ವೇದವ್ಯಾಸಪ್ರಣೀತ

# ಶ್ರೀ ಮದ್ಭಾಗವತಮ್

ಕನ್ನಡದಲ್ಲಿ ಲೇಖಕರು
ಭಾಗವತರತ್ನ, ಗೀತಾಚತುರಾದಿ ಬಿರುದಾಂಕಿತ
ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯ



ಭಾರತೀ ಪ್ರಕಾಶನ
ಸರಸ್ವತಿಪುರಂ ಮೈಸೂರು - 570 009

*SRIMAD BHAGAVATHAM* - in Kannada by Bhagavatharatna, Geethachatura, Vidwan Ghooli Krishnamurthy Acharya, Published by Bharati Prakashana, SaraswathiPuram, Mysore - 570 009

ಮೊದಲನೆಯ ಮುದ್ರಣ : 1966
ಎರಡನೆಯ ಮುದ್ರಣ : 1973
ಮೂರನೆಯ ಮುದ್ರಣ : 1987
ನಾಲ್ಕನೆಯ ಮುದ್ರಣ : 2000
ಐದನೆಯ ಮುದ್ರಣ : 2006
ಆರನೆಯ ಮುದ್ರಣ : 2007
ಏಳನೆಯ ಮುದ್ರಣ : 2010
ಎಂಟನೆಯ ಮುದ್ರಣ : 2013
ಒಂಭತ್ತನೆಯ ಮುದ್ರಣ : 2014
ಹತ್ತನೆಯ ಮುದ್ರಣ : 2015
ಹನ್ನೊಂದನೆಯ ಮುದ್ರಣ : 2017



ಬೆಲೆ : ರೂ. 450/-

ಮುದ್ರಕರು :
ಉದಯರವಿ ಆಫ್‌ಸೆಟ್ ಪ್ರಿಂಟರ್ಸ್
ಕೆ.ಎಂ. ಪುರಂ, ಮೈಸೂರು - 04
**Ph : 2332971 Mob : 9448382971**

|| ಶ್ರೀ ಗೋಪೀನಾಥೋ ವಿಜಯತೇ ||

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯತ್ವಾದ್ಯನೇಕ ಗುಣಸಂಪನ್ನ
ಪದವಾಕ್ಯಪ್ರಮಾಣ ಪಾರಾವಾರಪಾರೀಣ ಸರ್ವತಂತ್ರ
ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಜಗದ್ಗುರು ಶ್ರೀಮನ್
ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ
ಶ್ರೀಪದ್ಮನಾಭತೀರ್ಥ ಪರಂಪರಾ ಶ್ರೀಹಯವದನ ರಂಗವಿಠ್ಠಲಾತ್ಮಕ ಶ್ರೀ ಗೋಪೀನಾಥ
ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ
ಶ್ರೀ ಶ್ರೀಪಾದರಾಜವರವಿದ್ಯಾಸಿಂಹಾಸನಾಧೀಶರಾದ ಶ್ರೀ 108 ಶ್ರೀ ಸತ್ಯನಿಧಿತೀರ್ಥ
ಶ್ರೀಪಾದಂಗಳವರ ವರಕುಮಾರರಾದ
ಶ್ರೀ 108 ಶ್ರೀ ವಿಜಯನಿಧಿತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ



**ಶ್ರೀ 108 ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು**

## ಶ್ರೀ ವೇದವ್ಯಾಸ ಪ್ರಣೀತ

ಶ್ರೀಮದ್ಭಾಗವತಮ್ - ಎಂಬ ಗ್ರಂಥವು ಮೊಟ್ಟಮೊದಲಿಗೆ ಭಾಗವತರತ್ನ, ಗೀತಾಚತುರಾದಿ ಬಿರುದಾಂಕಿತ ಶ್ರೀಘೂಳಿ ಕೃಷ್ಣಮೂರ್ತಾಚಾರ್ಯ - ಬಳ್ಳಾರಿ - ಇವರು ಕನ್ನಡದಲ್ಲಿ ಬರೆದು ಅದಕ್ಕೆ ನಮ್ಮ ಪರಮ ಗುರುಗಳಾದ ಶ್ರೀ ಶ್ರೀ ಸತ್ಯನಿಧಿ ಶ್ರೀಪಾದಂಗಳವರು ಆಶೀರ್ವಾದ ವಚನವನ್ನು ಕೊಟ್ಟಿದ್ದು - ಪ್ರಸ್ತುತ ಅದರ ಐದನೇ ಮುದ್ರಣವು ಅವರ ಪುತ್ರರಾದ ಘೂಳಿ ಶ್ರೀಬದರೀನಾಥಾಚಾರ್ಯರು ಮುದ್ರಿಸಿ ಸಜ್ಜನರ ಶ್ರೇಯೋಭಿವೃದ್ಧಿಗೆ ಕಾರಣರಾಗಿರುತ್ತಾರೆಂತ ತಿಳಿಸುತ್ತಾ -

ಅಷ್ಟಾದಶ ಪುರಾಣಗಳಲ್ಲಿ ಶ್ರೀಮದ್ಭಾಗವತವನ್ನು "ಪುರಾಣರಾಜ" ಎಂತ ಪ್ರಸಿದ್ಧಿಯಾಗಿರುವುದು ಸಜ್ಜನರು ಗಮನಿಸಬೇಕಾದ ಮುಖ್ಯ ಅಂಶ.

ಶ್ರೀಭಾಗವತ ಗ್ರಂಥವು ಸಮಗ್ರವಾಗಿ ಜೀವನ ಅನಾದಿ ಭಂಧ ಬಿಡುಗಡೆಗೆ ಕಾರಣ ಎಾಗಿರುತ್ತೇಂತ ತಿಳಿಯಬೇಕು.

ಭಾಗವತ ಎಂಬ ವರ್ಣಗಳ ಕುರಿತು ವಿಚಾರ ಮಾಡಲಾಗಿ -

ಭಾ = ದೀಪ್ತಾ, ಗ = ಗಮ್ಯ್ಯ, ಗತೌ - ವಃ ಲಯ ಭಂಧನೆ. ಮತ್ತ = ತ = ತರತಿ ಎಂಬುದರಿಂದ - ಭಾಗವತ ಗ್ರಂಥ ಅರ್ಥೈಸಿಕೊಂಡು ಅಧ್ಯಯನ ಮಾಡಿದಲ್ಲಿ ನಮಗೆ ಭಗವಂತನ ಜ್ಞಾನದ ಅರಿವು ಆಗಿ ಅದರಂತೆ ಯಾವ ಮಾರ್ಗದಲ್ಲಿ ನಮ್ಮ ಜೀವನವನ್ನು ನಡೆಸಬೇಕೋ ಅದರಂತೆ ನಡೆದಲ್ಲಿ - ಅನಾದಿಭಂದದಿಂದ ಕೂಡಿದ ಈ ಜೀವನವನ್ನು ಬಂಧನದಿಂದ ಬಿಡಿಸಿ. ತ = ತರಣ ಅರ್ಥಾತ್ ಸಂಸಾರ ಚಕ್ರದಿಂದ ದಾಟುತ್ತಾನೆ - ಎಂತ ಅರ್ಥಕ್ಕೆ ಪೂರಕವಾಗಿ ಭಾ = 4, ಗ = 3, ವ = 4 ಮತ್ತು ತ = 1 =12 ಎಂಬುದು ವಾಸುದೇವ ದ್ವಾದಶಾಕ್ಷರ ಮಂತ್ರ ಜಪದಿಂದ - ಮೋಕ್ಷಪ್ರಾಪ್ತಿ ಎಂಬುದನ್ನು ಸೂಚಿಸುತ್ತದೆ ಮತ್ತು 1+ 2=3 ಜ್ಞಾನ, ಭಕ್ತಿ ಮತ್ತು ವೈರಾಗ್ಯದಿಂದ ಅಧ್ಯಯನ ಮಾಡಬೇಕೆಂದು ಸೂಚಿಸುತ್ತದೆ. ಆದ್ದರಿಂದ ಈ ಐದನೇ ಮುದ್ರಣದ ಆವಶ್ಯಕತೆಯನ್ನು ಕಂಡುಕೊಂಡು ಅವರ ತಂದೆಯವರ ಸದ್ಗತಿಗೆ ಕಾರಣರಾಗಿ 'ಪುತ್ರ' ಶಬ್ಧ ವಾಚ್ಯ ಶ್ರೀ ಘೋಳಿ ಬದರೀನಾಥಾಚಾರ್ಯರ ಕಡೆಯಿಂದ ಇನ್ನೂ ಇಂತಹ ಅನೇಕ ಗ್ರಂಥಗಳು ಹೊರಬರಲೆಂತ ಆಶಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

ಬೆಂಗಳೂರು
3-1-2006

## ಶ್ರೀ ಲಕ್ಷ್ಮೀವೆಂಕಟೇಶಾಯ ನಮಃ





**ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯ (1906 - 1993)**

**ಶ್ರೀಮತಿ ರುಕ್ಮಿಣಿ ಬಾಯಿ (1910 - 1979)**

***ನಮ್ಮ ತಂದೆತಾಯಿಗಳ ಪಾದಾರವಿಂದಗಳಿಗೆ***

ಹರಿಃ ಓಂ
ಶ್ರೀಮದ್ಧಾನುಮ ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಶ್ರೀ ಲಕ್ಷ್ಮೀ ಹಯಗ್ರೀವಾಯ ನಮಃ.
ಶ್ರೀಮದ್ಭಾಗವತ ಪ್ರತಿಪಾದ್ಯ ಶ್ರೀ ರುಕ್ಮಿಣೀಸಹಿತ ಶ್ರೀಕೃಷ್ಣಾಯನಮಃ
ಶ್ರೀಮದ್ಭಾಗವತ ಮಹಾಪುರಾಣಂ

# ಮುನ್ನುಡಿ

**ಕೃಷ್ಣೇತಿ ಮಂಗಲನಾಮ ಯಸ್ಯವಾಚೀ ಪ್ರವರ್ತತೇ|**
**ತಸ್ಯ ಭಸ್ಮಾಭವಂತ್ಯಾಸು ಮಹಾಪಾತಕ ಕೋಟಯಃ||**

**"ಕುರ್ಯೋದನನ್ಯ ಕುರ್ಯಾತ್ ಮೈತ್ರೋಬ್ರಾಹ್ಮಣ ಉಚ್ಯತೇ"** ಎಂಬ ಪ್ರಮಾಣಾನುಸಾರ ಬ್ರಾಹ್ಮಣ ಶರೀರ ಬಂದಾಗ ಮುಖ್ಯವಾಗಿ ಗಾಯತ್ರೀ ಮಂತ್ರವು ಅತ್ಯಂತ ಮುಖ್ಯ. ಇದರ ಜೊತೆಗೆ ಬ್ರಾಹ್ಮಣ್ಯವನ್ನು ಉಳಿಸಿಕೊಳ್ಳಲು **"ಓಂ ನಮೋ ನಾರಾಯಣಾಯ"** ಎಂಬ ಅಷ್ಟಾಕ್ಷರ ಮಂತ್ರ ಜಪವೂ ಮುಖ್ಯವೆಂದು ಶಾಸ್ತ್ರವು ಸಾರುತ್ತಿದೆ – ಇಲ್ಲಿ ಗಾಯತ್ರೀ ಜತೆಗೆ ನಾರಾಯಣಾಷ್ಟಾಕ್ಷರ ಮಂತ್ರ ಜಪವೆಂಬ ಎರಡು ಮಂತ್ರಾರ್ಥಗಳನ್ನು ವ್ಯಾಖ್ಯಾನಿಸಿ ವಿಷದಪಡಿಸುವುದೇ ಶ್ರೀಮದ್ಭಾಗವತ ಮಹಾಪುರಾಣವು.

ಇದನ್ನೇ ಗಾಯತ್ರೀ ಮಂತ್ರದಲ್ಲಿನ ಕೊನೆಯ ವಾಕ್ಯ 'ಧೀಮಹಿಃ' ಎಂದು ಸಾರುತ್ತಿದೆ.

**ಅರ್ಥೋಽಯಂ ಬ್ರಹ್ಮಸೂತ್ರಾಣಾಂ**
**ಭಾರತಾರ್ಥ ವಿನಿರ್ಣಯಃ**
**ಗಾಯತ್ರೀ ಭಾಷ್ಯರೂಪೋಸೌ**
**ವೇದಾರ್ಥ ಪರಿ ಬೃಂಹಿತಃ**
**ಪುರಾಣಾನಾಂ ಸಾರರೂಪಃ ಸಾಕ್ಷಾದ್ಭಾಗವತೋದಿತಃ ||**

ಶ್ರೀಮದ್ಭಾಗವತವು ಪುರಾಣವೆಂದಾದರೂ ಇದು ಬ್ರಹ್ಮಸೂತ್ರಗಳ ಅರ್ಥವನ್ನು ತಿಳಿಸುತ್ತದೆ.

**ಇದಂ ಭಾಗವತಂ ನಾಮ**
**ಪುರಾಣಾನಾಂ ಬ್ರಹ್ಮ ಸಂಸ್ಕೃತಃ||**

ಇಂತಹ ಪಾರಮಹಂಸ್ಯ ಸಂಹಿತೆ ಆಗಿರುವುದರಿಂದಲೇ ಪರಮಾತ್ಮನ ಅವಿಚ್ಛಿನ್ನ ಭಕ್ತರು ನಿತ್ಯ ಪಠಣಮಾಡುತ್ತಲಿರುವುದನ್ನು ನಾವು ಕಾಣುತ್ತೇವೆ.

ಶ್ರೀಮದ್ಭಾಗವತವನ್ನೂ ದೇವಋಷಿಗಳಾದ ನಾರದರಿಂದ ಪ್ರಾರ್ಥಿರಾಗಿ ಶ್ರೀಮನ್ನಾರಾಯಣ ಅವತಾರರಾದ ಶ್ರೀ ವೇದವ್ಯಾಸದೇವರು ಸಮಾಧಿ ಭಾಷೆಯಲ್ಲಿ ಹನ್ನೆರಡು ಸ್ಕಂಧಗಳಲ್ಲಿ ರಚಿಸಿರುತ್ತಾರೆ.

**"ಅತೋ ಮಹಾಭಾಗ ಭವಾನಮೋಘದೃಕ್**
**ಶುಚಿಶ್ರವಾಃ ಸತ್ಯರತೋ ಧೃತವ್ರತಃ ।**
**ಉರುಕ್ರಮಸ್ಯಾಖಿಲ ಬಂಧಮುಕ್ತಯೇ**
**ಸಮಾಧಿನಾನುಸ್ಮರ ಯದ್ವಿಚೇಷ್ಟಿತಂ॥**

ಈ ಹನ್ನೆರಡು ಸಂಖ್ಯಾಕ ಸ್ಕಂಧವು ಭಗವಂತನ 12 ಮೂರ್ತಿಗಳನ್ನು ಸೂಚಿಸುತ್ತಿದೆ. (ಕೇಶವ – ಇತ್ಯಾದಿ – ದಾಮೋದ'ರ ಪರ್ಯಂತ)

ಮನುಷ್ಯನ ಆಯುಃ ಪ್ರಮಾಣ ನೂರು ವರ್ಷಗಳೆಂದು ಇಟ್ಟುಕೊಂಡರೆ – ಅದರಲ್ಲಿ 50 ವರ್ಷಗಳನ್ನು ನಿದ್ರೆಯಲ್ಲಿ ಕಳೆಯುತ್ತಾನೆ. ಇನ್ನು 50 ವರ್ಷಗಳಲ್ಲಿ ಬಾಲ್ಯ, ಯೌವನ, ಸಂಸಾರ ಪೋಷಣೆಯಲ್ಲೇ ಕಳೆಯುತ್ತಾನೆ.

ಹಾಗೇನೇ 50 ವರ್ಷಗಳು ಅಂದರೆ, 18,000 ಹಗಲುಗಳು. ಈ ಪುರಾಣದಲ್ಲಿ 18,000 ಗ್ರಂಥಗಳಿಂದ ಕೂಡಿದೆ. ಇದನ್ನು ಭಾವುಕನು ಎಚ್ಚರದಿಂದ ದಿನಕ್ಕೊಂದು ಗ್ರಂಥದಂತೆ ಪಾರಾಯಣ ಪ್ರವಚನ ಮಾಡಿದಾಗ ಜನ್ಮ ಸಾಫಲ್ಯವಾಗುವುದು.

ಶ್ರೀಮದ್ಭಾಗವತವು ಪುರಾಣವೆಂದು ತಿಳಿಯದೇ ಮುಕ್ತಿದಾಯಕ ಮಹಾಕೃತಿ ಎಂದು ಅನುಸಂಧಾನವಿರಬೇಕು. ಬೇರೆ ಯಾವ ಪುರಾಣದಲ್ಲಿ ಇಷ್ಟೊಂದು ಮಹಾಫಲ ವಿವರಣೆವಿರುವು ದಿಲ್ಲ. ಇದನ್ನೇ ಶ್ರೀಮದ್ಭಾಗವತ ದ್ವಾದಶಸ್ಕಂಧ 13ನೇ ಅಧ್ಯಾಯದಲ್ಲಿ, ಇದರ ಉತ್ತಮತೆ ಯನ್ನೂ ತಿಳಿಸುತ್ತದೆ.

**ನಿಮ್ನಗಾನಾಂ ಯಥಾ ಗಂಗಾ ।**
**ದೇವಾನಾಂ ಅಚ್ಯುತೋ ಯಥಾ।**
**ವೈಷ್ಣವಾನಾಂ ಯಥಾಶಂಭುಃ**
**ಪುರಾಣಾನಾಂ ಇದಂ ತಥಾ।**
**ಕ್ಷೇತ್ರಿಯಾಣಾಂ ಚೈವಸರ್ವೇಷಾಂ**
**ಯಥಾ ಕಾಶೀಹ್ಯನುತ್ತಮಾ।**
**ತಥಾ ಪುರಾಣವ್ರಾತಾನಾಂ ಶ್ರೀಮದ್ಭಾಗವತಂ ದ್ವಿಜಃ ॥**

ವೈಷ್ಣವರಿಗೆ ಅತ್ಯಂತ ಪ್ರೀತಿಕರವಾದ ಪುರಾಣವೆಂದರೆ ಶ್ರೀಮದ್ಭಾಗವತ.

ಶ್ರೀಮದ್ಭಾಗವತಂ ಪುರಾಣಮಮಲಂ
ಯದ್ವೈಷ್ಣವಾನಾಂ ಪ್ರಿಯಂ ।
ಯಸ್ಮಿನ್ ಪಾರಮಹಂಸಮೇಕಮಮಲಂ
ಜ್ಞಾನಂ ಪರಂಗೀಯತೇ॥

ನಿರ್ದುಷ್ಟವಾದ ಮಹಾಪುರಾಣವು ವೈಷ್ಣವರಿಗೆ ಅತ್ಯಂತ ಪ್ರೀತಿಕರವಾದದ್ದು. ಏಕೆಂದರೆ ಇದರಲ್ಲಿ ಪರಮಹಂಸರೇ ಮೊದಲಾದ ಸಜ್ಜನರಿಗೆ ಮೋಕ್ಷಪ್ರದವಾದ ಜ್ಞಾನವೇ ಸ್ತುತಿಸುತ್ತದೆ.

ಅಂದ ಮೇಲೆ ಮೇಲಿನ ನೋಟಕ್ಕೆ ಪುರಾಣವೆಂದು ಕಥೆಗಳೇ ಇರುವುದಾಗಿ ತೋರಿದರೂ, ಇದರಲ್ಲಿ ಸಮಸ್ತ ಶಾಸ್ತ್ರಾರ್ಥವು ಗಹನವಾದ ವಿಷಯವನ್ನು ತಿಳಿಸುತ್ತದೆ. ಆದ್ದರಿಂದ ಇದು ಶಾಸ್ತ್ರವೂ ಹೌದು.

ಶ್ರೀಮದ್ಭಾಗವತದಲ್ಲಿ, ಮಹಾಮಹಾರಜರ, ಅವರ ಕಟುಂಬ – ಸಾಧನೆಗಳ ಬಗ್ಗೆ ಉಲ್ಲೇಖ ವಿರುವುದಿಲ್ಲ. ಇದರಲ್ಲಿ ಮುಖ್ಯವಾಗಿ ಹೆಚ್ಚಾಗಿ ಶ್ರೀಮನ್ನಾರಾಯಣನ ಸರ್ವೋತ್ತಮತ್ವ, ಲಕ್ಷ್ಮೀಪತಿತ್ವ ಬ್ರಹ್ಮರುದ್ರಾದಿಗಳಿಂದ ವಂದ್ಯತ್ವ -ಸಮಸ್ತ ಚರಾಚರ ಜಗತ್ತಿಗೆ ಸೃಷ್ಟಿ ಸ್ಥಿತಿ ಸಂಹಾರಕರ್ತೃತ್ವ – ಸಮಸ್ತ ಜೀವರಾಶಿಗಳ ಅಸ್ವಾತಂತ್ರತ್ವ ಇತ್ಯಾದಿ ಮಹಿಮೆ. ಅವನ ಭಕ್ತರ ಹಿರಿಮೆ, ಶ್ರೀಹರಿಯ ಅನೇಕ ಅಧ್ಭುತ ಲೀಲೆಗಳ ವರ್ಣನೆ ಇದರಲ್ಲಿ ಕಂಡು ಬರುವುದು. ಮತ್ತೆ ಇದರಲ್ಲಿ ಸ್ವಾಯಂಭು, ಧೃವರಾಜ, ಬಲಿಚಕ್ರವರ್ತಿ – ಪ್ರಹ್ಲಾದರಾಜ – ಇತ್ಯಾದಿ ರಾಜರುಗಳ ಕಥೆ ಇದೆಯಲ್ಲಾ? ಅಂದಾಗ ಶ್ರೀಮತ್ಸುಕಾಚಾರ್ಯರು ವಿವರಿಸುತ್ತಾರೆ. "ನಮಗೆ ಪ್ರಹ್ಲಾದ ಧ್ರುವರ ಕಥೆ ತಿಳಿಸಬೇಕೆಂಬ ವ್ಯಸನವಿಲ್ಲ. ಆದರೆ ಶ್ರೀಹರಿಯಮಹಿಮೆ ಒತ್ತಿ ತೋರಿಸಲು ಆ ಮಹಾಭಕ್ತರ ಮೂಲಕ ಪರಮಾತ್ಮನ ಅವತಾರ ಮಹಿಮೆ ಲೀಲೆಗಳನ್ನು ವರ್ಣಿಸುವುದ ಕ್ಕಾಗಿ ಮಾತ್ರ ತಿಳಿಸಲಾಗಿದೆ ಎಂದಿದ್ದಾರೆ.

ಶ್ರೀಮದ್ಭಾಗವತವನ್ನು ಎಷ್ಟು ಸಲ ಕೇಳಿದರೂ ಪಠಣ – ಅಧ್ಯಯನ ಮಾಡಿದರೂ ತೃಪ್ತಿ ಕಾಣಲಾಗುವುದಿಲ್ಲ. ನಿತ್ಯವಿನೂತವಾಗಿಯೇ ಹೊಸಹೊಸ ಪ್ರಮೇಯ ವಿಷಯ - ಭಗವಂತನ ವಿಚಿತ್ರ ವೈಭವವು ಹೊರಪಡಿಸುತ್ತದೆ.

**ತದೇವ ರಮ್ಯಂ ರುಚಿರಂ ನವಂ ನವಂ**
**ತದೇವ ಶಶ್ವನ್ ಮನಸೋ ಮಹೊತ್ಸವಂ।**
**ತದೇವ ಶೋಕಾರ್ಣ ಶೋಷಣಂ ನೃಣಾಂ**
**ಯದುತ್ತಮ ಶ್ಲೋಕ ಯಶೋಽನುಗೀಯತೇ**

ಶ್ರೀಮದ್ಭಾಗವತಕ್ಕೆ ಅನೇಕರು ವ್ಯಾಖ್ಯಾನ ಬರೆದಿದ್ದಾರೆ. ಸಾಕಷ್ಟು ಮುದ್ರಣಗಳಾಗಿವೆ. ಆದರೆ ಕೆಲವು ನಿಜತಾತ್ಪರ್ಯವನ್ನೂ ತಿಳಿಸಿಲ್ಲವೇನೋ ಎಂದೆನಿಸುತ್ತೆ. ಆಪಾತತಃ ಅರ್ಥಗಳನ್ನೂ ಬರೆದು ಸಜ್ಜನರಿಗೆ ಮಾರ್ಗದರ್ಶನ ಮಾಡಿಲ್ಲ. ಇಂತಹ ಇತರರಿಂದ ತಿಳಿಸಲಾದ ವಿಷಯಗಳನ್ನು ಶುದ್ಧೀಕರಿಸಿ, ಇದು ನಿಜವಾದ ಭಾಗವತ. ಅರ್ಥಾತ್ ಶ್ರೀವೇದವ್ಯಾಸರಿಂದ ರಚಿತವಾದ ಶುದ್ಧಪ್ರತಿ ಎಂದು ತೋರಿಸಿ ಅದರ ನಿಜಾರ್ಥರೂಪ ತಾತ್ಪರ್ಯವನ್ನೂ ಪ್ರಕಟಪಡಿಸಿದ ಮಹಾನುಭಾವರಾದ ಶ್ರೀವಾಯುದೇವರ ಅವತಾರರೂಪರಾದ ಶ್ರೀಮನ್ಮಧ್ವಾಚಾರ್ಯರು ತಮ್ಮ **"ಶ್ರೀಮದ್ಭಾಗವತ ತಾತ್ಪರ್ಯ"**ವೆಂಬ ಅಸ್ಕಲಿತ ವ್ಯಾಖ್ಯೆಯಿಂದ ಸಜ್ಜನರಿಗೆ ಮುಕ್ತಿಮಾರ್ಗ ಪ್ರದರ್ಶಿಸಿರುತ್ತಾರೆ. ಭಾಗವತವನ್ನು ಇತ್ತೀಚೆಗೆ ನವೀನ ಪಂಡಿತರು ಪುರಾಣ ಹೇಳುತ್ತಾರೆ. ಕೆಲವರು ಆಪಾತ ರಮಣೀಯವಾಗಿ – ಯಥಾರ್ಥ ಪ್ರಮೇಯಗಳನ್ನು ತಿಳಿಸದೇ ಇರುವುದು – ವಿಷಾದದ ಸಂಗತಿ.

ಹಾಗಾದರೆ ಭಾಗವತವನ್ನು ಯಾರು ಹೇಳಬೇಕು?

"ವಿದ್ಯಾವತಾಂ ಭಾಗವತೇ ಪರೀಕ್ಷಾ"

ಸಾಂಪ್ರದಾಯಕವಾಗಿ ಗುರು ಶುಶ್ರೂಷಾಗಳಿಂದ ಲಭ್ಯವಾದ ಜ್ಞಾನ - ವೇದ ಉಪನಿಷತ್ತು, ಪುರಾಣಗಳು - ಸ್ವಲ್ಪಮಟ್ಟಿಗಾದರೂ ವ್ಯಾಕರಣ ಜ್ಞಾನವಿದ್ದವರು ಪ್ರವಚನ ಮಾಡಬೇಕು ಎಂದು ತಿಳಿಸುತ್ತದೆ. ಇರಲಿ,

ಪ್ರಥಮಸ್ಕಂಧ 18ನೇ ಅಧ್ಯಾಯದಲ್ಲಿ ಪರೀಕ್ಷಿತ ರಾಜನು ಒಂದು ದಿನ ಬೇಟೆಯನ್ನಾಡಿ – ಮಾರ್ಗಶ್ರಾಂತನಾಗಿ ದಾಹದಿಂದ ಅರಣ್ಯದಲ್ಲಿ ಜಲಾಶಯಕ್ಕಾಗಿ ಹುಡುಕುತ್ತಾ ಹೊರಟು, ಎಲ್ಲಿಯೂ ನೀರು ಕಾಣದೇ ಸ್ವಲ್ಪ ದೂರದಲ್ಲಿ ಕೌಶಿಕೀ ನದೀ ತಟದಲ್ಲಿ ಒಂದು ಋಷ್ಯಾಶ್ರಮ ಕಂಡಿತು. ಆಶ್ರಮ ಅಂದ ಮೇಲೆ ನೀರು ಇರಬೇಕು. ಅಲ್ಲಿ ನೀರನ್ನು ಕೇಳೋಣ ಅಂತ ಬಂದನು. ಆ ಆಶ್ರಮವು ಶಮೀಕ ಋಷಿಗಳದ್ದು ಆಗಿತ್ತು. ಮಹಾನುಭಾವರು ಆಗ್ಗೆ ತಪಸ್ಸನ್ನು ಮಾಡುತ್ತಾ ತಮ್ಮ ಹೃದಯದಲ್ಲಿ ಭಗವಂತನ ದರ್ಶನದಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿದ್ದರೂ ಹೊರಗಿನ ಪ್ರಪಂಚದ ಅರಿವೇ ಇಲ್ಲದ್ದರಿಂದ ಮುನಿಗಳಿಗೆ ರಾಜನು ಬಂದದ್ದು ತಿಳಿಯಲಿಲ್ಲ.

ರಾಜನಾದರು ನೀರನ್ನು ಯಾಚಿಸಿದನು. ಎಷ್ಟು ಹೊತ್ತಾದರು ಕಣ್ಣು ತೆಗೆಯಲಿಲ್ಲ. ನೋಡಲೂ ಇಲ್ಲ. ರಾಜನಿಗೆ ಬೇಸರ ಕೋಪ ಬಂದಿತು. ಋಷಿಗಳ ಬಗ್ಗೆ ತುಚ್ಛವಾಗಿ ನುಡಿದ. ಅಲ್ಲಿಯೇ ಸ್ವಲ್ಪ ದೂರದಲ್ಲಿ ಒಂದು ಸರ್ಪವು ಸತ್ತುಬಿದ್ದಿರುವುದನ್ನು ನೋಡಿ ಮುನಿಗಳಿಗೆ ಅವಮಾನ ಮಾಡಬೇಕೆಂದು ಆ ಮೃತಸರ್ಪವನ್ನು ತನ್ನ ಬಿಲ್ಲಿನ ಕೊನೆಯಿಂದ ಹಿಡಿದು ಋಷಿಗಳ ಕೊರಳಲ್ಲಿ ಮಾಲಾಕಾರವಾಗಿ ಹಾಕಿ ಹಿಂತಿರುಗಿದನು. ಸ್ವಲ್ಪ ಸಮಯ ನಂತರ ಮುನಿಕುಮಾರನಿಗೆ ವೃತ್ತಾಂತ ತಿಳಿದು ರಾಜನ ಅಚಾತುರ್ಯ ಪ್ರವೃತ್ತಿಯಿಂದ ಕೋಪಿಷ್ಠನಾಗಿ ರಾಜನಿಗೆ ಶಾಪ ಕೊಟ್ಟನು. ಇದು ಕಥೆ. ಇಲ್ಲಿ ಮುನಿಬಾಲಕನು ಶಾಪ ಕೊಡುವ ಪೂರ್ವದಲ್ಲಿ ಕೌಶಕೀ ನದಿ ನೀರನ್ನು ತೆಗೆದು ಆಚಮನ ಮಾಡಿ ಶಾಪಕೊಟ್ಟನು ಎಂದು ಕೆಲವರು ವ್ಯಾಖ್ಯಾನಿಸಿದ್ದಾರೆ. ಭಾಗವತದಲ್ಲಿ ಇದಕ್ಕೆ ಸಂಶಯ ಬರುವಂತೆ ಒಂದು ಶ್ಲೋಕವು ತಿಳಿಸುತ್ತಿದೆ.

"ಇತ್ಯುಕ್ತ್ವಾ ರೋಷತಾಮ್ರಾಕ್ಷ:
ವಯಸ್ಯಾನೃಷಿಬಾಲಕಾನ್।
ಕಾಶಿಕ್ಯಪ ಉಪಸ್ಪೃಶ್ಯ
ವಾಗ್ವಜ್ರಂ ವಿಸಸರ್ಜ:" ॥ ಪ್ರಥಮ ಸ್ಕಂಧ (15-33-36)

ಪರೀಕ್ಷಿತನು – ನೀರಿಗಾಗಿ ಹುಡುಕಿ ಬಂದವನು ಕೌಶಿಕೀ ನದಿಯಲ್ಲಿ ನೀರು ಇದ್ದದ್ದೇ ಆದರೆ, ನದೀ ನೀರನ್ನು ಪ್ರಾಶನ ಮಾಡಿ ಹಿಂತಿರುಗುತ್ತಿದ್ದ. ಆಗ ಋಷ್ಯಾಶ್ರಮ ಪ್ರವೇಶ ಜಲಯಾಚನೆ ಪ್ರಸಂಗವೇ ಉದ್ಭವಿಸುತ್ತಿದ್ದಿಲ್ಲ.

ಹಾಗಾದರೆ ಶ್ಲೋಕದಲ್ಲಿ ತಿಳಿಸಿದಂತೆ ಶೃಂಗೀ ಋಷಿ ಬಾಲಕ. ನದೀ ನೀರನ್ನು ಸ್ವೀಕರಿಸಿ ಆಚಮನ ಮಾಡಿದ ಅಂತ ಹೇಳಿದ್ದರ ನಿಜಾರ್ಥವೇನು.

ನದಿಯಲ್ಲಿ ನೀರು ಹರಿಯುತ್ತಿದ್ದಿಲ್ಲ – ಇದು ದಿಟ. ಕೌಶಿಕ್ಯಪ ಉಪಸ್ಪೃಶ್ಯ – ಎಂಬುದಕ್ಕೆ ಅರ್ಥ ಹೇಗೆ ತಿಳಿಯಬೇಕು.

ಈ ಒಂದು ವಾಕ್ಯಕ್ಕೆ ಶ್ರೀವಿಜಯ ಧ್ವಜತೀರ್ಥರ ವಿವರಣೆ ವಿಚಾರ ಮಾಡಬೇಕು.

ರೋಷತಾಮ್ರಾಕ್ಷ ರೋಷೇಣ ರಕ್ತನೇತ್ರ:। ಕಾಶಿಕೀಂ ಕುಶಪಾಣಿಃ ಅಪ ಉಪಸ್ಪೃಶ್ಯ ಆಚಮ್ಯ ವಾಗ್‌ವಜ್ರಂ ಶಾಪಲಕ್ಷಣಂ ವಿಸಸರ್ಜದತ್ತವಾನ್॥

ಹಾಸ - ದ್ಯೊತಕೇನ ಹಶಬ್ದೇನ ಕೌಶಿಕೀ ನದೀ ತಸ್ಯಾ ಅಪಃ ಉಪಸ್ಪೃಶ್ಯ ಇತಿ ಅಪವ್ಯಾಖ್ಯಾನಂ ಅಪಹಸ್ತಿತಮಿತಿ ಜ್ಞಾತವ್ಯಂ॥

ಶೃಂಗಿಯು ಅತಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿ ವಜ್ರದಂಥ ಶಾಪವನ್ನು ಕೊಟ್ಟನು.

ಇಲ್ಲಿ ಶಾಪ ಕೊಡುವ ಮುಂಚೆ ನದೀನೀರನ್ನು ತೆಗೆದುಕೊಂಡು – ಆಚಮನ ಮಾಡಿದನು ಎಂಬುವ ವ್ಯಾಖ್ಯಾನವು ಅಪಹಾಸ್ಯವೇ ಆಗಿರುತ್ತೆ. ಶಾಪವೇ ಆಗಲಿ ಅನುಗ್ರಹವೇ ಆಗಲಿ ಬ್ರಾಹ್ಮಣನ ಬಲಗಿವಿಯಲ್ಲಿ ಗಂಗಾ ಸಾನ್ನಿಧ್ಯವಿರುತ್ತದೆ ಎಂದು ಶಾಸ್ತ್ರವು ತಿಳಿಸುತ್ತದೆ. ಅಂದ ಮೇಲೆ ನೀರು ಇಲ್ಲದಿದ್ದಾಗ ಬಲಕೈಯಿಂದ ಬಲಗಿವಿಯನ್ನು ಸ್ಪರ್ಶಮಾಡಿ 'ಓಂ' ಎಂದು ಉಚ್ಚರಿಸಿದರೆ ಆಚಮನಮಾಡಿದಂತೆ ಆಗುತ್ತೆ. ಇಲ್ಲಿ ಕುಶಪಾಣಿ ಆಗಿ ಆಚಮನ ಮಾಡಿದನೆಂದು ತಿಳಿದರೆ ಎಷ್ಟು ಪ್ರಶಸ್ತ.

ಇಂತಹ ಅಪೂರ್ವ ಸಂಗತಿಗಳನ್ನು ತಿಳಿಸುತ್ತಾ ಶ್ರೀಮದ್ಭಾಗವತಕ್ಕೆ ವಿಜಯಧ್ವಜೀಯ – ಶ್ರೀಯಾದವಾಚಾರ್ಯರ ವ್ಯಾಖ್ಯಾನಗಳನ್ನು ಹೊಂದಿಸಿಕೊಂಡು ಕನ್ನಡದಲ್ಲಿ ಅನುವಾದ ಮಾಡಿ ರುತ್ತಾರೆ ನನ್ನ ಪೂಜ್ಯ ತಂದೆಯವರಾದ ಪರಮಪೂಜ್ಯ ಕೃಷ್ಣಮೂರ್ತಿಆಚಾರ್ಯ ಘೂಳಿ ಅವರು. ಸುಮಾರು 1980ರಲ್ಲಿ ಪ್ರಪ್ರಥಮ ಬಾರಿಗೆ ಸಮಗ್ರ ಭಾಗವತ 12 ಸ್ಕಂಧಗಳನ್ನು ಅನುವಾದಿಸಿ – ಮುದ್ರಿಸಿ ಸಜ್ಜನ ವೃಂದಕ್ಕೆ ನೀಡಿರುತ್ತಾರೆ. ಮುದ್ರಣಕ್ಕಾಗಿ ಯಾರನ್ನೂ ಬೇಡದೇ ಹೊರತಂದ ನಿರಪೇಕ್ಷಿಗಳು. ಶ್ರೀಮದ್ಭಾಗವತವೆಂದರೆ ಆಯಿತು ಶ್ರೀ ಘೂಳಿ ಆಚಾರ್ಯರು ಮೈಮರೆತು ದಿನದಲ್ಲಿ ಕನಿಷ್ಟ 6-8 ತಾಸು ಬರೆಯುತ್ತಿದ್ದರು.

ನೌಕರಿಯಿಂದ ನಿವೃತ್ತರಾಗಿ ಬಿಡುವಿಲ್ಲದೇ ಸತತ ಪಾಠಪ್ರವಚನದಲ್ಲಿಯೇ ಶೇಷ ಆಯುಷ್ಯನ್ನು ಕಳೆಯುತ್ತಿದ್ದರು. ನನ್ನನ್ನು ಆಪ್ಯಾಯಮಾನವಾಗಿ ಕರೆದು ಬದರೀ – ಶ್ರೀಮದ್ಭಾ ಗವತ ಅಧ್ಯಯನ ಮಾಡು ಅಂತ ದಿನಕ್ಕೆ 2 ಗಂಟೆಗಳ ಕಾಲ ಪಾಠ ಮೂಲಕ ಹೇಳುತ್ತಿದ್ದರು. ಶ್ರೀಘೂಳಿ ಆಚಾರ್ಯರು ಅಂದಾಕ್ಷಣ ಅವರ ಅಮರ ಕೃತಿ ಶ್ರೀಮದ್ಭಾಗವತ ನೆನಪಿಗೆ ತರುತ್ತೆ. ಆಗ್ಗೆ ಇಷ್ಟೊಂದು ಸುಲಭವಾಗಿ ಕನ್ನಡೀಕರಿಸಿದರೆಂದರೆ, ಶ್ರೀಘೂಳೀ ಆಚಾರ್ಯರು, ಇಡೀ ಕರ್ನಾಟಕದಲ್ಲಿ ಹಾಗೂ ಹೈದರಾಬಾದಿನಲ್ಲಿಯೂ ಸಹ ಭಾಗವತ ಸಪ್ತಾಹಗಳನ್ನು ಮಾಡಿರು ತ್ತಾರೆ. ಇಷ್ಟೊಂದು ಖ್ಯಾತಿ ಪಡೆದ ಕಾರಣ ಅವರಿಗೆ **"ಶ್ರೀ ಭಾಗವತರತ್ನ"** ಎಂಬ ಬಿರುದು ಬಂದಿತು.

"ಶ್ರೀಮದ್ಭಾಗವತ ಕುರಿತಂತೆ ಇನ್ನೂ ಎರಡು ಕೃತಿಗಳನ್ನು ರಚಿಸಿರುತ್ತಾರೆ. ಶ್ರೀಮದ್ಭಾಗವತ ದಲ್ಲಿ ಪ್ರತಿ ಸ್ಕಂಧದಲ್ಲಿನ ಅತ್ಯಂತ ಉಪಯುಕ್ತ ಶ್ಲೋಕಗಳನ್ನು ೩೩೦ರಷ್ಟು ಅದಕ್ಕೆ ತಕ್ಕಂತೆ ಅರ್ಥವನ್ನೂ ಬರೆದಿರುತ್ತಾರೆ. ಇದೂ ಅಲ್ಲದೆ ಶ್ರೀಮಾದನೂರಿನ ಮಹನೀಯರು ಶ್ರೀವಿಷ್ಣು ತೀರ್ಥರಿಂದ ರಚಿತ. ಭಾಗವತ ಸಾರೋದ್ಧಾರವನ್ನೂ ಅನುವಾದಿಸಿದ ಕೀರ್ತಿ ಆಚಾರ್ಯರದ್ದೇ ಆಗಿರುತ್ತೆ. ವೈಷ್ಣವ ಪೀಠಾಧಿಪತಿಗಳಿಂದ ಸನ್ಮಾನಿತರಾಗಿದ್ದರು. ಒಬ್ಬರು ಹೀಗೆ ತಿಳಿಸುತ್ತಾರೆ. ವೈಷ್ಣವರ ಮನೆಮನೆಗಳಲ್ಲಿ – ಆಚಾರ್ಯರ ಭಾಗವತಾಮೃತಂ ಎಂಬ ಗ್ರಂಥವು ಇರಲೇಬೇಕು. ಈಗಲೂ ಕಾಣುತ್ತೇವೆ. ಶ್ರೀ ಆಚಾರ್ಯರು ತ್ರಿಭಾಷಾ ಚತುರರು ಆಗಿದ್ದರು.

ಇವತ್ತಿಗೆ ಅವರ ಭಾಗವತಾಮೃತಂ ಐದನೇ ಮುದ್ರಣವನ್ನು ಕಾಣುತ್ತಿದೆ. ಈ ಒಂದು ಮಹತ್ಕಾರ್ಯವನ್ನು ಕೈಗೊಂಡ **"ಶ್ರೀ ಶ್ರೀನಿವಾಸ್ ಬಿ. ಎನ್., ಭಾರತೀ ಪ್ರಕಾಶನ," ಸರಸ್ವತೀ ಪುರಂ,** ಮೈಸೂರು ಇವರಿಗೆ ಅಭಿನಂದನೆಗಳನ್ನು ಅರ್ಪಿಸುತ್ತೇನೆ.

ಈ ಕೃತಿಗೆ ಮುನ್ನುಡಿ ಬರೆಯುವ ಯೋಗ್ಯತೆ ನನಗೆ ಇಲ್ಲ. ತಥಾಪಿ ಅವರ ಚರಣಗಳಲ್ಲಿ 20 - 25 ವರ್ಷಗಳ ಕಾಲ ಶ್ರೀ ಅವರಲ್ಲಿಅಧ್ಯಯನ ಮಾಡಿದೆ.

ಅವರು ನಮಗೆ ಶ್ರೀಮನ್ನ್ಯಾಯಸುಧಾ ಪಾಠವನ್ನೂ ಹೇಳಿದರು. 1991ರಲ್ಲಿ ಮಂಗಳವನ್ನು ಮಾಡುವ ಭಾಗ್ಯ ಒದಗಿಸಿಕೊಟ್ಟರು. ಇಷ್ಟೊಂದು ಅನುಗ್ರಹ ಮಾಡಿದ ಪರಿಣಾಮವಾಗಿ ಪ್ರತಿಯಾಗಿ ಏನು ಕೊಟ್ಟೇನು. "ನಮ ಉಕ್ತಿಂ ವಿಧೇಮ" ಎಂದಷ್ಟೇ ಹೇಳಿ ನನ್ನ ಈ ಅಲ್ಪ ಸೇವೆಯಾದ ಮುನ್ನುಡಿ ರೂಪ ಬರಲಿ ಎಂಬ ಒಂದು ಅಪೇಕ್ಷೆಯ ಫಲವಾಗಿ ಬರೆದಿರುತ್ತೇನೆ.

**ಗೀತಾ ಪ್ರವಚನೇ ಅಸದೃಶೋಯಃ ।**
**ಭಾಗವತ ಪ್ರತಿಪಾದನೇ ರತ್ನೇತಿ ನಾಮ್ನೇಯಃ॥**
**ಸುಧಾ ಪಾಠಕ್ರಮೇ ಸ್ವಶಿಷ್ಯಾಃ ಸುಶಿಕ್ಷಿತಾಃ ।**
**ತಂ ವಂದೇ ಕೃಷ್ಣಾಖ್ಯ ಜನಕಮದ್ಗುರುಂ॥**

**ಶ್ರೀಮದ್ಭಾಗವತಂ ಪುರಾಣ ಮಮಲಂ**
**ಯದ್ವೈಷ್ಣವಾನಾಂ ಪ್ರಿಯಂ**

ಶ್ರೀಮನ್ಮಾಧ್ವಾಚಾರ್ಯರ ಭಾಗವತ ತಾತ್ಪರ್ಯದ ಅಂತಿಮಶ್ಲೋಕ –

**ನಿತ್ಯಾದೋಷ ಸ್ವರೋಪಾಯ**
**ಗುಣಪೂರ್ಣಾಯ ಸರ್ವದಾ।**
**ನಾರಾಯಣಾಯ ಹರಯೇ**
**ನಮಃ ಪ್ರೇಷ್ಠತ ಮಯಮೇ ॥**

ಇತಿ ಶ್ರೀ ಘೋಳಿ ಆಚಾರ್ಯರ ಅಂತೇ ವಾಸಿ/ಸುತನಾದ
ಸಜ್ಜನ ಕಿಂಕರ
**ಬದರೀನಾಥಾಚಾರ್ಯ ಘೋಳಿ,** ಎಂ.ಎ.

# ಅನುಕ್ರಮಣಿಕೆ

## ಪ್ರಥಮ ಸ್ಕಂಧ



## ದ್ವಿತೀಯ ಸ್ಕಂಧ

ಅವರು ನಮಗೆ ಶ್ರೀಮನ್ನ್ಯಾಯಸುಧಾ ಪಾಠವನ್ನೂ ಹೇಳಿದರು. 1991ರಲ್ಲಿ ಮಂಗಳವನ್ನು ಮಾಡುವ ಭಾಗ್ಯ ಒದಗಿಸಿಕೊಟ್ಟರು. ಇಷ್ಟೊಂದು ಅನುಗ್ರಹ ಮಾಡಿದ ಪರಿಣಾಮವಾಗಿ ಪ್ರತಿಯಾಗಿ ಏನು ಕೊಟ್ಟೇನು. "ನಮ ಉಕ್ತಿಂ ವಿಧೇಮ" ಎಂದಷ್ಟೇ ಹೇಳಿ ನನ್ನ ಈ ಅಲ್ಪ ಸೇವೆಯಾದ ಮುನ್ನುಡಿ ರೂಪ ಬರಲಿ ಎಂಬ ಒಂದು ಅಪೇಕ್ಷೆಯ ಫಲವಾಗಿ ಬರೆದಿರುತ್ತೇನೆ.

ಗೀತಾ ಪ್ರವಚನೇ ಅಸದೃಶೋಯಃ ।
ಭಾಗವತ ಪ್ರತಿಪಾದನೇ ರತ್ನೇತಿ ನಾಮ್ನೇಯಃ॥
ಸುಧಾ ಪಾಠಕ್ರಮೇ ಸ್ವಶಿಷ್ಯಾಃ ಸುಶಿಕ್ಷಿತಾಃ ।
ತಂ ವಂದೇ ಕೃಷ್ಣಾಖ್ಯ ಜನಕಮದ್ಗುರುಂ॥

ಶ್ರೀಮದ್ಭಾಗವತಂ ಪುರಾಣ ಮಮಲಂ
ಯದ್ವೈಷ್ಣವಾನಾಂ ಪ್ರಿಯಂ

ಶ್ರೀಮನ್ಮಾಧ್ವಾಚಾರ್ಯರ ಭಾಗವತ ತಾತ್ಪರ್ಯದ ಅಂತಿಮಶ್ಲೋಕ –

ನಿಶ್ಶೇಷದೋಷ ಸ್ವರೋಪಾಯ
ಗುಣಪೂರ್ಣಾಯ ಸರ್ವದಾ।
ನಾರಾಯಣಾಯ ಹರಯೇ
ನಮಃ ಪ್ರೇಷ್ಠತ ಮಯಮೇ ॥

ಇತಿ ಶ್ರೀ ಘೋಳಿ ಆಚಾರ್ಯರ ಅಂತೇ ವಾಸಿ/ಸುತನಾದ
ಸಜ್ಜನ ಕಿಂಕರ
ಬದರೀನಾಥಾಚಾರ್ಯ ಘೋಳಿ, ಎಂ.ಎ.

# ಅನುಕ್ರಮಣಿಕೆ

## ಪ್ರಥಮ ಸ್ಕಂಧ



## ದ್ವಿತೀಯ ಸ್ಕಂಧ

## ತೃತೀಯ ಸ್ಕಂಧ

## ಚತುರ್ಥ ಸ್ಕಂಧ

ತೃತೀಯ ಸ್ಕಂಧ

ಚತುರ್ಥ ಸ್ಕಂಧ

ಪಂಚಮ ಸ್ಕಂಧ



ಷಷ್ಠ ಸ್ಕಂಧ

## ಸಪ್ತಮ ಸ್ಕಂಧ

## ಅಷ್ಟಮ ಸ್ಕಂಧ



## ನವಮ ಸ್ಕಂಧ

**ದಶಮ ಸ್ಕಂಧ - ಪೂರ್ವಾರ್ಧ**

## ದಶಮಸ್ಕಂಧ - ಉತ್ತರಾರ್ಧ

## ಏಕಾದಶ ಸ್ಕಂಧ

## ದ್ವಾದಶ ಸ್ಕಂಧ

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಪ್ರಥಮಸ್ಕಂಧವು

|| ಹರಿಃ ಓಂ ||

**ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್ ।**
**ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ॥**
**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ ।**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥**

ಶ್ರೀಮದ್ವೇದವ್ಯಾಸದೇವರು, ಬ್ರಹ್ಮರುದ್ರೇಂದ್ರಾದಿಗಳಿಂದ ಪ್ರಾರ್ಥಿತರಾಗಿ, ಕಲಿಕಾಲ ಬಲದಿಂದ ಕಲುಷಿತಚಿತ್ತರಾಗಿ ನೊಂದ ಸಜ್ಜನರ ಉದ್ಧಾರ ಮಾಡಬೇಕೆಂದು ಕರುಣೆಯಿಂದ, ಬಹುಕಾಲ ತಪಸ್ಸನ್ನು ಮಾಡಿ ಪರಿಶುದ್ಧಳಾದ ಸತ್ಯವತಿ ದೇವಿಯಲ್ಲಿ ಶ್ರೀಪರಾಶರರಿಂದ ಆವಿರ್ಭೂತರಾಗಿ, ಮೊತ್ತಮೊದಲು ವೇದಗಳ ವಿಭಾಗ ಮಾಡಿ ಪೈಲಾದಿ ಶಿಷ್ಯರಿಗೆ ಉಪದೇಶಿಸಿದರು.

ವೇದಾಧಿಕಾರವಿಲ್ಲದ ಅಲ್ಪಮತಿಗಳಲ್ಲಿ ದಯದಿಂದ ಪಂಚಮವೇದವಾದ ಭಾರತವನ್ನು ರಚಿಸಿದರು. ಸಮಂಚಿತವಾದ ಅಷ್ಟಾದಶ ಪುರಾಣಗಳಲ್ಲಿ ಭಾಗವತವಲ್ಲದ ಇತರ ಪುರಾಣಗಳನ್ನೂ ರಚಿಸಿದರು. ಇಷ್ಟರಿಂದಲೂ ಸರ್ವಸಜ್ಜನರ ಕಷ್ಟನಿವಾರಣೆಗೆ ಕಾರಣವಾದ ಜ್ಞಾನ ಕಾರ್ಯವು ಸಂಪೂರ್ಣವಾಗಿ ಆಗಲಿಲ್ಲವೆಂದರಿತ ಶ್ರೀಬಾದರಾಯಣರು ನಾರದರಿಂದ ಆದರದಿಂ ಪ್ರಾರ್ಥಿತರಾಗಿ ಹನ್ನೆರಡು ಸ್ಕಂದಗಳಲ್ಲಿ ಹದಿನೆಂಟು ಸಾವಿರ ಗ್ರಂಥದಿಂ ಕೂಡಿ ರಮ್ಯಮಾದ ಭಾಗವತವನ್ನು ರಚಿಸಿ ತಮ್ಮ ಅವತಾರ ಕಾರ್ಯವಿದರಿಂದ ಪೂರ್ತಿಯಾಯಿತೆಂದು ತೃಪ್ತಿ ಹೊಂದಿದರು.

ಶ್ರೀಕೃಷ್ಣನಿಗೆ ಯಾವ ವಿಘ್ನಗಳಿಲ್ಲ; ಆದರೂ ಅವನ ಸ್ಮರಣೆಯೇ ಸರ್ವವಿಘ್ನ ನಿವಾರಣವು, ಸರ್ವಶ್ರೇಯಃ ಕಾರಣವೆಂದು ಸಜ್ಜನರಿಗೆ ತಿಳಿಸಿ, ಗ್ರಂಥಾರಂಭದಲ್ಲಿ ಅವಶ್ಯಾನುಷ್ಠೇಯವಾದ, ಶಿಷ್ಟಾಚಾರಪರಂಪರೆಯಿಂದ ಬಂದ, ನತಿಸ್ಮರಣಾದಿರೂಪವಾದ ಮಂಗಳಾಚರಣೆಯು ಆಯುಷ್ಮತ್ ಪುರುಷಕವಾಗುವುದೆಂದು ಪ್ರಕಟಿಸಲು, ತಾವೇ ಭಗವತ್ ಸ್ವರೂಪರಾಗಿದ್ದು ಕೂಡ, ಸಕಲ ಕಲ್ಯಾಣಗುಣಪೂರ್ಣನೂ, ಸರ್ವದೋಷವಿದೂರನೂ ಸರ್ವಸಚ್ಛಾಸ್ತ್ರ ಮುಖ್ಯಾರ್ಥನೂ, ಸರ್ವಮುಕ್ತಾಮುಕ್ತ ಜೀವನಿಯಾಮಕನೂ, ಕರುಣಾಸಮುದ್ರನೂ, ಸರ್ವವ್ಯಾಪ್ತನೂ ಆದ ಶ್ರೀಲಕ್ಷ್ಮೀನಾರಾಯಣನನ್ನು ಸ್ಮರಿಸಿ ಮಂಗಳವನ್ನು ಮಾಡುತ್ತಿದ್ದಾರೆ.

ಯಾವ ನಿರ್ದು:ಖನಿರತಿಶಯಾನಂತ ಜ್ಞಾನಾನಂದಾದಿ ಗುಣಾಕರನಾದ ಶ್ರೀಶನಿಂದ ಈ ಜೀವಜಡಾತ್ಮಕವಾದ ಸಕಲ ಜಗತ್ತಿಗೂ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನಾಜ್ಞಾನ, ಬಂಧ – ಮೋಕ್ಷಗಳು ಯಥಾ ಯೋಗ್ಯವಾಗಿ ಆಗುತ್ತಿವೆಯೋ, ಯಾವ ವೈದೇಕ ವೇದ್ಯನಾದ ರಮೇಶನು ಉಪಕ್ರಮಾದಿ ತಾತ್ಪರ್ಯನಿರ್ಣಾಯಕ ಲಿಂಗಗಳಿಂದಲೂ, ಸತ್ತರ್ಕದಿಂದಲೂ ಸಚ್ಛಾಸ್ತ್ರವೆನಿಸುವ ಋಗ್ಯಜುಸ್ಸಾಮಾಥರ್ವ, ಭಾರತ, ಮೂಲ ರಾಮಾಯಣ, ಪಂಚರಾತ್ರಾಗಮಾದಿ ಗ್ರಂಥಗಳ ಶ್ರವಣಾದಿ ವಿಚಾರ ಮಾಡಲು ತಿಳಿಯಲ್ಪಡುವನೋ, ಯಾವ ಸರ್ವಜ್ಞನಾದ ಕಮಲನಾಭನು ತನ್ನ ಮಗನಾದ ಆದಿಕವಿ ಬ್ರಹ್ಮದೇವನಿಗೆ ಪ್ರೀತಿಯಿಂದ ವೇದಾದಿಗಳನ್ನೆಲ್ಲ ಸಾಂಗವಾಗಿ ಉಪದೇಶಿಸಿದನೋ, ಯಾವ ಸರ್ವೇಶ್ವರನಾದ ಪುರುಷೋತ್ತಮನು ಜ್ಞಾನಿಗಳಾದ ಬ್ರಹ್ಮಾದಿ ಗಳಿಂದಲೂ ಪೂರ್ಣವಾಗಿ ತಿಳಿಯಲ್ಪಡಲಶಕ್ಯವಾದ ಮಹಿಮೆ ಉಳ್ಳವನೋ, ಯಾವ ಸಮರ್ಥ ನಾದ ಶ್ರೀಹರಿಯು ತನಗೆ ಪ್ರಯೋಜನವಿಲ್ಲದಿದ್ದರೂ ಕರುಣೆಯಿಂದ ಸಜ್ಜನರಕ್ಷಣೆ ಮಾಡಲು ಈಶ್ವರ–ಜೀವ–ಜಡ ಸೃಷ್ಟಿಯನ್ನು ಮಾಡಿರುವನೋ, ಯಾವ ಕಾಪಟ್ಯಾದಿ ಸರ್ವದೋಷ ದೂರನಾದ ಮಾಯಾ ರಮಣನು ಅನಾದಿಕಾಲದಿಂದ ಸಂಸಾರೋಪಕ್ರಮವೇ ಇಲ್ಲದ ನಿತ್ಯಮುಕ್ತಳಾದ ಮಾಯಾದೇವಿಯಿಂದ ಕೂಡಿ ಜಗತ್ಸರ್ಜನಾದಿ ವ್ಯಾಪಾರ ಮಾಡಿ ಜೀವರಿಗೆ ಸ್ವಯೋಗ್ಯ ಮುಕ್ತಿಪ್ರದಾಯಕನಾಗಿರುವನೋ, ಅಂತಹ ಶ್ರೀಮನ್ನಾರಾಯಣನಿಗೆ ನಮಸ್ಕಾರವು! ಶ್ರೀಹರೇ ನಮ್ಮ ಮನಸ್ಸು ನಿನ್ನಲ್ಲೇ ರಮಿಸಲಿ!

ಸಕಲವಾಙ್ಮನೋನಿಯಾಮಕಳಾದ ಲಕ್ಷ್ಮೀದೇವಿಗೂ, ಸರ್ವಪ್ರಾಣಿ ಪ್ರವರ್ತಕನಾದ ಜೀವೋತ್ತಮನಾದ ಮುಖ್ಯಪ್ರಾಣನಿಗೂ, ವಿದ್ಯಾದೇವಿಯೆನಿಸಿದ ಭಾರತೀದೇವಿಗೂ, ಸಕಲ ತತ್ತ್ವೇಶರಿಗೂ, ಕ್ಷಿಪ್ರಪ್ರಸಾದನಾದ ಶ್ರೀವಿಘ್ನರಾಜನಿಗೂ, ಶ್ರೀ ಟೀಕಾಕೃತ್ಪಾದರಿಗೂ, ಕರುಣಾ ವರುಣಾಲಯರಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರಿಗೂ, ಶ್ರೀ ಪುರಂದರ ದಾಸವರ್ಯರಿಗೂ, ಅಸ್ಮತ್ಪರಮಗುರುಗಳಾದ ಶ್ರೀಸತ್ಯಧ್ಯಾನಯತಿಪುಂಗವರಿಗೂ, ಅಸ್ಮದ್ಗುರುವರರಾದ ಹುಲಿಗೀ ಆಚಾರ್ಯರಿಗೂ ಶಿರಸಾ ನಮಿಸಿ, ವಚಸಾ ಸ್ತುತಿಸಿ, ಮನಸಾ ಸ್ಮರಿಸಿ, ಶ್ರೀ ಭಾಗವತ ಪುರಾಣ ವಚನವನ್ನು ರಚಿಸಲುದ್ಯುಕ್ತಲಾದ ನನ್ನಲ್ಲಿ ಸಕಲ ಭಗವದ್ಭಕ್ತರು ಅನುಗ್ರಹಿಸಲಿ!

ಶ್ರೀ ಭಾಗವತಮಹಾಪುರಾಣ ಪಾರಿಜಾತ ಪಾದಪಸಮಾಶ್ರಯಣವೆನಗೆ ಶ್ರೀಹರಿ ಕರುಣಾವಿಶೇಷದಿಂದಲೂ, ಶ್ರೀಘೂಳೀಪ್ರಾಣೇಶನ ಪರಮಾನುಗ್ರಹದಿಂದಲೂ, ಶ್ರೀ ಗುರುರಾಜರ ವರಪ್ರಸಾದದಿಂದಲೂ, ಲಭಿಸಿತಲ್ಲದೇ ಮಹಾಕಾವ್ಯ ನಿರ್ವಹಣೆಯಲ್ಲಿ ಸಮರ್ಥನಲ್ಲವೆಂದರಿತಿದ್ದರೂ ಶ್ರೀಮತ್ಪೂರ್ಣಪ್ರಮತಿ ಗುರುಮುಖ್ಯಸ್ತೋತ್ತಮಜನ ಕಾರುಣ್ಯಸರಣಿಯಲ್ಲಿ ಸಾಗುವ ನನ್ನ ಜನ್ಮವೇ ಧನ್ಯವಾದೀತೆಂದು ಬಗೆದು ಶ್ರೀ ಭಾಗವತಾಮೃತವೆಂಬೀ ವಚನಕಾವ್ಯ ರಚನೆಯಲ್ಲಿ ತೊಡಗುವ ನನ್ನ ಸಾಹಸವನ್ನು ಸಜ್ಜನರು ಮನ್ನಿಸದೆ ಇರರೆಂಬ ನಂಬಿಗೆಯೇ ನನ್ನನ್ನು ಮುಂದಕ್ಕೆ ಕರೆದೊಯ್ಯುತ್ತದೆ.

ನಂದಗೋಕುಲ ವಿಹಾರಿಯು, ಭಕ್ತದುಃಖಪರಿಹಾರಿಯು, ಗೋಪನಿತಂಬಿನೀ ಮನೋಹಾರಿಯು, ದುಷ್ಟಜನಸಂಹಾರಿಯು, ಆದ ಹರೇ! ನನ್ನನ್ನು ನಿನ್ನವನೆನಿಸು! ಶ್ರೀಬ್ರಹ್ಮ ಸೂತ್ರಗಳಿಗೆ ಅರ್ಥವಿವರಣರೂಪವು, ಗಾಯತ್ರೀ ಸಮಾರಂಭವು, ವೃತ್ರಾಸುರ ವಧ ನಿರೂಪಕವು, ಹಯಗ್ರೀವ ಬ್ರಹ್ಮವಿದ್ಯಾ ಪರಮಪವಿತ್ರ ವಿಷಯ ಪ್ರತಿಪಾದಕವಾದ್ದರಿಂದ ಶ್ರೀಮದ್ಭಾಗವತವು

ಸಜ್ಜನೋಪಾದೇಯತಮವಾಗಿದೆ; ಶ್ರೀ ವೇದವ್ಯಾಸರಿಂದ ರಚಿತವಾದ್ದರಿಂದಲೂ, ಸದ್ಭಕ್ತಿಯಿಂದ ಕೇಳುವವರ ವಿಮಲ ಚಿತ್ತಗಳಲ್ಲಿ ಶ್ರೀಹರಿಯು ನೆಲೆಸಿ ಉದ್ಧರಿಸುವವನಾದ್ದರಿಂದಲೂ, ಶ್ರವಣಮಾತ್ರದಿಂದ ಶ್ರುತಿಮನೋಹರವಾದ್ದರಿಂದಲೂ, ಶ್ರೀಮಂತವೆನಿಸಿದೆ. ಈ ಮಹಾಪುರಾಣ ವನ್ನು ಸ್ತೋತ್ರಮಜನರಲ್ಲಿ ನಿರ್ಮತ್ಸರರಾದ ಸಜ್ಜನರು ಕೇಳಲರ್ಹರೆನಿಸುವರು. ಆಧ್ಯಾತ್ಮಿಕಾಧಿ ಭೌತಿಕಾಧಿದೈವಿಕರೂಪ ತಾಪತ್ರಯಂಗಳನ್ನು ನಾಶಗೊಳಿಸಿ, ಪರಮಮಂಗಲ ರೂಪವಾದ ಮೋಕ್ಷ ಸುಖವನ್ನಾಪಾದಿಸಿ, ಮಹಾಫಲಪ್ರದವೆನಿಸುವ ಶ್ರೀಮದ್ಭಾಗವತದಲ್ಲಿ ಧರ್ಮಶಬ್ದ ವಾಚ್ಯನಾದ ಶ್ರೀಹರಿಯೇ ಮುಖ್ಯ ವಿಷಯನಾಗಿ ಪ್ರತಿಪಾದಿಸಲ್ಪಟ್ಟಿರುವನು. ಆ ಶ್ರೀಹರಿಯ ಪರಮ ಪ್ರಸಾದ ಸಾಧನವೆನಿಸಿದ ತ್ರಿಂಶದ್ವಿಧ ಭಾಗವತ ಧರ್ಮಗಳೂ ನಿರೂಪಿತವಾಗಿರುವವು. ಕಾಪಟ್ಯವಿಲ್ಲದೆ ಕೇವಲ ಶ್ರೀಶಪ್ರೀತಿಯೇ ಸಾಕೆಂದು ಬಯಸಿ ಭಜಿಸುವ ಭಗವದ್ಭಕ್ತರಿಗೆ ಭಾಗವತದಲ್ಲಿ ಶ್ರೀಹರಿಯ ದರ್ಶನವಾಗುವುದು. ಇತರ ಪುರಾಣಗಳಿಂದೇನು? ಸಾಧನ ಸಾಮಗ್ರಿಯು ಸಂಪೂರ್ಣವಾಗಿರುವ ಏಕಾಂತ ಭಕ್ತರಿಗೆ ಭಾಗವತವನ್ನು ಕೇಳಲುಪಕ್ರಮಿಸಿ ದಾಕ್ಷಣವೇ ಶ್ರೀಹರಿಯು ಅವರ ಹೃತ್ಕಮಲಗಳಲ್ಲಿ ನೆಲೆಸಿ ಪರಮಾನಂದಪ್ರದನಾಗುವನು. ಇದಕ್ಕೆ ಸಂಶಯವಿಲ್ಲ.

ವೇದಕಲ್ಪವೃಕ್ಷದ ಫಲರೂಪವಾದ ಶ್ರೀಕೃಷ್ಣದ್ವೈಪಾಯನರ ಕರುಣೆಯೆಂಬ ದೋಟಿ ಯಿಂದ–ದೇವಯೋಗ್ಯವಾದರೂ ಭೂಮಿಗೆ– ಕೆಳಗಿಳಿಸಲ್ಪಟ್ಟ ಶುಕಗುರು ಮುಖಾಂಬುಜನಿಃ ಸೃತಾಮೃತರಸನಿಷ್ಯಂದಿನಿಯು, ಶ್ರೀಹರಿಕಥಾಮಂದಾಕಿನಿಯು ಆದ, ಈ ಭಾಗವತಾಮೃತರಸ ವನ್ನು ಭಕ್ತಜನರೇ! ಸಾರಾಸಾರ ವಿವೇಕಿಗಳಾದ ಸಜ್ಜನರೇ! ಸೇವಿಸಿರಿ! ಮರಣಪರ್ಯಂತವು ಅಲ್ಲ, ಆಮೇಲೂ ಲಿಂಗಭಂಗಪರ್ಯಂತವೂ ಅಲ್ಲ, ಅದಾದ ಮೇಲೂ, ಮುಕ್ತಿ ಸಾಮ್ರಾಜ್ಯ ದಲ್ಲೂ ಸೇವಿಸಿರಿ!

ವೀತಶೋಕರಾದ ಮುಕ್ತರು ಕೃಷ್ಣನನ್ನು ಅದ್ಯಾಪಿ ಸೇವಿಸುತ್ತಿದ್ದಾರೆ!

## ೧. ಸೂತಶೌನಕ ಸಂವಾದವು

ಅನಿಮಿಷಕ್ಷೇತ್ರವೂ, ಪರಮಪವಿತ್ರವೂ, ಮುನಿವಲ್ಲಭಶರಣ್ಯವೂ, ಪರಮಪುಣ್ಯವೂ, ಕುಸುಮಫಲಭರಿತವೂ, ಸಂತತಗೇಗೀಯಮಾನ ಹರಿಪಾವನಚರಿತವೂ ಗೋಮತೀತರಂಗ ಮಂಗಲವೂ, ಸುದರ್ಶನತೀರ್ಥ ಮಜ್ಜನ ಕೃತಾಥ ಸಾರ್ಥವಾಹ ಸಜ್ಜನವೂ ಆದ ನೈಮಿಷಾರಣ್ಯ ದಲ್ಲಿ ಶೌನಕಾದಿ ಮುನಿಗಳೊಂದು ಸತ್ರಯಾಗವನ್ನು ಮಾಡುತ್ತಲಿದ್ದರು. ಸ್ವರ್ಗಾದಿ ವಿಷಯ ವಿರಕ್ತರಾಗಿ ಸ್ವರೂಪಭೂತ ಸುಖಾಪಾದಕ ಮೋಕ್ಷವನ್ನು ಬಯಸಿ, ಆ ಮುನಿವರ್ಯರು ಲೋಕಾ ನುಕಂಪಾರ್ಥವಾಗಿ ಒಂದು ಜ್ಞಾನ ಪ್ರಚುರವಾದ ಸತ್ರಯಾಗವನ್ನು ಮಾಡುತ್ತ ಒಂದು ದಿನ ಕೃತಾಹ್ನಿಕರಾಗಿ, ಹುತವಹನಲ್ಲಿ ಆಹುತಿಗಳನ್ನರ್ಪಿಸಿ, ಆ ಸಮಯದಿ ಬಂದ ಸೂತನ ನುತಹರಿ ಗುಣಸಂಪೂತನ, ನಿತಾಂತ ಕರುಣೋಪೋತನನ್ನುಗ್ರಶ್ರವನನ್ನು ಕಂಡು ಯಥೋಚಿತ ಸತ್ಕಾರವನ್ನು ಮಾಡಿ, ಆದರದಿಂದ ಪ್ರಶ್ನೆಗಳಂ ಕೇಳಿದರು.

ಸೂತ! ಪಾಪರಹಿತ! ಪುರಾಣೇತಿಹಾಸ ಧರ್ಮಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿ, ಸಾರವನ್ನು ತಿಳಿದಿರುವಿ; ಶ್ರೀ ವೇದವ್ಯಾಸನೇ ಮೊದಲಾದ ಮುನಿಮುಖ್ಯರ ಅನುಗ್ರಹದಿಂದ

ಅವರು ಉಪದೇಶಿಸಿದ ಅರ್ಥಗಳನ್ನು ವ್ಯತ್ಯಾಸವಿಲ್ಲದೆ ಯಥಾರ್ಥವಾಗಿ ಸರ್ವವನ್ನು ತಿಳಿದು ತಿಳಿಸಲು ಅರ್ಹನಾಗಿರುವಿ. ಪರಮ ರಹಸ್ಯಾರ್ಥವನ್ನಾದರೂ ಗುರುಗಳು ಪ್ರೇಮಪಾತ್ರರಾದ ಶಿಷ್ಯರಿಗೆ ತಿಳಿಸಿಕೊಡುವವರಲ್ಲವೇ? ಜೀವರಿಗೆ ಸ್ಥಿರಕಲ್ಯಾಣ ಸಾಧನವಾಗಿ ನೀನು ವಿಚಾರಿಸಿದ ಶಾಸ್ತ್ರ ಸಾರ್ಥ ಸಂಗ್ರಹವನ್ನೆಮಗೆ ನಿರೂಪಿಸು.

ಈ ಕಲಿಯುಗದಲ್ಲಿ ಮರ್ತ್ಯರಲ್ಪಾಯುಷ್ಯರು, ಅಲಸರು, ಮಂದಬುದ್ಧಿಗಳು, ಅಲ್ಪ ಪುಣ್ಯರು, ರಾಗರೋಗಪೀಡಿತರು, ಕಷ್ಟಸಾಧ್ಯವಾದ ಕರ್ಮಾಚರಣ ತತ್ಪರರು; ಕೇಳಬೇಕು ಅನಂತ ಶಾಸ್ತ್ರಗಳನ್ನು! ಉಳಿದಿರುವ ಆಯುಃ ಕಾಲವೋ, ಅನಿಶ್ಚಿತವು, ಅಲ್ಪವು, ಪರಸ್ಪರ ವಿರುದ್ಧ ಶಾಸ್ತ್ರಗಳಿಂದ ನಿಶ್ಚಯಜ್ಞಾನವು ದುರ್ಲಭವಾಗಿದೆ. ಆದ್ದರಿಂದ ಶ್ರೀಹರಿಯು ಎಂತು ಅನು ಗ್ರಹೋ ನ್ಮುಖನಾಗುವನೋ, ಎಂತು ಮನಃ ಶುದ್ಧಿ ಸಿಗುವದೋ ಅಂತಹ ಸಾರಭೂತವಾದ ಸರ್ವ ಭೂತಮಂಗಲಪ್ರದವಾದ ವಿಷಯವನ್ನು ನಿನ್ನ ನಿಶಿತ ಬುದ್ಧಿಯಿಂದ ನಿಶ್ಚಯಿಸಿ ಹೇಳು.

ಪ್ರಿಯ ಸೂತ! ನಿನಗೆ ಮಂಗಲವಾಗಲಿ! ವಸುದೇವನಿಂದ ದೇವಕಿಯಲ್ಲಿ ಜನಿಸಿದ ಪಾರ್ಥ ಸಖನಾದ ಶ್ರೀಕೃಷ್ಣನವತರಿಸಿದ್ದೇತಕ್ಕೆ? ಮೂಲರೂಪಿಯಾದ ನಾರಾಯಣನ ಅವತಾರಗಳು ಸಜ್ಜನರ ಕ್ಷೇಮಾಭಿವೃದ್ಧಿಗಳಿಲ್ಲವೇ? ಘೋರ ಸಂಸಾರದಲ್ಲಿ ನರಳುವ ನರನು ವಿವಶನಾಗಿ ಅರ್ಥಾನುಸಂಧಾನದಿಂದ, ಹರೇ! ಎಂದು ಉಚ್ಚರಿಸುವ ಮಾತ್ರದಿಂದ ಶೀಘ್ರವೇ ಮುಕ್ತನಾಗು ವನು. ಅಹಂಕಾರತತ್ವನಿಯಾಮಕನಾದ್ದರಿಂದ ಬಂಧಕನಾದ ಶಿವನೂ ಕೂಡ ಯಾವ ಸ್ವಾಮಿ ಯನ್ನು ಕಂಡು ದೂರ ಸರಿಯುವನೋ, ಭಾಗೀರಥಿಯಂತೆ ಭಾಗವತರೂ ಯಾವ ಪರಮಪುಣ್ಯ ಶ್ಲೋಕ ಶಿಖಾಮಣಿಯ ಪಾದವನ್ನಾಶ್ರಯಿಸಿರುವುದರಿಂದ ತಮ್ಮನ್ನು ಸೇವಿಪರ ಪಾಪರಾಶಿಯನ್ನು ನಾಶಗೈದು ದಿವ್ಯ ಜ್ಞಾನಕಾರಣರಾಗುವರೋ, ಅಂತಹ ಸ್ತೋತ್ರ ಪಾತ್ರ ಸಚ್ಚರಿತ್ರನಾದ ಭಗವಂತನ ಕಲಿಕಾಲ ಮಲಾಪಹರಣವಾದ, ಶ್ರವಣಭೂಷಣವಾದ ಹೃತ್ತೋಷಣವಾದ ಶ್ರೀಹರಿ ಕಲ್ಯಾಣ ಗುಣೋಪಚಿತ ಭಾಷಣಗಳನ್ನು ಯಾವ ಭಕ್ತನು ಕೇಳದಿರುವನು? ಯಾವ ಮನಃಶುದ್ಧಿ ಕಾಮನು ಕೇಳಿ ಸಂತೋಷಪಡದೆ ಇರುವನು?

ಬ್ರಹ್ಮಾದಿ ವಿಬುಧಜನ ಪರಿಗೀತವಾದ ಆ ಭಗವಂತನ ಉದಾರಕರ್ಮಗಳನ್ನು ಕೇಳಲು ನಾವೆಲ್ಲರೂ ಉತ್ಸುಕರಾಗಿರುವೆವು. ಅವನ ಅವತಾರಗಳಾವುವು? ಸ್ವೇಚ್ಛೆಯಿಂದ ಅವತರಿಸಿದ ಅವನ ಶುಭಗಾಥೆಗಳನ್ನು ಗಾನ ಮಾಡು ಸೂತಾ! ಪದಪದದಲ್ಲಿಯು ಮಧುರತರವಾದ ಉತ್ತಮ ಶ್ಲೋಕ ಚಕ್ರಪಾಣಿಯ ವಿಕ್ರಮಲೀಲೆಗಳನ್ನೆಷ್ಟು ಕೇಳಿದರೂ ನಮಗೆ ಸಾಕೆನಿಸಿಲ್ಲ. 'ರಸೋ ವೈ ಸಃ' ಅಲ್ಲವೇ?

ಬಲರಾಮನಿಂದ ಕೂಡಿ ಬ್ರಹ್ಮೇಶಮುಖಸುರವಲ್ಲಭನಾದ ಶ್ರೀಕೃಷ್ಣನು ಮಾಡಿದ ಲೋಕೋತ್ತರ ಕಾರ್ಯಗಳನ್ನು ನಾವು ಶ್ರದ್ಧೆಯಿಂದ ಕೇಳಲಿಚ್ಛಿಸಿರುವೆವು. ವರಗೋವಿಂದ ಕಥಾ ಸುಧಾರಸ ಮಹಾವರ್ಷೋರುಧಾರಾಪರಂಪರೆಯಿಂದಲ್ಲದೆ, ಸೂರಿಚಂದ್ರ! ಇತರೋಪಾಯ ಗಳಿಂದ ಪ್ರವಿಸ್ತರದುರ್ದಾಂತದುರಂತ ದುಸ್ಸಹಜನುಸ್ಸಂಭಾವಿತಾನೇಕದುಸ್ತರ ಗಂಭೀರ ಕಠೋರ ಕಲ್ಮಷ ಕನದ್ದಾವಾಗ್ನಿಯು ಶಾಂತಿಸುವದೇ? ಮನುಜರ ಮಧ್ಯದಲ್ಲಿ ಮಾಧವನು ತನ್ನ ಸ್ವರೂಪಾ ನಂದವನ್ನು ತೋರಗೊಡದೆ ಗೂಢವಾಗಿ ಸಾಮಾನ್ಯ ಮಾನವನಂತೆ ವರ್ತಿಸಿದನಂತೆ! ಈ ವೈಷ್ಣವ ಕ್ಷೇತ್ರದಲ್ಲಿ ಕಲಿಕಾಲವು ಬರುವದನ್ನರಿತು ದೀರ್ಘಸತ್ರವನ್ನು ಮಾಡುತ್ತಾ ವ್ಯಾಪಾರಾಂತರ ಗಳಂ ಬಿಟ್ಟು ಶ್ರೀಹರಿಕಥಾಕಲಾಪವನ್ನು ಕೇಳುತ್ತಾ ಅದೇ ನಮ್ಮ ಜೀವಾತುವೆಂದರಿತಿರುವೆವು.

ದೈವ ಯೋಗದಿಂದ ಜಲರಾಶಿಯನ್ನು ದಾಟಲಿರುವ ಜನರಿಗೆ ಕರ್ಣಧಾರನಂತೆ ಕಲಿ ದೋಷ ಹರಣ ವಾಂಛಾಕಲಿತರಾದ ನಾವು ನಿನ್ನನ್ನು ಪೊಂದಿ ಧನ್ಯರಾಗುವೆವು. ಯೋಗೇಶನಾದ ಶ್ರೀಕೃಷ್ಣನು ತನ್ನ ಮೂಲರೂಪವನ್ನೈದಲು ಭಕ್ತಿಜ್ಞಾನಲಕ್ಷಣ ಧರ್ಮವು ಯಾರಲ್ಲಿ ನೆಲೆಮಾಡಿ ನಿಂತಿದೆ? ಸೂತಾ! ಶ್ರೇಯಸ್ಸಾಧನವಾವುದು? ಅಂತರ್ಯಾಮಿ ಪ್ರೀತಿಯು ಹೇಗಾಗು ವುದು? ಕೃಷ್ಣಾವತಾರ ಗಳಲ್ಲಿ ಹರಿಯ ಚರಿತೆಗಳಾವುವು? ಅವನ ಯಶೋವರ್ಣನೆಯ ಮಹಿಮೆ ಏನು? ಅವತಾರಾಂತರ ಗಳ ವಿವರಗಳೆಂತು? ಧರ್ಮವೆಲ್ಲಿ ನಿಂತಿದೆ? ಎಂಬುವ ಈ ಆರು ಪ್ರಶ್ನೆಗಳಿಗೆ ಸಮಾಧಾನವಂ ಪೇಳಿ ನಮ್ಮನ್ನು ಸಂತೋಷಗೊಳಿಸು" ಎಂದು ಶೌನಕನು ಕೇಳಿದನು.

## ೨. ಸೂತಪ್ರತಿವಚನ - ಭಾಗವತಸಾರ

ನಿಖಿಲಪುರಾಣವ್ಯಾಖ್ಯಾನವೈಖರೀಸಮೇತನಾದ ಸೂತನಾಶೌನಕಾದಿ ಮುನಿಗಳ ವಚನವನ್ನು ಕೇಳಿ ಅವರನ್ನು ಪ್ರಶಂಸಿಸಿ, ದೇವತಾಗುರುವಂದನವನ್ನು ಮಾಡಲಿಚ್ಛಿಸಿ, ಇಂತೆಂದನು.

ಸರ್ವಸ್ವಪರಿತ್ಯಾಗವನ್ನು ಮಾಡಿ ಅವಧೂತರಾಗಿ ಶ್ರೀಹರೀಚ್ಛೆಯಂತೆ ಪ್ರಯಾಣ ಮಾಡುವ ದೇಹಾದ್ಯಭಿಮಾನರಹಿತರಾದ, ಏಕಾಕಿಗಳಾದ, ಕೃತಕೃತ್ಯರಾದ ಯಾವ ಶ್ರೀಶುಕಾಚಾರ್ಯನನ್ನು ನೋಡಿ ಪುತ್ರವಿಯೋಗ ಕಾತರರಂತೆ, ಅಧೀರರಂತೆ ಶ್ರೀ ವ್ಯಾಸದೇವರು ಪುತ್ರಾ! ಎಂದು ಕೂಗಲು, ಅಹಂಕಾರಾತ್ಮಕ ರುದ್ರಾವತಾರನಾದ ಶುಕನ ವ್ಯಾಪ್ತಿಯಿಂದ ವೃಕ್ಷಗಳು ಕೂಡ ಪ್ರತಿಧ್ವನಿಸಿದವೋ ಅಂತಹ ಸರ್ವಭೂತಹೃದಯ ಸ್ವಾಮಿಯಾದ ಶ್ರೀ ಶುಕಾಚಾರ್ಯನಿಗೆ ನಮಸ್ಕರಿಸುತ್ತೇನೆ. ಅವನು ಅಂತರ್ಗುರು ಮಾತ್ರನಲ್ಲದೇ ಜ್ಞಾನೋಪದೇಶಕನಾಗಿ ಬಹಿರ್ಗುರುವೂ ಆಗಿರುವುದರಿಂದ ಅವನಿಗೆ ಪುನಃ ನಮಸ್ಕಾರವು. ಯಾವ ಶುಕನು ತನ್ನ ಮನಸ್ಸಿನಲ್ಲಿ ವೇದಸಾರವಾದ ಭಾಗವತವನ್ನು ವೇದವೇದ್ಯನಾದ ಹರಿಯನ್ನೂ ಧರಿಸಿ ಅಧ್ಯಾತ್ಮ ತತ್ತ್ವದೀಪವನ್ನು ಸಂಸಾರಮಹಾಂಧಕಾರದಲ್ಲಿರುವ ಸಜ್ಜನ ಮುಮುಕ್ಷುಗಳಿಗೆ ತೋರಿ ಅವರನ್ನು ತಮಸ್ಸಿನಿಂದ ಪಾರು ಮಾಡಿದನೋ ಅಂತಹ ಕರುಣಾಪೂರ್ಣನಾದ ಭಾಗವತೋಪದೇಶಕನಾದ ಶ್ರೀಶುಕನಿಗೆ ನಮಸ್ಕಾರವು.

ಶ್ರೀ ನಾರಾಯಣನಿಗೂ, ಶ್ರೀ ರಮಾದೇವಿಗೂ, ಜೀವೋತ್ತಮರಾದ ಬ್ರಹ್ಮವಾಯು ಗಳಿಗೂ, ಭಾರತೀಸರಸ್ವತಿಯರಿಗೂ, ನರರೂಪನಾದ ಶೇಷದೇವರಿಗೂ ಭಾಗವತ ರಚನಾ ಸಮುಲ್ಲಾಸರಾದ ವೇದವ್ಯಾಸರಿಗೂ, ನಮಸ್ಕರಿಸಿ "ಜಯ" ಎಂದು ಖ್ಯಾತವಾದ ಶ್ರೀ ಭಾಗವತ ವನ್ನು ಅವರ ಕರುಣೆಯಿಂದ ಹೇಳುವೆನು.

ಮುನಿಶ್ರೇಷ್ಠರೇ! ಮೋಕ್ಷರೂಪವಾದ ಪರಮಮಂಗಲವನ್ನು ಕುರಿತು ನೀವು ಕೇಳಿದ ಪ್ರಶ್ನೆಯು ಶ್ಲಾಘನೀಯವಾಗಿದೆ. ಶ್ರೀಕೃಷ್ಣನ ಕಥೆಯು ಮನಶ್ಶುದ್ಧಿಗೆ ಕಾರಣವಾಗಿದೆ. ಮನ ಶ್ಶುದ್ಧಿಯಿಂದ ಜೀವನು ನಿಷ್ಕಲ್ಮಷನಾಗುತ್ತಾನೆ. ಅಂತಹನಲ್ಲಿ ಶ್ರೀಹರಿಯು ಪ್ರಸನ್ನ ನಾಗುವನು. ನಿರಂತರಾಯವೂ, ನಿಷ್ಕಾರಣವೂ ಆದ ಭಕ್ತಿಯನ್ನು ಪುಟ್ಟಿಸುವುದೇ ಪರಮಧರ್ಮವೆನಿಸುವದು. ಭಕ್ತಿಯಿಂದಲೇ ಭಗವತ್ಪ್ರಸಾದವಾಗುವದು. ವಾಸುದೇವನಲ್ಲಿ ಮಾಡಿದ ಭಕ್ತಿಯಿಂದ, ಶುಷ್ಕತರ್ಕ ದಿಂದ ಪುಟ್ಟಿದ ಅನ್ಯಥಾಜ್ಞಾನವು ನಶಿಸಿ, ಯಥಾರ್ಥ ಜ್ಞಾನವು ಮತ್ತು ವಿಷಯಾಸಂಗ ರೂಪವಾದ ವೈರಾಗ್ಯವು ಪುಟ್ಟುವುದು. ಶಾಸ್ತ್ರೋಕ್ತ ಸದಾಚಾರ, ದ್ರವ್ಯದೇಶಕಾಲಾದಿಗಳಿಂದ ಚೆನ್ನಾಗಿ ಅನುಷ್ಠಿತವಾದ ಸ್ವಧರ್ಮವೂ ಕೂಡ ದೈತ್ಯಾರಿಯಾದ ವಿಷ್ಣುಪಾದದಲ್ಲಿ ನಿರಂತರಾಭ್ಯಾಸ

ರೂಪ ರತಿಯನ್ನು ಹುಟ್ಟಿಸದಿದ್ದರೆ ಅದು ಶ್ರಮಫಲಕವೇ ಸರಿ. ಧರ್ಮಕ್ಕೆ ಫಲವು ಮೋಕ್ಷವೇ; ಅರ್ಥಕಾಮಗಳಲ್ಲ. ಅರ್ಥಕಾಮಗಳೂ ಮರಣ ಪರ್ಯಂತ; ಪಾರಲೌಕಿಕಗಳಲ್ಲ. ಅದರಲ್ಲಿ ಅರ್ಥವು ಧರ್ಮಮಾತ್ರ ಫಲಕವಾಗಿದೆ ಆಗಲಿ, ಕಾಮವೇ ಅದರ ಪ್ರಯೋಜನವಲ್ಲ. ಕಾಮದ ಲಾಭವು ಇಂದ್ರಿಯ ಪ್ರೀತಿಯಲ್ಲ. ಎಷ್ಟು ಮಾತ್ರ ಅರ್ಥಾದಿಗಳಿಂದ ಶರೀರಯಾತ್ರೆಯು ನಿರ್ವಹಿಸಲ್ಪಡುವದೋ ಅಷ್ಟೇ ಸಂಪಾದನೀಯವು ಎಂದರಿತು ಅರ್ಥಕಾಮಗಳಿಂದ ಧರ್ಮವನ್ನೂ, ಧರ್ಮದಿಂದ ವಿಷ್ಣುಕಥಾರತಿಯನ್ನೂ, ಕಥಾರತಿಯಿಂದ ಜ್ಞಾನ, ಭಕ್ತಿ, ವೈರಾಗ್ಯಗಳನ್ನೂ ಸಂಪಾದಿಸುವುದೇ ಕರ್ತವ್ಯವಾಗಿದೆ. ತತ್ತ್ವಜಿಜ್ಞಾಸೆಯನ್ನು ಮಾಡದ ಜೀವಿತದಲ್ಲಿ ಜೀವನಿಗೆ ಕಥಾರತಿಯೇ ಹುಟ್ಟಲಾರದು. ಭಗವತ್ತತ್ತ್ವವನ್ನರಿಯದ ಪುರುಷನು ಮಾಡಿದ ವಿವಿಧ ಕರ್ಮಗಳಿಗೆ ಐಹಿಕಾಮುಷ್ಮಿಕ ಫಲಗಳೆರಡೂ ಇಲ್ಲ. ಏಕೆಂದರೆ ಆ ಕರ್ಮಗಳನ್ನವನು ಭಗವಂತನಲ್ಲಿ ಅರ್ಪಿಸಿರುವುದಿಲ್ಲ. ಭಗವಂತನ ಯಥಾರ್ಥ ಸ್ವರೂಪವು ತತ್ತ್ವವೆನಿಸುವುದು. ಅವನು ಸಮಾಧಿಕರಹಿತನೂ ಜ್ಞಾನಸ್ವರೂಪನೂ ಆಗಿರುವನೆಂದು ಕಪಿಲಾದಿ ತತ್ತ್ವವೇದಿಗಳು ಪೇಳುವರು. ಗುಣಪೂರ್ಣನು ದೇಶಕಾಲಾದಿಗಳಲ್ಲಿ ವ್ಯಾಪ್ತನಾದ್ದರಿಂದ ಬ್ರಹ್ಮನೆಂತಲೂ, ಸರ್ವಾಂತರ್ಯಾಮಿಯಾದ್ದರಿಂದ ಪರಮಾತ್ಮನೆಂತಲೂ, ಐಶ್ವರ್ಯಾದಿ ಗುಣಗಳುಳ್ಳವನಾದ್ದರಿಂದ ಭಗವಂತನೆಂತಲೂ ಅವನನ್ನು ಕರೆಯುವರು. ಕೇವಲಾನಂದಮಯನಾದ ಆ ಶ್ರೀಹರಿಯು ಕಾರ್ಯಕಾರಣರೂಪವಾದ ಜಗತ್ತಿಗೆ ಭಿನ್ನನಾಗಿರುವನು. ಪ್ರಕೃತಿಯಲ್ಲಿಯೂ ಕಾರ್ಯಕಾರಣಗಳಲ್ಲಿಯು ನಿಯಾಮಕನಾಗಿದ್ದರೂ ಅವನಿಗೆ ಪ್ರಕೃತಿ ಸಂಬಂಧವಿಲ್ಲ. ಅಂತಹನಲ್ಲಿ ಭಕ್ತಿಯನ್ನು ಮಾಡುವದರಿಂದ ಜೀವನು ಬಂಧನರಾಹಿತ್ಯವನ್ನೈದುವನು. ಆದ್ದರಿಂದ ಮುನಿಗಳೆ! ಹರಿಮಾಹಾತ್ಮ್ಯಶ್ರವಣದಿಂದ ಪುಟ್ಟಿದ, ಜ್ಞಾನ ವೈರಾಗ್ಯಗಳಿಂದ ಹೆಚ್ಚಾದ ಭಕ್ತಿಯಿಂದ ಮನನಶೀಲರಾದ ವರು ತಮ್ಮ ಮನಸ್ಸಿನಲ್ಲಿಯೇ ಆ ಪ್ರಭುವನ್ನು ಕಾಣುವರು.

ಬ್ರಾಹ್ಮಣೋತ್ತಮರೇ! ವರ್ಣಾಶ್ರಮ ವಿಭಾಗದಿಂದ ಚೆನ್ನಾಗಿ ಮಾಡಲ್ಪಟ್ಟ ಧರ್ಮಗಳಿಗೆ ಶ್ರೀಹರಿ ಪ್ರೀತಿಯೇ ಫಲವಾಗಿದೆ. ಆದ್ದರಿಂದ ಒಂದೇ ಮನದಿಂದ ಭಗವಂತನ ಶ್ರವಣ ಮನನ ಧ್ಯಾನಗಳನ್ನು ಅವನ ಪೂಜೆಯನ್ನು ನಿತ್ಯ ಮಾಡುವುದರಿಂದ ಸಕಲ ಕುಕರ್ಮಫಲವೂ ನಷ್ಟವಾಗುವುದು. ಇಂತಹನ ಕಥೆಯಲ್ಲಿ ಯಾವ ಜ್ಞಾನಿಯು ಶ್ರದ್ಧೆ ವಹಿಸಲಾರನು? ವೇದಾದಿಶ್ರದ್ಧೆಯುಳ್ಳವನಿಗೆ ಭಗವತ್ಕಥೆಯಲ್ಲಿ ಶ್ರದ್ಧೆಯು, ಪುಣ್ಯತೀರ್ಥಯಾತ್ರೆಯ ಕಾಲದಲ್ಲಿ ಶ್ರೀಹರೀಚ್ಛೆಯಿಂದ ಲಭಿಸುವ ಮಹಜ್ಜನರ ಸೇವೆಯಿಂದಲೂ ಲಭಿಸುವುದು. ಸಜ್ಜನರಿಗೆ ಅನಿಮಿತ್ತ ಬಂಧುವಾದ ಗೋವಿಂದನು, ತನ್ನ ಮಹಿಮೆಯನ್ನು ಕೇಳುವವರ ಹೃದಯವನ್ನು ಪೊಕ್ಕು ಅವರ ಸರ್ವಪಾಪಗಳನ್ನು ಲಾಶಪಡಿಸುವನು. ಪಾಪಗಳು ನಶಿಸಲು ಭಾಗವತರ ಸೇನೆ ಹೆಚ್ಚಾಗಿ ಲಭಿಸುವುದು. ಭಾಗವತ ಧರ್ಮದ ಮತ್ತು ಭಾಗವತರ ಸೇವೆಯಿಂದ ಪುಣ್ಯಶ್ರವಣಕೀರ್ತನನಾದ ಉತ್ತಮಶ್ಲೋಕನಲ್ಲಿ ಅಚಂಚಲವಾದ ಭಕ್ತಿಯು ಪುಟ್ಟುವುದು. ಭಕ್ತಿಯಿಂದ ರಜಸ್ಸು ತಮಸ್ಸುಗಳ ಕಾರ್ಯವಾದ ಕಾಮಲೋಭಾದಿ ಪ್ರಮಾದಗಳು ದೂರ ಸರಿಯಲು, ಮನಸ್ಸು, ಸತ್ತ್ವದಲ್ಲಿ ಅಂದರೆ ಅದರ ಕಾರ್ಯವಾದ ಜ್ಞಾನದಲ್ಲಿ ಮಗ್ನವಾಗಿ ನಿರಂತರ ಹರಿಸ್ಮರಣಸಮರ್ಥವಾಗುವದು. ಅದರಿಂದ ಹರಿಯು ಪ್ರಸನ್ನನಾಗುವನು. ವಿಷಯಸ್ನೇಹವನ್ನು ದೂರವಾಗಿ ದೂಡಿದ ಭಕ್ತನಿಗೆ ಹರಿಪ್ರಸಾದದಿಂದ ಸ್ವಬಿಂಬ ಜ್ಞಾನವಾಗುವದು. ಅಪರೋಕ್ಷ ಜ್ಞಾನವಾದಾಕ್ಷಣವೇ ಲಿಂಗದೇಹವು ದಗ್ಧೇಂಧನವಹ್ನಿಯಂತೆ ಸ್ವಕಾರ್ಯವಾದ ಜನನಮರಣರೂಪ ಸಂಸಾರ ದಾನದಲ್ಲಿ ಅಸಮರ್ಥ

ವಾಗುವುದು. ಈಶ್ವರಾದಿ ತತ್ತ್ವವಿಷಯಕ ಸರ್ವಸಂಶಯವು ನಿವಾರಿತವಾಗಿ ಸ್ವಯೋಗ್ಯಜ್ಞಾನ ವಾಗುವದು. ಅದರಿಂದ ಪ್ರಾರಬ್ಧವೊಂದುಳಿದು ಸಂಚಿತಾಗಾಮಿ ಪಾಪಕರ್ಮಗಳ ಸರ್ವನಾಶ ವಾಗುವದು. ಈ ವಿಷಯಗಳನ್ನರಿತು ಜ್ಞಾನಿಗಳು ಮುಕ್ತಾಮುಕ್ತರೂ ಸಹ ಭಗವಂತನಾದ ವಾಸು ದೇವನಲ್ಲಿ ಬಹುಪ್ರೀತಿಯಿಂದ ಮನಃಪ್ರಸಾದಜನಕವೂ ಭಗವದನುಗ್ರಹಸಾಧನವೂ ಆದ ಭಕ್ತಿಯಂ ಮಾಡುವರು. ಅಮುಕ್ತರು ಮುಕ್ತಿಕಾಂತೆಯನ್ನು ಕೂಡುವರು.

ಸತ್ತ್ವ, ರಜಸ್ಸು, ತಮಸ್ಸು ಇವು ಜಡ ಪ್ರಕೃತಿಯ ಗುಣಗಳು. ಅವುಗಳ ಲೇಪವಿಲ್ಲದೆ ಇರುವನಾದರೂ ಶ್ರೀಹರಿಯು ಮೂಲಪ್ರಕೃತಿಯಿಂದ ಸೃಷ್ಟಿಗೋಸುಗ ರಜಸ್ಸನ್ನು, ಪಾಲನೆಗಾಗಿ ಸತ್ತ್ವವನ್ನು, ಸಂಹಾರಕ್ಕಾಗಿ ತಮಸ್ಸನ್ನು ಸ್ವೀಕರಿಸುವನು. ಆಗ ಶ್ರೀಹರಿಯು ಒಬ್ಬನೇ ಮೂರು ರೂಪಗಳನ್ನು ತಾಳಿ ಬ್ರಹ್ಮ, ವಿಷ್ಣು, ರುದ್ರ ಎನಿಸುವನು. ರಮಾದೇವಿಯಾದರೂ ಪ್ರಕೃತಿ ನಿಯಾಮಕಳಾದ್ದರಿಂದ ಸತ್ತ್ವದಲ್ಲಿ ಶ್ರೀ, ರಜದಲ್ಲಿ ಭೂ, ತಮದಲ್ಲಿ ದುರ್ಗಾ ಎಂಬುವ ರೂಪತ್ರಯದಿಂದ ಕೂಡಿ ಶ್ರೀಹರಿಯಲ್ಲಿ ರಮಿಸಿ ಸೃಷ್ಟ್ಯಾದಿಗಳನ್ನು ಮಾಡಿ ಆ ಮಹಾಪ್ರಭುವಿಗೆ ತಾ ಮಾಡಿದ ಸೇವಾಫಲವನ್ನು ಅರ್ಪಿಸುವಳು.

ಕಾಷ್ಠದಕಿಂತಲೂ ಮೇಘರೂಪವಾದ ಧೂಮವು ಉತ್ತಮವು. ಧೂಮದಕಿಂತಲು ವೇದ ಪ್ರತಿಪಾದ್ಯವಾದ ಅಗ್ನಿಹೋತ್ರನು ಶ್ರೇಷ್ಠನು. ಹಾಗೆಯೇ ಅಧೋಗತಿ ಸಾಧನವಾದ ತಮಸ್ಸಿ ಗಿಂತಲೂ ರಜಸ್ಸು, ಸ್ವರ್ಗಾದಿಲೋಕಸಾಧನವಾದ ರಜಸ್ಸಿಗಿಂತಲೂ ಸತ್ತ್ವವು ಉತ್ತಮವೆನಿಸಿದೆ. ಏಕೆಂದರೆ ಸತ್ತ್ವವು ಪರಬ್ರಹ್ಮದರ್ಶಕ ಜ್ಞಾನಸಾಧನವಾಗಿದೆ. ಹಾಗೆಯೇ ಸಾತ್ವಿಕರಾದ ಜೀವರೆ ಬ್ರಹ್ಮಜ್ಞಾನಾಧಿಕಾರಿಗಳಾಗಿದ್ದಾರೆ. ಆದ್ದರಿಂದ ಶಿಷ್ಟರಾದ ಮುನಿಗಳೂ ಬ್ರಹ್ಮಾದಿದೇವತೆಗಳೂ ಗುಣಗಳಲ್ಲಿ ಸತ್ತ್ವವನ್ನೇ ಅವಲಂಬಿಸಿ, ಅಪ್ರಾಕೃತ ಸತ್ತ್ವಸ್ವರೂಪನಾದ ಶ್ರೀಹರಿಯ ಲೋಕವನ್ನು ಪೊಂದಿದರು. ಸಂಸಾರಿಗಳಲ್ಲಿ ರಜಸ್ತಮಃ ಪ್ರಕೃತಿಯವರಿಗೆ ಮೋಕ್ಷಾನಂದವಿಲ್ಲ. ಆದ್ದರಿಂದ ಘೋರರೂಪರಾದ ಪಿತೃಭೂತ ಪ್ರಜೇಶರನ್ನು ಬಿಟ್ಟು ಪರಿಪೂರ್ಣಸುಖಾತ್ಮಕವಾದ ನಾರಾ ಯಣನ ಅವತಾರರೂಪಗಳನ್ನೇ ಭಜಿಸುತ್ತಾ ಸಾತ್ತ್ವಿಕ ಜನರು ತಮ್ಮ ಶಿಷ್ಯರಿಗೂ ಹಾಗೆಯೇ ವಾಸುದೇವನೇ ಭಜನೀಯನೆಂದು ಉಪದೇಶಿಸುವರು. ಸಂಸಾರ ಮುಮುಕ್ಷುಗಳಾದ ಸುಜನರವರ ಉಪದೇಶವನ್ನು ಅಸೂಯೆ ಮೊದಲಾದ ದೇಷವಿಲ್ಲದವರಾಗಿ ಅನುಸರಿಸಿ ಮೋಕ್ಷವನ್ನೈದುವರು. ಪ್ರಜಾಕಾಮರು ಐಶ್ವರ್ಯಕಾಮರು ಆದ ರಾಜಸರು ಮತ್ತು ತಾಮಸರು ಪಿತೃಭೂತ ಪ್ರಜೇಶರನ್ನೇ ಹರಿಯನ್ನು ಮರೆತು ಭಜಿಸುವರು.

ಸಕಲಶಾಸ್ತ್ರ ತಾತ್ಪರ್ಯವನ್ನು ಪರ್ಯಾಲೋಚಿಸಲು ಸಕಲರಿಂದ ಅವಶ್ಯ ಸೇವ್ಯನಾದವನು ಶ್ರೀ ನಾರಾಯಣನೇ–ಇದಕ್ಕೆ ಸಂಶಯವಿಲ್ಲ. ಏಕೆಂದರೆ ವೇದಾದಿಮಹಾ ತಾತ್ಪರ್ಯ ವಿಷಯನು ವಾಸುದೇವನು. ಅಗ್ನಿಷ್ಟೋಮಾದಿ ಯಜ್ಞಗಳವನ ಪ್ರೀತಿಗಾಗಿಯೇ. ಅಷ್ಟಾಂಗಯೋಗವು, ಸಂಧ್ಯಾದಿ ಕರ್ಮಗಳು, ಕಾಮಕ್ಲೇಶಾದಿ ತಪಸ್ಸು, ಇಷ್ಟಾಪೂರ್ತಾದಿ ಧರ್ಮಗಳು ಶಾಸ್ತ್ರಜ್ಞಾನ ದಾನಾದಿಗಳೆಲ್ಲವೂ ವಾಸುದೇವನ ಸರ್ವೋತ್ತಮತ್ವವನ್ನರಿತು ಮಾಡಿದರೇನೇ ಸಮೀಚೀನ ವೆನಿಸುತ್ತವೆ. ಇಲ್ಲದಿದ್ದರೆ ನಿಷ್ಫಲವಾಗುತ್ತವೆ. ಸತ್ಯಲೋಕಾದಿಗಳೂ ಕೂಡ ಶ್ರೀಹರಿಯ ವೈಕುಂಠ ದಂತೆ ಪುನರಾವೃತ್ತರಹಿತಗಳಲ್ಲ. ಆಗ ಶ್ರೀಹರಿಯೇ ಪ್ರಳಯಾವಸಾನದಲ್ಲಿ ತನ್ನ ಸ್ವೇಚ್ಛೆಯಿಂದ ಕಾರ್ಯಕಾರಣಾತ್ಮಕವಾದ ಪ್ರಕೃತಿಯಲ್ಲಿ ನಿಂತು ಆ ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತ ಮೋಗುಣಗಳನ್ನು ಉಪಾದಾನಕಾರಣವಾಗಿ ಮಾಡಿಕೊಂಡು ಪ್ರಕೃತಿನಿಯಾಮಕಳಾದ ಲಕ್ಷ್ಮೀ

ದೇವಿಯೂ ತಾನೂ ನಿಮಿತ್ತಕಾರಣರಾಗಿ ಈ ಜಗತ್ತನ್ನು ಸೃಷ್ಟಿಸಿದನು. ಗುಣತ್ರಯಗಳ ಲೇಪವಿಲ್ಲದ ಸಮರ್ಥನಾದ ಶ್ರೀಹರಿಯು ಗುಣನಿರ್ಮಿತವಾದ ಭೌತಿಕ ದೇಹೇಂದ್ರಿಯಾದಿಗಳಲ್ಲಿ ಪ್ರವೇಶಿಸಿ, ಸಕಲ ಪ್ರೇರಕನಾಗಿದ್ದರೂ ವಿಜ್ಞಾನಾನಂದಮೂರ್ತಿಯಾಗಿಯೇ ಇರುವನು. ಅಜ್ಞಾನಿಗಳು ದೇಹೇಂದ್ರಿಯಾದಿ ಸಂಬಂಧವುಳ್ಳವನಾದ್ದರಿಂದ ಆ ಪ್ರಭುವನ್ನೂ ಜೀವನೆಂದು ತಿಳಿಯುವರು. ಅನೇಕ ವಿಧ ಕಾಷ್ಠಗಳಲ್ಲಿರುವ ವಹ್ನಿಯು ಒಬ್ಬನೇ ಆಗಿರುವಂತೆ ಪರಮಾತ್ಮನು ತಾನೊಬ್ಬನೇ (ನಿರ್ವಿಶೇಷನು) ಆಗಿದ್ದರೂ ಅನೇಕ ರೂಪದವನಂತೆ ತೋರುವನು. ಪರಮಾತ್ಮನಲ್ಲಿ ಸ್ವಗತಭೇದವಿಲ್ಲ. ಕಾಷ್ಠಗಳಲ್ಲಿದ್ದಂತೆ ಭೇದವು ಜೀವರಲ್ಲಿ ಪರಸ್ಪರವಾಗಿಯೂ ಸತ್ಯರೂಪವಾಗಿಯೂ ಇದೆ. ದುರ್ಭಗ ಶರೀರ ಪ್ರವೇಶಾದಿಗಳಿಂದ ಆಗುವ ದುಃಖಾದಿಗಳು ಶ್ರೀಹರಿಗಿಲ್ಲ. ಪಂಚಭೂತಗಳು ಶಬ್ದಾದಿ ತನ್ಮಾತ್ರಗಳು ದಶೇಂದ್ರಿಯಗಳು ಮನಸ್ಸು ಇವುಗಳನ್ನು ನಿರ್ಮಿಸಿ ಅವುಗಳಲ್ಲಿ ಪ್ರವೇಶಿಸಿ, ಪ್ರೇರಿಸಿ ಅಲ್ಲಿ ಆಗುವ ಆನಂದಾದಿಗಳನ್ನೇ ಸ್ವೀಕರಿಸುವವನಾಗಲಿ ದುಃಖಾದಿಗಳನ್ನಲ್ಲ. ಇಂತು ಸತ್ವಗುಣವೃದ್ಧಿಯಿಂದ ಲೋಕಗಳನ್ನು ಪಾಲಿಸುತ್ತಾ ಪೂರ್ವಕರ್ಮವಶನಾಗಿ ಹುಟ್ಟುವ ಜೀವನಂತಲ್ಲದೆ ಲೋಕರಕ್ಷಣೆಗಾಗಿ ಸ್ವೇಚ್ಛೆಯಿಂದ ತಿರ್ಯಗ್ಯೋನಿಯಲ್ಲಿ ವರಾಹಾದಿರೂಪದಿಂದಲು, ನರರಲ್ಲಿ ರಾಮಕೃಷ್ಣಾದಿ ರೂಪದಿಂದಲೂ, ಸುರರಲ್ಲಿ ಮಹಿದಾಸಾದಿ ರೂಪದಿಂದಲು, ಬೇಕಾದಾಗ ಯೋನಿಯ ಅವಶ್ಯಕತೆಯಿಲ್ಲೆಂದು ಭಕ್ತರಿಗೆ ತೋರಿಸಲೋಸುಗ ಸ್ತಂಭಾದಿಗಳಿಂದ ನೃಸಿಂಹರೂಪದಿಂದಲೂ ಪ್ರಾದುರ್ಭವಿಸಿ ಸಜ್ಜನರಂ ಸಲಹುತ್ತಾನೆ.

## ೩. ಶ್ರೀಹರಿಯ ಅವತಾರಗಳು

ಭಗವಂತನು ಆದಿಯಲ್ಲಿ ಲೋಕಸೃಷ್ಟಿಯನ್ನು ಮಾಡಲಿಚ್ಛಿಸಿ ಮಹದಾದಿ ತತ್ತ್ವಗಳಿಂದ ಷೋಡಶಕಲಾಸಹಿತವಾದ ಪುರುಷರೂಪವನ್ನು ಸ್ವೀಕರಿಸಿದನು. ಪ್ರಲಯೋದಕದಲ್ಲಿ ಶ್ರೀಪರ್ಯಂಕದಲ್ಲಿ ಶ್ರೀಭುಜಾಂತರ್ಗತನಾಗಿ ತನ್ನನ್ನು ಗೂಢನಾಗಿಸುವ ತಮಸ್ಸಿನಲ್ಲಿದ್ದ ಪರಮ ಪುರುಷನು ಪುನಃ ಉತ್ಪತ್ತಿ ಕಾಲದಲ್ಲಿ ಸ್ವಗೂಹಕತಮಃಪಾನವನ್ನು ಮಾಡಿ ತನ್ನನ್ನು ತಾನೇ ಪ್ರಕಾಶಗೊಳಿಸಿದನು. ಯೋಗನಿದ್ರೆಯನ್ನು ಮಾಡುತ್ತಿದ್ದ ಆ ಪರಮ ಪುರುಷನ ನಾಭಿಸರೋವರಜಾತಕಮಲದಿಂದ ದಕ್ಷಾದಿಪ್ರಜೇಶರ ಒಡೆಯನಾದ ಬ್ರಹ್ಮನು ಪದ್ಮಕಲ್ಪದಲ್ಲಿ ಜನಿಸಿದಾಗ ಸ್ವಾಮಿಯು ಪದ್ಮನಾಭನೆನಿಸಿದನು. ಅದೇ ಹರಿಯು ಪುರುಷನೆನಿಸಿ ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ತನ್ನ ಅವಯವ ವಿನ್ಯಾಸ ಗಳಿಂದ ಹದಿನಾಲ್ಕು ಲೋಕಗಳನ್ನು ರಚಿಸಿದನು.

ಮೂಲರೂಪೀ ನಾರಾಯಣ, ಪದ್ಮನಾಭ, ಪುರುಷರೂಪತ್ರಯವು ನಿರ್ದೋಷವಾದುದು. ಸಕಲ ಕಲ್ಯಾಣಗುಣ ಪೂರ್ಣವಾದುದು. ಮಹಾಜ್ಞಾನಿಗಳಾದ ಬ್ರಹ್ಮಾದಿಗಳು ಅನಂತಪಾದಕರೋರುಭೂಜಾನನಾದ್ಭುತವಾದ ಅನಂತಶ್ರವಣನೇತ್ರನಾಸಿಕಾ ಸಮೇತವಾದ ಕಿರೀಟ ಕಟಕ ಕುಂಡಲ ಹಾರಾದಿ ಭೂಷಿತವಾದ ಈ ಪುರುಷರೂಪವನ್ನು ಕಂಡು ಸ್ತುತಿಪರು. ಈ ಸ್ವಾಮಿಯ ಸಾಮರ್ಥ್ಯೈಕ ದೇಶದಿಂದಲೇ ಸರ್ವ ಚರಾಚರ ಸೃಷ್ಟಿಯು ಆಗುವುದು. ಅನೇಕ ಅವತಾರ ರೂಪಗಳು ಇವನಿಂದ ಹೊರಬರುತ್ತಾ ಮತ್ತೆ ಅವನಲ್ಲೇ ಏಕೀಭಾವವನ್ನು ಹೊಂದುತ್ತವೆ. ಅವನಿಗೂ ಅವನ ಅವತಾರಗಳಿಗೂ ಯಾವ ವಿಧವಾದ ಭೇದವೂ ಇಲ್ಲ.

ಆ ದೇವನು ಪ್ರಥಮದಲ್ಲಿ ತನ್ನಿಂದ ತಾನೇ ಸನತ್ಕುಮಾರನೆಂಬ ರೂಪದಿಂದ ಜನಿಸಿ ಬ್ರಹ್ಮದೇವನಿಗೆ ವೇದವನ್ನುಪದೇಶಿಸಿದನು. ಬ್ರಹ್ಮಚರ್ಯವ್ರತವನ್ನು ವಿಶಿಷ್ಟ ಜನ ಶಿಕ್ಷೆಗಾಗಿ ಲೋಕದಲ್ಲಿ ನಡೆಸಿ ನೋಡಿಸಿದನು. ಇವನೇ ಒಂದಂಶದಿಂದ ಬ್ರಹ್ಮಮಾನಸಪುತ್ರರಾದ ಸನತ್ಕುಮಾರರಲ್ಲಿದ್ದು ಅವರ ಖ್ಯಾತಿಗೆ ಕಾರಣನಾಗಿರುವನು. ದ್ವಿತೀಯಾವತಾರದಲ್ಲಿ ರಸಾತಲ ಗತಳಾದ ಮಹೀಮಂಡಲವನ್ನುದ್ಧರಿಸಲು ಆದಿ ವರಾಹನಾಗಿ ಹಿರಣ್ಯಾಕ್ಷನಂ ಕೊಂದು ದೇವ ಸುಜನರ ಸಲಹಿದನು. ತೃತೀಯಾವತಾರವು ಮಹಿದಾಸರೂಪವಾಗಿದೆ. ದೇವರ್ಷಿಯೆನಿಸಿ ಇತರಾದೇವಿಯ ಮಗನಾದ ಮಹಿದಾಸನು ಪಾಂಚರಾತ್ರಾಗಮನವನ್ನು ರಚಿಸಿದನು. ಕರ್ಮ ಗಳಿಗೂ ಮೋಕ್ಷಸಾಧನತ್ವವು ಹೇಗೆ ಎಂದು ನಿರೂಪಿಸಿದನು. ಧರ್ಮ ಪ್ರಜೇಶನಲ್ಲಿ ಮೂರ್ತಿ ದೇವಿಯಿಂದ ನಾಲ್ಕು ರೂಪದಿಂದ ಜನಿಸಿದನು. ನರನೆಂಬುವ ಶೇಷನಲ್ಲಿ ನರನೆಂಬ ತನ್ನ ಶುಕ್ಲಕೇಶ ರೂಪದಿಂದಾವೇಶಿಸಿದನು. ನಾರಾಯಣ, ಹರಿ, ಕೃಷ್ಣ ಎನ್ನುವ ಮೂರು ರೂಪಗಳು, ತಾನಾಗಿಯೇ ಪೂರ್ಣನಾಗಿಯೇ ಇರುವನು. ನರನಾರಾಯಣರೆಂಬ ಈರ್ವರು ಋಷಿರೂಪರಾಗಿ ಬದರಿಕಾಶ್ರಮ ದಲ್ಲಿ ಭರತಖಂಡದ ಸುಜನಕ್ಷೇಮಾರ್ಥವಾಗಿ ತಪಸ್ಸಾಚರಿಸುತ್ತಿರುವರು. ಐದನೇ ಅವತಾರವು ಕಪಿಲಾವತಾರವು. ಕಾಲಬಲದಿಂದ ನಷ್ಟವಾದ ಯಥಾರ್ಥಜ್ಞಾನಜನಕವಾದ ಸಾಂಖ್ಯತತ್ವವನ್ನು ಆಸುರಿ ಎಂಬ ಶಿಷ್ಯನನ್ನುದ್ದೇಶಿಸಿ ಪೇಳಿ ಉದ್ಧರಿಸಿದನು. ಅತ್ರಿ ಋಷಿಗೆ ಅನಸೂಯೆಯಲ್ಲಿ ಜನಿಸಿ ತನ್ನನ್ನು ತಾನೇ ಪುತ್ರನಾಗಿ ಕೊಟ್ಟನಾದ್ದರಿಂದ ದತ್ತನೆನಿಸಿದ. ಆರನೇ ಅವತಾರದಲ್ಲಿ ಶ್ರೀಶನು ಅಲರ್ಕನಿಗೂ ಪ್ರಹ್ಲಾದ ಯದುಹೈಹಯಾದಿಗಳಿಗೂ ಪರಾಪರ ತತ್ತ್ವ ವಿದ್ಯೆಯನ್ನುಪದೇಶಿಸಿದನು. ಸ್ವಾಯಂಭುವ ಮನ್ವಂತರದಲ್ಲಿ ರುಚಿಪ್ರಜೇಶನಿಂದ ಆಕೂತಿ ಯಲ್ಲಿ ಜನಿಸಿದ. ಯಜ್ಞನು ಇಂದ್ರನಾಗಿ ಸುರರಾಜ್ಯವನ್ನಾಳಿದನಲ್ಲದೇ ಮನುರಾಜನನ್ನು ರಾಕ್ಷಸ ರಿಂದ ರಕ್ಷಿಸಿದನು. ಯಜ್ಞಾವತಾರವು ಏಳನೆಯದಾದಿದೆ. ಎಂಟನೇ ಅವತಾರದಲ್ಲಿ ಮೇರುದೇವಿ ಯಲ್ಲಿ ನಾಭಿರಾಜ ನಿಂದ ಋಷಭನೆನಿಸಿ ಜನಿಸಿ ಸರ್ವಾಶ್ರಮ ನಮಸ್ಕೃತವಾದ ಅವಧೂತ ಪದ್ಧತಿಯನ್ನು ಧೀರರಿಗಾಗಿ ನೋಡಿಸಿಕೊಟ್ಟನು. ಋಷಿಗಳ ಕೋರಿಕೆಯಂತೆ ಪೃಥುರಾಜನಲ್ಲಿ ಪೃಥು ಎಂಬ ತನ್ನ ಒಂಬತ್ತನೇ ರೂಪದಿಂದ ನೆಲಸಿ ಪೃಥಿವಿಯನ್ನು ಗೋವನ್ನಾಗಿಸಿ ಆಕೆಯಿಂದ ಎಲ್ಲಾ ಔಷಧಿಗಳಂ ಪಡೆದು ಜನರ ಜೀವನವನ್ನು ಕಲ್ಪಿಸಿ ಸತ್ಯಕಾಮರಲ್ಲಿ ಶ್ರೇಷ್ಠನೆನಿಸಿದನು. ಚಾಕ್ಷುಷ ಮನ್ವಂತರದ ಪ್ರಳಯದಲ್ಲಿ ಸ್ವಚ್ಛನಾದ ಮತ್ಸ್ಯನಾಗಿ ವೈವಸ್ವತಮನುವನ್ನು ಭೂರೂಪ ನೌಕೆಯಲ್ಲಿ ಕ್ಷೇಮ ದಿಂದಿರಿಸಿ ರಕ್ಷಿಸಿದ. ಈ ಅವತಾರವು ಹತ್ತನೆಯದು. ಏಕಾದಶಾವತಾರದಲ್ಲಿ ಕೂರ್ಮನಾಗಿ ಮಂದರಾಚಲವನ್ನು ಧರಿಸಿದನು. ದ್ವಾದಶದಲ್ಲಿ ಧನ್ವಂತರಿಯಾಗಿ ಸುಧೆಯನ್ನು ತಂದುಕೊಟ್ಟರೆ ತ್ರಯೋದಶವಾದ ಮೋಹಿನೀರೂಪದಿಂದ ಅಮೃತವನ್ನು ಸುರರುಗೆ ಮಾತ್ರ ಹಂಚಿ ಅಸುರರನ್ನು ವಂಚಿಸಿದನು. ಭಯಂಕರನಾದ ದೈತ್ಯೇಂದ್ರನನ್ನು ಅತಿ ಸುಲಭವಾಗಿ, ಚಾಪೆ ಮಾಡುವವನು ಬಿದಿರನ್ನು ಸೀಳುವಂತೆ ಸೀಳಿ ತರಳನಾದ ಪ್ರಹ್ಲಾದನನ್ನು ಸಲಹಿದ ನೃಸಿಂಹನು ಚತುರ್ದಶಾವತಾರವಾಗಿದೆ. ಹದಿನೈದನೇ ಅವತಾರದಲ್ಲಿ ವಾಮನ ರೂಪದಿಂದ ಕೂಡಿ ಬಲಿಯಂ ಬೇಡಿ ಪದತ್ರಯ ನೆವದಿಂದ ಕಸಿದ ತ್ರೈಲೋಕ್ಯ ರಾಜ್ಯವನ್ನು ಇಂದ್ರನಿಗೆ ಸಂಪಾದಿಸಿ ಕೊಟ್ಟನು. ಬ್ರಹ್ಮದ್ರೋಹಿಗಳಾದ ರಾಜರನ್ನು ಇಪ್ಪತ್ತೊಂದು ಸಲ ದಂಡಯಾತ್ರೆ ಯಂಗೈದು ಸಂಹರಿಸಿ ಶಾಂತನಾದ ಪರಶು ರಾಮನು ಹದಿನಾರನೆಯ ಅವತಾರವು. ಸತ್ಯವತೀ ದೇವಿಯಲ್ಲಿ ಪರಾಶರರಿಂದ ಪ್ರಾದುರ್ಭವಿಸಿ, ಅಲ್ಪಮತಿಗಳಾದ ಮನುಜರ ಜ್ಞಾನರಕ್ಷಣೆಗೆಂದು

ವೇದವಿಭಾಗವಂ ಮಾಡಿ ಪುರಾಣಗಳನ್ನು ರಚಿಸಿದನು. ಸುರಕಾರ್ಯನಿರ್ವಹಣೆಗೆಂದು ನರದೇವನಾಗಿ, ಸಾಗರನಿಗ್ರಹ ರಾವಣವಧ ಮೊದಲಾದ ಲೋಕೋತ್ತರ ಕಾರ್ಯಗಳಂ ಮಾಡಿದ ಶ್ರೀ ರಾಮಾವತಾರವು ಹದಿನೆಂಟನೆಯದು. ಹತ್ತೊಂಬತ್ತು ಇಪ್ಪತ್ತನೆಯ ಅವತಾರಗಳಾದ ರಾಮ-ಕೃಷ್ಣ ರೂಪಗಳನ್ನು ವೃಷ್ಣಕುಲದಲ್ಲಿ ಭೂಭಾರವನ್ನಿಳುಹಲು ಅಸುರಮರ್ದನನು ಧರಿಸಿದನು. ಬಲರಾಮನು-ಶೇಷನು. ಅವನಲ್ಲಿ ರಾಮನೆಂಬ ಶುಕ್ಲಕೇಶಾವೇಶದಿಂದ ಶ್ರೀಹರಿಯು ನೆಲಸಿದನು. ಅನಂತರದಲ್ಲಿ ಕಲಿಯುಗದ ಸಂಧ್ಯಾ ಕಾಲದಲ್ಲಿ ತ್ರಿಪುರವಾಸಿ ಅಸುರರನ್ನು ಮೋಹಪಡಿಸಿ ಧರ್ಮದೂರರಂ ಮಾಡಲು ಗಯಾ ಪ್ರಾಂತದ ಕೀಕಟ ದೇಶದಲ್ಲಿ ಜಿನಸುತನೆಂದೆನಿಸಿ ಬುದ್ಧನು ಅವತರಿಸಿ ಬೌದ್ಧಮತವೆಂಬ ಪಾಷಂಡ ಧರ್ಮವನ್ನುಪದೇಶಿಸಿದನು. ಬೌದ್ಧಾವತಾರವು ಇಪ್ಪತ್ತೊಂದನೆಯದು. ಇಪ್ಪತ್ತೆರಡನೆಯ ಸಲ ಶ್ರೀ ಕಲ್ಕಿಯೆನಿಸಿ ಜಗತ್ಪತಿಯಾದ ಪದ್ಮನಾಭ ಮೂರ್ತಿಯು ಕಲಿಯುಗದ ಅಂತ್ಯ ಸಂಧ್ಯಾಕಾಲದಲ್ಲಿ ರಾಜ್ಯಪಾಲಕರೆನಿಪರು ದಸ್ಯುಪ್ರಾಯರಾಗಿ ಪ್ರಜೆಗಳ ಪ್ರಾಣಮಾನ ವಿತ್ತಾಪಹಾರಕರಾಗಿ ಲೋಕಕಂಟಕರಾಗುತ್ತಿರಲು ಅವತರಿಸಿ ಭೂಭಾರವನ್ನು ಪರಿಹರಿಸಿ ಧರ್ಮವನ್ನು ಸ್ಥಾಪಿಸುವನು.

ಬಲಜ್ಞಾನಸ್ವರೂಪನಾದ ಶ್ರೀಹರಿಯ ಅವತಾರಗಳನಂತಗಳು. ಹೇ ವಿಪ್ರೋತ್ತಮರೇ! ಅವುಗಳನ್ನು ಸಾಕಲ್ಯೇನ ವರ್ಣಿಸಲು ಸಾಧ್ಯವೇ ಅಲ್ಲ. ಜಲಪಾತದಲ್ಲಿ ಜಲದ ಶೀಕರಗಳನ್ನೆಣಿಸಲಹುದಾಗಲಿ ಶ್ರೀಹರಿಯ ಗುಣಾವತಾರಂಗಳನ್ನು ವರ್ಣಿಸಿ ಮುಗಿಸಲು ಶ್ರೀ ಬ್ರಹ್ಮಾದಿಗಳಿಗೂ ಸಾಧ್ಯವಲ್ಲ. ಋಷಿಗಳು ಮನುಗಳು ದೇವತೆಗಳು ಮನುಪುತ್ರರು ಪ್ರಜಾಪತಿಗಳೆಲ್ಲರೂ ಹರಿಯ ಭಿನ್ನಾಂಶರು; ತದಧೀನರು; ತತ್ಸದೃಶರು. ಮೇಲೆ ಹೇಳಿದ ಇಪ್ಪತ್ತೆರಡು ಅವತಾರ ರೂಪಗಳು ಸಾಕ್ಷಾತ್ ಕೃಷ್ಣನೇ ಸರಿ. ಇವುಗಳಿಗೆ ಪರಸ್ಪರ ಭೇದವಾಗಲಿ ಭೇದಾಭೇದವಾಗಲಿ ಎಳ್ಳಷ್ಟೂ ಇರುವುದಿಲ್ಲ. ಮೂಲರೂಪೀ ನಾರಾಯಣನೇ ಇಂದ್ರಶತ್ರುಪೀಡಿತವಾದ ಲೋಕವನ್ನು ರಕ್ಷಿಸಲು ಯುಗಯುಗದಲ್ಲಿ ತನ್ನಿಚ್ಛೆಯಿಂದ ಅವತರಿಸುವನು. ಜಿತೇಂದ್ರಿಯನಾಗಿ ಯಾವ ನರನು ರಹಸ್ಯವಾದ ಈ ಅವತಾರ ಚರಿತವನ್ನು ಉಭಯ ಸಂಧ್ಯಾಕಾಲಗಳಲ್ಲಿ ಭಕ್ತಿಯಿಂದ ಪಠಿಸುವನೋ ಅವನು ಸಾಂಸಾರಿಕ ದುಃಖಗಳಿಂದ ಮುಕ್ತವಾಗುವನು. ಸಕಲ ಕಲ್ಯಾಣಗುಣ ನಿಧಾನನಾದ ಮಾಧವನ ಸ್ಥೂಲರೂಪವೇ ಈ ಬ್ರಹ್ಮಾಂಡವು. ಪ್ರತಿಮೆಯಂತೆ ಅವನಿಂದ ವ್ಯಾಪ್ತವಾಗಿ ನಡೆಸಲ್ಪಡುತ್ತದೆ. ಮಹದಾದಿ ತತ್ತ್ವರಚಿತವಾದ ಇದನ್ನು ಕಂಡು ಅಜ್ಞಾನಿಗಳು ಪ್ರತಿಮೆಯಂ ಕಂಡು ದೇವರೆಂಬುವ ಅಜ್ಞರಂತೆಯೇ ಈ ಬ್ರಹ್ಮಾಂಡವಾಗಿ ಪರಿಣಮಿಸಿರುವನೆಂದು ವಾದಿಸುವರು. ಸರ್ವಜ್ಞನನ್ನು ಜಡವೆನ್ನುವ ಈ ಜಡರನ್ನು ನೋಡಿದಾಗ ಮೇಘಮಾಲೆಯಂ ಕಂಡು ಆಕಾಶವೆನ್ನುವ ಅಥವಾ ಪಾರ್ಥಿವಧೂಳಿಯಂ ಕಂಡು ವಾಯುವೆನ್ನುವ ಬಾಲಬುದ್ಧಿಗಳ ನೆನಪಾಗುವುದಲ್ಲವೇ?

ಈಗ ಶೌನಕಾ! ಜೀವನಸ್ವರೂಪವನ್ನು ಪೇಳುವೆನು, ಕೇಳು.

ಜೀವನು ಅನಾದಿ ಕಾಲದಿಂದ ಸಾತ್ತ್ವಿಕನೋ ರಾಜಸನೋ ಅಥವಾ ತಾಮಸನೋ ಆಗಿರುವನು. ಈ ಸ್ವಭಾವವು ಎಂದಿಗೂ ನಾಶವಾಗದು, ಬದಲಾಗದು. ಮೇಲ್ಕಂಡ ಜಡ ಪ್ರಪಂಚದಿಂದಲೂ ಈಶನಿಂದಲೂ ಜೀವನು ಭಿನ್ನನಾಗಿರುವನು. ಪರಮಾತ್ಮನನ್ನು ಶ್ರವಣ ಮನನಾದಿಗಳಿಂದ ತಿಳಿಯದೆ, ಉಪಾಸನೆ ಮಾಡದೆಯಿರುವುದರಿಂದ ಪರಮಾತ್ಮನಾದ ಶ್ರೀಹರಿಯ ಜ್ಞಾನವಿಲ್ಲದೆ, ತಾನು ಯಾರು, ತನ್ನ ಗುಣಗಳೇನೆನ್ನುವ ಸ್ವಸ್ವರೂಪ ಜ್ಞಾನವೂ ಇಲ್ಲದೇ ಇರುವನು. ಮತ್ತೆ ಮತ್ತೆ ಜನನ ಮರಣಂಗಳನ್ನು ಅನುಭವಿಸುತ್ತಿರುವನು, ಸದಾ ಈಶಾಧೀಶನು.

ಶ್ರೀಹರಿಪ್ರಸಾದದಿಂದ ಬಂಧಕಶಕ್ತಿನಿರ್ಮಿತವಾದ ಅಜ್ಞಾನವು ನಶಿಸುವದು. ಆ ಪ್ರಭುವಿನ ಪ್ರಕಾಶಮಾನವಾದ ಅಜ್ಞಾನನಾಶಕವಾದ ಇಚ್ಛೆಯು ಪ್ರಾದುರ್ಭೂತವಾಗುತ್ತಲೇ ತದನುಗ್ರಹ ಪಾತ್ರನಾದ ಜೀವನು ಮುಕ್ತವಾಗುವನು. ಶ್ರೀಹರೀಚ್ಛೆ ಹೊರತು ಮುಕ್ತಿದಾನದಲ್ಲಿ ಸ್ವತಂತ್ರ ಕಾರಣವಿನ್ನೊಂದಿಲ್ಲ. ಮುಕ್ತಜೀವನು ಸ್ವರೂಪಜ್ಞಾನಾನಂದಾದಿಗಳನ್ನು ಸ್ವಯೋಗ್ಯ ತಾನುಸಾರ ವಾಗಿ ಪಡೆದು ವೈಕುಂಠಾದಿ ಲೋಕಗಳಲ್ಲಿ ಸ್ವಾವರರಿಂದ ಪೂಜಿತನಾಗಿರುತ್ತಾನೆ. ಇಂತು ಪ್ರಕೃತಿ ನಿರ್ಮಿತ ಸ್ಥೂಲ ಸೂಕ್ಷ್ಮ ಶರೀರಗಳು ಪರಮಾತ್ಮನಿಗೆ ಸರ್ವಜ್ಞನಾದ್ದರಿಂದ ಇಲ್ಲವೇ ಇಲ್ಲ. ಅವನ ಇಚ್ಛೆಯಿಂದ ಈ ಬಂಧವು ಅಜ್ಞಾನಿಯಾದ ಜೀವನಿಗೆ ಬಂದಿದೆ. ಅವನ ಇಚ್ಛೆಯಿಂದ ಬಂಧನಿವೃತ್ತಿಯೂ ಆಗುವುದೆಂಬ ತಿಳುವಳಿಕೆಗೆ ಬ್ರಹ್ಮಜ್ಞಾನವೆನ್ನುವರು. ಇಂತಹ ಜ್ಞಾನವೇ ಸಂಸಾರನಿವರ್ತಕವಾಗಿದೆ.

ಜನ್ಮರಹಿತನಾದ ಸ್ವಾಮಿಯ ಅವತಾರಗಳನ್ನು ಕರ್ಮಫಲ ಬದ್ಧವಾಗದ ಸರ್ವೇಶ್ವರನ ಪಾವನ ಚರಿತೆಗಳನ್ನು ಬ್ರಹ್ಮಾದಿ ಕವಿಜನರು ಅರಿತು ವರ್ಣಿಸುವರು. ಈ ಮನಃಪ್ರೇರಕನ ಮಹಾಮಹಿಮೆಯನ್ನು ಭ್ರಾಂತರೆಂತು ಬಲ್ಲರು?

ಸತ್ಯಸಂಕಲ್ಪನು, ಕ್ರೀಡಾರತನು ಆದ ರಮಾರಮಣನೀಲೋಕವನ್ನು ಸೃಷ್ಟಿಸಿ ಜೀವ-ಶರೀರ ಗಳಲ್ಲಿ ಪ್ರೇರಕನಾಗಿದ್ದು ಅನನ್ಯಾಧೀನನಾದ್ದರಿಂದ ಜೀವರ ಭೋಗಸಮಯಯದಲ್ಲಿ ಆನಂದ ವನ್ನೇ ಸ್ವೀಕರಿಸುವನು, ದುಃಖಗಳನ್ನಲ್ಲ. ಸೃಷ್ಟಿ, ಸ್ಥಿತಿ ಸಂಹಾರಗಳಿಂದವನಿಗೇನೂ ಪ್ರಯೋಜನ ವಿಲ್ಲದಿದ್ದರೂ ಕರುಣಾಕರನಾದ್ದರಿಂದ ಜೀವರಿಗಾಗುವ ಮುಕ್ತಿ ಪ್ರಾಪ್ತಿರೂಪ ಪ್ರಯೋಜನವನ್ನು ತನ್ನದಂತೆ ಅರಿತು ವಿಷಯಸಾರವಂಗೊಳ್ಳುವ ಹೃಷೀಕೇಶನಿಗೆ ಫಲಾಸಕ್ತಿಯೂ ಇಲ್ಲ, ಕರ್ಮ ಬಂಧವೂ ಇಲ್ಲ. ನಾಟಕದಲ್ಲಿ ನಟಿಸುವ ನಟನ ಸ್ವರೂಪಾದಿಗಳನ್ನು ಅಜ್ಞನು ಹೇಗೆ ತಿಳಿಯ ಲಾರನೋ ಅಂತೆಯೇ ಕ್ರಿಮೀ ಸದೃಶನಾದ ಈ ಪಾಮರ ಮನುಜನು ಆ ವನಜಾಕ್ಷನ ಅನಂತ ಮಹಿಮೆಯನ್ನು ಅರಿಯಲಾರನು. ಅವನ ನಾಮರೂಪಗಳನ್ನೂ ಎಣಿಸಿ ಮುಗಿಸಲಾರನು. ದುರಂತವೀರ್ಯನಾದ ರಥಾಂಗಪಾಣಿಯನ್ನು ಹೃತ್ಕಮಲ ಮಧ್ಯದಿ ನಿರಂತರ ಧ್ಯಾನವಂ ಮಾಡಿ ಕಾಪಟ್ಯಾದಿ ದೋಷಗಳಂ ಬಿಟ್ಟು ಸಂತತ ಸರಸಿಜಾಕ್ಷಪಾದಸರೋಜ ಗಂಧವನ್ನು ಸೇವಿಪ ಸಜ್ಜನನು ಮಾತ್ರ ಅವನ ಮಹಿಮೆಯಂ ಯಥಾಯೋಗ್ಯವಾಗಿ ಯಥಾರ್ಥಮಾಗಿ ತಿಳಿದಾನು!

ಅಹೋ! ಋಷಿವರ್ಯರೇ! ನೀವೇ ಧನ್ಯರು; ಏಕೆಂದರೆ ನಿರಪೇಕ್ಷರಾಗಿ ಅಖಿಲ ಲೋಕ ನಾಥನು ಸರ್ವಾಂತರ್ಯಾಮಿಯು ಆದ ವಾಸುದೇವನಲ್ಲಿ ನಿಷ್ಕಲ್ಮಷವಾದ ಭಕ್ತಿಯನ್ನು ಪೊಂದಿರುವಿರಿ. ಹರಿಯೇ ಸ್ವಾಮಿಯೆಂದು ಭಾವಿಸಿರುವಿರಿ. ಇಂತಹ ಭಕ್ತರಿಗೆ ಜನನ ಮರಣ ರೂಪ ಸಂಸಾರದಿಂದ ನಿವೃತ್ತಿಯು ನಿಶ್ಚಯವು. ವೇದಸಾರವಾದ ಭಾಗವತವೆಂದು ಖ್ಯಾತವಾದ ಉತ್ತಮ ಶ್ಲೋಕನ ಪಾವನ ಚರಿತೆಯನ್ನು ಭಗವಂತನಾದ ಬಾದರಾಯಣನು ಎಲ್ಲ ಲೋಕಗಳ ಜ್ಞಾನ ರೂಪ ಶ್ರೇಯಸ್ಸಿಗೂ ಪುಷ್ಟಿಗೂ ಮಂಗಳಕ್ಕಾಗಿಯು ರಚಿಸಿದನು. ಈ ಪುರಾಣರಾಜವು ಶಬ್ದದಿಂದ ಮಾತ್ರವಲ್ಲದೇ ಅರ್ಥದಿಂದಲೂ ದೊಡ್ಡದಾಗಿದೆ. ಇದನ್ನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಶುಕಾಚಾರ್ಯರೆಂಬ ತಮ್ಮ ಮಗನಿಗೆ ಉಪದೇಶಿಸಿದನು. ಆ ಶುಕರು ಗಂಗಾತೀರದಿ ವೈರಾಗ್ಯವನ್ನು ತಾಳಿ ಪ್ರಾಯೋಪವಿಷ್ಟನಾದ ಮಹಾರಾಜ ಪರೀಕ್ಷಿತನಿಗೆ ಋಷಿ ಸಭೆಯಲ್ಲಿ ಪೇಳಿದರು. ಆಗ ನಾನಲ್ಲಿ ಯೋಗ್ಯ ಸ್ಥಾನದಲ್ಲಿ ಕುಳಿತು ಅವರ ಪರಮಾಗ್ರಹದಿಂದ ಭೂರಿತೇಜ ನಾದ ರಾಜನಿಗೆ ಆ ಗುರುಗಳು ಪೇಳಿದ ಭಾಗವತವನ್ನಧ್ಯಯನ ಮಾಡಿರುವೆನು. ಈಗ ನಾನದನ್ನು

ಯಥಾಶ್ರುತವಾಗಿ ನನ್ನ (ಪ್ರಜ್ಞೆಯ) ಯೋಗ್ಯತೆಯಂತೆ ನಿಮಗೆ ಪೇಳುವೆನು. ಧರ್ಮ ಜ್ಞಾನಾದಿ ಗುಣಗಳಿಂದ ಶ್ರೀಕೃಷ್ಣನು ತನ್ನ ಮೂಲರೂಪವನ್ನೆದುತ್ತಿರಲು ಈ ಕಲಿಯುಗದಲ್ಲಿ ಜ್ಞಾನ ಧರ್ಮ ಪ್ರದರ್ಶನೆಗಾಗಿ ಭಾಗವತವನ್ನು ಶ್ರೀವ್ಯಾಸನೇ ರಚಿಸಿದನು.

## ೪. ಭಾಗವತ ರಚನೆ

ಎಂದು ಸೂತನು ಪೇಳಲು ದೀರ್ಘ ಸತ್ರಯಾಗರತರಾದ ಮುನಿಗಳಲ್ಲಿ ಋಷಿ ಕುಲಾಚಾರ ರಕ್ಷಕನೂ ಜ್ಞಾನವಯೋವೃದ್ಧನೂ ಋಗ್ವೇದನಿಷ್ಣಾತನೂ ಆದ ಶೌನಕನು ಶ್ರದ್ಧೆಯಿಂದ ಇಂತೆಂದನು –

ಸೂತ! ಸೂತ! ಪೂಜ್ಯನಾದ ಶುಕನು ರಾಜನಿಗೆ ಪೇಳಿದ ಪುಣ್ಯಮಾದ ಭಾಗವತವನ್ನು ನಮಗೆ ಹೇಳು. ಯಾವ ಯುಗದಲ್ಲಿ, ಎಲ್ಲಿ, ಅವರೀರ್ವರ ಸಂವಾದವು ನಡೆಯಿತು? ಶುಕನೇಕೆ ಅದನ್ನು ಪೇಳಿದನು? ಶ್ರೀವ್ಯಾಸನಾದರೂ ಈ ಪುರಾಣಸಂಹಿತೆಯನ್ನೇಕೆ ರಚಿಸಿದನು?

ಶ್ರೀಶುಕನು ಮಹಾಯೋಗಿಯು, ಸರ್ವದೇಶಕಾಲವ್ಯಾಪ್ತನಾದ ಶ್ರೀಹರಿಯನ್ನಪರೋಕ್ಷದಿಂ ನೋಡಿದವನು. ಸರ್ವವೀಶ್ವರಾಧೀನವೆಂದರಿತು ನನ್ನದು ಪರರದೆಂಬುವ ಭೇದಬುದ್ಧಿಯನ್ನು ತೊರೆದವನು. ಹರಿಯಲ್ಲಿಯೇ ರತವಾದ ಮತಿಯಿಂದ ಅಜ್ಞಾನಾದಿ ದೋಷಗಳನ್ನು ದೂರೀಕರಿಸಿ ದವನು. ಜ್ಞಾನೈಶ್ವರ್ಯಾದಿ ಗುಣಗಳನ್ನು ತೋರದೇ ಮೂಢರಂತಿರುವವನು. ಮೂಕ ಬಧಿರ ಮತ್ತರಂತೆ ಕಾಣುತ್ತಾ ಹಸ್ತಿನಾವತಿಯಲ್ಲಿ ಯದೃಚ್ಛೆಯಿಂದ ಬಂದ ಆ ಯೋಗಿ ವರನನ್ನು ಕುರುಜಾಂಗಲದ ಜಾನಪದರಾಗಲಿ ಪೌರರಾಗಲಿ ಶುಕರೇ ಇವರೆಂದು ತಿಳಿದರೆಂತು? ಹರಿಯ ಪರಮ ಶುಭಚಾರಿತಾತ್ಯಂತಮಂಗಲನಾದ ರಾಜರ್ಷಿ ಬ್ರಹ್ಮರ್ಷಿಗಳಿಂದಲೂ ಪ್ರಸಂಗವು ನಡೆದುದೆಂತು?

ಶುಕನಾದರೂ ಪಸಚಯಜ್ಞರತರಾದ ಗೃಹಪತಿಗಳ ಮನೆಗಳಿಗೆ ಭಿಕ್ಷಾಚರಣಾಗಾಗಿ ಬಂದು ಒಂದು ಗೋದೋಹನಕಾಲ ಮಾತ್ರ ಅವಾಙ್ಮುಖನಾಗಿ ನಿಂತು, ಅವರು ನೀಡಲಿ ಬಿಡಲಿ ಅವರ ಮನೆಯನ್ನು ತನ್ನ ಪಾದಕ್ರಮಣಗಲಿತ ಧೂಳಿಯಿಂದ ಪವಿತ್ರವನ್ನು ಮಾಡಿ ಪೋಗುವನಂತೆ. ಅವನ ದರ್ಶನ, ಸಂಭಾಷಣೆಗಳಷ್ಟು ದುರ್ಲಭವಾಗಿರಲು ಉಪದೇಶವಂತೂ ದುರ್ಲಭತರ ವಾಗಿದೆಯಲ್ಲವೇ?

ಅಭಿಮನ್ಯುಸುತನಾದ ಪರೀಕ್ಷಿತನನ್ನು ಭಾಗವತೋತ್ತಮನೆನ್ನುವರು. ಕೃಷ್ಣರಕ್ಷಿತನಾದ ಆ ರಾಜರ್ಷಿಯ ಜನನ ವೃತ್ತಾಂತವನ್ನು ನಮಗೆ ಪೇಳು. ಆ ಚಕ್ರವರ್ತಿಯು ಸಕಲ ಸಾರ್ವಭೌಮ ಸಂಪತ್ತಿಯನ್ನು ಗಣನೆ ಮಾಡದೆ ಗಂಗಾನದಿಯಲ್ಲಿ ಪ್ರಾಯೋಪವಿಷ್ಠನಾಗಲು ಕಾರಣವೇನು? ಮಂಡಲಪತಿಗಳಾದ ಶತ್ರುರಾಜರೂ ಕೂಡ ತಮ್ಮ ಕ್ಷೇಮಕ್ಕೆಂದು ತಂದ ಕಪ್ಪಕಾಣಿಕೆಗಳನ್ನು ಯಾವ ಮಹಾರಾಜನ ಪಾದಪೀಠದಲ್ಲಿ ಸಮರ್ಪಿಸಿ ನಮಿಸುವರೋ ಅಂತಹ ವೀರನಾದ ಪರೀಕ್ಷಿದ್ರಾಜನು ದುಸ್ತ್ಯಜವಾದ ಪ್ರಾಣವನ್ನು ರಾಜ್ಯ ಸಂಪತ್ತನ್ನು ಕೂಡ ಬಿಡಲಿಚ್ಛಿಸಿದ್ದೇತಕ್ಕೆ? ಉತ್ತಮ ಶ್ಲೋಕ ಪರಾಯಣರಾದ ಭಾಗವತೋತ್ತಮವರು ಸುಜನ ಲೋಕಕ್ಕೆ ಕ್ಷೇಮವಾಗಲಿ, ಐಶ್ವರ್ಯವಾಗಲಿ ಎಂದು ತದರ್ಥವಾಗಿ ಶ್ರಮಿಸುತ್ತ ಜೀವಿಪರು. ಇಂತಹ ಪರಾರ್ಥೈಕ ಜೀವನನಾದ ಪರೀಕ್ಷಿತನು ಅಖಂಡ ಭೂಮಂಡಲಾಧಿಪತ್ಯವನ್ನು ತ್ಯಜಿಸಿ ವೈರಾಗ್ಯವನ್ನು ವಹಿಸಿ

ದೇಹವನ್ನೇ ಬಿಟ್ಟನಲ್ಲವೆ? ಅದೇತಕ್ಕೆ? ಪುರಾಣಾದಿ ನಿರೂಪಣ ನಿಪುಣನಾದ ನೀನಾವಿಷಯ ವನ್ನೆಲ್ಲ ನಮಗೆ ಪೇಳು ಎಂದು ಶೌನಕನು ಕೇಳಿದನು –

ಆಗ ಸೂತನು ಪೇಳಿದನು – ದ್ವಾಪರಯುಗದ ಪರ್ಯವಸಾನ ಸಮಯದಲ್ಲಿ ಪರಾಶರ ರಿಂದ ಉಪರಿಚರನ ಸುಪುತ್ರಿಯಾದ ಸತ್ಯವತೀ ದೇವಿಯಲ್ಲಿ ನಿತ್ಯಜ್ಞಾನಿಯಾದ ಶ್ರೀಹರಿಯು ವೇದವ್ಯಾಸನಾಗಿ ಪುಟ್ಟಿದನು. ಒಂದು ದಿನ ಸರಸ್ವತೀ ತೀರದಲ್ಲಿದ್ದ ತನ್ನ ಆಶ್ರಮದಲ್ಲಿ ಕುಳಿತಿ ದ್ದನು. ಶುದ್ಧನಾಗಿ ಸ್ನಾನ ಸಂಧ್ಯಾದಿ ಕೃತ್ಯಗಳನ್ನು ಮುಗಿಸಿ ಏಕಾಂತದಲ್ಲಿ ಆಸೀನನಾಗಿದ್ದನು. ಸೂರ್ಯನು ಉದಯವಾಗುತ್ತಿರಲು ಆ ಹೊಂಬಿಸಿಲಾ ಋಷಿಯ ನೀಲ ದೇಹಕಾಂತಿಗೆ ಸುವರ್ಣ ಚ್ಛವಿಯಂ ಕೊಡುತ್ತಿದ್ದಿತು.

ತ್ರಿಕಾಲಜ್ಞಾನಿಯಾದ ಭಗವಂತನು ಮಹಾವೇಗದಿಂದೋಡುವ ಕಾಲಮಹಿಮೆಯಿಂದ ಆಗುವ ಯುಗಧರ್ಮಗಳ ಸಾಂಕರ್ಯವನ್ನು ಮನುಜಶರೀರಾದಿ ಪದಾರ್ಥಗಳ ಶಕ್ತಿಹ್ರಾಸವನ್ನು ಶ್ರದ್ಧೆಯಿಲ್ಲದ, ಸಾಧುಗಳಲ್ಲದ, ಧಾರಣಾಬುದ್ಧಿರಹಿತರಾದ, ನಿರ್ಭಾಗ್ಯರೂ, ಅಲ್ಪಾಯುಷ್ಯರಾದ ಮನುಜರನ್ನು ದಿವ್ಯಜ್ಞಾನದಿಂದ ಮೊದಲೇ ಕಂಡನು. ಸರ್ವಧರ್ಮಾಶ್ರಮಗಳಿಗೆ ಹಿತವು ಹೇಗಾ ದೀತೆಂದು ಚಿರಕಾಲ ಆಲೋಚಿಸಿ ನಿತ್ಯಜ್ಞಾನ ಮಹಾನಿಧಿಯಾದ ವ್ಯಾಸನು ಹೋತಾ, ಅಧ್ವರ್ಯು, ಉದ್ಗಾತಾ, ಬ್ರಾಹ್ಮಣನೆಂಬುವ ಯಜ್ಞಕರ್ತೃಗಳಿಂದ ಕೂಡಿದ ಯಜ್ಞಾದಿಗಳಿಂದ ಕ್ಷೇಮವಾದೀತೆಂದು ಯಜ್ಞಪರಂಪರಾ ಪ್ರವರ್ತನೆಗಾಗಿ ವೇದವನ್ನು ಅವಿಭಕ್ತವಾಗಿದ್ದುದನ್ನು ನಾಲ್ಕು ವಿಧವಾಗಿ ಭಾಗ ಮಾಡಿದನು. ಇತಿಹಾಸವೆನಿಸಿದ ಭಾರತವನ್ನು ರಚಿಸಿದನು. ಅದು ಪಂಚಮವೇದವೆಂದು ಖ್ಯಾತವಾಗಿದೆ ಮತ್ತು ಪುರಾಣಗಳನ್ನು ವೇದಾರ್ಥ ವಿವರಣೆಗಾಗಿ ರಚಿಸಿ ದನು.

ಋಗ್ವೇದವನ್ನು ಪೈಲನಿಗೂ, ಸಾಮವೇದವನ್ನು ಜೈಮಿನಿಗೂ, ಯಜುರ್ವೇದವನ್ನು ವೈಶಂಪಾಯನ ಸೂರ್ಯಾದಿಗಳಿಗೂ, ಅಥರ್ವಣವೇದವನ್ನು ವರುಣಪುತ್ರ ಸುಮಂತನಿಗೂ ಉಪದೇಶಿಸಿದನು. ಇತಿಹಾಸ ಪುರಾಣಗಳನ್ನು ನಮ್ಮ ತಂದೆಯಿಂದ ರೋಮಹರ್ಷಣನಿಗೆ ದಯಪಾಲಿಸಿದನು. ಆ ಋಷಿವರ್ಯರು ಶಿಷ್ಯ ಶಿಷ್ಯರಿಗೆ ಉಪದೇಶಿಸಿದ ಆ ವೇದ ಭಾಗಗಳು ಶಾಖೋಪಶಾಖಾ ಭೇದೇನ ವಿಸ್ತೃತವಾಗಿವೆ. ಅಲ್ಪಜ್ಞರಾದ ಮನುಜರೀವೇದಗಳ ನಿಜಾರ್ಥವಂ ತಿಳಿಯಲಾರರೆಂದರಿತು ಕೃಪಣವತ್ಸಲನಾದ ವ್ಯಾಸನು ಕರ್ಮಗಳೇ ಹಿತವೆಂದು ಪ್ರವೃತ್ತ ಕರ್ಮ ರತರಾದವರಿಗೆ ಮೋಕ್ಷವಾಗಲೆಂದು ಕರುಣೆಯಿಂದ ಸ್ತ್ರೀ ಶೂದ್ರ ದ್ವಿಜಾಭಾಸರಿಗೂ ಸುಜನರಿ ಗೆಲ್ಲಾ ಜ್ಞಾನವಾಗಲಿ ಎಂದು ಭಾರತವನ್ನು ರಚಿಸಿದನು.

ಶೌನಕಾದಿಗಳೆ! ಈ ರೀತಿಯಾಗಿ ಸದಾ ಭೂತಗಳ ಮುಕ್ತಿಸಾಧನ ನಿರೂಪಣದಲ್ಲಿ ತೊಡಗಿ ದ್ದರೂ ವ್ಯಾಸನ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಸರಸ್ವತಿ ನದಿತೀರದ ಏಕಾಂತ ಸ್ಥಲದಲ್ಲಿ ಕೂತು ಅವನಿಂತು ಚಿಂತಿಸಿದನು. "ಧೃತವ್ರತನಾದೆ, ವೇದಗಳನ್ನೋದಿದೆ. ಗುರುಗಳನ್ನೂ ಸೇವಿಸಿದೆ. ಅಗ್ನಿಹೋತ್ರನಿಗಾಹುತಿಗಳನ್ನರ್ಪಿಸಿದೆ. ನಿಷ್ಕಾಪಟ್ಯದಿಂದ ಗುರುಗಳ ಅನುಶಾಸನಗಳನ್ನು ಪಾಲಿ ಸಿದೆ. ಭಾರತದ ನೆವದಿಂದ ವೇದಾರ್ಥಗಳನ್ನರುಹಿದೆ. ಸ್ತ್ರೀಶೂದ್ರಾದಿಗಳು ಉದ್ಧಾರವಾಗಲು ಸಾಕಾದ ಧರ್ಮಗಳನಾಪಂಚಮವೇದದಲ್ಲಿ ಚೆನ್ನಾಗಿ ಪ್ರತಿಪಾದಿಸಿದೆ. ಆದರೂ ಈ ನನ್ನ ವ್ಯಾಪ್ತವಾದ ಸಮರ್ಥವಾದ ಮನಸ್ಸಿಗೇಕೋ ತೃಪ್ತಿಯಾಗಿಲ್ಲ. ಅವತಾರಕಾರ್ಯವಿನ್ನೂ ಅಸಂಪೂರ್ಣವಾದಂತೆ ತೋರುತ್ತಿದೆ. ಪರಮಹಂಸರಿಗೆ ಪ್ರಿಯವಾದ್ದರಿಂದ ಅಚ್ಯುತನಿಗೂ

ಪ್ರಿಯಕರವಾದ ಭಾಗವತ ಧರ್ಮಗಳನ್ನು ಸಾಕಷ್ಟು ನಿರೂಪಿಸಿಲ್ಲವೋ ಏನು?" ಎಂದು ಖಿನ್ನನಾದಂತೆ ಭಕ್ತೋದ್ಧಾರಕ್ಕಾಗಿ ಚಿಂತಿಸುವ ಕೃಷ್ಣದ್ವೈಪಾಯನರ ಆಶ್ರಮಕ್ಕೆ ನಾರದನು ಬಂದನು. ತತ್‌ಕ್ಷಣದಲ್ಲಿ ವ್ಯಾಸನು ನಾರದನನ್ನೆದುರುಗೊಂಡು ಕರೆತಂದು ಯಥಾಯೋಗ್ಯವಾಗಿ ಗೌರವಿಸಿದನು.

## ೫. ನಾರದ – ಬಾದರಾಯಣ ಸಂವಾದವು

ಆಗ ಸುಖಾಸೀನನಾದ ವೀಣಾಪಾಣಿ ದೇವರ್ಷಿಯು ತನ್ನನ್ನೇ ನೋಡುತ್ತಿರುವ ಬ್ರಹ್ಮರ್ಷಿ ವ್ಯಾಸನನ್ನು ಕಂಡು ಮಂದಹಾಸವಂ ಮಾಡುತ್ತಲಿಂತು ಕೇಳಿದನು.

"ಪಾರಾಶರ್ಯ! ಐಶ್ವರ್ಯಾದ್ಯನಂತಭಾಗ್ಯನಿಧೇ! ಸ್ವತ ಏವ ಕೃತಾವತಾರ ಕಾರ್ಯನಾಗಿ ಶರೀರಮಾನಸಗಳಲ್ಲಿ ಸಂತೋಷದಿಂದಿರುವೆಯಲ್ಲವೇ? ವೇದವನ್ನು ಚೆನ್ನಾಗಿ ವಿಚಾರ ಮಾಡಿರುವಿ; ವೇದವೇದ್ಯ ಬ್ರಹ್ಮಸ್ವರೂಪವನ್ನೂ ಅರಿತಿರುವಿ; ವೇದಶಾಸ್ತ್ರಾರ್ಥ ಪರಿಬೃಂಹಿತವಾದ ಪುರುಷಾರ್ಥಪ್ರದವಾದ ಭಾರತವನ್ನು ರಚಿಸಿರುವುದರಿಂದಲೇ ನಿನ್ನ ಅವತಾರ ಪ್ರಯೋಜನವು ಸಂಪೂರ್ಣವೇ ಸರಿ. ಆದರೂ ಅಕೃತಾರ್ಥನಂತೆ ತೋರುತ್ತಿರುವುದಕ್ಕೆ ಕಾರಣವೇನು, ಪ್ರಭೋ!"

ಎನ್ನಲು ವ್ಯಾಸನು ಪೇಳಿದನು. "ನಿಜ, ನಾರದಾ! ನೀ ಪೇಳಿದ್ದೆಲ್ಲ ಸತ್ಕಾರ್ಯಗಳೆನ್ನಿಂದಾದವು. ಆದರೆ ತೃಪ್ತಿಯಾಗದಿರುವುದಕ್ಕೆ ಕಾರಣವೇನು ನೀನೇ ಪೇಳು. ಹರಿನಾಭಿ ಸಂಭೂತನ ಸುತನಲ್ಲವೇ ನೀನಾದ್ದರಿಂದ ಪುರಾಣ ಪುರುಷನನ್ನುಪಾಸಿಸಿ ಎಲ್ಲವನ್ನೂ ತಿಳಿದಿರುವಿ. ಪ್ರಕೃತಿ ಗುಣಗಳ ಲೇಪವಿಲ್ಲದೆ ಅದೇ ಗುಣಗಳಿಂದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಮುಕ್ತಾಮುಕ್ತ ಜಗನ್ನಿಯಾಮಕನಾದ ಹರಿಯ ರಹಸ್ಯವ ನೀನರಿತಂತೆ ಯಾರು ತಿಳಿದಾರು? ಸೂರ್ಯನಂತೆ ಅವ್ಯಾಹತ ಗತಿಯಿಂದ ತ್ರಿಲೋಕಗಳಲ್ಲಿ ಸಂಚರಿಸಿ, ವಾಯುವಿನಂತೆ ಅಂತಸ್ಸಾಕ್ಷಿಯು ಆಗಿರುವ ನೀನು ಪರಬ್ರಹ್ಮ-ಶಬ್ದಬ್ರಹ್ಮಗಳಲ್ಲಿ ನಿಷ್ಣಾತನಾದ ನನ್ನ ಕೃತಕೃತ್ಯತೆಯು ಎಂತಾದೀತೆಂದು ಆಲೋಚಿಸಿ ಪೇಳು."

ನಾರದನು ವಿಜ್ಞಾಪಿಸಿದನು, "ಮುನಿವರ್ಯ! ಮಂದಾಧಿಕಾರಿಜನರಿಗೂ ಸುಗಮವೆನಿಸುವಂತೆ ಭಗವನ್ಮಹಿಮೆಯನ್ನು ನೀನು ವರ್ಣಿಸಿಲ್ಲವೋ ಏನೋ! ಅದರಿಂದ ನಿನ್ನ ಮನಸ್ಸಿಗೆ ಅಲಂಬುದ್ಧಿ ಉಂಟಾಗಿಲ್ಲ. ಭಾರತವು ದುರ್ಗಮಾರ್ಥವಾಗಿದೆ. ಅದೊಂದರಿಂದಲೇ ಸಾಕಷ್ಟು ಸಜ್ಜನೋದ್ಧಾರ ವಾಗದೆಂದು ನೀ ಭಾವಿಸಿರುವುದು ಸರಿಯಾಗಿದೆ. ಧರ್ಮಾದಿಗಳನ್ನು ಸಾಕಷ್ಟು ಪೇಳಿದ್ದರೂ ವಾಸುದೇವನ ಮಹಿಮಾವರ್ಣನೆಯು ಇನ್ನೂ ಮಾಡಬೇಕಾಗಿದೆ."

ಯಾವ ಶಾಸ್ತ್ರವು ಚಿತ್ರವಿಚಿತ್ರ ಪದಬಂಧಗರ್ಭಿತವಾಗಿದ್ದರೂ ಜಗತ್ಪವಿತ್ರವಾದ ಹರಿ ಚರಿತ್ರೆಯಂ ಕೀರ್ತಿಸದಿದ್ದರೆ ಅದು ವಾಯಸತೀರ್ಥವೆನಿಸುವುದು ಆಗಲಿ ಹಂಸಗಳಲ್ಲಿ ಸ್ನಾನ ಮಾಡಲು ಬರಲಾರವು. ಜೀವನಮಾತ್ರೋಪಯೋಗಿಯಾದೀತಾಶಾಸ್ತ್ರವಾಗಲಿ ಮೋಕ್ಷ ಸಾಧನವೆನಿಸಲಾರದು ಮತ್ತು ಸಜ್ಜನರದನ್ನು ಸ್ವೀಕರಿಸರು.

ಯಾವ ಶಾಸ್ತ್ರವು ಅಚಿತ್ರಪದವಾದರೂ ಅಲಂಕಾರರಹಿತವಾದರೂ ಅನಂತನ ಯಶೋಗಾನ ಮಾಡುವುದೋ ಅದೇ ಮೋಕ್ಷಸಾಧನವಾದ್ದರಿಂದ ಶುಕಾದಿಗಳು ಸನಕಾದಿಗಳೂ ಕೂಡ ಅದನ್ನು

ಆದರದಿಂದ ಕೇಳುವರು. ಗಾನ ಮಾಡುವರು. ಶಿರಸಾ ಅನುಮೋದಿಸಿ ಸ್ವೀಕರಿಸುವರು. ಅದೇ ಜನತಾ ಪಾಪವಿನಾಶ ಹೇತುವಾಗಿದೆ.

"ಸ್ವತಃ ಮುಕ್ತಿಸಾಧನವೂ ವಿಷಯಮಲರಹಿತವೂ ಅತ್ಯಂತ ವಿರಕ್ತಿಸಹಿತವೂ ಆದ ಪರೋಕ್ಷ ಜ್ಞಾನವು ಕೂಡ ಅಚ್ಯುತ ಭಕ್ತಿ ಬಂಧುರವಾಗದಿದ್ದರೆ ಮೋಕ್ಷದವಾಗಲಾರದು. ಅಂದಮೇಲೆ ಬಂಧಕವೂ ಅಮಂಗಲವೂ ಹರಿಗನರ್ಪಿತವೂ ಆದ ಕಾಮ್ಯಕರ್ಮವು ವ್ಯರ್ಥವೆಂದು ಹೇಳಬೇಕೇ? ಕರ್ಮವಾಗಲಿ ಜ್ಞಾನವಾಗಲಿ ಹರಿಭಕ್ತಿರಹಿತವಾದೊಡೆ ನಿಷ್ಫಲವೇ ಸರಿ. ಆದ್ದರಿಂದ ಅಪರಿಮಿತೈಶ್ವರ್ಯಾದಿಸಂಪನ್ನ! ಶುಚಿಶ್ರವ! ಸತ್ಯರತ! ಧೃತವ್ರತ! ಹಯೆ ವ್ಯಾಸ ಭಗವನ್! ಸಕಲಸಜ್ಜನ ಸಂಸಾರಬಂಧವಿಧ್ವಂಸನವಾದ ಉರುಕ್ರಮನ ಪರಾಕ್ರಮ ಲೀಲೆಗಳನ್ನು ಸಮಾಧಿ ಭಾಷೆ ಯಿಂದ ರಚಿಸು. ಕೇವಲ ಧರ್ಮಾದಿ ವಿಷಯಕವಾದ ಹರಿಕಥಾಬಾಹಿರವಾದ ಶಾಸ್ತ್ರ ರಚನೆಯಿಂದ ಅನರ್ಥವೇ ಆದೀತು! ಹೇಗೆಂದರೆ ಸ್ವರ್ಗಾದಿಗತಲಾವಣ್ಯಾದಿರೂಪ, ಮದನ ಕಲಿಕಾ ರತಿಮತೀತ್ಯಾದಿ ನಾಮಗಳಂ ಕೇಳಿ ತತ್ಪದಾರ್ಥಗಳಲ್ಲಿ ಮನಸ್ಸನ್ನು ಮಾಡಿ ಅವೇ ಸುಖ ಹೇತುಗಳೆಂಬ ಭ್ರಮೆಯಿಂದ ಪ್ರವೃತ್ತಿ ಕರ್ಮವಂ ಮಾಡಿದ ಮನುಜರು ಸ್ವರ್ಗ ನರಕಗಳನ್ನು ಕರ್ಮಫಲವಾಗಿ ಪೊಂದುತ್ತಾ ಎಂದೆಂದಿಗೂ ಸಮುದ್ರಮಧ್ಯದಲ್ಲಿ ವಾತಾಹತವಾದ ಪೋತದಂತೆ ದಡವನ್ನು ಸೇರಲಾರರು. ಅವರಿಗೆ ಜ್ಞಾನದಾರ್ಢ್ಯತೆ ಉಂಟಾಗಲಾರದು. ಸ್ವಾಮೀ! ಪ್ರವೃತ್ತಿಧರ್ಮದ ಉಪದೇಶವು ನಿಂದಿತವಲ್ಲವೇ? ಮತ್ತು ಅದು ಸಜ್ಜನರಿಗೆ ಮಾಡುವುದು ನ್ಯಾಯವೇ ಸರಿ. ಗಿಡದಿಂದ ಕೆಳಗೆ ಬಿದ್ದವನನ್ನು ಕರೆದು ಕೋಲಿನಿಂದ ಹೊಡೆದಂತೆ ಮೊದಲೇ ಪ್ರಾಕೃತನಾಗಿ ಕಾಮ್ಯಕರ್ಮರಕ್ತವಾದ ಮನಸ್ಸಿಗೆ ವಶನಾಗಿ ಸಾಂಸಾರಿಕ ತಾಪವನ್ನುಣ್ಣುತ್ತಿರುವ ಮನುಜನಿಗೆ ಕಾಮ್ಯಕರ್ಮನಿರೂಪಕ ಶಾಸ್ತ್ರರಚನೆಯಿಂದ ಉಪದೇಶದಿಂದ ಅನರ್ಥವೇ ಆಗುವುದು. ಅದನ್ನೇ ಅವನು ಧರ್ಮವೆಂದರಿತು ಬಿಡದೆ ಸೇವಿಸಿ ಸಂಸಾರಬಂಧದಿಂದ ಎಂದಿಗೂ ಮುಕ್ತನಾಗದಿರುವನು.

"ಪ್ರಭುವಾದ ವಾಸುದೇವನು ನಿವೃತ್ತಿ ಕರ್ಮದಿಂದ ಪ್ರೀತನಾಗಿ ಕೊಡುವ ಸುಖವನಂತವಾಗಿದೆ. ಅನಂತ ಮಹಿಮನಾದ ರಮಾಕಾಂತನಲ್ಲಿ ಭಕ್ತಿಯನ್ನು ಮಾಡಬೇಕು ಎಂದು ನಿರೂಪಿಸುವ ಭಾಗವತಶಾಸ್ತ್ರವನ್ನೇ ನೀನು ರಚಿಸು. ಸುತರಾಂ ಅಧರ್ಮವೇ ಆದ ಪ್ರವೃತ್ತಿಕರ್ಮವನ್ನು ಬಿಟ್ಟು ಹರಿಚರಣ ಸರೋಜವನ್ನು ಸೇವಿಪ ಭಕ್ತನೊಂದು ವೇಳೆ ಅಪರೋಕ್ಷವನ್ನು ಹೊಂದದೆ ಹೋದರೂ ಫಲಪರಿಪಾಕವನ್ನು ಸಾಧಿಸಿ ಕೊಡುವ ನಿವೃತ್ತಿ ಕರ್ಮಾನುಷ್ಠಾನವು ಅಪರೋಕ್ಷ ಜ್ಞಾನವು ಕೂಡ ಜನ್ಮಾಂತರದಲ್ಲಾದರೂ ಲಭಿಸುವುದು ನಿಶ್ಚಯವು. ಆದರೆ ಕೇವಲ ಪ್ರವೃತ್ತಿ ಧರ್ಮಭಜಕನಾದವನಿಗೆ ಹರಿಪ್ರೀತಿಯೂ ಇಲ್ಲ; ಹರಿಕರುಣಾ ಸಾಧ್ಯಗಳೇ ಆದ ಐಹಿಕಸುಖಗಳೂ ಆಗಲಾರವು. ಪ್ರವೃತ್ತಿಧರ್ಮಾನುಷ್ಠಾನವಿಲ್ಲದಿದ್ದರೂ ಸ್ವತಂತ್ರನಾದ ಸ್ವಾಮಿಯಿಂದ ದುಃಖವು ಬಂದಂತೆಯೇ ಅವನಿಂದಲೇ ಆಯಾ ಕಾಲದಲ್ಲಿ ಸುಖವು ಕೂಡ ಬಂದೇಬರುವುದೆಂದರಿತು ನಿಶ್ಚಿಂತನಾಗಿ ನಿವೃತ್ತಧರ್ಮ ಸೇವನೆಯನ್ನು ಮಾಡುವದೇ ಬುದ್ಧಿವಂತನ ಲಕ್ಷಣವು. ಅದರಿಂದಲೇ ಮೋಕ್ಷವು ಸಿಗುವುದಲ್ಲವೇ?

ಅಭಕ್ತನಂತೆ ಮುಕುಂದ ಚರಣಾರವಿಂದ ಸೇವಕನು ಎಂದಿಗೂ ಯಾವ ವಿಧವಾದ ದುರ್ಗತಿಯನ್ನು ಹೊಂದುವುದಿಲ್ಲ. ಅರವಿಂದನಾಭ ಚರಣಾರವಿಂದ ಸ್ಮರಣ ಸುಖವನ್ನೊಮ್ಮೆ ನೋಡಿದ ಸಾರಾಸಾರ ವಿವೇಕಿಯು ಪುನಃ ಶ್ರೀಹರಿಚರಣ ಸ್ಮರಣೆಯನ್ನೆಂದಿಗೂ ಬಿಡಲಾರನು. ಆ

ಮುಕುಂದನೋ ಜಗತ್ತಿನಲ್ಲಿ ಪ್ರತಿಮೆಯಲ್ಲಿ ಹೇಗೋ ಹಾಗೆಯೇ ವ್ಯಾಪಿಸಿ ನಿಂತಿರುವನು. ಜಗದ್ವಿಲಕ್ಷಣ ನಾಗಿರುವನು. ಜಗತ್ತಿಗೆ ಸಂಭವ ಸಂರಕ್ಷಾ ಸಂಹಾರಗಳಿವನಿಂದಲೇ ಆಗುವುವು. ಇಂತಹ ಸರ್ವಜ್ಞನು ಸರ್ವಸ್ವತಂತ್ರನು ಸರ್ವಶಕ್ತನು ಸರ್ವಸ್ವಾಮಿಯು ಆದ ಶ್ರೀಹರಿಯ ಮಹಿಮೆಯು ನಿನಗೆ ತಿಳಿದೇ ಇದೆ. ನಾಪೇಳುವುದೆನ್ನ ಉದ್ಧಾರಕ್ಕಾಗಿ ಹೊರತು ಅನ್ಯಥಾ ಇಲ್ಲ. ಉಪಾಧ್ಯಾಯರ ಮುಂದೆ ಬಾಲಕರು ಪಾಠವನ್ನೊಪ್ಪಿಸುವಂತೆ ಅವ್ಯಾಕೃತಾಕಾಶದಂತೆ ಅನಂತ ಜ್ಞಾನವಂತನು ಸಾಕ್ಷಾದ್ಭಗವಂತನಾದ ನಿನ್ನ ಮುಂದೆ ನನ್ನ ಪರಿಮಿತ ಜ್ಞಾನವನ್ನು ನೋಡಿಸಿ ಅಜನಾದ ಅಮೋಘಜ್ಞಾನನಾದ ಪರಮಾತ್ಮನ ಕಲಾಸಂಭೂತನಾದ ನಿನ್ನನ್ನು ಜಗನ್ಮಂಗಲಕರ ವಾದ ಭಾಗವತವನ್ನು ರಚಿಸೆಂದು ಕೇಳಿಕೊಳ್ಳುತ್ತಿರುವೆನು. ಪ್ರಭೂ! ತಪಸ್ಸು, ವೇದಾಭ್ಯಾಸ, ಯಜ್ಞಯಾಗಾದಿಕರ್ಮ, ವೇದಜ್ಞಾನ, ದಾನ, ಯಾತ್ರೆ, ಸಚ್ಚರಿತ್ರೆ ಇವುಗಳಿಗೆ ವ್ಯರ್ಥವಾಗದ ಫಲವೆಂದರೆ ಉತ್ತಮ ಶ್ಲೋಕನ ಗುಣಾನುವರ್ಣನವೇ ಎಂದು ಜ್ಞಾನಿಗಳು ಪೇಳುವರು."

ಜ್ಞಾನಿ ಜನರ ಸೇವೆಯಿಂದ ಭಗವದ್ಭಕ್ತಿಯು ಪುಟ್ಟುವುದು. ಜ್ಞಾನಿನಿಂದೆಯಿಂದ ಅನರ್ಥ ವಾಗುವುದು. ಈ ವಿಷಯದಲ್ಲಿ ನಾನೇ ಸಾಕ್ಷೀಭೂತನಾಗಿರುವೆನೆಂದು ನಾರದನು ತನ್ನ ಪೂರ್ವ ಜನ್ಮದ ವೃತ್ತಾಂತವನ್ನು ವ್ಯಾಸನಿಗೆ ಪೇಳಿದನು.

ಪೂರ್ವಕಲ್ಪದಲ್ಲಿ ನಾನು ದಾಸೀಪುತ್ರನಾಗಿದ್ದೆನು. ನನ್ನ ತಾಯಿಯು ಅದೃಷ್ಟದಿಂದ ವೇದ ವೇತೃಗಳಾದ ಪವಿತ್ರ ಬ್ರಾಹ್ಮಣರ ಮನೆಕೆಲಸ ಮಾಡುವಳು. ನಾನು ಬಾಲಕನಾಗಿದ್ದರೂ ಆಟಪಾಟಗಳಲ್ಲಿ ಲೋಲನಾಗದೆ ಇದ್ದೆನು. ಒಂದು ಸಲ ಆಷಾಢದಲ್ಲಿ ಕೆಲ ಯೋಗಿಪುಂಗವರು ಆ ಮನೆಗೆ ಬಂದು ಚಾತುರ್ಮಾಸ್ಯಸಂಕಲ್ಪ ಮಾಡಿ ಅಲ್ಲೇ ತಂಗಿದರು. ಆ ಸನ್ಯಾಸಿಗಳು ಚಾಪಲ್ಯ ವಿಲ್ಲದೆ ಕ್ರೀಡಾರತನಾಗದೆ ಇಂದ್ರಿಯಜಯವುಳ್ಳ ಅರ್ಭಕನಾದ ನನ್ನನ್ನು ಕಂಡು ಕೃಪೆ ಮಾಡಿ ತಮ್ಮ ಸೇವಾಸೌಲಭ್ಯವನ್ನೊದಗಿಸಿ ಕೊಟ್ಟರು. ನಾನಾದರೂ ಹೆಚ್ಚು ಮಾತನಾಡದೆ ಅವರ ಉಚ್ಛಿಷ್ಟಲೇಪನ, ಭಕ್ಷಣಾದಿಗಳಲ್ಲಿ ತೊಡಗಿ ದಿನಕ್ಕೊಂದೇ ಸಲ ಭುಜಿಸುತ್ತಾ, ಹರಿಯ ಚರಣವಂ ಭಜಿಸುತ್ತಾ ಪಾಪಗಳಿಂದ ದೂರನಾದೆ. ನನ್ನ ಮನಸ್ಸರೋವರವು ಹರಿಚರಣಸ್ಮರಣ ಗಂಗಾ ಸಂಗದಿಂದ ನಿರ್ಮಲವಾಯಿತು. ವೈರಾಗ್ಯ ಭಕ್ತಿಭರಿತನಾಗಿ ಶ್ರವಣಾಸಕ್ತನಾದೆ. ಶ್ರುತಿ ಮನೋಹರವಾದ ಹರಿಚರಿತೆಗಳನ್ನವರು ಪಾಡುತ್ತಿರಲು ಅವರ ಅನುಗ್ರಹದಿಂದಲ್ಲಿ ಕೂತು ತ್ರಿಷವಣಗಳಲ್ಲಿ ಶ್ರದ್ಧೆಯಿಂದ ಕೇಳಿದೆ. ಕ್ರಮೇಣ ಪರಮಮಂಗಲಕೀರ್ತಿಯಾದ ಹರಿಚರಣಂಗಳ ಮಂಗಳಧ್ಯಾನವೆನಗೊದಗಿ ಬಂತು. ರಾಗಾದಿ ದೋಷರಹಿತವಾದೆನ್ನ ಮನವು ಅಖಂಡೋಪಾಸ ನಾಸಕ್ತವಾಯಿತು. ಸ್ವೇಚ್ಛೆಯಿಂದ ಲಕ್ಷ್ಮೀದೇವಿಯಂ ಕೂಡಿ ಕಾರ್ಯಕಾರಣಾತ್ಮಕ ಜಗತ್ತನ್ನು ನಿರ್ಮಾಣ ಮಾಡಿ ವ್ಯಾಪ್ತನಾಗಿರುವ ಶ್ರೀಶನೇ ಎನ್ನ ಸ್ವಾಮಿಯು ಬಿಂಬರೂಪನು ಎಂದು ಕಂಡೆ, ಆನಂದಗೊಂಡೆ. ನನ್ನಿಂದ ರಾಗಾದಿಗಳಂತೆ ನಿದ್ರಾದಿಗಳೂ ದೂರ ಸರಿದವು. ಭಕ್ತಿ ಗಂಗೆಯು ಎನ್ನ ಮನದಂಗಣದಿ ಹರಿದಳು. ಇದೆಲ್ಲವೂ ಆ ಮಹಾತ್ಮರ ಅನುಗ್ರಹವೇ ಸರಿ!

ಚಾತುರ್ಮಾಸ್ಯ ಕಾಲವು ಮುಗಿಯುವಾಗ ಆ ಸನ್ಯಾಸಿಗಳು ಪೊರಮಟ್ಟರು. ಆಗ ನನ್ನನ್ನು ನೋಡಿ ಇವನು ಅನುರಕ್ತನಾದ ಭಕ್ತನು. ವಿನೀತನು ಪಾಪರಹಿತನು. ಶ್ರದ್ಧಾಳುವೆಂದು ಕೃಪಾಳು ಗಳಾದ ಆ ಪರಮಪೂಜ್ಯರು ಸಂಪ್ರದಾಯಾಗತವಾದ ರಹಸ್ಯ ಜ್ಞಾನತತ್ತ್ವವನ್ನು ಪೇಳಿ ಅನುಗ್ರಹಿ ಸಿದರು. ಅವರ ಉಪದೇಶದಿಂದ ಪರಮಪದವನ್ನೈದಿಸುವ ಶ್ರೀ ವಾಸುದೇವನ ಇಚ್ಛಾಸಾಮರ್ಥ್ಯವಂ ತಿಳಿದು ಅವನ ಭಕ್ತನೆನಿಸಿದೆ. ಕರ್ಮರಹಸ್ಯವನ್ನಾದರೂ ಅವರೇ ಎನಗೆ ತಿಳಿಸಿದರು. ಸಕಲ

ಶುಭ ಕರ್ಮಫಲವನ್ನಾ ಗುಣಗಣಪೂರ್ಣನಾದ ನಾರಾಯಣನಿಗರ್ಪಿಸುವುದೇ ಸಕಲ ತಾಪತ್ರಯ ನಿವರ್ತಕವು. ಯಾವ ಪದಾರ್ಥವು ರೋಗಜನಕವೋ ಅದೇ ಪದಾರ್ಥವನ್ನು ರಸಾದಿಗಳಿಂದ ಶುದ್ಧಗೊಳಿಸಿ ಔಷಧವಂ ಮಾಡಿ ಅದೇ ರೋಗವಂ ಕಳೆಯುವಂತೆ ಮನುಜರು ಮಾಡಿದ ಕರ್ಮಗಳೆಲ್ಲವೂ ಸಂಸಾರಕಾರಣಗಳೇ ಆದರೂ ನಿರ್ದೋಷ ಗುಣಪೂರ್ಣನಾದ ಶ್ರೀಹರಿಯಲ್ಲಿ ಸಮರ್ಪಿತವಾದೊಡನೆ ಅನೇಕ ಜನ್ಮಸಂಚಿತ ದುಷ್ಕರ್ಮಸ್ವರೂಪನಾಶಕವಾಗುವವು. ಭಗವತ್ಪರಿತೋಷಕವಾದದ್ದೇ ಕರ್ಮವು. ಅದರಿಂದ ಜ್ಞಾನವು, ಆ ಜ್ಞಾನದಿಂದಲೇ ಭಕ್ತಿ, ಅದರಿಂದ ಮುಕ್ತಿ. ಆದ್ದರಿಂದಲೇ ಋತ್ವಜರೂ ಕೂಡ ಕರ್ಮಗಳನ್ನು ಮಾಡುವಾಗ ಪುನಃ ಪುನಃ ಅವನ ಆಜ್ಞೆಯಂತೆ ಆ ಶ್ರೀಹರಿಯ ಪವಿತ್ರನಾಮಗಳನ್ನುಚ್ಚರಿಸುತ್ತಿರುವರು. ಸದಾ ಅವನನ್ನೇ ಸ್ಮರಿಸುವರು. "ಬಲಜ್ಞಾನಾನಂದರೂಪನು ದೈತ್ಯಪ್ರತೀಪನು ಕ್ರೀಡಾದಿಗುಣವಿಶಿಷ್ಟನಾದ ವಾಸುದೇವನೇ! ಹಿರಣ್ಮಯಾತಿಶಯಕಾಂತಿಯುಕ್ತನು. ಹಿರಣ್ಮಕೇಶಾದಿ ಅಪ್ರಾಕೃತ ಸರ್ವಾವಯವನಾದ ಪ್ರದ್ಯುಮ್ನನೇ! ಮುಖ್ಯಪ್ರಾಣವಲ್ಲಭನು. ಅನನ್ಯಾಧೀನನಾದ ಅನಿರುದ್ಧನೇ! ಪಾಪಕರ್ಷಣಶೀಲನು. ಸಮಿಚೀನ ಕರ್ಮಫಲಪ್ರದನಾದ ಸಂಕರ್ಷಣನೇ! ನಿನಗೆ ನಮಸ್ಕಾರವು" ಎಂದು ಚತುರ್ಮೂರ್ತಿಯಾದ ಸ್ವಾಮಿಯನ್ನು ಪ್ರಾಕೃತವಿಗ್ರಹ ವಿಧುರನೆಂದರಿತು ಯಜ್ಞಪುರುಷನಾದ ಹರಿಪ್ರೀತಿಗಾಗಿಯೇ ಯಜ್ಞಾದಿ ಕರ್ಮಗಳನ್ನು ಮಾಡುವ ಸಜ್ಜನನು ಪರೋಕ್ಷಜ್ಞಾನವನ್ನು ಮಾತ್ರವಲ್ಲದೆ ಅಪರೋಕ್ಷಜ್ಞಾನವನ್ನು ಹೊಂದುವನು.

ಇಂತು ಸ್ವಧರ್ಮದಲ್ಲಿದ್ದು ಸ್ವಯೋಗ್ಯನಿಷ್ಕಾಮಕರ್ಮವನ್ನು ಮಾಡಿದ ನನ್ನಲ್ಲಿ ಕನಿಕರಿಸಿ ಸ್ವವಿಷಯಕ ಜ್ಞಾನವನ್ನು ಭಕ್ತಿಯನ್ನು ಶ್ರೀಹರಿಯು ಅನುಗ್ರಹಿಸಿದನು.

ಮಹಾನುಭಾವನಾದ ವ್ಯಾಸದೇವನೇ! ನೀನಾದರೂ ಈಶ್ವರನಾದ ಕಾರಣ ಸಾಂಸಾರಿಕ ದುಃಖಪೀಡಿತರಾದ ಸಜ್ಜನರ ಕ್ಲೇಶನಿವಾರಣವಾದ, ಕೇಶವಯಶೋವಿಶಾಲವಾದ, ಗ್ರಂಥವನ್ನು ರಚಿಸು. ಅದರಿಂದ ನಿನ್ನ ಅತೃಪ್ತಿಯು ದೂರವಾಗುವುದು.

## ೬. ನಾರದಕೃತ ಭಗವದ್ದರ್ಶನ

ದೇವರ್ಷಿಯ ಜನ್ಮಕರ್ಮಗಳನ್ನು ಕೇಳಿ ಭಗವಾನ್ ವ್ಯಾಸನು ಪುನಃ ನಾರದನನ್ನು ಪ್ರಶ್ನಿಸಿದನು.

"ನಾರದಾ! ನಿನಗೆ ಜ್ಞಾನೋಪದೇಶಕರಾದ ಭಿಕ್ಷುವರ್ಯರು ಹೊರಟನಂತರ ಬಾಲಕನಾದ ನೀನೇನು ಮಾಡಿದೆ? ಜ್ಞಾನಾನಂತರ ಕಾಲದಲ್ಲಿ ಹೇಗೆ ಜೀವನವಂ ಕಳೆದೆ? ಕಾಲವು ಒದಗಿ ಬಂದಾಗ ಆ ಕಳೇಬರವನ್ನು ಹೇಗೆ ಬಿಟ್ಟೆ? ಹಿಂದಿನ ಕಲ್ಪದ ಈ ವಿಷಯಂಗಳನ್ನೆಲ್ಲಾ ಸರ್ವಜ್ಞಾನ ನಿರಾಕರಣ ಸಮರ್ಥವಾದ ಕಾಲಬಲದಿಂದ ಅಳಿಸಿಹೋಗದೇ ನಿನ್ನ ಸ್ಮರಣೆಯಲ್ಲಿರುವ ಬಗೆ ಹೇಗೆ?" ಎನ್ನಲು ನಾರದನು ಪೇಳಿದನು.

"ಭಿಕ್ಷುಗಳು ಪೊರಡುವಾಗ ನನಗಿನ್ನೂ ಬಾಲ್ಯವು. ನನ್ನ ತಾಯಿ ಬೇರೆಯಿದ್ದಳು. ಅವಳಿಗೆ ನಾನೊಬ್ಬನೇ ಮಗನು. ನನ್ನಲ್ಲಿ ಏನೋ ಸ್ನೇಹ! ತಾನು ಇನ್ನೊಬ್ಬರ ಮನೆಯ ದಾಸಿ! ನಾನೋ ಶ್ರೀಹರಿಯೇ ಗತಿಯೆಂದರಿತು ಈ ಸಾಂಸಾರಿಕ ಬಂಧಗಳಂ ಬಿಟ್ಟದ್ದೆ. ಆದರೂ ಮೋಹದಿಂದ ತನ್ನ ಕೈಲಾಗುವುದೇನೂ ಇಲ್ಲದಿದ್ದರೂ ನನ್ನ ಯೋಗಕ್ಷೇಮಂಗಳನ್ನು ತಾನು ವಹಿಸಿರುವೆನೆಂದು ರಕ್ಷಿಸುತ್ತಿದ್ದಳು. ಪ್ರಭೋ! ಈಶನಾಡಿಸುವ ಕೈಗೊಂಬೆಗಳಾಗಿದ್ದೂ ಅದೆಷ್ಟು ಸ್ವಾತಂತ್ರ್ಯ

ಭ್ರಾಂತಿಯೋ ಈ ಜೀವರಿಗೆ ! ಆಕೆಗೋಸುಗವೇ ನಾನು ಆ ಬ್ರಾಹ್ಮಣರ ಮನೆಯಲ್ಲಿ ಕೆಲಕಾಲವಿದ್ದೆ. ನನಗೈದು ವರ್ಷಗಳು ತುಂಬಿದವು. ದಿಕ್ಕು ಯಾವುದು ದೇಶವಾವುದು ಎಂಬುವ ಜ್ಞಾನವೇ ಆ ವಯಸ್ಸಿನಲ್ಲಿ ಆಗಲಾರದಲ್ಲವೇ?

ಒಂದು ರಾತ್ರಿ ನನ್ನ ತಾಯಿಯು ಆಕಳು ಕರಿಯಲು ಪೋಗುತ್ತಾ ದಾರಿಯಲ್ಲಿ ಹಾವನ್ನು ತುಳಿದಳು. ಕಾಲಚೋದಿತವಾದ ಸರ್ಪವು ಆಕೆಯನ್ನು ಕಚ್ಚಿತು. ಅಚ್ಯುತನ ಇಚ್ಛೆಯಿಂದ ಇದ್ದೊಂದು ಬಂಧವು ನಿವೃತ್ತವಾಗಲೂ ಆದದ್ದೆಲ್ಲಾ ಒಳಿತೆಂದು ಮಾಡತಕ್ಕ ಕರ್ಮಕಾಂಡವ ಮುಗಿಸಿ ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದೆನು. ಪುರಗ್ರಾಮಗಳನ್ನು ವನೋಪವನಗಳನ್ನು ದಾಟುತ್ತಾ ಒಂದರಣ್ಯವಂ ಪ್ರವೇಶಿಸಿದೆನು. ವಿಚಿತ್ರ ಧಾತುಗಳ ಚಿತ್ರವರ್ಣಗಳ ಪರ್ವತಗಳನ್ನು ಗಜಭುಗ್ರ ವೃಕ್ಷಗಳನ್ನು ಸ್ವಾದು ಜಲಪೂರ್ಣ ಸರೋವರಗಳನ್ನು ಕಮಲ ಮನೋಹರ ನದಿಗಳನ್ನು ಕಲಕಲ ನಾದ ಮಾಡುವ ಪಕ್ಷಿ ಸಮೂಹವನ್ನು ಪುಷ್ಪಮಕರಂದ ಲುಬ್ಧಭ್ರಮರ ಪಂಕ್ತಿಯನ್ನು ನೋಡುತ್ತಾ ಬಹುದೂರ ಪೋದೆ. ಪರಿಶ್ರಾಂತನಾಗಿದ್ದೆ. ಹಸಿವು ಬಾಯಾರಿಕೆಗಳನ್ನು ಹಿಂಗಿಸಲು ಒಂದು ಸುಂದರ ಸರದಲ್ಲಿ ಸ್ನಾನಾದಿ ಕೃತ್ಯಗಳನ್ನು ನಿರ್ವಹಿಸಿ ಜಲಪಾನವನ್ನು ಮಾಡಿ ಆ ನಿರ್ಮನುಜಾರಣ್ಯದಲ್ಲಿ ಅಶ್ವತ್ಥವೃಕ್ಷವಂ ಕಂಡು ಅದರ ನೆರಳಿನಲ್ಲಿ ಕೂತೆ. ಮನಸ್ಸಿನಿಂದ ನನ್ನ ಅಂತರ್ಯಾಮಿಯಾದ ಶ್ರೀಹರಿಯ ಚಿಂತನವನ್ನು ಸಾಧುಗಳು ಪೇಳಿದಂತೆ ಮಾಡಿದೆ.

"ಶ್ರೀಹರಿಯು ಜೀವನಿಗೆ ಸ್ವಪ್ನವನ್ನು ತನ್ನ ಇಚ್ಛೆಯಿಂದ ನೋಡಿಸುವನು. ಎಚ್ಚರಿಕೆಯನ್ನವನೇ ಕೊಡುವನು. ಗಾಢನಿದ್ರೆಯು ಅವನ ಇಚ್ಛೆಯಿಂದಲೇ ಬರುವದು. ಜಾಗ್ರದವಸ್ಥೆಯಲ್ಲಿ ಆಗುವ ನಾಮಗಳು ರೂಪಗಳು ಕ್ರಿಯೆಗಳು ಎಲ್ಲದರ ಜ್ಞಾನವು ಅವನಿಂದಲೇ. ಇಂತಹ ಜಗದ್ವಿಲಕ್ಷಣನಾದ ಶ್ರೀಹರಿಯು ಸರ್ವಜ್ಞನು, ಸರ್ವಾಂತರ್ಯಾಮಿಯು, ಪರಮಪ್ರಾಪ್ಯನೂ ಆಗಿರುವನು. ಸರ್ವಾವಸ್ಥಾಪ್ರೇರಕನಾದ ಪ್ರಭುವಿಗೆ ಸ್ವಪ್ನವಿಲ್ಲ, ನಿದ್ರೆಯಿಲ್ಲ, ನಿದ್ರೆಯಿಂದೇಳುವುದೆಂಬುದೂ ಇಲ್ಲವೇ ಇಲ್ಲ. ಭಗವಂತನ ಸ್ವರೂಪವು ಅಪ್ರಮೇಯವೂ ಅದ್ಭುತವೂ ಆಗಿದೆ. ಜನನ ಮರಣಾದಿ ಸರ್ವದೋಷ ದೂರನಾದ ಶ್ರೀ ನಾರಾಯಣನು ಪ್ರಳಯಾಂತ್ಯದಲ್ಲಿ ಕ್ರೀಡಾಲೋಲನಾಗಿ ಜೀವಜಡಾತ್ಮಕ ಜಗತ್ತನ್ನು ನಿರ್ಮಿಸಿ, ಸಂರಕ್ಷಿಸಿ, ಕೊನೆಗೆ ಅದನ್ನು ಸಂಹರಿಸಿ, ಪ್ರಪಂಚವನ್ನೆಲ್ಲ ಪೊಟ್ಟೆಯಲ್ಲಿಟ್ಟು ಉದಾಸೀನನಂತೆ ಯೋಗನಿದ್ರೆಯಲ್ಲಿ ನಿರತನಾಗಿರುತ್ತಾನೆ. ಇಂತು ರಮಾಕಾಂತನ ಚರಣಾಂಬುರುಹಧ್ಯಾನದಿಂದ ಭಕ್ತಿಪೂರವುಕ್ಕೇರಿ ಬರಲು ಔತ್ಕಂಠ್ಯದಿಂದ ಬಾಷ್ಪಪೂರಿತ ನೇತ್ರನು, ಪುಲಕಾಂಕುರಿತ ಗಾತ್ರನೂ ಆದ ನನ್ನ ಹೃದಯ ಸೀಮೆಯಲ್ಲಿ ರಮಾಮನೋಹರನ ದಿವ್ಯಸುಂದರರೂಪವಂ ಕಂಡೆ. ಪ್ರೇಮಾತಿಭರದಿಂದ ಆನಂದ ಸಮುದ್ರ ಮಗ್ನನಾಗಿ ಮೈಮರೆತೆ. ಲೋಕವನ್ನೂ ಮರೆತೆ. ಕರುಣಾಪೂರ್ಣ! ಬಾದರಾಯಣ! ಏನು ಪೇಳಲಿ! ನಿರ್ಭಾಗ್ಯನಾದ ನನ್ನ ಮನೋನೇತ್ರಗಳಿಗೆ ಆ ಸುಂದರಸುಖಾವಹವಾದ ಭಗವಂತನ ಆನಂದ ಮೂರ್ತಿಯು ಕಾಣದೇ ಹೋಗಲು ಸಹಸಾ ಎದ್ದು ನಿಂತೆ. ಮೋಕ್ಷಸಾಮ್ರಾಜ್ಯವಂ ಪರಿತ್ಯಜಿಸ ಬಂದ ನಿಂದನೀಯನಂತೆ ದುಃಖದಿಂದ ಗೋವಿಂದಾ! ಮುಕುಂದಾ! ಇಂದಿರೇಶಾ! ಎಂದೆ. ಮತ್ತೆ ನೋಡಬೇಕೆಂದೆ. ಮನಸ್ಸನ್ನು ಬುದ್ಧಿಯಲ್ಲಿಟ್ಟು, ತೃಪ್ತನಾಗದೆ ಎಲ್ಲ ವಿಷಯಂಗಳಂ ಬಿಟ್ಟು ಎಷ್ಟು ಪ್ರಯತ್ನಿಸಿದರೂ ಶ್ರೀಹರಿಯ ಆ ಪರಮಮಂಗಳ ರೂಪವು ನನಗೆ ಮತ್ತೆ ಕಾಣಲಿಲ್ಲ.

ಆಗ ವಿಜನಾರಣ್ಯದಲ್ಲಿ ಆಕಾಶವಾಣಿಯು ನನ್ನನ್ನುದ್ದೇಶಿಸಿ ಇಂತೆಂದಿತು. ಆ ಗಂಭೀರ ಮಧುರ ವಾಣಿಯಿಂದ ನನ್ನ ಮನಃ ಕ್ಲೇಶವಡಗಿದಂತಾಗಲು ಕಿವಿಗೊಟ್ಟಾಲಿಸಿದೆ.

"ಬಾಲಕಾ! ಈ ಜನ್ಮದಿ ನನ್ನನ್ನು ನೀ ಮತ್ತೆ ಕಾಣಲಾಗದು. ಪಾಪಕಷಾಯವು ಪೂರ್ತಿಯಾಗಿ ಇಂಗಿಹೋಗದ ಕುಯೋಗಿಗಳು ನನ್ನನ್ನೆಂತು ಕಂಡಾರು? ನನ್ನ ರೂಪದರ್ಶನವಿಷಯಕಾಭಿಲಾಷೆ ಪುಟ್ಟಿಸಲು ಈಗ ಕಾಣಿಸಿದೆ. ವತ್ಸಾ! ನನ್ನ ಭಕ್ತನಾದ ನೀನಿನ್ನು ಧನ್ಯನಾದೆ. ಪ್ರಾಕೃತಕಾಮಗಳಿನ್ನು ನಿನ್ನನ್ನು ಪೀಡಿಸಲಾರವು. ಪೋಗು, ಬಹುಕಾಲೀನವಾದ ಸಜ್ಜನಸೇವೆಯಿಂದ ನಿನಗೆ ನನ್ನಲ್ಲಿ ಮನನದಿಂದ ದೃಢಭಕ್ತಿಯು ಉಂಟಾಗಿದೆ. ಈ ಶೂದ್ರಶರೀರವನ್ನು ಕಾಲದಲ್ಲಿ ತ್ಯಜಿಸು. ಭಾಗವತೋತ್ತಮನಾಗುವಿ. ನನ್ನಲ್ಲಿ ನಿಬದ್ಧವಾದ ನಿನ್ನ ಬುದ್ಧಿಯು ನಾಶವಾಗುವುದಿಲ್ಲ. ಪ್ರಳಯ ಕಾಲಾನಂತರವು ನಿನಗೆ ನನ್ನ ಅನುಗ್ರಹದಿಂದ ಜಾತಿಸ್ಮರಣೆಯು ಇರಲಿ!" ಎಂದು ಪೇಳಿ ಜಡಶರೀರರಹಿತನು ಸರ್ವತ್ರ ಆಕಾಶದಂತೆ ವ್ಯಾಪ್ತನಾದ ಪ್ರಭುವು ಸುಮ್ಮನಾಗಲು ನಾನು ಆ ಸರ್ವೋತ್ತಮನಿಗೆ ಶಿರಸಾ ಬಾಗಿ ನಮಿಸಿದೆ. ಅವನ ದಯೆಗೆ ಪಾತ್ರನೆನಿಸಿದೆ. ಅಜ್ಞಾನಗಳಂ ತ್ಯಜಿಸಿದೆ. ಮಂಗಳಕರ ನಾಮಗಳಂ ನಾಲಿಗೆಯಿಂದ ನುಡಿಸಿದೆ. ಅವನ ಲೀಲಾವೈಭವವಂ ಸ್ಮರಿಸುತ್ತಾ ಆಶೆಗಳಂ ಬಿಟ್ಟೆ. ಮನಸಾ ಸಂತೋಷಪಟ್ಟೆ. ಮಾತ್ಸರ್ಯಾದಿ ಮನೋಮಲಗಳನ್ನು ಸುಟ್ಟೆ. ಬಟ್ಟೆಗಳನ್ನು ಬಿಟ್ಟೆ. ಇಂತು ಕೃಷ್ಣನಲ್ಲೇ ರತವಾದ ಮತಿಯಿಂದ ಪಾಪರಹಿತನಾದೆನಗೆ ಮಿಂಚಿನಂತೆ ಸಹಸಾ ಮರಣ ಕಾಲವು ಬಂತು. ಹರಿಸ್ಮರಣ ಶುದ್ಧನಾದ ನನ್ನ ಪ್ರಾರಬ್ಧಾವಸಾನವಾಗಲು ಪಾಂಚಭೌತಿಕ ದೇಹವು ಬಿದ್ದುಹೋಯಿತು. ಆಗ ಪ್ರಳಯಕಾಲವಾಯಿತು. ತ್ರೈಲೋಕ್ಯವನ್ನುಪಸಂಹರಿಸಿ ತನ್ನುದರದಲ್ಲಿಟ್ಟು ಶೇಷಶಯ್ಯೆಯಲ್ಲಿ ಪ್ರಳಯೋದಧಿಯಲ್ಲಿ ನಿದ್ರಿಸಿದ ಹರಿಯ ಉದರದಲ್ಲಿ ನಿದ್ರೆ ಮಾಡಲಿಚ್ಛಿಸಿದ ವಿರಿಂಚನನಿಶ್ವಾಸದಿಂದ ಕೂಡಿ ಪ್ರವೇಶಿಸಿದೆ. ಪ್ರಳಯದ ಸಾವಿರ ಮಹಾಯುಗಗಳಾದವು. ಹರಿಯ ದೆಶೆಯಿಂದ ವಿರಿಂಚನು ಈ ಜಗವನ್ನು ನಿರ್ಮಾಣ ಮಾಡಲಿಚ್ಛಿಸಿದಾಗ ಆತನ ಅಂಗಗಳಿಂದ ಮರೀಚ ಮುಖ್ಯಮುನಿಗಳು ಪುಟ್ಟಿದರು. ನಾನೂ ಉತ್ಸಂಗದಿಂದ ಜನಿಸಿದೆ. ಅಖಂಡಬ್ರಹ್ಮಚರ್ಯನಾಗಿ ನಾನು ಮೂರು ಲೋಕಗಳಲ್ಲಿಯೂ ಹೊರಗೂ ಶ್ರೀ ಮಹಾವಿಷ್ಣುವಿನ ಅನುಗ್ರಹದಿಂದ ಆತಂಕವಿಲ್ಲದೆ ಸಂಚರಿಸುವೆನು. ದೇವದತ್ತವಾದೀವೀಣೆಯಲ್ಲಿ ಸಪ್ತಸ್ವರಗಳು ತಾವಾಗಿಯೆ ಮೊಳಗುವವು. ಈ ವೀಣಾಲಾಪನವಂ ಮಾಡುತ್ತಾ ಹರಿಕಥೆಯಂ ಗಾನಮಾಡುತ್ತಾ ಮೈಮರೆತಾಗ ತೀರ್ಥಪಾದನಾದ ಶ್ರೀಹರಿಯು ಪ್ರೀತಿಯಿಂದ ನನ್ನ ಚಿತ್ತದಲ್ಲಿ ಕರೆಯಲ್ಪಟ್ಟವನಂತೆ ಬಂದುನಿಂದು ಆನಂದಪ್ರದನಾಗುವನು.

ವಿಷಯಾಭಿಲಾಷೆಯಿಂದ ಕೆಟ್ಟು ದುಃಖಪಡುತ್ತಿರುವವರು ಘೋರಸಂಸಾರವಾರ್ಧಿಯನ್ನು ದಾಟಲು ಹರಿಚರ್ಯಾನುವರ್ಣನವೇ ನಾವೆಯಾಗಿದೆ. ಯಮನಿಯಮಗಳಿಂದ ಮನಸ್ಸು ಸ್ವಾಧೀನವಾಗುವುದು ನಿಜ. ಆದರೆ ಕಾಮಲೋಭಾದಿಗಳಿಂದ ಅದು ಪುನಃ ವಕ್ರಮಾರ್ಗವನ್ನೇ ಹಿಡಿಯುವದು. ಮುಕುಂದ ಸುಂದರ ಕಥಾಶ್ರವಣಾದಿಗಳಿಂದ ಕ್ರಮವಾಗಿ ಮನಸ್ಸಿಗೆ ಶಾಂತಿ ಸಿಕ್ಕಂತೆ, ಮತ್ತಿನ್ನಾವುದರಿಂದಲೂ ಸಿಗಲಾರದು. ನನ್ನ ಜನ್ಮಕರ್ಮ ರಹಸ್ಯಂಗಳನ್ನು ನೀನು ಕೇಳಲು ಸರ್ವಜ್ಞನಾದ ನೀ ಪ್ರೀತನಾದರೆ ಸಾಕೆಂದು ವರ್ಣಿಸಿದೆ. ಮುನಿವರ್ಯಾ! ಹರಿಚರ್ಯೆಯನ್ನು ಸಮಾಧಿಭಾಷೆಯಿಂದ ವಿಸ್ತಾರಮಾಗಿ ವರ್ಣಿಸಿ ಸುಜನರನ್ನೆಲ್ಲ ಸಲಹು" ಎಂದು ಹೇಳಿ ಪೂಜ್ಯನಾದ ನಾರದನು ವ್ಯಾಸನನ್ನುಬೀಳ್ಕೊಟ್ಟು ವೀಣೆಯಂ ನುಡಿಸುತ್ತಾ ಹರೀಚ್ಛೆಯಂತೆ ಬೇಕಾದೆಡೆಗೆ ಹೊರಟುಹೋದನು. ಹೇ ಶೌನಕ! ಆ ನಾರದನೆಂತಹ ಧನ್ಯನು! ವೀಣೆಯನ್ನು ಮೀಟುತ್ತಾ, ಶ್ರೀಹರಿಯನ್ನು ಗಾನದಿಂದ ಪೊಗಳುತ್ತಾ, ಮಧುರಾತಿಮಧುರವಾದ ಸ್ವಾಮಿಯ

ಕೀರ್ತಿಚಂದ್ರಿಕೆಯನ್ನು ಲೋಕವೆಲ್ಲ ಹರಡುತ್ತಾ ಸಂಸಾರಕ್ಲೀಶ್ಯಮಾನ ಜನರನ್ನು ಸುಖಪಡಿಸುವನು! ದೇವರ್ಷಿವರ್ಯಾ! ನಿನಗೆ ನಮಸ್ಕಾರವು.

## ೭. ಅಶ್ವತ್ಥಾಮನ ಸ್ವಪ್ನ

ಶೌನಕನಾಗ ಸೂತನಂ ಕಂಡು "ನಾರದನ ವಿಜ್ಞಪ್ತಿಯನ್ನು ಲಾಲಿಸಿ ಭಗವಂತನಾದ ಬಾದರಾಯಣ ನೇನು ಮಾಡಿದನು?" ಎನ್ನಲು ಸೂತನು ಪೇಳಿದನು.

ಶೌನಕಾದಿಗಳೇ! ಬ್ರಹ್ಮದೈವತ್ಯವಾದ ಸರಸ್ವತೀ ನದಿಯ ಪಶ್ಚಿಮ ತೀರದಲ್ಲಿ ಋಷಿಗಳ ಸತ್ರಯಾಗ ಫಲಾತಿಶಯತ್ವಕಾರಣವಾದ ಬದರೀಷಂಡಮಂಡಿತವಾದ ಶಮ್ಯಾ ಪ್ರಾಸವೆಂಬುವ ಪ್ರಸಿದ್ಧ ತಪೋವನವಿದೆ. ಅದು ವ್ಯಾಸರ ಆಶ್ರಮವು. ನಾರದನು ಪೋದ ಮೇಲೆ ಶ್ರೀ ವೇದವ್ಯಾಸನಲ್ಲಿ ನಿತ್ಯಸಂಧ್ಯಾದಿಗಳಂ ಮಾಡಿ ಕೂತು ದೀರ್ಘಕಾಲವಾಲೋಚಿಸಿ ಇಂತು ನಿಶ್ಚಯಿಸಿದನು.

"ಸಜ್ಜನರು ರಾಗಾದಿ ದೋಷಗಳಂ ಬಿಟ್ಟು ಶುದ್ಧಾಂತಃಕರಣರಾಗಿ ಧ್ಯಾನಿಸುವ ದೇಶ ಕಾಲ ಗುಣಗಳಿಂದ ಪೂರ್ಣನಾದ ಶ್ರೀಹರಿಯನ್ನೂ, ಜೀವಸಂಸಾರಕಾರಿಣಿಯಾದ ಅವನ ಮಾಯೆಯಂದು ಖ್ಯಾತವಾದ ಬಂಧಕಶಕ್ತಿಯನ್ನೂ ಕಂಡೆನು. ಈ ಮಾಯೆಯಿಂದಲೇ ಜೀವನು ತಾನು ತ್ರಿಗುಣಾತ್ಮಕನಲ್ಲದಿದ್ದರೂ ದೇಹಾಭಿಮಾನದಿಂದ ಗುಣಬದ್ಧನಾಗಿ, ಅಹಂಕಾರ ಮಮಕಾರಗಳಿಗೆ ವಶನಾಗುತ್ತಾನೆ. ಅದರಿಂದ ಜನನ ಮರಣಾದಿರೂಪ ಸಂಸಾರದಲ್ಲಿ ನರಳುತ್ತಿರುವನು. ಅಧೋಕ್ಷಜನಲ್ಲಿ ಮಾಡಿದ ಭಕ್ತಿಯೊಂದರಿಂದಲ್ಲದೆ ಈ ಅನರ್ಥವು ನಶಿಸದು. ಬಂಧಕಶಕ್ತಿಯಿಂದಲಾದ ಸಂಸಾರವು ಆ ಶ್ರೀಹರಿಯ ಪ್ರಸಾದದಿಂದಲೇ ನಿವೃತ್ತವಾಗುವದು. ಇದು ಲೋಕದ ಜನರಿಗೆ ಗೊತ್ತಿಲ್ಲ"ವೆಂದು ಚಿಂತಿಸಿ ಸರ್ವಜ್ಞನಾದ ವ್ಯಾಸನು ಕರುಣೆಯಿಂದ ಯಾವ ಸಂಹಿತೆಯಂ ಕೇಳುವದರಿಂದ ಕೃಷ್ಣಭಕ್ತಿ ಪುಟ್ಟುವದೋ ಯಾವ ಸಂಹಿತೆಯ ಶ್ರವಣಾದಿ ಫಲವು ಶೋಕ ಮೋಹ ಭಯಾದಿ ನಾಶರಹಿತ ವಿರಕ್ತಿಯೋ ಅಂತಹ ಕ್ಷೇಮಂಕರವಾದ ಭಾಗವತವನ್ನು ರಚಿಸಿ, ಶೋಧಿಸಿ, ಪುತ್ರನಾದ, ವಿಷಯವಿದೂರನಾದ, ಶುಕನಿಗೆ ಕಲಿಸಿದನು ಎಂದು ಸೂತನು ಪೇಳಲು ಶೌನಕನು ಪ್ರಶ್ನಿಸಿದನು –

"ಸೂತಾ! ಧನಶಿಷ್ಯಾದಿ ಸಂಗ್ರಹಣಾಪೇಕ್ಷೆಯಿಲ್ಲದ ನಿವೃತ್ತಿನಿರತನಾದ ಶುಕನು ಈ ದೊಡ್ಡ ಗ್ರಂಥವನ್ನೋದಿದನು ಎಂದೆ. ಅಂತಹವನಿಗದರಿಂದ ಏನು ಪ್ರಯೋಜನ? ಅವನೇತಕ್ಕೆ ಓದಿದನು?" ಎನ್ನಲು ಸೂತನುತ್ತರಿಸಿದನು.

ನಿಜ. ಶುಕನಾತ್ಮಾರಾಮನು, ಬಾಹ್ಯವಿಷಯಾಪೇಕ್ಷೆ ಅವನಿಗಿಲ್ಲ. ನಿರಪೇಕ್ಷರಾದ ಮುಕ್ತಜನ ಮನೋವಶೀಕರಣಕ್ಷಮನಲ್ಲವೇ ಶ್ರೀಹರಿಯು! ಇನ್ನು ಅಮುಕ್ತರ ವಿಷಯ ಪೇಳಬೇಕೇ? ಸ್ವರೂಪಾನಂದಕ್ಕೆಂದೇ ಗೋವಿಂದ ಸುಂದರ ಕಥಾ ಸುಧಾಪಾನವನ್ನವರು ಮಾಡುವರು-ಮಾಡಿಸುವರು. ಇದವರ ಸ್ವಭಾವವು. ಶ್ರೀಹರಿಯೇ ಅಂತಹನು! ಹರಿಯ ಜ್ಞಾನಾನಂದ ಸೌಂದರ್ಯೌದಾರ್ಯಾದಿ ಕಲ್ಯಾಣಗುಣಗಳಿಂದಾಕರ್ಷಿತಚಿತ್ತನಾಗಿ ಶುಕನು ನಿತ್ಯವೂ ವಿಷ್ಣುಜನ ಪ್ರಿಯವಾಗಿದೆ ಎಂಬ ಈ ದೊಡ್ಡ ಗ್ರಂಥವನ್ನು ಅಧ್ಯಯನ ಮಾಡಿದನು. ಸಾವಿರ ನಿಗಮಗಳೋದಲು ಸುಲಭವಾಗದ ಮುಕ್ತಿಸುಭಗತ್ವವು ಭಾಗವತ ನಿಗಮದಿಂದ ಕಡುಬೇಗ ಕೈಸೇರುವದು.

ಇನ್ನು ರಾಜರ್ಷಿಯಾದ ಪರೀಕ್ಷಿತನ ಜನ್ಮಕರ್ಮಗಳನ್ನೂ ಮರಣವನ್ನೂ ಹಾಗೂ ಪಾಂಡವರ ಸ್ವರ್ಗಾರೋಹಣಾದಿ ಪವಿತ್ರ ಚರಿತ್ರವನ್ನೂ ಹೇಳುವನು. ಕೃಷ್ಣಕಥೆಯಂ ಬಿಟ್ಟು ಭಕ್ತರ ಕಥೆಯುಂಟೇ?

ಕೌರವ ಪಾಂಡವರ ಯುದ್ಧವು ಮುಗಿಯಿತು. ಬಹುವೀರರು ವೀರಸ್ವರ್ಗವನ್ನೈದಿದರು., ಭೀಮಸೇನ ಗದಾದಂಡದಿಂದ ತುಂಡರಿಸಲ್ಪಟ್ಟ. ಊರುದಂಡದಿಂದ ಮರಣೋನ್ಮುಖನಾದ ಕೌರವರಾಜನು ಪ್ರೀತನಾಗಲೆಂದು ಗುರುಪುತ್ರನಾದ ಅಶ್ವತ್ಥಾಮನು ದ್ರೌಪದೀಪುತ್ರರು ಶಿಬಿರದಲ್ಲಿ ಮಲಗಿರುವಾಗ ಅವರ ಶಿರಸ್ಸುಗಳ ಕತ್ತರಿಸಿ ಕೈಯಲ್ಲಿ ಪಿಡಿದು ತಂದು ಕೌರವನಿಗೆ ನೋಡಿಸಲು ಆ ಪಾಪಿಯು ಸಂತಸಿದನು. ಮತ್ತು 'ಭೂಮಂಡಲವು ನಿಷ್ಪಾಂಡವವಾಗಬೇಕು. ತನ್ನ ಪತ್ನಿ ಭಾನುಮತಿಯಲ್ಲಿ ಪುತ್ರಾದಾನ ಮಾಡಿ ಕೌರವವಂಶವನ್ನು ಪುನಃ ಸ್ಥಾಪಿಸಬೇಕೆಂದು' ಅಶ್ವತ್ಥಾಮನನ್ನು ಕೇಳಿಕೊಂಡು ಪ್ರಾಣಪರಿತ್ಯಾಗ ಮಾಡಿದನು. ಮೊದಲನೆಯ ವರದಾನವಂ ಮಾಡಬೇಕೆಂದು ಶಿಶುಹತ್ಯಾಭಿಲಾಷಿಯಾದ ಅಶ್ವತ್ಥಾಮನು ಸ್ವಲ್ಪ ಸಮಾಧಾನದಿಂದ ನಿದ್ರೆ ಹತ್ತಲು ಮಲಗಿದನು. ಆತನು ಆಗ ಕಂಡ ಸ್ವಪ್ನವೃತ್ತಾಂತವನ್ನು ಪೇಳುವೆನು ಕೇಳು.

ಶಿಶುಮಾತೆ ದ್ರೌಪದಿ ತನ್ನ ಸುತರ ಘೋರಹತ್ಯೆಯನ್ನು ಕಂಡು ರೋದಿಸುತ್ತಿರಲು ಅರ್ಜುನನಾತರುಣಿಯನ್ನು ಸಮಾಧಾನಪಡಿಸುತ್ತಿಂತೆಂದನು. "ಮಾನಿನಿ! ಅಳಬೇಡ. ಅಕೃತ್ಯವನ್ನು ಮಾಡಿದ ಬ್ರಾಹ್ಮಣಾಧಮನನ್ನು ಗಾಂಡೀವಯುಕ್ತ ಬಾಣಗಳಿಂದ ಕೊಂದು ಅವನ ತಲೆಯನ್ನು ತರುವೆನು. ಪಾದದಿಂದದನು ಒದೆದು ಆಮೇಲೆ ಸ್ನಾನ ಮಾಡುವಿಯಂತೆ!" ಎಂದು ಪ್ರಿಯಳನ್ನು ಮನೋಹರವಚನಗಳಿಂದ ಸಾಂತ್ವನಗೊಳಿಸಿ, ಕೃಷ್ಣಾಸಾರಥಿಯಾಗಿ ಕಪಿಧ್ವಜವಾದ ರಥವನ್ನೇರಿ ಗಾಂಡೀವ ಟಂಕಾರವನ್ನು ಮಾಡುತ್ತ ಗುರುಪುತ್ರನನ್ನು ಪಿಡಿದು ಕೊಲ್ಲಬೇಕೆಂದು ಬೆನ್ನಟ್ಟಿ ಬಂದನು. ಅದನ್ನು ನೋಡಿ ಶಿಶುಹಂತನಾದ ಅಶ್ವತ್ಥಾಮನು ಭೀತಿಯಿಂದ ಸಂಭ್ರಾಂತನಾಗಿ ಪ್ರಾಣವನ್ನುಳಿಸಿಕೊಳ್ಳಲು ಹಿಂದೆ ರುದ್ರನ ತೃತೀಯನೇತ್ರಾಗ್ನಿಯ ಭಯದಿಂದ ಓಡಿದ ಶನೈಶ್ಚರನ ನಂತೆ ರಥದಲ್ಲಿ ಕೂತು ಓಡಿದನು. ಅವನ ವಾಹನಗಳು ಶಾಂತವಾಗಿ ಓಡದಾದವು. ಗುರುಸುತ ನಾಗ ದಿಕ್ಕು ತೋಚದೆ ತನ್ನ ಪ್ರಾಣರಕ್ಷಣೆಗೆಂದು ಬ್ರಹ್ಮಶಿರೋನಾಮಕಾಸ್ತ್ರವನ್ನು ಪ್ರಯೋಗಿಸಿ ದನು. ಅದರ ಉಪಸಂಹಾರವವನಿಗೆ ಗೊತ್ತಿಲ್ಲದಿದ್ದರೂ ಪ್ರಾಣಸಂಕಟದಿಂದ ಪಾರಾಗಲು ಬ್ರಹ್ಮಾಸ್ತ್ರವಂ ಬಿಡಲಾದುಷ್ಕರತೇಜವೆಲ್ಲ ದಿಕ್ಕಿನಲ್ಲಿ ತುಂಬಿ ಸುಡುತ್ತಾ ಬಂತು. ಅದನ್ನು ಕಂಡು ಗಾಂಡೀವಿಯು ಪುಂಡರೀಕಾಕ್ಷನನ್ನು ಕೇಳಿದನು.

ಕೃಷ್ಣ ಕೃಷ್ಣಾ! ಭಕ್ತರಕ್ಷಕನೆ! ಸಂಸಾರದ ದುಃಖರಾಶಿಯನ್ನು ನಾಶಮಾಡಿ ತಾಪವನ್ನು ದೂರ ಮಾಡಲು ನೀನೇ ಹೊರತು ಅನ್ಯರಿಲ್ಲ. ಪಾಪವನ್ನು ಕಳೆದು ಜ್ಞಾನವನ್ನು ಕೊಡುವವನು ನೀನೇ! ಸರ್ವಜ್ಞನಾದ ನೀನು ಅನನ್ಯಾಶ್ರಿತನಾಗಿರುವೆ. ಲಕ್ಷ್ಮೀರಮಣ! ಜೀವರನ್ನು ಸಂಸಾರದಲ್ಲಿ ಸೆಳೆವ ಬಂಧಕಶಕ್ತಿಯು ನಿನ್ನನ್ನೇನೂ ಮಾಡಲಾರದು, ನಿನ್ನಧೀನವಾದ ಈ ಮಾಯೆಯಿಂದ ಬಂಧನ ದಲ್ಲಿ ಬಂದು ನೊಂದ ಜೀವರಿಗೆ ನಿನ್ನ ಜ್ಞಾನರೂಪ ಶ್ರೇಯಸ್ಸಾಗಲೆಂದು ನಿನ್ನ ಇಚ್ಛೆಯಿಂದ ಅವತರಿಸಿದೆ. ಸರ್ವೇಶ್ವರಾ! ಭೂಬಾರಹರಣದಂತೆ ಸ್ವಜನರಕ್ಷಣವೂ ನಿನ್ನದೇ ಆಗಿದೆ. ಸ್ವಾಮೀ! ಏನಿದೀ ಭಯಂಕರವಾದ ತೇಜವು? ಎಲ್ಲಿಂದ ಬಂತು? ಸರ್ವತೋಮುಖವಾಗಿ ಸುಡುತ್ತಾ ಬರುವ ಪರಮ ದಾರುಣವಾದ ಇದೇನು?

ಎನ್ನಲು ಕೃಷ್ಣನು "ಅರ್ಜುನಾ! ಇದು ದ್ರೋಣಪುತ್ರನ ಬ್ರಹ್ಮಶಿರವೆಂಬ ಅಸ್ತ್ರದ ತೇಜವು. ಉಪಸಂಹಾರ ಗೊತ್ತಿಲ್ಲದೆಯು ಪ್ರಾಣರಕ್ಷಣೆಗೋಸುಗ ಅಶ್ವತ್ಥಾಮನಿದನ್ನು ಬಿಟ್ಟಿರುವನು. ಬ್ರಹ್ಮಾಸ್ತ್ರವಂ ಬಿಟ್ಟು ಬೇರೆ ಪ್ರತೀಕಾರವಿಲ್ಲ. ನೀನೂ ಬ್ರಹ್ಮಾಸ್ತ್ರವನ್ನೇ ಬಿಡು. ಆ ತೇಜವನ್ನು ಸುಡು" ಎಂದನು.

ಪರವೀರ ವೈರಿಯಾದ ಅರ್ಜುನನು ಹಗಿಗೆ ಪ್ರದಕ್ಷಿಣ ನಮಸ್ಕಾರಗಳನ್ನಾಚರಿಸಿ ಭಗವಂತನ ಮಾತಿನಂತೆ ಆ ಬ್ರಹ್ಮಾಸ್ತ್ರದ ಶಾಂತಿಗೆಂದು ತನ್ನ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು.

ಅವೆರಡು ಬ್ರಹ್ಮಾಸ್ತ್ರಗಳಾಗ ಸೂರ್ಯಪಾವಕರಂತೆ ಸುಡುತ್ತಾ ಆಕಾಶಾದಿ ತುಂಬಿ ಮೂರು ಲೋಕಗಳನ್ನು ತಾಪಗೊಳಿಸಲು ಪ್ರಜರು ಪ್ರಳಯವೆ ಆಗುವದೇನೋ ಎಂದು ಶಂಕಿಸಿದರು. ಪ್ರಜೋಪದ್ರವವನ್ನೂ ಲೋಕನಾಶವನ್ನೂ ಕಂಡು ಕೃಷ್ಣನಾಜ್ಞಾಪಿಸಲು ಅರ್ಜುನನು ಆ ಅಸ್ತ್ರಗಳೆರಡನ್ನೂ ಉಪಸಂಹಾರ ಮಾಡಿ ಶಾಂತಿಗೊಳಿಸಿದನು.

ಅರ್ಜುನನಾಗ ವೇಗವಾಗಿ ಓಡಿ ದಾರುಣನಾದ ಅಶ್ವತ್ಥಾಮನನ್ನು ಹಿಡಿದು ಪಶುವಿನನ್ನು ಹಗ್ಗದಿಂದ ಕಟ್ಟಿದಂತೆ ಕಟ್ಟಿ ರಥದಲ್ಲಿಟ್ಟು ಶಿಬಿರಕ್ಕೆ ಬರುವಾಗ ಕೃಷ್ಣನು ಕುಪಿತನಾಗಿ "ಅರ್ಜುನಾ! ಇವನನ್ನು ಬಿಡಬೇಡ. ರಾತ್ರಿಯಲ್ಲಿ ಮಲಗಿದ್ದ ನಿರಪರಾಧಿಗಳಾದ ಬಾಲಕರನ್ನು ಕೊಂದ ಈ ಬ್ರಾಹ್ಮಣಾಧಮನು ವಧಾರ್ಹನೇ ಸರಿ! ಮದ್ಯಪಾನದಿಂದ ಮತ್ತನಾದವನಂ, ಮರೆತು ನಿಂತವನಂ, ಪಿಶಾಚಪೀಡಿತನಂ, ಮಲಗಿದನಂ, ಬಾಲನಂ. ತರುಣಿಯಂ, ಶರಣಾಗತನಂ, ವಿರಥನಂ, ಭೀತನಾದ ಶತ್ರುವಿನಂ ಧರ್ಮಜ್ಞನೆಂದಿಗೂ ಕೊಲ್ಲಲಾರನು. ದಯೆಯಿಲ್ಲದೆ ಇಂದ್ರಿಯಾರಾಮನಾಗಿ ತನ್ನ ಪ್ರಾಣವನ್ನುಳಿಸಿಕೊಳ್ಳಲೋಸುಗ ಪರಪ್ರಾಣಗಳ ತೆಗೆಯುವವನನ್ನು ಕೊಲ್ಲುವುದೇ ಅವನಿಗೆ ಶ್ರೇಯಸ್ಸೆನಿಸುವದು. ರಾಜದಂಡದಿಂದ ಪಾಪಿಗಳು ತಮ್ಮ ಪಾಪಗಳನ್ನಿಲ್ಲೇ ನೀಗಿ ಮುಂದೆ ನರಕಾದ್ಯನರ್ಥಗಳಿಗೆ ಗುರಿಯಾಗದಿರುವರೆಂದು ಮನುಸ್ಮೃತಿಯಲ್ಲಿ ಹೇಳಿದೆ. ಕೊಲ್ಲಿವನನ್ನು! ದ್ರೌಪದೀದೇವಿಗೆ ಇವನ ಶಿರಸ್ಸನ್ನು ತರುವೆನೆಂದು ನೀ ಕೊಟ್ಟ ಮಾತನ್ನು ಸತ್ಯ ಮಾಡು. ಆತ ತಾಯಿಯು ಪುತ್ರಹಂತಕನಾದ ಈ ಕುಲಪಾಂಸನನನ್ನು, ಪ್ರಯೋಜನವಿಲ್ಲದೆ ಹೋದದ್ದರಿಂದ ದುರ್ಯೋಧನನಿಗೂ ಅನಿಷ್ಟಕರವಾದ ಶಿಶುಹತ್ಯೆಯ ಮಾಡಿದ ಈ ಪಾಪಿಯನ್ನು ಸಂಹರಿಸು" ಎಂದನು. ಇಂತು ಧರ್ಮಪರೀಕ್ಷೆಗೆಂದು ನುಡಿದ ಗೋವಿಂದನ ಮಾತನ್ನು ಕೇಳಿ ಪಾರ್ಥನು ಗುರುಸುತನನ್ನು ಕೊಲ್ಲದೆ ಶಿಬಿರಕ್ಕೆ ಕರೆತಂದು ದ್ರೌಪದಿಯ ಮುಂದೆ ನಿಲ್ಲಿಸಿದನು. ಪಶುವಿನಂತೆ ಬದ್ಧನಾಗಿ, ತಲೆಬಾಗಿ ನಿಂತು ತಾ ಮಾಡಿದ ಅಮಾನುಷ ಕೃತ್ಯದಿಂದ ಲಜ್ಜಿತನಾದ ಗುರುಸುತನನ್ನು ಕಂಡು ಕೃಷ್ಣೆ ಕೃಪಾನ್ವಿತಳಾಗಿ ಕೃಪೀಪುತ್ರನಿಗೆ ನಮಸ್ಕರಿಸಿ ಇಂತೆಂದಳು. "ಬಿಡಿ ಬಿಡಿ ಇವನು ಬ್ರಾಹ್ಮಣನು, ನಮಗೆಲ್ಲಾ ಗುರುತುಲ್ಯನು. ಉಪಕ್ರಮೋಪಸಂಹಾರಸಹಿತವಾಗಿ ಧನುರ್ವೇದವನ್ನು ಯಾರ ಅನುಗ್ರಹದಿಂದ ಕಲಿತಿರೋ ಆ ಪೂಜ್ಯರಾದ ದ್ರೋಣಾಚಾರ್ಯರೇ ಇಲ್ಲಿ ಪುತ್ರರೂಪದಿಂದ ನಿಂತಿರುವರು. ಸಹಗಮನ ಮಾಡದೆ ಇವನ ತಾಯಿಯಾದ ಕೃಪಿಯು ಇರುವಳವಳಿಗೋಸ್ಕರ ಮಾದರೂ ಇವನನ್ನು ಬಿಟ್ಟುಬಿಡಿ. ಗುರುವಂಶವೇ ಪೂಜ್ಯವು, ವಂದ್ಯವಾಗಿರುವುದು. ಧರ್ಮಜ್ಞರಾದ ನಾವದಕ್ಕಪಚಾರ ಗೈಯಲಾಗದು. ಅಶ್ರುಮುಖಿಯಾಗಿ ಶಿಶುಗಳಂ ನೆನೆನೆನೆದು ಕರುವಂ ಕಳೆದುಕೊಂಡ ಆಕಳಂತೆ ನಾನಳುತ್ತಿರವೆ ನಿಂತಹ ಪುತ್ರಶೋಕವಾಪತಿದೇವತೆಯಾದ ಆಚಾರ್ಯಾಣಿ ಕೃಪೀದೇವಿಗಾಗದಿರಲಿ! ರಾಜನ್ಯರು

ದುಷ್ಟಮನಸ್ಕರಾಗಿ ಬ್ರಾಹ್ಮಣದ್ರೋಹವಂ ಬಗೆದೊಡೆ ಸಮೂಲವಾಗಿ ಅಂತಹರ ಕುಲವೇ ನಾಶವಾಗುವದು" ಎಂದಳು.

ಧರ್ಮಸಂಮತವು, ನ್ಯಾಯವು, ಕರುಣಾರಸಾಕ್ತವು, ಶಾಸ್ತ್ರಯುಕ್ತವು, ನಿಷ್ಪಕ್ಷಪಾತವು, ಪ್ರಶಂಸಾಪಾತ್ರವೂ ಆದ ಪಾಂಚಾಲಿಯ ವಚನಗಳ ಕೇಳಿ ಧರ್ಮರಾಜನು ಅಭಿನಂದಿಸಿದನು. ಬ್ರಾಹ್ಮಣರೇ! ನಕುಲ ಸಹದೇವ ಸಾತ್ಯಕಿ ಧನಂಜಯರೂ ಭಗವಂತನಾದ ಶ್ರೀಕೃಷ್ಣನೂ ಸಮ್ಮತಿಸಿದರು. ಆದರೆ ಭೀಮಸೇನನೊಪ್ಪದೆ ಕುಪಿತನಾಗಿ ಇಂತೆಂದನು, "ಶಿಶುಹತ್ಯೆಯನ್ನು ಮಾಡಿದ ಈ ಪಾಪಿಯ ಕುಕೃತ್ಯದಿಂದ ಯಾರಿಗೇನು ಪ್ರಯೋಜನವಾಯಿತು? ಇವನನ್ನು ಕೊಲ್ಲು ವುದರಿಂದ ಇವನಿಗಗೆ ಮುಂದೆ ನರಕಬಾಧೆ ತಪ್ಪುವುದು. ನಮಗೂ ಪಾಪವಿಲ್ಲ, ಕೊಲ್ಲಿ" ಎನಲಾಗಿ ಶ್ರೀಕೃಷ್ಣನು ಮಂದಹಾಸವಂ ಮಾಡಿ ಅರ್ಜುನನಂ ನೋಡಿ, "ಅರ್ಜುನಾ! ಬ್ರಾಹ್ಮಣನಂ ಕೊಲ್ಲಲಾಗದು, ಆತತಾಯಿಯಂ ಬಿಡಬಾರದು; ಈ ಧರ್ಮಗಳೆರಡೂ ಎನಗೆ ಸಮ್ಮತವೇ ಆಗಿವೆ. ನೀನಾದರೋ ಪಾಂಚಾಲಿಗೆ ಕೊಲ್ಲುವೆನೆಂದು ಮಾತು ಕೊಟ್ಟಿರುವೆ. ಅವಳಿಗೂ, ನನಗೂ, ಭೀಮಸೇನನಿಗೂ ಸಮ್ಮತವಾಗುವಂತೆ ಮಾಡು" ಎಂದನು. ಹರಿಯ ಹಾರ್ದವನ್ನರಿತು ಪಾರ್ಥನು ತಕ್ಷಣವೇ ತೀಕ್ಷ್ಣವಾದ ಕರವಾಲದಿಂದ ಅಶ್ವತ್ಥಾಮನ ಸಹಜವಾದ ಶಿರೋಮಣಿಯಂ ಶಿರೋಜ ಗಳಿಂದ ಸಹಿತಮಾಗಿ ಕತ್ತರಿಸಿ ತೆಗೆದು, ಅವನಂ ಬಿಚ್ಚಿ ಶಿಬಿರದಿಂದ ಹೊರ ಹಾಕಿದನು. ಬಾಲಹತ್ಯಾ ಹತಪ್ರಭನಾದ ಅಶ್ವತ್ಥಾಮನು ಮಣಿಯನ್ನೂ ತೇಜಸ್ಸನ್ನೂ ಕಳೆದುಕೊಂಡು ಖಿನ್ನವಾಗಿ ಹೊರಟುಹೋದನು. ಬ್ರಾಹ್ಮಣರಿಗೆ ಬಂಧನ, ದ್ರವ್ಯಾಪಹಾರ, ಸ್ಥಾನಚ್ಯುತಿ ಇವುಗಳೇ ಮರಣ ದಂಡಗಳೆನಿಸಿವೆ. ಏಕೆಂದರೆ 'ಬ್ರಾಹ್ಮಣೋ ನ ಹಂತವ್ಯಃ' ಎಂದು ವೇದವಿದೆ. ಇಂತು ಸ್ವಪ್ನವನ್ನು ಕಂಡ ಗುರುಸುತನು ಕಂದರಂ ಕೊಂದು ಭೀಮನ ಕೈಗೆ ಸಿಕ್ಕು ಮಣಿಯಂ ಕಳೆದುಕೊಂಡು ಹೋದನು.

## ೮. ಪರೀಕ್ಷಿತನ ರಕ್ಷಣೆ

ಅನಂತರ ಪಾಂಡವರು ಪಾಂಚಾಲೀಸಹಿತರಾಗಿ ಪುತ್ರರನ್ನು ನೆನೆದು ದುಃಖಿಸಿ ಮೃತರಾದವರಿಗೆಲ್ಲ ದಹನಾದಿ ಪಾರಲೌಕಿಕ ಕೃತ್ಯಗಳನ್ನು ಮಾಡಿದರು. ಶ್ರೀಕೃಷ್ಣನು ಹಿಂದೆ ವನವಾಸ ಸಮಯದಲ್ಲಿ ತನ್ನ ಪಾದಪಂಕಜವಂ ಪಿಡಿದು ರೋದಿಸಿದ ದ್ರೌಪದಿಗೆ ತಾ ಕೊಟ್ಟ ವಚನವಂ ಸತ್ಯವಾಗಿಸಲು ರಣಭೂಮಿಯಲ್ಲಿ ಮುಕ್ತಕೇಶಬಂಧರಾಗಿ ಪಾಂಚಾಲೀ ಕಬರೀವಿಕರ್ಷಣ ಮಹಾಪಾಪ ಕ್ಷತಾ ಯುಷ್ಕರಾದ ಭೀಮಗದಾದಂಡಭಗ್ನೋರುವಕ್ಷಸ್ಕರಾದ ತಮ್ಮ ತಮ್ಮ ಪತಿಶವಂಗಳನ್ನಾಲಿಂಗಿಸಿ ರೋದಿಸುವ ಕೌರವ ವನಿತೆಯರನ್ನು ನೋಡಿಸಿ ಸಂತೈಸಿದನು.

ಪಾಂಡವರು ಹರಿಪಾದಾರವಿಂದರಜಃಪೂತವಾದ ಭಾಗೀರಥಿಗೆ ಪೋಗಿ ಮೃತರಿಗೆ ತಿಲೋದಕ ದಾನವಂ ಕೊಟ್ಟು, ಪುನಃ ಶೋಕಭರ ಖಿನ್ನರಾಗಲು ಅವರನ್ನು ಕೃಷ್ಣನು ಸಮಾಧಾನ ಪಡಿಸಿದನು. ಪುತ್ರಶೋಕಾರ್ತರಾದ ಗಾಂಧಾರೀ ಧೃತರಾಷ್ಟ್ರರನ್ನು, ದ್ರೌಪದಿಯನ್ನು, ಕುಂತಿಯನ್ನು ಸಂತೈಸಿದನು. ಮುನಿಗಳಾದರೂ "ಭೂತಗಳಿಗೆ ಕಾಲದಿಂದ ಆಗುವ ಮರಣಾದಿಗಳು ಹರೀಚ್ಛೆ ಯಂತೆ ಆಗುವವು. ಅವುಗಳಿಗೆ ಪ್ರತೀಕಾರವಿಲ್ಲ" ಎಂದು ಬೋಧಿಸಿದರು.

ಈ ರೀತಿಯಾಗಿ ಶ್ರೀಹರಿಯು ಅಜಾತಶತ್ರುವಿಗೆ ರಾಜ್ಯಸಂಪದವನ್ನು ಶತ್ರುಗಳಿಂದ ಕಸಿದು ಕೊಟ್ಟು ತ್ರಿಗುಣಫಲಕವಾದ ಐದಶ್ವಮೇಧಗಳನ್ನು ಮಾಡಿಸಿ, ಧರ್ಮರಾಜನ ಪಾವನ ಕೀರ್ತಿಯನ್ನು ಇಂದ್ರಿಯಶೋಭಿವವನ್ನು ವಾಮನನಾಗಿ ಬೆಳೆಸಿದಂತೆ ಸಕಲ ದಿಕ್ಕುಗಳಲ್ಲಿ ಬೆಳಗಿದನು. ಪಾಂಡವಾದಿಗಳ ಅಪ್ಪಣೆಯ ಪಡೆದು ದ್ವೈಪಾಯನಾಗಿಗಳಂ ಪೂಜಿಸಿ ಅವರ ಸತ್ಕಾರವಂ ಪೊಂದಿ ದ್ವಾರಕೆಗೆ ಹೋಗಲು ಉದ್ಧವ ಸಾತ್ಯಕಿಗಳೊಡನೆ ರಥವನ್ನಾರೋಹಿಸಿದನು.

ಆ ತರುಣದಲ್ಲಿ ಉತ್ತರಾದೇವಿಯು ಭಯಕಾತುರಳಾಗಿ ಓಡಿಬಂದು ಕೃಷ್ಣನಿಗೆ ವಂದಿಸಿ ಇಂತೆಂದಳು.

"ದೇವೇಶ! ಪಾಹಿ ಪಾಹಿ! ಮೃತ್ಯುಗ್ರಸ್ತವಾದೀ ಲೋಕದಿ ನೀನೊಬ್ಬನೆ ಭಯರಹಿತನಾಗಿರುವಿ. ನನ್ನ ಭಯವಂ ಪರಿಹರಿಸು! ಹರೇ! ಭಯಂಕರವಾದ ಬಾಣಾಗ್ನಿಯು ದುಸ್ಸಹವಾಗಿದೆ. ಶ್ರೀಶಾ! ನನ್ನ ಚಿಂತೆಯೆನಗಿಲ್ಲ; ಗರ್ಭಗತನಾದೀ ಅರ್ಭಕನನ್ನು ರಕ್ಷಿಸು. ಪಾಂಡವವಂಶಾಂಕುರವನ್ನುಳಿಸು!" ಎಂದು ಶರಣಾಗತಳಾದ ಅವಳ ಮಾತನ್ನಾಲಿಸಿ ಭಕ್ತವತ್ಸಲನು ಸುಭದ್ರೆಯ ಸೊಸೆಯ ಗರ್ಭಗತಾ ರ್ಭಕನ ಸಂಹರಿಸಿ ಭೂಮಂಡಲವನ್ನು ಅಪಾಂಡವವನ್ನಾಗಿ ಮಾಡಲು ಅಶ್ವತ್ಥಾಮನು ಬ್ರಹ್ಮಾಸ್ತ್ರ ವನ್ನು ಪ್ರಯೋಗಿಸಿರುವುದನ್ನರಿತನು. ಅದೇ ಸಮಯದಲ್ಲಿ ದ್ರೋಣನಂದನನಿಂದ ಪ್ರಯುಕ್ತವಾದ ನಿಶಿತ ಮಾರ್ಗಣಂಗಳು ಪಾಂಡವರಿಗಭಿಮುಖವಾಗಿ ಉರಿಯುತ್ತಾ ಬರಲು ಅವರು ಪ್ರತ್ಯಸ್ತ್ರಂಗಳನ್ನು ಕೈಕೊಂಡು ಸೆಣಸಿದರು.

ಅನನ್ಯಭಕ್ತರಾದ ತನ್ನವರಾದ ಪಾಂಡವರ ವ್ಯಸನವಂ ಕಂಡು ಪುಂಡರೀಕಾಕ್ಷನು ಸುದರ್ಶನ ಚಕ್ರದಿಂದ ಅವರನ್ನು ರಕ್ಷಿಸಿದನು. ಸರ್ವಭೂತಾಂತರ್ಯಾಮಿಯು ಅಣಿಮಾದಿಯೋಗಾಧಿಪತಿಯು ಭಕ್ತದುಃಖಹರಣಶೀಲನಾದ ಶ್ರೀಕೃಷ್ಣನು ಕುರುಸಂತಾನವು ನಶಿಸದಿರಲು ತಾನೇ ಗರ್ಭವನ್ನು ಪ್ರವೇಶಿಸಿ ಗರ್ಭಸ್ಥ ಶಿಶುವನ್ನು ಯೋಗಸಾಮರ್ಥ್ಯದಿಂದಾವರಿಸಿ, ಬ್ರಹ್ಮಾಸ್ತ್ರದಿಂದ ಹಾನಿಯಾಗದಂತೆ ರಕ್ಷಿಸಿದನು. ಶೌನಕಾ! ಬ್ರಹ್ಮಾಸ್ತ್ರವೆಂದರೆ ಸಾಮಾನ್ಯವಲ್ಲ. ಅದಕ್ಕೆದುರಿಲ್ಲ; ಆದರೂ ಚಕ್ರತೇಜದಿಂದ ಅದು ಶಾಂತವಾಗಿ ಹೋಯಿತು. ಕೃಷ್ಣನ ಪ್ರಯಾಣವಂ ಕಂಡು ಉದ್ಧತವಾಗುತ್ತಿದ್ದ ಆ ಬ್ರಹ್ಮಾಸ್ತ್ರವನ್ನು ಪುನಃ ಚಕ್ರವು ಅಡಗಿಸಿತು. ಸರ್ವಾಶ್ಚರ್ಯಮಯನಾದ ಅಚ್ಯುತನು ತನ್ನವಳಾದ ರಮಾದೇವಿಯಿಂದ ಕೂಡಿ ಈ ಜಗವನ್ನು ನಿರ್ಮಿಪನು ಸಂರಕ್ಷಿಪನು ಸಂಹರಿಸುವನಿಂತಹ ಅಮೋಘವೀರ್ಯನಾದ ಸ್ವಾಮಿಯ ವಿಷಯದಲ್ಲಿದೇನಚ್ಚರಿ! ಹೀಗೆ ಧರಣೀಸುರ ಬಾಣನಿವಾರಣವಂ ಮಾಡಿ, ಪ್ರಯಾಣಾಭಿಮುಖನಾದ ಕೃಷ್ಣನಂ ಕಂಡು ಕುಂತಿಯು ಸಂತಸದಿಂದಿಂತು ಸ್ತುತಿಸಿದಳು.

"ಕೃಷ್ಣಾ! ಆದಿಪುರುಷನು, ಅವ್ಯಯನು, ಪ್ರಕೃತಿವಿಲಕ್ಷಣನು, ಅಪ್ರಮೇಯಮಹಿಮನು, ಸರ್ವಗತನೂ, ನಿತ್ಯನೂ ಆದ ನಿನಗೆ ನಮಸ್ಕಾರವು. ಜವನಿಕಾಚ್ಛನ್ನನಾದ ನಟವರನಂತೆ ಇರುವ ನಿನ್ನನ್ನು ನಿನ್ನ ಬಂಧಕಶಕ್ತಿಯಿಂದ ಮೂಢಳಾಗಿ ನಾನು ತಿಳಿಯದಿರುವೆ. ನಮ್ಮ ಕೃಷ್ಣನೆಂಬೆನಾಗಲಿ ಸರ್ವಭೂತಾವಾಸನೆಂದು ತಿಳಿಯಲಿಲ್ಲ. ಅವಿದ್ಯಾಕಾಮ ಕರ್ಮಾದಿ ಮಲರಹಿತಮನಸ್ಕರಾದ ಸನಕಾದಿಯೋಗಿವರರ ಹಾಗೂ ಮುನಿವರರ ಭಕ್ತಿವೃದ್ಧಿಗಾಗಿ ಅವತರಿಸಿದ ನಿನ್ನನ್ನು ನಾವು– ಅದರಲ್ಲಿ ಸ್ತ್ರೀಯರು -- ಸುದೃಢಸ್ನೇಹಪೂರ್ವಕವಾಗಿ ಅವರಂತೆ ಭಜಿಸುವದೆಂತು? ಶ್ರೀಕೃಷ್ಣ! ಲಕ್ಷ್ಮೀಸುಖವರ್ಧನ ನಂದಗೋಪಾನಿಷ್ಟ ಮರ್ದನ! ವೇದವೇದ್ಯಗೋವಿಂದ! ನಿನಗೆ ನಮಸ್ಕಾರ! ದೇವಕೀಕುಮಾರ! ಪಂಕಜನಾಭ! ಪಂಕಜಹಾರ! ಪಂಕಜನೇತ್ರ! ಪರಮಪವಿತ್ರ! ಪಂಕಜಪಾದ!

ನಿನಗೆ ವಂದನವು! ಸರ್ವೇಂದ್ರಿಯಪ್ರೇರಕ! ಹಿಂಸಾಶೀಲನಾದ ಕಂಸನಿಂದ ಪೀಡಿಸಲ್ಪಟ್ಟ ತಾಯಿಯಾದ ದೇವಕಿಯ ಚಿರಕಾಲೀನತಾಪವನ್ನು ನೀ ನಿವಾರಿಸಿದುದೇನು ಆಶ್ಚರ್ಯವು! ಪುತ್ರರಿಂದ ಕೂಡಿದ ನನ್ನನ್ನು ಪುನಃ ಪುನಃ ಬಂದ ವಿಪದ್ಗಣದಿಂದ ಪಾರುಮಾಡಿದ ನಿನ್ನ ಉಪಕಾರವನ್ನು ಮರೆಯಲಾರೆ. ಹರೀ! ಎಷ್ಟೆಂದು ಪೇಳಲಿ! ಅನ್ನದಲ್ಲಿ ವಿಷವನ್ನಿಟ್ಟರು! ಮನೆಯಲ್ಲಿಟ್ಟು ಸುಟ್ಟರು! ದುಷ್ಟಸಭೆಯಲ್ಲುಟ್ಟ ಸೀರೆಯಂ ಸೆಳೆಯಲು ಮುಟ್ಟಿದರು, ಕಪಟದ್ಯೂತದಲ್ಲಿ ವನ ಕಟ್ಟಿದರು, ಬಕಕಿಮ್ಮೀರಾದಿ ರಾಕ್ಷಸರು ಭಕ್ಷಿಸಲು ಬೆನ್ನಟ್ಟಿದರು. ರಣರಂಗದಲ್ಲಿ ಮಹಾರಥರೆಲ್ಲಾ ಕಲೆತು ಅಸ್ತ್ರಗಳಂ ಬಿಟ್ಟರು, ಅಶ್ವತ್ಥಾಮನೋ ಏನ ಪೇಳಲಿ ಗರ್ಭಸ್ಥ ಶಿಶುವಿನ ಅಸುವಿಗೆ ಹಗೆಯಿಟ್ಟ, ಇಷ್ಟು ವಿಪತ್ತಿನಿಂದ ಪಾರಾದುದು ನಿನ್ನ ಅನುಗ್ರಹದಿಂದಲ್ಲವೇ? ಕೃಷ್ಣಾ! ನಾನು, ನನ್ನ ಪುತ್ರರೆನ್ನ ಸೊಸೆ, ಅವಳ ಸೊಸೆ, ಅವಳ ಮಗನಿಂತು ನಮ್ಮೆಲ್ಲರ ರಕ್ಷಿಸಿ ಸಲಹಿದ ಸ್ವಾಮಿ! ನಿನ್ನನ್ನು ಇದೊಂದೇ ಕೊಡೆಂದು ಬೇಡುವೆನು. ಆಗಾಗ ನಮಗೆ ನಿನ್ನ ದಿವ್ಯದರ್ಶನ ಕಾರಣವಾದ ವಿಪತ್ತುಗಳನ್ನೇ ಕೊಡು. ನಿನ್ನ ಮರೆಸುವ ಸಂಪತ್ತು ಬೇಡ. ಕುಲ, ಧನ, ವಿದ್ಯಾ, ರೂಪ ವೈಭವಗಳಿಂದ ಮದಮತ್ತನಾದವನು ನಿನ್ನನ್ನು ಸ್ಮರಿಸಲಾರನು. ಏಕಾಂತಭಕ್ತಚಿಂತಾಮಣೀ! ಜಾಗ್ರದಾದಿ ತ್ರಿಗುಣ ಕೃತವಿಕಾರರಹಿತನಾದ, ಸ್ವರಮಣನಾದ, ಆನಂದಪೂರ್ಣನಾದ ಅಪ್ರಾಕೃತನಾದ ಮುಕುಂದ! ನಮೋನಮಃ ಭೂತಗಳ ಯೋಗ್ಯತೆಯಂತೆ ಫಲ ಕೊಡುವ ಸ್ವಾಮೀ! ನೀನೇ ಕಾಲನಾಗಿ ಸುಜನಾಭೀಷ್ಟವಂ ಪೂರೈಸುವಿ. ಈಶಾನಾದಿವಂದ್ಯ! ಮುಖ್ಯಪ್ರಾಣನೂ ನಿನ್ನಿಂದ ಜನನ ಲಯಗಳನ್ನು ಪೊಂದುವನೆಂದ ಮೇಲೆ ಇತರರ ಪಾಡೇನು? ಕುರುಪಾಂಡವ ಕಲಹ ವ್ಯಾಜದಿಂದ ಸಂಹಾರಕಾರಣನು ನೀನೇ! ಯೋಗ್ಯತಾತಿರೀಕದಿ ನಿನಗೆ ಯಾರೂ ಶತ್ರುಗಳಲ್ಲ, ಯಾರೂ ಮಿತ್ರರಲ್ಲ. ಆದರೂ ತಾಮಸರು ನೀನು ತಮ್ಮಲ್ಲಿ ದ್ವೇಷ ಮಾಡುವಿ ಎಂದು ತಪ್ಪಾಗಿ ತಿಳಿದು ನಿನ್ನನ್ನು ನಿಂದಿಪರು. ಭಗವನ್! ಮನುಜರಲ್ಲಿ ಘನುಜನಂತೆ ಮಾಡುವ ನಿನ್ನ ಈ ವಿಡಂಬನವನ್ನು ಯಾರೂ ತಿಳಿಯಲಾರರು. ಅಜನಾದ ನಿನ್ನ ಜನ್ಮವು ಅಕರ್ತನಾದ ನಿನ್ನ ಕರ್ಮವು ಆಶ್ಚರ್ಯಕರವಲ್ಲವೇ? ತಿರ್ಯಗಾದಿಯಲ್ಲಿ ವರಾಹನಾಗಿ, ನರರಲ್ಲಿ ರಾಮನಾಗಿ, ಋಷಿಗಳಲ್ಲಿ ಭಾರ್ಗವನಾಗಿ, ಜಲಚರಗಳಲ್ಲಿ ಮತ್ಸ್ಯನಾಗಿ ನೀ ಮಾಡಿದ ವಿಡಂಬನೆಯಿಂದ ನೀನು ಜನನಾದಿಗಳುಳ್ಳ ಕರ್ಮಫಲಬದ್ಧನಾದ ಜೀವನಲ್ಲವೆಂದು ತಿಳಿದುಬರುವದು. ಕೋಪದಿ ಗೋಪಿಕೆಯು ದಧಿಭಾಂಡವನ್ನೊಡೆದ ನಿನ್ನನ್ನು ಕಟ್ಟಲು ಹಗ್ಗವನ್ನು ತಂದಾಗ ಕಾಡಿಗೆ ಕಣ್ಣಿಂದ ಬಾಷ್ಪಗಳನ್ನು ದುರಿಸಿ ಮತ್ತಿಷ್ಟು ಕಪ್ಪಾದ ನಿನ್ನ ಮುದ್ದುಮುಖವನ್ನು ಕೈಗಳಿಂದ ತಿಕ್ಕುತ್ತಾ, ನಿಟ್ಟುಸಿರುಬಿಡುತ್ತಾ ಭಯಪಟ್ಟವನಂತೆ ಕಂಪಿಸುತ್ತಾ ನಿಂತ ನಿನ್ನನ್ನು ನೋಡಿ ಎಂತರ ಜ್ಞಾನಿಗಳೂ ನೀನು ಮನುಜ ಬಾಲಕನೇ ಎಂಬ ಅಜ್ಞಾನವನ್ನು ಪೊಂದುವರು. ದುರ್ಗಾರಮಣ! ಕರಕಿಂಕರಶಂಕಿ! ನಿನಗೇತರ ಭಯವು?

ಕೃಷ್ಣಾ! ಮಲಯಪರ್ವತದಿ ಚಂದನದಂತೆ ಯದುಕುಲದಿ ಪುಣ್ಯಶ್ಲೋಕನಾದ ಯದು ರಾಜನ ಕೀರ್ತಿಯಂ ಬೆಳಗಲು ಜನ್ಮರಹಿತನಾದರೂ ಪುಟ್ಟಿದೆಯೆಂದು ಕೆಲವರೆಂದರೆ ಬೇರೆ ಕೆಲವಿದ್ವಾಂಸರು ದೇವಕೀ ವಸುದೇವರು ಮಾಡಿದ ತಪಃಫಲವಾಗಿ ಸಜ್ಜನ ರಕ್ಷೆಯನ್ನು ದುರ್ಜನ ಶಿಕ್ಷೆಯನ್ನು ಮಾಡಲು ಪುತ್ರನಾಗಿ ಬಂದೆ; ಎಂಬರು. ಕೆಲವರು ಸಮುದ್ರ ಮಧ್ಯದಿ ಭಾರದಿಂದ ಮುಣುಗುತ್ತಿರುವ ನೌಕೆಯಂತೆ ಭೂರಿಸುರವೈರಿಭಾರಕರ್ಷಿತಳಾದ ಭೂದೇವಿಯಿಂದ ಪ್ರಾರ್ಥಿತನಾಗಿ ಬ್ರಹ್ಮನ ಬಿನ್ನಹವಂ ಲಾಲಿಸಿ ಭೂಭಾರಭೂತ ದುಷ್ಟ ಜನ ಸಂಹಾರವನ್ನು ಮಾಡಲು

ಅವತರಿಸಿದೆ; ಎಂಬರು. ಸಂಸಾರದಲ್ಲಿ ಅವಿದ್ಯಾಕಾಮಕರ್ಮಗಳಲ್ಲಿ ತೊಳಲಿ ಕಷ್ಟಪಡುವ ಸುಜನರ ಕ್ಲೇಶನಾಶಕವಾದ ಲೀಲಾವಿಲಾಸವನ್ನು ತೋರಿಸಲು ಜನಿಸಿದೆ ಎಂದು ಕೆಲವರನ್ನುವರು. ನಿನ್ನ ದಿವ್ಯಕಥೆಯಂ ಕೇಳುವ, ನಿನ್ನನ್ನೇ ಪಾಡಿ ಪೊಗಳುವ, ನಿನ್ನ ಪುಣ್ಯಸ್ಮರಣೆ ಮಾಡುವವರೇ ಘನದುರ್ಜನ್ಮಪರಂಪರಾಹರಣ ದಕ್ಷವೂ ಮಹೂಮುನಿರಕ್ಷಕವೂ ಆದ ನಿನ್ನ ಪದಾಂಬುಜವನ್ನು ಕಾಣುವರು ಇಂದು ನೀನೆಮ್ಮನ್ನು ಬಿಟ್ಟಗಲುವ ಮನಸ್ಸೇಕೆ ಮಾಡಿದೆ? ಪ್ರಭೋ! ನೀನುಂಡ ಪವಿತ್ರವಾದ ನೈವೇದ್ಯವನ್ನುಂಡು ಬದುಕುವ, ನಿನ್ನ ಪಾದಾಂಬು ಜವಂಬಿಟ್ಟನ್ಯಗತಿಯನ್ನು ಕಾಣದಿರುವ ನಮ್ಮನ್ನೇಕೆ ಬಿಡುವೆ? ನೀನಿಲ್ಲದಿರಲು ನಮಗೂ ಯಾದವರಿಗೂ ನಾಮರೂಪ ಗಳುಂಟೇ? ನೀ ಕೊಟ್ಟ ಖ್ಯಾತಿ ನಿನ್ನದು ಸಮೃದ್ಧಿ! ನಿನ್ನ ದರ್ಶನವೆಮಗೆ ಇಂದ್ರಿಯಗಳಿಗೆ ಮುಖ್ಯಪ್ರಾಣದರ್ಶನದಂತೆ ಜೀವನವೆನಿಸಿದೆ. ನಿನ್ನ ವಿರಹವೆಮಗೆ ಮರಣವೇ ಸರಿ! ಹಸ್ತಿನಾವತಿಯು ನಿನ್ನ ಪದಶುಭ ಲಕ್ಷಣಾಂಕಿತವಾಗಿ ಶೋಭಿಸುತ್ತಿರುವಂತೆ ನೀನು ದ್ವಾರಕೆಗೆ ಪೋಗಲು ಶೋಭಿಸಲಾರದು. ನಿನ್ನ ಕಾರುಣ್ಯಾಮೃತದೃಷ್ಟಿ ವೀಕ್ಷಿತವಾಗಿ ಈ ಜನಪದಗಳೀಮರಬಳ್ಳಿಗಳು ಈ ವನಾದ್ರಿ ನದೀ ಸಮುದ್ರಗಳು ಸಮೃದ್ಧವಾಗಿ ಶೋಭಿಸುತ್ತಿವೆ. ಪೋಗು ಎನ್ನಲಾ ನಮಗೆ ಅನಿಷ್ಟ; ಇರು ಎನ್ನಲಾ ಯಾದವರಿಗನಿಷ್ಟ! ಉಭಯವ್ಯಾಕುಲಳಾದ ನನ್ನ ಈ ಪಾಂಡವ ಯಾದವರಲ್ಲಿರುವ ಬಂಧು ಸ್ನೇಹಪಾಶವನ್ನು ಕಡಿದು ನಿನ್ನ ಭಕ್ತರೆಂಬುವ ಸ್ನೇಹಮಾತ್ರವನ್ನು ಉಳಿಸು. ಗಂಗೆ ಸಮುದ್ರರತಳಾದಂತೆ ನನ್ನ ಮನಸ್ಸು ನಿನ್ನಲ್ಲಿ ಅನನ್ಯ. ವಿಷಯವಾಗಿ ರಮಿಸಲಿ! ಶ್ರೀಕೃಷ್ಣ! ಪಾರ್ಥಸಖ! ಯಾದವ ಪಾಂಡವರ ದ್ರೋಹಿಗಳ ನಾಶಮಾಡಿದ ಅಮರ ವಂದ್ಯ! ಗೋವಿಂದ! ಗೋಬ್ರಾಹ್ಮಣ ದೇವಸುಜನಾರ್ತಿಹರಣ! ನಾರಾಯಣ! ಸರ್ವಸಮರ್ಥ! ಭಗವನ್! ಕೃಷ್ಣ! ನಿನಗಿದೋ ನಮಸ್ಕಾರವು."

ಎಂದು ನುತಿಸಿದ ಕುಂತಿಯ ಮಧುರಾಲಾಪವನ್ನು ಕೇಳಿ ನಸುನಕ್ಕು ಅವಳನ್ನು ಮೋಹ ಪಡಿಸುತ್ತಾ ಶ್ರೀಕೃಷ್ಣನು ಆಕೆಯನ್ನು ಇತರರನ್ನು ಬೀಳ್ಕೊಟ್ಟು ಹಸ್ತಿನಾವತಿಯಂ ಬಿಟ್ಟು ಪೊರಡುವನಾಗಿಯೂ ಧರ್ಮಜಾದಿಪ್ರಾರ್ಥಿತನಾಗಿ ಕೆಲಕಾಲವಲ್ಲೆ ನೆಲಸಿದನು.

## ೯. ಭೀಷ್ಮ ನಿರ್ಯಾಣ

ಬಂಧುವಧಜನಿತಶೋಕಾತುರನಾದ ಯುಧಿಷ್ಠಿರನು ಆಶ್ಚರ್ಯಚಕಿತನಾದ ಹರಿಯಿಂದಲು, ಭೂಭಾರಹರಣಾದಿಕಾರ್ಯಗತನಾಗಿ ಅವತರಿಸಿದ ಸತ್ಯಸಂಕಲ್ಪನಾದ ಕೃಷ್ಣನ ಮರ್ಮವನ್ನರಿತ ವೇದವ್ಯಾಸಾದಿ ಮುನಿಗಳಿಂದಲೂ 'ವಿಷ್ಣುದ್ವಿಟ್ ತದನುಬಂಧಿನಿಗ್ರಹವು ಕ್ಷತ್ರಿಯರಿಗೆ ಪರಮಧರ್ಮವೆಂದು' ಬೋಧಿತನಾದರೂ ದುಃಖಾಕ್ರಾಂತನಾಗಿ ಇಂತು ಚಿಂತಿಸಿದನು.

ಆಹಾ! ಏನು ನನ್ನ ಅಜ್ಞಾನವು! ಪರಕೀಯವೇ ಆದ ಈ ದೇಹದ ಸುಖಕ್ಕೆಂದು ಎಷ್ಟು ಅಕ್ಷೌಹಿಣೀ ಜನರ ಪ್ರಾಣಗಳನ್ನು ತೆಗೆದುಕೊಂಡೆ! ಛೇ! ನನ್ನಷ್ಟು ದುರಾತ್ಮರಿನ್ನಾರು? ಅಭಿಮನ್ಯು ಮೊದಲಾದ ಬಾಲಕರು, ದ್ರೋಣಾದಿ ವಿಪ್ರರು, ದ್ರುಪದಾದಿ ಬಂಧುಜನರು, ಅಶ್ವತ್ಥಾಮಾದಿ ಮಿತ್ರರು, ಭೂರಿಶ್ರವ ಬಾಹ್ಲಿಕಾದಿ ಹಿರಿಯರು ದುರ್ಯೋಧನಾದಿ ಸೋದರರು, ಕೃಪಭೀಷ್ಮಾದಿ ಗುರುಜನರು – ಇವರಿಗೆಲ್ಲಾ ದ್ರೋಹವನ್ನೆಸಗಿದ ನನಗೆ ಸಾವಿರಾರು ವರ್ಷಗಳವರೆಗೂ ನರಕವಾಗುವದು! ವೇದಗಳಲ್ಲಿ ರಾಜನಿಗೆ ಧರ್ಮಯುದ್ಧದಲ್ಲಿ ಶತ್ರುವಧೆಯು ಪಾಪವಲ್ಲವೆಂದು

ಇದೆ! ಆದರೂ ನನಗೇಕೋ ಪಾಪಭಯವು ಕಾಡುತ್ತಿದೆ! ನನ್ನ ಬಂಧುಗಳ ತರುಣಿಯರು ವೈಧವ್ಯವಂ ಪೊಂದಿದರು, ಅವರ ಮಕ್ಕಳು ಪರದೇಶಿಗಳಾದರು! ನಾನೆಷ್ಟು ಅಶ್ವಮೇಧಾದಿ ಪುಣ್ಯಕರ್ಮಗಳ ಮಾಡಿದೊಡೇನು? ಕೆಸರು ಮೆತ್ತಿದ ದ್ರವ್ಯವನ್ನು ಕೆಸರು ನೀರಿನಿಂದ ತೊಳೆದರೆ ನಿರ್ಮಲವಾಗುವದೇ? ಹೆಂಡದ ಪಾತ್ರೆಯನ್ನು ಹೆಂಡದಿಂದ ತೊಳೆದರೆ ಸುಗಂಧಿತವಾಗುವದೇ? ಅಂತೆಯೆ ನಾನು ಮಾಡಿದ ಭೂತಹತ್ಯಾ ಪಾಪರಾಶಿಯನ್ನು ಪಶುಹಿಂಸಾಯುತವಾದೀ ಯಾಗಗಳು ಹೇ. ಕಳೆಯುವವು?"

ಹೀಗೆ ಪ್ರಜಾದ್ರೋಹಭೀತನಾಗಿ ಸರ್ವಧರ್ಮರಹಸ್ಯವನ್ನು ತಿಳಿಯಲು ಕಾತರನಾದ ಧರ್ಮರಾಜನು ಭೀಷ್ಮನು ಶರಪಂಜರದಲ್ಲಿ ಮಲಗಿರುವ ರಣಭೂಮಿಗೆ ತೆರಳಿದನು. ಆಗ ಭೀಮಾದಿ ಸೋದರರೂ ಸ್ವರ್ಣಭೂಷಿತವಾದ ಕುದುರೆಗಳಂ ಕಟ್ಟಿದ ದಿವ್ಯರಥಗಳಲ್ಲಿ ಧರ್ಮರಾಜನನ್ನು ಹಿಂಬಾಲಿಸಿದರು. ವ್ಯಾಸಧೌಮ್ಯಾದಿ ವಿಪ್ರರು ಐತಂದರು. ಧನಂಜಯನ ರಥದಲ್ಲಿ ಪಾರ್ಥಸಾರಥಿಯೂ ದಯಮಾಡಿದನು. ಗುಹ್ಯಕರಿಂದ ಕೂಡಿದ ಕುಬೇರನಂತೆ ಶೋಭಿಸುವ ಧರ್ಮರಾಜನು ಸ್ವರ್ಗದಿಂದಿಳಿದು ಬಂದ ದೇವತೆಯಂತೆ ಕಂಗೊಳಿಸುವ ಭೀಷ್ಮನನ್ನು ನೋಡಿ ನಮಸ್ಕಾರ ಮಾಡಿದನು. ಅಂತೆಯೇ ಭೀಮಾದಿಗಳು ಪರಿವಾರದವರು ಕೃಷ್ಣನೂ ಕೂಡ ನಮಿಸಿದರು. ಯೋಗಸಾಮರ್ಥ್ಯದಿಂದ ಇದನ್ನರಿತ ದೇವರ್ಷಿ ಬ್ರಹ್ಮರ್ಷಿ ರಾಜರ್ಷಿಗಳಲ್ಲಿಗೆ ತಂಡೋಪತಂಡವಾಗಿ ಶಿಷ್ಯಜನರನ್ನು ಕರೆದುಕೊಂಡು ಬಂದರು. ಪರ್ವತ, ನಾರದ, ಧೌಮ್ಯ, ಭಗವಾನ್ ವೇದವ್ಯಾಸ, ಬೃಹದಶ್ವ, ಭರದ್ವಾಜ, ಶ್ರೀಪರಶುರಾಮ, ವಸಿಷ್ಠ, ಇಂದ್ರಪ್ರಮದ, ಗೃತ್ಸಮದ, ತ್ರಿತ, ಅಸಿತ, ಕಕ್ಷೀವಾನ್, ಗೌತಮ, ಚಿತ್ರಕೌಶಿಕ, ಸುದರ್ಶನ, ಶುಕಾಚಾರ್ಯ, ಕಶ್ಯಪ, ಅಂಗಿರಸ, ಮುಂತಾದ ಮಹನೀಯರನ್ನು ಕಂಡು, ಭೀಷ್ಮನು ದೇಶಕಾಲಾನುಸಾರವಾಗಿ ಅವರನ್ನು ಮನಸಾ ಪೂಜಿಸಿದನು. ತನ್ನ ಮುಂದೆ ಆಸೀನನಾದ ಸ್ವೇಚ್ಛಾಕೃತಾವತಾರನಾದ ವಾಸುದೇವನನ್ನು ನೋಡಿ ಸ್ವಾಂತರ್ಯಾಮಿಯೇ ಇವನೆಂದಾ ಜಗದೀಶನನ್ನು ನಮಿಸಿ ವಿನಯಾಭಿಮಾನಸಮನ್ವಿತರಾದ ಪಾಂಡುಸುತರನ್ನು ನೋಡಿ ಬಾಷ್ಪಾಕುಲಿತನೇತ್ರನಾಗಿಂತೆಂದನು.

"ಆಹಾ! ಎಷ್ಟು ಕಷ್ಟ! ಏನನ್ಯಾಯ? ಧರ್ಮರಾಜ! ವಿಪ್ರರನ್ನು ಧರ್ಮವನ್ನು ಕೃಷ್ಣನನ್ನು ಬಿಡದೆ ಆಶ್ರಯಿಸಿದ ನಿಮಗೂ ಇಷ್ಟು ವ್ಯಸನಗಳು ಬರಬೇಕೆ? ಪಾಂಡುರಾಜನು ಮೃತನಾಗಲು ಚಿಕ್ಕಮಕ್ಕಳಾದ ನಿಮ್ಮನ್ನು ಕಟ್ಟಿಕೊಂಡು ಕುಂತಿಯು ನಿಮಗಾಗಿ ಪಟ್ಟ ಕ್ಲೇಶಗಳೆಷ್ಟು! ನಿಮ್ಮ ಕಷ್ಟಗಳನ್ನು ನೋಡಿ ಎಲ್ಲವೂ ನಮ್ಮ ಪ್ರಾರಬ್ಧಪ್ರೇರಕ ಹರೀಚ್ಛೆಯಂತೆ ನಡೆಯುವದೆಂದು ತಿಳಿದಿರುವೆನು. ಕಾಲರೂಪಿಯ ವಶದಲ್ಲಿ ಲೋಕವು, ಮೇಘವೃಂದವು ವಾಯುವಶನಾಗಿರುವಂತೆ ನಡೆಯುತ್ತಿದೆ, ನೋಡು! ಪ್ರಜಾರಂಜಕನಾದ ಧರ್ಮರಾಜನೇ ರಾಜನು, ಕ್ಷಿತಿಭಾರಭೂತ ದಿತಿಸುತ ಶೋಣಿತ ದಿಗ್ಧಗದಾಪಾಣಿಯು ಹೃದಯಪೀಠ ಸಮರ್ಚಿತ ಚಕ್ರಪಾಣಿಯು ಆದ ಭೀಮಸೇನನೇ ನಾಯಕನು, ದ್ರೋಣಾನುಗ್ರಹ ಸಂಪಾದಿತಾಸ್ತ್ರಗ್ರಾಮನು, ಸಂತೋಷಿತ ಶಿವಸಂಗ್ರಾಮನು ಚಂಡಗಾಂಡೀವ ಧನುರ್ಧಾರಿಯಾದ ಅರ್ಜುನನೇ ಯುದ್ಧಚಾಲಕನು, ಸರ್ವ ಸುಪರ್ವಾಧಿರಾಜನು, ಬಲವೀರ್ಯಾದ್ಯನಂತ ಗುಣಸಿಂಧುರಾಜನು ಸಾಕ್ಷಾದ್ಭಗವಂತನಾದ ಕೃಷ್ಣನೇ ಅನಿಮಿತ್ತ ಬಂಧುವಾಗಿರುವಲ್ಲಿಯೂ ಇಷ್ಟು ವಿಪತ್ತುಗಳು ಬರಬೇಕೇ? ರಾಜನ್! ಇವನ ವಿಚಾರವನ್ನು ಮಾಡತೊಡಗಿ ಬ್ರಹ್ಮರುದ್ರಾದಿಗಳೂ ಮೋಹಿತರಾಗಿರುವರು! ಇವನ ಲೀಲೆಯನ್ನು ಯಾರಿಗೂ ತಿಳಿಯಲಾಗದು! ಹರಿಯೇ ಸ್ವತಂತ್ರನು! ಅವನ ವಶದಲ್ಲಿರುವ ಅವನ

ಆಟದ ಗೊಂಬೆಗಳು ನಾವು. ಅವನ ಇಚ್ಛೆಯಂತೆ ನಡೆ! ಅನಾಥರಾಗಿ, ದುರ್ಯೋಧನ – ದುಶ್ಶಾಸನಪೀಡಿತರಾದ ಪ್ರಜರನ್ನು ಚೆನ್ನಾಗಿ ರಕ್ಷಿಸು. ಈ ಕೃಷ್ಣನಾರೆಂದು ತಿಳಿದಿರುವೆ? ಪೂರ್ಣನಾದ ಸಾಕ್ಷಾನ್ನಾರಾಯಣನೇ ಧರ್ಮರಾಜಾ! ತನ್ನ ಇಚ್ಛೆಯಿಂದ ಬಂಧಕ ಶಕ್ತಿಯಂ ಬೀರಿ ಲೋಕದ ಜನರಿಗೆ ತಿಳಿಯದಂತೆ ಗೂಢನಾಗಿ ಯಾದವರಲ್ಲಿ ಚರಿಸುವ ಹರಿಯೇ ಕಾಲರೂಪಿಯಾಗಿ ತತ್ತದ್ಯೋಗ್ಯಫಲ ಪ್ರಧಾನವನ್ನು ಮಾಡುತ್ತಲಿರುವನು. ಸರ್ವವೇದ ಪ್ರತಿಪಾದ್ಯನಾದ ಇವನ ಅಗಾಧ ಮಹಿಮೆಯನ್ನು ಶಿವನೊಬ್ಬ ಬಲ್ಲ, ಬ್ರಹ್ಮ ಬಲ್ಲ. ತನ್ನ ಮಹಿಮೆಯನ್ನು ತಾನೇ ಕಪಿಲನಾಗಿ ಬಲ್ಲ. ನಾರದನೂ ಬಲ್ಲ. ವತ್ಸಾ! ಏನೆಂದು ಪೇಳಲಿ? ಈ ಗೋವಿಂದನನ್ನು ಮಿತ್ರನೆಂದೆ. ಮಾತುಲಪುತ್ರನೆಂದೆ. ಬಂಧುವೆಂದೆ. ಸಾರಥಿಯಂ ಮಾಡಿದೆ. ದೂತನಾಗಿಸಿದೆ. ಮಂತ್ರಿಯಂತೆ ಬಳಸಿದೆ. ನೀ ಮಾಡಿದ ಈ ಕರ್ಮಗಳಿಂದ ಸರ್ವಸ್ವಾಮಿಯು ಸರ್ವಾಂತರ್ಯಾಮಿಯು, ಸಮಾಧಿಕರಹಿತನು, ಪಕ್ಷಪಾತದುರಭಿಮಾನಾದಿ ಸರ್ವದೋಷ ವರ್ಜಿತನೂ ಆದ ಕೃಷ್ಣನಿಗೇನು ಕುಂದು? ಹಿಗ್ಗುಕುಗ್ಗುಗಳಿಲ್ಲದ ನಮ್ಮಯ ಪ್ರಭುವು ನನ್ನಲ್ಲಿ ಮಾಡಿದ ವಾತ್ಸಲ್ಯವನ್ನು ನೋಡು! ನಾನು ಪ್ರಾಣಗಳನ್ನು ಬಿಡುವ ಸುಸಮಯದಿ ತನ್ನ ದರ್ಶನವನ್ನು ಸಾಕ್ಷಾತ್ತಾಗಿ ಕೊಡುತ್ತಿಪ್ಪ ನಮ್ಮಪ್ಪನ ಕರುಣೆಗೇನೆಂಬೆ? ಭಕ್ತಿಯಿಂದ ಅವನಲ್ಲಿ ಮನವನ್ನಿಟ್ಟು ವಚಸಾ ಅವನನ್ನು ಪಾಡಿ ಪೊಗಳುತ್ತಾ ಕಳೇವರವನ್ನು ಬಿಡುವ ಯೋಗಿಜನರು ಕಾಮಕರ್ಮರೂಪ ಸಂಸಾರದಿಂದ ಮೋಕ್ಷವನ್ನೈದುವರಂತೆ! ಇನ್ನು ಸಾಕ್ಷಾತ್ ಆ ಭಗವಂತನನ್ನು ನೋಡುತ್ತಾ ಶರೀರವನ್ನು ಬಿಡುವ ಭಾಗ್ಯವೆನಗೆ ಕೊಟ್ಟು ಮುಂದೆ ನಿಂತ ಗೋವಿಂದನು ನನ್ನ ಕೈಬಿಡುವನೇ? ಇಲ್ಲ. ದೇವದೇವಾ! ಕೃಷ್ಣಾ! ಸ್ವಚ್ಛಂದ ಮರಣವನ್ನೆನಗೆ ನಮ್ಮ ತಂದೆಯು ಕೊಟ್ಟದ್ದೆಂತಹ ಚಂದವಾಯಿತು! ಪ್ರಸನ್ನ ಮಂದಹಾಸ ವದನಾರವಿಂದಸುದರನಾಗಿ ಕಮಲಾರುಣಲೋಚನ ನಿರ್ಮುಕ್ತ ಕರುಣಾಕಟಾಕ್ಷ ಬಂಧುರನಾಗಿ, ಓ ಚತುರ್ಭುಜನೇ ನನ್ನ ಧ್ಯಾನವಿಷಯನಾಗು!

ಎಂದು ಶರಪಂಜರಶಯಿತನಾದ ಕುರುಕುಂಜರನ ವಚನವನ್ನಾಲಿಸಿ ಧರ್ಮರಾಜನು ಮುನಿಸುಜನಸಭಾಮಧ್ಯದಲ್ಲಿ ಮಂದಾಕಿನೀನಂದನನಿಂದ ವಿವಿಧ ವಿಷಯಗಳನ್ನು ಕೇಳಿ ತಿಳಿದನು. ತ್ರಿವಿಧ ಪುರುಷಸ್ವಭಾವ, ನರಜಾತಿ ಸಾಧಾರಣಧರ್ಮ ವರ್ಣಾಶ್ರಮಧರ್ಮ, ರಾಗವಿರಾಗ ಸಹಕೃತವಾದ ಪ್ರವೃತ್ತಿ ನಿವೃತ್ತಿಧರ್ಮಗಳು, ದಾನಧರ್ಮ, ರಾಜಧರ್ಮ, ಸ್ತ್ರೀಧರ್ಮ, ಶಮದಮಾದಿ ಮೋಕ್ಷಸಾಧನ, ಸ್ಪಷ್ಟತ್ವಾದಿ ಹರಿಲಕ್ಷಣಗಳು, ಹರಿತೋಷಕರವಾದ ಏಕಾದಶ್ಯಾದಿ ಶುಭವ್ರತಗಳು, ಸಾಧನಸಹಿತವಾದ ಧರ್ಮಾರ್ಥಕಾಮ ಮೋಕ್ಷಗಳು ಮೊದಲಾದುವನ್ನು ನಾನಾಖ್ಯಾನೇತಿಹಾಸಗಳಿಂದ ವರ್ಣಿಸಿ ತತ್ವವಿದಗ್ರಣಿಯಾದ ಭೀಷ್ಮನು ವಿಶೇಷಪುಣ್ಯಕಾಲವಾದ ಉತ್ತರಾಯಣವು ಬಂದಿರುವುದನ್ನರಿತು ತನ್ನ ಶರೀರ ತ್ಯಾಗ ಸಮಯವಿದೇ ಎಂದು ನಿಶ್ಚಯಿಸಿದನು.

ತತ್ಕ್ಷಣವೇ ವಿಷಯಪರವಾಗಿಂದ್ರಿಯವನ್ನುಪಸಂಹರಿಸಿದನು. ಸಕಲೇತರಸಂಗರಹಿತವಾದ ಮನವನ್ನು ಪೀತಾಂಬರಧಾರಿಯು, ಭಕ್ತಮನೋಹಾರಿಯು ಚತುರ್ಭುಜಾ ಕಲಿತನು ಜನ್ಮಾದಿದೋಷರಹಿತನು ಆದ ಕೃಷ್ಣನಲ್ಲಿಟ್ಟು ಸರ್ವೇಂದ್ರಿಯ ವ್ಯಾಪಾರವನ್ನು ಬಿಟ್ಟು ಸ್ತುತಿಸಲುಪಕ್ರಮಿಸಿದನು. ಫಲರಾಗಮುಖದೋಷರಹಿತವಾದ ನಿರಂತರ ಮನೋಧಾರಣಾ ಬಲದಿಂದ ನಿರಸ್ತಪಾಪನಾಗಿ ಶ್ರೀಕೃಷ್ಣನ ಕಟಾಕ್ಷಪಾತದಿಂದ ಆಯುಧ ವ್ಯಥೆಯನ್ನೂ ಅಂತೆಯೇ ಮಮಕಾರಾದಿ ಭ್ರಮೆಯನ್ನೂ ಕಾಣದೆ ಶುದ್ಧವಾಗಿ ಜನನ ಮರಣ ಪರಂಪರಾನಾಶಕನಾದ

ವಾಸುದೇವನನ್ನಿಂತು ಪೊಗಳಿದನು. ಬಾಲ್ಯದಿಂದ ತೃಷ್ಣಾದೂರವಾಗಿಸಿ ಕೃಷ್ಣನಲ್ಲಿಟ್ಟಿದ್ದ ಮನಸ್ಸನ್ನು ಸುಮುಖನಾದ ಪಾರ್ಥಸಖನಲ್ಲಿಟ್ಟನು. ಸಂಸಾರ ಪ್ರವಾಹಕಾರಣನಾದ ನಾರಾಯಣನು ರಮಾದೇವಿಯಿಂದ ಕ್ರೀಡಿಸಿ ಪ್ರಕೃತಿಯಿಂದ ಜಗವ ನಿರ್ಮಿಸಿರುವನು. ಸ್ವಮಹಿಮಾಮಹಿತನು. ಅವ್ಯಾಹತ ಷಡ್ಗುಣೈಶ್ವರ್ಯಸಹಿತನು. ಅವನೇ ಇಂದು ಯಾದವ ಕುಲದಿ ಜನಿಸಿರುವನವನೇ ಎನಗೆ ಗತಿ ಎಂದನು.

"ತ್ರಿಜಗನ್ಮೋಹನ ನೀಲಮೇಘಸುಂದರ ಶರೀರೀಯೂ ಪ್ರಾಭಾತ ನೀರಜ ಬಂಧು ಕಿರಣಾಭಪೀತಾಂಬರಧಾರಿಯೂ ನೀಲಾಲಕಕುಲಕಲಿತಕಮನೀಯಮುಖಾರವಿಂದನೂ ಆದ ಗೋವಿಂದನಲ್ಲಿ ಎನಗೆ ನಿಷ್ಕಲ್ಮಷಭಕ್ತಿಯು ಇರಲಿ! ನಮ್ಮ ವಿಜಯ ಸಖನ ಅಪರಾಧ ಸಹಿಷ್ಣುತೆಯನ್ನೆಷ್ಟು ಬಣ್ಣಿಸಲಿ! ಹಯರಿಂಖಾಮುಖಧೂಳಿಧೂಸರ ಕುಂತಲವೃಂದದಿಂದಲು, ರಯಜಾತಶ್ರಮವಾರಿ ಬಿಂದುಗಳಿಂದಲೂ ಅಲಂಕೃತಮಾದ ಆಸನದಿಂದ ಸುಂದರನಾಗಿ ನನ್ನ ನಿಶಿತಶರಗಳಿಂದಲೂ ಭಿದ್ಯಮಾನವಾಗದೆ ಶೋಭಿಸುವ ಕೃಷ್ಣನನ್ನ ಶ್ರಾಂತವೂ ಚಿಂತಿಸುವೆ. ನರನ ನುಡಿಯನ್ನು ಕೇಳಿ ಸೇನಾದ್ವಯ ಮಧ್ಯದಲ್ಲಿ ರಥವನ್ನು ನಿಲ್ಲಿಸಿ ನಿಂತು ನೋಟದಿಂದಲೇ ಪರಸೈನಿಕಾಯುಶ್ಶೇಷವನ್ನು ನಿಶ್ಶೇಷವಾಗಿ ಹರಿಸಿ ಅನಾಯಾಸದಿಂದ ಭೂಭಾರಹರಣ ವನ್ನಾಚರಿಸಿದ ಕೃಷ್ಣನಲ್ಲೆನ್ನ ಮತಿಯು ನಿಲ್ಲಲಿ! ಸ್ವಜನ ವಧೆಯು ದೋಷಮೆಂದು ರಣದಿಂದ ವಿಮುಖನಾದ ಸಖನ ಕುಮತಿಯನ್ನು ನಾಶಗೊಳಿಸಲು ಗೀತೆ ಎಂಬ ಬ್ರಹ್ಮವಿದ್ಯೆಯನ್ನು ಪದೇಶಿಸಿದ ಸರ್ವೋತ್ತಮನ ಚರಣದಲ್ಲೆನ್ನ ಮನವು ನಿರಂತರವಾಗಿ ರಮಿಸಲಿ! ತಾನು ಆಯುಧವನ್ನು ಪಿಡಿಯುವುದಿಲ್ಲವೆಂದನು. ನಾನವನಿಂದ ಆಯುಧವನ್ನು ಪಿಡಿಸುವೆನೆಂದನು. ಭಕ್ತವತ್ಸಲನಾದ ಶ್ರೀಹರಿಯು ತನ್ನ ಮಾತನ್ನು ಪಾಲಿಸುವುದಂ ಬಿಟ್ಟು ಈ ದಾಸನ ನುಡಿಯ ಸತ್ಯವಾಗಿಸಲು ನಿಶ್ಚಯಿಸುದುದೆಷ್ಟು ಮನೋಹರವು! ಯುದ್ಧಭೂಮಿಯಲ್ಲಿ ರಥದಿಂದ ಕೆಳಗಿಳಿದು ರಥಾಂಗವಂ ಕೈಲಿ ಪಿಡಿದು ಭರದಿಂ ಬರುವಾಗ ಜಾರಿದ ಉತ್ತರೀಯದಿಂದಲೂ ಬಾಣಕ್ಷತರಕ್ತಪರಿಪ್ಲುತಗಾತ್ರದಿಂದಲೂ ಅಪರಾಧಿಯಾದೆನ್ನನ್ನು ಕೊಲ್ಲುವೆನೆಂದು ಅರ್ಜುನನಿಗೆ ಪೇಳುತ್ತಾ, ಅವನಿಂದ ವಾರಿತವಾದರೂ ಬಿಡದೆ ಆನೆಯ ಮೇಲೇರಿ ಬರುವ ಸಿಂಹದಂತೆ ಬಂದ ಗೋವಿಂದನೇ ನನಗೆ ದಿಕ್ಕಾಗಲಿ! 'ವಿಜಯರಥವೆನ್ನ ಕುಟುಂಬವದನ್ನು ರಕ್ಷಿಪುದೆನ್ನ ಕರ್ತವ್ಯ' ವೆಂಬುವಂತೆ, ತೋತ್ರವನ್ನು ಹಯರಶ್ಮಿಗಳನ್ನು ಕೈಗಳಲ್ಲಿ ಧರಿಸಿ, ಅನಾಯಾಸವಾಗಿ ರಕ್ಷಣೆಯಂ ಗೈದ ಭಗವಂತನಲ್ಲಿ ನನ್ನ ಚಿತ್ತವು ಹತ್ತಲಿ! ಮುಮೂರ್ಷುನಾದ ಎನಗಿನ್ನಾರು ದಿಕ್ಕು? ಪ್ರಯಾಣ ಕಾಲದಲ್ಲಿವನಂ ನೋಡಿದವರಿಗೆ ವೈಕುಂಠಾದಿ ಲೋಕಗಳಲ್ಲಿ ಸ್ವಯೋಗ್ಯ ಸುಖವು ಪ್ರಾಪ್ತ ವಾಗುವುದಲ್ಲವೇ? ಇವನ ಲಲಿತಗತಿವಿಲಾಸ, ಮಂದಹಾಸ, ಪ್ರೇಮವೀಕ್ಷಣ ದುಷ್ಟಶಿಕ್ಷಣಾದಿ ಲೀಲೆಯನ್ನು ಕಂಡು ಕೊಂಡಾಡಿ, ಇವನಲ್ಲೇ ಮನಸ್ಸನ್ನು ಮಾಡಿ ಗೋಪಕಾಂತೆಯರು ಕೂಡ ಜಡಶರೀರಾದಿಗಳನ್ನು ತ್ಯಜಿಸಿ ಸ್ವಭಾವಾವಿರ್ಭಾವಲಕ್ಷಣ ಮೋಕ್ಷವನ್ನು ಪಡೆಯಲಿಲ್ಲವೇ? ಅಂತಹ ಈ ಸರ್ವಾಂತರ್ಯಾಮಿಯಾದ ಸ್ವಾಮಿಯು ಶರೀರಧಾರಿಗಳಾದ ಜೀವನ ಹೃದಯ ಕುಹರದಲ್ಲಿ ಪ್ರತ್ಯೇಕನಾಗಿದ್ದೂ ಸೂರ್ಯನೊಬ್ಬನೇ ಉಪಾಧಿಭೂತನೇತ್ರೇಂದ್ರಿಯಭೇದದಿಂದ ಅನೇಕನಾಗಿ ತೋರುವಂತೆ ಅನೇಕ ಬಿಂಬರೂಪನಾಗಿದ್ದೂ ಸ್ವಗತಭೇದವಿವರ್ಜಿತನಾಗಿರುವನು. ಈ ಸರ್ವೇಶನ ಗುಣರೂಪಗಳಲ್ಲಿ ಭೇದಭ್ರಮವೆನಗೆ ದೂರವಾಯಿತು. ಯಥಾಸ್ಥಿತಿ ವಸ್ತುವಿಜ್ಞಾನವೆನಗೆ ಹರಿಕರುಣೆಯಿಂದಾಯಿತು. ದ್ಯೂತದ ನೆವದಿಂದ ಕುರುವಂಶವನ್ನಳಿಸಿ

ಭೂಭಾರವನ್ನಿಳಿಸಿದ ಶ್ರೀಕೃಷ್ಣನ ಭಕ್ತಜನ ಶೋಕನಾಶಕವಾದ ಪಾದಾರವಿಂದವನ್ನು ಹೃದಯದಿ ಧರಿಸಿ ಈ ಶರೀರವನ್ನು, ಗೂಡನ್ನು ಬಿಡುವ ಹಕ್ಕಿಯಂತೆ ಬಿಡುವೆ"ನೆಂದು ಮನೋವಾಙ ನೇತ್ರಗಳಿಂದ ಕೃಷ್ಣನಿಗೆ ಶುದ್ಧನಾದ ತನ್ನನ್ನೇ ತಾನು ಸಮರ್ಪಿಸಿ ಅಸಂಪ್ರಜ್ಞಾತ ಸಮಾಧಿಯನ್ನು ವಹಿಸಿ ತನ್ನ ಮೂಲರೂಪವನ್ನೈದಿದನು.

ಇಂತು ಗುಣಪೂರ್ಣನಾದ ಅಪ್ರಾಕೃತನಾದ ಹರಿಯಲ್ಲಿ ಮನಸ್ಸನ್ನಿಟ್ಟು ಉಪರತನಾದ ಭೀಷ್ಮನನ್ನು ಕಂಡು ಪಾಂಡವಾದಿ ಸರ್ವರೂ ಸಾಯಂಕಾಲದಿ ಪಕ್ಷಿಗಳಂತೆ ಸುಮ್ಮನೆ ನಿಂತು, ಚಿಂತಿಸಿದರು.

ಆಗ ದೇವದುಂದುಭಿಗಳು ಮೊಳಗಿದವು. ಗಂಧರ್ವರು ಹಾಡಿದರು. ಅಪ್ಸರೆಯರಾಡಿದರು. ಸಾಧುಗಳು ಪ್ರಶಂಸಿಸಿದರು. ಹೂಮಳೆಗರೆಯಿತು. ತಾತನನ್ನು ನೆನೆದು ದುಃಖಿಸಿ ಸಾಧುಧರ್ಮಜನು ಭೀಷ್ಮನಿಗೆ ಮಾಡುವ ಉತ್ತರಕ್ರಿಯೆಗಳನ್ನು ತಾನೂ ಮಾಡಿ ಭೀಮಾದಿಗಳಿಂದಲು ಮಾಡಿಸಿದನು. ಮುನಿಗಳು ಶ್ರೀಕೃಷ್ಣಮಹಿಮೆಯನ್ನು ನೋಡಿ ಪುಲಕಾಂಕುರಿತ ಗಾತ್ರರಾಗಿ ಕೃಷ್ಣನ ಪವಿತ್ರನಾಮ ಕೀರ್ತನೆಯನ್ನು ಮಾಡುತ್ತಾ ತಮ್ಮ ಆಶ್ರಮಗಳಿಗೆ ತೆರಳಿದರು.

ಶ್ರೀಕೃಷ್ಣನಿಂದ ಕೂಡಿ ಧರ್ಮರಾಜನು ಹಸ್ತಿನಾವತಿಯನ್ನು ಸೇರಿದನು. ಗಾಂಧಾರೀ ಧೃತರಾಷ್ಟ್ರರನ್ನು ಕುಂತಿಯನ್ನು ಸಂತೈಸಿದನು. ಧೃತರಾಷ್ಟ್ರನ ಅನುಮತಿಯನ್ನು ಪಡೆದು ಶ್ರೀಕೃಷ್ಣ ರಕ್ಷಿತನಾಗಿ ಧರ್ಮರಾಜನು ಪಿತೃಪೈತಾಮಹವಾದ ರಾಜ್ಯವನ್ನು ಪ್ರಜಾರಂಜಕನಾಗಿ ಆಳಿದನು ಎಂದು ಸೂತನು ಪೇಳಿದನು.

## ೧೦. ಶ್ರೀಕೃಷ್ಣದ್ವಾರಕಾಗಮನವು

ಆಗ ಶೌನಕನು ಇಂತೆಂದನು:

ತನ್ನ ಸಂಪತ್ತನ್ನಪಹರಿಸಿ ಕಲಹಪ್ರಿಯರಾದ ದುಷ್ಟಬಂಧುಗಳನ್ನು ವಧಿಸಿ ಧರ್ಮರಾಜನು ವ್ಯಾಸಾದಿ ಧರ್ಮಜ್ಞವಚನವಿಧೇಯನಾಗಿ ರಾಜ್ಯವನ್ನೆಂತು ಪಾಲಿಸಿದನು? ಅನುಜರಿಂದ ಕೂಡಿ ಭೋಗಾಸಕ್ತನಾಗದೆ ಜೀವನವಂ ಕಳೆದನಂತೆ! ಅದು ಹೇಗೆ?" ಎಂದು ಕೇಳಲು ಸೂತನು ಹೇಳಿದನು.

ಕುರುಸಂತತಿವೃದ್ಧಿಗಾಗಿ ಪರೀಕ್ಷಿತನನ್ನು ವಂಶಾಂಕುರವಂ ಮಾಡಿ ರಕ್ಷಿಸಿ ಜಗಜ್ಜನ್ಮಾದಿ ಕಾರಣನಾದ ನಾರಾಯಣನು ಧರ್ಮರಾಜನನ್ನವನ ರಾಜ್ಯದಲ್ಲಿ ಸ್ಥಾಪಿಸಿ ನಿತ್ಯಪ್ರಮುದಿತನಾದ ಶ್ರೀಕೃಷ್ಣನು ಸಂತೋಷಪಟ್ಟನು. ಉತ್ತಮಕಲ್ಪದಿಂದಾಚರಿಸಲ್ಪಟ್ಟ ಅಶ್ವಮೇಧ ಯಾಗಗಳನ್ನು ಧರ್ಮರಾಜನಿಂದ ಮಾಡಿಸಿ ಇಂದ್ರನ ಕೀರ್ತಿಯಂತೆ ಅವನ ಕೀರ್ತಿಚಂದ್ರಿಕೆಯನ್ನು ದಿಗಂತಗಳಲ್ಲಿ ಬೆಳಗಿಸಿದನು. ಧರ್ಮಜನಾದರೂ ಭೀಷ್ಮನ ನುಡಿಗಳನ್ನು ಅಚ್ಯುತನ ಉಪದೇಶವನ್ನು ಕೇಳಿ ಸರ್ವಸ್ವತಂತ್ರನಾದ ಹರಿಯ ಅಧೀನವೀ ಜಗವೆಂದರಿತನು. ದುರ್ಯೋಧನಾದಿ ದುಷ್ಟವಧೆಯು ಪಾಪವಲ್ಲವೆಂದೂ ತಿಳಿದನು. ಅಜಿತನಾದ ಕೃಷ್ಣನಾಶ್ರಯದಿ ಇಂದ್ರನಂತೆ ಭೂಮಿಯನ್ನು ಪಾಲಿಸುತ್ತಾ ಸಪ್ತಪ್ರಣಿಧಿ ಸಂಪಾದಿತ ಸಕಲೈಶ್ವರ್ಯನಾಗಿ ಅನುಜಸೇವಿತನಾಗಿದ್ದನು. ಬೇಕಾದಾಗ ಮಳೆ, ಬೇಕಾದಷ್ಟು ಬೆಳೆ, ಹಾಲುಹೈನ ಅನೂನ, ವಿವಿಧ ಋತುಸಮಯ ಸಮೃದ್ಧ ಧಾನ್ಯರಾಶಿಗಳು, ನದೀ ಸಮುದ್ರ ಪರ್ವತ ವನಸ್ಪತಿಗಳು ನೀಡುವ ಐಶ್ವರ್ಯವಪಾರವಾಗಿದ್ದವು. ಅನಾವೃಷ್ಟಿ

ಮುಂತಾದ ಅಧಿದೈವಿಕ ಕ್ಲೇಶ, ಉನ್ಮಾದಪ್ರಮುಖಾಧಿಭೌತಿಕ ದುಃಖ, ಕುಷ್ಠಾದಿ ಅಧ್ಯಾತ್ಮಿಕ ರೋಗ ಇವುಗಳಿಲ್ಲದೇ ಜನರು ಸುಖಿಗಳಾಗಿದ್ದರು.

ಶ್ರೀಕೃಷ್ಣನು ಹಸ್ತಿನಾವತಿಯಲ್ಲಿ ಕೆಲಕಾಲವಿದ್ದು ಸುಭದ್ರೆಗೂ ಬಂಧುಗಳಿಗೂ ಪ್ರಿಯವಂ ಮಾಡಿ, ಅವರೆಲ್ಲರನ್ನು ಬೀಳ್ಕೊಟ್ಟು ಧರ್ಮರಾಜನಿಗೆ ಲೋಕಾಚಾರದಂತೆ ವಂದಿಸಿ, ಭೀಮಾದಿ ಗಳನ್ನಾಲಿಂಗಿಸಿ, ಅರ್ಜುನಾದಿಗಳನ್ನಾಶೀರ್ವದಿಸಿದನು. ಶ್ರೀಕೃಷ್ಣನು ರಥಾರೋಹಣವನ್ನು ಮಾಡುತ್ತಿರಲು ಸುಭದ್ರಾ–ದ್ರೌಪದಿಯರು, ಉತ್ತರಾ–ಕುಂತಿಯರು, ಗಾಂಧಿರೀ–ಧೃತರಾಷ್ಟ್ರರು, ವಿದುರ–ಧರ್ಮಜರು, ಯುಯುತ್ಸು – ಕೃಪಾಚಾರ್ಯರು, ನಕುಲ – ಸಹದೇವರು, ವೃಕೋ ದರನು, ಧೌಮ್ಯನು, ಶಾರ್ಙ್ಗಪಾಣಿಯ ವಿರಹವನ್ನು ಸಹಿಸಲಾರದೆ ಸಂಭ್ರಮಕಾತರ ರಾದರು. ಇದೇನಾಶ್ಚರ್ಯವು! ಶೌನಕಾ! ಯಾವ ಪ್ರಭುವಿನ ಸಂಗದಿಂದ ಮನುಜನು ದುಸ್ಸಂಗದೂರನಾಗಿ, ಒಂದು ಸಲ ಕೇಳುತ್ತಲೇ ರುಚಿಯಂ ಪುಟ್ಟಿಸುವ ಅವನ ಯಶೋಗಾನವನ್ನಾಕರ್ಣಿಸಿ ಬಿಡ ಲಾರನೋ ಅಂತಹ ಹರಿಯ ವಿರಹವನ್ನೆಂತು ಸಹಿಸಲು ಶಕ್ತರಾಗುವರು? ದರ್ಶನ ಸ್ಪರ್ಶನಾ ಲಾಪಶಯನಾಸನ ಭೋಜನಾದಿ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಇಂದಿರಾರಮಣನಲ್ಲಿ ಅಭ್ಯಸ್ತವಾಗಿ ಪ್ರಶಸ್ತವಾದ ಬುದ್ಧಿಯುಳ್ಳ ಪಾಂಡವಾದಿಗಳನವನಂ ಬಿಡಲಾಗದೆ, ಎವೆ ಇಕ್ಕದ ಕಣ್ಣುಗಳಿಂದ ನೋಡುತ್ತಾ ಮನಸ್ಸೆಲ್ಲವೂ ಅವನ ಹಿಂಬಾಲಿಸಿಪೋದಿತೆಂಬಂತೆ ಕರ್ತವ್ಯ ಮೂಢರಾಗಿ ಸಂಚರಿಸುತ್ತಿದ್ದರು. ಮಂದಿರವನ್ನು ಬಿಟ್ಟು ಗೋವಿಂದನು ಪೊರಡುವಾಗ ಬಂಧು ಜನರು ಕಣ್ಣಲ್ಲಿ ಕವಿದ ಬಾಷ್ಪಗಳನ್ನು ಶುಭವಲ್ಲವೆಂದು ತಡೆದರು.

ಆಗ ಶಂಖಗಳನೂದಿದರು. ಭೇರಿಮೃದಂಗವೀಣಾಪಣವಗೋಮುಖಾದಿ ವಾದ್ಯಗಳು ಭೋರ್ಗರೆದವು! ಕುರುನಾರಿಯರು ಸುರವೈರಿಯನ್ನು ನೋಡಲುತ್ಸುಕರಾಗಿ, ಪ್ರಾಸಾದ ಶಿಖರ ಗಳನ್ನೇರಿ ಹರಿಶಿರದಿ ಕುಸುಮವೃಷ್ಟಿಯಂಗರೆದರು, ಪ್ರೇಮದಿಂದ ಪಾಡಿದರು, ಲಜ್ಜೆಯಿಂದ ಕೂಡಿದರು. ಕಮಲನೇತ್ರೆಯರು ಕಮಲೇಶನ ಕಂಡಾನಂದ ಪೊಂದಿದರಾಗ. ಮುಕ್ತಾದಾಮ ಚಿತ್ರಿತಧವಳಚ್ಛತ್ರವನ್ನು ಧನಂಜಯನು ಪ್ರಿಯತಮನ ಮೇಲೆ ಪಿಡಿದು ನಡೆದನು. ಉದ್ಧವ-ಸಾತ್ಯಕಿಯರು ವ್ಯಜನಗಳ ಬೀಸುತ್ತಿದ್ದರು. ಮುಕ್ತಾಮುಕ್ತ ನಿಯಾಮಕನಾದ ರಮೇಶನ ಗುಣ ವರ್ಣನರೂಪವಾದ ಆಶೀರ್ವಾದಗಳ ಮಾಡಿ, ಬ್ರಾಹ್ಮಣರು ಸತ್ವರಜಸ್ತಮೋಗುಣ ರಹಿತ ನಾದರೂ ಆನಂದಾದಿ ಸಕಲ ಕಲ್ಯಾಣಗುಣಾಕರನಾಗಿರುವ ಅಪ್ರಮೇಯನೆಂದು ಸ್ತುತಿಸಿದರು.

ಉತ್ತಮಶ್ಲೋಕನಾದ ಕೃಷ್ಣನಲ್ಲಿ ಭಕ್ತಿಭರಿತರಾದ ಹಸ್ತಿನಾವತಿಯ ಉತ್ತಮ ಸತಿಯರು ವೇದಸಾರ ಮನೋಹರವಾದ ವಚನತತಿಯಿಂದ ಅವನನ್ನು ಕೊಂಡಾಡಿದರು.

"ತರುಣೀ! ಯಾದವಪತಿಯೇ ಈ ಕೃಷ್ಣ? ಪುರಾತನಪುರುಷನು. ಆದ್ಯನು. ಮಹಾಪ್ರಳಯ ಕಾಲದಲ್ಲಿ ಜೀವಜಡಾತ್ಮಕ ಜಗವನ್ನು ಪೊಟ್ಟೆಯಲ್ಲಿಟ್ಟು, ತಮೋರೂಪ ದುರ್ಗಾಸತಿಯಿಂದ ಗೂಹಿತನಾಗಿ, ಅವಳ ಸ್ತೋತ್ರವನ್ನು ಕೇಳುತ್ತಾ, ರಮೆಯಿಂದ ರಮಿಸುತ್ತಾ ಜಗದ್ವ್ಯಾಪಾರವನ್ನು ಪರಮಿಸಿ, ಯೋಗನಿದ್ರಾಮುದ್ರಿತನೇತ್ರನವಾದ ಪರಮ ಪವಿತ್ರನು. ಸರ್ವತಂತ್ರಸ್ವತಂತ್ರನು. ಇವನೇ ತನ್ನವಳಾದ ರಮೆಯನ್ನು ಶ್ರೀಭೂದುರ್ಗಾರೂಪತ್ರಯದಿಂದ ತನ್ನಲ್ಲಿ ಕ್ರೀಡಿಸುವಂತೆ ಪ್ರೇರೇಪಿಸಿ ಪ್ರಾಕೃತನಾಮರೂಪರಹಿತನಾದ ತಾನೇ ಆಧಾರನಾಗಿ ಪ್ರಾಕೃತನಾಮರೂಪಸಹಿತ ಜೀವಸೃಷ್ಟಿಯನ್ನು ಮಾಡಲು ಅವಳಿಂದ ಕ್ರೀಡಿಸಿ, ಬ್ರಹ್ಮಾಂಡಾದಿ ಸೃಷ್ಟಿಯನ್ನು ಮಾಡಿದನು. ಜಿತೇಂದ್ರಿಯರಾಗಿ ವಾಯುಜಯವನ್ನು ಪಡೆದ ಭಕ್ತಸತ್ತಮರು ಇವನ ಪಾದಾರವಿಂದ

ದರ್ಶನವನ್ನು ಪೊಂದುವರು. ಅಂತಹ ಈ ಶ್ರೀಶನೆಮ್ಮ ಚಿತ್ತಗಳನ್ನು ಶುದ್ಧವನ್ನಾಗಿಸಲಿ! ಈ ಸೃಷ್ಟಿಸ್ಥಿತಿಲಯಕಾರಣನಾದ ಕೃಷ್ಣನನ್ನು ವೇದಗಳಿಂದ ಉಪನಿಷದಾದಿ ರಹಸ್ಯಮಂತ್ರಗಳಿಂದ ವೇದವಾದಿಗಳು ಪೊಗಳುವರು. ಆಪ್ತಕಾಮನಾದ ಸ್ವಾಮಿಗೆ ಸ್ಪೃಹಾದಿಗಳುಂಟೇ? ಅಧರ್ಮದಿಂದ ರಾಜರಾಳುವಾಗ ಧರ್ಮ, ಸತ್ಯ, ಋತ, ದಯ, ಯಶ, ಶರಣಜಲಕ್ಷೇಮ, ಇವುಗಳಿಗೆ ಭಂಗವು ಬರಲು, ಆಯಾಕಾಲದಲ್ಲಿವತರಿಸಿ ಸಜ್ಜನರನ್ನು ಸಲಹುವನು. ಇವನು ಪುಟ್ಟಿದ ಯದುಕುಲವೇ ಪಾವನವಾಯಿತು. ಈ ಪುರುಷೋತ್ತಮನ ಪಾದಪಂಕಜಪರಾಗಪವಿತ್ರವಾಯಿತಾ ಮಥುರಾಪುರಿ. ಅಹೋ! ಕುಶಸ್ಥಲಿಯು ಇವನ ಸಾನ್ನಿಧ್ಯದಿಂದ ಸ್ವರ್ಗವನ್ನೇ ಧಿಕ್ಕರಿಸಿತು. ಇವನ ಪ್ರಜರೀ ಗೋವಿಂದನ ಕರುಣಾಪೂರ್ಣ ಕಟಾಕ್ಷಪಾತಸುಖವನ್ನನುಭವಿಸಿ ಸ್ವರ್ಗವನ್ನೂ ಕಡೆ ಮಾಡಿರುವರು. ಇವನಲ್ಲಿ ಸರ್ವಾಶೆಗಳಂ ಸಮರ್ಪಿಸಿ, ಇವನಿಗಾಗಿ ಜೀವಿಸಿ, ಇವನ ಅಧರಾ ಮೃತಪಾನ ಮಾಡಲು ಆ ಕೃಷ್ಣಕಾಂತೆಯರು ನಿಯತಿಯಿಂದ ನಿರ್ಮಲಮನದಿಂದ ನೊಂತ ವ್ರತಗಳೆಷ್ಟೋ? ಮಿಂದತೀರ್ಥಗಳಾವುವೋ? ಗೈದಪೂಜೆಗಳೆನ್ನೆಷ್ಟೋ? ಚೈದ್ಯಾದಿಗಳನ್ನು ಗೆದ್ದು ಸ್ವಯಂ ವರಾಂಗಣದಿಂದ ತಂದ ಸುಂದರಿಯರು, ನರಕನನ್ನು ಸಂಹರಿಸಿ ಕಾರಾಗಾರದಿಂದ ತಂದ ರಾಜ ಕುಮಾರಿಯರು ಕೃಷ್ಣನ ಕೈಪಿಡಿಯಲು ಮಾಡಿದ ತಪಸ್ಸಿನ್ನೆಂತಹುದೋ? ಆಹಾ! ಅಗ್ನಿಪುತ್ರರಾದ ಮಹಾತ್ಮರಿವನ ಅಂಗಸಂಗಕ್ಕಾಗಿ ಅಂಗನೆಯರಾಗಲು ತಪಸ್ಸನ್ನು ಮಾಡಿದರಂತೆ! ಇದೇನಾಶ್ಚರ್ಯವು! ಆ ತಪಃಫಲವೆಂದೇ ನಂದನಂದನನು ಅವರ ಮಂದಿರವನ್ನರಗಳಿಗೆಯೂ ಬಿಡದೆ ತನ್ನ ಲೀಲಾವಿಲಾಸಗಳಿಂದ ಅವರ ಮನಮೋಹಕನಾಗಿರುವನು"– ಎಂದೀರೀತಿಯಿಂದಾ ಪುಣ್ಯಸತಿಯರಾಡುವ ಮಾತನ್ನು ಕೇಳಿ ಕಟಾಕ್ಷದಿಂದಲೇ ಅವರನ್ನೆಲ್ಲ ಬಹುಮಾನಿಸಿ ಕೃಷ್ಣನು ಪ್ರಯಾಣವನ್ನು ಬೆಳೆಸಿದನು. ಶತ್ರುಗಳಿಂದ ಶಂಕಿತನಾಗಿ ಧರ್ಮಜನು, ಹರಿಗೆ ರಕ್ಷೆಯೆಂದು ಚತುರಂಗಬಲಂಗಳನ್ನು ಕಳುಹಿಸಿದನು. ಶೌರಿಯು ಬಹುದೂರ ತನ್ನ ಹಿಂದೆ ಬಂದ ಬಂಧು ಜನರನ್ನು ಹಿಂದಕ್ಕೆ ಕಳುಹಿ ಉದ್ಧವಾದಿಗಳನ್ನು ಕರೆದುಕೊಂಡು ದ್ವಾರಕಾಮಾರ್ಗವನ್ನು ಪಿಡಿದು ನಡೆದನು. ಕುರುಜಾಂಗಲದಿಂದ ಪಾಂಚಾಲ, ಅನಂತರ ಶೂರಸೇನ ಯಾಮುನ ದೇಶಗಳನ್ನು ದಾಟಿ ಬ್ರಹ್ಮಾವರ್ತ ಕುರುಕ್ಷೇತ್ರಗಳನ್ನತಿಕ್ರಮಿಸಿ, ಮರುಧನ್ವಸೌವೀರ ಆಭೀರಸಿಂಧುವಿಷಯಗಳಿಂದ ಸರಿದು ತನ್ನದಾದ ಆನರ್ತವನ್ನು ಸಮೀಪಿಸಿದನು. ಹಾದಿಯಲ್ಲಿ ಆಯಾ ದೇಶದ ಜನರು ತನಗೆ ಸಮರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ ಅವರನ್ನು ಅನುಗ್ರಹಿಸಿದನು. ಸಾಯಂಕಾಲವಾಗುತ್ತಿರಲು ಕೃಷ್ಣನು ದ್ವಾರಕೆಯನ್ನು, ಸೂರ್ಯನು ಪಶ್ಚಿಮಾಂಬುಧಿಯನ್ನು ಸೇರಿದರು. ಆಗ ಶ್ರೀಕೃಷ್ಣನು ತನ್ನವರ ವಿರಹವಿಷಾದ ಶಮನವನ್ನು ಮಾಡಲು ಪಾಂಚಜನ್ಯವನ್ನೆತ್ತಿ ಊದಿದನು. ಧವಲವಾದಾ ಶಂಖವು ಕೃಷ್ಣನ ಕರಕಮಲದ ಅರುಣ ಕಾಂತಿಯಿಂದ ರಂಜಿತಮಾಗಿ ಧ್ವನಿಸುತ್ತಿರಲು ಅರವಿಂದದಲ್ಲಿರುವ ಕಲಹಂಸಪಕ್ಷಿಯಂತೆ ರಾರಾಜಿಸಿತು. ನಿಜಧ್ವಾನಧ್ವಸ್ತಪಾತಕ ಸಂಚಯವಾದಾ ಪಾಂಚಜನ್ಯರವವನ್ನು ಕೇಳಿ ಪ್ರಜೆಗಳೆಲ್ಲರು ಭಗವದ್ದರ್ಶನಲಾಲಸರಾಗಿ ಬಂದರು. ನಿರಪೇಕ್ಷನು ಪೂರ್ಣಕಾಮನು ಸ್ವಲಾಭ ಪರಿತುಷ್ಟನಾದ ಕೃಷ್ಣನಿಗೆ ರವಿಗೆ ದೀಪವನ್ನು ಪಿಡಿದಂತೆ ಕಾಣಿಕೆಗಳನ್ನರ್ಪಿಸಿ ನಮಿಸಿದರು. ತಂದೆಯನ್ನು ಕಂಡ ಕಂದರಂತೆ ಅಮಂದಾನಂದ ಕಂದಳಿತ ಮುಖಾರವಿಂದರಾಗಿ ಗದ್ಗದಿತಕಂಠದಿಂದ ಅನಿಮಿತ್ತಬಂಧುವೂ ರಕ್ಷಕನೂ ಆದ ಅಧೋಕ್ಷಜನನ್ನಿಂತುಸುತಿಸಿದರು.

ನಾಥ! ರಮಾನಾಥ! ವಿರಿಂಚಶಂಕರಪುರಂದರಾದಿ ವೃಂದಾರಕ ವಂದ್ಯವಾದ ನಿಮ್ಮ ಪಾದಾರವಿಂದಕ್ಕೆ ಸದಾ ವಂದಿಸುವೆವು. ಕ್ಷೇಮವನ್ನು ಬಯಸುವ ಭಕ್ತರಿಗೆ ನಿನ್ನ ಪಾದಾರವಿಂದವೇ ಗತಿಯು. ಜರಾಜನ್ಮರೋಗರಾಗಾದಿಗಳ ಉಪಟಳವನ್ನು ದೂರೀಕರಿಸುವದು. ಪ್ರಭೂ! ನಮಗೆ ಜ್ಞಾನ, ವೈರಾಗ್ಯ, ಭಕ್ತಿಗಳನ್ನು ಕೊಡು! ನೀನೆಮ್ಮ ತಾಯಿ ತಂದೆ. ನೀನೇ ಗುರು. ಪ್ರಭು ಮಿತ್ರಾದಿಸರ್ವವೂ ನೀನೇ! ಇಷ್ಟದೈವವಾದ ನಿನ್ನ ಸೇವೆಯಿಂದ ನಾವು ಕೃತಾರ್ಥರಾಗುವೆವು. ಏನು ನಮ್ಮ ಭಾಗ್ಯವು! ಸ್ವರ್ಗವಾಸಿಗಳಿಗೂ ದೂರದರ್ಶನವು ಸತಲ ಕ್ಲೇಶಕರ್ಶನವಾದೀ ನಿನ್ನ ಕಲ್ಯಾಣತಮರೂಪ ಸೌಭಾಗ್ಯವೆಮ್ಮದಾಗಿಹುದು. ಮಾಧವ! ನೀನು ಹಸ್ತಿನಾಪುರಕ್ಕೋ ಮಧುರೆಗೋ ಪೋದಾಗ ಒಂದು ಕ್ಷಣವೂ ಕೋಟಿ ವರ್ಷಗಳಂತೆ ದುಃಸಹವಾಗುವದು. ಸೂರ್ಯನಿಲ್ಲದಾಗ ಕಣ್ಣಿಗೆ ಕತ್ತಲು ಕವಿದಂತೆ ಚಿಂತಿಸುವ ನಿನ್ನವರಾದ ನಮ್ಮನ್ನು ಬಿಟ್ಟು ಪೋಗುವದಾದರೂ ಏತಕ್ಕೆ?" ಎಂದಾಡಿದ ಪ್ರಚುರಮಧುರಾಲಾಪಗಳನ್ನು ಕೇಳಿ ಹರಿಯು ನಸುನಗುತ್ತಾ ಪುರವನ್ನು ಪೊಕ್ಕನು. ಬಲಶಾಲಿಗಳಾದ ಮಧುಭೋಜದಶಾರ್ಹಕುಕುರಾಂಧಕ ವೃಷ್ಣಿಗಳಿಂದ ಕೂಡಿ ನಾಗರಾಜರಿಂದೊಪ್ಪುವ ಭೋಗವತಿಯಂತೆ ದ್ವಾರಾವತಿಯು ಶೋಭಿಸುತ್ತಿತ್ತು. ಸರ್ವಕಾಲಗಳಲ್ಲಿಯು ಪುಷ್ಪಫಲಭರಿತಮಾದ ವೃಕ್ಷಲತಾಗುಲ್ಮಗಳಿಂದ ಕಂಗೊಳಿಪ ಉದ್ಯಾನೋಪವನಗಳಿಂದಲೂ ವಿಕಸಿತ ಪದ್ಮಾದಿಗಂಧಗಂಧಿತ ಸ್ವಚ್ಛ ಜಲಗಳಾದ ಸರಸಿಗಳಿಂದಲೂ ಗೋಪುರ ದ್ವಾರಮಾರ್ಗಗಳಲ್ಲಿ ಕಟ್ಟಿದ ಕೌತುಕ ತೋರಣಗಳಿಂದಲೂ, ಬಿಸಿಲನ್ನಿ ವಾರಿಸುವಂತೆ ಎತ್ತಿ ಕಟ್ಟಿದ ಚಿತ್ರಧ್ವಜ ಪತಾಕೆಗಳಿಂದಲೂ, ತಳಿಲ ಪನ್ನೀರು ಚಲ್ಲಿದ ರಾಜ ಮಾರ್ಗ ಚತ್ವರ ಶೃಂಗಾಟಕಗಳಿಂದಲೂ, ಅಲಂಕಾರ ಮಾಡಿಟ್ಟ ಫಲಪುಷ್ಪಾಕ್ಷತಾಂಕುರಗಳಿಂದಲೂ ಪೂರ್ಣಕುಂಭ ದೀಪಾದಿ ಪೂಜಾಸಾಧನಗಳಿಂದ ಇಂಪಾದ ದ್ವಾರದೇಶಗಳಿಂದಲೂ ಶೋಭಿಸುವ ದ್ವಾರಕೆಯನ್ನು ಪ್ರವೇಶಿಸಿ ದಾರುಕ ಸಾರಥಿಯು ಪ್ರಯಾಣಿಸುತ್ತಿರಲು ವಸುದೇವೋಗ್ರಸೇನ ರಾಮಾಕ್ರೂರಪ್ರಮುಖ ಹಿರಿಯರು ಪ್ರದ್ಯುಮ್ನಸಾಂಬಚಾರುದೇಷ್ಣಾದಿ ಕಿರಿಯರು ಪ್ರಹರ್ಷ ವೇಗದಿಂದ ತಾವು ಮಾಡುತ್ತಿದ್ದ ಶಯನಾಸನ ಭೋಜನಾದಿ ಕಾರ್ಯಗಳನ್ನು ಪರಿತ್ಯಜಿಸಿ ಎದುರುಗೊಳ್ಳಲು ಬಂದರು. ಆನೆಯನ್ನು ಅಂಬಾರಿಯಿಂದ ಅಲಂಕರಿಸಿ ತಂದರು. ದ್ವಿಜರು ಸುಮಂಗಳ ವೇದಘೋಷವನ್ನು ಮಾಡುತ್ತಲೈತಂದರು. ಶಂಖ ತೂರ್ಯಾದಿ ಮಂಗಳ ವಾದ್ಯಗಳು ಭೋರ್ಗರೆದವು. ಆಲಸ್ಯದಿಂದ ಅಪರಾಧವಾದೀತೆಂದು ಸಂಭ್ರಮದಿಂದ ಸುಂದರಿಯರು ಕುಂಡಲಶೋಭಿತ ಗಂಡಸ್ಥಲಕಾಂತಿಯುತರಾಗಿ ಮಂದಹಾಸವನ್ನು ಬೀರುತ್ತ ಬಂದರು. ನಟರಾಡಿದರು. ಗಂಧರ್ವರು ಪಾಡಿದರು. ಸೂತಮಾಗಧವಂದಿಗಳು ಉತ್ತಮಶ್ಲೋಕನ ಅದ್ಭುತ ಚರಿತೆಗಳನ್ನು ಪೊಗಳಿ ಕೀರ್ತಿಸಿದರು. ಶ್ರೀಕೃಷ್ಣನು ಬಂಧು ಪೌರ ಭೃತ್ಯ ವರ್ಗದವರನ್ನು ಯಥಾಯೋಗ್ಯವಾಗಿ ವಿನಯದಿಂದ ಕೆಲವರನ್ನು ನಮಿಸಿ ಹಿರಿಯರನ್ನು ಆಲಿಂಗಿಸಿ ಸಮರನ್ನು ಕೈಕುಲುಕಿಸಿ ಮಿತ್ರರನ್ನು ನಗುತ್ತ ನೋಡಿ ಮಿಕ್ಕ ಜನರನ್ನು ಸತ್ಕರಿಸಿದನು. ಆಚಂಡಾಲಾಂತವಾದೆಲ್ಲ ಜನತೆಗೂ ಅಭಯವನ್ನು ನೀಡಿದನು. ಗುರುವಿಪ್ರವೃದ್ಧರ ಆಶೀರ್ವಚನವನ್ನು ಪಡೆದನು. ರಾಜಮಾರ್ಗದಿಂದ ಪುರಪ್ರವೇಶ ಮಾಡಿದನು. ದ್ವಾರಕೆಯ ಕುಲಕಾಮಿನಿಯರಾ ಗೋವಿಂದನ ಸಂದರ್ಶನವನ್ನು ಮಾಡಲು ಮಂದಿರಾಗ್ರ ಭಾಗಗಳನ್ನೇರಿ ಕಣ್ಣಾರೆ ಕಂಡು ಆನಂದಿಸಿದರು. ನಿತ್ಯವೂ ನೋಡುತ್ತಿದ್ದರೂ ದ್ವಾರಕಾವಾಸಿಗಳು ಆ ರಮಾವಾಸನಾದ ವಾಸುದೇವನನ್ನೆಷ್ಟು ನೋಡಿದರೂ ತೃಪ್ತರಾಗದೇ ಇಂತೆಂದುಕೊಂಡರು. 'ಸಕಲೈಶ್ವರ್ಯಪ್ರದಾತ್ರಿಯೂ

ಜಗದ್ಧಾತ್ರಿಯೂ ಆದ ಇಂದಿರೆಯು ಇವನ ವಕ್ಷವನ್ನು ಸೇರಿದಳು. ಲಾವಣ್ಯ ಸುಧಾಪಾತ್ರವಾದೀ ಸುಂದರನ ಮುಖವನ್ನು ಜನನೇತ್ರ ಚಕೋರಗಳಾದುಕೊಂಡವು. ಭಯಹರ ಬಾಹು ದಂಡಗಳನ್ನು ಲೋಕಪಾಲರು ನಂಬಿ ನಿಂತರು. ಬ್ರಹ್ಮಾದಿಗಳು ಇವನ ಪಾದಾಂಬುಜವನ್ನು ಆಶ್ರಯಿಸಿದರು. ನಮಗಾದರೂ ಅದೆ ಗತಿ' ಎಂದು ಕೊಂಡಾಡಿ ಪುಷ್ಪವೃಷ್ಟಿಯನ್ನಾವೃಷ್ಟಿ ವರನ ಶಿರದಿ ಕರೆದರು. ಆಗ ಜಲಜಾತಾಕ್ಷನು ಧವಳಛತ್ರದಿಂದ, ಚಾಮರಗಳಿಂದ, ಪುಷ್ಪವರ್ಷದಿಂದ, ತಾನುಟ್ಟ ಪೀತಾಂಬರದಿಂದ, ಧರಿಸಿದ ವನಮಾಲೆಯಿಂದಲೂ, ಕ್ರಮವಾಗಿ, ಸೂರ್ಯನಿಂದ, ಚಂದ್ರದ್ವಯದಿಂದ ನಕ್ಷತ್ರರಾಜಿಯಿಂದ, ಮಿಂಚಿನಿಂದ, ಇಂದ್ರಚಾಪದಿಂದಲೆಸಗುವ ನೀಲ ಮೇಘದಂತೆ ವಿರಾಜಿಸಿದನು.

ಆಗ ದೇವಕೀವಸುದೇವರ ಮನೆಯನ್ನು ಹೊಕ್ಕು ಅವರಿಗೆ ನಮಿಸಿ, ಶ್ರೀಕೃಷ್ಣನು ಅವಳನ್ನಾಲಿಂಗಿಸಿ ಸಂತೈಸಿದನು. ಸಪ್ತಸಪತ್ನೀ ಮಾತೆಯರಿಗೂ ನಮಿಸಿದನು. ಅವರು ಹರಿಯನ್ನಂಕದಲ್ಲಿಟ್ಟು ಸ್ನೇಹದಿಂದ ಹರಿದುಬಂದ ಸ್ತನ್ಯದಿಂದಲೂ ಹರ್ಷೋದ್ರೇಕದಿಂದ ಹರಿದುಬಂದ ಬಾಷ್ಪಜಲದಿಂದಲೂ ತೊಯಿಸಿ ಸಮ್ಮಾನಿಸಿದರು.

ಅನಂತರ ರಮಾಕಾಂತನು ಅಷ್ಟೋತ್ತರಶತಸಹಿತ ಷೋಡಶಸಹಸ್ರ ಕಾಂತೆಯರ ಶುದ್ಧಾಂತ ಭವನವನ್ನೊಂದೇಸಲ ತಾವದ್ರೂಪವಾಗಿ ಪೊಕ್ಕನು. ಪ್ರವಾಸದಿಂದ ಬಂದ ಗೋವಿಂದನ ಸಂದರ್ಶನವು ಅವರಿಗೆ ಮಹೋತ್ಸವವಾಯಿತು. ಮೇಲಕ್ಕೆದ್ದು ಎದುರ್ಗೊಂಡು ಲಜ್ಜಾಚಕಿತರಾಗಿಯೂ ಎವೆಯಿಕ್ಕದೇ ನೋಡುತ್ತಾ ನಿಂತರು. ಮಕ್ಕಳನ್ನು ಆಲಿಂಗಿಸಿ ಚುಂಬಿಸಿದ ಕೃಷ್ಣನನ್ನು ಮನಸಾ ಆಲಿಂಗಿಸಿ ಚುಂಬಿಸಿದರು. ತಡೆದರೂ ಬಿಡದೆ ನೇತ್ರಗಳಿಂದ ಬಾಷ್ಪಬಿಂದುಗಳು ತಾವಾಗಿ ಉರುಳಿ ಕಪೋಲಶೋಭೆಯನ್ನು ತುಂಬುತ್ತಿರಲು ಒರೆಸದೆ ತಮ್ಮ ರಸನನ್ನು ಕಂಡು ನಿತ್ಯನೂತನವಾದ ಅವನ ಪಾದಾಂಬುಜ ಧ್ಯಾನದಿಂದ ಆನಂದಪುಲಕಿತರಾದರು. ಅನ್ಯತ್ರ ಚಂಚಲಳಾದರೂ ಇಂದಿರೆಯು ಅವನ ಸುಂದರ ಪಾದಾರವಿಂದವನ್ನು ಅರೆಕ್ಷಣವೂ ಬಿಟ್ಟಿರಲಾರಳಂತಹ ಪುರುಷೋತ್ತಮನ ದರ್ಶನವು ಯಾರಿಗೆ ತಾನೇ ಸಾಕೆನಿಸುವದು? ಇಂದು ಭೂಭಾರಭೂತದುಷ್ಟ ರಾಜನ್ಯರೂಪರಾದ ಅಸುರರ ಅಸಂಖ್ಯಾತ ಬಲವನ್ನು ತಾನು ನಿರಾಯುಧನಾದರೂ ಪರಸ್ಪರ ಸಂಘರ್ಷಣದಿಂದ ವೇಣುವೃಂದದಿ ವಹ್ನಿಯನ್ನು ಹೊತ್ತಿಸಿ ವನಂಗಳ ಸುಡುವ ವಾಯುವಿನಂತೆ ನಾಶಗೊಳಿಸಿ ವಾಸುದೇವನು ಶಾಂತನಾದನು. ಅಂತಹ ಪ್ರಭುವರನು ಕಾಂತಾಜನ ಮಧ್ಯದಿ ಪ್ರಾಕೃತ ಮನುಜನಂತೆ ಸಂಚರಿಸಿದನು. ಅವನ ಮಾಯೆಯನ್ನಾರು ತಿಳಿಯಲಾದೀತು?

ಯಾರ ಸುಂದರ ಮಂದಹಾಸ, ಹಾವಭಾವ ವಿಲಾಸ, ದರ್ಪದ ಕುಡಿಗಣ್ಣ ನೋಟ, ವಕ್ಷಕಃ ಕೂಟಗಳನ್ನು ಕಂಡು ಮದನನೇ ವಿವಶನಾಗಿ ಕರಗತಪುಷ್ಪಚಾಪವನ್ನು 'ಪಂಚಬಾಣಗಳಿದ್ದೂ ಪಂಚಮುಖನ ಗೆಲ್ಲಲಾಗದೆ ಬೂದಿಯಾದನಾನಿಂದು ಈ ಸುಂದರಿಯರ ಸಹಾಯದಿಂದ ಚಾಪಾದಿ ಸಾಧನಗಳಂ ಬಿಟ್ಟು ತ್ರಿಲೋಕವನ್ನೂ ಜಯಿಸಿ, ವಶೀರಕಿಸಿಕೊಂಬುವೆ'ನೆಂದು ಬಗೆದ ನೆಂಬಂತೆ ದೂರ ಜಾರಿ ಬಿಸುಟನೋ, ಅಂತಹ ವಿಲಾಸವತಿಯರಾಸ್ಕರತನಾದ ಹರಿಯ ಮನೋವಿ ಕಾರವಂ ಪುಟ್ಟಿಸಲಾಗದೆ ಪೋದರು. ಇಂತಹ ಶ್ರೀಕೃಷ್ಣನನ್ನು ಸ್ತ್ರೀಜಿತನೆಂದು ತಿಳಿದವರ ಮೂರ್ಖತೆಗೇನೆನ್ನಬೇಕು? ಸಾಮಾನ್ಯ ಮನುಜನೇ ಸಾತ್ವತಪುಂಗವನಾದ ಶ್ರೀಕೃಷ್ಣ? ಪ್ರಕೃತಿಯಲ್ಲಿ ಪ್ರೇರಕನಾಗಿದ್ದೂ ಅದರ ಲೇಪ-ಲೋಪಗಳಿಲ್ಲದ ಶ್ರೀಹರಿಯೇ ಸರ್ವೇಶ್ವರನು! ಶೌನಕಾ! ನೋಡು ಹರಿಪದರತರಾದ ಸುಜನರ ಬುದ್ಧಿಯು ಮನಃ ಕೃತಮಾಲಿನ್ಯದಿಂದ ದೂರವಾಗಿ ಪ್ರಕೃತಿ

ಬಂಧಮೋಚಕವಾಗುವುದೆಂದ ಮೇಲೆ ಸಾಕ್ಷಾತ್ ಶ್ರೀಹರಿಯ ಪರಮೋತ್ಕರ್ಷವಿನ್ನೆಷ್ಟು? ಅಂತಹ ದೇವದೇವನಾದ ದೇವಕೀನಂದನನು ಸ್ತ್ರೈಣನೆಂದೂ, ತಮ್ಮಂತೆ ಮನುಜನೆಂದೂ ತಿಳಿದವರಿಗಿಂತ ಮೂಢರುಂಟೇ? ತಾಮಸ-ರಾಜಸರೇ ಅವನನ್ನಿಂತು ತಿಳಿದು ಕೆಡುವರು. ಸಾತ್ವಿಕರು ಯಥಾಮತಿ ಅವನ ಅನಂದಕಲ್ಯಾಣಗುಣಗಳನ್ನು ಭಜಿಸಿ ಮೋಕ್ಷಸಾಮ್ರಾಜ್ಯಸೌಖ್ಯವಂ ಭಜಿಸುವರು.

## ೧೧. ಪರೀಕ್ಷಿಜ್ಜನ್ಮ

ಶೌನಕನು ಪುನಃ ಪ್ರಶ್ನಿಸಿದನು.

ಅಶ್ವತ್ಥಾಮನ ಬ್ರಹ್ಮಾಸ್ತ್ರದ ಭಯಂಕರ ತೇಜದಿಂದ ಉತ್ತರೆಯ ಗರ್ಭಗತನಾದ ಅರ್ಭಕನು ಮೃತಕಲ್ಪನಾಗಲು ಶ್ರೀಶನು ಪುನಃ ಅವನನ್ನು ರಕ್ಷಿಸಿದನೆಂದು ಕೇಳಿದೆವು. ಆ ಮಹಾನುಭಾವನಾದ ಪರೀಕ್ಷಿತನ ಜನ್ಮವೃತ್ತಾಂತವನ್ನು ಮರಣಕಾರಣವನ್ನು ಅವನು ಪೊಂದಿದ ಪುಣ್ಯಲೋಕದ ವಿವರವನ್ನೆಮಗೆ ಪೇಳು. ಸೂತಾ! ಶ್ರೀಶುಕನವನಿಗೆ ಉಪದೇಶವನ್ನಿತ್ತನಂತೆ. ಅವನ ಕಥೆಯನ್ನು ಶ್ರದ್ಧೆಯಿಂದ ಕೇಳುವೆವೆನ್ನಲು ಸೂತನು ಹೇಳಲು ಉಪಕ್ರಮಿಸಿದನು.

ಧರ್ಮರಾಜನು ಪ್ರಜರನ್ನು ತಂದೆಯಂತೆ ರಂಜಿಸುತ್ತಾ ರಾಜ್ಯವನ್ನಾಳಿದನು. ಕೃಷ್ಣ ಪಾದ ಸೇವೆಯ ಮಾಧುರ್ಯವನ್ನು ಕಂಡ ಆತನಿಗೆ ಇತರ ಸರ್ವಕಾಮಗಳು ಕಹಿಯಾಗಿ ತೋರಿದವು. ಶೌನಕಾದಿ ದ್ವಿಜರೇ! ಸಂಪತ್ತು, ಯಜ್ಞಯಾಗಾದಿಗಳು, ವೀರಸೋದರರು, ಮಹೀಮಂಡಲ ಸಾಮ್ರಾಜ್ಯವು, ಮಹಿಷಿಯರು, ನಾಕವನ್ನು ಮುಟ್ಟಿ ಮೆರೆದ ಕೀರ್ತಿಯು ಎಲ್ಲವೂ ಇದ್ದೂ ಮುಕುಂದ ಪಾದಾರವಿಂದಾಸಕ್ತನಾದ ಧರ್ಮರಾಜನಿಗೆ, ಹಸಿವಾದವನಿಗೆ ವೀಣಾಸ್ರಕ್ಚಂದನಗಳಂತೆ ಸಂತೋಷಕರವಾಗಲಿಲ್ಲ.

ಹಿಂದೆ ನಾ ಪೇಳಿದಂತೆ ಮಾತೃಗರ್ಭಗತನಾದ ಬಾಲಕನು ಬ್ರಹ್ಮಾಸ್ತ್ರದಿಂದ ಪೀಡಿತ ನಾಗುತ್ತಾ ತನ್ನನ್ನಾ ಅಸ್ತ್ರತೇಜದಿಂದ ರಕ್ಷಿಪ ಲೋಕವಿಲಕ್ಷಣನಾದೊಬ್ಬ ಪುರುಷನನ್ನು ಕಂಡು ವಿಸ್ಮಿತನಾದನು. ಅಂಗುಷ್ಠಮಾತ್ರದೇಹನು, ನಿರ್ಮಲನು, ಹೇಮಕಿರೀಟ ವನಮಾಲ ಭೂಷಿ ತನು, ಷೋಡಶವರ್ಷಪ್ರಾಯನು, ಶ್ಯಾಮನು, ಮಂದಹಾಸನು ಆದ ಅಚ್ಯುತನವನಿಗೆ ತನ್ನ ದಿವ್ಯದರ್ಶನವನ್ನು ಕೊಟ್ಟನು. ಶ್ರೀಹರಿಯ ಶ್ರೀಮದ್ದೀರ್ಘ ಚತುರ್ಬಾಹುವಿಲಸಿತಮಾದ, ಕಾಂಚನಕುಂಡಲವಿಭ್ರಾಜಿತಮಾದ, ಕಮಲಾರುಣಕಟಾಕ್ಷಮಾದ ಆ ರೂಪವನ್ನು ನೋಡಿ ಯಾರಿವನೆಂದು ಚಿಂತಿಸಿದನು. ಗದಾದಂಡವನ್ನು ಗಿರಗಿರವೇ ತಿರುವುತ್ತಾ ಬ್ರಹ್ಮಾಸ್ತ್ರವನ್ನಡಗಿಸಿ, ತನ್ನ ಸುತ್ತು ತಿರುಗುತ್ತಿರುವನಿವನು ಅಧೋಕ್ಷಜನೇ ಅಹುದೆಂದು ನಿರೀಕ್ಷಿಸಿ, ನಿಶ್ಚಯಿಸಿದನು. ಆದ್ದರಿಂದಲೇ ಆ ಬಾಲಕನನ್ನು ಪರೀಕ್ಷಿತನೆಂಬರು.

ಧರ್ಮರಕ್ಷಕನಾದ ಶ್ರೀಹರಿಯು ಹತ್ತುತಿಂಗಳಾಗರ್ಭವನ್ನು ಪರಿರಕ್ಷಿಸಿ ಅಲ್ಲೇ ಅಂತರ್ಹಿತ ನಾದನು. ಆಗ ಗ್ರಹಗಳು ಲಗ್ನಾದಿ ಶುಭಸ್ಥಿತಿಯಲ್ಲಿರಲು ಶುಭಮುಹೂರ್ತದಲ್ಲಿ ಎರಡನೇ ಪಾಂಡುರಾಜನಂತೆ ಪಾಂಡವ ವಂಶಾಂಕುರನಾದ ಆ ಬಾಲಕನು ಜನಿಸಿದನು. ಧರ್ಮರಾಜನು ಪ್ರೀತನಾಗಿ ಧೌಮ್ಯಾದಿ ಪುರೋಹಿತರಿಂದ ಕೂಡಿ ಸ್ವಸ್ತಿಯ ಮಾಡಿಸಿ ಜಾತಕರ್ಮವನ್ನು ನಡೆಸಿದನು. ಕನಕ-ರಜತರಾಶಿಯನ್ನು ಕರಿತುರಗಾದಿಗಳನ್ನು ಗ್ರಾಮಾರಾಮಗಳನ್ನು ಸುವಿಪ್ರರಿಗೆ ಮೃಷ್ಟಾನ್ನವನ್ನುಣಿಸಿ ದಾನ ಮಾಡಿದನು. ಪಾತ್ರವನ್ನರಿತು ದಾನಧಾತೆಯಂ ಬಿಟ್ಟ ಮಹಾರಾಜ

ನನ್ನು ಕಂಡು ಸಂತುಷ್ಟರಾದ ಬ್ರಾಹ್ಮಣರು "ಮಹಾರಾಜಾ! ಈ ನಿನ್ನ ಪೌತ್ರನು ದೈವಕರುಣೆಯಿಂದ ಬದುಕಿರುವನು. ನಿನ್ನ ವಂಶವು ನಿಲ್ಲುವಂತೆ ನಿಮ್ಮಲ್ಲಿ ಅನುಗ್ರಹವನ್ನು ಮಾಡಿದ ಶ್ರೀಕೃಷ್ಣನಿಂದ ರಕ್ಷಿತನಾದ್ದರಿಂದ ಇವನಿಗೆ ಪರೀಕ್ಷಿತನೆಂಬ ಹೆಸರನ್ನಿಡುವೆವು. ಇವನು ಕೀರ್ತಿಶಾಲಿಯು ಭಗವದ್ಭಜನಶಾಲಿಯು ಆಗುವ"ನೆಂದು ಪೇಳಲಾಗಿ ವಿನಯಾನತ ಕಂಧರನಾದ ಧರ್ಮಜನು ಪುನಃ ಕೇಳಿಕೊಂಡನು.

"ಸ್ವಾಮಿ! ಈ ನನ್ನ ಪೌತ್ರನು ನಮ್ಮ ಪೂರ್ವಜರಾದ ಪುಣ್ಯಶ್ಲೋಕರು ನಡೆದ ಮಾರ್ಗದಲ್ಲಿ ಅವರಂತೆ ನಡೆಯುವನೇ? ಯಶಸ್ಸನ್ನು ಗಳಿಸುವನೇ? ಒಳ್ಳೆಯವನೆನಿಸುವನೇ?"

ಎನ್ನಲು ಪುನಃ ಬ್ರಾಹ್ಮಣರು ಪೇಳಿದರು:

"ಪಾರ್ಥ! ಇಕ್ಷ್ವಾಕುವಿನಂತೆ ಪ್ರಜಾರಕ್ಷಕವಾಗುವನೀ ನಿನ್ನ ಮೊಮ್ಮಗನು. ದಶರಥ ರಾಜನಂತೆ ಸತ್ಯಸಂಧನು ಬ್ರಾಹ್ಮಣಪ್ರಿಯನು ಆಗುವನು. ಕಾರ್ತವೀರ್ಯನೋ ಅರ್ಜುನನೋ ಎನಿಸುವನು ಧನುರ್ವಿದ್ಯೆಯಲ್ಲಿ. ದುಷ್ಯಂತಪುತ್ರ ಭರತನಂತೆ ಯಶೋವಿಶಾಲನು, ಅಗ್ನಿಯಂತೆ ದುರ್ಧರ್ಷನು, ಸಮುದ್ರನಂತೆ ದುಸ್ತರನು, ಸಿಂಹನಂತೆ ಪರಾಕ್ರಮಿಯು, ಹಿಮವಂತನಂತೆ ಸೇವ್ಯನು ಭೂದೇವಿಯಂತೆ ಕ್ಷಮಾಶಾಲಿಯು, ಮಾತಾಪಿತೃಗಳಂತೆ ಅಪರಾಧ ಸಹಲಶೀಲನು, ಬ್ರಹ್ಮನಂತೆ ಸಮಂಜಸನು, ಶಿವನಂತೆ ಅನುಗ್ರಹಕರ್ತನೂ, ರಮಾಶ್ರಯನಾದ ದೇವನಂತೆ ಸರ್ವಭೂತಾಶ್ರಯನಾಗುವನು. ಸಜ್ಜನಭೂಷಣವೆನಿಸಿದ ಸದ್ಗುಣಗಳುಳ್ಳ ಇವನು ಶ್ರೀಕೃಷ್ಣ ನನ್ನು ಅರ್ಜುನನನ್ನು ಪೋಲುವನು. ರಂತಿದೇವನಂತೆ ಉದಾರನು. ಯಯಾತಿಯಂತೆ ಧಾರ್ಮಿ ಕನು ಆಗಿ ಈ ವಂಶತಿಲಕನು ಬಲಿಯ ಧೈರ್ಯವನ್ನು ಪ್ರಹ್ಲಾದನ ಭಕ್ತಿಯನ್ನು ಅನುಕರಿಸುವನು. ಅಶ್ವಮೇಧ ಯಜ್ಞಗಳನ್ನು ಮಾಡುವನು. ಗುರುಹಿರಿಯರನ್ನು ಸೇವಿಸುವನು. ರಾಜರ್ಷಿಗಳನ್ನು ಕುಮಾರ ರನ್ನಾಗಿ ಪಡೆಯುವನು. ದುರ್ಮಾರ್ಗರ ಕುಕೃತ್ಯಂಗಳ ತಡೆವನು. ಭಗವಂತನಾದ ಧರ್ಮನಿಗೆ ದ್ರೋಹವನ್ನು ಬಗೆವ ಕಲಿಯನ್ನು ನಿಗ್ರಹಿಸುವನು. ಕೊನೆಗೊಂದು ಮಾತು ಕೇಳು ಧರ್ಮರಾಜಾ! ಬ್ರಾಹ್ಮಣ ಬಾಲಕನ ಶಾಪದಿಂದ ಪ್ರೇರಿತನಾಗಿ ಬಂದ ತಕ್ಷಕನಿಂದ ಮೃತ್ಯು ವೆಂದರಿತು ಸಕಲ ದುಸ್ಸಂಗವನ್ನು ಬಿಟ್ಟು ಹರಿಪದವನ್ನು ಪೊಂದುವನು. ಹರಿಪದಜಾತೆಯಾದ ಭಾಗೀರಥೀತೀರದಲ್ಲಿ ಋಷಿಸಭಾ ಸದನದಲ್ಲಿ ಶ್ರೀಶುಕನಿಂದ ಪರಮಾತ್ಮನ ಮಹಿಮೆಯನ್ನಾಲಿಸಿ ಪರಾಪರ ತತ್ತ್ವಜ್ಞಾನದಿಂದ ಕಳೇವರವನ್ನು ತ್ಯಜಿಸಿ ಮೋಕ್ಷವನ್ನು ಪಡೆಯುವನು" ಎಂದು ಜಾತಕ ಕೋವಿದರಾದ ದ್ವಿಜರು ರಾಜನಿಗೆ ಪೇಳಿ, ಸತ್ಕೃತರಾಗಿ ಹೊರಟುಹೋದರು. ಸರ್ವದೃಷ್ಟಿ ಯಿಂದ ಪರೀಕ್ಷೆಯನ್ನು ಮಾಡಿ ನೋಡುತ್ತಲಿದ್ದರಿಂದ ಪರೀಕ್ಷಿತನೆಂದಾಬಾಲಕನು ಕೀರ್ತಿತ ನಾದನು.

ಆ ರಾಜಪುತ್ರನು ಶುಕ್ಲಪಕ್ಷದಲ್ಲಿ ದಿಗ್ದೇವ ಸರಸ್ವತೀ ಪ್ರಮುಖರಿಂದ ಪೂಜಿಸಲ್ಪಡುವ ಚಂದ್ರನಂತೆ ತನ್ನ ತಾತಂದಿರ ಪೋಷಣೆಯನ್ನು ಪಡೆದು ದಿನ ದಿನ ಪ್ರವರ್ಧಮಾನನಾದನು.

ಅಶ್ವಮೇಧವನ್ನು ಮಾಡಲೆಣಿಸಿದ ಧರ್ಮರಾಜನು ಕಪ್ಪಕಾಣಿಕೆಗಳು ದಂಡಲಬ್ಧ ಧನವು ಸಾಲದೇ ಜ್ಞಾತಿದ್ರೋಹಪಾಪವೆಂದು ಕಳೆಯುವುದೆಂದು ಚಿಂತಿಸುತ್ತಿರಲು ವ್ಯಾಸರು ಪೇಳಿದಂತೆ ಭೀಮಾದಿಗಳು ತಮ್ಮ ಪೂರ್ವಜನಾದ ಮರುದ್ರಾಜನು ಸ್ಥಾಪಿಸಿದ ಅಪಾರಧನವನ್ನು ತೆಗೆದು ತಂದರು. ನಾಲ್ಕು ದಿಕ್ಕಿನಲ್ಲಿರುವ ರಾಜರಿಂದ ಕಾಣಿಕೆಯಾಗಿ ಬಹುಧನವು ಬರಲು ಧರ್ಮರಾಜನು ಸಂತೋಷಪಟ್ಟು, [illegible] ಸಂಭಾರಗಳನ್ನು ಸಂಪಾದಿಸಿದನು. ತ್ರಿಗಣಫಲಕವಾದ

ಪಂಚವಾಜಿಮೇಧಗಳಂ ಮಾಡಿ ಹರಿಗರ್ಪಿಸಿದನು. ಶ್ರೀಕೃಷ್ಣನು ಸಾಕ್ಷಾತ್ತಾಗಿ ಬಂದು ದ್ವಿಜರಿಂದ ಯಜ್ಞಗಳನ್ನು ಸಾಂಗಗೊಳಿಸಿ, ರಾಜನ ಅಪ್ಪಣೆಯಂ ಪಡೆದು ಯಾದವರನ್ನೂ ಅರ್ಜುನನನ್ನೂ ಕರೆದುಕೊಂಡು ದ್ವಾರಾವತಿಗೆ ಹೊರಟನು.

## ೧೨. ವಿದುರಬೋಧೆ

ವಿಷಯರಾಗವು ಸಂಸಾರಕಾರಣವು. ವಿರಾಗವೇ ಮುಕ್ತಿಕಾರಣವು. ಶುದ್ಧಾಂತಃಕರಣನಾದವನಿಗೆ ವಿರಾಗವು ದೃಢವಾಗಿ ನಿಲ್ಲುವಂತಹ ಬುದ್ಧಯು ಸತ್ಕರ್ಮಾನುಷ್ಠಾನದಿಂದಲೂ ತೀರ್ಥಯಾತ್ರೆಯಿಂದಲೂ ಲಭಿಸುವದು. ವಿದುರನು ತೀರ್ಥಯಾತ್ರೆಯನ್ನು ಮುಗಿಸಿ ಹಸ್ತಿನಾವತಿಗೆ ಬಂದನು. ಮೈತ್ರೇಯರ ಉಪದೇಶದಿಂದ ಪೂತನಾಗಿ ಪರಬ್ರಹ್ಮ ವಿದ್ಯೆಯಿಂದ ಪೂರ್ಣನಾಗಿ ಅಲಂಬುದ್ಧಿಯನ್ನು ಪೊಂದಿ ಶಾಂತನಾಗಿದ್ದನು.

ಬಂದ ಬಂಧುವನ್ನು ಕಂಡು ಧರ್ಮರಾಜನು ಅನುಜರಿಂದ ಕೂಡಿ ಎದುರ್ಗೊಂಡು ಕರೆತಂದನು. ಧೃತರಾಷ್ಟ್ರ ಸಂಜಯ ಕೃಪ ಕುಂತೀ ಗಾಂಧಾರೀ ದ್ರೌಪದೀ ಸುಭದ್ರಾದಿ ಪಾಂಡುರಾಜನ ಬಳಗವವನಿಗೆ ಸ್ವಾಗತವನ್ನು ಕೊಟ್ಟು ಸತ್ಕರಿಸಿತು. ಧರ್ಮರಾಜನು ಪ್ರೇಮಬಾಷ್ಪಪೂರಿತನಯನನಾಗಿ, ಆಸನವನ್ನು ಕೊಟ್ಟು, ಭೋಜನಾದಿಗಳಿಂದ ಸಂತೈಸಿ, ಸುಖಾಸೀನನಾದ ವಿದುರನನ್ನು ವಿನಯದಿಂದ ಕೇಳಿಕೊಂಡನು.

"ಪೂಜ್ಯನೇ! ನಿನ್ನ ಸಹಾಯದಿಂದ ಅನೇಕ ಕಷ್ಟಗಳಿಂದಲೂ ವಿಷಾಗ್ನಿಗಳಿಂದಲೂ ನಾವೂ ನಮ್ಮ ತಾಯಿಯೂ ಪಾರಾಗಿ ಬದುಕಿದೆವು. ಏಕಾಂತಭಕ್ತವಾದ ನೀನೀ ಕ್ಷಿತಿಮಂಡಲವನ್ನು ಯಾತ್ರೆಗೆಂದು ಸಂಚರಿಸುವಾಗ ಹೇಗೆ ಜೀವಿಸಿದೆ? ನೀನು ನೋಡಿದ ಕ್ಷೇತ್ರಗಳು ಆವುವು? ಮಿಂದ ತೀರ್ಥಗಳಾವುವು? ನಿಮ್ಮಂತಹ ಭಾಗವತರು ಸ್ವಯಂ ಪವಿತ್ರರೇ ಆಗಿಹರು. ಆದರೂ ತೀರ್ಥಗಳು ಕೂಡ ನೀವು ಬಂದು ಮಿಂದು ಪೋಗುವುದರಿಂದ ನಿಮ್ಮ ಅಂತರ್ಯಾಮಿ ಗದಾಧರನಿಂದ ನಾವೇ ಪವಿತ್ರವಾದೇವೆಂದು ಕಾದಿರುವವು! ಕೃಷ್ಣಪಾದಾಶ್ರಯರಾದ ನಮ್ಮ ಬಂಧುಜನರನ್ನು ಕಂಡೆಯಾ? ಅವರ ವಾರ್ತೆಯೇನು? ದ್ವಾರಾವತಿಯಲ್ಲೆಲ್ಲ ಸುಖದಿಂದಿರುವರೇ?" ಎಂದು ಕೇಳಲು ವಿದುರನು ತನ್ನ ಅನುಭವಗಳನ್ನೆಲ್ಲಾ ಹೇಳಿದನಾದರೆ, ಯದುಕುಲ ಕ್ಷಯವಾಗುವುದೆಂದು ಪೇಳಿದರೆ, ಇವರು ದುಃಖಪಡುವರು. ಅದನ್ನು ನೋಡಲಾರೆನೆಂದುಕೊಂಡು ದುರ್ವಿಷಹವಾದ ಆ ವೃತ್ತಾಂತವನ್ನು ಪೇಳಲಿಲ್ಲ. ಮರಣವೆಲ್ಲರಿಗೂ ಅನಿವಾರ್ಯವೇ ಆದರೂ ಪ್ರಿಯಜನರ ಭವಿಷ್ಯನ್ಮರಣ ಕಥೆಯು ಕಥನೀಯವಲ್ಲವೆಂದು ಕರುಣೆಯಿಂದ ಮಿಕ್ಕ ಸಮಾಚಾರವನ್ನು ಪೇಳಿಕಳುಹಿದನು. ಪಾಂಡವರ ಸತ್ಕಾರ ಸೌಖ್ಯವನ್ನನುಭವಿಸುತ್ತಾ ಕೆಲಕಾಲವಿದ್ದನು. ಪ್ರತಿ ದಿನವೂ ಅಣ್ಣನಾದ ಧೃತರಾಷ್ಟ್ರನಿಗೆ ಶ್ರೇಯವಾಗಲು ಚಿಂತಿಸಿ ವಿದುರನು ಹಿತೋಪದೇಶವನ್ನು ಮಾಡುತ್ತಿದ್ದನು.

ಮಾಂಡವ್ಯರ ಶಾಪದಿಂದ ಶೂದ್ರಯೋನಿಯಲ್ಲಿ ಜನಿಸಿದ ಸಾಕ್ಷಾದ್ಯಮಧರ್ಮನಲ್ಲವೇ ವಿದುರನು! ಒಂದು ನೂರು ವರ್ಷ ವಿದುರನಾಗಿದ್ದು ಅನಂತರ ಧರ್ಮರಾಜನಲ್ಲಿ ಲಯವನ್ನು ಪೊಂದಿದನು. ಲಬ್ಧರಾಜ್ಯನಾಗಿ ಧರ್ಮಜನು ಲೋಕಪಾಲರಂತಿರುವ ತಮ್ಮಂದಿರು ಸೇವಿಸುತ್ತಿರಲು ಕುಲಂಧರನಾದ ಮೊಮ್ಮಗನಂ ಕಂಡು ಆನಂದತುಂದಿಲನಾಗಿದ್ದನು. ಆಗ ಶ್ರೀಕೃಷ್ಣನು

ಅವರೆಲ್ಲರ ಅಪ್ಪಣೆಯನ್ನು ಪಡೆದು ಅರ್ಜುನೋದ್ಧವ ಸಾತ್ಯಕಿಯರಿಂದ ಕೂಡಿ ದ್ವಾರಕೆಗೆ ಹೊರಟುಹೋದನು.

ಇಂತು ಗೃಹಕೃತ್ಯಾಸಕ್ತರಾಗಿ ಮೈಮರೆತು ಜೀವಿಸುತ್ತಿರಲು ಪರಮದುಸ್ತರವಾದ ಕಾಲವು ತಿಳಿಯದಂತೆಯೇ ಕಳೆದುಹೋಯಿತು. ವಿದುರನಿದನ್ನರಿತನು. ಅಣ್ಣನಲ್ಲಿ ಬಂದು ಇಂತೆಂದನು. "ರಾಜನ್! ಹೊರಡು. ಇಲ್ಲಿರಬೇಡ. ಮರಣಭಯವೆಮ್ಮ ಬೆನ್ನಟ್ಟಿ ಬರುವುದು ಕಾಣ ಲಿಲ್ಲವೇ? ಎಲ್ಲಿಂದಲಾದರೂ ಯಾವ ರೀತಿಯಿಂದಲೂ ಮರಣಕ್ಕೆ ಪ್ರತಿಕ್ರಿಯೆ ಉಂಟೇ? ಇಲ್ಲ. ಇಂತಹ ಭಗವಂತನ ಅತ್ಯಂತ ಪರಾಕ್ರಮಿಯಾದ ಕಾಲಶಕ್ತಿಯನ್ನೇಕೆ ನೋಡದಿರವೆ? ಮರಣವು ಒದಗಲು ಪ್ರಿಯತಮ ಪ್ರಾಣಗಳಿಗೆರವಾಗುವನೆಂದಮೇಲೆ ಧನಾದಿಗಳುಳಿಯುವವೇ? ಹುಟ್ಟು ಕುರುಡನಿರುವೆ. ಶರೀರವು ಜರಾಗ್ರಸ್ತಮಾಯಿತು. ಪುತ್ರಭ್ರಾತೃಸುಹಜ್ಜನರೆಲ್ಲರು ನಿನ್ನ ಮುಂದೆ ಸತ್ತರು. ಆದರೂ ಪರರ ಮನೆಯಲ್ಲಿ ಜೀವಿಸಿರುವೆ! ಆಹಾ! ಜಂತುವಿಗೆ ಜೀವದಾಶೆಯು ಎಷ್ಟು ಉತ್ಕಟವಾಗಿರುವುದು! ನಿನಗೆ ರೋಷವಾದರೂ ಇರಬೇಡವೇ! ನಿನ್ನ ಪುತ್ರಹಂತಕನಾದ ಭೀಮಸೇನನು ಅನಾದರದಿಂದ ನಿನಗೆ ಕೊಡುವ ಎಡಗೈ ಪಿಂಡವನ್ನು ತಿಂದು ಬದುಕಬೇಕೆಂದಿ ರುವೆ! ಆದರೂ ಈ ನಿನ್ನ ದೇಹವು ನಿನ್ನ ಇಚ್ಛೆಯಿಲ್ಲದಿದ್ದರೂ ಬಿದ್ದುಹೋಗುವದು. ಹರಿದ ಚಿಂದಿಯಂತೆ ಉರಿದು ಬೀಳುವ ಈ ಶರೀರದಿಂದೇನು ಪ್ರಯೋಜನವಂ ಕಂಡೆ? ಬಿಡುದೇಹಾ ಭಿಮಾನವನ್ನು, ಕಡಿ ಬಂಧುಸ್ನೇಹವನ್ನು, ನಡೆ, ಹೊರಡುವ, ಹಿಮಾಲಯದ ಆಶ್ರಮ ಪ್ರದೇಶ ಗಳಿಗೆ! ಏಕಾಂತ ಭಕ್ತನಾಗು, ಹರಿಯನ್ನು ನಂಬು. ಇನ್ನಾದರೂ ಒಳ್ಳೆಯ ಹಾದಿ ಹಿಡಿದಾಗಲೇ ಧೀರನೆನಿಸುವೆ. ಬಾಲಾಜನ ಶಾಲಾಧನ ಲೀಲಾವನ, ಮೊದಲಾದ ವಿಭವದಲ್ಲಿ ಲೀನವಾದ ಮನಸ್ಸುಳ್ಳ ಮನುಜನನ್ನು ಕಾಲವು ನುಂಗುವುದೆಂದರಿತು ಮನೆಯನ್ನು ಬಿಡು – ಹೊರಡು"

ಎಂದು ವಿದುರನು ಹೇಳನು ಧೃತರಾಷ್ಟ್ರನು "ಅಹುದು ನಿಜ; ವಿದುರಾ ತಾನಾಗಿ ವೈರಾಗ್ಯವಂ ತಾಳಿದರೂ ಸರಿ! ಅಥವಾ ನಿನ್ನಂತಹವರ ಆಪ್ತವಾಕ್ಯದಿಂದಲಾದರೂ ಸರಿ! ಹರಿಯನ್ನು ಹೃದಯದಿ ಧರಿಸಿ ಮನೆಯನ್ನು ತ್ಯಜಿಸುವೆನು. ವಿವಿಕ್ತ ಸ್ಥಲವನ್ನು ಸೇರಿ ಶ್ರೇಯಸ್ಕರವಾದ ತಪಸ್ಸನ್ನು ಮಾಡುವದೀಗ ನನ್ನ ಕರ್ತವ್ಯ. ನಡೆ, ಇನ್ನು ಮುಂದಿನ ಕಾಲ ಕೆಟ್ಟದು. ಜ್ಞಾನೋ ಪದೇಶಕರೂ ಸಿಗಲಾರರು" ಎಂದು ಪ್ರಜ್ಞಾನೇತ್ರನಾಗಿ ತನ್ನವರಲ್ಲಿ ಸ್ನೇಹಪಾಶವನ್ನು ಕಡಿದು ವಿದುರೋಪದಿಷ್ಟಮಾರ್ಗದಲ್ಲಿ ನಡೆದುಕೊಂಡು ಹೋದನು. ಸುಬಲಪುತ್ರಿಯು ಪತಿವ್ರತೆಯು ಆದ ಗಾಂಧಾರಿಯೂ ವಿರಾಗಿಣಿಯಾದ ಕುಂತಿಯೂ ಅವನನ್ನು ಹಿಂಬಾಲಿಸಿ ಪೋದರು. ಧರ್ಮರಾಜನು ಬೇಡವೆಂದು ಕಾಲುಕಟ್ಟಿ ಅಂಗಲಾಚಿ ಬೇಡಿಕೊಂಡರೂ ಮೂರು ದಿನ ಹಠೋಪವಾಸ ಮಾಡಿ ಅವರೆಲ್ಲರೂ ಪಾಂಡವರ ಅನುಜ್ಞೆಯನ್ನು ಪಡದೇ ಪೋದರು. ಮುಂದೆ ಮೂರು ವರ್ಷ ಕಾಲ ಬದರಿಕಾಶ್ರಮದಲ್ಲಿ ವಾಸವಾಗಿದ್ದರು. ಒಂದು ಸಲ ಧರ್ಮರಾಜನವರನ್ನು ನೋಡಲು ಪೋದಾಗ ವಿದುರನು ಧರ್ಮರಾಜನಲ್ಲಿ ಐಕ್ಯವಂ ಪೊಂದಿದನು. ಅನಂತರ ಧೃತರಾಷ್ಟ್ರ-ಕುಂತೀ-ಗಾಂಧಾರಿಯರು ದಾವಾಗ್ನಿಯಲ್ಲಿ ದಗ್ಧರಾದರು.

ಧರ್ಮರಾಜನಾದರೂ ಪ್ರತಿ ದಿನ ಪ್ರಾತಃಕಾಲದಲ್ಲಿ ಧೃತರಾಷ್ಟ್ರ ದಂಪತಿಗಳು ಕೂಡುತ್ತಿದ್ದ ಸಿಂಹಾಸನಗಳಿಗೆ ನಮಸ್ಕರಿಸಿ, ಅವರನ್ನು ಮನಸಾ ಸ್ಮರಿಸಿ, ಮುಂದಿನ ಕಾರ್ಯಗಳನ್ನು ಮಾಡುತ್ತಿದ್ದನು. ಒಂದು ದಿನ ವಂದನೆಯಂ ಗೈದು ಸ್ಮರಿಸಿ ಪಿತೃಗಳು ತನ್ನ ಮನೋನೇತ್ರಗಳಿಗೆ ಕಾಣದಿರಲು ಚಿಂತಾಕ್ರಾಂತನಾಗಿ ಅಲ್ಲಿಗೆ ಬಂದಿದ್ದ ಸಂಜಯನನ್ನು ಕಂಡು ಇಂತರುಹಿದನು:

"ಸಂಜಯಾ! ಯಾವಾಗ ಬಂದೆ! ನಮ್ಮಪ್ಪನೆಲ್ಲಿ! ಕಣ್ಣಿಲ್ಲದ ತಂದೆ, ಮಕ್ಕಳನ್ನು ಕಳೆದು ಕೊಂಡು ದುಃಖಿಸುತ್ತಿದ್ದ ತಾಯಿ, ಏನಾದರು? ಅವಿವೇಕದಿಂದ ನಾನು ಮಾಡಿದ ಪುತ್ರವಧೆ ಪಾಪವಂ ಸ್ಮರಿಸಿ ರೋದಿಸುತ್ತಾ ಗಂಗೆಯಲ್ಲಿ ಬಿದ್ದರೋ ಏನು? ಸೂತಾ! ನಮ್ಮ ತಂದೆ ಪಾಂಡುರಾಜನು ಮೃತನಾಗಲು ದಿಕ್ಕಿಲ್ಲದ ನಮ್ಮನ್ನು ಬಾಲ್ಯದಿಂದ ರಕ್ಷಿಸಿದರಲ್ಲವೇ? ಇಹಲೊಕ ವನ್ನೇ ಬಿಟ್ಟಿರುವರೇ? ಪೇಳು" ಎಂದು ಕೇಳಲು ಸಂಜಯನು ಸ್ನೇಹದಿಂದ ರೋದನವನ್ನು ಮಾಡುತ್ತಾ ಧೃತರಾಷ್ಟ್ರಾದಿಗಳನ್ನು ನೆನೆದು ಚಿಂತೆಯಿಂದ ಸುಮ್ಮನಿದ್ದನು. ಅನಂತರ ಕಣ್ಣೀರ ನ್ನೊರೆಸಿಕೊಂಡು ಮನವನ್ನು ಗಟ್ಟಿಮಾಡಿ ತನ್ನ ಪ್ರಭುವಾದ ಧೃತರಾಷ್ಟ್ರನ ಪಾದವನ್ನು ನೆನೆದು ಇಂತೆಂದನು:

"ರಾಜನ್! ನಿಮ್ಮ ತಂದೆತಾಯಿಗಳು ನನ್ನನ್ನೂ ಕೈಬಿಟ್ಟು ಪೋದರು. ಏನಾದರೆಂದು ಹೇಳಲಿ!" ಎನ್ನುವಾಗ ತುಂಬುರುನಿಂದ ಕೂಡಿ ನಾರದನಿ ತ್ರಿತಂತ್ರೀ ಮಧುರವಾದ ಮಹತಿ ವೀಣೆಯನ್ನು ಮೀಟುತ್ತಾ ಅಲ್ಲಿಗೆ ಬಂದನು. ರಾಜನರ್ಪಿಸಿದ ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸಿ ಆಸನದಲ್ಲಿ ಕೂತನು. ಆಗ ಧರ್ಮರಾಜನವನಿಗೆ ನಮಿಸಿ "ಬದರಿಕಾಶ್ರಮದಲ್ಲಿ ಬಿಟ್ಟು ಬಂದ ತಂದೆತಾಯಂದಿರ ಗತಿಯೇನು? ಪೂಜ್ಯರೇ! ಅವರೇನಾದರು? ಸಂಸಾರ ಸಾಗರದಲ್ಲಿ ಮುಳುಗಿ ಕಷ್ಟಪಡುವ ಜನರಿಗೆ ತಾವು ಕರ್ಣಧಾರವಂತೆ ರಕ್ಷಕರಾಗಿರುವಿರಿ" ಎಂದು ಬೇಡಿಕೊಂಡನು.

ನಾರದನಿಂತು ಪೇಳಿದನು: "ರಾಜನ್! ಈ ಜಗತ್ತೆಲ್ಲ ಹರ್ಯಧೀನವಾಗಿದೆ ಎಂಬುದನ್ನು ಮರೆತೆಯಾ? ಯಾರಿಗಾಗಿ ಶೋಕಪಡುವೆ? ನೀನಾರವರಿಗೆ? ಶ್ರೀಹರಿಯೇ ಭೂತಗಳನ್ನೊಂದೆಡೆ ಋಣಾನುಬಂಧದಿಂದ ಕಲೆಸುವನು. ಅವನೇ ಅಗಲಿಸುವನು. ತಮ್ಮ ಮುಗುದಾಣೆಯಿಂದಲೂ ಸಾಮೂಹಿಕ ಬಂಧಕ ರಜ್ಜುವಿನಿಂದಲೂ ಕಟ್ಟಿಹಾಕಲ್ಪಟ್ಟು ಕರ್ಷಕನ ಭಾರವಹನಾದಿ ಕಾರ್ಯರತವಾದ ಪಶುಗಳಂತೆ ನಾವೆಲ್ಲರೂ ವಿವಿಧವರ್ಣಾಶ್ರಮಧರ್ಮಗಳಿಂದಲೂ ಸಾಮಾನ್ಯ ಧರ್ಮಗಳಿಂದಲೂ ಬದ್ಧರಾಗಿ ಭಗವಂತನ ಸೇವಾನಿರತರಾಗಿರುವೆವು. ಬಾಲಕನಾಡಿಸುವ ಬೊಂಬೆ ಗಳಂತೆ ಅಸ್ವತಂತ್ರರಾದೆಮಗೆ ಸಂಯೋಗವಿಯೋಗಗಳಾ ಸರ್ವೋತ್ತಮನ ಇಚ್ಛೆಯಿಂದ ಒದಗು ವವು. ಜೀವನು ನಿತ್ಯನಾದ್ದರಿಂದ ಜೀವನಿಗಾಗಿ ಶೋಕಪಡಬಾರದು. ದೇಹವು ಅನಿತ್ಯವೇ ಸರಿ ಎಂದ ಮೇಲೆ ಅದಕ್ಕಾಗಿ ದುಃಖಪಡುವುದುಚಿತವಲ್ಲ. ದೇಹವೇ ಜೀವನೆನ್ನುವರು ಮಿಥ್ಯಾಜ್ಞಾನಿ ಗಳಾದ್ದರಿಂದ ಆ ಮಾತನ್ನು ಬಿಡು. ಇನ್ನಾವುದಕ್ಕೆ ನಿನ್ನ ದುಃಖ? ಅಭಿಮಾನ, ಅಜ್ಞಾನ, ಇವೆರಡೇ ಶೋಕಕಾರಣಗಳಾಗಿವೆ. ಆದ ಕಾರಣ ಧರ್ಮರಾಜಾ! ಈ ನಿನ್ನ ಮನಸ್ಸಿನ ಅಜ್ಞಾನವನ್ನು ತಡೆ, ಅಭಿಮಾನವನ್ನು ಬಿಡು! ನಾನಿಲ್ಲದಿರೆ ಮುದುಕರ ಪಾಡೇನು, ಎಂಬುವ ಅಹಂಕಾರವನ್ನು ತ್ಯಜಿಸು. ಜ್ಞಾನವನ್ನು ಕೂಡು. ಈ ದೇಹವು ಪಂಚಭೂತ ರಚಿತವು. ಪ್ರಾಕೃತವು. ಕಾಲದಿಂದ ಕರ್ಮಾಧೀನವಾಗಿ ಬರುವದು, ಹೋಗುವದು. ಇಂತಹ ಅನಿತ್ಯದೇಹದಲ್ಲಿದ್ದ ನೀನನ್ಯರನ್ನು ಸಲಹುವೆನೆಂಬುವದು ಹಾವಿನ ಬಾಯಿಗೆ ಸಿಕ್ಕ ಕಪ್ಪೆಯು ತನ್ನ ಮರಿಯನ್ನು ಕಾಪಾಡುವೆನೆಂದು ತಿಳಿದಂತೆಯೇ ಸರಿ! ನೋಡು ದೈವಚಿತ್ತವನ್ನು! ಜೀವನಿಗಿನ್ನೊಬ್ಬ ಜೀವನನ್ನಾಹಾರವಾಗಿರಿಸಿ ಸ್ಥಿತಿಕಾರ್ಯವನ್ನು ನಡೆಸುವ ಸರ್ವೇಶ್ವರನ ಲೀಲೆಯು ಅಮೋಘವಾಗಿದೆ. ಕೈಯಿಲ್ಲದ ಪಕ್ಷಿ ಗಳನ್ನು ಕೈಯುಳ್ಳ ನರರಿಗೆ, ಪಾದಗಳಿಲ್ಲದ ತೃಣಾದಿಗಳನ್ನು ಚತುಷ್ಪದ ಜಂತುಗಳಿಗೆ, ಚಿಕ್ಕವರಾದ ವರನ್ನು ದೊಡ್ಡವರಿಗೆ, ನರರನ್ನು ರಾಕ್ಷಸರಿಗೆ ಆಹಾರವನ್ನಾಗಿ ವಿಧಿಸಿರುವನು! ಇದಕ್ಕೇಕೆ ಚಿಂತಿಸುವೆ? ಜೀವರ ಸರ್ವಸ್ವಗಳಿಗೆ ಆದಾನಾದಿಕರ್ತನಾದ ಭಗವಂತನು ಸರ್ವೋತ್ತಮ

ನುಗಿರುವನು. ಒಳಹೊರಗೆ ತುಂಬಿರುವನು. ತನ್ನ ಮಹಿಮೆಯನ್ನು ನೋಡುತ್ತಾ ತಾನೇ ಹಿಗ್ಗಿ ಸಮಾಧಿಕರಹಿತನಾಗಿರುವನು. ಆ ಸ್ವಾಮಿಯೇ ಇಂದು ಸುಜನ ರಕ್ಷಕನೂ ದುಷ್ಟಶಿಕ್ಷಕನೂ ಆಗಿ ಅವತರಿಸಿ ಯದುಕುಲವನ್ನಲಂಕರಿಸಿರುವನು. ಆಯಿತಿನ್ನವನ ದೇವಕಾರ್ಯವು! ಆನಂದ ನಂದನನೀ ಮಹೀಮಂಡಲವನ್ನೆಂದು ಬಿಡುವನೋ ಪಾಂಡವರೇ! ಎಚ್ಚರದಿಂದಿರಿ! ನಿಮ್ಮ ತಂದೆಯಾದ ಧೃತರಾಷ್ಟ್ರನು ಕುಂತೀ ಗಾಂಧಾರಿಯರಿಂದ ಕೂಡಿ ಹಿಮವತ್ಪರ್ವತದ ದಕ್ಷಿಣ ದಲ್ಲಿರುವ ಸಪ್ತಸ್ರೋತವೆಂಬುವ ಪುಣ್ಯಾಶ್ರಮವನ್ನು ಸೇರಿ ತಪವನ್ನು ಗೈಯುತ್ತಿರುವನು. ಅಲ್ಲಿ ಮಂದಾಕಿನಿಯು ಏಳು ಸರಳಾಗಿ ಹರಿಯುತ್ತಿರುವಳು. ಸಪ್ತಋಷಿಗಳ ಆಶ್ರಮಗಳಲ್ಲಿರುವವು. ಅಂತಹ ಸಪ್ತಸ್ರೋತದಲ್ಲಿ ಮೂರು ಸಂಧ್ಯೆಗಳಲ್ಲಿಯು ಮಿಂದು ಹೋಮಾದಿಗಳನ್ನು ಮಾಡಿ ನಿರಾಹಾರನೂ ಉಪಶಾಂತಚಿತ್ತನೂ ಆಗಿರುವನು. ನಷ್ಟಮಾಂಸ ದೃಷ್ಟಿಯಾದಾ ನೃಪನ ಬುದ್ಧಿಯು ನಿರಂತರ ಹರಿಚಿಂತನ ಸಮರ್ಥವಾಯಿತು. ಅವನು ಆಸನವನ್ನು ಕಲ್ಪಿಸಿ ಶ್ವಾಸವನ್ನು ಜಯಿಸಿ ಇಂದ್ರಿಯಂಗಳನ್ನು ವಿಷಯ ವಿಮುಖಂಗಳ ಮಾಡಿ ಮನಸಾ ಹರಿಯ ನೆನೆದು ತ್ರಿಗುಣಾತ್ಮಕವಾದ ಪ್ರಾಕೃತ ಮಲಗಳಂ ತೊಡೆದುಹಾಕಿದನು."ಸರ್ವಜಗವು ವಿರಿಂಚಾಧೀನವು. ವಿಜ್ಞಾನ ಪ್ರಭುವಾದ ಬ್ರಹ್ಮನು ಕ್ಷೇತ್ರಜ್ಞನೆನಿಸುವ ಹರ್ಯಧೀನನು. ಆ ಕ್ಷೇತ್ರಜ್ಞನು ಪುರುಷನೆನಿಸುವನು. ಹೊರಗಿರುವ ಕಾಲನಾಮಕ ಹರಿಯು ಸರ್ವಾಧಾರನಾಗಿರುವನು. ಪುರುಷ ಕಾಲರಿಗೆ ಭೇದವಿಲ್ಲ" ಎಂದೀರೀತಿ ಲಯ ಚಿಂತನವನ್ನು ಮಾಡಿದನು. ಇಂದ್ರಿಯ ವ್ಯಾಪಾರವನ್ನು ಬಂಧಿಸಿ ಆಹಾರವನ್ನು ತ್ಯಜಿಸಿ ಸ್ಥಾಣು ವಿನಂತೆ ಇರುವನು. ಸಕಲಕರ್ಮಗಳನ್ನು ಭಗವದರ್ಪಿತ ವಾಗಿ ಮಾಡಿದ ಆ ನಿನ್ನ ದೊಡ್ಡಪ್ಪನಿಗೆ ವ್ಯಾಸರ ಕೃಪೆಯಿಂದ ಯಾವ ವಿಘ್ನವೂ ಬರಲಿಲ್ಲ. ಇಂದಿನಿಂದ ಐದನೆಯ ದಿನದಲ್ಲಿ ಕಳೇವರವಂ ಬಿಟ್ಟು ಆ ರಾಜನ ಶರೀರವು ಭಸ್ಮವಾಗುವುದು. ಕುಟೀರದಲ್ಲಿದ್ದ ಧೃತರಾಷ್ಟ್ರನ ಶರೀರವು ನಷ್ಟವಾದುದನ್ನು ಕಂಡು ಹೊರಗಿದ್ದ ಕುಂತೀ ಗಾಂಧಾರಿಯರು ತತ್‌ಕ್ಷಣವೇ ಕುಟೀರವನ್ನು ಪ್ರವೇಶಿಸಿ ತಾವೂ ದಗ್ಧರಾಗುವರು.

ಹೀಗೆ ನಾರದನು ಕಾಲವ್ಯತ್ಯಾಸದಿಂದ ಐದು ದಿನದ ಹಿಂದೆ ಮೃತರಾದ ಧೃತರಾಷ್ಟ್ರಾದಿಗಳ ವಿಷಯವನ್ನು ಮುಂದೆ ನಡೆಯುವದೆಂದು ಪೇಳಿದುದು ಧರ್ಮರಾಜಾದಿಗಳ ವ್ಯಸನವನ್ನು ನೋಡಲಾಗದೆ ಕರುಣೆಯಿಂದ ಹೊರತು ಅನ್ಯಥಾ ಅಲ್ಲ. ವಿದುರನಾದರೂ ಯುದ್ಧಾನಂತರದಲ್ಲಿ ತೀರ್ಥಯಾತ್ರೆಯನ್ನು ಮಾಡಿ ಬಂದು ಅಣ್ಣನಿಂದ ಸಪ್ತಸ್ರೋತದಲ್ಲಿ ತಪವಂ ಗೈಯುತ್ತಾ ಒಂದು ಸಲ ಬಂದ ಧರ್ಮರಾಜನೊಡನೆ ಐಕ್ಯವನ್ನು ಪೊಂದಿದನೆಂಬುದು ಸರ್ವವಿದಿತವೇ" ಎಂದು ನುಡಿದು ನಾರದನು ತುಂಬುರುನೊಡಗೂಡಿ ಹೊರಟು ಹೋದನು. ಧರ್ಮರಾಜ ನಾದರೂ ಅವರ ಹಿತವಚನವನ್ನಾಲಿಸಿ ಶೋಕವನ್ನು ತ್ಯಜಿಸಿದನು.

## ೧೩. ಅಪಶಕುನಗಳ ದರ್ಶನ – ಧರ್ಮರಾಜನ ಪ್ರಶ್ನೆ

ಶ್ರೀಕೃಷ್ಣನು ದ್ವಾರಕೆಗೆ ಪೋದ ಮೇಲೆ ಕೆಲವು ದಿನಗಳಾದವು. ಅರ್ಜುನನು ಕೂಡ ಆ ಗೋವಿಂದ ಒಂದೆ ಹೋಗಿದ್ದನು. ಧರ್ಮರಾಜನು ಹಸ್ತಿನಾಪುರದಲ್ಲಿ ರಾಜ್ಯಪಾಲನೆಗೈಯುತ್ತಾ ದುಶ್ಶಕುನ ಗಳನ್ನು ಕಂಡು ಚಕಿತನಾದನು. ಕಾಲಗತಿಯು ಭಯಂಕರವಾಯಿತು. ಋತುಧರ್ಮಗಳು

ವ್ಯಸ್ತವಾದವು. ನರರು ಪಾಪದಿಂದ ಜೀವಿಸಿದರು. ಕ್ರೋಧ, ಲೋಭ, ಅಸತ್ಯಗಳು ಹೆಚ್ಚಿದವು. ವ್ಯವಹಾರವೆಲ್ಲವೂ ಕಾಪಟ್ಯದಿಂದ ತುಂಬಿತ್ತು. ಸ್ನೇಹವು ಪ್ರಯೋಜನವು ತೀರಲು ಕೊನೆಗೊಂಡಿತು. ತಂದೆಮಕ್ಕಳು, ಗಂಡಹೆಂಡತಿಯರು, ಅಣ್ಣತಮ್ಮಂದಿರು, ಸ್ನೇಹಿತರು ಜಗಳವಾಡಲು ಉತ್ಸುಕರಾದರು. ಕಲಿಕಾಲದ ಸಂಬಂಧದಿಂದ ಜನರಿಗಾದ ಲೋಭಾದಿ ಪಾಪವರ್ತನೆಯನ್ನು ಕಂಡು ಚಿಂತೆಗೊಂಡು ಧರ್ಮಜನು ಒಂದು ದಿನ ಭೀಮಸೇನನನ್ನು ನೋಡಿ ಇಂತು ನುಡಿದನು:

"ಶ್ರೀಕೃಷ್ಣನ ವಾರ್ತೆಯನ್ನು ತಿಳಿಯಲು ದ್ವಾರಕೆಗೆ ಪೋದ ಅರ್ಜುನನೇಕೆ ಹಿಂದಿರುಗಿ ಬರಲಿಲ್ಲ? ಭೀಮಸೇನಾ! ಇಂದಿಗೆ ಏಳು ಮಾಸಗಳಾದುವಲ್ಲಾ! ಏನು ಅನರ್ಥವು ಸಂಭವಿಸಿತೋ? ದೇವರ್ಷಿಯಾದ ನಾರದನು ಪೇಳಿದ ಆ ಕೃಷ್ಣನಿರ್ಯಾಣಕಾಲವೀಗ ಬಂತೋ ಏನು? ನಮ್ಮ ರಾಜ್ಯ, ಸಂಪತ್ತು, ಪತ್ನೀಪುತ್ರರು, ಪ್ರಾಣಗಳು ಕೂಡ ಯಾರ ಅನುಗ್ರಹದಿಂದ ಉಳಿದಿವೆಯೋ, ಯಾರ ದಯೆಯನ್ನು ಅವಲಂಬಿಸಿ ನಾವು ಶತ್ರುಗಳನ್ನು ಗೆದ್ದೆವೋ, ಸ್ವರ್ಗಾದಿ ಪುಣ್ಯಲೋಕ ಸದೃಶ ಸೌಖ್ಯವನ್ನನುಭವಿಸಿದೆವೋ, ಅಂತಹ ಶ್ರೀಕೃಷ್ಣನೆಮ್ಮನ್ನಗಲಿ ತನ್ನ ಕ್ರೀಡಾಂಗಣವೆನಿಸಿದ ಭೂಲೋಕವನ್ನು ತ್ಯಜಿಸಿದನೇ? ನೋಡೀ ಉತ್ಪಾತಂಗಳನ್ನು ವೃಕೋದರಾ! ಭೂಕಂಪ, ಉಲ್ಕಾಪಾತ, ನೇತ್ರಸ್ಪಂದನಾದಿ ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕ ನಿಮಿತ್ತಗಳು ಯಾವ ಘೋರ ವಿಪತ್ತನ್ನು ಸೂಚಿಸುತ್ತಿವೆ? ನನಗೆ ಭಯವಾಗುತ್ತಿದೆ. ಹುಚ್ಚು ಹಿಡಿದಂತಾಗಿರುವೆನು. ನನ್ನ ಎಡಗಣ್ಣು ಎಡಭುಜ ತೊಡೆಗಳು ಅದುರುತ್ತಿವೆ. ಗುಂಡಿಗೆಯು ದಡದಡ ಹೊಡೆದುಕೊಳ್ಳುತ್ತಿದೆ. ಈ ನರಿಯನ್ನು ನೋಡು. ಸೂರ್ಯಾಭಿಮುಖವಾಗಿ ಬಾಯಲ್ಲಿ ಕಿಡಿಯನ್ನು ಕಾರುತ್ತ, ಓ ಎಂದು ರೋದಿಸುತ್ತಿದೆ. ನಾಯಿಯು ನನ್ನ ಕಡೆ ನೋಡಿ, ಅಳುಕಿಲ್ಲದೆ ಅಳುತ್ತಿದೆ. ಭರದ್ವಾಜಾದಿ ಶುಭಪಕ್ಷಿಗಳೆನ್ನ ಎಡದಿಂದ ಬಲಕ್ಕೆ ಹಾರುತ್ತಿವೆ. ನನ್ನ ರಥದ ಕುದುರೆಗಳು ಕಣ್ಣಲ್ಲಿ ನೀರಿಡುತ್ತಿವೆ. ಜಗತ್ತನ್ನೇ ಶೂನ್ಯಮಾಡಲಿಚ್ಛಿಸುವಂತೆ ಗೂಬೆಗಳೆನ್ನ ಸ್ವಪ್ನದಲ್ಲಿ ಕಾಣಬಂದು ಭಯಭೀತನಾಗುವಂತೆ ಕೂಗುತ್ತಿವೆ. ಭೂಮಿಯು ನಡುಗುತ್ತಿದೆ. ದಿಕ್ಕುಗಳಲ್ಲಿ ಧೂಳಿಯು ಕವಿದಿದೆ. ನಿರ್ಮೇಘಗರ್ಜನವನ್ನು ಕೇಳಿ ಅಕಾಲ ಮೇಘದ ಮಿಂಚನ್ನು ಕಂಡು ನನಗೆ ಭಯವಾಗುತ್ತಿದೆ. ವಾಯುವು ಬಿರುಸಾಗಿ ಬೀಸುತ್ತಿದೆ. ಮೇಘಗಳಿಂದ ರಕ್ತವೃಷ್ಟಿಯನ್ನು ಕಂಡು ಪ್ರಜರು ಬೆಂಡಾಗಿರುವರು. ಸೂರ್ಯನ ತೇಜವೇ ಸವೆದಂತಿದೆ. ಗ್ರಹಯುದ್ಧದಿಂದ ಉರಿಯುವ, ನಭೋಮಂಡಲವನ್ನು ನೋಡು, ನದೀನದಗಳು ಉಕ್ಕೇರಿ ಹರಿಯುತ್ತಿವೆ. ಆಜ್ಯವನ್ನು ಹಾಕಿದರೂ ಅಗ್ನಿಯು ಜ್ವಲಿಸುವದಿಲ್ಲ! ಏನು ಕಾಲ ಬಂತು? ಮಕ್ಕಳು ಸ್ತನ್ಯವನ್ನೊಲ್ಲರು. ತಾಯಂದಿರು ಮಕ್ಕಳಿಗೆ ಮೊಲೆಕೊಡಲೊಲ್ಲರು! ಆಹಾ! ಆಕಳುಗಳು ಕರೆಯುವದಿಲ್ಲ! ವೃಷಭಗಳಿಗೆ ಗೋಷ್ಠಗಳಲ್ಲಿ ಹರ್ಷವಿಲ್ಲ! ದೇವಾಲಯಗಳಲ್ಲಿಯ ಪ್ರತಿಮೆಗಳೆನಗೆ ಕಣ್ಣೀರಿಡುತ್ತಿರುವಂತೆ ಎದ್ದು ಓಡಿಪೋಗುತ್ತಿದ್ದಂತೆ ತೋರುತ್ತಿವೆ. ಪುರಗಳು, ವನಗಳು, ಆಶ್ರಮಗಳೆಲ್ಲವೂ ನಿಸ್ತೇಜಸ್ಕವಾಗಿವೆ. ನಿರಾನಂದವಾಗಿವೆ. ಏನು ಪಾಪ ಮಾಡಿದ್ದೇವಾದೀತು? ಭೀಮಾ! ಈ ಅನರ್ಥಗಳನ್ನು ಕಂಡು ಖಂಡಿತವಾಗಿಯೂ ಪುಂಡರೀಕಾಕ್ಷನೀ ಭೂಖಂಡವನ್ನು ಬಿಟ್ಟು ಪೋಗುವನೆಂದು ಊಹಿಸುತ್ತಿರುವೆನು. ಭಗವದೇಕಶರಣರಾದ ಸುಜನರಿಗಿನ್ನೇನು ಗತಿ?" ಎಂದು ಚಿಂತಿಸುವ ಧರ್ಮರಾಜನಿದ್ದೆಡೆಗೆ ಯದುಪುರಿಯಿಂದ ಅರ್ಜುನನು ಬಂದನು. ಅಣ್ಣಂದಿರಿಗೆ ವಂದಿಸಿ, ರೋಗಾರ್ತನಂತೆ ನಿಸ್ತೇಜಸ್ಕನಾಗಿ ತಲೆ ತಗ್ಗಿಸಿ, ಕಣ್ಣೀರಿಡುತ್ತಾ ಮುಂದೆ ನಿಂತ

ನರನನ್ನು ಕಂಡು, ಭಯಚಕಿತನಾದ ಧರ್ಮಜನು ನಾರದನ ವಾಕ್ಯಂಗಳನ್ನು ನೆನೆದು ಮಿತ್ರಜನರು ಕೇಳುತ್ತಿರಲು ಇಂತು ಪ್ರಶ್ನಿಸಿದನು:

ಅರ್ಜುನಾ ದ್ವಾರಕೆಯಲ್ಲಿ ನಮ್ಮವರೆಲ್ಲ ಸುಖಿಗಳೇ? ಮಾತಾಮಹನಾದ ಶೂರಸೇನನು, ಮಾತುಲನಾದ ವಸುದೇವನು, ಅವನ ದೇವಕೀಪ್ರಮುಖ ಸಪ್ತಪತ್ನಿಯರು, ಅವರ ಮಕ್ಕಳೆಲ್ಲರಿಗೆ ಕ್ಷೇಮವೇ? ಆ ಉಗ್ರಸೇನನಿನ್ನೂ ಜೀವಿಸಿರುವನೇ? ಶತ್ರುಜಿದಾದಿ ಕೃಷ್ಣಸೋದರರು, ಅಕ್ರೂರೋದ್ಧವಾದಿ ಮಿತ್ರರು, ಪ್ರದ್ಯುಮ್ನಸಾಂಬಾದಿ ಪುತ್ರರು, ಅನಿರುದ್ಧಾದಿ ಪೌತ್ರರು, ಚೆನ್ನಾಗಿರುವರೇ? ನಮ್ಮಲ್ಲಿ ಅವರ ಪ್ರೇಮಾಭಿಮಾನಗಳೊಂದೇ ರೀತಿಯಿಂದಿರುವವೇ?

ಅರ್ಜುನಾ! ಏಕೆ ಸುಮ್ಮನಿರುವಿ? ಸುಧರ್ಮಸಭೆಯಲ್ಲಿ ವೇದಗಮ್ಯನು ಭಕ್ತವತ್ಸಲನಾದ ಶ್ರೀಕೃಷ್ಣನು ಸುಹೃದ್ಬಂಧುಯುತನಾದಿ ಸುಖದಿಂದಿರುವನೇ? ಪೇಳು. ಲೋಕಕ್ಷೇಮವನ್ನು ಮಾಡಲು ಯದುಕುಲಾಂಬೋಧಿಯಲ್ಲಿ ಜನಿಸಿದ ಶೇಷಶಾಯಿ ಪರಮಪುರುಷನಾದ ಆ ನಾರಾಯಣನಿಗೆ ಕ್ಷೇಮವೇ? ಅವನ ಬಾಹುದಂಡ ಪರಿರಕ್ಷಿತರಾಗಿ ಯಾದವರು ಸ್ವಪುರಿಯಲ್ಲಿ ವೈಕುಂಠದಲ್ಲಿ ನಲಿವ ಮುಕ್ತರಂತೆ ಸುಖಿಸುವರು. ಅವನ ಪಾದಾರವಿಂದ ಸೇವೆಯೇ ಕರ್ತವ್ಯವೆಂದರಿತು ಸತ್ಯಭಾಮಾದಿ ಕಾಂತೆಯರು ಶ್ರೀಶನು ಯುದ್ಧದಲ್ಲಿ ದೇವತೆಗಳನ್ನು ಗೆದ್ದು ತಂದ ಪಾರಿಜಾತಾದಿ ದೇವರಮಣೀ ಭೋಗ್ಯವಸ್ತುಜಾತಗಳನ್ನು ಪಡೆದರು. ಅವನ ಪ್ರಭಾವದಿಂದ ಯದುವೀರರು ಭಯವಿಲ್ಲದೆ ಸುರರಾಜ ಸಮುಚಿತವಾದ ಸುಧರ್ಮಸಭೆಯಲ್ಲಿ ವಿರಾಜಿಸಿದರು.

ಪೂರ್ವದಲ್ಲಿಷ್ಟು ಬೇಗನೆ ನೀನು ತಿರುಗಿಬಂದಿದ್ದಿಲ್ಲ. ಈಗೇಕೆ ಬೇಗ ಬಂದೆ? ಹೇಳು. ಅರ್ಜುನಾ! ಏಕೆ ಮಾತೇ ಇಲ್ಲ! ದೇಹದಲ್ಲಿ ರೋಗಪೀಡಿತನಾದಂತೆ ಕಳೆಗುಂದಿರುವೆ! ಬಂಧುಗಳು ಹೀಯಾಳಿಸಿದರೇ? ಅಮಂಗಳ ಶಬ್ದಗಳನ್ನು ಕೇಳಿ ನೊಂದೆಯಾ? ನಿನ್ನ ಮನಸ್ಸಿನಲ್ಲಿ ಕೆಟ್ಟ ಭಾವನೆಗಳೇನಾದರೂ ಪುಟ್ಟಿದವೇ? ಕೊಡುವನೆಂದು ವಚನವಂ ಕೊಟ್ಟು, ತಪ್ಪಿದೆಯಾ? ಶರಣಜನರಕ್ಷಕನಾದ ನೀನು ನಂಬಿ ಬಂದ ದ್ವಿಜರನ್ನು ಬಾಲಕರನ್ನು ವೃದ್ಧರನ್ನು ರೋಗಿಗಳನ್ನು ಮಾನಿನಿಯರನ್ನಾಗಲಿ ಕಾಪಾಡಲಾರದೇ ಬಂದೆಯಾ? ಯೋಗ್ಯರಿಗೆ ವೃದ್ಧಬಾಲರಿಗೆ ಕೊಡದೆ ಭೋಜನವನ್ನು ಮಾಡಿದೆಯಾ? ಏನು ಪಾಪಕರ್ಮವನ್ನು ಮಾಡಿದೆ? ಪೇಳು. ವತ್ಸಾ! ಇಷ್ಟು ಮಾತೇಕೆ? ನನಗೆ ನೋಡಲು ನೀನು ಅತ್ಯಂತ ಶ್ರೇಷ್ಠನು, ಆತ್ಮಬಂಧುವು ಆದ ಗೋವಿಂದನನ್ನಗಲಿ ಬಂದಂತೆ ಕಾಣುತ್ತಿದೆ, ಅನ್ಯಥಾ ನಿನ್ನ ತೇಜವಿಷ್ಟು ಕೆಡಲಾರದು!" ಎಂದು ಧರ್ಮಜನು ಪ್ರಶ್ನಿಸಿದನು.

## ೧೪. ಅರ್ಜುನನ ಪ್ರತಿವಚನವು

ಅರ್ಜುನನಾಗ ಧರ್ಮಜನನ್ನು ಕಂಡು ಶೋಕಾಗ್ನಿದಂದಹ್ಯಮಾನಮಾನಸನಾಗಿ ಕಳೆಗುಂದಿ, ಆ ಗೋವಿಂದನ ಪಾದಾರವಿಂದವನ್ನು ನೆನೆದು ಬದಲಾಡಲು ಬಾರದೆ ಸುಮ್ಮನೆ ನಿಂತನು. ಉಕ್ಕಿಬರುವ ದುಃಖವನ್ನು ಕಷ್ಟದಿಂದ ನುಂಗಿಕೊಂಡು ಕಣ್ಣೀರೊರೆಸಿಕೊಂಡು ವಿರಹದಿಂದ ಹೆಚ್ಚಾದ ಪ್ರೇಮಸಂಭ್ರಮದಿಂದ ಕಾತರನಾದ ಅರ್ಜುನನು ಶ್ರೀಕೃಷ್ಣನು ತನಗೆ ಸಾರಥ್ಯಾದಿಗಳಲ್ಲಿ ಮಾಡಿದ ಸ್ನೇಹವನ್ನು, ಅಭಿಮಾನವನ್ನು, ಹಂಬಲವನ್ನು ನೆನೆದು ಬಾಷ್ಪಗದ್ಗದ ಕಂಠದಿಂದ ಅಣ್ಣನನ್ನು ನೋಡಿ ಮಾತನಾಡಿದನು:

"ಅಣ್ಣಾ! ಶ್ರೀಕೃಷ್ಣನು ನಮ್ಮ ಕೈಬಿಟ್ಟು ಪೋದನು. ದೇವತೆಗಳಿಗೂ ಭಯಪ್ರದವಾದ ನನ್ನ ತೇಜವನ್ನೂ ಒಯ್ದನು. ಮುಖ್ಯಪ್ರಾಣನಿಲ್ಲದ ದೇಹದಂತೆ ಈ ಭೂಲೋಕವವನ ವಿಯೋಗದಿಂದ ಅಮಂಗಲವಾಗಿ ಕಾಣುತ್ತಿರುವದು. ಏನು ಪೇಳಲಿ!"

"ಯಾವ ಪ್ರಭುವಿನ ಸೇವಾಬಲದಿಂದ ದ್ರೌಪದೀಸ್ವಯಂವರದಿ ನೆರೆದ ಸ್ಮರದುರ್ಮದರಾದ ಜರಾಸಂಧಾದಿಗಳ ಅಭಿಮಾನವನ್ನು ನುಚ್ಚುನೂರಾಗಿ ಮಾಡಿ ಮತ್ಸ್ಯ ಯಂತ್ರವನ್ನು ದೂಡಿ ಪಾಂಚಾಲಿಯನ್ನು ವೇದಾಧ್ಯಯನವನ್ನಂತೆ ಪೊಂದಿದೆವೋ, ಯಾವ ಸರ್ವೇಶನ ಸನ್ನಿಧಿಯಲ್ಲಿ ಇಂದ್ರನನ್ನು ಲೆಕ್ಕಿಸದೆ ಅವನ ಖಾಂಡವವನವನ್ನು ಬೇಡಿದ ಅಗ್ನಿದೇವನಿಗಾಹುತಿಯಾಗಿತ್ತೆನೋ, ಅದ್ಭುತ ಶಿಲ್ಪಮಯವಾದಾ ಮಯಸಭೆಯನ್ನು ಪೊಂದಿದೆವೋ, ರಾಜಸೂಯವನ್ನು ವಿಜೃಂಭಣೆಯಿಂದ ಮಾಡಿ ರಾಜರು ತಂದ ಕಾಣಿಕೆಗಳನ್ನು ಪಡೆದೆವೋ, ಯಾವ ಕೃಪಾಸಮುದ್ರನ ಕೃಪೆಯಿಂದಲೂ ನಿನ್ನ ತಮ್ಮನೆನಿಸಿದ ಪೂಜ್ಯ ಭೀಮಸೇನನು ಗದಾಪಾಣಿಯಾಗಿದ್ದೂ ನಿರ್ಲಕ್ಷ್ಯದಿಂದ ನಿರಾಯುಧನಾಗಿ ಜರಾಸಂಧನಂ ಸೀಳಿ ಆ ಪಾಪಿಯಿಂದ ಬಂಧಿತರಾದ ಭೂಪರನ್ನು ಬಿಡಿಸಿದನೋ – ಯಾವ ಸರ್ವಾಪದುದ್ಧಾರಕನು ರಾಜಸೂಯಾವಭೃಥಸ್ನಾನ ಪಾವಿತ ಕೇಶಪಾಶಳನ್ನು ಸಭೆಯಲ್ಲಿ ತಂದು ಸೀರೆಯಂ ಸೆಳೆಯುವಾಗ 'ಕೃಷ್ಣಾ' ಎಂದೊರಲಿದ ಪಾಂಚಾಲಿಯ ಮೊರೆಯನ್ನಾಲಿಸಿ ಅಭಯವಸನವಿತ್ತು ಪಾಲಿಸಿದುದಲ್ಲದೆ ರಣರಂಗದಿ ಪತಿಗಳನ್ನಾಲಿಂಗಿಸಿ ರೋದಿಸುವ ಶತ್ರುಪತ್ನಿಯರ ಕಣ್ಣೀರನ್ನೂ ಮುಕ್ತಕಬರೀಭಾರವನ್ನೂ ನೋಡಿ ಸಂತೈಸಿದನೋ, ಯಾವ ಭಕ್ತವತ್ಸಲನ ದಯೆಯಿಂದ ಇಂದುಮೌಳಿಯನ್ನು ಮೆಚ್ಚಿಸಿ ಪಾಶುಪತಾಸ್ತ್ರವಂ ಪಡೆದೆನೋ, ದೇವೇಂದ್ರಾದಿಗಳಿಂದಲೂ ದಿವ್ಯಾಸ್ತ್ರಗಳನ್ನು ಪಡೆತು ಇದೇ ದೇಹದಿಂದ ಮಹೇಂದ್ರಭವನದಲ್ಲಾ ತ್ರಿಲೋಕೇಶನ ಅರ್ಧಾಸನವನ್ನಲಂಕರಿಸಿದೆನೋ – ನನ್ನ ಭುಜದಂಡ ಮಂಡನವಾದ ಗಾಂಡೀವ ನಿರ್ಮುಕ್ತ ಚಂಡಕಾಂಡಗಳನ್ನಾಶ್ರಯಿಸಿ ದೇವತೆಗಳಿಗೆ ಬಂದ ನಿವಾತಕವಚರ ಪೀಡೆಯನ್ನು ನಿವಾರಿಸಿದೆನೋ, ಅಂತಹ ಪುರುಷೋತ್ತಮನಿಂದ ವಿಯೋಗ ಹೊಂದಿ ನೊಂದಿರುವೆನು.

"ಅಣ್ಣಾ! ಉತ್ತರ ಗೋಗ್ರಹಣ ಕಾಲದಲ್ಲಿ ಅನಂತ ಕುರುಬಲವನ್ನೊಬ್ಬನೇ ಸಹಸಾ ಗೆದ್ದು ಗೋಗಣವನ್ನು ಕೌರವಗೌರವಚೂಡಾಮಣಿಗಳನ್ನು ತಂದೆ. ಭೀಷ್ಮ – ದ್ರೋಣ – ಕರ್ಣ – ಶಲ್ಯಮುಖ ಮಹಾರಥರನ್ನು ನನಗೆ ನೋಡಿಸುವ ನೆವದಿಂದ ಅವರವರ ಆಯುಶ್ಶೇಷವನ್ನು ಹರಿಸಿ ಆ ಶತ್ರುಗಳಿಂದ ನಿರ್ಮುಕ್ತವಾದ ದಿವ್ಯಾಸ್ತ್ರಗಳೆನಗೆ ತಾಕದಂತೆ ನನ್ನನ್ನು ತನ್ನ ಬಾಹುವಲಯದಲ್ಲಿಟ್ಟು ರಕ್ಷಿಸಿದ ಕೃಷ್ಣನ ದಯೆಯಿಂದ ಅಸುರರ ಹಿಂಸಾಕೃತ್ಯಗಳಿಗೆ ನೋಯದ ಹರಿದಾಸ ಪ್ರಹ್ಲಾದನಂತೆ ಅಕ್ಷತನಾಗಿ ಉಳಿದೆ. ನೃಪೇಂದ್ರ! ರಣಾಂಗಣದಲ್ಲಿ ಪರಮಮಾಂಗಲಿಕವಾದ ಗೀತಾಶಾಸ್ತ್ರವನ್ನೆನ್ನ ಅಜ್ಞಾನಾಂಧಕಾರವನ್ನು ದೂರ ಮಾಡಲು ಉಪದೇಶಿಸಿ ಉದ್ಧರಿಸಿದ ಹರಿಯ ಮಹಿಮೆಯನ್ನು ಮುಖ್ಯಪ್ರಾಣಾದಿ ಪರಮಜ್ಞಾನಿಗಳೇ ಸಾಕಲ್ಯೇನ ತಿಳಿಯಲಾರರೆಂದ ಮೇಲೆ ನನ್ನ ಪಾಡೇನು? ಇಂತಹ ಸ್ವಾಮಿಯಲ್ಲಿ ನಾ ಮಾಡಿದ ಅಪರಾಧಗಳೆಷ್ಟು? ಸೂತನನ್ನಾಗಿಸಿದೆ ಮುಕ್ತಾಶ್ರಯನನ್ನು. ಅವನ ಮೋಹನರೂಪವನ್ನು ಮುಗ್ಧನೇತ್ರಗಳಿಂದ ನೋಡುತ್ತಾ ಕರ್ಣಪ್ರಮುಖವೀರವರರು ವರುಣಾಸ್ತ್ರಬಲದಿಂದ ಕುದುರೆಗಳಿಗೆ ನೀರು ಕುಡಿಸುತ್ತಾ ನಿಂತ ನನ್ನನ್ನು ಹೊಡೆಯುವದನ್ನೂ ಮರೆತು ನಿಂತುಬಿಟ್ಟರು. ಆಹಾ! ಪಾರ್ಥ ಸಖ! ಕುಂತಿನಂದನನು ನ್ನುವ ಶರ್ಮದವಾದ ನರ್ಮಾಲಾಪಂಗಳನ್ನು, ಆ ಮಂದಸ್ಮಿತ ಸುಂದರವದನಾರವಿಂದನನ್ನು

ಸರಸನ್ನು ಕಂಡು, ಭಯಚಕಿತನಾದ ಧರ್ಮಜನು ನಾರದನ ವಾಕ್ಯಂಗಳನ್ನು ನೆನೆದು ಮಿತ್ರಜನರು ಕೇಳುತ್ತಿರಲು ಇಂತು ಪ್ರಶ್ನಿಸಿದನು:

ಅರ್ಜುನಾ ದ್ವಾರಕೆಯಲ್ಲಿ ನಮ್ಮವರೆಲ್ಲ ಸುಖಿಗಳೇ? ಮಾತಾಮಹನಾದ ಶೂರಸೇನನು, ಮಾತುಲನಾದ ವಸುದೇವನು, ಅವನ ದೇವಕೀಪ್ರಮುಖ ಸಪ್ತಪತ್ನಿಯರು, ಅವರ ಮಕ್ಕಳೆಲ್ಲರಿಗೆ ಕ್ಷೇಮವೇ? ಆ ಉಗ್ರಸೇನನಿನ್ನೂ ಜೀವಿಸಿರುವನೇ? ಶತ್ರುಜಿದಾದಿ ಕೃಷ್ಣಸೋದರರು, ಅಕ್ರೂರೋದ್ಧವಾದಿ ಮಿತ್ರರು, ಪ್ರದ್ಯುಮ್ನಸಾಂಬಾದಿ ಪುತ್ರರು, ಅನಿರುದ್ಧಾದಿ ಪೌತ್ರರು, ಚೆನ್ನಾಗಿರುವರೇ? ನಮ್ಮಲ್ಲಿ ಅವರ ಪ್ರೇಮಾಭಿಮಾನಗಳೊಂದೇ ರೀತಿಯಿಂದಿರುವವೇ?

ಅರ್ಜುನಾ! ಏಕೆ ಸುಮ್ಮನಿರುವಿ? ಸುಧರ್ಮಸಭೆಯಲ್ಲಿ ವೇದಗಮ್ಯನು ಭಕ್ತವತ್ಸಲನಾದ ಶ್ರೀಕೃಷ್ಣನು ಸುಹೃದ್ಬಂಧುಯುತನಾದಿ ಸುಖದಿಂದಿರುವನೇ? ಹೇಳು. ಲೋಕಕ್ಷೇಮವನ್ನು ಮಾಡಲು ಯದುಕುಲಾಂಬೋಧಿಯಲ್ಲಿ ಜನಿಸಿದ ಶೇಷಶಾಯಿ ಪರಮಪುರುಷನಾದ ಆ ನಾರಾಯಣನಿಗೆ ಕ್ಷೇಮವೇ? ಅವನ ಬಾಹುದಂಡ ಪರಿರಕ್ಷಿತರಾಗಿ ಯಾದವರು ಸ್ವಪುರಿಯಲ್ಲಿ ವೈಕುಂಠದಲ್ಲಿ ನಲಿವ ಮುಕ್ತರಂತೆ ಸುಖಿಸುವರು. ಅವನ ಪಾದಾರವಿಂದ ಸೇವೆಯೇ ಕರ್ತವ್ಯವೆಂದರಿತು ಸತ್ಯಭಾಮಾದಿ ಕಾಂತೆಯರು ಶ್ರೀಶನು ಯುದ್ಧದಲ್ಲಿ ದೇವತೆಗಳನ್ನು ಗೆದ್ದು ತಂದ ಪಾರಿಜಾತಾದಿ ದೇವರಮಣೀ ಭೋಗ್ಯವಸ್ತುಜಾತಗಳನ್ನು ಪಡೆದರು. ಅವನ ಪ್ರಭಾವದಿಂದ ಯದುವೀರರು ಭಯವಿಲ್ಲದೆ ಸುರರಾಜ ಸಮುಚಿತವಾದ ಸುಧರ್ಮಸಭೆಯಲ್ಲಿ ವಿರಾಜಿಸಿದರು.

ಪೂರ್ವದಲ್ಲಿಷ್ಟು ಬೇಗನೆ ನೀನು ತಿರುಗಿಬಂದಿದ್ದಿಲ್ಲ. ಈಗೇಕೆ ಬೇಗ ಬಂದೆ? ಹೇಳು. ಅರ್ಜುನಾ! ಏಕೆ ಮಾತೇ ಇಲ್ಲ! ದೇಹದಲ್ಲಿ ರೋಗಪೀಡಿತನಾದಂತೆ ಕಳೆಗುಂದಿರುವೆ! ಬಂಧುಗಳು ಹೀಯಾಳಿಸಿದರೇ? ಅಮಂಗಳ ಶಬ್ದಗಳನ್ನು ಕೇಳಿ ನೊಂದೆಯಾ? ನಿನ್ನ ಮನಸ್ಸಿನಲ್ಲಿ ಕೆಟ್ಟ ಭಾವನೆಗಳೇನಾದರೂ ಪುಟ್ಟಿದವೇ? ಕೊಡುವನೆಂದು ವಚನವಂ ಕೊಟ್ಟು ತಪ್ಪಿದೆಯಾ? ಶರಣಜನರಕ್ಷಕನಾದ ನೀನು ನಂಬಿ ಬಂದ ದ್ವಿಜರನ್ನು ಬಾಲಕರನ್ನು ವೃದ್ಧರನ್ನು ರೋಗಿಗಳನ್ನು ಮಾನಿನಿಯರನ್ನಾಗಲಿ ಕಾಪಾಡಲಾರದೇ ಬಂದೆಯಾ? ಯೋಗ್ಯರಿಗೆ ವೃದ್ಧಬಾಲರಿಗೆ ಕೊಡದೆ ಭೋಜನವನ್ನು ಮಾಡಿದೆಯಾ? ಏನು ಪಾಪಕರ್ಮವನ್ನು ಮಾಡಿದೆ? ಹೇಳು. ವತ್ಸಾ! ಇಷ್ಟು ಮಾತೇಕೆ? ನನಗೆ ನೋಡಲು ನೀನು ಅತ್ಯಂತ ಶ್ರೇಷ್ಠನು, ಆತ್ಮಬಂಧುವು ಆದ ಗೋವಿಂದನನ್ನಗಲಿ ಬಂದಂತೆ ಕಾಣುತ್ತಿದೆ, ಅನ್ಯಥಾ ನಿನ್ನ ತೇಜವಿಷ್ಟು ಕೆಡಲಾರದು!" ಎಂದು ಧರ್ಮಜನು ಪ್ರಶ್ನಿಸಿದನು.

## ೧೪. ಅರ್ಜುನನ ಪ್ರತಿವಚನವು

ಅರ್ಜುನನಾಗ ಧರ್ಮಜನನ್ನು ಕಂಡು ಶೋಕಾಗ್ನದಂದಹ್ಯಮಾನಮಾನಸನಾಗಿ ಕಳೆಗುಂದಿ, ಆ ಗೋವಿಂದನ ಪಾದಾರವಿಂದವನ್ನು ನೆನೆದು ಬದಲಾಡಲು ಬಾರದೆ ಸುಮ್ಮನೆ ನಿಂತನು. ಉಕ್ಕಿಬರುವ ದುಃಖವನ್ನು ಕಷ್ಟದಿಂದ ನುಂಗಿಕೊಂಡು ಕಣ್ಣೀರೊರೆಸಿಕೊಂಡು ವಿರಹದಿಂದ ಹೆಚ್ಚಾದ ಪ್ರೇಮಸಂಭ್ರಮದಿಂದ ಕಾತರನಾದ ಅರ್ಜುನನು ಶ್ರೀಕೃಷ್ಣನು ತನಗೆ ಸಾರಥ್ಯಾದಿಗಳಲ್ಲಿ ಮಾಡಿದ ಸ್ನೇಹವನ್ನು, ಅಭಿಮಾನವನ್ನು, ಹಂಬಲವನ್ನು ನೆನೆದು ಬಾಷ್ಪಗದ್ಗದ ಕಂಠದಿಂದ ಅಣ್ಣನನ್ನು ನೋಡಿ ಮಾತನಾಡಿದನು:

"ಅಣ್ಣಾ! ಶ್ರೀಕೃಷ್ಣನು ನಮ್ಮ ಕೈಬಿಟ್ಟು ಪೋದನು. ದೇವತೆಗಳಿಗೂ ಭಯಪ್ರದವಾದ ನನ್ನ ತೇಜವನ್ನೂ ಒಯ್ದನು. ಮುಖ್ಯಪ್ರಾಣನಿಲ್ಲದ ದೇಹದಂತೆ ಈ ಭೂಲೋಕವವನ ವಿಯೋಗದಿಂದ ಅಮಂಗಲವಾಗಿ ಕಾಣುತ್ತಿರುವದು. ಏನು ಪೇಳಲಿ!"

"ಯಾವ ಪ್ರಭುವಿನ ಸೇವಾಬಲದಿಂದ ದ್ರೌಪದೀಸ್ವಯಂವರದಿ ನೆರೆದ ಸ್ಮರದುರ್ಮದ ರಾದ ಜರಾಸಂಧಾದಿಗಳ ಅಭಿಮಾನವನ್ನು ನುಚ್ಚುನೂರಾಗಿ ಮಾಡಿ ಮತ್ಸ್ಯ ಯಂತ್ರವನ್ನು ದೂಡಿ ಪಾಂಚಾಲಿಯನ್ನು ವೇದಾಧ್ಯಯನವನ್ನಂತೆ ಪೊಂದಿದೆವೋ, ಯಾವ ಸರ್ವೇಶನ ಸನ್ನಿಧಿಯಲ್ಲಿ ಇಂದ್ರನನ್ನು ಲೆಕ್ಕಿಸದೆ ಅವನ ಖಾಂಡವವನವನ್ನು ಬೇಡಿದ ಅಗ್ನಿದೇವನಿ ಗಾಹುತಿಯಾಗಿತ್ತೆನೋ, ಅದ್ಭುತ ಶಿಲ್ಪಮಯವಾದಾ ಮಯಸಭೆಯನ್ನು ಪೊಂದಿದೆವೋ, ರಾಜಸೂಯವನ್ನು ವಿಜೃಂಭಣೆಯಿಂದ ಮಾಡಿ ರಾಜರು ತಂದ ಕಾಣಿಕೆಗಳನ್ನು ಪಡೆದೆವೋ, ಯಾವ ಕೃಪಾಸಮುದ್ರನ ಕೃಪೆಯಿಂದಲೂ ನಿನ್ನ ತಮ್ಮನೆನಿಸಿದ ಪೂಜ್ಯ ಭೀಮಸೇನನು ಗದಾಪಾಣಿಯಾಗಿದ್ದೂ ನಿರ್ಲಕ್ಷ್ಯದಿಂದ ನಿರಾಯುಧನಾಗಿ ಜರಾಸಂಧನಂ ಸೀಳಿ ಆ ಪಾಪಿಯಿಂದ ಬಂಧಿತರಾದ ಭೂಪರನ್ನು ಬಿಡಿಸಿದನೋ – ಯಾವ ಸರ್ವಾಪದುದ್ಧಾರಕನು ರಾಜಸೂಯಾವ ಭೃಥಸ್ನಾನ ಪಾವಿತ ಕೇಶಪಾಶಳನ್ನು ಸಭೆಯಲ್ಲಿ ತಂದು ಸೀರೆಯಂ ಸೆಳೆಯುವಾಗ 'ಕೃಷ್ಣಾ' ಎಂದೊರಲಿದ ಪಾಂಚಾಲಿಯ ಮೊರೆಯನ್ನಾಲಿಸಿ ಅಭಯವಸನವಿತ್ತು ಪಾಲಿಸಿದುದಲ್ಲದೆ ರಣ ರಂಗದಿ ಪತಿಗಳನ್ನಾಲಿಂಗಿಸಿ ರೋದಿಸುವ ಶತ್ರುಪತ್ನಿಯರ ಕಣ್ಣೀರನ್ನೂ ಮುಕ್ತಕಬರೀಭಾರವನ್ನೂ ನೋಡಿ ಸಂತೈಸಿದನೋ, ಯಾವ ಭಕ್ತವತ್ಸಲನ ದಯೆಯಿಂದ ಇಂದುಮೌಳಿಯನ್ನು ಮೆಚ್ಚಿಸಿ ಪಾಶುಪತಾಸ್ತ್ರವಂ ಪಡೆದೆನೋ, ದೇವೇಂದ್ರಾದಿಗಳಿಂದಲೂ ದಿವ್ಯಾಸ್ತ್ರಗಳನ್ನು ಪಡೆತು ಇದೇ ದೇಹದಿಂದ ಮಹೇಂದ್ರಭವನದಲ್ಲಾ ತ್ರಿಲೋಕೇಶನ ಅರ್ಧಾಸನವನ್ನಲಂಕರಿಸಿದೆನೋ – ನನ್ನ ಭುಜದಂಡ ಮಂಡನವಾದ ಗಾಂಡೀವ ನಿರ್ಮುಕ್ತ ಚಂಡಕಾಂಡಗಳನ್ನಾಶ್ರಯಿಸಿ ದೇವತೆಗಳಿಗೆ ಬಂದ ನಿವಾತಕವಚರ ಪೀಡೆಯನ್ನು ನಿವಾರಿಸಿದೆನೋ, ಅಂತಹ ಪುರುಷೋತ್ತಮನಿಂದ ವಿಯೋಗ ಹೊಂದಿ ನೊಂದಿರುವೆನು.

"ಅಣ್ಣಾ! ಉತ್ತರ ಗೋಗ್ರಹಣ ಕಾಲದಲ್ಲಿ ಅನಂತ ಕುರುಬಲವನ್ನೊಬ್ಬನೇ ಸಹಸಾ ಗೆದ್ದು ಗೋಗಣವನ್ನು ಕೌರವಗೌರವಚೂಡಾಮಣಿಗಳನ್ನು ತಂದೆ. ಭೀಷ್ಮ – ದ್ರೋಣ – ಕರ್ಣ – ಶಲ್ಯಮುಖ ಮಹಾರಥರನ್ನು ನನಗೆ ನೋಡಿಸುವ ನೆವದಿಂದ ಅವರವರ ಆಯುಶ್ಶೇಷವನ್ನು ಹರಿಸಿ ಆ ಶತ್ರುಗಳಿಂದ ನಿರ್ಮುಕ್ತವಾದ ದಿವ್ಯಾಸ್ತ್ರಗಳೆನಗೆ ತಾಕದಂತೆ ನನ್ನನ್ನು ತನ್ನ ಬಾಹುವಲಯದಲ್ಲಿಟ್ಟು ರಕ್ಷಿಸಿದ ಕೃಷ್ಣನ ದಯೆಯಿಂದ ಅಸುರರ ಹಿಂಸಾಕೃತ್ಯಗಳಿಗೆ ನೋಯದ ಹರಿದಾಸ ಪ್ರಹ್ಲಾದನಂತೆ ಅಕ್ಷತನಾಗಿ ಉಳಿದೆ. ನೃಪೇಂದ್ರ! ರಣಾಂಗಣದಲ್ಲಿ ಪರಮಮಾಂಗಲಿಕ ವಾದ ಗೀತಾಶಾಸ್ತ್ರವನ್ನೆನ್ನ ಅಜ್ಞಾನಾಂಧಕಾರವನ್ನು ದೂರ ಮಾಡಲು ಉಪದೇಶಿಸಿ ಉದ್ಧರಿಸಿದ ಹರಿಯ ಮಹಿಮೆಯನ್ನು ಮುಖ್ಯಪ್ರಾಣಾದಿ ಪರಮಜ್ಞಾನಿಗಳೇ ಸಾಕಲ್ಯೇನ ತಿಳಿಯಲಾರರೆಂದ ಮೇಲೆ ನನ್ನ ಪಾಡೇನು? ಇಂತಹ ಸ್ವಾಮಿಯಲ್ಲಿ ನಾ ಮಾಡಿದ ಅಪರಾಧಗಳೆಷ್ಟು? ಸೂತನನ್ನಾಗಿ ಸಿದೆ ಮುಕ್ತಾಶ್ರಯನನ್ನು. ಅವನ ಮೋಹನರೂಪವನ್ನು ಮುಗ್ಧನೇತ್ರಗಳಿಂದ ನೋಡುತ್ತಾ ಕರ್ಣಪ್ರಮುಖವೀರವರರು ವರುಣಾಸ್ತ್ರಬಲದಿಂದ ಕುದುರೆಗಳಿಗೆ ನೀರು ಕುಡಿಸುತ್ತಾ ನಿಂತ ನನ್ನನ್ನು ಹೊಡೆಯವದನ್ನೂ ಮರೆತು ನಿಂತುಬಿಟ್ಟರು. ಆಹಾ! ಪಾರ್ಥ ಸಖ! ಕುಂತಿನಂದನನು ನ್ನುವ ಶರ್ಮದವಾದ ನರ್ಮಾಲಾಪಂಗಳನ್ನು, ಆ ಮಂದಸ್ಮಿತ ಸುಂದರವದನಾರವಿಂದವನ್ನು

ನೆನೆದೆನ್ನ ಮನವಾ ಹರಿಪದಮಗ್ನವಾಗಿ ಹಿಂತಿರುಗಿ ಬಾರದೆ ವಿವಶನನ್ನು ಮಾಡಿದೆ. ಒಂದೆಡೆ ತಿರುಗಿ, ಮಲಗಿ, ಉಂಡು, ಕೂತು ನನ್ನನ್ನು ಶ್ಲಾಘಿಸುವ ಕೃಷ್ಣನ ಮಹಾಮಹಿಮೆಯಂ ಕಾಣದೆ ತಿರಸ್ಕಾರ ಮಾಡಿದೆನ್ನ ಮಹಾಪರಾಧವೆಣಿಸಿದನೇ ಕರುಣಾಳು! ಮಿತ್ರನಂತೆ, ತಂದೆಯಂತೆ ಎಲ್ಲವಂ ಕ್ಷಮಿಸಿ ಸಲಹಿದನಲ್ಲವೇ! ರಾಜನ್! ಅಂತಹ ಪುರುಷೋತ್ತಮನು ಅನಿಮಿತ್ತ ಬಂಧುವು ಪ್ರಿಯತಮನು ಆದ ಕೃಷ್ಣನ ವಿಯೋಗವನ್ನು ಪೊಂದಿ ನನ್ನ ಹೃದಯವು ಶೂನ್ಯವಾಗಿದೆ. ದ್ವಾರಕೆಯಿಂದ ಬರುವಾಗ ತಂದ ಕೃಷ್ಣ ಮಹಿಳೆಯರನ್ನು ಗೋಪಕಿರಾತಾದಿಗಳೆಳೆದು ಸೆಳೆವಾಗ ಹೆಣ್ಣಿನಂತೆ ನಿರ್ಬಲನಾಗಿ ಅವರನ್ನು ರಕ್ಷಿಸಲಾರದೆ ಸೋತು ಬಂದಿರುವೆನು! ಶ್ರೀಕೃಷ್ಣ ವಿಯೋಗನೇ ಎನ್ನ ಪರಾಭವ ಕಾರಣವನ್ಯವಲ್ಲ; ನೋಡು! ಅದೇ ಧನುಸ್ಸು! ಅಂತಹವೇ ಬಾಣಗಳು! ಅಂತಹದೇ ರಥ! ಕುದುರೆಗಳಂತಹುವೇ ಇದ್ದುವಾದರೇನು? ಶತ್ರುಭಯಂಕರನಾದ ನಾನೂ ಇದ್ದೆ! ಆದರೆ ಅವೆಲ್ಲವೂ ಒಂದೇ ಕ್ಷಣದಲ್ಲಿ ಕೆಲಸಕ್ಕೆ ಬಾರದೆ ವ್ಯರ್ಥವಾದವು. ಭಸ್ಮಹೋಮದಂತೆ ಮಾಯಾವಿಯ ಇಂದ್ರಜಾಲದಂತೆ, ಊಷರಕ್ಷೇತ್ರದಲ್ಲಿ ನಟ್ಟಿದ ಬೀಜದಂತೆ ಸಂಪೂರ್ಣ ವ್ಯರ್ಥವೇ ಆಗಿಹೋಗಲು ನಾನೊಬ್ಬನೀಗ ನಿನಗಾ ವಿಷಾದಗಾಥೆಯನ್ನು ಪೇಳುವ ಭಾರವನ್ನು ಹೊತ್ತು ಬಂದಿರುವೆನು. ಅಣ್ಣಾ! ನೀ ಕೇಳಿದ ಸುಹೃದ್ಬಂಧುಗಳೆಲ್ಲರೂ ವಿಪ್ರಶಾಪ ಮೂಢರಾಗಿ ಪರಸ್ಪರ ಕಾದಾಡಿ ಪ್ರಭಾಸದಲ್ಲಿ ಮಡಿದರು. ವಾರುಣೀ ಮದಿರೆಯನ್ನು ಕುಡಿದು ದುರ್ಮದರಾಗಿ ಕಣ್ಣು ಕಾಣದೆ ಬಡೆದಾಡಿದವರಲ್ಲಿ ನಾಲ್ಕಾರು ಜನರು ಮಾತ್ರ ಉಳಿದಿರುವರು. ಪ್ರಾಯಃ ಇದೂ ಆ ಶ್ರೀಹರಿಯೇ ಕಾಲರೂಪಿಯಾಗಿ ಮಾಡಿದ ಲೀಲೆಯೇ ಇರಬೇಕು! ತಾನು ನಿರ್ಲಿಪ್ತವಾಗಿ, ಜೀವರನ್ನು ಪರಸ್ಪರ ಕಾರಣರನ್ನಾಗಿ ಮಾಡಿ ಪುಟ್ಟಿಸುವನು– ಸಂಹರಿಸುವನು. ನೀರಿನಲ್ಲಿರುವ ಸಣ್ಣ ಜಲಚರಂಗಳನ್ನು ನುಂಗುವ ಮಹಾಮೀನಗಳಂತೆ ಬಲವಂತರು ದುರ್ಬಲರನ್ನು ಕೊಲ್ಲುವಂತೆ ಮಾಡುವನು. ಬಲವಂತರು ದೊಡ್ಡವರು ಪರಸ್ಪರವಾಗಿ ಕಡಿದಾಡಿ ಸಾಯುವಂತೆ ಪ್ರೇರಿಸುವನು. ಇಂತು ಯಾದವರನ್ನನ್ಯೋನ್ಯ ಕಲಹದಿಂದ ಅಳಿಸಿ, ಮುಳ್ಳನನ್ನು ಮುಳ್ಳಿನಿಂದ ತೆಗೆದಂತೆ ಅನಾಸಕ್ತನಾಗಿ, ಭೂಭಾರವನ್ನಳಿಸಿ ತಾನೂ ಪರಂಧಾಮವನ್ನೈದಿದನು. ದೇಶಕಾಲ ಸಮುಚಿತವೂ ಹೃತ್ತಾಪಶೋಷಕವೂ ಆದ ಆ ಗೋವಿಂದನ ಮಧುರ ಭಾಷಣಗಳನ್ನು ನೆನೆದು ಮೈಮರೆತು ಮಾತಾಡಲು ಕೈಲಾಗದಿರನೆ"ನೆಂದು ಪೇಳಿ ಅರ್ಜುನನು ಕೃಷ್ಣಪಾದಾರವಿಂದವನ್ನು ಸ್ಮರಿಸುತ್ತಾ ನಿಂತುಬಿಟ್ಟನು. ಅವನ ಮನಸ್ಸಾರಮಾರಮಣನ ಸ್ಮರಣೆಯಿಂದ ವಿಮಲನಾಗಿ, ಶಾಂತಿಯನ್ನು ಪೊಂದಿತು.

## ೧೫. ಪಾಂಡವರ ಸ್ವರ್ಗಾರೋಹಣವು

ಪುನಃ ಸೂತನಿಂತು ಪೇಳಿದನು:

ವಾಸುದೇವ ಪಾದಾರವಿಂದ ಧ್ಯಾನ ಪಾವಕನಿಂದ ಪಾಪಕಷಾಯವು ಶೋಷಿಸಿ ಪೋಗಲು ಅರ್ಜುನನು ಶುದ್ಧಧಿಷಣನಾದನು. ಸಂಗ್ರಾಮರಂಗದಲ್ಲಿ ಭಗವಂತನು ಪೇಳಿ ಅನುಗ್ರಹಿಸಿದ ಜ್ಞಾನವು ಕಾಲಕರ್ಮಕಾರಣದಿಂದ ನಶಿಸಿದಂತಾಗುವಾಗ ಪುನಃ ಭಗವದ್ಗೀತೆಯನ್ನು ಆವರ್ತಿಸಿ ಬ್ರಹ್ಮಜ್ಞಾನಸ್ಫೂರ್ತಿಯಿಂದ ವಿಶೋಕನಾದನು. ಅವನ ಅನ್ಯಥಾ ಜ್ಞಾನವು ನಷ್ಟವಾಯಿತು. ಸಂಶಯಗಳು ದೂರಾದವು. ಪ್ರಾರಬ್ಧವು ಮಾತ್ರ ಉಳಿದ ತತ್ತ್ವದೇವನಲ್ಲವೇ ಆ ಇಂದ್ರಾಂಶನು!

ಗುಣಕಾರ್ಯಗಳು ನೀತು ಅಹಂಕಾರವು ದೂರವಾಗಿ ಪುನರಾವೃತ್ತಿ ರಹಿತ ಮೋಕ್ಷವನ್ನು ಪೊಂದುವ ಸಾಧಕನಾದ ಅರ್ಜುನನು ಶಾಂತನಾದನು.

ಯದುಕುಲ ಕ್ಷಯವನ್ನೂ ಭಗವನ್ನಿರ್ಯಾಣವನ್ನೂ ಕೇಳಿ ಧರ್ಮರಾಜನಾದರೂ ಸಂಸಾರ ವಿಮುಖನಾಗಿ ಸ್ವರ್ಗಾರೋಹಣ ಮಾರ್ಗವನ್ನು ಪಿಡಿಯಲು ಇಚ್ಛಿಸಿದನು.

ಪುಣ್ಯ ಶ್ರವಣೀಯ ಚರಿತ್ರನಾದ ಮುಕುಂದನು ತನ್ನ ಶರೀರದಂತೆ ಪ್ರತಿಮಾಸ್ಥಾನಾಪನ್ನವಾದ ಭೂಮಂಡಲವನ್ನು ಯಾವ ದಿನ ಬಿಟ್ಟನೋ ಅಂದೆ ತದ್ಭಕ್ತಿರಹಿತರಿಗೆ ಪಾಪರಾಶಿಯಂ ಹೊರಿಸುವ ಅಂಗಲಾದ ಕಲಿಯು ತನ್ನ ಯುಗವನ್ನಾರಂಭಿಸಿದನು. ರಾಜ್ಯದಲ್ಲಿ, ಅಲ್ಲಿಂದ ಪುರದಲ್ಲಿ, ಅಂತಃಪುರದಲ್ಲಿ, ಸ್ವಜನರಲ್ಲಿ, ಕೊನೆಗೆ ತನ್ನಲ್ಲಿ ಪೊಕ್ಕು ಲೋಭ, ಅನೃತ, ಕಪಟ, ಹಿಸಾದಿ ಅಧರ್ಮ ಚಕ್ರವಂ ಪಿಡಿದು ನಡೆಸುವ ಕಲಿಯ ಪರಾಕ್ರಮವನ್ನು ಪರೀಕ್ಷಿತನಿಗೆ ಪಟ್ಟಗಟ್ಟಿ ಹಸ್ತಿನಾವತಿಯಲ್ಲಿಟ್ಟು, ವಜ್ರನಿಗೆ ಮಥುರಾ ರಾಜ್ಯಾಭಿಷೇಕವನ್ನು ಮಾಡಿ ಪೊರಮಟ್ಟನು. ಸರ್ವಸ್ವ ದಕ್ಷಿಣಾಕವಾದ ಪ್ರಜಾಪ್ರತ್ಯೇಷ್ಟಿಯನ್ನು ಮಾಡಿ, ಅಗ್ನಿಗಳನ್ನು ತನ್ನಲ್ಲೇ ಆರೋಪಿಸಿ ಸರ್ವರನ್ನು ತ್ಯಜಿಸಿ ನಿರಹಂಕಾರಿಯಾಗಿ ಮಮತೆಯ ನೀಗಿ ಸರ್ವಬಂಧಗಳನ್ನು ಕಡಿದುಕೊಂಡು ಧರ್ಮ ರಾಜನು ನಿಷ್ಪಾಪನಾದನು. ವೈರಾಗ್ಯಭಾಗ್ಯವನ್ನು ಮಾತ್ರ ಸ್ವೀಕರಿಸಿ ಹಿಮಾಲಯವನ್ನು ಸೇರಿದನು. 'ವಾಗಾತ್ಮಿಕಳಾದ ಉಮೆಯು ಮನೋನಿಯಾಮಕ ರುದ್ರಾಧೀನಳು. ರುದ್ರನು ಮುಖ್ಯ ಪ್ರಾಣಾಧೀನನು. ಆ ಜೀವೋತ್ತಮನು ಹರ್ಯಧೀನನೆಂದು ಲಯಚಿಂತನವಂ ಗೈದನು. ಪಂಚಪ್ರಾಣಗಳನ್ನು ನಿರೋಧಿಸಿ ಮನನಶೀಲನಾಗಿ ಹೃದ್ಗತನಾದ ಬಿಂಬನಲ್ಲಿ ಸರ್ವವನ್ನೂ ಸಮರ್ಪಿಸಿ ಗುಣಪೂರ್ಣನು ಲಯರಹಿತನಾದ ಹರಿಯನ್ನು ನೆನೆಯುತ್ತಾ, ಚೀರವಸನನು ನೀರಾಹಾರನು, ಮೌನಿಯು, ಮುಕ್ತಮುರ್ಧಜನು ಆಗಿ ಮೂಕಬಧಿರರಂತೆ ಸಂಚರಿಸಿದನು. ಉನ್ಮತ್ತನಂತೆ ತ್ಯಜಿಸಿದನು. ಯಾರು ಕರೆದರೂ ಕೇಳಿಸಕೊಳ್ಳದೆ ಮನೆಬಿಟ್ಟು ಹೊರಟು ಸರ್ವಾಪೇಕ್ಷೆಗಳನ್ನು ತ್ಯಜಿಸಿದನು. ಪೂರ್ವದಲ್ಲಿ ಮಹಾತ್ಮರು ಸೇರಿದ ಹಿಮಾಲಯದ ಆಶ್ರಮದಿ ತಪವಂ ಗೈದು ಧರ್ಮರಾಜಪದವನ್ನೈದಿದನು.

ಅವನ ತಮ್ಮಂದಿರೆಲ್ಲರೂ ಮನಸ್ಸನ್ನು ಗಟ್ಟಿ ಮಾಡಿ ಕಲಿಯಿಂದ ಕೆಟ್ಟ ಪ್ರಜರನ್ನು ಕಂಡು ವೈರಾಗ್ಯದಿಂದ ವಿಷಯಂಗಳನ್ನು ತ್ಯಜಿಸಿದನು. ಆ ಸಮಯದ ತಮ್ಮ ಕರ್ತವ್ಯವನ್ನು ಮನಗಂಡರು. ವೈಕುಂಠಚರಣಾಂಬುಜವನ್ನು ಮನಸಾ ಧರಿಸಿದರು. ತಮ್ಮ ತಮ್ಮ ಸ್ವರೂಪಗಳ ನ್ನರಿತು ಭಕ್ತ್ಯುದ್ರೇಕದಿಂದ ವಿಶುದ್ಧಬುದ್ಧಿಗಳಾದರು. ಆ ನಾರಾಯಣಾ ಶ್ರಮದಲ್ಲಿ ಭೌತಿಕ ಶರೀರಂಗಳನ್ನು ತ್ಯಜಿಸಿದರು. ವಿಷಯಾತ್ಮಕರಾದ ಅಸಜ್ಜನರಿಗೆ ಸಿಗಲಾರದ ಜರಾಮರಣ ರಹಿತವಾದ ಸ್ಥಾನದಲ್ಲಿ ತಮ್ಮ ಮೂಲರೂಪಂಗಳಲ್ಲಿ ಐಕ್ಯವನ್ನು ಪೊಂದಿದರು. ಪತಿಗಳು ನಿರಪೇಕ್ಷರಾಗಿದ್ದುದನ್ನುಪಲಕ್ಷಿಸಿ, ಪಾಂಚಾಲೀ ದೇವಿಯು ಮೊದಲೇ ಭಗವಂತನಾದ ವಾಸುದೇವನನ್ನು ನೆನೆದು, ಶರೀರತ್ಯಾಗವನ್ನು ಗೈದಿದ್ದಳು.

ಇಂತು ಭಗವತನ ಪರಂಧಾಗಮನವನ್ನು ಪಾಂಡವರ ನಿರ್ಯಾಣವನ್ನು ತ್ರಿಕರಣ ಶುದ್ಧರಾಗಿ ಕೇಳುವವರು ಪೇಳುವವರು ಪರಿಶುದ್ಧರಾಗುವರು. ಸರ್ವಮಂಗಳಗಳನ್ನು ಪೊಂದುವರು, ಹರಿಭಕ್ತಿಭಾಗ್ಯವಂ ಪಡೆದು ಮುಕ್ತರಾಗುವರು.

## ೧೬. ಗೋ – ಧರ್ಮ – ಸಂವಾದವು

ಮಹಾಭಕ್ತನಾದ ಪರೀಕ್ಷಿದ್ರಾಜನು ಬ್ರಾಹ್ಮಣೋತ್ತಮರ ಸದುಪದೇಶಾನುಸಾರವಾಗಿ ಪ್ರಜಾರಂಜಕನಾಗಿ ರಾಜ್ಯವಾಳುತ್ತಿದ್ದನು. ಜಾತಕಕೋವಿದರಾದ ವಿಪ್ರರು ವರ್ಣಿಸಿದಂತೆ ಮಹದ್ಗುಣಗಳವನಲ್ಲಿ ನೆಲೆಮಾಡಿ ನಿಂತಿದ್ದವು. ಆ ಮಹಾರಾಜನು ಉತ್ತರನ ಮಗಳಾದ ಇರಾವತಿಯನ್ನು ಮದುವೆಯಾಗಿ ಜನಮೇಜಯಾದಿಗಳನ್ನು ನಾಲ್ಕು ಜನ ಮಕ್ಕಳನ್ನು ಪಡೆದನು. ಕೃಪರ ಆಧ್ವರ್ಯದಲ್ಲಿ ಮೂರಶ್ವಮೇಧಯಾಗಂಗಳನ್ನು ಗಂಗಾ ತೀರದಲ್ಲಿ ಭೂರಿದಕ್ಷಿಣೆಗಳನ್ನು ಕೊಟ್ಟು ಮಾಡಿದನು. ಆ ಯಜ್ಞದಲ್ಲಿ ರಾಜನು ಕೊಟ್ಟ ಹವಿರ್ಭಾಗಗಳನ್ನು ದೇವತೆಗಳು ಪ್ರತ್ಯಕ್ಷವಾಗಿ ಬಂದು ಸ್ವೀಕರಿಸಿದರು. ಸ್ವಾಭಾವಿಕ ಸಾಮರ್ಥ್ಯದಿಂದ ಧೀರನಾದ ಪರೀಕ್ಷಿತನು ದಿಗ್ವಿಜಯ ಮಾಡಿ ಬರುತ್ತಾ ಗೋಮಿಥುನವನ್ನು ಪಾದದಿಂದೊದೆದು ಪೀಡಿಸುತ್ತಿದ್ದ ಶೂದ್ರ ಕರ್ಮದಿಂದ ನಿಂದ್ಯನಾದ ರಾಜವೇಷವನ್ನು ಧರಿಸಿದ ಕಲಿಯನ್ನು ನಿಗ್ರಹಿಸಿದನು.

ಎಂತು ಸೂತನು ಪೇಳಲು, ಶೌನಕನು ಕೇಳಿದನು:

ಸೂತಾ! ಪರೀಕ್ಷಿತನು ದಿಗ್ವಿಜಯ ಕಾಲದಲ್ಲಿ ಕಲಿಯನ್ನು ನಿಗ್ರಹಿಸಲು ಕಾರಣವೇನು? ರಾಜವೇಷಧಾರಿಯಾದ ಆ ಶೂದ್ರನು ಗೋವನ್ನು ಪಾದದಿಂದ ಒದೆದು ಎಂತಹ ಕುಕರ್ಮವನ್ನು ಮಾಡಿದನು? ಆ ಕಥೆಯು ವಿಷ್ಣುಕಥಾಶ್ರಯವಾದರೆ ಪೇಳು. ಅಥವಾ ಆ ಸ್ವಾಮಿಯ ಪಾದಾರವಿಂದ ಮಕರಂದ ರಸಪಾನರತರಾದ ಭಾಗವತರ ಕಥೆಯಾದರೂ ಕೇಳತಕ್ಕದ್ದೇ? ಮರ್ತ್ಯರಾಗಿದ್ದಾಗ ಮರಣವು ತಪ್ಪಿದ್ದಲ್ಲ. ಅಲ್ಪಾಯುಷ್ಕರಾದ ಮನುಜರಿಗೆ ಅಸದಾಲಾಪದಿಂದ ಅದೂ ವ್ಯರ್ಥವಾಗುವುದಲ್ಲವೇ? ಆದ್ದರಿಂದ ಬ್ರಹ್ಮಜ್ಞಾನಾರ್ಥಿಗಳಾಗಿರುವ ನಾವು ಶ್ರೀನೃಸಿಂಹದೇವನನ್ನು ಶಾಮಿತ್ರಕರ್ಮದಲ್ಲಿ ಅಹ್ನಾನಿಸಿ ಪ್ರಸನ್ನೀಕರಿಸಿಕೊಂಡು ನಿಲ್ಲಿಸಿರುವೆವು. ಆ ಮೃತ್ಯೋರ್ಮೃತ್ಯುವಾದ ನರಹರಿದೇವನಿಲ್ಲಿರುವಾಗ ಆರೂ ಸಾಯುವುದಿಲ್ಲ. ಅಂತೆಯೇ ಮೃತ್ಯುಭಯವಿಧುರರಾಗಿ ನೃಲೋಕವಾಸಿ ಸುಜನರು ಹರಿಲೀಲಾಮೃತ ವಚನವನ್ನಾಲಿಸಿ ಧನ್ಯರಾಗಲಿ!

ಮೊದಲೇ ಮಂದಾಯುಷ್ಕರು. ಪ್ರಜ್ಞಾವಿಶೇಷವಾದರೂ ಇಲ್ಲ. ಮೇಲೆ ನಿರ್ಭಾಗ್ಯರೂ ಆದ ಮನುಜರಿಗೆ ಅಸತ್ ಪ್ರಸಂಗದಿಂದಲ್ಲದೆ, ರಾತ್ರಿ ನಿದ್ರೆಯಿಂದಲೂ ಹಗಲು ಅರ್ಥ ಸಂಪಾದನೆಯಿಂದಲೂ ವ್ಯರ್ಥವಾಗಿ ಕಳೆದುಹೋಗುವದು. ಆದ್ದರಿಂದ ಶ್ರೀಹರಿಚರಿತೆಯನ್ನು ವರ್ಣಿಸಿ ನಮ್ಮನ್ನು ಧನ್ಯರನ್ನು ಮಾಡು ಎಂದನು.

ಸೂತನು ಪೇಳಿದನು– ಪರೀಕ್ಷಿದ್ರಾಜನು ಒಂದು ಸಲ ತನ್ನ ಆಳ್ವಿಕೆಯಲ್ಲಿದ್ದ ಕುರುಜಾಂಗಲ ದೇಶದಲ್ಲಿ ಕಲಿಯು ಪ್ರವೇಶ ಮಾಡಿರವನೆಂದು ತಿಳಿದನು. ತತ್ಕಾರ್ಯವಾದ ರಾಷ್ಟ್ರವಿಪ್ಲವವನ್ನಡಗಿಸಲು ಧನುಃ ಪಾಣಿಯಾಗಿ ನಿಂತನು. ಕಪ್ಪು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕೂತು, ಸಿಂಹಪತಾಕೆಯನ್ನೆತ್ತಿ, ರಥ ಗಜ ತುರಂಗ ಪದಾತಿ ಬಲವನ್ನು ಕರೆದುಕೊಂಡು ದಿಗ್ವಿಜಯವನ್ನು ಮಾಡಿ ಶಾಂತಿಯನ್ನು ಸ್ಥಾಪಿಸಲು ಹೊರಟನು.

ಭದ್ರಾಶ್ವ, ಕೇತುಮಾಲ, ಕುರು, ಕಿಂಪುರುಷ, ಭಾರತಾದಿ ನವವರ್ಷಗಳನ್ನು ಗೆದ್ದು, ಆಯಾ ರಾಜರಿಂದ ಕಪ್ಪವನ್ನು ತೆಗೆದುಕೊಂಡು ವಿಜಯಲಕ್ಷ್ಮೀಸಮೇತನಾಗಿ ಬರುತ್ತಿದ್ದನು.

ತಮ್ಮ ಪೂಜ್ಯರಾದ ಮಹಾತ್ಮರ ಯಶೋಗಾನವನ್ನು ಶ್ರೀಕೃಷ್ಣನು ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ತನ್ನನ್ನು ರಕ್ಷಿಸಿದ ಕರುಣ ಕಥೆಯನ್ನು, ಅಲ್ಲಲ್ಲಿ ದ್ವಿಜರ ಮುಖದಿಂದ ಕೇಳಿ ಸಂತೋಷಪಟ್ಟನು. ಪಾಂಡವರ ಭಕ್ತಿಯನ್ನು ಅವರಲ್ಲಿ ಶ್ರೀಕೃಷ್ಣನ ಅನುರಕ್ತಿಯನ್ನು ಸ್ಮರಿಸಿ, ಪ್ರೇಮವಿಕಸಿತನೇತ್ರನಾಗಿ, ಆ ಬ್ರಾಹ್ಮಣರನ್ನು ವಸ್ತ್ರಗಳಿಂದ, ಮಹಾಧನಗಳಿಂದ ಪೂಜಿಸಿ, ಸತ್ಕರಿಸಿದನು. ಸಾರಥಿಯಾದ, ಸಭಾಪತಿಯಾದ, ಸೇವೆಯಂ ಮಾಡಿದ, ಸ್ನೇಹವಂ ತೋರಿದ, ದೂತನಾಗಿ ಪೋದ, ರಾತ್ರಿಯಲ್ಲಿಯೂ ರಣಾಂಗಣವಂ ಬಿಡದೆ ವೀರಾಸನದಲ್ಲಿ ಕುಳಿತು ಕಾದ, ಅನುಸರಿಸಿದ, ವಂದಿಸಿ, ಪೊಗಳಿದ. ಇಂತು ಭಕ್ತವತ್ಸಲನಾಗಿ, ಬಹುಪರಿ ಸಲುಹಿದ ಲಕ್ಷ್ಮೀ ರಮಣನ ಚರಣಾರವಿಂದಗಳಲ್ಲಿ ಅನವರತ ಭಕ್ತಿಯನ್ನು ಮಾಡಿ ಧನ್ಯನಾದನು.

ತನ್ನ ಪೂರ್ವಜರನ್ನನುವರ್ತಿಸಿ ನಡೆಯುವ ಆ ರಾಜನು ಹಸ್ತಿನಾವತಿಯ ಸಮೀಪದಲ್ಲೇ ನಡೆದ ಒಂದಾಶ್ಚರ್ಯಕರ ವೃತ್ತಾಂತವನ್ನು ಕಂಡನು. ಕೇಳು ಶೌನಕಾ! ಧರ್ಮನು ವೃಷಭನಾಗಿದ್ದನು. ಭೂದೇವಿಯು ಗೋರೂಪ ತಾಳಿದ್ದಳು. ಕರುವನ್ನು ಕಳೆದುಕೊಂಡಂತೆ ನೊಂದು ಕಣ್ಣೀರಿಡುವ ಗೋವನ್ನು ನೋಡಿ ಒಂದೇ ಪಾದದಿ ಸಂಚರಿಪ ಧರ್ಮನಿಂತೆಂದನು.

"ಭದ್ರೇ! ಏಕೆ ನಿನ್ನ ಮುಖವು ಬಾಡಿದೆ? ಕಳೆಗುಂದಿ ರೋದಿಸುತ್ತಿರುವಿ, ನಿನಗೆ ಆರೋಗ್ಯವೇ? ಮನೋವ್ಯಾಧಿಯಿಂದ ಪೀಡಿತಳಂತೆ ಕಾಣುತ್ತಿರುವಿ. ಆಪ್ತಬಂಧುವೊಬ್ಬ ದೂರಾದನೆಂದು ದುಃಖಿಸುವಿಯಾ? ನನ್ನ ಒಂದು ಪಾದವನ್ನು ಕಂಡು ಚಿಂತಿಸುವಿಯಾ? ಅಥವಾ ನಿನ್ನನ್ನು ವೃಷಲ ರಾಜರು ಅನುಭವಿಸುತ್ತಿರುವರೆಂದೋ? ಯಜ್ಞಭಾಗಗಳನ್ನಸುರರ ಕಸಿಯಲು ಕಸಿವಿಸಿಪಡುವ ಸುರರನ್ನೂ ಯಜ್ಞಾಭಾವದಿಂದ ಮಹೇಂದ್ರಪರ್ಜನ್ಯರು ಮಳೆಗರೆಯದಿರಲು ಸಸ್ಯಾದಿ ಜೀವನಸೌಖ್ಯವಿಲ್ಲದೆ ಕಷ್ಟಪಡುವ ಮನುಜರನ್ನೂ ನೋಡಿ ಕನಿಕರದಿಂದೋ? ಹೇ ಧರೇ! ರಕ್ಷಕರಿಲ್ಲದೆ ರಾಕ್ಷಸರಂತಹ ದುಷ್ಟಜನರಿಂದ ಸ್ತ್ರೀಯರು ಬಾಲರು ಪೀಡಿತರಾಗಿರುವರು. ವೇದವಾಣಿಯನ್ನು ದ್ವಿಜರು ಬಿಟ್ಟುಕೊಟ್ಟರು. ಶೂದ್ರರು ಓದಿ ಕೆಟ್ಟರು. ಕುಲಾಚಾರರಹಿತರರು ಅಲ್ಪಶ್ರುತರು ವೇದಾರ್ಥಗಳನ್ನು ಕೆಡಿಸಿದರು. ರಾಜರೆನಿಸಿಕೊಂಡವರು ಕಲಿಭ್ರಂಶಿತಮತಿಗಳಾಗಿ ರಾಷ್ಟ್ರಗಳನ್ನಳಿಸುತ್ತಿರಲು ಉದ್ವಾಸಿತರಾದ ಪ್ರಜರು ಗೋಳಿಡುತ್ತಾ ಅಶನವಸನಗಳಿಗೆ ದಿಕ್ಕೆಟ್ಟು, ವಾಸವಿದೆಂಬುದಿಲ್ಲದೆ ಸ್ನಾನವ್ಯವಾಯಗಳನ್ನು ಕಾಣದೆ ಕಷ್ಟ ಪಡುತ್ತಿರುವರು. ಇದೆಲ್ಲವನ್ನು ಕಂಡು ಚಿಂತಿಸುವೆಯಾ? ಅಥವಾ ವಸುಂಧರೆ! ನನಗೆ ಪೇಳು. ನಿನ್ನ ಭೂರಿಭಾರವನ್ನಿಳುಹಲವತರಿಸಿದ ಹರಿಯು ಅಂತರ್ಹಿತವಾದನಲ್ಲಾ ಎಂದು ಮೋಕ್ಷಕಾರಣವಾದ ಅವನ ಮನೋಹರ ಚರಿತೆಯನ್ನು ಸ್ಮರಿಸಿ ಶೋಗಿಸುವಿಯಲ್ಲವೇ? ನಿನ್ನ ಮನೋವ್ಯಾಧಿಯ ಮೂಲವೇನು? ಎಷ್ಟು ಬಾಡಿಬತ್ತಿರುವೆ! ಕಾಲಬಲದಿಂದ ನಿನ್ನ ಸೌಭಾಗ್ಯವೆಷ್ಟು ಮಾಸಿಹೋಗಿದೆ ?"

ಎಂದು ಪ್ರಶ್ನಿಸಿದ ಧರ್ಮನನ್ನು ನೋಡಿ ಧರೆಯು ನಿಟ್ಟುಸಿರನ್ನು ಬಿಟ್ಟು, ಇಂತೆಂದಳು.

"ಧರ್ಮ! ನಿನಗೆಲ್ಲವೂ ಗೊತ್ತಿದೆ. ನನ್ನನ್ನೇಕೆ ಕೇಳುವೆ? ನೋಡು, ಲೋಕಸುಖಕರವಾದ ನಾಲ್ಕು ಪಾದಗಳಿಗೆಂತಹ ಹಾನಿ ಬಂದಿದೆ! ಸತ್ಯ, ಶೌಚ, ದಯಾ, ದಾನ, ಮಿಥ್ಯಾಭಿಮಾನವರ್ಜನ, ಸಂತುಷ್ಟಿ, ಆರ್ಜನ, ಶಮ, ದಮ, ತಪಸ್ಸು ಪ್ರಿಯಾಪ್ರಿಯ ಬುದ್ಧಿರಾಹಿತ್ಯ, ದುಃಖಸಂಮರ್ಷ, ಹರಿಭಕ್ತಕೃತಾಪರಾಧ ಸಹನೆ, ಮುಖ್ಯಪ್ರಾಣಭಕ್ತಿ, ಶಾಸ್ತ್ರಾಧ್ಯಯನ, ಸರ್ವಸಾಕ್ಷಾತ್ಕಾರ, ವೈರಾಗ್ಯ, ಈಶಿತ್ವ, ಪರಾಕ್ರಮ, ವರ್ಚಸ್ಸು, ಧಾರಣೆ, ಭಕ್ತಾನುಗ್ರಹೇಚ್ಛೆ, ಖತೆ, ಅಪರಾಧೀನತೆ, ನಿಪುಣತೆ, ಕಾಂತಿ, ಸುಭಭಾಗಿತ್ವ, ಭಕ್ತರಲ್ಲಿದ್ದ ಮಾರ್ದವ, ಕ್ರೋಧಾ

ದುರ್ಗುಣರಾಹಿತ್ಯ, ಧಾರ್ಷ್ಟ್ಯ, ವಿನಯ, ಶೀಲ ಪರಾಭಿಭವನ ಶಕ್ತಿ, ಬಲ, ಸಹನಶಕ್ತಿ, ಐಶ್ವರ್ಯ, ವೀರ್ಯ, ಯಃಶ ಶ್ರೀಜ್ಞಾನ ವಿಜ್ಞಾನ ನಾಮಕಭಗ, ಗಾಂಭೀರ್ಯ, ಸ್ಥೈರ್ಯ, ಆಸ್ತಿಕ್ಯ, ಕೀರ್ತಿ, ಪರಸತ್ಕಾರ, ಅನಹಂಕಾರ ಮುಂತಾದ ಸ್ವರೂಪಭೂತ ಮಹಾಗುಣಗಳೆಡೆಬಿಡದೆ ನಿತ್ಯವೂ ಆಶ್ರಯಿಸಿರುವ ರಮಾನಾಥನು ತನ್ನ ನಂಬಿದ ಜನರಿಗೆ ಮೋಕ್ಷದಲ್ಲಿ ಸ್ವಯೋಗ್ಯಗುಣಾ ವಿರ್ಭೂತಿಯನ್ನು ಕೊಡುವನು. ಜೀವರಿಗೆ ಹರಿಗುಣಪ್ರತಿಬಿಂಬಗಳಾದ ಸ್ವಗುಣಾವಿರ್ಭೂತಿ ಯಿಂದ ಆನಂದವಾಗುವದು. ಅಂತಹ ಸುಜನೋದ್ಧಾರಕನು, ಅನಂತಕಲ್ಯಾಣಗುಣ ಪಾತ್ರನೂ ಆದ ಶ್ರೀರಮಾವಾಸನ ಆವಾಸವೆನಿಸಿ ಸುಖಿಸಿದನಾನಿಂದು ಅವನಿಂದ ರಹಿತಳಾದೆನೆಂದೇ ಎನ್ನ ಕುಂದು. ಹರಿದೂರನಾದ ಕಲಿ ಪಾಪಿ ಕಣ್ಣಿಟ್ಟ, ನಾನೂ–ನೀನೂ, ದೇವ–ಪಿತೃ–ಋಷಿ–ಸಾಧುಗಳು ಅವನ ಚರ್ಯೆಯಿಂದ ನೊಂದಿರುವೆವು. ವರ್ಣಾಶ್ರಮಗಳು ತದ್ಧರ್ಮಗಳು ಕೆಟ್ಟುಹೋದವು. ಬ್ರಹ್ಮಾದಿಗಳು ವೇದವಿಧಿಯನ್ನನುಸರಿಸಿ ಆವ ಭಗವಂತನ ಕಟಾಕ್ಷವೀಕ್ಷಣಕಾಮರಾಗಿ ಚಿರತಪವನ್ನು ಗೈಯುವರೋ ಆವಸುಂದರನ ಪಾದಾರವಿಂದ ಸೌಭಾಗ್ಯವ ಕಂಡು ತದನುರಕ್ತಳಾಗಿ ಶ್ರೀದೇವಿಯು ತನ್ನ ಮನೆಯಾದ ಅರವಿಂದವದನವನ್ನು ಬಿಟ್ಟು, ಭಜಿಸುವಳೋ ಅಂತಹ ಶ್ರೀಕೃಷ್ಣನ ಅಬ್ಜಕುಲಿ ಶಯವಾಂಕುಶ ಕೇತುಮುಖ ಶುಭಲಕ್ಷಣಲಕ್ಷಿತವಾದ ಪಾದಾರವಿಂದ ಶೋಭಿತಳಾಗಿ ತ್ರಿಲೋಕಗಳಲ್ಲಿ ನಾನೇ ಹೆಚ್ಚೆಂದು ಗರ್ವಿತಳಾದೆನೆಂದೋ ಏನೋ ಆ ಶ್ರೀಹರಿಯು ನನ್ನನ್ನು ಪುಣ್ಯಾಂತವಾಯಿತೆಂಬಂತೆ ವಿಯೋಗದಿ ಸಿಲುಕಿಸಿ ಅಂತರ್ಹಿತನಾದನು. ನನಗೆ ಸಹಿಸಲಶಕ್ಯ ವಾಗಿರುವಷ್ಟು ಭಾರಭೂತರಾದ ರಾಕ್ಷಸರಾಜರ ಅಕ್ಷೌಹಿಣೀಲಕ್ಷವನ್ನೂ ಲಕ್ಷಿಸದೆ, ವೀಕ್ಷಣಮಾತ್ರದಿಂದ ಕೊಂದು ನಿನ್ನನ್ನು ನಾಲ್ಕು ಪಾದಗಳಿಂದ ಸರ್ವಾಂಗಸುಂದರ ನನ್ನು ಮಾಡಿ, ನಿಲ್ಲಿಸಿ, ಆ ಯಾದವ ಕುಲಾಲಂಕಾರನ ವಿರಹವನ್ನೆಂತು ಸಹಿಸಲಿ? ಅವನ ಪ್ರೇಮಾವಲೋಕನ ಮಂದಹಾಸಮಧುರಾಲಾಪಗಳು ಮಧುಮಾನಿನಿಯರ ಸೌಂದರ್ಯಾಭಿ ಮಾನಮದವನ್ನಿಳಿಸಿತು. ಆ ವನಜಾಕ್ಷನ ಪಾದಾರವಿಂದ ಚಿಹ್ನಿತಳಾದ ನಾನು ಪುಲಕಿತಳಾಗುತ್ತಿದ್ದೆ. ಅಂತಹ ಗೋವಿಂದನನ್ನು ಇನ್ನೆಂದು ಕಾಣುವೆವು?" ಎಂದು ಮಾತಾಡುವ ಗೋಮಿಥುನವಿದ್ದ ಸರಸ್ವತೀ ನದಿಯು ಹರಿಯುವ ಕುರುಕ್ಷೇತ್ರ ಪ್ರದೇಶಕ್ಕೆ ಪರೀಕ್ಷಿದ್ರಾಜನು ಬಂದು ಅವರೀರ್ವರ ದೀನಾಲಾಪಗಳನ್ನಾಲಿಸಿ, ಅವರನ್ನು ಸಮೀಪಿಸಿ, ಪ್ರಶ್ನಿಸಲುದ್ಯುಕ್ತನಾದನು.

## ೧೭. ಕಲಿನಿಗ್ರಹವು

ಪರೀಕ್ಷಿದ್ರಾಜನಾಗ ಅನಾಥರಂತೆ ಪೀಡಿಸಲ್ಪಡುವ ಗೋಮಿಥುನವನ್ನೂ ರಾಜವೇಷಧಾರಿಯಾದ ವೃಷಲನನ್ನೂ ಕಂಡನು. ಆ ವೃಷಭವು ಒಂದೇ ಕಾಲಿಂದ ಕುಂಟುತ್ತಾ ಕಂಪಿಸುತ್ತಾ ಶಕೃನ್ಮೂತ್ರನೆ ಮಾಡುತ್ತಿತ್ತು. ಮೃಣಾಲಧವಲವಾದಾ ವೃಷವನ್ನು ವೃಷಲನು ಕಾಲಿನಿಂದ ಒದೆಯುತ್ತಿದ್ದನು. ಗೋವು ಕೂಡ ಒದೆಯಲ್ಪಡುತ್ತಿತ್ತು, ದೀನವಾಗಿ ಕರುವನ್ನು ಕಳೆದುಕೊಂಡಂತೆ ಕಣ್ಣೀರಿಡುತ್ತಿತ್ತು. ಕನಕ ರಥದಲ್ಲಿ ಕೂತು ಬಂದ ರಾಜನಾ ಗೋಮಿಥುನವನ್ನು ಕಂಡು ಮೇಘಗಂಭೀರವಾದ ವಾಕ್ಯಗಳಿಂದ ಪ್ರಶ್ನಿಸಿದನು.

"ಎಲೌ ವೃಷಲನೇ! ವೇಷದಿಂದ ನರದೇವನಂತಿರುವಿ. ಕರ್ಮದಿಂದ ಶೂದ್ರನಿರುವಿ. ನನ್ನಿಂದ ರಕ್ಷಿತನಾಗಿರುವ ಈ ದೇಶದಲ್ಲಿ, ಬಲವಂತನಾದ ನೀನು ಬಲಹೀನರನ್ನು ಪೀಡಿಸು

ವದನ್ನು ನಾನು ಸಹಿಸಲಾರೆನು. ಅರ್ಜುನನಿಂದ ಕೂಡಿ ಕೃಷ್ಣನು ದೂರಾದನೆಂದು ನಿರ್ಭಯನಾಗಿ ನಿರಪರಾಧಿಗಳನ್ನು ಪೀಡಿಸುವ ನೀನು ವಧಾರ್ಹನೇ ಸರಿ! ನೀನಾರು? ಏಕೀಕುಕರ್ಮವನ್ನು ಮಾಡುತ್ತಿರುವೆ?"

"ಎಲೌ ವೃಷಭನೇ! ಒಂದೇ ಪಾದದಿಂದ ಚರಿಸುವದೇಕೆ? ವೃಷಭರೂಪದಿಂದ ನಿಂತ ಯಾವ ದೇವನಿರುವೆ ಪೇಳು?" ನಿನ್ನನ್ನು ನೋಡಿ ಎನ್ನ ಮನವು ಮರುಗುತ್ತಿದೆ, ಕೌರವ ಕುಲ ತಿಲಕರ ದೋರ್ದಂಡರಕ್ಷಿತವಾದ ಭೂಮಂಡಲದಲ್ಲಿ ನಿನ್ನ ಹೊರತು ಆಳುವವರ ನಾನೆಂದೂ ನೋಡಿಲ್ಲ. ಅಳಬೇಡ. ವೃಷಲನಿಂದ ಭಯವೀಗ ಪರಿಹರಿಸುವೆನು.

"ಅಮ್ಮಾ ಗೋಮಾತೆ! ನಿನಗೆ ಕ್ಷೇಮವಾಗಲಿ!" ದುಷ್ಟನಾಶಕನಾಗಿ ನಾನಿನ್ನೂ ಪಾಲಿಸು ತ್ತಿರುವೆನು. ನಿನ್ನ ರಕ್ಷಣೆಯು ನನ್ನ ಕರ್ತವ್ಯವೇ ಸೈ ನೋಡು. ಯಾರ ರಾಜ್ಯದಲ್ಲಿ ಅಸಾಧುಗಳಿಂದ ಸಾಧುಗಳಿಗೆ ಪೀಡೆಯುಂಟಾಗುವದೋ ಅಂತಹ ಮದಮತ್ತ ರಾಜರ ಕೀರ್ತಿ, ಸಂಪತ್ತು, ಆಯುಸ್ಸು, ಪುಣ್ಯಲೋಕಗಳೇ ಮೊದಲಾದುದೆಲ್ಲವೂ ನಶಿಸಿ ಹೋಗುವದು. ರಾಜನಿಗೆ ಆರ್ತರ ದುಃಖ ನಿವಾರಣೆಯಂ ಬಿಟ್ಟನ್ಯಧರ್ಮವಾವುದು? ಆದ್ದರಿಂದ ಭೂತದ್ರೋಹಿಯಾದ ಈ ದುರ್ಮಾರ್ಗವನ್ನು ಸಂಹರಿಸುವೆನು.

"ಹೇ ವೃಷಭ! ಯಾರು ನಿನ್ನ ಮೂರು ಪಾದಗಳನ್ನು ಕಡಿದು ಕೆಡಿಸಿದ ಕಟುಕ ಚಂಡಾಲರು? ಹೇಳು. ಕೃಷ್ಣಾನುವರ್ತಿಯಾದ ರಾಜನ ರಾಷ್ಟ್ರದಲ್ಲೂ ನಿಮ್ಮಂತಹ ಸಾಧುಗಳಿಗೆ ಇಂತಹ ಪರಾಭವವೇ? ನಿರಪರಾಧಿಗಳಾದ ನಿಮಗೆ ಕ್ಷೇಮವಾಗಲು ನಾನೇನು ಮಾಡಲಿ! ಪಾರ್ಥರ ಕೀರ್ತಿ ದೂಷಿತವಾಗಬಾರದು. ನಿರಪರಾಧಿಗಳಿಗೆ ನಿರಂಕುಶನಾಗಿ ಪೀಡೆಯನ್ನು ಕೊಡುವವನು ಅಮರನಾದರೂ ಬಿಡದೆ ಸಾಂಗದವಾದ ಅವನ ಭುಜವನನು ಕತ್ತರಿಸಿ ಬಿಡುವೆನು. ಸ್ವಧರ್ಮ ವನ್ನು ಬಿಡದವರ ರಕ್ಷಣೆಯೇ ರಾಜನ ಪರಮಧರ್ಮವು. ಆಪತ್ಕಾಲವಲ್ಲದಿದ್ದರೂ ನಿಷಿದ್ಧವನ್ನಾ ಚರಿಸುವವರನನು ಶಿಕ್ಷಿಸುವದೂ ಧರ್ಮವೇ ಸರಿ."

ಎಂದು ನುಡಿದ ರಾಜನ ವಾಕ್ಯವನ್ನು ಕೇಳಿ ಧರ್ಮನು ಇಂತೆಂದನು: "ಯಾರ ಗುಣಗಣಗಳಿಗೆ ಮೆಚ್ಚಿ ಅಚ್ಯುತನು ದೌತ್ಯಾದಿ ಕೃತ್ಯಗಳನ್ನು ಮಾಡಿದನೋ ಅಂತಹ ಪಾಂಡವರ ವಂಶಜಾತನಾದ ನಿನಗೀ ಮಾತುಗಳು ಶೋಭಕರವಾಗಿವೆ. ಕ್ಲೇಶಕಾರಣರಾರೆಂದೆ. ನಮಗಂತೂ ನಾನಾಶಾಸ್ತ್ರಗಳ ಪರಸ್ಪರ ವಿರುದ್ಧ ವಾಕ್ಯಗಳನ್ನು ಕಂಡು ಇವನೇ ಶೋಕಕಾರಣನೆಂದು ಪೇಳಲು ಬಾರದಂತಾಗಿದೆ. ಸಾಂಖ್ಯರು ಮನವೆಂದರೆ, ಚಾರ್ವಾಕರು ನಾವೇ ನಮ್ಮ ಸುಖದುಃಖ ಕರ್ತೃಗಳೆನ್ನುವರು. ಮೀಮಾಂಸಕರು ಕರ್ಮವೆನ್ನುವರು. ಕೆಲವರು ಜ್ಞಾನಿಗಳು ಶ್ರೀಹರಿಯೇ ಸರ್ವಕಾರಣನೆನ್ನುವರು. ಪ್ರತ್ಯಕ್ಷಾದಿಸಿದ್ಧ ಜಗತ್ಸತ್ಯವನ್ನಪಲಾಪಿಸುವ ಮಿಥ್ಯಾವಾದಿಗಳು ಕಾರಣವು ಅನಿರ್ವಚನೀಯವು ಅನೂಹ್ಯವು ಎಂದು ಪೇಳುವರು. ಆದ್ದರಿಂದ ರಾಜರ್ಷಿಯಾದ ನೀನೇ ಚೆನ್ನಾಗಿ ವಿಚಾರ ಮಾಡು. ಶ್ರುತಿಸ್ಮೃತ್ಯನುಕೂಲವಾಗಿ ನಿಶ್ಚಯ ಮಾಡಿ ನಡೆ" ಎಂಬ ಧರ್ಮನ ಮಾತನ್ನು ಕೇಳಿ ಚೆನ್ನಾಗಿ ನಿಶಿತವಾದ ಬುದ್ಧಿಯಿಂದ ವಿಮರ್ಶಿಸಿ ಆತ್ಮಸ್ವಭಾವ ಕರ್ಮಾದಿ ಶಬ್ದವಾಚ್ಯನಗಿ ತತ್ತಚ್ಛಕ್ತಿ ಪ್ರದನದ ಶ್ರೀಹರಿಯೇ ಸರ್ವಸ್ವತಂತ್ರ ಕಾರಣನೆಂದರಿತು ರಾಜನು ಪ್ರತ್ಯುತ್ತರಿಸಿದನು.

"ನೀನು ವೃಷಭರೂಪದಿಂದಿರುವ ಧರ್ಮನೇ! ತಿಳಿಯಿತು. ನೀನು ಪೇಳಿದುದೂ ಧರ್ಮವೇ ಆಗಿದೆ. ಅಧರ್ಮವನ್ನುಪ ಮಾಡಿದವನ ಪಾಪವು ಸೂಚಕನಿಗೂ ತಾಗುವುದಂತೆ! ನಿಜ. ಆ ಶ್ರೀಹರಿಯು ತನ್ನ ಇಚ್ಛಾನುಸಾರವಾಗಿ ಜೀವರಿಗೆ ಸುಖದುಃಖಪ್ರದನಾಗಿರುವನು. ಅನ್ಯೇಚ್ಛೆ

ಯಿಂದಲ್ಲ. ಅಂದ ಮೇಲೇ ಅವನ ಇಚ್ಛೆಯನ್ನಾರು ತಿಳಿದಾರು? ಅವನು ಅಪ್ರಮೇಯನು, ಸಾಕಲ್ಯೇನ ಅನಿರ್ವಾಚ್ಯನೂ ಅಹುದು. ಇರಲಿ! ನಿನ್ನ ಪಾದಗಳು ತಪಸ್ಸು, ಶೌಚ, ದಯಾಸತ್ಯಗಳಲ್ಲವೇ? ಅಧರ್ಮ ಪಾದಗಳಾದ ಸ್ಮಯ, ಸಂಗ, ಮದಗಳಿಂದ ಮೊದಲಿನ ಮೂರು ಪಾದಗಳ ಮೂರಂಶಗಳು ಕೆಡಲು ಸತ್ಯವೆಂಬೀ ಒಂದೇ ಪಾದಾಂಶದಿಂದ ನಡೆಯುತ್ತಿರುವೆ. ಈ ಪಾದವನ್ನೂ ಕೂಡ ಅಸತ್ಯವೆಂಬ ಅಧರ್ಮ ಪಾದದಿಂದ ಕಡಿಯಬೇಕೇಂದೀ ಕಲಿಯು ಪ್ರವೃತ್ತನಾಗಿರುವನು.

"ಈ ಭೂದೇವಿಯು ಭಗವಂತನೇ ಅವತರಿಸಿ ಭೂಭಾರವನ್ನಿಳಿಸಿ ತನ್ನ ಪದನ್ಯಾಸದಿಂದಲಂಕರಿಸಿದುದರಿಂದ ಸರ್ವತಃ ಸಮಲಂಕೃತಳಾಗಿ ಸಂತಸದಿಂದಿದ್ದಳು. ಈಗಲೂ ಆ ಧರ್ಮರಕ್ಷಕನು ಬಿಟ್ಟು ಪೋಗಲು ಅಬ್ರಹ್ಮಣ್ಯರಾದ ವೃಷಲರು ರಾಜವ್ಯಾಜರಾಗಿ ತನ್ನನ್ನು ಆಳುತ್ತಿರುವರೆಂದು ನೊಂದು ಅಳುತ್ತಿರುವಳು."

ಎಂದು ಧರ್ಮನನ್ನು ಭೂಮಿಯನ್ನು ಸಮಾಧಾನಪಡಿಸಿ ಮಹಾಪರಾಕ್ರಮಿಯಾದ ರಾಜಪುಂಗವನು ಅಧರ್ಮ್ತಹೇತುಭೂತನಾದ ಕಲಿಯನ್ನು ಕೊಲ್ಲಲು ನಿಶಿತಖಡ್ಗವನ್ನೆತ್ತಿ ಬಂದನು. ಅಂತಹ ರಾಜನನ್ನು ಕಂಡು ಕಲಿಯು ಭೀತಿಗೊಂಡು ರಾಜವೇಷವನ್ನೂ ತ್ಯಜಿಸಿ ಪಾದಮೂಲದಲ್ಲಿ ಬಿದ್ದು ಶರಣಾಗತನಾದನು. ದೀನವತ್ಸಲನಾದ ರಾಜನಿಗೆ ಆ ಪಾಪಿಯನ್ನು ಕೊಲ್ಲಲು ಮನವು ಬಾರದೆ ಶರಣಾಗತರಕ್ಷಕನಾದ ಕಾರಣ ಕಿರುನಗೆಯಿಂದ ಅವನನ್ನಪಹಸಿಸಿ ಇಂತೆಂದನು.

"ಎಲೋ ಕಲಿಯೇ! ಅರ್ಜುನಯಶೋಧಾರಿಗಳಿಗೆ ಕೈಮುಗಿದು ಅಂಗಲಾಚುವ ನಿನ್ನಂತಹ ತುಚ್ಛರಿಗೂ ಭಯವಿಲ್ಲ. ಶರಣಾಗತನಾದೆ; ಬದುಕಿದೆ. ಆದರೂ ನೀನು ನನ್ನ ರಾಜ್ಯದಲ್ಲಿ ಯಾವ ಪ್ರಕಾರದಿಂದಲೂ ಇರಲು ಸಾಧ್ಯವಿಲ್ಲ. ದಾಸನಂತಾದರೂ ನನ್ನ ಕ್ಷೇತ್ರದಲ್ಲಿರಲಾಗದು. ನೀನು ಅಧರ್ಮಪ್ರಿಯನು. ನಿನ್ನ ಹಿಂದೆ ಬರುವವರು ನಿನ್ನ ಬಂಧು ಜನರು. ಅನಾರ್ಯ! ನೀನು ಮೊದಲು ರಾಜರಲ್ಲಿ ಪ್ರವೇಶಿಸಿ ಅವರನ್ನು ಅಧರ್ಮಿಷ್ಠರನ್ನು ಮಾಡುವೆ. ಲೋಭ, ಅಸತ್ಯ, ದೌರ್ಜನ್ಯ, ಚೌರ್ಯ, ಪಾಪ, ದಂಭ ಮತ್ತು ಕಾಪಟ್ಯವೆಂಬ ದುರ್ಗುಣ ಸಮೂಹವನ್ನು ಜನರಲ್ಲಿ ಹಬ್ಬಿಸುವ ನೀನು ಸತ್ಯಧರ್ಮಯುತವಾಗಿರಲರ್ಹವಾದ ನನ್ನ ರಾಜ್ಯದಲ್ಲಿರಬೇಡ. ಈ ನನ್ನ ಬ್ರಹ್ಮಾವರ್ತವು ಯಜ್ಞೇಶನಾದ ಹರಿಯ ಯಾಗಗಳಿಂದ ಪವಿತ್ರವಾಗಿದೆ. ಇಚ್ಛಾಮೂರ್ತಿಯಾಗಿ ತನ್ನನ್ನು ಪೂಜಿಸುವವರಿಗೆ ಹರಿಯು ವರದರಾಜನಾಗಿದ್ದಾನೆ. ಅಮೋಘ ಕಾಮಪೂರಕನೂ ಅನಿಷ್ಟನಿವಾರಕನೂ ಆಗಿರುವ ಹರಿಯು ವಾಯುವಿನಂತೆ ವ್ಯಾಪಿಸಿ ರಕ್ಷಿಸುತ್ತಿರುವಲ್ಲಿ ನಿನ್ನ ಕಾಟವೇಕೆ? ಹೊರಡು" ಎಂದು ಆಜ್ಞಾಪಿಸಿದನು.

ಆಗ ಕಲಿಯು ಗಡಗಡನೆ ನಡುಗುತ್ತಾ ಮೇಲೇರಿ ಬರುವ ದಂಡಪಾಣಿ ಯಮನಂತಿರುವ ಉದ್ಯತ ಖಡ್ಗನಾದ ರಾಜನನ್ನು ನೋಡಿ "ಮಹಾರಾಜಾ ನಿನ್ನಾಜ್ಞೆಯಿಂದ ನಾನೆಲ್ಲಿ ವಸಿಸಿದರಲ್ಲೇ ಧನುರ್ಬಾಣಪಾಣಿಯಾದ ನೀನು ಕಾಣುತ್ತಿರುವೆ. ಧನುರ್ಬಾಣ ಸಮರ್ಥನಾದ ನೀನು ಇಲ್ಲಿ ವಸಿಸೆಂದಾಜ್ಞಾಪಿಸಿ ಸ್ಥಾನಗಳನ್ನು ಕೊಡದಿರೆ ಕಲಿಯುಗವನ್ನೆಂತು ನಡೆಸುವೆನು" ಎಂದು ಕೇಳಿಕೊಂಡನು.

ಆಗ ಪರೀಕ್ಷಿದ್ರಾಜನು ಕಲಿಪುರುಷನಿಗೆ ದ್ಯೂತ, ಪಾನ, ದುಷ್ಟಸ್ತ್ರೀಯರು, ಸೂನಾ ಎಂಬ ನಾಲ್ಕು ಸ್ಥಾನಗಳನ್ನು ಕೊಟ್ಟನು. ಆ ಸ್ಥಳಗಳಲ್ಲಿ ಕ್ರಮವಾಗಿ ಅನೃತ, ಮದ, ಸಂಗ, ಸ್ಮಯವೆಂಬ ಅಧರ್ಮಗಳನ್ನು ಪಸರಿಸಿ ನೀನಿರೆಂದು ಅಪ್ಪಣೆ ಕೊಲು ಅತೃಪ್ತನಾಗಿ ಕಲಿಯು ಪುನಃ ಇನ್ನೊಂದನ್ನು ಕೊಡೆಂದನು. ಆಗ ರಾಜನು ಜಾತರೂಪವನ್ನೇ ಕೊಟ್ಟುಬಿಟ್ಟನು. ಅದರಿಂದ

ಸರ್ವಪಾಪಗಳು ಪ್ರವೃತ್ತವಾಗುವುದೆಂದು ನಂಬಿ ಕಲಿಯು ಆ ಸ್ಥಾನಗಳಲ್ಲಿ ವಸಿಸಿ ಅಧರ್ಮ ವ್ಯಾಪಾರವನ್ನು ನಡೆಸಲು ಉಪಕ್ರಮಿಸಿದನು.

ಆದ್ದರಿಂದಲೇ ಪುರುಷಾರ್ಥಕಾಮರು ಈ ಸ್ಥಾನವಿಶೇಷಗಳಲ್ಲಿ ಆಸ್ಥೆಯನ್ನು ವಹಿಸದೆ ಜಾಗ್ರತರಾಗಿರುವರು. ಇನ್ನು ಧರ್ಮಶೀಲನು ಲೋಕದ ಜನರಿಗೆ ಧರ್ಮಶಿಕ್ಷಕನು ಎನಿಸಿದ ರಾಜನು ಈ ದುಷ್ಟವಿಷಯಂಗಳನ್ನು ಸೇವಿಸಬಾರದೆಂದು ಹೇಳಬೇಕೆ? ಈ ರೀತಿಯಾಗಿ ಕಲಿಯನ್ನು ನಿಗ್ರಹಿಸಿ ವೃಷಭರೂಪೀ ಧರ್ಮನ ಶೌಚತಪಸ್ಸತ್ಯದಯಾರೂಪ ಪಾದಚತುಷ್ಟಯವನ್ನು ಪೂರ್ಣವಾಗಿ ಜೋಡಿಸಿ ಧರ್ಮವನ್ನು ನಾಲ್ಕು ಪಾದಗಳಿಂದ ನಡೆಸಿದನು. ಭೂದೇವಿಯನ್ನೂ ಅಮೃತವಾಣಿಯಿಂದ ಸಂತೈಸಿದನು. ಅಂತಹ ಪರೀಕ್ಷಿತನು ಹಸ್ತಿನಾವತಿಯಲ್ಲಿ ಪಿತೃಪೈತಾಮಹವಾದ ರಾಜ್ಯವನ್ನು ಚೆನ್ನಾಗಿ ಆಳುತ್ತಿದ್ದನು. ಆ ಪುಣ್ಯಕೀರ್ತಿಯಾದ ಚಕ್ರವರ್ತಿಯು ಕೌರವೇಂದ್ರ ಸಂಪದ್ವಿರಾಜಮಾನನಾಗಿದ್ದನ್ನು ನಾ ನೋಡಿದ್ದೆನು. ಮಹಾನುಭಾವನಾದ ಅಭಿಮನ್ಯು ಸುತನ ಜನನಕಾಲದಲ್ಲೇ ತಾವೆಲ್ಲರೂ ಈ ಸತ್ರಯಾಗವನ್ನು ದೀಕ್ಷೆ ವಹಿಸಿ ನಡೆಸಲುಪಕ್ರಮಿಸಿದಿರಿ. ಆ ಭಾಗವತೋತ್ತಮನ ಮರಣಾನಂತರವೇ ನಾನಿಲ್ಲಿಗೆ ಬಂದು ಈ ಯಾಗದಲ್ಲಿ ಭಾಗವಹಿಸುವೆನು. ಎಂದು ಸೂತನು ನಿರೂಪಿಸಿದನು.

## ೧೮. ಶಮೀಕಸುತ ಶಾಪವು

ಸೂತನು ಹೇಳಿದನು.

ಶೌನಕಾ! ಅದ್ಭುಕರ್ಮನಾದ ಕೃಷ್ಣನ ಅನುಗ್ರಹದಿಂದ ತಾಯಿಯ ಗರ್ಭದಲ್ಲಿ ಅರ್ಭಕನಾದ ಪರೀಕ್ಷಿತನು ಬ್ರಹ್ಮಾಸ್ತ್ರದಿಂದ ಹೊಡೆಯಲ್ಪಟ್ಟರೂ ಮೃತನಾಗಲಿಲ್ಲ. ಆದರೆ ಬ್ರಹ್ಮಶಾಪ ಪ್ರೇರಿತನಾದ ತಕ್ಷಕನಿಂದ ಪ್ರಾಣವಿಯೋಗವನ್ನು ಪೊಂದಿದನು! ಭಗವಂತನಲ್ಲಿ ಸಮರ್ಪಿತವಾದ ಚಿತ್ತವೃತ್ತಿಯಿಂದ ಸಾವಿಗಂಜದೆ, ಸರ್ವಸಂಗವನ್ನು ತ್ಯಜಿಸಿ, ಶಿವಾವತಾರನಾದ ಶುಕನ ಪಾದವನ್ನು ಭಜಿಸಿ ಜ್ಞಾನವಿಜ್ಞಾನಗಳನ್ನು ಪೊಂದಿದನು. ಗಂಗಾತೀರದ ಪ್ರಾಸಾದದಲ್ಲಿ ರಾಜನ ಮೃತಿಯನ್ನು ನೋಡಿದಾಗ 'ಉತ್ತಮ ಶ್ಲೋಕನಾದ ಹರಿಯ ಪಾದಾರವಿಂದ ಭಜಕರಿಗೆ ಅವನ ಕಥಾಮೃತ ಪಾನರತರಿಗೆ ಮರಣ ಕಾಲದಲ್ಲೂ ಸಂಭ್ರಮವಾಗುವುದಿಲ್ಲ'ವೆಂಬುದು ನಿಜವಾಯಿತು. ಅಭಿಮನ್ಯುಸುತನ ಮಹಿಮೆಯನ್ನೇನ ಪೇಳಲಿ! ಆ ಚಕ್ರವರ್ತಿಯು ಆಳಿದ ಕಾಲದಲ್ಲಿ ಕಲಿಯುಗವಾಗಿದ್ದೂ ಕಲಿಯ ಆಟವು ನಡೆಯಲಿಲ್ಲ. ಅಧರ್ಮವು ಹೆಚ್ಚಲಿಲ್ಲ! ಅಧರ್ಮಪ್ರಭವನಾದ ಕಲಿಯು ಶ್ರೀಕೃಷ್ಣ ಪ್ರಭುವಿನ ನಿರ್ಯಾಣಾನಂತರವೇ ತನ್ನ ಯುಗವನ್ನಾರಂಭಿಸಿದ್ದನಾದರೂ ಪರೀಕ್ಷಿನ್ನಿರ್ಯಾಣಾನಂತರವೇ ಅವನ ಅಧರ್ಮ ಪರಾಕ್ರಮವು ಹೆಚ್ಚಾಯಿತು. 'ಪುಣ್ಯಕಾರ್ಯಗಳು ಸಂಕಲ್ಪಮಾತ್ರದಿಂದ ಫಲವಂತವಾಗುವವು, ಪಾಪಗಳು ಮಾಡಿದರೇನೇ ಫಲವೀವವೆ'ಂಬ ಕಲಿಕಾಲದ ಮರ್ಮವನ್ನರಿತ ರಾಜನು ಸಾರವನ್ನು ಗ್ರಹಿಸಿ ಆಸಾರವನ್ನು ಬಿಡುವ ಭೃಂಗದಂತೆ ಕಲಿಯನ್ನು ಸಂಹರಿಸಲಿಲ್ಲ. 'ಈ ಕಲಿಯು ಇಂದ್ರಿಯಾರಾಮರನ್ನು ಶೂರನಾಗಿ ಆಕ್ರಮಿಸಿ ಅವರನ್ನಾಡಿಸುವನು. ಶೂರರಾದ ಭಕ್ತರನ್ನು ಕಂಡು ಹೆದರುವನು. ಮಲಗಿಬಿಟ್ಟವರನ್ನೆಚ್ಚರವಿದ್ದು ಕೆಡಿಸುವನು. ಎಚ್ಚರದಿಂದಿದ್ದವರನ್ನು ಕಾಡೆನೆಂದು ದೂರ ಸರಿಯುವನು' ಎಂದರಿತು. ಪರೀಕ್ಷಿದ್ರಾಜನು ಅವನನ್ನು ಕೊಲ್ಲದೆ ಬೇಡಿದ ಸ್ಥಾನಂಗಳನ್ನು ಕೊಟ್ಟು ಕಳುಹಿಸಿದನು. ಇಂತಹ

ವಾಸುದೇವ ಕಥಾರಂಜಿತವಾದ ಪಾರೀಕ್ಷಿದಾಖ್ಯಾನವನ್ನು ನಿಮ್ಮ ಪ್ರಶ್ನಾನುಸಾರವಾಗಿ ನಾನು ಯಥಾಮತಿ ವರ್ಣಿಸಿರುವೆನು. ಕಥನೀಯ ಪುಣ್ಯ ಕರ್ಮನಾದ ಹರಿಯ ಗುಣಗಳನ್ನೂ ಅವನ ಪವಿತ್ರ ಚರಿತ್ರೆಗಳನ್ನೂ ಪುರುಷಾರ್ಥಕಾಮರು ಅವಶ್ಯವಾಗಿ ಕೇಳಬೇಕಲ್ಲವೇ?" ಎನ್ನಲಾಗಿ ಋಷಿಗಳು ಪುನಃ ಕೇಳಿದರು.

ಸುಮಾಪುತ್ರ! ಸೂತ! ಚಿರಕಾಲ ಬಾಳು. ಮರ್ತ್ಯರಾದೆಮಗೆ ಅಮೃತವನ್ನುಣಿಸುತ್ತಿರುವ ನಿನ್ನ ಕೀರ್ತಿಯು ಬೆಳಗಲಿ! 'ಕರ್ಮಣಾ ಜ್ಞಾನಮಾತನೋತಿ' ಎನ್ನುವ ವೇದ ವಚನವೆಮ್ಮಲ್ಲಿ ಸಾರ್ಥಕವಾಗಿದೆ ನೋಡು. ಹೋಮಶೇಷವನ್ನುಂಡು ಹೋಮಧೂಮ ಪವಿತ್ರ ದೇಹರಾಗಿ ಯಜ್ಞಕರ್ಮಗಳನ್ನು ಮಾಡುತ್ತಾ ಬಿಡುವಿಲ್ಲದಾಗ ನೀನು ಬಂದು ಗೋವಿಂದಪಾದಾರವಿಂದ ಮಧುಪಾನವನ್ನು ಮಾಡುವ ಬಿಡುವೆಮಗೆ ದೊರಕಿಸಿದೆ. ನಮ್ಮ ಸತ್ರಯಾಗವಿಂದು ಸಫಲ ವಾಯಿತು. ನಮಗೆ ಸ್ವರ್ಗವೂ ಬೇಡ ಮೋಕ್ಷವೂ ಬೇಡ. ಅಲ್ಲಿರುವ ಆನಂದವು ಅನಂತ ಗುಣಿತವಾಗಿ ಸಿಗುವ ನಿನ್ನಂತಹ ಭಗವದ್ಭಕ್ತರ ಸಂಗವು ಎಮಗಾಗಲಿ. ಇನ್ನಾವ ಐಶ್ವರ್ಯಾದಿ ಗಳಿಂದೇನು ಪ್ರಯೋಜನವು? ಮುಕ್ತಾಮುಕ್ತ ಬ್ರಹ್ಮಪ್ರಮುಖ ಮುಖ್ಯಾಶ್ರಯನಾದ ನಾರಾ ಯಣನ ಮಂಗಳ ಕಥೆಯನ್ನು ಕೇಳುತ್ತಲಿರುವ ಸಾರಾಸಾರವಿವೇಕವಂತನಾದ ಭಕ್ತನಿಗೆ ಅದು ಸಾಕೆನಿಸುವದೇ? ಅದಕ್ಕೆ ಕೊನೆಯೆಂಬುದೊಂದುಂಟೇ? ಸರ್ವೇಶನ ಗುಣಗಳನ್ನು ಎಣಿಸಿ ಮುಗಿಸಲು ಸ್ವಯಂಭೂ-ಶಂಭುಪ್ರಭೃತಿ ಸುರರಿಗಳವಲ್ಲವೆನ್ನುವಾಗ ಅಸ್ಮದಾದಿ ಪಾಮರರ ಪಾಡೇನು? ಆದ್ದರಿಂದ ಭಗವದ್ಭಕ್ತಶ್ರೇಷ್ಠನಾದ ನೀನು ಆದರದಿಂದ ಕೇಳಲು ಕುಳಿತಿರುವ ನಮಗೆ ಆ ಬ್ರಹ್ಮಾದಿ ವೃಂದಾರಕ ವಂದಿತನ ಸುಂದರೋದಾರ ಚರಿತೆಯನ್ನು ವಿಸ್ತಾರವಾಗಿ ಪೇಳು. ಅದರಿಂದ ನಮ್ಮ ಚಿತ್ತಶುದ್ಧಿಯು ಪುಣ್ಯವೃದ್ಧಿಯು ಆಗುವುದು. ಲೋಕೋತ್ತರ ಜ್ಞಾನೋಪಾಯಭೂತ ಭಕ್ತಿಯನ್ನು ಪುಟ್ಟಿಸುವ ಆ ರಮಾಕಾಂತನ ಚರಿತ್ರೆಯನ್ನೂ ತದಭಿರಾಮ ವಾದ ಪರೀಕ್ಷಿಚ್ಚರಿತೆಯನ್ನೂ ಪುನಃ ಹೇಳು. ಆ ಮಹಾಬುದ್ಧಿಶಾಲಿಯಾದ ರಾಜನು ಶುಕಮುಖ ದಿಂದ ಭಾಗವತವನ್ನು ಕೇಳಿ ಗುರಡಧ್ವಜನ ಪಾದಮೂಲವನ್ನೈದಿದನು. ಅಂತಹ ಭಕ್ತನ ಕಥೆಯನ್ನು ಕೇಳಲಿಚ್ಛಿಸುವೆವು ಎಂದರು.

ಆಗ ಸೂತನಿಂತೆಂದನು – ಓಹೋ! ಏನು ಭಾಗ್ಯವಿದು! ವಿಲೋಮ ಜಾತ್ಯುದ್ಭವನೆಂಬ ಮನಶ್ಚಿಂತೆಯನ್ನು ಹರಿಸಿಬಿಡುವದಲ್ಲವೇ ನಿಮ್ಮಂತಹ ಮಹನೀಯರಿಗೆ ಹರಿಚರಿತೆಯಂ ಪೇಳುವ ಈ ಯೋಗ! ನನ್ನ ಜನ್ಮವೇ ಸಫಲವಾಯಿತು! ಬ್ರಹ್ಮಾದಿವಂದ್ಯನಲ್ಲವೇ ಆ ಗೋವಿಂದ! ಮುಕ್ತಾಮುಕ್ತನಿಯಾಮಕನಲ್ಲವೇ ಆ ನೃಹರಿ! 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದೊರಲುವ ವೇದವವನ ಅಪ್ರಮೇಯ ಮಹಿಮೆಯನ್ನು ಬಣ್ಣಿಸುತ್ತಾ ಗುಣಗಳ ಕೊನೆಯನ್ನು ಕಾಣದೆ ಉಪರಮಿಸಿದೆ! ಅಂತಹ ಹರಿಯೇ ಸರ್ವಕರ್ತನು, ಸರ್ವೋತ್ತಮನು, ಸರ್ವನಿಯಾಮ ಕನು! ಶೌನಕಾ! ಒಂದೇ ಕಾರಣದಿಂದ ಅವನೇ ಸಮಾನಾಧಿಕರಹಿತನು, ಸರ್ವೋತ್ತಮನೆನ್ನ ಬಹುದಾಗಿದೆ. ಸಾಕ್ಷಾಲ್ಲಕ್ಷ್ಮಿಯು ತನ್ನ ಕಟಾಕ್ಷ ಮಾತ್ರವನ್ನು ಬಯಸಿ ಬೇಡುವ ಅನ್ಯರನ್ನವಗಣಿಸಿ ಅವನ ಪಾದಾರವಿಂದರಜೋ ಧಾರಿಣಿಯಾಗಲು ಸ್ವರತನೆಂದರಿತೂ ಅವನನ್ನೇ ವರಿಸಿದಳೆಂಬು ದೊಂದೇ ಸಾಕು. ಮತ್ತಿನ್ನೇನು? ಅವನ ಪಾದಾರವಿಂದದಿಂದ ಹರಿದು ಬಂದ ಮಂದಾಕಿನಿಯನ್ನು ನಿಜ ಕಮಂಡಲುವಿನಲ್ಲಿ ಪಿಡಿದು ಶ್ರೀಹರಿಯ ಪಾದವನ್ನು ತೊಳೆಗು ಆ ಪಾದೋದಕವನ್ನು ತಾನು ಧರಿಸಿದ್ದಲ್ಲದೇ ಬ್ರಹ್ಮನು ತನ್ನ ಮಗನಾದ ಶಿವನೇ ಮುಂತಾದ ಜಗಜ್ಜನರ ಶಿರದಿ

ಪ್ರೋಕ್ಷಿಸಿ, ಅವರನ್ನು ಪವಿತ್ರೀಕರಿಸಿದನೆನ್ನುವದೂ ಮುಕುಂದನೇ ಭಗವಂತನೆಂದು ಸಾರುವುದಲ್ಲವೇ? ಅವನ ಭಕ್ತರು ಅನುರಕ್ತಿಯಿಂದ ಭಜಿಸಿ, ದೇಹಾದಿ ದುರಭಿಮಾನಗಳನ್ನು ಬಿಟ್ಟು, ಪರಮಹಂಸ ಪ್ರಾಪ್ಯನಾದ ಆ ಪರಬ್ರಹ್ಮನ ಅಹಿಂಸಾದಿ ಧರ್ಮಸುಂದರವಾದ ವೈಕುಂಠಾದಿ ಲೋಕವನ್ನು ಪೊಂದುವರು. ಇಂತಹ ಮುಕ್ತಪ್ರದನು ಅವನಲ್ಲದೆ ಇನ್ನಾರು? ಆ ಗುಣಗಣ ವಿರಾಜಿತನ ಕಥೆಯನ್ನು ಪೇಳೆಂದು ಮಹಾತ್ಮರಾದ ನೀವು ಕೇಳುತ್ತಿರುವಿರಿ. ನಾನೂ ಅತ್ಯಂತ ಪಾಮರನಾದರೂ ನನ್ನ ಜ್ಞಾನವನ್ನನುಸರಿಸು ಗುರ್ವನುಗ್ರಹದಿಂದ ವರ್ಣಿಸಿ ಪೇಳುವೆನು. ವಿವಿಧ ಪಕ್ಷಿಗಳು ತಂತಮ್ಮ ಶಕ್ತ್ಯನುಸಾರವಾಗಿಯೇ ಅನಂತಾಕಾಶದಲ್ಲಿ ಹಾರುವಂತೆ ವಿಷ್ಣುಭಕ್ತರಾದ ಜ್ಞಾನಿಗಳು ಯಥಾಶಕ್ತಿಯೇ ಅವನನ್ನು ತಿಳಿದು ಪೇಳುವರಲ್ಲವೇ! ಕೇಳು.

ಒಂದು ಸಲ ಆ ಪರಿಕ್ಷಿದ್ರಾಜನು ಧನುಷ್ಪಾಣಿಯಾಗಿ ಬೇಟೆಯಾಡುತ್ತಾ ವನವನ್ನು ಪೊಕ್ಕು ಬೇಟೆಯಾಡಿ ಶ್ರಾಂತನಾದನು. ಹಸಿವೆ ನೀರಡಿಕೆಗಳವನನ್ನು ಕಾಡಿದವು. ಕಾಡಿನಲ್ಲಿ ಜಲಾಶಯವನ್ನೊಂದನ್ನೂ ಕಾಣದೆ ಒಂದಾಶ್ರಮವನ್ನು ಕಂಡು ಅದನ್ನು ಪೊಕ್ಕನು. ನಿಮೀಲಿತಲೋಚನನಾಗಿದ್ದ ಮುನಿಯನ್ನು ಕಂಡನು. ಇಂದ್ರಿಯಗಳನ್ನು ನಿಗ್ರಹಿಸಿ ಪ್ರಾಣ ಮನೋಬುದ್ಧಿಗಳ ವ್ಯಾಪಾರವನ್ನಂತರ್ಮುಖವನ್ನಾಗಿಸಿ, ಜಾಗ್ರದಾದ್ಯವಸ್ಥಾತ್ರಯವನ್ನು ದಾಟಿ, ವಿಕಾರಗಳಿಲ್ಲದೆ, ನಿವಾತಸ್ಥದೀಪದಂತೆ ನಿಶ್ಚೇಷ್ಟನಾಗಿ, ಪರಬ್ರಹ್ಮನನ್ನು ತುರೀಯಾವಸ್ಥೆಯಲ್ಲಿ ಮುಟ್ಟಿ ಸುಖಿಪ ಶಮೀಕನೆಂಬಾಮಹನೀಯನನ್ನು ಜಲಾರ್ಥಿಯಾಗಿ ಪ್ರಾರ್ಥಿಸಿದನು. ಜಟೆಗಳಿಂದಲೂ ರೌರವಕೃಷ್ಣಾಜಿನದಿಂದಲೂ ಆವೃತನಾದಾ ಮುನಿಯು ಮಾತಾಡಲಿಲ್ಲ. ರಾಜನಿಗೆ ಗಂಟಲು ಒಣಗಿತ್ತು. 'ಕೂಡಲಾಸನವನ್ನು ಕೊಡಲಿಲ್ಲ. ಕುಡಿಯಲು ನೀರನ್ನೀಯಲಿಲ್ಲ. ಒಳ್ಳೆಯ ಮಾತನ್ನಾದರೂ ಆಡಬಾರದೆ' ಎಂದು ನೊಂದ ರಾಜನು ತನಗೆ ಅವಮಾನವಾಯಿತೆಂದು ಬಗೆದನು. ಕ್ಷುತ್ಪಿಪಾಸಾಪೀಡಿತನಾದ ಅವನಿಗೆ ಎಂದಿಲ್ಲದ ಕೋಪವು ಬಂತು. ಆ ಬ್ರಾಹ್ಮಣನು ನನಗೆ ಅವಿಧೇಯನಾದನೆಂಬುವ ಮತ್ಸರವೂ ಮೂಡಿತು. ಆಗ ಅಲ್ಲಿದ್ದ ಒಂದು ಮೃತ ಸರ್ಪವನ್ನು ಧನುಷ್ಕೋಟಿಯಿಂದೆತ್ತಿ ಆ ಬ್ರಹ್ಮರ್ಷಿಯ ಕಂಠದಲ್ಲಿ ಹಾರದಂತೆ ಹಾಕಿ, ಸ್ವಪುರವನ್ನು ಕುರಿತು ಹೊರಟನು. 'ಏನೀ ಋಷಿಯ ಕಾಪಟ್ಯ! ಎಷ್ಟು ದಂಭ. ಇವನು ಕಣ್ಣುಗಳನ್ನು ಮುಚ್ಚಿ, ಸುಳ್ಳು ಸಮಾಧಿಯಲ್ಲಿದ್ದಂತೆ ತೋರುತ್ತಿದೆ! ನಮ್ಮಂತಹ ರಾಜರಿಂದೇನಾಗಬೇಕೆಂಬ ದುರಹಂಕಾರವೇ ಸರಿ' ಎಂದು ಊಹಿಸುತ್ತಾ ಪುರಮಾರ್ಗವನ್ನು ಪಿಡಿದನು. ಶಮೀಕನಂತೂ ಒಂದನ್ನೂ ಕಾಣದೇ ಅಸಂಪ್ರಜ್ಞಾತಸಮಾಧಿಯಲ್ಲಿದ್ದುದರಿಂದ ನಿರ್ವಿಕಾರನಾಗಿದ್ದನು.

ಅವನ ಮಗನಾದ ಶೃಂಗಿಯು ಬಾಲಕನಾದರೂ ಅತ್ಯಂತ ತೇಜಸ್ವಿಯಾಗಿದ್ದನು. ತನ್ನ ಸ್ನೇಹಿತರಿಂದ ಕೂಡಿ ಆಡುತ್ತಿರವಾಗ, ಆರೋ ಪೇಳಲಾಗಿ ಅರಸನು ತನ್ನ ತಂದೆಗೆ ಮಾಡಿದ ಅಪರಾಧವನ್ನು ತಿಳಿದು ಕಂಪಿತನಾಗಿಂತೆಂದನು. "ಅಹೋ! ಏನನ್ಯಾಯವು! ಭೂಪರು ಕಾಗೆಗಳಂತೆ ನಾಯಿಗಳಂತೆ ಅನ್ನವನ್ನಿಟ್ಟ ಪ್ರಭುವಿನ ಕಣ್ಣನ್ನು ಕುಕ್ಕಿ ಕಾಲನ್ನು ಕಚ್ಚುವ ಕಾಲವು ಬಂತೇ? ದುರ್ಮಾರ್ಗರನ್ನು ಶಾಸಿಸುವ ಕೃಷ್ಣ ಪ್ರಭುವಿಲ್ಲವೆಂದೇನು ಈ ಕೊಬ್ಬು? ಆಗಲಿ ಅಂತಹ ಧರ್ಮಭಂಜಕರನ್ನು ನಾನೇ ಶಿಕ್ಷಿಸುವೆನು. ನೋಡಿ! ನನ್ನ ಸಾಮರ್ಥ್ಯವನ್ನು!" ಎಂದು ತನ್ನ ಸಮವಯಸ್ಕ ಋಷಿಬಾಲಕರು ನೋಡುತ್ತಿರಲು ಕುಶಪಾಣಿಯಾಗಿ ಸಿಟ್ಟಿನಿಂದ ಕರ್ಣಾಚಮನವನ್ನು ಮಾಡಿ, ವಾಗ್ವಜ್ರವನ್ನು ಪ್ರಯೋಗಿಸಿದನು. ಏನು ಪೇಳಲಿ! ಶೌನಕಾ! "ಇಂದಿನಿಂದ

ಏಳನೆಯ ದಿನ ಕಳೆಯದೆ ಸಕಲ ಧರ್ಮಸೇತುವನ್ನು ಮುರಿದು ಎನ್ನ ತಂದೆಗೆ ಅಪರಾಧವನ್ನು ಮಾಡಿದ ರಾಜಾಧಮನು ತಕ್ಷಕನಿಂದ ಕಡಿಯಲ್ಪಟ್ಟು ಸಾಯಲಿ!" ಎಂದು ಶಾಪವನ್ನೇ ಕೊಟ್ಟನು.

ಅಲ್ಲಿಂದ ಶೃಂಗಿಯು ಆಶ್ರಮಕ್ಕೆ ಬಂದು, ತಂದೆಯ ಕಂಠದಲ್ಲಿದ್ದ ಸರ್ಪಕಲೇವರವನ್ನು ಕಂಡು, ದುಃಖಾರ್ತನಾಗಿ ಗಟ್ಟಿಯಾಗಿ ರೋದನವನ್ನು ಮಾಡಿದನು. ಎಷ್ಟಾದರೂ ಬಾಲಕನಲ್ಲವೇ? ರೋದನದಿಂದ ಸಮಾಧಿ ಕೆಡಲು ಎಚ್ಚೆತ್ತ ಶಮೀಕನು ಮೆಲ್ಲನೆ ಕಣ್ಣರಳಿಸಿ ಹಾರದಂತಿದ್ದ ಸರ್ಪವನ್ನು ಕಿತ್ತೊಗೆದು, ಪುತ್ರಾ! ಏಕೆ ಅಳುವೆ? ಏನಾಯಿತೆಂದು ಕೇಳಿದನು. ಶೃಂಗಿಯು ಪೇಳಲಾಗಿ ಶಾಪವೃತ್ತಾಂತವನ್ನು ತಿಳಿದು ಬಂದ ರಾಜನು ಸಾಮಾನ್ಯನಲ್ಲದೆ ಪರೀಕ್ಷಿದ್ರಾಜನೆಂದೂ ಮನಗಂಡು, ಮಗನನ್ನಿಂತು ನಿಂದಿಸಿದನು. "ಮೂಢ! ತಿಳಿಯದೇ ನೀನು ಮಾಡಿದ ಪಾಪವು ಬಹು ದೊಡ್ಡದಾಗಿದೆ. ಅಲ್ಪಾಪರಾಧಕ್ಕಿಂತಹ ದೊಡ್ಡ ಶಿಕ್ಷೆಯೇ? ಮನುಜರು ಮಾನವೇಶನಿಗೆ ಯಾವ ದ್ರೋಹವನ್ನೂ ಬಗೆಯಲಾಗದು. ಅಪಕ್ವಬುದ್ಧಿಯಾದ ನೀನು ರಾಜನನ್ನು ಶಪಿಸಿದೆ. ರಾಜತೇಜದಿಂದ ರಕ್ಷಿತರಾಗಿ ಪ್ರಜರು ನಿರ್ಭಯರಾಗಿ ನಿದ್ರಿಪರು. ಅಯ್ಯೋ! ಎಷ್ಟನರ್ಥವಂ ಮಾಡಿದೆ ನೋಡು. ರಾಜನೆಂಬ ನಾಮಸಾಮರ್ಥ್ಯಗಳಿಂದ ರಥಾಂಗಪಾಣಿಯು ರಾಜರಲ್ಲಿದ್ದು ರಕ್ಷಿಸದಿರೆ ಸೇನಾಪತಿರಹಿತ ಸೈನ್ಯದಂತೆ ಒಂದೇ ಕ್ಷಣದಲ್ಲಿ ಈ ಲೋಕವೆಲ್ಲಾ ಹಾಳಾದೀತು! ರಾಜನಿಲ್ಲದ ರಾಷ್ಟ್ರವನ್ನು ದುಷ್ಟರು ದೋಚುವರು. ಪರಸ್ಪರವಾಗಿ ಜನರು ಕಾದಿ, ಬೈದು, ಕೊಂದುಕೊಳ್ಳುವರು. ಪಶು-ಧನಗಳನ್ನೂ ತರುಣಿಯರನ್ನೂ ಕಳ್ಳಕಾಕರು ಅಪಹರಿಸುವರು. ಇದರಿಂದ ಆರ್ಯಧರ್ಮವೇ ಕೆಟ್ಟು ಪೋಗುವದು. ವರ್ಣಾಶ್ರಮಧರ್ಮಗಳ ನಾಶದಿಂದ ವೇದಮಾರ್ಗಪರಿಭ್ರಷ್ಟರಾದ ಜನರು ಅರ್ಥಕಾಮಮಾತ್ರಲಂಪಟರಾಗುವರು. ನಾಯಿಗಳಂತೆ ಮಂಗಗಳಂತೆ ಹೀನೋತ್ತಮ ಜಾತಿವಿಚಕ್ಷಣತಾರಹಿತರಾಗಿ ವರ್ಣಸಂಕರವನ್ನುಂಟುಮಾಡುವರು. ರಾಜನೆಂದರೆ ಶಾಪಾನರ್ಹನಿರುವನು. ಬಂದವನು ಬಹುಕೀರ್ತಿಯಾದ ಚಕ್ರವರ್ತಿಯು. ನಿಜವಾದ ದೊಡ್ಡ ಭಗವದ್ಭಕ್ತನು. ಅಶ್ವಮೇಧಯಾಜಿಯಾದ ಪರಿಕ್ಷಿದ್ರಾಜನು ಹಸಿವೆ, ನೀರಡಿಕೆಗಳಿಂದ ಬಂದು ಬೇಡಿದರೆ ಶಾಪವನ್ನು ಕೊಟ್ಟು ಕಳುಹಿಸಬಹುದೇ? ಖಂಡಿತವಾಗಿ ನಮಗೆ ಇಂದು ಮಹಾಪಾಪವೇ ಘಟಿಸಿತು. ಸ್ವಾಮೀ! ಸರ್ವಾಂತರ್ಯಾಮೀ! ನಾರಾಯಣಾ! ಈ ನನ್ನ ಬಾಲಕನು ನಿನ್ನ ಭಕ್ತನಿಗೆ ಮಾಡಿದ ಅವಿವೇಕಪೂರ್ವಕವಾದ ದ್ರೋಹವನ್ನು ಕ್ಷಮಿಸು! ಪರೀಕ್ಷಿದ್ರಾಜನಾದರೂ ಸಮರ್ಥನೇ ಸರಿ. ಆದರೂ ನಾವು ಮಾಡಿದ ದ್ರೋಹಕ್ಕೆ ತಕ್ಕ ಪ್ರತೀಕಾರವನ್ನು ಮಾಡಲಿಲ್ಲ. ನಾರಾಯಣ ಭಕ್ತರು ತಮ್ಮನ್ನು ತಿರಸ್ಕರಿಸಿದವರನ್ನಾಗಲಿ ವಂಚಿಸಿದವರನ್ನಾಗಲಿ ಬೈದವರನ್ನಾಗಲಿ ಕೊನೆಗೆ ಬಡಿದವರನ್ನಾಗಲಿ ತಿರಸ್ಕಾರಾದಿಗಳಿಂದ ಪ್ರತೀಕಾರ ಮಾಡಿ ಕೆಡಿಸುವುದಿಲ್ಲ. ಇದು ಅವರ ಸ್ವಭಾವವು" ಎಂದು ಪೇಳಿ ಆ ಮಹಾಮುನಿಯು ಸುತಾಪರಾಧವನ್ನು ನೆನೆದು ನೊಂದು ತನಗೆ ರಾಜನು ಮಾಡಿದ ತಪ್ಪನ್ನೇ ಮರೆತುಬಿಟ್ಟನು. ಸಾಧುಗಳು ಪ್ರಾಯಃ ಸುಖದುಃಖ ಪೊಂದಿಪ ಪರರನ್ನು ಕಂಡು ಹಿಗ್ಗುವುದಿಲ್ಲ – ಕುಗ್ಗುವುದೂ ಇಲ್ಲ. ಏಕೆಂದರೆ ಸುಖದುಃಖಗಳಿಗೆ ಕಾರಣನು ಜೀವನು ತಾನೇ ಆಗಿ ಪ್ರಾಕ್ತನ ಕರ್ಮಾನುಸಾರವಾಗಿ ಹರೀಚ್ಛೆಯಿಂದ ಅವುಗಳನ್ನು ಪೊಂದುವನು' ಎಂಬ ಜ್ಞಾನದಿಂದ (ಸಾಧುಗಳು) ನಿಶ್ಚಿಂತರಾಗಿರುವರು.

## ೧೯. ರಾಜ ವಿರಾಗವು

ಬಾಲ್ಯದಿಂದಲೂ ಜಾತಕಕೋವಿದ ವಿಪ್ರರು ಪೇಳಿದುದನ್ನು ಕೇಳಿ ಮೃತ್ಯುಪರೀಕ್ಷಣವನ್ನು ಮಾಡುತ್ತ ಪರೀಕ್ಷಿತನೆಂದು ಜನರಿಂದ ಕರೆಯಲ್ಪಡುತ್ತಿದ್ದ ರಾಜನು ವಾಸ್ತವವಾಗಿ ಗರ್ಭದಲ್ಲಿ ಶ್ರೀವಿಷ್ಣುವಿನಿಂದ ಪರಿತಃ ಈಕ್ಷಿತನಾದ್ದರಿಂದ ಪರೀಕ್ಷಿತನೆಂತಲೂ ವಿಷ್ಣುರಾತನೆಂತಲೂ ಖ್ಯಾತನಾಗಿದ್ದನು. ಜಂಬೂದ್ವೀಪಾಧಿಪತಿಯು ಪರಮಭಾಗವತನಾದ ಪರೀಕ್ಷಿದ್ರಾಜನಿಗೆ ದೈವದಿಂದ ಪ್ರಾರಬ್ಧಕರ್ಮಾನುರೂಪವಾಗಿ ವಿಪ್ರವಿಪ್ರಕೃತಿನಿಮಿತ್ತಕ ಶಾಪ ಬಂದೊದಗಿತು. ಈಶ್ವರೇಚ್ಛೆಯು ಬಲೀಯವಲ್ಲವೇ? ರಾಜನು ಹಸ್ತಿನಾಪುರವನ್ನು ಸೇರಪೋಗುತ್ತಾ ಮಾರ್ಗ ಮಧ್ಯದಲ್ಲೇ ಪಶ್ಚಾತ್ತಾಪದಿಂದ ಇಂತು ಚಿಂತಿಸಿದನು.

"ಅಹೋ! ಎಂತಹ ಕೆಟ್ಟ ಕಾರ್ಯವೆನ್ನಿಂದಾಯಿತು! ನಿರಪರಾಧಿಯು ಗೂಢತೇಜನಾದ ಬ್ರಾಹ್ಮಣನಲ್ಲಿ ಅನಾರ್ಯನಂತೆ ವರ್ತಿಸಿದೆ. ಈ ಅತ್ಯುತ್ಕಟ ಪಾಪದ ಫಲವೆನಗೆ ಬೇಗ ಸಿಗಲಿ! ಮತ್ತೆ ಮತ್ತನಾಗಿ ಸರ್ವದೇವತಾಧಿಷ್ಠಾನವಾದ ಬ್ರಾಹ್ಮಣರಲ್ಲಿ ಹೀಗೆ ವರ್ತಿಸದಂತೆ ನನ್ನ ಪಾಪವು ತೊಳೆದುಹೋಗುವಂತೆ ಶೀಘ್ರವಾಗಿ, ಇಂದೇ ನನ್ನ ರಾಜ್ಯವು ಸಮೃದ್ಧಕೋಶ ಮೊದಲಾದ ಅಭಿಮತ ಪದಾರ್ಥಗಳು ಪ್ರಕೋಪಿತರಾದ ಆ ಬ್ರಾಹ್ಮಣರ ಕೋಪಾಗ್ನಿಯಲ್ಲಿ ಬೆಂದು ಬೂದಿಯಾಗಬಾರದೇ! ನನಗೆ ದ್ವಿಜದೇವತಾದಿಗಳಿಗೆ ಅಪರಾಧವೆಸಗುವ ಅಜ್ಞಾನವನ್ನು ಅಮಂಗಲಬುದ್ಧಿಯನ್ನೇಕೆ ಕೊಟ್ಟೆ? ಹರೆ!" ಎಂದು ಪಶ್ಚಾತ್ತಾಪವನ್ನು ಪಡುತ್ತಾ ನಗರವನ್ನು ಸೇರಿದನು. ಆಗ ಶಮೀಕನು ಕಳಿಸಿಕೊಟ್ಟ ಗೌರಮುಖನೆಂಬ ಅವನ ಶಿಷ್ಯನು ಬಂದು ಶಾಪವೃತ್ತಾಂತವನ್ನು ತಿಳಿಸಿ ಪೋದನು. ತಕ್ಷಕನಿಂದ ಸಪ್ತಮ ದಿನದಲ್ಲಿ ತನ್ನ ದೇಹತ್ಯಾಗ ವಾಗುವದೆಂದು ತಿಳಿದು ರಾಜನು ಬಹಳ ಒಳ್ಳೆಯದೇ ಆಯಿತೆಂದು ಸಮಾಧಾನ ಪಟ್ಟನು. ರಾಜ್ಯದಲ್ಲಿ ಅತೀವ ಪ್ರಸಕ್ತನಾದ ನನಗೆ ಈ ಶಾಪವು ವಿರಕ್ತಿಯನ್ನು ಕೊಟ್ಟು ಎಚ್ಚರಿಸಿತೆಂದು ಬಗೆದು ಆಲಸ್ಯವನ್ನು ಮಾಡದೇ ರಾಜ್ಯಾದಿಗಳನ್ನು ಬಿಟ್ಟು ಪೊರಮಟ್ಟನು. ಬಾಲ್ಯದಿಂದ ವೈರಾಗ್ಯಭಕ್ತಿಭರಿತನಾಗಿದುದ್ದರಿಂದ ಈ ಲೋಕದಂತೆ ಸ್ವರ್ಗವೂ ಅನಿತ್ಯವು ಹೇಯವು ಎಂದು ತಿಳಿದು ಅವುಗಳನ್ನು ಬಯಸದೆ, ದುಃಖಾಮಿಶ್ರ ಸುಖಪ್ರದವಾದ ಕೃಷ್ಣಚರಣಾರವಿಂದ ಸೇವೆಯೇ ಶ್ರೇಯವೆಂದು ನಿಶ್ಚಯಿಸಿ, ದೇವನದೀ ತೀರದಲ್ಲಿ ಪ್ರಾಸಾದವನ್ನು ಸೇರಿ ಪ್ರಾಯೋಪವೇಶವನ್ನು ಕೈಕೊಂಡನು.

ಬ್ರಹ್ಮಾದಿ ಭಕ್ತರು ಸಮರ್ಪಿಸಿದ ಲಸತ್ತುಲಸೀದಲಪರಾಗಮಿಶ್ರಿತ ಕೃಷ್ಣಚರಣಾರವಿಂದ ರೇಣು ಮರಂದಮಿಳಿಂದಳಾದ ಮಂದಾಕಿನಿಯು 'ಇಹಪರಲೋಕಸಾಧಕಳಾಗಿ ಒಳ-ಹೊರ ಪಾಪಗಳನ್ನು ಕಳೆಯುವೆನು. ನನ್ನ ತಂದೆಯ ಪಾದಗಳನ್ನು ಸೇರಿಸುವೆ'ನೆಂದು ತರಂಗಗಳಿಂದ ಮಂಗಳಘೋಷ ಮಾಡುತ್ತ ಹರಿಯುತ್ತಿರುವಾಗ ಯಾವ ಮುಮೂರ್ಷುದಶಾಪನ್ನನಾದ ರಸಿಕನು ಆ ದೇವನದಿಯನ್ನು ಸೇವಿಸದೇ ಇರುವನು? ಶೌನಕಾದಿಗಳಿರಾ! ಅನಂತಚರಣಾಂಭೋಜ ಪ್ರಸೂತಳಾದ ಭಾಗೀರಥಿಯು ಭವಚ್ಛೇದ ಮಾಡುವುದೇನು ಆಶ್ಚರ್ಯವು?

ಇಂತು ವ್ಯವಸ್ಥೆಯನ್ನು ಮಾಡಿ ಆ ಪಾಂಡವೇಯನು ಗಂಗಾತೀರದಲ್ಲಿ ಪ್ರಾಯೋಪವಿಷ್ಟ ನಾಗಿ ಗಂಗಾಜನಕನ ಪಾದಾರವಿಂದವನ್ನೂ ಮನದಲ್ಲಿಟ್ಟು, ಇತರ ವಿಷಯಗಳನ್ನು ಬಿಟ್ಟು, ಮೌನವನ್ನು ತೊಟ್ಟು, ದುಸ್ಸಂಗವನ್ನು ದೂರ ಮಾಡಿ, ಕೂತನು. ಕಬ್ಬಿಗೆ ಜೇನಿಟ್ಟಂತೆ

ಮಹಾನುಭಾವರಾದ ಋಷಿಗಳಲ್ಲಿಗೆ ವಿಜಯಂಗೈದರು. ತೀರ್ಥಯಾತ್ರೆಯನ್ನು ಮಾಡುವೆವೆಂದು ಹೇಳುತ್ತಾ, ತಾವು ಸ್ನಾನ ಪಾನಾದಿಗಳನ್ನು ಮಾಡುವದರಿಂದ ತೀರ್ಥಗಳನ್ನೇ ಪವಿತ್ರೀಕರಿಸುವ ಸಜ್ಜನಾಗ್ರಣಿಗಳು ಸಶಿಷ್ಯರಾಗಿ ಬಂದರು. ಅತ್ರಿ, ವಶಿಷ್ಠ, ಚ್ಯವನ, ಕೃಪನ ತಂದೆ ಶರದ್ವಾನ್, ಅರಿಷ್ಟನೇಮಿ, ಭೃಗು, ಅಂಗಿರಸ, ಪರಾಶರ, ವಿಶ್ವಾಮಿತ್ರ, ಭಗವಾನ್ ಪರಶುರಾಮ, ಉತಥ್ಯ, ಇಂದ್ರಪ್ರಮತಿ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷಿಷೇಣ, ಭಾರದ್ವಾಜ, ಗೌತಮ, ಅಗಸ್ತ್ಯ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಭಗವಾನ್ ವೇದವ್ಯಾಸ, ನಾರದ ಮುಂತಾದ ದೇವರ್ಷಿ ಬ್ರಹ್ಮರ್ಷಿ ರಾಜರ್ಷಿವರ್ಯರು, ಅರುಣಾದಿ ಋಷಿಗಳು ಬರಲು ರಾಜನು ಶಿರಸಾ ನಮಿಸಿ ಅವರನ್ನೆಲ್ಲಾ ಯಥಾರ್ಹವಾಗಿ ಪೂಜಿಸಿದನು. ಆಸನಗಳಲ್ಲಿ ಸುಖೋಪವಿಷ್ಟರಾದ ಮುನಿವರರಿಗೆ ಪುನಃ ವಂದಿಸಿ ತನ್ನ ಕರ್ತವ್ಯವನ್ನು ಕುರಿತು ಕೇಳಬೇಕೆಂಬ ವಿವೇಕದಿಂದ ಮುಂದೆ ನಿಂತು ಪೂಜಾ ಪದಾರ್ಥಗಳನ್ನು ಕೈಲಿ ಹಿಡಿದು ಪೂಜಿಸಿ ವಿನಯದಿಂದ ಕೇಳಿಕೊಂಡನು.

"ಆಹಾ! ಎಂತಹ ಧನ್ಯನಾದೆ! ಮಹಜ್ಜನರ ಅನುಗ್ರಹಕ್ಕೆ ಪಾತ್ರನಾದೆ. ತಮ್ಮಂತಹ ಬ್ರಾಹ್ಮಣರ ಪಾದೋದಕವನ್ನು ಧರಿಸಿ ರಾಜಕುಲವೇ ಪಾಪದಿಂದ ಪಾವಿತವಾಗುವದು. ನಾನಂತೂ ನಿಂದ್ಯಕರ್ಮವನ್ನು ಮಾಡಿದೆ. ಪಾಪಿಯಾದೆ. ಗೃಹಕೃತ್ಯಗಳಲ್ಲಿ ಸದಾರತನಾದೆ. ಇಂತಹ ನನಗೆ ಬ್ರಾಹ್ಮಣ ಶಾಪವು ವೈರಾಗ್ಯ ಕಾರಣವಾಯಿತು. ಅದರಿಂದಲೇ ಹರಿಯಲ್ಲಿ ಮುಕ್ತಾಮುಕ್ತ ನಿಯಾಮಕನಲ್ಲಿ ಎನಗೆ ಆಸಕ್ತಿ ಹುಟ್ಟಿತು. ಇನ್ನು ಹರಿಚರಣವೆನಗೆ ಅಭಯವಂ ಕೊಡುವದು. ಇದಕ್ಕೆ ಸಂಶಯವಿಲ್ಲ. ಹೇ ಬ್ರಾಹ್ಮಣೋತ್ತಮರೇ! ನಿಮ್ಮ ಸನ್ನಿಧಾನವೆನಗಿರಲು, ಪಾವನ ಗಂಗೆಯೇ ಹತ್ತಿರ ಹರಿಯುತ್ತಿರಲು, ನನ್ನ ಚಿತ್ತವು ಶ್ರೀಶಾಸಕ್ತವಾಗೇ ಆಗುವದು. ಇಂತಹ ನನ್ನನ್ನು ತಕ್ಷಕ ಕಚ್ಚಲಿ! ನನಗಿನ್ನೇನು ಭಯವು? ಬ್ರಾಹ್ಮಣವಾಕ್ಯವು ಸತ್ಯವಾಗಲಿ! ನನ್ನ ದೇಹಪಾತ ಪರ್ಯಂತವು ಪುನಃ ಪುನಃ ಹರಿಗಾಥೆಯನ್ನು ಹಾಡಿ ಕೇಳಿ ಧನ್ಯನಾಗುವೆನು. ನನಗೆ ಯಾವ ಜನ್ಮದಲ್ಲಾಗಲಿ ಪುಟ್ಟ ಬೇಕಿದ್ದರೆ ಪುಟ್ಟುವೆನು. ಆಗ ಇದನ್ನು ಮಾತ್ರ ಕೊಡಿಸಿ ರೆಂಗು ನಿಮ್ಮನ್ನು ಬೇಡುವೆನು. ಬ್ರಾಹ್ಮಣರಿಗೆ ವಂದಿಸುವುದಿರಲಿ! ಸಕಲ ಸಜ್ಜನರಲ್ಲಿ ಎನಗೆ ಮೈತ್ರಿ ಸಿಗಲಿ! ಭಗವದ್ಭಕ್ತರ ಸಂಘವು ದೊರೆಯಲಿ! ಭಗವಂತನಾದ ಅನಂತದಲ್ಲಿ ನಿರೂಢ ಭಕ್ತಿಯು ಬೆಳೆಯಲಿ!" ಎಂದು ನಿಶ್ಚಯ ಮಾಡಿ ಗಂಗಾನದಿಯ ದಕ್ಷಿಣದ ದಡದಲ್ಲಿ ನೀರಿನಲ್ಲಿದ್ದ ಪ್ರಾಸಾದದಲ್ಲಿ ಉದಙ್ಮುಖನಾಗಿ ಪ್ರಾಯೋಪವೇಶವನ್ನು ಮಾಡಿದನು. ಸುತನಾದ ಜನಮೇಜಯ ನಿಗೆ ರಾಜ್ಯವನ್ನು ಒಪ್ಪಿಸಿಬಿಟ್ಟಿದ್ದನು. ಆ ಧೀರನು ರಾಜವೇಷವೆಲ್ಲವನ್ನು ತ್ಯಜಿಯಿ ಕೇಯೂರ ಕಟಕಹಾರಾದಿ ಭೂಷಣರಾಜಿಯನ್ನು ವರ್ಜಿಸಿ ವಿಮಲ ರತ್ನದುಂಗುರಗಳನ್ನು ಬಿಟ್ಟು ದರ್ಭ ಪವಿತ್ರವನ್ನು ತೊಟ್ಟು ಮುನಿವೇಷದಿಂದ ಕಂಗೊಳಿಸಿದನು. ಆಗ ದೇವತೆಗಳವನನ್ನು ಕೊಂಡಾಡಿ ಪೂಮಳೆಗರೆದರು. ಸಂತಸದಿಂದ ದೇವದುಂದುಭಿಗಳು ಮೊಳಗಿದವು.

ಬಂದ ಮಹರ್ಷಿಗಳು 'ಸಾಧು' ಎಂದು ರಾಜನನ್ನು ಪ್ರಶಂಸಿಸಿದರು. ಅವನ ಸುಕಾರ್ಯ ವನ್ನನುಮೋದಿಸಿದರು. ಉತ್ತಮ ಶ್ಲೋಕನಾದ ಹರಿಯ ಕಲ್ಯಾಣಗುಣ ಪ್ರಕಟನವನ್ನು ಮಾಡುತ್ತ ಮಾತನಾಡಿದರು. ಪ್ರಜಾನುಗ್ರಹ ತತ್ಪರರಲ್ಲವೇ ಸಾಧುಪುಂಗವರು?

"ರಾಜರ್ಷಿವರ್ಯ! ಕೃಷ್ಣಭಕ್ತರಾದ ನಿಮ್ಮಂತಹವರಲ್ಲಿ ವೈರಾಗ್ಯವು ಭಕ್ತಿಯು ಆಶ್ಚರ್ಯ ವಲ್ಲ. ನೋಡು ಮಂಡಲಾಧೀಶರಿಂದ ವಂದಿತನಾದ ನೀನು ಸಿಂಹಾಸನವನ್ನು ಕೃಷ್ಣಪಾದ ಭಜನೆಯಲ್ಲಿ ಆಸಕ್ತಿಯಿಂದ, ತೃಣದಂತೆ ಬಿಟ್ಟು ಬಂದಿರುವೆ, ಆದ್ದರಿಂದ ಇನ್ನೇಳು ದಿನವೂ

ನಾವಿಲ್ಲೇ ಇರುವೆವು" ಎಂದು ಪೇಳಿ ಆ ಭಾಗವತ ಶ್ರೇಷ್ಠನನ್ನು ಕುರಿತು ಇಂತು ಪ್ರಶಂಸಿಸಿದರು. "ಈ ಹರಿಭಕ್ತನಾದ ರಾಜನು ನಿಷ್ಪಾಪನು, ವಿಶೋಕನು, ಜನ್ಮಾದಿದೋಷರಹಿತ ನಾಪ ನಾರಾಯಣ ಪಾದಕಮಲ ಸನ್ನಿಧಿಯನ್ನು ಸೇರಿ ಮುಕ್ತನಾಗುವನು ನಿಜ" ಎಂದು ಮಾತಾಡಿದ ಮಹರ್ಷಿಗಣ ವಚನವನ್ನು ಕೇಳಿ ರಾಜನು ಸಂತೋಷಪಟ್ಟನು. ಯೋಗ್ಯವೂ, ಅಮೃತ ಸ್ರಾವಿಯೂ, ವಿಪ್ರಶಾಪಪ್ರೇರಿತ ತಕ್ಷಕ ದಂಶನ ರೂಪ ದುರ್ಮರಣದೋಷ ಪರಿಹಾರಿಯೂ ಆದ ವಚನಶ್ರವಣದಿಂದ ಆನಂದಿಸಿ, ವಂದಿಸಿ, ವಿಷ್ಣುಕಥಾಶ್ರವಣಾಭಿಲಾಷೆಯಿಂದ ಕೂಡಿ ಅವರನ್ನು ಪ್ರಶ್ನಿಸಿದನು.

"ಸತ್ಯಲೋಕದಲ್ಲಿ ಮೂರ್ತಿಮಂತರಾಗಿರುವ ದೇವತೆಗಳಂತೆ ರಾಜಿಸುವ ಋಷಿಗಳಿರಾ! ನಿಮಗೆ ಸುಸ್ವಾಗತವು! ಈ ಲೋಕದ ಧನಾದಿಗಳನ್ನು ವೈರಾಗ್ಯಶಾಲಿಗಳಾದ ನೀವು ಬಯಸಿ ಬರುವರಲ್ಲ – ಇನ್ನು ಭಕ್ತರಾದ್ದರಿಂದ ಸ್ವರ್ಗಾದಿ ಸುಖಗಳು ನಿಮಗೆ ಬೇಡವೆನಿಸಿವೆ. ಅಂದ ಮೇಲೆ ಕೇವಲ ಪರಾನುಗ್ರಹವೇ ನೀವಿಲ್ಲಿ ಬರಲು ಕಾರಣವಾಗಿದೆ. ನಿಮ್ಮನ್ನು ನಂಬಿರುವೆನು. ನನ್ನ ಕರ್ತವ್ಯವೇನು? ಎಂತು? ಎಂದು ನಿಮ್ಮನ್ನು ಕೇಳಿಕೊಳ್ಳುವೆನು. ಸರ್ವಾತ್ಮನಾ ಮರಣೋನ್ಮುಖನಾಗಿರುವ ನಾನು ಮೋಕ್ಷಫಲವಾಗುವಂತೆ ಮಾಡುವ ಕೃತ್ಯಗಳಾವುವು? ಆಲೋಚಿಸಿ ಅವುಗಳಲ್ಲಿ ಉತ್ತಮವಾದುದನ್ನು ನನಗೆ ಪೇಳಿ" ಎಂದು ಕೇಳಿದನು.

## ೨೦. ಶುಕಾಗಮನವು

ಆ ಸಮಯದಲ್ಲಿ ಜ್ಞಾನ-ವೈರಾಗ್ಯಭರಿತನಾದ ಶುಕನ ಆಗಮನವಾಸಭೆಯಲ್ಲಾಯಿತು ಯದೃಚ್ಛೆಯಿಂದ ಬಾಹ್ಯವಿಷಯಾಪೇಕ್ಷೆಯು ಇಲ್ಲದೆ ಶುಕಾಚಾರ್ಯನು ಹರೀಚ್ಛಾನುಸಾರನಾಗಿ ಅಲ್ಲಿಗೆ ಬಂದನು. ಅನಿಪಾಯಿನಿಯಾದ ಲಕ್ಷ್ಮೀಕಟಾಕ್ಷಪಾತ್ರನಾದರೂ ವಾಯುಪಾನಕುಶಲನಾಗಿ, ಶ್ರೀಹರಿಯ ಸ್ಮರಣೆಯಿಂದ ಸಂತುಷ್ಟನಾಗಿದ್ದನು. ಇಂತಹ ಆಶ್ರಮವೆಂದು ತಿಳಿಯಲಾಗದ ಅವಧೂತಚರ್ಯೆಯನ್ನವಲಂಬಿಸಿ, ಬಿಂಬಮೂರ್ತಿಯನ್ನು ನೋಡಿ ಸುಖಿಸುತ್ತಾ ಬರುವ ಶುಕನನ್ನು ಹುಚ್ಚನೆಂದು ತಿಳಿದು ಬಾಲಕರು ಸ್ತ್ರೀಯರು ಹಿಂಬಾಲಿಸಿ ಬರುತ್ತಿದ್ದರು.

ಸದಾ ಹದಿನಾರು ವರ್ಷದ ಪ್ರಾಯವಿದ್ದಂತೆ ತೋರುವ ಅವನ ಶರೀರವು ಅತಿ ಸುಂದರವೂ, ಧ್ಯಾನಯೋಗ್ಯವೂ ಆಗಿತ್ತು. ಕೈಕಾಲು, ಭುಜ, ಕಪೋಲ, ಮೊದಲಾದುವು ಅತಿ ಕೋಮಲವಾಗಿದ್ದವು. ಕೆಂಪಾದ ಕೊನೆಗಳಿಂದ ಮನೋಹರವಾದ ನೇತ್ರಗಳೇನು! ಉನ್ನತವಾದ ನಾಸಿಕೆ ಏನು? ಸಮಾನವಾದ ಕರ್ಣಗಳು, ಶುಭ್ರವಾದ ಮುಖ, ಶಂಖದಂತೆ ತ್ರಿರೇಖಾಂಚಿತ ಕಂಠ, ಪೂರಿತಜತ್ರುಭಾಗ, ಎತ್ತರವಾದ ವಕ್ಷಸ್ಥಲ, ಸುಳಿಯಂತಿರುವ ಗಂಭೀರನಾಭಿ, ಬಾಳೆಯ ಸುಳಿಯಂದದಿ ಬಳುಕುವ ಹೊಟ್ಟೆ, ಮೊದಲಾದ ಅಂಗ-ಪ್ರತ್ಯಂಗಗಳಲ್ಲಿ ಸೌಷ್ಠವ, ಲಾವಣ್ಯ ಉಕ್ಕಿಬರುತ್ತಿದ್ದುವು. ಅವನು ದಿಗಂಬರನಾಗಿದ್ದನು. ಕುಟಿಲ ಕೇಶಗಳವನ ಮುಖದ ಮೇಲೆ ಬಿದ್ದು ಹಾರಾಡುತ್ತಿದ್ದುವು. ದೀರ್ಘವಾದ ಆಜಾನುಬಾಹು-ಲಂಬಿಬಾಹುದಂಡಗಳಿಂದ ದೇವೋತ್ತಮನಂತೆ ಶೋಭಿಸುತ್ತಿದ್ದನು. ಕೈಶೋರವನ್ನು ದಾಟಿ ಯೌವನವನ್ನು ಪ್ರವೇಶಿಸಿದ ಶ್ರೀಶುಕನ ಅಂಗಸೌಂದರ್ಯ ಮಂದಹಾಸಗಳು ಸ್ತ್ರೀಯರಿಗೂ ಮನೋಜ್ಞವಾಗಿದ್ದವು.

ಇಂತಹ ಶುಕನು ಸಭೆಯನ್ನು ಪೊಕ್ಕಾಕ್ಷಣವೇ, ವೇದವ್ಯಾಸ ಪರಶುರಾಮರನ್ನು ಬಿಟ್ಟು ಅನ್ಯರೆಲ್ಲ ಎದ್ದುನಿಂತರು. ಗೂಢತೇಜಸ್ಕನಾದರೂ ಶುಕನ ಲಕ್ಷಣವನ್ನರಿತವರು ಅವನನ್ನು ಗುರುತಿಸಿ ಸಮ್ಮಾನಗೈದರು.

ಆ ವಿಷ್ಣುರಾತನು ಅತಿಥಿಯಾದ ಬ್ರಹ್ಮರಾತನಿಗೆ, ಸತ್ಕರಿಸಲು ಪೂಜಾದ್ರವ್ಯಗಳನನು ಶಿರಸಾ ವಹಿಸಿ ತಂದನು. ಅದನ್ನು ಕಂಡು ಸ್ತ್ರೀಯರು ಬಾಲಕರು ಹೊರಟುಹೋದರು. ಶುಕನು ಪೂಜಾಸ್ವೀಕಾರವನ್ನು ಮಾಡಿ ಮಹಾಸನದಿ ಕುಳಿತನು. ಆ ರಾಜರ್ಷಿ ಬ್ರಹ್ಮರ್ಷಿ ದೇವರ್ಷಿ ಸಂಘಮಧ್ಯದಲ್ಲಿ ಶ್ರೀ ಶುಕನು ಗ್ರಹ ತಾರಾನಕ್ಷತ್ರಯುತನಾದ ಚಂದ್ರನಂತೆ ಶೋಭಿಸಿದನು. ಅವನನ್ನು ಸಮೀಪಿಸಿ ವಿನಯದಿಂದ ವಂದಿಸಿ ನಿಂತು ಮಹಾರಾಜನು ಕೈಜೋಡಿಸಿ ಮಧುರ ವಾಗಿಂತು ನುಡಿದನು.

"ಜ್ಞಾನಿಶ್ರೇಷ್ಠನೇ! ನಾನಿಂದು ಧನ್ಯನಾದೆ. ಕೇವಲ ಕೃಪೆಯಿಂದ ನನ್ನಲ್ಲಿಗೆ ಅತಿಥಿಯಾಗಿ ಬಂದು ಉದ್ಧರಿಸಿದೆ. ಪವಿತ್ರನಾದೆ. ಯಾರ ಸ್ಮರಣೆಯೇ ಸಾಕು ಮನೆಯ ಜನರು ಪವಿತ್ರರಾಗಲು, ಅಂತಹವರ ದರ್ಶನ, ಸ್ಪರ್ಶನ, ಆಸನ, ಪಾದ ಜಲಪ್ರೋಕ್ಷಣಾದಿಗಳು ಸಿಕ್ಕಮೇಲೆ ಏನು ಪೇಳಲಿ! ಅಹೋ! ತಮ್ಮ ಸನ್ನಿಧಾನದಲ್ಲಿ ಮನುಜರಿಗೆ ಮಹಾಪಾಪಗಳು ಕೂಡ ವಿಷ್ಣುವಿನನ್ನೆದು ರಿಸಿದ ಸುರವೈರಿಗಳಂತೆ, ನಾಶವಾಗುತ್ತಿವೆ. ಪಾಂಡುಸುತ ಪ್ರಿಯನಾದ ಶ್ರೀಕೃಷ್ಣನು ನನ್ನಲ್ಲಿ ಪ್ರೀತನಾಗಿರುವನು. ಇದಕ್ಕೆ ಸಂಶಯವಿಲ್ಲ. ಸೋದರತ್ತೆಯಾದ ಕುಂತಿಯ ಮಕ್ಕಳ ಕಡೆ ನೋಡಿ ನನಗಿಂದು ಅವರ ಕುಲಜನೆಂದೇನೋ ಆಪ್ತನಾದ, ಬಂಧುವಾದ! ಇಲ್ಲದಿದ್ದರೆ ಸ್ವಾಮಿ! ನಿನ್ನಂತಹ ಪೂಜ್ಯನಾದ ಬ್ರಹ್ಮಜ್ಞಾನಿಯ ದರ್ಶನವೆಂತಾಗಬೇಕು? ನೀನು ಬರುವುದನ್ನಾರೂ ಅರಿಯರು. ಯೋಗಿಶ್ರೇಷ್ಠನಾದ ನೀನು ಬಂದಾಗಲೇ ಕೇಳಿಕೊಳ್ಳುತ್ತಿರುವೆನು. ಗುರುವರ! ಮರಣೋನ್ಮುಖನಾದ ಪುರುಷನ ಕರ್ತವ್ಯವೇನು? ಏನನ್ನು ಕೇಳಬೇಕು? ಯಾವುದನ್ನು ಜಪಿಸುವುದು ಲೇಸು? ಕರ್ತವ್ಯವಾವುದು? ಸ್ಮರಣೀಯನಾರು? ಯಾರನ್ನು ಭಜಿಸುವದೊಳಿತು? ನಾನಿಂತು ಕೇಳಿರುವೆನು. ನೀನು ಭಿಕ್ಷೆಗೆಂದು ಗೃಹಮೇಧಿಗಳ ಮನೆಗೆ ಬಂದರೂ ತಲೆಬಾಗಿ ನಿಂತು ಒಂದೇ ಗೋದೋಹ ಮಾತ್ರಕಾಲವಿದ್ದು ಪೊರಟುಪೋಗುವಿಯಂತೆ! ಅಂತಹ ನಿನ್ನ ಪಾದಧೂಳಿಯಿಂದ ಆ ಮನೆಯೇ ಪಾವನವಾಗುವುದೆಂಬುದೇನಾಶ್ಚರ್ಯವು?"

ಎಂದು ಕೇಳಲು ಅವನ ಮಧುರ ಭಾಷಣವನ್ನು ಕೇಳಿ ಪೂಜ್ಯನು ಧರ್ಮಕೋವಿದನಾದ ಶುಕಾಚಾರ್ಯನು ಆನಂದದಿಂದ ಅಮೃತದಂತೆ ಮಧುರವಾದ ಮಾತಿನಿಂದ ಪ್ರತ್ಯುತ್ತರವನ್ನು ಕೊಡಲುದ್ಯುಕ್ತನಾದನು.

ಪ್ರಥಮಸ್ಕಂಧವು ಪೂರ್ಣವಾಯಿತು.

ಶ್ರೀಕೃಷ್ಣಾರ್ಪಣಮಸ್ತು

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ದ್ವಿತೀಯ ಸ್ಕಂಧವು

|| ಹರಿಃ ಓಂ ||

### ೧. ಶುಕಪ್ರತಿವಚನವು ಧಾರಣಾನಿರೂಪಣವು

ಶ್ರೀ ಶುಕನು ರಾಜನನ್ನು ನೋಡಿ ಇಂತೆಂದನು :

ರಾಜನ್! ಎಂತಹ ಉತ್ತಮ ಪ್ರಶ್ನೆಯನ್ನು ಕೇಳಿದೆ? ಇದು ಸರ್ವ ಸುಜನರಿಗೆ ಹಿತಕರವಾಗಿದೆ. ಶ್ರೋತವ್ಯವಾವುದು? ಕರ್ತವ್ಯವೇನು? ಎಂದೆ! ಬ್ರಹ್ಮಾದಿಗಳಿಂದಲೂ ಈ ನಿನ್ನ ಪ್ರಶ್ನೆಯು ಸಂಭಾವಿಸಲರ್ಹವಾಗಿದೆ. ಈ ಲೋಕದಲ್ಲಿ ಶ್ರೋತವ್ಯ ವಿಷಯಗಳು ಸಾವಿರಗಟ್ಟಲೆಯಾಗಿವೆ, ಪರಾಪರತತ್ತ್ವವನ್ನರಿಯದ ಸಂಸಾರರತರಾದವರಿಗೆ! ಕಾಮ್ಯಕರ್ಮಗಳನ್ನು ಮಾಡುತ್ತಾ ಕರ್ಮಫಲವನ್ನುಣ್ಣಲು ಜನಿಸಿ ಸಾಯುವ ನರರಿಗೆ ಅವರ ಆಯಸ್ಸೆಲ್ಲಾ ವ್ಯರ್ಥವೇ ಸರಿ! ನೋಡು! ನಿದ್ರೆಯಿಂದ ರಾತ್ರಿಯು, ಸಂಭೋಗಾದಿಗಳಲ್ಲಿ ಯೌವನವು, ಅರ್ಥ ಸಂಪಾದನೆಯಲ್ಲಿ ಹಗಲು ಇಂತು ಕುಟುಂಬ ಪೋಷಣೆಗಾಗಿ ಆಯಸ್ಸೆಲ್ಲವೂ ವ್ಯರ್ಥವಾಗುವುದು. ಜ್ಞಾನಿ ಎಂದೆನಿಸಿದವನೂ ದೇಹ, ಮಕ್ಕಳು, ಹೆಂಡತಿ ಮೊದಲಾದುವು ತನ್ನನ್ನು ದೀನನನ್ನಾಗಿ ಬೇಡಿಸುತ್ತಿರಲು ಬಿಡದೆ ಅಮಂಗಳಕರವಾದ ಆ ವಿಷಯಗಳಲ್ಲೇ ಮಗ್ನನಾಗಿ ತನ್ನ ತಂದೆ ತಾತಂದಿರಂತೆ ತಾನೂ ಸಾಯುವೆನೆಂಬ ಅನುಸಂಧಾನವನ್ನು ಪೊಂದುವುದೇ ಇಲ್ಲ. ಇದನ್ನರಿತು ಭಾರತ! ಪ್ರಭುವಾದ, ಆದಾನಾದಿ ಕರ್ತನಾದ ಪಾಪಹರ್ತನಾದ ಲಕ್ಷ್ಮೀಭರ್ತನ ವಿಷಯವನ್ನು ಕೇಳು. ಹರಿಕೀರ್ತಿಯನ್ನು ಗಾನ ಮಾಡು. ಅವನ ಮಂಗಳರೂಪ ಕಲ್ಯಾಣಗುಣಗಳನ್ನು ಧ್ಯಾನ ಮಾಡು. ಹೀಗೆಯೇ ಮಾಡಿ ಬುದ್ಧಿವಂತರಪರೋಕ್ಷ ಜ್ಞಾನವನ್ನು ಪೊಂದಿರುವರು. ಸತ್ತತ್ತ್ವಜ್ಞಾದಿಂದಲೂ ಭಗವತ್ಪೂಜೆಯಿಂದಲೂ ಕೂಡಿ ಸ್ವಧರ್ಮನಿಷ್ಠನಾದವನಿಗೆ ಮರಣಕಾಲದಲ್ಲಿ ನಾರಾಯಣ ಸ್ಮರಣೆಯು ಬರುವುದದೇ ಅವನ ಜನ್ಮಸಾಫಲ್ಯ ಕಾರಣವಾಗಿರುವುದು. ಮುಕ್ತಜನರು ಕೂಡ ವಿಧಿನಿಷೇಧ ನಿವೃತ್ತರಾಗಿದ್ದೂ ಹರಿಗುಣಗಳನ್ನು ಸ್ಮರಿಸುತ್ತಾ ಅವನ ಕಥೆಯಂ ಕೇಳುವರು ; ಪೇಳುವರು. ಅಂದಮೇಲೆ ಇತರರು ಸದಾ ಶ್ರವಣಮಾಡುವುದವಶ್ಯವೆಂದು ಹೇಳಬೇಕೇ? ಆದ್ದರಿಂದಲೇ ನಾನು ವೇದಸಮಾನಾರ್ಥ ಪ್ರತಿಪಾದಕವಾದ ಭಾಗವತಪುರಾಣವನ್ನು ಕಿಲುತ ಬುದ್ಧಿಯಲ್ಲಿಟ್ಟುಕೊಂಡೆ. ಸರ್ವಜ್ಞರೂ ಅನಾಗತಜ್ಞಾನಿಗಳೂ ಆದ ನಮ್ಮ ತಂದೆ ವೇದವ್ಯಾಸರದನ್ನು ಕೃಷ್ಣಾವತಾರವಾಗುವ ಮೊದಲೇ ರಚಿಸಿ ನನಗುಪದೇಶಿಸಿದರು. ರುದ್ರನಾದ ನಾನು ನಿಶ್ಚಿತ ಮುಕ್ತನಾದರೂ ಉತ್ತಮಶ್ಲೋಕನ ಲೀಲೆಗಳಿಂದ ಆಕರ್ಷಿತನಾಗಿ ಅದನ್ನಧ್ಯಯನ ಮಾಡಿದೆನು. ನೀನಾದರೂ ಭಗವದ್ಭಕ್ತನಾದ್ದರಿಂದ ನಿನಗದನ್ನು ಪೇಳುವೆನು. ಶ್ರದ್ಧೆಯಿಂದ

ಭಾಗವತವನ್ನು ಕೇಳುವವರಿಗೆ ಮುಕುಂದಚರಣಾರವಿಂದದಲ್ಲಿ ದೃಢಭಕ್ತಿ ಪುಟ್ಟುವದು. ಸಾಂಸಾರಿಕ ಕ್ಲೇಷಗಳಿಂದ ನೊಂದು ಮೋಕ್ಷೇಚ್ಛು ಗಳಾದವರಿಗೆ ಶಮದಮಾದಿಸಾಧನ ಸಾಮಗ್ರೀ ಯುಕ್ತರಿಗೆ ಭಾಗವತಕೀರ್ತನವು ಫಲಕಾರಿಯಾಗುವುದು. ಅದೇ ಅಂತ್ಯದಲ್ಲಿ ನಾರಾಯಣಸ್ಮರಣ ಕಾರಣವಾಗುವುದು. ಪ್ರಮತ್ತನಾದವನಿಗೆ ಎಷ್ಟು ವರ್ಷಗಳಾಯುವಿದ್ದರೇನು ಪ್ರಯೋಜನ? ಶ್ರೇಯಃಸಾಧನೆಯನ್ನು ಮಾಡಲನುಕೂಲಿಸಿದ ಒಂದು ಮುಹೂರ್ತವೇ ಸಾಕು! ಖಟ್ವಾಂಗನೆಂಬ ರಾಜನಿದ್ದನು. ಅವನು ದೇವತೆಗಳಿಂದ ತನ್ನ ಆಯುಶ್ಶೇಷವು ಎರಡೇ ಮುಹೂರ್ತವೆಂದರಿತು ಸಕಲ ಸಂಗವನ್ನು ಬಿಟ್ಟು ಒಂದೇ ಮುಹೂರ್ತದಲ್ಲಿ ಬಾಲ್ಯಾದಭ್ಯಸ್ತ ಧ್ಯಾನಬಲದಿಂದ ಶ್ರೀ ಹರಿಚರಣಾರವಿಂದವನ್ನು ಸೇರಿ ಭಯರಹಿತನಾದನು. ಕೌರವೇಂದ್ರ! ನಿನಗಾದರೂ ಏಳು ದಿನದ ಆಯುಶ್ಶೇಷವಿದೆ. ಈ ಅವಧಿಯಲ್ಲಿ ಮೋಕ್ಷೋಪಯೋಗಿಯಾದುದನ್ನು ಮಾಡಿಕೋ! ಹರಿ ಚರಣಸ್ಮರಣೆಯು ಮರಣಕಾಲದಲ್ಲಿ ಬರುವಂತೆ ಸದಾ ಅವನನ್ನೇ ಸ್ಮರಿಸು. ಎಲ್ಲದಕ್ಕೂ ಮೊದಲು ವೈರಾಗ್ಯವೇ ಸಾಧನಶ್ರೇಷ್ಠವೆನಿಸಿದೆ. ಸ್ವತಃ ಅಥವಾ ಜ್ಞಾನಿಗಳಿಂದ ಅಂತ್ಯಕಾಲವನ್ನರಿತ ಸುಜನನು ಮೊದಲು ಭ್ರಮವನ್ನು ಬಿಡಬೇಕು. ವಿವೇಕಾಜ್ಞಾನವೆಂಬ ಖಡ್ಗದಿಂದ ಸ್ತ್ರೀ ಪುತ್ರಾದಿ ಗಳಲ್ಲಿದ್ದ ಆಶಾಪಾಶವನ್ನು ಕಡಿದು ಅನಂತರ ಗೃಹವನ್ನು ಬಿಟ್ಟು ಹೊರಡಲು ಬೇಕು. ಪುಣ್ಯ ತೀರ್ಥ ಜಲಗಳಲ್ಲಿ ಸ್ನಾನ, ತತ್ರತ್ಯ ಸಜ್ಜನಮುಖ ನಿಃಸೃತ ಹರಿಗಾಥಾ ಶ್ರವಣಗಳನ್ನು ಮಾಡಬೇಕು. ದುಸ್ಸಂಗದಿಂದ ದೂರನಾಗಿ ಶುಚಿಯಾದ ಏಕಾಂತಸ್ಥಾನದಲ್ಲಿ ಕುಶ, ಅಜಿನ, ಚೇಲಾಸನಾಸೀನ ನಾಗಬೇಕು. ಗುಣಪೂರ್ಣನಾದ ಹರಿಯನ್ನು ಪ್ರತಿಪಾದಿಸುವ 'ಓಂ' ಎಂಬ ಸರ್ವಮಂತ್ರ ರಾಜವಾದ 'ಅ, ಉ. ಮ' ಎಂಬ ಮೂರಕ್ಷರಗಳಿಂದ ಶ್ರೀಶನ ನಿರ್ದೋಷಜ್ಞಾನಾ ನಂದ ಸ್ವರೂಪನಿರೂಪಕವಾದ ಪ್ರಣವವನ್ನು ಜಪಿಸಿ ಜಪಿಸಿ ಮನಃಶುದ್ಧಿಯನ್ನು ಸಂಪಾದಿಸ ಬೇಕು. ಜಿತಶ್ವಾಸನಾಗಿ ಮನಸ್ಸನ್ನು ವಶೀಕರಿಸಿಕೊಂಡು ಜಗದಾದೀಕಾರಣವನ್ನು ಸ್ಮರಿಸಬೇಕು. ವಿಷಯಂಗಳಿಂದ ಇಂದ್ರಿಯಗಳನ್ನು ಹಿಂದಿರುಗಿಸಿ ಮನಸ್ಸೆಂಬ ರಜ್ಜು(ಕಡಿವಾಣ)ವನ್ನು ಬುದ್ಧಿಸಾರಥಿಯ ವಶದಲ್ಲಿಡಬೇಕು. ಮನಸ್ಸನ್ನು ಹೊರಗೆ ಹೋಗದಂತೆ ಮಂಗಳಮೂರ್ತಿ ಯಾದ ಹರಿಯಲ್ಲೇ ಬುದ್ಧಿಸಹಾಯದಿಂದಿಡಬೇಕು. ಸರ್ವಾವಯವ ಧ್ಯಾನವು ಮೊದಲೇ ಸಾಧ್ಯವಾಗಲಾರದು. ಆದ್ದರಿಂದ ಒಂದೊಂದೇ ಶ್ರೀನಿವಾಸನ ಅಂಗವನ್ನು ಖಂಡಸ್ಮರಣೆಯಿಂದ ಚಿಂತಿಸಬೇಕು. ಇತರ ವಿಷಯಂಗಳನ್ನು ಬಿಟ್ಟು ಹರಿಯಲ್ಲಿಟ್ಟ ಮನಸ್ಸು ಕ್ರಮೇಣ ಸಮಗ್ರ ಹರಿರೂಪಚಿಂತನ ಸಮರ್ಥವು ಆಗುವದು. ಆಗ ಸಿಗುವ ಸುಖವು ನಿರತಿಶಯವಾಗುವುದು. ರಜೋಗುಣದಿಂದ ಮನಸ್ಸು ವಿಷಯ ವಿಕ್ಷಿಪ್ತವಾಗುವದು. ತಮೋಗುಣದಿಂದ ಕರ್ತವ್ಯಜ್ಞಾನ ಶೂನ್ಯವಾಗುವದು. ಆದ್ದರಿಂದ ಧೀರನು ಅಖಂಡಧಾರಣಾಬಲದಿಂದ ಆ ಮನಸ್ಸಿನ ರಾಗ–ದ್ವೇಷಗಳನ್ನು ಅವಿದ್ಯಾಮಲವನ್ನು ತೊಳೆಯಲು, ಯೋಗಿ ಎನಿಸುವನು. ಜಗದಾಶ್ರಯನಾದ ಶ್ರೀಹರಿ ಚಿಂತನೆಯಿಂದ ಅವನಿಗೆ ಮನೋಜಯಸಹಿತ ಭಕ್ತಿಯೋಗವು ಲಭಿಸುವುದು" ಎಂದು ಕರ್ತವ್ಯವನ್ನು ನಿರೂಪಿಸಿದ ಶುಕನಂ ಕಂಡು ರಾಜನಿಂತೆಂದನು.

"ಬ್ರಹ್ಮಜ್ಞಾನಿಯೇ ! ಧಾರಣೆ ಹೇಗೆ ಕೂಡಿಬರುವದು ? ಎಲ್ಲಿ ಧಾರಣೆಯನ್ನು ಮಾಡಲು ಸರಿ ? ಎಂತಹ ಧಾರಣೆಯು ಪುರುಷನ ಮನೋಮಲವನ್ನು ತೊಡೆದುಹಾಕಲು ಸಮರ್ಥವಾಗಿದೆ? ಇದನ್ನು ನನಗೆ ಹೇಳು."

ಆಗ ಶುಖನು ಪೇಳಿದನು : "ರಾಜನ್! ಆಸನಜಯ ಹೊಂದುವುದಗತ್ಯವು. ಮುಖ್ಯ ಪ್ರಾಣಾನುಗ್ರಹದಿಂದ ಶ್ವಾಸಜಯವು, ರುದ್ರಾನುಗ್ರಹದಿಂದ ಮನೋಜಯವು. ಇಂದ್ರಾದಿ ದೇವತಾನುಗ್ರಹದಿಂದ ಇಂದ್ರಿಯ ಜಯವು ಲಭಿಸುವುದು. ಈ ರೀತಿಯಾಗಿ ಇಂದ್ರಿಯಾದಿಗಳನ್ನು ಪರಮಾತ್ಮನಲ್ಲಿಡಲು ಸಮರ್ಥನಾಗಿ ಮೊದಲು ಭಗವಂತನ ಸ್ಥೂಲರೂಪವನ್ನು ಚಿಂತಿಸಬೇಕು, ಕೇಳೀ ಬ್ರಹ್ಮಾಂಡವೇ ಅವನ ಪ್ರತಿಮೆ. ಅನಂತನಾದ ಹರಿಯು ದೊಡ್ಡದಾದುದಕ್ಕೆಲ್ಲಾ ದೊಡ್ಡವನು. ಅವನ ಆಧಾರದಲ್ಲಿ ಜಡಾಜಡ ಸಹಿತವಾದ ಅನಂತ ಬ್ರಹ್ಮಾಂಡಗಳಿವೆ. ಈ ಅಂಡಕೋಶವು ಜೀರ್ಣವಾಗುತ್ತಿರುವುದು. ಪಂಚಭೂತಗಳು ಮಹದಹಂಕಾರಗಳಿವರ ಸಪ್ತಾವರಣಗಳಾಗಿವೆ. ವಿಶೇಷಪ್ರಕಾಶಕನಾದ್ದರಿಂದ ವೈರಾಜನೆಂತಲೂ, ಸರ್ವತಃ ಶ್ರೇಷ್ಠನಾದ್ದರಿಂದ ವಿರಾಟ್ ಎಂತಲೂ, ಬಹುಕರ್ಮ ಫಲಪ್ರದನಾದ್ದರಿಂದ ಪುರುಷನೆಂತಲೂ, ಕರೆಯಲ್ಪಡುವ ಭಗವಂತನು ಈ ಬ್ರಹ್ಮಾಂಡದಲ್ಲಿ ತುಂಬಿ ನಿಂತಿರುವನು. ಅವನೇ ಧಾರಣಾವಿಷಯನು.

ರಾಜನ್! ಅವನ ಸ್ಥೂಲರೂಪವನ್ನು ವರ್ಣಿಸುವೆನು ಕೇಳು!

ಪಾತಾಲವು ಪಾತಾಲವೆಂಬ ಭಗವಂತನ ಪಾದಮೂಲದಿಂದ ಉತ್ಪನ್ನವಾಗಿ ಆಶ್ರಯಿಸಿಕೊಂಡು ತದಧೀನವಾಗಿದೆ. ಇಂತೆಯೇ ಎಲ್ಲ ಲೋಕಗಳು ಎಲ್ಲ ದೇವತೆಗಳು ಮೊದಲಾದ ವಸ್ತುಜಾತವು ಅವನಿಂದ ಕೊಡಲ್ಪಟ್ಟ ನಾಮರೂಪ ಕ್ರಿಯೆಗಳನ್ನು ಪೊಂದಿ ಅವನ ಅಧೀನದಲ್ಲಿರುವುವು ; ಅವನಿಂದ ಬಿನ್ನವಾಗಿಯೇ ಇರುವುದೆಂದೂ ತಿಳಿ. ಹಿಂಬುಡವು ಪಾದದ ಮೇಲ್ಭಾಗವದರಿಂದ ರಸಾತಲವು ಹುಟ್ಟಿದೆ. ಸೃಷ್ಟಿಕರ್ತನ ಗುಲ್ಫಗಳಿಂದ ಬ್ರಹ್ಮಾಂಡಗುಲ್ಫದಲ್ಲಿ ಮಹಾತಲವು, ಜಂಘಗಳಿಂದ ತಲಾತಲವು, ಜಾನುಗಳಿಂದ ಸುತಲವು, ತೊಡೆಗಳಿಂದ ಅತಲವಿತಲಗಳು, ಜಘನದಲ್ಲಿ ಭೂಮಿಯು, ನಾಭಿಯಿಂದ ಭುವರ್ಲೋಕವು, ಎದೆಯಿಂದ ಸ್ವರ್ಗವು, ಕಂಠದಿಂದ ಮಹರ್ಲೋಕವು, ವದನದಿ ಜನೋಲೋಕವು, ಲಲಾಟದಿಂದ ತಪೋಲೋಕವು, ಆದಿಪುರುಷನ ಶಿರಸ್ಸಿನಿಂದ ಸತ್ಯಲೋಕವು ಹುಟ್ಟಿದವು. ಇಂದ್ರಾದಿಗಳು ಬಾಹುಗಳಿಂದಲೂ, ದಿಗ್ದೇವತೆಗಳು ಕಿವಿಗಳಿಂದಲೂ, ನಾಸಿಕೆಯಿಂದ ಅಶ್ವಿನಿದೇವದ್ವಯರು, ಗಂಧ ಘ್ರಾಣೇಂದ್ರಿಯಗಳೂ, ಮುಖದಿಂದ ಅಗ್ನಿಯು, ಕಣ್ಣಿನಿಂದ ದ್ಯುಲೋಕವು ಸೂರ್ಯನು ಚಕ್ಷುರಿಂದ್ರಿಯವು ಪುಟ್ಟಿದವು. ಕಣ್ಣಿನ ರೆಪ್ಪೆಗಳಲ್ಲಿ ದಿವಾರಾತ್ರಗಳು, ಅವನ ಭ್ರೂವಿಜೃಂಭದಿಂದ ಸತ್ಯಲೋಕವೂ, ಜಿಹ್ವೆಯಿಂದ ರಸನೇಂದ್ರಿಯ, ಷಡ್ರಸಗಳು, ತಾಲುವಿನಿಂದ ನೀರೂ ಹುಟ್ಟಿದವು. ಅನಂತನ ವಾಕ್ಯಗಳೇ ವೇದಗಳು. ಕೋರೆಗಳಿಂದ ಸೂರ್ಯಚಂದ್ರರೂ, ಇತರ ದಂತಗಳಿಂದ ನಕ್ಷತ್ರಗಳೂ ಜನಿಸಿದವು. ಅವನ ಮಂದಹಾಸದಿಂದ ಜನರನ್ನು ಬಂಧಿಸುವ ಮೋಹಕ ಶಕ್ತಿಯು ಮತ್ತು ಅನಂತ ಸೃಷ್ಟಿಯು ಶ್ರೀಹರಿಯ ಕಡೆಗಣ್ಣನೋಟದಿಂದಲೇ ಆದವು. ಮೇಲ್ತುಟಿಯಿಂದ ಲಜ್ಜೆಯು, ಕೆಳತುಟಿಯಿಂದ ಲೋಭವು ಪುಟ್ಟಿದವು. ಧರ್ಮನು ಸ್ತನದಿಂದ ಜನಿಸಿದನು. ಬೆನ್ನಿನಿಂದ ಅಧರ್ಮನು ಬಂದನು. ಮೇಢ್ರದಿಂದ ಪ್ರಜಾಪತಿಯು ವರುಣನು ಬಂದರು. ಕುಕ್ಷಿಯಿಂದ ಸಮುದ್ರಗಳೂ, ಗಿರಿಗಳು ಅಸ್ಥಿಸಂಘದಿಂದಲೂ, ನಾಡಿಗಳಲ್ಲಿ ನದಿಗಳೂ, ರೋಮಗಳಲ್ಲಿ ವೃಕ್ಷಲತಾದಿಗಳು ಇಂತು ಬ್ರಹ್ಮಾಂಡವನ್ನು ಪೊಕ್ಕ ಶ್ರೀಹರಿಯಿಂದ ಜನಿಸಿ ಬಂದವು. ಅವನ ವೀರ್ಯದಿಂದ ಅನ್ನವೂ, ಉಸಿರಿನಲ್ಲಿ ಮುಖ್ಯಪ್ರಾಣನೂ ಬಂದರು. ಅವನ ಗಮನವೇ ವಯಃಕಾರಣವು. ಗುಣಗಳ ಪ್ರವಾಹ ಪ್ರವೃತ್ತಿಯು ಅವನ ಕರ್ಮದ ಕಾರ್ಯವಾಗಿದೆ. ಈಶನ ಕೇಶಗಳಲ್ಲಿ ಮೇಘಗಳು, ವಸನದಲ್ಲಿ ಸಂಧ್ಯಗಳು, ಅವನ ಹೃದಯದಿ ಮೂಲಪ್ರಕೃತಿಯು, ಮನದಿಂದ ಚಂದ್ರನು,

ಕಾಮವಿಕಾರಗಳೂ, ಬುದ್ಧಿಯಿಂದ ವಿರಿಂಚನು, ಅಹಂಕಾರದಿಂದ ಶಿವನು, ನಖಗಳಿಂದ ಕತ್ತೆ, ಕುದುರೆ, ಆನೆ, ಒಂಟೆಗಳೂ, ಶ್ರೋಣಿದೇಶದಲ್ಲಿ ಎಲ್ಲ ಮೃಗಪಶುಗಳೂ ಜನಿಸಿದವು. ಅವನ ಶಬ್ದದಿಂದ ವೈದಿಕ ಲೌಕಿಕ ಭಾಷೆಗಳು, ಮನೀಷೆಯಿಂದ ವಾಯುದೇವನೂ, ನಿವಸನ ಶಕ್ತಿಯಿಂದ ಪ್ರಿಯವ್ರತಾದಿಗಳೂ, ಸ್ವರಸ್ಮೃತಿಗಳಿಂದ ಗಂಧರ್ವ ವಿದ್ಯಾಧರಚಾರಣರೂ, ಪರಾಕ್ರಮದಿಂದ ಅಸುರರೂ, ಜನಿಸಿ ಬಂದರು. ಮುಖದಿಂದ ಬ್ರಾಹಣವರ್ಣವು, ಭುಜದಿ ಕ್ಷತ್ರಿಯವರ್ಣವು, ತೊಡೆಯಲ್ಲಿ ವೈಶ್ಯವರ್ಣವು, ಪಾದದಲ್ಲಿ ಶೂದ್ರವರ್ಣವೂ ಜನಿಸಿ ಬಂದವು. ಅವನ ರೇತಸ್ಸಿನಿಂದ ಸ್ವಾಹಾ ಎಂದು ದೇವತೆಗಳಿಗೆ ಪಿತೃಗಳಿಗೆ ಉಪಯೋಗಪಡುವ ಮಂತ್ರಗಳೂ ದ್ರವ್ಯಗಳೂ, ಮಧ್ಯದೇಹದಿಂದ ಹವ್ಯವೂ, ಅಗ್ನಿನಿಷ್ಟೋಮಾದಿ ಕರ್ಮವಿತಾನಗಳೂ ಪುಟ್ಟಿ ಆಶ್ರಯಿಸಿ ನಿಂದವು.

ಇಂತು ನಿನಗೆ ಪರಮೇಶನ ವೈರಾಜವೆಂಬ ವಿಗ್ರಹದ ಸ್ಥಿತಿಯನ್ನು ವರ್ಣಿಸಿರುವೆನು. ಇದನ್ನು ಚಿಂತಿಸಿ ಮನೋನ್ನೆರ್ಮಲ್ಯವನ್ನು ಪೊಂದಿ ಸುಬುದ್ಧಿಯಿಂದ ಶುದ್ಧನಾಗು. ಇದಕ್ಕಿಂತ ಬೇರೊಂದುತ್ತಮ ಸಾಧನವಿಲ್ಲ.

## ೨. ಸೂಕ್ಷ್ಮರೂಪ ಚಿಂತನವು ಮಾರ್ಗದ್ವಯವು

ರಾಜನ್! ಬ್ರಹ್ಮದೇವನು ಆದಿ ಸೃಷ್ಟಿಯಲ್ಲಿ ಧಾರಣಾಬಲದಿಂದಲೇ ಕಾಲದಿಂದ ತಿರೋಹಿತ ವಾಗಿದ್ದ ಪ್ರಾಕ್ಕಲ್ಪವಿಷಯಕವಾದ ಸ್ಮೃತಿಯನ್ನು ಮತ್ತೆ ಪೂರ್ಣವಾಗಿ ಪೊಂದಿ ಅಮೋಘ ಜ್ಞಾನಿಯಾಗಿದ್ದರಿಂದ ಪ್ರಳಯಪೂರ್ವದಲ್ಲಿದ್ದಂತೆಯೇ ಈ ಜಗತ್ತನ್ನೆಲ್ಲ ಹರ್ಯನುಗ್ರಹದಿಂದ ಸೃಷ್ಟಿಸಿದನು. ಆದ್ದರಿಂದ ನಾ ಹೇಳಿದುದನ್ನು ನಂಬಿ ಧಾರಣೆಯಲ್ಲಿ ತೊಡಗು. ಇದರಂತೆ ಮುಖ್ಯವಾಗಿ ಭಗವದ್ವಾಚಕಗಳಾಗಿರುವ ಇಂದ್ರಾಗ್ನ್ಯಾದಿ ನಾಮಗಳನ್ನು ಕೇಳಿದಾಗ ಇತರಾರ್ಥ ಗಳನ್ನು ಸ್ಮರಿಸದೇ, ಭಗವಂತನೇ ಸರ್ವಶಬ್ದವಾಚ್ಯನೆಂದು ಉಪಾಸಿಸುವುದೂ ಇನ್ನೊಂದು ಮೋಕ್ಷ ಸಾಧನವಾಗಿದೆ. ಏಕೆಂದರೆ ಹರಿಯೇ ಸರ್ವ ವೇದಾರ್ಥನು, ಮುಖ್ಯ ವಾಚ್ಯನು ಆಗಿರುವನು. ಹೀಗಿರಲು ಪುರಂದರಾದಿ ನಾಮಗಳನ್ನು ಕೇಳಿ ಮನುಜರ ಬುದ್ಧಿಯು ಹರಿಯನ್ನು ಬಿಟ್ಟು ಶಬ್ದಪ್ರವೃತ್ತಿ ನಿಮಿತ್ತ ಕಾರಣರಲ್ಲದ ಅನ್ಯರನ್ನು ತಿಳಿದು ಅವರನ್ನೇ ಉಪಾಸಿ ಸುವುದರಿಂದ ಅವರು ಮೋಕ್ಷವನ್ನು ಕಾಣದೆ ನಾನಾ ಯೋನಿಗಳಲ್ಲಿ ಹುಟ್ಟಿ ಸಾಯುತ್ತಿರು ವರು. ಇಂದ್ರಾದಿಗಳಲ್ಲಿ ಅನುಪಹತೈಶ್ವರ್ಯವತ್ವಾದಿ ಗುಣಗಳನ್ನು ಕಾಣದೆ ವ್ಯರ್ಥೋಪಾಸನೆ ಯನ್ನು ಗೈದು ಕೆಡುವರು. ಈಶ್ವರೇಚ್ಛಾ ನಿರ್ಮಿತ ತದಧೀನ ಸಂಸಾರದಲ್ಲಿ ಹೊರಳಾಡುತ್ತ ಅಜ್ಞಾನಿಗಳಾಗಿಯೇ ಉಳಿವರು. ಆದ್ದರಿಂದ ಜ್ಞಾನಿಗಳು ವ್ಯರ್ಥ ಶಬ್ದಪ್ರಯೋಗವನ್ನು ಮಾಡು ವುದೇ ಇಲ್ಲ. ಸ್ವಪ್ರಯೋಜನ ವನ್ನು ಅತಿಕ್ರಮಿಸದೇ ಘಟಾದಿ ನಾಮಗಳನ್ನೂ ಪರಮಾತ್ಮಲ್ಲೇ ಸಮನ್ವಯಿಸಿ ತಿಳಿದು ಇತರ ವ್ಯವಹಾರಗಳನ್ನು ಪ್ರಾಯಃ ಬಿಟ್ಟುಬಿಡುವರು. ಮರವಿಲ್ಲದೆ ಜಾಗರೂಕರಾಗಿ ನಿಶ್ಚಯಬುದ್ಧಿ ಯಿಂದ, ಶಬ್ದಮಾತ್ರಶ್ರವಣದಿಂದ ಮೊದಲು ಗೋವಿಂದನನ್ನೇ ಸ್ಮರಿಸಿ ಧನ್ಯರಾಗುವರು. ಘಟಾದಿ ಲೋಕವ್ಯವಹಾರವಿಲ್ಲದೆಯೇ ಸ್ವಪ್ರಯೋಜನವು ಸಿದ್ಧವಾಗು ತ್ತಿರಲು ಸ್ವಯಂಸಂಪನ್ನರಾಗುವರಾದ್ದರಿಂದ ಘಟಾದಿ ಪದಾರ್ಥ ಸಂಪಾದನದಲ್ಲಿ ಪ್ರಯತ್ನಿಸು ವುದಿಲ್ಲ. ಪ್ರಯತ್ನಿಸಿದರೂ ಅರ್ಥಪೂರ್ತಿಯು ಆಗದು. ಮತ್ತು ಕ್ಲೇಶವೇ ಉಳಿಯುವದು

ಎಂದು ತಿಳಿದು ತನ್ನ ಯತ್ನವಿಲ್ಲದೆ ಪದಾರ್ಥಗಳು ಹರೀಚ್ಛಾದದಿಂದ ಬರುವವು. ಹರೀಚ್ಛಾ ಇಲ್ಲದೇ ಪದಾರ್ಥ ಸಿದ್ಧಿಯು ಆಗುವುದೇ ಇಲ್ಲ. ಆದ್ದರಿಂದ ಪ್ರಯತ್ನದಿಂದೇನೆಂದು ತಿಳಿದು ಜ್ಞಾನಿಯು ಯದೃಚ್ಛಾಲಾಭಸಂತುಷ್ಟನಾಗಿರುವನು. ಪಕ್ವಜ್ಞಾನಿಗೆ ಪದಾರ್ಥಗಳು ಸ್ವತಃ ಸಿದ್ಧವಾಗಿವೆ. ನೋಡು! ಕಮನೀಯ ಭೂಮಿಭಾಗವಿರಲು ಲೇಪು ಹಾಸಿಗೆಗಳೇಕೆ? ಕೈತೋಳು ಗಳಿರಲು ತಲೆದಿಂಬುಗಳೇಕೆ? ಕರಾಂಜಲಿಯು ಇರಲು ಪರ್ಣಭಾಜನಪುಂಜವೇಕೆ? ಇನ್ನು ದಿಕ್ಕಿರಲು ಮೌಲ್ಯದಿಂದ ದೊರೆಯುವ ದುಕೂಲಗಳೇಕೆ? ಅಪರಿಪಕ್ವ ಯೋಗಿಗಳಿಗಾದರೂ ಸಕಲವೂ ದೇವದತ್ತವಾಗಿದೆ. ಮಾರ್ಗತೋರಣದಿ ಬಿಟ್ಟ ವಸ್ತ್ರಗಳು, ಪರಾರ್ಥೈಕ ಜೀವನವಾದ ವೃಕ್ಷಗಳು ಕೊಡುವ ಹಣ್ಣಿನ ಭಿಕ್ಷೆ, ನದಿಗಳು ನೀಡುವ ನೀರು, ಶಯನಸ್ಥಲವನ್ನೊದಗಿಸುವ ಗುಹೆಗಳಿರುವಾಗ ಶ್ರೀಕೃಷ್ಣನು ಇಂತಹ ಅವಧೂತ ಜನರಿಗೆ ಸಖನಾಗಿರುವಾಗ ರಾಜನ್! ಧನದುರ್ಮದಾಂಧರನ್ನು ಜ್ಞಾನಿಗಳೇಕೆ ಸೇವಿಸುವರು?

ಇಂತು ಸಾಧನದ್ವಯದಿಂದ ಚಿತ್ತವು ಸ್ವಾಧೀನವಾಗಿ ಶಾಂತವಾಗುತ್ತಿರಲು ಸ್ವಾಮಿಯೂ ಪ್ರೀತಿವಿಷಯನೂ ಆದ ಅನಂತವನ್ನು ಭಜಿಸುವ ಭಕ್ತನು ಅವಿದ್ಯಾಕಾಮಕರ್ಮಗಳಿಂದ ರಹಿತ ನಾಗುವನು. ಜೀವನಾಂತ್ಯದಲ್ಲಿ ಶ್ರೀಹರಿಯನ್ನೇ ಪೊಂದುವೆನೆಂಬ ನಿಶ್ಚಯದಿಂದ ಯುಕ್ತನಾಗಿ, ರೋಮಾಂಚನದಿಂದ ಆನಂದಬಾಷ್ಪದಿಂದ ಹರಿಯನ್ನು ಭಜಿಸುವನು.

"ಶ್ರೀ ಹರಿಯು ಸರ್ವಜ್ಞನು, ಪೂರ್ಣನು, ಆನಂದಮಯನು, ಅವನ ಭಕ್ತೋತ್ತಮನಾದ ಮುಖ್ಯಪ್ರಾಣನು ಸುಪ್ತಜನರಲ್ಲಿ ಎಚ್ಚರದಿಂದಿದ್ದು ನೋಡಿ ಕಾಪಾಡುತ್ತಿರುವನು; ಹಾಗೆಯೇ ಮುಖ್ಯಪ್ರಾಣಾಂತರ್ಯಾಮಿಯಾದ ಸ್ವಾಮಿಯು ಸರ್ವಸಾಕ್ಷಿಯು. ನಿತ್ಯನಿರ್ದುಃಖನಿರತಿ ಶಯಾ ನಂದ ಜ್ಞಾನನಿಧಿಯು ಎಂದು ಆಧಿವ್ಯಾಧಿಗಳಲ್ಲಿಯೂ ಬಿಡದೆ ನೆನೆದು ಉಪಾಸನೆಯನ್ನು ಗೈಯುವದು ಮೋಕ್ಷಕಾರಣವಾಗಿದೆ. ಹೀಗೆ ನೆನೆಯದಿರಲು ಜೀವನು ತನ್ನನ್ನು ತಾನೇ ನರಕಾದ್ಯ ನರ್ಥಗಳಿಗೆ ಗುರಿಯನ್ನಾಗಿರಿಸಿಕೊಳ್ಳುವನು. ಜನರು ಹರಿವಿಮುಖರಾಗಿ ವೈತರಣಿಯಲ್ಲಿ ಬಿದ್ದು ತಮ್ಮ ತಮ್ಮ ಕರ್ಮಗಳ ಫಲರೂಪವಾದ ನರಕತಾಪವನ್ನು ಹೊಂದುವರು. ಸತ್, ಚಿತ್, ಆನಂದ ಆತ್ಮನೆಂದುಪಾಸನೆಯನ್ನು ಮಾಡದೆ ಇತರ ವಿಷಯಗಳಲ್ಲಿ ಮನಸ್ಸಿಟ್ಟವನು ಪಶು ವಲ್ಲದೆ ಮತ್ತೇನು? ಅಶುಭವಿಷಯಂಗಳನ್ನು ಬಿಟ್ಟವನಲ್ಲವೇ ವಿವೇಕಿಯು? ಈಗ ಸಾಮಾನ್ಯಾ ಧಿಕಾರಿಗಳ ಉಪಾಸನಾಪ್ರಕಾರವನ್ನು ಕೇಳು.

ಆತ್ಮೋಪಾಸನಾಯೋಗ್ಯರು ತಮ್ಮ ಹೃದಯದ ದಹರಾಕಾಶದಲ್ಲೇ ಪ್ರಾದೇಶಮಾತ್ರನಾಗಿ ವಸಿಸುವ ಪೂರ್ಣಷಡ್ಗುಣನಾದ ಸ್ವಾಮಿಯನ್ನು ಭಜಿಸುವರು. ತೈಲದ ಅಖಂಡಧಾರೆಯಂತಿರುವ ಮನೋವೃತ್ತಿಯಿಂದ ಉಪಾಸಿಸುವರು.

ಚತುರ್ಭುಜನು, ಶಂಖ ಚಕ್ರ ಪದ್ಮ ಗದಾಧರನು, ಪ್ರಸನ್ನವದನನು, ನಲಿನಾಯ ತೇಕ್ಷಣನು, ಪೀತಾಂಬರಧಾರಿಯು, ರತ್ನಖಚಿತ ಸ್ವರ್ಣಾಂಗದ ಕವಚ ಕಿರೀಟ ಕುಂಡಲನು, ವಿಕಸಿತ ಹೃದಯಾರವಿಂದ ಕರ್ಣಿಕಾ ಮಧ್ಯಗತ ಪಾವಪಲ್ಲವನು, ಶ್ರೀವತ್ಸವನ ಮಾಲಾಂಚಿತನು, ಕೌಸ್ತುಭಕಂಠನು, ಮೇಖಲಾಂಗುಲೀಯ ನೂಪುರಕಂಕಣಾಲಂಕಾರನು, ಸ್ನಿಗ್ಧಕುಂಚಿತ ನೀಲ ಕುಂತಲ ಶೋಭಿತನು, ಮಂದಹಾಸ ಸುಂದರನು, ಮಂದಹಾಸಯುಕ್ತ ಕಟಾಕ್ಷ ಸೂಚಿತಭೂರಿದ ಯಾರಸನು ಆದ ಶ್ರೀಶನನ್ನು ಸಮಗ್ರಾಂಗಧ್ಯಾನಸಾಮರ್ಥ್ಯವು ಬರುವವರೆವಿಗೂ ಚಿಂತಿಸಲು ಅದು ಧಾರಣೆಯೆನಿಸುವದು. ಧಾರಣೆಯು ಸಮಗ್ರವಾದರೆ ಧ್ಯಾನವೆನಿಸುವದು. ಪಾದದಿಂದ

ಮುಖದ ಪರ್ಯಂತವು ಒಂದೊಂದು ಅವಯವವನ್ನು ಧಾರಣೆಯಿಂದ ಚಿಂತಿಸಿ ಅನಾಯಾಸ ಧ್ಯಾನಗೋಚರವಾಗುವವರೆವಿಗೂ ಧ್ಯಾನಿಸಿ ಬುದ್ಧಿಯು ಸರ್ವಾಂಗಧ್ಯಾನಸಮರ್ಥವಾಗುವಂತೆ ಬಿಡದೆ ಪ್ರಯತ್ನಿಸಬೇಕು. ನಿತ್ಯಕರ್ಮಾನುಷ್ಠಾನಾನಂತರದಲ್ಲಿ ಬ್ರಹ್ಮಪ್ರಭುವಾದ ಸರ್ವಸಾಕ್ಷಿಯಾದ ವಿಶ್ವೇಶ್ವರನೇ ನನ್ನ ಸ್ವಾಮಿಯು, ಸರ್ವೋತ್ತಮನು, ಮಹೋಪಕಾರಕನು, ಅತ್ಯಂತ ಪ್ರಿಯತಮನೆಂದು ಭಕ್ತಿಯಿಂದ ಭಾವಿಸಿ ಅವನ ಸ್ಥೂಲರೂಪವನ್ನು ಚಿಂತಿಸಬೇಕು. ಸ್ಥಿರವಾದ ಸುಖಾಸನದಲ್ಲಿ ಕೂತು, ಜ್ಞಾನಿಯು ಈ ದೇಹವನ್ನು ಬಿಡಲಿಚ್ಛಿಸುವ ಸಮಯದಲ್ಲಿ, ಕಾಲದೇಶಗಳಲ್ಲಿರುವ ವಿಷಯಗಳನ್ನು ನೆನೆಯದೆ ಇಂದ್ರಿಯಗಳನ್ನು ಮನೋವಶವನ್ನಾಗಿರಿಸಿ ಪ್ರಾಣಾಯಾಮದಿಂದ ಜಿತಶ್ವಾಸನಾಗಿ ಲಯಚಿಂತನವನ್ನು ಗೈದು ದೇಹವನ್ನು ಬಿಡಬೇಕು. ಇಂದ್ರರುದ್ರರು ಮನೋನಿಯಾಮಕರವರು ಬುದ್ಧಿನಿಯಾಮಕರಾದ ಉಮಾಭಾರತಿಯರ ಅಧೀನರು. ಅವರು ಮಹತ್ತತ್ತ್ವಮಾನಿಗಳಾದ ಬ್ರಹ್ಮಾಧೀನರು. ಬ್ರಹ್ಮನು ಕ್ಷೇತ್ರಜ್ಞಾಧೀನನು. ಕ್ಷೇತ್ರಜ್ಞನೇ ಹೃದಯಸ್ಥ ಹರಿಯು, ಅವನನ್ನು ಸರ್ವತ್ರವ್ಯಾಪ್ತನಾದ ಕಾಲನಾಮಕ ಹರಿಯಿಂದ ಅಭಿನ್ನನೆಂದು ತಿಳಿದು ಉತ್ಕ್ರಾಂತಿಯನ್ನು ಹೊಂದಿ ಹರಿಯನ್ನು ಸೇರಿ ಆನಂದವನ್ನು ಹೊಂದುವ ಅಧಿಕಾರಿಯು ಮುಕ್ತನೆನಿಸಿ ವಿಧಿನಿಷೇಧ ಲೇಪರಹಿತನಾಗುವನು.

ಅಂತಹ ಮುಕ್ತನು ಹೊಂದುವ ಲೋಕವು ಇತರ ಲೋಕವಿಲಕ್ಷಣವಾಗಿದೆ. ಅಲ್ಲಿ ಸರ್ವದೇವಪ್ರಭುವಾದ ವಾಯುವು ತನ್ನ ಶಕ್ತಿಯನ್ನು ನಡೆಸುವುದಿಲ್ಲ. ಜಗತ್ತಿನಲ್ಲಿ ಸ್ವಕಾರ್ಯದಿಂದ ಪರಿಪಾಲಿಸಿದ ರುದ್ರಾದಿಗಳಲ್ಲಿ ಆ ಕಾರ್ಯಗಳನ್ನು ಮಾಡುವುದಿಲ್ಲ. ಸತ್ತ್ವಾದಿ ಗುಣಗಳು ಸೃಷ್ಟ್ಯಾದಿ ಕಾರ್ಯಪ್ರವೃತ್ತವಾಗುವದಿಲ್ಲ. ಅಹಂಕಾರದಿಂದಾಗುವ ಭೂತೇಂದ್ರಿಯ ವಿಕಾರಗಳಿಲ್ಲ. ಮಹತ್ತತ್ತ್ವದಿಂದಾಗುವ ಪ್ರಾಕೃಬುದ್ಧಿವಿಕಾರಗಳು, ಪ್ರಕೃತಿಯಿಂದಾಗುವ ಜರಾದಿ ಗಳೂ ಇಲ್ಲ. ಕಾಲಾದಿ ಕೃತೋಪದ್ರವವು ಹರಿಗಿಲ್ಲ. ಅಂತೆಯೇ ಅವನ ವೈಕುಂಠಾದಿ ಲೋಕಗಳಿಗಿಲ್ಲ. ಅದೇ ಹೊಂದಲು ಅತ್ಯುತ್ತಮವಾದ ಲೋಕವೆನಿಸಿದೆ. ಇತರ ಲೋಕಗಳನ್ನು ನೋಡಿ ಅಲ್ಲಿರುವ ದುಃಖಾದಿಗಳನ್ನು ಕಂಡು ಅವುಗಳನ್ನು ಪರಿತ್ಯಜಿಸಿ ವಿಶಿಷ್ಟಾಧಿಕಾರಿಗಳು ಪೃಥಿವ್ಯಾದಿ ವಿಕಾರಿಗಳಂತೆ ಅಲ್ಲ, ಸ್ವರ್ಗದಂತೆ ಅಲ್ಲ, ಮಹತ್ತಲ್ಲ, ತದಭಿಮಾನಿದೇವತೆಯೇ ಅಲ್ಲವೆಂದು ಆ ಶ್ರೀಹರಿಯನ್ನು ಸರ್ವದೇವ ಭಿನ್ನನೆಂದು ತಿಳಿಯುವರು. ಐಕ್ಯವೆಂಬ ದುಷ್ಟ ಮನಸ್ಸನ್ನು ಕಳೆಯುವರು. ಅನನ್ಯಭಕ್ತಿಯನ್ನು ತಳೆದು ಹೃದಯದಲ್ಲಿ ಭಕ್ತಿಯಿಂದ ನಿತ್ಯವೂ ಭಜಿಸಿ ಅವನ ಲೋಕವನ್ನು ಪೊಂದುವರು.

ಈಗ ಜ್ಞಾನಿಯ ಉತ್ಕ್ರಮಣವನ್ನು ಕೇಳು. ನಿಶ್ಚಿತಬುದ್ಧಿಯಾದ ಜ್ಞಾನಿಯು ತನ್ನ ಬಿಂಬಾಪರೋಕ್ಷವನ್ನು ಪಡೆದು, ಪ್ರಾಕೃತ ಮನವನ್ನು ಸುಟ್ಟು ನಿರ್ವ್ಯಾಪಾರವನ್ನಾಗಿ ಮಾಡುವನು. ತನ್ನ ಹಿಂಬುಟದಿಂದ ಮೂಲಾಧಾರವನ್ನು ಪೀಡಿಸಿ, ಉದಾನವಾಯುವನ್ನೆಬ್ಬಿಸಿ, ಕ್ರಮವಾಗಿ ಷಟ್ಚಕ್ರಗಳಲ್ಲಿ ಮೇಲೆಮೇಲಕ್ಕೆ ಹೋಗುವನು. ಮೂಲಾಧಾರವು ಗುದದಲ್ಲಿರುವದು. ನಾಲ್ಕು ದಲಗಳಲ್ಲಿ ವ, ಶ, ಷ, ಸ ಎಂಬ ನಾಲ್ಕಕ್ಷರವಾಚ್ಯನಿರುವನು. ನಾಭಿಯಲ್ಲಿ ಆರು ದಳದ ಸ್ವಾಧಿಷ್ಠಾನ ಚಕ್ರದಲ್ಲಿ ಬ, ಭ, ಮ, ಯ, ರ, ಲ ಎಂಬ ಆರು ಭಗವದ್ರೂಪಗಳಿವೆ. ಹೃದಯದಿ ಮಣಿಪೂರ ಚಕ್ರದ ಹತ್ತು ದಳಗಳಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ ಎಂಬ ರೂಪಗಳು. ಉರಸ್ಸಿನಲ್ಲಿರುವ ಅನಾಹತಚಕ್ರದಲ್ಲಿ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ ಎಂಬುವ ಹನ್ನೆರಡು ರೂಪಗಳಿವೆ. ತಾಲುಮೂಲದಲ್ಲಿ ವಿಶುದ್ಧಚಕ್ರವು. ಅದರ

ಹದಿನಾರು ದಳಗಳಲ್ಲಿ ಅಜ್ಞ್ಯಾಚ್ಕ (ಅಕಾರಾದಿ ಸ್ವರ) ಭಗವದ್ರೂಪಗಳಿವೆ. ಹೀಗೆ ಅಸಂಭ್ರಮದಿಂದ ನಾಡ್ಯಂತರ ಪ್ರವೇಶಮಾಡದೇ ಈ ಐದು ಚಕ್ರಗಳನ್ನು ದಾಟಿ, ಆರನೆಯ ಚಕ್ರವಾದ ಆಜ್ಞಾಚಕ್ರದಲ್ಲಿ ಮೆಲ್ಲನೇ ನಿಲ್ಲಬೇಕು. ಆಜ್ಞಾಚಕ್ರದ ಎರಡು ದಳಗಳಲ್ಲಿ ಹಂ, ಸ ಎಂಬ ಭಗವದ್ರೂಪಗಳಿವೆ. ಅಲ್ಲಿ ಕರ್ಣಾಕ್ಷ ನಾಸಾಮುಖಗಳನ್ನು ನಿರೋಧಿಸಿ, ಅಕುಂಠಜ್ಞಾನದಿಂದ ಇತರ ಲೋಕಾಪೇಕ್ಷೆಯಿಲ್ಲದೆ, ಜ್ಞಾನಿಯು ಮೂರ್ಧವನ್ನು ಭೇದಿಸಿ ಮೇಲಿರುವ ಸಹಸ್ರಾರದಿಂದ ಹೊರಬೀಳಬೇಕು. ಇಂತು ಉತ್ಕ್ರಾಂತನಾದವನು ಸಮ್ಯಕ್‌ಪಕ್ವಭಕ್ತ್ಯಾದಿಸಾಧನವಂತನಾಗಿದ್ದರೆ ಬ್ರಹ್ಮಲೋಕವನ್ನೂ, ಇನ್ನು ಅಪಕ್ವಭಕ್ತನಾದರೆ ಮಹರ್ಲೋಕವನ್ನೂ ಹೊಂದುವನು. ಅಣಿಮಾದಿ ಅಷ್ಟಸಿದ್ಧಿಗಳನ್ನು ಪೊಂದಿದ್ದು ಅನಂತರ ಮುಕ್ತನಾದಾಗ ಕೇವಲ ಚಿನ್ಮಾತ್ರೇಂದ್ರಿಯಗಳಿಂದ ಕೂಡಿರುವನು. ಪಕ್ವರಲ್ಲಿ ಅಪ್ರತೀಕಾಲಂಬನನೇ ಆಗಿದ್ದರೆ ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿ ಪವನಾಂತರಾತ್ಮನಾದ ಸರ್ವದೇವವಂದ್ಯನಾದ ಹರಿಯನ್ನು ಪೊಂದಿರುವನು. ಪ್ರತೀಕಾಲಂಬನನು ಪವನವಿರಿಂಚರಿರುವ ಸತ್ಯಲೋಕವನ್ನು ಪೊಂದಿ ಅನಂತರ ಉಭಯರೂ ಬ್ರಹ್ಮನಿಂದ ಕಲಿತು ಮುಕ್ತಿಯನ್ನು ಪೊಂದುವರು. ತಪೋಯೋಗ ನಿತ್ಯಧ್ಯಾನಗಳಿಂದ ಹೊಂದಲರ್ಹವಾದ ಅಪರೋಕ್ಷಜ್ಞಾನದಿಂದಲೇ ಆ ಗತಿಯು ಸಿಗುವದು, ಕರ್ಮದಿಂದಲ್ಲ.

ಹೃದಯಾಕಾಶವನ್ನು ಬಿಟ್ಟು ಪೊರಮಟ್ಟ ಜೀವನು ಜ್ಞಾನಕಾಂತಿಯಿಂದ ಸುಷುಮ್ನಾಮಧ್ಯದ ಬ್ರಹ್ಮನಾಡಿಯಿಂದ ಉತ್ಕ್ರಾಂತನಾಗಿ ಅರ್ಚಿರಾದಿ ಮಾರ್ಗದಿಂದ ವೈಶ್ವಾನರನನ್ನು ಸೇರುವನು. ಆಗ ನಿಷ್ಪಾಪನಾದ ಆ ಆಧಿಕಾರಿ ಜೀವನು ಶಿಂಶುಮಾರ ಚಕ್ರವನ್ನು ದಾಟಿ ಧ್ರುವಲೋಕವನ್ನು ಮುಟ್ಟುವನು.

ಭೂತಗಳಲ್ಲಿರುವ ಕೋಷ್ಠಗಾಗ್ನಿಯಲ್ಲಿದ್ದು ಅವರುಂಡ ನಾಲ್ಕು ವಿಧಾನವನ್ನು ಪಚನ ಮಾಡುವವನೂ ಮತ್ತು ಬ್ರಹ್ಮಾಂಡ ಮಧ್ಯದ ಅಗ್ನಿಲೋಕದಲ್ಲಿರುವವನೂ ಆದ ಪ್ರಧಾನ ವಹ್ನಿಯೇ ವೈಶ್ವಾನರನೆನಿಸಿ ಬ್ರಹ್ಮ-ದೇವ-ಪಿತೃಲೋಕಗಳಿಗೆ ಪೋಗುವ ಯೋಗಿಗಳಿಗೂ ಕರ್ಮಿಗಳಿಗೂ ಕೂಡ ಮಾರ್ಗನೆನಿಸುವನು. ಬಲದ ಪಿಂಗಳಾನಾಡಿಯಿಂದ ಉತ್ಕ್ರಾಂತರು ದೇವಮಾರ್ಗವನ್ನೂ ಎಡದ ಇಡಾನಾಡಿಯಲ್ಲುಂತ್ಕ್ರಾಂತರು ಪಿತೃಮಾರ್ಗವನ್ನೂ ಮಧ್ಯದ ಸುಷುಮ್ನಾನಾಡಿಯಿಂದುತ್ಕ್ರಾಂತರು ವಿಶೇಷ ಸುಖವಂತವಾದ ಬ್ರಹ್ಮಯಾನವನ್ನೂ ಹೊಂದಿ ಪೋಗುವರು. ದೇವಯಾನ - ಬ್ರಹ್ಮಯಾನಗಳು ಅವಾಂತರ ಭೇದವಷ್ಟೇ, ಬೇರಲ್ಲ.

ವಿಶ್ವಾಧಾರ ಶಿಂಶುಮಾರನಿಂದ ಅವನ ಅಪ್ಪಣೆಯನ್ನು ಪಡೆದು ರಾಗಾದಿ ದೋಷ ವರ್ಜಿತರಾದ ಬ್ರಹ್ಮಜ್ಞಾನಿ ಜನರೆಲ್ಲರೂ ತಂತಮ್ಮ ಸೂಕ್ಷ್ಮರೂಪದಿಂದ ಮನ್ವಂತ ರಾಯುಷ್ಕರಾದ ದೇವತೆಗಳ ಲೋಕವನ್ನೂ ಅಥವಾ ಸ್ವಯೋಗ್ಯವಾದ ಮಹದಾದಿ ಲೋಕವನ್ನೂ ಹೊಂದುವರು. ಅಲ್ಲಿ ಕಲ್ಪಪರ್ಯಂತ ಜ್ಞಾನಾದಿ ಪರಿಪಾಕತೆಯನ್ನು ಹೊಂದುತ್ತಿರುವರು.

ಬ್ರಹ್ಮಪ್ರಳಯವು ಬಂದಾಗ ಶೇಷಾಂತರ್ಗತ ಸಂಕರ್ಷಣದ ಮುಖದ ಅಗ್ನಿಜ್ವಾಲೆಯಿಂದ ವಿಶ್ವವು ಸುಟ್ಟು ಹೋಗುತ್ತಿರಲು ಮಹಾಪ್ರಳಯವು ಬಂದಿತೆಂದು ತಿಳಿದು ಜ್ಞಾನಿಸಂಘವು ಸತ್ಯಲೋಕವನ್ನು ಸೇರುವುದು. ಸನಕಾದಿ ಸೇವಿತವಾದಾಲೋಕವು ಎರಡು ಪರಾರ್ಧಗಳ ಕಾಲವಿರುವುದು. ಅಲ್ಲಿ ಶೋಕಜರಾಮೃತ್ಯುಗಳಿಲ್ಲ. ಆದಿವ್ಯಾಧಿಗಳಿಲ್ಲ. ಉದ್ವೇಗವು ಎಳ್ಳಷ್ಟೂ ಇಲ್ಲ. ಕಾಮ್ಯನಿಷಿದ್ಧಾದಿ ಕರ್ಮದಿಂದ ಮನಃಪೀಡೆಯು ಇಲ್ಲ. ಜನನಾದಿ ಲಕ್ಷಣ ದುರಂತ ದುಃಖವನ್ನು ಕಾಣುವರು ಅಬ್ರಹ್ಮಜ್ಞಾನಿಗಳು, ಜ್ಞಾನಿಜನರಿಗೆ ನರಕವು ಸರ್ವಥಾ ಇಲ್ಲ.

ಮಹಾಪ್ರಳಯದ ಲಯಪ್ರಕಾರವಂ ಕೇಳು :

ಮುಕ್ತರಾಗುವ ಜೀವಸಂಘವು ಪೃಥಿವಿಯಲ್ಲಿದ್ದ ಹರಿಯನ್ನು ಸೇರುವದು. ಅಲ್ಲಿಂದ ಕ್ರಮವಾಗಿ ವಾರಿ, ಅಗ್ನಿ, ವಾಯು, ಆಕಾಶಗಳನ್ನು ಸೇರುವದು. ಅಲ್ಲಿರುವ ಹರಿಯ ಅನುಗ್ರಹ ದಿಂದ ಮನಸ್ತತ್ತ್ವ, ಬುದ್ಧಿ, ಅಹಂಕಾರ, ಮಹತ್ತತ್ತ್ವ, ಅವ್ಯಕ್ತ ತತ್ತ್ವಗಳಲ್ಲಿ ಸರ್ವಸ್ವಾಮಿ ಯಾಗಿರುವ ಶ್ರೀಶನನ್ನು ಸೇರಿ ನಿರಾಮಯರಾಗಿ ಆನಂದವನ್ನು ಪೊಂದುವರು. ಭೂಮಿ ಜಲಾಭಿಮಾನಿಗಳು ಪ್ರಾಣಮಯನನ್ನು, ಅಗ್ನಿವಾಯು ಗಗನಾಭಿಮಾನಿಗಳು ಮನೋಮಯ ನನ್ನು ಮನಸ್ಸು ವಿಜ್ಞಾನಮಯನನ್ನು ಹೊಂದಿದ ನಂತರ ವಿಜ್ಞಾನಾಭಿಮಾನಿ ವಿರಿಂಚನದ್ವಾರಾ ಆನಂದಮಯನನ್ನು ಪೊಂದುವರು. ಘ್ರಾಣಾದಿ ಇಂದ್ರಿಯಸ್ಥಿತ ವಿರಿಂಚ ನಿಯಾಮಕ ಹರಿಯಿಂದ ಗಂಧಾಧಿತ್ವ ಸಾತ್ಮಸ್ಥಿತ ವಿರಿಂಚಿ ನಿಯಾಮಕ ಹರಿಯನ್ನು ಹೊಂದಿ ಶ್ವೇತದ್ವೀಪಾದಿಗಳಲ್ಲಿರುತ್ತಾ ಅವರು ಹಿಂದಿರುಗಿ ಬರುವುದಿಲ್ಲ.

ಇಂತು ಪಂಚಭೂತಗಳು ಪಂಚತನ್ಮಾತ್ರಾಗಳು, ಹತ್ತಿಂದ್ರಿಯಗಳು ಇವುಗಳ ಅಭಿಮಾನಿ ಗಳಿಂದ ಕೂಡಿ ಆಯಾ ತತ್ತ್ವಗಳಲ್ಲಿರುವ ತನ್ನ ರೂಪದಿಂದ ಮನೋಮಯನೆನಿಸಿದ ವಿರಿಂಚ ನನ್ನೂ ದೇವಪ್ರದಾನವಾದ ವಿವಿಧ ಕಾರ್ಯಕಾರಣನಾದ ಅಹಂಕಾರಸ್ಥ ವಿರಿಂಚನನ್ನೂ, ಬುದ್ಧಿಸ್ಥ ನಾದ ವಿರಿಂಚನನ್ನೂ ಆಯಾ ರೂಪದಿಂದ ಕರೆದುಕೊಂಡು ಶ್ರೀಶನು ತನ್ನಲ್ಲೇ ತಾನು ಲಯವನ್ನು ಹೊಂದುವನು. ವಿರಿಂಚನು ಸತ್ತ್ವಾದಿಗುಣರಹಿತನಾದ ತನ್ನ ಅಂತರ್ಯಾಮಿಯಿಂದ ಕೂಡಿ ಚಿತ್ತಸ್ಥನಾದ ಆನಂದಮಯನನ್ನು ಹೊಂದಿ ಸರ್ವಸ್ವಾಮಿಯಾದ ವಾಸುದೇವನಲ್ಲಿ ಸಾಯುಜ್ಯ ವನ್ನೈದುವನು. ಇಂತು ಭಗವಂತನನ್ನು ಪೊಂದಿದ ವಿರಿಂಚಾಧೀನರಾದ ಮುಕ್ತರು ಯಾರೂ ಮತ್ತೆ ಹುಟ್ಟುಸಾವುಗಳನ್ನು ತಂದುಕೊಡುವ ಸಂಸಾರವನ್ನು ಪೊಂದುವುದಿಲ್ಲ. ರಾಜನ್! ಈ ಮಾರ್ಗಗಳನ್ನು ನೀನು ಕೇಳಲು ಪೇಳಿರುವೆನು. ಇವು ವೇದಪ್ರಸಿದ್ಧವಾಗಿವೆ. ಬ್ರಹ್ಮದೇವನು ಆರಾಧಿಸಿ ಬೇಡಲು ಶ್ರೀ ವಾಸುದೇವನವನಿಗೆ ಪೇಳಿದ ಈ ಮಾರ್ಗದ್ವಯವನ್ನು ಸಜ್ಜನ ಕರುಣೆ ಯಿಂದ ಭಗವಂತನಿಂದಲೇ ಹೇಳಲ್ಪಟ್ಟಿರುವದರಿಂದ, ಭಾಗವತವಂ ಬಿಟ್ಟಿನ್ನೊಂದು ಮಂಗಳಕರ ವಾದ ಶ್ರೇಯಸ್ಸಾಧನವಿಲ್ಲ. ಇದರಿಂದ ವಾಸುದೇವನಲ್ಲಿ ಭಕ್ತಿಯೋಗವು ಲಭಿಸುವುದು. ವೇದವ್ಯಾಸರೂಪೀ ವಾಸುದೇವನು ವೇದಗಳನ್ನು ಚೆನ್ನಾಗಿ ಪರಿಶೀಲಿಸಿ ನಿರ್ವಿಕಾರನಾದ ಹರಿ ಯಲ್ಲಿ ರತಿಯು ಪುಟ್ಟಲು ಭಾಗವತವೇ ಸಾಧನವೆಂದು ತಿಳಿದು ಅದನ್ನು ರಚಿಸಿದನು. ಶ್ರವಣಾದಿ ಗಳಿಂದ ಅದನ್ನೇ ಅಭ್ಯಸಿಸುವದರಿಂದ ಮೋಕ್ಷವು ಸಿಗುವದು. ಭಗವಂತನು ಸರ್ವಭೂತಗಳಲ್ಲಿ ಜೀವಭಿನ್ನನಾಗಿ ನಿಯಾಮಕನಾಗಿರುವನೆಂದು ಈ ಪುರಾಣಗಳಲ್ಲಿ ಹೇಳಿದೆ. ಸರ್ವಸ್ವತಂತ್ರನಾದ ಹರಿಯು ಅಸ್ವತಂತ್ರರಾದ ಬ್ರಹ್ಮಾದಿ ಜೀವಭಿನ್ನನೆಂಬುದು ಬುದ್ಧಿ ಪ್ರತ್ಯಕ್ಷದಿಂದಲೇ ತಿಳಿಯ ಬಹುದು. ಆ ಪರಿಯಿಂದಲೇ ರಚಿತವಾದ್ದರಿಂದಲೂ ವೇದಮೂಲವು ಆಪ್ತಿಮೂಲವು ಆದ್ದ ರಿಂದಲೂ ಭಾಗವತನು ಅವಶ್ಯವಾಗಿ ಅಭ್ಯಸನೀಯವೆನಿಸಿದೆ. ಆದ್ದರಿಂದ ರಾಜನ ! ಹರಿಯೇ ಸರ್ವಾತ್ಮನು, ಸರ್ವದೇಶಕಾಲಗಳಲ್ಲಿಯೂ ಶ್ರೋತವ್ಯನು, ಕೀರ್ತಿ ತವ್ಯನು, ಸ್ಮರ್ತವ್ಯನಾಗಿರು ವನು. ಸಜ್ಜನರ ಮುಖದಿಂದ ಭಗವಂತನ ಮತ್ತು ಆ ಸ್ವಾಮಿಯ ಭಕ್ತರ ಕಥಾಮೃತವನ್ನು ಶ್ರವಣದ್ರೋಣಗಳಲ್ಲಿ ತುಂಬಿಕೊಡು ಯಾರು ಪಾನಗೈಯುವರೋ ಅಂತಹ ಸುಜನರು ವಿಷಯಕಲುಷಿತವಾದ ಮನಸ್ಸನ್ನು ಶುದ್ಧೀಕರಿಸಿಕೊಂಡು ಆ ಹರಿಯ ಚರಣಾರವಿಂದ ಸನ್ನಿಧಿಯನ್ನು ಪೊಂದಿ ಸುಖಿಪರು.

## ೩. ಅನ್ಯದೇವೋಪಾಸನೆ – ಶೌನಕನ ಪ್ರಶ್ನೆ

ಶುಕನು ಮತ್ತೆ ಪೇಳಿದನು. ಮ್ರಿಯಮಾಣ ಮನುಜನ ಕರ್ತವ್ಯವನ್ನು ಕುರಿತು ನೀನು ಕೇಳಿದ್ದರಿಂದ ನಾನು ಹರಿಶ್ರವಣಾದಿಕವನ್ನು ವರ್ಣಿಸಿದೆನು. ಈಗ ಇತರ ದೇವತೆಗಳು ಕೊಡುವ ಫಲವೂ ಹರಿಚ್ಛಾಧೀನವಾದ್ದರಿಂದ ಹರ್ಯುಪಾಸನವೇ ಶ್ರೇಷ್ಠವೆಂಬುದನ್ನು ನಿರೂಪಿಸುವೆನು, ಕೇಳು. ಬ್ರಹ್ಮವರ್ಚಸ್ಸನ್ನು ಶೀಲಾಧ್ಯಯನಗಳನ್ನು ಬಯಸಿ ಬೃಹಸ್ಪತಿಯನ್ನು, ಇಂದ್ರಿಯಪಾಟವಕ್ಕಾಗಿ ಇಂದ್ರನನ್ನು, ಪ್ರಜೆಗಾಗಿ ಕಶ್ಯಪಾದಿ ಪ್ರಜಾಪತಿಗಳನ್ನು, ಸಂಪತ್ಕಾಮನು ಶ್ರೀದೇವಿಯನ್ನು, ತೇಜಸ್ಸನ್ನು ಬಯಸಿ ಅಗ್ನಿಯನ್ನು, ವಸುವನ್ನು ಬೇಡಿ ವಸುಗಳನ್ನು, ವೀರ್ಯಕಾಮನು ದಕ್ಷಾದಿಗಳನ್ನು, ಅನ್ನಾದಿಗಳಿಗಾಗಿ ಅದಿತಿಯನ್ನು, ಸ್ವರ್ಗವನ್ನು ಬೇಡಿ ದೇವತೆಗಳನ್ನು ರಾಷ್ಟ್ರಕಾಮನು ವಿಶ್ವೇದೇವರನ್ನು, ವೈಶ್ಯರನ್ನು ಸಾಧಿಸಲು ಸಾಧ್ಯರನ್ನೂ, ಆಯುಸ್ಸಿನಗೋಸ್ಕರ ಅಶ್ವಿನೀದೇವದ್ವಯವನ್ನು ಪುಷ್ಟಿಕಾಮನು ಭೂದೇವಿಯನ್ನು ಸ್ಥಿರಸ್ಥಾನವು ಬೇಕಾದರೆ ಲೋಕದ ತಾಯಿ–ತಂದೆಯರೂ ದ್ಯಾವಾಪೃಥಿವೀನಿಯಾಮಕರಾದ ಭಾರತೀ–ಪ್ರಾಣರನ್ನೂ, ರೂಪವನ್ನು ಕೋರಿ ಗಂಧರ್ವರನ್ನೂ, ಸ್ತ್ರೀಯರನ್ನು ಬೇಡಿ ಊರ್ವಶಿಯನ್ನು, ಅದಿಪತ್ಯವನ್ನು ಪಡೆಯಲು ಪರಮೇಷ್ಠಿಯನ್ನು, ಯಶಃಕಾಮನು ಇಂದ್ರನನ್ನು, ನಿಧಿಯನ್ನು ಬೇಡಿ ವರುಣನನ್ನು, ವಿದ್ಯಾಕಾಮನು ಶಂಕರನನ್ನು ದಾಂಪತ್ಯಪ್ರೀತಿಕಾಮನು ಉಮಾದೇವಿಯನ್ನೂ, ಅವರವರ ತಂತ್ರಶಾಸ್ತ್ರದಲ್ಲಿ ಪೇಳಿದ ಮಂತ್ರದ್ರವ್ಯಗಳಿಂದ ಉಪಾಸಿಸಬೇಕು. ಅಂತೆಯೇ ಅಕ್ಷಯಪುಣ್ಯಫಲಕ್ಕಾಗಿ ಉತ್ತಮ ಶ್ಲೋಕನಾದ ಹರಿಯನ್ನೂ ಉಪಾಸಿಸಬೇಕು, ಸಂತಾನವೃದ್ಧಿಗಾಗಿ ಪಿತೃಗಳನ್ನೂ ರಕ್ಷಾಕಾಮನು ಮಣಿಭದ್ರಾದಿ ಯಕ್ಷರನ್ನೂ, ಓಜಸ್ಕಾಮನು ಮರುದ್ಗಣವನ್ನೂ, ರಾಜ್ಯ ಕಾಮನು ಮನುಗಳನ್ನೂ, ಅಭಿಚಾರಹೋಮಾದಿಗಳಲ್ಲಿ ನಿರ್ಋತಿಯನ್ನೂ ಕಾಮವನ್ನು ಬಯಸಿ ಚಂದ್ರನನ್ನೂ ನಿಷಿದ್ಧಕಮರಹಿತನಾಗಲು ವಿಷ್ಣುವಿನನ್ನು ಪೂಜಿಸಬೇಕು. ಭಗವತ್ಪ್ರಸಾದವನ್ನು ಬಿಟ್ಟನ್ಯಕಾಮವಿಲ್ಲದವನಾಗಲಿ, ಮೇಲೆ ಹೇಳಿದ ಎಲ್ಲಾ ಕೋರಿಕೆಗಳಿಂದಾಗಲಿ ಮೋಕ್ಷಕಾಮನೇ ಆಗಲಿ ತೀವ್ರವಾದ ಭಕ್ತಿಯಿಂದ ಶ್ರೀ ಹರಿಯನ್ನು ಭಜಿಸಲು ಎಲ್ಲವೂ ಸಿದ್ಧಿಸುವುದು. ಕರ್ಮಭೂಮಿಯಲ್ಲಿ ಯಾವ ಯಜ್ಞವೇ ಮಾಡಲಿ ಅದರಿಂದ ನಿಃಶ್ರೇಯವಾಗಬೇಕಾದರೆ ಭಾಗವತರ ಸಂಗದಲ್ಲಿ ದೊರಕುವ ಅಚಲವಾದ ಭಗವದ್ಭಕ್ತಿಯಿಂದಲೇ ಆಗಲಿ ಅನ್ಯಕಾರಣವಿಲ್ಲ. ಹರಿಯ ಕಥೆಯನ್ನು ಕೇಳುವುದರಿಂದ ಮಹಾಫಲವಿದೆ. ಮಹಾರಾಜಾ! ಭಗವತ್ ಪರೋಕ್ಷಜ್ಞಾನವು ಆಗಿ ಸತ್ವಾದಿ ಗುಣನಿಮಿತ್ತವಾದ ಹಸಿವೆ ನೀರಡಿಕೆ ಶೋಕ, ಮೋಹ, ರಾಗ, ದ್ವೇಷಗಳೆಂಬ ಅಲೆಗಳ ಸುಳಿಯು ಅಳಿಸಿಹೋಗುವದು. ಅದರಿಂದ ಮನೋನೈರ್ಮಲ್ಯವು ಅದರಿಂದ ಐಹಿಕಾಮುಷ್ಮಿಕ ವೈಷಯಿಕ ಸುಖಗಳೆಂಬುವ ಫಲದಲ್ಲಿ ಸ್ನೇಹರಾಹಿತ್ಯರೂಪ ವೈರಾಗ್ಯವು ಅದರಿಂದ ಕೈವಲ್ಯಸಾಧಕವಾದ ಅಪರೋಕ್ಷ ಜ್ಞಾನವು ಅದನ್ನನುಸರಿಸಿ ರಾಜಮಾರ್ಗವೆನಿಸುವ ಭಕ್ತಿಯೋಗವು ಲಭಿಸುವುದು, ಅಂದಮೇಲೆ ಯಾವ ರಸಜ್ಞನಾದ ಪುರುಷನು ಹರಿಕಥಾಶ್ರವಣದಲ್ಲಿ ಶ್ರದ್ಧೆಯನ್ನು ವಹಿಸಲಾರನು?

ಆಗ ಶೌನಕನು ಕೇಳಿದನು :

“ಇಂತು ನಿರೂಪಿಸಿದ ಶುತರನ್ನು ಕಂಡು ಮಹಾರಾಜನು ವಿಶಾಲದರ್ಶಿಯೂ ಅಪರೋಕ್ಷ ಜ್ಞಾನಿಯೂ ಆದ ಅವನನ್ನು ಇನ್ನಾವ ವಿಷಯವನ್ನು ಪೇಳೆಂದು ಕೇಳಿದನು? ಸತ್ಸಭೆಯಲ್ಲಿ

ಹರಿಯ ಗಾಥೆಯೇ ನಡೆಯುವುದಲ್ಲವೇ? ಶ್ರದ್ಧೆಯಿಂದ ಕೇಳುವ ನಮಗೆ ಅದನ್ನು ಹೇಳು. ಆ ರಾಜನಾದರೋ ಪಾಂಡವೇಯನು. ಮಹಾರಥನು, ಭಾಗವತಶ್ರೇಷ್ಠನು. ಬಾಲ್ಯದಿ ಆಟಗಳಲ್ಲಿಯೂ ಕೃಷ್ಣಪೂಜೆಯ ಆಟಗಳನ್ನೇ ಆಡಿದನಂತೆ! ವ್ಯಾಸಪುತ್ರನೂ ಪೂಜ್ಯನು ವಾಸುದೇವ ಪರಾಯಣನು. ದೋಷರಹಿತನಾದ ಉರುಗಾಯನ ಕಥೆಯನ್ನವನು ಹೇಳಲು ರಾಜನು ಕೇಳಿದನು. ಸೂತಾ! ಈ ಸೂರ್ಯನು ಹುಟ್ಟಿ ಮುಳುಗುತ್ತಾ ಆಯಸ್ಸನ್ನೇ ಹರಿಸಿಕೊಂಡು ಹೋಗುತ್ತಿರುವನು! ಉತ್ತಮ ಶ್ಲೋಕನ ಕಥೆಯನ್ನು ಕೇಳಿದ ದಿನವು ವ್ಯರ್ಥವೇ ಸರಿ! ಹರಿಚರಿತ ಶ್ರವಣವಿಲ್ಲದ ಚೇತನತ್ವವು ಕೂಡ ಅಪ್ರಯೋಜಕವೇ ಆಗಿದೆ. ನೋಡು! ಗಿಡಗಳೂ ಬದುಕುತ್ತಿವೆ. ಕಮ್ಮಾರ ತಿತ್ತಿಗಳೂ ಉಸಿರಾಡುತ್ತಿವೆ. ಹಂದಿ, ನರಿ, ನಾಯಿಗಳೂ ಉಣ್ಣುತ್ತಿವೆ, ಮಲವಂ ವಿಸರ್ಜಿಸುತ್ತಿವೆ ; ಅಂತೆಯೇ ನರರು ಬದುಕಲು ಏನು ಪ್ರಯೋಜನವು? ಒಂದು ಜನ್ಮದಲ್ಲೊಂದು ದಿನವಾದರೂ ಗೋವಿಂದನ ಕಥೆಯನ್ನು ಕೇಳದವನು ಪಶುವೇ ಸೈ. ಅಷ್ಟೇ ಅಲ್ಲ, ನಾಯಿಯಂತೆ ಕೊಳೆನನ್ನುಂಡು ಬಾಗಿಲು ಕಾಯುವನು. ಹಂದಿಯಂತೆ ನಿವೇದಿತವಲ್ಲದ ಇತರ ಭುಕ್ತಶೇಷವನ್ನುಂಡು ಅಸಹ್ಯದಿಂದ ಜೀವಿಸುವನು. ಒಂಟೆಯಂತೆ ಕಾಲಕಾಲದಿ ಅನ್ನಪಾನೀಯ ಸೌಖ್ಯವಿಲ್ಲದೇ ತಿರುಗುವನು. ಕತ್ತೆಯಂತೆ ಭಾರವನ್ನು ಹೊರುವನು. ಇಂತಹ ವಿವೇಕಹೀನ ನಿನ್ನಾರು? ಹರಿಮಹಿಮೆಯನ್ನು ಕೇಳದ ಕಿವಿಗಳು ಬಚ್ಚಲಗುಣಿಗಳೇ ಸರಿ! ಉರುಗಾಯನನ್ನು ಪೊಗಳದ ನಾಲಿಗೆ, ಅಪತಿವ್ರತೆಯಂತೆ ಅಮಂಗಳವೂ ಅಹುದು. ಕಿರೀಟವಿಟ್ಟರೇನು, ಮುಕುಂದನಿಗೆ ವಂದಿಸದ ತಲೆಯು ವ್ಯರ್ಥಭಾರವೇ ಎನಿಸುವದು. ಕಾಂಚನಕಂಕಣಗಳಿದ್ದರೂ ಹರಿಸೇವೆಯನ್ನು ಮಾಡದ ಕೈಗಳು ಶವದ ಕೈಗಳಂತೆಯೇ ಸರಿ. ಹರಿಮೂರ್ತಿಯನ್ನು ನೋಡದ ಕಣ್ಣು ನವಿಲಿನ ಗರಿಗಣ್ಣುಗಳಂತೆ ನಿಷ್ಫಲವು. ವಿಷ್ಣುಕ್ಷೇತ್ರ ಸಂಚಾರವನ್ನು, ಹರಿಗೆ ಪ್ರದಕ್ಷಿಣೆಯನ್ನು ಮಾಡದ ಕಾಲು ಶುನಕನ ಹಿಂಗಾಲಿನಂತೆ ನಿಂದ್ಯವು. ಗಿಡವಾಗಿ ಕದಲದಿರುವುದೇ ಅಂತಹ ಕಾಲುಗಳಿಗಿರುವುದರಿಂದ ಲೇಸು. ಭಾಗವತರ ಪಾದರಜವನ್ನು ಧರಿಸಿದ ಮನುಜನು ಜೀವಚ್ಛವವೇ ಸರಿ! ಶ್ರೀಹರಿಪಾದಸಮರ್ಪಿತ ತುಳಸಿಯನ್ನು ಮೂಸಿ ನೋಡದಿರುವವನು ಹೆಣವೇ ಸೈ. ಹರಿನಾಮಧೇಯಂಗಳನ್ನು ಕೇಳಿ ಕರಗದ ಹೃದಯವದೊಂದು ದೊಡ್ಡ ಕಲ್ಲು. ಮುಖದಲ್ಲಿ ಪ್ರಸನ್ನತೆಯು ಇಲ್ಲ. ನೇತ್ರಗಳಲ್ಲಾನಂದ ಬಾಷ್ಪವಿಲ್ಲ; ಗಾತ್ರದಲ್ಲಿ ರೋಮಾಂಚವಿಲ್ಲ. ಇಂತಹನು ಮಾನವನೇ? ಆದ್ದರಿಂದ ಭಗವದ್ಭಕ್ತರಲ್ಲಿ ಉತ್ತಮನಾದ ನಿನ್ನನ್ನು ಕೇಳಿಕೊಳ್ಳುವೆವು. ನಮ್ಮ ಮನಸ್ಸಿಗೆ ಹಿಡಿಸುವಂತೆ ಹೇಳುತ್ತಿರುವಿ. ಆತ್ಮವಿದ್ಯಾವಿಶಾರದನಾದ ಶುಕನು ರಾಜನ ಸಾಧುವಚನಗಳಿಗೆ ಏನೆಂದುತ್ತರವನ್ನು ಕೊಟ್ಟನು? ಅದನ್ನು ನಮಗೆ ಹೇಳು.

## ೪. ರಾಜಪ್ರಶ್ನೆ – ಶುಕರ ಮಂಗಲಾಚರಣೆಯು

ಸೂತನು ಪೇಳಿದನು : –

"ಗುಣಪೂರ್ಣನಾದ ಪರಮಾತ್ಮನ ತತ್ವವನ್ನು ನಿರ್ಣಯಿಸಿ ನಿರೂಪಿಸುವ ಶ್ರೀಶುಕನ ವಾಕ್ಯವನ್ನು ಕೇಳಿ, ಕೃಷ್ಣನಲ್ಲೇ ಮನವನ್ನು ತಾಳಿ, ಉತ್ತರಾಪುತ್ರನು ಭಕ್ತಿಪರಿಪ್ಲುತನಾದನು. ದೇಹ, ಪತ್ನಿ, ಪುತ್ರರು, ಮನೆ, ಪಶುಗಳು, ಸಪ್ತಪ್ರಕೃತಿ ಪೂರ್ಣವಾಗಿ ಶತ್ರುಪೀಡೆಯೇ ಇಲ್ಲದ ರಾಜ್ಯವೇ ಮೊದಲಾದ ವಿಷಯಗಳಲ್ಲಿ ನಿರೂಢವಾಗಿದ್ದ ಸ್ವಲ್ಪವಾದ ಅಭಿಮಾನವನ್ನು

ತ್ಯಜಿಸಿದನು. ನೀನು ಕೇಳಿದಂತೆ ಶುಕನನ್ನೂ ಕೇಳಿಕೊಂಡನು. ಕೃಷ್ಣನ ಮಹಿಮೆಯನ್ನು ಕೇಳುವ ಶ್ರದ್ಧೆಯಿಂದ ಧರ್ಮಾರ್ಥಕಾಮಫಲಗಳನ್ನು ಬಿಟ್ಟನು. ಮಹಾಕೀರ್ತಿಶಾಲಿಯಾದ ಆ ರಾಜನು ಭಗವಂತನಾದ ವಾಸುದೇವನಲ್ಲಿ ದೃಢಭಕ್ತಿಯನ್ನು ಪೊಂದಿದನು. ಆತ್ಮಪ್ರಭುವೆಂದು ತಿಳಿದು ಗೋವಿಂದನಿಗೆ ವಂದಿಸಿ ಶುಕನನ್ನು ಕೇಳಿಕೊಂಡನು.

"ಬ್ರಹ್ಮಜ್ಞಾನಿಯೇ! ಸರ್ವಜ್ಞನಾದ ನಿನ್ನ ವಚನವು ಅಮೋಘವಾಗಿದೆ. ನನ್ನ ಅಜ್ಞಾನವೇ ನಷ್ಟವಾಗುತ್ತಿದೆ. ಹರಿಜ್ಞಾನಪ್ರದವಾದ ಕಥೆಯನ್ನು ಹೇಳು. ಬ್ರಹ್ಮಾದಿ ಲೋಕೇಶರಿಂದ ಮಾಡಲಸದಳವಾದ ಈ ವಿಶ್ವಸೃಷ್ಟಿಯನ್ನು ಸ್ವೇಚ್ಛೆಯಿಂದ ಲೀಲಾಜಾಲವಾಗಿ ಮಾಡುವನಂತೆ. ಅದೆಂತು? ಆ ರಮಾರಮಣನ ಮಹಿಮೆಯನ್ನು ಹೇಳು. ಸ್ಥಿತಿಯನ್ನು ಸಂಸಾರ ರಚನೆಯನ್ನು ಹೇಗೆ ಮಾಡುವನು? ಪೂರ್ಣಾನಂತಶಕ್ತಿವಂತನಾದ ಪ್ರಭುವು ಯಾವ ಯಾವ ರಮಾದಿ ದೇವತೆಗಳಿಂದ ಕೂಡಿ ಯಾವ ಯಾವ ಕಾರ್ಯವನ್ನು ಮಾಡುವನು? ಜೀವನಿಗೆ ಸಂಸಾರವನ್ನು ಕೊಟ್ಟು ತಾನು ಮಾತ್ರ ಅವತರಿಸಿ ಶುದ್ಧನಾಗಿಯೇ ಇರುತ್ತಾ ಏನು ವಿಶೇಷ ಕಾರ್ಯವನ್ನಾ ಚರಿಸುವನು? ಅದ್ಭುತಕರ್ಮನಾದ ಹರಿಯ ಚೇಷ್ಟೆಯು ಜ್ಞಾನಿಗಳಿಗೂ ತಿಳಿಯಲಸದಳವೆಂದ ಮೇಲೆ ಇನ್ನು ಪಾಮರರ ಪಾಡೇನು; ಪ್ರಕೃತಿಯ ಪರಸ್ಪರ ವಿರುದ್ಧ ಗುಣವನ್ನು ಹರಿಯು ಸ್ವೀಕರಿಸುವದೊಂದೇ ಕಾಲದಲ್ಲೋ? ಅಥವಾ ಕ್ರಮವಾಗಿಯೋ? ಅವತರಿಸಿ ಮಾಡುವ ಕರ್ಮಗಳೇನು? ಗುಣಗಳನ್ನೆಂತು ಧರಿಸುವನು? ನೀನು ವೇದದಲ್ಲಿ ಪಂಡಿತನು, ವೇದವೇದ್ಯ ನನ್ನರಿತವನು. ಈ ನನ್ನ ಸಂಶಯವನ್ನು ಸರಿಯಾಗಿ ಬಿಡಿಸಿ ನನ್ನನ್ನುದ್ಧರಿಸು."

ಎಂದು ರಾಜನಿಂದ ಶ್ರೀ ಹರಿಗುಣಕಥನವನ್ನು ಮಾಡೆಂದು ಪ್ರಶ್ನಿಸಲ್ಪಟ್ಟ ಶ್ರೀಶುಕನು ವಾಗಾದೀಂದ್ರಿಯಗಳ ಒಡೆಯನಾದ ಹೃಷಿಕೇಶವನ್ನು ಸ್ಮರಿಸಿ ಹೇಳಲುಪಕ್ರಮಮಿಸಿದನು.

ಶುಕಕೃತ ಭಾಗವತ ಮಂಗಲಾಚರಣೆಯು :

ಸತ್ಯವಾದ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡಲು ಲೀಲೆಯಿಂದ ಇಚ್ಛಾಜ್ಞಾನ ಕ್ರಿಯಾಶಕ್ತಿಗಳನ್ನು ಸ್ವೀಕರಿಸಿ, ಜೀವರಿಗೆ ಹೃದಯದಲ್ಲೇ ಇದ್ದರೂ ಚಕ್ಷುರಾದಿಗಳಿಂದ ತಿಳಿಯಲ್ಪಡದೆ ಜೀವಭಿನ್ನನಾಗಿ ವಾಸಿಸುವ ವೇದ್ಯೈಕವೇದ್ಯನಾದ ಪರಮಪುರುಷನಿಗೆ ನಮಸ್ಕಾರವು. ಸಜ್ಜನರ ಅನಿಷ್ಟವನ್ನು ಪರಿಹರಿಸಿ ಅಸಜ್ಜನರಿಗೆ ತಾಪಕರನಾದ ಎಲ್ಲ ಅವತಾರಗಳಲ್ಲಿಯೂ ಸಾಧುಗುಣ ಪೂರ್ಣನಾದ, ಪರಮಹಂಸರಿಗೆ ತಾನಾಗಿ ನಿಜಾನುಭಾವಾನಂದಲಕ್ಷಣ ಮೋಕ್ಷವನ್ನು ಕೊಡುವ ಪಾಪವೈರಿಯಾದ ಶ್ರೀಹರಿಗೆ ನಮಸ್ಕಾರವು. ಅನುತ್ಪನ್ನಜ್ಞಾನರಿಗೆ ಜ್ಞಾನಭಾಸಕನಾದ, ಐಕ್ಯಜ್ಞಾನಿಗಳಿಗೆಂದಿಗೂ ಸಿಗದೆ ದೂರನಾದ, ಸಮರು ಅಧಿಕರಿಲ್ಲದ, ವೈಭವದಿಂದ ತನ್ನಲ್ಲಿ ತಾನೇ ರಮಿಸುವ ಚಿದಾನಂದೈಕರಸನಾದ, ರಮಾಪತಿಗೆ ನಮೋ ನಮಃ, ಯಾರ ವಂದನೆ,ಕೀರ್ತನೆ, ಶ್ರವಣ, ದರ್ಶನ, ಸ್ಮರಣೆ ಪೂಜೆಗಳು, ಭಕ್ತಿಪೂರ್ವಕವಾಗಿದ್ದರೆ ತತ್‌ಕ್ಷಣದಲ್ಲಿ ಸಮಸ್ತ ಪಾಪಗಳನ್ನು ಕಳೆಯುವವೋ ಅಂತಹ ಪರಮ ಮಂಗಲ ಕೀರ್ತಿಗೆ ನಮಃ. ವಿವೇಕಿಗಳು ಯಾರ ಚರಣಾರವಿಂದವನ್ನಾಶ್ರಯಿಸಿ ಇಹಪರ ವಿಷಯಸಂಗವನ್ನು ಬಿಟ್ಟು ಬ್ರಹ್ಮಜ್ಞಾನವನ್ನು ಅದರಿಂದ ಮೋಕ್ಷವನ್ನು ಪೊಂದಿ ಸುಖಿಪರೋ ಅಂತಹ ಮಂಗಲಯಶೋಧಾಮನಿಗೆ ವಂದನವು. ತಪೋವಂತರು ದಾನವಂತರು ಕೀರ್ತಿವಂತರು ಮಾಂಗಲಿಕ ಕಾರ್ಯರತರು. ಯಾರ ಚರಣದಲ್ಲಿ ತಮ್ಮ ಕಾರ್ಯಫಲವನ್ನರ್ಪಿಸಿದರೆ ಕ್ಷೇಮವನ್ನು ಪೊಂದಲಾರರೋ ಅಂತಹ ಪುಣ್ಯಶ್ರವಣನಿಗೆ ನಮಃ! ಕಿರಾತಹೂಣಾಂಧ್ರಪುಲಿಂದಪುಲ್ಕಸರಾಗಲಿ, ಆಭೀರಕಂಕರಾಗಲಿ, ಯವನಶಕಾದಿ

ಗಳಾಗಲಿ. ಪಾಪಕಾರಣದಿಂದ ಬಂದ ಪಾಪಯೋನಿಯಲ್ಲಿ ಜನಿಸಿದ ಯಾರೇ ಆಗಲಿ, ಅವನ ಪಾದವನ್ನು ನಂಬಿದ ಬ್ರಾಹ್ಮಣಾದಿಗಳನ್ನಾಶ್ರಯಿಸುವುದರಿಂದ ಶುದ್ಧರಾಗುವರೋ ಅಂತಹ ಪ್ರಭುವಿಗೆ ಮಹಾಮಹಿಮನಿಗೆ ನಮಸ್ಕಾರವು. ಅಪರೋಕ್ಷ ಜ್ಞಾನಿಗಳಿಗೂ ಮುಕ್ತರಿಗೂ ಒಡೆಯನಾದ, ವೇದಮಾರ್ಗಾನುವರ್ತಿಗಳ ರಕ್ಷಕನಾದ, ಧರ್ಮಪಾಲಕನಾದ, ತಪಃಫಲನಾದ ಶ್ರೀಹರಿಗೆ ನಮಸ್ಕಾರವು. ಅನ್ಯತಕಾಪಟ್ಯಗಳನ್ನರಿಯದೆ ತನ್ನನ್ನು ಭಜಿಸುವ ಬ್ರಹ್ಮರುದ್ರ ಪ್ರಮುಖ ಜಿಜ್ಞಾಸ್ಯನಾದ ಜಗಜ್ಜನ್ಮಾದಿಕಾರಣನು ನಮಗೆ ಪ್ರಸನ್ನನಾಗಲಿ. ಶ್ರೀಪತಿಯು ಯಜ್ಞಫಲದನು, ಪ್ರಜಾಜೀವನದಾತನು, ಜ್ಞಾನದಾಯಿಯು, ಸರ್ವಲೋಕಪಾಲಕನು, ಕ್ಷಮಾ ಸಮುದ್ರನು, ಅಂಧಕವೃಷ್ಣಿಸಾತ್ವತರ ಪತಿಯು, ಭಕ್ತವತ್ಸಲನೂ ಆದ ಭಗವಂತನೆಮಗೆ ಪ್ರಸನ್ನ ನಾಗಲಿ! ವಿಷಯೋಪರಕ್ತವಾಗದ ಧ್ಯಾನದಿಂದ ಶುದ್ಧಬುದ್ಧಿಗಳಾದ ಜ್ಞಾನಿಗಳು ತಮಗೆ ತೋಚಿ ದಂತೆ ಮನೋಹರವಾಗಿ ಯಾರ ಚರಣಾರವಿಂದವನ್ನು ವರ್ಣಿಪರೋ ಅಂತಹ ಮೋಕ್ಷಪ್ರದನೂ ಸರ್ವಸ್ವಾಮಿಯೂ ಮಮಸ್ವಾಮಿಯೂ ಆದ ಶ್ರೀಹರಿಯು ಪ್ರಸನ್ನನಾಗಲಿ! ಪೂರ್ವದಲ್ಲಿ ಸರ್ಗಾದಿಯಲ್ಲಿ ಮಗನಾದ ಬ್ರಹ್ಮದೇವನಿಗೆ ಜ್ಞಾನವನ್ನು ಉತ್ತಮಗದಿಯನ್ನು ಕೊಡುವ ಸಂಕಲ್ಪದಿಂದ ವೇದವನ್ನು ವಿಸ್ತಾರಮಾಡಿ ಉಪದೇಶಿಸಿದ ನಾರಾಯಣಋಷಿಗೂ, ವೇದವಿಭಾಗ ಮಾಡಿ ವಿಸ್ತರಗೊಳಿಸಿ ಪರಾಶರಾದಿಗಳ ಜ್ಞಾನವನ್ನು ಸ್ತಿಮಿತಗೊಳಿಸಿದ, ಮತ್ತು ಹತ್ತು ಲಕ್ಷಣ ಗಳುಳ್ಳ ಸರ್ವವೇದಸಂವಾದವಾದ ಶ್ರೀ ಭಾಗವತವನ್ನು ರಚಿಸಿ ನನಗೆ ಪೇಳಿದ ಶ್ರೀ ವೇದವ್ಯಾಸ ಋಷಿವರನಿಗೂ ನಮಸ್ಕರಿಸಿ ಅವರು ಪ್ರಸನ್ನರಾಗಲಿ ಎಂದು ಬೇಡಿಕೊಂಬುವೆನು. ವ್ಯಾಪ್ತವಾದ ಪೃಥಿವ್ಯಾದಿ ಭೂತಗಳಿಂದ ಈ ಶರೀರಗಳನ್ನು ನಿರ್ಮಿಸಿ ಅವುಗಳಲ್ಲಿ ಅಂತರ್ಯಾಮಿಯಾಗಿದ್ದು ನಡೆಸುವದಲ್ಲದೆ ಹನ್ನೊಂದು ಇಂದ್ರಿಯಗಳು ಐದು ಭೂತಗಳಿಂದ ಅನುಭವಿಸುವ ಭೋಗಗಳ ಸುಖಸಾರವನ್ನು ಮಾತ್ರ ಸ್ವೀಕರಿಸುವ ಶ್ರೀಹರಿಯು ನನ್ನ ಈ ಮಾತುಗಳು ತನಗೆ ಪ್ರೀತಿಜನಕ ವಾಗುವಂತೆ ಮಾಡಲಿ! ವಾಸುದೇವನಿಗೆ ನಮಃ, ಬ್ರಹ್ಮದೇವರಿಗೆ ನಮಃ, ಭಕ್ತಿಸೋಮಾರ್ಹರಾದ ಬ್ರಹ್ಮಾದಿಗಳು, ನಾರದಾದಿಗಳು, ವೈಶಂಪಾಯನಾದಿಗಳು, ಉದ್ಧವಾದಿಗಳು ಮೊದಲಾದವರಿಗೆ ತನ್ನ ಮುಖಾರವಿಂದ ನಿಃಸೃತಭಾಗವತಾಮೃತವನ್ನು ಅನುಗ್ರಹಿಸಿದ ಶ್ರೀ ವೇದವ್ಯಾಸ ಭಗವಂತನಿಗೆ ನಮಸ್ಕಾರವು. ರಾಜನ್! ಅದೇ ಭಾಗವತವನ್ನೇ ನಾರದನು ಕೇಳಿಕೊಳ್ಳಲು ವೇದಗರ್ಭನಾದ ಬ್ರಹ್ಮದೇವನು ತನಗೆ ನಾರಾಯಣನು ಪೇಳಿದಂತೆಯೇ ಅರ್ಥವ್ಯತ್ಯಾಸವಿಲ್ಲದೆ ಪೇಳಿದನು.

## ೫. ನಾರದ – ಬ್ರಹ್ಮ ಸಂವಾದವು

ನಾರದನು ಬ್ರಹ್ಮನನ್ನು ಕೇಳಿದನು –

ದೇವದೇವ! ಸೃಷ್ಟಿಕರ್ತ! ನಿನಗೆ ನಮಸ್ಕಾರವು! ಜಗಜ್ಜನ್ಮಾದಿಕಾರಣನಾದ ಪರಮಾತ್ಮನ ಸ್ವರೂಪವನ್ನು ತಿಳಿಸಿಕೊಡು! ಈ ಜಗತ್ತಿನ ಸ್ವರೂಪವೆಂತಹುದು? ಯಾರ ಆಶ್ರಯದಲ್ಲಿದೆ? ಯಾರೀ ಸೃಷ್ಟಿಯನ್ನು ಯಾವುದರಿಂದ ಮಾಡಿದರು? ಯಾರಲ್ಲಿದೆ? ಪಾಲಕನಾರು? ಲಯವೆಂತು? ಇದೆಲ್ಲವೂ ನಿನಗೆ ತಿಳಿದಿದೆ. ಹಿಂದಾದ, ಮುಂದಾಗುವ, ಈಗಿರುವ ಜಗತ್ತನ್ನು ಕೈಯಲ್ಲಿ ಹಿಡಿದ ನೆಲ್ಲಿಕಾಯಿಯನ್ನಂತೆ ಚೆನ್ನಾಗಿ ತಿಳಿದಿರುವೆ! ಇಂತಹ ನಿನಗೆ ವಿಜ್ಞಾನವು ಯಾರ ಅನುಗ್ರಹದಿಂದ? ಯಾರು ನಿನಗೆ ಆಶ್ರಯರು? ನಿನ್ನಕಿಂತ ಉತ್ತಮರಾರು? ಯಾರು ನಿನ್ನ

ಸ್ವಾಮಿ? ನನಗೆ ಹೇಳು? ನೀನೇ ಪಂಚಭೂತಗಳಿಂದ ಸ್ವೇಚ್ಛೆಯಿಂದ ಜೀವರನ್ನು ಸೃಷ್ಟಿಸುವಿಯಲ್ಲವೇ? ನಿನ್ನಲ್ಲೇ ಅವರನ್ನು ಬೆಳೆಸಿ ಪಾಲಿಸುವೆ. ನಿನ್ನ ಹೊರತನ್ಯರನ್ನೂ ನಾ ಕಾಣೆ. ಈ ಜಗವನ್ನು ಸ್ವಶಕ್ತಿಯಿಂದ ಜಾಡರ ಹುಳುವು ಗೂಡನ್ನು ಕಟ್ಟಿದಂತೆ ಅನಾಯಾಸವಾಗಿ ಸೃಜಿಸುವನು ನೀನೇ! ನಿನಗೆ ಸಮವಾಗಲಿ ಚಿಕ್ಕವರಾಗಲಿ ಜಗತ್ಕಾರಣರು ಮತ್ತಾರೂ ಇಲ್ಲವೆಂದೇ ತಿಳಿದಿರುವೆನು. ದೇವದತ್ತಾದಿ ನಾಮಗಳನ್ನು, ಶುಕ್ಲಾದಿ ರೂಪಗಳನ್ನು ಸತ್ವಾದಿ ಗುಣಗಳ ಕ್ರಿಯೆಗಳನ್ನು ಸ್ಥೂಲಸೂಕ್ಷ್ಮವಾದ ಯಾವುದೇ ವಸ್ತುವನ್ನು ನಿನ್ನ ಹೊರತನ್ಯರಿಂದ ಸೃಷ್ಟವಾದದ್ದನ್ನು ನಾ ಕಾಣೆ. ಆದರೆ ಅಂತಹ ನೀನೂ ಕೂಡ ಶ್ರದ್ಧೆಯಿಂದ ಘೋರತರವಾದ ತಪಸ್ಸು ಮಾಡುತ್ತಿರುವೆ. ಯಾರನ್ನುದ್ದೇಶಿಸಿ ನಿನ್ನ ಈ ತಪಸ್ಸು? ಆದುದರಿಂದ ನನಗೆ ಸಂಶಯವು ಒದಗಿದೆ. ನಿನ್ನ ವಿಷಯವಿನ್ನೂ ತಿಳಿದಿಲ್ಲವೆಂಬ ಖೇದವಾಗುತ್ತಿದೆ. ಸರ್ವಜ್ಞ! ನನಗೆ ಚೆನ್ನಾಗಿ ತಿಳಿಯುವಂತೆ ದಯಮಾಡಿ ಎಲ್ಲವನ್ನೂ ಹೇಳು.

ಎನ್ನಲಾಗಿ ಬ್ರಹ್ಮನು ಹೇಳಿದನು.

ನಾರದಾ! ನಿನ್ನ ಪ್ರಶ್ನೆಯು ಚೆನ್ನಾಗಿದೆ. ಲೋಕದ ಜನರಿಗೆ ನಿಜವಾದ ಜ್ಞಾನವು ತಿಳಿಯಲಿ ಎಂದು ಕರುಣೆಯಿಂದ ಕೇಳಿದೆಯಲ್ಲವೇ? ನಾನಾದರೂ ಶ್ರೀ ಭಗವಂತನ ಮಹಿಮೆಯನ್ನು ವರ್ಣಿಸುವಂತೆ ಆಯಿತು. ಅಲ್ಲ ಹೇಳು! ನೀನು ಅಂದಮಾತು ಸುಳ್ಳಲ್ಲವೆ! ವತ್ಸಾ! ಆ ಮಾತು – ನಾನು ಸರ್ವೋತ್ತಮನೆನ್ನುವ ಮಾತು - ಕೇಳಿ ಖಿನ್ನನಾಗಿರುವೆನು. ಈ ನನ್ನ ಮಹಿಮೆ ಶಕ್ತಿ ಎಲ್ಲವೂ ಯಾರಿಂದ ಬಂದಿರುವುದೋ ಅಂತಹ ಪ್ರಭುವನ್ನು ಮರೆತು ಎಂತಹ ಗರ್ಹಣೀಯವಾದ ಮಾತಾಡಿದೇ! ಸೂರ್ಯನಂತೆ ಚಂದ್ರನಂತೆ, ಗ್ರಹನಕ್ಷತ್ರಗಣದಂತೆ, ಸ್ವಪ್ರಕಾಶನಾದ ಆ ಪರಮಾತ್ಮನ ಕಾಂತಿಯಿಂದ ಬೆಳಗಿದ ವಿಶ್ವವನ್ನು ನಾನವನ ಆಜ್ಞೆಯಿಂದ ಬೆಳಗುತ್ತಿರುವೆನಷ್ಟೆ! ನಾನವನ ದಾಸನು! ಆ ಭಗವಂತನಾದ ವಾಸುದೇವನಿಗೆ ವಂದಿಸಿ ಧ್ಯಾನಿಸುವೆನು. ಕೇಳು. ಅವನ ಬಂಧಕಶಕ್ತಿಗೆ ಒಳಗಾಗಿ ಕೆಲವರ ಜ್ಞಾನಿಗಳು ನನ್ನೇ ಜಗದ್ಗುರುವೆಂಬುವರು. ಚಿತ್ಪ್ರಕೃತ್ಯಭಿಮಾನಿನಿಯಾದ ನಮ್ಮ ತಾಯಿ ಲಕ್ಷ್ಮೀದೇವಿಯು ಕೂಡ ಅವನ ದೃಷ್ಟಿಮಾರ್ಗದಲ್ಲಿ ಲಜ್ಜಾ ಭಯಗಳಿಂದ ನಿಲ್ಲುವದಿಲ್ಲವಲ್ಲಾ! ಹೀಗಿರಲು ಹರೀಚ್ಛೆ, ಪ್ರಕೃತಿ, ಬಂಧಕಶಕ್ತಿಗಳೆಂದು ಮೂರು ರೂಪವಾದ ಮಾಯಾಶಕ್ತಿಯಿಂದ ವಂಚಿತರಾದ ಮೂಢರು ನಾನು – ನನ್ನದೆಂದು ಹೇಳುವರು. ಪೃಥಿವ್ಯಾದಿ ದ್ರವ್ಯಗಳು, ಪುಣ್ಯಪಾಪ ಕರ್ಮಗಳು, ತ್ರುಟಿಲವಾದ ಕಾಲವು, ಸಾತ್ವಿಕಾದಿ ಸ್ವಭಾವವುಳ್ಳ ಸುಖದುಃಖಾಶ್ರಯರಾದ ಜೀವರು ಎಲ್ಲವೂ ಅವನ ಅಧೀನವಾಗಿದೆ. ವಾಸುದೇವನಿಗಧಿಕರಿಲ್ಲವೇ ಇಲ್ಲ. ಸಮರೂ ಇಲ್ಲ. ವೇದಗಳು ಹರಿಯೇ ಸರ್ವೋತ್ತಮನೆಂದು ಸಾರುತ್ತವೆ. ದೇವತೆಗಳೆಲ್ಲರೂ ಹರಿಯ ಅಂಗಾಶ್ರಿತರು. ನಾರಾಯಣ ಲೋಕಕ್ಕೆ ಮಿಗಿಲಾದ ಲೋಕವಿಲ್ಲ. ಅವನೇ ಸರ್ವಯಜ್ಞ ಫಲಭೋಕ್ತನಾಗಿರುವನು. ಯೋಗಾಭ್ಯಾಸ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು ಅವನ ಪ್ರೀತಿಗಾಗಿ. ಅವನೇ ಪರಮಜ್ಞೇಯನು. ಮುಖ್ಯಾಶ್ರಯನು. ಅಂತಹ ಲಕ್ಷ್ಮೀಪತಿಯು ನಿರ್ವಿಕಾರನಿರುವನು. ಸರ್ವಪ್ರಭುವಾದ ಶ್ರೀನಾಥನ ಕರುಣಾ ಪೂರ್ಣಾವಲೋಕನಮಾತ್ರದಿಂದ ಪ್ರೇರಿತನಾಗಿ ನಾನವನು ಸೃಷ್ಟಿಸಿದುದನ್ನೇ ಸೃಷ್ಟಿ ಮಾಡುವೆನು. ನಿತ್ಯವೂ ಸತ್ತ್ವರಜಸ್ತಮೋಗುಣಗಳನ್ನು ಸ್ವೇಚ್ಛೆಯಿಂದ ಉಪಾದಾನ ಕಾರಣವಂ ಮಾಡಿ ಆ ಗುಣಗಳ ಲೇಪವೇನೂ ಇಲ್ಲದೆ ಸರ್ವಸಮರ್ಥನಾದ ರಮೇಶನು ಸೃಷ್ಟಿ ಸ್ಥಿತಿ ಲಯಗಳನ್ನು ಲೀಲಾಜಾಲವಾಗಿ ಮಾಡುತ್ತಿರುವನು. ಸತ್ತ್ವದಿಂದ ಜ್ಞಾನೇಂದ್ರಿಯಗಳು, ರಜಸ್ಸಿನಿಂದ

ಕರ್ಮೇಂದ್ರಿಯಗಳು, ತಮಸ್ಸಿನಿಂದ ಶರೀರಗಳನ್ನೂ ಜೋಡಿಸಿ, ಸ್ವತಃ ಜ್ಞಾನಿಯಾದರೂ ಪ್ರಕೃತಿ ಬಂಧದಿಂದ ಅಭಿಮಾನವನ್ನು ಹತ್ತಿಸಿಕೊಂಡು ತತ್ತರಿಸಿ ತಾಪತ್ರಯವನ್ನು ಪಡುವ ಜೀವನನ್ನು ಸೃಜಿಸುವನು. ಇಂತು ಜ್ಞಾನೋಪಾಯ ಲಕ್ಷಣಕವಾದ ದೇಹೇಂದ್ರಿಯಮನಸ್ಸುಗಳಿಂದ ಕೂಡಿದ ಜೀವನಿಗೆ ಯಮನಿಯಮಾದಿ ಸಾಧನಗಳಿಂದ ತನ್ನ ಸ್ವರೂಪವನ್ನು ತೋರಿಸಿ ಸಲಹುವ ಶ್ರೀಹರಿಯೇ ಎಲ್ಲರಿಗೂ ನಮಗೂ ಒಡೆಯನಾಗಿದ್ದಾನೆ. ಕಾಲಕರ್ಮ ಸ್ವಭಾವಗಳನ್ನು, ತ್ರಿಗುಣ ಗಳನ್ನು ಅನಾದಿಯಿಂದ ತನ್ನಧೀನದಲ್ಲಿಟ್ಟುಕೊಂಡಿದ್ದ ಹರಿಯು ಸೃಷ್ಟಿಕಾಲದಲ್ಲಿ ಸ್ವೇಚ್ಛೆಯಿಂದ ಸ್ವೀಕರಿಸಿ ಒಳಹೊಕ್ಕು ವಿಕಾರಗೊಳಿಸಿ ಸೃಷ್ಟಿಗನುವಾಗಿ ಮಾಡಿದನು. ಆಗ ವಿಕಾರಸ್ವಭಾವವಾದ ಪ್ರಕೃತಿಯಿಂದ ಕರ್ಮಪ್ರೇರಕ ಭಗವಂತನ ಪ್ರವೇಶ ಪ್ರೇರಣೆಗಳಂತೆ ಮಹತ್ತತ್ವವು ಉದಿಸಿತು. ಕಾಲದಲ್ಲಿ ಕರ್ಮಾನುಸಾರವಾಗಿ ಸ್ವಭಾವಕ್ಕೆ ತಕ್ಕಂತೆ ಮಹತ್ತಿನಲ್ಲಿ ರಜಸ್ಸತ್ವಗಳನ್ನು ಕಲಿಸಿ ವಿಕಾರಗೊಳಿಸಲು ತಮಃಪ್ರಧಾನವಾದ ಅಹಂಕಾರತತ್ವವು ಜನಿಸಿತು. ಅದು ವಿಕಾರವನ್ನು ಹೊಂದಿ ಮೂರಾಯಿತು. ವೈಕಾರಿಕ, ತೈಜಸ, ತಾಮಸವೆಂಬುವ ಆ ಮೂರು ವಿಧ ಅಹಂಕಾರತತ್ವದಿಂದ ಮನಸ್ಸು, ಇಂದ್ರಿಯಗಳು, ಭೂತಗಳು ಜನಿಸಿ ವೃದ್ಧಿಹೊಂದಿದವು. ದ್ರವ್ಯಜ್ಞಾನಕ್ರಿಯಾ ಶಕ್ತಿಯುಳ್ಳ ಅಹಂಕಾರದಿಂದ ಎಲ್ಲವೂ ಸೃಷ್ಟವಾಗಿದೆ. ತಾಮಸಾಹಂಕಾರದಿಂದ ಆಕಾಶವು, ಶಬ್ದವೆಂಬುವ ಅದರ ಗುಣ, ತದಭಿಮಾನಿ ದೇವತೆ, ತದಂತರ್ಗತ ಹರಿಯು ಜನಿಸಿದರು. ಇಲ್ಲಿ ಹರಿಯು ತನ್ನ ರೂಪದಿಂದಲೇ ಇನ್ನೊಂದು ರೂಪವಾಗಿ ಪ್ರಾದುರ್ಭವಿಸಿ ಪ್ರೇರಕನೆನಿಸುವನು. ಆಕಾಶದಿಂದ ಸ್ಪರ್ಶಗುಣದಿಂದ ಕೂಡಿದ ವಾಯುವು ಜನಿಸಿ ಆಕಾಶದಿಂದ ಪಡೆದ ಶಬ್ದವನ್ನೂ ಪೊಂದಿದನು. ಪ್ರಾಣ, ಓಜ, ಸಹನ, ಬಲ, ಇವು ವಾಯುಗುಣಗಳಾಗಿವೆ. ಅದರಿಂದ ರೂಪ ಸ್ಪರ್ಶ ಶಬ್ದಗಳನ್ನುಳ್ಳ ತೇಜಸ್ತತ್ವವು ಉದ್ಭವಿಸಿತು. ತೇಜೋವಿಕಾರದಿಂದ ರಸಗುಣಕವಾದ ಅಬ್–ತತ್ತ್ವವು ರೂಪ–ಸ್ಪರ್ಶ– ಶಬ್ದಗಳನ್ನೂ ಪೊಂದಿ ಹುಟ್ಟಿತು. ನೀರಿನಿಂದ ಗಂಧಗುಣವುಳ್ಳ ಪೃಥಿವೀತತ್ವವು ಜನಿಸಿ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬುವ ಐದು ಮಾತ್ರೆಗಳನ್ನು ಹೊಂದಿತು.

ವೈಕಾರಿಕಾಹಂಕಾರದಿಂದ ಮನಸ್ತತ್ವವು ಇಂದ್ರಿಯಕಾಯಶಕ್ತರಾದ ಅಭಿಮಾನಿ ದೇವತೆಗಳು ಪುಟ್ಟಿದರು. ದಿಗ್ದೇವತೆಯಾದ ಸೋಮಾದಿಗಳು ಶ್ರವಣದಲ್ಲಿ, ವಾಯುವು ತ್ವಗಿಂದ್ರಿಯದಲ್ಲಿ, ಸೂರ್ಯನು ಕಣ್ಣಿನಲ್ಲಿ, ವರುಣನು ಜಿಹ್ವೆಯಲ್ಲಿ, ಅಶ್ವಿನಿದೇವರು ನಾಸಿಕೆಯಲ್ಲಿ, ವಾಕ್ಕಿನಲ್ಲಿ ಅಗ್ನಿ, ಕೈಯಲ್ಲಿ ಇಂದ್ರ, ಕಾಲಲ್ಲಿ ಜಯಂತ, ಪಾಯುವಿನಲ್ಲಿ ಮಿತ್ರ, ಉಪಸ್ಥದಲ್ಲಿ ದಕ್ಷನೆಂದು ನಿಯಾಮಕರಾಗಿರುವರು. ಜಯಂತನಿಗೆ ಯಜ್ಞನೆಂದೂ ಹೆಸರು. ಅವನಲ್ಲಿ ಶ್ರೀಹರಿಯು ಇದ್ದು ಯಜ್ಞನೆನಿಸಿ ಪಾದಾಂಗುಷ್ಠದಲ್ಲಿದ್ದು ಶರೀರವನ್ನು ಧರಿಸಿರುತ್ತಾನೆ.

ತೈಜಸಾಹಂಕಾರದಿಂದ ಸತ್ತು ಇಂದ್ರಿಯಗಳು ಜನಿಸಿದವು. ಅವು ಜ್ಞಾನೇಂದ್ರಿಯ ಕರ್ಮೇಂದ್ರಿಯವೆಂದೆರಡು ವಿಧ. ಜ್ಞಾನಶಕ್ತಿಯು ಬುದ್ಧಿಮಾನಿನಿ ಉಮೆಯಿಂದಲೂ, ಕ್ರಿಯಾಶಕ್ತಿಯು ಅಹಂಕಾರಿಕ ಪ್ರಾಣನಿಂದಲೂ ನಡೆಯುವವು. ಇಂದ್ರಿಯಗಳ ನಾಮಗಳು ಮೊದಲೇ ಹೇಳಿದೆನು. ಇಂತು ಸೃಷ್ಟವಾದ ಪಂಚಭೂತಗಳು, ದಶೇಂದ್ರಿಯಗಳು, ಮನಸ್ಸು ಎಂಬುವ ಹದಿನಾರು ಪದಾರ್ಥಗಳು ಅಸಂಶ್ಲಿಷ್ಟವಾಗಿದ್ದ ಕಾರಣ ಬ್ರಹ್ಮಾಂಡವನ್ನು ನಿರ್ಮಿಸಲು ಸಮರ್ಥವಾಗದೇ ಇದ್ದವು. ಆಗ ಅವು ಅನ್ಯೋನ್ಯವಾಗಿ ಕಲೆತು ಭಗವಂತನ ಶಕ್ತಿಯಿಂದ ಪ್ರೇರಿತವಾಗಿ ನಮಗೆ ಮರಣಾದಿ ಭಯಪ್ರದವಾದ ಸದಸದಾತ್ಮಕವಾದ ಬ್ರಹ್ಮಾಂಡ

ವನ್ನು ಹುಟ್ಟಿಸಿದವು. ಸತ್ ಎಂದರೆ ಪೃಥಿವ್ಯಪ್ತೇಜಗಳು! ಅಸತ್ ಎಂದರೆ ವಾಯ್ವಾಕಾಶಗಳು.

ಈಗ ಬ್ರಹ್ಮಾಂಡದ ಒಳಗಿನ ಸೃಷ್ಟಿಯಂ ಕೇಳು. ನಾರದಾ! ಒಂದು ಸಾವಿರ ವರ್ಷ ಪರ್ಯಂತವೂ ಆವರಣಜಲಮಧ್ಯದಲ್ಲಿದ್ದ ಬ್ರಹ್ಮಾಂಡದಲ್ಲಿ ಶ್ರೀಹರಿಯು ತತ್ತ್ವದೇವತೆಗಳಿಂದ ಕೂಡಿ ಪ್ರವೇಶಿಸಿದನು. ಕಾಲಕರ್ಮಸ್ವಭಾವಗಳನ್ನನುಸರಿಸಿ ಜೀವಭಿನ್ನನಾದ ಸ್ವಾಮಿಯು ಜೀವನನ್ನು ಶರೀರಯೋಗದಿಂದ ವ್ಯಕ್ತನನ್ನಾಗಿ ಮಾಡಿದನು. ಈ ಹರಿಯೂ ಜೀವಮುಖ್ಯನಾದ ಬ್ರಹ್ಮನೂ ಬ್ರಹ್ಮಾಂಡದಲ್ಲಿ ಪುರುಷರೂಪದಿಂದ ತುಂಬಿ ನಿಂತರು. ಆ ನನ್ನ ಅಂತರ್ಯಾಮಿಯ ಮಹಿಮೆಯನ್ನು ಕೇಳು.

ಅವನಿಗೆ ಅನಂತಬಾಹುಗಳು, ಅನಂತಪಾದಗಳು, ಅನಂತಮುಖಗಳು, ಅನಂತಶಿರಗಳು. ಅವನ ಅವಯವಗಳಿಂದ ಎಲ್ಲ ಲೋಕಗಳು ವ್ಯಕ್ತವಾಗಿ ಅವನನ್ನವಲಂಬಿಸಿ ನಿಂತಿವೆ. ಇದು ಜ್ಞಾನಿಪ್ರತ್ಯಕ್ಷವಾಗಿದೆ. ನಡುವಿನಿಂದ ಕೆಳಗೇಳು ಲೋಕಗಳು ಮೇಲೇಳು ಲೋಕಗಳು ತದ್ಭಿನ್ನವಾಗಿ ತದಧೀನವಾಗಿ ತದಾಧಾರಕವಾಗಿ ತನ್ನಾಮಕವೂ ಆಗಿವೆ. ಅವನ ಮುಖದಿಂದ ಬ್ರಾಹ್ಮಣ ವರ್ಣವೂ, ಬಾಹುಗಳಿಂದ ಕ್ಷತ್ರಿಯವರ್ಣವೂ, ತೊಡೆಯಿಂದ ವೈಶ್ಯವರ್ಣವೂ, ಪಾದದಿಂದ ಶೂದ್ರವರ್ಣವೂ ಜನಿಸಿದವು. ಭೂಲೋಕವು ನಡುವಿನಲ್ಲಿ, ಭುವರ್ಲೋಕವು ನಾಭಿಯಿಂದ, ಸ್ವರ್ಗಲೋಕವು ಹೃದಯದಿಂದ, ಮಹರ್ಲೋಕವು ಎದೆಯಲ್ಲಿ, ಕಂಠದಲ್ಲಿ ಜನೋಲೋಕವು, ನೇತ್ರಮಧ್ಯದಿಂದ ತಪೋಲೋಕವು, ಲಲಾಟಾದಿ ಸತ್ಯಲೋಕವೆಂಬುವ ಊರ್ಧ್ವಲೋಕಗಳು ವ್ಯಕ್ತವಾದವು. ಕಟಿಯಲ್ಲಿ ಅತಲ, ತೊಡೆಯಲ್ಲಿ ವಿತಲ, ಜಾನುವಿನಲ್ಲಿ ಸುತಲ, ಜಂಘೆಯಲ್ಲಿ ತಲಾತಲ, ಗುಲ್ಫದಲ್ಲಿ ಮಹಾತಲ, ಹಿಂಬುಡದಲ್ಲಿ ರಸಾತಲ, ಪಾದತಲದಿಂದ ಪಾತಾಲವೆಂಬುವ ಏಳು ಅಧೋಲೋಕಗಳು ವ್ಯಕ್ತವಾದವು. ಈ ಲೋಕಗಳಲ್ಲಿ ಆಧಾರನಾಗಿದ್ದು, ವ್ಯಾಪ್ತನಾಗಿ, ಪ್ರಭುವಾಗಿರುವುದರಿಂದ ಶ್ರೀಹರಿಗೆ ಲೋಕಮಯನೆಂದು ಪೆಸರಾಗಿದೆ. ಅಥವಾ ತ್ರಿಲೋಕ ವಿವಕ್ಷೆಯಿಂದ ಪಾದದಿಂದ ಭೂಲೋಕ, ನಾಭಿಯಿಂದ ಭುವರ್ಲೋಕ, ತಲೆಯಲ್ಲಿ ಸ್ವರ್ಗಲೋಕವೆಂತಲೂ ಜ್ಞಾನಿಗಳು ತಿಳಿದು ಪೂಜಿಸುವರು.

## ೬. ಪುರುಷರೂಪ ವರ್ಣನೆಯು

ಆಧ್ಯಾತ್ಮಿಕಾಧಿದೈವಿಕಾಧಿಭೌತಿಕರೂಪವಾದ ಜಗತ್ತು ಶ್ರೀಹರಿಯ ಮುಖಾದ್ಯಂಗಗಳಿಂದ ಉದಯಿಸಿ ತದಾಧಾರಕವಾಗಿ ನಿಂತಿದೆ. ಜಗದ್ಭಿನ್ನನಾದ ಭಗವಂತನು ತದುತ್ತಮನಾಗಿರುವನು. ಜಗತ್ತವನಿಗೆ ಪ್ರತಿಮೆಯಂತಿದೆ. ನಾರದಾ! ವಾಗಿಂದ್ರಿಯ, ತದ್ವ್ಯಾಪಾರ, ಅವುಗಳ ಅಭಿಮಾನವುಳ್ಳ ಅಗ್ನಿಯು ಮುಖದಿಂದ ಹುಟ್ಟಿದರು. ಶ್ರೀಹರಿಯ ಸಪ್ತಧಾತುಗಳಿಂದ ಗಾಯತ್ರಿ, ಉಷ್ಣಿಕ್, ಅನುಷ್ಟುಪ್, ಬೃಹತೀ ಪಙ್ಕ್ತಿ, ತ್ರಿಷ್ಟುಪ್, ಜಗತೀ ಎಂಬ ಏಳು ಛಂದಗಳು ಹುಟ್ಟಿವೆ. ಹರಿಜಿಹ್ವೆಯು ಹವ್ಯಕವ್ಯಗಳಿಗೆ ಮಧುರಾದಿ ಷಡ್ರಸಗಳಿಗೆ ಜನ್ಮ ಕೊಟ್ಟಿದೆ. ಎಲ್ಲ ವಾಯುಗಳಿಗೂ ಮುಖ್ಯಪ್ರಾಣನಿಗೂ ಅವನ ನಾಸಿಕೆಯೇ ಆಧಾರವಾಗಿದೆ. ಅಲ್ಲಿಂದ ಗಂಧ, ಘ್ರಾಣೇಂದ್ರಿಯ, ಔಷಧಿಗಳು, ತದಭಿಮಾನಿ ಅಶ್ವಿನೀ ದೇವತೆಗಳೂ ಇಬ್ಬರೂ ಪುಟ್ಟಿರುವರು. ರೂಪ, ತೇಜ, ದ್ಯುಲೋಕ, ತದಭಿಮಾನಿ ಸೂರ್ಯನು ನೇತ್ರೇಂದ್ರಿಯದಿಂದ ಕೂಡಿ ಹರಿಯ

ನೇತ್ರಾವನ್ನಾಶ್ರಯಿಸಿರುವನು. ಕರ್ಣಗಳಿಂದ ಶಬ್ದ, ಆಕಾಶ, ತದಭಿಮಾನಿ ಪ್ರಾಣಗಣೇಶರು ಕ್ಷೇತ್ರದೇವತೆಗಳು, ಶಾಸ್ತ್ರಗಳು, ದಿಕ್ಕುಗಳು, ಶ್ರವಣೇಂದ್ರಿಯ, ತದಭಿಮಾನಿ ಸೋಮಾದಿ ದಿಕ್ಪಾಲಕರು ಪುಟ್ಟಿದರು. ಅವನ ಶರೀರವು ಶ್ರೇಷ್ಠಬಲರಾದ ವಾಯದ್ವಾದಿಗಳಿಗೂ ಸೌಭಾಗ್ಯಕ್ಕೂ ಆಧಾರವು. ತ್ವಗಿಂದ್ರಿಯದಿಂದ ಕೂಡಿ ಸ್ಪರ್ಶತನ್ಮಾತ್ರವೂ ಸರ್ವಜ್ಞನಾದ ಪ್ರಾಣನೂ ಹುಟ್ಟಿದರು. ರೋಮಗಳಿಂದ ಯಜ್ಞಸಂಪಾದಕ ಪಲಾಶ ಪಿಪ್ಪಲಾದಿ ಉದ್ಭಿಜ್ಜರು ಹುಟ್ಟಿದರು. ಕೇಶಗಳಿಂದ ಮೇಘಗಳು, ಮೀಸೆಗಳಿಂದ ಮಿಂಚು, ನಖಗಳಿಂದ ಶಿಲಾಲೋಹಗಳು ಜನಿಸಿದವು. ಲೋಕ ಪಾಲರು ಬಾಹುಗಳಿಂದುದಿಸಿದರು. ಅವರು ಪ್ರಾಯಃ ಕ್ಷೇಮಂಕರರು. ಪಾದವಿಕ್ಷೇಪದೀನ ಭೂಲೋಕ ಭುವರ್ಲೋಕಗಳು, ಸ್ವರ್ಗವೂ, ಕ್ಷೇಮ ಮೋಕ್ಷಗಳು ಜನಿಸಿದವು. ಶ್ರೀಹರಿ ಚರಣವು ಎಲ್ಲಾ ಕಾಮಿತ ವರಗಳನ್ನು ಕೊಡುವದು. ಅವನ ಶಿಶ್ನವನ್ನು ಆಶ್ರಯಿಸಿ ಶಿಶ್ನೇಂದ್ರಿ ಯವು, ಪರ್ಜನ್ಯನು, ಜಲ, ವೀರ್ಯ, ದಕ್ಷರು ಉದಿಸಿ ನಿಂತಿರುವರು. ಮತ್ತು ಅವನ ಉಪಸ್ಥದಲ್ಲಿ ಮೈಥುನಕ್ರಿಯೆ, ತದಾನಂದ, ಪ್ರಜನನ ಸುಖಗಳು ಪುಟ್ಟಿದವು. ಗುಹ್ಯದಲ್ಲಿ ಪಾಯ್ವಿಂದ್ರಿಯ ಮಿತ್ರರು, ಪರಿಮೋಕ್ಷ ವ್ಯಾಪಾರವು, ಯಮನು ಜನಿಸಿದರು. ಗುದದಲ್ಲಿ ಹಿಂಸೆ, ನಿಋತಿ, ಮೃತ್ಯು, ನರಕಗಳು ಪುಟ್ಟಿದವು. ಅವನ ಬೆನ್ನಿನಿಂದ ಕಲಿ, ಅಧರ್ಮ, ಅಲಕ್ಷ್ಮೀ, ತಮಸ್ಸುಗಳು ಪುಟ್ಟಿದವು. ನಾಡಿಗಳಲ್ಲಿ ನದನದಿಗಳು, ಅಸ್ಥಿಗಳಲ್ಲಿ ಬೆಟ್ಟಗಳು, ಉದರದಿಂದ ಮೂಲಪ್ರಕೃತಿ, ಮಧುರಾದಿರಸಗಳು, ಸಮುದ್ರಗಳು, ಜೀವರು, ಸಂಹಾರಕ್ರಿಯೆ ಹುಟ್ಟಿದವು. ಹೃದಯದಿಂದ ಮನಸ್ಸು, ರುದ್ರ, ಪುಣ್ಯದೇವನಾದ ಧರ್ಮ, ಸನಕಾದಿಗಳು, ನೀನು, ನಾನು ಪುಟ್ಟಿದೆವು. ನಾನವನ ದಾಸನು. ನಾರದಾ! ಅವನ ಮಧ್ಯದೇಹದಲ್ಲಿ ಸರಸ್ವತಿ, ವಿಜ್ಞಾನತತ್ತ್ವವು ಪುಟ್ಟಿದವು. ಇಂತು ನಾನು ; ನೀನು ರುದ್ರ, ಮುನಿಗಳು, ಸನಕಾದಿ ಪೂರ್ವಜರು, ಸುರಾಸುರರು, ನರನಾಗರು, ಖಗಮೃಗ ಸರೀಸೃಪಗಳು, ಗಂಧರ್ವಾಪ್ಸರೆಯರು, ಯಕ್ಷರಕ್ಷರು, ಭೂತೋರಗರು, ಪಶುಗಳು, ಪಿತೃಗಳು, ಸಿದ್ಧವಿಧ್ಯಾಧರ ಚಾರಣರು, ವೃಕ್ಷಗಳು, ಇಷ್ಟೇಕೆ ಎಲ್ಲಾ ವಿವಿಧ ಜೀವರು, ಭೂಮಿಗತರು, ಆಕಾಶಗತರು, ಜಲಚರರೆಲ್ಲರು ಮತ್ತು ಗ್ರಹ, ನಕ್ಷತ್ರ, ಕೇತು, ತಾರೆಗಳು, ಮಿಂಚು, ಸಿಡಿಲುಗಳು ಸಮಸ್ತವೂ ಪುರುಷನಧೀನವಾಗಿದೆ. ಹಿಂದೆ ನಡೆದ, ಮುಂಬರುವ, ಈಗಿರುವ ಬ್ರಹ್ಮಾಂಡಗಳೂ ಅಷ್ಟೇ. ಅವನಿಲ್ಲಿ ವ್ಯಾಪ್ತವಾಗಿ ಸ್ವಾಮಿಯಾಗಿ ಪಾಲಿಸುವುದಲ್ಲದೇ ಜೀವನ ಹೃದಯದಲ್ಲಿ ನೆಲೆಸಿ ಅಲ್ಲಿ ವಿಷಯಭೋಗಗಳನ್ನುಣಿಸುವವನೂ ಆಗಿದ್ದಾನೆ. ಹಾಗೆಯೇ ವಿರಾಟ್ ಬ್ರಹ್ಮಾಂಡದ ಒಳಹೊರಗೂ ವ್ಯಾಪ್ತನಾಗಿ ಪ್ರಕಾಶಿಸುತ್ತಿರುವನು. ಅವನು ಅನಾದ್ಯ ನಂತ ಕಾಲದಲ್ಲಿ ದೇಹವುಳ್ಳ ಬ್ರಹ್ಮಾದಿ ಜೀವರನ್ನು ಅತಿಕ್ರಮಿಸಿ ಅವರ ಸರ್ವಾಭೀಷ್ಟ ಪೂರಕ ನಾಗಿದ್ದಾನೆ. ಆದ್ದರಿಂದಲೇ ಮುಕ್ತಾಮುಕ್ತ ಪ್ರಭುವೆನಿಸಿರುವನು. ಇವನ ಮಹಿಮೆ ಇಷ್ಟೇ ಅಲ್ಲ. ದುರತ್ಯಯ ಮಹಿಮನಾದ ಶ್ರೀಪುರುಷನ ಭಿನ್ನಾಂಗಕರಾಗಿರುವರೀ ಸರ್ವಭೂತರು. ಇದು ಯಥಾರ್ಥಜ್ಞಾನಿಗಳು ಹೇಳುವ ಮಾತು. ವತ್ಸಾ! ಇನ್ನು ಸ್ವರೂಪಾಂಶಗಳನ್ನು ಕೇಳು. ಅಮೃತವೆಂಬುವ ಅನಂತಾಸನ, ಕ್ಷೇಮವೆಂಬುವ ವೈಕುಂಠ, ಅಭಯವೆಂಬುವ ಶ್ವೇತದ್ವೀಪ ಇವು ಮೂರು ಲೋಕಗಳಲ್ಲಿ ರೂಪಾಂತರಗಳಿಂದ ನಾರಾಯಣನು ಅನಂತ, ವೈಕುಂಠ, ವಾಸುದೇವನೆನಿಸಿ ವಿರಾಜಿಸುವನು. ಈ ಲೋಕಗಳು ಮೇಲೆ ಮೂರು ಲೋಕದ ಹೊರಗಿರುವವು. ಬ್ರಹ್ಮಾದಿಗಳಿಗವು ಆಶ್ರಯವು. ಏಕೆಂದರೆ ಅವರು ಅಪುತ್ರರು. ಮದ ಮೊದಲಾದ ಮಕ್ಕಳ ವರಿಗಿಲ್ಲ. ಈ ಲೋಕದಲ್ಲಿ ಶ್ರೀಹರಿಯು ಗೃಹಸ್ಥರಿಂದ ಚೆನ್ನಾಗಿ ಪೂಜಿಸಲ್ಪಡುವ ಯಜ್ಞ

ರೂಪಿಯಾಗಿ ವ್ಯಾಪಿಸಿರುವನು. ದೇವ-ಮನುಷ್ಯ ಮಾರ್ಗಗಳೆಂಬುವ ಎರಡು ಮಾರ್ಗವನ್ನು ರಚಿಸಿ, 'ಬ್ರಹ್ಮವಿದ್ಯೆಯಿಂದ ದೇವಮಾರ್ಗವು, ಅವಿದ್ಯೆಯಿಂದ ಮನುಷ್ಯ ಮಾರ್ಗವು ಸಿಗುವುದು' ಎಂಬುದಾಗಿ ನಿರ್ಣಯಿಸಿ, ಜೀವರನ್ನು ಯೋಗ್ಯತಾನುಸಾರವಾಗಿ ಆಯಾ ಲೋಕದಲ್ಲಿ ನಿಲಿಸುವನು. ಪುರುಷನ ಪೂಜೆಯನ್ನು ಬ್ರಹ್ಮಾರ್ಪಣಬುದ್ಧಿಯಿಂದ ಮಾಡಿದ ಜ್ಞಾನಿಗಳಿಗೆ ಅನಶನ ಮಾರ್ಗವು ಅಂದರೆ, ಬ್ರಹ್ಮಯಾನವು, ಫಲಾಸಕ್ತಿಯಿಂದ ಕರ್ಮವನ್ನು ಮಾಡಿದವರಿಗೆ ಅಶನ ಮಾರ್ಗವೆಂದರೆ ಪಿತೃಯಾನವು ಲಭಿಸುವದು. ಶ್ರೀ ಹರಿಯು ಮತ್ಸ್ಯಾದ್ಯವತಾರ ರೂಪಗಳಿಂದಲೂ ಕೂಡ ಸರ್ವದಾ ಸರ್ವತ್ರ ವ್ಯಾಪ್ತನಾಗಿರುವನು. ಸ್ವಗತಭೇದವಿಮರ್ಜಿತನಾದ ಪುರುಷನಾಮಕ ಹರಿಯಿಂದ ನಾನು ಜನಿಸಿದೆನು. ವಿರಾಟ್ ಎಂಬುವ ಹೆಸರಿನಿಂದ ನಾನು ಜೀವರಿಗೂ ಪಂಚ ಭೂತಗಳಿಗೂ ಇಂದ್ರಿಯಗಳಿಗೂ ಶಬ್ದಾದಿಗುಣಗಳಿಗೂ ಆಶ್ರಯನಾಗಿರುವೆನು. ಭಕ್ತಿಜ್ಞಾನಗಳು ಉದ್ರಿಕ್ತವಾದಾಗ ನಾನು ಎರಡನೇ ರೂಪವನ್ನು ತಾಳಿ ಪುರುಷನಾಭಿಕಮಲದಿಂದ ಬ್ರಹ್ಮನಾಗಿ ಜನಿಸಿದೆನು. ನನ್ನನ್ನೇ ಚತುರ್ಮುಖನೆನ್ನುವರು. ನಾರದಾ! ಇಂತಹ ಮಹಿಮೆಯು ನಮ್ಮ ತಂದೆಯಾದ ನಾರಯಣನಿಗಿದೆ; ಅನ್ಯರಿಗಿಲ್ಲ. ಆಗ ನಾನು ಪುರುಷಾವಯವಗಳಿಂದಲ್ಲದೇ ಬೇರೆ ಕಡೆಯಿಂದ ಯಜ್ಞ ಮಾಡುವ ಸಂಭಾರಗಳನ್ನು ಕಾಣದೇ ಅವ್ಯಾಪ್ತನಾದ ಸರ್ವ ಪದಾರ್ಥೋತ್ಪಾದಕನಾದಿ ಶ್ರೀ ಹರಿಯ ಅಂಗಗಳಿಂದಲೇ ಪಶುಗಳನ್ನು, ಅಶ್ವತ್ಥಾ ದಿವನ ಸ್ಪತಿ ಸಮಿಧೆಗಳನ್ನು, ಕುಶಗಳನ್ನು, ಯಾಗಭೂಮಿಯನ್ನು, ಧರ್ಮಯೋಗ್ಯ ಕಾಲವನ್ನು, ಕಾಂಚನಾದಿ ದ್ರವ್ಯ ಗಳನ್ನು, ವ್ರೀಹ್ಯಾದಿ ಧಾನ್ಯಗಳನ್ನು, ಕ್ಷೀರಘೃತಾದಿ ಗೋರಸವನ್ನು, ಲೋಹಮೃತ್ತಿಕೆಗಳನ್ನು, ಗಂಗಾದಿ ಜಲವನ್ನು ಪಡೆದು ಅವನ್ನು ಕೊಟ್ಟ ಪದಾರ್ಥಗಳಿಂದಲೇ ಅವನ ಪ್ರೀತಿಗಾಗಿ ಯಾಗವನ್ನು ಮಾಡಿದೆನು. ಋಗಾದಿ ವೇದಗಳು, ಚಾತುರ್ಹೋತ್ರಕ ಕರ್ಮವು, ಇಂದ್ರಾದಿನಾಮ ಗಳು, ಬೀಜಾತ್ಮಕ ಮಾಲಾತ್ಮಕ ಮಂತ್ರಗಳು, ದಕ್ಷಿಣೆ, ವ್ರತಗಳು, ದೇವತಾ ತಾರತಮ್ಯವು, ವಿಧಿಸಂಕಲ್ಪಗಳು, ಕರ್ಮಬ್ರಹ್ಮನಿರೂಪಕ ಮೀಮಾಂಸಾಶಾಸ್ತ್ರವು, ದೈವಮೀಮಾಂಸೆ, ಯಜ್ಞಫಲಗಳು, ಜ್ಞಾನ, ಶ್ರದ್ಧೆ, ಪ್ರಾಯಶ್ಚಿತ್ತ, ಬ್ರಹ್ಮಸಮರ್ಪಣೆ ಮೊದಲಾದ ಎಲ್ಲಾ ಸಂಭಾರಗಳು ನನಗೆ ಪುರುಷನಾಮಕ ಹರಿಯ ಅಂಗಗಳಿಂದಲೇ ದೊರೆತವು. ಆಗ ಅವನಿಂದ ಪ್ರೇರಿತನಾಗಿ ನಾನು ಅವನನ್ನೇ ಕುರಿತು ಆ ದ್ರವ್ಯಗಳಿಂದಲೇ ಯಜ್ಞ ಮಾಡಿ ಅವನನ್ನು ಪೂಜಿಸಿದೆನು. ಅದೇ ಆದಿಯಜ್ಞವು. ಆಮೇಲೆ ನಿನ್ನ ಅಣ್ಣಂದಿರಾದ ಈ ಮರೀಚ್ಯಾದಿ ಪ್ರಜಾಪತಿಗಳು ಒಂಬತ್ತು ಜನರು ಗಮ್ಯಾನುಗಮ್ಯರೂಪದ್ವಯನಾದ ಪುರುಷನ ಪ್ರೀತಿಗಾಗಿ ಶ್ರದ್ಧೆಯಿಂದ ಯಜ್ಞಗಳನ್ನು ಮಾಡಿದರು. ಅವರಂತೆ ವಸಂತ ಕಾಲದಲ್ಲಿ ಮನುಗಳು, ಇತರ ಋಷಿಗಳು, ಯಜಿಸಿದರು. ಅರ್ಯಮಾದಿ, ಪಿತೃಗಳು, ಇಂದ್ರಾದಿ ವಿಬುಧರು, ಪ್ರಹ್ಲಾದಾದಿ ದೈತ್ಯರು ಪ್ರಿಯವ್ರತಾದಿ ಮನುಜರು ಕೂಡಾ ಯಾಗಗಳನ್ನು ಮಾಡಿ ಹರಿಗರ್ಪಿಸಿದರು.

ಶ್ರೀ ಮತ್ಪುಂಡರೀಕಾಕ್ಷಕಟಾಕ್ಷ ಪ್ರೇಕ್ಷಣ ಪ್ರಾಪ್ತಪ್ರಭಾವನಾದ ನಾನು ನಾರಾಯಣ ನನ್ನೇ ಯಜ್ಞಾದಿಗಳಿಂದ ಪೂಜಿಸಿದೆನು. ಇದೆಲ್ಲಾ ವಿಶ್ವವು ಅವನಧೀನವಾಗಿದೆ. ಅವನೇ ಇದಕ್ಕಾಧಾರನಾಗಿರುವನು. ಇದರಲ್ಲಿ ವ್ಯಾಪ್ತನಾಗಿ ಎಲ್ಲವನ್ನೂ ಕೊಡುವ ವನವನೇ! ಇಂತಹ ಶ್ರೀ ಹರಿಗೆ ಸೃಷ್ಟಿಕಾಲದಲ್ಲಿ ಸ್ವೀಕರಿಸಿದ ಗುಣತ್ರಯ ಸಂಬಂಧ ಲೇಶವೂ ಇಲ್ಲ. ಜಡವೂ ಗುಣಮಯವು. ತದ್ರಚಿತ ದೇಹಾದಿಗಳಲ್ಲಿ ಅಭಿಮಾನದಿಂದ ಜೀವನಿಗೆ ಗುಣಸಂಬಂಧವಾಗು ವುದಷ್ಟೇ ಆಗಲಿ ಸ್ವತಃ ಜೀವನು ಗುಣರಹಿತನೇ ಸರಿ!

ನಾರದಾ! ಈಗ ತಿಳಿಯಿತೇ? ಆ ಹರಿಪ್ರೇರಣೆಯಿಂದ ಅವನ ಆಜ್ಞೆಯಿಂದ ನಾನು ಸೃಷ್ಟಿಯನ್ನು, ರುದ್ರನು ಸಂಹಾರವನ್ನು ಮಾಡುವೆವು. ಪುರುಷರೂಪದಿಂದ ವಿಶ್ವವನ್ನು ಪರಿಪಾಲಿಸುವ ಹರಿಯು ಸೃಷ್ಟಿ ಸ್ಥಿತಿ ಸಂಹಾರ ಶಕ್ತಿಗಳನ್ನು ಸ್ವತಂತ್ರವಾಗಿ ಉಳ್ಳವನು. ನಮ್ಮ ಶಕ್ತಿ ಅವನ ಅಧೀನವು. ಹರಿಯೇ ಸರ್ವೋತ್ತಮನು.

ವತ್ಸಾ! ನಿನ್ನ ಪ್ರಶ್ನೆಗೆ ಉತ್ತರವನ್ನು ಕೊಟ್ಟಿರುವೆವು. ಕೇಳು! ವ್ಯಕ್ತಾವ್ಯಕ್ತವಾದ ಜಗದಲ್ಲಿ ಹರಿಯಂ ಬಿಟ್ಟು ಸ್ವತಂತ್ರರಾರೂ ಇಲ್ಲ. ಭಕ್ತಿಯಿಂದಲೂ ಪ್ರೇಮದಿಂದಲೂ ನಾನು ನನ್ನ ಹೃದಯದಲ್ಲಿ ಹರಿಯನ್ನು ಸದಾ ಸನ್ನಿಧೀಕರಿಸಿರುವೆನು. ಅವನ ದಯೆಯಿಂದ ನನ್ನ ಮಾತೆಂದೂ ಸುಳ್ಳಾಗುವುದಿಲ್ಲ. ನನ್ನ ಮನಸ್ಸೆಂದೂ ಅಬದ್ಧಮಾರ್ಗದಲ್ಲಿ ಪೋಗುವುದಿಲ್ಲ. ನನ್ನ ಇಂದ್ರಿಯಗಳು ದುರ್ವಿಷಯಾಸಕ್ತವಾಗುವುದೇ ಇಲ್ಲ. ಇಂತು ವೇದ ಪ್ರತಿಪಾದ್ಯಮಾನನಾದ ನಾನು ಪ್ರಜಾಪತಿಗಳಿಂದ ವಂದಿತನು, ಸರ್ವಜ್ಞನು, ಪ್ರಭುವು ಆಗಿದ್ದೂ, ಯಾರಿಂದ ಜನಿಸಿ ಬಂದೆನೋ ಅಂತಹ ಶ್ರೀಹರಿಯನ್ನು ನಿಪುಣತರವಾದ ಧ್ಯಾನದಿಂದಲೂ ಕಾಣಲಾರದೆ ಇದ್ದೆನು. ಆ ಶ್ರೀಹರಿಯ, ಶರಣಾಗತ ಜನರ ಸಂಸಾರನಿವಾರಕವಾದ, ಮೋಕ್ಷದವಾದ, ಮಂಗಲ ಮಂಗಲವಾದ ಚರಣಕ್ಕೆ ನಾನು ನಮಸ್ಕರಿಸುವೆನು. ನನ್ನ ಮಹಿಮೆಯನ್ನು ಶ್ರೀಹರಿಯೇ ತಾನೇ ಅರಿತಿಹನಲ್ಲದೆ ನನಗೂ ಗೊತ್ತಿಲ್ಲ. ಮುಖ್ಯಪ್ರಾಣನಿಗೂ ಗೊತ್ತಿಲ್ಲ ಎಂದ ಮೇಲೆ ಇತರರ ಪಾಡೇನು? ನನಗೆ ನಿನಗೆ ಮತ್ತೆ ರುದ್ರನಿಗೂ ಸಾಕಲ್ಯೇನ ಅವನ ಜ್ಞಾನವಾಗಲಾರದು. ಅಂದಮೇಲಿತರ ಸುರರೇನು ತಿಳಿದಾರು? ಅವನ ಬಂಧಕಶಕ್ತಿಯಿಂದ ಮೋಹಿತರಾಗಿ ಅವನ ಪ್ರಸಾದದಿಂದ ನಮ್ಮ ನಮ್ಮ ಯೋಗ್ಯತಾನುಸಾರವಾಗಿ ಜಗವನ್ನು ತಿಳಿದಿರುವೆವು. ಯಾರ ಅವತಾರಲೀಲೆಗಳನ್ನು ಪಾಡುತ್ತಾ ನಾವೆಲ್ಲರೂ ಅವನ ಮಹಿಮೆಯನ್ನು ಸಾಕಲ್ಯೇನ ಪೇಳಲಾರೆವೋ ತಿಳಿಯಲಾರೆವೋ ಅಂತಹ ಭಗವಂತನಿಗೆ ನಮಸ್ಕಾರವು. ಪ್ರತಿಕಲ್ಪದಲ್ಲಿಯೂ ಜನ್ಮಾದಿದೋಷರಹಿತನಾದ ಶ್ರೀಶನು ತಾನೇ ತನ್ನಲ್ಲಿ ತನ್ನಿಂದ ತನ್ನನ್ನು ಸೃಷ್ಟಿಸಿಕೊಂಡು ಲಯವನ್ನೂ ಹೊಂದುವನು. ಮತ್ಸ್ಯಾದಿ ರೂಪದಿಂದ ಸಜ್ಜನರನ್ನು ಸಲಹುವನು. ಅವನು ನಿರ್ದೋಷನು, ಅದ್ವಿತೀಯನು, ಜ್ಞಾನರೂಪನು, ಅಂತರ್ಯಾಮಿಯು, ದುಷ್ಟಾಂಶರಹಿತನು, ದೇಶಕಾಲಗುಣಗಳಿಂದ ಪೂರ್ಣನು, ಅನಾದ್ಯನಂತನು, ಪ್ರಕೃತಿಗುಣಲೇಪರಹಿತನು, ಸ್ವಗತ ಭೇದವಿವರ್ಜಿತನು, ಶಶ್ವದೇಕಪ್ರಕಾರನಾಗಿರುವ ನಿತ್ಯನಿರ್ದುಃಖ ನಿರತಿಶಯಾನಂದಾನು ಭವರೂಪನು. ಮುನಿಗಳು ಇಂದ್ರಿಯಮನಂಗಳನ್ನು ಜಯಿಸಿ ಶ್ರೀ ಹರಿಯನ್ನು ಪರೋಕ್ಷೀಕರಿಸಿ ಕೊಂಡಾಗ ಅವರ ಮನವು ದುಷ್ಟತರ್ಕದಿಂದ ದೂರವಾಗಿ ಶುದ್ಧವೆನಿಸುವದು. ಸರ್ವಾಧಾರನಾದ ನಾರಾಯಣನ ಪ್ರಥಮಾವತಾರವು ಪುರುಷನೆಂದು ಪ್ರಸಿದ್ಧವಾಗಿದೆ. ಅವನಿಂದ ಸ್ಥಾವರ ಜಂಗಮ ಜಗತ್ತೆಲ್ಲಾ ತುಂಬಿದೆ. ಪರಮಾಣು, ಮಹತ್ತು, ಕಾಲ, ಸ್ವಭಾವ, ಪ್ರಾಣ, ಮೂಲಪ್ರಕೃತಿ, ಪಂಚಭೂತಗಳು, ಬ್ರಹ್ಮಾಂಡ, ತ್ರಿಗುಣಗಳು, ದಶೇಂದ್ರಿಯಗಳು, ಗರುಡ, ಇಂದ್ರ ಇವುಗಳಲ್ಲಿ ಶ್ರೀಹರಿಯು ಸನ್ನಿಹಿತನಾಗಿ ತತ್ತಚ್ಛಕ್ತಿಪ್ರದನಾಗಿದ್ದಾನೆ. ನಾನು ರುದ್ರ, ಇಂದ್ರ, ದಕ್ಷಾದಿ ಪ್ರಜೇಶರು, ನೀನೇ ಮೊದಲಾದ ಪರಮಹಂಸರು, ಸ್ವರ್ಗ ಖಗ ಮನುಜ ಪಾತಾಲಾದಿ ಲೋಕಪಾಲಕರು, ವಿಶ್ವಾವಸು ಮುಂತಾದ ಗಂಧರ್ವರು, ಚಿತ್ರಕೇತುಪ್ರಮುಖ ವಿದ್ಯಾಧರರು, ಪುಷ್ಪವಂತ ಮುಂತಾದ ಚಾರಣರು, ಯಕ್ಷೇಶನಾದ ಕುಬೇರ, ರಕ್ಷೋಪೋಗಣನೊಡೆಯ ನಿರ್ಋತಿ, ಉರಗಾಧಿಪ ವಾಸುಕಿ, ನಾಗಧೀಶ ಅನಂತ, ಪಿತೃಧಿಪ ಯಮ, ದೈತ್ಯೇಂದ್ರ ಪ್ರಹ್ಲಾದ, ಸಿದ್ಧೇಶಗಾದ ಸನಕಾದಿಗಳು, ದಾನವೇಂದ್ರರಾದ ವೃಷಪರ್ವಾದಿ

ಗಳು, ಪ್ರೇತಪತಿ ಯಮ, ಪಿಶಾಚರಾಜ ಘಂಟಾಕರ್ಣ, ಭೂತಪತಿ ಭೈರವ, ಕೂಷ್ಮಾಂಡನಾಥ ಭೃಂಗಿ, ಜಲಚಂತುಶ್ರೇಷ್ಠ ತಿಮಿಂಗಿಲ, ಮೃಗನಾಥ ಸಿಂಹ, ಪಶುಪಾಲಕ ನಂದಿ, ಎಷ್ಟೆಂದು ಹೇಳಲಿ ನಾರದಾ! ಜ್ಞಾನ, ಬಲ, ಸಹನೆ, ಅವಷ್ಟಂಭನಶಕ್ತಿ, ಅಕ್ರೋಧ, ನಿಷಿದ್ಧಕರ್ಮಕರಣ ಲಜ್ಜೆ, ಕಾಂತಿ, ಸೌಂದರ್ಯ, ಐಶ್ವರ್ಯ, ಶೌರ್ಯ, ಧೃತಿ ಮೊದಲಾದ ಆಶ್ಚರ್ಯಕರವಾದ ಗುಣಂಗಳುಳ್ಳವರೆಲ್ಲರೂ ಆ ಶ್ರೀಹರಿಯ ಭಿನ್ನಾಂಶರು. ಅವನಿಂದ ಬಂದ ಗುಣಗಳಿಂದ ಶೋಭಿಸುವರು. ಹರಿಗುಣಗಳಿಗೆ ಇತರರ ಸುಗುಣಗಳು ಪ್ರತಿಬಿಂಬಗಳಾಗಿವೆ. ಜ್ಞಾನಿಗಳು ಹೇಳುವ ಮತ್ತು ಉಪಾಸಿಸುವ ಆ ಪೂರ್ಣಷಡ್ಗುಣನ ಲೀಲಾವತಾರಗಳಲ್ಲಿ ಮುಖ್ಯವಾದವು ಗಳನ್ನು ಮಾತ್ರ ನಿನಗೆ ನಾ ಪೇಳುವೆನು. ಮನೋಜ್ಞಮಧುರವಾದ ಆ ಕಥೆಗಳನ್ನು ಕೇಳುವರಿಗೆ ದೇಹಾರಂಭಕಾರಣವಾದ ಪಾಪಕರ್ಮವೆಲ್ಲವೂ ನಷ್ಟವಾಗಿ ಪೋಗುವುದು.

## ೭. ಪದ್ಮನಾಭನ ಅವತಾರಗಳು

ಯಜ್ಞವರಾಹನಾಗಿ ಭೂಮ್ಯುದ್ಧರಣವನ್ನು ಮಾಡುವಾಗ ಬಂದ ಹಿರಣ್ಯಾಕ್ಷನನ್ನು ಕೊಂದನು. ಆಕೂತಿಯಲ್ಲಿ ರುಚಿಪ್ರಜೇಶನಿಗೆ ಪುಟ್ಟಿ ಯಜ್ಞವೆನಿಸಿ ಸ್ವರ್ಗವನ್ನಿಂದ್ರನಾಗಿ ಪಾಲಿಸಿದನು. ದಕ್ಷಿಣಾದೇವಿಯಲ್ಲಿ ತುಷಿತರೆಂಬುವ ದೇವರನ್ನು ಪಡೆದನು. ಸ್ವಾಯಂಭುವ ಮನುವನ್ನು ರಾಕ್ಷಸರಿಂದ ರಕ್ಷಿಸಿ ಈಶಾವಸ್ಯೋಪನಿಷತ್ತಿನಿಂದ ಸ್ತುತನಾದನು. ಕರ್ದಮನಿಗೆ ದೇವಹೂತಿ ಯಲ್ಲಿ ನವ ಭಗಿನಿಯರ ತಮ್ಮನಾಗಿ ಅವತರಿಸಿದ ಕಪಿಲನು ಮೋಕ್ಷ ಕಾರಣ ಸಂಖ್ಯಾಶಾಸ್ತ್ರವನ್ನು ತಾಯಿಗೆ ಪೇಳಿ ಉದ್ಧರಿಸಿದನು. ಅತ್ರಿಗೆ ತನ್ನನ್ನು ತಾನೇ ಮಗನಾಗಿ ಕೊಟ್ಟು ದತ್ತನೆನಿಸಿದನು. ಅವನ ಪಾದಪಂಕಜಪರಾಗಪವಿತ್ರದೇಹರಾಗಿ ಯದು ಹೈಹಯಾದಿಗಳು ಅಣಿಮಾದಿ ಸಿದ್ಧಿಗಳನ್ನು ಹರಿಭಕ್ತಿಯನ್ನು ಪೊಂದಿದರು. ಲೋಕವನ್ನು ಸೃಜಿಸಲು ನಾನು ತಪವನ್ನು ಗೈಯಲು ಸನತ್ಕುಮಾರ ನೆನಿಸಿ ಬಂದು ಹಿಂದಿನ ಕಲ್ಪಜ್ಞಾನ ವಿಶೇಷವನ್ನು ನನಗೆ ಕೊಟ್ಟು ಲೋಕವನ್ನು ಪಾಲಿಸಿ ಮುನಿ ಗಳಿಗೂ ಜ್ಞಾನಪ್ರದನಾದನು. ಇವನ ಆವೇಶದಿಂದ ಯುಕ್ತನೇ ನನ್ನ ಮಗನಾದ ಸನತ್ಕು ಮಾರನು. ಧರ್ಮನಿಗೆ ಮೂರ್ತಿದೇವಿಯಲ್ಲಿ ಹರಿ, ಕೃಷ್ಣ, ನರ, ನಾರಾಯಣ ಎಂಬ ನಾಲ್ಕು ರೂಪದಿಂದ ಅವತರಿಸಿದನು. ಹರಿ ಕೃಷ್ಣ ನಾರಾಯಣರು ಸಾಕ್ಷಾತ್ ಶ್ರೀ ಹರಿಯೇ. ನರನು ಅನಂತನು ಅವನಲ್ಲಿ ನರನೆಂಬ ರೂಪದಿ ಶುಕ್ಲಕೇಶಾವೇಶದಿಂದ ಹರಿಯು ವಾಸಿಸುವನು. ನರನಾರಾಯಣರು ಲೋಕಕ್ಷೇಮಾರ್ಥವಾಗಿ ತಪಸ್ಸನ್ನು ಮಾಡುತ್ತಿರುವರು. ಅವರ ತಪವನ್ನು ಕೆಡಿಸಲು ಬಂದ ಅಪ್ಸರೆಯರು ಹಾಗೂ ಅನಂಗನ ಪರಿವಾರವೂ ವಿಫಲಯತ್ನರಾಗಿ ಪೋದರು. ನಾರದಾ! ಮಹಾತ್ಮರಾದ ಶಂಕರಾದಿಗಳು ಕಾಮವನ್ನು ಸಿಟ್ಟಿನಿಂದ ಸುಟ್ಟರು, ನಿಜ. ಆದರೆ ಅವರು ಅಸಹ್ಯವು ಕಾಮಬೀಜವು ಆದ ರೋಷವನ್ನು ಗೆಲ್ಲಲಾರದೇ ಹೋದರು. ರೋಷವೇ ಅವರೀರ್ವರ ಮಲಿನರಹಿತ ಮನಸ್ಸನ್ನು ಪೊಗಲಾರದೆ ಹೋಯಿತೆಂದಮೇಲೆ ಕಾಮವೆಂತು ಪೊಕ್ಕು ಕೆಡಿಸಲರ್ಹವಾದೀತು? ಧ್ರುವನು ಮಲತಾಯಿಯ ವಾಗ್ಬಾಣವಿದ್ಧನಾಗಿ ವನವನ್ನು ಸೇರಿ ತಪವನ್ನು ಗೈಯಲು ವಾಸುದೇವನೆನಿಸಿ ಅವನಿಗೆ ಧ್ರುವಪದವಿಯನ್ನು ಕೊಟ್ಟು ಮುನಿಜನ ನುತನಾದನು. ಐಕ್ಯವಾದಿಯಾದ ವೇನನನ್ನು ಭೂಸುರರು ಶಪಿಸಿ ಸುಡಲು ಅವನ ಭುಜವನ್ನು ಮಥಿಸಿದ ಋಷಿಗಳ ಪ್ರಾರ್ಥನೆಯನ್ನು ಕೇಳಿ ಪೃಥುರಾಜನಲ್ಲಿ ಪೃಥು ಎಂಬ ತನ್ನ ರೂಪದಿಂದಾ

ನಾರದಾ! ಈಗ ತಿಳಿಯಿತೇ? ಆ ಹರಿಪ್ರೇರಣೆಯಿಂದ ಅವನ ಆಜ್ಞೆಯಿಂದ ನಾನು ಸೃಷ್ಟಿಯನ್ನು, ರುದ್ರನು ಸಂಹಾರವನ್ನು ಮಾಡುವೆವು. ಪುರುಷರೂಪದಿಂದ ವಿಶ್ವವನ್ನು ಪರಿಪಾಲಿಸುವ ಹರಿಯು ಸೃಷ್ಟಿ ಸ್ಥಿತಿ ಸಂಹಾರ ಶಕ್ತಿಗಳನ್ನು ಸ್ವತಂತ್ರವಾಗಿ ಉಳ್ಳವನು. ನಮ್ಮ ಶಕ್ತಿ ಅವನ ಅಧೀನವು. ಹರಿಯೇ ಸರ್ವೋತ್ತಮನು.

ವತ್ಸಾ! ನಿನ್ನ ಪ್ರಶ್ನೆಗೆ ಉತ್ತರವನ್ನು ಕೊಟ್ಟಿರುವೆವು. ಕೇಳು! ವ್ಯಕ್ತಾವ್ಯಕ್ತವಾದ ಜಗದಲ್ಲಿ ಹರಿಯಂ ಬಿಟ್ಟು ಸ್ವತಂತ್ರರಾರೂ ಇಲ್ಲ. ಭಕ್ತಿಯಿಂದಲೂ ಪ್ರೇಮದಿಂದಲೂ ನಾನು ನನ್ನ ಹೃದಯದಲ್ಲಿ ಹರಿಯನ್ನು ಸದಾ ಸನ್ನಿಧೀಕರಿಸಿರುವೆನು. ಅವನ ದಯೆಯಿಂದ ನನ್ನ ಮಾತೆಂದೂ ಸುಳ್ಳಾಗುವುದಿಲ್ಲ. ನನ್ನ ಮನಸ್ಸೆಂದೂ ಅಬದ್ಧಮಾರ್ಗದಲ್ಲಿ ಪೋಗುವುದಿಲ್ಲ. ನನ್ನ ಇಂದ್ರಿಯಗಳೂ ದುರ್ವಿಷಯಾಸಕ್ತವಾಗುವುದೇ ಇಲ್ಲ. ಇಂತು ವೇದ ಪ್ರತಿಪಾದ್ಯಮಾನನಾದ ನಾನು ಪ್ರಜಾಪತಿಗಳಿಂದ ವಂದಿತನು, ಸರ್ವಜ್ಞನು, ಪ್ರಭುವು ಆಗಿದ್ದೂ, ಯಾರಿಂದ ಜನಿಸಿ ಬಂದೆನೋ ಅಂತಹ ಶ್ರೀಹರಿಯನ್ನು ನಿಪುಣತರವಾದ ಧ್ಯಾನದಿಂದಲೂ ಕಾಣಲಾರದೆ ಇದ್ದೆನು. ಆ ಶ್ರೀಹರಿಯ, ಶರಣಾಗತ ಜನರ ಸಂಸಾರನಿವಾರಕವಾದ, ಮೋಕ್ಷದವಾದ, ಮಂಗಲ ಮಂಗಲವಾದ ಚರಣಕ್ಕೆ ನಾನು ನಮಸ್ಕರಿಸುವೆನು. ನನ್ನ ಮಹಿಮೆಯನ್ನು ಶ್ರೀಹರಿಯೇ ತಾನೇ ಅರಿತಿಹನಲ್ಲದೆ ನನಗೂ ಗೊತ್ತಿಲ್ಲ. ಮುಖ್ಯಪ್ರಾಣನಿಗೂ ಗೊತ್ತಿಲ್ಲ ಎಂದ ಮೇಲೆ ಇತರರ ಪಾಡೇನು? ನನಗೆ ನಿನಗೆ ಮತ್ತೆ ರುದ್ರನಿಗೂ ಸಾಕಲ್ಯೇನ ಅವನ ಜ್ಞಾನವಾಗಲಾರದು. ಅಂದಮೇಲಿತರ ಸುರರೇನು ತಿಳಿದಾರು? ಅವನ ಬಂಧಕಶಕ್ತಿಯಿಂದ ಮೋಹಿತರಾಗಿ ಅವನ ಪ್ರಸಾದದಿಂದ ನಮ್ಮ ನಮ್ಮ ಯೋಗ್ಯತಾನುಸಾರವಾಗಿ ಜಗವನ್ನು ತಿಳಿದಿರುವೆವು. ಯಾರ ಅವತಾರಲೀಲೆಗಳನ್ನು ಪಾಡುತ್ತಾ ನಾವೆಲ್ಲರೂ ಅವನ ಮಹಿಮೆಯನ್ನು ಸಾಕಲ್ಯೇನ ಪೇಳಲಾರೆವೋ ತಿಳಿಯಲಾರೆವೋ ಅಂತಹ ಭಗವಂತನಿಗೆ ನಮಸ್ಕಾರವು. ಪ್ರತಿಕಲ್ಪದಲ್ಲಿಯೂ ಜನ್ಮಾದಿದೋಷರಹಿತನಾದ ಶ್ರೀಶನು ತಾನೇ ತನ್ನಲ್ಲಿ ತನ್ನಿಂದ ತನ್ನನ್ನು ಸೃಷ್ಟಿಸಿಕೊಂಡು ಲಯವನ್ನೂ ಹೊಂದುವನು. ಮತ್ಸ್ಯಾದಿ ರೂಪದಿಂದ ಸಜ್ಜನರನ್ನು ಸಲಹುವನು. ಅವನು ನಿರ್ದೋಷನು, ಅದ್ವಿತೀಯನು, ಜ್ಞಾನರೂಪನು, ಅಂತರ್ಯಾಮಿಯು, ದುಷ್ಟಾಂಶರಹಿತನು, ದೇಶಕಾಲಗುಣಗಳಿಂದ ಪೂರ್ಣನು, ಅನಾದ್ಯನಂತನು, ಪ್ರಕೃತಿಗುಣಲೇಪರಹಿತನು, ಸ್ವಗತ ಭೇದವಿವರ್ಜಿತನು, ಶಶ್ವದೇಕಪ್ರಕಾರನಾಗಿರುವ ನಿತ್ಯನಿರ್ದುಃಖ ನಿರತಿಶಯಾನಂದಾನು ಭವರೂಪನು. ಮುನಿಗಳು ಇಂದ್ರಿಯಮನಂಗಳನ್ನು ಜಯಿಸಿ ಶ್ರೀ ಹರಿಯನ್ನು ಪರೋಕ್ಷೀಕರಿಸಿ ಕೊಂಡಾಗ ಅವರ ಮನವು ದುಷ್ಟತರ್ಕದಿಂದ ದೂರವಾಗಿ ಶುದ್ಧವೆನಿಸುವದು. ಸರ್ವಾಧಾರನಾದ ನಾರಾಯಣನ ಪ್ರಥಮಾವತಾರವು ಪುರುಷನೆಂದು ಪ್ರಸಿದ್ಧವಾಗಿದೆ. ಅವನಿಂದ ಸ್ಥಾವರ ಜಂಗಮ ಜಗತ್ತೆಲ್ಲಾ ತುಂಬಿದೆ. ಪರಮಾಣು, ಮಹತ್ತು, ಕಾಲ, ಸ್ವಭಾವ, ಪ್ರಾಣ, ಮೂಲಪ್ರಕೃತಿ, ಪಂಚಭೂತಗಳು, ಬ್ರಹ್ಮಾಂಡ, ತ್ರಿಗುಣಗಳು, ದಶೇಂದ್ರಿಯಗಳು, ಗರುಡ, ಇಂದ್ರ ಇವುಗಳಲ್ಲಿ ಶ್ರೀಹರಿಯು ಸನ್ನಿಹಿತನಾಗಿ ತತ್ತಚ್ಛಕ್ತಿಪ್ರದನಾಗಿದ್ದಾನೆ. ನಾನು ರುದ್ರ, ಇಂದ್ರ, ದಕ್ಷಾದಿ ಪ್ರಜೇಶರು, ನೀನೇ ಮೊದಲಾದ ಪರಮಹಂಸರು, ಸ್ವರ್ಗ ಖಗ ಮನುಜ ಪಾತಾಲಾದಿ ಲೋಕಪಾಲಕರು, ವಿಶ್ವಾವಸು ಮುಂತಾದ ಗಂಧರ್ವರು, ಚಿತ್ರಕೇತುಪ್ರಮುಖ ವಿದ್ಯಾಧರರು, ಪುಷ್ಪವಂತ ಮುಂತಾದ ಚಾರಣರು, ಯಕ್ಷೇಶನಾದ ಕುಬೇರ, ರಕ್ಷೋಪೋಗಣ ನೊಡೆಯ ನಿರ್ಋತಿ, ಉರಗಾಧಿಪ ವಾಸುಕಿ, ನಾಗಧೀಶ ಅನಂತ, ಪಿತೃಧಿಪ ಯಮ, ದೈತ್ಯೇಂದ್ರ ಪ್ರಹ್ಲಾದ, ಸಿದ್ಧೇಶಗಾದ ಸನಕಾದಿಗಳು, ದಾನವೇಂದ್ರರಾದ ವೃಷಪರ್ವಾದಿ

ಗಳು, ಪ್ರೇತಪತಿ ಯಮ, ಪಿಶಾಚರಾಜ ಘಂಟಾಕರ್ಣ, ಭೂತಪತಿ ಭೈರವ, ಕೂಷ್ಮಾಂಡನಾಥ ಭೃಂಗಿ, ಜಲಚಂತುಶ್ರೇಷ್ಠ ತಿಮಿಂಗಿಲ, ಮೃಗನಾಥ ಸಿಂಹ, ಪಶುಪಾಲಕ ನಂದಿ, ಎಷ್ಟೆಂದು ಹೇಳಲಿ ನಾರದಾ! ಜ್ಞಾನ, ಬಲ, ಸಹನೆ, ಅವಷ್ಟಂಭನಶಕ್ತಿ, ಅಕ್ರೋಧ, ನಿಷಿದ್ಧಕರ್ಮಾಕರಣ ಲಜ್ಜೆ, ಕಾಂತಿ, ಸೌಂದರ್ಯ, ಐಶ್ವರ್ಯ, ಶೌರ್ಯ, ಧೃತಿ ಮೊದಲಾದ ಆಶ್ಚರ್ಯಕರವಾದ ಗುಣಂಗಳುಳ್ಳವರೆಲ್ಲರೂ ಆ ಶ್ರೀಹರಿಯ ಭಿನ್ನಾಂಶರು. ಅವನಿಂದ ಬಂದ ಗುಣಗಳಿಂದ ಶೋಭಿಸುವರು. ಹರಿಗುಣಗಳಿಗೆ ಇತರರ ಸುಗುಣಗಳು ಪ್ರತಿಬಿಂಬಗಳಾಗಿವೆ. ಜ್ಞಾನಿಗಳು ಹೇಳುವ ಮತ್ತು ಉಪಾಸಿಸುವ ಆ ಪೂರ್ಣಷಡ್ಗುಣನ ಲೀಲಾವತಾರಗಳಲ್ಲಿ ಮುಖ್ಯವಾದವು ಗಳನ್ನು ಮಾತ್ರ ನಿನಗೆ ನಾ ಪೇಳುವೆನು. ಮನೋಜ್ಞಮಧುರವಾದ ಆ ಕಥೆಗಳನ್ನು ಕೇಳುವರಿಗೆ ದೇಹಾರಂಭಕಾರಣವಾದ ಪಾಪಕರ್ಮವೆಲ್ಲವೂ ನಷ್ಟವಾಗಿ ಪೋಗುವುದು.

## ೭. ಪದ್ಮನಾಭನ ಅವತಾರಗಳು

ಯಜ್ಞವರಾಹನಾಗಿ ಭೂಮ್ಯುದ್ಧರಣವನ್ನು ಮಾಡುವಾಗ ಬಂದ ಹಿರಣ್ಯಾಕ್ಷನನ್ನು ಕೊಂದನು. ಆಕೂತಿಯಲ್ಲಿ ರುಚಿಪ್ರಜೇಶನಿಗೆ ಪುಟ್ಟಿ ಯಜ್ಞವೆನಿಸಿ ಸ್ವರ್ಗವನ್ನಿಂದ್ರನಾಗಿ ಪಾಲಿಸಿದನು. ದಕ್ಷಿಣಾದೇವಿಯಲ್ಲಿ ತುಷಿತರೆಂಬುವ ದೇವರನ್ನು ಪಡೆದನು. ಸ್ವಾಯಂಭುವ ಮನುವನ್ನು ರಾಕ್ಷಸರಿಂದ ರಕ್ಷಿಸಿ ಈಶಾವಸ್ಯೋಪನಿಷತ್ತಿನಿಂದ ಸ್ತುತನಾದನು. ಕರ್ದಮನಿಗೆ ದೇವಹೂತಿ ಯಲ್ಲಿ ನವ ಭಗಿನಿಯರ ತಮ್ಮನಾಗಿ ಅವತರಿಸಿದ ಕಪಿಲನು ಮೋಕ್ಷ ಕಾರಣ ಸಂಖ್ಯಾಶಾಸ್ತ್ರವನ್ನು ತಾಯಿಗೆ ಪೇಳಿ ಉದ್ಧರಿಸಿದನು. ಅತ್ರಿಗೆ ತನ್ನನ್ನು ತಾನೇ ಮಗನಾಗಿ ಕೊಟ್ಟು ದತ್ತನೆನಿಸಿದನು. ಅವನ ಪಾದಪಂಕಜಪರಾಗಪವಿತ್ರದೇಹರಾಗಿ ಯದು ಹೈಹಯಾದಿಗಳು ಅಣಿಮಾದಿ ಸಿದ್ಧಿಗಳನ್ನು ಹರಿಭಕ್ತಿಯನ್ನು ಪೊಂದಿದರು. ಲೋಕವನ್ನು ಸೃಜಿಸಲು ನಾನು ತಪವನ್ನು ಗೈಯಲು ಸನತ್ಕುಮಾರ ನೆನಿಸಿ ಬಂದು ಹಿಂದಿನ ಕಲ್ಪಜ್ಞಾನ ವಿಶೇಷವನ್ನು ನನಗೆ ಕೊಟ್ಟು ಲೋಕವನ್ನು ಪಾಲಿಸಿ ಮುನಿ ಗಳಿಗೂ ಜ್ಞಾನಪ್ರದನಾದನು. ಇವನ ಆವೇಶದಿಂದ ಯುಕ್ತನೇ ನನ್ನ ಮಗನಾದ ಸನತ್ಕು ಮಾರನು. ಧರ್ಮನಿಗೆ ಮೂರ್ತಿದೇವಿಯಲ್ಲಿ ಹರಿ, ಕೃಷ್ಣ, ನರ, ನಾರಾಯಣ ಎಂಬ ನಾಲ್ಕು ರೂಪದಿಂದ ಅವತರಿಸಿದನು. ಹರಿ ಕೃಷ್ಣ ನಾರಾಯಣರು ಸಾಕ್ಷಾತ್ ಶ್ರೀ ಹರಿಯೇ. ನರನು ಅನಂತನು ಅವನಲ್ಲಿ ನರನೆಂಬ ರೂಪದಿ ಶುಕ್ಲಕೇಶಾವೇಶದಿಂದ ಹರಿಯು ವಾಸಿಸುವನು. ನರನಾರಾಯಣರು ಲೋಕಕ್ಷೇಮಾರ್ಥವಾಗಿ ತಪಸ್ಸನ್ನು ಮಾಡುತ್ತಿರುವರು. ಅವರ ತಪವನ್ನು ಕೆಡಿಸಲು ಬಂದ ಅಪ್ಸರೆಯರು ಹಾಗೂ ಅನಂಗನ ಪರಿವಾರವೂ ವಿಫಲಯತ್ನರಾಗಿ ಪೋದರು. ನಾರದಾ! ಮಹಾತ್ಮರಾದ ಶಂಕರಾದಿಗಳು ಕಾಮವನ್ನು ಸಿಟ್ಟಿನಿಂದ ಸುಟ್ಟರು, ನಿಜ. ಆದರೆ ಅವರು ಅಸಹ್ಯವು ಕಾಮಬೀಜವು ಆದ ರೋಷವನ್ನು ಗೆಲ್ಲಲಾರದೇ ಹೋದರು. ರೋಷವೇ ಅವರೀರ್ವರ ಮಲಿನರಹಿತ ಮನಸ್ಸನ್ನು ಪೊಗಲಾರದೆ ಹೋಯಿತೆಂದಮೇಲೆ ಕಾಮವೆಂತು ಪೊಕ್ಕು ಕೆಡಿಸಲರ್ಹವಾದೀತು? ಧ್ರುವನು ಮಲತಾಯಿಯ ವಾಗ್ಬಾಣವಿದ್ಧನಾಗಿ ವನವನ್ನು ಸೇರಿ ತಪವನ್ನು ಗೈಯಲು ವಾಸುದೇವನೆನಿಸಿ ಅವನಿಗೆ ಧ್ರುವಪದವಿಯನ್ನು ಕೊಟ್ಟು ಮುನಿಜನ ನುತನಾದನು. ಐಕ್ಯವಾದಿಯಾದ ವೇನನನ್ನು ಭೂಸುರರು ಶಪಿಸಿ ಸುಡಲು ಅವನ ಭುಜವನ್ನು ಮಥಿಸಿದ ಋಷಿಗಳ ಪ್ರಾರ್ಥನೆಯನ್ನು ಕೇಳಿ ಪೃಥುರಾಜನಲ್ಲಿ ಪೃಥು ಎಂಬ ತನ್ನ ರೂಪದಿಂದಾ

ವೇಶಿಸಿ ಪುಟ್ಟಿದನು. ಭೂಮಿಯನ್ನೇ ಗೋವನ್ನು ಮಾಡಿ ಸಕಲ ಜೀವನ ಪದಾರ್ಥಗಳನ್ನು ಕರೆದು ಪ್ರಜರಿಗಿತ್ತನು. ನಾಭಿರಾಜನಿಂದ ಮೇರುದೇವಿಯಲ್ಲಿ ಋಷಭನೆಂದವತರಿಸಿ ಸಕಲ ಬಾಹ್ಯಸಂಗವನ್ನು ತ್ಯಜಿಸಿ, ಪ್ರಶಾಂತನಾಗಿ, ಸರ್ವಾಧಾರನಾಗಿ, ಪ್ರಯೋಜನವಿಲ್ಲದಿದ್ದರೂ ಲೋಕಶಿಕ್ಷೆಗೋಸುಗವಾಗಿ ಯೋಗಚರ್ಯೆಯನ್ನು ನಡಿಸಿ ನೋಡಿಸಿದನು. ನಾನು ಯಜ್ಞವನ್ನು ಮಾಡುವಾಗ ಹಯಗ್ರೀವನಾಗಿ ಬಂದು ನನಗುಪದೇಶಗೈದ ಸ್ವಾಮಿಯು ಹಿರಣ್ಯವರ್ಣನು ವೇದಮುಖ್ಯಪ್ರತಿಪಾದನು, ಯಜ್ಞಫಲಪ್ರದನು ಮತ್ತು ಸಕಲ ದೇವೋತ್ತಮನು ಆಗಿರುವನು. ಅವನ ಮೂಗಿನ ಉಸಿರೇ ವೇದಗಳು. ಅವನ ಮುಖದಿಂದೆಲ್ಲ ವಿದ್ಯೆಗಳು ಪೊರಮಟ್ಟವು. ಆ ಜ್ಞಾನಾನಂದ ಸ್ವರೂಪನಿಗೆ ವಂದನೆಗಳು.

ಮತ್ಸ್ಯನಾಗಿ ಮನ್ವಂತರ ಪ್ರಳಯ ಸಮಯದಲ್ಲಿ ಮನುವಿನಿಂದ ಪೂಜೆಯನ್ನು ಕೊಂಡನು. ಭೂಮಿಯು ನೌಕಾರೂಪದಿಂದಿದ್ದಾಗ ಅದರಲ್ಲಿದ್ದ ಸರ್ವ ಜೀವರಿಗೆ ಆಧಾರವಾಗಿ ದ್ದನು. ಹಯಗ್ರೀವ ದೈತ್ಯನಿಂದ ಅಪಹೃತವಾದ ವೇದಗಳನ್ನು ನನಗೆ ಪುನಃ ತಂದುಕೊಟ್ಟನು. ಅಮರಾಸುರರು ಕ್ಷೀರಶರಧಿಯನ್ನು ಅಮೃತಕ್ಕೆಂದು ಮಥಿಸುವಾಗ ಮಂದರವನ್ನು ಮುಣಗದಂತೆ ಬೆನ್ನ ಮೇಲೆ ಕಚ್ಛಪನಾಗಿ ಧರಿಸಿದನು. ಆ ಮಂದರಪರ್ವತ ಪರಿಭ್ರಮಣದಿಂದ ಸುಖವೆನಿಸಿ ನಿದ್ರೆಬಂದಂತೆ ಆನಂದಮಯನಾಗಿದ್ದನು. ದೇವಭಯವನ್ನು ಪರಿಹರಿಸಲು ಭ್ರುಕಿಟು ದಂಷ್ಟ್ರಾಕರಾಳವದನ ಭಯಂಕರನಾದ ನೃಸಿಂಹನಾಗಿ, ಗದೆಯನ್ನು ಪಿಡಿದು ಮೇಲೇರಿ ಬರುವ ಹಿರಣ್ಯಕಶ್ಯಪನನ್ನು ತೊಡೆಯಲ್ಲಿಟ್ಟು ನಖಗಳಿಂದ ಸೀಳಿಕೊಂದನು. ಸರಸ್ಸಿನಲ್ಲಿ ಕಾಲನ್ನು ಪಿಡಿದು ಪೀಡಿಸುವ ಮಕರಿಯಿಂದ ಬಿಡಿಸೆಂದಾರ್ತನಾಗಿ ಕರದಿ ಕಮಲವನ್ನೆತ್ತಿ ಸಮರ್ಪಿಸಿ 'ಆದಿಪುರುಷ! ಅಖಿಲಲೋಕನಾಥ! ಪವಿತ್ರಕೀರ್ತೇ ! ಶ್ರವಣಮಂಗಳನಾಮಧೇಯ!' ಎಂದು ಕೂಗಲು ಶರಣಾಗತರಂ ಪೊರೆವ ಹರಿಯು ಗರುಡಾರೂಢನಾಗಿ ಬಂದು ಚಕ್ರದಿಂದ ನಕ್ರನನ್ನು ಕೊಂದು ಗಜರಾಜನನ್ನು ಬಿಡಿಸಿದನು. ಆ ಹರಿಯೇ ತಾಪಸಮನುವೆನಿಸಿದನು. ಅದಿತಿಯ ಮಕ್ಕಳಲ್ಲಿ ವಯಸ್ಸಾ ಚಿಕ್ಕವನಾದರೂ ಗುಣದಿಂದ ದೊಡ್ಡವನಾದ ಸ್ವಾಮಿಯು ಬಲಿಯನ್ನು ಬೇಡಿ ಮೂರು ಪಾದದ ನೆವದಿಂದ ಸುರರಾಜ್ಯವನ್ನು ಕಸಿದು ಇಂದ್ರನಿಗೆ ಕೊಟ್ಟ ವಾಮನ ಮೂರ್ತಿಯೇ ತ್ರಿವಿಕ್ರಮನಾಗಿ ಸಕಲ ಲೋಕಗಳನ್ನಾಕ್ರಮಿಸಿದನು. ಸನ್ಮಾರ್ಗದಲ್ಲಿರುವವರನ್ನು ಕೆಡಿಸಲು ಪ್ರಭುಗಳು ಸಮರ್ಥರಲ್ಲವೆಂದು ತೋರಿಸಿದನು. ಆ ಉರುಕ್ರಮನ ಪಾದೋಕವನ್ನು ಶಿವನು ಧರಿಸಿಹನು. ಅಂತಹ ಪಾದೋದಕವನ್ನು ಧರಿಸಿ, ಕೊಟ್ಟ ಮಾತನ್ನು ಸತ್ಯವನ್ನಾಗಿ ಮಾಡಲು, ತಲೆಬಾಗಿ ತನ್ನನ್ನೇ ಶ್ರೀವಾಮನನಿಗೆ ಸಮರ್ಪಿಸಿಕೊಂಡ ಆ ಬಲಿರಾಜನ ಸರ್ವಸ್ವ ದಾನ ಪುಣ್ಯಫಲವು ಇಂದ್ರಲೋಕಾಧಿಪತ್ಯವಲ್ಲ. ಹರಿತಪೋಣವೇ ನಿಜವಾದ ಫಲವು. ಅದರಿಂದ ಆ ಬಲಿಗೆ ಮುಕ್ತಿಯಲ್ಲಿ ಆನಂದೋದ್ರೇಕವಾಗುವದು. ನಾರದಾ! ನಮ್ಮ ಭಕ್ತಿಯಿಂದ ಮೆಚ್ಚಿದ ಭಗವಂತನು ಇತರಾದೇವಿಯಲ್ಲಿ ಮಹಿದಾಸನೆಂದವತರಿಸಿ, ಜ್ಞಾನಕರ್ಮನಿರೂಪಕವಾದ ಪಾಂಚರಾತ್ರಾಗಮವನ್ನು ಬೋಧಿಸಿದನು. ಅವನ ಮಹಿಮೆಯನ್ನೂ ಆ ಆಗಮದ ರಹಸ್ಯವನ್ನೂ ವಾಸುದೇವ ಶರಣರು ಮಾತ್ರ ತಿಳಿಯಬಲ್ಲರು. ಆಯಾ ಮನ್ವಂತರಗಳಲ್ಲಿ ರಾಜರಾಜೇಶ್ವರನೆಂಬ ರೂಪದಿಂದಿದ್ದು ಅಪ್ರತಿಹತವಾದ ತೇಜದಿಂದ ಪರಿಪಾಲಿಸುವನು. ದುಷ್ಟರನ್ನು ಶಿಕ್ಷಿಸುವನು. ಕಮನೀಯ ಚರಿತೆಯನ್ನಾಚರಿಸಿ ತನ್ನ ಕೀರ್ತಿಯನ್ನು ಪ್ರಕಟಿಸುವನು. ಧನ್ವಂತರಿಯಾಗಿ ಅಮೃತವನ್ನು ತಂದನು. ಆಯುರ್ವೇದವನ್ನು ಪ್ರಕಟಿಸಿದನು. ನಿತ್ಯಮುಕ್ತನಾದ ಸ್ವಾಮಿಯು

'ಧನ್ವಂತರಯೇ ಸ್ವಾಹಾ' ಎಂದು ತನ್ನ ಯಜ್ಞಭಾಗವನ್ನು ಕೊಡುವವರನ್ನೂ, ಕೇವಲ 'ಧನ್ವಂತರಯೇ ನಮಃ' ಎಂದು ತನ್ನ ಹೆಸರನ್ನು ಸ್ಮರಿಸುವವರನ್ನೂ ಆರೋಗ್ಯದಿಂದಿರಿಸಿ ಕಾಪಾಡುವನು. ದೈವದಿಂದ ನಾಶವಾಗಲಿರುವ ಬ್ರಹ್ಮದ್ರೋಹಿ ಕ್ಷತ್ರಿಯ ಕುಲವನ್ನು ಇಪ್ಪತ್ತೊಂದು ಸಲ ಪರಶುವಿನಿಂದ ಕಡಿದು ನಾಶಪಡಿಸಿದ ಭಾರ್ಗವ ರಾಮನ ಪರಾಕ್ರಮವು ಸಾಕ್ಷಾದ್ರುದ್ರನನ್ನು ಕೂಡ ನುಂಗಿಬಿಡುವಷ್ಟು ಭಯಂಕರವಾಗಿದೆ. ಪ್ರಾಣಾದಿಗಳೊಡೆಯನಾದ ಶ್ರೀಹರಿಯು ರಾಮನೆನಿಸಿ ಇಕ್ಷ್ವಾಕುವಂಶದಿ ಜನಿಸಿದನು. ತಂದೆಯ ಮಾತನ್ನು ಸತ್ಯವನ್ನಾಗಿ ಮಾಡಲು ಕಾಡನ್ನು ಸೇರಿದನು. ಪತ್ನಿಯಿಂದ ತಮ್ಮನಿಂದ ಕೂಡಿ ವಾಸಿಸುವ ಆ ರಾಮನಿಗೆ ದ್ರೋಹವನ್ನೆಸಗಿ ರಾವಣನು ಮರಣವನ್ನು ಪೊಂದಿದನು. ತ್ರಿಪುರವನ್ನು ಸುಡುವ ರುದ್ರನಂತೆ ಕುಪಿತನಾದ ರಾಮನಿಗೆ ಸಮುದ್ರರಾಜನು ಗಡಗಡ ನಡುಗಿ ಮಾರ್ಗವನ್ನು ಕೊಟ್ಟು ಪೂಜಿಸಿದನು. ಸೀತಾವಿಯೋಗಾಗ್ನಿಸಖವಾದ ರಾಮನ ರೋಷದೃಷ್ಟಿಯು ಸಮುದ್ರದಲ್ಲಿದ್ದ ಮಕರ ಮೀನೋರಗ ಜಂತುಜಾಲವನ್ನು ಬಲು ತಾಪಗೊಳಿಸಿತು. ತನ್ನ ವಕ್ಷದಲ್ಲಿ ತಾಗಿದ ಐರಾವತದ ದಂತಗಳು ಮುರಿಯಲು ದಿಗ್ವಿಜಯವನ್ನು ಗೈದು ಅಟ್ಟಹಾಸದಿಂದ ಗೆದ್ದ ರಾವಣನು ರಾಮದಾರ ಚೌರ್ಯವನ್ನು ಮಾಡಿ ಕೆಟ್ಟನು. ಶ್ರೀರಾಮನ ಧನುರ್ವಿಸ್ಫೂರ್ಜಿತಗಳಿಂದಲೇ ನಶಿಸಿ ಪುನಃ ಸಸೈನ್ಯನಾಗಿ ರಾಮಶರಗಳಿಂದ ಸತ್ತನು. ಅಸುರಭಾವಪೀಡಿತಳಾಗಿ ಮೊರೆಯಿಟ್ಟ ಭೂದೇವಿಯನ್ನು ಸಲಹಲು ಸಿತಕೃಷ್ಣಕೇಶವೆಂಬ ಕಲೆಯಿಂದ ಅವತರಿಸುವನು. ಅವನ ಚರಿತೆಯು ಸಾಮಾನ್ಯರಿಗೆ ಗೋಚರಿಸಬಾರದೆಂದು ಮನುಜನಂತೆ ನಟಿಸುವನು. ಆದರೂ ಆ ಕೃಷ್ಣನ ಅದ್ಭುತ ಮಹಿಮೆಗಳೆಲ್ಲವೂ ಲೋಕೋತ್ತರವಾಗಿವೆ. ನೋಡು! ಶಿಶುವಾಗಿದ್ದಾಗ ಪೂತನಿಯನ್ನು ಘಾತಿಸಿದನು. ಮೂರು ತಿಂಗಳ ವಯಸ್ಸಿನಲ್ಲಿ ಪಾದದಿಂದೊದೆಂದು ಶಕಟಾಸುರನನ್ನು ಕೊಂದನು. ಅಂಬೆಗಾಲಿಕ್ಕಿ ತನ್ನನ್ನು ಕಟ್ಟಿದ ಒರಳಿಗೆ ಸಿಲುಕಿಸಿ ಅರ್ಜುನವೃಕ್ಷಗಳನ್ನು ಕೆಡಹುವದು ವಿಷ್ಣುವಲ್ಲದವನಿಗೆ ಸಾಧ್ಯವೇ? ವಿಷಜಲಪಾನವನ್ನು ಮಾಡಿ ಮೂರ್ಛೆಯಲ್ಲಿ ಬಿದ್ದ ಗೋಪಾಲಕರನ್ನು ತನ್ನ ಅನುಗ್ರಹಪೂರ್ಣದೃಷ್ಟಿಸುಧಾವರ್ಷದಿಂದ ಬದುಕಿಸಿದನು. ಕಾಳಿಂದಿಯ ಮಡುವಿನಲ್ಲಿ ವಿಹರಿಸಿ ಕಾಳಿಯನನ್ನು ಅಲ್ಲಿಂದ ಹೊರಡಿಸಿ ಆ ಜಲವನ್ನು ಶುದ್ಧಿಗೊಳಿಸಿದನು. ಅವನ ಕರ್ಮಗಳೆಲ್ಲವೂ ದಿವ್ಯವೇ! ರಾತ್ರಿಯ ಸಮಯದಲ್ಲಿ ವಿಪಿನದಲ್ಲಿ ಮಲಗಿರುವಾಗ ಉರಿಯುತ್ತಾ ಬಂದ ದಾವಾಗ್ನಿಯನ್ನು ಕಣ್ಣುಮುಚ್ಚಿ ತೆಗೆಯುವಷ್ಟರಲ್ಲಿಯೇ ಪಾನಮಾಡಿ ನಂದಾದಿಗಳನ್ನು ಮರಣದಿಂದ ತಪ್ಪಿಸಿ ಸುಖವಾಗಿ ಗೋಕುಲವನ್ನು ಸೇರಿಸಿದನು. ಇವನನ್ನು ಕಟ್ಟಲು ಯಶೋದೆ ತಂದ ಹಗ್ಗಗಳೆಲ್ಲವೂ ಸಾಲದೇ ಹೋದವು. ಇವನು ಆಕಳಿಸಿದರೆ ಮುಖದಲ್ಲಿ ಯಶೋದೆಗೆ ಬ್ರಹ್ಮಾಂಡವೇ ಕಾಣಿಸಿತು. ನಂದನನ್ನು ವರುಣಪಾಶದಿಂದ ಬಿಡಿಸಿದನು. ಯಮಪುತ್ರಪನಾದ ವ್ಯೋಮಾಸುರನಿಂದ ಗುಹೆಯಲ್ಲಿ ಬಂಧಿಸಲ್ಪಟ್ಟ ಗೋಪಬಾಲರನ್ನು ಬಿಡಿಸಿ ಅವನನ್ನು ಕೊಂದನು. ತನ್ನನ್ನು ಬೇಡಿದ ನಂದಾದಿಗಳ ಅನ್ಯಥಾ ಜ್ಞಾನವನ್ನು ಕಳೆಯಲು ಅವರಿಗೆ ವೈಕುಂಠವನ್ನು ತೋರಿಸಿ ತಂದನು. ತನ್ನ ಯಾಗವು ಕೆಡಲು ಸಿಡಿದೆದ್ದ ಸುರರೊಡೆಯನು ವ್ರಜವನ್ನು ನಾಶಗೈಸುವೆನೆಂದು ಸಿಡಿಲು ಗುಡುಗಿನಿಂದ ಕೂಡಿದ ಮಳೆಯನ್ನು ಕರೆಯಲು, ಪಶುಗಳನ್ನು ಗೋಪರನ್ನು ನಾಶವಾಗದಂತೆ ಏಳು ವರ್ಷದವನಿದ್ದಾಗ ಗೋವರ್ಧನಗಿರಿಯನ್ನು ಸಣ್ಣ ಶಿಲೀಂಧ್ರ (ನಾಯಿಛತ್ರಿ)ದಂತೆ ಎತ್ತಿ ಹಿಡಿದು ಅನಾಯಾಸವಾಗಿ ರಕ್ಷಿಸಿದನು. ಶರಚ್ಚಂದ್ರಚಂದ್ರಿಕಾ ಧವಳವಾದ ಕಾನನದಲ್ಲಿ ಚಂದ್ರವದನೆಯರನ್ನು ಮನೋಹರ ವೇಣುಗಾನದಿಂದ ಆಕರ್ಷಿಸಿ ರಾಸಕ್ರೀಡೆಯನ್ನಾಡುವಾಗ

ಶ್ರೀ ಕೃಷ್ಣನು ಆ ವನಿತೆಯರನ್ನಪಹರಿಸಿಕೊಂಡು ಪೋಗುತ್ತಿರುವ ಶಂಖಚೂಡನನ್ನು ಸಂಹರಿಸಿ ಅವನ ಶಿರೋಮಣಿಯನ್ನು ಅಣ್ಣನಿಗೆ ಕೊಟ್ಟನು. ಪ್ರಲಂಭ, ಖರ ದರ್ದುರ, ಕೇಶಿ , ಅರಿಷ್ಟ, ಚಾಣೂರ, ಮುಷ್ಟಿಕ, ಕುವಲಯಾಪೀಡ, ಕಂಸ, ಕಾಲಯವನ, ನರಕಾಸುರ, ಪೌಂಡ್ರಕ, ಶಾಲ್ವ, ದ್ವಿವಿದ, ಬಲ್ವಲ, ದಂತವಕ್ತ್ರ, ಸಪ್ತವೃಷಭಾಸುರರು, ಶಂಬರ ವಿದೂರಥ, ರುಕ್ಮಿ ಮತ್ತು ಯುದ್ಧದಲ್ಲಿ ಧನುಷ್ಪಾಣಿಗಳಾಗಿ ಎದುರಿಸಿದ ಕಾಂಬೋಜ, ಮತ್ಸ್ಯ, ಕುರು, ಸೃಂಜಯ, ಕೈಕಯಾದಿ ಜೀವರನ್ನು ಅವರವರಿಗೆ ಯೋಗ್ಯವಾದ ತಮಸ್ಸನ್ನೋ, ನರಕವನ್ನೋ ಅಥವಾ ಹರಿಲೋಕವನ್ನೋ ಹೊಂದುವಂತೆ ಭೀಮಬಲರಾಮಾರ್ಜುನರಲ್ಲಿ ನಿಂತು ಕೊಲ್ಲಿಸಿದನು. ತಾನೂ ಕೊಂದನು. ಕಾಲಬಲದಿಂದ ಜ್ಞಾನಹ್ರಾಸವಾಗುತ್ತಿರುವುದನ್ನು ಕಂಡು ಅಲ್ಪಾಯುಷ್ಕರು ಮಂದಮತಿಗಳಾದ ಮನುಜರಲ್ಲಿ ಕೃಪೆಯಿಂದ ಪರಾಶರ ಸತ್ಯವತಿಯರಲ್ಲಿ ಅವತರಿಸಿದನು. ವೇದ ವಿಭಾಗವನ್ನು ಮಾಡಿ ಪುರಾಣಾದಿಗಳನ್ನು ರಚಿಸಲು ಉಪದೇಶಿಸಿದನು. ಮೂರು, ಏಳು, ಹದಿನಾರು, ಇಪ್ಪತ್ತೈದು ಮತ್ತು ಇಪ್ಪತ್ತೆಂಟನೆಯ ದ್ವಾಪರಗಳಲ್ಲಿ ವೇದವಿಭಾಗವು ನಡೆಯಿತು. ಆದರಲ್ಲಿ ಪೂರ್ವಯುಗಗಳಲ್ಲಿ ಇತರ ದ್ರೌಣಿವ್ಯಾಸಾದಿಗಳಿಂದ ವೇದವಿಭಾಗ ಮಾಡಿಸಿ ಸ್ವಯಂ ತಾನೇ ಇಪ್ಪತ್ತೆಂಟನೆಯ ದ್ವಾಪರದಲ್ಲಿ ಶ್ರೀಹರಿಯು ವೇದವಿಭಾಗವನ್ನು ಮಾಡಿದನು. ದೇವ ದ್ವೇಷಿಗಳಾದ ತ್ರಿಪುರಾಸುರರು ಲೋಕಗಳನ್ನು ಹಿಂಸಿಸುವಾಗ ಅವರು ವೇದಮಾರ್ಗದಿಂದ ಭ್ರಷ್ಟರಾಗಿ ಕೆಡುವಂತೆ ಬುದ್ಧಿಮೋಹಕ ಬಾಲವೇಷದಿಂದ ಪೋಗಿ ಅವರಿಗೆ ಪಾಷಂಡಧರ್ಮವನ್ನು ಬುದ್ಧನಾಗಿ ಪೇಳಿದನು. ಯಾವಾಗ ಕಲಿಯುಗದ ಕೊನೇ ಭಾಗದಲ್ಲಿ ಸಜ್ಜನರ ಮನೆಗಳಲ್ಲೂ ಭಗವತ್ಕಥೆ ಇರುವುದಿಲ್ಲವೋ, ಬ್ರಾಹ್ಮಣರು ಪಾಷಂಡಿಗಳಾಗುವರೋ, ವೃಷಲರು ರಾಜರಾಗು ವರೋ, ಸ್ವಾಹಾಸ್ವಧಾವಷಟ್ಕಾರಗಳೇ ಕೇಳಿಸುವುದಿಲ್ಲವೋ ಆಗ ಭಗವಂತನು ಕಲ್ಕಿಯಾಗಿ ಅವತರಿಸಿ ದುಷ್ಟರನ್ನು ಶಿಕ್ಷಿಸಿ ಧರ್ಮವನ್ನು ಪುನಃ ಸ್ಥಾಪಿಸಿದನು. ಸೃಷ್ಟಿಕಾಲದಲ್ಲಿ ನಾನು, ಕರ್ದಮಾದಿ ಋಷಿಗಳು, ನವಪ್ರಜೇಶರು; ಪಾಲನ ಸಮಯದಲ್ಲಿ ಧರ್ಮ, ಯಜ್ಞ, ಚತುರ್ದಶ ಮನುಗಳು, ಚತುರ್ದಶೇಂದ್ರರು, ಪ್ರಿಯವ್ರತಾದಿ ರಾಜರು; ಸಂಹಾರ ವೇಳೆಯಲ್ಲಿ ಅಧರ್ಮ, ರುದ್ರ, ಕ್ರೋಧವಶರೇ ಮೊದಲಾದವರು ಅವನ ವಿವಿಧ ಶಕ್ತಿಗಳಿಂದ ಕೂಡಿ ನಮ್ಮಲ್ಲಿದ್ದು ಅವನು ಮಾಡಿಸಿದಂತೆ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಿರುವೆವು. ಅವನ ಪರಾಕ್ರಮವು ಅನಂತವಾದುದು. ನಾನೊಂದು ವೇಳೆ ಪೃಥಿವಿಯ ರಜಃಕಣಗಳನ್ನು ಗಣನೆ ಮಾಡಬಲ್ಲೆನಾದರೂ ಶ್ರೀವಿಷ್ಣು ವೀರ್ಯವನ್ನು ಸಾಕಲ್ಯೇನ ತಿಳಿಯಲಾರದೆ ಇರುವೆನು. ಇನ್ನಿತರರ ಪಾಡೇನು? ತ್ರಿವಿಕ್ರಮನಾಗಿ ಪಾದಕ್ಷೇಪವನ್ನು ಮಾಡಿದಾಗ ಸತ್ಯಲೋಕವು ಕಂಪಿಸಲು ತದಧಿಪತಿಯಾದ ನಾನು ಪ್ರಾರ್ಥಿಸಲು ಸ್ತಂಭಿಸಿ ನಿಲ್ಲುವಂತೆ ಮಾಡಿದ ಆ ಮಹಾಪ್ರಭುವಿಗೆ ನಮಿಸುತ್ತಿರುವೆನು. ಸ್ವೇಚ್ಛಾಮಹಿಮನಾದ ಸ್ವಾಮಿಯನ್ನು ನಾನು ತಿಳಿದಿಲ್ಲ. ಪ್ರಜಾಪತಿಗಳು ಮುನಿಗಳರಿಯರು. ಆ ಶೇಷನು ಕೂಡ ಸಾವಿರ ಮುಖದಿಂದ ಪಾಡುತ್ತಾ ಹರಿಯ ಗುಣವಾರಿಧಿಯ ಪಾರವನ್ನು ಕಂಡಿಲ್ಲ. ಸರ್ವಾತ್ಮನಾ ಕಪಟಂಗಳನ್ನು ಬಿಟ್ಟು ಅವನ ಪಾದಪದ್ಮವನ್ನಾಶ್ರಯಿಸಿ ಅವನ ದಯೆಗೆ ಪಾತ್ರರಾಗಿರುವವರೇ ಅವನನ್ನು ಸ್ವಯೋಗ್ಯತಾನುಸಾರ ತಿಳಿಯುವರು. ಮತ್ತು ಸಂಸಾರದಿಂದ ಪಾರಾಗಬಲ್ಲರಾಗಲಿ ಈ ಹಾಳು ನಾಯಿನರಿಗಲು ತಿಂದು ಪೋಗಲರ್ಹವಾದ ಭೌತಿಕದೇಹದಲ್ಲಿ ನಾನು ನನ್ನದೆಂಬ ದುರ್ಮತಿಗಳವನನ್ನೆಂದಿಗೂ ತಿಳಿಯಲಾರರು. ಆ ಹರಿಯ ಪ್ರಸಾದದಿಂದ ನಾನು ಆ ಭಗವಂತನ ಮಹಿಮೆಯನ್ನು ಯಥೋಯೋಗ್ಯವಾಗಿ ತಿಳಿದಿರುವೆನು. ರುದ್ರನು

ತಿಳಿದಿರುವನು. ನೀನು, ಪ್ರಹ್ಲಾದನು, ಮನುರಾಜ, ಶತರೂಪೆ, ಪ್ರಿಯವ್ರತೋತ್ತಾನ ಪಾದರು, ಪ್ರಾಚೀನಬರ್ಹಿ, ಋಭು, ಅಂಗರಾಜ, ಧ್ರುವ, ಇಕ್ಷ್ವಾಕು, ಪುರೂರವ, ಮುಚುಕುಂದ, ಜನಕ, ಗಾಧಿ, ರಘು, ಅಂಬರೀಷ, ಸಗರ, ಗಯ, ಯಯಾತಿ, ಮಾಂಧಾಂತ, ಅಲರ್ಕ, ಶತಧನ್ವ, ರಂತಿದೇವ, ಭೀಷ್ಮ, ಬಲಿ, ಅಮೂರ್ತರಯ, ದಿಲೀಪ, ಸೌಭರಿ, ಉದಂಕ, ಶಿಬಿ, ದೇವಲ, ಪಿಪ್ಪಲಾದ, ಸಾರಸ್ವತ, ಉದ್ಧವ, ಪರಾಶರ, ಭೂರಿಷೇಣ, ವಿಭೀಷಣ, ಹನುಮಂತ, ಪಾರ್ಥ, ಆರ್ಷ್ಟಿಷೇಣ, ವಿದುರ, ಶ್ರುತದೇವ ಮೊದಲಾದವರೂ ಶ್ರೀಹರಿಯ ಜ್ಞಾನಿಗಳು. ಸ್ತ್ರೀಶೂದ್ರ ಹೂಣಶಬರಾದಿಗಳು ಹಿಂದಿನ ಪಾಪದಿಂದ ಆ ಜನ್ಮಗಳಲ್ಲಿ ಬಂದಿದ್ದರೂ ಶ್ರೀಶನ ಜ್ಞಾನವನ್ನು ಪಡೆದಿರುವರು. ವೃಂದಾವನದಲ್ಲಿದ್ದ ಪಶುಪಕ್ಷ್ಯಾದಿಗಳು ಕೂಡ ಅವನ ಮಾಯೆಯನ್ನು ದಾಟಿ ಮುಕ್ತರಾದರೆಂದ ಮೇಲೆ ಆ ತ್ರಿವಿಕ್ರಮನನ್ನೇ ನಂಬಿದ ಭಕ್ತರು ಉದ್ಧೃತರಾಗುವರೆಂದು ಹೇಳ ಬೇಕೇ? ಶ್ರವಣಧ್ಯಾನಗಳಿಂದ ಪರಿಪೂತರಾದ ಜ್ಞಾನಿಗಳವನ ಮಾಯಾಬಂಧವನ್ನು ಬಿಡಿಸಿ ಕೊಂಡು ಅವನ ದಯೆಯಿಂದ ಮುಕ್ತರಾಗುವರು.

ಆ ಹರಿಯು ಶಶ್ವದೇಕಪ್ರಕಾರನು, ಆನಂದಪೂರ್ಣನು, ಅದ್ವಿತೀಯನು ಮತ್ತು ಭಯರಹಿತನು, ಕೇವಲ ಜ್ಞಾನಶರೀರನು, ಅಪ್ರಾಕೃತನು, ರಾಗಾದಿದೋಷರಹಿತನು, ವೈಷಮ್ಯಾದಿ ದೋಷರಹಿತನು, ವ್ಯಕ್ತಾವ್ಯಕ್ತ ಜಗದ್ವಿಲಕ್ಷಣನು, ಅಹಂಭಾವರಹಿತನಾದ ಪ್ರಭುವು ಆಗಿರು ವನು. ಮಾಯೆ ಎನಿಸಿದ ಪ್ರಕೃತಿಯು ಅವನೆದುರು ನಿಲ್ಲಲಾರಳು. ಮಾಯೆಯಿಂದ ಬರುವ ಸಂಸಾರವು ಅವನ ಉಪಾಸಕರಿಂದ ದೂರವಾಗುವದು. ಇಂತಹ ಸ್ವಾಮಿಯನ್ನು ಕ್ರಿಯಾಕಾರಕಾದಿ ಶಬ್ದವಾಚ್ಯನಾದರೂ ಸಾಕಲ್ಯೇನ ವರ್ಣಿಸಲು ವೇದವು ಸಮರ್ಥವಲ್ಲ. ಗುಣಪೂರ್ಣನಾದ್ದರಿಂದ ಅವನನ್ನೇ ಬ್ರಹ್ಮನೆಂದು ನಿತ್ಯಸುಖನೆಂದು ವಿಶೋಕನೆಂದು ತಿಳಿದು ಚೆನ್ನಾಗಿ ಶ್ರವಣಾದಿ ಜಿಜ್ಞಾಸೆಯನ್ನು ಮಾಡಿ, ಇಂದ್ರನು ಅಮೃತ ಸಿಗುತ್ತಲೇ ಭಾವಿಯಂ ತೋಡುವ ಕುದ್ದಾಲವನ್ನು ಬಿಸುಡುವಂತೆ, ಯಮರಾಜನ ನರಕಲೋಕಕಾರಣವಾದ ಸಂಸಾರತಾಪವನ್ನು ಬಿಡುವರು. ಸರ್ವಶ್ರೇಯಪ್ರಭುವಾದ ಪರಮಾತ್ಮನಿಂದ ಫಲ ರೂಪಮೋಕ್ಷಸುಖವನ್ನರಿತು ಅನಾದಿಸ್ವಭಾವ ದಿಂದ ಪುಟ್ಟಿದ ಭಕ್ತಿಯನ್ನು ಮಾಡಿ ಸುಜನರು ಸುಖಿಸುವರು. ತನ್ನ ಕಾರಣವಾದ ಧಾತುಗಳ ವಿಶ್ಲೇಷಣದಿಂದ ದೇಹವು ನಾಶವಾಗುವಾಗ ಅಲ್ಲಿದ್ದ ಜೀವನು ಅಲ್ಲಿದ್ದ ಆಕಾಶದಂತೆಯೇ ನಷ್ಟವಾಗದೆ ಬೇರೆ ಶರೀರಗಳನ್ನು ಪೊಂದಿ ಹರೀಚ್ಛೆಯಿಂದ ಸಂಚರಿಸುವನು. ಅಭಿಮಾನದಿಂದ ಶರೀರವೇ ನಾನೆಂದು ತಿಳಿವನು. ಇಂತು, ವತ್ಸಾ! ಭಗವಂತನ ಮಂಗಲ ಮಹಿಮೆಯನ್ನು ನಿನಗೆ ಸಂಕ್ಷೇಪವಾಗರುಹಿದೆನು. ಹರಿಯೇ ಸ್ವತಂತ್ರನು. ಕಾರ್ಯಕಾರಣವಾದ ಜಗವೆಲ್ಲ ಅವನನ್ನು ಬಿಟ್ಟಿಲ್ಲ. ಅಂದರೆ ಅವನಧೀನವಾಗಿಯೇ ಅಸ್ವತಂತ್ರವಾಗಿದೆ.

ಭಗವದ್ವಿಭೂತಿಸಂಗ್ರಹರೂಪವಾದೀ ಭಾಗವತವನ್ನು ನೀನು ನರಲೋಕದಲ್ಲಿ ಪ್ರಕಟಿಸು ವಂತೆ ಶ್ರೀ ವೇದವ್ಯಾಸರಿಗೆ ವಿಜ್ಞಾಪಿಸು. ಇದನ್ನವನೇ ನಾರಾಯಣರೂಪದಿಂದ ನನಗುಪದೇಶಿಸಿ ದನು. ನಾನು ನಿನಗೆ ಪೇಳಿದೆನು. ಭಗವಂತನಲ್ಲಿ ಸುಜನರಿಗೆ ಭಕ್ತಿ ಹುಟ್ಟುವಂತೆ ವರ್ಣಿಸೆಂದು ಆ ಸರ್ವಸ್ವಾಮಿಯನ್ನು ಕೇಳಿಕೋ! ಯಮರಾಜನ ಕರೆಯಿಂದ ಕೊನೆಗಾಣುವ ನರಜನ್ಮವು ಬಂದಮಾತ್ರ ಸಾಲದು. ಮುಕ್ತಿವಲ್ಲಭನಾದ ಶ್ರೀಕೃಷ್ಣನಲ್ಲಿ ಎಡೆಬಿಡದ ಭಕ್ತಿಯು ಪುಟ್ಟಿದರೆ ಆಗ ನರಜನ್ಮವು ಸಾರ್ಥಕವೆನಿಸುವುದು. ಸರ್ವಪಾಪನಾಶಕನಾದ ಉತ್ತಮ ಶ್ಲೋಕನಲ್ಲಿ ಭಕ್ತಿಯಿಲ್ಲದವರು ಮಾಡಿದ ವರ್ಣಾಶ್ರಮಾಚಾರ, ದಾನ, ತಪಸ್ಸು, ವೇದಾಧ್ಯನಗಳಿಂದೇನು

ಫಲ? ನಾರದಾ! ನಾನು ನಿನಗೆ ಹೇಳಿದ ಭಗವನ್ಮಹಿಮೆಯನ್ನು ಹೇಳುವ, ನಿತ್ಯವೂ ಶ್ರದ್ಧೆಯಿಂದ ಕೇಳುವ ಅಥವಾ ಅನುಮೋದಿಸುವವರು ಕೂಡ ಸಂಸಾರಮೋಹದಿಂದ ದೂರವಾಗಿ ಜ್ಞಾನಿಗಳಾಗುವರು' ಎಂದು ಶುಕನು ಬ್ರಹ್ಮ - ನಾರದ ಸಂವಾದವನ್ನು ಹೇಳಿದನು.

## ៤. ರಾಜನು ಕೇಳಿದ ಪ್ರಶ್ನೆಗಳು

ರಾಜನು ಕೇಳಿದನು :-

ಬ್ರಹ್ಮಜ್ಞಾನಿಯೇ! ಸರ್ವೋತ್ತಮನಾದ ಹರಿಯ ಗುಣಗಳನ್ನು ಪ್ರಕಟಿಸೆಂದು ಬ್ರಹ್ಮನಿಂದ ಆಜ್ಞಾಪಿಸಲ್ಪಟ್ಟ ನಾರದನು ಯಾರಿಗೆ ಅದನ್ನು ಹೇಳಿದನು? ಭಾಗವತತತ್ತ್ವವನ್ನು ತಿಳಿಯಲಿಚ್ಛಿಸುವೆನು. ಅದ್ಭುತವೀರ್ಯನಾದ ಹರಿಯ ಕಥೆಗಳು ಲೋಕಮಂಗಳಕರಗಳು. ನನ್ನ ಮನಸ್ಸೆಲ್ಲವನ್ನು ಬಿಟ್ಟು, ಹರಿಚರಣಾಂಕಿತವಾಗಿ ನಾನು ಸರ್ವಸ್ವಾಮಿಯನ್ನು ಚಿಂತಿಸುತ್ತಾ ಹೇಗೆ ಈ ಶರೀರವನ್ನು ಬಿಡಲನುವಾಗುವದೋ ಹಾಗೆ ಹೇಳು. ತನ್ನ ಮಹಿಮೆಯನ್ನು ಪಾಡುವ ಹಾಗೂ ನಿತ್ಯವೂ ಕೇಳವು ಶ್ರದ್ಧಾವಂತರ ಹೃದಯವನ್ನು ಶ್ರೀಕೃಷ್ಣನು ಶೀಘ್ರವಾಗಿಯೇ ಕರ್ಣರಂಧ್ರಗಳಿಂದ ಪ್ರವೇಶಿಸಿ ಶುದ್ಧವನ್ನಾಗಿಸಿ, ಪಾಪಂಗಳನ್ನು ಕಳೆದು ಉದ್ಧರಿಸುವನು. ಶರದೃತುವಿನಲ್ಲಿ ಸರೋವರದಂತೆ ಶುದ್ಧವಾದ ಮನಸ್ಸುಳ್ಳವನು ಕೃಷ್ಣಪಾದಾಶ್ರಯವನ್ನು ಬಿಡದೆ, ಹಾದಿಕಾರನು ತಿರುಗಿ ಸಾಕಾಗಿ ಮನೆಯನ್ನು ಸೇರಿ ಸುಖಿಪಂತೆ, ಭಜಿಸಿ ಸುಖಿಸುತ್ತಾನೆ. ಸರ್ವಕ್ಲೇಷಗಳಿಂದ ದೂರನಾಗುತ್ತಾನೆ. ಜೀವನು ಧಾತುಯುಕ್ತನಲ್ಲವಲ್ಲಾ? ಅವನಿಗೆ ಧಾತುಗಳಿಂದಾದ ದೇಹವು ಬಂದ ರೀತಿ ಹೇಗೆ? ಅದೇನು ಹರೀಚ್ಛೆಯಿಂದೋ? ಅಥವಾ ಕರ್ಮಾದಿ ಇತರ ಕಾರಣಗಳೂ ಉಂಟೋ? ಅದನ್ನು ಹೇಳು.

ಪುರುಷನಿಂದ ವ್ಯಾಪ್ತವಾದ ಅಂಡಕೋಶದ ಪರಿಮಾಣ, ಅದರ ಅವಯವ ಭಾಗಗಳು, ನಾಭಿಯಿಂದ ಪದ್ಮದಲ್ಲಿ ಜನಿಸಿ ವಿಸ್ತಾರವಾದ ಲೋಕಗಳ ಲಕ್ಷಣಗಳು, ಇವೆಲ್ಲ ವಿವರಿಸು. ಶ್ರೀಹರಿಯು ಜೀವರಲ್ಲಿಯೂ ವ್ಯಾಪ್ತನಾಗಿದ್ದು ಹೇಗಿರುವನು? ಬ್ರಹ್ಮನು ಹರಿದಯೆಯಿಂದ ನಾಭಿಪದ್ಮದಲ್ಲಿ ಜನಿಸಿ ಬಂದು ನೋಡಿದ ರೂಪವೆಂತಹದು? ಆತನು ಹೇಗೆ ಯಾವ ಯಾವ ಜೀವರನ್ನು ಸೃಷ್ಟಿಸಿದನು? ಜಗದುತ್ಪತ್ತಿ ಸ್ಥಿತಿಸಂಹೃತಿಕಾರಣನಾದ ಪದ್ಮನಾಭರೂಪೀ ಲಕ್ಷ್ಮೀಶನು ಸೃಷ್ಟ್ಯಾದಿಗೆ ಮೊದಲು ಬ್ರಹ್ಮಾದಿ ಸರ್ವಜೀವಾಶ್ರಯನಾಗಿದ್ದುದು ಎಲ್ಲಿ? ತನ್ನ ಬಂಧಕಶಕ್ತಿಯ ವ್ಯಾಪಾರವನ್ನು ವಿರಮಿಸಿ ಹೇಗೆ ಮಲಗಿದ್ದನು? ಪುರುಷಾಂಗಗಳಿಂದ ಮೊದಲು ಲೋಕಗಳು ತತ್ಪಾಲಕರು ನಿರ್ಮಿತರಾದವರಲ್ಲವೇ? ಆ ಲೋಕಗಳು ಶ್ರೀ ಹರಿಯ ಬ್ರಹ್ಮಾಂಡವೆಂಬ ಪ್ರತಿಮೆಯ ಅವಯವದಿಂದ ಪುಟ್ಟಿ ಆಶ್ರಯಿಸಿ ನಿಂತಿವೆ ಎಂದು ಹೇಳಿದೆ. ಬ್ರಹ್ಮದಿನವೆಂದರೇನು? ಮನ್ವಂತರವೆಷ್ಟು ಕಾಲ? ಕಾಲದ ಅಳತೆ ಹೇಗೆ? ಆಯುರ್ಮಾನವೆಂತು ನಿರ್ಮಿತವಾಯಿತು? ಅಣು ಮಹತ್ತು ಎಂಬ ಕಾಲದ ಕೊನೆಗಳಾವುವು? ಕರ್ಮಫಲವು ಎಂತಹದು? ಎಲ್ಲಿಯವರೆಗೆ ಕರ್ಮಫಲದ ಅನುಭವವಾಗುವದು? ಕರ್ಮಗಳ ಸಂಬಂಧ ಯಾವ ಜೀವರಿಗೆಂತು? ಸತ್ವರಜಸ್ತಮೋಗುಣಗಳು, ಮಹದಾದಿ ತತ್ಕಾರ್ಯಗಳು, ಜೀವರು, ಅವರ ಸಾಮರ್ಥ್ಯ, ಇವನ್ನೆಲ್ಲಾ ವಿಸ್ತರಿಸಿ ಹೇಳು. ಭೂಮಿ, ಪಾತಾಳ, ದಿಕ್ಕು, ಆಕಾಶ, ಗ್ರಹ, ನಕ್ಷತ್ರ, ಪರ್ವತ, ನದನದಿಗಳು, ಸಮುದ್ರ, ದ್ವೀಪ ಇವುಗಳ ಪರಿಮಾಣವನ್ನು ಅಲ್ಲಲ್ಲಿ ವಾಸಿಸುವ ಜನರ

ಲಕ್ಷಣಗಳನ್ನು ವರ್ಣಿಸಲಿ? ಅಂಡ ಕೋಶದ ಪರಿಮಾಣವೆಷ್ಟು? ಅದರ ಒಳಹೊರಗೆ ಹರಿ ಎಂತಿರುವನು? ದೊಡ್ಡವರ ಚರಿತೆಗಳನ್ನೂ ವರ್ಣಾಶ್ರಮಲಕ್ಷಣವನ್ನೂ ಪೇಳು. ಹರಿಯ ಆಶ್ಚರ್ಯಕರವಾದ ಅವತಾರ ಚರಿತೆಗಳಾವುವು? ಯುಗವೆಂದರೇನು? ಪ್ರಮಾಣವೆಷ್ಟು? ಯುಗಧರ್ಮಗಳಾವುವು? ಸಾಮಾನ್ಯ ಧರ್ಮ ಮತ್ತು ವಿಶೇಷ ಧರ್ಮವನ್ನು ವಿಸ್ತರಿಸು. ಪ್ರಜರ ಮತ್ತು ರಾಜರ್ಷಿಗಳ ಧರ್ಮವೇನು? ಆಪದ್ಧರ್ಮವಾವುದು? ತತ್ತ್ವಗಳ ಸಂಖ್ಯೆ ಎಷ್ಟು? ಲಕ್ಷಣವೇನು? ತತ್ತ್ವೇಶನ ಲಕ್ಷಣಗಳಾವುವು? ಹರಿಪೂಜಾವಿಧಿಯನ್ನು, ಯಮಾದಿ ಯೋಗ ಗಳನ್ನು, ಭಕ್ತಿವಿಧಾನವನ್ನು ವಿವರಿಸು. ಅಣಿಮಾದಿ ಸಿದ್ಧಿಗಳಾವುವು? ಯೋಗಿಗಳೆಷ್ಟು ವಿಧ? ಅವರಿಗೆ ಲಿಂಗಭಂಗವಾಗುವುದೆಂದು? ಹೇಗೆ ವೇದ ಉಪವೇದ ಪುರಾಣ ಇತಿಹಾಸ ಇವುಗಳ ವಿವರವೇನು? ಜೀವರ ಸೃಷ್ಟಿ, ಸ್ಥಿತಿ, ಸಂಹಾರಗಳು ಹೇಗಾಗುವವು? ಇಷ್ಟಾಪೂರ್ತಗಳೆಂದ ರಾವುವು? ಕಾಮ್ಯಕರ್ಮಗಳ ಫಲವೇನು? ಧರ್ಮಾರ್ಥ ಕಾಮಗಳೆಂಬ ತ್ರಿವರ್ಗದ ಸಂಪಾದನೆ ಹೇಗೆ? ಸಂಸಾರಿಗಳಿಗೆ ಸ್ವರ್ಗದಿಂದ ಭ್ರಷ್ಟರಾದ ಮೇಲಾಗುವ ಗತಿಯನ್ನೂ ಪಾಖಂಡಮತದ ರೀತಿಯನ್ನೂ ಹೇಳು. ಜೀವನಿಗೆ ಬಂಧಮೋಕ್ಷಗಳು ಹೇಗಾಗುವವು? ಮುಕ್ತರು ಸ್ವರೂಪದಿಂದಿ ರುವುದೆಂತು? ತಾರತಮ್ಯವನ್ನು ವಿವರಿಸಿ ಹೇಳು. ಸ್ವತಂತ್ರನಾದ ಭಗವಂತನು ತನ್ನ ಮಾಯೆಯಿಂದ ಕ್ರೀಡಿಸುವುದೆಂತು? ಬಂಧಕ ಶಕ್ತಿಯನ್ನುಪಸಂಹರಿಸಿ ಉದಾಸೀನನಾಗಿರುವುದು ಹೇಗೆ? ಅವನ ಇಚ್ಛೆ, ಪ್ರಕೃತಿ ಎರಡೂ ಅವನ ಮಾಯೆ; ಅದರಲ್ಲಿ ಇಚ್ಛೆ, ಅವನ ಸ್ವರೂಪ ಮತ್ತು ಜೀವಮೋಚಕ; ಆದರೆ ಅವನ ವಶದಲ್ಲಿದ್ದು ಭಿನ್ನವಾದ ಪ್ರಕೃತಿಯು ಬಂಧಕವಾಗಿದೆ ಎಂದು ಕೇಳಿದ್ದೇನೆ. ನಿನಗೆ ಶರಣಾಗತನಾದ ನನಗೆ ಇವೆಲ್ಲವನ್ನೂ ತತ್ಸಂಬದ್ಧ ವಿಷಯಗಳನ್ನು ಕೂಡ ದಯೆಯಿಂದ ತಿಳಿಸಿಕೊಡಬೇಕೆಂದು ಬೇಡುತ್ತೇನೆ. ನೀನು ವ್ಯಾಸಪುತ್ರನು! ಬ್ರಹ್ಮದೇವ ನಂತೆ ನೀನೂ ಪರಮಾಪ್ತನು. ನಿನ್ನ ವಾಕ್ಯವು ಪರಮ ಪ್ರಮಾಣವಾಗಿದೆ. ನಿನ್ನಂತಹವರು ನಡೆದ ಮಾರ್ಗದಲ್ಲಿ ಶಿಕ್ಷಿತರಾಗಿ ನಡೆಯುವರು ಕಿರಿಯರ ಕರ್ತವ್ಯವಾಗಿದೆ. ಸರ್ವಮುನಿಗಳಿಗೆ ಗುರುಸ್ಥಾನಾಪನ್ನನಾದ ನೀನು ಹೇಳುವಾಗ ಆ ಅಚ್ಯುತಕಥಾಮೃತಪಾನವನ್ನು ಪಾಡುವ ನನಗೆ ಇಂದ್ರಿಯಂಗಳು ನಾನುಪವಾಸದಿಂದಿದ್ದರೂ ಕೆಟ್ಟಿಲ್ಲ. ಶ್ರದ್ಧೆಯಿಂದ ಚೆನ್ನಾಗಿ ಕೇಳುತ್ತೇನೆ, ಹೇಳು – ಎಂದು ರಾಜನು ಕೇಳಿದನು. ಶೌನಕಾ! ಸಜ್ಜನರೊಡೆಯನಾದ ಕೃಷ್ಣನ ಕಥೆಯನ್ನು ಪೇಳುವ ಕುತುಕದಿಂದ ಪ್ರೀತನಾಗಿ ಬ್ರಹ್ಮರಾತನಾದ ಶುಕನು ವಿಷ್ಣುವಾತನಿಗೆ ಭಗವಂತನು ಪ್ರಳಯಾವಸಾನ ಸಮಯದಲ್ಲಿ ಬ್ರಹ್ಮನಿಗೆ ಪೇಳಿದ ವೇದಸಮಾನವಾದ ಭಾಗವತ ಪುರಾಣವನ್ನು ಪಾಂಡುವಂಶತಿಲಕನಾದ ಪರೀಕ್ಷಿತನ ಪ್ರಶ್ನೆಗಳಿಗುತ್ತರರೂಪವಾಗಿ ಪೇಳಲಾರಂಭಿಸಿದನು ಎಂದು ಸೂತನು ಶೌನಕಾದಿಗಳಿಗೆ ತಿಳಿಸಿ, ಪುನಃ ಇಂತು ನುಡಿದನು.

## ೯. ಚತುಃಶ್ಲೋಕೀ ಭಾಗವತೋಪದೇಶ

ಶುಕಾಚಾರ್ಯನಿಂತೆಂದನು – ರಾಜನ್ ! ಜೀವನಿಗೆ ಧಾತುಮಯ ದೇಹಾದ್ಯರ್ಥ ಸಂಬಂಧವು ಬರಲು ಎರಡು ಕಾರಣಗಳಿವೆ. ಒಂದು ಹರೀಚ್ಛೆ; ಎರಡನೆಯದು ತ್ರಿಗುಣಾತ್ಮಕ ಪ್ರಕೃತಿ. ಜೀವನು ಸ್ವತಃ ಜ್ಞಾನಾತ್ಮಕನೇ ಆಗಿದ್ದರೂ ಸ್ವಪ್ನದಲ್ಲಿ ಕರಿತುರಗಾದಿಗಳ ಕಂಡಂತೆ ಅಭಿಮಾನ ದಿಂದ ದೇಹಾದಿಗಳಲ್ಲಿ ಅಹಂಕಾರ ಮಮಕಾರಗಳನ್ನು ಪೊಂದಿ ಸಂಸಾರ ಪ್ರವಾಹದಲ್ಲಿ

ಕೊಚ್ಚಿಕೊಂಡು ಹೋಗುತ್ತಿರುವನು. ದೇವಾಸುರಮನುಷ್ಯಾದಿ ದೇಹಗಳಲ್ಲಿ ಪೊಕ್ಕು ಬಹುರೂಪ ನಂತೆ ತೋರುವನು. ಸ್ವಮಹಿಮನಾದ ಶ್ರೀಹರಿಯಲ್ಲಿ ಯಾವಾಗ ರತನಾಗಿರುವನೋ ಯಾವಾಗ ಪ್ರಕೃತಿಕೃತಾಭಿಮಾನವನ್ನು ತ್ಯಜಿಸುವನೋ ಆಗ ಕಾಲಮಾಯಂಗಳ ಒಡೆಯನಾದ ಭಗವಂತನ ಪ್ರಸಾದವನ್ನು ಪಡೆದು ಜನನಮರಣಗಳ ಪ್ರವಾಹರೂಪವಾದ ಸಂಸಾರವನ್ನು ದಾಟಿ ಉತ್ಕೃಷ್ಟ ನಾಗಿ ಸುಖಿಸುವನು. ಇಂತು ಜೀವನ ಉದ್ಧಾರಕ್ಕಾಗಿಯೇ ಭಾಗವತವನ್ನು ಶ್ರೀಶನೇ ಬ್ರಹ್ಮನಿಗೆ ಪೇಳಿದನು. ಅವನ ಕಾಪಟ್ಯರಹಿತವಾದ ತಪಸ್ಸಿಗೆ ಮೆಚ್ಚಿ ತನ್ನ ದಿವ್ಯರೂಪವನ್ನು ತೋರಿಸಿ ಚತುಃಶ್ಲೋಕೀ ಭಾಗವತವನ್ನು ಪೇಳಿದ ವಿಸ್ತಾರವನ್ನು ಹೇಳುವೆನು, ಕೇಳು! ಸನಕಾದಿಭಜಕರ ಗುರುವಾದ ಆ ಬ್ರಹ್ಮನು ನಾಭಿಕರ್ಣಿಕಾಸ್ಥಾನದಲ್ಲಿ ಕೂತು ಸೃಷ್ಟಿಮಾಡುವ ಇಚ್ಛೆಯಿಂದ ಆಲೋಚಿಸಿದರೂ ಸೃಷ್ಟಿ ವಿಷಯಕಜ್ಞಾನವನ್ನು ಹೊಂದಲಿಲ್ಲ. ಪ್ರಪಂಚ ನಿರ್ಮಾಣ ವಿಧಿಯು ಹೇಗಾಗುವುದೆಂದು ವಿಧಿಯು ಆಲೋಚನೆ ಮಾಡುವಾಗ ಪ್ರಳಯೋದಕದಿಂದ ಎರಡು ಸಲ ಹೇಳಲ್ಪಟ್ಟ 'ತಪ ತಪ' ಎಂಬುವ ವಚನವನ್ನು ಕೇಳಿದನು. ತಪವೇ ಅಲ್ಲವೇ ಪರಮಹಂಸರ ನಿಧಿಯು! ಶಬ್ದವೆಲ್ಲಿಂದ ಬಂತೆಂದು ನಾಲ್ಕು ದಿಕ್ಕಿಗೆ ನೋಡಿದರೂ ಏನೂ ಕಾಣದೆ ಕಮಲದಲ್ಲಿ ಕೂತು, 'ತಪಸ್ಸನ್ನು ಮಾಡು' ಎಂಬ ಆಜ್ಞೆ ಎಂದು ತಿಳಿದು, ಒಂದು ಸಾವಿರ ದೇವ ವರ್ಷಂಗಳು ತಪವಂ ಗೈದನು. ವಾಯುಜಯದಿಂದ ಮನವನ್ನು ಗೆದ್ದು ಜಿತೇಂದ್ರಿಯನಾಗಿ ಆ ಅಮೋಘ ಜ್ಞಾನಿಯು ಸರ್ವಲೋಕ ಪ್ರಕಾಶನ ಸಮರ್ಥವಾದ ಜ್ಞಾನರೂಪ ತಪಸ್ಸನ್ನು ಮಾಡಲು, ಭಗವಂತನಾದ ಹರಿಯು ಪ್ರೀತನಾಗಿ ತನ್ನ ಅತ್ಯುತ್ಕೃಷ್ಟಮವಾದ ಲೋಕವನ್ನು ನೋಡಿದನು.

ಆ ಲೋಕದಲ್ಲಿ ಕ್ಲೇಶವಿಲ್ಲ, ಅಜ್ಞಾನವಿಲ್ಲ, ವ್ಯಾಕುಲತೆ ಇಲ್ಲ. ಸಮ್ಯಗಪರೇಕ್ಷಿಗಳಾದ ದೇವತೆಗಳಿಂದ ಸ್ತೋತ್ರಪಾತ್ರವಾದ ಆ ಸ್ಥಲದಲ್ಲಿ ಉತ್ಪತ್ತಿನಾಶ ವೃದ್ಧಿಕ್ಷಯಗಳಿಲ್ಲ. ಅಲ್ಲಿ ತ್ರಿಗುಣಗಳ ಪರಾಕ್ರಮವಿಲ್ಲ. ಅದು ಚಿತ್ಪ್ರಕೃತಿಮಯವಾದುದು. ಜಡ ಪ್ರಕೃತಿಯ ಗೊಡವೆಯೇ ಇಲ್ಲ. ಅಲ್ಲಿನ ಹರಿಪರಿವಾರದವರನ್ನು ಸುರಾಸುರರೂ ಪೂಜಿಪರು. ಸಾರೂಪ್ಯ ಮುಕ್ತರಲ್ಲಿ ನೀಲಮಣಿಯಂತ ನಿರ್ಮಲ ಕಾಂತಿಯಿಂದ ಮನೋಹರರು, ಕಮಲನೇತ್ರರು, ಪೀತವಸ್ತ್ರರು, ಕೋಮಲಗಾತ್ರರು, ಚತುರ್ಬಾಹು ಶೋಭಿತರು, ಮಣಿಖಚಿತ ಭೂಷಣಾಲಂಕೃತರು, ಪ್ರವಾಲ ದಂತೆ, ವೈಢೂರ್ಯದಂತೆ, ಮೃಣಾಳನಾಳದಂತೆ ಎಸಗುವ ಮೈಬಣ್ಣದಿಂದಲೂ ಪ್ರಕಾಶಯುತ ಕುಂಡಲ ಕಿರೀಟ ಹಾರಗಳಿಂದಲೂ ವಿರಾಜಿಸುವ ಮಹಾತ್ಮರು ವಿಮಾನಗಳಲ್ಲಿ ಸಂಚರಿಸುತ್ತಿ ರುವರು. ಸ್ತ್ರೀರತ್ನರಿಂದ ತಿರುಗುತ್ತಿರುವ ಮಿಂಚುಗಳಿಂದ ಕೂಡಿ ಮೇಘಗಳಂತೆ ಅವರು ಶೋಭಿಪರು.

ಸಾಕ್ಷಾಲ್ಲಕ್ಷ್ಮಿಯು, ತನ್ನ ವಿಭೂತಿ ರೂಪಗಳಿಂದ ಅನೇಕ ಪ್ರಕಾರವಾದ ಭಗವಂತನ ಚರಣಾರವಿಂದ ಸೇವೆಯನ್ನು ಮಾಡುವಳು. ವಸಂತದಲ್ಲಿ ಗಾನ ಮಾಡುವ ಭೃಂಗಕೋಗಿಲೆಗಳಂತೆ ಗಾನಮಾಡುವ ತನ್ನ ಆ ವಿಭೂತಿರೂಪಗಳು ರತ್ನದೋಲೆಗಳಲ್ಲಿ ಕೂತು ಪಾಡುತ್ತಿರಲು ಬ್ರಹ್ಮಾದಿ ಗೇಯಮಹಿಮಳಾದ ರಮಾದೇವಿಯು ಶ್ರೀಹರಿಮಹಿಮೆಯಂ ಪಾಡಿ ಪೊಗಳುತ್ತಿರುವಳು. ಆ ಶ್ವೇತದ್ವೀಪದ ಸಭಾಮಧ್ಯದಲ್ಲಿ ಮುಕ್ತಪತಿಯು ಲಕ್ಷ್ಮೀಪತಿಯು ಆದ ಜಗನ್ನಾಥನನ್ನು ಬ್ರಹ್ಮನು ಕಂಡನು.

ಅಪರಿಚ್ಛಿನ್ನರೂಪನಾದ ಆ ನಾರಾಯಣನು ಸುನಂದನಂದಾದಿ ದ್ವಾರಪಾಲಕರಿಂದ ಸೇವಿತ ನಾಗಿದ್ದನು. ಭಕ್ತರಲ್ಲಿ ಅನುಗ್ರಹಸೂಚಕವಾದ ಅಮೃತಕಟಾಕ್ಷದಿಂದ ಪ್ರಸನ್ನ ಮಂದಹಾಸ

ದಿಂದ, ಕಿರೀಟ ಕುಂಡಲಗಳಿಂದ, ಶ್ರೀವತ್ಸವನಮಾಲೆಗಳಿಂದ ಬಭ್ರಾಜಮಾನನಾದ ಆ ಪ್ರಭುವು ರತ್ನಸಿಂಹಾಸನದಲ್ಲಿ ವಿಜಯಂಗೈದು ಆತ್ಮಾಂತರಾತ್ಮ ಜ್ಞಾನಾತ್ಮ ಪರಮಾತ್ಮನೆಂಬುವ ಚತುಶ್ಶಕ್ತಿಗಳಿಂದಲೂ, ವಾಸುದೇವಾದಿ ದಾಮೋದರಾಂತ ಷೋಡಶ ಶಕ್ತಿಗಳಿಂದಲೂ, ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ, ಸಹಸ್ರೋಲ್ಕರೆಂಬ ಪಂಚಶಕ್ತಿಗಳಿಂದಲೂ ಸುತ್ತಲ್ಪಟ್ಟಿದ್ದನು. ಇತರರಲ್ಲಿ ಶಾಶ್ವತವಾಗಿಲ್ಲದಿರುವ ಐಶ್ವರ್ಯವೀರ್ಯಯಶಃಶ್ರೀಜ್ಞಾನ ವಿಜ್ಞಾನಗಳೆಂಬ ಸ್ವರೂಪಶಕ್ತಿಗಳು ಮೂರ್ತಿಮತ್ತಾಗಿ ಸೇವಿಸುತ್ತಿರಲು ಸ್ವಾತ್ಮಾನಂದರಮಣನಾದ ಸ್ವಾಮಿಯನ್ನು ಬ್ರಹ್ಮನು ಕಂಡು ಆ ಸಂದರ್ಶನದಿಂದ ಅಮಂದಾನಾಂದಕಂದಳಿತ ಹೃದಯಾರ ವಿಂದನಾದನು. ಕಣ್ಣಲ್ಲಿ ಪ್ರೇಮಬಾಷ್ಪಗಳುದುರಿದವು. ಮೈಯೆಲ್ಲ ಪುಲಕಿತವಾಯಿತು. ಜ್ಞಾನ ಮಾರ್ಗದಿಂದ ಮಾತ್ರ ಲಭ್ಯವಾದ ಆ ಹರಿಯ ಪಾದಾರವಿಂದಗಳಿಗೆರಗಿ, ಕೈಜೋಡಿಸಿ ನಿಂ ತುಕೊಂಡನು. ಪ್ರೀತಿಪಾತ್ರನು, ಸೃಷ್ಟಿಕಾರ್ಯದಲ್ಲಿ ನೆರವಾಗಲರ್ಹನು ಆದ ಬ್ರಹ್ಮನನ್ನು ನೋಡಿ ನಾರಾಯಣನು ಪ್ರೇಮದಿಂದ ಕೈಲಿ ಮುಟ್ಟುತ್ತಾ ಗಂಭೀರವಾಗಿಂತು ನುಡಿದನು –

ಎಲೌ ವೇದಗರ್ಭನೇ! ಸೃಷ್ಟಿ ಮಾಡುವದಕ್ಕೆಂದು ಬಹುಕಾಲ ತಪಸ್ಸನ್ನು ಮಾಡಿದೆ. ನಾನು ಸಂತೋಷಪಟ್ಟಿರುವೆನು. ನನ್ನನ್ನು ಮೆಚ್ಚಿಸಲು ಅನಧಿಕಾರಿಗಳಾದ ಕಪಟಗಳಿಗೆ ಸಾಧ್ಯವೇ ಇಲ್ಲ. ಸರ್ವಶ್ರೇಯಃಫಲವೆನ್ನದರ್ಶನವಾಗಿದೆ. ನಾನೂ ವರದೇಶನಾಗಿರುವೆನು. ನಿನಗೆ ಮಂಗಳವಾಗಲಿ! ಬೇಕಾದ ವರವನ್ನು ಬೇಡು. ನನ್ನ ಮಾತನ್ನು ಮರೆಯಾಗಿ ಪೇಳಿದುದನ್ನು ಪಾಲಿಸಿ ನನ್ನ ಗುಣಾ ಲೋಚನರೂಪ ತಪವನ್ನು ಮಾಡಿ ಧನ್ಯನಾದೆ. ಅಂತೆಯೇ ನನ್ನಿಚ್ಛೆಯಿಂದ ಈ ನನ್ನ ಲೋಕವನ್ನು ಕಂಡೆ. ನಾನೇ ತಪವನ್ನಾಚರಿಸುವಂತೆ ಕರ್ಮವಿಮೋಹಿತನಾದ ನಿನಗೆ ಆಜ್ಞಾಪಿಸಿದೆನು. ನಾನು ಜ್ಞಾನಾತ್ಮನಲ್ಲವೇ? ಆದ್ದರಿಂದ ತಪಸ್ಸನ್ನು ಮಾಡುವವರನ್ನು ಕಂಡರೆ ನನಗೆ ಬಲು ಪ್ರೀತಿಯೆನಿಸುವದು. ನಾನು ಜ್ಞಾನದಿಂದಲೇ ಸೃಷ್ಟಿಸುವೆನು, ಜ್ಞಾನದಿಂದಲೇ ಪಾಲಿಸುವೆನು. ಜ್ಞಾನದಿಂದಲೇ ಪುನಃ ಸಂಹರಿಸುವೆನು. ಜ್ಞಾನರೂಪ ತಪವೇ ಎನ್ನ ಮಹಿಮೆ – ಎನ್ನಲು ಬ್ರಹ್ಮನು ವಿಜ್ಞಾಪಿಸಿ ಕೊಂಡನು.

ಭಗವನ್! ಎಲ್ಲ ಭೂತಗಳ ಅಧ್ಯಕ್ಷನು ನೀನು. ಅಂತರ್ಯಾಮಿಯಾಗಿ ಹೃದಯದಲ್ಲಿರುವ ನಿನಗೆ ಎಲ್ಲರ ಇಚ್ಛೆಯು ಚೆನ್ನಾಗಿ ತಿಳಿಯುವದು. ಆದರೂ ನಾಥ! ನಾ ಬೇಡಿದ್ದನ್ನು ಕೊಡಲು ನೀನೇ ಸಮರ್ಥನು. ಪ್ರಾಕೃತರೂಪರಹಿತನಾದ ನಿನ್ನ ಚಿದಾನಂದಾದ್ಯಾತ್ಮಕ ವೈರಾಜರೂಪವನ್ನೂ ಸನವಾವರಣಾಂಡವೆಂಬ ಪುರುಷರೂಪವನ್ನೂ ನನಗೆ ತಿಳಿಸಿಕೊಡು! ನಿನ್ನಿಚ್ಛೆಯಂತೆ ಶ್ರೀದೇವಿ ಯನ್ನು ಕೂಡಿ ಜಗತ್ಸರ್ಜನರೂಪಸ್ವಭಾವಕ್ಕನುಸರಿಸಿ ಅವತಾರಗಳನ್ನೂ ಧರಿಸಿ, ಪಾಲನ ಸಂಹಾರಗಳನ್ನೆಂತು ಮಾಡುವಿ? ಊರ್ಣನಾಭಿಯಂತೆ ಅಲ್ಲವೇ ನಿನ್ನ ಸೃಷ್ಟಿಯ ಆಟ ಶ್ರೀಹರೀ! ಆ ಸೃಷ್ಟಿಜ್ಞಾನವೆನಗೆ ಕೊಡು. ನೀ ಪೇಳಿದ್ದನ್ನೇ ಆಲಸ್ಯವಿಲ್ಲದೆ ಮಾಡುವೆನು, ಮತ್ತು ನಿನ್ನನು ಗ್ರಹದಿಂದ ಪ್ರಜಾಸೃಷ್ಟಿಯನ್ನು ಮಾಡುವಾಗ ಬದ್ಧನಾಗದೆ ಇರುವಂತೆ ಮಾಡು. ಈಶ! ಸಖನಾದ ರಾಜನು ತನ್ನ ವಚನವನ್ನು ಪಾಲಿಸಿದವನಿಗೆ ಮಂಡಲಾಧಿಕಾರವನ್ನು ಕೊಡುವಂತೆ ನಿನ್ನಿಂತ ಅಧಿಕೃತನಾದ ನಾನು ರುದ್ರಾದಿಗಳಿಗೆ ದೇವಾಸುರನರತಿರ್ಯಗಾದಿ ಉತ್ಪಾದನಶಕ್ತಿಯನ್ನು ಪದವಿಗಳನ್ನು ವಿಭಾಗ ಮಾಡಿಕೊಡುವೆನು. ಹೀಗೆ ನನ್ನ ನೂರು ವರ್ಷದ ಬಾಳಿನಲ್ಲಿ ಎಂದೂ ನಾನು ನಿನ್ನ ಮಗ (ಅಜ) ಮತ್ತು ಜಗತ್‌ಕರ್ತಾ ಎಂಬ ದುರಬಿಮಾನವಂ ಪೊಂದದಂತೆ

ಮಾಡು. ದೈನ್ಯಹೀನನನ್ನಾಗಿಸಿ ನನ್ನನ್ನು ನಿನ್ನ ಕೆಲಸದಲ್ಲಿರಿಸಿಕೋ! ಮಾಧವಾ! – ಬ್ರಹ್ಮನಿಂತು ನುಡಿಯಲು ಶ್ರೀ ಭಗವಂತನು ಪೇಳಿದನು –

ನನ್ನ ವಿಷಯಕಜ್ಞಾನ, ರಹಸ್ಯವಾದ ಬಿಂಬಜ್ಞಾನ, ಬಿಂಬ ಉಪನಿಷತ್ಸಂವಾದ ರೂಪವಾದ ಪ್ರಮೇಯವನ್ನು ಕೇಳು! ನಾನಂತೂ ಅನಂತ ಪರಿಣಾಮೋಪೇತನು. ನನ್ನದು ನಿರೂಪಾಧಿಕಸತ್ತಾ. ಇತರಾಧೀನ ಅಲ್ಲ. ನನ್ನ ಅವತಾರ ಗುಣಕರ್ಮಗಳು ಅನಂತ. ಎಂಬ ಈ ತತ್ತ್ವಜ್ಞಾನವು ನನ್ನ ಪರಮಾನುಗ್ರಹದಿಂದ ನಿನಗೆ ಅಚ್ಚಳಿಯದೆ ಉಳಿದಿರಲಿ!

## ಚತುಃಶ್ಲೋಕೀ ಭಾಗವತವು

ಸೃಷ್ಟಿಗೆ ಹಿಂದೆ ನಾನೇ ನಾನಾಗಿದ್ದೆ. ಸ್ವತಂತ್ರನಾಗಿದ್ದೆ; ಇನ್ನಾವ ಸ್ವತಂತ್ರವಾದದ್ದು ಎಂಬುವುದೇ ಇಲ್ಲ. ಕಾಲಕರ್ಮ ಸ್ವಭಾವಾದಿಗಳು ಎಲ್ಲವೂ ನನ್ನಧೀನ. ಜೀವರೂ ನನ್ನಧೀನರೆ! ಸೃಷ್ಟ್ಯನಂತರದಲ್ಲಿ ನೀನಾದೆ. ಈ ಜಗವು ಉದ್ಭವಿಸಿತು. ಆದರೆ ಪುನಃ ಪ್ರಳಯವಾಗುವುದಾಗ ನಾನೇ ಇರುವೆನು. ನೀವೆಲ್ಲರೂ ನನ್ನಧೀನರಾಗಿಯೇ ಇರುವಿರಿ. ಇಂತು ಸ್ಥಿತಿಕಾಲದಲ್ಲಿಯೇ ಸ್ವಾತಂತ್ರ್ಯಭ್ರಾಂತಿ, ಅದನ್ನು ಕಳೆದುಕೊಂಡು ನನ್ನನ್ನು ತಿಳಿಯಬೇಕು. ಈಶ್ವರನಾದೆನಗೆ ಜೀವ ಪ್ರಕೃತಿಗಳಿಂದೇನೂ ಪ್ರಯೋಜನವಿಲ್ಲ. ಬಾಧೆಯೂ ಇಲ್ಲ. ಜೀವನನ್ನು ನನ್ನ ಪ್ರತಿಬಿಂಬನೆಂದು ತಿಳಿ. ಅಂದರೆ ಅವನು ನನ್ನಧೀನನು ಮತ್ತು ನನಗೆ ಸದೃಶನು. ಜಡವು ಜ್ಞಾನರಹಿತವಾಗಿದೆ ಮತ್ತು ಪ್ರಕೃತಿಯಿಂದ ನಿರ್ಮಿತವಾಗಿದೆ. ಈ ಮೂಲಪ್ರಕೃತಿಯೇ ಸಂಸಾರಗ್ಲಾನಿಹೇತುವಾಗಿದೆ. ಪ್ರಳಯದಲ್ಲಿ ಜೀವನಿಗೆ ಜೀವನವಿಲ್ಲ. ಪ್ರಕೃತಿ ಆಗ ಬಂಧಕವಲ್ಲ. ಕರ್ಮವು ಫಲ ಕೊಡುತ್ತಾ ಇರುವುದಿಲ್ಲ. ಕಾಲಕ್ಕೆ ಪರಿಣಾಮವಿಲ್ಲವೆಂದೇ ಜೀವ ಪ್ರಕೃತಿ ಕರ್ಮಕಾಲಗಳು ಇದ್ದರೂ ಇಲ್ಲದಂತೆ ಹರ್ಯಧೀನವಾಗಿರುತ್ತವೆ. ಮಹಾಭೂತಗಳೈದು ಸ್ವಕಾರ್ಯ ಶರೀರಗಳಲ್ಲಿ ತುಂಬಿದ್ದು ಹೊರಗೆ ಕೂಡ ಇರುವಂತೆ ನಾನು ಸರ್ವಭೂತಗಳಲ್ಲಿದ್ದೇನೆ ಮತ್ತು ಹೊರಗೂ ಇರುವೆನು. ಆದರೂ ನಾನು ಭೂತರ ಅಧೀನನನಲ್ಲ; ಅವರೇ ನನ್ನಧೀನರು. ನಾನು ಸರ್ವೋತ್ತಮನು; ಜೀವಜಡವಿಲಕ್ಷಣನು. ಸೃಷ್ಟ್ಯಾದ್ಯಸ್ವಸ್ವತಂತ್ರಕರ್ತನು, ಶಶ್ವದೇಕ ಪ್ರಕಾರನು, ರಮಾವಲ್ಲಭನು; ನಾನಿದ್ದೆಡೆ ಜೀವಕರ್ಮಾದಿಗಳೆಲ್ಲವೂ ವ್ಯಾಪಾರವಂತವಾಗಿದೆ. ನಾನಿಲ್ಲದೆಡೆ ಯಾವುದೂ ಏನೂ ಆಗಲಾರದು. ನಡೆಯಲಾರದು. ಮಾಡಲಾರದೆಂದು ತತ್ತ್ವವಿಚಾರಶೀಲರು ತಿಳಿದು ನನ್ನನ್ನು ಅಂತೆಯೇ ಸರ್ವಪ್ರಭುವೆಂದು ಉಪಾಸಿಸಬೇಕು. ಕೇಳು ಬ್ರಹ್ಮನೇ! ಈ ನನ್ನ ಮಾತನ್ನು ಚೆನ್ನಾಗಿ ಶ್ರದ್ಧೆಯಿಂದ ಪಾಲಿಸು. ನೀನು ಕಲ್ಪ ವಿಕಲ್ಪಗಳಾಗಿ ಹೋದರೂ ಅಜ್ಞಾನವನ್ನು ಪೊಂದುವುದಿಲ್ಲ. ನಿನಗೆ ಶುಭವಾಗಲಿ! –

ಎಂದು ಹೇಳಿ, ಜನ್ಮಾದಿ ದೋಷರಹಿತನಾದ ಹರಿಯು, ಜೀವೋತ್ತಮನಾದ ಬ್ರಹ್ಮನು ನೋಡುತ್ತಿರಲು ಅಂತರ್ಧಾನವನ್ನು ಪೊಂದಿದನು.

ಕಣ್ಣಿಗೆ ಕಾಣದೆ ಪೋದ ಹರಿಗೆ ನಮಸ್ಕರಿಸಿ ಬ್ರಹ್ಮನು ಈ ಭೂತಮಯವಾದ ವಿಶ್ವವನ್ನು ಸೃಜಿಸಿದನು. ಒಂದು ಸಲ ಧರ್ಮಪಾಲಕನಾದ ಬ್ರಹ್ಮನು ಪ್ರಜರಿಗೆ ಕ್ಷೇಮವನ್ನು ಬಯಸಿ, ತನ್ನ ಮೋಕ್ಷದ ಸುಖೋದ್ರೇಕ ಮಾತ್ರ ಪ್ರಯೋಜನಕವಾದ ಯಮ ನಿಯಮಗಳನ್ನು ನಡೆಸುತ್ತಾ ಹರಿಯನ್ನು ವಿಶೇಷವಾಗಿ ಪೂಜಿಸುತ್ತಿದ್ದನು. ಆಗ ಅವನ ಮಕ್ಕಳಲ್ಲಿ ಪ್ರಿಯತಮನಾದ ನಾರದನು ಶೀಲದಿಂದ, ಇಂದ್ರಿಯನಿಗ್ರಹದಿಂದ, ವಿನಯದಿಂದ ಕೂಡಿ ಶುಶ್ರೂಷೆಯನ್ನು ಗೈದನು. ಅನ್ಯಸರ್ವಮಹಿಮೆಗಳ ಪತಿಯಾದ ವಾಸುದೇವನ ಮಹಿಮೆಯನ್ನು ತಿಳಿಯಲಿಚ್ಛಿಸಿ ತಂದೆಯನ್ನು

ಸೇವಿಸಿ ಸಂತೋಷಪಡಿಸಲು ಆ ಪ್ರಪಿತಾಮಹನು ಪ್ರೀತನಾದನು. ಆಗ ನಾರದನು, ನೀನು ಏನನ್ನು ಕೇಳಿದೆ ಅದನ್ನೆಲ್ಲವನ್ನೂ ತಿಳಿಸೆಂದು ಪ್ರಶ್ನಿಸಿದನು. ಮಹಾಭಾಗವತನಾದ ನಾರದನಿಗೆ ದಶಲಕ್ಷಣಗಳುಳ್ಳ ಈ ಭಾಗವತ ಪುರಾಣವನ್ನು ಜಗನ್ನಿರ್ಮಾಣಸಮರ್ಥನಾದ ಬ್ರಹ್ಮನು, ತನಗೆ ಭಗವಂತನು ಹೇಳಿದಂತೆ ಹೇಳಿದನು. ರಾಜನ್! ಸರಸ್ವತೀನದೀತೀರದಲ್ಲಿದ್ದ ವೇದವ್ಯಾಸ ನಿಗೆ, ನಾರದನದನ್ನು ವಿಜ್ಞಾಪಿಸಿ ವಿಸ್ತರಿಸುವಂತೆ ಪ್ರಾರ್ಥಿಸಿದನು. ಆ ಅಮಿತ ತೇಜನಾದ ನನ್ನ ತಂದೆಯು ನನಗೆ ಪೇಳಿದನು. ಮೊದಲು ನಿನಗೆ ವೈರಾಜನಿಂದ ಜನಿಸಿದ ವಿಶ್ವಸೃಷ್ಟಿಯನ್ನು ಪೇಳಿ ಇತರ ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಕ್ರಮವಾಗಿ ಪೇಳುವೆನು.

## ೧೦. ಭಾಗವತ ದಶಲಕ್ಷಣ ವೈರಾಜಸೃಷ್ಟಿ

ರಾಜನ್! ಈ ಪುರಾಣವು ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿಗಳು, ಮನ್ವಂತರ, ಈಶಾನು ಕಥಾ, ನಿರೋಧ, ಮುಕ್ತಿ, ಆಶ್ರಯವೆಂಬ ಹತ್ತು ಲಕ್ಷಣಗಳುಳ್ಳದ್ದಾಗಿದೆ. ಮುಕ್ತಾಮುಕ್ತ ಪ್ರಪಂಚಕ್ಕೆ ಆಶ್ರಯನು ಶ್ರೀಹರಿಯೇ. ಅವನ ಸರ್ವೋತ್ತಮತ್ವಾದಿ ಗುಣಗಳಾಗುವುದಕ್ಕಾಗಿ ಮಿಕ್ಕವುಗಳನ್ನು ವರ್ಣಿಸುವರು. ಅನಂತ ವೇದಾರ್ಥ ಸಂವಾದವಾಗುವಂತೆ ಮಹಾತ್ಮರು ಪೇಳಿದ್ದನ್ನು ಕೇಳು!

ಬ್ರಹ್ಮಾಂಡದ ಹೊರಗೆ ಭೂತಗಳು, ಮಾತ್ರಗಳು, ಇಂದ್ರಿಯಂಗಳು, ಬುದ್ಧಿ ಮೊದಲಾದ ತತ್ತ್ವಸೃಷ್ಟಿಗೆ ಸರ್ಗವೆನ್ನುವರು. ಅಂಡಾಂತರದಲ್ಲಿ ಶ್ರೀಹರಿಯು ಸತ್ವಾದಿ ಗುಣಂಗಳ ಮಿಶ್ರಣ ದಿಂದ ಮಾಡಿದ ಸೃಷ್ಟಿಯೇ ವಿಸರ್ಗ, ವೈಕುಂಠನು ಮಾಡುವ ದುಷ್ಟ ಶಿಕ್ಷೆ, ಶಿಷ್ಟರಕ್ಷೆಯೇ ಸ್ಥಿತಿ. ಅವನ ಪ್ರಸಾದವೇ ಪೋಷಣ. ಸಜ್ಜನರು ಮಾಡುವ ಧರ್ಮಗಳುಳ್ಳವೇ ಮನ್ವಂತರಗಳು. ಊತಿ ಎಂದರೆ ಅನೇಕ ಜೀವರ ಅನೇಕಾನಾದಿ ಕರ್ಮವಾಸನೆಗಳು. ಹರಿಯ ಅವತಾರ, ಅವನು ಪೊರೆದ ಭಕ್ತರ ಕಥೆ ಇವು ಈಶಕಥೆ ಎನಿಸುವದು. ಈ ಜಗತ್ತಿನ ಲಯವೇ ನಿರೋಧವು. ಆಗ ಸ್ವರೂಪೇಚ್ಛಾದಿಗಳನ್ನು ಉಪರಮಿಸಿ ಶ್ರೀಹರಿಯು ಜೀವಸಮುದಾಯವನ್ನು ತನ್ನಲ್ಲಿ ಇಟ್ಟು ಕೊಳ್ಳುವನು. ಮುಕ್ತಿ ಎಂದರೆ ತಾನಲ್ಲದೆಲ್ಲವನ್ನೂ ಪ್ರಾಕೃತ ಜಡ ಸಂಬಂಧವನ್ನೂ ತೊರೆದು ಜೀವನು ಕೇವಲ ಚಿದಾನಂದನಾಗಿರುವುದು. ಸೃಷ್ಟಿ, ಸ್ಥಿತಿ, ಲಯಗಳು ಯಾರ ಆಧಾರದಿಂದ ನಡೆಯುವವೋ ಆ ಪರಬ್ರಹ್ಮನೇ ಆಶ್ರಯನು. ಅವನೇ ಮುಕ್ತರೊಡೆಯನಾದ ಪರಮಾತ್ಮನು. ಚಕ್ಷುರಾದಿಪ್ರೇರಕನಾದ ಪುರುಷನು ಅಧ್ಯಾತ್ಮಿಕನೆನಿಸುವನು. ಅದೇ ಪರಮಾತ್ಮನು ಸೂರ್ಯಾದಿ ಪ್ರೇರಕನಾಗಿ ಆಧಿದೈವಿಕನೆಂದೂ ಕರೆಯಲ್ಪಡುವನು. ಚಕ್ಷುಪ್ರಕಾಶಗಳ ಸಮ್ಯಕ್ ನಿಶ್ಚಾಯಕವಾದ ಆಧಿಭೌತಿಕ ನಿರೂಪದಿಂದ ಹರಿಯು ಘಟಾದಿಗಳಲ್ಲಿ ನೆಲಸಿರುವನು. ಈ ಮೂವರಲ್ಲಿಯೂ ಹರಿಪ್ರೇರಣೆಯು ಇಲ್ಲದಿರಲು ನಮಗೆ ರೂಪಾದಿ ಜ್ಞಾನವೇ ಆಗುವುದಿಲ್ಲ. ಅಂತಹ ಸ್ವಾಮಿಯು ರಮಾಪ್ರಾಣಾದಿ ಮುಕ್ತರಿಗೂ ಪ್ರೇರಕನಾಗಿರುವನು.

ಪುರುಷನು ತನ್ನ ತತ್ತ್ವಗಳಿಂದ ಕೂಡಿ ಅಂಡವನ್ನು ಪ್ರವೇಶಿಸಿ ಅದರಲ್ಲಿ ಪ್ರಾದುರ್ಭೂತ ನಾದಾಗ ತನಗೆ ಇರಲು ಆಶ್ರಯವನ್ನಪೇಕ್ಷಿಸಿ ಸ್ವಪೂಜಾಸಾಧನ ಯೋಗ್ಯವಾದ ನೀರನ್ನು ನಿತ್ಯಪಾವನನಾದ ಶೇಷಶಯನನು ನಿರ್ಮಿಸಿದನು. ಆ ನೀರಿನಲ್ಲಿ ಸಾವಿರ ವರ್ಷಕಾಲ ವಾಸಿಸಿದನು. ಅವನ ಅಧೀನದಲ್ಲಿದ್ದು ದ್ರವ್ಯ, ಕಾಲ, ಕರ್ಮ, ಸ್ವಭಾವ ಜೀವರು ಸ್ವತಂತ್ರ

ಕರ್ತನಾದ ಪ್ರಭುವಿಗೆ ಅಸ್ವತಂತ್ರ ಸಾಧನಾಂತರಗಳಾದರು. ನಾರಾ ಎಂದರೆ ನೀರು ; ಅದರಲ್ಲಿ ಆಶ್ರಯವನ್ನು ಪೊಂದಿ ಇದ್ದ ಕಾರಣದಿಂದ ನಾರಾಯಣನೆಂದು ಭಗವಂತನು ತಿಳಿಯಲ್ಪಟ್ಟನು. ದ್ರವ್ಯಾದಿಗಳ ಶಕ್ತಿ ಸತ್ತ್ವಗಳು ಅವನ ಅಧೀನವಾಗಿವೆ. ಯೋಗತಲ್ಪದಿಂದೆದ್ದು ತನ್ನನ್ನು ನಾನಾ ರೂಪನನ್ನಾಗಿಸಿ ಅವತರಿಸಲಿಚ್ಛಿಸಿ ಶ್ರೀಹರಿಯು ಹಿರಣ್ಮಯ ವೀರ್ಯವನ್ನು ಬ್ರಹ್ಮಾಂಡದಲ್ಲಿ ಮೂರು ವಿಧವಾಗಿ ವಿಸರ್ಜಿಸಿ ಬ್ರಹ್ಮನ ಪುರುಷ ರೂಪವನ್ನು ಸೃಷ್ಟಿಸಿದನು. ಆ ಮೂರು ರೂಪಗಳೇ ಅಧಿದೈವಾಧ್ಯಾತ್ಮಿಕಾದಿ ಭೌತಿಕಗಳು. ಪುನಃ ಆ ಪುರುಷನು ವಿರಾಜನೆನಿಸಿ ಮೂರು ಭಾಗಗಳನ್ನಾಗಿ ಮಾಡಿಕೊಂಡು ಬ್ರಹ್ಮಾಂಡದಲ್ಲಿಯೂ ವಿಭಜಿಸಿದನು. ಬ್ರಹ್ಮಶರೀರದಲ್ಲಿ ಓಜಸಹೋಬಲಾತ್ಮಕನಾಗಿ ತ್ರಿರೂಪದಿಂ ಪ್ರವೇಶಿಸಿದನು. ಅವನ ಸಹೋಬಲೋಜಗಳಿಂದ ಪುಟ್ಟಿದ ಮುಖ್ಯಪ್ರಾಣನು ಸರ್ವೇಂದ್ರಿಯ ನಾಯಕನಾದನು. ನಾರಾಯಣ ಬ್ರಹ್ಮಪ್ರಾಣರಿಂದ ಆಧ್ಯಾತ್ಮಿಕಾದಿ ತ್ರಿವಿಧ ಸೃಷ್ಟಿಯು ನಡೆಯಿತು. ಇಡಾದಿಂದ ಪ್ರಾಣನು ಪಿಂಗಲಾ ನಾಡಿಯಿಂದ ಅಪಾನನು ಮೇಲಕ್ಕೂ ಕೆಳಕ್ಕೂ ಚೇಷ್ಟೆ ಮಾಡುವಾಗ ಜೀವರ ಇಂದ್ರಿಯಗಳು ಪರಿಚರರು ರಾಜರನ್ನನುಸರಿಸಿದಂತೆ ವಿಧೇಯರಾಗಿ ದೇಹದಲ್ಲಿ ಪ್ರವರ್ತಿಸುವರು. ಈ ರೀತಿಯಾಗಿ ಸೃಷ್ಟವಾದ ಚತುರ್ಮುಖದೇಹದಲ್ಲಿ ಪ್ರಾಣಾಪಾನಗಳ ವ್ಯಾಪಾರದಿಂದ ಮೊದಲು ಮುಖವು ಮೂಡಿತು. ಅದರಲ್ಲಿ ಜೊತೆಯಾಗಿಯೇ ಹಸಿವೆ ನೀರಡಿಕೆಯು ಹುಟ್ಟಿದವು. ಮುಖದಲ್ಲಿ ತಾಲು ಜಿಹ್ವೇಂದ್ರಿಯ, ಅದರಿಂದ ಪೊಂದಲರ್ಹವಾದ ರಸಗಳು, ವ್ಯಕ್ತವಾದವು. ಮಾತಾಡಲುಪಕ್ರಮಿಸಿ ದಾಗ ಆ ವಿರಿಂಚಿಯ ಮುಖದಿಂದ ವಹ್ನಿ, ವಾಗಿಂದ್ರಿಯ, ಮಾತುಗಳು ಪುಟ್ಟಿದವು. ಅಂಡೋದಕ ದಲ್ಲಿದ್ದ ಬ್ರಹ್ಮನ ಶರೀರದಲ್ಲಿ ವಾಯುನಿರ್ಗಮದ್ವಾರವಿರದ್ದರಿಂದ ಒಳಗಿನ ವಾಯುವು ಕಂಪಿತ ವಾಗಲು ಕ್ಲೇಶವಾಯಿತು. ಆಗ ನಾಸಿಕೆಯು ಪುಟ್ಟಿತು. ಅದರಲ್ಲಿ ನಾಸಿಕ್ಯವಾಯು, ಗಂಧ, ಘ್ರಾಣೇಂದ್ರಿಯಂಗಳು ಪುಟ್ಟಿದವು. ಬೆಳಕಿಲ್ಲದೆ ತನ್ನನ್ನೂ ಇತರವನ್ನೂ ಕಾಣಲಾರದಾಗ ಕಣ್ಣುಗಳು, ಸೂರ್ಯ, ಚಕ್ಷುರಿಂದ್ರಿಯ, ರೂಪಗಳು ಪುಟ್ಟಿದವು. ವೇದಾದ್ಯುಪದೇಶ ಸ್ವೀಕರಿಸಲು ಕೋರಿದಾಗ ಕರ್ಣಗಳು, ದಿಗ್ದೇವರು, ಶ್ರೋತ್ರೇಂದ್ರಿಯ, ಶಬ್ದಗುಣಗಳು ಪುಟ್ಟಿದವು. ವಸ್ತುಗಳ ಮೃದುತ್ವ, ಕಾಠಿಣ್ಯ ಶೀತೋಷ್ಣಗಳನ್ನು, ಭಾರವನ್ನು ತಿಳಿಯಲು ತ್ವಗಿಂದ್ರಿಯ, ಸ್ಪರ್ಶಗುಣ, ಅಂತರ್ಬಹಿರ್ವ್ಯಾಪ್ತಸ್ಪರ್ಶವಾಯುವು, ಅನೇಕ ಕರ್ಮಗಳ ಮಾಡಲು ಕೈಗಳು ಪುಟ್ಟಲು ಅಲ್ಲಿ ಇಂದ್ರ, ಅದಾನದಾನಕರ್ಮ, ಪುಟ್ಟಿದರು. ನಡೆಯಲು ಪಾದವು ಪುಟ್ಟಲು, ಅದರಲ್ಲಿ ಯಜ್ಞಾದಿ ಗಳಲ್ಲಿ ಹವ್ಯವನ್ನು ಯಾರ ಉದ್ದೇಶದಿಂದ ಕೊಡುವೆವೋ ಆ ಯಜ್ಞನೆಂಬುವ ಇಂದ್ರಪುತ್ರನು, ಗಮನಕ್ರಿಯೆಯು ಪುಟ್ಟಿದವು. ಇಂದ್ರಪುತ್ರ ಯಜ್ಞನಲ್ಲಿ ಸರ್ವಾಧಾರನಾಗಿ ಶ್ರೀಹರಿಯು ಆವೇಶ ದಿಂದಾವಿರ್ಭವಿಸಿ ಯಜ್ಞನಾಮಕನಾಗಿಯೇ ಅಂಗುಟಮಧ್ಯದಲ್ಲಿರುವನು. ಪ್ರಜಾಸಂತತಿಗೋ ಸುಗ ರತಿಯನ್ನು ತದಾನಂದ ಸುಧೆಯನ್ನು ಬೇಡಿದಾಗ ಶಿಶ್ನವು ಜನಿಸಿತು. ಅದರಲ್ಲಿ ಪರಪ್ರಾಪ್ಯ ಸುಖಸಾಧನವೆನಿಸಿದ ಉಪಸೇಂದ್ರಿಯವು ರತಿಕ್ರಿಯೆಯು ಪುಟ್ಟಿದವು. ಧಾತುಮಲವನ್ನು ಬಿಡಲೋಸುಗ ಗುದೇಂದ್ರಿಯವು, ಪಾಯುವ್ಯಾಪಾರವು, ಮಿತ್ರನು ಜನಿಸಿದರು. ತಾನಿರುವ ದೇಹದಿಂದ ಇನ್ನೊಂದರಲ್ಲಿ ಪ್ರವೇಶಿಸಲು ಕೋರಿದಾಗ ನಾಭಿದ್ವಾರವು ಜನಿಸಿತು. ಅಲ್ಲಿ ಅಪಾನ, ಮೃತ್ಯು, ಜೀವರ ದೇಹಾಂತರ ಪ್ರಾಪ್ತಿ ಪುಟ್ಟಿದವು. ಅನ್ನಪಾನ ಸ್ವೀಕರಿಸಲು ಕುಕ್ಷಿನಾಡಿಗಳು ಪುಟ್ಟಿದವು. ಕುಕ್ಷಿಯಲ್ಲಿ ರುಧಿರ ಸಮುದ್ರ, ತೃಪ್ತಿಗಳು, ನಾಡಿಗಳಲ್ಲಿ ಎಪ್ಪತ್ತೆರಡು ವಿಧ ನರಗಳು, ನದಿಗಳು, ಪುಷ್ಟಿಗಳು ಜನಿಸಿದವು. ಶ್ರೀಶನ ಮಹಿಮೆಯನ್ನು ಧ್ಯಾನಿಸುವಾಗ ಹೃದಯಸ್ಥಾನ,

ಅಲ್ಲಿ ಮನಸ್ಸು, ಚಂದ್ರ, ಸಂಕಲ್ಪ, ಕಾಮಗಳು ಪುಟ್ಟಿದವು. ಶರೀರವಿರಲು ಕಾರಣವಾದ ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು, ಮಜ್ಜೆ, ಅಸ್ತಿ ಎಂಬ ಸಪ್ತಧಾತುಗಳು ಭೂಮಿ ನೀರು ಬೆಂಕಿ ಈ ಮೂರರಿಂದಾದವು. ಜಡಪ್ರಾಣನು ಆಕಾಶ, ವಾಯು, ಜಲಗಳಿಂದ ಪುಟ್ಟಿದವನು. ಇಂದ್ರಿಯಗಳು ಸತ್ತ್ವಾದಿ ಗುಣಗಳಿಂದ ಮೂಡಿದವು. ಅಹಂಕಾರದಲ್ಲಿ ಮೂರು ಗುಣಗಳಡಗಿವೆ. ಮನಸ್ಸು ಸರ್ವವಿಕಾರಕೋಶವಾಗಿದೆ. ಬುದ್ಧಿಯು ನಿಶ್ಚಯಜ್ಞಾನರೂಪವು. ಈ ಭಗವಂತನ ಸ್ಥೂಲ ರೂಪವನ್ನು ಪೇಳಿದೆನಲ್ಲದೇ ಇದಕ್ಕೆ ಹೊರಗೆ ಪೃಥಿವೀ, ಅಫ್, ತೇಜ, ವಾಯು, ಆಕಾಶ, ಅಹಂಕಾರ, ಮಹತ್ ಪ್ರಕೃತಿಗಳೆಂಬ ಎಂಟಾವರಣಗಳಿವೆ.

ಈಗ ರಾಜನೇ! ಸ್ವಪ್ರಸಾದವಿಲ್ಲದಿರೆ ದುರ್ಜ್ಞೇಯನಾದ ಹರಿಯ ಸೂಕ್ಷ್ಮತಮ ರೂಪವನ್ನು ಕೇಳು. ಅದಕ್ಕೆ ಮೀರಿದ್ದಿಲ್ಲ. ಅದು ಅನಾದಿಮಧ್ಯನಿಧನವು. ನಿತ್ಯವು. ವಾಕ್ ಮನಸ್ಸು ಇವೆರಡೂ ಕ್ರಮವಾಗಿ ಅದನ್ನು ಸಾಕಲ್ಯೇನ ಪೊಗಳಲಾರದು ಹಾಗೂ ತಿಳಿಯಲಾರದು.

ಈ ಎರಡು ರೂಪಗಳನ್ನು ನಾನು ನಿನಗೆ ಪೇಳಿರುವೆನು. ಭಗವದಿಚ್ಛೆಯಿಂದಲೂ ಪ್ರಕೃತಿಯಿಂದಲೂ ರಚಿತವಾದ ಈ ಜಗತ್ತಿನಲ್ಲಿ ಜ್ಞಾನದುರ್ಬಲರು ಸ್ಥೂಲಪ್ರತಿಮಾರೂಪವನ್ನಾಗಲಿ ಸೂಕ್ಷ್ಮ ಅಂತರ್ಯಾಮಿರೂಪವನ್ನಾಗಲಿ ತಿಳಿಯಲಾರರು. ನಾಮರೂಪ ಕ್ರಿಯೆಗಳನ್ನು ಆ ಶ್ರೀಹರಿಯೇ ನಿಯಮಿಸಿದ್ದಾನೆ. ಸರ್ವಶಬ್ದ ವಾಚ್ಯನು, ಸರ್ವಸ್ವತಂತ್ರಕರ್ತನು, ಸರ್ವಸ್ವಾಮಿಯು ಆಗಿದ್ದಾನೆ. ಸರ್ವಕರ್ತನಾದ್ದರಿಂದ ಸಕರ್ಮನೆನಿಸಿದರೂ, ಕರ್ಮಫಲ ಸಂಗರಹಿತನಾದ್ದರಿಂದ ಅಕರ್ಮನೆನಿಸಿ ವಿರಾಜಿಸುತ್ತಿದ್ದಾನೆ.

ಪ್ರಜಾಪತಿಗಳು, ಮನುಗಳು, ದೇವರು, ಋಷಿಗಳು, ಪಿತೃಗಳು, ಸಿದ್ಧರು, ಚಾರಣರು, ಗಂಧರ್ವರು, ವಿದ್ಯಾಧರರು, ಗುಹ್ಯಕರು, ಕಿನ್ನರರು, ಅಪ್ಸರಸೆಯರು, ನಾಗರು, ಸರ್ಪರು, ಕಿಂಪುರುಷರು, ಮಾತೃರಕಃ ಪಿಶಾಚರು, ಪ್ರೇತಭೂತವಿನಾಯಕರು, ಕೂಷ್ಮಾಂಡ ವೇತಾಳರು, ಉನ್ಮಾದರು, ಯಾತುಧಾನರು, ಗ್ರಹಗಲು, ಖಗಮೃಗಪಶುಗಳು, ವೃಕ್ಷಗಿರಿಗಳು, ಸರೀಸೃಪಗಳು, ಎಣಿಸಲು ಸಾಧ್ಯವಿಲ್ಲದ ಇತರ ಎಲ್ಲಾ ಚರಾಚರ ಜಗವು ಜಲಭೂಮ್ಯಾಕಾಶಗತ ಜೀವರು ಎಲ್ಲರೂ ಶ್ರೀಹರಿಯಿಂದ ನಾಮರೂಪಕ್ರಿಯೆಗಳನ್ನು ಹೊಂದಿದ್ದಾರೆ.

ರಾಜನ್! ಈ ಜೀವರು ಎರಡು ವಿಧ; ಚರರು ಅಚರರೆಂದು. ಮತ್ತು ಸಾತ್ತ್ವಿಕ ರಾಜ ಸತಾಮಸರೆಂದು ಅವರೇ ಮೂರು ವಿಧವಾಗಿದ್ದು ತಾವು ಮಾಡಿದ ಪುಣ್ಯದಿಂದ ಊರ್ಧ್ವಲೋಕಗಳನ್ನು, ಪಾಪದಿಂದ ಅಧೋಲೋಕವನ್ನು, ಮಿಶ್ರಕರ್ಮದಿಂದ ಭೂಲೋಕವನ್ನು ಪೊಂದುತ್ತಿರುವರು.

ರಾಜಸತಾಮಸರಿಂದ ಸಾತ್ತ್ವಿಕರಿಗೆ ಬಾಧೆಯು ಉಂಟಾದಾಗ ಪೋಷಣಾದಿ ಕರ್ತನು, ವರ್ಣಾಶ್ರಮ ಧರ್ಮಪ್ರವರ್ತಕನಾದ ಭಗವಂತನು ಮತ್ಸ್ಯಕೂರ್ಮಾದಿ ತೀರ್ಯಗ್ರೂಪದಿಂದಲೂ, ರಾಮಕೃಷ್ಣಾದಿ ನರರೂಪದಿಂದಲೂ, ಮಹಿದಾಸಾದಿ ದೇವರೂಪದಿಂದಲೂ ಅವತರಿಸಿ ಈ ಜಗವನ್ನು ಸತ್ತ್ವದಲ್ಲಿ ಸ್ಥಾಪಿಸಿ ಸಾತ್ವಿಕರನ್ನು ಸಂರಕ್ಷಿಸುವನು.

ಸೃಷ್ಟಿ ಸ್ಥಿತಿಗಳಂತೆಯೇ ಸಂಹಾರಕಾರ್ಯವೂ ಕೂಡ ಹರ್ಯಧೀನವಾಗಿದೆ. ಸ್ಥಿತಿಕಾಲವಾಗಿ ಪ್ರಳಯವು ಬರಲು ಕಾಲ, ಅಗ್ನಿ, ರುದ್ರರಲ್ಲಿ ಅಂತರ್ಯಾಮಿಯಾದ ಶ್ರೀಹರಿಯು ಬ್ರಹ್ಮಾಂತರ್ಯಾಮಿಯಾಗಿ ತಾನೇ ಸೃಜಿಸಿದ ಜಗವನ್ನೆಲ್ಲ ಸಂಹರಿಸುವನು. ಮೇಘ ಪಟಲವನ್ನು ಬಿರುಗಾಳಿಯಂತೆ ಲಕ್ಷ್ಮೀನೃಸಿಂಹನು ನಾಶಮಾಡಿ ಲಯವನ್ನು ಹೊಂದಿಸುವನು.

ಬ್ರಹ್ಮಾದಿಗಳು ಭಗವಚ್ಛಬ್ದವಾಚ್ಯರೆನಿಸಿದರೆ ಶ್ರೀಹರಿಯು ಭಗವತ್ತಮನೆನಿಸುವನು. ಐಶ್ವರ್ಯಾದಿ ಗುಣಗಳಿಂದ ಸರ್ವಜಗತ್ಪಾಲಕನು. ಅವನು ವೇದಾದಿ ಸಚ್ಛಾಸ್ತ್ರದಲ್ಲಿ ಸೃಷ್ಟಿಸ್ಥಿತಿ ಸಂಹಾರಕರ್ತನು, ಜೀವಜಡಾತ್ಮಕ ಸರ್ವಜಗದಾದಿ ಭಿನ್ನನು, ಸರ್ವದೋಷ ವಿವರ್ಜಿತನು ಎಂದು ಪ್ರತಿಪಾದಿಸಲ್ಪಟ್ಟಿರುವನು. ಜ್ಞಾನಿಗಳು ಕೂಡ ಅಂತೆಯೇ ಅವನನ್ನು ಉಪಾಸಿಸಿ ಕಂಡಿದ್ದಾರೆ.

ಕರ್ತೃತ್ವ ಜನ್ಮಕರ್ಮಗಳು ಜೀವರಿಗೆ ಬಂಧನಿವೃತ್ತಿಯನ್ನುದ್ದೇಶಿಸಿ ಹೇಳಲ್ಪಟ್ಟಿವೆ. ಶ್ರೀಹರಿಗೆ ಹಾಗಲ್ಲ, ಕರ್ತೃತ್ವ ಜನ್ಮಕರ್ಮಗಳು ಇದ್ದರೂ ಸ್ವಾಮಿಯು ಅಪ್ರಾಕೃತನಾದ ಕಾರಣ ಭಗವಂತನಿಗೆ ಅವು ತಾನಾಗಿ ತನ್ನ ಇಚ್ಛೆಯಿಂದ ವಹಿಸಿಕೊಂಡಾಗ ಬಂದವುಗಳು. ಜೀವರ ಜನ್ಮಕರ್ಮಾದಿಗಳವರ ಅಧೀನವಲ್ಲ. ಶ್ರೀಹರಿಯೇ ಅವರಿಗೆ ಬಂಧನಿವೃತ್ತಿಗಾಗಿ ಜನ್ಮಕರ್ಮಗಳನ್ನು ಕೊಟ್ಟು ಉದ್ಧರಿಸುವನು.

ಇಂತು ನಿನಗೆ ಬ್ರಹ್ಮನ ಪ್ರಥಮ ಕಲ್ಪವನ್ನು ಮನ್ವಂತರಾದಿ ವಿವಿಧ ಕಲ್ಪಗಳಿಂದ ಸಹಿತವಾಗಿ ವರ್ಣಿಸಿದೆನು. ಅನ್ಯಬ್ರಹ್ಮಕಲ್ಪಗಳೂ ಕೂಡ ಇದರಂತೆ ಪ್ರಾಕೃತ ವೈಕೃತ ಸರ್ಗಗಳಿಂದ ಕೂಡಿಯೇ ಇರುವವು.

ಇನ್ನು ಮುಂದೆ ಕಾಲದ ಲಕ್ಷಣವನ್ನು ಕಲ್ಪವಿಕಲ್ಪಗಳ ಸ್ವರೂಪವನ್ನು ಕ್ರಮವಾಗಿ ಹೇಳುವೆನು. ಈಗ ಮೊದಲು ಪಾದ್ಮಕಲ್ಪವಿಷಯವನ್ನು ಕೇಳು ಎಂದು ಶ್ರೀಶುಕನು ಹೇಳಿದನು.

ಆಗ ಶೌನಕನು ಸೂತನನ್ನು ಪ್ರಶ್ನಿಸಿಗನು.

ಸೂತ! ವಿದುರನು ಸಮುಸ್ತ್ಯಜರಾದ ಬಂಧುಜನರನ್ನು ಬಿಟ್ಟು ತೀರ್ಥಗಳಲ್ಲಿ ಸಂಚರಿಸಿದನೆಂದು ನೀನು ಹೇಳಿದೆ. ಆ ಭಾಗವತೋತ್ತಮನಿಗೆ ಮೈತ್ರೇಯನ ಸಂಗವೆಲ್ಲಿ ನಡೆಯಿತು? ಮತ್ತು ಆಧ್ಯಾತ್ಮವಿಚಾರ ಮನೋಹರವಾದ ಅವರೀರ್ವರ ಸಂವಾದವನ್ನೆಮಗೆ ಪೇಳು. ಪೂಜ್ಯನಾದ ಮೈತ್ರೇಯನು ವಿದುರನ ಪ್ರಶ್ನೆಗಳಿಗೆ ಉತ್ತರವನ್ನಾಗಿ ಪೇಳಿದ ತತ್ತ್ವವನ್ನು ವಿದುರಬಂಧುತ್ಯಾಗಕಾರಣವನ್ನೂ ಪುನರಾಗಮನವನ್ನೂ ವಿವರಿಸಿ ಹೇಳು.

ಸೂತನು ಪೇಳಿದನು – "ಪರೀಕ್ಷಿದ್ರಾಜನು ಕೇಳಿದ ಪ್ರಶ್ನೆಗಳಿಗೆ ಶ್ರೀ ಶುಕನೇನು ಪೇಳಿದನೋ ಅದೇ ಕ್ರಮದಿಂದ ವಿದುರ ಮೈತ್ರೇಯ ಸಂವಾದವನ್ನೂ ನಿಮಗೆ ಪೇಳುವೆನು"

ದ್ವಿತೀಯಸ್ಕಂಧವು ಪೂರ್ಣವಾಯಿತು

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ತೃತೀಯ ಸ್ಕಂಧವು

|| ಹರಿಃ ಓಂ ||

### ೧. ವಿದುರ – ಉದ್ಧವ ಸಮಾಗಮ, ಕುಶಲಪ್ರಶ್ನೆ

ಶ್ರೀ ಶುಕರು ಪೇಳಿದರು.

ರಾಜನ್! ನೀನೆನ್ನ ಕೇಳಿದಂತೆಯೇ ತ್ರಿಕಾಲಜ್ಞನಾದ ಮೈತ್ರೇಯನನ್ನು ವಿದುರನು ಕೇಳಿದನು. ಸಮೃದ್ಧವಾದ ಗೃಹಾದಿಗಳನ್ನು ಬಿಟ್ಟು ವೈರಾಗ್ಯವಂ ತೊಟ್ಟು ತೀರ್ಥಯಾತ್ರೆಗಳನ್ನು ಮಾಡುತ್ತಾ, ವಿದುರನು ಹೊರಟನು. ಸಂಧಿಕಾರ್ಯ ಕೆಡಿಸಿ ತನ್ನನ್ನು ಬಂಧಿಸಲು ಹೊರಟ ಕೌರವೇಂದ್ರನಲ್ಲಿ ಕುಪಿತನಾಗಿ, ಶ್ರೀಕೃಷ್ಣನು ಹಸ್ತಿನಾವತಿಯನ್ನು ಬಿಟ್ಟು, ಉಪಪ್ಲಾವ್ಯವನ್ನು ಸೇರಿದ ಕೂಡಲೇ ವಿದುರನಾದರೂ ವನಪ್ರವೇಶವಂ ಗೈದನು.

ಎನಲು ರಾಜನು ಪ್ರಶ್ನಿಸಿದನು –

ಪ್ರಭೋ! ವಿದುರಮೈತ್ರೇಯ ಸಂಗಮವೆಲ್ಲಿ ನಡೆಯಿತು? ಯಾವಾಗ? ಅವರ ಸಂವಾದವನ್ನು ನಮಗೆ ವರ್ಣಿಸಿರಿ. ನಿರ್ಮಲಚರಿತನಾದ ವಿದುರನು ಮಾಡಿದ ಪ್ರಶ್ನ ವಿಷಯವು ಮಹನೀಯವಾದದ್ದೇ ಇರಬೇಕು! ಸಾಧುಗಳ ವರ್ಣನೆ, ಪರಮನಿರ್ದೋಷನಾದ ಹರಿಯ ವರ್ಣನೆಗಳಂ ಬಿಟ್ಟು ಆ ಸಜ್ಜನರಿನ್ನೇನುಚ್ಚರಿಸುವರು? ಎಂದು ಕೇಳಿದನು.

ಸೂತನು ಶೌನಕವನ್ನು ನೋಡಿ "ಇಂತು ರಾಜನಿಂದ ಕೇಳಲ್ಪಟ್ಟ ಶುಕನು ಪ್ರೀತನಾಗಿ, ಕೇಳು ! ಎಂದು ನುಡಿಯಲಾರಂಭಿಸಿದನು." ಪೂರ್ಣಜ್ಞಾನಿಯಾದ ಶುಕನು "ಧೃತರಾಷ್ಟ್ರನು ಕೇವಲ ಕುರುಡನಷ್ಟೇ ಅಲ್ಲದೆ ಅಧರ್ಮಾಭಿರುಚಿಯಿಂದ ಅಂತರ್ದೃಷ್ಟಿಯನ್ನೂ ಕಳೆದುಕೊಂಡು ತನ್ನ ಕೆಟ್ಟ ಮಕ್ಕಳ ಮೇಲಿನ ಪ್ರೀತಿಯಿಂದ ಪಕ್ಷಪಾತವನ್ನು ವಹಿಸಿ ತಮ್ಮನಾದ ಪಾಂಡುರಾಜನ ಮಕ್ಕಳನ್ನು, ವಿಷ್ಣುವಿನನ್ನು ಬಿಟ್ಟು ಅನ್ಯಬಂಧುಗಳ ಕಾಣದವರನ್ನು ಅರಗಿನ ಮನೆಯಲ್ಲಿಟ್ಟು ಸುಟ್ಟನು.

ಕುರುದೇವದೇವಿಯಾದ ದ್ರೌಪದಿಯು ಕಣ್ಣೀರಿನಿಂದ ಕುಚಕುಂಕುಮಪಂಕವು ಕರಗಿ ಹೋಗುತ್ತಿರಲು ದೀನಳಾಗಿ ಕೇಶಾಭಿಮರ್ಶನವನ್ನು ಮಾಡುವ ದುಃಶಾಸನಾದಿ ದುಷ್ಟರ ಕೈಗೆ ಸಿಕ್ಕು ಸಭಾಮಧ್ಯದಲ್ಲಿ ಮೊರೆ ಇಡುವಾಗ ಆ ದುರ್ಮಾರ್ಗರ ಕುಕರ್ಮವನ್ನು ನಿವಾರಿಸದೆ ಸುಮ್ಮನಿದ್ದನು.

ಅಧರ್ಮದಿಂದ ದ್ಯೂತವಂ ಗೆದ್ದು ಅರಣ್ಯವಾಸಕ್ಕೆಂದು ಅಟ್ಟಲು ಸತ್ಯಾವಲಂಬನನಾಗಿ ಧರ್ಮರಾಜನು ಅರಣ್ಯಾಜ್ಞಾತವಾಸಗಳನ್ನು ಮುಗಿಸಿ, ತನ್ನ ದಾಯವನ್ನು ಕೇಡೆಂದು

ಕೇಳಿಕೊಂಡರೂ ಕೊಡದೆ ಅಜ್ಞಾನದಿಂದ, ಕಲಿಪ್ರಭಾವದಿಂದ, ಅಜಾತಶತ್ರುವಿಗೆ ದ್ರೋಹವನ್ನೆಸಗಿದನು.

ಪಾರ್ಥರಿಂದ ಕಳಿಸಲ್ಪಟ್ಟು ಬಂದು ನಿಂತು ಜಗದ್ಗುರುವಾದ ಕೃಷ್ಣನಾಡಿನ ಅಮೃತ ವಚನವನ್ನು ಮನ್ನಿಸದೇ ಇದ್ದ ಪುಣ್ಯಲೇಶವನ್ನು ಕಳೆದುಕೊಂಡನು.

ಒಂದು ರಾತ್ರಿ ಧೃತರಾಷ್ಟ್ರನು ನಿದ್ದೆ ಬರದೇ ರಾಜಕಾರ್ಯಾಲೋಚನೆಗೆಂದು ತಮ್ಮನಾದ ವಿದುರನನ್ನು ಕರೆಯಿಸಿದನು. ಆಗ ವಿದುರನು "ವಿದುರನೀತಿ" ಎಂದು ಲೋಕದಲ್ಲೆಲ್ಲಾ ಖ್ಯಾತವಾದ ಮಧುರ ಹಿತನುಡಿಗಳಿಂದ ಇಂತೆಂದನು – "ಅಜಾತಶತ್ರುವಾದ ಧರ್ಮಜನು ನಿನ್ನೆಲ್ಲಾ ಅಪರಾಧಗಳನ್ನು ಸಹಿಸಿ, ಕ್ಷಮಿಸಿರುವನು. ಅವನ ತಮ್ಮ ವೃಕೋದರನೇ ನಿನ್ನ ಪುತ್ರಹಂತಕನೆಂಬ ಭಯವು ನಿನಗಿದ್ದೇ ಇದೆ. ಶ್ರೀಕೃಷ್ಣನೋ ಬ್ರಾಹ್ಮಣಾರಾಧಿತನಾಗಿ, ರಾಜನ್ಯರನ್ನೆಲ್ಲ ಕಲೆಸಿ, ಉಪಪ್ಲಾವ್ಯದಲ್ಲಿ ಧರ್ಮಜನಿಗೆ ರಾಜ್ಯವನ್ನು ಗೆದ್ದುಕೊಡಿಸುವೆನೆಂದು ಪಣತೊಟ್ಟು ನಿಂತಿರುವನು. ಮೋಕ್ಷವನ್ನೇ ಕೊಡುವ ಆ ಮಹಾಪ್ರಭುವಿಗೆ ಈ ರಾಜ್ಯವಂ ಕೊಡುವುದೇನು ಲೆಕ್ಕ? ವಿಷ್ಣುವೈಷ್ಣವದ್ವೇಷಿಯಾದ ನಿನ್ನ ಪುತ್ರನೊಬ್ಬನನ್ನು ಪರಿತ್ಯಜಿಸು. ಕುಲಕ್ಕೆ ಕ್ಷೇಮವನ್ನು ಚಿಂತಿಸು. ಮಗನೆಂದು ನೀ ತಿಳಿದ ದುರ್ಯೋಧನನು ಸಾಕ್ಷಾತ್ತಾಗಿ ಕಲಿಯೇ ಆಗಿರುವನು. ಕೃಷ್ಣ ವಿಮುಖರಿಗೆ ಲಕ್ಷ್ಮಿಯೂ ವಿಮುಖಳೇ ಸರಿ. ಆದ್ದರಿಂದ ಈ ಒಬ್ಬನನ್ನು ತ್ಯಜಿಸು. ಧರ್ಮರಾಜನಿಗೆ ಅವನ ದಾಯವನ್ನು ಕೊಡು."

ಎಂದು ಹೇಳುವಾಗ ಕೇಳಿದ ದುರ್ಯೋಧನನು ಕೋಪಾಚ್ಚಲಿತಗಾತ್ರನಾಗಿ ಪರಮ ಪವಿತ್ರನಾದ ವಿದುರನನ್ನು ಕರ್ಣ ದುಃಶಾಸನ ಶಕುನಿಯರಿಂದೊಡಗೂಡಿ ಅಪಹರಿಸಿ, ನಿಂದಿಸಿದನು.

"ಯಾರು ಕರೆದರೋ ನಿನ್ನನ್ನು ಇಲ್ಲಿಗೆ ದಾಸ್ಯಾಃಪುತ್ರ? ಉಂಡಮನೆಗೆರಡನ್ನು ಬಗೆವ ನಿನ್ನಂತಹ ಕಪಟಿಯು ಉಂಟೇ! ಎಷ್ಟು ಶತ್ರುಪ್ರೀತಿ ಇವನಿಗೆ! ಯಾರೋ ಅಲ್ಲಿ, ಇವನನ್ನು ಊರ ಹೊರಗೆ ಹಾಕಿ!" ಎಂದು ದುರ್ಯೋಧನನಾಡಿದ ಪರುಷವಚನಗಳನ್ನಾಲಿಸಿ, ಅಲ್ಲಿನ್ನು ನಿಲ್ಲಬಾರದೆಂದು ನಿಶ್ಚಯಿಸಿ, ವಿದುರನು ಸುಮ್ಮನೇ ಕೂತಿದ್ದ ಅಣ್ಣನನ್ನೂ ಅವನ ಮಕ್ಕಳನ್ನೂ ದಿಟ್ಟಿಸಿ ನೋಡಿ ನಕ್ಕನು. ಹರಿಯ ಬಂಧಕಶಕ್ತಿಯಿಂದಾದ ಅಣ್ಣನ ಪುತ್ರರೆಂಬ ಸ್ನೇಹಪಾಶವನ್ನು ಕಿತ್ತೊಗೆದನು. ತನ್ನ ಭೀಷಣಧನುವನ್ನು ದ್ವಾರದೇಶದಲ್ಲಿ ಮುರಿದು ಬಿಸುಟಿ, ವ್ಯಥೆಗಳನ್ನೆಲ್ಲ ದೂರ ಸರಿಸಿ, ಹರಿಮಹಿಮೆಯೇ ಎಲ್ಲವೆಂದು ಸ್ಮರಿಸಿ, ಹಸ್ತಿನಾವತಿಯಿಂದ ಪೊರಮಟ್ಟು ಪೋಗುವಾಗ ಆ ಕೌರವ ಹತಕರ ಪುಣ್ಯಶೇಷಗಳನ್ನೆಲ್ಲ ಕಟ್ಟಿ ತೆಗೆದುಕೊಂಡೇ ಹೊರಟನು. ಅನಂತರೂಪಸಂಪನ್ನನಾದ ಹರಿಯು ನೆಲಸಿದ ತೀರ್ಥಕ್ಷೇತ್ರಗಳನ್ನು ನೋಡುತ್ತಾ ಭಾರತ ವರ್ಷದಲ್ಲೇ ಸಂಚರಿಸಿದನು. ವೃಂದಾವನಾದಿವನಗಳು, ಬದರ್ಯಾದ್ಯಾಶ್ರಮಗಳು, ಶ್ರೀಗಿರ್ಯಾದ್ಯದ್ರಿಗಳು, ಸಿಂಹಗಿರ್ಯಾದಿಕುಂಜಗಳು, ನಿರ್ಮಲಜಲಪೂರ್ಣವಾದ ಗಂಗಾ ಗೋದಾದಿ ನದಿಗಳು, ಪುಷ್ಕರಾದಿ ಸರೋವರಗಳು, ಮೊದಲಾದ ಅನಂತ ಸುಕಲ್ಯಾಣ ಲಕ್ಷಣಪೂರ್ಣನಾದ ಲಕ್ಷ್ಮೀಪತಿಯ ಸನ್ನಿಧಾನದಿಂದ ಅವನ ಪ್ರತಿಮೆಗಳಂತಿರುವ ಸ್ಥಳಗಳನ್ನು ನೋಡಿ ಸಂತಸಿಸಿದನು. ತ್ರಿಷವಣಸ್ನಾನವು, ಅಧಃಶಯನ, ಪತ್ರಫಲಭೋಜನ, ಅನಲಂಕರಣಗಳನ್ನು ಆಚರಿಸುತ್ತಾ ಶ್ರೀಹರಿಪ್ರೀತಿ ಸಾಧನವೆನಿಸಿದ ಏಕಾದಶ್ಯಾದಿ ವ್ರತಗಳ ಮಾಡಿದನು. ತಾ ಮಾಡಿದುದೆಲ್ಲವೂ ಹರಿಗರ್ಪಿಸಿದನು.

ಕೆಲಕಾಲವಾಗಲು ವಿದುರನು ಪ್ರಭಾಸವನ್ನು ಸೇರಿ, ಅಲ್ಲಿ ಶ್ರೀಕೃಷ್ಣನ ಅನುಗ್ರಹದಿಂದ ಧರ್ಮರಾಜನು ಏಕಛತ್ರಾಧಿಪತಿಯಾಗಿ ಹಸ್ತಿನಾವತಿಯಲ್ಲಿ ಪಾಲಿಸುತ್ತಿರುವನೆಂದು ವಾರ್ತೆ ಕೇಳಿದನು. ಮುಂದೆ ಭೂಭಾರಹರಣದೀಕ್ಷಾದಕ್ಷನಾದ ಶ್ರೀಕೃಷ್ಣನು ಯಾದವ ಕುಲವನ್ನು ಕೂಡ ಸಂಹರಿಸಿ, ಪರಂಧಾಮವನ್ನೈದುವನೆಂಬ ವಿಷಾದವಾರ್ತೆಯನ್ನೂ ಕೇಳಿ, ವಿಪ್ರಶಾಪದ ನೆವದಿಂದ ತಮ್ಮಲ್ಲೇ ತಾವು ತಿಕ್ಕಾಡಿ ನಶಿಸುವ ಬಿದಿರಿನ ಪೊಳೆಯಂತೆ ನಷ್ಟವಾಗಲಿರುವ ಸುಹೃಜ್ಜನರ ಸ್ಮರಣೆಯಿಂದ ಮನದಿ ನೊಂದು ಯಾರ ಕೂಡ ಮಾತಾಡದೆ ಪಶ್ಚಿಮ ವಾಹಿನಿಯಾದ ಸರಸ್ವತೀ ನದಿಯನ್ನು ಸೇರಿದನು. ಸಂಸಾರವು ಕ್ಷಣಭಂಗುರವೆಂದರಿತನು. ಅಲ್ಲಿ ಶುಕ್ರ, ಮನು, ಪೃಥು, ಅಗ್ನಿ, ಅಸಿತ, ವಾಯು, ಸುದಾಸ, ಗೋ, ಗುಹ, ಶ್ರಾದ್ಧದೇವ ಮುಂತಾದ ಪವಿತ್ರತೀರ್ಥಗಳಲ್ಲಿ ಶಾಸ್ತ್ರಜ್ಞಾನಿಯಾದ ವಿದುರನು ಸ್ನಾನ ಮಾಡಿ ಶುದ್ಧಾಂತಃಕರಣನಾದನು. ಲಕ್ಷಣವಾನ್ಮುಖ್ಯನಾದ ಮುಖ್ಯಪ್ರಾಣನಲ್ಲಿ ಸದಾ ನೆಲಿಸಿರುವ ಹರಿಯ ಸ್ಮರಣೆಯನ್ನು ಮರೆಯದಂತೆ ಮಾಡುವ ಅನ್ಯಕ್ಷೇತ್ರಗಳನ್ನೂ ನೋಡುತ್ತಾ ಸುರಾಷ್ಟ್ರ, ಮತ್ಸ್ಯ, ಸೌವೀರ, ಕುರು-ಜಾಂಗಲ ದೇಶಗಳನ್ನತಿ ಕ್ರಮಿಸಿ, ಯಮುನೆಯನ್ನು ಸಮೀಪಿಸಿ, ಅಲ್ಲಿ ಪ್ರಯಾಗದಲ್ಲಿ ಭಗವದ್ಭಕ್ತನಾದ ಉದ್ಧವನನ್ನು ನೋಡಿದನು. ಬೃಹಸ್ಪತ್ಯಂಶಜನು ತಚ್ಛಿಷ್ಯನು ಭಕ್ತೋತ್ತಮನು, ವಾಸುದೇವನ ಅನುಚರನು ಆದ ಆ ಮಹಾನುಭಾವನನ್ನಾಲಿಂಗಿಸಿ ಪ್ರೇಮದಿಂದ ನೋಡಿ ಭಗವಂತನ ಜನರ ಕ್ಷೇಮವಾರ್ತೆಯನ್ನು ಕುರಿತು ಕೌತುಕದಿಂದ ಪ್ರಶ್ನಿಸಿದನು –

ಉದ್ಧವಾ! ಬ್ರಹ್ಮನಿಂದ ಪ್ರಾರ್ಥಿತನಾಗಿ ಭುವಿಗಿಳಿದ ನಾರಾಯಣನೇ ಆದ ಶ್ರೀಕೃಷ್ಣನು, ಶೇಷಾವತಾರನಾದ ಬಲರಾಮನು ಶೂರಸೇನನ ಮನೆಯಾದ ಯದುಪುರದಲ್ಲಿ ಲೋಕ ಕ್ಷೇಮವನ್ನು ಮಾಡುತ್ತಾ ಸುಖದಿಂದಿರುವರೇ? ನಮಗೆ ಪೂಜ್ಯ ವಸುದೇವನು ಭಾವನಲ್ಲವೇ? ತಂಗಿಯರಲ್ಲಿ ಬಹುಪ್ರೀತಿಯಿಂದ ಬೇಕಾದ್ದನ್ನು ಕೊಡುವ ಆ ಶೌರಿಗೆ ಕ್ಷೇಮವೇ?

ಪೂರ್ವಜನ್ಮದಿ ಸ್ಮರನಾಗಿದ್ದು ಈಗ ಬ್ರಾಹ್ಮಣರ ಆಶೀರ್ಬಲದಿಂದ ತನ್ನ ಮಗನಾಗಿ ಜನಿಸಿದ ಪ್ರದ್ಯುಮ್ನನನ್ನು ಪಡೆದ ವೀರಮಾತೆ ರುಕ್ಮಿಣಿಯು ಕುಶಲಳೇ? ದಾರ್ಶಾರ್ಣಭೋಜ ವೃಷ್ಣಿಗಳೊಡೆಯ ಉಗ್ರಸೇನನು ರಾಜ್ಯವ್ಯಸನವಂ ತೊರೆದು ತನಗೆ ಪಟ್ಟಗಟ್ಟಿದ ಕೃಷ್ಣನ ದಯೆಯಿಂದ ಕ್ಷೇಮಿಯೇ? ಕೃಷ್ಣಸಮಾನವೀರನೆನಿಸಿದ ವೀರ, ಜಾಂಬವತೀ ದೇವಿಯು ವ್ರತಗಳಂ ಮಾಡಿ ಪಡೆದ ಪುತ್ರ, ಪೂರ್ವಜನ್ಮದಿ ಪಾರ್ವತೀತನಯ ಕುಮಾರನಾದ ಸಾಂಬನಿಗೆ ಕ್ಷೇಮವೇ? ನಮ್ಮ ಫಲ್ಗುಣನ ಪ್ರಿಯಶಿಷ್ಯನು, ಕೃಷ್ಣನಿಗತ್ಯಂತ ನಮ್ರಭಕ್ತನೂ, ಆದ ಸತ್ಯಾಕಿ ಚನ್ನಾಗಿರುವನೇ? ನಿಷ್ಪಾಪನು, ಶ್ವಫಲ್ಕಪುತ್ರನು, ಭಗವತ್ಪ್ರಪನ್ನನು ಆದ ಅಕ್ರೂರ – ಆಗ ಕೃಷ್ಣ ಪಾದಾರವಿಂದ ರಜಃಕಣಗಳಲ್ಲಿ ಹೊರಳಾಡಿ ಧನ್ಯನಾದ ಆ ಅಕ್ರೂರ ಸುಖಿಯೇ? ದೇವಮಾತೆ ಅದಿತಿಯಂತೆ ಪೂಜ್ಯಳು, ಅರ್ಥಧಾರಣ ಮಾಡಿದ ವೇದಗಳಂತೆ ಶ್ರೀಕೃಷ್ಣನನ್ನು ಗರ್ಭದಲ್ಲಿ ಧರಿಸಿ ಧನ್ಯಳಾದ ದೇವಕಿಯು ಸುಖದಿಂದಿರುವಳೇ? ಸಾತ್ವತರ ಅಭೀಷ್ಟಗಳನ್ನು ಕಾಮಧೇನುವಿನಂತೆ ಕೊಡುವ ಪೂಜ್ಯ ಅನಿರುದ್ಧನು ಸುಖವಾಗಿರುವನಲ್ಲವೇ? ವೇದವೇದ್ಯನು, ಚತುಮೂರ್ತಿಗಳಲ್ಲಿ ತುರೀಯನು, ಸಕಲ ಮನೋನಿಯಾಮಕನು ಆದ ಆ ಪರಮಾತ್ಮನ ನಾಲ್ಕನೇ ರೂಪವೇ ಅವನಲ್ಲಿರುವುದು. ಅಂತಹ ಅನಿರುದ್ಧನು ಎಂತಿರುವನು? ಶ್ರೀಕೃಷ್ಣನೇ ಕುಲದೈವ, ಇಷ್ಟದೈವ, ಆತ್ಮದೈವವೆಂದರಿತು ಸರ್ವಾತ್ಮನಾ ಅವನನ್ನೇ ಅನುಸರಿಸಿ ನಡೆವ ಹಾರ್ದಿಕ್ಯ, ಚಾರುದೇಷ್ಣ ಗದ ಮೊದಲಾದವರು ಸೌಖ್ಯವಾಗಿಪ್ಪರೇ? ಶ್ರೀಹರಿಯ ಸೇವೆಯಿಂದ

ಲಭಿಸಿದ ಮಯಸಭೆಯಲ್ಲಿ ವಿರಾಜಮಾನನಾದ ಧರ್ಮಜನ ವೈಭವವನ್ನು ಕಂಡು ಅಸೂಯೆಯಿಂದ ದುರ್ಯೋಧನನು ದುಃಖಿಸಿದ್ದನು ; ಆ ಸಭೆಯಲ್ಲಿ ಅರ್ಜುನ-ಭೀಮಭುಜದಂಡ ಮಂಡಿತನಾಗಿ ಧರ್ಮರಾಜನು ಧರ್ಮಸೇತುವನ್ನು ಕೃಷ್ಣಪ್ರೀತಿಗಾಗಿ ಸಂರಕ್ಷಿಸುತ್ತಿರುವನೇ? ಭೀಮಸೇನನು ರಣಾಂಗಣದಲ್ಲಿ ಚರಿಸುವಾಗ ಭೂಮಿಯೇ ನಡುಗುತ್ತಿತ್ತು. ಮತ್ತು ಪರಸೇನೆಯು ಅವನ ಗದಾಯುದ್ಧ ವಿಚಿತ್ರತೆಯಂ ಕಂಡು ಭೀತಿಗೊಂಡು ಪ್ರಾಣಾದಾಶೆಯಿಂದೋಡಿತು. ಆ ವೃಕೋದರನು ಪಾಪಿಗಳಾದ ಕೌರವರಲ್ಲಿಯ ರೋಷಾಗ್ನಿಯನ್ನು ಶಾಂತಗೊಳಿಸಿದನೇ? ಗಾಂಡೀವ ಧನುರ್ಧಾರಿಯಾಗಿ ಹೋರಾಡಿದ ಅರ್ಜುನನ ಶರಕೂಟದಲ್ಲಡಗಿ ಮಾಯಾ ಕಿರಾತನಾದ ಶಿವನು ಮೆಚ್ಚಿ ಪಾಶುಪತಾಸ್ತ್ರವನ್ನು ಕರುಣಿಸಿದನು. ಅಂತಹ ಪಾರ್ಥನ ಬಿಲ್ಲುಬಾಣಂಗಳು ವಿಶ್ರಾಂತಿ ಹೊಂದಿರುವವೇ? ಮಾದ್ರೀ ಸುತರಾದರೂ ಪಾರ್ಥನ ನೆರಳಿನಲ್ಲಿ ಕಣ್ಣುಗಳು ರೆಪ್ಪೆಗಳಿಂದ ರಕ್ಷಿತವಾಗುವಂತೆ ಸುಖದಿಂದಿದ್ದರು. ಇಂದ್ರಬಾಹುಗಳಿಂದ ಅಮೃತವನ್ನು ಕಸಿದು ತಂದ ಗರುಡನಂತೆ ಶತ್ರುಗಳಿಂದ ತಮ್ಮ ದಾಯವಾದ ರಾಜ್ಯವನ್ನು ಪಡೆದು ಆ ನಕುಲಸಹದೇವರು ಸುಖದಿಂದಿರುವರೇ? ಪಾಪ! ನಮ್ಮ ಪೃಥಾದೇವಿಯು ಗಂಡನಾದ ರಾಜರ್ಷಿಯೊಡನೆ ಸಹಗಮನ ಮಾಡದೇ ಮಕ್ಕಳಿಗಾಗಿ ಉಳಿದಳು. ಧನುರ್ಮಾತ್ರ ಸಹಾಯನಾಗಿ ನಾಲ್ಕೂ ದಿಕ್ಕುಗಳ ರಾಜರನ್ನು ಗೆದ್ದುಬಂದ ಅತಿರಥನಾಗಿ ಪಾಂಡುರಾಜನನನ್ನು ನೆನಿಸಿದಾಗ ಮಕ್ಕಳ ವೃದ್ಧಿಯಂ ಕಾಣದೇ ಪೋದನೆಂದು ದುಃಖವಾಗುತ್ತದೆ. ಉದ್ಧವಾ! ಏನು ಪೇಳಲಿ! ಅಂತೂ ಮೃತನಾದ ತಮ್ಮನ ಕಡೆ ನೋಡದೇ ಅವನ ಮಕ್ಕಳಿಗೆ ದ್ರೋಹವನ್ನೆಸಗಿದ ಆ ಧೃತರಾಷ್ಟ್ರನು ಹೇಗಿರುವನು? ತನ್ನ ಮಕ್ಕಳ ಮೇಲಿನ ದುರಭಿಮಾನದಿಂದ ತಮ್ಮನಾದ ನನ್ನನ್ನು ಊರ ಹೊರಗೆ ಹಾಕಿಸಿದ ಅವನ ಅಜ್ಞಾನಕ್ಕೆ ಏನೆಂಬೆ; ಎಲ್ಲವೂ ಆ ಹರಿಲೀಲೆ! ಮನುಜರ ಮಧ್ಯದಲ್ಲಿ ಅವತರಿಸಿ ಮಾಧವನು ಮಾಡಿದ ವಿಡಂಬನೆಯಂ ಕಂಡು ಕಣ್ದೆರೆದಿದ್ದೇನೆ. ಸಂಸಾರಿಗಳ ಕ್ಲೇಶ ಕಂಡು ಎಲ್ಲವನ್ನೂ ಬಿಟ್ಟು ಅವನ ಅನುಗ್ರಹದಿಂದ ಕೃಷ್ಣಪಾದಾರವಿಂದವನ್ನೇ ಹೃದಯದಲ್ಲಿಟ್ಟು ಜೀವಿಸುತ್ತಿರುವೆನು. ವಿದ್ಯಾ, ಧನ, ವಂಶಮದಗಳಿಂದ ಕಣ್ಣು ಕಾಣದೇ ಅಧರ್ಮಮಾರ್ಗದಲ್ಲಿ ವರ್ತಿಸುವ ನೃಪವೇಷದ ಸುರವೈರಿಗಳೀ ಭೂಮಿಗೆ ಭಾರವಾಗಲು ಅವರನ್ನು ಕೆಲಕಾಲ ಉಪೇಕ್ಷಿಸಿದನು. ಕಂಸನನ್ನು ಕೊಂದಂತೆ ತತ್‌ಕ್ಷಣವೇ ಕೊಲ್ಲದಿರಲು ಆ ಹರಿಯ ಪ್ರವೃತ್ತಿಯು ಭಕ್ತಾಭೀಷ್ಟಾನುಸಾರಿಣಿ ಭಕ್ತಯಶಃ ಪ್ರಕಾಶಕಾರಿಣಿ ಎಂಬುದೇ ಕಾರಣವಲ್ಲದೇ ಮತ್ತೇನು? ಅಂತು ಭೀಮಾರ್ಜುನರಲ್ಲಿದ್ದು ಭೂಭಾರವನ್ನಿಳಿಸಿ ಧರ್ಮವನ್ನು ನಿಲ್ಲಿಸಿದ ಆ ಜನ್ಮರಹಿತನ ಅವತಾರ, ಕರ್ಮಲೇಪವಿಲ್ಲದ ಸ್ವಾಮಿಯ ಕರ್ಮಗಳು, ಕಂಸಾದಿಗಳ ಸಂಹಾರಕ್ಕೂ, ಸತ್ಪುರುಷರ ಅನುಸರಣೆಗೋಸುಗವೇ ಸರಿ! ಇಲ್ಲದಿದ್ದರೆ ಸತ್ತ್ವರಜಸ್ತಮೋಗುಣರಹಿತನಾದ ಅಪ್ರಾಕೃತ ನಾದವನಿಗೆ ದೇಹಯೋಗವೆಂತು? ಸರ್ವತಂತ್ರಸ್ವತಂತ್ರನಾದ ಲಕ್ಷ್ಮೀನಾಥನಿಗೆ ಕರ್ಮಬಂಧ ವೆಂತು? ಅಂತಹ ಶರಣಾಗತಜನರ ರಕ್ಷಕನಾದ, ತನ್ನಾಜ್ಞೆಯನ್ನು ಶಿರಸಾವಹಿಸುವ, ಭಕ್ತರಾದ ಇಂದ್ರಾದಿ ಲೋಕಪಾಲಕರ ಕ್ಷೇಮಪಾಲನೆಗೆಂದು, ಮಹೀಮಂಡಲದಲ್ಲಿ ಯದುಗಳಲ್ಲಿ ಜನಿಸಿ ಬಂದ, ಪರಮಪವಿತ್ರಕೀರ್ತಿಯಾದ ಶ್ರೀಕೃಷ್ಣನವಾರ್ತೆಯನ್ನು ಪೇಳು, ಅವಹಿತನಾಗಿರುವೆನೆಂದು ವಿದುರನು ಉದ್ಧವನನ್ನು ಪ್ರಾರ್ಥಿಸಿದನು.

## ೨. ಉದ್ಧವ ಪ್ರತಿವಚನವು

ಆಗ ಉದ್ಧವನು ಪ್ರಿಯಕೃಷ್ಣವಿಷಯಕ ಪ್ರಶ್ನೆಯನ್ನು ಕೇಳಿ ಭುಕ್ತ್ಯುದ್ರೇಕದಿಂದ ಸ್ವಾಮಿ ಯನ್ನು ನೆನೆನೆನದು ಬದಲು ಮಾತಾಡಲು ಬಾರದೆ ಸುಮ್ಮನೆ ಕೂತಿದ್ದನು. ಅವನ ಕಣ್ಣುಗಳು ಬಾಷ್ಪಪೂರ್ಣವಾದವು. ಮೈಯೆಲ್ಲ ಪುಲಕಿತವಾಯಿತು. ಐದೇ ವರ್ಷದವನಿದ್ದಾಗೊಂದು ದಿನ ರಾಜನ್! ಕೇಳು, ತನ್ನ ಮಾತೆಯು ಬಂದು ಪ್ರಾತರಶನಕ್ಕೆಂದು ಕೂಗಲು, ಶ್ರೀಕೃಷ್ಣಸಪರ್ಯೆ ಯನ್ನು ಮಾಡುತ್ತಲಿದ್ದ ಆ ಭಾಗವತೋತ್ತಮನು ಊಟವನ್ನೊಲ್ಲದೆ ಬಾಲಲೀಲೆಗಳಲ್ಲಿಯೂ ಹರಿಸೇವೆಯಂ ಗೈಯುತ್ತ ಬೆಳೆದು ಹಾಗೆಯೇ ಮುದುಕನಾದನು. ಒಂದು ದಿನವಾದರೂ ಕೃಷ್ಣಸಪರ್ಯೆಯನ್ನು ಮರೆಯಲಿಲ್ಲ. ಅಂತಹ ಉದ್ಧವನು ಸ್ವಾಮಿಯ ಪಾದಪದ್ಮವನ್ನು ನೆನೆದು ಬದುಲಾಡಲು ಬಾರದಾದನು. ಇಂತು ಒಂದು ಮುಹೂರ್ತಕಾಲ ಸುಮ್ಮನೇ ಶ್ರೀಹರಿಯ ಪಾದಪದ್ಮಾಸವಪಾನವನ್ನು ಮಾಡುತ್ತಾ ತೀವ್ರವಾದ ಭಕ್ತಿಯು ಹೃದಯದಿ ತುಂಬಿಬರಲು ಪರಮಾನಂದಭರಿತನಾದನು. ಕೃತಕೃತ್ಯನಾಗಿ ಸ್ನೇಹಪ್ರವಾಹ ವೇಗದಲ್ಲಿ ತೇಲಿಹೋದನು. ಅಖಂಡಧ್ಯಾನದಿಂದ ಮೈಮರೆತಿದ್ದ ಉದ್ಧವನು ನಿಧಾನವಾಗಿ ಎಚ್ಚರವನ್ನು ತಂದುಕೊಂಡು, ಕಣ್ಣೀರನ್ನೊರೆಸಿಕೊಂಡು, ಮೆಲ್ಲನೇ ನಗುತ್ತಾ ವಿದುರನನ್ನು ಕಂಡು ಇಂತೆಂದನು–

ವಿದುರಾ! ಏನೆಂದು ಹೇಳಲಿ ಕೃಷ್ಣನೆಂಬ ಸೂರ್ಯನೇ ಮುಳುಗಿದ ಮೇಲೆ ಕಾಲವೆಂಬ ಹೆಬ್ಬಾವಿಗೆ ಬಾಯಿಗೆ ಸಿಲುಕಿರುವ ಯಾದವರ ಕುಶಲವಾರ್ತೆಯನ್ನು? ಕೃಷ್ಣಪರಮಾತ್ಮನ ನಿರ್ಯಾಣವಾಗುವುದೆಂದು ಅಷ್ಟು ಚಿಂತೆ ಇಲ್ಲ ನೋಡು! ಅವನ ಜೊತೆಯಲ್ಲಿರುತ್ತಿದ್ದರೂ ಮೀನಗಳು ಹಡಗುನ್ನು ಕಂಡು ಇದೂ ಒಂದು ದೊಡ್ಡ ಮೀನು ಎಂದು ತಿಳಿದಂತೆ, ದುಸ್ತರ ಸಂಸಾರ ತಾರಕನಾದ ಕೃಷ್ಣನೂ ನಮ್ಮಂತೆ ಮನುಷ್ಯನೆಂದು ತಿಳಿದ ಈ ಲೋಕದ ಜನರೂ ಹಾಗೂ ಯಾದವರೂ ಎಷ್ಟು ನಿರ್ಭಾಗ್ಯರೋ! ಎಲ್ಲರೂ ಇಂಗಿತಜ್ಞರೇ! ಶರೀರಾಭಿಮಾನ ಭರಿತರೇ! ಕೇವಲ ಕ್ರೀಡಾಲೋಲರೇ! ಹೀಗಾಗಿ ಯಾದವರೆಲ್ಲರೂ ಬ್ರಹ್ಮಾದಿವಂದ್ಯನೆಂದರಿಯ ಲಾರದೆ ಏನೋ ಕೆಲ ಯಾದವರೊಡನೆಯನೆಂದು ಅವಗಣನೆ ಮಾಡಿದರಲ್ಲಾ! ಭಗವಂತನ ಬಂಧಕ ಶಕ್ತಿಯಿಂದ ಮೋಹಿತರಾಗಿ ವಿಷಯಾಭಿರತರಾದ ಅಂತಹ ಮೂಢರ ವಾಕ್ಯಜಾಲದಿಂದ ಜ್ಞಾನಿಗಳೆಂದಿಗೂ ಬುದ್ಧಿಗೆಡುವುದಿಲ್ಲ. ವಿದುರಾ! ಈ ಜನ್ಮದಿ ತಪವರಿಯೆವು, ವ್ರತವರಿಯೆವು. ಯಾವ ಜನ್ಮದ ಪುಣ್ಯಫಲವೋ ಎಷ್ಟು ನೋಡಿದರೂ ತೃಪ್ತರಾಗದಂತೆ ತನ್ನ ಸುಂದರ ಮೂರ್ತಿಯನ್ನು ನಮಗೆ ತೋರಿಸಿ ಜನರಂಜನವನ್ನು ಗೈದು ಇಷ್ಟರಲ್ಲೇ ಅಂತರ್ಧಾನವನ್ನು ಪೊಂದುವ ಕೃಷ್ಣಲೀಲೆಗೇನೆಂಬೆ! ಸ್ವರೂಪಭೂತವಾದ ಇಚ್ಛಾಸಾಮರ್ಥ್ಯವನ್ನು ನೋಡಿಸಿ ಬಿಡುವೆನೆಂಬಂತೆ ಕೈಕೊಂಡ ಆ ಸೌಂದರ್ಯಸಾರರೂಪಶರೀರದಿಂದ, ಮನುಜರಂತೆ ಬಾಲ್ಯಕೌಮಾರ ಲೀಲೆಗಳನ್ನು ಮಾಡಿದನು. ತನ್ನ ಶರೀರ ಸೌಂದರ್ಯಕ್ಕೆ ರಮೆ ಅಂತಿರಲಿ, ತಾನೇ ವಿಸ್ಮಯವನ್ನು ವಹಿಸಿದನು. ಅಂತಹ ಸ್ವಾಮಿಯು ಭೂಷಣಗಳಿಗೆ ತಾನೇ ಭೂಷಣ ನಾದನು. ಧರ್ಮಜನ ರಾಜಸೂಯದಲ್ಲಿ ಕೂತಿದ್ದ ಗೋವಿಂದನ ನೇತ್ರಾನಂದಕರ ಸುಂದರ ರೂಪವನ್ನು ನೋಡಿ ಅಜ್ಞಾನಿಗಳಂತಿರಲಿ ಜ್ಞಾನಿಗಳು ಕೂಡ ವಿಧಾತನ ಸೃಷ್ಟಿಯ ಅತ್ಯಂತ ಪರಿಪಾಕ ನೈಪುಣ್ಯವಿದೆಂದು ತಿಳಿದರು. ಎಂತಹ ಆಶ್ಚರ್ಯವು! ಆ ಶ್ರೀಕೃಷ್ಣನ ಅನುರಾಗಪೂರ್ಣ ಮಂದಹಾಸ, ರಾಸಲೀಲಾ ವೈಭವ, ಲೀಲಾವಲೋಕನಗಳಿಂದ ಸನ್ಮಾನಿತರಾದ ಗೋಪಿಕೆಯರು

ಅವನಲ್ಲಿ ನೆಲಿಸಿದ ಮನದಿಂದ ಮನೆಕೆಲಸಗಳನ್ನು ಮರೆತು ನಿಂತುಬಿಡುತ್ತಿದ್ದರು. ಸಾತ್ವಿಕರಾದ ಸುರಸಜ್ಜನರಿಗೆ ರಾಜಸ ತಾಮಸರಾದ ದುರ್ಜನ ರಾಕ್ಷಸರಿಂದೊದಗಿದ ಪೀಡೆಯನ್ನು ಕಂಡು ದಯೆಯಿಂದ ಬ್ರಹ್ಮಾದಿಪ್ರಾರ್ಥಿತನಾಗಿ ಜನ್ಮರಹಿತನಾದರೂ ದಾರುವಿನಲ್ಲಿ ಅಗ್ನಿಯಂತೆ ಪ್ರಾದುರ್ಭೂತನಾದನು. ವಸುದೇವಪತ್ನಿಯಲ್ಲಿ ಜನಿಸಿದಂತೆ ಜನ್ಮದೂರನಾದ ಅಜ! ಶತ್ರುಭಯ ದಿಂದ ಮಧುರೆಯ ಬಿಟ್ಟು ಪೋದನಂತೆ; ಅನಂತವೀರ್ಯನಾದ ಹರಿ! ತಾಯ್ತಂದೆಯರನ್ನು ಸೆರೆಯಿಂದ ಬಿಡಿಸಿ, ಪಾದಗಳಿಗಭಿವಂದಿಸಿ, "ತಾತ! ಅಂಬ! ಕಂಸನಿಂದ ನಾನಾ ಕಷ್ಟಗಳನ್ನು ಪಟ್ಟ ನಿಮ್ಮ ಭವಣೆಯ ಬಿಡಿಸಿ, ಸೇವಿಸಲಾರದ ನಮ್ಮನ್ನು ಕ್ಷಮಿಸಿ ಅನುಗ್ರಹಿಸಿ" ಎಂದು ಬೇಡಿದ ಆ ಕೃಷ್ಣನ ಮನುಜಾನುಕರಣವನ್ನು ನೋಡಿ, ಬ್ರಹ್ಮಾದಿಗಳ ಭಗವದ್ವಿಷಯಕಜ್ಞಾನವೇ ಮಧ್ಯಾಹ್ನಾರ್ಕನಂತೆ ಚಲಿಸುವಾಗ ಇನ್ನು ನಮ್ಮ ಪಾಡೇನೆಂದು ಖೇದವಾಗುತ್ತದೆ. ಒಂದು ಸಲ ಗೋವಿಂದನ ಪಾದಾರವಿಂದ ರೇಣುವನ್ನು ಭಜಿಸಿ ಸುಖಿಸಿದ ರಸಿಕನು ಪುನಃ ಅವನನ್ನು ಹೇಗೆ ಮರೆತಾನು? ಒಂದೇ ಭ್ರೂಭಂಗದಿಂದ ಭೂಭಾರವನ್ನಿಳುಹಿದ ಅನಂತಕೃತಾಂತೋಪಮನ ಶೌರ್ಯವಾದರೂ ಎಂತಹುದು! ಯೋಗಿಗಳು ಭಕ್ತಿಯಿಂದ ಬೇಡುವ ಮುಕ್ತಿಯನ್ನು ತನ್ನನ್ನು ನಿಂದಿಸಿದ ಶಿಶುಪಾಲನಿಗೆ ಕೊಟ್ಟ ಕೃಷ್ಣನ ಕರುಣೆಯನ್ನು ರಾಜಸೂಯದಲ್ಲಿ ನೀವೆಲ್ಲ ನೋಡಿದಿರಲ್ಲವೇ? ಕರ್ಣಾದಿ ಮಹಾವೀರರು ನಮ್ಮ ಸ್ವಾಮಿಯ ಮುಖಾರವಿಂದಮಕರಂದಪಾನ ವನ್ನು ನೇತ್ರಗಳಿಂದ ಮಾಡುತ್ತಾ ಮೈಮರೆತು ಪಾರ್ಥರ ಅಸ್ತ್ರಗಳಿಂದ ಯುದ್ಧದಲ್ಲಿ ಮೃತರಾಗಿ ತಮ್ಮ ಭಕ್ತಿಯಿಂದ ಶುದ್ಧರಾಗಿ ಸ್ವಯೋಗ್ಯಮಾದ ಪುಣ್ಯಲೋಕಗಳನ್ನೇ ಪೊಂದಿದರು. ತಾನೋ ಸಮಾನಾಧಿಕರಹಿತನು, ಸ್ವರೂಪಾನಂದಭರಿತನು, ಆಪ್ತಸಮಸ್ತಕಾಮನು ಕಪ್ಪಕಾಣಿಕೆಗಳನ್ನರ್ಪಿ ಸಲು ಬಂದ ಬೃಂದಾರಕೇಂದ್ರರ ಕಿರೀಟಕೋಟಿಘಟ್ಟಿತ ಪಾದಪೀಠನು. ಅಂತಹ ಪ್ರಭುವು ಉಗ್ರಸೇನನ ಮುಂದೆ ಕೈಕಟ್ಟಿ ನಿಂತು 'ದೇವ! ಅವಧಾರು!' ಎಂದು ನುಡಿಯುತ್ತಾ ಮಾಡಿದ ಕೈಂಕರ್ಯವನ್ನು ಕಂಡು ನಾವು ಅಜ್ಞಾನಮಗ್ನರಾದೆವೆಲ್ಲ! ಎಂದು ಮನ ನೋಯುತ್ತಿದೆ. ನರಭಕ್ಷಕಿಯಾದ ಪೂತನೆಯೆಂಬ ಪಾಪಿಯು ಸ್ತನಕಾಲಕೂಟವನ್ನುಣಿಸಲು ಅವಳಿಗೆ ದಾದಿಗೆ ತಕ್ಕ ಸುಗತಿಯನ್ನು ಕೊಟ್ಟು ಪೂತನಾವಶಳಾದ ಊರ್ವಸಿಯನ್ನು ರಕ್ಷಿಸಿದ ಕೃಷ್ಣನಂತಹ ದಯಾಸಮುದ್ರನನ್ನು ಇನ್ನೆಲ್ಲಿ ಕಾಣುವೆವು? ಅವನಲ್ಲದಿನ್ನಾರೆಮ್ಮ ಗತಿ? ಯುದ್ಧರಂಗದಲ್ಲಿ ಚಕ್ರಾಯುಧನಾಗಿ ತಮ್ಮ ಮೇಲೇರಿ ಬರುವ ಗರುಡವಾಹನವನ್ನು ನೋಡಿ ಮೊದಲು ದ್ವೇಷಸಂರಂಭದಿಂದ ಶ್ರೀಹರಿಯನ್ನೆದುರಿಸಿ ನಿಂತರೂ ಸ್ವಭಾವಸಹಜವಾದ ಭಕ್ತಿಯಿಂದ ನಮ್ಮ ಚಿತ್ತವನ್ನವನಿಗರ್ಪಿಸಿದ ಅಸುರರನ್ನು ಕೂಡ ಭಾಗವತರೆಂದೇ ನಾನು ತಿಳಿದಿರುವೆನು.

ಬ್ರಹ್ಮನಿಂದ ಪ್ರಾರ್ಥಿತನಾಗಿ ಭೂಲೋಕಮಂಗಳವನ್ನು ಮಾಡಲು ವಸುದೇವನಿಂದ ದೇವಕಿಯಲ್ಲಿ ಕಂಸನ ಕಾರಾಗಾರದಲ್ಲಿ ಜನಿಸಿದನು. ಕಂಸನ ಭೀತಿಯಿಂದ ತಂದೆ ಕರೆದೊಯ್ಯಲು ನಂದವ್ರಜನ ಸೇರಿ ಗೂಢಪ್ರಭಾವನಾಗಿ ಬಲರಾಮನಿಂದ ಕೂಡಿ ಹನ್ನೊಂದು ವರ್ಷ ಬೆಳೆದನು. ಯಮುನೋಪವನಗಳಲ್ಲಿ ಗೋಪಬಾಲದಿಂದ ಕೂಡಿ ಕರುಗಳನ್ನು ಮೇಯಿಸುತ್ತಾ ಕಲಕಲ ನಾದವನ್ನು ಮಾಡುವ ಪಕ್ಷಿಗಣಸಂಕುಲ ವೃಕ್ಷಗಳ ನೆರಳಿನಲ್ಲಿ ಕೌಮಾರಕ್ರೀಡೆಗಳನ್ನಾಡಿದನು. ನಗುತ್ತಾ, ಒಂದು ಸಲ ಅಳುತ್ತಾ, ಮತ್ತೊಂದು ಸಲ ದುಷ್ಟತನವನ್ನು ಮಾಡುತ್ತಾ, ಬಾಲಸಿಂಹ ದಂತೆ ಕಾಣಿಸುವ ಕೃಷ್ಣನು ವ್ರಜವಾಸಿಗಳಿಗೆ ಪ್ರೇಕ್ಷಣೀಯನಾಗಿ ಬಾಲಲೀಲೆಗಳನ್ನಾಡಿ ತೋರಿಸಿ ದನು. ಲಕ್ಷ್ಮೀನಿವಾಸವಾದ ವೃಂದಾವನದಲ್ಲಿ ಆಕಳುಗಳನ್ನು ಮೇಯಲು ತಿರುಗುತ್ತಾ,

ವೇಣುಮಧುರನಾದದಿಂದ ತನ್ನ ಅನುಚರರನ್ನು ಸಂತೈಸಿದನು. ಕಂಸನಿಂದ ತನ್ನ ಹಿಂಸಿಸಲು ಕಳಿಸಲ್ಪಟ್ಟ ಕೆಟ್ಟ ಕಾಮರೂಪೀ ರಾಕ್ಷಸರನ್ನು ಹುಡುಗನು ಗೊಂಬೆಗಳಂ ಮುರಿದಂತೆ ಸುಲಭವಾಗಿ ಕೊಂದನು. ಕಾಳಿಯನನ್ನು ಯಮುನಾಹ್ರದದಿಂದ ಹೊರಹಾಕಿ ಆ ವಿಷಕಲುಷಿತ ಜಲವನ್ನು ವಿಮಲೀಕರಿಸಿ ತನ್ನವರಿಗೂ ತನ್ನ ಗೋವೃಂದಕ್ಕೂ ಪಾನಯೋಗ್ಯವನ್ನಾಗಿಸಿದನು. ಇಂದ್ರಯಾಗ ವನ್ನು ನಿಲ್ಲಿಸಿ ನಂದನಿಂದ ಗೋಸವವನ್ನೂ ಗೋವರ್ಧನೋತ್ಸವವನ್ನು ಮಾಡಿಸಿದನು. ಬ್ರಾಹ್ಮಣರಿಗೆ ಬಹುಧನಾದಿದಾನಗಳಂ ಕೊಡಿಸಿ, ಕೂಡಿಟ್ಟ ಹಣವು ಸಾರ್ಥಕವೆನಿಸಿದನು. ಕೋಪದಿಂದ ಸುರೇಂದ್ರನು ಏಳು ದಿನ ಮಳೆಗರೆಯಲು ವಿಹ್ವಲರಾಗಿ ಶರಣಾಗತರಾದ ಗೋಕುಲ ಪ್ರಜರನ್ನೂ ಗೋಗಣವನ್ನೂ ಗೋವರ್ಧನಗಿರಿಯನ್ನೆತ್ತಿ ಕಾಪಾಡಿ ಅನುಗ್ರಹಿಸಿದನು. ಶರಚ್ಚಂದ್ರ ಚಂದ್ರಿಕಾಸುಂದರವಾದ ವೃಂದಾವನದಲ್ಲಿ ಯಮುನಾಪುಲಿನತಲಗಳಲ್ಲಿ ಸ್ತ್ರೀರತ್ನಮಂಡಲ ಭೂಷಣನಾಗಿ ರಾಸಕ್ರೀಡೆಯಿಂದ ಅವರನ್ನು ರಮಿಸಿದನು.

## ೩. ಉದ್ಧವ ಕಥಿತ ಕೃಷ್ಣವಾರ್ತೆ

ಅನಂತರದಲ್ಲಿ ಶ್ರೀಕೃಷ್ಣನು ಬಲರಾಮನಿಂದ ಕೂಡಿ, ಮಧುರೆಗೆ ಬಂದು ಕಂಸನನ್ನು ಸಿಂಹಾಸನ ದಿಂದ ಕೆಳಸೆಳೆದು ಕೊಂದು ತಂದೆತಾಯಿಯರ ಮನೋಭಿಲಾಷೆಗಳನ್ನು ಪೂರೈಸಿದನು. ಸಾಂದೀಪನ್ಯಾಚಾರ್ಯರಲ್ಲಿ ಗುರುಕುಲವಾಸವನ್ನು ಮಾಡಿ, ಏಕವಾರಾಧ್ಯಯನದಿಂದ ಸಕಲ ವಿದ್ಯೆಗಳನ್ನು ಕಲಿತನು. ಅವರಿಗೆ ಮೃತಪುತ್ರನನ್ನು ಬದುಕಿಸಿ ತಂದು ಗುರುದಕ್ಷಿಣೆಯನ್ನಾಗಿ ಕೊಟ್ಟನು. ಭೀಷ್ಮಕಕನ್ಯಾಸ್ವಯಂವರದಲ್ಲಿ ಕ್ಷತ್ರಿಯರೆಂಬ ಕಾರಣದಿಂದ ಆಕೆಯನ್ನು ಕೊಂಡು ಪೋಗಲು ಬಂದಿದ್ದ ಚೈದ್ಯಮಾಗಧಾದಿಗಳನ್ನು ಸುಲಭವಾಗಿ ಗೆದ್ದು, ಅವರು ನೋಡುತ್ತಿರಲು ತನ್ನವಳಾದ ರುಕ್ಮಿಣಿಯನ್ನು ಅಪಹರಿಸಿಕೊಂಡು ತಂದನು. ಮುಗುದಾಣಿ ಇಲ್ಲದ ಏಳು ಗೂಳಿಗಳನ್ನು ಕಟ್ಟಿಗೆಯ ಬಸವರನ್ನಂತೆ ಕಟ್ಟಿ, ನೀಲಾದೇವಿಯನ್ನು ತರುವಾಗ ಕನ್ಯೇಚ್ಛುಗಳಾದ ಇತರ ರಾಜರು ಅವಮಾನಿತರಾಗಿ, ಸಿಟ್ಟಿನಿಂದ ಶಸ್ತ್ರಪಾಣಿಗಳಾಗಿ, ಮುತ್ತಲು, ಪ್ರತಿ ಶಸ್ತ್ರಗಳಿಂದ ಅವರನ್ನು ಸೋಲಿಸಿ, ತಾನು ಅಕ್ಷತನಾಗಿಯೇ ಬಂದನು. ವಿದುರಾ! ಗ್ರಾಮ್ಯಜನರು ಪತ್ನೀಪ್ರೀತಿ ಯನ್ನು ಸಾಧಿಸುವಂತೆ ಸತ್ಯಭಾಮೆಗೋಸುಗ ಪಾರಿಜಾತವನ್ನು ತರುವಾಗ ಶಚೀವಚನವನ್ನು ಕೇಳಿ ದರ್ಪದಿಂದ ಇಂದ್ರನು ಲೋಕಪಾಲಕರಿಂದೊಡಗೂಡಿ ಯುದ್ಧಸನ್ನದ್ಧನಾಗಿ, ನರಕಾಸುರ ಬಾಧೆಯನ್ನು ಬಿಡಿಸೆಂದು ಯಾರನ್ನು ಬೇಡಿದ್ದನೋ ಅಂತಹ ಕೃಷ್ಣನ ಮೇಲೇರಿ ಬರಲು ಅವರನ್ನೆಲ್ಲ ಸೋಲಿಸಿ, ಗರ್ವಾಪಹಾರ ಮಾಡಿದನು. ತನ್ನನ್ನು ನುಂಗಲು ಬಂದ ನರಕಾಸುರನನ್ನು ಚಕ್ರದಿಂದ ಕೊಂದು ಅವನ ಮಾತೆ ಧರಾದೇವಿಯ ಮೊರೆಯನ್ನು ಕೇಳಿ, ಅವನ ಮಗನಾದ ಭಗದತ್ತನಿಗೆ ರಾಜ್ಯವನ್ನು ಕೊಟ್ಟು ರಕ್ಷಿಸಿ, ಅವನ ಅಂತಃಪುರದಲ್ಲಿದ್ದ ಹದಿನಾರು ಸಾವಿರ ರಾಜಕನ್ಯೆಯರ ಸೆರೆ ಬಿಡಿಸಿದನು. ಅಂತಹ ಆರ್ತಬಂಧುವಾದ ಹರಿಯನ್ನು ಕಂಡು ಮೇಲೆದ್ದು ನಿಂತು, ಸಂತೋಷಲಜ್ಜಾನುರಾಗಪೂರ್ಣ ಕಟಾಕ್ಷಗಳಿಂದ ಅವರು ಶ್ರೀಕೃಷ್ಣನೇ ತಮ್ಮ ಪತಿ ಎಂದು ಮನಸಾ ವರಿಸಿದರು. ಅಷ್ಟು ಮಂದಿರಗಳಲ್ಲಷ್ಟು ತರುಣಿಯರನ್ನಷ್ಟು ರೂಪಗಳಿಂದ ಶ್ರೀಕೃಷ್ಣನು ವಿಧಿವಿಹಿತವಾಗಿ ಒಂದೇ ಮುಹೂರ್ತದಲ್ಲಿ ಮದುವೆಯಾದನು. ತನಗೆ ಕೆಲ ಗುಣಗಳಲ್ಲಿ ಕಿಂಚಿತ್ಸಮಾನರಾದ ಹತ್ತು ಗಂಡುಮಕ್ಕಳನ್ನೂ ಒಂದು ಹೆಣ್ಣನ್ನೂ ಪ್ರತಿ ಪತ್ನಿಯಲ್ಲಿ ·

ಪಡೆದನು. ಬಹುರೂಪನಾಗಿ ಅವರಲ್ಲಿ ವಿರಾಜಿಸಿದನು. ಕಾಲಯವನ ಜರಾಸಂಧ ಸಾಲ್ವಾದಿಗಳು ಮಧುರೆಗೆ ಮುತ್ತಿಗೆ ಹಾಕಲು ಮುಚುಕುಂದ ಭೀಮಸೇನಾದಿಗಳಲ್ಲಿದ್ದ ತನ್ನ ತೇಜಸ್ಸಿನಿಂದ ಕೊಲ್ಲಿಸಿದನು. ಶಂಬರಾದಿಗಳನ್ನು ಪ್ರದ್ಯುಮ್ನನಿಂದಲೂ, ವಿವಿಧ ಪ್ರಲಂಬ ಬಲ್ಮಲಧೇನುಕಾದಿ ಗಳನ್ನು ಬಲರಾಮನಿಂದಲೂ ಕೊಲ್ಲಿಸಿ ಮುರ, ಶಿಶುಪಾಲದಂತವಕ್ತ್ರಾದಿಗಳನ್ನು ಸ್ವಯಂ ತಾನೇ ಸಂಹರಿಸಿದನು.

ಅನಂತರದಲ್ಲಿ ಕೌರವ ಪಾಂಡವ ಪಕ್ಷಗಳ ವಹಿಸಿ ನಿಂತ ಹದಿನೆಂಟು ಅಕ್ಷೌಹಿಣೀ ಸೈನ್ಯ ಚಲನದಿಂದ ಕುರುಕ್ಷೇತ್ರದ ಭೂಮಿಯು ಕಂಪಿಸಿತು. ಕರ್ಣ, ದುಸ್ಸಾಸನ, ಶಕುನಿಗಳ ಧರ್ಮಂತ್ರ ವಶನಾಗಿ ಹತಶ್ರೀಕನು ಭಗವದ್ದ್ರೋಹದಿಂದ ಹತಾಯುಷ್ಕನೂ ಆದ ದುರ್ಯೋಧನನ ಊರುದಂಡವನ್ನು ಖಂಡಿಸಿದ ಚಂಡವೀರ ಭೀಮಸೇನನ್ನು ಕಂಡು ಸಂತಸದಿಂದ ಕೊಂಡಾಡಿದನು. "ದ್ರೋಣಭೀಷ್ಮಾರ್ಜುನಭೀಮ ಶಲ್ಯಾದಿಗಳಿಂದ ಸಂಹರಿಸಲ್ಪಟ್ಟರು. ಅಷ್ಟಾದಶಾಕ್ಷೌಹಿಣೀ ಸೈನ್ಯದಿಂದ ಎಷ್ಟು ಭೂಭಾರ ಇಳಿದೀತು? ತನ್ನ ತೇಜೋಪಬೃಂಹಿತವಾದ ಈ ಯದುಕುಲವು ಇನ್ನು ದುರ್ವಿಷಹವಾಗಿ ಭೂಭಾರವೆನಿಸಿದೆ. ಮಧುಪಾನದಿಂದ ಮತ್ತರಾಗಿ ಇವರು ಪರಸ್ಪರ ಕಾದಾಡಿ ಮಡಿಯುವುದೇ ಲೇಸು. ಇದರ ಹೊರತಿನ್ನಾವ ಉಪಾಯದಿಂದಲೂ ಇವರಿಗೆ ನಾಶವಿಲ್ಲ. ನಾ ಕೈಯೆತ್ತಿ ಬಡಿದಾಗ ಮಡಿಯದೇ ಉಳಿಯುವರಾವರೂ ಯಾರು?" ಎಂದು ಚಿಂತಿಸಿ ಸ್ವರ್ಗಸಮವೆನಿಸಿದ ರಾಜ್ಯದಲ್ಲಿ ಧರ್ಮಜನನ್ನು ನಿಲ್ಲಿಸಿ ತಾನೂ ಲೋಕಸಂಗ್ರಹಾರ್ಥ ವಾಗಿ ಸಾಧುಮಾರ್ಗದಿಂದ ನಡೆದು ನೋಡಿಸಿದನು. ಬಂಧುಮಿತ್ರರನ್ನು ಸುಖಪಡಿಸಿದನು.

ಉತ್ತರೆಯಲ್ಲಿ ಜನಿಸಿ ಅಭಿಮನ್ಯುಸುತಪರೀಕ್ಷಿತನಿಂದ ಪೂರುವಂಶವನ್ನು ನಿಲ್ಲಿಸಿದನು. ಅವನು ಜನಿಸಿದಾಗ ಅಶ್ವತ್ಥಾಮನ ಬ್ರಹ್ಮಾಸ್ತ್ರಗಳಿಂದ ಹತನಾಗಲು ಪುನಃ ಬದುಕಿಸಿದನು. ಧರ್ಮಸುತನ ಅಶ್ವಮೇಧಯಾಗಗಳ ಸಾಕ್ಷಿಯಾಗಿ ವೀಕ್ಷಿಸಿ, ಅಕ್ಷಯಫಲಂಗಳಿತ್ತನು. ಆಗ ಧರ್ಮರಾಜನು ಕೃಷ್ಣಾನುವ್ರತನಾಗಿ, ತಮ್ಮಂದಿರಿಂದೊಡಗೂಡಿ ಪ್ರಜಾರಂಜಕನಾಗಿ ಆಳಿದನು. ಶ್ರೀಕೃಷ್ಣನು ಲೌಕಿಕ ವೈದಿಕ ಮಾರ್ಗಗಳನ್ನು ಬಿಡದೆ ದ್ವಾರಾವತಿಯಲ್ಲಿ ಆಸಕ್ತನಾಗಿ ಸಕಲ ಭೋಗಗಳನ್ನನುಭವಿಸಿದನು. ತಾನು ಪೂರ್ಣನೆಂದು ತೋರಿಸಿದನು.

ಆಹಾ! ವಿದುರಾ! ಎಂತಹ ಸ್ನಿಗ್ಧವದನ ಅವಲೋಕನ! ಎಷ್ಟು ಅಮೃತಧಾರೆ ಅವನ ವಚನ? ಏನವನ ನಿರ್ದೋಷ ಚರಿತೆ! ಅವನ ದೇಹವ ತುಂಬಿ ತುಳುಕಿದಳು ಲಾವಣ್ಯಮಯಿ ರಮೆ. ಈ ಲೋಕ ಸ್ವರ್ಗವೆರಡೂ ಅವನ ಸಂಚಾರದಿಂದ ಆನಂದಿತವಾದವು. ಸುತರಾಂ ಯದು ಗಳ ಆನಂದವಿನ್ನೇನೆಂಬೆ! ರುದ್ರಬಂಧುವಾದ ಆ ಸ್ಮರಕೋಟಿ ಸುಂದರನು ರಾತ್ರಿಗಳಲ್ಲಿ ಸ್ತ್ರೀಗಣ ಭೂಷಿತನಾಗಿ ಚರಿಸಿದ ಯಮುನಾಪುಲಿನವಿನ್ನೆಷ್ಟು ಧನ್ಯವೋ! ಲೋಕಶಿಕ್ಷಾರ್ಥವಾಗಿ ಬಹು ವರ್ಷ ಗೃಹಮೇಧೀಯ ಕರ್ಮಗಳಲ್ಲಿ ಕಳೆದು ವಿರಾಗವನ್ನು ತಾಳಿದವನಂತೆ "ಕಾಮಗಳೆಲ್ಲಾ ದೈವಾಧೀನವಾಗಿ, ಸ್ವಯಂ ಮನುಜನು ದೈವಾಧೀನನೇ ಆಗಿರುವಾಗ ಕಾಮದೇಹಾದಿಗಳು ನಿತ್ಯವೆಂದು ನಂಬಬೇಡಿ" ಎಂದು ಯೋಗೇಶ್ವರರ ಮಾರ್ಗವನ್ನುಪದೇಶಿಸಿದನು.

ಇಂತು ಭಗವದಿಚ್ಛಾನುಸಾರವಾಗಿಯೇ ಬಂದ ದೂರ್ವಾಸಾದಿ ಮುನಿಗಳು ಪುರೋಪವನದಿ ಕ್ರೀಡಾರತರಾಗಿದ್ದ ಯದುಬಾಲಕರಿಂದ ವಂಚಿತರಾಗಿ ಕೋಪಗೊಂಡು ಶಪಿಸಿ ಪೋದರು.

ಇನ್ನು ಮುಂದಿನ ಕಥೆಯಂ ಕೇಳು – ಕೆಲವರ್ಷ ಕಾಲ ಕಳೆದ ಮೇಲೆ ವೃಷ್ಣಿ ಭೋಜಾಂಧ ಕಾದಿ ಯಾದವರೆಲ್ಲ ಪ್ರಭಾಸವನ್ನು ಸೇರಿ, ಸ್ನಾನಮಾಡಿ, ದೇವ ಋಷಿಪಿತೃತರ್ಪಣಗಳನ್ನಿತ್ತು

ಬ್ರಾಹ್ಮಣರನ್ನು ಕರೆದು ಮೃಷ್ಟಾನ್ನದಿಂದ ತೃಪ್ತಿಪಡಿಸಿ, ಶ್ರೇಷ್ಠ ಗೋದಾನವನ್ನು ಮಾಡುವರು. ಬಂಗಾರ, ಬೆಳ್ಳಿ, ಅಜಿನ, ಕಂಬಳಿಗಳನ್ನು ದಾನ ಮಾಡುವರು. ಕುದುರೆ, ರಥ, ಗಜ, ಕನ್ಯೆ, ಉರ್ವರಾಭೂಮಿ ಮೊದಲಾದುವನ್ನೂ ಕೊಟ್ಟು ಗೋವಿಪ್ರರಕ್ಷಣ ದಕ್ಷರಾದ ಆ ವೀರರು ಅವರಿಗೆರಗುವರು.

## ೪. ಶ್ರೀಕೃಷ್ಣನು ಉದ್ಧವನಿಗಾಜ್ಞಾಪಿಸಿದುದು

ಯಾದವರಾಮೇಲೆ ಭುಂಜಿಸಿ ವಾರುಣೀಪಾನವನ್ನು ಮಾಡಿ, ಮೈಮರೆತು, ಪರಸ್ಪರ ನಿಂದಿಸಿ, ಕಾದಾಡುವರು. ಮೈರೇಯ ಮಧುಪಾನದಿಂದ ಮತಿಗೆಟ್ಟು, ಮಾರ್ತಾಂಡ ಮಂಡಲವು ಪಶ್ಚಿಮಗಿರಿಯನ್ನು ಸೇರುತ್ತಿರಲು, ಕಾದಾಡಿ ಅಸ್ತಮಿಸುವರು. ಅದನ್ನು ಸರ್ವಜ್ಞನಾದ ಸ್ವಾಮಿಯು ಮೊದಲೇ ತಿಳಿದು ಸರಸ್ವತೀನದೀತೀರದ ಅಶ್ವತ್ಥವೃಕ್ಷವನ್ನಾಶ್ರಯಿಸಿ, ಕೂತಿರುವನು. ಆಗ ನಾನು ಪುನಃ ಬದರಿಯಿಂದ ಅವನಾಜ್ಞೆಯಂತೆ ಬಂದು ಬೇಡಿಕೊಂಡಾಗ ಜ್ಞಾನೋಪದೇಶ ವನ್ನು ಮಾಡುವನು.

ಪ್ರಪನ್ನಾರ್ತಿಹರನಾದ ಹರಿಯಂ ಕಂಡು ವಂದಿಸಿದ ನನ್ನಾ ಸ್ವಾಮಿಯು ನೀನು ಬದರಿಕಾ ಶ್ರಮಕ್ಕೆ ಪೋಗೆಂದು ಆಜ್ಞಾಪಿಸಿ, ಯದುಕುಲವನ್ನುಪಸಂಹರಿಸುವ ತನ್ನ ಸಂಕಲ್ಪವನ್ನು ತಿಳಿಸಿದನು. ಆದರೂ ಅವನನ್ನು ಬಿಡಲಾರದೆ ಹಿಂದೆ ಹಿಂದೆ ಪೋಗಿ ಸರಸ್ವತೀ ನದೀತೀರದ ಅಶ್ವತ್ಥಮೂಲದಲ್ಲಿ ಉಪಾಸೀನನಾದ ಅನನ್ಯಾಧಾರನಾದ ಶ್ರೀರಮಣನನ್ನು ಕಂಡು ಅವನ ಪಾದಾರವಿಂದ ವಿಯೋಗವನ್ನು ಸಹಿಸಲಾರದೆ ಗೋಳಾಡಿದೆನು.

ಶ್ರೀಕೃಷ್ಣನ ಆಗಿನ ಆ ಸೊಬಗೇನೆಂದು ವರ್ಣಿಸಲಿ! ರಾತ್ರಿಯ ಕತ್ತಲಲ್ಲಿಯೂ ಬೆಳಗುವ ದೇಹದಿಂದ ಆ ಹರಿಯು ಪ್ರಶಾಂತನಾಗಿದ್ದನು. ನಿರ್ಮಲನು, ಅರುಣ ಕಮಲನೇತ್ರನು, ಚತುರ್ಬಾಹುಮಂಡಿತನು, ಪೀತಾಂಬರಧಾರಿಯು ಆದ ಶ್ರೀಕೃಷ್ಣನು ತನ್ನ ಎಡತೊಡೆಯ ಮೇಲೆ ದಕ್ಷಿಣಪಾದವನ್ನಿಟ್ಟು ಶಯನಿಸಿದ್ದನು. ಕರ್ಮಫಲಲೇಪವಿಲ್ಲದ ಆ ಸ್ವಾಮಿಯು ಅರ್ಭಕನಂತೆ ತರುಣ ಸುಂದರನಾಗಿದ್ದನು. ಅಲ್ಲಿಯೇ ಸಮೀಪದಲ್ಲಿ ವೇದವ್ಯಾಸರ ಸ್ನೇಹಿತನಾದ ಸಹಾ ಧ್ಯಾಯಿಯೂ ಆದ ಮೈತ್ರೇಯನೆಂಬ ಜ್ಞಾನಿಯು ಯದೃಚ್ಛೆಯಿಂದ ಲೋಕಸಂಚಾರ ಮಾಡುತ್ತಾ ಅಲ್ಲಿಗೆ ಬಂದು ಕುಳಿತಿದ್ದನು. ಭಕ್ತನಾದ ಆ ಮುನಿಯು ಕೇಳುತ್ತಿರಲು ಶ್ರೀಕೃಷ್ಣನು ಅನುರಾಗ ದಿಂದ ಕಿರುನಗೆಯಂ ಬೀರಿ, ನನ್ನನ್ನು ನೋಡುವುದರಿಂದೇ ನನ್ನ ಸಂಸಾರಕ್ಲೇಶವನ್ನೆಲ್ಲ ಕಳೆದು ಆನಂದಸಮುದ್ರದಲ್ಲೋಲಾಡಿಸುತ್ತಾ ಇಂತೆಂದನು. ಮೈತ್ರೇಯನಾದರೂ ಹರ್ಷೋದ್ರೇಕದಿಂದ ತಲೆಬಾಗಿ ವಿನಯಾದರಗಳಿಂದ ಕೇಳುತ್ತಿದ್ದನು.

ಶ್ರೀಭಗವಂತನು ಪೇಳಿದನು –

ಉದ್ಧವಾ! ನಿನ್ನ ಮನಸ್ಸಿನ ಕೋರಿಕೆ ತಿಳಿದಿದೆ. ಅಭಕ್ತರಿಗೆ ದೊರಕಲಾರದ ಜ್ಞಾನವನ್ನು ನಿನಗೆ ಕೊಡುವೆನು. ಕೇಳು. ಪೂರ್ವಜನ್ಮದಲ್ಲಿ ನೀನು ವಿಶ್ವಸೃಷ್ಟಿ ಕಾರಣರಾದ ದೇವತೆಗಳು ಮಾಡುತ್ತಿದ್ದ ಸತ್ರಯಾಗದಲ್ಲಿ ನನ್ನನ್ನು, ಬ್ರಹ್ಮಜ್ಞಾನವನ್ನು ಕೋರಿ ಪೂಜಿಸಿದೆ. ಆ ಪುಣ್ಯಫಲ ವೀಗ ಸಿದ್ಧಿಸಿದೆ. ಈ ನಿನ್ನ ಜನ್ಮಪರಂಪರೆಯ ಕೊನೆಯಂ ಕಂಡಿರುವೆ. ಈ ಲೋಕವನ್ನು

ಬಿಡಲುದ್ಯುಕ್ತನಾದನ್ನ ದರ್ಶನವು ನಿನಗಾದುದು ಮದನುಗ್ರಹವೇ ಎಂದು ತಿಳಿ. ನಿನ್ನ ನಿರ್ದೋಷ ಸೇವೆಗೆ ಮೆಚ್ಚಿರುವೆನು.

ಪೂರ್ವದಲ್ಲಿ ನನ್ನ ಆದಿಮಸರ್ಗದಲ್ಲಿ ನಾಭಿಕಮಲಜಾತನಾದ ಬ್ರಹ್ಮನಿಗೆ ನಾನು ಪೇಳಿದ ಜ್ಞಾನವು ನನ್ನ ಮಹಿಮಾನುವರ್ಣನಾತ್ಮಕವಾಗಿದ್ದು ಭಾಗವತವೆಂದು ಜ್ಞಾನಿಗಳಿಂದ ಕರೆಯಲ್ಪಟ್ಟಿದೆ. ಆ ಭಗವದೇಕನಿಷ್ಠವಾದ ಭಾಗವತವನ್ನು ನಿನಗೆ ಪೇಳುವೆನು - ಎಂದಾಡಿದ ಆ ಪರಮಪುರುಷನ ಕಟಾಕ್ಷ ಸಂಸೂಚಿತ ಪರಮಾನುಗ್ರಹಪಾತ್ರನಾದ ನಾನು ಪ್ರೇಮಪುಲಕಿತ ಗಾತ್ರನು, ಆನಂದಬಾಷ್ಪಪೂರ್ಣ ನೇತ್ರನಾಗಿ ಅಂಜಲಿಬಂಧವಂ ಘಟಿಸಿ ಬೇಡಿಕೊಂಡೆನು –

ಈಶ! ನಿನ್ನ ಪಾದಾರವಿಂದ ಸೇವಾತತ್ಪರರಿಗೆ ಸಿಗದ ಪುರುಷಾರ್ಥ ಉಂಟೇ? ಆದರೂ ನಿನ್ನ ಪಾದಪದ್ಮ ಸೇವೆಯಂ ಬಿಟ್ಟನ್ಯವಾವುದನ್ನೂ ನಾ ಬೇಡುವುದಿಲ್ಲ. ನೀನು ಫಲಸಂಗರಹಿತನಾಗಿದ್ದೂ ಕರ್ಮಗಳನ್ನಾಚರಿಸಿದೆ; ಜನ್ಮರಹಿತನಾದರೂ ಪುಟ್ಟಿದೆ; ಕಾಲ ಮೂರ್ತಿಯಾಗಿದ್ದೂ ಶತ್ರುಭಯದಿಂದ ದೂರದ ದುರ್ಗವನ್ನಾಶ್ರಯಿಸಿದೆ; ಓಡಿಪೋದೆ; ಸ್ವರತನಾದರೂ ತರುಣೀ ಸಹಸ್ರ ರಮಣನೆನಿಸಿದೆ. ಇಂತಹ ನಿನ್ನ ವಿಚಿತ್ರ ಲೀಲೆಯಂ ಕಂಡು ಜ್ಞಾನಿಗಳೂ ಭ್ರಮವನ್ನು ಪೊಂದುವರು. ಜಡಾಮಿಶ್ರಪೂರ್ಣ ನಿರ್ದೋಷ ಜ್ಞಾನಾನಂದ ಸ್ವರೂಪನಾದ ನೀನೆನ್ನನ್ನೂ ಅಕ್ರೂರಾದಿಗಳನ್ನೂ ಮಂತ್ರಾಲೋಚನೆಗೆಂದು ಕರೆದು ಅರಿಯದವನಂತೆ ಕರ್ತವ್ಯವೇನೆಂದು ಪ್ರಶ್ನಿಸಿ ಅದರಂತೆ ನಡೆದೆ. ನಿನ್ನ ವಿಡಂಬನದಿಂದ ಅಜ್ಞಾನಿಗಳಾಗಿ ನಿನ್ನನ್ನು ತಿಳಿಯದೇ ಪೋದೆವು. ದೇವಾ! ನಿನ್ನ ಪರಮರಹಸ್ಯವಾದ ತತ್ತ್ವಜ್ಞಾನ ವನ್ನು ಸಮಗ್ರವಾಗಿ ಬ್ರಹ್ಮನಿಗೆ ಪೇಳಿದೆ ಎಂದು ನುಡಿದೆ. ಆ ಬ್ರಹ್ಮಾದ್ಯುತ್ತಮಾಧಿಕಾರಿಗಳಿಗೆ ಉಪದಿಷ್ಟವಾದ ಜ್ಞಾನೈಕದೇಶವನ್ನು ನನ್ನ ಯೋಗ್ಯತೆಗೆ ತಕ್ಕಂತೆ ಹೇಳಿ ಸಂಸಾರ ದುಃಖ ನಿರ್ಮೂಲನವನ್ನು ಮಾಡು –

ಎಂದು ಹೃದಯವಂ ಬಿಚ್ಚಿ ನುಡಿದ ನನಗೆ ಭಗವಂತನು ತನ್ನ ಸರ್ವೋತ್ತಮತ್ವವನ್ನೂ ತಾರತಮ್ಯವನ್ನೂ ಅನಾರೋಪಿತಾದ್ವಿತೀಯಾನಂದ ಜ್ಞಾನಸ್ವರೂಪವನ್ನೂ ಚೆನ್ನಾಗಿ ತಿಳಿಸಿ ಕೊಟ್ಟನು. ಇಂತು ಹರಿಪಾದ ಸೇವೆಯಿಂದ ಸಕಲವನ್ನು ತಿಳಿದು ಆ ವನಜನಾಭನ ಪಾದಗಳಿಗಭಿನಮಿಸಿ ವಿರಹಾತುರನಾಗಿ ಬಿಡಲಾರದೆ ಬಿಟ್ಟು ಇಲ್ಲಿಗೆ ಬಂದಿರುವೆನು. ಅವನಾಜ್ಞೆಯಂತೆ ಬದರಿಕಾಶ್ರಮವನ್ನು ಸೇರಲು ಹೊರಟಿರುವೆನು. ಈಗ ನಿನ್ನ ದರ್ಶನದಿಂದ ಆಹ್ಲಾದವಾಯಿತು. ಪ್ರಭುವಿಯೋಗಾರ್ತಿಯು ಬಿಡದೆ ಪೀಡಿಸುತ್ತಿದೆ. ನಾರಾಯಣ ದೇವನು ನರಮಹರ್ಷಿಯು ಲೋಕಸುಖಕ್ಕಾಗಿ ತೀವ್ರಚಿರಿಕಾಲೀನ ತಪವಂ ಗೈಯುತ್ತಿರುವಲ್ಲಿ ನೆಲಸಿ ಹರಿವಿರಹವನ್ನು ಮರೆಯಲು ಯತ್ನಿಸುವೆನು.

ಶ್ರೀಶುಕನು ಪೇಳಿದನು – ಇಂತು ಉದ್ಧವನಿಂದ ಬಂಧುಗಳ ಭವಿಷ್ಯತ್ಕಾಲೀನವಾದ ವಧರೂಪ ವಿಷಾದವೃತ್ತಾಂತವನ್ನು ಕೇಳಿ ಉಕ್ಕಿಬರುವ ಶೋಕವನ್ನು ಜ್ಞಾನಬಲದಿಂದ ತಡೆದು ವಿದುರನು ಹೊರಡಲುದ್ಯುಕ್ತನಾದ ಉದ್ಧವನನ್ನು ನೋಡಿ ವಿಶ್ವಾಸದಿಂದ ಹೀಗೆಂದನು -

ಕೃಷ್ಣಭಕ್ತಜನಸತ್ತಮ! ಉದ್ಧವ! ಪರಮರಹಸ್ಯವಾದ ತತ್ತ್ವಜ್ಞಾನವನ್ನು ಯೋಗೇಶ್ವರನಾದ ಕೃಷ್ಣನು ನಿನಗೆ ಪೇಳಿದನೆಂದೆ. ಅದನ್ನು ನನಗೆ ಹೇಳಬಾರದೆ? ವಿಷ್ಣುಭಕ್ತರು ತಮ್ಮನ್ನು ನಂಬಿದವರಿಗೆ ಜ್ಞಾನವನ್ನುಪದೇಶಿಸಿ ಉದ್ಧರಿಸಲು ಸಂಚರಿಸುತ್ತಿರುವರಲ್ಲವೇ? ಎನ್ನಲು ಉದ್ಧವನಿಂತೆಂದನು –

ವಿದುರಾ! ಜ್ಞಾನಿಶ್ರೇಷ್ಠನಾದ ಮೈತ್ರೇಯನಿಗೆ ಭಗವಂತನೇ ಮರ್ತ್ಯಲೋಕವನ್ನು ಬಿಟ್ಟು ಪೋಗುವಾಗ ಇಂತು ಆಜ್ಞಾಪಿಸಿರುವನು. 'ಮೈತ್ರೇಯಾ! ನಮ್ಮ ವಿದುರನು ನಿನ್ನಲ್ಲಿ ಬರುವನು. ಆಗ ನಾ ಪೇಳಿದ ಭಾಗವತ ತತ್ತ್ವವನ್ನವನಿಗೆ ಪೇಳು' ಎಂದು. ಆದ್ದರಿಂದ ನೀನಾ ಮೈತ್ರೇಯರನ್ನು ಕೇಳು ಎಂದು ಉದ್ಧವನು ನುಡಿದು ಕೃಷ್ಣಕಥಾಸುಧಾಪಾನದಿಂದ ರಾತ್ರಿಯನ್ನು ಕ್ಷಣದಂತೆ ಕಳೆದು ಯಮುನಾಪುಲಿನದಲ್ಲಿ ಕುಳಿತು ತನ್ನ ಮುಖದಿಂದ ಬಂದ ಗೋವಿಂದನ ವಾರ್ತೆಯನ್ನು ನೀರವನಾಗಿ ಕೇಳುತ್ತಲಿದ್ದ ವಿದುರನಿಂದ ಅಪ್ಪಣೆಯಂ ಪಡೆದು ಹೊರಟುಹೋದನು.

ಆಗ ಪರೀಕ್ಷಿತನು ಪ್ರಶ್ನಿಸಿದನು – "ಬ್ರಹ್ಮನ್! ಎಲ್ಲ ವೃಷ್ಣಿ ಭೋಜರು ಮೃತರಾದಾಗ ಬ್ರಹ್ಮಶಾಪವು ತಾಗಿ, ವೇದವೇದ್ಯನಾದ ಕೃಷ್ಣನೇ ತನ್ನ ಶರೀರದಂತೆ ಇರುವ ಪೃಥಿವೀ ಲೋಕವನ್ನು ತ್ಯಜಿಸಿ ಪೋದಾಗ, ಅತಿರಥಶ್ರೇಷ್ಠನಾದ ಉದ್ಧವನು ಮಾತ್ರ ಉಳಿದನೆಂತು?"

ಶುಕನು ಪೇಳಿದನು – ಬ್ರಹ್ಮಶಾಪನೆವದಿಂದ ಸತ್ಯಸಂಕಲ್ಪನಾದ ಹರಿಯು ತನ್ನ ಕುಲ ವನ್ನೆಲ್ಲ ಉಪಸಂಹರಿಸಿ, ತಾನೂ ಅಂತರ್ಧಾನವಂ ಪೊಂದಿ ಪೋಗುತ್ತಾ ಇಂತು ಚಿಂತಿಸಿದನು.

ನಾನೂ ಈ ಲೋಕವನ್ನು ಬಿಟ್ಟು ಪೋದನಂತರ ನನ್ನ ದಿವ್ಯ ಜ್ಞಾನೋಪದೇಶವನ್ನು ಮಾಡಲು ಸಮರ್ಥನೆಂದರೆ ಜ್ಞಾನಿವರನಾದ ಉದ್ಧವನೇ. ಅವನ ಭಕ್ತ್ಯಾದಿ ಗುಣಗಳಿಂದ ನಾನೇ ಅವನ ವಶನಾಗಿರುವೆ. ನನಗೆ ಸರಿಹೋಗುವವನೆಂದರೆ ಅವನೇ? ಆದ್ದರಿಂದ ಲೋಕಶಿಕ್ಷಣಕ್ಕಾಗಿ ಮಾರ್ಗದರ್ಶನವನ್ನು ಮಾಡುತ್ತಾ ಉದ್ಧವನು ಉಳಿಯಲಿ! ಎಂದು ಚಿಂತಿಸಿ ಆ ತ್ರಿಲೋಕ ಗುರುವಾಜ್ಞಾಪಿಸಲು ಉದ್ಧವನು ಬದರಿಕಾಶ್ರಮವ ಸೇರಿ ವೇದೈಕವೇದ್ಯನಾದ ಹರಿಯನ್ನು ಅಖಂಡಧ್ಯಾನದಿಂದ ಭಜಿಸಿದನು.

ವಿದುರನಾದರೂ ಉದ್ಧವನ ಮುಖದಿಂದ ಲೀಲಾಗೃಹಿತಮನುಜಶರೀರನಾದ ಪರಮಾತ್ಮನ ಪ್ರಶಂಸನೀಯ ಚರಿತೆಗಳನ್ನು ಕೇಳಿದನು. ಧೀರರ ಧೈರ್ಯವನ್ನು ಬೆಳೆಸುವ ಹರಿಯ ನಿರ್ಯಾಣ ಕಥೆಯನ್ನೂ ಆಕರ್ಣಿಸಿ, ಆ ಕಾಲದಲ್ಲಿ ತನ್ನನ್ನು ಸ್ವಾಮಿಯು ನೆನೆದುದನ್ನಾಲೋಚಿಸಿ ವಿಹ್ವಲವಾಗಿ ರೋದಿಸಿದನು. ಪ್ರೇಮಭರದಿಂದ ಮೈಮರೆತು ಹರಿಯನ್ನು ಚಿಂತಿಸುತ್ತಾ, ಹರಿಭಕ್ತನಾದ ಉದ್ಧವನು ಪೋದಮೇಲೆ ಕಾಳಿಂದೀತೀರವನ್ನು ಪಿಡಿದು ಹೊರಟನು. ಕೆಲದಿನಗಳಲ್ಲಿ ಗಂಗೆಯಂ ಕಂಡು ಪಯಣಿಸಿ ಮೈತ್ರೇಯನಿದ್ದ ಹರಿದ್ವಾರವಂ ಸೇರಿದನು.

## ೫. ವಿದುರ ಮೈತ್ರೇಯ ಸಮಾಗಮ

ಪರೀಕ್ಷಿತನೇ! ಪವಿತ್ರವಾದ ಗಂಗಾದ್ವಾರದಲ್ಲಿ ಕೌರವಶ್ರೇಷ್ಠನೂ, ಜ್ಞಾನಗ್ರಹಣ ಯೋಗ್ಯನೂ, ಶ್ರೀಕೃಷ್ಣಭಕ್ತನೂ, ಶುದ್ಧನೂ ಆದ ವಿದುರನು ಅಗಾಧ ಬೋಧ ಮೈತ್ರೇಯನನ್ನು ಸೇರಿ ತನ್ನ ಸೌಶೀಲ್ಯಾದಿ ಗುಣಗಳಿಂದ ಅವನನ್ನು ಸಂತೋಷಪಡಿಸಿದನು –

ಲೋಕದ ಜನರು ಸುಖವು ಬರಲೆಂದು ಕರ್ಮಗಳನ್ನು ಮಾಡುತ್ತಾರೆ. ಆದರೆ ಆ ಕರ್ಮದಿಂದ ಸುಖವಿಲ್ಲ. ಕರ್ಮಕರಣಕಷ್ಟವೊಂದುಳಿಯುವದಷ್ಟೇ ಅಲ್ಲ ಮತ್ತೆ ದುಃಖವನ್ನೇ ಹೊಂದುತ್ತಾರೆ. ಪೂಜ್ಯನೇ! ಸುಖಪ್ರಾಪ್ತಿ ದುಃಖನಿವೃತ್ತಿಗಳಿಗೆ ಯೋಗ್ಯವಾದ ಉಪಾಯವು ಯಾವದು? ದಯಮಾಡಿ ತಿಳಿಸು. ನಮಗೆ ಜ್ಞಾನವಿಲ್ಲದೆ ಬೋಧಕರೂ ಸಿಗದೆ ಕೃಷ್ಣನಿಂದ

ವಿಮುಖರಾಗಿರುವ ಜನರು ಅಧರ್ಮಗಳನ್ನು ಮಾಡಿ ತತ್ಫಲರೂಪ ದುಃಖವನ್ನು ಪೊಂದಿ ಕಷ್ಟಪಡುತ್ತಿರುವಾಗ ಅವರಿಗೆ ಜ್ಞಾನೋಪದೇಶವನ್ನು ಮಾಡಿ ಅನುಗ್ರಹಿಸಲು ಮಂಗಳಕರರಾದ ಜನಾರ್ದನನ ಭಕ್ತರು ಸಂಚರಿಸುತ್ತಿರುವರಲ್ಲವೇ? ಆದ್ದರಿಂದ ಭಗವಂತನು ಚೆನ್ನಾಗಿ ಪೂಜಿಸಲ್ಪಟ್ಟು ಹೃದಯಪದ್ಮದಲ್ಲಿ ಬಂದು ನೆಲಸಿ, ಭಕ್ತಿಗೆ ಪ್ರಸನ್ನನಾಗಿ, ತನ್ನ ವ್ಯಾಪ್ತಿಗ್ರಾಹಕವೂ ಸಂಪ್ರದಾಯಾಗತವೂ ಆದ ಜ್ಞಾನವನ್ನು ಕೊಡುವ ಶುಭಂಕರ ಮಾರ್ಗವಾವುದು? ಅವನ ಕರ್ಮಗಳಾವುವು! ಅವತಾರವನ್ನು ಮಾಡಿ ದುಷ್ಟಶಿಕ್ಷೆ ಶಿಷ್ಟರಕ್ಷೆಗಳನ್ನು ಮಾಡುವ ಬಗೆ ಹೇಗೆ? ಸ್ವತಂತ್ರನು, ವೇದಪ್ರಧಾನನು, ಅವ್ಯಾಹತ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು ಇದನ್ನು ಸೃಷ್ಟಿಸಿದುದೆಂತು? ಪಾಲನೆಯನ್ನು ಹೇಗೆ ಮಾಡುವನು? ಲಯವನ್ನು ಹೊಂದಿಸುವುದೆಂತು? ಸೃಷ್ಟ್ಯಾದಿಗಳನ್ನು ವಿರಮಿಸಿ ಜಗವನ್ನೆಲ್ಲ ಸ್ವೋದರದಲ್ಲಿಟ್ಟು ಪ್ರಳಯೋದಕದಿ ವಟಪತ್ರಶಯನನಾಗುವನಂತೆ ಅದು ಹೇಗೆ? ಸನಕಾದಿ ಯೋಗಿಜನವಂದ್ಯರಾದ ಬ್ರಹ್ಮಾದಿಗಳಿಗೂ ಸ್ವಾಮಿಯಾದ ಶ್ರೀಹರಿಯು ಪುನಃ ಆ ಜಗವನ್ನು ಸೃಷ್ಟಿಸಿ, ಅದರಲ್ಲನುಪ್ರವಿಷ್ಟನಾಗಿ ಬಹುರೂಪನಾಗುವುದನ್ನು ವಿವರವಾಗಿ ತಿಳಿಸು. ಅವತಾರಗಳಲ್ಲಿ ದ್ವಿಜಗೋಸುರಾದಿ ಸುಜನರಿಗೆ ಕ್ಷೇಮವನ್ನುಂಟುಮಾಡುವ ಸುಶ್ಲೋಕ ಮೌಳಿಯ ಚರಿತಾಮೃತವನ್ನೆಷ್ಟು ಕೇಳಿದರೂ ಮನಸ್ಸಿಗೆ ತೃಪ್ತಿಯಾಗದು. ದೇವಾಸುರ ನರತಿರ್ಯಗಾದಿ ಭೇದದಿಂದ ಪ್ರಖ್ಯಾತ ಸಕಲಭೂತ ನಿಕಾಯನಿಲಯವಾದೀ ಬ್ರಹ್ಮಾಂಡವನ್ನು ಮಹದಾದಿ ತತ್ತ್ವಗಳಿಂದ ರಚಿಸಿ, ಅದರಲ್ಲಿ ಭೂರಾದಿ ಲೋಕಕಲ್ಪನೆಯನ್ನು ಮಾಡಿ, ಸುತ್ತು ಒಂಬತ್ತಾವರಣಂಗಳಿಟ್ಟು, ಲೋಕಪಾಲಕನ್ನೇರ್ಪಡಿಸಿ ಸರ್ವಪ್ರೇರಕನಾಗಿ ವಿಹರಿಸುವ ಹರಿ ಮಹಿಮೆಯನ್ನು ವಿವರಿಸು. ಪ್ರಜರ ದೇಹವೈವಿಧ್ಯ. ಅವರ ವಿವಿಧ ಕರ್ಮ ಸ್ವಭಾವಗಳು, ರೂಪಗಳು, ನಾಮಗಳು ಇವುಗಳನ್ನು ಬ್ರಹ್ಮಜನಕನು ಸ್ವಸಂಭವನು ಆದ ನಾರಾಯಣನು ಮಾಡಿದ ಪ್ರಕಾರವೇನು? ದೇವಮನುಜರಿಗಾಗಿ ಭಗವಂತನು ಮಾಡಿದ ಭಾರತಾದಿಗಳನ್ನು ನಾನು ಬಹು ಸಲ ವ್ಯಾಸರ ಮುಖದಿಂದ ಕೇಳಿರುವೆನಾದರೆ ಕರ್ಣ ಸುಖಾವಹವು ಭವಹರವು ಆದ ಕೃಷ್ಣಕಥಾಮೃತವನ್ನು ಪಾನಮಾಡುವ ನನಗೆ ಸಾಕೆನಿಸಿಲ್ಲ. ಭಾರತಗ ತಾತ್ಪರ್ಯ ಜ್ಞಾನವಿಲ್ಲದವರಿಗೆ ಅದು ಗ್ರಾಮ್ಯಕಥಾಕಲಾಪವೇ ಎನಿಸುವುದು. ಜ್ಞಾನಿಗಳಾದ ತಮ್ಮಂಥವರು ಸತ್ರಯಾಗಗಳಲ್ಲಿ ಗಾನಮಾಡುವ ಕೃಷ್ಣಕಥೆಯು ಯಾವ ರಾಸಜ್ಞನಿಗೆ ಸಾಕೆನಿಸುವುದು? ಶ್ರೀಕೃಷ್ಣನು ಕರ್ಣನಾಡಿಯಿಂದ ಹೃದಯ ಗುಹೆಯನ್ನು ಪೊಕ್ಕು ನೆಲಸಿ ತನ್ನ ಮಹಿಮೆಯನ್ನು ಕೇಳುವವರ ಭಯಪ್ರದವಾದ ಸಂಸಾರ ರತಿಯನ್ನು ಕಡಿದುಬಿಡುವನಲ್ಲವೇ? ವ್ಯಾಸನಾದರೂ ನಿನ್ನ ಸ್ನೇಹಿತನೇ! ಭಾರತವನ್ನು ಪೇಳುವಾಗ ಭಗವದ್ಗುಣಗಳ ವರ್ಣನೆಯನ್ನೇ ಮಾಡಿದ್ದರೂ ಮನುಜರದನ್ನು ಕೌರವ ಪಾಂಡವ ಕಲಹಕಥೆಯೆಂದೆಣಿಸಿ ತಾತ್ಪರ್ಯಭೂತವಾದ ಭಗವದ್ಗುಣ ವರ್ಣನಾಪರವಿದೆಂದು ತಿಳಿಯಲಾರದೆ ಇರುವರು. ತಾತ್ಪರ್ಯಜ್ಞಾನದಿಂದ ಭಾರತವನ್ನಭ್ಯಸಿಸಿದವರಿಗೆ ಹರಿಗುಣಗಳ ರತಿಯುಂಟಾಗದಿರಲಾರದು. ಆ ಶ್ರದ್ಧೆಯಿಂದ ವಿರಕ್ತಿ ಹೆಚ್ಚುವುದು. ವಿಷಯಗಳೂ ದೂರಾಗುವವು. ಕ್ರಮವಾಗಿ ಅಪರೋಕ್ಷಜ್ಞಾನವನ್ನು ಹೊಂದಿ ಸಂತೋಷಭರಿತನಾದವನಿಗೆ ದುಃಖವು ಸಮಸ್ತವು ನಾಶವಾಗುವುದು. ಆದರೂ ಹರಿಕಥೆಯಿಂದ ವಿಮುಖರಾದ ನರರು ವ್ಯಸನಾಕ್ರಾಂತರಾಗಿ ಅಜ್ಞಾನದಲ್ಲಿ ಮಗ್ನರಾಗಿರುವುದನ್ನು ಕಂಡು ಬಹು ವ್ಯಥೆಯಾಗುತ್ತಿದೆ. ಕಾಲನಾಮಕ ಸ್ವಾಮಿಯು ಕಣ್ಣುಮುಚ್ಚದೆ ಪ್ರಮತ್ತರಾಗಿರುವ ಆ ಜನರನ್ನು ನುಂಗಿ ಬಿಡುತ್ತಿರುವನು. ಅವರ ಆಯುಸ್ಸೆಲ್ಲಾ ವೃಥಾ ವಾದಗಳಲ್ಲಿ ಕಳೆದುಹೋಗುವುದನ್ನು ನೋಡಿ ಕರುಣೆಯಿಂದ

ನಿನ್ನನ್ನು ಕೇಳಿಕೊಳ್ಳುತ್ತಿರುವೆನು. ಮಂಗಳಪ್ರಸನಾದ ಹರಿಯ ಪವಿತ್ರ ಚರಿತ್ರೆಯನ್ನು ಪುಷ್ಪಗಳಿಂದ ಮಕರಂದವನ್ನಂತೆ ಉದ್ಧರಿಸಿ ನಮ್ಮ ಶ್ರೇಯಸ್ಸಿದ್ಧಿಗಾಗಿ ನಿರೂಪಿಸು. ಎಲ್ಲ ಕಥೆಗಳಲ್ಲಿ ಶ್ರೇಷ್ಠವಾದುದಾ ಪರಮಪಾವನ ಹರಿಚರಿತೆಯೇ ಸರಿ! ವಿಶ್ವಜನ್ಮ ಸ್ಥಿತಿಲಯಂಗಳ ಮಾಡುವಾಗ ಅವತರಿಸಿ ಶ್ರೀಹರಿಯು ಮಾಡಿದ ಲೋಕೋತ್ತರ ಕರ್ಮಗಳನ್ನು ನನಗೆ ಪೇಳು ಎಂದು ವಿದುರನು ಕೇಳಲು ಪೂಜ್ಯನಾದ ಕೌಷಾರವಿಯು ಸರ್ವಸಜ್ಜನರ ಮೋಕ್ಷಫಲಕ್ಕಾಗಿ ವಿದುರನನ್ನು ಕುರಿತು ಇಂತೆಂದನು.

"ಸಾಧೋ! ವಿದುರ! ಲೋಕಾನುಗ್ರಹವನ್ನು ಮಾಡಲೋಸುಗ ಪ್ರಶ್ನಿಸಿರುವೆ. ಇದರಿಂದ ಲೋಕದಲ್ಲಿ ಹರಿಕೀರ್ತಿಯು ಹರಡುವದು. ನನಗೆ ನಿನಗೆ ಯಶಸ್ಕರವಾದ ಸ್ವಾಮೀ ಅಧೋಕ್ಷಜನ ಕಥಾಕಥನವಂ ಮಾಡುವೆನು.

ಬಾದರಾಯಣಾನುಗ್ರಹದಿಂದ ಪುಟ್ಟಿದ ನಿನ್ನಲ್ಲಿ ಈ ಪ್ರವೃತ್ತಿಯು ಆಶ್ಚರ್ಯಕರವೇನೂ ಅಲ್ಲ. ಸರ್ವೋತ್ತಮತ್ವ ಜ್ಞಾನಪೂರ್ವಕ ಬಹುಮಾನದಿಂದ ಹರಿಯನ್ನು ಸದಾ ಪೂಜಿಸುವ ನೀನೇನು ಸಾಮಾನ್ಯನೇ? ಪ್ರಜಾಸಂಯಮನಾದ ಯಮರಾಜನೇ ಮಾಂಡವ್ಯನ ಶಾಪವನ್ನು ಸ್ವೀಕರಿಸಿ ಸಾತ್ಯವತೇಯನಿಂದ ದಾಸಿಯಲ್ಲಿ ಜನಿಸಿದನಲ್ಲವೇ? ಇಂತಹ ಭಕ್ತನಾದ ನೀನು ಸಾನುಚರನಾದ ಶ್ರೀಕೃಷ್ಣನಿಗತ್ಯಂತ ಸಮ್ಮತನಾಗಿರುವೆ. ವಿದುರಾ! ಆ ಸ್ವಾಮಿಯು ಪರಂಧಾಮವನ್ನೈದುವಾಗ ನಿನ್ನನ್ನು ನೆನೆಸಿದನು. ನಿನಗೆ ಜ್ಞಾನೋಪದೇಶವನ್ನು ಮಾಡುವಂತೆ ನನಗಾಜ್ಞಾಪಿಸಿರುವನು. ಆದ್ದರಿಂದಲೇ ನನ್ನ ಕರ್ತವ್ಯವೆಂದರಿತು ಶ್ರೀಶನ ಜಗಜ್ಜನ್ಮಾದಿ ಕರ್ತೃತ್ವವನ್ನು ಅವನ ಸ್ವರೂಪ ಭೂತ ಮಹಾಯೋಗ ಸಾಮರ್ಥ್ಯದ ಮಹಿಮೆಯನ್ನು ನಿನಗೆ ಕ್ರಮವಾಗಿ ವರ್ಣಿಸುವೆನು"

## ೬. ಮೈತ್ರೇಯಕೃತ ಸೃಷ್ಟಿ, ವರ್ಣನೆ

ಭಗವಂತನೊಬ್ಬನೆ ಪ್ರಳಯದಲ್ಲಿ ಶಶ್ವದೇಕಪ್ರಕಾರನಾಗಿದ್ದನು. ಜೀವರೆಲ್ಲ ಅವನಾಧೀನರಾಗಿ ಉದರದಲ್ಲಿದ್ದರು. ಆ ದಾನಾದಿಕರ್ತನೂ ಲಕ್ಷ್ಮೀಭರ್ತನಾದ ಹರಿಯು ನಾನಾ ಸಾಧನಗಳನ್ನು ನಿಶ್ಶಕ್ತವಾದವಂ ಮಾಡಿಟ್ಟುಕೊಂಡಿದ್ದನು. ಶ್ರೀಹರಿಯ ಇಚ್ಛೆಗೇನೆಂಬೆ! ಆಗ ಜಗತ್ತೆಲ್ಲವೂ ಮೂಲಪ್ರಕೃತಿಯಲ್ಲಿ ಲೀನವಾಗಿತ್ತು. ಕಾಣುತ್ತಿದ್ದಿಲ್ಲ. ತಾನೇತಾನಾಗಿ ರಮೆಯನ್ನು ಅತೀವ ರತಳನ್ನಾಗಿಸಿ ಲೀಲೆಯಿಂದ ಯೋಗನಿದ್ರಾಮುದ್ರಿತನಾಗಿ ಪೂರ್ಣ ಶಕ್ತನಾದರೂ ನಿರ್ವ್ಯಾಪಾರನಾಗಿ ಪ್ರಳಯ ಸಮುದ್ರಶಯನನಾಗಿದ್ದನು. ಆ ಸರ್ವಸಾಕ್ಷಿಯ ಮೂಲಶಕ್ತಿಯಾದ ಜಡ ಪ್ರಕೃತಿಯು ಸತ್, ಅಸತ್ ಎಂದು ಎರಡು ವಿಧವಾಗಿದ್ದು ತನ್ನಲ್ಲಿ ಮಹದಾದಿ ಸರ್ವತತ್ವಗಳನ್ನೊಳಗೊಂಡಿತ್ತು. ಸರ್ವಪ್ರಧಾನನಾದ ವಿಷ್ಣುವೇ ಮಯನು. ಅವನವಳಾದ ಮಾಯೆಯೇ ಶ್ರೀದೇವಿಯು. ಆ ಮಾಯೆಯಿಂದ ಕೂಡಿ ಪ್ರಭುವೀ ಜಡಜಗತ್ತನ್ನು ನಿರ್ಮಿಸಿದನು. ಜಡ ಪ್ರಕೃತ್ಯಭಿಮಾನಿಯಾದ ಮಾಯಾದೇವಿಯಲ್ಲಿ ವಾಸುದೇವನು ಸೃಷ್ಟಿಕಾಲ ಬಂದಾಗ ಎಚ್ಚೆತ್ತು ಮೂಲರೂಪದಿಂದ ಪುರುಷನೆನಿಸಿ, ಅವತರಿಸಿ, ತನ್ನ ಸೃಷ್ಟಿಪರಿಣಾಮಕಾರಿಯಾದ ವೀರ್ಯವನ್ನು ವಿಸೃಜಿಸಿದನು. ಆಗ ಅವ್ಯಕ್ತತತ್ವದಿಂದ ಕಾಲಚೋದಿತವಾಗಿ ಮಹತ್ತತ್ತವವು ಜನಿಸಿತು. ವಿಜ್ಞಾನಾತ್ಮನಾದ ವಿರಿಂಚನಿಗದು ದೇಹವೆನಿಸಿತು. ಲೋಕದಲ್ಲಿ ತಮಸ್ಸನ್ನು ನುಂಗಿದಮೇಲೆ

ಪ್ರಪಂಚದಲ್ಲಿ ಬೆಳಗಾಗಲು ಆ ಮಹತ್ತತ್ತ್ವವು ಜೀವ, ಗುಣ, ಕಾಲಗಳ ಅಭಿಮಾನ ಉಳ್ಳ ಚತುರ್ಮುಖ ಬ್ರಹ್ಮನಿಂದಭಿಮನ್ಯಮಾನವಾಯಿತು. ಆಗ ವಿರಿಂಚನು ಹರಿಕಟಾಕ್ಷ ವೀಕ್ಷಣ ಪಾತ್ರನಾಗಿ, ಮಹತ್ತತ್ತ್ವವನ್ನು ಪ್ರಪಂಚ ಸೃಷ್ಟಿಯನ್ನು ಮಾಡಲೆಣಿಸಿ, ಪರಿಣಾಮೋನ್ಮುಖವನ್ನಾಗಿ ವಿಕಾರಗೊಳಿಸಿದನು. ಅದರಿಂದ ಅಹಂಕಾರತತ್ತ್ವವು, ತದಭಿಮಾನಿ ಗರುಡಾದಿಗಳುದ್ಭವಿಸಿದರು. ಅಹಂತತ್ತ್ವವು ಕಾರ್ಯವೆನಿಸುವ ಶರೀರಕ್ಕೂ, ಕಾರಣವೆನಿಸುವ ಇಂದ್ರಿಯಗಳಿಗೂ, ಕರ್ತನೆನಿಸುವ ಮನಸ್ಸಿಗೂ ಮೂಲಕಾರಣವಾಗಿದೆ. ಅದು ಮೂರು ವಿಧವಾಯಿತು. ವೈಕಾರಿಕಾಹಂಕಾರದಿಂದ ಮನವು, ದೇವದೇಹಗಳು ಪುಟ್ಟಿದವು. ತೈಜಸಾಹಂಕಾರದಿಂದ ಇಂದ್ರಿಯಗಳು ತಾಮಸಾಹಂಕಾರದಿಂದ ಆಕಾಶಾದಿ ಭೂತಗಳು ಪುಟ್ಟಿದವು. ವೈಕಾರಿಕರಾದ ದೇವತೆಗಳು ಇಂದ್ರಿಯ ನಿಯಾಮಕರಾಗಿ ವಿಷಯಜ್ಞಾನ ಭೋಗಕಾರಣರಾಗಿರುವರು. ತೈಜಸೇಂದ್ರಿಯಗಳೆರಡು ವಿಧ- ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು. ತಾಮಸದಿಂದ ಮೊದಲು ಶಬ್ದಗುಣಕವಾದ ಆಕಾಶದ ಉತ್ಪತ್ತಿಯು ಆಗಿ ಅದರಂತೆ ಹರಿಯು ಕಾಣದಿದ್ದರೂ ವ್ಯಾಪ್ತನಾಗಿ ಸರ್ವತ್ರ ಇರುವನೆಂದು ತಿಳಿಯಲು ಪ್ರಮಾಣವೆನಿಸಿತು. ಜೀವಾಭಿಮನಾನೀ ವಿರಿಂಚ, ಕಾಲ, ಕರ್ಮಗಳ ಯೋಗದಿಂದ ಆಕಾಶವು ಭಗವಂತನ ಸೃಷ್ಟೀಚ್ಛಾಗೋಚರವಾಗಲು ತಮೋಗುಣದ ದೆಶೆಯಿಂದ ಹುಟ್ಟಿದ್ದಾದ್ದರಿಂದ ವಿಕಾರಗೊಂಡು ಸ್ಪರ್ಶಗುಣಕವಾದ ವಾಯುತತ್ತ್ವವನ್ನು ಪಡೆಯಿತು: ಆಕಾಶಬಲದಿಂದ ಕೂಡಿ ವಾಯುವು ಕೂಡ ವಿಕಾರವನ್ನು ಹೊಂದಿ ರೂಪತನ್ಮಾತ್ರವಾದ ತೇಜಸ್ತತ್ತ್ವವನ್ನು ಲೋಕಪ್ರಕಾಶಕವಾಗುವಂತೆ ಪಡೆಯಿತು. ಆ ತೇಜಸ್ಸಿನಿಂದ ರಸಮಯವಾದ ಜಲತತ್ತ್ವವು ಪುಟ್ಟಿತು. ಸೃಷ್ಟಿಕಾಲ, ಪ್ರಕೃತಿ, ಜೀವ, ವಿರಿಂಚರಿಂದ ಕೂಡಿದ ಆ ಜಲವು ವಿಕಾರಗೊಂಡು ಭಗವದಿಚ್ಛೆಯಿಂದ ಗಂಧಗುಣಕವಾದ ಪೃಥ್ವೀತತ್ತ್ವವನ್ನು ಪುಟ್ಟಿಸಿತು. ಆಕಾಶಾದಿ ಭೂತಗಳಿಗೆ ತಮ್ಮ ಮೂಲಭೂತ ತತ್ತ್ವಗಳ ಗುಣಗಳು ಕೂಡ ಬಂದವು. ಆಕಾಶವು ಶಬ್ದಗುಣವಾದರೆ ವಾಯುವು ಶಬ್ದಸ್ಪರ್ಶ ಗುಣಗಳ ಪೊಂದಿತು. ಶಬ್ದಸ್ಪರ್ಶ ರೂಪಗಳು ತೇಜೋಗುಣಗಳು. ಶಬ್ದ ಸ್ಪರ್ಶ ರೂಪರಸಗಳು ಅಬ್ಲಕ್ಷಣಗಳು. ಪೃಥಿವಿಯು ಶಬ್ದಸ್ಪರ್ಶ ರೂಪರಸಗಂಧಗಳನ್ನೈದನ್ನೂ ಹೊಂದಿತು.

ಇಂತು ಮಹದಾದಿ ತತ್ತ್ವಗಳ ಅಭಿಮಾನಿಗಳಾಗಿ, ಹರಿಯಿಂದ ನಿಯಮಿಸಲ್ಪಟ್ಟ ತತ್ತ್ವ ದೇವತೆಗಳು, ಆ ಪರಮಾತ್ಮನ ಭಿನ್ನಾಂಶರು. ಕಾಲಾಭಿಮಾನಿ ಜೀವಾಭಿಮಾನಿ ಎಂಬ ಎರಡು ರೂಪದಿಂದ ವಿರಾಜಮಾನನಾದ ವಿರಿಂಚನಿಂದಲೂ ಪ್ರಕೃತಿಯಿಂದಲೂ, ತಮ್ಮ ಶರೀರಗಳನ್ನು ಪೊಂದಿ, ನಾನಾ ರೀತಿಯಾಗಿ ಪ್ರತ್ಯೇಕವಾಗಿದ್ದು ಸಂಶ್ಲೇಷರಾಗದೆ ಬ್ರಹ್ಮಾಂಡವನ್ನು ಸೃಷ್ಟಿಸಲು ಅಸಮರ್ಥರಾಗಿದ್ದರು. ಪ್ರಾಂಜಲಿಪುಟರಾಗಿ ಅವರೆಲ್ಲರೂ ಪ್ರಭುವಾದ ಹರಿಯನ್ನು ಸೃಷ್ಟಿ ಸಾಮರ್ಥ್ಯವನ್ನು ಪೊಂದಲು ಕೋರಿ ಪ್ರಾರ್ಥಿಸಿದರು-

ದೇವ! ಪ್ರಪನ್ನಜನರ ತಾಪವನ್ನು ಕಳೆದುಬಿಡುವ, ಮತ್ತು ಆಶ್ರಯಿಸಿದ ಇಂದ್ರಿಯ ಜಯಶೀಲಿಗಳ ಸಂಸಾರದುಃಖವನ್ನು ದೂರ ಮಾಡುವ ನಿನ್ನ ಪಾದಾರವಿಂದವನ್ನು ವಂದಿಸುವೆವು. ಯಾವ ನಿನ್ನ ಪಾದಚ್ಛಾಯೆಯೇ ಇಲ್ಲದಿದ್ದರೆ ಈ ಸಂಸಾರದಲ್ಲಿ ತಾಪತ್ರಯಪೀಡಿತರಾದ ಜೀವರು ಸುಖಶಾಂತಿಗಳನ್ನು ಪೊಂದಲಾರರೋ ಅಂತಹ ನಿನ್ನ ಪಾದಾರವಿಂದಚ್ಛಾಯೆಯೆನಿಸಿದ ಬ್ರಹ್ಮವಿದ್ಯೆಯನ್ನು ಸ್ವಯೋಗ್ಯತಾನುಸಾರ ಆಶ್ರಯಿಸಿರುವೆವು. ಬ್ರಹ್ಮಾದಿ ಜ್ಞಾನಿಗಳು ತಮ್ಮ ಮುಖಪದ್ಮಗಳೆಂಬ ಗೂಡಿನಲ್ಲಿರುವ ವೇದಗಳೆಂಬುವ ಪಕ್ಷಿಗಳಿಂದ ಏಕಾಂತದಲ್ಲಿದ್ದು ಯಾವ

ನಿನ್ನ ಪಾದಾರವಿಂದವನ್ನು ಹುಡುಕಿ ತಿಳಿಯುವರೋ, ಯಾವ ಪಾದವು ಸಕಲ ದುಃಖನಾಶಕವೋ, ಯಾವ ಪಾದದಲ್ಲಿ ಗಂಗೆಯು ಧರಾದೇವಿಯು ಪುಟ್ಟಿ ಪ್ರಸಿದ್ಧರಾದರೋ ಅಂತಹ ನಿನ್ನ ಪವಿತ್ರ ಪಾದವೇ ಎಮಗೆ ಗತಿ! ಶ್ರದ್ಧೆಯಿಂದ ಶ್ರವಣ ಮಾಡಿ ಭಕ್ತಿಭರದಿಂದ ಪೂತವಾದ ಹೃದಯದಲ್ಲಿ ನಿಂತ ಜ್ಞಾನವನ್ನು ವೈರಾಗ್ಯದಿಂದ ಪಕ್ವಗೊಳಿಸಿ ಧೀರರು ನಿನ್ನ ಪಾದ ಸರೋಜ ಪೀಠವನ್ನು ಕಾಂಬುವರು. ಆ ಜಗಜ್ಜನ್ಮಸ್ಥೇಮ ಪ್ರಳಯ ರಚನಾಶೀಲವಪುಷ್ಕನಾದ ನಿನ್ನ ಪಾದಾರವಿಂದ ವನ್ನು ಸ್ಮರಿಸಲು ಸಾಕು. ಭಕ್ತರು ಅಭಯವನ್ನು ಪೊಂದುವರು. ಹರೇ! ಪುತ್ರಾದಿ ಪರಿಕರಸಹಿತ ದೇಹದಲ್ಲಿ ನಾನೆಂದು ಅಹಂಕಾರವನ್ನು, ಧನಧಾನ್ಯಾದಿ ಸಹಿತವಾದ ಗೇಹದಲ್ಲಿ ನನ್ನದೆಂಬ ಮಮಕಾರವನ್ನೂ ಮಾಡಿ ಅಮಂಗಳಕರವಾದ ದೇಹ ಗೇಹಗಳಲ್ಲಿ ನೆಟ್ಟ ದುರಭಿಮಾನವುಳ್ಳವರಿಗೆ ಅವರ ಹೃದಯದಲ್ಲೇ ಇದ್ದೂ ಗೋಚರವಾಗದೇ ಇರುವ ನಿನ್ನ ಪಾದಾಬ್ಜವನ್ನು ಭಜಿಸುವೆವು. ಅಂತಸ್ಥನಾದ ಪರೇಶನಾದ ನಿನ್ನಿಂದ ದೂರರಾಗಿ ನಿನ್ನನ್ನು ಕಾಣದಿರಲು ಕೆಟ್ಟ ವಿಷಯಂಗಳ ಬೆನ್ನಟ್ಟಿ ತಿರುಗುವ ದುಷ್ಟೇಂದ್ರಿಯಗಳೇ ಕಾರಣ. ಇಂತು ನಿನ್ನ ಪಾದಪದ್ಮವಿಲಾಸ ಲಕ್ಷ್ಮಿಯನ್ನು ಕಾಣದೇ ಕುಜನರು ಕೇಡುವರು. ಆದರೆ ದೇವಾ! ನಿನ್ನ ಕಥಾಪೀಯೂಷ ಪಾನದಿಂದ ಪ್ರವೃದ್ಧವಾದ ಭಕ್ತಿಭಾಗ್ಯವನ್ನು ಪೊಂದಿ ನಿರ್ಮಲ ಮನಸ್ಕರು ವೈರಾಗ್ಯಸಹಕೃತ ಜ್ಞಾನದಿಂದ ಅಕುಂಠ ಮಹಿಮನಾದ ನಿನ್ನ ಪ್ರಸಾದಪಾತ್ರರಾಗುವರು. ವೇದಾಂತಶಾಸ್ತ್ರ ಶ್ರವಣಾದಿ ಲಕ್ಷಣೋಪಾಸನೆ ಯನ್ನು ಮಾಡಿ ಮುಕ್ತರಾಗುವರು. ಆದರೆ ಮತ್ತೆ ಕೆಲವರು ಧೀರರು ಸಮಾಧಿಯೋಗ ಬಲದಿಂದ ಚಿತ್ತೈಕಾಗ್ರತೆಯನ್ನು ಸಾಧಿಸಿ ಬಂಧಕಶಕ್ತಿಯನ್ನು ನಿನ್ನನುಗ್ರಹದಿಂದ ಗೆದ್ದು, ನಿನ್ನನ್ನೇ ಪೊಂದಿ ಸುಖಿಪರು. ನಿನ್ನ ಶ್ರವಣಾದಿರೂಪ ಸೇವೆಯೇ ಸುಲಭವು. ಕೇವಲ ಯೋಗದಿಂದ ನಿನ್ನ ಪೊಂದುವದು ಶ್ರಮಸಾಧ್ಯವೇ ಸರಿ! ಸ್ವಾಮಿನ್! ನೀನೆಮ್ಮನ್ನು ಲೋಕಸೃಷ್ಟಿ ಮಾಡಲು ಸೃಜಿಸಿದೆ. ಕಾಲ, ಪ್ರಕೃತಿ, ಜೀವ ಎಂಬ ವಿರಿಂಚರಮಾದೇವಿಯರಿಂದ ಸೃಷ್ಟವಾದ ದೇಹಾಂತಸ್ಥಿತರಾದ ನಾವು ಮಿಳಿತರಾಗದೆ ಇರುವ ಕಾರಣದಿಂದ ನಮ್ಮ ನಮ್ಮ ವ್ಯಾಪಾರವನ್ನು ಮಾಡಿ ನಿನ್ನ ಕ್ರೀಡಾಂಗಣವಾದ ಬ್ರಹ್ಮಾಂಡವನ್ನು ಸೃಜಿಸಲಾಗದೇ ಇರುವೆವು. ನೀನೇ ಎಮ್ಮ ತಂದೆ ನಮ್ಮ ಸಂತತಿಗೂ ನೀನೇ ಜನಕನಾಗಿರುವೆ. ಆದರೂ ನಿರ್ವಿಕಾರನಾಗಿ ಕೂಟಸ್ಥನೆನಿಸಿರುವೆ. ಪುರಾಣ ಪುರುಷನಾದ ನೀನು ನಿನ್ನಧೀನಳಾದ ಜನ್ಮರಹಿತಳಾದ ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀ ದೇವಿಯಲ್ಲಿ ರೇತೋಧಾನವಂ ಮಾಡಿದೆ. ಸರ್ವಜ್ಞನೂ, ಜನ್ಮರಹಿತನೂ ಆದ ನಾರಾಯಣನೇ! ಸತ್ವಾದಿ ಗುಣಗಳಿಗೂ ಕರ್ಮಫಲಗಳಿಗೂ ಕಾರಣಳಾದ ಲಕ್ಷ್ಮೀದೇವಿಯಲ್ಲಿ ಮುಖ್ಯಪ್ರಾಣನೇ ಮೊದಲಾದ ನಾವೆಲ್ಲ ಜನಿಸಿರುವೆವು. ಈಗ ಏನು ಪ್ರಯೋಜನ ನಮ್ಮಿಂದ? ನಿನ್ನ ಸೇವೆಯ ನ್ನೆಂತು ಮಾಡುವೆವು? ಯಾವ ಬ್ರಹ್ಮಾಂಡನಿರ್ಮಾಣ ಕಾರ್ಯದಲ್ಲಿ ಅಸ್ವತಂತ್ರರಾದ ನಾವು ಅಶಕ್ತರಾಗಿರುವೆವೋ ಆ ಕಾರ್ಯವನ್ನು ಮಾಡಿ ನಿನ್ನ ಸೇವಿಪ ಜ್ಞಾನವನ್ನೂ ಶಕ್ತಿಯನ್ನೂ ದಯಪಾಲಿಸು. ಹರೇ! ನಿನಗೆ ನಮಸ್ಕಾರವು.

## ೬. ಬ್ರಹ್ಮಾಂಡ ಸೃಷ್ಟಿ

ಇಂತು ತನ್ನವರಾದ ಭಕ್ತರಾಗ ತತ್ತ್ವದೇವತೆಗಳ ವಚನವನ್ನು ಕೇಳಿ ಲೋಕಸೃಷ್ಟ್ಯುಪಕರಣರೇ ಆದರೂ ತತ್ತಚ್ಛಕ್ತಿಯ ಆವಿರ್ಭಾವವಿಲ್ಲದೆ ಇರುವ ಅಸ್ವತಂತ್ರರಾದ ಆ ಇಪ್ಪತ್ತುಮೂರು ತತ್ವಗೇವತೆಗಳಲ್ಲಿ ಒಂದೇ ಸಲ ಕಾಲನಿಯಾಮಕಳಾದ ಶ್ರೀದೇವಿಯಿಂದೊಡಗೂಡಿ ಇಪ್ಪತ್ತು ಮೂರು ರೂಪಗಳಿಂದ ಉರುಕ್ರಮನಾದ ಶ್ರೀಹರಿಯು ಸ್ವೇಚ್ಛೆಯಿಂದ ಪ್ರವೇಶಿಸಿದನು. ವಿಶಿಷ್ಟ ವಾದ ತತ್ತ್ವಗಣವನ್ನು ಮಿಲನಮಾಡಿ ಪ್ರೇರಕನಾದ ಶ್ರೀಹರಿಯು ಕಾರ್ಯಸಮರ್ಥವನ್ನಾಗಿ ಮಾಡಿದನು. ಅದೃಷ್ಟಪ್ರೇರಕ ಹರಿಯ ಪ್ರೇರಣೆಯಿಂದ ಆ ತತ್ತ್ವದೇವರು ತಮ್ಮ ಗುಣಗಳ ಮಿಲನ ಮಾಡಿ ಬ್ರಹ್ಮಾಂಡವನ್ನು ಸೃಜಿಸಿದರು. ಆಗ ತತ್ತ್ವಸಮೂಹವು ಬ್ರಹ್ಮಾಂಡಾಕಾರವಾಗಿ ವಿಕಾರವನ್ನು ಹೊಂದಿತು. ಅದರಲ್ಲಿ ಚರಾಚರ ಲೋಕಗಳು ಉತ್ಪನ್ನವಾದವು.

ಜ್ಞಾನಾನಂದಸ್ವರೂಪನಾದ ಪುರುಷನಾಮಕ ಹರಿಯು ಎಲ್ಲ ನಿರ್ದೇಹಜೀವರನ್ನು ತನ್ನಲ್ಲಿಟ್ಟುಕೊಂಡು ಒಂದು ಸಾವಿರ ವರ್ಷ ಬ್ರಹ್ಮಾಂಡಾಂತಸ್ಥೋದಕದಲ್ಲಿ ಶೇಷಪರ್ಯಂಕದಲ್ಲಿ ಶಯಿತನಾಗಿದ್ದನು. ಆ ಸರ್ವದೇವಾಂತರ್ಯಾಮಿಯು ಬ್ರಹ್ಮಾದಿದೇವರಿಂದಲೂ ತತ್ತದನಾದಿ ಕರ್ಮಗಳಿಂದಲೂ, ಪ್ರಕೃತಿಯಿಂದಲೂ, ಸುಖದುಃಖಭೋಗಸಾಧನವಾದ ವಿವಿಧ ಶರೀರ ಕಾರಣ ಗಳಿಂದಲೂ ಯುಕ್ತನಾಗಿದ್ದನು. ತನ್ನನ್ನು ನಾನೇ ಬೇಕಾದಾಗ ಸ್ವೇಚ್ಛೆಯಿಂದ ಬ್ರಹ್ಮದೇವನ ವಿರಾಟ್ ಎಂಬ ದೇಹವನ್ನು ಪ್ರವೇಶಿಸಿ ಒಂದು, ಹತ್ತು, ಮೂರು ರೂಪಗಳಿಂದ ಅಲ್ಲಿ ಬಹುಕಾರ್ಯಪ್ರೇರಕನಾಗಿ ಭಾಗಿಸಿಕೊಂಡು ನಿಂತನು. ಆ ಪರಮಾತ್ಮನ ಅಂಶನಾದ ಪುರುಷನೇ ಮೊದಲನೆಯ ಅವತಾರವು. ಈ ಸ್ವಾಮಿಯನ್ನು ಆಶ್ರಯಿಸಿ ಸಕಲ ಭೂತಜಾಲವಿರುವದು. ಬ್ರಹ್ಮನ ವಿರಾಟ್ ದೇಹೇಂದ್ರಿಯಾದಿ ನಿಯಾಮಕನಾದ ಪುರುಷನು ಸಾಧ್ಯಾತ್ಮ, ಸಾಧಿದೈವ ಸಾಧಿಭೂತನೆಂದು ಜೀವ, ಶರೀರ, ತತ್ತ್ವದೇವ, ಭೂತಗಳಲ್ಲಿ ಅಂತರ್ಯಾಮಿಯಾಗಿ ಮೂರು ವಿಧನಾಗಿರುವನು. ಈ ರೂಪಗಳು ನಿತ್ಯವು. ವಿಶೇಷ ರಾಜಮಾನನಾದ್ದರಿಂದ 'ವಿರಾಟ್' ನಾಮಕ ಹರಿಯು ದಶೇಂದ್ರಿಯಗಳಲ್ಲಿ ದಶರೂಪನಾಗಿ ಬ್ರಹ್ಮಾಂತರ್ಯಾಮಿಯಾಗಿಯೂ ಇದ್ದು ಪ್ರಕೃಷ್ಟ ಚೇಷ್ಟಕನಾದ್ದರಿಂದ ಪ್ರಾಣನೆನಿಸಿದನು. ಏಕರೂಪದಿಂದ ಬ್ರಹ್ಮಹೃದಯವನ್ನು ಪ್ರವೇಶಿಸಿದನು. ಆಮೇಲೆ ತತ್ತ್ವದೇವರ ಪ್ರಾರ್ಥನೆಯನ್ನು ಮನಸ್ಸಿಗೆ ತಂದು ಆ ಬ್ರಹ್ಮನ ವಿರಾಟ್ ಶರೀರವನ್ನು ಪ್ರವೇಶಿಸಿ ತನ್ನ ತೇಜದಿಂದ ನೀರನ್ನು ಒಣಗಿಸಿ ಬ್ರಹ್ಮಾಂಡದಲ್ಲಿ ಅವಕಾಶವನ್ನುಂಟುಮಾಡಿದನು. ಆಗ ದೇವತೆಗಳ ಅಧಿಷ್ಠಾನಗಳಾದ ಕೆಲವು ಅವಕಾಶಗಳಾದವು. ಅವನ್ನು ಹೇಳುವೆ ಕೇಳು–ಮಾತಾಡಲು ಹೊರಟ ಬ್ರಹ್ಮಾಂತರ್ಯಾಮಿಯ ಮುಖವು ಮೊದಲೇರ್ಪಟ್ಟಿತು. ಅದನ್ನು ಅಗ್ನಿ ವಾಕ್ ವ್ಯಾಪಾರದಿಂದ ಕೂಡಿ ಪ್ರವೇಶಿಸಿ ಆಶ್ರಯಿಸಿದನು. ತಾಲುವನ್ನು ವರುಣನು ಜಿಹ್ವಾಂಶದಿಂದ ಪೊಕ್ಕು ರಸಗಳನ್ನು ಹರಿಗರ್ಪಿಸಿದನು. ನಾಸಿಕೆಗಳಲ್ಲಿ ಅಶ್ವಿನೀ ದೇವದ್ವಯವು ಪ್ರವೇಶಿಸಿ ಘ್ರಾಣೇಂದ್ರಿಯದಿಂದ ಗಂಧವನ್ನು ತಂದುಕೊಟ್ಟರು. ಕಣ್ಣುಗಳಲ್ಲಿ ಸೂರ್ಯನು ಪ್ರವೇಶಿಸಿ ಚಕ್ಷುರಿಂದ್ರಿಯದಿಂದ ರೂಪವನ್ನೊದಗಿಸಿದನು. ಚರ್ಮದಲ್ಲಿ ಅಹಂಕಾರಿಕ ಪ್ರಾಣನು ಸೇರಿ ಪ್ರಾಣೇಂದ್ರಿಯಗಳಿಂದ ಸ್ಪರ್ಶವನ್ನು ತಿಳಿಸಿದನು. ಕಿವಿಗಳು ನಿರ್ಭಿನ್ನವಾಗಲು ಸೋಮಾದಿ ದಿಗ್ದೇವತೆಗಳಲ್ಲಿ ಪ್ರವೇಶಿಸಿ ಶ್ರೋತ್ರೇಂದ್ರಿಯದಿಂದ ಶಬ್ದವನ್ನು ಪೂರೈಸಿದರು. ತ್ವಗಿಂದ್ರಿಯದಲ್ಲಿ ಓಷಧ್ಯಭಿಮಾನಿಗಳು ಪೊಕ್ಕು ರೋಮಗಳಿಂದ ಕಂಡೂತ್ಯಾದಿಗಳನ್ನು

ತಿಳಿಸಿ ವಿಜ್ಞಾಪಿಸಿದರು. ಮೇಢ್ರದಲ್ಲಿ ದಕ್ಷನು ಪ್ರವೇಶಿಸಿ ರೇತೋಂಶದಿಂದ ಉಪಸ್ಥವೆಂಬ ಇಂದ್ರಿಯವಲ್ಲಿ ಆನಂದವನ್ನರ್ಪಿಸಿದನು. ಗುದೇಂದ್ರಿಯವು ವಿರಾಟ್ ದೇಹದಲ್ಲಿ ನಿರ್ಭಿನ್ನವಾಗಲು ಮಿತ್ರನು ಪ್ರವೇಶಿಸಿ ಪಾಯು ಎಂಬ ಇಂದ್ರಿಯದಿಂದ ವಿಸರ್ಜನವಂ ಮಾಡಿ ಹರಿಸೇವೆಗೈದನು. ಕೈಗಳು ಪುಟ್ಟಲು ಸ್ವರ್ಗಪತಿ ಇಂದ್ರನು ಪ್ರವೇಶಿಸಿ ಹಸ್ತೇಂದ್ರಿಯಗಳಿಂದ ವಾರ್ತೆಯನ್ನು ನಡಿಸಿ ವೃತ್ತಿಯನ್ನು ಕಲ್ಪಿಸಿದನು. ಪಾದಗಳಲ್ಲಿ ಜಯಂತನು ಪ್ರವೇಶಿಸಿ ಪಾದೇಂದ್ರಿಯದಿಂದ ಗತಿಯನ್ನು ಕೊಟ್ಟನು. ಅವನಲ್ಲಿ ಅಂತರ್ಯಾಮಿಯಾಗಿ ಯಜ್ಞನಾಮಕ ಹರಿಯು ಹೆಬ್ಬೆರಳ ಮೂಲದಲ್ಲಿ ನಿಂತು ಸರ್ವಾಧಾರನಾಗಿ ವಿರಾಜಿಸಿದನು.

ಹೃದಯವೇರ್ಪಡಲು ಚಂದ್ರನು ಪ್ರವೇಶಿಸಿ ಮನೋನಾಮಕೇಂದ್ರಿಯದಿಂದ ವಿಕಾರ ಸಂಕಲ್ಪಗಳನ್ನು ಪೊಂದಿದನು. ನಾಡಿಗಳು ಪುಟ್ಟಲು ಬೃಹಸ್ಪತಿ ಪೊಕ್ಕು ಬುದ್ಧೀಂದ್ರಿಯದಿಂದ ಹರಿನಿಯತ ಬ್ರಹ್ಮನಿಗೆ ನಿಶ್ಚಯಜ್ಞಾನವನ್ನು ಸಮರ್ಪಿಸಿದನು. ಬ್ರಹ್ಮನಾಡಿಯಲ್ಲಿ ನಿಶ್ಚಯಜ್ಞಾನವು ಬ್ರಹ್ಮನ ಅಧೀನವಾದಂತೆ ಅಹಂನಾಡಿಯಲ್ಲಿ ಕರ್ತೃತ್ವಜ್ಞಾನವು ಕೂಡ ಬ್ರಹ್ಮಾಧೀನವಾಗಿದೆ. ಆ ನಾಡಿಯಲ್ಲಿ ಹರನು ಪ್ರವೇಶಿಸಿ ಕರ್ತವ್ಯಕಾರ್ಯವನ್ನು ಕರ್ತನೆನಿಸಿ ಮಾಡಿ ಹರಿಗೆ ಸಮರ್ಪಿಸಿದನು. ಸತ್ತ್ವನಾಡಿಯಲ್ಲಿ ಚಿತ್ತಾಂಶದಿಂದ ಬ್ರಹ್ಮನು ಪ್ರವೇಶಿಸಿ ವಿಜ್ಞಾನವನ್ನು ಪೊಂದಿದನು. ವಿರಾಟನ ತಲೆಯಿಂದ ದ್ಯುಲೋಕವು, ಪಾದಗಳಿಂದ ಭೂಲೋಕವು, ನಾಭಿಯಿಂದ ಆಕಾಶವು ಪುಟ್ಟಿದವು. ಅಲ್ಲಿರುವ ಪ್ರಾಣಿಗಳು, ಸುರಾಸುರಾದಿಗಳು ಗುಣಾನುಸಾರವಾಗಿ ಸುಖವನ್ನು, ಕರ್ಮವನ್ನು, ಪ್ರಸಾದವನ್ನು ಲಕ್ಷಣವಾಗಿ ಉಳ್ಳವರಾಗಿರುವರು. ಅದೆಂಥದೆಂದರೆ ಸ್ವಾಭಾವಿಕ ಸಾತ್ತ್ವಿಕರಾದ ದೇವತೆಗಳು ದೇವಲೋಕವನ್ನು, ರಾಜಸರಾದ ಮನುಜರು ಹಾನೋಪಾದಾನವ್ಯವಹಾರ ಉಳ್ಳವರಾಗಿ ಭೂಲೋಕವನ್ನು, ತಾಮಸರಾದ ಅಸುರರುದ್ರಪಾರ್ಶದ ಗಣಂಗಳು ದ್ಯಾವಾ ಪೃಥಿವಿಗಳ ಮಧ್ಯದಲ್ಲಿರುವ ಅಂತರಿಕ್ಷವನ್ನು ಪೊಂದಿದರು.

ಬ್ರಹ್ಮಾಂತರ್ಯಾಮಿ ಪುರುಷನ ಮುಖದಿಂದ ಬ್ರಾಹ್ಮಣವರ್ಣವು ತದಭಿಮಾನಿ ಭೃಗು ಪುಟ್ಟಿದರು. ಹರಿಯಲ್ಲಿ ಉನ್ಮುಖನಾಗಿ ತತ್ತ್ವಜ್ಞಾನದಾನದಿಂದ ಅಜ್ಞಾನದೋಷನಿಗರಣ ಮಾಡುವುದರಿಂದ ಬ್ರಾಹ್ಮಣನು ವರ್ಣಗಳಿಗೆಲ್ಲ ಗುರುವೆನಿಸಿದನು. ಬಾಹೂಗಳಿಂದ ಕ್ಷತ್ರವರ್ಣವು ತದಭಿಮಾನಿ ಮನುರಾಜನು ಪುಟ್ಟಿದನು. ಇತರ ವರ್ಣದವರನ್ನು, ಶತ್ರುಗಳಿಂವ ಕಾಪಾಡುವುದೀ ವೀರರ ಧರ್ಮವಾಯಿತು. ತೊಡೆಗಳಿಂದ ವೈಶ್ಯವರ್ಣವು ತದಭಿಮಾನಿ ವಾಸ್ತು ವಾಯುಗಳು ಪುಟ್ಟಿ ಕೃಷಿ, ಗೋರಕ್ಷಾ, ವಾಣಿಜ್ಯವೃತ್ತಿಯಿಂವ ಲೋಕಜೀವನಕರರಾದರು. ಶುಶ್ರೂಷಾಕರ್ಮಕ್ಕಾಗಿ ಪುರುಷನ ಪಾದಗಳಿಂದ ಶೂದ್ರ ವರ್ಣವು ತದಭಿಮಾನಿ ಕೃತಿಯು ಪುಟ್ಟಿ ಹರಿಯನ್ನು ಸೇವಿಸಿ ಸಂತೋಷಪಡಿಸಿತು. ಇದು ಆದಿ ಸೃಷ್ಟಿಯಲ್ಲಾದುದು. ವಿದುರ! ನಾನಾ ವರ್ಣದ ಜನರು ತಮ್ಮ ತಮ್ಮ ಸ್ವಧರ್ಮದಿಂದ ಸರ್ವಲೋಕಗುರುವಾದ ನಾರಾಯಣನನ್ನು ಪೂಜಿಸಿ ಶ್ರದ್ಧೆಯಿಂದ ಭಜಿಸಿ ತಮ್ಮ ಸ್ವಭಾವಕ್ಕನುಸರಿಸಿದ ವೃತ್ತಿಗಳನ್ನವಲಂಬಿಸಿ ಪೂತರಾಗಿ ಮುಕ್ತಿಯನ್ನು ಪಡೆಯುವರು.

ಇಂತು ಭಗವಂತನು ಅತೀತಾನಾಗತ ವರ್ತಮಾನಾನಂತ ಬ್ರಹ್ಮಾಂಡ ನಿರ್ಮಾತೃನಾಗಿರುವನು. ದೇವತೆಗಳಲ್ಲಧಿಕನಾದ್ದರಿಂದ ದೈವವೆನಿಸಿ, ಸರ್ವಮೂಲಕಾರಣನಾದ್ದರಿಂದ ಕರ್ಮನೆನಿಸಿ, ವ್ಯಾಪ್ತನಾದ್ದರಿಂಗ ಆತ್ಮನೆನಿಸಿರುವನು. ಅವನ ಸ್ವರೂಪಭೂತ ಮಹಿಮೆಯು ಅನಂತವಾಗಿದೆ. ಅದನ್ನು ಪುರುಷಾಯುಷದಿಂದಲೂ ಎಣಿಸಿ ಮುಗಿಸಲಾಗುವದಿಲ್ಲ. ಆದರೂ ಯಥಾಮತಿ

ನಾನಧ್ಯಯನ ಮಾಡಿದಂತೆ ಹರಿಕೀರ್ತಿಯ ವರ್ಣಿಸಿ ಲೋಕವಾರ್ತಾದುಷ್ಟವಾದೀ ನನ್ನ ವಾಣಿಯನ್ನು ಪವಿತ್ರಗೊಳಿಸುವೆನು. ಭಗವನ್ಮಹಿಮೆಯನ್ನು ವರ್ಣಿಸುವ ಸಾಮರ್ಥ್ಯವಿಲ್ಲವಾದರೂ ಸ್ವಪ್ರಯೋಜನವಿದೆ; ಆದಕಾರಣ ಪೇಳುತ್ತಿರುವೆನು. ಪುರುಷನಿಗೆ ವಾಗಿಂದ್ರಿಯವಿದ್ದುದರ ಅವ್ಯಭಿಚರಿತ ಪುರುಷಾರ್ಥಫಲವು ಸುಶ್ಲೋಕಶಿಖಾಮಣಿಯ ಚರಿತೆಯನ್ನು ಭಕ್ತಿಯಿಂದ ಪೇಳುವುದೇ ಆಗಿದೆ. ಶ್ರವಣೇಂದ್ರಿಯದ ಫಲವಾದರೂ ಜ್ಞಾನಿಗಳು ವ್ಯಾಖ್ಯಾನ ಮಾಡುವಾಗ ಶ್ರೀಹರಿಕಥಾ ಸುಧಾಪಾನವೇ ಹೊರತನ್ಯವಲ್ಲ. ಚಕ್ಷುರಾದಿಗಳು ಅವನನ್ನು ಸೇವಿಸಿದರೇನೆ ಚರಿತಾರ್ಥವಾಗುವುವು. ಆದಿಕವಿಯಾದ ವಿರಿಂಚನು ಸಾವಿರ ವರ್ಷ ಕಾಲ ಶಮದಮಾದ್ಯುಪಾಯಗಳಿಂದ ಪರಿಪಕ್ವವೂ ಸಕಲಶಾಸ್ತ್ರಾರ್ಥಾವಧಾರಣ ಸಮರ್ಥವಾದ ಬುದ್ಧಿಯಿಂದ ಆಶ್ರಯಿಸಿ ಪರಮಾತ್ಮನ ಪರೋಕ್ಷ ಜ್ಞಾನವಂ ಪೊಂದಿದನೆಂದ ಮೇಲೆ ಆ ಸ್ವಾಮಿಯ ನುಹಿಮೆ ಜ್ಞಾನಿಗಳಿಗೂ ಬುದ್ಧಿಭ್ರಂಶಕರವಾಗಿದೆ. ಆ ವಿರಿಂಚನು ಕೂಡ ಸಾಕಲ್ಯೇನ ತಿಳಿದಿಲ್ಲ. ಪರಮಾತ್ಮ ಜ್ಞಾನೋಪದೇಶಕಾಚಾರ್ಯನಾದ ಬ್ರಹ್ಮನು ಕೂಡ ಸಾಕಲ್ಯೇನ ತಿಳಿದಿಲ್ಲವೆಂದ ಮೇಲೆ ನಮ್ಮಂತಹರೇನು ತಿಳಿಯುವೆವು? ಅನಂತ ವೇದಾಭಿಮಾನಿ ಲಕ್ಷ್ಮಿಯು ಅನಂತರೂಪಗಳಿಂದ ಕೂಡಿ ಅನಾದಿಕಾಲದಿಂದ ಮನಸಾ ಗುಣಗಣವನ್ನೆಣಿಸುತ್ತಾ ಅದ್ಯಾಪಿ ಕೊನೆಕಂಡಿಲ್ಲ. ಕೊನೆಗಾಣಲು ಸಾಧ್ಯವೇ ಇಲ್ಲವೆಂದು ತಿಳಿದು ನಿತ್ಯ ಪರಿಚಿತ ಗುಣವರ್ಣನೆಯಿಂದಲೇ ಆನಂದಪಡುವಳು. ಅಂದಮೇಲೆ ಅಹಂ ತತ್ತ್ವಮಾನಿ ರುದ್ರಾದಿಗಳೂ ಅನ್ಯದೇವರಾದ ಇಂದ್ರಾದಿಗಳೂ ಅವನ ಮಹಿಮೆಯ ಕೊನೆ ಕಂಡಿಲ್ಲವೆಂದು ಹೇಳಬೇಕೇ? ಇಂತಹ ಅನಂತಗುಣಪೂರ್ಣನಾದ ಶ್ರೀಹರಿಗೆ ನಮಸ್ಕರಿಸುತ್ತಿರುವೆನು.

## ೮. ಹರಿಯ ಜೀವ ವೈಲಕ್ಷಣ್ಯ – ವಿದುರಪ್ರಶ್ನೆ

ಶ್ರೀಶುಕನು ಪೇಳಿದನು–

ಈ ರೀತಿಯಾಗಿ ಮೈತ್ರೇಯನು ಹರಿಮಹಿಮೆಯನ್ನು ವರ್ಣಿಸಲು ಕೇಳಿ ಆನಂದಿಸಿ ದ್ವೈಪಾಯನಸುತನಾದ ವಿದುರನು, ಪ್ರೀತಿಯಿಂದ ಮುಖ್ಯಪ್ರಾಣಪ್ರಿಯಳಾದ ಭಾರತಿಯು ಪ್ರೇರಿಸಿದಂತೆ ಇಂತು ಪ್ರಶ್ನಿಸಿದನು–

ಬ್ರಹ್ಮಜ್ಞಾನಿಯೇ! ಕಾಲದಲ್ಲಿ ಮಾಯೆಯನ್ನು ಕೂಡಿ ಗುಣತ್ರಯಾತ್ಮಕ ಸೃಷ್ಟಿಯನ್ನು ಶ್ರೀಹರಿಯು ಮಾಡಿದನೆಂದು ಪೇಳಿದೆ. ಜ್ಞಾನಾನಂದ ಶರೀರನಾದ, ನಿರ್ವಿಕಾರನಾದ, ಗುಣತ್ರಯಲೇಪರಹಿತನಾದ ಪರಮಪುರುಷನಿಗೆ ಸತ್ತ್ವಾದಿಗುಣ ಸ್ವೀಕಾರವು ಹೇಗೆ? ಸೃಷ್ಟ್ಯಾದಿಕರ್ಮವನ್ನೇಕೆ ಮಾಡಿದನು? ಲೀಲೆ ಎಂದರೆ: ಯಾರಾದರೂ ಲೀಲೆಗೆಂದು ಮುಳನ್ನು ತುಳಿವರೇ? ಇಲ್ಲ. ಅಂದಮೇಲೆ ಸೃಷ್ಟ್ಯಾದಿಗಳು ಗುಣಸ್ವೀಕಾರಗಳು ಅವನಿಗೆ ಹೇಗೆ ಸಂಭವಿಸುವವು? ಸೃಷ್ಟಿಮಾಡುವದು ಲೀಲೆ ಎಂದರೆ ಲೀಲೆಯಿಂದ ಸುಖವು ಆಗುವುದಿಲ್ಲವೇ? ಆ ಸುಖವು ಮೊದಲಿಲ್ಲದ್ದರಿಂದ ಅಪೂರ್ಣಸುಖವಾಗಬೇಕಾದೀತು! ಕ್ರೀಡೆಯು ಸ್ವಸಮಾನ ಪುರುಷಾಂತರಾಪೇಕ್ಷಕವಾಗಿದೆ. ಸ್ವತಃ ಅಸಮಾನಾಧಿಕನಾದ ಸ್ವಾಮಿಗೆ ಕ್ರೀಡೆ ಮಾಡಲು ಇನ್ನೊಬ್ಬರು ಬೇಕೆಂಬ ಇಚ್ಛೆಯೇ ಹುಟ್ಟಲಾರದು. ಮತ್ತು ಇನ್ನೊಂದರಲ್ಲಿ ಅರತಿಯಿಂದ ಕ್ರೀಡೇಚ್ಛೆಯೆಂದರೆ ಶಬ್ದಾದಿವಿಷಯನಿಮಿತ್ತ ತೃಪ್ತಿಯನ್ನು ಬಿಟ್ಟು ದೂರ ಮಾಡಿ ಸ್ವಭಾವ

ದಿಂದಲೇ ಆನಂದಸಮುದ್ರಮಗ್ನನಾಗಿ ಆನಂದರೂಪನಾದ ಹರಿಗೆ ಆರತಿ ಎಲ್ಲಿಂದ ಬರಬೇಕು? ಅಂತು ಕ್ರೀಡೆಯಿಂದ ಎಂದರೂ ಹರಿಗೆ ಪ್ರಕೃತಿ ಸಂಬಂಧವು ಘಟಿಸುವದಿಲ್ಲ. ಆದರೂ ಭಗವಂತನು ಸ್ವಾಧೀನಪ್ರಕೃತಿಯಿಂದ ಕೂಡಿ ರಜಸ್ಸಿನಿಂದ ಸೃಷ್ಟಿಯನ್ನೂ ಸತ್ವದಿಂದ ಸ್ಥಿತಿಯನ್ನೂ ತಮಸ್ಸಿನಿಂದ ಲಯವನ್ನೂ ಮಾಡುವವನೆಂದು ನೀನೇ ಹೇಳಿರುವೆ! ಅದು ಹೇಗೆ?

ಇನ್ನೊಂದು ಸಂಶಯವಿದೆ. ಕೇಳು! ದೇಶದಿಂದಲೂ, ಕಾಲದಿಂದಲೂ, ಜಾಗ್ರದಾದ್ಯವಸ್ಥೆಗಳಿಂದಲೂ, ತನ್ನಿಂದಾಗಲಿ, ಪರರಿಂದಾಗಲಿ, ಲೋಪವಾಗದ ನಿತ್ಯಜ್ಞಾನದೇಹನಲ್ಲವೇ ಹರಿ! ಅಂತಹವನಿಗೆ ಪ್ರಕೃತಿಸಂಬಂಧವೇ ಕೂಡುವುದಿಲ್ಲ.

ಭಗವಂತನು ಸರ್ವಕ್ಷೇತ್ರಗಳಲ್ಲಿ ನೆಲಸಿಹನು ಸರಿ. ಶರೀರದಲ್ಲಿರುವ ದೇವದತ್ತಾದಿಗಳಿಗೆ ಐಶ್ವರ್ಯಾದಿ ಗುಣರಾಹಿತ್ಯ, ರಾಗದ್ವೇಷಜನ್ಯ ಸಂಸಾರದುಃಖಗಳು ಇದ್ದೇ ಇವೆ. ಅವರ ಸಂಸರ್ಗದಿಂದ ಶ್ರೀಹರಿಗೂ ದುರ್ಭಗತ್ವಾದಿಗಳು ಬರುವವೇ? ಭಗವಂತನಾದ್ದರಿಂದ ಬರುವುದಿಲ್ಲವೆಂದರೆ ಅದು ಹೇಗೆ?

ಜ್ಞಾನಿಗಳೇ! ಇಂದು ನನ್ನ ಮನಸ್ಸು ಸಂಶಯವನ್ನು ಹೊಂದಿ ನಿಶ್ಚಯಾಭಾವದಿಂದ ಖೇದಪಡುತ್ತಿದೆ. ಈ ನನ್ನ ಮನಸ್ಸಿನ ಮಹಾದೋಷವನ್ನು ತಾವೇ ಜ್ಞಾನೋಪದೇಶದಿಂದ ಕಳೆದುದ್ಧರಿಸಬೇಕು.

ಶ್ರೀಶುಕರು ಹೇಳಿದರು–ರಾಜನ್! ತತ್ತ್ವಜಿಜ್ಞಾಸುವಾದ ವಿದುರನಿಂದ ಹೀಗೆ ಕೇಳಲ್ಪಟ್ಟು, ಮಂದಹಾಸವನ್ನು ಮಾಡಿ ಗತಾಹಂಕಾರನಾದ, ಮೈತ್ರೇಯನು ಶ್ರೀಕೃಷ್ಣನನ್ನು ಚಿಂತಿಸಿ, ಇಂತೆಂದನು–

ವಿದುರಾ! ಇದೇ ಭಗವನ್ಮಹಿಮೆಯ ಅಗಾಧತೆ: ಅದು ಸಂಶಯಕ್ಕೆಡೆಗೊಡುವುದೇನಾಶ್ಚರ್ಯ? ಈಶ್ವರನಿಗೆ ಇನ್ನೊಬ್ಬರನ್ನು ಬೇಡುವ ದೈನ್ಯವೂ, ನಿತ್ಯಮುಕ್ತನಿಗೆ ಗುಣಬಂಧನವೂ ಹೇಗೆ ಕೂಡುವದು? ನಿಜ. ಆದರೂ ಪರಮಾತ್ಮನಿಗೆ ಸ್ವರೂಪ ಜ್ಞಾನಾನಂದ ಸಾಮರ್ಥ್ಯದಿಂದ ಎಲ್ಲವೂ ಕೂಡುವುದಾಗಿದೆ. ನೋಡು ಸರ್ವಜ್ಞನಿಗೆ ಬಂಧನವಿಲ್ಲ. ಆನಂದಮಯನಿಗೆ ದೈನ್ಯವಿಲ್ಲ. ಸರಿಯೇ? ಜ್ಞಾನಾನಂದನು ಹರಿ. ಆದ್ದರಿಂದಲೇ ಜೀವನಂತೆ ಅಲ್ಲದೇ ಜೀವವಿಲಕ್ಷಣನಾಗಿರುವನು.

ಪುರುಷನು ಸ್ವಪ್ನದಲ್ಲಿ ತನ್ನ ದೇಹಕ್ಕೆ ಅವಿದ್ಯಮಾನವಾದ ಸ್ವಶಿರಚ್ಛೇದನಾದಿಗಳನ್ನು ವಾಸನಾಬಲದಿಂದ ನೋಡುವನಲ್ಲವೇ. ಅದರಿಂದ ಪ್ರಯೋಜನವಿಲ್ಲದಿದ್ದರೂ ಪರಾಧೀನನಾಗಿ ನೋಡುವಂತೆ ಜೀವನು ಪ್ರಕೃತಿಸಂಬಂಧದಿಂದ ಬಂದ ದೇಹಾದಿಗಳಲ್ಲಿ ಅಹಂಕಾರ ಮಮಕಾರಗಳನ್ನು ಹೊಂದಿ ಭ್ರಾಂತನಾಗಿ ಅದರಿಂದ ಸಂಸಾರದಲ್ಲಿ ಹುಟ್ಟಿ ಸತ್ತು ನರಳುತ್ತಿರುವನು. ಆದರೂ ಸ್ವಪ್ನವೂ ಮಿಥ್ಯೆಯಲ್ಲ. ಅರ್ಥಕ್ರಿಯಾಕಾರಿಯಾಗಿ ಶ್ರೀಶೇಚ್ಛೆಯೇ ನಿಮಿತ್ತಕಾರಣವು. ಜೀವ ಮನೋಗತ ವಾಸನೆಯೇ ಉಪಾದಾನ ಕಾರಣವಾಗಿ ಉಳ್ಳದ್ದಾದ್ದರಿಂದ ಸತ್ಯವೇ. ಅದರಂತೆ ಸಂಸಾರವು ಸತ್ಯವಾದರೂ ಹರಿಪ್ರಸಾದದಿಂದ ನಿವೃತ್ತವಾಗುತ್ತದೆ. ಜಲದಲ್ಲಿ ಮೂಡಿದ ಚಂದ್ರಪ್ರತಿಬಿಂಬವು ಜಲದಲ್ಲಿ ಚಲನವುಂಟಾಗಲು ಚಲಿಸಿದಂತೆ ತೋರುವದು. ನಿಜವಾಗಿ ಪ್ರತಿಬಿಂಬವು ಕೂಡ ಚಲಿಸುವುದಿಲ್ಲ. ಅಂತೆಯೇ ಸ್ವಭಾವದಿಂದ ಸ್ವಚ್ಛನಾದರೂ ಜಪಾಕುಸುಮ ಸಂಪರ್ಕದಿಂದ ಸ್ಫಟಿಕಮಣಿಗೆ ಕೆಂಪು ಬಣ್ಣ ಬಂದಂತೆ ಕಾಣುವ ಹಾಗೆಯೇ ಜೀವನು ದೇಹಾದ್ಯಭಿಮಾನದಿಂದ ಹುಟ್ಟಿದೆ, ಸತ್ತೆ, ಮಾಡಿದೆನೆಂದು ಭ್ರಾಂತಿಯನ್ನು ಹೊಂದುತ್ತಾನೆ. ಆ

ಭ್ರಾಂತಿಯು ನಿವಾರಿತವಾಗಲು ಶ್ರೀಹರಿಯ ದಯೆಯೇ ಕಾರಣವು. ದಯೆ ಪುಟ್ಟಲು ನಿಷ್ಕಾಮ ಕರ್ಮ ಸಹಕೃತ ಭಕ್ತಿಯೇ ಕಾರಣ. ಭಕ್ತಿಯಿಂದ ಸಂಸಾರವು ಮೆಲ್ಲನೆ ನಿವೃತ್ತವಾಗುವದು. ಗಾಢನಿದ್ರಾಮುದ್ರಿತನಾದ ಪುರುಷನ ಎಲ್ಲ ಕ್ಲೇಶಗಳು ದೂರವಾಗಿ ಪೋಗುವಂತೆ ಸಂಸಾರ ಕಾರಣ ದುರಿತ ದೂರೀಕರಣ ಸಮರ್ಥನಾದ ಹರಿಯ ಅಪರೋಕ್ಷವಾಗುತ್ತಿರಲು ಪರಮಾತ್ಮ ನಲ್ಲಿ ಸರ್ವೇಂದ್ರಿಯಗಳು ಸೇರಿ ರಮಿಸಲು ಮುಕ್ತಪ್ರಾಯನಾಗುವನು. ಕ್ಲೇಶನಾಶವನ್ನೂ ಹೊಂದುವನು. ಮುರವೈರಿಯ ಗುಣಾನುವಾದ ರೂಪ ಭಾಗವತದ ಶ್ರವಣವನ್ನು ಮಾಡುವುದ ರಿಂದಲೇ ಸರ್ವಕ್ಲೇಶ ನಾಶವಾಗುವುದೆಂದಮೇಲೆ ಮುರಾರಿ ಚರಣಾರವಿಂದಪರಾಗ ಸೇವೆಯಲ್ಲಿ ಸಂತತರತಿಯು ಕ್ಲೇಶನಾಶಕವೆಂದು ಹೇಳಬೇಕೆ? ಎನ್ನಲು ಮೈತ್ರೇಯನನ್ನು ಕಂಡು ವಿದುರನು ಕೇಳಿದನು

ಸ್ವಾಮಿ! ನಿನ್ನ ನಿಶಿತವಾಕ್ಯ ಖಡ್ಗದಿಂದ ನನ್ನ ಅನ್ಯಥಾಜ್ಞಾನ ಪಾಶವು ನಷ್ಟವಾಗಿ ಕಡಿದು ಹೋಯಿತು. ಆದರೂ ದೇಹಾದ್ಯಹಂಮಮತಾದಿಗಳಲ್ಲಿಯೂ ಹರಿಯು ಜೀವ ವಿಲಕ್ಷಣವೆಂಬ ವಿಷಯದಲ್ಲಿಯೂ ಇದ್ದ ಎರಡು ವಿಧ ಅನ್ಯಥಾ ಜ್ಞಾನವು ನಶಿಸಿದರೂ ಇನ್ನೂ ಹೌದು ಅಲ್ಲವೋ ಎಂಬ ಸಂದೇಹವು ಪೀಡಿಸುತ್ತದೆ. ನೀನು ಸ್ವರೂಪಸಾಮರ್ಥ್ಯದಿಂದ ಕೂಡಿದ ಹರಿಯ ಮಹಿಮೆಯನ್ನು ಚೆನ್ನಾಗಿ ಹೇಳಿರುವೆ. ಆದರೂ ಪೂರ್ವಾದೃಷ್ಟವಿಲ್ಲದೆ ಇನ್ನೊಂದು ಕಾರಣ ವಾಗಲಾರದು. ದೇಹಾತ್ಮತ್ವಾದಿ ಭ್ರಾಂತಿಯು ಬರಲು ಬ್ರಹ್ಮನೇ ಕಾರಣನು ಎಂದು ನಾನೇನು ತಿಳಿಯದೇ ಇಲ್ಲ. ಲೋಕದಲ್ಲಿ ಇಬ್ಬರು ನಿಶ್ಚಿಂತರಾಗಿ ಸುಖಿಪರಾರೆಂದರೆ ಒಬ್ಬನು ಅತ್ಯಂತ ಜ್ಞಾನ ವಿವೇಕಶೂನ್ಯನು ; ಇನ್ನೊಬ್ಬನು ಪ್ರಕೃತಿಗೂ ಮೀರಿದ ಬ್ರಹ್ಮನನ್ನು ತಿಳಿದ ಜ್ಞಾನಿಯು. ಆದರೆ ಮಧ್ಯಸ್ಥನಾದವನು ಸ್ವಪ್ನದರ್ಶಿಯಂತೆ ಕ್ಲೇಶಪಡುವನು. ಅಂತೆಯೇ ಸಂಶಯಪೀಡಿತ ನಾದ ನಾನು ಕೇಳಿಕೊಳ್ಳುವೆನು. ಮತ್ತು ನಿನ್ನ ಚರಣಸೇವೆಯಿಂದ ನಿನ್ನ ಉಪದೇಶದಿಂದ ಜೀವಭಿನ್ನವಾದ ದೇಹದಲ್ಲಿ ಅಹಂತ್ವ ಮಮತೆಗಳು ಮೋಹವೆಂದು ತಿಳಿದು ಜೀವಸ್ವರೂಪದೃಷ್ಟಿ ಯಿಂದ ಪ್ರಯೋಜನಕಾರಿಯಾಗದ ಆ ಎರಡು ವಿಧ ಪ್ರತೀತಿಯನ್ನು ಬಿಟ್ಟು, ಪುರುಷಾರ್ಥೋಪ ಯೋಗಿ ಜ್ಞಾನವನ್ನು ಹೊಂದುವೆನು. ಹರಿಸ್ವರೂಪವನ್ನು ಕಂಡ ನಿನ್ನಂತಹ ಜ್ಞಾನಿಜನ ಚರಣ ಸೇವೆಯಿಂದ ಅಂತಸ್ಥನಾದರೂ ನಿರ್ವಿಕಾರನಾದ ಮಧುಸೂದನನ ಚರಣಾರವಿಂದಗಳಲ್ಲಿ ದೃಢವಾದ ಭಕ್ತಿಯು ಪುಟ್ಟಿ ಶೀಘ್ರವೇ ಸರ್ವಕ್ಲೇಶಗಳು ನಷ್ಟವಾಗುವವು. ವೈಕುಂಠ ಮಾರ್ಗೋಪದೇಶಕರ ಸೇವೆ ಪೂರ್ವಸಂಚಿತ ಬಹುಪುಣ್ಯದಿಂದಲೇ ಸಿಗುವುದೇಕೆಂದರೆ ದೇವ ದೇವನಾದ, ಜನನಮರಣ ಭಯನಾಶಕನಾದ ಶ್ರೀಹರಿಯನ್ನೇ ಅವರು ಪಾಡುತ್ತಿರುವರು. ಅಂತಹ ಸೇವೆ ದುರ್ಲಭವೇ ಸರಿ! ಮಹದಾದಿಗಳನ್ನು ಸೃಷ್ಟಿಸಿ ವಿಕಾರಗಳಿಂದ ಕೂಡಿಸಿ ಬ್ರಹ್ಮಾಂಡ ವನ್ನು ಪಡೆದು ಅದರಲ್ಲಿ ತತ್ತ್ವಪ್ರವೇಶವನ್ನೂ ಅನಂತರ ಬ್ರಹ್ಮಪ್ರವೇಶವನ್ನೂ ವ್ಯಾಪ್ತನಾದ ಹರಿಯು ಮಾಡಿದನೆಂದೆ. ಅನಂತ ಬಾಹೂರುಪಾದಶಿರಸ್ಕನಾದ ಆ ಹರಿಯನ್ನು ಪುರುಷನೆಂಬರು. ಇವನಲ್ಲಿ ಸಕಲ ಲೋಕಗಳು ಆಶ್ರಯಿಸಿದವು. ದಶವಿಧಪ್ರಾಣರು, ಶಬ್ದಾದಿ ಇಂದ್ರಿಯಾರ್ಥ ಗಳು, ಓಜಸ್ಸಹೋಬಲಗಳು, ಬ್ರಾಹ್ಮಣಾದಿ ವರ್ಣಗಳು ಅವನಿಂದ ಜನಿಸಿದವೆಂದೆ. ಆ ವಿಷಯಗಳನ್ನು ಪೇಳು. ಪುತ್ರಪೌತ್ರಪ್ರಪೌತ್ರರಿಂದ ಕೂಡಿದ ಭಿನ್ನವಾದ ಆಕಾರಗಳುಳ್ಳ ಪ್ರಜರೀ ಬ್ರಹ್ಮಾಂಡದಲ್ಲಿ ಬ್ರಹ್ಮಾಂತರ್ಯಾಮಿ ಹರಿಯಿಂದ ಹೇಗೆ ಸೃಷ್ಟರಾದರು? ಸರ್ಗವೆಂದರೇನು? ಅನುಸರ್ಗ ವಾವುದು? ಮನ್ವಂತರಾಧಿಪರಾದ ಮನುಗಳಾರು? ಪ್ರಜಾಪತಿಗಳು ಮಾಡಿದ

ಕಾರ್ಯಗಳಾವುವು? ಮನುಗಳ ವಂಶವನ್ನು ವಂಶಾನುಚರಿತವನ್ನು ಪೇಳು. ಮೇಲಿರುವ ಲೋಕಗಳು, ಅಧೋಲೋಕಗಳು, ಅವುಗಳ ಸ್ಥಿತಿ ಪ್ರಮಾಣ ಪ್ರಜೆಗಳನ್ನು ಭೂಲೋಕದ ವಿಷಯವನ್ನು ವರ್ಣಿಸು. ತಿರ್ಯಜ್ಮನುಷ್ಯದೇವ ಸರ್ಪಪಕ್ಷಿ ಮತ್ಸ್ಯಾದಿಗಳ ಸೃಷ್ಟಿ ವಿಸ್ತಾರವನ್ನು ಅಂಡಜಸ್ವೇದಜೋದ್ಭಿಜ್ಜಗಳ ಹುಟ್ಟನ್ನೂ ಹೇಳು. ನಿತ್ಯಮುಕ್ತರಾದ ರಮಾ ಶ್ರೀನಿವಾಸರು ಪ್ರಪಂಚ ಕ್ಷೇಮಕ್ಕಾಗಿ ಅವತರಿಸಿ ಆಚರಿಸಿದ ಮಹೋದಾರ ಚರಿತ್ರೆಗಳಾವುವು? ವರ್ಣಾಶ್ರಮ ವಿಭಾಗವನ್ನು; ಅವರವರ ರೂಪಗುಣ, ಸ್ವಭಾವಗಳನ್ನು; ಋಷಿಗಳ ಜನ್ಮಕರ್ಮಗಳನ್ನು ವೇದ ವಿಭಾಗವನ್ನು; ಯಜ್ಞಗಳ ವಿವರಗಳನ್ನು; ಅಷ್ಟಾಂಗಯೋಗಸಾಧನವಾದ ಯಮಾದಿಗಳನ್ನು ಹೇಳು. ಮೋಕ್ಷಸಾಧನವಾವುದು? ಯಥಾರ್ಥಜ್ಞಾನವು ಹೇಗಾಗುವದು? ತಂತ್ರಪದ್ಧತಿಯಿಂದ ಭಗವತ್ಪೂಜೆ ಎಂತು? ಪಾಷಂಡ ಮತಗಳ ವರ್ಣನೆಯನ್ನು ಮಾಡು. ಗುಣಕರ್ಮಗಳಿಂದ ಜೀವನಿಗಾಗುವ ಗತಿಗಳಾವವು? ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಿಗೆ ನ್ಯಾಯಸಾಧನೆಗಳಾವುವು? ವಾರ್ತೆ ಎಂದರೇನು ? ದಂಡನೀತಿಯನ್ನು ವೇಗಾಧ್ಯಯನ ವಿಧಿಯನ್ನು ಪೇಳು. ಪಿತೃ–ದೇವ ಸೃಷ್ಟಿಯನ್ನು ಶ್ರಾದ್ಧವಿಧಾನವನ್ನು ವರ್ಣಿಸು. ಸೂರ್ಯಾದಿ ಗ್ರಹಗಳು, ಅಶ್ವಿನ್ಯಾದಿ ನಕ್ಷತ್ರಗಳು, ಧ್ರುವಾದಿ ತಾರೆಗಳು, ಅಣು–ಕಮಹದಾದಿ ಕಾಲಾವಯವಗಳು, ವಿಸ್ತರಿಸಿ ಪೇಳು. ದಾನ, ತಪಸ್ಸು, ಇಷ್ಟಾಪೂರ್ತಗಳು, ಮಾಡುವ ವಿಧಾನವನ್ನು ತಿಳಿಸಿಕೊಡು. ಪ್ರವಾಸಧರ್ಮ, ಆಪದ್ಧರ್ಮ, ಅಂದರೇನು? ಧರ್ಮಗಳನ್ನು ಲೋಕಸಂಗ್ರಹಕ್ಕೆಂದು ಭಗವಂತ ನಾಚರಿಸಿದನಲ್ಲವೇ? ಧರ್ಮದಲ್ಲಿ ನಡೆಯುವವರನ್ನು ಸಂರಕ್ಷಿಪ ವಿಧವು ಹೇಗೆ? ದೀನವತ್ಸಲ ರಾದ ಗುರುಗಳು ಅನುವ್ರತರಾದ ಶಿಷ್ಯರಿಗೆ ಮತ್ತು ಪುತ್ರರಿಗೂ ಕೂಡ ಅನುಗ್ರಹಿಸಿ, ಅವರು ಕೇಳದ ವಿಷಯವನ್ನು ಕೂಡ ಹೇಳಿಕೊಡುವದುಂಟು. ತತ್ತ್ವಗಳ ಸಂಖ್ಯೆ, ಸೃಷ್ಟಿ, ಅವುಗಳ ಲಯಕ್ರಮಗಳನ್ನು, ಪ್ರಳಯದಲ್ಲಿ ಯಾವ ತತ್ತ್ವಗಳು ಉಳಿದವು, ಯಾವ ತತ್ವಗಳು ಲಯವನ್ನು ಪೊಂದುವವು, ಎಂಬುವ ವಿವರಗಳನ್ನು ಹೇಳು. ಹರಿಯ ನಿಜಾವತಾರಗಳಾವವು? ಮುಕ್ತರ ಸ್ವರೂಪ ಎಂತಹದು? ವೇದಾಂತಶಾಸ್ತ್ರದ ವಿವರ, ಗುರುಕೃತವ್ಯಾಖ್ಯಾನ ಪ್ರಯೋಜನ, ಶಿಷ್ಯಶ್ರವಣಜನ್ಯಜ್ಞಾನ, ವೇದವಿದರು ಪೇಳಿದ ಜ್ಞಾನಸಾಧನಗಳು, ಸಾಧಾಪೇಕ್ಷೆ ಇಲ್ಲದೆ ಸ್ವತಃ ಜ್ಞಾನ–ಭಕ್ತಿ–ವೈರಾಗ್ಯಗಳು ಪುಟ್ಟುವ ರೀತಿಗಳು ಇವುಗಳನ್ನು ವರ್ಣಿಸು. ಕರ್ಮಜ್ಞಾನಾ ಪೇಕ್ಷೆಯಿಂದ ಕೇಳುತ್ತಿರುವೆನು. ಪುರುಷನು ಅಂಧಕಾರದಿಂದ ಚಕ್ಷುಃಶಕ್ತಿಯನ್ನು ಕಳೆದುಕೊಂಡಾಗ ಮಿತ್ರ(ಸೂರ್ಯ)ನು ಹೇಗೆ ಪ್ರಯೋಜಕನೋ ಹಾಗೆಯೇ ಪ್ರಕೃತಿಬಂಧದಿಂದ ಅಂಧನಾದೆನಗೆ ನೀನು ಮಿತ್ರನಾಗಿ ಪರಮೋಪಕಾರಕನಾಗಿರುವೆ. ಜೀವಾಭಯ ಹೇತುಜ್ಞಾನ ದಾನಫಲದ ಕಲಾಭಾಗವನ್ನು ಸರ್ವವೇದಯಜ್ಞ ತಪೋದಾನಗಳ ಫಲವು ಮೀರಲಾರದು.

ಇಂತು ಪುರಾಣ ವಿಷಯಂಗಳನ್ನು ಕುರಿತು ಕುರುಪ್ರಧಾನನಾದ ವಿದುರನು ಪ್ರಶ್ನಿಸಿದುದನ್ನು ಕೇಳಿ ಮುನಿಪ್ರಧಾನನಾದ ಮೈತ್ರೇಯನು ಆ ವಿಷಯಂಗಳೆಲ್ಲ ಭಗವತ್ಕಥಾಽವಿನಾ ಭೂತವಾದ್ದರಿಂದ ಸಂತೋಷಪಟ್ಟು ಇಂತು ಪರಿಹರಿಸಿ ಮಾತಾಡಿದನು.

## ೯. ಹಿರಣ್ಯಗರ್ಭ ಸೃಷ್ಟಿವರ್ಣನೆ

ಆಹಾ! ವಿದುರಾ! ನೀನೇ ಧನ್ಯನು. ನಿನ್ನಂತಹ ಹರಿಸರ್ವೋತ್ತಮತ್ವಜ್ಞಾನಿಯು ಯಮಲೋಕ ಪಾಲನು ಪುಟ್ಟಿದ್ದರಿಂದ ಪೂರುವಂಶವೇ ಸಜ್ಜನ ಪ್ರಶಂಸಾಪಾತ್ರವಾಗಿದೆ. ಈ ಲೋಕದಿ ಶ್ರೀಹರಿಕೀರ್ತಿಪುಷ್ಪಮಾಲೆಯನ್ನು ಹೊಸಹೊಸದನ್ನಾಗಿ ಮಾಡುತ್ತಿರುವ ನಿನ್ನ ಪ್ರಶ್ನೆಗಳಿಗೆ ಯಥಾಮತಿ ಸಮಾಧಾನವನ್ನು ಪೇಳುವೆನು ಕೇಳು. ಅದರಿಂದ ಶ್ರೀಕೃಷ್ಣನಾಜ್ಞೆಯಂ ಪಾಲಿಸಿ ದಂತೆಯೂ ಆಗುವದು.

ಮನುಜರು ಕ್ಷುಲ್ಲಕಸುಖವನ್ನು ಹೊಂದಲು ಬಹುದುಃಖವನ್ನು ಪಡುತ್ತಿರುವರು. ಅವರ ದುಃಖಶಮನವಾಗುವ ಕಾರಣವಾಗಿ ಸಾಕ್ಷಾತ್ಪೂಜ್ಯ ಶೇಷದೇವರು ಸನತ್ಕುಮಾರಾದಿಗಳಿಗೆ ಪೇಳಿದ ಭಾಗವತ ಪುರಾಣವನ್ನು ಹೇಳುವೆನು.

ಪಾತಾಳದಲ್ಲಾಸೀನರಾದ ಸನಕಾದಿಗಳಿಗಿಂತ ಪೂರ್ವದಲ್ಲಿ ಪುಟ್ಟಿದ, ಶ್ರೀಹರಿಯ ಸ್ತುತಿ ಮಾಡುತ್ತಾ ವಿರಾಜಿಸುವ, ಅಪ್ರತಿಬದ್ಧಜ್ಞಾನಶಕ್ತಿಯಾದ, ಶೇಷದೇವನನ್ನು ನೋಡಿದ ಸನಕಾದಿ ಗಳು ಅವನಿಂದ ಹರಿತತ್ತ್ವವನ್ನು ತಿಳಿಯಬೇಕೆಂದು ಪ್ರಶ್ನಿಸಿದರು. ತನಗೆ ಆಧಾರ ಭೂತನಾದ, ಸ್ವತಂತ್ರನಾದ, ವಾಸುದೇವಮೂರ್ತಿಯನ್ನು ಭಕ್ತಿಯಿಂದ ಉಪಾಸಿಸುತ್ತ ಆ ಅಂತರ್ಯಾಮಿ ಯಲ್ಲಿ ಲೀನವಾದ ಕಮಲನಯನಗಳನ್ನು ಸ್ವಲ್ಪ ಮುಚ್ಚಿ ವಿಬುಧರಲ್ಲಿ ಅನುಗ್ರಹಿಸಲು ಸ್ವಲ್ಪ ವಿಕಾಸಗೊಳಿಸುವ ಶೇಷನ ಪಾದಪದ್ಮವನ್ನು ನಾಗರಾಜಕುವರಿಯರು ಪ್ರೇಮದಿಂದ ನಾನಾ ಪೂಜಾಸಾಧನಗಳನ್ನು ತಂದು ಉತ್ತಮ ಭರ್ತೃಪ್ರಾಪ್ತಿಗೆಂದು ಪೂಜಿಸುತ್ತಿದ್ದರು. ಮಂದಾಕಿನೀ ಧವಳವಾದ ಜಟಾಕಲಾಪಗಳಿಂದ ಆಶೇಷದೇವನ ಪಾದವನ್ನು ಸ್ಪರ್ಶಿಸಿ ನಮಸ್ಕರಿಸಿ ಸನತ್ಕು ಮಾರರು ಭಕ್ತಿಗದ್ಗದಿತ ಸ್ಖಲಿತಾಕ್ಷರಗಳಿಂದ ಶೇಷಾವತಾರಕೃತ ಲೀಲೆಗಳನ್ನು ಸ್ತುತಿಸಿ ಸಹಸ್ರ ಕಿರೀಟ ಮಣಿಗಣ ಪ್ರಕಾಶಿತೋದ್ಧಾಮ ಫಣಾಸಹಸ್ರನಾದ ಆ ಭಗವಂತನಿಂದ ಭಾಗವತವನ್ನು ಶ್ರವಣ ಮಾಡಿದರು. ಪೂಜ್ಯತಮನಾದ ಶೇಷದೇವನು ತನಗೆ ಪೇಳಿದುದನ್ನು ನಿವೃತ್ತಧರ್ಮರತ ನಾದ ಸನತ್ಕುಮಾರನು ಧೃತವ್ರತನಾದ ಸಾಂಖ್ಯಾಯನನಿಗೆ ಪೇಳಿದನು. ಪರಮಹಂಸಮುಖ್ಯನಾದ ಸಾಂಖ್ಯಾಯನನು ಭಗವನ್ಮಹಿಮಾವರ್ಣನ ಕುತುಕನಾಗಿ ನಮ್ಮ ಗುರುಗಳಾದ ಭಕ್ತ್ಯಾದಿ ಗುಣ ಭರಿತನಾದ ಪರಾಶರನಿಗೂ ಮತ್ತು ಬೃಹಸ್ಪತಿಗೂ ಹೇಳಿಕೊಟ್ಟನು. ನಮ್ಮ ದಯಾಳು ಗುರುಗಳು ಪರಹಿಂಸಾ ವಿಮುಖರಾದ್ದರಿಂದ ಪುಲಸ್ತ್ಯನು ಅವರಲ್ಲಿ ಪ್ರೀತರಾಗಿ ವಿಷ್ಣುಪುರಾಣ ಪ್ರವಕ್ತನಾಗು ಎಂದು ವರವಂ ಪಾಲಿಸಿದರು. ಅಂತಹ ಪರಾಶರನು ಪೇಳಿದ ಭಾಗವತವನ್ನು ನಿತ್ಯವೂ ಅನುವ್ರತನಾಗಿ ಶ್ರದ್ಧೆಯಿಂದ ಕೇಳುತ್ತಿರುವ ನಿನಗೆ ಹೇಳುವೆನು.

ಶ್ರೀಹರಿಯು ಪ್ರಳಯೋದಧಿಯಲ್ಲಿ ಯೋಗನಿದ್ರಾ ಮುದ್ರಿತನಾಗಿ ಶೇಷತಲ್ಪದಲ್ಲಿ ಸರ್ಗಾದಿ ವ್ಯಾಪಾರವನ್ನು ಉಪರಮಿಸಿ, ಸ್ವಾತ್ಮರತನಾಗಿದ್ದನು. ಈ ವಿಶ್ವವೆಲ್ಲವೂ ಆ ಹರಿಯ ಉದರಗತವಾಗಿದ್ದಿತು. ಚರಾಚರ ಜಗತ್ತನ್ನು ಪ್ರಳಯಕಾಲಾತ್ಮಕಶಕ್ತಿಯಿಂದ ನುಂಗಿ ಆ ಪ್ರಳಯ ಜಲದಲ್ಲಿ, ದಾಹಕಶಕ್ತಿಯನ್ನಡಗಿಸಿಕೊಂಡು ಕಟ್ಟಿಗೆಯಲ್ಲಿದ್ದ ಅಗ್ನಿಯಂತೆ ವಾಸಮಾಡಿದನು. ಸ್ವರಮಣನಾದರೂ ಪ್ರಳಯಕಾಲಾತ್ಮಿಕಳಾದ ರಮೆಯನ್ನು ಗಾಢಾಲಿಂಗನದಿ ರಮಿಸುತ್ತಿದ್ದನು. ಚತುರ್ಯುಗಸಹಸ್ರವಾಗುತ್ತಿರಲು ಸೃಷ್ಟಿಕಾಲಪ್ರೇರಕನು ತನ್ನ ಸ್ವರೂಪ ಶಕ್ತಿಯಿಂದ ಅದೃಷ್ಟ ...ಸಾದಿಗಳನ್ನು ಲೀಲೆಯಿಂದ ಸ್ವೀಕರಿಸಿ ಒಳಗಿದ್ದ ಸಕಲ ಚರಾಚರ ಜಗನ್ನಿರ್ಮಾಣಮಾಡಲು

ನಿಶ್ಚಯಿಸಿದನು. ಆಗ ಆಕಾಶಾದಿ ಭೂತಗಳು ಇಂದ್ರಿಯಗಳು ಜೀವರು ಅವನ ಕಟಾಕ್ಷಪಾತ ಪಾತ್ರರಾದರು; ಸೃಷ್ಟಿಕಾಲಾನುಗತವಾಗಿ ರಜೋಗುಣದಿಂದ ಕೂಡಿ ಗರ್ಭೋದಕವು ವಾಯುವಿನಿಂದ ಶುಷ್ಕವಾಗಿ, ನಾಭಿಯಿಂದ ಕಮಲರೂಪವಾಗಿ, ಹೊರಹೊಮ್ಮಿತು. ಕರ್ಮಫಲದಾನ ಸಮರ್ಥವಾದ ಕಾಲಕರ್ಮಗಳಿಂದ ತತ್ಪ್ರೇರಕವಾದ ಹರೀಚ್ಛೆ ಮುಖ್ಯ ಕಾರಣವಾಗಿ ಹುಟ್ಟಿದ ಚತುರ್ಮುಖ ಭವನವಾದ ಲೋಕಪದ್ಮವು ಸೂರ್ಯನಂತೆ ಬೆಳಗುತ್ತಾ ವಿಶಾಲವಾದ ಪ್ರಳಯೋದಕ ಸಮುದ್ರವನ್ನು ಪ್ರಕಾಶಗೊಳಿಸಿತು.

ಆಗ ಶ್ರೀಹರಿಯು ರೂಪಾಂತರದಿಂದ ಪ್ರಕಾಶಕನಾಗಿ ಆ ಪದ್ಮವನ್ನು ಪ್ರವೇಶಿಸಿದನು. ಪೃಥಿವೀಮಯವಾದ್ದರಿಂದ ಶಬ್ದಾದಿ ಸರ್ವಗುಣಪ್ರಕಾಶಕವಾದ ಆ ಪದ್ಮದಲ್ಲಿ ವೇದಪ್ರತಿಪಾದ್ಯ ಪ್ರಧಾನನು, ಸ್ವತಂತ್ರ ಪರಮಾತ್ಮಸಂಭೂತನಾದ್ದರಿಂದ ಸ್ವಯಂಭುವೆನಿಸಿದ ಹಿರಣ್ಯಗರ್ಭನು ಉದಿಸಿಬಂದನು. ಆ ಪದ್ಮಕರ್ಣಿಕಾಮಧ್ಯದಲ್ಲಾಸೀನನಾಗಿ ಯಾವ ಲೋಕವನ್ನೂ ಯಾರನ್ನೂ ಕಾಣದೆ ಕಣ್ಣರಳಿಸಿ ಸುತ್ತಲೂ ನೋಡಿದಾಗ ನಾಲ್ಕು ದಿಕ್ಕಿಗೆ ನಾಲ್ಕು ಮುಖಗಳನ್ನು ಪಡೆದನು. ಪ್ರಳಯವಾಯುಪ್ರಕ್ಷುಬ್ಧಮಹಾತರಂಗಮಂಡಲವಾದ ಸಮುದ್ರದಿಂದ ಪುಟ್ಟಿದ ಪೃಥಿವ್ಯಾದಿ ಲೋಕನಿರ್ಮಾಣ ಕಾರಣವಾದ ಪದ್ಮವನ್ನು ಆಶ್ರಯಿಸಿ ತನ್ನನ್ನಾಗಲಿ ತನ್ನ ಹುಟ್ಟಿಗೆ ಕಾರಣನಾದ ಶ್ರೀಹರಿಯನ್ನಾಗಲಿ ಆ ಚತುರ್ಮುಖನು ತಿಳಿಯಲಿಲ್ಲ. ಪ್ರತ್ಯಕ್ಷಿಸಿ ದೇವನನ್ನೂ ನೋಡಲಾರದ ಬ್ರಹ್ಮನಾಗ ಇಂತು ಚಿಂತಿಸಿದನು. "ಈ ಪದ್ಮದಲ್ಲಿರುವ ನಾನಾರು? ಈ ಪದ್ಮವೆಲ್ಲಿಂದ ಬಂತು? ನೀರಿನಲ್ಲಿರುವ ಈ ಪದ್ಮಕ್ಕೆ ಕಾರಣವಾದ ವಸ್ತುವು ನೀರಿನಲ್ಲೇ ಇರಬೇಕು! ಅದಾವುದು? ಪೃಥಿವ್ಯಾದಿಗಳೇ ಉತ್ಪನ್ನವಾಗಿಲ್ಲವೆಂದಮೇಲೆ ಅದು ಸರ್ವಭೂತ ವಿಲಕ್ಷಣವಾದದ್ದೇ ಆಗಿರಬೇಕು. ಅದಾದರೂ ನಿರ್ದೋಷ ಜ್ಞಾನಾನಂದಾದಿ ಅಪ್ರಾಕೃತ ಶರೀರಿಯೇ! ಹರಿಯೇ! ಎಂದು ಚಿಂತಿಸಿ ಆ ಪದ್ಮನಾಲರಂಧ್ರದಿಂದ ಜಲದಲ್ಲಿ ಪ್ರವೇಶಿಸಿ ನಾಲೀಕಾಧಾರ ವಸ್ತುವನ್ನು ನೋಡಲಾರದೆ ಸ್ವರೂಪಾಚ್ಛಾದಕವಾದ ಮಾಯಾಂಧಕಾರದಲ್ಲಿ ತನ್ನ ಕಾರಣನಾದ ಹರಿಯನ್ನರಸುತ್ತಿರಲು ಚಾತುರ್ಮಾಸ್ಯಗಳೆಂಬ ಮೂರು ನೇಮಿಗಳಿಂದ ಕೂಡಿದ ಸಂವತ್ಸರವು ಹುಟ್ಟಿತು. ಅವ್ಯಕ್ತೈಕ ಸ್ವಭಾವನಾದ ಹರಿಯು ಸ್ವಪ್ರಸಾದವಿಲ್ಲದೆ ಪುರುಷ ವಾಯುವಿನಿಂದಲೂ ಕಾಣಸಿಗನೆಂದು ದೇಹಧಾರಣಮಾಡಿದ ಜೀವರಿಗೆ ಮರಣಭಯವನ್ನು ತಂದೊಡ್ಡುವ ಜನಾರ್ದನನ ಕಾಲಚಕ್ರವನ್ನು ಕಂಡು ತಿಳಿದು ಸ್ವಪ್ರಯತ್ನವನ್ನು ಬಿಟ್ಟು ಸಮಾಧಿಯಿಂದ ಶ್ರೀಹರಿ ಪ್ರಸಾದವನ್ನು ಗಳಿಸಲು, ನಿಶ್ಚಯಿಸಿ ಹಿಂತಿರುಗಿದನು. ಜಿತಶ್ವಾಸನೂ ಜಿತೇಂದ್ರಿಯನೂ ಆಗಿ ಅಸಂಪ್ರಜ್ಞಾತ ಚಿತ್ತೈಕಾಗ್ರತೆಯನ್ನು ಪೊಂದಿ, ಪುರುಷಾ ವಾಯುವಿನಿಂದ ನೂರು ವರ್ಷ ಕಾಲ ವೃದ್ಧಿಯನ್ನು ಪೊಂದುವ ಧ್ಯಾನಬಲದಿಂದ ಅಪರೋಕ್ಷಜ್ಞಾನವನ್ನು ಪೊಂದಿ, ತನ್ನ ಹೃದಯದಲ್ಲಿ ಪ್ರಕಾಶಿತನಾದ ಸರ್ವೋತ್ತಮನಾದ ಸ್ವಾಮಿಯ ಅಪೂರ್ವ ದರ್ಶನವನ್ನು ಪಡೆದನು.

ಆಗ ಬ್ರಹ್ಮನು ತಾವರೆಯ ನಾಳದಂತೆ ಧವಳವಾದ ವಿಶಾಲ ಶೇಷಭೋಗಶಯನದಿ ಪವಡಿಸಿದ ಪುರುಷನನ್ನು ನೋಡಿದನು. ಅನ್ಯೋನ್ಯ ಸಂಪರ್ಕರಹಿತ ಸಹಸ್ರ ಫಣಾಗ್ರಸ್ಥಿತ ಜಾತಿರತ್ನಕಾಂತಿಪ್ರಕಾಶಿತವಾದ ಪ್ರಳಯಜಲದಲ್ಲಿ ನೀಲಮಣಿಪರ್ವತದಂತೆ ಬೆಳಗುವ ಹರಿಯನ್ನು ಕಂಡನು. ನೀಲಪರ್ವತವು ಸಂಧ್ಯಾಮೇಘದಿಂದಾವೃತವಾಗಿ ಬಂಗಾರದ ಕೋಡನ್ನು ಪೊಂದಿ ರತ್ನಾಕರನನ್ನು ಓಷಧಿಗಳನ್ನು ಪುಷ್ಪಗಳನ್ನು ಧರಿಸಿ ದೇವತೆಗಳು ಮೇಲೆ ವಿಹರಿಸುತ್ತಿರಲು ವೇಣುಗುಲ್ಮ ವೃಕ್ಷಜಾಲಗಳಿಂದ ಕೂಡಿ ಶೋಭಿಸುತ್ತಿದ್ದಂತೆ ತೋರುತ್ತಾ ನೀಲಮೇಘ

ಶ್ಯಾಮನು, ಪೀತಾಂಬರಧರನು, ಸುವರ್ಣಕಿರೀಟಾಲಂಕೃತನು, ಕೌಸ್ತುಭರತ್ನಧರನು, ಪ್ರಣತಾರ್ತಿ ಹಾರಿ ಶ್ರೀಪಾದ ಪದ್ಮನು ಆದ ಶ್ರೀಹರಿಯ ಅಪ್ರಾಕೃತ ಮೂರ್ತಿಯನ್ನು ಕಂಡು ಆನಂದಭರಿತ ನಾದನು. ಲೋಕತ್ರಯವನ್ನೊಳಗೊಳ್ಳುವ ನ್ಯಗ್ರೋಧ ಪರಿಮಂಡಲತ್ವಾದಿ ಸರ್ವಶುಭಲಕ್ಷಣ ಲಕ್ಷಿತ ದೇಹನಾಗಿ ವಿಚಿತ್ರದಿವ್ಯಾಭರಣ ವಸ್ತ್ರಗಳ ಪೂರ್ಣಶೋಭೆಯಿಂದೊಪ್ಪುವ ದಿವ್ಯವೇಷ ವನ್ನು ಕಂಡು ಸಂತೋಷಭರಿತನಾದನು.

ವೈದಿಕಾದಿ ವಿವಿಧ ಮಾರ್ಗದಿಂದ ತಮ್ಮ ಇಷ್ಟಾರ್ಥಗಳನ್ನು ಪಡೆಯಲೋಸುಗ ಶ್ರೀಹರಿ ಯನ್ನಭಿಮುಖೀಕರಿಸಲು ಪೂಜಿಸುವರಲ್ಲಿ ದಯೆಯಿಂದ ನಖಚಂದ್ರರಶ್ಮಿಗಳಿಂದೊಪ್ಪುವ, ಚಾರುಚರಣ ಕೋಮಲಾಂಗುಲೀ ಮನೋಹರವಾದ, ಸರ್ವಕಾಮಪ್ರಧಾನ ಸಮರ್ಥವಾದ ಲೋಕವಿಲಕ್ಷಣವಾದ ತನ್ನ ಪಾದಪದ್ಮವನ್ನು ಪ್ರದರ್ಶಿಸುವ ಹರಿಯನ್ನು ಕಂಡನು.

ಆ ಲೋಕಾರ್ತಿಹರಣಕಾರಣ ಮಂದಹಾಸ, ಕುಂಡಲಮಂಡಿತ ಗಂಡಯುಗ್ಮ ಅಧರ ಬಿಂಬ ಶೋಣಿಮಾ ಸುಷಮೆ, ಚಾರುಚಂಪಕ ನಾಸಿಕೆ, ಸ್ಮರಶರಾಸನಸಮಭ್ರೂಮಂಡಲ, ನಿತಂಬ ದಲ್ಲೊಪ್ಪುವ ಕದಂಬಕಿಂಜಲ್ಕ ಪಿಶಂಗ ವಸನ, ಮೇಖಲಾಮಣಿ ಮಯೂಖರಂಜಿತ ಜಘನ, ಅನಂತರತ್ನಖಚಿತ ಹಾರಶೋಭೆ, ಶ್ರೀವತ್ಸವಲ್ಲಭವಕ್ಷಸ್ಥಲ ವಿಸ್ತಾರತೆ, ಇವುಗಳಿಂದೊಪ್ಪುವ ಅಪ್ಪನಂ ಕಂಡು ಹುಷ್ಟಿಗೊಂಡನು.

ಅನರ್ಘ್ಯ ಕೇಯೂರಮಣಿರಾಜರಾಜಮಾನ ದೋರ್ದಂಡ ಸಹಸ್ರಶಾಖಾಸಮೇತವಾಗಿ ಅವ್ಯಕ್ತಾನಂತತಮೂಲವಾಗಿ ಲಕ್ಷ್ಮೀಸೇವಿತವಾಗಿ, ಚತುರ್ದಶಭುವನ ಸರ್ವಕಲ್ಪತರು ಶ್ರೇಷ್ಠವಾಗಿ, ಪರಿವೀತವಲ್ಕಲಸದೃಶ ಶೇಷಭೋಗಮಾಗಿಪ್ಪ, ತರುರಾಜವೋ ಈ ಶ್ರೀಹರಿ !

ಚರಾಚರ ಸತ್ವನಿಷೇವಿತವು, ಸರ್ಪಬಂಧುವು, ಜಲನಿಧಿಪರಿವೀತವು, ಕಿರೀಟಸಹಸ್ರ ಕನಕ ಶೃಂಗವು, ಕೌಸ್ತುಭಾಖ್ಯರತ್ನಗರ್ಭವು ಆದ ಪರ್ವತಶ್ರೇಷ್ಠವೋ ಈ ಶೌರಿ! ಎಂದು ಚಿಂತಿಸುತ್ತಾ-ವೇದಮಧುಕರ ಮಧುರಗಾನರಚಿತ ನಿಜಕೀರ್ತಿಪ್ರಧಾನ ವರವಾಸನಾನವರತ ನವವನಮಾಲಿಕಾ ನಿವೀತನಾದ, ನಿತ್ಯತ್ರಿಧಾಮಸ್ಥಿತಿ ಮುಕ್ತ ಸೂರ್ಯಚಂದ್ರವಾಯುವಹ್ನಿಮುಖ ನಿಖಿಲಲೋಕ ಪಾಲ ಪರಿಸೇವಿತನಾದ, ಹರಿಯನ್ನು ಕಂಡು ಅದೇ ಸಮಯದಲ್ಲಿ ಬ್ರಹ್ಮನು ತನ್ನ ಮನೆಯಾದ ಕಮಲವು ಅವನ ನಾಭಿಸರೋವರದಿಂದ ಬಂದುದನ್ನು ಅಲ್ಲಿದ್ದ ತನ್ನನ್ನು ಪ್ರಳಯೋದಕವನ್ನು ಪ್ರಳಯವಾಯುವನ್ನು ಕಂಡನು. ಜಗದ್ವಿಧಾತನತಿಂತು ಮುಕ್ತರನ್ನಲ್ಲದೆ ಅನ್ಯವನ್ನು ಕಾಣದೆ ನಿಂತು, ತನ್ನ ಸೃಷ್ಟಿಕಾರ್ಯವು ಹರಿಯ ಅನುಗ್ರಹದಿಂದಲೇ ಎಂದರಿತು ಆ ಹರಿಶುಶ್ರೂಷೆ ಎಂತೆಂದು ಮನದಿ ಕಾತರತೆಯನ್ನು ತುಂಬಿ, ಹರಿಯನ್ನು ಸ್ತುತಿಸಲು ಆ ಸ್ವಯಂಭುವನು ಪ್ರಾರಂಭಿಸಿದನು. ತನ್ನ ಅದೃಷ್ಟ ಕಾರಣವನ್ನು ಅಭಿವ್ಯಂಜಿಸಿ ರಾಜಸ ಗುಣದಿಂದ ಉಪರಕ್ತನತ್ವಾಗಿಸಿ ಪ್ರಜರನ್ನು ತನ್ನಿಂದ ಸೃಜಿಸಲೆಣಿಸಿದ ಸರ್ವೇಶನ ಸಂಕಲ್ಪದಂತೆ ಅನೇಕ ವಿಧ ಸೃಷ್ಟ್ಯಭಿಮುಖ ನಾಗಿ ಬ್ರಹ್ಮನು ಪರಮಾತ್ಮನಲ್ಲೇ ಮನವನ್ನಿಟ್ಟು ಇತರವೆಲ್ಲವನ್ನು ಬಿಟ್ಟು ಈ ರೀತಿ ಸ್ತುತಿಸಿದನು.

## ೧೦. ಬ್ರಹ್ಮಕೃತ ಸ್ತುತಿ – ಹರಿ ವರದಾನ

ಸ್ವಾಮಿನ್! ಶ್ರೀಹರೇ! ಇಂದು ನಿನ್ನರಿತೆನಯ್ಯಾ ಗೋವಿಂದ! ಎಷ್ಟು ದಿನಕ್ಕೋ ಹರೇ! ನಿನ್ನ ಈ ದರುಶನ! ಅವ್ಯಕ್ತೈಕಸ್ವಭಾವನೇ ನಿಜ, ಆದರೂ ಭಕ್ತರ ಭಕ್ತಿಯ ಅನುನಯಕ್ಕೆ ನೀ ಒಲಿವೆ. ಇದು ಸುಳ್ಳಲ್ಲ. ಆದರೂ ನಿನ್ನನ್ನು ಸ್ವಸ್ವಾಮಿಭಾವದಿಂದ ತಿಳಿದವರೆ ನಿನ್ನನ್ನು ಕಾಣು ವರು. ಪಾಪಪ್ರತಿಬಂಧಕಬಂಧಿತರು ನಿನ್ನನ್ನೆಂತು ಕಾಣುವರು? ದ್ರವ್ಯಕರ್ಮ ಕಾಲಸ್ವಭಾವ ಜೀವರು ನಿನ್ನಧೀನರು. ಅವರಿಗೆ ಸ್ವತಃ ಅಸ್ತಿತ್ವವೇ ಇಲ್ಲ. ನಿನ್ನ ಹೊರತೆಲ್ಲವೂ ಸದೋಷವು, ಅಸ್ವತಂತ್ರವು, ಪ್ರಕೃತಿಯ ಸತ್ವಾದಿಗುಣರಚಿತ ಮಹದಾದಿ ವಿಕಾರಸೃಷ್ಟ ಶರೀರರವರು. ನೀನು ನಿರ್ಗುಣನು; ಅಪ್ರಾಕೃತನು. ಅವರಿಗೆ ನೀನು ಪ್ರೇರಕ. ನಿನಗೆ ಪ್ರೇರಕರಾರಿಲ್ಲ. ಅವತಾರಂಗಳ ವಹಿಸಿದಾಗಲೂ ಸ್ಥಾನಭೇದದಿಂದ ನಿನ್ನಲ್ಲಿ ಭೇದವಾಗಲಿ ಭೇದಾಭೇದವಾಗಲಿ ಎಳ್ಳಷ್ಟೂ ಇರುವುದಿಲ್ಲ. ಅಂತರ್ಯಾಮಿಯಾಗಿ ಸರ್ವರಿಗೆ ಸ್ವಾಮಿಯಾದ ನಿನಗೆ ನಿನ್ನಲ್ಲಿ ಭೇದವೆಲ್ಲಿಯದು?

ನಿನ್ನ ನಾಭಿಪದ್ಮಭವನದಿಂದ ಪ್ರಭವಿಸಿ ನಾ ಬಂದೆನು. ಆ ನಿನ್ನ ಪದ್ಮನಾಭರೂಪವು ನಿನ್ನ ಅನಂತಾವತಾರಗಳಿಗೆ ಮೂಲಭೂತವಾಗಿ ಕಂಗೊಳಿಪದು. ಜ್ಞಾನರಸಪೂರ್ಣನು, ನಿತ್ಯನಿರಸ್ತ ಪ್ರಕೃತಿಪ್ರಾಕೃತಸಂಬಂಧನು ಸಜ್ಜನಾನುಗ್ರಹದಿಂದವತರಿಸಿ ಪೊರೆವನು, ನಿರ್ದೋಷನು ಆದ ನಿನಗೆ ನಮಿಪೆನು.

ಆನಂದೈಕರಸನಾದ್ದರಿಂದ ಷಡ್ವಿಕಾರರಹಿತನು ಅಪ್ರತಿಹತ ಪ್ರಕಾಶ ಸ್ವರೂಪನು ಆದ ರಮಾಪತಿಯೇ! ನಿನ್ನ ಹೊರತು ನಿರ್ಗುಣರಿನ್ನಾರು? ವಿಶ್ವಸೃಷ್ಟ್ಯನಾದರೂ ನಿನಗೆ ಸೃಜಕರಿಲ್ಲ. ಪ್ರಪಂಚ ವಿಲಕ್ಷಣನಾದರೂ ಪ್ರಪಂಚ ವ್ಯಾಪ್ತನಾಗಿರುವೆ. ಆದಿಭೂತನಾದರೂ ಭೂತೇಂದ್ರಿಯ ಮನೋನಿಯಾಮಕನಾಗಿ ಅಂತಸ್ಥನೆನಿಸಿರುವ ನಿನ್ನನ್ನು ಆಶ್ರಯಿಸಿರುವೆನು. ನಿನ್ನ ಹೊರತನ್ಯ ಶರಣಜನ ಕರುಣಾವರಣಾಲಯರನ್ನು ಕಾಣೆನು.

ನಾನು ಕಂಡ ನಿನ್ನ ಭುವನವ ಮಂಗಳರೂಪವನ್ನು ಅವರವರ ಯೋಗ್ಯೋಪಾಸನೆ ಯಿಂದ ಧ್ಯಾನಾನುಗುಣವಾಗಿ ತೋರಿಸಿ, ಪೊರೆವ ಷಡ್ಗುಣೈಶ್ವರ್ಯಸಂಪನ್ನನೇ! ನಮೋನಮ! ಇಂತಹ ನಿನ್ನನ್ನು ತಮೋಯೋಗ್ಯರಾದ ಪಾಪಿಗಳೆಂತು ಭಜಿಪರು? ನರಕವನ್ನು ಪೊಂದುವ ದುಷ್ಪಸಂಗ ದೂಷಿತರೆಂತಾದರಿಪರು? ಆದರೆ ಕೃಷ್ಣಾ! ಅಂತರಂಗದಲ್ಲಿ ಹರಿಯ ಕಾಣುವ ಸುಜನರು ಗುರುಮುಖದಿಂದ ಕೇಳಿ ಉಪನಿಷದುಕ್ತಪ್ರಕಾರವಾಗಿ ಉಪಾಸಿಸಿ, ನಿನ್ನ ಚರಣಾಂಬುಜ ಗಂಧವನ್ನು ವಾಯುಸಮಾನೀತವಾಗುತ್ತಿರಲು ಸೇವಿಸಿ, ಶ್ವೇತದ್ವೀಪಾದಿಗಳಲ್ಲಿರುವ ನಿನ್ನ ಮೂಲ ರೂಪವನ್ನು ಹೃದಯದಲ್ಲಿ ನಿನ್ನ ಅನುಗ್ರಹದಿಂದ ವ್ಯಕ್ತೀಕರಿಸಿಕೊಂಡು ಕೊಂಡಾಡುವರು. ಅವರ ಹೃದಯವನ್ನೆಂದಿಗೂ ಬಿಡದೆ ನಿಂತು ಸಂತೈಸುವಿಯೋ ದೇವಾ! ಎಂದಿನವರೆಗೂ ನಿನ್ನ ಅಭಯಾಖ್ಯ ಪಾದಪದ್ಮವನ್ನಾಶ್ರಯಿಸುವುದಿಲ್ಲವೋ ಅಂದಿನವರೆವಿಗೀ ಜನರಿಗೆ ಧನವಸನ ನಿವಸನ ಪುತ್ರಕಳತ್ರಮಿತ್ರ ನಿಮಿತ್ತ ಶೋಕ, ಆಶೆ, ಪರಿಭವ, ದೀನತೆ, ಮಹಾಲೋಭಗಳು, ನಾನು ನನ್ನದೆಂಬ ದುರಭಿಮಾನ ಜನ್ಯದುಃಖಗಳು ಪೀಡಿಸುತ್ತಲೇ ಇರುವವು. ಸರ್ವಪಾಪಶಮನ ವಾದ ನಿನ್ನ ಮಂಗಳಕರಕಥಾ ಪ್ರಸಂಗವನ್ನು ಬಿಟ್ಟು ಸರ್ವೋತ್ತಮನಾದ ನಿನ್ನಿಂದ ವಿಮುಖರಾಗಿ, ಬೇಡಿದ ಸುಖಲೇಶಕ್ಕಾಗಿ ದೀನರಾಗಿ, ಕಂಡವರನ್ನು ಬೇಡಿ, ಧನವನ್ನು ಕೂಡಿಸಿ, ತಾವೂ ಸುಖಿಸದೆ

ಸದ್ಭ್ಕಯವನ್ನೂ ಮಾಡದೆ ನಿರಂತರ ಪಾಪಕಾರ್ಯಾಚರಣೆಯಿಂದ ನರಕವನ್ನೋ ತಮಸ್ಸನ್ನೋ ಪೊಂದುವ ಇಂದ್ರಿಯಾರಾಮರೆಂದಿಗೂ ನಿನ್ನ ಚರಣವನ್ನು ಕಾಣಲಾರರು. ಈ ತ್ರಿವಿಧ ಜೀವರು ಹಸಿವೆ, ನೀರಡಿಕೆ, ಪಿತ್ತ ಶ್ಲೇಷ್ಮಗಳೆಂಬ ತ್ರಿಧಾತುಗಳು, ಚಳಿ ಬಿಸಿಲು ಗಾಳಿ ಮಳೆ, ಪರಸ್ಪರ ಕಲಹ, ಕಾಮಾಗ್ನಿ ತಡೆಯಲಾಗದ ಸಿಟ್ಟು, ಇವುಗಳಿಂದ ಪೀಡಿತರಾಗಿರುವರು. ಇವರನ್ನು ಕಂಡು ನನ್ನ ಮನ ನೊಂದಿದೆ.

ಮುಕ್ತಿಯೋಗ್ಯರು ನಾನು ನನ್ನದೆನ್ನದೆ ಧ್ಯಾನ ದರ್ಶನ ಭೋಜನ ಭೋಗಾದೀಂದ್ರಿಯ ವಿವಿಧ ವ್ಯಾಪಾರವು ಶ್ರೀಹರೀಚ್ಛಾಪ್ರಣೀತವೆಂದು ತಿಳಿವರು. ಅವರು ಅದೇ ಸಂಸಾರದಿಂದ ಮುಕ್ತರಾಗುವರು. ಅಂದೇ ಆತ್ಯಂತಿಕ ಪ್ರಯೋಜನಶೂನ್ಯವಾದರೂ ಯಜ್ಞಾದಿ ಕ್ರಿಯೆಗಳ ಫಲವಾದ ಸುಖದುಃಖಪರಂಪರಾಪಾದಕವಾದ ಸಂಸ್ಕೃತಿಯು ನಾಶ ಹೊಂದುವದು.

ನಿತ್ಯ ಸಂಸಾರಿಗಳಂತೂ ತತ್ತ್ವಜ್ಞಾನ ನಿಶ್ಚಯವಿಲ್ಲದೆ ಅಜ್ಞಾನನಿದ್ರೆಯಲ್ಲಿ ಮಗ್ನರಾಗಿ ಶಬ್ದಾದಿ ವಿಷಯಸಕ್ತೇಂದ್ರಿಯವಶರಾಗಿ, ಮನೋರಥವನ್ನೇರಿ ಸಂಚರಿಸುತ್ತಾ ಧನಲೋಭದಿಂದ ನಿದ್ರೆಯನ್ನೂ ಮಾಡಲಾರದೆ, ಅದೃಷ್ಟ ಪ್ರೇರಕನಾದ ನಿನ್ನಿಂದ ತಮ್ಮ ಇಷ್ಟಾರ್ಥಂಗಳು ಕೈಗೂಡದೆ ಕೆಡುತ್ತಿ ಲು ಪಾಪಿಗಳಾಗಿ, ಏನು ಪೇಳಲಿ! ಋಷಿಕುಲಪ್ರಸೂತರೆನಿಸಿದವರು ಕೂಡ ನಿನ್ನ ಮಹಿಮೆಯನ್ನು ಕೇಳಲೊಲ್ಲದೆ ಸಂಸಾರದಲ್ಲೇ ನರಳುತ್ತಿರುವರು. ನಿತ್ಯಲುಪ್ತಕರ್ಮಾನುಷ್ಠಾನ ರಾಗಿ ತ್ರಿದಿವನಿರಯಭೂಗೋಚರರಾಗಿ ಗೋಳಾಡುತ್ತಿರುವರು.

ಪುರುಷೋತ್ತಮ! ಲೋಕಮಾನ್ಯರಾದ ಆಚಾರ್ಯವರ್ಯರಿಂದ ಶಾಸ್ತ್ರಶ್ರವಣ ಮಾಡಿ ವಿಷ್ಣುಭಕ್ತಿಪರಿಶುದ್ಧಾಂತಃಕರಣರಾದ ಮುಕ್ತಿಯೋಗ್ಯ ಜನರು ಸ್ವಯೋಗ್ಯವಾದ ರೀತಿಯಲ್ಲಿ ನಿನ್ನ ಜ್ಞಾನಾನಂದಾದಿ ಗುಣಗಳನ್ನು ಧ್ಯಾನಿಸಲು ಅವರಲ್ಲಿ ಪರಮಾನುಗ್ರಹವನ್ನು ಮಾಡಿ ಉರುಗಾಯನಾದ ನೀನು ನಿನ್ನ ಅನಂತರೂಪವನ್ನೇ ಅವರಿಗೆ ತೋರಿಸುವೆ. ನಾನಾ ಜನರಲ್ಲಿರುವ ನಿನ್ನನ್ನು ಸರ್ವಭೂತಗಳಲ್ಲಿ ದಯೆಯಿಂದ ಆರಾಧಿಸಿ ಮೆಚ್ಚಿಸಿ ದುರ್ಭಗ ಶರೀರದಲ್ಲಿದ್ದರೂ ನಿರ್ದೋಷನೆಂದು ತಿಳಿದು, ಅನಿಮಿತ್ತಬಂಧುವೆಂದು ನಂಬಿದ ಸುರಪ್ರಕೃತಿ ಜನರಲ್ಲಿ ಅತಿ ಪ್ರಸನ್ನನಾದಂತೆ, ಅಸುರಸ್ವಭಾವದವರು ಅತ್ಯುಪಚಾರ ವೈಭವಗಳಿಂದ ನಿನ್ನನ್ನು ಪೂಜಿಸಿದರೂ ಮನಸ್ಸಿನಲ್ಲಿ ಕಾಮಬೀಜಾಂಕುರವೃದ್ಧಿಯನ್ನು ಪೊಂದಿರುವ ಅವರ ಪೂಜೆಯನ್ನು ನೀ ಕೈಕೊಳ್ಳುವುದಿಲ್ಲ; ಪ್ರಸನ್ನನಾಗುವದು ದೂರತೋಪಾಸ್ತವೇ ಸರಿ!

ಪುರುಷರು ವಿವಿಧ ಕರ್ಮವನ್ನಾಚರಿಸುವರು. ದಾನಗಳನ್ನು ಕೊಡುವರು. ತಪವನ್ನು ಮಾಡುವರು, ವ್ರತಗಳನ್ನಾಚರಿಸುವರು, ಅದೆಲ್ಲವೂ ನಿನ್ನ ಸತ್ಕಾರದಿಂದ ಪುಟ್ಟುವ ಅದೃಷ್ಟವೆಂಬ ಪ್ರಯೋಜನದಿಂದ ಕೂಡಿದ್ದರೂ ನಿನಗೆ ಸಮರ್ಪಿತವಾಗದಿದ್ದರೆ ಬರೀ ನಿಷ್ಕಾಮಕರ್ಮವು ಕೂಡ ನಿನ್ನ ಪ್ರೀತಿಸಾಧನವಾಗಲಾರದು. ಶಶ್ವದೇಕಪ್ರಕಾರವಾದ ಸ್ವರೂಪಭೂತ ಜ್ಞಾನಬಲದಿಂದ ಸಂಪೂರ್ಣ ಭೇದವಿಷಯಕ ಮೋಹವನ್ನು ನಾಶಮಾಡಿರುವ, ಅಪ್ರಾಕೃತಜ್ಞಾನ ರೂಪಬುದ್ಧಿ ಪ್ರಕಾಶನಾದ, ಪ್ರಕೃತಿಕೃತದೇಹಜನನ ಮರಣಾದ್ಯುಪದ್ರವ ದೂರನಾದ, ಕರ್ಮಬದ್ಧ ಜೀವ ವಿಲಕ್ಷಣನಾದ, ಜಗಜ್ಜನ್ಮಸ್ಥಿತಿ ಸಂಹಾರ ನಿಯಮನಾದಿ ನಿಮಿತ್ತ ಸ್ವತಂತ್ರಕಾರಣನಾದ, ಲೀಲೆ ಗೋಸುಗ ಜೀವರಿಗೆ ಜನ್ಮಪ್ರಭೃತಿ ಮೋಕ್ಷಪರ್ಯಂತ ಸಮರ್ಪಕ ಕ್ರೀಡಾರಾಮ ಭೂತಪ್ರಪಂಚ ನಾದ, ಈಶ್ವರನೇ! ನಿನಗೆ ನಮಸ್ಕಾರ ಮಾಡುತ್ತಾ ಅನಾದಿಯಿಂದ ದಾಸನಾಗಿ ಬಂದಿರುವೆನು.

ಪ್ರಾಣಪ್ರಯಾಣಕಾಲದಲ್ಲಿ ಭಕ್ತಿವಿವಶರಾಗಿ ನಿನ್ನ ಗುಣಕರ್ಮ ಲೀಲೆಗಳನ್ನು ವರ್ಣಿಸುವ ನಿನ್ನ ಪವಿತ್ರನಮಗಳನ್ನು ನುಡಿವ ಸುಜನರು ಅನೇಕ ಜನ್ಮ ಸಂಚಿತಪಾಪಪಂಕಿಲವನ್ನು ನಿಶ್ಚಯವಾಗಿ ತೊಳೆದುಕೊಂಡು ಸೃಷ್ಟಿಪ್ರಳಯಾದಿ ಕಾಲಗಳಲ್ಲಿಯೂ ವಿಕಾರರಹಿತನೂ, ಮಾಯಾದಿ ಸರ್ವಾವರಣರಹಿತನೂ ಜನ್ಮ ಮುಖಪ್ರಾಕೃತದೋಷರಹಿತನೂ ಆದ ನಿನ್ನನ್ನು ಪೊಂದಿ ಸುಖಿಪರು.'ವಿಷ್ಣುವಿಗೆ ಅನ್ಯರೂ ಪೂರ್ಣರರು, ಅವನ ಅವತಾರಗಳಲ್ಲಿ ಭೇದ ಉಂಟು, ಜೀವನೇ ಬ್ರಹ್ಮನು. ವಿಷ್ಣುವೂ ಜೀವನೇ, ಜಡದಿಂದ ಜೀವವಿಷ್ಣುಗಳಿಗೆ ಭೇದವಿಲ್ಲ. ಇವು ಭೇದವೋಹವೀ ಅಜ್ಞಾನವು ಶ್ರೀಹರಿಗೆ ಎಂದಿಗೂ ಇರುವುದಿಲ್ಲ' ಎಂದು ನಿನ್ನನ್ನು ಉಪಾಸಿಸಿದವರಿಗೆ ಭೇದಮೋಹವು ಪುಟ್ಟಲಾರದು. ಅನಂತಾಸನ ವೈಕುಂಠ ಕ್ಷೀರಾಬ್ಧಿಗಳಲ್ಲಿದ್ದು ತ್ರಿಪಾತ್ ಎಂದು ಪ್ರಸಿದ್ಧನಾದ ನೀನೇ ಮೂರು ರೂಪನಾದೆ. ನನ್ನಲ್ಲಿ ವಿರಿಂಚನೆಂಬ ರೂಪದಿಂದಲೂ, ಗಿರೀಶನಲ್ಲಿ ಶಿವನೆಂಬ ರೂಪದಿಂದಲೂ, ಪ್ರವೇಶಿಸಿ ಸೃಷ್ಟಿಲಯಕಾರ್ಯ ಗಳನ್ನು ಮಾಡಿಸುತ್ತಾ ನೀನೇ ಸ್ವಯಂ ಸಂರಕ್ಷಣೆಯನ್ನೂ ಮಾಡುತ್ತಿರುವೆ. ಒಂದಿದ್ದು ಮೂರಾಗಿ ಬೆಳೆದ ಭಗವತ್ಕಲ್ಪದ್ರುಮನೇ! ನಿನಗೆ ನಮಸ್ಕಾರ. ಲೋಕದ ಜನರು ಶ್ರೀಹರೇ! ಪಾಪನಿರತರು, ಪುಣ್ಯಮಾಡುವದನ್ನು ಮರೆತರು. ನೀನೇ ಕರುಣೆಯಿಂದ ಪೇಳಿದ ನಿನ್ನ ಸೇವಾಧರ್ಮವನ್ನು ಬಿಟ್ಟು, ಅನ್ಯ ಲೌಕಿಕ ಕರ್ಮನಿರತರಾಗಿರುವಾಗ ಅವರು ಬದುಕಬೇಕೆಂಬ ಆಶಾಪಾಶವನ್ನು ಕಣ್ಣುಮುಚ್ಚದೆ ನಿತ್ಯಕಾಲವೀಕ್ಷಕನಾದ ನೀನು ನೋಡುತ್ತಿದ್ದಂತೆಯೇ ಕ್ಷಣಾರ್ಧದಲ್ಲಿ ಭೇದಿಸಿ ಬಿಡುವೆ. ಸಕಲ ಲೋಕದಿಂದ ನಮಸ್ಕೃತವಾದ ಸತ್ಯಲೋಕಪಾಲಕನೆನಿಸಿ ಪರಾಯುನಾಗಿರುವೆ ನಾದರೂ ಆ ದ್ವಿಪರಾರ್ಧಗಳು ಮುಗಿಯುವಾಗ ನಾನೂ ನಿನಗೆ ಭಯಪಡುವೆನು. ಮುಕ್ತಿಯಲ್ಲಿ ಆನಂದವೃದ್ಧಿಯನ್ನು ಪೊಂದಲು ಬಹುಕಾಲ ತಪವನ್ನೂ ಗೈಯುವೆನು. ಇಂತಹ ಸ್ವತಂತ್ರನಾದ ಹರಿಯೇ! ನಿನಗೆ ನಮಸ್ಕಾರವು.

ಇತರರಿಗೆ ವಿಜ್ಞಾನವಿಲೋಪ ಹೇತುಗಳಾದ ತಿರ್ಯಕ್, ಮನುಷ್ಯ ವಿಬುಧಾದಿ ಜೀವ ಯೋನಿಗಳಲ್ಲಿ ಸ್ವೇಚ್ಛೆಯಿಂದ ನೀನು ನಿರ್ಮಿಸಿದ ನಿರ್ಮಲಧರ್ಮ ಪರಿಪಾಲನೆಗೆಂದವತರಿಸಿ ನಿತ್ಯರತನಾದರೂ ನಿತ್ಯಾನಂದಮಹಾಂಬುಧಿಯಾದರೂ ಅವರವರಿಗವರವರ ಧರ್ಮವನ್ನು ನೋಡಿಸಲು ನಡೆಸಿದ ಪುರುಷೋತ್ತಮನೇ! ಭಗವನ್! ನಮಸ್ಕಾರ! ಸರ್ವಜ್ಞನಾದ ನಿನಗೆ ಅವಿದ್ಯಾಸಂಬಂಧವೇ ಇಲ್ಲ. ಪಾಂಚಪರ್ವಣಿಯಾದ ಅವಿದ್ಯೆಯಿಂದಾವೃತನೆಂದು ತೋರಿಸಿ, ಲೋಕಯಾತ್ರೆಯನ್ನು ಉಪರಮಿಸಿ, ಸಮಸ್ತವನ್ನುದರದಲ್ಲಿಟ್ಟು ಪ್ರಳಯೋದಧಿಯಲ್ಲಿ ಮೃದು ಶೇಷಪರ್ಯಂಕದಲ್ಲಿ ಯೋಗನಿದ್ರಾಮುದ್ರಿತನಾಗಿದ್ದೆ. ಸೃಷ್ಟಿಕಾಲವೆಂದು ನಿನ್ನ ಮನಸ್ಸಿಗೆ ಬರಲು ಸುಜನರು ಸುಖಕ್ಕಾಗಿ ಸೃಷ್ಟಿಮಾಡಲುಪಕಕ್ರಮಿಸಿದ ನಿನ್ನ ನಾಭಿಸರೋಜದಿಂದ ನಾ ಬಂದೆ. ನಿನ್ನನುಗ್ರಹದಿಂದ ಲೋಕತ್ರಯಸೃಷ್ಟಿಯಲ್ಲಿ ನಿನ್ನಿಂದ ಅಧಿಕೃತ ಸಾಧನನೆನಿಸಿ ನಿಂದೆ. ರುದ್ರಾದಿ ಸಮಸ್ತ ಜೀವರನ್ನು ಪೊಟ್ಟೆಯಲ್ಲಿಟ್ಟು ಯೋಗನಿದ್ರೆಯ ಮಾಡುತ್ತಾ ಸೃಷ್ಟಿಕಾಲೋದಯವಾಗಲು ವಿಕಸಿತನಲಿನನಯನನಾಗಿ ವೀಕ್ಷಿಸುವ ವಿಭೋ! ವಿಜ್ಞಾಪನೆಯಂ ಕೇಳು. ನೀನೆನ್ನ ಅನಿಮಿತ್ತ ಬಂಧುವಾಗಿರುವೆ. ಸಮಸ್ತ ಜಗಕ್ಕೆ ಸ್ವಾಮಿಯಾಗಿ ವ್ಯಾಪ್ತನಾಗಿ ಅಂತರ್ಯಾಮಿಯಾಗಿರುವೆ. ಪರಾಕ್ರಮಿಸಿ ಮೆರೆಯುವೆ. ಐಶ್ವರ್ಯದಿಂದ ವಿರಾಜಿಸುವ ನಿನ್ನನ್ನು ನಾ ಕೇಳಿಕೊಳ್ಳುವುದೊಂದೇ! ಪ್ರಣತ ಪ್ರಿಯನಲ್ಲವೇ ನೀನು! ಪೂರ್ವದಂತೆ ಈ ಜಗವನ್ನು ನಿರ್ಮಿಸುವ ಜ್ಞಾನವನ್ನು ನನಗೆ ದಯಪಾಲಿಸು.

ಪ್ರಪನ್ನಲೋಕವರದನು, ರಮಾಪ್ರಿಯನು ಆದ ನೀನಾಮಾತೆಯಿಂದ ಕೂಡಿ ಮಾಡುವ ಅವತಾರಗುಣಲೀಲೆಗಳಲ್ಲಿ ಈ ಜಗನ್ನಿರ್ಮಾಣವ್ಯಾಪಾರರತನಾದೆನ್ನ ಮನಸ್ಸು ಮರೆಯದೆ ಮಗ್ನವಾಗಲಿ! ಜ್ಞಾನಪ್ರತಿಬಂಧಕ ಪಾಪಸ್ವರೂಪ ದೈತ್ಯರನ್ನು ಸೃಜಿಸುವಾಗ ಪಾಪಲೇಪವಾಗ ದರಲಿ! ಪ್ರಳಯಸಮುದ್ರಶಾಯಿಯಾದ ಯಾವ ಶ್ರೀಹರಿಯ ಅನಂತಶಕ್ತಿಗಳಲ್ಲಿ ವಿಜ್ಞಾನನಾಮಕ ಶಕ್ತಿಯಿಂದ ನಾನು ಭಿನ್ನಾಂಶನಾಗಿ ಬಂದಿರುವೆನೋ–ಅಂತಹ ವಿಚಿತ್ರರೂಪನನ್ನು ತೋರಿಸಿ ಕೊಟ್ಟು ಕಾಪಾಡುವ ಪುರುಷೋತ್ತಮನೇ! ನಿನ್ನ ಸರ್ವೋತ್ತಮತ್ವಜ್ಞಾನವೆನಗೆ ಸದಾ ನಶಿಸದೇ ಜಾಗ್ರತವಾಗಿರಲಿ! ಇಂತಹ ನಿಶ್ಚಯಜ್ಞಾನದಾನಚಣನು, ಅತ್ಯಂತ ಕರುಣನು ಆದ ಶ್ರೀಶನು ಹೆಚ್ಚಳವಾದ ಪ್ರೀತಿಯಿಂದ ನಯನಪದ್ಮವನ್ನರಳಿಸಿ, ಮಂದಹಾಸದಿಂದ ನೋಡುತ್ತಾ ಪರ್ಯಂಕ ದಿಂದೆದ್ದು ಪ್ರಪಂಚಜಯಶಾಲಿಯಾಗುವಂತೆ ನನ್ನ ಮನಃಖೇದವು ನಶಿಸಿ ಪೋಗುವಂತೆ ಮಧುಮಧುರವಾಣಿಯಿಂದ 'ಎಲೌ ವೇದಗರ್ಭ! ಭಯ ಬೇಡ, ಸೃಷ್ಟಿಪ್ರಯತ್ನವನ್ನು ಮಾಡು!' ಎಂಬೀ ಆಜ್ಞೆಯನ್ನು ದಯಪಾಲಿಸಿ ನನ್ನ ಸೇವೆಯನ್ನು ಸ್ವೀಕರಿಸಿ ರಕ್ಷಿಸಲಿ! ಎಂದು ಚತುರ್ಮುಖನು ಸ್ತುತಿಸಿದನು.

ಇಂತು ತಪೋವಿದ್ಯಾಸಮಾಧಿಗಳಿಂದ ತನ್ನ ತಂದೆಯ ಸಂದರ್ಶನವನ್ನು ಪಡೆದು ಶತಾನಂದನು ಮನಸಾ ವಚಸಾ ಕೈಲಾದಷ್ಟು ಸ್ತುತಿಸಿ ಹರಿಗುಣಾನಂತ್ಯವಂ ಕಂಡು ಅಲಂಬುದ್ಧಿ ರಹಿತನಾದರೂ, ವಿರಮಿಸಿದನು. ಆಗ ಬ್ರಹ್ಮನ ಮನೋಭೀಷ್ಟವನ್ನು ತಿಳಿದು ಮಧುಸೂದನನು ಪ್ರಳಯಜಲಮಧ್ಯದಲ್ಲಿ ಲೋಕಗಳನ್ನಿಡುವ ವಿಧದ ವಿಜ್ಞಾನ ವಿಷಯದಲ್ಲಿ ಅಲಂಬುದ್ಧಿ ಯಿಲ್ಲದೆ ಖೇದಪಡುವ ಬ್ರಹ್ಮನ ಜ್ಞಾನಸಂಕಟವನ್ನು ಹೋಗಲಾಡಿಸುವ ಅಗಾಧ ಗಂಭೀರ ವಚನಚಗಳಿಂದಿಂತೆಂದನು.

ವೇದಗರ್ಭ! ಖೇದವನ್ನು ಬಿಡು, ಸರ್ಗಪ್ರಯತ್ನವನ್ನು ಮಾಡು. ಲೋಕಸಂಸ್ಥಾನ ವಿಜ್ಞಾನ ವನ್ನು ನೀನಪೇಕ್ಷಿಸಿದಾಗ ಆಗಲೇ ನಾನು 'ತಪ'ಎಂದು ಹೇಳಿದೆನಲ್ಲವೇ? ತಪಸ್ಸನ್ನು ಮಾಡು. ನನ್ನಲ್ಲಿ ಭಕ್ತಿಯಿಂದ ನಿನ್ನ ಹೃದಯದಲ್ಲಿ ಲೋಕಗಳನ್ನು ಚೆನ್ನಾಗಿ ಕಾಣುವೆ. ಆಗ ಭಕ್ತಿಯುಕ್ತ ಧ್ಯಾನಬಲದಿಂದ ವ್ಯಾಪ್ತನಾದ ನನ್ನನ್ನೂ ಮತ್ತು ನಿನ್ನ ಅಂತರ್ಯಾಮಿಯಾಗಿರುವ ನನ್ನಲ್ಲಿ ಸರ್ವಲೋಕಗಳನ್ನು ನೋಡುವೆ. ದಾರುವಿನಲ್ಲಿ ನಿಸ್ಸಂಗನಾಗಿರುವ ಅಗ್ನಿಯಂತೆ ಸರ್ವಭೂತ ಗಳಲ್ಲಿ ನಿರ್ವಿಕಾರನಾಗಿರುವ ನನ್ನನ್ನು ನೋಡಿದ ಯೋಗ್ಯನು, ತನ್ನ ಪಾಪವನ್ನೆಲ್ಲಾ ತೊಡೆದು ಬಿಸುಟು, ಶುದ್ಧನಾಗುವನು. ಇಷ್ಟೇ ಅಲ್ಲ ಕೇಳು, ಅಹಂ ಮಮಕಾರಗಳ ಬಿಟ್ಟು, ಭೂತೇಂದ್ರಿಯಮನೋ ಬುದ್ಧಿಪ್ರಮುಖ ಪ್ರಾಕೃತ ವಿಕಾರರಹಿತನೆಂದು ತಿಳಿದು, ಹೃದಯದಲ್ಲಿರುವ ಬಿಂಬಪಾದಾಬ್ಜಸೇವಕನಾದ ಜೀವಸ್ವರೂಪವನ್ನು ಕಂಡಾಗ ಮುಕ್ತನೇ ಆಗುವನು. ಅದೃಷ್ಟ ಫಲೋನ್ಮುಖವಾದ ನಾನಾಕರ್ಮವಿಪಾಕವನ್ನನುಸರಿಸಿ, ವಿವಿಧ ಪ್ರಜರನ್ನು ಸೃಜಿಸುವಾಗ ನಿನ್ನ ಬುದ್ಧಿಯು ನಶಿಸದೇ ಉಜ್ವಲವಾಗಲಿ! ಇದು ನನ್ನ ಪರಮಾನುಗ್ರಹವೆಂದು ತಿಳಿ. ನನ್ನಲ್ಲಿ ಮನವಿಟ್ಟು ಪ್ರಜಾಸೃಷ್ಟಿಮಾಡುವಾಗ ಪಾಪ ಬಹುಳವಾದ ರಜೋಗುಣಲೇಪವು ನಿನಗೆ ನನ್ನ ನಂಬಿದ ಜ್ಞಾನಿಶ್ರೇಷ್ಠರಿಗೆ, ಆಗದಿರಲಿ! ಭೂತೇಂದ್ರಿಯಮನೋಗುಣ ಬುದ್ಧಿ ನಿಯಾಮಕನಾದ ನನ್ನನ್ನು ಪ್ರಭುವೆಂದು ತಿಳಿದಿರುವೆ. ಆದ್ದರಿಂದ, ದೇಹಿಗಳಿಗೆ ದುರ್ಜ್ಞೇಯ ನಾದ ನಾನು ನಿನ್ನಲ್ಲಿ ಅನುಗ್ರಹಿಸಿ ಕಾಣಿಸಿರುವೆನು. ನನ್ನ ವಿಚಾರಚತುರನಾದ ನಿನಗೆ ನನ್ನ ಈ ರೂಪವು ಪುಷ್ಕರನಾಲ ದಿಂದ ಜಲಪೊಕ್ಕು ಹುಡುಕುವ ಸಮಯದಿ ದೃಗ್ಗೋಚರವಾಗಿದೆ. ನನ್ನ ಮಹಿಮಾಂಕಿತವಾದ

ಸ್ತೋತ್ರವನ್ನು ಮಾಡಿದೆ. ನನ್ನ ಕುರಿತು ತೀವ್ರ ತಪಸ್ಸನ್ನೂ ಗೈದೆ. ಮನೋವಾಗ್ವ್ಯಾಪಾರಗಳೆರಡು ನನ್ನಲ್ಲಿ ಸಮರ್ಪಿತವಾಗುವದು ನನ್ನ ಅನುಗ್ರಹದಿಂದಲೇ! ನಾನು ಪ್ರೀತನಾಗಿರುವೆನು. ನಿನಗೆ ಮಂಗಳವಾಗಲಿ! ಲೋಕಸೃಷ್ಟಿ ವಿಜಯೇಚ್ಛೆಯಿಂದ ಸತ್ವಾದಿಗುಣ ರಹಿತನಾದರೂ ಸರ್ವಜ್ಞತ್ವ, ಸ್ವತಂತ್ರತ್ವ, ಸರ್ವೇಶತ್ವಾದಿಗುಣಭರಿತನಾದೆನ್ನ ವರ್ಣನೆಯನ್ನು ಮಾಡಿ ಭಕ್ತಿಯಿಂದ ಸ್ತುತಿಸಿ ರುವೆ. ಅಧಿಕಾರಿಯು ಈ ಸ್ತೋತ್ರವನ್ನು ಪಠಿಸಿ ನನ್ನನ್ನು ನಿತ್ಯವೂ ಭಜಿಸಿದರೆ ಅವನಿಗೆ ನಾನು ಪ್ರಸನ್ನನಾಗಿ ಸರ್ವಕಾಮಿತಫಲದಾತನಾಗುವೆನು. ಪೂರ್ತದಿಂದ, ತಪದಿಂದ, ಯಜ್ಞಗಳಿಂದ ತುಲಾಪುರುಷಾದಿ ದಾನಗಳಿಂದ, ಯೋಗಾಭ್ಯಾಸದಿಂದ ಸಮಾಧಿಯಿಂದ ಸಂಪಾದಿಸಲು ಯೋಗ್ಯವಾದದ್ದೆನ್ನ ಪ್ರೀತಿಯೇ. ಅನ್ಯವಲ್ಲ. 'ನಿಃಶ್ರೇಯಸ್ಸಿಗೆ ನನ್ನ ರಂಜನವೇ ಕಾರಣವಾಗಿದೆ' ಎಂದು ತತ್ತ್ವವೇತೃಗಳು ತಿಳಿದಿರುವರು.

ನಾನೇ ಸರ್ವಭೂತಗಳ ಅಂತರ್ಯಾಮಿಯಾಗಿರುವೆನಾದ್ದರಿಂದ ಪ್ರೀತಿಪಾತ್ರ ವಿಷಯರಲ್ಲಿ ನಾನೇ ಅಭ್ಯರ್ಹಿತನೆನಿಸಿರುವೆನು. ಆದ್ದರಿಂದಲೇ ನಾನು ಕೊಟ್ಟು ಪ್ರೀತಿ ಮಾಡೆಂದು ನಿಯಮಿಸದ ಹೊರತು, ಪ್ರೀತಿಪಾತ್ರವಾಗಲಾರದ ದೇಹಾದಿಗಳಲ್ಲಿರುವ ಪ್ರೀತಿಯಂಕಿತ ಅನಂತಗುಣಿತವಾದ ಪ್ರೀತಿಯನ್ನು ನನ್ನಲ್ಲಿ ಮಾಡಬೇಕು. ನನ್ನಗೋಸುಗವೇ ದೇಹಾದಿಗಳು ಪ್ರೀತಿವಿಷಯಕವಾಗಿವೆ. ಬ್ರಹ್ಮನೇ! ಪ್ರಜಾಪತಿಯೇ! ನನ್ನಿಂದ ಪುಟ್ಟಿ ನನ್ನ ಭಕ್ತನಾದ ನೀನು ಈ ನಿನ್ನ ದೇಹದಿಂದ ನನ್ನಲ್ಲಿರುವ ಪ್ರಜಾಗಣವನ್ನು ಪೂರ್ವಕಲ್ಪದಲ್ಲಂತೆ ಸೃಷ್ಟಿಮಾಡು. ಸರ್ವವೇದದಲ್ಲಿ ಖ್ಯಾತನಾದೆನ್ನ ಇಚ್ಛೆಯಿಂದ ನೀನೀ ಸೃಜನಕರ್ಮದಲ್ಲಿ ಅಧಿಕೃತನಾಗಿರುವೆಯಾದ್ದರಿಂದ ನನ್ನ ಪೂಜೆಯೆಂದು ರುದ್ರಾದಿಗಳಿಂದ ಕೂಡಿ ಸೃಷ್ಟಿಮಾಡು.

ಮೈತ್ರೇಯನು ಹೇಳಿದನು.

ಪ್ರಕೃತಿಪುರುಷರೊಡೆಯನಾದ ಶ್ರೀಹರಿಯು ಧ್ಯಾನವಿಷಯವಾದ ತನ್ನ ರೂಪದಿಂದ ಬ್ರಹ್ಮನಿಗೆ ಕಾಣಿಸಿ, ಉಪದೇಶಿಸಿ ಅಂತರ್ಧಾನವನ್ನು ಹೊಂದಿದನು.

## ೧೧. ವಿರಿಂಚಕೃತ ನವವಿಧ ಸೃಷ್ಟಿ ವಿವರ

ವಿದುರ ಪ್ರಶ್ನಿಸಿದನು–

ಭಗವಂತನು ತಿರೋಹಿತನಾಗಲು ಲೋಕಪಿತಾಮಹನಾದ ಬ್ರಹ್ಮನು ಮನಸ್ಸಿನಿಂದ ದೇಹದಿಂದ ಎಷ್ಟು ವಿಧ ಪ್ರಜರನ್ನು ಸೃಜಿಸಿದನು? ಭಗವನ್! ಬಹುಶ್ರುತನಾದ ನೀನು ನಾ ಕೇಳಿದ ಎಲ್ಲಾ ಪ್ರಶ್ನೆಗಳಿಗೆ ಅನುಕ್ರಮವಾಗಿ ಉತ್ತರಗಳನ್ನು ದಯದಿಂದ ಕೊಟ್ಟು ನನ್ನ ಸರ್ವ ಸಂಶಯಗಳನ್ನು ಕಳೆಯಬೇಕೆಂದು ಬೇಡುತ್ತಿರುವೆನು.

ಎಂದು ವಿದುರನು ಪ್ರಶ್ನೆಯನ್ನು ಕೇಳಿದನು. ಕೌಷಾರವ ಮುನಿಯು ಪ್ರೀತನಾಗಿ ಅನುಕ್ರಮವಾಗಿ ಸಮಾಧಾನ ಕೊಟ್ಟನು.

"ವಿದುರಾ! ಕೇಳು, ವಿರಿಂಚನಾದರೂ ತನ್ನ ಅಂತರ್ಯಾಮಿಯಾದ ಶ್ರೀಹರಿಯಲ್ಲಿ ಮನ ಸಿಟ್ಟು ಭಕ್ತಿಯಿಂದ ಪರಮಾತ್ಮನ ಅಪ್ಪಣೆಯಂತೆ ದಿವ್ಯವರ್ಷಶತಕಾಲದ ತಪಸ್ಸನ್ನಾಚರಿಸಿದನು.

ಆ ಪ್ರಳಯ ಜಲದಲ್ಲಿದ್ದ ತನ್ನ ಅಧಿಷ್ಠಾನವಾದ ಕಮಲವು ಜಲವು ಕೂಡ ಹರಿಪ್ರಬೋಧ ಕಾಲವು ಬರಲು ಕಂಪಿತವಾದದ್ದನ್ನು ನೋಡಿ, ತಪಸ್ಸಿನಿಂದ ವಿವೃದ್ಧವಾದ ಹರಿನಿರತವಾದ

ವಿಜ್ಞಾನಬಲದಿಂದ ನೀರನ್ನೂ ವಾಯುವನ್ನೂ ಸಹ ಕುಡಿದುಬಿಟ್ಟನು. ಸರ್ವಜೀವವಾಸ ವಿರೋಧಿಯಾದ ಪ್ರಳಯಜಲವಾಯು ಪಾನವಂ ಗೈದು ಮೇಲಕ್ಕೆದ್ದ ಕಮಲವನ್ನು ಕಂಡು ಇದರಲ್ಲಿ ಹಿಂದೆ ಲೀನವಾದೆಲ್ಲ ಲೋಕಗಳನ್ನೂ ನಿರ್ಮಿಸುವೆನೆಂದು ಸಂಕಲ್ಪಿಸಿದನು.

ಜ್ಞಾನವೈರಾಗ್ಯಾದಿ ಗುಣಶಾಲಿಯಾದ ಚತುರ್ಮುಖನು ಚತುರ್ದಶ ಭವನ ನಿರ್ಮಾಣ ನಿಮಿತ್ತವಾದ ಕರ್ಮದಿಂದ ಪ್ರೇರಿತನಾಗಿ ಶ್ರೀಹರೀಚ್ಛೆಯಂತೆ ಒಂದಾದ ಪದ್ಮವನ್ನು ಪ್ರವೇಶಿಸಿ ಮೂರಾಗಿ, ಹದಿನಾಲ್ಕಾಗಿ ವಿಭಾಗಿಸಿದನು. ಇದು ಲೋಕಸಂಸ್ಥಾ ವಿಭಾಗವು ಸಂಕ್ಷೇಪವಾಗಿ ಹೇಳಲ್ಪಟ್ಟಿತು. ಬ್ರಹ್ಮಾರ್ಪಣಬುದ್ಧಿಯಿಂದ ಬ್ರಹ್ಮನು ಮಾಡಿದ ಈ ಜಗನ್ನಿರ್ಮಾಣವು ವಿಶಿಷ್ಟ ಫಲದಾಯಕವೆಂದು ತಿಳಿ.

ವಿದುರನು ಪ್ರಶ್ನಿಸಿದನು–

ಬಹುರೂಪನಾಗಿ ಅದ್ಭುತಕರ್ಮಗಳನ್ನು ಮಾಡುವ ಶ್ರೀಹರಿಯ ಕಾಲನಾಮಕ ಸ್ವರೂಪವನ್ನು ನಮಗೆ ವರ್ಣಿಸು.

ಎನ್ನಲು ಮೈತ್ರೇಯನು ಪೇಳಿದನು–

ಸೃಷ್ಟಿಕಾಲ ಬರಲು ಗುಣಗಳ ವಿಕಾರವಿಶೇಷವನ್ನು ಚೆನ್ನಾಗಿ ಮಾಡಿ ಸೃಜಿಸುವ ನಿರ್ವಿಕಾರನು, ಅನನ್ಯಾಧಾರನೂ, ಸಮಾಧಿರಹಿತನೂ ಆದ ಶ್ರೀಶನು ಗುಣವೈಷಮ್ಯನಿರ್ಮಾಣ ಕಾರಣನನ್ನಾಗಿ ತನ್ನನ್ನು ತಾನೇ ಸ್ವೀಕರಿಸಿ ಸೃಜಿಸಿ, ಮೂರು ರೂಪಗಳಿಂದ ಆವಿರ್ಭೂತನಾದನು. ಆ ರೂಪಗಳು ಬ್ರಹ್ಮವಿಷ್ಣುಶಿವನೆಂಬವುಗಳನ್ನು ಸೃಷ್ಟಿಸ್ಥಿತಿ ಸಂಹಾರಗಳಿಗೋಸುಗ ಸ್ವೀಕರಿಸಿದ ಶ್ರೀಹರಿಯು ಬ್ರಹ್ಮನಲ್ಲಿ ಬ್ರಹ್ಮನೆಂಬ ತನ್ನ ರೂಪದಿಂದ ನಿಂತು ಬ್ರಹ್ಮನಿಂದ ಸೃಷ್ಟಿಮಾಡಿಸಿ ರಕ್ಷಿಸಿದನು. ಶಿವನಲ್ಲಿ ಕಾಲ-ಶಿವನೆಂಬ ತನ್ನ ರೂಪದಿಂದ ನಿಂತು ಶಿವನಿಂದ ಸಂಹಾರಮಾಡಿಸಿ ಶಿವನನ್ನು ರಕ್ಷಿಸುವನು.

ಅನಾದ್ಯನಂತಕಾಲೀನವಾದ ಸರ್ವದೈಕಪ್ರಕಾರವಾದ ಈ ಜಗತ್ಪ್ರವಾಹವು ಸತ್ಯವಾದುದು. ಮಿಥ್ಯೆಯೆಂದಿಗೂ ಅಲ್ಲ. ಈಗ ಅರ್ಥಕ್ರಿಯಾಕಾರಿಯಾಗಿರುವುದರಿಂದ ಜಗತ್ತು ಸತ್ಯವು. ಅಂತೆಯೇ ಪ್ರಳಯದಲ್ಲಿಯೂ, ಮುಂದೆ ಪ್ರಳಯಾನಂತರದಲ್ಲಿಯೂ, ಜಗತ್ತು ಸರ್ವವೂ ಸತ್ಯವೆಂದೇ ತಿಳಿಯಲರ್ಹವಾಗಿದೆ. ಇದರ ಸೃಷ್ಟಿಯು ಒಂಬತ್ತು ವಿಧವಾಗಿದೆ. ಪ್ರಾಕೃತ ಸರ್ಗವು ಬ್ರಹ್ಮಾಂಡದ ಹೊರಗೆ ಆದದ್ದು. ಅದು ಆರು ವಿಧ. ವೈಕೃತಸರ್ಗವು ಅಂಡಾಂತರ್ಭಾಗದಲ್ಲಿ ನಡೆದುದು ಅದು ಮೂರು ವಿಧ.

ಪರಮಾತ್ಮನ ದೆಶೆಯಿಂದ ಚತುರ್ಮುಖದೇಹವೆನಿಸಿದ ತದಭಿಮನ್ಯಮಾನವಾದ ಮಹತ್ತತ್ವವು ತ್ರಿಗುಣಗಳ ವಿಕಾರಕಾರ್ಯವಾಗಿ ಜನಿಸಿತು. ಇದು ಮೊದಲನೆಯ ಪ್ರಾಕೃತ ಸೃಷ್ಟಿಯು.

ಪ್ರಕೃತಿಯಲ್ಲಿ ಮೂಲಸತ್ತ್ವವು 100 ಭಾಗವಾದರೆ ಮೂಲರಜಸ್ಸು 200 ಭಾಗ; ಮೂಲತಮವು 400 ಭಾಗ. ಶ್ರೀಭೂದುರ್ಗಾರೂಪ ತ್ರಯೋಪೇತ ಲಕ್ಷ್ಮೀದೇವಿಯೇ ಗುಣ ತ್ರಯಾಭಿಮಾನಿ ಎನಿಸುವಳು. ಮೂಲಸತ್ವ 100 ಮತ್ತು ಮೂಲರಜದ 10101/10 ಮತ್ತು ಮೂಲತಮದ 1221 ಭಾಗ ಕಲೆಸಿದರೆ ಮಹತ್ತತ್ವವು ಆಗುವದು. ಸತ್ವವು 100 ಭಾಗ ಅವಿಮಿಶ್ರವಾಗಿರುವದು. ಮೂಲರಜವು 100 ರಜ, 10000 ಸತ್ವ, 1 ತಮದಿಂದ ಕೂಡಿರುವದು. ಮೂಲತಮದಲ್ಲಿ 110 ತಮ, 1100 ಸತ್ವ, 11 ರಜ ಕೂಡಿರುವವು. ಮಹತ್ತತ್ವದಲ್ಲಿ

ಸತ್ತ್ವವಿತರ ತತ್ತ್ವಗಳಿಗಿಂತ ಹೆಚ್ಚಾದ ಕಾರಣ ಅದು ಕೇವಲ ಸಾತ್ತ್ವಿಕವೇ ಎಂದು ಖ್ಯಾತವಾಗಿದೆ.

ಎರಡನೆಯದು ಅಹಂಕಾರ ತತ್ತ್ವದ ಸೃಷ್ಟಿಯು. ದ್ರವ್ಯಜ್ಞಾನಕ್ರಿಯಾಭೇದದಿಂದ ಅದು ಮೂರು ವಿಧವು. ಅಲ್ಲಿ ಭೂತಗಳು ತಾಮಸಾಹಂಕಾರದಿಂದಲೂ, ಇಂದ್ರಿಯಂಗಳು ತೈಜಸಾಹಂಕಾರದಿಂದಲೂ, ದೇವದೇಹಗಳು ಮನಸ್ಸು ವೈಕಾರಿಕಾಹಂಕಾರದಿಂದಲೂ ಜನಿಸಿದವು.

ಮೂರನೆಯ ಪ್ರಾಕೃತ ಸೃಷ್ಟಿಯಲ್ಲಿ ಪುಟ್ಟಿದವು ಪಂಚಭೂತಗಳು. ತನ್ಮಾತ್ರಗಳಾದ ಶಬ್ದಸ್ಪರ್ಶರೂಪರಸಗಂಧಗಳೊಡನೆ ದ್ರವಣಶಕ್ತಿಯೊಡನೆ ತಾಮಸಾಹಂಕಾರದಿಂದ ಪುಟ್ಟಿದವು. ನಾಲ್ಕನೆಯದಾದ ಇಂದ್ರಿಯಗಳ ಸೃಷ್ಟಿಯು ತೈಜಸಾಹಂಕಾರದಿಂದಾದುದು. ಇಂದ್ರಿಯಗಳೆರಡು ವಿಧ. ಚಕ್ಷುಃಶ್ರೋತ್ರತ್ವಕ್ ರಸನ ನಾಸಿಕೆಗಳು ಜ್ಞಾನೇಂದ್ರಿಯಗಳು; ವಾಕ್ ಪಾಣಿಪಾದಪಾಯೂಪಸ್ಥಗಳು ಕರ್ಮೇಂದ್ರಿಯಗಳು. ಇಂದ್ರಿಯಪ್ರೇರಕರಾಗಿ ವಿಕಾರಿಗಳಾದ್ದರಿಂದ ವೈಕಾರಿಕ ದೇವತಾಸೃಷ್ಟಿಯು ಐದನೆಯದಾಗಿದೆ. ಮನಸ್ಸಾದರೂ ವೈಕಾರಿಕಾಹಂಕಾರ ಜನ್ಯವೇ. ಆರನೆಯದು ತಮಸ್ಸಿನ ಸೃಷ್ಟಿ. ತಮಸ್ಸು ಅಂದರೆ ಅವಿದ್ಯೆ. ಇದು ಹರಿಬುದ್ಧಿಯನ್ನನುಸರಿಸಿ ಬ್ರಹ್ಮನು ಮಾಡಿದ ವಿಶೇಷ ಸೃಷ್ಟಿಯಾಗಿ ತಮ, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರವೆಂದು ಐದು ವಿಧವಾಗಿದೆ. ಇವು ಆರು ಸೃಷ್ಟಿಕ್ರಮಗಳು ಪ್ರಾಕೃತವು. ಇನ್ನು ವೈಕೃತಸೃಷ್ಟಿಯನ್ನು ಕೇಳು. ವಿದುರಾ! ಸೃಷ್ಟ್ಯರ್ಥವಾಗಿ ಸೂರ್ಯಕೋಟಿಪ್ರಭವನಾದ ನಾರಾಯಣನು ಮಾಡಿರುವ ಲೀಲೆಯನ್ನು ವರ್ಣಿಸುವೆ. ಯೋಗ್ಯಜನರ ಮುಕ್ತ್ಯರ್ಥವಾಗಿ ಚತುರ್ಮುಖಾಂತರ್ಯಾಮಿಯು ಅನಾಯಾಸದಿಂದ ಮಾಡಿಸಿದ ಏಳನೆಯ ಸೃಷ್ಟಿಯು ಸ್ಥಾವರ ಸಮೂಹವೇ ಆಗಿ ಮುಖ್ಯವೆನಿಸಿದೆ. ಅದು ಪರೋಪಕರ್ತೃಗುಣಕವಾದದ್ದು. ಸ್ಥಾವರಗಳು ಪನಸಾದಿ ವನಸ್ಪತಿಗಳು, ವ್ರೀಹ್ಯಾದಿ ಓಷಧಿಗಳು, ಪರಾಶ್ರಯವಾದ ಜಾತೀಮಲ್ಲಿಕಾ ಲತೆಗಳು, ವೇಣ್ವಾದಿ ತ್ವಕ್‌ಪ್ರಧಾನಗಳು, ಗುಲ್ಮಗಳು, ಗಿಡಮರಗಳು ಎಂದು ಆರು ವಿಧವಾಗಿವೆ. ಇವು ಅಜ್ಞಾನಪ್ರಾಯವಾಗಿ ಮೇಲಕ್ಕೆ ಬೆಳೆಯುತ್ತಾ ನಿಂತಿರುತ್ತವೆ. ಸ್ಪರ್ಶದಿಂದ ಒಳಗೆ ಜ್ಞಾನವನ್ನು ಪೊಂದಿರುತ್ತವೆ. ಕಡಿದ ಕಡ್ಡಿ ಒಣಗುತ್ತದೆ.

ಎಂಟನೆಯ ಸೃಷ್ಟಿಯು ತಿರ್ಯಕ್ ಸೃಷ್ಟಿಯು. ಇದು ಇಪ್ಪತ್ತೆಂಟು ವಿಧ. ಜ್ಞಾನಶೂನ್ಯವಾದ ಇವು ಶರೀರಾಹಂಮಮಾಭಿಮಾನಭರಿತವು, ಆಹಾರನಿದ್ರಾರತವು, ಗಂಧಜ್ಞಾನಿಗಳು, ಅಂತಃಹೃದಯದಲ್ಲಿ ಸುಖದುಃಖಾನುಭೂತಿ ಪಡೆಯುವದಾಗಿವೆ. ಗೋವು, ಮೇಕೆ, ಎಮ್ಮೆ, ಕೃಷ್ಣಮೃಗ, ಹಂದಿ, ಗವಯ, ರುರು, ಕುರಿ, ಒಂಟೆ, ಇವು ದ್ವಿಶಫಗಳು. ಕತ್ತೆ, ಕುದುರೆ, ಹೇಸರಕತ್ತೆ, ಗೌರಮೃಗ, ಶರಭ, ಚಮರೀಮೃಗ ಇವುಗಳು ಏಕಶಫಪಶುಗಳು. ನಾಯಿ, ನರಿ, ತೋಳ, ಹುಲಿ, ಬೆಕ್ಕು, ಮೊಲ, ಶಲ್ಯಮೃಗ, ಸಿಂಹ, ಕೋತಿ, ಆನೆ, ಆಮೆ ಹಲ್ಲಿ, ಮೊಸಳೆ ಮೊದಲಾದವು ಪಂಚನಖಿಗಳು. ಕಂಕ, ಹದ್ದು, ಬಕ, ಗಿಡಗ, ಭಾಸ, ವಲ್ಲೂರ, ನವಿಲು, ಹಂಸ, ಸಾರಸ, ಚಕ್ರವಾಕ, ಕಾಗೆ, ಗೂಬೆ, ಮೊದಲಾದವು ಪಕ್ಷಿಗಳು.

ಒಂಬತ್ತನೆಯದು ಅರ್ವಾಕ್ ಸ್ರೋತಗಳ ಸೃಷ್ಟಿಯು ಇದೊಂದೇ ವಿಧವಾಗಿದೆ, ರಜೋಧಿಕರಾಗಿ ಕರ್ಮಪರರಾದ ಮನುಜರು ಮತ್ತು ದುಃಖದಲ್ಲಿ ಸುಖಭ್ರಾಂತಿಯುಳ್ಳ ಅನ್ಯಥಾ ಜ್ಞಾನಿಗಳಾದ ಅಸುರರು ಸ್ಥಾವರ ನರತಿರ್ಯಗ್ರೂಪ ಮೂರು ಸೃಷ್ಟಿಯು ವೈಕೃತವೇ. ವೈಕಾರಿಕಾಹಂಕಾರದಿಂದ ದೇವಸೃಷ್ಟಿ ಪ್ರಾಕೃತವೆಂದು ಹೇಳಿದೆನಲ್ಲವೇ? ಆ ದೇವತೆಗಳು ಪುನ:

ಅಂಡದ ಒಳಗೆ ಸೃಷ್ಟರಾಗುವುದು ಕೌಮಾರಸರ್ಗವೆನಿಸುವುದು. ಇದು ಪ್ರಾಕೃತವೂ ಮತ್ತು ವೈಕೃತವೂ ಆಗಿದೆ; ಉಭಯಾತ್ಮಕವೆನಿಸಿದೆ.

ದೇವಸರ್ಗವು ಎಂಟು ವಿಧ. ವಿಬುಧರು ಮುಖ್ಯಭೋಗಿಗಳೆನಿಪರು. ಮಿಕ್ಕ ಏಳು ಗಣವನ್ನು ಕೇಳು. ಪಿತೃಗಳು 100 ಜನ, ಅಸುರರಲ್ಲಿ 30, ಗಂದರ್ವಾಪ್ಸರಸರಲ್ಲಿ 200 ಸಿದ್ಧರು 100, ಯಕ್ಷರಕ್ಷಸರಲ್ಲಿ 70, ಚಾರಣರು 30, ಭೂತಪ್ರೇತಪಿಶಾಚಾದಿಗಳು 70, ವಿದ್ಯಾಧರರು 70, ಕಿನ್ನರರು 70, ಇವೆಂಟು ವಿಧವಲ್ಲದೆ, ಪ್ರಾಕೃತ ದೇವರು ವೈಕೃತ ದೇವರೆಂದು ಎರಡು ವಿಧ ಮೊದಲೇ ಪೇಳಿದೆ. ಅಂತೂ ಹತ್ತು ವಿಧ ದೇವಸೃಷ್ಟಿಯನ್ನು ಬ್ರಹ್ಮನು ಮಾಡಿದನು. ಇವರು ಊರ್ಧ್ವಸ್ರೋತಸರು.

ಇನ್ನು ಮುಂದೆ ನಿನಗೆ ವಂಶಾನುಚರಿತ ಮನ್ವಂತರಗಳನ್ನು ಪೇಳುವೆನು.

ವಿದುರಾ! ಇಂದು ಅಮೋಘಸಂಕಲ್ಪನು, ಸ್ವತಂತ್ರನು, ಅನ್ಯಸೃಷ್ಟ್ಯರಹಿತನು, ಸಕಲ ಸೃಷ್ಟಿಕರ್ತನೂ ಆಗ ಶ್ರೀಪತಿಯು ಸ್ವೇಚ್ಛೆಯಿಂದ ಕಲ್ಪಾದಿಗಳಲ್ಲಿ ರಜೋಗುಣದಿಂದ ಸೃಷ್ಟಿ ಮಾಡುವನು. ಇದು ಮೊದಲನೆಯ ಸೃಷ್ಟಿಯೆಂದು ನಿಯಮವಲ್ಲ. ಜ್ಞಾನಿಗಳು ಗುಣವ್ಯತ್ಯಯ ರೂಪ ಪ್ರಪಂಚಾರಂಭವು ಹರೀಚ್ಛಾ ನಿಯತವಾಗಿದೆ. ನದಿಯಲ್ಲಿ ತಿರುಗುತ್ತಿರುವ ಸುಳಿಗೆ ಪ್ರಾರಂಭ ಎಲ್ಲಿ ಕೊನೆ ಎಲ್ಲಿ ಎಂದು ತಿಳಿಯಲಾಗುವದಿಲ್ಲ. ಅದರಂತೆ ಪ್ರಪಂಚವು ಪ್ರವಾಹತಃ ಸತ್ಯವಾಗಿದೆ ಎಂದು ತಿಳಿದಿರುವರು. ಈ ಕಲ್ಪದಲ್ಲಿ ಹೇಳಿದ ದೇವಾಸುರಾದಿಗಳೆಲ್ಲರೂ ಮನ್ವಂತ ರಾಂತರಗಳಲ್ಲಿಯು ಇರುವರು. ಜೀವರು ಬೇರೆಯಾಗಬಹುದು. ಪದವಿಗಳೊಂದೆ. ಇಂದ್ರಾದಿ ನಾಮಗಳಿಂದ, ಶುಕ್ಲಕೃಷ್ಣಾದಿ ರೂಪಗಳಿಂದ, ಸಹಸ್ರಾಕ್ಷಾದಿ ಲಕ್ಷಣಗಳಿಂದ, ಯುಕ್ತರಾಗಿಯೇ ಇರುವರು.

## ೧೨. ಕಾಲನಾಮಕ ಹರಿ ಮಹಿಮೆ

ಮೈತ್ರೇಯನು ನುಡಿದನು –

"ವಿದುರನೇ! ಪರಮಾಣುಕಾಲಜ್ಞಾನವಾಗಬೇಕಾದರೆ ಮೊದಲು ದ್ರವ್ಯ ಪರಮಾಣುವನ್ನು ತಿಳಿಯಬೇಕು. ಅನೇಕಾವಯವ ಸಂಯುತವೇ ಆದ ಪಾರ್ಥಿವಾದಿ ಪದಾರ್ಥಗಳ ಚರಮಾಂಶವು ಪರಮಾಣು ಎನಿಸುವದು. ದೇವಲೋಕದಲ್ಲಿದ್ದ ಮನುಜರು ಯಾವ ಅಂಶಾಂಶಿತ್ವವನ್ನು ಕಾಣ ಲಾರರೋ ಅದರಲ್ಲಿ ಅವಯವಗಳಿದ್ದರೂ ಕಾಣಲಾರರೋ ಅದೇ ಚರಮ ವಿಶೇಷವೆನಿಸುವದು. ಅದನ್ನು ನೋಡಿ, ಕಣಾದಾದಿಗಳು ಒಂದೇ ಇದೆ, ಅವಯವಗಳಿಲ್ಲವೆಂದು ಐಕ್ಯಭ್ರಮವನ್ನು ಹೊಂದಿ ಪರಮಾಣುಪುಂಜವಾದಾದಿ ಅಸಚ್ಛಾಸ್ತ್ರಗಳನ್ನು ರಚಿಸುವರು. ನಿಜವಾದ ಪರಮಾಣು ವೆಂದರೆ ಶ್ರೀಹರಿಯೇ. ಅವನೇ ಮಹತ್ತಿಗೂ ಮಹತ್ತಾಗಿರುವನು. ಸ್ವಮಹಿಮಾರತವಾಗಿ ಅನ್ಯಾಧಾರಾಪೇಕ್ಷೆ ಇಲ್ಲದೆ, ಸರ್ವ ಮಹದಾದಿ ಶಬ್ದಗಳ ಮುಖ್ಯವಾಚ್ಯನಾಗಿ, ಕೇವಲ ನಿರಪೇಕ್ಷ ನಾಗಿ, ಜಗದಾವರಣ ವ್ಯಾಪಾರದಲ್ಲುದಾಸೀನನಾಗಿರುವ ಶ್ರೀಹರಿಯೇ ಪರಮಮಹತ್ತೆನಿಸುವನು. ಹೀಗೆ ಸೂಕ್ಷ್ಮಸ್ಥೂಲಗಳಾದ ಪದಾರ್ಥಗಳಂತೆ ಕಾಲವು ಕೂಡ ಅನಂತ ಅನಾದಿಯಾದರೂ ಅದರಲ್ಲಿ ಪರಮಾಣುವಾಗಿ ಪರಮಾಣುಕಾಲನೆನಿಸುವನು. ಮಹತ್ತಾಗಿ ಮಹಾಕಾಲವೆನಿಸುವನು ಕೂಡ ಶ್ರೀಹರಿಯೇ. ದೇವತಾಪ್ರೀತಿಯಿಂದ ಯಜ್ಞಕರ್ತನಾದ ಮನುಜನು ದೇವಲೋಕದಲ್ಲಿ

ಸೇರಿ ಚಿಂತಿಸಿದಂತೆ ಕಲಾಕಾಷ್ಠ ಮುಹೂರ್ತೇತ್ಯಾದಿ ಕಾಲಾವಯವಗಳನ್ನೂ ತಿಳಿಯಬಹುದಾಗಿದೆ. ಕಾಲಾಂತರ್ಯಾಮಿ ಹರಿಯನ್ನೂ ತಿಳಿದು ಶ್ರೀಹರಿಯು ಕಾಲದಿಂದ ದೇಶದಿಂದ ಗುಣದಿಂದಲೂ ಅನಂತನು ಎಂದು ಉಪಾಸಿಸುವುದೇ ಹರಿಪ್ರೀತಿಸಾಧನವಾಗಿದೆ. ಶ್ರೀಹರಿಯು ತಾನು ಅವ್ಯಕ್ತನಾಗಿದ್ದು ವ್ಯಕ್ತವಾಗುವ ಪ್ರಪಂಚದ ಸೃಷ್ಟಿರಕ್ಷಣ ಸಂಹರಣಗಳನ್ನು ಮಾಡುವನು.

ಶ್ರೀಹರಿಯು ಪರಮಾಣುರೂಪದಿಂದ ವ್ಯಾಪ್ತನಾಗಿರುವ ಕಾಲಕ್ಕೆ ಪರಮಾಣು ಕಾಲವೆನ್ನುವರು. ನಿರಂತರವಾದ ಪರಮಾತ್ಮಭೋಗಕಾಲವು ಪರಮಮಹತ್ ಎನಿಸಿದೆ. ಪರಮಾಣುಗಳು ಎರಡಣುವೆನಿಸುವದು. ಅವು ಮೂರಾದರೆ ತ್ರಸರೇಣು. ಇದು ಜಾಲಗತ ಸೂರ್ಯರಶ್ಮಿಯಲ್ಲಿ ಕಾಣುತ್ತಾ ಜರುಗುವ ದ್ರವ್ಯಪರಿಮಿತಿ ಕಾಲ. ತ್ರಸರೇಣು ತ್ರಯವಾದರೆ ತ್ರುಟಿಯು. ಮೂರು ತ್ರುಟಿಗಳು ವೇಧ. ಅವು ಮೂರು ಲವವೆನ್ನುವರು. ಮೂರು ಲವಗಳು ಒಂದು ನಿಮಿಷ. ಅವು ಮೂರೊಂದು ಕ್ಷಣ. ಕ್ಷಣಗಳೈದರೊಂದು ಕಾಷ್ಠ. ಕಾಷ್ಠಗಳು ಹದಿನೈದು ಒಂದು ಲಘು. ಹದಿನೈದು ಲಘುಗಳಾದರೊಂದು ನಾಡಿಕಾ. ನಾಡಿಕಾದ್ವಯವೇ ಮುಹೂರ್ತ. ಅವು ಆರಾದರೆ ಒಂದು ಯಾಮ. ಯಾಮಗಳು ನಾಲ್ಕು ಹಗಲೆನಿಸುವವು. ಅಷ್ಟೇ ರಾತ್ರಿಯ ಕಾಲಪರಿಮಿತಿಯು. ದಿನಗಳೈದು ಮತ್ತು ಹತ್ತಾದರೆ ಪಕ್ಷ, ಶುಕ್ಲಪಕ್ಷ-ಕೃಷ್ಣಪಕ್ಷಗಳೆರಡು ಕಲೆತು ಮಾಸವು. ಎರಡು ಮಾಸಗಳು ಋತುವು ಆಗುವುದು. ಮೂರು ಋತುಗಳಯನ. ಉತ್ತರ–ದಕ್ಷಣಾಯನಗಳೆರಡಾದರೆ ಸಂವತ್ಸರವಾಗುವುದು. ಇದು ಮನುಷ್ಯಮಾನ. ಮನುಜರ ಆಯುರ್ಮಾನವು ಇಂತಹ ನೂರು ವರ್ಷಗಳು. ಗ್ರಹನಕ್ಷತ್ರಾದಿಗಳಲ್ಲಿ ನಿಂತು ಪರಮಾಣ್ವಾದಿ ಕಾಲಗಳನ್ನು ಸತತವೂ ನಡೆಯಿಸುವ ಸರ್ವಸಾಕ್ಷಿಯು ಸಂವತ್ಸರದಿಂದ ಕಾಲವನ್ನು ಅಳೆಯುವಂತೆ ಮಾಡಿ, ಕಾಲಚಕ್ರವನ್ನು ನಡೆಸುತ್ತಿರುವನು. ವಿದುರಾ! ಮನುಷ್ಯರ ಶುಕ್ಲಪಕ್ಷವು ಪಿತೃಗಳಿಗೆ ದಿನವು. ಕೃಷ್ಣಪಕ್ಷವೇ ಪಿತೃಲೋಕದಿ ರಾತ್ರಿ. ಇಂತು ಪಿತೃಗಳಿಗೆ ಒಂದು ಮಾಸವು ಒಂದು ದಿನವೆನಿಸುವದು. ಅಂತೆಯೇ ಉತ್ತರಾಯಣ ದಕ್ಷಣಾಯನಗಳೆರಡು ಅಹೋರಾತ್ರಿಗಳಾಗಿರುವ ಸಂವತ್ಸರವು ದೇವಲೋಕದ ದಿನವಾಗುವದು. ಕಾಲವನ್ನಳೆಯುವ ನಾಡೀಯಂತ್ರವನ್ನು ಪೇಳುವೆ.

ಆರು ಪಲಗಳ ಪರಿಮಾಣವಿದ್ದ ಪಾತ್ರೆಯಲ್ಲಿ ಚತುರಂಗುಲ ದೀರ್ಘವಾದ ಸ್ವರ್ಣ ಮಾಷಗಳ ನಾಲ್ಕನ್ನು ನಾಲ್ಕು ರಂಧ್ರಗಳಲ್ಲಿಟ್ಟು ಪ್ರವಾಹಜಲವನ್ನೊ ಅಥವಾ ಪ್ರಯಾಗಜಲ ವನ್ನೋ ತುಂಬಿದರೆ ಆ ಜಲವು ಕೆಳಗಿನ ಪಾತ್ರೆಯಲ್ಲಿ ಹರಿದುಹೋಗುವ ಕಾಲಕ್ಕೆ ನಾಡಿ ಎನ್ನು ವರು. ಅತಿ ಶೀತಜಲ ಅಥವಾ ಸಕಲಂಕ ಜಲವಾದರೆ ನಿಧಾನವಾಗುವುದು. ಭಾರವಾದ ನೀರಾದರೆ ಬೇಗ ತುಂಬಿ ತಪ್ಪಾಗುವುದು. ಆದ್ದರಿಂದ ವಸಂತಕಾಲದ ಸಮಶೀತೋಷ್ಣ ಜಲವನ್ನು ತುಂಬ ಬೇಕು.

ಇಂತು ನಡೆಯುವ ಸಂವತ್ಸರವು ಐದು ವಿಧವಾಗಿದೆ. ಸೂರ್ಯನು ಹನ್ನೆರಡು ರಾಶಿಗಳಲ್ಲಿ ಸುತ್ತುವ ಕಾಲ ಸಂವತ್ಸರವು. ಗುರುವು ಒಂದು ರಾಶಿಯಿಂದ ಇನ್ನೊಂದನ್ನು ಸೇರುವ ಕಾಲ ಪರಿವತ್ಸರವು. ಇಪ್ಪತ್ತೇಳು ನಕ್ಷತ್ರಗಳು ಹನ್ನೆರಡು ಸಲ ತಿರುಗಿದರೆ ಇಡಾವತ್ಸರವೆನಿಸುವುದು. ಚಂದ್ರನು ತಿಥಿಗಳಲ್ಲಿ ತಿರುಗುತ್ತಾ ಹನ್ನೆರಡು ಹುಣ್ಣಿಮೆ ಆದರೆ ಅನುವತ್ಸರವು. ಎಣಿಸಲು ಮುನ್ನೂರಾ ಅರವತ್ತು ದಿನಗಳಾದರೆ ವತ್ಸರವು. ಯಾವ ಶ್ರೀರಮಣನು ತನ್ನವಳಾದ ಪ್ರಕೃತಿ ಯನ್ನು ವಿಜೃಂಭಿತಳನ್ನಾಗಿ ರಮಿಸಿ ಪ್ರಕೃತ್ಯಾದಿಗಳಿಂದ ಲೋಕವನ್ನು ಸೃಜಿಸಿ, ಜನರ ಭ್ರಮ ನಿರಸನೆಗಾಗಿ ವಿವಿಧ ಜ್ಞಾನ ಜನಕನಾಗಿ ಸೂರ್ಯನಲ್ಲಿಅಂತರ್ಯಾಮಿಯಾಗಿದ್ದು ಕಾಲವನ್ನು

ನಡೆಸುತ್ತಿರುವನೋ ವತ್ಸರ ಪಂಚಕದಲ್ಲಿ ತತ್ತನಾಮನಾಗಿ ನಿಂತು ತನ್ನ ಪ್ರಜೆಗಳಿಂದ ಸೃಷ್ಟಿವಿಸ್ತಾರವನ್ನು ಮಾಡಿಸುತಿಪ್ಪನೋ ಆ ಕಾಲನಾಮಕನಾದ ಸ್ವಾಮಿಗೆ ಸಕಲ ಪೂಜೆಯು ಸಲ್ಲಿಸಲ್ಪಡಲಿ!

ಎಂದು ಮೈತ್ರೇಯನು ಪೇಳಲು ವಿದುರನು ಪುನಃ ಕೇಳಿಗನು –

ಪೂಜ್ಯನೇ! ಪಿತೃ-ದೇವ-ಮನುಜರ ಆಯುಃ ಪರಿಮಿತಿಯನ್ನು ವರ್ಣಿಸಿದೆ. ಮಹರಾದಿ ಲೋಕಗತರಾದರು ಕಲ್ಪಾದ್ವಹಿಸ್ಥಿತರಲಲವೇ? ಅವರ ಸ್ಥಿತಿ ಎಂತು? ಭಗವಂತನು ಕಾಲಚಕ್ರವನ್ನು ವೇಗದಿಂದ ನಡೆಸುವ ಪರಾಕ್ರಮದ ಮಹಿಮೆಯನ್ನು ಅಷ್ಟಾಂಗಯೋಗ ಮಹಿಮೆಯಿಂದ ಜ್ಞಾನಿಯಾದ ನೀನು ತಿಳಿದಿರುವೆ.

ಮೈತ್ರೇಯನು ಪೇಳಿದನು.

ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು ಕಲೆತು ದೇವವರ್ಷಗಳಿಂದ ಹನ್ನೆರಡು ಸಾವಿರ ವರ್ಷಗಳಾಗುವವು. ಇದು ಮಹಾಯುಗವೆನಿಸುವದು. ಕೃತವು ನಾಲ್ಕು ಸಾವಿರ; ತ್ರೇತೆಯು ಮೂರು ಸಾವಿರ; ದ್ವಾಪರವು ಎರಡು; ಕಲಿಯು ಒಂದು ಸಾವಿರ ವರ್ಷ ಪರಿಮಿ . ಾಗಿವೆ. ಇವುಗಳಿಗೆ ಸಂಧ್ಯಾಕಾಲಗಳು ಕ್ರಮವಾಗಿ 400, 300, 200, 100, ಒಟ್ಟು ಸಾವಿರ ಪೂರ್ವಸಂಧ್ಯೆಗಳು, ಮತ್ತು ಸಾವಿರ ಅಪರ ಸಂಧ್ಯೆಗಳಿಂತು ದ್ವಾದಶ ಸಹಸ್ರ ವರ್ಷವಾಗುವುದು. ಸಂಧ್ಯಾಂಶಗಳ ಮಧ್ಯಕಾಲವು ಯುಗಮಾನವೆಂದು ಯುಗಜ್ಞಾನಿಗಳು ಪೇಳುವಲ್ಲಿ ಯುಗಧರ್ಮಗಳ ವಿಧಾನವನ್ನೂ ಮಾಡುವರು. ಧರ್ಮವು ಮನುಜರನ್ನುದ್ದೇಶಿಸಿ, ಕೃತಯುಗದಿ ತಪ, ಸತ್ಯ, ದಯಾ, ಶೌಚವೆಂಬ ನಾಲ್ಕು ಪಾದಗಳುಳ್ಳದ್ದಾಗಿದೆ. ತ್ರೇತಾದಲ್ಲಿ ಆ ನಾಲ್ಕರಲ್ಲಿಯೂ ಒಂದೊಂದು ಪಾದ ಕಡಿಮೆಯಾಗಿ ತ್ರಿಪಾದಗಳುಳಿಯುವವು. ಹೀಗೆಯೇ ಅಧರ್ಮದ ಪಾದಗಳಿಂದ ಕ್ರಮವಾಗಿ, ದ್ವಾಪರದಲ್ಲಿ ಎರಡು ಪಾದಗಳು, ಕಲಿಯಲ್ಲಿ ಒಂದೇ ಪಾದ ಸತ್ಯ ದಯಾ ತಪ ಶೌಚಗಳುಳಿಯುವವು. ಭೂಃ ಭುವಃ ಸ್ವಃ ಎಂಬ ಮೇಲಿನ ಮಾನ ಉಳ್ಳ ಮೂರು ಲೋಕಗಳು ದಾಟಿ ಮಹರ್ಲೋಕದಲ್ಲಿ ಬ್ರಹ್ಮದಿನದಿಂದ ಕಾಲಮಾನವೆನಿಸಲ ಪಡುವದು. ಚತುರ್ಯುಗ ಸಹಸ್ರವಾದರೆ ಬ್ರಹ್ಮದಿನ. ರಾತ್ರಿ ಮತ್ತೆ ಸಾವಿರ ಮಹಾ ಯುಗಗಳು. ಆಗ ವಿರಿಂಚನು ನಿದ್ರಿಸಿ ನಿಶಾವಸಾನದಲ್ಲಿ ಪುನಃ ಕಲ್ಪಾಂತರವನ್ನಾರಂಭಿಸಿ, ಸ್ಮರಿಸುವನು. ಒಂದು ಬ್ರಹ್ಮದಿನದಲ್ಲಿ ಹದಿನಾಲ್ಕು ಮನುಗಳು ತಮ್ಮಲ್ಲಿ ಅಂತರ್ಯಾಮಿಯಾದ ರಾಜರಾಜೇಶ್ವರ ರೂಪೀ ಹರಿಯ ಸನ್ನಿಧಾನದಿಂದ 71 ಮಹಾಯುಗಗಳು 18 $^1/_2$ ಲಕ್ಷ ವರ್ಷ ಕಾಲವಿದ್ದು ಮನ್ವಂತರವೆನಿಸುವ ಆ ಸಮಯದಲ್ಲಿ ಸಮಕಾಲೀನರಾದ ಇಂದ್ರ, ದೇವತೆಗಳು, ಋಷಿಗಳು, ಸ್ವವಂಶೀಯರು ಮೊದಲಾದವರೂ ತಮ್ಮ ತಮ್ಮ ಪದವಿಗಳಲ್ಲಿರುವರು. ಇದು ಬ್ರಹ್ಮನು ಮಾಡುವ ದೈನಂದಿನ ಸರ್ಗವು–ಮೂರು ಲೋಕಗಳನ್ನು ಸೃಜಿಸಿ, ಸಂಹರಿಸಿ ಪ್ರವರ್ತಿಸುವ ಕಾಲವು. ದಿನ ದಿನದ ಸೃಷ್ಟಿಯಲ್ಲಿ ಕರ್ಮಾನುರೂಪವಾಗಿ ತಿರ್ಯಕ್ ಪಿತೃದೇವ ಮನುಜಾದಿಗಳು ಪುಟ್ಟುವರು.

ಮನ್ವಂತರಗಳಲ್ಲಿ ಭಗವಂತನು ಅವತರಿಸಿ, ಮತ್ತು ಮನುಗಳಲ್ಲಿ ಸನ್ನಿಹಿತನಾಗಿ ಈ ಜಗವನ್ನತ್ಯಂತ ಪರಾಕ್ರಮಿಯಾಗಿ ಪರಿಪಾಲಿಸುವನು. ಬ್ರಹ್ಮದಿನವು ಮುಗಿಯಲು ಶ್ರೀಹರಿಯು ಸಂಕರ್ಷಣ ಕಾಲರುದ್ರಾದಿ ರೂಪಗಳಿಂದ ಜಗವನ್ನು ತಮೋಗುಣೋದ್ರೇಕಗೊಳಿಸಿ ಸಂಹರಿಸಿ ಕಾಲನಾಮಕ ಬ್ರಹ್ಮನಿಂದ ಕಲ್ಪಪ್ರಳಯೋದಕದಲ್ಲಿ ಜಗದ್ವ್ಯಾಪಾರವನ್ನು ಉಪರಮಿಸಿ ಮಲಗಿರುವನು. ಆಗ ಭೂಃ ಭುವಃ ಸ್ವಃ ಎನ್ನುವ ಮೂರು ಲೋಕಗಳು ಬ್ರಹ್ಮನನ್ನು ಸೇರಿ

ಲಯವನ್ನು ಪೊಂದುವವು. ರಾತ್ರಿಯೆಲ್ಲ ಕಳೆಯುವವರೆವಿಗೂ ಚಂದ್ರ ಸೂರ್ಯರಿರುವುದಿಲ್ಲ. ಸಂಕರ್ಷಣಮುಖಾಗ್ನಿಯಿಂದ ಮೂರು ಲೋಕಗಳು ಸುಟ್ಟು ಪೋಗಲು ಆ ಬೇಗೆಯನ್ನು ತಡೆಯಲಾರದೆ ಋಭ್ವಾದಿ ದೇವತೆಗಳು ಮಹರ್ಲೋಕವನ್ನೂ ಬಿಟ್ಟು ಜನೋಲೋಕವನ್ನೈದುವರು. ಆಗ ಸಂಕರ್ಷಣಮುಖ ವಿಷಮಿಶ್ರಿತ ಸಪ್ತಸಮುದ್ರಗಳು ಉಕ್ಕೇರಿ ಚಂಡಪ್ರಳಯ ವಾತಪ್ರೇರಿತವಾಗಿ ಭಯಂಕರ ತರಂಗಗಳಲ್ಲಿ ಲೋಕಗಳನ್ನು ನುಂಗಿಬಿಡುವವು. ಆಗ ಹರಿಯು ಬ್ರಹ್ಮನಿಗಾಗಿ ನಿದ್ರಿಸಿದಂತೆ ಪ್ರಳೋಯದಕದ ಅನಂತಾಸನದಲ್ಲಿ ಸುಮ್ಮನಿರುವನು! ಜನೋಲೋಕದವರು ಅವನನ್ನು ಸ್ತುತಿಸುತ್ತಿರುವರು. ಇಂತು ವರ್ಣಿಸಿದ ಬ್ರಹ್ಮನ ಅಹೋರಾತ್ರಿಗಳಿಂದ ಆಗುವ ನೂರು ವರ್ಷಗಳಿಗೆ ಪರವೆಂತಲೂ ಬ್ರಹ್ಮನಿಗೆ ಪರಾಯುನೆಂತಲೂ ಪೆಸರು. ಅದರಲ್ಲಿ ಪೂರ್ವ ಪರಾರ್ಧವು ಕಳೆದಿದೆ. ದ್ವಿತೀಯ ಪರಾರ್ಧವೀಗ ನಡೆಯುತ್ತಿದೆ.

ಪ್ರಥಮ ಪರಾರ್ಧದ ಕೊನೆಯ ಕಲ್ಪವೇ ಪಾದ್ಮಕಲ್ಪವು. ಆಗಲೇ ಶ್ರೀಹರಿಯ ನಾಭಿಸರದಿಂದ ಲೋಕಮಯ ಪದ್ಮವು ಪುಟ್ಟಿದುದು. ವಿದುರಾ! ದ್ವಿತೀಯ ಪರಾರ್ಧದ ಮೊದಲನೆಯ ಕಲ್ಪವು ಶ್ವೇತವಾರಾಹ ಕಲ್ಪವು. ಇಲ್ಲಿ ಶ್ರೀಶನು ಸೂಕರಾವತಾರವನ್ನು ಕೈಕೊಂಡು ಚಂಡ ದೈತ್ಯನಾದ ಹಿರಣ್ಯಾಕ್ಷನನ್ನು ಖಂಡಿಸಿದನು.

ದ್ವಿಪರಾರ್ಧಗಳ ಬ್ರಹ್ಮಾಯು ಪರಿಮಿತ ಕಾಲವು ಶ್ರೀಹರಿಯ ವಿಷಯದಲ್ಲಿ ನಿಮೇಷವೆಂದು ನಮಗೆ ತಿಳಿದುಕೊಳ್ಳಲು ಉಪಚರಿತವಾಗಿ ಪೇಳುವೆನು. ಅವನು ಅವ್ಯಾಕೃತನು. ಕಾಲಾತೀತನು. ಅನಂತನು. ಜಗತ್ಪ್ರಭುವಾದ ಶ್ರೀಹರಿಗೆ ಕಾಲವು ದೇಶವೂ ಬಾಧಕವಾಗಲಾರದು.

ಪರಮಾಣುವಿನಿಂದ ದ್ವಿಪರಾರ್ಧದವರೆವಿಗೂ ಇರುವ ಕಾಲವನ್ನು ನಿನಗೆ ಪೇಳಿದನು. ಲೋಕಾಧಿಪತಿಗಳಾಗಿ ನಾನು ನನ್ನದೆಂಬುವರನ್ನು ನುಂಗಿಬಿಡುವ ಕಾಲವು ಶ್ರೀಹರಿಯ ವಿಷಯದಲ್ಲಿ ತದಧೀನವಾಗಿ ತನ್ನಿಯತವಾಗಿದೆ. ಯಮ, ಸುದರ್ಶನ, ರುದ್ರ, ಬ್ರಹ್ಮ ಇವರೂ ಕಾಲರೇ, ಆದರೆ ಇವರೆಲ್ಲರೂ ದುರ್ಗಾಧೀನರು. ಪ್ರಳಯದಲ್ಲಿ ದುರ್ಗಾರೂಪಿಣೀ ಲಕ್ಷ್ಮಿಯು ಚಕ್ರರೂಪಿಣಿಯಾಗಿ ಶ್ರೀಹರಿಯ ಅಧೀನಳಾಗಿರುವಳು. ದುರ್ಗಾಪತಿಯಾದ ಶ್ರೀಶನನ್ನು ಕಾಲವೇನೂ ಮಾಡಲಾರದು.

ಷೋಡಶಕಲಾಯುಕ್ತವಾಗಿ, ಪೃಥಿದಿ ಆವರಣಸಹಿತವಾದ ಈ ಬ್ರಹ್ಮಾಂಡವು ಪಂಚಶತ ಕೋಟಿ ಯೋಜನ ವಿಸ್ತೀರ್ಣವಾಗಿದೆ. ಮೇಲೆ ಪೃಥಿವ್ಯಪ್ತೇಜೋವಾಯ್ವಾಕಾಶ ಅಹಂಕಾರ ಮಹತ್ ಪ್ರಕೃತಿನಾಮಕ ಅಷ್ಟಾವರಣದಿಂದ ದಶೋತ್ತರ ಪರಿಮಾಣ ವೃದ್ಧಿಯುಳ್ಳದ್ದಾಗಿದೆ. ಇದು ಹರಿಯಲ್ಲಿ ಪ್ರವಿಷ್ಟವಾದಾಗ ಪರಮಾಣುವಿನಂತೆ ಕಾಣುವದು. ಅನ್ಯ ಕೋಟಿಗಟ್ಟಲೆ ಅಂಡರಾಶಿಗಳು ಕೂಡ ಅವನಲ್ಲಿವೆ. ಅಂದಮೇಲೆ ಪರಮಾಣುವೂ ಅವನೇ, ಪರಮಮಹತ್ತೂ ಆ ಶ್ರೀಹರಿಯೇ. ಬ್ರಹ್ಮಾದಿಕಾರಣನಾದ ನಾಶರಹಿತನಾದ ಸ್ವಾಮಿಯು ಶರೀರದಲ್ಲಿ ಬಂದು ಜೀವಾಂತರ್ಯಾಮಿಯಾಗಿ ಪುರುಷನೆನಿಸಿ, ಬ್ರಹ್ಮಪ್ರಭುವಾದ ಕಾರಣ ಮಹಾತ್ಮನೆನಿಸಿ, ಕಾಲರೂಪನಾಗಿಯೂ ಬೆಳಗುತ್ತಿರುವನು. ಅಂತಹ ಸ್ವಾಮಿಯಲ್ಲಿ ಒಂದೇ ಅಂಡಕೋಶವು ಪ್ರತ್ಯೇಕವಾಗಿ ರೋಮಕೂಪಗಳಲ್ಲಿ ಕಾಣುವುದರಿಂದ ಬಹುಕೋಶಗಳಂತೆ ಬ್ರಹ್ಮನು ಕಂಡನು. ಅಂತಹ ವಿಶ್ವವ್ಯಾಪ್ತನಾದ ಶ್ರೀರಮಣನಿಗೆ ನಮಸ್ಕಾರವು!

## ೧೩. ಸೃಷ್ಟಿ ಪ್ರಕಾರವು; ಮನುರಾಜೋದಯವು

ಮೈತ್ರೇಯನು ಪೇಳಿದನು–

ವಿದುರಾ! ಪರಮಾತ್ಮನ ಕಾಲರೂಪದ ಮಹಿಮೆಯನ್ನು ನಿನಗೆ ವರ್ಣಿಸಿದೆನು. ಇನ್ನು ಬ್ರಹ್ಮನು ಮಾಡಿದ ಸರ್ಗವಿವರವನ್ನು ಕೇಳು. ಮೊದಲು ಬ್ರಹ್ಮನು ತಮ, ಮೋಹ, ಮಹಾ ಮೋಹ, ತಾಮಿಸ್ರ, ಅಂಧತಾಮಿಸ್ರವೆಂಬ ಐದು ವಿಧ ಅವಿದ್ಯಾಸೃಷ್ಟಿಯನ್ನು ಮಾಡಿದನು. ತಮಸ್ಸೆಂದರೆ ಅಜ್ಞಾನ. ಮೋಹವೆಂದರೆ ಅನ್ಯಥಾಜ್ಞಾನ. ಅದರಲ್ಲಿ ಆಗ್ರಹವೇ ಮಹಾಮೋಹವು. ಕ್ರೋಧವೇ ತಾಮಿಸ್ರ. ಮರಣವೇ ಅಂಧತಾಮಿಸ್ರವು. ಈ ಐದು ಅಜ್ಞಾನಮೂಲವಾದ ಪಾಪಿ ಸೃಷ್ಟಿಯನ್ನು ಕಂಡು ಬ್ರಹ್ಮನು ಖಿನ್ನನಾದನು. ಪ್ರಾಯಶ್ಚಿತ್ತವಾಗಿ ಭಗವಂತನನ್ನು ಚಿಂತಿಸಿ ಪುನ: ಮನಸಾ ಸನಕ ಸನಂದನ ಸನಾತನ ಸನತ್ಕುಮಾರ ಎಂಬುವ ನಾಲ್ಕು ಮಂದಿ ಮಕ್ಕಳನ್ನು ಪಡೆದನು. ಅವರು ಊರ್ಧ್ವರೇತಸ್ಕರು, ಪರಮಹಂಸರಾದರು. ಆಗ ಆ ಪುತ್ರರನ್ನು ಕಂಡು ಬ್ರಹ್ಮನು 'ಪುತ್ರರೇ ಮಕ್ಕಳನ್ನು ಸೃಜಿಸಿ' ಎಂದಾಜ್ಞಾಪಿಸಿದನು. ಆಗ ಅವರು ವಾಸುದೇವ ಪರಾಯಣರು, ನಿವೃತ್ತಿಮಾರ್ಗನಿರತರಾದ್ದರಿಂದ ಒಲ್ಲೆವೆಂದರು. ತನ್ನಾಜ್ಞೆಯನ್ನು ಪಾಲಿಸದಿರಲು ಬ್ರಹ್ಮನು ಅವಮಾನಿತನಾಗಿ, ಮಕ್ಕಳ ಮೇಲೆ ಸಿಟ್ಟು ಬಂದಂತೆ ಆಗಲು, ನಿಯಂತ್ರಿಸಿ ಶಾಂತನಾದನು. ಬುದ್ಧಿಬಲದಿಂದ ನಿಗ್ರಹಿಸಿದರೂ ಆ ಮನ್ಯು ಸ್ವರೂಪವು ಪ್ರಜಾಪತಿಯ ಹುಬ್ಬಿನ ದೆಸೆಯಿಂದ ಉಕ್ಕಿ ಬಂದು ಸದ್ಯೋಜಾತನೆನಿಸಿದ ರುದ್ರನಾಗಿ ನಿಂತಿತು. ಶೀರ್ಷವು ಕಪ್ಪಾಗಿ ನೇತ್ರಗಳು ಕೆಂಪಾಗಿದುದ್ದರಿಂದ ನೀಲಲೋಹಿತನೆಂದು ಖ್ಯಾತನಾದ ಭಗವಾನ್ ಶಿವನೇ ದೇವತೆಗಳಲ್ಲಿ ಮೊದಲು ಪುಟ್ಟಿದನು. ಪುಟ್ಟುತ್ತಲೇ ರೋದಿಸಿ, ರುದ್ರನೆಂದು ಹೆಸರನ್ನು ಪಡೆದನು. ಆಗ ತಂದೆಯಂ ಕಂಡು 'ಧಾತಃ! ಜಗದ್ಗುರೋ! ನಾನಿರಲು ಸ್ಥಾನಗಳನ್ನು ದಯಪಾಲಿಸು ಮತ್ತು ನನಗೆ ನಾಮಗಳನ್ನು ಪೇಳು. ನನ್ನ ಪತ್ನಿ ಯಾರು?' ಎನ್ನಲು ಅವನ ಮಾತನ್ನು ಲಾಲಿಸಿ, ಬ್ರಹ್ಮನು ಮಂಗಳಕರವಾಕ್ಯಗಳಿಂದ 'ವತ್ಸಾ! ಅಳಬೇಡ! ನಿನ್ನ ಕೋರಿಕೆಗಳನ್ನೀಡೇರಿಸುವೆನು. ಸುರಶ್ರೇಷ್ಠ! ಬಾಲಕನಂತೆ ರೋದನವನ್ನು ಮಾಡಿದುದರಿಂದ ಪ್ರಜರು ನಿನ್ನನ್ನು ರುದ್ರನೆನ್ನುವರು. ಮನಸ್ಸು, ಇಂದ್ರಿಯಗಳು, ಪ್ರಾಣ, ಆಕಾಶ ವಾಯು ವಹ್ನಿ ಜಲ ಭೂಮಿಗಳು, ಸೂರ್ಯ ಚಂದ್ರರು, ತಪಸ್ಸುಗಳೆಂಬ ಈ ಹನ್ನೊಂದು ಸ್ಥಾನಗಳಲ್ಲಿ ವಾಸ ಮಾಡು. ಮನ್ಯು, ಮನು, ಮಹಾನವ, ಮಹಾನ್, ಶಿವ, ಋತಧ್ವಜ, ಮರುರೇತ, ಭವ, ಕಾಲ, ವಾಮದೇನ, ಧೃತವ್ರತ ನೆಂಬ ಹನ್ನೊಂದು ಪೆಸರನ್ನು ಪಡೆದು, ಧೀ, ವೃತ್ತಿ, ಅಶಲೋಮಾ, ನಿತ್ಯಾ, ಉತ್ಸರ್ಪಿ, ಇಲಾ, ಅಂಬಿಕಾ, ಇರಾವತೀ, ಸುಧಾ, ದೀಕ್ಷಾ, ರುದ್ರಾಣೀ ಎಂಬ ಏಕಾದಶ ಪತ್ನಿಯರಿಂದ ಕೂಡಿ ಬಹು ಪ್ರಜರನ್ನು ಸೃಜಿಸು. ಪ್ರಜಾಪತಿಯಲ್ಲವೇ ನೀನು' ಎಂದು ಆಜ್ಞಪ್ತನಾಗಿ, ವೈರಾಗ್ಯಭಾಗ್ಯ ಭರಿತನಾದ ನೀಲಲೋಹಿತನು ಬಲವೀರ್ಯ ಭ್ರಾಜಮಾನನಾಗಿ, ಪ್ರಜರನ್ನು ಸೃಜಿಸಿದನು. ರುದ್ರನ ಉಗ್ರಸ್ವಭಾವವನ್ನು ಪೊಂದಿದ ಆ ಪ್ರಜರು ಉಗ್ರಗುಣರಾಗಿ, ಜಗವನ್ನೇ ನುಂಗಲುದ್ಯುಕ್ತ ರಾದರು. ಆಗ ಆ ಪ್ರಮಥಗಣವನ್ನು ಕಂಡು ಚಕಿತನಾಗಿ ಬ್ರಹ್ಮನು ರುದ್ರನನ್ನು ಕರೆದು 'ವತ್ಸ! ಸಾಕೀ ನಿನ್ನ ಸೃಷ್ಟಿ. ಕೆಂಡಗಣ್ಣಿನಿಂದ ಜಗವನ್ನೇ ಸುಡುವ ಇವರನ್ನು ನಿಲ್ಲಿಸು. ಮತ್ತೆ ತಪವನ್ನು ಮಾಡು. ನಿನಗೆ ಶುಭವಾಗಲಿ! ಸರ್ವಭೂತಗಳಿಗೆ ಸುಖಾವಹವಾದ ತಪಸ್ಸಿನಿಂದ, ಹಿಂದೆ ನೀ ಸೃಜಿಸಿದಂತೆ ಈಗಲೂ ಹರಿಧ್ಯಾನ ಬಲದಿಂದ ಜಗವನ್ನು ನಿರ್ಮಿಸು. ತಪಸ್ಸಿನಿಂದಲೇ ಸೂರ್ಯ

ದ್ಯಮಿತ ತೇಜಸ್ಕನು, ಇಂದ್ರಿಯದೂರನು, ಸರ್ವಭೂತಗುಹಾವಾಸಿಯು, ಆದ ಭಗವಂತನು ಚೆನ್ನಾಗಿ ಪ್ರೀತನಾಗಿ ಸರ್ವೇಷ್ಟಪ್ರದನಾಗುವನು' ಎಂದಾಜ್ಞಾಪಿಸಿದನು.

ಮೈತ್ರೇಯನು ಪೇಳಿದನು–

ಬ್ರಹ್ಮನಿಂದ ಆಜ್ಞಪ್ತನಾಗಿ, ತಂದೆಗೆ ಪ್ರದಕ್ಷಿಣವನ್ನು ಮಾಡಿ ವಂದಿಸಿ 'ಹಾಗೆ ಮಾಡುವೆ' ನೆಂದು ಅಪ್ಪಣೆ ಪಡೆದು, ತಪವನ್ನು ಮಾಡಲು ರುದ್ರನು ಸಮುದ್ರವನ್ನು ಸೇರಿದನು.

ಪುನಃ ಬ್ರಹ್ಮನು ಸೃಜನವಿಧಾನಧ್ಯಾನರತನಾಗಲು ಭಗವಚ್ಛಕ್ತಿಯುಕ್ತನಾದ ಆ ವಿರಿಂಚನ ಅಂಗಗಳಿಂದ ಹತ್ತು ಮಕ್ಕಳು ಪುಟ್ಟಿದರು. ಮರೀಚ್ಯಾದಗಳೊಂಭತ್ತು ಜನ. ನಾರದನೊಬ್ಬ. ಬ್ರಹ್ಮನ ಉತ್ಸಂಗದಿಂದ ನಾರದನು ಪುಟ್ಟಿದನು. ಅಂಗುಷ್ಠದಿಂದ ದಕ್ಷನು, ಪ್ರಾಣದಿಂದ ವಶಿಷ್ಠನು, ಚರ್ಮದಲ್ಲಿ ಭೃಗುವು, ಕೈಯಲ್ಲಿ ಕ್ರತುವು, ನಾಭಿಯಿಂದ ಪುಲಹನು, ಕರ್ಣಗಳಿಂದ ಪುಲಸ್ತ್ಯನು, ಮುಖದಿಂದ ಆಂಗಿರಸನು, ಕಣ್ಣುಗಳಲ್ಲಿ ಅತ್ರಿಯು, ಮನಸ್ಸಿನಿಂದ ಮರೀಚಿಯು, ಪುಟ್ಟಿ ನವ ಪ್ರಜಾಪತಿಗಳೆನಿಸಿದರು.

ದಕ್ಷಿಣಸ್ತನದಿಂದ ಧರ್ಮನು ಪುಟ್ಟಿದನು. ಇವನಲ್ಲಿ ಸಾಕ್ಷಾಚ್ಛ್ರೀಹರಿಯು ಹರಿ, ನರನಾಮಕ ಶೇಷಸ್ಥ ನರನಾಮಕ ಶುಕ್ಲಕೇಶ ಹರಿ (ಒಂದೆ ರೂಪ) ನಾರಾಯಣ, ಕೃಷ್ಣನೆಂದು, ನಾಲ್ಕುರೂಪದಿ ಪುತ್ರನಾಗಿ ಜನಿಸಿದನು. ಬೆನ್ನಿನಿಂದ ಅಧರ್ಮನು ಹುಟ್ಟಿದನು. ಅವನ ಮಗನೇ ದೇಹವಿಯೋಗ ಲಕ್ಷಣ ಭಯಂಕರ ಮೃತ್ಯುವು. ಹೃದಯದಲ್ಲಿ ಕಾಮನು, ಹುಬ್ಬಿನಲ್ಲಿ ಕ್ರೋಧನು, ಅಧರದಿಂದ ಲೋಭನು, ಪುಟ್ಟಿದರು. ಬಾಯಿಯಿಂದ ಮಾನುಷೀವಾಕ್ ಪುಟ್ಟಿದಳು. ಮೇಢ್ರದಿಂದ ಸಮುದ್ರಗಳು, ಪಾಯುವಿನಿಂದ ದುಃಖಾದ್ಯಭಿಮಾನಿಯಾದ ನಿರ್ಋತಿಯು ಪುಟ್ಟಿದರು.

ಬ್ರಹ್ಮನ ನೆರಳಿನಿಂದ ದೇವಹೂತಿಪತಿಯಾದ ಕರ್ದಮಪ್ರಜಾಪತಿಯು ಪುಟ್ಟಿದನು. ಇಂತು ಸ್ವಯಂಭುವಿನ ಮಾನಸ ಮತ್ತು ದೈಹಿಕವಾದ ಪ್ರಜಾಸಂತತಿಯನ್ನು ವಿವರಿಸಿದೆನು.

ವಿದುರಾ! ಭಗವದ್ಭಕ್ತನಾದ ಬ್ರಹ್ಮನು ದುಷ್ಟಜನಮೋಹನವನ್ನು ಮಾಡಲು ನಡೆಸಿದ ವಿಡಂಬನವನ್ನು ಪೇಳುವೆನು. ಮಾನುಷೀ ವಾಗ್ದೇವಿ ಪುಟ್ಟಲು ಶೃಂಗಾರರಸಭರಿತಳಾದ ಅಕುತ್ಸಿತಳಾದ ಮನೋಹರಳಾದ ಆ ತರುಣಿಯನ್ನು ಬ್ರಹ್ಮನು ಕಾಮಿಸಿದನೆಂದು ಕೆಲ ಕಥೆಗಳಿವೆ. ಅದು ತಥ್ಯವಲ್ಲ! ಕೇಳಾ ವಿಚಿತ್ರ. ಅಂತಹ ಅಧರ್ಮದಲ್ಲಿ ತೊಡಗಿದ ತಂದೆಯನ್ನು ಕಂಡು, ಮರೀಚಿಮುಖ್ಯರು ಪ್ರತಿಷೇಧಿಸಿ ಇಂತೆಂದರಂತೆ. 'ತಂದೆಯೇ ಜಗದ್ಗುರುವಾದ ನಿನಗಿದು ಯೋಗ್ಯವಲ್ಲ. ಹಿಂದಿನವರಾಗಲಿ ಮುಂದೆ ಬರುವ ಯಾರಾಗಲಿ ತಮ್ಮ ಮಗಳ ಕೈಯನ್ನೇ ತಾವು ಪಿಡಿಯುವರೇ? ಕಾಮನನ್ನು ಗೆಲ್ಲಲು ಸಮರ್ಥನಾಗು! ನೀನು ತೇಜೋಮಹಿಮನೇ! ನಿಜ, ಆದರೂ ನಿನಗಿದು ಸಲ್ಲದು. ಶ್ರೇಷ್ಠರಂತೆ ನಡೆದಲ್ಲವೇ ಲೋಕದ ಜನರು ಕ್ಷೇಮವನ್ನು ಕಾಣುವರು? ಶ್ರೀಹರಿಯಲ್ಲಿದ್ದ ಜಗವನ್ನೆಲ್ಲ ದಿವ್ಯಜ್ಞಾನ ಸಾಮರ್ಥ್ಯದಿಂದ ಸೃಜಿಸಿದ ಮಹದೈಶ್ವರ್ಯಶಾಲಿಯಾದ ಶ್ರೀಹರಿಪುತ್ರನಿಗೆ ನಮಸ್ಕರಿಸುತ್ತಿರುವೆವು. ತಾವೇ ನಿರ್ಮಿಸಿದ ಧರ್ಮವನ್ನು ತಾವೇ ಸಂರಕ್ಷಕರಾಗಿ ಕಾಪಾಡಬೇಕು!' ಎಂದು ಮಕ್ಕಳ ವಚನವನ್ನು ಕೇಳಿ ಪ್ರಜಾಪತಿಪ್ರಭುವಾದ ಬ್ರಹ್ಮನು ಲಜ್ಜಿತನಾದಂತೆ ಆ ತನ್ವಿಯನ್ನು ತ್ಯಜಿಸಿಬಿಟ್ಟನು. ಆ ವಾಕ್ಕನ್ನು ದಿಕ್ಕುಗಳಲ್ಲಿದ್ದ ಜನರು ಸ್ವೀಕರಿಸಿದರು. ಅವಳು ನೀಹಾರವೆಂಬುವ ತಮಸ್ಸಿಗೆ ಅಭಿಮಾನಿ ಯಾಗಿರುವಳು. ಚತುರ್ಮುಖನು ಒಂದು ಸಲ ಧ್ಯಾನಿಸುತ್ತಿರಲು ವೇದಗಳು ತದಭಿಮಾನಿಗಳು

ಪುಟ್ಟಿದರು. ವೇದಗಳಿಗೆ ಶಬ್ದತಃ ಅರ್ಥತಃ ಉತ್ಪತ್ತಿ ಇಲ್ಲ. ಅವು ನಿತ್ಯಗಳು. ವೇದಗಳಿಗೆ ಅಭಿವ್ಯಕ್ತಿಯೇ ಆಗಲಿ ಸೃಷ್ಟಿ ಇಲ್ಲ.

ಪೂರ್ವದಂತೆ ಲೋಕಗಳೆಂತು ಉಪಪನ್ನವಾಗುವವು? ಎಂದು ಚಿಂತಿಸಿ ಬ್ರಹ್ಮನು ಚಾತುರ್ಹೋತ್ರ ಮುಂತಾದ ಯಜ್ಞಗಳನ್ನು ತಂತಿಶಾಸ್ತ್ರ ಸ್ಮೃತಿಗಳು ನೀತಿತರ್ಕಗಳು ಮುಂತಾದೆಲ್ಲ ವನ್ನೂ ಸೃಜಿಸಿದನು. ನಾಲ್ಕು ಧರ್ಮಪಾದಗಳನ್ನು ನಾಲ್ಕಾಶ್ರಮ ವೃತ್ತಿಗಳನ್ನು ನಿರ್ಮಿಸಿದನು.

ವಿದುರನು ಪ್ರಶ್ನಿಸಿದನು– "ಸ್ವಾಮೀ! ಆ ಸೃಷ್ಟಿಕರ್ತನು ಯಾವ ಯಾವ ಮುಖಾದಿ ಅಂಗಗಳಿಂದ ಯಾವ ವೇದಾದಿಗಳನ್ನು ಸೃಜಿಸಿದನು? ಹೇಳಿ" ಎನ್ನಲು ಮೈತ್ರೇಯನು ನುಡಿದನು-

ಪೂರ್ವಮುಖದಿಂದ ಋಗ್ವೇದವು, ದಕ್ಷಿಣ ಮುಖದಿಂದ ಯಜುರ್ವೇದವು, ಪಶ್ಚಿಮ ಮುಖದಿಂದ ಸಾಮವೇದ, ಉತ್ತರ ಮುಖದಿಂದ ಅಥರ್ವವೇದವನ್ನು ಅಭಿವ್ಯಕ್ತ ಮಾಡಿದನು. ಹಾಗೆಯೇ ಕ್ರಮವಾಗಿ ಮಂತ್ರಶಾಸ್ತ್ರವನ್ನು ಸ್ತುತಿಸ್ತೋಮ ಸಾಮಗಳು, ಇಜ್ಯಾ ಯಜುರ್ಮಂತ್ರ ಗಳು ಪ್ರಾಯಶ್ಚಿತ್ತಾದಿ ಕರ್ಮಕಾಂಡವನ್ನು, ಆಯುರ್ವೇದ, ಧನುರ್ವೇದ, ಗಾಂಧರ್ವ, ತಕ್ಷಕರ್ಮಗಳನ್ನು ಪೂರ್ವಾದಿ ಮುಖಗಳಿಂದ ನಿರ್ಮಿಸಿದನು. ಸರ್ವಜ್ಞನೂ ಶಾಸ್ತ್ರಮೂಲ ನಾದ್ದರಿಂದ ಬ್ರಹ್ಮನು ಇತಿಹಾಸಪುರಾಣಗಳನ್ನು ಶಬ್ದತಃ ಮಾತ್ರ ನಿರ್ಮಿಸಿದನು. ಹರಿಯಿಂದ ಶ್ರವಣಮಾಡಿ ಪಂಚಮವೇದವಾದ ಭಾರತಾದಿಗಳನ್ನು ಶಬ್ದತಃ ರಚಿಸಿದನು. ಯಜ್ಞವಿಶೇಷ ಗಳಾದ ಷೋಡಶ್ಯುಕ್ಥಗಳು ಪೂರ್ವ ಮುಖದಿಂದ, ಪುರೀಷ್ಯಗ್ನಿಷ್ಟುತಗಳು ದಕ್ಷಿಣ ಮುಖದಿಂದ, ಆಪ್ತೋರ್ಯಾಮ ಅತಿರಾತ್ರಗಳು ಪಶ್ಚಿಮ ಮುಖದಿಂದ, ವಾಜಪೇಯ ಗೋಸವಗಳು ಉತ್ತರ ಮುಖದಿಂದಲೂ ನಿರ್ಮಿಸಿದನು. ಹಾಗೆಯೇ ಕ್ರಮವಾಗಿ ತಪಶೌಚದಯಾಸತ್ಯಗಳೆಂಬುವ ಧರ್ಮಪಾದಗಳನ್ನು ಚತುರಾಶ್ರಮಗಳನ್ನು ತತ್ತದ್ವೃತ್ತಿಗಳನ್ನೂ ನಿರ್ಮಿಸಿದನು. ದ್ವಾದಶವರ್ಷ ಗುರುಕುಲವಾಸ ವೇದಾಧ್ಯಯನವು ಸಾವಿತ್ರಬ್ರಹ್ಮಚರ್ಯವು. ಏಕಭಾರ್ಯಗಳಲ್ಲಾರ್ತವ ಕಾಲಗಮನವು ಪ್ರಾಜಾಪತ್ಯ ಬ್ರಹ್ಮಚರ್ಯವು., ಯಾವದ್ವಿವಾಹಾಧ್ಯಯನವು ಬ್ರಾಹ್ಮ ಬ್ರಹ್ಮಚರ್ಯವು. ಯಾವಜ್ಜೀವ ನೈಷ್ಠಿಕವು ಬೃಹದ್ ಬ್ರಹ್ಮಚರ್ಯವು. ಇಂತು ಗೃಹಸ್ಥಾಶ್ರಮಿ ಗಳಿಗೂ ಈ ನಾಲ್ಕು ವಿಧ ಬ್ರಹ್ಮಚಾರಿತ್ವವಿದೆ. ವಾರ್ತೆ ಎಂದರೆ ಭೈಕ್ಷ್ಯಚರ್ಯೆ. ಅಸಂಚಯ ವೆಂದರೆ–ಅಂದಿನ ಧಾನ್ಯವನ್ನಂದೇ ವಿನಿಯೋಗಿಸಿ ಮುಗಿಸುವುದು. ಶಾಲೀನವೆಂದರೆ–ವತ್ಸರ ಪರ್ಯಂತ ಜೀವನಹೇತು ಧಾನ್ಯಸಂಗ್ರಹವು. ವ್ರೀಹಿಸಸ್ಯಕ್ಷೇತ್ರಗಳಲ್ಲಿ ಗಲಿತವಾದ ಧಾನ್ಯವನ್ನು ತಂದು ದೇಹಯಾತ್ರೆಯು ಶಿಲೋಂಛವೆನಿಸುವುದು. ಇವು ಗೃಹಸ್ಥರ ವೃತ್ತಿಗಳು. ವಾನಪ್ರಸ್ಥರು ಮೂಲಾದಿ ಭಕ್ಷಣ ಮಾಡುವ ವಾಲಖಿಲ್ಯರು, ಸರ್ವಭಕ್ಷಕರಾದ ವಾಲಖಿಲ್ಯರು, ಫಲಜೀವನ ರಾದ ಉದುಂಬರರು, ವತ್ಸಫೇನಪಾನ ಮಾಡುವ ಫೇನಪರು ಎಂದು ನಾಲ್ಕು ವಿಧ. ಕುಟಿಯಲ್ಲಿ ವಾಸಿಸುತ್ತಾ ಪುತ್ರಾದಿಗಳು ಕೊಡುವ ಅನ್ನಾದಿಗಳಿಂದ ಜೀವಿಸುವವರು ಕುಟೀಚಕರು. ತೀರ್ಥ ಗಳನ್ನು ಕಂಡಾಕ್ಷಣ ಸ್ನಾನಗೈಯುವ ಬಹೂದಕರೆಂಬುವ ತ್ರಿದಂಡಿಗಳು, ಹಂಸ ಪರಮಹಂಸರು ಏಕದಂಡಿಗಳು. ಹಿಂಸಾದಿಕ್ರಿಯಾದೂರರು ಎಂದು ಸನ್ಯಾಸಿಗಳು ನಾಲ್ಕು ವಿಧವಾಗಿರುವರು. ವೇದಾನುಸಾರಿ ತಂತ್ರವಿದ್ಯೆಯಾದ ಆನ್ವೀಕ್ಷಕೀ, ಮೂರು ವೇದಗಳು, ವಾಣಿಜ್ಯಾದಿ ವೈಶ್ಯವೃತ್ತಿ, ದಂಡನೀತಿ ಮೊದಲಾದ ರಾಜಧರ್ಮ, ವ್ಯಾಹೃತಿಗಳಿಂದ ಕೂಡಿದ ಪ್ರಣವ ಇವೆಲ್ಲ ಬ್ರಹ್ಮನ ಪೂರ್ವಾದಿ ಮುಖಗಳಿಂದ ಜನಿಸಿದನು. ಓಂ ಪೂರ್ವ ಮುಖದಿಂದಲೂ, ಭೂಃ ದಕ್ಷಿಣ ಮುಖದಿಂದಲೂ, ಭುವಃ ಪಶ್ಚಿಮ ಮುಖದಿಂದಲೂ, ಸ್ವಃ ಉತ್ತರ ಮುಖದಿಂದಲೂ ಅಭಿವ್ಯಕ್ತ

ವಾದವು. ಆತನ ರೋಮಗಳಿಂದ ಉಷ್ಣಿಕ್ ಛಂದವು, ತ್ವಚದಿಂದ ಗಾಯತ್ರೀ ಛಂದವು, ಮಾಂಸದಿಂದ ತ್ರಿಷ್ಟುಪ್, ರಕ್ತದಿಂದ ಅನುಷ್ಟುಪ್, ಅಸ್ಥಿಯಿಂದ ಜಗತೀ ಛಂದವು, ಮಜ್ಜಾದಲ್ಲಿ ಪಂಕ್ತಿ ಛಂದವು, ಬೃಹತೀ ಪ್ರಾಣದಿಂದಲೂ, ಇಂತು ಸಪ್ತ ಛಂದಗಳು ಪುಟ್ಟಿದವು. ಆ ಬ್ರಹ್ಮಜೀವಚೈತನ್ಯದಿಂದ ಕ, ಮೊದಲು ಮ, ವರಿವಿಗಿರುವ 25 ಅಕ್ಷರಗಳು ಸ್ಪರ್ಶಗಳೆನಿಸಿ ಅಭಿವ್ಯಕ್ತವಾದವು. ಸ್ವರಗಳು ಅ, ಮೊದಲು ಐ, ವರಿವಿಗೂ ಇರುವ ವರ್ಣಗಳು ದೇಹದಿಂದ ಉದ್ಭೂತವಾದವು ಶ, ಷ, ಸ, ಹ, ಎಂಬ ಊಷ್ಮ ವರ್ಣಗಳು ಇಂದ್ರಿಯಗಳಿಂದಲೂ, ಯ, ರ, ಲ, ವ, ಎನ್ನುವ ಅಂತಸ್ಥಗಳು ಬಲದಿಂದಲೂ ಅಭಿವ್ಯಕ್ತವಾದವು, ಸರ್ವ ಶಬ್ದಾಭಿಧೇಯನಾದುದರಿಂದಲೂ ವ್ಯಕ್ತನೆನಿಸಿದ ಬ್ರಹ್ಮಾಂಡಕ್ಕೂ, ಅವ್ಯಕ್ತವೆನಿಸಿದ ಮಹದಾದಿಗಳಿಗೂ ಕೂಡ ನಿಯಾಮಕನಾದ್ದರಿಂದ ವ್ಯಾಪ್ತನಾದುದರಿಂದಲೂ, ಸಮರ್ಥನಾದ ಬ್ರಹ್ಮನು ತನ್ನ ಶರೀರ ವಿಹಾರಗಳಿಂದ ನಿಷಾದ, ಋಷಭ, ಗಾಂಧಾರ, ಷಡ್ಜ ಮಧ್ಯಮ, ದೈವತ, ಪಂಚಮವೆಂಬ ಸಪ್ತಸ್ವರಗಳನ್ನೂ ಸೃಜಿಸಿದನು. (ಸ, ನಿ, ಧ, ಪ, ಮ, ಗ, ರಿ.)

ಶ್ರೀಹರಿಯ ಅನುಗ್ರಹಾಮೃತಪೂರ್ಣನಾದ ಬ್ರಹ್ಮನಿಂತು ಅನೇಕ ವಿಧ ಸೃಷ್ಟಿ ಶಕ್ತಿಯುತನಾಗಿ ಸೃಜಿಸಿ, ಸಾಲದೆ ಸ್ತ್ರೀಪುರುಷಕಾರಣ ಶಕ್ತಿಯನ್ನು ಸ್ವೀಕರಿಸಿ ಸೃಜಿಸಲು ನಿಶ್ಚಯಿಸಿದನು.

ಭೂರಿ ವೀರ್ಯರಾದ ಮರೀಚ್ಯಾದಿ ಋಷಿಗಳು ಮಾಡಿರುವ ಸೃಷ್ಟಿಯು ವಿಸ್ತಾರವಾಗಿಲ್ಲವೆಂದು ಚಿಂತಿಸಿ ಇಂತೆಂದು ಅಂದುಕೊಂಡನು. 'ಏನಿದಾಶ್ಚರ್ಯವು! ನಿತ್ಯವೂ ಪ್ರಯತ್ನಶೀಲನಾಗಿದ್ದರೂ ನನ್ನ ಈ ಪ್ರಜಾಸೃಷ್ಟಿಯು ಚೆನ್ನಾಗಿ ಬೆಳೆಯದೆ ಇದೆ. ನಿಜವಾಗಿ ದೈವಾನುಗ್ರಹವಿದ್ದರೇನೆ ಕಾರ್ಯಗಳು ಕೈಗೂಡುವವು' ಎಂದು ಚಿಂತಿಸಿ ಹರಿಧ್ಯಾನವನ್ನು ಮಾಡುತ್ತಲಿರುವಾಗ ಬ್ರಹ್ಮರೂಪವು ಎರಡಾದವು. ಕ, ಎಂದರೆ ಬ್ರಹ್ಮನು ಅಯ, ಎಂದರೆ ಪೊಂದಿದ್ದರಿಂದ ಅದು ಕಾಯವೆನಿಸಿತು. ಆ ಎರಡು ರೂಪಗಳಿಂದ ಚಕ್ರವರ್ತಿಯಾದ ಸ್ವಾಯಂಭುವ ಮನುವು, ಅವನ ಮಹಿಷಿಯಾದ ಶತರೂಪಾದೇವಿಯು ಪುಟ್ಟಿದರು. ಅಂದಿನಿಂದ ಮೈಥುನಧರ್ಮಾವಲಂಬಿಗಳಾಗಿ ಪ್ರಜರು ವೃದ್ಧಿಯನ್ನು ಪೊಂದಿದರು.

ಮನುರಾಜನು ಶತರೂಪೆಯಲ್ಲಿ ಪ್ರಿಯವ್ರತೋತ್ತಾನಪಾದರೆಂಬ ಪುತ್ರರನ್ನು, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಪುತ್ರಿಯರನ್ನು ಪಡೆದನು. ಆಕೂತಿಯನ್ನು ರುಚಿ ಪ್ರಜಾಪತಿಗೂ, ದೇವಹೂತಿಯನ್ನು ಕರ್ದಮನಿಗೂ, ಪ್ರಸೂತಿಯನ್ನು ದಕ್ಷನಿಗೂ ಕೊಟ್ಟನು. ಪ್ರಸೂತಿ ಸಂತಾನ ಪರಂಪರೆಯಿಂದ ಈ ಜಗವೇ ತುಂಬಿನಿಂತಿತು ಎಂದು ಮೈತ್ರೇಯನು ವಿದುರನಿಗೆ ಪೇಳಿದನು.

## ೧೪. ವರಾಹಾವತಾರ ಕಥಾ

ಶ್ರೀಶುಕನು ಪೇಳುವನು.

ಮೈತ್ರೇಯನು ಪೇಳಿದ ಪುಣ್ಯಮಯ ಚರಿತೆಯನ್ನು ಕೇಳಿ ವಾಸುದೇವಕಥಾಸಕ್ತಚಿತ್ತನಾದ ವಿದುರನು ಪ್ರಶ್ನಿಸಿದನು–

ಮುನೇ! ಬ್ರಹ್ಮನ ಪ್ರಿಯಪುತ್ರನಾದ ಮನುರಾಜನು ಪ್ರಿಯಪತ್ನಿಯಿಂದ ಕೂಡಿ ಮುಂದೇನು ಮಾಡಿದನು? ಸಜ್ಜನಶಿಖಾಮಣಿಯೇ! ಆದಿರಾಜನಾದ ಆ ರಾಜರ್ಷಿಯು ವಿಷ್ಣುಭಕ್ತನಲ್ಲವೇ!

ಅವನ ಕಥೆಯನ್ನು ಶ್ರದ್ಧೆಯಿಂದ ಕೇಳುವೆನು. ಹೇಳು. ಬಹುಕಾಲ ವೇದಾದಿ ಶಾಸ್ತ್ರಾಭ್ಯಾಸವನ್ನ ತಿಕಷ್ಟದಿಂದ ಮಾಡಿದುದರ ಮುಖ್ಯಫಲವು, ಮುಕುಂದ ಪಾದಾರವಿಂದರತಚಿತ್ತರಾದ ಭಕ್ತಜನರ ಮುಖದಿಂದ ಹರಿಕಥಾಮೃತ ಪಾನವನ್ನು ಗೈಯುವದೇ ಹೊರತನ್ಯವಲ್ಲ. ಭಕ್ತಸತ್ತಮರ ಚರಿತೆಯು ಭಗವತ್ಕಥಾಮೃತದಿಂದ ಅವಿನಾಭೂತವಾಗಿಯೇ ಇರುವದು– ಎಂದು ಕೇಳಲು ವಿನೀತನು ಸಹಸ್ರಶಿರಸ್ಕ ಶ್ರೀಹರಿಚರಣಾಂಬುಜಪಾದಪೀಠಾಯಿತಶಿರಸ್ಕನು ಆದ ವಿದುರನನ್ನು ಕಂಡು ಆನಂದಪುಲಕಿತಗಾತ್ರನಾಗಿ ಮೈತ್ರೇಯನು ಚಿತ್ರಹರಿಕಥಾವರ್ಣನಾಚತುರನಾಗಿ ಇಂತೆಂದನು–

ವಿದುರಾ! ಸ್ವಾಯಂಭುವನು ತನ್ನ ಪತ್ನಿಯಿಂದ ಕೂಡಿ ವೇದಗರ್ಭನಾದ ತಂದೆಗಭಿವಂದಿಸಿ ಕೈಜೋಡಿಸಿ ನುಡಿದನು–

ಸ್ವಾಮೀ! ನೀನೇ ಸರ್ವಪ್ರಜಾನೀಕದ ತಂದೆ. ಸೃಷ್ಟಿಕರ್ಮ ನಮ್ಮ ಸೇವೆ ನಿನಗೆ ಸಲ್ಲುವದು. ಆಜ್ಞಾಪಿಸು. ನಿನಗೆ ನಮಸ್ಕಾರವು. ನಮ್ಮ ನಮ್ಮ ನಿತ್ಯ ನೈಮಿತ್ತಿಕ ಕರ್ಮಗಳನ್ನು ಪೂಜಾ ಯಜ್ಞಾದಿಗಳನ್ನು ಮಾಡುವಾಗ, ನಿನ್ನ ಸೇವೆಯಿಂದ ಇಹದಿ ಯಶವು ಪರದಿ ಸದ್ಗತಿಯು ಸಿಗುವಂತೆ ನಮ್ಮ ಕರ್ತವ್ಯವಾವುದು–ಎನ್ನಲು ಬ್ರಹ್ಮನು ಇಂತೆಂದನು–

ವತ್ಸಾ! ಆದಿರಾಜ! ಪ್ರೀತನಾದೆ. ನಿಮಗೆ ಶುಭವಾಗಲಿ! 'ಆಜ್ಞಾಪಿಸು' ಎಂದು ಕಾಪಟ್ಯರಹಿತ ನಾಗಿ ಸ್ವಯಂ ನೀನಾಗಿ ನಿನ್ನ ಸರ್ವವನ್ನೆನಗೆ ಸಮರ್ಪಿಸಿದೆ. ಮತ್ಸರವಿಲ್ಲದೆ ಅಪ್ರಮತ್ತರಾಗಿ ತಂದೆಯ ಶಾಸನವನ್ನು ಯಥಾಶಕ್ತಿಯಾಗಿ ಪಾಲಿಸುವುದೇ ಮಕ್ಕಳು ಮಾಡಲರ್ಹವಾದ ಗುರುಪೂಜೆ. ನೀನಾದರೂ ಶತರೂಪೆಯಲ್ಲಿ ಗುಣಸದೃಶರಾದ ಮಕ್ಕಳನ್ನು ಪಡೆದು, ಧರ್ಮದಿಂದ ಭೂಲೋಕವನ್ನು ಪಾಲಿಸು. ಯಜ್ಞಾದಿಗಳಿಂದ ಭಗವಂತನನ್ನು ಪೂಜಿಸು. ಪ್ರಜಾರಕ್ಷಣವೇ ಎನ್ನ ಸೇವ. ಪ್ರಜಾರಂಜಕನಾದರೆ ನಿನ್ನಲ್ಲಿ ಹೃಷೀಕೇಶನು ಪ್ರೀತನಾಗುವನು. ಯಾರು ಶ್ರಮೆ ಯಿಂದ ಯಾಗಾದಿಗಳನ್ನು ಮಾಡಿದರೂ, ಅಭಕ್ತರಾದ್ದರಿಂದ ಅವರಲ್ಲಿ ಶ್ರೀಹರಿಯು ಪ್ರೀತನಾಗ ದಿರುವನೋ ಅಂತಹರು ಸರ್ವ ಶ್ರೇಯೋದೂರರಾಗುವರು. ಅನುಷ್ಠಾನಾದ್ಯಾಯಾಸವೇ ಅವರಿಗೆ ಉಳಿಯುವ ಫಲವು ಎನ್ನಲು ಮನುರಾಜನಿಂತೆಂದನು–

ಪೂಜ್ಯನೇ! ನಿನ್ನ ಆಜ್ಞೆಯನ್ನು ಶಿರಸಾ ವಹಿಸಿ ನಡೆಸುವೆನು. ಆದರೆ ಕಾಮಾದಿ ಶತ್ರು ಸಂಹಾರಕನಾದ ಪ್ರಭೋ! ನನಗೂ ಮತ್ತು ನನ್ನ ಪ್ರಜರಿಗೂ ಇರಲು ಸ್ಥಾನವಾವುದು ನೋಡಿಸು! ಪಿಪೀಲಿಕಾದಿ ಸರ್ವಪ್ರಾಣಿಗಳಿಗಾವಾಸ ಸ್ಥಾನವಾದ ಮಹೀಮಂಡಲವು ಪ್ರಲಯಜಲದಲ್ಲಿ ಮಗ್ನವಾಗಿದೆ. ಈ ಭೂದೇವಿಯನ್ನುದ್ಧರಿಸುವ ಯತ್ನವನ್ನೂ ಮಾಡಿ ರಕ್ಷಿಸು.

ಆಗ ಪರಮೇಷ್ಠಿಯು ಮನುರಾಜ ಹೇಳಿದಂತೆ ನೀರಿನಲ್ಲಿ ಮುಳುಗಿದ ಭೂಮಿಯನ್ನು ನೋಡಿ, ಹೇಗಿದನ್ನು ಮೇಲೆ ತರುವುದೆಂದು ಬಹಳವಾಗಿ ಆಲೋಚಿಸಿದನು. 'ಮೊದಲೇ ನಾನೀ ಜಲವನ್ನು ಕುಡಿದು ದೇವಾಸುರ ಪಿತೃಮನುರ ಪಶುಪಕ್ಷಿಸರ್ಪನಾಗ ಪ್ರಮುಖ ಭೂತಗಳನ್ನು ಭೂಮಿಯಲ್ಲಿ ನಿಲ್ಲಿಸಿದೆ. ಆದರೂ ಮತ್ತೆ ಭೂಮಿಯು ಜಲದಲ್ಲಿ ಮುಳುಗಲು ಕಾರಣವೇನು? ನಿಶ್ಶೇಷವಾಗಿ ಜಲವನ್ನು ನಾನು ಪಾನಗೈದಿಲ್ಲವೆಂದು ಕಾಣುತ್ತೆ. ಸೃಷ್ಟಿಯನ್ನುಪಕ್ರಮಿಸುತ್ತಿರು ವಾಗಲೇ, ಭೂಮಿಯು ನೀರಿನಲ್ಲಿ ಮುಳುಗಿತು. ಇನ್ನಂತು ಸರ್ಗಕಾರ್ಯವನ್ನು ನಡೆಸುವೆವು? ಈ ಅವಸ್ಥೆಯಲ್ಲಿ ಹರ್ಯಾಜ್ಞಾಪಾಲನವೆಂತಾಗುವದು? ಯಾವ ಸ್ವಾಮಿಯ ದೆಶೆಯಿಂದ ನಾ ಬಂದೆನೋ ಆ ಪ್ರಿಯತಮನಾದ ಶ್ರೀಹರಿಯೇ ನಮಗೆ ಗತಿ' ಎಂದು ಭಕ್ತಿಯಿಂದ ಧ್ಯಾನಿಸುತ್ತಿ

ರಲು ಬ್ರಹ್ಮನ ನಾಸಾವಿವರದಿಂದ ಅಂಗುಷ್ಠಪರಿಮಿತ ಗಾತ್ರವಾದ ವರಾಹ ಕಿಶೋರವು ಹೊರ ಬಂದು ಆಕಾಶದಲ್ಲಿ ನಿಂದು, ಒಂದೇ ಕ್ಷಣದಲ್ಲಿ ಆನೆಯಷ್ಟಾಗಿ ಬೆಳೆಯಿತು. ಆಶ್ಚರ್ಯ ಚಕಿತ ರಾಗಿ ಸರ್ವರೂ ನೋಡುತ್ತಿರಲು ಗಂಡಶಿಲೆಯಷ್ಟಾಯಿತು. ಮರೀಚಿಮುಖ್ಯ ಋಷಿಗಳು ಸನಕಾದಿಗಳು ಮನುರಾಜನು ಸಂಭ್ರಮದಿಂದ ನೋಡುತ್ತಿದ್ದರು. ಬ್ರಹ್ಮನು 'ಅಹೋ ಮುನಿ ಗಳಿರಾ! ಏನಿದು ಸೂಕರರೂಪದಿಂದ ಕಾಣುವ ಮಹಾಭೂತವು? ನನ್ನ ನಾಸಾಪುಟದಿಂದಲೇ ಬಂತಲ್ಲವೇ? ಅಂಗುಷ್ಠಮಾತ್ರವಿದ್ದ ರೂಪವು ಕ್ಷಣಮಾತ್ರಕಾಲದಲ್ಲಿ ಗಂಡಶಿಲೋಪಮವಾಗಿದೆ. ನನ್ನ ಮನಸ್ಸಿಗಂತು ಚಿಂತೆಯನ್ನು ಕೊಟ್ಟ ಈ ಪುಟ್ಟವರಾಹವು ಯಜ್ಞಮೂರ್ತಿ ಭಗವಂತನೇ ಇರಬಹುದು' ಎಂದು ನಂದನರಿಂದ ಕೂಡಿ ಚಿಂತಿಸುವ ಬ್ರಹ್ಮನನ್ನು ಗಂಭೀರ ಗರ್ಜನೆಯಿಂದ ಸಂತೈಸಿ ಆ ವರಾಹಮೂರ್ತಿಯು ಅನುಗ್ರಹಿಸಿದನು. ಆ ಹರಿಯ ಗರ್ಜನವು ದಿಕ್ಕುಗಳಲ್ಲಿ ತುಂಬಿ ಪ್ರತಿಧ್ವನಿಸಿತು. ಅದನ್ನು ಕೇಳಿ ಸ್ವೇಚ್ಛೆಯಿಂದ ವರಾಹರೂಪವನ್ನು ತಾಳಿಬಂದ ಗೋವಿಂದನೆಂದು ತಿಳಿದು, ಸಕಲ ಶಂಕಾತಂಕಗಳನ್ನು ಬಿಟ್ಟು, ಜನಲೋಕ ತಪೋಲೋಕ ಸತ್ಯಲೋಕನಿವಾಸಿ ಮುನಿಜನರು ಆ ಪ್ರಭುವನ್ನು ಪವಿತ್ರ ವೇದತ್ರಯದಿಂದ ಸ್ತುತಿಸಿದರು. ಅವರು ಮಾಡಿದ ನಿಜಗುಣಾನುವಾದವನ್ನಾಲಿಸಿ ವೇದವೇದ್ಯನಾದ ಆದಿಸೂಕರನು ಸರ್ವ ಸುಜನಾರ್ತಿಸಂಹರ್ತನಾಗಿ ಪುನಃ ಘುರ್ಘುರಧ್ವಾನವನ್ನು ಮಾಡಿ ಗಜರಾಜನ ಸೊಬಗಂ ಸೂರೆಗೊಂಡು ಸುಂದರನಾಗಿ, ಪ್ರಳಯೋದಧಿಯನ್ನು ಪ್ರವೇಶಿಸಿದನು. ತತ್ತದ್ಯೋನಿಜ ಸ್ವಭಾವವನ್ನು ವ್ಯಕ್ತ ಮಾಡಿ ತೋರಿಸುವಂತೆ, ಬಾಲವನ್ನೆತ್ತಿ, ಕಠೋರ ಕೇಸರಗಳನ್ನು ಕೊಡವಿ, ಖುರಗಳಿಂದ ಮೇಘಗಳನ್ನು ಕೆದರುತ್ತಾ, ಆಕಾಶದಲ್ಲಿ ಸಂಚರಿಸಿದ ಆ ಅಧ್ವರಾಂಗನು ಧವಳ ದಂಷ್ಟ್ರಗಳಿಂದಲೂ, ಖರರೋಮಶರೀರದಿಂದಲೂ ಕೂಡಿ, ಕಣ್ಣುಗಳ ಕಾಂತಿಯಿಂದ ಪ್ರಕಾಶ ವನ್ನು ಬೀರುತ್ತಾ, ಉನ್ನತ ಕಪೋತವು, ಕಠಿಣಲತಾ ಕಂಪನ ಕರವು, ಪಿಚುಮಂದಾದಿ ವೃಕ್ಷಪರುಷ ತ್ವಚವು, ಸಂತಾಡಿತ ಮೇಘವು, ಧವಳ ಶೃಂಗವು, ದಾವಾಹ್ನಿ ಪ್ರಕಾಶವು ಆದ ಪರ್ವತರಾಜನಂತೆ ಕಂಗೊಳಿಸಿದನು. ಪೃಥ್ವಿಯನ್ನು ಮೂಸಿ ನೋಡಿ, ಹುಡುಕುವ ಆ ಯಜ್ಞವ ರಾಹನು ಕರಾಳ ದಂಷ್ಟ್ರಾವೀಕ್ಷಣನಾಗಿ, ಸ್ತುತಿಯನ್ನು ಮಾಡುವ ವಿಪ್ರರು ನೋಡುತ್ತಿರಲು, ಸಮುದ್ರವನ್ನು ಪ್ರವೇಶಿಸಿದನು.

ಆ ವಜ್ರಕೂಟಾಂಗ ವರಾಹನ ಪಾತವೇಗದಿಂದ ತನ್ನ ಮಧ್ಯಭಾಗವು ಘೂರ್ಣಿತವಾಗಿ, ಕ್ಷೋಭೆಯನ್ನು ಪೊಂದಿದ ಸಮುದ್ರನು ದೀರ್ಘ ತರಂಗ ಹಸ್ತಗಳನ್ನೆತ್ತಿ 'ಯಜ್ಞೇಶ್ವರ! ನನ್ನನ್ನು ಕಾಪಾಡು' ಎಂದು ಮೊರೆಯಿಡುವಂತೆ ಆಕ್ರೋಶವನ್ನು ಮಾಡಿ, ನಮಿಸಿದನು. ಅರ್ಧಚಂದ್ರಾಕಾರ ವಾದ ಖುರಗಳಿಂದ ನೀರನ್ನು ಸೀಳಿಕೊಂಡು ತ್ರಿವೇದಮಯನು ರಸಾತಲದಲಿ ಭೂಮಿಯನ್ನು ಕಂಡನು. ಪೂರ್ವದಲ್ಲಿ ನಿದ್ರಾಮುದ್ರಿತನಾಗಿದ್ದ ತಾನೇ ಆ ಭೂಮಿಯನ್ನು ಜೀವಧಾನಿಯನ್ನಾಗಿ ಸಂಕಲ್ಪಿಸಿ, ಜಲೋಪರಿ ಭಾಗದಲ್ಲಿಟ್ಟು ತ್ರಿಯುಗಹೂತಿಯು, ಪುನ: ತನ್ನ ಕೋರೆಯ ಕೊನೆ ಯಲ್ಲಿ ಭೂಮಂಡಲವನ್ನು ವಹಿಸಿ, ರಸಾತಲದಿಂದ ಮೇಲಕ್ಕೆ ಬಂದನು. ಆಗ ಆ ಹಿರಣ್ಯಾಕ್ಷ ನೆಂಬ ಬ್ರಹ್ಮಜನಾದ ಆದಿ ದೈತ್ಯನು ಗದೆಯನ್ನು ಪಿಡಿದೆದುರಿಸಲು ಚಕ್ರದಂತೆ ಪ್ರಜ್ವಲಿಸುವ ಕೋಪದಿಂದ ಅಸಹ್ಯ ವಿಕ್ರಮನಾಗಿ ವರಾಹವು – ಸಿಂಹವು ಆನೆಯನ್ನಂತೆ, ಲೀಲಾಜಾಲವಾಗಿ ಕೋರೆಯಿಂದ ಹೊಡೆದು ಸಂಹರಿಸಿದನು. ದಂತಪ್ರಹಾರದಿಂದ ತಟಭೂಮಿಯನ್ನೆತ್ತಿ ಎಸೆಯುತ್ತಾ ಪಂಕಾಂಕಿತತುಂಡಗಂಡನಾಗಿ ಶ್ರೀವರಾಹನು ಶೋಭಿಸಿದನು. ತಮಾಲನೀಲ

ಗಾತ್ರನು, ಸಿತದಂಷ್ಟ್ರಾಕೋಟಿನಿವಿಷ್ಟಧರಿತ್ರೀಮಂಡಲನು, ಗಜಲೀಲಾಗಮನ ಚಿತ್ರನೂ, ಪರಮಪವಿತ್ರನಾದ ವರಾಹನನ್ನು ಕಂಡು ಆನಂದದಿಂದ ಬ್ರಹ್ಮಾದಿಗಳು ಸ್ವಾಮಿಯನ್ನು ಅನುವಾಕಗಳಿಂದ ಪೊಗಳಿದರು.

ಲೋಕಮಂಗಲಕರ ವರಾಹನೇ! ನೀನು ಜಯಶಾಲಿಯಾಗಿರುವಿ! ನಿನಗೆ ಸರ್ವದಾ ಜಯವಾಗಲಿ! ಯಜ್ಞಾಂಗಪದಾರ್ಥಜನನಭೂಮಿಯಾದ ನಿನ್ನ ಯಜ್ಞವರಾಹ ದೇಹದ ರೋಮಕೂಪಗಳಲ್ಲಿ ಸಮುದ್ರಗಳಡಗಿದ್ದು, ನಿನ್ನ ಶರೀರವು ಕಂಪಿಸುತ್ತಿರಲು ಹೊರಬರುತ್ತಿವೆ. ದೇವ! ಈ ನಿನ್ನ ರೂಪವು ಪಾಪಿಗಳಿಗೆ ಕಾಣುವುದಿಲ್ಲ. ವೇದವೇದ್ಯನಾದ ನಿನ್ನ ಅವಯವಗಳಿಂದ ಯಜ್ಞಸಾಧನಗಳು ಜನಿಸಿ ಬಂದಿವೆ.

ನಿನ್ನತ್ವಚದಿಂದ ವೇದಗಳು, ರೋಮಗಳಿಂದ ದರ್ಭೆಗಳು, ಕಣ್ಣಿನಲ್ಲಿ ಆಜ್ಯವು ಪುಟ್ಟಿವೆ. ಪಾದಗಳೇ ಚಾತುರ್ಹೋತ್ರಗಳ ಜನನ ಸ್ಥಲ. ತುಂಡದಿಂದ ಸ್ರುಕ್, ನಾಸಿಕೆಯಿಂದ ಸ್ರುವವು, ಉದರದಿಂದ ಇಡಾಪಾತ್ರವು, ಕರ್ಣದಲ್ಲಿ ಚಮಸಪಾತ್ರೆ, ಆಸ್ಯದಿಂದ ಪುರೋಡಾಶ, ರಸನದಲ್ಲಿ ದ್ವಾದಶ ಸೋಮರಸಗಳು ಪುಟ್ಟಿವೆ. ನಿನ್ನ ಚರ್ವಣಕ್ರಿಯೆಯೇ ಅಗ್ನಿಹೋತ್ರ, ತವಾವತಾರ ಜನನವೇ ದೀಕ್ಷೆ, ನಿನ್ನ ಶಿರದಲ್ಲಿ ಉಪಸದವೆಂಬ ಯಜ್ಞಗಳು, ಉಪಕ್ರಮಾವಸಾನಗಳಲ್ಲಿ ಮಾಡುವ ಪ್ರಾಯಣೀಯೋದಯನೀಯ ಕರ್ಮಗಳು, ಮತ್ತು ದಂಷ್ಟ್ರಗಳಲ್ಲಿ ತುಂಗಭದ್ರಾದಿ ನದಿಗಳು, ಪುಟ್ಟಿವೆ. ಜಿಹ್ವೆಯಿಂದ ಪ್ರವರ್ಗ್ಯವು, ನಡುನೆತ್ತಿಯಲ್ಲಿ ಸಂಕಲ್ಪವು, ಪ್ರಾಣಗಳಲ್ಲಿ ಸಭ್ಯಾವಸಥ್ಯಗಳು, ಅಗ್ನಿಚಿತಿನಾಮಕ ಇಷ್ಟಕಗಳು, ಆಶ್ರಯಿಸಿ ಬಂದಿವೆ. ನೀನು ನಿಶ್ಚಲನಾಗಿ ನಿಲ್ಲುವುದೇ ಸವನ. ರೇತಸ್ಸಿನಿಂದ ಸೋಮಲತೆಯನ್ನು ಪಡೆದೆ. ಅಗ್ನಿಷ್ಟೋಮಾದಿ ಸಪ್ತ ಸಂಸ್ಥೆಗಳು ನಿನ್ನ ಧಾತುಗಳಿಂದ ಸರ್ವಸತ್ರಯಾಗಗಳು ಶರೀರ ಸಂಧಿಗಳಿಂದ ಬಂದವು. ನಿನ್ನ ದೇಹಬಂಧದಲ್ಲಿ ಪ್ರತಿಪದಾದಿ ತಿಥಿಗಳಲ್ಲಿ ಮಾಡುವ ಇಷ್ಟಿಕರ್ಮ ಜನಿಸಿದೆ. ಸರ್ವ ಮಂತ್ರತಂತ್ರ ದೇವತಾ ದ್ರವ್ಯಗಳಿಗೆ ನೀನೇ ಸತ್ತಾಪ್ರದನು. ಸರ್ವ ಯಜ್ಞಕರ್ತನೂ ಪ್ರೇರಕನೂ ನೀನೇ. ಭಕ್ತಿವೈರಾಗ್ಯಗಳಿಂದ ನಿರ್ಮಲಮನಸ್ಕರಾದವರಿಗೆ ಜ್ಞಾನಪ್ರದನು. ವೇದಾದಿ ಪರವಿದ್ಯೋಪದೇಶಕನೂ ಆದ ನಿನಗೆ ನಮೋ ನಮಃ ಹೇ ಭಗವನ್! ಭೂರಮಣ! ನಿನ್ನ ದಂಷ್ಟ್ರಾಕೋಟಿಯಲ್ಲಿಟ್ಟ ಪರ್ವತಯುಕ್ತ ಭೂಮಂಡಲವು ವನದಿಂದ ಬರುತ್ತಿರುವ ಗಜರಾಜನ ಕೋರೆಯ ಮೇಲಿದ್ದ ಪತ್ರಸಹಿತ ಪದ್ಮಿನಿಯಂತೆ ವಿರಾಜಿಸುತ್ತಿದೆ. ಕುಲಾಚಲದ ಕೋಡಿನಲ್ಲಿರುವ ಮೇಘದ ಸೊಬಗನ್ನು ವಹಿಸಿ ನಿನ್ನ ಕೋರೆಯ ಮೇಲಿರುವ ಭೂಮಿಯು ಶೋಭಿಸುತ್ತಿರುವಳು. ಸ್ಥಾವರ ಜಂಗಮ ಪ್ರಾಣಿಗಳ ವಾಸವಾಗಿ ಭರಿಸುವ ಈ ಭೂಮಾತೆಯನ್ನು ಸ್ಥಾಪಿಸು. ತಂದೆಯೇ! ನಿನ್ನ ತೇಜವನ್ನು ಅರಣಿಯಲ್ಲಗ್ನಿಯನ್ನಿಟ್ಟಂತೆ ಈ ತಾಯಿಯಲ್ಲಿ ತುಂಬಿರುವೆ. ಲೋಕಜನನೀ-ಜನಕರೇ! ನಿಮಗೆ ನಮಿಸುವೆವು. ಇಂತು ಭೂಮಿಯನ್ನು ರಸಾತಲದಿಂದ ಉದ್ಧರಿಸಿ ತರುವುದಿನ್ನೊಬ್ಬನಿಂದ ಸಾಧ್ಯವೇ! ನಾರಾಯಣಾ! ಸರ್ವಾಶ್ಚರ್ಯಮಯನಾದ ಸರ್ವಶಕ್ತನಾದ ನಿನಗಿದೇನಾಶ್ಚರ್ಯ! ಜಗವನ್ನೆಲ್ಲ ನಿರ್ಮಿಸಿದ್ದು ಪರಮಾಶ್ಚರ್ಯವಲ್ಲವೇ! ಈ ನಿನ್ನ ವೇದಮಯ ಶರೀರವನ್ನು ಕಂಪಿಸುತ್ತಿರಲು ಶಿಖಾಕೇಸರಧೂತ ಮಂಗಲ ಜಲಬಿಂದುಗಳಿಂದ ಆಪ್ಲಾವಿತರಾಗಿ ಜನಸ್ತಪಸ್ಸತ್ಯ ಲೋಕವಾಸಿಗಳಾದ ನಾವೆಲ್ಲರೂ ಪುನೀತರಾಗಿರುವೆವು. ವಾಚಾ ಸ್ತುತಿಸಿ, ಮನಸಾ ಸ್ಮರಿಸಿ, ಅಂತರ್ಬಾಹ್ಯ ಪಾವಿತರಾದೆವು. ಅನಂತವಿಕ್ರಮನಾದ ನಿನ್ನ ಭೂಮ್ಯುದ್ಧರಣಾದಿ ಪಾವನ ಚರಿತೆಗಳನ್ನು ಕೇಳಲಾರದ ಪಾಪಿಯು ನರಕಭಾಗಿಯೇ ಸರಿ!

ನಿನ್ನ ಬಂಧಕಶಕ್ತಿಯಿಂದ ಭ್ರಷ್ಟಮನಸ್ಕರಾಗಿ ತತ್ತ್ವಜ್ಞಾನದಿಂದ ದೂರಾಗುವ ಗತಿ ಎಮಗೆ ಬೇಡ. ಈಶ! ಜ್ಞಾನಸಾಧ್ಯವಾದ ನಿನ್ನ ಲೋಕವನ್ನೇ ಕೊಡು!

ವಿದುರಾ! ಇಂತು ಬ್ರಹ್ಮವಾದಿಗಳಾದ ಮುನಿಗಳಿಂದ ಭೂಮಿಯನ್ನು ಸ್ಥಿರವಾಗಿ ಸ್ಥಾಪಿಸಿ ಭಕ್ತರನ್ನು ಸಲಹಿದನು. ಪುನಃ ಅಲುಗಾಡದಂತೆ ಭೂಮಿಯನ್ನು ಜಲದಲ್ಲಿ ಸ್ಥಾಪಿಸಿದ ನಂತರ ಶ್ರೀಹರಿಯು ಅಂತರ್ಧಾನವನ್ನು ಹೊಂದಿದನು.

ಕಥನಯೋಗ್ಯಸಾಮರ್ಥ್ಯನು, ಸಂಸಾರ ಸಂಹಾರಿ ಬುದ್ಧಿಧೈರ್ಯನು ಆದ ಶ್ರೀಹರಿಯು ತನ್ನ ಈ ಸರ್ವಕಾಮದ ಕಥೆಯನ್ನು ಕೇಳಿದವರಿಗೂ ಹೇಳಿದವರಿಗೂ ಪ್ರಸನ್ನನಾಗಿ ಹೃದಯಪದ್ಮದಿ ಸನ್ನಿಹಿತನಾಗಿ ಪೊರೆವನು. ಸಕಲಸ್ವರ್ಗಾದಿ ಸುಖದೊಡೆಯನಾದ ಶ್ರೀಹರಿಯು ಪ್ರಸನ್ನನಾದನೆಂದರೆ ಇನ್ನಾವುದು ದುರ್ಲಭವು? ಆದರೂ ನಶ್ವರ ಸುಖಗಳಿಂದೇನು ಪ್ರಯೋಜನವು? ವಿದುರಾ! ಅನನ್ಯ ಭಕ್ತಿಯಿಂದ ತನ್ನ ಭಜಿಪರಿಗೆ ಹೃದಯ ಗುಹೆಯಲ್ಲಿಯೇ ಇದ್ದು ತನ್ನನ್ನೇ ಕೊಟ್ಟುಬಿಡುವ ದಿವ್ಯಜ್ಞಾನದಾಯಕನಾದ ಪರಮಪುರುಷನ ಕಥಾಮೃತಪಾನ ವನ್ನು ಮಾಡಲೊಲ್ಲದವನು ಮನುಜನೇ? ಲೋಕದಲ್ಲಿ ಪುರುಷಾರ್ಥಸಾರವೆನಿಸಿದ ಮುಕ್ತಿಸಾಮ್ರಾಜ್ಯವನ್ನು ಬಯಸಿದವನು, ಪೂರ್ವಗಾಥೆಗಳ ಮಧ್ಯದಲ್ಲಿರುವ ಹರಿಕಥಾಮೃತ ವನ್ನು ಕರ್ಣರಂಧ್ರಗಳಲ್ಲಿ ತುಂಬಿ ಪುನಃ ಪುನಃ ಪಾನಮಾಡಿಯೂ ತೃಪ್ತನಾಗಲಾರನು. ಹಾಗೆ ಸಾಕೆನಿಸಿದವನು ಮನುಜನಲ್ಲ. ಪಶುವೇ ಸರಿ!

## ೧೫. ದಿತಿ – ಕಶ್ಯಪ ಸಂವಾದ

ಕುಷಾರವಸುತನು ಇಂತು ದೇವಕಾರ್ಯ ನಿಮಿತ್ತವಾಗಿ ವರಾಹನಾಗಿ ಅವತರಿಸಿದ ಹರಿಯ ಕಥೆಯನ್ನು ವರ್ಣಿಸಲು ಕೇಳಿ ಮುದದಿಂದ 'ಹರಯೇ ನಮಃ' ಎಂದು ಭಕ್ತಿ ಪ್ರಣಾಮವನ್ನಾಚರಿಸಿ, ವಿದುರನು ಅತಿ ತೃಪ್ತನಾಗದೆ ಮತ್ತೆ ಪ್ರಶ್ನಿಸಿದನು–

ಶ್ರೀಯಜ್ಞವರಾಹನು ಆದಿದೈತ್ಯನಾದ ಹಿರಣ್ಯಾಕ್ಷನನ್ನು ರೂಪಾಂತರದಿ ಬಂದವನ ನ್ನಿಂನ್ನೊಂದು ಸಲವೂ ಕೊಂದನೆಂದು ಕೇಳಿರುವೆವು. ದಂಷ್ಟ್ರಾಗ್ರದಿ ಭೂಮಂಡಲ ವನ್ನೆತ್ತಿಕೊಂಡು ಬರುವ ಪುಂಡರೀಕಾಕ್ಷನಿಗೂ ಆ ದೈತ್ಯನಿಗೂ ಕಲಹವಾಗಲು ಕಾರಣವೇನು? ಎಂದು ಕೇಳಲು ಮೈತ್ರೇಯನಿಂತೆಂದನು –

ಸಾಧು ! ಹರಿಭಕ್ತವರ! ಮರ್ತ್ಯರಿಗೆ ಮೃತ್ಯುಪಾಶಮೋಚಕವಾದ ಶ್ರೀಹರಿಯ ಕಥೆಯನ್ನು ಪೇಳೆಂದು ಕೇಳುವ ನೀನೇ ಧನ್ಯನು! ನೋಡು. ಧ್ರುವರಾಜನು ಐದು ವರ್ಷದವನಿದ್ದಾಗಲೇ ನಾರದೋಪದೇಶದಿಂದ ಹರಿಯ ಮಹಿಮೆಯನ್ನರಿತು ಮೃತ್ಯುವಿನ ತಲೆ ತುಳಿದು ಧ್ರುವಪದವಿ ಯನ್ನೈದಿದನಲ್ಲವೇ? ದೇವತೆಗಳು ಕೇಳಲು ಬ್ರಹ್ಮನು ಪೇಳಿದ ಪುಣ್ಯಕರವಾದ ಇತಿಹಾಸವನ್ನು ಈಗ ನಿನಗೆ ಪೇಳುವೆನು ಕೇಳು.

ಒಂದು ಸಾಯಂ ಸಮಯದಿ ದಾಕ್ಷಾಯಣಿ ದಿತಿಯು ತನ್ನ ಪತಿಯಾದ ಮರೀಚಿ ಪುತ್ರನನ್ನು ಕಾಮಪೀಡಿತಳಾಗಿ ಸಮೀಪಿಸಿ ಮಕ್ಕಳನ್ನು ಕೊಡೆಂದು ಬೇಡಿದಳು. ಅಗ್ನಿಹೋತ್ರದಲ್ಲಿ ಯಜುರ್ವೇದಗಣಮಂತ್ರಪ್ರತಿಪಾದ್ಯ ಶ್ರೀಹರಿಯನ್ನು ಕುರಿತು ಕ್ಷೀರಾದಿಗಳಿಂದ ಆಹುತಿಯನ್ನು

ಹಾಕಿ ಸೂರ್ಯಾಸ್ತಮಾನಸಮಯದಿ ಶ್ರೀಹರಿಸ್ಮರಣೆ ಮಾಡುತ್ತಾ ಅಗ್ನ್ಯಾಗಾರದಲ್ಲಿ ಕುಳಿತಿರುವ ಕಶ್ಯಪನನ್ನು ಕಂಡು ದಿತಿಯು ನುಡಿದಳು –

"ನೋಡಿದೆಯಾ ಈ ಮನ್ಮಥನ ಪೂಬಾಣಗಳ ಮಳೆಯನ್ನು? ಆನೆಯಿಂದ ಅಲುಗಾಡಿ ಸಲ್ಪಟ್ಟ ಬಾಳೆಯ ಗಿಡದಂತೆ ನನ್ನ ಮನಸ್ಸು ಕಾಮಪೀಡಿತವಾಗಿದೆ. ದೀನಳಾಗಿರುವೆನು. ನನ್ನ ಸವತಿಯರ ಪುತ್ರಾದಿ ಸಂಪತ್ತಿಯನ್ನು ನೋಡಿ ಕುದಿಯುತ್ತಿರುವ ನನ್ನಲ್ಲಿ ಅನುಗ್ರಹಿಸು, ನನ್ನನ್ನು ಸಲಹು. ಪತಿಯ ಸನ್ಮಾನವನ್ನು ಪಡೆದ ಸತಿಯ ಕೀರ್ತಿ ಮೂರು ಲೋಕಗಳಲ್ಲಿ ಹರಡುವದು. ನಿನ್ನಂತಹ ಪತಿಯ ಪಡೆದ ನನಗೆ ಪ್ರಜಾಸಂಪತ್ತಿ ಉಳಿಯಬಾರದೇ? ಹಿಂದೆ ನಮ್ಮ ತಂದೆ ಪೂಜ್ಯ ದಕ್ಷನು 'ವತ್ಸೆಯರೇ! ಯಾರನ್ನು ನೀವು ಪತಿಯನ್ನಾಗಿ ವರಿಸುವಿರಿ?' ಎಂದು ಕೇಳಿದನು. ಆ ದುಹಿತೃವತ್ಸಲನಾದ ದಕ್ಷನು ನಿಮ್ಮನ್ನೇ ಮನದಿ ವರಿಸಿದ ನಮ್ಮ ಹಾರ್ದವನ್ನು ತಿಳಿದು, ನಿನಗೆ ನಿನ್ನಲ್ಲಿ ಅನುವ್ರತರಾದ ಹದಿಮೂರು ಜನ ಸುತೆಯರನ್ನೂ ಕೊಟ್ಟನು. ಆದ್ದರಿಂದ ಸುಂದರ! ನನ್ನಿಚ್ಛೆಯನ್ನು ಪೂರೈಸು. ದೊಡ್ಡವರನ್ನು ಆಪ್ತರೆಂದು ತಿಳಿದು ಶರಣಾಗತರಾದವರ ಮನೋಭಿಲಾಷೆ ಪೂರೈಸದೇ ವ್ಯರ್ಥವಾಗುವುದೇ?"

ಇಂತು ಕೃಪಣಳಾಗಿ ಬಹುಮಾತನಾಡುವ ಪತ್ನಿಯನ್ನು ಕಂಡು ಧೀರನಾದ ಕಶ್ಯಪನು ಅವಳ ಕಾಮಕೃತ ಮನಃಕಶ್ಮಲವನ್ನು ತೊಡೆದುಹಾಕಲಿಚ್ಛಿಸಿ ಇಂತೆಂದನು –

ಭೀರು! ಈಗಲೇ ನಿನ್ನ ಇಚ್ಛೆ ಕೈಗೂಡಿಸಿಕೊಡುವೆನು. ತಡೆ. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳನ್ನು ಸಂಪಾದಿಸಲು, ಸಾಧನಗಳೆನಿಸಿದ ಸತಿಯ ಸರ್ವೇಷ್ಟಗಳನ್ನು ಪೂರೈಸುವದು ಪತಿಯ ಕರ್ತವ್ಯವೇ ಸರಿ. ಭಾರ್ಯಾಯುಕ್ತನೇ ಇತರ ಆಶ್ರಮದವರಿಗೆ ಆಶ್ರಯನಾಗಿ ಸಂಭಾವಿಸಿ, ನೌಕೆಯಿಂದ ಸಮುದ್ರವನ್ನು ದಾಟಿದಂತೆ ಸತಿಯ ಸಹಾಯದಿಂದ ವ್ಯಸನಸಮುದ್ರವನ್ನು ದಾಟಿಬಿಡುವನು. ಸತಿಯೆಂದರೆ ಅರ್ಧಾಗಿಯೇ ಸರಿ! ಅವಳಿಗೆಲ್ಲವನ್ನೊಪ್ಪಿಸಿ ಪುರುಷನು ನಿಶ್ಚಿಂತನಾಗಿ ಸಂಚರಿಸಲು ಶಕ್ತನಾಗುವನು. ಅವಳನ್ನಾಶ್ರಯಿಸಿ ಇಂದ್ರಿಯ ಶತ್ರುಗಳನ್ನು ಮತ್ತು ವಿಷಯಗಳನ್ನು ಕೂಡ, ದುರ್ಗಪತಿಯು ಹೊರಗಿನ ಕಳ್ಳರನ್ನು ಗೆದ್ದಂತೆ ಸುಲಭವಾಗಿ ಜಯಿಸಿ, ಜಿತೇಂದ್ರಿಯನೆನಿಸುವನು.

ಗೃಹಿಣಿ! ನೀನು ಮಾಡಿದ ಸೇವೆಗೆ ಪ್ರತಿಮಾಡಿ ತೀರಿಸಲು ನಮ್ಮ ಆಯುರ್ಮಾನವೇ ಸಾಲದು. ಗುಣಲುಬ್ಧರಾದ ಪತಿಗಳಾರೇ ಆಗಲಿ ಸತಿಯ ಸೇವಾಋಣವನ್ನು ತೀರಿಸಲಾರರು. ನಾನಾದರೂ ಪ್ರಜಾಕಾಮಳಾದ ನಿನ್ನ ಕೋರಿಕೆಯನ್ನು ನೆರವೇರಿಸುವೆನು. ಲೋಕದವರು ನನ್ನನ್ನು ನಿಂದಿಸುವಂತೆ ಮಾಡಬೇಡ. ಒಂದು ಮುಹೂರ್ತಮಾತ್ರ ನಿಲ್ಲು. ಈ ಘೋರ ವೇಳೆಯನ್ನು ನೋಡು! ಘೋರರೂಪರಾದ ಭೂತೇಶಾನುಚರರು ಸಂಚರಿಪ ಸಂಧ್ಯೆಯಿಂದರಿತು ದಿಟ ಮಾಡು. ಸಾಧ್ವಿ! ಭಗವಂತನಾದ ಭೂತಪತಿ ರುದ್ರನೀಗ ಪಾರ್ಷದ ಗಣದಿಂದ ಕೂಡಿ ಸಂಚರಿಪನಲ್ಲವೇ? ನೋಡಲ್ಲಿ! ನಿನ್ನ ಮೈದುನನೆಂದು ಅಲಕ್ಷ್ಯ ಮಾಡಬೇಡ. ಸ್ಮಶಾನ ಚಕ್ರವಾತನೀತ ಧೂಳಿಧೂಸರ ವಿಕೀರ್ಣ ಜಟಾಕಲಾಪ ವಿಚಿತ್ರನೂ, ಭಸ್ಮೋದ್ಧೂಳಿತ ಶುಭ್ರಗಾತ್ರನೂ ಆದ ಮುಕ್ಕಣ್ಣ ನೆಲ್ಲವನ್ನೂ ವೀಕ್ಷಿಸುತ್ತಾ ನಂದಿಯನ್ನೇರಿ ಸುಂದರ ಸತಿಯಿಂದ ಕೂಡಿ ಆಕಾಶದಲ್ಲಿ ಬರುತಿಪ್ಪನು; ಅವನಿಗೆ ಅಪರಾಧವನ್ನೆಸಗಬಹುದೇ?

ಗರ್ಭಿಣೀವಧಾಪನೋದಕ್ಕೆಂದು, ಶ್ರೀಹರಿಯು ಆಜ್ಞಾಪಿಸಿದಂತೆ ಪಿಶಾಚಚರ್ಯೆಯನ್ನು ನಡೆಸುವ ಮಹಾದೇವನಿಗಪ್ರಿಯವನ್ನು ಮಾಡುವದು ಆ ಪರಮಾತ್ಮನಿಗೆ ಅಪ್ರಿಯವನ್ನು ಮಾಡಿದಂತೆಯೇ ಎಂದು ತಿಳಿ.

ಆ ಶ್ರೀಹರಿಯೋ ಇವನು ನನಗೆ ಸ್ವಜನ, ಇವನಲ್ಲವೆಂದು ನಮ್ಮಂತೆ ಪ್ರಾಕೃತ ಸಂಬಂಧದಿಂದ ಪ್ರೀತಿಯನ್ನೂ ಅಪ್ರೀತಿಯನ್ನೂ ಮಾಡುವವನಲ್ಲ. ನಾವು ಹರಿಪ್ರೀತಿಕರ ವ್ರತಗಳನ್ನಾಚರಿಸಿ ಬೇಡುವ ಗೃಹ, ಕಳತ್ರ, ಪುತ್ರಾದಿರೂಪ ಸಂಪತ್ತುಗಳನ್ನು ಪ್ರಕೃತಿ ಸ್ವಾಮಿನಿಯಾದ ಯಾವ ಲಕ್ಷ್ಮೀದೇವಿಯ ಕಟಾಕ್ಷಮಾತ್ರದಿಂದ ಪೊಂದುವೆವೋ ಆ ಶ್ರೀದೇವಿಯ ಪ್ರಕೃತಿಬಂಧವು ಶ್ರೀಹರಿಯ ಚರಣವನ್ನೂ ಸ್ಪರ್ಶಿಸಲಾರದು. ಅಂತಹ ಮಹಾಮಹಿಮನಾದ ಶ್ರೀಹರಿಯ ಪರಮೋದಾರ ಚರಿತೆಯನ್ನು ಸುಜನರು ತಮ್ಮ ಅವಿದ್ಯಾ ಪಟಲಪಾಟನಪಟುವೆಂದು ತಿಳಿದು ಶ್ರವಣ ಮಾಡುವರು. ಸಮಾನಾಧಿಕರಹಿತನಾದ ಹರಿಯ ಆದೇಶವನ್ನು ಶಿರಸಾವಹಿಸಿ, ದೇವೇಂದ್ರಾದಿ ವಂದ್ಯನಾದ ಚಂದ್ರಶೇಖರನು ಪಿಶಾಚ ಚರ್ಯೆಯನ್ನಾಚರಿಸುತ್ತಿರುವನು. ಸ್ವರಮಣನಾದ ಲಕ್ಷ್ಮೀರಮಣನ ವಿಡಂಬನಾಡಂಬರವನ್ನರಿಯದೆ ತಮೋಯೋಗ್ಯರು ನಗುತಿಪ್ಪರುರ. ಶ್ವಾನಭೋಜನವೆನಿಸಿದ ಕುಣಪವನ್ನು ತಾವೆಂದು ತಿಳಿದು ವಸ್ತ್ರಮಾಲ್ಯಗಂಧಗಳಿಂದ ಸಿಂಗರಿಸಿಕೊಂಡು ಮೆರೆವ ಜ್ಞಾನಹೀನರು ಅವನನ್ನೆಂತು ಬಲ್ಲರು? ಬ್ರಹ್ಮ ಪ್ರಮುಖ ಬಹಿರ್ಮುಖರವನ ಕಿಂಕರರು. ಅವನು ಸ್ವೇಚ್ಛೆಯಿಂದ ನಿಮಿತ್ತಕಾರಣನಾಗಿ ನಿರ್ಮಿಸಿದುದೀ ನಿಖಿಲಜಗವು. ಅಂತಹ ಮಹಾಪ್ರಭುವಿನ ಆಜ್ಞೆಯಿಂದ ಮಹಾದೇವನೂ ಪಿಶಾಚಚರ್ಯೆಯನ್ನಡೆಸುವನಂತೆ! ಆಹಾ ಏನು ಪೇಳಲಿ ವನಜನಾಭವಾದ ಗುಣಪೂರ್ಣನ ಲೋಕಾನುಕಾರಿ ಚರಿತ್ರದ ಮಹಿಮೆಯನ್ನು! ಮಹಾದೇವಾದಿಗಳ ಚರಿತೆಯಾದರೂ ಅದ್ಭುತವಾದುದೇ ಸರಿ! ದೇವಾನುಕರಣವನ್ನು ನಾವು ಮಾಡಲಾಗದು.

ಎಂದು ಕಶ್ಯಪನು ನುಡಿಯಲು, ಆ ಮಡದಿಯು ಮನ್ಮಥ ಮಥಿತೇಂದ್ರಿಯಳಾಗಿ, ವೃಷಲಿಯಂತೆ ಲಜ್ಜೆಯಂ ಬಿಟ್ಟು, ಉಟ್ಟಬಟ್ಟೆಯನ್ನು ಕೈಯಲ್ಲಿ ಪಿಡಿದೆಳೆದಳು. ದಿತಿಯ ನಿರ್ಬಂಧವನ್ನರಿತು, ಗರ್ಹಿತಕರ್ಮವೆಂದು ತಿಳಿದೂ, ಕರ್ಮಸಾಕ್ಷಿಯಾದ ಅದೃಷ್ಟ ನಿಯಾಮಕ ಹರಿಗೆ ವಂದಿಸಿ, ಕಶ್ಯಪನು ದಿತಿಯನ್ನು ಕೂಡಿ ರಹಸ್ಯದಲ್ಲಿ ವಸಿಸಿದನು.

ತತ್‌ಕ್ಷಣವೇ ಆಚಮಿಸಿ ಶುಚಿಯಾಗಿ ಪ್ರಾಣಾಯಾಮವನ್ನು ಮಾಡಿ, ಮೌನದಿಂದ ಓಂ ಎಂಬ ಪ್ರಣವಸಹಿತಮಾದ ಬ್ರಹ್ಮಗಾಯತ್ರೀ ಮಂತ್ರವನ್ನು ಜಪಿಸಿ ಮುನಿಯು ಹರಿಧ್ಯಾನರತವಾಗಿದ್ದನು. ದಿತಿಯಾದರೂ ತಾನು ಆಚರಿಸಿದ ಪಾಪಕರ್ಮದಿಂದ ಲಜ್ಜಿತಳಾಗಿ, ಆ ವಿಪ್ರರ್ಷಿ ಮುಂದೆ ನಿಂದು, ಇಂತೆಂದಳು-

ಸಕಲ ಭೂತನಾಥನಿಗೆ ನಾನಪರಾಧವನ್ನು ಗೈದಿರುವೆನು ನಿಜ. ಆದರೂ ಆ ಭೂತಪತಿಯು ನಾನೀಗ ಧರಿಸಿರುವ ಗರ್ಭವನ್ನು ಕರುಣೆಯಿಂದ ವಧಿಸದಿರಲಿ! ರೋಗ ದ್ರಾವಣನು, ಮಹಾತ್ಮನು, ದೇವೇಶನು, ಉತ್ಪಥಗಂತೃ ಶಿಕ್ಷಕನು, ಹರಿಗುಣಮನನನಿರತನು, ನೃಹಿಂಹಕ್ರೋಧಸಂಜಾತನು ಆದ ಶಿವನಿಗೆ ವಂದಿಸುತ್ತಿರುವೆನು. ಭಯವನ್ನು ಪರಿಹರಿಸಿ ಆ ಸ್ವಾಮಿಯು ನಮ್ಮಲ್ಲಿ ಅನುಗ್ರಹಿಸಲಿ! ನಮ್ಮನ್ನು ಕ್ಷಮಿಸಲಿ! ಕಟುಕನಿಗಾದರೂ ಕಾಂತೆಯರನ್ನು ಕಂಡು, ಕರುಣೆ ಪುಟ್ಟುವುದೆಂದ ಮೇಲೆ ನಮ್ಮ ಸತೀದೇವಿಗೆ ಪತಿಯಾದ ಪಶುಪತಿಯು ನಮ್ಮಲ್ಲಿ ಅನುಕಂಪಾವಿಶೇಷವನ್ನು ತೋರದಿರುವನೇ?

ಎಂದು ಸ್ವಗರ್ಭಕ್ಷೇಮವನ್ನು ಬಯಸಿ ನುಡಿದು, ಕಂಪಿತಗಾತ್ರಳಾಗಿ ನಿಂತ ಕಾಂತೆಯನ್ನು ಕಂಡು, ಸಂಧ್ಯಾದಿ ನಿಯತ ಕರ್ಮವನ್ನು ಮುಗಿಸಿ ಬಂದ ಮುನಿಯು ಇಂತು ಮಾತಾಡಿದನು–

ನೀನಾದರೂ ಆತ್ಮನಿಗ್ರಹವಿಲ್ಲದೆ ನಡೆದೆ. ಮುಹೂರ್ತವೂ ದುಷ್ಟವಾದುದೇ ಇತ್ತು. ನನ್ನ ಆದೇಶವನ್ನೂ ಅತಿಕ್ರಮಿಸಿ ದೇವತಾಹೇಲನವನ್ನಾಚರಿಸಿದೆ. ಆದ್ದರಿಂದ ಅಭದ್ರಳೇ! ಕೇಳು. ನಿನ್ನ ಹೊಟ್ಟೆಯಲ್ಲಿ ಲೋಕೋಪದ್ರವ ಕಾರಣರು ಅಮಂಗಳರು ಆದ ಪುತ್ರರಿಬ್ಬರು ಪುಟ್ಟುವರು. ಚಂಡಪರಾಕ್ರಮದಿಂದ ಲೋಕೇಶರನ್ನಾಕ್ರಮಿಸಿ, ನಿರಪರಾಧಿ ಜನರ ಪೀಡಿಸಿ, ಸ್ತ್ರೀಯರನ್ನು ಕೆಡಿಸಿ, ಹಿಂಸಾವ್ಯಾಪಾರವನ್ನು ನಡೆಸುವರು. ಇಂತು ಭಗವದ್ಭಕ್ತರ ಜನರ ಕೋಪಕಾರಣರಾಗುತ್ತಿರಲು, ನಿನ್ನ ಪುತ್ರಾಧಮರನ್ನು ವಿಶ್ವೇಶನು ಸುಜನಲೋಕ ಕಲ್ಯಾಣಾರ್ಥವಾಗಿ ಅವತರಿಸಿ ಇಂದ್ರನು ವಜ್ರದಿಂದ ಪರ್ವತಗಳನ್ನು ಸೀಳಿದಂತೆ ಸೀಳಿ ಸಂಹರಿಸುವನು– ಎಂದು ನುಡಿದ ಪತಿಯನ್ನು ನೋಡಿ ಸಮಾಧಾನದ ನಿಟ್ಟುಸಿರನ್ನು ಬಿಟ್ಟು, ದಿತಿಯು "ಸ್ವಾಮಿನ್! ಚಕ್ರಪಾಣಿಯಿಂದ ನನ್ನ ಪುತ್ರರು ಸಂಹರಿಸಲ್ಪಡುವರೇ? ಒಳ್ಳೆಯದು. ಕ್ರುದ್ಧರಾದ ಬ್ರಾಹ್ಮಣರಿಂದಂತೂ ಅಲ್ಲವಲ್ಲ? ಹಾಗಾದರೆ ಭೂತಭಯ ಪ್ರದರಾಗಲಿ ಬ್ರಹ್ಮ ದಂಡದಗ್ಧರಾಗಲಿ ನರಕದಲ್ಲಿ ಬಿದ್ದು ನರಳುವರು. ಯಾವ ಯೋನಿಯಲ್ಲಿ ಪುಟ್ಟಿದರೂ ಅವರಿಗೆ ಸುಖಲೇಶವೂ ಸದ್ಗತಿಯೂ ಸಿಗಲಾರದು" ಎಂದಳು.

ಪಶ್ಚಾತ್ತಾಪತಪ್ತಳಾದ ಆ ಸತಿಯ ಮಾತನ್ನು ಕೇಳಿ, ಕಶ್ಯಪನು ನುಡಿದನು–ಒಳ್ಳೆಯದು. ನಿನಗೆ ತತ್‌ಕ್ಷಣವೇ ಪಶ್ಚಾತ್ತಾಪವಾದ್ದರಿಂದಲೂ, ಭಗವಂತನಲ್ಲಿ ತೋರಿಸಿದ ಗೌರವಾತಿಶಯದಿಂದಲೂ, ನನ್ನಲ್ಲಿರುವ ಆದರದಿಂದಲೂ ಸಂತೋಷವಾಗಿದೆ. ಕೇಳು. ನಿನ್ನ ಪುತ್ರರಲ್ಲೋರ್ವನ ಸುತನು ಸಜ್ಜನ ಸಮ್ಮತನಾಗುವನು. ಅವನ ಯಶವು ಭಗವದ್ಯಶೋಮಿಲಿತವಾಗಿ ಪವಿತ್ರವಾಗುವದರಿಂದ ಗೇಗೀಯಮಾನವಾಗುವದು. ಔಷಧಾದ್ಯುಪಾಯಗಳಿಂದ ದುರ್ವರ್ಣದ ಹದಿನೆಂಟು ದೋಷಗಳನ್ನು ನಿವಾರಿಸಿ, ಸುವರ್ಣವನ್ನಾಗಿ ಪರಿವರ್ತಿಸುವಂತೆ, ಯಥಾವಸ್ತು ದರ್ಶನದಿಂದಲೂ, ಅನಾದಿಭಕ್ತಿಲಕ್ಷಣೌಷಧದಿಂದಲೂ, ದುಃಸಂಗದೋಷಗಳನ್ನು ಕಳೆದು, ಸಚ್ಚೇತನನಿಗೆ ಸದ್ಗತಿಯಾಗಲು ಪುತ್ರಾದಿಗಳು ಕಾರಣರಾಗುವರು. ಹಾಗೆಯೇ ಪ್ರಹ್ಲಾದನೆಂಬ ನಿನ್ನ ಪೌತ್ರನು ಪಿತೃಮುಕ್ತಿಗೆ ಕಾರಣನಾಗತಿ ರಾರಾಜಿಸುವನು. ಅವನನ್ನು ಕಂಡು ಸಾಧುಗಳು ಶಮಾದಿಗುಣಗಳನ್ನು ಕಲಿಯಲಿಚ್ಛಿಸುವರು. ಶ್ರೀಹರಿಯು ಜಗದಂತರ್ಯಾಮಿಯು, ಸರ್ವಸ್ವಾಮಿಯೂ ಆಗಿರುವನು. ಅವನು ಪ್ರಸನ್ನನಾದರೆ ಸಕಲ ಜಗವು ಸಂತಸಭರಿತವಾಗುವದು. ಅಂತಹ ಶಶ್ವನ್ನಿರ್ವಿಕಾರ ಜ್ಞಾನಸ್ವರೂಪನಾದ ಭಗವಂತನು ಸರ್ವೋತ್ತಮತ್ವಜ್ಞಾನದಿಂದ ತನ್ನನ್ನು ಭಜಿಸುವ ನಿನ್ನ ಪೌತ್ರನಲ್ಲಿ ಪ್ರೀತನಾಗಿ ಸಲಹುವನು. ಆ ಪ್ರಹ್ಲಾದನನ್ನೆಷ್ಟು ವರ್ಣಿಸಿದರೂ ಸಾಲದು. ಮಹಾ ಭಾಗವತನು, ಮಹಾತ್ಮನಾದ ನಿನ್ನ ಪೌತ್ರನು ದೃಢಭಕ್ತಿಯಿಂದ ಶುದ್ಧವಾದ ಮನದಿ ಮಾಧವನ ಚರಣಾರವಿಂದವನ್ನಿಟ್ಟು ತದನ್ಯವನ್ನೆಲ್ಲ ಅಸಾರ, ಅನಿತ್ಯವೆಂದು ಬಿಟ್ಟು ಸಾಧುಜನಗೌರವಪಾತ್ರನೆನಿಸುವನು. ವಿರಕ್ತನು, ಸಮಾಧಿಸಕ್ತನು, ಗುಣನಿಧಿಯು, ಪರಸುಖವರ್ಧನನು, ಪರದುಃಖ ದುಃಖಿತನು, ಅಜಾತಶತ್ರುವಾದ ಪ್ರಹ್ಲಾದನು ಚಂದ್ರಮನಂತೆ ಜಗಜ್ಜನರ ಶೋಕತಾಪಗಳನ್ನು ಕಳೆಯುವನು. ಸ್ವಭಕ್ತರು ಭಜಿಸುವಂತೆ ರೂಪಗೊಂಡು ಅನುಗ್ರಹಿಸುವ ಪುಂಡರೀಕಾಕ್ಷನು ಸ್ಫುರತ್ಕುಂಡಲಮಂಡಿತಗಂಡಸ್ಥಲನು, ಶ್ರೀಲಲನಾ ಸಮಾಶ್ರಿತ ವಕ್ಷೋವಿಶಾಲನು ಆಗಿ ನಿನ್ನ ಮೊಮ್ಮಗನಿಗೆ ದರ್ಶನವಿತ್ತು ಪೊರೆಯುವನು–

ಎಂದು ಕಶ್ಯಪರಾಡಲು ದಿತಿಯು ತನ್ನ ಪುತ್ರರನ್ನು ಶ್ರೀಹರಿಯು ಸಂಹರಿಸಿ ಉದ್ಧರಿಪನೆಂಬ ಸಮಾಧಾನವನ್ನೂ ತನ್ನ ಪೌತ್ರನು ಮಹಾಭಾಗವತನೆಂಬ ಸಂತೋಷವನ್ನೂ ಪೊಂದಿದಳು.

## ೧೬. ಜಯ ವಿಜಯ ಶಾಪ

ಮೈತ್ರೇಯನು ಮತ್ತೆ ಪೇಳಿದನು–

ವಿದುರಾ! ಕಶ್ಯಪರಿಂದ ಗರ್ಭ ಧರಿಸಿದ ದಿತಿಯು ಪರತೇಜೋಹರವಾದ ಗರ್ಭಗತ ಸುರವೈರಿತೇಜವನ್ನು ಸುರಾರಿಮರ್ದನನಾದ ಜನಾರ್ಧನನ ಭಯದಿಂದ ಒಂದು ನೂರು ವರ್ಷ ಪ್ರಸವಿಸದೇ, ಧರಿಸಿ ನಿಂತಳು. ಆ ಗರ್ಭತೇಜವು ತಮದಂತೆ ವ್ಯಾಪಿಸಿ ಲೋಕವೆಲ್ಲ ಕಣ್ಣು ಕಾಣದೆ ತತ್ತರಿಸಲು ಉಪದ್ರವಕರವಾದಾ ಕತ್ತಲೆಯನ್ನು ನಿವಾರಿಸಲೆಂದು ಶತಾನಂದನಿಗೆ ವೃಂದಾರಕೇಂದ್ರರು ವಿಜ್ಞಾಪಿಸಿಕೊಂಡರು.

ದೇವತೆಗಳು 'ಪ್ರಭೋ! ಏನೀ ಕತ್ತಲು? ಇದರಿಂದ ದಿಕ್ಕು ತೋಚದಂತಾಗಿದೆ. ಕಾಲದಿಂದ ನಷ್ಟವಾಗದ ಜ್ಞಾನಪ್ರಕಾಶನು, ಸರ್ವಜ್ಞನಾದ ನಿನಗೆ ತಿಳಿಯದ್ದೇನಿದೆ? ದೇವ ದೇವ! ಲೋಕ ಪಾಲಕರಾದ ನಮಗೆಲ್ಲ ಒಡೆಯನೆನಿಸಿರುವೆ. ಭೂತಭವಿಷ್ಯದ್ವರ್ತಮಾನ ಸರ್ವಜೀವ ಹೃದಯ ಜ್ಞನು ವಿಜ್ಞಾನವೀರ್ಯನು, ಶ್ರೀಹರಿಯ ತತ್ವಜ್ಞಾನಬಲದಿಂದ ಈ ವಿಶ್ವವನ್ನೆಲ್ಲ ಸತ್ವಾದಿ ಗುಣಗಳಿಂದ ಸೃಜಿಸಿದ ಪಿತಾಮಹನೇ! ಜೀವೋತ್ಪಾದಕನಾಗಿ ಚೇತನಾಚೇತನ ಜಗದ್ವ್ಯಾಪ್ತನಾದ ನಿನ್ನನ್ನು ಭಕ್ತಿಯಿಂದ ಭಜಿಸುವ ಜಿತೇಂದ್ರಿಯರಾದ ಹರಿಸರ್ವೋತ್ತಮತ್ವ ಜ್ಞಾನಿಗಳಿಗೆ ನೀನು ಪ್ರಸನ್ನನಾಗಿ ಪರಾಭವರಹಿತರನ್ನಾಗಿಸಿ ಪೊರೆವೆ. ಯಾವ ನಿನ್ನ ಮುಖದಿಂದ ಬಂದ ವೇದಸಮಾನ ವಾಕ್ಪಾಶಸಂಚಾಲಿತರಾಗಿ, ಮುಗುದಾಣಿಯಿಂದ ಕಟ್ಟಲ್ಪಟ್ಟ ವೃಷಭಾದಿಗಳಂತೆ, ನಿನ್ನ ವಶರಾಗಿ ನಿನಗೆ ಪೂಜಾದ್ರವ್ಯಗಳನ್ನರ್ಪಿಸುವೆವು. ಜೀವೋತ್ತಮನೇ! ನಿನಗೆ ನಮಸ್ಕಾರವು! ತಮಸ್ಸಿನಿಂದ ದಾರಿಗಾಣದಿರುವ ನಮ್ಮಲ್ಲಿ ದಯಮಾಡು. ಕರ್ಮಲೋಪದಿಂದ ನಮ್ಮನ್ನು ಕಾಪಾಡಿ ಅನು ಗ್ರಹಿಸು. ದಿತಿಗರ್ಭದ ತೀಕ್ಷ್ಣತೆಯು, ಸಮಿಧಾಧಾನದಿಂದುರಿದೇಳುವ ವಹ್ನಿಯಂತೆ, ಜಗವನ್ನು ಅಂಧೀಭೂತವನ್ನಾಗಿಸಿ ಕಂಗೆಡಿಸಿದೆ' ಎಂದು ಮೊರೆಯಿಟ್ಟ ದೇವತೆಗಳನ್ನು ಕಂಡು ನಗುತ್ತಾ, ರುಚಿರವಚನಗಳಿಂದ ಸಂತೈಸುತ್ತಾ ಸರಸ್ವತೀವಲ್ಲಭನಿಂತು ಮಾರ್ನುಡಿದನು.

ದೇವತೆಗಳಿರಾ! ಕೇಳಿ. ನಿಮಗೊಂದು ಪೂರ್ವಗಾಥೆಯನ್ನು ವರ್ಣಿಸುವೆನು. ನಿಮಗೂ ಮೊದಲಾಗಿ ನನ್ನ ಮನಸಾಜಾತರಾದ ಸನಕಾದಿ ಮುನಿಗಳು ಅಂತರಿಕ್ಷಾದಿ ಲೋಕಗಳಲ್ಲಿ ಯದೃಚ್ಛೆಯಿಂದ ಸಂಚರಿಸುತ್ತಾ ಒಂದು ಸಲ ನಿರ್ಮಲಚರಿತನಾದ ಶ್ರೀ ವೈಕುಂಠನ ಲೋಕವನ್ನು ಸೇರಿದರು. ಸರ್ವಲೋಕಮನಸ್ಸ್ತುತವಾದ ಆ ವೈಕುಂಠದ ಅಮುಕ್ತ ಭೂಭಾಗವನ್ನು ಪೊಕ್ಕು ನಮ್ಮನ್ನೆಲ್ಲ ರಕ್ಷಿಸುವ ಬಲಜ್ಞಾನಸುಖಾತ್ಮಕನಾದ ಶ್ರೀಹರಿಯ ಮಂದಿರವನ್ನು ಮುಟ್ಟಿದರು. ಅಲ್ಲಿ ನೈಶ್ರೇಯಸವೆಂಬ ಕಲ್ಪತರುಗಳ ವನವಿರುವದು. ಸರ್ವರ್ತುಫಲಪುಷ್ಪಭರಿತಳಾದ ವನಲಕ್ಷ್ಮಿಯು ಮೋಕ್ಷವೇ ಮೂರ್ತೀಭವಿಸಿ ನಿಂತಂತೆ ಕಂಗೊಳಿಸುವಳು. ವಿಮಾನಗಳಲ್ಲಿ ಪ್ರಮದೆಯರಿಂದ ಕೂಡಿ ಸಂಚರಿಸುವ ದೇವಪುರುಷರಾ ಪರಮ ಪುರುಷನ ಪಾಪಹರಣಶೀಲ ಲೀಲೆಗಳನ್ನು ಪಾಡಿ ಪೊಗಳುತ್ತಿರುವರು. ಸರಸ್ತೀರಗಳಲ್ಲಿ, ವಿಕಸಿತವಾಸಂತೀಪುಷ್ಪಗಂಧವನ್ನು ವಹಿಸಿ ತರುವ ಮಲಯಮರುತ್ಕಿಶೋರನಿಂದ ವಂಚಿತರಾಗದೆ ಮುಕ್ತರು ನಿರ್ವಿಕಾರರಾಗಿಯೇ

ಹರಿಗುಣಗಾನವನ್ನು ಮಾಡುತ್ತಿರುವರು. ಅಮುಕ್ತರು ಗಂಧಲುಬ್ಧರಾದರೂ ಕೃಷ್ಣಸಮರ್ಪಿತವನ್ನಾಗಿಸಿ ಸುಖಿಪರು. ಅನವದ್ಯವಾದ ಉದ್ಯಾನದಲ್ಲಿ ಪಾರಾವತ ಕೋಗಿಲೆಗಳು ಸಾರಸ ಚಕ್ರವಾಕಗಳು, ಹಂಸ ಶುಕಗಳು, ತಿತ್ತಿರಿ ಮಯೂರಗಳು ಮಾಡುವ ಕಲಕಲ ನಾದವನ್ನಡಗಿಸಿ ತಾರಸ್ವರದಿಂದ ಭೃಂಗರಾಜನು ಅಂಗಜಪಿತನ ನುಡಿಯನ್ನು ಗಾನ ಮಾಡುತ್ತಿರುವನು. ಮಂದಾರ ಕುಂದ ಕುರವಕೋತ್ಪಲ ಚಂಪಕ ಕರವೀರನಾಗ ಪುನ್ನಾಗ ವಕುಲಾಂಬುಜ ಪಾರಿಜಾತಮುಖ ಸುಮಜಾತವು ತುಲಸಿಯಿಂದ ಕೂಡಿ ಸಮರ್ಪಿತವಾದಾಗ, ತುಲಸಿಯನ್ನು ಕೈಕೊಂಡಾಘ್ರಾಣಿಸಿ, ಸ್ವೀಕರಿಸಿದ ಶ್ರೀಹರಿಯನ್ನು ಕಂಡು ಇತರ ಸುಮದೇವತೆಯರು ತುಲಸಿಯು ಮಾಡಿದ ತಪೋವಿಭವವನ್ನು ಮೆಚ್ಚಿ, ಕೊಂಡಾಡುವರು. ಹರಿಪದದಲ್ಲಿ ಎರಗುವದೇ ಸಾಕೆಂದು ಪೇಳುವಂತೆ ಕಿರುಗಂಟೆಗಳ ನಾದದಿಂದೊಪ್ಪುವ ರತ್ನಖಚಿತಕನಕ ವಿಮಾನಗಳಲ್ಲಿ ಕೂತು, ಮಂದಹಾಸವನ್ನು ಬೀರಿ, ವಿಲಾಸವನ್ನು ತೋರುವ ನಿತಂಬಿನಿಯರ ವಿಭ್ರಮವನ್ನು ಕಂಡು ಭ್ರಮೆಗೊಳ್ಳದೆ ಕೃಷ್ಣಭಕ್ತರು ಶಾಂತರಾಗಿರುವರು! ಆಹಾ! ಏನು ಪೇಳಲಿ! ಸೌಂದರ್ಯಸಾರ ಸರ್ವಸ್ವಳೆನಿಸಿದ ಶ್ರೀದೇವಿಯು ಚರಣಾರವಿಂದನೂಪುರ ಮಂಜುಲನಿಕ್ವಣನ ಮನೋಹರಳಾಗಿ ಕೈಯಲ್ಲಿ ನೀಲಲೀಲಾ ಕಮಲವನ್ನು ಪಿಡಿದು ಹರಿವರ ಮಂದಿರದಿ ಸಂಚರಿಸುತ್ತಿರಲು ಆ ಸಮಸ್ತ ಜನನಾದಿ ದೋಷಮುಕ್ತಳಾದ ಜನನಿಯ ಸುವರ್ಣಖಚಿತ ಸ್ಫಾಟಿಕ ಕುಡ್ಯಗತ ಪ್ರತಿಬಿಂಬವು, ಮಾಧವ ಮಂದಿರ ಮಾರ್ಜನ ಮಾಡುತ್ತಿರುವಂತೆ ತೋರುವುದು.

ಆ ಲೋಕಜನನಿಯ ಕಟಾಕ್ಷಪಾತ್ರರಾಗಲು ನಾವು ಯತ್ನಿಸುತ್ತಿರುವೆವು. ಆ ಸತೀ ಮಣಿಯೋ, ಸರ್ವದಾ ಸರ್ವೇಶರತರಾಗಿರುವಳೇನು ಧನ್ಯಳೋ! ಲಕುಮಿ ಎಂತಹ ಮಾನ್ಯಳೋ!

ಕಮಲವನಮಧ್ಯದಿ ವಿದ್ರುಮತಟಾಲಂಕೃತವಾದ ವಾಪೀಸೋಪಾನದಿ, ಚೇಟೀಶತದಿಂದ ಕೂಡಿ ಕುಳಿತು, ತುಲಸೀ ದಳಗಳಿಂದ ನಿಜರಮಣನನ್ನರ್ಚಿಸುವ ಸಮಯದಲ್ಲಿ ಅಮೃತಾಮಲ ಜಲದಲ್ಲಿ ಪ್ರತಿಬಿಂಬಿತವಾದ ಅಲಕ ಸುಂದರವು ಕಿಂಚಿದುನ್ನದ ನಾಸಿಕವು ಆದ ಸ್ವಮುಖವನ್ನೇ ಕಂಡು ಶ್ರೀಹರಿಚುಂಬಿತಮಾಯಿತೇ ಆ ಮುಖವೆಂದು ತಿಳಿದು ನಾಚುವಳು.

ಪಾಪಹರಣಚರಣನಾದ ಹರಿಯ ಲೀಲಾ ಶ್ರವಣಕೀರ್ತನಗಳನ್ನರಿಯದವರು ಪುಣ್ಯಲೋಕವನ್ನೂ ಅರಿಯರು. ಯಥಾರ್ಥಜ್ಞಾನ ನಾಶನಕಾರಣ ಕುಕಥಾ ಪ್ರಸಂಗರತರಾದ ಅಸುರರಿನ್ನೆಂತು ಪೊಂದುವರು? ಭಕ್ತಿಭಾಗ್ಯರಹಿತರಾಗಿರುವ ಆ ಕುಜನರಿಗೆ ಪುನರುತ್ಥಾನ ರಹಿತವಾದ ತಮಸ್ಸೇ ಗತಿಯಲ್ಲವೇ? ಜ್ಞಾನಾದಿಪ್ರಾಪ್ತಿಯೋಗ್ಯವೆಂದು ನಾವೆಲ್ಲರಂತಿರುವ ಮನುಜಯೋನಿಯಲ್ಲಿ ಪುಟ್ಟಿದರೂ, ಕೆಲವರು ತತ್ತ್ವಜ್ಞಾನವನ್ನೂ ಸ್ವಧರ್ಮವನ್ನೂ ಸಂಪಾದಿಸದೆ ಹರಿಬಂಧಕ ಶಕ್ತಿಯಿಂದ ಭ್ರಾಂತರಾಗಿ ಸ್ವಯಂ ಹರಿಯನ್ನಾರಾಧಿಸುವದಿಲ್ಲ. ಪರರಿಗುಪದೇಶ ವಂತೂ ದೂರವೇ ಸರಿ!

ಅನಿಮಿಷ ಋಷಭನಾದ ಹರಿಯ ಪರಮಪವಿತ್ರ ಚರಿತ್ರೆಯನ್ನು ಕೇಳಿ, ಪೇಳಿ, ಸಂತೋಷದಿಂದ ನೇತ್ರಬಿಂದುಗಳಂ ತಂದು ಪುಲಕಾಂಕಿತ ಗಾತ್ರರಾಗಿ ಮೈಮರೆವ ಸುಜನರು ಯಮರಾಜನನ್ನು ದೂರೀಕರಿಸಿ, ನನ್ನ ಈ ಸತ್ಯಲೋಕವನ್ನೂ ಅತಿಕ್ರಮಿಸಿ ಸೇರುವರರಾ ವೈಕುಂಠವನ್ನು! ಅವರ ಸೌಶೀಲ್ಯವು ಸ್ಪೃಹಣೀಯವಲ್ಲವೇ?

ಅಂತಹ ಸರ್ವ ಮುಕ್ತಾಮುಕ್ತಾಧಾರನಾದ ಲೋಕಗುರುವರನ ಭುವನಜನವಂದ್ಯವು, ಅಪ್ರಾಕೃತವು, ವಿಚಿತ್ರದೇವತಾ ವಿಮಾನ ತೇಜೋವಿರಾಜಿತವು, ಅಪೂರ್ವವು ಆದ ವೈಕುಂಠವನ್ನು

ಸನಕಾದಿ ಮುನಿಗಳು ಭಗವದಾರಾಧನ ಲಬ್ಧ ಜ್ಞಾನಬಲದಿಂದ ಪೊಂದಿ ಪರಮಾನಂದಭರಿತರಾದರು.

ಅವರು ಮಂದಿರದ ಆರು ದ್ವಾರಗಳಲ್ಲಿರುವ ದ್ವಾರಪಾಲರಿಂದ ನಿವಾರಿತರಾಗದೆ, ಪ್ರವೇಶಿಸಿ ಸಪ್ತಮದ್ವಾರದೇಶದಿ ನಿಂತಿರುವ ದ್ವಾರಪರನನ್ನಿಬ್ಬರನ್ನು ಕಂಡು ಅಬ್ಬುರದಿ ನೋಡುತ್ತಾ ನಿಂತರು. ಗದಾಪಾಣಿಗಳು, ಕೇಯೂರ ಕಟಕಕುಂಡಲಕಿರೀಟಾಲಂಕೃತರೂ, ಭ್ರಮರಝುಂಕಾರ ಭರಿತ ವನಮಾಲಾಯುತರೂ, ಚತುರ್ಭುಜರು ನೀಲಶರೀರ ತೇಜರೂ ಆದ ಜಯವಿಜಯರು ಆ ಮುನಿಬಾಲರನ್ನು ಕಂಡು ಮುನಿದು, ಹುಬ್ಬನ್ನು ಮುರಿದು, ಕಣ್ಣಿಂದ ಕಿಡಿಗಳನ್ನು ಸುರಿದು, ದುಡುಕಿ, ಹಿಂದಿನ ದ್ವಾರಗಳಲ್ಲಂತೆ ಕೇಳದೇ ಪೋಗಲಿಚ್ಛಿಸುವ ಬಾಲಕರ ತಡೆದು ನಿಲ್ಲಿಸಿದರು.

ವಜ್ರಖಚಿತ ಕಪಾಟಕೆಯ ಪರಿಸರದಿ ನಿಂತು ಹರಿರತಮತಿಗಳಾದ ಆ ಪರಮಹಂಸರವರು ಭಯವಿಲ್ಲದೆ ಬೇಕಾದಡೆ ಸಂಚರಿಪ ತಮ್ಮನ್ನಿಂತು ತಡೆದ ದ್ವಾರಪರನ್ನು ಕುಡಿಗಣ್ಣಿನಿಂದ ನೋಡಿದರು.

ದಿಗಂಬರರು ಪಂಚಶರದ್ವಯಸ್ಕರಂತೆ ಕಾಣುವ ಪೂರ್ವಜರು, ಪರಮಾತ್ಮ ಜ್ಞಾನನಿಧಿಗಳು ಆದ ಆ ಕುಮಾರರನ್ನು ಜಯ-ವಿಜಯರು ಪರಿಹರಿಸಿ ಭಗವತ್ಪ್ರತಿಕೂಲ ಶೀಲರಾಗಿ ನಗುತ್ತಾ ಕರವೇತ್ರದಂಡಗಳಿಂದ ಒಳಗೆ ಬಿಡದೆ ನಿಷೇಧಿಸಿದರು. ಪೂಜ್ಯತಮರಾದ ಕುಮಾರಾದಿಗಳನ್ನಿಂತು ದೇವತೆಗಳೆಲ್ಲರು ನೋಡುತ್ತಿರಲು ತಡೆಯಲು ಮುನಿಗಳು ಪ್ರಿಯತಮ ಭಗವದ್ದರ್ಶನ ಭಂಗದಿಂದ ಕಿಂಚಿತ್ಕುಪಿತರಾಗಿ ಕುಡಿಗಣ್ಣಿನಿಂದ ನೋಡಿ ಇಂತೆಂದರು–

ಏಸೋ ಜನುಮಗಳಲ್ಲಿ ಶ್ರೀಶನಂ ಸೇವಿಸಿದ ಪುಣ್ಯದಿಂದ ಈ ವಾಸುದೇವನ ಸಾನ್ನಿಧ್ಯವನ್ನು ಕಂಡುಕೂಡ ಆ ಭಗವಂತನ ಭಕ್ತರಾದ ಸಜ್ಜನರಲ್ಲಿ ಸಮರಾಗಿ ವರ್ತಿಸದೆ ಇರುವವರೂ ಉಂಟೇ? ಓಹೋ ಮಿಥ್ಯಾದೃಷ್ಟಿದೂಷಿತರಾದ ನಿಮ್ಮಂತೆ ಭಗವಂತನು ವಿರುದ್ಧ ಸ್ವಭಾವದವನೇ? ಪ್ರಕೃಷ್ಟಾನಂದ ಸ್ವರೂಪನು, ಅನುಪಹತೈಶ್ವರ್ಯಾದಿ ಷಡ್ಗುಣ ಪೂರ್ಣನು, ಸರ್ವಾಂತರ್ಯಾಮಿಯು, ಅಪ್ರತಿದ್ವಂದ್ವನೂ ಆದ ಶ್ರೀಹರಿಗೆ ವಿಷಮ ಸ್ವಭಾವವನ್ನು ಶಂಕಿಸುವುದಾದರೂ ಹೇಗೆ? ಸರ್ವತ್ರ ವ್ಯಾಪ್ತನಾದ ಸರ್ವಾಂತರ್ಯಾಮಿಯಾದ ಹರಿರೂಪಗಳಿಗೆಳ್ಳಷ್ಟೂ ಸ್ವಗತಭೇದವಿಲ್ಲ. ಜ್ಞಾನಿಗಳ ಪ್ರತ್ಯಕ್ಷವೇ ಹೀಗಿರುವಾಗ ನೀವು ಸುರವೇಷಿಗಳಾಗಿದ್ದರೂ, ಭೇದವನ್ನೇ ಹರಿಯಲ್ಲಿ ಕಾಣುತ್ತಿರುವಿರಿ. ನಿರ್ದೋಷನಾದ ಹರಿಯ ರೂಪಗಳಿಗೆ ಪರಸ್ಪರ ಭೇದವನ್ನು ಕಾಣುವವನು ದುಃಖವನ್ನೇ ಪೊಂದುವನು. ನಮ್ಮಂತರ್ಯಾಮಿಯಿಂದ ಅಭಯನಾದ ಹರಿಗೆ ಭಯವೆಂಬ ಬುದ್ಧಿಯನ್ನು ತೋರಿದಿರಿ. ಆದ್ದರಿಂದ ಆ ವಿಕುಂಠನಾಥನ ಚರಣಸೇವಾಭಾಗ್ಯವು ಮಂದಬುದ್ಧಿಗಳಾದ ನಿಮಗೆ ಸಲ್ಲದು. ಅನ್ಯಥಾಜ್ಞಾನಯೋಗ್ಯವಾದ ಅಸುರಯೋನಿಯಲ್ಲಿ ಹರಿವೈರಿಗಳಾಗಿ ಮೂರು ಸಲ ಜನಿಸಿರಿ! ಎಂದು ಶಾಪವನ್ನಿತ್ತರು.

ಮಹಾಸ್ತ್ರಗಳಿಂದಲೂ ವಾರಿಸಲಾಗದ ಬ್ರಹ್ಮದಂಡವನ್ನು ಘೋರಶಾಪರೂಪದಿ ಪೊಂದು ತತ್‌ಕ್ಷಣವೇ ಆ ಹರಿಪಾರ್ಷದರೀರ್ವರು ಭಯದಿಂದ ಗಡಗಡನೆ ನಡುಗಿ ಕಾತರರಾಗಿ ಆ ಮುನಿಗಳ ಚರಣಗಳನ್ನು ಪಿಡಿದು ವಂದಿಸಿ 'ಹೇ ಚತುರ್ಥಾಶ್ರಮ ಶಿಖಾಮಣಿಗಳೇ! ನಾವಪರಾಧಿಗಳು ನಿಜ. ನೀವು ವಿಧಿಸಿದ ದಂಡವಾದರೂ ನಮ್ಮ ಸಕಲ ಸುರಹೇಲನರೂಪ ಪಾಪವನ್ನೆಲ್ಲ ಕಳೆದುಬಿಡಲು ಸಮರ್ಥವೇ ಸರಿ! ಆದರೆ ತಮ್ಮಲ್ಲಿ ಕೈಯೊಡ್ಡಿ ಬೇಡುವದೊಂದಿದೆ. ಅಮೋಘವಾದ ನಿಮ್ಮ ಶಾಪದಿಂದ ಅಧೋಲೋಕವನ್ನು ಅಂಶದಿಂದ ಪೊಂದುತ್ತಾ ಪೋಗುವಾಗ

ಅಂಶಿಗಳಾಗಿರುವ ತಾವು ಪಶ್ಚಾತ್ತಾಪದಿಂದ ಕನಿಕರಿಸಿ, ಪುನಃ ಭಗವದ್ಯಥಾರ್ಥಜ್ಞಾನನಾಶಕವಾದ ಮೋಹವು ನಮಗೆ ಪುಟ್ಟದಂತೆ ಅನುಗ್ರಹಿಸಿ' ಎಂದು ಪ್ರಾರ್ಥಿಸಿದರು.

ಆಗ ಅರವಿಂದನಾಭನು ತನ್ನವರು ಸಾಧುಗಳಿಗೆ ಮಾಡಿದ ಅಪರಾಧವನ್ನರಿತು ಪರಮಹಂಸಮಹರ್ಷಿಗಣಶರಣ ಚರಣನಲಿನಗಳಿಂದ ನಡೆದು, ದ್ವಾರದೇಶದಲ್ಲಿ ಬಂದು, ಇಂದಿರೆಯಿಂದ ಕೂಡಿ ನಿಂದು, ಸನಕಾದಿಗಳಿಗೆ ಸಂದರ್ಶನ ಭಾಗ್ಯವನ್ನಿತ್ತನು. ಗೋವಿಂದನ ಹಿಂದೆ ಅರ್ಘ್ಯಪಾದ್ಯಾದಿಗಳನ್ನು ಪೊತ್ತು ಪರಿಚರರು ಬರುತ್ತಿದ್ದರು. ಇಂತು ಸಮಾಧಿಗಮ್ಯನಾಗಿದ್ದ ಶ್ರೀಶನು ಮುನಿದೃಗ್ಗೋಚರನಾದನು. ಬೀಸುವ ಚಾಮರಗಳೆರಡು ಹಂಸಗಳಂತೆ ಶೋಭಿಸಿದವು. ಚಂದ್ರನಂ ಪೋಲುವ ಶ್ವೇತಚ್ಛತ್ರ ವ್ಯಜನಗಳ ಶುಭವಾಯುವಿಗೆ ಕಂಪಿಸುತ್ತಿರಲು ಅದರ ಮುತ್ತಿನ ಗೊಂಚಲಿನಿಂದ ಅಮೃತಶಿಶಿರಬಿಂದುಗಳುದುರುತ್ತಿದ್ದವು. ನೋಡಬೇಕೆನಿಸುವ ರೂಪ, ಅನುಗ್ರಹೋನ್ಮುಖ ಮುಖಪದ್ಮ ಪ್ರೇಮರಸಪೂರ್ಣ ಕಟಾಕ್ಷಗಳಿಂದ ಮನೋಜ್ಞನಾದ ಹರಿಯ ವಕ್ಷಸ್ಥಲದಿ ಶ್ರೀವತ್ಸವಾಗಿ ಲಕ್ಷ್ಮೀದೇವಿಯು, ಕಂಠದಿ ಕೌಸ್ತುಭನಾಗಿ ಬ್ರಹ್ಮನು, ಚೂಡಾಮಣಿಯಾಗಿ ವಾಯುವು ಶೋಭಿಸುತ್ತಿದ್ದರು. ಶ್ರೀಹರಿಯು ಪೀತಾಂಬರ ಪರಿವೀತಮಾದ ನಿತಂಬದಿ ಕಾಂಚೀಕಲಾಪವನ್ನಿಟ್ಟು, ವನಮಾಲೆಯ ಆಮೋದದಿಂದಾಕರ್ಷಿತವಾಗಿ ಬಂದ ಭ್ರಮರವೃಂದದ ಗಾನವನ್ನಾಲಿಸುತ್ತಾ, ಸುಂದರ ಹಸ್ತವನ್ನೊಂದನ್ನು ವಿನತಾನಂದದ ಭುಜದಲ್ಲಿಟ್ಟು, ಇನ್ನೊಂದರಿಂದ ಲೀಲಾರವಿಂದವನ್ನಾಡಿ ಸುತ್ತಾ ಬಂದನು. ಮಿಂಚಿನಂತೆ ಹೊಳೆಯುವ ಮಕರಕುಂಡಲಗಳಿಂದ ಶೋಭಿಸುವ ಗಂಡಸ್ಥಲವು, ಉನ್ನತವಾದ ನಾಸಿಕೆಯು, ಮಣಿಖಚಿತ ಕಿರೀಟವು, ಭುಜದಂಡಮಧ್ಯಶೋಭಿಹಾರ ಸಮೂಹವು, ಕೌಸ್ತುಭ ಮಣಿಯು, ಒಪ್ಪುತ್ತಿರಲು ಬಂದ ಶ್ರೀಶನ ಮಂಗಳಾಂಗವ ನೋಡಿ ಇಂದಿರೆಯು ಪಾದಾದಿ ಕೇಶಪರ್ಯಂತವು ಧ್ಯಾನಿಸಿ ಮುಗಿಸಲಾರದೆ ಸರ್ವಾವಯವನ್ನಾಶ್ರಯಿಸಿ ನಿಂತಳು. ಬ್ರಹ್ಮರುದ್ರಾದಿಗಳಿಗೆ ಯಥಾಯೋಗ್ಯವಾಗಿ ಗೋಚರಿಸುವ ಅನಂತ ಸೌಂದರ್ಯಲಾವಣ್ಯ ಮಾಧುರ್ಯಾದಿ ಗುಣಪೂರ್ಣವಾದುದು, ನಾನು, ರುದ್ರನು, ನೀವು ಕಂಡಿರುವುದು ಆದ ಆ ಸ್ವಾಮಿಯ ಸುಂದರರೂಪವನ್ನು ಕಂಡು, ಮನದಿ ನೆಲೆಸಿದ ಭಕ್ತಿರಸವು ಉಕ್ಕೇರಿ ಬರಲು ಸನಕಾದಿಗಳು ಸಾಷ್ಟಾಂಗವೆರಗಿ ನಿಂತು ನೋಡುತ್ತಾ ತೃಪ್ತರಾಗದ ನಿಶ್ಶೇಷ್ಟರಾಗಿದ್ದರು. ಆ ಅರವಿಂದನಯನನ ಪಾದಾರವಿಂದಪರಾಗಪ್ರಸರ ಪವಿತ್ರ ತುಲಸೀದಲ ಮಕರಂದ ಮಿಲನ್ಮರುತವು, ಆ ಸನಕಾದಿಗಳ ನಾಸಿಕೆಯನ್ನು ಸೇರಿ ಮನೋಮೋದವಂ ಪೊಂದಿಸಿತು. ಭಕ್ತಿತನ್ಮಯರಾಗಿ ಮೈಮರೆತ ಆ ಮುನಿಗಳು ಪುನಃ ಆ ನವಕೋಟಿ ಮನ್ಮಥ ಸುಂದರತರಾಧರಬಿಂಬದಿಂದ ಸೂಸಿಬರುವ ಮಂದಹಾಸದಿಂದ ಶೋಭಿಪ ನೀಲಮುಖ ಪದ್ಮವನ್ನು ತಮ್ಮ ಮುಖವನ್ನು ಮೇಲಕ್ಕೆತ್ತಿ ನೋಡಿ ಕೃತಾರ್ಥರಾದರು. ಮತ್ತೆ ಮುಖವಂ ತಗ್ಗಿಸಿ ಭಕ್ತವತ್ಸಲನ ಪಾದಾರವಿಂದದ್ವಂದದ ನಖಾರುಣ ಮಣಿಗಳನ್ನೂ ನೋಡಿ, ಸರ್ವಾಂಗ ಸುಂದರನಾದ ರಮಾರಮಣನ ಆ ದಿವ್ಯರೂಪವನ್ನು ತಮ್ಮ ಹೃದಯಗಳಲ್ಲಿ ಧ್ಯಾನಿಸಿ ಬಚ್ಚಿಟ್ಟುಕೊಂಡರು. ತನ್ನನ್ನರಸುವವರಿಗೆ ಗತಿಪ್ರದವು ಯೋಗಮಾರ್ಗದಿಂದ ಬರುವವರಿಗೆ ಧ್ಯಾನ ವಿಷಯವು, ಪೂರ್ಣಗುಣವು, ನಯನಮನೋ ಮೋಹನವು ಆದ ತಾನೇ ತನ್ನ ರೂಪವನ್ನು ನೋಡಿಸಿ ಸ್ವಾಭಾವಿಕವು ಇತರಾನನುಭೂತವು ಆದ ಅಣಿಮಾದ್ಯಷ್ಟೈಶ್ವರ್ಯಗಳಿಂದ ಯುಕ್ತನಾಗಿ ನಿಂತ ರಮಾಕಾಂತನನ್ನು ಭಕ್ತಿಯಿಂದ ಸ್ತುತಿಸಿದರು–

ಅನಂತಮಹಿಮನೇ! ಹೃದಯದಲ್ಲೇ ಇದ್ದೂ ದುರಾತ್ಮರಿಗೆ ನೀನು ಸಿಗದಿರುವೆ. ಇಂದು ನಮ್ಮ ನಯನಾನಂದಕರನಾಗಿ ನಿಂದಿರುವೆ. ನಿನ್ನ ಸುತನಾದ ನಮ್ಮ ತಂದೆಯು, ಗೋಪ್ಯವಾಗಿ ನಮಗೆ ಪೇಳಿದ ಗುಣ, ರೂಪನಾಗಿ ನಮ್ಮ ಕರ್ಣವಿವರಗಳಿಂದ ಹೃದಯ ಗುಹೆಯಂ ಪೊಕ್ಕ ನಿನ್ನನ್ನು ಕಂಡು ಧನ್ಯರಾದೆವು. ಪರಮಾತ್ಮನೇ ! ಸುಜನ ಸಂತೋಷಪ್ರದನಾದ ನಿನ್ನನ್ನಿಂತು ತಿಳಿದೆವು. ನಿನ್ನಲ್ಲಿ ಅನುರಾಗದಿಂದ ಇತರ ವಿರಾಗವನ್ನು ತೊಟ್ಟು, ನಿನ್ನ ಮಹಿಮಾಜ್ಞಾನವನ್ನಾರ್ಜಿಸಿ ದೃಢವಾದ ಭಕ್ತಿಯಿಂದ ನಿನ್ನನ್ನು ಭಜಿಸಿ ಅಹಂಕಾರ, ಮಮಕಾರಗಳನ್ನು ತ್ಯಜಿಸಿದವರೇ ನಿಜವಾದ ಸುಜನರು! ನಿನ್ನನ್ನು ನೋಡುವುದೇ ಸಾಕವರಿಗೆ; ಮುಕ್ತಿಯೂ ಬೇಡಾಗುವುದು. ನಿನ್ನ ಭ್ರೂಭಂಗ ಮಾತ್ರದಿಂದ ನಶಿಸಿ ಪೋಗುವ ಪಾರಮೇಷ್ಠ್ಯಾದಿ ಪದವಿಗಳನ್ನೂ ಫಲವಾಗಿ ಬಯಸರೆಂದು ಹೇಳಬೇಕೇ? ನಿನ್ನ ಪಾದಾರವಿಂದವನ್ನು ನಂಬಿ ನಿನ್ನ ಅಮೃತಕಥೆಯನ್ನು ಕೇಳಿ, ಪವಿತ್ರ ಯಶೋಗಾನ ಕುಶಲರಾದ ಆ ರಸಜ್ಞರಿಗೆ ನೀನು ಮೋಕ್ಷದಲ್ಲಿ ಆನಂದೋದ್ರೇಕರೂಪ ಮಹಾಫಲವನ್ನು ಕೊಡುವೆ. ನಾವಾದರೂ ನಿನ್ನ ಚರಣೈಕಶರಣರು, ದೇವಾ! ಪುಟ್ಟಿಸು ನಮ್ಮನ್ನು ನಿನ್ನಿಚ್ಛೆ ಬಂದೊಡೆ ಪಶ್ವಾದಿ ನರಕಸಮ ಯೋನಿಯಲ್ಲಿ! ಆದರೆ ನಮ್ಮ ಮನೋಭ್ರಮರವೀ ಪದಪದ್ಮದಲ್ಲಿ ರಮಿಸಲಿ! ನಮ್ಮ ವಾಕ್ತುಲಸಿಯು ನಿನ್ನ ಚರಣಾರವಿಂದ ಶೋಭಾಕರವಾಗಲಿ! ನಮ್ಮ ಕರ್ಣರಂಧ್ರಗಳಲ್ಲಿ ನಿನ್ನ ಗುಣರಸಾಯನವು ತುಂಬಿರಲಿ! ಇಷ್ಟೇ ನಾವು ಬೇಡುವದಿನ್ನೊಂದಲ್ಲ. ನೀನು ಕಲ್ಯಾಣತಮರೂಪವನ್ನು ತೋರಿದುದನ್ನು ಕಂಡು ನಮ್ಮ ನಯನಗಳಿಗ ತ್ಯಂತಾ ನಂದವಾಗಿದೆ. ದುರಾತ್ಮರಿಗೆ ದುಷ್ಪ್ರಕಾಶನಾದ ಉರುಗಾಯನೇ! ನಿನಗಿದೋ ವಿನಯ ದಿಂದ ವಂದಿಸುವೆವು-ಎಂದು ಸಾಷ್ಟಾಂಗವೆರಗಿದರು.

## ೧೭. ಭಕ್ತಪರಾಧೀನ ಹರಿ ಮಹಿಮೆ

ಸನಕಾದಿಗಳ ಭಕ್ತಿಪೂರ್ವಕ ಸ್ತುತಿಯನ್ನು ಕೇಳಿ ಸಂತಸಪಟ್ಟು, ವಿಕುಂಠನಿಲಯನಾದ ಪ್ರಭು ವಿಂತೆಂದನು–

ಈ ನನ್ನ ದ್ವಾರಪ್ರಮುಖ್ಯರಾದ ಜಯವಿಜಯರು ನನ್ನನ್ನು ಲೆಕ್ಕಿಸದೆ ನಿಮಗೆ ಬಹು ಲಾಪರಾಧವನ್ನು ಗೈದಿರುವರು. ಇವರಿಗೆ ನೀವಿತ್ತ ದಂಡವನ್ನು ಅನುಮೋದಿಸಿರುವೆನು. ನನ್ನ ಭಕ್ತರಾದ ನೀವೂ ನಾನೂ ಏಕಮನಸ್ಕರಲ್ಲವೇ? ಬ್ರಾಹ್ಮಣರೆಂದರೆ ಸರ್ವರಿಗೂ ದೈವಸಮವೆನಿಸಿರುವರು. ಅವರಲ್ಲಿ ನನ್ನ ಭಕ್ತನಂತೂ ವಿಶೇಷಪೂಜ್ಯನಾಗಿರುವನು. ಆದ್ದರಿಂದಲೂ ಸ್ವಕಿಂಕರರ ಅಪರಾಧವು ಯಜಮಾನನನ್ನು ಪೊಂದುವುದರಿಂದಲೂ ನಿಮ್ಮನ್ನು ಪ್ರಸನ್ನರಾಗಬೇಕೆಂದು ಕೇಳಿಕೊಳ್ಳುತ್ತಿರುವೆನು. ಲೋಕದಲ್ಲಿ ಭೃತ್ಯನು ಅಪರಾಧವನ್ನೆಸಗಲು ಅವನ ಸ್ವಾಮಿಯ ಹೆಸರನ್ನೆತ್ತಿ ನಿಂದಿಸವರು. ಆ ಅಪವಾದವದು ಕೀರ್ತಿಚಂದ್ರಿಕೆಯನ್ನು ಕುಷ್ಠವು ಚರ್ಮವನ್ನಂತೆ ಕೆಡಿಸಿಬಿಡುವುದು.

ಇಷ್ಟೇ ಅಲ್ಲ. ಬ್ರಾಹ್ಮಣರು ನನಗೆ ಪರಮ ಪ್ರೀತಿಪಾತ್ರರು. ಆಚಂಡಾಲವಾದೀ ಜಗವನ್ನೆಲ್ಲಾ ತತ್‌ಕ್ಷಣದಿ ಪವಿತ್ರಗೊಳಿಸುವುದು ಶ್ರವಣಗೋಚರವಾದ ನನ್ನ ಅಮೃತಾಮಲ ಯಶವು. ಆ ಪರಮಪಾವನ ಕೀರ್ತಿಯು ನಿಮ್ಮಿಂದ ವಿಸ್ತೃತವಾಗುತ್ತಿರುವದಂತಹ ಬ್ರಾಹ್ಮಣರಿ

ಗೊಂದು ವೇಳೆ ಈ ನನ್ನ ಬಾಹುದಂಡವಪರಾಧವಂ ಗೈದೊಡೆ ಅದನ್ನೂ ಲೆಕ್ಕಿಸದೆ ಪರಶುಧಾರೆಯಿಂದ ಕಡಿದುಬಿಡುವೆನು. ಆ ಬಾಹುಜಾತರಾಗ ಕ್ಷತ್ರಿಯರ ಪಾಡೇನು? ಬ್ರಾಹ್ಮಣರ ಚರಣಪದ್ಮಪವಿತ್ರ ರೇಣುವನ್ನು ಸೇವಿಸಿ ಸಕಲ ಜನರ ಪಾಪರಾಶಿಯನ್ನು ಸುಡುವ ಮಾಹಾತ್ಮ್ಯ ದಿಂದ ಶೋಭಿಪ ನನ್ನನ್ನು ಬ್ರಹ್ಮಾದೀತರ ದೇವತೆಗಳು, ನಿಯಮಗಳಿಂದ ತಪವನ್ನು ಮಾಡಿ ಕರುಣಾಕಟಾಕ್ಷಪಾತವನ್ನರ್ಥಿಸುವ ಶ್ರೀದೇವಿಯು ಬಿಡದೆ ಭಜಿಸುತ್ತಿರುವಳು. ಅಂತಹ ನಾನೊಂದು ವೇಳೆ ಕ್ಷತ್ರಿಯರು ವಿಪ್ರರಿಗೆ ಪ್ರತೀಪವನ್ನು ಗೈದಿದರೆ ಅವರನ್ನು ನಾಶ ಮಾಡಿಬಿಡು ವೆನು. ನಾನು ಸ್ವರತನೇ ಸಹಿ, ಆದರೂ ಶ್ರೀದೇವಿಯಿಂದ ಕೂಡಿದ ನನಗೆ ಸರ್ವ ಕರ್ಮಗಳನ್ನ ರ್ಪಿಸಿ ನಾ ಕೊಟ್ಟ ಫಲರೂಪ ಸುಖದುಃಖಗಳನ್ನು ವಿಕಾರವಿಲ್ಲದೆ ಅನುಭವಿಸುವ ವಿಪ್ರರು, ಕಬಳವನ್ನೆತ್ತಿ ಗೋವಿಂದಾ ಎಂದು, ನನ್ನನ್ನು ಸ್ಮರಿಸಿ, ನನಗರ್ಪಿಸಿ ಭುಜಿಸುವಾಗ ಪ್ರೀತನಾದಂತೆ ಯಜಮಾನನು ಉದಾರಾಜ್ಯ ಧಾರೆಗಳಿಂದ ಕೂಡಿದ ಹವಿರ್ಭಾಗವನ್ನು ಅಗ್ನಿಮುಖವನ್ನು ಮಾಡಿ ಉತ್ತಮ ಕಲ್ಪಯಜ್ಞಗಳಲ್ಲಿ ಕೊಟ್ಟಾಗಲೂ ಪ್ರೀತನಾಗದಿರುವೆನು. ಅಖಂಡ ಯೋಗಮಾಯಾ ವೈಭವೋಪೇತನಾದ ನಾನು ಅವತರಿಸಿ, ಲೋಕಶಿಕ್ಷಾರ್ಥವಾಗಿ ಬ್ರಾಹ್ಮಣರ ನಿರ್ಮಲಚರಣ ಧೂಳಿಯನ್ನು ಕಿರೀಟದಿ ಧರಿಸುವೆನು. ವಿಪ್ರರ ಪಾದೋದಕವು ಚಂದ್ರಲಲಾಮನೇ ಮೊದಲಾದ ಸಕಲ ದೇವಮಾನವರನ್ನು ಪಾವನ ಮಾಡುವುದು. ಅಂತಹ ಬ್ರಾಹ್ಮಣರನ್ನು ಧಿಕ್ಕರಿಸುವವನು ನೀಚನೇ ಸರಿ! ನನ್ನ ಪ್ರತಿಮಾಸ್ಥಾನರು, ನನ್ನ ಭಕ್ತರು ಆದ ದ್ವಿಜವರರಲ್ಲಿ ವಿರೋಧ ಮಾಡಿ ದ್ರೋಹವೆಸಗಿದ ಪಾಪಾಂಧರು ನರಕವಂ ಸೇರಿ ದಂಡಪಾಣಿಯ ಚಂಡಶಾಸನಕ್ಕೆ ಗುರಿಯಾಗು ವರು. ಕೆಟ್ಟಗಣ್ಣಿನಿಂದ ವಿಪ್ರರನ್ನು ನೋಡಿದ ಅವರ ನೇತ್ರಗಳನ್ನು ಯಮನು ಹದ್ದುಗಳಿಂದ ಕಿತ್ತೆಸುವನು. ಆದರೆ ಬ್ರಾಹ್ಮಣರನ್ನು ಕಂಡು ನಾನೇ ಆ ರೂಪದಿ ಬಂದೆನೆಂದು ತಿಳಿದು ಸಂತುಷ್ಟ ಹೃದಯರು ಮಂದಸ್ಮಿತಯುಕ್ತ ವಚನಾಮೃತರು, ಪದ್ಮ ಪ್ರಸನ್ನವದನರಾದ ಪ್ರೇಮದಿಂದ ಮನೆಗೆ ಬಂದ ಅಳಿಯನನ್ನಂತೆ ಸಂತೈಸಿ ಸತ್ಕರಿಸುವ ವಿವೇಕಿಗಳಿಗೆ ಅದರ ಉಪಕಾರವನ್ನು ಹೊತ್ತು, ವಶನಾಗಿ, ನಿಲ್ಲುವೆನು. ನಾನೂ ವಿಪ್ರರಲ್ಲಿ ಹಾಗೆಯೇ ನಡೆದುಕೊಂಡು ಬರುತ್ತಾ, ಒಂದವತಾರದಲ್ಲಿಯೂ ವಿಪ್ರಾವಮಾನವನ್ನು ಮಾಡದಿರುವೆನು. ಆದ್ದರಿಂದ ನನ್ನ ಸ್ವಭಾವವನ್ನ ರಿಯದೆ ನಿಮಗೆ ವಿರೋಧವೆಸಗಿದ ಜಯವಿಜಯರು, ಮೂರು ಜನುಮಗಳಲ್ಲಿ ಸರೇತರ ಕುಲಜಾತರಾಗಿ ತತ್ಕ್ಷಣವೇ ಮರಳಿ ಬಂದು ನನ್ನ ಲೋಕವನ್ನು ಪೊಂದುವಂತೆ ಅನುಗ್ರಹಿಸಿರು ವೆನು. ಈ ನನ್ನ ಅನುಗ್ರಹವಿರದಿರೆ ಬಲವದ್ಬ್ರಾಹ್ಮಣಶಾಪದಿಂದ ಎಂದಿಗೂ ಅವರಿಗೆ ಅಸುರಯೋನಿಯಿಂದ ಮೋಕ್ಷವಿಲ್ಲದೆ ಹೋದೀತು! ಎಂದೇ ನಿಮ್ಮನ್ನೂ ವಿಶಾಪವನ್ನನುಮೋದಿ ಸಲು ಕೇಳುಕೊಳ್ಳುತ್ತಿರುವೆನು.

ವಿದ್ಯೋತಮಾನವು, ಸರ್ವಾಭೀಷ್ಟಪ್ರದವು, ವಿಪ್ರಸ್ತುತಿಪರವು, ಪವಿತ್ರವೂ ಆದ ಭಗವದ್ವಚನಾಮೃತವನ್ನಾಸ್ವಾದಿಸಿದ ಸನಕಾದಿಯೋಗಿಗಳ ಮನವು ಭಗವದ್ದಿದೃಕ್ಷಾಭಂಗಾ ಕುಲಿತ ಕೋಪತಾಪವನ್ನು ಕಳೆದುಕೊಂಡು ಶಾಂತವಾಯಿತು. ಶಬ್ದತಃ ಲಘುವಾದರೂ ಅರ್ಥತಃ ಬಹ್ವರ್ಥಗರ್ಭಿತವಾದ ಅತಲಸ್ಪರ್ಶಿಯಾದ ಭಗವದ್ವಚನಸಮುದ್ರದಿ ಮುಳುಗಿ ಅದರ ತಾತ್ಪರ್ಯವನ್ನರಿಯಲಾರದೆ ಬ್ರಹ್ಮಾದಿಲೋಕಸೃಜನಮಹೋದಯನಾದ ಶ್ರೀಹರಿಗೆ ಪುನಃ ವಂದಿಸಿ ಕೈಜೋಡಿಸಿ ಕಂಪಿತಗಾತ್ರರಾಗಿ ನಿಂದು ಸಂತಸದಿಂತೆಂದರು–

ಭಗವಾನ್! ಏನು ಈ ನಿನ್ನ ಲೀಲೇ? ಏನಯ್ಯಾ ನಿನ್ನಾಟ! ಅನುಗ್ರಹಿಸಿದಿರೆಂದೆಯಾ? ಅಧ್ಯಕ್ಷಾ! ನಾವಾ, ನೀನಾ ಅನುಗ್ರಹಿಸುವದು? ವಿಪ್ರರನ್ನು ತುತಿಸಿದ ನಿನ್ನ ತಿತ್ತವನ್ನರಿಯಲಾರದೆ ತತ್ತರಿಸುತ್ತಿರುವೆವು. ಬ್ರಾಹ್ಮಣರ ದೇವನೇ! ಬ್ರಾಹ್ಮಣರೇ ನಿನಗೆ ದೇವರಂತೆ ಪೂಜಾರ್ಹರೆನಿಸಿ ದರೇ? ದೇವತೆಗಳಿಗೂ ವಿಪ್ರರಿಗೂ ಕುಲದೇವತೆಯಾದ ನೀನು ಅವತರಿಸಿ ಸನಾತತನ ಧರ್ಮವನ್ನು ರಕ್ಷಿಸುವೆ. ನೀನು ಸರ್ವಾಧಾರನಾದ ವಾಯುವಿಗೂ ಅವನ ತಾಯಿಯಾದ ರಮೆಗೂ ಶ್ರೇಷ್ಠನಾಗಿರುವೆ. ನಿರ್ವಿಕಾರನಾದ ನಿನ್ನನ್ನು ಆ ಮುಖ್ಯಪ್ರಾಣನೂ ಸಾಕಲ್ಯೇನ ತಿಳಿಯಲಾರನು. ಏಷ ಸರ್ವೇಶ್ವರ ಏಷ ಭೂತಪಾಲ ಇತ್ಯಾದಿ ವೇದವಚನಗಳಿಂದಲೇ ನಿನ್ನನ್ನು ಯಥಾಯೋಗ್ಯ ವಾಗಿ ತಿಳಿಯಬಹುದಾಗಿದೆ. ನಿರ್ವತ್ತಿ ಧರ್ಮಾನುಷ್ಠಾನ ತತ್ಪರರು ನಿನ್ನ ಅನುಗ್ರಹದಿಂದ ಮೃತ್ಯುಸಂಸಾರವನ್ನು ದಾಟುವಂತಹ ಮುಕ್ತಾಮುಕ್ತ ಜಗನ್ನಿಯಾಮಕನಾದ ನಿನ್ನಲ್ಲಿ ನಾವು ಅನುಗ್ರಹಿಸುವುದೇ? ಇದು ವಿಪ್ರಸ್ತುತಿಯಲ್ಲವೇ? ಭಕ್ತ್ಯಾದಿ ಸಂಪತ್ತನ್ನು ಕೋರಿ ತನ್ನನ್ನು ಭಜಿಸುವವರನ್ನು ಬಿಟ್ಟು ತನ್ನ ಶಿರದಲ್ಲಿ ನಿನ್ನ ಪಾದರೇಣುವನ್ನಿಟ್ಟು, ಶ್ರೀದೇವಿಯು ತುಲಸೀನವ ದಾಮ ಶೋಭಿತವಾದ ನಿನ್ನ ಪಾದಾರವಿಂದ ಸೇವೆಯನ್ನು ಭ್ರಮರದಂತೆ ಅಪೇಕ್ಷಿಸಿ ಪೊಂದುವಳು. ಸ್ವರ್ಗಾದಿ ಫಲಾಪೇಕ್ಷಾ ರಹಿತರಾದ,ಸಾರಗ್ರಹಣ ಧುರೀಣ ಭಕ್ತ ಜನರಿಗೆ ಆ ಪಾದಪದ್ಮವಲ್ಲದೆ ಮತ್ತಾವುದು ಗತಿ? ಏಕಾಂತದಲ್ಲಿ ಶ್ರೀಕಾಂತೆಯು ಮಾಡುವ ಅನುಪಮ ಸೇವೆಯು ಅನಿತರಸಾಧ್ಯ ವಾದುದು. ಅದನ್ನೂ ಆದರಿಸಿಕೊಳ್ಳದೆ, ಪರಮ ಭಗವದ್ಭಕ್ತರ ಕರೆಗೆ ಓಗೊಟ್ಟು ಬರುವ, ಶ್ರೀವತ್ಸಾಂಕಿತವಕ್ಷನಾದ ನೀನು ಬ್ರಾಹ್ಮಣರ ಪಾದರಜವನ್ನು ಧರಿಸಿ 'ಪಾವನನಾದೆ ಸೌಭಾಗ್ಯವಂ ಪೊಂದಿದೆ' ಎಂಬುವುದೆಂತಹ ವಿಡಂಬನವು! ಧರ್ಮಸ್ವರೂಪನೂ ತ್ರಿಯುಗ ಹೂತಿಯೂ ಆದ ನಿನ್ನ ರೂಪಗಳು ಮೂರು. ಅನಂತಾಸನ, ವೈಕುಂಠ, ಕ್ಷೀರ ಸಾಗರ ಶಯನನೆಂಬಾರೂಪಗಳಿಂದ ಚರಾಚರಾತ್ಮಕವಾದೀ ಜಗವನ್ನು ದೇವ ದ್ವಿಜ ಸುಜನ ಪ್ರಯೋಜನಾರ್ಥವಾಗಿ ಸೃಜಿಸಿರುವೆ, ರಕ್ಷಿಸುತ್ತಿರುವೆ. ರಜಸ್ತಮೋಗುಣಗಳಿಂದ ಸತ್ತ್ವವು ಬಾಧಿತವಾದಾಗ ಕಪಿಲಾದಿ ಜ್ಞಾನರೂಪ ಗಳನ್ನು ರಾಮಾದಿ ಬಲರೂಪಗಳನ್ನೂ ಸ್ವೀಕರಿಸಿ, ಅಧರ್ಮವನ್ನು ತುಳಿದು, ಧರ್ಮವನ್ನು ಸ್ಥಾಪಿಸಿ ಸುಜನರ ಪೊರೆಯುವೆ.

ಪರಮೈಶ್ವರ್ಯವಾರಿಧೇ! ನೀನೇ ಒಂದು ವೇಳೆ ದ್ವಿಜೋತ್ತಮರನ್ನು ಸೂನೃತವಾಣಿ ಯಿಂದಲೂ ಲೋಕಮಾನ್ಯ ಸತ್ಕಾರದಿಂದಲೂ, ಗೌರವಿಸಿ ರಕ್ಷಿಸದಿದ್ದರೆ ಆ ಕ್ಷಣವೇ ತತ್ವಜ್ಞಾನ ವಿಷಯಕ ಶುಭಮಾರ್ಗವು ಶಿಷ್ಟಾಚಾರಪರಂಪರೆಯು ನಷ್ಟವಾಗಿ ಹೋಗುತ್ತಿತ್ತು. ಧರ್ಮಪ್ರವೃತ್ತಿ ಸಮರ್ಥನಾದ ನೀನು ನಡೆದಂತೆ ಲೋಕವು ನಡೆಯುವುದಲ್ಲವೇ? ಧರ್ಮಮಾರ್ಗನಾಶವು ನಿಷೇಧವಿಷಯವಾದ್ದರಿಂದ ಅಪ್ರಿಯವಾಗಿದೆ; ನಿನಗೆ ದುಃಖಕರವೆಂದಲ್ಲ. ಸ್ವರೂಪಶಕ್ತಿಯಿಂದ ಶತ್ರುಗಳನ್ನು ನಾಶಮಾಡಿ ಸುಜನಕ್ಷೇಮವನ್ನು ತಂದುಕೊಡಲು ಸಮರ್ಥನಾದ ನೀನು ನಮಗೆ ನಮಸ್ಕರಿಸುವುದರಿಂದ ನಿನ್ನ ಮಾನಭಂಗವೆನಿಸುವುದಿಲ್ಲ. ವೇದವೇದ್ಯನು ಜಗತ್ಪಲಕನಾದ ನೀನೆಲ್ಲಿ? ನಿನ್ನ ಭಕ್ತಚರಣದಾಸರಾದ ನಾವೆಲ್ಲಿ? ನಿನ್ನ ವಿಪ್ರಸ್ತುತಿನತಿಗಳು ಲೀಲಾವಿಲಾಸವೇ ಸರಿ! ಮಹಾಪ್ರಭೋ! ಈ ಜಯವಿಜಯರಿಗೆ ಶಿಕ್ಷೆಯನ್ನೇ ಕೊಡುವಿಯೋ, ಕ್ಷಮಿಸಿ ಇಲ್ಲೇ ಇಡುವಿಯೋ ನಿನ್ನಿಷ್ಟದಂತೆ ಮಾಡು. ನಿಷ್ಕಪಟಚಿತ್ತದಿಂದ ಅದನ್ನು ನಾವು ಒಪ್ಪಿಕೊಳ್ಳುವೆವು. ಸ್ವಭಾವದಿಂದ ನಿರ್ದೋಷರಾದ ನಿನ್ನ ಪಾರ್ಷದರಲ್ಲಿ ಶಾಪವನ್ನರ್ಪಿಸಿದ ಪಾಪವನ್ನೆಸಗಿದ ನಮ್ಮನ್ನಾದರೂ ದಂಡಿಸು–ಎಂದು ಬೇಡಿದ ಮುನಿಗಳನ್ನು ಕಂಡು ಭಗವಂತನು "ಒಳ್ಳೆಯದು!

ಇವರು ಅಸುರಯೋನಿಯಲ್ಲಿ ಪುಟ್ಟಿ ದ್ವೇಷಸಂಪಾದಿತ ಚಿತ್ತೈಕಾಗ್ರತೆಯಿಂದ ಪುಟ್ಟಿದ ಭಕ್ತಿಯೋಗದಿಂದ, ಅಸುರಾವೇಶವನ್ನು ಕಳೆದುಕೊಂಡು, ಪುನಃ ಇಲ್ಲಿಗೆ ಬರಲಿ! ವಿಪ್ರರೇ! ನೀವು ಶಾಪವನ್ನು ಕೊಟ್ಟೆವೆಂದು ಚಿಂತಿಸಲು ಕಾರಣವಿಲ್ಲ. ಹಿಂದೆ ಇಂದಿರೆಯಿಂದ ಈ ಶಾಪವು ಯೋಜಿತವಾದದ್ದೇ ಆಗಿದೆ" ಎಂದು ಇಂದಿರೇಶನು ನುಡಿಯಲು ಆ ನಯನಾನಂದಕಂದನಾದ ಗೋವಿಂದನನ್ನು, ಅವನ ಸುಂದರ ವೈಕುಂಠವನ್ನು ನೋಡಿ ಕೃತಾರ್ಥರಾದ ಸನಕಾದಿಗಳು ಶ್ರೀಹರಿಗೆ ಪ್ರದಕ್ಷಿಣ, ನಮಸ್ಕಾರವನ್ನು ಮಾಡಿ ಶ್ರೀಹರಿಯ ಸಿರಿಯನ್ನು, ಅವನರಸಿ ಸಿರಿಯನ್ನು ಪೊಗಳುತ್ತಾ ಆನಂದದಿಂದ ಹೊರಟುಹೋದರು.

ಆಗ ಭಗವಂತನು ಜಯವಿಜಯರನ್ನು ನೋಡಿ "ನಡೆಯಿರಿಲ್ಲಿಂದ. ಭಯಪಡಬೇಡಿ. ಸುಖವಾದೀತು! ಬ್ರಹ್ಮಶಾಪವನ್ನು ವಿಫಲಗೊಳಿಸಲು ಸಮರ್ಥನಾಗಿರುವೆನಾದರೂ ಅದೂ ಸನ್ನಿಚ್ಛೆಯೇ ಆಗಿದೆ. ನನ್ನಲ್ಲಿ ಬರುತ್ತಿದ್ದ ರಮೆಯನ್ನು ಹಿಂದೊಂದು ದಿನ ನೀವು ವಾರಿಸಿದಿರಿ. ಆಗ ಕ್ರುದ್ಧಳಾದ ರಮೆಯು ಶಪಿಸಿದ್ದಳು. ಅದೇ ಈಗ ಬ್ರಾಹ್ಮಣಮುಖ ನಿಃಸೃತವಾಯಿತು! ಬ್ರಹ್ಮಹೇಲನ ಪಾಪವನ್ನು ದ್ವೇಷ ಸಂರಂಭದಿಂದ ಪ್ರಾರಂಭಿಸಿ, ಭಕ್ತಿಯಿಂದ ಕಳೆದು ಕೊಂಡಾ ಕ್ಷಣವೇ ನನ್ನಲ್ಲಿ ಶೀಘ್ರವೇ ಬರುವಿರಿ" ಎಂದು ಭಗವಂತನವರನ್ನು ಸಾಂತ್ವನಗೊಳಿಸಿ ವಿಮಾನ ಗಣಸಂಕುಲನಾದ ತನ್ನ ಸರ್ವಸೌಭಾಗ್ಯಯುತ ಮಂದಿರವನ್ನು ಪ್ರವೇಶಿಸಿದನು.

ಆ ದೇವಪಾರ್ಷದ ಶ್ರೇಷ್ಠರಾದರೋ ದುಸ್ತರವಾದ ಬ್ರಹ್ಮಶಾಪದಿಂದ ಗತಮದರೂ ಹರಿಲೋಕವನ್ನು ಬಿಟ್ಟು ನಿಸ್ತೇಜಸ್ಕರೂ ಆದರು. ವೈಕುಂಠದಿಂದ ಪತನವನ್ನು ಪೊಂದಿ ಭೂಮಿಗಿಳಿಯುವ ಅವರನ್ನು ನೋಡಿ ವಿಮಾನಾಗ್ರದಲ್ಲಿ ಸಂಚರಿಪ ಸುರರು ಹಾಹಾಕಾರವನ್ನು ಮಾಡಿದರು.

ಆ ಹರಿದ್ವಾರಪರೇ ಈಗ ಕಾಶ್ಯಪವೀರ್ಯವನ್ನಾಶ್ರಯಿಸಿ ದಿತಿಯ ಗರ್ಭದಲ್ಲಿ ಭಯಂಕರ ತೇಜದಿ ಉರಿಯುತ್ತಿರುವರು. ಅಸುರಾವೇಶದಿಂದ ಕೂಡಿ ಅವರ ತೇಜದಿಂದಲೇ ನಿಮಗೆ ಈಗ ಕಷ್ಟವೆನಿಸಿದೆ. ಭಗವಂತನು ನಿಮ್ಮ ಸಂಕಟವನ್ನು ನಿವಾರಿಸುವನು.

ದೇವತೆಗಳಿರಾ! ಸಕಲ ಜಗಜ್ಜನ್ಮ ಸ್ಥಿತಿಲಯ ಕಾರಣನು, ಸನಕಾದಿ ಯೋಗೇಶ್ವರಾಗಮ್ಯ ಮಹಾಮಹಿಮನು, ವೇದವೇದ್ಯನು, ಅನವದ್ಯನು ಆದ ಶ್ರೀಹರಿಯು ನಮಗೆ ರಕ್ಷಕನಾಗಿರುವಾಗ ನಮ್ಮ ಕ್ಷೇಮಪ್ರಯತ್ನದಿಂದೇನು ಪ್ರಯೋಜನ? ಶ್ರೀಹರಿಯೇ ರಕ್ಷಿಸುವನು.

ಎಂದು ಬ್ರಹ್ಮನು ಪೇಳಿ ದೇವತೆಗಳನ್ನು ಕಳುಹಿಸಿದನು.

## ೧೮. ಹಿರಣ್ಯಕಶಿಪು ಹಿರಣ್ಯಾಕ್ಷ ಜನನ

ಮೈತ್ರೇಯನು ಪೇಳಿದನು–ಆಗ ದೇವತೆಗಳು ಭಯಕಾರಣವನ್ನು ಬ್ರಹ್ಮನಿಂದ ತಿಳಿದು ನಿರ್ಭಯರಾಗಿ ಸ್ವರ್ಗಲೋಕವನ್ನು ಸೇರಿದರು.

ಕಶ್ಯಪನ ವಚನವನ್ನನು ಕೇಳಿ ಗರ್ಭವನ್ನು ಹರಿಭಯದಿಂದ ಪ್ರಸವಿಸದೇ ಇದ್ದ ದಿತಿಯು ನೂರು ವರ್ಷ ತುಂಬಲು ಮಕ್ಕಳನ್ನೀರ್ವರನ್ನು ಪಡೆದಳು. ಅವರು ಪುಟ್ಟುವಾಗ ಆದ ಉತ್ಪಾತಗಳನ್ನು ಇನ್ನೆಷ್ಟು ಪೇಳಲಿ! ವಿದುರಾ! ಭೂಮಿಯು ಕಂಪಿಸಿತು. ದಿಕ್ಕುಗಳು ಉರಿಯುತ್ತಿರುವಂತೆ ಕಂಡವು. ಆಕಾಶದಿಂದ ಸಿಡಿಲು ಕೊಳ್ಳಿಗಳುದುರಿದವು. ಧೂಮಕೇತುವು ದುಃಖಸೂಚಕವಾಗಿ

ಕಾಣಿಸಿತು. ವಾಯುವು ಘಟ್‌ಕಾರವನ್ನು ಮಾಡುತ್ತಾ ಬಿರುಸಾಗಿ ಬೀಸಿತು. ಗಿಡಗಳು ಸುಡಿಗಾಳಿಗೆ ಬೇರುಸಹಿತ ಕಿತ್ತಿಬಿದ್ದವು. ಮೇಘಾಡಂಬರದಿಂದ ಕತ್ತಲು ವ್ಯಾಪಿಸಿ ಕಣ್ಣು ಕಾಣದಂತೆ ಆಯಿತು. ಸಮುದ್ರ ಉಕ್ಕೇರಿ ತೀರವನ್ನು ದಾಟಿ ಆಕ್ರೋಶಿಸಿತು. ನದೀಸರೋವರಗಳು ಅಲ್ಲೋಲ ಕಲ್ಲೋಲವಾದವು. ಕಮಲಗಳು ಬಾಡಿದವು. ಶಶಿಸೂರ್ಯರಿಗೆ ಗೂಡು ಕಟ್ಟಿತು. ನರಿಗಳು ಮುಖದಿಂದ ಕೆಂಡವನ್ನು ಕಾರುತ್ತಾ ಗ್ರಾಮಮಧ್ಯದಿ ಪೊಕ್ಕು ಅಮಂಗಳ ಧ್ವನಿಯಿಂದ ಕತ್ತೆತ್ತಿ ಕೂಗಿದವು. ನಾಯಿಗಳತ್ತವು. ಕತ್ತೆಗಳು ಖಾತ್ಕಾರವನ್ನು ಮಾಡುತ್ತಾ ಓಡಿದವು. ಗೋಷ್ಠದಲ್ಲಿ ಪಶುಗಳು ಭಯದಿಂದ ಶಕೃನ್ಮೂತ್ರಗಳ ವಿಸರ್ಜಿಸಿದವು. ಆಕಳು ಕರೆದರೆ ರಕ್ತವನ್ನು ಕೊಟ್ಟಿತು. ಮೇಘದಿಂದ ಪೂಯ ವರ್ಷವು ಬಂತು. ದೇವಾಲಯದಲ್ಲಿ ಪ್ರತಿಮೆಗಳತ್ತಂತೆ ತೋರಿದವು. ಗಾಳಿ ಇಲ್ಲದೆ ಗಿಡಗಳು ಬಿದ್ದವು. ಪುಣ್ಯಗ್ರಹಗಳಿಗೆ ಪಾಪಗ್ರಹದಿಂದ ಅತಿಚಾರ ದೋಷವು ತಗುಲಿತು. ಗ್ರಹಯುದ್ಧವು ಭಯಂಕರವಾಯಿತು. ವಕ್ರಗತಿಯಿಂದ ನಡೆದ ಗ್ರಹಗಳು ಶುಭಫಲ ಗಳನ್ನು ಕೆಡಿಸಿದವು.

ಈ ಮಹೋತ್ಪಾತಗಳನ್ನು ನೋಡಿ ಬ್ರಹ್ಮಾದಿ ದೇವರು ಸನಕಾದಿಗಳು ಬಿಟ್ಟನ್ಯರು ಪ್ರಳಯವೇ ಬಂದಿತೆಂದು ತಿಳಿದು ಭಯಪಟ್ಟರು. ಆ ಆದಿದೈತ್ಯರಿಂತು ಪುಟ್ಟಿ ಬೆಳೆದು ಬೆಟ್ಟದಂತೆ ಭಯಂಕರ ಶರೀರರಾದರರು. ಆ ವಜ್ರಕಾಯರು ಬಲಪರಾಕ್ರಮಗಳಿಂದ ಲೋಕಪೀಡಾಕರರಾಗಿ ಕಿರೀಟಾಂಗದಗಳಿಂದ ಸೂಸಿಬರುವ ಕಾಂತಿಯಿಂದ ದುರ್ನಿರೀಕ್ಷ್ಯರಾಗಿ ಭೂಮಿಯು ನಡುಗು ವಂತೆ ನಡೆಯುತ್ತಾ ಸೂರ್ಯನಂತೆ ಚಂಡತೇಜರಾಗಿ, ಲೋಕಗಳಿಗೆ ಭಯಪ್ರದರಾದರು.

ಕಶ್ಯಪರು ಅವರಲ್ಲಿ ಜ್ಯೇಷ್ಠನಿಗೆ ಹಿರಣ್ಯಕಶಿಪುವೆಂದೂ ದ್ವಿತೀಯನಿಗೆ ಹಿರಣ್ಯಾಕ್ಷನೆಂದು ನಾಮಕರಣವನ್ನು ಮಾಡಿದರು. ಹಿರಣ್ಯಕಶಿಪು ತಪವಂ ಗೈದು ಬ್ರಹ್ಮನಿಂದ ವರವನ್ನು ಪಡೆದು, ದರ್ಪಿತನಾಗಿ ಮೂರು ಲೋಕಗಳನ್ನು ಗೆದ್ದು, ಒಳಹೊರಗೆ ಮೃತ್ಯುವನ್ನು ಕಾಣದೆ ಮದವೇರಿ ಮೆರೆದನು.

ಅವನ ತಮ್ಮನಾದ ಹಿರಣ್ಯಾಕ್ಷನು ಅಣ್ಣನಿಗೆ ಪ್ರೀತ್ಯಾಸ್ಪದನಾಗಿದ್ದನು. ಒಂದು ಸಲ ಗದಾಪಾಣಿಯಾದ ಹಿರಣ್ಯಾಕ್ಷನು ಯುದ್ಧಕಾಂಕ್ಷಿಯಾಗಿ ದೇವಲೋಕವನ್ನೈದಿದನು. ಗಲುಗಲು ನಾದವನ್ನು ಮಾಡುವ ನೂಪುರವನ್ನು ಧರಿಸಿ ಮಹಾವೇಗದಿ ಬರುವ ಇಚ್ಛಾವದ್ವೀರ್ಯನು, ದುರ್ಮದನು, ವೈಜಯಂತೀಮಾಲಾಧರನು, ಭಯರಹಿತನು ಆದ ದೈತ್ಯನನ್ನು ಕಂಡು ಭೀತರಾಗಿ ದೇವತೆಗಳೆಲ್ಲರೂ ಗರುಡನನ್ನು ಕಂಡ ನಾಗಗಳಂತೆ, ಅಡಗಿಕೊಂಡು ಕಾಣದಾದರು. ಅದನ್ನು ನೋಡಿ ಇಂದ್ರಾದಿ ದೇವಗಣವು ನಿರ್ವೀರ್ಯವೆಂದು ನಕ್ಕು, ದೈತ್ಯರಾಜನು ಸಿಂಹಗರ್ಜನವನ್ನು ಮಾಡಿ, ಹಿಂದಿರುಗಿದನು. ಕ್ರೀಡಾರತನಾಗಿ ಬರುತ್ತಾ ಆ ಮಹಾಬಲನು ಗಂಭೀರವಾದ ಸಮುದ್ರವನ್ನು ನೋಡಿ ಸಿಂಹನಾದವನ್ನು ಮಾಡಿ ಒಳಹೊಕ್ಕನು. ವರುಣನ ಸೈನಿಕರು ಅವನನ್ನು ಕಂಡು ಭೀತಿಗೊಂಡು ದೂರ ಓಡಿಹೋದರು. ಜಲಜಂತುಗಳು ದಿಗ್ಭ್ರಮೆಗೊಂಡವು. ಎಷ್ಟೋ ವರುಷವಿರೀತಿಯಾಗಿ ಭೀತಿಗಾಣದೆ ಗದೆಯಿಂದ ತರಂಗಗಳನ್ನು ಹೊಡೆದು ಅಲ್ಲೋಲ ಕಲ್ಲೋಲವನ್ನು ಮಾಡಿ, ವರುಣಪುರಿಯಾದ ವಿಭಾವರಿಯನ್ನು ಸೇರಿದನು. ಅ ಕಲ್ಲಿ ರಾಕ್ಷಸ ರಾಜನು ವರುಣನನ್ನು ಕಂಡು ಅಟ್ಟಹಾಸವನ್ನು ಮಾಡಿ ಒಂದು ಕೈಯೆತ್ತಿ ವಂದಿಸಿ "ಓಹೋ ವರುಣರಾಜ! ಯುದ್ಧವನ್ನಾಡಲು ಬಾ, ನೀನು ಲೋಕಾಧಿಪನಲ್ಲವೇ? ಶಿಖಾಮಣಿಗಳಲ್ಲಿ

ದುರ್ಮದರನ್ನು ಗೆದ್ದು ದೈತ್ಯದಾನವರನ್ನು ಸೋಲಿಸಿ ರಾಜಸೂಯವನ್ನು ಮಾಡಿದೆಯಂತೆ! , ನೋಡುವ ನಿನ್ನ ಪರಾಕ್ರಮವನ್ನು" ಎಂದು ದರ್ಪದಿ ನುಡಿದನು.

ಆ ದುರ್ಮದ ದೈತ್ಯನ ನೀಚವಚನವನ್ನು ಕೇಳಿ ಪೂಜ್ಯ ವರುಣನು ಉಕ್ಕಿ ಬಂದ ರೋಷವನ್ನು ಬುದ್ಧಿವೈಭವದಿಂದ ನುಂಗಿಕೊಂಡು "ಸರೇ! ಹಿರಣ್ಯಾಕ್ಷ! ನಾವೀಗ ವಿರಾಗಿಗಳಾಗಿರುವೆವು. ಪುರಾಣ ಪುರುಷನೋಬ್ಬನನ್ನು ಬಿಟ್ಟು ನಿನ್ನಂತಹ ರಣರಂಗಕೋವಿದನಿಂದ ಯುದ್ಧ ಮಾಡಿ ದರ್ಪನಾಶವನ್ನು ಮಾಡುವ ಸಮರ್ಥನಿನ್ನೊಬ್ಬನ ನಾ ಕಾಣೆನು. ನಿನ್ನಂತಹ ಸ್ವೇಚ್ಛಾಚಾರಿ ವೀರರ ಮೆಚ್ಚುಗೆಗೆ ಅವನು ಪಾತ್ರನಾಗಿರುವನು. ಆದ್ದರಿಂದ ಬೇಗನೇ ಅವನನ್ನು ಸೇರಪೋಗು. ನಿನ್ನಂತಹ ದುಷ್ಟರನ್ನು ಶಿಕ್ಷಿಸಲೆಂದೇ ಅವನು ಅನೇಕ ರೂಪದಿಂದವತರಿಸಿ ಸುಜನರನ್ನು ಸಂರಕ್ಷಿಸುವನು. ಅಚಿರಕಾಲದಲ್ಲೇ ವೀರಶಯನದಿ ನರಿ ನಾಯಿಗಳಿಗಾಹಾರನಾಗಿ ಬಿದ್ದ ನಿನ್ನನ್ನು ನೋಡಿ ಲೋಕವು ಸಂತೋಷಿಸಲಿ! ಎಂದು ನುಡಿದಟ್ಟಿದನು.

## ೧೯. ಹಿರಣ್ಯಾಕ್ಷ ಪರಾಕ್ರಮ

ಪರುಣವಚನವನ್ನಾ ಅವಿವೇಕಿಯು, ಗರ್ವಿಯು ಆದ ಹಿರಣ್ಯಾಕ್ಷನು ಲೆಕ್ಕಿಸದೆ ಮುಂದೆ ಪೋಗಿ ನ್ಾರದರಿಂದ ಹರಿಯಿರುವ ಗುರಿ ತಿಳಿದು, ತ್ವರೆಯಿಂದ ರಸಾತಲವನ್ನು ಸೇರಿದನು. ಅಲ್ಲಿ ಅಜೇಯನಾದ ಶ್ರೀಹರಿಯು ವರಾಹರೂಪದಿಂದ ತನ್ನ ಕೋರೆಯ ಕೊನೆಯಲ್ಲಿ ಭೂಮಿ ಯನ್ನು ಪೊತ್ತು ಮೇಲೆ ತರುತ್ತಿರುವದನ್ನು ಕಂಡನು. ನಯನಾಂಬುಜ ಕಾಂತಿಯಿಂದ ಕಮಲದ ಸೊಬಗನ್ನು ಸೂರೆಗೊಂಡ ಪುಂಡರೀಕಾಕ್ಷನನ್ನು ನೋಡಿ ರಾಕ್ಷಸನು 'ಆಹಾ! ಏನೀ ವಚನಗೋಚರವಾದ ಮೃಗವು? ಇದು ಹರಿಯೇ?' ಎಂದು ಅಚ್ಚರಿಪಟ್ಟು ಅಚ್ಯುತನನ್ನು ನೋಡಿ 'ಎಲೊ ಅವಿವೇಕಿಯೇ! ಬಿಡು ಭೂಮಂಡಲವನ್ನು; ಇದು ರಸಾತಲದಲ್ಲಿರುವ ನಮಗಾಗಿ ಬ್ರಹ್ಮನಿಂದ ಸೃಷ್ಟವಾದದ್ದು. ಸುರಾಧಮ! ಸೂಕರಾಕಾರನೇ! ನನ್ನ ಕಣ್ಣಿಗೆ ಬಿದ್ದಮೇಲೆ ನಿನಗೆ ಕ್ಷೇಮವಿಲ್ಲ. ನಮ್ಮ ಶತ್ರುಗಳು ನಮ್ಮನ್ನು ಜಯಿಸಲು ಕೈಲಾಗದೇ ನಿನ್ನ ಬೇಡಿಕೊಳ್ಳಲು ಸೂಕರಾದಿ ಮಾಯಾರೂಪಗಳಿಂದ ದೈತ್ಯರನ್ನು ಕೊಲ್ಲುವ ನಿನ್ನನ್ನು ನಾನು ಲೆಕ್ಕಿಸೆನು. ಮರೆಯಲ್ಲಿದ್ದು ನಮ್ಮನ್ನು ಮುರಿಯುವ ಯೋಗಮಾಯಾಬಲವೇ ಹೊರತು ನಿನ್ನಲ್ಲಿ ಪೌರುಷವೆಲ್ಲಿಯದು? ಇಂತಹ ನಿನ್ನನ್ನು ಕೊಂದು ನಮ್ಮವರಿಗೆ ಪ್ರೀತಿಯನ್ನು ಮಾಡಿ ದುಃಖವನ್ನೆಲ್ಲ ಕಳೆದುಬಿಡುವೆನು.

ನನ್ನ ಗದಾಘಾತದಿಂದ ತಲೆಯೊಡೆದು ನೀನು ಬಿದ್ದಿದ್ದನ್ನು ನೋಡಿ ನಿನ್ನ ಪೂಜೆ ಮಾಡುವ ಋಷಿಗಳು, ದೇವತೆಗಳೆಲ್ಲರೂ ಬೇರಿಲ್ಲದ ಗಿಡದಂತೆ ನಷ್ಟವಾಗಿ ಹೋಗುವರು' ಎಂದು ಪರುಷವಚನವನ್ನಾಡಿದನು.

ಆಗ ವರಾಹಮೂರ್ತಿಯು ಆ ದುರ್ವಚನನಾರಾಚಗಳಿಂದ ಪೀಡಿತನಾಗಿ, ತನ್ನ ದಂಷ್ಟ್ರಾಗ್ರದಲ್ಲಿ ನಡುಗುತ್ತಿರುವ ಭೂದೇವಿಯನ್ನು ಸಾಂತ್ವನಗೊಳಿಸಿ, ಮಕರಿಯಿಂದ ತಿವಿಯಲ್ಪಟ್ಟ ಕರೇಣುಸಹಿತ ಭದ್ರಗಜದಂತೆ, ನೀರಿನಿಂದ ಮೇಲಕ್ಕೇರಿ ಬಂದನು. ಆಗ ಹಿರಣ್ಯಾಕ್ಷನು ಹಲ್ಲನ್ನು ಕಡಿಯುತ್ತಾ ಗುಡುಗಿನಂತೆ ಗರ್ಜನವನ್ನು ಮಾಡಿ, ಹರಿಯನ್ನು ಹಿಂಬಾಲಿಸಿದನು. ವರಾಹನು ಆಗ ಭೂಮಿಯನ್ನು ಸಲಿಲಸಮೀಪದಲ್ಲೆ ಚೆನ್ನಾಗಿ ಸ್ಥಾಪಿಸಿ ಸ್ಥೈರ್ಯಧೈರ್ಯಗಳನ್ನು ಕೊಟ್ಟು

ನಿಲ್ಲಿಸಿದನು. ಆಕಾಶದಿಂದ ಪ್ರಜಾಪತಿಗಳು ಪ್ರಸೂನ ವರ್ಷವನ್ನು ಸುರಿಸಿ ಸ್ತುತಿಸಿದರು. ಆಗ ಹರಿಯು ದೇವದ್ವೇಷಿಯನ್ನು ಹಿಂತಿರುಗಿ ನೋಡಿದನು. ಬಂಗಾರದಿಂದ ಚಿತ್ರಿತವಾದ ಮಹಾಗದೆಯನ್ನು ಪಿಡಿದು, ಸ್ವರ್ಣಾಭರಣಗಳಂ ತೊಟ್ಟು, ಮರ್ಮಪೀಡಕ ದುರ್ವಚನಗಳನ್ನು ಆಡುತ್ತಾ ಬರುವ ಹಿರಣ್ಯಾಕ್ಷನನ್ನು ನೋಡಿ, ಪ್ರಚಂಡ ಕೋಪವನ್ನು ಪೊಂದಿಯೂ, ಸಹಿಸಿ ನಗುತ್ತಾ, ಶ್ರೀಹರಿಯು ಇಂತು ನುಡಿದನು– ನಿಜ ನಿಜ! ನಾನು ಮೃಗವೂ ಅಹುದು. ನನ್ನನ್ನು ಹುಡುಕುತ್ತಾ ಬರುವರಿಗೆ, ವನಗೋಚರನೂ ಅಹುದು. ಜಲದಲ್ಲೇ ನಾ ಮಲಗಿರುವೆನು. ವನಮೃಗನಾದ ನಾನು ಗ್ರಾಮಸಿಂಹನಾದ ನಿನಗೋಸ್ಕರ ಕಾದಿದ್ದೆ. ಯಮನ ಪಾಶವು ಕುತ್ತಿಗೆಯಲ್ಲಿರುವ ನಿನ್ನ ಪ್ರಲಾಪವನ್ನು ಯಾರೂ ಲೆಕ್ಕಿಸರು. ನೀನೇನೆಂದೆ? ನಾನು ನಿಮ್ಮದಾದ ಭೂಮಿಯನ್ನು ಕದ್ದವನೋ? ನನಗೆ ಲಜ್ಜೆ ಇಲ್ಲವೋ? ನಿನ್ನ ಗದೆಯಿಂದ ಭಯಪೊಂದಿ ಓಡಿಬಂದೆನೇ? ಏನಾಗಲೀ ಈಗ ಇಲ್ಲಿ ನಿಂತಿರುವೆನು? ಯುದ್ಧವು ನೀನು ಬಿಡುವಂತಿಲ್ಲ! ನಿನ್ನಂತಹ ಬಲವಂತನಿಂದ ವೈರವನ್ನು ಮಾಡಿ ತಪ್ಪಿಸಿಕೊಂಡು ಹೋಗುವುದಾದರೂ ಎಲ್ಲಿ? ನನ್ನನ್ನು ಕೊಂದು ನಿಮ್ಮವರ ಕುಂದು ಕಳೆ. ಕಣ್ಣೀರನ್ನೊರೆಸು. ನೋಡು! ಪ್ರತಿಜ್ಞೆಯನ್ನು ಮಾಡಿ ಪಾಲಿಸದಿರುವವನು ನಿಂದನೀಯನೇ ಸರಿ!

ಎಂದು ಭಗವಂತನಿಂದ ಅಧಿಕ್ಷಿಪ್ತನಾಗಿ ತುಳಿಯಲ್ಪಟ್ಟ ನಾಗಸರ್ಪದಂತೆ ಕಿಡಿಕಿಡಿಯಾಗಿ ರೋಷದಿಂದ ನಿಟ್ಟುಸಿರನ್ನು ಬಿಡುತ್ತಾ ಮೈಯೆಲ್ಲವೂ ನಡುಗುತ್ತಿರಲು, ಆ ದೈತ್ಯನು ವೇಗವೇಗವಾಗಿ ಬಂದು ಗೋವಿಂದನನ್ನು ಗದೆಯಿಂದ ಹೊಡೆದನು. ವರಾಹನಾದರೂ ಯೋಗಾರೂಢನು. ಮೃತ್ಯುವಿನನ್ನಂತೆ ಆ ಗದಾಘಾತವು ತನ್ನ ಎದೆಗೆ ತಾಗದಂತೆ ತಪ್ಪಿಸಿಕೊಂಡು ತನ್ನ ಗದೆಯನ್ನು ತಿರುಗಿಸುತ್ತಾ, ಕೋಪದಿಂದ ತುಟಿಯನ್ನು ಕಡಿದು ರಕ್ಕಸನ ಮೇಲೆರಗಿದನು. ದಿತಿಜನ ದಕ್ಷಿಣ ಭುಜವನ್ನು ಗುರಿಯಿಟ್ಟು ಹೊಡೆದನು. ಗದಾಯುದ್ಧಕೋವಿದನಾದ ದೈತ್ಯನದನ್ನು ತನ್ನ ಗದೆಯಿಂದ ಹೊಡೆದು ತಪ್ಪಿಸಿಕೊಂಡನು. ಹಿರಣ್ಯಾಕ್ಷ–ಹರಿಗಳಿಂತು ಅನ್ಯೋನ್ಯ ಜಯೇಚ್ಛೆಯಿಂದ ಗದಾಯುದ್ಧವನ್ನು ಭಯಂಕರವಾಗಿ ಮಾಡಿದರು. ರಕ್ತವನ್ನು ಕಣ್ಣಲ್ಲಿ ಕಂಡು ವಿಜೃಂಭಿಸಿ, ವಿಚಿತ್ರ ಚಲನಗಳಿಂದ ಗದಾಯುದ್ಧ ಮಾಡುವ ಅವರು ಎರಡು ಗೂಳಿಗಳಂತೆ ಕಂಗೊಳಿಸಿ ಪರಾಕ್ರಮಿಸಿದರು. ಆಗ ಯಜ್ಞರಕ್ಷಾರ್ಥವಾಗಿ, ಇಚ್ಛೆಯಂತೆ ವರಾಹನಾದ ಮಹಾಪ್ರಭುವಿಗೂ ಆದಿದೈತ್ಯನ ಆವೇಶದಿ ಸಾಹಸಿಸುವ ಹಿರಣ್ಯಾಕ್ಷನಿಗೂ ನಡೆದ ಯುದ್ಧವನ್ನು ನೋಡಲು, ಬ್ರಹ್ಮನು ಮರೀಚ್ಯಾದಿಗಳಿಂದ ಕೂಡಿ ಬಂದು ಆಕಾಶದಿ ನಿಂದನು. ಪರಾಕ್ರಮಪಟುವಾಗಿ ಭಯವಿಲ್ಲದೆ, ಹಗೆಯಿಂದ ಪರ್ವತದಂತೆ ಮೇಲೆ ಬೀಳುವ ದೈತ್ಯರಾಜನನ್ನು ನೋಡಿ ನಾನಾ ಕಲ್ಪಜನನಾಯಕನಾದ ಬ್ರಹ್ಮನು ಆದಿಸೂಕರನಿಗೆ ಇಂತು ವಿಜ್ಞಾಪಿಸಿದನು–

ಸ್ವಾಮೀ! ನಿನ್ನ ಪಾದವನ್ನು ನಂಬಿದ ದೇವತೆಗಳಿಗೂ, ಬ್ರಾಹ್ಮಣರಿಗೂ, ಗೋಗಳಿಗೂ, ನಿರಪರಾಧಿ ಪ್ರಾಣಿಗಳಿಗೂ ಕೂಡ ಭಯಪ್ರದನಾದ ಈ ಪಾಪಿಯನ್ನು ಏಕೆ ಉಪೇಕ್ಷಿಸುವೆ? ನನ್ನಿಂದ ವರವನ್ನು ಪೊಂದಿ, ಎದುರಿಲ್ಲದೆ, ಲೋಕೋಪದ್ರವಕರನಾಗಿ ತಿರುಗುತ್ತಿರುವ ಈ ಮಾಯಾವಿಯನ್ನು ಕೊಂದುಬಿಡು. ದುರಹಂಕಾರಿಯು, ಸ್ವೇಚ್ಛಾಚಾರನು ಆದ ಈ ದುರ್ಮಾರ್ಗನಿಂದ ಆಟವೇತಕ್ಕೆ? ಹೆಡೆಯೆತ್ತಿದ ನಾಗರಹಾವನ್ನು ಹಿಡಿದಾಡುವರೇ? ಅಪರಾಹ್ನವಾಗುತ್ತಿದೆ. ಸಾಯಾಹ್ನವಾಗುವ ಮುಂಚೆ ನಿನ್ನ ಮಹಿಮೆಯಿಂದ ಇವನ ಉಕ್ಕನ್ನಡಗಿಸಿ ಸಂಹಾರ ಮಾಡು. ನೋಡೀ ಘೋರ ಸಂಧ್ಯಾ ಸಮಯವನ್ನು, ಸರ್ವಲೋಕ ಭಕ್ಷಣವನ್ನು ಮಾಡಲು ಬರುವಂತೆ

ಅಂಧಕಾರವು ಕರಗಳನ್ನು ಚಾಚಿ ಬರುತ್ತಿದೆ! ಪ್ರಭೋ! ಸುರರಿಗೆ ಜಯವನ್ನು ಕೊಡು! ಈಗ ಸದ್ಯ ಅಭಿಜಿದ್ವೇಳೆಯು. ಈ ಶುಭ ಮುಹೂರ್ತದಿ ಈ ದುರ್ಮಾರ್ಗನನ್ನು ಸಂಹರಿಸಿ, ನಿನ್ನವರಾದ ನಮಗೆ ಶುಭವನ್ನು ಮಾಡು! ಇವನು ನಿನ್ನಿಂದಲೇ ವಧ್ಯನೆಂದು ನಿನಗೆ ತಿಳಿಯದೇ? ಸರ್ವೇಶಾ! ನಾಶಮಾಡು ದೈತ್ಯನನ್ನು. ಪೋಷಿಸು ನಿನ್ನ ಭಕ್ತರನ್ನು ಎಂದು ಸ್ತುತಿಸಿದನು.

## ೨೦. ಹಿರಣ್ಯಾಕ್ಷ ವಧೆ

ಮೈತ್ರೇಯನು ಹೇಳಿದನು–

ಬ್ರಹ್ಮದೇವನ ಸತ್ಯ ನಿಷ್ಕಪಟ ವಚನವನ್ನು ಲಾಲಿಸಿ, ವರಾಹನು ಮಂದಹಾಸ ಸುಂದರ ಪ್ರೇಮಪೂರ್ಣ ಕಟಾಕ್ಷದಿಂದ ದೇವತೆಗಳನ್ನು ಸಂತಸಪಡಿಸಿ, ನಿರ್ಭಯನಾಗಿ ಪ್ರಚಂಡ ವೇಗದಿಂದ ಬರುವ ಶತ್ರುವಿಗೆ ಅಭಿಮುಖನಾದನು ಮತ್ತು ಗದೆಯನ್ನೆತ್ತಿ ಕಪೋಲದಲ್ಲಿ ಹೊಡೆದನು. ಆ ಗದೆಯು ಶ್ರೀದೇವನ ಕೈಯಿಂದ ಜಾರಿ ಉಲ್ಕಾಖಂಡದಂತೆ ಉರಿಯುತ್ತಾ ಕೆಳಗೆ ಬಿತ್ತು. ನಿರಾಯುಧನಾಗಿ ನಿಂತ ಹರಿಯನ್ನು ಕಂಡು ಯುದ್ಧರಂಗಧರ್ಮವನ್ನರಿತು ದೈತ್ಯನು ಪರಾಕ್ರಮಿಸದೆ ಸುಮ್ಮನೆ ನಿಂತನು. ಗದೆ ಜಾರಿಬೀಳಲು ದೇವತೆಗಳು ಹಾಹಾಕಾರವನ್ನೆಸಗಿ ಕ್ಷುಭಿತರಾದರು.

ಶ್ರೀಹರಿಯು ದಿತಿಜನನ್ನು ಮೆಚ್ಚಿ ಚಕ್ರವನ್ನು ಸ್ಮರಿಸಿದನು. ತತ್‌ಕ್ಷಣವೇ ಬಂದ ಚಕ್ರವು ವಿಜಯನಲ್ಲಿದ್ದ ದೈತ್ಯನ ಸಂಹಾರ ಮಾಡುವೆನೆಂದು ಪೇಳುವಂತೆ ಗಿರಗಿರನೆ ತಿರುಗುವುದನ್ನು ಕಂಡು ಖೇಚರರು ಶ್ರೀಹರಿಯ ಮಹಾಮಹಿಮೆಯನ್ನು ಪೊಗಳುತ್ತಾ, 'ಸ್ವಸ್ತಿ, ಜಯ, ಕೊಲ್ಲೀ ದೈತ್ಯನನ್ನು' ಎಂದು ನಾನಾ ರೀತಿಯಾಗಿ ನುಡಿದರು. ಆ ಶಬ್ದವನ್ನು ಕೇಳಿ ಚಕ್ರಪಾಣಿಯಾಗಿ ಮುಂದೆ ನಿಂತಿರುವ ಪುಂಡರೀಕಾಕ್ಷನನ್ನೂ ಕಂಡು ದೈತ್ಯನು ಕಣ್ಣುಗಳಿಂದ ಕಿಡಿಯನ್ನುದುರಿಸಿ, ತುಟಿಯನ್ನು ಕಚ್ಚಿ, ಕೆಚ್ಚಿನ ಭರದಿಂದ ಬುಸುಗುಟ್ಟುತ್ತಾ ಸುಡುವಂತೆ ನೋಡಿ, ಗದೆಯನ್ನೆತ್ತಿ 'ಸತ್ತೆ, ಆಯಿತು ನಿನ್ನ ಕೆಲಸ'ವೆನ್ನುತ್ತಾ ಹೊಡೆದನು. ವಾಯುವೇಗದಿಂದ ಬರುವ ಆ ಗದೆಯನ್ನು ಎಡಗಾಲಿನಿಂದ ಒದೆದು ಕೆಡವಿ ಶ್ರೀಹರಿಯು 'ತೊಗೋ ಗದೆಯನ್ನು ಬಾ ಸಂಗರಕ್ಕೆ! ಗೆಲ್ಲುವಿಯಂತೆ' ಎಂದನು. ಆ ಚುಚ್ಚಾಡಿದ ಮಾತನ್ನು ಗಮನಿಸದೆ ದೈತ್ಯನು ಗದೆಯನ್ನೆತ್ತಿ ಮತ್ತೆ ಸಿಂಹನಾದವನ್ನು ಮಾಡಿ ಹೊಡೆದನು. ಭಗವಂತನು ಕದಲದೆ ಆ ಬರುವ ಗದೆಯನ್ನು ಗರುಡನು ನಾಗಿನಿಯನ್ನು ಹಿಡಿದಂತೆ ಸುಲಭವಾಗ ಕೈಯಿಂದ ಪಿಡಿದು ಬಿಸಾಟಿದನು.

ನಿಜಪೌರುಷವು ಕೆಟ್ಟು, ದೈತ್ಯನಾಗ ಹರಿ ಕೊಟ್ಟ ಗದೆಯನ್ನು ಸ್ವೀಕರಿಸದೆ, ಸಿಟ್ಟಿನಿಂದ ತ್ರಿಶೂಲವನ್ನು, ವಿಪ್ರನ ಮೇಲೆ ಕಳಿಸುವ ಕೃತ್ಯೆಯನ್ನಂತೆ, ಶ್ರೀಹರಿಯಲ್ಲಿ ಪ್ರಯೋಗಿಸಿದನು. ತ್ರಿಶೂಲವು ಧಗಧಗನೆ ಉರಿಯುತ್ತಾ ಆಕಾಶದಲ್ಲಿ ಬರುವಾಗ ಚಕ್ರವು ಶ್ರೀಹರಿಯಿಂದ ಪ್ರೇರಿತವಾಗಿ ಬಂದು, ಇಂದ್ರಿ ವಜ್ರಾಯುಧವು ಗರುಡನ ಪಕ್ಕವನ್ನಂತೆ ಲೀಲೆಯಾಗಿ ತುಂಡರಿಸಿ ಶ್ರೀಹರಿಕರವನ್ನು ಸೇರಿತು.

ಹಿರಣ್ಯಾಕ್ಷನದನ್ನು ಕಂಡು ಕೆಂಡವಾಗಿ ಉರಿದೆದ್ದು ಗರ್ಜಿಸುತ್ತಾ ಕಠೋರವಾದ ಮುಷ್ಟಿಯಿಂದ ಲಕ್ಷ್ಮೀವಕ್ಷನ ಎದೆಯನ್ನು ಗುದ್ದಿದನು. ಆಗಲೂ ಶ್ರೀಹರಿಯು ಹೂಮಾಲೆಯಿಂದ ತಾಡಿತವಾದ ಆನೆಯಂತೆ ನಿಂತನು. ದೈತ್ಯನಂತರ್ಧಾನವನ್ನು ಹೊಂದಿ ಅಸುರ ಮಾಯೆಯನ್ನು

ಸೃಜಿಸಿದನು. ಅದನ್ನು ಕಂಡು ಪ್ರಜರು ಜಗತ್ಪ್ರಳಯವೇ ಬಂದೊದಗಿತೆಂದು ಭಯಕಂಪಿತರಾದರು.

ಬಿರುಗಾಳಿ ಬೀಸಿತು. ಧೂಳಿ ಕಣ್ಣುಗಳಲ್ಲಡರಿತು. ದಿಕ್ಕುಗಳಿಂದ ದೊಡ್ಡ ಬಂಡೆಗಳು ಉದುರಿದವು. ಮೇಘಾಡಂಬರವು ಹೆಚ್ಚಿ ಕತ್ತಲು ಕವಿಯಿತು. ಮಿಂಚು ಗುಡುಗುಗಳು ಭಯಂಕರವಾಗಿ ತೋರಿದವು. ಆಕಾಶದಿಂದ ಕೀವು, ರಕ್ತ, ಕೇಶ, ವಿಣ್ಮೂತ್ರಗಳ ಮಳೆಗರೆಯಿತು. ಬೆಟ್ಟಗಳಿಂದ ನಾನಾ ವಿಧ ಆಯುಧಗಳು ಹಾರಿ ಬಂದುವು. ರಾಕ್ಷಸಿಯರು ನಗ್ನರಾಗಿ ಶೂಲಗಳ ಪಿಡಿದು ನೃತ್ಯ ಮಾಡಿದರು. ಚತುರಂಗಬಲಾಹಿತವಾಗಿ ಬಂದ ಯಕ್ಷರಾಕ್ಷಸರ ಪರುಷ ಹೇಯ ವಚನಗಳು ಕರ್ಣಕಠೋರವಾಯಿತು. ಇಂತು ತೋರಿದ ಅಸುರ ಮಾಯೆಯನ್ನು ನಾಶಮಾಡಲು ಶ್ರೀಶನು ಸುದರ್ಶನವನ್ನು ಪ್ರಯೋಗಿಸಿದನು. ಅಮೃತ, ಕ್ಷೇಮ, ಅಭಯವೆಂಬ ಮೂರು ಸ್ಥಾನಗಳಲ್ಲಿ ನೆಲಸಿದ ಶ್ರೀಹರಿಯು ಹಿರಣ್ಯಾಕ್ಷನನ್ನು ಸಂಹರಿಸಲು ನಿಶ್ಚಯಿಸಿದಾಗ ದಿತಿಯ ಸ್ತನಗಳಿಂದ ರಕ್ತವು ಹರಿಯಿತು. ಅವಳ ಗುಂಡಿಗೆ ನಡುಗಿತು. ಕಶ್ಯಪರ ವಾಕ್ಯವನ್ನು ನೆನೆದು ಹರೀಚ್ಛೆಗೆ ನಮಿಸಿದಳು.

ಇಂತು ತನ್ನ ಮಾಯೆ ಕೆಡಲು ದೈತ್ಯನು ಓಡಿಬಂದು ಕೈಗಳಲ್ಲಿ ಹಿಚುಕಿ ಕೊಲ್ಲುವೆನೆಂದು ಬಗೆದು ಹರಿಯನ್ನು ಬಾಹುಗಳಿಂದ ಹಿಡಿದನು. ಆದರೆ ಕೇಶವನು ಸಿಗದೇ ಹೊರಗೇ ಇರುವುದನ್ನು ಕಂಡು, ಪಿಡಿಗಳಿಂದ ಗುದ್ದಲಾರಂಭಿಸಿದನು. ಆಗ ಇಂದ್ರನು ವೃತ್ರಾಸುರ ನನ್ನಂತೆ, ವರಾಹನು ಸುರಾರಿಯನ್ನು ಕರ್ಣಮೂಲಭಾಗದಿ ಗುದ್ದಿ ಕೆಡಹಿ ನಿರಾಯಾಸದಿಂದ ಕೊಂದನು. ದೈತ್ಯನು ಗರಗರ ತಿರುಗಿ ಕಣ್ಣುಗುಡ್ಡೆಗಳು ಹೊರಬರಲು ಕೈಕಾಲು ಜಾಡಿಸುತ್ತಾ, ಬಿರುಗಾಳಿಗೆ ಬಿದ್ದ ಗಿಡದಂತೆ ನೆಲದಲ್ಲಿ ಬಿದ್ದು ಸತ್ತನು.

ಮಹಾತೇಜಸ್ವಿಯು, ಕರಾಲದಂಷ್ಟ್ರನು, ತುಟ್ಟಿ ಕಚ್ಚಿರುವನು ಆಗಿ ಬಿದ್ದಿರುವ ದೈತ್ಯನನ್ನು ಬ್ರಹ್ಮಾದಿಗಳು ವೀಕ್ಷಿಸಿ ಪ್ರಶಂಸಿಸಿದರು. 'ಅಹೋ! ಎಂತಹ ದುರ್ಲಭವಾದ ಮರಣವಿವನಿಗೆ ದೊರಕಿತು! ಅಮಂಗಲ ಲಿಂಗಶರೀರದಿಂದ ಮೋಕ್ಷವನ್ನು ಬೇಡಿ ಸಮಾಧಿಯನ್ನು ಕೂಡಿ, ಹರಿಧ್ಯಾನವನ್ನು ಮಾಡಿದ ಯೋಗಿಜನರಿಗೂ, ಇವನಂತೆ ಹರಿ ಮುಖವನ್ನು ನೋಡುತ್ತಾ, ದೇಹತ್ಯಾಗವನ್ನು ಮಾಡುವ ಸುಯೋಗ ಸಿಗುವುದೇ? ಹರಿಕರತಾಡನದಿಂದ ಮೃತನಾದ ಈ ವಿಜಯನು ಮುನಿಶಾಪದಿ ಅಸುರಾವೇಶದಿಂದ ಕೂಡಿ ಹರಿಯಿಂದ ಕಾದಾಡಿ ಮಡಿದನು. ಕೆಲ ಜನ್ಮಗಳಲ್ಲಿ ಯೋಗ್ಯ ಸಾಧನೆಯನ್ನು ಮಾಡಿ ವೈಕುಂಠವನ್ನೇ ಸೇರುವನು. ಶ್ರೀಹರೇ! ಯಜ್ಞರಕ್ಷಕ! ಜ್ಞಾನಾನಂದಮಯ ವರಾಹಾವತಾರದಿಂದ ರಕ್ಷಿಸಿದೆ ನಮ್ಮನ್ನು! ನಮ್ಮ ಸುದೈವದಿಂದ ಲೋಕಭಯಂಕರನಾದ ದೈತ್ಯನು ಮಡಿದನು. ನಿನ್ನ ಪಾದಭಕ್ತಿಯಿಂದ ಆನಂದಭರಿತರಾಗಿರುವೆವು!' ಎಂದು ಸ್ತುತಿಸಿ ಹರಿಗೆ ನಮಿಸಿದರು.

ಇಂತು ಆದಿಸೂಕರನು ಮಹಾವೀರನಾದ ಹಿರಣ್ಯಾಕ್ಷನನ್ನು ನಿಸ್ಸಹಾಯಕನು ನಿರಾಯುಧನಾಗಿ ಸಂಹರಿಸಿ ಕಮಲಗರ್ಭಾದಿ ವೃಂದಾರಕರ ನುತಿಯನ್ನು ಕೇಳಿ ಅನುಗ್ರಹಿಸಿ, ನಿತ್ಯೋತ್ಸವವಾದ ತನ್ನ ಮಂಗಲ ಮಂದಿರವನ್ನು ಹೊಂದಿದನು.

ಮಹಾವೀರನಾದ ಹಿರಣ್ಯಾಕ್ಷನನ್ನೊಂದು ಗೊಂಬೆಯನ್ನಂತೆ ಕೊಂದ ಶ್ರೀ ಯಜ್ಞವರಾಹ ಮೂರ್ತಿಯ ಉದಾರಚರಿತೆಯನ್ನು ವಿದುರಾ! ನಾನು ನಿನಗೆ ಯಥಾಮತಿ ನಿರೂಪಿಸಿರುವೆನು – ಎಂದು ಮೈತ್ರೇಯನು ಹೇಳಿದನು.

ಶುಕನು ನುಡಿದನು – ರಾಜನ್!

ಮೈತ್ರೇಯನು ಹೇಳಿದ ಭಗವತ್ಕಥೆಯನ್ನಾಲಿಸಿ, ಮಹಾಭಾಗವತನಾದ ವಿದುರನು ...ಉದತುತಂದಿಲನಾದನು. ಉದಾರ ಯಶಸ್ಕರಾದ ಪುಣ್ಯವಂತರ ಚರಿತೆಯನ್ನು ಕೇಳಲಾನಂದ ...ವುದೆಂದ ಮೇಲೆ ಶ್ರೀವತ್ಸವಕ್ಷಸ್ಕನಾದ ಸ್ವಾಮಿಯ ಕಥೆಯನ್ನು ಕೇಳಲು ಆನಂದವು ಸಿಗುವುದೆಂದು ಹೇಳಬೇಕೇ!

...ಕರಿ ಪಿಡಿದು ನೀರಿನಲ್ಲಿ ಸೆಳೆವಾಗ ಪತ್ನಿಯರು ಹೋ ಎಂದು ಅಳುತ್ತಿರಲು ಯಾರನ್ನೂ ರಕ್ಷಕರನ್ನು ಕಾಣದೆ ತನ್ನ ಚರಣಾರವಿಂದವನ್ನೇ ಮೊರೆಹೊಕ್ಕ ಕರಿರಾಜನ ಕಷ್ಟವನ್ನು ಕಳೆದ, ಕರುಣಾಸಮುದ್ರನಲ್ಲವೇ ನಮ್ಮ ಹರಿ! ನೀನೇ ಗತಿ, ಎಂದು ನಂಬಿ ನಿಷ್ಕಪಟವಾಗಿ ಭಜಿಸುವ ಸುಜನರಿಗೆ ಒಲಿದು ಬರುವ ಸ್ವಾಮಿಯನ್ನು ಯಾರು ಸೇವಿಸದಿರುವರು? ಅಸಾಧುಗಳೆಷ್ಟು ಭಜಿಸಿದರೂ ಹರಿಯು ಅವರಿಗೆ ಸಿಗನು.

ಭೂಮ್ಯುದ್ಧರಣಕಾರ್ಯ ನಿರ್ವಹಣೆಗೆಂದು ಆದಿಸೂಕರನಾದ ಹರಿಯ ಹಿರಣ್ಯಾಕ್ಷ ವಧರೂಪ ಪವಿತ್ರ ಕಥೆಯನ್ನು ಕೇಳುವವರು, ಪೇಳುವವರು ಚೆನ್ನಾಗಿ ಅನುಮೋದಿಸುವವರು ಇವರ ಭಕ್ತರು ಬ್ರಹ್ಮಹತ್ಯಾದಿ ಪಾಪಗಳಿಂದಲೂ ಮುಕ್ತರಾಗಿ ಸಂಸಾರ ಸಾಗರದ ಪಾರವನ್ನು ಕಂಡು, ಹರಿಪ್ರಸಾದದಿಂದ ಮುಕ್ತರಾಗುವರು. ಈ ಕಥೆಯು ಪುಣ್ಯಪ್ರದವು, ಪವಿತ್ರವು, ಧನಯಶಃ ಪ್ರದವು. ಸಮಸ್ತ ದೀರ್ಘಾಯುರಾದ್ಯಭೀಷ್ಟದಾನ ಸಮರ್ಥವು, ಪ್ರಾಣೇಂದ್ರಿಯ ಜಯಸಾಧಕವು. ಶ್ರವಣಾಭ್ಯಾಸದಿಂದ ಕ್ರಮವಾಗಿ ಮನನ ಧ್ಯಾನಶಕ್ತಿಯನ್ನು ಬೆಳೆಸಿಕೊಂಡು ಜ್ಞಾನಸಾಧನ ಸಾಮಗ್ರಿಯನ್ನು ಸಂಪೂರ್ಣವಾಗಿರಿಸಿದವರನ್ನು ಶ್ರೀನಾರಾಯಣನು ತನ್ನ ಲೋಕವನ್ನು ಸೇರಿಸಿ ಮುಕ್ತರನ್ನು ಮಾಡುವನು.

## ೨೧. ಸೃಷ್ಟಿ ಪ್ರಪಂಚನವು

ರಾಜನು ಕೇಳಿಕೊಂಡನು–

ಬ್ರಹ್ಮನ್! ಶ್ರೀ ವರಾಹನಿಂದ ಭೂಮಿಯು ಸ್ಥಿರವಾದ ಮೇಲೆ ಸ್ವಾಯಂಭುವ ಮನುವು ಯಾವ ಸೃಷ್ಟಿಸಾಧಕ ಮಾರ್ಗಗಳನ್ನನುಸರಿಸಿ ಆಮೇಲಿನ ಸೃಷ್ಟಿಯನ್ನೆಂತು ಮಾಡಿದನು? ಸಂಸಾರಗಿರಿಚೂರ್ಣನದಕ್ಷನಾದ ವಿದುರನು ಮಹಾಭಾಗವತನು. ಶ್ರೀಹರಿ ಸರ್ವೋತ್ತಮ ಜ್ಞಾನಿಶ್ರೇಷ್ಠನು. ಶ್ರೀಹರಿಗೆ ದ್ರೋಹವನ್ನು ಬಗೆದನೆಂದು ಅಣ್ಣನನ್ನು ಅವನ ಮಕ್ಕಳನ್ನು ಕೂಡ ಬಿಟ್ಟನು. ಆ ಮಹಾನುಭಾವನು ವ್ಯಾಸಪುತ್ರನಲ್ಲವೇ? ವಾಸಿಷ್ಠ ಯಾದವ ಕೃಷ್ಣರನ್ನು ಸರ್ವಪ್ರಕಾರವಾಗಿ ಆಶ್ರಯಿಸಿದನು ಮತ್ತು ಹರಿಭಕ್ತರ ಸ್ನೇಹಿತನು. ತೀರ್ಥಯಾತ್ರೆಯನ್ನು ಮಾಡಿ ನಿಷ್ಪಾಪನಾದ ಆ ವಿದುರನು ಪವಿತ್ರಹರಿದ್ವಾರದಲ್ಲಿ ತತ್ತ್ವಜ್ಞಾನಿಯಾದ ಮೈತ್ರೇಯನನ್ನು ...ನು ಕೇಳಿದನು? ಅವರೀರ್ವರ ಸಂವಾದವು ಪವಿತ್ರವಾದ ಗಂಗೆಯಂತೆ ಹರಿಪಾದಾಶ್ರಯವಾಗಿ ...ಪಪರಿಹಾರ ಮಾಡುವದಲ್ಲವೇ? ಆದ್ದರಿಂದ ಕೀರ್ತಿನೀಯ ಚರಿತನಾದ ಶ್ರೀಹರಿಮಹಿಮೆ ...ಯನ್ನು ನಮಗೆ ಪೇಳು. ನಿನಗೆ ಮಂಗಲನಾದ ಹರಿಯು ಪ್ರಸನ್ನನಾಗಲಿ! ಹರಿಲೀಲಾಮೃತಪಾನ ...ಮಾಡುವ ರಸಜ್ಞರಿಗೆ ಅದು ಸಾಕೆನಿಸುವುದೇ?

ಸೂತನು ಹೇಳಿದನು–

ಶೌನಕಾ! ಇಂತು ಪರೀಕ್ಷಿತನ ಪ್ರಶ್ನೆಯನ್ನು ಕೇಳಿ ಪೂಜ್ಯನಾದ ಬಾದರಾಯಣಿಯು ಸರ್ವೇಂದ್ರಿಯಪ್ರೇರಕನಾದ ಹರಿಯನ್ನು ಸ್ಮರಿಸಿ ಕೇಳು ಎಂದು ಪೇಳಲಾರಂಭಿಸಿದನು. ಲೀಲೆಯಿಂದ ದೈತ್ಯನಂ ಕೊಂದು ರಸಾತಲದಿಂದ ಭೂಮ್ಯುದ್ಧಾರ ಮಾಡಿದ ವರಾಹಶುಭ ಚರಿತ್ರೆಯನ್ನು ಕೇಳಿ ಆನಂದಭರಿತನಾಗಿ ವಿದುರನು ಪ್ರಶ್ನಿಸಿದನು–

ಮೈತ್ರೇಯನೇ! ಮನುರಾಜನು ಶ್ರೀಹರಿಯ ಮಹಾಭಕ್ತನು. ಜ್ಞಾನಿಯು, ಅವನು ಸ್ವರ್ಗದಲ್ಲಿ ಮುಂದೆ ನಡೆಸಿದ ಕಾರ್ಯಗಳಾವವು? ಮರೀಚ್ಯಾದಿ ಪ್ರಜೇಶರು ಮನುರಾಜರು ಮಾಡಿದ ಸೃಷ್ಟಿವಿವರವೇನು? ಕರ್ಮಗಳನ್ನನುಸರಿಸಿ ವಿವಿಧ ಪ್ರಜೆಗಳನ್ನು ಬ್ರಹ್ಮನ ಆಜ್ಞೆಯಂತೆ ಸೃಜಿಸುವಾಗ ಸ್ವತಂತ್ರವಾಗಿ ಸೃಜಿಸಿದರೋ ಅಥವಾ ಭಾರ್ಯಾದ್ವಿತೀಯರಾಗಿ ಮಕ್ಕಳ ಪಡೆದರೋ? ಅಥವಾ ಎಲ್ಲರೂ ಕೂಡಿ ಪ್ರಧಾನವನ್ನಂತೆ ತೃಜಿಸಿದರೋ ಪೇಳು.

ಮೈತ್ರೇಯನು ಪೇಳಿದನು–

ಅಪ್ರಮೇಯನು ಮಹಿಮನು, ಶಶ್ವದೇಕ ಪ್ರಕಾರನು, ಸರ್ವೋತ್ತಮನು, ವಿವಿಧ ಜೀವರ ಅದೃಷ್ಟೋದ್ಬೋಧಕನು, ಕರ್ಮಫಲಪ್ರದನು ಆದ ಸ್ವಾಮಿಯು ತ್ರಿಗುಣಗಳಿಂದ ಮಹತ್ತತ್ತ್ವವನ್ನು ಸೃಜಿಸಿದನೆಂದು ಹೇಳಿದೆನಷ್ಟೆ? ರಜಃಪ್ರಧಾನವಾದ ಮಹತ್ತಿನಿಂದ ತ್ರಿವಿಧಾಹಂಕಾರ ತತ್ತ್ವವು ಪುಟ್ಟಿತು. ಅದರಿಂದ ಗರುಡ ಶೇಷ ರುದ್ರ ಇಂದ್ರ ಕಾಮರು ಸಭಾರ್ಯರಾಗಿ ಜನಿಸಿದರು. ವೈಕಾರಿಕ ಮನದಿಂದ ಚಂದ್ರಾನಿರುದ್ಧರು, ಅನ್ಯ ದೇವತೆಗಳು ಪುಟ್ಟಿದರು. ತೈಜಸದಿಂದ ಇಂದ್ರಿಯಗಳು ತಾಮಸದಿಂದ ಆಕಾಶಾದಿ ಭೂತಗಳು ಜನಿಸಿದವು. ಆ ಇಪ್ಪತ್ತುಮೂರು ತತ್ತ್ವದೇವರು ಹರಿಪ್ರೇರಣೆಯಿಂದ ಕಲೆತು ಈ ಬ್ರಹ್ಮಾಂಡವನ್ನು ನಿರ್ಮಿಸಿದರು. ಆ ಹೇಮಮಯಾಂಡವು ಒಳಗೆ ಶ್ರೀಹರಿಯ ಪ್ರವೇಶವಿಲ್ಲದ್ದರಿಂದ ಅವ್ಯಕ್ತ ಹರಿರೂಪವಾಗಿ ಪ್ರಳಯೋದಕದಕಲ್ಲಿ ಸಾವಿರ ವರ್ಷ ನೆನೆಯುತ್ತಾ ಇತ್ತು. ಆಗ ಅದರಲ್ಲಿ ಭಗವಂತನು ಪುರುಷರೂಪದಿಂದ ಪ್ರವೇಶಿಸಿದನು. ಅವನ ನಾಭಿಸರದಿಂದ ಸೂರ್ಯಸಹಸ್ರ ಪ್ರಭವಾದ ಪದ್ಮವು ಜನಿಸಿ ಅದರಲ್ಲಿ ಬ್ರಹ್ಮನು ಪುಟ್ಟಿದನು. ಶ್ರೀಮಯ ಪರ್ಯಂಕದಲ್ಲಿ ಕಾಲಾಖ್ಯ ಬ್ರಹ್ಮನಿಂದ ಮಲಗಿದ ಗರ್ಭೋದಕಶಾಯಿಯ ನಾಭಿಜಾತವಾದ ಬ್ರಹ್ಮಾಂಡವು ಸಕಲಜೀವನಿಕಾಯ ನಿಲಯವೆನಿಸಿತು. ಆಗ ಬ್ರಹ್ಮನು ಶ್ರೀಹರಿಯು ಕೊಟ್ಟ ಸಾಮರ್ಥ್ಯದಿಂದ ಹಿಂದಿನ ಕಲ್ಪಗಳಲ್ಲಂತೆಯೇ ಎಲ್ಲ ಲೋಕಗಳನ್ನು ನಿರ್ಮಿಸಿದನು.

ಬ್ರಹ್ಮನು ಸ್ವೀಕರಿಸಿದ ವಿವಿಧ ದೇಹಗಳು ಅವುಗಳಲ್ಲಿ ಜರುಗಿದ ಸೃಷ್ಟಿ, ವಿಸ್ತಾರ, ತತ್ತದ್ದೇಹತ್ಯಾಗ ಪ್ರಕಾರವನ್ನು ಪೇಳುವೆನು. ವಿದುರಾ! ಈ ದೇಹಗಳು ಬ್ರಹ್ಮನ ನಿಜದೇಹಗಳಲ್ಲ. ಬಾಹ್ಯದೇಹಗಳೆಂದು ತಿಳಿ.

ರಾತ್ರಿ ಎಂಬ ಶರೀರದಿಂದ ಪಂಚ ವಿಧವಾದ ತಾಮಿಸ್ರ, ಅಂಧತಾಮಿಸ್ರ, ತಮ, ಮೋಹ, ಮಹಾಮೋಹವೆಂಬ ನಾಮವುಳ್ಳ ಅವಿದ್ಯೆಯನ್ನು ನಿರ್ಮಿಸಿ ಅದನ್ನು ಅಂಧಕಾರ ಅಜ್ಞಾನಮಯವೆಂದು ನೋಡಿ ಪರಿತ್ಯಜಿಸಿದನು. ಯಕ್ಷರಕ್ಷಸರು ಅದನ್ನು ಸ್ವೀಕರಿಸಿದರು. ಅವರ ಶರೀರದಲ್ಲಿ ಹಸಿವು ನೀರಡಿಕೆಗಳು ಪುಟ್ಟಿದವು. ಹಸಿವೆಯನ್ನು ತಡೆಯಲಾರದೆ ಆ ಯಕ್ಷರಕ್ಷರು ಆಗ ಬ್ರಹ್ಮನನ್ನೇ ತಿನ್ನಲು ಧಾವಿಸಿ ಬಂದರು. 'ಬಿಡಬೇಡಿ! ತಿಂದುಬಿಡಿ ಈ ಬ್ರಹ್ಮನನ್ನು!' ಎಂದು ಕೂಗುತ್ತಾ ಬರುವವರನ್ನು ಕಂಡು 'ಎಲವೋ ತಿನ್ನಬೇಡಿ! ನನ್ನನ್ನು ರಕ್ಷಿಸಿ' ಎಂದು ಹೇಳಿ ಬ್ರಹ್ಮನು

'ನೀವು ನನ್ನ ಮಕ್ಕಳು, ಪಿತೃಭಕ್ಷಣ ಮಾಡುವಿರಾ? ಏನು ನಿಮ್ಮ ಅಜ್ಞಾನ? ಮಾ ರಕ್ಷತ! ಜಕ್ಷತ! ಎನ್ನುತ್ತಾ ಬಂದಿದ್ದಿರಾದ್ದರಿಂದ ನಿಮಗೆ ಯಕ್ಷರಕ್ಷರೆಂದು ಹೆಸರರಾಗಲಿ' ಎಂದು ಕಳುಹಿಸಿದನು.

ಅನಂತರ ಬ್ರಹ್ಮನು ಪ್ರಕಾಶನ ಪರವಾದ ವಿವಿಧ ವಿದ್ಯಾದೇಹದಿಂದ ಸರ್ವಜೀವ ಪ್ರಧಾನರಾದ ದೇವತೆಗಳನ್ನು ಸೃಜಿಸಿದನು. ಅವರು ಪ್ರಭಾದೇಹವನ್ನು ಸ್ವೀಕರಿಸಿ ಕ್ರೀಡಾದಿಗುಣ ವಿಶಿಷ್ಟರಾದರು. ಅದೇ ಹಗಲು ಎಂದು ಖ್ಯಾತವಾಯಿತು.

ಬ್ರಹ್ಮನು ಜಘನ ಎಂಬ ದೇಹದಿಂದ ಅಸುರರನ್ನು ಕೀರ್ತಿಲೋಲುಪರನ್ನಾಗಿ ಸೃಜಿಸಿದನು. ಅವರು ಇಂದ್ರಿಯಲೌಲ್ಯದಿಂದ ಬ್ರಹ್ಮನನ್ನು ಮುಟ್ಟಿ ಮೈಥುನ ಕ್ರಿಯೆಯನ್ನು ನಡೆಸಲು ಓಡಿ ಬಂದರು. ಲಜ್ಜಾರಹಿತರಾದ ಅವರನ್ನು ನೋಡಿ ನಕ್ಕು ಕ್ರೋಧವನ್ನು ಭಯವನ್ನು ಪ್ರದರ್ಶನ ಮಾಡುತ್ತಾ ಬ್ರಹ್ಮನು ಶರಣಾಗತ ದುಃಖತ್ರಾಣನಾದ ನಾರಾಯಣನನ್ನು ಸೇರಿದನು. ಯೋಗ್ಯತಾಪ್ರಕಾರವಾಗಿ ತನ್ನನ್ನು ತೋರಗೊಡಿಸಿ ಅನುಗ್ರಹಿಸುವ ಪ್ರಭುವನ್ನು 'ಪರಮಾತ್ಮಾ! ನಿನ್ನಿಂದ ಪ್ರೇರಿತನಾಗಿ ಪ್ರಜಾಸೃಷ್ಟಿ ಮಾಡುವಾಗ ಈ ಅಸುರರು ಪುಟ್ಟಿ ನನ್ನನ್ನೇ ಕೂಡಲು ಬರುತ್ತಿರುವರು. ಈ ಪಾಪಿಗಳನ್ನು ದೂರಮಾಡಿ ಪೊರೆ. ಸರ್ವಸುಜನಕ್ಲೇಶನಾಶಕನು, ಭವಚ್ಚರಣಾರವಿಂದದಿಂದ ದೂರರಾದ ಕುಜನರಿಗೆ ಕ್ಲೇಶದಾಯಕನು ನೀನೇ ಆಗಿರುವಿ. ರಕ್ಷಿಸು' ಎಂದು ಶರಣಾಗತನಾದನು. ಆ ಬ್ರಹ್ಮನ ಕಾರ್ಪಣ್ಯವನ್ನು ಕಂಡು ಅಶೇಷ ವಿಶೇಷ ಜ್ಞಾನ ಸ್ವರೂಪನಾದ ಹರಿಯು 'ಬಿಟ್ಟುಬಿಡು ಆ ಶರೀರವನ್ನು' ಎನ್ನಲು, ಹರಿಪ್ರೀತಿಯೇ ಪರಮೋದ್ದೇಶ ವಾಗಿ ತಿಳಿದು ಬ್ರಹ್ಮನು ಆ ಜಘನಾಖ್ಯ ಬಾಹ್ಯಶರೀರವನ್ನು ತ್ಯಜಿಸಿಬಿಟ್ಟನು.

ಆ ತನುವು ಸಂಧ್ಯಾ ಎಂಬ ಸ್ತ್ರೀರೂಪವಾದದ್ದನ್ನು ಕಂಡು ಅಸುರರು ಮೋಹಿತರಾದರು. ಮದತುಂಬಿದ ಕಣ್ಣುಗಳಿಂದ ನೋಡುತ್ತಾ, ಕಾಲಿನ ಪೈಜಣಿಯ ನಾದವನ್ನು ಮಾಡುತ್ತಾ, ಪಟ್ಟೆಪೀತಾಂಬರವನ್ನುಟ್ಟು, ಒಡ್ಯಾಣವನ್ನು ತೊಟ್ಟು ಬರುವ ಸುಂದರಿಯನ್ನು ಅಸುರರು ನೋಡಿ ದರು. ನಾಸಿಕೆಯೋ ಕೇತಕೀ ಕುಸುಮವೋ; ದಂತವೋ ದಾಡಿಮೀ ಬೀಜಗಳೋ; ಮಂದಹಾಸವು ಚಂದ್ರಿಕೆಯೋ ಎಂಬ ಭ್ರಮೆಯನ್ನು ಹೊಂದಿ ಮೋಹಕಟಾಕ್ಷವನ್ನು ಬೀರುವ ಅಲಕ ನೀಲಮಣಿ ಶೋಭಿತಳಾಗಿ ಬರುವ ತರುಣಿಯ ಸಮೀಪದಿ ಸಾರಿ 'ಏನು ರೂಪ! ಏನು ಕಾಂತಿ! ಏನು ಧೈರ್ಯ! ಎಂತಹ ನೂತನ ತಾರುಣ್ಯ! ನಾವಿಷ್ಟು ಕಾಮಾತುರರಾಗಿ ಹಿಂಬಾಲಿಸುತ್ತಿರಲು ನೋಡದೆ ಪೋಗುತ್ತಿರುವಳಲ್ಲ!' ಎಂದುಚ್ಚರಿಸುತ್ತಾ ಬಂದು ಆ ಕುಬುದ್ಧಿಗಳು ನಂಬುಗೆಯಿಂದ ಆ ಸಂಧ್ಯಾಂಗನೆಯನ್ನು ಪ್ರಶ್ನಿಸಿದರು. 'ಯಾರು ನೀನು? ಯಾರವಳೇ ಸುಂದರಿ! ಏನು ಕೆಲಸವಿಲ್ಲಿ? ನಿನ್ನ ಸಂಗಭಾಗ್ಯರಹಿತರಾದ ನಾವು ವಿರೂಪರರಾಗಿರುವೆವು. ಆದ್ದರಿಂದ ರೂಪದ್ರವ್ಯದಿಂದ ಕೊಳ್ಳಲಾರದೆ ನೊಂದಿರುವೆವು. ಇರಲಿ ಯಾರಾದರೇನು ನಮಗೆ? ನಿನ್ನನ್ನು ನೋಡಿ ಅದೃಷ್ಟವಂತ ರಾಗಿರುವೆವು. ಚೆಂಡಾಡುವ ನಿನ್ನ ಸೊಬಗಿನಿಂದ ನಮ್ಮ ಮನಸ್ಸು ಚೆಂಡಾಗಿ ಕುಣಿಯುತ್ತಿದೆ. ಎಲೇ! ಮೇಲಕ್ಕೆ ಕೆಳಕ್ಕೆ ಬೀಳುವ ಕಂದುಕವನ್ನು ನೀನು ಕೈಯಿಂದ ಆಡುತ್ತಿರಲು ಜಾರಿ ಪಾದಪದ್ಮವನ್ನು ಮುಟ್ಟುತ್ತಿದೆ. ಸ್ತನಭಾರದಿಂದ ಭೀತವಾಗಿ ನಡುವು ನಡುಗುತ್ತದೆ. ಬಿಳಿಗಣ್ಣು ಶ್ರಾಂತವಾಗಿ ಅರ ಮುಚ್ಚಿದೆ. ವೇಣೀಭಾರವು ಬಿಚ್ಚಿ ಹಾರಾಡುತ್ತಿದೆ. ಏನು ಚೆಂದವಾಗಿರುವೆ! ಭಲಾ!' ಎನ್ನುತ್ತಾ ಮದಕಾರಿಣಿ ಯಾದ ಆ ಸಂಧ್ಯೆಯಿಂದ ಮೋಹಿತರಾಗಿ ಸಂಧ್ಯಾಶರೀರವನ್ನೇ ಸ್ವೀಕರಿಸಿದರು.

ಅನಂತರ ಬ್ರಹ್ಮನು ಭಾವಗಂಭೀರವಾಗಿ ನಕ್ಕು ಕಾಂತಿ ಎಂಬ ತನುವಿನಿಂದ ಮೂಸಿ ನೋಡುವುದರಿಂದಲೇ ಗಂಧರ್ವಾಪ್ಸರೆಯರನ್ನು ಸೃಜಿಸಿದನು. ಆ ಕಾಂತಿಮಚ್ಛರೀರವೇ ಜ್ಯೋತ್ಸ್ನೆಯಾಗಲು ವಿಶ್ವಾವಸು ಮೊದಲಾದ ಗಂಧರ್ವರು ಅದನ್ನು ಸ್ವೀಕರಿಸಿದರು. ಬ್ರಹ್ಮನು ತನ್ನ ಸೋಮಾರಿತನದಿಂದ ಭೂತ ಪಿಶಾಚಗಳನ್ನು ಸೃಜಿಸಿ ದಿಗಂಬರರು ಮುಕ್ತಕೇಶರಾದ ಅವರನ್ನು ನೋಡಿ ಕಣ್ಣುಮುಚ್ಚಿಕೊಂಡನು. ಆಗ ಜೃಂಭಣವೆಂಬ ಶರೀರವನ್ನು ಅವರು ತೆಗೆದುಕೊಂಡರು. ಇದರ ವ್ಯಾಪಾರಗಳೇ ನಿದ್ರೆ, ಇಂದ್ರಿಯ ವೈಕ್ಲವ್ಯಗಳು. ಆ ಶರೀರದಿಂದ ಪಿಶಾಚಾದಿಗಳು ಇತರರಲ್ಲಿ ಆವಡಿಸುವರು. ಆಗ ಉನ್ಮಾದಪ್ರದರಾಗುವರರು. ಸಾರಾನ್ನವನ್ನು ಬೇಡಿ ಪರೋಕ್ಷವೆಂಬ ದೇಹದಿಂದ ಸಾಧ್ಯರನ್ನು ಪಿತೃಗಳನ್ನೂ ಸೃಜಿಸಿ ಬ್ರಹ್ಮನು ಆ ಅನ್ನನಾಮಕ ಶರೀರವನ್ನವರಿಗೆ ಕೊಟ್ಟನು. ಅದಕ್ಕಾಗಿಯೇ ಜ್ಞಾನಿಜನರು ಬಲಿಹರಣಾದಿಗಳಿಂದ ಸಾಧ್ಯರನ್ನು, ಶ್ರಾದ್ಧಾದಿಗಳಿಂದ ಪಿತೃಗಳನ್ನು, ಸಾರಾನ್ನವನ್ನು ಪರೋಕ್ಷವಾಗಿ ಕೊಟ್ಟು ಸಂತೈಸುವರು. ಸಿದ್ಧ ವಿದ್ಯಾಧರರನ್ನು ತಿರೋಧಾನ ದೇಹದಿಂದ ಸೃಜಿಸಿ ಅವರಿಗೆ ಬ್ರಹ್ಮನು ಆಶ್ಚರ್ಯಕರವಾದ ಅಂತರ್ಧಾನ ವಿದ್ಯೆಯನ್ನು ಕೊಟ್ಟನು.

ಬ್ರಹ್ಮನು ಗಂಧಪುಷ್ಪಾದಿಗಳಿಂದ ತನ್ನನ್ನು ತಾನಲಂಕರಿಸಿಕೊಂಡು ದರ್ಪಣದಲ್ಲಿ ಮೂಡಿದ ಪ್ರತಿಬಿಂಬವನ್ನು ನೋಡುತ್ತಾ, ಕಿನ್ನರ, ಕಿಂಪುರುಷ ಗಣವನ್ನು ಸೃಜಿಸಿದನು. ಇದೇ ರೀತಿ ಯಾಗಿಯೇ ನಡೆದ ಸೃಷ್ಟಿಪ್ರಕಾರವನ್ನೆಲ್ಲ ತಿಳಿ. ವಿದುರಾ! ಆಗ ಕಿನ್ನರಾದಿಗಳಾ ಶರೀರವನ್ನು ಸ್ವೀಕರಿಸಿ ಉಷಃಕಾಲಗಳಲ್ಲಿ ಗಾನ ಮಾಡುತ್ತಾ ಉಪಭೋಗಿಸುತ್ತಿರುವರು. ಚಿಂತೆಯಿಂದ ಉದ್ದಕ್ಕೆ ಮಲಗಿ ಚಿಂತಿಸುತ್ತಾ ಸೃಷ್ಟಿಯು ವೃದ್ಧಿಯಾಗಲಿಲ್ಲವೇ ಎಂದು ಕ್ರೋಧಗೊಂಡು ಬ್ರಹ್ಮನ ಕ್ರೋಧಶರೀರದಿಂದ ಉದುರಿದ ರೋಮಗಳಿಂದ ವಿವಿಧ ಸರ್ಪಗಳು ಕ್ರೂರಸ್ವಭಾವ, ದೀರ್ಘದೇಹ, ದೊಡ್ಡ ಹೆಡೆ ಉಳ್ಳವುಗಳಾಗಿ ಪುಟ್ಟಿದವು.

ಇಂತು ಸೃಜಿಸಿ ಕೃತಕೃತ್ಯನಾದೆನೆಂದು ಚಿಂತಿಸುವ ಮನೋನಿಶ್ಚಯದಿಂದ ಮನುಗಳನ್ನು ಸೃಜಿಸಿ ವಿರಿಂಚನು ಆ ಮನೋದೇಹವನ್ನವರಿಗೆ ಕೊಟ್ಟನು. ಎಲ್ಲಾ ಸೃಷ್ಟಿಗೀತಲೂ ಈ ಮಾನವಸೃಷ್ಟಿಯು ಉತ್ಕೃಷ್ಟವೆಂದರಿತು ದೇವತೆಗಳು ಬ್ರಹ್ಮನನ್ನು 'ಅಹೋ! ಬ್ರಹ್ಮನ ಈ ಸೃಷ್ಟಿಯು ಎಷ್ಟು ಚೆನ್ನಾಗಿದೆ! ಯಾಗಾದಿ ಸರ್ವ ಕರ್ಮಾಧಿಕ್ಯವು, ಉಪಕಾರಕವು ಆದ ಈ ಮಾನವಸೃಷ್ಟಿಯಿಂದ ಹವಿರಾದ್ಯನ್ನವನ್ನೂ ಪೊಂದಿ ಸುಖಿಪೆವು; ಮತ್ತು ಅವರಿಗೆ ಪ್ರಜಾಧನವೃದ್ಧಿ ಗಳನ್ನೂ ಕೊಡುವೆವು' ಎಂದು ಪ್ರಶಂಸಿಸಿದರು. ಬ್ರಹ್ಮಾಂತರ್ಯಾಮೀ ಶ್ರೀಹೃಷೀಕೇಶನು ಮೊದಲೇ ಋಷಿಗಳನ್ನು ಬ್ರಹ್ಮನ ವಿದ್ಯಾಶಮದಮ ತಪ ಆದಿ ಶರೀರಗಳಿಂದ ಸೃಜಿಸಿದ್ದನೋ ಅಂತೆಯೇ ಈ ಮೇಲೆ ನಾನು ವರ್ಣಿಸಿದ ಸೃಷ್ಟಿ ಎಲ್ಲವೂ ಹರಿಸನ್ನಿಧಾನಯುಕ್ತ ಬ್ರಹ್ಮನಿಂದಲೇ ಎಂದು ಚೆನ್ನಾಗಿ ನೋಡಿ ತಿಳಿ.

## ೨೨. ಕರ್ದಮ ಚರಿತೆ (ತಪಸ್ಸು)

ವಿದುರನು ಪುನಃ 'ಮೈತ್ರೇಯನೇ! ಮನುರಾಜನ ವಂಶವು ಭಕ್ತಜನಸಮ್ಮತವಲ್ಲವೇ! ಅಲ್ಲಿ ಮೈಥುನಧರ್ಮವನ್ನವಲಂಬಿಸಿ ಪ್ರಜಾವೃದ್ಧಿಯು ಆಯಿತೆಂದು ಕೇಳಿದೆನು. ಸ್ವಾಯಂಭುವನು ಪ್ರಿಯವ್ರತೋತ್ತಾನಪಾದರೆಂಬುವ ಪುತ್ರರನ್ನು ಪಡೆದು, ಸಪ್ತದ್ವೀಪವತೀಭೂಮಿಯನ್ನವರಿಗೆ

ಕೊಟ್ಟನಂತೆ, ಅವರೆಂತು ಪಾಲಿಸಿದರು? ಮನುರಾಜನ ಮಗಳಾದ ದೇವಹೂತಿಯಲ್ಲಿ ಕರ್ದಮಪ್ರಜೇಶನಿಂದ ಮಹಾಯೋಗಿವಂದ್ಯನಾದ ಕಪಿಲ ನಾಮಕ ಶ್ರೀಹರಿಯು ಅವತರಿಸಿದ ನಂತೆ. ಮತ್ತಿನ್ನೆಷ್ಟು ಸಂತಾನವು ಆ ಪುಣ್ಯ ಋಷಿದಂಪತಿಗಳಿಗೆ? ಆಕೂತೀಪತಿಯಾದ ರುಚಿಪ್ರಜೇಶನ ಮಕ್ಕಳಾರು? ದಕ್ಷನು ಮನುಪುತ್ರಿಯಾದ ಪ್ರಸೂತಿಯನ್ನು ಪೊಂದಿ ಪ್ರಜಾಸೃಜನ ವ್ಯಾಪಾರವನ್ನು ಮಾಡಿದುದರ ವಿವರವೇನು?' ಎಂದು ಕೇಳಲು ಮೈತ್ರೇಯನು ಹೇಳಿದನು.

ಪ್ರಜರನ್ನು ಸೃಜಿಸೆಂದು ಬ್ರಹ್ಮನಿಂದ ಆಜ್ಞಾಪಿಸಲ್ಪಟ್ಟ ಕರ್ದಮನು, ಸರಸ್ವತೀ ತೀರದಲ್ಲಿ ಹತ್ತು ಸಾವಿರ ವರ್ಷ ತೀವ್ರ ತಪವನ್ನು ಗೈದನು. ಸಕಲ ವೈದಿಕಕರ್ಮವನ್ನು ಚೆನ್ನಾಗಿ ಆಚರಿಸಿ, ತತ್ಫಲವನ್ನು ಶ್ರೀಹರಿಗರ್ಪಿಸಿ, ಸಮಾಧಿಯಿಂದ ಪ್ರಪನ್ನವರದನಾದ ಹರಿಯ ಧ್ಯಾನವನ್ನು ಮಾಡುತ್ತಾ ಅಷ್ಟು ಕಾಲ ಕಳೆಯಲು ಪುಂಡರೀಕಾಕ್ಷನು ಪ್ರಸನ್ನನಾಗಿ ವೇದವೇದ್ಯವಾದ ಗುಣಪೂರ್ಣ ಶುಕ್ಲನಾಮಕ ರೂಪದಿಂದ ಪ್ರತ್ಯಕ್ಷನಾದನು. ಆಗ ಕೃತಯುಗವು ನಡೆಯುತ್ತಿತ್ತು.

ನಿರ್ಮಲನು, ಸೂರ್ಯತೇಜನು, ಧವಳಪದ್ಮಮಾಲಾಧರನು, ಸ್ನಿಗ್ಧನೀಲಕುಟಿಲಾ ವೃತ ಮುಖ ಪಂಕಜನು, ಪೀತಾಂಬರನು, ಕರೀಟಕುಂಡಲಾದಿ ಭೂಷಣಯುಕ್ತನು, ಕ್ರೀಡಾಧೃತ ಶ್ವೇತೋತ್ಪಲನು, ಹೃದಯಂಗಮ ಮಂದಹಾಸನು, ಕರುಣಾಕಟಾಕ್ಷನು, ಗರುಡಭುಜನಿಹಿತ ಪಾದಪದ್ಮನು, ಶ್ರೀವತ್ಸವಕ್ಷಸ್ಕನು, ಕೌಸ್ತುಭಕಂಧರನು ಆಗಿ ಆಕಾಶದಿ ನಿಂದ ಹರಿಯ ಮೂರ್ತಿ ಯನ್ನು ಕಂಡು ಕರ್ದಮನು ಹರ್ಷೋತ್ಕರ್ಷದಿಂದೆದ್ದು ದಂಡಾಕಾರವಾಗಿ ನಮಿಸಿ ಹರಿದರ್ಶನ ದಿಂದ ಪರಿಪೂರ್ಣಮನೋರಥನಾಗಿ ಶುಕ್ಲನಲ್ಲೇ ಮನವಿರಿಸಿ ಭಕ್ತಿಯಿಂದ ಸ್ತುತಿಸಿದನು–

ಪೂರ್ಣಜ್ಞಾನಾನಂದನಿಧೇ! ನಿನ್ನ ದರ್ಶನದಿಂದ ನನ್ನ ತಪಸ್ಸು ಫಲಿಸಿತು. ಹರೇ! ನನ್ನ ಜನ್ಮವೇ ಧನ್ಯವಾಯಿತು. ಸಮಾಧಿನಿರತರಾದ ಯೋಗೀಂದ್ರರು ಅನೇಕ ಜನ್ಮಗಳಲ್ಲಿ ತಪಸ್ಸನ್ನು ಮಾಡಿ, ನೋಡಲಿಚ್ಛಿಸುವ ಈ ನಿನ್ನ ಕಲ್ಯಾಣತಮರೂಪವನ್ನು ಕಂಡೆ. ನಿನ್ನ ಬಂಧಕಶಕ್ತಿಗೊಳ ಗಾಗಿ ನಾನು ನನ್ನದೆನ್ನುತ್ತಾ, ಸಂಸಾರ ಸಾಗರತಾರಕವಾದ ನಿನ್ನ ಪಾದಾರವಿಂದವನ್ನು ಭಜಿಸಿಯೂ, ಕಾಮಗಳನ್ನು ಬೇಡುವರು! ಆಹಾ! ನರಕಸದೃಶ ತಿರ್ಯಗ್ಯೋನಿಯಲ್ಲಿಯೂ ಸಿಗುವ ಸುಖಲೇಶವನ್ನು ಕೊಡೆಂದು ಬೇಡುವ ಕುಮತಿಗಳಿಗೆ, ಐಶ್ವರ್ಯವಾರಿಧಿಯಾದ ನೀನು ಆ ಸ್ವಲ್ಪ ಸುಖವನ್ನೇ ಕೊಟ್ಟುಬಿಡುವೆ. ನನಗೆ ಲಜ್ಜೆಯಾಗಿದೆ. ಏಕೆಂದರೆ ನಾನೂ ಅದನ್ನೇ ಬೇಡು ತ್ತಿರುವೆನು. ಸ್ವಾಮೀ! ಗೃಹಮೇಧ ಸುಖದಾಯಿನಿಯಾದ ಸಮಾನಶೀಲ ಪತ್ನಿಯು ಸಿಗಲೆಂದು ನನಗೂ ಅಪೇಕ್ಷೆಯಾಗಿದೆ. ಅಪೇಕ್ಷಿತ ಸರ್ವಪುರುಷಾರ್ಥ ಕಾರಣನಾದ ನಿನ್ನ ಪಾದಮೂಲವನ್ನು ಪೊಂದಿಯು ಇದನ್ನು ಬೇಡಿದುದೂ ನಿನ್ನಿಚ್ಛೆಯಂತೆಯೇ! ಪ್ರಭೋ! ಪ್ರಜಾಪತಿಯಾದ ನಿನ್ನ ವಿಧಿನಿಷೇಧರೂಪ ವೇದವಾಕ್ಯವಶದಿಂದ ಬದ್ಧವಾಗಿ, ಲೋಕವೆಲ್ಲಾ ಕಾಮಗಳನ್ನು ನಿನ್ನಿಂದ ಬೇಡುತ್ತಾ ನಿನ್ನ ಪೂಜೆ ಮಾಡುತ್ತಿದೆ. ನಾನೂ ಅಂತೇ ಶುಕ್ಲನಾದ ನಿನಗೆ ಶರಣಾಗತನಾಗಿರುವೆನು. ಜಡ ಶರೀರವನ್ನೂ ತದ್ಗತೇಂದ್ರಿಯಾದಿಗಳನ್ನೂ ನಿನ್ನಧೀನವೆಂದು ತಿಳಿದು, ವಿರಕ್ತಿಯಿಂದ ನಿನ್ನ ಚರಣಚ್ಛತ್ರದ ನೆರಳನ್ನು ನಂಬಿ ನಿನ್ನ ಗುಣವರ್ಣನಾಮೃತಪಾನದಿಂದ ಜನನ ಮರಣರೂಪ ದೇಹಧರ್ಮದಿಂದಿ ದೂರರಾಗಿ ಮುಕ್ತರಾಗುವ ಸುಜನರಿನ್ನೆಷ್ಟು ಕುಶಲರೋ! ಅಜರಾಕ್ಷ! ಅಧಿಕಮಾಸ ಸಹಿತ ದ್ವಾದಶ ಮಾಸಗಳೇ ದಳಗಳಾಗಿ, ಮೂರು ನೂರ ಅರವತ್ತು ದಿನಗಳೇ ಪರ್ವಗಳಾಗಿ, ಆರು ಋತುಗಳೇ ನೇಮಿಗಳಾಗಿ, ಪರಮಾಣ್ವಾದಿ ಛಿದ್ರಗಳೇ ಅನಂತಾವಯವ ಗಳಾಗಿ, ಮೂರು ಚಾತುರ್ಮಾಸಗಳೇ ನಾಭಿಯಾಗಿ, ಅತಿ ವೇಗದಿಂದ ಜರಾರಹಿತ ನಾಭಿದ್ವಾರ

ಎಂತಿರುವ ನಿನ್ನ ಆಧಾರದಿಂದ ತಿರುಗುತ್ತಿರುವ ಈ ಸುದರ್ಶನ ಕಾಲಚಕ್ರವು ಆ ಸುಜನರ ಆಯುಸ್ಸನ್ನು ಕತ್ತರಿಸುವುದಿಲ್ಲ. ನಾನು ಗೃಹಾಶ್ರಮಿಯಾದರೂ ಸಂಸಾರದಲ್ಲಿ ಬಿದ್ದು ಹೊರಳಿಯಾಡದೆ ನಿವೃತ್ತಿಮಾರ್ಗನಿರತನಾಗಿ ನಿನ್ನನ್ನೇ ಪೊಂದಲು ಯತ್ನಿಸುವೆನು.

ನೀನು ನಿನ್ನವಳಾದ ಲಕ್ಷ್ಮೀದೇವಿಯಿಂದ ಕೂಡಿ ಸ್ವೋದರಸಮರ್ಪಿತವಾದ ಜಡ ಪ್ರಕೃತಿಯಿಂದ ಈ ಜಗವನ್ನು ನಿರ್ಮಿಸಿರುವೆ. ರಕ್ಷಿಸುವನು ನೀನೇ. ಊರ್ಣನಾಭಿಯಂತೆ ಸೃಜಿಸಿದ್ದನ್ನು ಪುನಃ ನುಂಗಿ ಮತ್ಸ್ಯಾದ್ಯವತಾರಗಳಿಂದ ಕ್ರೀಡಿಸುವನು ನೀನೇ. ನೀನು ಸ್ವೇಚ್ಛೆಯಿಂದ ಸ್ಥೂಲರೂಪವಾಗಿ ಗ್ರಹಿಸಿದ ಬ್ರಹ್ಮಾಂಡವು ಪ್ರಕೃತಿನಿರ್ಮಿತವು. ಅದರಿಂದ ನೀನತ್ಯಂತಭಿನ್ನನಾಗಿರುವೆ. ಸ್ವಾಮಿಯಾದ ನಿನ್ನನ್ನು ಜಡಜೀವ ವಿಲಕ್ಷಣನೆಂದು ತಿಳಿದವರು ಮುಕ್ತರಾಗುವರು. ಅಭೇದದಿಂದ ತಿಳಿದವರು ತಮೋದುಃಖವನ್ನು ಪೊಂದುವರು. ತುಲಸೀಮಾಲೆಯಿಂದ ವಿಶಿಷ್ಟನಾಗಿ ಲಕ್ಷಿತನಾದಂತೆ ಧ್ಯಾನಾನುರೂಪವಾಗಿ, ಭಕ್ತರಲ್ಲಿ ಅನುಕಂಪಾತಿಶಯದಿಂದ, ಸ್ಥೂಲ ಸೂಕ್ಷ್ಮರೂಪಗಳ ಚಿಂತನೆಗಾಗಿ ಹಾಗೇ ತೋರಿ ಅನುಗ್ರಹಿಸು. ಸ್ವರೂಪಸುಖಾನುಭೂತಿಯಿಂದ ದೇಹಾದಿ ಕರ್ಮಫಲಗಳಂಟದಂತೆ ಇರುವ ಉಪನಿಷದಭೀಷ್ಟ ದಿವ್ಯರೂಪನಾದ ನೀನೀ ಲೋಕಕಾರ್ಯವನ್ನು ನಿನ್ನಿಚ್ಛೆಯಿಂದ ನಿರ್ವಹಿಸುವೆ. ಅಲ್ಪನಾದ ನನ್ನಲ್ಲಿ ಅನುಗ್ರಹಿಸಿ ಕಾಮಪೂರಣವನ್ನು ಮಾಡಲು ಬಂದ ನಿನ್ನ ಪಾದಾರವಿಂದಗಳಿಗೆ ಪುನಃ ಪುನಃ ನಮಸ್ಕರಿಸುವೆವು.

ಎಂದು ವಂದಿಸಿದ ಅಮಾಯಿಕನಾದ ಕರ್ದಮನನ್ನು ಕಂಡು ಗರುಡವಾಹನನು ಪ್ರೇಮದಿಂದ ನಸುನಕ್ಕು ಭ್ರೂಭಂಗದಿಂದ ಭೂರಿದಯೆಯನ್ನು ತೋರಿ ಮಧುರವಚನಗಳಿಂದಿಂತೆಂದನು–

ನಿನ್ನ ಮನಸ್ಸು ನನಗೆ ಗೊತ್ತು. ನನ್ನ ಪ್ರೇರಣಾನುಸಾರವಾಗಿಯೇ ನಿಯಮಾನುಷ್ಠಾನ ತಪವನ್ನು ಮಾಡಿ ನನ್ನನ್ನು ಸಂತೋಷಪಡಿಸಿದೆ. ನನ್ನ ಪೂಜೆ ಅಲ್ಪವಾದರೂ ಎಂದಿಗೂ ವ್ಯರ್ಥವಾಗಲಾರದು. ನನ್ನಲ್ಲಿ ಸಮರ್ಪಿತಸರ್ವಕರ್ಮಫಲರಾದ ನಿನ್ನಂತಹರ ಪೂಜೆಯಂತೂ ಹೇಳಲೇಕೆ? ಪ್ರಖ್ಯಾತಚರಿತನಾದ ಮನುಚಕ್ರವರ್ತಿಯು ಸಪ್ತಸಮುದ್ರಮುದ್ರಿತ ಸರ್ವ ಸರ್ವಂಸಹಾ ಸಾರ್ವಭೌಮನಾಗಿ ಬ್ರಹ್ಮಾವರ್ತದಲ್ಲಿರುವನು. ಶತರೂಪೆ ಎಂಬ ಪತ್ನೀಸಮೇತನಾಗಿ ಆ ರಾಜರ್ಷಿಯು ನಾಳಿದ್ದು ಧರ್ಮಮರ್ಮಜ್ಞನಾದ ನಿನ್ನನ್ನು ನೋಡಲು ಬರುವನು. ಕೇಳು! ಆ ರಾಜನು ಸುಂದರಿಯಾದ, ವಯೋರೂಪಗುಣಭೂಷಣಳಾದ, ಪತಿಕಾಂಕ್ಷಿಣಿಯಾದ ದೇವಹೂತಿ ಎಂಬ ತನ್ನ ಮಗಳನ್ನು ಯೋಗ್ಯನಾದ ನಿನಗೆ ಕೊಡಲು ಬರುವನು. ಅನುಕೂಲವತಿಯಾದ ಸತಿಗಾಗಿ ಮಾಡಿದ ನಿನ್ನ ಮನಸ್ಸವಳಲ್ಲಿ ಸಮಾಹಿತವಾಗಿ, ಆ ರಾಜಕುಮಾರಿಯು ತಾಪಸನಾದರೂ ನಿನ್ನನ್ನೇ ವರಿಸಿ ಬರುವಳು. ನಿನಗೆ ಆಕೆಯಲ್ಲಿ ಮೊದಲು ಕನ್ಯಾರತ್ನನವಕವು ಜನಿಸುವುದು. ಆಮೇಲೆ ನಿನ್ನ ತಪಃಫಲರೂಪನೆನಿಸಿ ನಾನೇ ನಿನಗೆ ಮಗನಾಗುವೆನು. ಮರೀಚ್ಯಾದಿ ನವಪ್ರಜೇಶರಿಗೆ ನಿನ್ನ ಕನ್ಯೆಯರನ್ನು ಕೊಡು. ಅದರಿಂದ ಸೃಷ್ಟಿ ವೃದ್ಧಿಯು ಆಗುವದು. ಇಂತು ನನ್ನಾಜ್ಞೆಯನ್ನು ಪಾಲಿಸಿ ಕೀರ್ತಿಯನ್ನು ಗಳಿಸಿ ನನ್ನಲ್ಲಿ ಸರ್ವಕರ್ಮವನ್ನರ್ಪಿಸಿ, ನನ್ನ ಲೋಕವನ್ನೇ ಸೇರುವೆ. ಸರ್ವಜೀವರಿಗಭಯವನ್ನು ನನಗೆ ನಿನ್ನ ಮನಸ್ಸನ್ನು ಕೊಟ್ಟು ಸನ್ಯಾಸಿಯಾಗಿ ಸರ್ವತ್ರ ವ್ಯಾಪ್ತನಾದ ನನ್ನನ್ನು ನಿನ್ನಲ್ಲೇ ಹೃದಯೇಶನಾಗಿರುವ ನನ್ನನ್ನು ಕಂಡು ಮುಕ್ತನಾಗುವೆ. ನನ್ನಿಚ್ಛೆಯಿಂದ ನಿನ್ನ ವೀರ್ಯವನ್ನು ಸೇರದೆ ಅದರಿಂದ ಕೂಡಿ ದೇವಹೂತಿಯ ಗರ್ಭವನ್ನು ಪೊಕ್ಕು ನಾನು ಕಪಿಲನೆಂದು ಪುಟ್ಟಿ ಸಾಂಖ್ಯತತ್ತ್ವಸಂಹಿತೆಯನ್ನು ರಚಿಸಿ ಉಪದೇಶಿಸುವೆನು–

ಎಂದು ಹೇಳಿ ಶ್ರೀಹರಿಯು ಅಪರೋಕ್ಷಜ್ಞಾನ ವಿಷಯನಾಗಿ ಕರ್ದಮನ ಹೃದಯದಿ ಸಲೆಸಿ, ಸರಸ್ವತೀ ನದಿಯ ತೀರದ ಬಿಂದು ಸರೋವರವನ್ನು ತನ್ನ ನೇತ್ರಾನಂದ ಜಲಬಿಂದುವಿನಿಂದ ನಿರ್ಮಿಸಿ ಪೊರಟನು. ಗರುಡಪಕ್ಷಿಗಳಿಂದ ಮಧುರವಾಗಿ ಉಚ್ಚರಿತವಾಗುವ ಸಾಮಗಾನವನ್ನು ಕೇಳುತ್ತಾ ಬ್ರಹ್ಮಾದಿಸ್ತುತನು, ಸನಕಾದಿ ಸಿದ್ಧಜನಾನ್ವೇಷಿತ ಚರಣನು ಆದ ಶುಕ್ಲನು ಕರ್ದಮನು ನೋಡುತ್ತಿದ್ದಂತೆ ಅಂತರ್ಧಾನ ಪೊಂದಿದನು. ಕರ್ದಮನಾದರೂ ಬಿಂದು ಸರಸ್ತೀರದಲ್ಲಿ ಹರಿಯಾಜ್ಞೆಯಂ ಪಾಲಿಸುತ್ತಾಮನುರಾಜನ ಆಗಮನವನ್ನು ಕಾದು ಕುಳಿತನು. ಅಂತೆಯೇ ಬಂಗಾರದ ರಥವನ್ನೇರಿ ಮಗಳನ್ನು ಮಡದಿಯನ್ನು ಕರೆದುಕೊಂಡು ಮಹೀಮಂಡಲವನ್ನು ಸುತ್ತಿ, ಭಗವಂತನು ಹೇಳಿದಂದೇ ಪ್ರಾತಃಕಾಲವಾಗುತ್ತಿರಲು ಮನುರಾಜನು ಕರ್ದಮಾಶ್ರಮ ಪದವನ್ನು ಸೇರಿದನು. ಪ್ರಪನ್ನನಾದ ಕರ್ದಮನಲ್ಲಿ ಪ್ರೀತಿಯಿಂದ ಆನಂದ ಉಕ್ಕೇರಿಬಂತೆಂಬು ವಂತೆ ನೇತ್ರಬಿಂದುಗಳನ್ನು ಸುರಿಸಿದ ಸುಖಸಮುದ್ರನ ಕೃಪೆಯನ್ನು ಕಂಡು ಆನಂದದಿಂದ ಆಶ್ರಮವನ್ನು ಪೊಕ್ಕನು.

ಮಹರ್ಷಿಗಳಾ ಸರಸ್ವತಿಯ ತೀರದಲ್ಲಿ ವಿವಿಧಾಶ್ರಮಗಳಲ್ಲಿ ವಸಿಸುತ್ತಿದ್ದರು. ದ್ರುಮಲತೆ ಗಳು ಸರ್ವರ್ತುಫಲಪುಷ್ಪಗಳಲ್ಲಿ ಕಂಗೊಳಿಸುತ್ತಿದ್ದವು. ಮೃಗಪಕ್ಷಿಗಳ ರುತವು ಕಿವಿಗಿಂಪಾಗಿ ಕೇಳಿಸಿತು. ಮದಿಸಿದ ಮಧುಕರಗಳ ಝುಂಕಾರವನ್ನು ಶ್ರುತಿಗೈದು ಕೋಗಿಲೆಗಳು ಪಂಚಮಸ್ವರ ದಲ್ಲಿ ಅಂಚಿತಗಾನವನ್ನು ಮಾಡಿದವು. ಕದಂಬ ಚಂಪಕಾಶೋಕ ವಕುಲಕುಂದ ಮಂದಾರ ಕುಟಜಾದಿ ಪುಷ್ಪಸೌರಭ್ಯವು ಮಂದಮಾರುತನೀತವಾಗಿ ಸೂಸಿ ಬರುತ್ತಿತ್ತು. ಕಾರಂಡವ ಬಕಹಂಸ ಕುರರ ಕುಕ್ಕುಟ ಸಾರಸ ಚಕ್ರವಾಕ ಚಕೋರಾದಿ ಪಕ್ಷಿಗಳ ಕಲಕಲ ನಾದವು ರೋದಸೀ ಕುಹರವನ್ನು ತುಂಬಿತ್ತು. ಶಶಕಹರಿಣ ಕ್ರೋಡ ಶ್ವಾನ ಗವಯ ಕುಂಜರಾದಿ ವನಮೃಗಗಳು ಸಂಚರಿಸುವುದು ಕಾಣುತ್ತಿತ್ತು. ಚಮರೀ ಸಿಂಹ ವನಮಾರ್ಜಾರ ಮೃಗನಾಭಿಗಳೂ ಅಲ್ಲಲ್ಲಿ ತಿರುಗುತ್ತಾ ದೂರ ಸರಿದವು.

ಆದಿರಾಜನಾ ಆಶ್ರಮವನ್ನು ಅನುಚರರಿಂದ ಪೊಕ್ಕು ಅಲ್ಲಿ ಹುತಹುತಾಶನನಾಗಿ ಕುಳಿತ ಮುನಿವರನನ್ನು ಕಂಡನು. ತೀಕ್ಷ್ಣ ಚಿರಕಾಲೀನ ತಪೋವಿಭವದಿಂದ ಬೆಳಗುವ ಕರ್ದಮನು ಭಗವಂತನ ಪ್ರೇಮಪೂರ್ಣ ಕಟಾಕ್ಷಪಾತ್ರನಾಗಿದ್ದು ಅಷ್ಟೇನು ಕೃಶನಾಗದೆ ಶ್ರೀಹರಿಯ ವಚನಾಮೃತಪಾನದಿಂದ ಸುಂದರನಾಗಿಯೇ ತೋರಿದನು. ಪದ್ಮಲೋಚನನು, ಜಟಾಧಾರನು, ಚೀರವಸನನು, ಉನ್ನತ ಶರೀರನಾದ ಋಷಿವರನು ಅನಲಂಕೃತನಾದರೂ ಮನೋಹರನಾಗಿ ದ್ದನು.

ಮುನಿಯು ಸಮೀಪಿಸುತ್ತಿರುವ ಸಾಮ್ರಾಟನ ಸಾಷ್ಟಾಂಗವನ್ನು ಸ್ವೀಕರಿಸಿ ಸುಸ್ವಾಗತವಂ ಬಯಸಿ ಸುಖಾಸೀನನನ್ನಾಗಿಸಿ ಸಪರ್ಯೆಯಿಂದ ಸತ್ಕರಿಸಿದನು. ಭಗವಂತನ ಆದೇಶವನ್ನು ಮನಸಾ ಸ್ಮರಿಸಿ ಮಧುಮಧುರವಾಗಿಂತು ನುಡಿದನು–

ದೇವ! ನಿನ್ನ ಸಂಚಾರವು ಸಜ್ಜನ ರಕ್ಷಣೆಗಾಗಿಯೇ ಅಲ್ಲವೇ? ದುಷ್ಟರನ್ನು ಶಿಕ್ಷಿಸುವುದೂ ಶ್ರೀಹರಿಯ ಪಾಲನಶಕ್ತಿಯ ಸನ್ನಿಧಾನ ಉಳ್ಳವನಿಗೆ ಧರ್ಮವೇ ಆಗಿದೆ. ಸೂರ್ಯನಿಂದ ಪ್ರಕಾಶ, ಚಂದ್ರನಿಂದ ಆಹ್ಲಾದಕತ್ವ, ಅಗ್ನಿಯಿಂದ ಅಧೃಷ್ಯತೆ, ಇಂದ್ರನಿಂದ ಐಶ್ವರ್ಯ, ವಾಯುವಿನಿಂದ ಶ್ರೇಷ್ಠತ್ವ, ಯಮನಿಂದ ದುಷ್ಟದಮನ, ವರುಣನಿಂದ ಗಾಂಭೀರ್ಯ, ಧರ್ಮದಿಂದ ಪುಣ್ಯಾಪಾಪ ವಿವೇಕವೆಂಬ ಲೋಕಪಾಲಕಾಂಶದಿಂದ ರಾರಾಜಿಸುವೆ. ಶುಕ್ಲನಾಮಕ ಹರಿಸನ್ನಿಧಾನ ವಿಶೇಷ

ಯುತನಾದ ನಿನಗೆ ನಮಸ್ಕಾರವು. ಮಣಿಗಣಖಚಿತವಾದೀ ನಿನ್ನ ಜೈತ್ರರಥವನ್ನಾರೋಹಿಸಿ ಚಂಡಕೋದಂಡ ಜ್ಯಾಘೋಷ ಮಾತ್ರದಿಂದ ಪಾಪಿಗಳಿಗೆ ಭೀಷಣನಾಗಿ ನೀ ಚರಿಸಿದರೆ ಭೂಮಂಡಲವು ನಡುಗುವಂತೆ ನಿನ್ನ ಮಹಾಸೈನ್ಯವು ಬರುತ್ತಿರಲು ಅದರ ಅಗ್ರಭಾಗದಲ್ಲಿ ಚಂಡಕಿರಣನಂತೆ ನೀ ಕಾಣದಿರೆ ಆಗಲೇ ಕಳ್ಳಕಾಕರು ಭಗವದ್ರಚಿತ ವರ್ಣಾಶ್ರಮಾಚಾರ ನಿಬಂಧನಗಳನ್ನು ಮುರಿದು ಧರ್ಮಸೇತುವನ್ನು ಕೆಡಹಿಬಿಡದಿರುವರೇ? ನಿರಂಕುಶರಾದ ನೃಪಶು ಗಳಿಂದ ಅಧರ್ಮವು ಹೆಚ್ಚದಿರುವುದೇ? ನೀನೇ ಉಪೇಕ್ಷಿಸಲು ಈ ಲೋಕವೆಲ್ಲಾ ದುರಾತ್ಮರ ಕೈಸಿಕ್ಕು ನಾಶವಾದೀತು! ಇರಲಿ! ವೀರ! ನೀನೇಕೆ ಇಲ್ಲಿಗೆ ನನ್ನ ಆಶ್ರಮವನ್ನು ಪಾವನ ಮಾಡುತ್ತಾ ಬಂದೆ ಎಂದು ಕೇಳಬಹುದೇ? ಪ್ರೀತಿಯಿಂದ ನಿಷ್ಕಪಟನಾಗಿ ಕೇಳುತ್ತಿರುವೆನು, ಪೇಳು.

## ೨೨. ಕರ್ದಮ ವಿವಾಹ

ಇಂತು ನುಡಿಯಲು ಆ ಮುನಿಗಣಗಳನ್ನು ಕಂಡು ಸಂತೋಷಗೊಂಡು ಹರಿರತನಾಗಿ ಸುಮ್ಮನಾದ ಕರ್ದಮನೊಡನೆ ಮನುರಾಜನಿಂತು ಮಾತನಾಡಿದನು–

ಬ್ರಹ್ಮನು ಕ್ಷತ್ರಿಯರಾದ ನಮ್ಮ ರಕ್ಷಣೆಗಾಗಿ ನಿಮ್ಮನ್ನು ವಿಪ್ರರನ್ನು ಸೃಜಿಸಿದನು. ವೇದ ವನ್ನು ನಂಬಿದವರು, ತಪಸ್ಸು, ವಿದ್ಯೆ, ಯೋಗಾಭ್ಯಾಸ, ಭಕ್ತಿ ಮೊದಲಾದ ಗುಣಾಲಂಕೃತ ಬ್ರಾಹ್ಮಣರು ಲಂಪಟರಾಗದೆ ಜಿತೇಂದ್ರಿಯರಾಗಿ ಜ್ಞಾನಸಮುಪಾರ್ಜನೆಯಲ್ಲಿ ತೊಡಗಿರಲು ಅವರನ್ನು ರಕ್ಷಿಸಲೋಸುಗ ಶ್ರೀಹರಿಯ ಭುಜದಿಂದ ಸೃಷ್ಟರಾಗಿಲ್ಲವೇ? ಶ್ರೀಶನಿಗೆ ಬ್ರಹ್ಮಕುಲ ವತಿಪ್ರಿಯ ಕರವು. ಕ್ಷತ್ರವೂ ಅಂಗವಾಗಿ ಪ್ರಿಯವೇ ಆಗಿದೆ. ಆದ್ದರಿಂದಲೇ ಬ್ರಹ್ಮಕ್ಷತ್ರಿಯಾದಿ ಕುಲಗಳು ಅನ್ಯೋನ್ಯರಕ್ಷಕವಾಗಿವೆ. ಕಾರ್ಯಕಾರಣವ್ಯಾಪಿಯಾದ ಶ್ರೀಹರಿಯು ಸರ್ವಕುಲ ರಕ್ಷಕನಾಗಿರುವನು, ನಿಜ. ನಿನ್ನ ದರ್ಶನಮಾತ್ರದಿಂದಲೇ ನನ್ನ ಮನದ ಸಂಶಯವು ನಷ್ಟವಾಗಿದೆ. ಪೂಜ್ಯ ಮುನಿವರನೇ! ರಕ್ಷಾಪರನಾದ ಅಧೋಕ್ಷಜನ ಧರ್ಮವನ್ನೆನಗೆ ಪೇಳಿರುವೆ. ಮಧುರವಾದ ನಿನ್ನ ಮಾತನ್ನು ಅದೃಷ್ಟದಿಂದ ನಾ ಕಂಡೆ. ಮಂಗಳಕರವಾದ ನಿನ್ನ ಪಾದ ರಜವನ್ನೆನ್ನ ಶಿರದಿ ಮುಡಿದು ಧನ್ಯನಾದೆ. ನಿನ್ನ ಅನುಶಾಸನವನ್ನಾಲಿಸಿದೆ. ಮಹದನುಗ್ರಹವನ್ನು ಮಾಡಿರುವೆ. ಮಧುರವಾದ ನಿನ್ನ ಮಾತನ್ನು ಕಿವಿಗೊಟ್ಟಾಲಿಸಿದೆ. ಪುನೀತನಾದೆ. ಬ್ರಹ್ಮನ್! ನನ್ನದು ಒಂದು ಬಿನ್ನಪವಿದೆ.ಮಗಳ ಮೇಲಿನ ಮಮತೆಯಿಂದ ಮಾತನಾಡುವುದನ್ನು ಮನ್ನಿಸಿ ಕೇಳು. ಇವಳೆಮ್ಮ ಮಗಳು ದೇವಹೂತಿ ಎನ್ನುವಳು. ಪ್ರಿಯವ್ರತೋತ್ತಾನಪಾದರ ತಂಗಿ. ವಯಃ ಶೀಲ ಗುಣಗಳಿಂದ ಅನುರೂಪನಾದ ಪತಿಯನ್ನು ಕೋರಿ ಬಂದಿರುವಳು. ನಾರದರಿಂದ ನಿನ್ನ ಶೀಲ ವಿದ್ಯೆ ವಯಸ್ಸೌಷ್ಟ್ವ, ಗುಣಗಣಗಳನ್ನು ಕೇಳಿ, ನಿನ್ನನ್ನೇ ವರಿಸಿರುವಳು. ಬ್ರಾಹ್ಮಣೋತ್ತಮ! ಶ್ರದ್ಧೆ ಯಿಂದ ಕನ್ಯಾದಾನ ಮಾಡುವೆ. ಪ್ರತಿಗ್ರಹಿಸಿ ಗೃಹಮೇಧಿಯ ಕರ್ಮಗಳಲ್ಲಿ ಸಹಧರ್ಮಚಾರಿಣಿ ಯನ್ನಾಗಿಸಿ ಅನುಗ್ರಹಿಸು. ನೀನು ಮದುವೆಗೆ ಸುಮುಖನೇ ಎಂದು ಕೇಳಿರುವೆನು. ಬದಲಾಡ ಬೇಡ. ನಿರ್ಮುಕ್ತ ದುಷ್ಟ ವಿಷಯನಾದವನಿಗೆ ವಿವಾಹವನ್ನು ಪೊಂದಿಸುವದಲ್ಲವೇ? ವೇದಾಧ್ಯಯನವನ್ನು ಮುಗಿಸಿ, ಗುರುಕುಲದಿಂದ ನಿವೃತ್ತನಾಗಿ ವಿವಾಹಕಾಮನಾಗಿರುವೆಯೆಂದು ಕೇಳಿಯೇ ನಾನು ಕನ್ಯಾದಾನ ಮಾಡಲು ಬಂದಿರುವೆನು. ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನು ಮಾಡು' ಎಂದು ಬೇಡಿದನು.

ಆಗ ಕರ್ದಮನೀತೆಂದನು– ನಿಜ! ನಾನಾದರೂ ಕನ್ಯಾಪೇಕ್ಷಿಯಾಗಿರುವೆನು. ನಿನ್ನ ಮಗಳಾದರೂ ಮಹಾರಾಜಾ! ವಿಷಯಾಸಕ್ತಳಾಗದೆ, ಧರ್ಮಾರ್ಥಕಾಮಸಾಧಕಳೆನಿಸಿ ಪತಿ ಶುಶ್ರೂಷಾಸಾದರಳಾದರೆ ಸಾಕು. ನಮ್ಮಿಬ್ಬರ ಈ ಮೊದಲನೆಯ ಬ್ರಾಹ್ಮವೈವಾಹಿಕ ವಿಧಿಯು ಅನುರೂಪವಾಗಿದೆ. ಇಂದೇ ಮುಹೂರ್ತವೂ ಚೆನ್ನಾಗಿದೆ. ವೇದವಿಹಿತವಾದ ದಶಪುತ್ರಾಧಾನ ರೂಪ ಕಾಮವು ಪೂರ್ಣವಾಗಲಿ! ನಿನ್ನ ಮಗಳಾದರೂ ಕಮನೀಯಳಾಗಿರುವಳು. ತನ್ನ ಸ್ವಾಭಾವಿಕ ಕಾಂತಿಯಿಂದ ಇತರ ತರುಣಿಯರನ್ನು ಧಿಕ್ಕರಿಸುತ್ತಾ ಲಕ್ಷ್ಮಿಯಂತಿರುವ ನಿನ್ನ ಕುವರಿಯನ್ನು ಯಾವ ವರನು ಆದರಿಸನು? ನಾನೂ ಕೇಳಿರುವೆನು. ಇವಳು ಸೌಧಾಗ್ರಭಾಗದಿ ಕಂದುಕಖೇಲನ ನಿರತಳಾಗಿದ್ದಳಂತೆ! ಚೆಂಡಿನಂತೆ ಹಾರುವ ವಿವ್ಹಲನಯನನಲಿನಗಳಿಂದಲೂ, ರಣನ್ನೂಪುರನಿಕ್ವಣ ದಿಂದಲೂ, ಮನವನ್ನು ಸೆಳೆಯುವ ಇವಳನ್ನು ನೋಡಿದೊಡನೆ ವಿಮಾನಚರನಾದ ವಿಶ್ವಾವಸು ಗಂಧರ್ವರಾಜನು ಮೋಹಿತನಾಗಿ ಮೂರ್ಛೆ ಹೊಂದಿದನಂತೆ. ನಿರ್ಭಾಗ್ಯರಾಗಿ ಲಕ್ಷ್ಮೀದೇವಿಯ ಚರಣಾರಾಧನವನ್ನು ಮಾಡದವರಿಗೆ ಸಿಗದ ಈ ಲಲನಾಮಣಿಯನ್ನು ಯಾವ ಸದ್ವಂಶಜನು ಸ್ವೀಕರಿಸನು! ಅದಲ್ಲದೆ ನಿನ್ನ ಮಗಳೂ ಪ್ರಿಯವ್ರತೋತ್ತಾನಪಾದರ ತಂಗಿಯೂ ಈ ಮಂಗಳಾಂಗಿ! ಮದುವೆ ಮಾಡಿಕೊಳ್ಳಲು ನಾನು ಸಿದ್ಧನಿರುವೆನಾದರೆ ಒಂದು ನಿಬಂಧನವಿದೆ. ನನ್ನಿಂದ ಇವಳಿಗೆ ಮಕ್ಕಳಾಗುವವರೆವಿಗೂ ಮಾತ್ರ ಸಂಸಾರವನ್ನು ನಿರ್ವಹಿಸಿ, ಅದಾದ ನಂತರ ತತ್‌ಕ್ಷಣವೇ ಶುಕ್ಲನಿಂದ ಹೇಳಲ್ಪಟ್ಟಂತೆ ಅಹಿಂಸಾಪ್ರಧಾನವಾದ ಪರಮಹಂಸ ಧರ್ಮವನ್ನು ಪರಿಪಾಲಿಸಲು ಹೊರಟುಹೋಗುವೆನು. ವಿಚಿತ್ರಜಗನ್ನಿರ್ಮಾಣ ಧುರೀಣನು, ಸಂರಕ್ಷಕನು, ಸಂಹಾರಕನು, ಪ್ರಜಾಪತಿವಲ್ಲಭನು ಆದ ಶ್ರೀಭಗವಂತನು ನನಗೀವಿಷಯದಿ ಸಾಕ್ಷಿಯಾಗಿರುವನು.

ವಿದುರಾ! ಎಷ್ಟು ಹೇಳಿ, ಕರ್ದಮನು ಅರವಿಂದನಾಭ ಪದಾರವಿಂದವನ್ನು ಹೃದಯಾರವಿಂದದಲ್ಲಿಟ್ಟು ಸುಮ್ಮನಾದನು. ಸುಂದರ ಮಂದಸ್ಮಿತನಾದ ಕರ್ದಮನನ್ನು ನೋಡಿ ದೇವಹೂತಿಯು ಪ್ರೇಮಮುಗ್ಧಳಾದಳು. ಆಮೇಲೆ ಮನುರಾಜನು ಶತರೂಪಾದೇವಿಯನ್ನು ಕೇಳಿ ಮಗಳ ಅಭಿಪ್ರಾಯವನ್ನೂ ಚೆನ್ನಾಗಿ ಅರಿತು ಗುಣಗಣವರಿಷ್ಠನಾದ ಆ ಮುನಿಶ್ರೇಷ್ಠನಿಗೆ ಆ ಕನ್ಯಾಮಣಿಯನ್ನು ವಿವಾಹ ಮಾಡಿಕೊಟ್ಟನು. ಮಹಾರಾಣಿ ಶತರೂಪೆಯು ಅನರ್ಘ್ಯವಾದ ಪರಿಬರ್ಹವನ್ನು, ವಾಸ, ವಸನ, ಭೂಷಣಗಳನ್ನು ದಂಪತಿಗಳಿಗೆ ಪ್ರೀತಿಯಿಂದ ಕೊಟ್ಟು, ಸದ್ವೃಶಿ ನಾದ ವರನು ಮಗಳಿಗೆ ಸಿಕ್ಕನೆಂದು ನಿಶ್ಚಿಂತನಾದ ಮನುರಾಜನೊಡನೆ ಮಗಳನ್ನು ಬೀಳ್ಕೊಟ್ಟಳು.

ಮನುರಾಜನು ಪ್ರಿಯ ಸುತೆಯನ್ನು ಕೈಗಳಿಂದ ಹತ್ತಿರ ತಂದು ಅವಳ ವಿರಹದಿಂದ ಮನವು ಮರುಗುತ್ತಿರಲು ಮಾತಾಡಲು ಬರದೆ 'ಅಮ್ಮಾ! ಮಗಳೇ!' ಎನ್ನುತ್ತಾ ಮಗಳ ಶಿರವನ್ನು ಕಣ್ಣೀರಿನಿಂದ ತೋಯಿಸಿದನು. ಋಷಿಯ ಅಪ್ಪಣೆಯನ್ನು ಪಡೆದು ಭಾರ್ಯಾಪರಿವಾರಗಳು ಹಿಂಬಾಲಿಸಲು ರಥಾರೂಢನಾಗಿ ನಿಜಪುರವನ್ನು ಸೇರಹೊರಟನು. ಋಷಿಪ್ರಿಯಳಾದ ಸರಸ್ವತೀ ನದಿಯ ಎರಡು ದಂಡೆಗಳಲ್ಲಿ ವಸಿಸಿದ ಋಷಿವರ್ಯರ ಶಾಂತ ವಿಮಲಾಶ್ರಮ ಪದಗಳನ್ನು ನೋಡುತ್ತಾ ಪೋಗುತ್ತಿದ್ದನು. ಬ್ರಹ್ಮಾವರ್ತದಿಂದ ಬಂದ ಮನುರಾಜನನ್ನು ಗೀತಸ್ತುತಿ, ವಾದ್ಯಗಳಿಂದ ಪ್ರಜರು ಸತ್ಕರಿಸಿದರು. ಯಜ್ಞವರಾಹ ಮೂರ್ತಿಯ ಜ್ಞಾನಾನಂದ ಲಕ್ಷಣ ರೋಮಗಳು ಉದುರಿದ ಪವಿತ್ರಸ್ಥಲಗಳಲ್ಲಿ ನೆಲಸಿದ ಬರ್ಹಿಷ್ಮತೀ ಎಂಬ ತನ್ನ ಪುರವನ್ನು ಮನುರಾಜನು ಸೇರಿದನು. ಶ್ರೀವರಾಹನ ರೋಮಗಳಿಂದ ದರ್ಭಗಳು ಬೆಳೆದವು. ಅವು ಹರಿತ

ಕೋಮಲಕಾಂತಿಯಿಂದ ಶೋಭಿಸಿದವು. ಋಷಿಗಳವುಗಳಿಂದ ಯಜ್ಞಗಳನ್ನು ನಡೆಸಿ ರಾಕ್ಷಸಪೀಡೆಯನ್ನಡಗಿಸಿ ಯಜ್ಞಫಲವನ್ನು ಶ್ರೀಹರಿಗರ್ಪಿಸಿದರು. ಅಲ್ಲೇ ಮನುರಾಜನಾದರೂ ಕುಶಾಸ್ತರಣವನ್ನು ಮಾಡಿ ಮಾಧವನನ್ನುದ್ದೇಶಿಸಿ ಯಜ್ಞಗಳನ್ನು ಮಾಡಿದನು. ಅದರಿಂದ ಶಾಶ್ವತ ಪುಣ್ಯಲೋಕವನ್ನೂ ಪಡೆದನು.

ಅಂತಹ ಬರ್ಹಿಷ್ಮತೀ ನಗರವು ಸರ್ವಸಂಪತ್ಸಮೃದ್ಧವೂ ತಾಪತ್ರಯನಾಶಕವೂ ಆಗಿತ್ತು. ಅಲ್ಲಿದ್ದ ದಿವ್ಯ ರಾಜಭವನದಲ್ಲಿ ಪ್ರವೇಶಿಸಿ ಮನುರಾಜನು ಶತರೂಪಾದೇವಿಯಿಂದಲೂ ಸ್ವಸಂತಾನದಿಂದಲೂಯುತನಾಗಿ ಧರ್ಮಾವಿರುದ್ಧವಾದ ಸಕಲ ಭೋಗಗಳನ್ನು ಅನುಭವಿಸುತ್ತಲಿದ್ದನು. ಆದಿರಾಜನ ಕೀರ್ತಿಯನ್ನು ಸುರಗಾಯಕರು ರಮಣೀಜನ ಸಮೇತರಾಗಿ ಪಾಡಿ ಕೊಂಡಾಡಿದರು.

ಪ್ರತಿನಿತ್ಯವು ಪ್ರಾತಃಕಾಲದಿ ಪ್ರಭುವರನು ರಮಣೀಯ ರಮಾರಮಣನ ಕಥೆಗಳನ್ನು ಕೇಳುತ್ತಾ, ಅಣಿಮಾದ್ಯೈಶ್ವರ್ಯಗಳನ್ನು ಪೊಂದಿದವನಾಗಿಯೂ ಭೋಗಾಸಕ್ತನಾಗದೆ, ಭಗವತ್ಪರ ಜೀವನವನ್ನು ಚರಿತಾರ್ಥಗೊಳಿಸಿದನು. ಜಾವಜಾವದಿ ಹರಿಕಥೆಯ ಕೇಳುತ್ತಾ, ಹೇಳುತ್ತಾ, ಸ್ಮರಿಸುತ್ತಾ, ಹರಿಪೂಜೆ ಮಾಡುತ್ತಾ ಕಾಲವನ್ನು ಕಳೆದನು. ಪ್ರಜಾರಂಜಕನಾಗಿ ಧರ್ಮದಿಂದಾಳಿದುದಲ್ಲದೆ ವಾಸುದೇವಕಥಾಪ್ರಸಂಗದಿಂದ ತಿರ್ಯಗ್ಯಾತನಾ ನರಕ ತಮಸ್ಸುಗಳೆಂಬುವ ತ್ರಿವಿಧ ದುರ್ಗತಿಯನ್ನು ತಿರಸ್ಕರಿಸಿ, ಸುಖಿಯಾದನು. ಮನುಜನಾಗಿದ್ದರೂ ಹರಿಸಂಶ್ರಯ ಸೌಭಾಗ್ಯ ಶಾಲಿಯನ್ನು ಶಾರೀರ ಮಾನಸಿಕ ದೈವಿಕ ಭೌತಿಕ ಕ್ಲೇಶಗಳು ಬಾಧಿಸುವವೇ?

ಮನುರಾಜನು ಮುನಿಗಳಿಂದ ಹೇಳಲ್ಪಟ್ಟು ನಾನಾ ವಿಧ ಶುಭಧರ್ಮವನ್ನೂ ವರ್ಣಾಶ್ರಮಾಚಾರ ವಿಧಿಗಳನ್ನೂ ಸರ್ವಭೂತ ಹಿತಕ್ಕಾಗಿ ರಚಿಸಿ ಉಪದೇಶಿಸಿದನು. ಅದನ್ನೇ ಮನುಸ್ಮೃತಿ ಎಂಬುವರು. ವಿದುರಾ! ಇಂತು ಅದ್ಭುತವಾದ ಆದಿರಾಜನ ಕಥೆಯನ್ನು ನಿನಗೆ ವಿವರಿಸಿದೆನು. ಇನ್ನು ಅವನ ಮಗಳ ಮಗಳಕಥೆಯನ್ನು ಕೇಳು.

## ೨೪. ಕರ್ದಮಚರಿತೆ (ಐಶ್ವರ್ಯಭೋಗ)

ತಾಯಿತಂದೆಯರು ಹೊರಟನಂತರ ದೇವಹೂತಿಯು ಪ್ರೀತಿಯಿಂದ ಪತಿಯಾದ ಕರ್ದಮನನ್ನು ಭವಾನಿಯು ಭವನನನ್ನಂತೆ, ಚಿತ್ತವನ್ನರಿತು ಸೇವಿಸಿದಳು. ವಿದುರಾ! ಅವಳ ವಿಶ್ವಾಸ, ಮನಃ ಶುದ್ಧಿ, ಗೌರವ, ಇಂದ್ರಿಯಜಯ, ಅನಿಮಿತ್ತಸೇವಾ, ಮಧುರ ವಚನ ಮುಂತಾದ ಸುಗುಣಗಳಿಗೆ ಮೆಚ್ಚಿದ ಕರ್ದಮನು ಸಂತೋಷಿಸುವಂತೆ ನಡೆದುಕೊಂಡಳು. ವಿಷಯಲಾಂಪಟ್ಯ, ಮದ, ದಂಭ, ದ್ವೇಷ, ಲೋಭ, ಪಾಪಬುದ್ಧಿಗಳನ್ನು ಸುತರಾಂ ದೂರ ಸರಿಸಿ ಅಪ್ರಮತ್ತತೆಯಿಂದ ಅನುವ್ರತಳಾದ ಮನುಪುತ್ರಿಯನ್ನು ನೋಡಿ, ಕರ್ದಮನು ಅವಳ ಮನವನ್ನರಿತನು. ದೈವಕೃಪೆಯಿಂದ ಇಂತಹ ಮಹನೀಯನಾದ ಪತಿಯನ್ನು ಪೊಂದಿ ಅವನಿಂದ ಪುತ್ರಾದಿ ಸಂಪದವನ್ನಭಿಲಷಿಸಿ, ಬಹುಕಾಲ ವ್ರತಚರ್ಯೆದಿಂದ ಕ್ಷಾಮಕರ್ಷಿತಳಾಗಿದ್ದಳಾ ಸಾಧ್ವಿ. ಕರ್ದಮನು ಅವಳನ್ನು ಕಂಡು ಪ್ರೇಮಗದ್ಗದಿತ ಕಂಠನಾಗಿ ದಯೆಯಿಂದ ಕೂಡಿ ಇಂತು ಮಾತಾಡಿದನು–

ಮಾನಿನೀಮಣಿ! ನೀನು ಮಾಡಿದ ಭಕ್ತಿಯುಕ್ತನಾದ ಶುಶ್ರೂಷೆಯಿಂದ ಪ್ರೀತನಾಗಿರುವೆನು. ನನ್ನ ಪ್ರೀತಿಗಾಗಿ ದೇಹಧಾರಿಗಳಿಗತ್ಯಂತ ಪ್ರಿಯವಾದ ದೇಹವನ್ನೂ ಲಕ್ಷಿಸದೆ, ಸಮುಚಿತ

ಸ್ನಾನಾಲಂಕಾರ ಭೋಜನಾದಿಗಳಲ್ಲಿ ಅತಿ ಶ್ರದ್ಧೆಯನ್ನು ತೋರಲಿಲ್ಲ. ಭಗವತ್ಪ್ರಸಾದದಿಂದ ಸ್ವಧರ್ಮನಿರತನಾದ ನಾನು ತಪಸ್ಸಮಾಧಿ ವಿದ್ಯಾಯೋಗಗಳನ್ನನುಷ್ಠಿಸಿ ಸಮುಪಾರ್ಜಿಸಿದ ವಿದ್ಯಾಜ್ಞಾನ ಬಲವನ್ನಾದರೂ ನೋಡು. ನಿನಗೆ ದುಃಖ ಭಯನಾಶಕವಾದ ಐಶ್ವರ್ಯವು ಸಿದ್ಧವಾಗಿದೆ. ವಿಷಯಭೋಗ ಚಮತ್ಕಾರಗಳು ಉರುಕ್ರಮನಾದ ಭಗವಂತನ ಭ್ರೂಭಂಗಮಾತ್ರ ದಿಂದ ಒಂದೇ ಕ್ಷಣದಲ್ಲಿ ನಷ್ಟವಾಗಿ ಹೋಗುವುವಾದ್ದರಿಂದ ಅವನ ಅನುಗ್ರಹದಿಂದ ಮೋಕ್ಷವೇ ಸಂಪಾದಿಸಲರ್ಹವಾಗಿದೆ. ವಿಷಯಭೋಗಗಳು ಅವನ ಅನುಗ್ರಹವು ಒಂದಿದ್ದರೆ ತಾವಾಗಿಯೇ ಬರುವವು. ಸಕಲ ಪುರುಷಾರ್ಥಯೋಗ್ಯಳಾಗಿರುವ ನಿನಗೆ ಅಶ್ವಮೇಧಾದಿ ವಿಶಿಷ್ಟ ಕರ್ಮಗಳಿಂದ ಸಿಗಲಾರದ ದಿವ್ಯ ಭೋಗಗಳನ್ನು ನಿನ್ನ ಪಾವಿತ್ರ್ಯಾದಿ ಧರ್ಮಗಳಿಗೆ ಮೆಚ್ಚಿ, ಈಗಲೇ ಒದಗಿಸುವೆನು.

ಮೈತ್ರೇಯನು ಹೇಳಿದನು– ಅಣಿಮಾದಿ ಸಕಲ ಯೋಗ ಸಿದ್ಧಿಯುತನಾದ ಪತಿಯ ಮಾತನ್ನು ಕೇಳಿ ದೇವಹೂತಿಯು ಚಿಂತೆಯನ್ನೆಲ್ಲಾ ಮರೆತು ವಿನಯ ನಯ ಪ್ರಿಯ ವಚನ ಗಳಿಂದ, ಮಧುರ ಮಂದಹಾಸಯುಕ್ತಳಾಗಿ ಮಾತನಾಡಿದಳು–

ದ್ವಿಜವೃಷಭ! ಅಮೋಘಯೋಗ ಬಲವೈತಭವನಾದ ನಿನ್ನ ಮಹಿಮೆಯನ್ನು ನಾನು ಬಲ್ಲೆ. ಪ್ರಭೋ! ನೀನೇ ಪೇಳಿದಂತೆ ಸಕೃದಂಗಸಂಗವನ್ನರ್ಥಿಸುವೆನು. ಸಹಜವಾದ ಪುತ್ರಪ್ರಸವ ಕಾಮನವು ತಪ್ಪಲ್ಲವಷ್ಟೇ? ಭವನ್ನಿಮಿತ್ತ ಕಾಮದಿಂದ ತಪ್ತಳಾಗಿ ರಮಣನಾದ ನಿನ್ನಿಂದ ನಾನು ಶಾಸ್ತ್ರಾತಿಕ್ರಮಣ ನಡೆಸದಂತೆ ವರ್ತಿಸಲನುವಾದ ಜ್ಞಾನೋಪದೇಶವನ್ನು ಪೊಂದುವೆನು. ಕೃಶವಾದೀ ಶರೀರದಿಂದ ತಪದಿಂದ ನಿನಗೆ ದೂರಾಗಿ ನೊಂದ ಈ ಮನದಿಂದ, ಕಾಮಸಿದ್ಧಿ ಯಾದರೂ ಹೇಗಾಗುವದು? ರಾಜಪುತ್ರಿಯಾದೆನಗೆ ತಕ್ಕ ಭವನವನ್ನೂ ಪ್ರಸಾದಿಸು. ಕೃಪೆಮಾಡು.

ಎಂದು ಬೇಡಿದ ಪ್ರಿಯಳ ವಚನವನ್ನು ಲಾಲಿಸಿ ಕರ್ದಮನು ತಪೋಬಲದಿಂದ ದಿವ್ಯವಾದ ಕಾಮಗಮನ ವಿಮಾನವನ್ನು ರಚಿಸಿ ನಿಲ್ಲಿಸಿದನು. ಅದು ಸರ್ವಕಾಮಿತ ಪದಾರ್ಥಪೂರ್ಣವಾಗಿ, ರತ್ನಾಢ್ಯವಾಗಿ ರಾರಾಜಿಸಿತು. ಅದರ ಸಂಪತ್ಸಮೃದ್ಧಿಗೆ ಮಣಿಸ್ತಂಭಗಳು, ಕನಕಮಯ ಪಾತ್ರೆಗಳು, ವಿಚಿತ್ರ ಪತಾಕೆಗಳು, ಪೂಮಾಲೆಗಳು, ತೋರಣಗಳು, ನಾನಾ ಶಿಲ್ಪಗಳು, ವಿದ್ರುಮವೇದಿಗಳು, ಮರಕತ ಕುಟ್ಟಿಮಗಳು, ಮೊದಲಾದುವೇ ಸಾಕ್ಷಿಯಾಗಿದ್ದವು. ಪೂಮಾಲೆಗಳ ಸುಗಂಧ, ಗಂಧಾಕರ್ಷಿತವಾದ ಭ್ರಮರಗಳು, ಭ್ರಮರಗಳ ಝುಂಕಾರಗಳು, ಶ್ರುತಿಯನ್ನಾಗಿಸಿ ಪಾಡುವ ಲಲನೆಯರು, ಲಲನಾರತ್ನಸಂಕುಲವಾದ ವಿಶಾಲಗೃಹ ಪ್ರದೇಶಗಳಿಂದ ಮಂಡಿತವಾದ ವಿಮಾನದಲ್ಲಿ ಹಂಸತೂಲಿಕಾ ತಲ್ಪಗಳೇನು, ದುಕೂಲ ಪಟ್ಟವಸ್ತ್ರಗಳೇನು, ನಾನಾ ಆಭರಣ ಗಳೇನು, ಭೋಗದ್ರವ್ಯ ನಿಚಯವೇನು, ಯಾವ ಕೊರತೆಯೂ ಇಲ್ಲದೇ ಇದ್ದವು. ವಜ್ರ ಕಪಾಟಗಳಿಗೆ ವಿದ್ರುಮ ದೇಹಲಿಗಳು, ಇಂದ್ರನೀಲ ಶಿಖರಗಳಿಗೆ ಹೇಮಕುಂಭಗಳು, ಸ್ಫಟಿಕಕುಡ್ಯ ಗಳಿಗೆ ಪದ್ಮರಾಗ ಲತೆಗಳು, ವಿಚಿತ್ರ ವಿತಾನಗಳಿಗೆ ಹೇಮತೋರಣಗಳಲಂಕಾರವಾಗಿರೆ, ಆ ಸಕಲ ಶೋಭಾಕರವಾದ ವಿಮಾನವು ವಿಹಾರಭವನ, ಶಯನಶಾಲೆ, ಸ್ಥಿತಿಮಂದಿರ, ಪ್ರಾಂಗಣ ಗಳಿಂದ ಕೂಡಿ ಆಶ್ಚರ್ಯಕರವಾಗಿತ್ತು. ಅಲ್ಲಿ ಕೃತ್ರಿಮ ಹಂಸಪಾರಾವತಗಳನ್ನು ನಿಜವಾದ ಸಜಾತೀಯ ದ್ವಿಜಗಳು ನಿಜವೆಂದು ತಿಳಿದು, ಬಂದು ಬದಿಗೆ ಕೂತು, ರತಿಗೆ ಕರೆಯುವಂತೆ ಕಲಕಲರವವನ್ನು ಗೈಯ್ಯುತ್ತಿದ್ದವು. ಇಂತಹ ಸುಂದರ ಮಂದಿರವನ್ನು ಕಂಡೂ ಆನಂದಪಡ ದಿರುವ ಮಡದಿಯ ಮನದಿಂಗಿತವನ್ನರಿತು ಕರ್ದಮನು 'ಭೀರು! ಈ ಶುಕ್ಲಕೃತ ಬಿಂದು

ತೀರ್ಥದಲ್ಲಿ ಸ್ನಾನ ಮಾಡು. ಈ ವಿಮಾನವನ್ನಧಿರೋಹಿಸು. ನಿನ್ನ ಸರ್ವಕಾಮಗಳೀಡೇರುವವು' ಎಂದನು. ಆ ಕಮಲಲೋಚನೆಯು ಯೋಚನೆಯನ್ನು ಬಿಟ್ಟು ತನ್ನ ತಾ ನೋಡಿಕೊಂಡಳು.

ಉಟ್ಟವಸನವು ಧೂಳಿಧೂಸರವಾಗಿತ್ತು; ಕೂದಲು ಜಡೆಗಟ್ಟಿದ್ದವು. ಶರೀರವೋ ಕಲ್ಮಷಾಕುಲವಾಗಿತ್ತು; ಸ್ತನಗಳು ಕೃಷ್ಣಪಾಂಡರಗಳಾಗಿದ್ದವು; ನೋಡಿ ನಾಚಿದ ದೇವಹೂತಿಯ ಸರಸ್ವತೀ ತೀರದ ಶುಭಹ್ರದದಲ್ಲಿ ಮುಳುಗಿದಳು. ಅಲ್ಲಿ ಹದಿನಾರು ವರ್ಷದ ಸುರಸುಂದರಿಯರು ಉತ್ಪಲ ಗಂಧವನ್ನು ಬೀರುತ್ತಾ ಬಂದು, ದಿವ್ಯಮಂದಿರದಲ್ಲಿ ಆಕೆಯನ್ನು ಕರೆದೊಯ್ದರು. 'ರಾಜಪುತ್ರಿ! ನಾವೆಲ್ಲ ನಿನ್ನ ದಾಸಿಯರು. ಆಜ್ಞಾಪಿಸು' ಎಂದು ಕೈಜೋಡಿಸಿ ನಿಂತರು. ಪ್ರಸನ್ನಳಾದ ದೇವಹೂತಿಗೆ ಕೆಲವರು ಪನ್ನೀರಿನ ಜಳಕವನ್ನು ಮಾಡಿಸಿದರು. ಕೆಲವರು ನೂತನ ಕನಕ ದುಕೂಲದ್ವಯವನ್ನು ತಂದುಡಿಸಿದರು. ಕಾಂತಿ ಮದ್ಭೂಷಣರಾಜಿಯನ್ನು ತೊಡಿಸಿದರು. ಅಮೃತಾಸವದಿಂದ ಕೂಡಿದ ಚತುರ್ವಿಧಾನ್ನವನ್ನು ತಂದು ಮುಂದಿಟ್ಟರು. ನಿಲುವುಗನ್ನಡಿಯ ಮುಂದೆ ನಿಂತು ಸರ್ವಾಲಂಕಾರ ಭರಿತವಾದ ತನ್ನ ಶರೀರವನ್ನು ನೋಡಿ ಚಕಿತಳಾದಳು. ಪೂಮಾಲೆ ಹಾಕಿ, ದಿವ್ಯವಸನವನ್ನುಟ್ಟು, ಕಾಸಿನ ಸರ, ಕಾಂಚನ ನೂಪುರ, ರತ್ನಪೂರಿತ ಕಾಂಚೀ ಕಲಾಪ, ಸರಿಗಿ ಮೊದಲಾದಾ ಭರಣಗಳಿಂದ ಭೂಷಿತಳಾದ ತಾನು ದಿವ್ಯಸುಂದರಿಯಾಗಿರುವುದನ್ನು ಕಂಡು ನಾಚಿದಳು. ಮದನ ಬಾಣಗಳನ್ನು ಧಿಕ್ಕರಿಸುವ ಕಡೆಗಣ್ಣಿನ ನೋಟ, ಪದ್ಮವನ್ನು ನಾಚುವಂತೆ ಮಾಡುವ ಮುಖ, ನೀಲರತನಗಳನ್ನು ಹಾರಿಸುವ ಹುಬ್ಬು! 'ಸರಿಯಾಗಲಿ! ಪತಿ ಇಲ್ಲದಿವುಗಳಿಂದೇ'ನೆಂದು ಸ್ಮರಿಸಿದ ಕೂಡಲೆ, ತನ್ನ ಸಮೀಪದಲ್ಲೇ ಬಂದು ನಿಂತ ಕರ್ದಮ ಪ್ರಜೇಶನನ್ನೂ ನೋಡಿ, ಸಾವಿರ ದಾಸಿಯರ ಕಡೆಯೂ ನೋಡಿದಳು. ಸ್ನಾತಭೂಷಿತಳಾದ ರುಚಿರಾಂಗಿಯನ್ನು ನೋಡಿ ವ್ಯವಾಯಲೀಲಾರಂಭದಿಂದ ಕೂಡಿ, ಕರ್ದಮನು ಕಾಂತೆಯಿಂದ ವಿಮಾನವನ್ನೇರಿದನು. ಅದೋಷನು ಹರಿಗುಣಾಮೃತಪಾನದಿಂದ ಚತುರನಾಗಿದ್ದ ಕರ್ದಮನು ದೋಷಾರತನು ಅಧರಾಮೃತ ಪಾನಚತುರನಾಗಿ ಪರಿವರ್ತಿಸಿಯೂ ವಿಕಾರರಹಿತನಾಗಿದ್ದನು. ಮನ್ಮಥ ಸಖನಾದ ಮಲಯಮಾರುತನು ಸಂಚರಿಸುವ ಮಂದಾಕಿನೀ ಜಲಪಾತರುತಸಹಿತ ಸುಂದರ ಕುಲಾಚಲ ಕಂದರಗಳಲ್ಲಿ ವಿಮಾನಾರೂಢನಾಗಿ ದೇವಹೂತಿಯಿಂದ ರಮಿಸುತ್ತಾ ವೈಸ್ರಂಭಕ ನಂದನಪುಷ್ಪಭದ್ರ ಮಾನವ ಚೈತ್ರರಥಾದಿ ದಿವ್ಯಸ್ಥಲಗಳಲ್ಲಿ ಕ್ರೀಡಿಸಿದನು. ವಾಯುವಿನಂತೆ ಕಾಮಗಮನವಾದ ವಿಮಾನದಲ್ಲಿ ಕೂತು ಲೋಕಗಳನ್ನು ನೋಡುತ್ತಿದ್ದ ಕರ್ದಮನು ವೈಮಾನಿಕ ದೇವತೆಗಳನ್ನೂ ಮೀರಿ ಸುಖಿಸಿದನು.

ವಿದುರಾ! ಸರ್ವವ್ಯಸನ ನಾಶಕರನಾದ ತೀರ್ಥಪಾದನ ಚರಣವನ್ನಾಶ್ರಯಿಸಿದ ಉದಾರ ಮನಸ್ಕರಿಗೆ ಅಲಭ್ಯವೂ ಉಂಟೇ?

ಇಂತು ಯೋಗಬಲದಿಂದ ಭೂಗೋಲವನ್ನೇ ನೋಡಿ ಹಿಂತಿರುಗಿ ಸ್ವಾಶ್ರಮವನ್ನು ಸೇರಿ ಕರ್ದಮನು ಪ್ರಾರಬ್ಧಕ್ಷಯವೆಂತು? ಎಂದು ಚಿಂತಿಸಿ ತಾನು ನವರೂಪನಾದನು. ದೇವಹೂತಿಯು ನವರೂಪಳಾದಳು. ಬಹುಕಾಲ ರತಿಮಗ್ನರಾದ ಆ ನವದಂಪತಿಗಳು ಕಾಮಲಾಲಸರಂತೆ ನೂರು ವರ್ಷವನ್ನೊಂದು ಕ್ಷಣದಂತೆ ಕಳೆದರು. ಸತ್ಯಸಂಕಲ್ಪನಾದ ಶ್ರೀಹರಿಪ್ರೇರಣೆಯಂತೆ ನವರೂಪಳಾದ ದೇವಹೂತಿಯಲ್ಲಿ ತಾವದ್ರೂಪ ಕರ್ದಮನು ರೇತೋಧಾನವ ಮಾಡಿದನು. ಸದ್ಯಃ ದೇವಹೂತಿಯು ಉತ್ಪಲಗಂಧಿಯರು ಸುಂದರಾಂಗಿಯರಾದ ಕನ್ಯೆಯರನ್ನೊಂಭತ್ತು ಮಕ್ಕಳನ್ನು ಪ್ರಸವಿಸಿದಳು.

ತತ್‌ಕ್ಷಣವೇ ಸನ್ಯಾಸವನ್ನು ಕೊಳ್ಳಲು ಪಕ್ರಮಿಸುವ ಪತಿಯನ್ನು ಕಂಡು ಭೀತಿಯಿಂದಲೂ ಲಜ್ಜೆಯಿಂದಲೂ ವಿನಮ್ರಳಾಗಿ ನಖಮಣಿಕಾಂತಿಯಿಂದ ಭೂಮಿಯನ್ನುಲ್ಲಿಖಿಸುತ್ತಾ ಕಣ್ಣೀರು ಸುರಿಸುತ್ತಿರಲು ತಡೆದು ಲಲಿತ ವಚೋವಿಲಾಸದಿ ನುಡಿದಳು–

ಪೂಜ್ಯನೇ! ನೀನು ಹೇಳಿದುದೆಲ್ಲವೂ ನಡೆಸಿಕೊಟ್ಟೆ. ಧನ್ಯಳಾದೆ. ಆದರೂ ದೀನಳಾದೆನಗೆ ಅಭಯವನ್ನು ಕೊಡು. ಹರಿಯೇ ನಮಗೆ ಪುತ್ರನಾದರಲ್ಲವೇ ಸರ್ವ ಭಯ ಪರಿಹಾರವನ್ನು ಕಾಣುವುದು? ಸ್ವಾಮೀ! ಮಕ್ಕಳಿಗೆ ಮದುವೆ ಮಾಡಿಲ್ಲವಲ್ಲ! ನೀನು ವನಪ್ರವೇಶ ಮಾಡಲು ನನಗಾ ಸಚ್ಚಿದಾನಂದ ಹರಿಯು ಗತಿಯಾಗುವಂತೆ ಅನುಗ್ರಹಿಸು! ಕಾಮತೃಪ್ತಿ ಕಾಣದ ಕಾತರ ಳೆಂದು ಕಡೆಗಣಿಸಬೇಡ! ಇಂದ್ರಿಯಲೋಲುಪಳಾಗಿ ಶ್ರೀಹರಿಯನ್ನು ಮರೆತು ಇಷ್ಟು ಕಾಲವು ಕಳೆದುದೇ ಸಾಕು! ಆದರೂ ವಿಷಯಾಶೆಯಿಂದ ಅಜ್ಞಾನಿಯಾದೆನಗೆ ಪೂರ್ವಪುಣ್ಯದಿಂದ ನಿನ್ನ ಸಂಗವು ಲಭಿಸಿತು. ಅದು ನನಗೆ ಶ್ರೇಯಸ್ಕರವೇ ಆಯಿತು. ಅಸಜ್ಜನಸಂಯೋಗವೇ ಸಂಸಾರ ಪತನ ಕಾರಣವು. ಸಾಧುಸಂಗವಂತಲ್ಲ. ಸಾಧುಗಳು ದೋಷಹರಣಶೀಲರು. ಭಾರತಖಂಡದಲ್ಲಿ ಮಾಡಿದ ಕರ್ಮವೇ ಧರ್ಮಸಾಧನವು. ವೈರಾಗ್ಯಜನಕವೂ ಆಗುವದು. ಇಲ್ಲಿ ಪುಟ್ಟಿಯೂ ಪವಿತ್ರತೀರ್ಥಪಾದನ ಸೇವೆ ಗೈಯದವರು ಜೀವನ್ಮೃತರೇ ಸರಿ! ನಾನು ಭಗವನ್ಮಾಯೆಯಿಂದ ವಂಚಿತಳಾಗಿ ಮೋಕ್ಷವನ್ನೂ ಕೊಡಿಸುವ ನಿನ್ನ ವಂತಹ ಪತಿಯನ್ನು ಪೊಂದಿಯೂ ಸಂಸಾರದಲ್ಲೇ ನರಳಲಿಚ್ಛಿಸುವೆನು. ಶ್ರೀಹರಿಯ ಬಂಧಕಶಕ್ತಿಯು ಅನುಲ್ಲಂಘನೀಯವಾಗಿದೆ. ಅವನಿಗೆ ನಿಮಗೂ ನಮಿಪೆನು– ಎಂದು ಹೇಳಿ ಸುಮ್ಮನಾದಳು.

## ೨೫. ಕಪಿಲಾವತಾರ

ಮನುಪುತ್ರಿಯು ನುಡಿದ ದೀನವಚನಗಳನ್ನು ಕೇಳಿ ದಯಾಳುವಾದ ಕರ್ದಮನು ಶುಕ್ಲನನ್ನು ತದುಕ್ತ ಸುಮದುರ ಸಂದೇಶವನ್ನೂ ಸ್ಮರಿಸಿ, ಅವಳಿಗಿಂತೆಂದನು–

ರಾಜಪುತ್ರಿ! ವ್ಯಸನವನ್ನು ಬಿಡು, ಅಚಿರದಲ್ಲಿಯೇ ಅಕ್ಷರನು ನಿನ್ನ ಕುಕ್ಷಿಗತನಾಗುವನು. ಯಮನಿಯಮಗಳಿಂದ ಧೃತವ್ರತಳಾಗು. ತಪಃಶ್ರದ್ಧಾದಾನಗಳಿಂದ ಹರಿಯನ್ನು ಪೂಜಿಸು. ಆ ಶುಕ್ಲನು ನಿನ್ನಲ್ಲಿ ಪ್ರೀತನಾಗಿ ನಿನ್ನ ನನ್ನ ಯಶೋವಿಸ್ತಾರನು ಸಂಸಾರಸಾಗರ ತಾರಕನೂ ಆಗಿ ಜನಿಸುವನು. ನಿನ್ನ ಮಗನೆನಿಸಿ, ನಿನ್ನ ಅಹಂ ಮಮಕಾರರೂಪವಾದ ಹೃದಯ ಬಂಧನವನ್ನು ಬಿಡಿಸಿ, ಗುಣಪೂರ್ಣ ನಿಜಸ್ವರೂಪೋಪದೇಶದಿಂದ ಉದ್ಧರಿಸುವನು– ಎನ್ನಲು ದೇವಹೂತಿಯು ಗೌರವದಿಂದ ಆ ಸಂದೇಶವನ್ನು ಗ್ರಹಿಸಿ, ನಿರ್ವಿಕಾರನಾದ ಹರಿಯನ್ನು ಭಜಿಸಿದಳು. ಹತ್ತು ತಿಂಗಳಾಗುತ್ತಿರಲು ಕರ್ದಮನಿಂದ ಆಹಿತನಾದ ಸ್ವಾಮಿಯು ದೇವಹೂತಿಯಲ್ಲಿಂದ ಕಾಷ್ಠದಿಂದ ಬರುವ ಅಗ್ನಿಯಂತೆ ಪ್ರಾದುರ್ಭವಿಸಿದನು. ಮೇಘಗಳು ಮಂದ್ರಮಂದ್ರವಾಗಿ ಗರ್ಜಿಸಿದವು. ಗಂಧರ್ವರು ಪಾಡಿದರು. ಅಪ್ಸರೆಯರು ಆಡಿದರು. ದೇವಜನವು ದುಂದುಭಿಗಳನ್ನು ಬಾರಿಸಿ ಪುಷ್ಪವೃಷ್ಟಿಯನ್ನು ಸುರಿಸಿದರು. ಆಶ್ರಮಗಳು ಸರೋವರಗಳು ಸುಜನರ ಮನಗಳು ಪ್ರಸನ್ನ ವಾದವು.

ಆಗ ಸರಸ್ವತೀ ತೀರದ ಕರ್ದಮಾಶ್ರಮವನ್ನು ಬ್ರಹ್ಮನು ಮರೀಚ್ಯಾದಿ ಋಷಿಗಳಿಂದ ಬಂದು ಮುಟ್ಟಿದನು. ಮಹಾಗುಣಪೂರ್ಣನಾದ ಶ್ರೀಹರಿಯೇ ಸಾಂಖ್ಯವನ್ನುಪದೇಶಿಸಲು

ಅವತರಿಸುವನೆಂದು ತಿಳಿದ ಸರ್ವಜ್ಞನಾದ ಬ್ರಹ್ಮನು ಶ್ರೀಹರಿಕಾರ್ಯವನ್ನು ಮನಸಾ ಮೆಚ್ಚಿ, ಸರ್ವೇಂದ್ರಿಯಪ್ರೀತಿಯುತನಾಗಿ ಕರ್ದಮನನ್ನು ನೋಡಿ ನುಡಿದನು–

ಕರ್ದಮಾ! ತಾತ! ನಿಷ್ಕಪಟನಾಗಿ ನನ್ನ ಸೇವೆಯಂ ಗೈದೆ. ನನ್ನ ಮಾತನ್ನು ಚೆನ್ನಾಗಿ ಮರ್ಯಾದೆಯಿಂದ ಪಾಲಿಸಿದ ನಿನ್ನಲ್ಲಿ ನಾನು ಪ್ರೀತನಾಗಿರುವೆನು. ತಂದೆಯ ವಾಕ್ಯವನ್ನು ಹಾಗೇ ಮಾಡುವೆನೆಂದು ಅನುಮೋದಿಸುವುದರಿಂದಲೇ ನಂದನನು ಪಿತೃಶುಶ್ರೂಷಾಫಲವನ್ನು ಪೊಂದುವನು. ಈ ನಿ ನ್ನ ಪುತ್ರಿಯರ ವಿವಾಹವನ್ನು ಮಾಡು. ಅವಶಿಷ್ಟ ಸರ್ಗಕಾರ್ಯವನ್ನು ಆ ನವ ಪ್ರಜೇಶರು ಪೂರೈಸುವರು. ಆ ಋಷಿಮುಖ್ಯರಿಗೆ ಯೋಗ್ಯರಾದ ನಿನ್ನ ಮಕ್ಕಳನ್ನು ಕೊಡು. ಇಲ್ಲಿ ಕೀರ್ತಿಯನ್ನೂ ಪರತ್ರ ಸುಖವನ್ನೂ ಪೊಂದು. ವಿವಿಧ ಪುರುಷಾರ್ಥಸಾಧನ ನಿಧಿಯಾದ ಪರಮಪುರುಷನು ಸ್ವೇಚ್ಛೆಯಿಂದ ಕಪಿಲನಾಗಿ ನಿನ್ನಲ್ಲಿ ಬಂದು ಪುಟ್ಟುವವನೆಂದು ತಿಳಿದಿರುವೆನು. ನೀನೂ ಹಾಗೆಯೇ ತಿಳಿ. ಕಾಲದಿಂದ ನಷ್ಟವಾಗಿರುವ ಸಾಂಖ್ಯತತ್ತ್ವವನ್ನು ಆಸುರಿ ಎಂಬ ಮುನಿಯನ್ನುದ್ದೇಶಿಸಿ ಉಪದೇಶಿಸುವನು. ಜ್ಞಾನವಿಜ್ಞಾನಗಳನ್ನು ತಿಳಿಸಿ, ಕರ್ಮ ವಿಧಾನವನ್ನೂ ಪ್ರಕಾಶಪಡಿಸುವನು. ಹಿರಣ್ಯಕೇಶನಾದ ಪರಮಾನಂದಮೂರ್ತಿಯೂ ಪದ್ಮ ಧ್ವಜಾದಿ ಚಿಹ್ನಿತ ಪದಪದ್ಮದಿಂದ ಭೂಮಿಯ ಮೇಲೆ ಸಂಚರಿಸಿ ಸಕಲರನ್ನು ಪಾವನಗೊಳಿಸು ವನು.

ಅಮ್ಮಾ! ದೇವಹೂತಿ! ಈ ನಿನ್ನ ಗರ್ಭಗತನಾಗಿರುವವನು ಕೈಟಭಾರಿಯೇ ನೋಡು. ಅಜ್ಞಾನವನ್ನು ಸಂಶಯವನ್ನು ನಿವಾರಿಸುತ್ತಾ ಸಕಲಲೋಕ ಶರಣ್ಯವಾದ ಪಾದವನ್ನು ತೋರಿ ಲೋಕದಲ್ಲಿ ತಿರುಗುವನು. ಮುಕ್ತರೊಡೆಯನಾದ ಶ್ರೀಶನು ಸಾಂಖ್ಯಾಚಾರ್ಯಸಮ್ಮತನಾಗಿ ಕಪಿಲನೆಂದು ಖ್ಯಾತಿ ಪಡೆಯುವನು. ನಿನ್ನ ಯಶೋವರ್ಧನನಾಗುವನು– ಎಂದು ಋಷಿದಂಪತಿ ಗಳನ್ನು ಸಮಾಶ್ವಸಿಸಿ, ಸನಕಾದಿಗಳಿಂದಲೂ ನಾರದನಿಂದಲೂ ಕೂಡಿ ಹಂಸಯಾನನು ಸತ್ಯ ಲೋಕವನ್ನು ಸೇರಿದನು.

ಆಗ ಕರ್ದಮನು ಬ್ರಹ್ಮನ ಅಪ್ಪಣೆಯಂತೆ ತನ್ನ ಸುತೆಯರನ್ನು ನವಪ್ರಜೇಶರಿ ಗರ್ಪಿಸಿದನು. ಕಲಾದೇವಿಯನ್ನು ಮರೀಚಿಗೆ, ಅನಸೂಯೆಯನ್ನತ್ರಿಗೆ, ಶ್ರದ್ಧೆಯನ್ನಂಗಿರಸನಿಗೆ, ಹವಿರ್ಭುವಳನ್ನು ಪುಲಸ್ತ್ಯನಿಗೆ, ಗತಿಯನ್ನು ಪುಲಹನಿಗೆ, ಕ್ರಿಯೆಯನ್ನು ಕ್ರತುನಿಗೆ, ಖ್ಯಾತಿಯನ್ನು ಭೃಗುವಿಗೆ, ಅರುಂಧತಿಯನ್ನು ವಸಿಷ್ಠನಿಗೆ, ಶಾಂತಿಯನ್ನು ಅಥರ್ವಣನಿಗೆ ಕೊಟ್ಟನು. ಮಕ್ಕಳಿಂದ ಕೂಡಿದ ಅಳಿಯಂದಿರನ್ನು ಧನಮಾನಗಳಿಂದ ಪೂಜಿಸಿ ಕೃತಕೃತ್ಯನಾದನು. ಆ ಋಷಿಗಳು ತಮ್ಮ ಪತ್ನಿಯರಿಂದೊಡಗೂಡಿ ಆನಂದದಿಂದ ಕರ್ದಮ ದೇವಹೂತಿಯರು ಬೀಳ್ಕೊಡಲು, ಸ್ವಾಶ್ರಮ ಗಳನ್ನು ಸೇರಪೋದರು. ವಿದುರಾ! ಈಗ ಕಪಿಲ ಪ್ರಾದುರ್ಭಾವವನ್ನು ಕೇಳು.

ಶ್ರೀಹರಿಯು ಅವತರಿಸುವನೆಂದು ಬ್ರಹ್ಮವಚನದಿಂದ ತಿಳಿದು ಕರ್ದಮನು ಏಕಾಂತದಲ್ಲಿ ಶರಣಾಗತನಾಗಿ ನಮಸ್ಕರಿಸಿ ಬೇಡಿಕೊಂಡನು–

ಅಹೋ! ಸಂಸಾರದಲ್ಲಿ ನರಳುತ್ತಾ ಅಮಂಗಲವಿಷಯಮಗ್ನರಾದ ನನ್ನಂತಹವರಲ್ಲಿಯೂ ಬಹುಕಾಲ ಸೇವೆಯಿಂದ ತತ್ತ್ವದೇವತೆಗಳು ತತ್ತ್ವೇಶನು ಪ್ರಸನ್ನರಾಗುವದುಂಟು! ಬಹುಜನ್ಮ ಪರಿಪಾಕದಿಂದ ಚೆನ್ನಾಗಿ ಜಿತೇಂದ್ರಿಯರಾದ ವೈರಾಗ್ಯಶಾಲಿ ಸುಜನರು ಏಕಾಂತದಲ್ಲಿ ಅಸಂಪ್ರಜ್ಞಾತ ಸಮಾಧಿಯೋಗಬಲದಿಂದ ನೋಡಲು ಯತ್ನಿಸುವ ಈ ನಿನ್ನ ಪದಪದ್ಮದಿಂದೆ ನಮ್ಮ ಮನೆಯಲ್ಲಿ ನಡೆಯಾಡಲು ಬಂದೆಯಾ ತಂದೇ? ನಾವು ನಿನ್ನನ್ನು ಪುತ್ರನೆಂದು ತಿಳಿದು

ಕಡೆಗಾಣಿಸಿದರೂ ಉಪೇಕ್ಷಿಸಿ ಪೊರೆವ ನಿನ್ನ ಸ್ವಭಕ್ತಪಕ್ಷರಕ್ಷಾದೀಕ್ಷೆಗೇನೆಂಬೆ! ನೀನಿಲ್ಲಿ ನನ್ನ ಪತ್ನಿಯಲ್ಲಿ ಪುಟ್ಟಿರುವುದು ನಿನ್ನ ವಾಕ್ಯವನ್ನು ಸತ್ಯವಾಗಿಸಬೇಕೆಂದಲ್ಲದೇ ನಮ್ಮಂತಹ ಪಾಮಗರು ಆ ಭಾಗ್ಯವನ್ನು ಪಡೆಯಲರ್ಹರೇ? ನಮಗೇನೋ ಮಂಗಳವಾಗಬೇಕಾಗಿದೆ. ಅಪ್ರಾಕೃತನಾದ ನೀನು ಭಕ್ತರು ಕೋರಿದಂತೆ ಪ್ರಿಯಕರ ರೂಪಗಳನ್ನು ಪ್ರಕಟಿಸಿ, ಮೆರೆವೆ. ಬ್ರಹ್ಮಾದಿ ತವ ದಾಸರನ್ನು ಪೊರೆವೆ. ತ್ರಿಯುಗನೇ! ತತ್ತ್ವಜ್ಞಾನೇಚ್ಛುಗಳಾದ ಬ್ರಹ್ಮಾದಿ ಸೂರಿಜನರು ಮುಟ್ಟಿ ಭಜಿಸುವ ಪದಪದ್ಮನು, ಐಶ್ವರ್ಯ ವೈರಾಗ್ಯ ಯಶೋಜ್ಞಾನವೀರ್ಯ ಕಾಂತಿಪ್ರಮುಖ ಗುಣ ಸ್ವರೂಪನು ಆದ ನಿನಗೆ ಶರಣಾಗತನಾಗಿರುವೆನು. ಪೂರ್ಣನು, ಜಗದಾಧಾರನು ರಮಾ ವಲ್ಲಭನು, ಸದಾಗಮನ ಶೀಲನು, ಸರ್ವಜ್ಞನು, ಸರ್ವಕಾಮದನು, ಸರ್ವ ಸಂಹಾರಕನು, ವೇದವೇದ್ಯನು, ಸರ್ವಲೋಕೇಶನು, ಸ್ವಗತಪರಗತಾವಿಶೇಷ ಜ್ಞಾನಸ್ವರೂಪನು, ಸ್ವತಂತ್ರನು, ಬ್ರಹ್ಮರುದ್ರ ಪಾಲಕನು ಆದ ಕಪಿಲನೇ! ನಿನ್ನನ್ನೇ ನಂಬಿರುವೆನು. ನಿನ್ನ ಹುಟ್ಟಿನಿಂದೇ ಆಪ್ತಕಾಮ ನಾದ ನಾನು ನಿನ್ನಪ್ಪಣೆಯಿಂದ ಪಾರಿವ್ರಾಜ್ಯವನ್ನು ಪೊಂದಿ; ಗ್ರಾಮೈಕರಾತ್ರವಿಧಿಯಿಂದ ಸಂಚರಿ ಸುತ್ತಾ ನಿನ್ನನ್ನು ಧ್ಯಾನಿಸಿ, ವಿಶೋಕನಾಗುವೆನು– ಎಂದು ಪ್ರಾರ್ಥಿಸಲು ಭಗವಂತನಿಂತು ನುಡಿದನು–

ಯಥಾರ್ಥಜ್ಞಾನವಿಷಯದಲ್ಲಿ ನಾ ಪೇಳಿರುವುದೇ ಸರ್ವಲೋಕ ಜನರಿಗೆ ಪ್ರಮಾಣ ವಾಗುವುದು. ನಾನೇ ಆಪ್ತತಮನು. ಬ್ರಹ್ಮವಾಯುಗಳೂ ಆಪ್ತರೇ! ನಿನ್ನ ಮಗನಾಗುವೆನೆಂದೆನು. ಆ ಮಾತನ್ನು ಸತ್ಯವನ್ನಾಗಿಸಲು ಅವತರಿಸಿರುವೆನು. ಸಂಸಾರಭಯದಿಂದ ಮೋಕ್ಷಕಾಮರಿಗೆ ಚತುರ್ವಿಂಶತಿ ತತ್ತ್ವಸಂಖ್ಯಾನವನ್ನು ಬ್ರಹ್ಮಜ್ಞಾನವನ್ನು ಸ್ಥಾಪಿಸುವುದೀ ನನ್ನ ಅವತಾರೋದ್ದೇಶ್ಯ ವಾಗಿದೆ. ಸೂಕ್ಷ್ಮವಾದ ಬ್ರಹ್ಮಜ್ಞಾನವನ್ನು ತಿಳಿಸುವ ಸಾಂಖ್ಯತತ್ತ್ವವು ಬಹುಕಾಲವಾಗಿ ತಿರೋಹಿತನಾಗಿದೆ. ಅದನ್ನು ಪುನಃ ಪ್ರವರ್ತಿಸಲು ಈ ದೇಹವನ್ನು ಧರಿಸಿ ಬಂದಿಹೆನು. ನೀನೇ ಕೇಳಿದಂತೆ ಅನುಜ್ಞೆಯನ್ನು ಕೊಟ್ಟಿರುವೆನು. ಸರ್ವ ಕರ್ಮಫಲವನ್ನೆನಗರ್ಪಿಸಿ, ಸನ್ಯಾಸಿಯಾಗಿ ಪೋಗು. ಇಂದ್ರಿಯಗ್ರಾಮವು ದುರ್ಜಯವು. ಅದನ್ನು ಜಯಿಸಿ, ಮೋಕ್ಷೇಶನಾದ ನನ್ನನ್ನು ಭಜಿಸು. ಆದಾನಾದಿ ಕರ್ತನು ಸ್ವಪ್ರಕಾಶನಾದ ನಾನು ಸರ್ವಭೂತ ಹೃದಯ ಗುಹೆಯಲ್ಲಿರು ವೆನು. ಅಂತೇ ನಿನ್ನಲ್ಲಿಯೂ ಲಿಂಗಶರೀರ ಭಿನ್ನನು, ಜೀವಾಂತರ್ಯಾಮಿಯು, ಆಗಿರುವೆನು. ಚಿದಾನಂದಸ್ವರೂಪನಾದ ನನ್ನನ್ನು ನಿತ್ಯಕೈಂಕರ್ಯದಿಂದ ಸೇವಿಸು. ಶೋಕಭಯದೂರನಾಗಿ ಮುಕ್ತನಾಗುವೆ. ವಿಶ್ವವೆಲ್ಲವೂ ಅಸಾರವು, ಅನಿತ್ಯವು. ಅಂತರ್ಯಾಮಿಯಾದ ನಾನು ನಿತ್ಯನು, ಆನಂದಪೂರ್ಣವೆಂದು ತಿಳಿದ ಜ್ಞಾನಿಯು ದುಃಖಾಜ್ಞಾನಭಯಶೋಕಾದ್ಯುಪದ್ರವಗಳನ್ನು ಕಳೆದು ಕೊಂಡು ಷೋಡಶಕಲಾಯುಕ್ತ ಲಿಂಗಶರೀರಕಾರ್ಯೋಪರಮವನ್ನು ಪೊಂದಿ ಮುಕ್ತನಾಗುವನು. ಸರ್ವದುಷ್ಕರ್ಮಫಲನಾಶಕ ವಾದ ಆಧ್ಯಾತ್ಮಿಕ ಜ್ಞಾನವನ್ನು ನನ್ನ ಮಾತೆಗೆ ಹೇಳುವೆನು, ಅವಳ ಚಿಂತೆ ಬಿಡು. ಅದರಿಂದವಳು ಸಂಸಾರ ಕ್ಲೇಶವನ್ನು ದಾಟಿ, ನನ್ನ ಲೋಕವನ್ನು ಪೊಂದುವಳು.

ಮೈತ್ರೇಯನು ಪೇಳಿದನು–

ವಿದುರಾ! ಈ ರೀತಿಯಾಗಿ ಕಪಿಲನು ಪೇಳಲು ಕರ್ದಮನು ಸುಪ್ರೀತನಾಗಿ, ಶ್ರೀಹರಿಗೆ ಪ್ರದಕ್ಷಿಣವನ್ನು ಮಾಡಿ ವಂದಿಸಿ ವನಪ್ರವೇಶವನ್ನು ಮಾಡಿದನು; ಮೌನವ್ರತವನ್ನವಲಂಬಿಸಿ ದನು; ಹರಿಯೇ ರಕ್ಷಕನೆಂದು ನಂಬಿದನು. ಹರಿಗುಣ ಮನನವನ್ನು ಮಾಡಿ ದುಸ್ಸಂಗದೂರನಾಗಿ, ಕ್ಷೋಣೀಮಂಡಲದಿ ಸಂಚರಿಸಿದನು. ಅಗ್ನಿಗಳನ್ನು ತನ್ನಲ್ಲೇ ಆರೋಪಿಸಿಕೊಂಡು ಗುಣಪೂರ್ಣ

ನಾದ ಹರಿಯಲ್ಲಿ ಮನಸ್ಸಿಟ್ಟನು. ಆಶ್ರಮಾದಿ ವಸತಿಗಳಿಲ್ಲದೆ ತಿರುಗುತ್ತಾ, ಮೂರ್ತಾಮೂರ್ತ ಪ್ರಪಂಚ ವಿಲಕ್ಷಣನಾದ ಹರಿಯೇ ಸರ್ವೋತ್ತಮನೆಂದು ನಂಬಿ, ಭಕ್ತಿಯನ್ನು ಮಾಡಿ, ಶುದ್ಧ ನಾದನು. ಅಹಂಕಾರ ಮಮಕಾರಗಳನ್ನು ಬಿಟ್ಟು, ಶೀತೋಷ್ಣ ಸುಖದುಃಖಾದಿ ದ್ವಂದ್ವಸಹಿಷ್ಣು ನಾದನು. ಯಥಾಸ್ಥಿತ ವಸ್ತುದರ್ಶಿಯು ಸ್ವತಂತ್ರ ಹರಿಜ್ಞಾನಿಯು, ಅಂತರ್ಯಾಮಿ ಶಾಂತನು, ನಿಶ್ಚಲಭಕ್ತಿಯುಕ್ತನು ಆಗಿ ಅಲೆಗಳೇಳದ ಕಡಲಿನಂತೆ ಶೋಭಿಸಿದನು. ಸರ್ವಭೂತಸ್ಥನಾದ ಸ್ವಾಮಿಯಲ್ಲಿ ಸರ್ವಭೂತಗಳನ್ನು ನೋಡಿ, ಅಂತರ್ಯಾಮಿಗೂ, ಸರ್ವಗತನಾದ ಪರಮಾತ್ಮನ ರೂಪಗಳಿಗೂ, ಅಭೇದವನ್ನು ಪ್ರತ್ಯಕ್ಷೀಕರಿಸಿದನು. ಸ್ವಬಿಂಬನಾದ ಕೃಷ್ಣನು ಜಗಜ್ಜನ್ಮಾದಿ ಕಾರಣನು. ಸರ್ವಾಂತರ್ಯಾಮಿಯು, ಸರ್ವಜ್ಞನು ಎಂದು ಭಕ್ತಿಭರದಿಂದ ಭಜಿಸಿ, ಅಪರೋಕ್ಷ ಜ್ಞಾನವನ್ನು ಪೊಂದಿ, ಜೀವನ್ಮುಕ್ತನಾದನು. ನಿಷಿದ್ಧಗಳಲ್ಲಿಚ್ಛೆ, ಮತ್ತು ವೈಷ್ಣವರಲ್ಲಿ ದ್ವೇಷ ಇಲ್ಲದೆ, ಸರ್ವತ್ರ ಲಕ್ಷ್ಮೀಪತಿಯು ನೆಲೆಸಿರುವನೆಂದು ಕಂಡು ಭಗವದ್ಭಕ್ತಿಯಿಂದ ಭಾಗವತರು ಸೇರುವ ಹರಿಲೋಕವನ್ನೈದಿ ಸುಖಿಸಿದನು.

## ೨೬. ಕಪಿಲ ದೇವಹೂತೀ ಸಂವಾದವು

ಶ್ರೀಶುಕನು ಪೇಳಿದುದನ್ನು ಕೇಳಿ ರಾಜನು ಪ್ರಶ್ನಿಸಿದನು– ಶ್ರೀನಾರಾಯಣನು ಸಾಕ್ಷಾತ್ತಾಗಿ ತನ್ನಿಚ್ಛೆಯಿಂದ ತನ್ನ ಸ್ವರೂಪಜ್ಞಾನವನ್ನು ಜನರಿಗುಪದೇಶಿಸಲು ಕಪಿಲನಾಗಿ, ಅವತರಿಸಿ ತತ್ತ್ವಸಂಖ್ಯಾನವನ್ನು ರಚಿಸಿದನೆಂದು ಕೇಳಿದೆನು. ನಿವೃತ್ತಧರ್ಮಾನುಷ್ಠಾನರತರಿಂದ ಮಾನ್ಯ ನಾದ, ಸನಕಾದಿ ಸರ್ವಯೋಗಿಗುರುತಮನಾದ ಶ್ರುತಿಗಳಲ್ಲಿ ಕ್ರಿಯಾದಿ ಗುಣವಿಶಿಷ್ಟನಾಗಿ ಪೊಗಳಲ್ಪಟ್ಟ, ಆ ಕಪಿಲನ ಗುಣಮಹಿಮೆಯನ್ನು ಕೇಳುತ್ತಿರಲು ನನ್ನ ಇಂದ್ರಿಯಗಳೆಲ್ಲ ಪರಮಾನಂದವನ್ನು ಪೊಂದುತ್ತಿವೆ. ಶ್ರೀಹರಿಯು ಷಡ್ಗುಣೈಶ್ವರ್ಯಸಂಪನ್ನನು, ಸ್ವತಂತ್ರನು, ಕೀರ್ತನೀಯ ಸತ್ಕಥನು, ನಾನವನ ಮಹಿಮೆಯನ್ನು ಶ್ರದ್ಧೆಯಿಂದ ಕೇಳುವೆನು ಪೇಳು.

ಶ್ರೀಶುಕನು–ರಾಜನ್! ವ್ಯಾಸಸಖನಾದ ಮೈತ್ರೇಯನು ತತ್ತ್ವವಿದ್ಯೆಯಲ್ಲಿ ಶ್ರದ್ಧೆಯಿಂದ ಪ್ರಶ್ನಿಸಿದ ವಿದುರನಿಗೆ ಪೇಳಿದುದನ್ನು ಕೇಳು. ಅದೇ ನಿನಗೂ ಸಮಾಧಾನವಾಗುವುದು.

ಭಗವಂತನಾದ ಕಪಿಲನು ತಂದೆ ಅರಣ್ಯವನ್ನು ಸೇರಪೋದ ಮೇಲೆ ತಾಯಿಯ ಪ್ರೀತಿಗಾಗಿ ಅಲ್ಲೇ ಬಿಂದುಸರಸ್ತೀರದಲ್ಲಿ ಕೆಲಕಾಲ ವಸಿಸಿದನು. ಒಂದು ದಿನ ನಿಶ್ಚಲ ಬುದ್ಧಿರೂಪನಾದ ಕಪಿಲನು ಕೂತಿರಲು, ದೇವಹೂತಿಯು ಆ ಸಮಯವನ್ನರಿತು ತನ್ನ ಮಗನಾದ್ದರಿಂದ ಆಪ್ತನು, ತತ್ತ್ವಮಾರ್ಗದರ್ಶನ ಗುರುವರನಾದ್ದರಿಂದ ವಿವಕ್ಷಿತಾರ್ಥ ತತ್ತ್ವಜ್ಞಾನಿಯೂ ಆದ ಕಪಿಲನ ಸಮೀಪದಿ ಬಂದು ವಂದಿಸಿ ಬ್ರಹ್ಮವಚನವನ್ನು ಸ್ಮರಿಸುತ್ತ ಇಂತೆಂದಳು–

ಇಂದ್ರಿಯಗಳನ್ನು ಸಂಭಾವಿಸಲು ಪ್ರಯತ್ನಿಸಿ, ತತ್ತ್ವಜ್ಞಾನ ದೂರಳಾದೆ. ಆ ಇಂದ್ರಿಯ ತೃಪ್ತಿಯೂ ಆಗುವದು ಸುಳ್ಳು. ಅಮಂಗಲವಾದ ಈ ವಿಷಯಗಳಿಂದ ವಿರಕ್ತಳಾಗಿರುವೆನು. ಎಷ್ಟೋ ಜನ್ಮಗಳಾದ ಮೇಲೆ ಅನುಗ್ರಹಿಸಿ ಈಗ ಈ ಚರಮ ಜನ್ಮದಲ್ಲಿ ದಾಟಲಶಕ್ಯವಾದ ಅಂಧಂತಮವನ್ನು ದಾಟಿಸುವ ಕಣ್ಣಂತಿರುವ ನಿನ್ನನ್ನು ಪಡೆದೆನು. ನನ್ನ ಪುಣ್ಯವು ಅಗಣ್ಯವೇ ಸರಿ! ನೀನು ಸಾಕ್ಷಾತ್ ಭಗವಂತನಲ್ಲವೇ? ಅಜ್ಞಾನವೆಂಬ ಕತ್ತಲಿನಲ್ಲಿ ತತ್ತರಿಸುವ ಲೋಕಗಳಿಗೆ ಕಣ್ತೆರೆಸುವ, ಸೂರ್ಯನಂತೆ ಪ್ರಕಾಶಿಸುವ, ನಿನ್ನನ್ನು ನನ್ನ ಅಜ್ಞಾನ ಮಿಥ್ಯಾಜ್ಞಾನಗಳನ್ನು

ನಾಶಪಡಿಸಲು ಬೇಡಿಕೊಳ್ಳುತ್ತಿರುವೆನು. ಈ ಶರೀರದಿ ಮಾಡುವ ಅಹಂಕಾರ ಮಮಕಾರಗಳನ್ನು ನೀನೇ ಜೋಡಿಸಿರುವೆ. ಈಗ ನೀನೇ ಬಿಡಿಸು; ಸ್ವಭಕ್ತರ ಸಂಸಾರವಿಷವೃಕ್ಷ ಕುಠಾರನಲ್ಲವೇ ನೀನು? ಪ್ರಕೃತಿ ಪುರುಷರ ವಿವೇಕವನ್ನು ದಯಪಾಲಿಸು. ಶ್ರೀನಾರಾಯಣಾದಿ ಪುರುಷರು, ಶ್ರೀಲಕ್ಷ್ಮ್ಯಾದಿ ಪ್ರಕೃತಿಗಳು, ಜಡಪ್ರಕೃತಿ ಅಂತು ಜೀವ ಜಡೇಶರೂಪ ತ್ರಿವಿಧ ವಸ್ತುವಿಷಯಕ ಜ್ಞಾನವನ್ನುಂಟುಮಾಡಲು ಸದ್ಧರ್ಮ ವೇತೃಜನವರಿಷ್ಠನಾದ ನಿನ್ನನ್ನು ನಂಬಿ ಬಂದಿರುವೆನು, ಕೃಪೆಮಾಡು.

ಎಂಬುವ ತಾಯಿಯ ಮಾತು ನಿರ್ದೋಷವೂ, ತನ್ನ ಇಷ್ಟಾನುಸಾರಿಯೂ, ಪುರುಷರಿಗೆ ಮೋಕ್ಷಸಾಧನವೂ ಆಗಿರುವುದನ್ನು ಕಂಡು, ಮನಸಾ ಮೆಚ್ಚಿಕೊಂಡು, ಮಂದಸ್ಮಿತ ಸುಂದರ ವದನಾರವಿಂದನಾದ ಕಪಿಲನು ಮಾತಾಡಿದನು–

ಅಮ್ಮಾ! ಈ ದೇಹದಲ್ಲಿರುವ ತತ್ತ್ವಗಳ ಸ್ವರೂಪವಿಷಯಕ ಯಥಾರ್ಥಜ್ಞಾನವು ಜೀವರಿಗೆ ಮೋಕ್ಷವಾಗಲೆಂದು ನಾನೇ ನಿರೂಪಿಸಿರುವೆನು. ಮೋಕ್ಷದಲ್ಲಿ ಪ್ರಾಕೃತ ಸುಖ ದುಃಖ ಗಳೆರಡೂ ಇಲ್ಲ. ಸ್ವರೂಪಾನಂದದಿಂದ ಇರುವ ಮೋಕ್ಷಕ್ಕೆ ಕಾರಣವಾಗಿರುವ ಸಾಂಖ್ಯಶಾಸ್ತ್ರ ವನ್ನು ಹಿಂದೆ ಬ್ರಹ್ಮಾದಿ ಋಷಿಗಳು ಕೇಳಲು ಯಮನಿಯಮಾದಿ ಸಾಧನಸಹಿತವಾಗಿ ನಿರೂಪಿಸಿದೆನು. ಅದನ್ನೇ ನಿನಗೂ ಹೇಳುವೆನು. ಸಾರಭೂತವಾದ ನನ್ನ ಅಭಿಪ್ರಾಯವನ್ನು ಕೇಳು. ಜೀವನಿಗೆ ಮನಸ್ಸೇ ಬಂಧಕವು, ಅದೇ ಮೋಚಕವೂ ಆಗಿದೆ. ಪ್ರಥಮಸಾಧನವಾಗಿರುವ ಮನಸ್ಸನ್ನು ಶಬ್ದಾದಿ ವಿಷಯಗಳಲ್ಲಿಟ್ಟರೆ ಸಂಸಾರಬಂಧವು ಬರುವುದು. ಶ್ರೀಹರಿಯಲ್ಲಿಟ್ಟರೆ ಮುಕ್ತಿ ಸಿಗುವುದು. ಅಹಂಕಾರ ಮಮಕಾರಗಳಿಂದ ಕಾಮಲೋಭ ಮದಾದಿಗಳು ಪುಟ್ಟುವವು. ಅವೇ ಮನೋಮಲ ವೆನಿಸುವವು. ಕಾಮಲೋಭಾದಿಗಳನ್ನು ಬಿಡಲು ಮನಸ್ಸು ಶುದ್ಧವಾಗುವದು. ಆಗ ಚಿನ್ಮನ ಸ್ಸಂಪರ್ಕದಿಂದ ಪರತತ್ತ್ವಜ್ಞಾನವಾಗಿ ಬಾಹ್ಯ ಶಬ್ದಾದಿ ಸುಖಗಳಲ್ಲಿ ಇಚ್ಛೆಯೇ ಇರುವದಿಲ್ಲ. ದುಃಖವಂತೂ ಮುಟ್ಟದರೆ ತಾನೇ! ಆದ್ದರಿಂದ ಮನವು ಸುಖದುಃಖ ಸಮವಾಗಿ ನಿಶ್ಚಲವಾಗು ವುದು. ಆಗ ಜೀವನು ಪ್ರಾಣಪ್ರಸಾದದಿಂದ ಸ್ವಗತಭೇದ ವಿವರ್ಜಿತನೂ ಪ್ರಕೃತಿ ವಿಲಕ್ಷಣನೂ ಸರ್ವೋತ್ತಮನೂ, ಸ್ವಸಮಾಧಿಕ ರಹಿತನು, ಸ್ವಪ್ರಕಾಶನು, ಪೂರ್ಣಗುಣನೂ ಆದ ಸ್ವಬಿಂಬ ನನ್ನು ಚಿನ್ಮನಸ್ಸಿನಿಂದ ನೋಡುವನು. ಭಕ್ತಿಜ್ಞಾನವಿರಕ್ತಿಗಳೇ ಶ್ರೀಹರಿಯ ಅಪರೋಕ್ಷ ಸಾಧನ ಗಳು. ಆಗ ಪ್ರಕೃತಿಯ ಬಂಧಕ ಶಕ್ತಿಯು ಸಡಲಿ ಬೀಳುವುದು. ಹರಿಸ್ವರೂಪ ಬಂಧಕ ಶಕ್ತಿಯು ಸರಿಹೋಗಿ ಹರಿಪ್ರಸಾದದಿಂದ ಹರಿದರ್ಶನವಾಗುವುದು. ಸರ್ವೇಶ್ವರನಾದ ಭಗವಂತನನ್ನು ಪೊಂದಲು ಯೋಗಿಗಳಿಗೆ ಭಕ್ತಿಯಂತಹ ಸುಖಕರಮಾರ್ಗವಿನ್ನೊಂದಿಲ್ಲ. ಆ ಭಗವಂತನ ಜ್ಞಾನವಾಗದಂತೆ ಮಾಡುವ ದುಷ್ಟಸಂಗವು ಬಂಧಕವೆಂದು ಜ್ಞಾನಿಗಳು ಪೇಳುವರು. ಅದೇ ಸಂಗವನ್ನು ಸಜ್ಜನರಲ್ಲಿ ಮಾಡಲು ಮೋಕ್ಷವು ಕರತಲಾಮಲಕವಾಗುವುದು. ಸಾಧುಸಂಗವೇ ತಾರಕವು.

ಸಾಧುಗಳ ಲಕ್ಷಣವನ್ನು ಕೇಳು. ಅವರು ದುಃಖಸಹನಶೀಲರು, ಕರುಣಾಯುಕ್ತರು, ಸರ್ವ ಸುಜನ ಬಂಧುಗಳು; ಕಾಮಲೋಭಾದಿಗಳೇ ಅವರಿಗೆ ಶತ್ರುಗಳನ್ನರಲ್ಲ. ಭಕ್ತಿಯಿಂದ ಭಗವಂತನ ನಿಷ್ಠೆಯನ್ನು ಪೊಂದಿ, ಸರ್ವೋತ್ತಮನು ಶ್ರೀಹರಿಯೇ ಎಂದು ಚಿಂತಿಸುತ್ತಾ ಮರಣಕಾಲ ದಲ್ಲಿಯೂ, ಮರೆಯದೆ ಪ್ರೇಮಿಸುವರು. ನನಗಾಗಿ ಸರ್ವಕರ್ಮಫಲವನ್ನರ್ಪಿಸಿ ಬಿಡುವರು. ಸ್ವಜನರಾರು? ಬಂಧುಗಳಾರು? ಅವರಿಗೆ ನಾನಾರು? ಶ್ರೀಹರಿಯೇ ವೈಷ್ಣವರೇ ಎನ್ನ ಬಂಧು

ಗಳೆಂಬುವರು. ಮೃಷ್ಟಾನ್ನದಂತೆ ನನ್ನ ಕಥೆಯನ್ನು ಕೇಳಿ ಪೇಳಿ ಸುಖಿಪರು. ಉಪನಿಷತ್ಪ್ರತಿಪಾದ್ಯನಾದ ನನ್ನ ಶ್ರವಣಮನನರೂಪ ವಿಚಾರವನ್ನು ಮಾಡಿ 'ಹರಿಯೇ ಸರ್ವೋತ್ತಮನು ಅನ್ಯರಲ್ಲ, ಸರ್ವವೂ ಅವನಧೀನ'ವೆಂಬ ಜ್ಞಾನದಾರ್ಢ್ಯದಿಂದ ಪ್ರಕಾಶಿಸುವರು. ಸಾಧ್ವಿ! ಇಂತಹರು ಸಾಧುಗಳು. ದುಷ್ಟಸಂಗವನ್ನು ಅವರೆಂದೂ ಮಾಡರು. ಸರ್ವದುಸ್ಸಂಗಜನಿತ ದೋಷಗಳನ್ನು ಹರಿಸುವ ಅಂತಹ ಹರಿಭಕ್ತರ ಸಂಗವನ್ನು ಬೇಡು. ಬಿಡಬೇಡ. ಸಜ್ಜನರಿದ್ದೆಡೆ ಸರ್ವದಾ ಶ್ರವಣ ಮನೋಹರವಾದ ನನ್ನ ವೀರ್ಯಾದಿ ಗುಣವರ್ಣನೆಯೇ ನಡೆಯುವದು. ಅದನ್ನು ಸೇವಿಸುವರಿಗೆ ಅಚಿರ ಕಾಲದಲ್ಲಿ ಮೋಕ್ಷ ಮಾರ್ಗ ಸಾಧನವೆನಿಸಿದ ಭಕ್ತಿಯು ಅಂಕುರಿಸಿ, ದೃಢವಾಗುವದು. ಹೆಚ್ಚುತ್ತಾ ಪೋಗುವ ಭಕ್ತಿಗನುಸಾರವಾಗಿ ಇತರ ವಿಷಯಗಳಲ್ಲಿ ವಿರಕ್ತಿಯು ಹೆಚ್ಚಿ ಕಂಡ ಭೂಲೋಕ ಸುಖ, ಕೇಳಿದ ಸ್ವರ್ಗಸುಖಗಳೆಲ್ಲವೂ ಪ್ರಾಕೃತ, ಸದುಃಖ, ಅನಿತ್ಯ ಅಸಾರವೆಂದು ದಾರಾಪುತ್ರಾದಿ ಚಿಂತೆಯನ್ನು ದೂರೀಕರಿಸಿ ಬಿಟ್ಟುಬಿಟುವನು; ಉತ್ತಮರು ನೋಡಿದ, ಅವರು ಕೇಳಿದ, ಹೃದಯ ನಿಧಾನನಾದ ಹರಿಯ ಸತತ ಸ್ಮರಣೆಯಿಂದ ವಿಷಯಗಳು ತಾವಾಗಿ ದೂರವಾಗುವವರಿಗೂ ಅಭ್ಯಸಿಸುವನು. ಯಮಾದಿ ಯೋಗಮಾರ್ಗಗಳಿಂಟ ಕ್ಲೇಶವಿಲ್ಲದಂತೆ ಪ್ರಯತ್ನ ಮಾಡಿ ತಾರತಮ್ಯಜ್ಞಾನವನ್ನಾರ್ಜಿಸುವನು. ವೈರಾಗ್ಯವು ಪದೇ ಪದೇ ವಿಜೃಂಭಿತವಾಗಲು, ನನ್ನನ್ನೆ ಭಕ್ತಿಯಿಂದ ಭಜಿಸಿ, ಸ್ವಾಂತರ್ಯಾಮಿಯನ್ನು ಪ್ರಾರಬ್ಧನಾಶವಾದಾಗ ಅದೇ ಜನ್ಮದಲ್ಲೇ ಪ್ರತ್ಯಕ್ಷೀಕರಿಸಿಕೊಂಡು ಜೀವನ್ಮುಕ್ತನೆನಿಸುವನು.

ದೇವಹೂತಿ ಕೇಳಿದಳು–

ಭಕ್ತಿ ಎಂದರೇನು? ಅದು ದೃಢವಾಗುವುದೆಂತು? ಅಂತಹ ಭಕ್ತಿ ನನಗೆ ಲಭಿಸುವ ಸಾಧನವೇನು? ಭಕ್ತಿಯಿಂದಲೇ ಅಲ್ಲವೇ ನಿನ್ನ ದಿವ್ಯ ನಿತ್ಯ ಸುಖಸ್ವರೂಪವನ್ನು ತಿಳಿದು ಸಂಸಾರದಿಂದ ಮುಕ್ತರಾಗುವುದು? ಆನಂದಮೂರ್ತೇ! ತತ್ತ್ವಜ್ಞಾನ ಸಾಧನವಾದ ಯೋಗವೆಷ್ಟು ವಿಧ? ಅದರ ಅಂಗಗಳಾವುವು? ಅಂತಹ ಭಕ್ತಿಯೋಗವನ್ನೂ ನನಗೆ ತಿಳಿಸಿಕೊಡು. ನಾನೋ ಮಂದಬುದ್ಧಿಯು, ಅಲ್ಲದೆ ಸ್ತ್ರೀಯು; ಜ್ಞೇಯ ವಿಷಯವೋ ದುರ್ಬೋಧವು! ಸುಖವಾಗಿ ತಿಳಿಯುವಂತೆ ಪೇಳಿ ಅನುಗ್ರಹಿಸು!

ಮೈತ್ರೇಯನು ಹೇಳಿದನು-

ಕಪಿಲನು ತಾಯಿಯ ಹಾರ್ದವನ್ನರಿತನು. ಅವಳಿಂದ ಅವತರಿಸಿದೆನು. ನಂದನನೆನಿಸಿದೆನು. ಈಗ ಅನುಗ್ರಹಿಸುವೆನೆಂದನು. ಭಕ್ತಿವಿಸ್ತರ ಪ್ರಶಸ್ತನಾದ ಸಾಂಖ್ಯಶಾಸ್ತ್ರವನ್ನು ಆಕೆಗೆ ಪೇಳಲು ಪಕ್ರಮಿಸಿದನು-

ಅಂಬ! ಸಾತ್ವಿಕಾದಿ ಗುಣಭೇದದಿಂದ ಭಕ್ತಿಯು ಅನೇಕವಿಧವೆನಿಸುವದು. ನನ್ನಲ್ಲಿ ಪ್ರೇಮವೇ ಭಕ್ತಿಯಲ್ಲವೇ? ನನ್ನಲ್ಲಿ ಏಕಾಗ್ರವಾದ ಮನದಿಂದ ಸರ್ವೋತ್ತಮನು ಸರ್ವಗುಣಪೂರ್ಣನೆಂದು ಧ್ಯಾನಿಸುತ್ತಾ ಕರ್ಮಫಲ ಸಂಕಲ್ಪರಹಿತರಾಗಿ, ಗಂಗಾಪ್ರವಾಹದಂತೆ ನಿರಂತರ ಸರ್ವಾಧಿಕ ಸ್ನೇಹವನ್ನು ಮಾಡುವ ತತ್ತ್ವಮಾನಿ ದೇವತೆಗಳ ಭಕ್ತಿಯು ಸಾತ್ವಿಕ ಭಕ್ತಿ ಎನಿಸುವದು. ಅವರು ವೇದೋಕ್ತ ಕರ್ಮಾನುಷ್ಠಾನ ಮಾಡುವರು. ತದ್ವಿರುದ್ಧವನ್ನಾಚರಿಸರು. ಅಂತೆಯೇ ಹರಿದತ್ತಪದರಾಗಿ, ಶಬ್ದಾದಿ ಜ್ಞಾಪಕರಾಗಿ, ಉತ್ತಮಾಧಿಕಾರಿಗಳೆನಿಸಿರುವರು. ಅಸುರರು ಕೂಡ ತತ್ತ್ವಮಾನಿಗಳೇ ಏಕಾಗ್ರಮನದಿಂದ ಹರಿಯನ್ನು ಚಿಂತಿಪರೇ. ಆದರೆ ಅವರ ಚಿಂತನೆ ದ್ವೇಷದೋಷದೂಷಿತವು ಮತ್ತು ಅವರು ವೇದೋಕ್ತ ವಿರುದ್ಧಾಚರಣೋತ್ಸುಕರಂತೆಯೇ. ಅವರಿಗೆ

ಮುಕ್ತಿಯೆಂದರೆ ಅಂಧಂತಮದಲ್ಲಿ ದುಃಖಸ್ವರೂಪಾವಿರ್ಭವನವೇ ಆಗಿದೆ. ಭಕ್ತರಲ್ಲಿ ಕೂಡ ಅಪೂರ್ಣಭಕ್ತಿಯಿಂದ ಮುಕ್ತಿಯಲ್ಲಿ ಪೂರ್ಣಸುಖವಾಗಲಾರದು. ಅಂತಹ ಮುಕ್ತಿಗಿಂತಲೂ ಅವರಿಗೆ ಇಲ್ಲೇ ಪೂರ್ಣಭಕ್ತಿಯಿಂದ ಸುಖವು ಹೆಚ್ಚಾಗಿ ಸಿಗುವುದು. ಇಂತಹ ಭಕ್ತಿಯು ಲಗ್ನಿಯು ಕಾಷ್ಠವನ್ನಂತೆ ಲಿಂಗಶರೀರವನ್ನು ಸಮೂಲವಾಗಿ ನಾಶಮಾಡುವುದು.

ಹರಿಯಲ್ಲಿ ಏಕಾಗ್ರಮನಸ್ಕರು ದೇವತೆಗಳು. ತತ್ತ್ವಗೇವತೆಗಳು ವಿಶೇಷ ಭಕ್ತರು, ನಿಷಿದ್ಧಾಚರಣರಹಿತರು, ಸಾಮಾನ್ಯಭಕ್ತರು. ಸಹಜನಿರಂತರ ಭಕ್ತಿಯು, ಅಧಮಾಧಿಕಾರಿಗಳದು. ಭಕ್ತಿಯು ಫಲಾಪೇಕ್ಷಾರಹಿತ ಮತ್ತು ಹರಿಸರ್ವೋತ್ತಮತ್ವ ಭಾವಯುತವಾಗಿರದಿರೆ ಅದು ಭಕ್ತ್ಯಾಭಾಸವೇ ಸರಿ!

ಕೆಲವರು ಭಕ್ತರು ಕಲೆತು ಕೂತು ನನ್ನ ಪರಾಕ್ರಮ ಲೀಲೆಗಳನ್ನು ಹಾಡಿ ಕೊಂಡಾಡುವರು. ಹೇಳಿ ಕೇಳಿ ಸಂತಸದಿಂದ ಮೈಮರೆವರು. ನನ್ನ ಪಾದಸೇವೆಯೇ ಪೂರ್ಣಾನಂದ ಹೇತುವಾಗಿದೆ ಎಂದು ನನ್ನಲ್ಲಿ ಸರ್ವಕರ್ಮಫಲವರ್ಪಿಸಿದವರಿಗೆ ನಾ ಒಲಿದು ಬಂದು ಮುಕ್ತಿಯನ್ನು ಕೊಟ್ಟರೂ ಬೇಡರು. ನನ್ನಾಜ್ಞೆ ಎಂದಾಗ ವಿಧಿಯಿಲ್ಲದೇ ಸ್ವೀಕರಿಸುವರು. ಅಂತಹವರಿಗೆ ಮೋಕ್ಷದಲ್ಲಿ ಆನಂದವು ಹೆಚ್ಚಾಗುವುದು. ಭಕ್ತಿಯ ಫಲವಾಗಿ ಮೋಕ್ಷವೂ ಬೇಡವೆಂಬ ಈ ಸುಜನರು ದಿವ್ಯ ಮನೋಹರವಾದ ಪ್ರಸನ್ನ ಸುಂದರಮುಖ ಮಂದಹಾಸಯುಕ್ತ ಕಟಾಕ್ಷ ರುಚಿರಾವಯವ ಗಳಿಂದ ಕೂಡಿದ, ನನ್ನ ರೂಪಗಳನ್ನು ಕಣ್ಣಾರೆ ನೋಡುವರು ಮತ್ತು ಮಧುರವಚನಗಳಿಂದ ಮಾತಾಡುವರು. ನನ್ನ ದರ್ಶನ ಸಲ್ಲಾಪಗಳ ಹೊರತು ಅನ್ಯಸುಖಹೇತುವನ್ನರಿಯದೆ ಸರ್ವೇಂದ್ರಿಯಚೇಷ್ಟೆಗಳನ್ನು ಮರೆತು, ಭಕ್ತಿರಸಭರಿತ ಹೃದಯರಾದ ಅಂತಹ ನನ್ನ ಭಕ್ತರಿಗೆ ಸಾಯುಜ್ಯ ಮೋಕ್ಷವನ್ನು ಕೊಟ್ಟು ಸಲಹುವೆನು. ನನ್ನಿಂದ ನಿರ್ಮಿತವಾದ ಧ್ವಜ ಛತ್ರ ವ್ಯಜನ ಭೋಜನಾದ್ಯೈಶ್ವರ್ಯವನ್ನಾಗಲಿ, ಅಣಿಮಾದಿ ಯೋಗಸಿದ್ಧಿಗಳನ್ನಾಗಲಿ, ಸರ್ವಾಂಗಸುಂದರ ಗೋಗಜತುರಾಗಾದಿ ಸಂಪದವನ್ನಾಗಲಿ, ಬೇಡದಿದ್ದ ಕಾರಣ ನನ್ನ ಆನಂದಮಯ ದೇಹದಲ್ಲಿ ಸ್ವಯೋಗ್ಯ ಶುಭವನ್ನೇ ಭುಂಜಿಸುತ್ತಾ ಆನಂದದಿಂದಿರುವರು. ಅಥವಾ ನನ್ನ ವೈಕುಂಠಾದಿ ಲೋಕಗಳಲ್ಲಿ ಸುಖದಿಂದ ದುಃಖಲೇಶವಿಲ್ಲದೆ ವಾಸಿಸುವರು. ನೀನೂ ಅಂತೆಯೇ ಭಜಿಸು. ಇಂತಹ ಭಕ್ತಿಯಿಂದ ನಿನಗೂ ವೈಕುಂಠವು ದೊರೆಯುವುದು. ಅಲ್ಲಿಂದ ಆನಂತರೂಪರಾಗಿರುವ ನನ್ನ ಭಕ್ತರು ಎಂದಿಗೂ ನಶಿಸುವುದಿಲ್ಲ. ನನ್ನ ಕಾಲಚಕ್ರವು ಆ ಲೋಕದಲ್ಲಿ ತನ್ನ ನಾಶಕಾರ್ಯ ವನ್ನು ನಡೆಸದೆ ಇರುವುದು. ಅವನಿಗೆ ನಾನೇ ಪ್ರಿಯನು. ನಾನೇ ತಂದೆ, ನಾನೇ ಸುತ, ನಾನೇ ಸಖ, ಗುರು, ದೈವ, ಸರ್ವವೂ ನಾನೇ ಆಗಿರುವೆನು. ಈ ಜೀವನು ಲೋಕದ್ವಯ ಸಂಚಾರಿ ಯಾದ್ದರಿಂದ ಪಶು ಮಿತ್ರ ಪುತ್ರ ಕಳತ್ರ ಗೃಹಾರಾಮಾದಿಗಳು ನಿತ್ಯವಲ್ಲ ವೆಂದರಿತು,ಎಲ್ಲವನ್ನೂ ವೈರಾಗ್ಯವನ್ನು ವಹಿಸಿಬಿಟ್ಟು, ನನ್ನನ್ನೇ ಸರ್ವೋತ್ತಮನೆಂದು ಅನನ್ಯಭಕ್ತಿಯಿಂದ ಭಜಿಪರನ್ನು, ಮೃತ್ಯುವಿಗೆ ತುತ್ತಾಗದಂತೆ ಸಂಸಾರಸಾಗರವನ್ನು ದಾಟಿಸಿ ನನ್ನ ಲೋಕವನ್ನು ಸೇರಿಸುವೆನು. ಲಕ್ಷ್ಮೀವಿರಿಂಚರಿಗೂ ಒಡೆಯನಾದ ನನ್ನಿಂದ ಹೊರತನ್ಯರಿಂದ ಈ ಮೃತ್ಯುಭಯವು ಪೋಗಲಾರದು. ನನ್ನ ಭಯದಿಂದ ವಾಯುವು ಬೀಸುತ್ತಿದೆ, ನನ್ನ ಭಯದಿಂದ ಸೂರ್ಯನು ತಪಿಸುವನು, ನನ್ನ ಭಯದಿಂದ ಇಂದ್ರನು ಮಳೆಗರೆವನು, ಅಗ್ನಿಯು ಸುಡುವನು. ನನಗಂಜಿ ಮೃತ್ಯುವು ಕೊಲ್ಲುತ್ತಾ ಓಡುವಳು. ನನಗಾರ ಭಯವೂ ಇಲ್ಲ. ವಾಯ್ವಾದಿ ನಿಯಾಮಕನಾದ ನಾನೇ ಮುಕ್ತಿದನು; ಅನ್ಯರಲ್ಲ. ಜ್ಞಾನಿಗಳು ವೈರಾಗ್ಯ ವಿಶಿಷ್ಟ ಜ್ಞಾನಭಕ್ತಿಗಳಿಂದ ಭಜಿಸಲು

ಅವರಿಗೆ ಸರ್ವತಃ ಭಯರಹಿತವಾದ ನನ್ನ ಪಾದ ಮೂಲವನ್ನು ಸೇರಿಸಿ, ಮುಕ್ತಿಯನ್ನೇ ಕೊಡುವೆನು. ತೀವ್ರವಾದ ಭಕ್ತಿಯೋಗದಿಂದ ನನ್ನಲ್ಲಿ ಮನವಿರಿಸಿ, ಚಲಿಸದೆ ಭಜಿಸುವುದೊಂದೇ ಮೋಕ್ಷಮಾರ್ಗವು; ಅನ್ಯವಿಲ್ಲ. ಅಂಬ! ನನ್ನ ಭಕ್ತಳಾಗು. ಭಕ್ತಿಯೇ ತಾರಕವು.

## ೨೭. ತತ್ತ್ವಲಕ್ಷಣ ನಿರೂಪಣವು

ಈಗ ನಿನಗೆ ತತ್ತ್ವಗಳ ಲಕ್ಷಣಗಳನ್ನು ಬೇರೆ ಬೇರೆಯಾಗಿ ನಿರೂಪಿಸುವೆನು. ಪ್ರಾಕೃತ ಗುಣಗಳಿಂದ ಬಿಡಲ್ಪಡಬೇಕಾದರೆ, ಪ್ರಕೃತಿ ಪುರುಷರ ವಿವೇಕವನ್ನೂ ತಿಳಿಯಬೇಕಲ್ಲವೇ? ಪರಮಾತ್ಮಜ್ಞಾನವೇ ಮೋಕ್ಷಸಾಧನವು. ಸಂಸಾರ ಪಾಶಚ್ಛೇದಕವಾಗಿದೆ. ಪರಮಪುರುಷನು ಅನಾದಿ, ವ್ಯಾಪ್ತನು, ಪ್ರಕೃತಿಗುಣರಹಿತನು, ಚೇತನಾಚೇತನ ವಿಲಕ್ಷಣನು, ಹೃದಯಪದ್ಮ ನಿಲಯನು, ಸ್ವಯಂ ಪ್ರಕಾಶನು. ಶ್ರೀಹರಿಗೆ ದೇಹದಿಂದಲೂ ಜನನಮರಣಾದಿಗಳಿಲ್ಲ. ದೇಹಾದಿಗಳಿಂದ ಹುಟ್ಟು ವವನು ಸಾಯುವವನು ಜೀವನೇ. ಅವನಿಗೂ ಸ್ವರೂಪದಿಂದ ಜನನಾದಿಗಳಿಲ್ಲ. ಸ್ವಪ್ನದಲ್ಲಿ ಕಂಡ ಪದಾರ್ಥಗಳನ್ನು ಎಚ್ಚೆತ್ತು ನೆನೆಸಿದಂತೆ ಅಹಂಕಾರದಿಂದ ಜನನ ಮೃತಿಗಳನ್ನು ಪೊಂದುವ ಜೀವನು ಅಭಿಮಾನಬದ್ಧನಾಗಿ ಸಂಸಾರದಿ ನರಳುತ್ತಿರುವನು. ಅಭಿಮಾನವನ್ನು ಬಿಡಲು ದ್ವಂದ್ವಾತೀತನಾಗಿ ಸುಖಿಸುವನು.

ಅನಾದಿನಿತ್ಯನು, ಜನ್ಮಾದಿ ಮಜ್ಜೀವ ವಿಲಕ್ಷಣನು ಆದ ಹರಿಯು ತನ್ನಿಚ್ಛೆಯಿಂದ, ತ್ರಿಗುಣಾತ್ಮಕಳಾಗಿ ಚಿತ್ಪ್ರಕೃತಿ ಎನಿಸಿ ಸದಾ ತನ್ನನ್ನು ಸೇವಿಸುತ್ತಿರುವ ಶ್ರೀದೇವಿಯನ್ನು ಪೊಂದಿ, ಆಕೆಯನ್ನು ಸೃಷ್ಟಿಕಾರ್ಯೋನ್ಮುಖಿಯನ್ನಾಗಿ ಮಾಡಿದನು. ಸ್ವಪ್ರಯೋಜನವು ಲೇಶವು ಇಲ್ಲದಿದ್ದರೂ ರಮಾ–ನಾರಾಯಣರು, ಜೀವರ ಸ್ವರೂಪೋದ್ಧಾರಕ್ಕಾಗಿ, ಲೀಲೆಗಳನ್ನಾಡಿ ವಿವಿಧ ಪ್ರಜಾ ಸೃಜನ ಮಾಡಿದರು. ಅವರೂ ತಮ್ಮಂತೆ ರೂಪವುಳ್ಳವರಾಗಿ, ಕರಚರಣಾದ್ಯವಯವ ಗಳಿಂದ ವಿರಾಜಿಸಿದರು. ಆ ಜೀವರನ್ನು ತ್ರಿಗುಣಮಯ ಶರೀರದಲ್ಲಿಟ್ಟು, ಅಹಂಕಾರ ಮಮಕಾರ ಬದ್ಧರನ್ನಾಗಿರಿಸಿದನು. ಇಂತು ಲಿಂಗಶರೀರವನ್ನು ಬಿಡಿಸಲು ವಿವಿಧ ಪ್ರಕೃತಿ ಶರೀರಗಳನ್ನು ಮೇಲೆ ಹೊದಿಸಿದಾಗ ಜೀವನು ಅಭಿಮಾನದಿಂದ ಕೆಲಸಗಳನ್ನು ಮಾಡುತ್ತಾ ನಾನೇ ಕರ್ತನೆಂದು ತಿಳಿದು, ಸಂಸಾರಬದ್ಧನಾಗುವನು. ಅದೇ ಜನನಮರಣರೂಪ ಸಂಸಾರಬಂಧವು. ಅಕ್ಲಿಷ್ಟ ಕಾರಿಯು, ಸರ್ವಸಾಕ್ಷಿಯು, ಸ್ವತಂತ್ರನಾದ ಹರಿಗೆ ಈ ಬಂಧವು ಹೇಗೆ ಬರುವದು ನೋಡು! ಎಂದಿಗೂ ಇಲ್ಲ. ಸ್ವತಂತ್ರವಾದ ಸ್ವಾಮಿ ಇಚ್ಛೆಯಿಂದ ಬಂಧವು, ಅವನ ಪ್ರಸಾದದಿಂದ ಬಂಧ ಮೋಕ್ಷವೂ ಕೂಡ ಆಗುವುದು ಜೀವನಿಗೆ. ಇವನ ಶರೀರವು, ಇಂದ್ರಿಯಗಳು, ಮನಸ್ಸು ಇವುಗಳಿಗೆ ಕಾರಣಳು ಪ್ರಕೃತಿ ಸ್ವಾಮಿನಿಯಾದ ಶ್ರೀದೇವಿಯು. ಜೀವರಿಗೆ ಸುಖದುಃಖಾದಿ ಭೋಕ್ತೃತ್ವದಲ್ಲಿ ಕಾರಣನು ಪರಮಪುರುಷನೆಂದು ತಿಳಿ!

ಆಗ ದೇವಹೂತಿಯು ಕೇಳಿದಳು-

ಪುರುಷೋತ್ತಮ! ಪ್ರಕೃತಿಯ ಮತ್ತು ಪುರುಷನ ಲಕ್ಷಣಗಳನ್ನು ಹೇಳು. ಇವರೇ ಅಲ್ಲವೇ ಸ್ಥೂಲ ಮತ್ತು ಸೂಕ್ಷ್ಮ ಜಗತ್ತಿನಲ್ಲಿ ವ್ಯಾಪ್ತರಾಗಿ, ನಿಯಮನ ಮಾಡುತ್ತಿರುವುದು? ಎನ್ನಲು ಭಗವಂತನು ಹೇಳುವನು–

ತ್ರಿಗುಣಾತ್ಮಕವಾದ ಸೂಕ್ಷ್ಮವು ಅವಿನಾಶಿಯು, ವ್ಯಕ್ತಾವ್ಯಕ್ತವೆಂದು ವಿಭಕ್ತವು ಆದ ಪ್ರಕೃತಿಯು ಕಾರ್ಯೋನ್ಮುಖವಾಗದಿರಲು ಅವ್ಯಕ್ತವೆಂದೂ ಉಪಾದಾನರೂಪವಾದಾಗ ವ್ಯಕ್ತಾವ್ಯಕ್ತವೆಂದ, ಮಹದಾದಿ ಕಾರ್ಯಯುತವಾದಾಗ ವ್ಯಕ್ತವೆಂದೂ, ತಿಳಿಯಲ್ಪಡುವುದು, ಹೀಗೆಯೇ ತತ್ತ್ವದಭಿಮಾನಿನಿ ಶ್ರೀದೇವಿಯೂ ಕೂಡ ತ್ರಿರೂಪಳಾಗಿರುವಳು.

ಪಂಚಭೂತಗಳು, ಪಂಚತನ್ಮಾತ್ರಗಳು, ದಶೇಂದ್ರಿಯಂಗಳು ಮನೋಹಂಕಾರ ಬುದ್ಧಿ ಮಹತ್ತು ಅಂತು ಇಪ್ಪತ್ತುನಾಲ್ಕು ತತ್ತ್ವತಗಳು ಪ್ರಧಾನಕಾರ್ಯವೆನಿಸುವವು. ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳು ಪಂಚಭೂತಗಳು. ಶಬ್ದಸ್ಪರ್ಶರೂಪರಸಗಂಧಗಳು ಪಂಚತನ್ಮಾತ್ರಗಳು. ಶ್ರೋತ್ರ, ತ್ವಕ್, ದೃಕ್, ರಸನ, ನಾಸಿಕ, ವಾಕ್, ಕರ, ಚರಣ, ಪಾಯು, ಮೇಢ್ರವೆಂಬುವವು ದಶೇಂದ್ರಿಯಗಳು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂಬುವು ಅಂತಃಕರಣ ಚತುಷ್ಟಯವು. ಶ್ರೀಕೇಶವರ ಸಂಸ್ಥಾನ ವಿಶೇಷವಾದವು ಈ ಇಪ್ಪತ್ತುನಾಲ್ಕು ತತ್ತ್ವಗಳು. ಕಾಲಾತ್ಮಕನಾಗಿ ಶ್ರೀಹರಿಯು ಅನನ್ಯಾಧೀನನಾಗಿರುವನು. ಅವನನ್ನು ಇಪ್ಪತ್ತೈದನೆಯ ತತ್ತ್ವವೆಂಬುವರು. ಪ್ರಕೃತಿ ಬದ್ಧನಾಗಿ ಅಹಂಕಾರ ಮಮಕಾರಗಳಿಂದ, ಮಿಥ್ಯಾಜ್ಞಾನಿಯಾದ ಜೀವನಿಗೆ ಹೃದಯದಲ್ಲಿದ್ದು, ಪುರುಷನಾಗಿ, ಹೊರಗೆ ಜನನ ಮರಣ ಭಯಪ್ರದನಾಗಿರುವ ಹರಿಯು ರುದ್ರಾಂತರ್ಗತನಾಗಿರುವನು. ಅವನನ್ನೇ ಕಾಲನೆಂಬುವರು. ಕಾರ್ಯೋದಾಸೀನಳಾಗಿರುವ ಪ್ರಳಯಾವಸ್ಥಾವಿಶಿಷ್ಟಳಾದ ಮೂಲ ಲಕ್ಷ್ಮೀದೇವಿಗೆ ಶ್ರೀಭೂದುರ್ಗಾರೂಪಗಳಿಂದ ಕ್ರೀಡೇಚ್ಛೆಯನ್ನು ಪುಟ್ಟಿಸಿ, ಸೃಷ್ಟ್ಯಭಿಮುಖಳನ್ನಾಗಿ ಮಾಡುವವನೇ ಕಾಲನು. ಸರ್ವಾಂತರ್ಯಾಮಿ ಪುರುಷರೂಪನಿಗೆ ಸರ್ವವ್ಯಾಪಿ ಬಹಿಃಸ್ಥಿತನಾದ ಕಾಲರೂಪನಿಗೂ ಏನೂ ಭೇದವಿಲ್ಲ. ಸಿಸೃಕ್ಷಾಯುಕ್ತನಾದ ಮೂಲರೂಪಿ ನಾರಾಯಣನು ತನ್ನವಳಾದ ಶ್ರೀದೇವಿಯಲ್ಲಿ ವೀರ್ಯಾಧಾನವನ್ನು ಮಾಡಲು ಹಿರಣ್ಮಯವಾದ ಮಹತ್ತತ್ತ್ವವು ಉದ್ಭವಿಸಿತು. ತಾನೂ ವಾಸುದೇವನೆಂದು ಪ್ರಾದುರ್ಭೂತನಾದನು. ಬ್ರಹ್ಮಾದಿ ಸರ್ವಜೀವರಿಂದ ಕೂಡಿದ ವಿಶ್ವವನ್ನು ತನ್ನುದರದಿಂದ ಸೃಜಿಸುವ ಇಚ್ಛೆಯಿಂದ ಜಗದಂಕರಣಶೀಲನಾದ ಶ್ರೀಹರಿಯು ತನ್ನ ಯೋಗ ನಿದ್ರಾಕಾರಣವಾದ ನಿಬಿಡತಮವನ್ನು ಸ್ವರೂಪಪ್ರಭೆಯಿಂದ ಕುಡಿದು ನಾಶ ಮಾಡಿದನು. ಪೂರ್ಣಾನಂದಾದಿ ಗುಣನು, ಅಕಲಂಕನು ಆದ ವಾಸುದೇವನೇ ಮಹತ್ತತ್ತ್ವನಿಯಾಮಕನು. ಅವನಿಂದ ಮಾಯಾದೇವಿಯಲ್ಲಿ ಬ್ರಹ್ಮನು ಮಹತ್ತತ್ತ್ವಾಭಿಮಾನಿಯಾಗಿ ಜನಿಸಿದನು. ಆತನೇ ಸ್ಮರಣಶೀಲವಾದ ಚಿತ್ತಾಭಿಮಾನಿಯು. ವಿಕಾರಾಲ್ಪತೆ, ಸ್ವಚ್ಛತೆ ಇವು ಚಿತ್ತಲಕ್ಷಣವಾಗಿವೆ. ಉಪಾಧಿಗಳಿಲ್ಲದ ಅಪ್ ತತ್ತ್ವದಂತೆ ಧವಲವೂ ಆಗಿ ಜ್ಞಾನಪ್ರಧಾನವಾದ ಮಹತ್ತತ್ತ್ವದಿಂದ ಕ್ರಿಯಾಶಕ್ತಿ ಎನಿಸಿದ ಅಹಂಕಾರತತ್ತ್ವವು ಜನಿಸಿತು. ಅದು ಮೂರು ವಿಧವು. ಶಾಂತ, ಘೋರ, ಮೂಢವೆಂಬವು ಆ ಪ್ರಭೇದಗಳು. ಕರ್ತೃತ್ವ ಭ್ರಮೆಯನ್ನು ಕೊಡುವ ಮನಸ್ಸು, ಕರ್ಮಜ್ಞಾನಕಾರಣಗಳಾದ ಇಂದ್ರಿಯಗಳು, ಮತ್ತೆ ಮತ್ತೆ ಜನಿಸುವ ದೇಹವು ಕ್ರಮವಾಗಿ ವೈಕಾರಿಕ, ತೈಜಸ, ತಾಮಸವೆಂಬ ತ್ರಿವಿಧಾಹಂಕಾರದಿಂದ ಜನಿಸಿದವು.

ಸತ್ತ್ವಾಂಶ ಪ್ರಚುರವು ಭಗವನ್ನಿಷ್ಠಾಸಹಿತವು ಆದ ವೈಕಾರಿಕವು ಶಾಂತವೆನಿಸುವುದು. ಇದರಿಂದ ದೇವ ಪಿತೃ ಸೃಷ್ಟಿಯು ಮನಃಸೃಷ್ಟಿಯೂ ಆಗಿದೆ.

ಸತ್ತ್ವರಜೋಂಶ ಪ್ರಚುರವು, ಘೋರ ವಿಷಯಜ್ಞಾನ ಜನಕವು, ಘೋರತರಕಾರ್ಯಕಾರಣವಾದ ತೈಜಸವು ಘೋರವೆನಿಸಿದೆ. ಇದರಿಂದ ಜ್ಞಾನಕರ್ಮೇಂದ್ರಿಯಗಳ ಸೃಷ್ಟಿಯಾಗಿದೆ.

ತಮೋಂಶಪ್ರಚುರವಾಗಿ ಅಷ್ಟು ಜ್ಞಾನಜನಕವಾಗದಿರುವ ತಾಮಸವು ಮೂಢವೆನಿಸುವುದು. ಇದರಿಂದ ಪಂಚಭೂತಗಳ ಮತ್ತು ತದ್ವಿಕಾರ ದೇಹಂಗಳ ಸೃಷ್ಟಿಯೂ ಆಗಿದೆ.

ಮನಸ್ಸಿಗೆ ಸಂಕಲ್ಪ ವಿಕಲ್ಪಗಳು ಸ್ವಭಾವವು. ನಾನಾ ವಿಧ ಕಾಮಗಳಿಗದು ಮನೆ. ಸ್ಥೂಲ ಮನಸ್ಸಿನ ನಿಯಾಮಕ ಪ್ರದ್ಯುಮ್ನರೂಪದಿಂದ ಅಭಿವ್ಯಕ್ತನಾದ ಅನಿರುದ್ಧನೇ ತನ್ನಿಯಾಮಕನು. ಸರ್ವೇಂದ್ರಿಯ ಪ್ರೇರಕನಾದ ಈ ಸ್ವಾಮಿಯು ಶರತ್ಕಾಲೀನ ನೀಲೋತ್ಪಲ ನೀಲನು. ಪರಮ ಭಕ್ತರಾದ ಪ್ರಾಣಾಯಾಮ ಚತುರರಿಗೆ ಅವ್ಯಗ್ರವಾದ ಮನಸ್ಸಿನಿಂದ ಆರಾಧಿಸಲು ವಶನಾಗಿ ಒಲಿಯುವನು. ಅವರೇ ಮನೋಜಯಶಾಲಿಗಳೆನಿಪರು.

ತೈಜಸಾಹಂಕಾರದಿಂದ ಬುದ್ಧಿತತ್ತ್ವವು ಜನಿಸಿತು. ಕಾಚಕಾಮಲಾದಿ ದೋಷರಹಿತವಾದ ಚಕ್ಷುರಾದೀಂದ್ರಿಯಗಳಿಗೆ ದ್ರವ್ಯಗಳ ಸ್ಫುರಣದಿಂದ ವಿಶೇಷ ಜ್ಞಾನವಾಗುವುದು. ಬೇರೆ ಬೇರೆ ವೃತ್ತಿಗಳಿಂದ ಬರುವ ಸ್ಥಿರಸಂಶಯ, ಮಿಥ್ಯಾಜ್ಞಾನ, ನಿಶ್ಚಯಜ್ಞಾನ, ಸ್ಮೃತಿ, ಅಜ್ಞಾನ ಎನ್ನುವವು ಬುದ್ಧಿ ಲಕ್ಷಣವೆನಿಸಿವೆ. ಬುದ್ಧಿಯ ಸ್ಮೃತಿಯು ಚಂಚಲವು. ಆದರೆ ಚಿತ್ತದ ಸ್ಮೃತಿಯು ಸ್ಥಿರ.

ತೈಜಸವಾದ ಇಂದ್ರಿಯಗಳು ಕರ್ಮೇಂದ್ರಿಯಗಳು ಜ್ಞಾನೇಂದ್ರಿಯಗಳೆಂದು ಎರಡು ವಿಧ. ಕರ್ಮೇಂದ್ರಿಯಗಳಿಗೆ ಪ್ರೇರಕನು ಅಹಂಕಾರಿಕ ಪ್ರಾಣನು. ಜ್ಞಾನೇಂದ್ರಿಯ ಪ್ರೇರಕಳು ಉಮಾ ದೇವಿಯು.

ಭಗವತ್ಪ್ರಭಾವಪ್ರೇರಿತವಾದ ತಾಮಸಾಹಂಕಾರದಿಂದ ಶಬ್ದಗುಣವು, ಅದರಿಂದ ಆಕಾಶ ತತ್ತ್ವವೂ ಶ್ರೋತ್ರೇಂದ್ರಿಯವೂ ಪುಟ್ಟಿದವು. ಶಬ್ದದ ಅಭಿಧೇಯದಲ್ಲಿ ಮಾತ್ರ ಇರುವಿಕೆ, ಶಬ್ದಗುಣತ್ವ, ಸರ್ವಜ್ಞನ ಜ್ಞಾಪಕತ್ವ ಇವು ಆಕಾಶಲಕ್ಷಣಗಳು. ಶ್ರೀಹರಿಯು ಆಕಾಶದಂತೆ ಶಬ್ದದಿಂದಲೇ ತಿಳಿಯಲರ್ಹನಾಗಿರುವನು. ಜೀವರಿಗೆ ಅವಕಾಶ ಕೊಡುವನು, ಒಳಹೊರಗೆ, ದಿಗಾದಿರೂಪವಾಗಿರುನು. ಪ್ರಾಣಾಪಾನಾದಿಗಳಿಗೆ, ಇಂದ್ರಿಯಗಳಿಗೆ, ಜೀವರಿಗೆ ಆವಾಸವಾಗಿರು ವದು ಕೂಡ ಆಕಾಶವೇ.

ಆಕಾಶದಿಂದ ಸ್ಪರ್ಶಗುಣವು, ಅದರಿಂದ ವಾಯುತತ್ತ್ವವು, ಸ್ಪರ್ಶಜ್ಞಾನಜನಕವಾದ ತ್ವಗಿಂದ್ರಿಯವು ಜನಿಸಿದವು. ಮಹತ್ವ, ಕಠಿಣತ್ವ, ಶೈತ್ಯ, ಉಷ್ಣತ್ವ ಮೊದಲಾದವು ಸ್ಪರ್ಶವೇದ್ಯ ವಾಗಿವೆ. ಚಾಲನ, ಏಕೀಕರಣ, ಸರ್ವವಸ್ತುವ್ಯಾಪ್ತಿ, ಪರ್ಣಾದಿ ದ್ರವ್ಯಗಳನ್ನು ಶಬ್ದ ವರ್ಣಗಳನ್ನು ದೇಶಾಂತರಕ್ಕೆ ತೆಗೆದೊಯ್ಯುವದೆಂಬವು ವಾಯುವೃತ್ತಿಗಳು. ಸರ್ವೇಂದ್ರಿಯ ಸ್ವಾಮಿಯು ವಾಯುವೇ. ಇದಿಲ್ಲದೆ ಅವುಗಳ ವ್ಯಾಪಾರವೇ ನಡೆಯಲಾರದು.

ವಾಯುವಿನಿಂದ ದೈವಪ್ರೇರಿತವಾಗಿ, ರೂಪಗುಣವು ಅದರಿಂದ ತೇಜಸ್ತತ್ತ್ವವು ಚಕ್ಷುರಿಂದ್ರಿ ಯವು ಪುಟ್ಟಿದವು. ದ್ರವ್ಯಗಳ ಆಕಾರದಲ್ಲಿ ವ್ಯಾಪ್ತಿ, ಪ್ರಕಾಶ, ವ್ಯಕ್ತವಾಗಿರುವುದು, ಉಗ್ರತೆ ಇವು ತೇಜಸ್ಸಿನ ಸ್ವಭಾವಲಕ್ಷಣವೆನಿಸಿವೆ. ಇನ್ನು ತೇಜಸ್ಸಿನ ಕರ್ಮವೆಂದರೆ ಪ್ರಕಾಶನ, ಪಾಕಕರಣ, ಪಾನ, ಭಕ್ಷಣ, ಹಿಮನಿವಾರಕತ್ವ, ಶುಷ್ಕೀಕರಣ, ಹಸಿವೆ ನೀರಡಿಕೆಗಳನ್ನುಂಟು ಮಾಡುವ ದೆಂಬುವ ಇವೇ ಆಗಿವೆ.

ತೇಜಸ್ಸಿನಿಂದ ರಸಗುಣವು, ಅದರಿಂದ ಜಲತತ್ತ್ವವು ಜಿಹ್ವೇಂದ್ರಿಯವು ಜನಿಸಿದವು. ಒಂದೇ ರಸನವು ಭೌತಿಕವಿಕಾರದಿಂದ ಕಷಾಯ, ಮಧುರ, ತಿಕ್ತ, ಕಟು, ಆಮ್ಲ, ಲವಣವೆಂದು ಆರು ವಿಧವಾಗಿದೆ. ತೋಯಿಸುವುದು, ಮುದ್ದೆಯಾಗಿಸುವುದು ಅಲಂಬುದ್ಧಿ ಜನಕತ್ವ, ಪ್ರಾಣನ,

ಅಪ್ಯಾಯನ, ಬಿಂದುರೂಪತ್ವ, ತಾಪನಿವಾರಕತ್ವಗಳು ಜಲಸ್ವರೂಪ ಲಕ್ಷಣಗಳಾಗಿವೆ. ಇತರ ಭೂತಗಳಿಗಿಂತ ಹೆಚ್ಚಾಗಿರುವುದೂ ಜಲಲಕ್ಷಣವೇ

ಜಲದಿಂದ ದೈವಚೋದಿತವಾಗಿ ಗಂಧಗುಣವು, ಅದರಿಂದ ಭೂತತ್ತ್ವವು ಗಂಧಗ್ರಹಣ ಸಮರ್ಥವಾದ ನಾಸಿಕೇಂದ್ರಿಯವು ಪುಟ್ಟಿದವು. ಒಂದೇ ಗಂಧವು ಇತರ ದ್ರವ್ಯಾಂಶಗಳಿಂದ ಬೇರೆಬೇರೆಯಾಗಿ ಕರಂಭ, ಪೂತಿ, ಸೌರಭ್ಯ, ಶಾಂತ, ಉಗ್ರ, ಆಮ್ಲವೆಂದು ಕರೆಯಲ್ಪಡುವುದು. ಉತ್ಪಾದಕತ್ವ, ಪರಮಾತ್ಮನ ಸ್ಥೂಲಪ್ರತಿಮೆ ಎನಿಸಿರುವುದು. ಮೂರ್ತದ್ರವ್ಯಗಳ ಧಾರಣೆ, ಅತಿಶಯ ವ್ಯಕ್ತಿಮತ್ವ, ಸರ್ವಪ್ರಾಣಿಶರೀರಗತಗುಣವ್ಯಕ್ತಿತ್ವ ಇವು ಪೃಥಿವೀ ಸ್ವರೂಪವೃತ್ತಿಗಳಾಗಿವೆ. ಶಬ್ದವಿಷಯವು ಶ್ರೋತ್ರವು, ಸ್ಪರ್ಶವಿಷಯವು ತ್ವಕ್ ಎಂಬ ಇಂದ್ರಿಯವು. ಚಕ್ಷುಸ್ಸೇ ರೂಪವಿಷಯವು. ಜಲವು ರಸಗುಣ ವಿಷಯವು. ಪೃಥಿವಿಯು ಗಂಧವಿಷಯವೆನಿಸಿದೆ. ಆದರೆ ಆಕಾಶದಲ್ಲಿ ಶಬ್ದವು ವಿಶೇಷ ಗುಣವಾದರೆ ವಾಯುವಿಗೆ ಶಬ್ದಸ್ಪರ್ಶಗಳು, ತೇಜಸ್ಸಿಗೆ ಶಬ್ದಸ್ಪರ್ಶರೂಪಗಳು, ಜಲಕ್ಕೆ ಶಬ್ದಸ್ಪರ್ಶ ರೂಪರಸಗಳು, ಪೃಥ್ವಿಗೆ ಶಬ್ದಸ್ಪರ್ಶರೂಪ ರಸ ಗಂಧಗಳು ಪರಾನ್ವಯದಿಂದ ಕ್ರಮವಾಗಿ ಸಂಕ್ರಮಿಸಿ ಬರುವವು. ಆದ್ದರಿಂದಲೇ ಆಕಾಶಾದಿಗಳ ಗುಣಗಳು ಪೃಥ್ವಿಯಲ್ಲಿ ಕಾಣುವವು.

ಮಹದಾದಿ ತತ್ತ್ವಗಳು ಬ್ರಹ್ಮಾಂಡವನ್ನೂ ವಿರಾಟ್‌ಪುರುಷ ಶರೀರವನ್ನೂ ಸೃಜಿಸಲು ಸ್ವತಃ ಸಂಯೋಜನಶಕ್ತಿಯು ಇಲ್ಲದೆ ಅಚೇತನವಾಗಿ, ಬೇರೆಯಾಗಿರಲು, ಕರ್ಮಗುಣೋಪೇತ ನಾದ ಶ್ರೀನಾರಾಯಣನು ಆ ತತ್ತ್ವದೇವತೆಗಳಿಂದ ಪ್ರಾರ್ಥಿತನಾಗಿ, ಅವರಲ್ಲಿ ಪ್ರವೇಶಿಸಿದನು. ಶ್ರೀದೇವಿಯಿಂದ ಕೂಡಿ ಶ್ರೀನಾರಾಯಣನು ಪ್ರವೇಶಿಸಿ ಪ್ರೇರಿಸಿದ ಕೂಡಲೇ, ಆ ತತ್ತ್ವಗಳು ಸಾಮರ್ಥ್ಯವನ್ನು ಪೊಂದಿ ಬ್ರಹ್ಮಾಂಡವನ್ನು ನಿರ್ಮಿಸಿದವು ಅದರಲ್ಲಿ ಅಚೇತನವಾದ ಬ್ರಹ್ಮಾಂಡ ದಲ್ಲಿ ಶ್ರೀಹರಿಯು ಪುರುಷರೂಪದಿಂದ ಬ್ರಹ್ಮಾಂತರ್ಯಾಮಿಯಾಗಿ ಪ್ರಾದುರ್ಭವಿಸಿದನು. ವಿಶೇಷಪ್ರಕಾಶಮಾನನಾದ್ದರಿಂದ ಬ್ರಹ್ಮನು ವಿರಾಟ್ ಎನಿಸಿ ಬ್ರಹ್ಮಾಂಡಮಾನಿಯಾದನು. ಹತ್ತರಷ್ಟು ಹೆಚ್ಚಾಗುತ್ತಾ ಹೋಗುವ ತೋಯಾದ್ಯಾವರಣಗಳಿಂದ ವಿಶಿಷ್ಟವು, ಮೇಲೆ ತ್ರಿಗುಣ ಮೂಲಪ್ರಕೃತಿಯಿಂದ ಆವೃತವು, ಒಳಗೆ ಚತುರ್ದಶ ಭುವನ ವಿಶಿಷ್ಟವು ಆಗಿರುವುದರಿಂದ ಬ್ರಹ್ಮಾಂಡವು ವಿಶೇಷವೆನಿಸಿದೆ. ಹರಿಸನ್ನಿಧಾನ ವಿಶಿಷ್ಟವೂ ಆಗಿ ಪ್ರತಿಮೆಯಂತೆ ಇದೆ ಆದ್ದರಿಂದಲೂ ವಿಶೇಷವೆನಿಸಿದೆ. ಸಮುದ್ರದಿಂದ ಮೇಲಕ್ಕೆ ಬಂದ ಹಿರಣ್ಮಯಾಂಡಕೋಶವನ್ನು ದೇವೋತ್ತಮನಾದ ಹರಿಯು ಪ್ರವೇಶಿಸಿ, ಆ ಬ್ರಹ್ಮಾಂಡವೆಂಬ ಬ್ರಹ್ಮದೇವನಲ್ಲಿ ಮುಖಾದಿ ವಿವರಗಳನ್ನು ವ್ಯಕ್ತವನ್ನಾಗಿಸಿದನು. ಇಂತು ವ್ಯಕ್ತವಾದ ಮುಖದಲ್ಲಿ ವಾಕ್ಕು, ತದಭಿಮಾನ, ವಹ್ನಿಯು ಜನಿಸಿದರು. ಒಂದೊಂದು ಸಲ ತದಭಿಮಾನಿ ದೇವನು, ಆ ದೇವನ ದೇಹವು ತದಂತರ್ಗತ ಹರಿಯು, ಪುಟ್ಟಿದವೆಂದು ತಿಳಿ. ನಾಸಿಕೆಯಲ್ಲಿ ಘ್ರಾಣವು ತದಭಿಮಾನಿ ನಾಸಿಕ್ಯ ವಾಯುವು; ಘ್ರಾಣದಿಂದ ಪ್ರಾಣಶಕ್ತಿಯು ಪ್ರಾಣದೇವನು; ಕಣ್ಣಿನಿಂದ ಚಕ್ಷುಸ್ಸೂರ್ಯರೂ; ಕಿವಿಗಳಿಂದ ಶ್ರೋತ್ರ ದಿಗ್ದೇವತೆಗಳೂ; ಬ್ರಹ್ಮನ ತ್ವಗಿಂದ್ರಿಯದಿಂದ ರೋಮಾದಿಗಳು ಸ್ಪರ್ಶ ಪ್ರಾಣರೂ, ಓಷಧಿಗಳೂ ಪುಟ್ಟಿದರು. ಶಿಶ್ನದಿಂದ ರೇತಸ್ಸೂ ಜಲಗಳೂ; ಗುದೇಂದ್ರಿಯದಿ ಅಪಾನ, ಮೃತ್ಯುಗಳೂ; ಹಸ್ತಗಳಲ್ಲಿ ಬಲವು ಇಂದ್ರನು, ಪಾದಗಳಿಂದ ಗಮನವು ಯಜ್ಞನು, ಯಜ್ಞಾಂತರ್ಯಾಮಿ ಹರಿಯು ಜನಿಸಿದರು. ಬ್ರಹ್ಮ ಶರೀರ ನಾಡಿಗಳಿಂದ ರಕ್ತವು ನದಿಗಳು; ಉದರವೇರ್ಪಡಲು ಅಲ್ಲಿಂದ ಹಸಿವೆ ನೀರಡಿಕೆಗಳು, ಸಮುದ್ರವು; ಹೃದಯದಿಂದ ಮನಸ್ಸು,

ಚಂದ್ರಮನು; ಚಿತ್ತದಿಂದ ವಿರಿಂಚನು ಪುಟ್ಟಿದರು. ಚೈತನ್ಯವೆಂಬ ಬ್ರಹ್ಮನಲ್ಲಿ ಚೈತ್ಯನೆಂಬ ಹರಿಯು ಅಂತರ್ಯಾಮಿಯಾಗಿರುವನು. ಈ ದೇವತೆಗಳೆಲ್ಲಾ ಪುರುಷಶರೀರವನ್ನು ಒಬ್ಬೊಬ್ಬರೇ ಪ್ರವೇಶಮಾಡಿ ಗೋಲಕಗಳಲ್ಲಿ ನಿಂತು ಮೇಲಕ್ಕೆಬ್ಬಿಸಿ ನಿಲ್ಲಿಸಲು ಶಕ್ತರಾಗಲಿಲ್ಲ.

ವಹ್ನಿ ಮಾತಾಡಿಸಲು, ನಾಸಿಕ್ಯವಾಯುವು ಮೂಸಿ ನೋಡಲು, ಸೂರ್ಯನು ನೋಡಲು, ದಿಗ್ದೇವರು ಕೇಳಲು, ಓಷಧೀ ದೇವನು ಮುಟ್ಟಲು, ಜಲವು ಶಿಶ್ನದಿಂದ ಪುಟ್ಟಿಸಲು, ಮೃತ್ಯುವು ಸಾಯಿಸಲು, ಇಂದ್ರನು ಬಲನೋಡಿಸಲು, ವಿಷ್ಣುವು ಬೇಕಾಗಿ ಜಯಂತಾಂತರ್ಯಾಮಿಯಾಗಿ ನಡೆಯಲು, ನದೀದೇವರು ಹರಿಯಲು, ಸಮುದ್ರವು ನೀರಡಿಕೆ ಪುಟ್ಟಿಸಲು, ಚಂದ್ರನು ಮನದಿ ಸಂಕಲ್ಪಿಸಲು, ಗುರುವು ಬುದ್ಧಿಯಿಂದ ನಿಶ್ಚಯಿಸಲು, ಅಹಂಕಾರದಿಂದ ರುದ್ರನು ಅಭಿಮಾನ ಪುಟ್ಟಿಸಲು, ಕೈಲಾಗದೆ ನಿರ್ವಿಣ್ಣರಾಗಿ ನಿಂತರು.

ಆಗ ಚೈತನ್ಯನಾಮಕ ಹರಿಸನ್ನಿಧಾನವಿಶಿಷ್ಟ ಬ್ರಹ್ಮನು ಚಿತ್ತದಲ್ಲಿ ಪ್ರವೇಶಿಸಿದನು. ತತ್‌ಕ್ಷಣವೇ ವಿರಾಟ್ ಶರೀರವು ಸಲಿಲದಿಂದ ಎದ್ದು ನಿಂತಿತು. ಪಾದಮಾನೀ ವಿಷ್ಣುವು ಬ್ರಹ್ಮ ವಾಯುಗಳ ಜೀವೋತ್ತಮತ್ವವನ್ನು ತಿಳಿಸಿಕೊಟ್ಟು ತತ್ತ್ವಗಳ ಯಥಾರ್ಥಜ್ಞಾನವಾಗಲೆಂದು ತಾನಾಗಿ ಸುಮ್ಮನಿದ್ದನು. ಕ್ಷೇತ್ರಜ್ಞನಾದ ಆ ಹರಿಯೇ ನಿಲ್ಲದಿರೆ, ಪ್ರಾಣೇಂದ್ರಿಯ ಮನೋಬುದ್ಧಿ ನಿಯಾಮಕರು ಆಯಾ ವ್ಯಾಪಾರವನ್ನು ಮಾಡಿಸಲಾರದೇ ಇದ್ದು ಕ್ಷೇತ್ರಜ್ಞನಾದ ಬ್ರಹ್ಮಾಂತರ್ಯಾಮಿಯ ಪ್ರವೇಶವಾದ ಮೇಲೆ ಸ್ವಸ್ವವ್ಯಾಪಾರ ಧುರೀಣರಾದರೋ ಅಂತಹ ಶ್ರೀಹರಿಯು ಶರೀರದಲ್ಲಿ ಕ್ಷೇತ್ರಜ್ಞನೆನಿಸಿ ಇರುವನೆಂದು ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಉಪಾಸಿಸಿದವನೇ ಜ್ಞಾನಿಯು. ಆ ಶ್ರೀಹರಿದಾಸನೇ ಮುಕ್ತನಾಗುವನು.

## ೨೮. ಪರತತ್ತ್ವಪ್ರಾಪ್ತಿ ಸಾಧನ; ಪ್ರಕೃತಿಪುರುಷ ವಿವೇಕ

ಶ್ರೀ ಕಪಿಲನು ಹೇಳಿದನು–

ಜೀವಪರಮಾತ್ಮರು ಒಂದೇ ಶರೀರದಲ್ಲಿದ್ದರೂ ಜೀವನಿಗೆ ಇರುವಂತೆ ತದ್ಗತ ದುಃಖಾದಿ ಭೋಗವು ಪರಮಾತ್ಮನಿಗೆ ಇಲ್ಲ. ಅವನು ಪೂರ್ಣನು. ಸತ್ತ್ವಾದಿಗುಣರಹಿತನಾದ ಕಾರಣ ಶರೀರದಲ್ಲಿ ಉಂಟಾಗುವ ಸುಖದುಃಖಗಳಾಗಲೀ, ಜನನಮರಣಾದಿಗಳಾಗಲಿ, ಈಶನಿಗಿಲ್ಲ. ಆದರೆ ಜೀವನು ಶರೀರಾದಿಗಳಲ್ಲಿ ಅಹಂಕಾರವನ್ನು ಮಾಡಿ ಅಭಿಮಾನದಿಂದ ನಾನೇ ಸ್ವತಂತ್ರ ಕರ್ತನೆಂದು ತಿಳಿಯುವನು. ಶ್ರೀಶನು ಸ್ವತಂತ್ರಕರ್ತನಾಗಿರುವನೆಂಬ ಸತ್ಯವನ್ನೇ ಮರೆತುಬಿಡುವನು. ಆಗ ಅವನಿಗೆ ದುಃಖದ ಅನುಭವ ಆಗುವುದು. ಅಭಿಮಾನವು ಮನಸ್ಸಿನ ಕಾರ್ಯ; ಜೀವನು ಅಸ್ವತಂತ್ರನಾಗಿ ಮನಸ್ಸಿನಂತೆ ವಿಷಯಾಸಕ್ತನಾಗಿ ಕರ್ಮಫಲವಾಗಿ ಬಂದ ದೇವದಾನವ ಮಾನವ ಭೇದಭಿನ್ನವಾದ ವಿವಿಧ ಶರೀರಗಳಲ್ಲಿ ಹುಟ್ಟಿ ಆನಂದರಹಿತನಾಗಿರುತ್ತಾನೆ. ನಾನು ಸುಖಿ, ನಾನು ದುಃಖಿ, ಎಂಬ ಅನುಭವವು ಜೀವನದಲ್ಲ. ಆದರೂ ವಿಷಯಧ್ಯಾನದಿಂದ ಆಸಕ್ತನಾಗಿ ಕರ್ಮಗಳನ್ನು ಮಾಡಿ ತತ್ಫಲರೂಪ ಸಂಸಾರವನ್ನು, ಸ್ವಪ್ನದಲ್ಲಿ ಗರ್ದಭಾರೋಹವನ್ನಂತೆ ಪೊಂದುತ್ತಾನೆ. ಸ್ವಪ್ನ ನಿದ್ರೆಗಳಿಂದ ಎಚ್ಚತ್ತವನಂತೆ ಕಂಡ ವಿಷಯಗಳು ನಿಷ್ಫಲವು ಮತ್ತು ಅನಿತ್ಯವೆಂದು ತಿಳಿದು, ಆ ವಿಷಯಧ್ಯಾನವನ್ನು ಬಿಡಲು, ವಿಷಯಗಳನ್ನು, ಅವನೊಡ್ಡುವ ಸಂಸಾರವನ್ನು, ಆದರಿಂದ ಬರುವ ಮರಣಾದ್ಯನರ್ಥಾಗಮವನ್ನು, ಹೊಂದುವುದಿಲ್ಲ. ಆದ್ದರಿಂದ

ವಿಷಯಗಳಿಂದ ಮೇಲ್ಮೆಕ್ಕೆ ಮನಸ್ಸನ್ನು ದೂರೀಕರಿಸಿ, ತೀವ್ರವಾದ ವಿರಕ್ತಿಯನ್ನು ವಹಿಸಿ, ಹರಿಭಕ್ತಿಯಿಂದ ಜೀವನು ಮನೋಜಯವನ್ನು ಹೊಂದಲು ಪ್ರಯತ್ನಿಸಬೇಕು. ಯಮಾದಿ ಯೋಗಮಾರ್ಗದಲ್ಲಿ ನಡೆಯುತ್ತಾ ನನ್ನನ್ನು ಪ್ರಣವದಿಂದ ಜಪಿಸಿ ಧ್ಯಾನಿಸಬೇಕು. ಭೂತಹಿತ ವಾದ ಸತ್ಯವನ್ನು ನುಡಿಯಬೇಕು. ನನ್ನ ಮಹಿಮೆಯನ್ನು ಕೇಳಬೇಕು. ವಿಷ್ಣು ವೈಷ್ಣವದ್ವೇಷವನ್ನು ಮಾಡದೆ, ಹರಿಯು ಎಲ್ಲೆಡೆ ಇರುವನೆಂದು ತಿಳಿದು, ಆಯಾ ವಸ್ತುಗಳನ್ನು ಯೋಗ್ಯತಾನು ಕೂಲವಾಗಿಯೇ ನೋಡಿ ನಡೆಯಬೇಕು. ಸ್ವಧರ್ಮದಲ್ಲಿದ್ದು ವಿಷಯಸಂಗಿಸಂಗವನ್ನು ಮಾಡದೆ ಯೋಗ್ಯೋಪಾಸನೆಯನ್ನು ಗೈಯುತ್ತಾ ಹರಿರತನಾಗಬೇಕು. ದೈವದಿಂದ ಬಂದದ್ದರಿಂದ ತೃಪ್ತಿ ಪೊಂದಿ, ಮಿತಹಿತಭೋಜಿಯಾಗಿ, ವಿವೇಕಿಗಳ ಒಡನಾಡುತ್ತ ಶಾಸ್ತ್ರಮನನಶೀಲನು ಮದ್ಭಕ್ತನು ಆಗಬೇಕು. ಸಜ್ಜನರಿಗಾಪತ್ತು ಬಂದಾಗ ಅವರನ್ನು ಕೈ ಹಿಡಿದು ಪೊರೆಯಬೇಕು. ಮಿತ್ರದೇವತಾಕ ಸಂಧ್ಯಾವಂದನೆ ಮಾಡಬೇಕು. ಸಜ್ಜನರಲ್ಲಿ ಕೃಪೆತೋರಬೇಕು. ಮನಸ್ಸನ್ನು ವಶದಲ್ಲಿಡಬೇಕು. ಪುತ್ರಾದ್ಯನುಬಂಧ ಸಹಿತ ಶರೀರದಲ್ಲಿ ನನ್ನದು ನಾನು ಎಂಬ ದುರಭಿಮಾನವನ್ನು ಬಿಟ್ಟು ಯಥಾವಸ್ತುಜ್ಞಾನಿಯಾಗಿ ಪ್ರಕೃತಿಪುರುಷರ ವಿವೇಕವನ್ನು ಸಂಪಾದಿಸಬೇಕು. ದೂರೀಭೂತ ವಿಷಯನು, ದುಶ್ಯಾಸ್ತ್ರಕಲಂಕರಹಿತನು ಆಗಿ ಬಿಂಬನಾದ ಹರಿಯನ್ನು ಸ್ವರೂಪಾಂತಃಕರಣದಿಂದ, ಸೂರ್ಯನನ್ನು ಕಣ್ಣಿಂದ ನೋಡಿದಂತೆ, ತಿಳಿದು ಅಪರೋಕ್ಷಜ್ಞಾನವನ್ನು ಸಂಪಾದಿಸಬೇಕು. ಪ್ರಾಣಾದಿ ದೇವತೆಗಳ ಪ್ರಸಾದವೂ ಸಂಪಾದ್ಯವೇ ಸಹಿ! ಆಗ ಜೀವನು ಪ್ರಾರಬ್ಧಕರ್ಮ ಒಂಗುಳಿದು, ಅದೂ ನಷ್ಟವಾದ ಮೇಲೆ ದೇವಯಾನದಿಂದ ವಿರಿಂಚಲೋಕವನ್ನು ಸೇರುವನು. ಬ್ರಹ್ಮಪ್ರಲಯವಾದಾಗ, ಅನಿರುದ್ಧನ ದ್ವಾರಾ ವಿರಿಂಚನನ್ನು ಪ್ರವೇಶಿಸಿ ಅಲ್ಲಿಂದ ಬ್ರಹ್ಮನಿಂದ ಕೂಡಿ ಮುಖ್ಯಪ್ರಾಣಬಂಧುವಾದ ಸರ್ವ ನಿಜರೂಪಗಳಲ್ಲಿ ಸಮನಾದ, ಸಮಾಧಿಕರಹಿತನಾದ, ಸರ್ವಜ್ಞನಾದ, ವ್ಯಾಪ್ತನಾದ, ಸರ್ವಾಧಾರನಾದ ಪರಬ್ರಹ್ಮನನ್ನು ಹೊಂದಿ ಸುಖಿಸುವನು. ಇಂತು ಮುಖ್ಯಪ್ರಾಣಾದಿ ಪ್ರತಿಬಿಂಬಗಳು ಬಿಂಬರೂಪೀ ಹರಿಯನ್ನು ನೋಡಿಸುವುದನ್ನು ಕೇಳಿರುವೆ. ಅಂಬ! ಈಗ ಪ್ರತಿಬಿಂಬಗಳು ಬಿಂಬನೆಂತು ನೋಡಿಸುವುವೋ ಹೇಳುವೆನು ಕೇಳು. ಜಲದಿ ಮೂಡಿದ ಪ್ರತಿಬಿಂಬವು ನೋಡಿ ಸ್ಥಲದಿ ನಿಂತ ಪುರುಷಮುಖವು ಜಲದಲ್ಲಿದ್ದ ನಿಜಾಭಾಸದಿಂದ ದಿವಿಸ್ಥಿತ ಸೂರ್ಯನು ಜ್ಞಾಪ್ಯವಾಗುವಂತೆ, ಪ್ರತಿಬಿಂಬ ದರ್ಶನದಿಂದ ಬಿಂಬಜ್ಞಾನವಾಗುವುದು. ಪ್ರತಿಬಿಂಬವು ಬಿಂಬಸದೃಶವು, ತದಧೀನವು; ಆದರೂ ತದ್ಭಿನ್ನವೇ ನೋಡು. ಭೂತೇಂದ್ರಿಯ ಮನೋನಿಯಾಮಕರಾದ ಇಂದ್ರಾದಿ ದೇವರು ಅಹಂಕಾರಾತ್ಮಕ ಶೇಷನ ಪ್ರತಿಬಿಂಬರು. ಶೇಷನು ಪ್ರಾಣಪ್ರತಿಬಿಂಬನು. ಪ್ರಾಣನು ಶ್ರೀ ಲಕ್ಷ್ಮೀಪತಿಯ ಪ್ರತಿಬಿಂಬನು. ಹರಿಯು ಸರ್ವಬಿಂಬನು ಮತ್ತು ಸರ್ವೇಶನಾಗಿರುವನು.

ಸಂಸಾರಾವಸ್ಥೆಯಲ್ಲಿ ಜೀವನ ಶರೀರದಲ್ಲಿರುವ ಭೂತಸೂಕ್ಷ್ಮೇಂದ್ರಿಯಮನೋ ಬುದ್ಧಿಗಳು ನಿದ್ರಾವಸ್ಥೆಯನ್ನು ಹೊಂದಿ ಕೆಲಸ ಮಾಡದಿರುವಾಗಲೂ, ಉತ್ಫುಲ್ಲಕಮಲ ಲೋಚನನಬಾಗಿರುವ ಸಾಕ್ಷಿಯೇ ಸರ್ವಜ್ಞನು. ಅವನಿಗೆ ಅಜ್ಞಾನವು ಎಂದೂ ಸಂಭವಿಸುವುದಿಲ್ಲ. ಅವನಿಗೆ ಭಿನ್ನಶರೀರವಿಲ್ಲ. ತತ್ಕೃತ ಅಹಂಕಾರವೂ ಇಲ್ಲ. ಜೀವನಾದರೋ ಹಾಗಲ್ಲ; ನಷ್ಟವಾಗದಿದ್ದರೂ ನಷ್ಟವಿತ್ತನಂತೆ ಆತುರನಾಗಿ, ಮನೋವ್ಯಾಪಾರವಾದ ಅಹಂಕಾರ ನಶಿಸಿರಲು, ತಾತನು ಇಲ್ಲದವನಂತೆ ತಿಳಿಯುತ್ತಾನೆ. ಅಂತೆಯೇ ಅಲ್ಪಜ್ಞನೆನಿಸುತ್ತಾನೆ. ಜೀವ-ಪರಮಾತ್ಮರ ವೈಲಕ್ಷಣ್ಯವನ್ನಿಂತು ಚೆನ್ನಾಗಿ ಶಾಸ್ತ್ರದಿಂದ ವಿಚಾರ ಮಾಡಿ ವಿಷ್ಣುಪಾದ ಮೂಲ

ವನ್ನು ನಂಬಿ, ಶರಣಾಗತನಾಗಲು ನಾನು ನಾನೆಂಬ ಅಹಂಕಾರ ಉಳ್ಳ ಜೀವನ ಸ್ಥಿತಿ ಹೇತು ಭೂತನು ಅಂತಹ ಪ್ರತೀತಿಯುನ್ನುಂಟು ಮಾಡಿ ಅನುಗ್ರಹಿಸುವವನು ಆದ ಶ್ರೀಹರಿಯು ಪ್ರತ್ಯಕ್ಷ ನಾಗಿ ಮೋಕ್ಷವನ್ನೂ ದಯಪಾಲಿಸುವನಾಗುವನು.

ಎಂದು ಹೇಳಲು ದೇವಹೂತಿಯು ಕಪಿಲನನ್ನು ಕೇಳಿಕೊಂಡಳು–

ಪಾಪ ಪುಣ್ಯ ರೂಪ ಉಭಯ ಕರ್ಮವನ್ನು ಮಾಡುವ ಪುರುಷನನ್ನು ತ್ರಿಗುಣ ಪ್ರಕೃತಿ ಎಂದಿಗೂ ಬಿಡುವುದಿಲ್ಲವೆಂದು ತೋರುವುದು. ಪ್ರಕೃತಿ ಪುರುಷನು ನಿತ್ಯರು ಮತ್ತು ಅನ್ಯೋನ್ಯಾ ಶ್ರಯರು. ಶರೀರವಿಲ್ಲದ ಜೀವನು ಚೇಷ್ಟಾಮಾತ್ರವನ್ನು ಮಾಡಲಾರನು. ಜೀವನವಿಲ್ಲದ ಪ್ರಕೃತಿಮಯ ಶರೀರವು ಅಚೇತನವಾಗಿ ಬಿದ್ದಿಹುದು. ಗಂಧಗುಣವನ್ನು ಬಿಟ್ಟು ಭೂಮಿಯು ಬೇರೆಯಿರುವುದೇ? ಇಲ್ಲ. ಅಂತೆಯೇ ಪ್ರಕೃತಿ ಜೀವರ ಸಂಬಂಧವು ಅವಿನಾಭೂತವಾಗಿದೆ. ಪುರುಷನೋ ಅಸ್ವತಂತ್ರಕರ್ತನು. ಕರ್ಮಫಲ ರೂಪಸಂಸಾರವೋ ಪ್ರಕೃತಿಯದು. ಅಂದಮೇಲೆ ಈ ಜೀವನಿಗೆ ಬಂಧಮೋಕ್ಷವು ಹೇಗಾಗುವುದು? ನಿತ್ಯ ತತ್ತ್ವವಿಚಾರದಿಂದ ಬಂದ ಭಯವು ಒಂದು ಸಲ ಹೋದರೂ ಸಂಶಯರೂಪ ಮನೋವೃತ್ತಿಯಿಂದ ಭಯವು ಪುನಃ ಬಂದೇ ಬರುತ್ತೇ ಅಲ್ಲವೇ?

ಎನ್ನಲು ಶ್ರೀ ಕಪಿಲನು ಹೇಳಿದನು–

ಅಂಬ! ಫಲಾಭಿಸಂಧಿರಹಿತವಾಗಿ, ನಿರಂತರವಾಗಿ, ಅನುಷ್ಠಿಸಿದ ಶುದ್ಧವಾದ ಧರ್ಮದಿಂವ ಮನಶ್ಶುದ್ಧಿಯಾಗುವುದು. ಚಿರಕಾಲೀನ ವೇದಾಂತ ಶ್ರವಣದಿಂದ ಭಕ್ತಿ ದೃಢವಾಗುವುದು. ಬಲಿಷ್ಠವಾದ ವೈರಾಗ್ಯದಿಂದ, ಅಷ್ಟಾಂಗ ಯೋಗಾಭ್ಯಾಸದಿಂದ ಮನಸ್ಸಿನ ಏಕಾಗ್ರತೆ ಸಂಭವಿಸುವುದು. ಆಗ ಅಪರೋಕ್ಷವಾಗಿ ವಿಷ್ಣ್ವಾದಿ ದೇವತಾನುಗ್ರಹವಾಗುವುದು. ಅಗ್ನಿಯಿಂದ ಸುಡಲ್ಪಟ್ಟ ಕಟ್ಟಿಗೆ ತಾನೂ ಉರಿದು, ಸಮೂಲವಾಗಿ ನಷ್ಟವಾಗುವಂತೆ, ಜೀವನ ಪ್ರಕೃತಿಬಂಧವು, ಅಹರ್ನಿಶವೂ ಬಿಡದೆ ಮಾಡಿದ ಶ್ರವಣಾದಿ ಸಾಧನ ಜಾತದಿಂದ ಮೆಲ್ಲಗೆ ನಷ್ಟವಾಗಿ ಹೋಗುವದು; ವಿಷಯಗಳ ಅನಿತ್ಯತ್ವ ಹೇಯತ್ವಾದಿ ದೋಷಗಳನ್ನು ನೋಡಿ ಸಾಕೆಂದೆನಿಸಿದಾಗ ನಷ್ಟವಾಗೇ ಆಗುವದು. ಇನ್ನು ಆನಂದಾತ್ಮಕನಾಗಿ, ಅಚ್ಛೇದ್ಯ ಅಕ್ಲೇದ್ಯಾದಿ ಸ್ವರೂಪ ಮಹಿಮೆಯಿಂದ ಕೂಡಿ ತನ್ನ ಬಿಂಬನಾದ ಶ್ರೀಹರಿ ಪ್ರಸಾದದಿಂದ ಸಮರ್ಥನಾದ ಜ್ಞಾನಿಜೀವನಿಗೆ ಬಂಧವೆಂತಿರುವುದು? ಮಲಗಿ ನಿದ್ದೆ ಮಾಡುವವನಿಗೇ ವ್ಯಾಘ್ರ ಚೋರಾದಿ ಭಯವು! ಎಚ್ಚತ್ತಿರುವವನಿಗೆ ಆ ಭಯವೇ ಇಲ್ಲ. ಹೀಗೆ ನಾಮಾದಿಯೂ, ಮದಂತವೂ ಆದ ತತ್ತ್ವಗಳ ಯಥಾರ್ಥಜ್ಞಾನದಿಂದ ನನ್ನಲ್ಲೇ ಮನಸ್ಸಿಟ್ಟ ನನ್ನ ಭಕ್ತನಿಗೆ ಪ್ರಕೃತಿಬಂಧವು ಏನೂ ಮಾಡಲಾರದು. ಮತ್ತು ತತ್ತ್ವಜ್ಞಾನಿಯು ಬಹುಜನ್ಮಗಳ ಸಾಧನೆ ಮಾಡಿ ಸತ್ಯಲೋಕಾದಿ ಸಮಸ್ತವು ಅಸಾರವು ಅನಿತ್ಯವೆಂದರಿತು, ವೈರಾಗ್ಯದಿಂದ ನನ್ನನ್ನು ಉಪಾಸಿಸುವನು. ಚೆನ್ನಾಗಿ ನನ್ನ ಪ್ರಸಾದವನ್ನು ಪೊಂದುವನು. ಆಗ ನನ್ನ ಆಶ್ರಯವನ್ನು ಪಡೆದು ಸ್ವರೂಪಜ್ಞಾನವನ್ನು ಹೊಂದಿ ಸಂಶಯಗಳಿಲ್ಲದೆ ವೈಕುಂಠಾದಿ ನನ್ನ ಲೋಕಗಳಲ್ಲಿ ಪ್ರಾದುರ್ಭೂತ ನಿಜಸ್ವರೂಪನಾಗಿ ಸುಖಿಸುವನು. ಲಿಂಗ ಶರೀರವೇ ನಷ್ಟವಾಗಿರುವುದರಿಂದ ಆಗ ಮುಕ್ತಜೀವನು ಮತ್ತೆ ಸಂಸಾರಭಯವನ್ನು ಪೊಂದುವುದಿಲ್ಲ.

ಇಂತು ಸಾಧನ ಸಿದ್ಧನಾದವನು ನಾನೇ ಕೊಡಲಾಗಿ, ಅಷ್ಟಾಂಗ ಯೋಗಾಭ್ಯಾಸದಿಂದ ಬರುವ ಅಣಿಮಾದಿ ಸಿದ್ಧಿಗಳಲ್ಲಿ ಆಸಕ್ತನಾಗದೆ, ನನ್ನನ್ನೇ ಭಕ್ತಿಯಿಂದ ಭಜಿಸಿದರೆ ಅವನಿಗೆ

ಮುಕ್ತಿಯನ್ನೇ ಕೊಡುವೆನು. ಪುನರಾವೃತ್ತಿ ಲಕ್ಷಣ ವ್ಯುತ್ಕ್ರಮುಖದಿಂದ ಅವನನ್ನು ತಪ್ಪಿಸಿಬಿಡುವೆನು. ಒಂದು ವೇಳೆ ಸಿದ್ಧಿಗಳಲ್ಲಿ ಆಸಕ್ತನಾದರೂ ಮೋಕ್ಷವು ವಿಲಂಬಿತವಾಗುವುದು. ಅಷ್ಟೇ ಹೊರತು ನನ್ನಲ್ಲಿ ಭಕ್ತಿ ಎಂದಿಗೂ ವ್ಯರ್ಥವಲ್ಲ.

## ೨೯. ವೈಷ್ಣವ ಯೋಗ

ಭಗವಾನ್ ಕಪಿಲನು ಹೇಳಿದನು–

ಮನಸ್ಸು ಬ್ರಹ್ಮನನ್ನು ನೋಡಲು ಸುಲಭವಾದ ಯೋಗವನ್ನು ಯೋಗಫಲದನಾದ ನನ್ನ ಮಹಿಮೆಯನ್ನು ಹೇಳುವೆನು; ಕೇಳು. ಯೋಗವು ಜ್ಞಾನಸಾಧನವು. ಅದು ಸಿಗಬೇಕಾದರೆ ಸ್ವಧರ್ಮಾಚರಣವನ್ನು ಯಥಾಶಕ್ತಿ ಮಾಡುವುದು; ವಿರುದ್ಧ ಸರ್ವಧರ್ಮಗಳನ್ನು ಬಿಡುವುದು; ಯದೃಚ್ಛಾಲಾಭಸಂತುಷ್ಟಿ; ಭಗವದ್‌ಜ್ಞಾನಿಜನರ ಸೇವೆ; ಪ್ರವೃತ್ತಿ ಧರ್ಮಪರಿತ್ಯಾಗ; ನಿವೃತ್ತಿ ಧರ್ಮಾನುಷ್ಠಾನ, ವಿಹಿತಮಿತಭೋಜನ; ಹರಿಕ್ಷೇತ್ರದರ್ಶನ; ಶಾಸ್ತ್ರನಿಷಿದ್ಧ ಹಿಂಸಾವರ್ಜನ; ಭೂತಹಿತಕಥನ; ಚೌರ್ಯಪರಿವರ್ಜನ; ಶರೀರಪೋಷಣ ಮಾತ್ರಪರ್ಯಾಪ್ತ ಅರ್ಥಸಂಪಾದನ; ಬ್ರಹ್ಮಚರ್ಯ; ಉಪವಾಸ; ಶಾಸ್ತ್ರಪರ್ಯಾಲೋಚನ; ಆಂತರ್ಬಾಹ್ಯ ಶೌಚ; ಬ್ರಹ್ಮಯಜ್ಞ; ವೇದಾಧ್ಯಯನ; ನಿತ್ಯಪೂಜಾ; ಮಂತ್ರಜಪ; ಆಸನಜಯ; ವೈಷ್ಣವಸಿದ್ಧಾಂತದೀಕ್ಷಾ; ಪ್ರಾಣಾಯಾಮ; ಪ್ರತ್ಯಾಹಾರ; ಹರಿ ವಿಷಯ ಕೇಂದ್ರಿಯ ನಿರೂಢಿ; ಹರಿಪಾದಮಾರಭ್ಯ ಮಂದಹಾಸ ಪರ್ಯಂತ ಏಕೈಕಾವಯವಧಾರಣಾ; ಶ್ರೀಹರಿ ಜಗಜ್ಜನ್ಮಾದಿ ಕರ್ತೃತ್ವ ಚಿಂತನ; ಹರಿವಿವಶ ಮನಸ್ಸು ಇವೇ ಮೊದಲಾದವು ಯೋಗಮಾರ್ಗಗಳು. ಅಸಜ್ಜನ ಸಂಗದಿಂದ ದುಷ್ಟವಾದ ಮನಸ್ಸನ್ನು ನಿಧಾನವಾಗಿ ಬುದ್ಧ್ಯಧೀನವನ್ನಾಗಿಸಿ ಆಲಸ್ಯ ಪ್ರಮಾದಗಳಿಲ್ಲದೆ ಪ್ರಾಣಾನುಗ್ರಹವನ್ನು ಸಂಪಾದಿಸಲು ಮಾಡಬೇಕಾದ ಅಷ್ಟಾಂಗಯೋಗವನ್ನು ಪ್ರಾಣಾಯಾಮ ಲಕ್ಷಣವನ್ನು ಹೇಳುವೆನು.

ಶುಚಿಯಾದ ದೇಹದಲ್ಲಿ, ಸ್ಥಿರವಾದ ಆಸನದಲ್ಲಿ, ಕೂತು ಸ್ವಸ್ತಿಕ ಪದ್ಮಾದಿ ಆಸನವನ್ನ ವಲಂಬಿಸಬೇಕು. ಋಜುಕಾಯನಾಗಿ ಯೋಗಾಭ್ಯಾಸ ಮಾಡಬೇಕು. ಇತರಾಲೋಚನೆಯನ್ನು ಬಿಟ್ಟು, ಮನವು ಚಂಚಲವಾಗದೆ ಇರುವಂತೆ, ಪೂರಕ ಕುಂಭಕ ರೇಚಕಗಳಿಂದ ಪ್ರಾಣಾಯಾಮ ವನ್ನು ಮಾಡಿ ಜಿತಶ್ವಾಸನಾದ ಯೋಗಿಗೆ ಪ್ರಾಣಾನುಗ್ರಹವಾಗುವುದು. ಆಗ ಅವನು ನಿಷ್ಪಾಪನಾಗುವನು. ವಾಯು ವಹ್ನಿಗಳಲ್ಲಿಟ್ಟು ಊದಲು, ಸ್ವರ್ಣದಲ್ಲಿರುವ ತಾಮ್ರಾದಿಲೋಹ ಮಲವು ಸುಟ್ಟುಹೋಗುವಂತೆ, ಪ್ರಾಣಾಯಾಮದಿಂದ ರಾಗಾದಿ ದೋಷಗಳೂ, ಧಾರಣದಿಂದ ಜನ್ಮಾಂತರಕೃತ ಪಾಪಗಳು, ಪ್ರತ್ಯಾಹಾರದಿಂದ ದುಸ್ಸಂಗ ದುರಿತಗಳು, ಧ್ಯಾನದಿಂದ ಪ್ರಕೃತಿಯ ಸತ್ತ್ವಾದಿ ಗುಣಗಳು ನಾಶ ಹೊಂದುವುವು. ಆಗ ಸಮಾಧಿಯಲ್ಲಿ ಸ್ವಪ್ರಯತ್ನವಿಲ್ಲದೆ ಸಮಾಹಿತವಾಗಿ ಮನವು ಭಗವಂತನ ಪೂರ್ಣತೆಯನ್ನು ಸರ್ವೋತ್ತಮತ್ವವನ್ನು ಕಂಡು ಆನಂದ ತುಂದಿಲವಾಗುವುದು.

ಪ್ರಸನ್ನವದನಕಮಲನು, ಪದ್ಮನಯನನು, ನಿಲೋತ್ಪಲಶ್ಯಾಮನು, ಶಂಖಚಕ್ರಗದಾ ಧರನು, ಪಂಕಜಕಿಂಜಲ್ಕಪೀತದುಕೂಲನು, ವನಮಾಲನು, ಶ್ರೀವತ್ಸಾಂಕಿತವಕ್ಷನು, ತ್ರಿಜಗ ದಧ್ಯಕ್ಷನು, ಕೌಸ್ತುಭಾಮುಕ್ತಕಂಧರನು, ಪರಾರ್ಘ್ಯಹಾರಕಿರೀಟವನಮಾಲಾಂಗದ ನೂಪುರನು,

ಕಾಂಚೀಕಲಾಪವಿಲಸನ್ನಿತಂಬನು, ಲಾಲಿತಜಗದಂಬನು, ಹೃದಯಕಮಲನಿಲಯನು, ದರ್ಶನೀಯನು, ಶಾಂತನು, ಮನಃಕಾಂತನು, ಸದಾಪೀಚ್ಛದರ್ಶನನು. ಸರ್ವಲೋಕಪಾಪಕರ್ಶನನು, ಭಕ್ತನಮಸ್ಕೃತನು, ಯಶೋವಿಸ್ತೃತನು, ಅನುಗ್ರಹಕಾತರನು, ಪುಣ್ಯಶ್ಲೋಕಶಿಖಾಮಣಿಯು ಆದ ಶ್ರೀಹರಿಯನ್ನು ಧ್ಯಾನಿಸು. ಸಮಗ್ರಾಂಗಧ್ಯಾನವು ಲಭಿಸುವವರೆಗೂ ಏಕಾವಯವವನ್ನು ಧ್ಯಾನಿಸು. ವೈಕುಂಠದಲ್ಲಿ ಸ್ಥಿತನು, ಅನಂತಾಸನದಿ ಕೂತಿರುವನು, ಶ್ವೇತದ್ವೀಪದಲ್ಲಿ ಮಲಗಿಹನೆಂದು ಅಥವಾ ಹೃದಯದಲ್ಲಿ ದರ್ಶನೀಯ ರೂಪದಿಂದ ಧ್ಯಾನಿಸು. ಪಾದದಿಂದಾರಂಭಿಸಿ ಏಕೈಕಾವಯವ ಧ್ಯಾನವನ್ನು ವರ್ಣಿಸುವೆನು.

ವಜ್ರಾಂಕುಶಧ್ವಜಪದ್ಮಾದಿ ಶುಭಲಾಂಚನದಿಂದ ಕೂಡಿ ಭಕ್ತರ ಹೃದಯಾಂಧಕಾರವನ್ನು ಉತ್ತುಂಗರಕ್ತವಿಲಸನ್ನಖಚಂದ್ರಮಂಡಲ ಚಂದ್ರಿಕೆಯಿಂದ ದೂರಮಾಡುವ ಭಗವಚ್ಚರಣಾರವಿಂದವನ್ನು ಧ್ಯಾನಮಾಡು!

ಅತಿಶಯ ಪಾವನವೆನಿಸಿದ ಯಾವನ ಪಾದದಿಂದ ಪುಟ್ಟಿಬಂದ ಪವಿತ್ರ ಮಂದಾಕಿನಿಯನ್ನು ಧರಿಸಿ ಶಿವನು ಅತ್ಯಂತ ಪುಣ್ಯಭಾಜನನಾದನೋ ಅಂತಹ ಶ್ರೀಹರಿಯ ಭಕ್ತಪಾಪ ಪರ್ವತ ವಜ್ರನೆನಿಸಿದ ಚರಣಾರವಿಂದವನ್ನು ಬಹುಕಾಲ ಧ್ಯಾನಿಸು.

ಸುವರ್ಣಭುಜವಿನ್ಯಸ್ತವು, ಬಲಪ್ರಶಸ್ತವು, ಅತಸಿಕಾಕುಸುಮ ಶೋಭಿಯು ಆದ ಹರಿಯ ಊರುದ್ವಯವನ್ನು ಪೀತಾಂಬರೋಪರಿಧೃತ ಕಾಂಚೀಕಲಾಪಶೋಭಿತನಿತಂಬವನ್ನೂ ಧ್ಯಾನಿಸು.

ಬ್ರಹ್ಮಾಂಡಕೋಶಾಧಾರವು, ಬ್ರಹ್ಮನಿವಾಸಿಲೋಕ ಕಮಲಜನ್ಮಭೂಮಿಯು ಆದ ನಾಭಿಸರವನ್ನು ವಿಸ್ತಾರಹಾರಮಯೂಖಧವಲಿತ ಮಹೇಂದ್ರ ನೀಲಪ್ರಭಾಭಾಸಮಾನ ಪ್ರಶಸ್ತ ವಕ್ಷವನ್ನು ಅಲ್ಲಿ ವಸಿಸಿ ಜನರ ಮನೋನಯನಾಭಿರಾಮಳಾಗಿ ಆನಂದಪ್ರದಳಾದ ಶ್ರೀದೇವಿಯ ಶ್ರೀವತ್ಸವನ್ನು ಕೌಸ್ತುಭಮಣಿಯನ್ನು ಧ್ಯಾನಮಾಡು.

ಮಂದರಗಿರಿಮಥನಶೋಭಿತವು, ಅಂಗದಕಂಕಣಾಂಗುಲೀಯಕಾದಿ ಭೂಷಣ ಭೂಷಣವು, ಲೋಕಪಾಲರ ರಕ್ಷಣಚಣವು ಆದ ಹರಿಕರಗಳನ್ನು ಚಿಂತಿಸು. ಅಂಬ! ಅಸಹ್ಯವೀರ್ಯವಾದ ಸುದರ್ಶನವನ್ನು ಕರಸರೋರಾಜಹಂಸವೆನಿಸುವ ಪಾಂಚಜನ್ಯವನ್ನು ದಾನವಭಟರಕ್ತವಮನಕಾರಿ ಕೌಮೋದಕಿಯನ್ನು ಶ್ರೀದೇವಿಯೇ ನಿತ್ಯಸುಖರಕ್ತಳಾಗಿ ಆಲಿಂಗಿಪಳೆಂಬಂತಿರುವ ಮಾಲೆಯನ್ನು ಬ್ರಹ್ಮನೇ ತಂದೆಯ ಕಂಠಸೀಮಾವಲಂಬಿಯಾಗಿ ಬಿಡೆನೆಂಬಂತಿರುವ ಮಣಿಯನ್ನು ಚಿಂತಿಸಿ ವಂದಿಸು.

ಭಕ್ತರ ಸಮೀಕ್ಷೆಗಾಗಿ ಅವರ ಆರ್ತಿಯನ್ನು ಹರಿಸಲು ಅವತರಿಸುವ ಶ್ರೀಶನ ವದನಾರವಿಂದವನ್ನು ವದನಾರವಿಂದಶೋಭಿ ಮಕರಕುಂಡಲಗಳನ್ನು ಸುಂದರ ಮಂದಹಾಸವನ್ನು ಧ್ಯಾನಮಾಡು.

ಸಾಕ್ಷಾಚ್ಛ್ರೀದೇವಿಯು ಅಪೇಕ್ಷಿಸಿ ನಿರೀಕ್ಷಿಸುವ, ಮಂಗಲ ಕಟಾಕ್ಷಪ್ರಸರಕರುಣರಸಪೂರ್ಣವಾದ, ನೀಲಾಲಕಭ್ರಮರಸೇವಿತವಾದ, ಮತ್ಸ್ಯದ್ವಯಾಚ್ಛಶೋಭಾಜಯಶಾಲಿಯಾದ, ಧ್ಯಾತೃಮನಃಸಂಕಲ್ಪ ವಿತರಣಕುಶಲ ಭ್ರೂಭಂಗಮಂಗಲವಾದ ನೇತ್ರದ್ವಂದ್ವವನ್ನು ಚಿಂತಿಸು.

ಅಧಿಕ ಕೃಪಾಪರಿಪೂರ್ಣಕಟಾಕ್ಷವು, ಸಾಂಸಾರಿಕ ಘೋರತಾಪತ್ರಯ ನಿರ್ಮೂಲನ ದಕ್ಷವು, ಮಂದಹಾಸಶೋಭಿಯು, ತಪ್ರಸಾದಪರಿಸೂಚಕವೂ ಆದ ಸ್ವಾಮಿಯ ನೋಟವನ್ನು ಚಿರಧ್ಯಾನ ವಿಷಯವನ್ನಾಗಿಸಿ ಧನ್ಯಳಾಗು.

ಪ್ರಣತಲೋಕ ತೀವ್ರಶೋಕ ಸಾಗರ ಶೋಷಕವಾದ ಹಾಸವನ್ನು ಸ್ವೇಚ್ಛೆಯಿಂದ ಮನ್ಮಥನೂ ಮೋಹಿಸುವಂತೆ ರಚಿತವಾದ ಭ್ರೂಮಂಡಲವನ್ನು ಚಿಂತಿಸು. ಅದರ ಬಿಂಬ ರಕ್ತಿಮಾರಂಜಿತ ಸಿತಕುಂದ ಶೋಭಿದಂತ ಪಂಕ್ತಿಯನ್ನೂ ಧ್ಯಾನಿಸು.

ಇಂತು ಅನ್ಯದನ್ನು ಚಿಂತಿಸದೆ, ಸ್ವಹೃದಯ ಪದ್ಮಕರ್ಣಿಕಾಧಿಷ್ಠಿತನಾದ ಹರಿಯ ಸುಂದರತಮ ಮೂರ್ತಿಯನ್ನು ಭಕ್ತಿರಸಾರ್ದ್ರಚಿತ್ತದಿಂದೇಕಾಗ್ರಭಾವಮುಕ್ತಳಾಗಿ ಚಿಂತಿಸು. ಸಮಗ್ರಾಂಗಚಿಂತನಸಿದ್ಧಿ ಆಗಲು ಭಕ್ತಿರಸವು ಉಕ್ಕೇರಿ ಬಂದಂತೆ ಆನಂದಬಾಷ್ಪಗಳುದುರಿ, ಮೈಯೆಲ್ಲಾ ಪುಲಕಿತವಾಗುವುದು. ಆನಂದಭರ ಸಂಭ್ರಮದಿಂದ ಗದ್ಗದಿತನಾಗಿ ಅವಶನಾದಾಗ, ಚಿತ್ತವು ಹರಿಪದಾಯತ್ತವಾಗಿ ನಿಶ್ಚಲವಾಗುವುದು. ಸಂಸಾರ ಧರ್ಮಗಳಾದ ಶೋಕಮೋಹ ಗಳನ್ನು ದೂರೀಕರಿಸಿ, ಕರಗತ ಕಂದುಕದಂತೆ ಕಾಣುವ ಕಮಲನಯನನ ದರ್ಶನವನ್ನು ಪೊಂದುವನು. ಪ್ರಾಕೃತಾಂತಃಕರಣವು ನಷ್ಟವಾಗಿ ಸ್ಥೂಲ ಸೂಕ್ಷ್ಮ ಶರೀರಾಭಿಮಾನವು ಅಳಿಸಿಹೋಗುವುದು. ದೀಪವು ವರ್ತಿಗಳಿಲ್ಲದೆ ಆರಿದಂತೆ, ಬಾಹ್ಯ ಮನಸ್ಸಿನ ವ್ಯಾಪಾರವು ನಿತುಹೋಗುವುದು. ಜೀವಚಿನ್ಮಯವು ನಿತ್ಯಮುಕ್ತ ಭಗವದ್ವಿಷಯವಾಗುವುದು. ಅಂತಹ ಸರ್ವೋತ್ತಮ ಹರಿಜ್ಞಾನಿಯು ಆಗ ಜೀವನ್ಮುಕ್ತನೆನಿಸುವನು.

ಇಂತು ಪ್ರಾಕೃತ ಮನೋನಾಶನಾಗಿ ಅಜ್ಞಾನಾದಿಗಳಿಲ್ಲದೇ ಪ್ರಕಾಶರೂಪನಾಗಿ, ತತ್ತ್ವ ನಿಶ್ಚಯಜ್ಞಾನದಿಂದ ವಿರಾಜಿಸುವ ಜೀವನಿಗೆ ಮನಸ್ಸು ಸುಖದುಃಖಾದಿಗಳನ್ನುಂಟುಮಾಡಲಾರದೆ ವಿರತವಾಗುವುದು. ಪರಮಾತ್ಮನ ಸರ್ವೋತ್ತಮತ್ವವು ಸ್ಪಷ್ಟವಾಗಿ ತಿಳಿಯುವುದು. ಅದೇ ಚರಮದೇಹವೆನಿಸಿದಾಗ ಅಭಿಮಾನ ಪ್ರಯುಕ್ತ ಬಂಧಕ ಜ್ಞಾನವು ಇರುವುದಿಲ್ಲ. ದೇಹವಿದೆಯೋ ಬಿದ್ದುಹೋಯಿತೋ ಎಂಬ ಅಭಿಮಾನವಿಲ್ಲದೆ ಹರಿಯನ್ನೇ ಕಾಣುತ್ತಿರುವ ಜೀವನ್ಮುಕ್ತನು ತನ್ನ ಸ್ವರೂಪವನ್ನರಿತು ಅದೃಷ್ಟ ನಿಯಾಮಕ ಹರೀಚ್ಛೆಯಿಂದ ಬಂದ ಅಥವಾ ಬಿದ್ದ ದೇಹವನ್ನು ಮದಿರಾಮದಾಂಧನು ಉಟ್ಟಬಟ್ಟೆಯು ಇದೆಯೋ ಇಲ್ಲವೋ ಎಂದರಿಯದೆ ಪೋಗುವಂತೆ, ಲಕ್ಷಿಸದೆ ಪ್ರಾರಬ್ಧದ ನಾಶವನ್ನು ಪ್ರತೀಕ್ಷಿಸುತ್ತಿರುವನು. ಸಚ್ಚಿದಾತ್ಮಕ ನಾರಾಯಣ ಸಂದರ್ಶನ ಸುಧಾಸಮುದ್ರಮಗ್ನನಾದ ಜ್ಞಾನಿಯು, ಕಪಾಲಮುಕ್ತ ನಾರಿಕೇಲಫಲದಂತೆ ದೇಹದ ಪೋಷಣಾದಿ ಪ್ರಯತ್ನವೂ ಇಲ್ಲದಿರುವನು. ದೇಹವಾದರೂ ಪ್ರಾರಬ್ಧಾವಸಾನವಾದ ತತ್‌ಕ್ಷಣವೇ ಬಿದ್ದುಹೋಗುವುದಾಗ ಜ್ಞಾನಿಯು ಸಮಾಧಿಯೋಗಫಲವನ್ನು ಹೊಂದಿರುವನಾದ್ದರಿಂದ ಪುನಃ ಸೇಂದ್ರಿಯ ಶರೀರಸಂಪರ್ಕವನ್ನು ಕಾಣದೆ ಮುಕ್ತಪ್ರಾಯನಾಗುವನು.

ಈ ದೇಹವೇ ಮಗನಲ್ಲ, ದ್ರವ್ಯವಲ್ಲ, ಅಂತೆಯೇ ನಾನೆಂದು ತಿಳಿದ ದೇಹವೇ ಜೀವನೂ ಅಲ್ಲ. ಕೊಳ್ಳಿಯಿಂದ, ಕಿಡಿಯಿಂದ, ಹೊಗೆಯಿಂದ, ಅಗ್ನಿ ಬೇರೆ ಇರುವಂತೆ ಭೂತೇಂದ್ರಿಯಾಂತಃ ಕರಣಯುತನಾದ ಜೀವನಿಂದ ಸರ್ವಜ್ಞನು, ಗುಣಪೂರ್ಣನಾದ ಹರಿಯು ಭಿನ್ನನಾಗಿಯೇ ಇದ್ದಾನೆ. ಸರ್ವಭೂತಗಳ ಅಂತರ್ಯಾಮಿಯಾಗಿದ್ದಾನೆ. ಹರಿಯಲ್ಲಿ ಆಧಾರ ಮಾಡಿಕೊಂಡು ಜೀವರಿರುವರು. ಅಂತರ್ಯಾಮಿ ಹರಿರೂಪಗಳಿಗೆ ಭೇದವಿಲ್ಲ. ಅವನೇ ಸರ್ವಜೀವರಿಗೆ ಆದಾನಾದಿ ಕರ್ತನಾದ ಸ್ವಾಮಿಯು. ಆರ್ದ್ರ ಶುಷ್ಕ ಮುಖ ವಿವಿಧ ಭೇದವುಳ್ಳ ಕಾಷ್ಠಗಳಲ್ಲಿ ಅಗ್ನಿಯು ಒಬ್ಬನೇ ಅಲ್ಲವೇ? ಅಂತೆಯೇ ಶ್ರೀಹರಿಯು ಪ್ರಕೃತಿಯಲ್ಲಿ ಸ್ವಗತ ಭೇದ ವರ್ಜಿತನು ನಿರ್ದೋಷನಾಗಿಯೇ ಇರುವನು. ಆದ್ದರಿಂದ ಶ್ರೀಹರಿಯು ಸರ್ವೋತ್ತಮನೆಂದು ತಿಳಿಯಲು ಒಂದೇ ಕಾರಣವು ಸಾಕಾಗಿದೆ. ಅದೇನೆಂದರೆ ಬ್ರಹ್ಮಾದಿಗಳೂ ಕೂಡ ಕಾರ್ಯಕಾರಣರೂಪಳಾದ

ಪ್ರಕೃತಿಬಂಧದಲ್ಲಿ ಸಿಲುಕಿರಲು, ಶ್ರೀಹರಿಯು ಪ್ರಕೃತಿಗೆ ಒಡೆಯನಾಗಿ ನಿರ್ಲಿಪ್ತನಾಗಿರುವನು.

ಹರಿಯು ಇತರರಿಲ್ಲದ ದೇಶಕಾಲಗಳಲ್ಲಿ ಇರುವನು. ಸಾಕ್ಷಾತ್ತಾಗಿ ಸರ್ವವನ್ನು ವೀಕ್ಷಿಸುವನು. ಸರ್ವಸ್ವಾಮಿಯಾಗಿರುವನು. ಪ್ರಪಂಚವು ಹಾಗಲ್ಲ. ಜೀವಜಡಾತ್ಮಕ ವಿಶ್ವವೆಲ್ಲ ತದಧೀನವು. ಸ್ವತಃ ನಿಷ್ಪ್ರಯೋಜನವು. ಅಶಾಶ್ವತವೆಂದು ನಿತ್ಯವೂ ಧ್ಯಾನಿಸುವವನು ಹರಿಪ್ರಸಾದ ಪಾತ್ರನಾಗುವನು– ಎಂದು ಕಪಿಲನು ಹೇಳಿದನು.

## ೩೦. ಭಕ್ತಿಯೋಗ

ದೇವಹೂತಿಯು ಕೇಳಿದಳು–

ಮಹದಾದಿ ತತ್ತ್ವಗಳ ಲಕ್ಷಣಗಳೇನು? ಪ್ರಕೃತಿಪುರುಷಲಕ್ಷಣವನ್ನು ಪೇಳು. ಅವುಗಳ ಪಾರಮಾರ್ಥಿಕ ಸ್ವರೂಪಜ್ಞಾನವನ್ನು ನಾನು ಪೊಂದಲಿಚ್ಛಿಸಿ ಕೇಳುವೆನು. ನನಗೆ ಸಾಂಖ್ಯಶಾಸ್ತ್ರವು ನಿರೂಪಿಸುವ ರೀತಿಯಲ್ಲಿ ವಿಸ್ತರಿಸಿ ಪೇಳು. ಭಕ್ತಿಯೋಗದ ಮಾರ್ಗವಾವುದು? ವಿರಾಗವಿಲ್ಲದೆ ಭಕ್ತಿಯು ಚಂಚಲವಾಗುವುದು. ಅಂತಹ ವೈರಾಗ್ಯವು ದೃಢವಾಗುವುದೆಂತು? ಜೀವನ ವಿವಿಧ ಗರ್ಭವಾಸಾದಿ ಕರ್ಮಫಲಾನುಭೂತಿಯನ್ನು ವರ್ಣಿಸು. ನಿನ್ನ ಸರ್ವೋತ್ತಮತ್ವವನ್ನು ನಿನ್ನ ಕಾಲಚಕ್ರಮಹಿಮೆಯನ್ನು ಹೇಳು. ಸ್ತ್ರೀಮಾತ್ರಳಾದ ನಾನೂ ತಿಳಿಯುವಂತೆ ವಿಶದವಾಗಿ ತಿಳಿಸಿಕೊಡು ಪ್ರಭೂ! ನಿನ್ನ ಕಾಲಭಯದಿಂದಲಾದರೂ ಜನರು ಕುಶಲಕರ್ಮಗಳನ್ನು ಮಾಡಲಿ!

ಜ್ಞಾನಯೋಗ್ಯನು ಕೂಡ ದುಸ್ಸಂಗದಿಂದ ಅನ್ಯಥಾಜ್ಞಾನಿಯಾಗಿರುವನು. ಅನಾದಿ ಅವಿದ್ಯೆ ಕಾಮುಕರ್ಮಗಳ ಪೀಡೆಯೂ ಬಾಧಿಸುವುದು. ನಿಶ್ಚಯಜ್ಞಾನವಿಲ್ಲದೆ ಪುಣ್ಯಪಾಪ ಕರ್ಮಾಚರಣೆಯನ್ನು ಮಾಡಿ ತತ್ಫಲರೂಪಸುಖದುಃಖಾನುಭವವನ್ನು ಹೊಂದಲು ಹುಟ್ಟಿ ಸಾಯುತ್ತಿರುವ ಕಣ್ಣು ಕಾಣದ ಈ ಸುಜೀವರಿಗೆ ನೀನು ಸೂರ್ಯನಂತೆ ಯೋಗಪ್ರಕಾಶವನ್ನು ಬೀರಿ ಉದ್ಧರಿಸು– ಎಂದು ಬೇಡಿಕೊಂಡಳು.

ಆಗ ತಾಯಿಯ ನುಡಿಯನ್ನು ಕೇಳಿ ಸಂತೋಷದಿಂದ ಕರುಣಾಪೂರ್ಣನಾದ ಕಪಿಲ ನಿಂತೆಂದನು–

ಭಾಮಿನಿ! ಭಕ್ತಿಯೋಗವು ಶಾಸ್ತ್ರಗಳಲ್ಲಿ ಅನೇಕ ವಿಧವಾಗಿ ಹೇಳಲ್ಪಟ್ಟಿದೆ. ರಾಜಸಾದಿ ಗುಣಾನುಸಾರಿಯಾದ ಜನರ ಭಕ್ತಿಯು ಬೇರೆ ಬೇರೆ ವಿಧವಾಗಿರುತ್ತದೆ.

ಅಯಥಾರ್ಥಜ್ಞಾನಿಯಾದವನು ಹಿಂಸಾ ದಂಭ ಮಾತ್ಸರ್ಯಗಳನ್ನೊಳಗೆ ತುಂಬಿಕೊಂಡು ಗೂಢದ್ವೇಷಿಯಾಗಿ ಮಾಡುವ ಭಕ್ತಿಯು ತಾಮಸವೆನಿಸುವುದು. ಶಬ್ದಾದಿ ವಿಷಯಾಭಿಲಾಷೆಯಿಂದ, ಕೀರ್ತಿಕಾಮನೆಯಿಂದ; ಅಥವಾ ಛತ್ರಚಾಮರಾದ್ಯೈಶ್ವರ್ಯಲಾಭಕ್ಕೆಂದು ನನ್ನನ್ನು ಪೂಜಿಸುವನು, ನನ್ನ ರೂಪಗಳಲ್ಲಿ ಭೇದವೆಣಿಸುವನು, ಕೇವಲ ಪ್ರತಿಮೆಯಲ್ಲಿ ಮಾತ್ರ ಪೂಜಿಸುವನು ಮಾಡುವ ಭಕ್ತಿಯು ರಾಜಸವು. ಪಾಪಕ್ಷಯವಾಗಲೆಂದು ನನ್ನಲ್ಲಿ ಸರ್ವಕರ್ಮ ಸಮರ್ಪಣ ಮಾಡಿ, ವಿಹಿತವಾಗಿದೆ, ಆದ್ದರಿಂದ ಕರ್ತವ್ಯವೆಂದರಿತು, ಯಜ್ಞಾದಿ ಕರ್ಮ ಮಾಡುತ್ತಾ ನನ್ನ ರೂಪಗಳಲ್ಲಬೇದವನ್ನು ತಿಳಿದು ಮಾಡುವ ಭಕ್ತಿ ಸಾತ್ವಿಕವು. ನನ್ನ ಗುಣಶ್ರವಣ ಮಾತ್ರದಿಂದ ಸರ್ವೋತ್ತಮನಾದ ನನ್ನಲ್ಲಿ ಸಮುದ್ರದಲ್ಲಿ ಸೇರುವ ಗಂಗೆಯ ಪ್ರವಾಹದಂತೆ

ಮಾಡುವ ನಿತ್ಯಭಕ್ತಿಯು ನಿರ್ಗುಣವೆನಿಸುವುದು. ಅದು ಅವ್ಯವಹಿತವೂ ಮತ್ತು ಫಲಹೇತು ರಹಿತವೂ ಆಗಿದೆ.

ಏಕಾಂತಭಕ್ತರು ನನ್ನ ಸೇವೆಯನ್ನು ಬೇಡುವರಾಗಲಿ ಸೇವಾಫಲವಾಗಿ ಕೊಡುವ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಮೋಕ್ಷಗಳನ್ನೂ ಬೇಡರು. ಅದೇ ಭಕ್ತಿಯೋಗದ ಪರಿಪಕ್ವತೆ ಯೆಂದು ತಿಳಿ. ಇದರಿಂದಲೇ ಲಿಂಗಶರೀರವನ್ನು ಕಳೆದುಕೊಂಡು ಜೀವನು ನನ್ನನ್ನು ಹೊಂದಲರ್ಹನಾಗುವನು.

ಅಂತಹ ಭಕ್ತಿಗೆ ಸಾಧನಗಳನ್ನು ಕೇಳು.

ಶಕ್ತಿಗೆ ತಕ್ಕ ಹರಿಪೂಜೆ, ನಿಷ್ಕಾಮಕರ್ಮಾನುಷ್ಠಾನ, ವೇದವಿಹಿತಸ್ವಧರ್ಮ ರತಿ, ಪ್ರಾಣ್ಯು ಪದ್ರವರಾಹಿತ್ಯ, ನನ್ನ ಮೂರ್ತಿದರ್ಶನ ಸ್ಪರ್ಶನ ಪೂಜಾ ಸ್ತುತಿ ನಮಸ್ಕಾರ ಸಮರ್ಪಣ, ಸರ್ವಭೂತಗತ ಹರಿಮಾನಸ, ದುಃಸಂಗವರ್ಜನ, ಸತ್ಯವಚನ, ಮಹಜ್ಜನ ಪೂಜಾ, ದೀನಜನ ಕೃಪಾ, ತುಲ್ಯಜನಮೈತ್ರಿ, ಯಮನಿಯಮಾನುಷ್ಠಾನ, ವೇದಾಂತಶಾಸ್ತ್ರ ಶ್ರವಣ, ನಾಮ ಸಂಕೀರ್ತನ, ಅವಕ್ರಬುದ್ಧಿ, ಸುಜನಸಂಗ, ಅಹಂಮಮತಾ ಪರಿತ್ಯಾಗ, ದ್ವಾದಶೋರ್ಧ್ವಪುಂಡ್ರ ಧಾರಣ ಮೊದಲಾದ ಸಾಧನಗಳಿಂದ ಮನಸ್ಸು ಶುದ್ಧವಾಗುವುದು. ಅಚಿರದಲ್ಲೇ ನನ್ನ ಗುಣಶ್ರವಣ ಮಾಡುವ ಮಾತ್ರದಿಂದಲೇ ಪುಟ್ಟಿದ ಭಕ್ತ್ಯುದ್ರೇಕಭರನಾದವನು ನನ್ನನ್ನು ಪೊಂದುವನು.

ಹೇಗೆ ವಾಯುವಿನಿಂದ ತರಲ್ಪಟ್ಟ ಪುಷ್ಪಾದಿ ಸುಗಂಧವು ನಾಸಿಕೆಯನ್ನು ಆಕರ್ಷಿಸುವುದೋ, ಹಾಗೇ ಭಕ್ತಿರತವಾದ ಮನಸ್ಸು ವಿಷಯವಿಕಾರವನ್ನು ದೂರೀಕರಿಸಿ ಪರಮಾತ್ಮನನ್ನು ವಶೀಕರಿಸುವುದು.

ಸರ್ವಜೀವರಲ್ಲಿ ಅಂತರ್ಯಾಮಿಯಾಗಿದ್ದು ಆದಾನ ದಾನಗಳನ್ನು ನಾನೇ ಮಾಡುತ್ತಲಿರು ವಾಗ ನನ್ನನ್ನು ಮರೆತು ಮನುಜನು ಪ್ರತಿಮಾಪೂಜೆ ಮಾಡಲು ಅಲ್ಲೇನಿಲ್ಲ. ಸರ್ವಾಂತರ್ಗತ ನಾದ ನನ್ನ ಜ್ಞಾನವಿಲ್ಲದೆ ಮೂಢನಾಗಿ ಕೇವಲ ಪ್ರತಿಮೆಯನ್ನು ಪೂಜಿಸುವುದು ಭಸ್ಮದಲ್ಲಿ ಹೋಮ ಮಾಡಿದಂತೆಯೇ ಸರಿ! ಈ ರಾಜಸರಿಗೆ ಮಂತ್ರವಂತೂ ಉಚ್ಚರಿಸುವ ರಾದ್ದರಿಂದ, ಫಲವು ಸ್ವಲ್ಪವಾಗಿ ಬರುವುದಾಗಲಿ ತಾಮಸರಿಗದೂ ಇಲ್ಲ. ದುರಭಿಮಾನದಿಂದ ಇತರ ಸ್ವೋತ್ತಮರನ್ನು ಕಡೆಗಣಿಸಿ, ಜ್ಞಾನಿಯಾಗಿ, ವೈಷ್ಣವ ದ್ವೇಷಿಯಾದ ತಾಮಸನೆಷ್ಟು ಪೂಜಾದಿಗಳ ಮಾಡಿದರೂ ನನ್ನ ಭಕ್ತನೆನಿಸಲಾರನು. ಅನಘೇ! ಬೇಕಾದ ದ್ರವ್ಯಗಳಿಂದ ಬೇಕಾದಷ್ಟು ಪೂಜಿಸಿ ದರೂ ಭೂತಾವಾಸಿಯಾದೆನ್ನಲ್ಲಿ ಪ್ರೀತಿಯಿಲ್ಲದ ಪ್ರತಿಮಾ ಪೂಜೆಯನ್ನು ನಾನು ಸ್ವೀಕರಿಸುವು ದಿಲ್ಲ. ಆದರೂ ನನ್ನ ಭಕ್ತನ ಪ್ರತಿಮಾ ಪೂಜೆಯನ್ನು ವ್ಯರ್ಥವೆನ್ನುವುದಿಲ್ಲ. ಅವನಾದರೂ ಹೃದಯವಾಸಿಯಾದ ನಾನೇ ಸರ್ವಭೂತ ಸ್ಥಿತನೆಂದು ನನ್ನ ಸರ್ವತ್ರೈಕ ಸ್ಥಿತಿಯನ್ನರಿಯುವವರಿಗೆ ಪ್ರತಿಮೆಯನ್ನರ್ಚಿಸಲಿ. ಆ ರೀತಿ ತಿಳಿಯದೆ ನನ್ನಲ್ಲಿ ಭೇದವನ್ನು ತಿಳಿದ ಅನ್ಯಥಾ ಜ್ಞಾನಿಯು ಅಂಧಂತಮಸ್ಸನ್ನು ಪೊಂದುವನು. ಶ್ರೀನೃಸಿಂಹನಿಂದ ತಮಃಪ್ರಾಪ್ತಿ ಪೊಂದಬಾರದಲ್ಲವೇ? ಅಂದಮೇಲೆ ಸರ್ವಸ್ವಾಮಿಯು ಹೃದಯಗುಹಾವಾಸಿಯು ಆದ ನನ್ನ ಕಡೆ ದೃಷ್ಟಿಯಿಟ್ಟು ಪೂಜಾಸ್ಥಾನ ಯೋಗ್ಯತಾನುಸಾರವಾಗಿ ಗೌರವಿಸುವುದು ಲೇಸು. ದಾನ ಗೌರವಗಳು ಮೈತ್ರಿಯನ್ನು ನಡೆಸುವಾಗ ತಾರತಮ್ಯವನ್ನರಿತಿರಬೇಕು. ನೋಡು.

ಮುಕ್ತರ ವಿಷಯದಲ್ಲಿ ತಾರತಮ್ಯ ಪೇಳುವೆನು. ಅವರಲ್ಲಿ ಸ್ಥಾವರಕ್ಕಿಂತ ಜಂಗಮರು ಉತ್ತಮರು. ಅವರಕಿಂತ ಕ್ರಮವಾಗಿ ಚೇಷ್ಟಾವಂತರು, ಮನೋವ್ಯಾಪಾರಯುಕ್ತರು, ಇಂದ್ರಿಯ ವೃತ್ತಿವಂತರು, ಸ್ಪರ್ಶವೇದಿಗಳು, ರಸವೇದಿಗಳು, ಗಂಧವೇದಿಗಳು, ಶಬ್ದವೇದಿಗಳು, ರೂಪಭೇದ ವೇದಿಗಳು, ದಂತಯುಕ್ತರು ಶ್ರೇಷ್ಠರು. ಅಲ್ಲಿ ಬಹಪದರವರಿಗೆ ಚತುಷ್ಪದರ ನಂತರ ದ್ವಿಪದರು ಶ್ರೇಷ್ಠರು. ಅವರಲ್ಲಿ ವರ್ಣವಂತರು, ಆಶ್ರಮಯುತರವರಲ್ಲಿ ಬ್ರಾಹ್ಮಣನು ಉತ್ತಮನು. ಬ್ರಾಹ್ಮಣರಲ್ಲಿ ವೇದಜ್ಞನಾದ ವಿಪ್ರನವನಿಗಿಂತ ಅರ್ಥಜ್ಞನಾದ ಋಷಿಯು, ಆಮೇಲೆ ಸಂಶಯ ಚ್ಛೇತ್ತನಾದ ದೇವತೆಯು, ಆ ದೇವತೆಗಳಲ್ಲಿ ಸ್ವತಂತ್ರಹರಿಧರ್ಮರತನಾದ ಇಂದ್ರನು ಶ್ರೇಷ್ಠನು. ಆತ್ಮಕೃತ ಧರ್ಮಫಲವನ್ನು ಬಯಸದೆ ಮುಕ್ತ ಸಂಗನಾದ ಗರುಡನಿನ್ನೂ ಉತ್ತಮನವನಕಿಂತಲೂ ನನ್ನಲ್ಲಿ ಸಮರ್ಪಿತವಾದ ಸರ್ವಕರ್ಮನು ವಿಷ್ಣುರತನು ಸರ್ವಜ್ಞನಾದ ಬ್ರಹ್ಮನು ಶ್ರೇಷ್ಠನು. ನಿರ್ದುಷ್ಟ ಬ್ರಹ್ಮಜ್ಞಾನಿಯು, ನನ್ನ ಭಕ್ತನು, ಕರ್ಮಫಲಾಸಕ್ತಿರಹಿತನಾದ ಬ್ರಹ್ಮನಂತೆ ನನಗಿನ್ನಾರೂ ಪ್ರೀತಿಪಾತ್ರರಿಲ್ಲ. ಬ್ರಹ್ಮಜ್ಞಾನಿಗಳೆಲ್ಲರೂ ಯಥಾಯೋಗ್ಯವಾಗಿ ನನ್ನ ಪ್ರೀತಿಪಾತ್ರ ರಾಗಿರುವರು. ಆದ್ದರಿಂದ ಅಮ್ಮಾ! ಸರ್ವಭೂತಗಳಲ್ಲಿ ಅನಿರುದ್ಧಾಖ್ಯ ಮದಂಶದಿಂದ ಜೀವನ ದಲ್ಲಿದ್ದು ನಡೆಸುತ್ತಿರುವೆನಂದರಿತು ಮನಸಾ ಮನ್ನಿಸಿ, ಅಲ್ಲಿರುವ ನನ್ನನ್ನುದ್ದೇಶಿಸಿ ನಮಸ್ಕರಿಸ ಬೇಕು.

ಭಕ್ತಿಜ್ಞಾನಯೋಗಗಳನ್ನೂ ಕರ್ಮಯೋಗವನ್ನೂ ಕೂಡ ಹೇಳಿದೆನು. ಜ್ಞಾನ ಭಕ್ತಿಗಳೇ ಪುರುಷಾರ್ಥ ಸಾಧನವು. ಭಕ್ತಿಯನ್ನು ಬಿಟ್ಟು ಜ್ಞಾನವು, ಜ್ಞಾನವಿಲ್ಲದ ಭಕ್ತಿಯು ಇರಲಾರದು. ಪರಮಾತ್ಮನನ್ನು ಹೊಂದಿಸುವ ಭಕ್ತಿಯ ಜ್ಞಾನರೂಪವೇ ಆಗಿದೆ.

ಕಾಲಸ್ವರೂಪವನ್ನು ಕೇಳು: ಅದು ಶ್ರೀಹರಿಯೇ. ಪೂರ್ಣನು ಸರ್ವಾಂತರ್ಯಾಮಿಯು ಭಾಗ್ಯನಿಧಿಯು, ಬ್ರಹ್ಮವಂದ್ಯನು, ಸರ್ವದೇವೋತ್ತಮನು ಆದ ಶ್ರೀಹರಿಯೇ ಕಾಲದಲ್ಲಿದ್ದು ಸರ್ವಕರ್ಮಚೇಷ್ಟಕನು ಫಲಪ್ರದನೂ ಆಗಿರುವನು. ಶುಕ್ಲಕೃಷ್ಣಾದಿ ರೂಪಭೇದಾಸ್ಪದವು. ಅಪ್ರಾಕೃತವು. ಮಹದಾದಿ ಜೀವಭಯಜನಕವು ಆಗಿದೆ. ಕಾಲವು ಭೂತಗಳಲ್ಲಿದ್ದು ಭೂತಗಳಿಂದ ಭೂತರನ್ನು ತಿನ್ನುವನು. ಅಖಿಲಾಶ್ರಯನು, ಸಂಹಾರಕರ್ತೃ ರುದ್ರಾದಿ ಸಂಹಾರ ಸಮರ್ಥನು ಆದ ಕಾಲನಾಮಕ ವಿಷ್ಣುಮಹಿಮೆಯನ್ನು ಸಾಕ್ಷಿಚೈತನ್ಯದಿಂದ ನೋಡಿ ತಿಳಿದು ಆನಂದಪಡು. ಅವನಿಗೆ ಯಾರು ಪ್ರೇಮವಿಷಯರು? ಯಾರು ದ್ವೇಷವಿಷಯರು? ಬಂಧುಗಳಾರು? ಯೋಗ್ಯತೆ ಯಂತೆ ಪ್ರಿಯಾಪ್ರಿಯರಾಗಲಿ ಪಕ್ಷಪಾತದಿಂದಲ್ಲ. ಮಲಗಿ ಮೈಮರೆತವರನ್ನು ಮಲಗದೇ ನುಂಗುವನೀ ಕಾಲನಾಮಕ ಹರಿಯು. ಅವನ ಭಯದಿಂದ ಗಾಳಿ ಬೀಸುವುದು; ಸೂರ್ಯನು ತಪಿಸುವನು; ಇಂದ್ರನು ಮಳೆಗರೆವನವನ ಭಯದಿಂದ ; ನಕ್ಷತ್ರಗಳು ಮಿನುಗುತ್ತವೆ; ವನಸ್ಪತಿ ಲತೌಷಧಿ ವೀರುಧಗಳು ಕಾಲದಲ್ಲಿ ಪುಷ್ಪಫಲಗಳ ಕೊಡುವುದು ಅವನಾಜ್ಞೆಯಿಂದಲೇ. ನದಿಗಳು ಹರಿಯುವುದು, ಸಮುದ್ರವು ತೀರವಂ ದಾಟಿ ಬರದಿರುವುದೂ ಅವನ ಭಯದಿಂದ. ಪರ್ವತಭಾರ ದಿಂದ ಭೂಮಿ ಜಲದಲ್ಲಿ ಪೋಗದಿರುವುದು, ಅಗ್ನಿ ಉರಿಯುವುದು, ಉಸುರಾಡಿಸಲು ಆಕಾಶವು ಮಾರ್ಗ ಕೊಡುವುದು, ಬ್ರಹ್ಮನು ಮಹದಾದಿ ಸಪ್ತತತ್ತ್ವಗಳೆಂಬ ಮಣ್ಣಿನಿಂದ ವಿವಿಧ ಶರೀರಗಳನ್ನು ಸೃಜಿಸುವುದು, ರುದ್ರಾದಿಗಳು ಸಂಹರಿಸುತ್ತಿರುವುದು ಎಲ್ಲವೂ ಯಾವಾಗಲೂ ಅವನ ಭಯದಿಂದಲೇ. ಆ ಹರಿವಶವೇ ಎಲ್ಲವೂ.

ಶ್ರೀಹರಿಗೆ ಮರಣವಿಲ್ಲ. ಇತರರಿಗೆ ಮರಣಾದಿ ಭಯಪ್ರದನವನೇ, ಜ್ಞಾನರೂಪಿಯಾದ ಶ್ರೀರಮಣನಿಗೆ ಜನ್ಮವಿಲ್ಲ. ಇತರರು ಹುಟ್ಟುವುದವನಿಂದ. ಬ್ರಹ್ಮರುದ್ರಪ್ರೇರಕನಾಗಿ ಜನನ ಮರಣ ಪ್ರಭುವಾದ ಕಾಲನಾಮಕ ಹರಿಯ ಮಹಿಮೆ ತಿಳಿಯಿತೇ?-ಎಂದು ಕಪಿಲನು ನುಡಿದನು.

## ೩೧. ಜೀವಕರ್ಮ ಸಂಸೃತಿ ನಿರೂಪಣವು

ಶ್ರೀ ಭಗವಂತನು ಪೇಳಿದನು–

ಅಂಬ! ಇಂತಹ ಸ್ವಾಮಿಯ ಮಹಾ ಪರಾಕ್ರಮವನ್ನರಿಯದೆ ಅಜ್ಞಾನಮಗ್ನನಾದ ಜೀವನು ವಾಯುವಿನಿಂದ ಮೇಘಗಳು ಚೆಲ್ಲಾಚದರಾಗಿ ಪೋಗುವಂತೆ ಕಾಲನಾಮಕ ಹರಿಪರಾಕ್ರಮಕ್ಕೆ ಸಿಲುಕಿ ನಾನಾ ಯೋನಿಗಳಲ್ಲಿ ಜನಿಸಲು ಓಡುತ್ತಿರುವನು.

ಬಹಳ ಕಷ್ಟಪಟ್ಟು ಸಂಪಾದಿಸಿ ಸುಖಸಾಧನವೆಂದು ತಿಳಿದಿರುವ ಪದಾರ್ಥಗಳನ್ನು ಭಗವಂತನು ನಾಶಮಾಡಲು ಅಥವಾ ದೂರಮಾಡಲು ಜೀವನು ದುಃಖವನ್ನೆ ಪೊಂದುವನು. ಈ ದೇಹವು ಅನಿತ್ಯವು; ಆದರೂ ಅಭಿಮಾನದಿಂದ ಅಜ್ಞಾನವನ್ನು ಪೊಂದಿ ಗೃಹಕ್ಷೇತ್ರ ಧನಾದಿ ಗಳು ಶಾಶ್ವತವೆಂದು ತಿಳಿವನು. ಯಾವ ಯೋನಿಯಲ್ಲಿ ಜನಿಸಿದರೂ ಜೀವನಿಗೆ ದುಃಖವೇ ಹೊರತು ಸುಖವಿಲ್ಲ. ಆದರೂ ವೈರಾಗ್ಯವು ಪುಟ್ಟುವುದಿಲ್ಲ. ನರಕಸಮವಾದ ತಿರ್ಯಗ್ಯೋನಿ ಯಲ್ಲಿ ಜನಿಸಿದರೂ ಅಲ್ಲಿ ವೈಷಯಿಕ ಸುಖಮೋಹಿತನಾಗಿ ಆ ಕೀಳು ದೇಹವನ್ನೂ ಜೀವನು ಬಿಡಲಿಚ್ಛಿಸುವುದಿಲ್ಲ. ತಾನು, ತನ್ನ ಹೆಂಡತಿ, ಮಕ್ಕಳು, ಮನೆ, ಪಶುಗಳು, ದ್ರವ್ಯ, ಬಂಧು ಮಿತ್ರಾದಿಗಳಲ್ಲಿ ಮಮತೆಯಿಂದ ಬೇರೂರಿದ ಅಭಿಮಾನ ಬಿಡಲಾರದೆ ತನ್ನ ಸಮಾನರಿಲ್ಲವೆಂದು ಮೆರೆಯುವನು. ಮತ್ತು ಅವರ ರಕ್ಷಣೆಗಾಗಿ ಹಗಲಿರುಳು ದುಡಿದು, ಮೈ ಬೆಂದು ಬೆಂಡಾಗಲು, ಬಿಡದೆ ಮೂಢನಾಗಿ ದ್ರವ್ಯಾಶೆಯಿಂದ ಪಾಪಗಳನ್ನು ಮಾಡಿಬಿಡುವನು. ಅಸತ್ತರುಣಿಯರ ಮಾಯೆಗೆ ಸಿಲುಕಿ ಇಂದ್ರಿಯಗಳು ಕುಣಿಸಿದಂತೆ ಕುಣಿದು ಹಾಳಾಗುವನು. ರಹಸ್ಯ ಸಲ್ಲಾಪಗಳು, ಶಿಶುಜನ ಕಲಭಾಷಣಗಳು ಕೇಳುತ್ತಾ ವಿವಶನಾಗಿ ದುಃಖಸಾಧನವಾಗಿ ವಚನಮಯವಾದ ಗೃಹಧರ್ಮಗಳಲ್ಲಿ ತೊಡಗುವನು. ದುಃಖವನ್ನು ನಾಶಮಾಡಲು ಪ್ರಯತ್ನಿಸಿದರೂ ಅದು ಬರುತ್ತಿರುವಾಗ ದುಃಖವನ್ನೇ ಸುಖವೆಂದು ತಿಳಿವನು. ಅಲ್ಲಲ್ಲಿ ತಿರುಗಿ ತಿರುಗಿ ಮಹಾಕಷ್ಟದಿಂದ ಬಂದ ಧನವನ್ನು ತಂದು, ಪರಿಜನ ಪೋಷಣ ಮಾಡುತ್ತಾ, ಅವರುಂಡು ಮಿಕ್ಕಿದ್ದನ್ನು ತಿನ್ನುತ್ತಾ, ತಾನು ಕೊನೆಗೆ ಪಾಪದಿಂದ ನರಕವನ್ನು ಸೇರುವನು. ಒಂದು ಜೀವಿಕೆ ನಶಿಸಲು ಇನ್ನೊಂದಾ ರಂಭಿಸಿ ಅದೂ ನಷ್ಟವಾಗಲು ಲೋಭದಿಂದ ಹಿಂದುಮುಂದು ನೋಡದೆ ಪರದ್ರವ್ಯವನ್ನು ಕದಿಯಲು ಆಶೆಪಡುವನು. ಕುಟುಂಬಪೋಷಣವನ್ನು ಹಿಂದಿನಂತೆ ದುಡಿದು ಮಾಡಲಾರದಾ ದಾಗ, ಪ್ರಯತ್ನಗಳೆಲ್ಲ ಕೆಟ್ಟು ನಿಟ್ಟುಸಿರನ್ನಿಟ್ಟು, ಶೋಕಪಡುವನು. ಕಾಂತಿ ಕೆಡುವುದಲ್ಲದೆ ಕೈಲಿ ಧನವೂ ಇರುವುದಿಲ್ಲ. ಆದರೂ ಇವನಿಗೇನೋ ವೈರಾಗ್ಯವು ಆಗಲೂ ಪುಟ್ಟುವುದಿಲ್ಲ. ತಾನು ಪೋಷಿಸಿದವರೀಗ ತನ್ನನ್ನು ಪೋಷಿಪರು. ಮೈಯಲ್ಲಿ ಮುಪ್ಪು ಮೂಡುವುದು. ರೂಪವೇ ಕೆಡುವುದು. ಕೊನೆಗೆ ಮರಣವನ್ನು ಕಾಯುತ್ತಾ ಅಳುತ್ತಾ ಮನೆಯಲ್ಲಿ ಮಲಗಿರುವನು. ರೋಗದಿಂದ ನರಳುತ್ತಿರುವನು. ಅಲಕ್ಷ್ಯದಿಂದ ಮಕ್ಕಳು ಮೊದಲಾದವರು ಕೊಡುವ ಅನ್ನವನ್ನು ತಿಂದು ನಾಯಿಯಂತೆ ಬಿದ್ದಿರುವನು. ಅಲ್ಪಾಹಾರನು, ಅಲ್ಪಚೇಷ್ಟಿತನಾಗುವನು. ಆಸನ್ನಮರಣ

ನಾದಾಗ ಕಫದಿಂದ ಉಸಿರಾಡದು. ಕಾಸಶ್ವಾಸಗಳಿಂದ ಆಯಾಸಪಡುತ್ತಾ ಕಣ್ಣುಗುಡ್ಡೆಗಳನ್ನು ತೇಲಿಬಿಡುವನು. ಕಂಠದಲ್ಲಿ ಘುರ ಘುರ ಎಂಬ ಶಬ್ದವು ಪುಟ್ಟುವುದು. ಮಲಗಿ ಸಾಯುತ್ತಿರುವವನ ಸುತ್ತಲೂ ಬಂಧುಗಳು ನಿಂತು ಶೋಕಿಸುವರು; ಮಾತನಾಡಿಸುವರು; ಆದರೂ ಜೀವನಿಗೆ ಕಾಲಪಾಶವು ಸೆಳೆವಾಗ ಮಾತು ಬರದು. ತನ್ನವರು ಅಳುತ್ತಿರಲು, ಬಹು ವೇದನಾಮಯವಾದ ಮರಣವನ್ನೇ ಪೊಂದುವನು. ಇಂತು ಅಜಿತೇಂದ್ರಿಯನಾಗಿ ಕುಟುಂಬ ಪೋಷಣಕ್ಕಾಗಿ ತನ್ನ ಜೀವನವನ್ನು ಹಾಳು ಮಾಡಿಕೊಂಡು ಸಾಯುವನು. ಆಗ ಭಯಂಕರರು, ಕ್ರೂರವೀಕ್ಷಣರೂ ಆದ ಯಮದೂತರೀರ್ವರಿವನ ಕರೆದೊಯ್ಯಲು ಬಂದಾಗ ಅವರನ್ನು ನೋಡಿ, ಗುಂಡಿಗೆ ಬೆಚ್ಚಿ, ಮಲಮೂತ್ರ ವಿಸರ್ಜನೆಯನ್ನು ಮಾಡಿಕೊಳ್ಳುವನು.

ಆಗ ಅವನಿಗೆ ಯಾತನಾ ದೇಹವನ್ನು ತೊಡಿಸಿ ಕುತ್ತಿಗೆಗೆ ಬಲವಾದ ಪಾಶಗಳನ್ನು ಕಟ್ಟಿ, ರಾಜಭಟರಪರಾಧಿಯನ್ನಂತೆ, ಯಮಭಟರು ಅತಿದೂರದ ನರಕಕ್ಕೆ ಕರೆದುಕೊಂಡು ಹೋಗುವರು. ತರ್ಜನ ಭರ್ಜನಗಳನ್ನು ಮಾಡುವರು. ಜೀವನು ಗದಗದ ನಡುಗುವನು. ಹಾದಿಯಲ್ಲಿ ನರಿನಾಯಿಗಳವನನ್ನು ಕಿತ್ತಿ ತಿನ್ನುವುವು. ತನ್ನ ಪಾಪವನ್ನು ನೆನೆದು ದುಃಖಿಸುತ್ತಾ ಹಸಿವೆ ನೀರಡಿಕೆಗಳಿಂದ ಬಾಧೆಪಡುತ್ತಾ ಕಾದ ಮರಳ ಮೇಲೆ ನಡೆದುಪೋಗುವನು. ಮೇಲೆ ಸೂರ್ಯತಾಪವು ಸುಡುವುದು. ಸುತ್ತು ದಾವಾಗ್ನಿಯುರಿಯುತ್ತಾ ಬರುವುದು. ಬಿರುಗಾಳಿಗೆ ಸಿಕ್ಕು ಕಷ್ಟಪಡುತ್ತಾ ಹೋಗಲಾರದೆ ನಿಲ್ಲಲು, ಯಮಭಟರು ಕಶಾಘಾತಗಳಿಂದ ನೋಯಿಸುವರು. ಹಾಗೇ ನಡೆಯುತ್ತಾ ನೆರಳಿಲ್ಲದೆ ನೀರು ಸಿಗದೆ ಅಲ್ಲಲ್ಲಿ ಬಿದ್ದು ಎದ್ದು ಅಳುತ್ತಾ ಹೋಗಲೇಬೇಕಾಗುವುದು. ಹೀಗೆ ಪಾಪದಿಂದ ನರಕವನ್ನು ಸೇರಿ ಮುಟ್ಟಲು ಎರಡು ಅಥವಾ ಮೂರು ಮುಹೂರ್ತಗಳಾಗುವುದು. ಕೆಲವರು ಹತ್ತು ದಿನ, ಪಕ್ಷ ಅಥವಾ ಮಾಸದಲ್ಲಿ ಸೇರುವರು. ನರಕವು 99000 ಯೋಜನ ದೂರವಿರುವುದು.

ನರಕದಲ್ಲಿ ಪಾಪಜೀವರಿಗೆ ಆಗುವ ಶಿಕ್ಷೆ ಭಯಂಕರವಾಗಿದೆ. ಕಾಲು ಕೈಗಳಲ್ಲಿ ಬಟ್ಟೆಕಟ್ಟಿ ಸುಡುವರು. ಮೇಲೆ ಕೊಳ್ಳಿಗಳ ಕಟ್ಟುವರು. ಅವನ ಮಾಂಸವನ್ನು ಅವನಿಂದ ತಿನಿಸುವರು; ಪರರಿಂದಲೂ ತಿನಿಸುವರು. ಯಾತನಾದೇಹಕ್ಕೆ ಮರಣವಿಲ್ಲ. ಜೀವನು ಬದುಕಿರುವಾಗಲೇ ಕರುಳನ್ನು ತೆಗೆಯುವರು. ನಾಯಿಗಳು ಹದ್ದುಗಳು ಕರುಳನ್ನು ಕಿತ್ತು ತಿನ್ನುವುವು. ಸರ್ಪವೃಶ್ಚಿಕ ಮಶಕಾದಿಗಳು ತಮಗವನು ಕೊಟ್ಟ ಹಿಂಸೆಯನ್ನು ನೆನೆದು ಕೋಪದಿಂದ ಬಂದು ಕಚ್ಚುವುವು; ಅಂಗಗಳನ್ನು ಕಡಿಯುವುವು. ಆನೆಯಿಂದ ತುಳಿಸುವುದು, ಬೆಟ್ಟದ ಕೋಡಿನಿಂದ ಕೆಡಹುವುದು; ಭೂಮಿಯಲ್ಲಿ ಹೂತಿಡುವುದು ಮೊದಲಾದ ಹಿಂಸೆಯನ್ನು ಕೊಡುವರು. ನರನಾಗಲಿ, ನಾರಿಯಾಗಲಿ ದುಷ್ಟಸಂಗದಿಂದ ಪಾಪವನ್ನು ಮಾಡಿ ತತ್ಫಲವಾದ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವಾದಿ ನರಕಗಳನ್ನು ಅನುಭವಿಸುವರು. ಅಮ್ಮಾ! ಸಮೀಪದಲ್ಲೇ ನರಕ ಸ್ವರ್ಗಗಳಿವೆ, ನೋಡು, ರಾಜಾದಿದಂಡಿತರಾಗಿ ಯಾತನೆಯನ್ನು ಪಡೆವದು, ರೋಗ ದಾರಿದ್ರ್ಯಾದಿಗಳು ಪಾಪಫಲಗಳಲ್ಲವೇ?

ಇಂತು ಕುಟುಂಬ ಪೋಷಣವನ್ನು ಮಾಡುತ್ತ ತನ್ನ ಹೊಟ್ಟೆ ಮಾತ್ರ ಹೊರೆಯುವ ಪಾಪಿಯು ಆ ಕುಟುಂಬವನ್ನೂ ಆ ಉದರವನ್ನೂ ಇಲ್ಲೇ ಬಿಟ್ಟು, ಆ ಪಾಪದ ಫಲವನ್ನು ಮಾತ್ರ ಉಣ್ಣಲು ನರಕ ಸೇರುವನು. ತಾನೇ ಎಂದುಕೊಂಡ ಶರೀರವನ್ನು ಇಲ್ಲೇ ಬಿಟ್ಟು ಭೂತದ್ರೋಹದಿಂದ ಬಂದ ಪಾಪದ ಮೂಟೆಯನ್ನು ಬುತ್ತಿಯಂತೆ ತಲೆಯ ಮೇಲಿಟ್ಟು ಒಬ್ಬನೇ ನರಕಮಾರ್ಗವನ್ನು

ಅನುಸರಿಸಿ ಹೋಗುವನು. ದೈವಾಧೀನನಾಗಿ ಶ್ರೀಹರೀಚ್ಛೆಯಿಂದ ಪಾಪವು ಬೆನ್ನಟ್ಟಿ ಬಿಡದೆ ಬರಲು, ನರಕದಲ್ಲಿ ಅದನ್ನೇ ಉಣ್ಣುತ್ತಾನೆ. ಇನ್ನು ಕೇವಲ ಅಧರ್ಮದಿಂದ ಕುಟುಂಬಪೋಷಣಾ ರತನಾದವನು ಅಂಧತಾಮಿಸ್ರವನ್ನು ಸೇರಿ, ಹಿಂದಿರುಗದೆ, ಅಲ್ಲೇ ದುಃಖಮಗ್ನನಾಗಿರುತ್ತಾನೆ. ತಮೋಗರಲ್ಲದವರು ಈ ನರಕಲೋಕದ ಕೆಳಗಿರುವ ಯಾತನಾಮಯ ನರಕವನ್ನು ಅನುಭವಿಸಿ ಮತ್ತೆ ಪಾಪಶೇಷಯುತವಾಗಿಯೇ ಹಿಂದಿರುಗಿ ಬರುವರು.

## ೩.೨. ಜೀವಸಂಸ್ಕೃತಿ ನಿರೂಪಣ ಗರ್ಭವಾಸಾದಿ ದುಃಖ

ದೈವವಶನಾಗಿ ಕರ್ಮಫಲಾನುಭೋಗ ಮಾಡಲು, ಜೀವನು ತಂದೆಯ ರೇತಃಕಣ ವನ್ನಾಶ್ರಯಿಸಿ ಅಲ್ಲಿಂದ ತಾಯಿಯ ಉದರಪ್ರವೇಶವನ್ನು ಪೊಂದುತ್ತಾನೆ. ಮೊದಲನೆಯ ರಾತ್ರಿ ಕಲಲಾಕಾರವಾಗಿದ್ದ ಪಿಂಡವು ಐದು ರಾತ್ರಿಗಳಲ್ಲಿ ಬುದ್ಬುದಾಕಾರವಾಗುವುದು. ಹತ್ತು ದಿನಗಳಲ್ಲಿ ಕರ್ಕಂದು ಫಲದಂತೆ ಆಗಿ ಆಮೇಲೆ ಪಕ್ಷಿಯ ಗುಡ್ಡಿನಂತೆ ಆಗುವುದು. ತಿಂಗಳಲ್ಲಿ ಶಿರವೇರ್ಪ ಡುವುದು. ಎರಡನೆಯ ತಿಂಗಳಾಗಲು ಕೈಕಾಲುಗಳು ಸ್ಪಷ್ಟವಾಗುವುವು. ಮೂರು ತಿಂಗಳಲ್ಲಿ ನಖರೋಮಗಳು, ಅಸ್ಥಿ ಚರ್ಮಗಳು, ಲಿಂಗ ಛಿದ್ರಾದಿಗಳೇರ್ಪಟ್ಟು ನಾಲ್ಕರಲ್ಲಿ ಸಪ್ತಧಾತುಗಳು, ಐದರಲ್ಲಿ ಹಸಿವೆ ನೀರಡಿಕೆಗಳು ಪುಟ್ಟುವುವು. ಆರು ತಿಂಗಳು ತುಂಬಲು ಮಾಸವು ಮುಚ್ಚುವುದು. ಕುಕ್ಷಿಯ ಬಲಗಡೆ ತಿರುಗುತ್ತಿರುವುದು ತಾಯಿಗೆ ಗೊತ್ತಾಗುವುದು. ಏಳು ತಿಂಗಳಾಗಲು ಜ್ಞಾನಿಜೀವನಿಗೆ ಹಿಂದಿನ ಜನ್ಮಕರ್ಮಗಳ ಸ್ಮರಣೆ ಬರುವುದು. ಕರ್ಮಭೂಮಿಯಲ್ಲಿ ಶ್ರೀಹರಿಯ ಬಂಧಕಶಕ್ತಿಯಿಂದ ಒದಗಿದ ಸಂಸಾರಬಂಧದಲ್ಲಿ ನರಳುವ ಆ ಜೀವನು ತಾಯಿಯ ಆಹಾರ ಪಾನಗಳಿಂದ ಬೆಳೆಯುತ್ತಿರುವ ಶರೀರದಲ್ಲಿ, ರೋಗಿಯಂತೆ ವಿವಶನಾಗಿ, ವಿಣ್ಮೂತ್ರಗರ್ತದಲ್ಲಿ ಜಂತುಕ್ರಿಮಿಗಳಿಂದ ಕೂಡಿ ತಾನೂ ಹೊರಳಾಡುತ್ತಿರುವನು. ಅವನನ್ನು ಆ ಕ್ರಿಮಿಗಳು, ಸುಕುಮಾರನಾಗಿರುವುದನ್ನು ಕಂಡು ಕಡಿಯುತ್ತಲೇ ಇರುವುವು. ಅವಕ್ಕೂ ಹಸಿವಾಗುವುದಲ್ಲವೇ? ಜೀವನೋ ಮೂರ್ಛೆ ಹೊಂದುವನು. ಮರೀಚಿ ಸರ್ಷಪಾದಿ ಕಟುತೀಕ್ಷ್ಣ ಪದಾರ್ಥಗಳನ್ನು ಉಷ್ಣಲವಣಕ್ಷಾರಾಮ್ಲಾದಿ ತೀವ್ರರಸವಸ್ತುಗಳನ್ನೂ ತಾಯಿ ತಿನ್ನುವಳು. ಅವುಗಳ ರಸವವನಿಗೆ ಮೈಯೆಲ್ಲಾ ಹಚ್ಚಿದಂತಾಗಿ ದುಃಖಪಡುವನು. ಮೇಲೆ ಮಾಸವು ಮುತ್ತಿರುವುದು. ಅದರೊಳಗೆ ಕರುಳುಗಳವನ ಸುತ್ತಲೂ ಬಿಗಿಯುವುವು. ತಲೆಕೆಳಗೆ ಮಾಡಿ ಮೊಣಕಾಲುಗಳ ನಡುವಿಟ್ಟು ಬೆನ್ನು ಬಾಗಿ ತನ್ನ ಶರೀರವನ್ನು ತಾನು ಅಲ್ಲಾಡಿಸಲು ಸಮರ್ಥನಾಗದೆ, ಪಂಜರದಿ ಸಿಕ್ಕ ಪಕ್ಷಿಯಂತಿರುವನು. ದೈವವಶಾತ್ ನೂರು ಜನ್ಮಗಳಲ್ಲಿ ತಾನು ಮಾಡಿದ ಪುಣ್ಯಪಾಪಕರ್ಮಗಳ ಸ್ಮೃತಿ ಬರುವುದು. ಅವನ್ನೆಲ್ಲಾ ನೆನೆದು ನಿಟ್ಟುಸುರಂ ಬಿಟ್ಟು ವ್ಯಸನಾಕ್ರಾಂತನಾಗುವನು. ಹೇಳು ತಾಯೇ! ಗರ್ಭವಾಸದಲ್ಲಿ ಏನು ಸುಖವಿರುವುದು? ಏಳನೇ ತಿಂಗಳಿಂದ ಹಿಂದಿನ ಜ್ಞಾನವಿದ್ದೂ ತತ್ತರಿಸುತ್ತಾ, ಏನಾಗುವುದೋ ಇನ್ನು ಮುಂದೆ ಎಂಬ ಸಂಶಯಪೀಡಿತನಾಗಿ ಪ್ರಸೂತಿವಾತ ಗಳಿಂದ ಚಲಿಸುತ್ತಾ ಅಮೇಧ್ಯಗಳಲ್ಲಿ ಕ್ರಿಮಿಯಂತೆ ಹೊರಳಾಡುತ್ತಿರುವನು. ನಿಜವಾದ ತತ್ತ್ವ ಜ್ಞಾನವು ದೇವಋಷಿಜೀವರಿಗೆ ಆಗುವುದು. ಆ ಜೀವನು ಭೀತನಾಗಿ ಜ್ಞಾನೇಂದ್ರಿಯ ಮನೋ ಬುದ್ಧಿಗಳಿಂದ ಕೂಡಿ ಕೈಜೋಡಿಸಿ ರಕ್ಷಿಸೆಂದು ಯಾಚಿಸುತ್ತಾ, ದೈನ್ಯವಚನಗಳಿಂದ ಗರ್ಭವಾಸವಂ ಕೊಟ್ಟ ಪ್ರಭುವನ್ನು ಸ್ತುತಿಸುವನು.

ನನ್ನನ್ನೀ ಅಶುಭ ಗರ್ಭವಾಸದಲ್ಲಿ ತಂದಿಟ್ಟ ಶರಣಾಗತ ರಕ್ಷಕನಾದ ನಾರಾಯಣನ ದಿವ್ಯಚರಣಾರವಿಂದವನ್ನು ಆಶ್ರಯಿಸಿರುವೆನು. ಸ್ವೇಚ್ಛಾವತಾರನಾದ ಜಗಜ್ಜನ್ಮಾದಿ ಕಾರಣನೇ! ನಿನ್ನ ನಂಬಿದ ನನಗೆ ಭಯ ಬರಬಹುದೇ? ಭೂತೇಂದ್ರಿಯಾಂತಃಕರಣಗಳಿಂದ ಕೂಡಿ ಶ್ರೀಹರೀಚ್ಛೆಯಿಂದ, ಶರೀರದಲ್ಲಿ ಕರ್ಮಬದ್ಧನಾದ ಜೀವನಂತೆ ಶರೀರಸ್ಥನಾದರೂ, ಜನನ ಮರಣರಹಿತನು, ಅಖಂಡ ಜ್ಞಾನಿಯು, ಸಾಕ್ಷಿಯು ಆಗಿರುವ ಶ್ರೀಹರಿಗೆ ನಮಸ್ಕರಿಸುವೆನು. ಅವನಿಗೆ ಭೌತಿಕ ಶರೀರದ ಸೊಂಕಿಲ್ಲ. ಅವನ ಪ್ರತಿಬಿಂಬನೆನಿಸಿದ ನನಗೀ ತ್ರಿಗುಣ ದಶೇಂದ್ರಿಯ ಪಂಚಭೂತಗಳ ಬಂಧವು ಮರಣಭಯವು ಇರುವುದು. ಅವನ ಜ್ಞಾನದಿಂದಲೇ ಈ ಬಂಧನಿವೃತ್ತಿ ಆಗುವುದು. ಅಂತಹ ಪೂರ್ಣಗುಣನಾದ ಪ್ರಕೃತಿಪುರುಷ ವಿಲಕ್ಷಣನಾದ, ಷಡ್ಗುಣೈಶ್ವರ್ಯ ನಿಧಿಯಾದ, ಶ್ರೀಶನಿಗೆ ನಮಸ್ಕಾರವು. ಆ ಪ್ರಭುವಿನ ಇಚ್ಛೆಯಿಂದ ತ್ರಿಗುಣಾತ್ಮಕ ಪ್ರಕೃತಿಯ ಬಂಧ, ಅದರಿಂದ ಸಂಸಾರಮಾರ್ಗ, ಆ ಮಾರ್ಗದಲ್ಲಿ ತಾಪತ್ರಯಗಳು, ಅವುಗಳಿಂದ ಸ್ಮೃತಿ ನಾಶವಾಗಿ ಕೆಟ್ಟುಹೋಗುವ ಜೀವನು ಹರೇ! ನೀನೆನ್ನ ಸ್ವಾಮಿಯೆಂದು ಶರಣಾಗತನಾಗಿ ನಿನ್ನ ಪರಮಾನುಗ್ರಹ ಪೊಂದಿ ತರಿಸಬೇಕೇ ಹೊರತು, ಅನ್ಯಮಾರ್ಗವಿನ್ನಾವುದೂ ಇಲ್ಲ. ಸುಖನಿಧೇ! ನೀ ಕೊಟ್ಟದ್ದೀಜ್ಞಾನ. ಸದಾ ಸ್ಥಿರಚರ ಭೂತಗಳಲ್ಲಿ ಅಂತರ್ಯಾಮಿಯಾದ ನೀನೇ ಜೀವರಿಗೆ ಅವರ ಕರ್ಮವನ್ನುಣಿಸುತ್ತಿರುವೆ. ನಮ್ಮ ತಾಪತ್ರಯವನ್ನು ಕಳೆ. ನಿನ್ನ ಹೊರತು ದಿಕ್ಕಿಲ್ಲ! ಕಾಪಾಡು! ನೋಡೀ ಅಸಹ್ಯ ವೇದನೆಯನ್ನು! ಪಂಜರದಲ್ಲಿ ಪಕ್ಕವಿಲ್ಲದ ಪಕ್ಷಿಯಂತೆ ತನ್ನ ದೇಹದಲ್ಲಿ ಇರುವ ಜೀವನು, ಇನ್ನೊಂದು ಶರೀರದಲ್ಲಿ ಸಿಕ್ಕು ಅಲ್ಲಿಯ ಜಠರಾಗ್ನಿಯಿಂದ ಬೆಂದು, ವಿಣ್ಮೂತ್ರ ಕೂಪದಲ್ಲಿ ಹೊರಳಾಡುತ್ತಾ ದುಃಖಿತನಾಗಿರುವನು. ತಿಂಗಳನ್ನೆಣಿಸುತ್ತಿರುವನಾಗಿ ಗರ್ಭವಾಸದಿಂದ ಪಾರಾಗಲು ಪ್ರಾರ್ಥಿಸುತ್ತಿರುವನು. ಈ ಕೃಪಣನನ್ನೆಂದುದ್ಧರಿಸುವೆ ಪ್ರಭೂ! ಜ್ಞಾನವಿದೆ, ಆದರೆ ಗರ್ಭಗತನಾಗಿರುವದರಿಂದ ವ್ಯರ್ಥವಾಗಿದೆ. ಈ ಜ್ಞಾನವನ್ನು ಕೊಟ್ಟ ಕರುಣಾಮಯಾ! ದೀನನಾಥನಾದ ನೀನು ನಿನ್ನ ಲೀಲೆಯಿಂದ ಕಾಪಾಡಿ ಸಂತೋಷಪಡಿಸು! ನೀನೆನಗೆ ಮಾಡಿದುಪಕಾರಕ್ಕೆ ಪ್ರತಿಮಾಡಲರ್ಹನೇ? ಕೈಜೋಡಿಸಿ ಮುಗಿವೆನಿದೇ ನಿನ್ನ ಸಂತೋಷ ಜನಕವಾಗಲಿ! ಶರೀರದಿಂದ ನಾನು ಭಿನ್ನನೆಂದು ಚೆನ್ನಾಗಿ ತಿಳಿಯುತ್ತಿದೆ. ಇದು ನಿನ್ನ ದಯೆ. ನೀನೇ ನನ್ನ ಬಂಧವನ್ನು ಬಿಡಿಸುವ ಪ್ರಭುವೆಂದೂ ತಿಳಿದಿರುವೆನು. ಇದು ನಿನ್ನನುಗ್ರಹ! ಜೀವಜಡ ಭೇದಜ್ಞಾನವನ್ನು ದಯಪಾಲಿಸಿದ ಪುರಾಣಪುರುಷ ನೀನೇ; ಹೃದಯದಿ ಅಂತರ್ಯಾಮಿ ಎನಿಸಿರುವೆ. ಹೊರಗೆ ಕಾಲನಾಗಿ, ವಿರಿಂಚನಿಯಾಮಕ ರೂಪದಿಂದ ದೇವತೆಗಳಿಗೆ ಜ್ಞಾನಗೋಚರನಾಗಿರುವೆ. ವಿಭೋ! ಹೀಗೂ ಅನಿಸುತ್ತದೆ. ಈ ಗರ್ಭವಾಸವು ಬಹುದುಃಖಪೂರ್ಣವು; ಆದರೂ ಇದರಿಂದ ನನಗೆ ಹೊರಗೆ ಬರಲು ಬೇಡವೆನ್ನಿಸುತ್ತಿದೆ. ಹೊರಗೆ ನನ್ನನ್ನು ನುಂಗಲು ಅಜ್ಞಾನವೆಂಬ ತೋಳವು ಕಾದಿದೆ. ನಿನ್ನ ಬಂಧಕಶಕ್ತಿಯು ಅಹಂಕಾರವೆಂಬ ಬಲೆಯನ್ನೊಡ್ಡಿದೆ. ಮಮಕಾರವೆಂಬ ಅಗ್ನಿಜ್ವಾಲೆಯು ಮುತ್ತಿ ನಿಂತಿದೆ. ಸಂಸಾರಸಾಗರವು ಉಕ್ಕೇರಿಬರುತ್ತಿದೆ. ಆದರೂ ನಿನ್ನ ದಯೆ ಇರಲಿ ಸಾಕು. ಮತ್ತೆಯೂ ವ್ಯಸನಸಾಗರದಲ್ಲಿ ಬೀಳದಿರಲು, ಅನಿಮಿತ್ತ ಬಂಧುವಾದ ನಿನ್ನ ಪಾದಾರವಿಂದವನ್ನು ಸೇವಿಸುವೆನು. ಈ ಧೈರ್ಯವೆನಗೆ ಕೊಡು. ನನ್ನನ್ನು ನಾನುದ್ಧರಿಸಿಕೊಳ್ಳಲು ಯತ್ನಿಸುವೆನು.

ಕಪಿಲನು ಹೇಳಿದನು-

ಇಂತು ಮತಿಮಂತನಾದ ಈ ಜೀವವನ್ನು , ಹತ್ತು ತಿಂಗಳಾಗಲು, ಪ್ರವಪೊಂದಲು, ಸೂತಿಮಾರುತನು ಹರಿಯಾಜ್ಞೆಯಿಂದ ತಲೆ ಕೆಳಕ್ಕೆ ಮಾಡಿ ಹೊರಕ್ಕೆ ತಳ್ಳುವನು. ದೇಹಾಭಿಮಾನವು ತತ್‌ಕ್ಷಣವೇ ಹುಟ್ಟುವದು. ಬಹು ಕಷ್ಟದಿಂದ ಹೊರಬಂದು, ಉಸಿರಾಡದೆ ಮೂರ್ಛೆ ಹೊಂದಿದಂತೆ ಎಚ್ಚರ ತಪ್ಪುವುದು. ಭೂಮಿಯ ಮೇಲೆ ಮಲ, ರಕ್ತ, ಮೂತ್ರಗಳಲ್ಲಿ ಹುಳದಂತೆ ಹೊರಳಾಡಿ ರೋದಿಸುವನು. ವಿಪರೀತಜ್ಞಾನದಿಂದ ಹಿಂದೆ ನೆನಪಿಗೆ ಬಂದ ವಿಷಯವೆಲ್ಲ ನಷ್ಟವಾಗುವದು.

ಇನ್ನು ಶೈಶವದಲ್ಲಾದರೂ ಸುಖವಿಲ್ಲ. ಪರರಿವನನ್ನು ಬೆಳೆಸುವರು. ಅವರಿಗೆ ಇವನ ಇಂಗಿತವು ತಿಳಿಯದು. ಬೇಡದ್ದನ್ನು ಕೊಡುವರು. ಬೇಕಾದ್ದನ್ನು ಕೊಡರು. ಬೇಡವೆನ್ನಲು ಬಾಯಿಯು ಇರುವುದಿಲ್ಲ. ಅಶುಚಿಯಾದ ತೊಟ್ಟಿಲಲ್ಲಿ ಮಲಗಿಸುವರು. ತಿಗಣೆ ದೋಮಾರಿಗಳು ಕಚ್ಚಿದಾಗ ತುರಿಸಲು ಬಾರದು. ಏಳಲಾರದೆ ಓಡಲಾರದೆ ಬಿದ್ದಿರುವ ಆ ಮಗುವನ್ನು ಚಂದವಾಗಿರುವನಿವ ಸಿಕ್ಕನೆಂದು ಮಶಕಾದಿ ಕೀಟಗಳು ಇನ್ನೊಂದು ಕೀಟವನ್ನಂತೆ ಕಚ್ಚಿ ನೋಯಿಸುವುವು. ಓ ಎಂದು ಅಳುತ್ತಾ ಶೈಶವವು ದಾಟಲು, ಪೌಗಂಡವಿನ್ನೊಂದ್ಯೆದು ವರ್ಷಗಳ ಕಾಲ ದುಃಖದಿಂದೇ ಕಳೆದುಹೋಗುವುದು. ತಾನು ಬೇಡಿದ್ದನ್ನು, ಬೇಡದಷ್ಟು, ಬೇಡಿದಾಗ ಕೊಡರು. ಸಿಟ್ಟುಬರಲು ಏನೂ ಮಾಡಲಾರದೆ ದುಃಖಪಡುವನು.

ಆಗ ದೇಹವು ಬೆಳೆದಂತೆ ಕ್ರೋಧ ಲೋಭಗಳ ಗಣೆಯಾದ ಕಾಮವೂ ಬೆಳೆಯುವುದು. ಯೌವನವನ್ನು ಪೊಂದಿ, ಕಾಮಿಗಳಿಂದ ಕೂಡಿ, ಸ್ವೇಚ್ಛೆಯಿಂದ ತಿರುಗುವನು. ವಿಟರ ವಿರೋಧದಿಂದ ಸಾಯುವುದೂ ಸಂಭವಿಸುವುದು.

ಪಂಚಭೂತಗಳು ಕೊಟ್ಟ ದೇಹವೆನ್ನದೆಂದೂ ನಾನೇ ಎಂದೂ ತಿಳಿದು ದುರ್ಮತಿಯಾಗಿ ಕುಕರ್ಮಗಳನ್ನು ಮಾಡುವನು. ಅದರ ಫಲವಾಗಿ ಜನನಮರಣ ಚಕ್ರವಾದ ಸಂಸಾರದಲ್ಲೇ ಬಿದ್ದು, ಕೊನೆಗೆ ವಿಷ್ಣು ವೈಷ್ಣವ ದ್ವೇಷವನ್ನೂ ಮಾಡಿದವನು ತಮಸ್ಸನ್ನೇ ಹೊಂದುವನು. ಅವಿದ್ಯಾ ಕರ್ಮಗಳಿಂದ ಬಂದ ಜನ್ಮಗಳಲ್ಲಿ ಶಿಶ್ನೋದರ ಪರಾಯಣರ ಸಂಗವನ್ನು ಮಾಡಿದರೆ, ಮತ್ತು ಜೀವಾಭೇದವನ್ನು ಶ್ರೀಹರಿಗೆ ಪೇಳುವ ಅಸುರರನ್ನನು ಸರಿಸಿದರೆ ಕೂಡ, ಅಂಧತಮಸ್ಸನ್ನೇ ಪೊಂದಿ ನಿತ್ಯದುಃಖಿಯಾಗಿರುವನು. ಅಸಜ್ಜನ ಸಂಘವು ಬಹ್ವನರ್ಥಕಾರಿಯಾದುದು. ಅದರಿಂದ ಸತ್ಯ, ಶೌಚ, ದಯಾ, ಮ ಔನ, ಪುರುಷಾರ್ಥ ಬುದ್ಧಿ, ಭಕ್ತಿ, ಅಕಾರ್ಯಲಜ್ಜಾ, ಕೀರ್ತಿ, ಸುಜನವೈಷ್ಣವ ಕೃತಾಪರಾಧ ವಿಸ್ಮೃತಿ, ಅಂತರ್ಬಾಹ್ಯೇಂದ್ರಿಯಯ, ಐಶ್ವರ್ಯ ಮೊದಲಾದ ಸುಗುಣಗಳೆಲ್ಲಾ ನಶಿಸಿ ಹೋಗುವುವು. ಅಂತೆಯೇ ಶಾಂತಿಯಿಲ್ಲದೆ, 'ಶರೀರದಲ್ಲಿರುವವನು ಜೀವನೊಬ್ಬನೇ ಹರಿಯೂ ಇಲ್ಲ; ಚಯಾರಿಲ್ಲ'ವೆಂದು ತಿಳಿದಿರುವ ಸ್ತ್ರೀಜನ, ದಾಸರಾದ ಮೂಢರಲ್ಲಿಯೂ ಸ್ನೇಹವನ್ನು ಮಾಡಬಾರದು. ದುಷ್ಟ ಸ್ತ್ರೀಸಂಗದಿಂದಲೂ, ತತ್ಸಂಗಿಸಂಗದಿಂದಲೂ ಆಗುವಷ್ಟು ಅನರ್ಥವಿನ್ನಾವುದರಿಂದಲೂ ಆಗುವುದಿಲ್ಲ. ಬ್ರಹ್ಮನು ಮಗಳನ್ನೇ ಮೋಹಿಸಿದನೆಂಬರು. ಮೃಗಿಯಾದ ಅವಳನ್ನು ಮೃಗರೂಪನಾಗಿ ಲಜ್ಜೆಯಂ ಬಿಟ್ಟು ಹಿಂಬಾಲಿಸಿದ ನೆಂಬರು. ಅವನ ಪಾಡೇ ಹಾಗಾದಮೇಲೆ ಅವನಿಂದ ಸೃಷ್ಟರಾದ ರುದ್ರ, ಮರೀಚ್ಯಾದಿಗಳ, ಅವರಿಂದ ಸೃಷ್ಟರಾದ ಇತರ ಜನರ ಲೆಕ್ಕವೇನು! ಒಬ್ಬ ನಾರಾಯಣ ಋಷಿಯನ್ನು ಬಿಟ್ಟು ಯೋಷಿನ್ಮಾಯೆಗೆ ಸಿಲುಕದವರಿಲ್ಲ! ಸ್ತ್ರೀಯನ್ನು ನನ್ನ ಮಾಯೆಯಿಂದಲೇ

ನಾನೇ ಸೃಜಿಸಿದೆನು. ಅವಳು ಹುಬ್ಬಾಡಿಸುವುದರಿಂದಲೇ ದಿಗ್ಗಜಯಿಗಳು ಕೂಡ ಅವಳ ಪದಾಕ್ರಾಂತರಾಗಿ ಬೀಳುವರು.

ಆದ್ದರಿಂದ ನನ್ನ ಭಕ್ತಿಯೋಗದ ಪಾರವನ್ನು ಸೇರಲಿಚ್ಛಿಸಿದವನು, ನನ್ನ ಕಥಾಶ್ರವಣ ಚಿಂತನ ಧ್ಯಾನಗಳಿಂದ ನನ್ನ ಸ್ವರೂಪವನ್ನು ಕಂಡು ಸುಖಪಡಬೇಕೇ ಹೊರತು ನರಕದ್ವಾರವೆನಿಸಿದ ಪ್ರಮದಾಜನಸಂಗವನ್ನೆಂದಿಗೂ ಹಾಸ್ಯಕ್ಕಾಗಿಯೂ ಮಾಡಬಾರದು. ದೇವನಿರ್ಮಿತ ಮಾಯಾರೂಪಳಾದ ದುಷ್ಟನಾರಿಯು ಭಾರ್ಯಳಾಗಿ ಹತ್ತಿರ ಬರಲು ಅವಳನ್ನು ಮೃತ್ಯುವಿನಂತೆ ಕಂಡು ತೃಣಾವೃತ ಕೂಪದಿಂದಂತೆ ತಾನೇ ದೂರ ಸರಿಯಬೇಕು. ಮದಿರೆ ಕುಡಿದ ಮೇಲೆ ನುದ. ಕಾರಿಣಿಯಾದರೆ, ಪ್ರಮದೆ ನೋಟದಿಂದಲೇ ಮದಕಾರಿಣಿಯು. ಸರ್ವಥಾ ಭಗವದ್ಭಕ್ತರಲ್ಲದ ದುಷ್ಟಸ್ತ್ರೀಸಂಗವನ್ನು ದುಷ್ಟಪುರುಷರ ಸಂಗದಂತೆಯೇ ಬಿಟ್ಟುಬಿಡಬೇಕು. ಸ್ತ್ರೀಸಂಗದಲ್ಲಿ ಆಸೆಯಿಂದ ಪುರುಷನು ತನ್ನನ್ನು ಸೇರುವ ಸ್ತ್ರೀಯನ್ನು ಪುರುಷರತ್ಯಾದಿ ಗಳನ್ನಾಚರಿಸಿ, ವಿತ್ತಾಪತ್ಯಗೃಹಪ್ರದಳಾಗಿ ಬಂದ ನನ್ನ ಮಾಯೆ ಎಂದೇ ತಿಳಿಯಬೇಕು. ಭೃತ್ಯಾಪತ್ಯಗ್ರಹಪ್ರದನಾದರೂ ಗಂಡಸು ಭಕ್ತನಲ್ಲದಿರೆ ಅವನನ್ನು ಸ್ತ್ರೀಯು ಹರಿಣಿಯನ್ನು ಕೊಲ್ಲುವ ಬೇಟೆಗಾರನ ಗಾನವನ್ನಂತೆ ಮೃತ್ಯುವೆಂದೇ ತಿಳಿಯಬೇಕು.

ಜೀವನು ಕರ್ಮದಿಂದ ಬರುವ ಒಂದು ದೇಹದಿಂದ ಇತರ ದೇಹವನ್ನು ಹೊಂದುತ್ತಾ ಕರ್ಮವನ್ನು ಫಲಾಪೇಕ್ಷೆಯಿಂದ ಮಾಡುತ್ತಾ, ಸಂಸಾರದಲ್ಲೇ ಸಿಕ್ಕಿಬೀಳುವನು. ಭೂತೇಂದ್ರಿಯ ಮನೋಮಯ ದೇಹದ ವಿಯೋಗವೇ ಮರಣವು; ಸಂಯೋಗವೇ ಜನನವು. ಜೀವನಿಗೆ ಜನನಮರಣಗಳು ದೇಹದಿಂದ ಹೊರತು ಶರೀರದಿಂದಲ್ಲ. ಪಂಚಭೂತವಿರಚಿತವೀ ದೇಹ! ಇದರಲ್ಲಿ ಸತತವೂ ಭೂತಗಳು ಶಬ್ದಸ್ಪರ್ಶರೂಪರಸಗಂಧ ರೂಪವಾಗಿ ಸೇರುತ್ತಿರುವುವು. ಶರೀರ ಅವನ್ನು ಸ್ವೀಕರಿಸಲರ್ಹವಾಗದಿರುವುದೇ ಮರಣವು. ಶಬ್ದಾದಿಗಳನ್ನು ಅಹಂಕಾರದಿಂದ ಸ್ವೀಕರಿಸುವದೇ ಸಂಭವವು. ಕಣ್ಣಿಗೆ ಕಾಮಲಾದಿ ದೋಷದಿಂದ ರೂಪದರ್ಶನ ಯೋಗ್ಯತೆಯು ನಾಶವಾಗುವಂತೆಯೇ ಮತ್ತು ಚಕ್ಷುಸ್ಸಿನ ಯೋಗ್ಯತೆ ಚೆನ್ನಾಗಿರಲು ಜೀವನಿಗೆ ಚಕ್ಷುರ್ದ್ವಾರಾ ರೂಪದರ್ಶನವಾಗುವಂತೆಯೇ, ಶರೀರವು ದುಷ್ಟವಾದರೆ ಅದರಲ್ಲಿ ಜೀವನಿರಲಾರನು. ಕಣ್ಣಿನಿಂದ ಶಬ್ದವು ಕಿವಿಯಿಂದ ರೂಪವು ಬರಲಾರದು. ಅಂದಮೇಲೆ ಇಂದ್ರಿಯಗಳಲ್ಲಿ ಭೇದವು ಸಿದ್ಧವಾಯಿತು. ಅಂತೆಯೇ ಅವುಗಳಿಂದ ಜೀವನೂ ಭಿನ್ನನು, ಜೀವರೂ ಹರಿಯಿಂದ ಭಿನ್ನರು, ಅನ್ಯೋನ್ಯ ಭಿನ್ನರು– ಎಂಬೀ ಜ್ಞಾನವೇ ಜೀವರ ಪುರುಷಾರ್ಥಸಾಧನವು. ಸುಖದುಃಖಾದಿ ದ್ವಂದ್ವವು ಶ್ರೀಹರಿಗಿಲ್ಲ ಎಂದು ತಿಳಿಯುವುದೇ ಮೋಕ್ಷಸಾಧನವು. ಅಚೇತನವಾದ ದೇಹಾದಿಗಳಿಗೆ ಸುಖದುಃಖಾನುಭೂತಿಯು ಇರುವುದಿಲ್ಲ. ಜೀವನೋ, ಸ್ವರೂಪದಿಂದ ಬಲಾನಂದ ಜ್ಞಾನರೂಪನೇ ಇರುವನು ಎಂದಮೇಲೆ ಅವನಿಗೂ ಸುಖದುಃಖಾನುಭೂತಿಯೂ, ದೇಹಾಭಿಮಾನದಿಂದ ಬರುವುದೇ ಹೊರತು, ಸ್ವರೂಪದಿಂದಲ್ಲ. ಜೀವಸ್ವಾಮಿಯೂ, ಅವನ ಆನಂದ ರೂಪಾವಿರ್ಭೂತಿಗೆ ಅನುಗ್ರಾಹಕನೂ, ಆದ ಶ್ರೀಹರಿಗೆ ಸುಖದುಃಖಗಳು ಎಂದು ಬರಬೇಕು? ಆದ್ದರಿಂದ ಅಭಿಮಾನ ಬಿಟ್ಟವನಿಗೆ ಭಯ ಕಾರ್ಪಣ್ಯ ಸಂಭ್ರಮಗಳಿಲ್ಲ. ಜೀವನು ಸ್ವರ್ಗನರಕ ಭಾಜನನಾಗದಿರಲು ನಿಶ್ಚಯಿಸಿ ಶ್ರೀ ನಾರಾಯಣನನ್ನು ತಿಳಿದು ಭಕ್ತಿಯಿಂದ ಸೇವಿಸಿ ಮುಕ್ತಸಂಗನಾಗಿ ಜೀವನ್ಮುಕ್ತನೆನಿಸುವನು; ಮತ್ತು ಶ್ರೀಹರೀಚ್ಛೆಯಿಂದ ಬಂದ ದೇಹವೆಂದು ತಿಳಿದು ಅಭಿಮಾನವನ್ನು ಬಿಟ್ಟು, ಪ್ರಾಕೃತ ಸುಖದುಃಖರಹಿತನಾಗಿರುವನು.

## ೩೩. ಪ್ರವೃತ್ತಿ ನಿವೃತ್ತಿ ಮಾರ್ಗದ್ವಯ ಭಕ್ತಿ

ಪುರುಷನು ಗೃಹಸ್ಥಾಶ್ರಮರತನಾಗಿ, ಧರ್ಮಗಳನ್ನಾಚರಿಸಿ, ಫಲವನ್ನಾಗಿ ಮತ್ತೆ ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗವನ್ನೇ ಪೊಂದುತ್ತಿರುವನು. ಅಂತೆಯೇ ತನ್ನ ಪುತ್ರಾದಿಗಳಿಗೂ ಉಪದೇಶಿಸಿ, ಅರ್ಥಕಾಮತತ್ಪರರನ್ನಾಗಿ ಮಾಡುವನು. ಸ್ರಕ್‌ಚಂದನವನಿತಾದಿ ಮಗ್ನನಾಗಿ, ಅಜ್ಞಾನದಿಂದ ಮುಖ್ಯ ಪುರುಷಾರ್ಥವಾದ ಮೋಕ್ಷಕ್ಕಾಗಿ ಪ್ರಯತ್ನಿಸುವುದೇ ಇಲ್ಲ. ಯಜ್ಞಗಳಿಂದ ದೇವತೆಗಳನ್ನು, ಶ್ರದ್ಧೆಯ ಶ್ರಾದ್ಧದಿಂದ ಪಿತೃಗಳನ್ನು, ಸಂತೋಷಪಡಿಸಲು ಸಾಕೆಂದು ತಿಳಿದು ಪ್ರವೃತ್ತಿಕರ್ಮಗಳನ್ನೇ ಮಾಡುತ್ತಿರುವನು. ಅವನು ಮೃತನಾಗಿ ಚಂದ್ರಲೋಕವನ್ನು ಸೇರಿ ಪುಣ್ಯಾನುಭವಾನಂತರದಲ್ಲಿ ಪಾಪಾನುಭವಕ್ಕಾಗಿ ನರಕವನ್ನು ಸೇರುವನು. ಈಷದ್ಭಕ್ತನಾದರೆ ಸ್ವರ್ಗ ಕಾಮಗಳನ್ನು ಬಯಸಿ, ಸ್ವರ್ಗವನ್ನೂ ಸೇರಿ, ಪುಣ್ಯಶೇಷದಿಂದ ಭೂಲೋಕವನ್ನು ಮತ್ತೆ ಬಂದು ಸೇರುವನು. ಅಭಕ್ತನಿಗೆ ಸ್ವರ್ಗವಿಲ್ಲ. ಶೇಷಶಾಯಿಯಾಗಿ ಹರಿಯು ಮಲಗುತ್ತಲೇ ಪ್ರಳಯವು ಬಂದು ಈ ಪ್ರವೃತ್ತಿಧರ್ಮರತರಾದ ಪುರುಷರ ಲೋಕಗಳೆಲ್ಲ ಮುಳುಗಿ ನಷ್ಟವಾಗುವುವು.

ಬುದ್ಧಿವಂತರಾದ ಭಗವದ್ಭಕ್ತರು ಧರ್ಮಾಚರಣೆಯ ಫಲವನ್ನಪೇಕ್ಷಿಸುವುದಿಲ್ಲ. ಫಲಸಂಗವನ್ನೇ ಬಿಟ್ಟು ಶ್ರೀಹರಿಗೆ ಸಮರ್ಪಿಸುವರು. ಭಗವನ್ನಿಷ್ಠಾಬುದ್ಧಿಯಿಂದ ಶುದ್ಧಾಂತಃಕರಣರಾಗಿ ನಿವೃತ್ತಿ ಧರ್ಮವನ್ನೇ ಮಾಡುವರು. ಅಹಂಕಾರ ಮಮಕಾರಗಳನ್ನು ತ್ಯಜಿಸುವರು. ಸಾತ್ತ್ವಿಕಭಾವದಿಂದ ಕೂಡಿದ ಭಕ್ತರಾದ್ದರಿಂದ ಅರ್ಚಿರಾದಿ ಮಾರ್ಗದಿಂದ ಸೂರ್ಯನನ್ನು ಕೊನೆಗೆ ಮಾನವನ ಆಮಕ ಪುರುಷನನ್ನು ಸೇರಿ ಸರ್ವಜ್ಞನು ಮುಕ್ತಾ ಮುಕ್ತೇಶನು ಪ್ರಪಂಚ ಮೂಲಕಾರಣನು ಜಗಜ್ಜನ್ಮಾದಿನಿಮಿತ್ತನಾದ ಶ್ರೀಹರಿಯನ್ನು ಬ್ರಹ್ಮನ ದ್ವಾರಾ ಹೊದುವನು. ದ್ವಿಪರಾರ್ಧಗಳು ಮುಗಿಯುವವರೆವಿಗೂ ಶ್ರೀಹರಿಧ್ಯಾನರತನಾಗಿ ಬ್ರಹ್ಮಲೋಕದಲ್ಲಿದ್ದು ಅನಂತರ ಪ್ರಳಯವು ಬರಲಾಗ, ಬ್ರಹ್ಮನಿಂದ ಕೂಡಿ, ಶ್ರೀಹರಿಯನ್ನು ಸೇರುವರು. ಪಂಚಭೂತಗಳು, ದಶೇಂದ್ರಿಯಗಳು, ಮನಸ್ಸುಗಳಿಂದ ಕೂಡಿದ ಲಿಂಗಶರೀರವನ್ನು ಬಿಡಲು ಬ್ರಹ್ಮನನ್ನಾಶ್ರಯಿಸುವನು. ಗುಣತ್ರಯಾದಾನದಿಂದ ತನ್ನನ ಕಾಲವಾದ ದ್ವಿಪರರಾರ್ಧದ್ವಯ ವನ್ನನುಭವಿಸಿ ಬ್ರಹ್ಮನು ಪ್ರಳಯಕಾಲವು ಬರಲು ಶ್ರೀಲಕ್ಷ್ಮೀರಮಣನನ್ನು ತ್ಯಕ್ತಲಿಂಗರಾದ ಜೀವರಿಂದ ಕೂಡಿ ಪ್ರವೇಶಿಸುವನು. ಇಂತು ಮುಕ್ತರಾದ ಜೀರಿಗೆ ಲಿಂಗಶರೀರಬಂಧವಿಲ್ಲ. ವಾಯುದೇವರ ಅನುಗ್ರಹದಿಂದ ಮನೋಜಯವನ್ನು ಪೊಂದಿ ಬ್ರಹ್ಮದೇವರಿಂದ ಕೂಡಿ, ಪುರಾಣಪುರುಷನು ಸರ್ವೋತ್ತಮನಾದ ನಾರಾಯಣನನ್ನು ಪೊಂದಿ, ಜೀವರಾಗಿಯೇ ಸ್ವರೂಪನಾಶವಿಲ್ಲದೆ, ಸ್ವರೂಪಾನಂದಾವಿರ್ಭೂತಿಯಿಂದ ಸುಖಿಸುತ್ತಿರುವರು. ಸ್ಥಾವರ ಜಂಗಮರಿಗೆ ಆದಿಯಾದ ಬ್ರಹ್ಮನು ಗರುಡಶೇಷಮಾರ್ಗದ್ವಯದಿಂದ ಬಂದ ಸಾಧನಸಾಮಗ್ರೀ ಮಂತರಾದ ಸನಕಾದಿ ಯೋಗೀಶ್ವರರು, ಋಷಿ, ದೇವರು, ಮನುಷ್ಯೋತ್ತಮರು ಮೊದಲಾದವ ರಿಂದ ಕೂಡಿ ಶ್ರೀಹರಿಯನ್ನು ಸೇರುವನು. ಪಂಚಭೇದ ತಾರತಮ್ಯಜ್ಞಾನಿಗಳು ಸ್ವಯೋಗ್ಯಜ್ಞಾನ ಪೂರ್ಣರು, ಜ್ಞಾನೋತ್ತರಕಾಲೀನ ನಿವೃತ್ತಿಧರ್ಮನಿರತರು ಆದ ಜೀವರಿಂದ ಕೂಡಿ ಸೃಷ್ಟ್ಯಾದ್ಯಷ್ಟಕರ್ತನು, ಪರಮೇಶ್ವರ್ಯ ನಿಧಿಯು ಕ್ಷರಾಕ್ಷರಪುರುಷಾತೀತನು, ಜ್ಞಾನಾನಂದ ಸಮುದ್ರನಾದ ಶ್ರೀಹರಿಯಲ್ಲಿ ಶ್ವೇತದ್ವೀಪದಲ್ಲಿದ್ದು ಬ್ರಹ್ಮನು ಪುನಃ ಸೃಷ್ಟಿಕಾಲದಲ್ಲಿ, ಯಥಾಪೂರ್ವವಾಗಿ ಶ್ರೀಹರಿ

ಯಿಂದ ಜನಿಸಿ, ಸಂಸಾರವನ್ನು ತ್ಯಜಿಸಿ, ಶ್ರೀಹರಿಸೇವೆಯನ್ನು ಮಾಡುವನು. ಅಂಬ! ಮುಕ್ತರು ಜ್ಞಾನಧರ್ಮ ಫಲವಾದ ಅಣಿಮಾದ್ಯೈಶ್ವರ್ಯಗಳನ್ನು ಯಥಾಯೋಗ್ಯವಾಗಿ ಪೊಂದಿ ಸ್ವೋತ್ತಮದ್ವಾರಾ ಸೃಷ್ಟಿಕಾಲದಲ್ಲಿ ಸುಖಿಸುತ್ತಾ, ಶ್ವೇತದ್ವೀಪಾದಿ ಮುಕ್ತಲೋಕದಲ್ಲಿರುವರು. ಆದ್ದರಿಂದ ಜನನೀ! ಸರ್ವಭೂತಹೃದಯಗುಹಾವಾಸಿಯಾದ ಸ್ವಾಮಿಯ ಮಹಿಮೆಯನ್ನು ಕೇಳಿ ತಿಳಿದು ದಾಸ್ಯಭಾವದಿಂದ ಶರಣಾಗತಳಾಗು. ಭಕ್ತಿಯಿಂದ ಅವನನ್ನೇ ಭಜಿಸು.

ಕರ್ಮಶ್ರದ್ಧೆಯುಳ್ಳ ಕೆಲವರು ನಿತ್ಯವೂ ವಿಹಿತಕರ್ಮವನ್ನೇ ಚೆನ್ನಾಗಿ ಮಾಡುವರು. ಆದರೆ ರಜೋಗುಣಾಧಿಕರಾದ ಅವರ ಮನಸ್ಸು ಐಹಿಕಾಮುಷ್ಮಿಕ ಫಲಾಪೇಕ್ಷೆಯಿಂದ ದೂಷಿತ ವಾಗಿರುವುದು. ಅವರಿಗೆ ಇಂದ್ರಿಯಜಯವಿರುವುದಿಲ್ಲ. ಶ್ರೀಹರಿಗರ್ಪಿಸಿದ ಪಿತೃಯಜ್ಞಗಳನ್ನು ಮಾಡಿ ಗೃಹಸುಖಕ್ಕಾಗಿ ಚಡಪಡಿಸುವರು. ಹರಿಯಿಂದ ವಿಮುಖರಾದ ಈ ತ್ರೈವರ್ಗಿಕರು ಮಧುಸೂದನನ ಮಧುಕರ ಶ್ರವಣೀಯ ಕಥಾಲಾಪವನ್ನು ಒಲ್ಲರು. ದೈವಹತರಾಗಿ ಅಚ್ಯುತ ಕಥಾಮೃತಪಾನದಲ್ಲಿ ಅಭಿಲಾಷೆಯನ್ನು ತೋರದೆ, ಹಂದಿಯು ಅಮೇಧ್ಯವನ್ನು ಕೋರುವಂತೆ, ಕಾವ್ಯ ನಾಟಕಾದಿ ಹಾಳು ಕತೆಗಳನ್ನು ಕೇಳುವರು. ಇಂತಹವರು ಮುಕ್ತಿಯೋಗ್ಯರಲ್ಲ. ಅವರಿಗೆ ನರಕವೇ ಆಗುವುದು. ಅದರಲ್ಲಿ ಸಂಶಯವಿಲ್ಲ.

ನಿತ್ಯಸಂಸಾರಿಗಳು ದಕ್ಷಿಣಮಾರ್ಗದಿಂದ ಯಮಪುರವನ್ನು ಸೇರಿ, ನರಕಭೋಗಾ ನಂತರ ದಲ್ಲಿ ತಮ್ಮವರಲ್ಲಿ ಪುತ್ರಾದಿಗಳಾಗಿ ಹುಟ್ಟುವರು. ಗರ್ಭಾಧಾನಾದಿ ಸ್ಮಶಾನಾಂತ್ಯ ಕ್ರಿಯೆಗಳು ನಡೆಸಿಕೊಂಡು ಹರಿಯಲ್ಲಿ ಅತ್ಯಲ್ಪ ಭಕ್ತರಾದ್ದರಿಂದ ಸ್ವರ್ಗವನ್ನೂ ಸೇರಿ, ಸ್ವಲ್ಪ ಕಾಲ ಪುಣ್ಯಭೋಗಾನಂತರ ಪುನಃ ಈ ಲೋಕವನ್ನೇ ಹೊಂದುವರು. ಆದ್ದರಿಂದ ಮಾತೇ! ಶ್ರೀಹರಿ ಯನ್ನು ಭಕ್ತಿಭಾವದಿಂದ ಭಜಿಸು. ಅವನ ಸರ್ವೋತ್ತಮತ್ವಾದಿ ಮಹಿಮೆಯನ್ನು ಕೇಳು. ವಾಸುದೇವನೇ ಭಜನೀಯನು. ಅವನ ಚರಣಾರವಿಂದ ಭಕ್ತಿಯನ್ನು ಮಾಡಲು ವೈರಾಗ್ಯವು ದೃಢವಾಗುವುದು. ಮತ್ತು ಪರಬ್ರಹ್ಮಾಪರೋಕ್ಷಜನಕವಾದ ಜ್ಞಾನವು ಪುಟ್ಟುವುದು. ಇಂದ್ರಿಯ ವಿಷಯಗಳೆಲ್ಲವೂ ಅಪ್ರಿಯವೇ ಸರಿ. ಅವುಗಳಲ್ಲಿ ಇವು ಪ್ರಿಯ, ಇವು ಪ್ರಿಯವಲ್ಲನೆಂದು ಅರಿಯದೆ ಮನಸ್ಸು ಸಮ, ಶಾಂತವಾದಾಗ ಭಕ್ತನ ಚಿನ್ಮನಸ್ಸು ವಿಕಸಿತವಾಗಿ, ನಿರ್ದೋಷಜ್ಞಾನ ಸ್ವರೂಪನಾದ ಸ್ವಬಿಂಬನನ್ನು ಸರ್ವೋತ್ತಮನೆಂದು ಅಪರೋಕ್ಷದಿಂದ ತಿಳಿಯುವನು.

ಸೌಗತರು ಜ್ಞಾನೈಕರೂಪನೆಂಬುವರು. ವೇದಾಂತಿಗಳು ಪೂರ್ಣಗುಣನಾದ ಬ್ರಹ್ಮನೆಂದು ತಿಳಿವರು. ಯೋಗಿಗಳು ಜೀವೇಶನೆಂಬರು. ವೈಶೇಷಿಕರು ಈಶನ ಶೀಲನೆಂದು ಪೇಳುವರು. ಪಾಶುಪತರು ಪುಂಶಕ್ತಿ ಎನ್ನುವರು. ಸಾಂಖ್ಯರು ಪರಮಪುರುಷನೆಂದೆಣಿಸುವರು. ಪೌರಾಣಿಕರು ಭಗವಂತನೆಂಬರು. ಎಲ್ಲ ನಾಮಧೇಯಗಳು ಶ್ರೀಹರಿಯನ್ನೇ ನಿರೂಪಿಸುವುವು. ಅಷ್ಟಾಂಗೋ ಪೇತ ಭಕ್ತಿಯೋಗದಿಂದ ಭಕ್ತನಿಗಾಗುವ ಪ್ರಯೋಜನವು, ಲಿಂಗಶರೀರವಿಯೋಗವು ಸ್ವರೂಪಾ ನಂದಾವಿರ್ಭೂತಿಯೇ ಆಗಿದೆ. ಸರ್ವೋತ್ತಮನು ಸ್ವಗತಭೇದ ವರ್ಜಿತನಾದ ಅಪ್ರಾಕೃತ ಮತ್ಸ್ಯಾದಿರೂಪೀ ಹರಿಯು ಶಬ್ದಸ್ಪರ್ಶಾದಿ ವಿಷಯಾಭಿಮಾನವುಳ್ಳ ಅಜ್ಞರಿಗೆ ಪ್ರಾಕೃತನಂತೆ ತೋರುತ್ತಾನೆ. ಇದು ಅನ್ಯಥಾ ಜ್ಞಾನವು. ಇಂತು ತಿಳಿದರೆ ಅಂಧಂತಮಃಪ್ರಾಪ್ತಿಯಾಗುವುದು.

ಮಹತ್ತತ್ವವು ಬ್ರಹ್ಮಶರೀರವು. ತ್ರಿವಿಧಾಹಂಕಾರವು ರುದ್ರನು. ಭೂತಾಭಿಮಾನಿಯಾದ ಇಂದ್ರನು ಪಂಚವಿಧ. ಮನ ಆದಿ ಹನ್ನೊಂದಿಂದ್ರಿಯಗಳ ಸ್ವಾಮಿಯಾದ ಇಂದ್ರನು ಏಕಾದಶ ವಿಧನು ಎಂದು ಹೇಳಿದರೆ ಅಜ್ಞಜನರಿಗೆ ಬ್ರಹ್ಮನು ಪ್ರಾಕೃತ ಮಹತ್ತತ್ವಶರೀರನು ಇತ್ಯಾದಿ

ಪ್ರತೀತಿಯು ಪುಟ್ಟುವುದು. ಅಂತೆಯೇ ಮತ್ಸ್ಯಾದಿ ರೂಪಗಳನ್ನು ನೋಡಿ ಭಗವಂತನು ಪ್ರಾಕೃತ ಮತ್ಸ್ಯಸದೃಶನೆಂದು ತಿಳಿಯುವವರು ಅಜ್ಞಾನಿಗಳೇ ಸರಿ! ಜ್ಞಾನಿಗಳು ಶ್ರದ್ಧೆಯಿಂದ, ಭಕ್ತಿಯಿಂದ, ನಿತ್ಯವೂ ಯೋಗಾಭ್ಯಾಸದಿಂದ ಹರಿಯಲ್ಲಿ ಮನಸ್ಸನ್ನು ನಿರಂತರವಾಗಿಡುವರು. ದುಷ್ಟಸಂಗವನ್ನು ಬಿಡುವರು. ವೈರಾಗ್ಯವನ್ನು ತೊಟ್ಟು ಶ್ರೀಮತ್ಸ್ಯಾದಿರೂಪೀ ಹರಿಯ ಜ್ಞಾನಾನಂದ ರೂಪವನ್ನು ಪರೋಕ್ಷದಿಂದ ನೋಡುವರು. ಇಂತು ಪ್ರಕೃತಿ ಪುರುಷರ ಜ್ಞಾನವನ್ನು ಮಹಾರಹಸ್ಯ ವಾದದ್ದಾದರೂ ಭಕ್ತಳಾದ ಕಾರಣ ನಿನಗೆ ನಾನು ಹೇಳಿದೆನು. ಅಮ್ಮಾ! ಈ ಜ್ಞಾನದಿಂದಲೇ ಹರಿದರ್ಶನವು; ಈ ಜ್ಞಾನದಿಂದಲೇ ಸಂಸಾರ ನಿವೃತ್ತಿಯು. ಫಲಾಪೇಕ್ಷೆಯಿಲ್ಲದ ಭಕ್ತಿಯು, ಸರ್ವೋತ್ತಮತ್ವರೂಪವಾದ ನನ್ನ ಜ್ಞಾನವು, ಭಗವಂತನಾದ ನನ್ನ ಅತ್ಯರ್ಥಪ್ರಸಾದ ಕಾರಣವಾಗು ವುವು. ಜ್ಞಾನಭಕ್ತಿಗಳಿಲ್ಲದೆ ಯಾರಿಗೂ ಮುಕ್ತಿಯಾಗಲಾರದು. ಶಬ್ದಸ್ಪರ್ಶ ರೂಪ ರಸ ಗಂಧ ಗುರುತ್ವಾದಿ ಗುಣಗಳುಳ್ಳ ಒಂದೇ ಪದಾರ್ಥವು ಅನೇಕೇಂದ್ರಿಯಗಳಿಂದ ಅನೇಕವಾಗಿ ತಿಳಿಯಲ್ಪ ಟ್ಟಂತೆ, ಭಗವಂತನೊಬ್ಬನೇ ಜ್ಞಾನಾನಂದ ದಯಾವೀರ್ಯೈಶ್ವರ್ಯಾದಿ ನಾನಾಸ್ವರೂಪ ಗುಣಗಳುಳ್ಳವನೆಂದು ಸಚ್ಛಾಸ್ತ್ರಗಳು ನಿರೂಪಿಸುತ್ತಿವೆ. ಸಂಧ್ಯಾದಿ ಕ್ರಿಯೆಗಳು, ಯಜ್ಞದಾನ ತಪಸ್ಸ್ವಾಧ್ಯಾಯಗಳು, ತೀರ್ಥಯಾತ್ರೆಗಳು, ಇಂದ್ರಿಯ ಮನೋಜಯ, ತ್ಯಾಗ, ನಿಷಿದ್ಧ ವರ್ಜನ, ಅಷ್ಟಾಂಗಯೋಗ, ಸತ್ಪ್ರವೃತ್ತಿ, ಹಿಂಸಾದಿ ನಿವೃತ್ತಿಗಳು, ಪರಮಾತ್ಮಜ್ಞಾನ, ಹರಿಭಕ್ತಿ ಇವುಗಳಿಂದ ಸ್ವತಂತ್ರನಾದ, ಶ್ರೀಹರಿಯು ಜ್ಞಾನವೂ ಅಪರೋಕ್ಷವೂ ಮುಕ್ತಿಯೂ ಕ್ರಮವಾಗಿ ಆಗುವುವು.

ಮಾತೆ! ನಿನಗೆ ಚತುರ್ವಿಧ ಭಕ್ತಿಯನ್ನು ಜೀವರಲ್ಲಿ ಕರ್ಮಫಲಪ್ರದವಾಗಿ ಓಡುತ್ತಿರುವ ಕಾಲವನ್ನು ಅವಿದ್ಯಾಕಾಮಕರ್ಮಪ್ರಾಪ್ತ ಜೀವಸಂಸೃತಿಯನ್ನು ಹೇಳಿದೆನು. ಅವಿದ್ಯಾಗ್ರಸ್ತನಾದ ಜೀವನು ತನತ್ನ ಜ್ಞಾನವನ್ನು ತಾನರಿಯದೆ, ಸಂಸರಿಸುತ್ತಿರುವಲ್ಲಿ ಪಡುವ ದುಃಖವನ್ನೂ ಜೀವಮೋಕ್ಷಪ್ರದವಾದ ಜ್ಞಾನಭಕ್ತಿವೈರಾಗ್ಯಗಳನ್ನೂ ತಿಳಿಸಿದೆನು. ಈ ನಾನೂ ಪೇಳಿದ ತತ್ತ್ವ ಜ್ಞಾನವನ್ನು ಇಂದ್ರಿಯಾರಾಮರಾಗಿ ವಿನಯಾದಿ ಗುಣರಹಿತರಿಗೆ ಗುರು ದ್ರೋಹಿಗಳಿಗೆ ದಾಂಭಿ ಕರಿಗೆ ಅವೈಷ್ಣವರಿಗೆ ಗೃಹಾದಿನಿರೂಢಚಿತ್ತರಿಗೆ ಹೇಳಬೇಡ. ನನ್ನ ಭಕ್ತನಲ್ಲದವನಿಗಂತೂ ಹೇಳಲೇಬೇಡ. ನನ್ನ ಭಕ್ತರ ದ್ವೇಷಿಗೂ ಹೇಳಬೇಡ.

ಶ್ರದ್ಧಾವಂತನಿಗೆ, ವಿನಯಾನ್ವಿತನಿಗೆ, ಅಸೂಯಾದಿ ದೋಷರಹಿತನಿಗೆ, ಭೂತಹಿತನಿಗೆ, ಗುರುಸೇವಾರತನಿಗೆ, ನಿರ್ಮತ್ಸರನಿಗೆ, ಶುಚಿಗೆ, ಸ್ವರ್ಗಾದಿ ವಿಷಯವಿರಕ್ತನಿಗೆ ಹೇಳು. ಪುತ್ರಾದಿ ಸರ್ವಸಂಪತ್ತಿನಕಿಂತಲೂ, ಅವುಗಳನ್ನು ಕೊಟ್ಟ ನನ್ನಲ್ಲಿ ಹೆಚ್ಚು ಪ್ರೀತಿಯನ್ನು ಮಾಡುವ ನನ್ನ ಭಕ್ತನಿಗೆ ತಪ್ಪದೇ ಹೇಳಬೇಕು.

ಅಂಬ! ಈ ನನ್ನ ತತ್ತ್ವಜ್ಞಾನವನ್ನು ನನ್ನ ಭಕ್ತಿಯಿಂದ ಹೇಳಿದವನು ಮತ್ತು ಶ್ರದ್ಧೆಯಿಂದ ಕೇಳಿದವನೂ ಸುಕೃತಿಯಾಗಿ ನನ್ನ ಲೋಕವನ್ನು ಪೊಂದುವನು' ಎಂದು ಕಪಿಲ ಹರಿಯು ತನ್ನ ತಾಯಿಗೆ ಮಾಡಿದ ಉಪದೇಶವನ್ನು ಮುಗಿಸಿದನು.

## ೩೪. ದೇವಹೂತಿಯ ಮುಕ್ತಿ

ಕರ್ದಮದಯಿತೆಯಾದ ದೇವಹೂತಿಯು ಮಗನಾದ ಕಪಿಲನ ವಚನಗಳನ್ನು ಕೇಳಿ, ಸಕಲಾ ಜ್ಞಾನವೂ ಧ್ವಸ್ತವಾಗಿ ಪೋಗಲು, ತತ್ತ್ವೇಶನು ಬ್ರಹ್ಮಾದಿವಂದ್ಯನಾದ ಕಪಿಲನಿಗೆ ನಮಸ್ಕರಿಸಿ ಇಂತು ನುತಿಸಿದಳು–

ಭೂತೇಂದ್ರಿಯ ಮನೋನಿಯಾಮಕನಾಗಿ ಸೂಕ್ಷ್ಮ ಜಗವನ್ನು ಉದರದಲ್ಲಿಟ್ಟು ಪ್ರಲಯೋದಧಿಯಲ್ಲಿ ಶಯನಿಸಿದ್ದ ನೀನು ಗುಣಪ್ರವರ್ತಕನಾಗಿ ಸ್ವೇಚ್ಛೆಯಿಂದ ಸತ್ಯವಾದ ಈ ಜಗವನ್ನು ಸೃಜಿಸಿದೆ. ನಿನ್ನ ನಾಭಿಕಮಲಜಾತನಾದ ಬ್ರಹ್ಮನು ನಿನ್ನಾಜ್ಞೆಯಿಂದ ಸಕಲ ಜೀವರನ್ನು ಸೃಜಿಸಿದನು. ಸೃಷ್ಟಿಸಂಹಾರಾದಿ ಕ್ರಿಯೆಗಳು ನಡೆಯಲು ಬ್ರಹ್ಮರುದ್ರಾದಿಗಲ್ಲಿ ಅಂತರ್ಯಾಮಿಯಾಗಿರುವ ನೀನು ಸ್ವಗತಭೇದ ವಿವರ್ಜಿತನು. ಸತ್ಯಸಂಕಲ್ಪನಾದ ನಿನ್ನಿಚ್ಛಾ ಸೂತ್ರದಿಂದ ಸಕಲ ಸೃಷ್ಟ್ಯಾದಿ ಕಾರ್ಯವು ನಡೆಯುವುದು. ಜೀವರೊಡೆಯನಾದ ನೀನು ಅಪ್ರಮೇಯ ಮಹಾಮಹಿಮನು. ಸಕಲಬ್ರಹ್ಮಾಂಡವನ್ನು ಹೊಟ್ಟೆಯಲ್ಲಿಟ್ಟ ನೀನು ನನ್ನ ಹೊಟ್ಟೆಯಲ್ಲಿ ಹೇಗಿದ್ದೆ? ಪ್ರಳಯಸಮುದ್ರದಲ್ಲಿ ವಟಪತ್ರಶಾಯಿಯಾದ ಶಿಶುವಾಗಿ ಪಾದಾಂಗುಷ್ಠಪಾನ ಮಾಡಿದ ನಿನ್ನನ್ನು ನಿನ್ನ ಪ್ರೇರಣೆ ಇಲ್ಲದೆ ಸಾಸಿವೆಯಷ್ಟು ಭಾರವನ್ನು ಹೊರಲಾರದವಳಾದ ನಾನು ಹೇಗೆ ಹೊತ್ತು, ಹೆತ್ತು, ಧನ್ಯಳಾದೆ? ನೀನಾಗಿ ನಿನ್ನಿಂದ ಪ್ರಕಾಶಿತನಾದೆ ಅಷ್ಟೆ! ಪಾಪಿಗಳ ನಾಶವನ್ನು ನಿನ್ನಾಜ್ಞಾಧಾರಕ ಭಕ್ತರ ಕ್ಷೇಮವನ್ನೂ ಬಯಸಿ, ಸೂಕರಾದಿ ರೂಪದಿಂದ ಅವತರಿಸುವ ನಿನ್ನ ಈ ಕಪಿಲರೂಪವು, ಜೀವರಿಗೆ ಜ್ಞಾನಪ್ರದವಾಗಿದೆ. ನಿನಗೆ ನಮಸ್ಕಾರವು. ನಿನ್ನ ನಾಮಶ್ರವಣ, ನಿನ್ನ ಸಂಕೀರ್ತನ, ನಿನ್ನ ಸ್ತುತಿನತಿಗಳ, ಮಾಡಿದ ಚಂಡಾಲನಾದರೂ ಯಜ್ಞಾಧಿಕಾರಿಯಾಗಿ ಜನಿಸುವನೆಂದ ಮೇಲೆ ನನಗೆ ಇನ್ನುಂಟೆ ಭವಭಯ? ನಿನ್ನ ದರ್ಶನದಿಂದ ಭವನ್ಮುಖನಿಃಸೃತೋಪದೇಶದಿಂದ ಧನ್ಯಳಾದೆನು. ಪೂರ್ವಜನ್ಮದ ಪುಣ್ಯದಿಂದ ನಿನ್ನ ಭಕ್ತಳಾಗಿ ಹರೇ! ಕೃಷ್ಣಾ! ಎಂದು ನಿನ್ನ ನಾಮವನ್ನುಚ್ಚರಿಸುವ ಚಂಡಾಲನೂ ಧನ್ಯನೇ ಸರಿ! ನಿನ್ನ ಭಕ್ತನಲ್ಲದ ಸೋಮಯಾಜಕಿಂತಲೂ ಅಂತಹ ಚಂಡಾಲನೇ ಲೇಸು! ನಿನ್ನ ನಾಮಸ್ಮರಣೆ ಬರಬೇಕಾದರೆ ತಪಸ್ಸನ್ನು ಮಾಡಿರಬೇಕು. ಸುರಾದಿಪ್ರೀತಿಗಾಗಿ, ಯಜ್ಞನಾದ ನಿನ್ನ ಪ್ರೀತಿಗಾಗಿ, ಯಜ್ಞಗಳನ್ನೂ ಮಾಡಿರಬೇಕು. ವೇದವನ್ನೂ ಓದಿರಬೇಕು. ನಿನ್ನ ನಾಮಸ್ಮರಣೆ ತಪೋಯಜ್ಞ ವೇದಾಧ್ಯಯನ ಸಮಫಲವಾಗಿದೆ. ನೀನು ಪೂರ್ಣಗುಣನಾದ ನಾರಾಯಣನೆಂಬ ಅರಿವು ಚೆನ್ನಾಗಿ ಆಯಿತು. ಪುರುಷೋತ್ತಮನೇ! ಅಂತರ್ಯಾಮಿಯಾಗಿ ಧ್ಯಾನವಿಷಯನಾದ ಸ್ವಮಹಿಮಾ ವಿಧ್ವಸ್ತಸಕಲಪ್ರಕೃತಿಬಂಧನಾದ ಸಾಕ್ಷಾದ್ವಿಷ್ಣುವಾದ ಕಪಿಲನೇ! ವೇದವೇದ್ಯನೇ! ನಿನಗೆ ನಮಸ್ಕಾರ ಶತವು! ನಾರಾಯಣಾಯ ನಮಃ– ಎಂದು ಸ್ತುತಿಸಿದ ತಾಯಿಯ ನುಡಿಯನ್ನು ಕೇಳಿ, ಮಧುರ ಗಂಭೀರ ವಚನಗಳಿಂದ ಮಾತೃವತ್ಸಲನಾದ ಕಪಿಲನು ಮಾತಾಡಿದನು–

ಅಮ್ಮಾ! ನಾ ಪೇಳಿದ ಜ್ಞಾನಭಕ್ತಿಮಾರ್ಗವೇ ಕ್ಷೇಮಂಕರವು. ಅಂತೆಯೆ ಅನುಸರಿಸಿ ವರ್ತಿಸು. ಶೀಘ್ರದಲ್ಲೇ ಆನಂದಪೊಂದಿ ಮುಕ್ತಳಾಗುವೆ. ನನ್ನ ಪ್ರಸಾದಪಾತ್ರಳಾಗಿರುವೆ. ಬ್ರಹ್ಮಜ್ಞಾನಿಗಳು ನನ್ನನ್ನು ಹೀಗೆಯೇ ಸೇವಿಸಿ ಮುಕ್ತರಾಗಿರುವರು. ಈ ಮಾರ್ಗವನ್ನು ಬಿಟ್ಟವರು ನರಕವನ್ನೋ ತಮಸ್ಸನ್ನೋ ಹೊಂದುವರು. ಸಂಶಯವಿಲ್ಲ. ಶ್ರದ್ಧೆಯಿಂದ ನನ್ನ ಉಪದೇಶವನ್ನು

ಪಾಲಿಸು– ಎಂದು ಸಕಲಾಭೀಷ್ಟಪ್ರದವಾದ ಬ್ರಹ್ಮೋಪದೇಶವನ್ನು ಮಾಡಿ ಕಪಿಲನು ತಾಯಿಯ ಅಪ್ಪಣೆಯನ್ನು ಪಡೆದು ಹೊರಟುಹೋದನು.

ದೇವಹೂತಿಯು ಮಗನ ಮಾತನ್ನು ಮನಸ್ಸಿಗೆ ತಂದು ವೈರಾಗ್ಯ, ಜ್ಞಾನ, ಭಕ್ತಿಭರಿತಳಾದಳು. ಸರಸ್ವತೀ ತೀರದ ಕರ್ದಮಾಶ್ರಮದಲ್ಲಿ ಕುಳಿತು ತಪವನ್ನು ಗೈದಳು. ತ್ರಿಷವಣ ಸ್ನಾನದಿಂದ ಕೇಶಗಳು ಜಡೆಗಟ್ಟಿ ಕೆಂಪಾದವು. ಅನಶನದಿಂದ ಶರೀರವು ಕೃಶವಾಯಿತು. ಚೀರವಸನವನ್ನುಟ್ಟು ಕರ್ದಮರ ತಪೋವೈಭವಸಂಪಾದಿತವು ವೈಮಾನಿಕ ದೇವಗಣ ಪ್ರಾರ್ಥಿತಲರ್ಹವಾಗಿ ಸಾಟಿ ಇಲ್ಲದ ಸಂಪತ್ತನ್ನು ಸರ್ವವನ್ನೂ ಪರಿತ್ಯಜಿಸಿದಳು.

ಹಸುವಿನ ಹಾಲಿನ ಬುರುಗಿನಂತೆ ಮೆತ್ತನಾದ ಸುಖತಲ್ಪಗಳು, ದಂತದ ಮಂಚಗಳು, ಬಂಗಾರದ ಮಣಿಪೀಠಗಳು, ಆಸನಗಳು, ಸುಖಸ್ಪರ್ಶ ರತ್ನಕಂಬಳಿಗಳು, ಸ್ಫಟಿಕ ಮರಕತ ಕುಡ್ಯಗಳು, ರತ್ನದೀಪಧಾರಿ ನಾರೀಪ್ರತಿಮೆಗಳು ಇವುಗಳಿಂದ ಸಮೃದ್ಧವಾದ ಸೌಧಗಳು; ಸೌಧಗಳ ಹಿಂದೆ ಪುಷ್ಪೋದ್ಯಾನಗಳು; ಉದ್ಯಾನಗಳಲ್ಲಿರುವ ಅನವದ್ಯ ಸೌರಭಭರಿತ ಪುಷ್ಪಲತೆಗಳು, ಲತೆಗಳಲ್ಲಿ ಲತಾಂತಗಳ ತೆಗೆಯುವ ಲಂತಾಂಗಿಯರು; ಅವರ ಗಾನಕ್ಕೆ ಶ್ರುತಿಗೂಡಿಸುವ ಮಕರಂದಪಾನ ಚತುರ ಭ್ರಮರಗಳು, ಕಲಕಲರವ ಮನೋಹರ ಪಕ್ಷಿ ನಿವಹಗಳು ಎಲ್ಲವನ್ನೂ ನೆನೆದು, ದೇವಹೂತಿಯು ಕರ್ದಮನಿಂದ ಕೂಡಿ ತಾನಲ್ಲಿ ಕ್ರೀಡಾರತಳಾಗಿದ್ದುದನ್ನು, ತಮ್ಮನ್ನು ಪಾಡಿ ಪೊಗಳುವ ಗಂಧರ್ವಗಣಗಾನವನ್ನೂ, ಉತ್ಪಲಗಂಧಿತ ಸರೋವರಾಚ್ಛಜಲದಿ ತಾವು ಮಾಡಿದ ಜಲಕ್ರೀಡೆಯನ್ನು ಸ್ಮರಿಸಿ ಉಸಿರೆಳೆದಳು. ದೇವೇಂದ್ರ ಭಾಮಿನಿಯರಿಗೂ ಸಿಗಲಾರದ ಆ ವೈಭವವೀಗ ಇಲ್ಲವೆಂದಲ್ಲ ದೇವಹೂತಿಯ ಶೋಕ! ಮಾಧವನು ಮಗನಾಗಿ ಜನಿಸಿದನು; ಪತಿಯು ವನಪ್ರವೇಶವನ್ನು ಮಾಡಿದನು; ಮಗನೋ ಸಾಮಾನ್ಯನೇ? ಸಕಲ ತತ್ತ್ವಜ್ಞಾನವನ್ನು ತನಗೆ ದಯಪಾಲಿಸಿದ ದೀನನಾಥನು. ಆ ರಮಾನಾಥನನ್ನಗಲಿ ದೇವಹೂತಿಯು ನಿಟ್ಟುಸಿರಂ ಬಿಟ್ಟು ಶೋಕಿಸಿ, ದೀನವದನಳಾದಳು. ತತ್‌ಕ್ಷಣವೇ ಹರಿಯು ಉಪದೇಶಿಸಿದುದನ್ನು ಸ್ಮರಿಸಿ, ಕರುವನ್ನಗಲಿದ ಗೋವಿನಂತೆ ದುಃಖದಿಂದ ತಡೆಯಲಾಗದ ಕಣ್ಣೀರನ್ನೊರೆಸಿಕೊಂಡು ಧೀರಳಾದಳು. ಮಗನಾದ ಕಪಿಲನನ್ನೇ ಧ್ಯಾನಮಾಡುತ್ತಾ ಸರ್ವಸಂಪದವನ್ನೂ ಪರಿತ್ಯಜಿಸಿದಳು. ಏಕಾವಯವ ಧ್ಯಾನಾನಂತರ ಸಂಪೂರ್ಣ ಹರಿಮೂರ್ತಿಯನ್ನು ಶ್ರೀ ಕಪಿಲನು ಪೇಳಿದಂತೆ ಧ್ಯಾನಿಸಿ ಪ್ರೇಮಪ್ರವಾಹ ವೇಗದಲ್ಲಿ ತೇಲಿಪೋದಳು. ದೃಢ ವೈರಾಗ್ಯವನ್ನು ತಾಳಿದಳು. ಸಮೀಚೀನ ಧ್ಯಾನದಿಂದ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿ, ಅಪರೋಕ್ಷ ಜ್ಞಾನವನ್ನು ಹೊಂದಿದಳು. ಸಕಲದೋಷ ದೂರವಾದ ತನ್ನ ಚಿನ್ಮನದಿಂದ ಸರ್ವತ್ರ ವ್ಯಾಪ್ತನಾದ, ಸ್ವತಃ ಅನಾದಿತಃ ನಿರಸ್ತ ಸಮಸ್ತ ಪ್ರಕೃತಿವಿಕಾರನಾದ ಶ್ರೀಹರಿಯನ್ನು ನೋಡಿದಳು. ಮನದಿ ಹರಿ ಎಂಬ ರೂಪದಿ ವ್ಯಾಪ್ತನಾದ ಪರಬ್ರಹ್ಮನನ್ನು ನೋಡಿ ಆನಂದಭರಿತಳಾದಳು. ಲಿಂಗಶರೀರದ ಕಾರ್ಯವವಳಲ್ಲಿ ನಿಂತುಹೋಯಿತು. ಸಕಲ ಕ್ಲೇಶಗಳು ನಶಿಸಿದವು. ಬ್ರಹ್ಮಾನಂದವಾಯಿತು. ಸಮಾಧಿಯಲ್ಲೇ ಇರುತ್ತಾ ಸಂಸಾರ ದುಃಖವನ್ನು ಸುಖವೆಂದು ತಿಳಿಯುವ ಭ್ರಮಾದಿಗಳನ್ನು ದೂರ ಸರಿಸಿ ಎಚ್ಚರವಾದವನು ಸ್ವಪ್ನವನ್ನು ಮರೆಯುವಂತೆ ಪುನಃ ವಿಷಯಗಳನ್ನು ಸ್ಮರಿಸದೆ, ನಿಶ್ಚಿಂತಳಾದಳು. ಪೋಷಣವಿಲ್ಲದಿದ್ದರೂ ಮನೋನ್ನೈರ್ಮಲ್ಯ ಬಲದಿಂದ ಅವಳ ಅನಲಂಕೃತ ಮಲಿನ ದೇಹವು ಕೃಶವಾಗದೆ ಹೊಗೆಯಿಂದ ಕೂಡಿರುವ ವಹ್ನಿಯಂತೆ ಪ್ರಕಾಶಿಸಿತು, ದಿಗಂಬರವಾಯಿತು. ಆ ದೇಹ, ಕೇಶಗಳು ಹಾರಾಡಿ ಚೆದರಿದವು. ತಪೋಯೋಗ ಬಲದಿಂದ ವಾಸುದೇವನಲ್ಲಿ

ಬುದ್ಧಿಯನ್ನಿಟ್ಟ ದೇವಹೂತಿಯು ಒಂದನ್ನೂ ಲಕ್ಷಿಸದೆ, ದೇಹವನ್ನೇ ಮರೆತುಬಿಟ್ಟಳು. ಪ್ರಾಣೋತ್ಕ್ರಮಣಪರ್ಯತವದು ಪ್ರಾರಬ್ಧಕರ್ಮಪ್ರೇರಕವಾದ ಭಗವಂತನಿಂದ ರಕ್ಷಿತವಾಗಿತ್ತು. ಸರ್ವಗತನಾಗಿರುವ ಹರಿಯನ್ನು ನಾನು ಬಿಟ್ಟೇ ಇಲ್ಲವೆಂದು ತಿಳಿದು ಪ್ರಕೃತಿ ಪ್ರಾಕೃತಶರೀರರಹಿತನಾದ ಶ್ರೀ ನಾರಾಯಣನ ಪಾದಮೂಲವನ್ನು ಹೊಂದಿದಳು.

ಬಿಂದುಸರವಿದ್ದ ಆ ಪುಣ್ಯ ಕ್ಷೇತ್ರವು ತ್ರಿಲೋಕ ವಿಶ್ರುತವು; ಅದನ್ನೇ ಸಿದ್ಧಪದವೆಂಬುವರು. ಅಲ್ಲಿಯೇ ದೇವಹೂತಿಯು ಸಿದ್ಧಿಯನ್ನು ಪೊಂದಿದಳಲ್ಲವೇ?

ವಿದುರಾ! ಯೋಗಪ್ರಭಾವದಿಂದ ಬಿಟ್ಟುಹೋದಮೇಲೆ ದೇವಹೂತಿಯ ಶರೀರವು ನದೀರೂಪವಾಗಿ ಹರಿದುಹೋಯಿತು. ಆ ನದೀಶ್ರೇಷ್ಠವನ್ನೇ ಸಿದ್ಧಿದಾ ಎಂಬುವರು. ಇಂದೂ ಸಿದ್ಧರು ಅಲ್ಲಿದ್ದು ಆ ಜ್ಞಾನವಾಪಿಯನ್ನು ಸೇವಿಪರು.

ಕಪಿಲನು ಪಿತ್ರಾಶ್ರಮಪನ್ನು ಬಿಟ್ಟು ತಾಯಿಯನ್ನೂ ಬೀಳ್ಕೊಟ್ಟು ಈಶಾನ್ಯ ದಿಕ್ಕಿಗೆ ಹೊರಟನು. ಅಲ್ಲಿ ಸಿದ್ಧಚಾರಣ ಗಂಧರ್ವರಿಂದಲೂ, ಅಪ್ಸರೋಗಣದಿಂದಲೂ, ಸೇವಿತನಾಗಿ ಮುನಿಗಳಿಗೆ ತತ್ತ್ವೋಪದೇಶವನ್ನು ಮಾಡುತ್ತ, ಅದ್ಯಾಪಿ ರಾರಾಜಿಸುತ್ತಿರುವನು. ಸಮುದ್ರರಾಜನೇ ಆತನಿಗೆ ಸ್ಥಾನವನ್ನೂ ಕೊಟ್ಟು ಪೂಜಿಸಿದನು. ಯೋಗಾಸನಾಸೀನನಾದ ಶ್ರೀ ಕಪಿಲನನ್ನು ಸನಕಾದಿಗಳು ಸ್ತುತಿಸುತ್ತಿರುವರು. ತ್ರಿಲೋಕದ ಸುಜನರಿಗೆ ಕ್ಷೇಮವಾಗಲು ತಪವನ್ನು ಮಾಡಿ ರಕ್ಷಿಸುತ್ತಿರುವ ಶ್ರೀ ಕಪಿಲನಿಗೆ ನಮಸ್ಕಾರವು.

ಮೈತ್ರೇಯನು ಹೇಳಿದನು–

ವತ್ಸ ವಿದುರಾ! ನೀ ಕೇಳಿದಂತೆ ಕಪಿಲ ದೇವಹೂತಿ ಸಂವಾದವನ್ನು ನಿರೂಪಿಸಿರುವೆನು. ಇದನ್ನು ಕೇಳುವುದರಿಂದ ಲೋಕವು ಪಾವನವಾಗುವುದು.

ಇದನ್ನು ಶ್ರದ್ಧೆಯಿಂದ ಹೇಳುವವನು ಕೇಳುವವನು ಕೂಡ, ಸುಪರ್ಣಾರೂಢನಾದ ಶ್ರೀಹರಿ ಪೇಳಿದ ಜ್ಞಾನೋಪಾಯವಾದ ಯೋಗಗಳನ್ನರಿತು ದಿಟವಾದ ಬುದ್ಧಿಯಿಂದ ಶುದ್ಧ ನಾಗಿ, ಭಯವತ್ಪಾದಾರವಿಂದವನ್ನು ಪೊಂದಿ ಸುಖಿಸುವನು.

ತೃತೀಯಸ್ಕಂಧವು ಪೂರ್ಣವಾಯಿತು

ಶ್ರೀಕೃಷ್ಣಾರ್ಪಣಮಸ್ತು

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಚತುರ್ಥ ಸ್ಕಂಧವು

|| ಹರಿಃ ಓಂ ||

### ೧. ಕರ್ದಮಾದಿಕೃತ ಪ್ರಜಾಸೃಜನ

ಮೈತ್ರೇಯನು ಹೇಳಿದನು–

ವಿದುರಾ! ಶತರೂಪೆಯಲ್ಲಿ ಮನುರಾಜನಿಗೆ ಮೂರು ಜನ ಪುತ್ರಿಯರೆಂದು ಹೇಳಿದೆನು. ಆಕೂತಿಯನ್ನು ರುಚಿಪ್ರಜೇಶನಿಗೆ ಕೊಟ್ಟು ಮನುರಾಜನು ಪುತ್ರಿಕಾಧರ್ಮದಿಂದ ಆಕೂತಿ ಪುತ್ರನನ್ನು ತನಗೆ ಕೊಡುವದೆಂದು ಮಾತನ್ನು ಪಡೆದನು. ಶತರೂಪೆಯೂ ಕೂಡ ಇದಕ್ಕೊಪ್ಪಿದಳು. ಪುತ್ರರಿಬ್ಬರಿರಲು ಶ್ರೀಹರಿಯೇ ದೌಹಿತ್ರನಾಗುವನೆಂದು ತಿಳಿದು ಮನುರಾಜ ನಿಂತು ಮಾಡಿದನು.

ಪೂಜ್ಯನಾದ ರುಚಿಯು ಆಕೂತಿಯಲ್ಲಿ ಪರಮ ತಪೋವಿಭವದಿಂದ ಭಗವಂತನನ್ನೇ ಪುತ್ರನನ್ನಾಗಿಯೂ, ರಮಾದೇವಿಯನ್ನೇ ಪುತ್ರಿಯನ್ನಾಗಿಯೂ ಪಡೆದನು. ಹರಿಯು ಯಜ್ಞನೆನಿಸಿ ದನು. ರಮೆಯು ದಕ್ಷಿಣಾದೇವಿಯಾದಳು. ಯಜ್ಞನನ್ನು ಮಗಳ ಮನೆಯಿಂದ ಮನುರಾಜನು ತಂದುಕೊಂಡನು. ರುಚಿಪ್ರಜೇಶನು ಮಗಳನ್ನು ಬೆಳೆಯಿಸಿ ಯಜ್ಞನಿಗೇ ಕೊಟ್ಟನು. ತನ್ನಲ್ಲಿ ಪ್ರೀತಿಯಿಂದ ವರಸಿ ಬಂದ ದಕ್ಷಿಣಾ ದೇವಿಯಲ್ಲಿ ಯಜ್ಞನು ಹನ್ನೆರಡು ಗಂಡು ಮಕ್ಕಳನ್ನು ಪಡೆದನು. ತೋಷ, ಪ್ರತೋಷ, ಸಂತೋಷ, ಭದ್ರ, ಶಾಂತಿ, ಇಡಸ್ಪತಿ, ಇಂದ್ರ, ಕವಿ, ಭುವ, ಸ್ವಾಹ, ಸುದೇವ, ರೋಚನನೆಂಬುವ ಈ ದ್ವಾದಶ ತುಷಿತರೆಂಬ ಹರಿಪುತ್ರರು ಸ್ವಾಯಂಭುವ ಮನ್ವಂತರದಲ್ಲಿ ದೇವತೆಗಳಾಗಿದ್ದರು. ಮರೀಚಿಮುಖ್ಯರೇ ಆಗ ಋಷಿಗಳು. ಯಜ್ಞನೇ ಇಂದ್ರನಾಗಿ ಸುರಲೋಕಪಾಲಕನಾದನು.

ಮನುಪುತ್ರರಾದ ಪ್ರಿಯವ್ರತೋತ್ತಾನಪಾದರ ಹಾಗೂ ತತ್ಪುತ್ರ ಪೌತ್ರರ ವೃತ್ತಾಂತವನ್ನು ಆತನ ದುಹಿತೃತ್ರಯ ಕಥಾಕಥನಾನಂತರ ಹೇಳುವೆನು. ದೇವಹೂತಿಯು ಕರ್ದಮ ಪತ್ನಿ ಎಂತಲೂ, ಕಪಿಲನು ಆಕೆಗೆ ತತ್ತ್ವೋಪದೇಶವನ್ನು ಮಾಡಿರುವ ರೀತಿಯನ್ನು ಹೇಳಿರವೆನಲ್ಲವೇ? ಇನ್ನು ಪ್ರಸೂತಿಯನ್ನು ದಕ್ಷಪ್ರಜೇಶನಿಗೆ ಕೊಟ್ಟಿದ್ದನು. ಆಕೆಯ ಸಂತಾನವೇ ಈ ಮೂರು ಲೋಕ ತುಂಬಿ ನಿಂತಿದೆ.

ಕರ್ದಮಸುತೆಯರ ಸಂತಾನವನ್ನು ವಿವರಿಸುವೆನು. ಆ ಒಂಬತ್ತು ಕನ್ಯೆಯರು ಬ್ರಹ್ಮರ್ಷಿ ಪತ್ನಿಯರಾದವರ ವಂಶಾನುಚರಿತೆಯನ್ನು ಕೇಳು. ಮರೀಚಿಪತ್ನಿಯಾದ ಕಲೆಯು ಕಶ್ಯಪನನ್ನು ಪೂರ್ಣಿಮನನ್ನು ಪಡೆದಳು. ಅವರ ಸಂತಾನದಿಂದ ಜಗವೇ ತುಂಬಿತು. ಪೂರ್ಣಿಮನ ಮಗನು

ವಿರಜನು, ವಿಶ್ವಗಳೇ ಮಗಳು. ಈ ವಿಶ್ವಗಳೇ ದೇವಕುಲಪ್ರಿಯಳಾಗಿ ಶ್ರೀಹರಿ ಪಾದಶೌಚಜಲ ದಿಂದ ಪುಟ್ಟಿದ ದೇವಗಂಗೆಯಾದಳು. ಅತ್ರಿ ಪತ್ನಿಯು ಅನಸೂಯೆ, ಶ್ರೀ ಬ್ರಹ್ಮ, ವಿಷ್ಣು, ಗಿರೀಶರು ಈಕೆಯಲ್ಲಿ ಸೋಮ, ದತ್ತ ದುರ್ವಾಸರಾಗಿ ಪುಟ್ಟಿದರು. ಬ್ರಹ್ಮನಿಗವತಾರ ವಿಲ್ಲವಾದ್ದರಿಂದ ಸೋಮನಲ್ಲಿ ಬ್ರಹ್ಮಾವೇಶವು ಎಂದು ತಿಳಿ– ಎಂದು ಮೈತ್ರೇಯನು ಪೇಳಲು ವಿದುರನು ಪ್ರಶ್ನಿಸಿದನು.

ಬ್ರಹ್ಮನ್! ಈ ಜಗತ್ತಿಗೆ ಸೃಷ್ಟಿ, ಸ್ಥಿತಿ, ಲಯ ಕಾರಣರಾದ ತ್ರಿಮೂರ್ತಿಗಳೇತಕ್ಕೆ ಪುಟ್ಟಿದರು? ವಿವರವಾಗಿ ಹೇಳು!

ಎನ್ನಲು ಮೈತ್ರೇಯನು ಪೇಳಿದನು–

ಬ್ರಹ್ಮನಿಂದಾಜ್ಞಪ್ತನಾಗಿ ಬ್ರಹ್ಮಜ್ಞಾನಿವಾರವಾದ ಅತ್ರಿಯು ಅನಸೂಯೆಯನ್ನು ಕೂಡಿ ಋಷ್ಯಗಿರಿಯನ್ನು ಸೇರಿ, ಸತ್ಸಂತಾನಾಪೇಕ್ಷೆಯಿಂದ ತಪವನ್ನಾಚರಿಸಿದನು. ಪುಷ್ಪಗುಚ್ಛ ಸಮಲಂಕೃತವಾದ ಅಶೋಕ ಪಲಾಶ ಕಾನನದಲ್ಲಿ ನಿರ್ವಿಂದ್ಯಾ ನದಿತೀರದಲ್ಲಿ ಪ್ರಾಣಾಯಾಮ ದಿಂದ ಮನೋನಿಗ್ರಹವನ್ನು ಸಂಪಾದಿಸಿ ನೂರು ವರ್ಷಗಳ ತೀವ್ರ ತಪವನ್ನು ಮಾಡಿದನು. ಶೀತೋಷ್ಣಾದಿ ದ್ವಂದ್ವವಿಕಾರ ರಹಿತನಾಗಿ ವಾಯುಭೋಜನದಿಂದ ಒಂದೇ ಪಾದದಿ ನಿಂದು– ಜಗದೀಶಾ! ನಿನ್ನ ಸಮನಾದ ಸಂತಾನವನ್ನೆನಗೆ ದಯಪಾಲಿಸೆಂದು ಶರಣಾಗತನಾದನು. ಪ್ರಾಣ ಯಾಮಬಲದಿಂದ ವರ್ಧಿತನಾದ ಅತ್ರಿಯ ತಪೋವಹ್ನಿಯು ಅವನ ತಲೆಯಿಂದ ಹೊರಸೂಸಿ, ತ್ರಿಭುವನ ಪ್ರಕಾಶಕರವಾಗಲು ನೋಡಿ ಮೆಚ್ಚಿ ಅಚ್ಯುತ ಶತಾನಂದ ಶಿತಿಕಂಠರು ಉತ್ಕಂಠದಿಂದ, ಅಪ್ಸರೋಮುನಿಗಂಧರ್ವ ಸಿದ್ಧವಿದ್ಯಾಧರ ಕೀರ್ತ್ಯಮಾನ ಯಶಸ್ಕರಾಗಿ, ಅತ್ರಿಯ ಆಶ್ರಮವನ್ನು ಸೇರಿಬಂದರು. ಅವರ ಆಗಮನದಿಂದ ವಿಕಸಿತ ಹೃದಯಾರವಿಂದನಾಗಿ ಅತ್ರಿಯು ಎದ್ದು ದಂಡಾಕಾರವಾಗಿ ಸಾಷ್ಟಾಂಗವೆರಗಿ, ನಿಂತು, ಕೈಜೋಡಿಸಿ ಸ್ತುತಿಸಿದನು.

ವೃಷ, ಹಂಸ, ಗರುಡಾರೂಢರು, ಶೂಲಕಮಂಡಲ ಚಕ್ರಾದಿ ಚಿಹ್ನಿತರು, ಧವಲ ಸುವರ್ಣ ನೀಲಮಣಿನಿಭಶೋಭರು, ಕರುಣಾರಸಪೂರ್ಣ ನೇತ್ರರು, ಸುಂದರ ಗಾತ್ರರಾದ ತ್ರಿಮೂರ್ತಿ ಗಳನ್ನು ಕಂಡು, ಅವರ ಕಾಂತಿಯಿಂದ ಕಣ್ಣುಗಳು ಕುಕ್ಕಲು ಮೆಲ್ಲನೆ ತೆರೆದು, ಭಕ್ತಿಬರದಿಂದ ಶಿರಬಾಗಲು, ಮಧುರವಚನಗಳಿಂದ ಸರ್ವದೇವದೇವರನ್ನಿಂತು ಪೊಗಳಿದನು–

ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಕಾರಣರಾಗಿ ತ್ರಿಗುಣಗಳನ್ನು ಸ್ವೀಕರಿಸಿ, ಅವನನ್ನು ಸರಿಸಿ ರಾಜಸ, ಸಾತ್ವಿಕ, ತಾಮಸರೆನಿಪ ರೂಪಗಳಿಂದ ವಿರಾಜಿಸುವ ಹೇ ಬ್ರಹ್ಮ, ವಿಷ್ಣು, ಶಿವರೇ ನಿಮಗೆ ನಮಸ್ಕಾರವು. ನಿಮ್ಮಲ್ಲಿ ನಾನು ಕರೆದುದೊಬ್ಬನನ್ನೇ ಅಲ್ಲವೇ? ವಿಬುಧಪ್ರಧಾನವಾದ ಶ್ರೀಹರಿಯು ಬ್ರಹ್ಮಸ್ಥನಾಗಿ ಸೃಜಿಸುವನು ರುದ್ರಸ್ಥನಾಗಿ ಸಂಹರಿಸುವನು. ಅಂತಹ ಸ್ವಾಮಿಯು ಸ್ವಸದೃಶ ಸಂತತಿಯನ್ನೆನಗೆ ಕೊಡಲೆಂದೇ ನಾ ಬೇಡುವೆನೀಗಲೂ ಕೂಡ! ದೇಹದಾರಿಗಳಿಗೆ ಮನಸಾಪಿ ದೂರರಾದ ನೀವಿಂದು ಪ್ರಸನ್ನರಾಗಿ ತಾವಾಗಿ ಬಂದು ನಿಂತಿರುವದಂ ಕಂಡು ಆಶ್ಚರ್ಯಚಕಿತನಾಗಿರುವೆನು.

ವಿದುರಾ! ಇಂತು ನುತಿಸಿದ ಅತ್ರಿಯ ಮಾತನ್ನು ಕೇಳಿ ಮಾಗವವಾಣಿಧವೋ ಮಾಧವರು ನಗುನಗುತ್ತ ಮಧುರವಾಗಿತೆಂದರು–

ನಿನ್ನ ಸಂಕಲ್ಪದಂತೆಯೇ ಆತ್ಮಸಮ ಪುತ್ರರಾ ನಿನ್ನಲ್ಲಿ ಜನಿಸಲು ನಾವಾಗಿ ಬಂದಿರು ವೆವು. ತ್ರಿಮೂರ್ತಿಸ್ಥನಾದ ಹರಿಯನ್ನು ಧ್ಯಾನಿಸಿದ ನಿನ್ನ ಪ್ರಜಾಕಾಮನವು ವ್ಯರ್ಥವಾಗಲಾರದು.

ಪ್ರಿಯನಾದ ಅತ್ರಿಯೇ! ನಮ್ಮ ಮೂವರ ಅಂಶದಿಂದ ಲೋಕವಿಖ್ಯಾತ ಸುತತ್ರಯವು ನಿನಗಾಗು ವುದು. ನಿನ್ನ ಕೀರ್ತಿಯು ಬೆಳಗುವುದು. ನಿನಗೆ ಶುಭವಾಗಲಿ ಎಂದು ಕಾಮಿತ ವರಪ್ರಧಾನ ವಂಗೈದು ಸುರೇಶ್ವರರು ಋಷಿ ದಂಪತಿಗಳ ಪೂಜೆಯನ್ನು ಸ್ವೀಕರಿಸಿ ನೋಡುತ್ತಿರಲು ಅಂತರ್ಧಾನವನ್ನು ಹೊಂದಿದರು. ಬ್ರಹ್ಮನ ಆವೇಶಯುತನಾಗಿ ಚಂದ್ರನೂ ಅಣಿಮಾದಿ ಯೋಗೈಶ್ವರ್ಯಸಮಗ್ರನಾದ ದತ್ತನು ವಿಷ್ಣ್ವಂಶದಿಂದಲೂ ರುದ್ರಾಂಶದಿಂದ ದೂರ್ವಾಸನೂ ಅತ್ರಿಯ ಮಕ್ಕಳಾಗಿ ಜನಿಸಿದರು.

ವಿದುರಾ! ಆಂಗಿರಸನ ಪ್ರಜೆಯನ್ನು ಕೇಳು. ಶ್ರದ್ಧಾದೇವಿಯು ಆಂಗಿರಸನ ಪತ್ನಿಯು. ಅವಳಲ್ಲಿ ಕನ್ಯೆಯರು ನಾಲ್ವರು ಪುಟ್ಟಿದರು. ಕೃಷ್ಣಚತುರ್ದಶಿದೇವಿಯಾದ ಸಿನಿವಾಲಿಯು, ಅಮಾಭಿಮಾನಿನೀ ಕುಹೂದೇವಿಯು ಶುಕ್ಲ ಚತುರ್ದಶೀದೇವಿ ಅನುಮತಿಯು ಪೂರ್ಣಮಾಭಿ ಮಾನಿನಿ ರಾಕಾದೇವಿಯು ಎಂಬ ಕನ್ಯೆಯರಲ್ಲದೇ ಉಚಥ್ಯ ಬೃಹಸ್ಪತಿಗಳೆಂಬೀರ್ವರು ವೇದವಿಖ್ಯಾತರಾದ ಋಷಿಗಳೂ ಪುತ್ರರಾಗಿ ಪುಟ್ಟಿದರು.

ಪುಲಸ್ತ್ಯನಿಗೆ ಹವಿರ್ಭೂಳಲ್ಲಿ ಅಗಸ್ತ್ಯನು ಜನಿಸಿದನು. ಅವನೇ ಇನ್ನೊಂದು ಜನ್ಮದಲ್ಲಿ ದಭ್ರನೆಂದು ಅಗ್ನಿಗಳಲ್ಲೊಬ್ಬನಾದನು. ವಿಶ್ರವಸನು ಕೂಡ ಪುಲಸ್ತ್ಯ ಪುತ್ರನೇ. ಅವನಿಗೆ ಇಡಿಬಿಲಾದೇವಿಯಲ್ಲಿ ಕುಬೇರನು ಜನಿಸಿ ಯಕ್ಷಪತಿಯಾದನು; ಕೈಕಸಿಯೆಂಬ ರಾಕ್ಷಸಿಯಲ್ಲಿ ರಾವಣ ಕುಂಭಕರ್ಣ ವಿಭೀಷಣರೆಂಬ ಮೂವರು ಪುತ್ರರು ಜನಿಸಿದರು. ಪುಲಹನಿಗೆ ಗತಿದೇವಿ ಯಲ್ಲಿ ಕರ್ಮಶ್ರೇಷ್ಠ, ವರೀಯಾಂಸ, ಸಹಿಷ್ಣುರೆಂಬ ಮೂವರು ಪುತ್ರರಾದರು. ಕ್ರತು ಭಾರ್ಯಳು ಕ್ರಿಯಳು. ಬ್ರಹ್ಮತೇಜದಿಂದುರಿಯುವ ವಾಲಖಿಲ್ಯರೆಂಬ 60 ಸಹಸ್ರ ಜನರಾಕೆಯ ಪುತ್ರರು. ವಸಿಷ್ಠನಿಗೆ ಅರುಂಧತಿಯಲ್ಲಿ ಆದ ಪುತ್ರರು– ಚಿತ್ರಕೇತು, ಸುರೋಚಿ, ವಿರಜ, ಮಿತ್ರ, ಉಲ್ಬಣ, ವಸುಭೃತ್, ಯಾನ, ದ್ಯುಮಾನ್, ಶಕ್ತಿ ಮುಂತಾದವರು. ಅಥರ್ವಣ ಪತ್ನಿಯಾದ ಚಿತ್ತಿಯು ಧೃತವ್ರತ ಮತ್ತು ಅಶ್ವಶಿರನಾದ ದಧ್ಯಂಚನೆಂಬೀರ್ವರಂ ಪಡೆದಳು. ಭೃಗುವು ಖ್ಯಾತಿ ಯಲ್ಲಿ ಧಾತ ವಿಧಾತರನ್ನು ಭಗವತ್ಪ್ರಿಯಳಾದ ಶ್ರೀದೇವಿಯನ್ನು ಪಡೆದನು. ಮೇರುವು ತನ್ನ ಮಕ್ಕಳಾದ ಆಯತಿಯನ್ನು ಧಾತನಿಗೂ, ನಿಯತಿಯನ್ನು ವಿಧಾತನಿಗೂ ಕೊಟ್ಟನು. ಧಾತೃಪುತ್ರನೇ ಮೃಕಂಡನು. ವಿಧಾತೃಸುತನೇ ಪ್ರಾಣರ್ಷಿಯು. ಮೃಕಂಡನಿಗೆ ಮಾರ್ಕಾಂಡೇಯನು, ಪ್ರಾಣನಿಗೆ ವೇದಶಿರಸನು ಜನಿಸಿದರು. ಭೃಗುಪುತ್ರನಾದ ಕವಿಯು ಗ್ರಹನಾದ ಶುಕ್ರನನ್ನು ಪಡೆದನು. ವಿದುರಾ! ಈ ಎಲ್ಲರೂ ತಮ್ಮ ಸಂತಾನದಿಂದ ಲೋಕಗಳನ್ನು ಪ್ರಜಾ ಸಮೃದ್ಧವನ್ನಾಗಿ ಮಾಡಿ ದರು. ಈ ಕರ್ದಮ ದೌಹಿತ್ರ ಸಂತಾನವನ್ನು ಶ್ರದ್ಧೆಯಿಂದ ಕೇಳಿದವರು ಪಾಪಮುಕ್ತರಾಗುವರು.

ಮನುಪುತ್ರಿಯಾದ ಪ್ರಸೂತಿಯು ದಕ್ಷಪತ್ನಿಯಾದಳು. ಆಕೆಯಲ್ಲಿ ಪ್ರಜಾಪತಿಯು ಹದಿ ನಾರು ಸುಂದರ ಕನ್ಯೆಯರನ್ನು ಪಡೆದನು. ಧರ್ಮ ಪ್ರಜೇಶನಿಗೆ ಹದಿಮೂರು ಕನ್ಯೆಯರನ್ನು: ಸ್ವಾಹಾ ಎಂಬುವಳನ್ನು ಅಗ್ನಿಗೂ, ಎಲ್ಲ ಪಿತೃಗಳಿಗೆ ಸೇರಿ ಸ್ವಧಾ ಎಂಬವಳನ್ನು ಜ್ಞಾನೋಪದೇಶ ದಿಂದ ಸಂಸಾರ ನಿರ್ಮೂಲನ ದಕ್ಷನಾದ ಶಿವನಿಗೆ ಸತೀದೇವಿ ಎಂಬ ಹದಿನಾರನೆಯ ಕನ್ಯಾಮಣಿಯನ್ನು ಮದುವೆ ಮಾಡಿಕೊಟ್ಟನು. ಧರ್ಮಪತ್ನಿಯರು ಶ್ರದ್ಧೆ, ಮೈತ್ರಿ, ದಯಾ, ಶಾಂತಿ, ತುಷ್ಟಿ, ಕ್ರಿಯಾ, ಉನ್ನತಿ, ಬುದ್ಧಿ, ಮೇಧಾ, ತಿತಿಕ್ಷೆ, ಹ್ರೀ, ಮೂರ್ತಿ ಎಂಬುವರು. ಇವರಲ್ಲಿ ಶ್ರದ್ಧೆ ಶುಭನನ್ನು, ಮೈತ್ರಿಯು ಪ್ರಸಾದನನ್ನು , ದಯೆ ಅಭಯನನ್ನು, ಶಾಂತಿಯು ಸುಖನನ್ನು, ತುಷ್ಟಿಯು ಮುದನನ್ನು, ಪುಷ್ಟಿಯು ಸ್ಮಯನನ್ನು, ಕ್ರಿಯೆಯು ಯೋಗನನ್ನು,

ಉನ್ನತಿಯು ದರ್ಪನನ್ನು, ಬುದ್ಧಿಯು ಅರ್ಥನನ್ನು, ಮೇಧಾವಿಯು ಸ್ಮೃತಿಯನ್ನು, ತಿತಿಕ್ಷೆಯು ಕ್ಷೇಮನನ್ನು, ಹ್ರೀಯು ಪ್ರಶ್ರಯನನ್ನು, ಮೂರ್ತಿದೇವಿಯು ನರನಾರಾಯಣ ಹರಿಕೃಷ್ಣರೆಂಬ ಶ್ರೀಹರಿಯ ನಾಲ್ಕು ರೂಪಗಳನ್ನು ಪಡೆದರು. ನರನಾರಾಯಣರು ಪುಟ್ಟಲು ಜಗವೇ ಆನಂದತುಂದಿಲವಾದರು. ದಿಕ್ಕುಗಳು, ಅಗ್ನಿಗಳು, ವಾಯುವು, ಸಜ್ಜನಮನಗಳು, ನದಿಗಳು ಪ್ರಸನ್ನವಾದವು. ಆಕಾಶದಿ ದೇವವಾದ್ಯಗಳು ಮೊಳಗಿದವು. ಪುಷ್ಪವೃಷ್ಟಿಗರೆಯಿತು. ಮುನಿಗಳು ವೇದಘೋಷದಿಂದ ತುತಿಸಿದರು. ಗಂಧರ್ವಕಿನ್ನರರಾನಂದದಿಂದ ಕುಣಿದು ಹಾಡಿದರು. ಅಪ್ಸರೆಯರು ನಾಟ್ಯ ವಾಡಿದರು. ಪರಮಮಂಗಲಕರನಾದ ಈ ಸಮಯದಲ್ಲಿ ಬ್ರಹ್ಮಾದಿ ದೇವತೆಗಳು ಸ್ತೋತ್ರ ಮಾಡುತ್ತಿತೆಂದರು–

ಮೂರ್ತಿ ಧರ್ಮನಾಮಕ ಋಷಿ ದಂಪತಿಗಳಲ್ಲಿ ನೀನಾಗಿ ಸ್ವೇಚ್ಛೆಯಿಂದ ಋಷಿರೂಪನಾಗಿ ಅವತರಿಸಿದ ಚತುರ್ಮೂರ್ತಿಯೇ ! ನಿನಗೆ ನಮಸ್ಕಾರವು . ವಾಯುವಿಗಾಧಾರದಂತಿರುವ ಆಕಾಶದಂತೆ ನಿನಗೆ ನೀನೇ ವ್ಯಂಜಕನಾಗಿ ಸರ್ವಾಧಾರನಾಗಿರುವಿ. ಆಧಾರಾಧೇಯಭಾವವು ನಮಗೆ ಗೋಚರವಾಗಲು ವಿಮಾನಾದಿ ಚಲನಗಳಿಂದ ತೋರುವ ಆಕಾಶಭೇದವನ್ನಂತೆ, ನಿನ್ನಲ್ಲಿಯು ಅವತಾರಭೇದವಿಲ್ಲವೆಂದು ತಿಳಿಸಲವತರಿಸುವ ಸ್ವಾಮಿಯೇ! ಶ್ರೀಲಕ್ಷ್ಮೀದೇವಿಗೆ ನಿಲಯವಾದ ನಿನ್ನ ಕರುಣಾರಸಪೂರ್ಣನಯನಾರವಿಂದ ವೀಕ್ಷಣದಿಂದೆಮ್ಮನ್ನು ನೋಡು! ನಿನ್ನ ಜಗತ್ಪಾಲನ ಕಾರ್ಯವಿಘ್ನಪರಿಹಾರಕ್ಕಾಗಿ ಸತ್ವಗುಣದಿಂದ ಸೃಷ್ಟರಾದವರಲ್ಲವೇ ದೇವತೆಗಳು. ಅಂತಹ ನಿನ್ನ ಪ್ರಿಯರಾದ ನಮ್ಮನ್ನು ಕಾಪಾಡು!

ಎಂದು ನುತಿಸಿ ನತಿಸಿದ ಸುರಗಣರ ಪೂಜೆಯನ್ನು ಸ್ವೀಕರಿಸಿ, ಕರುಣಾಲೋಕನಗಳಿಂದ ಅವರನ್ನನುಗ್ರಹಿಸಿ, ನರನಾರಾಯಣರು ಗಂಧಮಾದನಪರ್ವತವನ್ನು ಸೇರಿದರು. ನಾರಾಯಣ ಋಷಿಯು ಸಾಕ್ಷಾಚ್ಛ್ರೀಹರಿಯೇ. ನರನು ಶೇಷಾತಾರನವನಲ್ಲಿ ಶ್ರೀಹರಿಯ ಶ್ವೇತಕೇತದ ವಿಶೇಷಾವೇಶವಿದೆ. ನಾರಾಯಣನೇ ಕೃಷ್ಣನಾಗಿ ಯದುಕುಲದಲ್ಲಿಯು, ನರನಾವೇಶದಿಂದ ಅರ್ಜುನನು ಕುರುಕುಲದಲ್ಲಿಯು ಪುಟ್ಟಿದರು.

ಸ್ವಾಹಾದೇವಿಯು ಅಗ್ನಿಯಿಂದ ಪಾವಕ, ಪಾವಮಾನ, ಶುಚಿ ಎಂಬ ಮೂವರು ಪುತ್ರರನ್ನು ಪಡೆದಳು. ಇವರು ಹುತಭೋಜನರೆನಿಸಿದರು. ಅವರಿಂದ 45 ಅಗ್ನಿಗಳು ಜನಿಸಿದರು. ತಂದೆಗಳು, ತಾತನಿಂದ ಕಲೆತು ಅಗ್ನಿಗಳು 49 ಜನರಾದರು. ಅವರ ವಿವಿಧ ನಾಮಗಳಿಂದ ಯಜ್ಞಕರ್ಮಕಾಲದಲ್ಲಿ ಬ್ರಹ್ಮವಾದಿಗಳು ಅಗ್ನಿದೈವತ್ಯನಾದ ವಿವಿಧೇಷ್ಟಿಗಳನ್ನು ನಿರೂಪಿಸಿ ಮಾಡುವರು. ಅಗ್ನಿಷ್ವಾತ್ತರು, ಬರ್ಹಿಷದರು, ಸಾಮ್ಯರು, ಅಜ್ಯಪರು, ಮೊದಲಾದ 49 ಮಂದಿ ಅಗ್ನಿಗಳು ಪಿತೃಗಳೆನಿಪರು. ಅವರು ಸಾಗ್ನಿಗಳು, ನಿರಗ್ನಿಗಳೆಂದು ಎರಡು ವಿಧವಾಗಿರುವರು. ಅವರ ಪತ್ನಿಯೇ ಸ್ವಧಾದೇವಿ. ಸ್ವಧಾದೇವಿಯು ಪಿತೃಗಳಿಂದ ಕನ್ಯಾದ್ವಯವನ್ನು ಪೆತ್ತಳು. ಮೇನಾ, ವೈತರಣೀ, ಎಂಬಾತರುಣಿಯರು ವೇದವಿಚಾರವಿಚಕ್ಷಣರಾಗಿ ಜ್ಞಾನ–ವಿಜ್ಞಾನಸಂಪನ್ನ ರಾದರು. ರುದ್ರಪತ್ನಿಯಾದ ಸತಿಯು ಮಹಾದೇವ ನಿಗನುವ್ರತಳಾಗಿದ್ದು ಕೂಡ ತನಗೆ ಸದ್ರುಶನಾದ ಪುತ್ರನನ್ನು ಪಡೆಯಲಿಲ್ಲ. ತನ್ನ ತಂದೆಯಾದ ದಕ್ಷನು ನಿರಪರಾಧಿಯಾದ ರುದ್ರನ ಮೇಲೆ ರೋಷ ದ್ವೇಷಗಳನ್ನು ಮಾಡಲು ಸಹಿಸದೆ ಅಸ್ವೀಕೃತಳಂತೆ ಇದ್ದು ಪ್ರಾಣೋತ್ಕ್ರಮಣ ನಿಮಿತ್ತ ಯೋಗನಿರತಳಾಗಿ ಮನಸಾ ಹರಿಧ್ಯಾನವನ್ನು ಮಾಡುತ್ತಾ ದೇಹವನ್ನು ತ್ಯಜಿಸಿದಳು– ಎಂದು ಮೈತ್ರೇಯನು ಹೇಳಿದನು.

## ೨. ದಕ್ಷ ಮಹಾದೇವ ವಿರೋಧ ಕಾರಣ

ವಿದುರನು ಪ್ರಶ್ನಿಸಿದನು –

ಮಹಾದೇವನು ಶೀಲವಂತರಲ್ಲಿ ಶ್ರೇಷ್ಠನು. ದಕ್ಷನೂ ದುಹಿತೃವತ್ಸಲನು. ಹೀಗಿದ್ದರೂ ಮಗಳಾದ ಸತಿಯಲ್ಲಿ ಅನಾದರವನ್ನು, ರುದ್ರನಲ್ಲಿ ದ್ವೇಷವನ್ನು ದಕ್ಷನೇಕೆ ಮಾಡಿದನು? ಮಹಾದೇವನು, ಜಗತ್ತಿಗೆಲ್ಲಾ ಪೂಜ್ಯನು, ಚರಾಚರಗುರುವು, ಶಾಂತಮೂರ್ತಿಯು, ಭಗವನ್ನಿರತನು ಆದ ರುದ್ರನಲ್ಲಿ ದ್ವೇಷವನ್ನಾರು ಮಾಡುವರು? ಬ್ರಹ್ಮನ್! ಈ ಮಾವ ಅಳಿಯಂದಿರ ಜಗಳವು ಕೊನೆಗೆ ಮಗಳ ಪ್ರಾಣತ್ಯಾಗ ಕಾರಣವಾಯಿತಲ್ಲವೆ? ದಯಮಾಡಿ ಆ ಕಥೆಯನ್ನೆನಗೆ ವಿಸ್ತಾರವಾಗಿ ಪೇಳಿ.

ಮೈತ್ರೇಯನು ಪೇಳಿದನು–

ಪೂರ್ವದಲ್ಲಿ ವಿಶ್ವಸೃಜರಾದ ಮರೀಚ್ಯಾದಿಗಳು ಯಜ್ಞವನ್ನು ಮಾಡಿದರು. ಮಹರ್ಷಿಗಳೆಲ್ಲರಲ್ಲಿಗೆ ಬಂದರು. ಸಾನುರಾಗದ ದೇವತೆಗಳು, ಸಾಗ್ನಿಗಳಾದ ಋಷಿಗಳು ಬಂದರು. ಆ ಯಜ್ಞಶಾಲೆಗಾಗ ಗಕ್ಷನೂ ಬಂದನು. ಸೂರ್ಯನಂತೆ ಪ್ರಕಾಶಿಸುತ್ತಾ ಸಭಾಮಂಟಪವನ್ನೇ ಬೆಳಗಿಸಿದ ದಕ್ಷನನ್ನು ಕಂಡು ವಿರಿಂಚಶರ್ವರಿಬ್ಬರನ್ನು ಹೊರತು ಎಲ್ಲಾ ಸದಸ್ಯರು ಅವನ ಕಾಂತಿಯಿಂದ ಸಂಭ್ರಾಂತರಾಗಿ ಎದ್ದು ನಿಂತರು. ಆಗ ಸದಸಸ್ಪತಿಗಳಿಂದ ಸತ್ಕೃತನಾದ ದಕ್ಷನು ಲೋಕಗುರುವಾದ ಬ್ರಹ್ಮನಿಗೆ ವಂದಿಸಿ ಆ ತಂದೆಯ ಆಜ್ಞೆಯಂತೆ ಆಸೀನನಾದನು. ಮುಂದೆ ಕೂತಿದ್ದ ಮೃಡನನ್ನು ನೋಡಿದರು. ಅಳಿಯನು ತನ್ನನ್ನು ಆದರಿಸಲಿಲ್ಲವೆಂದು ಸಿಟ್ಟಿನಿಂದ ಸುಡುವಂತೆ ನೋಡುತ್ತಾ ಪರುಷ ವಚನಗಳಿಂದಿಂತೆಂದನು–

ಬ್ರಹ್ಮಗಳಿರಾ! ಸಭ್ಯರೇ! ನನ್ನ ವಚನವನ್ನು ಕೇಳಿ. ಸಾಧುಗಳ ಸದಾಚಾರವನ್ನು ನಿರೂಪಿಸುವೆನು. ಅಜ್ಞಾನದಿಂದಲಾಗಲಿ ಮತ್ಸರದಿಂದಲಾಗಲಿ ಮಾತನಾಡುತ್ತಿಲ್ಲ. ಇವನು ಲೋಕಪಾಲಕರ ಯಶೋನಾಶಕನು. ಇವನಿಗೆ ಲಜ್ಜೆಯಾದರೂ ಇದೆಯೇ? ಸಜ್ಜನರು ಹಾಕಿಕೊಟ್ಟ ಸನ್ಮಾರ್ಗವನ್ನು ಸ್ತಬ್ಧನಾಗಿ ಕೆಡಿಸಿರುವನು. ಇಷ್ಟೇ ಅಲ್ಲ! ಇವನು ನನಗೆ ಶಿಷ್ಯ ನಲ್ಲವೇ ? ಬ್ರಾಹ್ಮಣರೆದುರು ಅಗ್ನಿಸಾಕ್ಷಿಯಾಗಿ ಸ್ವೀಕರಿಸುವ ಗಾಯತ್ರಿಮಂತ್ರೋಚ್ಚಾರಣದಂತೆ ನನ್ನ ಮಗಳ ಪಾಣಿಯನ್ನು ಗ್ರಹಿಸಿ ಅಳಿಯನೆನಿಸಿರುವ ಈ ಶಿವನು ಶಿಷ್ಯನೇ ಸರಿ! ಕೆಟ್ಟ ಕೆಂಡವನ್ನಿಟ್ಟ ಕಣ್ಣುಳ್ಳ ರುದ್ರನು, ಹರಿಣನಯನೆಯಾದ ನನ್ನ ಮಗಳ ಕೈಪಿಡಿದ ಅಳಿಯನೆನಿಸಿಯೂ ಪ್ರತ್ಯುತ್ಥಾನವನ್ನೂ ಅಭಿನಂದನವನ್ನೂ ಮಾಡಲಿಲ್ಲ! ಕೊನೆಗೆ 'ಬನ್ನಿ' ಎನ್ನಬಾರದೇ? ಛೇ! ಇವನಿಗೆ ಕ್ರಿಯಮರ್ಮವೇನು ಗೊತ್ತು? ಅಶುಚಿಯಾಗಿ ಅಹಂಕಾರ ಭರಿತನಾಗಿರುವನು. ಧರ್ಮ ಮರ್ಯಾದೆಯನ್ನುಲ್ಲಂಘಿಸಿರುವನು. ಶೂದ್ರನಿಗೆ ವೇದವನ್ನು ಕೊಟ್ಟಂತೆ ಇಷ್ಟವಿಲ್ಲದಿದ್ದರೂ ಇವನಿಗೆ ನನ್ನ ಮಗಳನ್ನು ಕೊಟ್ಟು ಕೆಟ್ಟೆ. ನನಗೇನೂ ಅಸೂಯೆ ಇಲ್ಲ. ನೋಡಿ! ಇವನಿರುವದೋ ಘೋರ ಸ್ಮಶಾನ! ಇವನ ಪರಿವಾರವೋ ಭೂತಪ್ರೇತಗಳು! ಇವನು ಸ್ವಯಂ ಉನ್ಮತ್ತನು. ದಿಗಂಬರನಾಗಿ ಕೂದಲನ್ನು ಬಿರಿಹಾಕಿ, ನಗುತ್ತಾ, ಅಳುತ್ತಾ, ಕುಣಿಯುತ್ತಾ, ತಿರುಗುವನು. ಚಿತಾಭಸ್ಮವನ್ನು ಹಚ್ಚಿ ಪ್ರೇತಾಸ್ಥಿಮಾಲೆಗಳನ್ನಿಟ್ಟು, ಮತ್ತಜನರಿಂದಾಡುವ ಅಶಿವನಾದ ಇವನಿಗೆ ಶಿವನೆಂದು ಹೆಸರೇಕೋ! ತಮೋಗುಣ ಸ್ವರೂಪಾತ್ಮರಾದ ಪ್ರಮಥ ಭೂತಗಳಿಗೊಡೆಯನಾದ ಹುಚ್ಚನಿವ! ಶೌಚವಿಲ್ಲ! ಒಳ್ಳೆಯ ಮನಸ್ಸಿಲ್ಲ. ಅಯ್ಯೋ! ಪಾಪ!

ನನ್ನ ಮಗಳಿಗೆ ಇವನಿಂದಲೇನು ಸುಖ? ಬ್ರಹ್ಮದೇವರೆ ಹೇಳಿದನಿಲ್ಲದಿಗೆ ಇವನಿಗೆ ಯಾರು ಕನ್ಯೆಯನ್ನು ಕೊಡುತ್ತಿದ್ದರು?–

ಎಂದು ನಿಂದಿಸಿ, ಬದಲಾಡದೆ ಸುಮ್ಮನಿದ್ದ ಶಿವನನ್ನು ಕಂಡು, ಕೆಂಡವಾಗಿ ಕಡು ಕೋಪದಿಂದ ದಕ್ಷನು ಶಾಪವನ್ನೇ ಕೊಡತೊಡಗಿದನು– ಈ ದೇವಗಣಾಧಮನಾದ ಭವನು ಇಂದ್ರೋಪೇಂದ್ರಾದಿ ದೇವತೆಗಳಿಂದ ಕೂಡಿ ಯಜ್ಞಭಾಗವನ್ನು ಹೊಂದದೆ ಹೋಗಲಿ !

ಸದಸ್ಯರು ಬೇಡಕೂಡದೆಂದರೂ ಕೇಳದೆ ದಕ್ಷನು ಗಿರೀಶನಿಗೀಶಾಪವನ್ನಿತ್ತು ಸಿಟ್ಟಿನಿಂದ ಅಲ್ಲಿ ನಿಲ್ಲಲಾರದೆ ಸಭೆಯನ್ನು ಬಿಟ್ಟು ಹೊರಹೊರಟನು. ದಕ್ಷ ಶಾಪದಿಂದ ಕುಪಿತನಾದ ನಂದಿಕೇಶನು, ದಕ್ಷನಿಗೂ ದಕ್ಷನ ದುರ್ವಚನಗಳನ್ನು ಕೇಳಿ ಅನುಮೋದಿಸಿದ ಬ್ರಾಹ್ಮಣರಿಗೂ ದಾರುಣವಾದ ಶಾಪವನ್ನಿತ್ತನು –

ನಶ್ವರವಾದೀ ಶರೀರವೇ ನಾನೆಂದು ದುರಭಿಮಾನದಿಂದ ದ್ರೋಹವನ್ನರಿಯದ ಭಗವಂತನಿಗೆ, ದ್ರೋಹವನ್ನೆಸಗಿದ ದಕ್ಷನು ಅಜ್ಞಾನಿಯೇ ಸರಿ! ಅವನ ತತ್ತ್ವಜ್ಞಾನವು ಅನ್ಯಥಾಜ್ಞಾನದಿಂದ ನಶಿಸಿಹೋಗಲಿ! ಗ್ರಾಮ್ಯಸುಖೇಚ್ಛೆಯಲ್ಲಾಸಕ್ತನಾಗಿ ವಂಚನಮಯ ಸಂಸಾರಕೂಪದಲ್ಲಿ. ಶ್ರೀನಾರಾಯಣವಿಷಯಕಕರ್ಮವ್ಯಾಪಾರನಿರತನಾಗಿ ಪತಿತನಾಗಲಿ! ವೇದವಾದರತನಾಗಿ, ಪುಷ್ಪಸದೃಶ ಸ್ವರ್ಗಾದಿಕಾಮನಾಭ್ರಷ್ಟನಾಗಲಿ! ವಿಷಯಧ್ಯಾನಮಾಡಿ, ತನ್ನ ಗತಿಯನ್ನು ಕಾಣದೆ ಸ್ತ್ರೀಕಾಮನಾಗಿ ಶೀಘ್ರದಲ್ಲಿಯೇ ದಕ್ಷನು ಬಸ್ತಮುಖನಾಗಲಿ! ಅವಿದ್ಯೆಯನ್ನೇ ವಿದ್ಯೆಯೆಂದು ತಿಳಿದ ಕರ್ಮಫಲಭೋಗಿಗಳಾಗುತ್ತಾ ಇವನು ಇವನನ್ನನುಸರಿಸಿ ಶಿವಾವಮಾನವನ್ನು ಗೈದವರೆಲ್ಲ ಸಂಸಾರನಿರತರಾಗಿ ಕೆಟ್ಟುಹೋಗಲಿ! ಮುಖ್ಯ ಪ್ರಾಣಾನುಗ್ರಹದಿಂದಲೇ ಮೋಕ್ಷಫಲ ಪ್ರತಿಪಾದಕವೆಂದು ತಿಳಿಯಲರ್ಹವಾದ ವೇದವನ್ನು ಪುಷ್ಪದಂತೆ ವಿಷಯಸುಖಲಕ್ಷಣ ಮಕರಂದಭರಿತವೆಂದರಿತು, ಕಾಮಾತ್ಮಕರಾಗಿ ಹರದ್ವೇಷಿಗಳು ನಶಿಸಲಿ. ಇನ್ನು ಈ ಬ್ರಾಹ್ಮಣರೋ ಜೀವನಕ್ಕಾಗಿ ತಪೋವಿದ್ಯಾವ್ರತಗಳನ್ನು ಬಳಸಿ , ಪಲಾಂಡು ಮುಂತಾದ ನಿಷಿದ್ಧ ಭೋಜನರಾಗಲಿ! ಧನ, ದೇಹ, ಇಂದ್ರಿಯಂಗಳದಾಸರಾಗಿ ಯಾಚಕರಾಗಿ ಅಲೆಯುತ್ತಿರಲಿ! ·ಇಂತು ಬ್ರಹ್ಮಕುಲಕ್ಕೆ ಶಾಪವನ್ನಿಟ್ಟ ನಂದಿಯ ಮಾತನ್ನು ಮನ್ನಿಸದೆ, ಭೃಗುವು ದುರತ್ಯಯ ಪ್ರತಿಶಾಪವನ್ನಿತ್ತನು. ಬ್ರಾಹ್ಮಣರಿಗೆ ಶಾಪವೇ ಅಲ್ಲವೇ ದಂಡಶಕ್ತಿಯು!

ಭವವ್ರತಧರರು ಅವರ ಅನುವ್ರತರೆಲ್ಲರೂ ಪಾಖಂಡಿಗಳಾಗಲಿ! ಸಚ್ಛಾಸ್ತ್ರದ್ವೇಷಿಗಳಾಗಲಿ! ನಷ್ಟಶೌಚರು ಮೂಢಬುದ್ಧಿಗಳು ಜಟಾಧಾರಿಗಳು, ಭಸ್ಮಾಸ್ಥಿಧರರು ಆಗಿ ಶಿವದೀಕ್ಷಾ ಪ್ರವಿಷ್ಟರಾಗಲಿ! ಸುರಾಸವಗಳೇ ಅವರ ದೈವತಗಳಾಗಲಿ ! ವೇದವನ್ನೂ ಬ್ರಾಹ್ಮಣರನ್ನು ಬೈದೆಯಲ್ಲವೇ? ಕಾರಣವಿಲ್ಲದೆ ಧರ್ಮಸೇತು ಧುರಂಧರರನ್ನು ನಿಂದಿಸಿದೆ. ಆದ್ದರಿಂದ ಪಾಖಂಡಿಗಳಾಗಿರಿ! ಅಲ್ಲವೋ! ಲೋಕಕ್ಕೆಲ್ಲ ಮಂಗಳಕರ ಸನಾತನ ಮಾರ್ಗದರ್ಶಕವಾದ ವೇದದ ಅಪರಾಧವೇನು? ಹೇಳು. ವೇದವಕ್ತಾಸಾಕ್ಷಾನ್ನಾರಾಯಣನಿರುವನು. ವೇದದಂತೆ ನಡೆಯುವ ವಿಪ್ರರೇನಪರಾಧಗೈದಿರುವರು? ಪರಮಪವಿತ್ರವು ಸಜ್ಜನಗಮ್ಯವಾದ ವೇದಮಾರ್ಗವನ್ನು ಬೈದು ಪಾಖಂಡಿಗಳಾದಿರಿ! ಭೈರವನೇ ನಿಮಗೆ ದೈವವಾಗಲಿ ಹೋಗು!

– ಎಂದು ಭೃಗುವು ಶಾಪೋಕ್ತಿಯನ್ನು ನುಡಿವಾಗ ಕೇಳಲಾರದೆ ವಿಮನಸ್ಕನಾಗಿ ಮಹಾದೇವನಲ್ಲಿಂದ ಪರಿವಾರವನ್ನು ಕರೆದುಕೊಂಡು ಹೊರಟುಹೋದನು.

ಅನಂತರ ವಿಶ್ವಸೃಗೃಷಿವರರು ಸಾವಿರ ವರ್ಷದ ಯಾಗವನ್ನು ಹರಿಯೇ ಪ್ರಧಾನ ದೇವತೆಯಾಗಿದ್ದುದರಿಂದ ವಿಘ್ನ ಬರದಂತೆ ಮುಗಿಸಿ, ಮಹೋತ್ಸಾಹದಿಂದ ಗಂಗಾಯಮುನಾ ಸಂಗಮಕ್ಕೆ ತಂದು, ಅವಭೃತ ಸ್ನಾನವನ್ನು ಮಾಡಿ ಶುದ್ಧಮನಸ್ಕರಾಗಿ ತಂತಮ್ಮ ಮನೆಗಳಿಗೆ ಪೋದರು.

## ೩. ಶಂಕರ ದಕ್ಷ ವಿವಾದ ಕಥನ – ಸತೀ ಶಂಕರ ಸಂವಾದ

ಮೈತ್ರೇಯನು ಪೇಳಿದನು–

ಹೀಗೆ ಶಂಕರ ದಕ್ಷರು ಅಳಿಯ ಮಾವಂದಿರಾದರೂ ದ್ವೇಷದಿಂದ ಬಹುಕಾಲ ಕಳೆದರು.

ಆಗ ಬ್ರಹ್ಮನು ದಕ್ಷನನ್ನು ನವಪ್ರಜೇಶರಿಗಧ್ಯಕ್ಷಸ್ಥಾನದಲ್ಲಿ ಅಭಿಷಿಕ್ತನನ್ನಾಗಿಸಿದನು. ಅದರಿಂದ ದಕ್ಷನಾದರೂ ದುರಹಂಕಾರದಿಂದ ಪೂರಿತನಾದನು. ಪೂರ್ವವೈರವನ್ನು ಬಿಡಲಿಲ್ಲ. ಕರ್ಮರತನಾಗಿ ವಾಜಪೇಯನೆಂಬ ಯಜ್ಞವನ್ನು ಮಾಡಿದನು. ಮತ್ತೆ ಬೃಹಸ್ಪತಿ ಸವನವನ್ನು ಮಾಡಲೆಣಿಸಿ, ಬ್ರಹ್ಮರ್ಷಿ ದೇವರ್ಷಿ ಗಣವನ್ನೂ ಪಿತೃದೇವತೆಗಳನ್ನೂ ಕರೆಯಿಸಿದನು. ಸ್ವಸ್ತಿವಾಚನವನ್ನೋದಿ ಎಲ್ಲರೂ ಯಜ್ಞಪತ್ನಿಯರೂ ನೆರೆದಿದ್ದ ಕಾಲದಲ್ಲಿ ಯಜ್ಞಾಹುತಿಗಳನ್ನು ನೀಡುತ್ತಾ ದಕ್ಷನು ಕುಳಿತಿದ್ದನು.

ಆಕಾಶದಲ್ಲಿ ವಿಮಾನಗಳಿಂದ ಪೋಗುವ ದೇವಸುಂದರಿಯರು ತಮ್ಮ ಪತಿಗಳಿಂದಾಡುವ ವಚನಗಳನ್ನು ಕೇಳಿ ಪೀತಾಂಬರವನ್ನುಟ್ಟು ಕಾಸಿನ ಸರವನ್ನಿಟ್ಟು ಲೋಲಲೋಚನೆಯರಾಗಿ ಮಣಿಕುಂಡಲಾಲಂಕೃತರಾದ ಅಮರಾಂಗನೆಯರ ಸಂಭ್ರಮವನ್ನು ನೋಡಿ, ಉತ್ಸುಕದಿಂದ ಪತಿಯನ್ನು ಸೇರಿ, ಸತಿದೇವಿಯು ಮಾತನಾಡಿದಳು–

ಪ್ರಜಾಪತೇ ! ನಿಮ್ಮ ಮಾವನ ಮನೆಯಲ್ಲಿ ಮಖದ ಮಹೋತ್ಸವವು ನಡೆದಿದೆಯಂತೆ! ನಾವು ಸುಂದರ! ಪೋಗೋಣವೇ? ಅದಕ್ಕಾಗಿಯೇ ಆಹ್ವಾನಿತರಾಗಿ ಅಮರವರರೂ ಪೋಗುತ್ತಿರುವರು ನೋಡು! ಬಂಧುದರ್ಶನವಾಗಲೆಂದು ನನ್ನ ಭಗಿನಿಯರು ಭಾವಂದಿರು ಯಜ್ಞಶಾಲೆಗೆ ಬರುವರು. ನಾನೂ ನಿಮ್ಮೊಡನೆ ಪೋಗಿ ಅವರಂತೆ ಉಡುಗೊರೆಯನ್ನು ತೆಗೆದುಕೊಳ್ಳಲಪೇಕ್ಷಿಸುವುದು ತಪ್ಪೆ? ಬಾ! ಅಲ್ಲಿ ಅಕ್ಕಂದಿರೌಚಿಯರು ಎಲ್ಲರಕ್ಕಿಂತಲೂ ನನ್ನ ತಾಯಿ ನನ್ನನ್ನು ಕಂಡೊಡನೆ ಅಂತಃಕರಣವು ಕರಗಲು ಕರೆದು ಬಿಗಿದಪ್ಪುವರು. ಎಷ್ಟು ದಿನವಾಯಿತವರನ್ನು ತವರನ್ನು ನೋಡಿ? ಧ್ವಜವು ಹಾರುತ್ತಿರಲು ಮಹಾಸಂಭ್ರಮದಿಂದ ಋಷಿಗಳು ಸೇರಿ ನಡೆಸುವ ಯಜ್ಞವನ್ನಾದರೂ ನೋಡಿಬರೋಣ! ಏನು ಮಾತಾಡದಿರುವಿ? ಹರೀಚ್ಛೆಯಿಂದ ನಿರ್ಮಿತವಾದೀ ಗುಣತ್ರಯಾತ್ಮಕವಾದ ಜಗವನ್ನು ಶ್ರೀಶನನುಗ್ರಹದಿಂದ ಚೆನ್ನಾಗಿ ತಿಳಿದಿರುವ ನಿನಗೆ ನೋಡಬೇಕೆಂಬುದಿಲ್ಲ. ಆದರೂ ನಾನು ಸ್ತ್ರೀಯು. ತತ್ವಜ್ಞಾನವೆನಗಷ್ಟಿಲ್ಲ. ಪ್ರಾಣನಾಥ! ನನ್ನ ಜನ್ಮಭೂಮಿಯನ್ನು ನೋಡಬೇಕೆನಿಸಿದೆ. ದೀನಳಾಗಿ ಬೇಡುವ ನನ್ನ ಈ ಕೋರಿಕೆಯನ್ನೀಡೇರಿಸು. ನೋಡೀ ಸುರವನಿತೆಯರು ಅಲಂಕೃತರಾಗಿ ಪತಿಸಹಿತರಾಗಿ ಪೋಗುತ್ತಿರುವ ವೈಭವವನ್ನು! ಶಿತಿಕಂಠ! ಹಂಸಪಾಂಡುರವಾದ ಅವರ ವಿಮಾನಾವಲಿಯಿಂದ ಆಕಾಶವೇ ಸಿಬಿಡವಾಗಿದೆ. ನಾನು ಮಗಳಲ್ಲವೇ? ದಕ್ಷನೆನ್ನ ತಂದೆಯಲ್ಲವೇ? ಅವನ ಮನೆಯಲ್ಲಿ ಮಹೋತ್ಸವವಾಗುತ್ತಿರಲು ಮಗಳಾದ ನನ್ನ ದೇಹವಿಲ್ಲಿ ನಿಲ್ಲುವುದೇ? ಕರೆಯದಿದ್ದರೂ ಸೌಹಾರ್ದವನ್ನೆಣಿಸಿ ಗಂಡನ

ಮನೆಗೆ ಹೆಣ್ಣೂ, ಗುರುಮಂದಿರಕ್ಕೆ ಶಿಷ್ಯನೂ, ತಂದೆಯ ತೌರಿಗೆ ಮಕ್ಕಳೂ ಹೋಗಲೇಬೇಕೆಂದು ನೀತಿಕೋವಿದರು ಪೇಳುವರು. ಇಷ್ಟಾಗಿ ದೀನತೆಯಿಂದ ಕೇಳುವ ನನ್ನಲ್ಲಿ ಪ್ರಸನ್ನನಾಗು. ಹೇ ದೇವಶ್ರೇಷ್ಠ! ಪೂಜ್ಯನಾದ ನೀನೆನ್ನ ಪಾಂಛೆಯನ್ನು ಕೈಗೂಡಿಸು. ಧರ್ಮವನ್ನು ಚೆನ್ನಾಗಿ ತಿಳಿದ ಸರ್ವಜ್ಞನಿರುವೆ. ನಾ ಕೇಳಿದುದೇನ ಧರ್ಮವೇ? ಅನುಗ್ರಹಿಸು.

ಎಂದು ಪ್ರಿಯಳಾಡಿದ ಭಾಷಣವನ್ನು ಕೇಳಿ ನಸುನಕ್ಕು ಸುರಪ್ರಿಯನು ವಿಶ್ವಸೃಡ್ಯಾಗದಲ್ಲಿ ದಕ್ಷನಾಡಿದ ವಾಗ್ಬಾಣಗಳ ಮರ್ಮಭೇದಿ ತೀಕ್ಷ್ಣತೆಯನ್ನು ನೆನೆದು ಮೆಲ್ಲನಿಂತು ನುಡಿದನು- ಶೋಭನ ರಾತ್ರಿ! ದಕ್ಷಪುತ್ರಿ! ಕರೆಯದಿದ್ದರೂ ಬಂಧುಜನರ ಮನೆಗೆ ಪೋಗಬೇಕೆಂದೇ. ನಿಜವೇ ಅಹುದು. ಆದರೆ ಅವರೆಮ್ಮನ್ನು ದೋಷದೃಷ್ಟಿಯಿಂದ ನೋಡದಿರುವಾಗ ಆ ಮಾತು. ದುರಭಿಮಾನದೂಷಿತರಾಗಿ ಸಿಟ್ಟಿನಿಂದ ಕೂಡಿದವರಲ್ಲಿ ಹೋಗಬಾರದು. ವಿದ್ಯಾ, ತಪಸ್ಸು, ಧನ, ಶರೀರ, ಸೌಂದರ್ಯ, ತಾರುಣ್ಯ, ಕುಲವೆಂಬ ಆರು, ಸಜ್ಜನರಿಗೆ ಗುಣವೆನಿಸುವುವು. ದುಷ್ಟರಿಗವೇ ಮದಕಾರಣವಾಗುವುವು. ಮದವೇರಲು ಶಾಸ್ತ್ರಜನಿತ ಸ್ಮೃತಿಯು ನಶಿಸುವುದು. ಅಭಿಮಾನದಿಂದ ಕಣ್ಣು ಕಾಣದಾಗಿ ಕುಮತಿಯು ಮಹಜ್ಜನರ ಪ್ರಭಾವವನ್ನೂ ನೋಡದೆ ಅವರನ್ನವಮಾನಿಸುವನು. ಇಂತಹರು ಸ್ವಜನರಾದರೂ ಅವ್ಯವಸ್ಥಿತಚಿತ್ತರಾದ್ದರಿಂದ ಅವರ ಮನೆಗೆ ಹೋಗುವುದನುಚಿತವೇ ಸರಿ ಹುಬ್ಬನ್ನು ಮುಡಿದು ಕಣ್ಣನ್ನು ಕೆಂಪಾಗಿಸಿ ವಕ್ರಬುದ್ಧಿಯಿಂದ ಬಂದವರನ್ನು ನೋಡುವ ದುರಾತ್ಮರಲ್ಲಿ ನಮಗೇನು ಕೆಲಸ? ನನ್ನವರೆನಿಸಿಕೊಂಡವರು ಕೊಂಕುಬುದ್ಧಿಯಿಂದ ಕೆಟ್ಟ ಮಾತುಗಳಾಡಿ ಮರ್ಮಭೇದನ ಮಾಡಿದ ವೇದನೆಯು ಯುದ್ಧರಂಗದಲ್ಲಿ ವಿಷದಿಗ್ಧ ಬಾಣಗಳಿಂದಾದ ವೇದನೆಗಿಂತಲೂ ಅಸಹ್ಯವಾದುದು. ನೀನೇನೋ ಸರ್ವಾಧಿಪತಿಯಾದ ದಕ್ಷನ ಪ್ರಿಯಪುತ್ರಿಯೇ ನಿಜ! ಆದರೂ ನನ್ನಲ್ಲಿ ಅಕಾರಣ ದ್ವೇಷಿಯಾದ ದಕ್ಷನು ನೀನೆನ್ನ ಪತ್ನಿಯಾಗಿರುವುದರಿಂದ, ಸನ್ಮಾನಿಸದಿರುವನೆಂದು ನಿನಗೂ ಗೊತ್ತಿದೆ. ಅಸುರಾವೇಶದಿಂದ ನನ್ನ ಪುರುಷಬುದ್ಧೀಂದ್ರಿಯಾದಿ ಪ್ರೇರಕತ್ವ ರೂಪಮಹದೈಶ್ವರ್ಯ ವನ್ನು ಕಂಡು ಅಸೂಯೆಯಿಂದ ಕುದಿಯುತ್ತಿರುವನು, ಇಂತಹ ಪದವಿಯು ತನಗಾಗಲಾರದೆಂದು ಅಸುರರು ಹರಿಯನ್ನಂತೆ ನಿಷ್ಕಾರಣವಾಗಿ ತನ್ನನ್ನು ದ್ವೇಷಿಸುತ್ತಿರುವ ದಕ್ಷನು ಹರಿ ದ್ವೇಷಿಯೇ ಸರಿ! ಕೇಳಿಲ್ಲಿ! ಪ್ರತ್ಯುದ್ಗಮನ, ವಿನಯ, ಅಭಿವಾದನಗಳು ಉತ್ತಮರಿಗೆ. ಮಿತ್ರರಿಗೆ ಪ್ರತ್ಯುದ್ಗಮನವಷ್ಟೇ! ಅಧಮರಿಗಿವಾವೂ ಇಲ್ಲ. ಆದರೂ ಪ್ರಾಜ್ಞರು ಸ್ವೋತ್ತಮರಲ್ಲಿರುವ ಶ್ರೀಶನಿಗೂ ಸ್ವೋತ್ತಮರಿಗೂ ಶಿರಸಾ ನಮಿಸುವರು. ಸ್ವಾಧಮರಾದರೆ ಅಂತರ್ಯಾಮಿಗೆ ಮನಸಾ ನಮಿಸಿ ಸುಮ್ಮನಿರುವರಿದು ಧರ್ಮಸೂಕ್ಷ್ಮವು; ದಕ್ಷನಿಗೀ ವಿವೇಕವಿಲ್ಲ. ನನ್ನಿಂದ ಪ್ರತ್ಯುತ್ಥಾನಾದಿಗಳಿಂದ ಪೂಜಿಸಲರ್ಹನು ಬ್ರಹ್ಮಾದಿ ಶರೀರಸ್ಥಿತನಾದ ಹರಿಯೇ. ಅವನು ಮಾಯಾವರಣಾದಿಗಳಿಂದ ರಹಿತನಾಗಿರುವನು, ಅಪ್ರಾಕೃತನಾಗಿರುವನು. ಅವನೇ ವ್ಯಾಪ್ತಿಯಿಂದ ಪೃಥಿವ್ಯಾದಿಗಳಲ್ಲಿದ್ದು ಪ್ರಕಾಶಿತನಾದರೂ ಲೇಪರಹಿತನಾಗಿರುವನು. ಅಂತಹ ಸರ್ವೇಂದ್ರಿಯಸ್ವಾಮಿಯಾದ ಬ್ರಹ್ಮಶರೀರಸ್ಥ ವಾಸು ದೇವನನ್ನು ನಾನಾಗ ಚಿಂತಿಸುತ್ತಿದ್ದೆ. ದಕ್ಷಾಂತಃಸ್ಥಿತ ಹರಿಯೂ ಅದರಿಂದ ಸತ್ಕರಿಸಲ್ಪಟ್ಟಂತೆಯೇ ಆಯಿತು. ಹೀಗಿರುವಾಗ ದಕ್ಷನು ನನ್ನನ್ನು ದ್ವೇಷಿಸುವುದು ನಿಷ್ಕಾರಣವೇ ಸರಿ. ರಜೋಗಣ ಪ್ರಯುಕ್ತ ಮದದೂಷಿತನಾದ್ದರಿಂದಲೂ ಹರಿಸನ್ನಿಧಾನ ವಿಶೇಷಾಭಾವದಿಂದಲೂ ಪ್ರತ್ಯುತ್ಥಾನಾದಿಗಳನ್ನು ಮಾವನಾದರೂ ಮಾಡದೇ ನಾನಿದ್ದುದೂ ಸರಿಯೇ. ನನ್ನ ದ್ವೇಷಿಯಾದ್ದರಿಂದ ನಿನ್ನ ತಂದೆಯಾದರೂ ದಕ್ಷನನ್ನು ನೋಡಲು ಪೋಗಬೇಡ. ಸತೀ! ಆ

ವಿಶ್ವಸೃಡ್ಯಾಗದಲ್ಲಿ ದುರ್ವಚನಗಳನ್ನಾಡದಿರುವನವನು ನಿನ್ನನ್ನು ಸಂಭಾವಿಸನು. ನನ್ನ ಮಾತನ್ನು ಮನ್ನಿಸದೆ ಪೋದರೆ ಒಳ್ಳೆಯದಾಗದು. ಸಂಭಾವಿತರಿಗೆ ಸ್ವಜನಕೃತ ಪರಾಭವವು ದೇಹ ವಿಯೋಗಕ್ಕೆ ಮಿಗಿಲೆನಿಸುವುದು. ನೋಡಿನ್ನು ನಿನ್ನ ಮನ ಬಂದಂತೆ ಮಾಡು. ಶ್ರೀಶೇಚ್ಛೆಯಂತಾಗಲಿ.

## ೪. ದಕ್ಷಾಧ್ವರ ಗಮನ

ಮೈತ್ರೇಯನು ಪೇಳಿದನು –

ಇಷ್ಟು ಮಾತನ್ನು ನುಡಿದು ಶಂಕರನು ಮನಸಾ ಹೇಗಾದರೂ ಪತ್ನಿಯ ಅಂಗನಾಶವು ನಿಶ್ಚಿತವು. ಬೇಡವೆಂದರೆ ಇಲ್ಲೇ ವಿಷಾಗ್ನಿ ಜಲಗಳಿಂದ, ಹೋಗೆಂದರೆ ಅಲ್ಲಿ ದಕ್ಷಾವಮಾನದಿಂದ ಸಾಯುವಳೆಂದು ತಿಳಿದು ನಿಟ್ಟುಸಿರಂ ಬಿಟ್ಟು ಸುಮ್ಮನಾದನು. ಆಗ ಸತಿಯು ಬಂಧುದರ್ಶನ ವಿಘ್ನದಿಂದ ಮನನೊಂದು ತಂದೆತಾಯಿಯರಲ್ಲಿ ಸ್ನೇಹದಿಂದ ಅಳುತ್ತಾ ವಿಹ್ವಲಚಿತ್ತಳಾದಳು. ಎದುರಿಲ್ಲದ ಗಂಡನನ್ನು ಸುಡುವಂತೆ ಕೆಂಗಣ್ಣಿನ ನೋಟದಿಂದ ನೋಡಿ, ಕೋಪರೋದನ ಗಳೆರಡೂ ವಿಫಲವಾಗಲು, ನಡುಗುತ್ತಾ, ನಿಶ್ಚಲಚಿತ್ತನಾದ ಚಿತ್ತಜ ವೈರಿಯನ್ನು ಬಿಟ್ಟು ಸಿಟ್ಟಿನಿಂದ ಹೊರಹೊರಟಳು. ಪ್ರೇಮದಿಂದ ಶರೀರಾರ್ಧವನ್ನೇ ಕೊಟ್ಟ ಪ್ರಿಯನನ್ನು ಬಿಟ್ಟು, ಸಾಮಾನ್ಯ ಸ್ತ್ರೀ ಸ್ವಭಾವವು ಇಂತು ವಿವೇಕರಹಿತವೆಂದು ತೋರಿಸುವಳೆಂಬಂತೆ ಹೊರಟ ಸತೀದೇವಿಯನ್ನನು ಸರಿಸಿ, ತ್ರಿನೇತ್ರನ ಅನುಚರರು ಬಂದರು. ಮಣಿಮಾದಾದಿ ಪಾರ್ಷದರು ಸ್ವಸ್ತಿಯಾಗುವುದೋ ಇಲ್ಲವೋ ಎಂಬ ಚಿಂತೆಯಿಂದ ಆಕುಲಿತರಾಗಿ ನಂದಿಯನ್ನು ಕರತಂದು ಸುಂದರಿಯನ್ನು ಕೂಡಿಸಿ ಹೊರಟರು. ಕ್ರೀಡಾಶುಕಿಯನ್ನು, ಜಲವಾದ್ಯವನ್ನು, ದರ್ಪಣವನ್ನು ಲೀಲಾಕಮಲವನ್ನು ತಂದರ್ಪಿಸಿದರು. ಓಡುತ್ತಾ ಹಿಂದೆ ನಡೆಯುವ ಪರಿವಾರವು ಅದರ ಗಾನ, ಪಿಡಿದ ಶ್ವೇತಚ್ಛತ್ರ, ಬೀಸುವ ಚಾಮರ, ಹಾಕಿದ ಪೂಮಾಲೆ, ಬಾರಿಸುವ ದುಂದುಭಿ ಶಂಖ ವೀಣಾ ವಾದ್ಯಗಳನ್ನು ನೋಡಿ ಸಂತಸವಿಲ್ಲದೆ ಸತಿಯು ನಂದಿಯ ಮೇಲೆ ಕುಳಿತು ಮೆಲ್ಲನೆ ಹೊರಟಳು; ಹೊರಟು ಕ್ರಮವಾಗಿ ದಕ್ಷನ ಯಜ್ಞವಾಟವನ್ನು ಸಮೀಪಿಸಿದಳು. ದೂರದಿಂದ ವಿಪ್ರರ ವೇದಘೋಷವನ್ನು ಕೇಳಿ ಯಜ್ಞಧೂಮವು ಮೇಲಕ್ಕೇರಿ ಬರುವುದನ್ನು ನೋಡಿ, ಪಶು ಹಿಂಸಾರಕ್ತಸಿಕ್ತವು ಬ್ರಹ್ಮರ್ಷಿ ಸೇವಿತವು, ದೇವಗಣ ಯುಕ್ತವು, ಆದ ಯಜ್ಞಶಾಲೆಯನ್ನು ಪ್ರವೇಶಿಸಿದಳು. ಮಣ್ಣು, ಕಟ್ಟಿಗೆ, ಕಾಂಚನ, ಕಬ್ಬಿಣ, ದರ್ಭೆ, ಚರ್ಮಗಳಿಂದ ಮಾಡಿದ ಯಾಗಪಾತ್ರೆಗಳು ಅಲ್ಲಿ ಇಡಲ್ಪಟ್ಟಿದ್ದವು. ಸತಿಯು ಶಾಲೆಯು ಮುಖದ್ವಾರದಿ ಬಂದು ನಿಂತಳು.

ಬಂದು ನಿಂತ ಮಗಳನ್ನು ಲೆಕ್ಕಿಸದೆ ತಿರಸ್ಕರಿಸಿದ ದಕ್ಷನ ಭಯದಿಂದ ಯಾರೂ ಆ ಸತಿಯನ್ನು ಪುರಸ್ಕರಿಸದೆ ಸುಮ್ಮನಿದ್ದರು. ಆದರೂ ಅಕ್ಕಂದಿರು ತಾಯಿಯು ಆದರದಿಂದ ಪ್ರೇಮಾಶ್ರುಗಳನ್ನು ಸುರಿಸುತ್ತಾ ಓಡಿಬಂದಾನಂದದಿಂದ ಸತಿಯನ್ನಾಲಂಗಿಸಿ ಚುಂಬಿಸಿದಗು. ಸೌಂದರ್ಯ ಸುಖ ಪ್ರಶ್ನೆಗಳನ್ನು ಮಾಡಿದರು. ಓಚಿಯರು ಆದರದಿಂದ ಮಾತಾಡಿಸಿ ಆಸನವನ್ನು ತೋರಿಸಿದರು. ಆದರೂ ಸತಿಯು ಪ್ರಧಾನದ ದಕ್ಷನ ಅವಜ್ಞೆಯನ್ನರಿತು ಅವರಿತ್ತ ಸತ್ಕಾರಗಳನ್ನು ಸ್ವೀಕರಿಸದೆ ಮನಸ್ಸಮಾಧಾನವಿಲ್ಲದೆ ಸುಮ್ಮನೆ ನಿಂತಳು.

ತಂದೆಯು ಬುದ್ಧಿಪೂರ್ವಕವಾಗಿ ರುದ್ರಭಾಗವನ್ನರ್ಪಿಸದೆ, ಪ್ರಭುವಾದ ಪರಮೇಶ್ವರನ ದ್ರೋಹವನ್ನು ಮಾಡಿದುದನ್ನು ಕಂಡಳು. ಚಂಡಕೋಪದಿಂದ ಚಂಡಿಕೆಯಾದಳು. ಲೋಕ ಗಳನ್ನೆಲ್ಲ ಸುಡುವಳೆಂಬಂತೆ ಕಿಡಿಕಿಡಿಯಾಗಿ ನೋಡಿದಳು. ಜಗದೀಶ್ವರಿಯಾದ ತಾಯಿಗೆ ಯಾರ ಅಂಜಿಕೆ? ರೋಷದಿಂದ ಗದ್ಗದಿತಕಂಠಳಾಗಿ, ಧೂಮಮಾರ್ಗದಿ ಶ್ರಮದಿಂದ ನಡೆದು ಬಂದ, ಐಶ್ವರ್ಯದಿಂದ ಮದಮತ್ತನಾದ ದಕ್ಷನನ್ನು ನೋಡಿ ಸಿಟ್ಟಿನಿಂದ ವಿಜೃಂಭಿಸಿ, ಮಣಿಮದಾದಿ ಭೂತಪ್ರಮಥರನ್ನು ಸುಮ್ಮನಾಗಿಸಿ ಸದಸ್ಯರೆಲ್ಲರೂ ಕೇಳುವಂತೆ ಇಂತೆಂದಳು–

ದೇಹಧಾರಿಗಳೆಲ್ಲಾ ಪ್ರಿಯನಲ್ಲವೇ ಮಹಾದೇವ? ಅವನಿಗೆ ಇವರು ದ್ವೇಷಿಗಳು, ಇವರು ಪ್ರಿಯರೆಂಬ ಪಕ್ಷಪಾತವೇ ಇಲ್ಲ. ಯೋಗ್ಯತೆಯಂತೆಯೇ ಅವನ ಪ್ರೀತಿ ರೋಷಗಳು. ವಿಷ್ಣು ರಮಾ ಬ್ರಹ್ಮ ವಾಯು ಸರಸ್ವತೀ ಭಾರತೀ ಷಟ್ಕವಲ್ಲದ ಇತರ ಸಮಸ್ತ ಜಗತ್ತಿಗೆ ಸ್ವಾಮಿಯು ನಿರ್ವೈರನಾದ ಭವದೇವನಲ್ಲಿ ನೀನಲ್ಲದಿನ್ನಾರು ವೈರವನ್ನಾಚರಿಪರು? ಕೆಲದುರ್ಜನರು ಉತ್ತಮರ ಗುಣಗಳನ್ನೂ ಬಿಟ್ಟು ದೋಷಗಳನ್ನೇ ಎಣಿಸುವರು. ನಿನ್ನಂತಹ ಸಾತ್ವಿಕರಾದವರು, ಬ್ರಾಹ್ಮಣರು, ಇತರರ ಸ್ವಲ್ಪ ಗುಣಗಳನ್ನು ದೊಡ್ಡದನ್ನಾಗಿ ಮಾಡಿ ದೋಷಗಳನ್ನು ಬಿಟ್ಟುಬಿಡುವರು. ಇಂತಹ ನಿನಗೇಕೆ ಮಹಜ್ಜನನಿಂದೆ ಘಟಿಸಿತೋ ನನಗರ್ಥವಾಗದಂತಿದೆ! ಶರೀರವೇ ನಾನೆಂಬ ಅಸಜ್ಜನರಾಚರಿಪರು ಸ್ವೋತ್ತಮ ದ್ರೋಹವನ್ನು. ವಿದ್ವಜ್ಜನಸೇವಾರಹಿತರಾಗಿ ಶಾಸ್ತ್ರವಿಚಾರ ಯೋಗ್ಯರಲ್ಲದ ದುರ್ಜನರಿಗದು ಸರಿಯೆನಿಸುವುದಾಗಲಿ ನಿನಗಿದು ಯೋಗ್ಯವಲ್ಲ. 'ಶಿವ' ಎಂಬೆರಡಕ್ಷರವನ್ನು ಪ್ರಸಂಗವಶದಿಂದುಚ್ಚರಿಸಲು ಸರ್ವದುಃಖವು ದೂರವಾಗುವುದು. ಇದವನ ಶಾಸನವು. ಪವಿತ್ರ ಕೀರ್ತಿಯಾದ ಶಿವನನ್ನು ಕೀರ್ತಿಸಿದವರಿಗೆ ಆರ್ತಿಲೇಶವೂ ಇಲ್ಲ. ಇಂತಹ ಶಿವನ ದ್ವೇಷವನ್ನು ಸಾಧಿಸಿ ನೀನೇ ಶಿವೇತರನಾಗಿ ಕೆಟ್ಟೆ. ಅಹೋ ಬ್ರಹ್ಮಾನಂದರಸಪಾನ ಲೋಲುಪರಾಗಿ ಸನಕಾದಿಗಳು ತಮ್ಮ ಮನೋಭ್ರಮರಗಳನ್ನು ಕೇಂದ್ರೀಕರಿಸುವ ಪಾದಾರವಿಂದ ಶೋಭಿತನಾದ ಮಹಾದೇವನು, ಬೇಡಿದವರಿಗಿಷ್ಟಾರ್ಥಗಳನ್ನು ಸಮೃದ್ಧವಾಗಿ ಕೊಡುವ ವಿಶ್ವ ಬಂಧುವು, ನಿಂದನೀಯನಾದನೇ? ಎಂತಹ ಗುರುದ್ರೋಹಿಯಾದೆ! ಶಿವನು ನಿನಗೆ ಅಶಿವನಾದನೆ! ಛೀ! ನಿತ್ಯಶುದ್ಧನು ಮಂಗಲಕರನೆಂದು ಸನಕಾದಿ ಬ್ರಹ್ಮಪುತ್ರರು ಸೇವಿಪ ಶಿವನು ನಿನಗೆ ಸ್ಮಶಾನವಾಸಿಯಾದನೇ? ತಲೆ ಬಿಚ್ಚಿ ತಿರುಗುವ ಹುಚ್ಚನೆಂದೆಯಾ? ಬ್ರಹ್ಮ ಕಪಾಲಾಸ್ಥಿಧರನಾಗಿ ಕಂಡನೇ? ಪಿಶಾಚಿಗಳೊಡೆಯನಾದನೇ? ಅಯ್ಯೊ! ನಿನಗೆ ಧಿಕ್ಕಾರವಿರಲಿ! ಶಿವನ ಪಾದಧೂಳಿ ಯನ್ನು ಶಿರಸಾವಹಿಸಿ ಜ್ಞಾನವನ್ನು ಪಡೆದಿರುವ ಸನಕಾದಿ ಯೋಗಿಗಳು ಧನ್ಯರಾಗಿಪ್ಪರು. ಅಂತಹ ಸ್ವಾಮಿಯ ದ್ರೋಹವೀಸಭೆಯಲ್ಲಿ ನಡೆಯುತ್ತಿದೆ. ಏನು ಮಾಡಲಿ? ಕಿವಿಮುಚ್ಚಿ ಹರಿ ಹರೀ ಎನ್ನುತ್ತಾ ಹೊರಗೆ ಹೋಗುವುದು ಅಲ್ಪರು ಮಾಡುವ ಕೈಲಾಗದ ಮಾರ್ಗ. ಧರ್ಮರಕ್ಷಕನಾದ ಸಜ್ಜನ ನಿಂದೆಯನ್ನು ಕೇಳುತ್ತ ಸುಮ್ಮನಿರದೆ, ಪರುಷವಾದ ಆ ದುರ್ಜನರ ನಾಲಿಗೆಯನ್ನು ಸೀಳುವುದು ಸಮರ್ಥರ ಮಾರ್ಗವು. ಈ ಮಾರ್ಗವು ಮಗಳಾದ ನನಗೆ ಸರಿಯಲ್ಲ. ಇನ್ನುಳಿದಿರುವುದೊಂದೇ; ಪ್ರಾಣಪರಿತ್ಯಾಗ ಮಾಡುವ ಧರ್ಮ ಸಂಕಟಸಮಯದ ಕರ್ತವ್ಯವೇ ನನಗೆ ಶರಣ್ಯವಾಗಿದೆ. ನಿನ್ನಿಂದ ಪುಟ್ಟಿದ ಈ ಕಳೇವರವಿನ್ನೇಕೆ? ಶಿವನಿಂದಕನಾದ ನಿನ್ನ ಮುಂದೆಯೇ, ಅಜ್ಞಾನದಿಂದ ಉಂಡ ಮೈಲಿಗೆಯ ಅನ್ನವನ್ನು ವಮನೋಪಾಯದಿಂದ ಹೊರಗೆಡಹುವಂತೆ, ಈ ಹಾಳು ಕಲೇವರವನ್ನು ವಿಸರ್ಜಿಸುವೆನು. ಸ್ವಬಿಂಬಪರಿದರ್ಶನ ಸುಧಾಪಾನ ನಿತ್ಯತೃಪ್ತನಾಗಿ ಮಹಾಮುನಿ ಎನಿಸಿದ ಮಹಾರುದ್ರನಿಗೆ

ಅಭ್ಯುತ್ಥಾನಾದಿ ಲೌಕಿಕ ನಿರ್ಬಂಧವಿಲ್ಲ. ಲೋಕವಿಲಕ್ಷಣನಾದ ಸ್ವಾಮಿಗೆ ವೇದವಾದಗಳು ಬಂಧಕವಲ್ಲ. ದೇವಮನುಷ್ಯ ಮಾರ್ಗಗಳು ಭಿನ್ನವೇ ಸರಿ. ಇದನ್ನರಿತು ಮನುಜನು ತನ್ನ ವಿಹಿತ ಮಾರ್ಗವನ್ನನುಸರಿಸಿ ನಡೆಯುತ್ತಾ ದೇವತೆಗಳನ್ನು ದೂಷಿಸದಿರುವುದು ಲೇಸು. ಆದ್ದರಿಂದ ನಿನ್ನದೇ ಮಹಾಪರಾಧವು! ಪ್ರವೃತ್ತವು ಸ್ವರ್ಗಾದಿ ಪ್ರಯೋಜನಕವು; ನಿವೃತ್ತವೇ ಮುಕ್ತಿಜನಕವು; ಎಂದು ವೇದದಲ್ಲೇ ಚೆನ್ನಾಗಿ ಭಿನ್ನವಾಗಿ ನಿರೂಪಿಸಲ್ಪಟ್ಟಿದೆ. ಪ್ರಕಾಶವೂ ಅಂಧಕಾರವೂ ಸೇರಿ ಒಂದೇ ಸ್ಥಲದಲ್ಲಿರಲಾರದಂತೆಯೇ ಪ್ರವೃತ್ತಿ ನಿವೃತ್ತಿ ಕರ್ಮಗಳೆರಡನ್ನೂ ಮಾಡುವೆನೆಂಬುದು ಯಾವ ಅಧಿಕಾರಿಗೂ ಸಲ್ಲದು. ಸಮ್ಯಕ್ ಜ್ಞಾನಿಯಾದವನಿಗೂ ಪ್ರವೃತ್ತಿ ನಿವೃತ್ತಿಗಳ ಬಂಧವಿಲ್ಲ. ಜೀವನ್ಮುಕ್ತನು ನಿಯತ ಕರ್ಮವನ್ನು ಹರ್ಯಾಜ್ಞಾಪ್ರಕಾರವಾಗಿ ಆಚರಿಸಿ ಮಹಾನಿಯಮದಿಂದ ಮೋಕ್ಷದಲ್ಲಿ ಆನಂದೋದ್ರೇಕವನ್ನು ಪೊಂದುವನು. ಯಜ್ಞ ಶಾಲೆಯಲ್ಲಿ ಕೂತು, ಹೊಗೆ ಎಬ್ಬಿಸಿ, ಕೆಂಡದಲ್ಲಿ ಪಶು ಮಾಂಸವನ್ನು ಹಾಕಿ ಆಮೇಲೆ ಅದನ್ನು ತಿಂದು ತೇಗುವ ನಿಮ್ಮ ಪ್ರವೃತ್ತಿ ಮಾರ್ಗವು ನಮಗೆ ಬೇಡ. ನಮ್ಮ ಮಾರ್ಗವು ನಿವೃತ್ತವು. ಅದನ್ನು ಸನಕಾದಿಗಳು ಸೇವಿಸುವರು. ಅನ್ನರರಿಯದ ಅರ್ಚಿರಾದಿ ಮಾರ್ಗವು ನಿಮಗೆಂತು ಗೋಚರಿಸುವುದು? ಇಂತಹ ಶಿವದ್ರೋಹಿಯ ದೇಹದಿಂದ ಜನಿಸಿ ಬಂದ ಈ ನನ್ನ ದೇಹವು ಸಾಕೆನಿಸಿದೆ. ನಿನ್ನಂತಹ ಕುಜನನೆನ್ನ ತಂದೆ ಎನ್ನಲು ನಾಚಿಕೆಯಾಗುತ್ತಿದೆ. ಸಾಕೀ ಹಾಳು ಜನ್ಮ! ದೊಡ್ಡವರಿಗೆ ದ್ರೋಹವೆಸಗಿದ ಜನ್ಮಕ್ಕೆ ಧಿಕ್ಕಾರವಿರಲಿ! ಪೂಜ್ಯನಾದ ಭರ್ತನ ಮಾತು ಲಾಲಿಸದೆ ಬಂದೆ. ಆತನ ಮನ ನೊಂದಿದೆ; ನನ್ನ ಕಂಡು ನಗುತ್ತಾ ದಾಕ್ಷಾಯಣೀ ಎಂದು ನಿನ್ನ ಗೋತ್ರ ವನ್ನುಚ್ಚರಿಸಿ ಅವಮಾನಿಸಿ ಕರೆಯುವುದನ್ನೆಂತು ಸಹಿಸಲಿ! ನೀ ಕೊಟ್ಟ ಈ ದೇಹವಿಲ್ಲೇ ಬಿದ್ದು ಹೋಗಲಿ! ಎಂದು ಸಿಟ್ಟಿನಿಂದ ನುಡಿದಳು.

## ೫. ಸತೀದೇಹತ್ಯಾಗ

ಮೈತ್ರೇಯನು ಪೇಳಿದನು–

ವಿದುರಾ! ಕೇಳು! ಇಂತು ದಕ್ಷನನ್ನು ಧಿಕ್ಕರಿಸಿ ನುಡಿದು ದೇಹತ್ಯಾಗಕೃತ ನಿಶ್ಚಯಳಾಗಿ ಸತಿಯು ಉತ್ತರದಿಗಭಿಮುಖಳಾಗಿ ನೆಲದ ಮೇಲೆ ಕುಳಿತು ಮೌನಧಾರಣ ಮಾಡಿದಳು. ಆಚಮನ ಮಾಡಿದಳು; ಪೀತಾಂಬರದಿಂದಾವೃತಳಾಗಿ ಕಣ್ಣುಗಳನ್ನು ಮುಚ್ಚಿ ಉತ್ಕ್ರಮಣ ಯೋಗ ಮಾರ್ಗವನ್ನು ಪ್ರವೇಶಿಸಿದಳು. ಪ್ರಾಣಾಪಾನಗಳು ಮೇಲೆ ಕೆಳಗೆ ಸಂಚರಿಸದಂತೆ ಸಮಾನನಲ್ಲಿ ತಂದಳು. ವ್ಯಾನನನ್ನೂ ಕೂಡಿಸಿ ಸರ್ವಾವಯವ ವ್ಯಾಪಾರವನ್ನು ಉಪರಿಮಿಸಿದಳು. ಅದನ್ನು ಉದಾನನಲ್ಲಿ ಸೇರಿಸಿ ಕುಂಭಕ ಪ್ರಾಣಯಾಮದಿಂದ ದೇಹದ ಸುಷುಮ್ನಾ ಮಾರ್ಗವನ್ನು ಶೋಧಿಸಿದಳು. ನಾಭಿಯಿಂದ ಹೃದಯವನ್ನು ಸೇರಿ ಅಲ್ಲಿಂದ ಕಂಠವನ್ನು ಭ್ರೂಮಧ್ಯವನ್ನು ಪ್ರಾಣದೇವನಿಂದ ಸೇರಿ ಹೊಂದಿದಳು. ಈ ವಿಧವಾಗಿ ಆ ನಿಂದಿತೆಯಾದ ಸತಿಯು ಇಂದ್ರಾದಿ ದೇವವಂದ್ಯನಾದ ಮಹಾದೇವನು ತನ್ನ ಅಂಕದಲ್ಲಿಟ್ಟು ಲಾಲಿಸಿದ ದೇಹವನ್ನು ದಕ್ಷನ ಮೇಲಿನ ರೋಷದಿಂದ ಬಿಡಲಿಚ್ಛಿಸಿ ದೇಹಾಂಗಗಳಲ್ಲಿ ವಾಯು ವಹ್ನಿಗಳು ಪುಟ್ಟುವಂತೆ ಧ್ಯಾನಿಸಿದಳು. ಜಗದ್ಗುರುವಾದ ತನ್ನ ಪತಿಯ ಆನಂದಕರ ಪದಾಂಬುಜವನ್ನು ಅವರ ಗುರುಗಳಾದ ಬ್ರಹ್ಮ, ವಾಯು, ಸರಸ್ವತೀ, ಭಾರತೀ, ಲಕ್ಷ್ಮೀನಾರಾಯಣರನ್ನು ಧ್ಯಾನಿಸಿದಳು. ಕೋಪ ಕಲುಷವನ್ನು

ಸುಟ್ಟು ತ್ಯಜಿಸಿ ಶ್ರೀಹರಿ ಮುಖ್ಯಗುರುಗಳನ್ನು ನೋಡುತ್ತ ದೇಹವನ್ನು ತ್ಯಜಿಸಿದಳು. ಆ ಕ್ಷಣವೇ ಅದು ಸುಟ್ಟು ಬೂದಿಯಾಯಿತು. ಆಶ್ಚರ್ಯಕರವಾದ ಸತೀದೇಹತ್ಯಾಗವನ್ನು ನೋಡಿ ಅಲ್ಲಿದ್ದವರು ಹಾ! ಹಾ! ಎಂದು ಚೀರಿ ಅಯ್ಯೊ! ದೇವಶ್ರೇಷ್ಠ ಪ್ರಿಯತಮಳಾದ ಸತಿಯು ಪ್ರಾಣವನ್ನೇ ಬಿಟ್ಟಳಲ್ಲಾ! ಎಂತಹ ಅನ್ಯಾಯವಾಯಿತು! ಏನೀಕೆಯ ಕೋಪ ಕಾರಣ? ಈ ದಕ್ಷನಿನ್ನೆಂತಹ ಮೂರ್ಖನು! ಚರಾಚರ ಜಗತ್ಪ್ರಸವಕಾರಣನಾದ ಪ್ರಜಾಪತಿಯ ಮಗಳಿಗೀವಿಧವಾದ ಮರಣವೇ! ಇವನು ಆಕೆಯನ್ನೇಕೆ ಸತ್ಕರಿಸಲಿಲ್ಲ! ಇದು ದಕ್ಷನ ತಪ್ಪೇ ಸರಿ! ಇವನಿಗಿನ್ನೆಷ್ಟು ಹೃದಯ ಕಾಠಿಣ್ಯ! ಬ್ರಾಹ್ಮಣಾಧಮನಂತೆ ವರ್ತಿಸಿದ ಇವನಿಗೆ ಲೋಕದಲ್ಲಿ ದುಸ್ತರವಾದ ಅಪಕೀರ್ತಿಯು ತಪ್ಪಿದ್ದಲ್ಲ. ಹೊಟ್ಟೆಯಲ್ಲಿ ಹುಟ್ಟಿದ ಮಗಳು ತನ್ನ ತಪ್ಪಿಗಾಗಿ ಸಾಯುತ್ತಿರಲು ನೋಡುತ್ತ ಸುಮ್ಮನಿದ್ದ ದಕ್ಷನು ಶಿವದ್ವೇಷಗ್ರಹಸ್ತನಷ್ಟೇ ಅಲ್ಲದೆ ಪೂರ್ಣಗುಣನಾದ ಶಿವಾಂತರ್ಯಾಮಿ ಹರಿಯ ದ್ವೇಷಿಯೂ ಅಹುದು ಎಂದು ನಿಂದಿಸಿದರು.

ದಕ್ಷನಾದರೂ ಮಗಳು ತನ್ನ ದ್ವೇಷನಿಮಿತ್ತದಿಂದ ಸತ್ತದ್ದನ್ನು ಕಂಡು ಹೋ! ಎಂದು ರೋದಿಸಿ, ಬಹು ಪಶ್ಚಾತ್ತಾಪತಪ್ತನಾದನು. ಅವನ ಅಸುರಾವೇಶವು ಸರಿಯುತ್ತಾ ಬಂದಂತೆ ಜ್ಞಾನೋದಯವಾಯಿತು.

'ಅಯ್ಯೋ! ಎಂತಹ ಕೆಡುಕನ್ನು ಮಾಡಿದೆನು! ಗುಣಗಳಂ ತೊರೆದೆ. ಲಜ್ಜೆಯಿಂ ಬಿಟ್ಟೆ. ಮನಸ್ಸಿನ ಕೈಗೊಂಬೆಯಾಗಿ ಕೋತಿಯಂತೆ ಕುಣಿದೆ. ಶವಸದೃಶವಾದೀ ದೇಹವನ್ನು ನಾನೆಂದೆ. ದೊಡ್ಡವರಿಗೆ ಗುರುಗಳಿಗೆ ದ್ರೋಹವೆಣಿಸಿದೆ. ಧಿಕ್ಕಾರವಿರಲಿ ನನಗೆ!' ಎಂದನು ತಾಪಪಟ್ಟನು. ಸತೀದೇವಿಯ ಅದ್ಭುತ ದೇಹತ್ಯಾಗವನ್ನು ಕಂಡು ಶಿವಪಾರ್ಷದರು ರೋಷದಿಂದ ದಕ್ಷನನ್ನು ಕೊಲ್ಲುವೆವೆಂದು ಆಯುಧಗಳನ್ನು ಪಿಡಿದೋಡಿ ಬಂದರು. ಅವರ ವೇಗವನ್ನು ನೋಡಿ ಭೃಗು ಮಹರ್ಷಿಯು ಯಜ್ಞನಾಶಕ ವಿನಾಶಕವಾದ ಯಜುರ್ವೇದ ಮಂತ್ರಗಳಿಂದ ದಕ್ಷಿಣಾಗ್ನಿಯಲ್ಲಿ ಹೋಮಿಸಿದನು. ಅಧ್ವರ್ಯುವಾದ ಭೃಗುವಿನ ಮಂತ್ರಬಲದಿಂದ, ಅವನು ಕೊಟ್ಟ ಸೋಮಭಾಗವನ್ನುಂಡ ಋಭುನಾಮಕ ಸಾವಿರಾರು ದೇವತೆಗಳು ದಕ್ಷಿಣಾಗ್ನಿಕುಂಡ ದಿಂದೆದ್ದು ಕೊಳ್ಳಿಗಳಿಂದ ಹೊಡೆದು ಪ್ರಮಥ ಗುಹ್ಯಕರನ್ನೋಡಿಸಿದವು ಬ್ರಹ್ಮತೇಜವು ಅತ್ಯಂತ ಬಲೀಯವಲ್ಲವೇ!

## ೬. ದಕ್ಷಾಧ್ವರ ಧ್ವಂಸ

ಪ್ರಜಾಪತಿಯಿಂದ ತಿರಸ್ಕೃತಳಾದ ಭವಾನಿಯು ದೇಹತ್ಯಾಗ ಮಾಡಿದಳೆಂದು ನಾರದನು ಪೇಳಲು ಕೇಳಿ ತನ್ನ ಪಾರ್ಷದ ಸೈನ್ಯವು ಅಧ್ವರ ರಕ್ಷಕರಾದ ಭೃಗ್ವಾದಿಗಳಿಂದ ಓಡಿಸಲ್ಪಟ್ಟಿತೆಂದೂ ತಿಳಿದು ಅಪಾರ ಕ್ರೋಧದಿಂದ ಭವನು ಕಿಡಿಕಿಡಿಯಾದನು. ಎದ್ದು ತುಟಿಯನ್ನು ಕಚ್ಚಿ, ವಿದ್ಯುದಗ್ನಿ ಜ್ವಾಲೆಯಂತೆ ಕೆಂಪಾದ ಜಟೆಯಂ ಬಿಚ್ಚಿ ದೂರ್ಜಟಿಯು ಒಂದನ್ನು ಕಿತ್ತು ಮಧ್ಯಾಹ್ನ ಸೂರ್ಯನಂತೆ ಉರಿಯುತ್ತಾ ನೆಲದ ಮೇಲೆ ಅಪ್ಪಳಿಸಿದನು. ಗಟ್ಟಿಯಾಗಿ ನಗುತ್ತಾ ಸಿಂಹ ಗರ್ಜನವನ್ನು ಮಾಡಿದನು. ಆಗ ವೀರಭದ್ರನು ಹುಟ್ಟಿದನು. ಅತಿಕಾಯನಾಗಿ ಆಕಾಶವನ್ನು ಮುಟ್ಟುತ್ತಾ ಸಹಸ್ರ ಬಾಹುವಾಗಿ ಕೆಂಪಾದ ಕಿಡಿಕಾರುವ ಕಣ್ಣಿನಿಂದಲೂ, ಕರಾಳ ದಂಷ್ಟ್ರಗಳಿಂದಲೂ, ಕೆಂಪು ಕೂದಲಿನಿಂದಲೂ, ಕಪಾಲಮಾಲೆಯಿಂದಲೂ, ಭಯಂಕರವಾಗಿ ವಿವಿಧ

ಯುಧಪಾಣಿಯಾಗಿ ಕರ್ಕಶಧ್ವನಿಯಿಂದ 'ಏನು ಮಾಡಲಿ?' ಎಂದು ಕೈಜೋಡಿಸಿ ನಿಂತನು. ರುದ್ರನು 'ನನ್ನಂಶದಿಂದ ಹುಟ್ಟಿರುವ ನೀನೀಕ್ಷಣ ಹೋಗಿ ಯಜ್ಞವನ್ನೂ ದಕ್ಷನನ್ನೂ ನಾಶ ಮಾಡು' ಎಂದು ಆಜ್ಞಾಪಿಸಿದನು.

ವೀರಭದ್ರನು ಕುಪಿತನಾಗಿ ಆದೇಶವಿತ್ತ ದೇವದೇವನಿಗೆ ಪ್ರದಕ್ಷಿಣೆ ಮಾಡಿ ವಂದಿಸಿ, ಮಹಾವೇಗದಿಂದ ಶತ್ರುಸಹನಶಕ್ತಿಯಿಂದ ಸಮಾನವಿಲ್ಲದವನಾಗಿ, ಕೂಗುವ ಚೀರುವ ರುದ್ರ ಪಾರ್ಷದ ಬಲದಿಂದ ಕೂಡಿ ಓಡಿಬಂದನು. ಅವನ ಕಾಲಿನ ನೂಪುರವು ಭಯಂಕರವಾಗಿ ಮೊಳಗಿತು. ಕೈಯಲ್ಲಿ ಹಿಡಿದ ಶೂಲವು ಮೃತ್ಯುವಿನನ್ನೂ ನುಂಗುವೆನೆಂದು ಬಾಯ್ತೆರೆಯಿತು. ಆಗ ಯಜ್ಞಶಾಲೆಯಲ್ಲಿ ಯಜಮಾನನಾದ ದಕ್ಷನು ಋತ್ವಿಜರು ಸದಸ್ಯರು ಮೊದಲಾದ ವರು ಉತ್ತರ ದಿಕ್ಕಿನಿಂದ ಬರುವ ಕೆಂಪಾದ ಧೂಳಿಯನ್ನು ಕಂಡು 'ಏನಿದು? ಎಲ್ಲಿಂದ ಬರುತ್ತಿದೆ ಈ ರಜಸ್ಸು?' ಎಂದು ಚಿಂತಿಸಿದರು. ವಿಪ್ರರೂ ತತ್ಪತ್ನಿಯರೂ ಚಿಂತೆಗೀಡಾಗಿ ತರ್ಕಿಸಿದರು. 'ಬಿರುಗಾಳಿ ಬೀಸುತ್ತಿಲ್ಲ. ಉಗ್ರದಂಡನಾದ ಪ್ರಾಚೀನಬರ್ಹಿಯ ಆಳಿಕೆ ಅಂದ ಮೇಲೆ ಕಳ್ಳಕಾಕರೆ ಲ್ಲಿಂದ ಬರಬೇಕು? ಆಕಳುಗಳು ಮನೆಗೆ ಬರುವ ವೇಳೆಯೂ ಅಲ್ಲ. ಮತ್ತೆ ಈ ದೂಳಿ ಎಲ್ಲಿಂದ ಬಂತು? ಏನು ಪ್ರಳಯವಾಗುವುದೋ?' ಎಂದು ಮುಂದೆ ನುಡಿಯದೆ ದಕ್ಷಭಯದಿಂದ ಸುಮ್ಮನಾದರು. ಪ್ರಸೂತಿ ಮೊದಲಾದ ತರುಣಿಯರು ಮನದಿ ತತ್ತರಿಸಿದರು. 'ಇದು ದಕ್ಷನ ಪಾಪದ ಫಲವೇ?' ಎಂದರು. ಮತ್ತೆ ಕೆಲವರು, 'ಎಲ್ಲ ಮಕ್ಕಳನ್ನಂತೆ ಕಾಣದೆ ಅವರೆದುರು ಪ್ರಾಣಬಿಡುವ ಸತಿಯನ್ನು ನಿರಪರಾಧಿನಿಯನ್ನು ಅವಮಾನಿಸಿದ ಪಾಪವು ಸುಡದೆ ಬಿಡುವುದೇ? ರುದ್ರದೇವನೇನು ಸಾಮಾನ್ಯನೇ? ಪ್ರಳಯ ಕಾಲದಲ್ಲಿ ಜಟೆಗಳಂ ಬಿಚ್ಚಿ ತನ್ನ ಶೂಲದ ಕೊನೆಗೆ ದಿಗ್ಗಜಂಗಳನ್ನು ಚುಚ್ಚಿ ವಿಕಾಟಾಟ್ಟಹಾಸವನ್ನು ಮಾಡಿ ಸಾಯುಧ ಬಾಹುಗಳನ್ನು ಮೇಲಕ್ಕೆತ್ತಿ ವಿರೂಪಾಕ್ಷನಾಗಿ, ಜಗವನ್ನೆಲ್ಲ ಸುಡುತ್ತಾ ಸಿಂಹನಾದವನ್ನು ಮಾಡುವ ಮಹಾದೇವನಿಗೆ ವಿರೋಧವನ್ನು ಬಗೆದವರಿಗೆ ಕ್ಷೇಮವೆಂತು? ಆತನ ತೇಜವೆಷ್ಟು ತೀಕ್ಷ್ಣ! ಆಹಾ ಏನುಹುಬ್ಬಿನ ಗಂಟು! ಕರಾಳವಾದ ಕೋರೆಗಳಿಂದ ನಕ್ಷತ್ರಗಳನ್ನು ಕೆಡಹುವ ಪರಾಕ್ರಮವೆಲ್ಲಿ? ಆತನೆದುರು ಅಲ್ಪನಾದ ಈ ದಕ್ಷನೆಲ್ಲಿ? ಇವನ ಗತಿ ಇನ್ನೇನೋ? ಎಂದು ನಿರ್ಭಯರಾಗಿ ನುಡಿದರು. ಅವರೆಲ್ಲರ ಮನವು ರುದ್ರಭಯದಿಂದ ಕಂಪಿಸುತ್ತಿತ್ತು. ಭೂಕಂಪ, ಉಲ್ಕಾಪಾತ, ಧೂಮಕೇತು ದರ್ಶನ ಮುಂತಾದ ಉತ್ಪಾತಗಳುದ್ಭವಿಸಿದುವು. ಅಷ್ಟರಲ್ಲೇ ಬಂದರಾ ರುದ್ರಾನುಚರರು; ರೌದ್ರರು ವಾಮನರು ಸಾಯುಧರಾಗಿ ವಿಕೃತ ನಾನಾ ಮಕರಾದಿವದನರಾಗಿ ಬಂದು ಯಜ್ಞವಾಟ ವನ್ನಾಕ್ರಮಿಸಿದರು.

ಕೆಲವರು ಪಾರ್ಷದರು ಅಗ್ನಿಹೋತ್ರಶಾಲೆಯನ್ನು ಮುರಿದರು. ಪ್ರಮಥರು ಪತ್ನೀಶಾಲೆಗೆ ಬೆಂಕಿ ಹಚ್ಚಿದರು. ಮುಂದಿದ್ದ ಸದಸ್ಸನ್ನು ಬದಿಗಿದ್ದ ಅಗ್ನೀಧ್ರ ಶಾಲೆಯನ್ನು ಸುಟ್ಟರು. ಮಹಾನಸವನ್ನು ಮುರಿದಿಟ್ಟರು. ಯಾಗಪಾತ್ರೆಗಳನ್ನೊಡೆದರು. ಅಗ್ನಿಕುಂಡಗಳಲ್ಲಿ ಮಲಮೂತ್ರ ಗಳನ್ನು ಮಾಡಿ ಕೆಡಿಸಿದರು. ಮೇಖಲಾಮಂಡಲವನ್ನು ಹಾಳು ಮಾಡಿದರು. ಮುನಿಗಳನ್ನು ಮುನಿಸತಿಯರನ್ನು ನಾನಾ ವಿಧವಾಗಿ ಪೀಡಿಸಿದರು. ತರ್ಜಿಸಿದರು; ಓಡಿಹೋಗುತ್ತಿದ್ದ ದೇವತೆ ಗಳನ್ನು ಹಿಡಿದು ಶಿಕ್ಷಿಸಿದರು. ಮಣಿಮಂತನು ಭೃಗುವನ್ನು ಕಟ್ಟಿಹಾಕಿದನು. ವೀರಭದ್ರನು ಸ್ವಯಂ ದಕ್ಷನನ್ನು ಬಂಧಿಸಿದನು. ಚಂಡೀಶನು ಪೂಷಣನನ್ನೂ ನಂದೀಶ್ವರನನ್ನು ಭಗನನ್ನೂ

ಪಿಡಿದು ಕಟ್ಟಿದರು. ಋತ್ವಿಜ ಸದಸ್ಯರು ದೇವತೆಗಳೀ ರೀತಿ ಪ್ರಮಥರಿಗೆ ಸೋತು, ಅವರು ಕಲ್ಲುಗಳ ತೂರುತ್ತಿರಲು ಭಯದಿಂದ ಓಡಿಹೋದರು.

ವಿಶ್ವಸೃಡ್ಯಾಗದಲ್ಲಿ ಮಾಡಿದ ಅಪರಾಧಕ್ಕೆ ಸಮನಾಗಿ ಪ್ರಮಥರೀಗ ಭೃಗ್ವಾದಿಗಳನ್ನು ಶಿಕ್ಷಿಸಿದರು. ಮೀಸೆಗಳನ್ನು ನೋಡಿಸಿ ತೀಡಿ ತೀಡಿ ನಕ್ಕ ಭೃಗುವಿನ ಮೀಸೆಗಳನ್ನು ವೀರಭದ್ರನು ಕಿತ್ತೊಗೆದನು. ಕಣ್ಣಿಂದ ಶಾಪವನ್ನು ಸೂಚಿಸಿ ನಕ್ಕ ಭಗನ ಕಣ್ಣುಗಳನ್ನು ಕಿತ್ತನು. ಹಲ್ಲನ್ನು ನೋಡಿಸಿ ನಕ್ಕ ಪೂಷಣನ ಹಲ್ಲುಗಳನ್ನು– ಬಲರಾಮನು ಕಳಿಂಗನ ಹಲ್ಲು ಕಿತ್ತಂತೆ–ಕಿತ್ತಿ ಕೆಡಹಿದನು. ಕೊನೆಗೆ ದಕ್ಷನ ಮೇಲೇರಿ ಕುಳಿತು ಕತ್ತಿಯನ್ನೆತ್ತಿ ಕುತ್ತಿಗೆಯನ್ನು ಕತ್ತರಿಸಿದರೂ ಕಡಿಯಲಾಗದೆ ಚಿಂತಾ ಕ್ರಾಂತನಾಗಿ, ವೀರಭದ್ರನು ತನ್ನ ಮೂಲರೂಪಿ ಶಿವನನ್ನು ಸ್ಮರಿಸಿದರು. ಆಗ ಸ್ವಯಂ ಶಿವನೇ ಕೈಲಾಸದಿಂದ ಬಂದು ಶ್ರೀ ನೃಸಿಂಹಾಯಸ್ವಾಹಾ! ಎಂದು ಜಪಿಸಿ ಆ ಪಶುಪತಿಯು ದಕ್ಷನೇ ಪಶುವೆಂದು ಅನುಸಂಧಾನದಿಂದ ಕುತ್ತಿಗೆಯನ್ನು ಕತ್ತರಿಸಿ ವೀರಭದ್ರನ ಕೈಗಿತ್ತು ತಾನು ಪುನಃ ಸ್ವನಿಲಯವನ್ನು ಸೇರಿದನು. ಆ ವೀರಭದ್ರನ ಪಕ್ಷದವರನ್ನು ಕಂಡು 'ಸಾಧು ಜಯ! ಜಯ!' ಎಂದು ಪೊಗಳಿದರು. ಅನ್ಯರು ಖಿನ್ನರಾದರು. ವೀರಭದ್ರನು ದಕ್ಷನ ಶಿರವನ್ನು ರೋಷದಿಂದ ದಕ್ಷಿಣಾಗ್ನಿಯಲ್ಲಿ ಹೋಮಮಾಡಿ, ಆ ದೇವಯಜನ ಶಾಲೆಯನ್ನು ಸುಟ್ಟು, ಯಜ್ಞವನ್ನು ಧ್ವಂಸಮಾಡಿ ಕೈಲಾಸವನ್ನು ಸೇರಿದನು.

## ೭. ದಕ್ಷಯಜ್ಞರಕ್ಷಣ ಪ್ರಾರ್ಥನೆ

ಶೂಲ ಪಟ್ಟಿಶ ಖಡ್ಗ ಗದಾ ಪರಿಘ ಮುದ್ಗರಪಾಣಿಗಳಾದ ರುದ್ರಕಿಂಕರರಿಂದ ಪರಾಜಿತರು ಪೀಡಿತರಾಗಿ ದೇವತೆಗಳು ಋತ್ವಿಕ್ ಸದಸ್ಯರಿಂದ ಕೂಡಿ ಸತ್ಯಲೋಕವನ್ನೈದಿದರು. ಸಾತ್ವಿಕರಾದ ಕಾರಣ ತಮ್ಮ ತಪ್ಪನ್ನು ತಟ್ಟನೆ ತಿಳಿದು ರುದ್ರನಲ್ಲಿ ಪೋಗಿ ಶರಣಾಗತರಾಗಲು ಧೈರ್ಯ ಸಾಲದೆ, ಲೋಕಗುರುವು ರುದ್ರಜನಕನಾದ ಬ್ರಹ್ಮನಿಗೆ ಮೊರೆಯಿಟ್ಟರು. ಹೀಗಾಗುವುದೆಂದು ತಿಳಿದ ಸರ್ವ ವ್ಯಾಪಿಯಾದ ನಾರಾಯಣನು, ಲೋಕಗುರುವಾದ ಬ್ರಹ್ಮನು ದಕ್ಷಾಧ್ವರಕ್ಕೆ ಬಂದಿದ್ದಿಲ್ಲ. ಅವರ ಪ್ರಾರ್ಥನೆಯಂ ಕೇಳಿ ಪ್ರಭುವಿಂತೆಂದನು– ವಿಷ್ಣು ವಾಯುಗಳ ಮಾತಿರಲಿ; ಇತರರಾರೇ ಆಗಲಿ ಮಹಜ್ಜನರ ದ್ರೋಹವನ್ನೆಸಗಲವರಿಗೆ ಕ್ಷೇಮವಾಗದು. ನೀವು ಯಜ್ಞ ಭಾಗಾರ್ಹವಾದ ಶಂಕರನಿಗೆ ಸಲ್ಲುವ ಹವಿರ್ದಾನವನ್ನು ಮಾಡದೆ ಇನ್ನೊಬನಿಗದನ್ನು ಕೊಟ್ಟು ಶಂಕರನಿಗದಪರಾಧವೆಸಗಿರುವಿರಿ. ಅವನನ್ನು ಬೇಡಿ ಕ್ಷಮಾಭಿಕ್ಷೆ ಪೊಂದುವುದೊಂದೇ ನಿಮಗೆ ಈಗ ಉಳಿದಿರುವ ಮಾರ್ಗವು. ಪರಿಶುದ್ಧವಾದ ಮನದಿಂದ ಶಿವನ ಪಾದಪದ್ಮವನ್ನು ಪಿಡಿದು ಪ್ರಾರ್ಥಿಸಿರಿ. ಶಿವನು ಸುಲಭಪ್ರಸಾದನು. ದಯಾಸಮುದ್ರನು. ಅವನನ್ನೇ ಬೇಡಿ! ಹೋಗಿ! ದುರ್ವಚನದಿಂದ ನೊಂದು, ಸುಂದರಿಯನ್ನು ಕಳೆದುಕೊಂಡು ಯಜ್ಞವನ್ನು ಶ್ರೀ ಹರೀಚ್ಛೆಯಂತೆ ನಾಶಪಡಿಸಿರುವನು. ಈಗ ಪುನಃ ಯಜ್ಞವು ಉಜ್ಜೀವಿತವಾಗಲು ಅವನ ಕರುಣೆಯೇ ಕಾರಣ. ಆ ಶ್ರೀಹರಿಯ ಮಹಾಮಹಿಮೆಯನ್ನು ನಾನು, ಇಂದ್ರ, ಶಿವ, ನೀವು, ಯಾರೇ ದೇವಮುನಿ ಗಳಾಗಲಿ ಸಾಕಲ್ಯೇನ ತಿಳಿಯಲಾರೆವು. ಅನಂತ ಬಲವೀರ್ಯನು, ಬ್ರಹ್ಮ ವಾಯುವಂದ್ಯನು, ಸ್ವತಂತ್ರನು ಆದ ಹರೀಚ್ಛೆಯನ್ನು ಅನುಸರಿಸಿ ವರ್ತಿಸಿ ಯಜ್ಞಧ್ವಂಸಕನಾದ ಶ್ರೀಕಂಠನ ದ್ವೇಷವು

ಯೋಗ್ಯವಲ್ಲ. ನಡೆಯಿರಿ. ನಾನು ಬರುವೆ'ನೆಂದು ಹೇಳಿ ಬ್ರಹ್ಮನು ದೇವಪಿತೃಪ್ರಜೇಶ ಮುನಿಗಳಿಂದ ಕೂಡಿ, ಪುರಾರಿಯ ಪ್ರಿಯವಾದ ಕೈಲಾಸ ಪರ್ವತವನ್ನು ಸೇರಪೋದನು. ಪರಮ ದಯಾಳುವಾದ ಬ್ರಹ್ಮನನ್ನುಸರಿಸಿ ಪೋದರೆ ಶಿವನ ಕ್ಷಿಪ್ರ ಪ್ರಸಾದವಾಗುವುದೆಂದರಿತ ದೇವಾದಿಗಳು ಧೈರ್ಯದಿಂದ ಅವನ ಹಿಂದೆ ನಡೆದರು.

ವಿಶಿಷ್ಟ ಕುಲಜರು, ಕೃಷ್ಣ ಚಿತ್ರಕಾದ್ಯೋಷಧಿಗಳಿಂದ ಕೃಚ್ಛ್ರಚಾಂದ್ರಾಯಣಾದಿತಪಗಳಿಂದ ಮೃತ್ಯುಂಜಯಾದಿ ಮಂತ್ರಗಳಿಂದ, ಅಷ್ಟಾಂಗಯೋಗದಿಂದ, ಸಿದ್ಧರಾದ ಕಿನ್ನರ ಗಂಧರ್ವ ಯಕ್ಷರಕ್ಷೋಜನರಲ್ಲಿ ಸುಖವಾಗಿ ನೆಲೆಸಿದ್ದರು. ಧಾತು ಚಿತ್ರತ ನಾನಾ ಮಣಿಮಯ ಶೃಂಗಗಳು, ವಿವಿಧ ಫಲಪುಷ್ಪವೃಕ್ಷಗಳು, ಅನೇಕ ವಿಧ ಮೃಗಗಣಗಳು! ಮೇಲಿಂದ ಹರಿಯುವ ಪ್ರಸ್ರವಣಗಳು, ಸುಂದರ ಕಂದರಗಳು, ಅಲ್ಲಿ ಕ್ರೀಡಿಸುವ ಸಿದ್ಧ ರಮಣೀರಮಣರು! ಆಡುವ ನವಿಲು, ಕೂಗುವ ಕೋಗಿಲೆ, ಝೇಂಕಾರ ಮಾಡುವ ಭ್ರಮರಗಳನ್ನು ನೋಡುತ್ತಾ ವಿವಿಧ ಪಕ್ಷಿಗಳ ಕಲಕಲರವವಾಹ್ವಾನವನ್ನೀಯುವಂತಿರಲು, ವೃಕ್ಷಗಳು ತಲೆಬಾಗಿ ಫಲಪುಷ್ಪ ಸಮರ್ಪಣೆ ಮಾಡುತ್ತಿರಲು, ದೇವತೆಗಳು ಕೈಲಾಸಗಿರಿಯನ್ನು ಪೊಕ್ಕರು.

ಆ ಗಿರಿಯು ಆನೆಗಳಾಗಿ ಓಡಿತೋ ನಿರ್ಝರವಾಗಿ ಕರೆದು ಕೂಗಿತೋ ಕಂದರಮಾಗಿ ಮಂದಿರಕೆ ಸ್ವಾಗತವನ್ನು ನೀಡಿತೋ, ಎಂಬಂತೆ ವಿರಾಜಿಸಿತು. ಮಂದಾರ ಪಾರಿಜಾತ ಸರಲ ತಮಾಲ ಸಾಲ ತಾಲ ಕೋವಿದಾರ ಚೂತ ಕದಂಬ ನೀಪಾಸನಾರ್ಜುನ ನಾಗಪುನ್ನಾಗ ಚಂಪಕ ಪಾಟಲಾಶೋಕ ವಕುಲ ಕುಂದ ಕುರವಕ ಸುವರ್ಣ ಶತಪತ್ರ ವೀರರೇಣುಕ ಜಾತೀ ಕುಬ್ಜಕ ಮಲ್ಲಿಕಾ ಮಾಧವೀ ಪ್ರಮುಖ ವಿವಿಧ ಫಲಪುಷ್ಪ ತರು ಲತಾ ಗುಲ್ಮ ಸಮುದಾಯ ಸಮಲಂಕೃತವಾದ ಆ ವನವನ್ನು ಕಂಡು ಸಂತಸಿಸಿದರು. ಪನಸೋದುಂಬರಾಶ್ವತ್ಥ ಪ್ಲಕ್ಷನ್ಯಗ್ರೋಧ ಹಿಂಗು ಭೂರ್ಜರ ಜನವೃಕ್ಷ ಪೂಗ ಜಂಬೂ ಖರ್ಜೂರ ಪ್ರಿಯಾಲಾಮ್ರಾತ ಕಾಮ್ರ ಮಧುಕೇಂಗುದ ಕೀಚಕ ವೇಣುವೃಕ್ಷ ತಂಡಮುಂಡಿತವಾದ ವನದಲ್ಲಿ ಅಮಲಜಲ ಸರೋವರಗಳನ್ನು ಕಂಡರು. ತತ್ತೀರಗಳಲ್ಲಿ ಕುಮುದೋತ್ಪಲ ಕಲ್ಹಾರ ಶತಪತ್ರ ಪುಷ್ಪಗಂಧವು ಘ್ರಾಣ ತರ್ಪಣವನ್ನೆಸಗಲು ಕಲಕಲರವಕರ ಖಗವೃಂದ ಗಾನವು ಕರ್ಣಮನೋಹರವಾಯಿತು. ಮೃಗ ಶಾಖಾಮೃಗ ಕ್ರೋಡಮೃಗೇಂದ್ರ ಶಲ್ಯ ಭಲ್ಲೂಕ ಗವಯ ಮೃಗನಾಭಿ ವ್ಯಾಘ್ರ ರುರು ಮಹಿಷಾದಿಗಳು ಸ್ವೇಚ್ಛೆಯಿಂದ ತಿರುಗುವುದನ್ನು ಕಣ್ಣಾರೆ ಕಂಡರು. ಕದಲೀವನಭರಿತವು, ನಲಿನೀಪುಲಿನ ರಮ್ಯವು, ಮಹಾಪುಣ್ಯದಾಯಿನೀ ನಂದಾ ನದೀಮಾನ್ಯವು ಆದ ಭೂತನಾಥನ ಕೈಲಾಸಗಿರಿಯನ್ನು ಕಂಡು ವಿಸ್ಮಿತರಾದರು. ಅಲ್ಲಿ ರಮ್ಯವಾದ ಅಲಕಾಪುರಿಯನ್ನು, ಸೌಗಂಧಿಕಾ ವನವನ್ನು, ಸೌಗಂಧಿಕ ಪದ್ಮವನ್ನು ನೋಡಿದರು. ಆ ಪುರಿಯನ್ನು ಸುತ್ತಿ ನಂದಾ, ಅಲಕಾನಂದ ಎಂಬ ಪವಿತ್ರ ಝರಿಗಳು ಹರಿಯುತ್ತಿದ್ದವು. ತೀರ್ಥಪಾದನ ಶ್ರೀಪದಾಂಭೋಜರಜಃ ಪಾವನವೆಂದು ತಿಳಿದು ಆ ನದಿಗಳಲ್ಲಿ ಸ್ನಾನ ಮಾಡಿ ಧನ್ಯರಾಗಲು ದೇವವನಿತೆಯರು ವಿಮಾನಗಳಿಂದಿಳಿದು ಬರುವರು. ಸ್ವರಮಣರೀ‌ ಕೂಡಿ ಜಲಕ್ರೀಡೆಯನ್ನು ಮಾಡುವ ಸುರ ಸುಂದರಿಯರ ಕುಚಕುಂಕುಮಗಂಧಿತವಾದ ಜಲವನ್ನು ಭದ್ರಗಜಗಳು ತಮ್ಮ ಪತ್ನಿಯರಿಗೆ ಕುಡಿಸಿ ಆಡುವುವು. ಮಣಿಖಚಿತ ರಜತಸುವರ್ಣ ನಿರ್ಮಿತ ವಿಮಾನಗಳಲ್ಲಿ ಪುಣ್ಯ ಜನಕಾಂತೆಯರು ಪತಿಯುತರಾಗಿ, ವಿದ್ಯುಲ್ಲತಾ ಮೇಘಮಾಲೆಗಳಿಂದ ಕೂಡಿದ ಆಕಾಶದಂತೆ ತೋರುತ್ತಾ ತಿರುಗುತ್ತಿದ್ದರು.

ಇಂತಹ ಯಕ್ಷಪತಿಯ ಪುರಿಯನ್ನು, ಸುತ್ತಲಿದ್ದ ಬೇಕಾದ ಫಲಪುಷ್ಪಭರಿತವಾದ ಸೌಗಂಧಿಕ ವನವನ್ನೂ ದಾಟಿ ಕೈಲಾಸಗಿರಿಯನ್ನು ಬ್ರಹ್ಮಾದಿಗಳು ಮುಟ್ಟಿದರು. ಮಧುಕರ ಝುಂಕಾರವನ್ನು ಶ್ರುತಿಯನ್ನಾಗಿಸಿ, ಕೋಗಿಲೆಗಳು ಪಾಡುತ್ತಿದ್ದವು. ಜಲಾಶಯಗಳಲ್ಲಿ ಜಲಜ ನಾಳವನ್ನು ತಿನ್ನುತ್ತಾ ಹಂಸಗಳು ಒಯ್ಯಾರದಿಂದ ಸಂಚರಿಸುತ್ತಿದ್ದವು. ಗಂಧಗಜಗಳು ಮೈ ತಿಕ್ಕಲು ಸೂಸಿಬಂದ ಹರಿಚಂದನಗಳ ಪರಿಮಳವನ್ನು ಹೊತ್ತುಬರುವ ಶೀತಮಾರುತ ವಲ್ಲಿಯ ಪುಣ್ಯಜನಕಾಂತೆಯರ ಮನವೊಲಿಸಿ ಬಳಸಿತು. ಪುಷ್ಕರಣಿಗಳಲ್ಲಿ ಉತ್ಪಲಗಳು ಅರಳಿದ್ದವು. ಕಿಂಪುರುಷರು ಸರಸಿಗಳ ವೈಡೂರ್ಯ ಸೋಪಾನಗಳಲ್ಲಿ ಕುಳಿತು ನಲಿಯುತ್ತಿದ್ದರು. ಅಲ್ಲೇ ಸಮೀಪದಿ ಒಂದು ವಟವೃಕ್ಷವಿತ್ತು. ಆದರೆ ರೆಂಬೆಗಳು 75 ಯೋಜನ ಉದ್ದವಿದ್ದವು. 100 ಯೋಜನ ಉನ್ನತವಿತ್ತು. ಶೀತೋಷ್ಣಸಮವಾದ ನೆರಳು ಚೆನ್ನಾಗಿ ಹರಡಿತ್ತು. ಮೇಲೊಂದೂ ಗೂಡಿದ್ದಿದ್ದಲ್ಲ. ಮುಮುಕ್ಷುಜನಶರಣ್ಯರು ಅಷ್ಟೈಶ್ವರ್ಯಭರಿತವಾದ ಆ ವಟಮೂಲದಲ್ಲಿ ಬ್ರಹ್ಮಾದಿಗಳು ಶಿವನಂ ಕಂಡು ಸಮೀಪಿಸಿದರು. ಹರನು ರೋಷವನ್ನು ಬಿಟ್ಟ ಅಂತಕನಂತೆ ಶಾಂತನಾಗಿ ಕುಳಿತಿದ್ದನು. ಸನಂದನಾದಿ ಸಿದ್ಧಜನರು ಆ ಸಂಶಾಂತಮೂರ್ತಿಯ ಉಪದೇಶಾಮೃತ ಪಾನಮಾಡುತ್ತಿದ್ದರು. ಗುಹ್ಯಕ ರಕ್ಷೋವಲ್ಲಭನಾದ ಕುಬೇರನು ನಿಂತು ಸೇವಿಸುತ್ತಿದ್ದನು. ವಿದ್ಯಾತಪೋ ಯೋಗಗಳಿಗೆ ವಿಷಯನು, ತದುಪದೇಶಕನು ಆದ ಶಿವನು ಪರಮಭಕ್ತಿಯಿಂದ ವಿಶ್ವಮಂಗಲಕರನಾದ, ತನ್ನ ಹೃದಯನಿಲಯನಾದ ನಾರಾಯಣನನ್ನು ಧ್ಯಾನಿಸುತ್ತಿದ್ದನು. ಭಸ್ಮದಂಡ ಜಟಾಜಿನಧಾರಿಯು, ಸಂಧ್ಯಾಭ್ರಸುಂದರನು, ಚಂದ್ರರೇಖಾಲಂಕೃತನು ಆಗಿ, ದರ್ಭಾಸನದಲ್ಲಿ ಬೃಸಿಯ ಮೇಲೆ ಕುಳಿತು ನಾರದನಿಗೆ ವೇದವೇದ್ಯನಾದ ನಾರಾಯಣನ ಗುಣ ಪೂರ್ಣತೆಯನ್ನುಪದೇಶಿಸುತ್ತಿರಲು ಸುತ್ತು ಕೂತು ಸನಕಾದಿ ಯೋಗಿಗಳಾಲಿಸುತ್ತಿದ್ದರು. ಬಲತೊಡೆಯ ಮೇಲೆ ಎಡಪಾದವನ್ನು ಪ್ರಕೋಷ್ಠದಲ್ಲಿ ಅಕ್ಷಮಾಲೆಯನ್ನು ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿ, ಹೃದಯದಲ್ಲಿ ಸಮಾಧಿಬಲದಿಂದ ಲಕ್ಷ್ಮೀರಮಣನನ್ನು ಚಿಂತಿಸುವ ಶಿವನು ಯೋಗಪಟ್ಟಿಕಾಧಿಷ್ಠಿತನಾಗಿದ್ದನು. ಆಗ ಇಂದ್ರಾದಿ ಲೋಕಪಾಲರು ದೇವಋಷಿ ಪ್ರಮುಖರೆಲ್ಲರೂ ಸಾಷ್ಟಾಂಗವಾಗಿ ಶಿವನಿಗೆರಗಿ ಎದ್ದು ಕೈಜೋಡಿಸಿ ನಿಂತರು. ಶಿವನಾದರೂ ಸುರಾಸುರೇಂದ್ರ ವಂದಿತನಾಗಿಯೂ ಅಲ್ಲಿ ನೋಡದೆ ತನ್ನ ತಂದೆಯು ಲೋಕಗುರುವಾದ ಬ್ರಹ್ಮನನ್ನು ನೋಡಿ ಎದ್ದು ಬಂದು ಸಾಷ್ಟಾಂಗವಾಗಿ ವಂದಿಸಿ ನಿಂತನು. ಆಮೇಲೆ ಸಿದ್ಧಋಷಿ ವರರು ಪುನಃ ಶಿವನಿಗೆ ವಂದಿಸಿದರು. ವಂದಿಸಿ ನಿಂತಿರುವ ಶಶಾಂಕಶೇಖರನಂ ಕಂಡು ನಗುತ್ತಾ ಬ್ರಹ್ಮನಿಂತೆಂದನು-

ಲಕ್ಷ್ಮೀನೃಸಿಂಹಾ! ನಿನಗೆ ನಮಸ್ಕಾರವು. ಎಷ್ಟು ಭಕ್ತವತ್ಸಲನೋ ಪ್ರಭೂ! ವೈಷ್ಣವಜನ ಮಣಿಯಾದೀ ನನ್ನ ಸುತನಿಗವಮಾನವಾಯಿತೆಂದು ದಕ್ಷಾಧ್ವರಧ್ವಂಸವನ್ನೇ ಅವನಲ್ಲಿ ನಿಂತು ಮಾಡಿರುವ ನಿನ್ನ ಮಹಿಮೆಯನ್ನೆಂತು ಬಣ್ಣಿಸಲಿ! ಸರ್ವಾಧಿಪತೇ! ಸರ್ವಜ್ಞ! ಭೂತಾದಿ ಜಗಕ್ಕೆ ಶಿವನಲ್ಲಿ ಬೀಜನೆನಿಸಿ, ಉಮೆಯಲ್ಲಿ ಯೋನಿಯೆನಿಸಿ ಅವರಿಬ್ಬರನ್ನೂ ನಡೆಸುವ ಒಡೆಯ ನಲ್ಲವೇ ನೀನು ? ನಿನಗೆ ನಿನ್ನ ರೂಪಾಂತರಗಳಿಂದ ಭೇದವಿಲ್ಲ. ಶಿವ-ಶಕ್ತಿಗಳು ನಿನ್ನ ಪ್ರತಿಮೆ. ಇಲ್ಲಿದ್ದು ಜಗವನ್ನು ಸೃಜಿಸುವೆ. ಪಾಲಿಸುವೆ ಸಂಹರಿಸುವೆ ಊರ್ಣನಾಭಿಯಂತೆ ಈ ನಿನ್ನಾಟ! ನೀನೇ ಧರ್ಮಫಲಪ್ರದನು. ರುದ್ರನಿಂದೂದಾಷಿತವಾಗಿ ಅಧರ್ಮವೆನಿಸಿದ ದಕ್ಷನ ಯಜ್ಞವನ್ನು ನಾಶಪಡಿಸಿದವನು ನೀನೇ! ಧರ್ಮಸೇತುವನ್ನು ನೀನಲ್ಲದಿನ್ನು ಮತ್ತಾರು ಪೊರೆದು ನಿಲ್ಲಿಸುವ

ಸಮರ್ಥರು? ಧೃತವ್ರತರಾದ ಬ್ರಾಹ್ಮಣರಲ್ಲಿ ನಿಂತು ಧರ್ಮೋಪದೇಶ ನಿರ್ಣಯಗಳನ್ನು ನೀನೇ ಮಾಡಿ ಹೇ ವಿಷ್ಣೋ! ಪುಣ್ಯ ಪಾಪಕರ್ಮಗಳನ್ನವರವರ ಸ್ವಭಾವಯೋಗ್ಯತೆಯಂತೆಯು ಕರ್ಮಗಳಂತೆಯು ಮಾಡಿಸಿ ತದನುಸಾರಿ ಫಲವನ್ನೂ ಕೊಡುವೆ. ನಿನಗೆ ಅನನ್ಯಾಧೀನನಾಗಿರುವು ದರಿಂದ ಕರ್ಮಫಲದ ಲೇಪವಿಲ್ಲ. ಅಮಂಗಲ ಕರ್ಮಶೀಲರಿಗೆ ಘೋರ ತಮಸ್ಸನ್ನು ಕೊಡುವೆ. ನಿನ್ನ ಭಕ್ತರ ದ್ವೇಷವೇ ತಮಃಪ್ರಾಪ್ತಿ ಕಾರಣವು. ಅಂತಹ ತಮಸ್ಸನ್ನು ಸರ್ವರಿಗೂ ಕೊಡದೆ ತಮೋಯೋಗ್ಯರಿಗೆ ಕೊಡುವುದು ಸತ್ಯಸಂಕಲ್ಪನಾದ ನಿನ್ನ ಸ್ವಭಾವವು. ನಿನ್ನ ಚರಣಾರವಿಂದ ದಲ್ಲಿ ಮನವಿಟ್ಟು, ಸರ್ವಭೂತಾವಾಸಿಯು, ಸರ್ವಭೂತಾಧಾರನು ಆದ ನಿನ್ನಲ್ಲಿ ಯಥಾರ್ಥ ಜ್ಞಾನವನ್ನು ಸಂಪಾದಿಸಿದ ರುದ್ರಾದಿ ಭಕ್ತರಿಗೆ ಇತರಾಜ್ಞಾನಿಗಳಂತೆ ಬರುವಂತೆ ರೋಷ ಮೋಹಾದಿಗಳು ಕಂಡು ಬಂದರೂ ಸ್ವಾಭಾವಿಕವಲ್ಲ. ಅನ್ಯಥಾಜ್ಞಾನದಿಂದ ಕರ್ಮಫಲವನ್ನು ಬೇಡಿ ಮನಸ್ಸನ್ನು ಕೆಡಿಸಿಕೊಂಡು ಪರರ ಶ್ರೇಯವನ್ನು ಕಂಡು ಹಗಲಿರುಳು ಕುದಿಯುವವರು, ಮತ್ತು ಉತ್ತಮರೆನ್ನದೆ ದುರ್ವಚನಗಳಿಂದ ನೋಯಿಸಿ, ಸದ್ಭಕ್ತವರರ ದ್ರೋಹವೆಸಗುವವರು ಕೂಡ ಜ್ಞಾನಿವಿಲೋಕವಿಲಕ್ಷಣರೇ ಆಗಿ ತಮ್ಮ ದೋಷದಿಂದ ತಾವೇ ನಾಶವಾಗುವರು. ಅವರನ್ನು ನೀ ಕೊಲ್ಲುವ ಅವಶ್ಯಕತೆಯೇ ಇಲ್ಲ. ಅಂತಹವರೀ ಲೋಕದಲ್ಲಿ ಪದ್ಮನಾಭನಾದ ನಿನ್ನ ಬಂಧಕ ಶಕ್ತಿಯಿಂದ ಕಟ್ಟಲ್ಪಟ್ಟು ಅಹಂ ಮಮತೆಗಳಿಗೀಡಾಗಿ ದ್ವೇಷಾಧಿಕವನ್ನು ಮಾಡಿ ದರೂ, ಅದೃಷ್ಟಪ್ರೇರಕನಾದ ಹರಿಯ ಬಂಧಕಶಕ್ತಿಯನ್ನರಿತ ಸುಜನರವರಲ್ಲಿ ಕೃಪೆ ಮಾಡಿ ಕರುಣಿಸಿ ಕ್ಷಮಿಸದಿರೆ ಅವರ ಗತಿಯೇನು? ಶ್ರೀನೃಸಿಂಹ! ನಮೋ ನಮಃ.

ಈಗ ರುದ್ರನೇ ! ಕೇಳು. ನೀನಾದರೂ ಶ್ರೀಹರಿಯ ಬಂಧಕಶಕ್ತಿಯ ಮಹಿಮೆಯನ್ನರಿತು ಅದರ ಅಹಂಮಮತೆಗಳನ್ನು ದೂರಮಾಡಿರುವೆ. ಸರ್ವವೂ ನಿನಗೆ ತಿಳಿದಿದೆ. ಬುದ್ಧಿರಹಿತರಾಗಿ, ಹಿಂಸಾಕರ್ಮಕರತರಾದ ದಕ್ಷಾದಿಗಳಲ್ಲಿ ನೀ ಅನುಕಂಪೆಯಂ ತೋರು!

ಯಜ್ಞವು ಪುನರುದ್ಧೃತವಾಗಲಿ! ದಕ್ಷನು ಯಜ್ಞದ ಯಜಮಾನನವನು ಪುನರುಜ್ಜೀವಿತ ನಾಗಲಿ! ನಿಜ, ನನಗೆ ಗೊತ್ತಿದೆ. ನ್ಯಾಯವಾದ ರುದ್ರಭಾಗವನ್ನು ಕುಸ್ಪರ್ಧೆಯಿಂದ ನಿನಗೆ ಕೊಡದೆ ಕೆಟ್ಟರು. ಯಜ್ಞವೂ ಹಾಳಾಯಿತು. ಭಗನಿಗೆ ಕಣ್ಣುಬರಲಿ! ಭೃಗುವಿಗೆ ಮೀಸೆ ಬೆಳೆಯಲಿ! ಪೂಷನಿಗೆ ದಂತಗಳ ದಯಮಾಡಿ ಕೊಡು. ಭಗ್ನಗಾತ್ರರಾದ ಋತ್ವಿಗ್ದೇವತಾದಿಗಳಿಗೆ ಆರೋಗ್ಯ ವಾಗಲಿ! ಇಕ್ಕೋ! ಇದು ನಿನಗೆ ರುದ್ರಭಾಗವೆಂದು ನಾ ಕೊಡುವೆ. ಸ್ವಿಷ್ಟಕೃದ್ಭಾಗವು ಯಾಜ್ಞ ಶಿಷ್ಟಹವಿರಾದಿ ಎಲ್ಲವೂ ರುದ್ರಭಾಗವೆನಿಸಿ ನಿನ್ನನ್ನು ಸೇರಲಿ!– ಎಂದು ವರವಿತ್ತು ಬ್ರಹ್ಮನು ರುದ್ರನನ್ನು ಸಂತೈಸಿದನು.

## ೮. ದಕ್ಷಯಜ್ಞರಕ್ಷಣ

ಇಂತು ತಂದೆಯಿಂದ ಸಮಾಧಾನವನ್ನು ಪೊಂದಿ ರುದ್ರನೆಲ್ಲವನ್ನು ನೆನೆದು, ನಸು ನಗು ತಿಂತೆಂದನು–

ಜೀವೋತ್ತಮ! ಗುರುವರ! ಬಾಲಕರಾದ ಇವರ ಅಪರಾಧವೆಣಿಸುವುದಿಲ್ಲ! ದಂಡನೆಯು ಅಪರಾಧಾನುಸಾರಿಯಾಗಿ ಮಾಡಿದೆನಾದ್ದರಿಂದ ಪಶ್ಚಾತ್ತಾಪವೂ ಇಲ್ಲ. ಆದರೂ ಪಿತೃವಾಕ್ಯ

ಪರಿಪಾಲನೆ ನನ್ನ ಕರ್ತವ್ಯವೇ ಸರಿ! ದಕ್ಷನ ತಲೆಯು ಬೆಂದು ನಷ್ಟವಾಯಿತಾದ್ದರಿಂದ ಅವನು ಬಸ್ತಮುಖನಾಗಿ ಬದುಕಲಿ! ಭಗನು ಮಿತ್ರನ ಕಣ್ಣಿನಿಂದ ಯಜ್ಞಭಾಗವನ್ನು ವೀಕ್ಷಿಸಲಿ ! ಪೂಷನು ಯಜಮಾನ ದಂತಗಳಿಂದ ಕಡಿಯಲಿ! ಪಿಷ್ಟಭೋಜನವೇ ಆಗಲಿ! ಉಚ್ಛೇಷಣ ಭಾಗವರ್ಪಿಸಿ ನನ್ನನ್ನು ಪೂಜಿಸಿದ ದೇವತಾದಿಗಳು ಪ್ರಕೃತಸರ್ವಾಂಗರಾಗಲಿ ! ಇರಲಿ ಈ ಯಜ್ಞವೈರಿಯೆನಿಸಿದ ನನ್ನ ಜಯಸ್ತಂಭವು ಗುರ್ಜನ ಭಯಸಂರಂಭವಾಗಿ ಮೆರೆಯಲಿ! ಭಿನ್ನ ಹಸ್ತರು ಪೂಷನ ಹಸ್ತಗಳಿಂದಲೂ ಭಿನ್ನಬಾಹುಗಳು ಅಶ್ವಿನಿಯರ ಬಾಹುಗಳಿಂದಲೂ ಹವಿಸ್ಸನ್ನು ಸ್ವೀಕರಿಸಲಿ ! ಭೃಗುವಿಗೆ ಮೇಕೆ ಹೋತದ ಮೀಸೆಗಳಾಗಲಿ– ಎಂದು ಅನುಗ್ರಹಿಸಿದನು.

ವಿದುರಾ ! ವರಪ್ರದಾನಚತುರನಾದ ಶಿವನ ವಚನಂ ಕೇಳಿ ಸರ್ವರು ಸಾಧು! ಎಂದು ಸಂತೋಷದಿಂದ ಜಯಜಯಕಾರ ಮಾಡಿದರು. ಆನಂತರದಲ್ಲಿ ಬ್ರಹ್ಮರುದ್ರರಿಂದ ಕೂಡಿ ಇಂದ್ರಾದಿ ಸರ್ವರು ರುದ್ರನ ಅಭಿಪ್ರಾಯದಂತೆ ಯಜ್ಞವಾಟವನ್ನು ಸೇರಿದರು. ರುದ್ರವಚನದಂತೆ ಸರ್ವರನುವರ್ತಿಸಿ, ದಕ್ಷನ ಶರೀರದಿ ಯಜ್ಞ ಪಶುವಾಗಿದ್ದ ಬಸ್ತದ ಶಿರವನ್ನು ಜೋಡಿಸಿದರು. ತತ್‌ಕ್ಷಣವೇ ರುದ್ರಕಟಾಕ್ಷಪಾತ್ರನಾದ ಪ್ರಜಾಪತಿಯು ಮಲಗಿದ್ದವನಂತೆ ಎದ್ದು ನಿಂತು ಚಂದ್ರಲಲಾಮನಂ ಕಂಡನು. ವೃಷಧ್ವಜ ದ್ವೇಷ ಕಲಂಕಿತವಾಗಿದ್ದ ದಕ್ಷನ ಮನವಾಗ ಶಿವದರ್ಶನದಿಂದ ಶರತ್ಕಾಲದ ಮೇಘದಂತೆ ನಿರ್ಮಲವಾಯಿತು. ಶುದ್ಧವಾದ ಅಂತಃಕರಣದಿಂದ ರುದ್ರಸ್ತುತಿಯನ್ನು ಮಾಡಲುದ್ಯುಕ್ತನಾದ ದಕ್ಷನಿಗೆ ಕಣ್ಣು ಕಂಬನಿಯಿಂದ ತುಂಬಿ ಕಂಠ ಕಂಪಿಸಿ ಮಾತಾಡಲು ಬರಲಿಲ್ಲ. ಮಗಳನ್ನು ನೆನೆದು ದುಃಖಿಸಿ ಕಷ್ಟದಿಂದ ಮನಸ್ಸನ್ನು ಸ್ತಿಮಿತವಾಗಿಸಿ ಪ್ರೇಮದಿಂದ ನಿಷ್ಕಪಟನಾಗಿ ಆಸುರಾವೇಶರಹಿತನಾಗಿ ದಕ್ಷ ನಿಂತು ಶಿವನನ್ನು ಸ್ತುತಿಸಿದನು – ಬಲಾತ್ಕಾರದಿಂದ ಹಿಡಿದು ದಂಡಿಸಿದ ನೀನೆನ್ನಲ್ಲಿ ಪರಮಾನುಗ್ರಹ ಮಾಡಿರುವೆ ಮಹಾ ಪ್ರಭೋ! ಧೃತವ್ರತರಾದವರು ಬ್ರಾಹ್ಮಣಮಾತ್ರನನ್ನು ಅವಮಾನಿಸಬಾರದೆಂದ ಮೇಲೆ ಬ್ರಾಹ್ಮಣ ಪ್ರಿಯನಾದ ನಿನ್ನ ಅಥವಾ ನಿನ್ನ ಅಂತರ್ಯಾಮಿಯಾದ ಹರಿಯ ಅವಮಾನವನ್ನು ಮಾಡಿದರೆ ಅನುತ್ತಾನತಮಃಪ್ರಾಪ್ತಿಯೇ ಒದಗುವುದು ! ಬ್ರಾಹ್ಮಣರು ವಿದ್ಯಾ ತಪೋವ್ರತ ಧನ್ಯರು. ಅವರನ್ನು ವೇದರಕ್ಷಕರಾಗುವಂತೆ ಸಂಕಲ್ಪಿಸಿ ನೀನೇ ನಿನ್ನ ಮುಖದಿಂದ ಮೊದಲು ಸೃಜಿಸಿದೆ. ಅಂತೆಯೇ ಅವರಿಗೆ ವಿಪತ್ತು ಬಂದಾಗ ದಂಡವನ್ನು ಪಿಡಿದು ಪಾಲಿಪ ಗೋಪಾಲನಂತೆ ಬಂದೊದಗಿ ರಕ್ಷಿಸುವೆ. ತತ್ತ್ವಜ್ಞಾನವನ್ನು ಮರೆತು, ವಿಶ್ವಸೃಡ್ಯಾಗದಲ್ಲಿ ನಾನಾಡಿದ ದುರ್ವಚನ ವಿಷಬಾಣಗಳನ್ನು ಲೆಕ್ಕಿಸದೆ, ಅನ್ಯಾಯವಾಗಿ ಮಹನ್ನಿಂದೆಯನ್ನು ಮಾಡಿ ಕೆಳಗೆ ತಮಃಪ್ರವೇಶ ಮಾಡಿ ಕೆಡುವನೆಂಬ ದಯೆಯಿಂದ ಕಟಾಕ್ಷಿಸಿ, ಶಿಕ್ಷಿಸಿ ಪೊರೆದು ನೀ ಮಾಡಿದುಪಕಾರವನ್ನೆಂತು ತೀರಿಸಲಿ! ಪ್ರಭೋ! ನೀನಾಗಿ ರಕ್ಷಿಸಿದೆ. ನೀನಾಗಿ ತುಷ್ಟನಾಗು– ಎಂದು ಕ್ಷಮಾಸಂಪಾದನವನ್ನು ಮಾಡಿ ದಕ್ಷನು ಬ್ರಹ್ಮರುದ್ರರ ಅಪ್ಪಣೆಯಂ ಪಡೆದು ಉಪಾಧ್ಯಾಯರಿಂದಲೂ ಋತ್ವಿಗ್ಜನರಿಂದಲೂ ಕೂಡಿ ಯಜ್ಞವನ್ನು ಪುನಃ ಪ್ರಾರಂಭಿಸಿದನು. ವೀರಭದ್ರೋಪದ್ರವ ಪರಿಹಾರಕ್ಕೆಂದು ತ್ರಿಕಪಾಲವನ್ನಾಚರಿಸಿ ಬ್ರಾಹ್ಮಣೋತ್ತಮರು ಪುರೋಡಾಶವನ್ನು ತಯಾರಿಸಿದರು. ಮಂತ್ರ ಪ್ರಧಾನ ದೇವನಿಗಾಗಿ ಅಧ್ವರ್ಯುವಾದ ಭೃಗುವು ಹವಿಸ್ಸನ್ನು ಹೋಮ ಮಾಡಿಸುವಾಗ ಶುದ್ಧ ಬುದ್ಧಿಯಿಂದ ದಕ್ಷನು ಪೂರ್ಣಾಹುತಿಯನ್ನು ಕೈಲಿ ಪಿಡಿದಿದ್ದು ನಿಂತಿರಲು ಶ್ರೀಹರಿಯು ಪ್ರತ್ಯಕ್ಷನಾದನು. ಸ್ವಾಮಿಯ ಕಾಂತಿಯಿಂದ ಹತ್ತು ದಿಕ್ಕುಗಳು ಬೆಳಗಿದವು. ಸಾಮಗಾನವನ್ನು

ಮಾಡುತ್ತ ಬಂದ ಗರುಡನನ್ನೇರಿ ಶ್ರೀಹರಿಯು ದಿವ್ಯ ಸುಂದರ ರೂಪದಿಂದ ಬ್ರಹ್ಮಾದಿಗಳಿಗೆ ಗೋಚರನಾದನು.

ಶ್ಯಾಮವರ್ಣನು, ಪೀತಾಂಬರನು, ಮಣಿಮಯಕಿರೀಟನು, ನೀಲಾಲಕಾವೃತ ಮುಖ ಪಂಕಜನು, ಕುಂಡಲಮಂಡಿತಗಂಡನು ಆದ ಶ್ರೀ ಹರಿಯು ತನ್ನ ಎಂಟು ಕೈಗಳಲ್ಲಿ ಶಂಖ, ಪದ್ಮ, ಚಕ್ರ, ಶರ, ಚಾಪ, ಗದಾಖಡ್ಗ, ಚರ್ಮಂಗಳಂ ಪಿಡಿದು ಕರ್ಣಿಕಾರ ಕುಸುಮದಂತೆ ಕಂಗೊಳಿಸಿದನು. ಸೇವಿಸಲು ವಕ್ಷದಲ್ಲಿ ನಿಂತ ಲಕ್ಷ್ಮಿ, ವನಮಾಲೆ, ಉದಾರ ಮಂದಹಾಸ, ಕರುಣಾಮೃತವರ್ಷಣವೀಕ್ಷಣ, ಪಕ್ಕಗಳಲ್ಲಿ ಚಾಮರ ವ್ಯಜನಗಳೆಂಬ ಹಾರುವ ರಾಜಹಂಸಗಳು, ಚಂದ್ರಸಂತೆ ಶಿರದಿ ಶೋಭಿಪ ಶ್ವೇತಚ್ಛತ್ರ ಓಹೋ! ಏನು ಆ ನಮ್ಮ ಶ್ರೀಹರಿಯ ಸೊಬಗು! ಎದುರಾ! ಇಂಥ ಪ್ರಭುವನ್ನು ಕಂಡು ಸಂಭ್ರಮದಿಂದೆದ್ದು ಬ್ರಹ್ಮ, ರುದ್ರರು , ಇಂದ್ರಾದಿ ದೇವಮುನಿಗಳು ನಮಿಸಿ ಕೈ ಜೋಡಿಸಿ ನಿಂತರು. ಶ್ರೀಶನ ತೇಜವನ್ನು ನೋಡಲಾರದೆ, ವೇದವೇದ್ಯವನ್ನು ಪೊಗಳಲುಪಕ್ರಮಿಸಿ ಗದ್ಗದಿತಕಂಠದಿಂದ ಮಾತನಾಡಲಾರದೆ ತಲೆಗಳ ಮೇಲೆ ಕೈಗಳನ್ನೆತ್ತಿ ನಮಿಸಿ ದರ್ಶನಾನಂದದಿಂದ ಸುಮ್ಮನೆ ನಿಂತರು. ಅನಂತ ಕಲ್ಯಾಣಗುಣಸಂಪನ್ನನಾದ ರಮಾರಮಣನನ್ನು ವಚನದಿಂದ ವರ್ಣಿಸಲು, ಮನದಿಂದ ಚಿಂತಿಸಲು, ಸಾಧ್ಯವಾಗದೆ ಬ್ರಹ್ಮಾದಿಗಳು ಯಥಾಮತಿ ಮನಸಾ ನುತಿಸಿ ಭಕ್ತಚಿಂತಿತನನ್ನು ಕೊಡಲು ಸ್ವೇಚ್ಛಾಗೃಹೀತ ಮೂರ್ತಿಯಾದ ಭಗವಂತನಿಗೆ ನಮಿಸಿದರು.

ಈಗ ದಕ್ಷನು ಪೂಜಾ ದ್ರವ್ಯಗಳಿಂದ ಶಿರಸಾ ವಹಿಸಿ ಸುನಂದನಂದಾದಿ ಪಾರ್ಷದ ಸೇವಿತನು ಲೋಕಗುರುವು, ಸೃಷ್ಟ್ಯಾದ್ಯಷ್ಟಕರ್ತನು, ಯಜ್ಞಪಾಲಕನು ಆದ ಶ್ರೀಹರಿಯನ್ನು ಸಮೀಪಿಸಿ ಪೂಜಿಸಿದನು. ಕೈಜೋಡಿಸಿ ನಿಂತು ಭಕ್ತಿಯಿಂದ ಸ್ತುತಿಸಿದನು

ಹರೇ! ಸ್ವರತನು, ಸ್ವತಂತ್ರನು, ನಿರ್ದೋಷಜ್ಞಾನಾನಂದದೇಹನು, ಜಾಗ್ರದಾದಿ ಜೀವವಸ್ಥಾ ಪ್ರೇರಕನು, ಸರ್ವೋತ್ತಮನು, ಜಡಪ್ರಕೃತಿಬಂಧರಹಿತನು ಆದ ನಿನಗೆ ನಮಸ್ಕಾರವು. ಜಡ ಪ್ರಕೃತಿಯಿಂದ ಮಹದಾದಿಗಳನ್ನು ಪುರುಷಶರೀರೇಂದ್ರಿಯಗಳನ್ನು ಸೃಜಿಸಿ, ಅವು ಪ್ರವರ್ತಿಸುವಂತೆ ಅಂತರ್ಯಾಮಿಯಾಗಿ ಜೀವನಿಂದ ಕೂಡಿ ಇದ್ದೂ ನಿರ್ಲಿಪ್ತನಾದ ನಿನ್ನನ್ನು ಅಜ್ಞಾನದಿಂದ ಮಾಯಾವಾದಿಗಳು ಜೀವನೆಂಬುವರು ಇಂತಹ ಅಮೇಯಮಹಿಮನಾದ ನಿನಗೆ ನಮೋ ನಮ.

ಋತ್ವಿಜರು– ಲೇಪಲೋಪರಹಿತ ನಾರಾಯಣ! ರುದ್ರಶಾಪದಿಂದ ಅಜ್ಞಾನವನ್ನು ಹೊಂದಿ ಯಜ್ಞಾದಿ ಕರ್ಮಫಲದಲ್ಲಿ ದುರಾಗ್ರಹಮಾಡಿದೆವು. ಸದಾಶಿವನ ಪ್ರಸನ್ನದೃಷ್ಟಿಯಿಂದೆಮಗೆ ತತ್ವಜ್ಞಾನವಾಗಿದೆ. ನಿನ್ನ ಪೂಜೆಯಾಗಿ, ನಿನಗರ್ಪಿಸಿದ ಕರ್ಮವು ಭಕ್ತಿಜ್ಞಾನ ಜನಕವಾಗುವುದರಿಂದಲೇ ನೀ ಪ್ರಸನ್ನನಾಗುವೆ. ಈಗ ನಿನ್ನ ಪ್ರತ್ಯಕ್ಷವೇ ಇದಕ್ಕೆಸಾಕ್ಷಿ. ಭಕ್ತಿಯಿಂದ ಪೂಜಿಸುವುದಕ್ಕೆ ಸಮಾನಧರ್ಮವಿನ್ನೊಂದಿಲ್ಲವೆಂಬಭಾರತವೇ ಸಾಕ್ಷಿ. ಭಕ್ತಿಯಿದ್ದುದರಿಂದ ನೀನಾವಿರ್ಭವಿಸಿದೆ ಎಂಬ ಲಿಂಗವೇ ಸಾಕ್ಷಿ. ಅಧ್ವರ ಭಾಗಗಳನ್ನು ಸ್ವೀಕರಿಸುವ ಸರ್ವೋತ್ತಮದೇವನಾದ ನೀನು ಬ್ರಹ್ಮಾದಿ ಶರೀರಗಳಲ್ಲಿ ನಿಂತು ಅಧಿದೈವರೂಪನಾಗಿ ಯಜ್ಞಫಲಭೋಕ್ತನೆನಿಸಿರುವೆ. ಯಜ್ಞಪ್ರಭೋ! ಇಂತಹ ನಿನ್ನ ಮಹಿಮೆಯನ್ನೀಗ ತಿಳಿದೆವು– ಎಂದು ನಮಿಸಿದರು.

ಸದಸ್ಯರು– ಸಂಸಾರ ಕಾಡುಮಾರ್ಗ; ಅಹಂಕಾರ ರಾಗ ವಿದ್ಯಾಭಿನವೇಶಗಳೆಂಬ ದುರ್ಗಮದುರ್ಗಗಳು; ಸೆಳೆದು ನುಂಗುವ ಆತಂಕನೆಂಬ ಹೆಬ್ಬಾವು; ವಿಷಯಸುಖಗಳೆಂಬ ಬಿಸಿಲುಗುದುರೆ; ಪತ್ನೀಪುತ್ರಭರಣವೆಂಬ ತಲೆಹೊರೆ; ದ್ವಂದ್ವವೆಂಬ ಗರ್ತಗಳು;ಖಲರೆಂಬ ಕ್ರೂರಮೃಗ

ಗಳು; ಶೋಕವೆಂಬ ದಾವಾಗ್ನಿ! ಎಷ್ಟು ಭಯಂಕರ ಈ ಸಾಂಸಾರಿಕಕಾರಣ್ಯವು! ಆದರೂ ಕಾಮಾಪೇಕ್ಷೆಯಿಂದ ತಲೆಕೆಟ್ಟವನು ಮೋಕ್ಷಪ್ರದವಾದ ನಿನ್ನ ಪ್ರಶಸ್ತಪಾದಪದ್ಮ ದ್ವಂದ್ವವನ್ನೆಂತು ಭಜಿಸುವನು? – ಎಂದು ಬೇಡಿ ವಿಜ್ಞಾಪಿಸಿದರು.

ರುದ್ರನು – ಹೇ ವರದರಾಜ, ಫಲರೂಪ ವರಗಳನ್ನು ಬೇಡಿದವರಿಗೆ ನಿನ್ನ ವರಚರಣ ಪಂಕಜವು ಗೋಚರವಾಗಿಲ್ಲ. ಬ್ರಹ್ಮಾದಿಗಳು ನಿಸ್ಸಂಗರಾಗಿ ಆದರದಿಂದ ಪೂಜಿಸಿ ಧ್ಯಾನಿಸಲು ಅವರಿಗೆ ಗೋಚರಿಸುವೆ. ಲೋಕಬಾಹ್ಯನಾಗಿ ವಿರಕ್ತನಾಗಿರುವ ನನ್ನನ್ನು ನಿನ್ನ ಪಾದಾರವಿಂದ ಧ್ಯಾನಾಸಕ್ತ ಭಕ್ತನೆಂದು ಪರಿಗಣಿಸಲು ಸಾಕು! ನಿನ್ನ ಅನುಗ್ರಹವನ್ನು ಹೊರತು ನಾನೇನೂ ಬೇಡುವುದಿಲ್ಲ! ಎಂದು ಕೇಳಿಕೊಂಡನು.

ಭೃಗುವು – ದೇವಾದಿ ಶರೀರದಾರಿಗಳು ನಿನ್ನ ಮಾಯೆಗೆ ಸಿಲುಕಿ ಅಜ್ಞಾನವನ್ನು ಹೊಂದಿ ಹೃದಯದಲ್ಲೇ ಇರುವ ಜೀವಪ್ರೇರಕರಾದ ನಿನ್ನನ್ನು ತಿಳಿಯದೆ ಇರುವರು. ಪ್ರಣತ ಭಕ್ತಜನಾಪ್ತ ಬಂಧುವಾದ ನೀನೆಮಗೆ ಪ್ರಸನ್ನವಾಗು! ಈ ನಿನ್ನ ರೂಪವು ಪ್ರಾಕೃತವಲ್ಲ. ಅವ್ಯಕ್ತ ಮಹದಾದಿ ಪ್ರಕೃತಿನಿರ್ಮಿತವಾದ ಶಬ್ದಾದಿ ವಿಷಯಗಳು, ಚಕ್ಷುರಾದಿಂದ್ರಿಯಗಳು, ಶರೀರಾಂತಃಕರಣಾದಿಗಳಿಂದ ವ್ಯತಿರಿಕ್ತನಾಗಿರುವ ನಿನ್ನನ್ನು ವೈರಾಗ್ಯ ಭಕ್ತಿಭರಿತರಾದ ಬ್ರಹ್ಮಾದಿಗಳು ಯಥಾಯೋಗ್ಯರಾಗಿ ತಿಳಿದಿರುವರು. ನಿನ್ನನ್ನು ಸಾಕಲ್ಯೇನ ತಿಳಿಯಲು ಯಾರಿಗೆ ಸಾಧ್ಯವು?– ಎಂದು ಪೊಗಳಿದನು.

ಇಂದ್ರನು – ಅಚ್ಯುತ! ಮನೋನಯನಾನಂದಕರವಾದ ಈ ನಿನ್ನ ಜಗನ್ಮಂಗಲವಿಗ್ರಹವು ಸುರಾರಿಜನವಿನಾಶಕರ ದರಾದಿಧರಭುಜಾಷ್ಟಕ ರಮಣೀಯವಾಗಿದೆ! ಎಂದು ವಂದಿಸಿದನು.

ಯಜ್ಞಪತ್ನಿಯರು ನುಡಿದರು– ಯಜ್ಞಪತೇ ! ಕಮಲನಾಭ! ಈ ಯಜ್ಞವು ನಿನ್ನ ಪ್ರೀತಿಗಾಗಿ ಮಾಡಲ್ಪಡುವದಾಗದೇ ರೋಷದಿಂದ ಕೃತವಾಗಿತ್ತು. ಆದ್ದರಿಂದಲೇ ಪಶುಪತಿಯು ಅದನ್ನೂ ಯಜಮಾನನನ್ನೂ ನಾಶಗೈಸಿ ಪ್ರೇತಾವಾಸದಂತೆ ಮಾಡಿದನು. ಈಗ ನಿನ್ನ ಕಮಲ ಮನೋಹರ ನಯನವೀಕ್ಷಿತವಾಗಿ ಯಜ್ಞವೂ ಯಜಮಾನನೂ ಪುನರುಜ್ಜೀವಿತರಾದರು. ನಿನ್ನ ಈ ದಯೆಯು ಸದಾ ನಮ್ಮ ಮೇಲಿರಲಿ!

ಋಷಿಗಳೆಂದರು– ಲೋಕವಿಲಕ್ಷಣ ಪವಿತ್ರಕರ್ಮನಾದ ನೀನೇನು ಮಾಡಿದರೂ ಆ ಕರ್ಮದ ಲೇಪವನ್ನು ಹೊಂದುವುದಿಲ್ಲ. ಬ್ರಹ್ಮಾದಿ ದೇವಗಣ ಸಂಪದ್ಧಾತ್ರಿಯಾದ ಜಗದ್ಧಾತ್ರಿ ಸ್ವಯಮಾಗಿ ಬಂದು ನಿನ್ನ ಸೇವಿಪಳು. ಸ್ವಾಭಾವಿಕವಾದ ಈ ರಮೆಯ ಸೇವೆಯು ನಿತ್ಯವು, ಅವ್ಯಾಜವೆಂದರಿತು, ಸೇವೆಯಿಂದ ಪ್ರಯೋಜನ ಪ್ರಾಪ್ತಿಯನ್ನೂ ಅರಿಯದೆ ಸುಮ್ಮನಿರುವೆ.

ಸಿದ್ಧರೆಂದರು – ಈ ನಮ್ಮ ಮನೋವಾರಣವು ಕ್ಲೇಶದಾವಾಗ್ನಿ ತಪ್ತವಾಗಿ ತೃಷಾರ್ತಿಯಿಂದ ನಿನ್ನ ಕಥಾಮೃತನದಿಯಲ್ಲಿ ಮಗ್ನವಾಗಿ ಬ್ರಹ್ಮಾನಂದವನ್ನು ಪೊಂದಿ ಬಿಟ್ಟುಬರಲಾರದೆ ಇದೆ.

ಯಜಮಾನಿ ಪ್ರಸೂತಿ ತುತಿಸಿದಳು– ಈಶ! ನಿನಗೆ ಸ್ವಾಗತವು. ಕಾಂತೆಯಾದ ಶ್ರೀದೇವಿಯಿಂದ ಬಂದು ನಮಗೆ ಪ್ರಸನ್ನನಾಗು! ಶ್ರೀನಿವಾಸ! ರಕ್ಷಿಸು. ನೋಡು ನೀನಿಲ್ಲದೀಯಜ್ಞವು ತಲೆಯಿಲ್ಲದೆ ಅಂಗಯುತವಾದ ಪುರುಷನಂತೆ ಶೋಭಿಸದೆ ಇಂದು ನೀ ಬಂದಿದ್ದರಿಂದ ಸರ್ವಾಗಂಸುಂದರವಾಯಿತು.

ಲೋಕಪಾಲಕರೆಂದರು– ಸಕಲಲೋಕಗಳನ್ನು ವೀಕ್ಷಿಸುವ ಸಾಕ್ಷಿಯಾದ ನಿನ್ನ ರೂಪವನ್ನು ನೋಡಿ ಅಮಂಗಲವಿಷಯಗ್ರಹಣಲಾಲಸವಾದ ನಮ್ಮ ಕಣ್ಣು ಪವಿತ್ರವಾಯಿತು. ಪೂರ್ಣ

ಜ್ಞಾನಮಹದಧೇ! ಕಾಣಿಸುವುದು ಕಾಣಿಸದಲ್ಲೆಡೆ ಇರುವುದು ನಿನ್ನ ಇಚ್ಛೆ! ಪಂಚಭೂತಗಳಲ್ಲಿ ತತ್ತ್ವಶಕ್ತಿಪ್ರದನಾಗಿ ಷಷ್ಠನೆನಿಸುವ ನಿನಗೆ ನಮೋವಾಕವು.

ಯೋಗೇಶರೆಂದರು – ಪ್ರಭೋ! ಮುಕ್ತಪ್ರಿಯ! ಜ್ಞಾನಿಗಳೆಂದರೆ ನಿನಗೆ ಬಲು ಪ್ರೀತಿ! ನಿನ್ನ ದಾಸರಾದ ನಮ್ಮನ್ನು ಸಲಹು. ಸ್ಥಿರಚರಾತ್ಮರ ಜಗದಂತರ್ಯಾಮಿಯಾದ ನಿನ್ನ ರೂಪ ಗುಣಗಳಿಗೆ ಪರಸ್ಪರ ಭೇದವಿಲ್ಲ! ಅನ್ಯಥಾಜ್ಞಾನಿಗಳು ನೀನು ಲೋಕವಿಲಕ್ಷಣನೆಂದು ತಿಳಿಯಲಾರದೆ ಹಟದಿಂದ ಕೆಡುವರು! ಜಗದುತ್ಪತ್ತಿಸ್ಥಿತಿಲಯಗಳನ್ನು ಮಾಡಲು ರಜಸ್ಸತ್ತ್ವತಮೋಗುಣಗಳನ್ನು ಸ್ವೇಚ್ಛೆಯಿಂದ ಸ್ವೀಕರಿಸಿ, ಗುಣವಿಕಾರರಹಿತವಾದ ಜ್ಞಾನಾನಂದಾದಿ ಗುಣಸಂಪನ್ನನಿಗೆ ನಮಸ್ಕಾರವು!

ಬ್ರಹ್ಮನಿಂತೆಂದನು– ಧರ್ಮಪ್ರಭೋ! ಧರ್ಮಫಲಪ್ರದ! ತ್ರಿಗುಣರಹಿತನಾದ ನಿನ್ನ ತತ್ತ್ವಜ್ಞಾನವನ್ನು ಸಾಕಲ್ಯೇನ ನಾನರಿಯೆ, ಇತರರ ಪಾಡೇನು?

ಅಗ್ನಿಯು ನುತಿಸಿದನು– ನೀ ಕೊಟ್ಟ ತೇಜಸ್ಸಿನಿಂದ ಉರಿಯುತ್ತಾ ನಾನು ಆಜ್ಯಸಿಕ್ತವಾದ ಹವಿರಾದಿಗಳನ್ನುಂಡು ಹವ್ಯವಾಹನನೆನಿಸಿರುವೆ. ದೇವತೆಗಳನ್ನು ಸೇರಿ ಅವರವರ ಭಾಗಗಳನ್ನು ಅವರಿಗೆ ಕೊಡುವೆ. ಶ್ರಾವಯ, ಅಸ್ತುಶ್ರೌಷಟ್, ಯಜ, ಯೇಯಜಾಮಹೇ, ವೌಷಟ್ ಎಂಬ ಯಜುರ್ಮಂತ್ರಗಳಿಂದ ಪೂಜಿತನಾಗುವ ಯಜ್ಞಪುರುಷ, ಯಜ್ಞೇಶ, ಯಜ್ಞಭಾವನ, ಯಜ್ಞಭುಕ್ ಎಂಬ ಪಂಚರೂಪನಾದ ಹರಿಯೇ! ನಿನಗೆ ನಮಿಸುವೆ.

ದೇವತೆಗಳೆಂದರು – ಪೂರ್ವದಿ ಪ್ರಳಯೋದಕದಲ್ಲಿ ಉರಗೇಂದ್ರಶಯನನಾಗಿ ವಿಶ್ವವನ್ನೇ ಸ್ವೋದರದಲ್ಲಿಟ್ಟು ಮಲಗಿದ್ದ ನೀನು ಸನಕಾದಿ ಯೋಗಿಜನ ಹೃದಯಾರವಿಂದಗತನಾಗಿ ಅವರ ಶಾಸ್ತ್ರವಿಚಾರರೂಪ ಮಂಥನಕ್ಕೆ ಒಲಿದು ಮೋಕ್ಷಾಮೃತವನ್ನು ಅನುಗ್ರಹಿಸಿದೆ. ಅದೇ ನಿನ್ನನೀಗ ನಯನಾಂದವಾಗಿ ನೋಡುತ್ತಿರುವ ಭೃತ್ಯರಾದ ನಮ್ಮನ್ನೂ ಸಲಹು!

ಗಂಧರ್ವರು– ಬ್ರಹ್ಮರುದ್ರೇಂದ್ರಾದಿ ಸಮಸ್ತ ದೇವತೆಗಳು ಮರೀಚ್ಯಾದಿ ಪ್ರಜೇಶರು ನಿನ್ನ ಕಿಂಕರರು. ಈ ಬ್ರಹ್ಮಾಂಡವೇ ನಿನ್ನ ಆಟದ ಮನೆ. ಪೂರ್ಣಗುಣನಾದ ಪ್ರಭೋ! ನಿನಗೆ ನತಿ ಎಂದರು.

ವಿದ್ಯಾಧರರು- ನಿನ್ನಿಚ್ಛೆಯಿಂದ ಬಂದ ಈ ಪ್ರಕೃತಿಬಂಧವೀಶರೀರದಲ್ಲಿ ನಾನೆಂದು ನನ್ನದೆಂದು ದುರಭಿಮಾನದಿಂದ ವಿಷಯಲಾಲಸನಾಗಿ ಮಾರ್ಗವನ್ನು ಬಿಟ್ಟು ನಡೆದರೂ ನಿನ್ನ ಕಥಾಮೃತಪಾನರತನಾಗಲು ಅಚಿರದಲ್ಲಿಯೇ ಉದ್ಧೃತನಾಗುವನು ಎಂದರು.

ಬ್ರಾಹ್ಮಣರು- ನೀನೇ ಯಜ್ಞ! ನೀನೇ ಹವಿಯು! ನೀನೇ ಮಂತ್ರವು! ನೀನೇ ಸಮಿದ್ದರ್ಭಪಾತ್ರ ಪವಿತ್ರಗಳು! ನೀನೇ ಋತ್ವಿಕ್ ಸದಸಸ್ಪತಿಗಳು ! ದಂಪತಿ, ದೇವತಾ, ಅಗ್ನಿಹೋತ್ರ, ಸ್ವಧಾ, ಸ್ವಾಹಾ, ಸೋಮ, ಆಜ್ಯ, ಪಶು ಎಲ್ಲವೂ ನೀನೇ! ನೀನಿಲ್ಲದಿರೆ ಅವೇನೂ ಅಲ್ಲ. ನೀನಿದ್ದರೆ ಅವುಗಳಿಗೆ ಸ್ವ– ಸ್ವಕಾರ್ಯನಿರ್ವಹಣ ಶಕ್ತಿಯು. ಸರ್ವಾಂತರ್ಯಾಮಿ! ಸರ್ವಶಬ್ದಾಭಿಧೇಯ! ಸರ್ವಸ್ವಾಮಿನ್! ನಿನಗೆ ನಮಃ. ಮಹೀಮಂಡಲವನ್ನು ರಸಾತಲದಿಂದ ತರಲು ಮಹಾಸೂಕರನಾದೆ. ಗಜವು ಪದ್ಮವನ್ನಂತೆ ಲೀಲೆಯಿಂದ ಭೂಮಿಯನ್ನು ದಂಷ್ಟ್ರಾಗುದಿ ನಿಲ್ಲಿಸಿ ಉದ್ಧರಿಸಿ ಘುರ್ಘುರ ಧ್ವಾನವನ್ನು ಮಾಡಿ, ನುತಿಸುವ ಬ್ರಹ್ಮಾದಿ ಭಕ್ತರನ್ನು ಪೊರೆದೆ. ಹೇ ಯಜ್ಞವರಾಹನೇ! ನಿನಗೆ ನಮಃ ಎಂದರು.

ಸಾಮಗರು– ಸತ್ಕರ್ಮವಂ ಬಿಟ್ಟು ನಮ್ಮ ಕೈಬಿಡಬೇಡ! ಪ್ರಸನ್ನನಾಗು! ಸಾಮ ಗಾನನುತ! ಹರೇ! ನಿನ್ನ ಕೀರ್ತನೆಯಿಂದ ಯಜ್ಞವಿಘ್ನಗಳು ದೂರಾಗುವುವು. ನಿನಗೆ ನಮಸ್ಕಾರವೆಂದರು. ಮೈತ್ರೇಯನು ಪುನಃ ಹೇಳುವನು–

ವಿದುರಾ! ಇಂತು ದಕ್ಷನು ವೀರಭದ್ರನಿಂದ ಯಜ್ಞವನ್ನು ಯಜ್ಞಭಾವನನಾದ ಹೃಷಿಕೇಶನ ಕೀರ್ತನೆಯಂ ಮಾಡಿ ಸಂಪೂರ್ಣಗೊಳಿಸಿದನು. ಭಗವಂತನು ಸರ್ವಾಂತರ್ಯಾಮಿಯಾಗಿ ಸರ್ವ ಭಾಗಮುಖ್ಯಭೋಕ್ತನಾಗಿಯೂ ತನ್ನ ಭಾಗವನ್ನು ದಕ್ಷನು ಕೊಡಲು ಸ್ವೀಕರಿಸಿ ಸಂತೋಷ ದಿಂತೆಂದನು–

ದಕ್ಷಾ! ಕೇಳು. ನಾನೇ ಬ್ರಹ್ಮನು ನಾನೇ ರುದ್ರನು, ನಾನೇ ಜಗತ್ಪ್ರಭುವು, ಸಾಕ್ಷಿ. ನನಗೆ ಪ್ರೇರಕರಾರೂ ಇಲ್ಲ. ನನಗೆ ಸ್ವಗತಭೇದವಿಲ್ಲ. ಸಮಾಧಿಕರೂ ಇಲ್ಲ. ನನ್ನಿಚ್ಛೆಯಿಂದ ಲಕ್ಷ್ಮೀ ದೇವಿಯಿಂದ ಕ್ರೀಡಿಸಿ ಈ ಜಗವನ್ನು ಸೃಜಿಸುವೆ. ಬ್ರಹ್ಮನಾದ ನಾನೀ ಬ್ರಹ್ಮನಲ್ಲಿ ಸೇರಿ ಸೃಜಿ ಸುವೆ. ನಾನೇ ಪಾಲಿಸುವೆ. ರುದ್ರನಾದ ನಾನೀ ರುದ್ರನಲ್ಲಿ ಸೇರಿ ಸಂಹರಿಸುವೆ. ಇಂತಹ ಸಮಾಧಿಕರಹಿತನಾದ ನನ್ನ ಅಂತರ್ಯಾಮಿ ರೂಪಗಳಿಗೆ ಕ್ರಿಯೆಗಳಿಗೆ ಗುಣಗಳಿಗೆ ಭೇದವನ್ನು ಕಾಣುವನು ಅಜ್ಞಾನಿಯೇ ಸರಿ. ಹಾಗೆ ಕಾಣಲು ಅವನು ಭೌತಿಕ ದೇಹದಿಂದ ಭಿನ್ನನಾಗಿದ್ದೂ ಅಭೇದದಿಂದ ನಾನೇ ದೇಹವೆಂದು ತಿಳಿದಿರುವ ಅನ್ಯಥಾಜ್ಞಾನವೇ ಕಾರಣವು. ಆದರೆ ಈ ಬ್ರಹ್ಮಾದಿಗಳು ನನ್ನ ಪ್ರಿಯರಾದ ಭಕ್ತರು. ಸೃಷ್ಟ್ಯಾದಿ ಕಾರ್ಯಗಳಲ್ಲಿ ಅಂಗಭೂತರು. ಮನುಷ್ಯನು ತನ್ನ ಅಂಗಗಳನ್ನು ಶಿರಃಪಾಣ್ಯಾದಿಗಳನ್ನು ಸ್ವಕೀಯವೆಂದೂ ಸ್ವಾಧೀನವೆಂದೂ ತಿಳಿಯುವುದಿಲ್ಲವೇ? ಅಂತೆಯೇ ಈ ಬ್ರಹ್ಮರುದ್ರರು ನನ್ನಧೀನರು. ನನ್ನ ಇಚ್ಛೆಯನ್ನನು ಸರಿಸಿಯೇ ಸರ್ವದಾ ನಡೆಯುವರು. ಇದನ್ನರಿತು ನಮ್ಮಲ್ಲಿ ಪರಸ್ಪರ ವಿರೋಧವನ್ನೂ ನನ್ನ ಬ್ರಹ್ಮರುದ್ರಾದಿ ರೂಪಗಳಲ್ಲಿ ಭೇದವನ್ನೂ ನೋಡದವನು ಮೋಕ್ಷವನ್ನು ಪಡೆಯುವನು.

ಇಂತು ಭಗವದಾಜ್ಞೆಯನ್ನು ಕೇಳಿ ದಕ್ಷನು ಹರಿಯನ್ನು ಪೂಜಿಸಿ, ದೇವತೆಗಳಿಗೆ ಅವರವರ ಯಜ್ಞಭಾಗಗಳನ್ನರ್ಪಿಸಿದನು. ಕೊನೆಗೆ ಭಗವದ್ಭಕ್ತನಾದ್ದರಿಂದ ಶುದ್ಧಮನಸ್ಕನಾಗಿ ಪಂಚಕ ಪಾಲಕನಾದ ಉದವಸಾನೀಯ ಚರುವನ್ನು ತೆಗೆದುಕೊಂಡು ಭಕ್ತಿಯಿಂದ ಭವನನ್ನು ಸತ್ಕರಿಸಿ ಇತರ ಸೋಮಪಾನಾರ್ಹರನ್ನೂ ಪೂಜಿಸಿದನು. ಇತರರಿಗೂ ಯಥಾಯೋಗ್ಯವಾಗಿ ಪೂಜೆ ಸಲ್ಲಿಸಿ ಸಮಾಪ್ತೇಷ್ಟಿಯನ್ನು ನೆರವೇರಿಸಿದನು. ಋತ್ವಿಜರಿಂದ ಕೂಡಿ ಅವಭೃಥವನ್ನೂ ಮಾಡಿ ಮಹಾನುಭಾವನಾದ ದಕ್ಷನಿಗೆ 'ಧರ್ಮದಲ್ಲೆ ಮನವಿರ'ಲೆಂದನುಗ್ರಹಿಸಿ ದೇವತೆಗಳು ಸ್ವರ್ಗ ವನ್ನು ಸೇರಿದರು.

ವಿದುರಾ! ಇಂತು ದೇಹತ್ಯಾಗವನ್ನು ಮಾಡಿದ ಸತಿದೇವಿಯು ಹಿಮವದ್ರಾಜಮಹಿಷಿಯಾದ ಮೇನಾದೇವಿಯಲ್ಲಿ ಪಾರ್ವತಿ ಎನಿಸಿ ಪುಟ್ಟಿ ಪುನಃ ಶಂಕರನ ಸತಿಯೇ ಆದಳು. ಪರಮಪುರುಷ ನಾದ ಹರಿಯನ್ನು ಪೊಂದುವ ಲಕ್ಷ್ಮಿಯಂತೆ ಅನನ್ಯಭಾವನಳು, ಏಕಪತಿವ್ರತೆಯಾದ ಗಿರಿಜೆ ತಪವಂಗೈದು ಶಂಕರನರ್ಧಾಂಗಿಯಾದಳು.

ದಕ್ಷಾಧ್ವರಧ್ವಂಸಿಯಾದ ಶಂಭುವಿನ ಪವಿತ್ರ ಕಥೆಯನ್ನು ನಾನು ಹಿಂದೊಂದು ಸಲ ಬೃಹಸ್ಪತ್ಯವತಾರನಾದ ಉದ್ಧವನು ಪೇಳಲು ಕೇಳಿ ತಿಳಿದೆ. ರಹಸ್ಯವು, ಯಶಸ್ಕರವು, ಆಯು ರ್ವೃದ್ಧಿಕಾರಣವು, ಪಾಪನಿವಾರಣವು ಆದ ಈ ಪರಮೇಶ ಲೀಲೆಯನ್ನು ನಿತ್ಯವೂ ಶ್ರದ್ಧೆಯಿಂದ ಕೇಳಲು ಪೇಳಲು ಭಕ್ತಿಯು ಹೆಚ್ಚಿ, ಅಹಂಕಾರ ಭಾವನೆಯು ನಶಿಸಿ, ಜ್ಞಾನೋದಯವಾಗುವುದು.

ಮೇನೆಯ ಮಗಳನ್ನು ಪೊಂದಿ ಮೃಡನು ಮೈಥುನರತನಾಗಿ ಬಹುವರ್ಷ ಕಳೆದನು. ಆ ಭೂರ್ಜಟಿಯು ತನ್ನ ಅಮೋಕ್ಷ ವೀರ್ಯಧಾರಣ ಮಾಡಲು ಆಕೆ ಅಸಮರ್ಥಳೆಂದೆಣಿಸಿ, ಆಕಾಶದಲ್ಲಿ ಬಿಡಲಾವೀರ್ಯವನ್ನು ಗಂಗೆ ಸ್ವೀಕರಿಸಿ ತಾನೂ ಸಹಿಸಲಾರದೆ ಒಳಗಿದ್ದ ವಹ್ನಿಗೆ ಕೊಡಲವನದನ್ನು ಸ್ವಾಹಾದ್ವಾರಾ ನದಿತೀರದ ಶರಕಾನನದಲ್ಲಿ ಬಿಟ್ಟನು. ಅದರಿಂದ ಕುಮಾರ ನುದಿಸಿದನು. ಷಟ್‌ಕೃತ್ತಿಕಾದೇವಿಯವರಿಗೆ ಸ್ತನಪಾನ ಮಾಡಿಸಲಿವನು ಷಣ್ಮುಖನಾದನು. ಮುಂದೆ ಅವನೇ ಸರ್ವಾಸುರ ಭಯಂಕರನಾದ ದೇವಸೇನಾಪತಿಯಾದನು.

## ೯. ಧ್ರುವ ಚರಿತೆ

ಮೈತ್ರೇಯನು ಪೇಳಿದನು–

ಬ್ರಹ್ಮಸುತರಾದ ಸನಕಾದಿಗಳು, ನಾರದ, ಋಭುಹಂಸ ಯತ್ಯರುಣರು ಗೃಹಾಶ್ರಮವನ್ನೊಲ್ಲದೆ ಸನ್ಯಾಸಿಗಳಾದರು. ಅಧರ್ಮಪತ್ನಿಯಾದ ಮೃಷೆಯು ದಂಭನನ್ನು ಮಾಯಳನ್ನು ಪಡೆದಳು. ಅವರನ್ನಿಬ್ಬರನ್ನು ಮಕ್ಕಳಿಲ್ಲದ ನಿರ್ಋತಿಯು ಸಾಕಿದನು. ಅವರಿಂದ ಲೋಭನಿಕೃತಿಗಳು, ಅವರಿಗೆ ದುರುಕ್ತಿ ಹಿಂಸಾಕ್ರೋಧರು ಪುಟ್ಟಿದರು. ಹಿಂಸಾಕ್ರೋಧರಿಂದ ಕಲಿಪುಟ್ಟಿದನು. ಕಲಿಯು ದುರುಕ್ತಿಯಲ್ಲಿ ಭಯಮೃತ್ಯುಗಳನ್ನು ಪಡೆದನು. ಭಯ ಮೃತ್ಯುಗಳ ಮಕ್ಕಳೇ ಯಾತನಾನಿರಯರು. ಈ ಅಧರ್ಮ ಸಂತಾನವು ಸಂಸಾರದ ಕಾರಣವೆಂದು ತಿಳಿದು ಶ್ರೇಯಸ್ಕಾಮರೀ ಗುಣಗಳನ್ನು ಸೇವಿಸಬಾರದು. ಸನ್ಯಾಸಿಗಳಂತೂ ದೂರ ಬಿಡಲು ಬೇಕು. ಅನುಸರ್ಗವನ್ನು ಸಂಗ್ರಹವಾಗಿ ವರ್ಣಿಸಿದೆನು. ವಿದುರಾ! ಇದನ್ನು ಮೂರು ಸಲ ಶ್ರದ್ಧೆಯಿಂದ ಕೇಳಿದವನು ಮನಶುದ್ಧಿಯನ್ನು ಮಹಾಪುಣ್ಯವನ್ನು ಪೊಂದುವನು.

ಈಗ ಹರಿಯ ವಿಶೇಷ ಸನ್ನಿದಾನಯುಕ್ತನಾದ ಪುಣ್ಯಕೀರ್ತಿಯಾದ ಸ್ವಾಯಂಭುವ ಮನುಪನ ವಂಶವಿಸ್ತಾರವನ್ನು ಪೇಳುವೆನು.

ಶತರೂಪಾಪತಿಗೆ ಪ್ರಿಯವ್ರತೋತ್ತಾನಪಾದರೆಂಬ ಇಬ್ಬರು ಪುತ್ರರು. ಅವರಲ್ಲಿ ಶ್ರೀ ವಾಸುದೇವನ ರಾಜರಾಜನೆಂಬುವ ರೂಪದ ಆವೇಶವಿತ್ತು. ಜಗದ್ರಂಜಕರಾದ ಅವರಲ್ಲಿ ಧ್ರುವನೆಂಬ ಮಹಾಭಗವದ್ಭಕ್ತನ ತಂದೆಯಾದ ಉತ್ತಾನಪಾದನ ಕಥೆಯನ್ನು ಮೊದಲು ಕೇಳು. ಉತ್ತಾನಪಾದನಿಗೆ ಸುನೀತಿ ಸುರುಚಿ ಎಂಬೀರ್ವರು ಪತ್ನಿಯರು. ಸುರುಚಿಯೇ ಪತಿಯ ಪ್ರೇಮವನ್ನೆಲ್ಲಾ ಸೂರೆಗೊಂಡಿದ್ದಳು. ಸುನೀತಿಯು ತಿರಸ್ಕೃತಳಾಗಿದ್ದಳು. ಅವಳ ಮಗನೇ ಧ್ರುವನು. ಒಂದು ದಿನ ಸುರುಚಿಯ ಮಗನಾದ ಉತ್ತಮನನ್ನು ತೊಡೆಯ ಮೇಲೆ ಕೂಡಿಸಿಕೊಂಡು, ಉತ್ತಾನಪಾದನು ಕುಳಿತಿರಲು ನೋಡಿ, ತಾನೂ ಕೂಡಬೇಕೆಂದು ಲವಲವಿಕೆಯಿಂದ ಧ್ರುವನು ಬಂದನು; ಆದರೂ ರಾಜನು ಧ್ರುವನನ್ನು ಕರೆಯದೆ ಸುಮ್ಮನಿದ್ದನು. ಸವತಿಯ ಮಗನು ರಾಜನ ತೊಡೆಯೇರಲಿಚ್ಛಿಸಿ ಬರುವುದನ್ನು ನೋಡಿ ಗರ್ವಿತಳಾದ ಸುರುಚಿಯು ರಾಜನೆದುರಿಗೇ ಧ್ರುವನನ್ನು ಕುರಿತು ಈರ್ಷೆಯಿಂದ ಹೀಗಳೆದಳು–

ವತ್ಸ! ರಾಜನ ತೊಡೆಯ ಮೇಲೆ ನೀನು– ರಾಜಪುತ್ರನಾದರೂ ನನ್ನ ಹೊಟ್ಟೆಯಿಂದ ಹುಟ್ಟಿಲ್ಲವೆಂದಿಲ್ಲ. ಈ ಸತ್ಯವನ್ನರಿತು ಕೂಡಲು ಪೋಗಬೇಡ. ನಿನಗಾ ಅರ್ಹತೆ ಇಲ್ಲ.

ಯಾವಳೋ ಒಬ್ಬಳ ಗರ್ಭದಲ್ಲಿ ಪುಟ್ಟಿದ್ದೂ ಬಾಲನಾದ ಕಾರಣ ನಾನಿಲ್ಲಿ ಕೂಡಬಾರದೆಂಬುದನ್ನು ತಿಳಿದಿಲ್ಲ. ಹೋಗು. ಒಂದು ವೇಳೆ ಹಾಗೇ ನೃಪಾಸನಾಸೀನನಾಗಲು ಬೇಕಾದರೆ ಕಾಡನ್ನು ಸೇರು; ತಪವನ್ನು ಮಾಡು. ಆಮೇಲೆ ಪುರುಷೋತ್ತಮನಾದ ಹರಿಯ ದಯದಿಂದ ನನ್ನಲ್ಲಿ ಜನಿಸು. ಆಗ ಈ ನಿನ್ನ ಮನೋರಥವು ಕೈಗೂಡುವುದು. ನಡೆ ಇಲ್ಲಿಂದ-ಎಂದು ಪರುಷ ವಚನಗಳನ್ನಾಡಲು ಸಪತ್ನಿಮಾತೆಯ ವಾಗ್ಬಾಣವಿದ್ಧನಾಗಿ ಧ್ರುವನು ನಿಟ್ಟುಸಿರನ್ನು ಬಿಡುತ್ತಾ ದಂಡತಾಡಿತ ಚಂಡಸರ್ಪದಂತೆ ರೋಷಪೂರಿತನಾದನು; ಮಾತಾಡದೆ ಸುಮ್ಮನೆ ಕೂತಿದ್ದ ತಂದೆಯ ಮಂದಿರವನ್ನು ಬಿಟ್ಟು ಅಳುತ್ತಾ ತಾಯಿಯನ್ನು ಸೇರಪೋದನು.

ಅಷ್ಟರಲ್ಲಿಯೇ ಪೌರರು ಪೇಳಲು ನಡೆಮುದೆಲ್ಲವನ್ನೂ ಕೇಳಿ, ಸವತಿಯ ಮಾತಿನಿಂದ ಮನನೊಂದು, ಬಂದ ಕಂದನ ಕಣ್ಣೀರೊರೆಸಿ ಚುಬುಕವಂ ತಡವಿ, ತೊಡೆಯ ಮೇಲೆ ಕೂಡಿಸಿಕೊಂಡು, ಸುನೀತಿ ಧೈರ್ಯವಂ ಬಿಟ್ಟು ಗಟ್ಟಿಯಾಗಿ ರೋದಿಸಿದಳು. ಶೋಕವೆಂಬದಾವ ಜ್ವಾಲೆಗೆ ಸಿಲುಕಿದ ಸುನೀತಿಯ ಮುಖಪಂಕಜವು ಕಂದಿಕುಂದಿತು. ಕಣ್ಣಲ್ಲಿ ಕಂಬನಿ ಹರಿಯಿತು. ಸವತಿಯ ಪರುಷ ವಚನಗಳನ್ನು ನೆನೆಸಿ, ನಿಃಶ್ವಸಿಸಿ 'ಅಯ್ಯೋ! ನನ್ನ ಪಾಪಕ್ಕೆ ಕೊನೆಯೇ ಇಲ್ಲವೇ!' ಎಂದು ತಪಿಸಿ ಬಾಲಕನನ್ನು ನೋಡಿ ಇಂತೆಂದಳು–

ತಾತ ! ಇನ್ನೊಬ್ಬರಿಗಮಂಗಳವನ್ನೆಣಿಸಬೇಡ! ನಾವು ಮಾಡಿದ್ದನ್ನು ನಾವುಣ್ಣುತ್ತಿರುವೆವು. ವತ್ಸಾ! ಪರರಿಗೆ ದುಃಖವಾಗಲೆಂದರೆ ದುಃಖವವನಿಗೆ ಬಂದು ತಗುಲುವುದು. ಸುರುಚಿಯ ಮಾತಿನಲ್ಲಿ ಸುಳ್ಳೇನಿದೆ? ದೌರ್ಭಾಗ್ಯಳಾದ ಎನ್ನ ಹೊಟ್ಟೆಯಲ್ಲಿ ಪುಟ್ಟಿದೆ. ರಾಜನು 'ಇವಳು ನನ್ನ ಹೆಂಡತಿಯೇ' ಎಂದು ಹೇಳಲು ನಾಚುವನಂತಹ ನನ್ನ ಪಾಪಿಷ್ಠೆ ಹಾಲನ್ನು ಕುಡಿದು ಬೆಳೆದೆ. ಮಗನೇ! ಆಗಲಿ ಬಿಡು! ಸುರುಚಿಯ ವಚನವನ್ನು ಸತ್ಯವನ್ನಾಗಿಸಿ ಬಿಡು. ಉತ್ತಮನಂತೆ ತಂದೆಯ ಲಾಲನೆಯನ್ನು ಪೊಂದಲು ಅಧೋಕ್ಷಜನ ಪಾದಾರವಿಂದವನ್ನಾರಾಧಿಸು. ಆ ಪ್ರಭು ಪಾದಾರವಿಂದದ್ವಂದ್ವವನ್ನಾರಾಧಿಸಿ, ಲೋಕವನ್ನು ಸೃಜಿಸಲು ರಕ್ಷಿಸಲು ಸಮರ್ಥನಾಗಿ ಬ್ರಹ್ಮನು ವಾಯ್ವಾತಿ ದೇವವಂದ್ಯಗಮ್ಯವಾದ ಸತ್ಯಲೋಕಾಧಿಪತ್ಯವನ್ನು ಪೊಂದಿರುವನು. ಹಾಗೆಯೇ ನಿಮ್ಮ ತಾತನಾದ ಮನುರಾಜನು ಸರ್ವೋತ್ತಮತ್ತ್ವರೂಪ ಭಕ್ತಿಯಿಂದ, ಶ್ರೀನಿವಾಸನ ಪ್ರೀತಿಗಾಗಿ ಬಹು ದಕ್ಷಿಣಾಕವಾದ ಅನೇಕ ಯಜ್ಞಗಳನ್ನು ಮಾಡಿ ಅಭಕ್ತರಿಗೆಂದಿಗೂ ಸಿಗಲಾರದ ಐಹಿಕಾಮುಷ್ಮಿಕ ಸುಖಗಳನ್ನು ಮತ್ತು ಮೋಕ್ಷವನ್ನು ಕೂಡ ಹೊಂದಿರುವನು. ಶ್ರೀ ಹರಿಯು ಭೃತ್ಯ ವತ್ಸಲನು. ಮೋಕ್ಷೇಚ್ಛುಗಳವನ ಪಾದಾರವಿಂದ ಮಾರ್ಗವನ್ನು ಬಿಡದೆ ಹುಡುಕಿ ಸೇರುವರು. ಇನ್ನಾರನ್ನಾಶ್ರಯಿಸೆಂದು ಪೇಳಲಿ? ಅಂತಹ ಕರುಣಾವರುಣಾಲಯನಾದ ಶ್ರೀಲಲನಾ ಲಲಾಮನನ್ನು ಅನನ್ಯಭಕ್ತಿಯಿಂದ ಯಮನಿಯಮಗಳನ್ನು ಬಿಡದೆ ಮನಸ್ಸಿನಲ್ಲಿಟ್ಟು ಮುಟ್ಟಿ ಭಜಿಸು! ಹೋಗು. ನಮ್ಮ ಕುಲದೇವನೋ ಲಕ್ಷ್ಮೀಕಾಂತನು! ಪುಷ್ಕರ ಪಲಾಶ ಲೋಚನನನ್ನು ಹೊರತಿನ್ನಾರು ನಿನ್ನ ದುಃಖವನ್ನು ನಿವಾರಿಪರು? ಅವನೇ ಗತಿ! ಬ್ರಹ್ಮಾದಿಗಳು ಸೇವಿಸುವ ಚರಣಾರವಿಂದಳಾದ ಅರವಿಂದವಾಸಿನಿಯು ಎಲ್ಲವಂ ಬಿಟ್ಟು ಅಪನ ಪಾದಪಂಕಜವನ್ನಾರಾಧಿಸಲು, ಕೈಲಿ ಕಮಲವಂ ಪಿಡಿದು ಹುಡುಕಿಕೊಂಡು ಬರುವಳು. ಇಂತಹ ನಾರಾಯಣನೇ ನಿನಗೆ ರಕ್ಷಕನಾಗಲಿ!

ಎಂದಾಡಿದ ತಾಯಿಯ ಮಾತು ಮನಸ್ಸಿಗೆ ಸಮಾಧಾನವನ್ನು ಕೊಡಲು, ಧ್ರುವನು ಧೈರ್ಯವಂ ತಾಳಿ, ತಾಯಿಯ ನುಡಿಯನ್ನು ನಡೆಸಲು ಪಿತೃ ಪುರವನ್ನು ಬಿಟ್ಟು ಪೊರಮಟ್ಟನು.

ಈ ವಿಷಯವನ್ನು ಯೋಗಮಹಿಮೆಯಿಂದರಿತ ನಾರದನು ಧ್ರುವನನ್ನನುಗ್ರಹಿಸಲು ಬಂದು ಮುಂದೆ ನಿಂದನು, ತಲೆಯಂ ಮೂಸಿದನು; ತಂದೆಯಂತೆ ಮೈತಡವಿ ಮುತ್ತಿಟ್ಟನು. ಆಶ್ಚರ್ಯದಿಂದ ಇಂತು ಮನಸ್ಸಿನಲ್ಲೇ ಚಿಂತಿಸಿದನು–

ಅಬ್ಬ! ಏನೀ ಕ್ಷತ್ರಿಯರ ತೇಜವು! ಮಾನಭಂಗವನ್ನೆಳ್ಳಷ್ಟು ಸಹಿಸಲಾರರಿವರು! ಐದು ವರ್ಷದ ಹುಡುಗನೂ ಸವತಿ ತಾಯ ನುಡಿಬಾಣಗಳು ನಟ್ಟಿದ ಮನಸ್ಸಿನಿಂದ ಕಿತ್ತೊಗೆಯದ ಇರುವನಾಶ್ಚರ್ಯವಾಗಿದೆ.

ಎಂದು ನಾರದನು ಧ್ರುವನಿಗಿಂತೆಂದನು–

ವತ್ಸ! ಒಬ್ಬನೇ ಎಲ್ಲಿಗೆ ಪೋಗುತ್ತಿರುವೆ? ಮನೆಯಲ್ಲಿ ನಿನಗೇನು ಕಡಿಮೆ?ಏಕೆ ಬಿಟ್ಟು ಬಂದೆ? ಸ್ವಜನರು ಅವಮಾನಿಸಲು ಬಿಟ್ಟು ಬಂದವನಂತೆ ಕಾಣುತ್ತಿರುವೆ. ಏನು ನಿನ್ನ ಕಥೆ? ಹೇಳು.

ಎನಲು ಧ್ರುವನು ಭಕ್ತಿಯಿಂದ ನುಡಿದನು-

ಸ್ವಾಮೀ! ಯೋಗಸಾಮರ್ಥ್ಯದಿಂದ ನಿನಗೆ ತಿಳಿಯದ ವಿಷಯವಾವುದು? ಆದರೂ ಪೇಳಿಕೊಳ್ಳುವೆನು. ಸುರುಚಿಯ ಮಾತು, ಬಾಣದಂತೆ ಮನದಲ್ಲಿ ಗಾಯಗೊಳಿಸಿದೆ. ಐದು ಮಾಯದ ಗಾಯವಾಗಿದೆ. ಸಹಿಸಿಕೊಂಬುವ ಸಮಾಧಾನವೆನಗಿಲ್ಲ.

ನಾರದನು– ಪುತ್ರಾ ಆಟವಾಡಿ ಕಳೆಯುವ ಈ ಬಾಲ್ಯದಲ್ಲಿ ಇರುವ ನಿನಗೆ ಮಾನವೇನು? ಅವಮಾನವೇನು? ಶತ್ರು ಮಿತ್ರರಾರಿಗೆ ? ಅಭಿಮಾನಗ್ರಸ್ತರಾದ ಮನದಿಂದ ಶತ್ರು ಮಿತ್ರ ಭಾವನೆಯು ಪುಟ್ಟುತ್ತಿದೆ. ಅಂತಹ ಮೋಹವನ್ನು ಬಿಟ್ಟವರಿಗೆ ಶತ್ರುಮಿತ್ರರಿಂದ ದುಃಖ ಸುಖಗಳೂ ಇಲ್ಲ. ಉತ್ತಮ ಮಧ್ಯಮ ನೀಚರೆಂದು ಮೂರು ವಿಧ ಜೀವರು, ಅವರವರ ಯೋಗ್ಯತೆಯಂತೆ ಕರ್ಮಗಳನ್ನು ಮಾಡುವರು, ಇದನ್ನರಿತು, ಇದರಲ್ಲಿ ಅವರ ಸ್ವಾತಂತ್ರ್ಯವಿಲ್ಲದೆ ದೈವವಶವಾಗಿಯೇ ಸುಖದುಃಖಗಳು ಬರುವುವು. ಜೀವರು ಸುಖ ದುಃಖ ಕಾರಣರಲ್ಲ ಎಂದು ತಿಳಿದವನಿಗೆ ಶ್ರೀಹರಿಯೇ ಜ್ಞಾನವಿಷಯನಾಗುವನು. ತಾಯಿಯು ಹೇಳಿದ ಮಾತ್ರಕ್ಕೆ ಕೇಳಿ, ಅರಣ್ಯವನ್ನು ಸೇರಿ, ಹರಿಯ ದಯೆಯನ್ನು ಕೋರಿ, ಉನ್ನತ ಪದವಿಯನ್ನೇರಿ, ಸೇಡನ್ನು ತೀರಿಸಲೆಣಿಸಿದೆಯಾ? ಶ್ರೀಹರಿಯು ಮನುಜರಿಗೆ ದುರಾರಾಧ್ಯನೆಂದೇ ನನ್ನ ಅಭಿಪ್ರಾಯವು. ಬಹುಜನ್ಮಗಳಲ್ಲಿ ನಿಸ್ಸಂಗರಾಗಿ ತಪವನ್ನು ಮಾಡಿದ ಮುನಿಗಳೇ ಅವನನ್ನು ತೀವ್ರ ಯೋಗ ಸಮಾಧಿಯಿಂದ ಚೆನ್ನಾಗಿ ಕಾಣದೇ ಇರುವರು. ನೀನೋ ಬಾಲಕನಿರುವೆ. ಕಂತುಪಿತನ ದರುಶನ ನಿನಗೆಂತು ಸಿಗುವುದು? ನಡೆ ಮನೆಗೆ, ಈ ನಿನ್ನ ನಿರ್ಬಂಧವು ನಿಷ್ಫಲವೇ ಸರಿ! ಆ ಕಾಲ ಬರಲಿ.ವೃದ್ಧನಾಗಿ ಶ್ರೇಯಸ್ಸಾಧನೆಯನ್ನು ಮಾಡುವೆಯಂತೆ. ಯಾರೇ ಆಗಲಿ ದೇವನು ಕೊಟ್ಟ ಸುಖದುಃಖಗಳನ್ನು ಸಂತೋಷದಿಂದ ಸ್ವೀಕರಿಸಿದವರು ಕೊನೆಗೆ ಮುಕ್ತರಾಗುವರು. ಲೋಕದಲ್ಲಿ ಶಮದಮಾದಿ ಗುಣಗಳಾದ ಸ್ರೋತ್ತಮರನ್ನು ನೋಡಿ ಸಂತೋಷವನ್ನು ಸಮಾನ ಗುಣರಲ್ಲಿ ಮೈತ್ರಿಯನ್ನೂ ಗುಣಾಧಮರನ್ನು ಕಂಡು ದಯೆಯನ್ನು ತೋರುತ್ತಾ ಬಾಳಿದವನು ದುಃಖತಾಪಗಳನ್ನು ಪೊಂದರೆ ಸುಖಿ ಎನಿಪನು.

ಎನ್ನಲು ಧ್ರುವನು ನಾರದನಿಗಿಂತು ವಿಜ್ಞಾಪಿಸಿದನು–

ಮಹಾತ್ಮಾ! ಕೃಪೆಮಾಡಿ ಮನುಜರಿಗೆ ಸುಖದುಃಖಪೀಡಿತರಾಗದಿರಲು ಸೂಚಿಸಿದ ನಿನ್ನ ಭಗವನ್ನಿಷ್ಠಾಮಾರ್ಗವು ನನ್ನಂತಹವರಿಗೆ ಹೇಗೆ ಸಿಗುವುದು. ಘೋರಕ್ಷಾತ್ರಧರ್ಮದಲ್ಲಿ ಜನಿಸಿದ

ನನ್ನ ಅವಿನಯವನ್ನು ಕ್ಷಮಿಸು. ಸುರುಚಿಯ ದುರ್ವಚನಗಳ ವ್ಯಥೆಯನ್ನು ಮರೆಯುವುದೆ ನ್ನಿಂದ ಸಾಧ್ಯವಿಲ್ಲದಂತಾಗಿದೆ. ತ್ರಿಭುವನದಲ್ಲಿ ಮತ್ಪಿತ್ರಾದಿಗಳಿಗಾರಿಗೂ ಲಭ್ಯವಾಗದಿರುವ ಉತ್ಕೃಷ್ಟಪದವಿಯನ್ನು ಪೊಂದಲಿಚ್ಛಿಸುವ ನನಗೆ ಅದರ ಮಾರ್ಗವನ್ನು ತಿಳಿಸು. ಭಗವಂತನಾದ ಬ್ರಹ್ಮನ ಮಗನಾದ ನೀನಲ್ಲದಿನ್ನಾರೆನಗೆ ಗತಿ? ಜಗತ್ತಿಗೆ ಹಿತವಾಗಿಸಲು ಸೂರ್ಯನಂತೆ ಲೋಕ ಬಂಧುವಾಗಿ ವೀಣೆಯನ್ನು ಮೀಟಿ ನಾರಾಯಣ ಗುಣಗಾನವನ್ನು ಮಾಡುತ್ತಾ ಸಂಚರಿಪೆ.

ಮೈತ್ರೇಯನು ಪೇಳಿದನು-

ವಿದುರಾ! ಪೂಜ್ಯನಾದ ನಾರದನು ಆ ಬಾಲನ ನುಡಿಯನ್ನು ಪೇಳಿ ಪ್ರೀತನಾಗಿ, ದಯೆ ಯಿಂದಿಂತೆಂದನು–

ಧ್ರುವಾ! ನಿನ್ನ ತಾಯಿಯಾಡಿದ ಮಾತಿಗಿಂತ ಹಿತವಿಲ್ಲ. ಭಗವಂತನಾದ ವಾಸುದೇವನನ್ನು ಭಕ್ತಿಯಿಂದ ಭಜಿಸು. ಧರ್ಮವೇ ಆಗಲಿ ಅರ್ಥಕಾಮಗಳೇ ಆಗಲಿ ಮೋಕ್ಷವೇ ಆಗಲಿ, ಬೇಡುವ ಮನುಜನಿಗೆ ಹರಿಚರಣವೇ ಶರಣ್ಯವು. ಆದ್ದರಿಂದ ವತ್ಸಾ! ಯಮುನಾ ತಟದಲ್ಲಿ ಪುಣ್ಯವಾದ ಮಧುವನವಂ ಸೇರು. ಅಲ್ಲಿ ಹರಿಸಾನ್ನಿಧ್ಯವು ನಿತ್ಯವಾಗಿರುವುದು. ಕಾಳಿಂದಿಯ ಪವಿತ್ರ ಜಲದಿ, ತ್ರಿಷವಣಗಳಲ್ಲಿ ಸ್ನಾನ ಮಾಡು. ಉಚಿತ ಕರ್ಮಗಳನ್ನು ಮುಗಿಸು. ಸಮೀಚೀನಾಸನದಲ್ಲಿ ಸಮಾಸೀನನಾಗು. ರೇಚಕಾದಿ ಪ್ರಾಣಾಯಾಮವಂ ಮಾಡು. 'ಯ' ಎಂಬ ವಾಯುಬೀಜದಿಂದ ಪಾಪ ಪುರುಷ ಶೋಷಣವನ್ನೂ 'ರ' ಎಂಬ ಅಗ್ನಿಬೀಜದಿಂದ ಪಾಪ ಪುರುಷ ದಾಹನ ವಿಸರ್ಜನೆ ಗಳನ್ನು ಮಾಡಿ 'ವ' ಎಂಬ ವರುಣ ಬೀಜದಿಂದ ಶರೀರಾಮೃತಾಪ್ಲಾವನವನ್ನೂ ಮಾಡಿ 'ಅ, ಉ, ಮ' ಎಂಬ ತ್ರ್ಯಕ್ಷರ ಸಮೇತ 'ಓಂ' ಎಂಬ ಪ್ರಣವದಿಂದ, ಗುಣಪೂರ್ಣನಾದ ನಾರಾಯಣ ನನ್ನು ಧ್ಯಾನಿಸು. ಪ್ರಾಣಗಳನ್ನು ವಶದಿ ತಾ. ಇಂದ್ರಿಯಗಳನ್ನು ಜಯಿಸಿ ವಿಷಯ ವಿಮುಖವನ್ನಾಗಿಸು. ಮನವನ್ನು ನಿಗ್ರಹಿಸಿ ಮಾಧವನಲ್ಲಿಡು. ಲೋಕಗುರುವಾದ ಬ್ರಹ್ಮನಿಗೂ ಗುರುವಾದ ಶ್ರೀ ಹರಿಯನ್ನು ಧ್ಯಾನ ಮಾಡುವ ರೀತಿಯನ್ನೂ ಕೇಳು.

ಪ್ರಸಾದಾಭಿಮುಖನು, ಪ್ರಸನ್ನವದನನು, ದಯಾವೀಕ್ಷಣನು, ಸುಂದರಭ್ರುವನು, ಚಂಪಕ ನಾಶಿಕನು, ಚಾರುಕಪೋಲನು, ರಮಣೀಯಾಂಗನು, ಅರುಣಾಧರನು, ತರುಣನು, ಶರಣ್ಯನು, ಕರುಣಾರ್ಣವನು, ಪ್ರಸನ್ನವರದನು, ಶ್ರೀವತ್ಸಾಂಕನು, ಘನಶ್ಯಾಮನು, ವನಮಾಲನು, ಶಂಖ ಚಕ್ರ ಗದಾ ಪದ್ಮಧರ ಚತುರ್ಭುಜನು, ಕಿರೀಟಕುಂಡಲ ಕೇಯೂರ ವಲಯ ಕೌಸ್ತುಭ ಕಾಂಚೀಕಲಾಪ ಕಾಂಚನ ನೂಪುರಾದ್ಯನೇಕಾನರ್ಘ್ಯಭೂಷಣಭೂಷಣನು, ಪೀತಾಂಬರನು, ದರ್ಶನೀಯತಮನು, ಶಾಂತನು, ಮನೋನಯನಾನಂದ, ಭಾಜನು, ಪಾದ ಪದ್ಮ ಸಮಾರಾಧಕ ಹೃತ್ಪದ್ಮನಿಲಯನು, ಸುಂದರ ಮಂದಸ್ಮಿತನು, ಸಾನುರಾಗಾವಲೋಕನನು ಆದ ವರದರಾಜನನ್ನು ಶ್ರೀನಿವಾಸನನ್ನು ವಾಸುದೇವನನ್ನು ಜಗನ್ನಾಥನನ್ನು ನಿಯಮದಿಂದ ಧ್ಯಾನಿಸು. ಧ್ರುವಾ! ಪರಮ ಮಂಗಲವಾದ ಹರಿರೂಪವನ್ನಿಂತು ಚಿಂತಿಸು. ಪರಮಾನಂದ ಮಯನಾದ ಸ್ವಾಮಿಯ ದರ್ಶನವಾಗಿ ನಿನ್ನ ಮನವದನ್ನು ಬಿಟ್ಟು, ಬರಲೊಲ್ಲದೆ ಆ ಹರಿಯ ಪಾದಾರವಿಂದ ಮಕರಂದಪಾನ ಮಧುಪವೆನಿಸಿ ಬಿಡುವದು.

ಪರಮ ರಹಸ್ಯವಾದ ಮಂತ್ರವನ್ನಾದರೂ ಉಪದೇಶಿಸಿವೆನು. ಇದನ್ನು ಚೆನ್ನಾಗಿ ಶ್ರದ್ಧೆ ಯಿಂದ ಏಳು ದಿನವೇ ಸಾಕು, ಜಪಿಸಲು ದೇವತಾದರ್ಶನವಾಗುವುದು. 'ಓಂ ನಮೋ ಭಗವತೇ ವಾಸುದೇವಾಯ ಓಂ' ಈ ಮಂತ್ರದಿಂದ ಜಪಿಸಿ ದ್ರವ್ಯಗಳಿಂದ ಪೂಜೆಯನ್ನೂ ಮಾಡು.

ದೇಶಕಾಲಗಳನ್ನನುಸರಿಸಿ ಸಿಕ್ಕ ದ್ರವ್ಯಗಳಿಂದ ಪೂಜಿಸು. ನೀರೇ ಸಾಕು. ಸುಕುಸುಮಗಳು, ವನ್ಯ ಮೂಲಫಲಗಳು, ಶಸ್ತಕುಶಗಳು, ಪ್ರಶಸ್ತ ತುಲಸಿಗಳಿಂದ ತುಲಸೀ ಪ್ರಿಯನನ್ನು ಪೂಜಿಸು. ಶಿಲಾದಿ ಪ್ರತಿಮೆಗಳಿದ್ದರೆ ಸರಿ. ಇಲ್ಲದಿರೆ ಸ್ಥಂಡಿಲದಲ್ಲಿ ನೀರಿನಲ್ಲಿ ಸೂರ್ಯನಲ್ಲಾಗಲಿ ಇರುವೆನೆಂದು ತಿಳಿದು, ವಿಷಯಗಳಿಂದ ಮನಸೆಳೆದು, ಮೌನದಿಂದ ಪೂಜಿಸು. ಶಾಂತನಾಗಿರು. ಮಿತವಾಗಿ ಭಜಿಸು. ವನ್ಯಗಳಾದ ಫಲಮೂಲಗಳನ್ನರ್ಪಿಸಿ ನಿಯತಾರ್ಥಮಾತ್ರ ಸ್ವೀಕರಿಸು. ಸ್ವೇಚ್ಛಾವತಾರನಾದ ಹರಿಯ ಲೀಲೆಗಳನ್ನು ನೆನೆದು, ಹೃದಯಂಗಮನಾದಾ ಪುಣ್ಯಶ್ಲೋಕನನ್ನು ಪೂರ್ವಾಪುಷ್ಪಾದಿಗಳು ಪೂಜಿಸಿದಂತೆ ಸೇವಿಸು. ನಾ ಪೇಳಿದ ಮಂತ್ರದಿಂದ ಸಕಲೋಪಚಾರಗಳ ನ್ನರ್ಪಿಸು. ಮರೆಯಬೇಡ. ಕಾಯೇನ ವಾಚಾ ಮನಸಾ ಭಗವಂತನ ಪೂಜೆಯನ್ನು ಭಕ್ತಿಯಿಂದ ಮಾಡು. ತನ್ನನ್ನು ಚೆನ್ನಾಗಿ ಮಾಯೆ ಇಲ್ಲದೆ ಸೇವಿಪರಿಗೆ ಧರ್ಮಾರ್ಥಕಾಮಗಳನ್ನು ಕೊಡುವ ಬೇಡಿದುದೆಲ್ಲವವನೇ ಕೊಡುವ. ಇಂದ್ರಿಯರತಿಯಂ ಬಿಟ್ಟು ಭಕ್ತಿಯಿಂದ ಭಜಿಪ. ಏಕಾಂತ ಭಕ್ತರಿಗೆ ಮೋಕ್ಷವನ್ನೇ ಕೊಡುವನು.

ಮೈತ್ರೇಯನು ಪೇಳಿದನು–

ವಿದುರಾ! ಹೀಗೆ ನಾರದರಾಡಲು ಕೇಳಿ ರಾಜಪುತ್ರನು ಭಕ್ತಿಯಿಂದ ವಂದಿಸಿ, ಅಪ್ಪಣೆಯನ್ನು ಪಡೆದು, ಮಧುವನವನ್ನು ಸೇರಿದನು. ಹರಿ ಚರಣ ಚರ್ಚಿತವಾದಾ ಪುಣ್ಯಕಾನನದಲ್ಲಿ ನಾರದನು ಪೇಳಿದಂತೆ ತಪವನ್ನು ಮಾಡಲುಪಕ್ರಮಿಸಿದನು.

ನಾರದಲ್ಲಿಂದ ರಾಜಾಂತಃಪುರವನ್ನು ಸೇರಿ ರಾಜನ ಪೂಜೆಯನ್ನು ಸ್ವೀಕರಿಸಿ ಸುಖಾಸೀನ ನಾಗಿಂತೆಂದನು.

ರಾಜನ್! ಏನೋ ದೀರ್ಘಾಲೋಚನೆಯಲ್ಲಿರುವಂತಿದೆ! ಯೋಚನೆ ಏತಕ್ಕೆ ? ಮುಖವೇಕೆ ಬಾಡಿದೆ? ಕಾಮಗಳು ಪೂರ್ಣವಾಗಿ ಲಭಿಸುವವೇ? ಧರ್ಮಾರ್ಥಗಳಿಗೆ ಕೆಡಕಿಲ್ಲವಲ್ಲ?– ಎಂದನು.

ರಾಜನು ಆಗ – ಬ್ರಹ್ಮನ್ !ಏನು ಹೇಳಲಿ?– ಸ್ತ್ರೈಣನಾದೆ ; ದಯೆಯಂ ತೋರದೆ, ಐದೇ ವರ್ಷದ ಬಾಲನನ್ನು ಆದರಿಸದೆ, ಅವನ ತಾಯಿಯನ್ನಂತೆ ದೂರ ಸರಿಸಿದೆ. ಜ್ಞಾನಿಯಾದ ವನು ನಮ್ಮ ಧ್ರುವ ಎಲ್ಲಿಗೆ ಪೋದನೋ, ಗೊತ್ತಿಲ್ಲ. ಅನಾಥನಾದ ನನ್ನ ಮಗುವನ್ನು ಅರಣ್ಯದಲ್ಲಿ ತಿರುತಿರುಗಿ ಸಾಕಾಗಿ ಮಲಗಿರಲು ತೋಳಗಳೇ ತಿಂದವೋ? ಹಸಿವೆಯನ್ನು ತಡೆಯಲಾರದೆ ಮುಖಕಮಲವು ಬಾಡಿ ಎಂತು ಕಷ್ಟಪಡುತ್ತಿರುವನೋ? ಎಷ್ಟು ದುರ್ಮಾರ್ಗನಾದೆ? ಹೆಂಡತಿಯ ದಾಸನಂತಾದ ನನ್ನ ದುರ್ಮತಿಗೇನೆಂಬೆ? ಪ್ರೇಮದಿಂದ ತಂದೆಯೆಂದು ಕೂಡಲು ಬಂದ ಕಂದನನ್ನು ಮನ್ನಿಸದೆ ಸುಮ್ಮನಿದ್ದ ಪಾಪಿ ನಾನಿನ್ನೇನ ಪೇಳಲಿ?-ಎಂದು ಗೋಳಾಡಿದನು. ನಾರದನದನ್ನು ಕೇಳಿ 'ರಾಜನ್ ! ಏಕೆ ಶೋಕಿಸುವೆ? ನಿನ್ನ ಮಗನನ್ನು ನೀನು ನೂಕಲು ದೇವನು ತನ್ನ ಮಗನೆಂದು ರಕ್ಷಿಸುತ್ತಿರುವನು. ಅವನ ಮಹಿಮೆ ನಿನಗೆ ಗೊತ್ತಿಲ್ಲ. ಅವನ ಯಶವೀಜಗವನ್ನೆಲ್ಲ ಬೆಳಗುವುದು. ಇತರಸಾಧ್ಯವಾದ ತಪವನ್ನು ಮಾಡಿ ಲೋಕಪಾಲಕ ರನ್ನು ಮೆಚ್ಚಿಸಿ ನಿನ್ನ ಧ್ರುವನು ಆಚಿರದಲ್ಲೇ ಬರುವನು. ನಿನಗೂ ವಿಪುಲ ಕೀರ್ತಿಯನ್ನು ತರುವನು' ಎಂದು ಹೇಳಿ ನಾರದನು ಪೋದಮೇಲೆ ಉತ್ತಾನಪಾದನು ಮಗನನ್ನೇ ನೆನೆನೆನೆದು ನಾರದನ ವಾಕ್ಯದಂತೆ ಮಗನು ತಿರುಗಿ ಬರುವನೆಂದು ನಂಬಿ ರಾಜ್ಯದಲ್ಲಾಸಕ್ತನಾಗದೆ ಪುತ್ರ ಚಿಂತೆಯಿಂದ ಕಾಲ ಕಳೆಯುತ್ತಿದ್ದನು.

ಧ್ರುವನು ಮಧುವನದಲ್ಲೊಂದು ದಿನ ಉಪವಸಿಸಿ ಸಮಾಹಿತಮನಸ್ಕನಾದನು. ನಾರದನು ಪೇಳಿದಂತೆ ಹರಿಪೂಜಾರತನಾದನು. ಹರ್ಯರ್ಚನೆಯಂ ಮಾಡುತ್ತಾ ಮೊದಲನೆಯ ತಿಂಗಳನ್ನು ಮೂರು ದಿನಗಳಿಗೊಮ್ಮೆ ಒಂದು ಕಪಿತ್ಥವನ್ನೊಂದು ಬದರವನ್ನು ಪಾರಣೆ ಮಾಡುತ್ತಾ ಕಳೆದನು. ದ್ವಿತೀಯ ಮಾಸದಲ್ಲಿ ಆರು ದಿನಕ್ಕೊಂದು ಸಲ ಉದುರಿದ ತೃಣಪರ್ಣಾದಿ ಪಾರಣೆ ಮಾಡುತ್ತಾ ಹರಿ ಪೂಜೆಗೈದನು. ಮೂರನೆಯ ತಿಂಗಳು ಒಂಬತ್ತು ದಿನಕ್ಕೊಮ್ಮೆ ನೀರಂ ಕುಡಿದು ಮಾಡಿದ ಉತ್ತಮ ಶ್ಲೋಕನ ಉಪಾಸನೆಯಿಂದ ಕಳೆದು ಹೋಯಿತು. ನಾಲ್ಕನೇ ತಿಂಗಳಲ್ಲಿ ಹನ್ನೆರಡು ದಿನಗಳಿಗೊಂದು ಸಾರಿ ವಾಯುಭಕ್ಷನಾಗಿ ಜಿತಶ್ವಾಸನಾಗಿ ದೇವನನ್ನು ಧ್ಯಾನಿಸಿದನು. ಐದನೆಯ ತಿಂಗಳು ನೃಪಾತ್ಮಜನು ಒಂದು ಪಾದದ ಮೇಲೆ ನಿಂತು ಸ್ಥಾಣುವಿನಂತೆ ಅಚಲನಾಗಿ ಗುಣಪೂರ್ಣನನ್ನು ಧ್ಯಾನಿಸುತ್ತಾ ಕಳೆದನು. ಸಮಾಧಿನಿರತನಾದ ಧ್ರುವನನ್ನು ಪರೀಕ್ಷಿಸಲು ದೇವತೆಗಳು ವಿಘ್ನಗಳನ್ನೊಡ್ಡಿದರು. ಸರ್ಪ ಗಜ ಸಿಂಹ ಕೂಷ್ಮಾಂಡರೂಪಗಳಿಂದ ಹೆದರಿಸಿದರೂ ಅವರನ್ನು ನೋಡದೆ ಹೃದಯದಿ ಭೂತೇಂದ್ರಿಯ ಸ್ವಾಮಿಯಾದ ನಾರಾಯಣ ರೂಪವನ್ನು ನೋಡುತ್ತಾ ಮಹದಾದಿ ಸಕಲ ತತ್ವಗಳಿಗಾಧಾರನೆಂದು ಆ ಪ್ರಧಾನ ಪುರುಷೇಶ್ವರನನ್ನು ಚಿಂತಿಸಿದನು. ಒಂದು ಪಾದದಿಂದ ನಿಂದು, ತಪವನ್ನು ಮಾಡುವ ಧ್ರುವನ ಬಾರದಿಂದ ಪೀಡಿತನಾಗಿ, ಭೂಮಂಡಲವು ಆನೆಯನ್ನು ಹೊತ್ತು ಪೋಗುವ ನೌಕೆಯಂತೆ, ಎಡಬಲಗಳಿಗೆ ಬಾಗುತ್ತಿತ್ತು. ತತ್ವದೇವರಿಂದ ಕೂಡಿದ ಹರಿಧ್ಯಾನವನ್ನು ಮಾಡುವ ಧ್ರುವನು ಉಸುರಂ ಬಿಡದೆ ಕುಂಭಕದಲ್ಲಿರಲು ಲೋಕದ ಪ್ರಜರಿಗೆ ಉಸುರು ಕಟ್ಟಿದಂತಾಗಿ, ಲೋಕಪಾಲಕರಂ ಬೇಡಿ ಕರೆದುಕೊಂಡು ಶ್ರೀಹರಿಗೆ ಶರಣಾಗತರಾದರು.

ದೇವತೆಗಳು – ಭಗವನ್! ಚರಾಚರ ಲೋಕಪ್ರಾಣಿಗಳಿಗೆ ಪ್ರಾಣರೋಧನಾಗಿರುವ ಕಾರಣ ತಿಳಿಯದೆ, ಕಷ್ಟಪಡುತ್ತಿರುವ ಇವರನ್ನು ಕಂಡು ವ್ಯಸನವಾಗುತ್ತಿದೆ. ಶ್ರೀಶಾ! ದಯಮಾಡು. ಈ ದುಃಖದಿಂದಿವರನ್ನು ಕಾಪಾಡು! ಎಂದು ಬೇಡಲು ಭಗವಂತನು ಭಯವಿಲ್ಲ! ದುಸ್ಸಾಧ್ಯವಾದ ತಪಸ್ಸನ್ನು ಗೈಯುತ್ತಿರುವ ಬಾಲಕನೀದ ಈ ಪ್ರಾಣ ನಿರೋಧವಾಗಿದೆ. ಉತ್ತಾನಪಾದಸುತನು ಸರ್ವವ್ಯಾಪಿಯಾದ ನನ್ನನ್ನು ಚಿಂತಿಸುತ್ತಿರುವುದೇ ಇದಕ್ಕೆ ಕಾರಣವು. ಅವನಿಗೆ ವರಪ್ರದವಾಗಿ ತಪವನ್ನು ನಿಲ್ಲಿಸುವೆನು. ನಿಮ್ಮ ಸಂಕಟವು ನಿವಾರಿತವಾಗುವುದೆಂದು ಸಮಾಧಾನಪಡಿಸಿ ಅವರನ್ನು ಕಳುಹಿದನು.

## ೧೦. ಶ್ರೀಹರಿವರದಾನ

ಆಗ ದೇವತೆಗಳು ಭಯವನ್ನು ತ್ಯಜಿಸಿ ಭಗವಂತನಿಗೆ ನಮಿಸಿ ದೇವಲೋಕವನ್ನು ಸೇರಿದರು. ಭಕ್ತರಕ್ಷಾತುರನಾಗಿ ಶ್ರೀಹರಿಯು ಗರುಡನನ್ನೇರಿ ಮಧುವನವನ್ನು ಸೇರಿದನು. ಯೋಗಸಮಾಧಿಯಲ್ಲಿ ಬುದ್ಧಿಯನ್ನೇಕಾಗ್ರವನ್ನಾಗಿಸಿ ತನ್ನ ಹೃತ್ಪದ್ಮ ಮಧ್ಯದಿ ಕಾಣುತ್ತಾ ಕೋಲ್ಮಿಂಚಿನಂತೆ ಹೊಳೆಯುತ್ತಿದ್ದ ಹರಿಯು ಸಹಸಾ ಕಾಣದಾಗಲು ಧ್ರುವನು ಕಣ್ದೆರೆಮ, ಅದೇ ಸುಂದರ ರೂಪವನ್ನು ಹೊರಗೆ ಕಂಡು, ಸಂಭ್ರಮದಿಂದೆದ್ದು ನಿಂತನು. ಭೂಮಿಯ ಮೇಲೆ ಸಾಷ್ಟಾಂಗ ವೆರಗಿದನು. ವಿನಯವಿನಮಿತಗಾತ್ರನು ಆನಂದಬಾಷ್ಪಾಕುಲಿತನೇತ್ರನಾದ ಬಾಲಕನು ಕಣ್ಣಿಂದ

ಕಮಲನಯನ ಸೌಂದರ್ಯಾಮೃತವನ್ನು ಕುಡಿವನೋ, ಕೈಗಳಿಂದ ಶ್ರೀ ವಲ್ಲಭನನ್ನಾಲಿಂಗಿಸುವನೋ, ಮುಖದಿಂದ ಮುತ್ತಾಡುವನೋ ಎಂಬಂತೆ ಕೈಚಾಚಿ ಕಣ್ಣಿಗೆ ಎವೆ ಇಡದೆ, ನೋಡುತ್ತ ನಿಂತನು. ಆಗ ಸಕಲ ಜೀವಹೃದಯನಿಲಯನಾದ ಶ್ರೀಹರಿಯು ತನ್ನನ್ನು ಪೊಗಳಲಿಚ್ಛಿಸಿ, ವಚನಶಕ್ತಿ ಸಾಲದೆ ತಡಪಡಿಸುತ್ತಾ ಕೈಜೋಡಿಸಿ ನಿಂತಿರುವ ಧ್ರುವನನ್ನು ದಯಮಾಡಿ ವೇದಮಯನಾದ ಪಾಂಚಜನ್ಯದಿಂದ ಅವನ ಕಪೋಲವನ್ನು ಮುಟ್ಟಿ ಅನುಗ್ರಹಿಸಿದನು.

ತತ್‌ಕ್ಷಣವೇ ದೇವನ ಕೃಪೆಯಿಂದ ಲಭಿಸಿದ ವಾಗ್ವೈಭವದಿಂದಲೂ ಸ್ವಯೋಗ್ಯ ಪರತತ್ವವಿಷಯಕ ಜ್ಞಾನನಿಶ್ಚಯದಿಂದಲೂ ಕೂಡಿ ಭಕ್ತಿಭರವು ಉಕ್ಕಿ ಬಂದಂತೆ ಮೈ ನವಿರೆದ್ದು ಸಿಧಾನವಾಗಿ ಭಕ್ತಜನನಿಧಾನನು ವೈಕುಂಠನಿಲಯನಾದ ಪರಮಪುರುಷನನ್ನು ಪೊಗಳಲುಕ್ರಮಿಸಿ ಧ್ರುವನಿಂತೆಂದನು—

ಈ ನನ್ನ ವಾಗಿಂದ್ರಿಯವು ಸ್ವಕಾರ್ಯಾಶಕ್ತವಾಗಿರಲು ಮಹಾಮಹಿಮೆಯಿಂದ ಶರೀರಾದಿಗಳನ್ನು ಪ್ರವೇಶಿಸಿ ಪ್ರೇರಿಸಿ ನುಡಿಸಿದ ಸಕಲೇಂದ್ರಿಯ ನಿಯಾಮಕನು, ಹಸ್ತಚರಣ ಶ್ರವಣ ತ್ವಗಾದೀಂದ್ರಿಯ ದೇವತಾ ಪ್ರವರ್ತಕನು ಆದ ಪೂರ್ಣಷಡ್ಗುಣಾ! ನಾರಾಯಣಾ! ನಿನಗೆ ನಮಸ್ಕಾರವು. ಮಾಯೆಯೆನಿಸಿದ ಶ್ರೀದೇವಿಯನ್ನು ಕೂಡಿ ಸ್ವತಂತ್ರನಾದ ನೀನು ಕ್ರೀಡಿಸಲಿಚ್ಛಿಸಿ ಮಹದಾದಿ ತತ್ತ್ವಗಳನ್ನು ಸೃಜಿಸಿದೆ. ಜೀವರನ್ನು ಕಂಡು ದಯೆಯಿಂದ ಅವರಿಂದ ಕೂಡಿ ಶರೀರಾದಿಗಳನ್ನು ಪೊಕ್ಕು ಕರ್ಮಫಲವನ್ನರಿಯಗುಣಿಸುತ್ತಾ ಸಾಧನವನ್ನೂ ಮಾಡಿಸುತ್ತಾ ಪೊರೆವೆ. ನಿನಗೆ ನತಿಯು. ವಿವಿಧ ಕಾಷ್ಠಗಳಲ್ಲಿರುವ ಅಗ್ನಿಯಂತೆ ಸರ್ವಜೀವಾಂತರ್ನಿಯಾಮಕನಾದ ನೀನು ತ್ರಿಗುಣಕೃತ ಲೇಪವಿಲ್ಲದೆ, ಸ್ವಗತ ಭೇದವಿವರ್ಜಿತನಾಗಿರುವೆ. ನಿನ್ನ ನಂಬಿದವನಿಗೆ ನೀ ಜ್ಞಾನವನ್ನು ಕೊಡುವೆ. ಆಗ ಅವನು ಮಲಗಿ ಎದ್ದವನಂತೆ ಕಣ್ತೆರೆದು, ಸಕಲವನ್ನು ಸರಿಯಾಗಿ ನೋಡುವನು. ಜ್ಞಾನಿ ಎನಿಸುವನು. ಇಂತಹ ಮೋಕ್ಷಾದಿ ಸಕಲ ಪುರುಷಾರ್ಥಪ್ರದವಾದ ನಿನ್ನ ಪಾದಮೂಲವನ್ನು ಆರ್ತ ಬಂಧೋ! ಯಾವ ಕೃತಜ್ಞನು ಮರೆತುಬಿಡುವನು? ಅಜ್ಞಾನದಿಂದ. ದೂರಮಾಡಿ ಜ್ಞಾನದವಾದ ನಿನ್ನ ಚರಣವೇ ಶರಣ್ಯವು! ಕೆಲವರು ನಿನ್ನ ಮಾಯೆಗೆ ಸಿಲುಕಿ ಜನನ ಮರಣ ರೂಪ ಸಂಸಾರ ತಾರಕನಾದ ನಿನ್ನನ್ನು ಸಂಸಾರಿಕ ಹೇಯ ಸುಖಗಳನ್ನೇ ಬೇಡುತ್ತಾ ಪೂಜಿಸುವರು. ಭಕ್ತಾಭೀಷ್ಟದಾನ ಕಲ್ಪತರುವಾದ ನಿನ್ನಿಂದ, ಪಶು ಯೋನಿಯಲ್ಲಿಯೂ ಸಿಗಬಹುದಾದ ವಿಷಯಗಳನ್ನು ಬೇಡಿ ಕೆಡುವವರಿಗೆ ನಿನ್ನಿಂದ ಬರುವ ಮೋಕ್ಷಾನಂದವೆಂತು ಸಿಗುವುದು? ನಾಥ, ಶರೀರಾಧಾರಿಗಳಿಗೆ ನಿನ್ನ ಪಾದಪದ್ಮಧ್ಯಾನದಿಂದಲೋ, ನಿನ್ನ ಭಕ್ತ ಜನರಿಂದ ಮತ್ತು ನಿನ್ನ ಭಕ್ತರ ಕಥಾ ಶ್ರವಣದಿಂದಲೋ ಆಗುವ ಆನಂದವು ಧ್ಯಾನಾದಿಸಾಧನ ಪರಿಪೂರ್ಣರಲ್ಲದ ಅಪಕ್ವ ಮುಕ್ತರಾಗುವ ಅವರವರಿಗೆ ಮೋಕ್ಷದಲ್ಲಿಯೂ ಸಿಗಲಾರದು. ಅಂದಮೇಲೆ ಕಾಮ್ಯಕರ್ಮಗಳನ್ನು ಮಾಡಿ ಸ್ವರ್ಗವನ್ನು ಸೇರಿ ಹರೇ! ನಿನ್ನ ಭ್ರೂ ವಿಜೃಂಭ ಕರವಾಲದಿಂದ ಕಡಿದು ಕೆಡಹುವ ವಿಮಾನದಿಂದ ಕೆಳಗುರುಳುವವರು ತಮ್ಮ ಕರ್ಮಸಾಧ್ಯಜ್ಞಾನದಿಂದ ಸ್ವರ್ಗವಂ ಸೇರಿ ವಿಮಾನಗಳನ್ನೇರಿ ನಂದನಾದಿಗಳಲ್ಲಿ ಅಲ್ಲಿಂದಲ್ಲಿಗೆ ತಿರುಗುತ್ತಾ ಪಡುವ ಸುಖವಿನ್ನೇನು ಲೆಕ್ಕ? ನಿನ್ನಲ್ಲಿ ನನಗೆ ಭಕ್ತಿಪ್ರವಾಹವು ನಿರಂತರವೂ ನಿರ್ವಾಜ್ಯವೂ ಆಗಲಿ! ನಿರ್ಮಲ ಮನಸ್ಕರು ಶರ್ಮದ ಹರಿಕಥಾ ರಚನವಚಸ್ಕರಾದ ನಿನ್ನ ಭಕ್ತರ ಸಂಗವೆನಗಾಗಲಿ ! ನಿನ್ನ ಕಥಾಮೃತಪಾನಮತ್ತಚಿತ್ತನಾಗಿ ಈ ಸಂಸಾರ ವ್ಯಸನ ಸಾಗರವನ್ನವಲೀಲೆಯಾಗಿ ದಾಟಿಬಿಡುವಂತೆ ಮಾಡು! ಸ್ವಪುತ್ರ ಮಿತ್ರ ಕಳತ್ರ ಗೃಹರಾಮ ಸಂಪತ್ಪರಿಜನರನ್ನು ಸ್ಮರಿಸುವವರು

ನಿನ್ನನ್ನು ನೆನೆಯುವುದಿಲ್ಲ. ಆದರೆ ಅಂಬುಜನಾಭ! ನಿನ್ನ ಪದಾರವಿಂದಸುಗಂಧಲೋಲುಪರಾದ ಭಕ್ತ ಜನ ಪ್ರಸಂಗವನ್ನೊಮ್ಮೆ ಮಾಡಲು ಸಾಕು. ಈ ಭಕ್ತಭಕ್ತರು ಕೂಡಕ ಸ್ವಪುತ್ರಮಿತ್ರ ಕಳತ್ರ ಗೃಹಾರಾಮ ಸಂಪತ್ಪರಿಜನರನ್ನು ಸ್ಮರಿಸುವುದೇ ಇಲ್ಲ. ಪಶುಪಕ್ಷಿಸರ್ಪದೇವದಾನವ ಮಾನವರೆಲ್ಲರೂ ತೇಜೋಬನ್ನ ನಿರ್ಮಿತ ಶರೀರವೇ ಆಗಿರುವರು. ಈ ಜಗವೆಲ್ಲ ಮಹಾದಾದಿ ತತ್ತ್ವ ನಿರ್ಮಿತವೂ ಅಹುದು. ಇಂತಹ ಚರಾಚರಜಗವೆಲ್ಲವೂ ನಿನಗೆ ಸ್ಥೂಲರೂಪವೆನಿಸಿ ಪ್ರತಿಮೆಯಂತೆ ವಿರಾಜಿಸುತ್ತಿದೆ. ಹೃದಯದಲ್ಲಿ ಅಣುವಾದ ಜೀವನಿಗೆ ಬಿಂಬವೆನಿಸಿ ಅಣು ತಮನಾಗಿರುವವನೂ ನೀನೇ! ಇಂತಹ ನಿನ್ನ ಮಹಾಮಹಿಮೆಯನ್ನು ಮಹಾಲಕ್ಷ್ಮಿಯೇ ಸಾಕಲ್ಯೇನ ತಿಳಿಯಲಾರಳು. ಇನ್ನು ನಮ್ಮಂತಹವರ ಪಾಡೇನು? ಪ್ರಳಯೋದಧಿಯ ಶೇಷ ತಲ್ಪದಿ ಅನಲ್ಪಸುಖಿನಾಗಿ, ರಮಾಸಖಿನಾಗಿ, ಜಗವನ್ನೆಲ್ಲ ಉದರದಲ್ಲಿಟ್ಟು ಮಲಗಿದ್ದೆ. ಸೃಷ್ಟಿ ಕಾಲದಲ್ಲಿ ನಾಭಿಸರದಿಂದ ಬ್ರಹ್ಮನನ್ನು ಪಡೆದು, ಅವನಿಂದ ಲೋಕಸೃಷ್ಟಿಯನ್ನು ಮಾಡಿಸಿದ ಮಹಾಪ್ರಭುವೇ! ನಿನಗೆ ನಮಿಸುವೆನು. ನಿತ್ಯಮುಕ್ತನು, ಅಪ್ರಾಕೃತನು, ಜ್ಞಾನಸ್ವರೂಪನು, ವ್ಯಾಪ್ತನು, ನಿರ್ಲಿಪ್ತನು, ಆದಿಪುರುಷನು, ವೇದಮುಖ್ಯವಿಷಯನು ಆದ ಭಗವಂತನೇ! ನಿನಗೆ ನಮಸ್ಕಾರವು! ಬ್ರಹ್ಮಾದಿಗಳು ತಮ್ಮ ಬುದ್ಧಿಗಳಲ್ಲಿ ಸ್ವರೂಪ ಜ್ಞಾನದಿಂದ ನಿನ್ನ ಗುಣ ಗಳನ್ನೆಣಿಸಲು ಪೋಗಿ, ಕೊನೆಗಾಣದೆ ತಾವದ್ಗುಣಚಿಂತನಾನಂದರಾಗಿ ಸುಖಿಪರು. ಇಂತಹ ಅಪ್ರಮೇಯ ಮಹಿಮನೇ! ನಮೋ ನಮಃ ವಿಚಿತ್ರಶಕ್ತಿಯಾದ ನೀನು ಮಹತ್ತೂ ಅಹುದು. ಅಣುವೂ ಅಹುದು. ಲೋಕದಲ್ಲಿ ವಿರುದ್ಧವಿಷಯಗಳಾದ ವಿದ್ಯೆಗಳಲ್ಲವೂ ವೇದಸಂವಾದದಿಂದ ನಿನ್ನನ್ನೇ ಪ್ರತಿಪಾದಿಸುತ್ತಿವೆ. ನೀನು ಜೀವನಲ್ಲ; ಜಗತ್ಕರ್ತನು. ಉಪಾದಾನ ಕಾರಣವಲ್ಲ. ಜಗದ್ಭಿನ್ನನು. ಪರಮಾಣ ಸಮೂಹವಲ್ಲ; ಮುಖ್ಯ ಕಾರಣನು. ಜಗದ್ವ್ಯಾಪ್ತನು. ದೇಹತೋಪಿ ಅನಾದ್ಯನಂತನು. ಆನಂದಮಯನು. ನಿರ್ವಿಕಾರನಿಂತಹ ಜೀವರೊಡೆಯಾ! ನಿನಗೆ ನಮಃ ಸಕಲ ಪುರುಷಾರ್ಥ ಪ್ರದಾನ ನಿಪುಣನಾದ ನಿನ್ನನ್ನು ಆಚಾರ್ಯರಿಂದ ಶಿಕ್ಷಿತರಾಗಿ ಭಕ್ತರು ಪೂಜಿಸಲು, ಬೇಡಿದ್ದನ್ನೆಲ್ಲ ಕೊಡುವೆ. ಪೂಜ್ಯನೇ! ನಿನ್ನ ದೀನವಾತ್ಸಲ್ಯಕ್ಕೇ ನೆಂಬೆ? ಹೊಸತಾಗಿ ಪ್ರಸವಿಸಿದ ಹಸುವು ತನ್ನಸೆಳೆಯನ್ನಂತೆ ಕಾಪಾಡಿ ಅನುಗ್ರಹಿಸುವ ನಿನ್ನ ದಯೆನ್ನಿನ್ನಷ್ಟು ಪೊಗಳುವೆನು ? ಶ್ರೀಹರೇ! ನಮೋ ನಮಃ.

ಮೈತ್ರೇಯನು ಹೇಳಿದನು–

ವಿದುರಾ! ಇಂತು ನಿರ್ಮಲ ಮನದಿಂದ ತನ್ನನ್ನು ನುತಿಸಿದ ರಾಜಸುತನ ಮಾತನ್ನು ಕೇಳಿ, ಸಂತೋಷದಿಂದ ಭಕ್ತವತ್ಸಲನಾದ ಶ್ರೀ ಹರಿಯು ನುಡಿದನು–

ವಿದುರಾ ಇಂತು ನಿರ್ಮಲ ಮನದಿಂದ ತನ್ನನ್ನುನುತಿಸಿದ ರಾಜಸುತನ ಮಾತನ್ನು ಕೇಳಿ, ಸಂತೋಷದಿಂದ ಭಕ್ತವತ್ಸಲನಾದ ಶ್ರೀಹರಿಯು ನುಡಿದನು–

ರಾಜಬಾಲಕ! ನಿನ್ನ ಮನಸ್ಸಿನ ಕೋರಿಕೆಯೆನಗೆ ತಿಳಿದಿದೆ. ಅಯೋಗ್ಯರಿಗೆ ಸಿಗಲಾರದಂತಹ ಧ್ರುವಪದವಿಯನ್ನು ನಿನಗೆ ಕೊಟ್ಟಿರುವೆನು. ಗ್ರಹ ನಕ್ಷತ್ರ ತಾರಕಾ ಮುಖ್ಯ ಜ್ಯೋತಿಶ್ಚಕ್ರವೇ ಅದನ್ನು ಪ್ರದಕ್ಷಿಣೆಸುತ್ತಿರುವುದು. ಅಂತಹ ಪ್ರಕಾಶಮಾನ ಧ್ರುವ ಲೋಕಾಧಿಪತ್ಯವೇನು ಸುಲಭ ವಲ್ಲ. ಅದಕ್ಕೆ ಕಲ್ಪಲಯದಲ್ಲಿಯೂ ನಾಶವಿಲ್ಲ. ಮುಂದಿನ ಕಲ್ಪದವರು ಕೂಡ ಆ ಲೋಕ ದಲ್ಲಿರುವವರು. ಧರ್ಮ, ಅಗ್ನಿ, ಕಶ್ಯಪ, ಇಂದ್ರ, ಸಪ್ತರ್ಷಿಗಳು, ಮುಂತಾದವರು ನಕ್ಷತ್ರಾದಿ ಗಳಂತೆಯೆ ಧ್ರುವನನ್ನು ಸುತ್ತುತ್ತಿರುವರು.

ಧ್ರುವಾ! ನಿಮ್ಮ ತಂದೆಯು ವಾನಪ್ರಸ್ಥ ಧರ್ಮದಿಂದ ಅರಣ್ಯವನ್ನು ಸೇರಲು ತದ್ವತ್ತ ರಾಜ್ಯವನ್ನು ಧರ್ಮದಿಂದ ಮೂವತ್ತಾರು ಸಾವಿರ ವರ್ಷಕಾಲ ಪ್ರಜಾರಂಜಕವಾಗಿ ಪಾಲಿಸು, ಅವ್ಯಾಹತೇಂದ್ರಿಯಾಗಿ ಬಾಳು. ನಿನ್ನ ಸೋದರನಾದ ಉತ್ತಮನು ಬೇಟೆಯಾಡಲು ಪೋಗಿ, ಯಕ್ಷನಿಂದ ಸಂಹರಿಸಲ್ಪಡುವನು. ಆಗ ಸುರುಚಿಯ ಮಗನನ್ನು ಹುಡುಕುತ್ತಾ ವನವನ್ನು ಪೊಕ್ಕು ದಾವಾಗ್ನಿಯಲ್ಲಿ ಸಾಯುವಳು.

ಯಜ್ಞೇಶನಾದ ನನ್ನ ಪ್ರೀತಿಗಾಗಿ ಅನೇಕ ಯಜ್ಞಗಳನ್ನು ಮಾಡಿ ದಕ್ಷಿಣೆಯಿಂದ ತೃಪ್ತರಾದ ವಿಪ್ರರ ಪ್ರಶಂಸೆಯಿಂದ ಸುಖಭೋಗಗಳಿಂದ ಪುಣ್ಯಕರ್ಮಫಲಾನುಭೂತಿಯನ್ನು ಪೊಂದು. ವಾರ್ಧಕದಲ್ಲಿ ಅಭ್ಯಾಸಬಲದಿಂದ ನನ್ನ ವಿಶೇಷ ಸ್ಮರಣೆಯನ್ನು ಮಾಡು. ಅನಂತರ ಸರ್ವ ಲೋಕ ನಮಸ್ಕೃತವಾದೆನ್ನ ಲೋಕವನ್ನು ಸೇರುವೆ. ಪುನರಾವೃತ್ತಿ ರಹಿತವಾದ ಮುಕ್ತಿಯನ್ನೇ ನಿನಗಾಗ ನಾ ಕೊಡುವೆನು.

ಮೈತ್ರೇಯನು ಪೇಳಿದನು–

ಇಂತು ರಮಾಕಾಂತನು ತನ್ನ ಚರಣಾರಾಧನಾಸಾದಿತ ಧ್ರುವಪದನಾದ ರಾಜಪುತ್ರನಿಗೆ ಅಭಯವನ್ನಿತ್ತು ಅವನು ನೋಡುತ್ತಿದ್ದಂತೆಯೇ ಗರುಡಾರೂಢನಾಗಿ ಅಂತರ್ಧಾನವನ್ನು ಪೊಂದಿದನು. ಧ್ರುವನು ಶ್ರೀಹರಿಯ ಚರಣಾರವಿಂದ ಸೇವೆಯಿಂದ ತನ್ನ ಪ್ರತಿಜ್ಞೆಯಂತೆ, ಉನ್ನತ ಧ್ರುವಪದವಿಯನ್ನು ಪೊಂದಿಯು, ಅತ್ಯಂತ ಪ್ರೀತನಾಗದೇ ನಿಜಪುರವನ್ನು ಸೇರಲು ಹೊರಟನು.

ವಿದುರನು ಪ್ರಶ್ನೆ ಮಾಡಿದನು-

ಸರ್ವಜ್ಞನಾದ ಶ್ರೀಹರಿಯ ದರ್ಶನವು ಬಹು ದುರ್ಲಭವು. ಧ್ರುವನು ಆ ಶ್ರೀಶನ ಪಾದಸೇವೆಯಿಂದ ತನ್ನ ಸಂಕಲ್ಪಸಿದ್ಧಿಯನ್ನು ತತ್ತತ್ಕಾಲೋಚಿತ ಪ್ರಯೋಜನಸಹಿತವಾಗಿ ಪಡೆದರೂ ಅಕೃತಾರ್ಥನಂತೆ ಅಸಮಾಧಾನಪಡಲು ಕಾರಣವೇನು? ಪೇಳಿ.

ಎನಲು ಮೈತ್ರೇಯನು ಪೇಳಿದನು–

ಸವತಿ ತಾಯಿಯ ವಾಗ್ಬಾಣಗಳು ಮನದಿ ನಟ್ಟಿದ್ದು ಮರೆಯಲಾರದೆ ಧ್ರುವನು ಕೈವಲ್ಯಪತಿಯಾದ ಕೇಶವನಿಂದ ಮುಕ್ತಿಯನ್ನು ಬೇಡದೆ ಕೆಟ್ಟೆನಲ್ಲ ಎಂದು ಪರಿತಪಿಸಿದನು.

ಧ್ರುವನಿಂತು ಚಿಂತಿಸಿದನು–

ಸನಕಾದಿ ಯೋಗಿಗಳು ಊರ್ಧ್ವರೇತಸ್ಕರಾಗಿ ಮಾಡಿದ ಬಹುತಪಸ್ಸಮಾಧಿಯಿಂದ ಕಂಡ ಶ್ರೀಹರಿಯ ಪಾದಪದ್ಮವನ್ನು ಕೇವಲ ಆರು ತಿಂಗಳಲ್ಲಿ ತಪಿಸಿ ಕಂಡೆ. ರಮಾರಮಣನ ಪಾದಚ್ಛಾಯೆಯಲ್ಲಿ ನಿಂತೆ. ಆದರೂ ಪುನಃ ವಿಷಯಾಸಕ್ತನಾಗಬೇಕಾಯಿತೇ! ಛೀ ನನಗೆ ಧಿಕ್ಕಾರ ವಿರಲಿ! ಮಂದಭಾಗ್ಯವಾದ ನಾನೇ ಸಂಸಾರವೈರಿಯಾದ ಮಾಧವನ ಪಾದಮೂಲವನ್ನು ಪೊಂದಿಯು, ಮತ್ತೆ ಸಾಂತ ಸುಖಲೇಶಗಳನ್ನು ಬೇಡಿ ಪಡೆದೆ. ಏಕೀ ಜಾಡ್ಯವೆನಗೆ ಬಂತು? ದೇವತೆಗಳು ಸಹಿಸದೆ ನನ್ನ ಪರೀಕ್ಷಿಸಲು ಮೋಕ್ಷವನ್ನು ಬೇಡದಂತೆ ನನ್ನ ಬುದ್ಧಿಯನ್ನು ಪ್ರೇರಿಸಿದರೋ ಏನೋ? ನಾರದನು ಹೇಳಿಯೇ ಪೋದನು. ಅವನ ವಚನವನ್ನು ಪಾಲಿಸದೆ ಕೆಟ್ಟೆ. ಅಜ್ಞಾನ ಮಗ್ನನಾದೆ. ಇದೆಲ್ಲವೂ ಶ್ರೀಹರಿಯ ಬಂಧಕಶಕ್ತಿಯ ಮಹಿಮೆಯೇ ಸರಿ! ಅವನಿಲ್ಲದಿನ್ನಾರು ಸ್ವತಂತ್ರರು? ಇಲ್ಲದಿರೆ ಉತ್ತಮನು ತಮ್ಮನೆಂದರಿತೂ ಈರ್ಷ್ಯೆಯಿಂದ ವರ್ತಿಸಿ ನಡೆಯಲು ನಾನಾರು ? ನನಗೆ ಧ್ರುವಪದವಿಯಿಂದೇನು? ಸಾಮ್ರಾಜ್ಯಾಧಿಪತ್ಯದಿಂದ ಮತ್ತೇನು? ಅರಿತೂ ಅವನ್ನೇ ಬೇಡಿದೆ! ಆಯುಸ್ಸೇ ಇಲ್ಲದವನಿಗೆ ಔಷಧದಂತೆ ಈ ನನ್ನ

ಪಶ್ಚಾತ್ತಾಪವು ವ್ಯರ್ಥವೇ ಸರಿ! ಜಗತ್ಪ್ರಭುವನ್ನು ಮೆಚ್ಚಿಸುವ ದುಷ್ಕರ ತಪವನ್ನು ಗೈದು, ಆ ಭವರೋಗನಿವಾರಕನನ್ನು ಕಂಡು ಭವರೋಗವನ್ನೇ ಕೊಡು ಎಂದ ನನ್ನಷ್ಟು ನಿರ್ಭಾಗ್ಯರಿನ್ನಾರು? ಸಾಯುಜ್ಯವನ್ನೇ ಕೊಡುವ ಸ್ವಾಮಿಯು ಬಂದು ನಿಂದಾಗ ಹಾಳು ಮನವೇಕೆ ಮಹಾರಾಜನನ್ನು ಕಂಡು ಭಿಕ್ಷುಕನು ಹುರುಳಿಯನ್ನು ಬೇಡಿದಂತೆ, ವಿಷಯ ಭಿಕ್ಷೆಯನ್ನೇ ಕೇಳಿತು? ಎಂದು ಚಿಂತೆ ಮಾಡುತ್ತಾ ಧ್ರುವನು ಮನೆಯ ಕಡೆಗೆ ನಡೆದನು. ವಿದುರಾ! ಮುಕುಂದ ಪಾದಾರವಿಂದ ರಜವನ್ನು ಧರಿಸಿ ತರಿಸಿದ ಸರಸಿಜನಾಭ ಭಕ್ತರ ಸ್ವಭಾವವೇ ಹಾಗಿರುವುದು. ಅವರು ಹರೀಚ್ಛಾದಿಂದ ಬಂದದ್ದೇ ಸಮೃದ್ಧವೆಂದು ನಿಶ್ಚಯಿಸಿ ಹರಿದಾಸ್ಯವನ್ನಲ್ಲದೇ ಮತ್ತೇನೂ ಬೇಡದಿರುವರು.

ನಂದನನು ಬರುತ್ತಿರುವುದನ್ನು ಕೇಳಿದ ಉತ್ತಾನಪಾದನು ಮೃತನಾದ ಸುತನು ಬದುಕಿ ಬಂದಂತಾಗಿ ಆ ವಾರ್ತೆಯನ್ನು ನಂಬಲಾರದೆ ಅಮಂಗಲನಾದನ್ನಂತಹ ಪಾಪಿಗಂತಹ ಭಾಗ್ಯವೇ? ಎಂದು ಚಿಂತಿಸಿ ನಾರದವಾಕ್ಯವನ್ನು ನೆನೆದು ವಿಶ್ವಸಿಸಿ, ಪ್ರಹರ್ಷವೇಗ ಸಂಭ್ರಮಾನ್ವಿತರಾಗಿ ವಾರ್ತಾಹರನಿಗೆ ಅನರ್ಘ್ಯಮಣಿಹಾರವನ್ನು ಬಹುಮಾನಿಸಿದನು. ಬಂಗಾರದ ರಥದಲ್ಲಿ ಕುಳಿತು ಬ್ರಾಹ್ಮಣರಿಂದಲೂ ಕುಲವೃದ್ಧರಿಂದಲೂ ಅಮಾತ್ಯ ಮಿತ್ರ ಬಂಧುಜನರಿಂದಲೂ, ಕಲೆತು ಶೀಘ್ರವಾಗಿ ಪುರದಿಂದ ಹೊರಟುಬಂದನು. ಸುನೀತಿ ಸುರುಚಿಯರು ಶಿಬಿಕಾರೂಢೆಯರಾಗಿ ಉತ್ತಮನನ್ನು ಕರೆತಂದರು.

ಪುರೋಪವನ ಸಮೀಪದಲ್ಲಿ ಬರುವ ಕುವರನನ್ನು ಕಂಡು ರಥದಿಂದಿಳಿದ ರಾಜನು ದೀರ್ಘವಿರಹತಾಪದಿಂದ ನಿಟ್ಟುಸಿರನ್ನು ಬಿಟ್ಟು ಓಡಿಬಂದು ನಂದನನನ್ನು ಪ್ರೇಮದಿಂದಾಲಿಂಗಿಸಿದನು. ಶ್ರೀಲಕ್ಷ್ಮೀಪತಿಯು ಪದಪದ್ಮಸ್ಪರ್ಶಪಾವಿತಗಾತ್ರನಾದ ಪುತ್ರವನ್ನಾಲಂಗಿಸಿ ತಾನೂ ಪವಿತ್ರನಾಗನು. ತಲೆಮೂಸಿ ಮುದ್ದಾಡಿ ಆನಂದಬಾಷ್ಪಗಳಿಂದ ಮುಂದೆ ಜರುಗುವ ರಾಜ್ಯಾಭಿಷೇಕವನ್ನು ಸೂಚಿಸುವನೆಂಬಂತೆ ಅಭಿಷೇಕಿಸಿದನು. ಉದ್ದಾಮಯಶಃಪೂರ್ಣನಾಗಿ ಬಂದ ಧ್ರುವನು ತಂದೆಯ ಪಾದಗಳಿಗಭಿವಂದಿಸಿ ಆಶೀರ್ವಾದವನ್ನು ಸ್ವೀಕರಿಸಿ, ಮುಂದೆ ನಿಂತ ಮಾತೆಯರಿಗೂ ನಮಿಸಿದನು. ಸಜ್ಜನಮಣಿಯಾದ ಧ್ರುವನು ದ್ವೇಷವನ್ನು ತೊರೆದು ವಂದಿಸಲು ಸುರುಚಿಯು ಪರಮಾನಂದದಿಂದ, ಅವನನ್ನೆತ್ತಿ ಅಪ್ಪಿ ಮುದ್ದಾಡಿ 'ಕೂಸೇ' ಚಿರಂಜೀವನಾಗೆ'ಂದು ಕಣ್ಣೀರಿಡುತ್ತಾ ಹರಸಿದಳು. ವಿದುರಾ! ಮೈತ್ರ್ಯಾದಿ ಗುಣಗಳಿಂದ ಶ್ರೀಹರಿಯ ಪ್ರಸನ್ನತೆಯನ್ನು ಪಡೆದ ಭಕ್ತನಿಗೆ ಸರ್ವಭೂತಗಳು ತಮ್ಮ ತಲವನ್ನು ಸೇರುವ ಜಲದಂತೆ, ತಾವಾಗಿ ಶಿರಬಾಗಿರುವುದರಿಂದೇನಾಶ್ಚರ್ಯವು!

ಆಗ ಉತ್ತಮ ಧ್ರುವರು ಪರಸ್ಪರಾಲಿಂಗನವನ್ನು ಮಾಡಿ ಮೈ ನವಿರೇಳಲು, ಪ್ರೇಮ ವಿಹ್ವಲರಾಗಿ ಕಣ್ಣೀರಿಟ್ಟರು. ಸುನೀತಿಯು ತನ್ನ ಪ್ರಾಣಕ್ಕಿಂತಲೂ ಪ್ರಿಯನಾದ ತನಯನನ್ನು ಸ್ವೀಕರಿಸಿ, ಅಪ್ಪಿ ಆನಂದಭರಿತಳಾದಳು. ಅವಳ ಮನೋವ್ಯಾಧಿಗಳೆಲ್ಲವೂ ದೂರವಾದವು. ಸ್ತನಗಳಿಂದುಕ್ಕಿಬಂದ ಕ್ಷೀರಧಾರೆಗಳು ನೇತ್ರಗಳ ಆನಂದ ಜಲಧಾರೆಗಳಿಂದ ಮಿಳಿತವಾಗಿ ತೊಡೆಯ ಮೇಲೆ ಕೂತು ಮೈಮರೆತ ನಂದನಗಭಿಷೇಕಗೈದವು. ಜನರಾಸ್ವಾಧಿಯನ್ನು ಹಾಡಿ ಹರಸಿದರು. 'ಧನ್ಯಳೆಂದರೆ ಸುನೀತಿಯೇ! ಏಕೆಂದರೆ ನಷ್ಟನಾದ ನಂದನನನ್ನು ಮತ್ತೆ ಪಡೆದಿರುವಳು. ಪ್ರಣತಕ್ಲೇಶನಾಶಕನಾದ ವಾಸುದೇವನನ್ನೆಷ್ಟು ಜನುಮಗಳಲ್ಲಿ ಪೂಜಿಸಿದ ಪುಣ್ಯಫಲವೋ, ಸುದುರ್ಜಯವಾದ ಮೃತ್ಯುವನ್ನು ಗೆದ್ದು ಶ್ರೀಹರಿಯ ಲಾಲನೆಯನ್ನು ಪೊಂದಿ ಬಂದ ಮಗನನ್ನು ನೋಡಿ, ಹಿಗ್ಗುತ್ತಿರುವಳು' ಎಂದು ಜನರು ಪ್ರಶಂಸಿಸುತ್ತಿರಲು ಬಾಲಕರಿಗೆ ದೀರ್ಘಾಯುಪ್ರದ

ವೆಂದು ತಿಳಿದು ಉತ್ತಮ ಧ್ರುವರನ್ನು ಕರಿಣಿಯನ್ನೇರಿಸಿ ರಾಜನೆಲ್ಲರೊಡನೆ ಪುರಪ್ರವೇಶವನ್ನು ಮಾಡಿದನು.

ನಗರವು ದಿವ್ಯಧ್ವಜಪತಾಕಾ ತೋರಣ ಸಮಲಂಕೃತರಾಗಿ ತೋರಿತು. ಬಾಳೆಯ ಕಂಬ ಗಳನ್ನು ಕಟ್ಟಿ, ಅಡಿಕೆಯ ಗೊಂಚಲನ್ನಿಟ್ಟ ದ್ವಾರದೇಶಗಳು, ಮೇಲಿಳಿಬಿಟ್ಟ ಪುಷ್ಪಹಾರ ಮುಕ್ತಾ ಸರ, ಚೂತಪಲ್ಲವವಾರಗಳು, ಮುಂದಿಟ್ಟ ಪೂರ್ಣಕುಂಭ ರತ್ನದೀಪಗಳು, ಕನಕಖಚಿತ ಪ್ರಾಕಾರ ಗೋಪುರ ಶೃಂಗಾರಾಟ್ಟಾಲಕಗಳು, ಮೇಲೆ ಹೋಳೆಯುತ್ತಾ ಹಾರುವ ದಿವ್ಯ ವಿಮಾನಾವಲಿಗಳು, ಪನ್ನೀರು ತಳಿಲನೀರಂ ಚೆಲ್ಲಿದ ರಥ್ಯಾ ಚತ್ವರಮಾರ್ಗಗಳು ಸೇರಿ ಆ ನಗರವು ಸರ್ವಾಂಗಶೋಭಾ ಸಂಪನ್ನವಾಗಿ ವಿರಾಜಿಸಿತು. ನಗರನಾರಿಯರು ಲಾಜಾಕ್ಷತೆ ಪುಷ್ಪಾಕ್ಷತೆಗಳನ್ನಾ ಕುಮಾರನ ಶಿರದಿ ಸುರಿದು, ಮಂಗಲ ನೀರಾಂಜನಗಳನ್ನು ಮಾಡಿದರು. ಬಿಳಿಯ ಸಾಸಿವೆಯನ್ನು ದೂರ್ವಾ ಪುಷ್ಪ ಫಲಗಳನ್ನು ಧಾರೆಯೆರೆದರು. ವಾತ್ಸಲ್ಯಾತಿರೇಕದಿಂದ ಹರಸಿ, ಹರ್ಷಪೂರಿತರಾದರು. ಇಂತು ಸುಂದರ ಸರಸಗಾನವನ್ನಾಗಲಿ ಸುತ್ತಾ ಪುರ ಪ್ರವೇಶವನ್ನು ಮಾಡಿ ಧ್ರುವನು ತಂದೆಯ ಮಂದಿರವನ್ನು ಸೇರಿ ಸುಖದಿಂದಿದ್ದನು. ಸ್ವರ್ಗ ಸೀಮೆಯಲ್ಲಿ ದೇವಪುರುಷನಂತೆ ಸಕಲ ಸೌಭಾಗ್ಯವಿಶಿಷ್ಟನಾಗಿ ಆನಂದದಿಂದ ಕಾಲವನ್ನು ಕಳೆದನು. ಹಾಲಿನ ನೊರೆಯಂತೆ ಮೃದುವಾದ ಶಯ್ಯೆಗಳು, ಆನೆಯದಂತದಿಂದ ಮಾಡಿ ಚಿನ್ನದಿಂದ ಖಚಿತವಾದ ದಿವ್ಯಾಸನಗಳು, ಪಟ್ಟದು ಕೂಲಗಳು, ರತ್ನಮಯ ಕನಕಪರಿಕರಗಳು, ಸಮೃದ್ಧ ಸ್ಫಟಿಕಮಂದಿರಗಳು, ಮಂದಿರಗಳಲ್ಲಿ ಮರಕತಸ್ತಂಭಗಳು, ಸ್ತಂಭಗಳಿಗೆ ನಿಂತ ರತ್ನಲಲನೆಯರು, ಲಲನೆಯರು ಪಿಡಿದಿದ್ದ ಮಣಿದೀಪ ಗಳು, ಮಂದಿರದ ಹಿಂದೆ ರಮ್ಯೋದ್ಯಾನಗಳು, ಉದ್ಯಾನದಲ್ಲಿ ವಿಕಸಿಸಿದ ಸುಗಂಧ ಪುಷ್ಪಗಳು, ಪುಷ್ಪಮಕರಂದ ಪಾನವಂ ಗೈಯಲು ಬಂದ ಮಧುಕರ ವೃಂದಗಳು, ಮಧುಕರ ಝುಂಕಾರಾ ನುಕಾರಿ ಕೂಜ ದ್ವಿಹಂಗ ಸಮೂಹಂಗಳು, ವಿಹಂಗಗಾನ ಸಮಾಕರ್ಣನ ನೃತ್ಯ ದ್ವಿವಿಧ ಸುಂದರ ಲಲನೆಯರು– ಇಂತಹ ಮಹದೈಶ್ವರ್ಯವನ್ನಾತನಯನಿಗೊಪ್ಪಿಸಿ ಉತ್ತಾನಪಾದನು ನಿಶ್ಚಿಂತನಾದನು. ಮಗನ ಮಹಿಮೆಯನ್ನು ಕಣ್ಣಾರ ಕಂಡು ಕಿವಿಯಾರ ಕೇಳಿ ಸಂತೋಷಾಶ್ಚರ್ಯ ತುಂದಿಲನಾಗಿ ಧ್ರುವನಿಗೆ ಪಟ್ಟವನ್ನು ಕಟ್ಟಿದನು. ಪ್ರಕೃತಿಸಮ್ಮತನು ಪ್ರಜಾಹಿತನು ಆದ ಧ್ರುವನಿಗೆಲ್ಲವನ್ನೊಪ್ಪಿಸಿ ಜರಾಶಿಥಿಲವಾದ ತಪಸ್ವಿಗಣಿಮಾಡಿ, ವಿರಕ್ತಿಯನ್ನು ವಹಿಸಿ ಆಶ್ರಮವನ್ನು ಸೇರಿದನು. ಶ್ರೀಹರಿಯ ಧ್ಯಾನದಿಂದ ಪೂತನಾಗಿ ಸದ್ಗತಿಯನ್ನು ಪೊಂದಿದನು.

## ೧೧. ಧ್ರುವ ಚರಿತೆ – ಯಕ್ಷವಿಜಯ

ಮೈತ್ರೇಯನು ಪೇಳಿದನು–

ಧ್ರುವನು ಶಿಂಶುಮಾರನೆಂಬ ಪ್ರಜೇಶನ ಮಗಳಾದ ಭ್ರಮಿಯನ್ನು ಮದುವೆಯಾಗಿ, ಕಲ್ಪವತ್ಸರರೆಂಬೀರ್ವರು ಸುತರನ್ನು ಪಡೆದರು. ವಾಯುಪುತ್ರಿಯಾದ ಇಲೆಯಲ್ಲಿ ಧ್ರುವನು ಉತ್ಕಲನೆಂಬ ಪುತ್ರನನ್ನು ಪಡೆದನು. ಉತ್ಕಲನು ರಾಜ್ಯವನ್ನೊಲ್ಲದೆ ವಿರಕ್ತನಾಗಿ ಯೋಗೇಶ ನೆನಿಸಿದನು.

ಉತ್ತಮನೊಂದುದಿನ ಬೇಟೆಯಾಡಲು ಪೋಗಿ ಗಿರಿಯಲ್ಲಿ ಯಕ್ಷನಿಂದ ಸಂಹೃತನಾದನು. ಸುರುಚಿಯು ಮಗನನ್ನು ಹುಡುಕುತ್ತಾ ಪೋಗಿ ದಾವಾಗ್ನಿಯಲ್ಲಿ ಸಿಕ್ಕು ಮೃತಳಾದಳು. ಈ

ವೃತ್ತಾಂತವನ್ನು ಕೇಳಿ ಧ್ರುವನು ಶೋಕ ರೋಷಪೂರ್ಣನಾಗಿ, ದಿಗ್ವಿಜಯ ರಥವನ್ನೇರಿ, ಪುಣ್ಯ ಜನನಿಲಯವಾದ ಅಲಕಾಪುರಿಯನ್ನು ಸೇರಿದನು. ರುದ್ರಾನುಚರ ಸೇವಿತನಾದ ಹಿಮ ವತ್ಕಂದರದಲ್ಲಿ ಗುಹ್ಯಕ ಸಂಕುಲವಾದ ಸುಂದರ ನಗರವನ್ನು ಮುತ್ತಿ, ರೊದಸೀಕುಹುರವು ಪ್ರತಿಧ್ವನಿಸುವಂತೆ ಶಂಖವನ್ನೂದಿದನು. ಆ ಭಯಂಕರಧ್ವಾನವನ್ನು ಕೇಳಿ, ಯಕ್ಷ ಸತಿಯರು ಭೀತರಾಗಿ ನಡುಗಿದರು. ತತ್‌ಕ್ಷಣವೇ ಅಲಕಾಪುರವನ್ನು ಪೊರಮಟ್ಟು, ಯಕ್ಷರಕ್ಷೋ ಗಣಗಳು ಉದ್ಯತಾಯುಧಪಾಣಿಗಳಾಗಿ ಬಂದು ಧ್ರುವನನ್ನು ಮುತ್ತಿ ಆರ್ಭಟಿಸಿದರು. ಮಹಾವೀರನಾದ ಧ್ರುವನು ಅವರನ್ನು ಪ್ರತ್ಯೇಕವಾಗಿ ಮೂರು ಮೂರು ಬಾಣಗಳಿಂದ ಹೊಡೆದೋಡಿಸಿದನು. ಲಲಾಟಪಟ್ಟ ಫಲಕರೇಖಾ ರಕ್ತಸಿಕ್ತರಾಗಿ ಯಕ್ಷರು ಸೋತು ಧ್ರುವನ ವೀರ್ಯವನ್ನು ಮೆಚ್ಚಿ ಪೊಗಳಿದರು! ರೊಚ್ಚಿಗೆದ್ದು ರೋಷದಿಂದ ದಂಡತಾಂಡಿತ ಭುಜಂಗಮದಂತೆ ಬುಸುಗುಟ್ಟಿ ಆರಾಗು ಬಾಣಗಳನ್ನು ಧ್ರುವನ ಮೇಲೆ ಪ್ರಯೋಗಿಸಿ ಸಿಂಹನಾದವನ್ನು ಮಾಡಿದರು. ಧ್ರುವನವರ ನಾರಾಚವರ್ಗವನ್ನೆಲ್ಲ ಮುರಿದು ಕೆಡಹಲು, ಯಕ್ಷರು ಕುಪಿತರಾಗಿ ಒಟ್ಟುಗಲೆತು, ಒಂದು ಲಕ್ಷ ಹದಿಮೂರು ಸಾವಿರ ವೀರಭಟರೊಂದಿಗೆ ಧ್ರುವನನ್ನು ಬಾಣವರ್ಷದಿಂದಾಚ್ಛಾದಿಸಿದರು. ಧ್ರುವನನ್ನು, ಸಾರಥಿಯನ್ನು, ಮಳೆಯ ಗಿರಿಯನ್ನಂತೆ -ಮುಚ್ಚಿದ ಯಕ್ಷ ಬಲವನ್ನು ನೋಡಿ ಗಗನ ಚಾರಿಗಳು ಸಿದ್ಧರು ಹಾಹಾಕಾರವನ್ನು ಮಾಡಿ 'ಆಯಿತೀ ಧ್ರುವನ ಕೆಲಸ! ಪುಣ್ಯಜನ ಸಮುದ್ರದಲ್ಲಿ ಧ್ರುವ ಸೂರ್ಯನು ಮುಳುಗಿದನು' ಎಂದು ಚಿಂತೆಪಟ್ಟರು. ಯಾತುಧಾನರು ಜಯಮೆಮ್ಮದೆಂದು ಗರ್ಜಿಸಿ ಮೆರೆಯುವಾಗ ಮಂಜನ್ನು ಕೊರೆದು ಬರುವ ಮಾರ್ತಾಂಡನಂತೆ ಧ್ರುವನಾಬಾಣ ಮೇಘವನ್ನು ಸೀಳಿ, ಮೇಲೆದ್ದು ರಥದಲ್ಲಿ ವಿಭ್ರಾಜಮಾನನಾದನು. ಜ್ಯಾಘೋಷದಿಂದ ದ್ವೇಷಿ ಜನ ತೋಷವನ್ನು, ಅಸ್ತ್ರ ಶಸ್ತ್ರಾಳಿಯಿಂದ ಅಸುರಜನ ಪ್ರಾಣವನ್ನೂ, ನಾಶಗೊಳಿಸಿದನು. ಪಿಡುಗಿನ ತುಂಡುಗಳು ಬಂಡೆಗಳನ್ನು ಖಂಡಿಸುವಂತೆ ಧ್ರುವನ ಶರಗಳಾ ಕುಬೇರಭಟರ ಕಾಯಗಳನ್ನು ಕಡಿದೀಡು ಮಾಡಿದವು. ಚಾರು ಕುಂಡಲ ಮಂಡಿತ ಶಿರೋ ಮಂಡಲಗಳು ಭಲ್ಲಖಂಡಿತವಾಗಿ ನೆಲಕ್ಕುರುಳಿದವು. ರಣರಂಗದಲ್ಲಿ ಅಂಗದ ಮಂಡಿತ ಬಾಹುಗಳು ಮಾಲಾಲಂಕೃತ ಮಧ್ಯದೇಹಗಳು, ವಲಯಮನೋಹರ ಹಸ್ತಗಳು, ಮುಕುಟೋಷ್ಣೀಷ ಭೂಷಿತ ಶೀರ್ಷಗಳು ಚೆಲ್ಲಾಪಿಲ್ಲಿಯಾಗಿ ಬಿದ್ದವು. ರಕ್ತದ ಕಾಲುವೆಗಳು ಹರಿದವು. ಕ್ಷತ್ರಿಯವರನಾದ ಧ್ರುವನ ಸಾಯಕಗಳಿಂದ ಸಾವನ್ನಪ್ಪಿ ವೀರಶಯನವನ್ನು ಪೊಂದಿದ ಯಕ್ಷವರರ ಸಂಖ್ಯೆ ಗಣತಾತೀತವಾಗಲು, ಹತಶೇಷರು ಓಡಿ ಹೋಗಿ– ಸಿಂಹವನ್ನು ಕಂಡೋಡಿದ ಆನೆಯ ಹಿಂಡಿನಂತೆ– ಕಾಣದಾದರು. ಮಾನವ ಪ್ರವರನಾಗ ಸಮರಾಂಗಣದಲ್ಲಿ ತನಗೆ ಸಮನಾಗಿ ನಿಲ್ಲುವ ವೀರ ಯಕ್ಷನೊಬ್ಬನನ್ನೂ ಕಾಣದೆ, ಅಲಕೆಯನ್ನೇ ಮುತ್ತಿ ಸುಡಲಿಚ್ಛಿಸಿದನಾದರೂ, ಮಾಯಾವಿಗಳ ಕಾಪಟ್ಯನ್ನರಿಯಲಾರದೆ ಸುಮ್ಮನಾದನು. ಸಾರಥಿಯನ್ನು ಎಚ್ಚರಿಸಿ ಯಕ್ಷರ ಪುನರಾಗಮನವನ್ನು ಕಾದಿರಲು ಬಿರುಗಾಳಿಯಿಂದುಕ್ಕೇರಿ ಭೋರ್ಗರೆವ ಕಡಲ ಭೀಷಣ ಘೋಷಣದಂತಿರುವ ಶಬ್ದವನ್ನು ಕೇಳಿದನು. ಎಲ್ಲ ಕಡೆಯೂ ತೂರಿ ಬರುವ ಧೂಳಿಯನ್ನೂ ಕಂಡನು. ಒಂದೇ ಕ್ಷಣದಲ್ಲಿ ಗಗನವೆಲ್ಲವೂ ಮೇಘಾಚ್ಛನ್ನವಾಗಿ ಕಾರುಗತ್ತಲೆ ಕವಿಯಿತು. ಗುಡುಗಿ ಮಿಂಚುವ ಮೇಘಗಳು ರಕ್ತ ವಿಣ್ಮೂತ್ರ ಮೇದೋವರ್ಷವನ್ನುಗರೆದವು. ಧ್ರುವನ ಮುಂಬದಿಯಲ್ಲಿ ಗಗನದಿಂದ ಬಿದ್ದ ಕಬಂಧಗಳುರುಳಿದವು. ಆಗಸದಿ ಕಂಡ ದೊಡ್ಡ ಗುಡ್ಡದಿಂದ ಗಧಾಪರಿಘಖಡ್ಗಶೂಲ ಮುಸಲಗಳತಿ ವೇಗದಿಂದ ಬಂದು ಬಡಿದವು. ವಿಷವೃಷ್ಟಿಯಾಗಿ ಕಾಲುವೆ

ಹರಿಯಿತು. ಸರ್ಪವ್ಯಾಘ್ರಸಿಂಹ ಗಜಯೂಥಗಳು ಮತ್ತವಾಗಿ ಸಂಚರಿಸಿದವು. ಪ್ರಳಯ ಕಾಲದಲ್ಲಿ ಬರುವಂತೆ ಸಮುದ್ರವು ಉಕ್ಕೇರಿ ವೇಲಾಭೂಮಿಯನ್ನು ನುಂಗಿ ಭೀಷಣ ಗರ್ಜನೆಯನ್ನು ಮಾಡುತ್ತಾ, ಸರ್ವತೋಮುಖವಾಗಿ ವ್ಯಾಪಿಸಿತು. ಇಂತು ಯಕ್ಷರು ಅಸುರ ಮಾಯೆಯಿಂದ ನಿರ್ಮಿಸಿದ ಭಯಂಕರ ಸೃಷ್ಟಿಯನ್ನು ಕಂಡು ಸರ್ವತ್ರಾಜಿತವಾದ ಧ್ರುವನು ಕಂಗೆಟ್ಟವನಂತೆ ಇರಲು ಹಿತಾಕಾಂಕ್ಷಿಗಳಾದ ಸಪ್ತರ್ಷಿಗಳು ಧ್ರುವನನ್ನು ಕುರಿತಿಂತೆಂದರು.

ಔತ್ತಾನಪಾದೇ! ಶಾರ್ಙ್ಗಧನುರ್ಧಾರಿಯಾದ ಶ್ರೀಹರಿಯು ಶತ್ರು ಕೃತ ತಿರಸ್ಕೃತಿಯಿಂದ ನಿನ್ನನ್ನು ರಕ್ಷಿಸಲಿ! ನಾರಾಯಣಾ! ಎಂದೊರಲುವ ಮಾತ್ರದಿಂದ, ನುಂಗುವ ಮೃತ್ಯುವನ್ನು ಹಿಂಸಿಸಿ ಭಕ್ತರು ಮುಕ್ತಿಯನ್ನು ಪೊಂದುವ ಸ್ವಾಮಿಯನ್ನು ನೆನೆದು ನಾರಾಯಣಾಸ್ತ್ರವನ್ನು ಪ್ರಯೋಗಿಸು ಎಂದು ಪೇಳುತ್ತಿದ್ದಂತೆಯೇ ಧ್ರುವನು ಧನುರ್ಮುಷ್ಟಿ ಪ್ರದೇಶದಿ ಶ್ರೇಷ್ಠ, ನಾರಾಯಣಾಸ್ತ್ರವನ್ನು ಜೋಡಿಸಿ ನಿಯಮದಿಂದ ನಮಿಸಿ ಬಿಟ್ಟನು. ತಕ್ಷಣವೇ ಗುಹ್ಯಕ ನಿರ್ಮಿತ ಮಾಯೆಗಳು ಜ್ಞಾನೋದಯವಾಗಲು ನಶಿಸಿ ಪೋಗುವ ಅವಿದ್ಯಾಸ್ಮಿತರಾಗ ದ್ವೇಷಾಭಿನಿವೇಶಗಳಂತೆ ನಷ್ಟವಾದವು. ಋಷಿಚ್ಛಂದೋದೇವತಾಜ್ಞಾನ ಪುರಸ್ಸರವಾಗಿ ಪ್ರಯುಕ್ತರಾದ ಆ ದಿವ್ಯಾಸ್ತ್ರಬಲದಿಂದ ಸುವರ್ಣ ಪುಂಖಗಳಿಂದಲೂ ಕಲಹಂಸ ಪಕ್ಷಿಗಳಿಂದಲೂ ಮೆರೆವ ಶಿಲೀಮುಖಗಳು ಕ್ರೇಂಕಾರವನ್ನು ಮಾಡುತ್ತಾ ವನವಂ ಪೋಗುವ ಮಯೂರಗಳಂತೆ ಶತ್ರು ಸೈನ್ಯವಂ ಪೊಕ್ಕು ಪುಣ್ಯ ಜನರನ್ನು ಪೀಡಿಸಿದವು. ಶತ್ರುಗಳು ಉದ್ಯತಾಯುಧರಾಗಿ ಹೆಡೆ ಎತ್ತಿ ಬರುವ ಸರ್ಪಗಳು ಗರುಡನ ಮೇಲೆರಗಿದಂತೆ ಧ್ರುವನನ್ನು ಮುತ್ತಿದರು. ಅವರ ತಲೆ, ಕೈ, ಕಾಲು, ತೊಡೆಗಳನ್ನು ತೀಕ್ಷ್ಣ ಬಾಣಗಳಿಂದ ಖಂಡಿಸಿ ಧ್ರುವನು ಅವರನ್ನು– ಊರ್ಧ್ವರೇತಸ್ಕರು ಉತ್ಕ್ರಮಿಸಿ ಪೋಗುವ ಸೂರ್ಯಮಂಡಲವನ್ನು ಸೇರಿಸಿ– ವೀರಸ್ವರ್ಗವನ್ನು ಮುಟ್ಟಿಸಿದನು. ಇಂತು ಚಿತ್ರರಥನು ಗುಹ್ಯಕಜನಸಂಹಾರ ಮಾಡುವುದನ್ನು ಸಹಿಸದೆ ಮನುರಾಜನು ಬಂದು ನಿರಪರಾಧಿ ಪುಣ್ಯಜನರಲ್ಲಿ ಕೃಪೆದೋರುತ್ತ ಪೌತ್ರನಿಗಿಂತಾಜ್ಞಾಪಿಸಿದನು–

ವತ್ಸ! ಸಾಕೀ ರೋಷವನ್ನು ಬಿಡು. ಯಥಾರ್ಥಜ್ಞಾನ ಪ್ರತಿಬಂಧಕವಲ್ಲವೇ ರೋಷವು! ನಿರಪರಾಧಿ ಪುಣ್ಯ ಜನರನ್ನು ನಿನ್ನ ಪಾಪಿರೋಷವೇ ಸಂಹರಿಸಿತು. ತಾತ! ಈ ನಿರ್ದೋಷಿಗಳ ಸಂಹಾರ ಕಾರ್ಯವು ಸಜ್ಜನ ನಿಗರ್ಹಿತವು. ಮತ್ತು ನಮ್ಮ ಕುಲೋಚಿತವಲ್ಲದ ಕುಕರ್ಮವನ್ನು ನಿಲ್ಲಿಸಿಬಿಡು. ನಿನ್ನ ತಮ್ಮನ ಕೊಂದವನೊಬ್ಬ; ನೀ ಕೊಂದದ್ದು ನಿರಪರಾಧಿ ಬಹುಯಕ್ಷರನ್ನು! ಇದು ನ್ಯಾಯವೇ? ಹೃಷೀಕೇಶ ಚರಣಾನುವರ್ತಿ ಸಾಧುಗಳಿಗೀಕಾರ್ಯ ಸಲ್ಲದು. ಮನಸ್ಸನ್ನು ನಿಗ್ರಹಿಸದೇ ರೋಷವಶನಾದ ಪಶುಗಳಂತೆ ಅಸಂಖ್ಯಾತ ಪುಣ್ಯಜನರನ್ನು ಕೊಂದೆ. ಸರ್ವಭೂತಾಂತರ್ಯಾಮಿಯು ಸರ್ವಭೂತನಿಯಾಮಕನು, ದುಷ್ಪ್ರಜನ ದುರ್ಲಭನು ಆದ ಶ್ರೀಹರಿಯನ್ನು ಮೆಚ್ಚಿಸಿ ದಿವ್ಯಪದವನ್ನುಗಳಿಸಿದೆ ಹರಿಭಕ್ತನೆನಿಸಿ – ಹರಿಭಕ್ತಸಮ್ಮತನೂ ಆಗಿರುವೆ; ಇಂತಹ ನೀನೆಂತಹ ನಿಂದ್ಯಕಾರ್ಯವನ್ನು ಮಾಡಿದೆ? ಸಜ್ಜನ ಸ್ವಭಾವವೇ ಇದು? ತಿತಿಕ್ಷೆ, ಕರುಣೆ, ಮೈತ್ರಿ, ಸಕಲ ಜಂತು ದಯೆ. ಯಥಾಯೋಗ್ಯ ಶತ್ರು ಮಿತ್ರಾದಿ ಭಾವನೆ ಇವು ಸುಜನ ಗುಣಗಳು. ಶ್ರೀಹರಿಯು ಈ ಗುಣಗಳಿಗೆ ಪ್ರಸನ್ನನಾಗುವನು. ಶ್ರೀಶನು ಪ್ರಸನ್ನನಾದನೆಂದರೆ ಜೀವನು ಪ್ರಾಕೃತ ಗುಣನಿರ್ಮಿತ ಲಿಂಗದೇಹವನ್ನು, ದೇಹಾದ್ಯಹಂಭಾವವನ್ನೂ ತೊರೆದು, ಆನಂದಮಯನ ಸಾನ್ನಿಧ್ಯದಲ್ಲಿ ಆನಂದದಿಂದಿರುವನು. ಸ್ತ್ರೀ ಪುರುಷ ಶರೀರಗಳು ಪಾಂಚ ಭೌತಿಕವು. ಆ ದಂಪತಿಗಳ ಮಿಲನದಿಂದ ನರನಾರೀಶರೀರಗಳು ಪುಟ್ಟವವಿಂತು ಸೃಷ್ಟಿ ಸ್ಥಿತಿ

ಲಯಾದಿಗಳು ಶ್ರೀ ಹರೀಚ್ಛಾನುಸಾರವಾಗಿ ಜರುಗುವುವು. ಗುಣಸಾಮ್ಯವೇ ಪ್ರಳಯವು; ಗುಣ ವೈಷಮ್ಯವೇ ಸೃಷ್ಟಿಯು, ಸೃಷ್ಟ್ಯಾದಿನಿಮಿತ್ತಕಾರಣನು ಶ್ರೀಲಕ್ಷ್ಮೀನಾರಾಯಣನು. ಆ ಪುರುಷೋ ತ್ತಮನು ಗುಣಾತೀತನು. ಕಾರ್ಯಕಾರಣಾತ್ಮಕವಾದೀಜಗವು, ಅಯಸ್ಕಾಂತವನ್ನನುಸರಿಸಿ ಕದಲುವ ಅಯಃಕಣದಂತೆ ಹರಿಪ್ರೇರಿತಚೇಷ್ಟಾಯುಕ್ತವಾಗಿದೆ. ಸೃಷ್ಟ್ಯಾದಿಗಳಲ್ಲಿ ತತ್ತತ್ಕ್ರಿಯಾನುಸಾರಿರೂಪಗಳಿಂದ ಪ್ರಾದುರ್ಭೂತನಾಗಿ ಶ್ರೀಹರಿಯು ಜಗನ್ನಿರ್ಮಾಣ ಸ್ವತಂತ್ರ ಕರ್ತನೆನಿಸಿದನು. ಸೃಷ್ಟ್ಯಾದಿಕರ್ತನಾದರೂ ಕರ್ಮಲೇಪವಿಲ್ಲದವನು, ಶತ್ರುವಾಗದೇ ಕೊಲ್ಲು ವವನು ಆದ ಶ್ರೀಶನ ಮಹಿಮೆಯನ್ನು ಅಸ್ಮಾದೃಶರೇನು ತಿಳಿಯುವರು? ಅವನು ಅಂತಕನಾದ ಅನಂತನು. ಆಯುರಾದಿ ಕಾಲಪ್ರವರ್ತಕನಾದ ನಿತ್ಯನು. ಪಿತ್ರಾದಿಗಳಿಂದ ಪುತ್ರಾದಿಗಳನ್ನು ಸಂಹರಿಸುವನು. ಅವನಿಗೆ ವೈಷಮ್ಯವಿಲ್ಲ; ದಯಾರಹಿತನು ಅಲ್ಲ. ರುದ್ರನಿಯಾಮಕನಾದ ಪ್ರಭುವೀಕಾಲದಲ್ಲಿದ್ದು ಕರ್ಮಫಲಪ್ರದನು ಮೃತ್ಯುಪ್ರದನೂ ಆಗಿರುವನು. ಗಾಳಿಯ ಕೂಡಿ ಹಾರುವ ರಜಃಕಣಗಳಂತೆ ಜನರು ಅಸ್ವತಂತ್ರರಾಗಿ ಶ್ರೀಹರಿಯನ್ನನುಸರಿಸಿ ನಡೆಯುತ್ತಿರುವರು. ಜೀವನಿಗೆ ಆಯುರ್ನಿಯಾಮಕನಾಗಿ ಜನ್ಮಮರಣಪ್ರದನಾದ ಸ್ವಾಮಿಗೆ ಜನನಮರಣಗಳಿಲ್ಲ. ಜೀವನು ಅಸ್ವತಂತ್ರನಾಗಿ ಸ್ವತಂತ್ರನಾದ ಪುರುಷೋತ್ತಮನಿಂದ ಬಂದ ಜನ್ಮಾದಿ ವಿಕಾರಗಳನ್ನು ಪೊಂದಿ ಸಂಸರಿಸುತ್ತಾ, ಅವನ ಪ್ರಸಾದದಿಂದಲೇ ಮುಕ್ತನಾಗಬೇಕಾಗಿದೆ. ಮೀಮಾಂಸಕರು ಕರ್ಮವೇ ಕಾರಣವೆಂಬರು; ಚಾರ್ವಾಕರು ಸ್ವಭಾವವೆಂಬುವರು. ಪೌರಾಣಿಕರು ಪುರುಷೋತ್ತಮ ನೆಂದರೆ ಮೌಹೂರ್ತಿಕರು ಕಾಲನೆಂಬುವರು. ವಾತ್ಸಾಯನರು ಕಾಮನೆಂಬುವರು. ಆದರೂ ಕರ್ಮಸ್ವಭಾವಕಾಲ ಕಾಮ ಶಬ್ದವಾಚ್ಯನು ತತ್ತನ್ನಿಯಾಮಕನಾದ ಹರಿಯೇ ಮುಖ್ಯ ಕಾರಣ ನೆಂದು ಜ್ಞಾನಿಗಳು ನಿಶ್ಚಯಿಸಿ ತಿಳಿವರು. ಶ್ರೀಶನು ಪ್ರತ್ಯಕ್ಷ ಗೋಚರನಲ್ಲ. ಅನುಮಾನದಿಂದ ತಿಳಿಯಲ್ಪಡುವವನಲ್ಲ. ಹಾಗೆಂದು ಶೂನ್ಯನೇ? ಅಲ್ಲ ಕರ್ಮಕಾಲಾದಿ ಶಕ್ತಿಪ್ರೇರಕನಾದ ಶ್ರೀಹರಿಯು ವೈದ್ಯಕವೇದ್ಯನಾಗಿರುವನು. ಅವನೇನನ್ನು ಎಂದು ನಿಂತು ಮಾಡುವನೆಂಬುದು ಬ್ರಹ್ಮನಿಗೇ ತಿಳಿಯದು. ಇತರರೆಂತು ತಿಳಿಯಬಲ್ಲರು? ಈ ಧನದಭಟರು ನಿನ್ನ ತಮ್ಮನನ್ನು ಕೊಂದರೇ? ಧ್ರುವಾ! ಜನ್ಮಮರಣ ಕಾರಣನು ನಾರಾಯಣನೇ ಹೊರತನ್ಯರಲ್ಲ! ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡಿಯೂ ಅಹಂಕಾರವಿಲ್ಲದುದರಿಂದ ರಮಾರಮಣನಿಗೆ ಕರ್ಮಲೇಪವಿಲ್ಲ. ಭೂತೇಶನು ಭೂತಗಳನ್ನು ಭೂತಗಳಿಂದ ಭೂತಗಳಿಗೆ ಮುಕ್ತಿಯಾಗಲೆಂದೇ ಸೃಷ್ಟ್ಯಾದಿಗಳನ್ನು ರಚಿಸುತ್ತಿರುವನು. ಲೋಕಮೃತ್ಯುಪ್ರದನಾದರೂ ಸ್ವಯಂ ಮೃತ್ಯುರಹಿತನಾದ ಆ ಮಹಾ ಪ್ರಭುವನ್ನು ಸರ್ವಾತ್ಮನಾ ಸಮಾಶ್ರಯಿಸಿ ಭಜಿಸು. ಮುಗುದಾಣಿಯಿಂದ ಬದ್ಧನಾಗಿ ಗೋಣಿ ಗಳನ್ನು ಹೊತ್ತು ಹೋಗುವ ವೃಷಭಾದಿಗಳಂತೆ ಬ್ರಹ್ಮಾದಿ ಜೀವರು ಸ್ವತಂತ್ರರಾದ ಶ್ರೀಹರಿಯ ವಶದಲ್ಲಿದ್ದು ಅವನ ಸೇವೆಯನ್ನು ಮಾಡುತ್ತಲಿರುವರು. ನೀನಾದರೂ ಆ ಹರಿಯ ಭಕ್ತನೇ! ಐದು ವರ್ಷದವನಿದ್ದೂ, ಸವತಿ ತಾಯಿಯ ವಾಗ್ಬಾಣವಿದ್ಧನಾಗಿ ಅರಣ್ಯವನ್ನು ಸೇರಿ, ಸರ್ವ ಜೀವೇಶನಾದ ವಾಸುದೇವನನ್ನಾರಾಧಿಸಿದೆ. ತ್ರಿಲೋಕಗಳಲ್ಲಿ ಶ್ರೇಷ್ಠವೆನಿಸಿದ ಧ್ರುವಪದವನ್ನೂ ಸಂಪಾದಿಸಿದೆ. ನಿನಗೀ ಭೂತದ್ರೋಹವು ಯುಕ್ತವಲ್ಲ. ಭೂತದ್ರೋಹಿಗಳಿಗೆ ಶ್ರೀ ಹರಿಯು ಕುಪಿತನಾಗಿ ದೂರನಾಗುವನು. ಪ್ರಿಯಪೌತ್ರನೇ! ಯೋಗಿಗಳು ದ್ವೇಷಾದಿಗಳನ್ನು ಬಿಟ್ಟು ಅವನನ್ನು ಸೇವಿಸಿ, ಪುನರಾವೃತ್ತಿರಹಿತ ಲೋಕವನ್ನು ಪೊಂದುವರು. ಅಂತಹ ಸ್ವಾಮಿಯನ್ನು ಮರೆಯದೆ, ನೆನೆದು ಸೇವಿಸು. ಅಂತರ್ದರ್ಶನನಾಗು. ರಾಗದ್ವೇಷಗಳನ್ನೀಡಾಡು. ಪಂಚಭೇದ

ಘಟಿತವಾದೀ ಜಗವೆಲ್ಲವೂ ಅವರ ಅಧೀನವು. ಅವನ ಆಧಾರವೇ ಜಗಕ್ಕೆಲ್ಲವೂ ಎಂದು ತಿಳಿ. ಅಂತರ್ಯಾಮಿಯೂ, ಸರ್ವಸ್ವಾಮಿಯೂ, ಆನಂದಮಾತ್ರನು, ಅಣುತ್ವ, ಮಹತ್ವ, ಸ್ಪಷ್ಟ್ಯತ್ವ ಸಂಹಾರಕತ್ವರೂಪ ವಿರುದ್ಧ ಶಕ್ತಿಗಳಿಗೆ ಏಕಾಧಾರನು, ಆದ ಭಗವಂತನನ್ನು ಉಪಾಸಿಸಿ, ಕ್ರಮವಾಗಿ ಹೃದಯ ನಿರೂಢವಾಗಿರುವ ಅಹಂಕಾರ ಮಮಕಾರಗಳೆಂಬ ಅವಿದ್ಯಾ ಗ್ರಂಥಿಯನ್ನು ಭೇದಿಸು. ಶ್ರೀಶಾನುಗ್ರಹವನ್ನು ಸಂಪಾದಿಸು. ಮೊದಲೀ ಶ್ರೇಯೋನಾಶಕರ ವಾದ ರೋಷವನ್ನು ಬಿಡು. ನಿನಗೆ ಮಂಗಳವಾಗಲಿ! ಔಷಧದಿಂದ ರೋಗವನ್ನು ಕಳೆವಂತೆ, ಶ್ರವಣಬಲದಿಂದ ರೋಷವನ್ನು ಗೆದ್ದು ಶಾಂತನಾಗು. ರೋಷಕಷಾಯ ದೂಷಿತನನ್ನು ನೋಡಿ ಜ್ಞಾನಿಜನರು ಭೀತರಾಗಿ ದೂರ ಸರಿಯುವರು. ಪಂಡಿತನೆಂದಿಗೂ ರೋಷವಶನಾಗದಿರುವನು. ರೋಷದಿಂದ ಭಯವು, ರೋಷದಿಂದ ಮೃತ್ಯುವು. ರುದ್ರಸಖನಾದ ಕುಬೇರನಿಗಪರಾಧವನ್ನು ಮಾಡಿ, ಶಿವನಿಗೂ ದ್ರೋಹವನ್ನೆಸಗಿದಂತಾಯಿತು. ತಮ್ಮನನ್ನು ಕೊಂದನೆಂದು, ಪುಣ್ಯ ಜನರನ್ನು ಕೊಂದು, ನೀ ಮಾಡಿದ ತಪ್ಪಿಗಾಗಿ ಕುಬೇರನಿಗೆ ನಮಿಸಿ, ವಿನಮ್ರವಚನದಿಂದ ದುರ್ನಯವನ್ನು ಕ್ಷಮಿಸೆಂದು ಬೇಡು. ಕುಬೇರನು ಸಾಮಾನ್ಯನಲ್ಲ. ಆ ಮಹಾತ್ಮನ ತಾಪದಿಂದ ನಮ್ಮ ಕುಲಕ್ಕೆ ಕೇಡಾಗ ದಿರಲಿ!– ಎಂದು ಮನುರಾಜನು ಹಿತವನ್ನುಪದೇಶಿಸಲು ಧ್ರುವನು ರೋಷವನ್ನು ತ್ಯಜಿಸಿದನು. ತಾತನಿಗೆ ನಮಸ್ಕರಿಸಿ 'ಪೂಜ್ಯನೇ! ನಿನ್ನಪ್ಪಣೆಯನ್ನು ಶಿರಸಾವಹಿಸಿರುವೆನು. ತಮ್ಮನು ಮೃತನಾದ, ತಾಯಿಯು ಬೆಂದುಸುಟ್ಟಳೆಂಬ ಲೋಕಾಪವಾದ ಭೀತಿಯಿಂದ ರೋಷಪೂರಿತನಾದೆ. ಅಕಾರ್ಯವಂ ಗೈದೆ, ಕ್ಷಮಿಸು' ಎಂದು ಬೇಡಿಕೊಂಡನು. ವಿದುರಾ! ಆಗ ಮನುರಾಜನು ಧ್ರುವನನ್ನು ಬೀಳ್ಕೊಟ್ಟು ಋಷಿಗಳಿಂದ ಕೂಡಿ ಸ್ವಪುರವನ್ನು ಸೇರಲು ಪೋದನು.

## ೧೨. ಧ್ರುವಪದವಿ ಪ್ರಾಪ್ತಿ

ಮೈತ್ರೇಯನು ಪೇಳಿದನು–

ಧ್ರುವನಿಂತು ದ್ವೇಷವನ್ನು ತ್ಯಜಿಸಿ, ಶಾಂತನಾದನೆಂದು ಕೇಳಿ ಕುಬೇರನೂ ವೈರವನ್ನು ಬಿಟ್ಟು, ಚಾರಣ ಯಕ್ಷ ಕಿನ್ನರ ಸೇವಿತನಾಗಿ ಬಂದು, ತನಗೆ ವಂದಿಸಿ ನಿಂತ ಧ್ರುವನನ್ನು ನೋಡಿ ಇಂದು ನುಡಿದನು–

ಪಾಪರಹಿತನೇ, ಕ್ಷತ್ರಿಯ ಕುಮಾರರಿಗೆ ಸಹಜವಾದ ರೋಷ ದ್ವೇಷವನ್ನು ಪಿತಾಮಹಾ ದೇಶದಿಂದ ತ್ಯಜಿಸಿದ ನಿನ್ನಲ್ಲಿ ಪ್ರೀತನಾಗಿರುವೆನು. ಯಕ್ಷರು ನಿನ್ನ ತಮ್ಮನನ್ನು ಕೊಲ್ಲಲಿಲ್ಲ. ನೀನು ಯಕ್ಷ ರಕ್ಷರನ್ನೂ ಕೊಲ್ಲಲಿಲ್ಲ. ಸ್ವತಂತ್ರನಾದ ಕಾಲನೇ ಜೀವನ ಜನನ ಮರಣಪ್ರದ ನಾದ ಪ್ರಭುವಾಗಿರುವನು. ನಾ ಕೊಂದೆ ನೀ ಕೊಂದೆ ಎನ್ನುವ ಬುದ್ಧಿಯು ನಿಷ್ಫ ಯೋಜನವು. ಹರಿಯಂ ಬಿಟ್ಟನ್ಯರು ಸ್ವತಂತ್ರ್ಯರಿಲ್ಲ. ಅವನ ಕೈಗೊಂಬೆಗಳಂತೆ ಆಡುವ ನಾವು ಅಜ್ಞಾನದಿಂದ ತಾವೇ ಕೃರ್ತಗಳೆಂಬ ಭ್ರಮೆಯನ್ನು ಪೊಂದುವೆವು. ಸ್ವಪ್ನಗತ ಪದಾರ್ಥಗಳು ಜಾಗ್ರದ ವಸ್ಥಾನುಭೂತ ಪದಾರ್ಥಗಳೆಂದು ತಿಳಿದರೆ, ಹೇಗೆ ಹಾನಿಯೋ ಹಾಗೆಯೇ ನಾನೇ ಕರ್ತನೆಂದು ತಿಳಿದರೆ, ಬಂಧ ಮತ್ತು ದುಃಖಗಳು ಪ್ರಾಪ್ತವಾಗುವುವು. ಒಳ್ಳೆಯದು ಧ್ರುವಾ! ನಿನಗೆ ಮಂಗಳ ವಾಗಲಿ ! ಪುರವಂ ಸೇರು ಪೋಗು. ಅದನಾದಿ ಕರ್ತನು, ಸರ್ವಜೀವ ಕರ್ಮಫಲ ಪ್ರದನು, ಅಂತರ್ಯಾಮಿಯೂ ಆದ ಶ್ರೀಶನನ್ನು ಸರ್ವದಾ ಸ್ಮರಿಸು. ಭಜನೀಯಪದನಲಿನ ನಾದ

ಹರಿಭಜನೆಯೇ ಸಂಸಾರತಾರಕವೆಂದು ನಿನಗೆ ಗೊತ್ತು. ತನ್ನಿಚ್ಛೆಯಿಂದ ತ್ರಿಗುಣಾತ್ಮಕ ಪ್ರಕೃತಿಯನ್ನು ಸ್ವೀಕರಿಸಿ ಸೃಷ್ಟ್ಯಾದಿಗಳನ್ನು ಮಾಡುವ ಮಾಧವನು ನಿನ್ನನ್ನು ಪೊರೆಯಲಿ! ಉತ್ತಾನಪಾದಪುತ್ರನೇ! ಬೇಕಾದ ವರವನ್ನು ಬೇಡು. ನಾನು ನಿನಗೆ ವರಪ್ರದಾನ ಮಾಡಲು ಇಚ್ಛಿಸುವೆನು. ಅಂಬುಜನಾಭ ಪದನಿರಂತರ ರತಸ್ವಾಂತನೆಂದು ನಾ ಕೇಳಿ ತುಷ್ಟನಾಗಿರುವೆನೆಂದನು.

ರಾಜರಾಜನು ವರವನ್ನು ಕೇಳೆನಲು, ಭಗವದ್ಭಕ್ತಸತ್ತಮನಾದ ಧ್ರುವನು 'ಸ್ವಾಮೀ! ಅನ್ಯಸಾಧನಗಳಿಂದ ದಾಟಲಾಗದ ಸಂಸಾರಾಂಧಕೂಪವನ್ನು ದಾಟಿಸುವ ಹರಿಸ್ಮೃತಿದೀಪವನ್ನು ಕೊಟ್ಟು ಭಕ್ತಿಸ್ನೇಹ ಪ್ರವಾಹದಿಂದ ಅದನ್ನು ಉಜ್ವಲವಾಗಿರಿಸು' ಎಂದು ಬೇಡಿದನು. ಕುಬೇರನು ಪ್ರೀತನಾಗಿ ಹರಿಭಕ್ತಿಯನ್ನೇ ವರವಾಗಿ ಕೊಟ್ಟು, ನೋಡುತ್ತಿರಲು ಅಂತರ್ಧಾನವನ್ನು ಪೊಂದಿದನು. ಧ್ರುವನು ಕೂಡ ತನ್ನ ಪುರವನ್ನು ಸೇರಿದನು. ಭೂರಿದಕ್ಷಿಣೆಗಳನ್ನಿತ್ತು ಹತ್ತಾರು ಉತ್ತಮ ಯಜ್ಞಗಳನ್ನು ಮಾಡಿ, ಸತತವು ದ್ರವ್ಯದೇಶಕ್ರಿಯಾ ದೇವತಾ ಮಂತ್ರ ಕರ್ಮದೀಕ್ಷಾ ಫಲ ನಿಯಾಮಕನಾದ ಶ್ರೀ ಹರಿಯಲ್ಲಿ ಭಕ್ತಿಯನ್ನು ಮಾಡಿ ಸರ್ವಭೂತಗಳಲ್ಲಿ ಶ್ರೀಹರಿಯನ್ನು, ಹರಿಯಲ್ಲಿ ಸರ್ವನನ್ನೂ ಕಂಡನು. ಇಂತಹ ಸಂಪನ್ನನು ಬ್ರಾಹ್ಮಣಪ್ರಿಯನು ದೀನರಕ್ಷಕನು, ಧರ್ಮಸೇತುಪರಿರಕ್ಷಣದಕ್ಷನು, ದುಷ್ಟಶಿಕ್ಷಕನು ಆದ ಧ್ರುವನನ್ನು ಪ್ರಜರು ತಂದೆಯೆಂದೇ ತಿಳಿದರು. ಕ್ಷಿತಿ ಮಂಡಲವನ್ನು ಮೂವತ್ತಾರು ಸಾವಿರ ವರುಷಗಳು ಆಳಿ, ಪುಣ್ಯವನ್ನು ಭೋಗಿಸಿ ಮತ್ತು ಪಾಪಗಳನ್ನು ಪ್ರಾಯಶ್ಚಿತ್ತಾದಿಗಳಿಂದಲೂ ಜ್ಞಾನ ಸಾಮರ್ಥ್ಯದಿಂದಲೂ ಕಳೆದುಕೊಂಡು ಆಂಧ್ಯಾದೀಂದ್ರಿಯ ವೈಕಲ್ಯವಿಲ್ಲದೆ ಬಾಳಿ ತ್ರಿವರ್ಗ ಸಾಧನವೆನಿಸಿದ ದೇಹವನ್ನು ಮೋಕ್ಷ ಮಂದಿರದ್ವಾರದಿ ನಿಲ್ಲಿಸಿ, ಮಗನಾದ ವತ್ಸರನನ್ನು ಸಿಂಹಾಸನದಿ ನಿಲ್ಲಿಸಿ, ವಿರಕ್ತನಾದನು. ಇದೆಲ್ಲವೂ ಹರೀಚ್ಛಾನಿರ್ಮಿತವು. ಸ್ವಪ್ನದಂತೆ ಅಶಾಶ್ವತವು. ಗಂಧರ್ವ ನಗರದಂತೆ ನಿಷ್ಪ್ರಯೋಜಕವು ಎಂದರಿತನು.

ತನ್ನ ದೇಹ, ಪತ್ನಿ, ಸುತ, ಸುಹೃತ್, ಸೈನ್ಯ, ಕೋಶಗಳು ಅಂತಃಪುರವು, ವಿಹಾರೋದ್ಯಾನಗಳು, ಸಕಲ ಸಮುದ್ರ ಮುದ್ರಿತ ಧರಾವಲಯವೆಲ್ಲವು ಕಾಲನಿಂದ ನಷ್ಟವಾಗುವುದೇ ಎಂದು ಮನಗಂಡು ತ್ಯಜಿಸಿ ಬದರಿಕಾಶ್ರಮವನ್ನು ಸೇರಿದನು. ಅಲ್ಲಿ ಅಲಕನಂದೆಯಲ್ಲಿ ಮಂಗಲಸ್ನಾನ ಮಾಡಿ ವಿಶುದ್ಧಮನಸ್ಕನಾದನು. ಆಸನದಲ್ಲಿ ಕುಳಿತು ಪ್ರಾಣ ಪ್ರಸಾದದಿಂದ ಇಂದ್ರಿಯಗಳನ್ನು ನಿಗ್ರಹಿಸಿ, ಪ್ರಪಂಚವೆಲ್ಲಾ ಶಿಲಾಧಿಕೃತ ಪ್ರತಿಮೆಯಂತೆ ಭಗವಂತನ ಸ್ಥೂಲರೂಪವೆಂದು ಚಿಂತಿಸಿ, ತದಭಿನ್ನವಾದ ಸೂಕ್ಷ್ಮ ರೂಪವನ್ನು ಧ್ಯಾನಿಸಿ, ಸಮಾಧಿಗತನಾದನು. ಅಸಂಪ್ರಜ್ಞಾತಸಮಾಧ್ಯವಸ್ಥಾನಿರತನಾಗಿ ಹರಿಭಕ್ತಿ ಪ್ರವಾಹವು ಉಕ್ಕೇರಿ ಬಂದಂತೆ ಕಣ್ಣೀರನ್ನು ಸುರಿಸುತ್ತಾ ಪ್ರೇಮಾರ್ದ್ರಹೃದಯನಾಗಿ ಪುಲಕಸಮಲಂಕೃತ ಶರೀರನಾದನು. ನಾನು ಧ್ರುವನು ಎಂಬ ದೇಹಾಭಿಮಾನವೇ ನಶಿಸಲು ಹರಿಯನ್ನೇ ಸ್ಮರಿಸುತ್ತಾ ನಿಶ್ಚಲನಾಗಿದ್ದನು.

ಆಗ ಆಗಸದಿಂದ ವಿಮಾನವು ಕೆಳಗಿಳಿದು ಬಂತು. ಅದರ ಚಂದ್ರ ಸಮಕಾಂತಿಯಿಂದ ದಶದಿಕ್ಕುಗಳು ಬೆಳಗಿದವು. ಶ್ಯಾಮವರ್ಣರು ಷೋಡಶವರ್ಷೀಯರು ಚತುರ್ಭುಜರು, ಜಲಜೇಕ್ಷಣರು, ಗದಾದಂಡ ಕೃತಾಲಂಬರೂ, ಕಿರೀಟ ಹಾರಂಗದ ಕಟಕಕುಂಡಲ ಭೂಷಿತರೂ ಆದ ವಿಷ್ಣುದೂತರಿಬ್ಬರೂ ಆ ವಿಮಾನದಿಂದ ಕೆಳಗಿಳಿಯಲು ನೋಡಿ ಧ್ರುವನು ಸಂಭ್ರಮಾಕಾಂತರನಾಗಿ ಮೈಮರೆತು ನಿಂತನು. ಆಮೇಲೆ ತಿಳಿದು ಅವರಿಗೆ ನಮಸ್ಕರಿಸಿದನು. ಉತ್ತಮಶ್ಲೋಕ! ರಕ್ಷಿತ ಭಕ್ತಲೋಕ! ಹರೇ! ಮೂರಾರೇ! ಎಂದು ನುಡಿಯುತ್ತಾ ಕೈ ಜೋಡಿಸಿ ನಿಂತನು.

ಆ ಭಕ್ತನನ್ನು ಕಂಡು ಸುನಂದನಂದರು ಮಂದಸ್ಮಿತವದನರಾಗಿ ಸಮೀಪಿಸಿ ಇಂತೆಂದರು– ಧ್ರುವರಾಜ! ನಿನಗೆ ಮಂಗಳವಾಗಲಿ! ನಾನು ಪುಷ್ಕರನಾಭಸಮ್ಮತರಾದ ನಂದಸುನಂದರು. ಅವನ ಅಪ್ಪಣೆಯಂತೆ ಬಂದಿರುವೆನು. ಐದೇ ವರ್ಷದವನಿದ್ದಾಗ ಶ್ರೀಶನನ್ನು ತಪವಂಗೈದು ಮೆಚ್ಚಿಸಿದೆ. ಆ ಶಾರ್ಙ್ಗಪಾಣಿಯ ಕಿಂಕರನಾದ ನಾವು ನಿನ್ನನ್ನು ಭಗವತ್ಪದನನ್ನು ಸೇರಿಸಲು, ಕರೆಯಬಂದಿರುವೆನೆಂದು ತಿಳಿ. ಸಪ್ತರ್ಷಿಗಳು ದೂರದಿಂದ ನೋಡಿ ಪ್ರದಕ್ಷಿಣೀಕರಿಸುವ ಧ್ರುವಪದವಿಯು ನಿನ್ನದಾಗಿದೆ. ಚಂದ್ರಸೂರ್ಯಾದಿ ಗ್ರಹಗಳು, ಅಶ್ವಿನ್ಯಾದಿ ನಕ್ಷತ್ರಗಳು, ತಾರಕೆಗಳು, ಮೇಷಾದಿ ರಾಶಿಗಳು ಸುತ್ತಿ ತಿರುಗುವ ಧ್ರುವಮಂಡಲವನ್ನು ಸೇರು. ಏಳು! ಯಾರೂ ಆ ಉತ್ತಮ ಪದವನ್ನು ಪೊಂದಿದವರನ್ಯರಿಲ್ಲ. ಶಿಂಶುಮಾರ ಮೂರ್ತಿಯು ಧರಿಸಿರುವ ಆವಿಷ್ಣೋ ಪರಮಂ ಪದಂ ಎಂದು ಖ್ಯಾತವಾದ ಲೋಕವನ್ನಾಳು. ಆ ಶಿಂಶುಮಾರನೇ ಕಳಿಸಿರುವನೀ ವಿಮಾನವನ್ನು ಏರು– ಎಂದರು.

ವೈಕುಂಠಭೃತ್ಯವರರ ಮೃದುಮಧುರ ವಚನಗಳನ್ನಾಲಿಸಿ ಹರಿಪ್ರಿಯನಾದ ಧ್ರುವನು ಸ್ನಾತನಾಗಿ ನಿತ್ಯಶುಭಕರ್ಮ ಕಲಾಪವನ್ನು ಮುಗಿಸಿದನು. ಮುನಿಗಳಿಗೆ ನಮಿಸಿದನು. ವಿಮಾನವನ್ನು ಪ್ರದಕ್ಷಿಣೀಕರಿಸಿ ಬಂದು ಪಾರ್ಷದ ಪ್ರವರರಿಗೆ ಹರ್ಷದಿಂದ ನಮಿಸಿ, ಹಿರಣ್ಮಯರೂಪದಿಂದ ವಿಮಾನವನ್ನೇರಿದನು. ದೇವದುಂದುಭಿಗಳು ಮೊಳಗಿದವು. ಗಂಧರ್ವರು ಪಾಡಿದರು. ಅಪ್ಸರೆಯರಾಡಿದರು. ಆಕಾಶದಿಂದ ಪೂಮಳೆಗರೆಯಿತು. ಸ್ವರ್ಗ ಲೋಕವನ್ನು ಸೇರಲು ಪೋಗುವ ಧ್ರುವನು ನನ್ನ ತಾಯಿಯಾದ ಸುನೀತಿಯು ಎಲ್ಲಿ? ಆಕೆಯನ್ನು ಬಿಟ್ಟು ನಾನು ತ್ರಿವಿಷ್ಟಪವನ್ನೊಲ್ಲೆನೆಂದನು. ಇಂತು ನಿಶ್ಚಯಿಸಿದ ಧ್ರುವನ ಮನೋ ಭಿಮತವನ್ನರಿತು, ಸತ್ಯಸಂಕಲ್ಪನಾದ ಶ್ರೀಹರಿಯ ಭಕ್ತರೂ ಸತ್ಯಸಂಕಲ್ಪರಾಗುವರೆಂದು ತೋರಿ ಸಲು ನಂದಸುನಂದರು ಮುಂದೆ ಅಂದಣವನ್ನೇರಿ ಪೋಗುತ್ತಿರುವ ಸುನೀತಿಯನ್ನು ತೋರಿಸಿದರು. ಆಗ ಧ್ರುವನು ವೈಮಾನಿಕಸ್ತವಪಾತ್ರನಾಗುತ್ತಾ ಪೂಮಳೆಯಲ್ಲಿ ಮುಳುಗಿ ಕ್ರಮವಾಗಿ ಗ್ರಹಾದಿಗಳನ್ನು ದಾಟಿ ಸ್ವರ್ಗವನ್ನು ಮುಟ್ಟಿದನು. ಅಲ್ಲಿಂದ ತಾಯಿಯನ್ನು ಬೀಳ್ಕೊಟ್ಟು ಪುನಃ ಧ್ರುವಮಂಡಲವನ್ನು ಸೇರಲು ಕೆಳಗಿಳಿದು, ನಿಶ್ಚಲವಾದ ಆ ಲೋಕದಲ್ಲಿ ಸುಖ ದಿಂದಿರುವನು. ಪ್ರಕಾಶಮಾನವಾದ ಆ ಧ್ರುವಲೋಕವನ್ನು ಖಲರು ಸೇರಲಾರರು. ಸಕಲಭೂತ ದಯಾಶೀಲರು, ಮಂಗಲಾಚಾರಪಾಲರೂ ಅದನ್ನು ಸೇರುವರು. ಶಾಂತರು, ಯಥಾರ್ಥ ಜ್ಞಾನಿಗಳು, ಪರಿಶುದ್ಧರು, ಸರ್ವಭೂತ ದಯಾಳುಗಳು ಆದ ಅಚ್ಯುತನ ಭಕ್ತಬಂಧುಗಳೇ ಆ ನಾಶರಹಿತ ಲೋಕವನ್ನು ಸೇರಿ ಸುಖಿಸಲರ್ಹರಾಗಿರುವರು.

ವಿದುರಾ! ಉತ್ತಾನಪಾದನ ಪುತ್ರನಾದ ಧ್ರುವನಿಂತು ಶ್ರೀಹರಿಪರಾಯಣನಾಗಿ ತ್ರಿಲೋಕಸು ಜನಚೂಡಾಮಣಿಯಾಗಿ ಮೆರೆದನು. ಗಂಭೀರ ವೇಗದಿಂದ ಜ್ಯೋತಿಶ್ಚಕ್ರವು ಪ್ರದಕ್ಷಿಣೆಸುವ ಸರ್ವಾಧಾರಕ ಶಿಂಶುಮಾರಾಧಿಷ್ಠಿತವಾದ ಧ್ರುವಪದವನ್ನು ಪೊಂದಿದ ಧ್ರುವನ ಮಹಿಮೆಯಂ ಕಂಡು ಪೂಜ್ಯನಾದ ನಾರದನು ಒಂದು ಸಲ ಪ್ರಚೇತಸರ ಸತ್ರಯಾಗದಲ್ಲಿ ವೀಣಾವಾದನವನ್ನು ಮಾಡುತ್ತಾ ಧ್ರುವನನ್ನು ಕೊಂಡಾಡಿದನು.

ನಾರದರು – ಸುನೀತಿಯು ಮಹಾಪತಿವ್ರತೆಯು. ಅವಳ ಮಗನು ಮಹಾತಪಸ್ವಿಯು. ಅವನು ಪೊಂದಿದ ಧ್ರುವಗತಿಯನ್ನು ವೇದವಾದಚತುರರೂ ಪೊಂದಲಾಲರರಿನ್ನು ನೃಪೇತರರ ಪಾಡೇನು? ಐದು ವರ್ಷದವನಾದ ಧ್ರುವನು ತಾಯಿಯ ವಾಗ್ಬಾಣವಿದ್ಧನಾಗಿ ನೊಂದು ವನಕ್ಕೆ

ಬಂದ. ನಾನವನಿಗಪದೇಶಿಸಿದೆ. ಭಕ್ತ್ಯಾದಿ ಗುಣಗಳಿಂದ ಅಜಿತನನ್ನು ಆರೇ ತಿಂಗಳಲ್ಲಿ ವಶೀಕರಿಸಿಕೊಂಡು ಮೆಚ್ಚಿಸಿದ ಆ ಅಚ್ಯುತ ಭಕ್ತನು ಸಾಮಾನ್ಯನೇ? ಇಂತಹ ತಪವಮಾಡಿ ಇಂತಹ ಪದವಿಯನ್ನೈದಲು ಯಾವ ಕ್ಷತ್ರಿಯನಿಗೆ ಸಾಧ್ಯವಾಗುವುದು?– ಎಂದು ಗಾನ ಮಾಡಿದನು.

ಮೈತ್ರೇಯನು ಹೇಳಿದನು-

ವಿದುರಾ! ನೀ ಕೇಳಿದಂತೆ ಉದ್ದಾಮ ಯಶನಾದ ಧ್ರುವನ ಚರಿತವನ್ನು ಪೇಳಿದೆನು. ಇದು ಸಜ್ಜನ ಸಂಮತವು, ಧನ್ಯವು, ಯಶಸ್ಕರವು, ಆಯುಷ್ಕರವು, ಪುಣ್ಯಕಾರಣವು, ಮಂಗಲ ಪ್ರದವೂ ಅಹುದು. ಸ್ವರ್ಗ ಮೋಕ್ಷಗಳ ಸಾಧನವು, ಪ್ರಶಂಸನೀಯವು, ಪಾಪನಿವಾರಣವಾದ ಈ ಧ್ರುವಚರಿತ್ರೆಯನ್ನು ಶ್ರದ್ಧೆಯಿಂದ ಕೇಳಲು ಭಗವಂತನಲ್ಲಿ ಭಕ್ತಿ ಪೊಂದುವನು. ಅವನ ಕ್ಲೇಶಗಳೆಲ್ಲಾ ನಷ್ಟವಾಗುವುವು; ಮಹತ್ವ, ಶೀಲ, ತೇಜ, ಮನೋಜಯಗಳು ಲಭಿಸುವುವು. ಬ್ರಾಹ್ಮಣ ಸಭೆಯಲ್ಲಿ ಪ್ರಾತಃಕಾಲದಲ್ಲಿ ಅಥವಾ ಸಾಯಂಕಾಲದಲ್ಲಿ ಅಚ್ಯುತಪ್ರಿಯ ಧ್ರುವಚರಿತೆಯನ್ನು ಪೇಳಿದವನು ಭಕ್ತಿಯನ್ನು ಪೊಂದಿ ಸುಖಿಸುವನು. ಪೌರ್ಣಿಮಾ ಶುಕ್ಲ ಚತುರ್ದಶೀ ದ್ವಾದಶೀ, ಶ್ರವಣ ನಕ್ಷತ್ರ, ದಿನಕ್ಷಯ, ವ್ಯತೀಪಾತ, ಸಂಕ್ರಮಣ, ಭಾನುವಾರ ಗಳಲ್ಲಿ ತೀರ್ಥಪಾದನ ಪದಪದ್ಮವನ್ನು ನಂಬಿ ಫಲಾಪೇಕ್ಷೆಯಿಲ್ಲದೆ ಹೇಳಿದವನು ಕೇಳಿದನನು ಕೂಡ, ಮನಸಾ ಹರಿಯ ಪ್ರೀತಿಯನ್ನೇ ಬಯಸಿತದನುಗ್ರಹದಿಂದ ಸಕಲಾಭೀಷ್ಟಸಿದ್ಧಿಯನ್ನು ಪೊಂದುವರು. ಅಜ್ಞಾನಿಗಳಿಗೆ ಜ್ಞಾನವನ್ನು ಕೊಡುವ ಹರಿಭಕ್ತನ ಕೃಪಾಗುಣವನ್ನು ದೀನವತ್ಸಲತೆಯನ್ನು ಕಂಡು ದೇವತೆಗಳವನಲ್ಲಿ ಪರಮಾನುಗ್ರಹವನ್ನು ಮಾಡಿ ಉದ್ಧರಿಸುವರು. ವಿದುರಾ! ಕ್ರೀಡಾವಸ್ತುಗಳಿಂದಾಡುವಷ್ಟು ಚಿಕ್ಕವನಿದ್ದಾಗ ತಾಯಿಯ ನುಡಿಯನ್ನು ಕೇಳಿ ಎಲ್ಲವನ್ನೂ ಬಿಟ್ಟು ಶ್ರೀಹರಿಚರಣವನ್ನೇ ಶರಣ್ಯನೆಂದು ನಂಬಿ ಉದ್ಧೃತನಾದ ಧ್ರುವನು ವಿಶುದ್ಧ ವಿಖ್ಯಾತ ಚರಿತ್ರವನ್ನು ವರ್ಣಿಸಿದೆನು.

## ೧೩. ಉತ್ಕಲಕಥಾ – ಅಂಗಚರಿತ

ಶ್ರೀ ಶುಕನು ನುಡಿದನು-

ರಾಜನ್! ಧ್ರುವನು ವೈಕುಂಠಪದವನ್ನಾರೋಹಿಸಿದ ಪವಿತ್ರ ಚರಿತ್ರೆಯನ್ನು ಕೇಳಿ, ಅಧೋಕ್ಷಜನಲ್ಲಿ ಭಕ್ತಿಯು ಹೆಚ್ಚಿ ವಿದುರನು ಪುನಃ ಮೈತ್ರೇಯನನ್ನು ಪ್ರಶ್ನಿಸಿದನು–

ಸುವ್ರತ! ಪ್ರಚೇತಸರಾರು? ಯಾರ ಮಕ್ಕಳು? ಅವರ ವಂಶವಾವುದು? ಎಲ್ಲಿ ಸತ್ರಯಾಗವನ್ನು ಮಾಡಿದರು? ದೇವದರ್ಶನಪ್ರದನಾದ ನಾರದನು ಮಹಾ ಭಗವಂತನು! ಅವನು ಪೇಳಿದ ಶ್ರೀಹರಿಯ ಪರಿಚರ್ಯೆ ಎಂತಹುದು? ಕ್ರಿಯಾಯೋಗವಾವುದು? ಸ್ವಧರ್ಮ ನಿರತರು ಮಾಡುವ ಯಜ್ಞಗಳಲ್ಲಿ ನಾರಾಯಣನೇ ಚರುಪುರೋಡಾಶ ಪ್ರಮುಖ ದ್ರವ್ಯ ಸ್ವಾಮಿಯು, ಅಗ್ನಿ ಪ್ರಮುಖ ದೇವತಾಂತರ್ಯಾಮಿಯು, ಮಂತ್ರಮೂರ್ತಿಯು ಎಂದು ಯಜಮಾನನು ತಿಳಿದರೆ ಆ ಯಜ್ಞವು ಹರಿ ಪ್ರೀತಿ ಸಾಧನವೆನಿಸುವ ವಿವರವನ್ನು ನಾರದನು ವರ್ಣಿಸಿದ ವಿಧವಾವುದು? ಇನ್ನು ಯಾವ ಭಗವತ್ಕಥೆಗಳು ವರ್ಣಿತವಾದವೋ ಅವನ್ನೂ ನನಗೆ ಪೇಳು.

ಮೈತ್ರೇಯನು ಪೇಳಿದನು–

ಧ್ರುವನ ಮಗನು ಉತ್ಕಲನು. ತಂದೆಯು ವನವನ್ನು ಸೇರಲು, ತನಗೆ ಸೇರಿದ ರಾಜ್ಯವೈಭವವನ್ನು ಪರಿತ್ಯಜಿಸಿದನು. ಹುಟ್ಟಿನಿಂದ ವೈರಾಗ್ಯವನ್ನು ಧರಿಸಿ, ಸಕಲ ಸಂಗವನ್ನು ತ್ಯಜಿಸಿ, ಸರ್ವತ್ರ ಪ್ರವದ್ವಶ, ಸನಾಗಿ ಅವಧೂತಚರ್ಯೆಯಿಂದ ಸಂಚರಿಸಿದನು; ಪ್ರಾಣಿಗಳಲ್ಲಿ ವ್ಯಾಪ್ತನಾದ ಹರಿಯನ್ನು ಹರಿಯಲ್ಲಿ ನೆಲೆಸಿದ ಸಕಲ ಜಗವನ್ನು ಕಂಡು 'ವಿಜ್ಞಾನ ಆನಂದಂ ಬ್ರಹ್ಮ' ಎಂದು ಸಂತತಧ್ಯಾನದಿಂದ ಚಿಂತಿಸಿದನು. ಅವ್ಯವಹಿತ ಧ್ಯಾನಲಬ್ಧ ಜ್ಞಾನಾಗ್ನಿಯಿಂದ ಮನೋಮಲವನ್ನು ದಹಿಸಿ, ಜೀವಬಿಂಬನಾದ ಶ್ರೀಹರಿಯ ಅಪರೋಕ್ಷವನ್ನು ಪೊಂದಿ ಜೀವನ್ಮುಕ್ತನಾದನು. ಜಡನಂತೆ, ಮೂಕನಂತೆ, ಅಂಧನಂತೆ, ಹುಚ್ಚನಂತೆ, ತತ್ತ್ವದ್ವಿಷಯ ಜ್ಞಾನಬಾಹಿರನಾಗಿ, ಬೂದಿ ಮುಚ್ಚಿದ ಕೆಂಡದಂತೆ ಹೊರಗೆ ತೋರದ ಮಹಿಮೆಯಿಂದ ಹುಚ್ಚನೆನ್ನುತ್ತಿರಲು, ಪ್ರಶಾಂತ ತೇಜಸ್ಸಂಪನ್ನನಾಗಿ ಲೋಕವನ್ನು ಲೆಕ್ಕಿಸದೆ, ಲೋಕನಾಥನ ಪಾದಮೂಲವನ್ನು ಪೊಂದಿದನು.

ಮಂತ್ರಿಗಳು ಕುಲವೃದ್ಧರು ಉತ್ಕಲನ ವಿಲಕ್ಷಣಗತಿಯನ್ನು ಕಂಡು ಹುಚ್ಚನೆಂದು ಅವನ ತಮ್ಮನಾದ ವತ್ಸರನಿಗೆ ಪಟ್ಟವನ್ನು ಕಟ್ಟಿದರು. ಭ್ರಮಿಯ ಸುತನಾದ ವತ್ಸರನು ಸ್ವರ್ವೀಥಿಯನ್ನು ಮದುವೆಯಾದನು. ಪುಷ್ಪಾರ್ಣ, ತಿಗ್ಮಕೇತು, ಇಷ್ಟ, ಊರ್ಜ, ವಸು, ಜಯ ಎಂಬೀ ಆರು ಜನರು ಅವನ ಪುತ್ರರು. ಪುಷ್ಪಾರ್ಣವನಿಗೆ ಪ್ರಭಾ ಮತ್ತು ದೋಷಾ ಎಂಬೀರ್ವರು ಪತ್ನಿಯರು. ಪ್ರಾತಃ ಮಾಧ್ಯಂದಿನ ಸಾಯಂಕಾಲಭಿಮಾನಿಗಳು, ತನ್ನಾಮರು ಮೂವರು ಪ್ರಭಾಸುತರು. ದೋಷಾದೇವಿಯು ಕೂಡ ಪ್ರದೋಷ, ನಿಶೀಥ, ವ್ಯುಷ್ಟ ಎಂಬ ಮೂವರು ಪುತ್ರರಂ ಪಡೆದಳು. ವ್ಯುಷ್ಟನು ಪುಷ್ಕರಿಣಿಯಲ್ಲಿ ಸರ್ವತೇಜಸನನ್ನು ಪಡೆದನು. ಸರ್ವತೇಜನು ಆಕೂತಿಯಲ್ಲಿ ಚಕ್ಷು ಎಂಬ ಮನುವನ್ನು ಪಡೆದನು. ಚಕ್ಷು ಪತ್ನಿಯು ನಡ್ವಲೆ, ಪುರುಕುತ್ಸ, ತ್ರಿತ, ದ್ಯುಮ್ನ, ಸತ್ಯವ್ರತ, ಋತವ್ರತ, ಅಗ್ನಿಷ್ಟೋಮ, ಅತೀರಾತ್ರ, ಸುದ್ಯುಮ್ನ, ಶಿಬಿ, ಉಲ್ಮುಕ ಎಂಬುವರು ಮನುಸುತರು. ಉಲ್ಮುಕನು ಪುಷ್ಕರಿಣಿದೇವಿಯಲ್ಲಿ ಅಂಗ, ಸುನಾಸ, ಆಖ್ಯಾತಿ, ಕ್ರತು, ಆಂಗಿರಸ, ಗಯ ಎಂಬ ಷಟ್ಪುತ್ರರನ್ನು ಪಡೆದನು. ಅಂಗನ ಪತ್ನಿಯು ಸುನೀಥಾ. ಇವಳ ಮಗನೇ ವೇನನು. ವೇನನ ದುಶ್ಚರಿತೆಯನ್ನು ಕಂಡು ನಿರ್ವಿಣ್ಣನಾಗಿ, ಅಂಗರಾಜನು ಪುರವನ್ನು ಬಿಟ್ಟು ಹೊರಟುಹೋದನು. ವೇನನನ್ನು ಕುಪಿತರಾದ ಮುನಿಗಳು ವಾಗ್ವಜ್ರಪ್ರಯೋಗದಿಂದ ಸಂಹರಿಸಿದರು. ಆಗ ವೇನನ ದಕ್ಷಿಣ ಕರವನ್ನಾ ಮುನಿವರರು ಮಥಿಸಲು, ನಾರಾಯಣನ ಆವೇಶದಿಂದ ಯುಕ್ತನಾದ ಪೃಥುರಾಜನು ಜನಿಸಿದನು. ವೇನನು ಮೃತನಾಗಿ ಅರಾಜಕವಾಗಲು ದಸ್ಯುಪೀಡಿತರಾದ ಪ್ರಜರನ್ನು ರಕ್ಷಿಸಿ ಬಹುಪರಾಕ್ರಮದಿಂದ ಪೃಥುರಾಜನು ದಸ್ಯುಗಳನ್ನು ಶಿಕ್ಷಿಸಿ ಧರ್ಮವನ್ನು ಸ್ಥಾಪಿಸಿದನು.

ವಿದುರನಾಗ ಪುನಃ ಪ್ರಶ್ನಿಸಿದನು–

ಬ್ರಹ್ಮರ್ಷೇ! ಅಂಗರಾಜನಂತಹ ಬ್ರಾಹ್ಮಣ ಭಕ್ತನಿಗೆ, ಅಂತಹ ಶೀಲನಿಧಿಗೆ ಮಹಾತ್ಮನಿಗೆ ಅಷ್ಟು ದುಷ್ಟನಾದ ಪುತ್ರನದೇಕೆ ಜನಿಸಿದನು? ಅವನ ದೌಷ್ಟ್ಯದಿಂದ ವಿರಕ್ತನಾಗಿ ಪೊರಮಟ್ಟು ವನವನ್ನು ಸೇರಿದನಲ್ಲವೆ? ಧರ್ಮವನ್ನರಿತ ಮುನಿಗಳು ದಂಡವನ್ನು ಧರಿಸಿ ಕಾಪಿಸುವ ರಾಜನನ್ನೇಕೆ ಶಪಿಸಿದರು? ದುರತ್ಯಯನಾದ ಬ್ರಹ್ಮದಂಡವನ್ನು ಪೊಂದಲುವೇನನಾಚರಿಸಿದ ಪಾಪನಾದರೂ ಎಂತಹುದು? ಎಷ್ಟೇ ಪಾಪಿಯಾಗಲಿ ಪ್ರಜಾಪಾಲಕನು ಲೋಕಪಾಲಕ ತೇಜೋಯುಕ್ತನಾಗಿರುವುದರಿಂದ ದಂಡಾರ್ಹನೆನಿಸನು. ತ್ರಿಕಾಲಜ್ಞನೇ! ಸುನೀಥಾಪುತ್ರನ ಕುಚೇಷ್ಟಿತ

ವಂತಹ ಘೋರವೇ ಇರಬೇಕು. ದಯಮಾಡಿ ಶ್ರದ್ಧೆಯಿಂದ ಕೇಳುವ ನನಗಾ ಕಥೆಯನ್ನು ಹೇಳು!

ಮೈತ್ರೇಯನು ಹೇಳಲುಪಕ್ರಮಿಸಿದನು–

ಅಂಗರಾಜನೊಂದು ಸಲ ಅಶ್ವಮೇಧನೆಂಬುವ ಮಹಾಯಜ್ಞವನ್ನು ಮಾಡುತ್ತಿರಲು ಬ್ರಹ್ಮವಾದಿ ಗಳಾದ ಋತ್ವಿಜರು ಆಹುತಿಗಳನ್ನು ಹಿಡಿದು ಕರೆದರೂ, ದೇವತೆಗಳು ಬರಲಿಲ್ಲ. ವಿಸ್ಮಿತರಾಗಿ ಋತ್ವಿಜರು ಯಜಮಾನನಿಗೆಂತೆಂದರು– 'ರಾಜನ್! ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸುತ್ತಿಲ್ಲ. ಹವಿಸ್ಸು ಶುದ್ಧವಾಗಿದೆ. ನೀನೂ ಅವನ್ನು ಶ್ರದ್ಧೆಯಿಂದ ಕೊಡುತ್ತಿರುವೆ. ನಾವು ಪಠಿಸುವ ವೇದಮಂತ್ರಗಳು ವೀರ್ಯವಂತವಾಗಿಯೇ ಇದೆ. ನಾವೂ ಧೃತವ್ರತರಾಗಿರುವೆವು. ದೇವತೆಗಳಿಗ ವಜ್ಞೆಯನ್ನು ಸ್ವಲ್ಪವಾದರೂ ಮಾಡಿ ಅರಿಯೆವು. ಕರ್ಮಸಾಕ್ಷಿಗಳಾದ ದೇವತೆಗಳು ಯಜ್ಞ ಭಾಗಗಳನ್ನೇಕೆ ಸ್ವೀಕರಿಸುವುದಿಲ್ಲವೋ! ಏನೂ ತಿಳಿಯದಂತಾಗಿದೆ. ಅಂಗನು ವಿಪ್ರವಚನ ವನ್ನು ಕೇಳಿ ಬಹುಖಿನ್ನನಾದನು. ಋತ್ವಿಜರಿಂದ ಅಪ್ಪಣೆಯನ್ನು ಪೊಂದಿ ಸಂಶಯನಿವಾರಣಾ ದಕ್ಷರಾದ ಸದಸ್ಯರನ್ನು ನೋಡಿ 'ದೇವತೆಗಳೇ ತಕ್ಕೋ ಹವಿಃ ಪಿಂಡಗಳನ್ನು ಸ್ವೀಕರಿಸಲು ಬರಲೊಲ್ಲರು. ಸದಸಸ್ಪತಿಗಳು ಸಂಕೋಚವಿಲ್ಲದೆ ನಾ ಮಾಡಿದ ಅಪರಾಧವನ್ನು ಹೇಳಬೇಕು' ಎಂದು ಬೇಡಿಕೊಂಡನು. ಆಗ ಸದಸ್ಯರು – ನರದೇವ! 'ಈ ಜನ್ಮದಲ್ಲಿ ನೀನು ಪ್ರಜಾವಿಹೀನ ನಾಗಿರುವೆ. ಆದರಿಂದ ಹಿಂದಿನ ಜನ್ಮದಲ್ಲಿ ನೀ ಮಾಡಿದ ಬಾಲಹತ್ಯದೋಷವು ಸ್ಫುರಿತವಾಗು ತ್ತದೆ. ಮೊದಲು ನೀ ಪುತ್ರವಂತನಾಗಲು ಬೇಕಾದ ಪುತ್ರಕಾಮೇಷ್ಟಿಯನ್ನು ಮಾಡಿ ಹರಿಯನ್ನು ಭಜಿಸು. ಹರೀಚ್ಛೆಯಿಂದ ವಿಶಿಷ್ಟ ಪುತ್ರನು ನಿನಗಾಗುವನು. ಅಂತೆಯೇ ದೇವತೆಗಳು ನಿನ್ನ ಯಜ್ಞ ಭಾಗವನ್ನು ಕೊಳ್ಳಲಿಲ್ಲ. ಶ್ರೀಹರಿಯನ್ನು ಪುತ್ರಕಾಮನಾಗಿ ಯಜಿಸಲು ದೇವತೆಗಳೆಲ್ಲರೂ ತಪ್ಪದೆ ಸ್ವಭಾಗಗಳನ್ನು ಸ್ವೀಕರಿಸುವರು. ಜನರು ಫಲವನ್ನು ಕೋರಿ ಫಲಕಾಮನಾನುಸಾರಿಯಾಗಿ ಮಾಡಿದ ಪೂಜೆಯಿಂದ ಸಂತುಷ್ಟನಾಗಿ ಶ್ರೀಶನು ಅವರು ಬೇಡಿದುದನ್ನೆಲ್ಲ ಕೊಡುವನು'ಎನಲು ಋತ್ವಿಜರು ಅಂಗನ ಸಂತತಿಗಾಗಿ ಪುತ್ರಕಾಮೇಷ್ಟಿ ದೇವನಾದ ಶಿಪಿವಿಷ್ಟನಾಮಕ ಶ್ರೀಹರಿ ಪ್ರೀತಿ ಗೆಂದು ಪುರೋಡಾಶವನ್ನು ಹೋಮಿಸಿದರು. ಆಗ ಅಗ್ನಿಕುಂಡದಿಂದ ಹೇಮಮಾಲಿಯು ಶುಭ್ರವಸನನಾದ ಯಜ್ಞಪುರುಷನು ಕೈಲಿ ಪಾಯಸಭರಿತ ಕನಕಪಾತ್ರೆಯಂ ಪಿಡಿದೆದ್ದು ಬಂದನು. ರಾಜನು ವಿಪ್ರರಾದೇಶಿಸಿದಂತೆ ಆ ಪಾಯಸವನ್ನು ಸ್ವೀಕರಿಸಿ, ಮೂಸಿ, ತನ್ನ ಪತ್ನಿಯಾದ ಸುನೀಥಳಿ ಗಿತ್ತನು. ಅದನ್ನು ಕುಡಿದ ರಾಣಿಯು ಋತುಕಾಲದಲ್ಲಿ ರಾಜನಿಂದ ಗರ್ಭದಾರಣವನ್ನು ಮಾಡಿ ಕಾಲಕಳೆಯಲು ಮಗನನ್ನು ಪಡೆದಳು. ಅವನು ಬಾಲಕನಿರುವಾಗಲೇ ತನ್ನ ಮಾತಾಮಹನು ಅಧರ್ಮಾಂಶನು ಆದ ಮೃತ್ಯುವಿನಂತೆ, ಅಧಾರ್ಮಿಕನೂ ಹಿಂಸಾಪರನೂ ಆಗಿ ಬೆಳೆದನು. ಧನುಃಪಾಣಿಯಾಗಿ ವನವನ್ನು ಪ್ರವೇಶಿಸಿ, ನಿಷ್ಕರುಣೆಯಾಗಿ ಸಾಧು ದೀನ ಮೃಗಗಳನ್ನು ಸಂಹರಿಸಿ ವೇನನೆಂದು ಹೆಸರನ್ನು ಪಡೆದನು. ವೇನನೆಂದರೆ ಹಿಂಸ್ರಕನೆಂದರ್ಥವು. ಆಟವಾಡುತ್ತಾ ವಯಸ್ಕರಿಂದ ಕೂಡಿ ಬಡಿದಾಟ ಬಲಾತ್ಕಾರವಾಗಿ ಹುಲಿಯಂತೆ ಮೇಲೆರಗಿ ಬಾಲರ ಕುತ್ತಿಗೆ ಯನ್ನು ಹಿಚುಕಿ ಕೊಂದನು. ಇಂತಹ ದುಷ್ಟಸುತನನ್ನು ಶಾಪಿಸಲು ಶಕ್ತನಾಗದೇ ಅಂಗರಾಜನು ಬಹು ವ್ಯಸನದಿಂದ ತಪಿಸುತ್ತಿಂತು ಚಿಂತಿಸಿದನು–

ಮಕ್ಕಳಿಲ್ಲದವರೇ ಧನ್ಯರು; ಯಾವ ದೇವನನ್ನೇನು ಪೂಜಿಸಿದರೋ ಅಪ್ರಜರಾಗಿ ನಿಶ್ಚಿಂತ ರಾಗಿರುವರು. ದುರ್ಭರವಾದ ದುಷ್ಟ ಸುತನಿಂದ ಆಗುವ ದುಃಖವನ್ನು ನೀಗಿಕೊಂಡಿರುವರು.

ಮಕ್ಕಳಿಂದ ನಿಂದೆ; ಮಕ್ಕಳ ಪೋಷಣೆಗಾಗಿ ಅಧರ್ಮ; ಮಕ್ಕಳನ್ನು ವಹಿಸಿಟ್ಟು ಪರರ ವಿರೋಧ, ಮಕ್ಕಳಿಂದ ಕೊನೆಗೆ ಮನೋವ್ಯಾಧಿ; ಮಗನೆಂಬ ಬಂಧನದಿಂದ ಎಷ್ಟು ಅಜ್ಞಾನ; ವಿವೇಕಿಯು ಬಹುಕ್ಲೇಶದಾಯಕವಾಟ ಗೃಹಸ್ಥಾಶ್ರಮದಲ್ಲಿ ಸಿಲುಕದಿರುವುದೇ ಲೇಸು. ಪ್ರಾಯಃ ಸತ್ಪುತ್ರನಿಗಿಂತ ದುಷ್ಟಸುತನೇ ಮೇಲು. ಸತ್ಪುತ್ರನು ಬಂಧಕನಾಗುವನು, ದುಷ್ಟಪುತ್ರನು ವೈರಾಗ್ಯಕಾರಣನಾಗುವನು. ಸಾಕೀ ಹಾಳು ಸಂಸಾರ! ಸಾಕೀ ಮಗನ ಗೊಡವೆ!

ಅಂಗರಾಜನಿಂತು ನಿರ್ವಿಣ್ಣನಾಗಿ ನಿದ್ರಾಹಾರಗಳನ್ನು ಬಿಟ್ಟು ನಿಶೀಥದಲ್ಲಿ, ಯಾರಿಗೂ ಪೇಳದೆ, ಮನೆಯಿಂದ ಹೊರಟುಹೋದನು. ವೇನಮಾತೆಯು ನಿದ್ರೆಯಿಂದೆದ್ದು ರಾಜನನ್ನು ಕಾಣದೆ, ಪೇಳಲು ಮಂತ್ರಿ ಪುರೋಹಿತಾಮಾತ್ಯಾಮಿತ್ರರು, ಸರ್ವತ್ರ ರಾಜನನ್ನು ಹುಡುಕಿ ಹರಿಯಂ ಕಾಣಲಾರದ ಕುಯೋಗಿಗಳಂತೆ ಕಾಣದೆ, ಹಿಂದಿರುಗಿ ಶೋಕದಿಂದಾವಾರ್ತೆಯನ್ನು ಪುರದಲ್ಲಿ ಸಭೆ ಸೇರಿದ ಋಷಿವರರಿಗೂ ಪ್ರಜರಿಗೂ ತಿಳಿಸಿದರು. ಇಂತು ಅಂಗರಾಜನು ಬಾಲಹತ್ಯಾದಿದೋಷದಿಂದ ಅನಪತ್ಯವಾಗಿ ದುಷ್ಟಪುತ್ರನನ್ನು ಪಡೆದನಾದರೆ ಶ್ರೀಹರಿಪ್ರೀತಿಗೆಂದು ಯಜ್ಞವನ್ನು ಮಾಡಿದುದರಿಂದ ಪೃಥುವಿನಲ್ಲಿ ಆವಿಷ್ಟನಾದ ಪೃಥುನಾಮಕ ವಿಷ್ಣುವಿನನ್ನೇ ಮೊಮ್ಮಗನನ್ನಾಗಿ ಪಡೆದನು.

## ೧೪. ವೇನದಂಡನ

ಭೃಗ್ವಾದಿ ಮುನಿಗಳಾದ ರಾಜನಿಲ್ಲದಿರೆ ಲೋಕದ ಜನರು ಪಶುಗಳಂತೆ ಧರ್ಮಬಾಹಿರರಾಗುವರೆಂದಾಲೋಚಿಸಿ, ಲೋಕಕ್ಷೇಮವನ್ನೇ ಬಯಸಿ, ಸುನೀಥೆಯನ್ನು ಕರೆಯಿಸಿ, 'ಸ್ವಭಾವದುಷ್ಟನಾದ ವೇನನು ರಾಜ್ಯಾನರ್ಹನೆಂದು' ಮಂತ್ರಿ ಪುರೋಹಿತಾದಿಗಳು ಅಭಿಪ್ರಾಯವನ್ನು ಸೂಚಿಸಿದರೂ ನೋಡೋಣವೆಂದು ವೇನನಿಗೆ ಪಟ್ಟಗಟ್ಟಿದರು. ವೇನನು ರಾಜಾನಾದನೆಂದು ಕೇಳಿದ ಮಾತ್ರದಿಂದಲೇ ಕಳ್ಳಕಾಕರು ಹಾವನ್ನು ಕಂಡ ಇಲಿಗಳಂತೆ ಅಡಗಿಕೊಂಡು ಕಾಣಿಸದಾದರು.

ವೇನನು ಸಿಂಹಾಸನವನ್ನೇರಿ ಭೃತ್ಯಾಮಾತ್ಯ ದೂತ ರಾಜ್ಯಕೋಶ ದುರ್ಗ ಜನಪದ ಪುರೋಹಿತರೆಂಬ ಅಷ್ಟಸಂಪನ್ಮದಮತ್ತನಾಗಿ ಮಹನೀಯರನ್ನವಮಾನಿಸಿದನು. ಸ್ತಬ್ಧನು, ಸಂಭಾವಿತನು, ಮೂರ್ಖನಾದ ವೇನನು ಮದವೇರಿದ ಆನೆಯಂತೆ ವಿಶ್ರಂಖಲನಾಗಿ ವರ್ತಿಸಿದನು. ರಥವನ್ನೇರಿ ಭೂಮಿಯು ನಡುಗುವಂತೆ, ಸಂಚರಿಸುತ್ತಾ ಆನೆಗಳ ಮೇಲೆ ಬೇರಿಗಳನ್ನು ಕಟ್ಟಿಸಿ, ಹೊಡೆಸಿ, ಡಂಗುರವನ್ನು ಸಾರಿಸಿದನು. 'ಎಲೋ ಬ್ರಾಹ್ಮಣರೇ! ಹೋಮ ಮಾಡಕೂಡದು. ಯಜ್ಞವನ್ನು ಮಾಡಕೂಡದು. ನಾನೇ ಬ್ರಹ್ಮನು. ದೇವನು ಬೇರೊಬ್ಬನಿಲ್ಲ' ಎಂದು ಚಾಟಿಸಲು ನಿಗ್ರಾಹಸುಗ್ರಹ ಸಮರ್ಥರಾದ ಮುನಿಗಳಿದನ್ನು ಕಂಡು ಲೋಕವ್ಯಸನದಿಂದ ನೊಂದು, ಕೃಪೆಯಿಂದ ಆಲೋಚಿಸಿದರು.'ಅಹೋ! ಜನರಿಗೆಂತಹ ಉಭಯ ಸಂಕಟವು ಬಂದೊದಗಿತು! ಒಂದು ಕಡೆ ರಾಜಹಿಂಸೆ, ಮತ್ತೊಂದೆಡೆ ತಸ್ಕರಪೀಡೆ. ಅಯ್ಯೋ ಪಾಪ! ಎರಡು ಕೊನೆಯಿಂದ ಉರಿಯುತ್ತ ಬರುವ ಅಗ್ನಿಗೆ ಸಿಕ್ಕ ಕಾಷ್ಟದಂತೆ ಕಷ್ಟಪಡುತ್ತಿರವರಲ್ಲ! ರಾಜ್ಯಾರ್ಹನಲ್ಲವೆಂದರಿತೂ ಅರಾಜಕಭಯದಿಂದ ವೇನನಿಗೆ ರಾಜ್ಯದಲ್ಲಿ ಪಟ್ಟಗಟ್ಟಿದವು. ಇವನೂ ಭಯಂಕರನೆ ಅದನಿನ್ನು ಪ್ರಜಾಕ್ಷೇಮವೆಂತು?

ನಮಗೂ ಹಾಲುಂಡು ಹಾರಿ ಕುಡಿಯುವ ಹಾವಿನಂತೆ ಈ ವೇನನು ಅನರ್ಥಕಾರಿಯೇ ಸರಿ! ಸುನೀಥಳ ಮಗನಲ್ಲವೇ? ಸ್ವಭಾವದಿಂದಲೇ ಖಲನು! ಮೇಲೆ ರಾಜನೂ ಆದನು. ಪ್ರಜರನ್ನು ಪೀಡಿಸುವ ವೇನನ ಪಾಪವೆಮಗೆ ತಾಗದಂತೆ ಮೊದಲು ಸಮಾಧಾನದಿಂದ ಹಿತವನ್ನು ಹೇಳಿ ನೋಡೋಣ! ಗೊತ್ತಿದ್ದೂ ದುರ್ಮಾಗನಿಗೆ ರಾಜ್ಯ ಕೊಟ್ಟು ತಪ್ಪಾಯಿತು. ಒಂದು ವೇಳೆ ನಮ್ಮ ಸಾಂತ್ವನವಚನವನ್ನಾಲಿಸದೆ ತಿರಸ್ಕರಿಸಿದರೆ ಆ ವೇನಹಂತಕನನ್ನು ನಮ್ಮ ತಪೋಬಲದಿಂದ ಸುಟ್ಟು ನಾಶಮಾಡೋಣ. ಜ್ಞಾನಿಜನದ್ರೋಹದಿಂದ ಅವನೀಗ ನಷ್ಟನಾಗೇ ಇರುವನು.

ಇಂತು ನಿಶ್ಚಯಿಸಿ ಮುನಿಗಳು ವೇನನಲ್ಲಿಯ ಸಿಟ್ಟನ್ನು ಅಡಗಿಸಿ, ಸಮೀಪಿಸಿ ಸಾಮವಚನ ಗಳಿಂದ ನುಡಿದರು–

ನೃಪವರ್ಯ !ಕೇಳು ನಮ್ಮ ಹಿತವಾದ ವಿಜ್ಞಾಪನೆಯನ್ನು ! ಇದರಿಂದ ನಿನ್ನ ಆಯುಃ ಕಾಂತಿ, ಬಲ, ಕೀರ್ತಿಗಳು ಹೆಚ್ಚಾಗುವುವು. ವಾಕ್ತಾನುಮನಶುದ್ಧಿಯಿಂದಲೂ ಬುದ್ಧಿಯಿಂದಲೂ ಆಚರಿದ ಸದ್ಧರ್ಮದಿಂದ ದುಃಖರಹಿತ ಪುಣ್ಯಲೋಕಗಳು ಸಿಗುವುವು. ಫಲಾಪೇಕ್ಷೆಯಿಂದ ತ್ಯಜಿಸಿ ಮಾಡಿದ ಧರ್ಮಕರ್ಮಗಳು ಮೋಕ್ಷವನ್ನೇ ಕೊಡುವುವು. ಧರ್ಮದಿಂದ ಪ್ರಜರಿಗೆ ಕ್ಷೇಮವಾಗುವುದು. ನಿನ್ನಿಂದ ಅಂತಹ ಪವಿತ್ರಧರ್ಮವು ನಷ್ಟವಾಗದಿರಲಿ! ಧರ್ಮವನ್ನು ನಾಶಗೊಳಿಸಿದ ರಾಜನು ಐಶ್ವರ್ಯಭ್ರಷ್ಟನಾಗುವನಿದು ನಿಜ.ಕೆಟ್ಟ ಮಂತ್ರಿಗಳಿಂದಲೂ ಚೋರಾದಿ ದುರ್ಜನರಿಂದಲೂ ಪ್ರಜರನ್ನು ರಕ್ಷಿಸುವ ರಾಜನು ಐಹಿಕಾಮುಷ್ಮಿಕ ಸುಖವನ್ನು ಪೊಂದುವನು. ಅಂತಹ ರಾಜನೇ ಷಷ್ಠಾಂಶವಾದ ಕಪ್ಪವನ್ನು ತೆಗೆದುಕೊಳ್ಳಲರ್ಹನೆನಿಸುವನು. ಯಾವ ರಾಜನ ರಾಜ್ಯದಲ್ಲಿ ಜನರು ವರ್ಣಾಶ್ರಮೋಚಿತ ಧರ್ಮದಿಂದ ನಡೆಯುತ್ತಾ, ಭಗವಂತ ನಾದ ಯಜ್ಞ ಪುರುಷನನ್ನಾರಾಧಿಸಿ ಯಜ್ಞಾದಿಪುಣ್ಯಕರ್ಮಗಳನ್ನು ಮಾಡುವರೋ, ಅಂತಹ ರಾಜನು ತನ್ನ ಧರ್ಮಶಾಸನವನ್ನು ನಡೆಯಿಸಿದನೆಂದು, ಗೋವಿಂದನಾನಂದ ಪಡುವನು. ಜಗತ್ಪ್ರಭುಗಳ ಪ್ರಭುವಾದ ಶ್ರೀಶನು ತುಷ್ಟನಾದನೆಂದ ಮೇಲೆ ಅಂತಹ ಭಕ್ತನಿಗೆ ಸಿಗಲಾರದ ವಸ್ತುವೀ ಜಗತ್ತ್ರಯದಲ್ಲಿಯೂ ಇಲ್ಲ. ಲೋಕದ ಜನರೇ ಏಕೆ? ಲೋಕಪಾಲರು ಕೂಡ ಅಂತಹವನನ್ನು ಯಥಾಯೋಗ್ಯವಾಗಿ ಗೌರವಿಸುವರು. ಶ್ರೀಹರಿಯು ಸರ್ವಲೋಕೇಶನು, ವೇದಮುಖ್ಯ ಪ್ರತಿಪಾದ್ಯನು. ಸಕಲ ಕರ್ಮಫಲಪ್ರದನು. ತಪೋವಿಷಯನು; ಅಂತಹ ಸರ್ವೋತ್ತಮನನ್ನು ವಿಪ್ರರು ಯಜ್ಞ, ದಾನ, ತಪಗಳಿಂದ ಪೂಜಿಸುವರು. ನೀನವರಿಗೆ ಪ್ರತಿಕೂಲನಾಗಬೇಡ. ಇದರಿಂದ ಜಗತ್ತಿಗೆ ಮಂಗಳವಾಗುವುದು. ನಿನ್ನದೇಶದಲ್ಲಿ ವಿಪ್ರರು ಮಾಡಿದ ಯಜ್ಞಗಳಿಂದ ಶ್ರೀ ಹರಿಯ ಭಿನ್ನಕಲಾರೂಪರಾದ ದೇವತೆಗಳು ತುಷ್ಟರಾದರೆಂದರೆ ಬೇಕಾದ ವಾಂಛಿತಗಳನ್ನೀಡೇರಿಸುವರು. ಅಂತಹ ದೇವಹೇಲನವು ನಿನಗೆ ಒಳ್ಳೆಯದಲ್ಲ– ಎನಲು ವೇನನು ಗಹಗಹಿಸಿ ನಕ್ಕು ಅವರನ್ನಿಂತು ದೂಷಿಸಿದನು-

ಅಧರ್ಮವನ್ನು ಧರ್ಮವೆಂದು ತಿಳಿದಿರುವ ನೀವು ಮೂರ್ಖರೇ ಸರಿ! ವೃತ್ತಿಯನ್ನು ಕಲ್ಪಿಸುವ ಪತಿಯನ್ನು ಬಿಟ್ಟು ಜಾರನನ್ನು ಸೇರುವ ಕುಲಟೆಯಂತೆ ರಾಜರೂಪಿಯಾದ ದೇವನನ್ನ ಗಣಿಸಿದ ನಿಮಗೇ ಈ ಲೋಕದಲ್ಲಿ ಮತ್ತು ಅಲ್ಲಿಯೂ ಮಂಗಲವಾಗಲಾರದು. ಕೇಳಿ! ಎಷ್ಟೋ ಭಕ್ತಿಯಿಂದ ಹೇಳುವ ಆ ನಿಮ್ಮ ಯಜ್ಞಪುರುಷನು ಯಾರು? ಎಲ್ಲಿರುವನು? ಪ್ರತ್ಯಕ್ಷನಾದ ರಾಜನನ್ನು ಬಿಟ್ಟು ಯಾವನನ್ನೋ ಭಜಿಸುವ ನೀವು ಜಾರಿಣಿಯರಂತೆ ನಿಂದ್ಯರೇ ಸರಿ! ವಿಷ್ಣು

ಬ್ರಹ್ಮ ಶಂಕರರು, ಇಂದ್ರ ವಾಯು ಯಮ ಸೂರ್ಯ ಪರ್ಜನ್ಯ ಕುಬೇರ ಚಂದ್ರ ಪಾವಕರೂ, ಭೂವರುಣರು ಇನ್ನು ನೀವು ಹೇಳುವ ದೇವತೆಗಳೆಲ್ಲರೂ ವರಶಾ ಸಮರ್ಥರಲ್ಲವೇ? ಅವರೆಲ್ಲ ರಾಜನಲ್ಲಿರುವರೆಂದೂ, ರಾಜನು ಸರ್ವದೇವಮಯನೆಂದೂ ನೀವೇ ಹೇಳುವಿರಿ. ಅಂದಮೇಲೆ ನಾನೇ ಗೇವೇಶನು. ಮತ್ಸರವಂ ಬಿಟ್ಟು ಯಜ್ಞಭಾಗಗಳನ್ನೆನಗೇ ಕೊಡಿ. ನನ್ನ ಹೊರತು ಉತ್ತಮ ಪುರುಷನಿನ್ನಾವು?– ಎಂದು ನಿಂದಿಸಿದನು.

ಮೈತ್ರೇಯನು ಪೇಳಿದನು–

ಪಾಪಿಯಾದ ವೇನನಿಂತು ವೇದಮಾರ್ಗವನ್ನು ತ್ಯಜಿಸಿ, ವಿಪರೀತ ಜ್ಞಾನಿಯಾದನು. ಋಷಿಗಳೆಷ್ಟು ಪೇಡಿದರೂ ಕೇಳದೆ ತಿರಸ್ಕರಿಸಿದನು. ಸಕಲ ಶುಭದೂರನಾಗುವದವನ ಹಣೆಯಲ್ಲೇ ಬರೆದಂತಿತ್ತು. ಆಗ ಭೃಗ್ವಾದಿ ಬ್ರಾಹ್ಮಣರು ದುರ್ಗರ್ವಿಯಾದ ವೇನನು ತಮ್ಮ ಪ್ರಾರ್ಥನೆಯನ್ನು ತಿರಸ್ಕರಿಸಲು, ಕುಪಿತರಾಗಿ ಇಂತು ನುಡಿದರು–

ಕೊಲ್ಲಿ! ಸಂಹರಿಸಿ ಇವನನ್ನು. ಸ್ವಭಾವದಿಂದ ದುಷ್ಟನಾದ ಈ ವೇನನಿಂದ ಜಗತ್ತಿಗೆ ಸುಖವಿಲ್ಲ. ಇವನಿನ್ನೂ ಬದುಕಿದ್ದರೆ ಲೋಕವನ್ನೆಲ್ಲಾ ನಾಶಮಾಡಿಬಿಡುವನು. ಈ ದುಶ್ಚರಿತನು ರಾಜ್ಯಾರ್ಹನಲ್ಲ. ಲಜ್ಜೆಯನ್ನು ಬಿಟ್ಟು ವಿಷ್ಣುನಿಂದೆಯನ್ನು ಮಾಡಿದ ಈ ಪಾಪಿಯು ಸಾಯಲಿ! ಶ್ರೀಶನ ದಯೆಯಿಂದ ಮಹದೈಶ್ವರ್ಯವನ್ನು ಪಡೆದು ಶ್ರೀಶನನ್ನೇ ನಿಂದಿಸುವ ಸಾಹಸವನ್ನು ಮಾಡಲು ವೇನನಂತಹ ಅಮಂಗಲನಿಗಲ್ಲದೆ ಇತರರಿಗೆ ಸಾಧ್ಯವೇ?

ಹೀಗೆ ನಿಶ್ಚಯಿಸಿ ಭೃಗ್ವಾದಿ ಮುನಿಗಳು ಸಿಟ್ಟಿನಿಂದ ಹುಂಕಾರವನ್ನು ಮಾಡುವುದರಿಂದಲೇ ಹರಿನಿಂದೆಯಿಂದ ಹತಪ್ರಾಯನಾದ ವೇನನನ್ನು ಸಂಹರಿಸಿದನು. ವೇನನು ಬ್ರಹ್ಮದಂಡಹತನಾದ ಅಂಧಂತಮವನ್ನು ಹೊಂದಿದನು. ಋಷಿಗಳು ತಮ್ಮ ಆಶ್ರಮಗಳಿಗೆ ಪೋಗಲು, ಸುನೀಥೆಯು ವೇನಶರೀರವನ್ನು ಔಷಧಾದಿಗಳಿಂದ ಕೆಡದೆ ಕಾದು ದುಃಖಿಸುತ್ತಿದ್ದಳು.

ಒಂದು ಸಲ ಆ ಭೃಗ್ವಾದಿ ಮುನಿಗಳು ಸರಯೂಸ್ನಾನವನ್ನು ಮಾಡಿ, ಆಹುತಿಗಳನ್ನಿತ್ತು, ನದೀತೀರದೀ ಕೂತು ವಿಷ್ಣುಕಥಾ ಶ್ರವಣವನ್ನು ಮಾಡುತ್ತಿದ್ದರು. ಆಗ ಲೋಕಭಯಂಕರಗಳಾದ ಉತ್ಪಾತಗಳೇಳಲು ಕಂಡು ತಪಿಸಿ ಇಂತೆಂದರು–

'ಅಯ್ಯೋ! ಭೂಮಿಯಲ್ಲಿ ಮತ್ತೆ ಚೋರಾದ್ಯುಪ್ರದವವು ಹೆಚ್ಚಿತೋ ಹೇಗೆ? ರಾಜ್ಯವೋ ಅರಾಜಕವಾಗಿದೆ' ಎನ್ನುತ್ತಿರುವಂತೆಯೇ ಕಳ್ಳಕಾಕರು ಕೊಳ್ಳೆ ಹೊಡೆಯಲು, ಅವರ ಪೀಡೆಯನ್ನು ತಡೆಯಲಾರದೆ ಓಡುವ ಜನರು, ಕಳ್ಳರು ಹಿಂಬಾಲಿಸಲೆದ್ದ ಧೂಳಿಯು ಕಾಣಿಸಿತು. ಅನ್ಯೋನ್ಯ ಹಿಂಸೆಯಿಂದ ದ್ರವ್ಯವನ್ನು ಸುಲಿಯುವ ದುಷ್ಟರ ಹಾವಳಿ ಹೆಚ್ಚಿತು. ಗ್ರಾಮಗಳು ಚೋರರಿಂದ ತುಂಬಿದವು. ರಾಜ್ಯವರಾಜಕವಾಗಿ ಬಲಹೀನವಾಯಿತು. ದೋಷವನ್ನು ಕಂಡು ಶಕ್ತರಾದವರೂ ದುಷ್ಟರನ್ನು ನಿವಾರಿಸಲಿಲ್ಲ. ಬ್ರಾಹ್ಮಣನು ಸಮದರ್ಶಿಯು ಶಾಂತನಾಗಿದ್ದರೂ ದೀನಜನ ದುಃಖವನ್ನು ಕಣ್ಣಾರೆ ಕಂಡು ಉಪೇಕ್ಷಿಸಿದರೆ ಒಡೆದ ಗಡಿಗೆಯಂತೆ ನೀರು ಹರಿದುಹೋಗುವಂತೆ ಅವನ ಬ್ರಾಹ್ಮಣ್ಯವೇ ನಷ್ಟವಾಗುವುದು. ಅಂಗರಾಜರ್ಷಿಯ ವಂಶವಿಲ್ಲಿಗೆ ನಿಂತುಹೋಗುವುದು ಉಚಿತವಲ್ಲ. ಈ ವಂಶದಲ್ಲಿ ಕೇಶವದಾಸರಾದ ವೀರರಾಜರು ಹುಟ್ಟಿರುವರು. ಆದ್ದರಿಂದ ಆ ವಂಶವನ್ನೂ ಉಳಿಸುವುದೂ, ಅಧರ್ಮವನ್ನು ಅಳಿಸುವುದೂ ಶಕ್ತರಾದ ನಮ್ಮ ಧರ್ಮವಾಗಿದೆ'.

ಇಂತು ನಿಶ್ಚಯಿಸಿ ಋಷಿಗಳು ಬಂದು ಮೃತರಾಜನ ತೊಡೆಯನ್ನು ಮಥಿಸಿದರು. ಅಲ್ಲಿಂದ ಕಾಕಕೃಷ್ಣವರ್ಣನು, ಹ್ರಸ್ವಬಾಹುವೂ, ಮಹಾಕಪೋಲನೂ, ಆದ ಕುಬ್ಜನೊಬ್ಬ ಸಮುದ್ರ ಮಥನದಿಂದ ಕಾಲಕೂಟದಂತೆ ಜನಿಸಿದನು. ಕಾಲುಗಿಡ್ಡಾಗಿ ಮೂಗುಬಚ್ಚಿಯಾಗಿ, ಕಣ್ಣು ಕೆಂಪಾಗಿ ಕೂದಲು ಕಂದಾಗಿದ್ದ ಅವನು ನಮಿಸಿ ಏನು ಮಾಡಲಿ ಎಂದನು. ಮುನಿಗಳವನನ್ನು 'ನಿಷೀದ'(ಕೂಡು) ಎಂದರು. ಅವನು ನಿಷಾಧನೆನಿಸಿ ಗಿರಿಕಾನನಚಾರಿಗಳಾದ ಬೇಡರಿಗೆ ಮೂಲಪುರುಷನಾದನು. ವೇನನ ಪಾಪವನ್ನು ವಹಿಸಿ ಜನಿಸಿದ ನಿಷಾದನು ತಾಮಸವೇನಾಂಶನು. ಪೃಥುನೆಂಬ ಜೀವನು ಸಾತ್ವಿಕವೇನಾಂಶನು. ಮಗನ ಪುಣ್ಯದಿಂದ ಸ್ವರ್ಗವನ್ನು ಸೇರಿದವನು ರಾಜಸವೇನಾಂಶನು. ಸ್ವಯಂ ವೇನನು ತಾಮಸ ತಾಮಸನು; ಅವನು ತಮಸ್ಸನ್ನು ಪೊಂದಿದನು.

ಅನಂತರ ಋಷಿಗಳು ಮತ್ತೆ ವೇನಶರೀರದ ಬಾಹುದ್ವಯವನ್ನು ಮಥಿಸಲಲ್ಲಿಂದ ದಂಪತಿಗಳು ಹುಟ್ಟಿದರು; ಆ ಗಂಡ ಹೆಂಡಂದಿರನ್ನು ಕಂಡಾನಂದಪರವಶರಾಗಿ ಪೃಥುನಾಮಕ ಹರಿಸನ್ನಿಧಾನ ವಿಶೇಷಯುಕ್ತನೆಂದೂ ತಿಳಿದು ಪ್ರಶಂಶಿಸಿದರು. ಭುವನ ಪಾವನನೆನಿಪ ಲಕ್ಷ್ಮೀಧವನ ಆವೇಶಯುಕ್ತನಾದ ಅವನೀ ಭೂಧವನು, ಪೃಥುನೆನಿಸುವನು. ಇವಳಾದರೂ ಲಕ್ಷ್ಮಿದೇವಿಯು, ಪತಿಯಂ ಬಿಟ್ಟಿರದಂತೆ ಅನಪಾಯನಿಯಾಗಿ ಲಕ್ಷ್ಮೀಸನ್ನಿಧಾನಯುತಳಾಗಿ ಅರ್ಚೀದೇವಿ ಎನಿಸುವಳು.

## ೧೫. ಪೃಥುಚರಿತೆ, ನಿರಹಂಕಾರಿತ್ವ

ಆಗ ಬ್ರಾಹ್ಮಣರು ಅರ್ಚಿ ಪೃಥುಗಳನ್ನಿಂತು ಪೊಗಳಿದರು-

ಆ ಮಹಾರಾಜನು ಆದಿರಾಜನೆಂದು ಪ್ರಥಿತನಾಗುವನು. ಮಹಾಕೀರ್ತಿಯನ್ನು ಗಳಿಸಿ ಪೃಥುನೆಂಬ ನಾಮದಿ, ಸಜ್ಜನ ಪ್ರಶಂಸಾ ಪಾತ್ರನಾಗುವನು. ಈ ದೇವಿಯು ಗುಣಗಣಮಣಿ ಭೂಷಿತಳಾಗಿ ಅರ್ಚಿ ಎಂಬ ನಾಮದಿ ಪೂಜ್ಯಳಾಗುವಳು. ಪೃಥುರಾಜನ ಪತ್ನಿಯಾಗಿ ಶೋಭಿಸುವಳು. ಶ್ರೀಹರಿಯ ಪೃಥುರೂಪ ಸನ್ನಿಧಾನದಿಂದ, ರಾಜನು ಲೋಕವನ್ನು ರಕ್ಷಿಸುವನು. ಅರ್ಚಿಯು ಶ್ರೀ ಸನ್ನಿಧಾನದಿಂದ ಅವನ ರಾಣಿ ಎನಿಸುವಳು.

ಆಗ ಗಂಧರ್ವರು ಪಾಡಿದರು. ಸಿದ್ಧರಾಕಾಶದಿ ನಿಂದು ಸುಮವರ್ಷವನ್ನುಗರೆದರು. ಅಪ್ಸರೆಯರಾಡಿದರು. ಶಂಖತೂರ್ಯ ಮೃದಂಗಗಳನ್ನು ಬಾರಿಸಿದರು. ದೇವದುಂದುಭಿಗಳು ಮೊಳಗಿದವು. ದೇವರ್ಷಿ ಪಿತೃಗಣಗಳಲ್ಲಿಗೆ ಬಂದರು. ಜಗದ್ಗುರುವಾದ ಬ್ರಹ್ಮನು ಸುರೇಶರಿಂದ ಕೂಡಿಬಂದು ವೈನ್ಯನ ದಕ್ಷಿಣಹಸ್ತದಲ್ಲಿ ಚಕ್ರಾದಿ ಶುಭ ಚಿಹ್ನಗಳನ್ನು ಪಾದಗಳಲ್ಲಿ ಪದ್ಮರೇಖೆ ಯನ್ನು ಕಂಡು ಹರಿಸನ್ನಿಧಾನದ ಮಹಿಮೆ ಎಂದು ತಿಳಿದನು. ಶ್ರೀಹರಿಯ ದಯದಿಂದ ಪೃಥು ರಾಜನು ಅಪ್ರತಿಹತ ಪರಾಕ್ರಮಿಯಾಗುವಂತೆ ಆಶೀರ್ವದಿಸಿದನು. ಆಗ ಪೃಥುರಾಜ ನಿಗಭಿಷೇಕ ವನ್ನು ಮಾಡಲು ಬ್ರಹ್ಮಾದಿಗಳು ಸಿದ್ಧರಾದರು. ಸರ್ವದೇಶದ ಜನರು ತತ್ತತ್ ದ್ರವ್ಯಗಳನ್ನು ತಂದರ್ಪಿಸಿದರು. ನದಿಗಳು ಅಭಿಷೇಕಜಲವನ್ನು, ಸಮುದ್ರವು ರತ್ನಗಳನ್ನು, ಗಿರಿಗಳೋಷಧಿ ಗಳನ್ನು, ನಾಗರು ಮಣಿಗಳನ್ನು, ಗೋವುಗಳು ಪಂಚರಸಗಳನ್ನು, ದುರ್ದೈವಿ ಪೂಮಳೆಯನ್ನು, ಭೂಮಿಯು ಅಂಕುರಗಳನ್ನು ಉಪಾಯನವನ್ನಾಗಿ ತಂದುಕೊಟ್ಟರು. ಇಂತು ಪಟ್ಟಾಭಿಷಿಕ್ತನಾಗಿ

ಮಹಾರಾಜನು ಪೀತಾಂಬರವನ್ನು ಸರ್ವಾಭರಣಗಳನ್ನು ಧರಿಸಿ, ಅಲಂಕೃತಳಾದ ಅರ್ಚಿಯಿಂದ ಕೂಡಿ ಎರಡನೆಯ ಅಗ್ನಿಯಂತೆ ವಿರಾಜಿಸಿದನು. ಕುಬೇರನು ಕನಕಸಿಂಹಾಸನವನ್ನು, ವರುಣನು ಜಲಸ್ರಾವಿ ಶ್ವೇತಛತ್ರವನ್ನು, ವಾಯುವು ವಾಲವ್ಯಜನಗಳನ್ನು, ಧರ್ಮನು ಕಾಂತಿಕೀರ್ತಿಮಯ ಹಾರವನ್ನು ಕೊಟ್ಟರು. ಶ್ರೀ ಹರಿಯು ಸುದರ್ಶನ ಚಕ್ರವನ್ನು, ಶ್ರೀ ದೇವಿಯ ಅವ್ಯಾಹತೈಶ್ವರ್ಯ ವನ್ನು ದಯಪಾಲಿಸಿದರು. ದಶಚಂದ್ರನೆಂಬ ಖಡ್ಗವನ್ನು ರುದ್ರನು, ಶತಚಂದ್ರವನ್ನು ಪಾರ್ವತಿಯು, ಚಂದ್ರನು ಅಮೃತಮಯಾಶ್ವಯಗಳನ್ನು, ವಿಶ್ವಕರ್ಮನು ರೂಪಾಶ್ರಯವೆಂಬ ರಥವನ್ನು, ಅಗ್ನಿಯು ಅಜಗವೆಂಬ ಧನುಸ್ಸನ್ನು, ಸೂರ್ಯನು ಕಿರಣಗಳಂತಿರುವ ಬಾಣಗಳನ್ನು, ಭೂಮಿಯು ಅಣಿಮಾದಿ ಯೋಗಯುಕ್ತ ಪಾದುಕೆಗಳನ್ನು, ದ್ಯುದೇವಿಯು ಪುಷ್ಪಗಳನ್ನು, ಖೇಚರರು ನಾಟ್ಯಗೀತ ವಾದಿತ್ರ ಕಲೆಗಳನ್ನು ಅಂತರ್ಧಾನ ವಿದ್ಯೆಯನ್ನು, ಋಷಿಗಳು ವೇದಾಶೀರ್ವಾದಗಳನ್ನು, ಸಮುದ್ರನು ಶಂಖವನ್ನು, ನದಿಗಳು ಪರ್ವತಗಳು ರಾಜಮಾರ್ಗವನ್ನು ಕೊಟ್ಟು, ಪೂಜಿಸಿದರು.

ಆಗ ಸೂತ ಮಾಗಧ ವಂದಿಗಳು ಪೃಥುರಾಜನನ್ನು ಸ್ತುತಿಸಲುಪಕ್ರಮಿಸಿದರು. ನಿರಹಂಕಾರಿ ಯಾದ ಪೃಥುರಾಜನು ಅವರನ್ನು ನಿವಾರಿಸಿ ಮೇಘಗಂಭೀರವಚನಗಳಿಂದ ಇಂತೆಂದನು-

ಎಲೌ ಸೂತ! ಮಾಗಧ! ವಂದಿ! ಇನ್ನೂ ಲೋಕದಲ್ಲಿ ನನ್ನ ಗುಣಕಾರ್ಯವೇ ಪ್ರಕಾಶಿತ ವಾಗಿಲ್ಲ. ನಿಮ್ಮ ಸ್ತೋತ್ರದ ವಿಷಯವೇ ಇಲ್ಲವಲ್ಲ! ಏಕೆ ಇಲ್ಲದ ಗುಣಗಳನ್ನು ವರ್ಣಿಸಿ ನಿಮ್ಮ ವಚನಗಳನ್ನು ವ್ಯರ್ಥವಾಗಿಸುವಿರಿ? ಆದರೂ ನಿಮ್ಮ ವಂದಿವೃತ್ತಿಗೆ ಲೋಪವಿಲ್ಲ. ಗುಣಪ್ರಕಾಶ ವಾದ ಮೇಲೆ ಕಾಲಾಂತರದಲ್ಲಿ ನನ್ನಲ್ಲಿ ಇದ್ದ ಗುಣಗಳನ್ನು ಅತಿಶಯೋಕ್ತ ವಾಗದಂತೆ ನನ್ನ ಮರೆಯಲ್ಲಿ ವರ್ಣಿಸಿರಿ. ಮಧುರವಚನರಾದ ನೀವು ಉತ್ತಮ ಶ್ಲೋಕನ ಗುಣಗಳನ್ನು ನಮ್ಮೆದುರಿಗೂ ಮರೆಯಲ್ಲಿಯೂ ಸದಾ ಪೊಗಳುವದುಚಿತವು. ವಿಣ್ಮೂತ್ರ ಪೂರ್ಣನಾಗಿ, ಹೇಯವಾದೀ ದೇಹದಿ ಅಹಂಭಾವವನ್ನು ಮಾಡಿ, ತನ್ನನ್ನು ಪೊಗಳಿಸಿಕೊಂಬು ವುದು ಸಭ್ಯಲಕ್ಷಣವಲ್ಲ. ಆತ್ಮಪ್ರಶಂಸೆಯೇ ಮರಣವಲ್ಲವೇ? ಬಾಲ್ಯದಲ್ಲಿ ಇಲ್ಲದಿದ್ದರೂ ಮುಂದೆ ಬರಬಹುದೆಂದು ಆತ್ಮವಂಚನೆಯನ್ನು ಮಾಡಿಕೊಂಡು, ಪೃಥಿವ್ಯಾದಿಗಳ ಕ್ಷಮಾಗುಣ ವನ್ನು ಶ್ರೀಹರಿಯ ಔದಾರ್ಯಾದಿ ಗುಣಗಳನ್ನು ತನ್ನಲ್ಲಿವೆ ಎಂಬ ಭ್ರಮೆಯಿಂದ, ವಂದಿಗಳ ಮುಖ ದಿಂದ ಪೊಗಳಿಸಿಕೊಳ್ಳಲು ಯಾವ ವಿವೇಕಿಯು ಇಚ್ಛಿಸುವನು? ಒಂದು ವೇಳೆ ಹಾಗೆ ಪೊಗಳಿಸಿ ಕೊಂಡವನು ಜನರು ನಗುವರೆಂದು ತಿಳಿಯದ ಮೂರ್ಖನೇ ಸರಿ! ಎಷ್ಟೇ ಕೀರ್ತಿಶಾಲಿ ಗಳಾಗಲಿ ಪ್ರಭುವರರಾಗಲಿ ಆತ್ಮಸ್ತುತಿಯನ್ನು ಸಹಿಸರು. ಪ್ರತ್ಯಕ್ಷವಾಗಿ ಕಂಡ ಪೌರುಷನನ್ನು ಪರಮೋದಾರರಾದ ಮಹಾತ್ಮರು ತುತಿಸಿಕೊಳ್ಳಲು ನಾಚುವರು. ಇನ್ನು ನಾನೋ! ಲೋಕದಲ್ಲಿ ಯಾವ ಶ್ರೇಷ್ಠ ಗುಣಗಿಂದಲೂ ಪ್ರಸಿದ್ಧನಾಗಲು ತಕ್ಕ ಸುಕೃತವನ್ನು ಇನ್ನೂ ಮಾಡಿಲ್ಲ. ಅಂದಮೇಲೆ ಮೂರ್ಖನಂತೆ ನನ್ನ ಸ್ತುತಿಯನ್ನು ನಾನೇ ಎಂತು ಮಾಡಿಸಿಕೊಳ್ಳಲಿ! ಹಾಡಿ ಶ್ರೀಹರಿಚರಿತೆಯನ್ನು ಎಂಗು ಮಹಾನುಭಾವನಾದ ಪೃಥುರಾಜನಾಡಿದನು.

## ೧೬. ಪೃಥುಗುಣವರ್ಣನೆ

ಮೈತ್ರೇಯನು ನುಡಿದನು–

ಪೃಥುರಾಜನ ವಚನಾಮೃತಪಾನದಿಂದ ತುಷ್ಟರಾಗಿ ಮುನಿಗಳು ಪೃಥುಗುಣಗಾನ ಮಾಡಿರೆಂದು ಪ್ರೇರೇಪಿಸಲು ಗಾಯಕರು ಪೊಗಳಿದರು.

ಆಗ ಸೂತನು ಇಂತು ಪೃಥುಗುಣಗಳನ್ನು ಬಣ್ಣಿಸಿದನು–

ಭಕ್ತಾನುಕಂಪಾವಶನಾಗಿ ಅವತರಿಸಿದ ದೇವದೇವನನ್ನು ಪೊಗಳಲು ನಮ್ಮ ತರವೇ? ವೇನಸುತನಲ್ಲಿ ಆವೇಶದಿಂದಿರುವ ಶ್ರೀ ಪೃಥುನಾಮಕ ವಿಷ್ಣುಪರಾಕ್ರಮಗಳನ್ನು ನೆನೆಯಲು ಬ್ರಹ್ಮಾದಿಗಳ ಮನವೇ ಕೈಲಾಗದೆ ಹಿಂದಿರುಗಿತೆಂದಮೇಲೆ ಇನ್ನು ವಾಗೀಂದ್ರಿಯದಿಂದಲೂ ಅವನನ್ನು ಪೊಗಳಲಾರದೆ ಸುಮ್ಮನಾದರೆಂದು ಹೇಳಬೇಕೆ? ಅಂತಹವರ ಕೈಲಾಗದೆಂದ ಮೇಲೆ ನಮ್ಮ ಪಾಡೇನು? ವರ್ಣನಾಸಮರ್ಥರಾದರೂ ಪರಮಪುರುಷ ಕಲಾಯುಕ್ತನಾದ ಪೃಥುರಾಜನ ಪ್ರಶಂಸನೀಯ ಕರ್ಮಗಳನ್ನು ಸರ್ವಜ್ಞರಾದ ಮುನಿಗಳ ಆಜ್ಞೆಯನ್ನು ಮೀರಲಾರದೆ ಅವರು ಪದೇಶಿಸಿದಂತೆ ವರ್ಣಿಸಿ ನಮ್ಮ ವಾಗೀಂದ್ರಿಯವನ್ನು ಪಾವನ ಮಾಡಿಕೊಳ್ಳುವೆವು. 'ಧರ್ಮ ಪ್ರಭುವರನಾದ ಪೃಥುರಾಜನು ಜನರನ್ನು ಧರ್ಮದಲ್ಲಿ ನಡೆಸುವನು. ಧರ್ಮಮರ್ಯಾದೆ ಗಳನ್ನು ರಕ್ಷಿಸುವನು. ಧರ್ಮದ್ರೋಹಿಗಳನ್ನು ಶಿಕ್ಷಿಸುವನು. ಲೋಕಪಾಲಕ ಶಕ್ತಿಗಳನ್ನು ಪೊಂದಿ ಆಯಾ ಕಾಲದಲ್ಲಿ, ಲೋಕದ ಜನರಿಗೆ ಇಹಾಮುತ್ರಶ್ರೇಯವನ್ನು ಕಲ್ಪಿಸುವನು. ಕಾಲಕ್ರಮದಿಂದ ಕೊಂಡ ಕಪ್ಪವನ್ನು ಪ್ರಜರಿಗೆ ದುರ್ಭಿಕ್ಷ ಬಂದರೆ, ತಿರಿಗಿ ವಿನಿಯೋಗಿಸಿ ರಕ್ಷಿಸುವನು. ಸೂರ್ಯನು ಗ್ರೀಷ್ಮದಿ ಕೊಂಡ ಜಲವನ್ನು ವರ್ಷಋತುವಿನಲ್ಲಿ ಕೊಡುವುದಿಲ್ಲವೇ? ತನ್ನ ಮೀರಿ ನಡೆಯುವ ಸುಜನರ ತಪ್ಪನ್ನು ಸಹಿಸಿ ಕ್ಷಮಿಸುವನು. ದೀನರನ್ನು ದಯದಿಂದ ಧನಾದಿಗಳನ್ನಿತ್ತು ಪೊರೆಯುವನು. ಮಳೆಯಿಲ್ಲದೆ ಕ್ಷಾಮಪೀಡಿತರಾಗಿ ಜನರು ಮೊರೆಯಿಡಲು, ಇಂದ್ರನಂತೆ ಮಳೆಗರಿಸಿ ಧಾನ್ಯಗಳನ್ನು ಬೆಳೆಸಿ ಪ್ರಜರನ್ನು ಕಾಪಾಡುವನು. ಇವನ ವದನ ಚಂದ್ರದರ್ಶನ ಮಾತ್ರದಿಂದ ಸಾನುರಾಗ ಕಟಾಕ್ಷದಿಂದ, ಮಂದಹಾಸದಿಂದ ಲೋಕವು ಪರಮಾ ನಂದಭರಿತವಾಗುವುದು. ಪೃಥುವು ಸಮುದ್ರನಂತೆ ಅಗಾಧ ಮಹಿಮನು, ವಿಶುದ್ಧ ಕಾರ್ಯನು, ಗಂಭೀರಮನಸ್ಕನು, ರಕ್ಷಿತ ರತ್ನಾದಿಧನನು, ನಿಗೂಢ ಸ್ವರೂಪನಾಗಿ ಮಹಾನುಭಾವನೆನಿಸು ವನು. ಅಗ್ನಿಯಂತೆ ದುರಾಸದನು, ದುರ್ಧರ್ಷನು ಆಗಿ ಸಮೀಪದಲ್ಲಿದ್ದರೂ ದೂರದಿಂದಲೇ ಸೇವ್ಯನಾಗುವನು. ವಾಯುವಿನಂತೆ ಚಾರರಿಂದ ಸಕಲಭೂತಗಳ ಮಧ್ಯದಿ ಒಳಹೊರಗೆ ತಿರುಗುತ್ತಿದ್ದರೂ ಮೇಲೆ ನಿಂತು ಅಧ್ಯಕ್ಷನಾಗುವನು. ಯಮನಂತೆ ಧರ್ಮರಕ್ಷೆಯನ್ನು ಮಾಡುತ್ತಾ ದಂಡ್ಯರನ್ನೇ ದಂಡಿಸುವನು. ಮಗನಾದರೂ ಅಪರಾಧಿಯಾದರೆ ದಂಡಿಸುವನು. ಶತ್ರುವಾದರೂ ನಿರಪರಾಧಿಯಾದರೆ ದಂಡಿಸದಿರುವನು. ಬ್ರಹ್ಮನಂತೆ ತನ್ನ ಅಪ್ರತಿಹತಾಜ್ಞೆ ಯನ್ನು ಸೂರ್ಯಕಿರಣಗಳು ಸೇರುವ ಮಾನಸಾಚಲದವರಿಗೂ ವರ್ತಿಸಿ ಮೆರೆದನು. ಚಂದ್ರನಂತೆ ಲೋಕಾನಂದಕರನಾಗಿ ಮನೋರಂಜನೆಯಂಗೈದು ನಿಜವಾದ ರಾಜನೆನಿಸುವನು. ಪ್ರತಿಜ್ಞೆಯಂ ಪಾಲಿಸದಿರನು. ವ್ರತವಂ ಪಿಡಿದು ನಡೆಸದಿರನು. ಬ್ರಾಹ್ಮಣರನ್ನು ವೃದ್ಧರನ್ನು ಸೇವಿಸುವನು. ಸರ್ವಭೂತಗಳಿಗಾನಂದಪ್ರದನೆನಿಸಿ ದೀನರಲ್ಲಿ ತಂದೆಯಂತೆ ದಯೆ ತೋರುವನು. ಪರಸ್ತ್ರೀ ಜನರು ಮಾತೃಸಮರೆಂದು ತಿಳಿದು ಸ್ವಸತಿಗೆ ಸ್ಮರನೆನಿಸುವನು. ಪ್ರಜರಿಗೆ ತಂದೆಯಂತೆ ಸ್ನೇಹ

ವಸ್ತು ತೋರಿ ಪೊರೆವನು. ಬ್ರಹ್ಮಾದಿಗಳಿಗೆ ಕಿಂಕರನಂತೆ ವಿಧೇಯನಾಗುವನು. ಮಿತ್ರಾನಂದ ವರ್ಧನನು. ದೇಹಿಗಣಪ್ರಿಯತಮನು ಆಗಿ ಭಕ್ತಸಂಗದಿಂದ ಪುನೀತನಾಗುವನು. ದುಷ್ಟ ಜನರಿಗೆ ಯಮರಾಜನೇ ಸರಿ! ಭೂದೇವಿಯಿಂದ ಔಷಧಿಗಳನ್ನು ಕರೆದು ಜನರಿಗಾಹಾರಕಲ್ಪನವನ್ನು ಮಾಡುವನು. ಧನುಃಕೋಟಿಯಿಂದ ಭೂಪ್ರದೇಶವನ್ನು ಸಮನಾಗಿಸಿ, ಪುರಗ್ರಾಮ ಜನಪದ ಗಳನ್ನು ಕಲ್ಪಿಸುವನು. ಸಾಕ್ಷಾದ್ಭಗವಂತನೇ ಒಂದಂಶದಿಂದಾವೇಶಿಸಿರುವನೀ ಶ್ರೀಶನಿಗೆ ಸ್ವಗತ ಭೇದವೆಳ್ಳಷ್ಟೂ ಇಲ್ಲ. ಆ ಶ್ರೀ ಹರಿಯ ಪೃಥುರಾಜನಲ್ಲಿದ್ದು ನಡೆಸುವ ಮಹಾತ್ಕಾರ್ಯವನ್ನು ಯಾರು ತಿಳಿಯುವರು? ಸೂರ್ಯನಂತೆ ಪೂರ್ವಗಿರಿಯಲ್ಲಿ ರಥಾವನ್ನಾರೋಹಿಸಿ ಧನುಃ ಪಾಣಿಯಾಗಿ ಪ್ರದಕ್ಷಿಣಿಸಿ ಭೂಮಂಡಲವನ್ನು ಬೆಳಗಿ, ಸುಜನ ರಕ್ಷಕನಾಗಿ ಲೋಕಬಾಂಧ ವೆನಿಸುವನು. ರಾಜರು ಶಿರಬಾಗಿ ನಮಿಸಿ ಸಮರ್ಪಿಸಿದ ಕಪ್ಪಕಾಣಿಕೆಗಳನ್ನು ಕೊಂಡು ಆ ರಾಜತರುಣಿಯರು 'ಚಕ್ರಾಯುಧನೇ ಆದಿರಾಜನಾಗಿ ಬಂದ'ನೆಂದು ತನ್ನ ಗುಣಗಾನವನ್ನು ಮಾಡುತ್ತಿರಲು, ದಿಗ್ವಿಜಯವನ್ನು ಮಾಡುವನು. ಪ್ರಜರ ವೃತ್ತಿಗಾಗಿ ಗೋರೂಪಳಾದ ಭೂದೇವಿಯಿಂದ ವಿವಿಧ ಕ್ಷೀರಗಳ ಕರೆದು ಧನುಃಕೋಟಿಯಿಂದ ಭೂಮಿಯನ್ನು ಸಮವಾಗಿಸಿ ಇಂದ್ರನಂತೆ ವಿಜೃಂಭಿಸುವನು. ಅಜಗವನ್ನು ಪಿಡಿದು ದುರ್ಜಯನಾಗಿ, ರಥದಿ ನಿಂತ ಪೃಥುವಿನನ್ನು ಕಂಡು ದುರ್ಮಾರ್ಗರು ಬಾಲ ಮುದುಡಿಕೊಂಡು ನಾಯಿಗಳಂತೆ ಓಡಿ ಅಡಗು ವರು. ಸರಸ್ವತೀ ತೀರದಲ್ಲಿ ನೂರನೆಯ ಅಶ್ವಮೇಧವನ್ನು ಮಾಡುತ್ತಿರಲು ಪೃಥುರಾಜನ ಕುದುರೆಯನ್ನು ಶತಕ್ರತುನಾದ ಇಂದ್ರನು ಅಪಹರಿಸುವನಾಗ, ಪೃಥುರಾಜನು ಏಕೋನ ಶತಕ್ರತುನೆನಿಸುವನು. ಉಪವನದಲ್ಲಿ ಪೂಜ್ಯನಾದ ಸನತ್ಕುಮಾರನಿಂದ ಬ್ರಹ್ಮಜ್ಞಾನವನ್ನು ಪೊಂದಿ ಧನ್ಯನಾಗುವನು. ಪ್ರಖ್ಯಾತ ಪರಾಕ್ರಮನೆಂದು ವರ್ಣಿಸುವ ಪ್ರಬಂಧಗಳನ್ನು ಕೇಳುತ್ತಾ ಎಲ್ಲವೂ ಶ್ರೀಹರಿದತ್ತವೆಂದು ತಿಳಿದನು. ಎದುರಿಲ್ಲದೆ ಲೋಕಗಳನ್ನೆಲ್ಲ ಜಯಿಸಿ, ಲೋಕ ಕಂಟಕರಾದವರನ್ನು ತೇಜೋಬಲದಿಂದ ಮುರಿದು, ದೇವತಾ ಗಣಗೀತ ಮಹಿಮನಾಗಿ ಪೃಥು ರಾಜನು ಮಹಾನುಭಾವನೆನಿಸುವನು.

## ೧೭. ಭೂದೇವಿಕೃತ ಪೃಥು ಪ್ರಾರ್ಥನೆ

ಮೈತ್ರೇಯನು ಪೇಳಿದನು–

ಈ ರೀತಿಯಾಗಿ ತನ್ನ ಗುಣಕರ್ಮವರ್ಣನೆಯನ್ನು ಮಾಡಿದ ಸೂತಮಾರ್ಗದ ಮಂದಿ ಗಳನ್ನು ಆದಿರಾಜನು ಚೆನ್ನಾಗಿ ಸತ್ಕರಿಸಿದನು. ಬ್ರಾಹ್ಮಣರನ್ನು ಭೃತ್ಯಾಮಾತ್ಯರನ್ನು ಪೌರಜಾನಪದರನ್ನು ಪ್ರಜಾವರ್ಗವನ್ನು ಯಥಾಯೋಗ್ಯವಾಗಿ ಸನ್ಮಾನಿಸಿದನು.

ವಿದುರನು ಕೇಳಿದನು–

ಬಹುರೂಪಿಣಿಯಾದ ಭೂದೇವಿಯು ಗೋರೂಪನ್ನು ಧರಿಸಲು ಕಾರಣವೇನು? ಪೃಥು ಅವಳ ಹಾಲುಗರೆದನೆಂದಿರಿ, ವತ್ಸವಾರು? ಕರೆದ ದ್ರವ್ಯವೇನು? ಪ್ರಕೃತಿ ವಿಷಮವಾದೀ ಭೂಮಿಯು ಸಮವೆಂತಾಯಿತು? ಪೃಥುವಿನ ಯಜ್ಞಾಶ್ವವನ್ನು ಇಂದ್ರನೇಕಪಹರಿಸಿದನು? ಬ್ರಹ್ಮ ಜ್ಞಾನಿಶ್ರೇಷ್ಠನಾದ ಸನತ್ಕುಮಾರನಿಂದ ಜ್ಞಾನವಿಜ್ಞಾನಗಳನ್ನು ಪೊಂದಿ, ಆ ರಾಜರ್ಷಿಯು ಯಾವ ಲೋಕವನ್ನು ಸೇರಿದನು? ಶ್ರವಣಮನೋಹರನಾದ ಶ್ರೀಕೃಷ್ಣನ ಕಥೆಯನ್ನು ಪೂರ್ವ ಭಕ್ತರ

ಕಥಾಸಹಿತವಾಗಿ ಎನಗೆ ಪೇಳಿ. ವೈನ್ಯರೂಪದಿಂದ ಗೋದೋಹನವನ್ನು ಮಾಡಿದ ಪುಣ್ಯ ಚರಿತೆಯನ್ನು ಮೊದಲು ಪೇಳಿ.

ರಾಜನ್! ವಿದುರನ ಪ್ರಶ್ನೆಯನ್ನು ಕೇಳಿ ವಾಸುದೇವ ಕಥಾವರ್ಣನೋನ್ಮುಖರಾದ ಮೈತ್ರೇಯನು ಪ್ರೀತಿಯಿಂದ ಹೇಳಿದನು-

ಬ್ರಾಹ್ಮಣರಿಂದ ಅಭಿಷಿಕ್ತನಾದ ಪೃಥುವು ಜನಪಾಲನಾಗಿ ಆಳುತ್ತಿರಲು ಭೂಮಿಯು ನಿರನ್ನವಾಯಿತು. ಕ್ಷಾಮವು ತಲೆದೋರಿತು. ಕ್ಷುದ್ಬಾಧೆಯನ್ನು ತಡೆಯಲಾರದೆ ಪ್ರಜರು ರಾಜನನ್ನು ಸಮೀಪಿಸಿ ವಿಜ್ಞಾಪಿಸಿದನು.

ರಾಜನ್! ಜಠರಾಗ್ನಿಯು ನಮ್ಮನ್ನು ದಹಿಸುತ್ತಿದೆ. ಕೋಟರಾಗ್ನಿಯಿಂದ ವೃಕ್ಷವು ಸುಟ್ಟಂತೆ ಅನ್ನಾಭಾವದಿಂದ ನಷ್ಟರಾಗುತ್ತಿರುವೆವು. ನೀನೇ ಗತಿ ಎಂದು ನಂಬಿ ಬಂದಿರುವೆವು. ರಾಜನು ಪ್ರಜರಿಗೆ ವೃತ್ತಿಕರನಲ್ಲವೇ? ಹಸಿವೆಯನ್ನು ತಾಳಲಾರದೆ ಸಾಯಲಿರುವ ನಮಗೆ ಅನ್ನದಾನವನ್ನು ಮಾಡು. ಲೋಕಪಾಲನಾದ ನಿನ್ನ ಹೊರತಿನ್ನಾರು ರಕ್ಷಕರು? ಎಂದು ಗೋಳಿಟ್ಟ ಪ್ರಜೆಗಳ ದೀನವಾಕ್ಯಗಳನ್ನು ಆಲಿಸಿ ದೀರ್ಘಾಲೋಚನೆಯನ್ನು ಮಾಡಿ ಅನ್ನಾಭಾವಕಾರಣವನ್ನು ತಿಳಿದನು: ತಿಳಿದು ನಿಶ್ಚಯಿಸಿ ಧನುಷ್ಪಾಣಿಯಾಗಿ ಭೂದೇವಿಯಲ್ಲಿ ಕುಪಿತರಾಗಿ ಶರವನ್ನು ಜೋಡಿಸಿ ಕೊಲ್ಲಲುದ್ಯುಕ್ತನಾದನು. ಆಗ ಧರಣಿಯು ಉದ್ಯತಾಯುಧನಾದ ರಾಜನನ್ನು ಕಂಡು ಗಡಗಡ ನಡುಗಿ, ಗೋರೂಪವನ್ನು ಧರಿಸಿ ವ್ಯಾಧನಿಂದ ಓಡುವ ಹರಿಣಿಯಂತೆ, ಓಡತೊಡಗಿ ದಳು. ತ್ರಿಪುರವೈರಿಯಂತೆ ಉಗ್ರನಾದ ಪೃಥುರಾಜನು ಶರಸಂಧಾನವನ್ನು ಮಾಡಿ ಗೋವನ್ನು ಹಿಂಬಾಲಿಸಿದನು. ದಶದಿಕ್ಕುಗಳಲ್ಲಿಯೂ ದಿಗಂತರದಲ್ಲಿಯೂ ಓಡಿಓಡಿ ಸಾಕಾಗಿ ಬಿಡದೆ ಕಡುಕೋಪದಿಂದ ಬೆನ್ನಟ್ಟಿ ಬರುವ ರಾಜನನ್ನು ನೋಡಿ ಭಯಚಕಿತಳಾಗಿ ಭೂದೇವಿಯು ಹಿಂದಿರುಗಿ ನಿಂತಳು. ಮೃತ್ಯುಮುಖದಿಂದ ಪಾರಾಗಲಾರದ ಜೀವರಂತೆ, ರಕ್ಷಿಸುವರನ್ನು ಕಾಣದೆ- ಮಹಾಭಾಗ! ಧರ್ಮಜ್ಞ! ದೀನವತ್ಸಲ! ರಕ್ಷಿಸು, ನನ್ನನ್ನು ಕೊಲ್ಲಬೇಡ! ಭೂತಪಾಲಕನಾದ ನಿನಗೆ ದೀನಳಾದ ನಿರಪರಾಧಿನಿಯಾದ ನನನ್ನು ಸಂಹರಿಸುವುದುಚಿತವೇ? ಧರ್ಮರತನಾದ ನೀನು ಸ್ತ್ರೀಹತ್ಯೆಯನ್ನು ಮಾಡುವೆಯಾ? ದುಷ್ಟನಾದರೂ ಸ್ತ್ರೀಯರನ್ನು ಅಪರಾಧವನ್ನೆಸಗಿ ದೊಡೆಯೂ ಕೊಲ್ಲುವುದಿಲ್ಲ. ನಿನ್ನಂತಹ ಕರುಣೆಗೆ, ದೀನವತ್ಸಲನಿಗೆ ಸ್ತ್ರೀ ಹತ್ಯೆ ಸಲ್ಲುವುದೇ? ನಡುನೀರಿನಲ್ಲಿ ನೌಕೆಯಂತೆ ಗಟ್ಟಿಯಾಗಿ ನೂತನಳಾಗಿ ಧಾರಣಸಮರ್ಥಳೆನಿಸಿದ ನನ್ನನ್ನು ಸಂಹರಿಸಿ ನಿನ್ನನ್ನು ನಿನ್ನ ಪ್ರಜರನ್ನು ಎಲ್ಲಿ ನಿಲ್ಲಿಸುವೆ? ಪೇಳು.

ಪೃಥುರಾಜನೆಂದನು– ವಸುಧೇ! ಭೂಭರ್ತನೆನಿಸಿದ ನನ್ನ ಶಾಸನವನ್ನು ಧಿಕ್ಕರಿಸಿದ ನಿನ್ನನ್ನು ಸಂಹರಿಸಿದೆ ಬಿಡೆನು. ಯಜ್ಞಗಳಲ್ಲಿ 'ಭೂಃ ಸ್ವಾಹಾ' ಎಂದು ಕೊಡುವ ಹವಿರ್ಭಾಗವನ್ನು ಮಾತ್ರ ತಿಂದು, ನಮಗೆ ಬೇಕಾದ ಅನ್ನವನ್ನು ಕೊಡದಿರುವೆ. ಅನುದಿನವು ಹವಿರೂಪನಾದ ಹುಲ್ಲುಮೇದು ದ್ರವ್ಯಕ್ಷೀರವನ್ನು ಕೊಡದಿರುವ ನೀನು ಸ್ತ್ರೀಯಾದರೇನು? ಗೋವಾದರೇನು? ನಿನ್ನನ್ನು ಸಂಹಾರ ಮಾಡುವುದು ತಪ್ಪಲ್ಲ. ಬ್ರಹ್ಮನು ಔಷಧೀಬೀಜಗಳನ್ನು ಸೃಜಿಸಿರುವನು. ಅದನ್ನು ನಿನಗರ್ಪಿಸಿದ ಪ್ರಜರಿಗೆ ತಿರುಗಿ ಕೊಡದೆ ಪ್ರಜಾಪಾಲನಾದ ನನ್ನನ್ನು ಕಡೆಗಣಿಸಿರುವ ನೀನು ಮೂರ್ಖಳೇ ಸರಿ! ನೋಡೀ ಪ್ರಜರನ್ನು: ಆರ್ತರಾದ ಇವರ ಪರಿದೇವನನ್ನು ಕಂಡ ಮನ ಕರಗದೇ ಕಠಿಣಳಾದ ನಿನ್ನನ್ನು ಬಾಣಗಳಿಂದ ಸೀಳಿ ಮಾಂಸವನ್ನು ಕೊಟ್ಟು ಪ್ರಜಾಜೀವನ ವನ್ನುಳಿಸುವೆನು. ಪುರುಷನಾಗಲಿ ಸ್ತ್ರೀಯಾಗಲಿ ನಪುಂಸಕನಾಗಲಿ, ಅಹಂಭಾವದಿಂದ ನೀಚನಾಗಿ

ಭೂತಗಳಲ್ಲಿ ನಿಷ್ಕರುಣೆಯಿಂದ ವರ್ತಿಸಲು ರಾಜನು, ಅಂತಹನನ್ನು ಸಂಹರಿಸುವುದೇ ಲೇಸು. ದುರ್ಮದಸ್ತಬ್ಧಳಾದ ನೀನು ಗೋವೇ? ಮಾಯಾ ಗೋರೂಪಳಾದ ನಿನ್ನನ್ನು ತುಂಡರಿಸಿ, ಸ್ವರೂಪ ಭೂತಧಾರಣ ಶಕ್ತಿಯಿಂದ ನನ್ನ ಪ್ರಜರನ್ನುದ್ಧರಿಸಿ ನಿಲ್ಲಿಸುವೆನು.

ಇಂತು ಕೃತಾಂತನಂತೆ ಕೋಪವೇ ಮೂರ್ತೀಭವಿಸಿ ನಿಂತ ಭೂಕಾಂತನನ್ನು ನೋಡಿ, ಭೂದೇವಿಯು ನಮಿಸಿ ಕೈಜೋಡಿಸಿ ನಡುಗುತ್ತಾ ಬಿನ್ನೈಸಿದಳು.

ಪರಮಪುರುಷನೇ! ನಿನಗೆ ನಮಸ್ಕಾರವು. ಬ್ರಹ್ಮಾದಿ ಸರ್ವ ಜೀವಶರೀರಗಳನ್ನು ಪ್ರಕೃತಿಯಿಂದ ರಚಿಸಿ ಪ್ರಕೃತಿ ಪ್ರಾಕೃತ ಸಂಬಂಧವಿಲ್ಲದಿರುವ ಜ್ಞಾನಾನಂದಾದಿ ಗುಣಪೂರ್ಣನು, ಸ್ವರೂಪಭೂತ ಜ್ಞಾನದಿಂದ ದೇಹೇಂದ್ರಿಯಾಂತಃಕರಣಜನ್ಯ ಷಡೂರ್ಮಿರಹಿತನು ಆದ ನಿನಗೆ ವಂದಿಸುವೆನು. ನಿನ್ನ ಶರೀರವೆನಿಸಿರುವ ನಾನು, ನಿನಗೆ ಪ್ರತಿಮೆಯಂತಿರುವೆನು. ತ್ರಿಗುಣದಿಂದ ಸೃಜಿಸಿದ ಪ್ರಜರೆನ್ನಲ್ಲಿರುವರು. ತಂದೆಯು ಪತಿಯು ಪ್ರಭುವಾದ ನೀನೇ ಸಂಹರಿಸಬರಲು ಮತ್ತಿನ್ನಾರನ್ನು ಶರಣೆನ್ನಲಿ? ಹೆತ್ತತಾಯಿಯೇ ಕುತ್ತಿಗೆ ಹಿಸುಕಲು, ಮತ್ತಿನ್ನಾರಿಗೆ ಪೇಳಲಾದೀತು? ನೀ ಸೃಜಿಸಿದೆ ಚರಾಚರ ಜಗವನ್ನು. ನಿನ್ನ ಸೃಜನಪ್ರಕಾರವು ವಿವಿಧ ತರ್ಕವಿಷಯವಾಗಿದೆ. ನಿನ್ನಿಚ್ಛೆಯಿಂದ ನಿನ್ನವಳಾದ ಲಕ್ಷ್ಮಿಯಿಂದ ಕೂಡಿ ನಿರ್ಮಿಸಿದ ಜಗವನ್ನು ನೀನೇ ಸಂರಕ್ಷಿಸುವೆ. ಕರ್ತಾ ಗೋಪ್ತಾ ಎನಿಸಿದ ನೀನೇ ಹಂತಕನು ಆಗುವುದುಚಿತವೇ? ಅಲ್ಪರು ನಿನ್ನ ಅಪ್ರಮೇಯ ಮಹಿಮೆಯನ್ನರಿಯರು, ಷಡ್ಗುಣೈಶ್ವರ್ಯಪೂರ್ಣನಾದ ನಿನ್ನ ಚೇಷ್ಟೆ ತಿಳಿಯದು. ಏನು ಮಾಡಿರುವೆ, ಇನ್ನೇನು ಮಾಡುವೆ, ಏನು ಮಾಡಿಸುವೆ ಒಂದೂ ತಿಳಿಯದು. ನೀನೇ ಸರ್ವೋತ್ತಮನು; ಪಂಚಭೂತಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರೀಯಗಳು, ಮನಸ್ಸೆಂಬ ಷೋಡಶ ಕಲೆಗಳಿಂದ ಜಗತ್ತಿಗೆ ಸೃಷ್ಟ್ಯಾದಿಗಳನ್ನು ಮಾಡುವ ನೀನು ಆಯಾ ಪದಾರ್ಥಗಳಲ್ಲಿ ಅಂತರ್ಯಾಮಿಯು ಶಕ್ತಿಪ್ರದನೂ ಆಗಿರುವೆ. ಸ್ವತಂತ್ರ ವಿವಿಧ ಶಕ್ತಿ ಸ್ವರೂಪನಾದ ನಿನಗೆ ಸ್ವಗತಭೇದವಿಲ್ಲ. ಇಂತಹ ಪರಮಪುರುಷನೇ ನಿನಗೆ ನಮಃ ಭೂತೇಂದ್ರಿಯಾಂತಃಕರಣಯುಕ್ತವಾದ ಜಗವನ್ನು ನಿರ್ಮಿಸಿ, ಅದನ್ನು ರಸಾತಲದಲ್ಲಿ ಪ್ರಳಯೋದಧಿಯಲ್ಲಿ ಮುಳುಗದಂತೆ ಸ್ಥಾಪಿಸಲು ಆದಿಸೂಕರನಾದೆ. ಉದ್ಧರಿಸಿ ಜಲ ಮಧ್ಯದಿ ನಾವೆಯಂತಿದ್ದ ನನ್ನ ಮೇಲೆ ನಿಲ್ಲಿಸಿ ಪ್ರಜಾಪತಿಯನ್ನು ಪೊರೆದೆ. ಧರಾಧರನೆನಿಸಿದ ನೀನೇ ಉಗ್ರಧನುರ್ಮುಕ್ತಶರದಿಂದ ಸಂಹರಿಸಲು ಬರುವುದು ನ್ಯಾಯವೇ? ಪ್ರಕೃತಿಬದ್ಧರಾಗಿ ಅಜ್ಞಾನದಿಂದ ನನ್ನಂತಹ ಜೀವರು ಈಶ್ವರನಾದ ನಿನ್ನ ಲೀಲೆಯನ್ನು ತಿಳಿಯಲಾರೆವು. ಅಂತಹ ವೀರ ಯಶೋಮೂರ್ತಿಯಾದ ನಿನಗೆ ನಮಸ್ಕಾರವು!

## ೧೮. ಭೂದೋಹನ

ಮೈತ್ರೇಯನು ಹೇಳಿದನು–

ಇಂತು ನುತಿಸಿ, ಸಿಟ್ಟಿನಿಂದ ತುಟಿಯ ಕಚ್ಚಿ ನಿಂತಿರುವ ಪೃಥುವನ್ನು ಕಂಡು, ಭೀತಳಾಗಿ ಭೂತಧಾತ್ರಿಯು ಮನಸ್ಸಂಭ್ರಮವನ್ನು ತಡೆದು ಪ್ರಾರ್ಥಿಸಿದಳು.

ವಿಭೋ! ಕೋಪವನ್ನು ನಿಗ್ರಹಿಸೆನ್ನಲ್ಲಿ ಅನುಗ್ರಹಿಸಿ. ನನ್ನಬಿನ್ನಪಮಂ ಕೇಳು. ಮಧುಕರನಂತೆ ಪಂಡಿತನು ಸಾರಮಾತ್ರ ಗ್ರಾಹಿಯಾಗಿರುವನು. ಈ ಲೋಕದ ಮತ್ತು ಪರಲೋಕದ

ಶ್ರೇಯಃಸಿದ್ಧಿಗಾಗಿ ತತ್ತ್ವದರ್ಶಿಗಳೆಷ್ಟೋ ಉಪಾಯಗಳನ್ನು ಹೇಳಿರುವರು. ಕೃಷಿಗಾಗಿ ಬೀಜ, ಸ್ವರ್ಗಭೋಗಕ್ಕಾಗಿ ಯಾಗ ಎಂಬ ಉಪಾಯಗಳು ಪ್ರಯುಕ್ತವಾಗಲೂ ಇವೆ. ಅಂತಹ ಪೂರ್ವಜದರ್ಶಿತೋಪಾಯಗಳನ್ನು ಚೆನ್ನಾಗಿ ಅವಲಂಬಿಸಿ ಇತರರು ಶ್ರದ್ಧೆಯಿಂದ ಫಲವನ್ನು ಪೊಂದುವರು. ಅವುಗಳಲ್ಲಿ ಆದರವಿಲ್ಲದೆ ಅವಿವೇಕಿಯು ತಾನಾಗಿ ತನಗೆ ತೋಚಿದಂತೆ ಮಾಡಲು ಫಲಸಿದ್ಧಿಯು ಆಗಲಾರದು. ಪೂರ್ವದಲ್ಲಿ ಬ್ರಹ್ಮನು ಸೃಷ್ಟಿಸಿದ ಓಷಧಿವ್ರಾತವನ್ನು ದುಷ್ಟರು ಉಪಯೋಗಿಸುವುದನ್ನು ಕಂಡೆನು ಅಧೃತವ್ರತರಾದ ಅವರನ್ನು ಶಿಕ್ಷಿಸಲು ನಿನ್ನಂತಹ ಲೋಕಪಾಲಕರಿರಲಿಲ್ಲ. ಲೋಕವು ಚೋರಪ್ರಚುರವಾಯಿತು. ಆದ್ದರಿಂದ ಓಷಧಿಗಳನ್ನು ಹೊರಗೆ ಬಿಡದೆ ನಾನೇ ನುಂಗಿರುವೆನು. ಬಹುಕಾಲವಾಗಿ ಆ ಬೀಜಗಳನ್ನಲಿ ಅಡಗಿಹೋಗಿವೆ. ಶಾಸ್ತ್ರದೃಷ್ಟವಾದ ಉಪಾಯವನ್ನಾಲೋಚಿಸಿ ಮಹಾತ್ಮನಾದ ನೀನು ಬೀಜಸೃಷ್ಟಿಯಾಗಿ ಅನ್ನಾಭಾವವು ನೀಗುವಂತೆ ಮಾಡು. ವೀರ! ಮೊದಲು ಗೋರೂಪಳಾಗಿರುವ ನನಗೆ ಕರುವನ್ನು ಕಲ್ಪಿಸು. ಬೇಕಾದ ವಸ್ತುಗಳನ್ನೆಲ್ಲಾ ಕ್ಷೀರರೂಪನಾಗಿ ನಾ ಕೊಡುವೆನು. ಸಕಲ ಭೂತಗಳಿಗೆ ಮಂಗಳವನ್ನು ಮಾಡು! ಕರೆಸುವ ದಕ್ಷನನ್ನು ನಿಯಮಿಸು. ಪ್ರಾಣಧಾರಣ ಶಕ್ತಿಮಂತನಾದ ಅನ್ನವನ್ನು ಯಥೇಚ್ಛವಾಗಿ ಧರ್ಮಿಷ್ಠನಾದ ನಿನಗೆ ಕೊಡುವೆನು. ಚೆನ್ನಾಗಿ ಮಳೆಗರೆದರೆ ಸಮವಾಗುವಂತೆ ನಿನ್ನ ಸಾಮರ್ಥ್ಯದಿಂದ ಎನ್ನ ಭೂತಲವನ್ನು ಸಮವನ್ನಾಗಿ ಮಾಡು. ಹಾಗೆ ಮಾಡಲು ಮಳೆ ಬರದಿದ್ದರೂ ನನ್ನಿಂದ ಕೃಷಿಲಬ್ಧಾನ್ನವನ್ನು ಪಡೆಯಲು ಬರುವುದು.

ಭೂ ದೇವಿಯ ವಚನಗಳು ಕರ್ಣಸುಖವಾಗಲು ಪೃಥುರಾಜನು, ಅದರಂತೆ ಮಾಡಿದನು. ಬುಧರು ಸಾರಗ್ರಾಹಿಗಳಲ್ಲವೇ? ಮನುವನ್ನು ಕರುವಾಗಿಸಿ, ಪಾಣಿಪಾತ್ರದಿ ಸಕಲೌಷಧಿಗಳನ್ನು ಕರೆಸಿ ಜನರಿಗೆ ಅನ್ನಸಮೃದ್ಧಿಯನ್ನುಂಟು ಮಾಡಿದನು. ಆಗ ಇತರರು ದೋಗ್ಧೃಗಳಾಗಿ ತಮಗೆ ಬೇಕಾದ ವಸ್ತುಗಳನ್ನು ಗೋರೂಪ ಭೂದೇವಿಯಿಂದ ಪಡೆದರು. ಋಷಿಗಳು ಬೃಹಸ್ಪತಿಯನ್ನು ಕರುವನ್ನು ಮಾಡಿ, ವಾಗಿಂದ್ರಿಯದಲ್ಲಿ ಛಂದೋಮಯವು ಪವಿತ್ರನಾದ ವೇದವಾಣಿಯನ್ನು ಪಡೆದರು. ದೇವತೆಗಳು ಇಂದ್ರನು ಕರುವಾಗಲು ಹಿರಣ್ಮಯಪಾತ್ರದಲ್ಲಿ ಸೋಮವನ್ನು ಪರಾಕ್ರಮ, ಧಾರಣಶಕ್ತಿ, ಬಲವೆಂಬ ಬಾಹ್ಯಗುಣಗಳನ್ನು ಕರೆಸಿಕೊಂಡರು. ದೈತೇಯದಾನವರು ಪ್ರಹ್ಲಾದನನ್ನು ಕರುವಾಗಿಸಿ, ಅಯಃಪಾತ್ರೆಯಲ್ಲಿ ಸುರಾಸವವನ್ನು ಕರೆಸಿದರು. ಗಂಧರ್ವಾಪ್ಸರೆಯರು ಪದ್ಮಪಾತ್ರೆಯಲ್ಲಿ ವಿಶ್ವಾವಸುವು ಕರುವಾಗಿ ಮಧುಸುಭಗ ಗಾಂಧರ್ವವನ್ನು ಪಡೆದರು. ಪಿತೃಗಳು ಅರ್ಯಮನು ವತ್ಸನಾಗಿ ಆಮಪಾತ್ರೆಯಲ್ಲಿ ಶ್ರದ್ಧೆಯಿಂದ ಕವ್ಯವನ್ನು ಪಡೆದರು. ಸಿದ್ಧರು ಕಪಿಲನೇ ಕರುವಾಗಲು ವಿದ್ಯಾಧರರಿಂದ ಕೂಡಿ ಆಕಾಶಪಾತ್ರದಲ್ಲಿ ಸಂಕಲ್ಪಮಾತ್ರ ಸಿದ್ಧಿಪ್ರದ ಅಂತರ್ಧಾನ, ಆಕಾಶ ಸಂಚಾರಾದಿ ಸಿದ್ಧಿಗಳನ್ನು ಪಡೆದರು. ಅನ್ಯಮಾಯಿಗಳು ಮಯನು ಕರುವಾಗಲು ಧಾರಣಾಮಯನಾದ ಅಂತರ್ಧಾನಾದಿ ಮಾಯೆಗಳನ್ನು ಪೊಂದಿದರು. ಯಕ್ಷರಕ್ಷೋಭೂತಪ್ರೇತ ಪಿಶಾಚರು ಬೈರವ ರುದ್ರನನ್ನು ಕರುವನ್ನಾಗಿ ಮಾಡಿ ಕಪಾಲ ಪಾತ್ರದಲ್ಲಿ ರುಧಿರಾಸವವನ್ನು ಕರೆಸಿಕೊಂಡರು. ದಂದಶೂಕ ಸರ್ಪ ನಾಗರು ತಕ್ಷಕನನ್ನು ವತ್ಸನೆನಿಸಿ, ಬಿಲಪಾತ್ರದಲ್ಲಿ ವಿಷವನ್ನು ಹೊಂದಿದರು. ಪಶುಗಳು ನಂದಿಯನ್ನು ಕರುವಾಗಿಸಿ, ಅರಣ್ಯಪಾತ್ರದಲ್ಲಿ ಯವಸವೆಂಬ ಹಾಲನ್ನು ಪಡೆದವು. ದಂಷ್ಟ್ರಿಗಳು ಮೃಗೇಂದ್ರನನ್ನು ಕರುವನ್ನಾಗಿ ಮಾಡಿ, ಕಳೇವರಪಾತ್ರದಲ್ಲಿ ಮಾಂಸವನ್ನು ಪೊಂದಿದವು. ಪಕ್ಷಿಗಳು ಗರುಡನು ವತ್ಸನಾಗಲು ಚರಾಚರವಾದ ಮಾಂಸಫಲಗಳನ್ನು ಪಡೆದವು. ವಟನೇ ವತ್ಸನಾಗಿ ವನಸ್ಪತಿಗಳು ಷಡ್ರಸಗಳನ್ನು

ಗಿರಿಗಳು ಹಿಮವದ್ವತ್ಸನಿಂದ ನಾನಾ ಧಾತುಗಳನ್ನು ಪಡೆದವು. ಇಂತು ಸರ್ವರೂ ತಮ್ಮ ಪ್ರಮುಖನೇ ವತ್ಸನಾಗಲು ಬೇಕಾದ ಪಾತ್ರೆಗಳಲ್ಲಿ ಬೇರೆ ಬೇರೆ ವಸ್ತುಗಳನ್ನು ಪೃಥುರಾಜ ಸಂಭಾವಿತಳಾದ ಸರ್ವಕಾಮಪ್ರದಳೆನಿಸಿದ ಭೂದೇವಿಯಿಂದ ಪಡೆದು ಸಂತುಷ್ಟರಾದರು. ಪೃಥು ಮೊದಲಾದವರಿಂತು ಬೇಕಾದ ಅನ್ನವನ್ನು ಪಡೆದರಿಲ್ಲಿ ದೋಹ ವತ್ಸಾದಿಭೇದದಿಂದ ಕ್ಷೀರವು ವಿವಿಧವಾಗಿ ಸಮುದ್ಭವಿಸಿತು. ಆಗ ಪೃಥುರಾಜನು ಸರ್ವಕಾಮಿತಪ್ರದಳಾದ ಭೂದೇವಿಯಲ್ಲಿ ಪ್ರೀತನಾಗಿ ಪ್ರೇಮಪುತ್ರಿಯೆಂದು ಅವಳನ್ನು ಸ್ವೀಕರಿಸಿದನು. ಅಂದಿನಿಂದ ಭೂಮಿಯು ಪೃಥವೀ ಎಂದು ಖ್ಯಾತಳಾದಳು. ಧನುಃ ಕೋಟಿಯಿಂದ ರಾಜನು ಗಿರಿಕೂಟಯುತವಾದ ಭೂಮಿಯನ್ನು ಪ್ರಾಯಃ ಸಮವಾಗಿ ಮಾಡಿ, ಪ್ರಜರ ವೃತ್ತಿಯನ್ನು ಕಲ್ಪಿಸಿ, ತಂದೆಯಂತೆ ರಕ್ಷಿಸಿದನು. ಯಥಾರ್ಥವಾದ ಪ್ರಜಾನಿವಾಸಗಳನ್ನೂ ಕಲ್ಪಿಸಿಕೊಟ್ಟನು. ಗ್ರಾಮಪುರ ಪತ್ತನ ದುರ್ಗ ಘೋಷ ವ್ರಜ ಶಿಬಿರ ನಗರಖೇಟ ಖರ್ವಟಗಳನ್ನು ಪೃಥುವೇ ನಿರ್ಮಿಸಿ ಪ್ರಜರನ್ನು ಅಲ್ಲಲ್ಲಿ ನೆಲಸಿದನು. ಪೃಥುರಾಜನಕಿಂತಲು ಪೂರ್ವದಲ್ಲಿ ಪುರಗ್ರಾಮಾದಿ ಕಲ್ಪನೆ ಅಷ್ಟಾಗಿ ಇರಲಿಲ್ಲ. ಅಂದಿನಿಂದ ಪ್ರಜರು ಬೇಕಾದಲ್ಲಿ ಸುಖವಾಗಿ ವಸಿಸಲು ಉಪಕ್ರಮಿಸಿದರು.

## ೧೯. ಪೃಥುರಾಜನ ಅಶ್ವಮೇಧ

ಮೈತ್ರೇಯನು ಪೇಳಿದನು–

ರಾಜರ್ಷಿಯಾದ ಪೃಥುವು ಒಂದು ಸಲ ನೂರಶ್ವಮೇಧಗಳನ್ನು ಸಂಕಲ್ಪಿಸಿ, ಸರಸ್ವತೀ ದೃಷದ್ವತೀ ನದಿಗಳ ಮಧ್ಯದೇಶವಾದ ಬ್ರಹ್ಮಾವರ್ತದಲ್ಲಿ ಪ್ರಾಚೀ ಸರಸ್ವತಿಯ ತೀರದಲ್ಲಿ ದೀಕ್ಷಿತನಾದನು. ಆಗ ಶತಕ್ರುತವಾದ ಇಂದ್ರನು ತನ್ನಂತೆ ಶತಕ್ರುತವಾಗಲು ಬಯಸಿದ ಪೃಥುರಾಜನ ಯಜ್ಞಮಹೋತ್ಸವವನ್ನು ನೋಡಿ ಸಹಿಸಲಿಲ್ಲ.

ಪೃಥುವಿನ ಯಜ್ಞದಲ್ಲಿ ಸಾಕ್ಷಾತ್ ಶ್ರೀ ನಾರಾಯಣನೇ ಯಜ್ಞಪತಿಯಾಗಿ ಪ್ರಧಾನ ದೇವತೆ ಎನಿಸಿದ್ದನು. ಸರ್ವವ್ಯಾಪಿಯಾದ ಆ ಸರ್ವಲೋಕ ಗುರುವನ್ನು ಪೃಥುವು ಪ್ರೀತಿಯಿಂದ ಆಹ್ವಾನಿಸಿದ್ದನು. ಬ್ರಹ್ಮರುದ್ರರಿಂದಲೂ ಲೋಕಪಾಲರಿಂದಲೂ ಕೂಡಿ ಶ್ರೀಹರಿಯು ಬಂದನು. ವಿದುರಾ! ಏನು ಹೇಳಲಿ ಆ ಶ್ರೀಶನ ವೈಭವವನ್ನು! ಗಂಧರ್ವರಪ್ಸರೆಯರು ಹಾಡಿ ಪಾಡುತ್ತಾ ಆಡುತ್ತಿರಲು, ಮುನಿಗಳು ವೇದಘೋಷದಿಂದ ಪೊಗಳುತ್ತಿರಲು ಸಿದ್ಧವಿದ್ಯಾಧರ, ಭಕ್ತ ದೈತ್ಯದಾನವ, ಗುಹ್ಯಕಾದಿಗಳಿಂದಲೂ, ಸುನಂದ ನಂದಾದಿ ಪಾರ್ಷದರಿಂದಲೂ ಸೇವಿತನಾಗುತ್ತಾ ಬಂದನಾ ಹರಿ! ಕಪಿಲದತ್ತರೂ ನಾರದ ಸನಕಾದಿಗಳೂ ತತ್ಸೇವನೋತ್ಸುಕರಾಗಿದ್ದ ಇತರ ಭಕ್ತರೂ ಹಿಂಬಾಲಿಸಲು ಯಜ್ಞಭೂಮಿಯನ್ನು ಸೇರಿದನು.

ಆಗ ಮಹೀಮಂಡಲವು ಯಜ್ಞಯೋಗ್ಯ ದ್ರವ್ಯಗಳನ್ನೊದಗಿಸಿತು; ಯಜಮಾನನ ಸರ್ವಕಾಮಿತ ಪದಾರ್ಥಗಳನ್ನಿತ್ತು ಪೂಜಿಸಿತು. ನದೀ ದೇವತೆಗಳು ಸರ್ವರಸಗಳನ್ನಿತ್ತರು. ಉನ್ನತ ವೃಕ್ಷಗಳು ಮಧುಧಾರಾ ನಿಷ್ಯಂದಿಗಳಾಗಿ ಕ್ಷೀರದಧ್ಯನ್ನ ಗೋರಸಗಳನ್ನಿತ್ತವು. ಸಮುದ್ರಗಳು ರತ್ನತತಿಯನ್ನು, ಗಿರಿಗಳು ಭಕ್ಷ್ಯಭೋಜ್ಯ ಲೇಹ್ಯ ಪೇಯವೆಂಬ ಚತುರ್ವಿಧಾನ್ನವನ್ನು ಸಮರ್ಪಿಸಿದವು. ಸರ್ವಲೋಕದ ಜನರು, ಜನಪಾಲರೂ ಪ್ರೀತಿಯಿಂದ ಕಾಣಿಕೆಗಳನ್ನು ಕೊಟ್ಟರು. ಇಂತು ವೈಭವದಿಂದ ನಡೆಯುವ ಪೃಥುರಾಜನ ಯಜ್ಞವನ್ನು ನೋಡಿ, ಪೂಜ್ಯನಾದ

ಇಂದ್ರನು ಅಸೂಯೆಯಿಂದ ವಿಘ್ನವನ್ನು ಮಾಡಲೆಣಿಸಿದನು ಆಗ ನೂರನೇ ಯಜ್ಞವು ನಡೆಯುತ್ತಿತ್ತು. ಯಜಮಾನರು ಹರಿಯನ್ನುದ್ದೇಶಿಸಿ, ಪಶುಬಂಧವನ್ನು ಮಾಡಿರಲು, ಶ್ರೀ ಹರಿ ಇಚ್ಛಾನುಸಾರವಾಗಿಯೇ ಶಕ್ರನು ಯಜ್ಞಾಶ್ವವನ್ನು ಅಪಹರಿಸಿಕೊಂಡು ಪೋದನು. ಆಗತ್ರಿಕಾಲಜ್ಞನಾದ ಅತ್ರಿಯು ಹೋತೃಸ್ಥಾನದಿಂದ ಇಂದ್ರನು ಅಶ್ವಾಪಹಾರವನ್ನು ಮಾಡಿರುವ ನೆಂದು ಸೂಚಿಸಿದನು. ಅಧರ್ಮದಲ್ಲಿ ಧರ್ಮವೆಂಬ ಭ್ರಮೆಯನ್ನು ಪುಟ್ಟಿಸುವ ಪಾಖಂಡರಂತೆ ವೇಷವನ್ನು ಧರಿಸಿದ್ದ ಇಂದ್ರನು ಆಕಾಶದಲ್ಲಿ ಪೋಗುತ್ತಿರಲು ಅತ್ರಿಚೋದಿತನಾದ ಪೃಥುಪುತ್ರನು ಹಿಂಬಾಲಿಸಿ 'ನಿಲ್ಲು ನಿಲ್ಲು' ಎಂದು ಸಮೀಪಿಸಿದನು. ಆ ಜಟಾಪಾಖಂಡಿಯಾದ ಯುದ್ಧವು ಧರ್ಮವೆಲ್ಲವಂದರಿತು ಬಾಣವನ್ನು ಬಿಡದೆ ಹಿಂದಿರುಗಿದನು. ಚೋರವಧಾ ಪಾಪವಲ್ಲವೆಂದು ಪುನಃ ಅತ್ರಿಯು ಪ್ರೇರಿಸಲು 'ಗುರುರ್ವಚನಮೌಷಧಂ' ಎಂದು ನಂಬಿ, ಮತ್ತೆ ಯಜ್ಞಘಾತಕನಾದ ಮಹೇಂದ್ರನನ್ನು ಸಂಹರಿಸಲು ನಿಶ್ಚಯಿಸಿ ವೈನ್ಯಸುತನು ಆಕಾಶಮಾರ್ಗದಲ್ಲೋಡುವ ಶಕ್ರನನ್ನು ರಾವಣನನ್ನು ಬೆನ್ನಟ್ಟಿ ಮುತ್ತಿದ ಜಟಾಯುವಿನಂತೆ ಮುತ್ತಿದನು. ಆಗ ಇಂದ್ರನು ತನ್ನ ವೇಷವನ್ನು ಕುದುರೆಯನ್ನು ಬಿಟ್ಟು ಕಾಣದಾದನು. ಧೀರ ವೈನ್ಯಸುತನು ಆ ಯಜ್ಞಹಯವನ್ನು ತಂದು ತಂದೆಗೊಪ್ಪಿಸಿದನು. ಆ ಕುಮಾರನ ಅದ್ಭುತ ಪರಾಕ್ರಮವನ್ನು ನೋಡಿ ಪರಮರ್ಷಿಗಳು ಹರ್ಷದಿಂದ ಅವನನ್ನು ವಿಜಿತಾಶ್ವನೆಂದು ಕರೆದರು.

ಮತ್ತೆ ಕತ್ತಲನ್ನು ಕವಿಸಿ ಇಂದ್ರನು ಚಷಾಲಯೂಪಗಳ ಮಧ್ಯದಲ್ಲಡಗಿದ್ದು ಕನಕ ಕಾಂಚೀಭೂಷಿತ ತುರಂಗವನ್ನು ಕದ್ದನು. ಆಕಾಶದಿ ಓಡುವ ಶಕ್ರನನ್ನು ಪುನಃ ನೋಡಿ ಅತ್ರಿಯು ಪ್ರೇರಿಸಲು ವಿಜಿತಾಶ್ವನು ರೋಷದಿಂದ ಬಾಣಸಂಧಾನವನ್ನು ಮಾಡಿ ಬೆನ್ನಟ್ಟಿ ಪೋದನು. ಆಗ ಇಂದ್ರನಾ ಕಪಾಲ ಖಟ್ವಾಂಗಧರವಾದ ರೂಪವನ್ನು ಬಿಟ್ಟು ಅಲ್ಲೇ ಅಡಗಿದನು. ವಿಜಿತಾಶ್ವನು ಆ ಕುದುರೆಯನ್ನು ತಂದು ಯಜ್ಞಶಾಲೆಯನ್ನು ಕಟ್ಟಿದನು.

ಅನ್ಯಥಾಜ್ಞಾನಿಗಳು ಇಂದ್ರನಿಂದ ತ್ಯಕ್ತವಾದ ರೂಪ ವೇಷಗಳನ್ನು ಸ್ವೀಕರಿಸಿ ಪಾಖಂಡಿಗಳೆನಿ ಸುವರು. ಪಾಪಪುಂಜವಾದ ಪಾಖಂಡಮತವನ್ನು ಪ್ರಚಾರ ಮಾಡಿದರು. ಭಸ್ಮಧಾರಣೆ, ಜಟಾಶಿರಸ್ಕತೆ, ನಗ್ನತೆ, ಕಪಾಲಮಾಲೆ ಮುಂತಾದ ವೇಷಗಳನ್ನೂ ಧರಿಸಿದರು. ಇಂತಹ ವೇಷಗಳಿಂದ ಇಂದ್ರನು ಯಜ್ಞವಿಘ್ನವನ್ನು ಮಾಡಿದನೆಂಬ ಕಾರಣದಿಂದ ಪಾಖಂಡಿಗಳೆಲ್ಲರೂ ಯಜ್ಞದ್ವೇಷಿಗಳು, ಯಜ್ಞನಾಮಕ ಹರಿದ್ವೇಷಿಗಳಾಗಿರುವರು. ಧರ್ಮವೆಂದು ಪೇಳಿ ಅಧರ್ಮ ವನ್ನು ಮಾಡುತ್ತ, ನಗ್ನರಾಗಿ, ರಕ್ತವಸನರಾಗಿ, ಕಪಾಲಮಾಲರಾಗಿ ಢಕ್ಕಾದಿಗಳ ಪಿಡಿದು ತಿರುಗುತ್ತಾ ಇವರು ಕುತರ್ಕ ಕುಶಾಸ್ತ್ರ ಚತುರರೂ ವಾಚಾಲರೂ ಆಗಿ ಜನರನ್ನು ಕೆಡಿಸುವರು. ಪೃಥುರಾಜನು ಆಗ ಇಂದ್ರನನ್ನು ಸಂಹರಿಸುವೆನೆಂದು ಕುಪಿತನಾಗಿ ಕಾರ್ಮುಕದಿ ಬಾಣವನ್ನು ಹೂಡಿ ನಿಂತನು. ಋತ್ವಿಜರು ಮಹಾಪರಾಕ್ರಮದಿಂದ ವಿಜೃಂಭಿಸಿ ನಿಂತ ಪೃಥುರಾಜನನ್ನು ನೋಡಿ 'ಪಶುವಲ್ಲದಿನ್ನೊಬ್ಬರ ವಧೆಯನ್ನು ಮಾಡುವುದು ವಿಹಿತವಲ್ಲ. ಮಹಾರಾಜ! ಈ ನಿನ್ನ ಯಜ್ಞವನ್ನು ನಾಶಮಾಡಲು ಇಂದ್ರನು ನಿನ್ನ ಕೀರ್ತಿಯನ್ನು ಅಸೂಯೆಯಿಂದ ಯತ್ನಿಸಿರು ವನು. ಅಪ್ರಯುಕ್ತಗಳಾಗಿರುವುದರಿಂದ ಅಗತಸಾರವಾದ ಮಂತ್ರಗಳಿಂದ ನಿನ್ನ ಶತ್ರುವನ್ನು ಬಿಡದೆ ಕರೆದು ಅಗ್ನಿಯಲ್ಲಿ ಹೋಮ ಮಾಡಿಬಿಡುವೆವು' ಎಂದು ಪೃಥುರಾಜನ ಅಪ್ಪಣೆಯನ್ನು ಪಡೆದು, ರೋಷದಿಂದ ಋತ್ವಿಜರು ಸ್ರುಕ್‌ಪಾತ್ರದಲ್ಲಿ ಹವಿಯನ್ನಿಟ್ಟು ಹೋಮಿಸಲು ಉದ್ಯುಕ್ತರಾದಾಗ ಬ್ರಹ್ಮನು ಬಂದು ಅವರನ್ನು ನಿಷೇಧಿಸಿ ಇಂತೆಂದನು– ಇಂದ್ರನನ್ನು

ಸಂಹರಿಸುವುದು ನಿಮಗೆ ಯೋಗ್ಯವಲ್ಲ, ಅದು ಸಾಧ್ಯವೂ ಅಲ್ಲ. ಕೇಳಿ, ಇಂದ್ರನು ಸುರಪ್ರಿಯನಾದ ಶ್ರೀಹರಿಯು ಸನ್ನಿಧಾನ ವಿಶೇಷಯುಕ್ತನು. ಅವನ ವಧೆಯು ಹರಿಗೆ ಅಪ್ರೀತಿಕರವು ಮತ್ತು ಇಂದ್ರನೇ ಸಂಹೃತನಾದಮೇಲೆ ಇನ್ನು ದೇವತಾಭಾವದಿಂದ ಯಜ್ಞವೇ ಇಲ್ಲದಂತೆ ಆಗುವುದು. ಆದ್ದರಿಂದ ನೀವೀಗ ಮಾಡುವುದು ಧರ್ಮದ್ರೋಹವಾದೀತು! ಶತಕ್ರುತುತ್ವ ಹಾನಿಯಾಗುವುದೆಂಬ ಭಯದಿಂದ ಇಂದ್ರನಿಂತು ಮಾಡಿರುವನು. ಪೃಥುರಾಜನೇ, ನಿನ್ನ ಕೀರ್ತಿಯು ಬೆಳಗಲಿ! ನೀನು ಏಕೋನಶತಕ್ರುತುನೆನಿಸು. ಸಾಕು, ನಿಲ್ಲಿಸು ಯಜ್ಞವನ್ನು! ತಾರತಮ್ಯವನ್ನರಿತ ನಿನಗಿಂತು ಮಾಡುವುದೇ ಭೂಷಣವು. ನಿನ್ನಲ್ಲಿದ್ದಂತೆ ಶ್ರೀಹರಿಯ ವಿಶೇಷ ಸನ್ನಿಧಾನವು ಇನ್ನೂ ಹೆಚ್ಚಾಗಿ ಮಹೇಂದ್ರನಲ್ಲಿರುವುದು. ಇಬ್ಬರು ಉತ್ತಮ ಶ್ಲೋಕ ಸನ್ನಿಧಾನ ಶೋಭಿತರೇ. ಆದ್ದರಿಂದ ಶತಕ್ರುತುವಿನಲ್ಲಿ ರೋಷವು ಯುಕ್ತವಲ್ಲ. ಯಜ್ಞವು ದೈವಹತವಾದಾಗ ಸುಮ್ಮನೆ ಚಿಂತಿಸುವುದು ನಿಷ್ಪ್ರಯೋಜನವು. ನನ್ನ ಮಾತನ್ನಾದರಿಸು. ದೈವೇಚ್ಛೆಗೆ ಬರದ ಕಾರ್ಯದ ಚಿಂತೆ ಮನಃಕ್ಲೇಶಕರವು, ತಮಸ್ಸದೃಶವಲ್ಲದೆ ವ್ಯರ್ಥವು. ಯಜ್ಞವನ್ನೂ ದೇವತೆಗಳಲ್ಲಿ ದುರಾಗ್ರಹವನ್ನೂ ನಿಲ್ಲಿಸು. ಇಂದ್ರನಿರ್ಮಿತ ಪಾಖಂಡಧರ್ಮಗಳನ್ನು ಅದರಿಂದಾಗುವ ಧರ್ಮ ನಾಶವನ್ನಾದರೂ ನೋಡು. ಮನೋವಶೀಕರಣ ಸಮರ್ಥವಾದ ಪಾಖಂಡಮತವನ್ನನುಸರಿಸಿ ಜನರೀಗ– ನೀನು ಚರಮಾಶ್ವಮೇಧವಂ ಮಾಡುವಾಗ ವಿಘ್ನವನ್ನಾಚರಿಸಿದ ಇಂದ್ರನ ವೇಷವನ್ನನು ಕರಿಸಿ ಕೆಡುತ್ತಿರುವರು. ಧರ್ಮರಕ್ಷೆ ದುಷ್ಟಶಿಕ್ಷೆಗಳನ್ನು ಮಾಡಲು ಅವತರಿಸಿರುವೆ. ವೇನಾಪಚಾರದಿಂದ ಕೆಟ್ಟ ಧರ್ಮವನ್ನುದ್ಧರಿಸಲು ವೇನದೇಹದಿಂದ ಬಂದ ಹರ್ಯಂಶ ಯುಕ್ತನಾದ ನಿನಗೆ ಇಂದ್ರವಿರೋಧವು ಯುಕ್ತವಲ್ಲ. ಶತಕ್ರುತುತ್ವವು ಇಂದ್ರನಿಗೊಬ್ಬನಿಗೇ, ಅನ್ಯರಿಗಲ್ಲವೆಂಬ ನನ್ನ ಸಂಕಲ್ಪವನ್ನೂ ಪಾಲಿಸಿ ನಡೆ. ಧರ್ಮಾಚರಣೆಯನ್ನು ಮಾಡಿ ಇಂದ್ರರಹಿತ ಮಾಯಾ ಪಾಖಂಡಮಾರ್ಗವನ್ನು ನಾಶಗೊಳಿಸಿ ಎಂದು ಲೋಕ ಗುರುವಾಜ್ಞಾಪಿಸಿದನು. ಆಗ ಪೃಥುರಾಜನು ಅಂತೆಯೇ ಇಂದ್ರನಿಂದ ಸ್ನೇಹವನ್ನು ಬೆಳೆಸಿ, ಯಜ್ಞವನ್ನು ನಿಲ್ಲಿಸಿಬಿಟ್ಟನು. ಅವಭೃತವನ್ನು ಮುಗಿಸಿ ಸರ್ವಸಮರ್ಪಣೆಯನ್ನು ಗೈದ ರಾಜನಿಗೆ ಯಜ್ಞತರ್ಪಿತರಾದ ಸುರರು ಬೇಕಾದ ವರಗಳನ್ನಿತ್ತರು. ವಿಪ್ರರು ವೇದೋಕ್ತಾಶೀರ್ವಾದಗಳನ್ನು ಮಾಡಿ ಭೂರಿ ದಕ್ಷಿಣೆಗಳನ್ನು ಪಡೆದು ಆದಿರಾಜನನ್ನು ಪೊಗಳಿದರು.

## ೨೦. ಭಗವದುಪದೇಶ – ಪೃಥುಕೃತಸ್ತುತಿ

ಮೈತ್ರೇಯನು ಪೇಳಿದನು–

ವಿದುರಾ! ಭಗವಂತನಾದ ಇಂದ್ರನಿಂದ ಕೂಡಿ ಯಜ್ಞದಲ್ಲಿ ಅಗ್ರಪೂಜೆಯನ್ನು ಸ್ವೀಕರಿಸಿ ತುಷ್ಟರಾಗಿ ಪೃಥುರಾಜನನ್ನು ನೋಡಿ ಇಂತೆಂದು ನುಡಿದನು-

ಪೃಥೋ! ನಿನ್ನ ನೂರನೆಯ ಅಶ್ವಮೇಧಯಾಗವನ್ನು ಇಂದ್ರನು ಕೆಡಿಸಿರುವನು. ಅವನನ್ನು ಕ್ಷಮಿಸು. ನಿನಗೆ ಮಾಡಿದ ಶತಕ್ರುತು ಭಂಗವು ತಪ್ಪಲ್ಲ. ಅದನ್ನು ಮಾಡಿದ ಇಂದ್ರನಲ್ಲಿ ವಿರೋಧ ಪಾಡಿದೆ; ಆದ್ದರಿಂದ ನನ್ನನ್ನು ಕ್ಷಮಿಸನೆಂದು ಬೇಡು. ನರದೇವ! ಸಾಧುಗಳು– ದೇಹವು ಜೀವನಲ್ಲ, ಜಡವು ಅನಿತ್ಯವಾದುದೆಂದರಿತು, ಲೋಕದಲ್ಲಿ ಯಾರಿಗೂ ದ್ರೋಹವನ್ನು

ಮಾಡುವುದಿಲ್ಲ. ಭಗವದ್ಬಂಧಕಶಕ್ತಿಗೆ ಸಿಲುಕಿ ನಿನ್ನಂತಹ ಬುದ್ಧಿವಂತರೇ ಅಜ್ಞಾನದಿಂದ ಧರ್ಮವನ್ನು ಬಿಟ್ಟರೆ ಇನ್ನು ದೀರ್ಘಕಾಲೀನ ವೃದ್ಧ ಜನಸೇವೆಯಿಂದೇನು ಪ್ರಯೋಜನ ಹೇಳು. ಅವಿದ್ಯಾಕಾಮಗಳಿಂದ ಪ್ರಾರಂಭವಾದದ್ದೀದೇಹವೆಂದು ಚೆನ್ನಾಗಿ ತಿಳಿದವನು, ಅದರಲ್ಲಾಸಕ್ತನಾಗಲಾರನು. ಈ ಶರೀರದಲ್ಲಿ, ಅದರ ಕೈಪಿಡಿದು ಬಂದ ಪತ್ನಿಯಲ್ಲಿ, ಅವಳಲ್ಲಿ ಪುಟ್ಟಿದ ಪುತ್ರಾದಿಗಳಲ್ಲಿ ಸಂಪಾದಿಸಿದ ದ್ರವ್ಯದಲ್ಲಿ, ಮಮತೆಯನ್ನು ಮಾಡುವವನು ಪಂಡಿತನೆನಿಸುವನೇ? ಕೇಳು ನನ್ನ ಜೀವವೈಲಕ್ಷಣ್ಯವನ್ನು. ನಾನು ಸರ್ವೋತ್ತಮನು. ಜನನಾದಿ ದೋಷರಹಿತನು. ಪರಂಜ್ಯೋತಿಯು, ಸ್ವಪ್ರಕಾಶನು, ಸತ್ತ್ವಾದಿಗುಣರಹಿತನು, ಆನಂದ ಜ್ಞಾನಾದಿ ಗುಣಪೂರ್ಣನು, ಸರ್ವತ್ರವ್ಯಾಪ್ತನು, ತನ್ನನ್ನು ತಾ ತಿಳಿದವನು, ಇತರ ಕರ್ಮಸಾಕ್ಷಿಯು, ಅಂತರ್ಯಾಮಿಯು, ಅನನ್ಯಾಧಿಪನು, ಜೀವರಾಶಿ ವಿಲಕ್ಷಣನು. ಪ್ರಭುವಾದ ಕಾರಣ ದೇಹಾದಿಗಳಿಂದ ನನಗಾಗುವ ಪ್ರಯೋಜನವಿಲ್ಲ. ಅಪ್ರಾಕೃತನಾದ ಕಾರಣ ಜನನಾದಿಗಳಿಲ್ಲ. ನಾನು ಅನನ್ಯ ಸದೃಶನು. ಸುಷುಪ್ತ ದಶೆಯಲ್ಲಿ ಹರ್ಯೇಕಾಸ್ಥಿತನಾಗಿ ದುಃಖಲೇಶವಿಲ್ಲದಿರುವುದು ಹರಿಯ ನಿರ್ದುಃಖತೆ, ಅನನ್ಯ ಸದೃಶತೆಗಳಿಗೆ ದೃಷ್ಟಾಂತವಾಗಿದೆ. ಇಂತು ಜೀವನು ಹರ್ಯಧೀನನೆಂದು ತಿಳಿದವನು,ಶರೀರದಲ್ಲಿದ್ದರೂ ಅಶನಾಯಾ ಪಿಪಾಸಾ ಶೋಕ ಮೋಹರಾಗದ್ವೇಷಾದಿ ಶರೀರ ಗುಣಗಳಿಂದ, ಲೇಪವನ್ನು ಪೊಂಡದೆ ಹರಿಯಲ್ಲಿ ಸಮಾಹಿತಚಿತ್ತ ನಾಗಿರುವನು. ಸ್ವಧರ್ಮಾಚರಣೆಯನ್ನು ಮಾಡುತ್ತಾ ಫಲಕಾಮನೆಯನ್ನು ತೊರೆದು ಶ್ರದ್ಧೆಯಿಂದ ನಿತ್ಯವೂ ನನ್ನನ್ನು ಭಜಿಸುವನು. ಮನಃಪ್ರಸಾದವನ್ನು ವಿಷಯವಿರಕ್ತಿಯನ್ನು, ಪೊಂದುವನು. ಯಥಾರ್ಥ ಜ್ಞಾನವನ್ನೂ ಸಂಪಾದಿಸಿ ಮನಶ್ಶುದ್ಧಿಯಿಂದ ನಿರ್ವಿಕಾರನು ಪೂರ್ಣನು ಆದ ಪರಮಾತ್ಮನನ್ನು ಪೊಂದಿ ಮುಕ್ತನಾಗುವನು. ಅಕ್ಲಿಷ್ಟಕಾರಿಯಾಗಿ ಉದಾಸೀನನೆನಿಸಿದ ಹರಿಯು ತಾಮಸ ವೈಕಾರಿಕ ತೈಜಸಾಹಂಕಾರಜಾತ ದ್ರವ್ಯಜ್ಞಾನ ಕ್ರಿಯೆಗಳೆಂಬ ಶರೀರ ಮನೋಜ್ಞಾನ ಕರ್ಮೇಂದ್ರಿಯಗಳ ಸ್ವಾಮಿಯು ಪ್ರೇರಕನು ನಿರ್ವಿಕಾರನು ಎಂದು ತಿಳಿದವನು ಪರಮ ಮಂಗಲರೂಪ ಮೋಕ್ಷವನ್ನೈದುವನು. ಲಿಂಗಶರೀರದಿಂದ ಮುಚ್ಚಲ್ಪಟ್ಟು ಸತ್ತ್ವರಜಸ್ತಮೋಗುಣಾತ್ಮಿಕ ಪ್ರಕೃತಿನಿರ್ಮಿತ ಶರೀರದಲ್ಲಿ ಬಂದು, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಕರ್ಮಗಳನ್ನು ಮಾಡುವ ಜೀವನು, ತಾನವುಗಳಿಂದ ಭಿನ್ನನೆಂದು ತಿಳಿದು ಪಂಡಿತನೆನಿಸುವನು. ಅಂತಹ ಬುದ್ಧಿವಂತರು ಸಂಪತ್ತಿನಲ್ಲಾಗಲಿ ವಿಪತ್ತಿನಲ್ಲಾಗಲಿ ನನ್ನಲ್ಲಿ ಭಕ್ತಿಯನ್ನೇ ಮಾಡುತ್ತಾ ವಿಕಾರವನ್ನು ಪೊಂದದೆ ಸುಖದುಃಖಗಳನ್ನೆಣಿಸದಿರುವನು. ಇದು ಕೂಡ ಮುಕ್ತಿಸಾಧನವಾಗಿದೆ. ಉತ್ತಮ ಮಧ್ಯಮಾಧಮದಲ್ಲಿ ತತ್ತದ್ಯೋಗ್ಯತಾನುಸಾರವಾಗಿ ಸಮಾನವಾಗಿ ವರ್ತಿಸುವನು, ಸುಖದುಃಖಗಳಲ್ಲಿ ವಿಕಾರಗಳನ್ನು ಪೊಂದದಿರುವಂತೆ ಮನವನ್ನು ಇಂದ್ರಿಯಗಳನ್ನು ಜಯಿಸಿದವನು, ನನ್ನಿಂದ ಕೊಡಲ್ಪಟ್ಟ ಸಕಲಗುಣಸಂಯುತನು ಆಗಿ ಎಲೌ ಪೃಥುರಾಜನೇ! ಸರ್ವ ಲೋಕಂಗಳನ್ನು ರಕ್ಷಿಸು. ಪ್ರಜರ ಪುಣ್ಯದಲ್ಲಿ ಷಷ್ಠಾಂಶವನ್ನೂ ಪ್ರಜಾರಂಜಕನಾದ ಧರ್ಮಿಷ್ಟ ರಾಜನು ಹೊಂದುವನು. ಆದ್ದರಿಂದ ಅದೇ ಮೋಕ್ಷ ಸಾಧನವೆನಿಸುವುದು. ಪ್ರಜರನ್ನು ರಕ್ಷಿಸದೆ ಕಪ್ಪವನ್ನು ಕೈಕೊಳ್ಳುವ ರಾಜನು ಅವರ ಪಾಪವನ್ನೇ ಉಂಡು, ತನ್ನ ಪುಣ್ಯವನ್ನು ಕೂಡ ಕಳೆದುಕೊಳ್ಳುವನು. ಇಂತು ನಾ ಪೇಳಿದ ರೀತಿಯಿಂದ ವಿಪ್ರಸಮ್ಮತವಾಗುವಂತೆ ವರ್ತಿಸು. ಪ್ರಜರನ್ನು ನಿಷ್ಪಕ್ಷಪಾತದಿಂದ ಪಾಲಿಸು. ಶೀಘ್ರದಲ್ಲಿಯೇ ನಿನ್ನ ಮನೆಗೆ ಜ್ಞಾನೋಪದೇಶವನ್ನು ಮಾಡಲು ಬರುವ ಸಿದ್ಧರನ್ನು ಕಾಣುವೆ. ಪ್ರಜರ ಪ್ರೀತಿಯನ್ನು ಗಳಿಸುವೆ. ನಿನ್ನ ಗುಣಗಳನ್ನು

ಶೀಲವನ್ನು ಕಂಡು ಹರ್ಷಿತವಾಗಿರುವೆನು. ನಾನು ಕೇವಲ ಯಜ್ಞಗಳಿಂದಲಾಗಲಿ, ತಪಸ್ಸಿನಿಂದಾಗಲೀ, ಅಷ್ಟಾಂಗಯೋಗದಿಂದಿದಾಗಲೀ, ಸಿಗುವವನಲ್ಲ. ಸುಜನರ ಭಕ್ತಿಗೆ ವಶವಾಗುವ ನನ್ನಿಂದ ನಿನಗೆ ಬೇಕಾದೊಂದು ವರನ್ನು ಬೇಡು.

ಮೈತ್ರೇಯನು ಹೇಳಿದನು–

ಲೋಕಗುರುವಾದ ಮಹಾಪ್ರಭುವಿಂತು ಹೇಳಲು ಕೇಳಿ ಪೃಥುಚಕ್ರವರ್ತಿಯು ಶ್ರೀಹರಿಯ ಆದೇಶವನ್ನು ಶಿರಸಾ ಸ್ವೀಕರಿಸಿದನು. ಮನಸಾ ಪೃಥುಸನ್ನಿಹಿತ ಹರಿಪಾದವನ್ನು ಮುಟ್ಟಿ ನಮಿಸಿ, ತನ್ನ ಹಯಹರಣ ಕರ್ಮದಿಂದ, ವ್ರೀಡಿತನಾದಂತೆ ನಿಂತ ಶತಕ್ರತುನನ್ನು ಆಲಂಗಿಸಿ, ಪೃಥುರಾಜನು ದ್ವೇಷವನ್ನು ತ್ಯಜಿಸಿದನು. ಸರ್ವಜ್ಞನಾದ ಶ್ರೀಶನಾಗ ಪೃಥುರಚಿತ ಪೂಜೆಯನ್ನು ಸ್ವೀಕರಿಸಿ, ಪೃಥುವು ಅಭಿವೃದ್ಧಭಕ್ತಿಯಿಂದ ತನ್ನ ಪಾದವನ್ನು ಹಿಡಿದು ಬಿಡದಿರಲು ಅನುಗ್ರಹ ಮಾಡಿ ಹೊರಡದೆ ನಿಂತುಬಿಟ್ಟನು. ವಿದುರಾ! ಇಂತಹ ಸಜ್ಜನ ಬಂಧು ಪ್ರಭುವಿನ್ನಾರು ಹೇಳು! ಆಗ ಆದಿರಾಜನು ಕಣ್ಣಲ್ಲಿ ನೀರು ತುಂಬಿ ಹರಿಯಲು, ಪದ್ಮನೇತ್ರನನ್ನು ನೋಡಲಾರದೆ, ಬಾಷ್ಪವಿಪ್ಲದ ಗದ್ಗದಿತ ಕಂಠದಿಂದ ಮಾತನಾಡಲಾರದೆ ಮನಸಾ ಹರಿಯನ್ನಾಲಂಗಿಸಿ ಸುಮ್ಮನೆ ನಿಂತನು. ಆಮೇಲೆ ಕಣ್ಣೀರನ್ನೊರೆಸಿಕೊಂಡು ನೋಡಿ ತೃಪ್ತನಾಗದೆ ಗರುಡಸ್ಕಂಧನ್ಯಸ್ತ ಲೋಕ ಪ್ರಶಸ್ತ್ಯನಾಗಿ, ಪದಪದ್ಮಗಳಿಂದ ಕ್ಷಿತಿಮಂಡಲ ಮಂಡನನಾಗಿ ನಿಂತ ರಮಾಕಾಂತನನ್ನಿಂತು ಪ್ರಾರ್ಥಿಸಿದನು.

ವಿಭೋ! ತ್ರಿಗುಣವಿಕಾರ ಮನಸ್ಕರಾದವರಂತೆ ವರಗಳನ್ನು ವರದರಾಜನಾದ ನಿನ್ನಿಂದ ಯಾವ ಬುದ್ಧಿವಂತನು ಬೇಡುವನು? ನರಕಸಮ ತಿರ್ಯಗ್ಯೋನಿಯಾಲ್ಲಿಯೂ ಸಿಗುವ ದೇಹ ಸುಖಗಳನ್ನು ಮೋಕ್ಷಪ್ರದನಾದ ನಿನ್ನಿಂದ ಬೇಡಬಹುದೇ? ಆದ್ದರಿಂದ ನಾನೇನೂ ಬೇಡುವುದಿಲ್ಲ. ನಾಥ! ನಿನ್ನ ಚರಣಾರವಿಂದ ಮಕರಂದಪಾನವಿಲ್ಲದ ಚತುರ್ವಿಧ ಪುರುಷಾರ್ಥ ಲಾಭವೂ ನನಗೆ ಬೇಡ. ಆದರೂ ಮಹಜ್ಜನರು ಹೃದಯಪೂರ್ವಕವಾಗಿ ವರ್ಣಿಸುವ ನಿನ್ನ ಕಥೆಯು ನನ್ನ ಕರ್ಣಾಮೃತವಾಗಲಿ! ಈ ವರವನ್ನು ದಯಮಾಡು. ಉತ್ತಮ ಶ್ಲೋಕ! ನಿನ್ನ ಭಕ್ತರ ಮುಖಪದ್ಮ ನಿಃಸೃತನಾದ ನಿನ್ನ ಪಾದಾರವಿಂದ ಮಧುರಾಮೃತ ಶೀಕರಶೀತಪಾವತ ಪೋತವೆಮ್ಮನ್ನು ಸ್ಪೃಸಿಸಲಿ. ನಿನ್ನನ್ನು ಮರೆತು ತತ್ವಮಾರ್ಗ ದೂರರಾದ ನಮ್ಮಂತಹ ಪಾಮರರನ್ನು ನಿನ್ನ ಸ್ಮೃತಿಯಂ ಪೊಂದುವಂತೆ ಮಾಡಲಿ! ಇನ್ನಾವ ವರಗಳಿಂದೇನು? ಶೋಭನಕರ ಕೀರ್ತಿ ಮೂರ್ತೇ! ನಿನ್ನನ್ನರಿತ ನಿನ್ನ ಭಕ್ತರ ಸಂಗದಿಂದ ಯದೃಚ್ಛಾವಶನಾಗಿ ಶ್ರವಣ ಮನೋಹರವಾದ ನಿನ್ನ ಕಥೆಯನ್ನೊಮ್ಮೆ ಕೇಳಿದ ಗುಣಜ್ಞನು ಸಾಕೆಂದು ತೃಪ್ತನಾಗಿಬಿಡುವನೇ? ಸಾಕ್ಷಾತ್ ಲಕ್ಷ್ಮೀದೇವಿಯೇ ಮತ್ತೆ ಮತ್ತೆ ಕೇಳಿ ಹೇಳಿ ಗುಣವರ್ಣನಿರತಳಾಗಿ ಅದನ್ನೇ ಬೇಡುತ್ತಿರುವಳೆಂದ ಮೇಲೆ ಇತರರು ಬೇಡರೇ! ನಿನ್ನ ಮಂಗಲ ಯಶಃಶ್ರವಣವೇ ಪರಮಾನಂದ ಸಾಧನವು. ಶ್ರೀಹರೇ! ಶ್ರೀ ಲಲನೆಯಂತೆ ಗುಣಪೂರ್ಣನಾದ ಪುರುಷೋತ್ತಮನಾದ ನಿನ್ನನ್ನು ಪ್ರೀತಿಯಿಂದ ಭಜಿಸಿದೆನು. ನೀನೇ ನಗೂ ಇಂದ್ರನಿಗೂ ಸ್ವಾಮಿಯು. ನಿನ್ನ ಚರಣೈಕನಿಷ್ಠರು ನಾವೀರ್ವರು. ನಮಗೇಕೆ ಕಲಹ? ಎಂದಿಗೂ ಇಲ್ಲ. ರಾಜಪ್ರಧಾನವಾದೀ ಲೋಕದಲ್ಲಿ ಜಂತುಗಳಿಗೆ ಪರಸ್ಪರ ಕಲಹವಾಗುವುದುಂಟು. ಅದು ನಮಗಿಲ್ಲ. ನಮ್ಮ ಶುಭಕರ್ಮಗಳಲ್ಲಿ ನಿನ್ನನ್ನೇ ಪೂಜಿಸುತ್ತಿರುವೆವು. ನಾವು ಮಾಡಿದ ಅಲ್ಪಪುಣ್ಯವನ್ನು ನೋಡಿ ಮಹಾಫಲವನ್ನು ಕೊಟ್ಟು ಅನುಗ್ರಹಿಸಿದ ದೀನವತ್ಸಲನಾದ ನಿನಗೆ ನಮ್ಮ ಪೂಜಾದಿಗಳಿಂದ ಪ್ರಯೋಜನವಿಲ್ಲ; ಆದರೂ ವಾತ್ಸಲ್ಯದಿಂದ

ಸ್ವೀಕರಿಸುವೆ. ಸ್ವಮಹಿಮಾರತನಾದ ನಿನಗೆ ಶ್ರೀದೇವಿಯಿಂದಲೂ ಫಲಾಕಾಂಕ್ಷೆಯು ಇರುವು ದಿಲ್ಲ. ಭಕ್ತಿಯು ಹೆಚ್ಚಾದಂತೆ ನಿನ್ನ ವಾತ್ಸಲ್ಯವು ಹೆಚ್ಚುವುದು. ಹೇ ಜಗದೀಶ! ನಿನ್ನಂತಹ ಭಕ್ತವತ್ಸಲನಾದ ಪ್ರಭುವನ್ನು ಕಾಣೆನಯ್ಯಾ! ನಿನಗ ನಮಃ. ಮಾಯಾಪ್ರಕೃತಿಗುಣಭ್ರಮೆಯನ್ನು ದೂರಮಾಡುವ ನಿನ್ನ ವಾತ್ಸಲ್ಯವೊಂದೇ ಸಾಕೆಂದು ಸಾಧುಗಳು ಬೇಡುವರು. ನೀನನುಗ್ರಹಿಸಲು ನಿನ್ನ ಪಾದಾರವಿಂದ ಸ್ಮರಣೆಯೇ ಕಾರಣವು. ಕರ್ಮಾದಿಗಳಲ್ಲವೆಂದು ಸಜ್ಜನರು ತಿಳಿದಿರುವರು. ವರನನ್ನು ಬೇಡೆಂದು ನಿನ್ನಭಕ್ತನಾದ ನನ್ನನ್ನು ಕುರಿತು ನೀನಾಡಿದ ವಚನವು ಜಗದ್ವಿಮೋಹಕ ವಲ್ಲವೆ? ಈ ನಿನ್ನ ವಾಕ್ಯವೆಂಬ ಪಾಶದಿಂದ ಕಟ್ಟಲ್ಪಡದಿರೆ, ಜನರು ಮೋಹಿತರಾಗುವುದೆಂತು? ಫಲಾರ್ಥಿಗಳಿಗೆ ಕರ್ಮಗಳನ್ನಾಚರಿಸುವುದೆಂತು? ನಿನ್ನ ಬಂಧಕಶಕ್ತಿಯಿಂದ ನಿನ್ನ ಉಪಾಸನೆ ಯನ್ನು ಬಿಟ್ಟು ಸ್ವರ್ಗಾದಿಕಗಳನ್ನು ಶ್ರೀಹರೇ! ನಿನ್ನಿಂದ ಬೇಡುವ ಅವಿವೇಕಿಗಳಾಗಿರುವೆವು. ಆದರೂ ತಂದೆಯು ನಂದನನಿಗೆ ಹಿತವಾದುದನ್ನು ತಾನೇ ತಿಳಿದು ಮಾಡುವಂತೆ ನೀನಾಗಿ ನಮಗೆ ಶ್ರೇಯಸ್ಸೆನಿಸಿದುದನ್ನು ತಿಳಿದುಕೊಡು!

ಭಗವಂತನಿಂತು ನುಡಿದನು–

ರಾಜನ್! ಆಶಿಷಗಳನ್ನು ಬೇಡದ ನೀನು ನಿಜವಾದ ಭಕ್ತನಾಗಿರುವೆ! ನನ್ನ ಭಕ್ತರು ಸ್ವರ್ಗಾಪವರ್ಗ ನರಕಾಂತರ ನಿವೃತ್ತಿಗಳನ್ನು ಸಮವಾಗಿ ನೋಡಿ ಲೆಕ್ಕಿಸದಿರುವರು. ನಿನ್ನಲ್ಲಿ ಪ್ರೀತನಾದೆ. ಏಕೆಂದರೆ ದುಸ್ತ್ಯಜವಾದ ರೋಷವನ್ನು ಬಿಟ್ಟ ನನ್ನ ಆದೇಶವನ್ನು ಶ್ರದ್ಧೆಯಿಂದ ಪಾಲಿಸುವುದೇ ನಿಜವಾದೆನ್ನ ಪೂಜೆಯೆನಿಸುವುದು.

ವಿದುರಾ! ರಾಜರ್ಷಿಯಾದ ಪೃಥುವಿನ ಮಹಾರ್ಥಗರ್ಭಿತ ವಚನವನ್ನಾಲಿಸಿ ಸಂತಸಿಸಿ, ಶ್ರೀಹರಿಯು ರಾಜನ ಪೂಜೆಯನ್ನೂ ಸ್ವೀಕರಿಸಿ ಹೊರಡಲುದ್ಯುಕ್ತನಾದನು. ಆಗ ಅಲ್ಲಿ ನೆರೆದ ದೇವಮುನಿ ಪಿತೃಗಂಧರ್ವ ಸಿದ್ಧಚಾರಣ ನಾಗಕಿನ್ನರಾಪ್ಸರೆಯನ್ನು ಮನುಜನರನ್ನು ಖಗಾದಿ ಭೂತಗಳನ್ನು ಶ್ರೀಹರಿಯು ಪ್ರತೀಕವೆಂದರಿತು ಪೃಥುರಾಜನು ಯಥಾಯೋಗ್ಯವಾಗಿ ಸತ್ಕರಿಸಿ ದನು. ವಚನವಿತ್ತ, ವಂದನ, ಭಕ್ತಾದಿಗಳನ್ನು ತಕ್ಕಂತೆ ಸಮರ್ಪಿಸಿದ ರಾಜನನ್ನು ಬೀಳ್ಕೊಂಡು ಅವರೆಲ್ಲರೂ ಶ್ರೀಪತಿಯ ಗಮನವನ್ನು ನೋಡುತ್ತಾ ನಿಂತರು. ಭಗವಂತನು ಉಪಾಧ್ಯಾಯ ಸಹಿತ ರಾಜನು ನಿಶ್ಚಲದೃಷ್ಟಿಯಿಂದ ನೋಡುತ್ತಿರಲು ಅವನ ಮನಸ್ಸನ್ನು ಸೆಳೆದುಕೊಂಡು ತನ್ನ ವೈಕುಂಠವನ್ನು ಸೇರಿದನು. ಅಂತರ್ಹಿತನಾದ ಶ್ರೀಹರಿಗೆ ನಮಿಸಿ, ತನಗೆ ಕೊಟ್ಟ ಜ್ಞಾನವನ್ನು ಸ್ಮರಿಸಿ, ರಾಜನು ದೇವನನ್ನೂ ದೇವತೆಗಳನ್ನೂ ಕಳಿಸಿ ಸ್ವಪುರವನ್ನು ಸೇರಿ ಸುಖದಿಂದಿದ್ದನು.

## ೨೧. ಪೃಥುರಾಜ ಹಿತೋಪದೇಶ

ಪೃಥುರಾಜನಗರವು ಸರ್ವಸಂಪತ್ಸುಸಮೃದ್ಧವಾಗಿತ್ತು. ಮುತ್ತಿನ ಮಾಲೆಗಳು ಪೂಸರಗಳು, ಪಟ್ಟವಸ್ತ್ರಗಳು, ಕನಕತೋರಣಗಳಲ್ಲಲ್ಲಿ ಕಟ್ಟಲ್ಪಟ್ಟಿದ್ದವು. ಧೂಮಪಾತ್ರೆಗಳಲ್ಲಿಂದ ಬಂದ ಧೂಪವಾಘ್ರಾತರ್ಪಕವಾಗಿತ್ತು. ಪಿಷ್ಟಚಂದನಾಗರುಮಿಶ್ರಿತವಾದ ತಳಿಲು ನೀರನ್ನು ರಾಜಮಾರ್ಗ ದಲ್ಲಿ ಚೆಲ್ಲಿದ್ದರು. ಪುಷ್ಪಗಳು ಅಕ್ಷತೆ ಫಲಜಲಗಳು ಪೂಜೆಗಾಗಿ ಅಣಿಯಾಗಿದ್ದವು. ಲಾಜಾರ್ಚಿತ ವಾದ ಮಾರ್ಗವು ಎರಡು ಬದಿಯ ಮಂದಿರ ದ್ವಾರಗಳಲ್ಲಿ ಕಟ್ಟಿದ ರಂಭಾಸ್ತಂಭಗಳಿಂದಲೂ

ಪು:ಷ್ಪೋತಗಳಿಂದಲೂ ಕಂಗೊಳಿಸುತ್ತಿತ್ತು. ಪಲ್ಲವ ತೋರಣಗಳ ಕಟ್ಟಿ ಧ್ವಜಗಳನ್ನೆತ್ತಿದ್ದರು. ಪ್ರಜರು ದೀಪಾರ್ತಿಗಳನ್ನು ಕಾಣಿಕೆಗಳನ್ನು ಹಿಡಿದು ರಾಜನನ್ನೆದುರ್ಗೊಂಡರು. ಮಣಿಕುಂಡಲ ಮಂಡಿತೆಯರಾದ ಕನ್ಯೆಯರು ಹಾಡುತ್ತಾ ಮುಂದೆ ನಡೆದರು. ಶಂಖದುಂದುಭಿಘೋಷವನ್ನು ಮೀರಿ ವಿಪ್ರರ ವೇದಘೋಷವು ಸುಶ್ರಾವ್ಯವಾಗಿ ಕೇಳಿಸಿತು. ಇಂತ ವೈಭವವಿದ್ದರೂ ಗರ್ವವಿರದ ಪೃಥುರಾಜನು ಮಂದಿರವನ್ನು ಪ್ರವೇಶಿಸಿ, ಕಾಣಿಕೆಯನ್ನು ಸ್ವೀಕರಿಸಿ, ಪೂಜ್ಯರಾದ ವಿಪ್ರವೃದ್ಧರನ್ನು ಪೂಜಿಸಿಗನು ಪೌರಗ್ರಾಮವಾಸಿಗಳಿಗೆ ಪ್ರಿಯಪದಾರ್ಥಗಳನ್ನಿತ್ತು ಗೌರವಿಸಿದನು. ಪೃಥುರಾಜ ನಿಂತು ಬಹು ಶುಭಕರ್ಮಗಳನ್ನು ಮಾಡುತ್ತಾ ಮಹನೀಯನೆಂದು ಖ್ಯಾತನಾದನು. ಅವನೀ ಮಂಡಲದಿ ಯಶವನ್ನು ತುಂಬಿ ಪರಮಪದವಿಯನ್ನೈದಿದನು.

ಈ ವಿದುರ– ಮೈತ್ರೇಯ ಸಂವಾದವನ್ನು ಶೌನಕಾದಿಗಳಿಗೆ ಹೇಳುತ್ತಲಿದ್ದ ಸೂತನಾಗ ಶೌನಕಾದಿಗಳಿಗಿಂತೆಂದನು–

ಸುಜನ ಸಂಭಾವಿತ ಸುಗುಣಸಂಪನ್ನನು ಯಶೋವಿಶಾಲವಾದ ಪೃಥುರಾಜನ ಪವಿತ್ರ ಚರಿತ್ರೆಯನ್ನು ಕೇಳಿ ಮಹಾ ಭಗವದ್ಭಕ್ತನಾದ ವಿದುರನು ಗುರುಗಳಾದ ಮೈತ್ರೇಯನನ್ನು ಮತ್ತೆ ಪ್ರಶ್ನಿಸಿದನು.

ಪೃಥುರಾಜನು ವಿಪ್ರರಿಂದ ಅಭಿಷಿಕ್ತನಾದನು. ಸುರರಿಂದ ಗೌರವಿತನಾಗಿ ವಿಷ್ಣು ತೇಜೋಬಲದಿಂದ ಭೂದೇವಿಯಿಂದ ಸಕಲೌಷಧಿಗಳನ್ನು ದೋಹನಮಾಡಿ ಪಡೆದನು. ಆ ಪೃಥುರಾಜನ ವಿಕ್ರಮವು ರಾಜರಿಗೆಲ್ಲ ಅನುಸರಣೀಯವೆನಿಸಿತು. ಲೋಕದಲ್ಲಿ ಜನರೆಲ್ಲ ಇಂದಿಗೂ ಪೃಥುವಿನಿಂದಲೇ ಜೀವನರೂಪೌಷಧಿಗಳನ್ನು ಪಡೆದಿರುವರು. ಅಂತಹ ಭಕ್ತ ರಾಜರ್ಷಿಯ ಕಥೆಯನ್ನು ಯಾವ ಅಭಿಜ್ಞನು ಕೇಳದಿರುವನು? ಅವನ ಚರಿತ್ರೆಯನ್ನಿನ್ನೂ ಹೇಳು.

ಮೈತ್ರೇಯನು ಹೇಳಿದನು–

ಗಂಗಾ ಯಮುನಾ ಮಧ್ಯದ ಪವಿತ್ರ ದೇಶದಲ್ಲಿ ವಸಿಸಿದ ಪೃಥುರಾಜನು ಭೋಗಗಳನ್ನು ಭುಜಿಸಿ ಪ್ರಾರಬ್ಧ ಪುಣ್ಯವನ್ನು ಕಳೆಯುತ್ತಾ ರಾಜ್ಯವಾಳುತ್ತಿದ್ದನು. ಅವ್ಯಾಹತವಾದ ಅವನ ಆಜ್ಞಾಚಕ್ರವು ಸಪ್ತದ್ವೀಪಗಳನ್ನು ರಕ್ಷಿಸುತ್ತಿತ್ತು. ಬ್ರಾಹ್ಮಣರಿಂದಲೂ ಮತ್ತು ವೈಷ್ಣವರಿಂದಲೂ ಕಪ್ಪವನ್ನು ಕೊಳ್ಳದೆ ಅವರಿಗೆ ದಂಡಧರನಾಗದೆ, ದುಷ್ಟದಮನನಾಗಿ ಶತ್ರುಭಯಂಕರನಾಗಿ ವಿರಾಜಿಸಿದನು. ಒಂದು ಸಲ ಪೃಥುರಾಜನು ಕರೆಯಿಸಲು ದೇವರ್ಷಿ ಬ್ರಹ್ಮರ್ಷಿಗಳು ಪೃಥುವಿನ ಸತ್ರಯಾಗದಲ್ಲಿ ಸಮ್ಮಿಲಿತವಾಗಿದ್ದರು; ಆ ಸಭೆಯಲ್ಲಿರುವ ಸನ್ಮಾನ್ಯರನ್ನು ಪೂಜಿಸಿ ಪೃಥು ರಾಜನ ಸಂಸನ್ಮಧ್ಯದಲ್ಲಿ ತಾರಾಗಣದಿ ಚಂದ್ರನಂತೆ ಎದ್ದು ನಿಂತುಕೊಂಡು ಮಾತನಾಡಲು ದ್ಯುಕ್ತನಾದನು.

ಉನ್ನತ ಗಾತ್ರನು, ಕಂಜಾರುಣ ನೇತ್ರನು, ಪೀನಾಯತ ಭುಜನು ಕುಂದಕುಟ್ಮಲ ದ್ವಿಜನು, ನಿರ್ಮಲ ವರ್ಣನು, ಸಮಕರ್ಣನು, ಚಂಪಕನಾಸಿಕನು, ಸುಂದರಮುಖನು, ಸಾಮ್ಯನು ಅತಿರಮ್ಯನು ಮಂದಸ್ಮಿತನು ಪೀನಭುಜಯುತನು, ಉನ್ನತ ವಕ್ಷಸ್ಕನು, ನತಶಿರಸ್ಕನು , ವಲೀ ಸುಂದರೋದರನು ಕಂಬು ಕಂಧರನು, ಆವರ್ತ ನಾಭಿರಸನು, ಗಂಭೀರ ಕಂಠಸ್ವರನು, ಸ್ನಿಗ್ಧ ಸೂಕ್ಷ್ಮ ವಕ್ರಾಸಿತ ಕೇಶನು ಆದ ಪೃಥುವು ದೀಕ್ಷಿತನಿಗೊಪ್ಪುವ ಭೂಷಣ ರಾಜಿಯಿಂದ ಸಮಲಂಕೃತನಾಗಿ ಪೀತಾಂಬರವನ್ನುಟ್ಟು ದುಕೂಲವನ್ನು ಹೊದ್ದು ಮೇಲೆ ಕೃಷ್ಣಾಜಿನವನ್ನು ಧರಿಸಿದ್ದನು. ಕುಶಪಾಣಿಯಾಗಿ ಉಚಿತ ಕರ್ಮಗಳನ್ನು ಮಾಡಿದ್ದನು. ಶೀತಲ ಪ್ರೇಮಾರ್ದ್ರ

ಕಟಾಕ್ಷದಿಂದ ಸಭಿಕರನ್ನು ವೀಕ್ಷಿಸಿ ಕ್ಷಿತೀಶನು ಆನಂದತುಂದಿಲರಾಗುವಂತೆ ಗಂಭೀರ ಸ್ವರದಿಂದ ಮನೋಹರವು ಚಿತ್ರಪದವು ವಿಶದವು ಆದ ವಚನಗಳನ್ನಾಡಿದನು–

ಸಭ್ಯರೇ! ಕೇಳಿ. ನಿಮಗೆ ಮಂಗಳವಾಗಲಿ! ಇಲ್ಲಿ ನೆರೆದಿರುವ ಸಾಧುಗಳೇ! ಜಿಜ್ಞಾಸುವು ತಾನೆಣಿಸಿದ ಧರ್ಮವನ್ನು ಯೋಗ್ಯರಲ್ಲಿ ವಿಜ್ಞಾಪಿಸಿ ತಿಳಿಯುವುದುಚಿತವು. ನಾನು ಪ್ರಜಾಶಾಸಕನಾಗಿ ಶ್ರೀಹರೀಚ್ಛೆಯಿಂದ ಜನಿಸಿರುವೆನು. ರಕ್ಷಣೆಯು ವೃತ್ತಿ ಕಲ್ಪನೆಯು ಧರ್ಮಸ್ಥಾಪನೆಯು ನನ್ನ ಕರ್ತವ್ಯಗಳಾಗಿವೆ. ಪ್ರಜಾಪಾಲನವನ್ನು ಬ್ರಹ್ಮವಾದಿಗಳು ಪೇಳಿದಂತೆ ಮಾಡಲು ಕಾಮಸಮೃದ್ಧ ಪುಣ್ಯಲೋಕವಾಗುವುದು! ಅದೃಷ್ಟಫಲಪ್ರದನಾದ ಶ್ರೀಹರಿಯು ಅಂತಹ ರಾಜನಲ್ಲಿ ಪ್ರೀತನಾಗುವನು. ಪ್ರಜರನ್ನು ಧರ್ಮದಲ್ಲಿ ನಡೆಯಿಸಿ ರಕ್ಷಿಸದೇ ಕೇವಲ ಕರಸ್ವೀಕಾರ ಮಾಡಿದ ರಾಜನು ಪ್ರಜರ ಪಾಪವನ್ನೇ ಉಂಡು ತನ್ನ ಷಷ್ಠಾಂಶಪುಣ್ಯವನ್ನೂ ಕಳೆದುಕೊಳ್ಳುವನು. ಪ್ರಜೆಗಳೇ! ರಾಜನಿಗೆ ಬರುವ ಷಷ್ಠಾಂಶಪುಣ್ಯವು ನಶಿಸದಂತೆಯು, ನಿಮ್ಮ ಶ್ರೇಯಸ್ಸು ವೃದ್ಧಿಯಾಗುವಂತೆಯು, ಅಸೂಯೆಯನ್ನು ಬಿಟ್ಟು, ಅಧೋಕ್ಷಜನ ಭಕ್ತರಾಗಿ, ಧರ್ಮವನ್ನೇ ಆಚರಿಸಿರಿ. ಇದೇ ನೀವೆನ್ನಲ್ಲಿ ಮಾಡುವ ಅನುಗ್ರಹವು! ಹೇ ಸಭ್ಯರೇ! ಪಿತೃದೇವ ಋಷಿಗಳಿರಾ! ಈ ವಿಷ್ಣು ಪ್ರಿಯಧರ್ಮವನ್ನು ನೀವೆಲ್ಲರನುಮೋದಿಸಿ ಶಾಸಕನಿಗೂ ಧರ್ಮಕರ್ತನಿಗೂ ಅನುಜ್ಞಾಪ್ರದನಿಗೂ ತತ್ತದ್ಯೋಗ್ಯ ಪುಣ್ಯಲೋಕವು ಲಭಿಸುವುದು. ವ್ಯಾಸಾದಿ ಮಹಾತ್ಮರು ಹೇಳಿದಂತೆ ಶ್ರೀಹರಿಯು ಯಜ್ಞಪತಿಯು ಇರುವನು. ಶ್ರೀನಾರಾಯಣಪ್ರಸಾದಪ್ರಾಪ್ಯ ಲೋಕಗಳು ತಲ್ಲೋಕಪಾಲಕರಾಗಿ ಹರಿಯಿಂದ ನಿಯತರಾದ ದೇವತೆಗಳೂ ಇರುವರು. ಈ ಲೋಕದಲ್ಲಿ, ಸ್ವರ್ಗಾದಿಗಳಲ್ಲಿ, ರಸಾತಲಾದಿಗಳಲ್ಲಿ, ಪ್ರಕಾಶಯುಕ್ತ ಪದಾರ್ಥಗಳಲ್ಲಲ್ಲಿ ಇವೆ. ಇಂದ್ರಿಯಾದಿ ಪ್ರಕಾಶಕರಾಗಿ ಈ ಶರೀರದಲ್ಲೇ ದೇವತೆಗಳು ಪರಿದೃಶ್ಯ ಸಮಾನರಾಗಿರುವರು. ಪ್ರಕಾಶಕರವು ಸುಖಕರವಾದ ಸ್ಥಾನಗಳು ದೇವತೆಗಳು ಈ ಲೋಕದಲ್ಲಿಯೂ ಕಾಣುವುದುಂಟು. ಮನುರಾಜ, ಉತ್ತಾನಪಾದ, ಧ್ರುವ, ಪ್ರಿಯವ್ರತ, ಅಂಗರಾಜ ಮೊದಲಾದ ಮಹನೀಯರು, ಬ್ರಹ್ಮರುದ್ರಾದಿ ದೇವತೆಗಳು, ಪ್ರಹ್ಲಾದ ಬಲ್ಯಾದಿ ಭಕ್ತದೈತ್ಯರೂ ಹರಿಯನ್ನು ಕಂಡು ಪೂಜಿಸಿ, ಪ್ರಯೋಜನವನ್ನು ಪೊಂದಿರುವರು. ರಾಜ್ಯವಾಗಲಿ ಸ್ವರ್ಗವಾಗಲಿ ಅಪವರ್ಗವಾಗಲಿ ಸಮಸ್ತ ಪ್ರಧಾನವಾದ ಶ್ರೀಹರಿಯಿಂದಲೇ. ಅವನ ಪ್ರಸಾದವು ಜ್ಞಾನೈಕಲಭ್ಯವು. ಈ ಧರ್ಮದಲ್ಲಿ ಮೋಹಿತರಾಗಿ ಕೆಟ್ಟು, ಮೃತ್ಯುದೌಹಿತ್ರನಾದ ವೇನನಂತಿರುವರು ಶೋಚನೀಯರೇ ಸರಿ! ಶ್ರೀಹರಿಯ ಪಾದಸೇವಾರತಿಯು ತತ್ಪದಾಂಗುಷ್ಠನಿಃಸೃತ ದೇವನದಿಯಂತೆ, ತತ್ಕ್ಷಣದಲ್ಲೇ ಅನಂತಜನ್ಮ ಸಂಚಿತ ಮನೋಮಲವನ್ನೆಲ್ಲ ಹರಿಸಿಬಿಡುವುದು, ಮತ್ತು ಪ್ರತಿ ನಿತ್ಯವೂ ಸೇವಿಸಿದಂತೆ ಹೆಚ್ಚುತ್ತಾ ಹೋಗುವುದು. ಮನಃಶುದ್ಧಿಯನ್ನು ಪೊಂದಿದವರು ವೈರಾಗ್ಯದಿಂದ ವಿಜೃಂಭಿತವಾದ ಜ್ಞಾನವನ್ನು ಪೊಂದಿ ಶ್ರೀಹರಿಯ ಭವಹರಣ ಚರಣ ಶರಣನಾಗಿಬಿಡುವನು. ಆಗ ಆ ಭಕ್ತನು ಪುನಃ ಕ್ಲೇಶನಿವಹ ಕಾರಣವಾದ ಸಂಸಾರವನ್ನು ಪೊಂದುವುದಿಲ್ಲ. ಆದ್ದರಿಂದ ಇಂತಹ ಮಹತ್ಪ್ರಯೋಜನಕಾರಿಯಾದ ಹರಿಸೇವೆಯೇ ಕರ್ತವ್ಯವು. ಆ ಸ್ವಾಮಿಯಲ್ಲಿ ನಿಷ್ಕಾಮವಾದ ಮನಸ್ಸಿನಿಂದ ಮಾತಿನಿಂದ ಮನುಜಾದಿ ದೇಹದಿಂದ ವರ್ಣಾಶ್ರಮವಿಹಿತವಾದ ಕರ್ಮವನ್ನು ಫಲಾಪೇಕ್ಷಾದಿ ಕಾಪಟ್ಯವಿಲ್ಲದೆ ಮಾಡಿ ಮಾಧವನಿಗರ್ಪಿಸಿರಿ. ಆ ವನಜನಾಭನ ಕಾಮದ ಪಾದಪಂಕಜವು ನಿಮ್ಮ ಯೋಗ್ಯತಾನುಸಾರವಾದ ಮೋಕ್ಷಾದಿ ಸಕಲ ಪುರುಷಾರ್ಥ ಸಿದ್ಧಿಯನ್ನು ಕೊಡುವುದು. ಜಗಜ್ಜನ್ಮಾದಿಕಾರಣನಾದ ಶ್ರೀಹರಿಯು ಪುರುಷರು ಮಾಡುವ ಅನೇಕ

ಯಾಗಗಳಲಿ ಪುರೋಡಾಶಾದಿದ್ರವ್ಯಗಳ ಶುದ್ಧಿ, ಯಜಮಾನನ ವಿಶಿಷ್ಟ ವಂಸವಿರಕ್ತ್ಯಾದಿಗಳು, ಋತ್ವಿಗ್ಜನಗ ವಿದ್ಯಾಜ್ಞಾನಗಳು, ಇಂದ್ರಾದಿದೇವತಾ ಮಂತ್ರಪಠನ ಪರಿಪಾಟಗಳಿಗೆ ತಕ್ಕಂತೆ ವಜ್ರಧರತ್ವಾದಿ ಲಿಂಗದಿಂದ ಇಂದ್ರಾದಿ ನಾಮದಿಂದ ಹವಿಸ್ಸನ್ನು ಸ್ವೀಕರಿಸಿ ಯಜಮಾನನಿ ಗೊಲಿವ ದೇವತೆಗಳಲ್ಲಿ ಅಂತರ್ಯಾಮಿಯು ಫಲಪ್ರದನೂ ಆಗಿದ್ದು, ವಿಶುದ್ಧ ವಿಜ್ಞಾನಾನಂದ ಸ್ವರೂಪದಿಂದ ಕಾಣಿಸುವನು. ಜ್ಞಾನಿಗಳವನನ್ನು ಮುಕ್ತಾಶ್ರಯನೆಂದು ತಿಳಿದು, ಚಕ್ರಧರತ್ವಾದಿ ಲಿಂಗಗಳಿಂದಲೂ ನಾರಾಯಣಾದಿ ನಾಮಗಳಿಂದಲೂ ಸಮನ್ವಯಿಸಿ ಭಜಿಸಿ ಮುಕ್ತಿಯನ್ನು ಪಡೆಯುವರು. ಪ್ರಕೃತಿಕಾಲ ಮನಃಕರ್ಮಗಳಿಂದ ಕೂಡಿ ಶರೀರದಿಂದ ಜೀವನಿಂದ, ಭಿನ್ನನಾಗಿ ವ್ಯಾಪ್ತನು ಸ್ವತಂತ್ರನು ಕ್ರಿಯಾಫಲಪ್ರದನು ಆದ ಶ್ರೀಹರಿಯು ದಾರುವಿನಲ್ಲಿ ಅಗ್ನಿಯಂತೆ ಇದ್ದು ಗುರುಶಿಷ್ಯವ್ಯಾಖ್ಯಾನ ರೂಪಮಥನಾದಿಗಳಿಂದ ಅಭಿವ್ಯಕ್ತನಾಗುವನು. ದಾರುವಿನಿಂದ ಭಿನ್ನವಾದ ಅಗ್ನಿಯಂತೆ ಜೀವಭಿನ್ನನು, ದಾರು ಸ್ಥೂಲತ್ವಾದಿಗಳಂತೆ ಸ್ಥೂಲನಾದ ಅಗ್ನಿಯಂತೆ ಜೀವಸದೃಶನು, ದಾರು ಪತನ ನಾಶಾದಿಗಳಿಂದ ನಷ್ಟವಾಗದ ಅಗ್ನಿಯಂತೆ ದೇಹಾದಿ ನಾಶವಿಲ್ಲದೆ ನಿತ್ಯಮುಕ್ತನು, ಮಥನಾದಿಗಳಿಂದ ಅಭಿವ್ಯಕ್ತನಾಗುವ ಅಗ್ನಿಯಂತೆ ಗುರುಶಿಷ್ಯರ ಪ್ರವಚನ ಪ್ರಕಾಶಿತನೂ ಆದ ಶ್ರೀಹರಿಯ ಜ್ಞಾನವು ಬ್ರಾಹ್ಮಣರಿಂದಲೇ ಆಗುವುದು. ಅವರು ಹರಿಮುಖ ಜಾತರೂ ಆದ್ದರಿಂದ ವ್ಯಾಖ್ಯಾನ ವೈಖರೀ ಪ್ರಕಾಶದಿಂದ ಇಷ್ಟದೇವನು ಜ್ಞಾನದನು ಯಜ್ಞಾದಿ ಕರ್ಮಫಲದನು ಆದ ಶ್ರೀಶನನ್ನು ನೋಡಿಸಲು ಸಮರ್ಥರೆನಿಸುವರು. ಕೃಷ್ಯಾದ್ಯನ್ಯ ವ್ಯಾಪಾರ ವನ್ನು ಬಿಟ್ಟು ಅನನ್ಯಭಕ್ತಿಯಿಂದ ಭಜಿಸುವ ಧೃತವ್ರತರಾದ ವಿಪ್ರರೆನಗೆ ಪ್ರೀತಿಪಾತ್ರರಾಗಿ ರುವರು. ಆದ್ದರಿಂದ ಓ ರಾಜಕುಲಜಾತರೇ! ಎಷ್ಟೇ ಮಹದೈಶ್ವರ್ಯಯುಕ್ತರು ಪ್ರಭಾವಶಾಲಿ ಗಳಾದರೂ ತಿತಿಕ್ಷಾತಪೋವಿದ್ಯಾವಿನಯ ಸಂಪನ್ನರಾಗಿ ಪ್ರಕಾಶಿಸುವ ಶ್ರೀನಾರಾಯಣ ಭಕ್ತರಾದ ಬ್ರಾಹ್ಮಣರಲ್ಲಿ ದ್ರೋಹವನ್ನೆಸಗಲು ಪೋಗಬೇಡಿ. ಅವರನ್ನು ಕೆಡಿಸಲು ನಿಮಗೆ ಸಾಧ್ಯವೇ ಇಲ್ಲ. ಬ್ರಾಹ್ಮಣಪ್ರಿಯರಾದ ಶ್ರೀಹರಿ ಪ್ರೀತಿಗಾಗಿ ವಿಪ್ರರನ್ನು ಭಕ್ತಿಯಿಂದ ಸೇವಿಸುವುದೇ ನಿಮಗೆ ಕರ್ತವ್ಯವು. ಇಂದ್ರನು ಯಾವ ಪ್ರಭುಚರಣಾರವಿಂದವಂದನದಿಂದ ಅಮಂದಸಂಪದವ ನ್ನೈದಿರುವನೋ ಜಗತ್ಪವಿತ್ರ ಕೀರ್ತಿಯಾಗಿ ಮೆರೆಯುವನೋ, ಅಂತಹ ಸರ್ವೋತ್ತಮ ಶ್ರೀಶನು ವಿಪ್ರಪ್ರಿಯನಾಗಿರುವನು. ಹರಿಭಕ್ತಿಯಿಂದ ವಿಪ್ರರನ್ನು ಸೇವಿಸಲು ಅಶೇಷಗುಣಾಕರನು ಅನನ್ಯಾಧಿಪನು ಸರ್ವಪ್ರಭುವಾದ ನಾರಾಯಣನು ಪರಮಪ್ರೀತನಾಗುವನು. ಆದ್ದರಿಂದ ವಿಷ್ಣು ಧರ್ಮಪರರೆಲ್ಲರೂ ವಿನಯದಿಂದ ಬ್ರಹ್ಮಕುಲವನ್ನು ಸೇವಿಸುವುದು ಬಹು ಶ್ರೇಯೋದಾಯಕ ವಾಗಿದೆ. ಬ್ರಾಹ್ಮಣರು ಹರಿನಿತ್ಯಸಂಬಂಧದಿಂದ ಪವಿತ್ರರು, ಅವರ ಸೇವೆಯಿಂದ ಮನಃ ಪ್ರಸಾದವು, ಅದರಿಂದ ಶೀಘ್ರದಲ್ಲಿಯೇ ಹರಿಪ್ರಸಾದವು, ಅದರಿಂದ ಭಕ್ತಿಜನ್ಯ ಸುಖರೂಪ ಮೋಕ್ಷವೇ ಆಗುವುದು. ಮುಕ್ತಿಸುಖಕ್ಕಿಂತಲೂ ಉತ್ತಮವಾದ ಸುಖವು ಇಲ್ಲ. ದೇವತೆಗಳಿಗೂ ಮುಕ್ತಿಯಲ್ಲಿ ಸಿಗುವ ಸುಖವಿಲ್ಲಿ ಇಲ್ಲ. ಭಗವತ್ತತ್ತ್ವವನ್ನರಿತ ಸುಜನರು ಹರಿಯ ಪವಿತ್ರ ನಾಮಗಳಿಂದ ವಿಪ್ರರ ಮುಖದಲ್ಲಿ ಶ್ರದ್ಧೆಯಿಂದ ಹೋಮಿಸಿದ ದ್ರವ್ಯವನ್ನು ಅನಂತಫಲದನಾಗಿ ಶ್ರೀಶನು ಸ್ವೀಕರಿಸುವಂತೆ ಜಡಹುತಾಶನನಲ್ಲಿ ಹಾಕಿದ ಅನ್ನಕ್ಷೀರಾದಿಗಳನ್ನು ಅಷ್ಟು ಪ್ರೀತಿಯಿಂದ ಸ್ವೀಕರಿಸುವನು. ವಿಪ್ರರಲ್ಲಿಯೂ ಪರಮಹಂಸರಲ್ಲಿ ಅನಂತಫಲದನಾಗಿ ಶ್ರೀಶನು ಸ್ವೀಕರಿಸುವಂತೆ ಜಡಹುತಾಶನನಲ್ಲಿ ಹಾಕಿದ ಅನ್ನಕ್ಷೀರಾಡಿಗಳನ್ನು ಅಷ್ಟು ಪ್ರೀತಿಯಿಂದ ಸ್ವೀಕರಿಸುವನು. ವಿಪ್ರರಲ್ಲಿಯೂ ಪರಮಹಂಸರಲ್ಲಿ ಅನಂತಫಲದನಾಗಿ ನೆಲೆಸಿರುವನು.

ಅವರಲ್ಲದೇ ಅವನನ್ನು ವರ್ಣಿಸಲು ವಾಕ್ಯವನ್ನು, ಸೇವಿಸಲು ದೇಹವನ್ನು, ಭಜಿಸಲು ಮನಸ್ಸನ್ನ ರ್ಪಿಸಿ ಅವನಾಜ್ಞೆಯಂತೆ ನಡೆಯಲು ಬಲ್ಲವರು? ಬ್ರಾಹ್ಮಣರು ಶ್ರದ್ಧಾ ತಪಗಳಿಂದಲೂ, ಪುಣ್ಯ ಮೌನ ದಮಗಳಿಂದಲೂ, ನಿತ್ಯ ನಿಷ್ಪಾಪಸ ನಾತನ ವೇದವನ್ನು ವೇದವೇದ್ಯನಾದ ಶ್ರೀಹರಿಯನ್ನೂ ಏಕಾಗ್ರಮನದಿ ಧರಿಸಿರುವರು. ಸಕಲ ಪುರುಷಾರ್ಥಪ್ರಾಪ್ತಿಯು ಶ್ರೀ ನಾರಾ ಯಣನಿಂದ. ಅಂತಹ ಬ್ರಹ್ಮನು ಬ್ರಹ್ಮಪ್ರತಿಪಾದಕವೇದನಿರತ ಬ್ರಾಹ್ಮಣರಲ್ಲಿ ದರ್ಪಣದಲ್ಲಿ ಯಂತೆ ಪ್ರಕಾಶಿತನಾಗಿರುವನು. ಆದ್ದರಿಂದ ಆರ್ಯರೇ! ನಿತ್ಯಧಾರಣದಿಂದ ಪಾಪನಾಶಕವೂ, ಸರ್ವಸುಗುಣ ಸಂಪಾದಕವೂ, ಆದ ಬ್ರಾಹ್ಮಣರ ಪಾದಪದ್ಮರಜವನ್ನು ಕಿರೀಟವವಿಟ್ಟ ನನ್ನ ಶಿರಸ್ಸಿನಲ್ಲಿ ಧರಿಸಿರುವೆನು. ಶೀಲಧನನು ಗುಣವಂತನು ಕೃತಜ್ಞನು, ಶ್ರದ್ಧಾವಂತನಾದ ಪುರುಷನನ್ನು ಸಂಪತ್ತುಗಳು ತಾವಾಗಿ ವರಿಸಿ ಸೇರುವುವು. ಆದ್ದರಿಂದ ಗೋಕುಲವು, ವಿಪ್ರರು, ಯತಿವರರು, ಬ್ರಹ್ಮಾದಿಹರಿಪರಿವಾರ, ಶ್ರೀಲಕ್ಷ್ಮೀನಾರಾಯಣರು ಎನ್ನಲ್ಲಿ ಪ್ರಸನ್ನರಾಗಿರಲಿ! ಎಂದು ಬೇಡುವೆನು.

ಮೈತ್ರೇಯನು ಪೇಳಿದನು–

ಇಂತು ನುಡಿದ ರಾಜನನ್ನು ಕಂಡು ಪಿತೃದೇವದ್ವಿಜವರರತ್ಯಂತ ಪ್ರೀತರಾಗಿ ಸಾಧು ಸಾಧು! ಎನ್ನುತ್ತ ಪೊಗಳಿದರು. 'ಪುತ್ರನಿಂದ ಮನುಜಲೋಕ ಜಯ, ಪುತ್ರನಿಂದ ತಮಸ್ತರಣ'ವೆಂದು ಶ್ರುತಿ ಸಾರುತಿದೆ. ಇದೆಷ್ಟು ಸತ್ಯವು! ಬ್ರಹ್ಮದಂಡಹತನಾದ ವೇನನು ಮಹಾಪಾಪಿಯಾದ್ದರಿಂದ ತಮವನ್ನು ಸೇರಿದರೂ, ಯಜ್ಞವನ್ನು ಮಾಡಿದ ರಾಜಸವೇನನು ಪೃಥುಗುಣದಿಂದ ಸ್ವರ್ಗವನ್ನೇ ಪೊಂದಿದನು. ವೀರವರ! ಪೃಥ್ವಿಗೆ ಪಿತೃನಾದೆ. ಶಾಶ್ವತವಾಗಿ ಬಾಳು. ಸರ್ವಲೋಕೇಶನಾದ ಅಚ್ಯುತನಲ್ಲಿ ನಿನಗೆಷ್ಟು ಭಕ್ತಿ? ನೀನು ನಮಗೆ ಪ್ರಭುವಾದ್ದರಿಂದ ಮುಕುಂದಪಾಲಿತರಾದಂತೆ ಸಂತೋಷದಿಂದಿರುವೆವು. ಉತ್ತಮ ಶ್ಲೋಕನಾದ ಶ್ರೀಹರಿಯ ಬ್ರಾಹ್ಮಣ ವತ್ಸಲತೆಯನ್ನು ವರ್ಣಿಸಿ ನಮ್ಮನ್ನು ಉದ್ಧರಿಸಿದೆ. ನಿನ್ನ ನಂಬಿ ಬದುಕುವ ನಿನ್ನವರಾದ ನಮ್ಮನ್ನು ಧರ್ಮದಲ್ಲಿ ನಡೆಸುವುದು ನಿನಗೇ ಸರಿ! ಇದು ನಿನ್ನಲ್ಲಿ ಆಶ್ಚರ್ಯವೇನಲ್ಲ. ಕರುಣಾಕರರಾದ ಮಹಜ್ಜನರ ಸ್ವಭಾವವೇ ಇಂತಿರುವುದಲ್ಲವೇ? ದೇವಸಂಯೋಜಿತವಾದ ಕರ್ಮಗಳಿಂದ ಅನೇಕ ಯೋಗ ನಿಸಂಜಾತರಾಗುತ್ತಾ ಅಜ್ಞಾನಿಗಳಾದ ತಮಗೆ ತಮಃಪಾರವನ್ನು ತೋರಿಸಿದ ನಿನಗೆ ನಮಃ ಬ್ರಹ್ಮಕುಲದಲ್ಲಿ ನೆಲಸಿ ಪೃಥ್ವಾವಿಷ್ಟನಾಗಿ ತನ್ನ ಮಹಿಮೆಯಿಂದ ಜಗವನ್ನುಪೊರೆವ ಸರ್ವೋತ್ತಮನು ಪೂರ್ಣಷಡ್ಗುಣನು ಅತ್ಯಂತ ಜ್ಞಾನಾನಂದಸ್ವರೂಪನಾದ ಶ್ರೀಹರಿಗೂ ನಮಸ್ಕರಿಸುವೆವು' ಎಂದು ಪ್ರಜರು ನುತಿಸಿದರು.

## ೨೨. ಸನಕಾದಿಕೃತೋಪದೇಶ

ಮೈತ್ರೇಯನು ಪೇಳಿದನು–

ಜನರೀತೆರನಾಗಿ ಸುತ್ತಿಸುತ್ತಿರಲು, ಸೂರ್ಯನಂತೆ ಬೆಳಗುವ ನಾಲ್ವರು ಮುನಿಗಳು ಪೃಥುಪರಾಕ್ರಮಿಯಾದ ಪೃಥುರಾಜನ ಸಭೆಗೆ ಬಂದರು. ಆಕಾಶದಿಂದಿಳಿದು ಬಂದ ಆ ಸಿದ್ಧೇಶರು ತಮ್ಮ ಪ್ರಭಾಜಾಲದಿಂದ ಲೋಕದ ಪಾಪವನ್ನು ಕಳೆಯುತ್ತಾ ಬರಲು ನೋಡಿ, ರಾಜನು ಪರಿವಾರದಿಂದೆದುರ್ಗೊಂಡು ಬರಲು ಸದಸ್ಯರಿಂದ ಕೂಡಿ ಹೊರಟನು. ಜೀವನು

ಇಂದ್ರಿಯಗಳನ್ನು ಕೊಂಡು ಹೋಗುವಂತೆ ಸದಸ್ಕರಿಂದ ಎದ್ದು ಬಂದ ರಾಜನು ಗೌರವದಿಂದ ಸ್ವಾಗತಿಸಿ, ಅರ್ಘ್ಯಪಾದ್ಯಸನಗಳಿಂದ ಪೂಜಿಸಿ, ಅವರ ಪವಿತ್ರ ಪಾದೋದಕವನ್ನು ಶಿರಸಾ ವಹಿಸಿದನು. ವಿನಯದಿಂದ ತಲೆಬಾಗಿಸಿ , ಕೈಜೋಡಿಸಿ, ಕನಕಾಸನಾಸೀನರಾಗಿ ಕುಂಡಗಳಲ್ಲಿ ಬೆಳಗುವ ಅಗ್ನಿಗಳಂತೆ ಇರುವ ಸನಕಾದಿಗಳನ್ನಿಂತು ಪ್ರಶ್ನಿಸಿದನು–

ಅಹೋ! ಏನು ಪುಣ್ಯವನ್ನು ಕೃಷ್ಣಪ್ರೀತಿಗಾಗಿ ಮಾಡಿದೆನೋ ಅದರಿಂದ ಕುಯೋಗಿ ಜನ ದುರ್ದರ್ಶನರಾದ ತಾವು ಶಿವಸೋದರರು ನನಗೆ ದರ್ಶನವನ್ನು ದಯಪಾಲಿಸಿದರು! ಬ್ರಾಹ್ಮಣರು ಯಾವ ಪುರುಷನಲ್ಲಿ ಪ್ರಸನ್ನರಾಗುವರೋ ಅವನನ್ನು ಶಿವಪ್ರಾಣಬ್ರಹ್ಮ ಕೇಶವರೂ ಅನುಗ್ರಹಿಸುವರು. ಸರ್ವಗತನಾದರೂ ಶ್ರೀಹರಿಯನ್ನು ಜಗತ್ಕಾರಣನೆನಿಸಿದ ಬ್ರಹ್ಮಾದಿಗಳಿಗೆ ಪೂರ್ಣವಾಗಿ ತಿಳಿದಿಲ್ಲ. ಅಂತೆಯೇ ತಾವು ಲೋಕದಲ್ಲಿ ಸಂಚರಿಸುತ್ತಿದ್ದರೂ ತಮ್ಮ ಜ್ಞಾನವೆಮಗೆ ತಿಳಿಯಲಾಗುವುದಿಲ್ಲ. ಸಾಧುಗಳಾದ ಗೃಹಸ್ಥರು ಬಡವರಾದರೂ, ತಮ್ಮಂತಹ ಪೂಜ್ಯತಮರಿಗೆ ಜಲ ತೃಣಾಸನ ಫಲ ಮಧುರ ವಚನ ವಸತಿಗಳನ್ನು ಸಮರ್ಪಿಸಲು ಅವರೇ ಧನ್ಯರು. ಸಕಲ ಸಂಪತ್ಸಂಪನ್ನರಾದರೂ ಯಾರ ಮನೆಯಲ್ಲಿ ತೀರ್ಥಪಾದನ ಭಕ್ತರ ಪಾದತೀರ್ಥವಿರುವುದಿಲ್ಲವೋ, ಅಂತಹವರ ಮನೆಗಳು ಹಾವಿರುವ ಮರಗಳಂತೆಯೇ ಸರಿ! ದ್ವಿಜಶ್ರೇಷ್ಠರೇ ನಿಮಗೆ ಸ್ವಾಗತವು, ವಯಸಾ ನೋಡಲು ಚಿಕ್ಕವರಾದರೂ, ಮುಮುಕ್ಷುಗಳಾಗಿ ದೊಡ್ಡ ವೈಷ್ಣವ ವ್ರತಗಳನ್ನು ಶ್ರದ್ಧೆಯಿಂದ ಮಾಡುವ ಜ್ಞಾನ ವೃದ್ಧಿಯು ನಮಸ್ಕಾರವು. ವ್ಯಸನ ಬೀಜ ಸಮೃದ್ಧ ಸಂಸಾರ ಕಾನನದಲ್ಲಿ ನಾವು ಮಾಡಿದ ಕರ್ಮವನ್ನುಣ್ಣಲು ಹುಟ್ಟಿ ಸಾಯುತ್ತಾ ಇಂದ್ರಿಯಾರ್ಥಿಗಳೇ ಸಂಪಾದ್ಯವೆಂಬ ಭ್ರಮೆಯಿಂದ ತಿರುಗುವ ನಮಗೇನು ಕುಶಲವೋ ಏನೋ? ಕುಶಲವಾದರೂ ಅದೆಂತಾಗುವುದು? ನಿಮಗೆ ಇದು ಕುಶಲವು. ಇದು ಅಕುಶಲವೆಂಬ ಮಾತಿಲ್ಲ. ಆತ್ಮಾರಾಮರಾದ ನಿಮ್ಮನ್ನು ಕುಶಲವನ್ನು ಕೇಳಲು ಬರದೆ ನಮಗೆಂತು ಕುಶಲವೆಂದು ಕೇಳುತ್ತಿರುವೆನು. ಮುನಿಜನಬಂಧುಗಳಾದ ತಮ್ಮನ್ನು ನಂಬಿಯೂ ಸಂಸಾರದಿಂದ ಬಿಡುಗಡೆಯನ್ನು ಹೊಂದುವ ಕ್ಷೇಮವೆಮಗೆ ಶೀಘ್ರವಾಗಿ ಆಗುವುದಕ್ಕೆ ಉಪಾಯವೇನು? ಎಂದು ಕೇಳಿಕೊಳ್ಳುವನು. ಬ್ರಹ್ಮಾದಿ ಯೋಗಿ ಜನರಿಗಿಷ್ಟದಾತನಾದ ಸ್ವಾಮಿಯು ಮನಃಪ್ರೇರಕನಾಗಿ ನಿಮ್ಮಂತಹ ಸಿದ್ಧರಲ್ಲಿ ನಿಂತು ಲೋಕಾನುಗ್ರಹವನ್ನು ಮಾಡಲು ಸಂಚಾರ ಮಾಡಿ, ಮಾಡಿಸುತ್ತಿರುವನು. ಮೈತ್ರೇಯನು ಹೇಳಿದನು–

ವಿದುರಾ! ಪೃಥುರಾಜನ ಸಾರಭೂತ ಮಿತ ಮಧುರವಚನಗಳನ್ನಾಲಿಸಿ, ಪ್ರೀತಿಯಿಂದ ನಸುನಕ್ಕು ಸನತ್ಕುಮಾರನು ಪ್ರತಿವಚನವನ್ನಿತ್ತನು–

ಮಹಾರಾಜ ! ಸರ್ವಭೂತಹಿತಕ್ಕಾಗಿ ಪ್ರಶ್ನೆಯನ್ನು ಕೇಳಿದೆ. ಸ್ವಯಂ ವಿದ್ವಾಂಸರಾದರೂ ಸಾಧುಗಳು ಲೋಕೋಪಕಾರಪ್ರವೃತ್ತರಾಗುವುದು ಸಹಜವೇ! ಸಾಧುಸಂಗಮವು ಉಭಯರಿಗೂ ಕ್ಷೇಮಕರವು. ಸಜ್ಜನರು ಪ್ರಶ್ನಿಸಲು ಸಜ್ಜನರು ಹೇಳಲು ಕೇಳಿದೆರೆಲ್ಲರೂ ಭಗವನ್ನಿಷ್ಠಾರೂಪ ಮಂಗಳವನ್ನು ಹೊಂದುವರು. ರಾಜನ್! ಮಧುಸೂದನಪಾದಾರವಿಂದ ಮಕರಂದಪಾನಚತುರನಾದ ನಿನಗೆ ಹರಿಗುಣವರ್ಣನಾಕರ್ಣನ ಶ್ರದ್ಧೆಯು ಸಿದ್ಧವಾಗಿದೆ. ಶ್ರೀಹರಿಭಕ್ತಿಯು ಮನಸ್ಸಿನ ವಿಷಯಲಾಲಸೆಯನ್ನು ಪಾಪಗಳನ್ನು ಕಳೆದುಬಿಡುವುದು. ಅಂತಹ ಭಕ್ತನಾದ ನಿನಗೆ ನಾವೇನು ಹೇಳುವುದು? ಆದರೂ ಕೇಳು. ಶಾಸ್ತ್ರಗಳಲ್ಲಿ ಮನುಜರಿಗೆ ಕ್ಷೇಮವಾಗಲು ಉಪಾಯಗಳನ್ನು ವಿಮರ್ಶಿಸಿರುವರು. ಅದರ ನಿರ್ಣಯವಿಷ್ಟೇ. ಪರಮಾತ್ಮನಲ್ಲದಿತರ ವಿಷಯಗಳಲ್ಲಿ ಹೇಯತಾ

ಬುದ್ಧಿ, ಪ್ರಕೃತಿಗುಣರಹಿತನು ಗುಣಪೂರ್ಣನಾದ ಶ್ರೀಹರಿಯಲ್ಲಿ ಮಹಾತ್ಮ್ಯಜ್ಞಾನ ಪೂರ್ವಕ ಸುದೃಢ ಭಕ್ತಿ ಎಂಬೀ ಸಾಧನಗಳು ಸರ್ವಶಾಸ್ತ್ರಸಮ್ಮತವಾಗಿವೆ.

ಶ್ರದ್ಧೆ, ಭಾಗವತ ಧರ್ಮಾಚರಣೆ, ವಿಚಾರಶೀಲತೆ, ಆಧ್ಯಾತ್ಮಿಕ ಯೋಗನಿಷ್ಠೆ, ಯೋಗೇಶ್ವರರ ಉಪಾಸನೆ, ನಿತ್ಯವೂ ಪುಣ್ಯಕೀರ್ತಿ ಹರಿಯ ಪುಣ್ಯಕಥಾಶ್ರವಣ, ದೇಹೇಂದ್ರಿಯಾರಾಮರು ಗುಣಗಳೆಂಬುವ ವಿಷಯಗಳಲ್ಲಿ ಹೇಯತ್ವಚಿಂತನೆ, ಸ್ಪಕ್ಚಂದನ ವನಿತಾದಿ ದೂರ ಪರಿವರ್ಜನೆ, ಏಕಾಂತಸೇವನಾಭಿಲಾಷೆ, ಹರಿಗುಣಾಮೃತಪಾನವಿಲ್ಲದಿರೆ ಅನಲಂಬುದ್ಧಿ, ದೇಹಭೋಗ ವಿಷಯದಿ ಅಲಂಬುದ್ಧಿ, ಶಾಸ್ತ್ರನಿಷಿದ್ಧ ಹಿಂಸಾವರ್ಜನ, ಪರಿಶುದ್ಧ ಭಗವದ್ಭಕ್ತಚರ್ಯಾನು ಕರಣ, ಮುಕುಂದ ಕಂಸವಧಾದಿ ಪರಾಕ್ರಮ ಕರ್ಮಾಮೃತಪಾನ ಫಲಕಾಮನವಿಲ್ಲದ, ಯಮನಿಯಮಾನುಷ್ಠಾನ, ಅಖಂಡ ಹರಿಸ್ಮರಣೆ, ನಿಷಿದ್ಧ ಕರ್ಮ ವರ್ಜನ, ದ್ವಂದ್ವ ಸಹಿಷ್ಣುತೆ, ಭಕ್ತಜನ ಕರ್ಣಭೂಷಣವೆನಿಸುವ ಹರಿಗುಣವರ್ಣನೆ ಇತ್ಯಾದಿ ಸಾಧನಗಳಿಂದ ಭಕ್ತಿಯು ವಿಜೃಂಭಿತವಾಗುವುದು. ಭಕ್ತಿ ಹೆಚ್ಚಾದಂತೆ ವಿಷಯಸಂಗವು ದೂರವಾಗಿ ಕಾರ್ಯಕಾರಣಾತ್ಮಕ ಜಗದಲ್ಲಿ ವಿರಕ್ತಿ ಪುಟ್ಟುವುದು. ಮುಕ್ತನಿಯಾಮಕನು, ಸತ್ವಾದಿಗುಣ ರಹಿತನು, ಆನಂದಾದಿ ಗುಣವರ್ಣನು ಆದ ಹರಿಯಲ್ಲಿ ಸಮೀಚೀನ ಜ್ಞಾನಯುಕ್ತಭಕ್ತಿಯು ಪರಿಪಕ್ವವಾಗುವುದು. ಅಂತಹ ಭಕ್ತನು ಗುರೂಪದಿಷ್ಟ ಜ್ಞಾನಸಾಫಲ್ಯವನ್ನು ಪೊಂದಿ, ಜ್ಞಾನವೈರಾಗ್ಯಬಲದಿಂದ ಅಪರೋಕ್ಷಜ್ಞಾನವನ್ನು ಪಡೆಯುವನು. ಅಗ್ನಿಕಾರಣವಾದ ಕಟ್ಟಿಗೆಯನ್ನು ಸುಟ್ಟು ತಾನೂ ಶಾಂತವಾಗುವಂತೆ ಜೀವನಿಗಾವರಕವಾಗಿರುವ ಪಂಚಭೂತಾತ್ಮಕವಾದ ಬಾಹ್ಯಮನವನ್ನು ನಿರ್ಬೀಜವಾಗಿ ಸುಟ್ಟು ಜೀವನ್ಮುಕ್ತನೆನಿಸುವನು. ಜೀವ ಬಾಹ್ಯೋಪಾಧಿಯು ನಶಿಸಲು ಅದುಂದ ಬಂದ ಜ್ಞಾನಾದಿಗಳು ನಶಿಸಿ, ತಾನು ಒಳಗೆ ಹೊರಗೆ ಎಂಬುವ ಭೇದವನ್ನು ಕಾಣದೆ ಅಂಧನಂತೆ ತನ್ನನ್ನು ತಾನೇ ನೋಡಿಕೊಂಡು ಇತರವನ್ನಾವುದನ್ನೂ ಕಾಣದಿರುವನು. ಸ್ವರೂಪ ಮನವೇ ನಷ್ಟವಾಗುವುದೆಂದರೆ ಸಂಸಾರದಲ್ಲಿ ಜೀವೇಶರಿಗಿದ್ದ ಜವನಿಕಾ ರೂಪೋಪಾಧಿಯು ನಷ್ಟವಾಗಬೇಕಾಗುವುದು. ಇದು ಅನಿಷ್ಟವು ಹೇಗೆಂದರೆ ಉಪಾಧಿಯೇ ಇಲ್ಲದಿರೇ ಜೀವನೇ ಇಲ್ಲವೆಂದಾಗುವುದು. ಆನಂದರೂಪವೆಂದಾಸೆಯಿಂದ ಪೊಂದಿದ ಮುಕ್ತಿಯು ಸ್ವರೂಪನಾಶ ವೆನಿಸಿ ಅನಪೇಕ್ಷಿತವಾಗುವುದು, ಮತ್ತು ಮುಕ್ತಿಗಿಂತಲೂ ಸಂಸಾರದೆಶೆಯೇ ಲೇಸೆನಿಸಬೇಕಾಗು ವುದು. ಆದ್ದರಿಂದ ಜೀವ, ಇಂದ್ರಿಯ ವಿಷಯಗಳು, ಅವೆರಡರಿಂದ ಭಿನ್ನವಾದ ಈಶ ಎಂಬ ಮೂರು ಪದಾರ್ಥಗಳಿರಬೇಕಾದರೆ ಸತ್ಯವಾದದ್ದೇ ಇರಬೇಕು ಜೀವೋಪಾಧಿಯು. ಅದೇ ಸ್ವರೂಪ ಮನವೆಂಬುವರು. ಬಾಹ್ಯಮನವು ಸುಟ್ಟು ಪೋಗುವುದು. ಸ್ವರೂಪವಲ್ಲ. ಜಲಾದಿ ಗಳಲ್ಲಿ ಕಂಡ ಪ್ರತಿಬಿಂಬವು ಬಿಂಬಭಿನ್ನವೆಂಬ ಜ್ಞಾನವು ಪ್ರತ್ಯಕ್ಷ ಸಿದ್ಧವು. ಇಲ್ಲಿ ಜಲವು ಸತ್ಯ ವಾಗಿದ್ದರೇ ಪ್ರತಿಬಿಂಬದರ್ಶನವು. ಅಂತೆಯೇ ಜೀವನು ಸ್ವರೂಪಮನವೆಂಬ ಸತ್ಯೋಪಾದಿ ಯಲ್ಲಿ ಮೂಡಿ ಸತ್ಯನೇ ಮತ್ತು ಈಶಭಿನ್ನನೇ ಆಗಿರುವನು. ಇನ್ನು ಜೀವನು ಮನಸ್ಸಿನಿಂದ ಇಂದ್ರಿಯ ವಿಷಯಗಳನ್ನೇ ಧ್ಯಾನಿಸುವುದರಿಂದ ಬುದ್ಧಿಯು ಸ್ಮರಣಶಕ್ತಿಯನ್ನು ಕಳೆದುಕೊಂಡು ಅಜ್ಞಾನಮಗ್ನನಾಗಿ, ಕೆರೆಯ ನೀರು ತೂಬಿನಿಂದ ಹರಿದು ಹೋದಂತೆ ಯಥಾರ್ಥಜ್ಞಾನವನ್ನು ಕಳೆದುಕೊಳ್ಳುವನು. ಶಾಸ್ತ್ರ ಯಥಾರ್ಥ ಸ್ಮರಣಸಾಮರ್ಥ್ಯವು ನಶಿಸಿ ಜ್ಞಾನದೂರನಾಗಿ ತನ್ನನ್ನು ಈಶಾಧೀನನಾಗಿ ತಿಳಿಯದೆ ವೇಸನಂತೆ ಶರೀರದಲ್ಲಿ ಈಶನೇ ಇಲ್ಲ. ನಾನೇ ಈಶನೆಂಬ ಇತ್ಯಾಧಿ ಅನ್ಯಥಾಜ್ಞಾನದಿಂದ ನಷ್ಟವಾಗುವನು. ಸ್ವರೂಪನಾಶದಕಿಂತಲೂ ಅನರ್ಥವೀಲೋಕದ

ಇಂದ್ರಿಯಗಳನ್ನು ಕೊಂಡು ಹೋಗುವಂತೆ ಸದಸ್ಯರಿಂದ ಎದ್ದು ಬಂದ ರಾಜನು ಗೌರವದಿಂದ ಸ್ವಾಗತಿಸಿ, ಅರ್ಘ್ಯಪಾದ್ಯಸನಗಳಿಂದ ಪೂಜಿಸಿ, ಅವರ ಪವಿತ್ರ ಪಾದೋದಕವನ್ನು ಶಿರಸಾ ವಹಿಸಿದನು. ವಿನಯದಿಂದ ತಲೆಬಾಗಿಸಿ , ಕೈಜೋಡಿಸಿ, ಕನಕಾಸನಾಸೀನರಾಗಿ ಕುಂಡಗಳಲ್ಲಿ ಬೆಳಗುವ ಅಗ್ನಿಗಳಂತೆ ಇರುವ ಸನಕಾದಿಗಳನ್ನಿಂತು ಪ್ರಶ್ನಿಸಿದನು–

ಅಹೋ! ಏನು ಪುಣ್ಯವನ್ನು ಕೃಷ್ಣಪ್ರೀತಿಗಾಗಿ ಮಾಡಿದೆನೋ ಅದರಿಂದ ಕುಯೋಗಿ ಜನ ದುರ್ದರ್ಶನರಾದ ತಾವು ಶಿವಸೋದರರು ನನಗೆ ದರ್ಶನವನ್ನು ದಯಪಾಲಿಸಿದರು! ಬ್ರಾಹ್ಮಣರು ಯಾವ ಪುರುಷನಲ್ಲಿ ಪ್ರಸನ್ನರಾಗುವರೋ ಅವನನ್ನು ಶಿವಪ್ರಾಣಬ್ರಹ್ಮ ಕೇಶವರೂ ಅನುಗ್ರಹಿಸುವರು. ಸರ್ವಗತನಾದರೂ ಶ್ರೀಹರಿಯನ್ನು ಜಗತ್ಕಾರಣನೆನಿಸಿದ ಬ್ರಹ್ಮಾದಿಗಳಿಗೆ ಪೂರ್ಣವಾಗಿ ತಿಳಿದಿಲ್ಲ. ಅಂತೆಯೇ ತಾವು ಲೋಕದಲ್ಲಿ ಸಂಚರಿಸುತ್ತಿದ್ದರೂ ತಮ್ಮ ಜ್ಞಾನವೆಮಗೆ ತಿಳಿಯಲಾಗುವುದಿಲ್ಲ. ಸಾಧುಗಳಾದ ಗೃಹಸ್ಥರು ಬಡವರಾದರೂ, ತಮ್ಮಂತಹ ಪೂಜ್ಯತಮರಿಗೆ ಜಲ ತೃಣಾಸನ ಫಲ ಮಧುರ ವಚನ ವಸತಿಗಳನ್ನು ಸಮರ್ಪಿಸಲು ಅವರೇ ಧನ್ಯರು. ಸಕಲ ಸಂಪತ್ಸಂಪನ್ನರಾದರೂ ಯಾರ ಮನೆಯಲ್ಲಿ ತೀರ್ಥಪಾದನ ಭಕ್ತರ ಪಾದತೀರ್ಥವಿರುವುದಿಲ್ಲವೋ, ಅಂತಹವರ ಮನೆಗಳು ಹಾವಿರುವ ಮರಗಳಂತೆಯೇ ಸರಿ! ದ್ವಿಜಶ್ರೇಷ್ಠರೇ ನಿಮಗೆ ಸ್ವಾಗತವು, ವಯಸಾ ನೋಡಲು ಚಿಕ್ಕವರಾದರೂ, ಮುಮುಕ್ಷುಗಳಾಗಿ ದೊಡ್ಡ ವೈಷ್ಣವ ವ್ರತಗಳನ್ನು ಶ್ರದ್ಧೆಯಿಂದ ಮಾಡುವ ಜ್ಞಾನ ವೃದ್ಧಿಯು ನಮಸ್ಕಾರವು. ವ್ಯಸನ ಬೀಜ ಸಮೃದ್ಧ ಸಂಸಾರ ಕಾನನದಲ್ಲಿ ನಾವು ಮಾಡಿದ ಕರ್ಮವನ್ನುಣ್ಣಲು ಹುಟ್ಟಿ ಸಾಯುತ್ತಾ ಇಂದ್ರಿಯಾರ್ಥಿಗಳೇ ಸಂಪಾದ್ಯವೆಂಬ ಭ್ರಮೆಯಿಂದ ತಿರುಗುವ ನಮಗೇನು ಕುಶಲವೋ ಏನೋ? ಕುಶಲವಾದರೂ ಅದೆಂತಾಗುವುದು? ನಿಮಗೆ ಇದು ಕುಶಲವು. ಇದು ಅಕುಶಲವೆಂಬ ಮಾತಿಲ್ಲ. ಆತ್ಮಾರಾಮರಾದ ನಿಮ್ಮನ್ನು ಕುಶಲವನ್ನು ಕೇಳಲು ಬರದೆ ನಮಗೆಂತು ಕುಶಲವೆಂದು ಕೇಳುತ್ತಿರುವೆನು. ಮುನಿಜನಬಂಧುಗಳಾದ ತಮ್ಮನ್ನು ನಂಬಿಯೂ ಸಂಸಾರದಿಂದ ಬಿಡುಗಡೆಯನ್ನು ಹೊಂದುವ ಕ್ಷೇಮವೆಮಗೆ ಶೀಘ್ರವಾಗಿ ಆಗುವುದಕ್ಕೆ ಉಪಾಯವೇನು? ಎಂದು ಕೇಳಿಕೊಳ್ಳುವನು. ಬ್ರಹ್ಮಾದಿ ಯೋಗಿ ಜನರಿಗಿಷ್ಟದಾತನಾದ ಸ್ವಾಮಿಯು ಮನಃಪ್ರೇರಕನಾಗಿ ನಿಮ್ಮಂತಹ ಸಿದ್ಧರಲ್ಲಿ ನಿಂತು ಲೋಕಾನುಗ್ರಹವನ್ನು ಮಾಡಲು ಸಂಚಾರ ಮಾಡಿ, ಮಾಡಿಸುತ್ತಿರುವನು.

ಮೈತ್ರೇಯನು ಹೇಳಿದನು–

ವಿದುರಾ! ಪೃಥುರಾಜನ ಸಾರಭೂತ ಮಿತ ಮಧುರವಚನಗಳನ್ನಾಲಿಸಿ, ಪ್ರೀತಿಯಿಂದ ನಸುನಕ್ಕು ಸನತ್ಕುಮಾರನು ಪ್ರತಿವಚನವನ್ನಿತ್ತನು–

ಮಹಾರಾಜ ! ಸರ್ವಭೂತಹಿತಕ್ಕಾಗಿ ಪ್ರಶ್ನೆಯನ್ನು ಕೇಳಿದೆ. ಸ್ವಯಂ ವಿದ್ವಾಂಸರಾದರೂ ಸಾಧುಗಳು ಲೋಕೋಪಕಾರಪ್ರವೃತ್ತರಾಗುವುದು ಸಹಜವೇ! ಸಾಧುಸಂಗಮವು ಉಭಯರಿಗೂ ಕ್ಷೇಮಕರವು. ಸಜ್ಜನರು ಪ್ರಶ್ನಿಸಲು ಸಜ್ಜನರು ಹೇಳಲು ಕೇಳಿದೆರೆಲ್ಲರೂ ಭಗವನ್ನಿಷ್ಠಾರೂಪ ಮಂಗಳವನ್ನು ಹೊಂದುವರು. ರಾಜನ್! ಮಧುಸೂದನಪಾದಾರವಿಂದ ಮಕರಂದಪಾನಚತುರನಾದ ನಿನಗೆ ಹರಿಗುಣವರ್ಣನಾಕರ್ಣನ ಶ್ರದ್ಧೆಯು ಸಿದ್ಧವಾಗಿದೆ. ಶ್ರೀಹರಿಭಕ್ತಿಯು ಮನಸ್ಸಿನ ವಿಷಯಲಾಲಸೆಯನ್ನು ಪಾಪಗಳನ್ನು ಕಳೆದುಬಿಡುವುದು. ಅಂತಹ ಭಕ್ತನಾದ ನಿನಗೆ ನಾವೇನು ಹೇಳುವುದು? ಆದರೂ ಕೇಳು. ಶಾಸ್ತ್ರಗಳಲ್ಲಿ ಮನುಜರಿಗೆ ಕ್ಷೇಮವಾಗಲು ಉಪಾಯಗಳನ್ನು ವಿಮರ್ಶಿಸಿರುವರು. ಅದರ ನಿರ್ಣಯವಿಷ್ಟೇ. ಪರಮಾತ್ಮನಲ್ಲದಿತರ ವಿಷಯಗಳಲ್ಲಿ ಹೇಯತಾ

ಬುದ್ಧಿ, ಪ್ರಕೃತಿಗುಣರಹಿತನು ಗುಣಪೂರ್ಣನಾದ ಶ್ರೀಹರಿಯಲ್ಲಿ ಮಹಾತ್ಮ್ಯಜ್ಞಾನ ಪೂರ್ವಕ ಸುದೃಢ ಭಕ್ತಿ ಎಂಬೀ ಸಾಧನಗಳು ಸರ್ವಶಾಸ್ತ್ರಸಮ್ಮತವಾಗಿವೆ.

ಶ್ರದ್ಧೆ, ಭಾಗವತ ಧರ್ಮಾಚರಣೆ, ವಿಚಾರಶೀಲತೆ, ಆಧ್ಯಾತ್ಮಿಕ ಯೋಗನಿಷ್ಠೆ, ಯೋಗೇಶ್ವರರ ಉಪಾಸನೆ, ನಿತ್ಯವೂ ಪುಣ್ಯಕೀರ್ತಿ ಹರಿಯ ಪುಣ್ಯಕಥಾಶ್ರವಣ, ದೇಹೇಂದ್ರಿಯಾರಾಮರು ಗುಣಗಳೆಂಬುವ ವಿಷಯಗಳಲ್ಲಿ ಹೇಯತ್ವಚಿಂತನೆ, ಸ್ರಕ್ಚಂದನ ವನಿತಾದಿ ದೂರ ಪರಿವರ್ಜನೆ, ಏಕಾಂತಸೇವನಾಭಿಲಾಷೆ, ಹರಿಗುಣಾಮೃತಪಾನವಿಲ್ಲದಿರೆ ಅನಲಂಬುದ್ಧಿ, ದೇಹಭೋಗ ವಿಷಯದಿ ಅಲಂಬುದ್ಧಿ, ಶಾಸ್ತ್ರನಿಷಿದ್ಧ ಹಿಂಸಾವರ್ಜನ, ಪರಿಶುದ್ಧ ಭಗವದ್ಭಕ್ತಚರ್ಯಾನುಕರಣ, ಮುಕುಂದ ಕಂಸವಧಾದಿ ಪರಾಕ್ರಮ ಕರ್ಮಾಮೃತಪಾನ ಫಲಕಾಮನವಿಲ್ಲದ, ಯಮನಿಯಮಾನುಷ್ಠಾನ, ಅಖಂಡ ಹರಿಸ್ಮರಣೆ, ನಿಷಿದ್ಧ ಕರ್ಮ ವರ್ಜನ, ದ್ವಂದ್ವ ಸಹಿಷ್ಣುತೆ, ಭಕ್ತಜನ ಕರ್ಣಭೂಷಣವೆನಿಸುವ ಹರಿಗುಣವರ್ಣನೆ ಇತ್ಯಾದಿ ಸಾಧನಗಳಿಂದ ಭಕ್ತಿಯು ವಿಜೃಂಭಿತವಾಗುವುದು. ಭಕ್ತಿ ಹೆಚ್ಚಾದಂತೆ ವಿಷಯಸಂಗವು ದೂರವಾಗಿ ಕಾರ್ಯಕಾರಣಾತ್ಮಕ ಜಗದಲ್ಲಿ ವಿರಕ್ತಿ ಪುಟ್ಟುವುದು. ಮುಕ್ತನಿಯಾಮಕನು, ಸತ್ವಾದಿಗುಣ ರಹಿತನು, ಆನಂದಾದಿ ಗುಣವರ್ಣನು ಆದ ಹರಿಯಲ್ಲಿ ಸಮೀಚೀನ ಜ್ಞಾನಯುಕ್ತಭಕ್ತಿಯು ಪರಿಪಕ್ವವಾಗುವುದು. ಅಂತಹ ಭಕ್ತನು ಗುರೂಪದಿಷ್ಟ ಜ್ಞಾನಸಾಫಲ್ಯವನ್ನು ಪೊಂದಿ, ಜ್ಞಾನವೈರಾಗ್ಯಬಲದಿಂದ ಅಪರೋಕ್ಷಜ್ಞಾನವನ್ನು ಪಡೆಯುವನು. ಅಗ್ನಿಕಾರಣವಾದ ಕಟ್ಟಿಗೆಯನ್ನು ಸುಟ್ಟು ತಾನೂ ಶಾಂತವಾಗುವಂತೆ ಜೀವನಿಗಾವರಕವಾಗಿರುವ ಪಂಚಭೂತಾತ್ಮಕವಾದ ಬಾಹ್ಯಮನವನ್ನು ನಿರ್ಬೀಜವಾಗಿ ಸುಟ್ಟು ಜೀವನ್ಮುಕ್ತನೆನಿಸುವನು. ಜೀವ ಬಾಹ್ಯೋಪಾಧಿಯು ನಶಿಸಲು ಅದರಿಂದ ಬಂದ ಜ್ಞಾನಾದಿಗಳು ನಶಿಸಿ, ತಾನು ಒಳಗೆ ಹೊರಗೆ ಎಂಬುವ ಭೇದವನ್ನು ಕಾಣದೆ ಅಂಧನಂತೆ ತನ್ನನ್ನು ತಾನೇ ನೋಡಿಕೊಂಡು ಇತರವನ್ನಾವುದನ್ನೂ ಕಾಣದಿರುವನು. ಸ್ವರೂಪ ಮನವೇ ನಷ್ಟವಾಗುವುದೆಂದರೆ ಸಂಸಾರದಲ್ಲಿ ಜೀವೇಶರಿಗಿದ್ದ ಜವನಿಕಾ ರೂಪೋಪಾಧಿಯು ನಷ್ಟವಾಗಬೇಕಾಗುವುದು. ಇದು ಅನಿಷ್ಟವು ಹೇಗೆಂದರೆ ಉಪಾಧಿಯೇ ಇಲ್ಲದಿರೇ ಜೀವನೇ ಇಲ್ಲವೆಂದಾಗುವುದು. ಆನಂದರೂಪವೆಂದಾಸೆಯಿಂದ ಪೊಂದಿದ ಮುಕ್ತಿಯು ಸ್ವರೂಪನಾಶವೆನಿಸಿ ಅನಪೇಕ್ಷಿತವಾಗುವುದು, ಮತ್ತು ಮುಕ್ತಿಗಿಂತಲೂ ಸಂಸಾರದೆಶೆಯೇ ಲೇಸೆನಿಸಬೇಕಾಗುವುದು. ಆದ್ದರಿಂದ ಜೀವ, ಇಂದ್ರಿಯ ವಿಷಯಗಳು, ಅವೆರಡರಿಂದ ಭಿನ್ನವಾದ ಈಶ ಎಂಬ ಮೂರು ಪದಾರ್ಥಗಳಿರಬೇಕಾದರೆ ಸತ್ಯವಾದದ್ದೇ ಇರಬೇಕು ಜೀವೋಪಾಧಿಯು. ಅದೇ ಸ್ವರೂಪ ಮನವೆಂಬುವರು. ಬಾಹ್ಯಮನವು ಸುಟ್ಟು ಪೋಗುವುದು. ಸ್ವರೂಪವಲ್ಲ. ಜಲಾದಿಗಳಲ್ಲಿ ಕಂಡ ಪ್ರತಿಬಿಂಬವು ಬಿಂಬಭಿನ್ನವೆಂಬ ಜ್ಞಾನವು ಪ್ರತ್ಯಕ್ಷ ಸಿದ್ಧವು. ಇಲ್ಲಿ ಜಲವು ಸತ್ಯವಾಗಿದ್ದರೇ ಪ್ರತಿಬಿಂಬದರ್ಶನವು. ಅಂತೆಯೇ ಜೀವನು ಸ್ವರೂಪಮನವೆಂಬ ಸತ್ಯೋಪಾದಿಯಲ್ಲಿ ಮೂಡಿ ಸತ್ಯನೇ ಮತ್ತು ಈಶಭಿನ್ನನೇ ಆಗಿರುವನು. ಇನ್ನು ಜೀವನು ಮನಸ್ಸಿನಿಂದ ಇಂದ್ರಿಯ ವಿಷಯಗಳನ್ನೇ ಧ್ಯಾನಿಸುವುದರಿಂದ ಬುದ್ಧಿಯು ಸ್ಮರಣಶಕ್ತಿಯನ್ನು ಕಳೆದುಕೊಂಡು ಅಜ್ಞಾನಮಗ್ನನಾಗಿ, ಕೆರೆಯ ನೀರು ತೂಬಿನಿಂದ ಹರಿಮು ಹೋದಂತೆ ಯಥಾರ್ಥಜ್ಞಾನವನ್ನು ಕಳೆದುಕೊಳ್ಳುವನು. ಶಾಸ್ತ್ರ ಯಥಾರ್ಥ ಸ್ಮರಣಸಾಮರ್ಥ್ಯವು ನಶಿಸಿ ಜ್ಞಾನದೂರನಾಗಿ ತನ್ನನ್ನು ಈಶಾಧೀನನಾಗಿ ತಿಳಿಯದೆ ವೇನನಂತೆ ಶರೀರದಲ್ಲಿ ಈಶನೇ ಇಲ್ಲ. ನಾನೇ ಈಶನೆಂಬ ಇತ್ಯಾಧಿ ಅನ್ಯಥಾಜ್ಞಾನದಿಂದ ನಷ್ಟವಾಗುವನು. ಸ್ವರೂಪನಾಶದಕಿಂತಲೂ ಅನರ್ಥವೀಲೋಕದ

ಲ್ಲುಂಟೇ? ವಿದುರಾ! ಪುತ್ರನಿಗಿಂತ ದೇಹವು ಪ್ರಿಯಕರವು. ದೇಹಕ್ಕಿಂತ ಆತ್ಮನು ಪ್ರಿಯಕರನು. ಅಂತಹ ಜೀವನ ಸರ್ವಥಾ ನಾಶವನ್ನು ಬಯಸಿ ತಂದುಕೊಳ್ಳುವನು ತಮೋಯೋಗ್ಯನಾದ ಅಸುರನೇ ಸರಿ!

ಆದ್ದರಿಂದ ಇಂದ್ರಿಯಗಳಿಂದ ಬರುವ ವಿಷಯಸಂತತಧ್ಯಾನವು ಮನುಜನ ಸರ್ವಪುರುಷಾರ್ಥ ನಾಶಕವು, ವಿಜ್ಞಾನ ವಿಧ್ವಂಸಕವು, ಎಂದರಿತು ವಿಷಯ ಧ್ಯಾನದಿಂದ ಮೋಹಿತನಾಗದೆ ಇರಲು ದುಷ್ಟಸಂಗವನ್ನು ಬಿಟ್ಟು, ಹರಿಯನ್ನು ಭಜಿಸುವನೇ ಬುದ್ಧಿವಂತನು. ಧರ್ಮಾರ್ಥಕಾಮ ಮೋಕ್ಷಗಳಲ್ಲಿಯೂ ಮೋಕ್ಷವೇ ಮಹಾಪುರುಷಾರ್ಥವು. ಧರ್ಮಾರ್ಥ ಕಾಮಗಳೆಂಬ ತ್ರಿವರ್ಗವು ಅನಿತ್ಯವು, ಯಮಭಯಯುಕ್ತವು, ಕಾಲನಾಮಕ ಹರ್ಯಧೀನವಾಗಿದೆ. ಮೂಲ ಪ್ರಕೃತಿಯ ಹಿಂದು ಮುಂದಿನವು ಮತ್ತು ಉತ್ಕೃಷ್ಟನಿಕೃಷ್ಟಗಳಾದ ಪದಾರ್ಥಗಳೆಲ್ಲವು ಶ್ರೀ ಹರಿಯ ಭ್ರೂವಿಭ್ರಮಣಮಾತ್ರದಿಂದ ವಿಧ್ವಂಸಿತವಾಗುತ್ತಿವೆ. ಅಂತಹ ಪ್ರಾಕೃತಿಕ ಜಡಪದಾರ್ಥ ಗಳಿಂದ ನಿತ್ಯಾನಂದವು ಹೇಗೆ ಬರುವುದು? ಶ್ರೀಹರಿಯು ತನ್ನ ಇಚ್ಛಾಮಾತ್ರದಿಂದ, ಸ್ವಪ್ನದಂತೆ ಜಗವನ್ನು ಸೃಷ್ಟಿಸಿರುವನು. ಆದ್ದರಿಂದಲೇ ಹರಿಯು ಸೃಷ್ಟ್ಯಾದಿ ವ್ಯಾಪಾರರಹಿತನಾದಾಗ ಜಗಪ್ರಳಯವನ್ನು ಪೊಂದಿ ತದಧೀನವಾಗಿರುತ್ತದೆ. ಶ್ರೀಹರೀಚ್ಛೆಯಿಂದ ಬಂಧ; ಶ್ರೀಹರೀಚ್ಛೆ ಯಿಂದ ಮೋಕ್ಷವೆಂದರಿತು ಜ್ಞಾನಿಯು ಅವನ ಪ್ರಸಾದವನ್ನು ಪೊಂದಲು ಯತ್ನಿಸಬೇಕು. ಜಾಗ್ರದಾದ್ಯವಸ್ಥಾನುಭವಿಯಾದ ಜೀವನಿಂದ ಭಿನ್ನನಾದ ತುರ್ಯನು ನಿತ್ಯಪೂರ್ಣಪ್ರಕಾಶನೆಂದು, ಪ್ರಳಯಕಾಲಪ್ರೇರಕನೆಂದು, ಸೃಷ್ಟ್ಯಾದಿ ವ್ಯಾಪಾರಹರಿತ ಲಕ್ಷ್ಮೀನಾಥನೆಂದು, ಮುಮುಕ್ಷೂ ಪಾಸ್ಯನೆಂಬರಿತವನು, ಶ್ರೀಹರಿಯ ಬಂಧಕಶಕ್ತಿಯನ್ನು ಮೀರಿ, ಹರಿಯನ್ನು ಸೇರಿ, ಸುಖದಿಂದಿರು ವನು. ಆ ಮುಕ್ತಿ ದೆಶೆಯಲ್ಲಿ ನಿದ್ರೆಯಿಲ್ಲ; ಜಾಗ್ರದವಸ್ಥೆ ಇಲ್ಲ; ಮೂರ್ಛೆ ಇಲ್ಲ; ಜೀವನ್ಮುಕ್ತಿ ಇಲ್ಲ; ಪ್ರಳಯವಿಲ್ಲ; ಅಂದರೆ ಅವುಗಳ ಶಕ್ತಿಯಿಂದ ಜೀವರಿಗೆ ಬಾಧಲೇಪಗಳಿಲ್ಲ. ಮನೋಜಯವಂತನೇ ಆ ಬ್ರಹ್ಮಲೋಕವನ್ನು ಸೇರುವನು.

ನರೇಂದ್ರ ! ಸ್ಥಾವರಜಂಗಮಾತ್ಮಕವಾದ ಜೀವರಾಶಿಯು ದೇಹ, ಇಂದ್ರಿಯಗಳು, ಪ್ರಾಣ, ಬುದ್ಧಿ, ಮನೋಹಂಕಾರಾದಿಗಳಿಂದ ಆವೃತವಾಗಿದೆ. ಈ ಜೀವರಿಗೆ ಸತ್ತಾಪ್ರದನಾದ ಪರಮಾತ್ಮನು ಕ್ಷೇತ್ರಜ್ಞನೆನಿಸಿ ಸರ್ವವ್ಯಾಪ್ತನಾಗಿರುವನು. ಜೀವನು ಅಣುವಾಗಿ ಹೃದಯದಲ್ಲಿ ಮಾತ್ರ ಇರುವನು. ಜೀವನು ಅಲ್ಪಜ್ಞನು. ಹರಿಯು ಜೀವನಿಗೆ ಅಭಿಮುಖಬಿಂಬನಾಗಿ ಪ್ರಕಾಶಮಾನನಾದ ಸರ್ವಜ್ಞನು. ದುರ್ಭಗ ಶರೀರದಲ್ಲಿದ್ದರೂ ತತ್ಕೃತಮಲಾದಿಲೇಪವಿಲ್ಲದ ಸಾಕ್ಷಿಯಾಗಿರುವನು. ಅವನನ್ನು ನಿತ್ಯೋಪಕಾರಕನೆಂದು ತಿಳಿ. ನನ್ನನ್ನೂ ನಿನ್ನಂತೆ ಜೀವನಾದರೂ ಜ್ಞಾನದಿಂದ ದೊಡ್ಡವನೆಂದೂ ತಿಳಿ. ಜೀವರಲ್ಲಿ ತಾರತಮ್ಯವನ್ನು ಪರಮಾತ್ಮನ ಸರ್ವೋತ್ತಮತ್ವ ವನ್ನು ತಿಳಿಯುವರೇ ಮುಕ್ತಿಯೋಗ್ಯರು, ಇತರರಲ್ಲ. ರಜ್ಜುವನ್ನು ಕಂಡು ಹಾವೆಂದು ಭ್ರಮೆ ಬರಲು, ಉಪದೇಶದಿಂದ ಅಥವಾ ತಾನೇ ಮುಟ್ಟಿ ನೋಡುವುದರಿಂದ ಸರ್ಪಭ್ರಮೆಯು ನಷ್ಟ ವಾಗಿ ಯಥಾರ್ಥಜ್ಞಾನವಾಗುವುದು. ಅದರಂತೆ ಸತ್ ಎಂಬ ಪೃಥಿವೀ, ಅಪ್ ತೇಜಗಳಿಂದಲೂ, ಅಸತ್ ಎಂಬ ವಾಯುಗಗನಗಳಿಂದಲೂ ನಿರ್ಮಿತವಾದ ಜಗವೆಲ್ಲವೂ ಶ್ರೀಹರಿಯೇ ಎಂದು ತಿಳಿಯುವುದು ಅಯೋಗಿರಾದ್ಧಾಂತವೂ ದೂಷ್ಯವೂ ಆಗಿದೆ. ಶ್ರೀಹರಿಯು ಜ್ಞಾನದೇಹನು; ಜೀವನು ಪಾಂಚಭೌತಿಕ ದೇಹನು; ಅವರೀರ್ವರಿಗತ್ಯಂತ ವೈಲಕ್ಷಣ್ಯವೇ ಇದೆ. ನಿತ್ಯ ಮುಕ್ತನು, ನಿತ್ಯ ಪರಿಶುದ್ಧನು, ನಿತ್ಯಬುದ್ಧನು ಆಗಿ ಕರ್ಮಲೇಪವಿಲ್ಲದೆ ಸತ್ತ್ವಾದಿ ಗುಣದೂರನಾದ

ಶ್ರೀಹರಿಯು ಜಗದ್ಭಿನ್ನನೇ ಸರಿ! ಇಂತು ಜೀವಭಿನ್ನನು ಜೀವೇಶನಾದ ಶ್ರೀಶನನ್ನರಿತು ಭಕ್ತಿಯನ್ನು ಮಾಡುವುದು ಸಂಸಾರತಾರಕವು. ಸತ್ಪುರುಷರವನ ಪಾದಪಂಕಜವನ್ನು ಭಜಿಸಿ ಕರ್ಮಗಳ ಬೀಡಾದ ಮನಸ್ಸಿನ ಅಜ್ಞಾನಾನ್ಯಥಾಜ್ಞಾನಗಳನ್ನು ಕಳೆದುಕೊಳ್ಳುವರು. ಹೇಯವಾದ ಸಂಸಾರ ಗುಣಗಳು ಶ್ರೀಹರಿಪ್ರಾಪ್ತಿಸಾಧನವಿರೋಧಿಗಳು, ಆದ್ದರಿಂದ ಎರಡು ಮನಸ್ಸನ್ನು ಮಾಡದೆ ಪುರುಷೋತ್ತಮನಿಗೆ ಶರಣಾಗತನಾಗು ಪೃಥುರಾಜಾ! ಭಕ್ತಿ ಎಂಬ ಹಡಗಿಲ್ಲದೆ ಷಡ್ವರ್ಗಮಕರಭಯಂಕರವಾದೀ ಸಂಸಾರಸಮುದ್ರವನ್ನು ದಾಟುವರು ಬಹು ಕಷ್ಟಪಡುವರು. ಆ ಸಾಗರದವರಿಗೆ ದುಸ್ತರವೇ ಸರಿ! ಆದ್ದರಿಂದ ಶ್ರೀಹರಿಯು ಭಜನೀಯ ಪದಾಂಬುಜವನ್ನು ಪಿಡಿದು ಹಡಗವನ್ನಾಗಿಸಿ ಗುರುಕರ್ಣಧಾರನಾಗಿ ದುಸ್ತರಭವಾರ್ಣವನ್ನು ದಾಟಿ, ವ್ಯಸನರಹಿತನೆನಿಸಿ ಸುಖಿಸು!

ಮೈತ್ರೇಯನು ಪೇಳಿದನು–

ವಿದುರಾ! ಬ್ರಹ್ಮಪುತ್ರನಾದ ಸನತ್ಕುಮಾರನು ಬ್ರಹ್ಮಜ್ಞಾನೋಪದೇಶವನ್ನು ಮಾಡಲು ಪೃಥುವಾಬ್ರಹ್ಮಜ್ಞಾನಿಯನ್ನು ಪ್ರಶಂಶಿಸಿ ಇಂತು ನುಡಿದನು–

ಶ್ರೀಹರಿಯು ಪರಮಾನುಗ್ರಹವನ್ನು ಮಾಡಿ ಹಿಂದೆ ನನಗೆ ಮಾಡಿದ ಉಪದೇಶವನ್ನು ವೀರ್ಯವಂತವಾಗಿಸಲು ಪೂಜ್ಯರು ತಾವು ಬಂದಿರುವಿರಿ. ಆರ್ತಾನುಕಂಪಿಯಾದ ಹರಿ ಭಕ್ತರು ತಾವೂ ದಯಾಳುಗಳು. ತಮ್ಮ ಋಣವನ್ನೇನು ಕೊಟ್ಟು ತೀರಿಸಲಿ? ಈ ದೇಹ ಮೊದಲುಗೊಂಡು ಸರ್ವವನ್ನು ಸಾಧುಗಳಿಗೆ ಕೊಟ್ಟಿರುವೆನು. ನನ್ನದು ಎಂಬ ಒಂದು ವಸ್ತುವಿಲ್ಲ. ಪ್ರಾಣ, ಪತ್ನಿ, ಸುತರು, ಮನೆ, ಪರಿಹಾರ, ಐಶ್ವರ್ಯ, ಭೂಮಂಡಲ, ಸೈನ್ಯ, ಕೋಶ ಅಂತ ಏನಿತ್ತೋ ಅದೆಲ್ಲ ಕೊಡಲ್ಪಟ್ಟಿದೆ. ತಪ್ಪಾಯಿತು ನಾನು ಕೊಡುವುದೆಲ್ಲಿಂದ ಬಂತು?ಎಲ್ಲವೂ ಸ್ವತಃ ತಮ್ಮದೇ ಆಗಿರುತ್ತದೆ. ಸೇನಾಪತ್ಯ, ರಾಜ್ಯ, ದಂಡಾಧಿಪತ್ಯ, ಇಷ್ಟೇಕೆ? ಸರ್ವಲೋಕಾಧಿಪತ್ಯವನ್ನು ವೇದಶಾಸ್ತ್ರವೇದಿಯು ಪೊಂದಲು ಯೋಗ್ಯನಿರುವನು. ವೇದ ಚತುರನಾದ ತಾವು ವೇದಾಂತಶಾಸ್ತ್ರದಿ ಮುಖ್ಯತಃ ಪ್ರತಿಪಾದಿತನಾದ ಪರಬ್ರಹ್ಮನ ದಿವ್ಯ ಜ್ಞಾನವನ್ನೆಮಗುಪದೇಶಿಸಿ ಉದ್ಧರಿಸುವಿರಿ. ಮಹಾದಯಾ ಸಮುದ್ರರಾದ ತಾವು ತಮ್ಮ ಉಪದೇಶಕರಣ ಮಹಾಕಾರ್ಯದಿಂದ ತಾವೇ ಸಂತೋಷಪಡಬೇಕಷ್ಟಲ್ಲದೆ 'ಸಾಕಷ್ಟು ಗುರುದಕ್ಷಿಣೆಯನ್ನಿತ್ತು ಗುರುಋಣವಂ ತೀರಿಸಿದೆ' ಎಂದು ಪೇಳುವ ಅವಿವೇಕಿಯನ್ನು ನೋಡಿ ಸಭಿಕರು ಅಪಹಸಿಸಿ ನಗುವರು.

ಮೈತ್ರೇಯನು ಪೇಳಿದನು–

ಆಗ ಸನತ್ಕುಮಾರಾದಿ ಬ್ರಹ್ಮರ್ಷಿಗಳನೀಶನ ಪೂಜೆಯನ್ನು ಸ್ವೀಕರಿಸಿ ಅವನ ಗುಣಗಾನವನ್ನು ಮಾಡುತ್ತಾ, ನೋಡುತ್ತಿರುವ ಜನರಿಗೆ ಕಾಣದೆ, ಅಂತರ್ಧಾನವಂ ಪೊಂದಿದರು.

ಪೃಥುರಾಜನು ಮಹಜ್ಜನರ ಪೂರ್ಣತತ್ತ್ವ ಜ್ಞಾನೋಪದೇಶದಿಂದ ಶ್ರೀಹರಿಯನ್ನೇ ನೆನೆಯುತ್ತಾ ಆಪ್ತಕಾಮನಂತೆ ಆನಂದಭರಿತನಾದನು. ದೇಶಕಾಲಗಳನ್ನರಿತು ಕರ್ಮಗಳನ್ನು ವಿಧಿಯುಕ್ತವಾಗಿ ಮಾಡಿ ಭೂರಿದಕ್ಷಿಣೆಗಳಿಂದ ಬ್ರಾಹ್ಮಣರನ್ನು ಸತ್ಕರಿಸಿದನು. ಫಲವನ್ನು ಶ್ರೀಹರಿಗರ್ಪಿಸಿ ಶ್ರೀಹರಿಯು ಲಕ್ಷ್ಮೀರಮಣನು ಪ್ರಕೃತಿಭಿನ್ನನು ಕರ್ಮಫಲಪ್ರದನೆಂದು ತಿಳಿದು ಶ್ರದ್ಧೆಯಿಂದ ಯಾಗಾದಿಗಳನ್ನಾಚರಿಸಿದರು. ಗೃಹಸ್ಥಾಶರ್ಮಧರನಾದರೂ ಸಾಮ್ರಾಜ್ಯ ಸಂಪದ್ಭರಿತನಾದರೂ ಅಹಂಕಾರವಿಲ್ಲದೆ ಸೂರ್ಯನು ಜಗಲ್ಲಿಪ್ತನಾಗದಿರುವಂತೆ ಇಂದ್ರಿಯ ವಿಷಯಗಳಿಂದ ಲಿಪ್ತನಾಗದೆ ಆಧ್ಯಾತ್ಮ ಯೋಗವನ್ನವಲಂಬಿಸಿ ಸತ್ಕರ್ಮಾನುಷ್ಠಾನವನ್ನು ಮಾಡಿದನು.

ಅರ್ಚಿದೇವಿಯಲ್ಲಿ ಐದು ಜನ ಮಕ್ಕಳನ್ನು ಪಡೆದನು. ವಿಜಿತಾಶ್ವ, ಧೂಮ್ರಕೇಶ, ಹರ್ಯಕ್ಷ, ದ್ರವಿಣ, ವೃಕರೆಂಬ ಪುತ್ರರಿಂದ ಕೂಡಿ ವಿರಾಜಿಸಿದನು. ಭಗವದನುಗ್ರಹದಿಂದ ಆಯಾ ಕರ್ಮ ಗಳಲ್ಲಿ ಇಂದ್ರಾದಿ ಲೋಕಪಾಲರ ಗುಣಗಳನ್ನು ತಕ್ಕಂತೆ ಪೊಂದಿ ದಕ್ಷನೆನಿಸಿದನು. ಜಗದ್ರಕ್ಷಣ ವನ್ನು ಮಾಡಲು ಕಾಲ ಕಾಲದಲ್ಲಿ ಅಚ್ಯುತನನ್ನು ನೆನೆದು ಪ್ರವೃತ್ತನಾಗುತ್ತಾ ಮನೋವಾಗ್ದೇಹ ಗಳಿಂದ ಸೌಮ್ಯನಾಗೆ ಪ್ರಜರಿಗೆ ರಂಜಕನೆನೆಸಿ ರಾಜಶಬ್ದವನ್ನು ಸಾರ್ಥಕಗೊಳಿಸಿದನು. ಚಂದ್ರ ನಂತೆ ರಂಜಿಸಿ ರಾಜನಾಗಿಭೂಮಿಯಿಂದ ಜಲವನ್ನು ತೆಗೆದು ಕಾಲದಲ್ಲಿ ಕೊಡುವ ಸೂರ್ಯನಂತೆ ಪ್ರಜರಿಂದ ಕರಾದಿಗಳ ತೆಗೆದು ಅವರಿಗೆ ಧನವನ್ನು ಕೊಡುತ್ತಿದ್ದನು. ಅಗ್ನಿಯಂತೆ ದುರ್ಧರ್ಷನು, ಮಹೇಂದ್ರನಂತೆ ದುರ್ಜಯನು, ಧರಣಿಯಂತೆ ಕ್ಷಮಾಶೀಲನು, ದ್ಯುಲೋಕದಂತೆ ಅಭೀಷ್ಟವರ್ಷದನು, ಪರ್ಜನ್ಯನಂತೆ, ಜೀವನಪ್ರದನು, ಸಮುದ್ರನಂತೆ ಗಂಭೀರನು, ಮೇರು ವಿನಂತೆ ಅಚಲನು, ಧರ್ಮರಾಜನಂತೆ ದುಷ್ಟಶಿಕ್ಷಕನು, ಹಿಮವಂತನಂತೆ ಆಶ್ಚರ್ಯಕರನು, ಕುಬೇರನಂತೆ ಕೋಶವಿಪುಲನು, ವರುಣನಂತೆ ಗುಪ್ತಧನನು, ಮುಖ್ಯಪ್ರಾಣನಂತೆ, ಸರ್ವಸಂಚಾ ಲಕನು, ಬಲವಂತನು, ಸರ್ವಾಧಾರನು, ಮಹಾದೇವನಂತೆ ಎದುರಿಲ್ಲದವನು, ಬೃಹಸ್ಪತಿಯಂತೆ ವೇದವಿಚಾರನಿಪುಣನು, ಪರಬ್ರಹ್ಮನಂತೆ ಪರತತ್ತ್ವಜ್ಞನು, ಆಗಿ ಗೋ ಗುರು ಬ್ರಾಹ್ಮಣ ಹರಿಭಕ್ತ ರಲ್ಲಿ ಭಕ್ತಿಯಿಂದ ವರ್ತಿಸುತ್ತಿದ್ದನು. ವಿನಯದಿಂದ ನಿಷಿದ್ಧಕರಣಲಜ್ಜೆಯಿಂದ, ಸುಗುಣದಿಂದ ಪಡೆದ ಕೀರ್ತಿಗಾನವನ್ನು ತ್ರಿಲೋಕಗಳಲ್ಲಿ ಪ್ರಜರು ಪಾಡುತ್ತಿರಲು ಪರಕೃತ್ಯವನ್ನು ತನ್ನದೆಂಬಂತೆ ನಡೆದು ನೆರವೇರಿಸಿ ಶ್ರೀರಾಮನಂತೆ ಸ್ತ್ರೀಪುರುಷರ ಕರ್ಣರಂಧ್ರ ಪ್ರವಿಷ್ಟ ಮಹಾಮಹಿಮನಾಗಿ ಮೆರೆದನು.

## ೨೩. ಪೃಥುರಾಜತಃಪಕರಣ – ಲಯತಿಂತನೆ

ಮೈತ್ರೇಯನು ಪೇಳಿದನು–

ಒಂದು ದಿನ ಪೃಥುರಾಜನ ಶರೀರದಲ್ಲಿ ಒದಗಿದ ಜರೆಯನ್ನು ಕಂಡನು. ಪ್ರಜರನ್ನು ಪೋಷಿಸಿ ಪುತ್ರಪೌತ್ರರನ್ನು ಪಡೆದು ಜಂಗಮಸ್ಥಾವರ ಜೀವರಿಗೆ ಅನ್ನಾದಿ ಜೀವನವನ್ನು ಕಲ್ಪಿಸಿ ಸಜ್ಜನರನ್ನು ಸಲಹಿ ತಾನು ಬಂದ ಕಾರ್ಯವಾಯಿತು, ಶ್ರೀಹರಿ ಹೇಳಿದ ಆಜ್ಞೆ ನೆರವೇರಿತು ಎಂದು ನಿಶ್ಚಯಿಸಿದನು. ತನ್ನ ವಿರಹದಿಂದ ರೋದಿಸುವಂತಿರುವ ಪೃಥ್ವಿಯನ್ನು ಪುತ್ರರಿಗೊಪ್ಪಿಸಿ ಪ್ರಜರು ತನ್ನನ್ನಗಲಿರಲಾರದೆ ದುಃಖಿಸುತ್ತಿರಲು ಅರ್ಚಿಯು ತಾನು ತಪೋವನವನ್ನು ಪ್ರವೇಶಿಸಿದನು. ಅಲ್ಲಿ ವೈಖಾನಸಮಾರ್ಗದಿಂದ ಕಂದಮೂಲಾದ್ಯಾಹಾರನಾಗಿ ನಿಯಮದಿಂದ ಹಿಂದೆ ಸ್ವದೇಶದಲ್ಲಿ ದುಷ್ಟರನ್ನು ತಪಿಸಿದಂತೆ ವನದಲ್ಲಿ ದೇಹವನ್ನು ತಪದಿಂದ ದಂಡಿಸಿದನು. ಶುಷ್ಕಪರ್ಣನನ್ನು ತಿಂದು ಕೆಲವು ಪಕ್ಷಗಳನ್ನ, ಜಲಪಾನದಿಂದ ಕೆಲವು ತಿಂಗಳುಗಳನ್ನು ಕಳೆದನು. ಅನಂತರ ವಾಯುಭಕ್ಷನಾಗಿ ತಪವನ್ನು ಗೈಯಲು ಪ್ರಾರಂಭಿಸಿದನು. ಗ್ರೀಷ್ಮದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ, ವರ್ಷಗಳಲ್ಲಿ ನಿರಾಧಾರವಾಗಿ ತೊಯ್ದು ನೆನೆಯುತ್ತಾ, ಶಿಶಿರದಲ್ಲಿ ಆಕಂಠ ಶೀತೋದಕದಲ್ಲಿಯು ನೆಲಸಿ ತೀವ್ರತಪವನ್ನು ಮಾಡಿ ಶ್ರೀಕೃಷ್ಣನನ್ನಾರಾಧಿಸಿದನು. ಮೌನವಂ ಧರಿಸಿ ಶೀತೋಷ್ಣದಿ ದ್ವಂದ್ವವಿಕಾರಗಳನ್ನು ಹರಿಸಿದನು. ಇಂದ್ರಿಯಗಳನ್ನು ನಿಗ್ರಹಿಸಿ ವಾಯು

ದೇವನನುಗ್ರಹದಿ ಜಿತಶ್ವಾಸನಾದನು. ಊರ್ಧ್ವರೇತಸ್ಕನಾಗಿ ಯೋಗಾಭ್ಯಾಸಕ್ರಮದಿಂದ ನಿರ್ಮಲಮನಸ್ಕನಾದನು. ಷಡ್ವರ್ಗವನ್ನು ತ್ಯಜಿಸಿ ಅಪವರ್ಗಮಾರ್ಗವನ್ನು ಭಜಿಸಿದನು. ಪೂಜ್ಯರಾದ ಸನತ್ಕುಮಾರರು ಪೇಳಿದಂತೆ ಆಧ್ಯಾತ್ಮಿಕ ಪುರುಷೋಪಾಸನಾಮಾರ್ಗವನ್ನವಲಂಬಿಸಿ ಭಾಗವತ ಧರ್ಮರತನು ರಾಗದ್ವೇಷರಹಿತನು ಆದನು. ಗುಣಪೂರ್ಣನಾದ ಶ್ರೀಹರಿಯಲ್ಲಿ ಅನನ್ಯ ಭಕ್ತಿಯನ್ನು ಪೊಂದಿ ಸಕಲಕರ್ಮಮಲವನ್ನು ತೊಳೆದು ಬಿಸುಟಿದನು. ನಿರಂತರ ಧ್ಯಾನ ಪ್ರವಾಹಮಗ್ನವಾಗಿ ಮತ್ತೇನನ್ನು ಕಾಣದೆ ವೈರಾಗ್ಯನಿಶಿತಜ್ಞಾನಬಲದಿಂದ ಸಂಶಯಾನ್ಯಥಾ ಜ್ಞಾನಗಳನ್ನು ಖಂಡಿಸಿದನು. ಶ್ರೀಹರಿಯ ಪರಮಮಂಗಳ ಸ್ವರೂಪವನ್ನು ಕಂಡು ಚಿನ್ಮನವು ಬಾಹ್ಯಾಂತಃಕರಣ ಸಂಬಂಧವನ್ನು ಕಡಿದುಹಾಕಿಬಿಡಲು, ಅಪರೋಕ್ಷ ಜ್ಞಾನವನ್ನು ಪೊಂದಿ, ನಿರ್ಜಿತೇಂದ್ರಿಯನಾಗಿಯೂ ಪ್ರಯತ್ನವನ್ನು ಬಿಡದೆ, ನಿಷಿದ್ಧವನ್ನು ಮಾಡದೆ, ಹರಿಧ್ಯಾನರತ ನಾದನು. ಅನಾವಿರ್ಭೂತಸ್ವರೂಪಜ್ಞಾನನು ಅದರ ಅಭಿವ್ಯಕ್ತವಾಗುವ ಮೋಕ್ಷದವರಿಗೂ, ಗದಾಗ್ರಜನ ಸುಂದರ ಕಥಾನುಸಂಧಾನ ಸಂವಿಗ್ನ ಚಿತ್ತನಾಗಬೇಕಾಗದುದು ಸರಿಯೇ ಅಲ್ಲವೇ ವಿದುರಾ! ಇಂತು ಪೃಥುರಾಜನು ಮನವನ್ನು ಸ್ವಾಮಿಯಲ್ಲಿಟ್ಟು ತಾನು ಬ್ರಹ್ಮಾಧಾರನೆಂದು ಅಪರೋಕ್ಷಿಸಿ ಕಂಡು ಪ್ರಾರಬ್ಧಕ್ಷಯವಾಗಲು ಕಳೇವರವನ್ನು ಪರಿತ್ಯಜಿಸಿದನು.

ಪಾಯವನ್ನು ಪೀಡಿಸಿ ವಜ್ರಾಸನಸ್ಥಿತನಾಗಿ ವಾಯುವಿನನ್ನು ಮೇಲಕ್ಕೆ ತಂದು ಕ್ರಮವಾಗಿ ಮೂಲಾಧಾರ, ನಾಭಿ, ಹೃದಯ, ವಕ್ಷಃ, ಕಂಠ, ಶಿರೋಗ್ರಗಳಲ್ಲಿ ನಿಲ್ಲಿಸಿ ಮತ್ತು ಭ್ರೂಮಧ್ಯ ಭಾಗದಿ ನಿಂತು ಸ್ಥಿರನಾದನು. ಪಂಚಪ್ರಾಣಗಳನ್ನು ಮೇಲಕ್ಕೆ ತಂದು ಮೂರ್ಧದಲ್ಲಿ ಆವೇಶಿಸಿ ಚಲಿಸಿದಂತೆ ಲಯಚಿಂತನವನ್ನು ಮಾಡಿದನು. ದೇಹದ ವಾಯು, ತೇಜೋಭೂಜಲಾಕಾಶ ಭಾಗಗಳನ್ನು ತತ್ತದಿದೇವತೆಗಳಲ್ಲಿ, ಲಯವಂ ಪೊಂದಿಸಿ ಆಮೇಲೆ ಭೂಮಿಯನ್ನು ಜಲದಲ್ಲಿ, ಅದನ್ನು ತೇಜಸ್ಸಿನಲ್ಲಿ, ತೇಜಾದಿಗಳನ್ನು ವಾಯುವಿನಲ್ಲಿ, ಆ ನಾಲ್ಕನ್ನು ಆಕಾಶದಿ ಚಿಂತಿಸಿ ಲಯ ಪೊಂದುವುದೆಂದು ತಿಳಿದನು. ಇಂದ್ರಿಯಗಳು ಹತ್ತು ತನ್ಮಾತ್ರಗಳೈದು ಕಲೆಸಿ, ಅಹಂಕಾರತತ್ತ್ವನಿಯಾಮಕರುದ್ರನಲ್ಲಿ, ಆ ರುದ್ರನನ್ನು ಚತುರ್ಮುಖಾಧೀನ ಮಹತತ್ತ್ವದಲ್ಲಿ ಲಯವಂ ಪೊಂದಿಸಿದನು. ಅನಂತರ ಬ್ರಹ್ಮನು ಭಕ್ತಿಜ್ಞಾನಾನಂದಾದಿ ಗುಣನಿಧಾನಳಾದ ಶ್ರೀದೇವಿಯ ಅಧೀನ; ಆಕೆಯು ಸರ್ವಸ್ವಾಮಿಯಾದ ಹರಿಯ ಅಧೀನಳೆಂದು ತಿಳಿದು ಜ್ಞಾನವೈರಾಗ್ಯಯುಕ್ತ ಸ್ವರೂಪಮನದಿಂದ ಅನುಸಂಧಾನ ಮಾಡಿ ಶರೀರವನ್ನು ಬಿಟ್ಟನು.

ಅರ್ಚಿ ಮಹಾರಾಣಿಯು ಅತಿ ಸುಕುಮಾರಿ, ಅಸೂರ್ಯಂಪಶ್ಯಳು, ಆಗಿದ್ದೂ ಪತಿಸೇವೆಯೇ ವ್ರತ, ಅದೇ ಧರ್ಮವೆಂದರಿತು ಗ್ರಾಮ್ಯಸುಖವನ್ನು ಬಿಟ್ಟು ಕಂದಮೂಲಾದಿ ಖುಷ್ಕಾಹಾರದಿಂದ ದೇಹಯಾತ್ರೆಯನ್ನು ಮಾಡುತ್ತಿದ್ದಳು. ವ್ರತಕರ್ಶತಳಾದರೂ ಪತಿಯ ಪ್ರೇಮಕರ ಸ್ಪರ್ಶ ಮಾತ್ರದಿಂದಾನಂದಭರಿತಳಾಗಿದ್ದಳು. ಅಂದು ತನಗೂ ಪೃಥಿವಿಗೂ ಪತಿಯೆನಿಸಿದ ಪೃಥುರಾಜನು ದೇಹವನ್ನು ಬಿಟ್ಟು ಪೋದದನ್ನು ಕಂಡು ಕಿಂಚಿತ್ ವಿಲಾಪಿಸಿ ಆ ಪರಮ ಪತಿವ್ರತೆಯು, ಗಿರಿಕಂದರದಲ್ಲಿ ಚಿತೆಯನ್ನು ಮಾಡಿದಳು. ನಿತ್ಯ ಸಾಮಾನ್ಯ ಕೃತ್ಯವನ್ನು ಮುಗಿಸಿ, ನದೀ ಜಲ ಸ್ನಾತಳಾದಳು. ಉದಾರಕರ್ಮನಾದ ಪತಿಗೆ ತಿಲೋಕವನ್ನರ್ಪಿಸಿದಳು. ಆಕಾಶದಿರುವ ದೇವತಾ ವೃಂದಕ್ಕಭಿವಂದಿಸಿ, ಚಿತೆಯನ್ನು ಸಮೀಪಿಸಿ, ಮೂರು ಸಲ ಪ್ರದಕ್ಷಿಣೆಯನ್ನು ಮಾಡಿ, ಬ್ರಹ್ಮಗುಣ ಪೂರ್ಣತೆಯನ್ನು ಚಿಂತಿಸುತ್ತಾ ಚಿತೆಯನ್ನೇರಿ ಪತಿಯನ್ನಾಲಂಗಿಸಿ ಶರೀರವನ್ನು ಬಿಟ್ಟಳು. ಸಾವಿರಾರು ದೇವತೆಗಳು ಪತ್ನಿಸಮೇತರಾಗಿ

ವೀರವರನಾದ ಪತಿಯನ್ನು ಹಿಂಬಾಲಿಸಿದ ಪರಮ ಸಾಧ್ವಿಯನ್ನು ಕಂಡು ಪುಷ್ಪವೃಷ್ಟಿಯನ್ನು ಮಾಡಿ ಪೊಗಳಿದರು. ಆಗ ಮಂದರ ಕಂದರವು ಬೃಂದಾರಕ ವೃಂದ ದುಂದುಭಿ ಧ್ವನಿಯಿಂದ ಪ್ರತಿಧ್ವನಿಸಿತು. 'ಅಹೋ! ಈ ಅರ್ಚಿದೇವಿಯೇ ಧನ್ಯಳು! ಯಜ್ಞೇಶನನ್ನು ಬಿಡದಿರುವ ಶ್ರೀಲಲನೆಯಂತೆ ಪತಿಯನ್ನು ಬೆಂಬಿಡದೆ ಅನುಸರಿಸಿದಳು. ವೈನ್ಯನ ಜೊತೆಗೆ ಮಾಡಿದ ಮಹಾಪುಣ್ಯ ಫಲದಿಂದ ನಮ್ಮನ್ನೂ ದಾಟಿ ಊರ್ಧ್ವಲೋಕವನ್ನು ಸೇರಲು ಪೋಗುವಳು! ಏನು ಧನ್ಯರೀ ಮನುಜರು! ತಟಿಚ್ಚಂಚಲವಾದ ಜೀವನದಲ್ಲಿಯೂ, ಮೋಕ್ಷಲಕ್ಷಣ ಮಹಾಪುರುಷಾರ್ಥವನ್ನು ಸಾಧಿಸಿಬಿಡುವರು. ಭಕ್ತರಿಗೆ ದುರ್ಲಭವಾದು ದೊಂದುಂಟೇ? ಆದರೂ ಇಂತಹ ಮೋಕ್ಷಕಾರಣನಾದ ಮಾನುಷ್ಯನು ಬಹುಜನ್ಮಾರ್ಜಿತ ಕಷ್ಟಲಬ್ಧ ಪುಣ್ಯದಿಂದೊದಗಿ ಬಂದಿರಲು– ಅದರಲ್ಲಿ ಭಾರತ ವರ್ಷದಲ್ಲಿ– ಬ್ರಾಹ್ಮಣಾದಿ ಯೋನಿಯಲ್ಲಿ ಬಂದಿರಲು– ಬ್ರಹ್ಮವಿಚಾರವನ್ನು ಮಾಡದೆ ವಿಷಯಲಾಲಸರಾಗಿ ಕೆಡುವವರು ಆತ್ಮದ್ರೋಹಿಗಳು, ಆತ್ಮವಂಚಕರೇ ಅಲ್ಲವೆ?' ಎಂದು ಸುರರು ನುತಿಸಿದನು.

ಮೈತ್ರೇಯನು ಮತ್ತೆ ಪೇಳಿದನು–

ಅಚ್ಯುತನ ನಚ್ಚಿದ ಭಕ್ತನಾದ ಪೃಥುರಾಜನ ಪೊಂದಿದ ಪುಣ್ಯಲೋಕಗಳನ್ನು ಪೊಂದಿ ಅರ್ಚಿಯು ಅಮರಾಂಗನೆಯರ ಮಂಗಳನುತಿ ಪಾತ್ರಳಾದಳು. ಇಂತಹ ಮಹಾನುಭಾವನು ಭಗವದ್ಭಕ್ತಸತ್ತಮನೂ ಆದ ಪೃಥುರಾಜನ ಪವಿತ್ರ ಚರಿತ್ರವನ್ನು ನಿನಗೆ ಪೇಳಿರುವೆನು. ಇಂತಹ ಮಹತ್ಪುಣ್ಯಕಥಾನಕವನ್ನು ಶ್ರದ್ಧೆಯಿಂದ ಕೇಳಲು ಪೇಳಲು, ಪಠಿಸಲು ಆ ಅಧಿಕಾರಿಯು ಸ್ವಯೋಗ್ಯತಾನುಸಾರವಾದ ಜ್ಞಾನ, ಭಕ್ತಿ, ವೈರಾಗ್ಯದಿ ಭಾಗ್ಯವನ್ನು ಪೊಂದಿ ಆನಂದಿಸಿದನು. ಬ್ರಾಹ್ಮಣನು ಕೇಳೆ ಪೇಳೆ ಬ್ರಹ್ಮತೇಜಸ್ಸಂಪನ್ನನು, ಕ್ಷತ್ರಿಯನು ಕೇಳಿ ಜಗತೀಪತಿಯು, ವೈಶ್ಯನಾಲಿಸಿ ಧನಾಧಿಕನು, ಶೂದ್ರನು ಸೇವಿಸಿ ಉತ್ತಮ ಭಕ್ತನು ಆಗುವರು. ಈ ಚರಿತೆಯನ್ನು ಮೂರು ಸಲ ಕೇಳಿದ ನರನಾಗಲಿ ನಾರಿಯಾಗಲಿ, ಅಪ್ರಜರು ಸುಪ್ರಜರನ್ನು, ನಿರ್ಧನರು ಧನ ವನ್ನೂ ಪೊಂದುವರು. ಮೂರ್ಖನು ಪಂಡಿತನಾಗುವನು, ಅವಿದಿತನು ಸುಯಶಸ್ಕನಾಗುವನು. ಅಮಂಗಲನಾಶಕವು, ಮಂಗಲದಾಯಕವು, ಧನ್ಯವು, ಆಯುಷ್ಕರವು, ಸ್ವರ್ಗಸುಖದವು, ಕಲಿಮ ಲಾಪಹರವು, ಚತುರ್ವಿದಪುರುಷಾರ್ಥಪ್ರದವೆನಿಸಿದ ಈ ಪರಮಮಂಗಲ ಕಥೆಯನ್ನು ಶ್ರದ್ಧೆ ಯಿಂದ ಕೇಳುವುದು. ಸಂಗ್ರಾಮಾಭಿಮುಖವಾಗಿ ಪೋಗುವ ರಾಜನು ಪೃಥುಚರಿತೆಯನ್ನು ಕೇಳಲು ಶತ್ರುಗಳವನಿಗೆ ಶಿರಬಾಗಿ ಪೃಥುವಿಗೆ ರಾಜರರ್ಪಿಸುವಂತೆ ಕಪ್ಪಕಾಣಿಕೆಗಳನ್ನರ್ಪಿಸುವರು. ದುಷ್ಟಸಂಗವನ್ನು ಬಿಟ್ಟು ಭಗವಂತನಲ್ಲಿ ಅಚಲ ಭಕ್ತಿಯನ್ನಿಟ್ಟು ಕೇಳಲು ಪೇಳಲು ಪಠಿಸಲು ಶ್ರೇಯಸ್ಕರವು.

ವಿದುರಾ! ಪೃಥುವಿನಂತೆ ಉತ್ತಮಗತಿಯನ್ನು ಪೊಂದಿಸುವ ಕಾರಣವೀಮಹಾಮಹಿಮನಾದ ಪೃಥುಚರಿತ್ರ ಶ್ರವಣವು. ಆದ್ದರಿಂದ ಅನುದಿನವು ಆದರದಿಂದ ಕೇಳಿದ ಪೇಳಿದ ಸಜ್ಜನರು ದುಷ್ಟಸಂಗದೂರರಾಗುವರು. ಸಂಸಾರಸಿಂಧು ನಾವೆಯೆನಿಸಿದ ಭಗವತ್ಪದ ಪದ್ಮದಲ್ಲಿ ಭಕ್ತಿ ಪುಟ್ಟಲು ಕಾರಣವಾದ ಈ ಚರಿತ್ರೆಯು ವರ್ಣನವನ್ನು ಮಧ್ವೇಶನಿಗರ್ಪಿಸಿರುವೆನು.

## ೨೪. ರುದ್ರಗೀತೆ, ಪ್ರಚೇತಸರ ಕಥೆ

ಮೈತ್ರೇಯನು ಪೇಳಿದನು–

ಪೃಥುರಾಜನ ಆನಂತರ ವಿಜಿತಾಶ್ವನೆಂಬ ಪೃಥುಪ್ರಥಮ ಪುತ್ರನು ರಾಜನಾದನು. ನಾಲ್ವರು ತಮ್ಮಂದಿರಿಗೆ ಪ್ರೀತಿಯಿಂದ ನಾಲ್ಕು ದಿಕ್ಕಿನ ರಾಜ್ಯಗಳನ್ನು ಕೊಟ್ಟನು. ಹರ್ಯಕ್ಷನಿಗೆ ಪೂರ್ವ ವನ್ನು, ಧೂಮ್ರಕೇಶನಿಗೆ ದಕ್ಷಿಣವನ್ನು, ವೃಕನಿಗೆ ಪಶ್ಚಿಮವನ್ನು, ದ್ರವಿಣನಿಗೆ ಉತ್ತರ ವನ್ನು ಕೊಟ್ಟನು. ಶಕ್ರನಿಂದ ಬಂದ ಅದೃಶ್ಯವಿದ್ಯೆಯಿಂದ ಅಂತರ್ಧಾನನೆಂದು ಪೆಸರಾದನು. ಅವನ ಪತ್ನಿಯು ಶಿಖಂಡಿನಿ. ಅವಳಲ್ಲಿ ಮೂವರು ಮಕ್ಕಳನ್ನು ಪಡೆದನು. ಪಾವಕ, ಪವಮಾನ, ಶುಚಿ ಎಂಬ ಮೂವರು ಅಗ್ನಿದೇವತೆಗಳು ವಶಿಷ್ಠಶಾಪದಿಂದ ಮನುಜಯೋನಿಯಲ್ಲಿ ಪುಟ್ಟಿ ಮತ್ತೆ ತಮ್ಮ ಲೋಕವನ್ನು ಪೊಂದಿದರು. ಅಂತರ್ಧಾನವೆಂಬುವ ಪ್ರಥಮ ಪುತ್ರನು ನಭಸ್ವತೀ ದೇವಿಯಲ್ಲಿ ಹವಿರ್ಧಾನನನ್ನು ಪಡೆದನು. ಇವನ ಯಜ್ಞಾಶ್ವವನ್ನು ಇಂದ್ರನು ಹರಿಸಲೂ ತಿಳಿದೂ, ಇಂದ್ರನ ಮೇಲೆ ಕೈಮಾಡದಿದ್ದ ಈ ಮಹಾರಾಜನು, ಕರಗ್ರಹಣ ದಂಡಕರಣ ಶುಲ್ಕಹರಣ ಮುಂತಾದ ರಾಜಪ್ರವೃತ್ತಿಯು ಅತಿ ದಾರುಣವೆಂದು ವಿರಕ್ತನಾಗಿ ದೀರ್ಘ ಸತ್ರಯಾಗದಲ್ಲಿ ದೀಕ್ಷಿತನಾಗಿ ರಾಜವೃತ್ತಿಯನ್ನು ಬಿಟ್ಟನು. ಆ ಯಜ್ಞದಲ್ಲಿ ಪರಮಾತ್ಮನ ಪ್ರೀತಿಗೆಂದು ದಿವ್ಯಜ್ಞಾನದಿಂದ ಹೋಮಿಸಿ ಪರಮಶುದ್ಧನಾದನು. ದಿವ್ಯಸಮಾಧಿಯನ್ನು ಪೊಂದಿ ಶ್ರೀಹರಿಯನ್ನು ಸೇರಿದನು. ಈ ಹವಿರ್ಧಾನನ ಪತ್ನಿಯು ಹವಿರ್ಧಾನಿ. ಇವಳಾರು ಮಕ್ಕಳನ್ನು ಪಡೆದಳು. ಬರ್ಹಿಷ್ಮಂತ, ಹಯ, ಶುಕ್ಲ, ಕೃಷ್ಣ, ಜಿತವ್ರತರವರು, ಬರ್ಹಿಷ್ಮದ್ರಾಜನು ಒಂದು ಕಡೆ ಪ್ರವೃತ್ತಿ ಕರ್ಮವಾದ ಯಜ್ಞಾದಿ ಕರ್ಮಕಾಂಡ ನಿಷ್ಣಾತನಾಗೊಂದು ಕಡೆ ನಿವೃತ್ತಿಕರ್ಮರೂಪ ಜ್ಞಾನರತನೂ ಆಗಿದ್ದನು. ಅವನ ಯಜ್ಞಕ್ಷೇತ್ರವು ಕ್ರಮೇಣ ಪ್ರಾಚೀನಾಗ್ರ ದರ್ಭಮಯವಾದ ಭೂಮಂಡಲ ವಿಸ್ತೃತವಾಯಿತು. ಬ್ರಹ್ಮನು ಪೇಳಲು ಸಮುದ್ರಪುತ್ರಿಯಾದ ಶತದ್ರುತಿಯನ್ನು ಮದುವೆಯಾಗಿದ್ದನು. ಚಾರುಸರ್ವಾಂಗಿಯು, ನವಯೌವನಳು. ಸಮಲಂಕೃತಳಾದ ಶತ ದ್ರುತಿಯು ಅಗ್ನಿಪರಿಕ್ರಮಣ ಮಾಡುವಾಗ ಶುಕೀ ಎಂಬ ರಾಜಪುತ್ರಿಯನ್ನು ತೆಗೆದುಕೊಂಡು ಪೋದಂತೆ ಅವಳನ್ನು ಹರಿಸಲು ಯತ್ನಿಸಿ ಅಗ್ನಿದೇವನು ವಿಫಲನಾಗಿದ್ದನು. ವಿಬುಧಾಸುರ ಗಂಧರ್ವಮುನಿ ಸಿದ್ಧನಾಗರು ಕೂಡ ನವೋಢೆಯಾದ ಶತದ್ರುತಿಯು ನೂಪುರ ಝಣ ಝಣತ್ಕಾರದಿಂದ ವಿಭ್ರಮವನ್ನು ಪೊಂದಿದ್ದರು. ಅಂತಹ ಶತದ್ರುತಿಯಲ್ಲಿ ಪ್ರಾಚೀನ ಬರ್ಹಿ ಎಂದು ಬಿರುದು ಪಡೆದ ಬರ್ಹಿಷ್ಮಂತನು ಹತ್ತು ಸುತರನ್ನು ಪಡೆದು ಅವರಿಗೆ ಪ್ರಚೇತ ರೆಂದು ಹೆಸರಿಟ್ಟನು. ಅವರು ಒಂದೇ ಹೆಸರಿಗೆ ತಕ್ಕಂತೆ ಶೀಲವ್ರತಗಳಲ್ಲಿ ಸಮರಾಗಿ ಧರ್ಮ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ತಂದೆಯ ಆಜ್ಞೆಯಂತೆ ಪ್ರಜಾಸೃಷ್ಟಿಯನ್ನು ಮಾಡಲು ಸಮುದ್ರವನ್ನು ಸೇರಿ ತಪವನ್ನಾಚರಿಸಿದರು. ಹತ್ತು ಸಾವಿರ ವರ್ಷ ಕಾಲ ತೀವ್ರ ತಪದಿಂದ ಕಳೆದರು. ತಪಸ್ಸಿಗೆಂದು ಹೋಗುವಾಗ ಮಧ್ಯದಲ್ಲಿ ಮಹಾನುಗ್ರಹದಿಂದ ಬಂದ ಮಹಾದೇವ ನಿಂದ ಉಪದೇಶಿಸಲ್ಪಟ್ಟ ರುದ್ರಗೀತೆಯನ್ನು ಜಪಿಸುತ್ತ ಶ್ರೀ ಹರಿಯನ್ನು ಪೂಜಿಸಿ ಧ್ಯಾನಿಸುತ್ತಾ ತಪವಂಗೈದು ಇಷ್ಟಸಿದ್ಧಿಯನ್ನು ಪೊಂದಿದರು.

ಆಗ ವಿದುರನು ಕೇಳಿದನು–

ಪ್ರಚೇತಸರಿಗೆ ರುದ್ರದೇವನಿಂದ ಸಂಗಮವಾದದ್ದೆಂತು? ಆ ದೇವನೇನು ಪೇಳಿದನು? ಮಹತ್ವಪೂರ್ಣವೂ ಯೋಜನಕಾರಿಯಾದ ರುದ್ರಗೀತೆಯನ್ನು ನನಗೆ ಪೇಳಿ. ಶರೀರಧಾರಿಗಳಿಗೆ ಶಿವದರ್ಶನವು ದುರ್ಲಭವಲ್ಲವೇ? ಅಸಂಗರಾದ ಮುನಿಗಳು ಧ್ಯಾನಿಪ ಸಜ್ಜನೇಷ್ಟಪ್ರದನಾದ ಸ್ವಾಮಿಯು ಸಂಗ ಅಸಮಾನ್ಯ ಫಲದವಲ್ಲ. ಲೋಕ ರೋಗಾದಿ ಮುಕ್ತಿಗೆಂದು ಹರಿಯನ್ನು ಕುರಿತು, ತೀವ್ರತಪವನ್ನು ಮಾಡುವ ಭಗವಾನ್ ಭವನಿಂದ ಸಂಭಾಷಣಾವಕಾಶವನ್ನು ಪಡೆದ ಪ್ರಚೇತಸರೇ ಧನ್ಯರು!

ಮೈತ್ರೇಯನು ಪೇಳಿದನು–

ಪ್ರಚೇತಸರು ತಂದೆಯ ಮಾತನ್ನು ಶಿರಸಾ ವಹಿಸಿ, ತಪಸ್ಸಿನವಲ್ಲಾದರದಿಂದ ಪಶ್ಚಿಮ ದಿಕ್ಕಿಗೆ ಪೊರಮಟ್ಟು, ಸಮುದ್ರ ಸಮೀಪದಿ ಮಹಾಸರಸ್ಸನ್ನೊಂದಿನ್ನು ಕಂಡರು. ಕಣ್ವಾದಿ ಶ್ರೀನಾರಾಯಣಚರಣಾರವಿಂದ ಪರಾಯಣ ಮನಸ್ಸಿನಂತೆ ಸ್ವಚ್ಛವು ದಕ್ಷಿಣೋತ್ತರಾಯತವು ಆದ ಆ ನಾರಾಯಣ ಸರೋವರವು ನೀಲ ರಕ್ತೋತ್ಪಲಾಂಭೋಜ ಕಲ್ಹಾರೇಂದೀವರಗಳಿಂದ ತುಂಬಿತ್ತು. ಹಂಸ ಸಾರಸ ಚಕ್ರವಾಕ ಕಾರಂಡವ ಪಕ್ಷಿಗಳು ಕಲಕಲ ನಾದವನ್ನು ಮಾಡುತ್ತಿದ್ದವು. ಮಧು ಮತ್ತು ಮಧುಕರಮಧುರಗಾನದಿಂದ ಪುಲಕಿತವಾದಂತೆ ತರುಲತೆಗಳು ಪಲ್ಲವಿತವಾಗಿದ್ದವು. ಶೈತ್ಯ ಮಾಂದ್ಯ ಸೌರಭ್ಯ ಭರಿತ ಪವನ ಕುಮಾರನು ಪದ್ಮಕೋಶರಜವನ್ನು ದಿಕ್ಕುಗಳಲ್ಲಿ ಚೆಲ್ಲಿ ಸೂಸುತ್ತಿದ್ದನು.

ರಾಜಪುತ್ರರಲ್ಲಿ ಪೋಗುತ್ತಾ ದೇವಮನೋಹರವಾದ ಸಂಗೀತವು ಮೃದಂಗಪಣವ ವಾದ್ಯಗಳಿಂದ ಕೂಡಿ ಕೇಳಿಬರಲು, ವಿಸ್ಮಯದಿಂದ ನಿಂತುಕೊಂಡು ಕಿವಿಗೊಟ್ಟು ಕೇಳಿದರು. ಆದ ಆಸರದಿಂದ ಪರಿವಾರಸಹಿತನಾಗಿ ಅಮರಸ್ತುತನಾಗಿ ಬರುವ ಶಿವನನ್ನು ಕಂಡರು. ಆ ಅಮರೋತ್ತಮನು ಕಾದ ಬಂಗಾರದ ಮೈಬಣ್ಣದಿಂದ, ಕಪ್ಪು ಕಂಠದಿಂದ, ಪ್ರಸಾದೋನ್ಮುಖ ಮುಖದಿಂದ ಬರಲು ಕೌತುಕಪರವಶರಾಗಿ ಪ್ರಚೇತಸರನು ಸಾಷ್ಟಾಂಗವೆರಗಿದರು. ಧರ್ಮಜರು ಶೀಲಸಂಪನ್ನರಾದ ಪ್ರಚೇತಸರನ್ನು ಕಂಡು, ಪ್ರೀತನಾಗಿ ಪ್ರಪನ್ನಾರ್ತಿಹರನು ಧರ್ಮವತ್ಸಲನು ಆದ ಹರನು ಇಂತೆಂದನು–

ನೀವು ಬರ್ಹಿಷ್ಮದ್ರಾಜನ ಪುತ್ರರಲ್ಲವೇ?ನಿಮ್ಮ ಮನೋಭೀಷ್ಮವೆನಗೆ ತಿಳಿದಿದೆ. ನಿಮ್ಮಲ್ಲಿ ಅನುಗ್ರಹಿಸಲು ಈಗ ನಿಮಗೆ ದರ್ಶನವನ್ನು ಕೊಟ್ಟಿರುವೆನು. ಲಕ್ಷ್ಮೀದೇವಿಗಿಂತ ಉತ್ತಮನು. ಜೀವನಿಯಾಮಕಳಾದ ಪ್ರಕೃತಿಸ್ವಾಮಿನಿಯಾದ ಆ ಲೋಕಜನನಿಗೆ ಪತಿಯು ಆದ ಶ್ರೀವಾಸುದೇವನ ಭಕ್ತರೆಂದರೆ ನನಗತ್ಯಂತ ಪ್ರೀತಿಯು. ಅಂತೆಯೇ ನಿಮ್ಮಲ್ಲಿ ದಯದಿಂದ ಬಂದಿರುವೆನು. ಜ್ಞಾನಶಕ್ತಿ ವೈರಾಗ್ಯನಿಷ್ಠನಾಗಿ ಋಜುಯೋಗಿ ಜನರ ಮಧ್ಯದಲ್ಲಿ ಒಬ್ಬನು ತೊಂಬತ್ತೊಂಬತ್ತು ಜನ್ಮಗಳಿಂದ ಮಾಡಿದ ಹಯರ್ಯುಪಾಸನಾಜನಿತ ಭಗವತ್ಪ್ರಸಾದದಿಂದ ವಿರಿಂಚನಾಗುವನು. ಆ ಬ್ರಹ್ಮಪದವನ್ನು ಅನುಭವಿಸಿದ ನಂತರ ಶ್ರೀದೇವಿಯನ್ನು ಪೊಂದಿ ಆ ನಿರ್ವಿಕಾರ ಲಕ್ಷ್ಮೀತತ್ತ್ವದ್ವಾರಾ ಭಕ್ತ್ಯಾದಿ ಸಂಪನ್ನನಾದ ಬ್ರಹ್ಮನು ಭಗವದ್ಭಕ್ತಿ ಭಾಗ್ಯಸಂಪನ್ನರಾದ ಮುಕ್ತಿಯೋಗ್ಯರಿಂದ ಕೂಡಿ ಕಾರ್ಯಕಾರಣ ಸಹಿತ ಷೋಡಶ ಕಲಾತ್ಮಕ ಶರೀರ ಮೊದಲ್ಗೊಂಡು ಜಗತ್ತಿನ ಪ್ರಳಯವಾಗುತ್ತಿರಲು ಅಪರಿಚ್ಛಿನ್ನ ಸ್ವರೂಪನಾದ ಶ್ರೀಹರಿಯಲ್ಲಿ ಸರ್ವಾಂಗ ಸಾಯುಜ್ಯವನ್ನು ಹೊಂದುವನು. ನಾನು ನಲವತ್ತು ಕಲ್ಪಸಾಧನದಿಂದ ಇಂದ್ರನು ಇಪ್ಪತ್ತು ಕಲ್ಪಗಳಿಂದ ಪದವಿಗಳನ್ನನುಭವಿಸಿ ಬ್ರಹ್ಮನಿಂದ ಕೂಡಿ ಮುಕ್ತಿಯನ್ನು ಪೊಂದುವೆವು. ಇದೆಲ್ಲವೂ ಶ್ರೀಹರಿ

ಪ್ರಸಾದಾಯುಕ್ತವು. ಇಂತು ಅನಾದಿ ಕಾಲದಿಂದ ಭಗವದ್ಭಕ್ತನಾದೆನಗೆ ಭಾಗವತರಾದ ನೀವು ದೇವನಂತೆಯೇ ಪ್ರೀತಿಪಾತ್ರರು. ಯಾರಾದರೂ ಭಾಗವತ ಜನರಿಗಿಂತ ನನಗೆ ಪ್ರೀತಿವಿಷಯರಿನ್ನೊಬ್ಬರಿಲ್ಲ.ನಿಮಗೂ ನಾನು ಪ್ರಿಯನಾಗಿರುವೆನು. ಈ ರಹಸ್ಯವಾದ ಮಂಗಲಕರ ಮಂತ್ರವನ್ನು ಕೇಳಿ ಜಪಿಸಲು ಇದು ಮೋಕ್ಷಪ್ರದವಾಗುವುದು.

ಮೈತ್ರೇಯನು ಪೇಳಿದನು–

ಆಗ ದಯಾಪೂರ್ಣಾಂತಕರಣದಿಂದ ಶಿವನು ಬದ್ಧಾಂಜಲಿಪುಟರಾಗಿ ನಿಂತ ರಾಜಪುತ್ರರಿಗೆ ಶ್ರೀನಾರಾಯಣನ ಜ್ಞಾನವನ್ನು ಕೊಡುತ್ತಾ ಇಂತು ನುಡಿದನು–

## ರುದ್ರಗೀತೆ

ಎಲೌ ಪರಬ್ರಹ್ಮಜ್ಞಾನಿವರರೇ!ಭಗವದುಪಾಸನವನ್ನು ನನ್ನಿಂದ ಪಡೆವ ನೀವೆಲ್ಲವನ್ನು ಜಯಿಸಿದಂತೆಯೇ ಸರಿ! ನಿಮಗೆ ಭಕ್ತಿಯು ಅನುದಿನವೂ ಹೆಚ್ಚಲಿ! ಭಕ್ತಿಯಿಂದ ಪೂಜ್ಯವಾದ ಭಗವತ್ತತ್ವಜ್ಞಾನವನ್ನು ಪೊಂದಲು ನಾವು ಮಾಡುವುದಿಷ್ಟೆ. ಸರ್ವಾಂತರ್ಯಾಮಿಯಾದ ಶ್ರೀಹರಿಗೆ ನಮಸ್ಕಾರ ಎಂದು ಸಂಕಲ್ಪಿಸಿ ಧ್ಯೇಯಸ್ವರೂಪವನ್ನು ಪೇಳುವೆನು ಕೇಳಿ:'ಪಂಕಜನಾಭ! ಭೂತೇಂದ್ರಿಯ ಶಬ್ದಾದಿ ವಿಷಯಗಳ ಪ್ರಭುವೇ! ವಾಸುದೇವ! ನಿನಗೆ ನಮಃ. ಸುಖರೂಪಿಯು ನಿರ್ಲಿಪ್ತನು ಸ್ವಯಂ ಜ್ಯೋತಿಯಾದ ನಿನಗೆ ನಮಃ. ದೇಶಕಾಲ ಗುಣದಿಂದ ನಾಶರಹಿತನಾದ ಜಗದಂತಕಸೂಕ್ಷ್ಮಶಕ್ತಿಯುಳ್ಳ ಸಂಕರ್ಷಣವೇ! ನಿನಗೆ ನಮಃ ಪೂರ್ಣಜ್ಞಾನಿಯು ಅಂತರಾತ್ಮನು, ಸೃಷ್ಟ್ಯಾದಿ ಕಾರಣನಾದ ಪ್ರದ್ಯುಮ್ನನೇ! ನಿನಗೆ ನಮಃ. ಜೀವೇಂದ್ರಿಯಗಳ ನಿಯಾಮಕನು, ಪರಮಶುದ್ಧನು, ಸ್ತಿಮಿತರೂಪನಾದ ಅನಿರುದ್ಧನೇ!ನಿನಗೆ ನಮಃ. ಸ್ವರ್ಗಾಪವರ್ಗಪ್ರದನು ನೀನೇ. ಅಗ್ನಿಯಲ್ಲಿಯೂ ಮುಖ್ಯಪ್ರಾಣನಲ್ಲಿಯೂ ಇರುವ ದುಃಖರಹಿತನು, ಸುಖವೀರ್ಯನೂ ನೀನೇ. ಅಧ್ವರ್ಜ್ಞಿ, ಉದ್ಗಾತ, ಸಾಮಗ, ಹೋತನೆಂಬುವರಲ್ಲಿ ತನ್ನಾಮನಾಗಿ ತತ್ ಸ್ವಾಮಿಯಾಗಿರುವೆ. ವ್ಯಾಪ್ತನು, ಸಂತತಿವರ್ಧಕನಾದವನು, ಹವ್ಯಕವ್ಯಗಳು ಸ್ವೀಕರಿಸುವವನು, ವೇದಪ್ರತಿಪಾದ್ಯನು, ಯಜ್ಞಪತಿಯು, ಜೀವತೃಪ್ತಿದಾತನು, ಸರ್ವರಪ್ರದನು, ಸರ್ವಚೇಷ್ಟಾಪ್ರದನು, ಸ್ಥೂಲತಮನು, ತ್ರಿಲೋಕೀವಲ್ಲಭನು, ಓಜೋಬಲರೂಪನಾದ ನಿನಗೆ ನಮಸ್ಕಾರವು. ನೀನು ವೇದೈಕವೇದ್ಯನು, ಅಸಂಗನು, ಪವಿತ್ರೀಕರಣಕಾರಣನು, ಪ್ರಕಾಶರೂಪನು, ದಿವ್ಯತೇಜನು. ಪ್ರವೃತ್ತಿನಿವೃತ್ತಿಮಾರ್ಗಪ್ರವರ್ತನವನ್ನು ಮಾಡಿ ಪಿತೃದೇವಲೋಕಗಳನ್ನು ನೀನೇ ಕೊಡುವೆ. ಕ್ರಿಯಾರೂಪನಾದ ನೀನು ಧರ್ಮವಿಪಾಕದಿಂದ ಫಲವನ್ನು ಕೊಡುತ್ತಿರುವೆ. ರುದ್ರಪ್ರೇರಕನಾಗಿ ಮೃತಿಯನ್ನು, ಅಸುರಪ್ರೇರಕನಾಗಿ ದುಃಖವನ್ನು ಕೊಡುವೆ. ಸರ್ವಾಭೀಷ್ಟಪ್ರದನಾಗಿ ಮಂತ್ರಮೂರ್ತಿಯಾದ ಸರ್ವಕಾರಣನೇ ನಿನಗೆ ನಮಃ. ಪೂರ್ಣಸುಖನು, ನಿರ್ದುಖಾನಂದನು, ಪುರಾಣಪುರುಷನು, ಯಥಾರ್ಥ ಜ್ಞಾನಮಾತ್ರಲಭ್ಯನು, ಅಷ್ಟಾಂಗಯೋಗೇಶನು, ಇಚ್ಛಾಜ್ಞಾನ ಕ್ರಿಯಾಶಕ್ತಿಸಮೇತನು, ಅಮಿತವೀರ್ಯನು ಆಗಿರುವೆ. ಸರ್ವಸ್ವಾಮೀ, ಮಮಸ್ವಾಮಿ! ನಿನಗೆ ನಮಃ. ಮನಸ್ಸಿನ ಅಭಿಪ್ರಾಯ ಪ್ರಕಟನ ಸಾಮರ್ಥ್ಯವು ನೀ ಕೊಟ್ಟಿದ್ದು; ವಚಃಪ್ರೇರಣೆ ನಿನ್ನಿಂದ, ಭಾಗವತರು ಭಕ್ತಿಯಿಂದ ಪೂಜಿಸುವ ನಿನ್ನ ಮಂಗಳರೂಪವನ್ನೆಮಗೆ ತೋರು. ಸರ್ವೇಂದ್ರಿಯ ಸುಖಪ್ರದವು, ಪ್ರಿಯತಮವು, ಸರ್ವಸೌಂದರ್ಯಸಂಗ್ರಹವೂ! ಸ್ನೇಹಪ್ರಸರವು,

ಘನಶ್ಯಾಮವು, ಚಾರು ಚತುರ್ಭುಜವು, ಕೋಮಲರುಚಿರಾನಾನವು, ಪದ್ಮಸುಂದರ ಲೋಚನವು, ಸುಭಗವು, ಸುನಾಸಿಕವು, ಸುಭ್ರೂಶ್ರಿಕವು, ಕುಂದಕುಟ್ಮಲದಂತವು, ದರ್ಪಣಕಪೋಲವು, ಸಮಕರ್ಣ ವಿಭೂಷಿತವು, ಅಲಕಶೋಭಿತವದನ ಪಂಕಜವು, ಪ್ರೇಮಮಂದಾಹಸವು, ಪಂಕಜಕಿಂಜಲ್ಕದುಕೂಲಧರವು, ಮಣಿಮಯಕುಂಡಲವು, ದಿವ್ಯಕಿರೀಟಮಲಯ ಹಾರ ನೂಪುರ ಮೇಖಲವು ಆದ ನಿನ್ನ ಕಲ್ಯಾಣತಮರೂಪವನ್ನು ತೋರು! ಶಂಖ ಚಕ್ರ ಗದಾಪದ್ಮಗಳನ್ನು ಧರಿಸಿ, ವನಮಾಲೆಯಿಂದ ಕೌಸ್ತುಭದಿಂದ ಶೋಭಿಸುತ್ತಿರುವ ಸಿಂಹಸ್ಕಂದನು, ಅನಪಾಯನಿಯಾದ ಶ್ರೀದೇವಿಯು ಮಚ್ಚೆಯಾಗಿ ನಿಂತ ಶ್ರೀವತ್ಸವಕ್ಷಸ್ತನು, ಪೂರಕ ರೇಚಕಗಳಿಂದ ಚಲಿಸುವ ಪಲ್ಲವೋದರನು ಆಗಿರುವ ನಿನ್ನ ಅಪ್ರಾಕೃತ ರೂಪವನ್ನು ತೋರು. ದಕ್ಷಿಣಾವರ್ತನಾಭಿಯಿಂದ ವಿಶ್ವವನ್ನೇ ಮತ್ತೆ ಒಳಗೆ ಸೆಳೆಯುವಂತೆ ಶೋಭಿಸುವೆ. ಶ್ಯಾಮಶ್ರೋಣಿಯಲ್ಲಿ ಕಟ್ಟಿದ ಪಟ್ಟದುಕೂಲದ ಮೇಲಿಟ್ಟ ಸ್ವರ್ಣಮೇಖಲೆಯಿಂದೊಪ್ಪಿ, ಸಮಚಾರುಂಘಾಜಾನು ಚರಣಮನೋಹರನಾಗಿ, ಶರತ್ಕಾಲೀನ ಪದ್ಮಪಲಾಶಕಾಂತಿಯನ್ನು ಮೀರುವ ನಖಚಂದ್ರ ಚಂದ್ರಿಕೆಯಿಂದ ನೋಡಿ, ನುತಿಪರ ಪಾಪಾಂಧಕಾರವನ್ನು ಕಳೆಯುವೆ. ಅರ್ಚಿರಾದಿ ಮಾರ್ಗೋಪದೇಶಕರಾದ ಗುರೂತ್ತಮರ ಅಂತರ್ಯಾಮಿಯೇ ! ಅಜ್ಞಾನದಲ್ಲಿರುವ ನಮ್ಮನ್ನುದ್ಧರಿಸು' ಎಂದು ಧ್ಯಾನಿಸಿ.

ಪ್ರಚೇತಸರೇ! ಕೇಳಿ. ಈ ರೀತಿಯಾಗಿ ಶ್ರೀಹರಿರೂಪವನ್ನು ಚೆನ್ನಾಗಿ ಧ್ಯಾನಿಸಿದರೆ ಮನಶುದ್ಧಿಯಾಗುವುದು. ಸ್ವಧರ್ಮಾದಿ ನಡೆಯುವವರಿಗೆ ಭಕ್ತಿಯೋಗವು ಅಭಯವನ್ನು ಕೊಡುವುದು. ನೀವು ಭಕ್ತಿವಂತರಿರುವಿರಿ. ಶ್ರೀಹರಿಯು ಅಭಕ್ತರಿಗೆ ದುರ್ಲಭನು. ಇಂದ್ರಾದಿಗಳು ಕೂಡ ಸ್ವರ್ಗಾಧಿಪತಿತ್ವಾದಿ ಸುಖದಿಂದಿದ್ದರೂ ಶ್ರೀಹರಿಭಕ್ತಿಯಲ್ಲಿ ನಿಯಮೇನನಿರತರಾಗಿ ಅವನಿಂದ ಮುಕ್ತಿಯನ್ನು ಪೊಂದಲಿಚ್ಛಿಸುವರು. ಏಕಾಂತ ಭಕ್ತರು ಹರಿಯಿಂದೇನನ್ನೂ ಬೇಡದೆ ಭಕ್ತಿಯನ್ನೇ ಬೇಡುವರು. ಸಜ್ಜನರಿಗೂ ಸಿಗಲು ಕಷ್ಟತರವಾದ ಅವನ ಪಾದಮೂಲವನ್ನು ಏಕಾಂತ ಭಕ್ತಿಯಿಂದಾರಾಧಿಸಿ, ಮತ್ತೆ ಭಕ್ತಿಯನ್ನಲ್ಲದೆ ಐಹಿಕ ವಿಷಯಗಳನ್ನು ಬೇಡುವವನು ಬುದ್ಧಿವಂತನೇ? ಪಾದಮೂಲ ಶರಣಾಗತನನ್ನು ನೋಡಿ ಯಮನು ಕೂಡ ದೂರ ಸರಿಯುವನು. ಮೃತ್ಯುವಿನ ಪರಾಕ್ರಮದ ಗಂಟಿಟ್ಟ ಭ್ರೂಭಂಗವನ್ನು ನೋಡಿ ವಿಶ್ವವೆಲ್ಲ ನಡುಗುವುದಾದರೂ ಮೃತ್ಯುವು ಭಕ್ತನಿಗೆ ಭಯವನ್ನು ಪುಟ್ಟಿಸಲಾರದಿರುವುದು. ಭಗವದ್ಭಕ್ತರ ಸಂಗವು ಕ್ಷಣಾರ್ಧವಾದರೂ ಸ್ವರ್ಗಾಪವರ್ಗಗಳಿಗಿಂತ ಹೆಚ್ಚು ಫಲಪ್ರದವಾಗಿದೆ. ಬರಿಯ ವಿಷಯಗಳಿಂದೇನು! ಭಾಗವತಸಂಗವೇ ಸಾಕು. ಇಂತರಿತು ಶ್ರೀಹರಿಯನ್ನು ಪ್ರಾರ್ಥಿಸುವ ವಿಧಾನವನ್ನು ಕೇಳಿ–

'ಶ್ರೀಹರೇ! ಅನಘ! ನಿನ್ನ ಕೀರ್ತಿಯಲ್ಲಿ ಅಂತಃಸ್ನಾನವನ್ನೂ ನಿನ್ನ ಪಾದತೀರ್ಥದಲ್ಲಿ ಬಹಿಃಸ್ನಾನವನ್ನು ಮಾಡಿ ನಿಷ್ಪಾಪರಾಗಿ ಸಕಲ ಜೀವಜಾತವನ್ನು ದಯೆಯಿಂದ ನೋಡುವ ನಿನ್ನ ಭಕ್ತರ ಸಂಗವನ್ನು ಕೊಡು. ಇದೇ ಪರಮಾನುಗ್ರಹವು. ಶಬ್ದಾದಿ ವಿಷಯಗಳಿಗಾಗಿ ಹೊರಗೆ ಹರಿದು ಹೋದ ಮನಸ್ಸಿನಲ್ಲಿ ಶ್ರೀಹರಿಗೆ ಮನೆ ಮಾಡಿಕೊಟ್ಟು ಭಕ್ತಿಯೋಗವನ್ನು ಗಟ್ಟಿಯಾಗಿ ಹಿಡಿದು ಮನನಾದಿ ಶೀಲನು ನಿನ್ನ ಸ್ವರೂಪವನ್ನು ನೋಡುವನು. ವಿಶ್ವವೆಲ್ಲವು ಬ್ರಹ್ಮನ ಆಧಾರದಲ್ಲಿದೆ. ಬ್ರಹ್ಮನು ವಿಶ್ವದಲ್ಲಿ ತುಂಬಿ ಪ್ರಕಾಶಿಸುತ್ತಿರುವನು. ಅವನ ಅನಾರೋಪಿತ ಸ್ವರೂಪನು. ನಿತ್ಯಪ್ರಕಾಶನಾದ ಆ ಹರಿಯು ಆಕಾಶದಂತೆ ವ್ಯಾಪ್ತನು. ಶುಕ್ಲಲೋಹಿತ ಕೃಷ್ಣರೂಪಳಾದ ಪ್ರಕೃತಿಯಿಂದ ಜಗತ್ತನ್ನು ಸೃಜಿಸಿ ರಕ್ಷಿಸಿ ಮತ್ತೆ ಸಂಹರಿಸುವೆ. 'ಇಂತಹ ಶ್ರೀಹರಿಯು ಸೃಜ್ಯರಾದ ಜೀವರಿಂದ ಭಿನ್ನವೇ ಆಗಿರುವನು. ಶ್ರೀಹರಿಯು ಪ್ರಕೃತಿಸಹಾಯವೇ ಇಲ್ಲದ

ಸೃಷ್ಟ್ಯಾದಿಗಳನ್ನು ಸ್ವತಂತ್ರವಾಗಿ ಮಾಡಬಲ್ಲನು. ಆದರೆ ಅವನು ತನ್ನ ವ್ಯವಸ್ಥೆಯಿಂದ ನಿರ್ದೋಷಜ್ಞಾನರೂಪನಾಗಿದ್ದೂ ಪ್ರಕೃತಿಯಲ್ಲಿ ಸೇರಿ ಪ್ರೇರಿಸಿ, ಸೃಜಿಸಿ ನಿರ್ಲಿಪ್ತನಾಗಿರುವನು' ಹೀಗೆಂದು ತಿಳಿದು ಶ್ರೀಹರೇ! ಕರ್ಮಯೋಗಿಗಳು ನೀನೇ ಜಗತ್ಕರ್ತನು, ಇಂದ್ರಾದಿಗಳಲ್ಲವೆಂದು ನಿಶ್ಚಯಿಸಿ ಜ್ಞಾನಸಿದ್ಧಿಯಂ ಪೋಂದಿರುವರು. ವೇದಗಳಲ್ಲಿ ತಂತ್ರಶಾಸ್ತ್ರಗಳಲ್ಲಿಯೂ ಕೂಡ ನೀನು ಜೀವಭಿನ್ನನು, ಭೂತೇಂದ್ರಿಯಾಂತಃಕರಣ ಪ್ರೇರಕನು ಎಂದು ಪ್ರತಿಪಾದಿತವಾಗಿದೆ. ಜ್ಞಾನಿಗಳೆಲ್ಲರಂತೇ ತಿಳಿದಿರುವರು.

ಸ್ವಾಮಿನ್! ನಾರಾಯಣ! ನೀನೇ ಆದಿ ಪುರುಷರು. ಜಗದ್ವ್ಯಾಪಾರವನ್ನುಪರಮಿಸಿ ರಮೆಯಿಂದ ಮಲಗಿದ್ದ ನೀನು ಸತ್ತ್ವರಜಸ್ತಮೋಗುಣಗಳ ವೈಷಮ್ಯವನ್ನು ಮಾಡಿ, ರಮೆಯಿಂದ ಕೂಡಿ, ಮಹತ್, ಅಹಂತತ್ತ್ವ, ಆಕಾಶ ವಾಯು ತೇಜೋ ಜಲಧರಾದಿ ತತ್ವಗಳನ್ನು, ಸುರ, ಋಷಿಗಳನ್ನು, ಪಂಚಭೂತಗಳನ್ನು ಸೃಜಿಸಿದೆ. ನೀನು ನಿನ್ನಿಂದ ರಮಾದೇವಿಸಹಿತನಾಗಿ ಬ್ರಹ್ಮಾಂಡವನ್ನು ಪ್ರವೇಶಿಸಿ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜವೆಂಬ ಚತುರ್ವಿಧ ಜೀವರ ಶರೀರ ಹೃದಯದಲ್ಲಿ ನಿನ್ನ ಒಂದು ರೂಪದಿಂದ ಪುರುಷರೆನಿಸಿರುವೆ. ಜೀವನಿಂದ ಕೂಡಿ ಶರೀರದಲ್ಲಿದ್ದರೂ ಜೇನು ಹುಳುವು ಮಕರಂದವನ್ನು ಮಾತ್ರ ತೆಗೆದುಕೊಂಡಂತೆ ಸುಖವನ್ನು ತದ್ಗತ ಸ್ವಾಖ್ಯ ರಸವನ್ನು ಮಾತ್ರ ಸ್ವೀಕರಿಸುವೆ. ನಿರ್ದೋಷನು, ಸ್ವತಂತ್ರನಾದ ನಿನಗೆ ದುಃಖಲೇಪವಾಗುವುದಾದರೆ ಹೇಗೆ? ಇಂತಹ ನಿದುಃಖಜ್ಞಾನಾನಂದನಾದ ನಿನ್ನ ಹೊರತಿನ್ನು, ನಮ್ಮನ್ನು ಅಭಯಾದಾನದಿಂ ಪೊರೆವ ದೊರೆ ಯಾರು? ರುದ್ರಭಯಗ್ರಸ್ತರಾಗಿ ನಡುಗುವ ನಮಗೆ ನೀನೇ ಅಭಯವನ್ನು ಕೊಡುವ ದಯಾಳವು. ನೀನೇ ವ್ಯಾಪ್ತ. ನೀನೇ ದಹರಾಕಾಶಗತನು, ಜ್ಞಾನಿಪ್ರಾಪ್ಯನು ಮಹಾವೇಗದಿಂದ ಲೋಕವನ್ನೆಲ್ಲ ಮೃತ್ಯುವಿನ ತುತ್ತಾಗಿಸಲು ಸೆಳೆವ ನಿನ್ನ ಪರಾಕ್ರಮವು ಅಮೋಘವು. ವಾಯುವು ಮೇಘಗಳನ್ನು ಸೆಳೆದಂತೆ ಸಂಹರಿಸುವ ನಿನಗೆ ಕಾಲ ಯಮ ರುದ್ರರು ಕಿಂಕರರಾಗಿ ಸಹಕರಿಸಿ ಸೇವೆ ಮಾಡುವರು. ಜೀವನೋ ಸಂಸಾರದಲ್ಲಿ ಕಾರ್ಯಪರಂಪರಾ ತರಂಗ ಮಗ್ನವಾಗಿ ಚಿಂತೆಯಿಂದ ದ್ರವ್ಯ ಲೋಭದಿಂದ ಕುಂದಿ ವಿಷಯಲಾಲಸನಾಗಿ ನಿನ್ನನ್ನು ಮರೆತಿರುವಾಗ ನೀನೋ ಕಣ್ಣು ಮುಚ್ಚದೆ ಮಹಾವೇಗದಿಂದ ಇಲಿಯನ್ನು ನುಂಗಲು ಬರುವ ಹಾವಿನಂತೆ ಬಂದು ಬೀಳುವೆ. ನಿನಗೆದುರಿಲ್ಲ. ಇಂತರಿತ ವಿವೇಕಿಯು ನಿನ್ನ ಪದಾಬ್ಜ ಭಜನೆಯನ್ನಂತು ಬಿಡುವನು! ನಮ್ಮ ತಂದೆಯು ಗುರುವಾದ ಬ್ರಹ್ಮನು, ಅಂತೆಯೇ ಫಲಾಕಾಂಕ್ಷೆಯನ್ನು ಬಿಟ್ಟು ನಿಶ್ಶಂಕವಾಗಿ ನಿನ್ನ ನೀರಜ ಚರಣವನ್ನೇ ನಂಬಿ ಭಜಿಸುತ್ತಿರುವರು. ರುದ್ರನಾದ ನಾನೂ ಭಜಿಸುತ್ತಿರುವೆನು. ಇಂದ್ರರು ಚತುರ್ದಶಿ ಮನುಗಳು ಭಜಿಸುವರು. ಪ್ರತಿನಿತ್ಯವು ನಿನ್ನ ಪಾದವನ್ನು ಸೇರುವ ಸುಷುಪ್ತಿಯಲ್ಲಿ ಮನುಜನು ಪರಮಾನಂದನಾದ ನಿನ್ನ ಸನ್ನಿಧಾನದಿಂದಾನಂದಿಸುವನು. ಮತ್ತೆ ಎಚ್ಚೆತ್ತು ನಿನ್ನನ್ನು ಮರೆತು ಬಿಡುವನು. 'ನಿನ್ನಲ್ಲಿ ನೆಲೆಸಿದಾಗ ಸರ್ವಕ್ಲೇಶ ದೂರನಾದೆ. ನಿನ್ನ ಸನ್ನಿಧಿಯೇ ಪರಮಾನಂದ' ಎಂದು ಸ್ಮರಿಸುವವನು ದುರ್ಲಭನು.

ಎಲೌ ರಾಜಪುತ್ರರೇ! ಶ್ರೀ ರುದ್ರಗೀತೆಯನ್ನು ವಿಶ್ವಾಸದಿಂದ ಜಪಿಸಿ. ನಿಮಗೆ ಮಂಗಳವಾಗುವುದು. ಸ್ವಧರ್ಮದಿ ನಡೆದು ಭಗವಂತನಲ್ಲಿಟ್ಟ ಮನದಿಂದ ಅಂತರ್ಯಾಮಿಯು ಸರ್ವ ಭೂತನಿಯಾಮಕನಾದ ಶ್ರೀಶನನ್ನು ಪೂಜಿಸಿರಿ, ನುತಿಸಿರಿ, ಧ್ಯಾನಿಸಿರಿ, ಪುನಃ ಪುನಃ ಮೌನವ್ರತ ಧಾರಿಗಳಾಗಿ ಸಮಾಹಿತವಾದ ಬುದ್ಧಿಯಿಂದ ರುದ್ರಗೀತೆಯನ್ನು ಅಭ್ಯಸಿಸಿ ಆದರದಿಂದ ಜಪಿಸಿರಿ.

ಪೂರ್ವದಲ್ಲಿ ನನಗೂ ಭೃಗ್ವಾದಿ ಪುತ್ರರಿಗೂ ಸೃಜನಕಾರ್ಯ ಸಮುದ್ಯತರಾಗಿರಲು ನಮ್ಮ ತಂದೆಯು ಪೇಳಿದ ರುದ್ರಗೀತೆಯನ್ನು ನಿಮಗೆ ಪೇಳಿರುವೆನು. ಆ ಲೋಕಗುರುವಿನಿಂದ ಆಜ್ಞಪ್ತರಾಗಿ ಪ್ರಜಾಸೃಷ್ಟಿ ವಿಷಯದ ಅಜ್ಞಾನವನ್ನು ರುದ್ರಗೀತಾ ಮಹಿಮೆಯಿಂದ ಕಳೆದುಕೊಂಡು ವಿವಿಧ ಪ್ರಜರನ್ನು ಸೃಜಿಸಿದೆವು. ಇದನ್ನು ನಿತ್ಯವೂ ಭಕ್ತಿಯಿಂದ ಶ್ರದ್ಧೆಯಿಂದ ಜಪಿಸಿದವನು. ಶ್ರೀ ವಾಸುದೇವಭಕ್ತನಾಗಿ ಬೇಗನೆ ಸರ್ವಶ್ರೇಯಗಳನ್ನು ಪೊಂದುವನು. ಎಲ್ಲ ಶ್ರೇಯಃ ಪದಾರ್ಥಗಳಲ್ಲಿ ಜ್ಞಾನವೇ ಹೆಚ್ಚು. ಅದು ಮೋಕ್ಷ ಕಾರಣವಾಗಿದೆ. ಜ್ಞಾನನೌಕೆಯಿಂದ ವ್ಯಸನ ಸಮುದ್ರವನ್ನು ದಾಟುವುದು ಸುಲಭವಾಗಿದೆ. ಇದು ನಾನು ಪೇಳಿದ ಗೀತೆ. ಭಗವಂತನ ಸ್ತುತಿಯಾದೀ ರುದ್ರಗೀತೆಯನ್ನು ಅಧ್ಯಯನ ಮಾಡಿದವನು ಹರಿಯನ್ನಾರಾಧಿಸಿದಂತೆಯೇ ನಿಜ. ಇದರಿಂದ ಬೇಕಾದ ಇಷ್ಟಸಿದ್ಧಿಯು ರುದ್ರಗೀತಾತುಷ್ಟನಾದ ಸರ್ವಶ್ರೇಯೋದಾಯಕನಾದ ಹರಿಯಿಂದಾಗುವುದು ದಿಟ. ಪ್ರಾತಃಕಾಲದಲ್ಲೆದ್ದು ಕೈಜೋಡಿಸಿ ನಿಂತು ತ್ರಿಕರಣ ಶುದ್ಧನಾಗಿ ಶ್ರದ್ಧೆಯಿಂದ ಪೇಳಿದವನು, ಕೇಳಿದವನು ಕರ್ಮಬಂಧದಿಂದ ಮುಕ್ತಿಯನ್ನು ಪೊಂದುವರು. ಎಲೌ ರಾಜಸುತರೇ! ಪರಮಪುರುಷನ ಸ್ತವವನ್ನು ನಿಮಗೆ ನಾನು ಉಪದೇಶಿಸಿರುವೆನು. ಇದನ್ನು ಆದಿಪುರುಷನಾದ ಹರಿಯಲ್ಲಿ ಏಕಾಗ್ರಬುದ್ಧಿಯನ್ನಿಟ್ಟು ಜಪಿಸುತ್ತಾ ತಪಸ್ಸನ್ನು ಮಾಡಿ ಇಷ್ಟಸಿದ್ಧಿಯನ್ನು ದೇಹಾಂತದಲ್ಲಿ ಮುಕ್ತಿಯನ್ನು ಪಡೆಯುವಿರಿ.

## ೨೫. ಪುರಂಜನ ಚರಿತೆ – ಜಾಗ್ರದ್ದಶೆ

ವಿದುರಾ! ಕೇಳು. ಇಂತು ಉಪದೇಶಿಸಿ ರುದ್ರನು ಬರ್ಹಿಷ್ಮದ್ರಾಜಸುತರಿಂದ ಪೂಜಿತನಾಗಿ ನೋಡುತ್ತಿರಲು ಕಾಣದಾದನು. ಆ ಸ್ವಾಮಿಯು ಪೇಳಿದ ಗೀತೆಯನ್ನು ಜಪಿಸುತ್ತಾ ಪ್ರಚೇತಸರು ಸಮುದ್ರತೀರದ ನಾರಾಯಣ ಸರೋವರದಲ್ಲಿ ಕೂತು ಹತ್ತು ಸಾವಿರ ವರ್ಷ ತಪವಂಗೈದರು. ಅಲ್ಲಿ ನಾರದನು ಕರ್ಮಾಸಕ್ತ ಮನಸ್ಕನಾದ ಪ್ರಾಚೀನಬರ್ಹಿಯ ಸಮೀಪವನ್ನು ಪೊಂದಿ ದಯೆಯಿಂದ ಆಧ್ಯಾತ್ಮಿಕ ತತ್ತ್ವವನ್ನು ತಿಳಿಸಲಿಚ್ಛಿಸಿ ಇಂತೆಂದನು.

ರಾಜನ್! ಈ ಕರ್ಮಗಳಿಂದ ಯಾವ ಶ್ರೇಯವನ್ನು ಬಯಸಿ ಪಡೆಯಲಿಚ್ಛಿಸಿರುವೆ? ಹೇಳು. ದುಃಖಹಾನಿ ಸುಖಾವಾಪ್ತಿಗಳಲ್ಲವೇ ಶ್ರೇಯವೆಂದರೆ? ಅತ್ಯಂತಿಕ ದುಃಖನಾಶವೀ ಕರ್ಮಗಳಿಂದ ಎಂದಿಗಾದರೂ ಆಗುವುದೇ? ಇಲ್ಲ.

ಪ್ರಾಚೀನ ಬರ್ಹಿಯು ಕೇಳಿಕೊಂಡನು– 'ಪೂಜ್ಯನೇ ! ಕೇವಲ ಕರ್ಮನಲ್ಲಿ ಮಗ್ನನಾದೆ. ನಿಜ. ನನಗೇನು ಗೊತ್ತು? ನಿನ್ನನ್ನೇ ಕೇಳುತ್ತಿರುವೆನು. ವಿಮಲಜ್ಞಾನವೆಂತು ಲಭಿಸುವುದು? ಕರ್ಮಗಳಿಂದ ಬಿಡಲ್ಪಟ್ಟು ಮೋಕ್ಷವನ್ನು ಪಡೆಯುವುದು ಹೇಗೆ?'

ನಾರದನು ಪೇಳಿದನು–

ರಾಜನ್! ಕಾಮ್ಯಕರ್ಮಮಯವೀಗೃಹವು. ಇದರಲ್ಲಿ ಮನೆ, ಧನ, ಮಕ್ಕಳು, ಮಡದಿಗಾಗಿ ದುಡಿದು ಅವರೇ ಪ್ರಯೋಜನಕರರೆಂದು ತಿಳಿದು ಸಂಸಾರಮಾರ್ಗದಿ ಹುಟ್ಟಿ ಸತ್ತು ನರಳುತ್ತಾ ಜೀವನು ಪರಮಾತ್ಮವಿಚಾರವನ್ನು ಮಾಡದೆ ಕೆಡುವನು.

ಓಹೋ! ಪ್ರಜಾಪಾಲ! ನೀನು ಯಜ್ಞಗಳಲ್ಲಿ ಕೊಂದ ಪಶುಗಳ ಗೋಳನ್ನು ನೋಡು. ದಯೆಯಂ ತೊರೆದು ಯಜ್ಞವೆಂದು ಜೀವರಾಶಿಯನ್ನು ನಾಶಮಾಡಿ ಪಾಪವಂ ಕಟ್ಟಿಕೊಂಡೆ.

ಭೇದಿಸುವಾಗ ನೀ ಮಾಡಿದ ಹಿಂಸೆಯನ್ನು ನೆನೆದು, ರೋಷದಿಂದ ಅವು ನಿನಗಾಗಿ ನರಕದಲ್ಲಿ ಕಡಿದು ಪೀಡಿಸಲು ಕಾದು ನಿಂತಿವೆ. ಇರಲಿ! ಶರೀರವಿಷಯಕವಾದ ಒಂದು ಪುಣ್ಯೇತಿಹಾಸವನ್ನು ಹೇಳುವನು. ಕೇಳೀ ಆಧ್ಯಾತ್ಮಿಕರಸರಂಜಿತಪುರಂಜನ ಚರಿತೆಯನ್ನು–

ಹಿಂದೆ ಪುರಂಜನನೆಂಬ ರಾಜನಿದ್ದನು. ಅವನು ವಿಶಿಷ್ಟ ಜೀವನು ಕೀರ್ತಿಶಾಲಿಯು ಆಗಿದ್ದನು. ಅವನಿಗೊಬ್ಬ ಅವಿಜ್ಞಾತನೆಂಬ ಸಖನಿದ್ದನು. ಅವನ ಚೇಷ್ಟೆ ಯಾರಿಗೂ ತಿಳಿದಿದ್ದಲ್ಲ. ಅಜ್ಞಾತಚೇಷ್ಟನಾದ ಆ ನಿರಂತರ ಸಖನನ್ನು ಪುರಂಜನನೇ ಮರೆತುಬಿಟ್ಟನು. ಒಂದು ಸಲ ಪುರಂಜನನು ಸ್ವರ್ಗದಿಂದ ಕೆಳಗಿಳಿದು ಸುಖದುಃಖ ಭೋಗಯೋಗ್ಯವಾದ ಪುರವನ್ನು ಹುಡುಕುತ್ತಾ ಕರ್ಮಭೂಮಿಯನ್ನೆಲ್ಲಾ ಸುತ್ತಿದನು. ದುಃಖವಿಲ್ಲದೆ ಸುಖಮಾತ್ರದಾಯಕವಾದ ಊರನ್ನು ಕಾಣದೆ ಇತರ ಪುರಗಳಲ್ಲಿ ಮನಸ್ಸೇ ಇಲ್ಲದೆ ಚಿಂತಿಸಿದನು. ಕಾಮಗಳನ್ನು ಬೇಡುವ ತನಗೆ ಬೇಕಾದ ಕಾಮಭೋಗಕ್ಕನುಕೂಲವಾಗದಿರುವ ಅನೇಕ ಪುರಗಳನ್ನು ಬಿಟ್ಟು ಪುರಂಜನನು ಶುಭವು ಫಲಿಸಿದಂತಾಗಲು ಹಿಮವತ್ಪರ್ವತದ ದಕ್ಷಿಣ ಕಂದರದಲ್ಲೊಂದೂರನ್ನು ಕಂಡು ಆನಂದಿಸಿದನು. ಅದಕ್ಕೆ ಮುಖಾದಿ ನವದ್ವಾರಗಳಿದ್ದವು. ಸರ್ವಲಕ್ಷಣಭರಿತವಾದ ಆ ಪುರವು ಪ್ರಾಕಾರ (ಚರ್ಮ), ಉಪವನ (ಮುಖ), ಅಟ್ಟಾಲ (ಮೇದಸ್ಸು), ಪರಿಖ (ಉದರ), ಉಚ್ಚ ತೋರಣ (ಬಾಹು)ಗಳಿಂದ ಶೋಭಿತವಾಗಿತ್ತು. ಸುವರ್ಣ (ಸತ್ವ) ರಜತ (ರಜಃ) ಆಯಸ (ತಮಃ) ಶೃಂಗಸಹಿತವಾದ ಅನೇಕ ಗೃಹಗಳಲ್ಲಿದ್ದವು. ನೀಲಸ್ಫಟಿಕ ವೈಢೂರ್ಯ ಮುಕ್ತಾಫಲ ಮರಕತ ಮಣಿಗಳಿಂದ ಮಾಡಿದ ಮಹಡಿಗಳ ಕಾಂತಿಯಿಂದ ಭೋಗವತಿಯಂತೆ ತೋರುತ್ತಿತ್ತು. ಸಭೆ (ಗೇವನಿಲಯ), ಚತ್ವರ (ಸಂಧಿ), ರಥ್ಯಾ (ಬ್ರಹ್ಮನಾಡಿ) ದಿನಗಳಿಂದ ಕೂಡಿತ್ತು. ಆಟದ ಭೂಮಿಗಳು (ಗೋಲಕ), ಅಂಗಡಿಗಳು (ವಾಕ್) ಸರಿಯಾಗಿದ್ದವು. ಚೈತ್ಯ (ಶಿರಃ) ಧ್ವಜ (ಕೇಶ) ಪತಾಕೆಗಳಿಂದಲೂ, ವಿದ್ರುಮ ವೇದಿ (ಕಟಿ)ಗಳಿಂದಲೂ ಕೂಡಿದ ಆ ಪುರದ ಹೊರಗೆ ದಿವ್ಯವಾದ ಉಪವನವಿತ್ತು(ವಿಷಯಗಳು). ದಿವ್ಯ ವೃಕ್ಷಗಳಿಂದ ನಿಬಿಡನಿಬಿಡವಾದಾ ಆರಾಮದಿ ವಿಹಗ ಕೋಲಾಹಲವು ಜಲತರಂಗ ಮರ್ಮರಗಳಿಂದ ಮೇಳವಿತವಾಗಿತ್ತು. ಶೀತಜಲಶೀಕರಗಳನ್ನು ಹೊತ್ತು ತರುವ ಮಾರುತಕುಮಾರನು ಸ್ಪರ್ಶಸುಖನಾಗಿ ಚಲಿಸುವ ಪ್ರವಾಲಕುಸುಮಗಳ ಮೇಲೆ ಸೂಸಿ ಬಂದು, ಸುಗಂಧವಹನೆನಿಸಿದನು. ಕ್ರೂರಮೃಗಗಳ ಪೀಡೆ ಅಲ್ಲಿದ್ದಿಲ್ಲ. ಅಂತಹ ವನದಲ್ಲಿ ಕೋಗಿಲೆಗಳ ಹಾಡನ್ನು ಕೇಳಿ ಪಾಂಥರು ಆ ಕೂಗನ್ನು ಆಹ್ವಾನವೆಂದೆಣಿಸಿ ಬರುತ್ತಿದ್ದರು.

ದೈವೇಚ್ಛೆಯಿಂದ ಬಂದ ಆ ಸುಂದರ ನಗರೋಪಕಂಠದಲ್ಲಿ ಪುರಂಜನನು ಸುಂದರ ನಾರಿಯನ್ನೋರ್ವಳಂ ಕಂಡನು. (ಮನಃ). ಅವಳನ್ನನುಸರಿಸಿ ಹತ್ತು ಭಟರು ಅವರ ಹಿಂದೆ ಅನೇಕ ಶತ ಪರಿಜನರು (ಇಂದ್ರಿಯ - ಇಂದ್ರಿಯ ವೃತ್ತಿಗಳು) ಬರುತ್ತಿದ್ದರು. ಅವರೆಲ್ಲರಿಗೂ ಒಡೆಯನಾಗಿ, ಅಹಂಕಾರದಿಂದ ಅವರೆಲ್ಲರ ಪೂಜೆಯನ್ನು ಸ್ವೀಕರಿಸುತ್ತಾ ಬಹುರೂಪಿಯಾದ ಒಬ್ಬ ನಾಯಕನು (ಮನಃ) ಬರುತ್ತಿದ್ದನು. ಐದು ಹೆಡೆಗಳನ್ನೆತ್ತಿ ಬುಸುಗುಟ್ಟುವ ಹೆಬ್ಬಾವೊಂದು ಸರ್ವರಕ್ಷಕನಾಗಿ ಬರುತ್ತಿರಲು ಆ ಸುಂದರಿಯು ಕಾಂತನನ್ನು ಹುಡುಕುತ್ತಾ ಬಂದಳು. ಅಪ್ರೌಢಳು ಕಾಮರೂಪಿಣಿಯೂ ಆಗಿ, ಅವಳು ಪುರಂಜನನನ್ನು ನೋಡಿ ವರಿಸಲು ಬಂದಳು. ಅವಳ ನಾಸಿಕೆ (ಅಭಿಮಾನ) ದಂತ ಪಂಕ್ತಿ ( ವಿಷಯಭೋಗಪಟುತಾ) ಯೌವನಗಳನ್ನು ನೋಡಿದ ಪುರಂಜನನಿಂತು ಚಿಂತಿಸಿದನು–

ಆಹಾ! ಕಪೋಲ ದರ್ಪಣದಿಂದ ಶೋಭಿಸುವ ಈ ವರಾನನೆ ಯಾರು? ಇವಳ ಕರ್ಣಗಳೆರಡೂ ಸಮನಾಗಿವೆ. (ಬಾಹ್ಯ-ಅಂತಃ) ಕುಂಡಲ (ಸಂಕಲ್ಪ-ವಿಕಲ್ಪಗಳು), ಗಳು ಡೋಲಿತ ವಾಗಿ ಮೆರೆಯುತ್ತಿವೆ. ಪೀತಾಂಬರ(ರಾಗ)ವನ್ನುಟ್ಟು ಕನಕಮೇಖಲ (ರಜೋ ಗುಣ)ವನ್ನಿಟ್ಟು ಪಾದನೂಪುರಗಳು (ಕಲಭಾಷಣ) ಝಣಝಣಧ್ವಾನ ಮಾಡಲು ದೇವತೆಯಂತೆ ಬರುತ್ತಿರು ವಳು! ಏನೀ ಸ್ತನಗಳಲ್ಲಿ ಸೂಸುವ ತಾರುಣ್ಯ! ಸಮವೃತ್ತವೂ ನಿರಂತರವಾದೀ ಸ್ತನದ್ವಯವನ್ನು ಸೆರಗಿನಿಂದ ಮುಚ್ಚಿ ಲಜ್ಜೆಯಿಂದ ಬರುವ ಈ ಗಜಗಾಮಿನಿಯಂ ಕಂಡ ಚಕಿತನಾಗಿರುವೆನು.

ಅಂತು ಚಿಂತಿಸಿ ಲಜ್ಜಾಸ್ಮಿತಶೋಭಿತೆಯಾದ ಪುರಂಜನಿಯ ಸ್ನೇಹಪಾಂಗಕಟಾಕ್ಷ ಬಾಣದಿಂದ ಪೀಡಿತನಾಗಿ ಪ್ರೇಮಭ್ರೂಭಂಗದಿಂದಾಹ್ವಾನಿತನೂ ಆಗಿ ಪುರಂಜನನು ಅವಳನ್ನು ಸಮೀಪಿಸಿ ಮಧುರವಚನದಿಂದಿಂತೆಂದನು-

ಕಂಜಪಲಾಶಾಕ್ಷಿ! ಯಾರೇ ನೀನು? ಯಾರವಳು? ಎಲ್ಲಿರುವೆ? ಇಲ್ಲಿಗೇಕೆ ಬಂದೆ? ಈ ಪುರಸಮೀಪದಲ್ಲಿ ನಿನಗಿರುವ ಕೆಲಸವಾದರೂ ಯಾವುದು? ಹೇಳು. ಈ ನಿನ್ನ ಹನ್ನೊಂದನು ಚರರ ಪೆಸರೇನು? ಈ ವಿಲಾಸಿನಿಯರು ಯಾರು? ಸುಂದರಿ! ಈ ಹಾವೇಕೆ ಬಿಡದೆ ಮುಂದೆ ನಡೆದುಪೋಗುತ್ತಿದೆ? ಹ್ರೀಯೋ ಶ್ರೀಯೋ ವಾಕ್ಪತಿಯೋ! ನಿಜಸ್ವಾಮಿಯನ್ನು ಹುಡುಕುತ್ತಾ ಬರುವಂತೆ ಇದೆ. ನಿನ್ನ ಪಾದಸಾಮ್ಯವನ್ನು ಪೊಂದಲು ಹವಣಿಸಿದ ಪದ್ಮಕೋಶವೆಲ್ಲಿ ? ಜಾರಿಬಿದ್ದೀತೇ ಅಲ್ಲ! ಈ ದೇವತೆಯರಲ್ಲಿ ನೀನೊಬ್ಬಳಲ್ಲ, ಮನುಜ ಮನೋಹರಳಾದ ನೀನು ನನ್ನೊಡನೆ ಈ ಪುರವನ್ನು ಪ್ರವೇಶಿಸಿ ಅಲಂಕರಿಸು. ಯಜ್ಞಪತಿಯಿಂದ ಶ್ರೀದೇವಿಯು ವೈಕುಂಠದಲ್ಲಿದ್ದಂತೆ ನನ್ನ ಅನಂತಾದ್ಭುತ ಕರ್ಮಗಳಿಂದ ಈ ಪುರವನ್ನಾಕ್ರಮಿಸಿ, ಪಾಲಿಸುವ ನನ್ನಿಂದ ಕೂಡಿ ಸುಖಿಸು. ನನಗೀಗ ಮನವೇ ಸ್ವಾಧೀನವಿಲ್ಲ. ನಿನ್ನ ಅಪಾಂಗಕಟಾಕ್ಷದಿಂದ ನಿನ್ನ ಮಂದಹಾಸದಿಂದ ನಿನ್ನ ಭ್ರೂವಿಲಾಸದಿಂದ ಬಲಗೊಂಡು ಮನೋಭವನೆನ್ನನ್ನು ಪೀಡಿಸುತ್ತಿ ರುವನು. ನನ್ನಲ್ಲಿ ದಯಮಾಡು. ನನ್ನನ್ನು ಅನುಗ್ರಹಿಸಿ ಸ್ವೀಕರಿಸು. ಭ್ರೂಲತಾಸುಂದರಸುತಾರ ಲೋಚನವೂ ನೀಲಾಲಕವೃಂದ ಸಂವೃತವೂ ಆದ ನಿನ್ನ ಮುಖವನ್ನೆತ್ತಿ ನೋಡು. ಮಧುರವಾಗಿ ಮಾತನಾಡು. ಶುಚಿಸ್ಮಿತೇ! ಏಕೆ ಲಜ್ಜೆಯಿಂದ ತಲೆಬಾಗಿಸಿರುವೆ?

ಇಂತು ಅಧೀರನಂತೆ ಪುರಂಜನನಾನಾರಿಯನ್ನು ಬೇಡಲು ನಸುನಕ್ಕು ವೀರಧೈರ್ಯ ವಿಭ್ರಂಸಿನಿಯಾದ ಪುರಂಜನಿಯು ಇಂತೆಂದಳು-

ಪುರುಷವರ! ನನ್ನನ್ನುತ್ಪಾದಿಸಿದ ಕರ್ತನ ನಾಮಗೋತ್ರಗಳನ್ನು ನಾನರಿಯೆ. ಪರನ ವಿಷಯ ನನಗೇಕೆ ? ಈಗ ಇಲ್ಲಿ ಈ ಪುರದಲ್ಲಿರಲು ಬಂದಿರುವೆ, ಇಷ್ಟು ಮಾತ್ರ ತಿಳಿದಿರುವೆ. ಈ ನರನಾರಿಯರೆನ್ನ ಸಖರು. ನನ್ನಿಂದ ಅವರಿಗೆ ಸುಖ. ನಾನು ಮಲಗಿದಾಗ ಎಚ್ಚೆತ್ತಿದ್ದು ಈ ನಾಗವು ಪುರವನ್ನು ಕಾದು ಕಾಪಾಡುವುದು. ಅದೃಷ್ಟದಿಂದ ಬಂದ ನಿನಗೆ ಶುಭವಾಗಲಿ! ನಿನಗೂ ಗ್ರಾಮ್ಯಭೋಗಾಸೆ ಇದೆ. ನಿನ್ನನ್ನು ವರಿಸಿ ಈ ನನ್ನ ಬಂಧುಗಳಿಂದ ಕೂಡಿ ನಿನ್ನನ್ನು ಬಿಡದಿರು ವೆನು. ನಮಮುಖವಾದಿ ಪುರಿಯನ್ನು ಸೇರಿ ಪಾಲಿಸು. ನಾ ಕೊಡುವ ಕಾಮಭೋಗಗಳನ್ನು ನೂರುವರ್ಷ ಕಾಲ ಅನುಭವಿಸುತ್ತಾ ಬಾಳು. ಮನುಜದೇಹ ಬಂದಾಗ ರತಿಜ್ಞನಲ್ಲದ, ಪಂಡಿತ ನಾದ, ಮುಂದರಿಯದ, ಯುದ್ಧಾದಿ ವೀರಕಾರ್ಯವಿಮುಖನಾದವನನ್ನು ಯಾವ ತರುಣಿಯು ರಮಿಸಲು ಸೇರುವಳು? ಯಾವ ಸುದತಿಯು ಭಗವದ್ರತಿಯನ್ನರಿಯದ ಜ್ಞಾನರಹಿತಳಾಗಿ ನಾಳೆ ಏನಾಗುವುದೋ ಎಂದೂ ತಿಳಿಯದ ಮೋಕ್ಷಸುಖ ವಿಮುಖನಾದವನನ್ನು ವರಿಸಿ ಸೇರುವಳು?

ಈ ಶರೀರದಲ್ಲಿ ಧರ್ಮಾರ್ಥಕಾಮಗಳು ಇಲ್ಲಿ ಪ್ರಜೆ, ಇಲ್ಲಿ ಆನಂದ, ಇದರಿಂದ ವಿಶೋಕವಾದ ಲೋಕಗಳು. ಇದರಿಂದ ಮೋಕ್ಷ. ಈ ಶರೀರ ಬಂದಾಗ ವಿಷಯಗಳನ್ನು ಭೋಗಿಸದಿರುವ ನಿಷ್ಕಿಂಚನರಿಗೇನು ಗೊತ್ತು? ಅಬರಲ್ಲಿ ಗೃಹಸ್ಥಾಶ್ರಮವು ಬಹು ಶ್ರೇಷ್ಠವಾಗಿದೆ. ನೋಡು! ಪಿತೃ ದೇವರ್ಷಿ ನರಭೂತಗಳಿಗೆ ಗೃಹಸ್ಥರಿಂದ ಅನ್ನೋದಕಾದಿ ಪೂಜೆ. ಈ ದೇಹವು ಅದರಿಂದ ಕ್ಷೇಮವನ್ನು ಗಳಿಸುವುದು. ಪುತ್ರಕಳತ್ರ ವಾಂಛಿತಪ್ರದನಾದ ಪ್ರಿಯದರ್ಶನನಾಗಿರುವ ನಿನ್ನಂತಹ ಪ್ರಸಿದ್ಧ ವೀರನನ್ನು ಅಪ್ರಯತ್ನವಾಗಿ ಪೊಂದಿ ನನ್ನಂತಹ ರಮಣಿಯು ವರಿಸದಿರುವಳೇ? ನಿನ್ನ ಈ ಭುಜಗಭೋಗ ಸುಭಗವಾದ ಮಹಾಭುಜಮಧ್ಯದಿ ಸೇರಲು ಯಾವ ಸುಂದರಿಯು ಕಾತರಳಾಗಳು? ಅನಾಥರಾದ ನಮ್ಮ ಮನೋವ್ಯಸನಗಳನ್ನು ನಿನ್ನ ಮಂದಹಾಸಾವಲೋಕನ ದಿಂದ ಕಳೆದು ಕಾಪಾಡು.

ಇಂತಾ ದಂಪತಿಗಳು ಪರಸ್ಪರ ಪ್ರೇಮನಿಬಂಧನಬದ್ಧರಾಗಿ ಆ ಪುರವನ್ನು ಪೊಕ್ಕು ನೂರು ವರ್ಷದಲ್ಲಿ ಬಾಳಿದರು. ಜಾಗ್ರತನಾಗಿ ಬಂದ ವಿಷಯಂಗಳ ಬಿಡದೆ ಸೇವಿಸುತ್ತಾ, ಪೊಗಳಿಸಿ ಕೊಳ್ಳುತ್ತಾ, ಆಡಿ ನಲಿಯುತ್ತಾ, ಆಗಾಗ ಬೇಕಾದ ಪರಿವಾರವನ್ನು ಸ್ವಪ್ನದಲ್ಲಂತೆ ಕಲೆತು ಕ್ರೀಡಿಸಿ, ಕೊನೆಗೆ ಪುರಂಜನನು ನಲಿನೀದಲ ಶೋಭಿತನಾದ ಸರೋವರವನ್ನು ಸೇರಿ ನಿದ್ರೆಯಲ್ಲಿದ್ದಂತೆ ಮೈಮರೆತು ಕಾಲ ಕಳೆದನು.

ಮಲಗಿ ಎಚ್ಚತ್ತು ಹೃದಯಪದ್ಮದಲದಲ್ಲಿ ತನ್ನನ್ನು ಸೆಳೆದು ಸುಖವನ್ನಿತ್ತ ಶ್ರೀಪ್ರಾಜ್ಞನನ್ನು ಮರೆತು ಜೀವನು ವಿಷಯಸುಖಜಾಗೃತನಾಗುವಂತೆ ಪುರಂಜನನು ಅನೇಕ ದೇಶಗಳ ನೋಡಿ ಬರಲು ಹೋಗಿಬರುತ್ತಿದ್ದನು.

ಆ ಪುರದ ಏಳು ದ್ವಾರಗಳು ಮೇಲೆ ಇದ್ದವು. ಕೆಳಗೆ ಎರಡು ದ್ವಾರಗಳು. ಅನೇಕ ವಿಷಯಗಳನ್ನು ತಿರುಗಿ ಬರಲು ಅವು ಮಾರ್ಗವಾಗಿ ತನ್ನ ಪುರದೊಡೆಯನಿಗೆ ಗಮನಾಗಮಸುನ ಕರವಾಗಿದ್ದವು. ಐದು ದ್ವಾರಗಳು ಪೂರ್ವಕ್ಕೆ ಸಮ್ಮುಖವಾಗಿರಲು ಒಂದು ದಕ್ಷಿಣಕ್ಕೆ ಮತ್ತೊಂದು ಉತ್ತರಕ್ಕೆ ತೆರೆದಿದ್ದವು. ಪಶ್ಚಿಮದ್ವಾರಗಳೆರಡೂ ಗೂಢವಾಗಿದ್ದವು. ಖದ್ಯೋತ ಅವಿರ್ಮುಖಿ ಎಂಬ ಎರಡು ದ್ವಾರಗಳು ಮೇಲೆ ಸಮರೇಖವಾಗಿದ್ದು ಅವುಗಳಿಂದ ರಾಜನು ದ್ಯುಮಾನ್ ಎಂಬ ಸ್ನೇಹಿತನಿಂದ ಕೂಡಿ ವಿಭ್ರಾಜಿತವೆಂಬ ದೇಶವನ್ನು ನೋಡಲು ಹೋಗುತ್ತಿದ್ದನು. ನಲಿನೀನಾಲಿನಿ ಎಂಬೆರಡು ದ್ವಾರಗಳಾಬಾಗಿಲುಗಳ ಕೆಳಗಡೆ ಇದ್ದವು. ಅವಧೂತನೆಂಬ ಸಖ ನಿಂದ ಕೂಡಿ ಪುರಂಜನನು ಸೌರಭವಿಷಯವನ್ನು ಪೊಂದುತ್ತಿದ್ದನು. ಮುಖ್ಯವಾದ ಹೆಬ್ಬಾಗಿಲವು ಗಳ ಕೆಳಗೆ ಇತ್ತು. ಮುಂದಿದ್ದ ಆ ಮುಖದಿಂದ ಪ್ರಭುವು ರಸಜ್ಞ, ವಿಪಣರೆಂಬ ಸಖರಿಂದ ಕೂಡಿ ಬಹೂದನ ಆಪಣವೆಂಬ ವಿಷಯಗಳನ್ನು ಅನುಭವಿಸಿ, ಮೆಚ್ಚಿ, ಮಾತಾಡಿ ಬರುತ್ತಿದ್ದನು. ಪಿತೃಭೂ ಎಂಬುವ ದಕ್ಷಿಣದ್ವಾರವದರಿಂದ ಶ್ರುತಧರನೆಂಬ ಮಿತ್ರನಿಂದ ಕೂಡಿ ರಾಜನು ದಕ್ಷಿಣ ಪಂಚಾಲ ದೇಶದ ವಾರ್ತೆ ಕೇಳುತ್ತಿದ್ದನು. ದೇವಭೂ ಎಂಬ ಉತ್ತರದ್ವಾರದಿಂದ ಪುರಂಜನನು ಉತ್ತರ ಪಾಂಚಾಲ ವಾರ್ತೆಯನ್ನು, ಶ್ರುತಧರನಿಂದಲೇ ಕೂಡಿ ಕೇಳಿ ಕ್ರಮವಾಗಿ ದೇವಪ್ರಿಯ ನಿವೃತ್ತಶಾಸ್ತ್ರವನ್ನೂ ಪಿತೃಪ್ರಿಯ ಪ್ರವೃತ್ತಿಶಾಸ್ತ್ರವನ್ನೂ ತಿಳಿಯುತ್ತಿದ್ದನು. ಅಸುರೀ ಎಂಬ ಪಶ್ಚಿಮ ದ್ವಾರದಿಂದ ಪುರಂಜನನು ದುರ್ಮದಸಖನಾಗಿ ಹೊರಟು ಗ್ರಾಮ್ಯಕವೆಂಬ ವಿಷಯ ವನ್ನು ಸೇರುತ್ತಿದ್ದನು. ನಿಕೃತಿ ಎಂಬುದಿನ್ನೊಂದು ಹಿಂಬದಿಯ ಪಶ್ಚಿಮದ್ವಾರವು. ಪುರಂಜನನಟವ ರಿಂದ ಲುಬ್ಧಕನೆಂಬ ಸಖನಂ ಕೂಡಿ ವೈಶಸ ವಿಷಯವನ್ನು ಸೇರಿ ವಿಸರ್ಜನ ವ್ಯಾಪಾರವನ್ನು

ಮಾಡುತ್ತಿದ್ದನು. ಆ ದ್ವಾರಗಳ ಮಧ್ಯದಿ ಇಬ್ಬರು ಅಂಧರಿದ್ದರು. ನಿರ್ವಾಕ್ಕನೆನಿಸಿದವನಿಂದ ಸೇವಪತಿಯು ಮೇಲೆ ಕೂತು ನಡೆಯುತ್ತಿದ್ದನು. ಉಪಸ್ಕರನೆಂಬ ಕುರುಡನಿಂದ ಆದನಾದಿ ಕಾರ್ಯಗಳನ್ನು ಮಾಡುತ್ತಿದ್ದನು. ಇಂತು ವಿಷಯಮಗ್ನರಾಗಿ ರಾಜನು ಕಾಮಾವಶನೂ ಕರ್ಮಸಕ್ತನೂ ಆಗಿ ವಂಚಿತನಾದನು. ಅಪಂಡಿತನಂತೆ ಸ್ತ್ರೈಣನೆನಿಸಿ ತನ್ನ ಮಹಿಷಿಯು ಬೇಡಿದಂತೆ ಕೊಟ್ಟು, ಹೇಳಿದಂತೆ ನಡೆದನು. ಅವಳು ಕುಡಿದರೆ ತಾನೂ ಕುಡಿದು ಮದವಿಹ್ವಲನಾಗುವನು. ಊಟ, ತಿಂಡಿ, ಆಟ, ಪಾಟ, ನಗು, ನೋಟ, ಮಾತು, ಕಥೆ, ಓಟ, ಕೂಟ, ಆಸನ, ವಸನಗಳಲ್ಲಿ ಅವಳನ್ನನುಕರಿಸಿ, ತಾನೂ ನಡೆದು, ಮೂಸಿ, ಮಲಗಿ, ಕೇಳಿ, ಮುಟ್ಟಿ ಅವಳ ವಶನಾದನು. ಅಳುತ್ತಿರೆ ತಾನೂ ದೀನನಾಗಿ ರೋದಿಸಿದನು. ಅವಳು ನಕ್ಕರೆ ನಕ್ಕನು ಇಂತು ಮಹಿಷೀಂವಂಚಿತನಾಗಿ ಅವಳ ಸ್ತ್ರೀಸ್ವಭಾವ ಗುಣಗಳಿಗೆ ಸಿಲುಕಿ, ಇಷ್ಟವಿಲ್ಲದಿದ್ದರೂ ಅವಳಂತೆ ನಡೆದು ಕ್ಲಿಬನಂತೆ ದೀನನು, ಸ್ತ್ರೈಣನಂತೆ ಅಧೀನನೂ ಆಗಿ ಕ್ರೀಡಾಮೃಗದಂತೆ ಹಿಂಬಾಲಿಸಿ ನಡೆಯುತ್ತಾ ವರ್ತಿಸಿದನು.

## ೨೬. ಪುರಂಜನ ಚರಿತೆ, ಜಾಗೃದ್ದಶೆ

ಒಂದು ದಿನ ಪ್ರಾತಃಕಾಲದಲ್ಲಿ ಪುರಂಜನನು ಮಹಾ ಧನುರ್ಧರರಾಗಿ ರಥವನ್ನೇರಿ ಹೊರಟನು. ಶ್ರೀಘ್ರಗಾಮಿಯಾದಾರಥಕ್ಕೆ ಇಂದ್ರಿಯಗಳೆಂಬ ಕುದುರೆಗಳೈದು ಕಟ್ಟಿ, ಮೂರು ಗುಣಗಳೆಂಬ ಮೂರು ಧ್ವಜಗಳನ್ನೆತ್ತಿದ್ದನು. ಪುಣ್ಯಪಾಪವೆಂಬ ಎರಡು ಚಕ್ರಗಳು, ಸೂತ್ರವಾಯುವೆಂಬ ಅಕ್ಷ, ನಾಡೀವಿಶೇಷರೂಪ ಪಂಚಬಂಧುರಗಳು, ಮನಸ್ಸೆಂಬ ಮುಗುದಾಣಿ, ಬುದ್ಧಿ ಎಂಬ ಸಾರಥಿ, ಹೃದಯವೆಂಬ ಗೂಡು, ಶೀತೋಷ್ಣದಿ ದ್ವಂದ್ವ ರೂಪ ದ್ವಿಕೂಬರಗಳು, ಶಬ್ದಾದಿ ವಿಷಯ ಪೃಥ್ವ್ಯಾದಿಭೂತ ಸನ್ನಿಕರ್ಷವೆಂಬ ಐದಾಯುಧಗಳು, ಸಪ್ತಧಾತುಗಳೆಂಬ ಸೈನ್ಯದಲಗಳು, ಪಂಚಭೂತ ಪ್ರಭಾವವೆಂಬ ಐದುಮಾರ್ಗ ಗಮನ ವೈಚಿತ್ರ್ಯಗಳು, ಉಳ್ಳ ದೇಹರಥವನ್ನು ಅಧಿರೋಹಿಸಿ ಪರಂಜನನು ಸ್ವರ್ಣಾಭರಣಭೂಷಿತರಾಗಿ ರಜತಮಯಚರ್ಮವನ್ನು ಪಿಡಿದು ಅನಂತ ಬಾಣಗಳಿಂದ ತುಂಬಿದತೂಣೀರವನ್ನು ಬೆನ್ನು ಹಿಂದೆ ಕಟ್ಟಿಕೊಂಡು ಜಾಗೃತನಾಗಿ ಹೊರಟನು. ದರ್ಪದಿಂದ ಪಂಚಪ್ರಸ್ತವೆಂಬ ವನವಂ ಮುತ್ತಿದನು. ಕರ್ತವ್ಯಾಕರ್ತವ್ಯಗಳನ್ನರಿಯದೆ ಕೈ ಹಿಡಿದ ಪತ್ನಿಯ ಬುದ್ಧಿಯನ್ನು ಮೃಗಯಾವ್ಯಸನಿಯಾಗಿ ಆಸುರೀ ವೃತ್ತಿಯಿಂದ ಪಾಪಭೀತಿಯಂ ಬಿಟ್ಟು, ದಯೆಯಂ ತೊರೆದು ವನಗೋಚರವಾದ ಮೃಗಗಳೆಲ್ಲ ಸಂಹರಿಸಿದನು. ಶಾಸ್ತ್ರದಲ್ಲಿ ರಾಜನು ಮಾತ್ರ ವನದಲ್ಲೇ ಮೇಧ್ಯಪಶುಗಳನ್ನೇ ಲುಬ್ಧನಾಗದೆ ಬೇಕಾದಷ್ಟು ಮಾತ್ರ ಸಂಹರಿಸಿ ಸ್ವೀಕರಿಸಲರ್ಹನೆಂದಿದೆ; ಎಂಬೀ ವಿಷಯವನ್ನು ಪುರಂಜನನು ಮರೆತು ಸಾಧು ಅಸಾಧು ಎಂಬ ವಿವೇಕವಿಲ್ಲದೆ ಬೇಕಾದದ್ದನ್ನೆಲ್ಲ ಹಿಂಸಿಸಿ ತೆಗೆದುಕೊಂಡನು.

ಅಪರೋಕ್ಷಜ್ಞಾನಿಯು ನಿಯತವೇ ಆಗಲಿ ಅನಿಯತವೇ ಆಗಲಿ ಕರ್ಮಗಳನ್ನು ಮಾಡಲು ಅಥವಾ ಬಿಡಲು ಅವನು ಜ್ಞಾನಿಯಾದ್ದರಿಂದ ಪುಷ್ಕರಪಲಾಶದಲ್ಲಿ ನೀರಂಟದಿರುವಂತೆ ಪುಣ್ಯಪಾಪ ಲೇಪವಿಲ್ಲದಿರುವನು. ಆದರೆ ಜ್ಞಾನಹೀನನು ಕಾಮರೂಢನಾಗಿ ಮಾಡುವ ಕರ್ಮಗಳಿಂದ ಸಂಸಾರಪತಿತನಾಗಿ ಬುದ್ದಿಗೆಟ್ಟು ಅಧಃಪತನವನ್ನು ಪೊಂದುವನು.

ಇರಲಿ ಕೇಳು! ಬರ್ಹಿಷ್ಮದ್ರಾಜನೇ! ಜೀವನ ಕಥೆಯನ್ನು, ಅವನು ಹಿಂಸಿಸಿದ ಭೂತಗಳ ಆಕ್ರಂದನವು ಕರುಣಾಜನಕವಾಗಿ ದುಃಸಹವಾಯಿತು. ಶಶ ವರಾಹ ಮಹಿಷ ಗವಿಯ ರುರು ಶಲ್ಯ ಗಳೇ ಮೊದಲಾದ ವಿವಿಧ ಮೇಧ್ಯ ಮೃಗಗಳನ್ನು ಬೇಟೆಯಾಡಿ ಶ್ರಮಪಟ್ಟು ಹಸಿವೆ ನೀರಡಿಕೆಗಳನ್ನು ತಡೆಯಲಾರದೆ, ಮನೆಗೆ ಹಿಂದಿರುಗಿ ಬಂದನು. ಸ್ನಾನವನ್ನು ಮಾಡಿದನು. ಉಚಿತಾಹಾರವನ್ನುಂಡು ಶ್ರಮರಹಿತನಾದನು. ಅನಂತಹ ಪುರಂಜನನು ಧೂಪಾ ಲೇಪ ಮಾಲಾದಿಗಳಿಂದ ಅಲಂಕೃತನಾಗಿ ತನ್ನ ಮಹಿಷಿಯನ್ನು ನೆನೆದು ಮದನಾಕರ್ಷಿತ ಮನಸ್ಕನಾಗಿ ಸುಖತೃಪ್ತನಾಗಿ ಸೇರಲು ಬಂದನು. ಗೃಹಮೇಧನಿಯನ್ನು ಕಾಣದೆ ವಿಮನಸ್ಕನಾಗಿ ಅಂತಃ ಪುರಸ್ತ್ರೀಯನ್ನು ಕೇಳಿದನು–

ರಮಣೀಯರೇ! ನಿಮಗೆ ಕ್ಷೇಮವೇ? ನಿಮ್ಮ ರಾಣಿಯು ಎಲ್ಲಿ ಇರುವಳು? ಅವಳು ಚೆನ್ನಾಗಿರುವಳೇ? ಮನೆಯು ಕಳೆಗುಂದಿನಂತಿದೆ. ಮನೆಯಲ್ಲಿ ತಾಯಿ ಅಥವಾ ಪತಿವ್ರತೆಯಾದ ಪತ್ನಿಯು ಇಲ್ಲದಿದ್ದ ಮುರಿದ ರಥದಂತಿರುವ ಗೃಹದಲ್ಲಿ ಯಾವನಿರಲಿಷ್ಟಪಡುವನು? ದೀನನಾಗಿ ಕೇಳುವೆನು ಪೇಳಿ. ಆ ನನ್ನ ಲಲನೆ ಎಲ್ಲಿ? ವ್ಯಸನಸಮುದ್ರಮಗ್ನನಾದೆನ್ನನ್ನು ಹೆಜ್ಜೆಹೆಜ್ಜೆಗೂ ಉದ್ಧರಿಸಿ ಬುದ್ಧಿಯನ್ನು ಪೇಳುತ್ತಿದ್ದಳು. ಅವಳೆಲ್ಲಿ? ಎಂದು? ಕೇಳಲು ರಾಮೆಯರಿಂತು ನುಡಿದರು–

ನರನಾಥ! ನಿನ್ನ ಪ್ರಿಯಳ ಮನೋ ನಿಶ್ಚಯವೇನೆಂಬುದನ್ನು ನಾವರಿಯವು. ಹೋಗು, ಕೋಪಗೃಹದಲ್ಲಿ ಬರಿಯ ನೆಲದ ಮೇಲೆ ಮಲಗಿರುವಳು ನೋಡು.

ನಾರದನು ಪೇಳಿದನು–

ಬರ್ಹಿಷ್ಮದ್ರಾಜನೇ! ಪುರಂಜನನಾಗ ಪೋಗಿ ಕೆಳಗೆ ಬಿದ್ದಿರುವ ಮಹಿಷಿಯನ್ನು ನೋಡಿ ದನು. ಅವಳ ಸಂಗದಿಂದ ಜ್ಞಾನವೇ ಕೆಡಲು ದೀನನಾಗಿ ಮಧುರ ಮನೋಹರ ವಚನ ಗಳಿಂದ ಅವಳನ್ನು ಸಾಂತ್ವನಗೊಳಿಸಿದನು. ಅವಳ ಬುದ್ಧಿ ಕೆಡುವ ಅಪರಾಧವೆನ್ನಿಂದೇನಾಯಿ ತೆಂದು ತರ್ಕಿಸಿ, ಕಾಣದೆ ನೊಂದ ಹೃದಯದಿಂದ ಸಮೀಪಿಸಿ ಚೆನ್ನಾಗಿ ಅನುನಯಿಸಿದನು. ಅವಳ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ರಾಣಿಯನ್ನು ಲಾಲಿಸಿ ಪಾದಯುಗಲವನ್ನು ಮುಟ್ಟಿ ಬೇಡಿಕೊಂಡನು–

ಶೋಭನಾಂಗಿ! ಭೃತ್ಯರಪರಾಧವನ್ನು ಮಾಡಿದರೆನ್ನು. ನೋಡಿ ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳುತ್ತಾ ಪ್ರಭುಗಳು ದಂಡಿಸದೆ ಬಿಟ್ಟರೆ ಆ ಸೇವಕರಿಗಿಂತ ನಿರ್ಭಾಗ್ಯರಿಲ್ಲ. ಮೂರ್ಖ ಬಾಲನಂತೆ ದಂಡವು ಹಿತಕಾರಿ ಎಂದು ತಿಳಿಯುವುದಿಲ್ಲ. ಪ್ರಭುವಿಂದ ಭೃತ್ಯನಲ್ಲಿ ಪ್ರಯುಕ್ತ ವಾದ ದಂಡವು ಪರಮಾನುಗ್ರಹವೇ ಸರಿ. ಸುದತಿ! ಹುಬ್ಬನ್ನು ಬಿಚ್ಚು, ಅನುರಾಗ ಭರದಿಂದ ತುಂಬಿ ತುಳುಕುವ ಮಂದಹಾಸಾವಲೋಕನಗಳನ್ನೆನ್ನ ಮೇಲೆ ಅಮೃತವಾಹಿನಿಯಂತೆ ಬೀರು. ನೀಲಾಲಕವೃತವು ಉನ್ನತವಾದ ನಿನ್ನ ಮುಖವನ್ನೆತ್ತಿ ಮಧುರವಾಗಿ ಮಾತನಾಡು. ವೀರಪತ್ನಿ! ಹೇಳು ನಿನಗೆ ಅಪರಾಧವನ್ನು ಮಾಡಿದವನು ಬ್ರಾಹ್ಮಣನಲ್ಲದೆ– ಮುರರಿಪುದಾಸನಲ್ಲದೆ ಮತ್ತಾವನಾದರೂ ಬಿಡದೆ ದಂಡಿಸುವೆನು. ಮೂರು ಲೋಕಗಳಲ್ಲಿಯೂ ನಾನು ಕ್ರುದ್ಧನಾದರೆ ಭಯಪಡದವನಿಲ್ಲ. ಅಂತಹ ಅಪರಾಧಿಯ ಸಂತೋಷವು ಮುಗಿಯಿತೆಂದು ತಿಳಿ. ನೋಡೆನ್ನ ಕಡೆ. ನಿನ್ನ ಮುಖವು ಮಲಿನವು ಹರ್ಷರಹಿತವು ಅನಲಂಕೃತವು ಪ್ರೀತಿರಹಿತವಾಗಿರುವುದನ್ನು ನೋಡಲಾರೆ. ತಿಲಕವಿಡು, ಸಿಟ್ಟನ್ನು ಬಿಡು. ಸ್ತನಗಳು ಶೋಕಾಶ್ರುಲಿಪ್ತವಾಗಲೇಕೆ ? ಏಳು.

ಅಧರದಿ ಕುಂಕುಮರಾಗವಿಟ್ಟು ಪ್ರೀತಿಯಿಂದ ನನ್ನಲ್ಲಿ ಅನುಗ್ರಹಿಸು. ತಪ್ಪು ಮಾಡಿದೆ ನಿಜ. ಸ್ವೇಚ್ಛೆಯಿಂದ ನಿನ್ನನ್ನು ಬಿಟ್ಟು ಮೃಗಯಾವ್ಯಸನಿಯಾದೆ, ಕ್ಷಮಿಸು. ಕುಸುಮಾಸ್ತ್ರತಾಡಿತನಾಗಿ ಧೈರ್ಯವಂ ಬಿಟ್ಟು ವಶನಾಗಿ ಬಂದ ಪ್ರಿಯನನ್ನು ಯಾವ ತನ್ವಂಗಿಯು ಸೇರದಿರುವಳು?

## ೨೭. ಪುರಂಜನ ಚರಿತೆ, ಸಂಸಾರ – ಮುಪ್ಪು

ನಾರದನೆಂದನು –

ಇಂತು ಪುರಂಜನನನ್ನು ವಿಭ್ರಮವಿಲಾಸದಿಂದ ವಶಪಡಿಸಿಕೊಂಡು ಪುರಂಜನಿಯು ಪತಿಯಿಂದ ರಮಿಸಿ ಮೈಮರೆಸಿದಳು. ರುಚಿರಪೀತಾಂಬರವನ್ನು ಧರಿಸಿ, ಸ್ವಸ್ತಿವಾಚನವನ್ನು ಸ್ವೀಕರಿಸಿ ದೃಪ್ತಳಾಗಿ ಬಂದ ಮಹಿಷಿಯನ್ನು ಕೂಡಿ ಪುರಂಜನೀಬಾಹುಲತಾವೃತ ಕಂಧರನು, ಸರಸಸಲ್ಲಾಪ ಬಂಧುರನಾಗಿ ರಾಜನು ಎಲ್ಲವನ್ನೂ ಮರೆತು ದುರತ್ಯಯ ಕಾಲಚಕ್ರವು ಮಹಾ ವೇಗಗಿಂದ ತಿರುಗುವುದನ್ನು ಕಾಣದೆ, ಹಗಲು ರಾತ್ರಿಯೆನ್ನದೆ, ಪುರಂಜನಿಯಿಂದ ಕ್ರೀಡಾ ರತನಾಗಿದ್ದನು. ಮಹೋನ್ನತಮದದಿಂದ ಹಂಸತೂಲಿಕಾತಲ್ಪದಲಿ ಮಹಿಷೀ ಭುಜದಿ ತಲೆ ಯಿಟ್ಟು ಮತಿಗೆಟ್ಟು ಅವಳೇ ತನ್ನ ಪ್ರಪಂಚವೆಂದು ನಂಬಿದನು. ನಾನು ಜೀವನು, ಜೀವೇಶನು ಹರಿ ಇರುವನೆಂಬುದನ್ನು ಮರೆತನು. ಕಾಮ ಕಲುಷಿತ ಚಿತ್ತದಿಂದ ರಾಣಿಯನ್ನು ಕೂಡಿ ಕ್ರೀಡಿಸುವ ಪುರಂಜನನ ತಾರುಣ್ಯವೂ ಜ್ಞಾನವೂ ಕ್ಷಣಾರ್ಧದಂತೆ ಕಳೆದುಹೋಯಿತು.

ಆ ಪುರಂಜನಿಯಲ್ಲಿ ಪುರಂಜನನು ಹನ್ನೊಂದು ನೂರು ಪುತ್ರರನ್ನು ಪಡೆದು ವಿಷಯ ವಿರಕ್ತನಾಗದೇ ಅರ್ಧ ವಯಸ್ಸನ್ನು ದಾಟಿದನು. ಇಂದ್ರಿಯ ವೃತ್ತಿಗಳಂತೆ ಪಡೆದ ಪುತ್ರರಲ್ಲದೆ ತಂದೆ ತಾಯಿಯರಿಗೆ ಯಶವಂ ಕೊಟ್ಟು ಕುಲವೃದ್ಧಿಕರರಾಗುವ ನೂರುಹತ್ತು ಕುಮಾರಿಯರನ್ನು ಪಡೆದನು. ಆ ಕುವರಿಯರು ಶೀಲ ಔದಾರ್ಯ ಸೌಂದರ್ಯಾದಿ ಗುಣೋಪೇತರಾಗಿ ವಂಶವನ್ನು ಬೆಳೆಸಿದರು. ಮಕ್ಕಳಿಗೆ ಸೊಸೆಯರನ್ನು ಅಳಿಯರನ್ನು ಜೋಡಿಸಿ ಅನಂತ ಚೇಷ್ಟಾಮನೋಹರ ರಾದ ಅವರನ್ನು ನೋಡಿ ತುಷ್ಟನಾದನು. ಒಬ್ಬ ಮಗನಿಗೆ ನೂರು ಮಕ್ಕಳಾಗಲು ಪೌರಂಜನ ವಂಶವು ಪಾಂಚಾಲ ವಿಷಯವನ್ನೆಲ್ಲ ತುಂಬಿ ಹರಡಿತು. ಅವರೆಲ್ಲ ರಾಜದ್ರವ್ಯದಿಂದ ಜೀವಿಸುತ್ತಾ ಅವನೆದುರಿಗೇ ಕೋಶಾದಿಗಳನ್ನು ಸ್ವೇಚ್ಛೆಯಿಂದ ಬಳಸಿ ಹಾಳು ಮಾಡಿದರೂ ಪುರಂಜನನು ಮಮತೆಯಿಂದ ಕಾಣದೆ ವಿಷಯಗಳಲ್ಲಿ ಅನುಬದ್ಧನಾಗಿದ್ದನು. ಪಶುಗಳನ್ನು ಕೊಂದು ಯಜ್ಞಗಳನ್ನು ಮಾಡಿ ಭೂರಿ ದಕ್ಷಿಣೆಯನ್ನಿತ್ತು ದೇವಪಿತೃನೃಭೂತಗಳನ್ನು ನಿನ್ನಂತೆ ಸಂತೃಸಿದನು.

ಇಂತು ಕುಟುಂಬಾಸಕ್ತಚಿತ್ತನಾಗಿ, ಗೃಹಸುಖಗಳಲ್ಲಿ ಮೈಮರೆತ ಪುರಂಜನನಿಗೂ ಸ್ತ್ರೀ ಜನಾಸಹ್ಯನಾದ ಆ ಕಾಲವು ಜರೆಯೆಂಬ ರೂಪದಿಂದ ಬಂದೊದಗಿತು.

ಚಂಡವೇಗನೆಂಬ ಗಂಧರ್ವಾಧಿಪತಿಯು ತನ್ನ ಮೂನ್ನೂರಾ ಅರವತ್ತು ಸೇನಾಪತಿ ಗಳಿಂದಲು ಮುನ್ನೂರು ಅರವತ್ತು ಗಂಧರ್ವೀಯರಿಂದಲೂ ಕೂಡಿ ಪುರಂಜನಪುರಿಯನ್ನು ಸುತ್ತಲೂ ಮುತ್ತಿ ಅವನ ಭೋಗವಸ್ತುಗಳನ್ನು ಕದಿಯಲಾರಂಭಿಸಿದನು. ಗಂಧರ್ವರು ಧವಳ ಗಾತ್ರರು ಅವರ ಬೆನ್ನ ಹಿಂದೆ ಬಿಡದೆ ಬರುವ ಗಂಧರ್ವೀಯರು ರಾತ್ರಿಯಂತೆ ಕಪ್ಪಾಗಿದ್ದರು. ಅವರು ಸುತ್ತು ತಿರುಗುತ್ತಾ ಅಪಹರಿಸುವುದನ್ನು ತಡೆಯಲು ನಿದ್ದೆ ಇಲ್ಲದೆ ಪುರವನ್ನು

ಕಾಯುತ್ತಿದ್ದ ಪ್ರಜಾಗರ ಪ್ರಾಣನು ಪ್ರಯತ್ನಿಸಿ ಏಳುನೂರಾ ಇಪ್ಪತ್ತು ಜನರಿಂದ ಕಾದಾಡುತ್ತಿದ್ದನು. ನೂರು ವರ್ಷವಿಂತು ಕಳೆಯಲು ಪುರಂಜನನು ಶತ್ರುಜನರಿಂದ ಕಾದು ಕ್ಷೀಣಬಲನಾದನು. ಬಹು ವಿರೋಧದಿಂದ ಚಿಂತಾಕರ್ಷಿತನಾಗಿ ರಾಷ್ಟ್ರಪುರ ಬಂಧುಗಳಿಂದ ಕೂಡಿ ಶೋಕಿಸಿದನು. ಪುರಿಯಲ್ಲಿದ್ದು ಕದಲದೆ ತನ್ನವರು ಕೊಟ್ಟ ಮಧುರ ಮಧುವನ್ನು ಸೇವಿಸುತ್ತಾ ತಂದಿಟ್ಟ ಆಹಾರವನ್ನುಣ್ಣುತ್ತಾ ಸ್ತ್ರೀಜಿತನಾಗಿ ಬಂದು ಬೀಳುವ ಮೃತ್ಯುವನ್ನು ಕಾಣದಿದ್ದನು.

ಆಗ ಬರ್ಹಿಷ್ಮನ್! ಕೇಳು ಕಾಲನ ಮಗಳು ತನಗೆ ಬೇಕಾದ ವರನನ್ನು ಹುಡುಕುತ್ತಾ ಮೂರು ಲೋಕಗಳಲ್ಲಿ ಸರಿಯಾದವನನ್ನು ಕಾಣದೆ ದುರ್ಭಗೆ ಎಂದು ಖ್ಯಾತಳಾಗಿದ್ದಳು. ಇವಳೇ ಯಯಾತಿಯಿಂದ ಪೂರುವಿನನ್ನು ಪ್ರವೇಶಿಸಿ ಅವನನ್ನು ಮುದುಕನನ್ನಾಗಿಸಿದವಳು. ಪೂರುವು ತುಷ್ಟನಾದ ತಂದೆಯಿಂದ ವರವನ್ನೇನೂ ಪಡೆದನಿರಲಿ. ಒಂದು ದಿನ ಅವಳು ಸುತ್ತುತ್ತಾ ಬ್ರಹ್ಮಲೋಕದಿಂದ ಭೂಮಿಗಿಳಿದು ಬರುವಾಗ ನನ್ನನ್ನು ಕಂಡು ನಾನು ಬ್ರಹ್ಮಚಾರಿ ಎಂದು ತಿಳಿದೂ ಕಾಮಮೋಹಿತಳಾಗಿ ವರಿಸಬಂದಳು. ನನ್ನ ಮೇಲೆ ಸಿಟ್ಟಿನಿಂದ ದುಃಸಹ ಶಾಪವನ್ನೇ ಕೊಟ್ಟಳು. 'ನನ್ನ ಪ್ರಾರ್ಥನೆಯನ್ನು ಧಿಕ್ಕರಿಸಿದ ನೀನು ಒಂದು ಕಡೆ ನಿಲ್ಲದೆ ಸದಾ ತಿರುಗುತ್ತಿರು' ಎಂದು ಶಾಪವೀಯಲು ನಾನು ನಕ್ಕು ಸುಮ್ಮನಾದೆ. ತನ್ನ ಸಂಕಲ್ಪವು ನನ್ನಿಂದ ಫಲಿಸದಿರಲು ಕಾಲಕನ್ಯೆಯು ಯವನಾಧಿಪನಾದ ಭಯನೆಂಬುವನನ್ನು ನನ್ನ ಮಾತಿನಿಂದ ಹೋಗಿ ವರಿಸಿದಳು.

ಯವನಸಿಂಹಾ! ವೀರನಾದ ನಿನ್ನನ್ನು ಪತಿಯನ್ನಾಗಿ ವರಿಸಿ ಬಂದಿರುವೆನು. ನಿನ್ನಲ್ಲಿ ಭೂತಗಳು ಮಾಡಿದ ಸಂಕಲ್ಪವು ವಿಫಲವಾಗದು. ಕಾರ್ಯವನ್ನರಿಯದ ಮೂರ್ಖರು, ದುರಾಗ್ರಹವಶರೆಂಬೀ ಈರ್ವರು ಲೋಕಕ್ಕೂ ಮುಖ್ಯವಾಗಿ ಶಾಸ್ತ್ರಕ್ಕೂ ಅವಿರೋಧವಾಗಿ ಬಂದ ಸುಖವನ್ನು ಸ್ವೀಕರಿಸಿದೆ. ಕೊಡುವ ದಾನಾದಿಗಳನ್ನು ಕೊಡದೆ, ಕೊನೆಗೆ ದುಃಖವನ್ನೇ ಪೊಂದುವರು. ಆದ್ದರಿಂದ ನಿನ್ನನ್ನು ಬೇಡಿ ಬಂದ ನನ್ನನ್ನು ಭಜಿಸು. ದಯೆಯನ್ನು ತೋರು. ಆರ್ತರಲ್ಲಿ ದಯೆ ತೋರುವುದೇ ಪುರುಷಧರ್ಮವಲ್ಲವೇ?

ಕಾಲಕನ್ಯೆಯ ಮಾತನ್ನು ಕೇಳಿ ಯವನೇಶನು ಬ್ರಹ್ಮಸಂಕಲ್ಪವನ್ನನುವರ್ತಿಸಿ ನಗುತ್ತಾ ಇಂತೆಂದನು–

ಒಳ್ಳೆಯದು. ನಾನು ನಿನಗೆ ತಕ್ಕ ಪತಿಯಂ ಕಂಡಿರುವೆನು. ಅಮಂಗಳಕರಳಾದ ನಿನ್ನನ್ನು ಯಾರು ಸಮ್ಮತಿಸಿ ಸ್ವೀಕರಿಸುವರು? ಆದ್ದರಿಂದ ನೀನು ಯಾರಿಗೂ ತಿಳಿಯದಿರುವಂತೆ ಎಲ್ಲರಲ್ಲಿ ಪ್ರವೇಶಿಸಿ ಕರ್ಮನಿರ್ಮಿತ ಭೋಗಗಳನ್ನು ಪೊಂದು. ಹೋಗು. ನನ್ನ ಭಯಪ್ರದ ಸೈನ್ಯವನ್ನೂ ಕಳಿಸುವೆನು. ಪ್ರಜ್ವಾರನೆಂಬುವನೆನ್ನ ಅಣ್ಣನಿರುವನು. ಶೈವ ವೈಷ್ಣವ ಜ್ವರಗಳವನ ಆಯುಧಗಳು. ಅವನಿಗೆ ಮಕ್ಕಳಿಲ್ಲ. ನಿನ್ನನ್ನವನು ಸ್ವೀಕರಿಸುವನು. ನೀನೆನ್ನ ತಂಗಿಯಾಗು. ಭಯಂಕರ ಸೇನೆಯಿಂದ ಜರಾ ಪ್ರಜ್ವಾರರೆಂಬ ನಿಮ್ಮಿಬ್ಬರಿಂದ ಕೂಡಿ ಲೋಕವನ್ನು ಸಂಚರಿಸಿ ನುಂಗಿಬಿಡುವೆನು.

## ೨೮. ಪುರಂಜನ ಚರಿತೆ – ಮೃತಿ – ಮುಕ್ತಿ

ನಾರದನು ಪೇಳಿದನು –

ಬರ್ಹಿಷ್ಮನ್! ಆಗ ಭಯರಾಜನ ಇಷ್ಟದಂತೆ ಜ್ವರಾಜರಾದಿಗಳಿಂದ ಕೂಡಿದ ಸೈನಿಕರು ಭೂಮಿಯನ್ನು ಮುತ್ತಿದರು. ಒಂದು ಸಲ ಮಹಾ ರಭಸದಿಂದ ಪುರಂಜನಪುರಿಯನ್ನೂ ಮುತ್ತಿದರು. ಆ ಪುರವು ಅಶನ ವಸನ ಪಾನ ಮೈಥುನಾದಿ ಭೋಗಪೂರ್ಣವಾಗಿತ್ತು. ಅದರ ಪಾಲಕನಾದ ಸರ್ಪರಾಜನು ಚೇಷ್ಟಾಲ್ಪತೆಯನ್ನು ಪೊಂದಿರುವುದನ್ನು ನೋಡಿ ಧೈರ್ಯದಿಂದ ಯವನ ಸೈನ್ಯವು ಎಲ್ಲ ದಿಕ್ಕುಗಳಿಂದಲೂ ಪುರವನ್ನು ಮುತ್ತಿ, ಬಾಗಿಲುಗಳನ್ನೊಡೆದು, ನುಗ್ಗಿ ಬಂದು, ಪುರವಾಸಿಗಳನ್ನು ಪೀಡಿಸಿದರು. ಅದನ್ನು ಕಂಡು ಪುರವೆನ್ನದೆಂದಭಿಮಾನದಿಂದ ನೊಂದು ಪುರಂಜನನು ಕುಟುಂಬದಲ್ಲಿ ಮಮತೆಯಿಂದ ಬೆಂದು ಬೆಂಡಾದನು. ಸಂಪತ್ತೆಲ್ಲವೂ ಹೋಯಿತು. ಕಾರ್ಪಣ್ಯವು ತುಂಬಿ ತುಳುಕಿತು. ವಿಷಯಗಳ ಆಶೆ ಹರಿಯಲಿಲ್ಲ. ಪ್ರಜ್ಞಾಬಲವು ಕುಗ್ಗಿತು. ಐಶ್ವರ್ಯವೆಲ್ಲಾ ಗಂಧರ್ವಯವನರ ಹಸ್ತಗತವಾಯಿತು. ನೋಡಿದನು ಪುರಂಜನನು ತನ್ನ ಹಾಳಾದ ಪುರವನ್ನು, ಆದರವಿಲ್ಲದೆ ತಿರಸ್ಕರಿಸುವ ಪುತ್ರ ಪೌತ್ರಾಮಾತ್ಯರನ್ನು, ಕೊನೆಗೆ ಸೌಹಾರ್ದವಿಲ್ಲದ ನಾರಿಯನ್ನು ನೋಡಿದನು ಕಾಲಕನ್ಯಾಗ್ರಸ್ತ ಶರೀರವನ್ನು ಪಾಂಚಾಲವೆಲ್ಲಾ ಶತ್ರುದೂಷಿತವಾಯಿತು. ಆದರೂ ಪ್ರತಿಕ್ರಿಯೆಯನ್ನು ಮಾಡಲರಿಯದೆ ದುರಂತ ಚಿಂತಾಕ್ರಾಂತನಾದ ಪುರಂಜನನು ನಿಟ್ಟುಸಿರುಬಿಟ್ಟನು. ಜಾವ ಜಾವದಿ ಕಾಮಾಭಿಲಾಷೆ ಹೆಚ್ಚುತ್ತಿತ್ತು. ಕನ್ಯೆಯು ಬಿಡಿದಿರಲಿಚ್ಛಿಸಿ ಪತ್ನಿಪುತ್ರಾದಿಗಳನ್ನು ಲಾಲಿಸುತ್ತಾ ಹರಿಜ್ಞಾನದೂರನು, ಭಕ್ತಿಬಾಹಿರನು ಆಗಿ ಕೆಟ್ಟನು. ಪುರವು ಗಂಧರ್ವಯವನರಿಂದ ಹಾಳಾಯಿತು. ಬಲವು ಕಾಲಕನ್ಯೆಯಿಂದ ಕುಗ್ಗಿತು. ಇಷ್ಟವಿಲ್ಲದಿದ್ದರೂ ಪುರವಂ ಬಿಟ್ಟು ಪೊರಮಟ್ಟಲು ಪುರಂಜನನು ಪ್ರಾರಂಭಿಸಿ ಪ್ರಯತ್ನಿಸಿದನು. ಆಗ ಭಯನ ಅಗ್ರಜನಾದ ಪ್ರಜ್ವಾರನು ತಾನಾಗಿ ಬಂದು ಪುರವನ್ನೆಲ್ಲ ಸುಟ್ಟು ಅಣ್ಣನಾದ ಮೃತ್ಯುವಿಗೆ ಅನುಕೂಲ ಮಾಡಿಕೊಟ್ಟನು. ಊರೇ ಸುಡುತ್ತಿರುವುದಂ ಕಂಡು ಪೌರಪರಿಚ್ಛದರಿಂದ ಕೂಡಿ ದೊಡ್ಡ ಕುಟುಂಬವನ್ನು ಕಟ್ಟಿಕೊಂಡಿದ್ದ ಪುರಂಜನನು ಮಡದಿಯಂ ಕಂಡು ಗೋಳಿಟ್ಟು ದುಃಖಿಸಿದನು. ಯವನರು ಅವನ ಮನೆಯನ್ನೆಲ್ಲ ಮುತ್ತಿ ನಾಶಪಡಿಸಿದರು; ಕಾಲಕನ್ಯೆಯಾದ ಜರೆ ಮೈಮುರಿದಳು. ಊರೆಲ್ಲ ಪ್ರಜ್ವಾರದಗ್ಧವಾಯಿತು. ಇದನ್ನೆಲ್ಲ ನೋಡಿ ಆ ಬಡಜೀವನದಲ್ಲಿ ಅನುತಾಪದಿಂದ ಅಯ್ಯೋ! ಪಾಪ! ಎಂದು ಇನ್ನಲ್ಲಿ ನಿಲ್ಲಲಾರದೆ ಪ್ರಾಣಭುಜಂಗನು ಬೆಂಕಿ ಬಿದ್ದುರಿಯುವ ವೃಕ್ಷಕೋಟರದಿಂದ ಓಡುವ ಹಾವಿನಂತೆ ಜೀವಶರೀರವು ನಡುಗುತ್ತಿರಲು ಬಹು ಕಷ್ಟಪಡುತ್ತಿರಲು ಹೊರಹೊರಟನು. ಪೌರುಷವೆಲ್ಲ ಗಂಧರ್ವರಿಂದ ಕೆಡಲು ಪುರಂಜನನು ಸುತ್ತು ಶತ್ರುಗಳನ್ನು ನೋಡಿ ರೋದಿಸಿದನು. ಕುಮಾರಿಯರು, ಪುತ್ರಪೌತ್ರರು, ಮಾವ ಮೈದುನರು, ಅಳಿಯಂದಿರಾಳುಗಳು, ಏನೋ ಉಳಿದಿದ್ದ ಮನೆ, ಧನ, ಭೂಷಣವಸ್ತ್ರಗಳು, ಇವನ್ನೆಲ್ಲ ನೋಡಿ ನಾನು ನನ್ನದೆಂಬ ದುರ್ಬುದ್ಧಿಯಿಂದ ದುಃಖಪಟ್ಟನು. ಪುರಂಜನಿಯ ವಿಯೋಗವನ್ನು ತರುವ ಮರಣವು ಬಂದೊದಗಲು ದೀನನಾಗಿ ಅತ್ತನು.

ಅಯ್ಯೋ! ನಾನು ಲೋಕಾಂತರವನ್ನು ಸೇರುವೆನಾಗ ಕುಟುಂಬಿನಿಯಾದ ನನ್ನವಳು ಹೇಗೆ ಜೀವಿಸುವಳು! ಚಿಕ್ಕಮಕ್ಕಳನ್ನೆಂತು ಸಂತೈಸುವಳು! ನಾ ಮಲಗದೆ ಮಲಗಳು, ನಾನುಣ್ಣದೆ ತಿನ್ನಳು, ನಾ ಮೀಯದೆ ಮೀಯಳು, ನನ್ನ ನೋಡಿ ಸಂತಸಿಸುವುರಿನ್ನಾರು ? ನಾನು ನಗಲು

ನಗುವಳು, ಮುನಿಯಲು ಭಯದಿಂದ ಸುಮ್ಮನಿರುವಳು. ಪ್ರಭಾತವಾಗಲು ಮೇಲಕ್ಕೆಬ್ಬಿಸುವಳು. ಊರು ಬಿಟ್ಟು ಹೋದಾಗ ಶೋಕಿಸುವಳು. ಇವಳಂತೆ ನಡೆಯಲು ಯಾವ ವೀರಪತ್ನಿಯಿಂದಾಗುವುದು? ಪುತ್ರಿಯರ ಮಕ್ಕಳೆನ್ನನ್ನೇ ನಂಬಿರುವರು. ನಾನು ಹೋದಮೇಲೆ ಒಡೆದ ಹಡಗಿನಲ್ಲಿದ್ದ ಜನರಂತೆ ಯಾರಿಗೆ ಅವರೇ ದೂರರಾಗಿ ನಾಶವಾಗುವರೋ ಏನೋ?

ಪುರಂಜನನಿಂತು ಕೃಪಣನಾಗಿ ಸುಮ್ಮನೆ ಶೋಕಿಸುತ್ತಿರಲು ಭಯನಾಯಕನು ಅವನನ್ನು ಹಿಡಿದು ಪಶುವಿನಂತೆ ಸೆಳೆದು ಕೊಂದನು. ಪ್ರಾಣೇಂದ್ರಿಯಾದಿಗಳು ಶರೀರದಿ ನಿಲ್ಲಲಾರದೆ ಆತುರದಿಂದ ಹಾರಿ ಹೋದವು. ಪ್ರಾಣವನ್ನು ಕಾಪಾಡುತ್ತಿದ್ದ ಭುಜಂಗಮವು ಪುರವನ್ನು ಬಿಟ್ಟುಹೋದ ತತ್ಕ್ಷಣವೇ ಪುರಿಯು, ತನ್ನ ಪಂಚಭೂತಾತ್ಮಕ ಪ್ರಕೃತಿಯನ್ನು ಸೇರಿ ನಾಶವಾಯಿತು. ಬಲಾತ್ಕಾರದಿಂದ ಯವನನು ಮೃತ್ಯುವಾಗಿ ಸೆಳೆಯುವಾಗಲೂ ಪುರಂಜನನು ಮೋಹದಿಂದ ಅನಿಮಿತ್ತ ಬಂಧುವಾದ ಸಖನಿರುವನೆಂದು ನೆನೆಯಲಿಲ್ಲ. ದಯೆಯಿಲ್ಲದ ಅವನು ಕೊಂದ ಯಜ್ಞಪಶುಗಳು ತಮಗಾದ ಹಿಂಸೆಯನ್ನು ನೆನೆಸಿ, ರೋಷದಿಂದ ಅವನನ್ನು ಕುಠಾರಗಳಿಂದ ಕಡಿದುಹಾಕಿದವು. ಪಾರವಿಲ್ಲದ ನರಕ ದುಃಖವನ್ನನುಭವಿಸಿ ಬಹು ಕಾಲ ಮಾಡಿದ ಪ್ರಮದಾಸಂಗ ದೋಷದಿಂದಲೂ, ಅವಳನ್ನೇ ನೆನೆಸುತ್ತಾ ಪ್ರಾಣವಂ ಬಿಟ್ಟನಾದ್ದರಿಂದಲೂ, ಪುರಂಜನನು ಪ್ರಮದೆಯಾಗಿ ಪುಟ್ಟಿದನು.

ಪೂರ್ವ ಪುಣ್ಯದಿಂದ ತಮವನ್ನು ತರಿಸಿ ಮದರಹಿತ ಬುದ್ಧಿಯಿಂದ ಕೂಡಿದ ಪುರಂಜನಿಯು ವಿದರ್ಭ ದೇಶದ ರಾಜಸಿಂಹನ ಮನೆಯಲ್ಲಿ ಪುಟ್ಟಿದಳು. ಹರಿಸೇವಾದಿಗಳನ್ನು ಮಾಡಿ ಸಂಸ್ಕೃತ ಮನಸ್ಕನಾದ ಮಲಯಧ್ವಜನೆಂಬ ಪಾಂಡ್ಯರಾಜನು ಯಮನಿಯಮಗಳಿಂದ ರೋಗಿಯು ಇಂದ್ರಿಯಂಗಳನ್ನು ಜಯಿಸಿ ವಿವೇಕ ಜ್ಞಾನಗಳಿಂದ ಹರಿಯನ್ನು ಸೇರುವಂತೆ ಯುದ್ಧದಲ್ಲಿ ಶತ್ರುವೀರನನ್ನು ಗೆದ್ದು ಪರಾಕ್ರಮದಿಂದ ವೈದರ್ಭಿಯನ್ನು ವಿವಾಹವಾದನು. ಆ ಬುದ್ಧಿವತಿಯಲ್ಲಿ ಮಲಯಧ್ವಜನು ಅಸಿತೇಕ್ಷಣೆಯೆಂಬ ಮಗಳನ್ನು ಅನಂತರ ಏಳು ಮಂದಿ ಸುಪುತ್ರರನ್ನು ಪಡೆದನು. ಅವರಿಗೆ ಅರ್ಬುದ ಪುತ್ರರಾದರು. ನೂರಾರು ವರ್ಷದವರು ಮಹೀರಾಜ್ಯವನ್ನು ಭೋಗಿಸಿದರು. ದ್ರವಿಡವರರಾದ ಅವರ ತಂಗಿಯನ್ನು ಹರಿಸ್ತೋತ್ರಪರನಾದ ಅಗಸ್ತ್ಯನು ಮದುವೆಯಾದನು. ಅಸಿತವನ್ನು ಮನಮುಟ್ಟಿ ಭಜಿಸಿದ ಭಕ್ತಳಾದ ಆ ರಾಣಿಯು ಧೃಡಚ್ಯುತನೆಂಬ ಮಗನನ್ನು ಪಡೆದಳು. ಅವನಿಗೆ ಇಧ್ಮವಾಸನೆಂಬ ಮುನಿಯು ಮಗನಾದನು. ಇಧ್ಮವಾಸನು ಗುರುಕುಲಪಿತನೆನಿಸಿದನು. ಧೃಢಚ್ಯುತನು ವಿಷಯಂಗಳನ್ನು ಬಿಟ್ಟು ಹರಿಯಂ ಭಜಿಸಿದನು.

ರಾಜರ್ಷಿಯಾದ ಮಲಯ ಧ್ವಜನು ತನಯರಿಗೆ ಕ್ಷಮಾಮಂಡಲವನ್ನು ಹಂಚಿ ಪಂಡಿತನಾದ ಕಾರಣ ವಿರಕ್ತನಾಗಿ ಕೃಷ್ಣಾಪರೋಕ್ಷವನ್ನು ಪಡೆಯಲು ಕುಲಾಚಲವನ್ನು ಸೇರಿದನು. ಅಲ್ಲಿ ಗುರುಕುಲದಲ್ಲಿ ನೆಲೆಸಿ ತನ್ನ ಹಿಂದೆ ಚಂದ್ರನನ್ನನುಸರಿಸುವ ಚಂದ್ರಿಕೆಯಂತೆ ಗೃಹಾರಾಮ ಸುತರನ್ನು ಬಿಟ್ಟು ವೈರಾಗ್ಯವನ್ನು ತಾಳಿ ಬಂದ ಪುರಂಜನಿಯಿಂದ ವಾಸಿಸಿದನು. ಆಹ್ಲಾದಕರ ವೇದಾಂತಶಾಸ್ತ್ರವು ಆಜ್ಞಾನಾನ್ಯಥಾಜ್ಞಾನ ಧ್ವಂಸಕವಾದ ವೇದಾಂತ ವ್ಯಾಖ್ಯೆಯು ಗುರು–ಶಿಷ್ಯರ ಮನಶ್ಶುದ್ಧಿ ಜ್ಞಾನಸಿದ್ಧಿಗಳನ್ನು ಕೊಡುತ್ತಿರುವಂತೆ ಅಲ್ಲಿ ಚಂದ್ರವದಾ ಎಂಬ ನದಿಯು ತಾಮ್ರಪರ್ಣೀ ನದಿಯು ಪುಣ್ಯಸಲಿಲನಿರಂತರ ಪ್ರವಾಹದ್ವಯರಾಗಿ ಅಂತರ್ಬಹಿಶ್ಶುದ್ಧಿಸಂಪಾದಕವಾಗಿದ್ದವು. ಮಲಯಧ್ವಜನು ಕಂದಮೂಲಗಳಿಂದ ಪುಷ್ಪಪರ್ಣಗಳಿಂದ ಉದಕಗಳಿಂದ ಜೀವಿ

ಸುತ್ತಾ ಶರೀರಶೋಷಕವಾದ ತೀವ್ರತಪವಂಗೈದು ಸುಖದನು ಮೂಲಕಾರಣನು, ಶಾಸ್ತ್ರಫಲದನು, ಉದ್ಗತ ದುಃಖನು ಆದ ಹರಿಯನ್ನು ಭಜಿಸಿದನು. ಶೀತೋಷ್ಣವಾತವರ್ಷಾದಿಗಳನ್ನು ಕ್ಷುತ್ಪಿಪಾಸೆಗಳನ್ನು ಪ್ರಿಯಾಪ್ರಿಯಗಳನ್ನು ಸುಖದುಃಖಗಳನ್ನು ಸಹಿಸಿ ತದ್ವಿಕಾರ ರಹಿತನಾದನು. ಮನನ ರೂಪ ತಪಸ್ಸಿನಿಂದ ಅವನ ಪಾಪ ಕಷಾಯವೂ ಇಂಗಿತು. ಯಮನಿಯಮಗಳಿಂದ ಪೂರ್ಣನು ವ್ಯಾಪ್ತನಾದ ಶ್ರೀಹರಿಯಲ್ಲಿ ಮನವನ್ನಿಟ್ಟು ಇಂದ್ರಿಯವ್ಯಾಪಾರವಂ ಬಿಟ್ಟು ವಾಯ್ವಾಹಾರನಾಗಿ ಮಲಯಧ್ವಜನು ಒಂದು ನೂರು ದೇವ ವರ್ಷಗಳ ಕಾಲ ಬುದ್ಧಿಪ್ರಸಾದ ಜನಕವಾದ ಶಾಸ್ತ್ರವಿಚಾರವನ್ನು ಮಾಡಿದನು. ನಿಶ್ಚಲವಾದ ದೇಹದಲ್ಲಿ ಸ್ಥಿರವಾದ ಬುದ್ಧಿಯಿಂದ ವಾಸುದೇವನನ್ನು ಚಿಂತಿಸಿ ಭಕ್ತಿಪುಲಕಿತನಾದನು. ಅನ್ಯವನ್ನೆಲ್ಲ ಮರೆತು, ಜಗದ್ಭಿನ್ನನಾಗಿ, ತದಂತರ್ವ್ಯಾಪ್ತನು, ಜೀವಾಂತರ್ಯಾಮಿಯು ಆದ ಹರಿಯು ಅಧೀನವಲ್ಲವೆಂದು ತಿಳಿದನು. ಸ್ವಪ್ನದಲ್ಲಿ ಜೀವನು ತನಗೆ ಬೇಡವಾದ ಶಿರಚ್ಛೇದಾದಿಗಳನ್ನು ನೋಡುವನು. ಬೇಕಾದ ಸ್ವಪ್ನವು ಬೇಕಾದಾಗ ಬೇಕಾದಷ್ಟು ಕಾಲ ಬರಲಾರದು. ಆದ್ದರಿಂದ ಸ್ವಪ್ನದಲ್ಲಿ ಜೀವನು ಅಸ್ವತಂತ್ರನೆಂದು ಅನುಭವ ವೇದ್ಯವೇ ಆಗಿದೆ. ಅಂತೆಯೇ ಜಾಗ್ರದಾದಿಗಳಲ್ಲಿಯೂ ಅಸ್ವತಂತ್ರಜೀವನು ಸ್ವಪ್ನಾದಿದರ್ಶಕಪರಮಾತ್ಮಾಧೀನನೇ ಸರಿ. ಅಂತೆಯೇ ಜಾಗ್ರದಾದಿಗಳಲ್ಲಿಯೂ ಅಸ್ವತಂತ್ರಜೀವನು ಸ್ವಪ್ನಾದಿದರ್ಶಕಪರಮಾತ್ಮಾಧೀನನೇ ಸರಿ. ಶ್ರೀಹರಿಯು ಸಾಕ್ಷಿಯು, ಸರ್ವಜ್ಞನು, ಸರ್ವಾವಸ್ಥಾ ಪ್ರೇರಕನು, ಇತ್ಯಾದಿ ವಿಜ್ಞಾನವನ್ನು ಪೊಂದಿ ಜೀವನ್ಮುಕ್ತನಾದ ಮಲಯಧ್ವಜನೊಂದು ದಿನ ಶ್ರೀಹರಿಗುರೂಕ್ತ ಮಾರ್ಗದಿಂದ ದೇಹವನ್ನು ತ್ಯಜಿಸಿ ಪ್ರಕಾಶಮಾನವಾದ ಅರ್ಚಿರಾದಿ ಮಾರ್ಗವನ್ನು ಪೊಂದಿದನು. 'ಜೀವಾಂತರ್ಯಾಮಿಗೂ ಜೀವಪ್ರಾಪ್ಯನಿಗೂ ಭೇದವಿಲ್ಲ. ಅವು ಹರಿಯ ಸ್ವಾಂಶಗಳು. ನಾನು ಭಿನ್ನಾಂಶವು, ಶ್ರೀಹರಿನಿಯತನು' ಎಂದು ಚಿಂತಿಸುತ್ತಾ ಶರೀರವನ್ನು ಬಿಟ್ಟನು.

ಪತಿಯನ್ನು ಹಿತದಿಂದ ಸೇವಿಸುತ್ತಿದ್ದ ಪುರಂಜನಿಯು ಪತಿದೇವನನ್ನು ಪ್ರೇಮದಿಂದ ಉಪಚರಿಸುವುಗೇ ಪರಮಧರ್ಮವೆಂದರಿತಿದ್ದಳು. ನಾರುಸೀರೆಯನ್ನುಟ್ಟು ವ್ರತಗಳಿಂದ ಕೃಶಳಾಗಿ, ಧೂಮರಹಿತವಾದ ಅಗ್ನಿಶಿಖೆಯಂತೆ ಪತಿಯಂ ಬಿಡದಿದ್ದಳು. ಅವನು ಮರಣವನ್ನು ಪೊಂದಿರುವುದನ್ನು ತಿಳಿಯದೆ ಸಂಸ್ಕಾರಬಲದಿಂದ ಏಕವ್ರತನಿಷ್ಠಳಾಧ ಪುರಂಜನಿಯು ಹಿಂದಿನಂತೆ ಉಪಚರಿಸಲು ಬಂದಳು. ಕಾಲುಗಳನ್ನು ಮುಟ್ಟಿ ನಮಿಸುವಾಗ ತಣ್ಣಗಾಗಿ ತೋರಲು ಸ್ವರೂಪಬುದ್ಧಿಬಲದಿಂದ ತಿಳಿದು ಗುಂಪನ್ನು ಬಿಟ್ಟು ಬಂದ ಹರಣಿಯಂತೆ ವ್ಯಸನಾಕ್ರಾಂತಳಾದಳು. ಅಯ್ಯೋ! ಎಂದು ದೀನವಾಗಿ ರೋದಿಸಿದಳು. ಬಂಧುರಹಿತಳು ವೃತ್ತಿಶೂನ್ಯಳು ಆದೆನೆಂದು ಶೋಕಿಸಿದಳು. ಅಶ್ರು ಜಲಗಳಿಂದ ಸ್ತನಪಟ್ಟಿಕೆಯು ತೊಯ್ದು ಮುಖವು ಬಾಡಿತು.

'ರಾಜರ್ಷೇ! ಏಳು ಏಳು! ಉದಧಿಮೇಖಲೆಯಾದ ಭೂಮಂಡಲವು ಕಳ್ಳಕಾಕರ ಪಾಲಾಗಿದೆ. ನೀಚರಾಜರಿಳೆಯನ್ನು ಪಾಲಿಸಿ ಹಾಳುಮಾಡುವರು. ಎದ್ದು ಕಾಪಾಡು' ಎಂದು ಪುರಂಜನಿಯು ಕಣ್ಣೀರಿನಿಂದ ಪತಿಪಾದವನ್ನು ತೊಳೆಯುತ್ತಾ ರೋದಿಸಿದಳು.

ದಾರುಮಯ ಚಿತೆಯನ್ನು ಮಾಡಿ ಪತಿಯ ಕಳೇವರವನ್ನದರ ಮೇಲಿಟ್ಟಳು. ಚಿತೆಗೆ ಬೆಂಕಿ ಹಚ್ಚಿ ಸಹಗಮನ ಮಾಡಲುದ್ಯುಕ್ತಳಾದಳು. ವೇದಜ್ಞಾನಿಯು ಹರಿಗುಣ ಪ್ರತಿಪಾದಕನು ಆದ ಪೂರ್ವಸಖನು ಬ್ರಾಹ್ಮಣರೂಪದಿಂದ ಬಂದು ಪುರಂಜನಿಯನ್ನು ಸಮಾಧಾನಪಡಿಸಲು ಮಧುರವಚನದಿಂದ ನುಡಿದನು–

ನಿನ್ನ ಜಾತಿ ಯಾವುದು? ನಿನಗಿವನಿಂದ ಏನು ಸಂಬಂಧ? ಈ ಶರೀರವನ್ನು ನೋಡಿ ಅಳುತ್ತಿರುವೆ. ಇದು ನಿನಗೇನಾಗುವುದು? ನಾನಾರು ಕಂಡು ತಿಳಿದೆಯಾ? ಪೂರ್ವದಲ್ಲಿ ವೇದಾಂತ ವಿಚಾರ ಸಮಯದಲ್ಲಿ ನಿನ್ನ ಜೊತೆಯಲ್ಲೇ ಇದ್ದೆ. ಸಖಿ ನೀನು ಅಜ್ಞಾತವೆಂಬ ಪರಮಾತ್ಮನ ಸಖನಲ್ಲವೇ? ಸ್ಮರಿಸಿ ಅವನನ್ನು ತಿಳಿ. ನಾನು ಅವಿಜ್ಞಾತ ಸಖನೇ. ನೀನೆನ್ನನ್ನು ಬಿಟ್ಟು ಭೌಮಭೋಗಲಾಲಸನಾಗಿ ಕೆಳಗಿಳಿದು ಬಂದೆ. ನಾವಿಬ್ಬರೂ ನಿರ್ಲಿಪ್ತರು. ಹಂಸಪಕ್ಷಿಗಳಾಗಿ ಮಾನಸ ಸರೋವರದಿ ಸಖರಾಗಿದ್ದೆವು. ಸಾವಿರಾರು ವರ್ಷಗಳಿದ್ದು ಜಾತಿಸ್ಮೃತಿಯಿಂದ ಪ್ರಕಾಶಿಸುತ್ತಿರಲೊಂದು ದಿನ ನೀನು ಬಂಧುವಾದೆನ್ನನ್ನುಬಿಟ್ಟು ಗ್ರಾಮ್ಯ ಸುಖವಂ ಪೊಂದಲಿಲ್ಲಿಗೆ ಬಂದೆ. ಇದು ನಿನ್ನ ಪ್ರಾರಬ್ಧವೇ ಸರಿ! ಒಬ್ಬಳಿಂದ ಕೂಡಿ ಈ ನವಮುಖಪುರವನ್ನು ಪೊಕ್ಕು ನೂರುವರ್ಷ ಪಾಲಿಸಿದೆ. ಪಂಚಾರಾಮಗಳು, ನವದ್ವಾರಗಳು, ಒಬ್ಬ ಪಾಲಕ, ಮೂರು ಕೋಷ್ಟಕ, ಆರು, ಕೂಲ, ಐದಂಗಡಿ, ಪ್ರಕೃತಿಗಳೈದು. ಇವುಗಳಿಂದ ಕೂಡಿದ ನಗರದಿ ಸ್ತ್ರೀಜಿತನಾಗಿ ವಾಸಿಸಿದೆ. ಆರಾಮಗಳಿಂದ್ರಿಯಂಗಳು ವಿಷಯಂಗಳು, ನವದ್ವಾರಗಳು ಘ್ರಾಣಾದಿಗಳು, ತೇಜೋಬನ್ನಗಳೇ ಕೋಷ್ಟಕಗಳು. ಪ್ರಾಣನೇ ಬಾಲಕ. ಆರುಕೂಲಗಳಿಂದ್ರಿಯ ಗೋಲಂಕಗಳು, ವಾಗಾದಿ ಕರ್ಮೇಂದ್ರಿಯಗಳೈದಂಗಡಿ, ಭೂತಗಳೈದು ಪ್ರಕೃತಿಗಳು, ಬುದ್ಧಿಯೇ ಸ್ತ್ರೀಯು, ಭೋಗಕಾರಣಳಾಗಿ ನಿನ್ನನ್ನು ವಿಷಯಗಳ ಕಡೆ ಸೆಳೆದಳು. ಜ್ಞಾನವನ್ನು ಕಳೆದಳು. ವೈಷಯಿಕ ಬುದ್ಧಿಸಂಗವನ್ನು ಮಾಡಿ ಇಂತಹ ಪಾಪಿಯಾದೆ. ನೀನು ವಿದರ್ಭರಾಜನ ಮಗಳೇ? ಅಲ್ಲ, ಇವನು ನಿನ್ನ ಪತಿಯೇ? ಅಲ್ಲ. ನವಮುಖ ನಗರದಿ ಪುರಂಜನಿಯ ಕೂಡ ವಾಸಿಸಿದ ಪುರಂಜನನಲ್ಲವೇ? ಇದೆಲ್ಲ ಶ್ರೀಹರಿಯು ಬಂಧಕಶಕ್ತಿಯ ಮಹಿಮೆ. ಈ ಜನ್ಮಾದಿಗಳು ಸ್ತ್ರೀಪುರುಷ ದೇಹಗಳು ಪತಿಪತ್ನೀ ಸಂಬಂಧಗಳೆಲ್ಲವನ ಸಂಕಲ್ಪಾನಬಂಧವು ನಿತ್ಯವಲ್ಲ. ನಿಜವಾಗಿಯೂ ನೀನು ಶುದ್ಧಜೀವನು, ನಿನ್ನ ಗತಿಯನ್ನರಸು. ಅರಸನಾದ ಹರಿಯನ್ನರಿಸು. ನನ್ನ ನಿನ್ನ ಅಂತರ್ಯಾಮಿಯಾಗಿ ಜ್ಞಾನಕಾರಣನಾದ ಶ್ರೀಹರಿಯು ಅಹಂ ತ್ವಂ ಎಂಬ ಶಬ್ದಗಳಿಂದ ಹೇಳಲ್ಪಡುವನು. ಅವನಿಗೆ ಸ್ವಗತಭೇದವಿಲ್ಲ. ಅವನ ರೂಪಗಳಲ್ಲಿ ಎಳ್ಳಷ್ಟೂ ಭೇದವನ್ನು ಎಣಿಸದಿರುವರೇ ಪಂಡಿತರು. ನೀನು ನಾನಲ್ಲ, ನಾನು ನೀನಲ್ಲ; ನಾವೀರ್ವರು ಜೀವರು. ಈರ್ವರೂ ಹರ್ಯಧೀನರು, ಹರಿಭಿನ್ನರು, ಬಿದ್ದುಹೋದ ಶರೀರ ಜೀವನಲ್ಲ. ಅದು ಜಡವು ಜಡಜೀವರು ಭಿನ್ನರು, ಇಂತು ಪಂಚಭೇದವನ್ನು ತಿಳಿ. ನೀನು ಸಾಮಾನ್ಯಜ್ಞನಾದ ಜೀವನು. ಆದರೆ ನಾನು ವಿಶೇಷಜ್ಞನು. ಜೀವರಾದರೂ ನಮ್ಮಲ್ಲಿದ್ದಂತೆ ಬ್ರಹ್ಮಪರ್ಯಂತವೂ ತಾರತಮ್ಯವಿದೆ. ತಾರತಮ್ಯ ಜ್ಞಾನವೇ ಯಥಾರ್ಥಜ್ಞಾನ ಮೋಕ್ಷಗಳಿಗೆ ಸಾಧಕವು. ಒಬ್ಬ ಪುರುಷ ತನ್ನನ್ನು ದರ್ಪಣದಲ್ಲಿಯೇ ಅಥವಾ ಕಣ್ಣಿನಲ್ಲಿಯೋ ಪ್ರತಿಬಿಂಬನಾದಿ ಪ್ರತಿಫಲಿಸಿದ್ದನ್ನು ನೋಡಿ ಎರಡೆಂದು ತಿಳಿದಂತೆ ನನ್ನ ನಿನ್ನ ಅಂತರ್ಯಾಮಿಯು ನನ್ನಲ್ಲಿ ನಿನ್ನಲ್ಲಿರುವುದರಿಂದ ಭಿನ್ನನೆಂದು ತಿಳಿಯಬೇಡ. ಅವನೊಬ್ಬನಾದರೂ ಅನೇಕ ಜೀವೋಪಾದಿಗಳಲ್ಲಿ ಪ್ರತಿಫಲಿಸಿ ಪ್ರತಿಬಿಂಬರಾವ ಆ ಜೀವಿಗಳನ್ನು ತನ್ನಧೀನದಲ್ಲಿಟ್ಟು ನಡೆಸುವನು. ಹರಿಯಿಂದಲೇ ಜೀವನಿಗೆ ಸತ್ತಾ, ತ್ರೈವಿಧ್ಯವು ಎಂದು ತಿಳಿ. ಜೀವನು ಹರಿಸದೃಶನು ತದಧೀನನಾಗಲಿ ಸ್ವತಂತ್ರನಲ್ಲ.

ಈ ರೀತಿಯಾಗಿ ಮಾನಸ ಹಂಸನಾದ ಪುರಂಜನನು ಗುರು ಹಂಸವಚನವನ್ನಾಲಿಸಿ, ಅವನಂ ಬಿಟ್ಟು ವಿಷಯಾಸಕ್ತಿಯಲ್ಲಿ ಮನಸ್ಸಿಟ್ಟು ಬಂದುದರಿಂದ ಮರೆತುಹೋದ ಸ್ಮೃತಿಯನ್ನು ಮತ್ತೆ ಪೊಂದಿದನು.

ಬರ್ಹಿಷ್ಮನ್! ಅನ್ಯಾಪದೇಶದಿಂದ ಈ ಅಧ್ಯಾತ್ಮಿಕಾರ್ಥಗಳನ್ನು ನಿನಗುಪದೇಶಿಸಿದೆನು. ದೇವತೆಗಳು ಪ್ರತ್ಯಕ್ಷವಚನಗಳನ್ನೊಲ್ಲರು. ಪರೋಕ್ಷಪ್ರಿಯರಾದ ದೇವತೆಗಳಂತೆಯೇ ಶ್ರೀನಾರಾಯಣನು ಪರೋಕ್ಷವನ್ನೇ ಮೆಚ್ಚುವನು. ಭಗವಂತನಾದ ಶ್ರೀಹರಿಯು ಪ್ರೀತನಾಗಲಿ!

ಎಂದು ನಾರದನು ಪುರಂಜನ ಚರಿತೆಯನ್ನು ಮುಗಿಸಿದನು.

## ೨೯. ಪುರಂಜನ ಕಥಾರ್ಥ – ಬರ್ಹಿಷ್ಮದ್ಬೋಧೆ

ಪ್ರಾಚೀನ ಬರ್ಹಿಯು ಕೇಳಿದನು–

ಪೂಜ್ಯ ನಾರದ! ಏನೋ ನೀನು ಪೇಳಿದ ಕಥೆಯು ಅರ್ಥವಾಗಲಿಲ್ಲ. ಚತುರನು ಚತುರ್ಮುಖತನಯನಾದ ನಿನ್ನ ವಚನಗಳೆಷ್ಟು ಚೆನ್ನಾಗಿ ಪೇಳಿದರೂ ಜ್ಞಾನಿಗಳಿಗೆ ತಿಳಿಯುವುದೇನೋ ಆಗಲಿ ನನ್ನಂತಹ ಕರ್ಮಮೋಹಿತರಿಗೆ ಸುಕರವಲ್ಲ. ದಯಮಾಡಿ ವಿವರಿಸಿ ಹೇಳು.

ಆಗ ನಾರದನಿಂತೆಂದನು–

ಪುರುಷನೇ ಪುರಂಜನನು . ಪುರವೆಂದರೆ ಶರೀರವು. ಶರೀರದಿಂದ ವ್ಯಕ್ತನಾಗಿ ಶರೀರವನ್ನು ಜನಯಿಸುವನಾದ್ದರಿಂದ ಪುರಂಜನನೆಂದರೆ ಜೀವನು. ಅವಿಜ್ಞಾತನು. ಜೀವಸಖನಾದ ಪರಮಾತ್ಮನು. ಅವಿಜ್ಞಾತ ಸಖನೆಂದರೆ ಹರಿಯ ತೋರಿಸುವ ಗುರುವು. ಈಶನಾಮರೂಪ ಕ್ರಿಯಾ ಗುಣಗಳನಂತರವು. ಅವನ್ನಾರು ಬಲ್ಲರು? ಭಕ್ತಾನುಗ್ರಹವನ್ನು ಮಾಡಿ ನಾಮರೂಪಾದಿಗಳನ್ನು ಗ್ರಹಿಸಿ ವ್ಯಕ್ತವಾಗುವ ಶ್ರೀಹರಿಯು ಅವಿಜ್ಞಾತನೇ ಸರಿ! ಸ್ವಚ್ಛಂದನಾದಿ ಪ್ರಕೃತಿಗುಣಗಳಲ್ಲಿ ರಮಿಸುವ ಜೀವನಿಗೆ ತತ್ಸ್ಯಾಪಕವಾದ ಇಂದ್ರಿಯಗಳೇ ನವದ್ವಾರಗಳು. ಆ ಶರೀರವವನಿಗೆ ಪ್ರಿಯವೆನಿಸಿತು. ವೈಷಯಿಕ ಬುದ್ಧಿಯೇ ಪುರಂಜನಿಯೆಂಬ ಪ್ರಮದೆ. ಅವಳೇ ಅಹಂಮಮಕಾರಗಳ ಜನ್ಮಭೂಮಿ. ಅಂತಹ ಮನಸ್ಸಿನಿಂದಲೇ ಇಂದ್ರಿಯ ವಿಷಯ ಸುಖಾದಿ ಗ್ರಹಣವು ಜೀವನಿಗಾಗುವುದು. ಜ್ಞಾನಕಮೇಂದ್ರಿಯಗಳೇ ಅವಳ ಸ್ನೇಹಿತರು ಇಂದ್ರಿಯ ವೃತ್ತಿಗಳವರ ಅನಂತ ಪರಿಚಾರಕರು. ಪ್ರಾಣಾಪಾನ ವ್ಯಾನೋದಾನ ಸಮಾನವೆಂಬ ಐದು ಹೆಡೆಯಿಂದಲೊಪ್ಪುವ ಮುಖ್ಯಪ್ರಾಣನೇ ನಾಗಪಾಲಕನು. ಪಾಂಚಾಲರೆಂದರೆ ಗೊಂಬೆಯಂತಾಡುವ ಜೀವಶರೀರಗಳು. ಕಣ್ಣು ಮೂಗು ಬಾಯಿ ಇವೈದು ಮುಂದಿನ ದ್ವಾರಗಳು. ಕರ್ಣಗಳೆರಡು ಎರಡು ದಿಕ್ಕಿನ ದಕ್ಷಿಣೋತ್ತರ ದ್ವಾರಗಳು. ಪಶ್ಚಿಮ ದ್ವಾರಗಳೆಂದರೆ ಶಿಶ್ನ ಗುದಗಳು. ನಿಭ್ರಾಜಿತವೆಂದರೆ ರೂಪಘ್ರಾಣವೇ ಅವಧೂತನು. ಅಂಗಡಿಯೇ ವಾಕ್. ಅಪಣ ವ್ಯವಹಾರದಂತೆ ವಾಕ್ಕಿನ ಚಿತ್ರವಿಚಿತ್ರತೆ. ಪಿತೃದೇವಯಾನಗಳಂತೆ ದಕ್ಷಿಣೋತ್ತರ ಕರ್ಣದಿಂದ ಬರುವ ಪ್ರವೃತ್ತಿ ನಿವೃತ್ತಿ ಕರ್ಮವೈಚಿತ್ರವು. ದುರ್ಮದವೆಂದರೆ ಉಪಸ್ಥವು. ಮೇಹನನೇ ಅಸುರೀದ್ವಾರವು. ವೈಶಸವೆನ್ನಲು ನರಕವು. ಕೈಗಳು ಕಾಲುಗಳು ಉಭಯರು ಕುರುಡರು. ಕುರುಡರಲ್ಲದವರನ್ನು ಪೊತ್ತು ತಿರುಗುತ್ತಾ ಅವರಿಗೆ ಬೇಕಾದ್ದನ್ನು ತಂದುಕೊಡುವರು. ಅಂತಃಪುರವೆಂದರೆ ಹೃದಯವು. ಮನಃ ಪ್ರಭಾವದಿಂದ ಹರ್ಷಶೋಕ ಮೋಹ ಪ್ರಸಾದಾದಿಗಳನ್ನು ಜೀವನು ಹೊಂದುತ್ತಾ ನೆಲಸಿರುವನು.

ದೇಹವೇ ರಥವು; ಇಂದ್ರಿಯಗಳೇ ಕುದುರೆಗಳು; ರಥಗತಿಯೇ ಸಂವತ್ಸರವು. ಚಕ್ರಗಳೆಂದರೆ ಪುಣ್ಯಪಾಪ ಕರ್ಮಗಳು; ಸತ್ತ್ವರಜಸ್ತಮಗಳೇ ಧ್ವಜಗಳು. ಪ್ರಾಣಾದಿಪಂಚಕವೇ ರಥಬಂಧಗಳು. ಮನಸ್ಸೇ ಲಗಾಮು; ಬುದ್ಧಿಯೇ ಸಾರಥಿಯು; ಹೃದಯವೇ ರಥದ ಗೂಡು; ಜೀವನೇ

ರಥಿಕನು. ಶೀತೋಷ್ಣಾದಿ ದ್ವಂದ್ವಗಳೇ ಕೂಬರಗಳು. ಪಂಚವಿಷಯಗಳೇ ಬಾಣಗಳು; ಸಪ್ತ ಧಾತುಗಳೇ ಸೈನ್ಯವು; ಹೊರಗೆ ಓಡುವ ಪರಾಕ್ರಮವೇ ಮನೋರಥಗಳು. ಮೃಗತೃಷ್ಣೆಯಲ್ಲಿ ನೀರಿನಾಶೆಯಿಂದೋಡಿದಂತೆ ಜೀವನು ವಿಷಯಗಳು ದುಃಖಪ್ರದವೇ ಆಗಿದ್ದರೂ ಸುಖಭ್ರಾಂತಿಯಿಂದ ಅವನ್ನು ಬೆನ್ನಟ್ಟಿ ಓಡಿ ದುಃಖಪಡುತ್ತಿರುವನು. ಚಂಡವೇಗನೆಂದರೆ ಸಂವತ್ಸರ ಕಾಲವು. ಭಯನೆಂದರೆ ಮೃತಿ. ಜರಾ ಎಂದರೆ ಮುಪ್ಪು. ೩೬೦ ಗಂಧರ್ವರು ಹಗಲು; ೩೬೦ ಗಂಧರ್ವಿಯರು ರಾತ್ರಿ; ಪ್ರಜ್ವಾರನೆಂದರೆ ವಿವಿಧ ಜ್ವರ . ಆಧಿವ್ಯಾಧಿಗಳು ಭಯನ ಸೈನಿಕರು.

ಇಂತು ದೈವಿಕ ಭೌತಿಕ ಮಾನಸಿಕ ದುಃಖಗಳಿಂದ ಕ್ಲೇಶಪಡುತ್ತಾ ನೂರು ವರ್ಷ ದೇಹದಲ್ಲಿದ್ದು ಜೀವನು ಅಭಿಮಾನದಿಂದ ದೇಹದ ಆಗುಹೋಗುಗಳನ್ನು ತನ್ನ ತಲೆಯ ಮೇಲೆ ಪೊತ್ತು ಕಷ್ಟಪಡುತ್ತಿರುವನು. ಪ್ರಾಣಗಳೇಂದ್ರಿಯಗಳು ಮನಸ್ಸು ಇವುಗಳಿಗೆ ಸಿಲುಕಿ ನಾನು ನನ್ನದೆನ್ನುತ್ತಾ ದೇಹಿಯು ಪ್ರಾಕೃತ ಕರ್ಮಗಳನ್ನು ಫಲಾಪೇಕ್ಷೆಯಿಂದ ಮಾಡಿ ಪುನಃ ಆ ಪುಣ್ಯಪಾಪ ಫಲವನ್ನುಣ್ಣಲು ವಿವಿಧ ಯೋನಿಗಳಲ್ಲಿ ಪುಟ್ಟಿ ಸಾಯುತ್ತಿರುವನು. ಭಗವದ್ವಿಸ್ಮೃತಿಯೇ ಇದೆಲ್ಲದರ ಕಾರಣವು. ಸಾತ್ವಿಕ ಕರ್ಮವು ಪ್ರಕಾಶಕವಾದ ಸ್ವರ್ಗಾದಿ ಲೋಕವನ್ನು ಪೊಂದಿಸುವುದು. ರಾಜಸಕರ್ಮವು ಮನುಷ್ಯ ಯೋನಿಯನ್ನು ತಾಮಸಕರ್ಮವು ಅಧೋಲೋಕವನ್ನು ಪೊಂದಿಸುವನು. ಸ್ತ್ರೀಯಾಗಿ, ಪುರುಷನಾಗಿ, ದೇವನಾಗಿ, ಮನುಜನಾಗಿ, ದಾನವನಾಗಿ ಜನಿಸಲು ಸ್ವಭಾವವು ತದನುಗುಣ ಸಾತ್ತ್ವಿಕಾದಿ ಕರ್ಮಗಳೇ ಕಾರಣವಾಗಿವೆ.

ಹಸಿವೆಗೊಂಡ ನಾಯಿಯು ಮನೆಮನೆಯ ಮುಂದಲೆಯುತ್ತಾ ಅಲ್ಲಲ್ಲಿ ಬಂದ ಅನ್ನವನ್ನೋ ಅಥವಾ ಪೆಟ್ಟನ್ನೋ ತಿಂದು ದೀನನಾಗಿರುವಂತೆ ಕಾಮಚಿತ್ತನಾಗಿ ಜೀವನು ಅನೇಕ ಲೋಕಗಳಲ್ಲಿ ತಿರುಗುತ್ತಾ ಪ್ರಿಯಾಪ್ರಿಯಗಳನ್ನು ಪೊಂದುತ್ತಿರುವನು. ದೈವಿಕವಾದ ದುಃಖವಿಲ್ಲದಿರೆ ಮಾನಸಿಕ ದುಃಖ, ಅದೂ ಇಲ್ಲದಿರೆ ಭೌತಿಕ. ಈ ರೀತಿ ಎಡೆಬಿಡದೆ ದುಃಖವು ಬರುವಾಗ ಸುಖವೆಲ್ಲಿಯದು? ರಾಜನ್! ದುಃಖಪ್ರತೀಕಾರಾಯಾಸವು ದುಃಖವೇ ಆಗಿದೆ ಅಲ್ಲವೇ? ಕೇಳು. ಓರ್ವ ಮನುಜನು ದೊಡ್ಡ ಮೂಟೆಯನ್ನು ತಲೆಯ ಮೇಲಿಟ್ಟು ಪೋಗುವಾಗ ತಲೆ ನೋಯಲು ಆ ಮೂಟೆಯನ್ನು ಭುಜದ ಮೇಲಿಟ್ಟು, ಭುಜವು ನೋಯಲು ಕಂಕುಳಲ್ಲಿಟ್ಟನದರಿಂದ ಅವನು ಭಾರವಹನಲ್ಲವೇ ಇರುವನೇ? ಅಂತೆಯೇ ದುಃಖಪ್ರತೀಕಾರಗಳೆಲ್ಲವೂ ದುಃಖರೂಪವೇ ಆಗಿವೆ.

ಕರ್ಮಫಲವನ್ನು ನಾಶಮಾಡಲು ಕರ್ಮ ಸಮರ್ಥವಲ್ಲ. ಕರ್ಮಫಲವು ನಿವಾರ್ಯವೆನಿಸಿದರೆ ಕರ್ಮವಲ್ಲ, ತನ್ನಿವರ್ತಕವು, ನಿವಾರ್ಯ ನಿವಾರಕಗಳೆರಡೂ ಈಶ್ವರೇಚ್ಛಾಧೀನವಾಗಿವೆ. ಸ್ವಪ್ನವನ್ನು ನೋಡುವ ಜೀವನು ಶಿರಚ್ಛೇದಾದಿಗಳನ್ನನುಭವಿಸುತ್ತಾ 'ಸಾಕೋ ಸಾಕು' ಎಂದೊದರಲು ಸ್ವಪ್ನ ನಿವರ್ತನವಾಗುವುದಿಲ್ಲ. ಈಶ್ವರೇಚ್ಛೆಯಿಂದ ಸ್ವಪ್ನವು ಮುಗಿಯುವುದು. ಈಶ್ವರೇಚ್ಛೆಯಿಂದ ಜಾಗ್ರತವಾದೀತು. ಸ್ವಪ್ನ ನೋಡುವಾಗ ವಿಷಯ ಭೋಗದಂತೆ ಅಪರೋಕ್ಷ ಜ್ಞಾನವಿಲ್ಲದಿರೆ ಸಂಸಾರವು ಮನಸ್ಸಿನಲ್ಲಿ ವಾಸನರೂಪವಾಗಿರುವುದರಿಂದ ನಿವೃತ್ತವಾಗುವುದಿಲ್ಲ. ಆದ್ದರಿಂದ ಭಗವದಪರೋಕ್ಷ ಜ್ಞಾನವೇ ಸಂಸಾರ ನಿವರ್ತಕವೆಂದರಿತು ತತ್ಕಾರಣವಾದ ಜ್ಞಾನಪೂರ್ವಕ ಭಕ್ತಿಯನ್ನು ಮಾಡುವುದೇ ಜೀವನಿಗೆ ಮಹಾಶ್ರೇಯಸ್ಕರವು.

ಭಕ್ತಿಯಿಂದ ಜ್ಞಾನ; ಭಕ್ತಿಯಿಂದ ವೈರಾಗ್ಯ; ಪ್ರಾಣಯಾಮಾದಿ ಬಲದಿಂದ ಮನಶುದ್ಧಿಯನ್ನು ಪೊಂದಿದವನು ಜ್ಞಾನವೈರಾಗ್ಯಗಳನ್ನು ಅವುಗಳಿಂದ ದೃಢಭಕ್ತಿಯನ್ನು ಪೊಂದಿ ಮುಕ್ತಿ

ಯೋಗ್ಯನೆನಿಸುವನು. ಭಕ್ತಿಯು ಬೇಗನೆ ಪಕ್ವವಾಗಲು ಅಚ್ಯುತಕಥಾಶ್ರವಣವನ್ನು ಮಾಡು. ರಾಜರ್ಷೇ! ನಿತ್ಯವೂ ಶ್ರದ್ಧೆಯಿಂದ ಶ್ರೀಹರಿ ಮಹಿಮೆಯನ್ನು ಕೇಳು.

ಎಲ್ಲಿ ಭಗವದ್ಭಕ್ತರೋ, ಎಲ್ಲಿ ಶುದ್ಧಮನಸ್ಕರಾದ ಸಾಧುವರರೋ, ಎಲ್ಲಿ ಹರಿಕಥಾ ಶ್ರವಣಮಗ್ನ ಜನರೋ ಅಲ್ಲಿ ಮಹಜ್ಜನರ ಮುಖಪದ್ಮದಿಂದ ಹರಿದು ಬಂದ ಮಧುವೈರಿ ಚರಿತ್ರ ಪೀಯೂಷ ಲಹರೀ ಪವಿತ್ರ ಪ್ರವಾಹವು ಹರಿಯುತ್ತಲೇ ಇರುವುದು. ಅದನ್ನು ಬಿಡದೆ ಶ್ರದ್ಧೆಯಿಂದ ಕರ್ಣಪುಟ ತುಂಬಿ ಪಾನ ಮಾಡುವ ಸುಜನರನ್ನು ಕ್ಷುತ್ಪಿಪಾಸಾಭಯ ಶೋಕ ಮೋಹಗಳೆಂದಿಗೂ ಮುಟ್ಟಿ ಪೀಡಿಸಲಾರವು. ಜೀವರಿಗೆ ಸ್ವಾಭಾವಿಕವೀ ದೇಹಧರ್ಮಗಳು. ಅವುಗಳಲ್ಲೇ ಮಗ್ನರಾದರೆ ಅವರಿಗೆ ಹರಿವಿಕ್ರಮೋದಾರಚರಿತ ಭಾಗೀರಥೀ ದೂರಳಾಗಿ ಬಿಡುವಳು. ಹರಿಕಥಾಮೃತಪಾನವವರಿಗೆ ರುಚಿಸುವುದೂ ಇಲ್ಲ. ಪೂಜ್ಯತಮ ಬ್ರಹ್ಮದೇವನು, ಶಂಕರನು, ಮನುರಾಜನು, ದಕ್ಷಾದಿ ಪ್ರಜೇಶರು, ನೈಷ್ಠಿಕರಾದ ಸನಕಾದಿಗಳು, ಭೃಗು, ವಸಿಷ್ಠ, ಮರೀಚಿ, ಅತ್ರಿ, ಅಂಗಿರಾಃ, ಪುಲಸ್ತ್ಯ, ಪುಲಹ, ಕ್ರತು, ಕರ್ದಮ ಮೊದಲಾದ ನನ್ನಂತಹ ಬ್ರಹ್ಮವಾದಿ ಜನರು, ಬೃಹಸ್ಪತ್ಯಾದಿ ಋಷಿಗಳು ತಪೋವಿದ್ಯಾಸಮಾಧಿಗಳನ್ನು ಶ್ರದ್ಧೆಯಿಂದ ಮಾಡಿ ಆ ವಿಷ್ಣುವಿನ ಪರಮಪದ ಸ್ವರೂಪವನ್ನು ತಿಳಿದರೂ ಸಾಕಲ್ಯೇನ ತಿಳಿಯದೇ ಇರುವರು. ಅತ್ಯಂತ ವಿಸ್ತರವು ದುಷ್ಪಾರವು ಆದ ವೇದಾದಿ ಶಾಸ್ತ್ರಗಳಲ್ಲಿ ನಿಷ್ಣಾತರಾಗಿದ್ದವರು ಕೂಡ ವೇದೋಕ್ತ ಲಕ್ಷಣಗಳಿಂದ ಪರಮಾತ್ಮನನ್ನು ಪೂರ್ಣವಾಗಿ ತಿಳಿಯಲಾರದೆ ಇರುವರು.

ಬರ್ಹಿಷ್ಮನ್! ಎಲ್ಲಾ ಜಂತುಗಳಿಗೆ ದೇಹಪೋಷಣವಿಷಯದಲ್ಲಿ ಬುದ್ಧಿಯು ಸಮಾಯತ್ತವಾಗಿರುತ್ತದೆ. ಅಷ್ಟರಿಂದ ಮನುಷ್ಯನ ಹೆಚ್ಚಳವೇನು? ಕರ್ಮಭೂಮಿಯಲ್ಲಿ ಕೊನೆಗೆ ಬರುವುದೀ ಮನುಜದೇಹವದರಲ್ಲಿ ಅಹಂಮಮತೆಗಳನ್ನು ಬಿಟ್ಟು ಶ್ರವಣಾದಿ ಸಾಧನಗಳಿಂದ ಬ್ರಹ್ಮಜ್ಞಾನವನ್ನು ಸಂಪಾದಿಸಿ ಆ ನಶ್ವರ ಶರೀರದಿಂದ ಅನಶ್ವರ ಮೋಕ್ಷ ಸುಖವನ್ನು ಪಡೆಯುವ ಜೀವನೇ ಬುದ್ಧಿವಂತನು. ಶ್ರೀಹರೀಚ್ಛೆಯಿಲ್ಲದಿರೆ ಯಾವ ಸಾಧನವೂ ಆಗಲಾರದು. ಮಮಸ್ವಾಮೀ ಹರೀ ಎಂದು ಭಾವಿಸಿದವನಿಗೆ ಶ್ರೀಹರಿಯು ಅನುಗ್ರಹಿಸಿ ಲೌಕಿಕ ಬುದ್ಧಿಯನ್ನೂ, ವೈದಿಕ ಶಬ್ದರಾಶಿಯನ್ನೂ ಬಿಡಿಸುವನು. ವೇದಾನುಸಾರಿ ಚಿಂತನರತನು ವೈದಿಕನು; ವೇದರಾಶಿಯನ್ನು ಅನುಭವದಿಂದಲೇ ತಿಳಿದು ವೇದಾವಿರುದ್ಧವಾಗಿ ನಡೆಯುವನು. ತ್ಯಕ್ತವೇದನವನು. ವೇದ ರಾಶಿಯಿಂದಲೇನಿಲ್ಲ. ವೇದವೇದ್ಯನನ್ನು ತಿಳಿದವನೇ ತ್ಯಕ್ತವೇದನೆನಿಸುವನು.

ಬರ್ಹಿಷ್ಮನ್! ಕರ್ಮಗಳು ಮಹಾಪ್ರಯೋಜನಕಗಳೆಂದು ತೋರುವುವು. ಕರ್ಮಮಯ ಯಜ್ಞಗಳಲ್ಲಿರುವ ನಿನ್ನ ದೃಷ್ಟಿಯನ್ನು 'ಅಪಾಮಸೋಮಂ ಅಮೃತಾಬಭೂಮ' ಎಂಬ ಹರಿಯನ್ನು ದೂರದಿಡುವ, ಕರ್ಣಮನೋಹರ ವೇದವಚನಗಳಿಂದ ತಿರುಗಿಸು. ವೇದವು ಕರ್ಮಗಳನ್ನು ತತ್ಫಲವನ್ನು ನಿರೂಪಿಸುವುದೆಂದು ಅಜ್ಞಾನಿಗಳು ಪೇಳುವರು. ಬರಿಯ ಹೊಗೆ ತುಂಬಿಕೊಂಡ ಅವರ ಕಣ್ಣಿಗೆ ಹರಿಯು ಕಾಣುವುದಿಲ್ಲ. ಅಂತಹವರಿಗೆ ತಮ್ಮ ಗತಿ ಎಂತು, ಜ್ಞಾನವು ಹೇಗೆ, ಎಂಬುವುದೇ ಗೊತ್ತಿಲ್ಲ. ಸುಮ್ಮನೆ ಭೂಮಿಯನ್ನೆಲ್ಲ ಪ್ರಾಗಗ್ರದರ್ಭಗಳಿಂದ ಮುಚ್ಚಿ, ಪಶುಗಳನ್ನು ಕೊಂದು ಯಜ್ಞಮಾಡಿದೆನೆಂದು ದಂಭದಿಂದ ತಿರುಗಿದೆ. ಕರ್ಮ ಸ್ವರೂಪ ವೇನೂ ಗೊತ್ತಿಲ್ಲ. ಕೇಳು ಹರಿಪ್ರೀತಿಕರವಾದುದೇ ಕರ್ಮ! ಹರಿಜ್ಞಾನಭಕ್ತಿ ಜನಕವಾದುದೇ ವಿದ್ಯೆ! ಶ್ರೀಹರಿಯೇ ಸರ್ವಶರೀರಧಾರಿ ಜೀವರಿಗೆ ಸ್ವಾಮಿಯು, ಅಂತರ್ಯಾಮಿಯು, ಅವನೇ ಅಪ್ರಾಕೃತನು. ಮೂಲಕಾರಣವಾದ ಪ್ರಕೃತಿಯು ಅವನೇ. ಅಣಿಮಾದ್ಯೈಶ್ವರ್ಯಭರಿತಳಾದ

ಲಕ್ಷ್ಮೀಪತಿಗೆ ಶರಣೆನ್ನು. ಅವನ ಪಾದಮೂಲದಿ ಜೀವಜಾತವು ಕ್ಷೇಮದಿಂದಿರುವುದು. ಜೀವನಿಗೆ ಪತ್ನೀಪುತ್ರಮಿತ್ರಾದಿಗಳಿಗಿಂತಲೂ ಅತ್ಯಂತ ಪ್ರೀತಿವಿಷಯನಾದನು ಹರಿಯೇ. ದುರಿತಹರಣಶೀಲನಾದ ಶ್ರೀನಾರಾಯಣ ಚರಣಾರವಿಂದ ಶರಣಾಗತನಿಗೆ ಯಾವ ಭಯವೂ ಇಲ್ಲ. ಇಂತು ತಿಳಿದವನೇ ವಿದ್ವಾಂಸನು. ವಿದ್ವಜ್ಜನರ ಅಂತರ್ಯಾಮಿಯಾದ ಶ್ರೀಹರಿಯೇ ಜ್ಞಾನಪ್ರದನು. ಪ್ರಾಚೀನ ಬರ್ಹಿರಾಜ! ನಿನ್ನ ಪ್ರಶ್ನೆಗಳಿಗೆ ವಿಶದವಾಗಿ ಸಮಾಧಾನ ವನ್ನು ಪೇಳಿದೆನು. ಈಗ ಪರಮರಹಸ್ಯವಾದ ಜೀವಸ್ವರೂಪನಿಶ್ಚಾಯಕ ಗಾಥೆಯನ್ನು ಪೇಳುವೆನು, ಕೇಳು–

ಒಂದು ಜಿಂಕೆ ಕ್ಷುದ್ರತೃಣಗಳನ್ನು ತಿನ್ನುತ್ತಾ ಸುಮನೋವನದಲ್ಲಿ ಸುಮವಾಸನೆಯನ್ನು ಕೊಂಡು, ಸೊಕ್ಕಿ ತನ್ನವರಿಂದ ಕಲೆತು ಕ್ರೀಡಿಸುತ್ತಾ, ಷಡಂಘ್ರಿಗಣವು ಪಾಡುವ ಸಾಮಗಾನಕ್ಕೆ ಕರ್ಣಗಳೆತ್ತಿ ಆಲಿಸುತ್ತಾ ಮೇಲೆ ಬೀಸುವ ಮಾರುತಸುಖಸ್ಪರ್ಶದಿಂದ ಮೈಮರೆತು ಪೋಗು ತ್ತಿತ್ತು. ಮುಂದೆ ನುಂಗಲು ಕಾದಿದ್ದ ಭೀಕರ ಶತ್ರುಗಳಾದ ತೋಳಗಳನ್ನೂ ಹಿಂದೆ ಬಾಣವೇರಿಸಿದ ಧನುವನ್ನು ಪಿಡಿದು ಬರುವ ಬೇಟೆಗಾರರನ್ನೂ ಕಣ್ದೆರೆದು ನೋಡದೆ, ಕೊನೆಗೆ ಅವನ ನಿಶಿತಬಾಣದ ತುತ್ತಾಗಿ ನಾಶವನ್ನು ಹೊಂದಿತು.

ಗಾಥೆಯ ಅಂತರಾರ್ಥವನ್ನು ಕೇಳು –

ಹುವ್ವಿನಂತೆ ಕೋಮಲರಾದ ಸ್ತ್ರೀಜನರ ಮಧ್ಯದಲ್ಲಿ, ಪುಷ್ಪಗಂಧ ಮಧುರಸಗಳಂತೆ ಕ್ಷುದ್ರ ತಮವಾದ ಕಾಮ್ಯಕರ್ಮಫಲವಾಗಿ ಬಂದ ಕಾಮಸುಖಲವಗಳನ್ನು ಹುಡುಕುತ್ತಾ ಪೂರ್ಣವೆನಿಸುವಷ್ಟು ಪೊಂದಲಾರದೆ ಜೀವನು ಜೈಹ್ವೆ, ಔಪಸ್ಥಾದಿ ಸುಖದಿ ಮನವನ್ನು ಮಾಡಿ ಸಂಸಾರವನದಿ ಪೋಗುತ್ತಿರುವನು. ಮಿಥುನೀಭಾವವನ್ನು ಪೊಂದಿ ಬಿಡದೆ ಸ್ತ್ರೈಣನಾಗುವನು. ಮಧುಕರ ಸಾಮಗೀತದಂತಿರುವ ಮನೋಹರ ವನಿತಾಲಾಪ ಶಿಶುಕಲಭಾಷಣಾದಿ ವಂಚಿತನಾಗು ವನು. ಮುಂದೆ ಆಯುರ್ಹರಣ ಮಾಡುತ್ತಿರುವ ಅಹೋರಾತ್ರಗಳೆಂಬ ತೋಳಗಳನ್ನು, ಹಿಂದೆ ಕಾಣದೆ ಬರುವ ದಂಡಪಾಣಿ ಯಮನನ್ನು ಲೆಕ್ಕಿಸದೆ ಒಂದು ದಿನ ಮೃತ್ಯುವನ್ನು ತುತ್ತಾಗು ವನೀ ಮೃಗದಂತೆ ನೀನೂ ಇರುವೆ. ಒಂದು ದಿನ ಶ್ರೀಹರಿಯು ನಿನ್ನನ್ನೂ ಕರೆಯಲು ಯಮನನ್ನು ಕಳಿಸುವನು ತಿಳಿ. ನೀನು ಮೃಗದಂತೆ ಪ್ರವರ್ತಿಸುತ್ತಿರುವುದನ್ನು ಮನದಲ್ಲಿ ವಿಚಾರಿಸಿ ನೋಡು. ಮನವನ್ನು ಶ್ರೀಹರಿಯಲ್ಲಿಡು. ಹರಿಕಥೆಯನ್ನು ಕೇಳುತ್ತಾ ಶ್ರವಣಜನಿತ ಚಿತ್ತವೃತ್ತಿಯನ್ನು ಹರಿಗುಣವರ್ಣನ ಧ್ಯಾನಪರವನ್ನಾಗಿಸು. ಜೀರ್ಣವಾಗುವ ಶರೀರಸುಖ ಭ್ರಾಂತಿಯನ್ನು ಬಿಡು. ಅದು ಅಸಜ್ಜನ ಜಾಲದಿಂದ ಪ್ರಶಂಸನೀಯವಾಗಿದೆ. ನಮಗಲ್ಲ. ಪರಮಹಂಸ ಶರಣ್ಯಚರಣ ನಾದ ರಮಾರಮಣನ ಪ್ರೀತಿಯನ್ನಾರ್ಜಿಸು. ಮೊದಲು ಕ್ರಮವಾಗಿ ವಿರಕ್ತನಾಗು'– ಎಂದು ನಾರದನು ಪೇಳಲು ಪ್ರಾಚೀನ ಬರ್ಹಿಯು ಕೇಳಿದನು–

'ಸ್ವಾಮೀ! ಪೂಜ್ಯನಾದ ನಿನ್ನಿಂದ ಆಧ್ಯಾತ್ಮಿಕ ಗಾಥೆಯಾದ ಪುರಂಜನ ಚರಿತೆಯನ್ನು ಕೇಳಿದೆನು. ಮನನವೂ ಮಾಡಿದೆನು. ನನ್ನ ಗುರುಗಳು ತಿಳಿಯದ ರಹಸ್ಯ ಪ್ರಮೇಯವಿದು ತಿಳಿದಿದ್ದರೆ ಅವರೇಕೆ ಪೇಳುತ್ತಿದ್ದಿಲ್ಲ? ಆದರೂ ನನಗೊಂದು ಸಂಶಯವು ಉಳಿದಿದೆ. ಚಕ್ಷುರಾ ದೀಂದ್ರಿಯಾಗೋಚರವಾದ ವಿಷಯವು ಹೇಗೆ ಸುಲಭಗ್ರಾಹ್ಯವಾದೀತು?

ಜೀವನೊಂದು ದೇಹದಿಂದ ಕರ್ಮಗಳನ್ನು ಮಾಡುವನು. ಪ್ರಾರಬ್ಧ ಮೂಗಿಯಲಿನ್ನೊಂದು ದೇಹವನ್ನು ಸೇರಿ ಅದರಿಂದ ಹಿಂದಿನ ದೇಹದ ಕರ್ಮಫಲವನ್ನುಣ್ಣುವನು ಎಂದು ಪೇಳಿದಿರಿ.

ಸರಿ! ಆದರೆ ಒಂದು ದೇಹದ ಕರ್ಮವಿನ್ನೊಂದು ದೇಹಕ್ಕಾದರೆ ಅನ್ಯಾಯವಲ್ಲವೇ? ಶ್ರುತಿ ಸ್ಮೃತಿಗಳೂ ವೇದವೇತೃಗಳೂ ಹಾಗೆಯೇ ಹೇಳುವುದರಿಂದ ದೇಹದಿಂದ ಬೇರೆ ಆದ ಆತ್ಮ ನಿರುವನೇ ಎಂಬ ಸಂಶಯವೂ ಬರುವುದು. ಸ್ವರ್ಗಾದಿ ಫಲಕ್ಕಾಗಿ ಕರ್ಮ ಮಾಡಿದವರಿಗೇ ಫಲಪ್ರಾಪ್ತಿ ಆಗುವುದು ಕಾಣುವುದಿಲ್ಲ. ಸತ್ತತಂದೆ ಮಗನಿಗೆ ಬಾಳೇಹಣ್ಣನ್ನು ತಂದುಕೊಟ್ಟ ನೆಂಬುವುದು ಯುಕ್ತಿವಿರುದ್ಧವೂ ಸರಿ' ಎಂದು ಕೇಳಲು ನಾರದನು ಪೇಳಿದನು.

ರಾಜನ್! ಏಕೆ ಶಂಕೆ? ಯಾವ ಶರೀರದಿಂದ ಕರ್ಮಗಳನ್ನು ಮಾಡಿದನೋ ಅದೇ ಶರೀರದಿಂದ ಕರ್ಮಫಲವನ್ನೂ ಉಣ್ಣುವನು. ಆದರೆ ಅದು ಭೌತಿಕವಲ್ಲ. ಲಿಂಗ ಶರೀರವು. ಸ್ವಪ್ನವು ನೋಡುವಾಗ ಮಲಗಿದ ಶರೀರವನ್ನು ಬಿಟ್ಟು ಮನಸಾ ನಿರ್ಮಿತಾದೃಶ ದೇಹ ದಿಂದಲೋ ಅಥವಾ ತದ್ವಿಲಕ್ಷಣ ದೇಹದಿಂದಲೋ ಜೀವನು ಮನಸಾ ನಿರ್ಮಿತ ಭೋಗ ಗಳನ್ನುಂಡು ಪುನಃ ಅಭಿಮಾನವು ಜಾಗ್ರತವಾಗಲು ಅದೇ ದೇಹವನ್ನು ಪೊಂದುವಂತೆ, ಅನೇಕ ಶರೀರ ನಿರ್ಮಿತ ಭೋಗಗಳನ್ನುಣ್ಣುತ್ತಾ ತಿರುಗುತ್ತಿರುವನು. ತಾನು ಸುಖಪಡಲು ಸಾಧನವೆಂದು ಮನಸಾ ತಿಳಿದು, ಇಂತಹ ಕೃಷ್ಣಶರ್ಮನ ಮಗನಾದ ನಾನು ತಂದೆಯಂತೆ ಯಾಜ್ಞಿಕನಾಗು ವೆನೆಂದು ವಾಚಾ ಹೇಳುತ್ತಾ ಶರೀರದಲ್ಲಿ ದುರಭಿಮಾನದಿಂದ ಮಾಡಿದ ಕರ್ಮವು ಫಲವನ್ನು ಕೊಡಲು ಅನೇಕ ಜನ್ಮಗಳನ್ನು ಹೊಂದಿ ಅದನ್ನು ಅನುಭವಿಸುವನು. ಇಂತಹ ಕರ್ಮಕರಣ ವಿಷಯದಲ್ಲಿ ಸಾಕ್ಷಾತ್ಕರ್ತನು ಜೀವನೇ. ಮನಸ್ಸು ಅಂತರಂಗ ಸಾಧನವು. ಜ್ಞಾನಕರ್ಮೇಂದ್ರಿಯ ಗಳ ವ್ಯಾಪಾರದಿಂದ ಕೂಡಿ ಅಂತಃಕರಣವು ಲಿಪ್ತವಾಗುತ್ತದೆ. ಆಗ ಕರ್ಮ ನಡೆಯುವುದು. ಜ್ಞಾನವೂ ಹುಟ್ಟುವುದು. ಅಂತಃಕರಣವಿಲ್ಲದಿದ್ದರೆ ಜ್ಞಾನಕರ್ಮಗಳಿಲ್ಲ. ಅಂತಃಕರಣದಿಂದ ವ್ಯಾಪಾರವು ನಡೆದಾಗ ಆ ಕರ್ಮವು ಹಿಂದಿನ ಜನ್ಮದಲ್ಲಿ ಶುಕ್ಲ (ಸಾತ್ವಿಕ) ರಕ್ತ (ರಾಜಸ) ಕೃಷ್ಣ (ತಾಮಸ) ವಾದುದೆಂದು ಫಲದಿಂದ ಊಹಿಸಲು ಬರುವುದು. ದೇಹವುಳ್ಳವನಿಗೇ ಇಂತು ಜ್ಞಾನವೆಂದ ಮೇಲೆ ಹಿಂದೆ ಮಾಡಿದ ಕರ್ಮಫಲವನ್ನುಣ್ಣಲು ಮತ್ತೆ ದೇಹಾಂತರವು ಜೀವನಿಗೆ ಸಿದ್ಧವೇ ಆಗಿದೆ. ವಾಸನಾ ವೈಚಿತ್ರ್ಯದಿಂದ ಪ್ರವೃತ್ತಿ ವೈಚಿತ್ರ್ಯವೆಂದು ತಿಳಿ. ಈ ದೇಹದಿಂದ ನೋಡಿದ್ದು ಕೇಳಿದ್ದು ಅನುಭೂತವಾದದ್ದೇ ಸ್ವಪ್ನದಲ್ಲಿ ನೋಡುವನು, ಅನುಭೋಗಿಸುವವನು ಎಂದೇನಿಲ್ಲ. ಪ್ರಾಗ್ಜನ್ಮಗಳಲ್ಲನುಭೂತವಾದುದನ್ನೂ ಈ ದೇಹದಲ್ಲಿ ನೋಡುವನು. ಅದರಂತೆಯೇ ಪೂರ್ವಜನ್ಮಕರ್ಮವು ವಾಸನಾರೂಪವಾಗಿದ್ದು ಜಡವಾದರೂ ಕೃಷ್ಣಚಾಪಯುಕ್ತ ಶರವೇಗ ಸಂಸ್ಕಾರದಂತೆ ಬಂದು ಈ ಜನ್ಮದಲ್ಲಿ ಫಲವನ್ನು ಕೊಡುವುದು. ಅದಕ್ಕನುಸಾರವಾಗಿ ಲಿಂಗಶರೀರಯುಕ್ತ ಜೀವನಿಗನೇಕ ದೇಹಗಳು ಬರುವುವು. ಎಂದಿಗೂ ಅನನುಭೂತವಾದ ಪದಾರ್ಥವನ್ನು ಮನಸ್ಸು ಹೊಂದಲಾರದು. ಆ ಮನಸ್ಸು ಲಿಂಗಶರೀರದಂತೆಯೇ ಜೀವನನ್ನು ಹಿಂಬಾಲಿಸಿ ಬರುತ್ತಿರುವುದು. ಪೂರ್ವದಲ್ಲಿ ಅನುಭವಿಸಿದುದನ್ನು ಅದೇ ಮನವು ಸಂಸ್ಕಾರರೂಪ ದಿಂದ ಪುಟ್ಟಿಸಿ ವರ್ತಮಾನ ಕಾಲದಲ್ಲಿ ತದನುಗುಣ ಕರ್ಮವನ್ನು ಮಾಡಿಸುತ್ತಿರುವುದು. ಎಂದಿಗೂ ಅನನುಭೂತವಾದುದನ್ನು ಮನಸ್ಸು ನೋಡಿರಲಾರದು. ಶಿರಚ್ಛೇದಾದಿಗಳನ್ನು ನೋಡಿದಾಗ ಒಂದು ಕಡೆ ನೋಡಿದ ಶಿರಸ್ಸು ಇನ್ನೊಂದು ಕಡೆ ನೋಡಿದ ಛೇದನಾದಿಗಳನ್ನು ಕೂಡಿಸಿ ಸ್ವಪ್ನವಾಗುತ್ತಿದೆ ಎಂದು ತಿಳಿಯಬೇಕು. ಎಲ್ಲ ವಿಷಯಗಳು ಕರ್ಮವನ್ನನುಸರಿಸಿಯೇ ಇಂದ್ರಿಯಗೋಚರವಾಗುವುವು. ಆಗ ಮನಸ್ಸು ಹರೀಚ್ಛೆಯಿಂದ ಆ ವಿಷಯಗಳಲ್ಲಿ ಮಗ್ನವಾಗಿ ಜೀವನಿಗೆ ಕರ್ಮಫಲರೂಪ ಸುಖದುಃಖಗಳನ್ನು ಕೊಡುವುದು. ಮನಸ್ಸೇ ಜೀವನಲ್ಲ. ಆ

ಮನಸ್ಸನ್ನು ಭಗವಂತನಲ್ಲಿ ಭಕ್ತಿಯಿಂದ ಸಮರ್ಪಿಸಿದರೆ ಮಾತ್ರ ಮನಸ್ಸು ಲಿಂಗಶರೀರಗಳು ಜೀವಭಿನ್ನವೆಂಬ ಜ್ಞಾನವು ಪುಟ್ಟುವುದು. ಚಂದ್ರಮನ ಪ್ರಕಾಶದಲ್ಲಿ ಮೇಘಾಂಧಕಾರದಂತೆ ಭಿನ್ನವಾಗಿ ತೋರಲು ಮನಸ್ಸಿನ ಅಹಂಕಾರಶಕ್ತಿಯು ಕುಗ್ಗುವುದು. ಎಂದಿನವರೆಗೂ ಅಹಂಕಾರ ಮಮಕಾರಗಳು ನಷ್ಟವಾಗುವುದಿಲ್ಲವೋ ಅಲ್ಲಿಯವರೆಗೂ ಪುರುಷನಿಗೆ ಈ ಬುದ್ಧಿ ಮನಶ್ಚಕ್ಷುರಾದೀಂದ್ರಿಯಗಣದ ಉಪದ್ರವವು ಮತ್ತು ಜನನಮರಣ ರೂಪ ಸಂಸಾರವು ಬೆನ್ನು ಬಿಡದು. ಸುಪ್ತಿಯಲ್ಲಿ, ಮೂರ್ಛೆಯಲ್ಲಿ, ವಿಶೇಷ ಕಷ್ಟದಲ್ಲಿ, ಅಪಮೃತ್ಯುವಿನಲ್ಲಿ, ಜ್ವರ ತೀವ್ರತೆಯಲ್ಲಿ ಈ ಅಹಂಕಾರವು ಕಾಣುವುದಿಲ್ಲವೆಂದು ತೋರಿದರೂ ಅಷ್ಟು ಮಾತ್ರದಿಂದ ಅಹಂಕಾರನಾಶವಾಗಿ ಜೀವನು ಮುಕ್ತನಾದನೆನ್ನಬಹುದೇ? ಸ್ವರೂಪೇಂದ್ರಿಯದಿಂದ ಆ ಅಹಂಕಾರವು ಇದ್ದೇ ಇರುವುದಿಲ್ಲದಿರೆ ನಿದ್ರಾದಶಾನುಭೂತ ಸುಖಸ್ಮೃತಿಯು ಬರುವುದು. ದುಶ್ಶಕವಾದೀತು. ಗರ್ಭದಲ್ಲಿಯು ಬಾಲ್ಯದಲ್ಲಿಯು ಏಕಾದಶೇಂದ್ರಿಯ ಜನ್ಯ ಅಹಂಕಾರ ವಿರುವುದಿಲ್ಲ– ಏಕೆಂದರೆ ಗರ್ಭಗತನು ಅಥವಾ ಬಾಲನು ಅನುಪಚಿತಾಯವನಾಗಿರುವನು. ಅಹಂಕಾರವಿದ್ದೂ ರಾಹುವಿನಿಂದ ಮುಚ್ಚಲ್ಪಟ್ಟ ಚಂದ್ರಮಂಡಲದಂತೆ ಕಾಣದೆ ಅಡಗಿರುವುದು. ಒಂದು ವೇಳೆ ಅಹಂಮಮತೆಗಳು ನಷ್ಟವಾದ ಮಾತ್ರಕ್ಕೆ, ಸಂಸಾರ ಮೋಕ್ಷವೆಂದು ತಿಳಿಯಬೇಡ. ಸ್ವಪ್ನದಲ್ಲಿ ನೋಡುವವನಿಗೆ ಶಿರಚ್ಛೇದಾದ್ಯನರ್ಥವು ಎಚ್ಚರವಾಗುವವರೆಗೂ ಪೋಗದಂತೆ ವಿಷಯ ಧ್ಯಾನದಿಂದ ಮನಸ್ಸು ಸಂಸಾರವನ್ನು ತಂದೊಡ್ಡುವುದು. ಪ್ರಾಣಗಳೈದು, ಪಂಚ ಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು ಮನಸ್ಸೆಂಬ ಹದಿನಾರು ಕಲೆಗಳಿಂದ ಕೂಡಿ ಲಿಂಗಶರೀರವು ಜೀವನನ್ನಾವರಿಸಿ ಅವನಿಗೆ ಅನೇಕ ದೇಹಗಳನ್ನೂ ಸುಖದುಃಖ ಭಯಶೋಕಾದಿ ಗಳನ್ನೂ ತಂದು ಕೊಡುವುದು. ತೃಣಜಲೂಕೆಯು ಒಂದು ತೃಣವನ್ನು ಬಿಗಿಯಾಗಿ ಹಿಡಿದು ಇನ್ನೊಂದು ತೃಣವು ಸಿಗುವವರೆಗೂ ಬಿಡದಿರುವಂತೆ ಜೀವನು ಮರಣದೆಶೆಯಲ್ಲಿಯು ಹಿಂದಿನ ದೇಹವನ್ನು ಬಿಡಲಾರದೆ ತತ್ತರಿಸುವನು. ಕರ್ಮಫಲದಿಂದ ವಿಲಂಬವಾಗಿ ಇನ್ನೊಂದು ದೇಹವನ್ನು ಪೊಂದುವನು.

ಮಹಾರಾಜ! ಭೂತಗಳಿಗೆ ಸಂಸಾರೋತ್ಪಾದಕವಾದುದು ಮನವೇ. ಅದು ಇಂದ್ರಿಯ ವಿಷಯಗಳನ್ನು ಧ್ಯಾನಿಸಿ ಕರ್ಮಗಳನ್ನು ಪುನಃಪುನಃ ಮಾಡಿಸುತ್ತಲಿರುವುದು. ವಿಷಯೇಚ್ಛೆಯಿಂದ ಕರ್ಮ, ಕರ್ಮದಿಂದ ಬಂಧ, ಬಂಧವು ಮತ್ತೆ ವಿಷಯೇಚ್ಛಾಜನಕ. ಇಂತು ಕರ್ಮಚಕ್ರದಲ್ಲಿ ತೊಳಲುವ ಜೀವನಿಗೆ ಕರ್ಮನಿವೃತ್ತಿಯಾಗಬೇಕಾದರೆ, ಸರ್ವಪುತ್ರಾದಿಗಳಿಗಿಂತಲೂ ಪ್ರೀತಿ ವಿಷಯನೆಂದು ತಿಳಿದು ಶ್ರೀಹರಿಯನ್ನು ಭಜಿಸು. ಅವನೇ 'ಏನಂ ಮೋಚಯಾಮಿ' ಎಂಬ ಪ್ರಸಾದವನ್ನು ಮಾಡಿ, ಉದ್ಧರಿಸುವನು. ಜನ್ಮಸ್ಥಿತಿಲಯಕಾರಣನವನೇ! ಅವನಿಂದ ವ್ಯಾಪ್ತವೀ ಜಗತ್ತೆಲ್ಲವು. ಸರ್ವಸ್ವಾಮಿಯೂ ಅವನೇ. ಬ್ರಹ್ಮಾದಿ ದೇವರೇ ಮೊದಲಾದ ಸ್ವೋತ್ತಮ ಜನರಲ್ಲಿ ಭಕ್ತಿ, ಶ್ರೀಹರಿಯಲ್ಲಿ ಸರ್ವೋತ್ತಮ ಭಕ್ತಿ, ಸ್ವಾವರಲ್ಲಿ ದಯೆ, ಹರಿದ್ವೇಷಿಗಳಲ್ಲಿ ದ್ವೇಷ, ದೇಹಾದಿವ್ಯತಿರೇಕೇಣ ಜ್ಞಾನಾನಂದರೂಪನು ಜೀವನೆಂಬ ಜ್ಞಾನ– ಈ ಸಾಧನಗಳಿ ದ್ದೊಡೆ ಜೀವನು ಸಂಸಾರದಿಂದ ಮುಕ್ತನಾಗುವನು. ಸ್ವರ್ಗಾದಿಗಳೂ ನೋಡಿದ ಈ ಜಗದಂತೆ ನಷ್ಟವಾಗುವುದು. ಈ ಜಗವು ಸ್ವಪ್ನದಂತೆ ನಶ್ವರವು. ಭೂತಭವಿಷ್ಯದ್ವರ್ತಮಾನವೆಲ್ಲವನಿತ್ಯವು. ಬ್ರಹ್ಮನೊಬ್ಬನೇ ಪರಮನಿತ್ಯನು. ನಿತ್ಯನಿರ್ದೋಷನು. ಇಂತು ವಿಷಯವಿರಕ್ತಿಯಿಂದ ಹರಿಭಕ್ತಿ,

ಅದರಿಂದ ಧ್ಯಾನ, ಅದರಿಂದ ಅಪರೋಕ್ಷಜ್ಞಾನ, ಅದರಿಂದ ಶ್ರೀನಾರಾಯಣ ಪ್ರಸಾದವು ಆಗಿ ಜೀವನು ಸ್ವಯೋಗ್ಯ ಮುಕ್ತಿಯನ್ನು ಪೊಂದುವನು.

ಮೈತ್ರೇಯನು ಪೇಳಿದನು–

ಸಿದ್ಧಪ್ರಧಾನನು, ಭಾಗವತ ಮುಖ್ಯವಾದ ನಾರದನಿಂತ ಜೀವ ಪರಮಾತ್ಮನ ಲಕ್ಷಣ ನಿರೂಪಕವಾದ ಪುರಂಜನ ಚರಿತೆಯನ್ನು ಪೇಳಿ, ರಾಜನಪ್ಪಣೆಯನ್ನು ಪಡೆದು ಸಿದ್ಧಲೋಕವನ್ನು ಕುರಿತು ಪ್ರಯಾಣ ಮಾಡಿದನು.

ಪ್ರಾಚೀನಬರ್ಹಿಯು ಪ್ರಜರನ್ನು ಧರ್ಮವನ್ನು ರಕ್ಷಿಸಲು ಪುತ್ರರಿಗಾಜ್ಞಾಪಿಸಿ ತಾನು ತಪವಂಗೈಯಲು ಕಪಿಲಾಶ್ರಮವನ್ನು ಸೇರಿದನು. ಅಲ್ಲಿ ಏಕಾಗ್ರಮನಸ್ಕನಾಗಿ ವಿಷಯಸಂಗವನ್ನು ಬಿಟ್ಟು, ಗೋವಿಂದಚರಣಾಂಬುಜವನ್ನು ಮುಟ್ಟಿ ಭಜಿಸಿ ಭಕ್ತಿಯಿಂದ ಹರಿಯಂತೆ ನಿರ್ದೋಷ ನಾಗಿ ಮುಕ್ತನಾದನು.

ಅನಘ! ವಿದುರ! ಈ ರಹಸ್ಯವಾದ ಆಧ್ಯಾತ್ಮ ಪಾರೋಕ್ಷ್ಯ ಗೀತವೆನಿಸಿದ ಪುರಂಜನ ಚರಿತೆಯನ್ನು ಹೇಳಿ ಕೇಳಿದ ಭಕ್ತರು ಲಿಂಗಶರೀರದಿಂದ ಮುಕ್ತರಾಗುವರು. ಯಾವನೇ ಆಗಲಿ ದೇವರ್ಷಿ ವರವದನಕಮಲ ನಿಃಸೃತವಾದೀ ಮನಶ್ಶುದ್ಧಿಪ್ರದ ಮುಕುಂದಯಶೋಗಾನವನ್ನು ಭುವನಪಾವನ ಜೀವೇಶ ಚರಿತೆಯನ್ನು ಗುರುಮುಖದಿಂದ ಕೇಳಿದರೆ ಹರಿ ಸ್ಮರಣನಿರತನಾಗಿ ಸಂಸಾರಬಂಧವನ್ನು ಬಿಟ್ಟು, ಮುಕ್ತನಾಗುವನು.

ವಿದುರಾ! ಗಹನವಾದೀ ಆಧ್ಯಾತ್ಮಗಾಥೆಯನ್ನು ಗುರುಕರುಣೆಯಿಂದ ಅಧ್ಯಯನವನ್ನು ಮಾಡಿ ತಿಳಿದಿರುವೆನು. ವೇದವಿಷಯಕವಾದ ಸಂಶಯಗಳೂ ಇದರಿಂದ ಕಳೆದುಕೊಂಡಿರುವೆನು. ಆಧ್ಯಾತ್ಮನು ಆಧಿದೈವಿಕನು ಶ್ರೀನಾರಾಯಣನೇ. ಜೀವನು ತದಧೀನನು. ದೇವತೆಗಳಿಗೊಡೆಯ ನಾದ ಶ್ರೀಹರಿಗೆ ನಮಸ್ಕಾರವು.

## ೩೦. ಪ್ರಚೇತಸರ ತಪಸ್ಸಿದ್ಧಿ

ವಿದುರನು ಕೇಳಿದನು–

ಬ್ರಹ್ಮಜ್ಞಾನಿಯಾದ ಮೈತ್ರೇಯನೇ! ಪ್ರಾಚೀನಬರ್ಹಿಪುತ್ರರಾದ ಪ್ರಚೇತಸರು ರುದ್ರಗೀತೆ ಯನ್ನು ಜಪಿಸಿ ಪೊಂದಿದ ಫಲವೇನು? ಹರಿಯು ಪ್ರಸನ್ನರಾಗಿ ವರವನ್ನು ಪಾಲಿಸಿದ ಅವರ ಪವಿತ್ರ ಚರಿತ್ರೆಯನ್ನು ವರ್ಣಿಸು. ಮುಕುಂದಪಾದಾರವಿಂದಭಕ್ತರ ಭಕ್ತರು ಕೂಡ ಇಹಲೋಕ ಸ್ವರ್ಗಾದಿಲೋಕಗಳನ್ನೊಲ್ಲದೆ ಭಕ್ತಿತೃಪ್ತರಾಗಿರುವರು. ಪ್ರಚೇತಸರೂ ದೇವಪ್ರಭುವಾದ ಪಾರ್ವತಿವಲ್ಲಭನನ್ನು ಕಂಡು ರುದ್ರಗೀತೆಯಿಂದ ಶ್ರೀಹರಿಯನ್ನು ಮೆಚ್ಚಿಸಿದ ಭಕ್ತರಲ್ಲವೇ? ಎಂದು ಕೇಳಲು ಮೈತ್ರೇಯನು ಪೇಳಿದನು–

ಪ್ರಚೇತಸರು ತಂದೆಯ ಆಜ್ಞೆಯಂತೆ ತಪವನ್ನು ಮಾಡಲು ಪೋಗಿ ರುದ್ರಗೀತೆಯನ್ನು ಜಪಿಸುತ್ತಾ, ಪುರದಲ್ಲಿ ಪುಟ್ಟುವುದರಿಂದ ಪುರಂಜನನೆನಿಸಿದ ಜೀವನಿಗೆ ಶರೀರಗಳನ್ನು ಸೃಜಿಸುವುದರಿಂದ ಪುರಂಜನನೆನಿಸಿದ ಶ್ರೀಹರಿಯನ್ನು ಮೆಚ್ಚಿಸಿದರು. ಬಹು ಕಾಲವಾದ ಮೇಲೆ ವೇದವೇದ್ಯನಾದ ಪರಮಪುರುಷನು ಅವರ ಭಗವನ್ನಿಷ್ಠೆಗೆ ಮೆಚ್ಚಿ ಪ್ರತ್ಯಕ್ಷನಾಗಿ ದುಃಖವನ್ನೆಲ್ಲ ಕಳೆದು ಅನುಗ್ರಹಿಸಿದನು. ಮೇರು ಶೃಂಗದಿ ಮೆರೆವ ಮೇಘದಂತೆ ಗರುಡಸ್ಕಂಧಾರೂಢನಾಗಿ

ಪೀತಾಂಬರವನ್ನಿಟ್ಟು, ಕೌಸ್ತುಭವನ್ನು ಕಂಠದಲ್ಲಿಟ್ಟು ದಿಕ್ಕುಗಳನ್ನು ಬೆಳಗುತ್ತಾ ಬಂದನು. ಧರಿಸಿದ ಮಕರಕುಂಡಲಕಾಂತಿಯು ಕಪೋಲವನ್ನು ವ್ಯಾಪಿಸಿ ಮಂದಹಾಸಕಾಂತಿಗೆ ಸೋತು ಹಿಮ್ಮೆಟ್ಟುತ್ತಿರಲು ಪ್ರಕಾಶಮಾನ ಕಿರೀಟವನ್ನು ಧರಿಸಿ, ಪೀನಾಯತಾಷ್ಟಭುಜನು, ಅಷ್ಟಾಯುಧ ಧರನು, ಮುನೀಂದ್ರ ಗರುಡ ಕಿನ್ನರ ಸ್ತುತ ಯಶೋವಿಶಾಲನು, ಚಿಕುರವೃತಫಾಲನು ಆಗಿ ಬಂದನು. ಶ್ರೀಹರಿಯ ವಕ್ಷಃಸ್ಥಲದಿ ನೆಲೆ ಮಾಡಿ ನಿಂತ ಲಕ್ಷ್ಮೀದೇವಿಯು ವನಮಾಲೆಯನ್ನು ಕಾಂತಿಯಿಂದ ಮೀರಿಸಲು ಯತ್ನಿಸುವಂತೆ ತೋರುತ್ತಿದ್ದಳು. ಶ್ರೀಹರಿಯ ಮೇಘ ಗಂಭೀರವಾಣಿಯಿಂದ ಕರುಣಾಕಟಾಕ್ಷದಿಂದ ನೋಡುತ್ತಾ ಪ್ರಚೇತಸರಿಗಿಂತೆಂದನು–

ರಾಜನಂದನರೇ! ನಿಮಗೆ ಮಂಗಳವಾಗಲಿ! ವರವನ್ನು ಬೇಡಿ. ಏಕವಿಷಯ ಧರ್ಮಚಾರಿಗಳಾದ ನಿಮ್ಮ ಸೌಹಾರ್ದವನ್ನು ನೋಡಿ ತುಷ್ಟನಾಗಿರುವೆನು. ನಿಮ್ಮನ್ನು ಸಂಧ್ಯಾ ಕಾಲದಿ ನಿತ್ಯವು ಸ್ಮರಿಸಿದವರು ಸೌಭ್ರಾತ್ರವಂತರಾಗಿ ಸಮಧರ್ಮರೆನಿಸಿ ಭೂತದಯಾವಂತರಾಗುವರು. ಸಾಯಂಕಾಲ ಪ್ರಾತಃಕಾಲಗಳಲ್ಲಿ ಶ್ರದ್ಧೆಯಿಂದ ರುದ್ರಗೀತೆಯನ್ನು ಪಠಿಸಿ ನನ್ನನ್ನು ಸುತ್ತಿಪರಿಗೆ ನಾನು ಬೇಕಾದ ವರಗಳನ್ನು, ಶುಭ ಬುದ್ಧಿಯನ್ನು ಕೊಡುವೆನು. ನೀವು ತಂದೆಯ ಆಜ್ಞೆಯನ್ನು ಶಿರಸಾ ವಹಿಸಿದುದರಿಂದ ನಿಮ್ಮ ಕೀರ್ತಿಯು ಲೋಕಗಳಲ್ಲಿ ಬೆಳಗುವುದು. ಬ್ರಹ್ಮದೇವನಂತೆ ಗುಣವಂತನಾದ ಪುತ್ರನು ನಿಮಗಾಗುವನು. ಅವನು ದಕ್ಷನೆಂದು ಪ್ರಸಿದ್ಧನಾಗಿ ಈ ಜಗವನ್ನೆಲ್ಲ ತನ್ನ ಸಂತಾನದಿಂದ ತುಂಬಿಸಿ ನನ್ನ ಸೃಷ್ಟಿಕಾರ್ಯವರ್ಧನರೂಪ ಸೇವೆಯನ್ನು ಸಲ್ಲಿಸುವನು. ಪ್ರಮ್ಲೋಚ ಎಂಬ ಅಪ್ಸರೆಯು ಕಂಡು ಋಷಿಯಿಂದ ಪೊಂದಿದ ಕಮಲಲೋಚನೆಯಿಂದ ಮಾರಿಷ ಎಂಬ ಕನ್ಯೆಯನ್ನು ವೃಕ್ಷಗಳು ಸ್ವೀಕರಿಸಿದವು. ಜನನೀಜನಕ ಗಂಡದಲ್ಲಿ ಜನಿಸಿದಳೆಂದಾ ಕೂಸನ್ನು ಅವರು ಬಿಟ್ಟಿರಲು ನೋಡಿ ವೃಕ್ಷಗಳು ನೆರಳನ್ನಿತ್ತು ಕಾಪಾಡಿದವು. ಹಸಿವೆಯಿಂದ ಅಳುತ್ತಿರಲು ನೋಡಿ ಚಂದ್ರನು ತನ್ನ ತರ್ಜನಿಯನ್ನು ಮುಖದಲ್ಲಿಟ್ಟು ಅಮೃತವರ್ಷಕವಾಗಿ ಪೋಷಿಸಿದನು. ಆಲಸ್ಯವಿಲ್ಲದೆ ಆ ಕನ್ಯೆಯನ್ನು ವಿವಾಹವಾಗಿ ತಂದೆ ಹೇಳಿದಂತೆ ಪ್ರಜಾಸರ್ಜನನ್ನು ಮಾಡಿ, ನಿಮಗೆಲ್ಲರಿಗೆ ಅವಳು ಅಪೃಥಗ್ಧರ್ಮಶೀಲಳಾದ ಪತ್ನಿಯಾಗಲಿ! ಇದು ನನ್ನಾದೇಶವು. ಹೋಗಿ, ಬಹುಕಾಲ ಭೂಲೋಕಸುಖಗಳನ್ನನುಭವಿಸುತ್ತಾ ಮಹಾತೇಜಸ್ಕರಾಗಿ, ಹನ್ನೆರಡು ಲಕ್ಷ ವರ್ಷ ರಾಜ್ಯವಾಳಿ ಆನಂತರ ಸ್ವರ್ಗಸುಖವನ್ನೂ ಪೊಂದಿರಿ. ನನ್ನನುಗ್ರಹದಿಂದ ನಿಮ್ಮ ಭಕ್ತಿಯು ದೃಢವಾಗುವುದು. ಮನವು ಶುದ್ಧವಾಗುವುದು. ಪುಣ್ಯಾಪಾಪಮಿಶ್ರ ಸಂಸಾರವು ಸಾಕೆನಿಸಿ ವೈರಾಗ್ಯವು ಪೂರ್ಣವಾಗಲು ನನ್ನ ವೈಕುಂಠ ಲೋಕವನ್ನು ಪೊಂದಿ ಮುಕ್ತರಾಗುವಿರಿ. ಗೃಹಸ್ಥಾಶ್ರಮಕಾರ್ಯರತರಾದರೂ ನನ್ನಲ್ಲಿ ಸಮರ್ಪಿತಸಕಲಕರ್ಮರಾದ ಸುಜನರು ನನ್ನ ಕಥಾಮೃತಪಾನವನ್ನು ಬಿಡದೆ ಮಾಡಿ ಬಂಧಮುಕ್ತರಾಗುವರು. ಅವರಿಗೆ ಗೃಹಾಶ್ರಮವೇನು ಬಾಧಕವಲ್ಲ. ವಿಪತ್ತಿನಲ್ಲಿ ಮೋಹವಿಲ್ಲದೆ ಸಂಪತ್ತಿನಲ್ಲಿ ಹರ್ಷೋದ್ರೇಕವಿಲ್ಲದೆ ಇರುವರು ನನ್ನನ್ನರಿತ ಜ್ಞಾನಿಜನರು ಅವರು ಕೂಡ ಯಥಾನುಭೂತವಾದ ಬ್ರಹ್ಮಜ್ಞಾನವನ್ನೆಲ್ಲರಿಗೆ ಬಿಚ್ಚಿ ಹೇಳುವುದಿಲ್ಲ. ಆದ್ದರಿಂದ ಬ್ರಹ್ಮಜ್ಞಾನವು ಸುಲಭವಾಗಿಲ್ಲವಷ್ಟೇ.

ಮೈತ್ರೇಯನು ಪೇಳಿದನು–

ಸರ್ವಪುರುಷಾರ್ಥಪ್ರದನಾದ ಶ್ರೀಜನಾರ್ಧನನಿಂತು ನುಡಿಯಲು ಕೇಳಿ ಕೈಜೋಡಿಸಿ ನಮಿಸಿ ಆ ರಂಗನಾಥನ ದಿವ್ಯಸಂದರ್ಶನಧ್ವಸ್ತ ಸಮಸ್ತಪಾಪರಾಗಿ ಹರ್ಷಗದ್ಗದಿತ ಕಂಠದಿಂದ ಅನಿಮಿತ್ತ ಬಂಧುವಾದ ಗೋವಿಂದನನ್ನು ಕಂಡಿಂತೆಂದರು–

ನಮೋನಮಃ! ಕ್ಲೇಶನಾಶನಾ! ಉದಾರಗುಣಭಿಧಾನಾ! ಇಂದ್ರಿಯಗಳಿಂದಲೂ ವಾಕ್ಕ ದಿಂದಲೂ ತಿಳಿಯಲಾಗದ ಮಹಿಮೆ ನಿನ್ನದು. ಮನವಾದರೂ ಸಾಕಲ್ಯೇನ ನಿನ್ನನ್ನು ತಿಳಿಯಲಾರ ದಾಗಿದೆ. ನೀನು ಅಪ್ರಾಕೃತನು. ಆನಂದಪೂರ್ಣನು. ನಿನ್ನಲ್ಲಿ ಭಕ್ತಿನಿಷ್ಠೆಯಿಲ್ಲದವರು ನಿನ್ನ ರೂಪದ್ವಯದಲ್ಲಿ ಭೇದವನ್ನು ಕಾಣುವರು. ಜ್ಞಾನಿಗಳು ನಿನ್ನನ್ನು ಸ್ವಗತಭೇದವರ್ಜಿತನೆಂದೇ ತಿಳಿದಿರುವೆ. ಈ ಜಗತ್ತಿಗೆ ಸೃಷ್ಟಿಸ್ಥಿತಿಲಯಗಳನ್ನು ಮಾಡಲು ಪ್ರಕೃತಿಯ ಗುಣಗಳನ್ನು ಸ್ವೀಕರಿಸುವೆ. ಆದರೂ ಗುಣಲೇಪವಿಲ್ಲದ ಆನಂದಮೂರ್ತಿಯು ನೀನು. ವಿಶುದ್ಧಗುಣನಾದ ಹರೇ! ನಿನಗೆ ನಮಸ್ಕಾರವು. ನಿನ್ನ ಜ್ಞಾನವನ್ನೆಮಗೆ ಹೆಚ್ಚಾಗಿ ಕೊಡು. ವಾಸುದೇವಾ! ಕೃಷ್ಣ! ಕಮಲನಾಭ! ಕಮಲಮಾಲಿನಿ! ಕಮಲಪಾದ! ಕಮಲೇಕ್ಷಣ! ಕಮಲಕಿಂಜಲ್ಕಪಿಶಂಗ ವಸನನೆ! ನಿನಗೆ ನಮಃ. ನೀನು ಸರ್ವಭೂತಗಳಲ್ಲಂತರ್ಯಾಮಿಯಾಗಿರುವೆ. ಸಾಕ್ಷಿಯಾಗಿ ಅವರ ಕರ್ಮಗಳನ್ನು ಸ್ವಯಂ ವೀಕ್ಷಿಸುವೆ. ಈ ನಿನ್ನ ಸಕಲಕ್ಲೇಶನಾಶಕ ಮಂಗಳರೂಪವನ್ನು ನೀನಾಗಿ ತೋರಿಸಿ ಪೊರೆದೆ. ಇದು ನಿನ್ನನುಗ್ರಹದ ಹೊರತು ನಾವೇನು ಮಹಾಪುಣ್ಯವನ್ನು ಮಾಡಿ ಅರಿಯೆವು. ಸ್ವಾಮಿನ್! ದಯಾಳುಗಳಾದ ಪ್ರಭುಗಳು ದೀನರಾದ ಸೇವಕರನ್ನೀರೀತಿ ಕಾಲವರಿತು ಮನಸ್ಸಿಗೆ ತಂದು ಪೊರೆಯದಿರೆ, ಅವರ ಕಷ್ಟವೆಂತು ನಿವಾರಿತವಾದೀತು? ಅಲ್ಪಾಲ್ಪ ಜೀವ ಹೃದಯದಲ್ಲಿ ಮನೆ ಮಾಡಿ ನಿಂತ ಅಂತರ್ಯಾಮಿಗೆ ಅವರ ಕರ್ಮಚೇಷ್ಟಾದಿಗಳೆಲ್ಲವೂ ತಿಳಿದೇ ಇರುವುದು. ನಮಗೇನು ವರ ಬೇಕೋ ಎಂತು ಶಾಂತಿ ಸಿಗಬೇಕೋ ಅದೆಲ್ಲವೂ ನಿನಗೇ ಗೊತ್ತು. ಜಗತ್ಪತೇ! ಇದೇ ವರವನ್ನೆಮಗೆ ದಯಪಾಲಿಸು. ಮೋಕ್ಷಾದಿ ಸಕಲ ಪುರುಷಾರ್ಥ ಪ್ರದನು ಜಗದ್ಗುರುವಾದ ನೀನು ನಮ್ಮಲ್ಲಿ ಪ್ರಸನ್ನನಾಗು. ಇಷ್ಟೇ ಸಾಕು. ಆದರೂ ಲಕ್ಷ್ಮೀಪತಿ ಯಾದ ನಿನ್ನನ್ನು ಪರವನ್ನು ಬೇಡೆನಲು ಬೇಡದಿರಲಾರೆವು. ನಿನ್ನ ಗುಣಗಳಿಗೆ ಕೊನೆಯುಂಟೇ? ಅನಂತ! ನಿನ್ನ ವಿಭೂತಿರೂಪಗಳನ್ನು ಸಾಕಲ್ಯೇನ ತಿಳಿಯಲು ಬ್ರಹ್ಮನಿಗೂ ರಮೆಗೂ ಆಗದು. ಇಂತಹ ಅನಂತಮಹಿಮನಾದ ನೀನಲ್ಲದಿನ್ನಾರನ್ನೂ ಬೇಡೋಣ? ಪಾರಿಜಾತಪುಷ್ಪ ಮಕರಂದರ ಸಮತ್ತಚಿತ್ತವಾದ ಮಧುಕರವಿನ್ನು ಚಂಪಕಾದಿಗಳನ್ನು ಬೇಡದಿರುವಂತೆ ನಿನ್ನಂಘ್ರಿ ಮೂಲವನ್ನು ಪೊಂದಿರುವ, ನಾವಿನ್ನೇನು ಬೇಡೇವು? ಆದರೂ ನಿನ್ನ ಮಾಯೆಯಿಂದ ಮೋಹಿತರಾಗಿ ಕರ್ಮ ಫಲವನ್ನುಣ್ಣಲು ಅನೇಕ ಯೋನಿಜಾತರಾಗುವ ನಮಗೆ ಜನ್ಮಜನ್ಮದಲ್ಲಿ ನಿನ್ನ ಭಕ್ತರ ಸಂಗವನ್ನು ಕೊಡು. ಸ್ವರ್ಗಾಪವರ್ಗಗಳು ಕೂಡ ಭಗವದ್ಭಕ್ತ ಸಂಗಫಲದಲ್ಲಿ ಕಲಾಭಾಗವೆಂದೆನಿಸಲಾರವು. ಮರಣಶೀಲರಾದ ಮನುಜರಿಗಿನ್ನು ಬೇರೆ ಸಂತಾನಸಂಪದಾದಿಗಳಿಂದ ಏನಾದೀತು?

ಸಜ್ಜನಸಂಗದಿ ಮಂಗಲಕರ ಭಗವತ್ಕಥೆಯ ಗೀತವಾಗುವುದರಿಂದ ಭಗವನ್ನಿಷ್ಠೆಯು ಹೆಚ್ಚುವುದು. ದುಷ್ಟವಿಷಯಾಶೆಯು ದೂರವಾಗುವುದು. ಭೂತಗಳಲ್ಲಿ ಪರಸ್ಪರ ವೈರವಿರುವು ದಿಲ್ಲ. ಮಾನಸೋದ್ವೇಗವು ನಷ್ಟವಾಗುವುದು. ಶ್ರೀಬ್ರಹ್ಮರುದ್ರವಂದ್ಯನು ಸನಕಾದಿ ಯೋಗ ಸ್ತುತ್ಯನು ಆದ ಶ್ರೀ ನಾರಾಯಣನ ಸತ್ಕಥೆಯನ್ನಾಮುಕ್ತಸಂಗರು ಮತ್ತೆ ಮತ್ತೆ ಪಾಡುತ್ತಿರುವರು. ತೀರ್ಥಗಳನ್ನು ಪಾವನಮಾಡುತ್ತಾ ನಡೆದುಪೋಗುವ ನಿನ್ನವರ ಸಮಾಗಮವು ಸಂಸಾರದಿಂದ ಭೀತನಾಗ ಸುಜನನಿಗೆ ರುಚಿಸದಿರುವುದೇ? ನಾವು ಸಾಕ್ಷಾತ್ ಭಗವತ್ಪ್ರಿಯನು ಸಂಸಾರಸಾಗರ ತರಣ ಸಹಾಯನು ಆದ ಶಿವನಿಂದ ಕ್ಷಣಕಾಲ ಮಾತ್ರ ಕೂಡಿದ ಪುಣ್ಯದಿಂದ, ಔಷಧವಿಲ್ಲದ ಮೃತ್ಯುರೂಪ ಸಂಸಾರ ರೋಗವನ್ನು ಕಳೆದ ಭಿಷಗ್ವರನಾದ ನಿನ್ನ ಚರಣಾರವಿಂದ ಪೊಂದಿದೆವು. ನಾವು ಓದಿದ ವಿದ್ಯೆ, ಮಾಡಿದ ಗುರುಸೇವೆ, ವಿಪ್ರವೃದ್ಧಜನರ ಪರಿಚರ್ಯೆ, ಆರ್ಯರ ಪೂಜೆ,

ಅನಾಥರ ಪೋಷಣೆ, ಮಿತ್ರರ ಸ್ನೇಹ, ಭ್ರಾತೃಜನ ಪ್ರೇಮ, ಅಖಿಲ ಭೂತಗಳಲ್ಲಿ ಅಸೂಯಾ ರಾಹಿತ್ಯ. ಇಷ್ಟು ಕಾಲ ನೀರಿನಲ್ಲಡಗಿ ನಿರಾಹಾರರಾಗಿ ಮಾಡಿದ ತಪಸ್ಸು, ಇನ್ನೇನೆಲ್ಲ ಶುಭಕರ್ಮ ಗಳೆಲ್ಲವನ್ನು ನಿನಗರ್ಪಿಸಿ ನೀನು ಪ್ರೀತನಾಗೆಂದು ಬೇಡುತ್ತಿರುವೆವು. ಮನುರಾಜ, ಪೂಜ್ಯರಾದ ಬ್ರಹ್ಮರುದ್ರರು ಇನ್ನಿತರ ಜ್ಞಾನಿಗಳು ಸ್ತುತಿಸಲುಪಕ್ರಮಿಸಿ ಕೊನೆಗಾಣದಿರುವ ನಿನ್ನ ಮಹಿಮೆ ಯನ್ನು ಯಥಾಮತಿ ಸ್ತುತಿಸಿರುವೆವು. ವೈಷಮ್ಯ ನೈರ್ಘೃಣ್ಯರಹಿತನು. ನಿಷ್ಪಾಪನು, ಪೂರ್ಣ ಷಡ್ಗುಣನು, ಜೀವಭಿನ್ನನು, ಸರ್ವೋತ್ತಮನು, ಬಲಜ್ಞಾನಾತ್ಮಕ ಮುಖ್ಯಪ್ರಾಣ ಪ್ರವರ್ತಕನು, ಬಲಸ್ವರೂಪನು, ಆದ ಭಗವಂತನೇ! ನಿನಗೆ ನಮಸ್ಕರಿಸುವೆವು.

ಮೈತ್ರೇಯನು ಪೇಳಿದನು–

ಪ್ರಚೇತಸರ ಸ್ತುತಿಯನ್ನು ಕೇಳಿ ಪ್ರೀತನಾಗಿ ಶ್ರೀ ಹರಿಯು 'ಒಳ್ಳೆಯದು' ಎಂದು ಹೇಳಿ, ನೋಡಿ ತೃಪ್ತರಾಗದೆ ನೋಡುತ್ತಿರುವ ಪ್ರಚೇತಸರನ್ನು ಬೀಳ್ಕೊಟ್ಟು ಶರಣ್ಯವತ್ಸಲನು ಅವಿನಿಷ್ಟ ಪರಾಕ್ರಮನಾದ ಶ್ರೀಹರಿಯು ಹೊರಟುಹೋದನು.

ಪ್ರಚೇತಸರರ ಉದಕದಿಂದ ಹೊರಬಂದು ಮೇಲಕ್ಕೆ ಬೆಳೆದು ನಿಂತ ವೃಕ್ಷಗಳಿಂದ ಮುಚ್ಚ ಲ್ಪಟ್ಟ ಭೂಮಿಯನ್ನು ಕಂಡು ಕೋಪಗೊಂಡು ಮುಖದಿಂದ ಅಗ್ನಿವಾಯುಗಳನ್ನು ಸೃಜಿಸಿ ಭೂಮಂಡಲದಿ ವೃಕ್ಷಗಳನ್ನು ನಾಶಗೊಳಿಸಲುಪಕ್ರಮಿಸಿದರು. ದ್ರುಮಗಳೆಷ್ಟೋ ಸುಟ್ಟು ಬೂದಿ ಯಾದವು. ಆಗ ಬ್ರಹ್ಮದೇವನು ಬಂದು ಬರ್ಹಿಷ್ಮತ್ಪುತ್ರರನ್ನು ಯುಕ್ತಿಗಳನ್ನು ಪೇಳಿ ಶಾಂತ ಗೊಳಿಸಿದನು. ಉಳಿದ ಗಿಡಗಳೂ ತದಧಿಪತಿಯಾದ ಚಂದ್ರನು ಬ್ರಹ್ಮದೇವನ ವಾಕ್ಯವನ್ನೇ ಕೇಳಿ, ತಮ್ಮ ಮಗಳಂತೆ ಸಾಕಿದ ಮಾರಿಷಳನ್ನು ತಂದು ಪ್ರಚೇತರಿಗೊಪ್ಪಿಸಿದರು. ಅವರಾದರೂ ಬ್ರಹ್ಮನಪ್ಪಣೆಯಂತೆ ಅವಳನ್ನು ಮದುವೆಯಾಗಿ ದಕ್ಷನೆಂಬ ಮಗನನ್ನು ಪಡೆದರು. ಹಿಂದೆ ರುದ್ರದೇವನನ್ನವಮಾನಿಸಿ ಬಸ್ತಮುಖನಾಗಿದ್ದ ದಕ್ಷನೇ ಪ್ರಚೇತಸರ ಪುತ್ರನಾಗಿ ಚಾಕ್ಷುಸ ಮನ್ವಂತರದಲ್ಲಿ ಹಿಂದಿನ ನಷ್ಟವನ್ನು ಸೃಷ್ಟಿಯನ್ನು ಮುಂದುವರಿಸಿದನು. ಹರಿಪ್ರೀತಿಯನ್ನು ಬ್ರಹ್ಮಪ್ರೀತಿಯನ್ನು ಸಂಪಾದಿಸಿದನು. ಇತರ ತೇಜಶ್ಶಾಲಿಗಳೆನಿಸಿದ ಜನರನ್ನು ಯೋಗ್ಯತೆ ಯಿಂದಲೂ ಪದವಿಯಿಂದಲೂ ಮೀರಿ ಹರಿಪ್ರೀತಿಕರ ಕರ್ಮಗಳನ್ನು ಚೆನ್ನಾಗಿ ಮಾಡಿ ದಕ್ಷನೆನಿಸಿ ದನು. ಪ್ರಜಾಪತಿಯಾದ ಬ್ರಹ್ಮನು, ಪ್ರಜೇಶರಾದ ಮರೀಚ್ಯಾದಿಗಳು ದಕ್ಷನನ್ನೇ ಪ್ರಜಾಸರ್ಗ ರಕ್ಷಣೆಯನ್ನು ಮಾಡಲು ನಿಯೋಜಿಸಿದರು.

## ೩೧. ನಾರದೋಪದೇಶ – ಪ್ರಚೇತಸರ ಮುಕ್ತಿ

ಮೈತ್ರೇಯನು ಪೇಳಿದನು–

ದ್ವಾದಶ ಲಕ್ಷ ವರ್ಷ ಅವ್ಯಾಹತೇಂದ್ರಿಯರಾಗಿ ಪೃಥ್ವೀರಾಜ್ಯವನ್ನಾಳಿ, ಪ್ರಚೇತಸರು ವಿರಕ್ತಿಯನ್ನು ತಾಳಿದರು. ಅಧೋಕ್ಷಜನಾಡಿದ ಮಾತನ್ನು ನೆನೆದು ಜ್ಞಾನೋದಯವನ್ನು ಪೊಂದಿದರು. ಪತ್ನಿಯನ್ನು ಪುತ್ರನಿಗೊಪ್ಪಿಸಿ ಸನ್ನ್ಯಾಸವನ್ನು ಕೈಕೊಂಡು ದೀಕ್ಷಿತರಾದರು. ಸರ್ವಭೂತಸ್ವಾಮಿಯು ಅಂತರ್ಯಾಮಿಯು ಆದ ಹರಿಯನ್ನು ಧ್ಯಾನಿಸುತ್ತಾ ತಪವನ್ನು ಮಾಡಿದರು. ಪಶ್ಚಿಮ ಸಮುದ್ರತೀರದಲ್ಲಿ ಜಾಜಲಿ ಎಂಬ ಋಷಿಯ ಸಿದ್ಧನಾದ ಆಶ್ರಮವನ್ನು ಸೇರಿದರು. ಪ್ರಾಣೇಂದ್ರಿಯ ಮನಸ್ಸುಗಳನ್ನು ನಿಗ್ರಹಿಸಿ, ಜಿತಾಸನರಾಗಿ ಶಾಂತಮನದಿಂದ

ಗುಣಪೂರ್ಣನಾದ ರಮಾರಮಣನನ್ನು ಚಿಂತಿಸುವ ಆ ಸಮಾನರೂಪಗುಣವಿಭ್ರಾಜಿತರಾದ ಪ್ರಚೇತಸರಲ್ಲಿ ಸುರಾಸುರವಂದ್ಯನಾದ ನಾರದನು ಬಂದನು. ಪ್ರಚೇತಸರವನನ್ನು ಕಂಡು, ಎದ್ದು ನಮಿಸಿ ಪೂಜಿಸಿ, ಸುಖಾಸನದಿ ಕೂಡಿಸಿ ಇಂತು ಕೇಳಿದರು–

ಸುರರ್ಷೇ! ನಿನಗೆ ಸ್ವಾಗತವು. ನಮ್ಮ ಭಾಗ್ಯವು ಫಲಿಸಿ ನಿನ್ನ ದರ್ಶನವಾಯಿತು. ಸಂಸಾರ ವೆಂಬ ಕತ್ತಲನ್ನು ದೂರಮಾಡುತ್ತಾ ಸೂರ್ಯನಂತೆ ಪ್ರಕಾಶದಿಂದ ಸಂಚರಿಸುತ್ತಿರುವೆ. ಭಗವಂತ ನಾದ ಶಿವನು ಸರ್ವಸ್ವಾಮಿಯಾದ ಶ್ರೀಹರಿಯು ಉಪದೇಶಿಸಿದ ತತ್ತ್ವಜ್ಞಾನವು ಗೃಹಾಸಕ್ತರಾಗಿ ಬಹುಕಾಲ ಕಳೆದುದರಿಂದ ನಷ್ಟಪ್ರಾಯವಾದಂತಿದೆ. ಆದ್ದರಿಂದ ತತ್ತ್ವಸ್ವರೂಪ ನಿರೂಪಕರಾದ ಅಧ್ಯಾತ್ಮಜ್ಞಾನವನ್ನು ನಮಗೆ ದಯಮಾಡಿ ಕೊಟ್ಟು ದುಸ್ತರ ಸಂಸಾರಸಾಗರದಿಂದ ಪಾರುಮಾಡಿ ರಕ್ಷಿಸು.

ವಿದುರಾ! ಇಂತು ಬೇಡಿದ ಆ ರಾಜರ್ಷಿಗಳ ವಾಕ್ಯವನ್ನು ಕೇಳಿ ನಾರದನು ಭಗವಂತನನ್ನು ನೆನೆದಿಂತೆಂದನು–

ಶ್ರೀಹರಿಯನ್ನು ಸರ್ವೇಶನೆಂದರಿತು ಸೇವಿಸಲು ವಿನಿಯೋಗಪಡಿಸುವುದೇ ನರಜನ್ಮ; ಅದೇ ಸತ್ ಕರ್ಮ; ಅದೇ ಸಾರ್ಥಕವಾದ ಆಯುಸ್ಸು; ಅದೇ ಒಳ್ಳೆಯ ಮನಸ್ಸು; ಅದೇ ನಿರ್ದುಷ್ಟ ವಚಸ್ಸು; ಉಭಯಕುಲಶುದ್ಧವು, ಉಪನಯನ ಪವಿತ್ರವು, ಅಗ್ನ್ಯಾಧಾನ ವಿಶಿಷ್ಟವು ಆದ ಜನ್ಮಗಳಿಂದೇನು? ವೇದೋಕ್ತ ಕರ್ಮಾನುಷ್ಠಾನದಿಂದೇನು? ದೇವಜೀವಮಾನವನ್ನು ಪೊಂದಿ ಮಾಡಿದ ಕರ್ಮ, ತಪಸ್ಸು, ವಚನ, ಮನೋಜಯ, ಬುದ್ಧಿಬಲ, ಇಂದ್ರಿಯಸಂಪತ್ತು, ಯೋಗಾಭ್ಯಾಸ, ಯಥಾರ್ಥಜ್ಞಾನಶಕ್ತಿ , ಸನ್ಯಾಸ, ವೇದಾಧ್ಯಯನಾದಿ ಶ್ರೇಯಸ್ಸಾಧನಗಳಿಂದ ಪರಮಾತ್ಮನು ಪ್ರೀತನಾಗುವಂತೆ ಭಜಿಸಲ್ಪಡದಿದ್ದರೆ ಯಾವ ಕರ್ಮಾದಿಗಳಿಂದಲೂ, ತೀರ್ಥ ಯಾತ್ರೆ ವ್ರತಗಳಿಂದಲೂ, ಕೂಡ ಏನೂ ಪ್ರಯೋಜನವಿಲ್ಲ. ಎಲ್ಲ ಶ್ರೇಯಃಪದಾರ್ಥಗಳಲ್ಲಿ ಶ್ರೇಷ್ಠನು ಶ್ರೀಹರಿಯೇ. ಶ್ರೀಹರಿಯು ಎಲ್ಲ ಜೀವರ ಸ್ವರೂಪಾನಂದಪ್ರದನು, ಸ್ವಾಮಿಯು ಆದುದರಿಂದ ಅವನೇ ಶ್ರೇಷ್ಠನೆನಿಸಿರುವನು.

ತರುಮೂಲವನ್ನು ತೋಯಿಸಲು ಅದರ ಶಾಖೋಪಶಾಖೆಗಳಿಗೆ ಸ್ವತಃತೃಪ್ತಿಯು ಆದಂತೆ, ಮುಖದಲ್ಲಿ ಮುಖ್ಯಪ್ರಾಣನಿಗೆ ಆಹಾರವನ್ನರ್ಪಿಸಲು ಸರ್ವೇಂದ್ರಿಯಗಳಿಗೆ ಬಲತೇಜಗಳು ಬಂದಂತೆ, ಶ್ರೀನಾರಾಯಣನ ಪೂಜೆಯನ್ನು ಗೈಯಲು, ಸರ್ವದೇವತೆಗಳು ತಾವಾಗಿ ತೃಪ್ತರಾಗು ವರು. ಸೂರ್ಯನಿಂದ ಆಷಾಢದಲ್ಲಿ ಕಿರಣ ಜಲಗಳು ಪುಟ್ಟಿ ಮತ್ತೆ ಹೇಮಂತದಲ್ಲಿ ಕಿರಣ ಜಲಗಳು ಅಲ್ಲೇ ಹುದುಗಿರುವಂತೆ, ಪ್ರಾತಃಕಾಲಕಿರಣಗಳು ಸಾಯಂಕಾಲದಲ್ಲಿ ಸೂರ್ಯ ಮಂಡಲವನ್ನು ಪ್ರವೇಶಿಸುವಂತೆ, ಭೂಮಿಯಿಂದ ಬಂದ ಸ್ಥಿರ ಜಂಗಮ ದೇಹದಲ್ಲಿಯೇ ಸೇರುವುವು. ಶ್ರೀಹರಿಯಿಂದ ಹೊರಬಂದ ಜಗತ್ತು ಮತ್ತೆ ಅವನಲ್ಲೇ ಲಯವನ್ನು ಪೊಂದಿರು ವುದು. ಆ ಜಗತ್ಸ್ವಾಮಿಯು ಸ್ವರೂಪವು ಜಗತ್ತಿನಿಂದ ಭಿನ್ನವಾಗಿದೆ. ಅವನು ಜಗದಲ್ಲವತರಿಸಿ ಆಗಾಗ ಪ್ರಕಾಶಿಸುವನು. ತನಗೆ ಬೇಕಾದಾಗ ಮೂಲರೂಪವನ್ನು ಪೊಂದುವನು. ಜೀವನು ಮಲಗಿದಾಗ ಅವನ ಇಂದ್ರಿಯಗಳು ವ್ಯಾಪಾರವಿಲ್ಲದೆ ಸುಮ್ಮನಿರುವುವು. ಆಗ ದೇಹವೇ ನಾನೆಂಬ ದ್ರವ್ಯಭ್ರಮೆ, ನಾನೇ ಕರ್ತನೆಂಬ ಕ್ರಿಯಾಭ್ರಮೆ, ಇಂದ್ರಿಯಗಳು ನನ್ನವೆಂಬ ಕಾರಕ ಭ್ರಮೆ ಇವೆಲ್ಲವೂ ಇರುವುದಿಲ್ಲ. ಆಕಾಶದಲ್ಲಿ ಪ್ರಕಾಶವಸ್ತುಗಳು ಬಂದು ಆಮೇಲೆ ಅಸ್ತಂಗತವಾಗುವಾಗ ಆಕಾಶಕ್ಕೆ ಇವುಗಳ ಲೇಪವಿಲ್ಲ. ಅಂತೆಯೇ ಅಸಂಗನಾದ ಪರಮಾತ್ಮನಿಗೆ

ಸತ್ತ್ವರಜಸ್ತಮೋಗುಣಗಳನ್ನು ಸ್ವೀಕರಿಸಿ ಸೃಷ್ಟ್ಯಾದಿಗಳನ್ನು ಮಾಡಿದಾಗ ಆ ಗುಣಲೇಪವಿಲ್ಲ. ಅಗ್ನಿ ಪ್ರತಿಷ್ಟಂಭನ ಮಾಡಿದವನು ಅಗ್ನಿಯಲ್ಲಿದ್ದರೂ ಸುಡದಿರುವಂತೆ, ಸರ್ವಸ್ವಾಮಿಯಾದ ಭಗವಂತನಿಗೆ ತತ್ಕೃತಹಾನಿಲೇಪಗಳಿಲ್ಲ. ಅಗ್ನಿ ಸುಡಲಿಲ್ಲ ಆದ್ದರಿಂದ ಅಗ್ನಿಮಿಥ್ಯೆ ಎನ್ನಲು ಬರುವುದೇ? ಇಲ್ಲ. ಅಂತೆಯೇ ಜಗವು ಮಿಥ್ಯವಲ್ಲ ಸತ್ಯವೇ! ಆದ್ದರಿಂದ ಪ್ರಚೇತಸರೇ! ಸರ್ವೋತ್ತಮನು, ಸರ್ವಜೀವನಿಯಾಮಕನು, ಕಾಲರೂಪಿಯು, ಲಕ್ಷ್ಮೀಪತಿಯು, ಸ್ವತೇಜೋ ಬಲದಿಂದ ಪ್ರಕೃತಿಗುಣಲೇಪರಹಿತನು, ಆದವನು ಶ್ರೀಹರಿಯೇ. ಇನ್ನೊಬ್ಬರಾದರೂ ಅಲ್ಲ ವೆಂದು ಸರ್ವಶ್ರೇಷ್ಠನಾದ ಭಕ್ತಿಯಿಂದ ಅವನನ್ನು ಭಜಿಸಿ. ಮುಖ್ಯಪ್ರಾಣಾನುಗ್ರಹದಿಂದ ಎಚ್ಚತ್ತು ಇಂದ್ರಿಯವ್ಯಾಪಾರಶರೀರದಲ್ಲಿ ನಡೆಸುವಂತೆ ಜೀವನು ಮುಖ್ಯಪ್ರಾಣಪ್ರಸಾದದಿಂದ ಇಂದ್ರಿಯಜಯವನ್ನುಮನೋಜಯವನ್ನು ಸಂಪಾದಿಸಿ ಸರ್ವಭ್ರಮೆಗಳನ್ನು ಕಳೆದುಕೊಂಡು ಭಗವಂತನನ್ನು ಅಪರೋಕ್ಷದಿಂದ ನೋಡಿ ಮುಕ್ತನಾಗುವನು. ಆ ಶ್ರೀಹರಿಯು ಭಕ್ತರ ಸಂಕಲ್ಪ ವಿಕಲ್ಪಗಳನ್ನು ನಾಶಪಡಿಸುವನು. ಸಮಾನಾಧಿಕಾರಹಿತನು! ಪಂಚಭೇದ ತಾರತಮ್ಯಗಳನ್ನು ತಿರಸ್ಕರಿಸದಿರುವ ಸುಜನರಿಗೆ ಮಾತ್ರ ಸಿಗುವನು; ಆದಿಮಧ್ಯಂತರ ರಹಿತನು, ನಿರಂತರಾನಂದ ಜ್ಞಾನರೂಪನು. ಈ ರೀತಿಯಾದ ಜ್ಞಾನದಿಂದ ಅವನನ್ನು ಭಜಿಸಿ. ಸರ್ವಭೂತಗಳಲ್ಲಿ ದಯೆ ಯನ್ನು ತೋರಿಸಿ. ದೇವನು ಕೊಟ್ಟಿದ್ದರಿಂದ ಸಂತುಷ್ಟರಾಗಿ. ಸರ್ವೇಂದ್ರಿಯಗಳನ್ನು ವಿಷಯ ಗಳಿಂದ ನಿಗ್ರಹಿಸಿ. ಜನಾರ್ಧನನಾಗ ನಿಮ್ಮಲ್ಲಿ ಪ್ರೀತನಾಗುವನು. ದಾರಾಪುತ್ರಧನೇಷಣ ತ್ರಯವನ್ನು ಬಿಟ್ಟು ನಿರ್ಮಲವಾದ ಮನಸ್ಸಿನಿಂದ ಭಜಿಸಿ ಹೆಚ್ಚಿದ ಭಕ್ತಿಯಿಂದ ಕರೆಯಲು ತನ್ನವರ ವಶವಾಗಿ ಓಗೊಟ್ಟು ಓಡಿಬಂದು ಸನ್ನಿಹಿತನಾಗುವನು. ಎಲ್ಲ ಕಡೆ ತುಂಬಿ ಬರುವ ಆಕಾಶದಂತೆ ಅಲ್ಲಿದ್ದು ಕದಲದೆ, ಸಜ್ಜನರನ್ನು ಬಿಡದಿರುವ ಅಕ್ಷರನ ಕರುಣಗೇನೆಂದೆ? ಕುಬುದ್ಧಿಗಳ ದೊಡ್ಡ ಪೂಜೆಯನ್ನವನೊಲ್ಲ. ಅಧನರಾದರೂ ಶ್ರೀಹರಿಯೇ ಧನಸರ್ವ ಸ್ವವೆಂದರಿತವರೇ ತನ್ನವರೆಂದು ಅವರ ಭಕ್ತಿರಸವನ್ನು ಪ್ರೀತಿಯಿಂದ ಸ್ವೀಕರಿಸಿ ಉದ್ಧರಿಸುವನು. ವಿದ್ಯೆ, ಐಶ್ವರ್ಯ, ಕುಲ, ಕರ್ಮಾನುಷ್ಠಾನುಗಳಿಂದ ಮದವನ್ನು ಹೊಂದಿ ಅಕಿಂಚಿನರಾದ ಭಗವದ್ಭಕ್ತರಿಗಪರಾಧವನ್ನು ಮಾಡುವ ದುಷ್ಟಬುದ್ಧಿಗಳ ಡಾಂಭಿಕ ಪೂಜೆಯನ್ನು ಸ್ವೀಕರಿಸು ವುದಿಲ್ಲ. ಅಂತಹ ಕರ್ಮಾದಿಗಳಿಗೆ ಫಲವೂ ಕೊಡದಿರುವನು. ಒಂದು ವೇಳೆ ಪರಿಚರ್ಯೆಯನ್ನು ಮಾಡುವ ಜಗನ್ಮಾತೆಯನ್ನೂ ಲೆಕ್ಕಿಸನು. ಲಕ್ಷ್ಮೀ ಕಟಾಕ್ಷವನ್ನು ಬಯಸುವ ಮನುಜಾಧಿಪರನ್ನು ಪೂಜಿಸುವ ದೇವತೆಗಳನ್ನು ಕೂಡ ಅಪೇಕ್ಷಿಸದೆ ಸ್ವಸುಖಪೂರ್ಣನಾದ ಶ್ರೀಹರಿಯು ತನ್ನ ಭಕ್ತಸಮೂಹ ಸುಲಭನಾಗಿ, ಅವರಿಗೊಲಿದು ವಶನಾಗುವನು. ಇಂತಹ ಭಕ್ತವತ್ಸಲನನ್ನು ಯಾವ ರಸಜ್ಞನು ಭಜಿಸಲೊಲ್ಲನು? ಚಿತ್ರರಥನೆಂದು ಪ್ರಸಿದ್ಧನಾದ ಧ್ರುವನು ನಿಮ್ಮ ಪೂರ್ವಜನು. ಬಹುಯಶಃಪ್ರಕಾಶದಿಂದ ಮೆರೆದನು. ಸವತಿ ತಾಯಿಯ ವಾಗ್ಬಾಣಗಳಿಂದ ಮನನೊಂದು ಚಿಕ್ಕ ಬಾಲಕನಾಗಿದ್ದ ಧ್ರುವನು ಸ್ತ್ರೈಣನಾದ ತಂದೆಯನ್ನು, ತನ್ನವರನ್ನೂ ಬಿಟ್ಟು ಅರಣ್ಯವನ್ನು ಸೇರಿದನು. ಆಗ ನಾನವನನ್ನು ಕಂಡೆ. ಐದೇ ವರ್ಷದ ಬಾಲಕನು ನನ್ನ ಉಪದೇಶದಂತೆ ಹರಿಯನ್ನಾಧರಿಸಿ, ಹರಿನಿಲಯವಾದ ಧ್ರುವಪದವಿಯನ್ನು ಪೊಂದಿದನು. ಆ ಸರ್ವೋಚ್ಚ ಧ್ರುವಲೋಕವನ್ನು ಅದ್ಯಾಪಿ ಸಪ್ತರ್ಷಿಗಳು ಪ್ರದಕ್ಷಿಣೆಸುತ್ತಾ ಇರುವರು. ಧ್ರುವನ ಉತ್ತಮೋರ್ಧ್ವಲೋಕವನ್ನು ಪೊಂದಲು ಕೆಲವು ಮುನಿಗಳಿಗೂ ಸಾಧ್ಯವಿಲ್ಲ. ಅಂತಹ ಸರ್ವಭೂತಾಂತರ್ಯಾಮಿಯಾದ ಶ್ರೀಹರಿಯನ್ನು ನೀವೂ, ರುದ್ರದೇವನ ಉಪದೇಶವನ್ನನುಸ

ಸರಿಸಿ ಭಜಿಸಿ ಪೂತರಾಗಿರಿ. ಸಂಸಾರವನ್ನೂ ದಾಟಿ ಮುಕ್ತರಾಗುವಿರಿ.

ಮೈತ್ರೇಯನು ಹೇಳಿದನು–

ವಿದುರಾ! ಇಂತು ಪ್ರಚೇತಸರಿಗೆ ಭಗವತ್ಕಥೆಯನ್ನು ಅನೇಕಗಳನ್ನು ವರ್ಣಿಸಿ ನಾರದನು ಬ್ರಹ್ಮಲೋಕವನ್ನು ಕುರಿತು ಪ್ರಯಾಣ ಮಾಡಿದನು.

ಪ್ರಚೇತಸರು ಲೋಕಪಾಪಹರವಾದ ಶ್ರೀ ಹರಿಯ ಯಶೋಮಹಿಮೆಯನ್ನು ಕೇಳಿ ಶ್ರೀ ರಮಣಚರಣವನ್ನು ಧ್ಯಾನಿಸಿ, ವೈಕುಂಠವನ್ನು ಪೊಂದಿದನು.

ವಿದುರಾ! ನೀನು ಕೇಳಿದ ಪ್ರಶ್ನೆಗಳಿಗುತ್ತರವನ್ನು ಹೇಳಿದುದಾಯಿತು. ಪ್ರಚೇತೋ ನಾರದ ಸಂವಾದರೂಪವನ್ನು ಈ ಹರಿಗಾಥೆಯು ಶ್ರೀಶನ ಚರಣಾರ್ಪಿತವಾಗಲಿ! ಶ್ರೀಶುಕನು – ಇಂತು ರಾಜನ್! ಉತ್ತಮಪಾದನ ವಂಶವು ವರ್ಣಿಸಿದುದಾಯಿತು. ಇನ್ನು ಪ್ರಿಯವ್ರತನ ಕಥೆಯನ್ನು ಕೇಳು. ನಾರದರಿಂದ ಬ್ರಹ್ಮವಿದ್ಯೆಯನ್ನು ಕೇಳಿ ಕೆಲಕಾಲ ಗೃಹಸ್ಥಾಶ್ರಮದಲ್ಲಿದ್ದು ಮಹೀಮಂಡಲ ವನ್ನಾಳಿ ಅನಂತರ ಪುತ್ರರಿಗೆ ರಾಜ್ಯವನ್ನು ಹಂಚಿಕೊಟ್ಟು ಪ್ರಿಯವ್ರತನು ತಪವನ್ನು ಮಾಡಿ ಮುಕ್ತನಾದನು.

ರಾಜನ್! ಅಜಿತನ ಮಹಾಮಹಿಮೆಯನ್ನಿಂತು ವರ್ಣಿಸಿದ ಮೈತ್ರೇಯನ ವಾಗಮೃತವನ್ನು ಸವಿದು, ಬಹು ಭಕ್ತಿಯಿಂದ ಆನಂದಭಾಷ್ಪಗಳುದುರುತ್ತಿರಲು, ವಿದುರನು ಮುನಿಚರಣವನ್ನು ಶಿರಬಾಗಿ ನಮಿಸಿ, ಹರಿಯನ್ನು ಹೃದಯದಿ ನೆನೆದು ಇಂತೆಂದನು–

ಹೀಗೆಂದು ವಿದುರನು ಮೈತ್ರೇಯನಿಗೆ ವಂದಿಸಿ ಸಂತೋಷಭರಿತರಾಗಿ ತನ್ನ ಬಂಧುಗಳಾದ ಪಾಂಡವಾದಿಗಳನ್ನು ನೋಡಲು ಹಸ್ತಿನಾವತಿಗೆ ಹೊರಟನು.

ಮನ್ವಾದಿ ರಾಜರ್ಷಿಗಳ ವೃತ್ತಾಂತವನ್ನು ನಾನು ನಿನಗೆ ಹೇಳಿರುವನು. ಪರೀಕ್ಷಿತನೇ! ಅವರೆಲ್ಲ ಹರಿಭಕ್ತರು. ಅಂತಲೇ ಅವರ ಕಥೆಯು ವರ್ಣಿತವಾಯಿತು. ಇದನ್ನು ಕೇಳಿದವನು ಆಯುಸ್ಸನ್ನು, ಧನವನ್ನು, ಯಶವನ್ನು, ಶುಭವನ್ನು, ಐಶ್ವರ್ಯವನ್ನು, ಉತ್ತಮಗತಿಯನ್ನು ಪೊಂದುವನು.

ಚತುರ್ಥಸ್ಕಂದವು ಪೂರ್ಣವಾಯಿತು

॥ಶ್ರೀ ಕೃಷ್ಣಾರ್ಪಣಮಸ್ತು॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಪಂಚಮ ಸ್ಕಂಧವು

|| ಹರಿಃ ಓಂ ||

### ೧. ಪ್ರಿಯವ್ರತ ಚರಿತೆ

ಪರೀಕ್ಷಿತನು ಪ್ರಶ್ನಿಸಿದನು–

ಶುಕಮುನೇ! ಪ್ರಿಯವ್ರತನಂತಹ ಆತ್ಮಾರಾಮನು ಗೃಹಾಶ್ರಮಸುಖಗಳಲ್ಲಿ ಮಗ್ನನಾದನೆಂದರೆ ಆಶ್ಚರ್ಯವಾಗಿದೆ! ಗೃಹಾಶ್ರಮವು ಬಂಧಕವು; ಅಜ್ಞಾನಪ್ರದವು. ಸಕಲ ಕರ್ಮಫಲ ಸಂಗರಹಿತರಾದವರಿಗೂ ಗೃಹಸ್ಥಾಶ್ರಮವು ಅಭಿಮಾನವನ್ನು ಪುಟ್ಟಿಸಿ ಕೆಡಿಸುವುದು. ಉತ್ತಮಶ್ಲೋಕಪಾದಚ್ಛತ್ರದ ಛಾಯೆಯೆನಿಸಿದ ಬ್ರಹ್ಮಜ್ಞಾನವನ್ನು ಪಡೆದವರಿಗೆ ಕುಟುಂಬದಲ್ಲಿ ಆಸಕ್ತಿ ಇರುವುದುಂಟೇ? ಆದರೂ ಪ್ರಿಯವ್ರತನು ದಾರಾಗಾರಸುತಾದಿ ಸಕ್ತನಾಗಿದ್ದೂ, ಮೋಕ್ಷವನ್ನು ಪಡೆದುದು ಹೇಗೆ? ಶ್ರೀಹರಿಯಲ್ಲಿ ನಿರ್ಮಲಭಕ್ತಿಯಾದರೂ ಅವನಿಗೆ ದೊರಕಿದುದು ಹೇಗೆ? ಎಂಬ ಸಂಶಯವು ಪೀಡಿಸುತ್ತಿದೆ. ದಯಮಾಡಿ ಹೇಳಿ.

ಶ್ರೀಶುಕನು ಪೇಳಿದನು–

ಸಕಲ ಸೌಭಾಗ್ಯನಿಧಿಯು, ಸದಾ ನಿರ್ದೋಷಯಶನು ಆದ ಭಗವಂತನ ಪಾದಾರವಿಂದ ಮಕರಂದ ರಸಪಾನಮಗ್ನನಾಗಿ ಬಾಲ್ಯದಿಂದಲೂ ಭಕ್ತನಾದ ಪ್ರಿಯವ್ರತನು ಸತ್ಸಂಗದಿಂದ ಈಷಣತ್ರಯವನ್ನು ಗೆದ್ದು ಮಂಗಳಕರವಾದ ಬ್ರಹ್ಮಜ್ಞಾನವನ್ನೂ ಮೋಕ್ಷವನ್ನೂ ಪೊಂದಿದನು. ಶ್ರೀವಾಯುದೇವನಿಗೆ ವಿಷಪಾನಮಾಡಿದರೂ ಹಾನಿಯಾಗದಿದ್ದಂತೆ ಭಗವದ್ಭಕ್ತರಿಗೆ ಗೃಹಸ್ಥಾಶ್ರಮ ಹಾನಿಕರವೆನಿಸದು. ಕೊನೆಗೆ ಆ ಮಹಾರಾಜನು ಸನ್ಯಾಸವನ್ನೂ ತೆಗೆದುಕೊಂಡು ನಡೆಸಿ, ತನ್ನ ಮೊದಲಿನ ಸಂಕಲ್ಪವನ್ನು ನೆರವೇರಿಸಿದನು.

ಪರಮಭಾಗವತನಾದ ಪ್ರಿಯವ್ರತನು ನಾರದನ ಚರಣಸೇವೆಯನ್ನು ಮಾಡಿ ಶ್ರೀಹರಿಯ ಜ್ಞಾನವನ್ನು ಚೆನ್ನಾಗಿ ಪಡೆದು ಸನ್ಯಾಸದೀಕ್ಷೆಯನ್ನು ಸ್ವೀಕರಿಸಲು ನಿಶ್ಚಯಿಸಿದನು. ಆಗ ತಂದೆಯಾದ ಮನುರಾಜನು ರಾಜ್ಯಪಾಲಕನಾಗಲು ಬೇಕಾದ ಗುಣಗಳಿಂದ ಭೂಷಿತನಾದ ಮಗನನ್ನು ರಾಜ್ಯಸ್ವೀಕಾರಮಾಡೆಂದನು. ಪ್ರಿಯವ್ರತನೋ ನಿತ್ಯವು ಬಿಡದೆ ಹರಿಧ್ಯಾನರತನಾಗಿ ತಾ ಮಾಡಿದ ಸಕಲಕ್ರಿಯಾಕಲಾಪವನ್ನು ಭಗವದರ್ಪಣವಾಗಿ ಮಾಡುತ್ತಾ ರಾಜ್ಯವನ್ನೊಲದಿದ್ದನು. ತಂದೆಯ ಮಾತು ಮೀರಬಾರದೆಂದು ತಿಳಿದೂ 'ರಾಜ್ಯಾಧಿಕಾರವು ಮನಸ್ಸನ್ನು ಕೆಡಿಸಿ, ಇತರ ದುರ್ವಿಷಯಗಳಲ್ಲಿ ತೊಡಗಿಸಿ, ಮನುಜರನ್ನು ಸೋಲಿಸಿ, ನಾಶ ಮಾಡದೆ ಬಿಡದು; ತಂದೆಯು ಪ್ರೀತಿಯಿಂದ ರಾಜ್ಯವನ್ನಾಳೆಂದರೂ ಅವನಿಗೆ ಭಗವದ್ಭಜನಸಾಧನವಾದ ಸನ್ಯಾಸ ಸ್ವೀಕರಣವು ಆಕ್ಷೇಪಾರ್ಹ

ವಲ್ಲವೆಂದು ತಿಳಿಯುದೇ?' ಎಂದಾಲೋಚಿಸಿ ಗಂಧಮಾದನ ಪರ್ವತವನ್ನು ಸೇರಿ ತಪಸ್ಸನ್ನು ಮಾಡುತ್ತಿದ್ದನು.

ಆಗ ದೇವಶ್ರೇಷ್ಠನಾದ ಚತುರ್ಮುಖನು ತಾನು ಸೃಜಿಸಿದ ತ್ರಿಗುಣಾತ್ಮಕ ಜಗದಭಿವೃದ್ಧಿಯನ್ನು ಕಾಂಕ್ಷಿಸುತ್ತಾ, ಆಲೋಚನೆ ಮಾತ್ರದಿಂದ ಸಕಲಜೀವಹೃದಯಾಭಿಜ್ಞನಾದ ಕಾರಣ, ಪ್ರಿಯವ್ರತನ ಮನವನ್ನರಿತು, ಸಕಲ ವೇದಮೂರ್ತಿಗಳಿಂದಲೂ, ಮರೀಚ್ಯಾದಿ ಪ್ರಜೇಶರಿಂದಲೂ ಕೂಡಿ ಸತ್ಯಲೋಕದಿಂದಿಳಿದು ಬಂದನು. ಅಲ್ಲಲ್ಲಿ ಬರುವಾಗ ಆಕಾಶದಿಂದ ಸಂಚರಿಸುವ ವಿಮಾನಗತರಾದ ವಿಬುಧವರರ ಪೂಜೆಯನ್ನು ಕೈಕೊಂಡು, ಗುಂಪಾಗಿ ನೋಡಲು ಬಂದ ಸಿದ್ಧ ಗಂಧರ್ವ ಸಾಧ್ಯ ಚಾರಣ ಮುನಿಗಣದಿಂದ ಸ್ತುತಿಸಲ್ಪಡುತ್ತಾ ಗಂಧಮಾದನ ಕಂದರವನ್ನು ಮುಟ್ಟಿದನು.

ಪೂಜ್ಯನಾದ ಹಂಸವಾಹನನು ಬಂದುದು ನೋಡಿ ಬ್ರಹ್ಮಪುತ್ರನಾದ ನಾರದನು ದೇವಲೋಕದಿಂದ ಬಂದು, ಮನುರಾಜ ಪ್ರಿಯವ್ರತರಿಂದ ಕೂಡ ತಂದೆಗೆ ಕೈಮುಗಿದು ವಂದಿಸಿ ನಿಂತನು. ಪರೀಕ್ಷಿತನೇ! ಕೇಳು. ಪ್ರಿಯವ್ರತನ ಪೂಜೆಯನ್ನುಸ್ವೀಕರಿಸಿ, ದಯೆಯಿಂದ ನೋಡಿ ಹಸನ್ಮುಖನಾಗಿ ನಿರಂತರ ಸಮುದಿತ ಸುಗುಣಗಣನಿಲಯನಾದ ವಾಸುದೇವನನ್ನು ಸ್ಮರಿಸಿ, ಇಂತೆಂದನಾ ಚತುರ ಚತುರ್ಮುಖನು–

ತಾತ! ಪ್ರಿಯವ್ರತ! ಕೇಳು, ಶಾಸ್ತ್ರವಿಹಿತವಾದ ಹಿತವಚನವನ್ನು, ರಾಜರಿಗೆ ದುಷ್ಟಶಿಕ್ಷಣ, ಶಿಷ್ಟರಕ್ಷಣಪೂರ್ವಕ ಧರ್ಮಜ್ಞಾನಾನುಪಾಲನವು ಶ್ರೀಹರಿಯಿಂದ ನಿಯತವಾಗಿದೆ. ಹರ್ಯಾಜ್ಞೆಯನ್ನು ಲೆಕ್ಕಿಸದೆ ಕೇವಲ ಸಂನ್ಯಾಸವು ಹರ್ಯಾಜ್ಞೋಲಂಘನವೇ ಸರಿ. ಅಪ್ರಮೇಯನಾದ ಹರೀಚ್ಛೆಗೆ ವಿರೋಧಿಯಾಗಿ ವರ್ತಿಸುವುದು ಯುಕ್ತವಲ್ಲ. ನಾನು, ಮಹಾದೇವ, ನಿಮ್ಮ ತಂದೆ ಈ ಮಹರ್ಷಿಗಳೆಲ್ಲರೂ ಆ ಪ್ರಭುವಿನಾದೇಶವಂ ದಾಟದಿರುವೆವು. ತಪಸ್ಸು, ವಿದ್ಯೆ, ಯೋಗ ಬಲ, ಬುದ್ಧಿಶಕ್ತಿ, ಅರ್ಥಬಾಹುಲ್ಯ, ಧರ್ಮವರ್ತನೆ ಮೊದಲಾದ ಗುಣಗಳಿವೆಯೆಂದು ಅಹಂಕಾರದಿಂದ ಶ್ರೀಹರಿಗೆ ಎದುರು ನಡೆಯಲು ಯಾರೂ ತಾವಾಗಿಯಾದರೂ ಅಥವಾ ಪರಸಹಕಾರದಿಂದಲಾದರೂ ಸಮರ್ಥರಾಗಲಾರರು. ಕ್ಷೇಮನಾಶಗಳು, ಶೋಕ ಮೋಹಗಳು, ಅಭಯ ಮೃತಿಗಳು, ಸುಖ–ದುಃಖ ಮೊದಲಾದುದನ್ನು ಶ್ರೀಹರಿಯು ರಮೆಯದ್ವಾರಾ ಕೊಟ್ಟ ಪ್ರಕೃತಿನಿರ್ಮಿತ ದೇಹದಲ್ಲಿದ್ದು ಅನುಭವಿಸುವ ಜನರು ಅದೇ ದೇಹದಿಂದ ಕರ್ಮಗಳನ್ನು ಮಾಡಿ ಪುಟ್ಟುತ್ತಾ ಶ್ರೀಹರಿಯ ವಶದಲ್ಲಿರುವರು. ಮುಗುದಾಣಿಯಿಂದ ನೀತವಾಗಿರುವ ಪಶುಗಳು ಮನುಜರಿಗೆ ಭಾರವನ್ನು ಹೊತ್ತು ಸೇವಿಸುವಂತೆ ವೇದವೆಂಬ ಮೂಲಸೂತ್ರದಿ ಬಿಗಿಯಲ್ಪಟ್ಟು ತಮ್ಮ ವಿವಿಧ ಗುಣ ವರ್ಣೋಚಿತ ಕರ್ಮ ವಿಪ್ರಾದಿನಾಮ, ಯೋಗ್ಯಗುಣಗಳೆಂಬ ತಮ್ಮ ತಮ್ಮ ಕಣ್ಣುಗಳಿಂದ ಕಟ್ಟಲ್ಪಟ್ಟು ನಡೆಯುತ್ತಾ ಪರತಂತ್ರರಾಗಿ ನಾವೆಲ್ಲ ಬ್ರಹ್ಮಾರ್ಪಣ ಬುದ್ಧಿಯಿಂದ ವೇದವಿಹಿತಕರ್ಮವನ್ನು ಮಾಡುತ್ತಲಿರುವೆವು.

ಗುಣಕರ್ಮಾನುಸಾರವಾಗಿ ಸ್ವಾಮಿಯು ಕೊಟ್ಟ ಸುಖವನ್ನು ದುಃಖವನ್ನು ನಾವು ಶರೀರಾನುರೂಪವಾಗಿ, ಆಯಾ ಯೋನಿಯಲ್ಲಿ ಪುಟ್ಟಿ ಅನುಭವಿಸುತ್ತಿರುವೆವು. ಕರ್ಮಫಲವೂ ನಮ್ಮಧೀನವಲ್ಲ. ಕುರುಡರು ಕಣ್ಣುಳ್ಳವನನ್ನುಸರಿಸುವಂತೆ ಶ್ರೀಹರಿ ಕೊಟ್ಟದ್ದುಂಡು ಅವನ ವಶರಾಗಿರುವೆವು. ದೇಹದಲ್ಲಿಅಭಿಮಾನವೇ ಇಲ್ಲದಿರುವ ಜೀವನ್ಮುಕ್ತನು ಕೂಡ ಪ್ರಾರಬ್ಧ ಕರ್ಮವು ಮುಗಿಯುವವರಿವಿಗೂ ದೇಹಧಾರಣವಂ ಮಾಡಿ ಹರಿ ಕೊಟ್ಟಿದ್ದನ್ನುಣ್ಣುತ್ತಿರುವನು. ಅಜ್ಞಾನ,

ಅನ್ಯಥಾಜ್ಞಾನಗಳಿಲ್ಲದೆ ಜಾಗ್ರತನಾಗಿ ಇನ್ನೊಂದು ದೇಹ ಬರಲು ಕಾರಣವಾದ ದುಷ್ಕರ್ಮವನ್ನು ಮಾಡದಿರುವನು. ಇರಲಿ! ವನವಂ ಸೇರಿದ ಮಾತ್ರದಿ, ಪಾಪಭಯವಿಲ್ಲವೆನ್ನುವಿಯಾ? ಕಾರ್ಯವೇನೆಂದು ಮರೆತವನು ಎಲ್ಲಿದ್ದರೇನು? ಮತ್ತನಾದವನಿಗೆ ಬೆನ್ನಟ್ಟಿ ವನದಲ್ಲಿಯೂ ಬಿಡದಿರುವರಾ ಶತ್ರುಗಳು ಆರು ಜನರು. ಮನಸ್ಸು, ಪಂಚೇಂದ್ರಿಯಗಳೆಂಬ ರಿಪುಗಳನ್ನು ಜಯಿಸಿದ ಕರ್ತವ್ಯಜ್ಞಾನಿಗೆ ಗೃಹಸ್ಥಾಶ್ರಮವೇನಪರಾಧವನ್ನು ಮಾಡಲು, ದೋಷವನ್ನಾಪಾದಿಸಲು, ಸಮರ್ಥವಾಗಿದೆ? ಆಶ್ರಮವಲ್ಲ, ಮನವೇ ಕಾರಣವು ಬಂಧಮೋಕ್ಷಗಳಿಗೆ. ಇಂದ್ರಿಯ ಶತ್ರುಗಳಂ ಗೆಲ್ಲಲ್ಲು ಮೊದಲು ಗೃಹಸ್ಥಾಶ್ರಮವೆಂಬ ಕೋಟೆಯು ಅಗತ್ಯವಾಗಿದೆ. ಅದನ್ನಾಶ್ರಯಿಸಿ, ಅಲಂಬುದ್ಧಿಯನ್ನು ಪೊಂದಿ, ನಿರ್ವಿಣ್ಣರಾದ ಶತ್ರುಗಳು ಬಲಹೀನರಾದಮೇಲೆ, ಬೇಕಾದಂತೆ ಅವರನ್ನಾಡಿಸಲು ಬರುವಂತೆ, ಶ್ರೀಹರಿನಿಷ್ಠೆಯಿಂದ ಇಂದ್ರಿಯ ಜಯವು ಸಾಧ್ಯವಾಗಿದೆ. ನೀನಾದರೂ ಅರವಿಂದನಾಭಪದಸರೋಜ ಕೋಶ ದುರ್ಗವನ್ನಾಶ್ರಯಿಸಿ ಶತ್ರುಗಳನ್ನು ಗೆಲ್ಲು. ಗೃಹದಲ್ಲೇ ಸಕಲ ಭೋಗಗಳು ಹರಿಪ್ರಸಾದವೆಂದು ಅನುಭವಿಸುತ್ತಿದ್ದು ಪುತ್ರದಾರಾದಿ ದುರಭಿಮಾನ ದೂರನಾಗು. ನೀರಿನಲ್ಲಿದ್ದ ತಾವರೆಯಂತೆ ನಿರ್ಲಿಪ್ತನಾಗು. ಸಚ್ಚಿದಾನಂದ ಮೂರ್ತಿಯಂ ಭಜಿಸು.

ಶ್ರೀಶುಕನು ಪೇಳಿದನು–

ತ್ರಿಭುವನಗುರುವಾದ ಬ್ರಹ್ಮನ ವಚನವನ್ನಾಲಿಸಿ ಮಹಾಭಾಗವತನಾದ ಪ್ರಿಯವ್ರತನು ಪಿತಾಮಹನ ನಿದೇಶಭಾರದಿಂದೆಂಬಂತೆ ತಲೆತಗ್ಗಿಸಿ 'ಆಗಲಿ' ಎಂದು ಗೌರವದಿಂದ ಅಂಗೀಕರಿಸಿದನು. ಪೂಜ್ಯ ಪಿತಾಮಹನಾಗ ಮನುರಾಜನು ಮಾಡಿದ ಪೂಜೆಯಂ ಸ್ವೀಕರಿಸಿ ಪ್ರಿಯವ್ರತ ನಾರದರು ಭಕ್ತಿ ಭರಿತಭಾವರಾಗಿ ನೋಡುತ್ತಿರಲು ಆ ವಾಙ್ಮನೋಗೋಚರವಾದ ದುರ್ಜನ ದೂರವಾದ ಸತ್ಯಲೋಕವನ್ನು ಸೇರಿದನು. ಆಗ ಮನುವು ತನ್ನ ಮನೋರಥವು ವಿರಿಂಚಾನುಗ್ರಹದಿಂದ ಈಡೇರಿತೆಂದು ಸಂತಸದಿಂದ ನಾರದ ಋಷಿವರನ ಅನುಮತಿಯನ್ನೂ ಪೊಂದಿ, ಮಗನನ್ನಖಿಲ ಮಹೀಮಂಡಲಪಾಲಕನನ್ನಾಗಿ ಪಟ್ಟಗಟ್ಟಿ, ಕೆಟ್ಟ ವಿಷಯ ವಿಷಜಲಧಿಯನ್ನು ಬಿಟ್ಟು ತಪೋವನವಂ ಸೇರಿದನು.

ಶ್ರೀಹರೀಚ್ಛೆಯಿಂದ ಬಂದ ಕರ್ಮಾಧಿಕಾರವಂ ಶಿರಸಾವಹಿಸಿ ಪ್ರಿಯವ್ರತನು ಅಖಿಲ ಜಗದ್ವಂಧ್ವಂಸನ ಸಮರ್ಥಮಹಾಮಹಿಮನಾದ ಪುರುಷೋತ್ತಮನ ಪಾದಾರವಿಂದ ದ್ವಂದ್ವವನ್ನನವರತಧ್ಯಾನದಿಂದ ಭಜಿಸಿ ಪಾಪ ಕಷಾಯಶೋಷಣವಂ ಮಾಡಿ ಶುದ್ಧ ಹೃದಯನಾಗಿ, ಮಹಜ್ಜನಮಾನವರ್ಧನನೆನಿಸಿ, ರಾಜ್ಯವನ್ನಾಳಿದನು, ಮದುವೆಯೂ ಆದನು.

ವಿಶ್ವಕರ್ಮನೆಂಬ ಪ್ರಜಾಪತಿಯು ಮಗಳಾದ ಬರ್ಹಿಷ್ಮತೀದೇವಿಯನ್ನು ವಿವಾಹವಾಗಿ ಪ್ರಿಯವ್ರತನು ತನ್ನಂತೆ ಗುಣಕರ್ಮರೂಪವೀರ್ಯಮಹಿತರಾದ ಹತ್ತು ಜನ ಪುತ್ರರನ್ನು ಉತ್ಪಾದಿಸಿದನು. ಊರ್ಜಸ್ವತಿ ಎಂಬ ಕನ್ಯೆಯನ್ನು ಆಮೇಲೆ ಪಡೆದನು. ಆಗ್ನೀಧ್ರ ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತ, ಘೃತಪೃಷ್ಠ, ಸವನ, ಮೇಧಾತಿಥಿ, ವೀತಿಹೋತ್ರ, ಕವಿ ಎಂಬ ಅಗ್ನಿನಾಮಕರಾದ ಆ ಪುತ್ರರಲ್ಲಿ ಮಹಾವೀರ ಕವಿ ಸವನರು ಮೂರ್ವರು ಊರ್ಧ್ವರೇತಸ್ಕರಾದರು. ಬಾಲ್ಯದಿಂದ ಆತ್ಮವಿದ್ಯಾವಿಶಾರದರಾದ ಅವರು ಸನ್ಯಾಸಿಗಳಾಗಿ ಹೋದರು. ಆ ಪರಮರ್ಷಿಗಳು ವೈರಾಗ್ಯಶೀಲರಾಗಿ ಸಕಲಜೀವನಿಕಾಯನಿವಾಸನಾದ ಶ್ರೀನಿವಾಸನ ಶ್ರೀಮಚ್ಚರಣಾರವಿಂದವೇ ಸಂಸಾರ ಭಯಭೀತಜನಶರಣವೆಂದು ನಂಬಿ ಎಡೆಬಿಡದೆ ಭಕ್ತಿಯಿಂದ

ಭಜಿಸಿದರು. ಮನಸ್ಸು ವಶವಾಗಿ ಶುದ್ಧವಾಯಿತು. ಭಗವಂತನೇ ಸರ್ವಭೂತಾಂತಾರ್ಯಾಮಿಯಾದ್ದರಿಂದ ಪ್ರಿಯತಮನೆಂದರಿತು ತಮ್ಮ ಹೃದಯದಿ ಬಿಂಬನಾದ ಹರಿಯ ಧ್ಯಾನದಿಂದ ಪೂತರಾಗಿ ಪಾರ್ಥಿವದೇಹವನ್ನು ತ್ಯಜಿಸಿ ಸಾರೂಪ್ಯಮೋಕ್ಷವನ್ನು ಪೊಂದಿದರು.

ಪ್ರಿಯವ್ರತನಿಗೊಬ್ಬ ಮಹಷಿಯಲ್ಲಿ ಉತ್ತಮ, ತಾಪಸ, ರೈವತರೆಂಬ ಮೂರು ಜನ ಪುತ್ರರಿದ್ದರು. ಅವರು ಮೂರು ಜನರೂ ಮನ್ವಂತರಾಧಿಪತಿಗಳಾದರು.

ಸರ್ವಜಗತೀಪತಿಯಾದ ಪ್ರಿಯವ್ರತನು ಹನ್ನೊಂದರ್ಬುದವರ್ಷಗಳ ಕಾಲ ಅವ್ಯಾಹತೇಂದ್ರಿಯನು, ಮಹಾಮನಸ್ವಿಯು ಆಗಿ ರಾಜ್ಯವಾಳಿದನು. ಅವರ ಪರಾಕ್ರಮ ಸಾರ ದೋರ್ದಂಡಯುಗಳಧೃತಕೋದಂಡ ನಿರ್ಮುಕ್ತಚಂಡಾನರಾಜಗಳಿಗಖಿಲ ಧರ್ಮ ವಿರೋಧಿಗಳು ಬಲಿಯಾದರು. ಅನುದಿನ ಪ್ರವರ್ಧಮಾನ ಪ್ರೇಮಪ್ರಮೋದದಿಂದ ಬರ್ಹಿಷ್ಮತಿಯ ಹಾವಾಭಾವವಿಲಾಸ ಮಂದಹಾಸ ರುಚಿರವಚನೋಲ್ಲಾಸವಶನಾಗಿ, ವಿವೇಕವಿಲ್ಲದಿರುವ ಆಜ್ಞನಂತೆ, ಬಹುಕಾಲ ಕಳೆದನು.

'ಸೂರ್ಯಭಗವಂತನು ಮೇರುಗಿರಿಯ ಪ್ರದಕ್ಷಿಣೆಯನ್ನು ಮಾಡುತ್ತಾ ಭೂಮಂಡಲದಿ ಅರ್ಧ ಭಾಗವನ್ನು ಮಾತ್ರ ಪ್ರಕಾಶಗೊಳಿಸಿ, ಮಿಕ್ಕ ಅರ್ಧವನ್ನು ಅಂಧಕಾರ ಬಂಧುರವನ್ನಾಗಿ ಮಾಡಿರುವನಿದು ಸರಿಯಲ್ಲ; ಶ್ರೀಹರಿಯ ಸೇವಾಬಲದಿಂದ ಅವನು ಬೆಳಗದಿರುವ ಅರ್ಧವನ್ನು ನಾನು ಪ್ರಕಾಶಗೊಳಿಸುವೆ'ನೆಂದು ಲೋಕೋತ್ತರ ಮಹಾಮಹಿಮನಾದ ಪ್ರಿಯವ್ರತನು ಚಿಂತಿಸಿ ಸೂರ್ಯಸಮಾನವೇಗವಾದ ಜ್ಯೋತಿರ್ಮಯ ರಥದಲ್ಲಿ ಕುಳಿತು ಎರಡನೆಯ ಸೂರ್ಯನೆಂಬಂತೆ ಬೆಳಗುತ್ತಾ, ಸೂರ್ಯನಿಲ್ಲದೆ ಕಡೆ ತಿರುಗುತ್ತಾ ಏಳು ದಿನಗಳಲ್ಲಿ ಏಳು ಭೂಪ್ರದಕ್ಷಿಣೆಗಳಂ ಮಾಡಿದನು. ಆ ರಥಚಕ್ರನೇಮಿಗಳ ವೇಗದಿಂದ ನಿರ್ಮಿತವಾದ ಪರಿಖೆಗಳೇ ಸಪ್ತಸಿಂಧುಗಳೆನಿಸಿ, ಸಮುದ್ರ ವಿಸ್ತರಣ ಕಾರಣನಾದ ಪ್ರಿಯವ್ರತನ ಕೀರ್ತಿಯನ್ನು ಸಾರುತ್ತಿವೆ. ಮಧ್ಯಧಿ ಚೆನ್ನಾಗಿ ಬೇರ್ಪಟ್ಟು ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಶುದ್ಧೋದಕ ಸಮುದ್ರಗಳಿಂದಾವೃತನಾದ ಜಂಬೂ, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕಗಗಳೆಂಬ ದ್ವೀಪಗಳನ್ನು ತನ್ನ ಏಳು ಜನ ಮಕ್ಕಳಿಗೆ ಹಂಚಿ ಪ್ರಿಯವ್ರತನು, ಊರ್ಜಸ್ವತಿ ಎಂಬ ಮಗಳನ್ನು ಶುಕ್ರಾಚಾರ್ಯನಿಗೆ ಕೊಟ್ಟನು.

ಜಂಬೂದ್ವೀಪವು ಲವಣಸಮುದ್ರಾವೃತವು; ಇವು ಒಂದೊಂದು ಲಕ್ಷ ಯೋಜನ ವಿಸ್ತೃತವು. ಪ್ಲಕ್ಷವೆರಡುಲಕ್ಷವು; ಅದರ ಸುತ್ತು ಇಕ್ಷುರಸಸಮುದ್ರವಷ್ಟೇ ವಿಸ್ತೃತವಾಗಿದೆ. ಶಾಲ್ಮಲೀದ್ವೀಪವು ಅದರ ಸುತ್ತಲಿರುವ ಸುರಾಸಮುದ್ರದಂತೆ ನಾಲ್ಕು ಲಕ್ಷ ಯೋಜನ ವಿಸ್ತೃತವು ಅದರ ಹೊರಗೆ ಕುಶದ್ವೀಪವು ಎಂಟು ಲಕ್ಷ ಯೋಜನವಿದ್ದು ಅಷ್ಟೇ ಅಗಲವಾದ ಘೃತಸಮುದ್ರದಿಂದ ಸುತ್ತಲ್ಪಟ್ಟಿದೆ. ಅನಂತರವಿರುವುದು ಕ್ರೌಂಚದ್ವೀಪವು. ಇದು ತನ್ನ ಸುತ್ತಿರುವ ದಧಿಮಂಡೋದದಂತೆ ಹದಿನಾರು ಲಕ್ಷ ಯೋಜನವಿದೆ. ಆಮೇಲೆ ಶಾಕ ದ್ವೀಪವು ೩೨ ಲಕ್ಷ ಯೋಜನವು; ಅದರ ಸುತ್ತು ಕ್ಷೀರಸಮುದ್ರವು ೩೨ ಲಕ್ಷ ಯೋಜನ ವಿಸ್ತಾರವಾಗಿ ತನ್ನಲ್ಲಿ ಶ್ವೇತದ್ವೀಪವನ್ನು ಅಳವಡಿಸಿಕೊಂಡಿದೆ. ಅನಂತರ ಪುಷ್ಕರದ್ವೀಪವಿದೆ. ಇದು ೬೪ ಲಕ್ಷ ಯೋಜನಾತ್ಮಕವು; ಇದರ ಸುತ್ತು ಅಷ್ಟೇ ಅಗಲವಾದ ಶುದ್ಧೋದಕ ಸಮುದ್ರವಿದೆ.

ಆಗ್ನೀಧ್ರನಿಗೆ ಜಂಬೂದ್ವೀಪವನ್ನು, ಇಧ್ಮಜಿಹ್ವನಿಗೆ ಪ್ಲಕ್ಷವನ್ನು, ಯಜ್ಞಬಾಹುವಿಗೆ ಶಾಲ್ಮಲಿಯನ್ನು, ಹಿರಣ್ಯರೇತನಿಗೆ ಕುಶದ್ವೀಪವನ್ನು, ಘೃತಪೃಷ್ಠನಿಗೆ ಕ್ರೌಂಚದ್ವೀಪವನ್ನು,

ಮೇಧಾತಿಥಿಗೆ ಶಾಕದ್ವೀಪವನ್ನು, ವೀತಿಹೋತ್ರನಿಗೆ ಪುಷ್ಕರದ್ವೀಪವನ್ನು ಕೊಟ್ಟು ಪ್ರಿಯವ್ರತನು ನಿಶ್ಚಿಂತನಾದನು.

ಊರ್ಜಸ್ವತಿಯ ಮಗಳು ದೇವಯಾನಿ. ಅವಳು ಯಯಾತಿಯ ಕೈಪಿಡಿದು ರಾಜವಂಶ ವರ್ಧಕಳಾದಳು. ಉರುಕ್ರಮನ ಪಾದಾರವಿಂದ ರಜವಂ ಧರಿಸಿ ಕಾಮಾದಿ ಷಡ್ವೈರಿವರ್ಗವನ್ನು ಗೆದ್ದು, ಅಶನಾಯಾ ಪಿಪಾಸಾ ಶೋಕ ಮೋಹ ರಾಗ ದ್ವೇಷಗಳೆಂಬ ಷಡ್ವಿಕಾರರಹಿತರಾಗಿ ಈ ಪ್ರಿಯವ್ರತನಂತಿರುವ ಸುಜನರು ಮಹಿಮೆಗಳ ತೋರುವುದೇನಚ್ಚರಿಯು! ಶೂದ್ರನಾಗಲಿ ಚಂಡಾಲನಾಗಲಿ ಶ್ರೀಹರಿಯನ್ನು ನೆನೆಯಲು ತತ್ಕ್ಷಣವೇ ಸಂಸಾರಬಂಧಮುಕ್ತನಾಗುವ ನಲ್ಲವೇ? ಒಂದು ದಿನ ದೇವರ್ಷಿವರಚರಣಸೇವೆಯಿಂದ ವಿರಕ್ತನಾಗಿ ಪ್ರಿಯವ್ರತನು ಅತ್ಯಂತ ಬಲಪರಾಕ್ರಮ ಶೋಭಿತನಾಗಿಯೂ, ತಾನು ಯದೃಚ್ಛಾಪ್ರಾಪ್ತ ಸತ್ತ್ವಾದಿ ಗುಣವಿಕಾರಭೂತ ಸಂಸಾರಬಂಧದಲ್ಲಿ ಶಿಲುಕಿ ತೊಳಲುತ್ತಿರುವುದು ಉಚಿತವಲ್ಲವೆಂದರಿತು ಹೀಗೆಂದನು-

'ಅಹೋ! ಎಷ್ಟು ಕೆಟ್ಟೆ. ಅವಿದ್ಯಾಕಾಮಕರ್ಮಗಳಿಂದ ವಿಷಸಮ ವಿಷಯಾಂಧಕೂಪದಲ್ಲಿ ಬಿದ್ದು ಇಂದ್ರಿಯಲೋಲನಾದೆ. ಸಾಕು ಸಾಕು. ಮನುಜ ವನಿತಾಕ್ರೀಡಮೃಗನಾಗ ಕಾಲ ಕಳೆದ ನನಗೆ ಧಿಕ್ಕಾರವಿರಲಿ!' ಎಂದು ನಿಂದಿಸಿಕೊಂಡು ಶ್ರೀನಾರಾಯಣ ಪ್ರಸಾದದಿಂದ ದಿವ್ಯಜ್ಞಾನವಂ ಪಡೆದ ಪ್ರಿಯವ್ರತನು ಪುತ್ರರಿಗೂ ಮಹೀಮಂಡಲವನ್ನು ಹಂಚಿಕೊಟ್ಟು, ಮಹಾಸಂಪದ್ಭರಿತ ರಾಜ್ಯವೈಭವವನ್ನು ಮಹಿಷಿಯನ್ನು, ಶವವಂ ಬಿಡುವಂತೆ ತ್ಯಜಿಸಿ, ಮನಸಾ ವೈರಾಗ್ಯವಂ ಧರಿಸಿ, ರುಚಿರ ಹರಿವಿಹಾರಗಳನ್ನು ನೆನೆದು, ಶ್ರೀನಾರದನು ಪೇಳಿದ ಸನ್ಯಾಸಪದವಿಯನ್ನು ಸ್ವೀಕರಿಸಿದನು.

ಅವನ ಕೀರ್ತಿಯನ್ನಿಂತು ಗಾನಮಾಡುವರು–

ಪ್ರಿಯವ್ರತನಂತೆ ಸೂರ್ಯಾನುಕರಣವನ್ನು ಮಾಡುತ್ತಾ ಸಪ್ತರಾತ್ರಿಕೃತಾಂಧಕಾರವನ್ನು ಕಳೆದು, ಸಪ್ತಸಮುದ್ರವಿಸ್ತೃತಿಯನ್ನು ಮಾಡಲು ಮತ್ತಾರು ಸಮರ್ಥರಾಗುವರು? ಭೂಮಿಯಲ್ಲಿ ಸಪ್ತದ್ವೀಪಗಳನ್ನು ದೇಶಗಳನ್ನು ನದಿಗಳಿಂದ ಸೀಮಾರೇಖೆಗಳಂ ಮಾಡಿ ವಿಂಗಡಿಸಿದ, ಮಹಾ ಮಿಹಮನಾದ ಪ್ರಿಯವ್ರತನ ಸಮರಿಲ್ಲ. ಭೂಮಿ, ದೇವಲೋಕ, ಅಂತರಿಕ್ಷಾದಿ ಲೋಕಗಳ ಐಶ್ವರ್ಯವು ಸಮೃದ್ಧವಾಗಿದ್ದರೂ ಅದನ್ನೆಲ್ಲವನ್ನೂ ನರಕಸಮವೆಂದರಿತು, ಭೂತಹಿತ ಮಹಾ ಪೌರುಷನಾದ ಪ್ರಿಯವ್ರತನು ನಿಜವಾದ ಶ್ರೀಹರಿದಾಸನೆಂದು ಪ್ರಶಂಸಿಸುವರು.

## ೨. ಆಗ್ನೀಧ್ರಚರಿತೆ

ಪ್ರಿಯವ್ರತನು ಸನ್ಯಸ್ತನಾಗಿಪೋಗಲು, ಆಗ್ನೀಧ್ರನು ಜಂಬೂದ್ವೀಪದ ಪ್ರಜರನ್ನು ಮಕ್ಕಳಂತೆ ರಕ್ಷಿಸಿದನು. ಧರ್ಮದಲ್ಲಿ ನಡೆಸಿ ಕೀರ್ತಿಯಂ ಪಡೆದನು. ಒಂದು ಸಲ ಆ ಮಹಾರಾಜನು ಸಂತಾನಾರ್ಥಿಯಾಗಿ ಸುರವರವನಿತಾವಿಹಾರಭೂಮಿಯಾದ ಕುಲಾಚಲ ಕಂದರವನ್ನು ಸೇರಿ ಬ್ರಹ್ಮದೇವನಂ ಕುರಿತು ತಪಸ್ಸು ಮಾಡಿದನು. ಸೇವಾಪರಿಕರಗಳನ್ನು ಶ್ರದ್ಧೆಯಿಂದ ಸಂಪಾದಿಸಿ ಏಕಾಗ್ರಮನಸ್ಕನಾಗಿ ಪೂಜಿಸುವ ರಾಜವರನ ಹೃದಯಾಭಿಲಾಷೆಯನ್ನು ತಿಳಿದು, ಭಗವಾನ್ ಬ್ರಹ್ಮನು ತನ್ನ ಸಭೆಯಲ್ಲಿ ಗಾನಮಾಡುವ ಪೂರ್ವಚಿತ್ತಿ ಎಂಬ ಅಪ್ಸರೆಯನ್ನು ಕಳಿಸಿದನು. ಅವಳು ಆಗ್ನೀಧ್ರನ ತಪೋವನದಿ ಬಂದು ಸಂಚರಿಸುತ್ತಿದ್ದಳು. ಅತಿ ರಮಣೀಯ ವೃಕ್ಷ ಸಮೂಹ

ಗಳನ್ನಾಶ್ರಯಿಸಿ ಬೆಳೆದ ಲತೆಗಳ ಮೇಲೆ ಕುಳಿತು ತೂಗಾಡುವ ಪಕ್ಷಿಮಿಥುನಗಳು ಕಲಕಲರವವನ್ನು ಮಾಡುತ್ತಿದ್ದವು. ಕೋಗಿಲೆಗಳು ಹಾಡಿದವು; ನವಿಲುಗಳಾಡಿದವು. ಅವನ್ನು ನೋಡಿ ಜಲಕುಕ್ಕುಟ ಕಾರಂಡವ ಕಲಹಂಸಾದಿ ವಿವಿಧ ಜಲವಿಹಂಗಮಗಳು ಪ್ರತಿರಾವವನ್ನು ಮಾಡಿದವು. ಕಮಲಮನೋಹರ ಜಲಾಶಯ ಸಮೀಪದಲ್ಲಿ, ಲಲಿತಪದಗತಿಯಿಂದ ಕಾಲಿನ ಪೈಜಣಗಳು ಗಲ್ಲುಗಲ್ಲುಗಲ್ಲೆಂದ ನಿಸ್ವಾನವಂ ಮಾಡುತ್ತಿರಲು, ನಡೆದುಬಂದ ವಿಲಾಸಿನಿಯನ್ನು ರಾಜಕುಮಾರನು, ತಪಸ್ಸಮಾಧಿಯಿಂದೆದ್ದು ಕಮಲಮುಕುಲ ನಿಭನಯನಗಳನ್ನರೆಬಿಚ್ಚಿ ನೋಡಿದನು. ಮಧುಕರವನಿತೆಯಂತೆ ಸುಮಗಳನ್ನು ಮೂಸುತ್ತಾ, ದೇವಮಾನವ ಮನೋನಯನ ಹರ್ಷಪ್ರದರೂಪದಿಂದ ಸಮೀಪಿಸಿದ ಆ ದೇವರಮಣಿಯ ವಿನಯ, ನಯನವಿಲೋಕನ, ಗಮನವಿಲಾಸ, ಸುಸ್ವರವಚನ, ಮಧುರಸುಕುಮಾರಾಂಗಸೌಷ್ಠವಾದಿ ಗುಣಗಳು ಮನಸಿಜನ ಕುಸುಮಬಾಣಗಳಿಗೆ ಮನುಜಮನೋವಿವರಗಳನ್ನರ್ಪಿಸುತ್ತಿದ್ದುವು. ಅವಳು ಮುಖಪದ್ಮ ಮವಾಸ ವಾಮೋದಮತ್ತಮಧುಕರಗಳು ಮುತ್ತುತ್ತಿರಲು ಶೀಘ್ರಗಮನದಿಂದ ಬರುವಾಗ, ಸ್ತನ ಕಲಶಕಬರಹಾರಗಳು ಚಲಿಸುತ್ತಿದ್ದವು. ಅವಳನ್ನು ನೋಡುತ್ತಿದ್ದಂತೆ ಮಕರಧ್ವಜನ ವಶನಾಗಿ ಜಡಬುದ್ಧಿಯಂತೆ ರಾಜಕುಮಾರನಿಂತೆಂದನು—

ಮುನಿವರ! ಯಾರವಳು ನೀನು? ಈ ಶೈಲದಲ್ಲೇನು ಕೆಲಸ? ಪರದೇವತೆಯ ಮಾಯೆಯೋ ನೀನು? ಸುಹೃಜ್ಜನ ವಶೀಕರಣಕಾರಣ ಧನುಸ್ಸನ್ನು ಧರಿಸಿರುವೆ. ಆದರೆ ಅದೇಕೆ ಜ್ಯಾರಸನಾ ರಹಿತವಾಗಿದೆ? ಅಥವಾ ವನದಲ್ಲಿ ಪ್ರಮತ್ತವಾಗಿರುವ ಮೃಗಗಳನ್ನು ಬೇಟೆಯಾಡು ವಿಯೋ? ಈ ಶತಪತ್ರಪತ್ರವಾದ ಬಾಣಯುಗಳವು ಪುಂಖರಹತವಾದರೂ ರುಚಿರತೀಕ್ಷ್ಣವಾಗಿದೆ. ಯಾರ ಮೇಲೆ ನಿನ್ನ ಬಾಣಪ್ರಯೋಗ? ನಿನ್ನ ವಿಕ್ರಮದಿಂದ ನನ್ನಂತಹ ಜಡಮತಿಗಳಿಗೆ ಕ್ಷೇಮ ವಾಗಲಿ! ನಿನ್ನ ಸುತ್ತು ತಿರುಗುವ ಸಾಮಗಾನಚತುರರು ನಿನ್ನ ಶಿಷ್ಯರೇನು? ಆ ಮಧುರರಸಮತ್ತರೇನೋ ನನ್ನ ಕಿವಿಯಲ್ಲಿ ಹೇಳುತ್ತಿರುವರು. ಋಷಿಗಣಗಳು ವೇದಶಾಖೆಗಳನ್ನಂತೆ ಅವರು ನಿನ್ನ ಕಬರೀಭರವಿಗಲಿತ ಸುಮನೋವರ್ಷವನ್ನು ಸೇವಿಸುತ್ತಿರುವರು. ಬ್ರಾಹ್ಮಣವರ! ನಿನ್ನ ಚರಣ ನೋಹರನೂಪುರತಿತ್ತಿರೀ ಶಬ್ದ ಕೇಳಿಬರುತ್ತಿದೆ. ಆದರೆ ಅದರ ಅರ್ಥವು ಗೊತ್ತಾಗದಂತಿದೆ. ಕದಂಬಕುಸುಮ ಸುಂದರವಾದೀ ಕಟಿವಿಟಂಕದಿ ವಲ್ಕಲವೆಲ್ಲಿಯದು? ಅದರ ಸುತ್ತಿರುವ ಆಲಾತಪರಿವೇಷವೆಷ್ಟು ಚೆನ್ನಾಗಿದೆ! ಈ ನಿನ್ನ ಶೃಂಗಗಳೆರಡರ ಮೇಲೆ ಕುಂಕುಮರಾಗವನ್ನು ಕೆಳಗೆ ಸಣ್ಣದಾದ ಮಧ್ಯವನ್ನು ನೋಡುವ ನನ್ನ ಕಣ್ಣುಗಳು ನಟ್ಟನಿಂತಿವೆ. ನಿನ್ನ ವಿಷಾಣಾಗ್ರ ರಕ್ತಗಂಧವೆನ್ನಾಶ್ರಮವನ್ನೆಲ್ಲ ಸುರಭಿಪೂರಿತವ್ನಾಗಿಸಿದೆ. ಸುಹೃದ್ವರ! ನಿನ್ನ ಈ ಲೋಕವನ್ನೆನಗೆ ತೋರಬಾರದೇ? ಆ ಲೋಕದಲ್ಲಿ ಇಂತಹ ಸುಂದರ ವಕ್ಷೋಜ ಗಳಿರುವವೇನು? ನನ್ನ ಮನಸ್ಸಾ ಅಪೂರ್ವತುಂಗ ಶೃಂಗದ್ವಯ ದರ್ಶನದಿಂದ ಹರ್ಷಿತಾಗಿದೆ. ಸರಸ ಮಂದಹಾಸ ಸುಧಾಮಧುರ ವಕ್ತ್ರವನ್ನೂ ನೋಡಿಸು. ಅನ್ನವನ್ನು ತಿನ್ನುವನಿಗೆ ವಲೀಪಲಿತ ದೌರ್ಗಂಧ್ಯಗಳು ದುರ್ವಾರ ವಾಗಿದೆ. ನನ್ನ ಜೀವನವು ಅನ್ನದಿಂದಿರಲಿಕ್ಕಿಲ್ಲ. ನಿನಗವಿಲ್ಲ. ವಿಷ್ಣುವಿನ ಕಲೆಯೋ ಏನು? ನಿನ್ನ ಕಿವಿಯಲ್ಲಿ ಕಣ್ಣುಮುಚ್ಚದೆ ಹೊಳೆಯುವ ಮಕರಗಳನ್ನಿಟ್ಟಿರುವೆ. ನಿನ್ನ ಮುಖಸರೋವರವು ಉದ್ವಿಗ್ನಮೀನದ್ವಯದಿಂದಿಲು ದ್ವಿಜಪಂಕ್ತಿಯಿಂದಲು ಅಸನ್ನಮಧುಕರ ನಿಕರದಿಂದಲು ಶೋಭಿಸುತ್ತಿದೆ. ಏನಿದು ನಿನ್ನ ಕೈಯಲ್ಲಿ ಹಿಡಿದಿರುವುದು? ಈ ಪತಂಗವು ತಾನು ಮೇಲೆ ಕೆಳ ಗಾಡುತ್ತಾ ನಿನ್ನ ಕಣ್ಣುಗಳನ್ನೂ ಆಡಿಸುತ್ತಿದೆ. ಈ ಕೃಷ್ಣಮರುತನು ಲಂಪಟನಾಗಿ ನಿನ್ನ ಕುಟಿಲ

ಜಟಾಕಲಾಪವನ್ನು ಸಡಲಿಸಿರುವನು. ಆದರೆ ನಿನ್ನ ನೀವೀಬಂಧವಂ ಸಡಲಿಸುವುದವನಿಗೆ ಯುಕ್ತವಲ್ಲ. ತಪೋಧನ! ನಿನ್ನ ಈ ರೂಪವು ತಪಸ್ವೀಜನ ತಪೋಭಂಗಕರವಾಗಿದೆ. ಈ ರೂಪಸೌಭಾಗ್ಯವಂ ಪೊಂದಲು ನೀನಾವ ತಪವಂ ಮಾಡಿದೆ? ಮಿತ್ರ! ನನ್ನ ಜತೆಯಾಗಿ ತಪವಂ ಮಾಡಬಾರದೆ? ಪ್ರಸನ್ನನಾಗು; ಆದರೆ ನನ್ನ ಸಂಪತ್ತು ಪೂರ್ಣವಾಗುವುದು. ಪ್ರಿಯವಾದ ನಿನ್ನನ್ನು ನಾ ಬಿಡುವುದಿಲ್ಲ. ದೇವರಾಗಿ ಕೊಟ್ಟಿರುವ ನಿನ್ನಲ್ಲಿ ನನ್ನ ಮನೋನಯನಗಳು ಲಗ್ನವಾಗಿ ಇನ್ನೊಂದನ್ನೂ ನೋಡದಿವೆ. ನಿನ್ನ ಅನುಚರನಾಗಿ ಸ್ವೀಕರಿಸು. ಈ ನರಿಗಳು ಪ್ರದಕ್ಷಿಣಾಕಾರವಾಗಿ ಪೋಗಿ ಶುಭವನ್ನು ಸೂಚಿಸುತ್ತಿವೆ. ನಿನ್ನ ಸಖಿಯರ ಗಾನ ಸಾಕು. ಅವರನ್ನು ದೂರಮಾಡಿ ನನ್ನನ್ನು ಸೇರು.

ಶ್ರೀಶುಕನು ಪೇಳಿದನು–

ಇಂತು ಲಲಾನಾನುನಯವಿದಗ್ಧನಾದ ರಾಜನಾಡಿದ ಗ್ರಾಮ್ಯಪರಿಭಾಷಣವನ್ನು ಕೇಳಿ ಆ ವಿಬುಧ ವಧೂಮಣಿಯು ಆಗ್ನೀಧ್ರನ ವಶವಾದಳು. ಆ ವೀರವರನ ಬುದ್ಧಿ ಶೀಲರೂಪ ವಿದ್ಯಾವಯಃಶ್ರೀಮೋಹಿತಳಾಗಿ ಸಾವಿರಾರು ವರ್ಷವವನಂ ಕೂಡಿ ಜಂಬೂದ್ವೀಪಾಧಿಪತಿಯ ಐಶ್ವರ್ಯಾದಿ ಸುಖಭಾಗಿನಿಯಾದಳು. ಅವಳಲ್ಲಿ ರಾಜವರನು, ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ, ಕೇತುಮಾಲರೆಂಬ ಒಂಭತ್ತು ಮಕ್ಕಳನ್ನು ಪಡೆದನು. ಅನಂತರ ಪೂರ್ವಚಿತ್ತಿಯು ಪತಿಪುತ್ರರನ್ನು ಬಿಟ್ಟು ಮೊದಲಿನಂತೆ ಬ್ರಹ್ಮಸಭೆಯನ್ನು ಸೇರಿದಳು.

ಆಗ್ನೀಧ್ರಪುತ್ರರು ತಾಯಿಯಾದ ದೇವಾಂಗನೆಯ ಅನುಗ್ರಹದಿಂದ ಸ್ವಾಭಾವಿಕ ದೇಹ ಪುಷ್ಟಿಬಲವೀರ್ಯಯುತರಾಗಿ, ತಂದೆಯು ಹಂಚಿಕೊಟ್ಟ ಜಂಬೂದ್ವೀಪ ನವಖಂಡಾಧಿಪತಿಗಳಾದರು. ಅವರ ಹೆಸರೇ ಆ ಖಂಡಗಳಿಗೆ ಬಂತು.

ಅಗ್ನೀಧ್ರನು ಅಪ್ಸರೆಯಾದ ಸತಿಯನ್ನು ಮರೆಯಲಾರದೆ ತತ್ಸಮಾನ ಲೋಕವನ್ನು ಪೊಂದಲು ಅಭಿಲಷಿಸಿ, ಶ್ರೀಹರಿಯನ್ನು ವೇದೋಕ್ತಸಾಧನಸಹಿತ ಯಜ್ಞಗಳಿಂದ ಪೂಜಿಸಿ, ಪಿತೃಗಣಾನಂದ ಸಂಧಾಯಕ ಲೋಕವನ್ನು ಪೊಂದಿ ಅವಳನ್ನೂ ಪಡೆದನು.

ಅನಂತರ ಅವನ ಪುತ್ರರು ಮೇರುಪುತ್ರಿಯರಾದ ಮೇರುದೇವಿ, ಪ್ರತಿರೂಪೆ, ಉಗ್ರದಂಷ್ಟ್ರೀ, ಲತಾ, ರಾಮಾ, ಶ್ಯಾಮಾ, ನಾರೀ, ಭದ್ರಾ, ದೇವೀ ಎಂಬುವ ಭಾರ್ಯಾನವಕವಂ ಮದುವೆಯಾಗಿ ಸುಖದಿಂದಿದ್ದರು.

## ೩. ಋಷಭಚರಿತೆ — ಅವತಾರ

ಶ್ರೀಶುಕನು ಪೇಳಿದನು–

ನಾಭಿರಾಜನು ಮೇರುದೇವಿಯಲ್ಲಿ ಸಂತಾನವಾಗದಿರಲು ಭಗವಂತನನ್ನು ಸಂತಾನಾರ್ಥಿಯಾಗಿ ವರಿಸಿ ಯಜ್ಞವನ್ನಾಚರಿಸಿದನು. ಶ್ರದ್ಧೆಯಿಂದಲೂ ವಿಶುದ್ಧಭಕ್ತಿಯಿಂದಲೂ ಪ್ರವರ್ಗ್ಯಾದಿ ಕರ್ಮಗಳನ್ನಾಚರಿಸಿದ ನಾಭಿರಾಜನಿಗೆ ಒಲಿದು, ದ್ರವ್ಯದೇಶಕಾಲ ಮಂತ್ರ ಋತ್ವಿಗ್ದಕ್ಷಿಣಾವಿಧಾನ ಯೋಗಸಂಕಲ್ಪಾದಿಗಳಿಂದ ಸಿಗದ ಶ್ರೀಹರಿಯು, ಭಾಗವತವತ್ಸಲನಾದುದರಿಂದ ಪರಮಪ್ರೀತನಾಗಿ, ಭಕ್ತಜನಮನೋಭಿಲಷಿತಾರ್ಥವಂ ಕೊಡಲು ಮನಮಾಡಿ, ಮನೋನಯನಾಭಿರಾಮ

ವಾದ ತನ್ನ ದಿವ್ಯಾಕೃತಿಯನ್ನು ತೋರಿಸಿದನು. ಚತುರ್ಭುಜನು, ಸುಖಪೂರ್ಣನು, ಪೀತಾಂಬರ ವರಧರನು, ಶ್ರೀವತ್ಸ ವಕ್ಷಸ್ಕನು, ಶಂಖಪದ್ಮ ಚಕ್ರಗದಾಹಸ್ತನು, ಧವಳಮಣಿಗಣ ಖಚಿತ ದಿವ್ಯ ಮುಕುಟ ಕಿರೀಟಕಟಕಕಟಿಸೂತ್ರಹಾರ ಕೇಯೂರನೂಪುರಾದಿಭೂಷಣಭೂಷಿತ ಸರ್ವಾ ವಯವಸುಂದರನು ಆದ ಶ್ರೀರಮಣನನ್ನು ಕಂಡು, ಋತ್ವಿಜರು ಸದಸ್ಯರು ಯಜ ಮಾನನ ಆದರದಿಂದ ಅಧನನಿಗೆ ಧನರಾಶಿ ದೊರಕಿದಂತಾನಂದಿಸಿ, ಬಹುಮಾನದ್ರವ್ಯಗಳನ್ನು ಶಿರಸಾ ವಹಿಸಿ ತಂದು, ವಂದಿಸಿ ಸಮರ್ಪಿಸಿದರು–

ಪರಮಪೂಜ್ಯ! ನಾರಾಯಣಾ! ನಿನ್ನ ದಾಸರಾದ ನಮ್ಮಲ್ಲಿ ದಯತೋರು. ನಮೋನಮಃ ಎಂದು ಮಹಜ್ಜನರು ಹೇಳಿಕೊಟ್ಟಂತೆ ನಿನಗೆ ವಂದಿಸುವುದೇ ನಮ್ಮ ಕೈಲಾಗುವ ನಿನ್ನ ಪೂಜೆ. ವಿಷಯದೂಷಿತ ಮತಿಯು ಅಸ್ವತಂತ್ರನಾದ ಜೀವನು - ಸ್ವತಂತ್ರನು ಪ್ರಕೃತಿ ಪುರುಷಭಿನ್ನನು, ಸರ್ವೋತ್ತಮನು ಆದ ನಿನ್ನನ್ನು ನಾಮರೂಪಗಳಿಂದ ನಿರೂಪಿಸಿ ತಿಳಿಯಲು ಸಮರ್ಥನಾಗು ವನೇ? ಸಕಲ ಜೀವಸಮೂಹದ ಪಾಪರಾಶಿಯನ್ನು ಪೂರ್ಣವಾಗಿ ನಾಶಮಾಡುವ ಪರಮ ಮಂಗಲಮೂರ್ತಿಯಾದ ನಿನ್ನ ಅನಂತ ಕಲ್ಯಾಣಗುಣಗಣದಲ್ಲಿ ಯಥಾಶಕ್ತಿ ತಿಳಿದಷ್ಟು ಪೊಗಳು ವುದೇ ನಿನಗೆ ನಾವು ಸಲ್ಲಿಸುವ ಗೌರವವಾಗಿದೆ. ಪರಿಜನರು ಪ್ರೀತಿಯಿಂದ ಮಾಡಿದ ಸ್ತುತಿಲವ ವಚನ, ಕೊಟ್ಟ ಜಲ, ಪಲ್ಲವ, ತುಲಸೀ ದೂರ್ವಾಂಕುರಗಳಿಂದಲೆ ಸಂತೋಷಿಸುವೆ. ಪರಮ ಪುರುಷ! ಆಗ ನಾವು ಮಹಾಸಂಭಾರದಿಂದ ಸಂಪಾದಿಸಿ, ಸಮರ್ಪಿಸಿದ ಯಜ್ಞದಿಂದ ನಿನಗೆ ಹೊಸತಾಗಿ ಲಭಿಸುವ ಪ್ರಯೋಜನವನ್ನು ನಾವು ಕಾಣೆವು. ಏಕೆಂದರೆ ನೀನು ನಿನ್ನಿಂದ ನಿನ್ನ ಸ್ವರೂಪಭೂತವಾದ ಸಕಲ ಪುರುಷಾರ್ಥಸಾರವನ್ನು ಪೊಂದಿ ಪೂರ್ಣನಾಗಿರುವೆ. ಆದರೂ ನಿನ್ನಿಂದ ಆಶೀರ್ವಾದ ವರಗಳನ್ನು ಪಡೆಯಲು ಈ ನಮ್ಮ ಪೂಜೆಯಂ ಮಾಡಿ ಅನುಗ್ರಹಿಸೆಂದು ಬೇಡುತ್ತಿರುವೆವು. ಬಾಲಿಶರಾದ ನಮಗೆ ನಮ್ಮ ಶ್ರೇಯಸ್ಸೇನು? ಹೇಗೆ? ಎಂದು ಗೊತ್ತಿಲ್ಲ. ನಿನ್ನ ಕರುಣೆಯು ನಮಗೆ ಸ್ವರೂಪ ಭೂತ ಸುಖಸಂಪಾದಕವಾದ ಮುಕ್ತಭಾಗ್ಯವನ್ನು ಕೆಡಿಸದೆ ಕಾದಿಟ್ಟು ನಿನ್ನನುಗ್ರಹಲಬ್ಧ ಭೂಲೋಕಸುಖಗಳನ್ನು ಕೂಡಲು ಸಮರ್ಥವಾಗಿದೆ. ಈಗ ಯಜ್ಞ ಮಾಡುತ್ತಿರುವ ಈ ರಾಜರ್ಷಿಗೆ ವರದರಾಜನಾದ ನೀನು ಭಕ್ತಜನವಾಂಛಿತವಾದೀರೂಪದಿಂದ ಪ್ರತ್ಯಕ್ಷನಾಗಿರುವುದರಿಂದ ನಮ್ಮ ಸೇವೆಯು ಸಫಲವಾಗಿದೆ. ಫಲಪ್ರಾಪ್ತ್ಯನಂತರವೂ ನಿನ್ನ ಸೇವೆಯೇ ಕೊಡು. ವೈರಾಗ್ಯವಿಜೃಂಭಿತವಾದ ಜ್ಞಾನಾಗ್ನಿಯಿಂದ ರಾಗಾದಿ ಮನೋಮಲಗಳನ್ನು ನಿರ್ಮೂಲಮಾಡಿ, ಸಾತ್ವಿಕರಾದ ಮುನಿವರರು ಎಡೆಬಿಡದೆ ನಿನ್ನ ಕಲ್ಯಾಣಗುಣಗಾನವನ್ನು ಮಾಡುತ್ತಿರುವರು. ಪವಿತ್ರಚರಿತ್ರನೇ! ನಾವು ಒಂದೊಂದು ಸಲ ಜಾರಿ ಬಿದ್ದಾಗ, ಆಕಳಿಸುವಾಗ, ಕೆಮ್ಮಿದಾಗ, ಸೀತಾಗ, ಪ್ರವಾಸಶ್ರಮೆಯನ್ನು ಪೊಂದುವಾಗ, ಜ್ವರದಿಂದ ಮಲಗಿದಾಗ, ಸಾಯು ವಾಗಲಾಗಲಿ ಸಕಲಪಾಪಕ್ಷಾಲನಸಮರ್ಥವಾದ ನಾರಾಯಣಾದಿ ಗುಣನಾಮಗಳು, ಕಂಸಾರಿನರ ಕಾಂತಕಾದಿ ಕ್ರಿಯಾನಾಮಗಳು ವಚನ ಗೋಚರವಾಗಲಿ! ನಿನ್ನ ಶ್ರೀಮಚ್ಚರಣಾರವಿಂದ ಸ್ಮರಣೆ ಸದಾ ಎಮಗಿರಲಿ! ಇಷ್ಟೇ ಅಲ್ಲ ಪ್ರಭೋ! ಈ ರಾಜರ್ಷಿಯು ಸಂತಾನವಂ ಬೇಡುತ್ತಿರುವನು. ನಿನ್ನಂತಹ ಮಗನಂ ಬೇಡಿ, ಸ್ವರ್ಗಾಪವರ್ಗಪ್ರದನು, ಸರ್ವಾಭೀಷ್ಟವರದನು ಆದ ನಿನ್ನ ಚರಣಾರವಿಂದವನ್ನು ಸೇವಿಸಿರುವನು. ಕುಬೇರನಿಂದ ಹೊಟ್ಟನ್ನು ಬೇಡಿದ ದರಿದ್ರನಂತೆ ಮಕ್ಕಳಂ ಬೇಡಿ, ನಿನಗೆ ಶರಣಾಗತನಾಗಿರುವನು. ಅಪರಾಜಿತ! ನಿನ್ನ ಬಂಧಕಶಕ್ತ್ಯಯಿಂದ ನಿನ್ನ ಮಂಗಳ ಸ್ವರೂಪ ಧ್ಯಾನವಂ ಬಿಟ್ಟು, ಚಿತ್ತವನ್ನನ್ಯವಿಷಯಂಗಳಲ್ಲಿಟ್ಟು, ಮಹಜ್ಜನಚರಣ ಸೇವೆಯನ್ನು

ಮಾಡದ ಮಂದಮತಿಯು ವರಗಳನ್ನು ಬೇಡುವುದೇ ನಿಜ. ಆದರೆ ಈ ನಿನ್ನ ಮೋಹನ ಶಕ್ತಿಯಂ ಜಯಿಸಲು ನಿನ್ನನುಗ್ರಹವೇ ಕಾರಣವು. ಅದರಿಂದ ನಿನ್ನನ್ನು ರಾಜನಿಗೆ ಪುತ್ರವರದಾನಂ ಮಾಡಲುಕರೆದ ಮಂದಮತಿಗಳಾದ ನಮ್ಮನ್ನು ಕ್ಷಮಿಸು. ಅಜ್ಞಾನಗಳಾದ ನಮ್ಮ ಅವಜ್ಞೆಯನ್ನು ಮನ್ನಿಸು.

ಇಂತು ವೇದಸಮವಚನಗಳಿಂದ ಸ್ತುತಿಸಿದ ಋಷಿವರರನ್ನು, ವಂದಿಸಿ ನಿಂತ ನಾಭಿರಾಜ ನನ್ನು ಕರುಣೆಯಿಂದ ಕಟಾಕ್ಷಿಸಿ, ಸರ್ವಸುರಾಧ್ಯಕ್ಷನಿಂತು ನುಡಿದನು–

ಋಷಿವರೇ! ಎಂತಹ ದುರ್ಲಭವಾದ ವರವನ್ನು ಕೊಡೆಂದು ಬೇಡಿದಿರಿ! ನೀವೋ ಸತ್ಯವಚನರು. ನಾನೋ ಬ್ರಾಹ್ಮಣಪ್ರಿಯನು. ಆದ್ದರಿಂದ ಈ ರಾಜನಿಗೆ ನಾನೇ ಮಗನಾಗಿ ಬರುವೆನೇಕೆಂದರೆ ನನಗೆ ಸಮನಿನ್ನೆಲ್ಲಿರುವನು? ನಾನೇ ನನಗೆ ಸಮನೆಂದಮೇಲೆ ಬ್ರಹ್ಮವಾದಿ ಗಳಾದ ನಮ್ಮ ವಚನವನ್ನು ಸತ್ಯವನ್ನಾಗಿಸಲು, ನಾಭಿರಾಜಪತ್ನಿಯಲ್ಲಿ ಮಗನಾಗಿ ಅವತರಿಸು ವೆನು. ಬ್ರಾಹ್ಮಣರೆಂದರೆ ನನ್ನ ಮುಖ, ಅವರ ಮಾತೇ ನನ್ನ ಮಾತು – ಎಂದು ಭಗವಂತನು ಮೇರುದೇವೀ ನಾಭಿರಾಜನು ಆನಂದದಿಂದ ತನ್ನನ್ನು ನೋಡುತ್ತಿರಲು ಅಂತರ್ಧಾನವಂ ಪೊಂದಿ ದನು.

ಹೇ ವಿಷ್ಣುರಾತ! ಇಂತಾಯಜ್ಞದಿ ಪರಮರ್ಷಿಗಳಿಂದ ಪ್ರಸಾದಿತನಾದ ಪರಮಪುರುಷನು, ನಾಭಿರಾಜನಲ್ಲಿ ಪ್ರೀತನಾಗಿ ಅವನ ಪತ್ನಿಯಾದ ಮೇರುದೇವಿಯಲ್ಲಿ, ಧರ್ಮಶಿಕ್ಷಣಕಾಮನಾಗಿ, ದಿಗಂಬರ ಸನ್ಯಾಸಿಗಳು ಊರ್ಧ್ವರೇತಸ್ಕರು ನಡೆಯಲರ್ಹವಾದ ಅವಧೂತಚರ್ಯೆಯನ್ನು ತೋರಿಸಲು, ಸುಖಜ್ಞಾನಾತ್ಮಕ ದೇಹದಿಂದ ಅವತರಿಸಿದನು.

## ೪. ಋಷಭಚರಿತೆ – ಧರ್ಮಪರಿಪಾಲನೆ

ಶ್ರೀಶುಕನು ಪೇಳಿದನು-

ಆ ಕುಮಾರನು ಶ್ರೇಷ್ಠನಾದ ಓಜೋಬಲ ಶ್ರೀಯಶೋವೀರ್ಯ ಶೌರ್ಯ ಮಾಧುರ್ಯಾದಿ ಗುಣಾತ್ಮಕ ದೇಹನೆಂದರಿತು ಜನಕನು, ಋಷಭನೆಂದು ಪೆಸರನಿಟ್ಟನು. ಸ್ವಾಭಾವಿಕವಾದ ಭಗವಲ್ಲಕ್ಷಣಗಳು ಸ್ಫುಟವಾಗುತ್ತಿರಲು, ಆ ಕುಮಾರನು, ಸಾಮ್ಯ,ಉಪಶಮ, ವೈರಾಗ್ಯ, ಐಶ್ವರ್ಯ ಮೊದಲಾದ ಮಹದ್ಗುಣಗಳಿಂದ ದಿನ ದಿನ ಪ್ರವರ್ಧಮಾನಾಗುತ್ತಿರಲು ನೋಡಿ ಪ್ರಜರು, ಬ್ರಾಹ್ಮಣರು, ಪ್ರಧಾನರು ತುಷ್ಟರಾಗಿ ಋಷಭನನ್ನು ರಾಜನಾಗಿ ವರಿಸಿದರು. ಋಷಭನ ವರ್ಷದಲ್ಲಿ ಯಜ್ಞನಾಮಕ ಸುರಪತಿಯು ಸ್ಪರ್ಧೆಯಿಂದ ಮಳೆಗರೆಯದಿರಲು ಯೋಗೇಶನಾದ ಋಷಭನು ಸ್ವರೂಪಸಾಮರ್ಥ್ಯದಿಂದ ಅಂಜನಾಭದಲ್ಲಿ ವರ್ಷವಂ ತರಿಸಿದನು. ಋಷ ಭಯಜ್ಞರು ಭಿನ್ನರೆಂಬ ಮೋಹವನ್ನಸುರರಿಗೆ ಪುಟ್ಟಿಸಿದನು.

ನಾಭಿಯು ತನ್ನ ಅಭಿಲಾಷೆಯಿಂದ ಮಗನನ್ನು ಪಡೆದು ಪ್ರಮೋದಭರಿತನಾದನು. ನರನಂತೆ ತೋರಿ ಚರಿಪ ಭಗವಂತನನ್ನು ಕುಮಾರನೆಂದು ತಿಳಿದು, ಗದ್ಗದ ಕಂಠನು ಪ್ರೇಮೋತ್ಕಂಠನಾಗಿ ವತ್ಸ! ತಾತ! ಎಂದು ಕರೆದು ಲಾಲಿಸಿ ಆನಂದಿಸುತ್ತಿದ್ದನು. ಪೌರ ಜಾನಪದ ಜನಾನುರಾಗ ಭಾಜನನಾದ ಕುಮಾರನಿಗೆ ಧರ್ಮವನ್ನು ರಾಜ್ಯವನ್ನು ರಕ್ಷಿಸಲು ಪಟ್ಟಿಗಟ್ಟಿ ಬ್ರಾಹ್ಮಣ ಮಂತ್ರಿ ಗಳಿಗೊಪ್ಪಿಸಿದನು. ಮೇರುದೇವಿಯುತನಾಗಿ ವಿರಕ್ತಿಯನ್ನು ಪೊಂದಿ ಬದರಿಕಾಶ್ರಮವನ್ನು ಸೇರಿ

ದನು. ತಪಸ್ಸಮಾಧಿಯಿಂದ ನರನಾರಾಯಣರನ್ನು ಭಜಿಸಿ ಜ್ಞಾನಾದಿಸಂಪನ್ನನಾಗಿ ಜರಾ ಮರಣ ದೂರ ಹರಿಚರಣವನ್ನು ಸೇರಿದನು.

ರಾಜನ್! ನಾಭಿರಾಜನ ಕೀರ್ತಿಯು ಪ್ರಸಿದ್ಧವಾಗಿದೆ. ನಾಭಿರಾಜನಂತೆ ಪವಿತ್ರ ಕರ್ಮಗಳನ್ನು ಯಜ್ಞಗಳನ್ನು ಮಾಡಲಿತರರಿಗೆ ಸಾಧ್ಯವೇ? ಅವನಂತೆ ಬ್ರಾಹ್ಮಣಪ್ರೀತಿಯಂ ಪೊಂದಿದವರುಂಟೇ? ಚೆನ್ನಾಗಿ ಪೂಜಿತರಾದ ವಿಪ್ರರು ಆ ರಾಜನ್ಯನಿಗೆ ಶ್ರೀಹರಿಯನ್ನು ತೋರಿದರಲ್ಲವೇ? ಶ್ರೀಹರಿಯೇ ಆ ರಾಜನಿಗೆ ಪ್ರಸನ್ನನಾಗಿ ಮಗನಾಗಿ ಜನಿಸಿದನು.

ಋಷಭನು ಅಂಜನಾಭವೆಂಬ ತನ್ನ ದೇಶವು ಕರ್ಮಕ್ಷೇತ್ರವೆಂದು ತಿಳಿದು ಗುರುಕುಲವಾಸವಂ ಮಾಡಿ ಗುರುದಕ್ಷಿಣೆಯನ್ನು ಕೊಟ್ಟು ಗೃಹಸ್ಥನಾದನು. ಜಯಂತಿ ಎಂಬ ಇಂದ್ರಪುತ್ರಿಯನ್ನು ಮದುವೆಯಾಗಿ ಪ್ರವೃತ್ತಿ–ನಿವೃತ್ತಿ–ರೂಪ ಕರ್ಮದ್ವಯವನ್ನು ನಡೆಸಿದನು. ಆಕೆಯಲ್ಲಿ ಪುತ್ರಶತವನ್ನೂ ಪಡೆದನು. ಜ್ಯೇಷ್ಠಪುತ್ರನಾದ ಭರತನು ಶ್ರೇಷ್ಠ ಗುಣನಾಗಿದ್ದನು. ಅವನಿಂದಲೆ ಅಂದು ಮೊದಲ್ಗೊಂಡು ಈ ವರ್ಷವು ಭಾರತ ವರ್ಷವೆಂದು ಖ್ಯಾತವಾಯಿತು. ಅವನು ತಮ್ಮಂದಿರು ಕುಶಾವರ್ತ, ಇಲಾವರ್ತ, ಬ್ರಾಹ್ಮವರ್ತ, ಆರ್ಯಾವರ್ತ, ಮಲಯ ಕೇತು, ಭದ್ರಸೇನ, ಇಂದ್ರಸ್ಪೃಕ್, ವಿದರ್ಭ, ಕೀಟಕರೆಂಬುವರು, ತಮ್ಮ ಹೆಸರಿನ ದೇಶಖಂಡಗಳಿಗೊಡೆಯರಾದರು. ಮಹಾಭಾಗವತರಾದ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನರು ಭಾಗವತಧರ್ಮಪ್ರವರ್ತಕರೆನಿಸಿ, ಅವಧೂತರಾದರು. ಭಗವನ್ಮಹಿಮಾಭರಿತವಾದ ಅವರ ಸಚ್ಚರಿತವನ್ನು ವಸುದೇವನಿಗೆ ನಾರದನು ಪೇಳಿದರು. ಆ ವೈರಾಗ್ಯಭಕ್ತಿಬೋಧಕವಾದ ಗಾಥೆಯನ್ನು ಮುಂದೆ ನಿನಗೆ ಹೇಳುತ್ತೇನೆ. ಇನ್ನುಳಿದ ಎಂಭತ್ತೊಂದು ಜನ ಜಾಯಂತೇಯರು ತಂದೆಯ ಅನುಶಾಸನವನ್ನನುರಿಸಿ ಮಹಾಶಾಲೀನರು, ಶ್ರೋತ್ರಿಯರು, ಕರ್ಮಕುಶಲರು, ಯಜ್ಞಶೀಲರು ಆಗಿ ಬ್ರಾಹ್ಮಣರಂತೆ ಆಶ್ರಮಗಳಲ್ಲಿ ನಿವಾಸವನ್ನು ಮಾಡಿದರು.

ಭಗವಾನ್ ಋಷಭನು ತಾನು ಸ್ವತಂತ್ರನು, ಸರ್ವಾನರ್ಥದೂರನು, ಕೇವಲಾನಂದ ಮೂರ್ತಿಯು ಎಂದು ತಿಳಿದೂ, ಸಾಮಾನ್ಯ ಜನರಂತೆ ಕರ್ಮಗಳನ್ನು ಕಾಲಕಾಲಕ್ಕೆ ನಡೆಸಬೇಕಾದ ಧರ್ಮಗಳನ್ನು ಆಚರಿಸಿ ಲೋಕವನ್ನು ಶಿಕ್ಷಿಸಿ ಧರ್ಮದಲ್ಲಿ ನಡೆಸಿದನು. ಅಜ್ಞಾನಿಗಳನ್ನುದ್ಧರಿಸಲು ಗೃಹಾಶ್ರಮವನ್ನು ನಡೆಸಿ ನೋಡಿದನು. ಶಾಂತಿ, ಮೈತ್ರಿ, ಕರುಣೆ,ಧರ್ಮಾರ್ಥಕಾಮಾರ್ಜನೆ, ಪ್ರಜಾನಂದಗಳನ್ನು ಮೋಕ್ಷಕ್ಕೆ ಬಾಧಕವಾಗದಂತೆ ಪ್ರವರ್ತಿಸಿದನು. ಮಹಜ್ಜನರು ಮಾಡಿದುದನ್ನು ನೋಡಿ ಅಲ್ಲವೇ ಸಾಮಾನ್ಯರು ನಡೆದುಕೊಳ್ಳುವುದು! ವೇದವಿಹಿತವು ಗೋಪ್ಯವಾದ ಧರ್ಮವನ್ನು ಚೆನ್ನಾಗಿ ತಿಳಿದವನಾದರೂ, ಋಷಭನು ಬ್ರಾಹ್ಮಣರು ಪೇಳಿದಂತೆ ಕೇಳುತ್ತಾ ಸಾಮಾದ್ಯುಪಾಯಗಳಿಂದ ಜನತೆಯನ್ನು ಪಾಲಿಸುತ್ತಿದ್ದನು. ದ್ರವ್ಯ ದೇಶ ಕಾಲ ವಯಃ ಶ್ರದ್ಧಾದಿಗಳಿಂದ ಸಂಪೂರ್ಣವಾದ ಯಜ್ಞಗಳನ್ನು ನೂರು ನೂರು ಸಲ ಮಾಡಿದನು ಋಷಭನಿಂದ ರಕ್ಷಿತ ವಾದ ಭರತವರ್ಷದಲ್ಲಿ ಯಾವ ಮನುಜನು ಕೂಡ ತನಗಿಲ್ಲವೆಂದು ಏನನ್ನೂ ಯಾರಿಂದಲೂ ಎಂದಿಗೂ ದೀನನಾಗಿ ಬೇಡುತ್ತಿದ್ದಿಲ್ಲ. ಪ್ರತಿನಿತ್ಯವೂ ಋಷಭನಾಮಕ ಹರಿಯಲ್ಲಿ ಭಕ್ತಿಯು ವಿಜೃಂಭಿತವಾಗುತ್ತಿರುವುದೊಂದೇ ಆಗಿನ ಪ್ರಜರು ವಾಂಛಿಸುವ ವರವಾಗಿತ್ತು. ಒಂದು ಸಲ ಸಂಚಾರ ಮಾಡುತ್ತಾ ಋಷಭನು ಬ್ರಹ್ಮಾವರ್ತವನ್ನು ಸೇರಿದನು. ಅಲ್ಲಿ ಬ್ರಹ್ಮರ್ಷಿ

ಸಭೆ ಸೇರಿರಲು ಎಲ್ಲ ಪ್ರಜರೂ ಕೇಳುವಂತೆ ಸ್ವಯಂ ವಿನಯಪ್ರಣಯಶೀಲರಾದ ತನ್ನ ಮಕ್ಕಳನ್ನು ಕುರಿತು, ಲೋಕ ಶಿಕ್ಷಣಾರ್ಥವಾಗಿ ಉಪದೇಶಿಸಿದನು.

## ೫. ಋಷಭ ಚರಿತೆ – ಹಿತೋಪದೇಶ

ಋಷಭನು ಪುತ್ರರನ್ನುದ್ದೇಶಿಸಿ ಲೋಕಹಿತಕರ ವಚನಗಳನ್ನಿಂತು ನುಡಿದನು–

ಈ ಮನುಜದೇಹವು ಕೇವಲ ಭೋಗಗಳಿಗೆಂದು ಬಂದುದಲ್ಲ. ಹಂದಿ ನಾಯಿಗಳಿಗೂ ಒದಗುವ ಆಹಾರ ಮೈಥುನಾದಿ ಕಾಮಗಳಿಂದ ಪ್ರಯೋಜನವೇನು? ತಪಸ್ಸನ್ನು ಮಾಡಿ ಮೋಕ್ಷವಂ ಪೊಂದಲು ಬಂದ ದೇಹವಿದೆಂದು ತಿಳಿದು ಅನಂತಸುಖಕಾರಣವಾದ ಬ್ರಹ್ಮ ಜ್ಞಾನವನ್ನು ಸಂಪಾದಿಸಿರಿ. ತಪಸ್ಸೇ ಮನಶ್ಶುದ್ಧಿಯಂ ಕೊಡುವ ಸಾಧನವು ಶುದ್ಧವಾದ ಮನದಿಂದ ಜ್ಞಾನಸಿದ್ಧಿಯು ಅದರಿಂದ ಶ್ರೀಹರಿ ಪ್ರಸಾದದಿರಿಂದ ಮೋಕ್ಷವು ಲಭಿಸುವುದು. ಮಹಜ್ಜನ ಸಂಗವು ಸ್ವಯೋಗ್ಯಮುಕ್ತಿಗೆ ದ್ವಾರವೆನಿಸಿದೆ. ನಿಷಿದ್ಧ ಸ್ತ್ರೀಸಂಗವು, ಕೂಡ, ತಮೋದ್ವಾರವಾಗಿದೆ. ಮಹಜ್ಜನರು ಯೋಗ್ಯತಾನುಸಾರಮಾದ ಚಿತ್ತವೃತ್ತಿಯಿಂದ ಪ್ರಶಾಂತರಾಗಿರುವರು. ಜ್ಞಾನ ಶೀಲರು, ಅನಿಮಿತ್ತೋಪಕಾರಿಗಳು, ರಾಗಾದಿ ದೋಷರಹಿತರು ಆದ ಸಜ್ಜನರ ಸಂಗವು ವಾಂಛನೀಯವಾಗಿದೆ. ಅವರು ಈಶನಾದ ನನ್ನನ್ನೇ ಬಹು ಪ್ರೀತಿಯಿಂದ ಭಜಿಸಿ ಮತ್ತಿನ್ನೇನನ್ನೂ ಬೇಡದಿರುವರು. ಉದರಪೋಷಣಮಾತ್ರ ಜೀವಿ ಸುತ್ತಾ, ದಾರಾಪುತ್ರ ಮಿತ್ರ ಧನ ರೂಪವಾದ ಗೃಹಬಂಧಯುತರಾದ ಕುಜನರ ಸಂಗದಿಂದ ದೂರವಾಗಿ, ಲೋಕದ ವಿಷಯಗಳಲ್ಲಿ ಮಿತರಾಗಿ, ಶರೀರಯಾತ್ರೆಯನ್ನು ನಡೆಸುವರು. ಅಂತಹ ಸುಜನರು ಸೇರದೆ, ಶಬ್ದಾದಿ ವಿಷಯಗಳಿಂದ ಇಂದ್ರಿಯ ಪ್ರೀತಿಯಾಗುವುದೆಂದು ವ್ಯಮರೆತು, ಇಂದ್ರಿಯದಾಸನಾಗಿ ಜೀವನು ಬಹುಪಾಪಕರ್ಮಗಳನ್ನು ಮಾಡಿ, ಅನೇಕ ಶರೀರಗಳನ್ನು ಪೊಂದಿ, ಕರ್ಮಫಲರೂಪವಾದ ದುಃಖವನ್ನನುಭವಿಸುವನು. ವಿಣ್ಮೂತ್ರಾದಿ ದೋಷಪೂರ್ಣವಾದ ದೇಹ ಪೋಷಣೆಗಾಗಿ ಪಡುವ ಕಷ್ಟವೆಷ್ಟು? ಎಂದಿನವರಿವಿಗೂ ಪರಬ್ರಹ್ಮವಿಚಾರವು ಪುಟ್ಟವುದಿಲ್ಲವೋ ಅಂದಿನವರೆವಿಗೂ ಸಂಸಾರಕ್ಲೇಶವು ಬಿಡುವುದಿಲ್ಲ. ಎಲ್ಲಿಯವರಿಗೂ ಕಾಮುಕರ್ಮವನ್ನು ಮಾಡವನೋ, ಅಲ್ಲಿಯವರಿವಿಗೂ ಜೀವನ ಮನವು ಕರ್ಮಫಲಭೋಗ ನಿದಾನವಾದ ಶರೀರ ಗಳನ್ನು ಸೃಜಿಸುತ್ತಿರುವುದು. ವಿಷಯಾಸಕ್ತವಾದ ಮನವು ಪ್ರವೃತ್ತ ಕರ್ಮವನ್ನು ಮಾಡಿ ಜೀವನಿಗೆ ಅವನ ಜ್ಞಾನವನ್ನು ಅವನ ಅಂತರ್ಯಾಮಿಯ ಜ್ಞಾನವನ್ನು ಆಗದಂತೆ ಪ್ರತಿಬಂಧಿಸುವುದು. ವಾಸುದೇವನಾದ ನನ್ನಲ್ಲಿ ಪ್ರೀತಿಯಿಂದಲೇ ದೇಹಬಂಧವು ನಿವೃತ್ತವಾಗುವುದು. ಜೀವಾತ್ಮನು ಸ್ವಭಾವದಿಂದ ಜ್ಞಾನರೂಪನಾದರೂ, ವಿಪರೀತೇಂದ್ರಿಯವ್ಯಾಪಾರದಿಂದ ಅಜ್ಞಾನವನ್ನು ಪೊಂದಿ ಶಾಸ್ತ್ರಸ್ಮೃತಿಯನ್ನು ಕಳೆದುಕೊಂಡು, ಮೈಥುನಾದಿ ಗೃಹಸುಖಗಳಲ್ಲಿ ಲೋಭದಿಂದ ಕಷ್ಟಪಡು ತ್ತಿರುವನು. ಈ ಸಂಸಾರವು ಸ್ತ್ರೀಪುರುಷಮಿಥುನೀಭಾವದಿಂದಲೇ ಪ್ರಾರಂಭವಾಗಿದೆ. ಅವರೀರ್ವರ ಹೃದಯವು ಗೃಹಕ್ಷೇತ್ರಸುತಾಪ್ತವಿತ್ರವೋಹದಿಂದ ತುಂಬಿ ಅಹಂಕಾರ ಮಮಕಾರಗಳಿಂದ ತೂಡಕಾಗಿದೆ. ಆ ಬಂಧವು ಜಡವಾದರೂ ಸತ್ಯವಾಗಿದೆ. ಸತ್ಯವಾದ ಬಂಧವು ಕೂಡ ಶ್ರೀಹರಿ ಕೃಪೆಯಿಂದ ನಿವೃತ್ತವಾಗುವುದು. ಅಹಂಮಮಕಾರಗಳನ್ನು ಬಿಡುವುದರಿಂದ ಕರ್ಮಫಲವನ್ನು

ಕಳೆದುಕೊಂಡು, ಜೀವನು ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು, ತತ್ಪ್ರಸಾದದಿಂದ ಮುಕ್ತನಾಗುತ್ತಾನೆ.

ಹರಿಗುರುಭಕ್ತಿ, ಶುಶ್ರೂಷೆ, ತೃಷ್ಣಾಪರಿತ್ಯಾಗ, ದ್ವಂದ್ವಸಹನೆ, ಸರ್ವಶರೀರಗತ ವಿವಿಧ ವ್ಯಸನದರ್ಶನ, ವೇದಾಂತ ವಾಕ್ಯವಿಚಾರ, ತಪಸ್ಸು, ನಿಷಿದ್ಧ ಕರ್ಮಪರಿತ್ಯಾಗ, ಹರಿಪೂಜೆ, ಹರಿಕಥಾಶ್ರವಣ, ಹರಿಭಕ್ತಸಂಗ, ಹರಿಗುಣಕೀರ್ತನೆ, ಭೂತವೈರರಾಹಿತ್ಯ, ಯಥಾಯೋಗ್ಯವಾದ ಸೌಮ್ಯವರ್ತನೆ, ವೈರಾಗ್ಯ, ದೇಹ ಗೃಹಾದಿಗಳಲ್ಲಿ ಅಹಂಕಾರವರ್ಜನ, ನಾಡೀ ಶೋಧನಾದಿ ಪ್ರಾಣಾಯಾಮ, ಇಂದ್ರಿಯಜಯ, ಪರಿವಿಸ್ಮೃತಿರಾಹಿತ್ಯ, ಬ್ರಹ್ಮಚರ್ಯ, ಪ್ರಮಾದರಹಿತ ಕರ್ತವ್ಯಕರಣ, ಮೌನ, ದುಃಶಾಸ್ತ್ರವರ್ಜನ, ಸರ್ವಸತ್ತಾ ಪ್ರದಹರಿಮಹಿಮಾಜ್ಞಾನ, ವಿಶೇಷ ಜ್ಞಾನ, ಭಗವದ್ಧ್ಯಾನ, ಜಿಹ್ವೋಪಸ್ಥಜಯ, ವಿಷ್ಣು ದೀಕ್ಷೆ, ಅನಶನಾದಿ ಸಹನೆ ಎಂಬ ಈ ಗುಣಗಳನ್ನು ಸಂಪಾದಿಸಿ, ಕರ್ಮಜವಾದ ಶರೀರ ಮಿಥುನೀಭಾವರೂಪ ಅಜ್ಞಾನಬಂಧವನ್ನು ಕಡಿದು, ಲಿಂಗಶರೀರದಿಂದ ಜೀವನು ಮುಕ್ತನಾಗುವನು.

ನಾನು ಹೇಳಿದ ಸಾಧನಗಳಿಂದ ಅಹಂಕಾರರೂಪ ಬಂಧಗಳನ್ನು ಕಡಿದು, ಯೋಗವನ್ನು ಚೆನ್ನಾಗಿ ಪುನಃ ಅಭ್ಯಸಿಸಲು ನನ್ನ ಅನುಗ್ರಹವನ್ನು ಪೊಂದುವನು ತಂದೆಯಾದವನು ಮಗನಿಗೂ, ಗುರುವಾದವನು ಶಿಷ್ಯನಿಗೂ ಈ ಗುಣಗಳನ್ನು ಉಪದೇಶಿಸಲು ನನ್ನ ಲೋಕವನ್ನು ಸೇರುವನು. ಜ್ಞಾನಶೀಲನು ಪಾಪರಹಿತವಾದ ಸರನು ನನ್ನ ಅನುಗ್ರಹವಾಗಬೇಕಾದರೆ ನಾನು ಹೇಳಿದ ನಿವೃತ್ತಿ ಕರ್ಮವನ್ನೇ ಬೋಧಿಸಬೇಕು ಹೊರತು ಮೊದಲೇ ಕರ್ಮರತವಾದ ಸಾಮಾನ್ಯರಿಗೆ ಮತ್ತೆ ಪ್ರವೃತ್ತಿಕರ್ಮವನ್ನು ಪೇಳಿದರದರಿಂದವರಿಗೆ ಹಾನಿಯೇ ಆಗಲಿ ಪ್ರಯೋಜನವಿಲ್ಲ. ಕುರುಡನು ನಾಯಕನಾಗಿ ಮತ್ತೊಬ್ಬನನ್ನು ಹಾಳುಭಾವಿಯಲ್ಲಿ ಕೆಡವಿ ತಾನೂ ಬಿದ್ದಂತೆ. ಲೋಕದ ಜನರು ಸ್ವೈಜವಾಗಿ ಕರ್ಮಫಲವನ್ನು ಬೇಡಿ, ಅಂಧರಂತೆ ತಮ್ಮ ಹಿತವನ್ನರಿಯದಿರಲು ಅವರಿಗೆ ಮತ್ತೆ ಪ್ರವೃತ್ತಿ ಕರ್ಮೋಪದೇಶವನ್ನು ಮಾಡಿದವನು ತಾನು ಅಂಧನೇ ಅವರೂ ಅಂಧರೇ ಎನಿಸಿ ನಷ್ಟನಾಗವನು. ಕಾಮಿತ ಪದಾರ್ಥಗಳಿಂದ ಆಯಾಸ, ಕಲಹ, ಫಲವ್ಯತ್ಯಾಸ, ಅನಂತದುಃಖಗಳೇ ಹೊರತು ನಿಜವಾದ ಸುಖವಿಲ್ಲ. ಇಷ್ಟು ವಿಷಯವನ್ನು ತಿಳಿದೂ ಯಾವ ವಿವೇಕಿಯು, ಅವಿದ್ಯಾಲೀನರಾಗಿ ಕುಮಾರ್ಗದಲ್ಲಿ ನಡೆಯುತ್ತಾ ನರಕದ ದಾರಿಯನ್ನು ಮುಟ್ಟುವ ಜೀವರನ್ನು ಮತ್ತೆ ಪ್ರವೃತ್ತಿಧರ್ಮದಲ್ಲಿ ತೊಡಗಿಸುವಷ್ಟು ಕರುಣಾರಹಿತನಾಗುವನು. ಅಂತು ಪ್ರವೃತ್ತಿ ಧರ್ಮವನ್ನು ಉಪದೇಶಿಸಿದ ಗುರು ಗುರುವಲ್ಲ; ತಂದೆ ತಂದೆಯಲ್ಲ; ತಾಯಿ ತಾಯಿಯಲ್ಲ; ಅಜ್ಞಾನ ಮೂಲ ಸಂಸಾರದಿಂದ ಬಿಡಿಸುವ ಶ್ರೀಹರಿ ಭಕ್ತಸಾಧಕ, ನಿವೃತ್ತಿಧರ್ಮವನ್ನುಪದೇಶಿಸಿದ ದೇವತೆ ದೇವತೆಯಲ್ಲ. ರಾಜನು ರಾಜನಲ್ಲ. ಈ ನನ್ನ ಶರೀರವು ಜ್ಞಾನಾನಂದಾತ್ಮಕವು. ಭೌತಿಕ ವಿಕಾರರಹಿತವು ನನ್ನ ಜ್ಞಾನಬಲಾತ್ಮಕ ಹೃದಯದಲ್ಲಿ ಧರ್ಮವು ನೆಲೆಮಾಡಿದೆ. ಆದ್ದರಿಂದ ಜ್ಞಾನಪೂರ್ವಕವಾಗಿ ಅನುಷ್ಠಿತವಾದುದೇ ಧರ್ಮವು. ನನ್ನ ಬೆನ್ನಿನಿಂದ ಪುಟ್ಟಿದ ಅಧರ್ಮವನ್ನು ಅಜ್ಞಾನಮಯವೆಂದು ದೂರಮಾಡಿರುವೆನು. ಜ್ಞಾನರೂಪನು ಧರ್ಮಾದಿ ಸ್ಥಿತಿಹೇತುಭೂತ ನಾದ್ದರಿಂದ ನನ್ನನ್ನು ಜ್ಞಾನಿಗಳು ಋಷಭನೆನ್ನುವರು.

ಪುತ್ರರೇ! ನೀವೆನ್ನ ಹೃದಯದಿಂದ ಪುಟ್ಟಿರುವಿರಿ. ನೀವೆಲ್ಲರೂ ಸರ್ವಾಧಾರನು ಸರ್ವೋತ್ತಮನಾದ ಶ್ರೀಹರಿಯನ್ನು ನಿಷ್ಕಪಟಬುದ್ಧಿಯಿಂದ ಭಜಿಸಿ, ಹಾಗೂ ನಿಮ್ಮಣ್ಣನಾದ ಭರತ

ನಿಗನುವ್ರತ ರಾಗಿ ಪ್ರಜಾಭರಣ ಪುಣ್ಯಭಾಜನರಾಗಿ ನನ್ನ ಅನುಗ್ರಹವನ್ನು ಪೊಂದುವಿರಿ. ಪ್ರಜಾ ರಂಜನವೇ ನನ್ನ ನಿಜವಾದ ಶುಶ್ರೂಷೆಯು.

ಸಕಲ ಭೂತಗಳಲ್ಲಿ ವೃಕ್ಷ ಸರೀಸೃಪಗಳು ಉತ್ತಮಗಳು. ಅವುಗಳಿಗೂ ಜ್ಞಾನಲವಸಹಿತ ಪಶ್ವಾದಿಗಳು ಶ್ರೇಷ್ಠವೆನಿಸುವುವು. ಮನುಜರು ಅವರಿಗಿಂತಲೂ ಶ್ರೇಷ್ಠರು. ಗಂಧರ್ವಸಿದ್ಧ ವಿಬುಧರು ಇನ್ನೂ ಶ್ರೇಷ್ಠರು. ಬ್ರಹ್ಮಸುತರಾದ ಸನಕಾದಿಗಳು ದಕ್ಷಾದಿ ಪ್ರಜೇಶರು ಅವರಲ್ಲಿ ಪ್ರಧಾನರು. ಅವರಿಗೂ ಇಂದ್ರನು ಶ್ರೇಷ್ಠನು. ಇಂದ್ರನಿಗೆ ಪ್ರಭುವು ರುದ್ರನು. ರುದ್ರನಿಗೆ ಬ್ರಹ್ಮನುನಿಯಾಮಕನು. ಅವನಿಗೆ ನಾನೇ ಪ್ರಭುವು. ನನಗೆ ಯಾರೂ ಪ್ರಭುಗಳಿಲ್ಲ. ದ್ವಿಜರು ದೇವತೆಗಳು ನನ್ನನ್ನೇ ಸರ್ವೋತ್ತಮನೆಂದು ತಿಳಿದು ಭಜಿಸುವರು.

ಭೂತಲದಿ ನನ್ನ ಸನ್ನಿಧಾನಪಾತ್ರರೆಂದರೆ ಬ್ರಾಹ್ಮಣರೇ. ಅವರು ಜ್ಞಾನ ವೈರಾಗ್ಯ ಭಕ್ತಿ ಯುಕ್ತರಾಗಿರುವುದರಿಂದ ನನ್ನ ಪ್ರೀತಿಯನ್ನು ಪಡೆದಿರುವರು. ಅವರ ಮುಖದಲ್ಲಿ ಹುತವಾದ ಅನ್ನವನ್ನು ನಾನು ಅಗ್ನಿಹೋತ್ರದಲ್ಲಿ ಹಾಕಿದ ಅನ್ನಕ್ಕಿಂತಲೂ ಹೆಚ್ಚಾದ ಪ್ರೀತಿಯಿಂದ ಸ್ವೀಕರಿಸು ವೆನು. ನನ್ನನ್ನು ಪ್ರತಿಪಾದಿಸುವ ವೇದಗಳು ಮೂರ್ತೀ ಭವಿಸಿದಂತಿರುವ ವಿಪ್ರರಷ್ಟು ಪರಮ ಪವಿತ್ರವಾದ ಪ್ರಾಣಿಯು ಮತ್ತೊಂದಿಲ್ಲ. ಅವರಲ್ಲಿ ಶಮದಮ ಮನಃಪ್ರಸನ್ನತೆ, ಅನುಗ್ರಹ ತಪಸ್ಸು ತಿತಿಕ್ಷಾ ಜ್ಞಾನ ಮೊದಲಾದ ಗುಣಗಳು ಸ್ಥಿರವಾಗಿ ನೆಲಿಸಿವೆ. ಅವರಿಗೆ ಸ್ವರ್ಗಾ ಪವರ್ಗಾಧಪನು, ಲಕ್ಷ್ಮೀಪತಿಯು ಆದ ನನಗಿಂತ ಉತ್ತಮವಾದ ವಸ್ತುವಿರುವುದಿಲ್ಲ. ಇತರ ಪದಾರ್ಥಗಳಿಂದ ಸ್ವರ್ಗಾದಿಗಳಿಂದ ಅವರು ಆಕರ್ಷಿತರಾಗುವುದಿಲ್ಲ; ನಿರ್ಧನಿಗಳಾದರೂ ಅವರು ಭಕ್ತಿಭರಿತರಾಗುವರು. ಚರಾಚರ ಭೂತಗಳೆಲ್ಲರೂ ನನ್ನ ಸನ್ನಿಧಾನಪಾತ್ರರೇ! ಇದು ನಿಶ್ಚಯವು. ಆದರೆ ಬ್ರಾಹ್ಮಣನು ಬ್ರಹ್ಮಜ್ಞಾನಿಯಾಗಿದ್ದರೆ ನನ್ನ ವಿಶೇಷ ಸನ್ನಿಧಾನ ಪಾತ್ರ ನೆನಿಸುವನು. ಭೂತಗಳಲ್ಲಿ ನಾನಿರುವೆನಾದರೆ ನಾನೇ ಭೂತಗಳಲ್ಲ. ನಾನು ಸಕಲ ಜೀವ ಜಡಭಿನ್ನವೆಂದು ತಿಳಿದು ತಿಳಿಸುವುದೇ ನನ್ನ ಪೂಜೆಯು. ಇಂತು ಭೇದವನ್ನು ನನ್ನ ಪೂಜೆ ಎಂದು ಮನದಿಂದ, ವಚನದಿಂದ, ಕರಣದಿಂದ ತಿಳಿದು ಪಂಚಭೇದ ಪ್ರತಿಪಾದನೆಯನ್ನು ಮಾಡುವುದರಿಂದ ಅಪರೋಕ್ಷಜ್ಞಾನವು ಸಿದ್ಧಿಸುವುದು. ಇಂತಹ ನನ್ನ ಪೂರ್ಣಾನುಗ್ರಹ ಕಾರಣವಾದ ಪೂಜನವಿಲ್ಲದಿರೆ ಯಾವ ಮನುಜನಿಗೂ ಅಜ್ಞಾನಪ್ರಭವ ಸಂಸಾರಪಾಶದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಾರದು.

ಈ ರೀತಿಯಾಗಿ ಋಷಭನಾಮಕ ಶ್ರೀಹರಿಯು ಸ್ವಯಂಬುದ್ಧಿಶಾಲಿಗಳು, ಮಹಜ್ಞನ ಶಿಕ್ಷಿತರು ಆದ ತನ್ನ ಮಕ್ಕಳನ್ನುದ್ದೇಶಿಸಿ ಉಪದೇಶಿಸುತ್ತಾ ಲೋಕವನ್ನೂ ಶಾಸಿಸಿದನು. ಪರಮ ಸುಹೃದನು ಮಹಾನುಭಾವನು ಆದ ಋಷಭನು, ಉಪಶಮಶೀಲರು, ಕರ್ಮಂದಿಗಳು, ಮಹಾಮುನಿಗಳು ಆದ ಸುಜನರಿಗೆ ಪಾರಮಹಂಸ್ಯ ದರ್ಮವನ್ನುಪದೇಶಿಸುವ ಉದ್ದೇಶ್ಯದಿಂದ ಮಹಾಭಾಗವತನು, ತನ್ನ ಜ್ಯೇಷ್ಠಪುತ್ರನು ಆದ ಭರತನಿಗೆ ಪಟ್ಟಗಟ್ಟಿ ರಾಜ್ಯವನ್ನೊಪ್ಪಿಸಿದನು. ಸಕಲವನ್ನು ಗೃಹದಲ್ಲೇ ಬಿಟ್ಟು ಶರೀರವನ್ನು ಮಾತ್ರ ತೆಗೆದುಕೊಂಡು ಉನ್ಮತ್ತನಂತೆ ದಿಗಂಬರ ನಾಗಿ, ಮುಕ್ತಕೇಶನಾಗಿ ಅಹವನ್ನೀಯಾಗ್ನಿಯನ್ನು ತನ್ನಲ್ಲೇ ಆರೋಪಿಸಿ ಬ್ರಹ್ಮಾವರ್ತದಲ್ಲಿ ಅವಧೂತನಾಗಿ ಚರಿಸಿದನು. ಜಡನಂತೆ ಮೂಕನಂತೆ ಅಂಧನಂತೆ ಕಿವುಡನಂತೆ ಅವಧೂತ ವೇಷದಿಂದ ತಿರುಗುತ್ತಾ ಜನರು ಮಾತಾಡಿಸಿದರೂ ಮೌನದಿಂದ ಸುಮ್ಮನಿರುತ್ತಿದ್ದನು. ಪಿಶಾಚಬಡಿದವನಂತೆ ತಿರುಗುತ್ತಾ ಪುರಗ್ರಾಮ ದುರ್ಗಾಕರ ಖೇಟ ಖರ್ವಟ ಶಿಬಿರ ವಜ್ರಘೋಷ

ಕಳೆದುಕೊಂಡು, ಜೀವನು ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು, ತತ್ಪ್ರಸಾದದಿಂದ ಮುಕ್ತನಾಗುತ್ತಾನೆ.

ಹರಿಗುರುಭಕ್ತಿ, ಶುಶ್ರೂಷೆ, ತೃಷ್ಣಾಪರಿತ್ಯಾಗ, ದ್ವಂದ್ವಸಹನೆ, ಸರ್ವಶರೀರಗತ ವಿವಿಧ ವ್ಯಸನದರ್ಶನ, ವೇದಾಂತ ವಾಕ್ಯವಿಚಾರ, ತಪಸ್ಸು, ನಿಷಿದ್ಧ ಕರ್ಮಪರಿತ್ಯಾಗ, ಹರಿಪೂಜೆ, ಹರಿಕಥಾಶ್ರವಣ, ಹರಿಭಕ್ತಸಂಗ, ಹರಿಗುಣಕೀರ್ತನೆ, ಭೂತವೈರರಾಹಿತ್ಯ, ಯಥಾಯೋಗ್ಯವಾದ ಸೌಮ್ಯವರ್ತನೆ, ವೈರಾಗ್ಯ, ದೇಹ ಗೃಹಾದಿಗಳಲ್ಲಿ ಅಹಂಕಾರವರ್ಜನ, ನಾಡೀ ಶೋಧನಾದಿ ಪ್ರಾಣಾಯಾಮ, ಇಂದ್ರಿಯಜಯ, ಪರಿವಿಸ್ಮೃತಿರಾಹಿತ್ಯ, ಬ್ರಹ್ಮಚರ್ಯ, ಪ್ರಮಾದರಹಿತ ಕರ್ತವ್ಯಕರಣ, ಮೌನ, ದುಃಶಾಸ್ತ್ರವರ್ಜನ, ಸರ್ವಸತ್ತಾ ಪ್ರದಹರಿಮಹಿಮಾಜ್ಞಾನ, ವಿಶೇಷ ಜ್ಞಾನ, ಭಗವದ್ಧ್ಯಾನ, ಜಿಹ್ವೋಪಸ್ಥಜಯ, ವಿಷ್ಣು ದೀಕ್ಷೆ, ಅನಶನಾದಿ ಸಹನೆ ಎಂಬ ಈ ಗುಣಗಳನ್ನು ಸಂಪಾದಿಸಿ, ಕರ್ಮಜವಾದ ಶರೀರ ಮಿಥುನೀಭಾವರೂಪ ಅಜ್ಞಾನಬಂಧವನ್ನು ಕಡಿದು, ಲಿಂಗಶರೀರದಿಂದ ಜೀವನು ಮುಕ್ತನಾಗುವನು.

ನಾನು ಹೇಳಿದ ಸಾಧನಗಳಿಂದ ಅಹಂಕಾರರೂಪ ಬಂಧಗಳನ್ನು ಕಡಿದು, ಯೋಗವನ್ನು ಚೆನ್ನಾಗಿ ಪುನಃ ಅಭ್ಯಸಿಸಲು ನನ್ನ ಅನುಗ್ರಹವನ್ನು ಪೊಂದುವನು ತಂದೆಯಾದವನು ಮಗನಿಗೂ, ಗುರುವಾದವನು ಶಿಷ್ಯನಿಗೂ ಈ ಗುಣಗಳನ್ನು ಉಪದೇಶಿಸಲು ನನ್ನ ಲೋಕವನ್ನು ಸೇರುವನು. ಜ್ಞಾನಶೀಲನು ಪಾಪರಹಿತವಾದ ನರನು ನನ್ನ ಅನುಗ್ರಹವಾಗಬೇಕಾದರೆ ನಾನು ಹೇಳಿದ ನಿವೃತ್ತಿ ಕರ್ಮವನ್ನೇ ಬೋಧಿಸಬೇಕು ಹೊರತು ಮೊದಲೇ ಕರ್ಮರತವಾದ ಸಾಮಾನ್ಯರಿಗೆ ಮತ್ತೆ ಪ್ರವೃತ್ತಿಕರ್ಮವನ್ನು ಪೇಳಿದರದರಿಂದವರಿಗೆ ಹಾನಿಯೇ ಆಗಲಿ ಪ್ರಯೋಜನವಿಲ್ಲ. ಕುರುಡನು ನಾಯಕನಾಗಿ ಮತ್ತೊಬ್ಬನನ್ನು ಹಾಳುಭಾವಿಯಲ್ಲಿ ಕೆಡವಿ ತಾನೂ ಬಿದ್ದಂತೆ. ಲೋಕದ ಜನರು ನೈಜವಾಗಿ ಕರ್ಮಫಲವನ್ನು ಬೇಡಿ, ಅಂಧರಂತೆ ತಮ್ಮ ಹಿತವನ್ನರಿಯದಿರಲು ಅವರಿಗೆ ಮತ್ತೆ ಪ್ರವೃತ್ತಿ ಕರ್ಮೋಪದೇಶವನ್ನು ಮಾಡಿದವನು ತಾನು ಅಂಧನೇ ಅವರೂ ಅಂಧರೇ ಎನಿಸಿ ನಷ್ಟನಾಗವನು. ಕಾಮಿತ ಪದಾರ್ಥಗಳಿಂದ ಆಯಾಸ, ಕಲಹ, ಫಲವ್ಯತ್ಯಾಸ, ಅನಂತದುಃಖಗಳೇ ಹೊರತು ನಿಜವಾದ ಸುಖವಿಲ್ಲ. ಇಷ್ಟು ವಿಷಯವನ್ನು ತಿಳಿದೂ ಯಾವ ವಿವೇಕಿಯು, ಅವಿದ್ಯಾಲೀನರಾಗಿ ಕುಮಾರ್ಗದಲ್ಲಿ ನಡೆಯುತ್ತಾ ನರಕದ ದಾರಿಯನ್ನು ಮುಟ್ಟುವ ಜೀವರನ್ನು ಮತ್ತೆ ಪ್ರವೃತ್ತಿಧರ್ಮದಲ್ಲಿ ತೊಡಗಿಸುವಷ್ಟು ಕರುಣಾರಹಿತನಾಗುವನು. ಅಂತು ಪ್ರವೃತ್ತಿ ಧರ್ಮವನ್ನು ಉಪದೇಶಿಸಿದ ಗುರು ಗುರುವಲ್ಲ; ತಂದೆ ತಂದೆಯಲ್ಲ; ತಾಯಿ ತಾಯಿಯಲ್ಲ; ಅಜ್ಞಾನ ಮೂಲ ಸಂಸಾರದಿಂದ ಬಿಡಿಸುವ ಶ್ರೀಹರಿ ಭಕ್ತಸಾಧಕ, ನಿವೃತ್ತಿಧರ್ಮವನ್ನುಪದೇಶಿಸಿದ ದೇವತೆ ದೇವತೆಯಲ್ಲ. ರಾಜನು ರಾಜನಲ್ಲ. ಈ ನನ್ನ ಶರೀರವು ಜ್ಞಾನಾನಂದಾತ್ಮಕವು. ಭೌತಿಕ ವಿಕಾರರಹಿತವು ನನ್ನ ಜ್ಞಾನಬಲಾತ್ಮಕ ಹೃದಯದಲ್ಲಿ ಧರ್ಮವು ನೆಲೆಮಾಡಿದೆ. ಆದ್ದರಿಂದ ಜ್ಞಾನಪೂರ್ವಕವಾಗಿ ಅನುಷ್ಠಿತವಾದುದೇ ಧರ್ಮವು. ನನ್ನ ಬೆನ್ನಿನಿಂದ ಪುಟ್ಟಿದ ಅಧರ್ಮವನ್ನು ಅಜ್ಞಾನಮಯವೆಂದು ದೂರಮಾಡಿರುವೆನು. ಜ್ಞಾನರೂಪನು ಧರ್ಮಾದಿ ಸ್ಥಿತಿಹೇತುಭೂತ ನಾದ್ದರಿಂದ ನನ್ನನ್ನು ಜ್ಞಾನಿಗಳು ಋಷಭನೆನ್ನುವರು.

ಪುತ್ರರೇ! ನೀವೆನ್ನ ಹೃದಯದಿಂದ ಪುಟ್ಟಿರುವಿರಿ. ನೀವೆಲ್ಲರೂ ಸರ್ವಾಧಾರನು ಸರ್ವೋತ್ತಮನಾದ ಶ್ರೀಹರಿಯನ್ನು ನಿಷ್ಕಪಟಬುದ್ಧಿಯಿಂದ ಭಜಿಸಿ, ಹಾಗೂ ನಿಮ್ಮಣ್ಣನಾದ ಭರತ

ನಿಗನುವ್ರತ ರಾಗಿ ಪ್ರಜಾಭರಣ ಪುಣ್ಯಭಾಜನರಾಗಿ ನನ್ನ ಅನುಗ್ರಹವನ್ನು ಪೊಂದುವಿರಿ. ಪ್ರಜಾರಂಜನವೇ ನನ್ನ ನಿಜವಾದ ಶುಶ್ರೂಷೆಯು.

ಸಕಲ ಭೂತಗಳಲ್ಲಿ ವೃಕ್ಷ ಸರೀಸೃಪಗಳು ಉತ್ತಮಗಳು. ಅವುಗಳಿಗೂ ಜ್ಞಾನಲವಸಹಿತ ಪಶ್ವಾದಿಗಳು ಶ್ರೇಷ್ಠವೆನಿಸುವುವು. ಮನುಜರು ಅವರಿಗಿಂತಲೂ ಶ್ರೇಷ್ಠರು. ಗಂಧರ್ವಸಿದ್ಧ ವಿಬುಧರು ಇನ್ನೂ ಶ್ರೇಷ್ಠರು. ಬ್ರಹ್ಮಸುತರಾದ ಸನಕಾದಿಗಳು ದಕ್ಷಾದಿ ಪ್ರಜೇಶರು ಅವರಲ್ಲಿ ಪ್ರಧಾನರು. ಅವರಿಗೂ ಇಂದ್ರನು ಶ್ರೇಷ್ಠನು. ಇಂದ್ರನಿಗೆ ಪ್ರಭುವು ರುದ್ರನು. ರುದ್ರನಿಗೆ ಬ್ರಹ್ಮನುನಿಯಾಮಕನು. ಅವನಿಗೆ ನಾನೇ ಪ್ರಭುವು. ನನಗೆ ಯಾರೂ ಪ್ರಭುಗಳಿಲ್ಲ. ದ್ವಿಜರು ದೇವತೆಗಳು ನನ್ನನ್ನೇ ಸರ್ವೋತ್ತಮನೆಂದು ತಿಳಿದು ಭಜಿಸುವರು.

ಭೂತಲದಿ ನನ್ನ ಸನ್ನಿಧಾನಪಾತ್ರರೆಂದರೆ ಬ್ರಾಹ್ಮಣರೇ. ಅವರು ಜ್ಞಾನ ವೈರಾಗ್ಯ ಭಕ್ತಿಯುಕ್ತರಾಗಿರುವುದರಿಂದ ನನ್ನ ಪ್ರೀತಿಯನ್ನು ಪಡೆದಿರುವರು. ಅವರ ಮುಖದಲ್ಲಿ ಹುತವಾದ ಅನ್ನವನ್ನು ನಾನು ಅಗ್ನಿಹೋತ್ರದಲ್ಲಿ ಹಾಕಿದ ಅನ್ನಕ್ಕಿಂತಲೂ ಹೆಚ್ಚಾದ ಪ್ರೀತಿಯಿಂದ ಸ್ವೀಕರಿಸುವೆನು. ನನ್ನನ್ನು ಪ್ರತಿಪಾದಿಸುವ ವೇದಗಳು ಮೂರ್ತೀಭವಿಸಿದಂತಿರುವ ವಿಪ್ರರಷ್ಟು ಪರಮ ಪವಿತ್ರವಾದ ಪ್ರಾಣಿಯು ಮತ್ತೊಂದಿಲ್ಲ. ಅವರಲ್ಲಿ ಶಮದಮ ಮನಃಪ್ರಸನ್ನತೆ, ಅನುಗ್ರಹ ತಪಸ್ಸು ತಿತಿಕ್ಷಾ ಜ್ಞಾನ ಮೊದಲಾದ ಗುಣಗಳು ಸ್ಥಿರವಾಗಿ ನೆಲಿಸಿವೆ. ಅವರಿಗೆ ಸ್ವರ್ಗಾಪವರ್ಗಾಧಪನು, ಲಕ್ಷ್ಮೀಪತಿಯು ಆದ ನನಗಿಂತ ಉತ್ತಮವಾದ ವಸ್ತುವಿರುವುದಿಲ್ಲ. ಇತರ ಪದಾರ್ಥಗಳಿಂದ ಸ್ವರ್ಗಾದಿಗಳಿಂದ ಅವರು ಆಕರ್ಷಿತರಾಗುವುದಿಲ್ಲ; ನಿರ್ಧನಿಗಳಾದರೂ ಅವರು ಭಕ್ತಿಭರಿತರಾಗುವರು. ಚರಾಚರ ಭೂತಗಳೆಲ್ಲರೂ ನನ್ನ ಸನ್ನಿಧಾನಪಾತ್ರರೇ! ಇದು ನಿಶ್ಚಯವು. ಆದರೆ ಬ್ರಾಹ್ಮಣನು ಬ್ರಹ್ಮಜ್ಞಾನಿಯಾಗಿದ್ದರೆ ನನ್ನ ವಿಶೇಷ ಸನ್ನಿಧಾನ ಪಾತ್ರನೆನಿಸುವನು. ಭೂತಗಳಲ್ಲಿ ನಾನಿರುವೆನಾದರೆ ನಾನೇ ಭೂತಗಳಲ್ಲ. ನಾನು ಸಕಲ ಜೀವ ಜಡಭಿನ್ನವೆಂದು ತಿಳಿದು ತಿಳಿಸುವುದೇ ನನ್ನ ಪೂಜೆಯು. ಇಂತು ಭೇದವನ್ನು ನನ್ನ ಪೂಜೆ ಎಂದು ಮನದಿಂದ, ವಚನದಿಂದ, ಕರಣದಿಂದ ತಿಳಿದು ಪಂಚಭೇದ ಪ್ರತಿಪಾದನೆಯನ್ನು ಮಾಡುವುದರಿಂದ ಅಪರೋಕ್ಷಜ್ಞಾನವು ಸಿದ್ಧಿಸುವುದು. ಇಂತಹ ನನ್ನ ಪೂರ್ಣಾನುಗ್ರಹ ಕಾರಣವಾದ ಪೂಜನವಿಲ್ಲದಿರೆ ಯಾವ ಮನುಜನಿಗೂ ಅಜ್ಞಾನಪ್ರಭವ ಸಂಸಾರಪಾಶದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಾರದು.

ಈ ರೀತಿಯಾಗಿ ಋಷಭನಾಮಕ ಶ್ರೀಹರಿಯು ಸ್ವಯಂಬುದ್ಧಿಶಾಲಿಗಳು, ಮಹಜ್ಜನ ಶಿಕ್ಷಿತರು ಆದ ತನ್ನ ಮಕ್ಕಳನ್ನುದ್ದೇಶಿಸಿ ಉಪದೇಶಿಸುತ್ತಾ ಲೋಕವನ್ನೂ ಶಾಸಿಸಿದನು. ಪರಮ ಸುಹೃದನು ಮಹಾನುಭಾವನು ಆದ ಋಷಭನು, ಉಪಶಮಶೀಲರು, ಕರ್ಮಂದಿಗಳು, ಮಹಾಮುನಿಗಳು ಆದ ಸುಜನರಿಗೆ ಪಾರಮಹಂಸ್ಯ ದರ್ಮವನ್ನುಪದೇಶಿಸುವ ಉದ್ದೇಶ್ಯದಿಂದ ಮಹಾಭಾಗವತನು, ತನ್ನ ಜ್ಯೇಷ್ಠಪುತ್ರನು ಆದ ಭರತನಿಗೆ ಪಟ್ಟಗಟ್ಟಿ ರಾಜ್ಯವನ್ನೊಪ್ಪಿಸಿದನು. ಸಕಲವನ್ನು ಗೃಹದಲ್ಲೇ ಬಿಟ್ಟು ಶರೀರವನ್ನು ಮಾತ್ರ ತೆಗೆದುಕೊಂಡು ಉನ್ಮತ್ತನಂತೆ ದಿಗಂಬರನಾಗಿ, ಮುಕ್ತಕೇಶನಾಗಿ ಆಹವನ್ನೀಯಾಗ್ನಿಯನ್ನು ತನ್ನಲ್ಲೇ ಆರೋಪಿಸಿ ಬ್ರಹ್ಮಾವರ್ತದಲ್ಲಿ ಅವಧೂತನಾಗಿ ಚರಿಸಿದನು. ಜಡನಂತೆ ಮೂಕನಂತೆ ಅಂಧನಂತೆ ಕಿವುಡನಂತೆ ಅವಧೂತ ವೇಷದಿಂದ ತಿರುಗುತ್ತಾ ಜನರು ಮಾತಾಡಿಸಿದರೂ ಮೌನದಿಂದ ಸುಮ್ಮನಿರುತ್ತಿದ್ದನು. ಪಿಶಾಚಬಡಿದವನಂತೆ ತಿರುಗುತ್ತಾ ಪುರಗ್ರಾಮ ದುರ್ಗಾಕರ ಖೇಟ ಖರ್ಪಟ ಶಿಬಿರ ವಜ್ರಘೋಷ

ಸಾರ್ಥಗಿರಿ ವನಾಶ್ರಮಗಳಲ್ಲಿರುವ ನರಪಶುಗಳಿಂದ ಅವಮಾನಿತನಾದರೂ ಮಕ್ಷಿಕಾವ್ರಾತವನ್ನು ಲಕ್ಷಿಸದಿರುವ ಮದಗಜದಂತೆ ಶಾಂತನಾಗಿದ್ದನು. ತರ್ಜನ, ತಾಡನ, ಅಮೇಧ್ಯಮೂತ್ರ ಪ್ರಕ್ಷೇಪಣ, ದುರ್ವಚನಗಳಿಂದ ಚಲಿಸದೆ ಕಲ್ಲುಮಣ್ಣು ಸೆಗಣಿಗಳನ್ನು ತೂರಿದರೆ ಲೆಕ್ಕಿಸದೆ ಉಗುಳಿ ಬೈದರೆ ಗಣಿಸದೆ 'ಅಮಂಗಲ ನರಶರೀರವೆಷ್ಟು ಅಸ್ವತಂತ್ರವಾಗಿದೆ ಹೇಯವಾಗಿದೆ' ಎಂಬ ಜ್ಞಾನವನ್ನು ನರರಿಗೆ ತೋರಿಸಿ ಉದ್ಧರಿಸಿದನು. ತಾನು ಜ್ಞಾನಾನಂದಾನು ಭವ ದಿವ್ಯ ದೇಹನಾದ್ದರಿಂದ ನಾನು ಬ್ರಹ್ಮನೇ ಆಗಿರುವನೆಂಬುದನ್ನರಿತು ತನ್ನ ಮಹಾಮಹಿಮೆಯಲ್ಲಿ ತಾನೇ ತಾನಾಗಿ ಅಪರಿಚ್ಛಿನ್ನ ಕಲ್ಯಾಣಗುಣನಾದ ಋಷಭನು ಏಕಾಕಿಯಾಗಿ ಭೂಸಂಚಾರವನ್ನು ಮಾಡಿದನು. ಅತಿ ಸುಕುಮಾರವಾದ ಕರಚರಣಗಳು ವಿಶಾಲವಾದ ವಕ್ಷಸ್ಥಲ, ವಿಪುಲಭುಜ ಶಂಖಸಮ ಕಂಠ ಪದ್ಮಸುಂದರವದನನು, ಸಕಲಾವಯವ ಸೌಷ್ಠವೋಪೇತನು, ಮಂದಹಾ ಸಪ್ರಕಾಶಿತಮುಖನು ನವನಲಿನದಲಾಯತ ನಯನನು, ಶೀತಲ ಕಟಾಕ್ಷನು ಚಂಪಕನಾಸನು ಸಮಾನ ಕರ್ಣಸುಭಗನು ಆದ ಋಷಭನನ್ನು ನೋಡುವ ಪುರವನಿತೆಯರು ಮನ್ಮಥ ಮಥಿತಹೃದಯರಾಗುತ್ತಿದ್ದರು. ಧರಾಪರಾಗವು ಮುಚ್ಚಿದ ಕುಟಿಲಜಟಿಲಾಲಕ ವೃಂದವು ಮುಖದ ಮೇಲೆ ಮುತ್ತಿರಲು ಭೂರಿಕೇಶಭಾರನು ಮಲಿನ ಶರೀರವು ಆಗಿ ಗ್ರಹಗ್ರಸ್ತನಂತೆ ಕಾಣುತ್ತಿದ್ದನು.

ಆ ಭಗವಂತನು ಈ ಲೋಕವು ಧ್ಯಾನಯೋಗಪ್ರತಿಕೂಲವಾದರೂ ತನಗೆ ಪ್ರತಿಕೂಲಾ ಪ್ರತಿಕೂಲಾಜಗತ್ತಿನಿಂದೇನಾಗಬೇಕೆಂದು ಭಕ್ಷಣ ಮೇಹನ ಪ್ರಕ್ಷಾಲನಾದಿಗಳು ಯೋಗಶಾಸ್ತ್ರ ನಿಷಿದ್ಧವೆಂದು ತೋರಿಸಲು ಅಜಗರ ವ್ರತವನ್ನವಲಂಬಿಸಿದನು. ಮಲಗಿ ಉಣ್ಣುತ್ತಾ ಕುಡಿ ಯುತ್ತಾ ತಿನ್ನುತ್ತಿದ್ದನು. ಮಲಗೇ ಮಲವಿಸರ್ಜನಾದಿಗಳನ್ನು ಮಾಡಿ ನಗುತ್ತಿದ್ದನು. ಆ ವನಜ ನಾಭನ ಪುರೀಷದಿಗ್ಧ ದೇಹವನ್ನು ಸೋಂಕಿ ಸೂಸಿ, ಬೀಸುತ ಮಾರುತನು ಗಂಧವಹನಾಮ ವನ್ನು ಸಾರ್ಥಕಗೊಳಿಸುತ್ತಾ ಸುರಭಿಳ ಮಧುರನಾಗಿ ಸುತ್ತು ಹತ್ತು ಯೋಜನಗಳ ದೇಶವನ್ನು ಆಮೋದಭರಿತವನ್ನು ಮಾಡುತ್ತಿದ್ದನು. ಇಂತು ಮೃಗದಂತೆ ಗೋವಿನಂತೆ ಕಾಗೆಯಂತೆ ತಿರುಗಿ ತೊಯಿದು ಮೆದ್ದು ಕಡಿದು ವಿಸರ್ಜಿಸಿ, ಕಾಲವನ್ನು ಕಳೆದನು.

ಮೋಕ್ಷಾದಿ ಸಕಲ ಪುರುಷಾರ್ಥಪ್ರದನು, ಮಹಾನಂದಾನುಭವನಿತ್ಯನು, ಸರ್ವಭೂತಾಂತ ರ್ಯಾಮಿಯು ಆದ ವಾಸುದೇವನೇ ಋಷಭನಾಗಿ ಬಂದನೆಂದು ಚೆನ್ನಾಗಿ ತಿಳಿದು, ಅನೇಕ ಯೋಗಚರ್ಯೆಗಳನ್ನು ನಡೆಸಿದನು. ಸರ್ವಪುರುಷಾರ್ಥಪೂರ್ಣನು, ವಿಶ್ವೈಶ್ವರ್ಯಪತಿಯು ಆದ ಆ ಸ್ವಾಮಿಯು ಸ್ವೇಚ್ಛೆಯಿಂದ ಬಂದ ಆಕಾಶಗಮನ, ದೂರ ಶ್ರವಣ, ದೂರದರ್ಶನ, ಮನೋಜವ, ಪರಕಾಯಪ್ರವೇಶಾದಿ ಸಿದ್ಧಿಗಳನ್ನು ತಿರಸ್ಕರಿಸಿ ಪೂರ್ಣನಾಗಿದ್ದನು.

## ೬. ಋಷಭ ಚರಿತೆ — ನಿರ್ಯಾಣ

ರಾಜನು ಕೇಳಿದನು–

ಭಗವನ್! ಉಪಾಸನೆಯ ಬಲದಿಂದ ಜ್ಞಾನವನ್ನು ಪೊಂದಿ ರಾಗದ್ವೇಷಾದಿ ಕೃತ ಕರ್ಮ ಬೀಜಗಳನ್ನು ಸುಟ್ಟುಬಿಟ್ಟಿರುವ ಯೋಗೇಶ್ವರನಾದ ಭಗವದ್ಭಕ್ತರಿಗೆ ಅಣಿಮಾದ್ಯೈಶ್ವರ್ಯಗಳು ಯದೃಚ್ಛೆಯಿಂದ ಬಂದರೆ ಸೇವನೀಯವಾಗುವುದಿಲ್ಲವೇ? ಅವೆಂತು ಮನೋವ್ಯಗ್ರತಾ ಕಾರಣ ವಾಗುವುವು?

ಶ್ರೀಶುಕನು ಪೇಳಿದನು–

ರಾಜನ್! ನೀನು ಪೇಳಿದ ವಿಷಯವು ನಿಜ. ಆದರೂ ಕೆಲವರು ಮಹಾತ್ಮರು ಮನಸ್ಸು ಕೆಟ್ಟದು – ಹೊಸ ಗಡಿಗೆಯಲ್ಲಿ ನೀರಿಟ್ಟರೆ ಕುಡಿದು ಮಾಯಾವಾದಂತೆ – ಜ್ಞಾನವನ್ನು ನಾಶ ಪಡಿಸುವುದು – ಅದನ್ನು ನಂಬಲಾಗದೆಂದು ಜಾಗರೂಕರಾಗಿ ಅಣಿಮಾದಿಗಳು ಬಂದರೂ ಸ್ವೀಕರಿಸದೆ, ಶ್ರೀಹರಿಯನ್ನು ಭಜಿಸುವರು. 'ಸೌಭರ್ಯಾದಿಗಳ ವಿವೇಕ, ಈಶ್ವರ ವಿಷಯಕ ಜ್ಞಾನ ತಪಸ್ಸು ಅವರು ಮನಸ್ಸಿನಲ್ಲಿ ಮಾಡಬಾರದ ವಿಶ್ವಾಸವನ್ನು ಮಾಡಿದ್ದರಿಂದ ವ್ಯಯವಾಯಿ ತೆಂದು ತಿಳಿದು ಮನಸ್ಸಿನ ವಿಷಯದಲ್ಲಿ ಜಾಗರೂಕರಾಗಿರಬೇಕು'- ಎಂಬ ಶಾಸ್ತ್ರಾದೇಶವೂ ಇದೆ. ಮನಸ್ಸು ನಿತ್ಯವೂ ಕಾಮಕ್ಕೆ ಅವಕಾಶವನ್ನು ಕೊಟ್ಟಿರುತ್ತದೆ. ಅದರ ಹಿಂದೆ ಕ್ರೋಧಾದಿಗಳು ಪ್ರವೇಶಿಸುವವು. ಪುಂಶ್ಚಲಿಯು ಪತಿವಿರೋಧಿಗಳಾದ ಉಪಪತಿಗಳಿಗೆ ಅವಕಾಶವಿತ್ತಂತೆ ಮನಸ್ಸು ಜಾಗರೂಕನಾಗದವನನ್ನು ಕಾಮಾದಿವಶವನ್ನಾಗಿಸಿ, ಆಮೇಲೆ ಕ್ರೋಧ, ಲೋಭ, ಶೋಕ, ಮೋಹ, ಭಯ, ಕರ್ಮಬಂಧಗಳನ್ನೊಡ್ಡಿ ಕೆಡಿಸುವುದಾದ್ದರಿಂದ ವಿವೇಕಿಯು ಮನೋವಶನಾಗ ಬಾರದು.

ಇಂಥ ಸಮಸ್ತ ಲೋಕಪ್ರಶಸ್ತನಾದ ಋಷಭನು ಲೋಕವಿಲಕ್ಷಣ ಭಗವತ್ಸ್ವರೂಪ ನಾದರೂ, ಜಡನಂತೆ ಅವಧೂತವೇಷಭಾಷಾಚರಿತಗಳಿಂದ ಅದನ್ನು ತೋರಗೊಡದೆ, ಹೀಗೇ ಇದ್ದು ಯೋಗಿಗಳು ಮೋಕ್ಷಸಾಧನವನ್ನು ಮಾಡಿಕೊಳ್ಳಬೇಕೆಂದು ನಡೆದು ತೋರಿಸಿದನು. ಕೊನೆಗೆ ಭೂಲೋಕವೆನ್ನುವ ತನ್ನ ಪ್ರತಿಮಾರೂಪ ಶರೀರವನ್ನು ಬಿಡಲು ನಿಶ್ಚಯಿಸಿ ಮೂಲ ನಾರಾಯಣ ರೂಪದಿಂದ ಭಿನ್ನನಾಗದ ತನಗೆ ತನ್ನಲ್ಲಿ ವ್ಯವಧಾನವಿಲ್ಲವೆಂದು ಸದಾ ತಿಳಿದು ನಿತ್ಯಮುಕ್ತನಾದರೂ ವಿಷಯಾನುವೃತ್ತಿಯಂ ತೊರೆದು ನಿಸ್ಪೃಹನಾದನು.

ವರ್ಣಾಶ್ರಮಾದಿ ಚಿನ್ಹಗಳನ್ನಾರಿಗೂ ತೋರಗೊಡದಿದ್ದ ಭಗವಂತನು ತನ್ನ ಋಷಭ ಲೀಲೋತ್ಕರ್ಷವನ್ನು ಉಪಸಂಹರಿಸಲಿಚ್ಛಿಸಿದನು. ಅವನ ಜ್ಞಾನಾಪ್ರಕಾಶವೀಜಗದಿ ತಂಬಿ ಬೆಳಗಿತು. ಒಂದು ಸಲ ಕಾಂಕಟ ಕರ್ಣಾಟಕದಿಂದ ದಕ್ಷಿಣ ಕರ್ಣಾಟಕಕ್ಕೆ ಸ್ವೇಚ್ಛೆಯಿಂದ ಬಂದು ನಾಗಪುರ ಸಮೀಪದಲ್ಲಿಯ ಕುಟಚಾಚಲವನ್ನು ಸೇರಿದ ಋಷಭನು ಸಮೀಪವನದಲ್ಲಿ ಬಾಯಲ್ಲಿ ಕಲ್ಲನ್ನಿಟ್ಟು ತಿರುಗುತ್ತಾ ಕೂದಲನ್ನು ಬಿರಿಹಾಕಿ ದಿಗಂಬರನಾಗಿ ತಿರುಗುತ್ತಿದ್ದನು. ಆಗ ವಾಯ ವೇಗದಿಂದ ಬಿದುರು ಪೊಳೆಯು ತಿಕ್ಕಾಡಿ, ಅಗ್ನಿಯು ಉದ್ಭವಿಸುವಂತೆ ಮಾಡಿ, ಅದರಿಂದ ಆ ಆನಂದಶರೀರನು ವನವನ್ನೆಲ್ಲ ಸುಟ್ಟು ತಾನು ಅಂತರ್ಧಾನನಾದನು. ಅವನೂ ಸುಟ್ಟು ಹೋದ ನೆಂದು ದುಷ್ಟರು ತಿಳಿದರು.

ಅಂತಹ ಪ್ರಭುವಿನ ನಡತೆಯನ್ನು ಕಂಡು ಆ ದೇಶದ ರಾಜನು ಅರ್ಹನೆಂಬುವನು ತಾನು ಹಾಗೆಯೇ ನಡೆಯಲು ನಿಶ್ಚಯಿಸಿದನು. 'ಕಲಿಯುಗದಲ್ಲಿಅಧರ್ಮವು ಹೆಚ್ಚಾಗಲು ಕಾರಣ ವಾಗಲಿ' ಎಂಬ ವಿಧಿವಿಲಾಸಮೋಹಿತನಾಗಿ, ಕ್ಷೇಮಕರನಾದ ಸ್ವಧರ್ಮ ಮಾರ್ಗವನ್ನು ಬಿಟ್ಟು, ಆ ಮಂದಭಾಗ್ಯನು 'ನಾನೇ ವಾಸುದೇವ'ನೆಂಬುವ ಪಾಖಂಡಮತವನ್ನು ಅನುಸರಿಸಿ ತನಗೆ ತೋರಿದ ಅಹಿಂಸಾದಿ ಧರ್ಮಾಭಾಸಗಳನ್ನು ಪ್ರಕಟಿಸಿದನು. ಇದನ್ನೇ ಮುಂದೆ ಕಲಿಯುಗದಲ್ಲಿ ನೀಚಜನರನುಸರಿಸಿ ಶ್ರೀಹರಿಮಾಯೆಯಿಂದ ಅಜ್ಞಾನ ಮಗ್ನರಾಗುವರು. ಸ್ವವೇದಪಥವಂ ದೂಷಿಸಿ ಶೌಚಾಚಾರಹೀನವಾಗುವರು. ದೇವ ಹೇಲನವನ್ನು ಮಾಡುವರು. ವೇದವಿರುದ್ಧ ದುಷ್ಟದೇವತೆಗಳನ್ನರ್ಚಿಸುವರು. ಮನಸ್ಸಿಗೆ ಬಂದಂತೆ ಕುತ್ಸಿತವ್ರತೋಪಾಸನೆಗಳನ್ನು ಮಾಡು

ವರು. ಸ್ನಾನಾಚಮನಶೌಚಗಳನ್ನು ಬಿಟ್ಟು, ಕೇಶ ವಿಕಾರಗಳನ್ನು ವಹಿಸಿ, ಅಧರ್ಮಪ್ರಾಯವಾದ ಕಲಿಮಹಿಮೆಯಿಂದ ಬುದ್ಧಿ ಕೆಟ್ಟು, ವೇದ, ವಿಪ್ರ, ಯಜ್ಞ, ನಾರಾಯಣ, ಹರಿಭಕ್ತರನ್ನು ಬೈಯುತ್ತಾ ಇರುವರು. ತತ್ಫಲವಾಗಿ ನೀಚರಾಗಿ, ಅಂಧರನ್ನು ನಡೆಸುವ ಅಂಧರಂತೆ ತಮ್ಮ ಪರಂಪರಾಪ್ರಾಪ್ತವಾದ ಉದರಂಭರಣವನ್ನು ಮಾಡಿ, ಕೊನೆಗೆ ಅಂಧಂತಮಸ್ಸಿನಲ್ಲಿ ಬೀಳುವರು.

ಪರೀಕ್ಷಿತನೇ! ಈ ಅವತಾರವು ರಜೋಗುಣೋಪದ್ರುತರಾದ ಸಾಧುಜನ ಶಿಕ್ಷಾರ್ಥವಾಗಿ, ಅವರು ಕೈವಲ್ಯವನ್ನು ಪಡೆಯುವ ಸಾಧನವನ್ನು ತೋರಿಸಲು ಧರಿಸಿದ್ದಾಗಿದೆ. ಋಷಭನ ಮಹಿಮೆಯನ್ನು ಪಾಡುವ ಶ್ಲೋಕವನ್ನು ಕೇಳು–

ಸಪ್ತ ಸಮುದ್ರಮುದ್ರಿತ ಭೂವಲಯದಲ್ಲಿ ಈ ಭಾರತವರ್ಷವೇ ಪುಣ್ಯಸಾಧನ ಭೂಮಿ ಎನಿಸಿ ಪ್ರಸಿದ್ಧವಾಗಿದೆ. ಅಲ್ಲಿರುವ ಜನರು ಮುರಾರಿಯ ಮಂಗಳಕರಗುಣ ಕರ್ಮಗಳನ್ನು ಪೊಗಳುತ್ತಾ ಪ್ರಕಾಶಪಡಿಸುತ್ತಿರುವರು. ಅಹೋ! ಪ್ರಿಯವ್ರತನ ವಂಶವೆಷ್ಟು ಶುದ್ಧವು! ಅವನ ವಂಶದಲ್ಲಿ ಮುಕ್ತಿಪ್ರದನಾದ ಪುರಾಣಪುರುಷನವತರಿಸಿ ಕರ್ಮಜಜ್ಞಾನಪ್ರಾಪ್ಯವಾದ ಮೋಕ್ಷಧರ್ಮವನ್ನು ನಿರೂಪಿಸಿ, ಸುಜನೋದ್ಧಾರವನ್ನು ಗೈದಿರುವನು. ಮನಸ್ಸಿನಿಂದಲಾದರೂ ಅವನಂತೆ ಮಹಿಮೆಯನ್ನು ಹೊಂದಲಾಗುವುದೇ? ಆ ಮಹಿಮಾದಿಗಳವರ ಸ್ವರೂಪ ಭೂತಗಳಲ್ಲವೇ? ಹರಿಯಿಂದ ನಿರಾಕೃತವಾದ ಯೋಗಸಿದ್ಧಿಗಳನ್ನು ಪೊಂದಲು ಋಷಭನನ್ನು ಉಪಾಸಿಸುವರು. ಅವನ ಪ್ರಸಾದದಿಂದ ಸಿದ್ಧಿಗಳನ್ನಲ್ಲದೇ ಮೋಕ್ಷವನ್ನು ಪೊಂದಿ ಸುಖಿಸುವರು.

ಸಕಲವೇದ ಬ್ರಾಹ್ಮಣ ಗೋ ಸುಜನರಿಗೆ ಪರಮಗುರುವಾಗಿ ಜ್ಞಾನೋಪದೇಶವನ್ನು ಮಾಡಿದ ಭಗವಂತನ ವಿಶುದ್ಧ ಚರಿತ್ರೆಯ ಸಮಸ್ತದುರಿತಾಪಹರವು, ಪರಮಮಂಗಲವು ಆಗಿದೆ. ಇದನ್ನು ಶ್ರದ್ಧೆಯಿಂದ ಕೇಳಲು ಪೇಳಲು ಋಷಭನಾಮಕ ವಾಸುದೇವನಲ್ಲಿ ಏಕಾಂತಭಕ್ತಿಯು ಪುಟ್ಟುವುದು. ಕವಿಗಳು ಈ ಚರಿತ – ಅಮರ – ನದಿಯಲ್ಲಿ ಸಂತತ ವಿವಿಧ ಸಂಸಾರತಾಪ ನಿವಾರಣೆಗಾಗಿ ಸ್ನಾನಮಾಡಿ ಶುದ್ಧವಾದ ಮನದಲ್ಲಿ ಭಕ್ತಿಯು ಪುಟ್ಟಿ ವರ್ಧಿಸಲು ಪರಮಹರ್ಷ ಭರಿತರಾಗಿ, ತಾನಾಗಿ ಬಂದ ಮೋಕ್ಷವನ್ನೂ ಗಣಿಸದೆ, ಪರಮಪುರುಷನ ಪರಿಚರ್ಯೆಯೇ ಸರ್ವ ಪುರುಷಾರ್ಥಸಿದ್ಧಿ ಎಂದು ಸಂತೃಪ್ತರಾಗಿರುವರು.

ರಾಜನ್! ದೇವಪ್ರಿಯನಾದ ಶ್ರೀಕೃಷ್ಣನು ನಿಮಗೆ ಗುರುವಾಗಿ, ಕುಲಸ್ವಾಮಿಯಾಗಿ ಕೊನೆಗೆ ದೂತನೂ ಆದನೆಂದರೆ, ಅಕಲ್ಮಷವಾದ ಭಕ್ತಿಯಿಂದಲ್ಲವೇ? ಇರಲಿ ಕೇಳು. ತನ್ನ ಭಜಿಸುವ ಜನರಿಗೆ ಶ್ರೀ ಮುಕುಂದನು ಸ್ವಯೋಗ್ಯ ಮುಕ್ತಿಯನ್ನು ಕೊಡವನಾದರೆ ಬ್ರಹ್ಮದೇವನಿಗೆ ಕೊಟ್ಟಂತೆ ಪೂರ್ಣ ಭಕ್ತಿಯನ್ನು ಯಾರಿಗೂ ಕೊಡದಿರುವನು. ನಿತ್ಯವೂ ಲಭಿಸುವ ಸ್ವರೂಪ ಭೂತಾನಂದದಿಂದ ಪೂರ್ಣವಾಗಿ ಏನನ್ನೂ ಅಪೇಕ್ಷಿಸದೆ ಕರುಣೆಯಿಂದ, ವಿಶುದ್ಧ ಕರ್ಮರತ ರಾಗಿ ಶ್ರೇಯಃಸಾಧನಗಳನ್ನು ಮರೆತ ಸುಜನರಿಗೆ ತನ್ನ ಅಭಯ ಲೋಕವನ್ನು ಕೊಡುವ ದಿವ್ಯ ಜ್ಞಾನವನ್ನುಪದೇಶಿಸಿದ ಶ್ರೀ ಋಷಭನಿಗೆ ನಮಸ್ಕಾರವು.

## ೭. ಭರತಕಥಾ — ಪಾಲನ, ತಪೋವನ ಗಮನ

ಮಹಾಭಗವದ್ಭಕ್ತನಾದ ಭರತನು ಋಷಭನಿಂದ ರಾಜ್ಯವನ್ನು ಸ್ವೀಕರಿಸಿ, ಆ ವನಜಾಕ್ಷನಾಜ್ಞೆಯಂತೆ ಪಾಲಿಸಿದನು. ವಿಶ್ವರೂಪನ ಮಗಳಾದ ಪಂಚಜನಿಯನ್ನು ಮದುವೆಯಾಗಿ, ತನಗೆ ತಕ್ಕ ಐದು ಜನ ಮಕ್ಕಳನ್ನು ತಾಮಸಾಹಂಕಾರತತ್ತ್ವವು ಶಬ್ದಾದಿ ಪಂಚಭೂತ ಮಾತ್ರೆಗಳನ್ನು ಪಡೆದಂತೆ ಪೊಂಡಿ, ಅವರಿಗೆ ಸುಮತಿ, ರಾಷ್ಟ್ರಭೂತ, ಸುದರ್ಶನ, ಆವರಣ, ಧೂಮ್ರಕೇತು, ಎಂದು ಪೆಸರಿಟ್ಟನು. ಅಂಜನಾಭನೆಂದು ಕರೆಯಲ್ಪಡುತ್ತಿದ್ದ ಈ ವರ್ಷವು ಭರತರಾಜನ ಕಾಲದಿಂದ ಅವನ ಪೆಸರಿನಲ್ಲಿ ಭಾರತವೆಂದು ಪ್ರಸಿದ್ಧವಾಯಿತು.

ಆ ರಾಜರ್ಷಿಯು ತನ್ನ ತಂದೆತಾತಂದಿರಂತೆ ಬಹು ಪ್ರೀತಿಯಿಂದ ಪ್ರಜರನ್ನು ಪಾಲಿಸಿ ಅವರವರ ಧರ್ಮದಲ್ಲಿ ನಿಲ್ಲಿಸಿದನು. ಅನೇಕ ವಿಧ ಯಜ್ಞಗಳನ್ನು ಮಾಡಿ ಶ್ರೀಹರಿಯನ್ನು ಸಂತೋಷಪಡಿಸಿದನು. ಶ್ರದ್ಧೆಯಿಂದ ಆಹಿತಾಗ್ನಿಯಾಗಿ ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಅಶ್ವಮೇಧ, ಸೋಮಯಾಗಗಳನ್ನು ಮಾಡಿದನು. ಸಮಗ್ರಾಂಗವಾದ ಮತ್ತು ಏಕಾದಶಾಂಗವಾದ ಸತ್ಕರ್ಮಗಳನ್ನೆಲ್ಲಾ ಹರಿಗರ್ಪಿಸಿದರು. ಅನೇಕ ದೇವತಾ ಧ್ಯಾನಾದಿಗಳನ್ನು ಹೋತಾ, ಉದ್ಗಾತ, ಸಾಮಗ, ಅಧ್ವರ್ಯುಗಳು ಮಾಡುವಾಗ, ಕಾರ್ಮಾಂಗಗಳನ್ನು ನಡೆಸುವಾಗ, ಬಂದ ಕ್ರಿಯಾಫಲವಾದ ಧರ್ಮವನ್ನೆಲ್ಲ ಪರಬ್ರಹ್ಮನು, ಯಜ್ಞೇಶನು, ಸರ್ವ ದೇವತಾ ಲಕ್ಷಣ ಮಂತ್ರಾರ್ಥ ನಿಯಾಮಕನು, ಸ್ವತಂತ್ರಕರ್ತನು, ಸರ್ವೋತ್ತಮನು ಆದ ಶ್ರೀ ವಾಸುದೇವನಲ್ಲಿ ಸಮರ್ಪಿಸಿದನು. ತನ್ನ ಪುಣ್ಯಕರ್ಮದಿಂದ ಪಾಪವನ್ನೆಲ್ಲ ತೊಳೆದನು. ಹವಿಸ್ಸನ್ನು ತೆಗೆದು ಋತ್ವಿಜರು ಕೊಡುವಾಗ ಆಯಾ ದೇವತೆಗಳಲ್ಲಿ ಅಂತರ್ಯಾಮಿಯಾದ ಶ್ರೀಹರಿಯನ್ನು ಸ್ಮರಿಸಿ, ಆ ದೇವತೆಗಳವನ ಚಕ್ಷುರಾದ್ಯವಯವ ಜಾತರೆಂದು ಧ್ಯಾನಿಸಿದನು. ಇಂತು ಶುದ್ಧ ಕರ್ಮಾನುಷ್ಠಾನವನ್ನು ಮಾಡಿ, ಶುದ್ಧಾಂತಃಕರಣನಾದ ರಾಜನು ತನ್ನ ಹೃದಯದಹರಾಕಾಶದಿ ಸೂಕ್ಷ್ಮವಾದ ಪುರುಷಬಿಂಬವನ್ನು ವ್ಯಾಪ್ತನಾದ ಬ್ರಹ್ಮನಿಂದ ಅಭಿನ್ನನೆಂದು ತಿಳಿದು ಮಹಾಪುರುಷಲಕ್ಷಣಲಕ್ಷಿತನೆಂದು ಉಪಾಸಿಸಿದನು. ಶ್ರೀವತ್ಸ, ಕೌಸ್ತುಭ, ವನಮಾಲೆ, ಚಕ್ರ ಶಂಖಗದಾಪದ್ಮಗಳನ್ನು ಧರಿಸಿ ನಿಜಭಕ್ತಜನಹೃದಯ ಚಿತ್ರಿತನಾದ ಶ್ರೀಹರಿಯ ಪುರುಷನಾಮಕ ಶ್ರೀಭೂಸಹಿತ ರೂಪವು ಪ್ರಕಾಶಿತವಾಗುತ್ತಿರಲು, ಭಕ್ತಿಯು ದಿನ ದಿನ ಪ್ರವರ್ಧಮಾನವಾಗಿ ಜ್ಞಾನವಿರಾಗ ವಿಜೃಂಭಿತವಾಯಿತು.

ಭರತನು ಪ್ರಾರಬ್ಧಪ್ರಾಪ್ತವಾದ ಹತ್ತಾರು ಸಾವಿರ ವರುಷಗಳ ರಾಜ್ಯಭೋಗವನ್ನನುಭವಿಸಿ, ಕರ್ಮನಿರ್ವಾಣವು ಸಮೀಪಿಸಿದೆ ಎಂದು ತಿಳಿದು, ಪಿತೃಪೈತಾಮಹವಾದ ರಾಜ್ಯಾದಿ ಸಂಪತ್ತನ್ನು ಮಕ್ಕಳಿಗೆ ಸರಿಯಾಗಿ ಹಂಚಿ, ತಾನು ಸಕಲ ಸಂಪದಾಕರವಾದ ನಿಜಗೃಹದಿಂದ ಹೊರಹೊರಟು, ಶಾಲಗ್ರಾಮ ಕ್ಷೇತ್ರವೆನಿಸಿದ ಪುಲಹಾಶ್ರಮವನ್ನು ಸೇರಿದನು. ಅಲ್ಲಿ ಶ್ರೀಭಗವಂತನು ಭಕ್ತಜನ ವತ್ಸಲನಾಗಿ ಇಚ್ಛಾರೂಪದಿಂದ ಶಾಲಗ್ರಾಮನಾಗಿ ಸನ್ನಿಧಿಯಂ ಮಾಡಿ ನೆಲಸಿರುವನು. ಎರಡು ಕಡೆ ಚಕ್ರಾಂಕಿತಶಿಲೆಗಳ ದಡದಿಂದ ಶೋಭಿತವಾದ ಚಕ್ರನದೀಮತಲ್ಲಿಕೆಯು ಹರಿಯುತ್ತಾ, ಆ ದೇಶವನ್ನು ಪವಿತ್ರ ಮಾಡುತ್ತಿದೆ. ಅಲ್ಲಿ ಭರತನು ಏಕಾಕಿಯಾಗಿ, ವಿಷಯಾಭಿಲಾಷೆಯನ್ನು ವರ್ಜಿಸಿ, ವೈರಾಗ್ಯವನ್ನು ಧರಿಸಿ, ಪುಲಹಾಶ್ರಮದ ಉಪವನದಲ್ಲಿ ಸಿಗುವ ಪುಷ್ಪಫಲಗಳಿಂದಲೂ, ತುಲಸೀಜಲಗಳಿಂದಲೂ, ಕಂದಮೂಲಫಲ

ಸಮರ್ಪಣಗಳಿಂದಲೂ ಭಗವತ್ಸೇವೆಯನ್ನು ಭಕ್ತಿಯಿಂದ ಮಾಡುತ್ತಾ, ಆನಂದತುಂದಿಲ ನಾಗುತ್ತಿದ್ದನು. ಇಂದು ಬಿಡದೆ ನಡೆಸಿದ ಪುರುಷಪರಿಚರ್ಯೆಯಿಂದ ಭಗವದ್ಭಕ್ತಿಯು, ಸಕಲ ಹೃದಯಗತ ಸಂಶಯಗಳನ್ನು ತೊಡೆದು ಹಾಕಲು, ಹರ್ಷಪುಲಕಾಂಕಿತಗಾತ್ರನು, ಪ್ರೇಮ ಬಾಷ್ಪಾಕುಲಿತನೇತ್ರನು ಆಗಿ ನಿಶ್ಚಲಚಿತ್ತನಾದನು. ನಿಜರಮಣ ಚರಣಾರುಣಾರವಿಂದ ಧ್ಯಾನ ದಿಂದ ಭಕ್ತಿ ಪ್ರವಾಹ ವೇಗವು ಹೆಚ್ಚಿ ಹೃದಯವನ್ನು ತುಂಬಲು ಮೈಮರೆತು, ತಾನು ಮಾಡುತ್ತಿದ್ದ ಭಗವತ್ಪೂಜೆಯನ್ನೇ ಬಿಟ್ಟು, ಸುಮ್ಮನೆ ಹರಿಚರಣಸ್ಮರಣ ಲೀನನಾಗಿದ್ದನು. ಇಂತು ಭಗವತ್ಪರಿ ಚರ್ಯೆಯೇ ನಿತ್ಯವ್ರತವಾಗಿ ಭರತನು ಅಜಿನವಸನವನ್ನು ಧರಿಸಿ, ತ್ರಿಷವಣ ಸ್ನಾನದಿಂದ ಕಪಿಶಕುಟಿಲಜಟಾಕಲಾಪನಾಗಿ ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಸೂರ್ಯಮಂಡಲಸ್ಥಿತವಾದ ಸುಖಪೂರ್ಣ ಭಗವದ್ರೂಪವನ್ನು ಅಪರೋಕ್ಷಿಸಿ ನೋಡಿ ಉಪಾಪಿಸುತ್ತಿಂತೆಂದನು–

ಪ್ರಕೃತಿಗಿಂತಲು ಉತ್ತಮನು, ಜಗಜ್ಜನ್ಮಕಾರಣನು, ಸರ್ವಜ್ಞನು, ವೇದಮುಖ್ಯ ಪ್ರತಿಪಾದ್ಯನು, ಅನಾಯಾಸ ಸ್ವತಂತ್ರಕರ್ತನು, ಜಗನ್ನಿಯಾಮಕವೀರ್ಯಬಲನು, ಸರ್ವಸುಜನ ದುಃಖಹರಣಶೀಲನು, ಜೀವಪಾಲನು ಆದ ನಾರಾಯಣನನ್ನು ಸ್ತುತಿಸುವೆವು. ಶ್ರೀಹರೇ! ಗಾಯತ್ರೀಶಬ್ದವಾಚ್ಯತೇ! ನಮೋ ನಮಃ!

## ೮. ಭರತಕಥಾ — ಹರಿಣಸಂಗ — ಹರಿಣಜನ್ಮ

ಶ್ರೀಶುಕನು ಪೇಳಿದನು–

ಒಂದು ಸಲ ಭರತನು ಕಾಲಕೃತ್ಯಗಳನ್ನು ತೀರಿಸಿ ಚಕ್ರನದಿಯಲ್ಲಿ ಮಿಂದು ಅಘಮರ್ಷಣ ಮಂತ್ರಗಳನ್ನು ಪಠಿಸಿ, ಪ್ರಣವವನ್ನು ಗಾಯತ್ರಿಯನ್ನು ಜಪಿಸುತ್ತಾ ಎರಡು ಮುಹೂರ್ತ ಕಾಲ ತೀರದಲ್ಲೇ ಕುಳಿತಿದ್ದನು. ಆಗ ಒಂದು ಜಿಂಕೆಯು ನೀರು ಕುಡಿಯಲು ದಡವನ್ನು ಸಮೀಪಿಸಿತು. ಅದು ಏಕಾಕಿಯಾಗಿತ್ತು. ಪೂರ್ಣಗರ್ಭಿಣಿಯು ಆಗಿತ್ತು. ನೀರನ್ನು ಕುಡಿಯುತ್ತಿರಲು ಸ್ವಲ್ಪದೂರ ದಲ್ಲಿ ಒಂದು ವ್ಯಾಘ್ರವು ಗರ್ಜಿಸಿದ ಭಯಂಕರ ಶಬ್ದವು ಕೇಳಿಸಿತು. ಅದನ್ನು ಕೇಳುತ್ತಲೇ ಸ್ವಭಾವಭೀರುವಾದ ಹರಿಣಿಯು ದಿಕ್ಕೆಟ್ಟು ನೋಡುತ್ತಾ, ಹರಿಭಯವು ತುಂಬಿ ಹೃದಯವು ನಡುಗುಲು ನೀರನ್ನೂ ಕುಡಿಯದೇ ಸಹ ಭಯಕಾತರವಾಗಿ ಆಚೆಯ ದಡಕ್ಕೆಂದು ಹಾರಿತು. ಹಾರುವಾಗ ಪಾಪ! ಗರ್ಭವತಿಯಾದ ಜಿಂಕೆಯ ಗರ್ಭವು ನದೀ ಪ್ರವಾಹದಲ್ಲಿ ಗಲಿತವಾಗಿ ಬಿದ್ದುಹೋಗುತ್ತಿತ್ತು. ಆ ಹಾರಿ ಎಗರುವ ವೇಗ, ಭಯ ಖೇದಗಳಿಂದ ಹರಿಣಿಯು ಒಂದು ಗರ್ತದಲ್ಲಿ ಬಿದ್ದು ಮೃತವಾಯಿತು.

ಭರತನಿದೆಲ್ಲವನ್ನೂ ನೋಡುತ್ತಿದ್ದನು. ಜಿಂಕೆಯ ಮರಿಯು ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿತ್ತು. ಬಂಧುಗಳಿಲ್ಲದ ಮರಿಯ ಅವಸ್ಥೆಯನ್ನು ಕಂಡು ಕರುಣೆಯಿಂದ ಆ ರಾಜರ್ಷಿಯು, ಅದನ್ನು ರಕ್ಷಿಸಿ ಆಶ್ರಮದಲ್ಲಿಟ್ಟು ಸಾಕುತ್ತಿದ್ದನು. ಬರಬರುತ್ತಾ ಆ ಹರಿಣದಲ್ಲಿ ಅಭಿಮಾನವು ಹೆಚ್ಚಾಗಲು ಅದರ ಪೋಷಣೆ, ಪಾಲನೆ, ಪ್ರೀಣನೆ, ಲಾಲನೆ, ಕ್ಷೇಮ ಚಿಂತನೆ ಗಳನ್ನು ಮಾಡುತ್ತಾ ಭರತನ ಯಮನಿಯಮಗಳು, ಪುರುಷೋತ್ತಮಪೂಜೆ, ಧ್ಯಾನಗಳು ಸಡಲಿ, ಕ್ರಮವಾಗಿ ಎಲ್ಲವೂ ನಿಂತುಹೋದವು.

ಆಗ ಭರತನಿಂತು ಚಿಂತಿಸಿದನು–

ಅಹೋ! ಈ ಹರಿಣ ಕುಣಕವು ಪಾಪ! ಈಶ್ವರನ ಕಾಲಚಕ್ರಕ್ಕೆ ಸಿಕ್ಕಿಬಿದ್ದು ತನ್ನ ಬಂಧು ಮಿತ್ರರಿಂದ ದೂರವಾಗಿ ನನ್ನನ್ನೇ ತಂದೆ, ತಾಯಿ, ಬಳಗವೆಂದು ನಂಬಿ ಶರಣೆಂದು ಬಂದಿ. ನನ್ನ ಬಿಟ್ಟು ರಕ್ಷಕರಾರೀ ಹರಿಣಕುಮಾರನಿಗೆ! ವಿಶ್ವಾಸದಿಂದ ನನ್ನನ್ನು ಸೇರಿದ ಇದರ ಪೋಷಣ ವನ್ನು ಮಾಡಬೇಕು. ಮುದ್ದಾಡಿ ಲಾಲಿಸಬೇಕು. ಅಸೂಯೆಯನ್ನು ಬಿಟ್ಟು, ಶರಣ್ಯ ಜನರಕ್ಷಾ ವಿಮುಖದೋಷವನ್ನರಿತ ನಾನು ಇದನ್ನು ಲಾಲಿಸಿ ಪಾಲಿಸಿದರೆ ತಪ್ಪೇನು? ಆರ್ಯರು, ವೈರಾಗ್ಯ ಭರಿತರಾದ ಸಾಧುಗಳು ಕೂಡ ದೀನಜನರಕ್ಷಾದಿ ಕಾರ್ಯಗಳಲ್ಲಿ ತೊಡಗಿ ತಮ್ಮ ಗುರುತರ ಶ್ರೇಯಸ್ಸಾಧನಗಳನ್ನು ಬಿಟ್ಟಿರುವರಲ್ಲವೇ? ಎಂದು ಸಮಾಧಾನವನ್ನು ಹಚ್ಚಿಕೊಂಡು, ಕೂತಾಗ, ನಿಂತಾಗ, ಮಿಂದಾಗ, ತಿಂದಾಗ, ಮಲಗಿದಾಗ, ತಿರಿಗಿದಾಗ, ಸದಾ ಬಿಡದೆ ಮೃಗಬಾಲಕ ನಲ್ಲಿ ಮನಸ್ಸಿಟ್ಟು ಫಲಪುಷ್ಪ ಕುಶ ಸಮಿತ್ತುಗಳನ್ನು ಉದಕಾದಿಗಳನ್ನು ತರಲು ಪೋಗುವಾಗ ತೋಳ, ಕಿರುಬ, ಮೊದಲಾದ ಕ್ರೂರಮೃಗಗಳೆಲ್ಲಿ ಬಂದು ಕೊಂದುಬಿಡುವವೋ ಎಂದು ಭಯದಿಂದ ಹರಿಣಪೋತವನ್ನು ಸಂಗಡ ಕರೆದುಕೊಂಡೇ ವನಕ್ಕೆ ಪೋಗುತ್ತಿದ್ದನು. ಹಾದಿಯಲ್ಲಿ ಅದರ ಮುಗ್ಧ ಭಾವವಿಲಾಸಗಳನ್ನು ನೋಡಿ ಹಿಗುತ್ತಾ, ದಯೆಯಿಂದ ಭುಜದಮೇಲಿಟ್ಟು, ಹೊತ್ತು ಕೊಂಡು ಪೋಗುತ್ತಿದ್ದನು. ಅಂತೆಯೇ ತೊಡೆಯ ಮೇಲಿಟ್ಟು, ಎದೆಗೆ ಹಚ್ಚಿ ಲಾಲಿಸಿ ಪರಮಾ ನಂದಭರಿತನಾಗುತ್ತಿದ್ದನು. ಕರ್ಮಗಳನ್ನು ಮಾಡುತ್ತಾ, ಮಧ್ಯದಲ್ಲೇ ಬಿಟ್ಟೆದ್ದು, ಜಿಂಕೆಯು ಸುಖವಾಗಿರುವುದನ್ನು ಕಂಡು, ಆಮೇಲೆ ಮನಶ್ಶಾಂತಿಯನ್ನು ಹೊಂದಿ ಅದನ್ನು ಆಶೀರ್ವದಿಸು ತ್ತಿದ್ದನು. 'ವತ್ಸ! ನಿನಗೆ ಕ್ಷೇಮವಾಗಲಿ! ಎಂದು ಪುನಃ ಕರ್ಮವನ್ನು ಹೇಗೋ ಮಾಡಿಬಿಡುತ್ತಿ ದ್ದನು; ಕಣ್ಣಿಗೆ ಕಾಣದಾಗ ತತ್ತರಿಸುತ್ತಾ ಧನವನ್ನು ಕಳೆದುಕೊಂಡ ಲೋಭಿಯಂತೆ ಗೋಳಿ ಡುತ್ತಿದ್ದನು. ಜಿಂಕೆ ವಿರಹದಿಂದ ನೊಂದು ದುಃಖಿಸುತ್ತಾ ಮನಃಕಶ್ಮಲವನ್ನು ಪೊಂದಿ ಹೀಗೆಂದನು–

ಅಯ್ಯೋ! ಏನು ಮಾಡಲಿ! ತಾಯಿಸತ್ತ ಪರದೇಶಿಯಾಗಿ ನನ್ನನ್ನು ನಂಬಿ – ದಯಾ ರಹಿತನು, ಕಪಟಿಯು ಪುಣ್ಯಹೀನನಾದ ನಾನದನ್ನು ಚೆನ್ನಾಗಿ ಪೋಷಿಸದಿದ್ದರೂ ಪಾಪ! ಲೆಕ್ಕಿಸದೆ ಸ್ವಜನನಂತೆ ಪ್ರೇಮವನ್ನು ತೋರಿ ಸೇರುತ್ತಿತ್ತು. ಏನೋ ಕ್ಷೇಮವಾಗಿದ್ದು ಈ ಆಶ್ರಮದಲ್ಲಿ ಎಳೆಯ ಹುಲ್ಲು ತಿನ್ನುತ್ತಾ ತಿರುಗುವ ನನ್ನ ಮರಿಯು ದೇವರಕ್ಷಿತವಾಗಿ ನನ್ನ ಕಣ್ಣಿಗೆ ಬೀಳ ಬಾರದೇ? ಒಂದು ವೇಳೆ ತೋಳವೋ ಕಿರುಬವೋ ಅಷ್ಟಪದಮೃಗವೋ ಅದನ್ನು ತಿಂದುಬಿಟ್ಟಿರು ವುದೋ ಏನು? ಭಗವಾನ್ ಭಾಸ್ಕರನು ಮುಣುಗಿದನಲ್ಲ! ಆದರೂ ಇನ್ನೂ ನನ್ನ ಮೃಗಬಾಲನು ಬರಲಿಲ್ಲ. ಏನು ಮಾಡಲಿ? ಬಂದು ಸುಖಪಡಿಸುವನೋ ಇಲ್ಲವೋ! ಹರಿಣರಾಜಕುಮಾರನು ಎಷ್ಟು ಮನೋಹರನಿಜಮೃಗಜಾತಿಸಹಜಚೇಷ್ಟಾ ವಿನೋದಗಳಿಂದ ನನ್ನನ್ನು ಸಂತೋಷಪಡಿಸು ತ್ತಿದ್ದನು. ಸುಳ್ಳು ಸಮಾಧಿಯಲ್ಲಿ ಕಣ್ಣು ಮುಚ್ಚಿ ಕೂತ ನನ್ನನ್ನು ಕೂಗಿ ಪ್ರೇಮ ಕೋಪ ಸಂರಂಭದಿಂದ ನಾನು ನೋಡದಿರಲು, ಹಿಂದೆ ನಿಂದು ಭಯದಿಂದ ಮೆಲ್ಲನೆ ತನ್ನ ಎಳೆಯ ಕೊಂಬಿನಿಂದ ನನ್ನನ್ನು ತಿವಿದು, ಅಭಿಮುಖನನ್ನಾಗಿಸುತ್ತಿತ್ತು.

ನಾನು ಹವಿಸ್ಸನ್ನು ಇಳಿಸಿಟ್ಟಿರಲು ಬಂದು ತಿಂದು ಕೆಡಿಸಿದ ಮರಿಯನ್ನು ಬೈದು ಸರಿಸಿದಾಗ ಹೆದರುತ್ತಾ, ಹಿಂದಕ್ಕೆ ಸರಿದು ಚಿಕ್ಕ ಬಾಲಕನಂತೆ ಕೈಕಾಲು ಮುದುಡಿಕೊಂಡು ಸುಮ್ಮನೆ ಇರುತ್ತಿತ್ತು. ಈ ಭೂಮಿಯು ಎಂತಹ ತಪಸ್ಸನ್ನು ಮಾಡಿ ಮೆಲ್ಲನೆ ಹೆಜ್ಜೆಯಿಟ್ಟು ನಡೆಯುವ ನನ್ನ ಜಿಂಕೆಯ ಪಾದಚಿಹ್ನೆಗಳನ್ನು ಮೂಡಿಸಿಕೊಂಡಿದೆ? ನಿಧಿಯನ್ನು ಕಳೆದುಕೊಂಡ ನಿರ್ಭಾಗ್ಯ

ನಂತಿರುವ ನನಗೆ ಆ ಮಂಗಳಕರ ಪದಪಂಕ್ತಿಯ ನನ್ನ ನಿಧಿಯನ್ನು ತೋರುವಂತೆ ಕಾಣುತ್ತಿದೆ. ಈ ಹೆಜ್ಜೆಯ ಗುರುತಿನಿಂದಲಲ್ಲವೇ ಭೂಮಿಯು ಸಮಲಂಕೃತವಾಗಿ ವಿಪ್ರರಿಗೆ ದೇವಯಜನಾರ್ಹವೆನಿಸಿರುವುದು?

ಒಂದು ವೇಳೆ ಈ ಭಗವಾನ್ ಶಶಾಂಕನು ನನ್ನ ಮರಿಯನ್ನು ಶಾರ್ದೂಲಾದಿಗಳಿಂದ ಕಾಪಾಡಲು ಮನಮಾಡಿ ತಾಯಿಯನ್ನು ಕಳೆದುಕೊಂಡ ನನ್ನ ಆಶ್ರಮದಿಂದ ತಪ್ಪಿಹೋದ ಜಿಂಕೆಯನ್ನು ದಯದಿಂದ ತನ್ನಲ್ಲಿಟ್ಟುಕೊಂಡು ಕಾಪಾಡುತ್ತಿರುವನೋ ಏನು? ಇದೇ ಅಲ್ಲವೇ ನಿನ್ನ ಹರಿಣಕುಲ ನಿಧಾನವಿದನ್ನು ನಾನು ಕಾಪಾಡಿರುವೆನೆಂದು ಮಗನ ವಿರಹವನ್ನು ತಾಳಲಾರದೆ ಬೆಂದು ನೊಂದಿರುವ ಹೃದಯನಲಿನವಾದ ನನ್ನನ್ನು ಸಮೀಪಿಸಿ ನನ್ನ ಮೃಗಕುಮಾರನನ್ನೊಪ್ಪಿಸಿ ಹಿಮಶೀತಲ ಶಾಂತ ಕರುಣಾರಸಪೂರ್ಣ ಕರಗಳಿಂದ ನನ್ನನ್ನು ಆ ಭಗವಂತನು ಸಂತೈಸುವನೇ?

ಎಂದು ಚಿಂತಿಸಿದ ಮನೋರಥಗಳೆಲ್ಲ ವ್ಯರ್ಥವಾಗಲು ಅಕುಲಚಿತ್ತನಾಗಿ ಜಿಂಕೆಯ ರೂಪದಿಂದ ಬಂದೊದಗಿದ ಪ್ರಾರಬ್ಧಕರ್ಮವಶನಾಗಿ ಭಗವತ್ಪೂಜೆಯನ್ನು ಧ್ಯಾನವನ್ನು ಸಂಪೂರ್ಣವಾಗ ಬಿಟ್ಟು ಆ ತಪಸ್ವಿಯು ತನ್ನ ಜಾತಿಗೇ ಸೇರದ ಮೃಗಕುಮಾರನಲ್ಲಿ ಬದ್ಧಹೃದಯನಾಗಿದ್ದನು. ಮೋಕ್ಷಸಾಧನೆಗೆ ವಿಘ್ನವೆಂದು, ಹಿಂದೆ ದುಸ್ತ್ಯಜರಾದ ಪುತ್ರಾದಿ ಬಂಧುಗಳನ್ನು ಬಿಟ್ಟು ಬಂದ ಭರತನಿಂತು ಯೋಗಾರಂಭಣದಿಂದ ಭ್ರಂಶಿತನಾದನು. ಆ ಮೃಗದಾರಕನ ಪೋಷಣವನ್ನು ಮಾಡುತ್ತಾ, ಮುದ್ದಾಡಿ ಲಾಲಿಸಿ ಪಾಲಿಸುವ ಅಭಿಮಾನ ಭರಮಗ್ನನಾಗಿದ್ದಾಗ, ತನ್ನ ಗತಿಯನ್ನು ಮರೆತು ಹರಿಯನ್ನೂ ನೆನೆಯದೆ ಇದ್ದ ಆ ರಾಜರ್ಷಿಯು ಮರಣಕಾಲವು, ಇಲಿಯನ್ನು ನುಂಗಲು ಬಂದ ಹಾವಿನಂತೆ, ಕರಾಳವೇಗದಿಂದ ದಾಟಲಾಗದಂತೆ ಬಂತು. ಆಗಲೂ ತನ್ನ ಪಕ್ಕದಲ್ಲಿ ನಿಂತು ಮಗನಂತೆ ಶೋಕಿಸುವ ಆ ಮೃಗಕುಮಾರನನ್ನೇ ನೋಡುತ್ತ ಅದರಲ್ಲೇ ಮನಸ್ಸಿಟ್ಟು ಭರತನೆನಿಸಿದ ಶರೀರವನ್ನು ಬಿಟ್ಟು, ಪೂರ್ವಜನ್ಮದಿ ಭರತದೇಹದಿಂದ ಮಾಡಿದ ಜಿಂಕೆಯ ಸಂಗದಿಂದ, ತಾನೂ ಒಂದು ಜಿಂಕೆಯಾಗಿ ಜನಿಸಿದನು. ಆ ಜಿಂಕೆಯ ಜನ್ಮದಲ್ಲಿ ತನಗಂತಹ ಪಶುದೇಹವು ಬರಲು ಕಾರಣನಾದ ಮೃಗಾಭಿನಿವೇಶನ ವನ್ನು, ಶ್ರೀಹರಿ ಚರಣಾರಾಧನೆಯ ಮಹಿಮೆಯಿಂದ ಸ್ಮರಿಸುತ್ತಾ ಬಹು ಪಶ್ಚಾತ್ತಾಪದಿಂದಿಂತೆಂದನು–

ಅಯ್ಯೋ! ಕೆಟ್ಟೆನಲ್ಲ! ಭಕ್ತಜನಮಾರ್ಗವಂ ಬಿಟ್ಟೆನಲ್ಲ! ಶ್ರೀವಾಸುದೇವನಲ್ಲಿ ಶ್ರವಣ ಮನನ ಸಂಕೀರ್ತನಾರಾಧನಗಳನ್ನು ಬಿಡದೆ ಸರ್ವದಾ ಮಾಡಿ ನಿಲ್ಲಿಸಿ, ಸಮಾಧಾನವನ್ನು ಪೊಂದಿದ್ದ ನನ್ನ ಮನಸ್ಸಾಜಿಂಕೆಯಲ್ಲಿ ಮಾಡಿದ ಪುತ್ರಾಭಿಮಾನದಿಂದ ಕೆಟ್ಟು, ಸಕಲಚೇತನ ನಿಯಾಮಕ ಬ್ರಹ್ಮಜ್ಞಾನಿಯಾಗಿದ್ದ ನಾನೊಂದೇ ಕ್ಷಣದಲ್ಲಿ ಎಂತಹ ಅವಿವೇಕಿಯಾದೆ!

ಎಂದು ಒಳಗೇ ಪಶ್ಚಾತ್ತಾಪತಪ್ತನಾಗಿ ಭರತನು ತನ್ನ ತಾಯಿಯಾದ ಜಿಂಕೆಯನ್ನು ಬಿಟ್ಟು ಮತ್ತೆ ವೈರಾಗ್ಯ ಭಾಗ್ಯಭರಿತ ಮುನಿಜನ ಪ್ರಿಯವಾದ ಸಾಲಗ್ರಾಮ ಕ್ಷೇತ್ರಕ್ಕೆ ಕಾಲಂಜರಪರ್ವತದಿಂದ ಬಂದು ಸೇರಿದನು. ಅಲ್ಲಿ ತನ್ನನ್ನು ಸೇರಲು ಬರುವ ಜಿಂಕೆಗಳ ಸಂಗದಿಂದ ಭೀತನಾಗಿ, ಏಕಾಕಿಯಾಗಿ ತಿರುಗುತ್ತಾ, ಮರಣಕಾಲವನ್ನು ನಿರೀಕ್ಷಿಸುತ್ತಿದ್ದನು. ಶುಷ್ಕಪರ್ಣ ತೃಣಾದಿಗಳನ್ನು ತಿಂದು ಜೀವಿಸುತ್ತಾ, ಜಿಂಕೆಯ ಜನ್ಮ ಬರಲು ಕಾರಣವಾದ ದುಷ್ಟ ಪ್ರಾರಬ್ಧಕರ್ಮ ನಾಶಕಾಲವನ್ನೆಣಿಸುತ್ತಿದ್ದು ಕೊನೆಗೆ ಆ ಜಿಂಕೆಯ ದೇಹವನ್ನು ತೀರ್ಥದಲ್ಲೇ ಇದ್ದು ಪರಿತ್ಯಜಿಸಿದನು.

## ೯. ಜಡಭರತಾಖ್ಯಾನ

ಅನಂತರ ಭರತನು ಒಬ್ಬ ವಿಪ್ರವರನ ಮಗನಾಗಿ ಜನಿಸಿದನು. ಆಂಗೀರಸಗೋತ್ರಜನಾದ ಆ ದ್ವಿಜನು ಶಮ, ದಮ, ತಪಸ್ಸು, ವೇದಾಭ್ಯಾಸ, ದಾನ, ಸಂತೋಷ, ತಿತಿಕ್ಷಾ, ವಿನಯ, ವಿದ್ಯಾ ಅನಸೂಯೆ, ಬ್ರಹ್ಮಜ್ಞಾನ ಮೊದಲಾದ ಗುಣಗಳಿಂದ ಆನಂದದಿಂದಿದ್ದನು. ಅವನಿಗೆ ಪ್ರಥಮ ಪತ್ನಿಯಲ್ಲಿ ಪುಟ್ಟಿದ ಒಂಭತ್ತು ಜನ ಪುತ್ರರು ತಂದೆಗೆ ತಕ್ಕ ಮಕ್ಕಳೆನಿಸಿ ಶೀಲಾಚಾರ ರೂಪೌದಾರ್ಯಾದಿಗುಣವಂತರಾಗಿದ್ದರು; ಎರಡನೆಯ ಪತ್ನಿಗಿಬ್ಬರು ಮಕ್ಕಳು. ಅವರಲ್ಲಿ ಕನಿಷ್ಠ ಪುತ್ರನೇ ಪರಮ ಭಾಗವತನು ರಾಜರ್ಷಿಪ್ರವರನು ಆಗಿದ್ದ ಭರತನು; ಮೃಗ ಶರೀರವನ್ನು ತ್ಯಜಿಸಿ ಚರಮ ಶರೀರದಿಂದ ಬ್ರಾಹ್ಮಣನಾಗಿ ಜನಿಸಿ, ಜಡಭರತನೆನಿಸಿದನು. ಆಗಲೂ ಸ್ವಜನ ಸಂಗವನ್ನು ಹುಲಿಯನ್ನಂತೆ ಭಯದಿಂದ ಬಿಟ್ಟು, ಸಕಲಕರ್ಮ ಬಂಧ ವಿಧ್ವಂಸನಕಾರಣವಾದ ಹರಿಗುಣ ಶ್ರವಣ ಮನನ ವ್ಯಾಖ್ಯಾನಾದಿಗಳಿಂದ ಶ್ರೀರಮಾರಮಣ ಚರಣಾರವಿಂದವನ್ನು ಮನಸ್ಸಿನಲ್ಲಿ ನಿಧಿಯಂತೆ ಇಟ್ಟು, ಶ್ರವಣಾದಿ ವಿಘ್ನವೆಲ್ಲಿಂದಲೆಂತು ಬರುವುದೋ ಎಂದು ಹೆದರಿ, ಭಗವದನುಗ್ರಹದಿಂದ ಹಿಂದಿನ ಜನ್ಮವೃತ್ತಾಂತಗಳ ಸ್ಮರಣೆ ಬರಲು ವಿವೇಕವನ್ನು ತಾಳಿ, ನೋಡುವ ಜನರಿಗೆ ಮೂಕನಂತೆ, ಬಧಿರನಂತೆ, ಉನ್ಮತ್ತನಂತೆ ತೋರಿ ನಡೆಯುತ್ತಿದ್ದನು.

ಆ ವಿರಕ್ತ ಭರತನ ತಂದೆಯು ಪುತ್ರಸ್ನೇಹದಿಂದ ಸಮಾವರ್ತನ ಪರ್ಯಂತವಾದ ಸಂಸ್ಕಾರ ಗಳನ್ನು ವಿಧಿವತ್ತಾಗಿ ಮಾಡಿ, ಆ ವಟುವಿಗೆ ಬೇಡಾಗಿದ್ದ ಶೌಚಾಚಮನಾದಿ ಕರ್ಮಗಳನ್ನು 'ತಂದೆಯಾದವನು ಮಗನನ್ನು ಶಿಕ್ಷಿಸಿ ಸರಿಯಾಗಿ ನಡೆಸಬೇಕೆಂಬ' ದುರಾಗ್ರಹದಿಂದ, ಬಲವಂತ ವಾಗಿ ಮಾಡಿಸುತ್ತಿದ್ದನು. ಭರತನು ತಂದೆಯ ಸಮಕ್ಷಮದಲ್ಲಿದ್ದಾಗ ಸರಿಯಾಗಿಯೇ ನಡೆದು ಕರ್ಮಾಚರಣೆಯನ್ನು ಮಾಡುತ್ತಿದ್ದನು. ಅಪರೋಕ್ಷಜ್ಞಾನಿಯಾದ ಭರತನಿಗೆ ಕಾಮಚಾರವು. ದೋಷಾಪಾದಕವಾಗಲಾರದಲ್ಲವೇ? ವೇದಗಳನ್ನು ಕಲಿಸುವ ತಂದೆಯು ವ್ಯಾಹೃತಿಗಳಿಂದ ಕೂಡದ ಪ್ರಣವಶಿರಸ್ಕವು, ತ್ರಿಪಾಗವು ಆದ ಗಾಯತ್ರಿಯನ್ನೂ ವೇದವನ್ನೂ ವಸಂತ ಗ್ರೀಷ್ಮ ಗಳಲ್ಲಿ ಹೇಳಿಕೊಟ್ಟರೂ, ಸರಿಯಾಗಿ ನುಡಿಯದೆ, ಬೇಕೆಂದೇ ಅಸಮಂಜಸವಾಗಿ ಉಚ್ಚರಿಸುತ್ತಿ ದ್ದನು.

'ಆತ್ಮವೈ ಪುತ್ರನಾಮಾಸಿ' ಎಂದಂತೆ ತಾನೇ ಆದ ಮಗನ ಮೇಲಿನ ಅನುರಾಗಾಭಿಮಾನ ಗಳಿಂದ ತಂದೆಯು ತನ್ನ ಕರ್ತವ್ಯವೆಂಬ ದುರಾಗ್ರಹದಿಂದ, ಮಗನಿಗೆ ಅನಪೇಕ್ಷಿತವಾದ ಶೌಚಾಧ್ಯ ಯನ ವ್ರತನಿಯಮ ಗುರುಸೇವಾಗ್ನಿಕಾರ್ಯ ಭಿಕ್ಷಾದಿ ಕರ್ಮಗಳನ್ನು ಕಲಿಸುತ್ತಾ, ಗೃಹವ್ಯಸನ ಪ್ರಮತ್ತನಾಗಿ ಅಪ್ರಮತ್ತನಾದ ಕಾಲದಿಂದ ವಂಚಿತನಾಗಿ, ತನ್ನ ಮನೋರಥವು ಫಲಿಸದಿರಲು, ದುಃಖದಿಂದ ಕೊನೆಗೆ ಮೃತನಾದನು. ಆಗ ಚಿಕ್ಕ ಹೆಂಡತಿಯು ಮಗಳನ್ನು, ಮಗನಾದ ಭರತನನ್ನು ಸವತಿಗೊಪ್ಪಿಸಿ, ತಾನು ಸಹಗಮನವನ್ನು ಮಾಡಿ ಪತಿಯ ಲೋಕವನ್ನು ಸೇರಿದಳು.

ತಂದೆಯು ಮೃತನಾದಮೇಲೆ ಭರತನ ಅಣ್ಣಂದಿರು ಅವನ ಪ್ರಭಾವವನ್ನರಿಯದೆ, ವೇದವು ಕರ್ಮಪ್ರತಿಪಾದಕವೆಂದೇ ತಿಳಿದು, ಬ್ರಹ್ಮಜ್ಞಾನವೇ ಮೋಕ್ಷಕಾರಣವೆಂಬುದನ್ನು ನಿರ್ಲಕ್ಷಿಸಿ, ಭರತನು ಹುಚ್ಚನೆಂದು ನಿಶ್ಚಯಿಸಿ, ಅವನಿಗೆ ವಿದ್ಯಾಶಿಕ್ಷಣವನ್ನು ಕೊಡುವುದನ್ನು ನಿಲ್ಲಿಸಿಬಿಟ್ಟರು. ಪಶುಗಳಂತೆ ವರ್ತಿಸುವ ದ್ವಿಪದತ್ವ ಮಾತ್ರ ವಿಶೇಷರಾದ ನರಪಶುಗಳವನನ್ನು ಹುಚ್ಚಾ! ಮೂಕಾ! ಜಡಾ! ಎಂದು ಕರೆದರೆ ಅದರಂತೆ ಅನುವರ್ತಿಸಿ, ಎಲ್ಲ ಕಾರ್ಯಗಳನ್ನು ಹರೀಚ್ಛೆಯಿಂದ

ಮಾಡುತ್ತಿದ್ದನು. ಬಿಟ್ಟಿಯಾಗಿಯೋ, ಕೂಲಿ ಎಂದೋ, ಭಿಕ್ಷೆಯಿಂದಲೋ ಆಗಲಿ, ಬಂದ ಅನ್ನವು ಸ್ವಲ್ಪವಾಗಲಿ, ಬಹಳವಾಗಲಿ; ಮೃಷ್ಟಾನ್ನವಾಗಲಿ, ಕದನ್ನವಾಗಲಿ ಶ್ರೀಹರಿ ಕೊಟ್ಟದ್ದೆಂದು ಆನಂದದಿಂದ ಭುಜಿಸುತ್ತಿದ್ದನು; ಇಂದ್ರಿಯಪ್ರೀತಿಗಾಗಿ ಅಲ್ಲ. ನಿತ್ಯನಿವೃತ್ತ ಸಮಸ್ತ ದುಃಖ ನಾದ ಹರಧ್ಯಾನದಿಂ ರ ಬಂದ ಆನಂದಾನುಭವದಿಂದ ಮಹಾಲಾಭದಿಂದ ಸುಖದುಃಖಾದಿ ದ್ವಂದ್ವನಿಮಿತ್ತ ಮನೋವಿಕಾರವಿಲ್ಲದೆ ಗಿಟಕದಂತೆ ನಿರ್ಲಿಪ್ತನಾಗಿ, ದೇಹಾಭಿಮಾನವನ್ನು ತ್ಯಜಿಸಿ ದ್ದನು. ಶೀತ ವಾತ ವರ್ಷತಪಗಳಲ್ಲಿ ಮೈಮೇಲೆ ಬಟ್ಟೆಯಿಲ್ಲದೆ ಎತ್ತಿನಂತೆ ತಿರುಗುತ್ತಿ ದ್ದನು; ನೆಲದ ಮೇಲೆಯೇ ಮಲಗುತ್ತಿದ್ದನು. ಸ್ನಾನವಿಲ್ಲದೇ ದೇಹವು ಮಾಸಿರಲು ತಿಕ್ಕದೆ ಮೀಯದೆ ಧೂಳಿಯಿಂದ ಮುಚ್ಚಲ್ಪಟ್ಟ ಮಹಾಮಣಿಯಂತೆ ಬ್ರಹ್ಮವರ್ಚಸ್ಸಿನಿಂದ ಅಸ್ಪಷ್ಟವಾಗಿ ಹೊಳೆ ಯುತ್ತಾ ಹರಿದ ವಸ್ತ್ರವನ್ನು ನಡುವಿಗೆ ಸುತ್ತಿ ಕಪ್ಪಾದ ಜನಿವಾರದಿಂದ ಮಾತ್ರ ಬ್ರಾಹ್ಮಣನೆಂದು ಗೊತ್ತಾಗುತ್ತಿರಲು ತಿರುಗುತ್ತಿದ್ದನು.

ಪರರಿಗಾಗಿ ದುಡಿದು ವೇತನಪ್ರತಿನಿಧಿಗಾಗಿ ಆಹಾರವನ್ನು ಸ್ವೀಕರಿಸುತ್ತಿದ್ದ ತಮ್ಮನನ್ನು ನೋಡಿ ಅವನ ಅಣ್ಣಂದಿರು ಹೊಲವನ್ನು ಕಾಯಲು ನಿರೂಪಿಸಲು ಅದನ್ನೇ ಮಾಡುತ್ತಿದ್ದನು. ಕೊಟ್ಟ ವೇತನವು ಕಡಿಮೆ ಹೆಚ್ಚು ಎಂದಾಗಲಿ, ಒಳ್ಳೆಯದು ಕೆಟ್ಟದ್ದೆಂದಾಗಲಿ ಗಣಿಸದೆ ಕಲ್ಲು, ನುಚ್ಚು, ಚಿಗಳಿ, ಹಿಂಡಿ, ತವುಡು, ಹುಳಕ ಉದ್ದು, ಪಾತ್ರೆಯ ಹೊತ್ತು ಯಾವುದಾದರೂ ಅಮೃತವೆಂದು ತಿಳಿದು ಉಣ್ಣುತ್ತಿದ್ದನು.

ಒಂದು ಸಲ ಒಬ್ಬ ಶೂದ್ರರಾಜನು ಮಗನಿಗಾಗಿ ಬೇಡಿ ಕಾಳಿಕಾದೇವಿಯಿಂದ ಮಗನನ್ನು ಪಡೆದು ಆಕೆಗೆ ನರಬಲಿಯನ್ನು ಕೊಡಲು ಒಂದು ನರಪಶುವನ್ನು ಪಿಡಿದಿಟ್ಟಿದ್ದನು. ಆ ಮನುಷ್ಯನು ಒಂದು ದಿನ ರಾತ್ರಿ ಕಗ್ಗತ್ತಲಲ್ಲಿ ತಪ್ಪಿಸಿಕೊಂಡು ಓಡಿಹೋದನು. ಆಗ ರಾಜನ ಪರಿಚರರವನನ್ನು ಹುಡುಕುತ್ತಾ ಬಂದು ಅವನನ್ನು ಹಿಡಿಯಲಾರದೆ, ಚಿಂತಾಕ್ರಾಂತನಾದನು. ಆಗ ಅವರಿಗೆ, ವಿಧಿಬಲದಿಂದ ಕೇದಾರವನ್ನು ಕಾಯುತ್ತಾ ವೀರಾಸನದಿಂದ ಕೂತು ಜಿಂಕೆ ಹಂದಿಗಳು ಬರದಂತೆ ನೋಡುತ್ತಿದ್ದ ಆಂಗಿರಸ ಕುಲಜನು ಕಾಣಿಸಿದನು. ತತ್‌ಕ್ಷಣವೇ ಅವನ ಸುಲಕ್ಷಣಾಕೃತಿಯನ್ನು ಗಮನಿಸಿ ಆ ದುಷ್ಕೃತಿಗಳು ತಮ್ಮ ರಾಜನ ಕಾರ್ಯವಿವನ ಬಲಿಯಿಂದ ನೆರವೇರುವುದೆಂದು ಬಂದು ಕಟ್ಟಿ, ಸಂತೋಷದಿಂದ ಕೂಗುತ್ತಾ ಚಂಡಿಕಾಲಯವನ್ನು ಸೇರಿದರು. ಅಲ್ಲಿ ಚೋರರಿವನಿಗೆ ಸ್ನಾನವಂ ಮಾಡಿಸಿ, ಹೊಸ ಬಟ್ಟೆಯನ್ನುಡಿಸಿ, ಗಂಧವನ್ನು ಹಚ್ಚಿ ವಸ್ತ್ರಗಳನ್ನಿಟ್ಟು, ಹಣೆಯ ತಿಲಕವನ್ನು ತೀಡಿ, ಹೂಮಾಲೆಯನ್ನು ಹಾಕಿ, ಊಟ ಮಾಡಿಸಿದರು. ಆಮೇಲೆ ಧೂಪದೀಪಗಳನ್ನು ಕೊಟ್ಟು, ಭದ್ರಕಾಳಿಯನ್ನು ಪೂಜಿಸಿದರು. ವಸ್ತ್ರಮಾಲ್ಯಪಲ್ಲದ ಫಲಗಳನ್ನು ಲಾಜಾ ದೂರ್ವಾಂಕುರ ನೈವೇದ್ಯಗಳನ್ನು ಸಮರ್ಪಿಸಿ, ಹಿಂಸಾವಿಧಿಯಿಂದ ಮೃದಂಗ ಪಣವಗಳನ್ನು ಬಾರಿಸುತ್ತಾ ಹಾಡಿ ಕುಣಿಯುತ್ತಾ ಆ ಪುರುಷಪುಶುವಿನನ್ನು ಭದ್ರಕಾಳಿಯ ಮುಂದೆ ನಿಲ್ಲಿಸಿದರು. ಚೋರರಾಜನು ಆ ಪಶುವಿನ ಬಿಸಿನೆತ್ತರದಿಂದ ಭದ್ರಕಾಳಿಯನ್ನು ಪೂಜಿಸಲಿಚ್ಛಿಸಿ, ಆಕೆಯ ಮಂತ್ರವನ್ನು ಪಠಿಸಿ, ಮಂತ್ರಿತವಾದ ಕಾಲಕರಾಳ ಖಡ್ಗವನ್ನೆತ್ತಿ ನಿಂತನು.

ಇಂತು ರಜಸ್ತಮೋಗುಣ ಸ್ವಭಾವತೀಕ್ಷ್ಣರಾಗಿ, ಧನಮದಗರ್ವದ ವಿಶೃಂಖಲವೃತ್ತಿಯಿಂದ, ಭಗವತ್ಸನ್ನಿಧಾನಪಾತ್ರನು ಆಂಗೀರಸಕುಲ ಪವಿತ್ರನು ಆದ ಜಡಭರತನನ್ನು ತಿರಸ್ಕರಿಸಿ, ಸ್ವೇಚ್ಛಾಚಾರಿಗಳಾದ ಅವರ ದಾರುಣ ಕರ್ಮವು ದುಸ್ಸಹವಾಗಲು, ಅಪರೋಕ್ಷ ಜ್ಞಾನಿಯು, ಬ್ರಹ್ಮರ್ಷಿಸುತನು, ನಿರ್ವೈರನು, ಸರ್ವಭೂತಸಹಿತನಾದ ಭರತನ ಹಿಂಸೆಯು ತನಗಭಿಮತವಲ್ಲ

ವೆಂದು ಗರ್ಜಿಸುತ್ತಾ, ದುರ್ವಿಷಹವಾದ ಆ ಬ್ರಾಹ್ಮಣ ತೇಜದಿಂದ ಮೈ ಉರಿದಂತಾಗಲು, ಕೆಂಡವನ್ನು ಕಾರುತ್ತಾ ಹಠಾತ್ತಾಗಿ ಭದ್ರಕಾಳಿಯು ವಿಗ್ರಹದಿಂದೆದ್ದು ಬಂದಳು. ರೋಷಾವೇಶದಿ ಹುಬ್ಬನ್ನು ಗಂಟಿಕ್ಕಿ, ಕೋರೆಗಳಂ ತೋರಿ, ಹಲ್ಲು ಕಡಿಯುತ್ತಾ, ಕೆಂಗಣ್ಣು ಕಿಡಿಗಳುದುರಿಸುವ ಭಯಾನಕ ಮುಖದಿಂದ ಜಗವನ್ನೆಲ್ಲ ಸುಟ್ಟು ನಾಶಪಡಿಸುವಳೋ ಎಂಬಂತೆ ಅಟ್ಟಹಾಸವನ್ನು ಮಾಡಿ, ಹಾರಿಬಿದ್ದು, ದುಷ್ಟಮನಸ್ಕರಾದ ಆ ಪಾಪಿಗಳನ್ನೆಲ್ಲ ಅದೇ ಖಡ್ಗದಿಂದ ತುಂಡರಿಸಿದಳು. ದೇಗುಲದ ಅಂಗಳದಲ್ಲೆಲ್ಲ ಚಲ್ಲಾಪಿಲ್ಲಿಯಾಗಿ ತಲೆಗಳನ್ನೀಡಾಡಿ, ಆ ಪಾಪಿಗಳ ಉಷ್ಣರಕ್ತಾಸವವನ್ನು ಗಣಗಳಿಂದ ಕೂಡಿ ಕುಡಿದು ಮದವಿಹ್ವಲೆಯಾಗಿ, ಪಾರ್ಷದರಿಂದ ಕೂಡಿ ಪಾಡಿ ಗಟ್ಟಿಯಾಗಿ ಗಹಗಹಿಸಿ ನಗುತ್ತ ಕುಣಿದು ತಲೆಗಳಿಂದ ಚೆಂಡಾಟವನ್ನಾಡಿ ಅಂತರ್ಧಾನವನ್ನು ಪೊಂದಿದಳು.

ವಿಷ್ಣುರಾತ! ದೊಡ್ಡವರಲ್ಲಿ ಮಾಡಿದ ಅಭಿಚಾರಾದಿ ದುರತಿಕ್ರಮವು ಮಾಡಿದವನನ್ನೇ ಪೀಡಿಸಿ ಕೊಲ್ಲುವುದು. ಸ್ವಶಿರಚ್ಛೇದನವು ಬಂದೊದಗಿದಾಗಲೂ ದೇಹಾದ್ಯಹಂಭಾವರಹಿರು, ಹೃದಯಗ್ರಂಥಿಬಂಧ ವಿಮುಕ್ತರು, ಸರ್ವಜೀವಸಖರು ಸರ್ವಸ್ವಾಮಿ ಶ್ರೀಹರಿಚರಣನಿರತರು, ನಿರ್ವೈರರು ಆಗ ಭಾಗವತರಿಗೆ ಸಂಭ್ರಮವಿರುವುದಿಲ್ಲ. ಇಂತಹ ವಿಷಯದಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಅಕುತೋಭಯವಾದ ನಾರಾಯಣ ಪಾದಮೂಲವನ್ನು ನಂಬಿರುವ ಪರಮ ಶುದ್ಧಾತ್ಮರನ್ನು ಸಾಕ್ಷಾತ್ ಭಗವಂತನ ಸುದರ್ಶನಚಕ್ರವು ಕಾಲ ರೂಪದಿಂದ ನಿಂತು, ಆಯಾ ಭದ್ರಕಾಲ್ಯಾದಿ ರೂಪಗಳಿಂದ ಅಪ್ರಮತ್ತರಾಗಿ ರಕ್ಷಿಸುತ್ತಿರುವುದು.

## ೧೦. ಜಡಭರತ ರಹೂಗಣ ಸಂವಾದ

ಶ್ರೀಶುಕನು ಪೇಳಿದನು–

ರಾಜನ್! ಇಕ್ಷುಮತೀ ನದೀತೀರದಲ್ಲಿ ಒಂದು ಆಶ್ರಮದಲ್ಲಿ ಬಂದಿದ್ದ ಕಪಿಲಮುನಿಯನ್ನು ನೋಡಲು ಹೊರಟಿದ್ದ ರಹೂಗಣ ರಾಜನ ಆಂದೋಲಿಕೆಯನ್ನು ಹೊರಲು ಬೇಕಾದ ಪುರುಷರನ್ನವನ ಸೇವಕಪ್ರಧಾನನು ಹುಡುಕುವಾಗ, ದೈವವಶದಿಂದ ಆ ಬ್ರಾಹ್ಮಣ ವರನು ಸಿಕ್ಕನು; ಇವನು ಪುಷ್ಟನು, ಯುವಕನು, ಸಂಹನನಾಂಗನು, ಕತ್ತೆಯಂತೆ ಭಾರವನ್ನು ಹೊರಬಲ್ಲವನು ಎಂದು ಹಿಂದೆ ಬಿಟ್ಟಿಯಾಗಿ ಹಿಡಿದು ಹೊರಲು ನೇಮಿಸಿದ್ದ ಪುರುಷರಿಂದ ಕೂಡಿಸಿ ಪಲ್ಲಕ್ಕಿಯನ್ನು ವಹಿಸಲು ಆಜ್ಞಾಪಿಸಿದನು. ಜಡಭರತನು ಮಹಾನುಭಾವನಾದರೂ, ಸುಮ್ಮನೇ ಶ್ರೀಹರಿ ಇಚ್ಛೆ ಎಂದು ತಿಳಿದು, ಆ ಅವಮಾನವನ್ನು ಸಹಿಸಿ, ಪಲ್ಲಕ್ಕಿಯನ್ನು ಹೊತ್ತು ಹೊರಟನು. ಒಂದು ನೊಗೆಯಷ್ಟು ದೂರ ನೋಡಿ ನಡೆಯುವ ಭರತನಿಂದ ಕೂಡಿ ನಡೆಯಲಾರದೆ, ಇತರ ಪುರುಷರು ತಪ್ಪಿ ನಡೆಯಲು, ಶಿಬಿಕೆಯು ತೂಗಿ ರಹೂಗಣನಿಗೆ ಕಷ್ಟವಾಯಿತು. ಆಗ ರಾಜನು ವಾಹಕರನ್ನು ನೋಡಿ 'ಎಲವೋ! ವಾಹಕರೇ! ಸರಿಯಾಗಿ ನಡಿಯಿರೋ, ಏಕೋ ವಾಹನವು ವಿಷಮಗತಿಯಿಂದ ಹೋಗುತ್ತಿದೆ?' ಎಂದನು. ಆಗ ಅವರು ತರ್ಜಿಸಿ ನುಡಿದ ರಾಜನ ಮಾತನ್ನು ಕೇಳಿ ದಂಡಿಸುವನೆಂದು ಭಯಪಟ್ಟು ವಿಜ್ಞಾಪಿಸಿದರು–

'ನರದೇವ! ನಾವು ಜಾಗರೂಕರಾಗಿ ನಡೆಯುತ್ತಿರುವೆವು. ನಿನ್ನ ಆಜ್ಞೆಯನ್ನು ಮೀರಿಲ್ಲ. ಚೆನ್ನಾಗಿಯೇ ಹೊರುತ್ತಿರುವೆವು. ಆದರೆ ಈಗ ಹೊಸತಾಗಿ ಕರೆತಂದವನು, ಸಮಶೀಘ್ರುವಾಗಿ

ನಡೆಯುತ್ತಿಲ್ಲ. ಇವನ ಜತೆ ಕೂಡಿ ಹೊರಲು ನಮಗೆ ಸಾಧ್ಯವಿಲ್ಲ. ಸಾಂಸರ್ಗಿಕ ದೋಷದಿಂದ ನಾವೂ ಅವನಂತೆ ತಪ್ಪು ಹೆಜ್ಜೆಯನ್ನು ಹಾಕಬೇಕಾಗುತ್ತದೆ'. ಎಂದ ಅವರ ಮಾತನ್ನು ಕೇಳಿ ರಾಜಾ ರಹೂಗಣನು ದೊಡ್ಡವರ ಸೇವೆ ಮಾಡಿದ್ದನಾದರೂ ರಾಜನೆಂಬುವ ದರ್ಪದಿಂದ ಸ್ವಲ್ಪ ಕುಪಿತನಾಗಿ ಬ್ರಹ್ಮವರ್ಚಸ್ಸು ಸ್ಪಷ್ಟವಾಗಿ ತೋರದೆ ಧೂಳಿಮುಚ್ಚಿದ ಮಲಿನಕಾಯನಾಗಿ ಬೂದಿಮುಚ್ಚಿದ ಕೆಂಡದಂತಿದ್ದ ಬ್ರಾಹ್ಮಣನನ್ನು ನೋಡಿ ಅಜ್ಞಾನದಿಂದ ಇಂತೆಂದನು–

ಅಯ್ಯೋ ಪಾಪ! ಸಖನೇ! ಬಹಳ ಹೊತ್ತು ಒಬ್ಬನೇ ಬಹುದೂರ ಮಾರ್ಗವನ್ನು ಹೊತ್ತು ನಡೆದಿರುವೆ! ಬಹಳ ಶ್ರಮವಾಗಿದ್ದಂತೆ ಇದೆ ಅಲ್ಲವೇ? ಬಡವಾಗಿರುವೆ. ಗಟ್ಟಿ ಮೈಕಟ್ಟಿಲ್ಲ. ಮುದುಕನೂ ಆಗಿರುವೆ! ಅಣ್ಣಾ ಈ ನಿನ್ನ ಜತೆಗೆ ಹೊರುವವರು ಹಾಗಿಲ್ಲ.

ಇಂತು ನಿಂದಿಸಿದರೂ ಆ ಮಹಾನುಭಾವನು 'ಪ್ರಕೃತಿಯು ಹರೀಚ್ಛೆಯಿಂದ ಕೊಟ್ಟ ಪಂಚಭೂತ ತ್ರಿಗುಣ ಪಾಪ ಪುಣ್ಯ ಕರ್ಮ ಸಮೂಹವೆನಿಸಿದ ಶರೀರವು ಅನಿತ್ಯವು, ಘಟದಂತೆ ನಾನಾವಿಧಾವಯವ ಸನ್ನಿವೇಶರೂಪವು– ಅದರಲ್ಲಿ ಈ ನನ್ನ ಭೌತಿಕಶರೀರವೆನಗೆ ಕೊನೆಯ ದಾಗಿದೆ. ಇದರಲ್ಲಿ ನನಗೇಕೆ ಅಹಂಕಾರ? ನನಗೇಕೆ ಮಮಕಾರ? ಎಂದು ಮಿಥ್ಯಾಜ್ಞಾನರಹಿತ ನಾಗಿ, ಶ್ರೀಹರಿಯನ್ನು ಚಿಂತಿಸುತ್ತಾ, ಸುಮ್ಮನೆ ಪಲ್ಲಕ್ಕಿಯನ್ನು ಹೊರುತ್ತಿದ್ದನು. ಸ್ವಲ್ಪದೂರ ಹೋದಮೇಲೆ ಮತ್ತೆ ಶಿಬಿಕೆಯು ವಿಷಮವಾಗಿ ಹೋಗುವುದನ್ನು ಕಂಡು, ಕಡುಕೋಪಗೊಂಡು, ರಹೂಗಣನು 'ಎಲೋ! ನೀನು ಜೀವನ್ಮೃತನಂತೆ ಕಾಣುತ್ತಿರುವೆ! ಏತಕ್ಕೋ ನನ್ನನ್ನು ತಿರಸ್ಕರಿಸಿ, ರಾಜಾಜ್ಞೆಯನ್ನೂ ಮೀರಿ ನಡೆಯುತ್ತಿರುವೆ? ಪ್ರಮತ್ತನಾದ ನಿನಗೆ ಬುದ್ಧಿಬರುವಂತೆ ಮಾಡಲೇ ಬೇಕಾಗಿದೆ. ಜನರನ್ನು ಯಮರಾಜನಂತೆ, ನಾನೂ ನಿನ್ನನ್ನು ದಂಡಿಸಿ ಸರಿಯಾಗಿ ನಡೆಸುವೆನು. ನೋಡು' ಎಂದನು.

ಇಂತು ಬಹುಭಗವದ್ಭಕ್ತಜನರಲ್ಲಿ ಹರಿಗೆ ಪ್ರೀತಿಪಾತ್ರನಾದ ಭರತನನ್ನು, ಅಜ್ಞಾನ ಮಿಥ್ಯಾಜ್ಞಾನಗಳಿಂದ ಕೂಡಿ, ಕಡುಕೆಡುಕು ಮಾತನ್ನಾಡಿ, ರಾಜನೆಂಬ ದುರಭಿಮಾನದಿಂದ ತಿರಸ್ಕರಿಸಿದ ರಹೂಗಣನನ್ನು ನೋಡಿ, ಪೂಜ್ಯನಾದ ಬ್ರಾಹ್ಮಣನು ಸರ್ವಭೂತಾಂತರ್ಯಾಮಿ ಯನ್ನು ನೆನೆದು, ಹರಿಗೆ ಮನಸಾ ವಂದಿಸಿದನು. ಪಂಡಿತಮಾನಿಯಾಗಿ, ಯೋಗೇಶ್ವರ ಶುಶ್ರೂಷೆ ಯನ್ನು ಚೆನ್ನಾಗಿ ಮಾಡದಿರುವ ರಾಜನನ್ನು ನೋಡಿ ನಗುತ್ತ, ಅಹಂಕಾರವಿಲ್ಲದೆ ಇಂತೆಂದನು–

ವೀರ! ನಾನು ಹೊರುವವನಾಗಿದ್ದರೆ ನನಗೆ ಭಾರ! ನಾನು ಹೋಗುವವನಾಗಿದ್ದರೆ ಆಗ ನನಗೆ ಹೋಗಿ ಸೇರುವ ಸ್ಥಲ – ನಡೆಯುವ ಮಾರ್ಗ. ವಿಚಾರಿಸಿ ನೋಡಲು ನಾನು ಭರ್ತನೂ ಇಲ್ಲ. ನನಗೆ ಭಾರವನ್ನೆಲ್ಲಿಯದು? ನಾನುಗಂತಾನೂ ಅಲ್ಲ. ನನಗೆ ಗಮ್ಯವಿನ್ನಾವುದು? ಮಾರ್ಗವಂತೂ ಇಲ್ಲೇ ಇಲ್ಲ. ಆದ್ದರಿಂದ ನೀನು ನುಡಿದ ಮಾತುಗಳಿಗೆ ಅರ್ಥವೇ ಇಲ್ಲ. ಭೂತಮಯ ಶರೀರವನ್ನು ನೋಡಿ ದಷ್ಟಪುಷ್ಟ ಎನ್ನುವುದು ಜ್ಞಾನಗಳಿಗೆ ಸಮ್ಮತಲ್ಲ. ಸ್ಥೌಲ್ಯ, ಕೌರ್ಶ್ಯ, ಆಧಿವ್ಯಾಧಿಗಳು, ಹಸಿವು ನೀರಡಿಕೆಗಳು, ಭಯ, ಕಲಹ, ಇಚ್ಛೆ, ಮುಪ್ಪು, ನಿದ್ರೆ, ತಂದ್ರಿ, ಸಿಟ್ಟು, ಅಹಂಕಾರ ಮದ ಇವು ದೇಹದಲ್ಲಿ ನಾನೆಂಬ ದುರಭಿಮಾನಿಗೇ ಹೊರತು ನನಗಿಲ್ಲ.

ಆದಿ ಮತ್ತು ಅಂತ್ಯಗಳುಳ್ಳ ಜಡವೆಲ್ಲವೂ ಜೀವನ್ಮೃತವೇ ಸರಿ! ಪ್ರಾಣಯೋಗದಿಂದ ಜೀವಿಸುವೆವು. ಪ್ರಾಣವಿಯೋಗದಿಂದ ಸಾಯುವೆವು. ನಾವೆಲ್ಲರೂ ದೇಹದಿಂದ ಜೀವನ್ಮೃತರೇ ಆದರೂ ಚೇತನಸ್ವರೂಪರಾದ್ದರಿಂದ ನಿತ್ಯರು. ನೀನೆನ್ನನ್ನು ದಂಡಿಸುವ ಸ್ವಾಮಿಯಾ? ಸ್ವಾಮಿ

ಭಾವವು ಅಚ್ಯುತನಲ್ಲಿ ಮುಖ್ಯವಾಗಿದೆ. ಅವನೇ ನಿಜವಾದ ಪ್ರಭುವೆಂದು ತಿಳಿ. ಮಮಸ್ವಾಮಿ ಹರಿಯು ಸರ್ವಸ್ವಾಮಿಯಾಗಿರುವನು. ಮತ್ತೊಬ್ಬನು ಸ್ವಾಮಿಯಾಗಲಾರನು. ಅಂತಹ ಸ್ವಾಮಿತ್ವವು ರುದ್ರಾದಿಗಳಲ್ಲಿಯೂ ಸ್ವಲ್ಪವಾದರೂ ನಾನು ಕಾಣದಿರುವೆನು. ಆಜ್ಞರೂಢಿಯಿಂದ ಸ್ವಾಮಿಶಬ್ದವು ಇತರರಲ್ಲಿ ಕಂಡಮಾತ್ರದಿಂದ ಶ್ರೀಶನಲ್ಲದವರು ಮುಖ್ಯಸ್ವಾಮಿ ಎನಿಸಲಾರರು. ಸೈಂಧವ ಪ್ರಜರು ನಿನ್ನನ್ನು ಸ್ವಾಮಿ ಎಂದ ಮಾತ್ರದಿಂದ ನೀನು ಮುಖ್ಯಸ್ವಾಮಿಯಾಗಿ ಪ್ರಪಂಚ ವನ್ನೆಲ್ಲಾ ನಡೆಸುವೆಯಾ? ಇಲ್ಲ. ಮನುಜರಲ್ಲಿ ಒಬ್ಬ ಸ್ವಾಮಿಯೂ ಇಲ್ಲ. ಹಟಹಿಡಿದು ಅವನು ಸಾಧಿಸುವುದೂ ಇಲ್ಲ. ನೀನೂ ಅನ್ಯಜೀವರಂತೆ ಒಬ್ಬನಾದ್ದರಿಂದ ನಿನ್ನಲ್ಲಿ ಏನೂ ವಿಶೇಷವಿಲ್ಲ. ಹೋಗಲಿ ಬಿಡು! ರಾಜನ್! ನಾವೇನು ಮಾಡಬೇಕು? ಹೇಳು. ಉನ್ಮತ್ತಮತ್ತ ಜಡಸ್ವರೂಪ ಸ್ಥಿತಿಯನ್ನು ಹೊಂದಿ ನಿಂತಿರುವ ನನ್ನನ್ನು ಶಿಕ್ಷಿಸುವುದರಿಂದ ನಿನಗೇನೂ ಪ್ರಯೋಜನವಾಗಲಾರದು. ಶಿಕ್ಷಿಸಿದರೂ ದೇಹಾಭಿಮಾನರಹಿತನಾದ ನನಗೆ ವ್ಯಥೆಯೂ ಆಗ ಲಾರದು. ಇನ್ನು ಅಳುವುದೆಲ್ಲಿಂದ ಬರಬೇಕು? ಸ್ತಬ್ಧನಾದ ಹುಚ್ಚನಂತಿರುವ ನನ್ನ ಶಿಕ್ಷೆಯು ಪಿಷ್ಟಪೇಷಣದಂತೆ ವ್ಯರ್ಥವೇ ಆದೀತು!

ಶ್ರೀಶುಕನು ಪೇಳಿದನು–

ಜಡಭರತನಿಂತು ಪೇಳಿ, ಇನ್ನೊಂದು ದೇಹಾರಂಭವನ್ನು ತರಲಾರದೆ ವಿರಮಿಸಿದ ಪ್ರಾರಬ್ಧ ಕರ್ಮಶೇಷವನ್ನು ಭುಂಜಿಸಿ, ಕಳೆದುಬಿಡಲು ನಿಶ್ಚಯಿಸಿ, ಶಾಂತನಾಗಿ, ಯಥಾಪೂರ್ವವಾಗಿ ಪಲ್ಲಕ್ಕಿಯನ್ನು ಹೊತ್ತು ನಡೆದನು.

ಪಾಂಡವೇಯ! ಆ ಸಿಂಧುಸೌವೀರ ರಾಜನು, ನಿಜವಾಗಿ ಸೇವಿತ ಮಹಚ್ಚರಣನು, ತತ್ತ್ವ ಜ್ಞಾನಾಧಿಕಾರಿಯು ಶ್ರದ್ಧಾವಂತನೇ ಆಗಿದ್ದನಾದ್ದರಿಂದ, ಹೃದಯಗತ ಅಹಂಕಾರಾದಿ ದೋಷ ನಿರಾಸಕವು, ಬಹು ಯೋಗಶಾಸ್ತ್ರ ಸಮ್ಮತವು ಆದ ಭರತನ ವಚನವನ್ನಾಲಿಸಿ, ಸತ್ವರವಾಗಿ ಶಿಬಿಕೆಯಿಂದಿಳಿದು, ರಾಜನೆಂಬ ಮದವನ್ನು ಬಿಟ್ಟು, ಪಾದದಲ್ಲಿ ಶಿರವನ್ನಿಟ್ಟು ನಮಿಸಿ, ಕೈಜೋಡಿಸಿ, ನಿಂತಿಂತೆಂದನು–

ಸ್ವಾಮಿ! ಯಾರು ನೀನು? ಯಾವ ಜಾತಿ? ಏಕೆ ನಿಗೂಢವಾಗಿರುವೆ? ಬ್ರಾಹ್ಮಣರ ಸೂತ್ರ ವಿದೆಯಲ್ಲ! ಯಾವ ಅವಧೂತನು? ಯಾರ ಪುತ್ರನು? ಎಲ್ಲಿಂದ ಬಂದೆ? ಏಕೆ ಬಂದೆ? ನಮಗೆ ಕ್ಷೇಮವನ್ನು ಕೊಡಲು ಬಂದೆಯಾ? ಅಥವಾ ಸಾಕ್ಷಾತ್ ಕಪಿಲನೋ? ಇರಲಿಕ್ಕಿಲ್ಲ! ಯಾರೇ ಆಗಲಿ ನನ್ನನ್ನು ಕ್ಷಮಿಸು. ಸುರರಾಜನ ವಜ್ರ, ರುದ್ರನ ಶೂಲ, ಯಮನ ದಂಡ; ಅಗ್ನಿ, ಸೂರ್ಯ, ಸೋಮ, ವಾಯು, ಕುಬೇರಾದ್ಯಸ್ತ್ರಗಳು ಮೊದಲಾದವೆನಗಷ್ಟು ಭಯಕಾರಣ ವಲ್ಲ. ಬ್ರಾಹ್ಮಣಾಪರಾಧಕ್ಕೆ ನಾನು ಬಲು ಹೆದರುತ್ತಿರುವೆನು! ಸರ್ವಸಂಗ ದೂರನಾಗಿ, ಮೂಢನಂತೆ ಗೂಢನಾಗಿರುವ ನಿನ್ನ ವಿಜ್ಞಾನವು, ಮಹಾನುಭಾವಾ! ನನ್ನಂತಹ ಪಾಮರರಿಗೆ ಅಗಾಧವೆಂದು ತೋರುತ್ತಿದೆ. ಆಧ್ಯಾತ್ಮಯೋಗ ರಹಸ್ಯ ಪ್ರಕಾಶಕವಾದ ನಿನ್ನ ವಚನಗಳನ್ನರ್ಥ ಮಾಡಿ ತಿಳಿಯಲು, ಮನಸಾಪಿ ಸಾಧ್ಯವಾಗಿಲ್ಲ. ನಾನೂ ಆತ್ಮತತ್ತ್ವವಿದ್ಗುರುವಾದ ಕಪಿಲ ಯೋಗೀಶ್ವ ರನನ್ನು ಕೇಳಿ, ತಿಳಿಯಲಪೇಕ್ಷಿಸಿ, ಹೋಗುತ್ತಿರುವೆನು. ಜ್ಞಾನಾಂಶದಿಂದ ಅವತರಿಸಿ, ಸಂಸಾರಿ ಶರಣನೆನಿಸಿರುವ ಕಪಿಲ ಭಗವಂತನು, ಸಾಕ್ಷಾತ್ ಶ್ರೀಹರಿಯೇ ಅಹುದು. ಅವನೇ ಲೋಕ ಸಾಕ್ಷಿಯಾಗಿ ಸಾಧ್ವಸಾಧುಜನ ಪರೀಕ್ಷಣವನ್ನು ಮಾಡಲು, ನಿಜರೂಪ ತೋರಗೊಡದೆ, ಇಂತು

ನೀನಾಗಿ ಸಂಚರಿಸುತ್ತಿರುವನೋ ಏನು? ಗೃಹಸ್ಥಾಶ್ರಮ ಪಾಶಬದ್ಧನು. ಅಜ್ಞಾನಿಯು ಆದ ನಾನು, ಯೋಗೇಶ್ವರಸ್ವರೂಪವನ್ನೆಂತು ತಿಳಿಯುವೆನು?

ನಮಗೆಲ್ಲರಿಗೂ ಆದಂತೆ ನಿನಗೂ ಹೊರುವಾಗ ಕಂಠಭುಗ್ನತೆಯು, ನಡೆಯುವಾಗ ಪಾದವೇದನೆಯು, ಆಗಿ ಶ್ರಮೆ ಎನಿಸುವುದಿದು ಸತ್ಯ. ಜಲಾಹರಣಾದಿಗಳಲ್ಲಿ ತರುವ ಘಟಾದಿಗಳು ಶ್ರಮಾಪಾದಕವಾಗಿಲ್ಲವೇ? ಘಟಕ ಭಾರವು ಹೊತ್ತು ತರುವ ಶ್ರಮೆಯು ವ್ಯವಹಾರದಿಂದ ಸಿದ್ಧವಾಗಿ, ಸತ್ಯವೆಂದೇ ಸಾಕ್ಷಿಯು ಪೇಳುತ್ತಿದೆ. ಸಾಕ್ಷಿ ಪ್ರಮಾಣಸಿದ್ಧವಾದುದು ಸತ್ಯವೇ ಸರಿ! ಸ್ಥಾಲಿಯನ್ನು ಅಗ್ನಿಯ ಮೇಲಿಟ್ಟಾಗ ಅದು ಕಾದು, ಆಮೇಲೆ ಒಳಗಿನ ನೀರು, ಅದರ ತಾಪದಿಂದ ಅನ್ನ ಕಾರ್ಯವು ಹುಟ್ಟಿ ಪಾಕವಾಗುತ್ತದೆ. ಅಂತೆಯೇ ದೇಹೇಂದ್ರಿಯಗಳಿಂದ ಮನಸ್ಸು, ಮನಸ್ಸಿನಿಂದ ಜೀವನು, ದುಃಖವನ್ನು - ಅಭಿಮಾನದಿಂದಲೇ ಆಗಲಿ - ಹೊಂದುವುದೂ ನಿಜವಲ್ಲವೇ? ದುಷ್ಟಶಿಕ್ಷಕನು, ಶಿಷ್ಟರಕ್ಷಕನು, ದೇವಬ್ರಾಹ್ಮಣ ಕಿಂಕರನಾದ ರಾಜನು, ಪ್ರಜರನ್ನು ದಂಡಿಸುವುದು ಪಿಷ್ಟಪೇಷಣದಂತೆ ವ್ಯರ್ಥವಾಗಲಾರದು ನೋಡು. ಸ್ವಧರ್ಮವನ್ನು ಮಾಡಿ, ಅದೇ ಅಚ್ಯುತಾರಾಧನವೆಂಬ ಜ್ಞಾನಿಯು ಆಧಿವ್ಯಾಧಿಕಾರಣವಾದ ಪಾಪದಿಂದ ದೂರನಾಗಿ, ಸಂಸಾರಮುಕ್ತನಾಗುವವನಲ್ಲವೇ? ನಾನೇನೋ ಪಾಪಿಯು ನಿಜ! ನರದೇವನೆಂಬ ದುರಭಿಮಾನದಿಂದ ಮದಿಸಿ, ಕಣ್ಣು ಕಾಣದೆ, ನಿನ್ನಂತಹ ಸಜ್ಜನಶ್ರೇಷ್ಠನನ್ನು ತಿರಸ್ಕರಿಸಿದೆನು. ನನ್ನನ್ನು ಕ್ಷಮಿಸು. ದೀನಬಂಧೋ! ಹರಿವಿಷಯಜ್ಞಾನವನ್ನೂ ದಯಪಾಲಿಸಿ ರಕ್ಷಿಸು. ಸುಜನಾವಮಾನ ಪಾಪಪಂಕವನ್ನು ಜ್ಞಾನಬಲದಿಂದ ತೊಳೆದುಕೊಂಡು, ಶುದ್ಧನಾಗುವಂತೆ ಮಾಡು. ಹರಿಪ್ರಿಯನಾದ ನಿನಗೆ, ತಾಪ ಕೋಪಾದಿ ವಿಕಾರವೆಲ್ಲಿಯದು? ಮಾನಾಪಮಾನಗಳನ್ನು ಸಮಾನವಾಗಿ ಕಾಣುವ, ದೇಹಾಭಿಮಾನರಹಿತನಾದ ನಿನಗೆ, ನನ್ನಲ್ಲಿ ದಯೆಬಾರದಿರುವುದೇ? ಮಹಜ್ಜನಾವಮಾನ ಮಾಡಿದೆಡೆ, ಮಹಾರುದ್ರನು ಕೂಡ ತಪಿಸಿಬಿಡುವನೆಂದ ಮೇಲೆ ನನ್ನಂತಹ ಪಾಮರನು, ನಿನ್ನಂತಹ ಮಹಜ್ಜನಾವಮಾನ ಮಾಡಿ ಪಶ್ಚಾತ್ತಾಪದಿಂದ ಬೇಡುವುದೇನಾಶ್ಚರ್ಯವು! ದಯಮಾಡಿ ಕ್ಷಮಿಸು.

## ೧೧. ಜಡಭರತಾಖ್ಯಾನ – ಉಪದೇಶ

ಆಗ ಬ್ರಾಹ್ಮಣನಿಂತು ನುಡಿದನು–

ರಾಜನ್! ಅಪಂಡಿತನಾದರೂ ಕೋವಿದರಂತೆ, ಕಲಿತು ಮಾತನಾಡುವ ನಿನ್ನನ್ನು ತತ್ವಜ್ಞಾನಿಗಳು ಮೆಚ್ಚಲಾರರು. ಜ್ಞಾನಿಸಭೆಯಲ್ಲಿ – 'ದೃಶ್ಯವಾದ್ದರಿಂದ ಪ್ರಪಂಚವು ಮಿಥ್ಯೆ' ಎಂಬುವ ಕುತರ್ಕದಂತೆ ಕಂಡದ್ದೆಲ್ಲವೂ, ನೀನು ತಿಳಿದಂತೆ ಇದೆ, ಎಂಬುವ ನಿನ್ನ ಮಾತೂ ಸರಿ ಎನಿಸಲಾರದು. ನೀನೂ ಪಂಡಿತನೆನಿಸಲಾರೆ. 'ಭರಣ ಗಮನಗಳು ನಿನಗಿವೆ, ನಾನು ಶಾಸಕನಾದ್ದರಿಂದ ದಂಡಿಸುವೆನು– ಪಾತ್ರೆಯ ತಾಪದಿಂದ ತಂಡುಲವು ಬೆಂದಂತೆ, ಜೀವನಿಗೆ ದುಃಖವು ತಪ್ಪಿದ್ದಲ್ಲ' ಎಂದು ನೀನಾಡಿದ ಕುತರ್ಕಗಳು, ಯಥಾಸ್ಥಿತ ವಸ್ತು ಸ್ವರೂಪವನ್ನರಿತ ಜ್ಞಾನಿಜನರಿಗೆ ನಿಂದ್ಯವೇ ಸರಿ. ದೇಹಾಭಿಮಾನವಿಲ್ಲದವನಿಗೆ, ದುಃಖವಿಲ್ಲವೇ ಇಲ್ಲ. ಹರಿಯು ಸ್ವತಂತ್ರನು – ನಾವೆಲ್ಲರೂ ಅಸ್ವತಂತ್ರರು, ಅಂದಮೇಲೆ ಕರ್ತೃತ್ವ ಭರಣತ್ವ ಗಂತೃತ್ವಾದಿಗಳು ನಮಗಿಲ್ಲ.

ನಿನ್ನಂತೆಯೇ, ವೇದಗಳ ಪ್ರತೀತಾರ್ಥವನ್ನು ಮಾತ್ರ ಗ್ರಹಿಸಿ, ಗೃಹಪತಿಯು ಮಾಡಲು ಪೇಳಿದ ಯಜ್ಞಾದಿಕರ್ಮ ವಿಸ್ತಾರವನ್ನು ವಿಜೃಂಭಣೆಯಿಂದ ಮಾಡುವ ಅಲ್ಪಬುದ್ಧಿಗಳಿಗೆ, ಶುದ್ಧವಾದ ಜ್ಞಾನಸಿದ್ಧಾಂತವೆಂತು ಗೋಚರವಾಗುವುದು? ಕರ್ಮಕಾಂಡ ಬ್ರಹ್ಮಕಾಂಡಗಳೆರಡೂ ಪರಬ್ರಹ್ಮ ನಿರೂಪಕವೆಂಬುದೇ ಸರಿಯಾದದ್ದು.

ವೇದವು ಅಪೌರುಷೇಯವು. ಮೋಕ್ಷಸಾಧನ ಜ್ಞಾನಜನಕವು ಆಗಿದೆ. ಆದರೂ ಸ್ವಪ್ನ ದೃಷ್ಟಾಂತವನ್ನು ನೋಡಿ, ಗೃಹಸ್ಥಾಶ್ರಮದ ವಿಷಯಸುಖವು ಸ್ವಪ್ನದಂತೆಯೇ ಹರೀಚ್ಛಾಧೀನವು; ಸತ್ಯವಾದರೂ ಹರಿಪ್ರಸಾದಲಬ್ಧಜ್ಞಾನದಿಂದ ನಿವೃತ್ತವಾಗುವುದು. ಅಶಾಶ್ವತವೆಂದರಿಯದವನಿಗೆ ಸಾಕ್ಷಾದ್ವೇದವು ಕೂಡ ಎಷ್ಟಧ್ಯಯನ ಮಾಡಿದರೂ ಮೋಕ್ಷವೆಂಬ ಮಹಾಪುರುಷಾರ್ಥವನ್ನು ಕೊಡಲಾರದು. ಎಲ್ಲಿಯವರೆವಿಗೂ ಮನಸ್ಸು ರಜಸ್ಸಿನಿಂದಲೋ ತಮಸ್ಸಿನಿಂದಲೋ ಅಥವಾ ಸತ್ವಗುಣದಿಂದಲೋ ತುಂಬಿರುವುದೋ ಅಲ್ಲಿಯವರೆವಿಗೂ ವಿಷಯಸುಖೇಚ್ಛೆಯನ್ನು ಹುಟ್ಟಿಸಿ ಶಾಸ್ತ್ರವಿಧಿಯನ್ನೂ ಮೀರಿ ನಡೆಯಿಸಿ, ಪುಣ್ಯವನ್ನೋ ಪಾಪವನ್ನೋ ಮಾಡಿಸೇ ಬಿಡುವುದು. ಆ ಮನಸ್ಸು ಕರ್ಮವಾಸನಾಮಯವು, ವಿಷಯಾಸಕ್ತವು, ತ್ರಿಗುಣಪ್ರವಾದ ವೇಗವಶವು ಆಗಿ ಹತ್ತಿಂದ್ರಿಯಗಳು, ಐದು ಪ್ರಾಣಗಳು, ಒಂದು ತಾನಾಗಿ ಹದಿನಾರು ಮಾರ್ಗದಲ್ಲಿ ಹರಿದು ಹೋಗುತ್ತಿರುವುದು. ಅದರ ಗತಿಯು ಬಹು ವಿಧವಾಗಿ ಒಳಗೆ ವಾಸನಾರೂಪದಿಂದಿದ್ದು ಹೊರಗೆ ಅನೇಕ ದೇಹಗಳನ್ನು ಕರ್ಮಗಳಿಂದ ಸೃಜಿಸಿಕೊಡುತ್ತಲೇ ಇರುವುದು; ಹೊರಗೆ ವಿಷಯರೂಪ ದಿಂದಲೂ ಒಳಗೆ ಅಂತಃಕರಣರೂಪದಿಂದಲೂ ಮನವು ಜೀವನನ್ನು ಆಲಿಂಗಿಸಿ, ದುಃಖವನ್ನೂ, ಸುಖವನ್ನೂ, ಸುಖಮಿಶ್ರ ದುಃಖವನ್ನೂ, ದುಃಖಮಿಶ್ರ ಸುಖವನ್ನೂ ಕಾಲಕಾಲದಿ ಉಣಿಸುತ್ತಲೇ ಇರುವುದು; ಜೀವನನ್ನೂ ಸಂಸಾರಚಕ್ರದಲ್ಲಿ ತೊಳಲಿಸಿ ಬಳಲಿಸುತ್ತಿರುವುದು. ಅಹಂಕಾರ ಮಮಕಾರವೆಲ್ಲಿಯವರಿಗೂ ಬಿಡುವುದಿಲ್ಲವೋ, ಅಲ್ಲಿಯವರೆಗೂ ಶ್ರೀಹರಿ ಮುಖ್ಯಪ್ರಾಣರ ಪ್ರೇರಣೆಯಿಂದ, ಮನವು, ಸ್ಥೂಲವಾದ ಅಥವಾ ಸೂಕ್ಷ್ಮವಾದ ದೇಹಗಳನ್ನು ತರಲು ಕಾರಣವಾಗಿರುತ್ತದೆ. ಪೂರ್ವೋತ್ತರ ಕಾಲದಲ್ಲಿಯೂ ನಿತ್ಯವಾಗಿದ್ದ ಹರಿಯೇ ಜೀವನ ಸಂಸಾರಕ್ಕೂ ಮೋಕ್ಷಕ್ಕೂ ಮುಖ್ಯಕಾರಣನೆನಿಸಿ, ಅಮುಖ್ಯಕಾರಣವಾದ ಮನದಿಂದ ಜನ್ಮ ಮೋಕ್ಷಗಳನ್ನು ತಂದೊಡ್ಡುತ್ತಿರುವನು.

ತುಪ್ಪದ ಬತ್ತಿಯನ್ನೇ ನುಂಗುವಾಗ ದೀಪವು ಹೊಗೆಯಿಂದ ಕೂಡಿ ಉರಿಯುವುದು. ಬತ್ತಿಯನ್ನು ನುಂಗದೇ ಸರಿಯಾಗಿ ಉರಿಯುವಾಗ ಸ್ವರೂಪವನ್ನು ಹೊಂದಿ ಚೆನ್ನಾಗಿ ಪ್ರಕಾಶವನ್ನು ಕೊಡುವುದು. ಅಂತೆಯೇ ವಿಷಯಗಳಲ್ಲಿ ಅನುರಕ್ತವಾದ ಮನವು ಜೀವನಿಗೆ ದುಃಖಕಾರಣವಾಗುವುದು; ಅದೇ ಮನವೇ ನಿರ್ಗುಣವಾಗಿ ಶ್ರೀಹರಿಯಲ್ಲಿ ರತವಾದರೆ, ಮೋಕ್ಷ ಕಾರಣವಾಗುವುದು. ತ್ರಿಗುಣಗಳಲ್ಲಿಯೂ, ಪೂರ್ವ ಸಂಚಿತ ಕರ್ಮಗಳಲ್ಲಿಯೂ, ರತವಾಗಿ ಮನಸ್ಸು, ನರರ ರಕ್ತವನ್ನು ಹೀರಿ ರುಚಿಕಂಡ ಹುಲಿಯಂತೆ, ಪುನಃ ಪುನಃ ವಿಷಯಗಳಲ್ಲೇ ಪರಿದಾಡುತ್ತಾ ಅದೇ ಶ್ರೇಯಸ್ಸೆಂದು ಭಾವಿಸುವುದು. ಅದೇ ಮನವು ವಿಷಯ ದೂರವಾಗಲು, ಅನಾರೋಪಿತ ಬ್ರಹ್ಮಸ್ವರೂಪವನ್ನಾಶ್ರಯಿಸಿ ನಿರ್ಮಲವಾಗುವುಗು. ಹತ್ತು ಇಂದ್ರಿಯಗಳಿಂದ ಕೂಡಿ ತಾನು ಹನ್ನೊಂದು ಎನಿಸಿ, ಹನ್ನೊಂದು ವಿಧವಾಗಿ, ಹೊರಗಿನ ವಿಷಯಗಳತ್ತ ಧಾವಿಸುವುದು ಮನಸ್ಸಿನ ಸ್ವಭಾವವು. 'ನಾನು ಶಬ್ದವನ್ನು ಕೇಳಲಿಚ್ಛಿಸುವೆನೆಂಬ' ಇಚ್ಛಾಪಂಚಕವು. 'ನಾನು ಮಧುರ ಶಬ್ದವನ್ನೇ ಕೇಳಬೇಕೆಂಬ' ಅಭಿಮಾನ ಪಂಚಕವು ಮನಸ್ಸಿನ ವ್ಯಾಪಾರವಾಗಿದೆ.

ಏಕಾದಶೇಂದ್ರಿಯ ವೃತ್ತಿಗಳಿಗಧಿಷ್ಠಾನಗಳು, ಶಬ್ದಸ್ಪರ್ಶರೂಪರಸಗಂಧ್ವ ಗಳೆಂಬ ಜ್ಞಾನೇಂದ್ರಿಯ ವಿಷಯಗಳು ಗತಿರತಿವಿಸರ್ಜನ ವಚನಶಿಲ್ಪಗಳೆಂಬ ಕರ್ಮೇಂದ್ರಿಯ ವ್ಯಾಪಾರಗಳು, ಮತ್ತು ಶರೀರವು ನಾನಾಧಿಷ್ಠಾನ ಭೂತಮನೋನಾಡಿಯು, ಅಹಂ ಎಂಬ ಅಭಿಮಾನದಿಂದಲೂ, ಮಮ ಎಂಬ ನಿಶ್ಚಯದಿಂದಲೂ ಎರಡು ವಿಧವಾಗಿದೆ. ನಾನು ನೋಡು ವೆನು. ನನ್ನದೀರೂಪ; ಎಂದು ಅನುಭೂತವಾಗುವ ವೃತ್ತಿಗಳೆರಡಕ್ಕು, ಅಹಂ ಎಂಬ ಮಾಯೆ ಎನ್ನುತ್ತಾರೆ. ಇದೇ ಸಂಸಾರಕಾರಣವಾಗಿದೆ. ದೇಹ ಜೀವನ ಯೋಗ್ಯತೆ ಸಂಸ್ಕಾರ ಪುಣ್ಯಪಾಪ ಕರ್ಮ ಫಲವಾಚಕಕಾಲ ಇವುಗಳಿಂದ ಉದ್ಬೋಧಿತವಾಗಿ ಮನಸ್ಸಿಗೆ ಹನ್ನೊಂದು ವಿಕಾರಗಳು ಹುಟ್ಟುತ್ತಿವೆ. ಅದೇನು ನಿಯಮವಿಲ್ಲ. ಹನ್ನೊಂದೇನು ಸಾವಿರವೇನು ಕೋಟಿಗಟ್ಟಲೆಯಾಗಿ ಶ್ರೀಹರಿಪ್ರೇರಣೆಯಿಂದ ಮನೋವಿಕಾರಗಳು ಸಂಭವಿಸುವುವು. ಪರಸ್ಪರವಾಗಿ ಅಗಲಿ ತಾನಾಗಿ ಹೆಂಡದಲ್ಲಾದಂತೆ ಆಗಲಿ ವಿಕಾರಗಳಾಗಲಾರವು. ಶ್ರೀಹರಿಯೇ ಸ್ವತಂತ್ರ ಪ್ರೇರಕನು.

ಕ್ಷೇತ್ರಜ್ಞನಾದ ಹರಿಯು ಜೀವನಭೋಗಕ್ಕಾಗಿ, ಮನಸ್ಸಿನ ವಿಷಯಗಳನ್ನು ಪ್ರಕೃತಿಯಿಂದ ರಚಿಸಿರುವನು. ವಿಷಯಗಳು ಜಾಗ್ರದ್ದಶೆಯಲ್ಲಿ - ಸ್ವಪ್ನದಂತೆ ಹೇಗೋ ಹಾಗೆಯೇ – ಸ್ವತಂತ್ರನು ನಿರ್ಲಿಪ್ತನಾದ ಶ್ರೀಹರಿಯು ಇಚ್ಛೆಯಿಂದ ಹೊಳೆದು ಕಾಣುವುವು. ನಿದ್ರೆಯಲ್ಲಿ ಕಾಣುವುದಿಲ್ಲ. ಶ್ರೀಹರಿಯು ಸಾಕ್ಷಿಯಾಗಿ ಇದೆಲ್ಲವನ್ನೂ ನೋಡುತ್ತಿರುವನು ಮತ್ತು ಆಯಾ ಅವಸ್ಥಾವಿಶೇಷ ವನ್ನು, ಭೋಗವನ್ನು ಜೀವನಿಗೆ ಕೊಡುತ್ತಿರುವನು. ಶ್ರೀಹರಿಯು ಸರ್ವತ್ರವ್ಯಾಪ್ತನು; ಅಂತಃ ಪುರುಷರೂಪನು, ಅನಾದಿನಿತ್ಯನು, ಜಡಜೀವಭಿನ್ನನು, ಸ್ವಪ್ರಕಾಶನು, ದೇಹದಿಂದಲೂ ಜನನ ಮರಣರಹಿತನು, ಬ್ರಹ್ಮಾದಿ ನಿಯಾಮಕನು, ತನ್ನಲ್ಲಿ ತಾನೇ ತಿರೋಹಿತನಾಗಿ ಮೂಲರೂಪ ದಿಂದಿರುವನು, ಭಗವಾನ್ ವಾಸುದೇವನು ಎಂದು ಪ್ರಸಿದ್ಧನಾಗಿದ್ದಾನೆ. ಮುಖ್ಯಪ್ರಾಣನು ಸ್ಥಾವರ ಜಂಗಮ ಜೀವರಲ್ಲಿ ಪ್ರಾಣನಾಗಿದ್ದು ನಡೆಸಿದರೂ, ಸುಖದುಃಖಾದಿ ಜೀವಭೋಗ ಲೇಪವಿಲ್ಲದಿರುವಂತೆ, ಸರ್ವೋತ್ತಮನಾದ ಶ್ರೀವಾಸುದೇವನು ಅಂತರ್ಯಾಮಿಯಾಗಿಯೂ ಮನೋವಿಭೂತಿಗಳನ್ನು ಸಾಕ್ಷಿಯಾಗಿ ನೋಡುತ್ತಿರುತ್ತಾನೆ. ಎಲ್ಲಿಯವರೆಗೂ ಈ ನನ್ನದು, ನಾನೆಂಬ ಭ್ರಾಂತಿಯನ್ನು ಶಾಸ್ತ್ರಜನ್ಯಜ್ಞಾನದಿಂದ ಕಳೆದುಕೊಂಡು, ದುಷ್ಟಸಂಗವನ್ನು ಬಿಟ್ಟು ಆರೆಂದ್ರಿಯಗಳಂ ಜಯಿಸಿ, ಶ್ರೀಹರಿ ಸ್ವರೂಪವನ್ನು ತಿಳಿಯುವುದಿಲ್ಲವೋ ಜೀವನು ಅಲ್ಲಿಯ ವರೆವಿಗೂ ಸಂಸಾರದ ಮಡುವಿನಲ್ಲಿ ಸುತ್ತುತ್ತಲೇ ಇರುವನು. ಇಂತು ಆತ್ಮಯೋಗ್ಯತಾ ಜ್ಞಾಪಕವಾದ ಮನವು ಸಂಸಾರವನ್ನು ತಂದೊಡ್ಡುತ್ತಿರುವಾಗ, ಮಮತೆಯನ್ನು ಪುಟ್ಟಿಸಿ, ಅದರಿಂದ ಶೋಕ ಮೋಹವ್ಯಾಧಿ ದುಸ್ಸಂಗ ಲೋಭ ವೈರ ದುರಭಿಮಾನಾದಿಗಳಿಂದ ತಾಪಪಡಿಸುತ್ತಲೇ ಇರುತ್ತದೆ. ಆದ್ದರಿಂದ ರಾಜನ್! ಈ ಮನಸ್ಸೇ ಶತ್ರುವೆಂದು ತಿಳಿ. ಇದರ ಪರಾಕ್ರಮವು ದುಸ್ಸಹವು. ನೀನು ಉಪೇಕ್ಷಿಸಿದರೆ ಸಾಕು, ಅದು ಅಪ್ರಮತ್ತವಾಗೇ ಇರುವುದ್ದಾದ್ದರಿಂದ ಪ್ರಮತ್ತನಾದವನನ್ನು ತಾಪಕೂಪದಲ್ಲಿ ಕೆಡುಹದೇ ಬಿಡುವುದಿಲ್ಲ. ಶ್ರೀಪರಿ ಗುರುಸೇವೆ ಎಂಬುವ ದಿವ್ಯಾಸ್ತ್ರದಿಂದ, ನೀನಾಗಿ ಎಚ್ಚತ್ತಿದ್ದು, ಅನ್ಯಥಾಜ್ಞಾನಕಾರಣವಾದ ಅದನ್ನು ಗೆದ್ದು ಸಂಹರಿಸು.

## ೧೨. ಜಡಭರತನ ಉಪದೇಶ

ಜಡಭರತನ ಉಪದೇಶವನ್ನಾಗಲಿ ರಹೂಗಣನು ಇಂತು ಪ್ರಾರ್ಥಿಸಿದನು–

ಲೋಕಾನುಗ್ರಹಕ್ಕಾಗಿ ದಿವ್ಯದೇಹವನ್ನು ಧರಿಸಿದ ಸ್ವರೂಪಭೂತಾನಂದವನ್ನು ಮರೆಮಾಚಿ, ಬ್ರಾಹ್ಮಣಬಂಧುವೆನಿಸಿದ ಶ್ರೀಹರೇ! ನಿನಗೆ ನಮಃ. ನಮ್ಮಂತಹ ಪಾಮರರನ್ನು ಉದ್ಧರಿಸಲು ಪುಟ್ಟಿ ಪ್ರಾಕೃತ ದೇಹಾಭಿಮಾನವನ್ನು ತೊರೆದು ಅವಧೂತನಾಗಿ ನಿಜವಾದ ಜ್ಞಾನವನ್ನು ತೋರಿಸದೆ ಗೂಢನಾಗಿ ಚರಿಪ ಬ್ರಾಹ್ಮಣಶ್ರೇಷ್ಠನೇ! ನಿನಗೂ ನಮಃ.

ಜ್ವರದಿಂದ ನೊಂದವನಿಗೆ ದಿವ್ಯೌಷಧವು ಹೇಗೋ, ಉರಿಬಿಸಿಲಲ್ಲಿ ಬೆಂದವನಿಗೆ ಶೀತ ಜಲವು ಹೇಗೋ, ಹಾಗೆಯೇ ಕೆಟ್ಟ ದೇಹಾಭಿಮಾನದಿಂದ ಕಣ್ಣುಕಾಣದೆ ಜ್ಞಾನಹೀನನಾದ ನಿನಗೆ ನಿನ್ನ ವಚನಾಮೃತವೇ ಔಷಧವಾಗಿದೆ. ಆದ್ದರಿಂದಲೇ ನಿನ್ನನ್ನು ನನ್ನ ಸಂಶಯವನ್ನು ಕಳೆಯಬೇಕೆಂದು ಕೇಳಿಕೊಳ್ಳುತ್ತಿರುವೆನು. ನೀನಿಲ್ಲದಿರೆ ಆ ವಿಷಯವು ಪರಿಹೃತವಾಗಲಾರದು. ಆಧ್ಯಾತ್ಮಯೋಗದಿಂದ ಪರಮಾತ್ಮಜ್ಞಾನವನ್ನು ನನಗೆ ತಾನೇ ಹೇಳಿರುವೆ. ಅದನ್ನು ವಿಸ್ತಾರ ಮಾಡಿ ಹೇಳು. ಯೋಗೇಶ್ವರ! ಪ್ರತ್ಯಕ್ಷವಾದ ಭರಣ ಗಮನ ಕ್ರಿಯಾಫಲವೆನಗಿಲ್ಲ ಎಂದು ಹೇಳಿದೆ. ಸೋಮಪಾನಾದಿಕ್ರಿಯಾಜಾತ ಅಮೃತತ್ವವು, ವೇದದಿಂದ ಹೇಳಲ್ಪಟ್ಟು ವ್ಯವಹಾರದಲ್ಲಿಯೂ ಅಭಿಜ್ಞರು ಹೇಳಿ ಒಪ್ಪುತ್ತಿರುವಾಗ, ಅಂತಹ ವೇದ ವಚನಾರ್ಥವು ತತ್ತ್ವಜ್ಞಾನವನ್ನು ಪುಟ್ಟಿಸಲಾರದೆಂದೂ ಪೇಳಿರುವೆ. ಈ ವಿಷಯದಲ್ಲಿ ನನ್ನ ಮನವು ಸಂಶಯಪಟ್ಟು ಹೊಯ್ದಾಡುತ್ತಿದೆ.

ಆಗ ಬ್ರಾಹ್ಮಣನಿಂತು ನುಡಿದನು–

ರಾಜನ್! ಶ್ರೀಹರಿಯೇ ಸರ್ವಮೂಲಕಾರಣನು; ಮೂಲವನ್ನು ಬಿಟ್ಟು ಅಗ್ರವೇ ಸರ್ವಧಾರವೆಂದು ಅನ್ನಬಹುದೇ? ಮೂಲವಿದ್ದರಲ್ಲವೇ ಅಗ್ರವು? ಪೃಥಿವಿಯಲ್ಲಿ ಹುಟ್ಟಿ ಅಲ್ಲೇ ಇರುವುದರಿಂದ ಪಾರ್ಥಿವನು, ಹುಟ್ಟು ಉಳ್ಳವನಾದ್ದರಿಂದ ಜನನು ಎನಿಸಿದವನು ನಡೆಯುವಾಗ ಅಲ್ಲಿ ನಡೆಯುವನು? ಭೂಮಿಯ ಮೇಲೆ ಎಂದರೆ ಅದೇಕೆ ಹೇಳು? ಅವನು ಪಾದಾದ್ಯವಯವಗಳಿಂದ ಧರಿಸಲ್ಪಟ್ಟು ನಿಂತು ನಡೆಯುವವನಲ್ಲವೇ? ಹಾಗೆಂದು ಪಾದದ ಮೇಲೆ ನಡೆಯುವೆನೆಂದು ಯಾರಾದರೂ ವ್ಯವಹರಿಸುವರೇ? ಇಲ್ಲ. ಏಕೆಂದರೆ ಪಾದ ಮೊದಲಾದವು ಗಳಿಗೂ ಭೂಮಿ ಮೂಲಾಧಾರವಾಗಿದೆ. ಆದ್ದರಿಂದಲೇ ಭೂಮಿಯ ಮೇಲೆ ನಡೆಯುವೆನೆಂದು ಹೇಳುವರು. ಅಂತೆಯೇ ಶ್ರೀನಾರಾಯಣನು ಸರ್ವಾಧಾರನು, ಸರ್ವಶಕ್ತನಾದ್ದರಿಂದ ಅವನೇ ಹೊರುವವನು, ಅವನೇ ನಡೆಯುವವನೆಂದು ಜ್ಞಾನಿಜನರು ತಿಳಿದಿರುವರು. ಅವನೇ ಮೂಲಕಾರಣನು, ಅವಾಂತರ ಕಾರಣಗಳನ್ನಾರು ಎಣಿಸುವುದಿಲ್ಲ. ಪಾದಗಳ ಮೇಲೆ ಗುಲ್ಫಗಳು, ಅದರ ಮೇಲೆ ಜಂಘೆಗಳು, ಅದರ ಮೇಲೆ ಕ್ರಮವಾಗಿ ಜಾನುಗಳು, ತೊಡೆಗಳು, ನಡುವು, ಎದೆ, ಕುತ್ತಿಗೆ, ಭುಜಗಳು ಒಬ್ಬ ಮನುಜನ ಅವಾಂತರಾಧಾರಗಳಾಗಿ ಇವೆ. ನನ್ನ ಭುಜದ ಮೇಲೆ ಪಲ್ಲಕ್ಕಿಯ ದಾರುವಿದೆ. ಅದರಾಧಾರದಿ ಪಲ್ಲಕ್ಕಿ, ಅದರಲ್ಲಿ ನೀನು ಸೌವೀರರಾಜನೆಂಬ ಹೆಸರುಳ್ಳವನಾಗಿರುವೆ. ರಾಜನೆಂಬ ಹೆಸರು, ಶಬ್ದಮಾತ್ರದಿಂದ ನಿನ್ನಲ್ಲಿದೆ. ರಂಜಕನೆಂಬ ಅರ್ಥದಿಂದಲ್ಲ! ಆ ನಿನ್ನ ಶರೀರವನ್ನು ರಾಜನೆಂದು ದುರಭಿಮಾನದಿಂದ ತಿಳಿದು, ದುಮದಾಂಧ ನಾಗಿರುವೆ. ಅದರ ಫಲವೀ ಬಡಜನರನ್ನು ಹಿಡಿದು ಬಿಟ್ಟಿಯಾಗಿ ಹೊರಿಸುತ್ತಿದ್ದೂ, ದಯೆಯಿಲ್ಲದೆ

ನಿಷ್ಠುರವಾಗಿ ಮಾತುಗಳನ್ನಾಡಿ ನೋಯಿಸುತ್ತಿರುವೆ. ಮೇಲೆ ಜನರ ರಕ್ಷಕನೆಂದು ಕೊಚ್ಚಿಕೊಳ್ಳುವ ನಿನ್ನನ್ನು ಜ್ಞಾನಿಸಭೆಯು ದುಷ್ಟನೆಂದು ಜರಿಯುವುದು; ಹೊರತು ಮೆಚ್ಚಲಾರದು.

ಇನ್ನು ಪೃಥಿವಿಯ ಮೇಲೆ ನಡೆಯುವವನು ನಿಂತಿರುವನೆಂದಮಾತ್ರದಿಂದ ಅದೇ ಮೂಲ ಕಾರಣವಾಗಲಾರದು. ಚರಾಚರಗಳ ಉತ್ಪತ್ತಿ ಸ್ಥಿತಿಗಳಿಗೆ ಪೃಥಿವಿಯೇ ಕಾರಣವೆಂಬುದು ಅವಿದ್ವದ್ರೂಢಿಯಿಂದ. ಪೃಥಿವೀಶಬ್ದಾರ್ಥ ತಿಳಿಯದೆ, ಪೃಥಿವಿಯ ನಿಯಾಮಕವಾಗಿ ಪೃಥಿವಿ ಯಲ್ಲಿದ್ದು, ತನ್ನ ಪೃಥಿವೀನಾಮವನ್ನದಕ್ಕೆ ಕೊಟ್ಟ ನಾರಾಯಣನೇ ಸರ್ವಧಾರನೆಂಬುದನ್ನು ಮರೆತು, ಪೃಥಿವಿಯೇ ಕಾರಣವೆಂದು ವ್ಯವಹರಿಸುವವರು ಅಜ್ಞಾನಿಗಳೇ ಸರಿ! ಪೃಥಿತನು, ಪೃಥುಸ್ವರೂಪನಾದ್ದರಿಂದ ಶ್ರೀಹರಿಯು ಪೃಥಿವಿ ಎನಿಸಿ ಖ್ಯಾತನಾಗಿರುವನು. ಕ್ಷಿತಿ ಎಂದರೆ ಜನರನ್ನು ತನ್ನ ಆಧಾರದಿಂದ ಧರಿಸಿ ನಿಲ್ಲಿಸಿ ಪೋಷಿಸುವನೆಂದು ಅರ್ಥ. ಪ್ರವೃತ್ತಿನಿಮಿತ್ತವಿಲ್ಲದ ಪರಮಾಣನು ಸಮುದಾಯರೂಪ ಪೃಥಿವಿಯು ಚರಾಚರಾಶ್ರಯವೆಂಬುವುದು ತಪ್ಪು, ಮತ್ತು ಅಂತಹ ಆಧಾರತ್ವವು ಅಜ್ಞಾನ ಕಲ್ಪಿತವಾಗಿದೆ. ಆದ್ದರಿಂದ ಪೃಥಿವಿಯು ಅವಾಂತರಧಾರಿಣಿಯಾಗಿ ಶ್ರೀಹರಿಯೇ ಮುಖ್ಯಾಧಾರನಾಗಿರುವನೆಂಬುವುದೇ ಪ್ರಮಾಣಸಿದ್ಧವು, ಜ್ಞಾನಿಸಮ್ಮತವು ಆಗಿದೆ.

ಇಂತು ಕೃಶವು, ಸ್ಥೂಲವು, ಅಣುವು, ಮಹತ್ತು, ಎಂದು ನಾನಾ ವಿಧವಾದ ಚೇತನಾ ಚೇತನ ಜಗವು, ಮತ್ತು (ಅಸತ್) ಕಾರಣವೆನಿಸಿದ ಆಕಾಶವಾಯುಗಳು, (ಸತ್) ಕಾರ್ಯವೆನಿಸಿದ ಪ್ರಥಿವೀಜಲತೇಜಗಳು ಎಲ್ಲವೂ ಶ್ರೀಹರಿಭಿನ್ನವು ಮತ್ತುಅವನ ಅಧೀನವು ಆಗಿದೆ. ದ್ರವ್ಯ, ಸ್ವಭಾವ, ಮನಸ್ಸು, ಕಾಲ ಕರ್ಮಗಳಿಂದ ಕೂಡಿ ತತ್ ಸ್ವಾಮಿನಿಯಾದ ಪ್ರಕೃತಿಯು, ಪರಮಾತ್ಮನ ಅನಂತರ, ಸರ್ವಪ್ರಪಂಚಕ್ಕೂ ದ್ವಿತೀಯ ಧಾರಕಳೆನಿಸಿದೆ. ಇತರರಲ್ಲಿ ಕಾಣುವ ಧಾರಕತ್ವವು ಮುಖ್ಯವಲ್ಲ. ಶ್ರೀಹರಿಯೇ ಮುಖ್ಯಧಾರಕನು.

ಶ್ರೀಹರಿಯು ಜ್ಞಾನಸ್ವರೂಪನು, ಅಪ್ರಾಕೃತನು, ಸರ್ವೋತ್ತಮನು, ಅಂತಃಪ್ರೇರಕನು, ಸರ್ವತ್ರವ್ಯಾಪ್ತನು, ಗುಣಪೂರ್ಣನು, ನಿತ್ಯನಿರ್ದುಃಖನಿರತಿಶಯಾನಂದ ಜ್ಞಾನಾನುಭವ ಸ್ವರೂಪನು ಆಗಿರುವನು. ಅವನೇ ಮುಖ್ಯಬಿಂಬನು. ಅತ್ಯಂತ ಪೂಜ್ಯನು, ಜ್ಞಾನಿಗಳವನನ್ನು ವಾಸುದೇವನೆನ್ನುವರು.

ರಹೂಗಣಾ! ಅವನನ್ನು ಬರಿಯ ತಪಸ್ಸಿನಿಂದ ತಿಳಿಯಲಾಗದು, ಶಾಸ್ತ್ರಜಟಿಲ ಜ್ಞಾನದಿಂದ ಲಾಗಲಿ, ಸನ್ಯಾಸ ಸ್ವೀಕಾರಮಾತ್ರದಿಂದಾಗಲಿ, ಬ್ರಹ್ಮಯಜ್ಞಾದಿ ವೇದಕರ್ಮ ಗಳಿಂದಾಗಲಿ, ವರುಣಾಗ್ನಿ ಸೂರ್ಯಾದಿ ದೇವತೆಗಳ ಸೇವೆಯಿಂದಾಗಲಿ ತಿಳಿಯಲಾಗುವುದಿಲ್ಲ. ಭಗವದ್ಭಕ್ತರ ಪಾದರಜಸ್ಸನ್ನು ಶಿರಸ್ಸಿನಲ್ಲಿಡದವರಿಗೆ ಅವನು ಸಿಗುವವನಲ್ಲ. ಆ ಸುಜನರು ಮಾಡುವ ಉತ್ತಮ ಶ್ಲೋಕನ ಗುಣಾನುವಾದವು, ಇತರ ಲೌಕಿಕ ಕಥಾ ವಿಘಾತಕವಾಗಿ, ನಿತ್ಯವು ಸೇವಿಸುವ ಮುಮುಕ್ಷು ಜನರಿಗೆ ಭಕ್ತಿಯನ್ನು, ಶ್ರೀವಾಸುದೇವನ ಚರಣಾರವಿಂದ ಸೇವಾನಂದ ವನ್ನು, ಕೊಡುತ್ತಿರುವುದು.

ನಾನು ಹಿಂದೆ ಭರತನೆಂಬುವ ರಾಜನಾಗಿದ್ದೆನು. ಪ್ರಪಂಚದಲ್ಲಿ ಇಹಲೋಕದ ದಾರಾ ಪುತ್ರಾದಿ ಸಂಗವನ್ನು ಸ್ವರ್ಗಸುಖಾಶಕ್ತಿಯನ್ನು ಬಿಟ್ಟು, ಪುಲಹಾಶ್ರಮದಲ್ಲಿ ಶ್ರೀಹರಿಯನ್ನಾ ರಾಧಿಸುತ್ತಿದ್ದು, ವಿಜಾತೀಯವಾದ ಮೃಗಸಂಗದಿಂದ ಭ್ರಷ್ಟನಾಗಿ ಪುರುಷಾರ್ಥ ದೂರನಾದೆ. ಮೃಗದೇಹದಲ್ಲಿದ್ದಾಗಲು, ಶ್ರೀಕೃಷ್ಣಾಂಘ್ರಿಸಮರ್ಚನ ಪ್ರಭಾವದಿಂದ ಹಿಂದಿನ ಜನ್ಮ ವಿಷಯ ಗಳನ್ನು ನೆನೆದು, ಪಶ್ಚಾತ್ತಾಪದಿಂದ ನೊಂದು, ಈಗ ಈ ನರಜನ್ಮವನ್ನು ಕೊಟ್ಟು ಶ್ರೀಹರಿಯು ಕಳಿಸಿರುವಾಗ, ತಿಳಿದು, ಸಕಲ ದುಷ್ಟಸಂಗ ದೂರನಾಗಿ, ಜ್ಞಾನಮಾತ್ರಚಿನ್ಹನಾಗಿ, ಅವಧೂತ

ಚರ್ಯೆಯಿಂದ ತಿರುಗುತ್ತಿರುವೆನು. ಆದ್ದರಿಂದ ದುಷ್ಟಸಂಗರಹಿತನಾದ ಸಾಧುಜನರ ಸಂಗವನ್ನು ಮಾಡಬೇಕು. ಅದರಿಂದ ದೊರಕುವ ಜ್ಞಾನಖಡ್ಗವನ್ನು ಪಿಡಿದು, ಸ್ವರ್ಗಾದಿ ಸುಖಾಭಿಮಾನ ಪಾಶವನ್ನು ಕಡಿದು, ಶ್ರೀಹರಿಯ ಪರಮ ಮಂಗಳ ಚರಿತೆಯನ್ನು ಹೇಳಿ, ಕೇಳಿ, ತತ್ಪ್ರಸಾದ ಪಾತ್ರನಾದವನು ಸಂಸಾರ ಸಾಗರವನ್ನು ಪಾರವನ್ನು ಕಂಡು, ವೈಕುಂಠದಲ್ಲಿ ಆನಂದವನ್ನು ಪೊಂದುವನು.

## ೧೩. ಭವಾಟವೀ ವರ್ಣನೆ

ಬ್ರಾಹ್ಮಣನು ಹೇಳಿದನು–

ಪ್ರಕೃತಿಬಂಧದಿಂದ ಜೀವನು ಪುಟ್ಟಿ ಸಾಯುತ್ತಾ ಸಂಸಾರವನದಲ್ಲಿ ದಿಕ್ಕೆಟ್ಟು ಅಲೆಯುತ್ತಿರುವನು. ಹರಿದಯೆಯಿಂದಲ್ಲದೆ ಬೇರೊಂದು ವಿಮೋಚಕ ಮಾರ್ಗವಿಲ್ಲದ ಆ ಭವಾಟವಿಯಲ್ಲಿ ರಜಸ್ತಮಸ್ಸತ್ತ್ವರೂಪ ತ್ರಿವಿಧ ಕರ್ಮಗಳ ಫಲವನ್ನು ಬಯಸಿ ಬೇಡುತ್ತಾ ಸ್ವಪ್ರಯೋಜನ ನಿವಿಷ್ಟಬುದ್ಧಿಯಾಗಿ ತಿರುಗುವ ನರನಿಗೆ ಬ್ರಹ್ಮಾದಿ ಸ್ತಂಬ ಪರ್ಯಂತ ಯೋನಿಗಳಲ್ಲಿ ಜನಿಸಿದಾಗ ಕಷ್ಟವೇ ಸಿಗುವದಾಗಲಿ ಸ್ವಾಭಿಪ್ರೇತ ಸುಖವು ಸಿಗಲಾರದು.

ಆ ಭವಾಟವಿಯಲ್ಲಿ ಪೋಗುವ ಜೀವವನ್ನು, ಮನಸ್ಸು ಮತ್ತು ಇಂದ್ರಿಯಗಳೆಂಬ ಶತ್ರುಷಟ್ಕವು ವಿಷಯಭೋಗದಲ್ಲಿ ಆಶೆಯನ್ನು ಪುಟ್ಟಿಸಿ, ಕೆಡಿಸುತ್ತಿರಲು, ನರಿಗಳಂತೆ ಮಾಯಿಗಳಾದ ಪುತ್ರಾದಿ ಕಪಟಬಂಧುಗಳು, ಕಲರವ ಮನೋಹರ ನರ್ಮವಚನಗಳಿಂದ ಪ್ರಮತ್ತನಾಗಿ ಸೋತ ಅವನ ಧನವನ್ನೂ ಅಪಹರಿಸಿ, ಮೇಕೆಯನ್ನು ತಿನ್ನು ತೋಳದಂತೆ ಕಿತ್ತಿ ತಿನ್ನುವರು. ಪ್ರಭುತ ವೃಕ್ಷ ಲತಾ ಗುಲ್ಮ ದುರ್ಗಮವಾದ ಕರ್ಮಬೀಜನಿರ್ಮಿತ ಗಿರಿಕಂದರದಲ್ಲಿ ದಂಶಮಶಕಗಳಂತೆ ಇರುವ ಕ್ರೂರ ರಾಜಭಟರು ಮೇಲಿಂದಮೇಲೆ ಧನವನ್ನು ವಂಚಿಸಿ ಪಡೆದು ಪೀಡಿಸುವರು. ಒಂದೆಡೆ ಗಂಧರ್ವ ನಗರವನ್ನು ಪ್ರವೇಶಿಸಿ ಭ್ರಮಿಸುವಂತೆ ಮನುಷ್ಯೇತರ ಶರೀರಗಳಲ್ಲಿ ತಿರಿಗಿ ಕಷ್ಟಪಡುವನು. ಮತ್ತೊಂದೆಡೆ ಪ್ರಾಣವನ್ನು ಹೀರುವ ಕೊಳ್ಳಿದೆವ್ವಗಳಂತಿರುವ ಶಬ್ದಾದಿ ವಿಷಯಗಳತ್ತ ಧಾವಿಸಿ ಸಂಸಾರಾಟವಿಯಲ್ಲಿ ತಿರುಗಿದರೂ, ಅರ್ಥಸಿದ್ಧಿಯಾಗದೆ ಅಳುತ್ತ ಕೂಡುವನು. ಬಿರುಗಾಳಿ ಬೀಸಲು ಕಣ್ಣು ಕಾಣದೆ ರಜೋದೂಷಿತನೇತ್ರನಾಗಿ ಕಾಮಿನೀಪಿಶಾಚಿಗಳ ಕೈಗೆ ಸಿಕ್ಕು ಅವಿವೇಕಿಯಾಗುವನು. ಕಣ್ಣಿಂದ ನೋಡಲಾಗದ ಸೂಕ್ಷ್ಮ ಝಿಲ್ಲಿ ಸದೃಶರಾಗಿ ಕ್ರೂರಶಬ್ದ ಮಾತ್ರ ಗೋಚರರಾಗುವ ರಾಜಚೋರಜನ ತರ್ಜನೆಯನ್ನೂ ಗೂಬೆಗಳ ಭಯಾದಾರವನ್ನು ಕಳಿ ನಡುಗುವವನು. ಬಿಸಿಲಿಗೆ ತಾಳಲಾರದೆ, ಅಪುಣ್ಯವೃಕ್ಷಗಳವನ್ನಾಶ್ರಯಿಸಿ ಕಂಟಕವಿದ್ಧನಾಗಿ, ಬಿಸಿಲುಗುದುರೆಯ ಬೆನ್ನಟ್ಟುವನಂತೆ ಪಾಖಂಡ ಜನವನ್ನಾಶ್ರಯಿಸುವನು. ನೀರಿಲ್ಲದ ನದಿಗಳನ್ನು ಸೇರಿದವನಂತೆ ದರಿದ್ರನಾಗಿ ತಂದೆ ಮಗನನ್ನು, ಮಗನು ತಂದೆಯನ್ನು ಬದುಕಿದ್ದಂತೆ ತಿಂದು ಬಹಿಶ್ಚರ ಪ್ರಾಣಗಳೆನಿಸಿದ ಧನಕ್ಕಾಗಿ ಕಚ್ಚಾಡುತ್ತಲಿರುವನು. ತಾಪತ್ರಯಗಳೆಂಬ ಅಗ್ನಿಯಲ್ಲಿ ನೊಂದು, ದಾವಾಗ್ನಿ ಸದೃಶ ಗೃಹವನ್ನು ಸೇರಿ ಬೆಂದು, ರಾಜಯಕ್ಷಾದಿಹೃತ ಧನ ಪ್ರಾಣನಾಗಿ ನಿಟ್ಟುಸಿರನ್ನು ಬಿಡುವನು.

ಪರಸ್ವಾಪಹಾರ ಪಟುಗಳಾದ ಗ್ರಾಮಾಧಿಪತಿಗಳು ಭೂಧನಗಳನ್ನು ಹರಿಸಿ, ದೇಶದಿಂದೋಡಿಸಲು, ನಿರ್ವಿಣ್ಣನಾಗಿ ದುಃಖಿಸುವನು. ಪುಣ್ಯಲಬ್ಧವಾದ ಗಂಧರ್ವನಗರೋಪಮ

ಸ್ವರ್ಗವನ್ನೂ ಸೇರಿ, ಪುಣ್ಯಸಮಾಪ್ತಿಯಾಗಲು ಕೆಳಗೆ ಬೀಳುವನು. ಕಂಟಕ ಕಠಿನ ಶಿಲಾಮಯ ದುರ್ಗಮ ಮಾರ್ಗದಲ್ಲಿ ಕುಕರ್ಮಫಲ ಭಾರವನ್ನು ಬಿಟ್ಟು, ಗಿರಿಯನ್ನೇರಿ ಪೋಗಲಶಕ್ತನಾಗಿ, ಹೊಟ್ಟೆ, ಯಲ್ಲಿ ಉರಿಯುವ ಜಠರಾಗ್ನಿಸಂದೀಪಿತ ಗಾತ್ರನಾಗಿ ಸುಮ್ಮನೆ ಕಂಡವರ ಮೇಲೆ ಕೆಂಡವನ್ನು ಕಾರಿ ಶಪಿಸುವನು. ಕಾಲಕಾಲದಿ ಅನ್ನ ನಿದ್ರಾದಿಗಳನ್ನು ಕಾಣದೆ ಕೈಕಾಲು ಸೋತು ಮಲಗುವನು. ಅಜಗರವು ನುಂಗಿದ ಮೇಕೆಯಂತೆ, ತಪಿಸಿ ನಿದ್ರಾವ್ಯಸನಗಳಲ್ಲಿ ಮಗ್ನನಾಗಿ ಸಾಯುವನು. ದಂದಶೂಕ ದುಷ್ಟ ಪ್ರಾಣಿಗಳು ಕಚ್ಚಲು ಮೂರ್ಛೆ ಹೊಂದುವನು. ಅಂಧಕೂಪ ದಲ್ಲಿ ಬಿದ್ದವನಂತೆ ಗರ್ಭದಲ್ಲಿ ತಾನೂ ಕುರುಡನಾಗಿ ನರಳುವನು. ನರಕಕೂಪದಲ್ಲಿ ಬೀಳುವನು. ಅಲ್ಪಸುಖರಸವನ್ನು ಹುಡುಕುತ್ತಾ ಮಧು ಮಕ್ಷಿಕದಂತೆ ತಿರುಗಿ, ವಿಟರಿಂದ ವಂಚಿತನಾಗಿ ಅವರನ್ನು ತಾನೂ ವಂಚಿಸಿ ತಂದ ಧನವನ್ನು ಇತರರು ಮತ್ತು ಸ್ತ್ರೀಜನರು ಅಪಹರಿಸಲು, ಕದ್ದು ಪರಧನವನ್ನಾಶಿಸುವನು. ಪರವನಿತಾಭಿಲಾಷೆಯು ಮನವನ್ನು ಮೆರೆಸಲು, ಮಾನವನ್ನು ಬಿಟ್ಟು, ಹೇಯವರ್ತನನಾಗುವನು.

ಕೆಲವೆಡೆ ಪ್ರಾವರಣಾದಿಗಳಿಲ್ಲದೆ ಶೀತ ವಾತಾತಪ ವರ್ಷಗಳಿಂದ ಸಿಕ್ಕು ನಡುಗಿ, ಒಣಗಿ, ಸುಟ್ಟು, ತೊಯ್ದು ಕಷ್ಟಪಡುತ್ತಾ, ಮಾರಿ, ಕೊಂಡು, ವ್ಯವಹಾರದಿಂದ ಧನವನ್ನು ಹೊಂದಲು ಯತ್ನಿಸುವನು. ಯುಕ್ತಾಯುಕ್ತಗಳನ್ನರಿಯದೆ ರಸಾದಿಗಳನ್ನು ವಿಕ್ರಯಿಸುವನು. ಆಗ ಧನ ನಷ್ಟವಾದಾಗ ಶಯ್ಯಾಸನ ಸ್ಥಾನ ವಿಹಾರ ಸುಖಗಳಿಗೆರವಾಗಿ ಪರರನ್ನಾಶ್ರಯಿಸಿ ಬದುಕುವನು. ಅವರ ದ್ರವ್ಯಾಪಹಾರವನ್ನು ಮಾಡಿ ಬಂಧನತಾಡನಾದಿಗಳಿಂದ ಅವಮಾನವನ್ನು ಪೊಂದುವನು. ಮಧುರಾಲಾಪ ಚತುರ ಪಕ್ಷಿಗಣಕ್ಕಾಶ್ರಯವು ಲತಾಸುಂದರವು ಆದ ಸ್ತ್ರೀಜನ ಭುಜವನ್ನಾಶ್ರಯಿಸಿ ಲತಾಪಂಜರದಲ್ಲಿ ತಗಲಿಕೊಡು ಬಿಡಿಸಿಕೊಳ್ಳಲಾರದೆ, ಕೊನೆಗೆ ಕಾಲ ಚಕ್ರವು ರಭಸದಿಂದ ತಿರುಗುತ್ತಾ ನುಂಗಲು, ಮೃತನಾಗಲಿಚ್ಛಿಸದೆ, ಅಲ್ಲಿದ್ದ ಕಂಕ ಬಗ ಗೃಧ್ರಗಳಿಗೆ ಶರಣೆನ್ನುವರು. ಬಕದಂತೆ ತಿನ್ನುವ ವಿಘ್ನೇಶ್ವರನನ್ನು, ಕಂಕದಂತೆ ಮೈಥುನಲೋಲ ಯಕ್ಷಾದಿಗಳನ್ನು, ರುಧಿರಾಸವ ಲೋಭಗೃಧ್ರದಂತೆ ಹಿಂಸಾರತವಾದ ಭದ್ರಕಾಳ್ಯಾದಿಗಳನ್ನು ಸೇವಿಸಿ, ಮೊರೆಹೊಕ್ಕು, ಬ್ರಾಹ್ಮಣ ಜನ್ಮವನ್ನೂ ಲೆಕ್ಕಿಸದೆ, ಹೀನ ವೃತ್ತಿಯನ್ನು, ಮಾಯಾವಿದ್ಯೆಯನ್ನು ಅವಲಂಬಿಸುವನು. ಸೇವಾ ವೃತ್ತಿಯಲ್ಲಿ ಸುಖವನ್ನು ಕಾಣುತ್ತಾ, ಹಿಂಸೆಯಲ್ಲಿ ರತನಾಗುವನು. ಉಪನಯನಾದಿಗಳನ್ನು, ಸ್ನಾನಾಚಮನಾದಿ ಸತ್ಕರ್ಮಗಳನ್ನು ಕಷ್ಟಕರವೆಂದು ವರ್ಜಿಸಿ, ಶೂದ್ರಸದೃಶರಾಗಿ ಇಂದ್ರಿಯ ಸುಖವೇ ಪರಮಧ್ಯೇಯವಾಗಲು ಸ್ತ್ರೀಯರನ್ನು ನೋಡಿ ನಗುತ್ತಾ ಅವರು ತನ್ನನ್ನು ನೋಡಿ ನಲಿದರೆ ಸಾಕೆಂದು ಕೋರುತ್ತಾ ಜೀವನ ಮಾರ್ಗದ ತುದಿಯಾದ ಮೃತ್ಯುಗಿರಿಯನ್ನು ಸೇರುವನು. ವಿವಶನಾಗಿ ಐಹಿಕ ಮಾತ್ರ ಫಲವಾದ ಗೃಹವೆಂಬ ಕೋಟರದಲ್ಲಿ ಸುತದಾರವತ್ಸಲನಾಗಿ ಕಾಲಕಳೆಯುತ್ತಾ ಮೈಥುನಾಶೆಯಿಂದ ನಿದ್ದೆಗೆಟ್ಟು ಚಿಂತಿಸಿ ಪೋಗುತ್ತಿರುವನು. ಮಾರ್ಗದಲ್ಲಿ ಹಾಳುಭಾವಿಯಲ್ಲಿ ಕಾಲುಜಾರಿ ಬೀಳುವನು. ದೈವಾತ್ ದೊರೆತ ಬಳ್ಳಿಯನ್ನು ಪಿಡಿದು ಮೇಲಕ್ಕೇರಿ ಬರುವಾಗ, ಅಲ್ಲಿ ಕಾದು ನಿಂತ ಕಪ್ಪಾದ ಮದ್ದಾನೆಯ ಕಾಲ ಕೆಳಗೆ ಸಿಕ್ಕು ಮೃತಿಯನ್ನ ಪ್ಪುವನು.

ಅಕಸ್ಮಾತ್ತಾಗಿ ಅಲ್ಲಿಂದ ತಪ್ಪಿಸಿಕೊಂಡು ತನ್ನ ಸಾರ್ಥಕುಲವನ್ನು ಸೇರಿ, ಮತ್ತೆ ಹಾದಿ ನಡೆಯುವನು. ದಾರಿಯ ಕೊನೆ ಯಾವಾಗ, ಎಂತು, ಎಂಬುದನ್ನರಿಯದೇ ಭ್ರಮಿಸುತ್ತಿರುವನು. ಕುಟುಂಬ ಭಾರವನ್ನು ಹೊತ್ತು ಬೆನ್ನು ಬಾಗುವುದು. ದಾನಾದಾನ ಕರ್ಮಗಳಿಂದ ವಿತ್ತವ್ಯಯ

ವಾಗಲು, ವೈರಾಗ್ನಿಯಲ್ಲಿ ಹೃದಯವು ಸುಟ್ಟು ಬಹುಕಷ್ಟದಿಂದ ಗೋಳಿಡುತ್ತಾ, ಪೋಗಲೇ ಬೇಕಾಗಿ ದಿಙ್ಮೂಡನಾಗುವನು. ತನ್ನ ದೇಹವೇ ತನ್ನನ್ನು ಬಿಟ್ಟು ಬಿದ್ದು ಹೋದಾಗ, ಬೇರೇ ದೇಹಗಳನ್ನು ಹೊಂದಿ ಆಯಾ ದೇಹವಿತ್ತ ಕರ್ಮದ ಗಂಟನ್ನು ಮಾತ್ರ ಹೊತ್ತು, ಸಂಸಾರಾಟ ವಿಯನ್ನೇ ಪೊಕ್ಕು, ಭ್ರಮಿಸುವನಲ್ಲದೆ, ಹರಿಯಂ ಭಜಿಸಿ ಭವಾಟವೀ ಭೇದನವನ್ನು ಮಾಡಿ, ಸಂಸಾರದ ಪಾರವನ್ನು ಸೇರುವವನು ಬಹುದುರ್ಲಭನಾಗಿರುವನು. ರಾಜೇಂದ್ರರು ಆಗಿ ಹೋದರು; ದಿಗ್ಗಜಪರ್ಯಂತವಾದ ರಾಜ್ಯವನ್ನೂ ಆಳಿದರು. ಆದರೆ ನಾನು ನನ್ನದೆಂದು ಪರಸ್ಪರ ಬದ್ಧವೈರರಾಗಿ ಯುದ್ಧರಂಗದಲ್ಲಿ ವೀರಶಯನವನ್ನು ಪೊಂದಿದರಾಗಲಿ, ಹಿಂದೆ ಹಿಡಿ ಹುಡಿಮಣ್ಣನ್ನೂ ಒಯ್ಯಲಾರದೆ ಹೋದರು; ಹಿಂಸಾರಹಿತ ಮುನಿವೃತ್ತಿಯಿಂದ ಭೂತ ಸುಹೃದರಾದ ಸುಜನರ ಪುಣ್ಯಲೋಕವೂ ಅವರಿಗೆ ಸಿಗಲಿಲ್ಲ.

ರಹೂಗುಣ! ಸಮಸ್ತ ವೈರವನ್ನು ತ್ಯಜಿಸು. ಭೂತಮಾತ್ರ ಮಿತ್ರನಾಗು, ಸಂಸಾರಾಟವೀ ಸಕ್ತನಾಗಬೇಡ! ಹರಿಯನ್ನು ಸೇವಿಸು. ಜ್ಞಾನಖಡ್ಗದಿಂದ ಭವಾಟವಿಯನ್ನು ತುಂಡರಿಸಿ, ತ್ಯಜಿಸಿ, ಜನನ ಮರಣ ನದಿಯನ್ನು ದಾಟಿ, ಶ್ರೀಹರಿಯನ್ನು ಸೇರು.

ಆಗ ರಹೂಗಣನಿಂತೆಂದನು –

ಅಹೋ! ಸ್ವರ್ಗಾದಿಲೋಕಗಳಲ್ಲಿ ಬರುವ ದೇವತಾದಿ ದೇಹಗಳಿಗಿಂತಲೂ ತಮ್ಮಂಥ ಹೃಷೀಕೇಶ ಯಶೋಗಾನ ಚತುರಾಂತಃಕರಣರಾದ ಸುಜನರ ಸದುಪದೇಶ ಪ್ರಚುರ ಸಮಾಗಮ ವಾಗುವ ನರಜನ್ಮವೇ ಬಲು ಶ್ರೇಯಸ್ಸಾಧನವು!

ಸ್ವಾಮೀ! ನಿನ್ನ ಚರಣಾರವಿಂದರಜಃಸ್ನಾತನಾಗಿ ನಿಷ್ಪಾಪನಾದವನಿಗೆ ಶ್ರೀಶನಲ್ಲಿ ನಿಶ್ಚಲ ನಿರ್ದೋಷ ಭಕ್ತಿಯು ಪುಟ್ಟುವದೆಂಬುದೇನಾಶ್ಚರ್ಯವು! ನಾನೇ ಇದಕ್ಕೆ ಸಾಕ್ಷಿಯಾಗಿರುವೆನು. ನಿನ್ನ ಒಂದೇ ಮುಹೂರ್ತಮಾತ್ರ ಸಂಗಬಲದಿಂದ ನನ್ನ ಕುತರ್ಕಜನಿತ ವಿವೇಕರಾಹಿತ್ಯವು ನಷ್ಟವಾಗಿ ಪೋಗಿ ನಾನು ಕೃತಾರ್ಥನಾದೆನಲ್ಲವೇ! ಭೂಮಿಯಲ್ಲಿ ಅವಧೂತಚರ್ಯೆಯಿಂದ ಸಂಚರಿಪ ಮಹನೀಯರಾದ ಬ್ರಹ್ಮಾದಿ ದೇವತೆಗಳಿಂದಲೂ ಸನಕಾದಿ ಕುಮಾರ ಬ್ರಹ್ಮಚಾರಿ ಗಳಿಂದಲೂ ಯುವಕರಾದ ವಾಯುವರುಣೇಂದ್ರಚಂದ್ರಾದಿಗಳಿಂದಲೂ ವಟುಗಳಾದ ನಾರದಾದಿ ಋಷಿಗಳಿಂದಲೂ ಸರ್ವಬ್ರಾಹ್ಮಣರು ಶಿಶುಮಾತ್ರರಾದರೂ ಸರೀ, ಅವರೆಲ್ಲರಿಂದ ರಾಜಮಾತ್ರ ನಿಗೆ ಕ್ಷೇಮವಾಗಲಿ! ನಿನಗೆ ನಮಃ.

ಇಂತು ನುಡಿದ ರಹೂಗಣನು ವಂದಿಸಲು ಆ ಪರಮಾತ್ಮ ಸತ್ತತ್ತ್ವಜ್ಞಾನಿಯಾದ ಜಡ ಭರತನು ಕರುಣೆಯಿಂದ ಜ್ಞಾನವನ್ನಿತ್ತು ತನ್ನ ಚರಣಕಮಲಾರ್ಚನೆಗೈದ ರಾಜನನ್ನು ಬೀಳ್ಕೊಟ್ಟು ತುಂಬಿದ ಅಂಬುಧಿಯಂತೆ ತುಳುಕದೆ ಇಂದ್ರಿಯದಮನಶೀಲ ಚಿತ್ತವೃತ್ತಿಯನ್ನು ಹರಿಯಲ್ಲ ರ್ಪಿಸಿ, ಭೂಮಂಡಲವನ್ನು ಸಂಚರಿಸುತ್ತಾ ಪ್ರದಕ್ಷಣೀಕರಿಸಿದನು.

ಆ ಸುಜನ ಲಲಾಮನಿಂದ ಜ್ಞಾನನಿಧಿಯನ್ನು ಪೊಂದಿದ ರಹೂಗುಣನು, ತಾನೇ ದೇಹವೆಂಬ ಅನ್ಯಥಾ ಮತಿಯನ್ನೂ ತನ್ನ ಅಂತರ್ಯಾಮಿ ಶ್ರೀಹರಿ ವಿಷಯಕ ಅನ್ಯಥಾ ಜ್ಞಾನವನ್ನು ಕೂಡ ತ್ಯಜಿಸಿ, ನಿರ್ಮಲ ಭಗವದ್ಗುಣ ಚಿಂತನಾಧ್ಯಸ್ತ ಸಮಸ್ತ ಚಿತ್ತನಾದನು. ಭಗವದ್ಭಕ್ತರ ಚರಣ ಸೇವೆಯ ಮಹಿಮೆಯೇ ಇಂತಹದಲ್ಲವೇ!

ಆ ಭರತನನ್ನು ಕುರಿತು ಇಂತು ಪಾಡುವರು–

ಶ್ರೀ ಋಷಭಪುತ್ರನಾದ ಭರತನಂತೆ ವರ್ತಿಸಲು ಪ್ರಯತ್ನಿಸುವುದೆಂದರೆ ಗರುಡನಂತೆ ಹಾರಲು ಮಕ್ಷಿಕವು ಯತ್ನಿಸಿದಂತೆಯೇ ಸರಿ! ಲೋಕಮಾರ್ಗವನ್ನು ಶಾಸ್ತ್ರಮಾರ್ಗವನ್ನೂ ಬಿಡದೆ, ನಡೆಸಿ ರಾಜನ್ಯನಾದ ಭರತನು ಕೊನೆಗೆ ದುಸ್ತ್ಯಜರಾದ ದಾರಾಪುತ್ರರನ್ನು ಮಿತ್ರರನ್ನು ಸಮೃದ್ಧ ರಾಜ್ಯವನ್ನು, ಯೌವನದಲ್ಲಿಯೇ ಮಲವನ್ನಂತೆ ಬಿಟ್ಟು ಹೊರಟನು! ಇಂತಹ ಸಂಪತ್ತನ್ನು ದೇವತೆಗಳೂ ಬೇಡುತ್ತಿದ್ದರಾದರೂ ಭರತನು ಒಂದನ್ನೂ ಲೆಕ್ಕಿಸದೆ ಪೊರಮಟ್ಟು, ತಪೋವನ ವನ್ನು ಸೇರಿದನು.

ಮಧುವೈರಿಪದಸೇವಾನುರಕ್ತಮನಸ್ಕರಾದ ಸುಜನರದನ್ನು ಮೋಕ್ಷಕ್ಕಾಗಿಯೂ ಬಿಟ್ಟು ಕೊಡದಿರುವರೆಂಬುವುದು ನಿಜ!

ಯಜ್ಞೇಶ! ಧರ್ಮಪಾಲಕ! ಕರ್ಮಫಲದಾನನಿಪುಣ! ಸರ್ವಜ್ಞಶಿಖಾಮಣೇ! ನಾರಾಯಣ! ಹರೇ! ರಮಾಪತೇ! ಎಂದು ಪೊಗಳುತ್ತಾ ಮೃಗದೇಹವನ್ನು ತ್ಯಜಿಸಿ ಜಡಭರತನೆನಿಸಿದ ಮಹಾನುಭಾವನಿಗೆ ನಮಸ್ಕಾರವು!

ಇಂತು ಭಾಗವತಜನಬಹುಮತವಾದ ಭರತಚರಿತೆಯನ್ನು ನಿನಗೆ ಪೇಳಿದೆನು. ರಾಜನ್! ಇದು ಮಂಗಳಕರವು! ಆಯುರ್ವೃದ್ಧಿಪ್ರದವು; ಧನ್ಯವು, ಯಶಸ್ಕರವು; ಸ್ವರ್ಗಾಪವರ್ಗ ಸಾಧನ ವಾಗಿದೆ; ಹೇಳಿ ಕೇಳಿದವನ ಸರ್ವಾಭೀಷ್ಟಗಳನ್ನು ಪೂರೈಸಿಕೊಟ್ಟು ಶ್ರೀಹರಿಯೇ ರಕ್ಷಿಸುವನು. ಅವನಿಂದ ಮತ್ತೊಬ್ಬನಿಂದ ಬೇಡಲರ್ಹವಾದ ಕಾಮಿತವು ಉಳಿದಿರುವುದಿಲ್ಲ.

## ೧೪. ಭವಾಟವೀ ವಿವರಣೆ

ರಹೂಗಣನು ಪ್ರಾರ್ಥಿಸಿದನು–

ಭಾಗವತಸತ್ತಮ ! ಜೀವಲೋಕದ ಸಂಸಾರವನಮಾರ್ಗವನ್ನು ವ್ಯಂಗ್ಯಭಂಗಿಯಿಂದ ವರ್ಣಿಸಿದೆ. ಅದು ಕೇವಲ ಪಂಡಿತೈಕಗಮ್ಯವಾಗಿದೆ. ನನ್ನಂತಹ ಪಾಮರರದರ ಅರ್ಥವನ್ನೆಂತು ತಿಳಿಯುವರು? ಆದ್ದರಿಂದ ನನಗೆ ತಿಳಿಯುವಂತೆ, ಶಬ್ದಾರ್ಥಜ್ಞಾನವೆನಗೆ ಚೆನ್ನಾಗಿ ಆಗುವಂತೆ, ದಯಮಾಡಿ ವಿಸ್ತರಿಸಿ ಪೇಳು!

ಸೂತನು 'ಶೌನಕಾ! ಆಗ ಬ್ರಾಹ್ಮಣನಿಂತು ಕೇಳೆಂದನು.'

ರಾಜನ್! ಅನಾದ್ಯವಿದ್ಯಾಕಾಮಕರ್ಮಗಳಿಂದ ಜೀವನು ಸಂಸಾರವನದಲ್ಲಿ ಹಾದಿತಪ್ಪಿದವ ನಂತೆ ಅಲೆಯುತ್ತಿರುವನು. ಸತ್ತ್ವಾದಿಗುಣನಿರ್ಮಿತ ದೇಹಬಂಧದಿಂದ ಅಜ್ಞಾನಾವೃತನಾಗಿ, ನಾನು ನನ್ನದೆಂಬ ಭ್ರಾಂತಿಯಿಂದ, ಪುಣ್ಯಪಾಪ ಕರ್ಮಗಳನ್ನು ಮಾಡಿ, ತತ್ಫಲವಾದ ಸುಖ-ದುಃಖಗಳನ್ನು ಪೊಂದುತ್ತಿರುವನು. ಅವನ ಸಂಸಾರಮಾರ್ಗವು ದುರ್ಗಮಾರಣ್ಯದಂತೆ ಗಹನ ವಾಗಿ, ವಿವಿಧ ಕಷ್ಟದಾಯಕವಾಗಿರುವುದು. ಶ್ರೀಹರೀಚ್ಛೆಯಿಂದ ಬಂದ ಮಾರ್ಗದಲ್ಲಿ ವರ್ತಕ ನಂತೆ ಕರ್ಮದ ಗಂಟುಗಳನ್ನು ಪೊತ್ತು ಹೋಗುತ್ತಾ ತಾನಾಗಿ ಮಾಡಿಕೊಂಡದ್ದನ್ನು ಉಣ್ಣುತ್ತಾ ಸ್ಮಶಾನದಂತೆ ಅಮಂಗಲವು, ನರಕದಂತೆ ದುಃಖಪೂರ್ಣವ, ಇಂದ್ರಜಾಲದಂತೆ ಕಾಪಟ್ಯಜಟಿಲವು ಆದ ಭವಾಟವಿಯಲ್ಲಿ ನರಳುವನಾಗಲಿ ನರಸಖನ ಸಕಲಹೃತ್ತಾಪಹರಚರಣ ಸರಸಿಜಯ ಗಳವನ್ನು ತನ್ಮಕರಂದರಸಮತ್ತಚಿತ್ತ ಗುರು ಮಧುಕರಸುಗೀತವನ್ನೂ ಸೇವಿಸದೇ ಕೆಟ್ಟು ಕಷ್ಟ ಪಡುತ್ತಿರುವನು.

ದುಸ್ಸಜನರಂತೆ ಮನಸ್ಸು ಪಂಚೇಂದ್ರಿಯಗಳು ಪುರುಷನ ಧರ್ಮವೆಂಬ ಧನವನ್ನು ದೋಚಿಕೊಳ್ಳಲು, ಶ್ರೀಪರಮಪುರುಷನ ಚರಣಾರಾಧನೆಯು ಮೋಕ್ಷಸಾಧನವೆಂದು ತಿಳಿದೂ ಜೀವನು ದರ್ಶನ ಸ್ಪರ್ಶನ ಶ್ರವಣ ಭೋಜನ ಘ್ರಾಣಗಳೆಂಬ ವೃತ್ತಿಗಳಲ್ಲಿ ಮನದಿಂದ ತೊಡಗಿ ಕೆಡುವನು. ಇವನ ಮಕ್ಕಳು ಮಡದಿಯರು ತೋಳ ನರಿಗಳಂತೆ ಕಾದಿದ್ದು ಕುಟುಂಬಭರಣ ದಕ್ಷನೆನಿಸಿಕೊಳ್ಳಲು ತೊಳಲುವ ಜೀವನ ಧನವನ್ನು ಕಣ್ಣೆದುರಿನಲ್ಲೇ ಕದ್ದು ತಿಂದು ಮೇಲೆ ಕಾದುವರು. ಎಷ್ಟು ಕಷ್ಟಪಟ್ಟು ಕಳೆಕೀಳಿಸಿದರೂ ಮತ್ತೆ ಹೊಲದಲ್ಲಿ ಹುಲ್ಲು ಮುಳ್ಳು ಬೆಳೆವಂತೆ, ಗೃಹಸ್ಥಾಶ್ರಮವೆಷ್ಟು ಚೊಕ್ಕಟವಾಗಿಸಲು ಯತ್ನಿಸಿದರೂ ಕೊಳಕಾಗಿ ಬಿಡುವುದು. ಕಾಮವು ಸಾಕೆನಿಸಿದೆ ಕೊಟ್ಟಿಗೆಯಲ್ಲಿ ಕಟ್ಟಿಟ್ಟ ಪಶುವಿನಂತೆ ಮನೆಯಲ್ಲಿರುವವನನ್ನು ಶಲಭಮಶಕ ಸದೃಶ ನೀಚ ಜನರು ಕಿತ್ತಿ ತಿನ್ನುವರು. ಶಕುಂತ ತಸ್ಕರಮೂಷಕಗಳು ಧಾನ್ಯವನ್ನು ಅಪಹರಿಸುವುವು. ಅವಿದ್ಯಾ ಕಾಮ ಕರ್ಮಗಳೆಂಬ ಕೆಸರು, ಮನವೆಂಬ ಮಣಿಯನ್ನು ಮುತ್ತಿ ಕಣ್ಣು ಕಾಣದೆ, ಗಂಧರ್ವ ನಗರದಂತೆ ತೋರುವ ಮನೋರಥಗಳನ್ನು ಮಾಡಿ ವ್ಯರ್ಥ ಪ್ರಯತ್ನನಾಗಿ ಪ್ರಯಾಸ ಪಡುವರು. ದೇಹದ ಕಾಂತಿಯನ್ನು ಕಂಡು ಭ್ರಮೆಗೊಂಡು, ಬಂಗಾರವೆಂದು ಅಂಗಾರಖಂಡು ವನ್ನು ಪಿಡಿದು ನೋಡು, ಕೊಳ್ಳಿದೆವ್ವಗಳಂತಿರುವ ಕಾಂತೆಯರ ಬೆನ್ನಟ್ಟಿ ತಿರುಗುವನು. ಪಾನೀಯಾದಿ ಜೀವನೋಪಾಯ ಸಂಪಾದನ ಶ್ರಮವನ್ನು ಲೆಕ್ಕಿಸದೆ, ರಾಮಾಮಣಿಯವರಾ ರೋಹ ಸುಖಾಸೆಯಿಂದ ಕಾಮಕಶ್ಮಲಚಿತ್ತನಾಗಿ, ಮಾನ-ಮರ್ಯಾದೆಗಳನ್ನು ಬಿಟ್ಟು, ಸಾಕ್ಷಿಯಾಗಿ ವೀಕ್ಷಿಸುತ್ತಿರುವ ದಿಗ್ದೇವರನ್ನೂ ಅವಮಾನಿಸಿ, ಅಧರ್ಮವನ್ನು ಮಾಡುವನು. ವಿಷಯ ಧ್ಯಾನದಿಂದ ಶಾಸ್ತ್ರಜನಿತ ಸ್ಮೃತಿ ನಶಿಸಲು, ಬಿಸಿಲುಗುದುರೆಯಂತಿರುವ ಶ್ರಮಾಪಾದಕ ವಿಷಯಸುಖವನ್ನು ಹುಡುಕುತ್ತಾ, ಸಂರಂಭದಿಂದ ಸಂಚರಿಸುವನು. ರಾಜಪುರುಷನ ನಿಷ್ಠುರ ಭರ್ತ್ಸನದಿಂದನೊಂದು ಅಪುಣ್ಯವೃಕ್ಷಗಳಂತೆ, ಉಭಯಲೋಕ ಶೋಕದಾಯಕ ರಾಜಕುಜರನ್ನು ಸೇರಿ, ಅವರನ್ನು ಕಾಡಿ ಬೇಡುವನು; ಪಾಷಂಡರನ್ನೂ ಸೇರಿ ದೈವದ್ರೋಹವನ್ನು ಬಗೆವನು. ಎಲ್ಲಿಂದಲೂ ಧನವು ಬಾರದಾದಾಗ, ಮಕ್ಕಳನ್ನೂ ಬಾಲಕರನ್ನೂ ಬಿಡದೆ ಬಿಕ್ಕೆ ಬೇಡಿ, ಮನೆಯಲ್ಲಿದ್ದವರೆಲ್ಲರೂ ತಿರಸ್ಕರಿಸಲು, ಸುಮ್ಮನೆ ಕುದಿಯುವನು. ಧನವಿಲ್ಲದಿರೆ ಹೆಣದಂತೆ ನಿರುತ್ಸಾಹನು. ನಿಸ್ತೇಜನೂ ಆಗಿ ಗೃಹಾಶ್ರಮ ಕರ್ಮಗಹನ ಗಿರಿಯನೇರಲಾರದೆ, ತಾಪತ್ರಯ ಗಳೆಂಬ ಕಲ್ಲುಮುಳ್ಳಿನಲ್ಲಿ ನಡೆಯುತ್ತಾ ರೋದಿಸುವನು.

ಹಸಿವೆಯಿಂದ ಹೊಟ್ಟೆ ಸುಟ್ಟಾಗ, ಆಹಾರವನ್ನು ಬೇಡಿ, ಕೊಡದ ಸ್ವಜನರನ್ನು ಕೋಪಿಸಿ ಬೈದು, ಕದ್ದುತಿಂಬುವನು, ನಿದ್ರೆಯಲ್ಲಿ ಶವದಂತೆ ಮಲಗುವನು. ದುರ್ಜನ ವೃಶ್ಚಿಕಗಳು ಕಡಿಯಲು ನಿದ್ರೆಬಾರದೆ, ಹೊರಳಾಡಿ ಗೋಳಿಡುವನು. ಕುರುಡನಂತೆ ಜ್ಞಾನಶೂನ್ಯನಾಗಿ ಕಾಮಕೂಪದಲ್ಲಿ ಬೀಳುವನು. ಪರದ್ರವ್ಯವನ್ನು ಪರದಾರೆಯರನ್ನು ಪಡೆಯಲು ಪೋಗಿ ರಾಜನಿಂದಲೂ ತದ್ಭರ್ತ್ರಾದ್ರಿಗಳಿಂದಲೂ ಶಿಕ್ಷೆಯನ್ನು ಅನುಭವಿಸಿ, ಕೊನೆಗೆ ನರಕವನ್ನು ಸೇರುವನು. ಶೀತ ವಾತ ವರ್ಷ ವಹ್ನಿಗಳಿಂದ ತನ್ನನ್ನು ತನ್ನವರನ್ನು ರಕ್ಷಿಸಲಾಗದೆ ವಿಷಣ್ಣನಾಗುವನು. ವಿತ್ತಶಾಠ್ಯದಿಂದ ಕವಡೆಗಾಗಿ ಕೋಟೆಯನ್ನೂ ವೆಚ್ಚಿಸಿ, ದುರಂತ ಚಿಂತಾವಶನಾಗುವನು. ಯಾವ ಶ್ರೀಹರೀಚ್ಛೆಯಿಂದ ಬಂದಿದೆಯೋ ಈ ಸಂಸಾರ ಮಾರ್ಗಗಮನವು ಆ ಶ್ರೀಹರೀಚ್ಛೆಯೇ ತನ್ಮೋಚಕವೆಂಬುದನ್ನು ತಿಳಿದೂ, ಅನುಸರಿಸಿ ಗುರುಚರಣವಂ ಸೇವಿಸದಿರುವನು. ಪರಮ ಮಂಗಲಕರವಾದ ಆ ಹರಿಸೇವೆ ಉಪಶಮಶೀಲರಾದ ಸುಜನರಿಗೆ ಮಾತ್ರ ಲಭ್ಯವಾಗಿದೆ ಅಲ್ಲವೇ? ಸ್ತ್ರೀಯರ

ಭುಜ ಲತಾವಿಷ್ಟ, ನಿಜಶಿರಸ್ಕನು ಶಿಶುಕಲಭಾಷಣಾನುರಕ್ತಮನಸ್ಕನು ಆಗಿ ತನ್ನ ಗತಿಯೇ ನೆಂದಾಲೋಚಿಸದೆ ಅಂಧಂತಮಸ್ಸನ್ನು ಪೊಂದುವನು. ಅಬ್ರಹ್ಮಸ್ತಂಬ ಪರ್ಯಂತ ಜೀವರಾಶಿ ನಾಶಕವಾದ ಶ್ರೀಹರಿಯ ಕಾಲಚಕ್ರ ವೇಗದಿಂದ ನಿಜಾಯುಃಖಂಡಗಳು ಉದುರಿ ಚದುರುತ್ತಿ ರಲು ನೋಡಿ ಬೆದರಿ ಇತರ ಕ್ಷುದ್ರ ದೇವತೆಗಳನ್ನು ಶರಣೆಂದು ಬೇಡಿ, ಅವರೂ ಆತ್ಮ ವಂಚಕ ರಾದ್ದರಿಂದ, ಸರ್ವೋತ್ತಮ ಶ್ರೀಹರಿಯ ಇಚ್ಛೆಗೆ ವಿರುದ್ಧ ನಡೆಯಲಾಗದಿದ್ದರೂ ಇಷ್ಟಾರ್ಥ ಗಳನ್ನು ಕೊಟ್ಟಂತೆ ನಟಿಸಿದಾಗ, ಅವರೇ ಗತಿಯೆಂದು ನಂಬಿ, ದ್ವಿಜಕುಲೋಚಿತ ಧರ್ಮಕರ್ಮ ಗಳನ್ನು ಬಿಟ್ಟು ಪಾಖಂಡನಂತೆ ವೇದದೂಷಕನು, ಶೂದ್ರ ಸದೃಶಾಚಾರನು ಆಗಿಬಿಡುವನು. ವಾನರರಂತೆ ಮಿಥುನೀಭವನವೇ ಕುಟುಂಬ ಭರಣವೆಂದು, ಸ್ವೈರವೃತ್ತಿಯಿಂದ ವರ್ತಿಸಿ, ಕಾಲಾವಯವ, ವಿಚ್ಛಿತ್ತಿಯನ್ನೂ ಲೆಕ್ಕಿಸದೆ ವ್ಯರ್ಥಜೀವನನಾಗುವನು. ಇಂತನೇಕ ಕಷ್ಟಗಳನ್ನನು ಭವಿಸಿ, ಒಂದು ದಿನ ಮದಗಜದಂತೆ ನುಗ್ಗಿ ಬಂದ ಮೃತ್ಯುವಿನ ತುತ್ತಾಗುವನು. ಪುಣ್ಯಕರ್ಮ ವಶನಾಗಿ ನರಕದಿಂದ ವಿಮುಕ್ತನಾಗಿ, ಮತ್ತೆ ನರಲೋಕವನ್ನು ಸೇರಿ, ಸಂಸಾರವನದಿ ಸುತ್ತುತ್ತಾ, ಸಾಯುತ್ತಾ, ಹುಟ್ಟುತ್ತಾ ಕರ್ಮಭಾರವಂ ಪೊತ್ತು ತಿರುಗು ತ್ತಿರುವನು.

ರಾಜನ್! ಈ ಸಂಸಾರಮಾರ್ಗವಿಂತು ನಾನಾ ಕ್ಲೇಶವಿಸ್ತಾರವು, ಇದರಲ್ಲಿ ವಿಪನ್ನರನ್ನು ಬಿಡುತ್ತಾ, ಜಾತರನ್ನು ಕರೆದೊಯ್ಯುತ್ತಾ ನರನು ಶೋಕಿಸುವನು, ಮೋಹಿತನಾಗುವನು; ನಗುವನು, ಅಳುವನು, ಪಾಡುವನು, ಆರ್ತಸ್ವರದಿಂದ ರೋದಿಸುವನು. ಇಷ್ಟಾದರೂ ಸಾಧು ಜನರನ್ನು ಸೇರನು. ದಿಗ್ವಿಜಯಿಗಳಾದ ರಾಜರ್ಷಿಗಳು ಕೂಡ ಈ ದುಷ್ಟಕಷ್ಟವನದಲ್ಲಿ ಸಿಕ್ಕಿ ಬಿದ್ದು ನನ್ನದೆಂಬ ದುರಭಿಮಾನದಿಂದ, ಭೂಖಂಡಗೋಸುಗ ಕಾದಾಡಿ ಅದನ್ನಿಲ್ಲೇ ಬಿಟ್ಟು, ತಾವು ಮಹಾಸಂಗ್ರಾಮ ರಂಗದಿ ಶಯಿತರಾಗಿಹೋದರು. ಈ ಸಂಸಾರದಲ್ಲಿ ರಾಗದ್ವೇಷಗಳು, ಭಯಾಭಿಮಾನಗಳು, ಪ್ರಮಾದ ಮದಗಳು, ಶೋಕ ಮೋಹಗಳು, ಈರ್ಷ್ಯಾಮಾತ್ಸರ್ಯಗಳು, ಮಾನಾಪಮಾನಗಳು, ಕ್ಷುತ್ಪಿಪಾಸೆಗಳು, ಆಧಿವ್ಯಾಧಿಗಳು, ಜನನ ಮರಣಗಳು ಎಂಬ ನಾನಾ ವಿಧ ಸಂಕಟಗಳು ವಿಕಟತಾಂಡವವನ್ನು ಮಾಡುತ್ತ, ಜೀವನವನ್ನು ಮುತ್ತಿ ವ್ಯಥಾಕುಲನನ್ನಾಗಿ ಮಾಡುವುವು.

## ೧೫. ಭರತವಂಶ — ಗಯಚರಿತೆ

ಶ್ರೀಶುಕನು ಪೇಳಿದನು-

ಭರತನ ಮಗನಾದ ಸುಮತಿಯು ವಿರಕ್ತನಾಗಿ ತನ್ನ ತಾತನಿಂದ ಋಷಭನಂತೆ ಅವಧೂತ ಪದವಿಯನ್ನೈದಿ ಸಂಚರಿಸುತ್ತಿರಲು ನೋಡಿ ಕೆಲ ಕುಜನರು ವೇಷಮಾತ್ರದಿಂದ ಅವನನ್ನನುಕರಿಸಿ, ವೈಭಾಷಿಕಾದಿ ಚತುರ್ಧಾ ಭಿನ್ನ ಪಾಖಂಡಮತ ಕಾರಣರಾಗಿ ಪ್ರವರ್ತಿಸುವರು.

ಸುಮತಿಗೆ ಗೃಧಶ್ಯೆನಾದೇವಿಯಲ್ಲಿ ದೇವಪಾದಿ ಎಂಬ ಪುತ್ರನುದಿಸಿದನು. ಅವನಿಗಾಸುರಿ ಯಲ್ಲಿ ದೇವದ್ಯುಮ್ನನು, ಅವನಿಗೆ ಧೇನುಮತಿಯಲ್ಲಿ ಪರಮೇಷ್ಠಿಯು, ಪರಮೇಷ್ಠಿಗೆ ಸುವರ್ಚಲೆ, ಸುವರ್ಚಲೆಯಲ್ಲಿ ಪ್ರತೀಹನು ಪುಟ್ಟಿದರು. ಆ ಪ್ರತೀಹನು ಆತ್ಮವಿದ್ಯಾ ವಿಶಾರ ದನಾಗಿ ಶ್ರೀಹರಿಯನ್ನು ಸೇರಿದನು. ಪ್ರತೀಹನಿಗೆ ಸುವಾಲೆಯು, ಪ್ರತಿಹರ್ತ ಮುಂತಾದ

ಮೂವರು ಸುತರನ್ನು ಕೊಟ್ಟಳು. ಪ್ರತಿಹರ್ತನಿಗೆ ಸ್ತುತೀದೇವಿಯಲ್ಲಿ ವ್ಯೋಮ, ಭೂಮರು ಪುಟ್ಟಿದರು. ವ್ಯೋಮನಿಗೆ ಋಷಿಕುಲ್ಯೆಯಲ್ಲಿ ಉದ್ಗೀಥನು ಮತ್ತು ಪ್ರಸ್ತೋತನು ಪುಟ್ಟಿದರು. ಪ್ರಸ್ತೋತನಿಗೆ ವಿರುರುತ್ಸೆಯಲ್ಲಿ ವಿಭುವು ಜನಿಸಿದನು. ವಿಭುವಿಗೆ ರಥ್ಯಾದೇವಿಯಲ್ಲಿ ಪೃಥು ಷೇಣನು, ಪುಥುಶೇಣನಿಗೆ ಆಕೂತಿಯಲ್ಲಿ ನಕ್ತನು, ಅವನಿಗೆ ಋತಿಯಲ್ಲಿ ಗಯನು ಪುಟ್ಟಿದರು.

ಗಯನು ರಾಜರ್ಷಿ ಪ್ರವರನೆಂದು ಪ್ರಸಿದ್ಧನಾದನು. ಶ್ರೀನಾರಾಯಣನ ಜಗದ್ರಕ್ಷಕ ಸತ್ತ್ವ ಕಲಾಂಶದಿಂದ ಜನಿಸಿ, ಕರಚರಣಾದಿ ಚಿಹ್ನಿತ ಶುಭ ಚಕ್ರಾದಿ ಲಕ್ಷಣಲಕ್ಷಿತನಾಗಿ, ಗೇಗೀಯಮಾನವಾಗಿ ಗಯನೆನಿಸಿದನು. ಸ್ವಧರ್ಮದಲ್ಲಿಟ್ಟು ಪ್ರಜರನ್ನು ಶಾಸಿಸಿದನು; ತಂದೆ ಯಂತೆ ಪೋಷಿಸಿ, ತಾಯಿಯಂತೆ ಲಾಲಿಸಿದನು. ಪರಮಪುರುಷನಾದ ಶ್ರೀಹರಿ ಚರಣಾರವಿಂದ ದಲ್ಲಿ ಸರ್ವವನ್ನರ್ಪಿಸಿ, ಬ್ರಹ್ಮಜ್ಞಾನಿಜನ ಸೇವೆಯನ್ನು ಗೈದು, ಹೆಚ್ಚಾದ ಭಕ್ತಿಯಿಂದ ಹರಿಯನ್ನು ಭಜಿಸಿದನು. ಇಂದ್ರಿಯಗಳ ಗೆದ್ದು, ಶೂನ್ಯನಾದ ಮನದಿಂದ ದೇಹಭಿನ್ನ ಜೀವನನ್ನು, ಜೀವಾಂತರ್ಯಾಮಿ ಶ್ರೀಹರಿಯನ್ನು ಚೆನ್ನಾಗಿ ತಿಳಿದು ರಾಜ್ಯವನ್ನು ನಿರಭಿಮಾನಿಯಾಗಿ ಪಾಲಿಸಿದನು.

ಪೂರ್ವಜರವನ ಮಹಿಮೆಯನ್ನಿಂತು ಪಾಡಿರುವರು–

ಯಜ್ಞಗಳನ್ನು ಶ್ರೀಹರಿಪ್ರೀತಿಗಾಗಿ ಮಾಡಿ, ಧರ್ಮವನ್ನು ರಕ್ಷಿಸಿ, ಸರ್ವಸ್ವವನ್ನು ತ್ಯಜಿಸಿ, ಸಜ್ಜನ ಸದಸಸ್ಪತಿಗಳನ್ನು ಭಜಿಸಿ, ಸುಪ್ರಸಿದ್ಧನಾದ ಗಯನಲ್ಲಿ ಶ್ರೀ ಭಗವಂತನ ಕಲೆಯಿತ್ತು. ಇಲ್ಲದಿರೆ ಅಂತಹ ಶ್ರೇಯಃಕಾರ್ಯಗಳನ್ನು ಸಾಧಿಸಲು ಇತರರಿಗೆ ಸಾಧ್ಯವೇ? ಪ್ರಿಯವತನಂತೆ ಗಯನು ಕರ್ಮದೇವ ಸಮನೆನಿಸಿದನು. ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಎಂಬ ದಕ್ಷಸುತೆಯರು ಮೂರ್ತಿಮತಿಯರಾಗಿ ಬಂದು, ನದೀ ಜಲಗಳಿಂದ ಗಯನನ್ನಭಿಷೇಕಿಸಿ ದರು. ಧರಾದೇವಿಯು ಗಯನ ಗುಣಗಳಿಗೆ ಮನಸೋತು, ತುಂಬಿದ ಸ್ತನಭಾರದಿಂದ ಹಾಲು ಗರೆವ ಕಾಮಧೇನುವಿನಂತೆ ಬೇಕಾದ ಪದಾರ್ಥಗಳನ್ನು ಪ್ರಜರಿಗೆ ಸಮೃದ್ಧವಾಗಿ ಉತ್ಪಾದಿಸಿ ಕೊಟ್ಟಳು. ವೇದಾಭಿಮಾನಿಗಳು ನಿಷ್ಕಾಮನಾದ ಗಯನಿಗೆ ಬೇಕಾದ ವಸ್ತುಜಾತವು ದೊರಕುವಂತೆ ಹರಸಿದರು. ದಿಗ್ದೇಶನ ರಾಜರವನಿಗೆ ಕಪ್ಪಕಾಣಿಕೆಯನ್ನರ್ಪಿಸಿದರು. ಧರ್ಮರತನಾದ ಗಯನಿಗೆ ವಿಪ್ರರಾಶೀರ್ವಾದಗಳನ್ನು, ಪ್ರಜರು ಷಷ್ಠಾಂಶ ಕಾಣಿಕೆಯನ್ನು, ಪ್ರೀತಿಯಿಂದ ಸಮರ್ಪಿಸಿದರು. ಇಂದ್ರಾದಿ ದೇವತೆಗಳಾದ ಗಯನ ಯಜ್ಞದ ಹವಿರ್ಭಾಗಗಳಿಂದ ಮತ್ತರಾಗಿ ತೃಪ್ತರಾದರು. ಶ್ರೀಹರಿಯು ತಾನಾಗಿ ಬಂದು ಯಜ್ಞ ಫಲವನ್ನು ತನ್ನ ಅನುಗ್ರಾಹಕ ಕರುಣಾಕಟಾಕ್ಷದಿಂದ ದಯಪಾಲಿಸಿದನು. ಯಾವ ಸ್ವಾಮಿಯು ಪ್ರೀತನಾಗಲು ಬ್ರಹ್ಮಚರ್ಯಂತ ಸಕಲ ಜೀವ ದೇವ ಮಾನವ ದಾನವರು ತಾನಾಗಿ ಪ್ರೀತರಾಗುವರೋ ಅಂತಹ ಶ್ರೀಶನು ಗಯನ ಯಜ್ಞಗಳಿಂದ ಪ್ರೀತನಾಗಿ ವರವನ್ನು ಪಾಲಿಸಿ ರಕ್ಷಿಸಿದನು. ಇವೆಲ್ಲವೂ ಗಯನು ಪಡೆದ ಶ್ರೀ ಪುರುಷೋತ್ತಮ ಮಂತ್ರಸಿದ್ಧಿಯ ಬಲವೆಂದು ಜ್ಞಾನಿಜನರು ಪೇಳುವರು.

ಗಯನಿಗೆ ಜಯಂತಿಯಲ್ಲಿ ಚಿತ್ರರಥೆ, ಖ್ಯಾತಿ, ಅವರೋಧ ಎಂಬ ಮೂವರು ಪುತ್ರರು ಜನಿಸಿದರು. ಚಿತ್ರರಥನಿಗೆ ಊರ್ಜಳಲ್ಲಿ ಸಾಮ್ರಾಟ್ ಮಗನಾದನು. ಅವನಿಗೆ ಉತ್ಕಲೆಯಲ್ಲಿ ಮರೀಚಿಯು, ಅವನಿಗೆ ಬಿಂದುಮತಿಯಲ್ಲಿ ಬಿಂದುಮಂತನು ಪುಟ್ಟಿದರು. ಬಿಂದುಮಂತನಿಗೆ ಸುಷೇಣೆಯಲ್ಲಿ ಮಧುವು, ಮಧುವಿಗೆ ಸುಮನಳಲ್ಲಿ ವೀರವ್ರತನು, ಅವನಿಗೆ ವಜ್ರಳಲ್ಲಿ ಮನ್ಯು ಪ್ರಮನ್ಯುರೆಂಬೀರ್ವರು ಸುತರಾದರು. ಮನ್ಯುವಿಗೆ ಸತ್ಯಳಲ್ಲಿ ಭುವನನು, ಅವನಿಗೆ ದೋಷಾ

ದೇವಿಯಲ್ಲಿ ತೃಪ್ತನು ಅವನಿಗೆ ವಿರೋಚನಳಲ್ಲಿ ವಿರಜನು, ಅವನಿಗೆ ವಿಷೂಚಿಯಲ್ಲಿ ಶತಜಿತ್ ಪ್ರಮುಖ ಪುತ್ರಶತವು, ಓರ್ವಳು ಮಗಳು ಆದರು.

ಪ್ರಿಯವ್ರತನ ವಂಶವಿಂತು ವಿರಜನವರಿವಿಗೂ ವೃದ್ಧಿ ಪೊಂದಿ, ಶ್ರೀಹರಿಯು ದೇವತಾಗಣ ವನ್ನಂತೆ ಕೀರ್ತಿಯಿಂದ ಭೂಲೋಕವನ್ನು ಅಲಂಕರಿಸು.

## ೧೬. ಭೂಗೋಲ ವಿಚಾರವು – ಜಂಬೂದ್ವೀಪ

ಪರೀಕ್ಷಿತನು ಪ್ರಶ್ನಿಸಿದನು–

ಋಷಿವರಾ! ಈ ವಿಶ್ವವೆಲ್ಲವೂ ಶ್ರೀಹರಿಯ ಪ್ರತಿಮೆ ಎನಿಸಿದೆ. ಈಶಾವಾಸ್ಯವಾದ ಈ ಜಗವು ತದ್ಗದ ಸಮಸ್ತ ಪ್ರಶಸ್ತಸಂಪತ್ತು ಅವನದಾಗಿದೆ. ಸೂರ್ಯಚಂದ್ರ ನಕ್ಷತ್ರಗಳವನ ಮನೆಯ ದೀಪವಾಗಿ ಪ್ರಕಾಶಿಸುತ್ತಿರುವರು. ಪ್ರಿಯವ್ರತ ರಥಚರಣ ನಿರ್ಮಿತ ಪರಿಖಾಸಪ್ತಕವೇ ಸಪ್ತಸಮುದ್ರಗಳೆಂದು, ಅವುಗಳ ನಡುವೆ ಇರುವವೇ ಸಪ್ತದ್ವೀಪಗಳೆಂದು ನೀನು ಪೇಳಿದೆ. ಆ ದ್ವೀಪ ನದಿಗಳ ಪರಿಮಾಣಗಳನ್ನು ಲಕ್ಷಣಗಳನ್ನೂ ಚೆನ್ನಾಗಿ ತಿಳಿಯಲಿಚ್ಛಿಸುವೆನು. ಸ್ಥೂಲ ರೂಪ ಚಿಂತನಾನಂತರವಲ್ಲವೇ ಶ್ರೀಹರಿಯ ಸೂಕ್ಷ್ಮರೂಪ ಚಿಂತೆಯು. ಹೃದ್ಗತನು, ಗುಣ ಪೂರ್ಣನು, ನಿಖಿಲೈಶ್ವರ್ಯಾದಿ ಗುಣನಿಧಿಯು ಆದ ವಾಸುದೇವನೇ ಸೂಕ್ಷ್ಮನು. ಬ್ರಹ್ಮಾಂಡವೇ ಅವನ ಸ್ಥೂಲರೂಪವು. ಆದ್ದರಿಂದ ದಯಮಾಡಿ ಅದನ್ನು ವರ್ಣಿಸು.

ಶ್ರೀಶುಕನು ಪೇಳಿದನು–

ಮಹಾರಾಜ! ಪ್ರಕೃತಿಯ ಗುಣ ವ್ಯಾಪಾರವನ್ನು ಮಾಡಿಸಲು ನಾನಾ ರೂಪದಿಂದ ಸರ್ವಾಂತ ರ್ಯಾಮಿಯು ಸರ್ವಭಿನ್ನನು ಸರ್ವೇಶ್ವರನು ಆದ ಶ್ರೀಹರಿಯ ಸಂಸ್ಥಾನ ವಿಶೇಷಗಳನ್ನು ಬ್ರಹ್ಮಾಯುವಾದ ಪುರುಷನು ಪೂರ್ತಿಯಾಗಿ ತಿಳಿಯಲಾರನಿನ್ನು ನಮ್ಮ ಪಾಡೇನು? ಆದರೂ ಮುಖ್ಯವಾದ ಭೂಗೋಲ ಖಗೋಲ ವಿಶೇಷಗಳನ್ನು ವೇದಾಂತ ದೃಷ್ಟಿಯಿಂದ ನಾಮರೂಪ ಲಕ್ಷಣಗಳ ಸಮೇತ ಸಂಗ್ರಹಿಸಿ ಹೇಳುವೆನು.

ಈ ನಾವಿರುವುದೇ ಜಂಬೂದ್ವೀಪವು, ಅನೇಕ ದಲ ವಿಶಿಷ್ಟ ಕುವಲಯ ಕಮಲ ಕೋಶದ ಒಳಗಿರುವ ವರ್ತುಲಾಕಾರ ಭೂಭಾಗವು ಜಂಭೂದ್ವೀಪವೆನಿಸಿ ಒಂದು ಲಕ್ಷ ಯೋಜನ ವಿಶಾಲ ವಾಗಿದೆ. ಇದರಲ್ಲಿ ಒಂದೊಂದು ಒಂಭತ್ತು ಸಾವಿರ ಯೋಜನ ಸಮವಿಸ್ತಾರವಾದ ಒಂಭತ್ತು ಖಂಡಗಳಿವೆ. ಇವುಗಳ ಮಧ್ಯೆ ಎಂಟು ಮರ್ಯಾದಾಚಲಗಳು ವಿಭಜಿಸಿ ನಿಂತಿವೆ.

ಎಲ್ಲ ಖಂಡಗಳಿಗೂ ಮಧ್ಯದಲ್ಲಿರುವುದು ಇಲಾವೃತವು. ಅದರ ಮಧ್ಯದಲ್ಲಿ ಬಂಗಾರದ ಬೆಟ್ಟವೆನಿಸಿದ ಮೇರುಪರ್ವತವಿದೆ. ಅದರ ಎತ್ತರವು ಭೂಮಿಯಲ್ಲಿ 16 ಸಾವಿರ ಯೋಜನ ಬೇರು – ಮೇಲೆ 84 ಸಾವಿರ ಯೋಜನ ಕಲೆತು ಒಂದು ಲಕ್ಷ ಯೋಜನವಿದೆ. ಅದರ ಅಗಲವು ಮೂಲದಲ್ಲಿ 16 ಸಾವಿರ ಯೋಜನ ಮತ್ತು ಶಿಖರಸಮೀಪದಿ 32 ಸಾವಿರ ಯೋಜನವಿದೆ. ಅದರ ಉತ್ತರದಲ್ಲಿ ನೀಲ, ಶ್ವೇತ ಶೃಂಗವಾನ್‌ಎಂಬ ಮರ್ಯಾದಾ ಗಿರಿಗಳು ಕ್ರಮವಾಗಿ ರಮ್ಯಕ, ಹಿರಣ್ಮಯ ಕುರುಖಂಡಗಳನ್ನು ಇಲಾವೃತದಿಂದ ಬೇರ್ಪಡಿಸುತ್ತಾ ಪೂರ್ವ ಪಶ್ಚಿಮ ವಾಗಿ ಲವಣಸಮುದ್ರಪರ್ಯಂತವೂ ವ್ಯಾಪಿಸಿದೆ. ಅವುಗಳ ಎತ್ತರವು 10 ಸಾವಿರ ಯೋಜನ

ವಾಗಿದೆ. ಅಗಲವು 2 ಸಾವಿರ ಯೋಜನ. ಆದರೂ ಒಂದಕ್ಕಿಂತ ಒಂದು ಉತ್ತರಕ್ಕೆ ಪೋದಂತೆ ಹತ್ತನೇ ಒಂದಂಶದಷ್ಟು ದೀರ್ಘದಲ್ಲಿ ಕಡಿಮೆಯಾಗುತ್ತಾ ಹೋಗುವುದು.

ಇದೇ ವಿಧವಾಗಿ ಇಲಾವೃತದ ದಕ್ಷಿಣದಲ್ಲಿ ನಿಷಧ, ಹೇಮಕೂಟ, ಹಿಮಾಲಯ ಎಂಬ ಮರ್ಯಾದಾ ಗಿರಿಗಳು ಪ್ರಾಗಾಯತವಾಗಿ 10 ಸಾವಿರ ಯೋಜನೋನ್ನತವಾಗಿ ಕ್ರಮವಾಗಿ ಹರಿವರ್ಷ, ಕಿಂಪುರುಷ, ಭಾರತಖಂಡಗಳನ್ನು ವಿಂಗಡಿಸುತ್ತಿವೆ. ಪೂರ್ವದಲ್ಲಿ ಗಂಧಮಾದನವು, ಪಶ್ಚಿಮದಲ್ಲಿ ಮಾಲ್ಯವಂತವೂ ಮರ್ಯಾದಾ ಗಿರಿಗಳಾಗಿ ನೀಲವಿಷಧ ಗಿರಿಗಳನ್ನು ಮುಟ್ಟಿ ವ್ಯಾಪಿಸಿ, ಭದ್ರಾಶ್ವಕೇಶುಮಾಲಖಂಡಗಳನ್ನು ವಿಂಗಡಿಸುತ್ತಿವೆ. ಮೇರುವಿನ ನಾಲ್ಕು ದಿಕ್ಕಿನಲ್ಲಿಯು ಮಂದರ, ಮೇರುಮಂದರ ಸುಪಾರ್ಶ್ವ, ಕುಮುದವೆಂಬ ಗಿರಿಗಳು 10 ಸಾವಿರ ಯೋಜನ ವಿಸ್ತೃತವಾಗಿ ಅವಷ್ಟಂಭ ಗಿರಿಗಳೆನಿಸಿ ನಿಂತಿವೆ. ಈ ಪರ್ವತಗಳ ಕೋಡುಗಳಲ್ಲಿ ಚೂತ, ಜಂಬೂ, ಕದಂಬ, ನ್ಯಗೋಧತರುಗಳು ಧ್ವಜಗಳಂತೆ 1100 ಯೋಜನೋನ್ನತವಾಗಿ ಶತಯೋಜನಾಯತ ಶಾಖಾಸಹಿತವಾಗಿ ರಾಜಿಸುತ್ತಿವೆ. ಅಲ್ಲಿ ಪಯಸ್ಸರ, ಮಧುಸರ, ಇಕ್ಷುರಸಸರ, ಮೃಷ್ಟಜಲಸರಗಳು ಇವೆ. ಸ್ನಾನ ಮಾಡುವ ದೇವಗಣವು ಸ್ವಾಭಾವಿಕ ಯೋಗೈಶ್ವರ್ಯವನ್ನು ಪೊಂದಿ, ಅಮರಲಲನಾಲಲಾಮ ರಮಾರಮಣರಾಗಿ ವಿಹರಿಸುತ್ತಿರುವರು.

ಮಂದರಗಿರಿಯ ಮೇಲಿರುವ ಮಾವಿನ ಮರದಿಂದ 1,100 ಯೋಜನದ ಎತ್ತರದಿಂದ ಗಿರಿಶಿಖರ ಸ್ಥೂಲಫಲಗಳು ಮಂದರಸಾವಿನಲ್ಲಿ ಬಿದ್ದು ಒಡೆದು, ಅದರ ಮಧುರ ಸುರಭಿಳಾರುಣರಸವು ನದಿಯಾಗಿ ಹರಿದು ಅರುಣೋದಾ ಎಂಬ ಪೆಸರಿನಿಂದ ಪೂರ್ವದಲ್ಲಿ ಇಲಾವೃತ ಖಂಡ ದೇಶದಿ ಪ್ರವಹಿಸಿ ಪೋಗುವುದು. ಅಲ್ಲಿ ಸ್ನಾನ ಮಾಡಿ ಚರಿಸುವ ಭವಾನೀದೇವಿಯ ಅನುಚರಿ ಸುಂದರಿಯನ್ನು ಮುಟ್ಟಿ ಸೂಸಿ ಬರುವ ಸುಗಂಧಮಾರುತವು, ಸುತ್ತಲು ಹತ್ತು ಯೋಜನದ ದೇಶವನ್ನು ಆಮೋದಭರಿತವನ್ನಾಗಿಸುತ್ತಿದೆ.

ಜಂಬೂವೃಕ್ಷದಿಂದಲೂ ಬೀಜಾಲ್ಪವು ಹಸ್ತಿಕಾಯ ಸದೃಶರಾದ ಫಲಗಳು ಮೇರು ಮಂದರಸಾನುಗಳನ್ನು ಬಿದ್ದೊಡೆದು, ಹರಿವ ರಸವು, ಜಾಂಬೂನದವಾಗಿ ದಕ್ಷಿಣೇಲಾವೃತ ಖಂಡದಲ್ಲಿ ಹರಿಯುತ್ತಿದೆ. ಅದರ ಎರಡು ದಡದ ಮೃತ್ತಿಕೆಯು ಆ ಸರದಿ ತೊಯ್ದು, ವಾಯು ಸೂರ್ಯಸಂಯೋಗದಿಂದ ಬಂಗಾರವೆನಿಸಿ, ಸಕಲ ಸುರರಮಣೀಯರಮಣೀಯ ಭೂಷಣವಾಗಿ ಕಟಕಮುಕುಟ ಕಟಿಸೂತ್ರಹಾರಾದ್ಯಾಭರಣರೂಪದಿಂದ ಧಾರಣಯೋಗ್ಯವೆನಿಸಿದೆ.

ಕದಂಬವೃಕ್ಷವು ಸುಪಾರ್ಶ್ವದ ಕೋಡಿನಲ್ಲಿದೆ. ಅದರ ಕೋಟರಗಳಿಂದ ಐದು ಮಾರು ಅಗಲವಾದ ಐದು ಮಧುಧಾರಾರೂಪ ನದಿಗಳು ಇಲಾವೃತ ಪಶ್ಚಿಮ ದೇಶದಲ್ಲಿ ಹರಿಯುತ್ತಿವೆ. ಅದರ ಸುಗಂಧವು ನೂರು ಯೋಜನ ದೂರ ವ್ಯಾಪ್ತವಾಗಿ, ಆ ರಸವು ಅವನ ನರನಾರೀ ಸೇವ್ಯವಾಗಿದೆ.

ಶತಲವಶವೆಂಬ ವಟವು ಕುಮುದಪರ್ವತಾಗ್ರದಲ್ಲಿದೆ. ಅದರ ಬುಡಗಳಿಂದ ಹಾಲು ಮೊಸರು ತುಪ್ಪ ಜೇನು ಪಾಯಸಗಳು ಅಂಬರಶಯ್ಯಾಸನಾಭರಣಗಳು ಕಾಮಪ್ರದ ನದಿಗಳು ಕುಮುದ ಗಿರ್ಯಗ್ರದಿಂದ ಬಂದು ಬೀಳುವುವು. ಇದರ ನದಿಗಳು ಇಲಾವೃತದ ಉತ್ತರದಲ್ಲಿ ಹರಿಯುವುವು. ಇವನ್ನು ಸೇವಿಸುವರಿಗೆ ವಲೀಪಲಿತಾದಿಗಳು ಕ್ಲಮ ಸ್ವೇದ ದೌರ್ಗಂಧ್ಯಗಳು ಜರಾಮರಣಗಳು ಶೀತೋಷ್ಣಮುಖೋಪದ್ರವಗಳು ಇರುವುದಿಲ್ಲ. ಜೀವಮಾನವೆಲ್ಲವೂ ನಿರತಿಶಯ ಸುಖವೇ ಲಭಿಸುವುದು.

ಕುರಂಗ ಕುರರ ಕುಸುಂಭವ ಕಂಕತ ತ್ರಿಕೂಟ ಶಿಶಿರ ಪತಂಗ ರುಚಕ ನಿಷಧ ಶಿತಿವಾಸ ಕಪಿಲ ಶಂಖ ವೈಢೂರ್ಯ ಜಾರುಧಿ ಹಂಸ ಋಷಭ ಸೌನೀರ ನಾಗ ಕಾಲಂಜರನಾರದಾದಿ ಗಿರಿಗಳು ಮೇರುವಿನ ಸುತ್ತಲು ಪುಷ್ಪಕೇಸರಗಳಂತೆ ನಿಂತಿವೆ. ಮೇರುವಿಗೆ ಸುತ್ತಲೂ ಅಷ್ಟಾದಶ ಸಹಸ್ರಯೋಜನ ದೂರ ದೇಶದಲ್ಲಿ ಜಠರ ದೇವಕೂಟಗಳು ಪೂರ್ವದಲ್ಲಿಯು ಪವನ ಪಾರಿಯಾತ್ರಗಳು ಪಶ್ಚಿಮದಲ್ಲಿಯು ಕೈಲಾಸಕರವೀರ ಗಿರಿಗಳು ದಕ್ಷಿಣದಲ್ಲಿಯು ಶೃಂಗ ಮಕರ ಗಿರಿಗಳು ಉತ್ತರದಲ್ಲಿಯೂ ಅಗ್ನಿಯ ಸುತ್ತಲೂ ಪರಿಸ್ತರಣವಿದ್ದಂತೆ ನಿಂತಿವೆ.

ಇಂತಹ ಕನಕಗಿರಿಶೃಂಗದಲ್ಲಿ ಭಗವಂತನಾದ ಚತುರ್ಮುಖನ ಮಂದಿರವಿದೆ. ಅದರ ದೀರ್ಘವು ಹತ್ತು ಸಾವಿರ ಯೋಜನವು. ಅಗಲವೂ ಅಷ್ಟೇ. ಬಂಗಾರದ ಆ ಮನೆಗೆ ಶತ ಕೋಟಿ ಎಂಬ ಪೆಸರು ಪ್ರಖ್ಯಾತವಾಗಿದೆ. ಅಲ್ಲೆ ಸುತ್ತಮುತ್ತಲೂ ತತ್ತದ್ದಿಕ್ಪಾಲಕ ಮಂದಿರಗಳೂ ತತ್ತದ್ದಿಗ್ಭಾಗಗಳಲ್ಲಿ ರಚಿತವಾಗಿ $2^1/_2$ ಸಾವಿರ ಯೋಜನ ವಿಸ್ತಾರವಾಗಿ ವಿರಾಜಿಸುತ್ತಿವೆ.

## ೧೭. ಭೂಗೋಲ ವಿಚಾರ – ಗಂಗಾವತಾರ – ಇಲಾವೃತ

ಆ ಶತಕೋಟಿ ಮಂದಿರಾಂಗಣದಲ್ಲಿ ಬರಲೆಣಿಸಿ ಸಾಕ್ಷಾದ್ಭಗವಂತನಾದ ತ್ರಿವಿಕ್ರಮನ ವಾಮ ಪಾದಾಂಗುಷ್ಠನಖನಿರ್ಭಿನ್ನವಾದ ಬ್ರಹ್ಮಾಂಡಕಟಾಹದ ಬಿರುಕಿನಿಂದ ಬಾಹ್ಯಜಲಧಾರೆಯು ತೂರಿಬಂದು ಗೋವಿಂದಸುಂದರ ಚರಣಾರವಿಂದಾವನೇಜನವನ್ನು ಮಾಡಿ ತದ್ಗತಾರುಣಕಿಂಜಲ್ಕ ರಂಜಿತವಾದುದರಿಂದ ಸಕಲಜಗತ್ಕಾಲುಷ್ಯಕ್ಷಾಲನ ಸಮರ್ಥವೆನಿಸಿ ಭಗವತ್ಪದಿ ಎಂಬ ಸಾರ್ಥಕ ನಾಮದಿಂದ ಪ್ರಶಂಸಿತವಾಗಿ ಒಂದು ಸಾವಿರ ಯುಗದ ಕಾಲದಲ್ಲಿಳಿದು ದ್ಯುಲೋಕಮಣಿಯಾದ ಧ್ರುವಮಂಡಲದಲ್ಲಿ ಪ್ರಕಾಶಿತ ಸ್ವರೂಪವಾಗಲು ಗಂಗೆ ಎಂಬುವರು. ನಾಮಕೀರ್ತನ ಮಾತ್ರ ದಿಂದ ಪಾಪಹರಳು ಪರಮಪುರುಷಪಾದ ಸಂಭೂತಳೆಂದಮೇಲೆ ಮತ್ತು ಆಚಮನಮಾತ್ರ ದಿಂದ ದುರಿತದೂರೀಕರಣ ಸಮರ್ಥಳೆಂದ ಮೇಲೆ ಸ್ನಾನಾದಿಗಳಿಂದ ಪಾಪನಾಶಕಳೆಂದು ಹೇಳ ಬೇಕೆ? ಶಿಂಶುಮಾರ ಭಗವತ್ಪದಪಂಕಜ ಪಾವನವಾದಾ ಧ್ರುವಮಂಡಲದಲ್ಲಿ ಪರಮಭಾಗವತನು ವೀರವ್ರತನಾದ ಧ್ರುವನಾಜಲವಂ ಕಂಡು 'ಓಹೋ! ಎಂತಹ ಧನ್ಯನಾದೆ! ನಮ್ಮ ಕುಲದೇವತಾ ಚರಣಾರವಿಂದೋದಕವಲ್ಲವೇ' ಎಂದು ಪರಮಭಕ್ತಿರಸಾರ್ದ್ರಹೃದಯನು, ಔತ್ಕಂಠ್ಯದಿಂದಾ ಮೀಲಿತ ನಯನನು, ಆನಂದಾಶ್ರುಕಲಾಭಿರಂಜಿತ ಮುಖಪಂಕಜನು, ಹರ್ಷಪುಲಕಾಂಕುರಿತ ಗಾತ್ರನಾಗಿ ಇಂದಿನವರಿವಿಗೂ ಬಿಡದೆ, ತ್ರಿಕಾಲಗಳಲ್ಲಿಯೂ ಸ್ನಾನಾದಿಗಳಿಂದ, ಸೇವಿಸಿ ಶಿರಸಾ ಧರಿಸಿರುವನು.

ಅಲ್ಲಿಂದಿಳಿದು ಮಂದಾಕಿನಿಯು, ಋಷಿಲೋಕದಿ ಹರಿಯಲು ನೋಡಿ 'ನಮ್ಮ ತಪಸ್ಸಿಂದು ಫಲಿಸಿತು. ಸರ್ವಾತ್ಮಕನಾದ ವಾಸುದೇವನಲ್ಲಿ ಅನವರತ ಭಕ್ತಿಯೋಗ ಲಾಭವನ್ನು ಹೊರತನ್ಯ ವೇನೂ ಬೇಡೆಂಬ ಮುಮುಕ್ಷುಗಳಾದೆಮಗೆ ಶ್ರೀಹರಿ ದಯಪಾಲಿಸಿದ ಮುಕ್ತಿಯೋ ಏನು? ಎಂದು ಪರಮಾದರದಿಂದ ತಮ್ಮ ಜಟಾಜೂಟಗಳಲ್ಲಿ ಧರಿಸಿರುವರು. ಆಗ ದೇವನದಿಯು ಆ ಋಷಿಲೋಕದಿಂದ ಇಂದ್ರಾದಿ ಪುರಸಂಬಂಧದಿಂದ ಸಂಚರಿಪ ಬೃಂದಾರಕ ವಿಮಾನಸಂಕುಲ ವಾದ ಅಂತರಿಕ್ಷದಲ್ಲಿ ಬಂದು, ಚಂದ್ರಮಂಡವನ್ನು ತೊಯಿಸಿ ಪ್ರವಹಿಸಿ, ಮೇರುಶಿಖರಸ್ಥಿತ ಬ್ರಹ್ಮಪುರವಾದ ಶತಕೋಟಿ ಮಂದಿರಾಂಗಣದಲ್ಲಿ ಬಿದ್ದು ಹರಿಯವುದು. ಅಲ್ಲಿಂದ ನಾಲ್ಕು

ಭಾಗವಾಗಿ ನಾಲ್ಕು ದಿಕ್ಕಿನಲ್ಲಿಯೂ, ನಾಲ್ಕು ಪೆಸರಿನಿಂದ ಹರಿದು ಸಮುದ್ರವನ್ನು ಸೇರುವುದು. ಸೀತಾ, ಅಲಕಾನಂದಾ, ಚಕ್ಷುಃ, ಭದ್ರಾ ಎಂದು ಆ ನದಿಗಳ ನಾಮಗಳು.

ಸೀತಾನದಿಯು ಮೇರು ಶಿಖರದಿಂದ, ಕೇಸರ ಪರ್ವತಗಳ ತುದಿಯಿಂದ, ಗಂಧಮಾದನ ಶಿಖರಕ್ಕೆ ಹಾರಿ, ಭದ್ರಾಶ್ವ ಖಂಡವನ್ನು ವ್ಯಾಪಿಸಿ ಹರಿದು, ಪೂರ್ವದಿಕ್ಕಿನ ಲವಣ ಸಮುದ್ರವನ್ನು ಸೇರುವಳು. ಮಾಲ್ಯವಚ್ಛಿಖರದಿ ಬಿದ್ದು ಕೇತುಮಾಲಖಂಡದಲ್ಲಿ ಹರಿದು, ಚಕ್ಷು ನದಿಯು ಪಶ್ಚಿಮಾಂಬುಧಿಯನ್ನು ಕಲಿಯುವಳು. ಭದ್ರಾನದಿಯು ಉತ್ತರಕ್ಕೆ ಹಾರಿ ಶೃಂಗವತ್ಪರ್ವತದ ಕೋಡಿನಿಂದ ಧುಮುಕಿ, ಉತ್ತರ ಕುರು ಖಂಡವನ್ನು ಹರಿದು ದಾಟಿ, ಲವಣೋದಧಿಯನ್ನು ಸೇರುವಳು. ಅಲಕನಂದಾನದಿಯು ಕೂಡ ಬಹು ಗಿರಿಕೂಟಗಳಲ್ಲಿ ಹಾರಿ ಬಂದು, ಹೇಮಕೂಟ ಹಿಮಾಲಯ ಶಿಖರದಿಂದ, ಬಹು ರಭಸಾರ್ಭಟಿಯಾಗಿ ದಕ್ಷಿಣಕ್ಕೆ ಹರಿದು, ಭಾರತ ವರ್ಷದಲ್ಲಿ ಜಲನಿಧಿಯನ್ನು ಕಾಣುವಳು. ಎಷ್ಟೋ ನದನದಿಗಳು ಮೇರ್ವಾದಿ ಗಿರಿಗಳಿಂದ ಪುಟ್ಟಿ ಹರಿಯುವ ವಿನ್ನೂ ಇವೆ. ಆದರೆ ಜಂಬೂದ್ವೀಪದಲ್ಲಿ ಭಾರತವರ್ಷವೇ ಕರ್ಮಭೂಮಿ ಎನಿಸಿದೆ. ಇನ್ನು ಮಿಕ್ಕ ಎಂಟು ವರ್ಷಗಳು ಸ್ವರ್ಗಿಜನರ ಪುಣ್ಯಶೇಷವನ್ನನುಭವಿಸಲು ಪುಟ್ಟಿದ ಭೋಗಭೂಮಿ ಗಳಾಗಿವೆ. ಅಂತೆಯೇ ಅವು ಭೌಮ ಸ್ವರ್ಗವೆನಿಸಿದೆ. ಅಲ್ಲಿಯ ಪುರುಷರು ಆಯುತಾಯುಷ್ಕರು. ದೇವಕಲ್ಪರು. ಗಜಾಯುತ ಬಲರು. ವಜ್ರಸಂಹನನಾಂಗರು. ಮೋದ ಮಾನರಮಣೀ ಸುರತನಿರತರು. ಸ್ತ್ರೀಯರೋ ಏಕಪ್ರಸವರು. ಕಾಲವು ತ್ರೇತಾಯುಗ ಸಮಧರ್ಮಕವಾಗಿರುವುದು. ದೇವಶ್ರೇಷ್ಠರು ತಮ್ಮ ತಮ್ಮ ನಾಯಕರನ್ನು ಪೂಜಿಸುತ್ತಾ ಅವರಿಂದ ಸಕಲ ಸುಖಗಳನ್ನು ಪೊಂದುವರು. ಸರ್ವತು ಕುಸುಮಫಲಪಲ್ಲವಭರಿತವಾದ ಉದ್ಯಾನಗಳು ಉದ್ಯಾನದಲ್ಲಿ ಫಲಭಾರನತವೃಕ್ಷಗಳು ವೃಕ್ಷಗಳ ಛಾಯಾನಿಬಿಡ ರುಚಿರಕಾನನ ಗಿರಿಕಂದರಾಶ್ರಮಗಳು, ಆಶ್ರಮ ಗಳಲ್ಲಿ ಅಮಲ ಜಲಾಶಯಗಳು, ಜಲಾಶಯಗಳಲ್ಲಿ ವಿಕಸಿತ ಕಮಲಕಲ್ಹಾರಾಮೋ ದಭರಿತ ಕಲಹಂಸ ಕಾರಂಡವಸಾರಸಾದಿ ಜಲಪಕ್ಷಿಗಳು ಪಕ್ಷಿ ಕಲಕಲವಿರುತದಿ ಶ್ರುತಿ ಗೂಡಿಸುವಂತೆ ಝುಂಕಾರ ಮಾಡುವ ಮಧುಕರಗಳು, ಮಧುಕರಗಳನ್ನು ಧಿಕ್ಕರಿಸುವ ಕುಂತಲಗಳಿಂದ ವಿಭ್ರಾಜಿತ ವಾದ ವದನಪಂಕಜದಿಂದ ಶೋಭಿಪ ಸುರಸುಂದರಿ ಯರು, ಸುಂದರಿಯರಿಂದ ಜಲಕ್ರೀಡಾ ಪರಮನಸ್ಕರಾದ ಅಮರಪರಿವೃಢರು ಆ ಖಂಡಗಳಲ್ಲಿ ಸ್ವೈರವಿಹಾರಧೀರರಾಗಿ ಮೆರೆಯುವರು.

ನವವರ್ಷಗಳಲ್ಲಿಯೂ ಭಗವಾನ್ ನಾರಾಯಣನು ಭಕ್ತಜನಾನುಗ್ರಹಕರಣಶೀಲನಾಗಿ ನಾನಾರೂಪದಿಂದ ವಿರಾಜಿಸಿ ತತ್ತದ್ವರ್ಷಪತಿಗಳಿಂದ ಪೂಜೆಗೊಳ್ಳುತ್ತಿರುವನು.

ಇಲಾವೃತದಲ್ಲಿ ಭಗವಾನ್ ಮಾಹಾದೇವನೊಬ್ಬನೇ ಪುರುಷನು. ಇನ್ನೊಬ್ಬನಲ್ಲಿಲ್ಲ. ಭವಾನಿಯ ಶಾಪವನ್ನರಿತ ಪುರುಷರಾರೂ ಅಲ್ಲಿ ಪ್ರವೇಶಿಸುವುದಿಲ್ಲ. ತಿಳಿಯದೇ ಪ್ರವೇಶಿಸಿ ದವನು ಸ್ತ್ರೀಯಾಗುವನು. ಇದರ ವಿವರವನ್ನು ಮುಂದೆ ನವಮಸ್ಕಂಧದಲ್ಲಿ ಪೇಳುವೆನು. ಭವನು ಕೋಟಿಸುಂದರೀ ಸೇವಿತಳಾದ ನಿಜಸತಿಯಿಂದ ಕೂಡಿ ಅಲ್ಲಿ ನೆಲಸಿರುವನು. ಭಗವಂತನ ಸಂಹಾರಕಾರಣ ಸಂಕರ್ಷಣರೂಪವನ್ನು ತನಗೆ ಕಾರಣವಾಗಿರುವುದರಿಂದ, ಸಮಾಧಿಯಲ್ಲಿ ಧ್ಯಾನಿಸಿ, ಇಂತು ನುತಿಸಿ ಪೂಜಿಸಿತ್ತಿರುವನು–

ಶೇಷಸ್ಥಿತಹರೇ! ನಿನ್ನ ಸರ್ವಗುಣಗಳು ಪೂರ್ಣಗಳು–ಸರ್ವಗುಣಗಳು ನಿರ್ದೋಷಗಳು. ಭಕ್ತಜನದೋಷಕರ್ಷಣ! ಸಂಕರ್ಷಣ! ನಿನಗೆ ನಮಃ. ಲಕ್ಷ್ಮೀ ಪೂಜಿತವಾದ ನಿನ್ನ ಪಾದಪಂಕಜವು ಗುಣಪೂರ್ಣವಾಗಿದೆ. ಸಕಲ ಜಗಜ್ಜನಕನೇ! ನಿತ್ಯತೃಪ್ತನಾದ ಬ್ರಹ್ಮಾದಿಗಳಿಗೂ ವಂದ್ಯನಾದ,

ಐಶ್ವರ್ಯಪೂರ್ಣನಾದ ನಿನ್ನ ಭವಮೋಚಕ ಪಾದಪಂಕಜವನ್ನು ಭಜಿಸುವೆನು. ಸರ್ವ ಸಮರ್ಥನಾದ ನಿನಗೆ ಪ್ರಕೃತಿಯು ಸತ್ವಾದಿ ಗುಣನಿರ್ಮಿತ ಶಬ್ದಾದಿ ವಿಷಯ ವಿಷಲೇಪವಿಲ್ಲ. ಸರ್ವ ಸಾಕ್ಷಿಯಾದ ನಿನಗೆ ಕರ್ಮಲೇಪವಿಲ್ಲ. ನಾವು ನಿನ್ನನ್ನು ಸಂಪೂರ್ಣವಾಗಿ ತಿಳಿಯಲಾರೆವು. ಮನಸ್ಸನ್ನು ಜಯಿಸಲಿಚ್ಛಿಸಿದ ಯಾವ ವಿವೇಕಿಯು, ನಿನ್ನನ್ನು ಭಜಿಸದಿರುವನು? ಶ್ರೋತ್ರಾದೀಂದ್ರಿಯಗಳಲ್ಲಿದ್ದು, ಶಬ್ದಾದಿ ವಿಷಯಗಳಲ್ಲಿ ನಡೆಸಿ, ಜ್ಞಾನ ವನ್ನೂ ಪುಟ್ಟಿಸಿ, ಸುಖವನ್ನು ಕೊಡುವ ಅತ್ಯಂತೋಪಕಾರಕನಾದ ನಿನ್ನನ್ನೆಂತು ಮರೆಯುವೆವು? ಮಧುರ ಮಧು ಸೇವನದಿಂದ ಮತ್ತನಾದವನಿಗೆ ಇತರರೂ ಮಧುಮತ್ತರಾಗಿ ತೋರುವಂತೆ, ದುಶ್ಯಾಸ್ತ್ರಜನಿತಾನ್ಯಥಾಜ್ಞಾನವೆಂಬ ಸುರೆಯನ್ನು ಕುಡಿದವನಿಗೆ ನೀನೂ ಕಾಣದಿರುವೆ. ಅದು ನನ್ನ ಆಚ್ಛಾದಕಶಕ್ತಿಯ ಪ್ರಭಾವವೇ ಸರಿ!

ಹೇ ಶೇಷಾಂತರ್ಯಾಮಿನ್! ಹರೇ! ನಿನ್ನನ್ನು ಪೂಜಿಸಲು ಬಂದ ನಾಗಸುಂದರಿಯರು, ವಂದಿಸುವಾಗ, ಪಾದಸ್ಪರ್ಶದಿಂದ ಧರ್ಷಿತೇಂದ್ರಿಯರಾಗಿ, ಪೂಜೆಯನ್ನು ಮಾಡುವುದನ್ನೂ ಮರೆತು ನಿಲ್ಲುವರು. ನಿನ್ನಿಂದ ಈ ಜಗಕ್ಕೆ ಸೃಷ್ಟಿ ಸ್ಥಿತಿ ಲಯಗಳು. ನಿನ್ನಿಂದ ಜಾಗ್ರತ್ ಸ್ವಪ್ನ ಸುಷುಪ್ತಿಗಳು. ನಿನಗೆ ಸೃಷ್ಟ್ಯಾದಿ ಕರ್ತನು ಬೇರಿಲ್ಲ. ನೀನು ಸದಾ ಜಾಗ್ರತನು. ಕಾಲತ್ರಯದಲ್ಲಿಯು ನನ್ನ ಅಗಾಧ ಮಹಿಮೆಯು ಅಪರಿಚ್ಛಿನ್ನವು ಶಶ್ವದೇಕ ಪ್ರಕಾರವೂ ಆಗಿದೆ. ಈ ಭೂಮಂಡಲವು ನಿನ್ನ ಒಂದು ಹೆಡೆಯ ಮೇಲೆ ನಿಂತಿದ್ದರೂ ಅದರ ಭಾರವು ನಿನಗೆ ಲಕ್ಷ್ಯವಿಲ್ಲವಾದ್ದರಿಂದ ಒಂದು ಸಾಸಿವೆ ಕಾಳಿನಂತೆ ಅನಾಯಾಸದಿಂದ ಅದನ್ನು ಧರಿಸಿರುವೆ. ನಿನ್ನಿಂದ ಮೊದಲು ರಜಃಪ್ರಧಾನ ಸೃಷ್ಟಿಕರ್ತನಾದ ಬ್ರಹ್ಮನು ಪುಟ್ಟಿ, ಮಹತ್ತತ್ವಾಭಿಮಾನಿ ಎನಿಸಿದನು; ನಿನ್ನ ವಿಜ್ಞಾನದಿಂದ ಸರ್ವಜ್ಞನೆಂದು ಖ್ಯಾತನಾದನು. ಅವನಿಂದ ನಾನು ಜನಿಸಿ, ವೈಕಾರಿಕ ತೈಜಸ ತಾಮಸಾಹಂಕಾರ ಸ್ವಾಮಿ ಎನಿಸಿ, ಮಿಕ್ಕೆಲ್ಲವನ್ನೂ ಸೃಜಿಸಿದನು. ಸೂತ್ರಯಂತ್ರಿತವಾಗಿ ಪಕ್ಷಿಗಳು ಹಾರಾಡುವಂತೆ ನಿನ್ನ ಮಹಾಮಹಿಮೆಯ ದಾಸರಾಗಿ, ನಿನ್ನ ವಶರಾಗಿ, ಬ್ರಹ್ಮನು, ನಾನು, ಇಂದ್ರಿಯ ದೇವತೆಗಳು ನಡೆಯುತ್ತಾ ನಿನ್ನಾಜ್ಞೆಯಂತೆ ಸೃಜಿಸಿ, ನಿನ್ನನುಗ್ರಹವನ್ನು ಬೇಡುವೆವು. ಶಬ್ದಾದಿ ವಿಷಯ ಮೋಹಿತನಾಗಿ, ಜೀವನು ನಿನ್ನ ಬಂಧಕಶಕ್ತಿಗೆ ಸಿಲುಕುವನಾಗಿ ವಿಹಿತ ನಿಷೇದ ಕರ್ಮಗಳನ್ನು ಮಾಡುತ್ತಾ ತತ್ಫಲವನ್ನು ಭುಜಿಸಲು ಪುಟ್ಟಿ ಸಾಯುತ್ತಿರುವನು. ಸಂಸಾರ ತರಣೋಪಾಯವನ್ನೂ ನೀನೇ ತಿಳಿಸಿ, ನಿನ್ನ ಬಂಧಕ ಶಕ್ತಿಯನ್ನು ಉಪಸಂಹರಿಸಿ, ಜ್ಞಾನಪ್ರದನಾಗು! ನೀನೇ ಸ್ವತಂತ್ರಕರ್ತನೆಂಬ ಜ್ಞಾನವನ್ನಿತ್ತು ಅನುಗ್ರಹಿಸು-ಎಂದು ನುತಿಸುತ್ತಿರುವನು.

## ೧೮. ಭದ್ರಾಶ್ವ—ಹರಿವರ್ಷ—ಕೇತುಮಾಲ—ರಮ್ಯಕ—ಕುರು—ಹಿರಣ್ಮಯ ಖಂಡಗಳು

ಭದ್ರಾಶ್ವ ವರ್ಷದಲ್ಲಿ ಭದ್ರಶ್ರವನೆಂಬುವ ಧರ್ಮಪ್ರಜೇಶಪುತ್ರನು, ತನ್ನ ಕುಲಜನರಿಂದ ಕೂಡಿ, ವಾಸುದೇವನ ಸರ್ವಪ್ರಿಯರೂಪವಾದ ಹಯಗ್ರೀವದೇವನನ್ನು ಸ್ತುತಿಸಿ ಉಪಾಸಿಸುತ್ತಿರುವನು—

ಜಗದ್ಧಾರಣ ಪ್ರಧಾನರೇ! ಮನಸ್ಸನ್ನು ರಾಗದ್ವೇಷಾದಿ ಮಲದಿಂದ ದೂರಮಾಡಿ ಶುದ್ಧೀಕರಿಸು. ನಿನಗೆ ನಮಃ!

ಭಗವಂತನ ಚರಿತ್ರವು ಅತಿ ವಿಚಿತ್ರವು! ಸಂಹಾರಕನಾಗಿ ಬರುವ ಶ್ರೀಹರಿಯನ್ನು ಕಣ್ಣೆದ್ದೂ ನೋಡದ ಜನರಿರುವರಲ್ಲವೇ?ಶಾಸ್ತ್ರದಿಂದ ಶಬ್ದಾದಿಗಳು ಅಮಂಗಳವೆಂದರಿತೂ ಬಿಡದೆ, ವಿಷಯಲೋಲುಪನಾಗುವನಲ್ಲವೇ? ಜ್ಞಾನಿಗಳು ಪ್ರಪಂಚವೆಲ್ಲವೂ ಪ್ರವಾಹತಃ ನಿತ್ಯವಾದರೂ, ಶಾಶ್ವತವಲ್ಲವೆಂದೂ ಹೇಳಿದರೂ, ಅಧ್ಯಾತ್ಮವಿಜ್ಞನರು ಹಾಗೆಂದು ಪ್ರತ್ಯಕ್ಷೀಕರಿಸಿ ಅನುಭವ ವನ್ನು ತಿಳಿಸಿದರೂ, ಸಾಮಾನ್ಯರು ನಿನ್ನ ಬಂಧಕಶಕ್ತಿಯಿಂದ ಅಜ್ಞನವನ್ನು ಪೊಂದಿ, ತಿಳಿಯದೇ ಸಂಸರಿಸುವರು. ಜ್ಞಾನಿಗಳೂ ಒಂದೊಂದು ಸಲ ನಿನ್ನ ಮಹಿಮೆನ್ನು ತಿಳಿಯಲಾರದೆ ಮೋಹಿತ ರಾಗುವರಿದು ಚಿತ್ರವೇ ಸರಿ! ವಿಶ್ವವನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ನಿನಗೆ, ಕರ್ಮ ಲೇಪವಿಲ್ಲವೆಂದೇ, ವೇದಾದಿ ಸಚ್ಛಾಸ್ತ್ರಗಳು ಪೇಳುತ್ತಿರುವುವು. ಕಾರ್ಯಕಾರಣ ವಸ್ತುಗಳಲ್ಲಿ ನಿಯಾಮಕನಾದ ನಿನಗೆ ನಿಮಿತ್ತ ಕಾರಣನಾದುದರಿಂದ, ಸ್ವತಂತ್ರನಾದುದರಿಂದ, ತತ್ಕೃತ ಲೇಪ ಲೋಪಗಳಿಲ್ಲ. ಮಧುನಾಮಕ ದೈತ್ಯನು ಅಪಹರಿಸಿದ ವೇದಗಳನ್ನುದ್ಧರಿಸಿ, ಪ್ರಳಯಾಂತ್ಯದಲ್ಲಿ ಆ ದೈತ್ಯನನ್ನು ಸಂಹರಿಸಿ, ರಸಾತಲದಿಂದ ವೇದವನ್ನು ತಂದು, ಬ್ರಹ್ಮನಿಗೆ ಪೇಳಿದ ಸತ್ಯ ಸಂಕಲ್ಪನೇ! ನಿನಗೆ ನಮಸ್ಕಾರವು–ಎಂದು ಭದ್ರಾಶ್ವ ಪುರುಷರು ಹಯಗ್ರೀವಪ್ರಭುವನ್ನು ನುತಿಸುತ್ತಿರುವರು.

ಹರಿವರ್ಷದಲ್ಲಿ ಭಗವಂತನು ನರಹರಿರೂಪದಿಂದ ಪೂಜೆಗೊಂಬುವನು. ಆ ರೂಪ ಗ್ರಹಣ ಕಾರಣವನ್ನು ಮುಂದೆ ಸಪ್ತಮ ಸ್ಕಂಧದಲ್ಲಿಪೇಳುವೆನು. ಆ ಪ್ರಿಯತಮರೂಪನನ್ನು ಭಕ್ತಿಜ್ಞಾನವಿರಕ್ತಿಮುಖ ಮಹಾಪುರುಷಲಕ್ಷಣ ಸಮನ್ವಿತನು, ಮಹಾಭಾಗವತನು, ದೈತ್ಯ ದಾನವಕುಲಪವಿತ್ರೀಕರಣಶೀಲನು, ಬಾಲ್ಯಾರಭ್ಯಾಭ್ಯಾಸ್ತ ಕಮನೀಯಗುಣಜಾಲನು ಆದ ಪ್ರಹ್ಲಾದನು ಫಲಕಾಮನೆಯನ್ನು ಬಿಟ್ಟು ನಿರಂತರ ಭಕ್ತಿಯೋಗದಿಂದ ಆ ವರ್ಷಪುರುಷರಿಂದ ಕೂಡಿ, ಉಪಾಸಿಸುವನು; ಮತ್ತು ಇಂತು ನುತಿಸುವನು–

ನಿತ್ಯತೇಜಸ್ಸ್ವರೂಪನೇ! ನಿತ್ಯಾವಿರ್ಭೂತನೇ! ವಜ್ರದಂಷ್ಟ್ರನೇ! ವಜ್ರನಖನೇ! ನಿನ್ನ ರೂಪವನ್ನು ತೋರು! ಅಜ್ಞಾನವನ್ನೂ ದೈತ್ಯರನ್ನೂ ನಾಶಮಾಡು! ನನಗೆ ಅಭಯವನ್ನು ನೀಡು! ಪುನಃ ಪುನಃ ನಿನಗೆ ನಮಸ್ಕಾರವು.

ನೃಸಿಂಹನು ಪ್ರಸನ್ನನಾಗಲಿ! ವಿಶ್ವಕ್ಕೆ ಮಂಗಲವಾಗಲಿ! ಜನರೇ! ಮನಃಪೂರ್ವಕವಾಗಿ ಶ್ರೀಹರಿಯನ್ನು ಧ್ಯಾನಿಸಿರಿ! ನಿಮಗೆ ಶುಭವಾಗುವುದು. ಅಧೋಕ್ಷಜನಲ್ಲಿ ಚಲಿಸದೆ ಮನವಿಟ್ಟು, ಫಲಾಕಾಂಕ್ಷೆಯನ್ನು ಬಿಟ್ಟು ಸೇವಿಸಿರಿ!

ಧನ–ದಾರಾ–ಆಗಾರ–ಪುತ್ರ–ಮಿತ್ರಾದಿ ದುಸ್ಸಂಗವಿನ್ನು ಸಾಕು. ಭಗವತ್ಪ್ರಿಯರ ಸಂಗಬೇಕು. ಜೀವನಮಾತ್ರದಿಂದ ತೃಪ್ತನಾದವನಿಗೇ ಇಂದ್ರಿಯಜಯಶಾಲಿಯಾದವನಿಗೇ ಜ್ಞಾನವು ಸಿದ್ಧಿಸಿ ಮೋಕ್ಷವನ್ನು ಕೊಡುವುದು. ಇಂದ್ರಿಯಜಯಶಾಲಿಯಾದವನಿಗೇ ಜ್ಞಾನವು ಸಿದ್ಧಿಸಿ ಮೋಕ್ಷವನ್ನು ಕೊಡುವುದು. ಇಂದ್ರಿಯದಾಸನಿಗೆ ಜ್ಞಾನವೇ ಆಗಲಾರದು. ತನ್ನನ್ನು ಸೇವಿಪರಿಗೆ, ಸೂರ್ಯನಂತೆ ಪ್ರಕಾಶವನ್ನು, ಗಂಗೆಯಂತೆ ಪಾವಿತ್ರ್ಯವನ್ನೂ ಕೊಟ್ಟು ಮನಶುದ್ಧಿಯನ್ನು ನೀಡಿ ಪಾಪವನ್ನು ದೂರಮಾಡಿ, ಬಹುವಾರ ಕೃತ ವೇದಾಂತ ಶಾಸ್ತ್ರವಿಚಾರಲಬ್ಧ ಸುಖಸುಧಾಸಾಗರದಲ್ಲೋಲಾಡಿ ಸುವ ಮುಕುಂದ ವಿಕ್ರಮ ವೈಭವವನ್ನು ಯಾವ ರಸಜ್ಞನು ಸೇವಿಸದಿರುವನು? ಯಾವ ನರನು ಹರಿಭಕ್ತನೋ ಅವನಲ್ಲಿ ದೇವತೆಗಳೆಲ್ಲರೂ ಗುಣಮಣಿಕಾರಣರಾಗಿ, ನೆಲಸಿ, ಮೆರಸುವರು. ಹರಿಭಕ್ತನಾಗದವನಿಗೆ ಗುಣಗಳು ಬರಲು ಅವಕಾಶವೆಲ್ಲಿಯದು? ಮನೋರಥಗಳಿಂದ ವಿಷಯ

ವಿಷಮ ದೇಶದಲ್ಲಿ ಓಡುವವನು ಎಡವದೇ ಇರುವನೇ? ಮೀನಿಗೆ ಜಲವೇ ಜೀವನವು, ಅದರಂತೆ ಶ್ರೀಹರಿಯೇ ಶರೀರಧಾರಿ ಮಾತ್ರ ಜೀವರ ಜೀವನಕಾರಣನು, ಪ್ರಿಯತಮನು ಆಗಿರುವನು. ಅಂತಹ ಸರ್ವಸ್ವಾಮಿಯನ್ನು ಬಿಟ್ಟು ಗೃಹಸುಖಗಳಲ್ಲೇ ಮಗ್ನರಾಗಿ ಮುದುಕರಾದರೆ ಅವರೂ ದೊಡ್ಡವರೇ! ವಯಸ್ಸಿನಿಂದ–ಜ್ಞಾನದಿಂದಲ್ಲ. ಆದ್ದರಿಂದಲೇ ಪಾಪಗಳು, ರಾಗದ್ವೇಷಗಳು, ಶೋಕರೋಷಗಳು, ಆಶಾಭಯಗಳು, ದೈನ್ಯಚಿಂತೆಗಳಿಗೆ ಮೂಲಕವೆಂದೆನಿಸಿದ ಸಂಸಾರದಲ್ಲಿ ಹುಟ್ಟಿ ಸಾಯುತ್ತಾ ತಿರುಗುವುದನ್ನು ಬಿಟ್ಟು ಶ್ರೀನೃಸಿಂಹದೇವನ ಪಾದಾರವಿಂದ ಭಜನೆಯನ್ನು ಮಾಡಲು ಸರ್ವಭಯವು ಪರಿಹೃತರಾಗಿ ಮೋಕ್ಷಸಾಮ್ರಾಜ್ಯವು ಸಿಗುವುದೆಂದು ನಂಬಿ ವರ್ತಿಸಲು ಒಳಿತಾಗುವುದು.

ಕೇತುಮಾಲದಲ್ಲಿ ರತೀ– ಕಾಮರು ತಮ್ಮಂತರ್ಯಾಮಿಯಾದ ಪ್ರದ್ಯುಮ್ನನನ್ನು ಭಜಿಸುತ್ತಿರುವರು. ಲಕ್ಷ್ಮೀದೇವಿಗೂ ತದ್ವರ್ಷಪತಿಗಳ 36000 ಮಂದಿ ಕುಮಾರಿಯರಿಗೂ ಪ್ರಿಯವನ್ನು ಮಾಡಲು, ಪ್ರದ್ಯುಮ್ನರೂಪದಿಂದ ಅಲ್ಲಿ ಶ್ರೀಹರಿಯು ನೆಲಸಿರುವನು. ಅವನ ಮಹಾಸ್ತ್ರವಾದ ಸುದರ್ಶನ ಚಕ್ರದ ತೇಜದಿಂದ ಉದ್ವೇಜಿತರಾದ ತರುಣಿಯರ ಗರ್ಭವು ಗತಪ್ರಾಣವಾಗಿ ಸಂವತ್ಸರಾಂತ್ಯದಲ್ಲಿ ನಿಪತಿತವಾಗುವುದು. ಪ್ರದ್ಯುಮ್ನನು ಸುಲಲಿತ ಗತಿವಿಲಾಸದಿಂದ ಮಧುರ ಮಂದಹಾಸದಿಂದ ಕಟಾಕ್ಷಾವಲೋಕಲೀಲೆಯಿಂದ ಸುಂದರ ಭ್ರೂಮಂಡಲ ಸುಭಗವದನಾರವಿಂದಕಾಂತಿಯಿಂದ ರಮಾದೇವಿಯನ್ನು ಸಂತೋಷಪಡಿಸಿ ರಮಿಸುವನು. ರಮಾದೇವಿಯು ರಾತ್ರಿಯಲ್ಲಿ ಆ ವರ್ಷಪತಿ ದುಹಿತೃಗಣಸಹಿತಗಳಾಗಿಯು, ಹಗಲಿನಲ್ಲಿ ಅವರ ಭರ್ತೃಸಹಿತಳಾಗಿಯು ಶ್ರೀಹರಿಯನ್ನು ಸೇವಿಸುವಳು–

ಶ್ರೀ ಹೃಷಿಕೇಶ! ಬ್ರಹ್ಮಾದಿ ಸಕಲ ದೇವಾಶ್ರಯದೇಹನಾದ ನಿನಗೆ ನಮಃ! ಮನಸ್ಸಿನ ಸಂಕಲ್ಪವು, ಚಿತ್ತದ ಸ್ಮರಣೆ, ಬುದ್ಧಿಯ ನಿಶ್ಚಯ, ನಿನ್ನಿಂದಲೇ ಅಹುದು. ಶೋಡಶಕಲಾದೇವ ಪ್ರೇರಕನಾದ ನಿನ್ನನ್ನು ವೇದಗಳು ಸರ್ವೋತ್ತಮನೆಂದು ಸಾರುತ್ತಿವೆ. ಅನ್ನವು ಜೀವಾಧಾರಕವಾಗಿರುವುದು; ಅಮೃತವು ಮರಣನಿವಾರಕವಾಗಿರುವುದು ನಿನ್ನಿಂದ. ಸರ್ವೋತ್ತಮನೇ! ಸಹನೆ, ಓಜ, ಬಲ, ಸೌಂದರ್ಯ, ಕಾಮನಾ, ಮುಂತಾದ ಸರ್ವಶಕ್ತಿಗಳು ನಿನ್ನಿಂದ. ಒಳಗೆ ಹೊರಗೆ ಇದ್ದು ರಕ್ಷಿಸುವ ನಿನಗೆ ನಮಸ್ಕಾರವು! ಹೃಷಿಕೇಶ! ಲೋಕದಲ್ಲಿ ಸ್ತ್ರೀಯರು ಪುಣ್ಯವ್ರತಗಳನ್ನು ಮಾಡಿ, ಇಂದ್ರಿಯಸ್ವಾಮಿಯಾದ ನಿನ್ನನ್ನಾರಾಧಿಸುವರು. ನಿನ್ನ ದಯದಿಂದ ಒಬ್ಬ ಪತಿಯನ್ನು ಪೊಂದುವರು. ಅವರು ಅವರ ಪತಿಗಳು ಅಸ್ವತಂತ್ರರಾದ್ದರಿಂದ, ಸ್ವತಃ ರಕ್ಷಕತ್ವ ಪತಿತ್ವಗಳು ಅವರಲ್ಲಿಲ್ಲ. ನಿಜವಾದ ರಕ್ಷಕನು ನೀನಾಗಿ ಅವರನ್ನು ಅವರ ಪ್ರಿಯಭಕ್ತರನ್ನು ಅವರ ಮಕ್ಕಳನ್ನು, ಭೋಗಸಾಧನವಾದ ಧನಾದಿಗಳನ್ನು, ಅಹೋರಾತ್ರ ರೂಪ ಆಯಸ್ಸನ್ನು ಕೊಟ್ಟು ರಕ್ಷಿಸುವೆ. ಇನ್ನೊಬ್ಬರಿಂದ ಭಯವಿಲ್ಲದ ಪತಿ ಎಂದರೆ ನೀನೇ. ಭಯಾತುರರಾದ ಸ್ತ್ರೀ ಪುರುಷರನ್ನು ಸರ್ವತಃ ರಕ್ಷಿಸುವೆ. ಜನರೋ, ಪರಸ್ಪರ ಭಯಶಂಕಿತರಾಗಿಯೇ ಇರುವರು. ನಿನ್ನನ್ನು ರಕ್ಷಕನಾಗಿ ಪೊಂದುವನು, ಮತ್ತನ್ಯರನ್ನು ಶರಣೆಂದು ಸೇರಲಾರನು. ನೀನೇ ಪತಿಯು, ಲೋಕಪತಿಗಳು ಬಹುಸಂಖ್ಯರಾದೆಡೆ ಅನ್ಯೋನ್ಯಭಯಪೀಡಿತರಾಗಿರಬೇಕಾದೀತು! ನಿನಗೆ ಸಮರಿಲ್ಲ. ಅಧಿಕರಿನ್ನೆಲ್ಲಿ? ನಿನ್ನ ಪಾದಾರವಿಂದ ಪೂಜಕನು, ಸಕಲ ಕಾಮಿತಾರ್ಥಫಲಗಳನ್ನು ಪೊಂದುವನು. ಇತರ ಪೂಜಕನು ತಾ ಬೇಡಿದ್ದನ್ನು ಪೊಂದಲಾರದೆ, ಸುಮ್ಮನೆ ತಪಿಸುವನು. ಇಂದ್ರಿಯಾರ್ಥ

ಗಳನ್ನು ಬೇಡುತ್ತಾ ಉಗ್ರತಪವನ್ನು ಗೈದು, ಸುರಾಸುರ ಮನುಜರು, ನನ್ನನ್ನು ಮೆಚ್ಚಿಸಲು ಯತ್ನಿಸುವರು. ಶ್ರೀಶ! ನಾನು ನಿನ್ನ ಪ್ರೀತಿವಿಷಯಳಾದ್ದರಿಂದ ನಿನ್ನ ಪಾದಾರವಿಂದ ಸೇವಾರಹಿತರಿಗೆ, ಸಂಪದಾದಿಗಳನ್ನು ಕೊಡದಿರುವೆನು. ನನ್ನ ಶಿರಸ್ಸನಲ್ಲಿ ಗೋಕುಲ ತರುಣೀಶಿರೋಭೂಷಣನೆನಿಸಿದ ನಿನ್ನ ಕರಾಂಬುಜವನ್ನಿಡು! ಸುಂದರ! ನನ್ನಲ್ಲಿ ನಿನ್ನ ಪ್ರೀತಿಯು ನಿರವಧಿಕವೆಂದೇ, ನನ್ನನ್ನು ಲಕ್ಷಣವಾದ ಶ್ರೀವತ್ಸರೂಪದಿಂದ ವಕ್ಷದಿ ಧರಿಸಿರುವೆ. ಇಂತಹ ನಿನ್ನ ಲೀಲಾವಿಲಾಸವನ್ನಾರು ತಿಳಿಯಲರ್ಹರಾಗುವರು? ಎಂದು ಶ್ರೀದೇವಿಯು ನುತಿಸಿ ನತಿಸುತ್ತಿರುವಳು.

ರಮ್ಯಕದಲ್ಲಿ ಪ್ರಿಯತಮನಾದ ಭಗವಂತನ ಮತ್ಸ್ಯರೂಪವನ್ನು ವೈವಸ್ವತ ಮನುರಾಜನು, ತಾನು ಹಿಂದೆ ಪ್ರಳಯಸಮುದ್ರದಿ ನೋಡಿದುದನ್ನು ನೆನೆದು, ಮಹಾಭಕ್ತಿಯಿಂದ ಆರಾಧಿಸುತ್ತಾ, ಇಂತು ನುತಿಪನು–

ಸರ್ವೋತ್ತಮನಾದ ಮತ್ಸ್ಯನೇ! ನಿನಗೆ ನಮಃ. ಬಲ ಜ್ಞಾನಾನಂದಸ್ವರೂಪನೇ! ನಿನಗೆ ನಮಃ. ಸರ್ವಲೋಕಪಾಲಕರಿಗೂ ಗೋಚರನಾಗದೆ, ಒಳಹೊರಗೆ ಸರ್ವತ್ರ ಸರ್ವ ಪ್ರೇರಕನಾಗಿರುವ ನಿನ್ನ ವಶದಲ್ಲಿದೆ ಈ ಲೋಕವು. ನರನು ದಾರುನಾರಿಯನ್ನಂತೆ, ನೀನವರನ್ನು ಪ್ರವರ್ತಿಸಿ, ಪ್ರಭುವಾಗಿರುವೆ. ನಿನ್ನಾಜ್ಞೆಯಿಂದಲು, ಅಥವಾ ಅಸುರಾವೇಶದಿಂದಲು, ಲೋಕ ಪಾಲಕರು, ನಿನ್ನನ್ನು ಬಿಟ್ಟು ನಾನು ನಾನೆಂದು ಸ್ಥಾವರ ಜಂಗಮಾತ್ಮಕವಾದ ಈ ಜಗದಲ್ಲಿರುವ ಮನುಜರನ್ನು ಪಶ್ವಾದಿಗಳನ್ನೂ ಸಂರಕ್ಷಿಸಲು ಪೋಗಿ, ಒಟ್ಟಾಗಿಯಾಗಲಿ, ಪ್ರತ್ಯೇಕವಾಗಿಯಾಗಲಿ ರಕ್ಷಿಸಲಾರದೆ, ನಿಶ್ಶಕ್ತರಂತೆ, ಸುಮ್ಮನಾಗುವರು. ಪ್ರಳಯಕಾಲೀನ ಮಹೋರ್ಮಿಮಾಲಾ ಭೀಲವಾದ ಸಮುದ್ರಮಧ್ಯದಲ್ಲಿ, ಔಷಧೀಸಮೂಹ ನಿಧಿಯಾದ ಭೂಮಿಯ ನೌಕೆಯನ್ನು ಮುಣುಗದೆ ರಕ್ಷಿಸಿ, ಅದರಲ್ಲಿದ್ದ ನನಗೆ ತತ್ತ್ವೋಪದೇಶವನ್ನು ಮಾಡಿದ ಮುಖ್ಯಪ್ರಾಣ ಪತಿಯೇ! ನಿನಗೆ ನಮಃ.

ಹಿರಣ್ಮಯ ವರ್ಷದಲ್ಲಿ ಭಗವಂತನಾದ ಕೂರ್ಮನ ಪ್ರಿಯತಮ ಮೂರ್ತಿಯನ್ನು ಆರ್ಯಮನೆಂಬ ಪಿತೃಗಣಾಧಿಪತಿಯು, ತದ್ವರ್ಷ ಪುರುಷರಿಂದ ಕೂಡಿ, ಆರಾಧಿಸಿ ನುತಿಪನು–

ಭಗವನ್! ಸಮುದ್ರಗಮನ! ಸರ್ವಕಲ್ಯಾಣಗುಣಪೂರ್ಣನಾಗಿ, ಸರ್ವತ್ರ ನಿವಸಿಸಿ ಸರ್ವೋತ್ತಮನೆನಿಸಿರುವೆ. ಶಾಸ್ತ್ರಗಳೆಲ್ಲವೂ ನಿನ್ನಿಂದ ಉಪದೇಶಿಸಲ್ಪಟ್ಟು ಬ್ರಹ್ಮಾದಿಗಳಿಂದ ಸ್ವೀಕೃತವಾಗಿದೆ. ಪ್ರಪಂಚವು ಸ್ಥಿರವಾಗಿ ನಿನ್ನಾಧಾರದಿಂದ ನಿಂತಿದೆ. ಈ ಜಗತ್ತೆಲ್ಲವು ನಿನ್ನ ಪ್ರತಿಮೆಯಂತೆ ನಿನ್ನಧೀನವಾಗಿದೆ. ಅರ್ಥಕ್ರಿಯಾಕಾರಿಯಾದ ಜಗವು ಜೀವಜಡರೆಂಬ ದ್ವಿರೂಪವಾಗಿ ಸತ್ಯವೂ, ನಿನ್ನಿಂದ ಭಿನ್ನವೂ, ಆಗಿದೆ. ಜರಾಯುಜ ಸ್ವೇದಜಾಂಡಜೋದ್ಭಿಜರೆಂಬ ಚತುರ್ವಿಧ ಪ್ರಾಣಿಗಳಿಗೂ ವಾಙ್ಮನಸಾಪಿ ಅಗೋಚರನಾಗಿ, ಅನಂತ ಕಲ್ಯಾಣಗುಣ ಪೂರ್ಣನಾದ ನಿನಗೆ ನಮಸ್ಕಾರವು. ದೇವರ್ಷಿ ಪಿತೃ ಭೂತಗಳು, ಸ್ವರ್ಗ ಭೂಶೈಲ ಸರಿತ್ಸಮುದ್ರ ದ್ವೀಪ ಗ್ರಹ ತಾರಾದಿಗಳೆಲ್ಲ ನಿನ್ನ ಹೆಸರಿನಿಂದ ಕರೆಯಲ್ಪಟ್ಟು, ನೀ ಕೊಟ್ಟ ಗುಣಗಳಿಂದ ಖ್ಯಾತವಾಗಿ, ನಿನ್ನಿಂದ ಪ್ರೇರಿತವಾಗಿ, ಪ್ರವರ್ತಿಸುತ್ತವೆ ಈ ಜಗತ್ತಿನಲ್ಲಿ ಜೀವ ಜಡರಿಗಿಲ್ಲದ ಅಪ್ರಾಕೃತ ನಾಮರೂಪಾದಿಗಳಿಂದ ಜಗದ್ರಕ್ಷಣೆಗಾಗಿ ಪ್ರಕಟನಾಗುವ ನಿನ್ನ ದಶಾವತಾರಾದಿ ವೈಭವವನ್ನು, ಜ್ಞಾನಿಗಳುಪದೇಶಿಸಲು ಮಾತ್ರ, ಯಥಾರ್ಥಜ್ಞಾನಜನಕನಾಗಿ ಅವರನ್ನು ರಕ್ಷಿಸುವೆ. ನಿನಗೆ ನಮಃ.

ಉತ್ತರ ಕುರು ಖಂಡದಲ್ಲಿ ಭಗವಾನ್ ಯಜ್ಞಪುರುಷನಾದ ಶ್ರೀವರಾಹನನ್ನು ಧರಾಭಿಮಾನಿನೀ ಭೂದೇವಿಯು ಕುರು ಖಂಡವಾಸಿಗಳಿಂದ ಕೂಡಿ ದೃಢಭಕ್ತಿಯಿಂದ ಪೂಜಿಸಿ ನುತಿಸುವಳು; ರಹಸ್ಯವಾದ ಮಂತ್ರದಿಂದುಪಾಸಿಸುವಳು.

ಭಗವನ್! ಸಕಲ ಮಂತ್ರಗತ ದಿವ್ಯ ತತ್ತ್ವಜ್ಞಾನವು ನಿನ್ನಿಂದ. ಯಜ್ಞಾದಿಗಳಲ್ಲಿ ಸಂಕಲ್ಪ ಸಮರ್ಪಣ ಕರ್ಮಗಳು ನಿನ್ನ ಪ್ರೀತಿಗಾಗಿ ಧರಾಧರನೇ! ಮಹಾಪುರುಷನೇ! ತ್ರಿಯುಗದಲ್ಲಿ ಅವತರಿಸಿ, ಪರಿಶುದ್ಧ ಮಂಗಳ ಕರ್ಮವನ್ನಾಚರಿಸಿ, ಸುಜನರ ಪೊರೆವ ನಿನಗೆ ನಮಸ್ಕಾರವು. ದಾರುವಿನಲ್ಲಿದ್ದು ತದ್ಭಿನ್ನನಾಗಿ ಅಭಿವ್ಯಕ್ತನಾಗುವ ಅಗ್ನಿಯಂತೆ, ಸತ್ವಾದಿ ಗುಣಕಾರ್ಯಗಳಲ್ಲಿ ನಿಯಾಮಕನಾಗಿ ಅಡಗಿದ್ದು, ನೋಡಲಿಚ್ಛಿಸಿದ ಜ್ಞಾನಿಜನರು ವಿಚಾರ ಮಂಥನವನ್ನು ಮಾಡಲು, ಅಭಿವ್ಯಕ್ತನಾಗಿ ಪೊರೆವ ವರಾಹನೇ! ನಿನಗೆ ನಮಃ. ಯಜ್ಞದಲ್ಲಿ ಇಂದ್ರಾದಿ ನಾಮಗಳಿಂದ ಕರೆಯಲ್ಪಟ್ಟು, ಮುಖ್ಯ ಹವಿರ್ಭೋಕ್ತನಾಗಿರುವ ಇಂದ್ರಾದಿ ದೇವರಕ್ಷಕನೇ! ನಿನಗೆ ನಮಃ.

ದ್ರವ್ಯ, ಕ್ರಿಯಾ, ಕಾರಣ, ಆಧಾರಗಳಿಗೆ ಒಡೆಯರಾದ ಶಂಕರ, ಗರುಡ, ಬ್ರಹ್ಮ, ವಾಯುಗಳು ನಿನ್ನ ಇಚ್ಛಾರೂಪಾನುಗ್ರಹದಿಂದ, ತತ್ತದ್ವಸ್ತು ಪ್ರೇರಕನಾಗಿ, ನಿನ್ನ ಅಖಿಲ ವಿಶೇಷಗುಣ ದರ್ಶನ ಪಟುತರ ಬುದ್ಧಿ ಶಕ್ತಿಯನ್ನು ಪಡೆದು, ನಿನ್ನನ್ನು ಯಥಾಯೋಗ್ಯವಾಗಿ ಪೂಜಿಸುವರು. ಇಂದ್ರಜಾಲದಂತೆ ಮಾಯಾಮಯವಲ್ಲವೀ ಜಗವೆಲ್ಲ ಸತ್ಪರಾಕ್ರಮನಾದ ನಿನ್ನ ಸತ್ಯದೃಷ್ಟಿ ಎಂದೇ ಆ ಯಥಾರ್ಥಜ್ಞಾನಿಗಳು ತಿಳಿದಿರುವರು. ಬ್ರಹ್ಮಾದಿಗಳಿಂತು ಅಮೋಘ ಮಹಿಮರಾದರು. ನೀನು ಗುಣಗಳಿಂದಾಡುತ್ತಾ ರಮೆಯಿಂದ ನಲಿಯುತ್ತಾ ಜಗದುತ್ಪತ್ತಿಸ್ಥಿತಿ ಸಂಹೃತಿಗಳನ್ನೆಂತು ಮಾಡುವೆ, ಎಂಬುದನ್ನರಿಯಲಾರದೆ ನಿನ್ನ ಕಲ್ಯಾಣ ಗುಣಗಳಿಂದ ಅಯಃಖಂಡವು ಅಯಸ್ಕಾಂತದಿಂದ ಹೇಗೋ ಹಾಗಯೇ ಆಕರ್ಷಿತರಾಗಿ ಭಜಿಸುತ್ತಿರುವರು. ಇಂತಹ ಕರ್ಮಸಾಕ್ಷಿಯು ಸ್ವತಂತ್ರಕರ್ತನಾದ ನಿನಗೆ ನಮಸ್ಕಾರವು. ಪ್ರತಿ ಗಜದಂತೆ ಎದುರಾಳಾದ ದೈತ್ಯನನ್ನು ಕೊಂದು ರಸಾತಲದಿಂದ ನನ್ನನ್ನು ತಂದ ಆದಿವರಾಹನೇ! ಕಮಲದಳವನ್ನು ಪಿಡಿದ ಗಜರಾಜನಂತೆ ಭೂಮಂಡಲವನ್ನು ದಂಷ್ಟ್ರಾಗ್ರದಿ ನಿಲ್ಲಿಸಿ ವಿರಾಜಿಸುವ ಪ್ರಭುವೇ! ನಮಸ್ಕಾರ!

## ೧೯. ಭೂಗೋಲ ವಿಚಾರ – ಕಿಂಪುರುಷ ಭರತವರ್ಷಗಳು

ಕಿಂಪುರುಷ ವರ್ಷದಲ್ಲಿ ಭಗವಾನ್ ಲಕ್ಷ್ಮಣಾಗ್ರಜನನ್ನು, ಸೀತಾಭಿರಾಮನಾದ ಶ್ರೀರಾಮನನ್ನು ತಚ್ಚರಣ ಸೇವಾತತ್ಪರನಾದ ಹನುಮಂತನು ಕಿಂಪುರುಷರಿಂದ ಕೂಡಿ ನಿರವಧಿಕ ಭಕ್ತಿಯಿಂದ ಸೇವಿಸುತ್ತಿರುವನು. ಗಂಧರ್ವರಿಂದ ಕೂಡಿ ಆರ್ಷ್ಟಿಷೇಣನು ಪಾಡುವ ಪರಮ ಕಲ್ಯಾಣ ರಾಮನ ಕಥೆಯನ್ನು ಶ್ರದ್ಧೆಯಿಂದ ಕೇಳುವೆನು; ಮತ್ತು ತಾನು ಕೂಡ 'ಉತ್ತಮ ಶ್ಲೋಕ ಶಿಖಾಮಣೇ! ನಿತ್ಯನಿದೋಷ! ಸತ್ಯಜಗತ್ಸೃಷ್ಟಿ ಕಾರಣ! ಜೀವ ಪರಮಾಶ್ರಯ! ಲೋಕಪೂಜ್ಯತಮ! ಪರಮ ಪ್ರಸಿದ್ಧ! ಪಾಪ ಪರಿಹಾರಕ! ಬ್ರಹ್ಮಣ್ಯದೇವ! ಮಹಾರಾಜ! ನಾರಾಯಣ! ಶ್ರೀರಾಮ!' ಎಂದು ನುತಿಸಿ ಪಾಡುತ್ತಿರುವನು.

ನಿತ್ಯ ನಿರವಧಿಕ ಜ್ಞಾನಾನಂದಾನುಭವ ಸ್ವರೂಪವನ್ನು ಸರ್ವಪ್ರಧಾನನು, ಜಾಗ್ರದಾದಿ ಜೀವವಸ್ಥಾಪ್ರೇರಕನು, ಜೀವಾಭಿಮುಖ ಬಿಂಬರೂಪನು, ಸುಖಪೂರ್ಣನು, ಸುಜನೈಕ ಪ್ರಾಪ್ಯನು, ಪ್ರಾಕೃತ ನಾಮರೂಪರಹಿತನಾದ ಶ್ರೀರಾಮನೇ ನಮಗೆ ಗತಿಯು.

ವ್ಯಾಪ್ತನು ವಿಶುದ್ಧಾನಂದಾನುಭವನು ಆದ ಶ್ರೀರಾಮನು ಮನುಷ್ಯನಂತೆ ಆಕಾರವಂ ಧರಿಸಿ, ಅವತರಿಸಿದುದು ಕೇವಲ ರಾಕ್ಷಸವಧವನ್ನು ಮಾಡಲೆಂದಲ್ಲ; ಮನುಜರಿಗೆ ಪಿತ್ರಾಜ್ಞಾ ಪಾಲನ, ಶರಣಾಗತರಕ್ಷಣ, ಭಾತೃಜನಲಾಲನ, ಏಕಪತ್ನೀ ವ್ರತಕರಣ ಮೊದಲಾದ ಧರ್ಮವನ್ನು ತಾನಾಗಿ ನಡೆಸಿ ತೋರಿಸಲು ಕೂಡ ಅಹುದು. ಇಲ್ಲದೆಡೆ, ಸ್ವರಮಣನಿಗೆ ಸೀತಾವಿಯೋಗ ವ್ಯಸನವು, ಪ್ರಭುವಿಗೆ ಇತರ ಸಹಾಯಾಭ್ಯರ್ಥನವು ಎಂತು? ಭಗವಾನ್ ವಾಸುದೇವನು ಮನೋ ಜಯ ಶಾಲಿಗಳಾದ ಬ್ರಹ್ಮಾದಿಗಳಿಗೊಡೆಯನೆಂದ ಮೇಲೆ ಸ್ತ್ರೀ ನಿಮಿತ್ತಕ ಕಾಮಸಾರ ತಾದಿ ಕಶ್ಮಲವೆಲ್ಲಿಯದು. ಸೀತಾದಿಗಳ ವಿಯೋಗವೆಲ್ಲಿಯದು?

ಕೇವಲ ಭಕ್ತಾನುಕಂಪಾವಶನಾಗಿ ಈಶನವತರಿಸಿದನಲ್ಲದೆ, ಆ ನಮ್ಮಪ್ಪನಿಗೆ ದೊಡ್ಡ ಕುಲ, ಸುಂದರರೂಪ, ಬುದ್ಧಿಬಲ, ಪಾಂಡಿತ್ಯ ಮುಂತಾದವು, ತೋಷಕಾರಣವಾಗಲಾರವು. ಆರ್ಷ್ಟಿಷೇಣಾ! ನೋಡು! ಆ ಲಕ್ಷ್ಮಣಾಗ್ರಜನು ಯಾವ ಗುಣನು ಇಲ್ಲದ ನಮ್ಮಂತಹ ವಾನರರಲ್ಲಿ ಎಷ್ಟು ಸಖ್ಯವನ್ನು ಬೆಳೆಸಿ ಪ್ರೀತಿಸಿದನು! ನಮ್ಮಿಂದ ಅವನಿಗೇನೂ ಪ್ರಯೋಜನವಿರ ದಿದ್ದರೂ ಕೇವಲ ಕೃಪೆಯಿಂದಲಲ್ಲವೇ ನಮ್ಮನ್ನು ಸೇವಕರನ್ನಾಗಿ ಸ್ವೀಕರಿಸಿದನು? ಆದ್ದರಿಂದ ಪುರುಷಾರ್ಥ ಕಾಮನು, ಸುರನಾಗಲಿ ಅಸುರನಾಗಲಿ, ವಾನರನಾಗಲಿ, ಮನುಜಾಕಾರನಾದ ವಾಸುದೇವ- ರಾಮನನ್ನು ಜ್ಞಾನ ಭಕ್ತಿಗಳಿಂದ ಸೇವಿಸಲು ಬೇಕಾದ್ದನ್ನೆಲ್ಲ ಕೊಡುವನೆಂಬುದರಲ್ಲಿ ಸಂದೇಹವೇ ಇಲ್ಲ. ತಾನು ಪರಂಧಾಮವನ್ನೆದುವಾಗ ಕರಕರೆದು, ನಂಬಿದ ಕೋಸಲರನ್ನು ಸ್ವರ್ಗವನ್ನು ಮೋಕ್ಷವನ್ನೂ ಸೇವಿಸಿ ಪೊರೆದ, ಶ್ರಿರಾಮನಂತಹ ಕೃತಜ್ಞನಿನ್ನಾರು? ಎಂದು ಹನುಮಂತನು ಸ್ತುತಿಸಿ ನರ್ತಿಸುತ್ತಿರುವನು.

ಭಾರತವರ್ಷದಲ್ಲಿಯು ಭಗವಾನ್ ನರನಾರಾಯಣರೂಪಿ ಹರಿಯು, ನಿತ್ಯಪ್ರವರ್ಧ ಮಾನ ಧರ್ಮಜ್ಞಾನ ವೈರಾಗ್ಯೈಶ್ವರ್ಯಭಗವನ್ನಿಷ್ಠಾ ಮನೋನಿಗ್ರಹಾದಿಗುಣ ಸ್ವರೂಪನಾಗಿ, ಲೋಕಾನುಗ್ರಹವನ್ನು ಮಾಡಿ, ಜ್ಞಾನಿಜನ ಕರುಣಾವಾರಿಧಿಯಾಗಿ, ಲೋಕಸಾಮಾನ್ಯ ಗೋಚರ ನಾಗಿ, ಬದರಿಕಾಶ್ರಮದಿ ತಪವನ್ನಾಚರಿಸುತ್ತಿರುವನು. ವರ್ಣಾಶ್ರಮವಂತರಾದ ಭಾರತವರ್ಷ ಪ್ರಜರಿಂದ ಕೂಡಿ ನಾರದನು, ಯಥಾರ್ಥಜ್ಞಾನ ತತ್ಸಾಧನ ನಿಷ್ಕಾಮ ಕರ್ಮಗಳನ್ನು ತಿಳಿಸುವ, ಮಹಿದಾಸಪ್ರೋಕ್ತಪಾಂಚರಾತ್ರಾಗಮವನ್ನು ಸಾವರ್ಣಿ ಮನುವಿಗೆ ಉಪದೇಶಿಸುತ್ತಾ ನರ ನಾರಾಯಣರನ್ನಿಂತು ನುತಿಸಿ ಭಜಿಸುತ್ತಿರುವನು–

ಪರಮಾನಂದ ನಿಧೇ! ಜನನ ಮರಣಾದಿ ದೇಹಧರ್ಮವಿಲ್ಲದ, ನಿಷ್ಕಿಂಚನ, ಜನಧನರಾಶಿ ಯಾದ ನರನಾರಾಯಣನೇ! ಪರಮಹಂಸ ಗುರುವರ! ಆತ್ಮಾರಾಮಾಧಿಪತೇ! ನಿನಗೆ ನಮ ಸ್ಕಾರವು.

ಜಗವನ್ನು ಸೃಜಿಸುವೆ, ಜನನಮರಣ ದೂರನಾಗಿರುವೆ. ದೇಹದಲ್ಲಿ ನೆಲಸಿರುವೆ, ಕರ್ಮಫಲ ಲೇಪವಿಲ್ಲದಿರುವೆ. ಸಕಲವನ್ನೂ ವೀಕ್ಷಿಸುವೆ; ನೋಡಿದ ದುಷ್ಟರೂಪ ಸಂಬಂಧವಿಲ್ಲದಿರುವೆ. ಇಂತಹ ಲೋಕವಿಲಕ್ಷಣನು ಅಸಂಗನು ಸಾಕ್ಷಿಯು ಆದ ಅಧೋಕ್ಷಜನಿಗೆ ನಮಸ್ಕಾರವು. ಬಹುಜನ್ಮಾರ್ಜಿತ ಪುಣ್ಯಲಭ್ಯ ಸಂಸ್ಕಾರದಿಂದ ಸಿಗುವ ಮಹೋಯೋಗವೆಂದರೆ, ಅಂತ ಕಾಲ ದಲ್ಲಿ ಸತ್ವಾದಿ ಗುಣುದೂರನು ರಮಾದರನಾದ ನಿನ್ನನ್ನು ಭಕ್ತಿಯಿಂದ ಸ್ಮರಿಸುವುದೇ, ಎಂದು ಪೂಜ್ಯ ಚತುರ್ಮುಖನು ಪೇಳಿರುವನು. ಆದ್ದರಿಂದ ವಿವೇಕಿಯು ಸರ್ವವೂ ಅನಿತ್ಯವೆಂದರಿತು, ಐಹಿಕಾಮುಷ್ಮಿಕ ಕಾಮಲಂಪಟನಾಗದೆ, ಸುತದಾರ ಧನಚಿಂತೆಯಿಂದ ಕೊರಗದೆ, 'ನಾನು

ಮೃತನಾದರೆ ಅವರ ಗತಿ ಏನೆಂಟು ಮರುಗದೆ ಇರುತ್ತಾ ಕೆಟ್ಟ ಮಣ್ಣಿನ ದೇಹವನ್ನು ಸಾಯದೆ ಉಳಿಸಲು, ಯತ್ನಿಸದಿರುವನು. ಮರಣರಹಿತವಾಗಿ ಮಾಡಲು, ಮಾಡುವ ಯತ್ನವು ಶ್ರಮಾ ಪಾದಕವು ನಿಷ್ಫಲವೇ ಸರಿ! ಶಾಸ್ತ್ರ ಶ್ರವಣಾದಿಗಳನ್ನು ಮಾಡಿಯು ದೇಹ ಮೋಹವನ್ನು ಬಿಡಲಾರದವನ ಶಾಸ್ತ್ರಾಭ್ಯಾಸವು ನಿಷ್ಫಲವೇ ಸರಿ! ಪ್ರಭೋ! ಅಧೋಕ್ಷಜ! ಈ ಹಾಳು ದೇಹದಲ್ಲಿ ನಾವು ಮಾಡುವ ಅಹಂಮಮತೆಗಳನ್ನು ಬಿಡಿಸು. ನಿನ್ನನುಗ್ರಹವಿಲ್ಲದಿರೆ ಈ ನಾನು ನನ್ನದೆಂಬ ರೋಗವು ಪೋಗದು. ನಿನ್ನನ್ನು ಚೆನ್ನಾಗಿ ತಿಳಿಯುವ ಜ್ಞಾನದ ಉಪಾಯವನ್ನು ಹೇಳಿಕೊಡು.

ಈ ಭಾರತ ವರ್ಷದಲ್ಲಿ ನದೀ ಪರ್ವತಗಳು ಬಹುಸಂಖ್ಯಾಕವಾಗಿವೆ.

ಮಲಯ, ಮಂಗವಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಕನಕ, ಕೊಲ್ಲ, ಸಹ್ಯ ವೇದಗಿರಿ, ಋಷ್ಯಮೂಕ, ಶ್ರೀಶೈಲ, ವೆಂಕಟ, ಮಹೇಂದ್ರ, ವಾರಿಧಾರ, ವಿಂಧ್ಯ, ಶುಕ್ತಿಮಂತ, ದಕ್ಷಗಿರಿ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕಕುಭ, ನೀಲ, ಕೋಕಾಮುಖ, ಇಂದ್ರಕೀಲ, ಕಾಮಗಿರಿ ಮುಂತಾದ ಸಾವಿರಾರು ಭೂಧರಗಳಿರುವುವು. ಅವುಗಳ ನಿತಂಬದಿಂದ ಹರಿದು ಬರುವ ನದನದಿಗಳೂ ಅಸಂಖ್ಯಾತವಾಗಿವೆ. ಅವುಗಳ ನೀರನ್ನು ಆಚಮನ ಸ್ನಾನಗಳು ಮಾಡುವ ಭಾರತೀ ಪ್ರಜರು ಅಂತಃಪವಿತ್ರರೂ ಆಗುವರು. ನದೀ ನಾಮಸ್ಮರಣೆಯು ಸಾಕು ಸರ್ವಾಘ ನಿವಾರಣೆಗೆ!

ಚಂದ್ರವಟಾ, ತಾಮ್ರಪರ್ಣಿ, ಅವಟೋದಾ, ಕೃತಮಾಲಾ, ವೈಹಾಯಸೀ, ಕಾವೇರಿ, ವೇಣಿ, ಪಯೋದಾ, ಶರ್ಕರಾವರ್ತ, ತುಂಗಭದ್ರಾ, ಕೃಷ್ಣಾ, ಭೀಮರಥೀ, ಗೋದಾವರೀ, ನಿರ್ವಿಂಧ್ಯಾ, ಪಯೋಷ್ಣೀ, ತಾಪೀ, ಸುರಸಾ, ನರ್ಮದಾ, ಚರ್ಮಣ್ವತೀ, ಸಿಂಧು , ಅಂಧಃ ಶೋಣನದಗಳು, ವೇದಸ್ಮೃತಿ, ಋಷಿಕಲ್ಯಾ, ವಿಸೋಮಾ, ಕೌಶಿಕೀ, ಮಂದಾಕಿನೀ, ಯಮುನಾ, ಸರಸ್ವತೀ, ದೃಷದ್ವತೀ, ಗೋಮತೀ, ಸರಯೂ, ರೋಘವತೀ, ಸಪ್ತವತೀ, ಘೋಷಣಾ, ಸುಷೋಮಾ, ಶತಮಾಲಾ, ಚಂದ್ರಭಾಗಾ, ಶುತುದ್ರೀ, ಮರುದ್ವೃಧಾ, ವಿತಸ್ತಾ, ಅಸಿಕ್ನೀ, ವಿಶ್ವಾ ಮುಂತಾದ ಪುಣ್ಯನದಿಗಳು ಶ್ರೀಹರಿಯ ನಾಮವನ್ನುಚ್ಚರಿಸುತ್ತಾ ಹರಿಯುತ್ತಿವೆ.

ಭಾರತ ವರ್ಷದಲ್ಲಿ ಪುಟ್ಟಿದ ಜನರು ಸಾತ್ವಿಕ ರಾಜಸ ತಾಮಸ ಭೇದ ಭಿನ್ನವಾದ ತಮ್ಮ ತಮ್ಮ ಕರ್ಮದಿಂದ ದಿವ್ಯಲೋಕವನ್ನೋ ಭೂಲೋಕವನ್ನೋ ನರಕವನ್ನೋ ಶ್ರೀಹರಿಯಾಜ್ಞೆ ಯಿಂದ ಪೊಂದುವರು. ವರ್ಣಾಶ್ರಮವಿಹಿತ ಸತ್ಕರ್ಮಾನುಷ್ಠಾನದಿಂದ ಇಲ್ಲಿ ಜನರು ಸಾಧನ ಮಾಡಿಕೊಂಡು ಮೋಕ್ಷಪರ್ಯಂತ ಯಥಾಯೋಗ್ಯ ಫಲಗಳನ್ನು ಪೊಂದುವರು.

ಜೀವ ಧರ್ಮರಹಿತನು, ಸಾಕಲ್ಯೇನ ಅಜ್ಞಾತನು, ಅನಿತರಾಧೀನನು. ಮುಕ್ತಾನಂದದನು ಆದ ಶ್ರೀ ವಾಸುದೇವನನ್ನು ಅನಿಮಿತ್ತವಾದ ಭಕ್ತಿಭಾವದಿಂದ ಭಜಿಸುವ ಭಾಗ್ಯವು ಭಾರತೀ ಯರದೇ ಆಗಿದೆ. ಅನೇಕ ಜನ್ಮಗಳನ್ನು ತಂದೊಡ್ಡುವ ಅವಿದ್ಯಾ ಬಂಧನವನ್ನು ಛೇದಿಸಲು ಕಾರಣವಾದ ಭಗವದ್ಭಕ್ತಪಾದರಜೋಧಾರಣ ಭಾಗ್ಯವು ಭಾರತೀಯರದೇ ಆಗಿದೆ. ಎಂದೇ ಸ್ವರ್ಗದಲ್ಲಿ ಪುಣ್ಯನಿಧಿಯನ್ನುಣ್ಣುತ್ತಲಿರುವ ದೇವತೆಗಳು ಕೂಡ ಭಾರತವನ್ನು ಪ್ರಶಂಸಿಸಿ, ಅಲ್ಲಿ ಜನಿಸಬೇಕೆಂದು ಶ್ರೀಹರಿಯನ್ನು ಬೇಡುತ್ತಿರುವರು.

ಆಹಾ! ಏನೀ ಭಾರತೀಯರ ಭಾಗ್ಯ ವೈಭವ! ಇವರೇನು ಪುಣ್ಯಗಳನ್ನು ಮಾಡಿರುವರೋ! ಸಾಕ್ಷಾತ್ ಶ್ರೀಹರಿಯು ಇವರಿಗೆ ತಾನಾಗಿ ಒಲಿದಿರುವನು. ಮುಕುಂದಚರಣಾರವಿಂದ ಸೇವೆಗೆ ಉಪಯೋಗಿಸುವ ಜೀವನವಿಲ್ಲಿ ಪುಟ್ಟಿದ ಈ ಪುಣ್ಯವಂತರಿಗೆ ಸಿಕ್ಕಿದೆ! ನಾವೂ ಮಾಡಿದೆವು

ತಪವನ್ನು; ನೀಡಿದೆವು ದಾನಗಳನ್ನು; ಯಜ್ಞಗಳನ್ನೂ ನಡೆಸಿದೆವು; ಜಯಿಸಿದೆವು ಸ್ವರ್ಗವನ್ನು. ಆದರೇನು? ಇಲ್ಲಿ ನಮಗಾಗುವ ಪುಣ್ಯನಾಶಕರವಾದ ಅತಿ ಶಯೇಂದ್ರಿಯೋತ್ಸವದಲ್ಲಿ, ನಾರಾಯಣಪಾದಪಂಕಜ ಪವಿತ್ರ ಸ್ಮರಣದೂರರಾಗುತ್ತಿರುವೆಯಲ್ಲವೇ? ಮಹಾರಾದಿ ಲೋಕ ಗಳಲ್ಲಿ ಕಲ್ಪಾಯುಷರಾಗುವುದು ನಿಜ; ಆದರೆ ಅಲ್ಲಿಂದ ಪುಣ್ಯನಾಶವಾದಮೇಲೆ ಹಿಂದಿರುಗಿ ಬರುವುದೂ ನಿಜ. ಅಂತಹ ಸ್ಥಾನಲಾಭಕ್ಕಿಂತ ಭಾರತ ಪುಣ್ಯಭೂಮಿಯಲ್ಲಿ ಪುಟ್ಟುವುದೇ ಲೇಸು. ನಶ್ವರವಾದೀ ಮರ್ತ್ಯಶರೀರದಿಂದ ಒಂದೇ ಕ್ಷಣದಿ ಮಾಡಿದ ಸುಕರ್ಮವು ಶ್ರೀಹರಿಗೆ ಸಮರ್ಪಿತ ವಾಗಲು, ಅಭಯವೆಂಬ ಅವನ ಲೋಕವನ್ನು ಸೇರಿಸಿ ಪುನರ್ಜನ್ಮವಿಲ್ಲದಂತೆ ಮಾಡಲು ಸಮರ್ಥವಾಗಿದೆ. ಮಹರಾದಿ ಲೋಕಗಳೇ ಆಗಲಿ– ಎಲ್ಲಿ ರಾಗಾದಿ ದೋಷ ದೂರರಾದ ಸಾಧುಜನರು ಸುಲಭವಾಗಿ ಸಿಗಲಾರರೋ ಆದ್ದರಿಂದ ಅವರ ಮುಖಕಮಲದಿಂದ ಬರುವ ವೈಕುಂಠ ಕಥಾ ಸುಧಾ ಪ್ರವಂತಿಯೂ ದುರ್ಲಭವೋ ಮತ್ತು, ಯಜ್ಞೇಶನಾದ ನಾರಾಯಣನ ಮಹಾಯಜ್ಞೋತ್ಸವಗಳೂ ದುರ್ಲಭವಾಗಿವೆಯೋ ಅಂತಹ ಸುರೇಂದ್ರಾದಿ ಲೋಕಗಳೂ ನಮಗೆ ಸೇವ್ಯವೆನಿಸುವುದಿಲ್ಲ.

ಈ ಭಾರತದಲ್ಲಿ ಮನುಜರಾಗಿ ಪುಟ್ಟಿದವರೇ ಧನ್ಯರು. ಶ್ರೀಹರಿಯು ಅವರಿಗೆ ಪಾರಲೌಕಿಕ ಸಾಧನವನ್ನೂ ಮಾಡಿಕೊಂಡು ಮತ್ತೆ ಪುಟ್ಟದಿರುವ ಮೋಕ್ಷವನ್ನೂ ಪೊಂದಲೆಂದು, ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನಶ್ಶರೀರಾದಿಗಳನ್ನೂ ಕೊಟ್ಟಿರುವನು. ಹೀಗಿದ್ದೂ ಶ್ರೀಹರಿ ಯನ್ನು ಭಜಿಸದವನು, ವನದಲ್ಲಿ ಬಲೆಗೆ ಬಿದ್ದ ಪಕ್ಷಿಯಂತೆ, ಸಂಸಾರ ಬಂಧನದಲ್ಲಿ ನರಳುವನು. ಇಲ್ಲಿ ವಿಪ್ರಾದಿ ಪವಿತ್ರಜನ್ಮರು ಶ್ರದ್ಧೆಯಿಂದ ವಿಧಿವಿಧಾನವಾಗಿ, ಮಂತ್ರಗಳನ್ನು ಚೆನ್ನಾಗಿ ಉಚ್ಚರಿಸುತ್ತಾ, ಇಂದ್ರಾದಿ ನಾಮಗಳಿಂದ ತದಂತರ್ಯಾಮಿ ಶ್ರೀಹರಿಯು ಪ್ರೀತನಾಗಲೆಂದು ಹವಿಸ್ಸನ್ನು ಕೊಡುವರು. ಆಗ ಸ್ವಯಂಪೂರ್ಣನಾಗಿದ್ದೂ, ಶ್ರೀಶನು ಅವರ ಪೂಜೆಯನ್ನು ಪ್ರೀತಿಯಿಂದ ಸ್ವೀಕರಿಸುವನು.

ಶ್ರೀಶನು ಹವಿರಾದಿ ತೃಪ್ತನಾಗಿ ಸ್ವರ್ಗಾದಿಗಳನ್ನು ಕೊಡುವನು; ಇದು ನಿಜ ಪ್ರಾಪ್ತಸ್ವರ್ಗ ರಿಂದ, ಬೇಡಲ್ಪಟ್ಟು ಕೂಡ ಪುನಃ ಫಲವನ್ನು ಕೊಡದಿರುವನು; ಇದೂ ನಿಜವೇ! ಬೇಡಿದ್ದನ್ನೆಲ್ಲಾ ಕೊಡುವುದರಿಂದ ಭಕ್ತನು ಮದವೇರಿ ಕೆಡುವನು– ತನ್ನನ್ನು ಮರೆವನು– ಹೀಗಾಗಬಾರದೆಂದು ಕೊಡದೆ ಕಾಪಾಡುವನು. ಏನನ್ನೂ ಬೇಡದೆ, ತನ್ನ ಪಾದಪಲ್ಲವವನ್ನು ಭಜಿಪರಿಗೆ ತನ್ನನ್ನೇ ತಾನು ಕೊಟ್ಟುಕೊಂಡು ರಕ್ಷಕನಾಗಿ ಸರ್ವಶ್ರೇಯಃಪ್ರದನಾಗಿ ನಿಲ್ಲುವನು. ಶ್ರೀಹರೇ! ನಾವು ಉಳಿದಿದ್ದರೆ, ಅನುಗ್ರಹಿಸಿ ನಿನ್ನ ಭಜನೆಯಿಂದ ಮೋಕ್ಷವನ್ನು ಪೊಂದಲನುವಾದ ಭಾರತವರ್ಷ ದಲ್ಲಿ ನಮ್ಮನ್ನು ವಿಪ್ರರನ್ನಾಗಿ ಪುಟ್ಟಿಸು. ನಿನ್ನ ಭಜಿಸುವಂತೆ ಮಾಡು.

ಶ್ರೀಶುಕನು ಪೇಳಿದನು–

ರಾಜನ್! ಸಗರಾತ್ಮಜರು ಯಜ್ಞಾಶ್ವವನ್ನು ಹುಡುಕಿಕೊಂಡು ಪೋಗುವಾಗ ತೋಡಲು ಉಪಕಲ್ಪಿತವಾದ ಎಂಟು ಉಪದ್ವೀಪಗಳು ಈ ಜಂಬೂದ್ವೀಪದಲ್ಲಿ ಅಲ್ಲಲ್ಲಿ ಸಮುದ್ರ ಮಧ್ಯ ದಲ್ಲಿವೆ ಎಂದು ಪೇಳುವರು.

ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆವರ್ತನ, ರಮಣಕ, ಮುದಾಹರಣ, ಪಾಂಚಜನ್ಯ, ಸಿಂಹಲ, ಲಂಕಾ, ಎಂದು ಅವು ಕರೆಯಲ್ಪಟ್ಟಿವೆ.

ಭಾರತೋತ್ತಮ! ಇಂತು ನಿನಗೆ ಜಂಬೂದ್ವೀಪಗಳ ವಿಶೇಷಗಳನ್ನು ವರ್ಣಿಸಿದುದಾಯಿತು.

## ೨೦. ಪಕ್ಷಾದಿ ದ್ವೀಪಗಳು — ಮಾನಸೋತ್ತರಲೋಕಾಲೋಕ ಪರ್ವತಗಳು

ಶ್ರೀ ಶುಕನು ಪೇಳಿದನು–

ಇನು ಪ್ಲಕ್ಷಾದಿ ದ್ವೀಪಗಳ ಲಕ್ಷಣ ವಿಸ್ತಾರಾದಿಗಳನ್ನು ವರ್ಣಿಸುವೆನು ಕೇಳು.

ಜಂಬೂದ್ವೀಪವು ತನ್ನಷ್ಟೇ ಅಗಲವಾದ ಲವಣಸಮುದ್ರಪರಿವೇಷ್ಟಿತವಾಗಿದೆ. ಅದರ ಸುತ್ತಲೂ ಎರಡು ಪಕ್ಷ ಯೋಜನ ವಿಸ್ತಾರವಾದ ಪ್ಲಕ್ಷದ್ವೀಪವಿದೆ. ಜಂಬೂವೃಕ್ಷದಂತೆ ಏಕಾದಶ ಶತಯೋಜನೋನ್ನತವಾದ ಹಿರಣ್ಮಯ ಪ್ಲಕ್ಷತರುವು ಅಲ್ಲಿದೆ. ಅದರಲ್ಲಿ ಸಪ್ತಜಿಹ್ವನಾದ ಅಗ್ನಿದೇವನು ಸನ್ನಿಹಿತನಾಗಿದ್ದು ಮೆರೆಯುತ್ತಾ ಶ್ರೀಹರಿಯನ್ನು ಉಪಾಸಿಸುತ್ತಿರುವನು.

ಆ ದ್ವೀಪಾಧಿಪತಿಯು ಇಧ್ಮಜಿಹ್ವನೆಂಬ ಪ್ರಿಯವ್ರತ ಪುತ್ರನು. ತನ್ನ ರಾಜ್ಯವಾದ ಪ್ಲಕ್ಷದ್ವೀಪವನ್ನು ಏಳು ಭಾಗಗಳಾಗಿ ಮಾಡಿ, ಶಿವ, ಯಶಸ್ಯ, ಸುಭದ್ರ, ಶಾಂತ, ಕ್ಷೇಮ, ಅಮೃತ, ಅಭಯರೆಂಬ ತನ್ನ ಏಳು ಮಕ್ಕಳಿಗೆ ಅವರ ಹೆಸರನ್ನಿಟ್ಟು ಕೊಟ್ಟು ತಾನು ವಿರಕ್ತನಾಗಿ ತಪವನ್ನು ಗೈದು ಮುಕ್ತನಾದನು.

ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಧೂಮ್ರವರ್ಣ, ಹಿರಣ್ಯಗ್ರೀವ ಮೇಘಮಾಲ ಎಂಬುವು ಅಲ್ಲಿರುವ ಏಳು ಪರ್ವತ ಪಂಕ್ತಿಗಳು. ಅರುಣಾ, ಅನುಗುಣಾ, ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ, ಸತ್ಯಂಭರಾ ಎಂಬ ಏಳೇ ನದಿಗಳಲ್ಲಿ ವರ್ಷಗಳನ್ನು ವಿಂಗಡಿಸಿ ಹರಿಯುತ್ತಾ ಸ್ನಾನ ಪಾನ ಮಾಡಿದವರ ಪಾಪ ಪಟಲ ವಿನಾಶಕವಾಗಿರುವುವು. ಹಂಸ, ಪತಂಗ, ಗೋಧ್ಯಾಯನ, ಸತ್ಯಾಂಗರೆಂದಲ್ಲಿ ವರ್ಣಚತುಷ್ಟಯಯುಕ್ತರು ಪೆಸರಾಗಿ, ಸಾವಿರ ವರುಷದ ಆಯುರ್ಮಾನದಿಂದ ದೇವತಾ ಸದೃಶರಾಗಿ, ವೇದವಿದ್ಯೆಯಿಂದ ಸೂರ್ಯಾಂತರ್ಗತ ಶ್ರೀಹರಿಯನ್ನು ಉಪಾಸಿಸುವರು.

'ಅತ್ಯಂತ ಪುರಾತನನು, ಸುಕೃತ ಪ್ರೇರಕನು, ಚತುರ್ಮುಖ ನಿಯಾಮಕನು, ದೇವಾದಿಗಳಲ್ಲಿ, ಅಮರತ್ವವನ್ನು ಕೊಟ್ಟು, ರುದ್ರಾದಿಗಳಿಂದ ದುಷ್ಟಸಂಹಾರ ಮಾಡಿಸುವ ಜ್ಞಾನಿಜನಗಮ್ಯ ನಾರಾಯಣಾ ! ನಿನಗೆ ನಮಃ' ಎಂದವರು ಸೂರ್ಯನನ್ನು ಪೂಜಿಸುವರು.

ಪ್ಲಕ್ಷಾದಿ ದ್ವೀಪಗತ ಪುರುಷರು ಪೂರ್ಣವಾಯು ಆಯುಸ್ಸು, ಇಂದ್ರಿಯಬಲ, ಓಜಸ್ಸು, ಸಹನೆ, ಬಲ, ಬುದ್ಧಿ, ವಿಕ್ರಮ ಮುಂತಾದ ಸ್ವಭಾವಸಿದ್ಧ ಗುಣಗಳಿಂದ ವಿರಾಜಿಸುತ್ತಿರುವರು.

ಪ್ಲಕ್ಷದ್ವೀಪದ ಸುತ್ತಲೂ ಎರಡು ಲಕ್ಷ ಯೋಜನಾತ್ಮಕವಾದ ಇಕ್ಷುರಸ ಸಮುದ್ರವಿರುವುದು. ಅದರ ಸುತ್ತು ಶಾಲ್ಮಲೀ ದ್ವೀಪವು 4 ಲಕ್ಷ ಯೋಜನ ವಿಸ್ತಾರವಾಗಿದ್ದು 4 ಲಕ್ಷ ಯೋಜನ ವಿಸ್ತೃತವಾದ ಸುರಾಸಮುದ್ರದಿಂದಾವೃತವಾಗಿದೆ.

ಶಾಲ್ಮಲಿಯು 1500 ಯೋಜನ ಎತ್ತರವಾಗಿ, ಆ ವೇದಸ್ತುತನಾದ ಗರುಡನ ನಿಲಯವಾಗಿದೆ. ಆ ದ್ವೀಪಾಧಿಪತಿಯ ಪ್ರಿಯವ್ರತಪುತ್ರನಾದ ಯಜ್ಞಬಾಹುವು. ತನ್ನಾ ಏಳು ಜನ ಮಕ್ಕಳಿಗೆ ತನ್ನ ರಾಜ್ಯದ ಏಳು ವರ್ಷಗಳನ್ನು ತನ್ನಮಕಗಳನ್ನಾಗಿ ಕೊಟ್ಟು ತಾನು ವಿರಕ್ತನಾದನು.

ಸುರೋಚನ, ಸಾಮನಸ್ಯ, ರಮಣ, ದೇವವರ್ಷ, ವಾರಿಭದ್ರ, ಆಪ್ಯಾಯನ, ಅಭಿಜಾತವೆಂಬ ವರ್ಷಗಳಿಗೆ ಅವರೇ ರಾಜರು. ಸುರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಸಹಶ್ರುತಿ ಎಂಬುವು ಏಳು ಗಿರಿಗಳು. ಅನುಮತಿ, ಸಿನೀವಾಲೀ, ಸರಸ್ವತೀ, ಕುಹೂ, ರಜನೀ, ನಂದಾ, ರಾಕಾ ಎಂಬವೇ ಏಳು ನದಿಗಳು. ಶ್ರುತಧರ, ವೀರ್ಯಧರ, ವಸುಂಧರ,

ಊರ್ಧ್ವರ್ಧರರೆಂಬ ವರ್ಣಚತುಷ್ಟಯಯುಕ್ತರಾದ ಪ್ರಜರು ವೇದವೇದ್ಯನಾದ ಚಂದ್ರಾಂತ ರ್ಯಾಮಿ ಶ್ರೀಹರಿಯನ್ನು ಉಪಾಸಿಸುವರು.

'ತನ್ನ ಅಮೃತ ಕಿರಣಗಳಿಂದ ದೇವಪಿತೃಗಳಿಗೆ ಕ್ರಮವಾಗಿ ಶುಕ್ಲ ಕೃಷ್ಣಪಕ್ಷಗಳಲ್ಲಿ ಅನ್ನ ರಸವನ್ನು, ಪ್ರಜರಿಗೆ ಓಷಧೀಶವಾಗಿ ಅನ್ನವನ್ನೂ ಕೊಡುವ ಚಂದ್ರನಲ್ಲಿ ಅಂತರ್ಯಾಮಿ ಯಾದ ಶ್ರೀಹರಿಯೇ! ನೀನೇ ನಮಗೆ ಪಾಲಕನು' ಎಂದು ಪೂಜಿಸುತ್ತಿರುವರು.

ಸುರಾ ಜಲಧಿಯ ಸುತ್ತು 8 ಲಕ್ಷ ಯೋಜನ ವಿಸ್ತಾರವಾದ ಕುಶದ್ವೀಪವು 8 ಲಕ್ಷ ಯೋಜನ ವಿಸ್ತಾರವಾದ ಘೃತಸಮುದ್ರದಿಂದಾವೃತವಾಗಿದೆ. ಶ್ರೀಹರಿಕೃತ ಕುಶಸ್ತಂಭವು ಅಲ್ಲಿ ಎರಡನೆಯ ಅಗ್ನಿಯಂತೆ ಪ್ರಕಾಶಿಸುತ್ತಿರುವುದು. ಅದರ ಹಸಿರುಕುಶಕಾಶಗಳು ದಿಕ್ಕುಗಳನ್ನು ಬೆಳಗುತ್ತಿರುವುದು. ಆ ದ್ವೀಪ ಪತಿಯು ಪ್ರಿಯವ್ರತಪುತ್ರನಾದ ಹಿರಣ್ಯರೇತಸನು. ವಸುದಾನ, ದೃಢರುಚಿ, ನಾಭಿ, ಗುಪ್ತ, ಸತ್ಯವ್ರತ, ವಿಪ್ರ, ವಾಮದೇವರೆಂಬ ತನ್ನ ಸುತರಿಗೆ ತನ್ನಾಮಕ ವರ್ಷಗಳನ್ನು ವಿಭಜಿಸಿ ಕೊಟ್ಟು ತಾನು ತಪೋವನವಂ ಸೇರಿದನು. ಚಕ್ರ, ಚತುಃಶೃಂಗ, ಕಪಿಲ, ಛಿನ್ನಕೂಟ, ದೇವಾನೀಕ, ಊರ್ಧ್ವರೋಮಾ, ದ್ರವಿಣವೆಂಬ ಏಳು ಪರ್ವತಗಳು, ರಸಕಲ್ಯಾ, ಮಧುಕುಲ್ಯಾ, ಶ್ರುತವಿಂದಾ, ಮಿತ್ರವಿಂದಾ, ದೇವಗರ್ಭಾ, ಘೃತಚ್ಯುತಾ, ಮಂತ್ರ ಮಾಲಾ ಎಂಬ ಏಳು ನದಿಗಳು ಅಲ್ಲಿವೆ. ಕುಶಲ, ಕೋವಿದ, ಅಭಿಯುಕ್ತ, ಕುಲಕರೆಂಬ ಚತುರ್ವರ್ಣದ ಜನರು ಅಗ್ನಿಯ ಅಂತರ್ಯಾಮಿಯಾದ ಶ್ರೀಹರಿಯನ್ನು ಕುಸಲಕರ್ಮವನ್ನರ್ಪಿಸಿ ಪೂಜಿಸು ವರು.

'ಸರ್ವೋತ್ತಮನು, ಗುಣಪೂರ್ಣನಾದ ನಾರಾಯಣನಿಗಾಗಿ ಹವ್ಯವನ್ನು ವಹಿಸಿ ಪೋಗುವೆ. ಸರ್ವಜ್ಞನು, ಶ್ರೀ ನಾರಾಯಾಣಾಂಗಜರಾದ ದೇವತೆಗಳಿಗೆ ಹವಿಃಪ್ರದಾತನು ಆದ ನಿನಗೆ ವಂದನವು. ನಾವು ಶ್ರೀಹರಿಯನ್ನು ಯಜ್ಞಾದಿಗಳಿಂದ ಪೂಜಿಸುವಂತೆ ಮಾಡಿ' ಎಂದು ಅಗ್ನಿಯನ್ನು ಪ್ರಾರ್ಥಿಸುವರು.

ಕ್ರೌಂಚದ್ವೀಪವು ಆಮೇಲೆ ತನ್ನಂತೆ ಹದಿನಾರು ಲಕ್ಷ ಯೋಜನ ವಿಸ್ತೃತವಾದ ದಧಿ ಮಂಡೋದದಿಂದಾವೃತವಾಗಿದೆ. ಕ್ರೌಂಚವೆಂಬ ಪರ್ವತದಲ್ಲಿ ವಿರಾಜಿಸುವುದು. ಕುಮಾರಸ್ವಾಮಿ ಯಿಂದ ರಂಧ್ರಿತವಾದ ನಿತಂಬದಿಂದ ನೊಂದರೂ, ದದಿ ಮಂಡೋದಜಲದಿಂದನೆಂದು, ಕ್ರೌಂಚಪರ್ವತವು ವರುಣರಕ್ಷಿತವಾಗಿ ನಿರ್ಭಯವಾಗಿ ನಿಂತಿದೆ. ಆ ದ್ವೀಪವನ್ನು ಪ್ರಿಯವ್ರತಪುತ್ರ ನಾದ ಘೃತಪೃಷ್ಠನು ಪರಿಪಾಲಿಸಿ ತನ್ನ ಏಳು ಜನ ಮಕ್ಕಳಿಗೆ ಸಪ್ತವರ್ಷಾತ್ಮಕ ರಾಜ್ಯವನ್ನು ಹಂಚಿಕೊಟ್ಟು, ಪರಮಕಲ್ಯಾಣಗುಣನಿಧಿಯಾದ ಶ್ರೀಹರಿಯ ಚರಣಾರವಿಂದವನ್ನು ಸೇರಿದನು. ಆಮ, ಮಜ್ಯ, ಮೇಘಪೃಷ್ಠ, ಸುಧಾಮ, ಋಷಿಜ್ಯಾಲ, ಹಿತಾವರ್ಣ, ವನಸ್ಪತಿ ಎಂಬುವರು ಅವನ ಸುತರು. ಶುಕ್ಲ, ವರ್ಧಮಾನ, ಉಪಬರ್ಹಣ, ಉಪಭೋಜನ, ನಂದ, ನಂದನ, ಸರ್ವತೋಭದ್ರವೆಂಬುವು ಏಳು ವಿಭಾಜಕ ಗಿರಿಗಳು. ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವತ್ರಾ, ಶುಕ್ಲಾ, ಎಂಬ ಪವಿತ್ರ ನದಿಗಳು ಏಳು ಅಲ್ಲಿ ಹರಿಯುವುವು. ಗುರು, ಋಷಭ, ದ್ರವಣ, ದೇವರೆಂಬ ಚತುರ್ವರ್ಣ ಪುರುಷರಲ್ಲಿ ಜಲಾಂತರ್ಯಾಮಿಯಾದ ವರುಣಸ್ವಾಮಿ ಹರಿಯನ್ನು ಪೂರ್ಣ ಜಲಾಂಜಲಿಗಳಾಗಿ ಪೂಜಿಸುವರು.

'ಜಲಗಳೇ ಶ್ರೀಹರಿಯ ವೀರ್ಯವ, ಅವು ಭೂಃ ಭುವಃ ಸ್ವಃ ಎಂಬ ಮಂತ್ರಪೂತವಾಗಿ ತ್ರಿಲೋಕದ ಜನರನ್ನು ಪಾವನರನ್ನಾಗಿ ಮಾಡುವುವು. ನಮ್ಮ ಪಾಪವನ್ನು ಕಳೆದು ನಮ್ಮನ್ನು

ಪವಿತ್ರೀಕರಿಸಿ ಸ್ಪರ್ಶಮಾತ್ರದಿಂದ ಸುಖವನ್ನು ಕೊಡುವ ಜಲಾಂತರ್ಗತ ಶ್ರೀಹರಿಗೆ ನಮಸ್ಕಾರವು' ಎಂದವರು ಸ್ತುತಿಸುವರು.

ದದಿ ಮಂಡೋದದ ಸುತ್ತು ವ್ಯಾಪಿಸಿದ ಶಾಕದ್ವೀಪವು ತನ್ನಂತೆ 32 ಲಕ್ಷ ಯೋಜನ ವಿಸ್ತೃತವಾದ ಕ್ಷೀರಸಮುದ್ರದಿಂದಾವೃತವಾಗಿ ಶಾಕವೆಂಬ ದೊಡ್ಡ ವೃಕ್ಷದಿಂದ ಕೂಡಿದೆ. ಆ ತರುವಿನ ಸುಗಂಧವು ದ್ವೀಪವನ್ನು ಸುರಭೀಕರಿಸಿ ವ್ಯಾಪಿಸಿದೆ. ಅದರಲ್ಲಿ ಪ್ರಿಯವ್ರತಪುತ್ರನಾದ ಮೇಧಾತಿಥಿಯು ಆಳಿ, ತನ್ನ ಮಕ್ಕಳಾದ ಪುರೋಜವ, ಮನೋಜವ, ವೇಪಮಾನಸ ಧೂಮ್ರಾನೀ ವಿಚಿತ್ರರೇಫ, ಬಹುರೂಪ, ವಿಶ್ವಾಧಾರರೆಂಬವರಿಗೆ ತನ್ನಾಮಕ ಸಪ್ತವರ್ಷಗಳನ್ನು ಹಂಚಿಕೊಟ್ಟು, ತಾನು ಅನಂತವನ್ನು ಚಿಂತಿಸಿ ತಪವಂಗೈಯಲು ಹೊರಟು ಹೋದನು.

ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ರೋತ, ದೇವಪಾಲ, ಮಹಾನಸ ಎಂಬ ಏಳು ಮರ್ಯಾದಾಗಿರಿಗಳು, ಅನಘಾ, ಆಯುರ್ದಾ, ಉಭಯಸ್ಪೃಷ್ಟ, ಅಪರಾಜಿತಾ, ಪಂಚಪದೀ, ಸಹಸ್ರಸ್ರುತಿ, ನಿಜಧೃತಿ ಎಂಬ ಏಳು ನದಿಗಳು ಅಲ್ಲಿವೆ. ಅಲ್ಲಿಯ ಜನರು ಧೃತವ್ರತ, ಸತ್ಯವ್ರತ, ದಾಸವ್ರತ, ಅನುವ್ರತರೆಂದು ಚತುರ್ವರ್ಣವಿಭಕ್ತರಾಗಿ ವಾಯ್ವಂತ ರ್ಯಾಮಿ ಶ್ರೀಹರಿಯನ್ನು ಪ್ರಾಣಾಯಾಮಗಳಿಂದ ಪೂಜಿಸಿ ನುತಿಸುವರು.

'ದೇಹದಲ್ಲಿ ತತ್ತ್ವದೇವತಾಂತರ್ಯಾಮಿಯಾಗಿದ್ದು ಅನೇಕ ರೂಪನಾಗಿ ಸರ್ವಭೂತಾ ಧಾರಕನಾದ ಶ್ರೀಹರಿಯು ವಶದಲ್ಲಿಜಗವೆಲ್ಲವೂ ನಿಂತಿದೆ. ಅಂತಹ ಅಂತರ್ಯಾಮಿಯಾದ ಶ್ರೀ ಮುಖ್ಯಪ್ರಾಣವಲ್ಲಭನಿಗೆ ನಮಸ್ಕಾರವು' ಎಂದು ನುತಿಪರು.

ಕ್ಷೀರಸಾಗರವು 32 ಲಕ್ಷ ಯೋಜನವು. ಅದರಲ್ಲಿ 6 ಲಕ್ಷ ಯೋಜನವು ಎರಡು ಕಡೆ ಬಿಟ್ಟರೆ ಮಧ್ಯೆ ಇರುವ 20 ಲಕ್ಷ ಯೋಜನ ವಿಸ್ತೃತವಾದುದೇ ಶ್ವೇತದ್ವೀಪವು. ಇದರಲ್ಲಿ ಶಾಕದ್ವೀಪದ ಕಡೆ ಇರುವ ಆರು ಲಕ್ಷ ಯೋಜನ ವಿಸ್ತೃತವು ಭೂಭಾಗವು. ಪುಷ್ಕರ ದ್ವೀಪದ ಕಡೆ ಇರುಲ ಆರು ಲಕ್ಷ ಯೋಜನ ವಿಸ್ತೃತವು ದುರ್ಗಾಭಾಗವು. ಮಧ್ಯೆ ಇರುವ 8 ಲಕ್ಷ ಯೋಜನ ವಿಸ್ತೃತವಾದ ಶ್ರೀಭಾಗವು ಮುಕ್ತಸ್ಥಾನವೆನಿಸಿದೆ. ಇದರ ಎರಡು ಕಡೆ ಸುಧಾ ಸಮುದ್ರ ಗಳಿವೆ. ಭೂಭಾಗವು ದುರ್ಗಾಭಾಗದಂತೆ ಪುನರಾವೃತ್ತಿಸಹಿತವು, ಪ್ರಳಯ ಕಾಲದಲ್ಲಿ ನಷ್ಟವಾಗು ವುದು. ಶ್ರೀ ಭಾಗವು ಅಪ್ರಾಕೃತವು-ಮುಕ್ತರಲ್ಲಿದ್ದು ಪುನರಾವೃತ್ತಿರಹಿತರಾಗುವರು. ಶ್ರೀವಾಸುದೇವನು ಅಲ್ಲಿ ದಿವ್ಯರೂಪದಿಂದ ಮುಕ್ತಸೇವ್ಯನಾಗಿರುವನು.

ಕ್ಷೀರಸಾಗರದಾಚೆಗೆ ಪುಷ್ಕರದ್ವೀಪವಿದೆ. ಅದರ ಅಗಲವು 64 ಲಕ್ಷ ಯೋಜನವು. 64 ಲಕ್ಷ ಯೋಜನವಗಲವಾದ ಶುದ್ಧೋದಕ ಸಮುದ್ರವು ಅದರ ಸುತ್ತಲಿದೆ. ನಿರ್ಮಲ ಕನಕ ಸಹಸ್ರಪತ್ರವಾದ ದಿವ್ಯ ಕಮಲದಲ್ಲಿ ಪ್ರಕಾಶಮಾನರಾಗಿ ಬೆಳಗುತ್ತಾ, ಭಗವಂತನಾದ ಚತುರ್ಮುಖನ ಅಧ್ಯಾಸನವೆನಿಸಿದೆ. ಈ ದ್ವೀಪವು ಮಧ್ಯದಲ್ಲಿ ವ್ಯಾಪಿಸಿರುವ ಮಾನಸೋತ್ತರ ಪರ್ವತದಿಂದ ಎರಡೇ ಭಾಗವಾಗಿದೆ. ಆ ಪರ್ವತದ ಎತ್ತರವು ಹತ್ತು ಸಾವಿರ ಯೋಜನವು. ಆ ಗಿರಿಯ ಮೇಲೆ ನಾಲ್ಕು ದಿಕ್ಕಿನಲ್ಲಿಯು ಇಂದ್ರಾದಿ ದಿಕ್ಪಾಲಕರ ಭೂಮಿಗತಪುರಗಳಿವೆ. ಸೂರ್ಯರಥದ ಚಕ್ರವು ಈ ಗಿರಿಯ ಮೇಲೆ ಹಾದುಹೋಗುತ್ತಾ, ಮೇರುವಿಗೆ ಒಂದಕ್ಷದಿಂದ ಬದ್ಧವಾಗಿದೆ. ಹಗಲು ರಾತ್ರಿಗಳವಯವವಾಗಿ ಉಳ್ಳ ಸಂವತ್ಸರವೆಂಬ ಚಕ್ರವು ಈ ಸೂರ್ಯ ರಥ. ಮನಾನುಸಾರವಾಗಿ ತಿರುಗುತ್ತಿರುವುದು. ಈ ಅಕ್ಷ ಚಕ್ರಾದಿಗಳೆಲ್ಲವೂ ತೇಜೋಮಯವು.

ವಿದ್ಯುಚ್ಛಕ್ತಿಯಂತೆ ಅಗೋಚರವಾಗಿರುವ ಮಹಾಶಕ್ತಿಯು ಶ್ರೀಹರಿ ಪ್ರೇರಣೆಯಿಂದಲೂ ಮುಖ್ಯಪ್ರಾಣ ಬಲದಿಂದಲೂ ನಡೆಯುತ್ತಿರುವುದು.

ಪುಷ್ಕರ ದ್ವೀಪವನ್ನು ಪ್ರಿಯವ್ರತಪುತ್ರನಾದ ವೀತಿಹೋತ್ರನು ಪಾಲಿಸಿ, ತನ್ನ ರಮಣ ಧಾತಕಿ ಎಂಬ ಮಕ್ಕಳೀರ್ವರಿಗೆ ಎರಡು ವರ್ಷಗಳನ್ನು ಹಂಚಿಕೊಟ್ಟು ಪೂರ್ವಜರಂತೆ ತಾನೂ ತಪವನ್ನು ಮಾಡಿ ಮುಕ್ತನಾದನು.

ಆ ವರ್ಷಪುರುಷನು ಗುಣಪೂರ್ಣನಾದ ಬ್ರಹ್ಮಾಂತರ್ಯಾಮಿ ನಾರಾಯಣನನ್ನು ಕರ್ಮ ಫಲವನ್ನು ಬೇಡದೆ ಸುಕರ್ಮಗಳಿಂದ ಆರಾಧಿಸಿ ನುತಿಪರು.

'ಶ್ರೀರಮಣ! ಸತ್ಕರ್ಮಗಳೇ ನನ್ನ ಜ್ಞಾನಕ್ಕೆ ಕಾರಣವಾಗಿವೆ. ಚತುರ್ಮುಖ ಬ್ರಹ್ಮನು ನಿನ್ನ ಮುಖ್ಯಪ್ರತಿಮೆಯಂತಿದ್ದು ನಿನ್ನ ಜ್ಞಾನವನ್ನು ಸುಜನರಿಗೆ ಉಪದೇಶಿಸುವ ಗುರುವಾಗಿರುವನು. ನಿನ್ನಲ್ಲಿ ನಿನಗೆ ಸ್ವಗತಭೇದವಿಲ್ಲವಾದರೂ ಬ್ರಹ್ಮಾದಿಗಳಿಂದ ನೀನು ಭಿನ್ನನಾದ ಪ್ರಭುವಾಗಿರುವೆ. ಭಗವನ್! ನಿನಗೆ ನಮಸ್ಕಾರವು' ಎಂದು ನುತಿಪರು.

ಅಲ್ಲಿಂದ ಹೊರಗೆ ಲೋಕಾಲೋಕ ಪರ್ವತವು ಸುತ್ತಲೂ ವ್ಯಾಪಿಸಿದೆ. ಅದರ ಆಚೆಗೆ ಸೂರ್ಯಕಿರಣಗಳು ವ್ಯಾಪಿಸಿ ಪ್ರಕಾಶಿಸುವುದಿಲ್ಲ. ಮಾನಸೋತ್ತರ ಮೇರುಮಧ್ಯ ದೂರವೆಂದರೆ 10 ಕೋಟಿ 16 ಲಕ್ಷ ಯೋಜನಗಳಷ್ಟೇ ವಿಸ್ತೃತವಾದ.ಕಾಂಚನಮಯ ಭೂಮಿಯು ಅದರ ಮೇಲೆ ಬರುವುದು; ಅದು ದರ್ಪಣ ತಲದಂತೆ ನುಣುಪಾಗಿದ್ದು ತನ್ನಲ್ಲಿ ಪತಿತವಾದ ಯಾವ ಪದಾರ್ಥವನ್ನು ತೆಗೆಯಲು ಬಾರದಂತೆ ಇರುವುದು. ಆದ್ದರಿಂದ ಅಲ್ಲಿ ಯಾವ ಜೀವರಿರುವುದಿಲ್ಲ. ಲೋಕಾಲೋಕದ ಈಚೆಗೆ ಸೂರ್ಯಚಂದ್ರಕಾಂತಿಯಿದ್ದು ತ್ರಿಲೋಕಗಳಿಗೆ ಪ್ರಕಾಶವಾಗಿರುವುದು. ಆಚೆಗೆ ಸೂರ್ಯದಿಗಳ ಪ್ರಕಾಶವು ಪೊಕ್ಕು ಹೋಗಲಾರದೇಕೆಂದರೆ ಆ ಲೋಕಾಲೋಕಾಚಲವು ಲೋಕವಿಸ್ತಾರ ಸಮವಿಸ್ತೃತವು ಐವತ್ತುವರೆ ಲಕ್ಷ ಯೋಜನೋನ್ನತವು ಆಗಿ ಸೂರ್ಯಾದಿ ಕಿರಣ ಪ್ರತಿಬಂಧಕವಾಗಿದೆ.

ಬ್ರಹ್ಮಾಂಡವು ಐವತ್ತು ಕೋಟಿ ಯೋಜನಾತ್ಮಕವಾಗಿದೆ. ಅದರಲ್ಲಿ ನಾಲ್ಕನೆ ಒಂದಂಶ ಘನೋದಕವು, ಎರಡನೇ ಅಂಶ ಒಳಗಿರುವ ಅಂಧಂತವನು, ಮೂರನೇ ಕಾಲುಭಾಗವೇ ಲೋಕಾಲೋಕಾಚಲವು. ಇದರ ಒಳಗೆ ಇರುವುದೇ ಲೋಕವು. ಇದು ಮೂರೂವರೆ ಕೋಟಿ ಯೋಜನಾತ್ಮಕವೆಂದು ಜ್ಞಾನಿಗಳು ಪೇಳುವರು. ಚತುರ್ಥಭಾಗದ ತುರೀಯಾಂಶವಾದ ಇದೇ ಲೋಕವಿಲ್ಲಿ ಮನುಷ್ಯಾದಿ ವ್ಯವಹಾರವಿದೆ. ಆ ಲೋಕದಲ್ಲಿ ಸೂರ್ಯದಿ ಕಾಂತಿಯಿಲ್ಲ. ಈ ಲೋಕದ ಜನರಲ್ಲಿಗೆ ಪೋಗಲಾರದು. ಆ ಲೋಕಾಲೋಕಾಚಲದ ನಾಲ್ಕು ದಿಕ್ಕಿನಲ್ಲಿಯು ನಿಖಿಲ ಲೋಕ ಗುರುವಾದ ಬ್ರಹ್ಮನು ನಿಲ್ಲಿಸಿದ ಋಷಭ, ಪುಷ್ಕರಚೂಡ, ವಾಮನ, ಅಪರಾಜಿತ ಎಂಬ ನಾಲ್ಕು ಭದ್ರಗಜಗಳು ಲೋಕಸ್ಥಿತಿ ಹೇತುಗಳಾಗಿವೆ. ತನ್ನ ಭಿನ್ನಾಂಶರಾಗಿ ತನ್ನಿಂದ ನಿಜಪದವಿಯಂ ಪಡೆದ ಮಹೇಂದ್ರಾದಿ ಲೋಕಪಾಲಕರ ಶ್ರೇಯೋವೃದ್ಧಿ ಮಾಡಲು ಪರಮ ಪುರುಷನು ನಿಜಾಯುಧವರಶೋಭಿತ ಭುಜದಂಡಮಂಡಿತನು ವಿಷ್ವಕ್ಸೇನಾದಿ ಪಾರ್ಷದಪ್ರವರ ಸೇವಿತನು, ನಿತ್ಯ ಸಿದ್ಧ ಶುದ್ಧ ಸತ್ವೈಧರ್ಮಜ್ಞಾನವೈರಾಗ್ಯಾದ್ಯಷ್ಟೈಶ್ವರ್ಯ ಮಹಿತನು ಆಗಿ ಶೋಭಿಸುತ್ತಿರುವನು. ಸರ್ವಾಂತರ್ಯಾಮಿಯು ಸಕಲ ಲೋಕ ಸ್ವಸ್ತಿಕಾರಣನಾದ ಈ ಶ್ರೀಹರಿಯು ವಿವಿಧ ಲೋಕಯಾತ್ರೆಯನ್ನು ಚೆನ್ನಾಗಿ ನಡೆಸುತ್ತಾ ಪ್ರಳಯಕಾದಲವರಿವಿಗೂ ಈ ಗಿರಿಯಲ್ಲಿ

ಆ ರೂಪದಿಂದ ನೆಲಸಿರುವನು. ಅನಂತರ ಬ್ರಹ್ಮಾಂಡ ಪ್ರಳಯವಾದಾಗ ನಿಜಮೂಲರೂಪದಿ ಐಕ್ಯವನ್ನು ಪೊಂದುವನು.

ಲೋಕಾಲೋಕ ಪರ್ವತದ ಆಚೆಗೆ ಪೋಗಬೇಕೆಂದರೆ ಕೇವಲ ಅಣಿಮಾದಿಯೋಗಸಿದ್ಧಿಗೆ ಮಾತ್ರ ಸಾಧ್ಯವಾಗಿದೆ.

ಸೂರ್ಯನು ಬ್ರಹ್ಮಾಂಡ ಮಧ್ಯಗತನಾಗಿರುವನು. ಬ್ರಹ್ಮಾಂಡವು ಐವತ್ತು ಕೋಟಿ ಯೋಜನವಿಸ್ತೃತವೆನ್ನುವರು. ಅದಕ್ಕೆ ಕೇಂದ್ರಮಧ್ಯದಲ್ಲಿ ಅಂತರಿಕ್ಷದಲ್ಲಿ ಸೂರ್ಯಮಂಡಲ ಸಂಚಾರವಿರುವುದು; ಅದು ದಶದಿಗಪೇಕ್ಷಯಾ ಪಂಚವಿಂಶತಿಕೋಟಿಯೋಜನ ದೂರವೆಂದು ತಿಳಿಯಬೇಕು.

ಜಡವಾದ್ದರಿಂದ ಮೃತವಾದ ಬ್ರಹ್ಮಾಂಡ ಮಧ್ಯದಲ್ಲಿರುವುದರಿಂದ, ಸೂರ್ಯನಿಗೆ ಮಾರ್ತಾಂಡವೆಂದು ಹೆಸರಿದೆ. ಹಿರಣ್ಯಾಂಡ ಸಂಭೂತನಾದ ಸ್ವಯಂಭುವನಿಗೆ ಹಿರಣ್ಯಗರ್ಭ ನೆನ್ನುವರಲ್ಲವೇ?

ಸೂರ್ಯನಿಂದಲೇ ನಾವು ಪೂರ್ವಾದಿ ದಿಕ್ಕುಗಳನ್ನು ಆಕಾಶ ದ್ಯುಭೂಮ್ಯಾದಿಗಳನ್ನು ಸ್ವರ್ಗ ನರಕ ರಸಾತಲಾದಿಲೋಕ ಸ್ಥಿತಿಯನ್ನು ತಿಳಿಯುತ್ತಲಿರುವೆವು.

ದೇವ ಪಶು ನರ ನಾಗ ನಗ ತರು ಕೀಟಾದಿ ಸರ್ವಜೀವಸಮೂಹಗಳಿಗೂ ಸೂರ್ಯನೇ ತನ್ನ ಅಂತರ್ಯಾಮಿಯಾದ ಶ್ರೀಹರಿಪ್ರೇರಿತನಾಗಿ ಚಕ್ಷುರಿಂದ್ರಿಯವಸ್ಥಿತನಾಗಿ ರೂಪಜ್ಞಾನವನ್ನು ಕೊಡುವನು.

## ೨೧. ಖಗೋಲಃ — ಸೂರ್ಯರಥ ಕುಟುಂಬವು

ಶ್ರೀಶುಕನು ಪೇಳಿದನು-

ರಾಜನ್! ಇಂತು ಭೂವಲಯ ಪ್ರಮಾಣ ಲಕ್ಷಣಗಳನ್ನು ಪೇಳಿದೆನು. ಇದರಂತೆ ಖಗೋಲ ಪ್ರಮಾಣ ಲಕ್ಷಣಗಳಿದ್ದರೂ ಕೇಳು. ಅವರೇಕಾಳಿನಲ್ಲಿ ಎರಡು ದಲವಿರುವುವು; ಮಧ್ಯದಲ್ಲಿ ಸ್ಥಲವಿದ್ದಂತೆ ಖಗೋಲ ಭೂಗೋಲ ಮಧ್ಯದಲ್ಲಿ ಅಂತರಿಕ್ಷಲೋಕವಿದೆ. ಅಲ್ಲಿ ಪ್ರಕಾಶಕಶ್ರೇಷ್ಠ ನಾದ ಶ್ರೀಹರಿಯು ಸೂರ್ಯನಲ್ಲಿದ್ದು ತನ್ನ ದಿವ್ಯಕಾಂತಿಯಿಂದ ಮೂರು ಲೋಕಗಳಿಗೆ ತಾಪ ವನ್ನೂ, ಅಂತರಿಕ್ಷದಲ್ಲಿ ಪ್ರಕಾಶನವನ್ನೂ ಕೊಡುತ್ತಿರುವನು.

ದೀರ್ಘ ಹ್ರಸ್ವ ಸಮಾನಗತಿ ಭೇದದಿಂದ ಸೂರ್ಯನು ಮಾನಸೋತ್ತರದ ಆರೋಹಣ, ಅವರೋಹಣ ಸಮಾನಮಾರ್ಗದಲ್ಲಿ ಪೋಗುವನು. ಅಲ್ಲಿ ಮಕರಾದಿ ರಾಶಿಗಳಲ್ಲಿ ದೀರ್ಘಹ್ರಸ್ವ ಸಮಾನವಾದಿ ಅಹೋರಾತ್ರಗಳನ್ನುಂಟುಮಾಡಿ, ಉತ್ತರಾಯಣ, ದಕ್ಷಿಣಾಯನ, ವೈಷುವಕಾಲ, ಕರ್ತನಾಗಿದ್ದಾನೆ; ಮೇಷತುಲಾಮಾಸಗಳಲ್ಲಿ ಅಹೋರಾತ್ರಗಳು ಸಮಾನವಾಗಿರುವುವು. ವೃಷಭಾದಿ ಪಂಚರಾಶಿಗಳಲ್ಲಿ ಸೂರ್ಯನಿರುವಾಗಿ ಹಗಲು ಹೆಚ್ಚುತ್ತಾ ರಾತ್ರಿಯು ಒಂದು ಘಟಿಯಷ್ಟೇ ಅಥವಾ ಇನ್ನೂ ಸ್ವಲ್ಪ ಹೆಚ್ಚೇ ತಗ್ಗುತ್ತಾ ಇರುವುದು. ವೃಶ್ಚಿಕಾದಿ ಪಂಚಮಾಸಗಳಲ್ಲಿ ಹಗಲು ಕಡಿಮೆ ಆದಂತೆ, ರಾತ್ರಿಯು ಹೆಚ್ಚುವುದು; ಉದಗಯನದಲ್ಲಿ ಹಗಲು ದಕ್ಷಿಣಾ ಯುನದಲ್ಲಿ ರಾತ್ರಿ ಹೆಚ್ಚುವುದು. ಆದರೆ ದಿನವೆಲ್ಲಾ ಕಲೆತು 60 ಘಳಿಗೆಯೇ ಆಗಲಿ ಹೆಚ್ಚುವು ದೆಂಬುದಿಲ್ಲ.

ಸೂರ್ಯನ ರಥವು ಒಂದು ದಿನದಲ್ಲಿ ಮಾನಸೋತ್ತರ ಪೂರ್ವದಿಶೆಯಿಂದ, ಒಂದು ಸಲ ಸುತ್ತಿ ಬರಲು 9 ಕೋಟಿ 51 ಲಕ್ಷ ಯೋಜನ ದೂರವಾಗುವುದು. ಆ ಗಿರಿಯ ಪೂರ್ವದಲ್ಲಿ ಅಮರಾವತಿಯು, ದಕ್ಷಿಣದಿ ಸಂಯಮನಿಯು, ಪಶ್ಚಿಮದಿ ನಿಮ್ಲೋಚನೀ, ಉತ್ತರದಿ ವಿಭಾವರೀ ಎಂಬ ಇಂದ್ರ, ಯಮ, ವರುಣ ಸೋಮರ ನಗರಗಳಿವೆ. ಪೂರ್ವದಿಗಪೇಕ್ಷಯಾ ಆ ನಗರಗಳಲ್ಲಿ ಸೂರ್ಯ ಉದಯ, ಮಧ್ಯಂದಿನ, ಸಾಯಾಹ್ನ, ರಾತ್ರಿಗಳಾಗುವುವು. ಮೇರುವಿನ ನಾಲ್ಕು ದಿಕ್ಕಿನಲ್ಲಿರುವವರಿಗೆ, ಹೀಗೆಯೇ ಅಲ್ಲಲ್ಲಿ ಅಹೋರಾತ್ರಗಳನ್ನು ಮಾಡುತ್ತಾ, ಸೂರ್ಯನು ಮೇರುವಿನನ್ನು ಪ್ರದಕ್ಷಿಣೀಕರಿಸುತ್ತಿರುವನು. ಸೂರ್ಯನ ಉದಯಾಸ್ತಮಾನಗಳು ಸಮಾನ ಸೂತ್ರನಿಪಾತದಲ್ಲಿರುವುವು ಮತ್ತು ಉದಿತವಾದ ದೇಶದಿ, ಹಗಲು ತತ್ಸಮಾನಸೂತ್ರ ನಿಪಾತ (1800) ದೇಶದಲ್ಲಿ ತತ್ಸಮಕಾಲ ರಾತ್ರಿಯು, ಆಗುವುದರಿಂದ, ಸೂರ್ಯನ ದರ್ಶನವು ಸದಾ ಆಗದಿರುವುದು. ಸೂರ್ಯನು ಇಂದ್ರಪುರಿಯಿಂದ ಯಮಪುರಿಯನ್ನು ಸೇರುವಾಗ $2^1/_4$ ಕೋಟಿ $1^1/_2$ ಲಕ್ಷ ಯೋಜನದೂರ ದಾಟಿರುವನು. ಅಂತೆಯೇ ಕ್ರಮವಾಗಿ ಮರುಣ ಸೋಮಪುರ ಗಳನ್ನೂ ಸುತ್ತಿ ಪುನಃ ಇಂದ್ರಪುರಿಯನ್ನು ಸೇರಲು ಒಂದು ದಿನವಾಗಿ ಬಿಡುವುದು. ಚಂದ್ರಶುಕ್ರಾದಿ ಗ್ರಹಗಳೂ ನಕ್ಷತ್ರಾದಿಗಳು ಕೂಡ ತಿರುಗುತ್ತಾ ಜ್ಯೋತಿಷ್ಚಕ್ರದಿಂದ ಉದಯಾಸ್ತಮಾನಗಳನ್ನು ಪೊಂದುತ್ತಿರುವುವು. ಒಂದು ಮುಹೂರ್ತದಲ್ಲಿ ಸೂರ್ಯರಥವು 30 ಲಕ್ಷ 8 ಸಾವಿರ ಯೋಜನ ವನ್ನು ಕ್ರಮಿಸುತ್ತಾ ನಾಲ್ಕು ಪುರಗಳನ್ನು ಸುತ್ತಿ ಒಟ್ಟು 9 ಕೋಟಿ 51 ಲಕ್ಷ ಯೋಜನ ದೂರವನ್ನು ನಡೆದಿರುವರು.

ಸೂರ್ಯರಥಕ್ಕೆ ಒಂದೇ ಚಕ್ರವು. ಹನ್ನೆರಡು ಮಾಸಗಳೇ ಆರಾಸಮೂಸವು. ಆರು ಋತುಗಳೇ ನೇಮಿದಳಗಳು. ಮೂರು ಚಾತುರ್ಮಾಸ್ಯಗಳೇ ತ್ರಿನಾಭಿಗಳು ಆ ಚಕ್ರಕ್ಕೇ ಸಂವತ್ಸರ ವೆಂದು ಪೆಸರು. ಅದರ ಅಕ್ಷದ ಒಂದು ಕೊನೆ ಮೇರುಶಿರದಲ್ಲಿದೆ. ಇನ್ನೊಂದು ಕೊನೆ ಮಾನಸೋತ್ತರ ಶಿಖರದಲ್ಲಿ ಅಂಟಿಸಿದೆ. ಇಂತು ತೈಲಯಂತ್ರದಂತೆ ತೋರುವ ಈ ಸೂರ್ಯ ರಥವು, ಕೆಳಗೆ ಮೇರುವನ್ನು ಪ್ರದಕ್ಷಿಣವನ್ನು ಮಾಡುತ್ತಾ ಮಾನಸೋತ್ತರ ಗಿರಿಯ ಮೇಲೆ ತಿರುಗುತ್ತಿರುವುದು. ಇನ್ನೊಂದಕ್ಷವು ಅಲ್ಲಿಂದ ದೀರ್ಘಾಕ್ಷ ಚತುರ್ಭಾಗ ಸಮವಾದದ್ದು, ಧ್ರುವಮಂಡಲದಿ ಆಧಾರಿತವಾಗಿದೆ. ಇದೆಲ್ಲವೂ ತೇಜೋಮಯವು. ಮನುಷ್ಯಮಾಂಸ ಚಕ್ಷುರಾದ್ಯಗೋಚರವಾಗಿದೆ; ಆ ರಥಕ್ಕೆ ಮಾಯುಪಾಶದಿಂದ ಬದ್ಧವಾಗಿದೆ. ಸನಪ್ತವೆಂಬ ಅಶ್ವಗಳೇಳು, ಸಪ್ತಂಚ್ಛಂದೋನಾಮಗಳು ದೇವನಾದ ಆದಿತ್ಯನ ರಥವನ್ನು ವಹಿಸಿ ಪೋಗುವುವು. ಒಂದಕ್ಕೇ ಏಳುಮುಖ ಅದರ ಹೆಸರೇ ಸಪ್ತವೆಂದು ಕೆಲವರು ಪೇಳುವರು.

ಸೂರ್ಯನ ಮುಂದೆಯು ಕುದುರೆಗಳ ಹಿಂದೆಯು ಅರುಣನೆಂಬ ಸೂತನು ರಥವನ್ನು ನಡೆಸುತ್ತಿರುವನು. ಅಂಗುಷ್ಠಪರ್ವಮಾತ್ರ ಗಾತ್ರರಾದ ವಾಲಖಿಲ್ಯರೆಂಬ ಅರವತ್ತು ಸಾವಿರ ಋಷಿಗಣವು ಹಿಂದುಮುಂದಾಗಿ ಸೂರ್ಯಾಭಿಮುಖವಾಗಿ ಭಗವತ್ ಸ್ತುತಿಯನ್ನು ಮಾಡುತ್ತಾ ನಡೆದು ಪೋಗುತ್ತಿರುವರು. ಇನ್ನೂ ಅನ್ಯ ಋಷಿವರರು ಗಂಧರ್ವರಪ್ಸರೆಯರು ನಾಗರು, ತಕ್ಷರು, ರಾಕ್ಷಸರು, ದೇವತೆಗಳು, ಒಂದೊಂದು ಗುಂಪು ಒಂದೊಂದು ಮಾಸದಲ್ಲಿ ದ್ವಾದಶಾ ದಿತ್ಯರನ್ನು ದ್ವಾದಶ ಭಿನ್ನನಾಮರು ಉಪಾಸಿಸಿ ಸೇವಿಸುತ್ತಿರುವರು. 9 ಕೋಟಿ 51 ಲಕ್ಷ ಯೋಜನ ಪರಿಮಂಡಲ ಭೂಮಂಡಲದ ದೂರದಲ್ಲಿ ಎರಡುಸಾವಿರ ಒಂದು ಗವ್ಯೂತಿ (2 ಕೋಶ) ದೂರವನ್ನು ಸೂರ್ಯಕುಟುಂಬವು ಒಂದೇ ಕ್ಷಣದಲ್ಲಿದಾಟಿ ಪೋಗುತ್ತಿರುವುದು.

## ೨೨. ಖಗೋಲ – ನವಗ್ರಹಗಳು – ಶಿಂಶುಮಾರ

ರಾಜನು ಪ್ರಶ್ನಿಸಿದನು–

ಭಗವಾನ್ ಆದಿತ್ಯನು ಮೇರು ಧ್ರುವಗಳನ್ನು ಪ್ರದಕ್ಷಿಣೀಕರಿಸುತ್ತಾ ರಾಶಿಗಳಿಗೂ ಅಭಿಮುಖವಾಗಿ ಪೋಗುವನೆಂಬುದು ನನಗೆ ಚೆನ್ನಾಗಿ ತಿಳಿದಿಲ್ಲ. ಸ್ವಾಮೀ! ತಿಳಿಸಿಕೊಡಿ.

ಶ್ರೀಶುಕನು ಪೇಳಿದನು–

ರಾಜನ್! ಕುಲಾಲ ಚಕ್ರವು ಗಿರಗಿರನೆ ತಿರುಗುವುದು; ಅದರ ಮೇಲಿರುವ ಪಿಪೀಲಿಕಾದಿ ಗಳವರ ಜೊತೆಗೆ ತಿರುಗುತ್ತಿದ್ದರೂ ತಮ್ಮ ಪ್ರತ್ಯೇಕಚಲನ ಪ್ರಕಾಶವನ್ನೂ ಬಿಡದಿರುವುವು. ಅಂತೆಯೇ ನಕ್ಷತ್ರರಾಶಿಗಳಿಂದ ಉಪಲಕ್ಷಿತವಾದ ಕಾಲಚಕ್ರದಿ ಓಡುತ್ತಿರುವಾಗ ಧ್ರುವ ಮೇರು ಪ್ರದಕ್ಷಿಣವನ್ನೂ ಮಾಡುವ ಸೂರ್ಯಾದಿ ಗ್ರಹಗಳ ಗತಿಯು ತಮ್ಮ ಪ್ರತ್ಯೇಕ ಗತಿಯನ್ನು ಪ್ರತಿರೋಧಿಸುವುದಿಲ್ಲ. ಗ್ರಹಗಳು ನಕ್ಷತ್ರಗಳಲ್ಲಿಯೂ, ರಾಶಿಗಳಲ್ಲಿಯೂ, ಸಂಚರಿಸುವುದು ಜ್ಯೋತಿಶ್ಶಾಸ್ತ್ರದಿಂದಲೂ, ಪ್ರತ್ಯಕ್ಷದಿಂದಲೂ ತಿಳಿಯುತ್ತಿದೆಯಲ್ಲವೆ?

ಭಗವಾನ್ ಆದಿಪುರುಷನಾದ ಸಾಕ್ಷಾನ್ನಾರಾಯಣನು ಲೋಕಮಂಗಲವನ್ನು ಬಯಸಿ, ವೇದವೇದ್ಯನಾದ ತನ್ನನ್ನು ಹನ್ನೆರಡು ರೂಪದಿಂದ ವಿಭಜಿಸಿ, ಸರ್ವರೂಪಪೂರ್ಣನೂ ಆಗಿ ಆರು ಋತುಗಳ ಹನ್ನೆರಡು ಸೂರ್ಯಾಂತರ್ಗತ ರೂಪ ವಿಶೇಷಗಳಿಂದ ವಸಂತಾದಿ ಋತು ಧರ್ಮಗಳನ್ನು ಪ್ರವರ್ತಿಸುವತ್ತಿರುವನು. ಅವನನ್ನು ಈ ವರ್ಷದ ಪುರುಷರು ವರ್ಣಾಶ್ರಮಾಚಾರ ವಿಶೇಷಯುತರಾಗಿ, ವೇದಲಬ್ಧ ಜ್ಞಾನದಿಂದಲೂ, ವೇದಿವಿಹಿತ ನಿಷ್ಕಾಮ ಕರ್ಮಾನುಷ್ಠಾನ ದಿಂದಲೂ, ಶ್ರದ್ಧೆಯಿಂದ ಸೇವಿಸಿ ಮುಖ್ಯಶ್ರೇಯವೆನಿಸಿದ ಮೋಕ್ಷವನ್ನು ಪೊಂದಿ ಸುಖಿಸುವರು.

ಈ ಲೋಕಬಂಧವು ನಭೋವಲಯದಿ ನೆಲಸಿರುವ ಕಾಲಚಕ್ರ ಗಮನಾನುಗಮನನಾಗಿ ದ್ವಾದಶಮಾಸಗಳನ್ನು ಒಂದೊಂದು ಮಾಸದಿ ಎರಡು ಪಕ್ಷಗಳನ್ನು ಎರಡುಕಾಲು ನಕ್ಷತ್ರಗಳನ್ನೂ ಭುಂಜಿಸಿ ನಡೆಸುತ್ತಿರುವನು. ಎರಡು ತಿಂಗಳಿಗೆ ಒಂದು ಋತುವೂ, ಆರು ತಿಂಗಳಿಗೆ ಒಂದು ಅಯನವೂ ಆಗುವುದು. ಸಂಪೂರ್ಣ ರಾಶಿಚಕ್ರವನ್ನು ಒಂದು ಸಲ ಸೂರ್ಯನು ಸುತ್ತಿದರೆ ಒಂದು ಸಂವತ್ಸರವೆನಿಸುವುದು. ಇದೇ ಪರಿವತ್ಸರ, ಇಡಾವತ್ಸರ, ಅನುವತ್ಸರ, ವತ್ಸರ, ಸಂವತ್ಸರ ವೆಂದು, ಗುರು, ಚಂದ್ರ, ದಿನ, ನಕ್ಷತ್ರ ಸೂರ್ಯಗತಿಗಳಿಂದ ಪ್ರಭಿನ್ನವಾಗಿರುವ ವತ್ಸರ ಪಂಚಕವು.

ಒಂದು ಲಕ್ಷ ಯೋಜನೋನ್ನತವಾದ ಸೂರ್ಯಮಂಡಲದಿಂದ ಲಕ್ಷ ಯೋಜನದ ಮೇಲೆ ಚಂದ್ರಮಂಡಲವಿದೆ. ಸೂರ್ಯನ ಸಂವತ್ಸರ ಸಂಚಾರದೇಶವನ್ನು ತಿಂಗಳಲ್ಲಿಯು, ಮಾಸ ದೇಶವನ್ನು ಎರಡೂಕಾಲು ದಿನಗಳಲ್ಲಿಯೂ, ಪಕ್ಷ ಭುಕ್ತಿಯನ್ನೊಂದೇ ದಿನದಲ್ಲಿಯು ಕ್ರಮಿ ಸುವ ಚಂದ್ರನು ನಕ್ಷತ್ರರಾಜನೆನಿಸಿ ಶೀಘ್ರಗಮನನಾಗಿರುವನು. ಕಲಾಗಳಿಂದ ತುಂಬುತ್ತಾ ಶುಕ್ಲ ಪಕ್ಷವನ್ನು, ತಗ್ಗುತ್ತಾ ಕೃಷ್ಣಪಕ್ಷವನ್ನು ನಡೆಸುವ ಚಂದ್ರನು, ಪಿತೃಲೋಕದ ಅಹೋ ರಾತ್ರಗಳಾದ ಪಕ್ಷಗಳಲ್ಲಿ ಸರ್ವ ಜೀವನಿಕಾಯಚೇಷ್ಟಾಪ್ರದನು, ಜೀವನಪ್ರದನು ಆಗಿರುವನು. ಒಂದು ನಕ್ಷತ್ರದಲ್ಲಿ 30 ಮಹೂರ್ತ ಕಾಲವಿರುವ ಚಂದ್ರನು ಷೋಡಶ ಕಲಾಯುಕ್ತನು ಮನೋನಿಯಾಮಕನಾಗಿರುವನು. ದೇವ ಪಿತೃ ಮನುಷ್ಯ ಭೂತ ಪಶು ಪಕ್ಷಿ ಸರೀಸೃಪ ತೃಣ

ತರುಗಳಿಗೆ ಪ್ರಾಣಶಕ್ತಿಯನ್ನು ಕೊಟ್ಟು, ಆನಂದಪಡಿಸಿ ಸರ್ವೋಪಜೀವ್ಯನಾಗಿ ಪ್ರಸಿದ್ಧಿಯನ್ನು ಪೊಂದಿರುವನು.

ಚಂದ್ರನ ಮೇಲೆ ಲಕ್ಷ ಯೋಜನ ದೂರದಲ್ಲಿ ನಕ್ಷತ್ರ ಚಕ್ರವು ಅಭಿಜಿತದಿಂದ ಕೂಡಿ ಇಪ್ಪತ್ತೆಂಟು ಗುಂಪುಗಳಾಗಿ, ಮೇರುವನ್ನು ಪ್ರದಕ್ಷಿಣವಾಗಿ ಸುತ್ತುತ್ತಿರುವುದು. ಇದು ಕಾಲದ ಅವಯವವಾಗಿದೆ.

ನಕ್ಷತ್ರ ಚಕ್ರದಿಂದ 2 ಲಕ್ಷ ಯೋಜನದ ಮೇಲೆ ಶುಕ್ರನು ಸೂರ್ಯನಂತೆಯೇ ಶೀಘ್ರಮಾಂದ್ಯ ಸಮಗತಿಗಳಿಂದ ತಿರುಗುತ್ತಿರುವನು. ಶುಕ್ರನು ಪ್ರಾಯಃ ಲೋಕಾನುಕೂಲನು; ಅವನಿಂದ ವೃಷ್ಟಿಯನ್ನು ತಿಳಿಯಲನುವಾಗಿದೆ. ಅವನು ವೃಷ್ಟಿಪ್ರತಿಬಂಧ ನಿವರ್ತಕನಾಗಿರುವನು.

ಅಲ್ಲಿಂದ ಮೇಲೆ ಎರಡು ಲಕ್ಷ ಯೋಜನ ದೂರದಲ್ಲಿ ಬುಧನಿರುವನು. ಸೋಮಸುತನು ಪ್ರಾಯಃ ಶುಭಕಾರಿಯು. ಆದರೆ ಸೂರ್ಯನನ್ನು ದಾಟಿ ಪೋಗುವಾಗ ಮೇಘಾಂಡಂಬರ ಅನಾವೃಷ್ಟಿಗಳನ್ನು ಸೂಚಿಸುವನು.

ಬುಧನ ಮೇಲೆ ಎರಡು ಲಕ್ಷ ಯೋಜನದಲ್ಲಿ ಅಂಗಾರಕನು ಮೂರು ಪಕ್ಷಗಳಲ್ಲಿ ಒಂದು ರಾಶಿಯನ್ನು ಸಂಚರಿಸಿ ಮೇರುವನ್ನು ಪ್ರದಕ್ಷಿಣಿಸುವನು. ವಕ್ರನಾದರೆ ಶುಭನು. ಪ್ರಾಯಃ ಅಶುಭಕಾರಣನು.

ಭಗವಾನ್ ಗುರುವು ಅಲ್ಲಿಂದ ಎರಡು ಲಕ್ಷ ಯೋಜನದ ಮೇಲಿರುವನು. ಒಂದು ರಾಶಿಯಲ್ಲಿ ಒಂದು ವರ್ಷವಿರುವನು. ಪ್ರಾಯಃ ಬ್ರಾಹ್ಮಣಾನುಕೂಲನು.

ಅಲ್ಲಿಂದ ಎರಡು ಲಕ್ಷ ಯೋಜನದ ಮೇಲೆ ಭಗವಾನ್ ಶನಿಯು ಇರುವನು. ಒಂದು ರಾಶಿ ದಾಟಲು ಮೂವತ್ತು ಮಾಸಗಳಾಗುವಂತೆ ಮಂದಗತಿಯಿಂದ ಮೇರು ಪ್ರದಕ್ಷಿಣವನ್ನು ಮಾಡುವನು, ಪ್ರಾಯೇಣ ಆಶಾಂತಿಕರನಾಗಿರುವನು.

ಅಲ್ಲಿಂದ ಮೇಲೆ ಹನ್ನೊಂದು ಲಕ್ಷ ಯೋಜನ ದೂರದಲ್ಲಿ ಸಪ್ತರ್ಷಿಗಳಿರುವರು. ಲೋಕ ಶ್ರೇಯಃಕಾರಣರಾಗಿ ವಿಷ್ಣುವಿನ ಪರಮಪದವೆನಿಸುವ ಧ್ರುವನನ್ನು ಪ್ರದಕ್ಷಿಣಿಸುತ್ತಿರುವರು.

ಆಮೇಲೆ ಹದಿಮೂರು ಲಕ್ಷ ಯೋಜನ ದೂರದಲ್ಲಿ ಧ್ರುವಮಂಡಲವು ವಿಷ್ಣುಪದವೆನಿಸಿ ಮೆರೆಯುತ್ತಿರುವುದು. ಅಲ್ಲಿ ಮಹಾಭಾಗವತನಾದ ಧ್ರುವನು ಅಗ್ನೀಂದ್ರ ಪ್ರಜಾಪತಿ ಕಶ್ಯಪ ಧರ್ಮರು ಸಮಸಾಯುಜ್ಯಕಾಲರಾದವರು, ಬಹುಮಾನದಿಂದ ಧ್ರುವಮಂಡಲ ಸ್ಥಿತ ಶಿಂಶುಮಾರ ಹರಿಗೆ ವಂದಿಗೆ ಪ್ರದಕ್ಷಿಣವನ್ನು ಮಾಡುತ್ತಿರಲು, ಕಲ್ಪಜೀವರಿಗೆ ಆಶ್ರಯನೆನಿಸಿ, ಶ್ರೀಹರಿಯನ್ನು ಉಪಾಸಿಸುತ್ತಿರುವನು. ಅವನ ಮಹಿಮೆಯನ್ನು ನಿನಗೆ ಚತುರ್ಥ ಸ್ಕಂಧದಿ ಹೇಳಿರುವೆನು. ಆ ಧ್ರುವಮಂಡಲವು, ಶ್ರೀಹರಿಯ ಆಜ್ಞೆಯಿಂದ ಜ್ಯೋತಿರ್ಗಣ ಗ್ರಹ ನಕ್ಷತ್ರಾದಿಗಳು ಎವೆಯಿಕ್ಕದೆ ಕಾಲಚಕ್ರವನ್ನು ನಡೆಸುವ ಶ್ರೀಶನಿಂದ ಪ್ರೇರಿತನಾಗಿ ತನಗೆ ಸುತ್ತಿ ಬರುತ್ತಿರಲು, ತಾನು ಚಲಿಸದೆ ಧ್ರುವನಾಗಿ ಶಾಶ್ವತಪ್ರಕಾಶನಾಗಿರುವನು. ಮೇಢೀಸ್ತಂಭದ ಸುತ್ತು ತಿರುಗುವ ಪಶುಗಳಂತೆ ಕಾಲಚಕ್ರದಿ ಬದ್ಧರಾದ ಗ್ರಹತಾರಾದಿಗಳೆಲ್ಲ ಕಲ್ಪಾಂತ ಕಾಲದವರಿವಿಗೂ ಧ್ರುವನನ್ನು ಸುತ್ತಿ ತಿರುಗುವುವು. ಕರ್ಮನಿರ್ಮಿತ ಶಕ್ತಿಯಿಂದ ನಿರಾಧಾರವಾದ ಆಕಾಶದಲ್ಲಿ ಹಾರುತ್ತ ನಿಂತಿರುವ ಮೇಘಗಳು ಶ್ಯೇನಾದಿ ವಿಹಗಗಳು ವಾಯುವಶರಾಗಿ ಬೀಳದಿರುವಂತೆಯೇ ಗ್ರಹತಾರಾದಿ ಜ್ಯೋತಿರ್ಮಂಡಲವು ಶ್ರೀಹರೀಚ್ಛೆಯಿಂದ ಅಲ್ಲಲ್ಲಿ ನಿಂತು ಸಂಚರಿಸುತ್ತಿರುವುದು. ಅವು ಬೀಳದಿರಲು, ತತ್ತತ್ಕರ್ಮಪ್ರೇರಕರಾದ ಶ್ರೀಶ ಶ್ರೀದೇವಿಯರೇ ಕಾರಣರಾಗಿರುವರು.

ಕೆಲವರು ಜ್ಞಾನಿಗಳು ಜ್ಯೋತಿರನೀಕವೆಲ್ಲವು ಭಗವಾನ್ ವಾಸುದೇವನು ಶಿಂಶುಮಾರ ರೂಪದಿಂದ ಧರಿಸಿರಲು ನಿಂತಿದೆ ಎಂದು ವರ್ಣಿಸುವರು.

ಶ್ರೀ ಶಿಂಶುಮಾರನು ಕುಂಡಲೀಭೂತದೇಹನಾಗಿ ತನ್ನ ಕೊಂಡಿಗಳಿಂದ ಮೇರು ಶಿಖರವನ್ನು ಬಾಲಾಗ್ರದಿಂದ ಧ್ರುವಮಂಡಲವನ್ನು ಧರಿಸಿ ತನ್ನ ಸುತ್ತು ತಾನು ದಿನಕ್ಕೊಂದು ಸಲ ತಿರುಗುತ್ತಿರುವನು. ಬಾಲದಲ್ಲಿ ಪ್ರಜಾಪತಿ ಧರ್ಮ ಕಶ್ಯಪೇಂದ್ರರು, ಮೂಲದಲ್ಲಿ ಧಾತೃ ವಿಧಾತೃಗಳು, ಕಟಿಯಲ್ಲಿ ಸಪ್ತರ್ಷಿಮಂಡಲವು, ನೆಲಸಿರುವರು.

ದಕ್ಷಿಣಾವರ್ತ ಕುಂಡಲಾಕಾರನಾದ ಶಿಂಶುಮಾರನು ಬಲಪಕ್ಕೆಯಲ್ಲಿ ಉತ್ತರಾಯಣ ನಕ್ಷತ್ರಗಳು ಎಡಪಾರ್ಶ್ವದಲ್ಲಿ ದಕ್ಷಿಣಾಯನ ನಕ್ಷತ್ರಗಳು ಸಮಸಂಖ್ಯಾಕವಾಗಿದ್ದು ಶಿಂಶುಮಾರನು ತಿರುಗಿದಂತೆ ತಾವೂ ತಿರುಗುತ್ತಿದೆ. ಬೆನ್ನಿನಲ್ಲಿ ಅಜವೀಥಿ ಆಕಾಶಗಂಗೆ ನೆಲೆಸಿವೆ. ಪುನರ್ವಸು ಪುಷ್ಯಗಳು ದಕ್ಷಿಣ ವಾಮಶ್ರೋಣಿಗಳಲ್ಲಿಯು, ಆರ್ದ್ರಾಶ್ಲೇಷಗಳು ಬಲ, ಎಡಪಾದಗಳಲ್ಲಿಯು, ಅಭಿಜಿತ್, ಉತ್ತರಾಷಾಢಗಳು ಬಲ ಎಡನಾಸಿಕಗಳಲ್ಲಿಯೂ, ಶ್ರವಣ ಪೂರ್ವಾಷಾಢಗಳು ಬಲ, ಎಡಕಣ್ಣುಗಳಲ್ಲಿಯು, ಧನಿಷ್ಟ ಮೂಲಗಳು ಬಲ ಎಡ ಕಿವಿಗಳಲ್ಲಿಯು, ಮಘಾದಿ ಎಂಟು ನಕ್ಷತ್ರಗಳು ದಕ್ಷಿಣಾಯನ ಸಂಬದ್ಧವಾದವು ಎಡಪಾರ್ಶ್ವ ದಲ್ಲಿ ವಿರಾಜಿಸುತ್ತಿವೆ. ಅಂತೆಯೇ ಶತಭಿಷಾದಿ ಉದಗಯನ ಸಂಬದ್ಧವಾದ ನಕ್ಷತ್ರಗಳು ಬಲಪಾರ್ಶ್ವದಲ್ಲಿ ನೆಲಸಿವೆ. ಶತಭಿಷ ಜ್ಯೇಷ್ಠಗಳೆರಡು ಭುಜಗಳಲ್ಲಿ ನಿಂತಿವೆ. ಮೇಲಿನ ಹನುವಿನಲ್ಲಿ ಅಗಸ್ತ್ಯನು, ಕೆಳ ಹನುವಿನಲ್ಲಿ ಯಮನು, ಮುಖದಿ ಅಂಗಾರಕನು, ಉಪಸ್ಥದಿ ಶನ್ಯೆಶ್ಚರನು, ಬೆನ್ನಿನಡುಬ್ಬದಿ ಬೃಹಸ್ಪತಿಯು, ಎದೆಯಲ್ಲಾದಿತ್ಯನು, ಹೃದಯದಿ ತಾನೇ ನಾರಾಯಣನು, ಮನಸ್ಸಿನಲ್ಲಿ ಚಂದ್ರನು, ನಾಭಿಯಲ್ಲಿ ಶುಕ್ರನು, ಸ್ತನಗಳಲ್ಲಿ ಅಶ್ವಿನೀದೇವದ್ವಯವು, ಪ್ರಾಣಾಪಾನಗಳಲ್ಲಿ ಬುಧನು, ಗಲ್ಲದಲ್ಲಿ ರಾಹುವು, ಸರ್ವಾಂಗದಲ್ಲಿ ಕೇತುಗಳು, ಮಿಕ್ಕ ತಾರಾಗಣವೆಲ್ಲವೂ ರೋಮಗಳಲ್ಲಿ ಆಧಾರ ಮಾಡಿಕೊಂಡು ನೆಲಸಿರುವರು.

ಇಂತಹ ಭಗವಂತನ ಸರ್ವದೇವಮಯ ಸ್ವರೂಪವನ್ನು ಸಂಧ್ಯಾಕಾಲದಲ್ಲಿ ಮೌನದಿಂದ ನಿಂತು ನೋಡುತ್ತಾ ಧ್ಯಾನಿಪ ಜನರೇ ಧನ್ಯರು.

ಜ್ಯೋತಿರ್ಲೋಕಾಧಿಪತೇ! ಕಾಲಾಶ್ರಯ! ದೇವವಲ್ಲಭ! ಮಹಾಪುರುಷ! ಶಿಂಶುಮಾರ! ನಿನಗೆ ನಮಃ. ನಿನ್ನನ್ನೇ ಧ್ಯಾನಿಸುವೆವು.

ಗ್ರಹ ನಕ್ಷತ್ರ ತಾರಾಮಯನಾದ ದೇವನ ಪಾಪಪರಿಹಾರಕ ದಿವ್ಯರೂಪವನ್ನು ತ್ರಿಕಾಲವು ಚಿಂತಿಸುವನು, ನಮಿಸುವನು, ಸ್ತುತಿಸುವನು ಕೂಡ ತ್ರಿಕಾಲದಿ ಮಾಡಿದ ಪಾಪದಿಂದ ಪರಿಮುಕ್ತನಾಗುವನು.

ಶ್ರೀ ಶಿಂಶುಮಾರಹರಯೇ ನಮಃ

## ೨೩. ಅಧೋಲೋಕಗಳು

ಶ್ರೀನಾರಾಯಣ ಪರಮೈಶ್ವರ್ಯವ್ಯಂಜಕವಾದ ಅತಲಾದಿ ಅಧೋಲೋಕವರ್ಣನವನ್ನು ಕೇಳು.

ಸೂರ್ಯನಿಗೆ ಕೆಳಗೆ ನಭೋಮಂಡಲದಲ್ಲಿ ಹತ್ತು ಸಾವಿರ ಯೋಜನದೂರದಲ್ಲಿ ಮಾನಸೋತ್ತರ ಪಶ್ಚಿಮಗಿರಿಯಲ್ಲಿ ಪುಟ್ಟುತ್ತಾ ಪೂರ್ವಗಿರಿಯಲ್ಲಿ ಮುಣುಗುವ ರಾಹುವು ಛಾಯಾಗ್ರಹವೆನಿಸಿ ಮೇರುವಿಗೆ ಅಪ್ರದಕ್ಷಿಣವಾಗಿ ಸುತ್ತುತ್ತಿರುವನು. ಭಗವದನುಕಂಪಾ ವಶದಿಂದ ಅಮರತ್ವವನ್ನು ಪೊಂದಿರುವ ಈ ಸಿಂಹಿಕಾಪುತ್ರವು ಅಯೋಗ್ಯನೇ ಸರಿ! ಅವನ ಜನ್ಮ ಕರ್ಮಾದಿಗಳನ್ನು ಮುಂದೆ ವರ್ಣಿಸುವೆನು. ಸೂರ್ಯಮಂಡಲದ ವಿಸ್ತಾರವು ಹತ್ತುಸಾವಿರ ಯೋಜನ, ಚಂದ್ರಮಂಡಲವು ಇಪ್ಪತ್ತು ಸಾವಿರ ಯೋಜನ. ಅಂತೆಯೇ ರಾಹುಮಂಡಲವು ನಲವತ್ತು ಸಾವಿರ ಯೋಜನ ವಿಸ್ತೃತವೆಂದು ತಿಳಿಯಬೇಕು. ಪರ್ವದಿನದಿ ಪೂರ್ವವೈರವನ್ನು ಸ್ಮರಿಸಿ, ಸೂರ್ಯ– ಚಂದ್ರರನ್ನು ನುಂಗಿದಂತೆ ಅಡ್ಡವಾಗಿ ಬಂದು ನಿಲ್ಲುವನು. ಆಗ ಸರ್ವ ಸುಜನಚಕ್ರಭಯ ನಿವರ್ತಕ ಹರಿಚಕ್ರವು ದುಃಸಹವಾಗಿ ಉರಿಯುತ್ತಾ ಬಂದು ನಿಲ್ಲಲು, ಒಂದೆರಡು ಮುಹೂರ್ತಕಾಲವಿದ್ದು ರಾಹುವು ಭಯಚಕಿತನಾಗಿ ತಿರುಗಿ ಪೋಗುವನು. ಇದೇ ಗ್ರಹಣವೆಂದು ಜನರು ತಿಳಿದು, ಜಪತಪಾದಿಗಳಿಂದ ಸೂರ್ಯಾದಿ ಸುಜನಕ್ಷೇಮವನ್ನು ಸಂಪಾದಿಸಲು ಯತ್ನಿಸುವರು. ಅಲ್ಲಿಂದ ಹತ್ತು ಸಾವಿರ ಯೋಜನದ ಕೆಳಗೆ ಸಿದ್ಧಚಾರಣ ವಿದ್ಯಾಧಿ ಲೋಕಗಳಿವೆ. ಇನ್ನು ಕೆಳಗಿನ ಅಂತರಿಕ್ಷ ಲೋಕದಲ್ಲಿ ಯಕ್ಷರಕ್ಷ ಪಿಶಾಚಿ ಭೂತ್ರ ಪ್ರೇತಗಣವಿಹಾರಾಂಗಣವು, ವಾಯುಸಂಚಾರ ಪರ್ಯಂತಮಾಗಿಯು ಮೇಘಗಳವರಿವಿಗೂ ವ್ಯಾಪಿಸಿದೆ. ಅಲ್ಲಿಂದ ನೂರು ಯೋಜನ ಕೆಳಗಿಳಿಯಲು ಭೂಲೋಕವು ಸಿಗುವುದು. ಇದರಲ್ಲಿ ಹಂಸ ಶ್ಯೇನ ಗೃಧ್ರ ಸುಪರ್ಣಾ ಪಕ್ಷಿಗಣ ಹಾರಾಡುತ್ತಿರುವುವು. ಭೂಮಿಯ ಸಂಸ್ಥಾನ ಲಕ್ಷಣಾದಿಗಳನ್ನು ವರ್ಣಿಸಿದುದಾಗಿದೆ.

ಭೂಮಿಯ ಕೆಳಗೆ ಭೂವಿವರಗಳೇಳು ಇವೆ. ಒಂದೊಂದು ಹತ್ತು ಸಾವಿರ ಯೋಜನ ವಿಸ್ತಾರ ಸಮದೀರ್ಘಗಳಾಗಿ ಅತಲ, ವಿತಲ, ತಲಾತಲ, ಮಹಾತಲ, ರಸಾತಲ, ಪಾತಾಳವೆಂದು ಪೆಸರಾಗಿವೆ.

ಈ ಬಿಲ್ವಸ್ವರ್ಗಗಳು ಸ್ವರ್ಗಾಧಿಕ ಸಂಪತ್ಸಮೃದ್ಧವಾಗಿವೆ. ಕಾಮಭೋಗಾನಂದೈಶ್ವರ್ಯ ಭರಿತನಾಗಿ ಸಮೃದ್ಧಭವನೋದ್ಯಾನವನ, ವಿಹಾರಸ್ಥಾನಕಲಿತವಾಗಿದೆ. ಇಲ್ಲಿ ದೈತ್ಯದಾನವ ಕಾದ್ರವೇಯರು ನಿತ್ಯಪ್ರಮುದಿತರಾಗಿ ಕಲತ್ರಪುತ್ರಮಿತ್ರಾದಿ ಸ್ವಪರಿವಾರದಿಂದ ಕ್ರೀಡಿಸುತ್ತಾ ನಲಿಯುತ್ತಿರುವರು. ಅವರು ಪ್ರಮೋದ ಕಾಮರತ್ಯಾದಿಗಳನ್ನು ಶಿವವರದಿಂದ ಪೊಂದಿ, ಆಮೇಲೆ ಶಿವನನ್ನೂ ಲೆಕ್ಕಿಸದೆ ಮದಿಸಿ ರಮಿಸುತ್ತಿರುವರು. ಮಯನು ನಿರ್ಮಿಸಿದ ಭವನಗಳು, ನಾನಾ ಮಣಿಗಣನಿರ್ಮಿತ ಗೋಪುರಚೈತ್ಯ ಸಭಾಚತ್ವರಾಯತನಗಳು, ಪಾರಾವತಹಂಸ, ಶುಕಸಾರಿಕಾದಿ ಪಕ್ಷಿಮಿಥುನ ಕಲಕಲನಾದ ಸಂಕುಲವಾಗಿ ವಿರಾಜಿಸುತ್ತಿವೆ. ಕುಸುಮಫಲಸ್ತಬರಭಾರದಿಂದ ಬಾಗಿದ ತರುಶಾಖಾಪ್ರವರವನ್ನಾಲಿಂಗಿಸಲು ಬೆಳೆದ ಲತಾ ಕುಂಜರದಲ್ಲಿ ತೂಗಾಡುವ ವಿಹಂಗ ಮಿಥುಲ ಕೋಲಾಹಲವನ್ನು ಕೇಳಿ, ಜಲಾಶಯ ತರಂಗ ಡೋಲಿಕಾಸುಖಾಸಕ್ತಜಲಪಕ್ಷಿಗಳು ಮಂದ್ರಮಧುರ ಕೂಜಿತದಿಂದ ಮೇಳವಿಸಿ ಪಾಡುತ್ತಿರುವುವು. ಒಳಗಿನ ಮೀನಕುಲ ಸಂಚರಣ ದಿಂದ ಕ್ಷುಭಿತವಾದ ನೀರಿನಲ್ಲಿ ಪುಟ್ಟಿ ಸೋಗಿನಿಂದ ತಲೆಯಾಡಿಸುವ ಕಮಲ ಕಲ್ಹಾರ ಕುಮುದ

ನೀಲೋತ್ಪಲಾದಿ ಪುಷ್ಪಗಳ ರಸವನ್ನು ಹೀರಿ ಸುಖಿಸಲು ಝುಂಕಾರವಂ ಮಾಡುತ್ತಾ ಮಧುಕರ ಪ್ರಕರವು ಕಾತರವಾಗಿ ಬರುವುದನ್ನು ರಮಣೀ ಜನರಿಗೆ ತೋರಿಸುತ್ತಾ, ನಲಿವ ರಮಣರ ಸುಖವು ಸ್ವರ್ಗಸುಖವನ್ನೂ ಮೀರಿ ಮೆರೆವುದಾಗಿದೆ.

ಅಲ್ಲಿ ಅಹೋರಾತ್ರಕೃತ ಕಾಲಭಯವಿಲ್ಲ. ಮಹಾನಾಗರಾಜ ಶಿರೋಮಣಿ ಕಾಂತಿಗಳಿಂದ ರಾತ್ರಿಯೇ ಹಗಲಾಗಿಬಿಡುವುದು. ವಸಂತಾದಿಗಳಲ್ಲಿ ಸ್ವೇದ ದೌರ್ಗಂಧ್ಯಗಳು, ಶಿಶಿರಾದಿಗಳಲ್ಲಿ ಶೀತವಾತಾದಿಗಳೂ ಇರುವುದಿಲ್ಲ. ದೇಹದಲ್ಲಿ ಜರಾ ಪಲಿತ ವೈಕಲ್ಯ, ಶ್ರಮ, ಗ್ಲಾನಿಗಳೂ ಕಾಲಕೃತವಾಗಿ ಇಲ್ಲವೇ ಇಲ್ಲ. ಆದರೆ ಭಗವತ್ತೇಜಸ್ಸಮೂಹವಾದ ಸುದರ್ಶನಚಕ್ರದಿಂದೊಂದ ರಿಂದಲೇ ಅವರಿಗೆ ಮೃತ್ಯುಭಯವು. ಅವರ ಸ್ತ್ರೀಯರಿಗೆ ಭಯ ಕೃತಗರ್ಭಪಾತವೂ ತಪ್ಪದೆ ಆಗುವುದು.

ಅತಲದಿ ಮಯಪುತ್ರನಾದ ಬಲಾಸುರನಿರುವರು. ಅವರು ತೊಂಭತ್ತಾರು ಮಾಯಾ ವಿದ್ಯೆಗಳನ್ನು ನಿರ್ಮಿಸಿರುವನು. ಕೆಲವನ್ನು ಕಲಿತ ಕುಜನರು ಅವನ್ನು ಪ್ರದರ್ಶಿಸುತ್ತಾ ಅದ್ಯಾಪಿ ಕಾಣಬರುವರು. ಅವನು ಆಕಳಿಸಲು ಪುಟ್ಟಿದ ಸ್ವೈರಿಣೀ, ಕಾಮಿನೀ, ಪುಂಶ್ಚಲಿ ಎಂಬ ಮೂರು ಗಣಸ್ತ್ರೀಯರು ಅಲ್ಲಿಗೆ ಬಂದ ಪುರುಷರಿಗೆ ಹಾಟಕವೆಂಬ ರಸವನ್ನು ಕುಡಿಸಿ, ತಮ್ಮ ವಿಲಾಸ ಹಾವಭಾವಯುತ ಸಲ್ಲಾಪಾವಲೋಕನಾದಿಗಳಿಂದ ರಮಿಸುವರು. ಈ ರಸ ಕುಡಿದ ಮಾತ್ರ ದಿಂದಲೇ ಪುರುಷನು ಗಜಬಲನಾಗಿ ನಾನೇ ಸಿದ್ಧನು ನಾನು ಈಶ್ವರನೆಂದು ಮದಾಂಧನಾಗಿ ವಿಹರಿಸುವನು.

ವಿತಲದಲ್ಲಿ ಹಾಟಕೇಶ್ವರನೆಂದು ಖ್ಯಾತನಾದ ಭಗವಾನ್ ಮಹಾದೇವನು ಭೂತಗಣಾವೃತ ನಾಗಿ ಪಾರ್ವತೀದೇವಿಯಿಂದ ಕ್ರೀಡಿಸುತ್ತಾ ಪ್ರಜಾಸರ್ಗವನ್ನು ಮಾಡಲು ಬ್ರಹ್ಮಾಜ್ಞೆಯಂತೆ ವಿಹರಿಸುವನು. ಅಲ್ಲಿ ಹಾಟಕವೆಂಬ ನದಿಯು ಹರಿಯುವುದು; ಅದು ಭವಭವಾನೀ ವೀರ್ಯ ಸಂಭೂತವು. ಸೂರ್ಯವಾಯು ತಪ್ತಶುಷ್ಕವಾಗಿ ಭಂಗಾರವೆನಿಸುವ ಹಾಟಕವನ್ನು ಸುರೇಂದ್ರಾ ವರೋಧಕಾಂತೆಯರು, ಸುರಾಧಿಪರು ಭೂಷಣರಾಜಿಯನ್ನಾಗಿ ಧರಿಸಿ ವಿರಾಜಿಪರು.

ಅಲ್ಲಿಂದ ಸುತಲವಿನ್ನೂ ಕೆಳಗಿದೆ. ಅಲ್ಲಿ ಪುಣ್ಯಶ್ಲೋಕನಾದ ಬಲಿಚಕ್ರವರ್ತಿಯು ಇರು ವನು. ಮಹೇಂದ್ರನಿಗೆ ಪ್ರೀತಿಯನ್ನು ಗಳಿಸಲು, ವಾಮನನಾಗಿ ಅದಿತಿಯಿಂದ ಅವತರಿಸಿ ಬಲಿ ಯಿಂದ ತ್ರಿಪಾದ ಧರಣಿಯನ್ನು ಯಾಚಿಸಿ, ತ್ರಿವಿಕ್ರಮನಾಗಿ ತ್ರಿಲೋಕನ್ನಾಕ್ರಮಿಸಿ ಶ್ರೀಹರಿಯು ಭಕ್ತಾನುಕಂಪವಶನಾಗಿ ಇಂದ್ರಾದಿ ಲೋಕಗಳಲ್ಲಿಲ್ಲದ ಸಮೃದ್ಧ ಸಂಪದ್ಭರಿತವಾದ ಸುತಲ ಲೋಕಾಧಿಪತ್ಯದಿ ಸ್ಥಾಪಿಸಿ ಗದಾಪಾಣಿಯಾಗಿ ದ್ವಾರದೇಶದಿ ನಿಂತು ದರ್ಶನವನ್ನು ಕೊಡು ತ್ತಿರಲು, ಬಲಿರಾಜನೂ ನಿರ್ಭಯನಾಗಿ ಬಿಲನಿಲಯೈಶ್ವರ್ಯ ಪತಿಯಾಗಿರುವನು.

ಸರ್ವೋತ್ತಮನು, ಸರ್ವಜೀವ ನಿಕಾಯಕಾಯ ಹೃದಯುಗುಹಾಧಾಮನು, ಪರಮಾತ್ಮ ನಾದ್ದರಿಂದ ಪಾತ್ರತಮನಾದ ಶ್ರೀಹರಿಯು ಬರಲು, ಅರಿತು, ಪರಮಶ್ರದ್ಧೆಯಿಂದ, ರಾಜ್ಯನಾಶ ವರುಣಪಾಶ ಗುರುಜನಾಕ್ರೋಶಗಳನ್ನು ಲೆಕ್ಕಿಸದೆ ಸಮರ್ಪಿಸಿದ ಸರ್ವಸ್ವ ದಾನದ ಪ್ರತಿಫಲವು ಈ ಬಿಲಸ್ವರ್ಗ ಭಾಗ್ಯವಲ್ಲವೇ ಅಲ್ಲ. ಮೋಕ್ಷಪ್ರದನಾದ ಶ್ರೀಶನ ಗುಣಕರ್ಮನಾಮಗಳನ್ನು ಭಕ್ತಿಯಿಂದ ಕ್ಷುತ್ಪತನ ಪ್ರಸ್ಖಲನಾದಿಗಳಲ್ಲಿಯೂ ವಿವಶನಾಗಿ ಉಚ್ಚರಿಸಲು ಕರ್ಮಬಂಧ ವಿಧ್ವಂಸವಾಗುವುದು; ಮುಮುಕ್ಷು ಜನರು ಮುಕ್ತಿಕಾರಣನಾದ ಜ್ಞಾನವನ್ನು ಪಡೆಯುವರು ; ಸರ್ವಚೇತನರು ಸ್ಮರಣೆಯಿಂದ ಪಾಪ ದೂರರಾಗುವರು; ಅಂತಹ ಶ್ರೀಶನಿಗರ್ಪಿತವಾದ

ಸರ್ವಸ್ವವು ಬಿಲಸ್ವರ್ಗ ಸ್ವರ್ಗಾಧಿಪತ್ಯಗಳನ್ನೇ ಅಲ್ಲದೆ ಮೋಕ್ಷವನ್ನೂ ಸಂಪಾದಿಸಿ ಕೊಡಲು ಸಮರ್ಥವಾಗಿದೆ. ಆದರೂ ಶ್ರೀಹರಿಯು ನಿತ್ಯಸಂಸಾರಿಗಳಲ್ಲಿ ಅತ್ಯರ್ಥಪ್ರಸಾದವನ್ನೂ ತೋರುವುದಿಲ್ಲ. ಅವರ ಸೇವೆಗೆ ಪ್ರತಿಫಲವಾಗಿ ನಶ್ವರವಾದ ಭೋಗೈಶ್ವರ್ಯಾದಿಗಳನ್ನು ಕೊಡುವವನಾದರೂ ಮೋಕ್ಷವನ್ನೆಂದಿಗೂ ದಯಪಾಲಿಸನು.

ಭಿಕ್ಷಾಚಾರಣವನ್ನು ಬಿಟ್ಟನ್ಯೋಪಾಯವನ್ನು ಕಾಣದೆ ಬಂದು ಸುರೇಂದ್ರನಿಗಾಗಿ ಬೇಡಲು, ಕೊಟ್ಟ ತ್ರಿಪಾದ ಪರಿಮಿತ ಧರಣೀದಾನವನ್ನು ಕೊಡಲಾರದಾದಾಗ ವರುಣಪಾಶದಿಂದ ಕಟ್ಟಲ್ಪಟ್ಟು, ಸುತಲಕ್ಕೆ ಕಳಿಸಲ್ಪಟ್ಟರೂ ಧರ್ಮವನ್ನು ಬಿಡದೆ, ಭಕ್ತಿಯು ಕೆಡದೆ ಬಲಿರಾಜನಿಂತು ಚಿಂತಿಸಿದನು–

ಆಹಾ! ಏನು ಭಗವಂತನ ಕಾರ್ಯಕರಣ ನಿಪುಣತೆ! ಇಂದ್ರನ ಸಚಿವನು, ಗುರುವು, ಏಕಾಂತಮಂತ್ರಚತುರನಾದ ಬೃಹಸ್ಪತಿಯು ಸಂಧಾನಾರ್ಥವಾಗಿ ನನ್ನಲ್ಲಿ ಬರುವವನಿರಲು – ಮುಂಚಿತವಾಗಿಯೇ ವಟು ವಾಮನನಾಗಿ ಬಂದು, ಯಾಚಿಸಲು ಯೋಗ್ಯನಲ್ಲದ ನನ್ನನ್ನು ಬೇಡಿ, ಮೂರು ಪಾದದ ಭೂಮಿಯ ನೆವದಿಂದ ಮೂರು ಲೋಕವನ್ನಪಹರಿಸಿದ ಭಗವಂತನ ಕಾರುಣ್ಯಕೇನೆಂಬೆ! 'ಈ ಬಲಿಯು ನನ್ನ ಪಾದಸೇವನೋತ್ಸುಕನು; ಇವನಿಗೆ ಮನ್ವಂತರಕಾಲ ಮಾತ್ರವಿದ್ದು ಪೋಗುವ ತ್ರಿಲೋಕಾಧಿಪತ್ಯವು ಮದಕಾರಿಯಾಗಬಾರದು – ಇವನಿಗೆ ರಾಜ್ಯವನ್ನು ಕಸಿದು ಭಕ್ತಿಯಿಂದ ಕೊಡುವೆನು; ಅದರಿಂದ ಶಾಶ್ವತವಾದ ಮೋಕ್ಷ ಸಾಮ್ರಾಜ್ಯವನ್ನೂ ನನ್ನ ಚರಣಾರವಿಂದ ಸೇವೆಯನ್ನೂ ಸಂಪಾದಿಸಲಿ' ಎಂದು ಪರಮಾನು ಗ್ರಹವನ್ನು ತೋರಿರುವನು! ನಮ್ಮ ತಾತನಾದರೂ ಶ್ರೀಹರಿಯ ದಾಸ್ಯವನ್ನೇ ಬೇಡಿದನು– ನಿಷ್ಕಂಟಕವಾಗಿದ್ದ ಪಿತೃರಾಜ್ಯವನ್ನಲ್ಲ. ತಂದೆಯನ್ನು ಕೊಂದ ಗೋವಿಂದನ ಚರಣಾರವಿಂದ ಸೇವೆಯೊಂದೇ ಸಾಕೆಂದನು. ಆಹಾ! ಆ ಮಹಾನುಭಾವನೆಲ್ಲಿ! ನನ್ನಂತಹ ಪಾಮರನೆಲ್ಲಿ! ಪಾಪಕಷಾಯವಿನ್ನೂ ಇಂಗದ ನನ್ನಂತಹವನಿಗೆ ಅಂತಹ ಭಗವದನುಗ್ರಹವು ಹೇಗೆ ಸಿಗುವುದು! ಎಂದು ಚಿಂತಿಸಿ ಭಕ್ತಿಭರನಾಗಿ ನಮಿಸುತ್ತಿರುವನು.

ಆ ಪ್ರಹ್ಲಾದ ಬಲಿರಾಜರ ಚರಿತವನ್ನು ಮುಂದೆ ನಿನಗೆ ಪೇಳುವೆನು. ಅಖಿಲ ಜಗದ್ಗುರುವಾದ ನಾರಾಯಣನೊಬ್ಬನಿಗಾಗಿ ಕಂಬದಿಂದ ಬಂದು ಪೊರೆದ ನಿನ್ನೊಬ್ಬನಿಗಾಗಿ ದ್ವಾರದಿ ಗದಾಪಾಣಿಯಾಗಿ ನಿಂದು ನಿಜಭಕ್ತಜನರಕ್ಷಾಧುರೀಣನಾಗಿ, ಬಂದ ರಾವಣಾದಿ ರಾಕ್ಷಸರ ಗರ್ವವನ್ನು ಮುರಿದನು. ಶ್ರೀ ತ್ರಿವಿಕ್ರಮನ ಪಾದಾಂಗುಷ್ಠಸ್ಪರ್ಶಮಾತ್ರದಿಂದ ದಿಗ್ವಿಜಯಾರ್ಥಿಯಾಗಿ ಬಂದ ರಾವಣನು ಹತ್ತು ಸಾವಿರ ಯೋಜನ ದೂರವೆಸೆಯಲ್ಪಟ್ಟು ಓಡಿ ಹೋಗನಲ್ಲವೇ ಇಂತು ದೇವನು ಇಂದ್ರನಿಗಾಗಿ ರಾಜ್ಯವನ್ನು ಕೊಡುವ ಕಾರಣದಿಂದ ನನ್ನ ಬೇಡಲಿಲ್ಲ– ನನ್ನನ್ನು ತನ್ನವನನ್ನಾಗಿ ಮಾಡಿಕೊಡು ಕಾಪಾಡಲು ಬೇಡಿದ ನಮ್ಮಪ್ಪನ ದಾಸದಾಸ್ಯವು ಎನಗೆ ಸದಾ ಇರಲಿ!' ಎಂದ ಬಲಿಯೆ ಧನ್ಯನು.

ತಲಾತಲದಿ ಮಯನೆಂಬ ದಾನವೇಂದ್ರನಿರವನು. ತ್ರಿಪುರಾರಿಯಿಂದ ಸ್ವನಿರ್ಮಿತ ಪುರತ್ರಯವು ದಗ್ಧವಾಗಲು ಮಹೇಶನ ಪ್ರಸಾದಿಂದ ತಲಾತಲದೊಡೆಯನಾಗಿ, ಮಯಾವಿಗಳಿಗೆ ಪರಮಾಚಾರ್ಯನೆನಿಸಿ, ಸುದರ್ಶನ ಭಯದಿಂದ ರಕ್ಷಿತನಾಗಿ, ಸ್ವಭೃತ್ಯ ಸೇವಿತನಾಗಿಬುವನು.

ಮಹಾತಲದಿ ಕ್ರೋಧವಶರೆಂಬ ಕಾದ್ರವೇಯರಿರುವರು. ಅನೇಕ ಶಿರಸ್ಕರಾದ ಆ

ಸರ್ಪರಾಜನಲ್ಲಿ ಕುಹಕ, ತಕ್ಷಕ, ಕಾಲಿಯ, ಸುಷೇಣ ಮೊದಲಾದವರು ಬಹು ಸ್ಥೂಲ ದೇಹರಾಗಿ ನಿಜಕಳತ್ರಪುತ್ರಮಿತ್ರಾದಿ ಪರಿವಾರಯುತರಾಗಿ ಪ್ರಮೃತ್ತರಾಗಿ ವಿಹರಿಸುವರು. ಅವರಿಗೆ ಇರುವ ಭಯವೆಂದರೆ ಭಗವಾನ್ ಪುರುಷೋತ್ತಮನ ವಾಹನವಾದ ಗರುಡನಿಂದ ಮಾತ್ರವೇ!

ಇನ್ನೂ ಕೆಳಗಿರುವ ರಸಾತಲದಲ್ಲಿ ನಿವಾತಕವಚರೆಂಬ ದೈತ್ಯದಾನವರು ಕಾಲಕನ್ಯಾಪುತ್ರರಾದ ಕಾಲಕೇಯರಿಂದಲು, ಹಿರಣ್ಯಪುರವಾಸಿಗಳಾದ ಇತರ ದೈತ್ಯರಿಂದಲೂ ಕೂಡಿ ಸ್ವಭಾವದಿಂದಲೇ ಬಲ ಸಾಹಸ ಗರ್ವಿತರಾಗಿ ಸರ್ವಲೋಕೇಶನಾದ ಶ್ರೀಶನಿಂದಲ್ಲದೆ ಬೇರೆ ಭಯವಿಲ್ಲದೆ ನಿವಸಿಸುವರು. ಮಂತ್ರವರ್ಣಗಳಿಂದ ಇಂದ್ರನ ದೂತಿಯಾದ ಸರಮೆ ಎಂಬ ಶುನಿಯು ಪಾಡುವ ಇಂದ್ರಸ್ತುತಿಯನ್ನು ಕೇಳಿ ಭೀತರಾಗಿ ಸರ್ಪಾಕಾರವನ್ನು ತಾಳಿರುವ ಈ ಚೋರರಾಕ್ಷಸರು ನಡುಗುತ್ತಿರುವರು.

ಇನ್ನು ಕೆಳಗೆ ಪಾತಾಳವಿದೆ. ಅಲ್ಲಿ ವಾಸುಕಿ, ಶಂಖ, ಕುಲಿಕ, ಮಹಾಶಂಖ, ಶ್ವೇತ, ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಲ, ಅಶ್ವತರ, ದೇವದತ್ತಾದಿ ನಾಗರಾಜರು ಮಣಿಭೂಷಿತಾನೇಕಫಣರಾಗಿ ಪಾತಾಳ ವಿವರವನ್ನು ಬೆಳಗುತ್ತಲಿರುವರು.

ಈ ಪಾತಾಳದ ಮೂಲದಲ್ಲಿ ಮೂವತ್ತು ಯೋಜನ ದೂರದಲ್ಲಿ ಭಗವಂತನ ತಮೋಗುಣ ಪ್ರವರ್ತಕರೂಪನಾದ ಅನಂತನಿರುವನು. ಜೀವಶರೀರಗಳಿಗೆ ಅತ್ಯಂತ ಸಾಮೀಪ್ಯವನ್ನು ಅಹಂದೇಹಃ ನಾನೇ ಈ ದೇಹವೆಂಬ ಭ್ರಾಂತಿಯನ್ನು ಪುಟ್ಟಿಸುವ ಈ ರೂಪವನ್ನು ಸಂಕರ್ಷಣ ನೆಂದೂ ಕರೆವರು.

ಆ ಸಂಕರ್ಷಣನು ನಿಜ ಸಹಸ್ರ ಫಣಾಮಧ್ಯಗತ ಫಣಾಗ್ರಭಾಗದಿ ಭೂಮಂಡಲವನ್ನು ಒಂದು ಸಾಸುವೆಯ ಕಾಳಿನಂತೆ ಅನಾಯಾಸವಾಗಿ ಧರಿಸಿರುವನು. ಪ್ರಳಯವು ಬರಲು ಈ ಸಂಕರ್ಷಣನ ರುಚಿರಭ್ರೂಮಧ್ಯದಿಂದ ಸಾಂಕರ್ಷಣವೆಂಬ ಏಕಾದಶ ರುದ್ರಗಣವು ತ್ರಿಶೂಲವನ್ನು ಪಿಡಿದು, ಲೋಕಭಯಂಕರವಾಗಿ ಪುಟ್ಟಿ ಬರುವುದು. ಸಾತ್ವತರಿಂದ ಕೂಡಿದ ನಾಗಪತಿಗಳು ಶ್ರೀಸಂಕರ್ಷ ಣನ ಚರಣಕಮಲಾರುಣನಖಮಂಡಲಗಳಿಗೆ ನಮಿಸುವಾಗ, ನಿಜಕುಂಡಲಮಂಡಿತ ಗಂಡಮನೋ ಹರವದನಗಳಿಂದ ನೋಡಿ ನೀರಾಜಿಸುತ್ತಾ ವಿರಾಜಿಸುವರು. ನಾಗಕನ್ಯೆಯರು ಅವನ ಆಶೀ ರ್ವಾದಗಳನ್ನು ಬೇಡಿ, ಚಾರುಶರೀರ ವಿಲಾಸವನ್ನು ತೋರಿ, ಅವರ ರಜತಧವಳ ಭುಜಗಳಿಗೆ ಅಗರುಚಂದನ ಕುಂಕುಮಗಂಧವನ್ನು ಪೂಸುವಾಗ, ಮನಸಿಜನ ಕುಸುಮಬಾಣ ಪಂಚಕದಿಂದೇಕ ದಾವಂಚಿತ ಚಿತ್ತೆಯರಾಗಿ, ಪ್ರಮೃತ್ತ ಘೂರ್ಣಿತಾವಲೋಕನಪ್ರಾಪ್ತಮಹೋ ತ್ಸವೆಯರಾಗಿ, ಲಜ್ಜೆಯಿಂದ ತಲೆಬಾಗಿ ನಿಂತು ನೋಡಿ ಸಂತತಿಸುವರು. ಅಂತು ಭಗವಂತನಾದ ಅನಂತನು ಅನಂತಗುಣಗಣ ರತ್ನಾಕರನಾಗಿಯೂ ಲೋಕಕ್ಷೇಮವನ್ನು ಬಯಸಿ, ರೋಷಮರ್ಷ ವೇಗವನ್ನು ನುಂಗಿಕೊಂಡು ಶಾಂತನಾಗಿರುವನು. ಸಿದ್ಧ ಗಂಧರ್ವ ಸುರಾಸುರೋರಗ ವಿದ್ಯಾಧರ ಮಹರ್ಷಿ ಗಣರು ಸ್ತುತಿಸುತ್ತಿರಲು, ಮದ ಮುದಿತ ಲೋಚನ ನಿರ್ಗತ ಕೃಪಾವಲೋಕನ ದಿಂದಲು, ಮಧುರವಚನದಿಂದಲು ಅವರನ್ನು ಸಂತೈಸುವನು. ನವತುಲಸೀಪಲ್ಲವ ಸಮ್ಮಿಲಿತ ವೈಜಯಂತೀ ಮಾಲೆಯನ್ನು ಧರಿಸಿ, ಅದರ ಮಕರಂದವನ್ನು ಪಾನಮಾಡಲು ಗುಂಪಾಗಿ ಬಂದ ದುಂಬಿಗಳ ಮಧುರ ರುತವನ್ನಾಲಿಸಿ ನಗುತ್ತಾ, ನೀಲವಸನನು ಏಕಕುಂಡಲನು ಆಗಿ ಭುಜದಿ ಧರಿಸಿದ ಹಲಾಯುಧದಿಂದ ಐರಾವತದಂತೆ ಮೆರೆಯುತ್ತಾ ಕಾಂಚನ ಕಾಂಚೀಕಲಾಪವನ್ನಿಟ್ಟು ಶೋಭಿಸುತ್ತಿರುವನು. ಇಂತು ತನ್ನನ್ನು ಧ್ಯಾನಿಪ ಮುಮುಕ್ಷು ಜನರ ಅನಾದ್ಯವಿದ್ಯಾಕಾಮಕರ್ಮ

ರೂಪವಾದ ಹೃದಯದ ಪ್ರಕೃತಿಗುಣಮಯ ಗ್ರಂಥಿಯನ್ನು ನುಚ್ಚುನೂರಾಗಿ ಒಡೆದು ಅವರ ಮನದಲ್ಲಿ ನಿಂತು ಪವಿತ್ರಗೊಳಿಸುವನು.

ಆ ಅನಂತನ ಮಹಿಮೆಯನ್ನು ಬ್ರಹ್ಮಸಭೆಯಲ್ಲಿ ಪೂಜ್ಯನಾದ ನಾರದನು ತುಂಬುರು ನಿಂದ ಕೂಡಿ ಹಾಡುವನು.

ಪ್ರಕೃತಿಯ ಸತ್ವರಜಸ್ತಮೋಗುಣಗಳು ಯಾವ ಶ್ರೀಶನ ಕಟಾಕ್ಷಬಲದಿಂದ ಸ್ಥಿತ್ಯುದ್ಭವ ಪ್ರಳಯಗಳನ್ನು ಮಾಡಲು ಶಕ್ತವಾಗಿವೆಯೋ ಯಾವ ಶ್ರೀಹರಿಯು ತಾನು ಅವಿಕಾರಿಯು, ಶಶ್ವದೇಕಪ್ರಕಾರನಾಗಿದ್ದೂ ಜಗತ್ತಿನಲ್ಲಿರುವ ನಾನಾ ವಿಧ ಜಡಜೀವವಸ್ತುಗಳನ್ನು ಧರಿಸಿರು ವನೋ ಅಂತಹ ಅನಂತಮಹಿಮೆಯನ್ನು ಸಾಕಲ್ಯೇನ ತಿಳಿಯಲು ಯಾರು ಸಮರ್ಥರು? ಯಾವನು ಮತ್ಸ್ಯಾದಿ ರೂಪಗಳಿಂದ ಪರಿಮಿತನಾಗಿ ತೋರಿದರೂ, ಕಾರ್ಯಕಾರಣಾತ್ಮಕ ಜಗದಾಧಾರ ನೆನಿಸಿರುವನೋ, ಯಾವನ ವಿಕ್ರಮಲೀಲೆಯನ್ನು ನೋಡಿ ಮೃಗರಾಜನು ಅನುಕರಿಸಿ ದನೋ, ಆರ್ತನಾಗಿ ಅಥವಾ ಪತನಾದಿಗಳಲ್ಲಿ ಅಥವಾ ಆಶೆಯಿಂದಲಾಗಿ ಯಾವನ ಪವಿತ್ರನಾಮ ವನ್ನುಚ್ಚರಿಸಿದ ಮಾತ್ರದಿಂದ ಸಮಸ್ತ ಪಾಪವು ಅಸ್ತಮಿತವಾಗುವುದೋ ಅಂತಹ ಶೇಷಾಂತರ್ಗತ ಸಂಕರ್ಷಣನೆಂಬ ದೊರೆಯನ್ನು ಬಿಟ್ಟು ನಮಗೆ ಶರಣ್ಯರಿರುವರೇ? ಸಾವಿರ ತಲೆಗಳಲ್ಲಿ ಮಧ್ಯದ ತಲೆಯ ಮೇಲೆ ಅಖಂಡ ಭೂಮಂಡಲವನ್ನು, ಗಿರಿ ಸಪ್ತಸಮುದ್ರ ಸಮೇತರಾಗಿ ಸಾಸಿವೆಯ ಕಾಳಿನಂತೆ ಅನಾಯಾಸವಾಗಿ, ಧರಿಸಿರುವ ಸಂಕರ್ಷಣನ ಮಹಿಮೆಯನ್ನು ವರ್ಣಿಸಲು ಸಹಸ್ರ ಜಿಹ್ವನಾದ ಶೇಷನಿಗೂ ಸಾಧ್ಯವಲ್ಲವೆಂದ ಮೇಲೆ ಇತರರ ಪಾಡೇನು?

ಇಂತು ಅನಂತ ಪ್ರಭಾವನು ದುರಂತವೀರ್ಯನ್ನು ನಿತ್ಯಾನುಭೂತ ಜ್ಞಾನಾನಂದ ಸ್ವರೂಪ ನಾದ ಶ್ರೀ ಸಂಕರ್ಷಣನು ಶೇಷನದಲ್ಲಿದ್ದು ರಸಾತಲದಿ ಭೂಲೋಕಾಧರಕನೆನಿಸಿರುವನು. ಶೇಷನಾದರೂ ಶ್ರೀಹರಿ ಸನ್ನಿಧಾನದಿಂದೀ ಭೂಮಿಯನ್ನು ಪೊತ್ತು ಸಕಲ ಸುಜನ ಲೋಕವಂದ್ಯ ನಾಗಿರುವನು.

ರಾಜನ್! ಸ್ವರ್ಗ ಭೂ ನರಕಗಳೆಂಬ ವಿವಿಧ ಲೋಕವನ್ನು ಕರ್ಮಾನುಸಾರವಾಗಿ ಜನರು ಪೊಂದುತ್ತಿರುವರು. ಪ್ರವೃತ್ತಿಧರ್ಮವನ್ನು ಮಾಡಿ ಫಲವನ್ನು ಬೇಡಿ ಸ್ವರ್ಗಸುಖವನ್ನುಂಡು, ಹಿಂತಿರುಗಿ ನಾನಾ ವಿಧ ಕರ್ಮಫಲ ಶೇಷವನ್ನು ಭುಂಜಿಸಲು, ನಾನಾ ಯೋನಿಗಳಲ್ಲಿ ಪುಟ್ಟುವ ಜೀವರ ಲಕ್ಷಣವನ್ನು, ಅವರಿಗಾಗುವ ಲೋಕಗಳನ್ನೂ ನಿನಗೆ ನಾನು ವಿವರಿಸುವೆನು. ಇನ್ನೇನು ಕೇಳಬೇಕೆಂದಿರುವೆ – ಕೇಳು, ಎಂದು ಶುಕನು ಪೇಳಿದನು.

## ೨೬. ನರಕವರ್ಣನೆ

ರಾಜನು ಪ್ರಶ್ನಿಸಿದನು–

ಮಹರ್ಷೇ! ಸ್ವರ್ಗಾದಿ ಪಾತಾಳಾಂತ ಲೋಕಗಳಲ್ಲಿರುವ ಜನರಲ್ಲಿ ಕಾಣಬರುವ ವೈಚಿತ್ರ್ಯಕ್ಕೆ ಕಾರಣವೇನು!

ಆಗ ಶ್ರೀಶುಕನು ಹೇಳಿದನು–

ರಾಜನ್! ಕರ್ಮವೈಚಿತ್ರ್ಯದಿಂದ, ಜೀವನು ತಾನು ಇಂತು ಮಾಡಿದ ಕರ್ಮದ ಫಲವನ್ನು ಬೇಡಿ, ಇಲ್ಲಿ ಹುಟ್ಟಿ ಅನುಭವಿಸುವೆನೆಂಬ ಶ್ರದ್ಧಾವೈಚಿತ್ರ್ಯದಿಂದ, ಸಾತ್ವಿಕ ರಾಜಸ ತಾಮಸ ಜೀವಸ್ವಭಾವ ವೈಚಿತ್ರ್ಯದಿಂದಲು, ಲೋಕಪ್ರಾಪ್ತಿಯಲ್ಲಿ ವೈಚಿತ್ರ್ಯವಿದೆ. ಅನಾದ್ಯ ವಿದ್ಯೆಯಿಂದ ಕಣ್ಣು ಕಾಣದೆ ಮಾಡಿದ ಕಾಮ್ಯಕರ್ಮಗಳ ಫಲವನ್ನು ಉಣ್ಣಲೇಬೇಕಲ್ಲವೆ? ಇರಲಿ. ಈಗ ನಿನಗೆ ನಿಷಿದ್ಧ ಕರ್ಮವನ್ನು ಮಾಡಿದ ಜೀವನು ಹೊಂದುವ ವಿವಿಧ ಫಲರೂಪ ನರಕಗಳನ್ನು ವರ್ಣಿಸುವೆನು ಕೇಳು. ನರಕಗಳೆಂದರೆ ದುಃಖ ಫಲಾನುಭವಸ್ಥಾನಗಳು. ಅವು ಸಾವಿರಗಟ್ಟಲೆ ಯಾಗಿವೆ. ಮುಖ್ಯವಾದುದನ್ನು ನಿನಗೆ ತಿಳಿಸಿ ಕೊಡುವೆನು.

ರಾಜನ್ 'ಸ್ವಾಮಿನ್! ನರಕಗಳೆಂದರೆ ಸ್ಥಾನವಿಶೇಷಗಳೆಂದು ಹೇಳಿದೆ. ಅವೆಲ್ಲಿ ಇವೆ? ಬ್ರಹ್ಮಾಂಡದಲ್ಲಿ ತ್ರಿಲೋಕಗಳ ಒಳಗೋ ಹೊರಗೋ? ಅಥವಾ ಅಂತರಾಳದಲ್ಲಿಯೋ? ವಿವಿಧ ನರಕವನ್ನು ಜೀವನು ಹೊಂದಲು ಮಾಡಿದ್ದ ಪಾಪಗಳಾವುವು? ಎಂದು ಕೇಳಲು ಶ್ರೀಶುಕನು ಹೇಳಿದನು.

ಮೂರು ಲೋಕಗಳ ಮಧ್ಯದಲ್ಲಿ ಅಂತರಾಳದಲ್ಲಿ ನರಕಗಳು ದಕ್ಷಿಣ ದಿಶೆಯಲ್ಲಿ, ಕೆಳಗೆ ಪಾತಾಳವನ್ನಂಟಿಕೊಂಡಿವೆ. ಮೇರು ದಕ್ಷಿಣದಲ್ಲಿರುವ ಪಿತೃ ಪತಿ ಪುರದಲ್ಲಿ ಅಗ್ನಿಷ್ವಾತ್ತರು ಮೊದಲಾದ ಪಿತೃಗಣಗಳು ತಮ್ಮ ತಮ್ಮ ಗೋತ್ರಜರ ಕ್ಷೇಮ ವಂಶವೃದ್ಧಿ ಸಂಪದ್ರೂಪ ಶ್ರೇಯವನ್ನು ಬಯಸಿ ಆಶೀರ್ವದಿಸುತ್ತಿರುವರು. ಅಲ್ಲಿ ಪಿತೃರಾಜನಾದ ಪೂಜ್ಯ ಯಮರಾಜನು ತನ್ನ ಊರಿಗೆ, ಸತ್ತು ಬಂದ ಜೀವರ ಪಾಪವನ್ನನುಸರಿಸಿ ತಕ್ಕ ಶಿಕ್ಷೆಯನ್ನು ವಿಧಿಸುತ್ತಾ ಶ್ರೀಹರಿಶಾಸನಧಾರಕನಾಗಿ ದಂಡಪಾಣಿ, ಸಮವರ್ತಿ ಎನಿಸಿರುವನು.

ಕೆಲವರು ಮುಖ್ಯವೆಂದು ಹೇಳುವ ನರಕಗಳಿಪ್ಪತ್ತೊಂದು. ಅವುಗಳಾವುವೆಂದರೆ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕರ ಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತಭೂಮಿ ವಜ್ರಕಂಟಕಶಾಲ್ಮಲಿ, ವೈತರಿಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾ ದನ, ಅವೀಚಿ, ಅಯಃಪಾನವೆಂದು ಹೆಸರಾಗಿರುವುವು.

ಕೆಲವರಿನ್ನೂ ಏಳು ನರಕಗಳನ್ನ ಸೇರಿಸಿ ಇಪ್ಪತ್ತೆಂಟು ಎಂಬುವರು. ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಅವಟನಿರೋಧ, ಪರ್ಯಾವರ್ತನ, ಸೂಚೀ ಮುಖವೆಂಬವು ಆ ಏಳು ನರಕಗಳು.

ಪರವಿತ್ತಾಪತ್ಯ ಕಳತ್ರಗಳನ್ನುಪಹರಿಸಿದವನು ಕಾಲಪಾಶಬದ್ಧನಾಗಿ ತಾಮಿಸ್ರದಲ್ಲಿ ಬೀಳು ವನು. ಅಲ್ಲಿ ಅವನಿಗೆ ಆಹಾರವನ್ನು ಕೊಡದೆ ನೀರನ್ನು ಹೆಚ್ಚಾಗಿ ಕುಡಿಸುವರು; ಬಡಿದು ಬೆದರಿಸಿ ದುಃಖಪಡಿಸುತ್ತಲೇ ಇರುವರು.

ಅಂಧತಮಿಸ್ರದಲ್ಲಿ ಅನ್ನ ಧನದಾರಾದಿಗಳನ್ನು ಅಪಹರಿಸಿದ ವಂಚಕನನ್ನು ಕೆಡಹುವರು. ವೇದನಾಭರದಿಂದ ಕಣ್ಣು ಕತ್ತಲೆ ಕವಿಯುವುದು, ಬುದ್ಧಿಭ್ರಂಶಿತವಾಗಿ ಬುಡವಂ ಕಡಿದ ಗಿಡದಂತೆ ಬಿದ್ದಿರುವನು.

ಅಹಂ ಮಮಕಾರಗಳಿಂದ ಭೂತದ್ರೋಹವನ್ನು ಮಾಡಿ ಕೇವಲ ಕುಟುಂಬ ಪೋಷಣ ತತ್ಪರನಾಗಿದ್ದವನನ್ನು ರೌರವದಲ್ಲಿ ಕೆಡಹುವರು. ಅಲ್ಲಿ ಅವನಿಂದ ಹಿಂಹಿತರಾಗಿದ್ದ ಜೀವರು ರುರುಗಳೆಂಬ ಸರ್ಪಕ್ರೂರಜಂತುರೂಪದಿಂದ ಬಂದು ಪೀಡಿಸುವರು.

ಅಂತೆಯೇ ಮಹಾರೌರವದಲ್ಲಿಯು ದೇಹಂಭರನು ತನ್ನದೆಂದು ತಿಳಿದಿದ್ದ ದೇಹವನ್ನಿಲ್ಲೇ ಬಿಟ್ಟು ಹೋಗಿ, ಮಾಂಸಭಕ್ಷಕ ರುರುಜಂತುಗಳಿಗೆ ತುತ್ತಾಗಿ ಸಾಯದೆ, ದುಃಖವನ್ನು ಮಾತ್ರ ಪೊಂದುತ್ತಿರುವನು. ಕ್ರೂರನಾಗಿ ಪಶುಪಕ್ಷ್ಯಾದಿಗಳನ್ನು ದಯೆಯಿಲ್ಲದೆ ಬಂಧಿಸಿ ಪೀಡಿಸಿದವನನ್ನು ಯಮಭಟರು ಕುಂಭೀಪಾಕದಲ್ಲಿಟ್ಟು, ತಪ್ತತೈಲದಲ್ಲಿ ಹಾಕುವರು.

ಪಿತೃಭ್ರಾತೃ ಬ್ರಾಹ್ಮಣದ್ರೋಹಿಯು ಕಾಲಸೂತ್ರದಲ್ಲಿ ಬೀಳುವನು. ಅದು ಅಯುತ ಯೋಜನ ವಿಸ್ತರವಾದ ತಾಮ್ರಮಯ ಭೂಮಿಯಾಗಿ, ಚೆನ್ನಾಗಿ ಕೆಂಡದಂತೆ ಕಾದಿರುವುದು. ಅದರ ಮೇಲೆ ಓಡಿ, ಬಿದ್ದು, ಮಲಗಿ, ಪಾಪಜೀವನು ಸಹಿಸಲಾರದೆ ಯಮಭಟರನ್ನು ಕರುಣಿಸಿರೆಂದು ಬೇಡವನು. ಈ ಕಾಲಸೂತ್ರವು ಪಶುರೋಮ ಸಮಸಂಖ್ಯ ವರ್ಷ ಕಾಲ ಪರಿಮಿತನಾಗಿ ದುಃಖಪಡಿಸುತ್ತಿರುವುದು.

ಬ್ರಾಹ್ಮಣನಾಗಿ ಪುಟ್ಟಿಯು ವೇದಮಾರ್ಗವನ್ನು ಬಿಟ್ಟು ಪಾಖಂಡ ಮತವನ್ನವಲಂಬಿಸಿದವನನ್ನು ಅಸಿಪತ್ರವನದಲ್ಲಿ ಖಡ್ಗತೀಕ್ಷ್ಣ ಪತ್ರಗಳಲ್ಲಿ ಎಳೆದಾಡಿಸಿ - ದೂಡಿ - ಪೀಡಿಸಿ ಕಶಾ ಪ್ರಹಾರಗಳನ್ನು ನೀಡುವರು.

ರಾಜನಾಗಿದ್ದು ಅಥವಾ ರಾಜಾಧಿಕಾರಿಯಾಗಿದ್ದು ಅದಂಡ್ಯರನ್ನು ದಂಡಿಸಿದ ಪಾಪಿಯನ್ನು ಬ್ರಾಹ್ಮಣನಿಗೆ ಶರೀರ ದಂಡವನ್ನು ವಿಧಿಸಿದ ದುಷ್ಟನೂ, ಸೂಕರ ಮುಖದಲ್ಲಿ ಪತಿತರಾಗಿ ಮಹಾಬಲ ಮೃಗ ಭಕ್ಷಿತಗಾತ್ರರಾಗಿ ಚಿತ್ರಹಿಂಸೆಯನ್ನು ಪೊಂದುವರು. ಇಲ್ಲಿ ಮಾಡಿದ ದೋಷದ ಫಲವು ಉಣ್ಣದಿರಲು ಪೋಗುವುದೇ?

ಭೂತಗಳಿಗೆ ಸರ್ವೇಶನು ಕೊಟ್ಟ ವೃತ್ತಿಯನ್ನು ಜೀವನ ರೀತಿಯನ್ನು ಲಕ್ಷಿಸದೆ ಮತ್ಕುಣಾದಿ ಗಳಂತೆ ಪರವೇದನೆಯನ್ನು ತಿಳಿಯದವನಾಗಿರದಿದ್ದರೂ, ಅವರಿಗೆ ವೃತ್ತಿಯನ್ನು ಕಲ್ಪಿಸಿಕೊಡಲು ಕೈಲಾಗದವನಾಗಿದ್ದರೂ, ಪೀಡಿಸಿ ಕೊಲ್ಲುವವನು ಅಂಧಕೂಪದಲ್ಲಿ ಬಿದ್ದು, ತಾ ಕೊಂದ ಜಂತು ಜಾಲ ಪೀಡಿತನಾಗಿ, ನಿದ್ರಾ ವಿಶ್ರಾಂತಿ ಸುಖದೂರನಾಗಿ, ಕುಷ್ಠಗ್ರಸ್ಥ ಶರೀರದಲ್ಲಿರುವವನಂತೆ ದುಃಖಪಡಿಸುತ್ತಿರುವನು.

ಪುರುಷಬಲಿಯನ್ನು ಕೊಡುವವನು ಮತ್ತು ಅಶಾಸ್ತ್ರೀಯ ಪಶುಮಾಂಶ ಭಕ್ಷಕನು ಸತ್ತು ಅಲ್ಲಿ ವಿಶಸನ ನರಕದಲ್ಲಿ ಬಿದ್ದು, ತತ್ತಜ್ಜಂತುಹಿಂಸಿತನಾಗಿ ದುಃಖಪಡುತ್ತಿರಲು ಆ ಜಂತು ಗಳವರ ರಕ್ತವನ್ನು ಕುಡಿದು, ಕುಣಿದು, ತಣಿಯುವುವು.

ಅರಣ್ಯಮೃಗಗಳನ್ನು ಬಲೆ ಪಂಜರಾದಿಗಳಲ್ಲಿ ಪಿಡಿದಾಡಿಸುತ್ತಾ ನಲಿಯುವ ಪಾಪಿಯು, ಶೂಲಸೂತ್ರದಿ ಬಿದ್ದು, ಹಸಿವೆ ನೀರಡಿಕೆಗಳಿಂದ ವ್ಯಥಿತನಾಗಿರುವಾಗ, ಕಂಕಗೃಧಾದಿಗಳವನನ್ನು ಕಿತ್ತಿ ತಿನ್ನುವುವು.

ಇತರ ಭಯಾಪಾದಕರಾಗಿರುವ ಪಾಪಿಗಳು ದಂದಶೂಕದಲ್ಲಿ ಬಿದ್ದು ಅನೇಕ ಫಣ ಫಣಿಗಳಿಂದ ಕಚ್ಚಲ್ಪಡುವರು.

ಉಸಿರಾಡದ ಬಿಲದಲ್ಲಿ, ಧಾನ್ಯ ಕಣಜದಲ್ಲಿ, ದಾರುಬಂಧನದಲ್ಲಿ ಮತ್ತು ಕಾರಾಗಾರದಲ್ಲಿ ಯಾದರೂ ಜೀವರನ್ನು ನಿರೋಧಿಸುವ ಕ್ರೂರನು, ಅವಟನಿರೋಧ ನರಕದಲ್ಲಿ ತತ್ಸದೃಶಾನಂತ ವೇದನೆಯನ್ನನುಭವಿಸುವನು.

ಬಂದ ಅತಿಥಿಗಳನ್ನೂ ಅಭ್ಯಾಗತರನ್ನು ಕೆಂಗಣ್ಣಿನಿಂದ ಸುಡುವಂತೆ ನೋಡುವ ಕಡು ಪಾಪಿಯು, ಪರ್ಯಾವರ್ತನ ನರಕದಿ ಬಿದ್ದಾಗ, ವಕ್ರತುಂಡಗಳಾದ ಕಾಕ ಗೃಧ್ರ ಬಲಾಕಾದಿ ಪಕ್ಷಿಗಳವನ ಕಣ್ಣುಗಳನ್ನು ಕುಕ್ಕಿ ತೆಗೆಯುವುವು. ಅರ್ಥಾಭಿಲಾಷಾಂಧನಾಗಿ ಸರ್ವರನ್ನು ಶಂಕಿಸುವ ಕಲಂಕಿಯು ದ್ರವ್ಯವನ್ನಿಲ್ಲೇ ಬಿಟ್ಟು ಸೂಚೀಮುಖದಲ್ಲಿ ಬೀಳುವನು. ಅಲ್ಲಿ ಅವನ ಮೈಯಲ್ಲಿ, ವಾಯಕರು ನೇದಂತೆ, ಸೂತ್ರಗಳನ್ನು ಪೋಣಿಸಿ ಪೀಡಿಸುವರು.

ಮಿಷ್ಟಾನ್ನವನ್ನು ತಾನುಂಡು ಪರಿವಾರ ವಿಪ್ರರಿಗೆ ಕದನ್ನವಂ ಕೊಡುವ ದುಷ್ಟನು ಕೃಮಿ ಭೋಜನ ನರಕದಲ್ಲಿ ಪತಿತನಾಗಿ ಕೃಮಿಗಳನ್ನು ತಿಂದು ಕೃಮಿಗಳಿಂದ ತಿನ್ನಲ್ಪಡುತ್ತಿರುವನು. ನಿವೇದಿತವಲ್ಲದ ಅನ್ನವನ್ನು ಅಸಂಸ್ಕೃತಾನ್ನವನ್ನು ತಿನ್ನುವ ದಾರಾಚಾರಿಯು ಇದೇ ಗತಿಯನ್ನು ಹೊಂದುವನು.

ಅನ್ಯರ ಹಿರಣ್ಯ ರತ್ನಾದಿಗಳ್ಳೂ ಬಲಾತ್ಕರಿಸಿ ಅಪಹರಿಸುವವನು ಸಂದಂಶದಲ್ಲಿ ಬಿದ್ದು, ಅಗ್ನಿವರ್ಣಸೂಚೀ ವಿಶೇಷಗಳಿಂದ ಚರ್ಮವನ್ನು ಹೊಲಿಯಲಾಗ ವೇದನಾದೋ ದೂಯಮಾನ ನಾಗುವನು.

ಸ್ತ್ರೀಪುರುಷರು ಅಗಮ್ಯ ಗಮನವನ್ನು ಮಾಡಿದೆಡೆ ಅವರನ್ನು ತಪ್ತಸೂರ್ಮಿ ಎಂಬ ನರಕದಲ್ಲಿ, ಕಶಾತಾಡನವನ್ನು ಮಾಡುತ್ತ ಯಮಭಟರು, ಕಾದ ಲೋಹದ ಗೊಂಬೆಯನ್ನಾಲಂಗಿ ಸುವಂತೆ ಮಾಡುವರು.

ಸರ್ವಾಭಿಗಮನಾದ ವ್ಯಭಿಚಾರಿಯು ವಜ್ರಕಂಟಕ ಶಾಲ್ಮಲಿಯಲ್ಲಿ ಬಿದ್ದು ಕಂಟಕವಿದ್ಧ ಗಾತ್ರನಾಗುವನು. ಧರ್ಮಸೇತುವನ್ನು ಮುರಿದ ರಾಜಪುರುಷರು ವೈತರಿಣಿಯಲ್ಲಿ ಬೀಳುವರು. ಆ ನಿರಯಪರಿಖೆಯಲ್ಲಿ ಜಲಜಂತು ಭಕ್ಷಿತರಾಗಿ ವಿಣ್ಮೂತ್ರಪೂಯ ಶೋಣಿತ ಕೇಶ ನಖಾಸ್ಥಿಮೇದೋಮಾಂಸ ವಸಾವಾಹಿನಿಯಲ್ಲಿ ಮಗ್ನರಾಗಿರುವರು.

ವೃಷಲೀ ಪತಿಗಳಾಗಿ ಲಜ್ಜೆಯನ್ನು ಬಿಟ್ಟು ಪಶುಗಳಂತೆ ತಿರುಗುವವರೂ, ವೈತರಣಿಯಲ್ಲಿ ಬಿದ್ದು ವಿಣ್ಮೂತ್ರಪೂಯಗಳನ್ನು ತಿನ್ನುವರು. ಬ್ರಾಹ್ಮಣಾದಿಗಳಾಗಿದ್ದ ತೀರ್ಥಗಳಲ್ಲಿ ಬೇಟೆ ಮಾಡಿ ಮೃಗಗಳನ್ನು ಹಿಂಸಿಸಲು, ಯಮಪುರುಷರು ಅವನನ್ನು ಬಾಣಭಿನ್ನಗಾತ್ರರನ್ನು ಮಾಡಿ ಪೀಡಿಸುವರು. ದಾಂಭಿಕನಾಗಿ ಪಶುಹಿಂಸೆಯನ್ನು ಮಾಡಿದವನು, ವೈಶಸ ನರಕದಲ್ಲಿ ಸದೃಶ ಹಿಂಸೆಯನ್ನು ಪೊಂದುವನು. ರೇತಃಪಾನವೆಂಬ ನರಕದಲ್ಲಿ ಸವರ್ಣಳಾದ ಪತ್ನಿಯಿಂದ ರೇತಃ ಪಾನ ಮಾಡಿಸಿದ ಪಾಪಿಯು ಬೀಳುವನು.

ಮನೆಗೆ ಬೆಂಕಿಯನ್ನಿಟ್ಟು, ಅನ್ನದಿ ವಿಷವನ್ನಿಟ್ಟು, ಹಾದಿ ಹೊಡೆದು ಬದುಕುವ ಪಾಪಿಗಳು ಸಾರಮೇಯಾದನದಲ್ಲಿ ಸಾವಿರಾರು ನಾಯಿಗಳಿಗೆ ತುತ್ತಾಗಿ ದುಃಖಿಸುವರು. ಸಾಕ್ಷ್ಯದಲ್ಲಿ, ದಾನ ದಲ್ಲಿ ವ್ಯವಹಾರದಲ್ಲಾಗಲಿ ಸುಳ್ಳನು ಪೇಳಿದವನು ಅವೀಚಿಯಲ್ಲಿ ಬೀಳುವನು. ಶತ

ಯೋಜನೋನ್ನತ ಗಿರಿ ಶಿಖರದಿಂದ ಕೆಳಗೆ ನೀರಿನಂತೆ ಕಾಣುವ ಶಿಲಾಮಯ ಪ್ರದೇಶದಲ್ಲಿ ಬಿದ್ದು ಚೂರು ಚೂರಾಗುವನು. ದ್ವಿಜನಾಗಿದ್ದು ಸುರಾಪಾನವನ್ನು ಮಾಡಿದವನು, ಅಯಃ ಪಾನವೆಂಬ ನರಕದಲ್ಲಿ ಕಾದ ಕಬ್ಬಿಣದ ರಸವನ್ನು ಯಮಭಟರು ಮುಖದಲ್ಲಿ ಹಾಕಲು ರೋದಿಸುವನು.

ಅಧಮನಾಗಿದ್ದು ಜನ್ಮ ಆಚಾರ ವಿದ್ಯಾ ಆಶ್ರಮ ವೃದ್ಧರನ್ನು ಗಣಿಸದೆ ಅವಮಾನಿಸುವ ಜೀವನ್ಮೃತನು, ಮೃತನಾಗಿ ಕ್ಷಾರಕರ್ದಮದಲ್ಲಿ ಕಾದ ಕೆಸರಿನಲ್ಲಿ ಬಿದ್ದು ಕುದಿಯುವನು.

ಇಂತನೇಕ ನರಕಗಳು ಅಧರ್ಮವರ್ತನರಿಗೆ ದುಃಖಾದಾಯಕವಾಗಿದೆ. ಧರ್ಮಾನುವರ್ತಿಗಳು ಸ್ವರ್ಗದಿಂದ ಬರುವಾಗ ಪುಣ್ಯಶೇಷದಿಂದ ಕೂಡಿ ಬಂದಂತೆ, ನರಕಾಗತರು ಪಾಪಶೇಷದಿಂದ ಬಂದು, ತತ್ತದ್ಯೋಗ್ಯಯೋನಿಯಲ್ಲಿ ಪುಟ್ಟುವರು. ಮೋಕ್ಷಮಾರ್ಗ ನಿವೃತ್ತಿ ಕರ್ಮಾನುಷ್ಠಾನ ಕ್ರಮವನ್ನು ಮೊದಲೇ ಪೇಳಿರುವೆನು.

ಮಹಾರಾಜಾ! ಈಗ ನಾನು ನಿನಗೆ ಚತುರ್ದಶಭುವನ ಕೋಶವನ್ನು ವರ್ಣಿಸಿರುವೆನು. ಇದು ಪರಮಾತ್ಮನ ಸ್ಥೂಲರೂಪವಲ್ಲವೇ? ಶ್ರದ್ಧೆಯಿಂದ ಭೂಗೋಳ ವಿಚಾರವನ್ನು ಹೇಳಿ ಕೇಳಿದ ಜನರು, ಶ್ರೀಹರಿಯ ಸ್ಥೂಲರೂಪ ಚಿಂತನೆಯನ್ನು ಮಾಡಲರ್ಹರಾಗಿ, ಅನಂತರ ಸೂಕ್ಷ್ಮರೂಪವನ್ನೂ ಚಿಂತಿಸಿ ಮುಕ್ತರಾಗುವರು. ಸ್ಥೂಲದಲ್ಲಿ ಚಿಂತಿತ ಮನವು ಸ್ಥಿರವಾದ ಮೇಲಲ್ಲವೇ ಸೂಕ್ಷ್ಮರೂಪದ ಚಿಂತೆ!

ಭೂಮಿ, ದ್ವೀಪ, ನದೀ, ನದ, ಸಮುದ್ರ, ಆಕಾಶ, ಪಾತಾಳ, ದಿಕ್, ನರಕ, ತಾರಾಗಣಗಳೇ ಮೊದಲಾದ ಈ ಬ್ರಹ್ಮಾಂಡವೆಲ್ಲವೂ ಸಕಲಜೀವ ಹೃದಯನಿಲಯವಾದ ಶ್ರೀಹರಿಯ ಸ್ಥೂರಪ್ರತಿಮೆ ಎಂದೇ ನಿನಗೆ ವರ್ಣಿತವಾಯಿತು. ಅಂತಹ ಶ್ರೀಕಾಂತನಿಗೆ ನಮಸ್ಕಾರವು!

ಪಂಚಮಸ್ಕಂಧವು ಪೂರ್ಣವಾಯಿತು.

|| ಶ್ರೀಕೃಷ್ಣಾರ್ಪಣಮಸ್ತು ||

॥ ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ॥

# ಶ್ರೀಮದ್ಭಾಗವತಮ್

## ಷಷ್ಠ ಸ್ಕಂಧವು

॥ ಹರಿಃ ಓಂ ॥

### ೧. ಅಜಾಮಿಲ ಕಥಾ – ಯಮದೂತ ವಚನಂ

ರಾಜನು ಪ್ರಶ್ನಿಸಿದನು–

ಸ್ವಾಮಿನ್ ! ನಿವೃತ್ತಿಮಾರ್ಗವನ್ನು ಪೇಳಿರುವೆ. ಆ ಮಾರ್ಗದಲ್ಲಿ ನಡೆಯುವ ನರನು ಭಕ್ತಿಜ್ಞಾನವೈರಾಗ್ಯಗಳನ್ನು ಕ್ರಮವಾಗಿ ಪೊಂದಿ ಸಂಸಾರದಿಂದ ಮುಕ್ತನಾಗುವನು. ಶ್ರೀಹರಿಯು ಆವನಲ್ಲಿ ಪರಮಾನುಗ್ರಹವನ್ನು ಮಾಡುವನೆಂದೂ ಕೇಳಿದೆನು. ಪ್ರವೃತ್ತಿ ಮಾರ್ಗವು ಸ್ವರ್ಗಾದಿ ನಶ್ವರಲೋಕಪ್ರಾಪಕನಾಗಿ ಪ್ರಕೃತಿಯ ಬಂಧವನ್ನು ಬಿಡಿಸಿಕೊಳ್ಳಲಾರದ ಮನುಜನಿಗೆ ಪುನಃ ಪುನಃ ದೇಹಾದಿಗಳನ್ನು ತಂದುಕೊಡುವುದು. ಶ್ರೀಶನು ಪರಮಾನುಗ್ರಹವನ್ನು ಮಾಡದ ಹೊರತು ಈ ಸಂಸಾರವು ನಿವೃತ್ತವಾಗುವುದಿಲ್ಲ. ಚತುರ್ಮುಖನಿಂದ ಕೂಡಿ ಶ್ರೀಹರಿಚರಣವನ್ನವಲೋಕಿಸದ ಹೊರತು ಸ್ವರೂಪಾನಂದಾಭಿ ವ್ಯಕ್ತಿಯೂ ಇಲ್ಲ. ಧರ್ಮರಾಜನನ್ನಲ್ಲದೆ ಯಮರಾಜನನ್ನು ಸೇರಿಸುವ ಪಾಪಗಳ ಫಲವೆನಿಸಿದ ನರಕಗಳನ್ನೂ ವಿವರಿಸಿದಿರಿ. ಸ್ವಾಯಂಭುವ ಮನ್ವಂತರವು ಪ್ರಾಯಃ ವರ್ಣಿತವಾಯಿತು. ಪ್ರಿಯವ್ರತೋತ್ತಾನಪದರಚರಿತೆಯನ್ನಾಕರ್ಣಿಸಿದೆನು. ದ್ವೀಪವರ್ಷ ಜಲಧಿ ನದೀನದ ಗಿರಿ ಸಂಯುತ ಧರಾಮಂಡಲ ಮಾನಲಕ್ಷಣಗಳನ್ನು ತಿಳಿದೆನು. ಈಗ ಜ್ಞಾನ ಪ್ರಕಾಶ ! ಯಮದೂತರಿಂದ ಉಗ್ರಯಾತನೆಯನ್ನು ಪೊಂದದಿರಲು ಸಮೀಚೀನವಾದ ಉಪಾಯ ವಾವುದೋ ದಯಮಾಡಿ ಪೇಳು – ಎನ್ನಲು ಶ್ರೀ ಶುಕನು ಪೇಳಿದನು–

ಮನೋವಚಃಕಾಯಗಳಿಂದ ಇಲ್ಲಿ ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನಿಲ್ಲೇ ಮಾಡಿಕೊಳ್ಳದಿರೆ ತಪ್ಪದೇ ಯಮಲೋಕವನ್ನು ಸೇರಿ ನಿನಗೆ ನಾನು ವರ್ಣಿಸಿದ ತೀವ್ರ ವೇದ ನಾಮಯ ನರಕಗಳನ್ನನುಭವಿಸಬೇಕಾಗುವುದು; ಇದು ದಿಟ. ನಶ್ವರವಾದೀ ಶರೀರವು ಶಶ್ವದೀಶ ವಶವಾಗಿದೆ. ಆಯುಸ್ಸಿನ ಅಪಸಾನಸಮಯವೆಲ್ಲರಿಗೂ ತಿಳಿಯಲಾಗದು. ಆದ್ದರಿಂದ ಮೊದಲೇ ಮರಣವು ಒದಗಿ ಬರುವುದಕ್ಕಿಂತ ಪೂರ್ವದಲ್ಲೇ ಮಾಡಿದ ಪಾಪವನ್ನರಿತು, ಆಚಾರ್ಯಾದಿಗಳಿಂದ ಪೇಳಲ್ಪಟ್ಟ ತದುಚಿತ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ನಿಪುಣ ವೈದ್ಯನಿಂದ ತಕ್ಕ ಔಷಧವನ್ನು ಪಡೆದು ರೋಗಿಯಂತೆ–ಶುದ್ಧ ಶರೀರನಾಗುವುದು ಲೇಸು. ಶರೀರವು ಜರಾಮಯ ದೂಷಿತವಾದ ಮೇಲೆ ಕೈಯಲ್ಲಿ ಕಾಸಿಲ್ಲದಾದಾಗ, ಮಾಡುವುದಾದರೂ ಏನಿದೆ? ಎಂದ ಶ್ರೀಶುಕನ ವಾಕ್ಯವನ್ನು ಕೇಳಿ ಪರೀಕ್ಷಿತನು ಕೇಳಿದನು –

ಚೌರ್ಯಾದಿಗಳಿಂದ ರಾಜದಂಡಿತನಾಗುವುದನ್ನು ನೋಡಿಯು ಪಾಪದಿಂದ ನರಕವು ತಪ್ಪದೆಂಬ ಆಗಮ ವಚನಗಳನ್ನು ಕೇಳಿಯೂ, ನರನು ಪಾಪವು ಆಪದಾಪಾದಕವೆಂದರಿತೂ, ಪುನಃಕರ್ಮವಶನಾಗಿ ದೇವನು ಮಾಡಿಸಿದಂತೆ ಪಾಪಗಳನ್ನೇ ಮಾಡುವನಲ್ಲ? ಅವನಿಗೆ ಪ್ರಾಯಶ್ಚಿತ್ತದಿಂದೇನು ಫಲ? ಪ್ರಾಯಶ್ಚಿತ್ತನಂತರದಲ್ಲಿಯು ಪಾಪವನ್ನು ಮಾಡಿದವನಿಗೆ ಕುಂಜರಸ್ನಾನದಂತೆ ಪ್ರಾಯಶ್ಚಿತ್ತವು ವ್ಯರ್ಥವೇ ಸರಿ! ಎನ್ನಲು ಶ್ರೀಶುಕನು ಹೇಳಿದನು.

ಬರಿಯ ಪ್ರಾಯಶ್ಚಿತ್ತಕರ್ಮದಿಂದ ಪಾಪಕರ್ಮವು ಪೂರ್ಣವಾಗಿ ನಶಿಸುವುದಿಲ್ಲ. ಆದರೂ ವಿದ್ವದ್ವಿಮರ್ಶಿತವಾದ ಜ್ಞಾನಪೂರ್ವಕವಾದ ಪ್ರಾಯಶ್ಚಿತ್ತವು ವ್ಯರ್ಥವಾಗುವುದಿಲ್ಲ. ವಿಷ್ಣುಪ್ರೀತಿ ಕರವಾದ ಜ್ಞಾನಯುತ ಕರ್ಮವು ಸ್ವಲ್ಪವಾದರೂ ಮಹತ್ಫಲ ಸಂಪಾದಕವು, ಮಹಾಪಾಪ ನಾಶಕವೂ ಆಗುವುದು. ಪಥ್ಯಪದಾರ್ಥವನ್ನು ಉಣ್ಣುವನಿಗೆ ರೋಗವಿಲ್ಲ. ಭಗವದರ್ಪಿತವನ್ನು ಣ್ಣುವನಿಗೆ ಭವರೋಗವೂ ಇಲ್ಲ. ಇಂದು ನಿಯಮವನ್ನು ಪಾಲಿಸಿ, ದೇವ ದ್ವಿಜ ಗುರು ಸೇವೆ ಯನ್ನು ಗೈಯುತ್ತಾ, ಕಾರ್ಯಕ್ಲೇಶಾದಿ ತಪಗಳನ್ನನುಷ್ಠಿಸಿ, ಏಕಪತ್ನೀರತನಾಗಿರುವ ಶಮ ದಮಾನ್ವಿತನು, ಸತ್ಯ ಶೌಚ ಯಮನಿಯಮಾದಿಗಳಿಂದ ತ್ರಿಕರಣಕೃತ ಪಾಪವನ್ನು – ಬಿದುರಿನ ಪೊಳೆಯನ್ನಗ್ನಿಯಂತೆ – ನಾಶಪಡಿಸುವನು. ಮುಖ್ಯ ಪ್ರಾಣವಲ್ಲಭನಾದ ವಾಸು ದೇವನ ಭಕ್ತಿ ಯಿಂದಲೇ ಕೆಲವರುತ್ತಮರು – ಸೂರ್ಯನು ಮಂಜಿನನ್ನು ಹರಿಸುವಂತೆ - ಸಮಸ್ತ ಪಾಪಗಳನ್ನು ದೂರೀಕರಿಸಿ ನಿರ್ಮಲರಾಗುವರು. ರಾಜನ್! ತಪಸ್ಸು ಮೊದಲಾದವು ಪಾಪನಿವಾರಕವಾಗಿವೆ, ಆದರೂ ಕೃಷ್ಣನಿಗೆ ಸರ್ವಸ್ವವನ್ನರ್ಪಿಸಿದ ಭಕ್ತನು ಹರಿಭಕ್ತರ ಸೇವೆಯಿಂದ ತನ್ನ ಪಾಪರಾಶಿಯನ್ನೆ ಲ್ಲವನ್ನು ಸುಟ್ಟಂತೆ, ತಪೋನಿಯಮಾದಿಗಳು ಪಾಪಿಯ ಪಾಪವನ್ನು ನಾಶಪಡಿಸಲಾರವು. ಪ್ರಾಯಶ್ಚಿತ್ತಗಳಲ್ಲಿ ಅಕುತೋಭಯವು ಸುಕ್ಷೇಮವು ನಿಷ್ಕಂಟಕವಾದುದೀ ಭಕ್ತಿ ಮಾರ್ಗವೇ. ಅಂತೆಯೇ ನಾರಾಯಣಪರಾಯಣರಾದ ಸಾಧುಜನರಿದನ್ನಾಶ್ರಯಿಸಿ ಸುಖಿಸುವರು. ನಾರಾಯಣ ಪರಾಙ್ಮುಖರೇನು ಮಾಡಿದೊಡೇನು? ಹೆಂಡದ ಗಡಿಗೆಯನ್ನು ಗಂಗೆಯಲ್ಲಿ ತೊಳೆದರೂ ದುರ್ವಾ ಸನೆಯು ಪೋಗದಿರುವಂತೆ, ಅದರ ಪಾಪಗಳಳಿಸಿ ಪೋಗದಿರುವುದು. ಬ್ರಹ್ಮಾದಿ ಪರಿವಾರ ಸಮನ್ವಿತನಾದ ಶ್ರೀಪತಿಯು ಸುಂದರ ಚರಣಾರವಿಂದದಿ ಮಧುಕರದಂತೆ ಮಗ್ನರಾಗಿ, ಭಕ್ತಿ ಮಧುರ ಮಧುಪಾನವನ್ನೊಮ್ಮೆ ಮಾಡಿದವರು ಕೂಡ ಯಮನನ್ನು ಯಮಭಟರನ್ನು ಸ್ವಪ್ನ ದಲ್ಲಿಯೂ ನೋಡದೆ, ಲಕ್ಷ್ಮೀವಂದ್ಯನ ಪಾರ್ಷದ ಪ್ರವರರ ಕುಂಡಲಾದಿಮಂಡಿತ ಮುಖಚಂದ್ರ ಮಂಡಲವನ್ನೇ ನೋಡುತ್ತಿರುವರು. ಅವರಿಂದ ಸರ್ವ ಪ್ರಾಯಶ್ಚಿತ್ತವು ಚೆನ್ನಾಗಿ ಅನುಷ್ಠಿತ ವಾದಂತೆಯೇ ಸರಿ! ಸು = ಅಂದರೆ ಆನಂದ; ವಃ – ಅಂದರೆ ಜ್ಞಾನವಾದ್ದರಿಂದ ಆನಂದಜ್ಞಾನ ರೂಪ ಹರಿಯನ್ನಾರಾಧಿಸುವ, ಈ ಅರ್ಥವನ್ನು ಪೇಳಿಕೊಟ್ಟು ಮುಖ್ಯ ಪ್ರಾಣನನ್ನು ನಂಬಿದ ಭಕ್ತರಿಗೆ ಇನ್ನು ಪಾಪವೆಲ್ಲಿಯದು?

ಈ ವಿಷಯದಲ್ಲಿ ಪುರಾತನವಾದೊಂದು ಕಥೆಯನ್ನು ವಿಷ್ಣುಯಮದೂತರ ಸಂವಾದ ರೂಪವಾದುದನ್ನು ಲೋಕಹಿತವಾಗಲೆಂದು ವಿವರಿಸುವೆನು ಕೇಳು.

ಕಾನ್ಯಕುಬ್ಜ ನಗರದಲ್ಲಿ ದ್ವಿಜನೊಬ್ಬನಿದ್ದನು. ಅಜಾಮಿಲನೆಂಬಾ ಬಾಲಿಶನು ದಾಸೀ ಪತಿಯಾಗಿ ಸದಾಚಾರದೂರನಾಗಿ ವಾಸಿಸುತ್ತಿದ್ದನು. ಜೂಜಾಡಿ, ಕದ್ದು,ಹಾದಿ ಕಾದು ನಿಂದ್ಯವೃತ್ತಿ ಯಿಂದ ನಂದನಾದಿ ಕುಟುಂಬವನ್ನು ಪೋಷಿಸಿದನು. ಅಗ್ನಿಯಂ ಬಿಟ್ಟನು. ದಾಸಿಯಲ್ಲಿಯು ತತ್ಸುತರಲ್ಲಿಯು ಮನವನ್ನಿಟ್ಟನು. ಇಂತು ಕೆಟ್ಟು ಸುತರ ಲಾಲನೆಯಂಗೈದು ವಸಿಸುವ ಆ

ದ್ವಿಜನಿಗೆ ಅರಿಯದಂತೆ ಆಯುವಿನ ಎಂಭತ್ತೆಂಟು ವರ್ಷಗಳ ಕಾಲವು ಉರುಳಿಹೋಯಿತು. ಮುದುಕನಾದರೂ ಹತ್ತನೆಯ ಮಗನಲ್ಲಿ ಮಮತೆಯು ಮಿತಿ ಮೀರಿತ್ತು. ಕೊನೆಯ ಮಗನಾದ ನಾರಾಯಣನು ತನ್ನ ತಂದೆ ತಾಯಂದಿರ ಮುದ್ದುಮರಿಯಾಗಿದ್ದನು. ಮುದ್ದುಮಾತನ್ನಾಡುವ ಆ ಬಾಲನ ಲೀಲೆಯನ್ನು ನೋಡಿ ಜರಠನಾದ ಅಜಾಮಿಲನು ಅವನಲ್ಲಿ ಮನಸ್ಸಿನನ್ನಿಟ್ಟು ಬಲು ಸಂತಸದಿ ಅವನಿಂದ ಕೂಡಿ ಉಂಡು, ಕುಡಿದು, ನಲಿಯುತ್ತಾ, ತನ್ನನ್ನು ಸಮೀಪಿಸಿದ ಕಾಲಪಾಶವನ್ನು ಕಾಣದಾಗಿದ್ದನು.

ಇಂತು ಅಜ್ಞಾನಿಯಾಗಿದ್ದ ದ್ವಿಜನಿಗೂ ಒಂದು ದಿನ ಮರಣಕಾಲವು ಒದಗಿ ಬಂತು. ಪಾಶಹಸ್ತರು, ದಾರುಣರೂಪರು, ಉರ್ಧ್ವರೋಮರು, ವಕ್ರಮುಖರಾದ ಮೂರು ಜನ ಯಮಭಟರವನಿಗೆ ದೃಷ್ಟಿಗೋಚರರಾದರು. ಆದೊಡನೆ ಮಗನ ನೆನಪು ಮನದಿ ಮೂಡಿ ದೂರದಲ್ಲಿ, ಅತಿ ದೂರವಲ್ಲಿ ಆಡುತ್ತಿದ್ದ, ಕ್ರೀಡಿಸುತ್ತಿದ್ದ ಮಗ ನಾರಾಯಣನನ್ನು, ಸರ್ವ ನರಕ ಸಂರಕ್ಷಕ ನಾರಾಯಣನನ್ನೂ ಒಂದೇ ಸಲ ನೆನೆಸಿ ಆಕುಲೇಂದ್ರಿಯನಾಗಿಯೂ, ಕೆಂಗೆಡದೆ ಭಕ್ತಿಯಿಂದ ಪೂರ್ವಜನ್ಮ ಸುಕೃತಫಲವು ಪರಿಪಕ್ವವಾಗಿ ಬಂದ ಗೋವಿಂದನ ಸ್ಮರಣೆಯ ಬಲದಿಂದ ಮಗನನ್ನು ಮರೆತು 'ನಾರಾಯಣ' ಎಂದು ಗಟ್ಟಿಯಾಗಿ ಶ್ರೀಶನಿಗೆ ಸರ್ವಪಾಪನಾಶನಿಗೆ ಮೊರೆಯಿಟ್ಟು ಕೂಗಿದನು.

ಮರಣಕಾಲದಲ್ಲಿ ನಾರಾಯಣನ ಸ್ಮರಣೆಯನ್ನು ಮಾಡಿದ ಆ ವಿಪ್ರನ ಆರ್ತನಾದವನ್ನು ಕೇಳಿ ವಿಷ್ಣುಪಾರ್ಷದರು ಶೀಘ್ರವಾಗಿ ಬಂದು ದಾಸೀಪತಿಯನ್ನು ಪಾಶದಿಂದ ಕಟ್ಟಿ ಸೆಳೆಯುವ ಯಮದೂತರನ್ನು ನಿವಾರಿಸಿದರು. ಆಗ ಯಮಭಟರವರನ್ನು ನೋಡಿ 'ಯಾರು ನೀವು? ಧರ್ಮರಜನ ಶಾಸನವನ್ನು ನಡೆಯಗೊಡದಿರುವುದೇತಕೆ? ಯಾರು ನಿಮ್ಮ ಪ್ರಭುವು? ಎಲ್ಲಿಂದ ಬಂದಿರಿ? ಏಕೆಮ್ಮನ್ನು ನಿಷೇಧಿಸುವಿರಿ? ದೇವತೆಗಳೋ? ಗಂಧರ್ವರೋ? ಸಿದ್ಧರೋ? ಪದ್ಮ ಪಲಾಶ ಸುಂದರ ಲೋಚನರು, ಪಿತಾಂಬರಧಾರಗಳು, ಕಿರೀಟಕುಂಡಲ ವನಜಮಾಲಿಗಳು, ಚಾಗುನವಯೌವನಗಾತ್ರರು, ಸುರುಚಿರ ಚತುರ್ಭುಜರಾಗಿರುವಿರಿ. ಧನು ತೂಣೀರ ಖಡ್ಗ ಗದಾ ಶಂಖ ಚಕ್ರ ಪದ್ಮಧರರಾದ ನಿಮ್ಮ ಕಾಂತಿಗೆ ಸೋತು ದಿಕ್ಕುಗಳಲ್ಲಿರುವ ಅನ್ಯಪ್ರಕಾಶಗಳು ಕಳೆಗುಂದಿವೆ. ಹೇಳಿ, ಧರ್ಮಪಾಲನ ಕಿಂಕರರನ್ನೇಕೆ ತಡೆದಿರಿ' ಎಂದು ಕೇಳಿದರು.

ಆಗ ವಿಷ್ಣುದೂತರಿಂತು ನುಡಿದರು – 'ಏನು? ನೀವು ಧರ್ಮರಾಜನ ಆಜ್ಞಾಧಾರಕರೇ? ಅಂದಮೇಲೆ ನಿಮಗೆ ಧರ್ಮಾಧರ್ಮಗಳ ಲಕ್ಷಣಗಳು ಚೆನ್ನಾಗಿಯೇ ತಿಳಿದಿರಬೇಕಲ್ಲವೇ? ಏನು ಅಪರಾಧ ಸಮದಂಡವೆನಿಸುವುದು? ಯಾರು ದಂಡ್ಯರು? ಕರ್ಮಗಳ ಮಾಡಿದ ಮಾನವ ಮಾತ್ರನು ನಿಮಗೆ ಶಿಕ್ಷಾರ್ಹನೇನು? ಅಥವಾ ಕೆಲರನ್ನು ಮಾತ್ರ ದಂಡಿಸುವಿರಾ? ಅಂತಹವ ರಾರು?' ಎನಲು ಯಮದೂತರಿಂತೆಂದರು–

ವೇದವಿಹಿತವಾದುದೇ ಧರ್ಮವು. ತದ್ವಿರುದ್ಧವೆಲ್ಲವು ಅಧರ್ಮವೇ ಸರಿ. ವೇದವು ನಾರಾಯಣನಿಂದ ಉಚ್ಚರಿತವು, ಉಪದಿಷ್ಟವು ಆಗಿದೆ. ಆದ್ದರಿಂದ ಅದು ಪರಮ ಪ್ರಮಾಣವಾಗಿದೆ. ಆ ಸ್ವತಂತ್ರನಾದ ಶ್ರೀಹರಿಯ ರಜಸ್ಸತ್ವ ತಮೋಗುಣಗಳಿಂದ ಶುಕ್ಲಾದಿ ರೂಪಗಳನ್ನು ಅಶ್ವನರ ದೇವದತ್ತಾದಿ ನಾಮಗಳನ್ನು, ಪಚನ ಪಠನಾದಿ ಕ್ರಿಯೆಗಳನ್ನು ಕೊಟ್ಟು, ದ್ವಿಪಾದಪಾಚ್ಚತುಷ್ಪ ದಾದಿ ಜೀವಶರೀರವನ್ನು ಪರಸ್ಪರ ಸಂಕರವಿಲ್ಲದೆ ಸೃಜಿಸುವನು. ಧರ್ಮಾಧರ್ಮಮರ್ಮಜ್ಞಾನವು ಸುಕರವಲ್ಲವೆಂದು ಸಕಲಾನುಭೂತ ಸಾಕ್ಷಿಗಳನ್ನು ನಿರ್ಮಿಸಿರುವನು. ಸೂರ್ಯ, ಚಂದ್ರ, ಅಗ್ನಿ,

ಜಲ, ಆಕಾಶ, ವಾಯು, ಸಂಧ್ಯಾ, ಹಗಲು, ರಾತ್ರಿ, ದಿಕ್, ಧರ್ಮದೇವತೆಗಳನ್ನು, ಧರ್ಮಾಧರ್ಮವೀಕ್ಷಕರನ್ನಾಗಿ ನಿಲ್ಲಿಸಿ, ಸ್ವಯಂ ಶ್ರೀಹರಿಯು ಕಾಲರೂದಿಂದೀಕ್ಷಿಸುತ್ತಿರುವನು. ಜೀವನು, ಜೀವನ ಮನವು ಕೂಡ ಸಾಕ್ಷಿಯಾಗಿದೆ. ಇವರಿಂದ ಪಾಪವನ್ನು ತಿಳಿದು ತಕ್ಕ ದಂಡವನ್ನೂ ಕೊಡಲು ಬರುವುದರಿಂದ, ಎಲ್ಲ ಪಾಪಿಗಳು ಯಮಶಿಕ್ಷೆಗೆ ಗುರಿಯಾಗುತ್ತಿದ್ದಾರೆ. ದೇಹವಿರುವತನಕ ಕರ್ಮವನ್ನು ಮಾಡದಿರಲು ಶಕ್ಯವಲ್ಲ– ಕರ್ಮವು, ಪಾಪಪುಣ್ಯಕರ್ಮ ಭೇದದಿಂದ ದುಃಖಸುಖಗಳೆಂಬ ಫಲವನ್ನೂ ಕೊಡದಿರುವುದಿಲ್ಲ. ಯಾವ ಮನುಜನು ಎಂತಹ ಅಧರ್ಮವನ್ನು ಎಲ್ಲಿಯವರಿವಿಗೂ ಮಾಡುವನೋ, ಅಷ್ಟೇ ಕಾಲ ಪರಲೋಕದಲ್ಲಿ ಅಂತಹ ಶಿಕ್ಷೆಯನ್ನು ತಪ್ಪದೆ ಅನುಭವಿಸಲೇಬೇಕಾಗುವುದು. ಒಂದು ಸಲ ಶ್ರೀಹರಿಯು ಭಕ್ತಿಯಿಂದ ದುಃಖಕಾರಣವಾದ ಪಾಪಕರ್ಮವು ಕೂಡ ದುಃಖವನ್ನು ಕೊಡಲಾರದೆ ನಶಿಸುವುದೂ ನಿಜ. ಸತ್ವಾದಿಗುಣ ವೈಚಿತ್ರ್ಯದಿಂದ ಭೂತಗಳಲ್ಲಿ ಉತ್ತಮ ಮಧ್ಯಮಾಧಮರೆಂಬ ವೈಚಿತ್ರ್ಯವು ಪ್ರತ್ಯಕ್ಷಸಿದ್ಧವಾದಂತೆ, ಮಾಡಿದ ಕರ್ಮವೈಚಿತ್ರ್ಯದಿಂದ ಊರ್ಧ್ವ ಮಧ್ಯಮ ಧೋಲೋಕ ಪ್ರಾಪ್ತಿಯು ಕೂಡ ಆಗಮಿಸಿದ್ದ ವಾಗಿದೆ. ಈಗಿನ ವಸಂತಾದಿ ಕಾಲವನ್ನು ನೋಡಿ ಹಿಂದಿನ ಮತ್ತು ಮುಂದೆ ಬರುವ ವಸಂತಾದಿಗಳಲ್ಲಿಯು ಫಲಪುಷ್ಪಾದಿಗಳನ್ನು ತಿಳಿಯುವಂತೆ, ಈ ಜನ್ಮದ ಸುಖದುಃಖಾದಿ ಭೋಗದಿಂದ ಹಿಂದಿನ ಪುಣ್ಯ ಪಾಪಕರ್ಮವನ್ನು ಮುಂದಿನ ಕರ್ಮಫಲ ರೀತಿಯನ್ನೂ ತಿಳಿಯಬಹುದಾಗಿದೆ. ಶ್ರೀಹರಿಯು ಜೀವಮನಃಸಂಸ್ಕಾರವನ್ನನುಸರಿಸಿ ದೇಹಗಳನ್ನು ಕೊಡುವನು. ಆ ಶ್ರೀಶನ ಕರ್ಮಫಲದಾನೇಚ್ಛೆಯನ್ನನುಸರಿಸಿ ಚತುರ್ಮುಖನು, ದೇಹಗಳನ್ನು ಮೊದಲೇ ಸಂಕಲ್ಪಿಸಿಟ್ಟಿರುವನು. ಯಮರಾಜನಾದರೂ ಶ್ರೀಶೇಚ್ಛೆಯಿಂದಲೇ ಜೀವರನ್ನು ಶಿಕ್ಷಿಸುವನು. ಅಜ್ಞಾನಿಯು ದೇಹವೇ ನಾನೆಂಬನು, ಪ್ರತ್ಯಕ್ಷನಾಗಿ ಎದುರು ನಿಂತಿದ್ದನ್ನೇ ತಿಳಿಯುವನು. ಶ್ರೀಹರಿಯನ್ನು ಹಿಂದುಮುಂದಿನ ಜನ್ಮಗಳಲ್ಲೂ ಕಾಣದಿರುವನು. ಇಂತಹ ಚಾರ್ವಾಕಮತವು ಪ್ರಮಾಣರಹಿತವು, ಸ್ವಯಂ ಅನರ್ಥಾಪಾದಕವು. ಅಂತೆಯೇ ಹಿಂದಿನ ಜನ್ಮಗಳನ್ನು ಮರೆತು, ಇದೇ ಸರ್ವವೆಂಬ ಪುರುಷನು, ಅಜ್ಞಾನಿಯೋ, ಅನ್ಯಥಾ ಜ್ಞಾನಿಯೋ ಆಗಿರಬಹುದಾಗಲಿ ಸಾತ್ವಿಕವಲ್ಲ. ವಾಕ್, ಶಿಲ್ಪ, ಗಮನ, ವಿಸರ್ಜನಾನಂದಗಳೆಂಬ ಕರ್ಮೇಂದ್ರಿಯ ವ್ಯಾಪಾರಗಳೈದು. ಶಬ್ದ ಸ್ಪರ್ಶರೂಪರಸಗಂಧ ಗ್ರಹಣವೆಂಬ ಜ್ಞಾನೇಂದ್ರಿಯ ವ್ಯಾಪಾರಗಳೈದು. ಇವುಗಳಿಂದು ಕೂಡಿ ಹದಿನಾರನೆಯದಾದ ಮನಸ್ಸು ಹದಿನೇಳನೆಯವನಾದ ಜೀವನಿಗೆ ಸುಖ ದುಃಖಪ್ರದವಾಗಿದೆ. ಹತ್ತಿಂದ್ರಿಯಗಳು, ಐದೂ ಭೂತಗಳು, ಒಂದು ಮನಸ್ಸು, ಈ ಷೋಡಶ ಕಲಾತ್ಮಕ ಲಿಂಗಶರೀರವು ಜೀವನಿಗೆ ಹರ್ಷಶೋಕಕಭಯ ಕಾರಣವಾದ ಅಹಂಕಾರವನ್ನು ಪುಟ್ಟಿಸಿ, ಅನಂತಶರೀರ ಕಾರಣವಾಗಿರುವುದು. ಅಜ್ಞಾನಿ ಜೀವನು, ಇಂದ್ರಿಯ ದಾಸನಾಗಿ ಅನೇಕ ಪಾಪಕರ್ಮವನ್ನು ಮಾಡಿ ಅದರ ಫಲವನ್ನನುಭವಿಸುವನು; ಕೋಶಕಾರ ಕ್ರಿಮಿಯು ಮಣ್ಣಿನ ಗೂಡನ್ನು ಕಟ್ಟಿ ಒಳಗಿದ್ದು, ಆ ಗೂಡಿನ ನಾಶ ಕ್ಷೇಮಗಳನ್ನರಿಯಲಾರ ದಿರುವಂತೆ, ಗುಣನಿರ್ಮಿತ ಶರೀರದಲ್ಲಿ ಸದಾ ಬಿಡದೆ ಕರ್ಮಗಳನ್ನು ಮಾಡಿ, ತತ್ತದುಚಿತ ಯೋನಿಯಲ್ಲಿ ಪುಟ್ಟಿ, ಯೋಗ್ಯತಾನುಸಾರವಾದ ಸುಖದುಃಖ ಫಲವನ್ನು ಭುಂಜಿಸುವನು. ಇಂತು ಜೀವನಿಗೆ ಪ್ರಕೃತಿಸಂಗದಿಂದ ಸಂಸಾರವು ಬಂದಿದೆ. ಅಂತಹ ಬಂಧವು ಸತ್ಯವಾದರೇನು! ಸ್ವೋತ್ತಮರ ಸೇವೆಯಿಂದಲು ಶ್ರೀಹರಿ ಕರುಣೆಯಿಂದಲು ಸಂಸಾರವು, ಸಮೂಲವಾಗಿ ನಾಶವಾಗುವುದು.

ಈ ಅಜಾಮಿಲನು ಶ್ರುತಸಂಪನ್ನನು, ಶ್ರೀಲವ್ರತ ಗುಣಾಲಯನು, ಧೃತವ್ರತನು, ದಾಂತನು, ಸತ್ಯವಚನನು; ಮಂತ್ರನಿರತನು, ಶುಚಿಯು ಅಹುದು. ಗುರು ವಿಪ್ರ ಅತಿಥಿವೃದ್ಧಾಗ್ನಿಗಳನ್ನು ನಿರಂಹಕಾರಿಯಾಗಿ ಸೇವಿಸಿರುವುದೂ ನಿಜ. ಸರ್ವಭೂತರಹಿತವಾಗಿ ಮಿತಭಾಷಿಯಾಗಿ, ಅಸೂಯಾದಿ ದೋಷಗಳ ದೂಡಿ, ಸಾಧುವೆನಿಸಿದುದೂ ದಿಟ. ಆದೊಡೇನು ಫಲ? ಕೇಳಿ. ಒಂದು ದಿನ ಇವನು, ತಂದೆಯು ಆಜ್ಞೆಯಂತೆ ವನವನ್ನು ಸೇರಿ ಫಲಪುಷ್ಪ ಸಮಿತ್ಕುಶಗಳನ್ನು ತರುತ್ತಾ, ಮನೆಗೆ ಬರುವಾಗ ದಾಸೀ ಭೋಗರತನಾದ ವಿಟನೊಬ್ಬನನ್ನು ನೋಡಿದನು. ಮೈರೇ ಯಮಧುಪಾನಮತ್ತರಾಗಿ ಮೈಮರೆತು, ಲಜ್ಜೆಯನ್ನು ತೊರೆದು, ಕ್ರೀಡಿಪ ಕಾಮುಕರ ದರ್ಶನ ದಿಂದ ಅಜಾಮಿಲನು ಅನಂಗವಶನಾದನು. ಅವನಂತೆ ಅವಳನ್ನು ಬಾಹುಪರಿರಂಭಿತಳನ್ನಾಗಿ ಮಾಡಲೆಣಿಸಿದನು. ವಿದ್ಯಾಬಲದಿಂದ ಕೈಲಾದಷ್ಟು ಮನೋನಿಗ್ರಹವನ್ನು ಮಾಡಿ ನೋಡಿದನು. ನೋಡಿದಷ್ಟೂ ನಯನಗಳು ಹಿಂದಿರುಗದೆ ಮನವನ್ನು ಕಂಗೆಡಿಸಲು ಸ್ಮರಪಿಶಾಚಿ ಗ್ರಸ್ತನಾಗಿ ಅವಳನ್ನೇ ನೆನೆನೆನೆದು, ಸೇರಿ ರಮಿಸಿ, ಸ್ವಧರ್ಮದಿಂದ ದೂರನಾದನು. ಪಿತೃಧನವು ನಿಶ್ಶೇಷನಾಗಿ ನಾಶವಾದರೂ ಲೆಕ್ಕಿಸದೆ ಗ್ರಾಮ್ಯಮನೋರಥಗಳನ್ನೀಡೇರಿಸಿ, ದಾಸಿಯನ್ನು ಸಂತೈಸಿದನು. ಅಪೌಢೆಯಾದ ಧರ್ಮಪತ್ನಿಯನ್ನು, ಮಹತ್ಕುಲ ಪ್ರಸೂತಳು ಸಾಧ್ವಿ ಎಂದೆಣಿ ಸದೇ, ಜಾರಣೀ ಹೃತಬುದ್ಧಿಯಾಗಿ ತ್ಯಜಿಸಿದನು. ಮಾತಾಪಿತೃಗಳನ್ನು ಕೈಬಿಟ್ಟನು. ನ್ಯಾಯಾ ನ್ಯಾಯಗಳನ್ನು ವಿಚಾರಿಸದೆ ಧನವನ್ನು ಗಳಿಸಿ ಹತ್ತು ಮಕ್ಕಳ ತಾಯಿಯಾದ ದಾಸಿಯ ಕುಟುಂಬವನ್ನು ಪೋಷಿಸುತ್ತಿದ್ದನು. ಶಾಸ್ತ್ರವನ್ನರಿತೂ ಮೀರಿ ನಡೆದ ಈ ಸ್ವೇಚ್ಛಾಚಾರನನ್ನು ಅಗ್ನಿಹೋತ್ರಾದಿ ನಿತ್ಯ ಸದಾಚಾರ ದೂರನನ್ನು, ದಂಡಪಾಣಿಯ ಸಭೆಗೆ ಸೇರಿಸುವೆವು. ಪಾಪಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿರುವ ಈ ವಿಪ್ರನು ಪಾಪಿಯೇ ಆಗಿರುವನು. ದಂಡದಿಂದ ಇವನು ಶುದ್ಧನಾಗಲಿ!

## ೨. ಅಜಾಮಿಲ ಕಥಾ — ವಿಷ್ಣುದೂತ ವಚನ

ಶ್ರೀಶುಕನು ಪೇಳಿದನು–

ಆಗ ಭಗವದ್ದೂತರು ಯಮದೂತರ ಮಾತನ್ನು ಕೇಳಿ ಪ್ರಾಯಶ್ಚಿತ್ತ ಶಾಸ್ತ್ರದ ಸೂಕ್ಷ್ಮ ವನ್ನರಿತವರಾದ್ದರಿಂದ ನೊಂದು ಇಂತೆಂದರು–

ಆಹಾ! ಎಂತಹ ಅನ್ಯಾಯವಿದು! ಧರ್ಮದರ್ಶನರಿಗೂ ಅಧರ್ಮಸ್ಪರ್ಶವಾದೊಡೆ ಇನ್ನೇನು ಗತಿ? ಪಾಪವಿಲ್ಲದವರನ್ನೂ, ದಂಡನಾರ್ಹರೆಂದು ನಿರ್ಣಯಿಸಿ, ಶಿಕ್ಷಿಸುವ ಸಭೆ ಇನ್ನೆಂತಹದು? ಪ್ರಜರಿಗೆ ಶಾಸಕರು ತಂದೆಯಂತೆ ನಿಷ್ಪಕ್ಷಪಾತಿಗಳಿರಬೇಕು. ಆದರೆ ಶಾಸಕರೇ ಪಕ್ಷಪಾತವನ್ನು ಮಾಡಿದೊಡೆ, ಪ್ರಜರನ್ನು ರಕ್ಷಿಪರಿನ್ನಾರು? ಜನನಿಯೇ ವಿಷವನ್ನು ಕೊಡಲು ತನಯನಿಗೆ ರಕ್ಷಕರುಂಟೇ? ಶ್ರೇಷ್ಠರು ನಡೆದಂತಲ್ಲವೆ ಸಾಮಾನ್ಯರು ನಡೆಯುವುದು? ನಂಬಿ ತೊಡೆಗೆ ತಲೆಕೊಟ್ಟು ಮಲಗಿರಲು ತಲೆ ಕಡಿಯುವುದುಚಿತವೇ? ಜನರು ಪಶುಗಳಂತೆ – ಹಿರಿಯರೇ ಬೋಧಿಸಿದರೆ – ಧರ್ಮಾಧರ್ಮವಿವೇಚನಾರಹಿತರಾಗುವರು. ಅಜ್ಞಾನಿಗಳಿಂತು ವಿಶ್ವಾಸದಿಂದ ಸರ್ವಾತ್ಮನಾ ವರ್ತಿಸುವಾಗ ಯಾವ ಕರುಣಾನ್ವಿತನವರಿಗೆ ದ್ರೋಹವನ್ನು ಬಗೆಯಲೆಣಿಸುವನು? ನೋಡಿ. ಆ ಅಜಾಮಿಲನು ಕೋಟಿ ಜನ್ಮಗಳ ಪಾಪಗಳಿಗೀಗಲೇ – ಶ್ರೀಹರಿಯ ಪರಮಮಂಗಲ ನಾಮೋಚ್ಚಾರಣವನ್ನು ವಿವಶನಾಗಿ ಮಾಡಿದ ಮಾತ್ರದಿಂದಲೇ ಪ್ರಾಯಶ್ಚಿತ್ತವನ್ನು

ಮಾಡಿಕೊಂಡಿರುವನು. 'ನಾರಾಯಣ' ಎಂಬ ನಾಲ್ಕಕ್ಷರದ ಮಹಿಮೆಯನ್ನು ಕೇಳಿ ಇವನು ಮಾಡಿದ ಸರ್ವ ಪಾಪಗಳಿದರಿಂದ ಸುಟ್ಟು ನಷ್ಟವಾಗಿದೆ.

ಪಾತಕ ಸರ್ವಸ್ವಗರ್ವ ನಿರ್ವಾಪಣವೀ ಹರಿನಾಮಸ್ಮರಣೆಯು. ಭಕ್ತಿಯೊಂದಿರಲು ಸಾಕು-ಕಳ್ಳನಾಗಲಿ, ಸುಳ್ಳನಾಗಲಿ, ಸುರಾಪಾಯಿ, ಮಿತ್ರದ್ರೋಹಿ, ಬ್ರಹ್ಮಹಂತಾ, ಗುರುತಲ್ಪಗನಾಗಲಿ, ಸ್ತ್ರೀರಾಜ ಪಿತೃ ಗೋವಧಕನಾಗಲಿ, ಭಕ್ತಿಯಿಂದ ನಾರಾಯಣನ ಯಾವುದೇ ಗುಣಕರ್ಮ ನಾಮವನ್ನುಚ್ಚರಿಸಿದ ಮಾತ್ರದಿಂದ ಶುದ್ಧನಾಗುವನು. ಆನಂದಾದಿ ಗುಣಪೂರ್ಣನನ್ನು ವರ್ಣಿಸುವ ಪವಿತ್ರ ನಾಮಸಂಕೀರ್ತನದಿಂದ ಆಗುವ ಪಾಪಶುದ್ಧಿಯು, ವೇದವಿಚ್ಚತುರರು ಪೇಳಿದ ತಪೋವ್ರತಾದಿ ಪ್ರಾಯಶ್ಚಿತ್ತ ಮಾತ್ರದಿಂದ ಎಂದಿಗೂ ಆಗಲಾರದು. ಪ್ರಾಯಶ್ಚಿತ್ತವನ್ನು ಮಾಡಿದ ಮೇಲೂ ಮನವು ಅಶುದ್ಧವಾಗಿ ಕೆಡುಕನ್ನು ಮಾಡಿದೊಡೆ, ಪ್ರಾಯಶ್ಚಿತ್ತದ ಪ್ರಯೋಜನವೇನು? ಮನಶ್ಶುದ್ಧಿಯನ್ನು ತಂದುಕೊಟ್ಟು, ಪಾಪದ ಮಾರ್ಗವನ್ನು ಬಿಡಿಸುವ ಗೋವಿಂದನ ಗುಣಾನುವಾದವೇ ನಿಜವಾದ ಪ್ರಾಯಶ್ಚಿತ್ತವು. ಆದ್ದರಿಂದ ಸಕಲ ಪಾಪ ಪ್ರಾಯಶ್ಚಿತ್ತವನ್ನು ಮಾಡಿರುವ ಅಜಾಮಿಲನನ್ನು ನೀವು ನರಕವನ್ನು ಸೇರಿಸಲೆಣಿಸುವುದಾ ನ್ಯಾಯವಲ್ಲವೇ? ಸ್ಮರಣವು ಪುನಃ ಪುನಃ ಬಂದಿರಲು ಸಾಕು – ಸ್ಮರಣೆಗಾಗಿ ಪರಿಣಮಿಸುವ ನಾರಾಯಣಾದಿ ಸಾಂಕೇತಿಕ ಶಬ್ದಗಳು – ಮಧುಸೂದನಾದಿ ಪರಿಹಾಸಕ ಶಬ್ದಗಳು ಕ್ಷೀರ ಸಾಗರಶಯನಾದಿ ಸ್ತೋಭಜನಕ ಶಬ್ದಗಳು ಕೂಡ ಪಾಪಪರಿಹಾರಕವಾಗಿವೆ. ಹರಿದ್ವೇಷದಿಂದ ನಾಮೋಚ್ಚಾರಣ ವನ್ನು ಮಾಡಿದರೂ, ಸ್ಮರಣ ಬಾಹುಲ್ಯವಿದೆ; ಆದರೂ ಪಾಪ ನಾಶವಿಲ್ಲ. ಸದ್ಗತಿಯಂತೂ ಇಲ್ಲವೇ ಇಲ್ಲ. ಭಕ್ತಿಯಿಂದ ಭಕ್ತನುಚ್ಚರಿಸಿದ ಶ್ರೀಹರಿನಾಮಗಳು ಪಾಪ ವಿರಾಮಗಳು ಜಿತವೈಕುಂಠಾದಿ ಸುಖ ಧಾಮಗಳು ಎಂಬುವುದಕ್ಕೆ ಸಂಶಯವಿಲ್ಲ. ಆದ್ದರಿಂದ ಸದಾ ಹರಿ ನಾಮಸ್ಮರಣೆಯು ಕರ್ತವ್ಯವಾಗಿದೆ. ಬಿದ್ದರೆ, ಜಾರಿದರೆ, ಸರ್ಪವು ಕಚ್ಚಿದರೆ, ಲಗುಡಾಹತ ನಾದರೆ, ಬಿಡದೆ ಯಾರೂ ಹೇಳಿಕೊಡದೆ, ಪ್ರದ್ಯುಮ್ನ, ನಾರಾಯಣ, ಸರ್ಪಶಯನ, ಗುಡಾಕೇಶ ಮಿತ್ರ, ಪರಮಪವಿತ್ರ, ಹರೇ! ಎಂದು ಜ್ಞಾನಪೂರ್ವಕವಾಗಿ ನುಡಿದ ನರನು, ನರಕ ದುಃಖದಿಂದ ದೂರನಾಗುವನು.

ಋಷಿಗಳು ಪಾಪಗಳಿಗೆ ತಕ್ಕಂತೆ ವಿವಿಧ ಪ್ರಾಯಶ್ಚಿತ್ತಗಳನ್ನು ಪೇಳಿರುವರು; ನಿಜ. ತಪೋದಾನ ವ್ರತಾದಿಗಳಿಂದಲೇ ಅಲ್ಲದೆ, ಹರಿಸ್ಮರಣೆಯಿಂದ ಅಚಿನ್ಮನವು ಶುದ್ಧವಾಗಿ ಜೀವನನ್ನು ಪಾಪದಿಂದ ದೂರೀಕರಿಸಿ ಶ್ರೀಹರಿಯನ್ನು ಸೇರಿಸುವುದು. ಇಂತಹ ಪರಮ ಭಾಗವತ ಧರ್ಮವು ವೇದವಿಹಿತವಾಗಿದೆ. ಬಟ್ಟೆಯು ಒಗೆದಾಗ ಶುಭ್ರವಾಗುವಂತೆ, ನಿತ್ಯಸ್ಮರಣೆಯಿಂದ ಮನವೂ ಶುದ್ಧವಾಗುವುದು. ಜೀವನು ಅಸ್ವತಂತ್ರನು. ಪ್ರಾಯಶ್ಚಿತ್ತ ಕರ್ಮಫಲವಾದರೂ ಜೀವಾಧೀನವಿಲ್ಲ. ಆದ್ದರಿಂದ ಶ್ರೀಹರಿಗೆ ಶರಣಾಗತನಾಗಿ ಅಜ್ಞಾನದಿಂದಲೋ, ಅರ್ಥಜ್ಞಾನ ಪುರಸ್ಸರವಾಗಿಯೋ, ಶ್ರೀಶನ ಗುಣನಾಮವನ್ನು ನುಡಿದು ಪಾಡಲು, ಪಾಪರಾಶಿಯೆಲ್ಲವು ಬೆಂದು ಬೂದಿಯಾಗುವುದು. ತಿಳಿಯದಿದ್ದರೂ ವೀರ್ಯಯುತವಾದೌಷಧವು ಚೆನ್ನಾಗಿ ಉಪಯೋಗಿಸಲು, ರೋಗವನ್ನು ನಿರ್ಮೂಲಿಸುವಂತೆ, ಸಾಮಾನ್ಯ ಜ್ಞಾನಿಯಾದರೂ ಸರ್ವೋತ್ತಮನೆಂದರಿತು ಸಂಕೀರ್ತನ ಮಾಡಲು ಸರ್ವ ಪಾಪ ನಾಶವಾಗುವುದು. ಗರುಡಮಂತ್ರದಿಂದ ಸರ್ಪವಿಷನಾಶವು ಪ್ರತ್ಯಕ್ಷಸಿದ್ಧವಾಗಿದೆ. ಈ ವಿಷಯದಿ ಸಂಶಯವಿದ್ದರೆ ನಿಮ್ಮೊಡೆಯನನ್ನು ಕೇಳಿ, ಹೋಗಿ. ಪೂಜ್ಯನಾದ ಆ ಯಮಧರ್ಮನು ಧರ್ಮರಹಸ್ಯವನ್ನು ಚೆನ್ನಾಗಿ ತಿಳಿದಿರುವನು.

ಶ್ರೀಶುಕನು ಪೇಳಿದನು–

ಇಂತು ಭಾಗವತಧರ್ಮ ನಿರ್ಣಯವನ್ನು ನಿರೂಪಿಸಿ, ವಿಷ್ಣುದೂತರು. ಯಮಪಾಶದಿಂದ ವಿಪ್ರನನ್ನು ಬಿಡಿಸಲು, ಯಮದೂತರು ವಿಸ್ಮಿತರಾಗಿ ಸಂಯಮನಿಯನ್ನು ಸೇರಿ ಯಮರಾಜನಿಗೆ ನಡೆದ ವೃತ್ತಾಂತವನ್ನೆಲ್ಲವನ್ನೂ ನಿವೇದಿಸಿದರು.

ಅಜಾಮಿಲನು ಕಾಲಪಾಶಮುಕ್ತನಾಗಿ ಸಾತ್ವಿಕಸ್ವಭಾವಯುಕ್ತನೂ ಆದನು ಪಾಪವು ಬಿಟ್ಟು ಪೋದಂತೆ ಭಯವೂ ದೂರವಾಯಿತು. ವಿಷ್ಣು ಕಿಂಕರರಿಗೆ ವಂದಿಸಿ ದಿಟ್ಟಿಸಿ ನೋಡಿ ಕೌತುಕದಿಂದ ಮಾತಾಡಲುದ್ಯುಕ್ತನಾದ ವಿಪ್ರನಿಗೆ ಕಾಣಬರದಂತೆ ವಿಷ್ಣುದೂತರು ಅಂತರ್ಧಾನವನ್ನು ಪೊಂದಿದರು. ಯಮ-ವಿಷ್ಣುದೂತ ಸಂವಾದವನ್ನಾಲಿಸಿ ಅಜಾಮಿಲನ ಸಂಸ್ಮೃತಿಯು ಜಾಗೃತವಾಯಿತು. ವೇದವಿಹಿತವು, ನಾರಾಯಣ ಗುಣಾಶ್ರಯವು ಆದ ಸಂಕೀರ್ತನವೆಂಬ ಭಾಗವತಧರ್ಮದ ಪ್ರಭಾವವನ್ನು ಕಣ್ಣಾರ ಕಂಡು, ಕಿವಿಯಾರ ಕೇಳಿ, ಕಾಲಪಾಶಮುಕ್ತನಾದ ಅಜಾಮಿಲನು ಭಕ್ತಿರಸವು ಹೃದಯಸರದಿ ತುಂಬಿ ತುಳುಕಿ ಬರಲು ಪಶ್ಚಾತ್ತಾಪತಪ್ತನಾಗಿ ತನ್ನ ಪಾಪ ಕರ್ಮವನ್ನು ನೆನೆದು, ನಿಟ್ಟುಸಿರಿಟ್ಟು ಇಂತೆಂದನು–

ಅಯ್ಯೋ! ಎಷ್ಟು ಕೆಟ್ಟೆ! ಮನಸ್ಸನ್ನು ಸ್ವೇಚ್ಛೆಯಾಗಿ ಬಿಟ್ಟೆ. ವೃಷಲಿಗೆ ಸರ್ವಸ್ವವನ್ನು ಕೊಟ್ಟೆ. ಬ್ರಾಹ್ಮಣ ಕುಲಾಚಾರವನ್ನು ಬಿಟ್ಟೆ. ಛೀ! ನನಗೆ ಧಿಕ್ಕಾರವಿರಲಿ! ಕುಲವೆಂಬ ಚಿತ್ರಕ್ಕೆ ಕಾಡಿಗೆಯನ್ನು ಬಡಿದೆ. ಬಾಲೆ, ಸುಗುಣಶೀಲೆಯಾದ ಸತಿಯನ್ನು ತ್ಯಜಿಸಿ ಸುರಾಮಾಂಸಲೋಲುಪಾಳದ ಜಾರಿಣಿಯನ್ನು ಭಜಿಸಿದೆ! ಅಯ್ಯೋ ತಾಯಿತಂದೆಯರು ವೃದ್ಧರು, ಅನಾಥರು, ನನ್ನ ಬಿಟ್ಟನ್ಯರವರಿಗಾಧಾರವಿರಲಿಲ್ಲ. ಪಾಪ! ಕೃತಘ್ನನಾಗಿ ನೀಚನಂತೆ ಅವರನ್ನು ಕೈಬಿಟ್ಟೆ. ನಿಜ! ನನಗೇಕೆ ಘೋರ ದಾರುಣ ನರಕವಾಗಬಾರದು? ಧರ್ಮದೂಷಕನು, ಕಾಮೋಪಾಸಕನು, ಅರ್ಥನಾಶಕನಾದ ನನಗಲ್ಲದೆ ಮತ್ತಾರಿಗಾಯಮಯಾತನೆಗಳು? ಓಹೋ! ಏನು ನೋಡಿದೆನಿದು ಸ್ವಪ್ನವೋ? ತಥ್ಯವೋ? ಎಂತಹ ಆಶ್ಚರ್ಯವು! ನನ್ನನ್ನು ಪಾಶದಿಂದ ಸೆಳೆದ ಆ ಮೂವರೆಲ್ಲಿ ಪೋದರು? ನನ್ನನ್ನವರಿಂದ ಅಲ್ಲ– ಪಾಪಫಲವಾದ ನರಕದಿಂದ –ಬಿಡಿಸಿದ ಆ ನಾಲ್ವರಾದರೂ ಎಲ್ಲಿ? ಎಂತಹ ಮನೋಹರ ರೂಪವವರದು! ನಿಜವಾಗಿಯು ದೇವತಾಶ್ರೇಷ್ಠರೇ ಇರಬೇಕು. ಇಲ್ಲದಿರೆ ನನ್ನ ಮನಸ್ಸಿಂತು ಶಾಂತ ಪ್ರಸನ್ನವಾಗಲು ಸಾಧ್ಯವೇ? ಯಾವ ಜನುಮದ ಪುಣ್ಯವು ಒದಗಿ ಬಂತೋ ಕಾಣೆ! ದುರ್ಭಗನು, ಅಶುಚಿಯು ವೃಷಲೀಪತಿಯು ಆದ ನನ್ನ ಪಾಳು ನಾಲಿಗೆಗೆ ವೈಕಂಠನಾಮ ಗ್ರಹಣವೆಂತು ಬಂತು? ಕಪಟಿಯು, ಪಾಪಿಯು, ಬ್ರಾಹ್ಮಣಾಧಮನು, ಲಜ್ಜಾಹೀನನು ಆದ ನನ್ನಂತಹ ನೀಚನೆಲ್ಲಿ? ಪರಮಮಂಗಲನು, ಸರ್ವೋತ್ತಮನು, ಲಕ್ಷ್ಮೀಪತಿಯು ಆದ ಶ್ರೀಹರಿಯು ಶುಭ ನಾರಾಯಣ ನಾಮವೆಲ್ಲಿ? ಶ್ರೀಹರೇ! ದಯಾನಿಧೇ! ಇನ್ನಾದರೂ ಮನವನ್ನು ಇಂದ್ರಿಯಗಳನ್ನು, ಪ್ರಾಣಾದಿ ವಾಯುವ್ಯಾಪಾರವನ್ನೂ ನಿಗ್ರಹಿಸಿ, ಅಂಧಂತಮಃಪ್ರಾಯವಾದ ಸಂಸಾರಕೂಪದಲ್ಲಿ ಪುನಃ ಬೀಳದಿರಲು ಯತ್ನಿಸುವೆನು. ನನ್ನಲ್ಲಿ ಅನುಗ್ರಹಿಸು. ಅವಿದ್ಯಾಕಾರ್ಮಕರ್ಮಬಂಧದಿಂದ ಬಿಡಿಸಿಕೊಂಡು ಸರ್ವಭೂತ ಸುಹೃದನಾಗುವೆನು. ದಾಂತನಾಗುವೆನು. ಮನಸ್ಸನ್ನು ನಿನ್ನಲ್ಲೇ ಇಡುವೆನು. ನಿನ್ನ ಬಂಧ'ಶಕ್ತಿಯಾದ ಸ್ತ್ರೀ ಮಾಯೆಯನ್ನು ಜಯಿಸುವೆನು. ಅಧರ್ಮನಾಗಿ ಕ್ರೀಡಾಶುನಕನಂತೆ ಅವಳನ್ನನುವರ್ತಿಸಿ ನಡೆದ ನನ್ನ ಕಣ್ಣು ತೆರೆ. ನಾನು ನನ್ನದೆಂಬ ಮೋಹವನ್ನು ಬಿಡಿಸು. ಸ್ವಾಮೀ! ನಿನ್ನ ಕೀರ್ತನವನ್ನು ಮಾಡಿಸು– ಎಂದು ಚಿಂತಿಸಿ ವೈರಾಗ್ಯಪೂರ್ಣನಾಗಿ ಸರ್ವವನ್ನು ತ್ಯಜಿಸಿ ಅಜಾಮಿಲನು ಹರಿದ್ವಾರವನ್ನು ಸೇರಿದನು. ರಾಜನ್! ವಿಷ್ಣುಭಕ್ತರ ಕ್ಷಣಸಂಗವೇ ಸಾಕು ದುಸ್ಸಂಗ ದುಃಖ ನಿರ್ಮೂಲನಕ್ಕೆ!

ಅಜಾಮಿಲನು ಆ ದೇವಭೂಮಿಯಲ್ಲಿ ಯೋಗಾರೂಢನಾಗಿ ಇಂದ್ರಿಯಗಳಂ ಜಯಿಸಿ ಮನವನ್ನು ಶ್ರೀಹರಿಗರ್ಪಿಸಿ ತಪವಂಗೈದನು. ಜ್ಞಾನಾನಂದಪೂರ್ಣನಾದ ಸ್ವಾಂತರ್ಯಾಮಿಯ ಪ್ರತಿಬಿಂಬನಾದ ತಾನು ಶರೀರಭಿನ್ನನಾದಂತೆ ಹರಿಭಿನ್ನರೂ ಅಹುದೆಂದು ಚಿಂತಿಸಿ ಹರಿಯ ವ್ಯಾಪ್ತವಾದ ಕಾಲರೂಪಕ್ಕೆ ತನ್ನ ಬಿಂಬನಾದ ಪುರುಷನಾಮಕ ಹರಿಯಿಂದ ಭೇದವಿಲ್ಲವೆಂದೂ ತಿಳಿದು ದೇಹವನ್ನು ಬಿಟ್ಟನು. ಹಿಂದೆ ಬಂದಿದ್ದ ವಿಷ್ಣು ಪಾರ್ಷದರನ್ನಾಗಲೂ, ಕಂಡು, ಶಿರಸಾ ವಂದಿಸಿ ನಿಂತನು. ಗಂಗೆಯಲ್ಲಿ ಪರಿತ್ಯಕ್ತದೇಹನಾಗಿ ಪವಿತ್ರನಾದ ಅಜಾಮಿಲನು ನಿರ್ದೋಷ ದಿವ್ಯರೂಪವನ್ನು ಧರಿಸಿ, ಮುಕ್ತರಂತೆ ಶೋಭಿಸಿದನು. ವಿಷ್ಣುಪಾರ್ಷದರಿಂದ ವಿಮಾನವನ್ನೇರಿ ಶ್ರೀಯಃಪತಿಯ ಲೋಕವನ್ನೈದಿ ಮುಕ್ತನಾದನು.

ಸರ್ವಧರ್ಮದೂರನು ವಿಗತವಿಚಾರನು ಹತವ್ರತನು ದಾಸೀರತನು ಪತಿತನಾದ ಅಜಾಮಿಲನು ನರಕವನ್ನುಣ್ಣಿಸುವ ಮರಣವು ಬಂದಾಗ ಭಗವನ್ನಾಮವನ್ನು ಭಕ್ತಿಯಿಂದ ನುಡಿದು ಮುಕ್ತನಾದನು. ತೀರ್ಥಪದನ ನಾಮಕೀರ್ತನೆಗಿಂತಲೂ ಪವಿತ್ರವಾದ ಪಾಪ ಪರಿಹರಣೋಪಾಯವಿನ್ನೊಂದಿಲ್ಲ. ಮನವು ರಜಸ್ತಮೋರಹಿತವಾಗಿ ಪಾಪಕರ್ಮವನ್ನು ಬಿಟ್ಟು ಶುದ್ಧವಾಗಲು ಕೀರ್ತನವೇ ಕಾರಣವಾಗಿದೆ. ಇಂತು ಪಾಪಪರಿಹಾರಕವು ಪರಮ ರಹಸ್ಯವೂ ಆದ ಈ ಕಥೆಯನ್ನು ಭಕ್ತಿಯಿಂದ ಹೇಳಿ ಕೇಳಿದವರು ನರಕವನ್ನು ಪೊಂದುವುದಿಲ್ಲ. ಯಮ ಭಟರು ಅವರನ್ನು ಕಣ್ಣೆತ್ತಿ ನೋಡುವುದೂ ಇಲ್ಲ. ಎಷ್ಟೇ ಪಾಪಿಯಾದರೂ ನಾರಾಯಣನನ್ನು ನಂಬಿ ಪಶ್ಚಾತ್ತಾಪದಿಂದ ಸಂಕೀರ್ತನವನ್ನು ಮಾಡಿದರೆ ವಿಷ್ಣುಲೋಕವನ್ನು ಸೇರಿ ಸುಖಿಸುವನು.

'ಪುತ್ರನೆಂದರೆ ನಾರಾಯಣನೇ – ಮಗನಾದ ನಾರಾಯಣನು ನರಕತ್ರಾತನೇ? ಎಂದಿಗೂ ಅಲ್ಲ'ವೆಂದು ತಿಳಿದು ಮಗನ ನೆವದಿ ಶ್ರೀಧವನ ನೆನೆದು, ಅಜಾಮಿಲನು ಗೋವಿಂದ ಮಂದಿರ ವನ್ನು ಪೊಂದಿದನೆಂದ ಮೇಲೆ ಭಕ್ತಿಜ್ಞಾನಪುರಸ್ಸರವಾದ ಹರಿನಾಮ ಕೀರ್ತನೆಯಿಂದ ಮುಕ್ತ ನಾಗುವನೆಂದು ಹೇಳಬೇಕೆ?

## ೩. ಅಜಾಮಿಲ ಕಥಾ – ಯಮ – ಯಮಭಟ ಸಂವಾದ

ರಾಜನು ಕೇಳಿಕೊಂಡನು–

ಸ್ವಭಟರ ಮಾತನ್ನು ಕೇಳಿ ಧರ್ಮರಾಜನು ಏನೆಂದನು? ಮುರಾರಿಯ ಪರಿಚರರಿಂದ ತನ್ನ ಆಜ್ಞೆಯು ತಿರಸ್ಕೃತವಾಯಿತೆಂದು – ಎಂದೂ ಭಂಗವಿಲ್ಲದ ಯಮದಂಡವಂದು ನಿರರ್ಥಕ ವಾದುದನ್ನು ಕಂಡು ದಂಡಧರನು ಮಾಡಿದುದೇನು? ಇಂತು ಲೋಕ ಜನರ ಸಂಶಯವು ನಿಮ್ಮಿಂದಲ್ಲದೆ ಯಾರಿಂದ ನಿವಾರಿತವಾಗುವುದು?

ಶ್ರೀಶುಕನು ಪೇಳಿದನು–

ರಾಜನ್! ಭಗವದ್ಭಟರಿಂದ ವಾರಿತರಾಗಿ ಯಮಭಟರು ಸಂಯಮಪತಿಯನ್ನು ಕಂಡು ವಿಜ್ಞಾಪಿಸಿದರು–

'ಪ್ರಭೋ! ಮರಣವಿಷಯದಲ್ಲಿ ಲೋಕವನ್ನು ಶಾಸಿಸುವರೆಷ್ಟು ಜನ ಒಡೆಯರಾಗಿರುವರು? ತ್ರಿವಿಧಕರ್ಮಗಳಿಗೆ ತಕ್ಕಫಲವನ್ನಾರು ಕೊಡುವರು? ನಿನ್ನಂತೆ ದಂಡಧಾರಿಗಳನೇಕರಿದ್ದರೆ ಯಾರ ಆಜ್ಞೆಯನ್ನು ನಾವು ಪಾಲಿಸಲಾದೀತು? ಯಾರಿಗೆ ಮೃತ್ಯುವು? ಯಾರಿಗೆ ಮೋಕ್ಷ? ಶಾಸಕರು

ಇಂತು ಭಾಗವತಧರ್ಮ ನಿರ್ಣಯವನ್ನು ನಿರೂಪಿಸಿ, ವಿಷ್ಣುದೂತರು. ಯಮಪಾಶದಿಂದ ವಿಪ್ರನನ್ನು ಬಿಡಿಸಲು, ಯಮದೂತರು ವಿಸ್ಮಿತರಾಗಿ ಸಂಯಮನಿಯನ್ನು ಸೇರಿ ಯಮರಾಜನಿಗೆ ನಡೆದ ವೃತ್ತಾಂತವನ್ನೆಲ್ಲವನ್ನೂ ನಿವೇದಿಸಿದರು.

ಅಜಾಮಿಲನು ಕಾಲಪಾಶಮುಕ್ತನಾಗಿ ಸಾತ್ವಿಕಸ್ವಭಾವಯುಕ್ತನೂ ಆದನು ಪಾಪವು ಬಿಟ್ಟು ಹೋದಂತೆ ಭಯವೂ ದೂರವಾಯಿತು. ವಿಷ್ಣು ಕಿಂಕರರಿಗೆ ವಂದಿಸಿ ದಿಟ್ಟಿಸಿ ನೋಡಿ ಕೌತುಕದಿಂದ ಮಾತಾಡಲುದ್ಯುಕ್ತನಾದ ವಿಪ್ರನಿಗೆ ಕಾಣಬರದಂತೆ ವಿಷ್ಣುದೂತರು ಅಂತರ್ಧಾನವನ್ನು ಹೊಂದಿದರು. ಯಮ-ವಿಷ್ಣುದೂತ ಸಂವಾದವನ್ನಾಲಿಸಿ ಅಜಾಮಿಲನ ಸಂಸ್ಮೃತಿಯು ಜಾಗ್ರತವಾಯಿತು. ವೇದವಿಹಿತವು, ನಾರಾಯಣ ಗುಣಾಶ್ರಯವು ಆದ ಸಂಕೀರ್ತನವೆಂಬ ಭಾಗವತಧರ್ಮದ ಪ್ರಭಾವವನ್ನು ಕಣ್ಣಾರ ಕಂಡು, ಕಿವಿಯಾರ ಕೇಳಿ, ಕಾಲಪಾಶಮುಕ್ತನಾದ ಅಜಾಮಿಲನು ಭಕ್ತಿರಸವು ಹೃದಯಸರದಿ ತುಂಬಿ ತುಳುಕಿ ಬರಲು ಪಶ್ಚಾತ್ತಾಪತಪ್ತನಾಗಿ ತನ್ನ ಪಾಪ ಕರ್ಮವನ್ನು ನೆನೆದು, ನಿಟ್ಟುಸಿರಿಟ್ಟು ಇಂತೆಂದನು–

ಅಯ್ಯೋ! ಎಷ್ಟು ಕೆಟ್ಟೆ! ಮನಸ್ಸನ್ನು ಸ್ವೇಚ್ಛೆಯಾಗಿ ಬಿಟ್ಟೆ. ವೃಷಲಿಗೆ ಸರ್ವಸ್ವವನ್ನು ಕೊಟ್ಟೆ. ಬ್ರಾಹ್ಮಣ ಕುಲಾಚಾರವನ್ನು ಬಿಟ್ಟೆ. ಛೀ! ನನಗೆ ಧಿಕ್ಕಾರವಿರಲಿ! ಕುಲವೆಂಬ ಚಿತ್ರಕ್ಕೆ ಕಾಡಿಗೆಯನ್ನು ಬಡಿದೆ. ಬಾಲೆ, ಸುಗುಣಶೀಲೆಯಾದ ಸತಿಯನ್ನು ತ್ಯಜಿಸಿ ಸುರಾಮಾಂಸಲೋಲುಪಾಳದ ಜಾರಿಣಿಯನ್ನು ಭಜಿಸಿದೆ! ಅಯ್ಯೋ ತಾಯಿತಂದೆಯರು ವೃದ್ಧರು, ಅನಾಥರು, ನನ್ನ ಬಿಟ್ಟನ್ಯರವರಿಗಾಧಾರವಿರಲಿಲ್ಲ. ಪಾಪ! ಕೃತಘ್ನನಾಗಿ ನೀಚನಂತೆ ಅವರನ್ನು ಕೈಬಿಟ್ಟೆ. ನಿಜ! ನನಗೇಕೆ ಘೋರ ದಾರುಣ ನರಕವಾಗಬಾರದು? ಧರ್ಮದೂಷಕನು, ಕಾಮೋಪಾಸಕನು, ಅರ್ಥನಾಶಕನಾದ ನನಗಲ್ಲದೆ ಮತ್ತಾರಿಗಾಯಮಯಾತನೆಗಳು? ಓಹೋ! ಏನು ನೋಡಿದೆನಿದು ಸ್ವಪ್ನವೋ? ತಥ್ಯವೋ? ಎಂತಹ ಆಶ್ಚರ್ಯವು! ನನ್ನನ್ನು ಪಾಶದಿಂದ ಸೆಳೆದ ಆ ಮೂವರೆಲ್ಲಿ ಹೋದರು? ನನ್ನನ್ನವರಿಂದ ಅಲ್ಲ– ಪಾಪಫಲವಾದ ನರಕದಿಂದ –ಬಿಡಿಸಿದ ಆ ನಾಲ್ವರಾದರೂ ಎಲ್ಲಿ? ಎಂತಹ ಮನೋಹರ ರೂಪವವರದು! ನಿಜವಾಗಿಯು ದೇವತಾಶ್ರೇಷ್ಠರೇ ಇರಬೇಕು. ಇಲ್ಲದಿರೆ ನನ್ನ ಮನಸ್ಸಿಂತು ಶಾಂತ ಪ್ರಸನ್ನವಾಗಲು ಸಾಧ್ಯವೇ? ಯಾವ ಜನುಮದ ಪುಣ್ಯವು ಒದಗಿ ಬಂತೋ ಕಾಣೆ! ದುರ್ಭಗನು, ಅಶುಚಿಯು ವೃಷಲೀಪತಿಯು ಆದ ನನ್ನ ಪಾಳು ನಾಲಿಗೆಗೆ ವೈಕಂಠನಾಮ ಗ್ರಹಣವೆಂತು ಬಂತು? ಕಪಟಿಯು, ಪಾಪಿಯು, ಬ್ರಾಹ್ಮಣಾಧಮನು, ಲಜ್ಜಾಹೀನನು ಆದ ನನ್ನಂತಹ ನೀಚನೆಲ್ಲಿ? ಪರಮಮಂಗಲನು, ಸರ್ವೋತ್ತಮನು, ಲಕ್ಷ್ಮೀಪತಿಯು ಆದ ಶ್ರೀಹರಿಯು ಶುಭ ನಾರಾಯಣ ನಾಮವೆಲ್ಲಿ? ಶ್ರೀಹರೇ! ದಯಾನಿಧೇ! ಇನ್ನಾದರೂ ಮನವನ್ನು ಇಂದ್ರಿಯಗಳನ್ನು, ಪ್ರಾಣಾದಿ ವಾಯುವ್ಯಾಪಾರವನ್ನೂ ನಿಗ್ರಹಿಸಿ, ಅಂಧಂತಮಃಪ್ರಾಯವಾದ ಸಂಸಾರಕೂಪದಲ್ಲಿ ಪುನಃ ಬೀಳದಿರಲು ಯತ್ನಿಸುವೆನು. ನನ್ನಲ್ಲಿ ಅನುಗ್ರಹಿಸು. ಅವಿದ್ಯಾಕಾರ್ಮಕರ್ಮಬಂಧದಿಂದ ಬಿಡಿಸಿಕೊಂಡು ಸರ್ವಭೂತ ಸುಹೃದನಾಗುವೆನು. ದಾಂತನಾಗುವೆನು. ಮನಸ್ಸನ್ನು ನಿನ್ನಲ್ಲೇ ಇಡುವೆನು. ನಿನ್ನ ಬಂಧಶಕ್ತಿಯಾದ ಸ್ತ್ರೀ ಮಾಯೆಯನ್ನು ಜಯಿಸುವೆನು. ಅಧರ್ಮನಾಗಿ ಕ್ರೀಡಾಶುನಕನಂತೆ ಅವಳನ್ನನುವರ್ತಿಸಿ ನಡೆದ ನನ್ನ ಕಣ್ಣು ತೆರೆ. ನಾನು ನನ್ನದೆಂಬ ಮೋಹವನ್ನು ಬಿಡಿಸು. ಸ್ವಾಮೀ! ನಿನ್ನ ಕೀರ್ತನವನ್ನು ಮಾಡಿಸು– ಎಂದು ಚಿಂತಿಸಿ ವೈರಾಗ್ಯಪೂರ್ಣನಾಗಿ ಸರ್ವವನ್ನು ತ್ಯಜಿಸಿ ಅಜಾಮಿಲನು ಹರಿದ್ವಾರವನ್ನು ಸೇರಿದನು. ರಾಜನ್! ವಿಷ್ಣುಭಕ್ತರ ಕ್ಷಣಸಂಗವೇ ಸಾಕು ದುಸ್ಸಂಗ ದುಃಖ ನಿರ್ಮೂಲನಕ್ಕೆ!

ಅಜಾಮಿಲನು ಆ ದೇವಭೂಮಿಯಲ್ಲಿ ಯೋಗಾರೂಢನಾಗಿ ಇಂದ್ರಿಯಗಳಂ ಜಯಿಸಿ ಮನವನ್ನು ಶ್ರೀಹರಿಗರ್ಪಿಸಿ ತಪವಂಗೈದನು. ಜ್ಞಾನಾನಂದಪೂರ್ಣನಾದ ಸ್ವಾಂತರ್ಯಾಮಿಯ ಪ್ರತಿಬಿಂಬನಾದ ತಾನು ಶರೀರಭಿನ್ನನಾದಂತೆ ಹರಿಭಿನ್ನರೂ ಅಹುದೆಂದು ಚಿಂತಿಸಿ ಹರಿಯ ವ್ಯಾಪ್ತವಾದ ಕಾಲರೂಪಕ್ಕೆ ತನ್ನ ಬಿಂಬನಾದ ಪುರುಷನಾಮಕ ಹರಿಯಿಂದ ಭೇದವಿಲ್ಲವೆಂದೂ ತಿಳಿದು ದೇಹವನ್ನು ಬಿಟ್ಟನು. ಹಿಂದೆ ಬಂದಿದ್ದ ವಿಷ್ಣು ಪಾರ್ಷದರನ್ನಾಗಲೂ, ಕಂಡು, ಶಿರಸಾ ವಂದಿಸಿ ನಿಂತನು. ಗಂಗೆಯಲ್ಲಿ ಪರಿತ್ಯಕ್ತದೇಹನಾಗಿ ಪವಿತ್ರನಾದ ಅಜಾಮಿಲನು ನಿರ್ದೋಷ ದಿವ್ಯರೂಪವನ್ನು ಧರಿಸಿ, ಮುಕ್ತರಂತೆ ಶೋಭಿಸಿದನು. ವಿಷ್ಣುಪಾರ್ಷದರಿಂದ ವಿಮಾನವನ್ನೇರಿ ಶ್ರೀಯಃಪತಿಯ ಲೋಕವನ್ನೈದಿ ಮುಕ್ತನಾದನು.

ಸರ್ವಧರ್ಮದೂರನು ವಿಗತವಿಚಾರನು ಹತವ್ರತನು ದಾಸೀರತನು ಪತಿತನಾದ ಅಜಾಮಿಲನು ನರಕವನ್ನುಣ್ಣಿಸುವ ಮರಣವು ಬಂದಾಗ ಭಗವನ್ನಾಮವನ್ನು ಭಕ್ತಿಯಿಂದ ನುಡಿದು ಮುಕ್ತನಾದನು. ತೀರ್ಥಪದನ ನಾಮಕೀರ್ತಿನೆಗಿಂತಲೂ ಪವಿತ್ರವಾದ ಪಾಪ ಪರಿಹರಣೋಪಾಯವಿನ್ನೊಂದಿಲ್ಲ. ಮನವು ರಜಸ್ತಮೋರಹಿತವಾಗಿ ಪಾಪಕರ್ಮವನ್ನು ಬಿಟ್ಟು ಶುದ್ಧವಾಗಲು ಕೀರ್ತನವೇ ಕಾರಣವಾಗಿದೆ. ಇಂತು ಪಾಪಪರಿಹಾರಕವು ಪರಮ ರಹಸ್ಯವೂ ಆದ ಈ ಕಥೆಯನ್ನು ಭಕ್ತಿಯಿಂದ ಹೇಳಿ ಕೇಳಿದವರು ನರಕವನ್ನು ಪೊಂದುವುದಿಲ್ಲ. ಯಮ ಭಟರು ಅವರನ್ನು ಕಣ್ಣೆತ್ತಿ ನೋಡುವುದೂ ಇಲ್ಲ. ಎಷ್ಟೇ ಪಾಪಿಯಾದರೂ ನಾರಾಯಣನನ್ನು ನಂಬಿ ಪಶ್ಚಾತ್ತಾಪದಿಂದ ಸಂಕೀರ್ತನವನ್ನು ಮಾಡಿದರೆ ವಿಷ್ಣುಲೋಕವನ್ನು ಸೇರಿ ಸುಖಿಸುವನು.

'ಪುತ್ರನೆಂದರೆ ನಾರಾಯಣನೇ – ಮಗನಾದ ನಾರಾಯಣನು ನರಕತ್ರಾತನೇ? ಎಂದಿಗೂ ಅಲ್ಲ'ವೆಂದು ತಿಳಿದು ಮಗನ ನೆವದಿ ಶ್ರೀಧವನ ನೆನೆದು, ಅಜಾಮಿಲನು ಗೋವಿಂದ ಮಂದಿರ ವನ್ನು ಪೊಂದಿದನೆಂದ ಮೇಲೆ ಭಕ್ತಿಜ್ಞಾನಪುರಸ್ಸರವಾದ ಹರಿನಾಮ ಕೀರ್ತನೆಯಿಂದ ಮುಕ್ತ ನಾಗುವನೆಂದು ಹೇಳಬೇಕೆ?

## ೩. ಅಜಾಮಿಲ ಕಥಾ — ಯಮ — ಯಮಭಟ ಸಂವಾದ

ರಾಜನು ಕೇಳಿಕೊಂಡನು–

ಸ್ವಭಟರ ಮಾತನ್ನು ಕೇಳಿ ಧರ್ಮರಾಜನು ಏನೆಂದನು? ಮುರಾರಿಯ ಪರಿಚರರಿಂದ ತನ್ನ ಆಜ್ಞೆಯು ತಿರಸ್ಕೃತವಾಯಿತೆಂದು – ಎಂದೂ ಭಂಗವಿಲ್ಲದ ಯಮದಂಡವಂದು ನಿರರ್ಥಕ ವಾದುದನ್ನು ಕಂಡು ದಂಡಧರನು ಮಾಡಿದುದೇನು? ಇಂತು ಲೋಕ ಜನರ ಸಂಶಯವು ನಿಮ್ಮಿಂದಲ್ಲದೆ ಯಾರಿದಂ ನಿವಾರಿತವಾಗುವುದು?

ಶ್ರೀಶುಕನು ಪೇಳಿದನು–

ರಾಜನ್! ಭಗವದ್ಭಟರಿಂದ ವಾರಿತರಾಗಿ ಯಮಭಟರು ಸಂಯಮಪತಿಯನ್ನು ಕಂಡು ವಿಜ್ಞಾಪಿಸಿದರು–

'ಪ್ರಭೋ! ಮರಣವಿಷಯದಲ್ಲಿ ಲೋಕವನ್ನು ಶಾಸಿಸುವರೆಷ್ಟು ಜನ ಒಡೆಯರಾಗಿರುವರು? ತ್ರಿವಿಧಕರ್ಮಗಳಿಗೆ ತಕ್ಕಫಲವನ್ನಾರು ಕೊಡುವರು? ನಿನ್ನಂತೆ ದಂಡಧಾರಿಗಳನೇಕರಿದ್ದರೆ ಯಾರ ಆಜ್ಞೆಯನ್ನು ನಾವು ಪಾಲಿಸಲಾದೀತು? ಯಾರಿಗೆ ಮೃತ್ಯುವು? ಯಾರಿಗೆ ಮೋಕ್ಷ? ಶಾಸಕರು

ಪರಸ್ಪರ ವಿರೋಧದಿಂದ ವರ್ತಿಸಲು ಮಂಡಲಾಧಿಪತಿಗಳಂತೆ ಅನ್ಯಾಧೀನರೆನಿಸುವರಾಗಲಿ ಸ್ವತಂತ್ರರಾಗುವುದಿಲ್ಲ. ಆದ್ದರಿಂದ ಲೋಕೇಶ! ನೀನೊಬ್ಬನೇ ಶಾಸಕನು; ಅಧಿಪತಿಯು; ಶುಭಾ ಶುಭಫಲಪ್ರದಾತನು ನೀನೇ! ಅಂತಹ ನಿನ್ನಯ ಶಾಸನವಿಂದು ತಿರಸ್ಕೃತವಾಯಿತು. ಮನುಜ ಲೋಕದಿಂದ ಯಾತನಾಗೃಹವನ್ನು ಸೇರಿಸಲು ನಿನ್ನಾಜ್ಞೆಯಂತೆ ಪಾಶದಿಂದ ಕಟ್ಟಿ ತರುತ್ತಿದ್ದ ಪಾಪಿಯನ್ನು ನಾಲ್ಕುರು ಸಿದ್ಧರು ಬಂದು ನಮ್ಮನ್ನು ತಡೆದು, ಬಿಡಿಸಿ ಪಾಶಗಳನ್ನು ಛೇದಿಸಿದರು. ಅವನು 'ನಾರಾಯಣಾ' ಎಂದೊದರಲು 'ಭಯಪಡಬೇಡ'ವೆನ್ನುತ್ತ ಓಡಿಬಂದ ಆ ಸುಂದರ ಪುರುಷರಾರು? ದಯಮಾಡಿ ನಮಗೆ ತಿಳಿಸಿಕೊಡು' ಎಂದು ಬೇಡಿದ ಭಟರನ್ನು ನೋಡಿ, ನಿಂದು ಗೋವಿಂದನಿಗೆ ವಂದಿಸಿ ವೈವಸ್ವತನು ಶ್ರೀಭಗವನ್ಮಂಗಲ ಮಹಿಮಾಕಥನೋತ್ಸುಕತೆ ಯಿಂದ ಇಂತು ನುಡಿದನು–

ಜಂಗಮಸ್ಥಾವರಾತ್ಮಕವಾದೀ ಜಗವೆಲ್ಲ ಶ್ರೀಶನದಲ್ಲಿ ತಂತುಗಳು ಕಂಥಾಪಟಲದಿ ಓತಪ್ರೋತವಾಗಿ ನಿಂತಿರುವಂತೆ ನಿಂತಿದೆ. ಅವನ ಒಂದಂಶದಿಂದ ಜಗಜ್ಜನನ ಸ್ಥಿತಿನಾಸಗಳಾಗು ತ್ತಿವೆ. ಬ್ರಹ್ಮರುದ್ರಾದಿಗಳವನ ಭಿನ್ನಾಂಶರು. ಅವರೆಲ್ಲರೂ ಮುಗುದಾಣೆಯಿಂದ ಕಟ್ಟಲ್ಪಟ್ಟು ಕೃಷಿಕನ ಗೋಣೆಯನ್ನು ಹೊತ್ತು ತಿರುಗುವ ಪಶುಗಳಂತೆ ಶ್ರೀಶಾಧೀನರಾಗಿರುವರು. ವಿವಿಧ ರಜ್ಜುಗಳಿಂದ ಕಟ್ಟಲ್ಪಟ್ಟು ವಿವಿಧ ಪಶುಗಳು ಯಜಮಾನನ ಭಾರವಹನಾದಿ ಕಾರ್ಯದಲ್ಲಿ ತದಧೀನನಾಗಿ ನಡೆಯುವಂತೆ, ಶ್ರೀರಮಣನಿಂದ ಅಭಿವ್ಯಕ್ತವಾದ ವಾಕ್ಯಗಳಿಗೆ ವಿಧೇಯರಾಗಿ, ವಿವಿಧನಾಮಗಳನ್ನವನಿಂದ ಪಡೆದ ಬ್ರಹ್ಮಾದಿ ಜೀವರು ವಿವಿಧ ಕರ್ಮಗಳನ್ನವನಾಜ್ಞೆಯಂತೆ ಹರಿಸೇವೆ ಎಂದು ತಿಳಿದು ಮಾಡುತ್ತಿರುವರು. ನಾನು, ಮಹೇಂದ್ರನು, ನಿರ್ಋತಿವರುಣರು, ಸೋಮಸೂರ್ಯವಹ್ನಿಗಳು, ರುದ್ರ ವಾಯುಗಳು, ಬ್ರಹ್ಮದೇವನು, ವಸುರುದ್ರಾದಿತ್ಯರು, ಸಿದ್ಧಸಾಧ್ಯರು, ವಿಶ್ವೇದೇವತೆಗಳು, ಮನ್ವಾದಿಗಳು ಇತರರೆಲ್ಲರು, ಶುದ್ಧಸಾತ್ವಿಕರೆನಿಸುವರು. ಮರೀಚ್ಯಾದಿ ಪ್ರಜೇಶರು, ಭೃಗ್ವಾದಿ ತಪಸ್ವಿಗಳೂ ಸಾತ್ವಿಕರೇ. ಅಂತಹವರೂ ಶ್ರೀಹರಿಯ ಬಂಧಕಶಕ್ತಿಗೆ ಸಿಲುಕಿ, ಅವನ ಮಹಿಮೆಯನ್ನು ಸಾಕಲ್ಯೇನ ತಿಳಿಯಲಾರದೆ ಇರುವರೆಂದ ಮೇಲೆ, ಇತರರ ಪಾಡೇನು? ಜೀವರಾರೇ ಆಗಲಿ ತಮ್ಮ ಹೃದಯದಲ್ಲೆ ಇರುವ ಅಂತರ್ಯಾಮಿಯನ್ನು ವಚಸಾ ತುತಿಸಲು, ಮನಸಾ ಚಿಂತಿಸಲು, ಇಂದ್ರಿಯಂಗಳಿಂದ ತಿಳಿಯಲು, ಅಶಕ್ತರಾಗಿರುವರು. ಕಣ್ಣು ರೂಪದಲ್ಲಿ ನೋಡುವುದಾಗಲಿ ತನ್ನನ್ನು ತಾನೇ ನೋಡಲು ಶಕ್ತವಾಗದಿರುವಂತೆ, ಸರ್ವವಿಲಕ್ಷಣನಾದ ಶ್ರೀಶನನ್ನು ಪೂರ್ಣವಾಗಿ ಯಾರೂ ತಿಳಿಯಲಾರರು. ಶ್ರೀಶನು ಸರ್ವೇಂದ್ರಿಯ ಪ್ರೇರಕನು, ಆದರೆ ಇಂದ್ರಿಯಗೋಚರನಾಗದಿರುವ ಮಹಾಮಹಿಮನು.

ಸರ್ವತಂತ್ರ ಸ್ವತಂತ್ರನು, ಪಾಪಪರಿಹಾರಕನು ಆದ ಲಕ್ಷ್ಮೀನಾಥನು ಜೀವೇಶನು; ಸರ್ವಪ್ರಭುವಾದ ಆ ಶ್ರೀಹರಿಯ ದೂತರು ಅವನಂತೆ ದಿವ್ಯರೂಪವಾಗಿ, ಭವ್ಯಕರುಣರಾಗಿ ಸಂಚರಿಸುತ್ತಿರುವರು. ಆ ವಿಷ್ಣುಪಾರ್ಷದರು ದೇವಪೂಜ್ಯರಾಗಿರುವರು. ಆಶ್ಚರ್ಯಕರ ಚರಿತ ರಾದ ಆ ಮಹನೀಯರನ್ನೆಲ್ಲರೂ ತಿಳಿಯಲಾಗದು. ವಿಷ್ಣುಭಕ್ತರನ್ನು ಪರರಿಂದ ರಕ್ಷಿಸುತ್ತಾ ಶ್ರೀಹರಿದೂತರು ನರಕಾದ್ಯನರ್ಥಗಳಿಂದ ಅವರನ್ನು ಪಾರುಮಾಡುವರು. ಈ ಧರ್ಮಸೂಕ್ಷ್ಮ ವನ್ನು ಶ್ರೀಹರಿಯೊಬ್ಬನೇ ಚೆನ್ನಾಗಿ ತಿಳಿದಿರುವನು. ಅವನೇ ಧರ್ಮನಿರೂಪಕನಲ್ಲವೇ? ಋಷಿ ಗಳು, ದೇವತೆಗಳು, ಸಿದ್ಧರು, ವಿದ್ಯಾಧರಚಾರಣರು, ಅಸುರರು ಕೂಡ ಅದನ್ನು ಚೆನ್ನಾಗಿ ತಿಳಿಯಲಾರರೆಂದಮೇಲೆ ಮನುಜರೆಂತು ತಿಳಿಯುವರು?

ಶ್ರೀದೇವಿ, ಬ್ರಹ್ಮದೇವ, ನಾರದ, ಶಂಭವು, ಸನತ್ಕುಮಾರ, ಕಪಿಲಮುನಿ, ಪ್ರಹ್ಲಾದ , ಜನಕ, ಭೀಷ್ಮ, ಬಲಿ, ಶುಕರ್ಷಿ, ನಾನು ಎಂಬ ಹನ್ನೆರಡು ಜನರು ಭಾಗವತ ಧರ್ಮಸೂಕ್ಷ್ಮ ವನ್ನು ಅವನ ದಯೆಯಿಂದ ಯಥಾಯೋಗ್ಯವಾಗಿ ಅರಿತಿರುವೆವು. ಭಾಗವತಧರ್ಮವು ಪರಮ ರಹಸ್ಯವಾಗಿದೆ ಮತ್ತು ದುರ್ಬೋಧವೂ ಆಗಿದೆ. ಶುದ್ಧ ಭಾಗವತಧರ್ಮವು ಮೋಕ್ಷಸಾಧನ ವೆಂದು ಜ್ಞಾನಿಗಳು ಪೇಳುವರು. ಭಕ್ತಿಯಿಂದ ಭಗವನ್ನಾಮ ಸಂಕೀರ್ತನವೇ ಮೊದಲಾದ ಭಾಗವತ ಧರ್ಮದಂತೆ ಶ್ರೇಷ್ಠನಾದ ಮೋಕ್ಷಸಾಧನವಿನ್ನೊಂದಿಲ್ಲ.

ಪುತ್ರರೇ! ನೀವೇ ನೋಡಿದಂತೆ ಮಗನ ನೆವದಿ ನಾರಾಯಣನ ನಾಮವನ್ನುಚ್ಚರಿಸಿದ ಅಜಾಮಿಲನು ಮೃತ್ಯುಪಾಶಮುಕ್ತನಾದನಲ್ಲವೆ? ಆದ್ದರಿಂದ ಸರ್ವಪಾಪ ಪ್ರಾಯಶ್ಚಿತ್ತವೆಂದರೆ ಭಕ್ತಿಪೂರ್ವಕ ಭಗವನ್ನಾಮಗ್ರಹಣವೇ ಸರಿ. ನಾರಾಯಣಾದಿ ಗುಣನಾಮಗಳನ್ನು ಮಧೂಸೂದ ನಾದಿ ಕರ್ಮನಾಮಗಳನ್ನು ಮೀರಿದ ಪ್ರಾಯಶ್ಚಿತ್ತವಿನ್ನೊಂದಿಲ್ಲ. ಪಾಪಿಯಾದ ಅಜಾಮಿಲನು ನಾರಾಯಣನೆಂದು ಮಗನನ್ನು ನೆನೆದು ಒರಲಿದ ಮಾತ್ರದಿಂದ ಮುಕ್ತಿಯನ್ನು ಪೊಂದಲಿಲ್ಲವೇ? ಆದರೂ ಈ ಧರ್ಮಸೂಕ್ಷ್ಮವನ್ನು ಜನರು ಅರಿತಿಲ್ಲ. ಮಾಯೆ ಕವಿತು ಕಣ್ಣು ಕಾಣದೆ ವೇದರಹಸ್ಯಗಳನ್ನು ತಿಳಿಯಲಾರದ ಜಡಮತಿಗಳು ಸ್ವರ್ಗಾದಿ ಕಾಮಿತಗಳಂ ಬೇಡಿ ಯಜ್ಞಗಳನ್ನು ಮಾಡಿದ ಶ್ರೀಹರಿದೂರರಾಗಿರುವರು. ಪುಷ್ಪದಂತೆ ನಶ್ವರವಾದ ವೈಷಯಿಕ ಸುಖವನ್ನೇ ಬೇಡುವ ಮೂಢರಿಗೆ ಮೋಕ್ಷಾನಂದವು ರುಚಿಸುವುದೇ? ಇದೆಲ್ಲವನ್ನೂ ವಿಚಾರಮಾಡಿ ಬುದ್ಧಿವಂತರು ಸರ್ವಪ್ರಕಾರದಿಂದ ಶ್ರೀಹರಿಯನ್ನು ನಂಬಿ ಭಕ್ತಿಯೋಗವನ್ನವಲಂಬಿಸಿರುವರು. ಅಂತಹ ಸುಜನರನ್ನು ದಂಡಿಸುವ ಅಧಿಕಾರವೆನಗಿಲ್ಲ. ಒಂದು ವೇಳೆ ಅವರು ಪಾಪಗಳನ್ನು ಮಾಡಿದ್ದರೂ ಶ್ರೀಶನ ಪರಮ ಪವಿತ್ರ ಕೀರ್ತನವು ಪ್ರಾಯಶ್ಚಿತ್ತವಾಗಿ ಅದರ ಪಾಪರಾಶಿಯನ್ನು ನಾಶಮಾಡಿರು ವುದು ನಿಜ. ವೇದಗೀತ ಪವಿತ್ರಾಚಾರವಂತರು, ರಾಗದ್ವೇಷಾದಿದೋಷರಹಿತನು, ಸರ್ವದರ್ಶ ನರು ಆದ ಭಗವದ್ಭಕ್ತರ ಗೊಡವೆಗೆ ಪೋಗಬೇಡಿ. ಅವರನ್ನು ಶ್ರೀರಮಣನ ಕೌಮೋದಕೀ ಗದೆಯು ರಕ್ಷಿಸುತ್ತಿರುವುದು. ಅವರಿಗೆ ಯಾರಿಂದಲೂ ಭಯವಿಲ್ಲ. ನಾನು ಕೂಡ ಅವರನ್ನು ಶಿಕ್ಷಿಸಲು ಅರ್ಹನಾಗದಿರುವೆನು.

ಮುಕುಂದಪಾದಾರವಿಂದ ಮಕರಂದ ಪಾನದಿಂದ ವಿಮುಖರಾದ ದುರ್ಜನರು ನಿಮಗೆ ಶಿಕ್ಷಾಯೋಗ್ಯರಾಗಿರುವರು. ಪರಮ ಶುದ್ಧಾಂತಃಕರಣವು, ಸಾರಗ್ರಾಹಿಗಳಾದ ಭಗವದ್ಭಕ್ತ ಜನರೇ ಸೇವಿಸುವ ಶ್ರೀಹರಿಚರಿತೆಯನ್ನು ಪರಿತ್ಯಜಿಸಿ, ದುಷ್ಟ ಸಾಂಸಾರಿಕ ಜೀವನವನ್ನೇವರಿಸಿ, ನರಕಸದೃಶ ಪಶುಯೋನಿಯಲ್ಲಿಯಾದರೂ ಸಿಗುವ ವೈಷಯಿಕಸುಖವನ್ನು ಸಾಕೆನ್ನದೆ ಭಜಿಸುವ ಕುಜರನ್ನು ಕಟ್ಟಿ ತನ್ನಿ! ನಾಲಿಗೆಯಿಂದ ಭಗವದ್ಗುಣನಾಮವನ್ನುಚ್ಚರಿಸದೆ, ಮನದಿಂದ ಹರಿಚರಣಾರ ವಿಂದವನ್ನು ಸ್ಮರಿಸದೆ, ಒಮ್ಮೆಯಾದರೂ ತಮ್ಮ ಶಿರದಿಂದ ಶ್ರೀಹರಿಗೆ ಬಾಗಿ ವಂದಿಸದೆ, ಲೋಕನಿಂದಿತ ಕುಕರ್ಮಗಳನ್ನು ಮಾಡುವ ವಿಷ್ಣುಚರಣಸೇವಾವಿಮುಖರನ್ನು ಬಿಡದೆ ತನ್ನಿ!

ಒಂದು ಸಲ ಗೋವಿಂದ ಪಾದಾರವಿಂದ ಮಕರಂದಪಾನವನ್ನು ಮಾಡಿದವನು ಮತ್ತೆ ಮತ್ತನಾಗಿ ಪಾಪಕಾರಣವೆನಿಸುವ ವಿಷಯಗಳಲ್ಲಿ ಎಂದಿಗಾದರೂ ಮಗ್ನರಾಗಿ ಮೈಮರೆವನೇ? ಕಾಮಹತನಾದ ಕುಜನನಂತೆ ಒಂದು ಪಾಪವನ್ನು ಕಳೆಯಲು ಮತ್ತೊಂದು ಹಿಂಸಾದಿರೂಪ ಪ್ರಾಯಶ್ಚಿತ್ತವನ್ನು ಮಾಡುತ್ತಾ, ಸಂಸಾರಕೂಪದಿ ಬೀಳುವನೇ? ಎಂದಿಗೂ ಇಲ್ಲ.

ಪುರಾಣ ಪುರುಷಾ! ನಾರಾಯಣಾ! ನನ್ನ ದೂತರು ನಿನ್ನ ಭಕ್ತನಿಗೆ ಮಾಡಿದ ಅಪಚಾರವನ್ನು ಕ್ಷಮಿಸು! ನಿನ್ನ ಮಹಿಮೆಯನ್ನು ತಿಳಿಯದೆ, ಅಪರಾಧವೆಸಗಿದ ನಮ್ಮನ್ನು, ಕೈಜೋಡಿಸಿ ವಂದಿಸುವ ಮಾತ್ರದಿಂದ ಕ್ಷಮಿಸುವ ಸರ್ವಜ್ಞನು ಕರುಣಾಮಯ ನೀನೇ ದಿಟ. ಶ್ರೀಹರೇ! ನಿನಗೆ ನಮಸ್ಕಾರವು!

ಶ್ರೀಶುಕನು ಪೇಳಿದನು–

ರಾಜನ್! ಆಗ ಯಮಕಿಂಕರರು ತಮ್ಮ ಪ್ರಭುವಾಡಿದ ಮಾತನ್ನು ಕೇಳಿ ಭಗವನ್ಮಹಿಮೆಯನ್ನರಿತು ಆಶ್ಚರ್ಯಚಕಿತರಾದರು. ಅಂದಿನಿಂದ ಅಚ್ಯುತನ ನೆಚ್ಚಿದ ಭಕ್ತಿ ಜನರನ್ನು ಭಯದಿಂದ ಸಮೀಪಿಸದೆ, ದೂರದಿಂದಲೇ ನೋಡಿ, ವಂದಿಸಿ ಸರಿದು ಪೋಗುತ್ತಿರುವರು. ಆದ್ದರಿಂದ ಸಮಸ್ತ ಪಾಪಗಳಿಗೆ ಸರಿಯಾದ ಪ್ರಾಯಶ್ಚಿತ್ತವು ಭಗವನ್ನಾಮ ಸಂಕೀರ್ತನವೇ ಹೊರತನ್ಯವಿಲ್ಲ. ಜಗನ್ಮಂಗಲಮಂಗಲನಾದ ಹರಿಯ ನಾಮದಿಂದ ಸರಿಯಾದ ಪಾಪವೂ ಇಲ್ಲ. ಶ್ರೀಹರಿಯ ಪವಿತ್ರಚರಿತ್ರೆಯನ್ನು ಕೇಳಿ, ಪೇಳುವಾಗ ಪುಟ್ಟಿದ ಭಕ್ತಿಯಿಂದ ಮನವು ಶುದ್ಧವಾಗುವುದಾಗಲಿ ಭಕ್ತಿರಹಿತವಾದ ತಪೋವ್ರತಾದಿಗಳಿಂದಲ್ಲ.

ಈ ಇತಿಹಾಸವನ್ನು ಪೂಜ್ಯ ಅಗಸ್ತ್ಯನು ಮಲಯಾಚಲದಿ ತನ್ನ ಆಶ್ರಮದಿ, ಶ್ರೀಹರಿಯನ್ನು ಪೂಜಿಸುತ್ತಾ, ಹೇಳಿದನು, ನಾನು ಈ ಪವಿತ್ರ ಕಥಾರಹಸ್ಯವನ್ನು ಅವರಿಂದ ಕೇಳಿ ನಿನಗೆ ಪೇಳಿರುವೆನು.

## ೪. ದಕ್ಷತಪಸ್ಸು – ಹಂಸಗುಹ್ಯಸ್ತುತಿ

ರಾಜನು ಕೇಳಿದನು–

ಸ್ವಾಯಂಭುವ ಮನ್ವಂತರದಿ ನಡೆದ ದೇವಾಸುರ ನರ ಮೃಗ ಪಕ್ಷಿನಾಗಾದಿ ಸೃಷ್ಟಿಯನ್ನು ಸಂಗ್ರಹವಾಗಿ ಕೇಳಿದೆನು. ಈಗ ವಿಸ್ತಾರವಾಗಿ ಅವಾಂತರ ಸರ್ಗವನ್ನೂ ಪೇಳು.

ಶ್ರೀ ಸೂತನು ಪೇಳುವನು.

ಇಂತು ರಾಜನ ಪ್ರಶ್ನೆಯನ್ನಾಕರ್ಣಿಸಿ ಶ್ರೀ ಶುಕನು ಸಂತಸದಿ ಇಂತೆಂದನು–

ರಾಜನ್! ಪ್ರಜೇತಸರು ತಪವನ್ನು ಮುಗಿಸಿ ಸಮುದ್ರದಿಂದ ಎದ್ದು ಬಂದಾಗ ತೀರ ದೇಶವೆಲ್ಲವೂ ಬಿಡುವಿಲ್ಲದ ಬೆಳೆದ ಗಿಡಗಳಿಂದ ತುಂಬಿದ್ದನ್ನು ಕಂಡು ಕುಪಿತರಾದರು. ತಮ್ಮ ಮುಖದಿಂದ ವಾಯುವನ್ನು ವಹ್ನಿಯನ್ನು ಹೊರಗೆಡಹಿ, ಗಿಡಗಳನ್ನೆಲ್ಲ ಸುಡಲು ಉಪಕ್ರಮಿಸಿದರು. ಆಗ ಅವರನ್ನು ಶಾಂತಿಗೊಳಿಸುತ್ತಾ ಓಷಧೀಶನಾದ ಚಂದ್ರನಿಂತೆಂದನು.

ಮಹಾಭಾಗರೇ! ಬಡಗಿಡಗಳ ಮೇಲೇಕೆ ಕೆಂಡವನ್ನು ಕಾರುವಿರಿ? ಪ್ರಜಾವೃದ್ಧಿಯನ್ನು ಬೇಡಿ ತಪವನ್ನು ಮಾಡಿದ ನಿಮಗೆ ಪ್ರಜಾಜೀವನ ಕಾರಣರಾದ ವನಸ್ಪತಿ ತರುಗಳು ಮಾಡಿದ ದ್ರೋಹವಾದರೂ ಏನು! ಪ್ರಜಾಪಾಲಕರಾದ ನಿಮಗೆ ವೃಕ್ಷ ತರು ಲತಾ ದ್ರೋಹವು ಸಲ್ಲದು. ಪ್ರಜಾಪತಿಗಳೊಡೆಯನಾದ ಶ್ರೀಹರಿಯು ಹವ್ಯಕವ್ಯಗಳಿಗುಪಕರಿಸವಂತೆ ಓಷಧಿಗಳನ್ನು ನಿರ್ಮಿಸಿದನು. ಚರಜೀವರಿಗಚರರು, ಪಾದಚಾರಿಗಳಿಗಪಾದರು, ಸಹಸ್ತರಿಗೆ ವಿಹಸ್ತರೂ ಆಹಾರವಾಗಿ ಇರುವರು. ಪ್ರಜಾಸರ್ಗವನ್ನು ಮಾಡಲು ಆಜ್ಞಾಪಿಸಿದ ತಂದೆಯ ಮಾತನ್ನು ಶಿರಸಾ ವಹಿಸಿದ ನೀವು ವೃಕ್ಷಗಳನ್ನು ಸುಡುವುದು ಉಚಿತವಲ್ಲ. ಸಜ್ಜನರ ಮಾರ್ಗದಿ ನಡೆಯಿರಿ; ಕೋಪವನ್ನು ನಿಗ್ರಹಿಸಿರಿ. ನಿಮ್ಮ ಪಿತೃಪಿತಾಮಹರು ನಡೆದ ಶಾಂತಿಮಾರ್ಗವನ್ನು ಅನುಸರಿಸಿರಿ.

ಬಾಲಕರಿಗೆ ತಂದೆತಾಯಿಗಳು; ಕಣ್ಣಿಗೆ ರೆಪ್ಪೆಯು; ಸ್ತ್ರೀಯರಿಗೆ ಪತಿಯು; ಪ್ರಜನರಿಗೆ ರಾಜನು; ಸನ್ಯಾಸಿಗಳಿಗೆ ಗೃಹಸ್ಥನು; ಅಜ್ಞಾನಿಗಳಿಗೆ ಪಂಡಿತನು ಬಂಧುಗಳೆನಿಸುವರು. ಎಲ್ಲರ ದೇಹದಲ್ಲಿ ಶ್ರೀಹರಿಯೇ ಅಂತರ್ಯಾಮಿಯಾಗಿರುವನೆಂದು ತಿಳಿಯುವುದೇ ಹರಿಪೂಜೆ. ಅಂತಹ ಪೂಜೆಯಿಂದಲೇ ಸ್ವಾಮಿಯು ಪ್ರೀತನಾಗುವನು. ಈ ದೇಹದಲ್ಲಿ ಅಭಿಮಾನದಿಂದ ಪುಟ್ಟಿ ಬಂದ ಕೋಪವನ್ನು ಹರಿಜ್ಞಾನಬಲದಿಂದ ನಿಗ್ರಹಿಸಿದವನು ಸಂಸಾರಕಾರಣವಾದ ಅವಿದ್ಯಾ ಕಾಮಕರ್ಮಗಳನ್ನು ಬಿಟ್ಟು ಮುಕ್ತನಾಗುವನು.

ಸಾಕಿನ್ನು ಈ ವೃಕ್ಷಗಳ ದ್ರೋಹ! ಉಳಿದವಾದರೂ ಕ್ಷೇಮದಿಂದಿರಲಿ! ನಿಮಗೂ ಮಂಗಳ ವಾಗಲಿ! ಈ ವನದೇವತೆಗಳು ಸಾಕಿದ ವಾರ್ಕ್ಷೀ ಎಂಬ ಈ ಕನ್ಯೆಯನ್ನು ಪತ್ನಿಯನ್ನಾಗಿ ಸ್ವೀಕರಿಸಿರಿ – ಎಂದು ನುಡಿದ ಚಂದ್ರನು ಆ ಕನ್ಯೆಯನ್ನು ಪ್ರಚೇತಸರಿಗೆ ಧಾರೆಯೆರೆದು ಕೊಟ್ಟು ಹೊರಟು ಹೋದನು.

ಆ ಮಾರಿಷಳ ಮಗನೇ ದಕ್ಷನು. ಈ ಪ್ರಾಚೇತಸನ ಪ್ರಜಾವಿಸ್ತಾರವು ಎಲ್ಲ ಲೋಕಗಳನ್ನು ತುಂಬಿ ವ್ಯಾಪಿಸಿತು. ದುಹಿತೃವತ್ಸಲನಾದ ದಕ್ಷನು ಮೊದಲು ಮನಸಾ ಬ್ರಹ್ಮನಿಂದ ಸೃಷ್ಟರಾದ ದೇವ ಅಸುರ ಮನುಜರನ್ನು ಪುನಃ ರೇತಸ್ಸಿನಿಂದಲೂ ಸೃಷ್ಟಿಸಿದನು. ಜಲಭೂಮ್ಯಾಕಾಶ ಚಾರಿಗಳಾದ ಆ ಜೀವರಿಂದ ಲೋಕಗಳು ಸಾಕಷ್ಟು ತುಂಬಲ್ಲಿಲ್ಲವೆಂದು ತಿಳಿದು, ದಕ್ಷನು ವಿಂಧ್ಯಾಪರ್ವತ ಪ್ರಾಂತವನ್ನು ಸೇರಿ ತಪವನ್ನು ಮಾಡಿದನು. ಭಗವಂತನನ್ನು ಹಂಸಗುಹ್ಯ ಮಂತ್ರದಿಂದ ಸ್ತುತಿಸಿ ಪ್ರಸನ್ನೀಕರಿಸಿಕೊಂಡನು. ಆ ಮಂತ್ರವನ್ನು ಪೇಳುವೆನು ಕೇಳು.

ಸತ್ಯಸಂಕಲ್ಪನು, ಸತ್ಯಜ್ಞಾನಾನಂದ ರೂಪನು, ಸತ್ತ್ವರಜಸ್ತಮೋಗುಣಪ್ರವರ್ತಕನು, ಪ್ರಕೃತಿ ಪುರುಷ ಭಿನ್ನನು ಚಕ್ಷುರಾದೀಂದ್ರಿಯಾಗೋಚರನು, ವಿಷಯಲೋಲುಪ ಜನದೂರನು, ಅನಂತ ಮಹಿಮನು, ಸ್ವಪ್ರಕಾಶನು ಆದ ಶ್ರೀಹಂಸನೇ! ನಿನಗೆ ನಮಃ. ದೇಹದಲ್ಲಿದ್ದು, ಎಡೆಬಿಡದೆ, ಸುಖನಾಗಿ ಪೊರೆಯುವ ನಿನ್ನನ್ನು ಅಜ್ಞಾನಮಗ್ನನಾದ ಜೀವನು ನೆನೆಯದೆ, ನಿತ್ಯೋಪಕಾರಿಯಾದ ರಾಜನನ್ನು ಮರೆತ ಸೇವಕನಂತೆ, ಕೃತಘ್ನನಾಗಿರುವನು. ದೇಹಮಾನಿಯಾದ ಕುಬೇರನು, ಪ್ರಾಣಮಾನೀ ವಾಯುವು, ಇಂದ್ರಿಯ ದೇವರಾದ ಇಂದ್ರಾದಿಗಳು, ಪೃಥಿವ್ಯಾದಿ ಭೂತಮಾನಿ ಗಳು, ಶಬ್ದಾದಿ ಮಾತ್ರಾ ನಿಯಾಮಕರಾದ ಗರುಡಾದಿಗಳು, ಮನೋನಿಯಾಮಕರಾದ ರುದ್ರಾದಿ ಗಳು, ಶ್ರೀಹರಿಯನ್ನಾಗಲಿ, ಅವನಿಂದ ಸೃಷ್ಟವಾದ ಜಗವನ್ನಾಗಲಿ ಸಾಕಲ್ಯೇನ ತಿಳಿದವರಾಗಿಲ್ಲ. ಅವನ ಪ್ರಸಾದದಿಂದ ಬ್ರಹ್ಮನು ಮಾತ್ರ ಆಲೋಚನಯಾ ಜಗವನ್ನೆಲ್ಲ ತಿಳಿದು, ಸರ್ವಜ್ಞ ನೆನಿಸಿ ರುವನಾದರೂ, ಆ ಸರ್ವಜ್ಞನನ್ನು ಸಂಪೂರ್ಣವಾಗಿ ತಿಳಿಯಲಾರದೆ ಇರುವನು. ಇಂತು ಅನಂತಮಹಿಮನಾದ ಶ್ರೀಹರಿಯನ್ನಿತರರೇನು ತಿಳಿಯಲರ್ಹರು ? ಗಾಢನಿದ್ರೆಯಲ್ಲಿ ಮನಸ್ಸೇ ಮೊದಲಾದ ಎಲ್ಲ ಇಂದ್ರಿಯಗಳು ಉಪರತವಾಗಲು ಪ್ರಪಂಚದ ನಾಮರೂಪಜ್ಞಾನಾದಿ ವ್ಯಾಪಾರಗಳೆಲ್ಲವು ನಿಲ್ಲುವುವು. ಆದರೂ ಶ್ರೀಹರಿಯು ಮಾತ್ರ ಶರೀರವ್ಯಾಪಾರವನ್ನು ನಡೆಸುವ ಮುಖ್ಯಪ್ರಾಣನಿಂದ ಸೇವಿತ ಚರಣನಾಗಿ, ಜೀವನಿಗೆ ಜೀವನಪ್ರದನಾಗಿರುವನು. ಹೃದಯಗುಹೆ ಯಲ್ಲಿ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎಂಬ ನವಸ್ವರೂಪ ಶಕ್ತಿಗಳಿಂದಲೂ, ಇಚ್ಛಾಜ್ಞಾನ ಕ್ರಿಯಾಶಕ್ತಿತ್ರಯದಿಂದಲೂ, ಕೂಡಿ ಸಕಲೇಂದ್ರಿಯಪ್ರೇರಕನಾಗಿರುವ ಶ್ರೀಹರಿಯನ್ನು ಜ್ಞಾನಿಗಳು ಅರಣಿಯ ಮಥನದಿಂದ ಅಗ್ನಿಯನ್ನಂತೆ – ಜಿಜ್ಞಾಸೋತ್ಥ ಜ್ಞಾನಜನ್ಯ ಪ್ರಸಾದದಿಂದ ಕಾಣುವರು. ಅಪರಿಮಿತಾನಂದವನ್ನು

ಅಪ್ರಾಕೃತ ಶರೀರಿಯಾಗಿ ಸದಾ ಅನುಭವಿಸುವ ಶ್ರೀಹರಿಯು, ಪ್ರಜಾಪತಿರುದ್ರ ಚಂದ್ರಾದಿ ಸರ್ವಶಬ್ದಮುಖ್ಯಾರ್ಥನೆನಿಸಿರುವನು. ಬಹುರೂಪನಾಗಿ ವಿಶ್ವವೆಲ್ಲ ವ್ಯಾಪಿಸಿ ನಿಂತಿರುವನು. ಇಂತಹ ಸ್ವಾಮಿಯು ನಮಗೆ ಪ್ರಸನ್ನವಾಗಲಿ! ವಾಗಾದ್ರೀಂದ್ರಿಯಗಳವನನ್ನು ಪೇಳಿ ತಿಳಿಯ ಲಾರವು. ಮನವು ಅವನನ್ನು ಸಾಕಲ್ಯೇನ ತಿಳಿಯಲಾರದು. ಇಂದ್ರಿಯಗೋಚರವಾಗದಿರುವ ಆನಂದಾದಿ ಗುಣಪೂರ್ಣದೇಹನಾದ ಶ್ರೀಹರಿಯು ಸ್ವಭಾವದಿಂದಲೇ ನಿರ್ಗುಣನೆನಿಸಿರುವನು. ಅವನು ಕಾಲಾದಿಗಳಿಗೂ ಕಾರಣನಾಗಿ ನಡೆಸುತ್ತಿರುವನು. ಕಾಲದಲ್ಲಿ ಕಾಲರೂಪಿಯಾಗಿ ಕಾಲವನ್ನು ನಿರೀಕ್ಷಿಸಿ, ಕಾಲದಿಂದ ಪುಟ್ಟಿಸಿ, ಕಾಲಕ್ಕಾಗಿ ಕಾದು ನಿಲ್ಲಿಸಿ, ಕಾಲದ ದೆಶೆಯಿಂದ ನಡೆಸಿ, ಕಾಲಕ್ಕೆ ಅಧೀನವಾಗಿಟ್ಟು ಕಾಲದಲ್ಲಿ ಅಡಗಿಸಿಟ್ಟು, ಸರ್ವಸ್ವಾಮಿಯಾಗಿ ತಾನು ಕಾಲಕ್ಕೆ ಮೀರಿರುವನು. ಇಂತಹ ಸ್ವಗತಭೇದವಿವರ್ಜಿತನು ಸಮಾನಾಧಿಕರಹಿತನು ಆದ ಶ್ರೀಶನಿಗೆ ವಂದಿಸುವೆನು. ಅವನ ಪರಾಕ್ರಮವನ್ನು ತಿಳಿಯಲು, ವಾದಪ್ರತಿವಾದಗಳಿಂದ ವಿಚಾರಿಸಿ, ಕೊನೆಗೆ ಅವನ ಅನಂತ ಮಹಿಮೆಗೆ ಮಾರುಹೋಗಿ ಜ್ಞಾನಿಗಳೂ ಮುಗ್ಧರಾಗಿ ನಿಲ್ಲುವರು. ಅಂತಹ ಶ್ರೀಕಾಂತನಿಗೆ ನಮಸ್ಕಾರವು. ನನ್ನಿಂದ ಭಿನ್ನವಾದ ಈಶನಿಲ್ಲವೆಂದು ಕೆಲವರು ತಿಳಿದಿರಲು, ತದ್ವಿರುದ್ಧವಾಗಿ ನನ್ನಿಂದ ಭಿನ್ನನಾಗಿ ಈಶನಿರುವನೆಂದು ಕೆಲವರು ತಿಳಿದು ಪೇಳುವರು. ಅಂತಹವರಿಗೆ ಪ್ರಿಯತಮ ಸ್ವಾಮಿ ಎನಿಸಿ ತತ್ತದ್ಯೋಗ್ಯಫಲವನ್ನು ಕೊಡುವ ಪ್ರಭುವಿಗೆ ನಮ ಸ್ಕಾರವು! ವೇದಾಂತ ವಿಚಾರ ದಿಂದ ಶ್ರೀಶನು ಜೀವಸ್ವಾಮಿಯು ತದ್ಭಿನ್ನನೆಂದು ಚೆನ್ನಾಗಿ ತಿಳಿದು ಬರುವುದು. ಅವನಿಗೆ ಪ್ರಾಕೃತನಾಮರೂಪಗಳಿಲ್ಲ; ಆದರೂ ಭಕ್ತರನ್ನು ಅನುಗ್ರಹಿಸಿ ಪೊರೆಯಲು ಅವತರಿಸಿ, ನಾಮರೂಪವಂತನೆನಿಸಿರುವ ಆನಂದಮಯನು ನಮ್ಮಲ್ಲಿ ಪ್ರಸನ್ನನಾಗಲಿ! ಅಧಮರಜೀವನ ವನ್ನು ದೇಹಗತ ಜೀವನೆಂಬುವರು; ಮಧ್ಯಮರು ಜೀವನೋ, ತದ್ಭಿನ್ನನೋ ಎಂದು ಸಂದೇಹದಿಂದಿರುವರು; ಉತ್ತಮರು ಜೀವಭಿನ್ನನಾದ ಶ್ರೀಹರಿಯು ದೇಹಗತನಾದರೂ ಜೀವನಂತೆ ಸುಖದುಃಖಗಳನ್ನು ಪೊಂದದೆ ನಿರ್ಲಿಪ್ತನಾಗಿರುವನೆಂದೇ ತಿಳಿವರು. ಮುಖ್ಯ ಪ್ರಾಣ ನನ್ನು ಶ್ವಾಸರೂಪನೆಂದಧಮರು, ಶಾರೀರ ಪ್ರಾಣನೆಂದು ಮಧ್ಯಮರು, ಸರ್ವ ಜೀವೋತ್ತಮ ಸೂತ್ರನೆಂದು ಉತ್ತಮರೂ ತಿಳಿಯುವಂತೆ, ಶ್ರೀಮುಖ್ಯಪ್ರಾಣವಲ್ಲಭನನ್ನೂ ತ್ರಿವಿಧ ಜೀವರು ತಿಳಿದು, ಉಪಾಸಿಸಿ, ತತ್ತದ್ಯೋಗ್ಯಗತಿಯನ್ನು ಪೊಂದುವರು. ಅಂತಹ ಶ್ರೀಹಂಸನಿಗೆ ನಮಸ್ಕಾರವು!

ಎಂದು ದಕ್ಷನ ನುತಿಸುವಾಗ ಆ ಪವಿತ್ರವಾದ ಅಘಮರ್ಷಣ ತೀರ್ಥ ಸಮೀಪದಲ್ಲಿ ಭಕ್ತವತ್ಸಲನವನಿಗೆ ಪ್ರತ್ಯಕ್ಷನಾದನು.

ಗರುಡವಾಹನನು, ದೀರ್ಘಭುಜಾದಂಡಮಂಡಿತನು, ಶಂಖಚಕ್ರಖಡ್ಗಚರ್ಮ ಧನು ರ್ಬಾಣಾಪಾಶ ಗದಾಧರನು ಪೀತಾಂಬರನು ಘನಶ್ಯಾಮನು ಪ್ರಸನ್ನಮುಖನು ಕರುಣಾರಸ ಪೂರ್ಣಕಟಾಕ್ಷನು ವನಮಾಲಿಯು ಕೌಸ್ತುಭ ಕಂಧರನು ಶ್ರೀವತ್ಸವಿರಾಜಿತನು ಮಹಾ ಕಿರೀಟ ಕಟಕ ಕುಂಡಲಾದ್ಯಲಂಕೃತನು ಕಾಂಚೀಮುದ್ರಿಕಾವಲಯ ನೂಪುರಾಂಗದ ಭೂಷಣನು ತ್ರೈಲೋಕ್ಯ ಮೋಹನವೇಷನು ಆದ ಶ್ರೀನಾರಾಯಣನು ನಾರದನಿಂದಲೂ ಸುರಪಾರ್ಷದರಿಂದಲೂ ಕೂಡಿ ಬಂದನು. ಸಿದ್ಧಗಂಧರ್ವಚಾರಣರು ಅವನನ್ನು ಪಾಡಿ ಪೊಗಳುತ್ತಿದ್ದರು.

ಅಂತಹ ಪರಮಾಶ್ಚರ್ಯಕರರೂಪವನ್ನು ಧರಿಸಿ ಬಂದ ಗೋವಿಂದನಿಗೆ ವಂದಿಸಿ, ದಕ್ಷನು ಪರಮಾನಂದದಿಂದ ಮಾತನಾಡಲು ಬರದೆ ನಿರ್ಝರಗಳಿಂದ ತುಂಬಿ ಸೂಸುವ ಸರೋವರದಂತೆ

ಮನವು ಭಕ್ತಿರಸದಿಂದ ತುಂಬಿ ತುಳುಕಲು ತಲೆಬಾಗಿ ನಿಂತನು. ಆನಂದಬಿಂದು ಪೂರ್ಣನಯನನಾದ ಭಕ್ತನ ಚಿತ್ತವನ್ನರಿತ ಸರ್ವೇಶನಿಂತೆಂದನು–

ಪ್ರಾಚೇತಸ! ಧನ್ಯನಾದೆ! ನಿನ್ನ ತಪವಿಂದು ಫಲಿಸಿತು. ಶ್ರದ್ಧೆಯಿಂದ ಪೂತವಾದ ಭಕ್ತಿಯಿಂದ ನನ್ನ ಪ್ರೀತಿಯನ್ನು ಗಳಿಸಿದೆ. ಸಂತುಷ್ಟನಾಗಿರುವೆನು. ಪ್ರಜಾವೃದ್ಧಿಯನ್ನು ಮಾಡು. ನನ್ನ ಅಧಿಷ್ಠಾನಭೂತರಾದ ಪ್ರಜರ ಸಂಖ್ಯೆಯು ಹೆಚ್ಚಲೆಂದೇ ನಾನು ಕೋರುವೆನು. ಬ್ರಹ್ಮನು ಶಿವನು ನೀನೇ ಮೊದಲಾದ ದೇವತೆಗಳೆಲ್ಲರೂ ನನ್ನ ವಿವಿಧಾಧಿಷ್ಠಾನರೆನಿಸಿ, ಪ್ರಜರಿಗೆ ಕ್ಷೇಮೈಶ್ವರ್ಯಗಳನ್ನು ಕೊಡುತ್ತಿರುವರು. ತಪೋರೂಪರುದ್ರನು ನಿನ್ನ ಹೃದಯದಿಂದ ಜನಿಸಿರುವನಾದ್ದರಿಂದ ತಪಸ್ಸೆಂದರೆ ನನಗೆ ಬಲು ಪ್ರೀತಿ. ಪೂರ್ಣಗುಣನಾದ ನನ್ನ ವಿದ್ಯೆ ಎಂಬ ಗುಣದಿಂದ ಉಮೆಯು ಜನಿಸಿ ಅದನ್ನೇ ಆಶ್ರಯಿಸಿರುವಳು. ಶೃಂಗಾರಾದ್ಯಾಕಾರದಿಂದ ಜನಿಸಿದ ಇಂದ್ರನು ಕ್ರಿಯಾಭಿಮಾನಿ ಎನಿಸಿರುವನು. ನನ್ನ ಮಧ್ಯ ದೇಹದಿಂದ ಧರ್ಮನು ಇತರಾವಯವಗಳಿಂದ ಸರ್ವವ್ಯಾಪ್ತಿಯು ಸರ್ವದೇವತೆಗಳು ಪುಟ್ಟಿರುವರು. ಮುಖ್ಯಪ್ರಾಣನು ನನ್ನ ಪ್ರಾಣಶಕ್ತಿಯಿಂದ ಪುಟ್ಟಿರುವನು. ನಾನೇ ಪ್ರಳಯದಲ್ಲಿ ಸರ್ವವ್ಯಾಪ್ತಿಯು ಸ್ವತಂತ್ರನಾಗಿದ್ದೆನು. ನನಗೆ ಸದೃಶವಾದುದಾವುದೂ ಎಂದಿಗೂ ಇಲ್ಲ. ಜ್ಞಾನಸ್ವರೂಪನಾಗಿ ಸೃಷ್ಟಿ ವ್ಯಾಪಾರವನ್ನು ಉಪರಮಿಸಿ ನಿದ್ರಾಮುದ್ರಿತ ನಯನನಂತೆ ಇದ್ದೆನು. ಜಗದ್ಭನ್ನನಾದ ನಾನು ಅನಂತಗುಣನು. ಒಂದೊಂದು ನನ್ನ ಗುಣವೂ ಅನಂತವು, ಅಪ್ರಾಕೃತವು, ದೋಷರಹಿತವೂ ಆಗಿದೆ. ಅನಂತರೂಪದಿಂದ ಪ್ರಾದುರ್ಭವಿಸಿ, ಸೃಷ್ಟಿ ಮಾಡಲೆಣಿಸಿದಾಗ ನನ್ನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. ಈ ಜೀವೋತ್ತಮನು ಜೀವೇಶನಾದ ನನ್ನಿಂದ ವಿಜ್ಞಾನಾದಿ ಶಕ್ತಿಗಳನ್ನು ಪಡೆದು ಸೃಷ್ಟಿ ಮಾಡಲು ಸಮರ್ಥನಾದನು. ನನ್ನ ಉಪದೇಶದಂತೆ ತಪಸ್ಸನ್ನು ಮಾಡಿ ನನ್ನ ಅನುಗ್ರಹವನ್ನು ಪೊಂದಿ ನೀನೇ ಮೊದಲಾದ ನವಪ್ರಜೇಶರನ್ನು ಸೃಜಿಸಿದರು.

ಈಗ ನೀನು ಪಂಜಜನನ ಮಗಳಾದ ಅಸಿಕ್ನೀದೇವಿಯನ್ನು ಮದುವೆಯಾಗಿ ಸೃಷ್ಟಿಯನ್ನು ಬೆಳೆಸು. ಇನ್ನು ಮುಂದೆ ಮಿಥುನವ್ಯವಾಯ ಧರ್ಮದಿಂದ ಪ್ರಜಾವೃದ್ಧಿಯು ಆಗಲಿ! ನಾನು ಸೃಜಿಸಿರುವ ಸ್ತ್ರೀರೂಪ ಮಾಯೆಯಿಂದ ಮೋಹಿತರಾಗಿ ಪ್ರಜರನ್ನು ಪಡೆದು ಜನರು ನನ್ನ ಸೇವೆಯನ್ನು ಸಲ್ಲಿಸಿ ಕೃತಾರ್ಥರಾಗಲಿ!

ಎಂದು ನುಡಿದು ವಿಶ್ವಮಂಗಲನಾದ ಶ್ರೀಹರಿಯು ಸ್ವಪ್ನದಲ್ಲಿ ಕಂಡಂತೆ ಕಂಡುಬಂದು ದಕ್ಷನು ನೋಡುತ್ತಿರಲು ಅಂತರ್ಹಿತನಾದನು.

## ೫. ಹರ್ಯಶ್ವ ಶಬಲಾಶ್ವರು

ಶ್ರೀಶುಕನು ಪೇಳಿದನು–

ಶ್ರೀಹರಿಯ ಮಹಿಮೆಯಿಂದ ದಕ್ಷನಾದ ದಕ್ಷಪ್ರಜೇಶನು ಪಂಚಜನಪ್ರಜಾಪತಿಯ ಪುತ್ರಿಯಾದ ಆಸಿಕ್ನಿಯಲ್ಲಿ ಹತ್ತುಸಾವಿರ ಪುತ್ರರನ್ನು ಪಡೆದು ಎಲ್ಲರಿಗೂ ಹರ್ಯಶ್ವರೆಂದು ಹೆಸರಿಟ್ಟನು. ಆ ದಕ್ಷಸುತರು ಸಮಾನಶೀಲರಾಗಿ ಬೆಳೆದರು. ತಂದೆಯ ಮಾತಿನಂತೆ ಪ್ರಜಾವೃದ್ಧಿಯನ್ನು ಸಂಪಾದಿಸಲು ತಪವನ್ನು ಮಾಡಬೇಕೆಂದು ಪಶ್ಚಿಮ ಸಮುದ್ರದಲ್ಲಿ ಸಿಂಧು ನದವು ಸೇರುವಲ್ಲಿ ನಾರಾಯಣ ಸರೋವರವನ್ನು ಸೇರಿದರು. ಮುನಿಸಿದ್ಧ ಸೇವಿತವಾದ ಈ ತೀರ್ಥಸ್ನಾನ

ಪೂತ್ರದಿಂದ ಶುದ್ಧಮನಸ್ಕನಾಗಿ ಸ್ವಭಾವದಿಂದ ಸನ್ಯಾಸ ಸ್ವೀಕಾರ ಕುತುಕರಾದರೂ ತಂದೆಯ ಆಜ್ಞಾಪಾಶದಿಂದ ಬದ್ಧರಾಗಿ ಪ್ರಜಾವಿವರ್ಧನವನ್ನು ಬೇಡಿ ತಪಸ್ಸನ್ನು ಮಾಡಲುದ್ಯುಕ್ತರಾಗಿದ್ದರು. ಆಗ ನಾರದನು ಅಲ್ಲಿಗೆ ಬಂದು ಇಂತು ನುಡಿದನು–

ಎಲೌ ಹರ್ಯಶ್ವರೇ! ಪ್ರಜಾಸೃಜನಕ್ಕಾಗಿ ತಪವನ್ನು ಮಾಡುವಿರಾ? ಅದರಿಂದ ನಿಮಗಾಗುವ ಪ್ರಯೋಜನವಾದರೂ ಏನು? ಆತ್ಮಾನಾತ್ಮ ವಿವೇಕವನ್ನು ಪಡೆಯಲು ಮಾಡಬೇಕಲ್ಲವೇ ತಪವನ್ನು?

ಮೂರ್ಖರಂತೆ ವರ್ತಿಸುವ ನಿಮ್ಮನ್ನು ಕೆಲಪ್ರಶ್ನೆಗಳನ್ನು ಕೇಳುವೆನು-

ಭೂಮಿಯ ಕೊನೆಯನ್ನು ಕಂಡಿರುವಿರಾ? ಒಂದು ರಾಜ್ಯವಿದೆ, ಅದರಲ್ಲಿ ಒಬ್ಬನೇ ಪುರುಷನಿರುವನು. ಆ ರಾಜ್ಯವನ್ನು ಆ ಪುರುಷನನ್ನು ತಿಳಿದಿರುವಿರಾ? ಒಳಗೆ ಹೋದ ಮೇಲೆ ಹೊರಗೆ ಬರಲು ಬಾರದ ಬಿಲವಾವುದು? ಬಹುರೂಪಳಾದ ಸ್ತ್ರೀಯನ್ನು ಪುಂಶ್ಚೂಪತಿಯಾದ ಪುರುಷನನ್ನು ಕಂಡಿಲ್ಲವೇ? ಎರಡು ಕಡೆಗೂ ಹರಿಯುವ ನದಿಯು ಯಾವುದು? ಇಪ್ಪತ್ತೈದು ಪದಾರ್ಥಗಳಿಂದ ನಿರ್ಮಿತವಾದ ಅದ್ಭುತವಾದ ಗೃಹವಾವುದು? ಒಂದು ಹಂಸವಿದೆ; ಅದರ ಚಿತ್ರವಚನವನ್ನು ಕೇಳಿರುವಿರಾ? ತಾನಾಗಿ ತಿರುಗುವ ತೀಕ್ಷ್ಣಧಾರವಾದ ಚಕ್ರವೊಂದಿದೆ; ಅದನ್ನು ನೋಡಿದಿರಾ? ತಂದೆಯ ಆಜ್ಞೆ ಎಂದಮಾತ್ರದಿಂದ ಸಂಸಾರ ಕೂಪದಿ ನರಳಿಸುವ ಪ್ರಜಾ ಸೃಜನೇಚ್ಛೆಯನ್ನು ಪೊಂದಿ ಆತ್ಮಾನಾತ್ಮ ವಿವೇಕದೂರರಾಗುವುದುಚಿತವೇ? ಎಂದು ಪೇಳಿ ನಾರದನು ಸುಮ್ಮನಾದನು. ಆಗ ಸ್ವಾಭಾವಿಕ ಬುದ್ಧಿಶಕ್ತಿಯಿಂದ ಕುಶಲರಾದ ಹರ್ಯಶ್ವರು ನಾರದರ ಒಗಟುಗಳನ್ನು ವಿಚಾರಮಾಡಿ ತಿಳಿದು ಇಂತು ನಿಶ್ಚಯಿಸಿದರು.

ಭೂಮಿ ಎಂದರೆ ಲಿಂಗ ಶರೀರವು. ಬೀಜವೇ ಜೀವನು. ಬೀಜವನ್ನು ಕ್ಷೇತ್ರದಿ ನಾಟಿದೊಡೆ ಅನಂತಬೀಜವಾಗುವುದು. ಅದರಂತೆ ಲಿಂಗಶರೀರವು ಜೀವನಿಗೆ ಅನಂತ ಶರೀರಾಪಾದಕವಾಗಿದೆ. ಅದನ್ನು ಸರ್ವಾತ್ಮನಾ ಕೊನೆಗಾಣಿಸಬೇಕು; ಆಗಲೇ ಮೋಕ್ಷಸುಖವು. ಸರ್ಜನಾದಿ ದುಷ್ಕರ್ಮಗಳಲ್ಲಿ ನಾವು ತೊಡಗಬಾರದು.

ಒಬ್ಬನೇ ಪುರುಷನೆಂದರೆ ಶ್ರೀಹರಿಯೇ. ಅವನೇ ಸ್ವತಂತ್ರನು. ಮಿಕ್ಕ ಜೀವಜಡಜಾತವೆಲ್ಲವೂ ಸ್ತ್ರೀಯಳಂತೆ ಅಸ್ವತಂತ್ರವು. ನಿತ್ಯಮುಕ್ತನು ಮೋಕ್ಷದಾತನು ತ್ರಿವಿಧಾವಸ್ಥಾರಹಿತನಾದ ಪುರುಷೋತ್ತಮನನ್ನು ತಿಳಿಯುವುದೂ ಅವಶ್ಯಕವು. ಇಂತಿರಲು ಪಶುಹಿಂಸಾದಿ ಕುಕರ್ಮಗಳಿಂದ ನಮಗೇನು ಪ್ರಯೋಜನವು?

ಮೋಕ್ಷವೆಂಬುದೆ ಬಿಲವು. ಅದು ಪುನರಾವೃತ್ತಿರಹಿತವಲ್ಲವೇ? ಅದನ್ನು ದಯಪಾಲಿಸುವ ರಮಾರಮಣನ ಪ್ರೀತಿಯನ್ನು ಪಡೆಯದೆ ನಿತ್ಯನೈಮಿತ್ತಿಕಕರ್ಮಗಳನ್ನೆಷ್ಟು ಮಾಡಿದರೇನು?

ಬಹುರೂಪಳಾದ ತರುಣಿಯೇ ಜೀವನ ಬುದ್ಧಿಯು. ಅದು ಸ್ವೈರಿಣಿಯಂತೆ ವಿಷಯಗಳ ಕಡೆಗೆ ಓಡುತ್ತಿರುವುದು. ಸತ್ವಾದಿಗುಣಗಳ ವಿಕಾರದಿಂದ ಮನಸ್ಸನ್ನು ಬಿಡಿಸಿ ಭಗವತ್ಪರನಾಗಬೇಕಾಗಲಿ ಹರಿಗಿಲ್ಲದ ದಾನಾದಿ ದಾಂಭಿಕ ಕೃತ್ಯಗಳಿಂದೇನು ಪ್ರಯೋಜನವು? ಅಂತಹ ಮನಸ್ಸಿಗೆ ವಶನಾದವನು ಕೆಟ್ಟ ಹೆಂಡತಿಯ ಕೈಗೊಂಬೆಯಂತಾಡುವ ಪುಂಶ್ಚಲೀಪತಿಯಂತೆನಿಂದ್ಯನೇ ಸರಿ! ಮನವನ್ನು ಗೆಲ್ಲದವನು ತೀರ್ಥಸ್ನಾನಾದಿಗಳನ್ನು ಮಾಡಿದರೇನು?

ಒಂದೆಡೆ ಸೃಷ್ಟಿಯು ಪ್ರವಾಹದಂತೆ ಕೆಳಗಿಳಿಯುವಾಗ ಮತ್ತೊಂದೆಡೆ ಸಂಹಾರ ಪ್ರವಾಹವು ಮೇಲೇರಿ ಪೋಗುತ್ತಿರುವದಿದೇ ಉಭಯವಾಹಿನೀ ನದಿಯು. ವಿಷಯರಾಗದಿಂದ ಮತ್ತನಾಗಿ

ಹುಟ್ಟುತ್ತಾ ಸಾಯುತ್ತಾ ಸಂಸಾರನದಿಯಲ್ಲಿ ಮಗ್ನನಾಗದೆ ಶ್ರೀಹರಿಚರಣವನ್ನು ಉಪಾಸಿಸುವುದೇ ಲೇಸು. ಉಕ್ಕೇರಿ ಬಂದು ಸಸ್ಯಜೀವರನ್ನು ಕೊಂದು ಹಿಂದಿರುಗುವ ಭವನದಿಯಲ್ಲಿ ಕೆಡಹುವ ಕಾಮ್ಯತಪಸ್ಸಿನಿಂದೇನು ಉಪಯೋಗ?

ಈ ದೇಹವು ಇಪ್ಪತ್ತೈದು ತತ್ತ್ವಗಳಿಂದ ರಚಿತವಾಗಿದೆ. ಆ ತತ್ತ್ವೈಕರಾದ ದೇವರನ್ನು ತತ್ತ್ವೇರಕನಾದ ರಮೇಶನನ್ನೂ ತಿಳಿಯದೆ ಅವಿಹಿತ ಯೋಗಾಭ್ಯಾಸಾದಿಗಳಿಂದೇನು ಫಲ? ಒಂದು ಹಂಸವು ಚಿತ್ರಕಥೆಯನ್ನು ಪೇಳುವುದೆಂದರೆ ಭಾರತಾದಿ ಸಚ್ಛಾಸ್ತ್ರವು ತಮುಪದೇಶಕ ಗುರುಗಳು. ಹಂಸವು ನೀರನ್ನು ಬಿಟ್ಟು ಕ್ಷೀರವನ್ನು ಮಾತ್ರ ಸ್ವೀಕರಿಸುವಂತೆ ಸರ್ವತಸ್ಸಾರಭೂತವಾದ ಹರಿ ಮಹಿಮೆಯನ್ನು ಹಂಸದಂತೆ ಶುದ್ಧಮನಸ್ಕರಾದ ಶ್ರೀಮದಾಚಾರ್ಯ ಪರಂಪರೆಯಿಂದ ಬಂದ ಸದ್ಗುರುಗಳು ಪೇಳುವರು. ಬಂಧವನ್ನು ಬಿಡಿಸಿ ಮೋಕ್ಷವನ್ನು ಕೊಡುವ ಸಚ್ಛಾಸ್ತ್ರವನ್ನೋದ ಬೇಕು. ಗೋವಿಂದರಹಿತವಾದ ಕುಶಾಸ್ತ್ರದಿಂದ ಜ್ಞಾನವಾಗುವುದೇ? ಅದು ನಿಷ್ಕಂಟಕ ಮಾರ್ಗ ವೆನಿಸುವುದೇ?

ಕಾಲಚಕ್ರವು ತೀವ್ರವೇಗದಿಂದ ಸರ್ವಜಗದಾಯುಃಖಂಡಗಳನ್ನು ತುಂಡರಿಸುತ್ತ ತಿರುಗು ತ್ತಿದೆ. ಸ್ವತಂತ್ರನಾದ ಹರಿಯು ತತ್ತ್ವೇರಕನಾಗಿರಲು ಅವನ ಮಹಿಮೆಯಂ ತಿಳಿದು, ತತ್ತ್ವಾ ಲೋಚಿತ ಕರ್ಮಗಳನ್ನು ಪ್ರಮಾದಾಲಸ್ಯಾದಿಗಳನ್ನು ಬಿಟ್ಟು ಮಾಡಿ ಅವನಿಗರ್ಪಿಸಬೇಕಾಗಲಿ ಕುಕರ್ಮಗಳಿಂದೇನು ಪ್ರಯೋಜನವು.

ಮಾತೆಯಂತೆ ರಕ್ಷಿಸಿ, ಪಿತನಂತೆ ಹಿತವನ್ನು ಪೇಳುವ ಸಚ್ಛಾಸ್ತ್ರವನ್ನು ತಿಳಿದು, ನಿವೃತ್ತಿರಹಿತ ವಾದ ಮೋಕ್ಷವನ್ನು ಪೊಂದಬೇಕಾಗಲಿ ತಂದೆಯ ಮಾತೆಂದು ಅಜ್ಞಾನಮಯ ಸಂಸಾರದಲ್ಲಿ ಬೀಳಲಾಗುವುದೇ?

ಎಂದು ಹರ್ಯಶ್ವರು ಒಂದೇ ಮನಸ್ಸಿನಿಂದ ನಿಶ್ಚಯಿಸಿ ನಾರದರಿಗೆ ವಂದಿಸಿ ಸನ್ಯಾಸಿಗಳಾಗಿ ಹಿಂದಿರುಗದೆ ಮುಕ್ತಿಯನ್ನೈದಿದರು.

ನಾರದನಾದರೂ ಷಡ್ಜಾದಿ ಸ್ವರಗಳನ್ನು ನುಡಿಸುವಾಗ ವೀಣಾತಂತಿಗಳಂತೆ ಮಧುರವಾಗಿ ಮೀಟುವ ಮನದಲ್ಲಿ ಶ್ರೀಶನ ಪಾದಾರವಿಂದವನ್ನು ಕಂಡು ಭಕ್ತಿರಸ ತರಂಗಗಳನ್ನು ಲೋಕದಲ್ಲಿ ಬೀರುತ್ತಾ ನಡೆದುಹೋದನು.

ಮಕ್ಕಳಿಂತು ಮರಳಿ ಬಾರದುದನ್ನು ಕಂಡು ನಾರದನಿಷ್ಟು ಮಾಡಿದುದನ್ನು ಕೇಳಿ ದಕ್ಷನು ಬಹು ಚಿಂತಿಸಿದನು.

ಒಳ್ಳೆಯ ಮಕ್ಕಳೂ ಚಿಂತೆಗೆ ಕಾರಣರಾಗುವರಲ್ಲವೇ?

ಬ್ರಹ್ಮನಿಂದ ಸಾಂತ್ವನವನ್ನು ಪಡೆದು ದಕ್ಷನು ಪುನಃ ಅಸಿಕ್ನಿಯಲ್ಲಿ ಸಾವಿರ ಜನ ಪುತ್ರರನ್ನು ಪಡೆದನು. ಸಮಾನಶೀಲರಾದ ಅವರಿಗೆ ಶಬಲಾಶ್ವರೆಂದು ಹೆಸರಿಟ್ಟನು. ಅವರೂ ತಂದೆಯ ಮಾತಿನಂತೆ ಧೃತವ್ರತರಾಗಿ ನಾರಾಯಣ ಸರಸ್ತೀರದಲ್ಲಿ ತಪವನ್ನು ಮಾಡುತ್ತಿದ್ದರು. ತೀರ್ಥಸ್ನಾನ ದಿಂದ ಪವಿತ್ರರಾಗಿ 'ಓಂ' ಎಂದು ಗುಣಪೂರ್ಣನಾದ ನಾರಾಯಣನನ್ನು ಧ್ಯಾನಿಸುವಾಗ ಕೆಲತಿಂಗಳು ಜಲಮಾತ್ರಾಹಾರಿಗಳಾಗಿ ಕಳೆದರು; ವಾಯು ಭಕ್ಷಕರಾಗಿ ಕೆಲಮಾಸಗಳು ಕಳೆದರು. 'ಓಂ ನಮೋ ನಾರಾಯಣಾಯ' ಬಲಜ್ಞಾನ ಸ್ವರೂಪನೇ! ಪರಮಪಾವನನೇ! ಸಾರಗ್ರಾಹಿವರನೇ! ನಿಮಗೆ ನಮಃ' ಎಂಬೀ ಮಂತ್ರವನ್ನು ಜಪಿಸುತ್ತಾ ಪ್ರಜಾಕಾಮರಾಗಿ ತಪವನ್ನು ಮಾಡುತ್ತಿರುವ ಶಬಲಾಶ್ವರನ್ನು ಸಮೀಪಿಸಿ ನಾರದನು ಅವೇ ಪ್ರಶ್ನೆಗಳನ್ನು ಕೇಳಿ ಮತ್ತೆ ಇಂತೆಂದನು–

ದಕ್ಷಸುತರೇ! ಕೇಳಿ. ನಿಜವಾದುದನ್ನು ನಿಮಗೆ ಹೇಳುತ್ತಿರುವೆನು. ನಿಮ್ಮ ಅಣ್ಣಂದಿರು ಹೋಗಿರುವ ಮೋಕ್ಷಮಾರ್ಗವು ನಿಮಗೆ ಅನುಸರಣೀಯವಲ್ಲವೇ? ಅವರಂತೆ ನೀವೂ ಸನ್ಯಾಸವನ್ನು ಸ್ವೀಕರಿಸುವುದೇ ನ್ಯಾಯವಾಗಿದೆ. ನಾವು ಮಾಡಿದ ಪುಣ್ಯವೇ ನಮಗೆ ಬಂಧುವಾಗಲಿ, ಪಿತ್ರಾದಿಗಳಲ್ಲ. ಪುಣ್ಯವಂತನು ದೇವತೆಗಳಿಂದ ಕೂಡಿ ಸಂತಸದಿಂದಿರುವನು – ಎಂದು ಹೇಳಿ ಅಮೋಘದರ್ಶನನಾದ ನಾರದನು ಹೊರಟುಹೋದನು.

ಆಗ ಶಬಲಾಶ್ವರು ಅಣ್ಣಂದಿರಂತೆ ನಿಶ್ಚಯಜ್ಞಾನವನ್ನು ಪೊಂದಿ ಶ್ರೀಹರಿಗಭಿಮುಖರಾದರು. ಸಂಸಾರವಿಮುಖರಾಗಿ ಸನ್ಯಾಸಿಗಳಾಗಿ ಮುಕ್ತರಾದರು. ಕಳೆದುಹೋದ ರಾತ್ರಿಗಳಂತೆ ತಿರುಗಿ ಬರದ ಮಕ್ಕಳ ವೃತ್ತಾಂತವನ್ನು ಕೇಳಿ ನಿತಾಂತಚಿಂತಾಕ್ರಾಂತನಾಗಿ ದಕ್ಷನು ಕೋಪದಿಂದ ಹಲ್ಲು ಕಡಿಯುತ್ತಾ ನಾರದನನ್ನು ಕುರಿತು ಇಂತೆಂದನು–

ಆಹಾ! ಎಂತಹ ದುಷ್ಟನು ನೀನು! ಸಾಧುವಿನಂತೆ ಜಟಾಸೂತ್ರಾದಿಗಳನ್ನು ಧರಿಸಿ ಶಮದಮಾದಿಗಳನ್ನು ಅನುಷ್ಠಿಸಿದೆಯಾದರೂ ನೀ ಮಾಡಿದ ಕಾರ್ಯವು ಅಸಾಧುವೇ ಸರಿ! ಚಿಕ್ಕ ಮಕ್ಕಳನ್ನು ಬಿಕ್ಷುಗಳನ್ನು ಮಾಡಿಬಿಟ್ಟೆ. ಪಿತೃದೇವರ್ಷಿ ಋಣದಿಂದ ಮುಕ್ತರಾಗದ ಕರ್ಮಾಕರ್ಮ ವಿಚಾರವರಿಯದ ಬಾಲಕರಿಗೆ ಉಭಯಲೋಕ ಸುಖವಾಗದಂತೆ ಕೆಡಿಸಿದೆ. ನಿನ್ನಂತಹ ದಯಾಹೀನನಿನ್ನಿಲ್ಲ. ಶ್ರೀಹರಿಭಕ್ತರ ಮಧ್ಯದಲ್ಲಿ ಅವರ ಕೀರ್ತಿಯನ್ನು ಕೆಡಿಸುತ್ತಾ, ಲಜ್ಜೆಯಿಲ್ಲದೆ ತಿರುಗುವೆ ! ಅಲ್ಲವೋ! ಭಾಗವತರೆಂದರೆ ಭೂತಾನುಗ್ರಹಕಾತರರಾಗಿರಬೇಕು. ನೀನು ಮಾತ್ರ ಕ್ರೂರನಾಗಿ ನಿಷ್ಕಾರಣ ವೈರಿಯಾಗಿರುವೆ. ಯಾವ ಕರ್ಮವೂ ಇಲ್ಲದ ನಿನಗೊಬ್ಬ ನಿಗೇ ಸರಿಯಾಗಲಿ ಕೇವಲ ಬೋಧನದಿಂದ ವೈರಾಗ್ಯವು ಎಲ್ಲರಿಗೂ ಜನಿಸುವುದೇ? ಸನ್ಯಾಸವೇ ಸ್ನೇಹ ಪಾಶಚ್ಛೇದಕವೆನ್ನುವುದು ಸರಿಯೇ? ಪುರುಷನು ವಿಷಯಗಳನ್ನು ಭುಂಜಿಸದೆ ವಿಷಯ ತೀಕ್ಷ್ಣತೆಯನ್ನರಿಯದೆ, ವಿರಕ್ತನಾಗಲು ಬರುವುದಿಲ್ಲ. ನಿನ್ನ ಮಾತಿನಿಂದ ಮಕ್ಕಳು ಬುದ್ಧಿಗೆಟ್ಟು ಹಾಳಾಗಿಹೋದರು. ನಾವು ಗೃಹಸ್ಥರು, ಕರ್ಮಬದ್ಧರು, ಇನ್ನೊಬ್ಬರಿಗೆ ಕೇಡನು ಬಗೆಯೆವು. ಇಂತಹ ನಮಗೆ ವಿರೋಧವನ್ನು ಮಾಡಿದ ನಿನ್ನನ್ನು ಎಷ್ಟೋ ಸಹಿಸಿ ಕ್ಷಮಿಸಿದೆನು. ಇನ್ನು ಕ್ಷಮಿಸಲಾರೆ. ವಂಶವರ್ಧನರಾಗುವ ಸುತರನ್ನು ಐಹಿಕಸುಖದೂರರನ್ನು ಮಾಡಿದ ನೀನು ಒಂದೆಡೆ ನಿಲ್ಲದೆ ಲೋಕಗಳಲ್ಲಿ ಸುಮ್ಮನೆ ಸುತ್ತುತ್ತಿರು!

ಎಂದು ನುಡಿದ ದಕ್ಷನ ಶಾಪವನ್ನು ನಾರದನು ಕೈಯೊಡ್ಡಿ ಸ್ವೀಕರಿಸಿದನು. ಸಾಧು ಜನರ ಸ್ವಭಾವವೇ ಇಂತಹದಲ್ಲವೇ? ಪ್ರತಿ ಶಾಪವನ್ನು ಕೊಡಲು ಸಮರ್ಥನಾದರೂ ನಾರದನು ಸಹಿಸಿ ಸುಮ್ಮನೆ ಹೊರಮಟ್ಟನು.

## ೬. ದಕ್ಷಕನ್ಯಾ– ಸೃಷ್ಟಿ– ವಿಸ್ತಾರ

ಶ್ರೀಶುಕನು ಹೇಳಿದನು–

ಅನಂತರ ದಕ್ಷನು ಬ್ರಹ್ಮನ ಮಾತಿನಿಂದ ಸಮಾಧಾನವನ್ನು ಪೊಂದಿ ಅಸಿಕ್ನಿದೇವಿಯಲ್ಲಿ ಅರವತ್ತು ಕನ್ಯೆಯರನ್ನು ಪಡೆದನು. ಧರ್ಮನಿಗೆ ಹತ್ತು ತರುಣಿಯರನ್ನು, ಕಶ್ಯಪನಿಗೆ ಹದಿಮೂರು ಕುವರಿಯರನ್ನು, ಚಂದ್ರನಿಗೆ ಕಾಲಜ್ಞಾಪಕರೆನಿಸುವ ಇಪ್ಪತ್ತೇಳು ಮಂದಿ ತಾರೆಯರನ್ನು, ಭೂತನಿಗಿಬ್ಬರನ್ನು, ಅಂಗಿರಸನಿಗಿಬ್ಬರನ್ನು, ಕೃಶಾಶ್ವನಿಗೆ ಇಬ್ಬರನ್ನು ಕೊಟ್ಟು ಮಿಕ್ಕ ನಾಲ್ವರನ್ನು

ತಾರ್ಕ್ಷ್ಯನಿಗೆ ಕೊಟ್ಟನು. ಅವರ ಸಂತಾನದಿಂದ ಮೂರು ಲೋಕಗಳು ತುಂಬಿದವು. ಅವರ ಹೆಸರನ್ನು ಕೇಳು–

ಭಾನು, ಲಂಬಾ, ಕಕುಪ್, ಜಾಮಿ, ವಿಶ್ವಾ, ಸಾಧ್ಯಾ, ಮರುತ್ವತೀ, ವಸು, ಮುಹೂರ್ತಾ, ಸಂಕಲ್ಪಾ, ಎಂಬೀ ಧರ್ಮಪತ್ನಿಗಳು ಹತ್ತು ಜನ.

ಭಾನುಪುತ್ರನೇ ವೇದಋಷಭನು. ಅವನ ಮಗನು ಇಂದ್ರಸೇನನೆನಿಸಿದನು. ಲಂಬೆಯ ಮಗನು ವಿದ್ಯೋತನು. ಅವನಿಂದ ಮಿಂಚುಗಳು ಪುಟ್ಟಿದವು. ಕಕುಪ್ ಎನ್ನುವವಳ ಮಗನು ಸಂಕಟನು. ಅವನಿಗೆ ಕೀಕಟನೆ ತನಯನಾದನು. ಜಾಮಿಯ ಮಕ್ಕಳು ಭೂಮಿಯಲ್ಲಿ ಅಗಮ್ಯವಾದ ದುರ್ಗಸ್ಥಾನಮಾನಿಗಳಾದರು. ಸ್ವರ್ಗನೂ ಮತ್ತು ನಂದಿಯೂ ಜಾಮಿಯ ಮಕ್ಕಳೇ. ವಿಶ್ವಳ ಮಕ್ಕಳು ವಿಶ್ವೇದೇವತೆಗಳು. ಅವರು ಅಪ್ರಜರೆಂದು ಪೇಳುವರು. ಸಾಧ್ಯಳ ಪುತ್ರರು ಸಾಧ್ಯರು. ಅವರ ಮಗನು ಅರ್ಥಸಿದ್ಧಿಯು. ಮರುತ್ವತಿಯಲ್ಲಿ ಮರುತ್ವಂತನು ಜಯಂತನೆಂಬ ಈರ್ವರು ಸುತರು ಜನಿಸಿದರು. ಧರ್ಮಸುತನಾದ ಜಯಂತನನ್ನು ಉಪೇಂದ್ರನೆನ್ನುವರು. ಇವನು ಶ್ರೀಹರಿಯೇ ಆಗಿರುವನು. ಭೂತಗಳಿಗೆ ಆಯಾ ಕಾಲಕ್ಕೆ ತಕ್ಕಂತೆ ಕರ್ಮಫಲವನ್ನು ಕೊಡುವ ಮೌಹೂರ್ತಿಕರೆಂಬ ದೇವತೆಗಳು ಮುಹೂರ್ತಳಿಗೆ ಧರ್ಮನಿಂದ ಜನಿಸಿದರು. ಸಂಕಲ್ಪಳಿಗೆ ಸಂಕಲ್ಪನೆಂಬ ಮಗನು. ಅವನ ಸುತನು ಕಾಮನು. ವಸುದೇವಿಗೆ ಎಂಟು ಜನ ಮಕ್ಕಳಾದರು. ಅವರಿಗೆ ವಸುಗಳೆಂಬುವರು. ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸ್ತು, ವಿಭಾವಸು ಎಂಬ ಪೆಸರಿನಿಂದ ವಸುಗಳು ಖ್ಯಾತರಾಗಿರುವರು. ದ್ರೋಣನಿಗೆ ಅಭಿಮತಿಯಲ್ಲಿ ಹರ್ಷ, ಶೋಕ, ಭಯಾಭಿಮಾನಿ ದೇವರು ಪುಟ್ಟಿದರು. ಪ್ರಾಣನಿಗೆ ಊರ್ಜಸ್ವತಿ ಎಂಬ ಪತ್ನಿಯಲ್ಲಿ ಸಹ, ಆಯು, ಪರ, ಜವರೆಂಬುವರು ಜನಿಸಿದರು; ಧ್ರುವನಿಗೆ ಧರಣಿಯಲ್ಲಿ ಪುರಾಭಿಮಾನಿ ದೇವತೆಗಳು ಪುಟ್ಟಿದರು. ಅರ್ಕನಿಗೆ ವಾಸನೆಯಲ್ಲಿ ತರ್ಷಾದಿ ಸುತರಾದರು. ಅಗ್ನಿ ಎಂಬ ವಸುದೇವಿ ಪುತ್ರನಿಗೆ ಧಾರಾ ಎಂಬ ಪತ್ನಿಯು. ಇವಳೇ ಸ್ವಾಹಾ ಎನಿಸಿದಳು. ದ್ರವಿಣಕಾದಿಗಳು ಅವಳ ಮಕ್ಕಳು. ಕೃತ್ತಿಕೆಯ ಮಗಳು ಸ್ಕಂಧನು. ಅವನ ಮಕ್ಕಳು ವಿಶಾಖ ಮೊದಲಾದವರು. ದೋಷನಿಗೆ ಶರ್ವರೀದೇವಿಯಲ್ಲಿ ಶ್ರೀಹರಿಯು ಶಿಂಶುಮಾರರೂಪದಿಂದ ಪ್ರಾದುರ್ಭವಿಸಿದನು. ವಸ್ತುವಿಗೆ ಅಂಗೀರಸಿಯಲ್ಲಿ ವಿಶ್ವಕರ್ಮನೆಂಬ ಶಿಲ್ಪಕಲಾಧೀಪತಿಯು ಪುಟ್ಟಿದನು. ಈ ದೇವಶಿಲ್ಪಿಯ ಮಗನೇ ಚಾಕ್ಷುಷನೆಂಬ ಮನುವು. ಆ ಮನುವಿಗೆ ವಿಶ್ವೇಶಾದಿಗಳು ಸುತರಾದರು. ವಿಭಾವಸುವಿಗೆ ಉಷಾದೇವಿಯಲ್ಲಿ ವ್ಯುಷ್ಯ, ರೋಚಿಷ, ಆತಪರೆಂಬರು ಜನಿಸಿದರು. ಆತಪನ ಮಗನು ಪಂಚಯಾಮನು. ಅವನಿಂದ ಜನರು ಜಾಗ್ರತರಾಗಿ ಕರ್ಮತತ್ಪರರಾಗಿರುವರು. ಭೂತನಿಗೆ ಭೂತಾದೇವಿಯಲ್ಲಿ ಏಕಾದಶರುದ್ರರು ಪುಟ್ಟಿದರು. ಭೂತನ ಮತ್ತೊಬ್ಬ ಪತ್ನಿಯಾದ ಸುರೂಪೆಯಲ್ಲಿ ಕೋಟಿಗಟ್ಟಲೆ ರುದ್ರರು ಪುಟ್ಟಿದರು. ರೈವತ, ಅಜ, ಭವ, ಭೀಮ, ವಾಮ, ಉದ್ರ, ವೃಷಾಕಪಿ, ಅಜ, ಏಕಪಾತ್, ಅಹಿರ್ಬುಧ್ನ್ಯ, ಮಹಾನ್ ಎಂಬವರೇ ಏಕಾದಶ ರುದ್ರರು. ರುದ್ರರಲ್ಲದೇ ಪಾರ್ಷದರು, ಘೋರರಾದ ಪ್ರೇತರು ವಿನಾಯಕರನ್ನು ಕೂಡ ಸುರೂಪೆಯು ಪಡೆದಳು.

ಆಂಗಿರಸನೆಂಬುವ ಪ್ರಜಾಪತಿಯು ಸ್ವಧಾ ಎನ್ನುವ ಪತ್ನಿಯಲ್ಲಿ ಪಿತೃದೇವತೆಗಳನ್ನೂ ಪಡೆದು ಇನ್ನೊಬ್ಬ ಸತಿಗಾಗಿ ಅಥರ್ವಾಂಗಿರಸವೇದನೆಂಬವನನ್ನು ಪುತ್ರನನ್ನಾಗಿ ಸ್ವೀಕರಿಸಿದನು. ಕೃಶಾಶ್ವತನು ಅರ್ಚಿಯಲ್ಲಿ ಧೂಮಕೇತುನನ್ನು ಮತ್ತು ಧಿಷಣೆಯಲ್ಲಿ ದೇವಲನನ್ನು ಪಡೆದನು.

ತಾರ್ಕ್ಷ್ಯನ ಪತ್ನಿಯರು ವಿನತೆ, ಕದ್ರು, ಪತಂಗಿ ಮತ್ತು ಯಾಮಿನಿ ಎಂಬುವರು. ಪತಂಗಿಯು ಪಕ್ಷಿಗಳನ್ನು, ಯಾಮಿನಿಯು ಶಲಭಗಳನ್ನು, ವಿನತೆಯು ವಿಷ್ಣುವಾಹನನಾದ ಗರುಡನನ್ನು ಸೂರ್ಯಸುತನಾದ ಅರುಣನನ್ನೂ ಕದ್ರುವು ಅನೇಕ ನಾಗರನ್ನೂ ಪಡೆದರು. ದಕ್ಷಶಾಪದಿಂದ ಕ್ಷಯಗ್ರಸ್ತನಾಗಿ ಚಂದ್ರನು ತನ್ನ ಇಪ್ಪತ್ತೇಳು ಪತ್ನಿಯರಲ್ಲಿ ಪುತ್ರರನ್ನು ಪಡೆಯಲಿಲ್ಲ. ಪುನಃ ಅವನ ಅನುಗ್ರಹದಿಂದ ವೃದ್ಧಿಹ್ರಾಸವನ್ನು ಪೊಂದುವ ಕಲಾವಂತನಾದನು. ಲೋಕಸುಖ ಕಾರಣ ರಾದ ಕಶ್ಯಪ ಪತ್ನಿಯರ ಸಂತಾನವನ್ನು ಕೇಳು. ಕಶ್ಯಪನಿಗೆ ಅದಿತಿ, ದಿತಿ, ದನು, ಕಾಷ್ಠಾ, ಅರಿಷ್ಟಾ, ಸುರಸಾ, ಇಲಾ, ಮುನಿ, ಕ್ರೋಧವಶಾ, ತಾಮ್ರಾ, ಸುರಭಿ, ಸರಮಾ, ತಿಮಿ ಎಂಬ ಹದಿಮೂರು ಪತ್ನಿಯರು.

ತಿಮಿಯಲ್ಲಿ ಜಲಜಂತುಗಳು, ಸರಮೆಯಲ್ಲಿ ಶ್ವಾಪದಗಳು, ಸುರಭಿಯಲ್ಲಿ ಗೋ ಮಹಿಷ ಗಳು, ತಾಮ್ರೆಯಲ್ಲಿ ಶ್ಯೇನ ಗೃಧ್ರಾದಿಗಳು, ಮುನಿಯಲ್ಲಿ ಅಪ್ಸರೆಯರು, ಕ್ರೋಧ ವಶಗಳಲ್ಲಿ ಸರ್ಪಗಳು, ಇಲೆಯಲ್ಲಿ ಗಿಡಗಳು, ಸುರಸೆಯಲ್ಲಿ ಯಾತುಧಾನರು, ಅರಿಷ್ಟೆಯಲ್ಲಿ ಗಂಧರ್ವರು, ಕಾಷ್ಠೆಯಲ್ಲಿ ದ್ವಿಶಫೇತರ ಪಶುಗಳು ಪುಟ್ಟಿದರು.

ದನುವಿನ ಮಕ್ಕಳಾದ ದಾನವರಲ್ಲಿ ಮುಖ್ಯರಾದವರು ದ್ವಿಮೂರ್ಧಾ, ಶಂಬರ, ಅರಿಷ್ಟ, ಹಯಗ್ರೀವ, ವಿಭಾವಸು, ಅಯೋಮುಖ, ಶಂಕುಶಿರ, ಸ್ವರ್ಭಾನು, ಕಪಿಲ, ಅರುಣ, ಪುಲೋಮ, ವೃಷಪರ್ವ, ಏಕಚಕ್ರ, ಅನಾತಾಪನ, ಧೂಮ್ರಕೇಶ, ವಿರೂಪಾಕ್ಷ, ವಿಪ್ರಚಿತ್ತಿ, ದುರ್ಜಯರೆಂಬುವರು.

ಸ್ವರ್ಭಾನುವಿನ ಮಗಳು ಸುಪ್ರಭಾ. ಅವಳನ್ನು ನಮುಚಿ ಮದುವೆಯಾದನು. ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನು ನಹುಷ ಪುತ್ರನಾದ ಯಯಾತಿಯು ಕೂಡಿದನು. ವೈಶ್ವಾನರ ಕನ್ಯೆಯರು ಉಪದಾನದಿ, ಹಯಶಿರಾ, ಪುಲೋಮಾ, ಕಾಲಿಕಾ ಎಂಬ ಸುಂದರಿಯರು. ಹಿರಣ್ಯಾಕ್ಷನ ಪತ್ನಿಯು ಉಪದಾನದಿ. ಖತುನೆಂಬುವನು ಹಯಶಿರಳನ್ನು ಕೂಡಿದನು. ಪುಲೋಮ ಕಾಲಿಕೇಯರನ್ನು ಕಶ್ಯಪನು ಬ್ರಹ್ಮವಚನವನ್ನು ಶಿರಸಾ ವಹಿಸಿ ಮದುವೆಯಾದನು. ಆ ರಕ್ಕಸಿಯರ ಮಕ್ಕಳಾದ ಪೌಲೋಮ ಕಾಲಕೇಯರು ಅರವತ್ತು ಸಾವಿರ ಜನರು. ಆ ದುಷ್ಟ ದೈತ್ಯರನ್ನು ನಿಮ್ಮ ತಾತನಾದ ಅರ್ಜುನನು ಸಂಹರಿಸಿ ಇಂದ್ರನಿಗೆ ಸಂತಸವನ್ನುಂಟುಮಾಡಿದನು. ವಿಪ್ರಚಿತ್ತಿಯು ಸಿಂಹಿಕೆಯಲ್ಲಿ ನೂರೊಂದು ಪುತ್ರರನ್ನು ಪಡೆದನು. ರಾಹುವು ಅವರಲ್ಲಿ ಜ್ಯೇಷ್ಠನು. ಅವರು ವಿಧಿಬಲದಿಂದ ಗ್ರಹವಾದನು.

ಈಗ ಅದಿತಿಯ ವಂಶವನ್ನು ಕೇಳು. ಶ್ರೀನಾರಾಯಣನು ಅದಿತಿಯಲ್ಲಿ ಪುತ್ರನಾಗಿ ಜನಿಸಿ ದನು. ವಿವಸ್ವಾನ್, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಶಕ್ರ, ಉರುಕ್ರಮರೆಂಬುವರೇ ದ್ವಾದಶಾದಿತ್ಯರು. ವಿವಸ್ವಂತನು ಸಂಜ್ಞಾ ದೇವಿಯಲ್ಲಿ ಶ್ರಾದ್ಧದೇವ ಯಮರನ್ನು ಯಮುನೆಯಲ್ಲಿ ಪಡೆದನು. ಶ್ರಾದ್ಧದೇವನೇ ವೈವಸ್ವತಮನು ಎನಿಸಿದನು. ಸಂಜ್ಞಾದೇವಿಯೇ ವಡವಾರೂಪಳಾಗಿ ನಾಸತ್ಯದಸ್ರರೆಂಬುವ ಅಶ್ವಿನೀದೇವದ್ವಂದ್ವ ವನ್ನು ಪಡೆದಳು. ಛಾಯಾದೇವಿಗೆ ವಿವಸ್ವತನಿಂದ ಶನೈಶ್ಚರನು, ಸಾವರ್ಣಿಮನುವು ತಪತಿಯು, ಪುಟ್ಟಿದರು. ತಪತಿಯು ಸಂವರಣವನ್ನು ವರಿಸಿದಳು.

ಅರ್ಯಮನಿಗೆ ಮಾತೃಕೆಯಲ್ಲಿ ಚರ್ಷಣಿಗಳೆಂಬ ಮಕ್ಕಳಾದರು. ಅವರಿಂದ ಮಾನುಷೀ ಜಾತಿಯು ವೃದ್ಧಿಯನ್ನು ಪೊಂದಿತು. ಪೂಷನು ದಕ್ಷಯಜ್ಞದಲ್ಲಿ ಹಲ್ಲನ್ನು ಕಳೆದುಕೊಂಡು

ಪಿಪ್ಪಾದನಾಗಿದ್ದನು. ಹರನನ್ನು ನೋಡಿ ಹಲ್ಲು ಕಿರಿದು ನಕ್ಕ ಫಲವದು. ಅವನಿಗೆ ಮಕ್ಕಳಾಗಲಿಲ್ಲ. ತ್ವಷ್ಟನ ಪತ್ನಿಯು ದೈತ್ಯರ ತಂಗಿಯಾದ ರಚನೆಯು. ಅವಳಲ್ಲಿ ಸನ್ನಿವೇಶ ವಿಶ್ವರೂಪರೆಂಬ ಪುತ್ರರು ಜನಿಸಿದರು. ಆ ವಿಶ್ವರೂಪವನ್ನು ತಂಗಿಯ ಮಗನು ಆಪ್ತನೆಂಬ ಕಾರಣದಿಂದ, ದೇವತೆಗಳು ಗುರುಪರಿತ್ಯಕ್ತರಾದಾಗ ಗುರುವಾಗಿ ವರಿಸಿದರು.

## ೭. ವಿಶ್ವರೂಪ ಚರಿತೆ

ರಾಜನು ಕೇಳಿದನು–

ಪೂಜ್ಯನೇ! ಸುರಾಚಾರ್ಯನು ಸುರರನ್ನು ಬಿಡಲು ಕಾರಣವೇನು? ಶಿಷ್ಯರು ಮಾಡಿದ ಗುರುದ್ರೋಹವೇನು? ಪೇಳಿ.

ಎನ್ನಲು ಶ್ರೀಶುಕನು ಪೇಳಿದನು–

ತ್ರಿಭುವನೈಶ್ವರ್ಯಮದದಿಂದ ಇಂದ್ರನೊಂದು ಸಲ ಸದಾಚಾರವನ್ನತಿಕ್ರಮಿಸಿ ಆಚಾರ್ಯರಿಗೆ ಅಪರಾಧವನ್ನು ಮಾಡಿದನು. ಒಂದು ದಿನ ಇಂದ್ರನು ಸುಧರ್ಮಸಭೆಯಲ್ಲಿ ದಿವ್ಯಸಿಂಹಾಸನವನ್ನಲಂಕರಿಸಿದ್ದನು. ವಸುರುದ್ರಾದಿತ್ಯರು, ವಿಶ್ವೇದೇವರು, ಸಿದ್ಧಚಾರಣ ಗಂಧರ್ವರು, ಬ್ರಹ್ಮವಾದಿ ಮುನಿಜನರು, ವಿದ್ಯಾಧರಾಪ್ಸರೆಯರು ಅವರನ್ನು ಸೇವಿಸುತ್ತಿದ್ದರು. ಶ್ವೇತಛತ್ರದ ಮುತ್ತಿನ ಗೊಂಚಲದ ಅಮೃತ ಕಿರಣಧಾರೆಯಲ್ಲಿ ಶಚೀದೇವಿಯಿಂದ ಕೂತು ವಿರಾಜಮಾನನಾದ ಸುರರಾಜನನ್ನು ಸುರನಾರಿಯರು ಪಾಡಿ ಪೊಗಳುತ್ತಿದ್ದರು. ಚಾಮರ ವ್ಯಜನಗಳನ್ನು ಬೀಸುತ್ತಿದ್ದರು. ಆಗ ಬಂದ ಸುರಗುರುವನ್ನು ನೋಡಿ ಪ್ರತ್ಯುತ್ಥಾನ ಆಸವಾದಿಗಳಿಂದ ಸತ್ಕರಿಸದೆ, ಆಸದಿಂದೇಳದೆ, ಮದಮತ್ತನಾದ ಇಂದ್ರನು ಕೂತಿರಲು, ನೋಡಿ ಸಿಟ್ಟಿನಿಂದ ಆಂಗೀರಸನು ಸಭೆಯನ್ನು ಬಿಟ್ಟು ಮನೆಯಲ್ಲಿ ಸೇರಿದನು.

ತತ್‌ಕ್ಷಣವೇ ಎಚ್ಚತ್ತ ಸುರರಾಜನು ಪಶ್ಚಾತ್ತಾಪಪಟ್ಟು ಸಭೆಯಲ್ಲಿ ಇಂತು ನುಡಿದನು–

ಅಯ್ಯೋ! ಎಷ್ಟು ಕೆಟ್ಟ ಕಲಸವನ್ನು ಮಾಡಿದೆ! ಸಭೆಯಲ್ಲಿ ಗುರುವನ್ನು ಅವಮಾನಿಸುವ ಅಲ್ಪಬುದ್ಧಿಯು ನನಗೇಕೆ ಪುಟ್ಟಿತು? ಐಶ್ವರ್ಯದ ಮದದಿಂದ ಕಣ್ಣಿದ್ದೂ ಕಾಣದಾದೆ. ಅಸುರಭಾವವನ್ನು ಪೊಂದಿಸುವ ತ್ರಿಲೋಕದ ಸಂಪತ್ತಿನಿಂದ ಏನು ಲಾಭವು? ಅದಕ್ಕಾಗಿಯೇ ಪಂಡಿತರು ಐಶ್ವರ್ಯಾದಿಗಳನ್ನು ಬೇಡದಿರುವರು. ರಾಜಸಿಂಹಾಸನಾಸೀನನು ಯಾರು ಬಂದರೂ ಏಳಕೂಡದೆಂಬುವರು ಪಂಡಿತಮ್ಮನ್ಯರೇ ಆಗಲಿ ಮಾನ್ಯರಲ್ಲ. ಅಂತಹ ದುರ್ಮಾರ್ಗರ ಮಾತನ್ನು ಕೇಳಿ ಅದರಂತೆ ನಡೆದವನು ಕೂಡ ಕಲ್ಲಿನ ನಾವೆಯು ಸಮುದ್ರದಿ ಮುಣುಗಿಸುವಂತೆ ನಾಶವನ್ನು ಪೊಂದುವನು. ಈಗಲೇ ಹೋಗಿ ಜ್ಞಾನಿವರನಾದ ಆಚಾರ್ಯನಿಗೆ ಶರಣಾಗತನಾಗುವೆನು. ಶಿರಬಾಗಿ ಕ್ಷಮಿಸೆಂದು ಬೇಡುವೆನು.

ಇಂತು ಚಿಂತಿಸಿ ಶಚೀಕಾಂತನು ಗುರುವಿನ ಮನೆಗೆ ಬರುವಾಗ ಅವನನ್ನು ನೋಡಿ ಬೃಹಸ್ಪತಿಯು ಅಂತರ್ಧಾನವನ್ನು ಪೊಂದಿದನು. ಇಂದ್ರನು ಗುರುವಿನನ್ನು ಕಾಣದೆ ತಲ್ಲಣಿಸಿ ಸುರರಿಂದ ಕೂಡಿ ಆಲೋಚಿಸುತ್ತಿದ್ದನು. ಇದನ್ನರಿತು ದೈತ್ಯರು ಶುಕ್ರರ ಆಜ್ಞೆಯನ್ನು ಪಡೆದು ದೇವತೆಗಳನ್ನು ಯುದ್ಧದಲ್ಲಿ ಸೋಲಿಸಿದರು. ಇಂದ್ರಾದಿಗಳು ದೀನರಾಗಿ ಬ್ರಹ್ಮನಿಗೆ ಮೊರೆ

ಯಿಟ್ಟರು. ದೈತ್ಯಪೀಡಿತರಾದ ಸುರರನ್ನು ಕಂಡು, ಕೃಪೆಗೊಂಡು ಬ್ರಹ್ಮದೇವನು ಸಂತೈಸುತ್ತಾ ಇಂತು ನುಡಿದನು–

ದೇವತೆಗಳಿರಾ – ವೇದವೇದಾಂಗಚತುರನು, ಶಮದಮಾದಿ ಗುಣಾಕರನು, ಬ್ರಾಹ್ಮಣ ಶ್ರೇಷ್ಠನು ಆದ ಗುರುವಿನನ್ನು ಧನಮದದಿಂದ ಧಿಕ್ಕರಿಸಿದುದು ಅನುಚಿತವಲ್ಲವೇ? ಆ ಗುರು ದ್ರೋಹದ ಫಲವೇ ಈ ಪರಾಭವವು. ಚೆನ್ನಾಗಿದ್ದ ನೀವು ಕ್ಷೀಣರಾಗಿದ್ದ ದೈತ್ಯರಿಂದ ಪರಾಯ ವನ್ನು ಪೊಂದಿ ಕಷ್ಟಪಡುವುದು ಸ್ವಯಂಕೃತಾಪರಾಧದಿಂದಲೇ ಆಗಲಿ ಅನ್ಯಾಥಾ ಅಲ್ಲ. ಇಂದ್ರಾ! ಹಿಂದೆ ಗುರುವನ್ನು ಅತಿಕ್ರಮಿಸಿ ಕಷ್ಟಪಟ್ಟು ದೈತ್ಯರು ಇಂದು ಅದೇ ಗುರುಗಳನ್ನು ಭಕ್ತಿಯಿಂದ ಭಜಿಸುವುದರಿಂದ ಭಾಗ್ಯಶಾಲಿಗಳಾಗಿರುವರು. ಗುರುವಿನನ್ನು ದೇವನಂತೆ ಪೂಜಿಪರು, ಸ್ವರ್ಗ ವನ್ನೇಕೆ ಸತ್ಯಲೋಕವನ್ನೂ ಜಯಿಸಿ ಸುಖಿಸುವರು. ಅಂತಹ ಶಕ್ತಿವಂತರು ಆ ಬ್ರಾಹ್ಮಣೋತ್ತಮ ರಾದ ಭೃಗುವರರು! ಗೋಬ್ರಾಹ್ಮಣ ಗೋವಿಂದರು ಆ ಭಜಕರಿಗೆ ಎಂದಿಗೂ ಅಮಂಗಲ ವಾಗದು. ಇರಲಿ! ವಿಶ್ವರೂಪನೆಂಬ ಬ್ರಾಹ್ಮಣವರನಿರುವನು. ಅವನು ಬ್ರಹ್ಮಜ್ಞಾನಿಯು, ತಪಸ್ಸಂಪನ್ನನಾಗಿರುವನು. ತ್ವಷ್ಟನ ಮಗನಾದ ಆ ವಿಶ್ವರೂಪವನ್ನು ಚೆನ್ನಾಗಿ ಪೂಜಿಸಿ ಪ್ರಸನ್ನೀ ಕರಿಸಿಕೊಳ್ಳಿ. ನಿಮ್ಮೆಲ್ಲಾ ಅಭೀಷ್ಟಗಳವನಿಂದಲೇ ಈಡೇರುವುವು. ಅವನೇನೇ ಮಾಡಲಿ ನೀವು ಮಾತ್ರ ಸುಮ್ಮನಿರಿ, ಪೋಗಿ.

ಆಗ ಬ್ರಹ್ಮನ ವಚನದಿಂದ ನಿಶ್ಚಿಂತರಾದ ಇಂದ್ರಾದಿ ದೇವತೆಗಳು ವಿಶ್ವರೂಪವನ್ನು ಕಂಡು, ಅವನನ್ನಾಲಿಂಗಿಸಿ ಸತ್ಕರಿಸಿ ಇಂತು ನುಡಿದರು–

ವತ್ಸಾ! ನಿನ್ನ ಆಶ್ರಮಕ್ಕೆ ನಾವು ಅತಿಥಿಗಳಾಗಿ ಬಂದಿರುವೆವು. ನಿನಗೆ ಮಂಗಳವಾಗಲಿ! ಕಷ್ಟಪಡುತ್ತಿರುವ ನಿನ್ನ ಹಿರಿಯರಾದ ನಮ್ಮ ಇಷ್ಟವನ್ನು ನೆರವೇರಿಸು. ಪಿತೃಶುಶ್ರೂಷೆಗೆ ಸಮನಾದ ಧರ್ಮವು ಉಂಟೇ? ಮಗನು ತಂದೆಯ ಸೇವೆಯನ್ನಂತೆ, ಪುತ್ರರಹಿತರಾದ ಹಿರಿಯರ ಸೇವೆಯನ್ನೂ ಮಾಡುವುದು ವಿಹಿತವೆನಿಸಿದೆ. ಆಚಾರ್ಯನಲ್ಲಿ ಬ್ರಹ್ಮನು, ತಂದೆಯಲ್ಲಿ ರುದ್ರನು, ಅಣ್ಣನಲ್ಲಿ ಇಂದ್ರನು, ತಾಯಿಯಲ್ಲಿ ಪೃಥ್ವೀದೇವಿಯು, ತಂಗಿಯಲ್ಲಿ ದಯಾದೇವಿಯು, ಅತಿಥಿಯಲ್ಲಿ ಧರ್ಮನು, ಅಭ್ಯಾಗತನಲ್ಲಿ ಅಗ್ನಿಯು, ಸರ್ವಭೂತಗಳಲ್ಲಿ ಶ್ರೀಹರಿಯು ನೆಲೆಸಿ, ಅವರ ಪೂಜೆಯನ್ನು ಮಾಡುವ ಜನರಿಗೆ ಒಲಿದು ಮಹಾ ಫಲಪ್ರದರಾಗಿರುವರು. ನಾವು ಹಿರಿಯರಲ್ಲವೇ? ನಮ್ಮ ಕಷ್ಟವನ್ನು ಕಂಡು ಕರುಣೆಯಿಂದ ನೀನು ಕಾಪಾಡುವುದು ಉಚಿತ ವಲ್ಲವೇ? ಶತ್ರುಗಳಿಂದ ನಮಗಾದ ಪರಾಭವ ದುಃಖವನ್ನು ನಿನ್ನ ತಪೋಬಲದಿಂದ ದೂರ ಗೊಳಿಸಿ ನಮಗೆ ಜಯವಾಗುವಂತೆ ಮಾಡು. ನಮಗೆ ಗುರುವಾಗು. ಬ್ರಾಹ್ಮಣೋತ್ತಮನು ವೇದವಿದ್ವರನು ಆದ ನಿನ್ನ ತೇಜೋಬಲದಿಂದ ಪ್ರಬಲರಾದ ದೈತ್ಯರನ್ನೆಲ್ಲ ಗೆದ್ದು ನಮ್ಮ ರಾಜ್ಯವನ್ನು ನಾವು ಪೊಂದುವಂತೆ ಅನುಗ್ರಹಿಸು. ಚಿಕ್ಕವನಾದರೂ ಚಿಂತೆಯಿಲ್ಲ. ನಿನ್ನ ಕಾಲಿಗೆ ಬಿದ್ದು ಕೈಜೋಡಿಸಿ ಬೇಡುತ್ತಿರುವ ನಮ್ಮನ್ನು ಉದ್ಧರಿಸು! ವೇದವಿಜ್ಞಾನಿಗಳಿಗೆ ವಯಸ್ಸು ಕಾರಣವಲ್ಲ. ಅವರ ಜ್ಞಾನವೇ ಪೂಜಾಸ್ಥಾನವಾಗಿದೆ – ಅವರ ಮಾತನ್ನು ಕೇಳಿ ಪ್ರಸನ್ನನಾದ ವಿಶ್ವರೂಪನಿಂತು ನುಡಿದನು-

ಬ್ರಹ್ಮವರ್ಚಸ್ಸನ್ನು ಕೆಡಿಸುವ ಪೌರೋಹಿತ್ಯವು ನಿಂದ್ಯವಾಗಿದೆ. ಧರ್ಮಶೀಲರಾದ ನನ್ನಂತಹ ತಪಸ್ವಿಗಳಿಗಿದು ಉಚಿತವಾಗದು. ಆದರೂ ಲೋಕೇಶರಾದ ನೀವು ಯಾಚಿಸಿದಾಗ ನಿಮಗೆ ಕಿರಿಯನು ವಿಧೇಯನು ಆದ ನಾನು 'ಇಲ್ಲ'ವೆನ್ನಲು ಬರುವುದೇ? ಹಾಗೆಂದವನು

ಸ್ವಾರ್ಥಪರನೆನಿಸುವನು. ನಾನೋ ಶಿಲೋಂಛನದಿಂದ ಜೀವನವನ್ನು ನಡೆಸುತ್ತಾ, ಸತ್ಕರ್ಮಪರನಾಗಿರುವನು. ಶ್ರೀಹರಿಯನ್ನುಳಿದು ಮತ್ತಾವ ಧನವೂ ನನಗೆ ಬೇಕಿಲ್ಲ. ಇಂತಹವನಿಗೆ ವಿಗರ್ಹಿತವಾದ ಪೌರೋಹಿತ್ಯವು ಸಮ್ಮತವಲ್ಲ. ಏನು ಮಾಡಲಿ? ಹಿರಿಯರು ಕೈಯೊಡ್ಡಿ ಬೇಡುತ್ತಿರಲು ತಿರಸ್ಕರಿಸಲಾರೆನು. ನಿಮ್ಮ ಕಾರ್ಯವನ್ನು ನನ್ನ ಅರ್ಥಪ್ರಾಣಗಳನ್ನೂ ಲೆಕ್ಕಿಸದೆ ಸಾಧಿಸಿ ಕೊಡುವೆನು.

ಅಂದಿನಿಂದ ವಿಶ್ವರೂಪನು ದೇವತೆಗಳಿಗೆ ಪುರೋಹಿತನಾಗಿ ಶ್ರದ್ಧೆಯಿಂದ ಅವರಿಗೆ ಶ್ರೇಯಸ್ಸನ್ನು ಸಂಪಾದಿಸಿದನು. ಶುಕ್ರವಿದ್ಯೆಯಿಂದ ಸಂಪಾದಿತವಾಗಿದ್ದ ದೈತ್ಯರ ಭಾಗ್ಯವನ್ನು ವೈಷ್ಣವೀವಿದ್ಯೆಯ ಬಲದಿಂದ ಕಸಿದು, ಹಯಗ್ರೀವ ಬ್ರಹ್ಮವಿದ್ಯಾವಿಶಾರದನನಾದ ವಿಶ್ವರೂಪನು ಆ ವಿದ್ಯೆಯೊಡನೆ ಇಂದ್ರನಿಗೆ ಕೊಟ್ಟು ಅನುಗ್ರಹಿಸಿದನು.

ಉದಾರಗುಣನಾದ ಆಚಾರ್ಯನಿಂದ ಸ್ವೀಕರಿಸಿದ ನಾರಾಯಣ ಕವಚವನ್ನು ತೊಟ್ಟು ಇಂದ್ರನು ದೈತ್ಯಸೈನ್ಯವನ್ನು ಅನಾಯಾಸವಾಗಿ ಸಿಂಹವು ನೀಚಮೃಗಗಳನ್ನಂತೆ, ಜಯಿಸಿದನು.

## ೮. ನಾರಾಯಣವರ್ಮವು

ರಾಜನು ಕೇಳಿದನು–

ಸಹಸ್ರಾಕ್ಷನು ಕುದುರೆಗಳನ್ನೇರಿ ಬಂದ ಶತ್ರುಸೈನಿಕರನ್ನೆಲ್ಲ ಲೀಲೆಯಿಂದ ಗೆದ್ದು ತ್ರಿಲೋಕದ ಸಂಪತ್ತನ್ನು ಪೊಂದಲು ಕಾರಣವಾದ ನಾರಾಯಣವರ್ಮವನ್ನು ನನಗೆ ಪೇಳಿ. ದುರ್ಮಾರ್ಗರಾದ ಅಸುರರನ್ನು ನಿರಾಯಾಸವಾಗಿ ಜಯಿಸಿ ಇಂದ್ರನು ಸುಖಪಡಲು ಅದೇ ಕಾರಣವಲ್ಲವೇ?

ಶ್ರೀಶುಕನು ಪೇಳಿದನು–

ತ್ವಷ್ಟನ ಮಗನಾದ ವಿಶ್ವರೂಪನು ಇಂದ್ರನಿಗೆ ಪುರೋಹಿತನಾಗಿ ಪೇಳಿದ ನಾರಾಯಣ ವರ್ಮವನ್ನು ಶ್ರದ್ಧೆಯಿಂದ ಕೇಳು.

ವಿಶ್ವರೂಪನೆಂದನು–

ನಾರಾಯಣವರ್ಮ ಮಂತ್ರವನ್ನು ಅಭ್ಯಸಿಸುವವನು ಸ್ನಾತನಾಗಿ ಶುಚಿಯಾಗಬೇಕು. ಉತ್ತರದಿಗಭಿಮುಖನಾಗಿ ಆಚಮಿಸಿ, ಕರನ್ಯಾಸ ಅಂಗನ್ಯಾಸಗಳನ್ನು 'ಓಂ ನಮೋ ನಾರಾಯಣಾಯ ಓಂ, ಓಂ ವಿಷ್ಣವೇ ನಮಃ ಓಂ' ಎಂಬ ಮಂತ್ರಗಳಿಂದ ಮಾಡಿ ಮೌನವನ್ನು ಧರಿಸಬೇಕು. ಅನಾವೃಷ್ಟ್ಯಾದಿ ದೈವಿಕವು, ಉನ್ಮಾದಾದಿ ಆದಿಭೌತಿಕವು, ಕುಷ್ಠಾದಿ ರೋಗಲಕ್ಷಣವಾದ ಆಧ್ಯಾತ್ಮಿಕವು ಆದ ತ್ರಿವಿಧ ಭಯದಿಂದ ಪೀಡಿತನಾದಾಗ, ಜಪಿಸಲು ನಾರಾಯಣವರ್ಮವು ಅವನ ಸರ್ವಭಯವನ್ನು ಪರಿಹರಿಸಿ ಕಾಪಾಡುವುದು.

ಪಾದಗಳಲ್ಲಿ ಓಂ, ಜಾನಗಳಲ್ಲಿ ನ, ಊರುಗಳಲ್ಲಿ ಮೋ, ಉದರದಲ್ಲಿ ನಾ, ಹೃದಯದಲ್ಲಿ ರಾ, ಉದರದಲ್ಲಿ ಯ, ಮುಖದಲ್ಲಿ ಣಾ, ಶಿರಸ್ಸಿನಲ್ಲಿ ಯ ಎಂಬ ಅಕ್ಷರ ದೇವತಾರೂಪಗಳನ್ನು ಧ್ಯಾನಿಸಬೇಕು. 'ಓಂ ವಿಷ್ಣವೇ ನಮಃ' ಎಂಬ ಅರಕ್ಷರದ ಮಂತ್ರದಿಂದಾಗಲಿ, 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದಿಂದಾಗಲಿ ಕರನ್ಯಾಸಾಂಗನ್ಯಾಸಗಳನ್ನು ಮಾಡಬಹುದು. ಆಗ 'ಓಂ'ಕಾರವನ್ನು ಹೃದಯದಲ್ಲಿ, 'ವಿ'ಕಾರವನ್ನು ಶಿರಸ್ಸಿನಲ್ಲಿ 'ಷ'ಕಾರವನ್ನು ಭ್ರೂಮಧ್ಯದಲ್ಲಿ 'ಣ'ಕಾರವನ್ನು ಶಿಖೆಯಲ್ಲಿ 'ವೇ'ಕಾರವನ್ನು ನೇತ್ರ ಮಧ್ಯದಲ್ಲಿ, 'ನ'ಕಾರವನ್ನು

ಸರ್ವಸಂಧಿಗಳಲ್ಲಿಯೂ 'ಮ'ಕಾರವನ್ನು ಅಸ್ತ್ರವೆಂದೂ ಚಿಂತಿಸಿ ಅಧಿಕಾರಿಯು ದೇವಸನ್ನಿಧಾನ ಯುಕ್ತನಾಗುವನು. ವಿದ್ಯಾತೇಜಸ್ತಪೋಯುಕ್ತನೂ ಆಗುವನು. ಓ ವಿಷ್ಣವೇ ನಮಃ ಓಂ ಅಣಿಮಾದ್ಯಷ್ಟೈಶ್ವರ್ಯಸಮನ್ವಿತನು, ಸೃಷ್ಟ್ಯಾದ್ಯಷ್ಟಕರ್ತನು, ಶಂಖ ಚಕ್ರ ಚರ್ಮ ಖಡ್ಗ ಗದಾಬಾಣ ಧನುಃ ಪಾಶಧರನು, ಅಷ್ಟಬಾಹು ವಿಲಸಿತನು, ಗರುಡಾರೂಢನು ಆದ ಶ್ರೀಹರಿಯು ನನ್ನನ್ನು ಸರ್ವ ವಿಪತ್ತಿನಿಂದ ರಕ್ಷಿಸಲು! ಜಲಗಂಡಗಳಿಂದಲೂ ತಿಮಿ ನಕ್ಷತ್ರಗಳಿಂದಲೂ ವರುಣಪಾಶದಿಂದಲೂ ಮತ್ಸ್ಯನು ರಕ್ಷಿಸಲಿ! ವಿಶ್ವರೂಪನೂ ಸ್ಥಲದಲ್ಲಿಯೂ, ಆಕಾಶದಲ್ಲಿ ತ್ರಿವಿಕ್ರಮನು ಆದ ವಾಮನನು ರಕ್ಷಿಸಲಿ! ದುರ್ಗಗಳಲ್ಲಿಯೂ, ಯಜ್ಞಗಳಲ್ಲಿಯೂ, ಯುದ್ಧ ರಂಗದಲ್ಲಿಯೂ ರಾಕ್ಷಸ ವೈರಿಯಾದ ಶ್ರೀಲಕ್ಷ್ಮೀನೃಸಿಂಹನು ರಕ್ಷಿಸಲಿ! ಅವನ ಅಟ್ಟಹಾಸವನ್ನು ಕೇಳಿದೊಡನೆ ಅಸುರ ಸ್ತ್ರೀಯರಿಗೆ ಗರ್ಭಪಾತವಾಗುವುದಲ್ಲವೇ? ಮಾರ್ಗಮಧ್ಯದಲ್ಲಿ ಯಜ್ಞಕಾರಣ ಪವಿತ್ರದೇಹನು, ದಂಷ್ಟ್ರಾಗ್ರಧೃತ ಭೂಮಂಡಲನು ಆದ ವರಾಹನು ರಕ್ಷಿಸಲಿ! ಪರಶುರಾಮನು ಆದ್ರಿಕೂಟಗಳಲ್ಲಿಯೂ, ಲಕ್ಷ್ಮಣಸಹಿತನಾದ ಶ್ರೀರಾಮನು ಪ್ರವಾಸ ದಲ್ಲಿಯೂ, ನನ್ನನ್ನು ರಕ್ಷಿಸಲಿ! ನಿಖಿಲಪ್ರಮಾದಗಳಿಂದ ನಾರಾಯಣನು, ಉನ್ಮಾದದ ನಗುವಿ ನಿಂದ ನರನು, ಹರಿಸ್ಮೃತಿ ವೈಕಲ್ಯವು ಬರದಂತೆ ದತ್ತನು, ಕರ್ಮಬಂಧದಿಂದ ಕಪಿಲನು ಸಂರಕ್ಷಿ ಸಲಿ! ಸನತ್ಕುಮಾರರೂಪ ಹರಿಯು ಅಯೋಗ್ಯ ವಿಷಯಗಳಿಂದಲೂ, ಹಯಗ್ರೀವನು ಮಾರ್ಗ ದಲ್ಲಿ ತಿಳಿಯದೆ ನಡೆಯುವ ದೇವಹೇಲನಾದಿಗಳಿಂದಲೂ, ಮಹಿದಾಸನು ಹರಿಸರ್ವೋತ್ತಮತ್ವ ಜ್ಞಾನ ವಿಸ್ಮರಣೆದಿಂದಲೂ, ಕೂರ್ಮನು ನರಕದಿಂದಲೂ, ಧನ್ವಂತರಿಯು ಅಪಥ್ಯದಿಂದಲೂ, ಋಷಭನು ಶೀತೋಷ್ಣಾದಿ ದ್ವಂದ್ವಗಳಿಂದಲೂ, ಯಜ್ಞನು ಕ್ಷುದ್ರ ಸ್ವರ್ಗಾದಿ ಸುಖಾಶೆ ಯಿಂದಲೂ, ಶುಕ್ಲಕೇಶಯುಕ್ತ ಬಲರಾಮನಾದ ಶೇಷನು ಕ್ರೋಧವಶದಿಂದಲೂ, ವೇದವ್ಯಾಸನು ಅಜ್ಞಾನದಿಂದಲೂ, ಬುದ್ಧನು ಪಾಖಂಡಮತದಿಂದಲೂ, ಧರ್ಮರಕ್ಷಣಾವತಾರನಾದ ಕಲ್ಕಿಯು ಕಲಿಕಾಲ ಮಲದಿಂದಲೂ ನನ್ನನ್ನು ಸಂರಕ್ಷಿಸಲಿ!

ಪ್ರಾತಃಕಾಲದಿ ಕೇಶವನು, ಆ ಸಂಗವದಲ್ಲಿ ವೇಣುಪಾಣಿಗೋವಿಂದನು, ಮಧ್ಯಂದಿ ನದಿ ಶಕ್ತಿಧರನಾರಾಯಣನು, ಅಪರಾಹ್ಣದಲ್ಲಿ ಚಕ್ರಪಾಣಿ ವಿಷ್ಣುವು, ಸಾಯಂಕಾಲದಿ ಮಾಧವನು, ರಾತ್ರಿ ಪ್ರಥಮಯಾಮದಿ ಹೃಷಿಕೇಶನು, ಅರ್ಧ ರಾತ್ರಿಯಲ್ಲಿ ಪದ್ಮನಾಭನು ನನ್ನನ್ನು ಪೊರೆಯಲಿ! ಶ್ರೀವತ್ಸವಕ್ಷಸ್ಕನಾದ ಈಶನು ಅಪರರಾತ್ರಿಯಲ್ಲಿಯೂ ಖಡ್ಗಧಾರಿ ಜನಾರ್ಧನನು ಅರುಣೋದಯ ದಲ್ಲಿಯು ಸಂಧ್ಯಾಕಾಲಗಳಲ್ಲಿ ದಾಮೋದರನು ಸೂರ್ಯೋದಯಸನ್ನ ಸಮಯದಲ್ಲಿ ಕಾಲ ಮೂರ್ತಿಯಾದ ವಿಷ್ಣುವು ನನ್ನನ್ನು ಸಂರಕ್ಷಿಸಲಿ!

ಹೇ ಸುದರ್ಶನಚಕ್ರವೇ! ಪ್ರಳಯಕಾಲಾಭೀಲವಹ್ನಿಜ್ವಾಲೆಯಂತೆ ಉರಿಯುತ್ತಾ ಶ್ರೀಶನಿಂದ ಪ್ರೇರಿತವಾಗಿ ನೀನು ಕಾಡುಗಿಚ್ಚು ಹುಲ್ಲಿನನ್ನಂತೆ ದೈತ್ಯ- ಸೈನ್ಯವನ್ನು ದಹಿಸಿ ನಾಶಪಡಿಸುವೆ. ಶ್ರೀಹರಿಯ ದಿವ್ಯಜ್ಞಾನವನ್ನು ಕೊಡು. ಹೇ ಕೌಮೋದಕಿ! ವಜ್ರಾಯುಧದಂತೆ ಕಿಡಿಗಳನ್ನು ಕಾರುತ್ತಾ ಕೂಷ್ಮಾಂಡ ವೈನಾಯಕ ಯಕ್ಷರಕ್ಷೋ ಭೂತಗ್ರಹಗಳನ್ನು ಸದೆಬಡಿದು ಪುಡಿಮಾಡು! ಎಲೌ ಪಾಂಚಜನ್ಯವೇ! ಯಾತುಧಾನ ಪ್ರಮಥ ಪ್ರೇತಮಾತೃಪಿಶಾಚರ ಬ್ರಹ್ಮರಾಕ್ಷಸರೂ ದೃಷ್ಟಿದುಷ್ಟವಾದ ಗ್ರಹಗಳೂ ನಿನ್ನ ಭಯಂಕರ ಧ್ವಾನವನ್ನು ಕೇಳಿ ಎದೆಯೊಡೆದು ಓಡಿಹೋಗು ವರು. ಸಂಸಾರಾರ್ಣವದಲ್ಲಿ ಪತಿತನಾದ ನನ್ನನ್ನು ಉದ್ಧರಿಸಿ ಕಾಪಾಡು! ಹೇ ನಂದಕ! ನಿನ್ನ

ತೀಕ್ಷ್ಣಧಾರೆಯಿಂದ ನನ್ನ ಶತ್ರುಗಣವನ್ನು ಖಂಡಿಸು. ಶತಚಂದ್ರ ನನ್ನ ಶತ್ರುಗಳ ಕಣ್ಣು ಕೆಡಿಸಿ ನನ್ನ ಪಾಪಗಳನ್ನು ನಾಶಮಾಡು.

ಗ್ರಹಗಳಿಂದಲೂ, ಕೇತುಗಳಿಂದಲೂ, ನರರಿಂದಲೂ ಸರ್ಪವೃಶ್ಚಿಕಗಳಿಂದಲೂ, ಭೂತ ಪಿಶಾಚಿಗಳಿಂದಲೂ, ವ್ಯಸನಗಳಿಂದಲೂ ನಮಗೆ ಒದಗಬಹುದಾದ ವಿಪತ್ತೆಲ್ಲಾ ಭಗವಂತನ ನಾಮರೂಪಾಯುಧಗಳ ಸಂಕೀರ್ತನದಿಂದ ತತ್‌ಕ್ಷಣವೇ ನಷ್ಟವಾಗಲಿ! ನನ್ನ ಮಂಗಳಕಾರ್ಯ ವಿರೋಧಿ ಜನರೆಲ್ಲ ನಷ್ಟರಾಗಲಿ!

ಪೂಜ್ಯನಾದ ಗರುಡನು ಸಾಮವೇದದಲ್ಲಿ ಪ್ರಥಿತನಾಗಿರುವನು. ಹರಿನಿವೇದಿತಾಶನನಾದ ವಿಷ್ವಕ್ಸೇನನು ವಿಷ್ಣುಪಾರ್ಷದಮುಖ್ಯನಾಗಿರುವನು. ಅವರೀರ್ವರು ನನ್ನನ್ನು ರಕ್ಷಿಸುತ್ತಿರಲಿ!

ಶ್ರೀಹರಿಯ ನಾಮ, ಅವನ ದಿವ್ಯರೂಪ, ವಾಹನ ಪಾರ್ಷದ ಭೂಷಣಾಯುಧಗಳು ನಮ್ಮ ಬುದ್ಧೀಂದ್ರಿಯ ಪ್ರಾಣಗಳನ್ನು ಕಾಪಾಡಲಿ! ನಮ್ಮ ವಿಪತ್ತೆಲ್ಲವೂ ದೂರವಾಗಲಿ!

ಸದಸದ್ರೂಪನಾದ ಜಗವನ್ನು ಸೃಜಿಸಿ, ಅದರಲ್ಲಿ ಪ್ರವೇಶಿಸಿ, ಪ್ರೇರಕನಾಗಿ ಸರ್ವಸ್ವಾಮಿಯಾದ ಶ್ರೀಹರಿಯ ವಿರಾಜಿಸುವನು ಎಂಬ ಈ ಸತ್ಯವನ್ನು ಹಿಡಿದು ಶಪಥ ಮಾಡುವೆನು. 'ಇದರಿಂದ ನನ್ನ ಉಪದ್ರವಗಳೆಲವೂ ನಾಶವಾಗಲಿ!' ಸರ್ವಬಿಂಬನು, ಸರ್ವತ್ರವ್ಯಾಪ್ತನು ಆದ ಶ್ರೀಹರಿಯು ಸ್ವಗತಭೇದ ವಿವರ್ಜಿತನಾಗಿ ತನ್ನ ಆಯುಧ ಭೂಷಣಾದಿಗಳಿಗೆ ನಿಯಮಾಮಕನು, ಶಕ್ತಿಪ್ರದನು ಆಗಿರುವನು. ಶ್ರೀಹರಿಯೇ ಸರ್ವೋತ್ತಮನು, ಸರ್ವಜ್ಞನು ಎಂಬ ಸತ್ಯವಚನದ ಬಲದಿಂದ ಶ್ರೀಶನು ಸರ್ವದೇಶಕಾಲಾವಸ್ಥೆಗಳಲ್ಲಿಯೂ ನನ್ನನ್ನು ಸಲಹುತ್ತಿರಲಿ!

ದಿಕ್ಕುವಿದಿಕ್ಕುಗಳಿಂದ, ಮೇಲಿಂದ ಕೆಳಗಿಂದ, ಒಳಗಿಂದ. ಹೊರಗಿಂದ ಬರಬಹುದಾದ ಭಯವನ್ನು ನಿವಾರಿಸಿ, ತನ್ನ ದಿವ್ಯ ತೇಜೋರಾಶಿಯಲ್ಲಿ ಸೂರ್ಯಾದಿಗಳು ನಿಸ್ತೇಜಸ್ಕರಾಗುವಂತೆ ಬೆಳಗುವ ಲಕ್ಷ್ಮೀನೃಸಿಂಹನು ನನ್ನನ್ನು ಸಂರಕ್ಷಿಸಲಿ!

ಇಂದ್ರನೇ ಈ ನಾರಾಯಣವರ್ಮನನ್ನು ಸ್ವೀಕರಿಸು. ಇದನ್ನು ಕವಚದಂತೆ ಧರಿಸು. ಅಸುರ ಸೇನಾಪತಿಗಳನ್ನು ಅನಾಯಾಸವಾಗಿ ಜಯಿಸು.

ಈ ನಾರಾಯಣ ಕವಚವನ್ನು ಜಪಿಸಿ ಸಿದ್ಧಿಯನ್ನು ಪೊಂದಿದವನು ನೋಡಿದರೆ ಸಾಕು, ಪದದಿಂದ ಮುಟ್ಟಿದರೆ ಸಾಕು, ಸರ್ವಭಯದಿಂದಲೂ ಮುಕ್ತರಾಗಿ ಜನರು ಸುಖಿಸುವರು. ಈ ವಿದ್ಯೆಯನ್ನು ಧರಿಸಿದವನಿಗೆ ರಾಜ ಚೋರಗ್ರಹಾದಿಗಳಿಂದ ಭಯವಿಲ್ಲ. ಈ ವಿದ್ಯೆಯನ್ನು ಧರಿಸಿದ ಕೌಶಿಕನೆಂಬ ಬ್ರಾಹ್ಮಣನೂ ಮರುಧನ್ವದಲ್ಲಿ ಪ್ರಯಾಣಿಸುತ್ತಿದ್ದು, ಯೋಗದಿಂದ ಶರೀರವನ್ನು ಬಿಟ್ಟನು. ಚಿತ್ರರಥನೆಂಬುವ ಗಂಧರ್ವ ರಾಜನು ಸ್ತ್ರೀಯರಿಂದ ಕೂಡಿ ವಿಮಾನದಲ್ಲಿ ಸಂಚರಿಸುತ್ತಾ ಆ ವಿಪ್ರನ ಶರೀರವಿದ್ದ ಮರುಭೂಮಿ ಪ್ರದೇಶದಲ್ಲಿ ಬರುತ್ತಲೇ ವಿಮಾನವು ಕೆಳಗೆ ಪತಿತವಾಯಿತು. ಅಲ್ಲೇ ಸಮೀಪದಲ್ಲಿ ವಾಲಖಿಲ್ಯರೆಂಬ ಋಷಿಗಳನ್ನು ಕೇಳಿ ಅವರ ವಚನದಂತೆ ಚಿತ್ರರಥನು ಸರಸ್ವತೀ ನದಿಯಲ್ಲಿ ಆ ವಿಪ್ರನ ಅಸ್ಥಿಗಳನ್ನು ಹಾಕಿ, ಸ್ನಾನವನ್ನು ಮಾಡಿ ಬರಲು ಅವನ ವಿಮಾನವು ಮತ್ತೆ ಹಾರತೊಡಗಿತು. ಆಗ ಚಿತ್ರರಥನು ತನ್ನ ನಿಲಯವನ್ನು ಕುರಿತು ಹೊರಟು ಹೋದನು.

ರಾಜನ್! ಗುರುಗಳು ಪ್ರಸಾದಪುರಸ್ಸರವಾಗಿ ಉಪದೇಶಿಸಿದ ವಿದ್ಯೆಯೇ ಫಲಪ್ರದವಾಗುವುದು, ಗುರುಶಿಷ್ಯರು ಯೋಗ್ಯರಾಗಿರುವುದು. ಗುರುಕುಲವಾಸ ಸಂಪೂರ್ತಿಯು ಕೂಡ ವಿದ್ಯೆಯು ಫಲಿಸಲು ಕಾರಣಗಳೆನಿಸಿವೆ.

ಇಂತು ಇಂದ್ರನು ವಿಶ್ವರೂಪಾಚಾರ್ಯನಿಂದ ಕಲಿತ ಹಯಗ್ರೀವ ಬ್ರಹ್ಮವಿದ್ಯೆಯ ಸಹಾಯದಿಂದ ರಕ್ಕಸರನ್ನು ಗೆದ್ದು ತ್ರಿಲೋಕ ರಾಜ್ಯವನ್ನು ಪಾಲಿಸಿ ಸುಖಿಸಿದನು.

ಪ್ರಾತಃಕಾಲದಲ್ಲಿ ಈ ಮಂತ್ರರಾಜವನ್ನು ಪಠಿಸುವವನು ಮತ್ತು ಶ್ರದ್ಧೆಯಿಂದ ಧರಿಸಿದವನು ಸಮಸ್ತ ಭೂತಗಳಿಂದ ಪೂಜಿತನಾಗುವನು. ಅವನಿಗೆ ಯಾವ ಭಯವೂ ಇರುವುದಿಲ್ಲ.

## ೯. ವೃತ್ರಪೀಡೆ – ದೇವಕೃತ ನಾರಾಯಣ ಸ್ತುತಿ

ಶ್ರೀಶುಕನು ಹೇಳಿದನು–

ಆ ವಿಶ್ವರೂಪನಿಗೆ ಸೋಮಪೀಥ, ಸುರಾಪೀಥ, ಅನ್ನಾದವೆಂಬ ಮೂರು ತಲೆಗಳಿದ್ದವು. ಅವನು ರೋಚನಿ ಪುತ್ರನಾದ್ದರಿಂದ ಅಸುರ ಪಕ್ಷಪಾತಿಯಾಗಿದ್ದನು. ಗಟ್ಟಿಯಾಗಿ ಸ್ವಾಹಾಕಾರ ದಿಂದ ದೇವತೆಗಳಿಗೆ ಹವಿರ್ಭಾಗವನ್ನು ನೀಡುವ ಮಂತ್ರವನ್ನುಚ್ಚರಿಸಿದರೂ, ಮನಸ್ಸಿನಿಂದ ಆ ಭಾಗಗಳೆಲ್ಲವನ್ನು ರಾಕ್ಷಸರಿಗೆಂದು ಸಂಕಲ್ಪಿಸಿ ಹೋಮಿಸುತ್ತಿದ್ದನು. ಅವನ ಧರ್ಮ ಕಾಪಟ್ಯವನ್ನರಿತು ಅವನು ಮಾಡಿದ ದೇವಹೇಲನವನ್ನು ಸಹಿಸಲಾರದೆ ಇಂದ್ರನು ಎಂದಿಗಾದರೂ ಇವನಿಂದ ದೇವತೆಗಳಿಗೆ ಪ್ರಾಣಭಯವು ಉಂಟಾಗುವುದೆಂದು ಹೆದರಿ, ವಿಶ್ವರೂಪನ ತಲೆಗಳನ್ನು ಖಂಡಿಸಿದನು. ಆಗ ಅವನ ಸೋಮಪೀಥ, ಶಿರವು ಕಪಿಂಜಲವೆಂಬ ಪಕ್ಷಿ ಆಯಿತು. ಸುರಾ ಪೀಥವು ಕಲವಿಂಕವಾಯಿತು. ಅನ್ನಾದವು ತಿತ್ತಿರಿಪಕ್ಷಿ ಆಯಿತು. ಬ್ರಹ್ಮಹತ್ಯೆಯು ಇಂದ್ರನನ್ನು ಕಾಡಲಾರಂಭಿಸಿತು. ದೋಷನಿವಾರಣಾ ಸಮರ್ಥನಾದರೂ ಇಂದ್ರನು ಲೋಕಾಪವಾದ ಭೀತಿಯಿಂದ ಒಂದು ವರ್ಷ ಆ ಪೀಡೆಯನ್ನನುಭವಿಸಿ ಕೊನೆಗೆ ಅದನ್ನು ನಾಲ್ಕು ಭಾಗವನ್ನಾಗಿ ವಿಭಜಿಸಿ ಭೂಮಿ, ಜಲ, ವೃಕ್ಷ, ನಾರಿಯರಿಗೆ ಹಂಚಿಕೊಟ್ಟು ಶ್ರೀಹರಿದಯದಿಂದ ಬ್ರಹ್ಮ ಹತ್ಯಾಪಾಪನಿರ್ಮುಕ್ತನಾದನು.

ಖಾತಪೂರವರನ್ನು ಪಡೆದ ಭೂಮಿಯ ಬ್ರಹ್ಮಹತ್ಯೆಯು ಚುತುರ್ಥಾಂಸವನ್ನು ಸ್ವೀಕರಿ ಸಿತು. ಅದರಲ್ಲಿ ಆ ದೋಷವು ಸೌಳಿನ ರೂಪದಲ್ಲಿ ಕಂಡು ಬರುತ್ತಿದೆ. ಛೇದರೋಹವರವನ್ನು ಪೊಂದಿದ ವೃಕ್ಷಗಳಲ್ಲಿ ಬ್ರಹ್ಮಹತ್ಯೆಯು ಗೋಂದಿನ ರೂಪದಿಂದ ಕಾಣಬರುವುದು. ಪಂಚ ಭೂತಗಳಲ್ಲಿ ತಾನೇ ಬಹುಲವಾಗಿರುವ ವರವನ್ನು ಪಡೆದ ಜಲದಲ್ಲಿ ಆ ಪಾಪವು ಬುದ್ಬುದ ಫೇನರೂಪದಿಂದ ಕಾಣಿಸುವುದು. ಸ್ತ್ರೀಯರು ಶಶ್ವದ್ವಿಷಯಸೇವಾವರವನ್ನು ಪೊಂದಿ ತೆಗೆದು ಕೊಂಡ ಪಾಪಭಾಗವು ಮಾಸಮಾಸದಲ್ಲಿ ರಜೋರೂಪವಾಗಿ ಕಾಣುವುದು.

ಅನಂತರದಲ್ಲಿ ವಿಶ್ವರೂಪನ ಜನಕನಾದ ತ್ವಷ್ಟನು ಇಂದ್ರನಲ್ಲಿ ಕುಪಿತನಾಗಿ 'ಇಂದ್ರ ಶತ್ರೋ ವರ್ಧಿಸು. ಅಲಸ್ಯವನ್ನು ತ್ಯಜಿಸು! ಶತ್ರುವನ್ನು ಸಂಹರಿಸು!' ಎಂಬ ಮಂತ್ರದಿಂದ ದಕ್ಷಿಣಾಗ್ನಿಯಲ್ಲಿ ಹೋಮಿಸಿದನು. ಮಂತ್ರವನ್ನುಚ್ಚರಿಸುವಾಗ ನಡೆದ ಸ್ವರವ್ಯತ್ಯಾಸದಿಂದ ತ್ವಷ್ಟನಿಗೆ ಅಭಿಮತಸಿದ್ಧಿಯಾಗದೆ ವಿಪರೀತವೇ ಆಯಿತು 'ಇಂದ್ರನಿಗೆ' ಎಂದಾಗದೆ 'ಇಂದ್ರ ಶತ್ರುವೇ!' ಎಂದಾದ್ದರಿಂದ ಇಂದ್ರ ಸಂಹೃತನಾಗಲು ಅರ್ಹನಾದ ವೃತ್ರನು ಅಗ್ನಿಕುಂಡದಿಂದೆದ್ದು ಬಂದನು. ಪ್ರಳಯಕಾಲದ ಕೃತಾಂತನಂತೆ ಲೋಕಭಯಂಕರೂಪನಾದ ಆ ಪುತ್ರನು ದಿನದಿನ ವರ್ಧಮಾನನಾಗಿ ಲೋಕನಾಶಕನೆನಿಸಿದನು. ಸಂಧ್ಯಾಕಾಲದ ಅರುಣ ಮೇಘಗಳಿಂದ ಕೂಡಿದ ಸುಟ್ಟು ಬೆಟ್ಟದಂತೆ ಕಾಣುವ ವೃತ್ರಾಸುರನು ಕಾದ ತಾಮ್ರದ ತಂತಿಗಳಂತೆ ಕೆಂಪಾದ ಕೇಶಶ್ಮಶ್ರು

ಗಳಿಂದಲು, ಮಧ್ಯಾಹ್ನ ಸೂರ್ಯನಂತೆ ತೀಕ್ಷ್ಣಕಾಂತಿಯನ್ನು ಕಾರುವ ಕಣ್ಣುಗಳಿಂದಲು ಲೋಕ ಭೀಕರನಾಗಿ ವ್ಯಾಪಿಸಿ ನಿಂತನು. ಉರಿಯುವ ತ್ರಿಶೂಲವನ್ನೆತ್ತಿ ಪಿಡಿದು ಗರ್ಜಿಸುತ್ತಾ, ಕುಣಿಯುತ್ತಾ, ಬರುವ ವೃತ್ರನ ಪದಾಘಾತದಿಂದ ಭೂಮಿ ಕಂಪಿಸಿತು. 'ಆ' ಎಂದು ಗುಹೆಯಂತೆ ತೆರೆದ ಬಾಯಿಯಿಂದ ಆಕಾಶವನ್ನು ನುಂಗುವನೋ ಚಾಚಿದ ನಾಲಿಗೆಯಿಂದ ನಕ್ಷತ್ರಗಳನ್ನು ನೆಕ್ಕುವನೋ ಮೂರು ಲೋಕಗಳನ್ನು ಕೈಗಳಿಂದ ಹಿಡಿದು ಹಿಂಡುವನೋ ಎಂಬಂತೆ ಕರಾಳ ದಂಷ್ಟ್ರಾ ಕುಟಿಲವಾದ ಮುಖವನ್ನು ತೆರೆದು, ಆಕಳಿಸಿ, ವೇಗದಿಂದ ಬರುತ್ತಿರುವ ವೃತ್ರನನ್ನು ನೋಡಿ ಜನರು ಹಾಹಾಕಾರವನ್ನು ಮಾಡಿ ದಿಕ್ಕೆಟ್ಟು ಓಡಿದರು. ಲೋಕವನ್ನೆಲ್ಲ ಆವರಿಸಿ ನಿಂತ ಆ ದುಷ್ಟನು ವೃತ್ರನೆಂಬ ಹೆಸರನ್ನು ಸಾರ್ಥಕಗೊಳಿಸಿದನು. ಆ ಪಾಪಿಯನ್ನು ಕೊಲ್ಲಲು ಬಂದ ದೇವಯೋಧರ ವಿವಿಧಾಯುಧಗಳನ್ನು ಅವನು ನುಂಗಿ ಬಿಟ್ಟನು. ಅದನ್ನು ನೋಡಿ ಆಶ್ಚರ್ಯ ಶೋಕಮಗ್ನರಾದ ದೇವತೆಗಳು ಆದಿಪುರುಷನನ್ನು ಶರಣು ಪೊಂದಿ ಹೋಗಿ ಇಂತು ನುತಿಸಿದರು–

ವಾಯುಗಗನಾಗ್ನಿಜಲಭೂದೇವತೆಗಳು, ಬ್ರಹ್ಮಾದಿಗಳು ಮೊದಲಾದ ನಮಗೆಲ್ಲ ಪ್ರಳಯಪ್ರದಳಾದ ದುರ್ಗಾದೇವಿಯು ಅಂತಕಳೆನಿಸಿರುವಳು. ಮೂಲಪ್ರಕೃತಿನಿಯಾಮಕಳಾದ ದುರ್ಗೆಯು ಕೂಡ ಶ್ರೀಹರಿಯ ವಶದಲ್ಲಿರುವಳು ಮತ್ತು ಅವನಿಗಂಜುವಳು. ಇಂತಹ ದುರ್ಗಾರಮಣನಾದ ಶ್ರೀಹರಿಯು ನಮಗೆ ರಕ್ಷಕನಾಗಲಿ! ಪರಿಪೂರ್ಣಕಾಮನಾಗಿರುವುದರಿಂದ ಕುತೂಹಲರಹಿತನು, ಸ್ವರೂಪಾನಂದಮಯನಾದ್ದರಿಂದ ನಿಷ್ಪಕ್ಷಪಾತಿಯು ಆದ ಶ್ರೀಹರಿಯನ್ನು ಬಿಟ್ಟು ಅನ್ಯರನ್ನು ಬೇಡುವವನು, ನಾಯಿಯ ಬಾಲವನ್ನು ಪಿಡಿದು ನದಿಯನ್ನು ದಾಟಪೋದವನಂತೆ ಮೂರ್ಖನೇ ಸರಿ! ವೈವಸ್ವತಮನುರಾಜನು ಪ್ರಳಯೋದಧಿಯಲ್ಲಿ ಮುಣುಗದಂತೆ ಭೂಮಯ ನೌಕೆಯನ್ನು ಯಾವ ಸ್ವಾಮಿಯು ಕೋಡಿಗೆ ಕಟ್ಟಿ, ಕಷ್ಟಸಮುದ್ರದಿಂದ ಪಾರಾದನೋ ಅಂತಹ ಸ್ವಚ್ಛನಾದ ಮತ್ಸ್ಯರೂಪೀ ಹರಿಯು ಈಗ ವೃತ್ರನ ದುರಂತ ಚಿಂತಾಸಾಗರದಿಂದ ನಮ್ಮನ್ನು ಪಾರುಮಾಡಿ ರಕ್ಷಿಸಲಿ! ಆದಿಸೃಷ್ಟಿಯಲ್ಲಿ ಪ್ರಕೃತ್ಯಾತ್ಮಕ ವಾಯುವೇಗದಿಂದ ಭಯಂಕರ ತರಂಗಸಂಘಾತ ಸಂಕುಲವಾದ ಪ್ರಳಯ ಜಲಧಿಯಂತೆ ಪುಟ್ಟಿದ ಕಮಲದಲ್ಲಿ ಬ್ರಹ್ಮನು ಜನಿಸಿ ಶ್ರೀಹರಿಯನ್ನು ನುತಿಸಿ ಜೀವಸಹಜ ಗುಣವೆನಿಸಿದ ಭಯವನ್ನು ತ್ಯಜಿಸಿದನು. ಅಂತಹ ಬ್ರಹ್ಮನಿಗೂ ಅಭಯಪ್ರದನಾದ ಶ್ರೀಹರಿಯು ಈಗ ನಮ್ಮನ್ನು ವತ್ರಭಯದಿಂದ ರಕ್ಷಿಸಲಿ! ಸರ್ವೇಶನಾದ ಶ್ರೀರಮಣನು ಪ್ರಕೃತಿಯಿಂದ ಕೂಡಿ ಸೃಜಿಸಿದುದನ್ನೇ ನಾವು ಅವನ ಅನುಗ್ರಹದಿಂದ ಸೃಜಿಸುತ್ತಿರುವೆವು. ಅವನನ್ನು ನೋಡಿಯು, ಅವನ ಸ್ವರೂಪವನ್ನು ಸಾಕಲ್ಯೇನ ತಿಳಿಯಲಾರದೆ, ಕೇವಲ ಕೆಲವು ಲಕ್ಷಣಗಳನ್ನು ತಾರತಮ್ಯದಿಂದ ಅರಿತು ಯಥಾಯೋಗ್ಯವಾಗಿ ನುತಿಸುವೆವು. ತನ್ನ ಇಚ್ಛೆಯಿಂದ ದೇವ ಮನುಜ ಮೃಗ ಮೀನರೂಪನಾದರೂ ನಿರ್ವಿಕಾರನಾಗಿರುವ ಶ್ರೀಹರಿಯು ಶತ್ರುಕೃತಪೀಡೆಯಿಂದ ನೊಂದು ಬಂದ ನಮ್ಮನ್ನು ತನ್ನ ದಾಸರೆಂದು ಸ್ವೀಕರಿಸಲಿ ರಕ್ಷಿಸಲಿ! ಅವನಿಂದ ಭಿನ್ನರಾಗಿ, ಅವನೇ ಕುಲದೈವವೆಂದು ನಂಬಿ, ಅವನಿಗೇ ಶರಣಾಗತರಾದ ನಮ್ಮನ್ನು ಆ ಪರಮಪುರುಷನು ಮಹಾಮಹಿಮನು ಜಗದಾದಿಕಾರಣನಾದ ನಾರಾಯಣನು ಸಂರಕ್ಷಿಸಲಿ!

- ಎಂದು ದೇವತೆಗಳು ಸ್ತುತಿಸಲು ಕೇಳಿ ಶ್ರೀಹರಿಯು ಪಶ್ಚಿಮ ದಿಕ್ಕನ್ನು ಬೆಳಗುತ್ತಾ ಪ್ರತ್ಯಕ್ಷನಾದನು. ಶಂಖಚಕ್ರ ಗದಾಧರನು, ವಾಸುದೇವಾದಿ ಷೋಡಶ ಶಕ್ತಿಯುಕ್ತನು, ಪ್ರಕೃತಿಪುರುಷ ರೂಪ ಶ್ರೀವತ್ಸ ಕೌಸ್ತುಭಭೂಷಣನು, ವಿಕಸಿತ ಕಮಲೇಕ್ಷಣನು ಆದ ಶ್ರೀಹರಿಯನ್ನು ನೋಡಿ

ಪರಮಾನಂದಭರಿತರಾಗಿ, ದೇವತೆಗಳೆಲ್ಲರೂ ಸಾಷ್ಟಾಂಗವಾಗಿ ಬಾಗಿ, ನಿಂತು, ಇಂತು ಪೊಗಳಿದರು–

'ಹೇ ಶ್ರೀಶ! ಯಜ್ಞಫಲಪ್ರದನು, ಯಜ್ಞದ್ರವ್ಯನಿಯಮಾಕನ ಯಜ್ಞಮುಖ್ಯಭೋಕ್ತನಾದ ನಿನಗೆ ನಮಸ್ಕಾರವು. ಅಜ್ಞಾನದಿಂದ ಜೀವರನ್ನು ಸಂಸಾರದಲ್ಲಿ ಬಂಧಿಸುವವನು, ಜ್ಞಾನವನ್ನು ದಯಪಾಲಿಸಿ ಬಿಡಿಸುವವನು ನೀನೇ. ನೀನೇ ಸ್ವತಂತ್ರಕರ್ತನು. ಶುದ್ಧಜ್ಞಾನಾನಂದಾತ್ಮಕನು. ಎಲ್ಲ ನಾಮಗಳು ಮುಖ್ಯವಾಗಿ ನಿನ್ನನ್ನೇ ಪೇಳುವುವು. ದೇವಪಿತೃನರಕಲೋಕಗಳಿಗಿಂತಲು ಶ್ರೇಷ್ಠವಾದ ನಿನ್ನ ಪರಮಪದವನ್ನು ನಿನ್ನ ಮಗನಾದ ಬ್ರಹ್ಮನಿಂದ ಸೃಷ್ಟವಾಗಿ ಸಂಸಾರದಲ್ಲಿ ನರಳುವ ನರನೆಂತು ತಿಳಿಯುವನು? ಜ್ಞಾನಿಗಳೇ ಆ ವೈಕುಂಠಾದಿ ಲೋಕವನ್ನು ಸೇರಲರ್ಹರಾಗಿರುವರು. 'ಓಂ ನಮೋ ಭಗವನ್! ನಾರಾಯಣ! ವಾಸುದೇವ! ಪರಮಪುರುಷ! ಮಹಾನುಭಾವ! ಪರಮಮಂಗಲ! ಪರಮ ಕಾರುಣಿಕ! ಪರಮಹಂಸ! ಪಾಹಿ ಪಾಹಿ!' ಎಂದು ಪರಿವ್ರಾಜಕರು ಪರಮಯೋಗ ಸಮಾಧಿಯಲ್ಲಿ, ಪರಿಪರಿ, ಪರಿಭಾವಿಸಲು, ಅವರಿಗೆ ಪರಮಾನುಗ್ರಹವನ್ನು ಮಾಡಿ, ಪರಮ ಪ್ರಮೇಯವನ್ನು ತಿಳಿಸಿ, ಅಜ್ಞಾನ ಕಪಾಟವನ್ನು ತೆಗೆದು, ಸ್ವರೂಪಜ್ಞಾನ ಸುಖವನ್ನು ತೋರಿ, ಪೊರೆಯುವ ನಿನ್ನ ಲೀಲೆಯು ಪರಮಾಶ್ಚರ್ಯಕರವಾಗಿದೆ. ಯಾರ ಸಹಾಯವಿಲ್ಲದೆ, ಎಲ್ಲಿಯೂ ಆಧಾರವಾಗಿ ಪಡೆದು ನಿಲ್ಲದೆ, ಪ್ರಾಕೃತ ಶರೀರಾದಿಗಳಿಲ್ಲದೆ ನೀನು ಸೃಜಿಸಿ ಪಾಲಿಸಿ ಸಂಹರಿಸುವೆ. ಆದರೂ ನಮ್ಮ ಸಹಾಯವನ್ನು ಪೊಂದಿ, ಪ್ರಕೃತಿಯಲ್ಲಿ ನಿಂತು ಶರೀರಗುಹಾಗತನಾಗಿ ತೋರುವ ನಿನ್ನ ಮಹಾಮಹಿಮೆಯು ಅಚಿಂತ್ಯವೇ ಸರಿ! ಈ ಸಂಸಾರ ಕೂಪದಲ್ಲಿ ಬಿದ್ದು ನರಳುವ ಮನುಜನು ಅಸ್ವತಂತ್ರನಾಗಿರುವಾಗ ತಾನು ಮಾಡಿದ ಪುಣ್ಯಪಾಪಗಳ ಫಲವನ್ನು ತನಗೆ ಬೇಕಾದಂತೆ ಬೇಡಿ ಪಡೆಯಲು ಅಥವಾ ಬಿಡಲು ಸಮರ್ಥನಾಗುವನೇ? ಎಂದಿಗೂ ಇಲ್ಲ. ನೀನಾದರೋ ಪೂರ್ಣಾನಂದನು, ಸ್ವರಮಣನು, ಶುದ್ಧಜ್ಞಾನ ಸ್ವರೂಪನು. ಆದ್ದರಿಂದಲೇ ನಿನಗೆ ಕರ್ಮಫಲ ಲೇಪವು ಇರುವುದಿಲ್ಲ. ಜೀವ ವಿಲಕ್ಷಣನು ಸ್ವತಂತ್ರನು ಆದ ನಿನಗೆ ಕುಶಲ ಸ್ವೀಕಾರವು. ಅಕುಶಲ ಪರಿತ್ಯಾಗವು, ಸಹಜವಾಗಿದೆ. ಜೀವನಿಗೆ ಹಾಗೆ ಮಾಡಲು ಬರಲಾರದು. ನೀನು ಅಪ್ರಮೇಯ ಮಹಿಮನು, ಕುತರ್ಕದೂಷಿತ ಮತಿ ವಿಚಾರ ದೂರನು, ನಿಷ್ಕಪಟನು, ಅಪರಿಚ್ಛಿನ್ನ ಅನಂತಕಲ್ಯಾಣಗುಣಪೂರ್ಣನು, ಅಘಟ್ಯ ಘಟನಾ ಸಮರ್ಥನು ಆದ್ದರಿಂದ ದೇವದತ್ತಾದಿ ಜೀವರಂತೆ, ದೇಹದಲ್ಲಿದ್ದರೂ ನಿನಗೆ ಪ್ರಾಕೃತ ಗುಣ ಲೇಪವಾಗಲಿ, ಕರ್ಮ ಫಲರೂಪ ಸುಖದುಃಖಾದಿಗಳಾಗಲಿ, ಸ್ವರೂಪದ್ವಯಗತ ಭೇದವಾಗಲಿ ಇಲ್ಲ. ಹಗ್ಗವನ್ನು ನೋಡಿ ಹಾವೆಂದು ಕೆಲವರು, ಹಾರವೆಂದು ಕೆಲವರು ತಿಳಿಯುವರು. ಅವರು ಅನ್ಯಥಾ ಜ್ಞಾನಿಗಳೇ ಸರಿ. ಯಥಾರ್ಥ ಜ್ಞಾನಿಗಳು ನಿನ್ನನ್ನು ಸರ್ವವಸ್ತುಗತನೆಂದು, ಸರ್ವವಸ್ತು ವಿಲಕ್ಷಣನೆಂದು, ಸರ್ವವಸ್ತು ನಿಯಾಮಕನೆಂದು, ಸರ್ವಕಾರಣ ಕಾರಣನೆಂದು ಸರ್ವೇಶನೆಂದು ತಿಳಿಯುವರು, ನೀನೇ ಸರ್ವಗುಣ ಪ್ರಕಾಶಕನು, ನಿರ್ದೋಷನು ಹಾಗೂ ಸಂಸಾರ ನಿವರ್ತಕನು. ನಿನ್ನ ಮಹಿಮೆಯು ಅಮೃತ ಸಮುದ್ರದಂತೆ ಗಂಭೀರವು ಮಧುರವು ಅನಂತವಾಗಿದೆ. ಅಲ್ಲಿ ಸ್ನಾನಮಾಡಿ ಪೂತಚಿತ್ತರಾದ ಸುಜನರು ವಿಷಯಸುಖವು ವಿಷ ಸಮವೆಂದರಿತು ಅದನ್ನು ಮರೆತು, ನಿನ್ನ ಸ್ಮರಣೆಯಿಂದ ಆನಂದಕಂದಲಿತ ಹೃದಯಾರವಿಂದರಾಗಿರುವರು. ಮಧುಸೂಧನ! ತಮ್ಮ ಹಿತವನ್ನರಿತು ನಿನ್ನ ದಿವ್ಯ ಚರಣಾಂಬುಜ ಚಿಂತನಾಮೃತ ಸಾನ ವಿಶೇಷಮತ್ತಚಿತ್ತರಾದ ನಿನ್ನ ಏಕಾಂತ ಭಕ್ತರು ಮತ್ತೆ ಜನನ ಮ[illegible]ಣರೂಪ ಸಂಸಾರಗ[illegible]ದಲ್ಲಿ ಬೀಳಲಿಚ್ಛಿಸುವರೇ?

ತ್ರಿಲೋಕನಾಥ! ತ್ರಿವಿಕ್ರಮ! ತ್ರಿನಯನನೃಸಿಂಹ! ತ್ರಿಲೋಕ ಜನ ಮನೋಹರ! ಹರಚಿಂತಿತಪದ ಕಂಜ! ಕಂಜಜ ವಂದಿತ! ದಿತಿಸುರರೂ ನಿನ್ನ ಪರಾಕ್ರಮದ ಭಿನ್ನಾಂಶರೆನಿಸಿಹರು. ಅವರು ದುರ್ವಾರರಾಗಿರವಾಗ ನಾನು ಸ್ವೇಚ್ಛೆಯಿಂದ ಶುಕ್ರಶೋಣಿತ ಸಂಪರ್ಕವಿಲ್ಲದೆ ವಿವಿಧ ರೂಪ ದಿಂದ ಅವತರಿಸಿ ದೈತ್ಯಧ್ವಂಸಿ ಎಂದು ಖ್ಯಾತನಾಗಿರುವೆ. ಅಂತೆಯೇ ಈ ವೃತ್ರಾಸುರನನ್ನೂ – ನಿನಗಿಷ್ಟನಾದೊಡೆ – ಸಂಹರಿಸು. ದೀನ ಬಂಧು! ನಿನ್ನವರಲ್ಲವೇ ನಾವು? ನಿನ್ನ ಚರಣ ನಲಿನ ಯುಗಲವನ್ನು ಮನಸ್ಸಿನಲ್ಲಿಯು, ನಿನ್ನ ಶಂಖಚಕ್ರ ಗದಾಪದ್ಮಗಳ ಚಿಹ್ನವನ್ನು ಶರೀರದಲ್ಲಿಯು, ನಿನ್ನ ಮಂಗಲ ನಾಮೋಚ್ಚಾರಣೆಯನ್ನು ವರ್ಚಸ್ಸಿನಲ್ಲಿಯು ಧರಿಸಿ, ನಿನ್ನ ಕಿಂಕರರಾದ ನಮ್ಮನ್ನು ದಯಾರಸ ರಂಜಿತ ಕಟಾಕ್ಷದಿಂದ ವೀಕ್ಷಿಸು! ಅಮೃತ ಮಧುರ ಮಂದ್ರ ವಚನಗಳಿಂದ ಮಾತಾಡಿಸು! ನಮ್ಮ ಮನಸ್ತಾಪವನ್ನು ಹರಿಸು! ಆಪದ್ಧರಣ ಶೀಲ! ಸಕಲ ಜಗಜ್ಜನ್ಮಾದಿ ನಿಮಿತ್ತಕಾರಣನು, ಇಚ್ಛಾವಿನೋದನು, ಸಕಲ ಜೀವ ಹೃದಯ ಗುಹಾವಾಸಿಯು, ವಿಶ್ವ ವ್ಯಾಪ್ತಿಯು, ದೇಶಕಾಲ ದೇಹಾದಿ ಸರ್ವಪ್ರೇರಕನು, ಸರ್ವಜ್ಞನು, ಸಾಕ್ಷಾತ್ ಸರ್ವಸಾಕ್ಷಿಯು, ಆದ ಪರಮಾತ್ಮನೇ! ನಿನಗೆ ನಾವು ವಿಜ್ಞಾಪಿಸಿ ಹೇಳಬೇಕೇ? ಎಲ್ಲವೂ ನಿನಗೆ ಗೊತ್ತೇ ಇದೆ. ರವಿಗೆ ದೀಪ ಹಚ್ಚಿಟ್ಟಂತೆ, ಅಗ್ನಿಯ ಮುಂದೆ ಖದ್ಯೋತವು ಮೆರೆದಂತೆ ನಿನಗೆ ಹೇಳಿಕೊಡುವು ದೇನೂ ಇಲ್ಲ. ನಿನ್ನ ಪಾದಕಮಲಚ್ಛಾಯೆಯನ್ನಾಶ್ರಯಿಸಿ ನಿಂತ ನಮ್ಮ ಸರ್ವತಾಪವನ್ನು ದೂರಮಾಡುವೆ – ಎಂದು ತಿಳಿದು, ವೃತ್ರಾಸುರನಿಂದ ರಕ್ಷಿಸೆಂದು, ಮೊರೆಯಿಡುತ್ತಿರುವೆವು. ಘೋರಸಂಸಾರ ಪರಿಶ್ರಮನಾಶಕನಿಗೆ ವೃತ್ತಪೀಡಾ ನಿವಾರಣೆಯು ಅತ್ಯಂತ ಸುಕರವೇ ಸರಿ! ಆ ಭವನತ್ರಯ ದ್ರೋಹಿಯನ್ನು ನಿಗ್ರಹಿಸು. ಅವನು ನಮ್ಮ ಅಸ್ತ್ರಗಳನ್ನು ಹಾಗೂ ತೇಜಶಕ್ತಿ ಗಳನ್ನೂ ನುಂಗಿ ಬಿಟ್ಟಿರುವನು. ಪರಮಶುದ್ಧನು, ಭಕ್ತಿಪಾಶ ಬದ್ಧನು, ಪೂರ್ಣಾನಂದನು, ವಿಮಲ ಯಶಸ್ಸಾಂದ್ರನು, ಸರ್ವಸಾಕ್ಷೀಭೂತನು, ಪಕ್ಷಪಾತಾದಿ ದೋಷಾಪೇತನು, ಸಜ್ಜನ ರಕ್ಷಕನು, ದುರ್ಜನಶಿಕ್ಷಕನು, ಲೀಲಾಜಾಲನಿರ್ಮಿತ ಜಗದ್ವ್ಯಾಪಾರನು, ಕಲ್ಯಾಣಗುಣಾ ಕೂಪಾರನು, ಭವಮಾರ್ಗಶ್ರಮ ನಿವಾರಕನು, ಮುಕ್ತಿಪ್ರದಾಯಕನು ಆದ ಶ್ರೀಹರೇ! ನಿನಗೆ ನಮಸ್ಕಾರವು!

ಎಂದು ನುತಿಸಿದ ದೇವತೆಗಳನ್ನು ನೋಡಿ ಶ್ರೀ ಭಗವಂತನು ಇಂತು ನುಡಿದನು –

ಎಲೌ! ದೇವತೆಗಳಿರಾ! ಈ ನನ್ನ ಸ್ತೋತ್ರವನ್ನು ಮಾಡಿದ ನಿಮ್ಮಲ್ಲಿ ಪ್ರೀತನಾಗಿರುವೆನು. ಈ ಸ್ತುತಿಯನ್ನು ಪಠಿಸುವವನಿಗೆ ಐಶ್ವರ್ಯವು, ವಿದ್ಯೆಯು, ಹಾಗೂ ಭಕ್ತಿಯು ಲಭಿಸುವುವು. ನನ್ನನ್ನು ನೋಡಿದವನಿಗೆ ದುರ್ಲಭವೆಂಬುದೊಂದಿಲ್ಲ. ಆದರೂ ಏಕಾಂತ ಭಕ್ತನು ನನ್ನಿಂದ ಭಕ್ತಿ ಜ್ಞಾನಗಳ್ನು ಬಿಟ್ಟು ಇತರ ವಿಷಗಳನ್ನೆಂದಿಗೂ ಬೇಡುವುದಿಲ್ಲ. ಕಾಮಭಿಲಾಷೆಯು ನನ್ನನ್ನು ಪೊಂದಿಯೂ ತನ್ನ ಶ್ರೇಯವಾವುದೆಂಬುದನ್ನು ಮರೆತು ಸ್ವರ್ಗಾದಿ ವಿಷಯಸುಖವನ್ನೇ ಬೇಡುವನು. ನನ್ನನ್ನವನು ಬೇಡದಿರುವುದರಿಂದ ಅವನಿಗೆ ನಾನು ನಶ್ವರ ಫಲಗಳನ್ನೇ ಕೊಟ್ಟು ಕಳಹುವೆನು. ಆದ್ದರಿಂದಲೇ ಜ್ಞಾನಿಯು ತತ್ತದ್ಯೋಗ್ಯತೆಯನ್ನರಿತು ಜನರಿಗೆ ಜ್ಞಾನೋಪದೇಶ ವನ್ನು ಮಾಡಿ, ಅವರನ್ನು ಕರ್ಮಫಲ ವಿಮುಖರನ್ನಾಗಿರಿಸಿ ಕಾಪಾಡುವನು. ಶೀತಜ್ವರಾರ್ತನು ನೀರನ್ನು ಬೇಡಿದರೂ ಕೊಡದೆ ಪಥ್ಯವಾದ ಔಷಧಾದಿಗಳನ್ನೇ ಕೊಟ್ಟು ಕಾಪಾಡುವ ವೈದ್ಯನಂತೆ - ಜ್ಞಾನಿಯು ಕರ್ಮಗಳಿಂದ, ಮನಶ್ಶುದ್ಧಿಯಾಗುವುದೆಂದು ತಿಳಿಯ ಹೇಳಿ, ಸುಜನರನ್ನು ನಿವೃತ್ತಿಮಾರ್ಗದಲ್ಲಿಟ್ಟು ಕಾಪಾಡುವನು. ವೃತ್ರವಧೆಯು ನನ್ನ ಮನಸ್ಸಿಗೆ ಬಂದಿದೆ – ಅದೇ

ನೀವು ಕೇಳಿರುವುದೂ ಆಗಿದೆ. ಒಳ್ಳೆಯದು. ಇಂದ್ರ! ನೀವೆಲ್ಲರೂ ದಧ್ಯಂಚ ಋಷಿಯನ್ನು ಸೇರಿ ಅವನಿಂದ ವರನಾಗಿ ಅವರ ಶರೀರವನ್ನು ಬೇಡಿ; ವಿದ್ಯಾವ್ರತ ತಪಸ್ಸಾರವಾಗಿರುವ ಅವನ ಗಾತ್ರವು ವೃತ್ರವಧ ಕಾರಣವಾಗುವುದು. ದಧೀಚಿಯು ಪ್ರವರ್ಗ್ಯಾಖ್ಯವಿದ್ಯೆಯನ್ನೂ ಬ್ರಹ್ಮ ವಿದ್ಯೆಯನ್ನೂ ಧರಿಸಿ ದಕ್ಷನೆನಿಸಿದನು. ಅವನಿಂದ ಅಶ್ವಿನೀ ದೇವತೆಗಳು ಆ ವಿದ್ಯೆಗಳನ್ನು ಕಲಿತು ಅಮರರಾದರು. ಇಂದ್ರ ಭಯದಿಂದ ಅಶ್ವಶಿರನಾಗಿ ದಧೀಚಿಯು ತಾನು ಅಥರ್ವಣನಿಂದ ಕಲಿತ ನಾರಾಯಣ ಕವಚವನ್ನು ನಾಸತ್ಯದಸ್ರರಿಗೂ ಮತ್ತು ವಿಶ್ವರೂಪನಿಗೂ ಉಪದೇಶಿಸಿದ್ದವು. ಆ ವಿಶ್ವರೂಪನಿಂದಲ್ಲವೇ ನೀನೂ ನಾರಾಯಣವರ್ಮವನ್ನು ಸ್ವೀಕರಿಸದೆ? ಇರಲಿ; ಬೇಗ ಪೋಗಿ ದಧೀಚಿಯ ಗಾತ್ರವನ್ನು ಬೇಡಿ. ಆ ದರ್ಮಜ್ಞನು ಇಲ್ಲ ಎನ್ನದೆ ಶರೀರವನ್ನು ಕೊಡುವನು. ಅವನ ಎಲುವಿನಿಂದ ಅಸ್ತ್ರಗಳನ್ನು, ಬೆನ್ನೆಲುಬಿನಿಂದ ವಜ್ರವನ್ನು ವಿಶ್ವಕರ್ಮನು ನಿರ್ಮಿಸಲಿ! ನೀನು ವಜ್ರವನ್ನು ಸ್ವೀಕರಿಸಿ ವೃತ್ರನನ್ನು ಅದರಿಂದ ಸಂಹರಿಸು. ನಾನೂ ವಜ್ರದಲ್ಲಿದ್ದು ನಿನಗೆ ಸಹಾಯ ಮಾಡುವೆನು. ಆಗ ವೃತ್ರನು ಸಾಯುವನು. ನಿಮ್ಮ ಅಸ್ತ್ರಗ್ರಾಮವನ್ನು ಹೊಂದಿ ನೀವು ಸುಖಿಸುವಿರಿ. ನನ್ನ ಭಕ್ತರಾದ ನಿಮಗಿನ್ನಾರಿಂದಲೂ ಭಯವಿಲ್ಲ– ಎಂದು ಹೇಳಿ ಶ್ರೀಹರಿಯು ಅಂತರ್ಹಿತನಾದನು.

## ೧೦. ದಧೀಚ ಚರಿತೆ – ದೇವಾಸುರ ಯುದ್ಧವು

ಶ್ರೀಶುಕನು ಪೇಳಿದನು–

ಶ್ರೀಶನ ವಚನದಂತೆ ದೇವತೆಗಳು ದಧೀಚಿಯನ್ನು ನೋಡಿ ಶರೀರವನ್ನು ಕೊಡೆಂದು ಬೇಡಿದರು. ಆಗ ಋಷಿಯು ನಗುತ್ತಾ ಇಂತೆಂದನು.

ಆಹಾ! ದೇವತೆಗಳಲ್ಲವೆ ನೀವು! ಮರಣ ಸಮಯದಲ್ಲಿ ಶರೀರಧಾರಿಗಳಿಗೆ ಆಗುವ ಬುದ್ಧಿಭ್ರಂಶಕರ ಯಾತನೆಯು ಅಮರರಾದ ನಿಮಗೆಂತು ತಿಳಿಯುವುದು? ಜೀವರಿಗೆ ದೇಹಕ್ಕಿಂತಲೂ ಪ್ರೀತಿಪಾತ್ರವೆನಿಸಿದ ಪದಾರ್ಥವಾವುದೂ ಇಲ್ಲ. ಅಂತಹ ದೇಹವನ್ನು ಸಾಕ್ಷಾದ್ವಿಷ್ಣುವು ತಾನಾಗಿ ಬಂದು ಬೇಡಿದರೂ ಕೊಡಲಾಗುವುದೇ?

ಆಗ ದೇವತೆಗಳು ನಿರುತ್ಸಾಹರಾಗಿ ಹೀಗೆಂದರು–

ಬ್ರಾಹ್ಮಣಶ್ರೇಷ್ಠನೇ! ಭೂತದಯಾಶೀಲರಿಗೆ ದುಸ್ತ್ಯಜವಾದುದೇನಿದೆ? ಅದರಲ್ಲಿ ನಿನ್ನಂತಹ ಪುಣ್ಯಕೀರ್ತಿಯಾದ ಮಹಾನುಭಾವನು 'ನಾಸ್ತಿ' ಎನ್ನಬಹುದೇ? ನಾವೇನೋ ಸ್ವಾರ್ಥಪರರು ನಿಜ. ಸ್ವಾರ್ಥಪರನಿಗೆ ಪರಸಂಕಟದ ವಿಚಾರವಿಲ್ಲ. ಇದ್ದರೆ ಬೇಡುತ್ತಿದ್ದನೇ? ಸಮರ್ಥನಾದವನು ಇತರರು ಬೇಡಿ ವಸ್ತುವನ್ನು ಪ್ರಾಣವನ್ನು ಕೂಡಕೊಟ್ಟು ಬಿಡಲು ಹಿಂಜರಿಯುವುದೂ ಇಲ್ಲ.

ಆ ಮಾತನ್ನು ಕೇಳಿ ನಸುನಕ್ಕು ದಧೀಚಿಯು ನುಡಿದನು–

ದೇವತೆಗಳೇ! ಈ ಧರ್ಮವನ್ನು ನಿಮ್ಮ ಮುಖದಿಂದ ಕೇಳಬೇಕೆಂದು ನಾನು 'ಕೊಡಲಾಗುವುದಿಲ್ಲ'ವೆಂಬುದು ನಿಜವು. ಈ ಶರೀರವು ಪ್ರಿಯತಮವು ಆದರೂ ಎಂದೋ ಒಂದು ದಿನ ನನ್ನನ್ನು ಬಿಟ್ಟು ಪೋಗುವುದು. ಅದನ್ನು ಲೆಕ್ಕಿಸದೆ ನಾನೇ ಬಿಡುವೆನು. ಧರ್ಮವಿಲ್ಲ, ಯಶವಿಲ್ಲ, ಅಂತಹ ಶರೀರದಿಂದೇನು ಪ್ರಯೋಜನವು? ಅಶಾಶ್ವತವಾದ ಶರೀರದಿಂದ ಶಾಶ್ವತ ಕೀರ್ತಿಯನ್ನು

ಪಡೆಯು ಭೂತದಯವನ್ನು ತೋರುವವನೇ ಧನ್ಯನು. ದಯಾಧರ್ಮಶೂನ್ಯನು ಸಾವಿರ ವರ್ಷ ಬಾಳಿದರೂ ಫಲವಿಲ್ಲ. ವೃಕ್ಷಾದಿ ಸ್ಥಾವರ ಜೀವರಕಿಂತಲೂ ಅವನ ಜೀವನವು ಕೀಳೆನಿಸಿದೆ. ಭೂತಗಳು ಸುಖಿಸಲು ನೋಡಿ ಮುದವನ್ನೂ ದುಃಖಿಸಲು ನೋಡಿ ಖೇದವನ್ನೂ ಪೊಂದಿ ನಡೆಯುವವನೇ ಸುಜೀವನು. ಪುಣ್ಯವಂತರು ನಡೆಯುವ ಧರ್ಮಮಾರ್ಗವ ದಯಾ ದಾಕ್ಷಿಣ್ಯ, ಛಾಯಾಭರಿತವಲ್ಲವೇ? ತನ್ನ ದೇಹದಿಂದಲೂ, ತನ್ನವರಿಂದಲೂ ಪರಪ್ರಯೋಜನವನ್ನು ಸಾಧಿಸದಿರುವ ನರನ ಶರೀರವು ಕೊನೆಗೆ ನರಿ ನಾಯಿಗಳಿಗೆ ಆಹಾರವಾಗಿ ನಶಿಸಿ ಪೋಗುವುದು. ಇಂತಹ ದೇಹಕ್ಕಾಗಿ ನಾವು ಪಡುವ ದೈನ್ಯವೆಷ್ಟು? ಕಷ್ಟವೆಷ್ಟು?

ಇಂತು ನಿಶ್ಚಯಿಸಿ ದಧೀಚಿಯು ಶ್ರೀಹರಿಯಲ್ಲಿ ಮನವಿಟ್ಟು ದೇಹವನ್ನು ತ್ಯಜಿಸಿದನು. ಇಂದ್ರಿಯಗಳನ್ನು ಮನವನ್ನು ಬುದ್ಧಿಯನ್ನು ನಿಗ್ರಹಿಸಿ, ಸಕಲ ಸಂಸಾರಬಂಧವನ್ನು ಕಡಿದೆ ಯೋಗಾರೂಢನಾಗಿ ದಧೀಚಿಯು ಶರೀರಪತನವನ್ನು ಲೆಕ್ಕಿಸದೆ ಶ್ರೀಹರಿಪಾದ ಮೂಲವನ್ನು ಸೇರಿದನು. ಆಗ ಇಂದ್ರನು ದಧೀಚಿಯ ಅಸ್ಥಿಯಿಂದ ನಿರ್ಮಿತವಾದ ವಜ್ರವನ್ನು ಸ್ವೀಕರಿಸಿ ಸಮುನ್ನದ್ಧ ಪರಾಕ್ರಮನಾದನು. ವಜ್ರಗತನಾದ ಶ್ರೀಹರಿಯು ಅಸುರ ಭಯಪ್ರದನು, ಇಂದ್ರರಕ್ಷಕನು ಆಗಿರಲು ಇಂದ್ರನು ದೇವಸೈನ್ಯದೊಡನೆ ಹೊರಟು ಅಸುರಸೈನ್ಯಪರಿವೃತನಾದ ವೃತ್ರನನ್ನು ಕದನಕ್ಕೆ ಕರೆದನು. ಮುನಿಜನರು ಆ ಇಂದ್ರನನ್ನು ಸ್ತುತಿಸುತ್ತಿದ್ದರು. ಐರಾವತನ್ನೇರಿ ಮೆರೆಯುವ ಸುರರಾಜನನ್ನು ನೋಡಿ ತ್ರಿಲೋಕದ ಜನರು ಹರ್ಷದಿಂದ ಹಾಡಿ ಹರಸಿದರು. ಮೃತ್ಯುದೇವನನ್ನೆದಿರಿಸುವ ರುದ್ರನಂತೆ ಭಯಂಕರನಾಗಿ, ಇಂದ್ರನು ವೃತ್ರನೊಡನೆ ವೈವಸ್ವತ ಮನ್ವಂತರದ ಪ್ರಥಮ ತ್ರೇತಾಯುಗದ ಪ್ರಾರಂಭ ಕಾಲದಲ್ಲಿ ನರ್ಮದಾ ನದೀತೀರದಲ್ಲಿ ಯುದ್ಧವನ್ನು ಮಾಡಿದನು. ವಸು ರುದ್ರ ಆದಿತ್ಯರು, ಅಶ್ವಿನೀ ದೇವರು, ಪಿತೃ ಮರುತ್ ವಿಶ್ವೇದೇವರು, ಋಭು ವಹ್ನಿಗಳು, ಉದ್ಯತಾಯುಧ ಪಾಣಿಗಳಾಗಿ ಹಿಂಬಾಲಿಸಲು ಬರುವ ವಜ್ರಧರನ ದಿವ್ಯತೇಜವನ್ನು ಕಂಡು ಅಸುರರು ರಣರಂಗದಲ್ಲಿ ವೃತ್ರನ ಹಿಂದೆ ನಿಂತು ಭೀತಿಗೊಂಡರು. ನಮುಚಿ, ಶಂಬರ, ಅನರ್ವ, ದ್ವಿಮೂರ್ಧ, ವೃಷಭ, ಅಂಬರ, ಹಯಗ್ರೀವ, ಶಂಕುಶಿರ, ವಿಪ್ರಚಿತ್ತಿ, ಅಯೋಮುಖ, ಪುಲೋಮಾ, ವೃಷಪರ್ವ, ಪ್ರಹೇತಿ, ಹೇತಿ, ಉತ್ಕಚ, ವ್ಯೋಮಕೇಶ, ವಿರೂಪಾಕ್ಷ, ಕಪಿಲ, ವಿಭಾವಸು, ಇಲ್ವಲ, ಬಲ್ವಲ, ದಂತಶೂಕ, ವೃಷಧ್ವಜ, ಕಾಲನಾಭ, ಮಹಾನಾಭ, ಭೂತಸಂತಾಪನ, ವೃಕ, ಸುಮಾಲಿ, ಮಾಲಿ ಮೊದಲಾದ ದೈತ್ಯನಾದವರು ಸುವರ್ಣಾಲಂಕಾರಭೂಷಿತರಾಗಿ ಭೀಷಣ ಸಿಂಹಘೋಷಣವನ್ನು ಮಾಡುತ್ತಾ, ದೇವಸೈನ್ಯವನ್ನು ಮುತ್ತಿದರು. ಪರಿಘಪಾಶ ಮುದ್ಗರ ತೋಮರ ಶೂಲ ಖಡ್ಗಾದಿ ವಿವಿಧಾ ಯುಧಗಳನ್ನು ನಾನಾಸ್ತ್ರಗಳನ್ನು ಪ್ರಯೋಗಿಸಿ, ಸುರರನ್ನು ಹಿಂಸಿಸಿದರು. ಮಳೆಗಾಲದಿ ಕವಿದ ಮೋಡಗಳಿಂದ ಕಾಣಬರದ ಆಗಸದಂತೆ, ದೇವ ಸೈನ್ಯವು ದೈತ್ಯನಿರ್ಮುಕ್ತ ಬಾಣವರ್ಷದಲ್ಲಿ ಅಡಗಿತು. ಆಗ ದೇವತೆಗಳು ಆ ಬಾಣವರ್ಗವನ್ನು ಮಧ್ಯದಲ್ಲೇ ತುಂಡರಿಸಿ ಅಸುರರ ಮೇಲೆ ಬಾಣಗಳನ್ನು ಪುಂಖಾನುಪುಂಖವಾಗಿ ಬಿಟ್ಟರು. ಶಸ್ತ್ರಾಸ್ತ್ರಗಳು ಇಲ್ಲವಾಗಲು ದೈತ್ಯರು ಸಿಟ್ಟಿನಿಂದ ಗಿರಿಶೃಂಗಗಳಿಂದಲು, ವೃಕ್ಷಗಳಿಂದಲು, ಕಲ್ಲಿನಿಂದಲು, ಯುದ್ಧ ಮಾಡಿ ದೇವತೆಗಳನ್ನು ಜಯಿಸಲಾರದೆ ನಿರ್ವಿಣ್ಣರಾದರು. ಸುರರು ದೈತ್ಯರು ಪ್ರಯೋಗಿಸಿದ ಗಿರಿ ಪಾಷಾಣ ತರುಗಳನ್ನು ನುಚ್ಚುನೂರಾಗಿ ಕಡಿದು ಸಿಂಹನಾದವನ್ನು ಮಾಡಿ ವಿಜೃಂಭಿಸಿದರು. ಹರಿವಿಮುಖರಾದ್ದರಿಂದ ಪರಾಜಯವನ್ನು ಪೊಂದಿ ದರ್ಪವನ್ನು ಆಯುಧಗಳೊಡನೆ ದಿಕ್ಕುಗಳಿಗೆ ತೂರಿ, ರಣರಂಗದಿಂದ

ಓಡಿಹೋಗುತ್ತಿರುವ ದೈತ್ಯನಾಯಕರನ್ನು ನೋಡಿ, ಹೀಯಾಳಿಸುತ್ತಾ, ವೃತ್ರಾಸುರನಿಂತು ನುಡಿದನು–

ಎಲೌ ವಿಪ್ರಚಿತ್ತೇ! ನಮುಚೇ! ಪುಲೋಮನ್! ಶಂಬರ! ಕೇಳಿರೋ! ಹುಟ್ಟಿದವ ನೆಂದಿಗಾದರೂ ಸಾಯುವನು. ಮೃತಿಗೆ ಪ್ರತಿಕ್ರಿಯೆಯು ಉಂಟೇ! ಪರತ್ರ ಪುಣ್ಯಲೋಕವನ್ನು ಇಹದಲ್ಲಿ ಕೀರ್ತಿಯನ್ನು ತಂದುಕೊಡುವ ಮರಣವು ವಾಂಛನೀಯವಲ್ಲವೇ? ಪರಬ್ರಹ್ಮಧ್ಯಾನ ದಿಂದ ಯೋಗಾರೂಢನಾಗಿ ದೇಹತ್ಯಾಗವನ್ನು ಮಾಡುವುದೊಂದು. ರಣದಲ್ಲಿ ಹಿಂದಿರುಗದೆ ಕಾದು ಮಡಿಯುವುದಿನ್ನೊಂದು. ಈ ಎರಡು ವಿಧದ ಮರಣವು ಬಹು ದುರ್ಲಭವು ಹಾಗೂ ಧೀರಜನಸ್ಮತವಾಗಿದೆ.

## ೧೧. ಇಂದ್ರ ವೃತ್ರರ ಯುದ್ಧ – ವೃತ್ರಾಸುರಕೃತ ಹರಿಸ್ತುತಿ

ವೃತ್ರನ ಧರ್ಮಸಮ್ಮತವಾದ ವಚನವನ್ನು ಬುದ್ಧಿಹೀನರಾದ ದೈತ್ಯರು ಕೇಳಿಯೂ ಕೇಳದೆ ದೇವತೆಗಳಿಗಂಜಿ ಓಡಿ ಹೋದರು. ದೇವತೆಗಳಿಗನುಕೂಲವಾಗಿ ಜಯವನ್ನು ಗಳಿಸಿ ಕೊಟ್ಟ ಕಾಲದ ಮಹಿಮೆಯನ್ನು ತಿಳಿದು, ವೃತ್ರನು ದುಃಖಿಸಿ, ಓಡುವ ತನ್ನವರನ್ನು ಕಾಡಿ ಕೊಲ್ಲುವ ಸುರ ಸೈನಿಕರನ್ನು ಕೋಪದಿಂದ ನಿಂದಿಸಿ ಇಂತೆಂದನು–

ಎಂತಹ ನೀಚರೋ ನೀವು! ರಣದಿಂದೋಡಿ ಪೋಗುವ ಭೀತರನ್ನು ಕೊಲ್ಲುವುದು ನ್ಯಾಯವೇ? ಶೂರರಿಗೆ ಭೀತರನ್ನು ಕೊಲ್ಲುವುದು ಉಚಿತವಲ್ಲ. ಅದಿತಿಯಿಂದ ಮಲಮೂತ್ರ ಗಳಂತೆ ಹೊರಬಂದ ದುರಾತ್ಮಕರನ್ನು ಶಿಕ್ಷಿಸಲು ನಾನಿಲ್ಲಿರುವಾಗ ಆ ದೀನರ ಮೇಲೇರಿ ಹೋಗುವುದು ಶೌರ್ಯವೇ? ಬನ್ನಿ. ನನ್ನೆದುರಿಗೆ ಕ್ಷಣಮಾತ್ರದಲ್ಲಿ ವಿಷಯಸುಖಗಳಿಗೆ ನಿಮ್ಮಿಂದಲೂ, ನಿಮಗೆ ನಿಮ್ಮ ಪುತ್ರಾದಿಗಳಿಂದಲೂ, ತಿಲಾಂಜಲಿಯನ್ನು ಕೊಡಿಸುವೆನು– ಎಂದು ನುಡಿದು ಕಡುಕೋಪದಿಂದ, ಭೀಕರಕಾಯನಾದ ವೃತ್ರನು ಗರ್ಜಿಸಲು ಕೇಳಿ ದೇವತೆಗಳು ಸಿಡಿಲು ಬಡಿದವರಂತೆ ಮೂರ್ಛೆ ಹೊಂದಿ ಬಿದ್ದರು. ಅವರನ್ನು ಕಾಲಿನಿಂದ ತುಳಿದು ಒದೆಯುತ್ತಾ ದುರ್ಮದನಾಗಿ ಭೂಮಿಯು ಅವರ ಪಾದಕ್ಷೇಪದಿಂದ ನಡುಗುತ್ತಿರಲು ನಿರಾತಂಕವಾಗಿ ವೀರ ವಿಹಾರವನ್ನು ಮಾಡುವ ವೃತ್ರನು ಜಂಬಿ(ಆಪಿ)ನ ಗುಂಪನ್ನು ಕಿತ್ತಿ ತುಳಿಯುವ ಆನೆಯಂತೆ ಬರುತ್ತಾ ಇಂದ್ರನನ್ನು ನೋಡಿದನು. ವೃತ್ರನನ್ನು ತಡೆಯಬೇಕೆಂದು ಸುರಪತಿಯು ಗದೆಯನ್ನು ಪ್ರಯೋಗಿಸಿದನು. ವೃತ್ರಾಸುರನು ಆ ಗದೆಯನ್ನು ಎಡಗೈಯಿಂದ ಹಿಡಿದು ಬಿಸುಟು ಸಿಂಹ ನಾದವನ್ನು ಮಾಡಿ, ತನ್ನ ಗದೆಯಿಂದ ಐರಾವತದ ಕುಂಭಸ್ಥಲದಿ ಗುರಿಯಿಟ್ಟು ಹೊಡೆದನು. ಆಗ ಆ ದೇವಗಜವು ವಜ್ರಾಯುಧದಿಂದ ಹೊಡೆಯಲ್ಪಟ್ಟ ಗಿರಿಕೂಟದಂತೆ ನಡುಗಿ ಮುಖದಿಂದ ರಕ್ತವನ್ನು ಕಾರುತ್ತಾ ಘೀಂಕರಿಸಿ ಓಂದಕ್ಕೆ ಸರಿಯಿತು. ಇದನ್ನು ಕಂಡು ವೃತ್ರನು ವಿರಥವಾಹನ ನಾದ ಶತ್ರುವನ್ನು ಹೊಡೆಯಬಾರದೆಂದು ಮತ್ತೆ ಗದೆಯನ್ನು ಪ್ರಯೋಗಿಸದೆ ಸುಮ್ಮನಿದ್ದನು. ಅಷ್ಟರಲ್ಲಿ ಇಂದ್ರನು ತನ್ನ ಸುಧಾರಸ ಶೀತಲ ಕರದಿಂದ ಕರಿಯ ವ್ಯಥೆಯನ್ನು ಕಳೆದು ಯುದ್ಧಸಿದ್ಧನಾದನು. ತನ್ನ ಅಣ್ಣನಾದ ವಿಶ್ವರೂಪನನ್ನು ಕೊಂದ ಸುರರಾಜನನ್ನು ನೋಡಿ ವೃತ್ರನು ಅವನ ನೀಚಕರ್ಮವನ್ನು ನೆನೆದು ಶೋಕರೋಷಪರೀತನಾಗಿ ಗಹಗಹಿಸಿ ನಗುತ್ತಾ ಇಂತೆಂದನು–

ಇಂದ್ರಾ! ವಿಧಿಬಲವು ನಿನ್ನನು ತಂದು ನನ್ನ ಮುಂದೇ ನಿಲ್ಲಿಸಿದೆ, ಒಳ್ಳೆಯದಾಯಿತು. ಬ್ರಹ್ಮಹಂತಕನು, ಗುರುಹಂತಕನು, ಭ್ರಾತೃಹಂತಕನು ಆದ ನಿನ್ನನ್ನು ಶೂಲದಿಂದ ತಿವಿದು ನಿನ್ನ ಪಾಷಾಣ ಕರ್ಕಶ ಹೃದಯವನ್ನು ಬಗೆದು, ನಮ್ಮಣ್ಣನಿಗೆ ಪ್ರೀತಿಯಾಗುವಂತೆ ರಕ್ತ ತರ್ಪಣವನ್ನು ಕೊಡುವ ಅದೃಷ್ಟವು ಇಂದೆನಗೊದಗಿಬಂತು! ನಮ್ಮ ಅಣ್ಣನಾದ ವಿಶ್ವರೂಪನು ಮಾಡಿದ ಪಾಪವೇನು ಹೇಳು! ಬ್ರಾಹ್ಮಣನು, ನಿನಗೆ ಗುರುವು, ದೀಕ್ಷಿತನು, ಬ್ರಹ್ಮವೇತ್ತನು ಆದ ಅವನನ್ನು ಯಜಮಾನ ಸ್ಥಾನದಲ್ಲಿದ್ದ ನೀನು ಪಶುವಿನನ್ನಂತೆ ಕೊಂದೆ. ನಿನಗೆ ನಾಚಿಕೆ ಯಾಗುವುದಿಲ್ಲವೇ! ದಯಾ ಕೀರ್ತಿವರ್ಜಿತನು, ದುಷ್ಕರ್ಮದೂಷಿತನು ಆದ ನಿನ್ನನ್ನು ನನ್ನ ಆ ಶೂಲದಿಂದ ಕೊಂದು ರಣರಂಗದಲ್ಲಿ ಕೆಡಹುವೆನು. ಹದ್ದು ಕಾಗೆಗಳು ನಿನ್ನನ್ನು ಕಿತ್ತಿ ತಿನ್ನಲಿ! ನಿನ್ನಂತಹ ನೀಚನನ್ನು ಅನುಸರಿಸಿ ಬಂದು ನನ್ನನ್ನು ಅಸ್ತ್ರಶಸ್ತ್ರಗಳಿಂದ ಹೊಡೆದಾಡುವ ದೇವತೆಗಳನ್ನೂ ಕೊಂದು ಕತ್ತರಿಸಿದ ಅವರ ತಲೆಗಳನ್ನು ಭೂತನಾಥನಿಗೆ ಆಹುತಿಯನ್ನಾಗಿ ಕೊಡುವೆನು. ಎಲವೋ! ಇಂದ್ರ! ಕೇಳು. ನಿನ್ನ ವಜ್ರದಿಂದ ನನ್ನನ್ನು ಹೊಡೆದು ಕೊಂದುವೆ ಯಾದರೂ ನನಗೆ ಭಯವಿಲ್ಲ. ಹಿಂದೆ ವೀರಸ್ವರ್ಗ ವನ್ನೈದಿದವರ ಪಾದರಜೋಧಾರಣ ಭಾಗ್ಯವು ನನಗೆ ಸಿದ್ಧವೇ ಆಗಿದೆ. ಅಹಲ್ಯಾಜಾರ! ಬಿಡು ನಿನ್ನ ವಜ್ರವನ್ನು! ಸಂಶಯಪಡಬೇಡ! ನಿನ್ನ ಮುಂದೆ ನಿರ್ಭಯವಾಗಿ ನಿಂತಿರುವೆನು. ಕೃಪಣನ ಧನವು ಯಾಚಕನಿಗೆ ಸಿಗದಿರುವಂತೆ ನೀನು ಸಂಪಾದಿಸಿರುವ ವಜ್ರಾಯುಧವು ವ್ಯರ್ಥವಾಗಬಾರದು. ಶ್ರೀಹರಿಯ ತೇಜವು ದಧೀಚಿಯ ತಪಸ್ಸು ಕಲೆತು ನಿನ್ನ ವಜ್ರಾವನ್ನು ಅತ್ಯಂತ ತೀಕ್ಷ್ಣವನ್ನಾಗಿಸಿವೆ. ಹರಿವಶನಾದ ನೀನೂ ಅದನ್ನು ಪಿಡಿದು ನನ್ನನ್ನು ಸಂಹರಿಸಲು ಬಂದಿರುವೆ. ಶ್ರೀಹರಿಯ ಇರುವಲ್ಲಿಲ ವಿಜಯ ಶ್ರೀ ಭೂತಿ ನೀತಿಗಳು ನೆಲಸಿರುವುವು. ನನಗೆ ಆ ಜ್ಞಾನವಿದೆ. ಮನಸ್ಸನ್ನು ಸಮಾಧಾನದಿಂದ ವಿಷಯಗಳಿಂದ ಬಿಡಿಸಿ ಶ್ರೀಸಂಕರ್ಷಣನ ಚರಣಾರವಿಂದವನ್ನು ಭಕ್ತಿಯಿಂದ ನೆನೆಯುತ್ತಾ ವಜ್ರಾಹತಾಗಿ ವಿಷಯ ಭೋಗ ಕಲುಷವಾದ ದೇಹವನ್ನು ತ್ಯಜಿಸಿ ಋಷಿಶರಣ್ಯನಾದ ನಾರಾಯಣನ ಲೋಕವನ್ನು ಸೇರುವೆನು. ಸ್ವರ್ಗ ಭೂ ಪಾತಾಲ ಗತ ಸಂಪತ್ತನ್ನು ಶ್ರೀನಾರಾಯಣನು ತನ್ನವರಾದ ಏಕಾಂತ ಭಕ್ತರಿಗೆ ಕೊಡದಿರುವನು. ಸಂಪತ್ತಿನಿಂದ ಮದ, ಆಧಿ, ಚಿಂತೆ, ಕಲಹ, ದುರ್ವ್ಯಸನ, ಆಯಾಸ ಹಾಗೂ ವೈರವೆಂಬ ದೋಷಗಳು ತಲೆ ದೋರುವುವೆಂದೇ ತ್ರಿವರ್ಗಾಯಾಸನಿರಾಸಕವಾದ ತನ್ನ ಚರಣಾರವಿಂದ ಸೇವೆಯನ್ನೇ ಕೊಡುವನು. ಅಂತಹ ಅಕಿಂಚನ ಗೋಚರನಾದ ಅಚ್ಯುತನು ನನ್ನಲ್ಲಿ ಪರಮಾನುಗ್ರಹದಿಂದ ದುರ್ಲಭವಾದ ತನ್ನ ಸ್ಮರಣೆಯನ್ನು ನನಗೆ ಈಗ ಮರಣ ಕಾಲದಲ್ಲಿ ಕೊಟ್ಟಿರುವನು.

ಹರೇ! ನಾರಾಯಣಾ! ನಿನ್ನ ಪಾದಮೂಲವನ್ನು ನಂಬಿದ ದಾಸರ ದಾಸರ ದಾಸಾನುದಾಸ ನೆಂದೆನಿಸೋ ನನ್ನನ್ನು ! ಪುನಃ ಪುನಃ ನಿನ್ನ ಸೇವೆಯನ್ನು ಕೊಡಿಸೋ! ನನ್ನ ಮನವೆಂಬ ದುಂಬಿಯು ಅಂಬುಜನಾಭ! ನಿನ್ನ ಚರಣಾರವಿಂದರತವಾಗಿ ನಿನ್ನ ಕಲ್ಯಾಣಗುಣಗಳ ಗಾನವನ್ನು ಮಾಡಲಿ! ನನ್ನ ವಚನವು ನಿನ್ನನ್ನು ಪೊಗಳಲಿ! ನನ್ನ ಕಾಯಕವು ನಿನ್ನ ಸೇವೆಗೆ ಮೀಸಲಾಗಿರಲಿ! ನಾಕವನ್ನು ಬೇಡೆನು. ಪರಮೇಷ್ಠಿ ಪದದ ಗೊಡವೆ ಎನಗೇಕೆ? ಚಕ್ರವರ್ತಿತ್ವದಿಂದಿನ್ನೇನು? ರಸಾತಲಾಧಿ ಪತ್ಯವು ಯೋಗಸಿದ್ಧಿಗಳು ಕೊನೆಗೆ ಪುನರಾವೃತ್ತಿರಾಹಿತ್ಯ ಮಾತ್ರ ಮೋಕ್ಷವೂ ಕೂಡ ನೀನಿಲ್ಲದಿರೆ, ನಿನ್ನ ಭಕ್ತಿರಸವಿಲ್ಲದಿರೆ ನನಗೆ ಬೇಡ. ನಿನ್ನ ದಾಸ್ಯವೇ ಸಾಕು ! ಸ್ವಾಮೀ! ಪುಕ್ಕಗಳು ಪುಟ್ಟಿರದ ಹಕ್ಕಿಗಳು ತಮ್ಮ ತಾಯಿಯನ್ನು, ಹಸಿವುಗೊಂಡ ಸ್ತನಂಧಯರು ಮಾತೆಯ ಮೊಲೆಯನ್ನು,

ಪ್ರಿಯಪತ್ನಿಯು ಪ್ರವಾಸದಲ್ಲಿರುವ ಪತಿಯನ್ನು, ಕರುವು ಆಕಳವನ್ನು ಬಯಸುವಂತೆ ನನ್ನ ಮನವು ಅತ್ಯಂತ ವಿಷಣ್ಣವಾಗಿ ನಿನ್ನ ವಿರಹವನ್ನು ತಾಳಲಾರದೆ, ನಿನ್ನನ್ನು ನೋಡಲಿಚ್ಛಿಸುತ್ತಿದೆ. ಉತ್ತಮ ಶ್ಲೋಕ! ಸಂಸಾರಕೂಪದ ತಳದಿ ನರಳಾಡುವ ಕರ್ಮಫಲವನ್ನುಣ್ಣುತ್ತಾ ಕೃಪಣ ರಾಗಿರುವ ಹಾಗೂ ತಾನು ತನ್ನದೆಂದು ಗೃಹಾಪತ್ಯ ಕಳತ್ರ ದೇಹಾದಿಗಳಲ್ಲಿಅಭಿಮಾನದಿಂದ ಸಿಲುಕಿರುವ ಕುಜನರ ಸಂಗವಾಗದಂತೆ ನನ್ನನ್ನು ಉದ್ಧರಿಸು.

## ೧೨. ವೃತ್ರವಧೆ

ವೃತನಿಂತು ದೇಹವನ್ನು ಬಿಡಲು ನಿಶ್ಚಯಿಸಿ ರಣಮರಣವೇ ಮುಖ್ಯ ವಿಜಯವೆಂದು ತಿಳಿದು ಕೈಟಭನು ವಿಷ್ಣುವಿನನ್ನಂತೆ ಇಂದ್ರನನ್ನೆದುರಿಸಿ ನಿಂತನು. ಪ್ರಳಯಾಗ್ನಿಯಂತೆ ಉರಿಯುವ ತ್ರಿಶೂಲವನ್ನೆತ್ತಿ ಮಹೇಂದ್ರನ ಮೇಲೊಗೆದು ' ಪಾಪೀ ! ಆಯಿತು ನಿನ್ನ ಜೀವಿತದಾಶೆಯನ್ನು ಬಿಡು' ಎಂದು ಸಿಂಹನಾದವನ್ನು ಮಾಡಿದನು. ಕಿಡಿಗಳನ್ನು ಕಾರುತ್ತ ಬರುವ ತ್ರಿಶೂಲವನ್ನು ನೋಡಿ ಹೆದರದೆ ಇಂದ್ರನು ವಜ್ರದಿಂದ ಅದನ್ನು ಕಡಿದು ಕೆಡಹಿ ವೃತ್ರನ ಬಲಗೈಯನ್ನು ಕತ್ತರಿಸಿದನು. ಎಡಗೈಯಿಂದ ಪರಿಘವನ್ನು ತಿರುಗಿಸುತ್ತಾ, ಓಡಿ ಬಂದು ವೃತ್ರನು ಇಂದ್ರನನ್ನು ಕಪೋಲದಲ್ಲಿ ಹೊಡೆಯಲು ವಜ್ರಾಯುಧವು ಅವನ ಕೈಯಿಂದ ಜಾರಿಬಿದ್ದಿತು. ವೃತ್ರನ ಮಹಾಪರಾಕ್ರಮವನ್ನು ನೋಡಿ ಸುರಾಸುರರು ವಿದ್ಯಾಧರ ಚಾರಣರು ಆಶ್ಚರ್ಯಚಕಿತರಾಗಿ 'ಸಾಧು ! ಬಾಪು' ಎಂದು ಪೊಗಳಿದರು. ಮತ್ತು ಪುರುಹೂತನಿಗೊದಗಿದ ಸಂಕಟವನ್ನು ಕಂಡು ಮರುಗಿದರು. ವಜ್ರವನ್ನು ಮತ್ತೆ ಪಿಡಿಯದೆ ಲಜ್ಜೆಯಿಂದ ಸುಮ್ಮನೆ ನಿಂತ ಸುರಕಾಂತನನ್ನು ನೋಡಿ, ವೃತ್ರನು' ಇಂದ್ರಾ! ಏಕೆ ಸುಮ್ಮನಿರುವೆ? ಇದು ವಿಷಾದ ಕಾಲವಲ್ಲ. ಪಿಡಿ ವಜ್ರಾಯುಧವನ್ನು. ಕಡಿ ನಿನ್ನ ಶತ್ರುವನ್ನು! ಯುದ್ಧದಲ್ಲಿ ಜಯಾಪಜಯಗಳು ದೈವಾಧೀನವಾಗಿದೆ. ಒಂದು ಸಲ ದುರ್ಮಾರ್ಗರು ಜಯಿಸುವುದೂ ಮತ್ತೊಂದು ಸಲ ಸಜ್ಜನರು ಗೆಲ್ಲುವುದೂ ಹರಿಯು ಅನುಗ್ರಹದಿಂದಲೇ! ಅವನೊಬ್ಬನೇ ಸದಾ ಜಯಶೀಲನು. ಪ್ರತಿ ಕ್ಷಣದಲ್ಲಿಯು ಸೃಷ್ಟಿಸ್ಥಿತಿ ಲಯಗಳನ್ನು ಮಾಡುವ ಸರ್ವಜ್ಞನಾದ ಆ ಪುರಮಪುರುಷನ ವಶರಾಗಿ ಜೀವರಿರುವರು. ಅವನ ದಯೆ ಇಲ್ಲದಿದ್ದರೆ ಯಾರಿಗೂ ಉಸಿರಾಡಲು ಕೂಡ ಆಗದು. ಜಾಲಬದ್ಧವಾದ ವಿಹಗ ಗಳಂತೆ ಆ ಕಾಲರೂಪಿಯಾದ ಹರಿಯ ವಶದಲ್ಲಿ ಸರ್ವಜೀವರಿರುವರು. ಅವನಿಂದ ಓಜಸ್ಸು. ಅವನಿಂದ ಬಲ, ಪ್ರಾಣ, ಮುಕ್ತಿ, ಮತ್ತು ಸಂಸಾರತಾಪಗಳು. ಮುಖ್ಯಕಾರಣನಾದ ಅವನನ್ನು ಮರೆತು ಅಜ್ಞಾನಿಗಳು ತಾವೇ ವೃದ್ಧಿಹಾನಿ ಕಾರಣರೆಂದು ಮೆರೆವರು. ಕಟ್ಟಿಗೆಯ ಗೊಂಬಿಯಂತೆ ಯಂತ್ರಮಯ ಮೃಗದಂತೆ ಸರ್ವಭೂತಗಳು ಈಶಾಧೀನರು. ಪುರುಷನೆನಿಸುವ ಬ್ರಹ್ಮನು, ಪ್ರಕೃತಿನಿಯಾಮಕಳಾದ ಲಕ್ಷ್ಮೀದೇವಿಯು, ಅಹಂತತ್ವಮಾನೀ ಶೇಷನು, ಪ್ರಾಣಮಾನೀ ವಾಯುವು, ಮನೋನಿಯಾಮಕಳಾದ ರುದ್ರನು, ಇಂದ್ರಿಯ ಪ್ರೇರಕರಾದ ಇಂದ್ರಾದಿಗಳು ಶ್ರೀಹರಿಯು ಅನುಗ್ರಹವಿಲ್ಲದೆ ಸೃಜನಾದಿ ಸ್ವಕಾರ್ಯಗಳನ್ನು ಮಾಡಲಾರರು. ಇಂತು ಆದಾನಾದಿಕರ್ತನು, ಸರ್ವೇಶ್ವರನು ಆದ ಶ್ರೀಹರಿಯನ್ನು ಜೀವನೆಂದು ತಿಳಿಯುವವನು ಮೂಢನಲ್ಲವೇ? ಪರಸ್ಪರವಾಗಿ ಜೀವರಿಂದ ಜೀವನನ್ನು ಸೃಜಿಸಿ, ಸಂಹರಿಸಿ ಸರ್ವಕರ್ತನಾಗಿರುವ

ಶ್ರೀಹರಿಯು ಜೀವಭಿನ್ನನಾಗಿ ಜೀವರಿಗೆ ಜೀವನ ಮರಣಗಳನ್ನು, ಶ್ರೀಕೀರ್ತಿಗಳನ್ನು ಸಂಪದ್ವಿಪತ್ತುಗಳನ್ನು ಕೊಡುತ್ತಿರುವನು. ನಮಗೆ ಬೇಡೆನಿಸುವ ದುಃಖವೂ ಶ್ರೀಹರೀಚ್ಛೆ ಯಿಂದಲೇ ಬರುವುದು. ಆದ್ದರಿಂದ ಜಯಾಪಜಯಗಳನ್ನು ಸುಖ- ದುಃಖಗಳನ್ನು, ಜೀವನ ಮರಣಗಳನ್ನು ಶ್ರೀಹರಿದತ್ತವೆಂದು ತಿಳಿದು ಹಿಗ್ಗದೆ ಕುಗ್ಗದೆ ಸ್ವೀಕರಿಸುವವನೇ ಧೀರನು. ಸತ್ತ್ವರಜಸ್ತಮೋಗುಣಗಳು ಜಡ ಪ್ರಕೃತಿಯ ಭಾಗಗಳು, ಅವು ಜೀವಗುಣಗಳಲ್ಲ. ಜೀವನು ಜಡಭಿನ್ನನಾದಂತೆಯೇ, ಸ್ವಾಂತರ್ಯಾಮಿಯಾದ ಶ್ರೀಹರಿಯಿಂದಲು ಭಿನ್ನನಾಗಿರುವನು. ಈ ಸಾಕ್ಷಿಯನ್ನರಿತು ಅವನ ಇಚ್ಛೆಗೆ ಬಂದಂತೆ ನಡೆಯುವವನಿಗೆ ಸಂಸಾರವೂ ಬಂಧಕವಲ್ಲ. ನನ್ನನ್ನು ನೋಡು! ನಿನಗೆ ಸೋತಿರುವೆನು. ನನ್ನ ಭುಜವು ಕಡಿದು ಬಿದ್ದಿದೆ. ಆದರೂ ಅಂಜದೆ ನಿನ್ನನ್ನು ಕೊಲ್ಲಲು ಬರುತ್ತಿರುವೆನು. ಯುದ್ಧವೂ ಜೂಜಿನಂತೆಯೇ ಸರಿ. ಇಲ್ಲಿ ಪ್ರಾಣಗಳೇ ಪಣ. ಬಾಣಗಳೇ ಪಗಡೆ, ವಾಹನಗಳೇ ಹಲಿಗೆ. ಇಲ್ಲಿಯೂ ಇವನಿಗೆ ಜಯ; ಇವನಿಗೆ ಅಪಜಯ ವೆಂಬುದಿಲ್ಲ– ಎಂದನು.

ಆಗ ಇಂದ್ರನು ಅವನ ನಿಷ್ಕಪಟ ವಚನವನ್ನಾಲಿಸಿ ಮೆಚ್ಚಿ ವಜ್ರವನ್ನು ಕೈಲಿ ಪಿಡಿದು ನಗುತ್ತಾ ನುಡಿದನು–

ಅಹೋ! ದಾನವ! ಜೀವನ್ಮುಕ್ತನಾಗಿರುವೆ! ನಿನ್ನಯ ಬುದ್ಧಿವೈಶದ್ಯವನ್ನು, ಜಗದೀಶನಾದ ಶ್ರೀಹರಿಯಲ್ಲಿ ನಿನಗಿರುವ ಭಕ್ತಿಯನ್ನು, ಕಂಡು ಸಂತಸವಾಗಿದೆ. ವಿಷ್ಣು ಮಾಯೆಯನ್ನು ತಿಳಿದು ದಾಟಿ, ಅಸುರೀಭಾವನನ್ನು ಪರಿತ್ಯಜಿಸಿ ಮಹಾಪುರುಷೋತ್ತಮನ ದಾಸನಾದೆ. ರಾಕ್ಷಸನಾದ ನಿನಗೆ ಸರ್ವಸ್ವಾಮಿಯಾದ ವಾಸುದೇವನಲ್ಲಿ ನಿಶ್ಚಲಭಕ್ತಿಯು ಪುಟ್ಟಿದುದನ್ನು ನೋಡಿ ಆಶ್ಚರ್ಯ ವಾಗಿದೆ. ಮೋಕ್ಷಪ್ರದನು ಪಾಪಹರನು ಅವ್ಯಾಹತ ಷಡ್ಗುಣೈಶ್ವರ್ಯನು ಆನಂದಮಯನು ಆದ ಗೋವಿಂದನ ಚರಣಾರವಿಂದ ಭಕ್ತಿಸುಧಾ ಸಮುದ್ರದಲ್ಲಿ ಸ್ನಾತನಾದವನು ಕ್ಷುದ್ರಕೂಪ ಸದೃಶನಾದ ಸ್ವರ್ಗಾದಿ ಸುಖಗಳನ್ನು ಬೇಡುವನೇ?

ಹೀಗೆ ಅನ್ಯೋನ್ಯವಾಗಿ ಧರ್ಮವಿಚಾರವನ್ನು ತಿಳಿಸಿ ವೃತ್ರೇಂದ್ರರು ಯುದ್ಧಮದದಿಂದ ಕಾದಾಡಲು ಪ್ರಾರಂಭಿಸಿದರು. ವೃತ್ರನು ತನ್ನ ಎಡಗೈಯಲ್ಲಿ ಪಿಡಿದೆತ್ತಿದ ಪರಿಘದಿಂದ ಇಂದ್ರ ನನ್ನು ಹೊಡೆದನು. ಉಕ್ಕಿನ ಪರಿಘವನ್ನು ಅದನ್ನು ಪಿಡಿದಿದ್ದ ಕೈಯನ್ನೂ ಕಡಿದು ಇಂದ್ರನು ಆರ್ಭಟಿಸಿದನು. ರೆಕ್ಕೆಗಳನ್ನು ಕಡಿಯಲು ಬೀಳುವ ಬೆಟ್ಟದಂತೆ ವೃತ್ರನು, ಕೈಗಳು ಬೀಳಲು ರಕ್ತವನ್ನು ಕಾರುತ್ತಾ ನೆಲದ ಮೇಲುರುಳಿದನು.

ಮತ್ತೆ ದೈತ್ಯನು ಬಿಡದೆ ಬಾಯಿಯನ್ನು ತೆರೆದು ಕೆಳತುಟಿಯನ್ನು ಭೂಮಿಗೂ, ಮೇಲ್ತುಟಿ ಯನ್ನು ಆಕಾಶಕ್ಕೂ, ಹಚ್ಚಿ ಹಿಡಿದು ಕೋರೆಗಳಂ ತೋರಿ ಬೆಳೆದು ಮೂರ್ಲೋಕಗಳನ್ನು ನುಂಗುವವನಂತೆ ವಿಜೃಂಭಿಸಿದನು. ನಡೆದು ಬರುವ ಗಿರಿರಾಜನೋ ಎಂಬಂತೆ ತೋರಿ ಗುಡುಗಿ ಗರ್ಜಿಸಿ ಭೂಮಿಯು ನಡುಗುವಂತೆ ಓಡಿಬಂದು,ಇಂದ್ರನನ್ನು ಐರಾವತವನ್ನು ಕೂಡ ನುಂಗಿಬಿಟ್ಟನು. ಬಲವೀರ್ಯದರ್ಪಿತವಾದ ಸರ್ಪವು ಆನೆಯನ್ನಂತೆ, ನುಂಗಿ ನಿಂತ ವೃತ್ರನನ್ನು ಕಂಡು ಸುರರು ಪ್ರಜೇಶರು ಹಾಹಾಕಾರವನ್ನು ಮಾಡಿ ನಿರ್ವಣ್ಣರಾದರು. ಋಷಿಗಳು ನಿಶ್ಚೇಷ್ಟ ರಾದರು. ಇಂದ್ರನು ವೃತ್ರಕುಕ್ಷಿಗತನಾದರೂ ನಾರಾಯಣಕವಚದ ಮಹಿಮೆಯಿಂದ ಸಾಯದೆ ಅಣಿಮಾದಿ ಯೋಗಬಲದಿಂದ ಉಳಿದು, ವಜ್ರದಿಂದ ಅವನ ಹೊಟ್ಟೆಯನ್ನು ಸೀಳಿ ಹೊರ ಬಂದು ವೃತ್ರನ ಶಿರವನ್ನು ಕತ್ತರಿಸಿ ಅವನನ್ನು ಕೊಂದನು.

ಇಂತು ನರ್ಮದೆಯ ತೀರದಲ್ಲಿ ಆರಂಭವಾದ ಯುದ್ಧವು ಸಮುದ್ರ ತೀರದಲ್ಲಿ ಪರಿಸಮಾಪ್ತವಾಗಲು ಒಂದು ವರ್ಷವು ಹಿಡಿಯಿತು. ವಜ್ರವನ್ನು ಫೇನದಲ್ಲಿ ಅದ್ದಿ ತೆಗೆದು ನಾರಾಯಣ ತೇಜೋವರ್ಧಿತನಾದ ಇಂದ್ರನು ಕೊನೆಗೆ ರಕ್ಕಸನನ್ನು ಕೊಂದು ಲೋಕಮಂಗಲವನ್ನುಂಟುಮಾಡಿದನು.

ಆಗ ಆಕಾಶದಲ್ಲಿ ದೇವದುಂದುಭಿಗಳು ಮೊರೆದವು. ಗಂಧರ್ವ ವಿದ್ಯಾಧರನು ಹಾಡಿ ಪೊಗಳಿದರು. ಋಷಿಗಳು ಇಂದ್ರನನ್ನು ವಾರ್ತಹಣ ಸೂಕ್ತಗಳಿಂದ ನುತಿಸಿದರು. ಸುರರು ಪೂಮಳೆಗರೆದರು. ವೃತ್ರದೇಹದಿಂದ ಅವನ ಜೀವವು ಮುಕ್ತವಾಗಿ ಎಲ್ಲರೂ ನೋಡುತ್ತಿರಲು ವಿದ್ಯಾಧರ ಲೋಕವನ್ನು ಸೇರಪೋಯಿತು. ಶ್ರೀರಸ್ತು.

## ೧೩. ಬ್ರಹ್ಮಹತ್ಯಾ ನಿವೃತ್ತಿ

ಶ್ರೀಶುಕನು–'ವೃತ್ರನು ಮೃತನಾಗಲು ಸರ್ವಲೋಕದ ಜನರು ಲೋಕೇಶರೂ ಹಿರಿಹಿರಿ ಹಿಗ್ಗಿದರು. ಆದರೂ ಇಂದ್ರನಿಗೆ ಮಾತ್ರ ಸಮಾಧಾನವಾಗಲಿಲ್ಲ. ಬ್ರಹ್ಮೇಶಾನರೇ ಮೊದಲಾದವರೆಲ್ಲ ಸಮುದ್ರತೀರ ಪ್ರದೇಶವನ್ನು ಬಿಟ್ಟು ತಂತಮ್ಮ ಲೋಕಗಳಿಗೆ ಹೊರಟು ಹೋದರು- ಎನ್ನಲು ರಾಜನು ಪ್ರಶ್ನಿಸಿದನು–

ಮುನೇ! ಇಂದ್ರನಿಗೇಕೆ ಸುಖವಾಗಲಿಲ್ಲ! ದೇವತೆಗಳೆಲ್ಲರು ನಿಶ್ಚಿಂತರಾದರೂ ಇಂದ್ರನು ಮಾತ್ರ ದುಃಖದಿಂದಿರಲು ಕಾರಣವೇನು?

ಆಗ ಶುಕನಿಂತು ನುಡಿದನು–

ವೃತ್ರವಿಕ್ರಮದಿಂದ ಭೀತರಾಗಿ, ಅವನನ್ನು ಸಂಹರಿಸೆಂದು ತನ್ನನ್ನು ಬೇಡಿದ ದೇವತೆಗಳನ್ನು ನೋಡಿ ಬ್ರಹ್ಮಹತ್ಯಾಭೀತನಾಗಿ ಹೀಗೆಂದನು–

ವಿಶ್ವರೂಪನನ್ನು ಕೊಂದಾಗ ಬಂದ ಬ್ರಹ್ಮಹತ್ಯೆಯನ್ನು ಸ್ತ್ರೀ ಭೂ ಜಲ ವೃಕ್ಷಗಳಿಗೆ ಕೊಟ್ಟು ಹೇಗೋ ಕಷ್ಟದಿಂದ ಮುಕ್ತನಾದೆ. ಈಗ ವೃತ್ರನನ್ನು ಕೊಂದರೆ ಮತ್ತೆ ಬ್ರಹ್ಮಹತ್ಯೆಯು ಬರುವುದು. ಅದನ್ನು ಕಳೆಯುವ ಉಪಾಯವೇನು– ಎಂದ ಇಂದ್ರನಿಗೆ ಧೈರ್ಯವನ್ನು ಕೊಟ್ಟು ಋಷಿಗಳು ಮಾತನಾಡಿದರು–

ಇಂದ್ರಾ! ನಿನಗೆ ಮಂಗಳವಾಗಲಿ. ನಿನಗೆ ಬರುವ ಬ್ರಹ್ಮಹತ್ಯೆಯನ್ನು ಅಶ್ವಮೇಧಯಾಗವನ್ನು ಮಾಡಿಸಿ ಕಳೆಯುವೆವು. ಭಯಪಡಬೇಡ. ಸ್ಥಾವರ ಜಗದ್ವಧದಿಂದಲೂ ಬಿಡಿಸಲು ಸಮರ್ಥವಾಗಿದೆ ಶ್ರೀ ನಾರಾಯಣ ಪ್ರೀತಿಕರವಾದ ಅಶ್ವಮೇಧವು. ಬ್ರಹ್ಮಹತ್ಯೆಯೇ ಏಕೆ, ಗೋಮಾತೃಪಿತೃಗುರ್ವಾದಿ ಜನಹತಾಪಾಪವು ಕೂಡ ಶ್ರೀಹರಿನಾಮ ಕೀರ್ತನಮಾತ್ರದಿಂದ ನಾಶವಾಗುವುದು. ಶ್ವಪಚಾದಿಗಳೂ ಅವನ ನಾಮವನ್ನು ನುಡಿದು ಪಾವನರಾಗುವರು. ಶ್ರದ್ಧಾನ್ವಿತನಾಗಿ ಅಶ್ವಮೇಧವನ್ನು ಮಾಡು. ನಾವೂ ಶ್ರದ್ಧೆಯಿಂದ ಮಾಡಿಸುವೆವು. ಸಾವಿರ ಬ್ರಹ್ಮಹತ್ಯೆಗಳು ಅದರಿಂದ ನಶಿಸುವವೆಂದಮೇಲೆ ಈ ದುರಾತ್ಮನನ್ನು ಕೊಂದ ಪಾಪವು ನಶಿಸದಿರುವುದೇ?

ಈ ರೀತಿಯಾಗಿ ಬ್ರಾಹ್ಮಣರು ಭರವಸೆಯನ್ನು ಕೊಡಲು ಕೇಳಿ ಇಂದ್ರನು ವೃತ್ರನನ್ನು ಸಂಹರಿಸಿದನು. ತತ್‌ಕ್ಷಣವೇ ಬ್ರಹ್ಮಹತ್ಯೆಯು ಅವನನ್ನು ಬೆನ್ನಟ್ಟಿ ಬಂದು ಪೀಡಿಸಲು ಇಂದ್ರನು

ಭೀತನಾಗಿ – ಬ್ರಹ್ಮಹತ್ಯೆಯು ಲೋಕದಲ್ಲಿ ಜುಗುಪ್ಸಿತವೆಂದರಿತು–ಸ್ವರ್ಗವನ್ನು ಬಿಟ್ಟು ಓಡಿಹೋದನು.

ಆಗ ಬ್ರಹ್ಮಹತ್ಯೆಯು ಮುದುಕಿಯ ರೂಪದಿಂದ ಸುರಾಧೀಶನನ್ನು ಬಿಡದೆ ಹಿಂಬಾಲಿಸಿತು. ಕ್ಷಯರೋಗಪೀಡಿತಳಂತೆ ಕೃಶಳಾಗಿ, ರಕ್ತದಲ್ಲಿ ತೊಯ್ದ ಬಟ್ಟೆಯನ್ನುಟ್ಟು ಚಂಡಾಲಿಕೆಯ ರೂಪವನ್ನು ಧರಿಸಿ ನಡುಗುತ್ತಾ ನಡೆದುಬಂದ ಬ್ರಹ್ಮಹತ್ಯೆಯನ್ನು ನೋಡಿ 'ನಿಲ್ಲು ನಿಲ್ಲು' ಎಂಬುವ ಅವಳ ಮಾತಿಗೆ ಹೆದರಿ, ಅವಳ ಮೈಯಿಂದ ಹೊಮ್ಮಿ ಬರುವ ದುರ್ಗಂಧವನ್ನು ಸಹಿಸಲಾರದೆ ಇಂದ್ರನು ದಿಕ್ಕುಗಳಿಗೆ ಓಡಿದನು. ಕೊನೆಗೆ ಮಾನಸ ಸರೋವರದಲ್ಲಿ ಕಮಲನಾಳದಲ್ಲಿ ಅಡಗಿ ಕುಳಿತನು. ಸ್ವರ್ಗಸುಖ ದೂರನಾಗಿ ಕಷ್ಟಪಡುವ ಇಂದ್ರನಿಗೆ ದೂತನಾಗಿ ಅಗ್ನಿಯು ವಾರ್ತೆಯನ್ನು ಮುಟ್ಟಿಸುತ್ತಿದ್ದನು.

ಇಂತು ಬ್ರಹ್ಮಹತ್ಯೆ ನಿವಾರಣೋಪಾಯವನ್ನು ಚಿಂತಿಸುತ್ತಾ ಇಂದ್ರನು ಒಂದು ಸಾವಿರ ವರ್ಷ ಕಾಲವು ಆ ನಾಳದಲ್ಲಿದ್ದನು. ಅಷ್ಟು ಕಾಲವು ಸ್ವರ್ಗವನ್ನು ವಿದ್ಯಾತಪೋಯೋಗ ಬಲದಿಂದ ನಹುಷನಾಳಿದನು. ಸ್ವರ್ಗೀಯ ಸಮೃದ್ಧ ಸಂಪದ್ಗರ್ವಿತನಾದ ನಹುಷನು ಇಂದ್ರಪತ್ನಿಯನ್ನು ಕಾಮಿಸಿ ಅಜಗರನಾಗಿ ಬಿದ್ದನು. ಅಷ್ಟರಲ್ಲಿ ಸುರಪತಿಯು ಸತ್ಯಪಾಲಕ ಶ್ರೀಲಕ್ಷ್ಮೀನೃಸಿಂಹನ ಧ್ಯಾನದಿಂದ ಪೂತನಾದನು. ಬ್ರಹ್ಮಹತ್ಯಾಲಕ್ಷಣ ಜೀವನು ಕೂಡ ಗಂಗಾಜಲಪಾವಿತ ಮಾನಸ ಸರೋವರದಲ್ಲಡಗಿದ್ದ ಇಂದ್ರನನ್ನು ದಿಗ್ದೇವತಾ ತೇಜೋರಕ್ಷಿತನಾಗಿದ್ದುದರಿಂದ ಕಾಣಲಾರದೆ ಹಿಂದಿರುಗಿದನು. 'ಋತಂಭರನನ್ನು ಭಜಿಸೆಂ'ದು ಬ್ರಹ್ಮನು ಅಗ್ನಿದೂತ ಮುಖದಿಂದ ಹೇಳಿ ಕಳುಹಿದುದರಿಂದ ಇಂದ್ರನು ಬ್ರಹ್ಮಹತ್ಯಾ ಮುಕ್ತನಾಗಿ ಪೂರ್ವದಂತೆ ಶೋಭಿಸಿದನು.

ಆಗ ಋಷಿಗಳು ಇಂದ್ರನಿಂದ ಅಶ್ವಮೇಧ ಯಾಗವನ್ನು ಮಾಡಿಸಿದರು. ಸರ್ವಭೂತ ನಿಲಯನಾದ ಶ್ರೀವಾಸುದೇವನೇ ಪ್ರಧಾನದೇವತೆಯಾಗಿರಲು ಬ್ರಹ್ಮವಾದಿಗಳು ನಡೆಸಿದ ಆ ಮಹಾಯಜ್ಞದಿಂದ ಇಂದ್ರನು ಪೂತನಾಗುವುದಲ್ಲದೆ ಬ್ರಹ್ಮಹತ್ಯೆಯು ಸಂಪೂರ್ಣವಾಗಿ ನಷ್ಟವಾಯಿತು. ಮರೀಚ್ಯಾದಿ ಋತ್ವಿಜರಿಂದ ಕೂಡಿ ಯಜ್ಞಪುರುಷನ ಪ್ರೀತಿಗಾಗಿ ಯಜ್ಞವನ್ನು ಮಾಡಿದ ಇಂದ್ರನು ಶ್ರೀಹರಿಜ್ಞಾನ ಮಹಿಮೆಯಿಂದ ನಿಷ್ಪಾಪನಾದನು. ಹಾಗೂ ವೃತ್ರಹರಣನೆಂದು ಕೀರ್ತಿಯನ್ನೂ ಗಳಿಸಿದನು.

ರಾಜನ್! ಈ ತೀರ್ಥಪದನ ಪಾವನಚರಿತೆಯು ಸಕಲ ಪಾಪನಾಶಕವು, ಭಕ್ತಿವರ್ಧಕವು ಆಗಿದೆ. ವೃತ್ರಸಂಹಾರಕನಾದ ಮಹೇಂದ್ರನ ವಿಜಯಗಾಥೆಯನ್ನು ಓದಿದವರು, ಕೇಳಿದವರು ಕೀರ್ತಿಯನ್ನು ಪಾಪಮುಕ್ತಿಯನ್ನು ಶತ್ರುಜಯವನ್ನು ಆಯುರ್ವೃದ್ಧಿಯನ್ನು ಪೊಂದಿ ಧನ್ಯರಾಗುವರು. ಶ್ರೀಹರಿಯಲ್ಲಿ ಅವರಿಗೆ ಅಚಂಚಲವಾದ ಭಕ್ತಿಯು ಪುಟ್ಟುವುದು.

## ೧೪. ಚಿತ್ರಕೇತು – ಕಥೆ – ಸಾಂಸಾರಿಕ ಸುಖ ದುಃಖ ವರ್ಣನೆ

ರಾಜನು ಕೇಳಿದನು–

ಸ್ವಾಮೀ! ದುಷ್ಟಸ್ವಭಾವನಾದ ವೃತನಿಗೆ ನಾರಾಯಣ ಸ್ಮರಣೆಯು ದೃಢವಾದ ಭಕ್ತಿಯು ಹೇಗೆ ಪುಟ್ಟಿತು? ಶುದ್ಧಮನಸ್ಕರಾದ ಕೆಲ ದೇವತೆಗಳಿಗೂ ಹಾಗೂ ಕೆಲ ಋಷಿಗಳಿಗೂ ಅಂತ್ಯಕಾಲ ದಲ್ಲಿ ಹರಿಸ್ಮರಣೆಯು ದುರ್ಲಭವಲ್ಲವೇ? ಭೂಮಿ ಕಣಗಳಂತೆ ಅಸಂಖ್ಯಾತ ಪ್ರಾಣಿಗಳಲ್ಲಿ ಮನುಜರು ಶ್ರೇಯಸ್ಸಿಗಾಗಿ ಯತ್ನಿಸುವವರು. ಅವರಲ್ಲಿ ಮೋಕ್ಷೇಚ್ಛುಗಳು ಬಹು ವಿರಳ; ಪ್ರಯತ್ನಿಸುವ ಸುಜನರಲ್ಲಿಯೂ ಸಿದ್ಧಿಯನ್ನು ಪೊಂದುವವನು ಅತ್ಯಂತ ದುರ್ಲಭನು. ಮುಕ್ತರಲ್ಲಿಯೂ ನಾರಾಯಣೈಕನಿಷ್ಠನು ಬ್ರಹ್ಮನೊಬ್ಬನೇ – ಅಷ್ಟು ಭಕ್ತಿಯು ಇತರರಿಗೆ ಸಿಗಲಾರದೆಂದು ಕೇಳಿರುವನು. ಇರಲಿ. ವೃತ್ರನು ಮಹಾಪಾಪಿಯು. ಸರ್ವಜನ ದ್ರೋಹಿಯಾದ ಅವನಿಗೆ ರಣರಂಗದಲ್ಲಿ ಮರಣಕಾಲದಲ್ಲಿ ನಾರಾಯಣ ಸ್ಮರಣವು ಬಂದುದು ಹೇಗೆ? ಅವನೂ ಭಕ್ತನೇನು? ಈ ನಮ್ಮ ಸಂಶಯವನ್ನು ನಿವಾರಿಸಿ ಅವನ ಹರಿಭಕ್ತಿಯನ್ನು ನೋಡಿ ಸಹಸ್ರಾಕ್ಷನೇ ಮೆಚ್ಚಿದನಲ್ಲವೇ?

ಇಂತು ರಾಜನಾಡುದ ಮಾತನ್ನು ಕೇಳಿ ಶ್ರೀಶುಕನು ಸಂತೋಷದಿಂದ ಶ್ರೀಹರಿಮಹಿಮಾ ಭರಿತವೆನಿಸಿದ ಚಿತ್ರಕೇತು ಚರಿತವನ್ನು ಹೇಳಲು ಪ್ರಾರಂಭಿಸಿದನು–

ರಾಜನ್! ಶ್ರದ್ಧೆಯಿಂದ ಕೇಳು. ಈ ಕಥೆಯನ್ನು ನಾನು ವ್ಯಾಸರ ಮುಖದಿಂದ ಕೇಳಿರುವೆನು. ನಾರದ ದೇವಲರೂ ಇದನ್ನು ಪೇಳಿರುವರು.

ಶೂರಸೇನ ದೇಶದಲ್ಲಿ ಚಿತ್ರಕೇತುವೆಂಬ ರಾಜನಿದ್ದನು. ಅವನಿಗೆ ಮಹೀಮಂಡಲವು ಸಂಪತ್ಸಮೃದ್ಧವಾಗಿತ್ತು. ಸಾವಿರಾರು ಪತ್ನಿಯರಿದ್ದರು. ಆದರೂ ಸಂತಾನವಿಲ್ಲದೆ ಚಿಂತೆಪಡು ತ್ತಿದ್ದನು. ರೂಪೌದಾರ್ಯವಯೋಜನ್ಮ ವಿದ್ಯೈಶ್ವರ್ಯ ಕಾಂತಿಸಂಪನ್ನನಾದರೂ ವಂಧ್ಯಾಪತಿ ಯಾದೆನೆಂಬ ಕುಂದಿನಿಂದ ಕೊರಗುವ ರಾಜನಿಗೆ, ಸುಂದರ ತರುಣ ಪತ್ನಿಯರು, ಸಕಲ ಸಂಪತ್ತು, ಸಾರ್ವಭೌಮ ವೈಭವವಿದ್ದೂ ವ್ಯರ್ಥವೆನಿಸಿದವು.

ಒಂದು ದಿನ ಬ್ರಹ್ಮಪುತ್ರನಾದ ಅಂಗಿರಸ ಋಷಿಯು ಲೋಕಸಂಚಾರವನ್ನು ಮಾಡುತ್ತಾ ಯಾದೃಚ್ಛಿಕವಾಗಿ ಚಿತ್ರಕೇತುವಿನ ಮನೆಗೆ ಬಂದನು. ವಂದಿಸಿ ಅತಿಥಿ ಪೂಜೆಯನ್ನರ್ಪಿಸಿ, ವಿನಯಾನತಕಂಧರನಾಗಿ ನಿಂತ ರಾಜನನ್ನು ನೋಡಿ ಆಂಗಿರಸನಿಂತೆಂದನು

ರಾಜನ್! ಆರೋಗ್ಯವಾಗಿರುವೆಯಾ? ಪ್ರಜರಿಗೆ ಕ್ಷೇಮವೇ? ಮಹದಹಂಕಾರ ಭೂತ ಗಳೆಂಬ ಸಪ್ತ ಪ್ರಕೃತಿಗಳಿಂದ ಕೂಡಿದ ಜೀವನಂತೆ ರಾಜನು– ಸ್ವಾಮಿ, ಅಮಾತ್ಯ ಜನಪದ, ದುರ್ಗ, ದ್ರವಿಣ, ದಂಡ, ಮಂತ್ರಿಗಳೆಂಬ ಸಪ್ತಪ್ರಕೃತಿಯುಕ್ತನಾಗಿ ಸುಖಿಸುವನು. ರಾಜನಾಗಲಿ ಜೀವನಾಗಲಿ ಪ್ರಕೃತಿಯನ್ನು ತನ್ನ ವಶದಲ್ಲಿಡದಿರೆ ದುಃಖಪಡುವನು. ದಾರ ಸುತಾದಿಗಳು, ಭೃತ್ಯಾಮಾತ್ಯರು ಪೌರಜಾನಪದರು ನಿನಗೆ ವಿಧೇಯರಾಗಿರುವರೆ? ನಿನ್ನ ಮನಸ್ಸನ್ನು ಸಮಾಧಾನ ದಿಂದಿಟ್ಟಿರುವೆಯೇ? ಮನವನ್ನು ಗೆದ್ದವನು ಮಹಿಯನ್ನು ಗೆದ್ದಾನು! ಕೋಪ ದೂರನಾಗವನಿಗೆ ಎಲ್ಲರೂ ಪ್ರಸನ್ನರಾಗುವರು. ಪ್ರಪಂಚವೇ ನಿನಗೆ ಸುಖಮಯವೆನಿಸುವುದು. ಅಂತಹ ನಿನ್ನ ಮನವು ಚಿಂತಾಕ್ರಾಂತವಾದಂತೆ ತೋರುತ್ತಿದೆ. ನಿನ್ನ ಮುಖವು ಬಾಡಿದೆ, ಕಾರಣವೇನು?

ಎಂದು ಕೇಳಿದ ಋಷಿಯನ್ನು ನೋಡಿ ಪ್ರಜಾಕಾಮನೆಯನ್ನು ಮನಸಾ ಬೇಡಿ ರಾಜ ನಿಂತೆಂದನು–

ಪೂಜ್ಯನೇ ! ನಿನಗೆ ತಿಳಿಯದ್ದೇನಿದೆ? ತಪೋಜ್ಞಾನನಿಧಿಯಾದ ನೀನು ಸರ್ವ ಮನುಜರ ವಿಷಯವನ್ನು ಚೆನ್ನಾಗಿ ಅರಿತಿರುವೆ. ಆದರೂ ನಿನ್ನ ಪ್ರಶ್ನೆಗೆ ಉತ್ತರವೀಯಬೇಕಲ್ಲವೇ? ನೀನಾಡಿದಂತೆ ನನ್ನ ರಾಜ್ಯವು ಸಕಲ ಸಂಪದ್ಭರಿತವಾಗಿದೆ; ದೇವತೆಗಳೂ ಬೇಡಲು ಯೋಗ್ಯ ವಾಗಿದೆ ನಿಜ. ಆದರೆ ಹಸಿವಾದವನಿಗೆ ಸ್ರಕ್ಚಂದನ ವನಿತೆಯರಂತೆ, ನನಗದು ಬೇಡವೆನಿಸಿದೆ. ಮಹಾಭಾಗ! ಮಕ್ಕಳಿಲ್ಲದೆ ನರಕೋನ್ಮುಖನಾದ ನನ್ನನ್ನು ಉದ್ಧರಿಸು. ನನಗೆ ಮಗನಾಗುವ ಮಾರ್ಗವಾವುದು ಪೇಳು.

ಇಂತು ಪ್ರಾರ್ಥಿಸಿದ ಪಾರ್ಥಿವನಲ್ಲಿದಯದಿಂದ ಆಂಗಿರಸನು ತ್ವಷ್ಟ್ರಯಾಗವನ್ನು ಮಾಡಿಸಿ ರಾಜನನ್ನು ಹರಸಿ, ಯಜ್ಞಹುತ ಶೇಷವನ್ನು ಜ್ಯೇಷ್ಠಮಹಿಷಿಯಾದ ಕೃತದ್ಯುತಿಗೆ ಕೊಟ್ಟನು ಹಾಗೂ ರಾಜನನ್ನು ನೋಡಿ–

ರಾಜನ್! ಮಗನಾಗುವನು ನಿಮಗೆ– ಆ ಮಗನಿಂದ ಹರ್ಷಶೋಕಗಳನ್ನು ಪೊಂದುವಿರಿ– ಎಂದು ಹೇಳಿ ಹೊರಟುಹೋದನು. ಪಾಯಸ ಪ್ರಾಶನ ಮಾಡಿದ ಕೃತದ್ಯುತಿಯು ಚಿತ್ರಕೇತುವಿನಿಂದ ಗರ್ಭವನ್ನು ಧರಿಸಿದಳು. ಶುಕ್ಲಪಕ್ಷ ಚಂದ್ರನಂತೆ ಗರ್ಭವೂ, ಶೂರಸೇನ ದೇಶಪ್ರಜರ ಹರ್ಷವೂ ಬೆಳೆಯತೊಡಗಿತು. ಯೋಗ್ಯಕಾಲದಲ್ಲಿ ಪುತ್ರನು ಜನಿಸಲು ಕೇಳಿ ಪ್ರಜರು ರಾಜನಂತೆ ಪರಮಾನಂದಭರಿತರಾದರು. ರಾಜನು ಮಂಗಲಸ್ನಾನವನ್ನು ಮಾಡಿ ಕುಮಾರನಿಗೆ ಜಾತಕರ್ಮ ವನ್ನೆಸಗಿದನು: ಬ್ರಾಹ್ಮಣರಿಗೆ ಹಿರಣ್ಯ ರಜತವಸ್ತ್ರ ಗೋಗ್ರಾಮಾದಿಗಳನ್ನು ದಾನವಿತ್ತನು. ಇತರರಿಗೂ ತಕ್ಕಂತೆ ಬೇಡಿದ ವಸ್ತುಗಳನ್ನಿತ್ತು ಸಂತೈಸಿದನು. 'ಮಗನಿಗೆ ಆಯುರ್ವೃದ್ಧಿಯಾಗಲಿ' ಎಂದು ಚಿತ್ರಕೇತು ಕೃತದ್ಯುತಿಯರು ಹರಕೆ ಹೊತ್ತರು.

ದರಿದ್ರನಿಗೆ ನಿಧಿ ಸಿಕ್ಕಂತಾಗಲು ರಾಜನು ದಿನದಿನ ಪ್ರವರ್ಧಮಾನ ಪುತ್ರಸ್ನೇಹದಿಂದ ಪುತ್ರವತಿಯಾಗದ ಕೃತದ್ಯುತಿಯ ಮನೆಯಲ್ಲೇ ಇರುತ್ತಿದ್ದನು. ಇತರ ಪತ್ನಿರಿದರಿಂದ ಕುಪಿತರಾಗಿ ಚಿಂತಿಸತೊಡಗಿದರು. ಅಯ್ಯೋ! ನಮ್ಮ ಜೀವನಕ್ಕೆ ಧಿಕ್ಕಾರವಿರಲಿ! ಮಕ್ಕಳಿಲ್ಲದ ದುಃಖ ರಾಜನು ತೋರುವ ಅನಾದರವೆಂಬ ಅಗ್ನಿಯು ಎರಡು ಕಡೆಯಿಂದ ಉರಿಯುತ್ತ ಬರುವ ಕಟ್ಟಿಗೆಯ ಮೇಲೋಡಾಡುವ ಕ್ರಿಮಿಗಳಂತಿರುವ ನಮ್ಮನ್ನು ದಹಿಸುತ್ತದೆ. ಮಕ್ಕಳಿಲ್ಲದ ಮಡದಿಯು ಮಡಿಯುವುದೇ ಲೇಸು! ನಮ್ಮ ಘೋರ ಪಾಪವಿನ್ನು ಎಂತಹದೋ! ಮಕ್ಕಳಿಲ್ಲದಿರುವ ಚಿಂತೆ ಯಿರಲಿ. ಗಂಡನೂ ಒಲ್ಲದ ಹೆಂಡತಿಯರಾದೆವು. ಆ ನಮ್ಮ ಸವತಿಯು ನಮ್ಮನ್ನು ದಾಸಿಯರಂತೆ ನೋಡುತ್ತಿರುವಳು. ದಾಸಿಯರಿಗೆ ದುಃಖವಿಲ್ಲ. ಪರಿಚರ್ಯಾಪರಾಭವಗಳನ್ನು ಸಹಜವೆಂದು ತಿಳಿದು ಅವರು ಲೆಕ್ಕಿಸರು. ನಾವು ರಾಣಿಯರಾಗಿದ್ದರೂ ದಾಸಿಯರಕಿಂತಲೂ ನೀಚರಾದೆವೇ?– ಎಂದು ಆ ರಾಣಿಯರು ಅಸೂಯೆಯಿಂದ ಬೆಂದು ರಾಜನನ್ನು ದ್ವೇಷಿಸಲು ಪ್ರಾರಂಭಿಸಿದರು. ದಾರುಣಮನಸ್ಕರಾದ ಆ ದುಷ್ಟ ವನಿತೆಯರೊಂದು ದಿನ ದ್ವೇಷಾವೇಶ ವಶರಾಗಿ ಕಣ್ಣು ಕಾಣದೆ ಕುಮಾರನಿಗೆ ವಿಷವನ್ನು ಕುಡಿಸಿದರು. ಕುಮಾರನು ತತ್ಕ್ಷಣವೇ ಮೃತನಾದನು. ಕೃತದ್ಯುತಿಯು ಮಗನು ಮಲಗಿರುವನೆಂದೇ ತಿಳಿದು ಬಹುವೇಳೆಯಾದರು ಏಳದ, ಆಳದ ಮಗುವಿನನ್ನು ತಾರೆಂದು ದಾದಿಗೆ ಹೇಳಿದಳು. ಅವಳು, ಮೈಯೆಲ್ಲವೂ ಹಸುರಾಗಿ, ಕಣ್ಣುಗುಡ್ಡು ಮೇಲಕ್ಕೆ ಉಬ್ಬಿ, ಪ್ರಾಣರಹಿತನಾದ ಶಿಶುವನ್ನು ನೋಡಿ 'ಹಾ!' ಎಂದೊದರಿ ಮೂರ್ಛೆ ಬಿದ್ದಳು. ಅದನ್ನು

ಕೇಳಿ ರಾಣಿಯು ಅಯ್ಯೋ! ಏನಾಯಿತೇ ಎನ್ನ ಕಂದನಿಗೆ? ಎಂದು ಚೀರಿ, ನೆಲದ ಮೇಲೆ ಮೂರ್ಛಿತಳಾಗಿ ಬಿದ್ದಳು. ಈ ದುಃಖವಾರ್ತೆಯು ಕಾಡುಕಿಚ್ಚಿನಂತೆ ಅಂತಃ ಪುರವನ್ನು, ಪುರವನ್ನು ಮುಟ್ಟಿ ಸರ್ವರನ್ನು ದುಃಖಾರ್ಣವದಲ್ಲಿ ಮುಳುಗಿಸಿತು. ಆ ದುಷ್ಟ ನಾರಿಯರು ಕೂಡ ಏನನ್ನೂ ಅರಿಯದವರಂತೆ ಗಟ್ಟಿಯಾಗಿ ರೋದಿಸಿದರು.

ಈ ಸುದ್ದಿಯನ್ನು ಕೇಳಿದ ರಾಜನು ಜಾರುತ್ತಾ ಎಡವುತ್ತಾ ಓಡಿಬಂದು ಬಾಲಕನ ಕಾಲಿನ ಸಮೀಪದಲ್ಲಿ 'ಹೋ!' ಎಂದು ಕೂಗಿ, ಮೈಮರೆತು ಬಿದ್ದನು, ಸ್ವಲ್ಪ ಹೊತ್ತಾದ ಮೇಲೆ ಎಚ್ಚತ್ತು ಕೃತದ್ಯುತಿಯು ಪತಿಯ ದುಃಖವನ್ನು ಕಂಡು, ಮುಮ್ಮಲವಾದ ಶೋಕವನ್ನು ತಡೆಯಲಾರದೆ, ಎದೆಯನ್ನು ಬಡಿದುಕೊಂಡು ಚಿತ್ರವಿಚಿತ್ರವಾಗಿ ಪ್ರಲಾಪಿಸಿ ಅತ್ತಳು. ಅವಳ ಕಣ್ಣೀರು ಬಿಸಿಯಾಗಿ ಹರಿದು ವದನಕಮಲವನ್ನ ಬಾಡಿಸಿ, ಸ್ತನ ಕುಂಕುಮ ಪಂಕವನ್ನು ಕರಗಿಸಿತು. ಕೇಶಗಳು ಚದರಿ, ಭೂಷಣಗಳ ಮುತ್ತುಗಳುದುರಿ, ಮೈ ಅದುರುತ್ತಾ ಇರಲು ಏಕಮಾತ್ರ ಪುತ್ರನ ಮರಣ ದುಃಖ ಭಾರದಿಂದ ಕುಗ್ಗಿ ಕುರರಿಯಂತೆ ರೋದಿಸುವ ಕೃತದ್ಯುತಿಯು ಇಂತು ಪ್ರಲಪಿಸಿದಳು–

ಎಲೌ ಬ್ರಹ್ಮನೇ! ಎಷ್ಟು ಮೂರ್ಖನಿರುವೆ? ನಿನ್ನ ಸೃಷ್ಟಿಕಾರ್ಯಕ್ಕೆ ವಿರುದ್ಧವಾದ ಬಾಲ ಸಂಹಾರವನ್ನು ಮಾಡುವುದು ನಿನಗೆ ಉಚಿತವೇ? ತಾಯಿ ಬದುಕಿರಲು ಕಂದನನ್ನು ಕರೆದೊಯ್ಯುವ ಕಟುಕತನಕ್ಕೇನೆಂಬೆ! ಚಿಕ್ಕವರನ್ನುಳಿಸಿ ವೃದ್ಧರನ್ನು ಮಾತ್ರ ಸಂಹರಿಸುವೆಯಾದೊಡೆ, ನೀನು ನಿಜವಾದ ಬುದ್ಧಿವಂತನು. 'ಮೃತಿ ಜನನಗಳಿಗೆ ಕ್ರಮವು ಅಗತ್ಯವಲ್ಲ. ಕರ್ಮವೇ ಕಾರಣ' ಎನ್ನುವಿಯಾ? ಹಾಗಾದರೂ ನಿನ್ನ ಸೃಷ್ಟಿಕ್ರಮವು ಅಭಿವೃದ್ಧವಾಗಲೆಂದು ನೀನು ಕಟ್ಟಿದ ಅಭಿಮಾನ ಪಾಶವನ್ನಾದರೂ ಕಡಿಯದೇ ಮಕ್ಕಳನ್ನು ಹಿರಿಯರ ಕಣ್ಣೆದುರಿಗೇ ಕೊಲ್ಲುವ ನೀನು ಜಡಮತಿಯೇ ಸರಿ! ಇರಲಿ ಹತವಿಧಿಯೇ! ನಿನ್ನನ್ನು ಬೈದು ಪ್ರಯೋಜನವೇನು? ನನ್ನ ಮಗನೇ ನನ್ನ ಕೈಬಿಟ್ಟು ಪೋದನು.

ವತ್ಸಾ! ಅನಾಥಳು ಕೃಪಣಳು ಆದ ನನ್ನ ಕಡೆ ನೋಡು! ಅಳುತ್ತಾ ನಿಂತಿರುವ ನಿನ್ನ ತಂದೆಯನ್ನು ನೋಡು! ಕಣ್ತೆರೆ! ನನ್ನನ್ನು ಬಿಟ್ಟು ಹೋಗಬೇಡ. ನೀನೇ ಗತಿ ಎಂದು ನಂಬಿರುವ ನಮ್ಮನ್ನು ಕೈಬಿಟ್ಟು ಪಾಪಿ ಯಮನ ಹಿಂದೆ ಏಕೆ ಓಡುವೆ? ಬಾ! ಏಳು! ಈ ನಿನ್ನ ಸಂಗಡಿಗರು ಬಂದಿರುವರು. ಆಡು ಅವರ ಜೊತೆಯಲ್ಲಿ. ಏಕೆ ಮಲಗಿರುವೆ? ಎಷ್ಟು ಹೊತ್ತಾಯಿತೋ ಕಂದಾ! ಹಸಿವೆಯಾಗುವುದಿಲ್ಲವೇ? ಹಾಲು ಹರಿದು ಹೋಗುತ್ತಿದೆ. ಏಳು! ಕುಡಿ! ಮಗನೇ! ನಮ್ಮ ಕಣ್ಣೀರನ್ನೊರಸು. ನಗುನಗುತ್ತ ಚಂದ್ರನಂತೆ ಬರುವ ನಿನ್ನ ಮುಖವಿನ್ನೆಂತು ಕಾಣುವೆನು? ನಿನ್ನ ಮಧುರ ಕಲ ಭಾಷಣಗಳಿನ್ನೆಂತು ಕೇಳುವೆನು? ತಿರುಗಿ ನೋಡಲೂ ಬಾರದೇ? ಎಲ್ಲಿಗೆ ಹೋದೆ? ನನ್ನನ್ನೂ ನಿನ್ನ ಹಿಂದೆ ಕರೆದುಕೊಂಡು ಹೋಗು.

–ಎಂದು ಚಿತ್ರವಾಗಿ ವಿಲಪಿಸುವ ಸತಿಯ ದುಃಖವನ್ನು ನೋಡಿ ತಡೆಯಲಾಗದೆ ರಾಜನು ಗೋಳಿಟ್ಟು ರೋದಿಸಿದನು. ಅಂತಃಪುರದ ಜನರೆಲ್ಲರೂ ರೋದಿಸತೊಡಗಿದರು. ಯಾರಿಗೂ ಏನು ತೋಚದಂತಾಗಲು ದುಃಖಸಾಗರವು ಉಕ್ಕೇರಿ ಬಂದಂತೆ ಎಲ್ಲರೂ ಶೋಕರಸಮಗ್ನರಾಗಿ ನಿಶ್ಚೇಷ್ಟರಾಗಿದ್ದರು. ಆಗ ಅಂಗಿರಸ ನಾರದರು ರಾಜನಿಗೆ ತಿಳಿಯಹೇಳಲು ಅಲ್ಲಿಗೆ ಬಂದರು.

## ೧೫. ಚಿತ್ರಕೇತು ಚರಿತೆ — ಆಂಗಿರಸನ ನುಡಿ

ಆ ಋಷಿವರರು ಮೃತಬಾಲಕನ ಹತ್ತಿರ ಮೃತನಂತೆ ಬಿದ್ದಿರುವ ರಾಜನನ್ನು ಯುಕ್ತಿಗಳಿಂದ ಬೋಧಿಸಬೇಕೆಂದು ಇಂತೆಂದರು–

ರಾಜೇಂದ್ರ! ಯಾರು ಈ ಬಾಲನು? ನಿನಗೇನಾಗಬೇಕು? ಅವನನ್ನು ನೋಡಿ ನೀನೇಕೆ ಅಳುವೆ? ಹಿಂದೆ ಮುಂದೆ ಈಗ ಅವನಿಗೆ ನೀನಾರು? ಪ್ರವಾಹವು ಬಂದಾಗ ಮರಳಿನ ದಿಬ್ಬೆಗಳು ಚಲಿಸಿ ಮರಳಿ ದೂರದೂರವಾಗಿ ಸರಿಯುವುದು. ಅದರಂತೆ ಜೀವರು ಶ್ರೀಹರಿಪ್ರೇರಿತವಾದ ಕಾಲಪ್ರವಾಹದಲ್ಲಿ ಒಂದು ಸಲ ಕಲೆಯುವರು. ಮತ್ತೊಂದು ಸಲ ಅಗಲುವರು. ಇದಕ್ಕೇಕೆ ಚಿಂತೆ? ಬೀಜವನ್ನು ನಟ್ಟಲು ಬೀಜಾಂತರಗಳಾಗುವುವು. ಅಂತೆಯೇ ಶರೀರಗಳು ಅನ್ಯ ಮಾತಾ ಪಿತೃ ಶರೀರಗಳಿಂದ ಪುಟ್ಟುವುವು. ನಾವು, ನೀನು, ಇವರೆಲ್ಲರೂ ಈಗಿರುವೆವು. ಹಿಂದೆ ಇದ್ದೆವು. ಮುಂದೂ ಇರುತ್ತೇನೆ. ಜೀವರೆಲ್ಲರೂ ನಿತ್ಯರು. ಜೀವೇಶನು ಭೂತನಿರ್ಮಿತ ದೇಹಗಳನ್ನು ಜೀವರಿಗೆ ಕೊಟ್ಟು, ಸೃಜಿಸಿ, ಪಾಲಿಸಿ ಸಂಹರಿಸುವನು. ಅವನಿಗೆ ಜನ್ಮಮರಣಗಳಿಲ್ಲ. ಅಸ್ವತಂತ್ರ ರಾದ ಜೀವರಿಗೆ ಭೌತಿಕ ದೇಹಗಳು ಅನ್ಯ ದೇಹಗಳಿಂದ ಬಂದವುಗಳು. ಸ್ವಾಭಾವಿಕ ವಲ್ಲ. ದೇಹವು ಅನಿತ್ಯವೇ ಸರಿ. ಶ್ರೀಹರಿಯು ಮತ್ಸ್ಯನಾದನು, ಗೋವಳನಾದನು, ಸಿಂಹನಾದನು ನಿಜ; ಆದರೂ ಶ್ರೀಹರಿಯಲ್ಲಿ ಸ್ವಗತಭೇದವಿಲ್ಲ. ಅಂತೆಯೇ ಜೀವನು ಯಾವ ದೇಹದಲ್ಲಿ ಪುಟ್ಟಿದರೂ ಅವನಿಗೆ ದೇಹಕೃತವಾದ ವಿಭಿನ್ನತೆಯೂ ಇಲ್ಲ. ದೇಹನೇ ಜೀವನೆಂಬು ವವರು ಅವಿವೇಕಿಗಳೇ ಸರಿ! ಅಗ್ನಿಯು ಅನೇಕ ಕಾಷ್ಟಗಳಲ್ಲಿದ್ದರೂ ಅದರ ವಕ್ರತಾದಿ ಗುಣಗಳು ವೇಪವಿಲ್ಲದೆ, ತಾನೇ ತಾನಾಗಿರುವಂತೆ, ಜೀವನು ಶರೀರಗತ ಜನ್ಮಮರಣ ವೃದ್ಧಿಹ್ರಾಸ ಜಾತಿ ಕ್ರಿಯಾ ಫಲಗಳಿಂದ ಲಿಪ್ತನಾಗದೆ ಶರೀರಭಿನ್ನನಾಗಿರುವನೆಂದು ಜ್ಞಾನಿಗಳು ತಿಳಿಯುವರು. ಆದರೆ ಅಜ್ಞಾನಿಗಳು 'ದೇಹವೇ ನಾನು' ಎಂದು ದುರಭಿಮಾನದಿಂದ ಜನನ ಮರಣಾದಿಗಳನ್ನು ಪೊಂದುತ್ತಿರುವರು. 'ಸ್ವಪ್ನದಲ್ಲಿ ಬರುವ ಶರೀರಗಳು ತಾನಲ್ಲ'ವೆಂದು ಎಚ್ಚರಿಕೆಯಾಗಲು ತಿಳಿಯುವಂತೆ ಜ್ಞಾನಿಯು ದೇಹಭಿನ್ನನೇ ಜೀವನೆಂದು ತಿಳಿದು, ದೇಹಾದಿಗಳಿಗಾಗುವ ದುಃಖದಿಂದ ಮುಕ್ತವಾಗಿರುವನು. ಗಾಢನಿದ್ರೆಯಲ್ಲಿ ಮಲಗಿರುವಾಗ ದೇಹಾಭಿಮಾನವಿಲ್ಲ; ಆಗ ಸಂಸಾರಗತ ಅನರ್ಥ ಪರಂಪರೆಯ ಅನುಭವವೂ ಇಲ್ಲ ಹಾಗೆಯೇ ನಿರಹಂಕಾರ ಜೀವನಿಗೆ ಸದಾ ದುಃಖವಿಲ್ಲ. ಪುತ್ರ ಕಳತ್ರ ಮಿತ್ರಾದಿಗಳು ನಾವು ಮನಸ್ಸಿನ ಅಭಿಮಾನದಿಂದ ಕಲ್ಪಿಸ ಕೊಂಡವರು. ಆದ್ದರಿಂದ ಜ್ಞಾನಿ ಯಾಗು. ಮಮತೆಯನ್ನು ದೂರವಾಗಿ ದೂಡು. ವಾಸುದೇವನ ಧ್ಯಾನವನ್ನು ಮಾಡು.

ಎಂದು ಮುನಿಗಳು ನುಡಿದ ವಚನವನ್ನು ಕೇಳಿ ರಾಜನು ಕಣ್ಣೀರನ್ನೊರಸಿಕೊಂಡು, ವಿನಯದಿಂದ ಇಂತೆಂದನು–

ಬಹು ದೊಡ್ಡವರಂತೆ ಕಾಣುವ ತಾವು ಯಾರು? ಅವಧೂತರಂತೆ ಧೂಲಿಧೂಸರ ಗಾತ್ರ ರಾದ ನಿಮ್ಮ ಪವಿತ್ರನಾಮಧೇಯವೇನು? ಭಗವದ್ಭಕ್ತರು ಹರೀಚ್ಛೆಯಿಂದ ಅವನನ್ನು ಮರೆತ ನನ್ನಂತಹ ಮೂಢರನ್ನುದ್ಧರಿಸಲು ಭೂಮಿಯಲ್ಲಿ ಸಂಚರಿಸುತ್ತಿರುವರು. ಕುಮಾರ ದೇವಲರೋ? ನಾರದಾಂಗಿರಸರೋ? ಮಾರ್ಕಂಡೇಯ ಗೌತಮರೋ? ವಸಿಷ್ಠ ಕಪಿಲರೋ? ವ್ಯಾಸ ಶುಕರೋ? ದೂರ್ವಾಸ, ಯಾಜ್ಞವಲ್ಕ್ಯ ಜಾತುಕರ್ಣ, ಋಭು, ಅಸಿತ, ಅಪಾಂತರತಮ, ಪರಶುರಾಮ, ರೋಮಶ, ಚ್ಯವನ, ದತ್ತ, ಪತಂಜಲಿ, ಅಸುರಿ, ಪರಾಶರ, ಮೈತ್ರೇಯ, ಭಾರದ್ವಾಜ, ಅರುಣ,

ವೇದಶಿರ ಬೋಧ್ಯ, ಪಂಚಶಿಖ, ಹಿರಣ್ಯನಾಭ, ಕೌಶಲ್ಯ, ಶ್ರುತದೇವ, ಕ್ರತುಧ್ವಜರಲ್ಲಿ ತಾವಾರು? ಗ್ರಾಮ್ಯಪಶುವಿನಂತಿರುವ ನಾನು ಅಜ್ಞಾನಾಂಧಕಾರ ಪತಿತನಾಗದಂತೆ ಉದ್ಧರಿಸಿ, ಜ್ಞಾನದೀಪವನ್ನು ಹಿಡಿದು ತೋರಿಸಿ ಕಾಪಾಡಿರೆಂದು ಬೇಡುವೆನು.

ಆಗ ಅಂಗೀರಸನು ನುಡಿದನು–

ರಾಜನ್! ನೀನು ಪುತ್ರಕಾಮನಾಗಿದ್ದಾಗ ಒಮ್ಮೆ ಬಂದು ನಿನಗೆ ಪುತ್ರನನ್ನು ಕೊಟ್ಟು 'ಅವನು ಸುಖದುಃಖಕಾರಣನಾಗುವನು' ಎಂದೆ; ಆಯಿತು! ಕಂಡು ಬೆಂಡಾಗಿರುವೆ ಪುತ್ರ ಜನನ ಮರಣಗಳನ್ನು! ಇವನು ಬ್ರಹ್ಮಪುತ್ರನಾದ ನಾರದನು. ನಾವೀರ್ವರು ಸುತಶೋಕ ಸಾಗರದಲ್ಲಿ ಮುಳುಗುತ್ತಿರುವ ನಿನ್ನನ್ನು ಮೇಲಕ್ಕೆತ್ತಿ ಸಲಹಲು ಬಂದಿರುವೆವು. ಬ್ರಹ್ಮಣ್ಯನು, ಬ್ರಾಹ್ಮಣ ಭಕ್ತನು ಆದ ನೀನು ಶೋಕದಿಂದ ಮತಿಗೆಡುವುದು ಯೋಗ್ಯವಲ್ಲ. ಬ್ರಹ್ಮಜ್ಞಾನವನ್ನು ನಿನಗೆ ಕೊಟ್ಟು ಅನುಗ್ರಹಿಸಲು ಬಂದ ನಮ್ಮ ವಚನವನ್ನಾಲಿಸು. ಆಗಲೇ ಜ್ಞಾನೋಪದೇಶವನ್ನು ನೀಡಲು ಬಂದಿದ್ದ ನಾನು ನಿನ್ನ ಪುತ್ರವ್ಯಾಮೋಹವನ್ನು ಕಂಡು ಪುತ್ರನನ್ನೇ ಕೊಟ್ಟೆ. ಈಗ ಪುತ್ರವಂತರ ಪಾಡನ್ನು ಸ್ವಲ್ಪ ತಿಳಿದಿರುವೆ. ಪುತ್ರನಂತೆಯೇ ಪತ್ನಿಯರು, ಮನೆ, ವನ, ಸಿರಿ–ಸಂಪತ್ತು ಮೊದಲಾದ ಎಲ್ಲ ವಿಷಯಗಳೂ ಚಂಚಲವು. ಈ ರಾಜ್ಯ ಕೋಶಾಮಾತ್ಯ ಮಿತ್ರಾದಿಗಳು ಶೋಕ ಮೋಹ ಭಯಪ್ರದರು; ಗಂಧರ್ವ ನಗರದಂತೆ, ಸ್ವಪ್ನದಂತೆ, ಮನೋ ರಥಗಳಂತೆ ಅಸ್ಥಿರರು, ನಶ್ವರರು ಮತ್ತು ದುರ್ಲಭರು. ಕರ್ಮಗಳನ್ನು ಫಲಗಳನ್ನು ಚಿಂತಿಸುವ ಮನವು ಕರ್ಮಫಲಾಸಕ್ತವಾಗುವುದು. ಆದರಿಂದ ನರಕಯೋಗ್ಯ ಕರ್ಮಗಳನ್ನು ಮಾಡಿ ತತ್ಫಲರೂಪವಾಗಿ ನರಕಾದಿಗಳನ್ನುಂಡು, ಇಲ್ಲಿ ಪುಟ್ಟಿ ಕರ್ಮಫಲಾನುರೂಪ ದಾರಾದಿ ಸಂಪತ್ತನ್ನು ಹೊಂದುವ ಮನುಜನ ದೇಹದಿಂದ ಸದಾ ಪ್ರಯೋಜನವು ಆಗುವುದೆಂಬ ನಿಯಮವಿಲ್ಲ. ಈ ದೇಹವು ಪಂಚಭೂತಗಳು, ಮನಸ್ಸು, ಹತ್ತು ಇಂದ್ರಿಯಗಳು ಕೂಡಿ ಜೀವನಿಗೆ ಸಂಸಾರ ತಾಪವನ್ನು ಕೊಡುತ್ತಿರುವುದು. ಆದ್ದರಿಂದ ಮನಸ್ಸಮಾಧಾನವನ್ನು ಪೊಂದಿ ಜೀವ- ಪರಮಾತ್ಮವಿಷಯಕ ವಿಚಾರವನ್ನು ಮಾಡು. ದೇಹವು ಧ್ರುವವೆಂಬ ಭ್ರಮೆಯನ್ನು ಬಿಡು. ಹರಿಭಜನೆಯನ್ನು ಮಾಡು.

ಭೋಜನೆಂಬ ರಾಜನಿಗೊಂದು ರಾತ್ರಿ ಕನಸಿನಲ್ಲಿ ಮಹಾದುಃಖ ಬಂದಂತೆ ಆಯಿತು. 'ಶತ್ರುಗಳು ಮುತ್ತಿ ಭೋಗಭಾಗ್ಯಗಳನ್ನು ಸೂರೆಗೊಂಡರು. ಪೂರ್ವವೈರವನ್ನು ನೆನೆದು, ಕೆಲವರು ಪತ್ನಿಯರು ಅವನ ತಲೆಯನ್ನು ಕತ್ತರಿಸಲು ಬಂದರು. ಶತ್ರುಗಳು ಬಿಟ್ಟುಹೋದ ಎಂಜಲೇ ಅವನಿಗಾಹಾರವಾಯಿತು.' ಇಂತಹ ಸ್ವಪ್ನದಿದೆಚ್ಚೆತ್ತು ಅದನ್ನು, ನೆನೆದು, ಅದರಂತೆ ಯಾತಕ್ಕೆ ಆಗಬಾರದೆಂದು ಭಯದಿಂದ ವಿರಕ್ತನಾದನು. ದುಷ್ಟಸಂಗದೂರನಾಗಿ ಪೂರ್ಣಗುಣನಾದ ಹರಿಯ ಧ್ಯಾನದಿಂದ ಮುಕ್ತನಾದನು. ಪುನರ್ದೇಹಯೋಗವು ಅವನಿಗೆ ಇಲ್ಲದೆ ಸುಖಿಸಿದವನು–ಎನ್ನಲು ನಾರದನು ಕೂಡ ರಾಜನಲ್ಲಿ ಕನಿಕರಿಸಿ ಇಂತೆದನು–

ರಾಜನ್! ಈ ಸಂಕರ್ಷಣ ಮಂತ್ರವನ್ನು ನನ್ನಿಂದ ಸ್ವೀಕರಿಸು. ಏಳು ದಿನ ಜಪಿಸುವುದರಿಂದ ನಿನಗೆ ಶ್ರೀಶೇಷಾಂತರ್ಯಾಮಿಯು ಪ್ರತ್ಯಕ್ಷನಾಗುವನು.

ಆ ಶ್ರೀಸಂಕರ್ಷಣನ ಚರಣಸೇವೆಯಿಂದ ರುದ್ರಾದಿಗಳು ಅಜ್ಞಾನಾನ್ಯಥಾಜ್ಞಾನಗಳನ್ನು ಎರಡನ್ನೂ ಕಳೆದುಕೊಂಡು ಶ್ರೀಹರಿಯು ಪ್ರಸಾದಭಾಜನರೆನಿಸಿ, ರುದ್ರಾದಿ ಪದವಿಯನ್ನೈದಿ ಹೆಚ್ಚಾದ ಪ್ರಭಾವದಿಂದ ಶೋಭಿಸುತ್ತಿರುವರು. ನೀನಾದರೂ ನಿನ್ನ ಚರಮ ಶರೀರಪಾತಾನಂತರವೇ ಅವನ ದಯೆಯಿಂದ ಮುಕ್ತನಾಗುವೆ.

## ೧೬. ಚಿತ್ರಕೇತು ಚರಿತೆ — ಸಂಕರ್ಷಮೋಪದೇಶ

ಶ್ರೀಶುಕನು ಹೇಳಿದನು–

ಅನಂತರದಲ್ಲಿ ನಾರದನು ಮೃತಬಾಲಕನನ್ನು ನೋಡಿ, ಶೋಕಾರ್ತಬಂಧುಗಳು ಕೇಳುವಂತೆ ಇಂತೆಂದನು–

ಜೀವಾತ್ಮನೇ! ಏಳು. ನಿಮ್ಮ ತಾಯಿ ತಂದೆಯರು ಅಳುತ್ತಿರುವರು ನೋಡು. ನಿನಗಾಗಿ ದುಃಖಿಸುವ ಬಂಧುಜನರನ್ನು ಸಂತೈಸು. ನಿನ್ನದಾದ ದೇಹವಿದು. ಇಲ್ಲಿ ರಾಜಕುಮಾರನಾಗಿದ್ದು ತಂದೆಯು ಕೊಡುವ ಸುಖಮಯ ಸಾಮ್ರಾಜ್ಯದ ದೊರೆಯಾಗು– ಎನ್ನಲು ಜೀವನೆದ್ದು ಕೂತು ನಾರದರನ್ನು ನೋಡಿ ಮಾತಾಡಿದನು–

ಬ್ರಹ್ಮಜ್ಞಾನಿಗಳೇ! ನನಗೆ ಇವರು ತಾಯಿತಂದೆಯರೇ? ಯಾವ ಜನ್ಮದಲ್ಲಿ? ದೇವ ಪಶು ಮಾನವ ಯೋನಿಗಳಲ್ಲಿ ಕರ್ಮದಿಂದ ಸುತ್ತುತ್ತಾ ಹುಟ್ಟಿ ಸಾಯುತ್ತಿರುವ ನನಗೂ ಇವರಿಗೂ ಏನು ಸಂಬಂಧವು? ಬಂಧುಗಳು, ಮಿತ್ರರು, ದ್ವೇಷಿಗಳು, ಅನ್ಯರು ಎಂಬುವುದು ಜನ್ಮಜನ್ಮದಲ್ಲಿ ವಿವಿಧವಾಗಿದೆ. ಮಾರುವ ಪದಾರ್ಥದ ಬೆಲೆಯನ್ನಾಗಿ ಬಂಗಾರವನ್ನು ಕೊಡುವೆವು. ಆ ದ್ರವ್ಯವು ಹಾಗೆಯೇ ಮನುಜರಿಂದ ಬೇರೆ ಮನುಜರ ಕೈಸೇರುತ್ತಿರುವುದು. ಹಾಗೆಯೇ ಜೀವನು ಅನೇಕ ಯೋನಿಗಳಿಂದ ರೇತಸ್ಸೇಚಕನ ಯೋಗನಿಮಿತ್ತವಾಗಿ ಪುಟ್ಟಿ ತಿರುಗುತ್ತಿರುವನು. ನಿತ್ಯನಾದ ಜೀವನಿಗೆ ಋಣಾನುಬಂಧದಿಂದ, ಮಕ್ಕಳು ಮನೆ ಮಡದಿ ಬರುವರು. ಅವರಲ್ಲಿ ನಾವು ಮಾಡುವ ಮಮತೆಯೇ ಅನಿತ್ಯವೆಂದಮೇಲೆ ದೇಹಗಳು ಅನಿತ್ಯವೆಂದು ಹೇಳಬೇಕೇ? ಹೀಗೆ ನಿತ್ಯನಾದ ಜೀವನು ನನ್ನದೆಂಬ ಭ್ರಮೆಯಿಂದ ಸ್ವೀಕರಿಸುವ ದೇಹಾದಿಗಳೆಲ್ಲವೂ ಅವನವು ಅಲ್ಲ. ಆದರೆ ಶ್ರೀಹರಿಯು ಸ್ವತಂತ್ರನು, ಪರಮನಿತ್ಯನು, ಸರ್ವಾಶ್ರಮಯನು; ಅವನು ತನ್ನ ಅಧೀನದಲ್ಲಿರುವ ಪ್ರಕೃತಿಯಿಂದ ಜೀವದೇಹಗಳನ್ನು ನಿರ್ಮಿಸುವನು. ತಾನೂ ಮತ್ಸ್ಯಾದ್ಯವತಾರರೂಪನಾಗಿ ಪ್ರಾದುರ್ಭೂತನಾಗುವನು. ಅವನಿಗೆ ಇವರು ನನ್ನವರು ಆದ್ದರಿಂದ ಪ್ರಿಯರು-ಇವರು ನನ್ನವರಲ್ಲ. ಆದ್ದರಿಂದ ಅಪ್ರಿಯರು– ಎಂಬುವ ವೈಷಮ್ಯವಿಲ್ಲ. ಕರುಣಾಸಮುದ್ರನಾದ ಶ್ರೀಹರಿಯು ಕರ್ಮಾನುರೂಪಫಲದನು, ಸ್ವತಂತ್ರನು, ಕರ್ಮಪ್ರೇರಕನು ಆಗಿರುವನು. ಅವನಿಗೆ ಕರ್ಮಫಲದ ಲೇಪವಿಲ್ಲ; ಅಂತೆಯೇ ಗುಣದೋಷ ವಿಚಾರವು ಅವನ ವಿಷಯದಲ್ಲಿ ಅನುಚಿತವೆನಿಸುವುದು. ಅಂತಃಬಹಿಃ ವ್ಯಾಪ್ತನಾದ ಆ ಸ್ವಾಮಿಯ ಮಹಿಮೆಯು ಅನಂತವಾಗಿದೆ- ಎಂದು ಹೇಳಿ ಜೀವನು ಹೊರಟುಹೋದನು. ಆಗ ಅಲ್ಲಿ ನೆರೆದ ಜನರು ಆಶ್ಚರ್ಯಚಕಿತರಾಗಿ ಅಜ್ಞಾನಮೂಲವಾದ ದುಃಖವನ್ನು ಬಿಟ್ಟು ನಾರದನಿಗೆ ವಂದಿಸಿದರು. ದುಸ್ತ್ಯಜವಾದ ಸ್ನೇಹಪಾಶವನ್ನು ಜ್ಞಾನಖಡ್ಗದಿಂದ ಕಡಿದು ರಾಜನು ಬಾಲನಿಗೆ ಕ್ರಿಯೆಗಳನ್ನು ಮಾಡಿದನು.

ಬಾಲಹತ್ಯೆಯಿಂದ ಲಜ್ಜಿತರಾದ ನಾರಿಯರು ಪಶ್ಚಾತ್ತಾಪದಿಂದ ವಿಪ್ರೋಕ್ತ ಪ್ರಾಯಶ್ಚಿತ್ತಗಳನ್ನು ಆಚರಿಸಲು ಯಮುನಾತೀರವನ್ನು ಸೇರಿದರು.

ಚಿತ್ರಕೇತು ರಾಜನು ಸಂಸಾರಕೂಪದಿಂದೆದ್ದು ಪಂಕಗರ್ತದಲ್ಲಿಂದ ಹೊರಬಂದು ಯಮುನೆಯಲ್ಲಿ ಮಿಂದು ಶುದ್ಧವಾದ ಗಜರಾಜನಂತೆ ತಾನೂ ಯಮುನಾಸ್ನಾನದಿಂದ ಶುದ್ಧನಾದನು; ಬ್ರಹ್ಮಸುತರಿಬ್ಬರಿಗೂ ವಂದಿಸಿದನು; ಆಗ ಭಕ್ತನು, ದೀನನು, ಶರಣಾಗತನು ಆದ ಆ ರಾಜನಲ್ಲಿ

ಪ್ರೀತನಾಗಿ ನಾರದನು ಸಂಕರ್ಷಣ ವಿದ್ಯೆಯನ್ನು ಉಪದೇಶಿಸಿದನು–

ವಾಸುದೇವ! ಭಗವನ್ ಸಂಕರ್ಷಣ! ಪ್ರದ್ಯುಮ್ನ! ಅನಿರುದ್ಧ! ಜ್ಞಾನಾನಂದರೂಪನೇ! ನಿನಗೆ ನಮಃ. ಸ್ವಮಹಿಮಾಮಹಿತನು, ಶಾಂತನು, ಸ್ವಗತಭೇದ ವಿವರ್ಜಿತನು, ಅನ್ಯಥಾಜ್ಞಾನ ನಿವರ್ತಕನು ಆದ ನಿನಗೆ ನಮಸ್ಕಾರವು! ಪ್ರಾಕೃತದೇಹರಹಿತನಾದುದರಿಂದ ಅಹಂಕಾರವಿಲ್ಲದ ಸ್ವರೂಪಾನಂದಮಯ ದೇಹನಾದ ಹೃಷೀಕೇಶನೇ! ಅನಂತಮೂರ್ತೆ! ನಿನಗೆ ನಮಸ್ಕಾರವು!

ಮನೋವಾಚಾಮಗೋಚರನು, ಪ್ರಾಕೃತನಾಮರೂಪರಹಿತನು, ಸ್ಥೂಲಸೂಕ್ಷ್ಮ ಪ್ರಪಂಚ ವಿಲಕ್ಷಣನು ಆದ ಶ್ರೀಶನು ನಮ್ಮನ್ನು ರಕ್ಷಿಸಲಿ! ಅವನಿಂದ ಪುಟ್ಟಿ ಪಾಲಿತವಾಗಿರುವ ಈ ಜಗವು ಮಣ್ಣಿನಿಂದ ಬರುವ ವೃಕ್ಷಾದಿಗಳಂತೆ ಪ್ರಕೃತಿಯಿಂದ ನಿರ್ಮಿತವಾಗಿ ತದ್ಭಿನ್ನವಾಗಿದೆ. ಮನೋಬುದ್ಧೀಂದ್ರಿಯ ನಿಯಾಮಕರಾದ ದೇವತೆಗಳು ರುದ್ರ ಭಾರತೀ ಸುರೇಂದ್ರ ಚತುರ್ಮುಖಾದಿಗಳು. ಅವರೂ ಸರ್ವತ್ರ ಆಕಾಶದಂತೆ ವ್ಯಾಪ್ತವಾಗಿರುವ ಶ್ರೀಹರಿಯನ್ನು ಸಾಕಲ್ಯೇನ ತಿಳಿದಿಲ್ಲ. ಮತ್ತು ಅವನೇ ಅವರನ್ನು ತನ್ನ ವಶದಲ್ಲಿಟ್ಟು, ಅವನೇ ಪ್ರೇರಕನಾಗಿ ತತ್ತದ್ವ್ಯಾಪಾರವನ್ನು ಅವರಿಂದ ಮಾಡಿಸುತ್ತಿರುವನು. ಅವನಿಲ್ಲದಿರೆ ಅವರಿದ್ದೂ ಇಂದ್ರಿಯಾದಿ ವ್ಯಾಪಾರವು ನಡೆಯಲಾರದು. ಕಾಸಿದ ಕಬ್ಬಿಣದ ಗುಂಡಿನಲ್ಲಿ ಅಗ್ನಿತೇಜವಿರುವವರೆಗೂ ಸುಡುವುದು. ಅಗ್ನಿಯು ಆರಿಹೋಗಲು ಸುಡಲಾರದು. ಇಂತಹ ಸರ್ವಸ್ವಾಮಿಯನ್ನು ಶರಣೆಂದು ಬೇಡುತ್ತಿರುವೆನು. ಮಹಾಪುರುಷ! ಮಹಾನುಭಾವ! ಮಹದೈಶ್ವರ್ಯನಿಧೇ! ಸಕಲಸಜ್ಜನ ಕರತಾಮರಸಲಾಲಿತ ರಮಣೀಯ ಪಾದಾರವಿಂದ ! ಇಂದಿರಾಧವ ನಿನಗೆ ನಮಸ್ಕಾರವು!

ಚಿತ್ರಕೇತುವಿಗೆ ಈ ಸಂಕರ್ಷಣ ವಿದ್ಯೆಯನ್ನು ಪೇಳಿ, ಅಂಗೀರಸನು ಕೂಡಿಬರಲು ನಾರದನು ಅಲ್ಲಿಂದ ಹೊರಟುಹೋದನು. ಚಿತ್ರಕೇತುವು ನಾರದನು ಪೇಳಿದ ವಿದ್ಯೆಯನ್ನು ಶ್ರದ್ಧೆಯಿಂದ ಅಬ್ಭಕ್ಷನಾಗಿ ಏಳು ದಿನ ಜಪಿಸಿದನು. ಅದರ ಪ್ರಭಾವದಿಂದ ವಿದ್ಯಾಧರ ಅಧಿಪತಿಯೂ ಆದನು.

ಕೆಲಕಾಲ ಕಳೆಯಿತು. ಒಂದು ಸಲ ವಿದ್ಯಾಧರಾಧಿಪತಿಯ ಸಂಕರ್ಷಣ ವಿದ್ಯಾವಿಶಾರದನು ಆದ ಚಿತ್ರಕೇತುವು ಪಾತಾಳದಲ್ಲಿ ಶೇಷನನ್ನು ನೋಡಿದನು.

ಧವಳಶರೀರನು, ನೀಲಾಂಬರನು, ಕಿರೀಟಕೇಯೂರ ಕಟಕಕುಂಡಲಾದ್ಯಲಂಕೃತನು, ಪ್ರಸನ್ನವದನನು, ಕರುಣಾರಸಪೂರ್ಣ ಕಮಲಾರುಣಲೋಚನನು, ಸಿದ್ಧೇಶ ಸೇವಿತನು ಆದ ಆ ಲೋಕನಾಥನನ್ನು ಕಂಡು ಚಿತ್ರಕೇತುವಿನ ಸಮಸ್ತ ಪಾಪಗಳು ಅಸ್ತಮಿಸಿದವು. ಮನವು ಪ್ರಶಸ್ತವಾಯಿತು. ಹೆಚ್ಚಾದ ಭಕ್ತಿಯಿಂದ ನಮಿಸಿ, ನಿಂತು ಕಣ್ಣುಗಳಿಂದಾನಂದಬಿಂದುಗಳು ಉದುರುತ್ತಿರಲು, ಮೈನವಿರೇಳಲು ಪೊಗಲುವ ಕಂಠ ಸೆರೆಬಿಗಿದು ಮಾತನಾಡಲು ಬರದೆ ತಳಮಳಿಸಿ, ತಾಳಿ, ಮೆಲ್ಲನೆ ನುತಿಸಲು ಪರಾಕ್ರಮಿಸಿದನು. ಪಂಚರಾತ್ರಾಗಮೋಕ್ತ ವಿಧಾನದಿಂದ ಪೂಜಿಪರ ಪ್ರಭುವಾದ ಶೇಷಹೃದಯವರ್ತಿಯಾದ ಶ್ರೀಸಂಕರ್ಷಣನನ್ನು ಮನಸಾ ಕಂಡು ಪೊಗಳಿದನು.

ಅಜಿತ! ಮನಸ್ಸನ್ನು ಗೆದ್ದವನಿಗೆ ನೀನು ವಶನಾಗಿರುವೆ. ಸಾಧುವಂದಿತ! ಅವರ ಮನಸ್ಸು ವಿಷಯದೂರವಾಗಿ ನಿನಗೇ ವಶವಾಗಿ ನಿನ್ನನ್ನೇ ಚಿಂತಿಸುತ್ತಾ ನಿಶ್ಚಲವಾಗಿ ನಿಂತಿದೆ. ಅವರೂ ನಿನ್ನ ವಶರಾಗಿಹರು! ಏನೂ ಬೇಡದ ಅವರಿಗೆ ನೀನು ನಿನ್ನನ್ನೇ ಕೊಡುವೆ. ನಿನ್ನ ಕರುಣೆಗೆಣೆ ಇಲ್ಲ. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿಗಳು ನಿನ್ನ ಸ್ವಭಾವ ಲೀಲೆ. ನಿನ್ನ ಆಟದ ಗೊಂಬೆಗಳಂತೆ ಈ ಜೀವರು ' ನಾನು ಸೃಜಿಸುವೆ, ನಾನು ಸಂಹರಿಸುವೆ' ನೆಂದು ಸುಳ್ಳೇ ಕಾದಾಡಿ, ಅಹಂಕಾರದಿಂದ

ನಿನ್ನನ್ನು ಮರೆದು ಸಂಸಾರದಲ್ಲಿ ನರುಳುವರು. ಕಾಲದಲ್ಲಿರುವ ಪರಮಾಣು ಪರಮ ಮಹತ್ತುಗಳಿಗೂ ನೀನು ಆದಿಯು ಅಂತ್ಯನು ಆಗಿ ಕಾಲ ಪ್ರಭಾವಕ್ಕೆ ಸಿಲುಕದಿರುವೆ. ಜೀವರು ಇಲ್ಲದಾಗೂ, ಇದ್ದಾಗೂ, ಇಲ್ಲದೆ ಹೋಗುವಾಗೂ ಕೂಡ, ನೀನು ಶಶ್ವದೇಕ ಪ್ರಕಾರನಾಗಿ ವಿರಾಜಿಸುವೆ. ಜೀವರು ಪ್ರಳಯದಲ್ಲಿ ನಿನ್ನಧೀನರು, ಕರ್ಮವ್ಯಾಪಾರರಹಿತನೂ ಆಗಿ ನಿನ್ನಲ್ಲಿರುವರು. ಈ ಬ್ರಹ್ಮಾಂಡವು ಐವತ್ತು ಕೋಟಿ ಯೋಜನಾತ್ಮಕವು, ಅದರ ಸುತ್ತು ಒಂದರಕ್ಕಿಂತ ಹತ್ತು ಪಟ್ಟು ಹಚ್ಚಾಗುತ್ತಾ ಇರುವ ಪೃಥಿವೀ, ಜಲ, ತೇಜಸ್, ವಾಯು, ಗಗನ ಅಹಂಕಾರ, ಮಹತ್ತುಗಳೆಂಬುವ ಏಳು ಆವರಣಗಳಿವೆ. ಇಂತಹ ಬ್ರಹ್ಮಾಂಡವು ನಿನ್ನ ರೋಮಕೂಪದಲ್ಲಿ ಅಣುವಿಗೆ ಅಣುವಾಗಿ ನಿಂತಿದೆ. ಅಂತಹ ನಿನ್ನ ಅಪರಿಮೇಯ ಸ್ವರೂಪವನ್ನು ನೋಡಲು ಯಾರಿಗೂ ಶಕ್ಯವಿಲ್ಲ. ಅದು ಅನಂತವಾಗಿದೆ. ನಿನ್ನ ವಿವಿಧ ಶಕ್ತಿಧರರಾದ ಬ್ರಹ್ಮಾದಿಗಳನ್ನು ಪೂಜಿಸಿ, ಅವರಿಂದ ವಿಷಯಫಲವನ್ನು ಬೇಡುವವರು ನರರಲ್ಲ. ಅವರು ಪಶುಸಮಾನರೇ ಸರಿ! ನಿನ್ನನ್ನವರು ಪೂಜಿಸುವುದಿಲ್ಲ. ಅವರು ಬೇಡುವ ವಿಷಯಗಳು ಕರ್ಮಾನುಸಾರವಾಗಿ ನಶಿಸಲು ಅವರಿಗೆ ಉಳಿಯುವುದು ಸಂಸಾರಕೂಪವೇ ಆಗಿದೆ. ನಿನ್ನಲ್ಲಿ ಸಮರ್ಪಿತವಾದ ಕರ್ಮಗಳು ಭರ್ಜಿತ ಧಾನ್ಯಗಳಂತೆ ಮತ್ತೆ ಬೆಳೆಯಲಾರದೆ ನಶಿಸುವುವು. ನೀನು ಜ್ಞಾನಮಯನು, ಪ್ರಕೃತಿವಿಕಾರರಹಿತು. ಪ್ರಕೃತಿ ಗುಣದಿಂದಲೇ ಸುಖದುಃಖಾದಿದ್ವಂದ್ವಗಳು. ಅವು ನಿನಗಿಲ್ಲ. ನೀನು ಸಂಸಾರದಿಂದ ದೂರನಾಗಿ ಅದಕ್ಕೆ ಸ್ವಾಮಿ ಎನಿಸಿರುವೆ. ಭಾಗವತ ಧರ್ಮವನ್ನು ಭಕ್ತರಿಗೆ ಕರುಣೆಯಿಂದ ರಚಿಸಿ ತೋರಿಸಿದೆ. ಸಂಸಾರ ಜಯೋಪಾಯವನ್ನು ಸೂಚಿಸಿದೆ. ವ್ಯಾಸರೂಪದಿಂದ ನೀನು ಪೇಳಿದ ಭಾಗವತ ಧರ್ಮವನ್ನು ಆತ್ಮಾರಾಮರಾದ ಮುನಿಗಳು ಶ್ರೀಹರಿಪ್ರೀತಿಗಾಗಿಯೇ ಆಚರಿಸಿ ಮುಕ್ತರಾಗುವರು. 'ನಾನು ನನ್ನದು– ನೀನು ನಿನ್ನದು. ನನ್ನದೆಲ್ಲವೂ ಒಳ್ಳೆಯದು. ನಿನ್ನದೆಲ್ಲವು ಕೆಟ್ಟದ್ದು' ಎನ್ನುವ ಹೀನಬುದ್ಧಿಯು ಭಾಗವತಧರ್ಮರತರಿಗಿಲ್ಲ. ಆ ವಿಷಮ ಬುದ್ಧಿಯು ಭಾಗವತರಲ್ಲದವರಿಗೆ. ಎಂತಹ ಧರ್ಮವೂ ಹರಿಪ್ರೀತಿಕರವಾಗದಿರೆ ಅದರಿಂದ ಶಾಶ್ವತ ಲೋಕವಿಲ್ಲ. ಪುಣ್ಯವಿಲ್ಲ. ಕೇವಲ ಪ್ರವೃತ್ತಿಕರ್ಮವೆನಿಸುವ ಪಶುಹಿಂಸಾಮಯ ಯಾಗಾದಿಗಳಿಂದ ಪ್ರಯೋಜನವೂ ಇಲ್ಲ. ಅದರಿಂದ ಕ್ಲೇಶವೇ ಹೆಚ್ಚು. 'ನಿವೃತ್ತಿ ಮಾರ್ಗದಲ್ಲಿ ನಡೆ' ಎಂಬ ನಿನ್ನಾಜ್ಞೆಯನ್ನು ಮೀರಿ ನಡೆದುದರಿಂದ ಪಾಪವೂ, ನಿನಗೆ ಕೋಪವೂ ಬರುವುದು. ಆದ್ದರಿಂದ ಜ್ಞಾನಪೂರ್ವಕವಾಗಿ ಭಾಗವತ ಧರ್ಮವನ್ನು ನಡೆಸಿ ನಿನಗರ್ಪಿಸಲು ಮೋಕ್ಷ ಫಲವು ನಿಶ್ಚಯವಾಗಿ ಲಭಿಸುವುದು. ಇದನ್ನರಿತು ಜ್ಞಾನಿಗಳು ಚರಾಚರ ಜೀವರಲ್ಲಿ ಅಂತರ್ಯಾಮಿಯಾಗಿರುವ ನಿನ್ನನ್ನು ಅರಿತು ಅಧಿಷ್ಠಾನ ತಾರತಮ್ಯದಿಂದ ನಿನ್ನನ್ನು ಪೂಜಿಸಿಧನ್ಯರಾಗುವರು. ಪುಲಸನಾದರೂ ನಿನ್ನ ನಾಮವನ್ನು ನುಡಿದ ಮಾತ್ರ ಸಂಸಾರ ಯುಕ್ತನಾಗುವನು. ಅಂದ ಮೇಲೆ ನಿನ್ನನ್ನು ಪ್ರಸನ್ನೀಕರಿಸಿಕೊಂಡು ನೋಡಿದವನಿಗೆ ಸರ್ವಪಾಪನಾಶವಾಗಿದೆ ಎಂದು ಹೇಳಬೇಕೆ? ಭಗವನ್! ನಿನ್ನ ನೋಡಿ ಧನ್ಯನಾದೆನ್ನೆ! ಎನ್ನ ಮನವು ಶುದ್ಧವಾಯಿತು! ನಾರದರು ನನಗೆ ತಿಳಿಸಿದ ನಿನ್ನ ಅಗಾಧ ಮಹಿಮೆಯನ್ನು ಕಂಡೆ. ಕೃತಾರ್ಥನಾದೆ. ಜನರ ಮನಸ್ಸಿನ ಒಡೆಯನಾದ ನಿನಗೆ ತಿಳಿಯದಿರುವುದೇನಿದೆ? ಪರಮ ಗುರೋ! ರವಿಗೆ ದೀಪವನ್ನಿಟ್ಟಂತೆ ನಾವು ನಮ್ಮ ಮನವನ್ನು ಬಿಚ್ಚಿ ವಿಜ್ಞಾಪಿಸುವೆವು.

ಸಕಲ ಜಗಜ್ಜನ್ಮ ಸ್ಥಿತಿ ಲಯ ಕಾರಣಾ! ನಾರಾಯಣಾ! ಕುಯೋಗಿ ಜನ ದೂರ! ಅನಂತ

ಪ್ರೀತನಾಗಿ ನಾರದನು ಸಂಕರ್ಷಣ ವಿದ್ಯೆಯನ್ನು ಉಪದೇಶಿಸಿದನು–

ವಾಸುದೇವ! ಭಗವನ್ ಸಂಕರ್ಷಣ! ಪ್ರದ್ಯುಮ್ನ! ಅನಿರುದ್ಧ! ಜ್ಞಾನಾನಂದರೂಪನೇ! ನಿನಗೆ ನಮಃ. ಸ್ವಮಹಿಮಾಮಹಿತನು, ಶಾಂತನು, ಸ್ವಗತಭೇದ ವಿವರ್ಜಿತನು, ಅನ್ಯಥಾಜ್ಞಾನ ನಿವರ್ತಕನು ಆದ ನಿನಗೆ ನಮಸ್ಕಾರವು! ಪ್ರಾಕೃತದೇಹರಹಿತನಾದುದರಿಂದ ಅಹಂಕಾರವಿಲ್ಲದ ಸ್ವರೂಪಾನಂದಮಯ ದೇಹನಾದ ಹೃಷೀಕೇಶನೇ! ಅನಂತಮೂರ್ತೆ! ನಿನಗೆ ನಮಸ್ಕಾರವು!

ಮನೋವಾಚಾಮಗೋಚರನು, ಪ್ರಾಕೃತನಾಮರೂಪರಹಿತನು, ಸ್ಥೂಲಸೂಕ್ಷ್ಮ ಪ್ರಪಂಚ ವಿಲಕ್ಷಣನು ಆದ ಶ್ರೀಶನು ನಮ್ಮನ್ನು ರಕ್ಷಿಸಲಿ! ಅವನಿಂದ ಪುಟ್ಟಿ ಪಾಲಿತವಾಗಿರುವ ಈ ಜಗವು ಮಣ್ಣಿನಿಂದ ಬರುವ ವೃಕ್ಷಾದಿಗಳಂತೆ ಪ್ರಕೃತಿಯಿಂದ ನಿರ್ಮಿತವಾಗಿ ತದ್ಭಿನ್ನವಾಗಿದೆ. ಮನೋಬುದ್ಧೀಂದ್ರಿಯ ನಿಯಾಮಕರಾದ ದೇವತೆಗಳು ರುದ್ರ ಭಾರತೀ ಸುರೇಂದ್ರ ಚತುರ್ಮುಖಾದಿಗಳು. ಅವರೂ ಸರ್ವತ್ರ ಆಕಾಶದಂತೆ ವ್ಯಾಪ್ತವಾಗಿರುವ ಶ್ರೀಹರಿಯನ್ನು ಸಾಕಲ್ಯೇನ ತಿಳಿದಿಲ್ಲ. ಮತ್ತು ಅವನೇ ಅವರನ್ನು ತನ್ನ ವಶದಲ್ಲಿಟ್ಟು, ಅವನೇ ಪ್ರೇರಕನಾಗಿ ತತ್ತದ್ವ್ಯಾಪಾರವನ್ನು ಅವರಿಂದ ಮಾಡಿಸುತ್ತಿರುವನು. ಅವನಿಲ್ಲದಿರೆ ಅವರಿದ್ದೂ ಇಂದ್ರಿಯಾದಿ ವ್ಯಾಪಾರವು ನಡೆಯಲಾರದು. ಕಾಸಿದ ಕಬ್ಬಿಣದ ಗುಂಡಿನಲ್ಲಿ ಅಗ್ನಿತೇಜವಿರುವವರೆಗೂ ಸುಡುವುದು. ಅಗ್ನಿಯು ಆರಿಹೋಗಲು ಸುಡಲಾರದು. ಇಂತಹ ಸರ್ವಸ್ವಾಮಿಯನ್ನು ಶರಣೆಂದು ಬೇಡುತ್ತಿರುವೆನು. ಮಹಾಪುರುಷ! ಮಹಾನುಭಾವ! ಮಹದೈಶ್ವರ್ಯನಿಧೇ! ಸಕಲಸಜ್ಜನ ಕರತಾಮರಸಲಾಲಿತ ರಮಣೀಯ ಪಾದಾರವಿಂದ ! ಇಂದಿರಾಧವ ನಿನಗೆ ನಮಸ್ಕಾರವು!

ಚಿತ್ರಕೇತುವಿಗೆ ಈ ಸಂಕರ್ಷಣ ವಿದ್ಯೆಯನ್ನು ಪೇಳಿ, ಆಂಗೀರಸನು ಕೂಡಿಬರಲು ನಾರದನು ಅಲ್ಲಿಂದ ಹೊರಟುಹೋದನು. ಚಿತ್ರಕೇತುವು ನಾರದನು ಪೇಳಿದ ವಿದ್ಯೆಯನ್ನು ಶ್ರದ್ಧೆಯಿಂದ ಅಬ್ಭಕ್ಷನಾಗಿ ಏಳು ದಿನ ಜಪಿಸಿದನು. ಅದರ ಪ್ರಭಾವದಿಂದ ವಿದ್ಯಾಧರ ಅಧಿಪತಿಯೂ ಆದನು.

ಕೆಲಕಾಲ ಕಳೆಯಿತು. ಒಂದು ಸಲ ವಿದ್ಯಾಧರಾಧಿಪತಿಯ ಸಂಕರ್ಷಣ ವಿದ್ಯಾವಿಶಾರದನು ಆದ ಚಿತ್ರಕೇತುವು ಪಾತಾಳದಲ್ಲಿ ಶೇಷನನ್ನು ನೋಡಿದನು.

ಧವಳಶರೀರನು, ನೀಲಾಂಬರನು, ಕಿರೀಟಕೇಯೂರ ಕಟಕಕುಂಡಲಾದ್ಯಲಂಕೃತನು, ಪ್ರಸನ್ನವದನನು, ಕರುಣಾರಸಪೂರ್ಣ ಕಮಲಾರುಣಲೋಚನನು, ಸಿದ್ಧೇಶ ಸೇವಿತನು ಆದ ಆ ಲೋಕನಾಥನನ್ನು ಕಂಡು ಚಿತ್ರಕೇತುವಿನ ಸಮಸ್ತ ಪಾಪಗಳು ಅಸ್ತಮಿಸಿದವು. ಮನವು ಪ್ರಶಸ್ತವಾಯಿತು. ಹೆಚ್ಚಾದ ಭಕ್ತಿಯಿಂದ ನಮಿಸಿ, ನಿಂತು ಕಣ್ಣುಗಳಿಂದಾನಂದಬಿಂದುಗಳು ಉದುರುತ್ತಿರಲು, ಮೈನವಿರೇಳಲು ಪೊಗಲುವ ಕಂಠ ಸೆರೆಬಿಗಿದು ಮಾತನಾಡಲು ಬರದೆ ತಳಮಳಿಸಿ, ತಾಳಿ, ಮೆಲ್ಲನೆ ನುತಿಸಲು ಪರಾಕ್ರಮಿಸಿದನು. ಪಂಚರಾತ್ರಾಗಮೋಕ್ತ ವಿಧಾನದಿಂದ ಪೂಜಿಪರ ಪ್ರಭುವಾದ ಶೇಷಹೃದಯವರ್ತಿಯಾದ ಶ್ರೀಸಂಕರ್ಷಣನನ್ನು ಮನಸಾ ಕಂಡು ಪೊಗಳಿದನು.

ಅಜಿತ! ಮನಸ್ಸನ್ನು ಗೆದ್ದವನಿಗೆ ನೀನು ವಶನಾಗಿರುವೆ. ಸಾಧುವಂದಿತ! ಅವರ ಮನಸ್ಸು ವಿಷಯದೂರವಾಗಿ ನಿನಗೇ ವಶವಾಗಿ ನಿನ್ನನ್ನೇ ಚಿಂತಿಸುತ್ತಾ ನಿಶ್ಚಲವಾಗಿ ನಿಂತಿದೆ. ಅವರೂ ನಿನ್ನ ವಶರಾಗಿಹರು! ಏನೂ ಬೇಡದ ಅವರಿಗೆ ನೀನು ನಿನ್ನನ್ನೇ ಕೊಡುವೆ. ನಿನ್ನ ಕರುಣೆಗೆಣೆ ಇಲ್ಲ. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿಗಳು ನಿನ್ನ ಸ್ವಭಾವ ಲೀಲೆ. ನಿನ್ನ ಆಟದ ಗೊಂಬೆಗಳಂತೆ ಈ ಜೀವರು ' ನಾನು ಸೃಜಿಸುವೆ, ನಾನು ಸಂಹರಿಸುವೆ' ನೆಂದು ಸುಳ್ಳೇ ಕಾದಾಡಿ, ಅಹಂಕಾರದಿಂದ

ನಿನ್ನನ್ನು ಮರೆದು ಸಂಸಾರದಲ್ಲಿ ನರುಳುವರು. ಕಾಲದಲ್ಲಿರುವ ಪರಮಾಣು ಪರಮ ಮಹತ್ತುಗಳಿಗೂ ನೀನು ಆದಿಯು ಅಂತ್ಯನು ಆಗಿ ಕಾಲ ಪ್ರಭಾವಕ್ಕೆ ಸಿಲುಕದಿರುವೆ. ಜೀವರು ಇಲ್ಲದಾಗೂ, ಇದ್ದಾಗೂ, ಇಲ್ಲದೆ ಹೋಗುವಾಗೂ ಕೂಡ, ನೀನು ಶಶ್ವದೇಕ ಪ್ರಕಾರನಾಗಿ ವಿರಾಜಿಸುವೆ. ಜೀವರು ಪ್ರಳಯದಲ್ಲಿ ನಿನ್ನಧೀನರು, ಕರ್ಮವ್ಯಾಪಾರರಹಿತನೂ ಆಗಿ ನಿನ್ನಲ್ಲಿರುವರು. ಈ ಬ್ರಹ್ಮಾಂಡವು ಐವತ್ತು ಕೋಟಿ ಯೋಜನಾತ್ಮಕವು, ಅದರ ಸುತ್ತು ಒಂದರಕ್ಕಿಂತ ಹತ್ತು ಪಟ್ಟು ಹಚ್ಚಾಗುತ್ತಾ ಇರುವ ಪೃಥಿವೀ, ಜಲ, ತೇಜಸ್, ವಾಯು, ಗಗನ ಅಹಂಕಾರ, ಮಹತ್ತುಗಳೆಂಬುವ ಏಳು ಆವರಣಗಳಿವೆ. ಇಂತಹ ಬ್ರಹ್ಮಾಂಡವು ನಿನ್ನ ರೋಮಕೂಪದಲ್ಲಿ ಅಣುವಿಗೆ ಅಣುವಾಗಿ ನಿಂತಿದೆ. ಅಂತಹ ನಿನ್ನ ಅಪರಿಮೇಯ ಸ್ವರೂಪವನ್ನು ನೋಡಲು ಯಾರಿಗೂ ಶಕ್ಯವಿಲ್ಲ. ಅದು ಅನಂತವಾಗಿದೆ. ನಿನ್ನ ವಿವಿಧ ಶಕ್ತಿಧರರಾದ ಬ್ರಹ್ಮಾದಿಗಳನ್ನು ಪೂಜಿಸಿ, ಅವರಿಂದ ವಿಷಯಫಲವನ್ನು ಬೇಡುವವರು ನರರಲ್ಲ. ಅವರು ಪಶುಸಮಾನರೇ ಸರಿ! ನಿನ್ನನ್ನವರು ಪೂಜಿಸುವುದಿಲ್ಲ. ಅವರು ಬೇಡುವ ವಿಷಯಗಳು ಕರ್ಮಾನುಸಾರವಾಗಿ ನಶಿಸಲು ಅವರಿಗೆ ಉಳಿಯುವುದು ಸಂಸಾರಕೂಪವೇ ಆಗಿದೆ. ನಿನ್ನಲ್ಲಿ ಸಮರ್ಪಿತವಾದ ಕರ್ಮಗಳು ಭರ್ಜಿತ ಧಾನ್ಯಗಳಂತೆ ಮತ್ತೆ ಬೆಳೆಯಲಾರದೆ ನಶಿಸುವುವು. ನೀನು ಜ್ಞಾನಮಯನು, ಪ್ರಕೃತಿವಿಕಾರರಹಿತು. ಪ್ರಕೃತಿ ಗುಣದಿಂದಲೇ ಸುಖದುಃಖಾದಿದ್ವಂದ್ವಗಳು. ಅವು ನಿನಗಿಲ್ಲ. ನೀನು ಸಂಸಾರದಿಂದ ದೂರನಾಗಿ ಅದಕ್ಕೆ ಸ್ವಾಮಿ ಎನಿಸಿರುವೆ. ಭಾಗವತ ಧರ್ಮವನ್ನು ಭಕ್ತರಿಗೆ ಕರುಣೆಯಿಂದ ರಚಿಸಿ ತೋರಿಸಿದೆ. ಸಂಸಾರ ಜಯೋಪಾಯವನ್ನು ಸೂಚಿಸಿದೆ. ವ್ಯಾಸರೂಪದಿಂದ ನೀನು ಪೇಳಿದ ಭಾಗವತ ಧರ್ಮವನ್ನು ಆತ್ಮಾರಾಮರಾದ ಮುನಿಗಳು ಶ್ರೀಹರಿಪ್ರೀತಿಗಾಗಿಯೇ ಆಚರಿಸಿ ಮುಕ್ತರಾಗುವರು. 'ನಾನು ನನ್ನದು– ನೀನು ನಿನ್ನದು. ನನ್ನದೆಲ್ಲವೂ ಒಳ್ಳೆಯದು. ನಿನ್ನದೆಲ್ಲವು ಕೆಟ್ಟದ್ದು' ಎನ್ನುವ ಹೀನಬುದ್ಧಿಯು ಭಾಗವತಧರ್ಮರತರಿಗಿಲ್ಲ. ಆ ವಿಷಮ ಬುದ್ಧಿಯು ಭಾಗವತರಲ್ಲದವರಿಗೆ. ಎಂತಹ ಧರ್ಮವೂ ಹರಿಪ್ರೀತಿಕರವಲ್ಲದಿರೆ ಅದರಿಂದ ಶಾಶ್ವತ ಲೋಕವಿಲ್ಲ. ಪುಣ್ಯವಿಲ್ಲ. ಕೇವಲ ಪ್ರವೃತ್ತಿಕರ್ಮವೆನಿಸುವ ಪಶುಹಿಂಸಾಮಯ ಯಾಗಾದಿಗಳಿಂದ ಪ್ರಯೋಜನವೂ ಇಲ್ಲ. ಅದರಿಂದ ಕ್ಲೇಶವೇ ಹೆಚ್ಚು. 'ನಿವೃತ್ತಿ ಮಾರ್ಗದಲ್ಲಿ ನಡೆ' ಎಂಬ ನಿನ್ನಾಜ್ಞೆಯನ್ನು ಮೀರಿ ನಡೆದುದರಿಂದ ಪಾಪವೂ, ನಿನಗೆ ಕೋಪವೂ ಬರುವುದು. ಆದ್ದರಿಂದ ಜ್ಞಾನಪೂರ್ವಕವಾಗಿ ಭಾಗವತ ಧರ್ಮವನ್ನು ನಡೆಸಿ ನಿನಗರ್ಪಿಸಲು ಮೋಕ್ಷ ಫಲವು ನಿಶ್ಚಯವಾಗಿ ಲಭಿಸುವುದು. ಇದನ್ನರಿತು ಜ್ಞಾನಿಗಳು ಚರಾಚರ ಜೀವರಲ್ಲಿ ಅಂತರ್ಯಾಮಿ ಯಾಗಿರುವ ನಿನ್ನನ್ನು ಅರಿತು ಅಧಿಷ್ಠಾನ ತಾರತಮ್ಯದಿಂದ ನಿನ್ನನ್ನು ಪೂಜಿಸಿಧನ್ಯರಾಗುವರು. ಪುಲಸನಾದರೂ ನಿನ್ನ ನಾಮವನ್ನು ನುಡಿದ ಮಾತ್ರ ಸಂಸಾರ ಯುಕ್ತನಾಗುವನು. ಅಂದ ಮೇಲೆ ನಿನ್ನನ್ನು ಪ್ರಸನ್ನೀಕರಿಸಿಕೊಂಡು ನೋಡಿದವನಿಗೆ ಸರ್ವಪಾಪನಾಶವಾಗಿದೆ ಎಂದು ಹೇಳಬೇಕೆ? ಭಗವನ್! ನಿನ್ನ ನೋಡಿ ಧನ್ಯನಾದೆನ್ನೆ! ಎನ್ನ ಮನವು ಶುದ್ಧವಾಯಿತು! ನಾರದರು ನನಗೆ ತಿಳಿಸಿದ ನಿನ್ನ ಅಗಾಧ ಮಹಿಮೆಯನ್ನು ಕಂಡೆ. ಕೃತಾರ್ಥನಾದೆ. ಜನರ ಮನಸ್ಸಿನ ಒಡೆಯನಾದ ನಿನಗೆ ತಿಳಿಯದಿರುವುದೇನಿದೆ? ಪರಮ ಗುರೋ! ರವಿಗೆ ದೀಪವನ್ನಿಟ್ಟಂತೆ ನಾವು ನಮ್ಮ ಮನವನ್ನು ಬಿಚ್ಚಿ ವಿಜ್ಞಾಪಿಸುವೆವು.

ಸಕಲ ಜಗಜ್ಜನ್ಮ ಸ್ಥಿತಿ ಲಯ ಕಾರಣಾ! ನಾರಾಯಣಾ! ಕುಯೋಗಿ ಜನ ದೂರ! ಅನಂತ

ಮಹಿಮ! ಪರಮಪೂತ! ಯೋಗಿಜನ ವಂದ್ಯ! ಗೋವಿಂದ! ನಿನಗೆ ನಮಃ! ನಿನ್ನ ಪ್ರೇರಣೆಯು ಇಲ್ಲದಿರೆ ಬ್ರಹ್ಮ ರುದ್ರಾದಿ ಸಮಸ್ತರೂ, ಉಸಿರು ಬಿಡಲು ಕೂಡ ಶಕ್ತರಾಗುವುದಿಲ್ಲ. ನಿನ್ನಿಂದ ಸಕಲ ಪದಾರ್ಥಜ್ಞಾನವು ಅವರಿಗಾಗುವುದು.

ಇಂತಹ ಸಂಕರ್ಷಣನ ಸನ್ನಿಧಾನಪಾತ್ರನೆನಿಸಿದ ಶೇಷನೇ! ನಿನಗೂ ನಮಃ. ನಿನ್ನ ಒಂದು ಹೆಡೆಯ ಮೇಲೆ ಈ ಸಮಸ್ತ ಭೂಮಂಡಲವನ್ನು ಸಾಸುವೆಯನ್ನಷ್ಟು ಸುಲಭವಾಗಿ ಧರಿಸಿ ಮೆರೆಯುವ ಸಹಸ್ರಫಣನೇ! ನಿನಗೆ ನಮಃ!

ಆಗ ಶ್ರೀ ಸಂಕರ್ಷಣನು ಪ್ರೀತನಾಗಿ ಚಿತ್ರಕೇತುವಿನನ್ನು ನೋಡಿ ಇಂತು ನುಡಿದನು– ಎಲೌ ವಿಧ್ಯಾಧರವಲ್ಲಭನೇ! ನಾರದಾಂಗಿರಸರಿಂದ ಕೇಳಿದ ನನ್ನ ಉಪಾಸನಾವಿದ್ಯೆಯಲ್ಲಿ ಸಿದ್ಧನಾಗಿರುವೆ. ನನ್ನ ದರ್ಶನದಿಂದ ಧನ್ಯನಾದೆ. ನಾನೆಲ್ಲ ಭೂತಗಳಲ್ಲಿರುವೆನು. ಭೂತಗಳಿಗೆ ಆದಾನಾದಿ ಕರ್ತನಾಗಿ ಕೊಟ್ಟು ಕಸಿಯುವವನು ನಾನೇ! ನನ್ನಿಂದ ಅವರ ದೇಹೇಂದ್ರಿಯಾದಿ ವ್ಯಾಪಾರಗಳು ನಡೆಯುವುವು. ವೇದವು ಎನ್ನ ಪ್ರತಿಮೆ. ಸಚ್ಚಿದಾನಂದಮೂರ್ತಿಯಾದ ನನ್ನನ್ನು ವೇದದಿಂದ ತಿಳಿಯುವವರೇ ಧನ್ಯರು. ಅವರೇ ಜ್ಞಾನಿಗಳು. ಲೋಕದಲ್ಲಿ ಜೀವರು ಅಣು ರೂಪರಾಗಿರುವರು. ಅವರಿಂದ ಲೋಕವು ತುಂಬಿದೆ. ಲೋಕಗಳಲ್ಲಿಯೂ ಜೀವರಲ್ಲಿಯೂ ತುಂಬಿ ನಾನಿರುವೆನು. ಸುಪ್ತನಾದವನು ಸ್ವಪ್ನಗಳಲ್ಲಿ ಮನೋವಾಸನಾನಿರ್ಮಿತ ವಸ್ತುಜಾತವನ್ನು ನೋಡುವನು. ಆಗ ತನ್ನನ್ನೂ ಒಂದು ಕಡೆ ಜಗದ್ಭಿನ್ನನಾಗಿಯೇ ನೋಡುವನು. ಅಂತೆಯೇ ಯಾವಾಗಲೂ ಜೀವನು ಜಗದ್ಭಿನ್ನನೂ ಅಹುದು. ಈ ಭಿನ್ನನೆಂಬುವುದರಲ್ಲಿ ಸಂಶಯವೇ ಇಲ್ಲ. ಸ್ವಪ್ನವು ಈಶ್ವರೇಚ್ಛಾನಿರ್ಮಿತವು. ಜೀವನು ಅಸ್ವತಂತ್ರ ಸ್ವಪ್ನದ್ರಷ್ಟನಾಗಿರುವನು. ಅಂತೆಯೇ ಜಾಗ್ರದವಸ್ಥೆಯು ಜೀವನು ಸುಖ ಭೋಗ ಸ್ಥಾನಗಳು ಪದಾರ್ಥಗಳು ಎಲ್ಲವೂ ಈಶ್ವರಾಧೀನವಾಗಿದೆ. ಪ್ರಕೃತಿ ಜೀವರೊಡೆಯನಾದ ಈಶ್ವರನು ಸ್ವತಂತ್ರನು. ನಿದ್ರೆ ಮಾಡುವ ಜೀವನಿಗೆ 'ಇಷ್ಟು ಕಾಲವು ನನಗೆ ಏನೂ ತಿಳಿಯದೇ ಇದ್ದೇ' ಎಂಬ ಜ್ಞಾನವು ಮತ್ತು ಎಚ್ಚತ್ತ ಮೇಲೆ 'ನಾನು ಸುಖವಾಗಿ ಮಲಗಿದ್ದೆ' ಎಂಬ ಅನುಭವವು ತೋರಿಬರುವುದು; ಇಂತಹ ಸುಪ್ತಿಯು ಶ್ರೀಹರೀಚ್ಛೆಗೆ ಅಧೀನವಾಗಿದೆ. ಸ್ವಪ್ನಜಾಗ್ರತ್ ಸುಷುಪ್ತಿಗಳಲ್ಲಿ ಜೀವನ ಜತೆಯಲ್ಲಿದ್ದರೂ ಸ್ವಪ್ನ ಜಾಗ್ರನ್ನಿದ್ರೆಗಳಿಲ್ಲದೆ ಇರುವ ನಾನು ಜೀವಭಿನ್ನನಲ್ಲವೇ? ಇದನ್ನು ಮರೆತು ನನ್ನನ್ನು ಜೀವನೆಂದು ತಿಳಿದ ಜೀವನು ಸಂಸಾರದಲ್ಲಿ ಬಿದ್ದು ಹುಟ್ಟುಸಾವುಗಳನ್ನು ಹೊಂದುತ್ತಲಿರುವನು.

ಜ್ಞಾನಿವಿಜ್ಞಾನಿಗಳಿಗೆ ಆಕರವಾದ ಮನುಜಶರೀರವು ಬಂದಾಗ ಜೀವನು ನನ್ನನ್ನು ತಿಳಿಯ ದಿದ್ದರೆ ಅಂತಹವನಿಗೆ ಇತರ ಯೋನಿಗಳಲ್ಲಿ ಜನಿಸಿದಾಗ ಕ್ಷೇಮವಾಗುವುದೇ? ಯಜ್ಞಾದಿಗಳನ್ನು ಫಲಾಪೇಕ್ಷೆಯಿಂದ ಮಾಡುವವರಿಗಾದರೂ ಆ ಫಲವು ಸಿಗದು. ದುಃಖಪರಿಹಾರವೂ ಕೂಡ ಆಗದಿರುವುದು. ನಿವೃತ್ತಿಕರ್ಮವನ್ನು ಮಾಡಿದವನಿಗೆ ಫಲಾಶೆಯು ಇಲ್ಲದುದರಿಂದ ದುಃಖವಿಲ್ಲ. ಸುಖ ಲೋಕ ಪ್ರಾಪ್ತಿಯು ನಿಶ್ಚಿತವು. ಇದನ್ನರಿತು ದುಷ್ಟ ಕರ್ಮಗಳನ್ನು ಬಿಟ್ಟು ಸತ್ಕರ್ಮ ಫಲವನ್ನು ನನಗರ್ಪಿಸಿದವನು, ಜಾಗ್ರತಾದಿ ಅವಸ್ಥಾಶ್ರಯ ವಿಕಾರವಿಲ್ಲದಿರುವ ವೈಕುಂಠಾದಿ ಲೋಕಗಳನ್ನು ಪೊಂದುವನು. ಈ ಲೋಕದಲ್ಲಿ ನೋಡಿರುವ ಹಾಗೂ ಸ್ವರ್ಗದಲ್ಲಿವೆ ಎಂದು ಕೇಳಿರುವ ವೈಷಯಿಕ ಸುಖದ ಸಂಗವನ್ನು ವಿಶದ ಬುದ್ಧಿಶಕ್ತಿಯಿಂದ ಜಯಿಸಿ ಪರಿತ್ಯಜಿಸಿ ಜ್ಞಾನವಿಜ್ಞಾನಗಳನ್ನು ಸಂಪಾದಿಸಿದ ನನ್ನ ಭಕ್ತನು ಮುಕ್ತನಾಗುವನು. 'ಶ್ರೀಹರಿಯು ಸಮಾಧಿ

ಕರಹಿತನು, ಸರ್ವೋತ್ತಮನು' ಎಂಬ ಜ್ಞಾನವೇ ಮನುಜಜನ್ಮದ ಅತ್ಯಂತ ಲಾಭವೆನಿಸಿದೆ.

ರಾಜನ್! ಈ ನನ್ನ ಉಪದೇಶವನ್ನು ಶ್ರದ್ಧೆಯಿಂದ ಅನುಷ್ಠಿಸು! ಶೀಘ್ರವಾಗಿಯೇ ಜ್ಞಾನ ವಿಜ್ಞಾನಪೂರ್ಣನಾಗಿ ಮೋಕ್ಷವನ್ನು ಪೊಂದುವೆ ಎಂದು ಹೇಳಿ ಜಗದ್ಗುರುವಾದ ಶ್ರೀಹರಿಯು ಅಂತರ್ಹಿತನಾದನು.

## ೧೭. ಚಿತ್ರಕೇತು ಚರಿತೆ – ಪಾರ್ವತೀಶಾಪ

ಶ್ರೀಶುಕನು ಪೇಳಿದನು-

ಚಿತ್ರಕೇತುವು ಆಗ ಶ್ರೀಹರಿಯು ಪೋದ ದಿಕ್ಕಿಗೆ ನಮಸ್ಕರಿಸಿ ಗಗನಚಾರನಾಗಿ ವಿಷ್ಣು ದತ್ತವಾದ ವಿಮಾನದಲ್ಲಿ ತಿರುಗುತ್ತಾ, ಬಹುಕಾಲ ಸುಖದಿಂದಿದ್ದನು. ಶ್ರೀಹರಿ ಗುಣಗಾನವನ್ನು ಮಾಡುತ್ತಾ ಚಿತ್ರಕೇತುವು ವಿದ್ಯಾಧರ ವನಿತೆಯರಿಂದ ಕೂಡಿ ಕಾಮ ಸಂಕಲ್ಪಸಿದ್ಧಿಪ್ರದವಾದ ಕುಲಾಂಚಲಕಂದರಗಳಲ್ಲಿ ಸಂಚರಿಸಿ ವಿಹರಿಸಿದನು.

ಒಂದು ಸಲ ಕೈಲಾಸದ ಮೇಲೆ ಹಾರುತ್ತಾ ಚಿತ್ರಕೇತುವು, ಸಿದ್ಧ ಚಾರಣ ಗಂಧರ್ವ ಸೇವಿತಚರಣನಾಗಿ, ಪಾರ್ವತೀದೇವಿಯನ್ನು ಕೈಯಿಂದಾಲಿಂಗಿಸಿ ತೊಡೆಯ ಮೇಲಿಟ್ಟು ಕುಳಿತ ಶಿವನನ್ನು ನೋಡಿದನು. ಗಟ್ಟಿಯಾಗಿ ನಕ್ಕು ದೇವಿಯು ಕೇಳುವಂತೆ ಇಂತೆಂದನು–

'ಇವನು ಲೋಕಗುರುವಲ್ಲವೇ? ಎಲ್ಲರಿಗೂ ಧರ್ಮವನ್ನುಪದೇಶಿಸುವ ವೇದಮುಖ್ಯನು ಸಭೆಯಲ್ಲಿ ಹೆಂಡತಿಯಿಂದ ಕೂಡಿ ಕುಳಿತಿರುವನು. ನೋಡಿದರೆ ತಲೆ ತುಂಬ ಜಟೆಗಳು. ಮಾಡಿರು ವುದು ತೀವ್ರ ತಪವನ್ನು. ಓದಿರುವುದು ಸಾಂಗ ವೇದವನ್ನು, ಪ್ರಾಕೃತ ಮನುಜನಂತೆ ತೊಡೆಯ ಮೇಲೆ ಸತಿಯನ್ನು ಕೂಡಿಸಿಕೊಂಡಿರುವುದು ಸಜ್ಜನರೊಡೆಯನಾದ ಶಿವನಿಗೆ ಯೋಗ್ಯವೆನಿಸು ವುದಿಲ್ಲ. ಪಾಮರರು ಕೂಡ ತಮ್ಮ ಪತ್ನಿಯರನ್ನು ಏಕಾಂತದಲ್ಲಿ ಕಲೆತು ಮಾತಾಡುವರು. ವ್ರತಧರನಾದ ಶಿವನು ಸಭೆಯಲ್ಲಿ ಹೀಗೆ ಇರುವುದು ಸರಿಯಲ್ಲ' ಎಂದು ನಿಂದಿಸಿದ ವಿದ್ಯಾಧರನ ಬಿರುನುಡಿಯನ್ನು ಕೇಳಿ, ಕಿವಿಗೊಡದೆ ಮಹಾದೇವನು ನಸುನಕ್ಕು ಸುಮ್ಮನಿದ್ದನು. ಸಭಿಕರು ಕೂಡ ಸುಮ್ಮನಿದ್ದರು. ಇಂತು ಮಾನಾಪಮಾನಗಳನ್ನು ಲೆಕ್ಕಿಸದಿರುವರಲ್ಲವೇ ಮಹಾನು ಭಾವರು?

ಆದರೂ ದೇವಿಯು, ಬಹು ಪ್ರಲಾಪಿಯಾದ ವಿದ್ಯಾಧರನನ್ನು ಕ್ಷಮಿಸದೆ ಸಿಟ್ಟಿನಿಂದ ಇಂತೆಂದಳು–

ಓಹೋ! ಈಗ ಲೋಕಪ್ರಭುವೂ ದಂಡಧರನೂ ಆಗಿರುವನು ಇವನಾ ಏನು? ನಮ್ಮಂತಹ ಲಜ್ಜಾರಹಿತರನ್ನು ಇವನಾ ಶಾಸಿಸುವವನು? ಓಹೋ! ಇವನಿಗೆಷ್ಟು ಸೊಕ್ಕು! ಬ್ರಹ್ಮನಿಗೆ ಧರ್ಮವು ಗೊತ್ತಿಲ್ಲ. ಭೃಗು ನಾರದಾದಿಗಳರಿಯರು. ಸನತ್‌ಕುಮಾರ ಮನುಕಪಿಲಾದಿಗಳರಿ ಯದ ಧರ್ಮರಹಸ್ಯವನ್ನಿವನು ತಿಳಿದಂತೆ ಬೊಗಳುತ್ತಿರುವನು! ಅವರಾರೂ ನಮ್ಮ ವರ್ತನೆ ಯನ್ನು ಅಲ್ಲಗೆಳೆಯದಿರುವಾಗಿ, ಈ ನೀಚ ಕ್ಷತ್ರಿಯನು ಇಂದ್ರಾದಿವಂದ್ಯ ಚರಣಾರವಿಂದನು, ಜಗದ್ಗುರು, ಪರಮಮಂಗಲಕರನಾದ ಶಂಕರನಿಗೆ ಅವಮಾನವನ್ನೆಸಗುತ್ತಿರುವನು! ಈ ದುಷ್ಟನು ದಂಡಾರ್ಹನೇ ಸರಿ! ವೈಕುಂಠಪಾದ ಸೇವಾಭಾಗ್ಯವಿವನಿಗೆ ಸಲ್ಲದು. ಸಾಧು ವಂದಿತವಾದ ಗೋವಿಂದನ ಚರಣವು ಈ ದುರಹಂಕಾರಿಗೆ ದೂರವಾಗಲಿ! ಇವನು ರಾಕ್ಷಸಯೋನಿಯಲ್ಲಿ

ಪುಟ್ಟಲಿ! ಇನ್ನು ಮುಂದೆ ಗರ್ವದಿಂದ ದೊಡ್ಡವರಿಗೆ ಅಪರಾಧವನ್ನು ಮಾಡದಿರಲಿ ಎಂದೇ ಈಗ ಇವನನ್ನು ದಂಡಿಸಿರುವೆನು.

ಆಗ ಚಿತ್ರಕೇತುವು ವಿಮಾನದಿಂದಿಳಿದು, ಶಿರಸಾ ನಮಸ್ಕರಿಸಿ, ನಿಂತು ಅನುಗ್ರಹವನ್ನು ಮಾಡೆಂದು ಬೇಡಿದನು–

ಅಂಬ! ನಿನ್ನ ಶಾಪವನ್ನು ಕೈಯೊಡ್ಡಿ ಸ್ವೀಕರಿಸುವೆನು. ದೇವತೆಗಳು ಮನುಜರಿಗೆ ಕೊಡುವ ಶಾಪಾದಿಗಳೆಲ್ಲವು ಮೊದಲು ಶ್ರೀಹರಿ ಸಂಕಲ್ಪಿತವಾಗಿಯೇ ಇರುವುವು. ಇದಕ್ಕೇಕೆ ಚಿಂತೆ! ಸಂಸಾರ ಚಕ್ರದಲ್ಲಿ ಸಿಲುಕಿದ ಜೀವನು ಅಜ್ಞಾನಮೋಹಿತನಾಗಿ ಎಲ್ಲಿಗೆ ಪೋದರೂ, ಯಾವಾಗಲೂ ಸುಖವನ್ನೋ ದುಃಖವನ್ನೋ ಪೊಂದುತ್ತಲೇ ಇರುವನು. ಸುಖ ದುಃಖಾದಿಗಳಿಗೆ ತಾನಾಗಲಿ ಪರರಾಗಲಿ ಕಾರಣರಲ್ಲ. ಶ್ರೀಹರಿಯೇ ಸುಖದುಃಖಪ್ರದನು ಎಂದು ಜ್ಞಾನಿಯು ತಿಳಿದಿರುವನು. ಸಂಸಾರಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಜೀವನಿಗೆ ಸ್ವರ್ಗ ನರಕಗಳು, ಸುಖ ದುಃಖಗಳು ಮೊದಲಾದವು ಬರುವುವು, ಹೋಗುವುವು. ಅಂತಹ ಸುಖದುಃಖಾದಿ ಸೂಚಕಗಳಾದ ವರ-ಶಾಪಗಳೂ ಶಾಶ್ವತವಲ್ಲ. ಎಲ್ಲವೂ ಹರಿಯ ಅಧೀನವಾಗಿದೆ. ಅವನೇ ಸ್ವತಂತ್ರನು, ಜಗಜ್ಜನ್ಮಾದಿಕರ್ತನೂ, ಕರ್ಮಗಳು ಕರ್ಮಫಲಗಳು ಕೂಡ ಶ್ರೀಶಾಧೀನವಾಗಿದೆ. ಅವನು ಸ್ವಭಕ್ತರು ಮಾಡಿದ ಸೇವೆಗೆ ಹೇಗೋ, ಹಾಗೆಯೇ ಸ್ವಶತ್ರುಗಳು ಮಾಡಿದ ಅಪರಾಧಗಳಿಗೂ ಮೀರಿದ ಫಲ ದಂಡಗಳನ್ನು ಕೊಡುವುದಿಲ್ಲ. ಅವನಿಗೆ ರಾಗರೋಷಾದಿಗಳಿಲ್ಲ. ಅಂತೆಯೇ ಅವನನ್ನು ಜ್ಞಾನಿಗಳು ಸಮನೆನ್ನುವರು. ಹಾಗಿದ್ದರೂ ಶ್ರೀಹರಿಯು ಕರ್ಮಾನುರೂಪನಾದ ಸುಖದುಃಖಾದಿಗಳನ್ನೂ, ಬಂಧಮೋಕ್ಷಗಳನ್ನೂ, ಜನನಮರಣಗಳನ್ನೂ ಕೊಟ್ಟು ಶರೀರಧಾರಿ ಜನರಿಂದ ತದ್ಯೋಗ್ಯ ಸಾಧನವನ್ನು ಮಾಡಿಸುತ್ತಿರುವನು. ಇರಲಿ. ನಾನು ನಿನ್ನನ್ನು ಶಾಪವಿಮುಕ್ತಿಯನ್ನು ದಯಮಾಡೆಂದು ಕೇಳಿಕೊಳ್ಳುವುದಿಲ್ಲ. ಅದು ಹರೀಚ್ಛಾಪ್ರಾಪ್ತವಾಗಿದೆ. ನನ್ನ ಬಾಯಿಂದ ನುಡಿದ ಆ ಕೆಟ್ಟ ಮಾತನ್ನು ಕ್ಷಮಿಸು.

ಎಂದು ಬೇಡಿ ಶಿವರಿಗೆ ನಮಸ್ಕರಿಸಿ ಚಿತ್ರಕೇತುವು ವಿಮಾನದಲ್ಲಿ ಕೂತು ಹೊರಟು ಹೋದನು.

ಆಗ ಭಗವಾನ್ ರುದ್ರನು ರುದ್ರಾಣಿಯನ್ನೂ ನೋಡಿ ದೇವ ಋಷಿ ದೈತ್ಯ ಸಿದ್ಧರು ಕೇಳುತ್ತಿರಲು ಇಂತೆಂದನು–

ದೇವೀ! ಹರಿಯ ಅದ್ಭುತ ಮಹಿಮೆಯನ್ನು ಅವನ ನಿಸ್ಪೃಹರಾದ ಭಕ್ತರ ಮಹಿಮೆಯನ್ನು ನೋಡಿದೆಯಾ? ಅಭಯನಾದ ಶ್ರೀಶನ ಭಕ್ತರು ಯಾವುದಕ್ಕೂ ಹೆದರದೆ, ಬಂದ ಸುಖದುಃಖ ಪ್ರದವಾಗ ಸ್ವರ್ಗನರಕಗಳನ್ನೂ ಸಮನಾಗಿ ಸ್ವೀಕರಿಸುವರು. ದೇಹವು ಬಂದೊಡನೆ ಅದನ್ನನುಸರಿಸಿ ದ್ವಂದ್ವಗಳೆನಿಸಿದ ಸುಖದುಃಖಾದಿಗಳೂ ಬಿಡದೆ ಬರುವುವು. ಸ್ವಭಾವದಿಂದ ಜನನಮರಣಾದಿಗಳಿಲ್ಲದಿರುವ ಜೀವನು ಸೃಗಾಲಮನುಜಾದಿ ದೇಹಗಳಲ್ಲಿ ಪುಟ್ಟಿ, ಅಲ್ಲಿ ಅಭಿಮಾನದಿಂದ ಆಸಕ್ತನಾಗಿ ದುಃಖ ಸುಖಗಳನ್ನು ಅನುಭವಿಸುವನು. ಸ್ವಪ್ನದಲ್ಲಿ ಸೃಗಾಲಾದಿ ಶರೀರವನ್ನು ಪೊಂದಿದ್ದವನಿಗೆ, ಆ ಶರೀರಗಳು ಅನಿತ್ಯವಲ್ಲವೇ? ಅಂತೆಯೇ ಎಲ್ಲ ದೇಹಗಳು ಅನಿತ್ಯವೇ ಸರಿ. ಶ್ರೀವಾಸುದೇವನ ಭಕ್ತರಿಗೆ ಆ ಜ್ಞಾನ ವಿಜ್ಞಾನಬಲದಿಂದ ಭಯವಾಗುವುದಿಲ್ಲ. ಅವರು ಶ್ರೀಹರಿಯನ್ನೇ ಆಶ್ರಯಿಸಿ ಭಕ್ತಿಜ್ಞಾನಗಳಿಂದಲೇ ತೃಪ್ತರಾಗಿರುವರು. ನಾನು, ನಮ್ಮ ತಂದೆಯಾದ ಬ್ರಹ್ಮನು, ಸನತ್ಕುಮಾರ ನಾರದಾದಿ ಬ್ರಹ್ಮಪುತ್ರರು, ದೇವತೆಗಳು ಎಲ್ಲರೂ

ಅವನ ಬಿನ್ನಾಂಶರಾಗಿ ಅವನಾಡಿಸಿದಂತೆ ಆಡುತ್ತಿರುವೆವು. ಅವನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಅವನಿಗೆ ಪಕ್ಷಪಾತವಿಲ್ಲ. ಸರ್ವಾಂತರ್ಯಾಮಿಯು ಸರ್ವ ಪ್ರಭುವಾದ ಶ್ರೀಹರಿಯು ಸರ್ವಭೂತಪ್ರಿಯನಾಗಿರುವನು. ಯೋಗ್ಯತೆಯನ್ನು ಮೀರಿದ ಶತ್ರುಗಳು ಅವನಿಗಿಲ್ಲ; ಮಿತ್ರರೂ ಇಲ್ಲ. ಈ ಚಿತ್ರಕೇತವು ಶ್ರೀವಾಸು ದೇವಭಕ್ತನು. ಶ್ರೀಹರಿಗೆ ಪ್ರೀತಿಪಾತ್ರನು, ಸರ್ವತ್ರ ನಿಷ್ಪಕ್ಷಪಾತಿಯು, ಹರಿಸರ್ವೋತ್ತಮತ್ವ ಜ್ಞಾನಿಯು ಆದ ನಾನೂ ಅಚ್ಯುತನ ಮೆಚ್ಚುಗೆಯನ್ನು ಗಳಿಸಿರುವೆನು. ಆದ್ದರಿಂದ ಶಾಂತರು, ನಿರ್ವಿಕಾರರು, ಶ್ರೀಹರಿಭಕ್ತರು ಆದ ಮಹಜ್ಜನರನ್ನು ನೋಡಿ ಆಶ್ರರ್ಯಪಡಲು ಕಾರಣವಿಲ್ಲ.

ಆ ಮಾತನ್ನು ಕೇಳಿ ಉಮಾದೇವಿಯು ಚಿತ್ರಕೇತುವಿನ ನಿರ್ವಿಕಾರತೆಯನ್ನು ನೋಡಿ ಆಶ್ಚರ್ಯಪಡುವುದನ್ನು ಬಿಟ್ಟು ಶಾಂತಮನಸ್ಕಳಾದಳು. ಭಾಗವತನಾದ ವಿಧ್ಯಾಧರರಾಜನು ಪ್ರತಿ ಶಾಪವನ್ನು ಕೊಡದೆ, ಪಾರ್ವತೀಶಾಪವನ್ನು ಶಿರಸಾವಹಿಸಿ ನಡೆದನು.

ಸಾಧುಜನರು ಸುಖದುಃಖ ನಿರ್ವಿಕಾರರಲ್ಲವೇ?

ಈ ಚಿತ್ರಕೇತುವೇ ತ್ವಷ್ಟನ ದಕ್ಷಿಣಾಗ್ನಿ ಕುಂಡದಿಂದ ಜನಿಸಿ ವೃತ್ರನೆನಿಸಿದನು. ಅಂತೆಯೇ ವೃತ್ರನಿಗೆ ಜ್ಞಾನವಿಜ್ಞಾನಗಳಿದ್ದುವು. ಅಸುರ ಜಾತಿಯಲ್ಲಿ ಪುಟ್ಟಿದರೇನು, ಸ್ವಭಾವವು ಒಳ್ಳೆಯ ದಾದ್ದರಿಂದ ಶ್ರೀಹರಿಸ್ಮರಣೆಯು ಕೂಡ ಮರಣ ಕಾಲದಲ್ಲಿ ಒದಗಿತು. ಆ ಭಗವನ್ಮಹಿಮಾ ಪೂರ್ಣವಾದ ಚಿತ್ರಕೇತುಚರಿತೆಯನ್ನು ಕೇಳಿದವನು ಕರ್ಮಬಂಧದಿಂದ ಮುಕ್ತನಾಗುವನು. ಪ್ರಾತಃಕಾಲದಲ್ಲಿ ಶ್ರದ್ಧೆಯಿಂದ ಪಠಿಸುವವನಿಗೆ ಶ್ರೀಹರಿಯು ತನ್ನ ಉತ್ತಮಲೋಕವನ್ನು ಕೊಟ್ಟು ಕಾಪಾಡುವನು.

## ೧೮. ಮರುಜ್ಜನ್ಮವೃತ್ತಾಂತವು

ಸವಿತೃವಿನ ಪತ್ನಿಯಾದ ಪೃಶ್ನಿಯು ಸಾವಿತ್ರಿ, ವ್ಯಾಹೃತಿ, ತ್ರಯಿ ಎಂಬ ಕುವರಿಯರನ್ನು; ಅಗ್ನಿ ಹೋತ್ರ, ಪಶು ಸೋಮ ಚಾತುರ್ಮಾಸ್ಯ ಮಹಾಮುಖಗಳಿಗೆ ಅಭಿಮಾನಗಳಾದ ಕುಮಾರರನ್ನು ಪಡೆದಳು.

ಭಗನ ಹೆಂಡತಿಯು ಸಿದ್ಧಿಯು. ಅವಳು ಮಹಿಮಾನ, ವಿಭು, ಪ್ರಭು, ಆಶಿಷ, ಎಂಬ ಕುಮಾರರನ್ನೂ, ವರಾರೋಹಳೆಂಬ ಸುವ್ರತ ಕನ್ಯೆಯನ್ನು ಪಡೆದಳು. ಧಾತನಿಗೆ ಕುಹೂ, ಸಿನೀವಾಲೀ, ರಾಕಾ, ಅನುಮತಿ ಎಂಬ ಕನ್ಯೆಯರು ಹುಟ್ಟಿ ಅಮಾವಾಸ್ಯಾ, ಕೃಷ್ಣ ಚತುರ್ದಶಿ, ಪೂರ್ಣಿಮಾ, ಶುಕ್ಲ ಚತುರ್ದಶೀ ದೇವತೆಗಳಾದರು. ಮತ್ತು ಧಾತೃಪತ್ನಿಯಾದ ಕ್ರಿಯೆಯು ಸಾಯಂ, ದರ್ಶ, ಪ್ರಾತಃ, ಪೂರ್ಣಮಾಸರೆಂಬ ಗಂಡುಮಕ್ಕಳನ್ನೂ ಪಡೆದಳು ವಿಧಾತನು ಕ್ರಿಯೆಯಲ್ಲಿ ಪುರೀಷಾಗ್ನಿಗಳನ್ನು, ವರುಣನೆಂಬ ಸೂರ್ಯನು ಪೂರ್ವದಲ್ಲಿ ಬ್ರಹ್ಮಸುತನಾದ ಭೃಗುವನ್ನು, ವಲ್ಮೀಕಜಾತನಾದ ವಾಲ್ಮೀಕಿಯನ್ನೂ, ಮಿತ್ರಾ ವರುಣರು ಊರ್ವಶಿಯಿಂದ ಅಗಸ್ತ್ಯ ವಸಿಷ್ಠರನ್ನೂ ಪಡೆದರು. ಅಗಸ್ತ್ಯ ವಸಿಷ್ಠರು ಕುಂಭದಿಂದ ಪುಟ್ಟಿ ಕುಂಭಸಂಭವರೆನಿಸಿದರು. ಇಂದ್ರನಿಗೆ ಶಚಿಯಲ್ಲಿ ಜಯಂತ, ಋಷಭ, ಮೀಢುಷನೆಂಬ ಮೂವರು ಪುತ್ರರು ಜನಿಸಿದರು. ಮಿತ್ರನು ರೇವತಿಯಲ್ಲಿ ಉತ್ಸರ್ಗ, ಅರಿಷ್ಟ, ಪಿಪ್ಪಲರನ್ನು ಪಡೆದನು. ವಾಮನ ರೂಪೀ ಶ್ರೀಉರುಕ್ರಮನಿಗೆ ಕೀರ್ತಿದೇವಿಯಲ್ಲಿ ಬೃಹತ್ ಶ್ಲೋಕನು ಅವನಿಗೆ ಸೌಭಗಾದಿ ಸುತರಾದರು.

ಆ ಅದಿತಿ ಕಶ್ಯಪರ ಮಗನಾದ ಶ್ರೀಹರಿಯ ಕಥೆಯನ್ನು ಅಷ್ಟಮ ಸ್ಕಂಧದಲ್ಲಿ ಹೇಳುವೆನು.

ಈಗ ದೈತ್ಯವಂಶವನ್ನು ಕೇಳು. ಶ್ರೀಮಂತರು ಭಗವದ್ಭಕ್ತರು ಆದ ಪ್ರಹ್ಲಾದ ಬಲಿರಾಜರು ದೈತ್ಯರಲ್ಲಿ ಜನಿಸಿದರಲ್ಲವೇ?

ದಿತಿಯ ಮಕ್ಕಳು ಹಿರಣ್ಯಾಕ್ಷ ಹಿರಣ್ಯಕಶಿಪುಗಳು ದೈತ್ಯದಾನವಂದಿತರಾಗಿ ಮೆರೆದರು. ಜಂಭನ ಮಗಳಾದ ಕಯಾಧುವು ಹಿರಣ್ಯಕಶಿಪುವಿನ ಪತ್ನಿಯು. ಪ್ರಹ್ಲಾದ, ಸಂಹ್ಲಾದ, ಹ್ಲಾದ, ಅನುಹ್ಲಾದರೆಂಬವರು ಅವಳ ಸುತರು. ಸಿಂಹಿಕೆ ಎಂಬ ಜಂಭನ ಮಗಳು ವಿಪ್ರಚಿತ್ತನ ಪತ್ನಿಯಾಗಿ ರಾಹುವನ್ನು ಪಡೆದಳು. ಅವನೇ ಅಮೃತಪಾನವನ್ನು ಮಾಡುವಾಗ ಶ್ರೀಹರಿಕೃತ್ತಶಿರಸ್ಕನಾಗಿ ಗ್ರಹಪದವಿಯನ್ನೈದಿದವನು. ಸಂಹ್ಲಾದನ ಪತ್ನಿ ಮತಿಯ ಪಂಚಜನನನ್ನು ಪಡೆದಳು. ಹ್ಲಾದನಿಗೆ ಧಮನಿಯಲ್ಲಿ ಇಲ್ವಲ ವಾತಾಪಿಗಳು ಜನಿಸಿದರು. ಇಲ್ವಲನು ವಾತಾಪಿಯನ್ನು ಮೇಕೆಯ ರೂಪದಿಂದಿರಲು ಸಂಹರಿಸಿ ಅತಿಥಿಗಳಿಗುಣಿಸಿ ಅವರನ್ನು ಸಂಹರಿಸುತ್ತಿರಲು ಅಗಸ್ತ್ಯನು 'ವಾತಾಪಿ! ಜೀರ್ಣೋಭವ' ಎಂದು ಅವನನ್ನು ಕೊಂದು, ಇಲ್ವಲನನ್ನು ಶಿಕ್ಷಿಸಿದರು. ಅನುಹ್ಲಾದನಿಗೆ ಸೂರ್ಮಿಯಲ್ಲಿ ಬಾಷ್ಕಲ ಮಹಿಷರು ಪುಟ್ಟಿದರು. ವರೋಚನನು ಪ್ರಹ್ಲಾದನಿಗೆ ಜನಿಸಿದನು. ವಿರೋಚನ ಪುತ್ರನಾದ ಬಲಿಯು ಬಾಣನೇ ಮೊದಲಾದ ನೂರು ಜನ ಸುತರನ್ನು ಪಡೆದನು. ಅಶನಾಸುತನಾದ ಬಾಣನು ಶಂಕರನನ್ನು ಮೆಚ್ಚಿಸಿ ಪ್ರಮಥಗಣಮುಖ್ಯನಾದನು. ಅವನ ಪುರಪಾಲಕನಾದ ಆ ದೇವನು ಈಗಲೂ ನೆಲಸಿರುವನು. ದಿತಿಗೆ ಪುಟ್ಟಿದ ನಲವತ್ತೊಂಭತ್ತು ಜನ ಸುತರು ಮರುತ್ತುಗಳೆನಿಸಿ ಇಂದ್ರನಿಂದ ಸೋದರರಂತೆ ಸ್ವೀಕರಿಸಲ್ಪಟ್ಟರು. ಅವರೆಲ್ಲರೂ ಮಕ್ಕಳಿಲ್ಲದವರು– ಎಂದು ಶುಕನು ಪೇಳಲು ರಾಜನು ಪ್ರಶ್ನಿಸಿದನು–

ದಿತಿಪುತ್ರರಿಗೆ ಅಸುರಭಾವವು ಪೋಗಿ ದೇವತೆಗಳಾಗಲು ಕಾರಣವೇನು? ಇಲ್ಲಿರುವ ಋಷಿಗಳು ಕೂಡ ಆ ಆಶ್ಚರ್ಯಕರ ವೃತ್ತಾಂತವನ್ನು ಕೇಳಬೇಕೆಂದಿರುವರು ದಯಮಾಡಿ ಹೇಳು! ಆಗ ಶ್ರೀಶುಕನು ಆದರದಿಂ[illegible] ಕೇಳಿದ ಅವರ ಮಾತನ್ನಾಲಿಸಿ ಅಭಿನಂದಿಸಿ ಇಂತೆಂದನು-

ಶ್ರೀಹರಿಯು ತನ್ನ ಮಕ್ಕಳನ್ನು ಸಂಹರಿಸಿ ಇಂದ್ರನಿಗೆ ಸಹಾಯ ಮಾಡುವುದನ್ನು ನೋಡಿ ದಿತಿಯು ಬಹು ಚಿಂತಾಕ್ರಾಂತಳಾದಳು.

'ಇಂದ್ರಿಯಾರಾಮನು, ಸುಖಮತ್ತಚಿತ್ತನು, ಸೋದರಜನ ವೈರಿಯು ಆದ ಇಂದ್ರನು ಸತ್ತದ್ದನ್ನು ನಾನು ಹೇಗೆ ನೋಡಲಿ? ಆ ಪಾಪಿಯು ನಿರ್ದಯನು ಆದ ಇಂದ್ರನು ಮೃತನಾದರೆ ಅಲ್ಲವೇ ನನಗೆ ಕಣ್ಣು ತುಂಬ ನಿದ್ರೆ ಬರುವುದು? ಈ ದೇಹವೆಂದಾದರೊಂದು ದಿನ ಕ್ರಿಮಿ ಭಕ್ಷಿತವೋ, ಅಗ್ನಿದಗ್ಧಭಸ್ಮವೋ, ಮಣ್ಣೋ ಆಗಿ ಪೋಗುವುದು ನಿಜ. ಆದರೂ ಬಿಡದೆ ಇತರರಿಗೆ ದ್ರೋಹವನ್ನು ಮಾಡಿ ತಾನು ಮಾತ್ರ ಉಳಿಯಬೇಕೆಂದಿರುವ ನೀಚನಿಗೆ ನರಕವಿದೆ ಎಂದು ಜ್ಞಾಪಕವಿರಲಿಲ್ಲ! ನಾನು ಧ್ರುವನೆಂದು ಆಶೆಪಡುವ ದುರ್ಮದನು ಕೂಡ ಒಂದು ದಿನ ಸಾಯಲೇಬೇಕು! ಆ ಇಂದ್ರನ ಕೊಬ್ಬನ್ನಳಿಸುವ ಮಗನನ್ನು ನಾನು ಪಡೆಯಲೇಬೇಕು.'

ಇಂತು ಚಿಂತಿಸಿ, ಆಶ್ರಮಕ್ಕೆ ಬಂದ ಕಾಂತನಿಗೆ ಚೆನ್ನಾಗಿ ಉಪಚರಿಸಿ ಅವನ ಪ್ರೀತಿಯನ್ನು ಪಡೆದಲು. ಅವಳ ಭಕ್ತಿ ಶ್ರದ್ಧೆಗಳನ್ನೂ, ವಿನಯಾನುರಾಗಗಳನ್ನೂ, ಮಧಾರಾಲಾಪಗಳನ್ನು ನೋಡಿ, ಕೇಳಿ, ಸಂತುಷ್ಟನಾದ ಕಶ್ಯಪನು ಅವಳ ಹಾವಭಾವ, ವೈದಗ್ಧ್ಯಗಳಿಗೆ ವಶನಾದನು. ಆದಿಯಲ್ಲಿ ಸ್ನೇಹವಿಲ್ಲದೆ ಕಾದು ಬಡಿದಾಡುವ ಜೀವರನ್ನು ನೋಡಿ ಬ್ರಹ್ಮನು ಸ್ನೇಹರಸದಿಂದ ಸ್ತ್ರೀ ಶರೀರವನ್ನು ನಿರ್ಮಿಸಿ ಪುರುಷರ ಅರ್ಧಾಂಗಿಯನ್ನಾಗಿ ಮಾಡಿರುವನಲ್ಲವೇ!

ದಿತಿಯ ಸೇವೆಯಿಂದ ಕಡುಮೆಚ್ಚಿ, ಮೈಮರೆತು ಕಶ್ಯಪನು ನಗುತ್ತ ಇಂತೆಂದನು-

ಸುಂದರಿ! ಬೇಕಾದ ವರವನ್ನು ಬೇಡು! ನಿನ್ನ ನಿರ್ದೋಷ ಚರಿತೆಯನ್ನು ಕಂಡು ಸಂತಸವಾಗಿದೆ. ಭರ್ತೃ ಪ್ರೀತಿಪಾತ್ರಳಾದವಳಿಗೆ ಈ ಲೋಕದಲ್ಲಿ ದುರ್ಲಭವೆಂಬುದೊಂದಿಲ್ಲ! ನಾರಿಯರಿಗೆ ಪತಿಯೇ ಪ್ರತ್ಯಕ್ಷ ದೇವತೆ. ಅವನಲ್ಲಿ ಸರ್ವಭೂತಪತಿಯಾದ ಶ್ರೀಯಃಪತಿಯು ಇರುವನೆಂದರಿತು ಸೇವಿಸುವ ತರುಣಿಯು ಪತಿವ್ರತೆ ಎನಿಸುವಳು. ಅವಳಿಗೆ ಬೇಕಾದ ಸರ್ವಶ್ರೇಯಸ್ಸಿದ್ಧಿಯು ತಪ್ಪದೇ ಆಗುವುದು. ನಿನ್ನ ಯಾವ ಕೋರಿಕೆಯನ್ನು ನಾನು ನೆರವೇರಿಸಬೇಕಾಗಿದೆ? ಹೇಳು. ಅಸತೀ ದುರ್ಲಭವಾದ ಪತಿಪ್ರೇಮನಿಧಿಗೆ ಪಾತ್ರಳಾಗಿರುವೆ– ಎನ್ನಲು ದಿತಿಯು ಹೀಗೆಂದಳು-

'ಬ್ರಹ್ಮನ್! ಹಾಗಾದರೆ ಇಂದ್ರನನ್ನು ಸಂಹರಿಸುವ ಮಗನನ್ನೆನಗೆ ದಯಪಾಲಿಸು. ಆ ನನ್ನ ಮಗನಿಗೆ ಮರಣವಾಗಬಾರದು. ಮೃತಪುತ್ರಳಾದ ನನ್ನ ಹೊಟ್ಟೆಯಕಿಚ್ಚು ಈಗಲಾದರೂ ಆರಲಿ!' ಎಂದಳು. ಆ ಮಾತನ್ನು ಕೇಳಿ ಕಶ್ಯಪನು ಬಹಳ ನೊಂದನು.

ಅಯ್ಯೋ! ಎಂತಹ ಪಾಪವೆನಗೆ ಘಟಿಸಿತು! ಇಂದ್ರಿಯರಾಮನಾದೆ. ತರುಣೀಮಾಯೆಗೆ ಸಿಲುಕಿದೆ. ನಿಜವಾಗಿ ನರಕದಲ್ಲಿ ಬೀಳುವೆನು. ಸ್ತ್ರೀಸಹಜಗುಣವಾದ ಸ್ವಾರ್ಥವನ್ನು ಬಿಡದೆ, ಬೇಡಿದ ದಿತಿಯ ತಪ್ಪಿಲ್ಲ. ನನ್ನದು ಅಪರಾಧವಾಯಿತು. ನನಗೆ ಧಿಕ್ಕಾರವಿರಲಿ! ವದನವೋ ರಾಕಾ ಪೂರ್ಣಚಂದ್ರ ಬಿಂಬವು! ವಚನವೋ ಶ್ರವಣಾಮೃತವು! ಆದರೆ ಹೃದಯವು ತೀಕ್ಷ್ಣಕ್ಷುರಧಾರಾಸದೃಶವು. ಈ ಸ್ತ್ರೀಯರ ಮನಸ್ಸನ್ನು ಯಾರು ಕಂಡಿರುವರು! ಅವರಿಗೆ ಸ್ವಾರ್ಥವೇ ಮುಖ್ಯವು. ಅದಕ್ಕಾಗಿ ಬೇಕಾದರೆ ಪತಿಯನ್ನು, ಪುತ್ರರನ್ನು, ಸೋದರರನ್ನು ಕೆಡಿಸಲು, ಕೊನೆಗೆ ಕೊಲ್ಲಲು ಕೂಡ ಅವರು ಹಿಂಜರಿಯುವುದಿಲ್ಲ. ವರವನ್ನು ಕೊಡುವೆನೆಂದ ಮಾತು ತೆಗೆಯಲಾರದು. ಇಂದ್ರನು ಸಾಯುವುದೂ ನ್ಯಾಯವಲ್ಲ. ಒಳ್ಳೆಯದು! ಇದೇ ಸರಿ ! ಎಂದು ಚಿಂತಿಸಿ ಕಶ್ಯಪನು ಸ್ವಲ್ಪ ಸಿಟ್ಟಿನಿಂದ ತನ್ನನ್ನೇ ಬೈದುಕೊಂಡು, ದಿತಿಯನ್ನು ನೋಡಿ ಇಂತು ನುಡಿದನು-

'ದಿತಿ! ಆಗಲಿ! ದೇವಬಾಂಧವನು, ಇಂದ್ರಹರನು ಆದ ಮಗನು ನಿನಗೆ ಜನಿಸುವನು. ಮೊದಲು ನೀನು ಒಂದು ವರ್ಷದ ಪುಂಸವನ ವ್ರತವನ್ನು ಲೋಪವಿಲ್ಲದೆ ಆಚರಿಸು. ಲೋಪವಾದರೆ ನಿನ್ನ ಇಷ್ಟಸಿದ್ಧಿಯು ಆಗಲಾರದು.'

ಆ ಮಾತನ್ನು ಕೇಳಿ ದಿತಿಯು ವ್ರತದ ವಿವರಗಳನ್ನು ವಿಧಿಯನ್ನು ಕೇಳಲು ಕಶ್ಯಪನಿಂತೆಂದನು–

ಸರ್ವಭೂತಗಳಲ್ಲಿ ದಯೆತೋರಿ ಹಿಂಸೆಯನ್ನು ಮಾಡಲಾಗದು. ಆಣೆ ಇಡಬಾರದು. ಸುಳ್ಳನ್ನಾಡಬಾರದು. ನಖ ರೋಮಚ್ಛೇದನವನ್ನು ಮಾಡಬಾರದು. ಅಮಂಗಲವಾದ ಎಲುಬು ಮುಂತಾದವುಗಳನ್ನು ಮುಟ್ಟಬಾರದು. ನಗ್ನಳಾಗಿ ಜಲದಲ್ಲಿಳಿಯಬಾರದು. ಸಿಟ್ಟಾಗಬಾರದು. ದುರ್ಜನ ಸಂಭಾಷಣೆಯು ಕೂಡದು. ಕೊಳಕಾದ ಬಟ್ಟೆಯನ್ನುಟ್ಟಿರಬಾರದು. ಅನ್ಯರು ಧರಿಸಿದ ಪೂಮಾಲೆಯನ್ನು ಧರಿಸಲಾಗದು. ನಾಂದೀನಿವೇದಿತವನ್ನು. ಶೂದ್ರಾನ್ನವನ್ನು, ರಜಸ್ವಲಾ ದೃಷ್ಟಾನ್ನವನ್ನು ಉಣಬಾರದು. ಬೊಗಸೆಯಿಂದ ನೀರನ್ನು ಕುಡಿಯಬಾರದು. ಮಲಮೂತ್ರಗಳನ್ನು ವಿಸರ್ಜಿಸಿ ಕೈಕಾಲುಗಳನ್ನು ತೊಳೆಯದೆ, ತೊಳೆದು ಒರೆಸಿಕೊಳ್ಳದೆ ಇರಬಾರದು.

ಉತ್ತರ ದಿಶೆಗೆ ತಲೆಯಿಟ್ಟು ಮಲಗಬಾರದು. ಮೇಲ್ಮುಸುಗಿರಬೇಕು. ಅಲಂಕೃತಳಾಗಿರಬೇಕು. ಸಂಧ್ಯಾಕಾಲ ಗಳಲ್ಲಿ ಕೂದಲು ಬಿರಿಹಾಕಿಕೊಂಡಿರಬಾರದು. ನಗ್ನಳಾಗಬಾರದು.

ಶುಭ್ರವಸನವನ್ನುಟ್ಟು, ಶುಚಿಯಾಗಿ, ಪ್ರಾತಃಕಾಲ ಭೋಜನಕ್ಕೆ ಮೊದಲೆ ಹಸಿದಿದ್ದು, ಗೋವಿಪ್ರರನ್ನು ಶ್ರೀ ಗೋವಿಂದರನ್ನು ಪೂಜಿಸಬೇಕು. ಮುತ್ತೈದೆಯರಿಗೆ ಗಂಧಪುಷ್ಪ ವಾಯನಾದಿ ಗಳನ್ನು ಹರಿದ್ರಾಕುಂಕುಮಗಳನ್ನೂ ಕೊಟ್ಟು ತನ್ನ ಗಂಡನ ಅಂತರ್ಯಾಮಿ ಎಂದು ಶ್ರೀಹರಿಯನ್ನು ಚಿಂತಿಸಿ ಪೂಜಿಸಬೇಕು. ಒಂದು ವರುಷದ ಕಾಲ ಯಾವ ಲೋಪವಿಲ್ಲದೆ ಈ ವ್ರತವನ್ನು ಮಾಡಲಾಗುವುದೇ? ಎಂದನು.

ಆಗ ದಿತಿಯು ಅಪ್ಪಣೆಯನ್ನು ಪಡೆದು ವ್ರತವನ್ನು ಪ್ರಾರಂಭಿಸಿದಳು. ದೈವಾನುಗ್ರಹದಿಂದ ಗರ್ಭವನ್ನೂ ಧರಿಸಿದಳು. ಇಂತಿರಲು ಇಂದ್ರನು ಇದನ್ನರಿತು ದಿತಿಯ ಆಶ್ರಮವನ್ನು ಸೇರಿದನು. ಆಕೆಯ ಶುಶ್ರೂಷೆಯಲ್ಲಿ ತೊಡಗಿನಿಂತನು. ನಿತ್ಯವು ವನದಿಂದ ಫಲಪುಷ್ಪ ಕಂದಮೂಲ ಸಮಿತ್ಕುಶಗಳನ್ನು ತಂದು ಒದಗಿಸಿದನು. ಪತ್ರಾಂಕುರಗಳನ್ನು, ಮೃತ್ತಿಕಾ ಜಲಗಳನ್ನು ಸಿದ್ಧಪಡಿಸಿ ದನು. 'ಈಕೆಯ ವ್ರತಚ್ಛಿದ್ರವನ್ನೆಂದು ಕಾಣುವೆ'ನೆಂಬ ಲವಲವಿಕೆಯಿಂದ ಇಂದ್ರನು ಚಿಂತಿಸುತ್ತಿ ರಲು, ಒಂದು ಸಂಧ್ಯೆಯಲ್ಲಿ ದಿತಿಯು ವಿಧಿ ಮೋಹಿತಳಾಗಿ, ಕಾಲನ್ನು ತೊಳೆಯದೆ ಬಂದು ಮಲಗಿದಳು. ತತ್‌ಕ್ಷಣವೇ ಯೋಗಬಲದಿಂದ ಇಂದ್ರನು ಆಕೆಯ ಗರ್ಭವನ್ನು ಪ್ರವೇಶಿಸಿ ಪಿಂಡವನ್ನು ಏಳು ಭಾಗಗಳಾಗಿ ತುಂಡರಿಸಿದನು. ಸಾಯದೆ ಇರುವುದನ್ನು ನೋಡಿ ಇಂದ್ರನು ಅವನ್ನು ಮತ್ತೆ ಏಳೇಳು ಹೋಳನ್ನಾಗಿರಿಸಿದನು. ಆಗಲೂ ಸಾಯದೆ ಆ ಮಕ್ಕಳು ರೋದಿಸುತ್ತಿ ರಲು ಶಚೀಪತಿಯು ಅವರನ್ನು ನೋಡಿ 'ಅಳಬೇಡಿ! ಅಳಬೇಡಿ' ಎಂದು ಸಮಾಧಾನಪಡಿಸಿದನು. ಅವರು ಇಂದ್ರನನ್ನು ಕಂಡು ಅಣ್ಣಾ! ನಾವು ನಿನ್ನ ಸೋದರರು. ನಮ್ಮನ್ನೇಕೆ ಕೊಲ್ಲುವೆ' ಎಂದರು. ಆಗ ಇಂದ್ರನು ಅವರು ತನ್ನ ಭಕ್ತರೆಂದರಿತು ಮರುತ್ತುಗಳೆಂದು ಅವರಿಗೆ ಹೆಸರಿಟ್ಟನು.

ರಾಜನ್! ಅಶ್ವತ್ಥಾಮಾಸ್ತ್ರದಿಂದ ಸುಡಲ್ಪಡದೆ ನೀನು ಉಳಿದಂತೆಯೇ ಆ ಮಕ್ಕಳು ವ್ರತಪ್ರೀತನಾದ ಶ್ರೀನಿವಾಸನ ದಯೆಯಿಂದ ಮೃತರಾಗದೆ ಇಂದ್ರಸೋದರರಾಗಿ ದೇವತೆಗಳೆನಿಸಿ ದರು. ಒಂದು ಸಲ ಪೂಜಿಸಲೂ ಒಲಿವ ಶ್ರೀಹರಿಯು ಒಂದು ವರ್ಷವೂ ಪೂಜಿಸಿದ ದಿತಿಯ ಒಲಿದು ಮಕ್ಕಳನ್ನುಳಿಸಿದನೆಂಬುದೇನು ಆಶ್ಚರ್ಯವು? ಶ್ರೀಹರಿಯು ಆ ಮರುತ್ತುಗಳನ್ನು ಇಂದ್ರನಿಂದ ಕಲೆಸಿ, ಪಂಚಾಶನ್ಮರುದ್ದೇವತೆಗಳನ್ನು ಮಾಡಿದನು. ಅವರು ಸೋಮಪಾನಾರ್ಹ ರಾದರು.

ಆಗ ದಿತಿಯು ಎಚ್ಚತ್ತು ಇಂದ್ರನಿಂದ ಕೂಡಿ ನಿಂತ ತನ್ನ ಮಕ್ಕಳನ್ನು ಕಂಡು ಅವರು ಸಜೀವರಾಗಿರುವುದರಿಂದ ಸಂತೋಷಿಸಿ ಇಂದ್ರನನ್ನು ನೋಡಿ ಹೀಗೆಂದಳು–

ಇಂದ್ರ! ಅದಿತಿಪುತ್ರರಿಗೆ ಭಯಂಕರನಾದ ಮಗನನ್ನು ಬೇಡಿ ಮಾಡಿದೆನು ಈ ವ್ರತವನ್ನು! ಆದರೆ ನಲವತ್ತೊಂಭತ್ತು ಸುತರೆಂತಾದರು? ನಿನಗೆ ತಿಳಿದಿದ್ದರೆ ನಿಜವನ್ನು ಹೇಳು.

ಆಗ ಇಂದ್ರನು ನುಡಿದನು–

ಅಂಬ! ನಿನ್ನ ಮನೋರಥವು ಎನಗೆ ಮಾರಕವೆಂದು ನಾನು ತಿಳಿದೆ. ವ್ರತವಿಘ್ನವನ್ನು ಕಂಡೆ. ಗರ್ಭಪಿಂಡವನ್ನೇಳಾಗಿ ಸೀಳಿದೆ. ಸಾಯದಿರಲು ಅವನ್ನು ಏಳೇಳಾಗಿ ಕಡಿದೆ. ನಿನ್ನ ವ್ರತ ಮಹಿಮೆಯನ್ನು ಏನೆಂದು ವರ್ಣಿಸಲಿ? ಅವರೂ ಸಾಯಲಿಲ್ಲ. ನನ್ನ ಸೋದರರಾಗಿ ನಿನ್ನಿಂದ ಪುಟ್ಟಿ ಹೊರಬಂದರು. ತಾಯೇ? ಏನನ್ನೂ ಬೇಡದ ಭಕ್ತರಿಗೆ ಶ್ರೀಹರಿಯು ತನ್ನನ್ನೇ ಕೊಟ್ಟು

ಕೊಳ್ಳುವನು.ಇಂತಹ ಲೋಕನಾಥನನ್ನು ಭಜಿಸಿ ಪಶ್ವಾದಿ ಸರ್ವಯೋನಿಗಳಲ್ಲಿಯೂ ಸಿಗಬಹುದಾದ ವೈಷಯಿಕ ಸುಖವನ್ನು ಬೇಡುವವನು ರಸಿಕನೇ? ಒಳ್ಳೆಯದು. ನನ್ನ ತಪ್ಪನ್ನು ಕ್ಷಮಿಸು! ಅರ್ಥಬುದ್ಧಿಯಾದೆ, ಧರ್ಮಬುದ್ಧಿಯಾಗಲಿಲ್ಲ. ಆದರೂ ದೇವರ ದಯದಿಂದ ನಿನ್ನ ಮಕ್ಕಳು ಉಳಿದರು.

ದಿತಿಯು ಇಂದ್ರನ ಸಾತ್ವಿಕಭಾವವನ್ನು ಕಂಡು ಸಂತೋಷಿಸಿ ಅವನನ್ನು ಕ್ಷಮಿಸಿದಳು. ಆಗ ಇಂದ್ರನು ಮರುದ್ದೇವಗಣವನ್ನು ಕರೆದುಕೊಂಡು ದಿತಿಗೆ ನಮಿಸಿ, ಸ್ವರ್ಗಲೋಕವನ್ನು ಸೇರ ಪೋದನು.

ಆ ಮಂಗಲಕರವಾದ ಮರುಜ್ಜನ್ಮವನ್ನು ನಿನ್ನ ಪ್ರಶ್ನಾನುಸಾರವಾಗಿ ಹೇಳಿರುವೆನು. ರಾಜನ್! ಇನ್ನೇನು ಕೇಳಲಿಚ್ಛಿಸುವೆ ಹೇಳು ಎಂದು ಶ್ರೀ ಶುಕನು ಪೇಳಿದನು.

## ೧೯. ಪುಂಸವನ ವ್ರತವಿಧಿಯು

ರಾಜನು ಕೇಳಿದಳು–

ಬ್ರಹ್ಮಜ್ಞಾನಿಯೇ! ವಿಷ್ಣುಪ್ರೀತಿಕರವಾದ ಪುಂಸವನ ವ್ರತವಿಧಾನವನ್ನೆಮಗೆ ಪೇಳು.

ಶ್ರೀಶುಕನು ಹೇಳಿದನು–

ಮಾರ್ಗಶಿರ ಮಾಸದಲ್ಲಿ ಶುಕ್ಲಪಕ್ಷದಲ್ಲಿ ಈ ವ್ರತವನ್ನಾರಂಭಿಸಬೇಕು. ಸ್ತ್ರೀಯು ತನ್ನ ಪತಿಯ ಅನುಮತಿಯಿಂದ ಮೋಕ್ಷಾದಿ ಸರ್ವಕಾಮಿತಪ್ರದವಾದ ಈ ವ್ರತವನ್ನು ಮಾಡಬಹುದು. ಮರುಜ್ಜನ್ಮ ಕಥೆಯನ್ನು ಕೇಳಿ ಬ್ರಾಹ್ಮಣರನ್ನು ಪೂಜಿಸಬೇಕು.

ಸ್ನಾತಾಲಂಕೃತಳಾಗಿ ಶುಭ್ರವಸನವನ್ನುಟ್ಟು ಹಸಿದು ಶ್ರೀದೇವಿಸಹಿತನಾದ ನಾರಾಯಣನನ್ನು ಪೂಜಿಸಬೇಕು. ನಿರಪೇಕ್ಷನೇ! ಪೂರ್ಣಕಾಮನೇ! ಲಕ್ಷ್ಮೀನಾಥ! ನಿನಗೆ ನಮಃ! ತೇಜಸ್ಸು, ಕೃಪೆ, ಸಂಪತ್ತು, ಓಜಸ್ಸು, ತುಷ್ಟಿ, ಮಹತ್ವ, ಎಂಬುವ ಆರು ಗುಣಗಳಿಂದ ಶೋಭಿತನಾಗಿ ಭಗವಂತ ನೆನಿಸುವ ನಿನಗೆ ನಮಃ . ವಿಷ್ಣುಪತ್ನೀ ಸರ್ವಲಕ್ಷಣಲಕ್ಷಿತೆ! ತಾಯೆ! ನಮಃ. ನನ್ನಲ್ಲಿ ಪ್ರೀತಳಾಗು! 'ಓಂ ನಮೋ ಭಗವತೇ ಮಹಾಪುರುಷನಿಗೆ ನಮಃ, ಲಕ್ಷ್ಮೀಶನಿಗೆ ನಮಃ' ಎಂಬ ಮಂತ್ರದಿಂದ ಶ್ರೀಶನಿಗೆ ಆಸನ, ಅರ್ಘ್ಯ, ಪಾದ್ಯ, ಆಚಮನ, ಸ್ನಾನ, ವಸ್ತ್ರ, ಯಜ್ಞೋಪವೀತ, ಭೂಷಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮಂಗಳಾರತಿ, ಮಂತ್ರಪುಷ್ಪಗಳನ್ನರ್ಪಿಸಬೇಕು. ಅದೇ ಮಂತ್ರದಿಂದ ಹತ್ತಾದರೂ ಆಹುತಿಗಳನ್ನು ಹೋಮಿಸಿ ಲೋಕಜನನೀಜನಕರಿಗೆ ವಂದಿಸುವುದು. ಭಕ್ತಿಯಿಂದ ವಿನಯದಿಂದ ಮನಃಪೂರ್ವಕವಾಗಿ ಆ ಮಂತ್ರವನ್ನು ದಶವಾರವಾದರೂ ಪಠಿಸಿ ನಿಂತು ನುತಿಸಲು ಬೇಕು.

ರಮಾನಾರಾಯಣನೇ! ನೀವು ಜಗತ್ತಿಗೆ ಒಡೆಯರಾಗಿರುವಿರಿ. ನಿಮ್ಮಿಂದ ಇವೆಲ್ಲವೂ ಪುಟ್ಟುವುದು. ಅಮ್ಮಾ ರಮೇ! ನಿನ್ನ ಶಕ್ತಿಯು ಅಗಾಧವೂ ಅಲಂಘ್ಯವೂ ಆಗಿದೆ. ಅಂತಹ ನಿನಗೆ ಸ್ವಾಮಿಯಾದ ಶ್ರೀಹರಿಯು ಸರ್ವೋತ್ತಮನಾಗಿರುವನು. ಹರೇ! ಸರ್ವಾಂತರ್ಯಾಮಿಯು, ಯಜ್ಞಫಲದನು ನೀನಾಗಿರೆ ನಿನ್ನ ಸತಿಯು ಇಚ್ಛಾಕ್ರಿಯಾರೂಪಿಯಾಗಿ ನಡೆಸುತ್ತಿರುವಳು. ಪ್ರಕೃತಿಗುಣಗಳೇ ದೇವಿಯ ಅಧೀನವು. ಗುಣಕಾರ್ಯಗಳನ್ನು ಫಲಿಸುವಂತೆ ಮಾಡುವವನು ನೀನು. ನೀನು ಜೀವರನ್ನೂ ನಿನ್ನ ರಮೆಯು ಶರೀರೇಂದ್ರಿಯಗಳನ್ನೂ ನಡೆಸು

ವಿ. ನಾಮರೂಪಗಳನ್ನಾಕೆಯು ಕೊಟ್ಟಾಗ ಅವುಗಳ ನಿಶ್ಚಯ ಜ್ಞಾನವು ನಿನ್ನಿಂದಾಗುವುದು. ನೀವೀರ್ವರು ಸರ್ವಚರಾಚರ ಲೋಕಪ್ರಭುಗಳು– ಇದು ಸತ್ಯವು. ಈ ಸತ್ಯದಂತೆ ನಿನ್ನ ಅನುಗ್ರಹವು ಸತ್ಯವಾಗಿದೆ.

ಇಂತು ಶ್ರೀದೇವಿಯನ್ನು ಶ್ರೀನಿವಾಸನನ್ನು ನುತಿಸಿ, ನೈವೇದ್ಯಾದಿಗಳನ್ನು ಅರ್ಪಿಸಿ, ಆಚಮನವನ್ನು ಸಮರ್ಪಿಸಿ, ಪುನಃ ಪೂಜೆಯನ್ನು ಮಾಡಬೇಕು. ವಿಷ್ಣುಸಾನ್ನಿಧ್ಯಬುದ್ಧಿಯಿಂದ ಪೂಜಾಶೇಷದ್ರವ್ಯವನ್ನಾಘ್ರಾಣಿಸಿ ಅನಂತರದಲ್ಲಿ ಗಂಡನನ್ನೂ ಶ್ರೀಹರಿಸನ್ನಿಧಾನಪಾತ್ರನೆಂದೆಣಿಸಿ ಪೂಜಿಸಬೇಕು. ಪತಿಯು ಕೂಡ ತನ್ನ ಪತ್ನಿಯಲ್ಲಿ ಆದರದಿಂದ ಸರ್ವ ಪದಾರ್ಥಗಳನ್ನು ಒದಗಿಸಿಕೊಡಬೇಕು. ಪತಿಯು ಪೂಜಿಸಿದರೆ ಪತ್ನಿಗೆ ವ್ರತಫಲವು ತಪ್ಪದೇ ಸಿಗುವುದು. ರಜೋದರ್ಶನಾದಿ ಸಮಯಗಳಲ್ಲಿ ಪತಿಯೇ ಶ್ರದ್ಧಾಭಕ್ತಿಗಳಿಂದ ಈ ವ್ರತವನ್ನು ಮಾಡಬಹುದು.

ಈ ವ್ರತವು ಶ್ರೀಹರಿ ಪ್ರೀತಿಕರವಾಗಿದೆ. ಇದನ್ನು ಹಿಡಿದು ಮುಗಿಸದೆ ಬಿಡಬಾರದು. ನಿಯಮದಿಂದ ಶ್ರೀಹರಿಯನ್ನು ಪೂಜಿಸಿದ ನಂತರ ವಿಪ್ರದಂಪತಿಗಳಿಗೆ ವಸ್ತ್ರಾಲಂಕಾರ ಭೋಜನಾದಿಗಳನ್ನರ್ಪಿಸಿ ಸಂತೋಷಪಡಿಸಬೇಕು. ದೇವನನ್ನು ಭುಜಂಗಿಸಿ ನೈವೇದ್ಯ ಶೇಷವನ್ನು ತಾನು, ತನ್ನ ಪತಿಯು ಸ್ವೀಕರಿಸಬೇಕು. ಇಂತು ಒಂದು ವರ್ಷದ ಪುಂಸವನ ವ್ರತವನ್ನು ಮಾಡಿ ಕಾರ್ತಿಕಮಾಸದ ಕೊನೆಯ ದಿವಸದಲ್ಲಿ ಮುಗಿಸಬೇಕು. ಆ ದಿನ ಪ್ರಾತಃಕಾಲದಲ್ಲಿ ಹಾಲಿನಿಂದ ಅನ್ನವನ್ನು ಮಾಡಿ, ತುಪ್ಪವನ್ನೂ ಕಲಿಸಿ ಆ ಚರುವಿನಿಂದ ಹನ್ನೆರಡಾಹುತಿಗಳನ್ನರ್ಪಿಸಬೇಕು. ಕೇಶವಾದಿ ದ್ವಾದಶಮೂರ್ತಿಗಳನ್ನು ನೆನೆದು ಹನ್ನೆರಡು ಬ್ರಾಹ್ಮಣದಂಪತಿಗಳಿಗುಣಿಸಿ ತಿಲ ಗೋ ಭೂ ಹಿರಣ್ಯಾದಿ ದಾನಗಳನ್ನು ಕೊಟ್ಟು ಅವರ ಆಶೀರ್ವಾದವನ್ನು ಸ್ವೀಕರಿಸಬೇಕು. ಅವರಿಗೆ ನಮಸ್ಕರಿಸಿ, ಅವರ ಅಪ್ಪಣೆಯನ್ನು ಪಡೆದು ತಾನು ಭುಂಜಿಸಬೇಕು. ಆಚಾರ್ಯನನ್ನು ಪೂಜಿಸಿ ಹುತಶೇಷ ಚರುವನ್ನು ಗಂಡನು ತನ್ನ ಸತಿಗೆ ಕೊಡಲು ಅವಳು ಸುಪ್ರಜಳು ಸೌಭಾಗ್ಯಳುಆಗಿ ಸುಖಿಸುವಳು. ಈ ವ್ರತದಿಂದ ಸಿದ್ಧಿಸದ ಅಭೀಷ್ಟಗಳೇ ಇಲ್ಲ. ಇದನ್ನು ಮಾಡಿದ ತರುಣಿಯು ಚಿರಂಜೀವರಾದ ಪತಿಪುತ್ರರನ್ನು ಪೊಂದುವಳು. ಸಂಪತ್ಸೌಭಾಗ್ಯಗಳನ್ನು ಕೀರ್ತಿಯನ್ನು ಪೊಂದಿ ಸುಖಿಸುವಳು. ಕನ್ಯೆಯು ಈ ವ್ರತವನ್ನು ಮಾಡಿದರೆ, ಸುಲಕ್ಷಣ ಪತಿಯನ್ನು ಪಡೆಯುವಳು. ಮೃತಪ್ರಜಳಾದ ವನಿತೆಯು ಮಾತಲು ಜೀವತ್ಪ್ರಜಳಾಗುವಳು. ದರಿದ್ರಳು ಧನೇಶ್ವರಿಯಾಗುವಳು. ಕುರೂಪಿಯು ಸುರೂಪಳೆನಿಸುವಳು. ರೋಗಾರ್ತರು ಆರೋಗ್ಯವನ್ನು ಪಡೆಯುವರು. ಶಕ್ತಿಹೀನರು ಬಲವಂತರಾಗುವರು.

ಮಂಗಲಕಾರ್ಯಗಳಲ್ಲಿ ಈ ಮರುಜ್ಜನ್ಮ ಕಥೆಯನ್ನು ಪಠಿಸಿದರೆ, ಕಾರ್ಯಸಿದ್ಧಿಯು ಪಿತೃದೇವ ಋಷಿಪ್ರೀತಿಯೂ ಆಗುವುದು. ಶ್ರೀಹರಿಯು ಶ್ರೀದೇವಿಯು ಭಕ್ತನರ್ಪಿಸಿದ ಹೋಮದ್ರವ್ಯದಿಂದಲು ಅವನ ಭಕ್ತಿಯಿಂದಲು ಪ್ರೀತರಾಗಿ ಸಮಸ್ತ ಕಾಮಿತಾರ್ಥಗಳನ್ನಿತ್ತು ಸಲಹುವರು. ರಾಜನ್! ಈ ಪುಣ್ಯಕರವಾದ ಮರುಜ್ಜನ್ಮ ಕಥೆಯನ್ನು ನಿನಗೆ ನಾನು ನಿರೂಪಿಸಿದೆನು.

ಅನೇಕಜನ್ಮಾರ್ಜಿತಪುಣ್ಯಸಂಚಯಾತ್ ಮಹಜ್ಜನಾಂಘ್ರ್ಯಂಬುಜಗಂಧಸೇವನಾತ್।
ಷಷ್ಠಂ ಪರಿಷ್ಕಂ ವಿಲಿಖನ್ ಕೃತಾರ್ಥೋಽಭವಂ ಗುರೋರದ್ಯ ಹರೇಃ ಕೃಪಾಬಲಾತ್॥

ಷಷ್ಠಸ್ಕಂಧವು ಸಂಪೂರ್ಣವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಸಪ್ತಮ ಸ್ಕಂಧವು

|| ಹರಿಃ ಓಂ ||

### ೧. ಶ್ರೀಶನ ಸಮತೆ

ರಾಜನು ಕೇಳದನು–

ಸ್ವಾಮಿ! ಶ್ರೀ ನಾರಾಯಣನಿಗೆ ಪಕ್ಷಪಾತವಿಲ್ಲವಷ್ಟೇ? ಸಕಲ ಭೂತಾಂತರ್ಯಾಮಿಯು ಮತ್ತು ಪ್ರಿಯನು ಆದ ಶ್ರೀಹರಿಗೆ ಇಂದ್ರನ ಪಕ್ಷವನ್ನು ವಹಿಸಿ, ದೈತ್ಯರನ್ನು ಕೊಲ್ಲುವುದರಿಂದ ವೈಷಮ್ಯವು ಬರುವುದು. ನಿತ್ಯಾಭಿವ್ಯಕ್ತವಾದ ಸ್ವರೂಪಾನಂದ ಜ್ಞಾನಾನುಭವನಾದ ಪ್ರಭುವಿಗೆ ದೇವತೆಗಳಿಂದ ಪ್ರಯೋಜನವೂ ಇಲ್ಲ. ಪ್ರಾಕೃತ ಗುಣರಹಿತನಾದ್ದರಿಂದ ದೈತ್ಯರ ದೆಶೆಯಿಂದಾಗುವ ಹಾನಿಯೂ ಇಲ್ಲ. ಅಂದ ಮೇಲೆ ಶ್ರೀಶನು ದೈತ್ಯರನ್ನು ದ್ವೇಷದಿಂದ ಕೊಂದನೆಂಬುವ ವಿಷಯದಲ್ಲಿ ನಮಗೆ ಸಂಶಯವಿದೆ. ದಯ ಮಾಡಿ ಈ ಸಂಶಯವನ್ನು ಪರಿಹರಿಸು. ನಿರ್ದೋಷ ಜ್ಞಾನಸುಖರೂಪನಾದ ಶ್ರೀಹರಿಯ ಮಹಿಮೆಯನ್ನು ವರ್ಣಿಸು.

ಶ್ರೀಶುಕನಿಂತು ನುಡಿದನು –

ರಾಜನ್ ! ಚೆನ್ನಾಗಿ ಕೇಳಿದೆ. ವೈಷಮ್ಯನೈರ್ಘೃಣ್ಯಾದಿ ದೋಷಗಂಧವಿಲ್ಲದ ಹರಿಯ ಚರಿತವು ಭಕ್ತಿವರ್ಧಕವಾಗಿದೆ. ಭಾಗವತರ ಕಥೆಯಾದರೂ ಶ್ರೀಹರಿಯ ಚರಿತೆಯಿಂದ ಕೂಡಿ ಶ್ರವಣೀಯವಾಗಿರುವುದು. ಅಂತೆಯೇ ನಾರದಾದಿ ಮುನಿವರರು ಪರಮಪುಣ್ಯವು, ಪಾಪಲತಾಲವಿತ್ರವು, ತ್ರೈಲೋಕ್ಯಪವಿತ್ರವು ಆದ ಶ್ರೀ ವಿಷ್ಣುಚರಿತ್ರವನ್ನು ಪಾಡುತ್ತಿರುವರು. ಶ್ರೀಕೃಷ್ಣನಿಗೂ, ಶ್ರೀವೇದವ್ಯಾಸನಿಗೂ ನಮಸ್ಕರಿಸಿ ಅವರ ಅನುಗ್ರಹದಿಂದ ಶ್ರೀಹರಿಯ ಮಹಿಮೆಯನ್ನು ನಿನಗೆ ವರ್ಣಿಸುವೆನು.

ಶ್ರೀಹರಿಯು ಪ್ರಕೃತಿಗುಣರಹಿತನು. ಜನ್ಮಾದಿಗಳವನಿಗಿಲ್ಲ. ಶಶ್ವದೇಕಪ್ರಕಾರನಾದ ಸ್ವಾಮಿಯು ತನ್ನ ಇಚ್ಛೆಯಿಂದ ಪ್ರಕೃತಿನಿರ್ಮಿತ ವಿವಿಧ ಶರೀರಧಾರಿಗಳಾಗಿರುವ ದೇವದಾನವ ಮಾನವರನ್ನು ಪೊಕ್ಕು ಅವರಿಗೆ ಜಯಾಪಜಯಗಳನ್ನು ಕೊಡುವಾಗ ಬಾಧ್ಯನು ಬಾಧಕನೂ ಎನಿಸುವನು. ಸ್ವತಃ ಅವನು ಬಾಧ್ಯನೂ ಅಲ್ಲ, ಬಾಧಕನೂ ಅಲ್ಲ. ಸತ್ತ್ವ, ರಜಸ್ಸು, ತಮಸ್ಸು ಎಂಬುವ ಮೂರು ಗುಣಗಳು ಪ್ರಕೃತಿಗೆ ಸೇರಿದವಾಗಲಿ ಶ್ರೀಹರಿಗೆ ಅವುಗಳ ಲೇಪವಿರುವುದಿಲ್ಲ. ಆ ಗುಣಗಳಿಗೆ ವೃದ್ಧಿಹ್ರಾಸಗಳು ಆಗುತ್ತಿರುವುವು. ಆ ಗುಣಶಕ್ತಿಗಳ ಪ್ರೇರಕನಾದ ಶ್ರೀಹರಿಯು ಸತ್ತ್ವಗುಣೋನ್ನಾಹವಾದಾಗ ದೇವತೆಗಳಿಗೂ, ರಜೋಗುಣವೃದ್ಧಿಯಾದಾಗ ಅಸುರ ಮಾನವರಿಗೂ, ತಮೋಗುಣೋನ್ನಾಹನಾದಾಗ ಯಕ್ಷರಾಕ್ಷಸರಿಗೂ ಜಯವನ್ನುಂಟು ಮಾಡುತ್ತಿರುವನು.

ಆಯಾ ಕಾಲದಲ್ಲಿ ತತ್ತದ್ಗುಣಾನುಸಾರವಾಗಿ ಫಲಪುಷ್ಪಗಳ ವೃದ್ಧಿಹ್ರಾಸಗಳನ್ನು ಕೊಟ್ಟು ಕಾಲನಿಯಾಮಕನಾಗಿರುವಂತೆ, ಆ ಗುಣತ್ರಯಗಳ ಉನ್ನಾಹವನ್ನನುಸರಿಸಿ, ತ್ರಿವಿಧ ಜೀವರಿಗೆ ಜಯ ಸುಖಾದಿಗಳನ್ನು ಕೊಟ್ಟು ತಾನು ನಿರ್ಲಿಪ್ತನಾಗಿರುವನು. ದೇಹೇಂದ್ರಿಯ ನಿಯಾಮಕನಾಗಿ ಹೃದಯದಲ್ಲಿದ್ದ ಅವನನ್ನು ಯಾರೂ ಮಥನಮಾಡದ ಮುಂಚೆ ಮೊಸರಿನಲ್ಲಿದ್ದ ಬೆಣ್ಣೆಯನ್ನಂತೆ, ಸ್ಪಷ್ಟವಾಗಿ ಕಾಣಲಾರದು. ಅವನ ಅನುಗ್ರಹದಿಂದ ಮಾತ್ರ ಅವನ ದರ್ಶನವಾಗುವುದು. ಬ್ರಹ್ಮಾದಿ ಜ್ಞಾನಿಗಳು ಚೆನ್ನಾಗಿ ಶಾಸ್ತ್ರವಿಚಾರವನ್ನು ಮಾಡಿ ತಮ್ಮ ಅಂತರ್ಯಾಮಿಯಾದ ಹರಿಯನ್ನು ಕಂಡಿರುವರು.

ಶ್ರೀಶನು ತನ್ನ ವಿವಿಧ ನಿವಾಸಭೂತರಾದ ಜೀವರನ್ನು ಸೃಜಿಸಲು ರಜವನ್ನು, ಸುರ ನರತಿರ್ಯಗ್ರೂಪದಿಂದ ಅವತರಿಸಿ ಪಾಲಿಸಲು ಸತ್ವವನ್ನು, ಪ್ರಳಯದಲ್ಲಿ ಸಂಹರಿಸಲು ತಮಸ್ಸನ್ನು ಸ್ವೀಕರಿಸಿ ತ್ರಿಗುಣಪ್ರೇರಕನೆನಿಸುವನು. ಆಯಾ ಕಾಲದಲ್ಲಿ ಕಾಲನಾಮಕನಾಗಿ ಕರ್ಮಫಲಕಪಾಚಕನಾಗಿರುವನು. ಕಾಲಕರ್ಮಗಳಿಗೂ, ಪ್ರಧಾನಪುರುಷರೆನಿಸಿರುವ ಲಕ್ಷ್ಮೀವಿರಿಂಚರಿಗೂ, ಪ್ರಭುವಾದ ನಾರಾಯಣನು ಮಹತ್ಪದಾರ್ಥಗಳಲ್ಲಿ ಮಹತ್ತಾಗಿ, ಅಣುಗಳಲ್ಲಿ ಅಣುವಾಗಿ ನೆಲಸಿರುವನು. ಕಾಲಕರ್ಮದ್ರವ್ಯಗಳಲ್ಲಿರುವ ಶಕ್ತಿಯು ಶ್ರೀಹರಿ ಕೊಟ್ಟದ್ದು – ಹಾಗೂ ತದಧೀನವೂ ಆಗಿದೆ.

ಸ್ವಾಭಾವಿಕವಾಗಿ ಸಾತ್ವಿಕರು ಶ್ರೀಹರಿಪ್ರಿಯರು. ತಾಮಸರು ಅಪ್ರಿಯರು – ರಾಜಸರು ಪ್ರಿಯಾಪ್ರಿಯರು. ಸ್ವಭಾವಯೋಗ್ಯತೆಯನ್ನು ಅತಿಕ್ರಮಿಸಿದ ಪ್ರಿಯತ್ವ ಶತ್ರುತ್ವಾದಿಗಳು ಶ್ರೀಹರಿಗಿಲ್ಲ; ಅಂತೆಯೇ ಅವನು ಸಮನೆನಿಸಿರುವನು. ಸುರಪ್ರಿಯನಾದ ಹರಿಗೆ ಜೀವರಿಗಿದ್ದಂತೆ ಜ್ವಲನಾತ್ಮಕವೂ, ಕೇವಲ ದೇಹಮಾತ್ರ ನಿಮಿತ್ತಕವು ಆದ ದ್ವೇಷವು ಇಲ್ಲ. ಸುರಪ್ರಿಯನಾದ್ದರಿಂದ ಸುರರಿಗೆ ಜಯವನ್ನು ಕೊಡಿಸುವನು; ಅವರ ಶತ್ರುಗಳಾದ ಅಸುರರಿಗೆ ಅಪಜಯವನ್ನು ಮರಣವನ್ನು ಕೊಡಿಸುವನು. ಸುರರಿಗೆ ಜಯವನ್ನು ಕೊಡುವುದರಿಂದಲೇ ಲೋಕದ ಸ್ಥಿತಿಯು ರಕ್ಷಣೆಯು ನಡೆಯುತ್ತಿದೆ. ಅಸುರರು ಜಯಿಸಲು ಲೋಕ ನಾಶವಾಗುವುದೆಂದು ತಿಳಿದೇ ಸ್ವಾಮಿಯು ಸುರಪಕ್ಷವನ್ನು ವಹಿಸಿ ದುಷ್ಟತಾಮಸರನ್ನು ವಧಿಸುವನು.

ಈ ವಿಷಯದಲ್ಲಿ ನಾರದನು ಧರ್ಮರಾಜನಿಗೆ ಪೇಳಿದ ಪಾವನ ಚರಿತೆಯನ್ನು ನಿನಗೆ ಪೇಳವೆನು.

ರಾಜಸೂಯಯಾಗದಲ್ಲಿ ಚಕ್ರದಿಂದ ಸಂಹೃತನಾದ ಶಿಶುಪಾಲನು ಶ್ರೀಹರಿಚರಣ ಸಾಯುಜ್ಯವನ್ನು ಪೊಂದಿದುದನ್ನು ನೋಡಿ ಆಶ್ಚರ್ಯದಿಂದ ಧರ್ಮರಾಜನು ನಾರದನನ್ನು ಕೇಳಿದನು. ಮುನಿಗಳೂ, ಮತ್ತು ಮುನಿಜನಪ್ರಿಯನಾದ ಗೋವಿಂದನು ಅಲ್ಲೇ ವಿರಾಜಮಾನನಾಗಿರಲು ಧರ್ಮರಾಜನಿಂತೆಂದನು–

ಭಕ್ತಿಯೇ ಮುಕ್ತಿಕಾರಣವೆಂದು ನಂಬಿ ಭಜಿಸುವ ಏಕಾಂತಭಕ್ತರಿಗೂ ದುರ್ಲಭವೆನಿಸಿದ ಶ್ರೀವಾಸುದೇವ ಪರತತ್ತ್ವಪಾದಾರವಿಂದ ಪ್ರವೇಶವು, ದ್ವೇಷದೂಷಿತನಾದ ಶಿಶುಪಾಲನಿಗೆ ಹೇಗೆ ದೊರೆಯಿತು? ನಮಗೆಲ್ಲರಿಗೂ ಈ ವಿಷಯವನ್ನು ತಿಳಿಯಬೇಕೆಂಬ ಕುತೂಹಲವಿದೆ. ಭಗವನ್ನಿಂದೆಯು ಸಜ್ಜನರಿಗೆ ಕರ್ಣಶೂಲವೆನಿಸುವುದಲ್ಲವೇ? ಶ್ರೀಹರಿ ನಿಂದೆಯಿಂದ ವೇನನು ಬ್ರಾಹ್ಮಣಕೋಪಕ್ಕೀಡಾಗಿ ಅಂಧಃತಮಸ್ಸನ್ನು ಸೇರಿದನು. ಈ ಶಿಶುಪಾಲನೋ ಮಹಾಪಾಪಿಯು. ತೊದಲುನುಡಿಗಳನಾಡಲು ಮೊದಲಾದಂದಿನಿಂದ ಗೋವಿಂದನ ನಿಂದೆಯನ್ನು ಮಾಡಿದ ಈ ದುರ್ಮಾರ್ಗನಿಗೆ, ಹಾಗೂ ಇವನ ತಮ್ಮನಾದ ದಂತವಕ್ತ್ರನಿಗೆ ನಾಲಿಗೆಗೆ ತೊನ್ನು ಬಡಿಯಲಿಲ್ಲ!

ಪರಮಾತ್ಮನನ್ನು ಬೈದ ಈ ಪಾಪಿಗಳಿಗೆ ತಮಸ್ಸಾದರೂ ಆಗಲಿಲ್ಲ! ನಾವೆಲ್ಲರೂ ನೋಡಿದಂತೆ ಶಿಶುಪಾಲನು ಸಾಯುಜ್ಯವನ್ನು ಪೊಂದಿದನು. ಆದ್ದರಿಂದ ವಾತಚಲಿತ ದೀಪಕಳಿಕೆಯಂತೆ ನನ್ನ ಮನವು ಸಂಶಯದಿಂದ ತೂಡಾಗುತ್ತಿದೆ. ಪೂಜ್ಯನೇ! ಈ ಆಶ್ಚರ್ಯಕರ ಘಟನೆಗೆ ಕಾರಣವೇನು. ಪೇಳು!

ಆಗ ನಾರದನು ಸಂತೋಷದಿಂದ ಸಭಾಜನರೆಲ್ಲರು ಕೇಳುತ್ತಿರಲು ಇಂತು ನುಡಿದನು: ಜಯವಿಜಯರು ಸಾತ್ವಿಕರು. ಶ್ರೀಹರಿದ್ವಾರಪಾಲಕರು. ಭಕ್ತರಾದ ಕಾರಣಹರಿಗೆ ಪ್ರಿಯರು. ಅವರಿಗೆ ಸನಕಾದಿ ಶಾಪದಿಂದ ಅಸುರಜನ್ಮವು ಬಂದಿತು. ಆಗಲೂ ಕೆಲವೇಳೆ ಅವರು ಭಕ್ತಿಯನ್ನೂ ತೋರಿದರು. ಕೆಲವೇಳೆ ಅವರಿಂದ ನಡೆದ ನಿಂದನಾದಿಗಳು ಅವರಲ್ಲಿದ್ದ ಅಸುರ ಕೃತವಾದುದರಿಂದ ಶ್ರೀಹರಿಯು, ಅವರನ್ನು ಕ್ಷಮಿಸಿ ತನ್ನವರಾದ ಕಾರಣ, ಅಸುರ ಬಂಧನದಿಂದ ಬಿಡಿಸಲು ಸಂಹರಿಸಿದನು. ಪುನಃ ತನ್ನ ಮನೆಗೆ ಕರೆದುಕೊಂಡನು.

ದೇಹಾದ್ಯಭಿಮಾನವಂತನಿಗೆ ನಿಂದನಾದಿಗಳಿಂದ ಮನಃಖೇದವಾಗಿ ಕೋಪವು ಉಕ್ಕೇರಿ ಬರುವುದು ನಿಜ. ಆದರೆ ಕಲೇವರವನ್ನು ಕಂಡು ಅದಕ್ಕಾದ ನಿಂದನ, ಸ್ತುತಿ, ಸತ್ಕಾರ, ತಿರಸ್ಕಾರಗಳಿಂದ ಖೇದಮೋದಗಳನ್ನು ಪೊಂದುವ ಜೀವರಂತೆ ದೇಹಾಭಿನ್ನನು, ಅಪ್ರಾಕೃತನು, ಸಚ್ಚಿದಾನಂದಮೂರ್ತಿಯು ಆದ ಶ್ರೀಹರಿಗೆ ದೇಹಾಭಿಮಾನವು ಇಲ್ಲದಿರುವುದರಿಂದ ಖೇದಾದಿ ಗಳೂ ಇಲ್ಲ. ಕೋಪವಂತೂ ಮೊದಲೇ ಇಲ್ಲ. ಹಿಂಸೆಯಿಂದ ನೋವಾಗುವುದು, ದೇಹದಂಡ ಪಾರುಷ್ಯಗಳಿಂದ ಕುಗ್ಗುವುದು, ಸಿಟ್ಟಾಗಿ ದ್ವೇಷಿಸುವುದು ಎನ್ನುವುದೆಲ್ಲವು ನಾನು, ನನ್ನದೆಂಬ ಜೀವರಿಗೇ ಹೊರತು ಶ್ರೀಹರಿಗಿಲ್ಲ. ದೇಹವೇ ಅವರಲ್ಲ; ಆದರೂ ದೇಹವೇ ನಾನೆಂಬ ಅವಿವೇಕವು, ಅಭಿಮಾನವನ್ನು ಪುಟ್ಟಿಸುವುದು. ಆ ಅವಿವೇಕವೇ ಕೋಪಾದಿ ಕಾರಣವಾಗಿದೆ. ಆನಂದದೇಹನಾದ ಶ್ರೀಹರಿಗೆ ದುರಭಿಮಾನವಿಲ್ಲ ಮತ್ತು ತತ್ಕೃತವಾದ ಕೋಪದ್ವೇಷಾದಿಗಳೂ ಇಲ್ಲ. ದೇಹವು ಸತ್ತರೆ ನಾನು ಸತ್ತೆನೆನ್ನುವುದು ಅಭಿಮಾನ ಕಾರ್ಯವೇ ಸರಿ! ಸರ್ವಸ್ವಾಮಿಯಾದ ನಾರಾಯಣನು ಸರ್ವಕರ್ತನಾದರೂ ಕರ್ಮಲೇಪವಿಲ್ಲ. ಅವತರಿಸುವನಾದರೂ ಜನ್ಮವಿಲ್ಲ! ಭೂತ್ಯಾಗವನ್ನು ಮಾಡುವನಾದರೂ ಮರಣವಿಲ್ಲ. ಅಂತಹವನಿಗೆ ಹಿಂಸೆಯು ದೈತ್ಯರಿಂದಾದೀತೇ? ಅವರ ಭಯವು ಅವನಿಗೆ ಉಂಟೇ? ಆದ್ದರಿಂದ ಶ್ರೀಹರಿಯು ಭಕ್ತವತ್ಸಲನು. ದೈತ್ಯರಲ್ಲಾದರೂ ಸಾತ್ವಿಕರಾದ ನನ್ನ ಭಕ್ತರನ್ನು ತಪ್ಪದೆ ಅವರ ಅಪರಾಧಗಳನ್ನೆಣಿಸದೆ ಕ್ಷಮಿಸಿ ಸದ್ಗತಿಯನ್ನು ಕೊಡುವನು. ದೈತ್ಯಾದಿ ಸುಜೀನರು ವೈರನಿಮಿತ್ತಕವಾಗಿ ಮನಃಪ್ರವಣತೆಯಿಂದ ಭಜಿಸಿದರೂ, ಭಯದಿಂದ ಸ್ಮರಿಸಿದರೂ, ಕಾಮದಿಂದ ಒಲಿಸಿದರೂ, ಸ್ನೇಹದಿಂದ ಲಾಲಿಸಿದರೂ ಸಾಕೆಂದು ಹಿಗ್ಗಿ ಶ್ರೀಹರಿಯು ಅವರ ದ್ವೇಷಾದಿಗಳನ್ನು ಹಂಸವ ನೀರನ್ನಂತೆ ಬಿಟ್ಟು, ಕ್ಷೀರವನ್ನಂತೆ ಅವರ ಅನನ್ಯ ಭಕ್ತಿಯನ್ನು ಸ್ವೀಕರಿಸಿ ಸಲಹುವನು.

ತಮೋಯೋಗ್ಯನು ನಿತ್ಯದ್ವೇಷದಿಂದ ದ್ವೇಷವಿಷಯ ವಸ್ತುವಾದ ಶ್ರೀಹರಿಯಲ್ಲಿ ಅಭಿನಿವೇಶವನ್ನು ಪೊಂದಿದಂತೆ, ಮುಕ್ತಿಯೋಗ್ಯನು ನಿತ್ಯಭಕ್ತಿಯಿಂದ ಭಕ್ತಿವಿಷಯವಾದ ಶ್ರೀಹರಿಯಲ್ಲಿ ಅಭಿನಿವೇಶವನ್ನು ಪೊಂದುವುದಷ್ಟು ಸುಲಭವಲ್ಲ. ಭಕ್ತರು ಬಹುವಿರಲವೆಂದೇ ನನ್ನ ನಿಶ್ಚಯವು.

ಶಾಮವೆಂಬುವ ಕೀಟವನ್ನು ಪಿಡಿದು ಮಣ್ಣಿನ ಗೂಡಿನಲ್ಲಿಟ್ಟು ಮುಚ್ಚುವ ಕಣಜದಂತೆ ಜೀವವನ್ನು ಶ್ರೀಹರಿಯ ಶರೀರಗಳಲ್ಲಿಡುವನು. ಕಣಜವನ್ನು ದ್ವೇಷಿಸುವ ಕೀಟದಂತೆ ಜೀವನು

ಮೊದಲು ಶ್ರೀಹರಿಯನ್ನು ದ್ವೇಷಿಸಿದರೂ ಆಹಾರಾದಿಗಳನ್ನಿತ್ತು ಪೋಷಿಸುವುದನ್ನು ಕಂಡು ಪ್ರೇಮಿಸಲಾರಂಭಿಸುವನು. ಅದರ ಗಾನವು ಕರ್ಣಮನೋಹರವೆನಿಸಿ ಅದರ ಬರುವಿಕೆಯನ್ನೇ ಬಯಸುವ ಹುಳದಂತೆ ಜೀವನು ಪ್ರೇಮಪಕ್ವವಾಗಿ ಶ್ರೀಹರಿಶ್ರವಣವನ್ನು ಮಾಡಿ ಶ್ರೀಹರಿದರ್ಶನವನ್ನೇ ಕೋರುವವನು. ಕೊನೆಗೆ ಹುಳವು ಕೂಡ ಕಣಜದಂತೆ ತಾನೂ ಮಾರ್ಪಟ್ಟು ಇನ್ನೊಂದು ಕಣಜವೇ ಆಗಿ ಗೂಡನ್ನೊಡೆದುಕೊಂಡು ಹಾರಿಹೋಗುವಂತೆಯೇ ಜೀವನು ಯೋಗ್ಯನಾದರೆ, ತಾನು ಶ್ರೀಹರಿಯಂತೆ ಸಾರೂಪ್ಯವನ್ನು ಪೊಂದಿ, ಶರೀರಾದಿ ಬಂಧಮುಕ್ತನಾಗಿ ಸುಖಿಸುವನು. ಇಂತು ವೈರಕಾರಣವಾಗಿ ಪುಟ್ಟಿದ ನಿರಂತರಾನುಸಂಧಾನರೂಪ ಭಕ್ತಿಯಿಂದ ಸಕಲ ಪಾಪಮುಕ್ತರಾಗಿ ಚೈದ್ಯಾದಿಗತಸುಜೀವರು ಮುಕ್ತಿಯನ್ನೂ, ತದನುನಿಷ್ಟ ದುರ್ಜೀವರು ದ್ವೇಷಕೃತ ಪಾಪದಿಂದ ತಮಸ್ಸನ್ನೂ ಪೊಂದಿದರು. ಕಾರಣವು- ಕಾಮವಾಗಲಿ, ಸ್ನೇಹವಾಗಲಿ, ಭಯವಾಗಲಿ, ದ್ವೇಷವಾಗಲಿ ಚಿಂತೆಯಿಲ್ಲ; ಶ್ರೀ ಹರಿ ನಿರಂತರ ಸ್ಮರಣ ಭಕ್ತಿಯನ್ನು ಪುಟ್ಟಿಸಿದರೆ ಅಂತಹ ಭಕ್ತಿಯಿಂದ ಸದ್ಗತಿಯು ಆಗುವುದು.

ಗೋಪಿಕೆಯರು ಕಾಮದಿಂದಲು, ಕಂಸನು ಭಯದಿಂದಲು, ಚೈದ್ಯನು ದ್ವೇಷದಿಂದಲು, ಯದುಗಳು ಬಂಧುತ್ವದಿಂದಲು, ನೀವು ಸ್ನೇಹದಿಂದಲು, ಶ್ರೀಹರಿಯನ್ನು ಪೊಂದಿರುವಿರಿ. ಕೊನೆಗೆ ಕಾರಣವಾದ ದ್ವೇಷಾದಿಗಳಳಿಸಿಪೋಗಲು ಭಕ್ತಿಯೇ ಸ್ಥಿರವಾಗುವುದು. ನಾವು ಕೇವಲ ಭಕ್ತಿಯನ್ನೇ ಆಶ್ರಯಿಸಿರುವೆವು. ಧರ್ಮರಾಜಾ! ವೇನನಿಗೆ ಈ ಐದು ವಿಧ ಭಕ್ತಿಕಾರಣಗಳಲ್ಲೊಂದಾದರೂ ಇರಲಿಲ್ಲ. ಕೇವಲ ದ್ವೇಷದಿಂದ ಆ ಪಾಪಿಯು ತಮಸ್ಸನ್ನೇ ಪೊಂದಿದುದು ಸರಿಯೇ! ಶಿಶುಪಾಲನು ನಿಮ್ಮ ಚಿಕ್ಕಮ್ಮನ ಮಗನಲ್ಲವೇ? ದಂತವಕ್ರವೂ ಅಷ್ಟೇ! ಅವರೀರ್ವರು ಶ್ರೀಹರಿಪಾರ್ಷದರು. ವಿಪ್ರಶಾಪದಿಂದ ಪದಚ್ಯುತರಾದಿ ಅಸುರಾವೇಶದೂಷಿತರಾಗಿದ್ದರು, ಎನ್ನಲು ಧರ್ಮರಾಜನು ಪ್ರಶ್ನಿಸಿದನು.

ಸ್ವಾಮೀ! ಹರಿದಾಸರನ್ನೂ ಬಿಡದೆ ಕಾಡಿದ ಶಾಪವು ಎಂತಹುದು? ಯಾರು ಆ ಶಾಪವನ್ನಿತ್ತವರು? ಇದು ನಂಬಲು ಬಾರದಂತೆ ಕಾಣುತ್ತಿದೆ. ಶ್ರೀಹರಿಯ ದ್ವಾರಪಾಲಕರಿಗೂ ಅಸುರಜನ್ಮಂತು ಬಂತು? ಪ್ರಾಕೃತ ದೇಹೇಂದ್ರಿಯಾದಿರಹಿತರಿಗೆ ದೇಹಸಂಬಂಧವನ್ನು ತಂದೊಡ್ಡಿದ ಶಾಪಕ್ಕೆ ಕಾರಣವೇನು?

ಆಗ ನಾರದನು ಪೇಳಲುಪಕ್ರಮಿಸಿದನು–

ಒಂದು ಸಲ ಬ್ರಹ್ಮಮಾನಸಪುತ್ರರಾದ ಸನಕಾದಿಗಳು ಮೂರುಲೋಕಗಳಲ್ಲಿ ಸುತ್ತುತ್ತಾ ಯದೃಚ್ಛೆಯಿಂದ ವೈಕುಂಠಲೋಕದ ಮುಕ್ತ ಸ್ಥಾನವನ್ನು ಸೇರಿದರು. ಐದಾರು ವರ್ಷದವರಂತೆ ಕಾಣುವ ಆ ಪೂರ್ವಜರು ದಿಗಂಬರರು, ನಿರಾಡಂಬರರು ಆಗಿದ್ದರು. ಶ್ರೀರಮಾನಾಥ ಸಲ್ಲಾಪ ಸುಖಾರಂಭಕವಾದ ಆ ಡಿಂಭಕರನ್ನು ನೋಡಿ ಜಯವಿಜಯರು ಕೋಲನ್ನೊಡ್ಡಿ ಅಡ್ಡಿ ಮಾಡಿದರು. ಆಗ ಋಷಿಗಳು ಕುಪಿತರಾಗಿ 'ರಜಸ್ತಮೋಗುಣಕಾರ್ಯವಾದ ಅನ್ಯಥಾ ಜ್ಞಾನಾದಿಗಳಿಲ್ಲದ ಈ ಮಧುಸೂಧನ ಲೋಕದಲ್ಲಿರಲು ನೀವು ಅರ್ಹರಲ್ಲ. ಮೂರ್ಖರೇ! ಅಸುರೀ ಯೋನಿಯಲ್ಲಿ ಪುಟ್ಟಿ ಹರಿದೂರರಾಗಿರಿ!' ಎಂದು ಶಾಪವನ್ನಿತ್ತರು. ಮತ್ತೆ ದಯಮಾಡಿ 'ಮೂರು ಜನುಮಗಳಲ್ಲಿ ಹರಿ ದ್ವೇಷವನ್ನು ಮಾಡಿ ಅವನಿಂದ ಸಂಹೃತರಾಗಿ ಪುನಃ ನಿಮ್ಮ ಪದವಿಯನ್ನು ಪೊಂದುವಿರಿ' ಎಂದು ವಿಶಾಪವನ್ನೂ ಶ್ರೀಹರಿಯ ಆಜ್ಞೆಯಂತೆ ಇತ್ತು ಅನುಗ್ರಹಿಸಿದರು.

ಆ ಜಯವಿಜಯರು ಹಿರಣ್ಯಕಶಿಪು ಹಿರಣ್ಯಾಕ್ಷರಾಗಿ ದಿತಿಯಲ್ಲಿ ಜನಿಸಿದರು. ಹಿರಣ್ಯಾಕ್ಷನನ್ನು ವರಾಹರೂಪದಿಂದ ಶ್ರೀಹರಿಯು ಸಂಹರಿಸಿದನು. ಹಿರಣ್ಯಕಶಿಪುವು ತನ್ನ ಮಗನಾದ ಪ್ರಹ್ಲಾದನ ಭಗವದ್ಭಕ್ತಿಯನ್ನು ಕಂಡು ಕೆಂಡವಾಗಿ, ಅವನನ್ನು ಕೊಲ್ಲಬೇಕೆಂದು ಬೇಕಾದ ಯಾತನೆಗಳನ್ನು ಪಡಿಸಿದನು. ಸರ್ವಭೂತಪತಿಯಾದ ಭಗವಂತನ ದಿವ್ಯತೇಜವು ಆ ಬಾಲಕನನ್ನು ಸರ್ವವಿಪತ್ತಿನಿಂದಲೂ ಸಂರಕ್ಷಿಸುತ್ತಿರಲು ಆಶ್ಚರ್ಯ ಕೋಪ ಪರೀತನಾದ ತಂದೆಯು ಮಗನನ್ನು ಕೊಲ್ಲಲ್ಲು ಹೋದನು. ಶ್ರೀಲಕ್ಷ್ಮೀಪತಿಯು ನೃಸಿಂಹರೂಪದಿಂದ ಅವನನ್ನೇ ಕೊಂದು ಪ್ರಹ್ಲಾದನನ್ನು ಕಾಪಾಡಿದನು. ಭಯಂಕರ ಹರಿರೂಪವನ್ನು ನೋಡುತ್ತಾ ಸತ್ತು, ಎರಡನೆಯ ಜನುಮದಲ್ಲಿ ರಾವಣ ಕುಂಭಕರ್ಣರೆನಿಸಿದಾಗ ಲೋಕ ವಿದ್ರಾವಣರಾದ ಆ ದೈತ್ಯರನ್ನು ಶ್ರೀರಾಮನು ಸಂಹರಿಸಿದನು. ರಾಜರೂಪವನ್ನು ನೋಡುತ್ತಾ ಮೃತರಾದ ಅವರೇ ಈಗ ರಾಜರಾಗಿ ಶಿಶುಪಾಲ ದಂತವಕ್ತ್ರರೆನಿಸಿದರು. ಶ್ರೀಕೃಷ್ಣನ ದಿವ್ಯರೂಪವನ್ನು ನೋಡುತ್ತಾ ಮೃತರಾದ ಅವರಿಗೆ ಪುನಃ ದಿವ್ಯರೂಪವು ಬಂದು ದ್ವಾರಪಾಲಕನಾಗಿ ಹೋದರು. ವೈರಕಾರಣ ವಾದರೂ ಭಕ್ತಿಯು ತೀವ್ರವಾಗಿದ್ದುದರಿಂದ ವೈರಕೃತ ಪಾಪವನ್ನು ತತ್ಫಲವನ್ನು ಸ್ವಾವಿಷ್ಟ ದೈತ್ಯರಿಗೆ ಬಿಟ್ಟು, ಭಕ್ತಿಫಲವಾದ ಮುಕ್ತಿಯನ್ನೇ ಅವರು ಪೊಂದಿದರು– ಎನ್ನಲು ಧರ್ಮರಾಜನು ಪ್ರಶ್ನಿಸಿದನು–

ಸ್ವಾಮಿ! ಪ್ರಿಯಪುತ್ರನು, ಮಹಾತ್ಮನು, ಅಚ್ಯುತಭಕ್ತನು ಆದ ಪ್ರಹ್ಲಾದನಲ್ಲಿ ಅವನ ತಂದೆಯು ಅಷ್ಟು ದ್ವೇಷವನ್ನು ಮಾಡಲು ಕಾರಣವೇನು? ದಯಮಾಡಿ ಪ್ರಹ್ಲಾದ ಚರಿತೆಯನ್ನು ಹೇಳು.

## ೨. ಸುಯಜ್ಞೋಪಾಖ್ಯಾನವು

ನಾರದನಿಂತೆಂದನು–

ಕಮಲೋದರನು ವರಾಹನಾಗಿ ತನ್ನ ಸಹೋದರನನ್ನು ಕೊಂದನೆಂದು ಕೇಳಿ ಹಿರಣ್ಯಕಶಿಪುವು ಶೋಕದೋಷ ದಂದಹ್ಯಮಾನ ಮಾನಸನಾಗಿ, ಹಲ್ಲು ಕಟಕಟ ಕಡಿದು, ಕೋಪಾಗ್ನಿ ಜ್ವಾಲೆಯನ್ನು ಕಾರುವ ಕಣ್ಣುಗಳಿಂದ ಲೋಕಗಳನ್ನು ಸುಡುವಂತೆ ನೋಡುತ್ತಾ, ಸಭೆಯಲ್ಲಿ ನಿಂತು ಹುಬ್ಬನ್ನು ಗಂಟಿಕ್ಕಿ, ಶೂಲವನ್ನೆತ್ತಿಪಿಡಿದು, ದಾನವರೆಲ್ಲರು ಕೇಳುವಂತೆ ಇಂತೆಂದನು–

ಎಲವೋ ದಾನವದೈತೇಯರೇ! ಕೇಳಿ. ತ್ರಿಶಿರ! ತ್ರಿಲೋಚನ! ಶಂಬರ! ವಿಪ್ರಚಿತ್ತೇ! ಶತಬಾಹು! ಹಯಗ್ರೀವ! ಪಾಕ! ಕೇಳಿರೋ ನನ್ನ ಮಾತನ್ನು. ಶೀಘ್ರುವಾಗಿ ನಾ ಹೇಳಿದುದೆಲ್ಲವನ್ನೂ ಮಾಡಿರಿ!

ಕ್ಷುದ್ರರಾದ ದೇವತೆಗಳ ಪಕ್ಷವನ್ನು ವಹಿಸಿ ಅವರ ಪೂಜೆಗೆ ಋಣಿಯಾಗಿ ಆ ವಿಷ್ಣುವು ತನ್ನ ಸ್ವಭಾವವಾದ ಸಾಮ್ಯವನ್ನು ತ್ಯಜಿಸಿ ತನ್ನ ತಮ್ಮನನ್ನು ಅನ್ಯಾಯವಾಗಿ ಕೊಂದನು. ಅವನ ಬಿಸಿನೆತ್ತರಿನಿಂದ ನನ್ನ ಯುದ್ಧದುರ್ಮದನಾದ ತಮ್ಮನಿಗೆ ತರ್ಪಣವನ್ನು ಕೊಡುವ ತನಕ ನನ್ನ ಮನೋವ್ಯಥೆಯು ಅಡಗುವುದಿಲ್ಲ. ಆ ಮೋಸಗಾರನನ್ನು ಸಂಹರಿಸಿದರೆ ಸಾಕು! ಮಿಕ್ಕ ಚಿಕ್ಕ ವೈರಿಗಳೆಲ್ಲರೂ ಬೇರನ್ನು ಕಡಿದ ಗಿಡದಂತೆ ತಾವಾಗಿ ಬಿದ್ದು ಸಾಯುವರು. ವಿಷ್ಣುವೇ ಅವರ ಪ್ರಾಣವು! ನೀವೆಲ್ಲರೂ ಬ್ರಾಹ್ಮಣ ಕ್ಷತ್ರಿಯರಿರುವ ಪುಣ್ಯ ಭೂಮಿಗಳಿಗೆ ಹೋಗಿ, ತಪಸ್ಸನ್ನು, ಯಜ್ಞವನ್ನು ಮಾಡುವ ವಿಪ್ರರನ್ನು, ದಾನಕ್ರತು ವೇದಾಧ್ಯಯನಗಳನ್ನು ಮಾಡುವ

ವಿಪ್ರ ಕ್ಷತ್ರಿಯ ವೈಶ್ಯ ಸುಜನರನ್ನೂ ಸಂಹರಿಸಿ, ವಿಷ್ಣುವಿನ ಪ್ರಾಣವು ಬ್ರಾಹ್ಮಣರ ತಪೋ ಯಜ್ಞಧರ್ಮಗಳಲ್ಲಿ ನೆಲಸಿದೆಯಂತೆ! ಅವನೇ ದೇವರ್ಷಿ ಪಿತೃಭೂತಗಳಿಗಾಧಾರನಂತೆ! ಎಲ್ಲೆಲ್ಲಿ ಬ್ರಾಹ್ಮಣರೂ ಇರವರೋ, ಎಲ್ಲಿ ಗೋವುಗಳೋ, ಎಲ್ಲಿ ವೇದಾಧ್ಯಯನವೋ, ಎಲ್ಲಿ ವರ್ಣಾಶ್ರಮಚಾರವೋ ಅಲ್ಲೆಲ್ಲವೂ ನುಗ್ಗಿ ಹಾಳು ಮಾಡಿ ಗ್ರಾಮಾರಾಮಗಳನ್ನು ಭಸ್ಮ ಮಾಡಿ. ಹೋಗಿ!

ಮೊದಲೇ ಕದನಪ್ರಿಯರಾದ ಈ ದಾನವರು ತಮ್ಮ ರಾಜನ ಮಾತಿನಿಂದ ವಿಜೃಂಭಿತರಾಗಿ ಪ್ರಜರನ್ನು ಪೀಡಿಸಿದರು. ಪುರ ಗ್ರಾಮಗಳನ್ನು ಕೊಳ್ಳೆ ಹೊಡೆದರು. ಆಶ್ರಮಾರಾಮಗಳನ್ನು ಸುಟ್ಟರು. ಸೇತು ಪ್ರಕಾರ ಗೋಪುರಗಳನ್ನು ಒಡೆದರು. ತೆಂಗು, ಹಲಸು, ಮಾವು ಮುಂತಾದ ಫಲವೃಕ್ಷಗಳನ್ನು ಕಡಿದು ಕೆಡಹಿದರು. ಪ್ರಜರ ಮನೆಗಳಿಗೆ ಕೊಳ್ಳಿಯನ್ನಿಟ್ಟರು. ಲೋಕದ ಪ್ರಜರ ಪಾಡನ್ನು ನೋಡಿ ದೇವತೆಗಳು ಕನಿಕರ(ಕರುಣೆ)ದಿಂದ ಕರಗಿ ಸ್ವರ್ಗವನ್ನು ಬಿಟ್ಟು ಭೂಮಿಗಿಳಿದು ಕಣ್ಣಿಗೆ ಕಾಣದಂತೆ ತಿರುಗುತ್ತಿದ್ದರು.

ಹಿರಣ್ಯಕಶಿಪುವು ಮೃತನಾದ ತಮ್ಮನಿಗೆ ಕಟೋದಕಾದಿ ಕರ್ಮಗಳನ್ನು ಮಾಡಿ ಅವನ ಮಕ್ಕಳನ್ನು ಸಮಾಧಾನಪಡಿಸಿದನು. ಶಕುನಿ, ಶಂಬರ, ದೃಷ್ಟ, ಭೂತಸಂತಾಪನ, ವೃಕ್ಷ, ಕಾಲನೇಮಿ, ಮಹಾನಾಭ, ಹರಿಶ್ಮಶ್ರು, ಉತ್ಕಲರೆಂಬುವ ಹಿರಣ್ಯಾಕ್ಷಪುತ್ರರನ್ನು, ಅವರ ಮಾತೆಯಾದ ರುಶದ್ಭಾನುಳನ್ನು, ತನ್ನ ತಾಯಿಯಾದ ದಿತಿಯನ್ನೂ ನೋಡಿ ದೇಶಕಾಲೋಚಿತವಾಗಿ ಇಂತು ನುಡಿದನು–

ಅಮ್ಮಾ! ಎಲೌ ರುಶಾದ್ಭಾನು! ಮಕ್ಕಳಿರಾ! ನಿಲ್ಲಿಸಿ ನಿಮ್ಮ ರೋದನವನ್ನು, ಕೇಳಿ ಎನ್ನ ಮಾತನ್ನು, ಶತ್ರುವಿನನ್ನೆದುರಿಸಿ ನಿಂತು ಸಾಯುವ ವೀರಮಣರವು ಬಹು ದುರ್ಲಭವಾಗಿದೆ.

ಅಮ್ಮಾ! ಅರವಟ್ಟಿಗೆಯಲ್ಲಿ ಕಲೆತಂತೆ ಜನರಿಲ್ಲಿ ಕಲೆಯುವರು. ವಿಧಿಯಿಂದ ಕಲೆತಿದ್ದು ವಿಧಿಯಿಂದಲೇ ಅಗಲಿ ಹೋಗುತ್ತಿರುವರು. ಎಲ್ಲರು ಒಂದೇ ಕಡೆ ಯಾವಾಗಲೂ ಇರಲು ಸಾಧ್ಯವೇ? ಜೀವವಿಲಕ್ಷಣನಾದ ಪರಮಾತ್ಮನು ನಿತ್ಯನು, ನಾಶರಹಿತನು; ಅಪ್ರಾಕೃತನು, ಸರ್ವತ್ರ ವ್ಯಾಪ್ತನು, ಮತ್ತು ಸರ್ವಜ್ಞನಾಗಿರುವನು. ಅವನಿಗೆ ಜನನ ಮರಣಗಳಿಲ್ಲ. ಅವನೇ ಜೀವನಿಗೆ ಲಿಂಗಶರೀರದಿಂದ ಬಿಡಿಸಲು ಕಾರಣವಾದ ಭೌತಿಕ ಶರೀರಾದಿಗಳನ್ನು, ಇಂದ್ರಿಯ ಮನೋಬುದ್ಧಿಗಳನ್ನು ಕೊಡುವನು. ಸ್ವೇಚ್ಛೆಯಿಂದ ಕ್ರೀಡಿಸುವ ಅವನಿಗೆ ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ವಿಷಯಗಳ ಅಪೇಕ್ಷೆಯು ಜೀವನಿಗಿದ್ದಂತೆ ಇಲ್ಲ. ಆದರೂ ಅಜ್ಞಾನಿಗಳು ಅವನೂ ಜೀವನಂತೆ ಹುಟ್ಟಿ ಸಾಯುವ ದೇಹದಲ್ಲಿ ಬದ್ಧನಾಗಿರುವನೆಂದು ತಿಳಿದು ಕೆಡುವರು. ನೀರಲುಗಿದರೆ ಮೇಲಿದ್ದ ಗಿಡಗಳು ನಿಶ್ಚಲವಾಗಿಯೇ ಇರುವುವು. ನೀರಿನಲ್ಲಿ ಮೂಡಿದ ಗಿಡದ ಪ್ರತಿಬಿಂಬವು ಅಲ್ಲಾಡಿದಂತೆ ತೋರುವುದು. ಅಂತೆಯೇ ಈಶನಿಗೆ ಚಲನವಿಲ್ಲ. ಜೀವನಿಗೆ ಅಭಿಮಾನದಿಂದ ಚಲನವು ಆದಂತೆ ಕಾಣುವುದು. ನಿಜವಾದ ಚಲನಾದಿ ವಿಕಾರವು ದೇಹಕ್ಕೇ ಆಗುವುದು. ಪರಮಾತ್ಮನಿಗಲ್ಲ. ತಾನು ಗಿರಗಿರ ತಿರುಗಿ ಆಡುವ ಹುಡುಗಿಗೆ ಭೂಮಿಯು ತಿರುಗಿದಂತೆ ಆಗುವುದು. ಇದು ಭ್ರಮವೇ ಸರಿ. ಅಂತೆಯೇ ಜೀವನಂತೆ ಪರಮಾತ್ಮನು ದುಃಖಾದಿಗಳನ್ನು ಪೊಂದುವನೆಂಬುವನೂ ಭ್ರಾಂತನು. ಮನಸ್ಸಿನಲ್ಲಿ ಜೀವ ವಿಲಕ್ಷಣನು ಪೂರ್ಣನು ಆದ ಸ್ವಾಮಿಯನ್ನು ತಿಳಿಯದಿರುವ ಅಜ್ಞಾನಿಗೆ ಕೊನೆಗೆ ತಮಸ್ಸೇ ಪ್ರಾಪ್ತವಾಗುವುದು; ಶ್ರೀಶನ ಜ್ಞಾನವು ಆಗುವುದೇ ಇಲ್ಲ. ಅಜ್ಞಾನದಿಂದ ಸಂಸಾರವು, ಜ್ಞಾನದಿಂದ ಮೋಕ್ಷವು ಆಗುವುದು.

ಪ್ರಿಯಯೋಗವು, ಅಪ್ರಿಯವಿಯೋಗವು ಆಗಬೇಕೆಂದು ನಾವು ಮಾಡಿದ ಕರ್ಮಗಳ ಫಲವು ಈಶ್ವರಾಧೀನವಾದ್ದರಿಂದ ಒಂದೊಂದು ಸಲ ಪ್ರಿಯವಿಯೋಗವು ಅಪ್ರಿಯಯೋಗವು ಆಗುತ್ತಿರುವುದು. ಸಂಸಾರದಲ್ಲಿ ಹುಟ್ಟು, ಸಾವು, ಶೋಕ, ಅವಿವೇಕ, ದಂಭ, ಚಿಂತೆ ಎನ್ನುವ ಅನರ್ಥಗಳು ಬಿಡದೆ ಸಂಭವಿಸುವುವು. ಆದ್ದರಿಂದ ಜನನೀ! ಜೀವನು ನಿತ್ಯನು! ದೇಹವು ಅನಿತ್ಯವು; ಜೀವ ದೇಹಾದಿಗಳೆಲ್ಲವೂ ಸದಾ ಈಶ್ವರಾಧೀನವೆಂದು ತಿಳಿದು, ಶೋಕವನ್ನು ಬಿಡು. ನಿನಗೊಂದು ಕಥೆಯನ್ನು ಹೇಳುವೆನು ಕೇಳು.

ಉಶೀನರ ದೇಶದಲ್ಲಿ ಸುಯಜ್ಞನೆಂಬ ರಾಜನಿದ್ದನು. ಅವನು ಶತ್ರುಗಳ ಅಸ್ತ್ರಗಳಿಗೆ ಬಲಿಯಾಗಿ ರಣರಂಗದಲ್ಲಿ ಬಿದ್ದಿದ್ದನು. ಕವಚವು ಹರಿದು, ಆಭರಣಹಾರಾದಿರಿಗಳು ಅಸ್ತವ್ಯಸ್ತವಾಗಿ, ರಕ್ತದ ಮಡುವಿನಲ್ಲಿ ಬಿದ್ದಿದ್ದ ರಾಜನ ಹೃದಯವು ಬಾಣ ಭಿನ್ನವಾಗಿತ್ತು. ಕೇಶಗಳು ಹಾರಾಡುತ್ತಿದ್ದವು. ಕಣ್ಣುಗುಡ್ಡುಗಳು ಉಬ್ಬಿ ಬಂದಿದ್ದವು. ತುಟಿಯನ್ನು ಕಚ್ಚಿ ಹಾಗೆಯೇ ಪ್ರಾಣಗಳನ್ನು ಬಿಟ್ಟಿದ್ದ ರಾಜನನ್ನು ನೋಡಿ ಜ್ಞಾತಿ ಬಂಧುಗಳು ಶೋಕದಿಂದ ಸುತ್ತುಗಟ್ಟಿ ನಿಂತರು. ಅವನ ಸತಿಯರು 'ಹೋ' ಎಂದಳುತ್ತಾ, ಎದೆಯನ್ನು ಬಡಿದುಕೊಂಡು ಗೋಳಿಟ್ಟರು; ಕಣ್ಣೀರಿಂದ ಅವನ ಕಾಲನ್ನು ತೊಳೆದರು. ಕುಚ ಕುಂಕುಮಪಂಕವು ಕರಗಿ ಜಾರಲು, ಕೇಶಹಾರಗಳು ಬೀರಿ ಉದುರಲು, ಶೋಕವೇ ಮೂರ್ತೀಭವಿಸಿದಂತೆ ಆರ್ತರಾಗಿ ವಿಲಪಿಸಿದರು.

ಅಹೋ! ಬ್ರಹ್ಮದೇವಿ! ನಿನಗೇಕೆ ದಯೆ ಇಲ್ಲ? ನಮ್ಮ ನಾಥವನನ್ನೇಕೆ ಕಣ್ಮರೆ ಮಾಡಿದೆ? ನಿನ್ನಂತಹ ಕ್ರೂರರಿರುವರೇ? ಉಶೀನರದೇಶಪಾಲಕನು, ಪ್ರಜಾರಂಜಕನು ಆದ ರಾಜನನ್ನು ನೋಡಿ ದುಃಖಪಡುವಂತೆ ಮಾಡಿದ ಕುಟುಕಬುದ್ಧಿ ನನಗೆ ಯೋಗ್ಯವೇ? ಅತ್ಯಂತ ಪ್ರಿಯನಾದ ನಾಥನನ್ನು ಬಿಟ್ಟಿನ್ನು ನಾವು ಬದುಕಿಲಾರೆವು. ಹೇ ನಾಥ! ನೋಡು ನಮ್ಮ ಕಡೆ, ಮಾತಾಡೊಂದು ಮಾತನ್ನು! ನಿನ್ನ ದಾಸಿಯರಾದ ನಮ್ಮನ್ನೂ ನಿನ್ನ ಹಿಂದೆ ಕರೆದುಕೊಂಡು ಹೋಗು.

ಎಂದು ದುಃಖಿಸುತ್ತಾ ಪತಿದೇಹವನ್ನು ಸುಡಲು ಕೇಳುವ ಸಚಿವಾದಿ ಜನರಿಗೆ ಕೊಡದೆ ರಾಣಿಯರು ಪರಿಪರಿಯಾಗಿ ವಿಲಪಿಸುವುದನ್ನು ಕೇಳಿ, ನೋಡಲಾರದೆ ಸೂರ್ಯನು ಅಸ್ತಂಗತನಾದನು. ಆಗ ಯಮನು ಅಲ್ಲಿಗೆ ಬಂದನು. ಬಾಲಕರೂಪವನ್ನು ತಾಳಿ ಅಳುತ್ತಿರುವ ಪ್ರೇತ ಬಂಧುಗಳನ್ನು ನೋಡಿ ನಗುತ್ತಾ ಸೂರ್ಯಸುತನು ನುಡಿದನು–

ಆಹಾ! ಇವರಿಗೆ ವಯಸ್ಸು ಬಂದಿದೆ ಆದರೆ ವಿವೇಕವು ಬಂದಂತಿಲ್ಲ. ಎಲ್ಲರಂತೆ ಸಾಯುವುದು ಲೋಕವಿಧಿಯು. ಬಂದಲ್ಲಿಗೆ ಪೋದ ಮನುಜನಿಗಾಗಿ ಶೋಕಿಸುವುದು ವ್ಯರ್ಥವು ಹಾಗೂ ಅವಿವೇಕವು. ನಾವೂ ಒಂದು ದಿನ ಸಾಯುವುದು ನಿಶ್ಚಯವೆಂದರಿತೂ ಸತ್ತವರನ್ನು ನೋಡಿ ಅಳುತ್ತಾ ಕೂಡಬಹುದೇ?

ನಾನೆಷ್ಟು ಧನ್ಯನು? ತಂದೆತಾಯಿಗಳು ನನ್ನನ್ನು ಕಾಡಿನಲ್ಲಿ ಹಾಕಿಹೋದರೂ ನಾನು ಶೋಕಮೋಹಗಳನ್ನು ಪೊಂದದೆ ಸರ್ವವು ದೈವಾಧೀನವೆಂದರಿತು ನಿಶ್ಚಿಂತನಾಗಿರುವೆನು. ಕಾಡಿನಲ್ಲಿ ದುರ್ಬಲನಾದ ಅರ್ಭಕನನ್ನು ತೋಳ ನರಿಗಳೂ ಮುಟ್ಟಲಿಲ್ಲ. ಗರ್ಭದಲ್ಲಿ ರಕ್ಷಿಸಿದ ದೇವನು ಆಮೇಲೂ ರಕ್ಷಕನಲ್ಲವೇ? ಆ ದೇವನೇ ಜಗವನ್ನೆಲ್ಲ ಸೃಜಿಸಿ, ರಕ್ಷಿಸಿ, ಸಂಹರಿಸುತ್ತಿರುವನು. ಅವನ ಆಟದ ಗೊಂಬೆಗಳಾಗಿರುವರು ಜೀವರು. ಆ ಪ್ರಭುವೇ ನಿಗ್ರಹಾನುಗ್ರಹ ಸಮರ್ಥನು. ದೇವರಕ್ಷಿತವಾಗಿದ್ದರೆ ಹಾದಿಯಲ್ಲಿ ಬಿಸುಟು ಬಂದ ಪದಾರ್ಥವು ಮತ್ತೆ ಲಭಿಸುವುದು. ದೇವನು ರಕ್ಷಿಸದಿರಲು ಮನೆಯಲ್ಲಿಟ್ಟಿದ್ದೂ ಮಾಯವಾಗುವುದು. ಅಂತೆಯೇ ಅನಾಥನು

ಶ್ರೀಶನಿಂದ ವೀಕ್ಷಿತನಾದನೆಂದರೆ ಅವನನ್ನು ಕಾಡಿನಲ್ಲಿ ಬಿಸುಟಿ ಬಂದರೂ ಬದುಕುವನು. ಮನೆಯಲ್ಲಿ ವೈದ್ಯ ಬಂಧುಗಳು ಔಷಧಾದಿಗಳಿದ್ದರೂ– ಶ್ರೀಹರಿಯು, ಕರುಣೆಯಿಂದ ಕಣ್ತೆರೆಯದಿರಲು – ತಪ್ಪದೆ ಸಾಯುವನು. ಹರಿಯು ತಾನಾಗಿ ಕೊಲ್ಲಲು ಉಳಿಸುವರೂ, ಹರಿಯು ರಕ್ಷಿಸಲು ಅಳಿಸುವರೂ ಉಂಟೇ? ಸರ್ವಥಾ ಇಲ್ಲ.

ಜೀವರು ತಮ್ಮ ತಮ್ಮ ಕರ್ಮಾನುಸಾರವಾಗಿ ಶ್ರೀಹರಿಯು ಕೊಟ್ಟ ಯೋನಿಯಲ್ಲಿ ಜನಿಸಿ, ಕರ್ಮಫಲವನ್ನು ಆ ಮಹಾಪ್ರಭುವು ಕೊಟ್ಟಾಗ ಉಂಡು, ಹುಟ್ಟಿ ಸಾಯುತ್ತಿರುವರು. ಜೀವ ವಿಲಕ್ಷಣನಾದ ಶ್ರೀಶನು ಪ್ರಕೃತಿನಿರ್ಮಿತ ಜೀವ ದೇಹಗಳಲ್ಲಿ ಅಂತರ್ಯಾಮಿಯಾಗಿದ್ದರೂ ದೇಹಕೃತ ಸುಖದುಃಖಾದಿ ಕರ್ಮಫಲದೂರನಾಗಿಯೇ ವಿರಾಜಿಸುವನು.

ವೃಕ್ಷದಾರ್ವಾದಿಗಳಿಂದ ನಿರ್ಮಿತವಾದ ಗೃಹವೇ ಅದರಲ್ಲಿ ವಸಿಸುವ ಜೀವನಲ್ಲ. ಪೃಥಿವೀ ಜಲ ಪರಮಾಣು ನಿರ್ಮಿತವಾದ ದೇಹವಾದರೂ ನಾಶವನ್ನು ಹೊಂದುವುದು. ಆದ್ದರಿಂದಲೇ ದೇಹವು ಜೀವನಲ್ಲ. ಕಾಷ್ಠದಲ್ಲಿರುವ ಅಗ್ನಿಯು ಕಾಷ್ಠವಲ್ಲ. ದೇಹದಲ್ಲಿರುವ ಪ್ರಾಣನು ದೇಹವಲ್ಲ. ಇನ್ನು ಆ ಪರಮಾತ್ಮನ ವಿಷಯವೇನೆಂದು ವರ್ಣಿಸಲಿ! ಎಲ್ಲ ಕಡೆಯೂ ತುಂಬಿರುವ ಆಕಾಶವು ಎಲ್ಲ ವಸ್ತುಗಳಿಗೂ ಭಿನ್ನವಾಗಿ ನಿರ್ಲಿಪ್ತವಾಗಿರುವಂತೆ, ರಮಾಕಾಂತನು ಜ್ಞಾನಾನಂದಾದಿ ಗುಣಭರಿತನು, ಪ್ರಾಕೃತಗುಣರಹಿತನು ಆಗಿ ಶೋಭಿಸುತ್ತಿರುವನು. ದೇಹವೇ ನಾನೆಂಬ ಅನ್ಯಥಾಜ್ಞಾನದಿಂದಲೇ ಜೀವನಿಗೆ ದುಃಖವಾಗುವುದು. ಇರಲಿ!

ಇಲ್ಲಿ ಮಲಗಿರುವವನು ಸುಯಜ್ಞನೇ? ಇಲ್ಲಿ ಈ ಶರೀರದಲ್ಲಿ ಸುಯಜ್ಞನು ಇರುವುದಾದರೆ ಬದಲು ಮಾತನ್ನಾಡದಿರುವನೇ? ಎದ್ದು ಕಾಣದಿರುವನೇ? ಕೇಳಿ ಮಾತಾಡುವ ಸುಯಜ್ಞ ಪ್ರೇಕರನಾದ ಮುಖ್ಯಪ್ರಾಣವಲ್ಲಭನಾದ ಶ್ರೀಹರಿಯು ಇಲ್ಲಿಲ್ಲ. ಮೂರ್ಖರೇ! ಏಕೆ ವ್ಯರ್ಥವಾಗಿ ಅಳುವಿರಿ? ಮುಖ್ಯಪ್ರಾಣನೂ ಶ್ರೀಹರಿ ಇಲ್ಲದಿದ್ದಡೆ ಇರಲಾರನು ಅಂದ ಮೇಲೆ ಜೀವನು ಶರೀರವನ್ನು ಬಿಡದೆ ಹಿಡಿದಿರಲು ಶಕ್ತನೇ? ಸುರನರ ತಿರ್ಯಗಾದಿ ಶರೀರಗಳನ್ನು ಸ್ವೀಕರಿಸುವುದು, ತ್ಯಜಿಸುವುದು ಸರ್ವವೂ ಶ್ರೀಶೇಚ್ಛೆಯಂತೆಯೇ ನಡೆಯುವುದು. ಮರಣಾದಿಗಳಲ್ಲಿ ಅಚಿದ್ದೇಹವು ಪತಿತವಾಗಲು ಜೀವನು ಚಿದ್ದೇಹದಿಂದಲು ಲಿಂಗದೇಹದಿಂದಲು ಯುಕ್ತನಾಗಿಯೇ ಅನ್ಯ ದೇಹವನ್ನು ಪೊಂದುತ್ತ, ಅಭಿಮಾನನಾಶಪರ್ಯಂತರವು ಸಂಸರಿಸುತ್ತಿರುವನು. ಶ್ರೀಹರಿಯು ಪ್ರೇರಕನಾಗಿ ಅನ್ನಮಯ, ಪ್ರಾಣಮಯ, ಮನೋಮಯ ಕೋಶಗಳಲ್ಲಿದ್ದು ಜೀವನಿಗೆ ಅನೇಕ ದೇಹಗಳನ್ನು ಕರ್ಮಫಲಾನುಸಾರವಾಗಿ ಕೊಡುತ್ತಲೇ ಇರುವನು. ಅವನು ಅನುಗ್ರಹಿಸಿ ಭೂತಶರೀರ ಸಂಬಂಧವನ್ನು ತಾನೂ ಬಿಟ್ಟು, ತನ್ನ ಪ್ರತಿಬಿಂಬನಾದ ಜೀವನಿಗೂ ಬಿಡಿಸಿದ ತತ್ಕ್ಷಣವೇ ಜೀವನು ಮುಕ್ತನೆನಿಸಿ ಸಾಂಸಾರಿಕ ಕ್ಲೇಶ ಮೋಹಬಂಧಾದಿಗಳಿಲ್ಲದೆ ಸುಖಿಸುವನು.

ದುರ್ಜನರು ಶಬ್ದ ಸ್ಪರ್ಶ ರೂಪ ರಸ ಗಂಧಗಳೇ ಜೀವನ ಪ್ರಯೋಜನವೆನ್ನುವರು. ದುರಭಿಮಾನದಿಂದ ಭ್ರಾಂತರಾದ ಅವರ ಮನೋರಥ ರಾಜ್ಯವೆಲ್ಲವು, ಸ್ವಪ್ನದಂತೆ ನಶ್ವರವು, ವ್ಯರ್ಥವೂ ಆಗಿ ಹೋಗುವುದು. ತನ್ನ ಅಧೀನವಲ್ಲದ ವಸ್ತುವನ್ನು ತನ್ನ ಅಧೀನವೆಂದು ತಿಳಿಯುವ ಲೇಪಾಭಿಮಾನವು ಜೀವನಿಗೇ ಹೊರತು ಶ್ರೀಶನಿಗಲ್ಲ. ಆದ್ದರಿಂದ ಜ್ಞಾನಿಗಳು ನಿತ್ಯವಾದ ಜೀವನ ದೇಹವಿಯೋಗವನ್ನು, ಅನಿತ್ಯವಾದ ದೇಹದ ನಾಶವನ್ನು ಕಂಡು ಶೋಕವನ್ನು ಪೊಂದುವುದಿಲ್ಲ. ನಿತ್ಯವಾದುದನ್ನು ಅನಿತ್ಯವಾಗಿರಿಸಲು ಸಾಧ್ಯವೇ ಇಲ್ಲ. ಒಂದು ಕಥೆಯನ್ನು ಕೇಳಿ:

ಒಬ್ಬ ಲುಬ್ಧಕನು ಅರಣ್ಯದಲ್ಲಿ ಬಲೆಯನ್ನೊಡ್ಡಿ ಹಕ್ಕಿಗಳನ್ನು ಹಿಡಿದು ಜೀವಿಸುತ್ತಿದ್ದನು. ಒಂದು ದಿನ ಒಂದು ಕುಲಿಂಗ ಮಿಥುನವು ಅಲ್ಲಿ ಹಾರಾಡುತ್ತಾ ಬಂದಿತು. ಕುಲಿಂಗಿಯು ಬಲೆಯ ಕಾಳಿಗೆ ಮಾರುಹೋಗಿ ಬಲೆಯಲ್ಲಿ ಬಿದ್ದಿತು. ಕುಲಿಂಗವು ಅದನ್ನು ನೋಡಿ ಬಿಡಿಸಲು ಕೈಲಾಗದೆ ದುಃಖದಿಂದ ರೋದಿಸಿತು.

'ಅಯ್ಯೋ! ವಿಧಿಯೇ! ನಿನಗೇಕೆ ಕರುಣೆ ಇಲ್ಲ? ಕೃಪಣಳಾಗಿ ಬಲೆಯಲ್ಲಿ ಸಿಕ್ಕು, ಅಳುತ್ತಿರುವ ನನ್ನನ್ನು ನೋಡಿ ವಿಲಪಿಸುವ, ವಿಹಂಗಿಯ ಕಣ್ಣೀರನ್ನು ಒರೆಸಲಾರದಿರುವ ನನ್ನನ್ನೂ ಒಯ್ದುಬಿಡು. ಅರ್ಧಶರೀರವನ್ನು ಕೊಂದು ಅರ್ಧಶರೀರವನ್ನು ಉಳಿಸಲಾಗುವುದೆ? ವಿಧುರನಾಗಿ ನಾನೆಂತು ಬಾಳಲಿ? ರೆಕ್ಕೆಗಳು ಬಾರದ ಚಿಕ್ಕ ಮಕ್ಕಳನ್ನು ಹೇಗೆ ಸಲಹಲಿ? ಈ ಪರದೇಶಿ ತಬ್ಬಲಿಗಳು ತಾಯಿಯ ಬರವನ್ನು ಕಾಯ್ದು ಕಣ್ಣೀರಿಡುತ್ತವೆ. ಏನು ಮಾಡಲಿ?'

ಎಂದು ಪ್ರಿಯಾವಿಯೋಗದಿಂದ ರೋದಿಸುವ ಕುಲಿಂಗವನ್ನು ನೋಡಿ ಹಕ್ಕಿಗಳ ಯಮರಾಜನು ಕಾಲಪ್ರೇರಿತನಾಗಿ ವೃಕ್ಷಮೂಲದಲ್ಲಿ ಅವಿತು ಗುರಿಯಿಟ್ಟು ಅದನ್ನೂ ಹೊಡೆದು ಕೆಡಹಿದನು.

ಕುಲಿಂಗದಂತೆಯೇ ನೀವೂ ಒಂದು ದಿನ ಸಾಯುವುದು ನಿಜ. ನೂರು ವರ್ಷ ರೋದಿಸಿದರೂ ನಿಮ್ಮ ಪತಿಯು ಹಿಂದಿರುಗಿ ಬರಲಾರನು. ನೀವು ಅಳುವುದು ವ್ಯರ್ಥವೇ ಸರಿ!

ಈ ರೀತಿ ನುಡಿದು ಯಮರಾಜನು ಅಂತರ್ಹಿತನಾದನು. ಆಗ ಎಲ್ಲರೂ ಆಶ್ಚರ್ಯದಿಂದ ಆ ಬಾಲಕನ ಮಾತನ್ನು ನೆನೆದು, ದೇಹಾದಿಗಳ ಅನಿತ್ಯತ್ವವನ್ನು ತಿಳಿದು ಸುಯಜ್ಞನಿಗೆ ಉತ್ತರ ಕ್ರಿಯೆಗಳನ್ನು ಮಾಡಿದರು.

ಅಂಬ ದಿತಿ! ನಾನು ನೀವು ಎಲ್ಲರೂ ದೇಹತಃ ಅನಿತ್ಯರೇ. ದೇಹಕ್ಕೆಂದು ಅತ್ತು ಪ್ರಯೋಜನವಿಲ್ಲ. ಚೇತನವೆಲ್ಲಿ? ದೇಹವೆಲ್ಲಿ? ಅವುಗಳ ಪರಸ್ಪರ ಸಂಬಂಧವು ಎಷ್ಟು ನಶ್ವರವು! ಹೀಗಿದ್ದೂ ನಾನು ನನ್ನದೆಂಬ ದುರಭಿಮಾನವು, ನೀನು ನಿನ್ನದೆಂಬ ದ್ವೇಷ ಭಾವನೆಯು ಬರಲು ಅಜ್ಞಾನವೇ ಕಾರಣವಾಗಿದೆ– ಎಂದು ಹಿರಣ್ಯಕನು ಪೇಳಿದ ಯಥಾರ್ಥ ವಚನವನ್ನಾಲಿಸಿ ದಿತಿಯು ಪುತ್ರಶೋಕವನ್ನು ಬಿಟ್ಟು ಶ್ರೀಹರಿಧ್ಯಾನದಿಂದ ನಿಶ್ಚಿಂತಳಾದಳು.

## ೩. ಹಿರಣ್ಯಕಶಿಪು ತಪಸ್ಸು – ಬ್ರಹ್ಮವರದಾನ

ನಾರದನು ನುಡಿದನು–

ಧರ್ಮರಾಜ! ಹಿರಣ್ಯಕಶಿಪುವು ಅಜರಾಮರನಾಗಲಿಚ್ಛಿಸಿ, ಮಂದರಕುಂದರದಲ್ಲಿ ಪರಮದಾರುಣ ತಪವನ್ನು ಮಾಡಿದನು. ಕೈಗಳೆತ್ತಿ, ಆಕಾಶವನ್ನು ನೋಡುತ್ತಾ, ಕಾಲಿನ ಅಂಗುಟದ ಮೇಲೆ ನಿಂತು, ಜಟಾಜಾಲದಿಂದ ಪ್ರಳಯ ಕಾಲಾರ್ಕನಂತೆ ಉರಿಯುತ್ತಾ, ತಪವನ್ನು ಮಾಡುವ ಹಿರಣ್ಯಕನ ತೀವ್ರತಪೋಜ್ವಾಲೆಯಿಂದ ನೊಂದು ದೇವತೆಗಳು ತಮ್ಮ ನಿವಾಸಗಳಲ್ಲಿ ಅಡಗಿ ನಿಂತರು. ಅವನ ಶಿರೋಗ್ರದಿಂದ ಉರಿದೆದ್ದ ತಪೋಗ್ನಿಜ್ವಾಲೆಯ ಹೊಗೆಯು ಲೋಕವನ್ನು ತುಂಬಿತು. ಭೂಮಿಯ ಪರ್ವತಗಳು ನಡುಗಿದವು. ನದೀ ಸಮುದ್ರಗಳುಕ್ಕೇರಿದವು. ಉಲ್ಕಾತಾರೆಗಳು ಉದುರಿದವು. ದಿಕ್ಕುಗಳು ಸುಡುತ್ತಿರುವಂತೆ ತೋರಿದವು. ಆಗ ಆ ತಾಪವನ್ನು

ತಡೆಯಲಾರದೆ ದೇವತೆಗಳು ಬ್ರಹ್ಮಲೋಕವನ್ನು ಸೇರಿ ಆ ದೇವದೇವನಿಗೆ ಮೊರೆಯಿಟ್ಟು ನುಡಿದರು–

ದೇವ! ಜಗತ್ಪತೇ! ದೈತ್ಯರಾಜನ ತಾಮಸ ತಪಸ್ತಾಪವನ್ನು ಸೈರಿಸಲಾರೆವು. ದಯಮಾಡಿ ಅವನ ತಪವನ್ನು ನಿಲ್ಲಿಸು. ಇಲ್ಲದಿದ್ದರೆ ನಿನ್ನನ್ನೂ ಪೂಜಿಸುವ ಜನರಿಂದ ತುಂಬಿದ ಎಲ್ಲ ಲೋಕಗಳೂ ಸುಟ್ಟು ಹಾಳಾಗುವವೆನಿಸುತ್ತದೆ. ದುಶ್ಚರತಪವನ್ನು ಮಾಡುವ ದುಷ್ಟನ ಉದ್ದೇಶ್ಯವಾದರೂ ನಿನಗೆ ತಿಳಿಯದೆ ಇಲ್ಲ! ಆದರೂ ಕರ್ತವ್ಯವೆಂದರಿತು ವಿಜ್ಞಾಪಿಸುವೆವು. ಚರಾಚರಾತ್ಮಕವಾದೀ ಜಗವನ್ನು ತಪೋಬಲದಿಂದ ಸೃಜಿಸಿ, ಸರ್ವಲೋಕ ಶ್ರೇಷ್ಠವೆನಿಸಿದ ಸತ್ಯಲೋಕವನ್ನಾಳುವ ನಿನ್ನ ಮಹಿಮೆಯನ್ನು ತಾನೂ ತಪೋಯೋಗಬಲದಿಂದ ಹೊಂದಬೇಕೆಂದು ಆ ಪಾಪಿಯ ಅಭಿಪ್ರಾಯವು. ಕಾಲವು ನಿತ್ಯವಾಗಿ ಜೀವನು ನಿತ್ಯನೆಂದ ಮೇಲೆ ತಾನು ಬಹುಕಾಲ ಕೃತ ತಪೋಬಲದಿಂದ ಬ್ರಹ್ಮನಾಗಬಾರದೇಕೆ? ಅದಕ್ಕಾಗಿ 'ಈ ಲೋಕವನ್ನು ಸಂಹರಿಸಿ ಬೇರೊಂದು ಲೋಕವನ್ನೇ ಸೃಜಿಸಿ ಆಳುವೆ'ನೆಂಬಂತೆ ಆ ದುರ್ಮತಿಯು ತನ್ನ ಯೋಗ್ಯತೆನ್ನು ಮೀರಿ ನಡೆಯುತ್ತಿರುವನು. 'ಬ್ರಹ್ಮನಿರ್ಮಿತವಾದ ಲೋಕಗಳೆಲ್ಲವು ಮನ್ವಂತರ ಮಾತ್ರ ನಿಲ್ಲುವುವು. ಅಂತಹ ಅಶಾಶ್ವತ ಪುಣ್ಯಲೋಕಗಳಿಂದೇನು ಪ್ರಯೋಜನವು? ಬ್ರಹ್ಮಪದವಿಯನ್ನು ಹೊಂದುವೆ'ನೆಂದು ನಿಶ್ಚಯಿಸಿರುವ ಈ ದುರಾಗ್ರಹ ಗ್ರಹಸ್ತನ ತಪಃಪೀಡೆಯನ್ನು ದಯಮಾಡಿ ನಿವಾರಿಸು. ಜಗದ್ರಕ್ಷಕನಾದ ನಿನ್ನಿಂದ ಸುಜನರಿಗೆ ಶಾಂತಿ ಸಮಾಧಾನ ಗಳು, ಸುಖಭಾಗ್ಯಗಳು ವಿಜಯ ಕ್ಷೇಮಗಳು ಸಿಗಬೇಕು. ಅನನ್ಯ ಭಜಕರಾದ ನಮ್ಮನ್ನು ರಕ್ಷಿಸು– ಎಂದು ಬೇಡಿದ ಸುರರ ನುಡಿಯನ್ನಾಗಲಿ ಸುರಗುರುವು ಭೃಗುದಕ್ಷಾದಿ ಸಹಿತನಾಗಿ ಮಂದರದ್ರೋಣಿಯನ್ನು ಸೇರಪೋದನು.

ಅಲ್ಲಿ ವಲ್ಮೀಕ ತೃಣ ವೇಣುಗಳಿಂದಾವೃತವಾದ ಅಸುರರಾಜನನ್ನು ನೋಡಿದನು. ಅವನ ಮೈಯೆಲ್ಲವೂ ಕೀಟಗಳು ತುಂಬಿ ತಿನ್ನುತ್ತಿರಲು ರಕ್ತಮಾಂಸಗಳು ಕಾಣುತ್ತಿದ್ದುವು. ಸೂರ್ಯನಂತೆ ಪ್ರಭಾಸಮಾನವಾಗಿ ತಪವನ್ನು ಮಾಡುವ ದೈತ್ಯರಾಜನನ್ನು ನೋಡಿ ವಿಸ್ಮಿತನಾಗಿ, ಮಿಂಚನು ನಗುತ್ತಾ ಇಂತೆಂದನು–

ಕಾಶ್ಯಪ! ಏಳೇಳು. ನಿನಗೆ ಮಂಗಳವಾಗಲಿ! ನಿನ್ನ ತಪವು ಫಲಿಸಿತು. ವರವನ್ನು ಕೊಡಲು ಬಂದಿರುವೆನು. ಬೇಕಾದ ವರವನ್ನು ಬೇಡು. ನಿನ್ನ ಮನೋದಾರ್ಢ್ಯವನ್ನು ಕಂಡು ಆಶ್ಚರ್ಯಗೊಂಡಿರುವೆನು. ಸೂಚಿಮುಖ ಶುಕಾದಿ ಭಕ್ಷಿತದೇಹನಾದ ನಿನ್ನ ಪ್ರಾಣಗಳು ಅಸ್ಥಿಗತವಾಗಿ ಹಾರಿಹೋಗದೆ ಉಳಿದವೆ. ಪೂರ್ವಋಷಿಗಳು ಯಾರೂ ಇಂತಹ ತೀಕ್ಷ್ಣ ಕಠೋರ ತಪವನ್ನು ಮಾಡಿಲ್ಲ; ಮುಂದಿನವರೂ ಮಾಡಲಾರರು. ನೀರಿಲ್ಲದೆ ನೂರು ದಿವ್ಯ ವರುಷಗಳ ತಪವನ್ನು ಮಾಡಿದ ನಿನ್ನ ಪ್ರಯತ್ನ, ನಿನ್ನ ನಿಷ್ಠೆ, ನಿನ್ನ ಮನೋಬಲಗಳನ್ನು ಕಂಡು ಮೆಚ್ಚಿರುವೆನು. ಮರ್ತ್ಯನಾದ ನಿನಗೆ ಅಮರ್ತ್ಯನಾದ ನನ್ನ ದರ್ಶನವು ನಿಷ್ಫಲವಾಗುವುದೇ? ಬೇಡು- ಎಂದು ಹೇಳಿ ವಿಧಿಯು ತನ್ನ ಕಮಂಡಲು ಜಲದಿಂದ ಹಿರಣ್ಯಕಶಿಪುವಿನನ್ನು ಪ್ರೋಕ್ಷಿಸಿ ಅವನನ್ನು ಸಿಂಹಸಂಹನನ್ನಾಗಿ ಮಾಡಿದನು.

ಸರ್ವಾವಯವ ಸಂಪನ್ನನಾಗಿ ಕಾದ ಕಾಂಚನದಂತೆ ಮೆರೆಯುತ್ತಾ, ಬಲತೇಜೋ ವೀರ್ಯಯುತನಾದ ದೈತ್ಯನು ಹುತ್ತಿನಿಂದ ಮೇಲಕ್ಕೆದ್ದು ಹಂಸವಾಹನನನ್ನು ಕಂಡನು. ಸಾಷ್ಟಾಂಗವೆರಗಿ ಕೈಮುಗಿದು ಮಹೋತ್ಸಾಹ ಬಂಧುರನು, ವಿನಯಾನತ ಕಂಧರನು ಆಗಿ ಆನಂದ ಬಿಂದುಗಳುರುಳುತ್ತಿರಲು ಗದ್ಗದವಚನಗಳಿಂದ ನುತಿಸಿದನು.

ಪ್ರಳಯಕಾಲದಲ್ಲಿ ದುರ್ಗೆಯು ತಮೋರೂಪಳಾಗಿ ಮುತ್ತಿರಲು ಅಡಗಿದ್ದು, ಸ್ವಯಂ ಜ್ಯೋತಿಯಾದ ಪರಮಾತ್ಮನು ತನ್ನ ಇಚ್ಛೆಯೇ ನಿಮಿತ್ತಕಾರಣವಾಗಲು, ಪ್ರಕೃತಿಯು ಉಪಾದಾನ ಕಾರಣವಾಗಿರಲು ಈ ಜಗವನ್ನು ವಿಸ್ತಾರವಾಗಿ ನಿರ್ಮಿಸಿದನು. ಸತ್ತ್ವರಜಸ್ತಮೋಗುಣಗಳನ್ನು ಕಲೆಸಿ ವಿಕಾರಗೊಳಿಸಿ, ಸ್ಥಿತ ಜನ್ಮ ನಾಶಗಳನ್ನು ಮಾಡುತ್ತಿರುವನು. ಅಣುವಿನಲ್ಲಿ ಪರಮಾಣು ರೂಪನು, ಮಹತ್ತಿನಲ್ಲಿ ಪರಮ ಮಹದ್ರೂಪನು ಆದ ಆದಿಪುರುಷನಿಗೆ ನಮಸ್ಕರಿಸುವೆನು. ಜ್ಞಾನ ವಿಜ್ಞಾನ ಸ್ವರೂಪನು, ಪ್ರಾಣೇಂದ್ರಿಯ ಮನೋಬುದ್ಧಿ ಪ್ರೇರಕನು, ಸರ್ವವಲ್ಲಭನು, ಆ ಮುಖ್ಯಪ್ರಾಣನು ಪರಮಾತ್ಮಾಧೀನನಾಗಿರುವನು. ಶ್ರೀಶನು ಅನನ್ಯಾಧೀನನು. ಅವನು ಚಿತ್ತದ ಸ್ಮರಣಶಕ್ತಿಯನ್ನು, ಮನದ ಮನನಶಕ್ತಿಯನ್ನು, ಇಂದ್ರಿಯಗಳ ವಿಷಯಗ್ರಹಣಶಕ್ತಿಯನ್ನು ತನ್ನ ಕೈಯಲ್ಲಿಟ್ಟುಕೊಂಡು, ಅವುಗಳನ್ನು ಶಕ್ತಿವಂತವನ್ನಾಗಿ ಮಾಡಿ ನಡೆಸುತ್ತಿರುವನು.

ವೇದಶರೀರದಿಂದ ಯಜ್ಞಗಳ ವಿಸ್ತಾರವನ್ನು ಮಾಡಿ, ಅವುಗಳಿಂದ ಪೂಜಿತನಾಗುವವನು ಶ್ರೀಹರಿಯೇ ಆಗಿರುವನು. ಜೀವರಿಗೆ ಜೀವನಪ್ರದನಾಗಿ ಶ್ರೇಷ್ಠನಾಗಿರುವನು, ಅಪ್ರಮೇಯ ಮಹಿಮನು, ಸರ್ವಜ್ಞನು, ಮುಕ್ತ ಪ್ರೇರಕನು, ಜಾಗ್ರದಾದ್ಯವಸ್ಥಾ ನಿಯಾಮಕನಾದ ಸ್ವಾಮಿಯು ಕಾಲಾವಯವಗಳಾದ ಲವನಿಮೇಷಾದಿಗಳಿಂದ, ಕಾಣದಂತೆ ಇದ್ದು, ಜೀವ ಆಯುಃಖಂಡಗಳನ್ನು ಕತ್ತರಿಸಿಬಿಡುತ್ತಿದ್ದರೂ, ಅವನಿಗೆ ಕಾಲಕೃತವಿಕಾರವಿಲ್ಲ.

ಬ್ರಹ್ಮನೇ! ಇಂತಹ ಪರಮಾತ್ಮನಿಂದ ಮೊದಲು ಪುಟ್ಟಿ ಬಂದ ನೀನು ಜೀವೋತ್ತಮನೆನಿಸಿರುವೆ. ಜೀವ ಪ್ರಾಣಧಾರಕನೂ ನೀನೇ. ನಿನ್ನ ಸ್ವಾಮಿಯು ಸ್ಥಾವರ ಜಂಗಮ ಜಗದೊಡೆಯನು, ಸರ್ವವಿದ್ಯಾಶ್ರಯನು, ಜಾಗ್ರದಾದ್ಯವಸ್ಥಾತ್ರಯವಿದೂರನು, ಸರ್ವತ್ರವ್ಯಾಪ್ತನು ಆಗಿರುವನು. ತುರೀಯನೆನಿಸಿರುವ ಆ ಅನಂತ ಬ್ರಹ್ಮಾಂಡೋದರನ ಶರೀರದಿಂದ ಜನಿಸಿದ ನೀನೂ ಸರ್ವಜೀವ ಜಗತ್ಪ್ರಭುವಾಗಿ ವಿರಾಜಿಸುವೆ. ಬ್ರಹ್ಮಾಂಡವು ನಿನಗೆ ಸ್ಥೂಲ ಶರೀರವು. ಆದರಿಂದ ಪ್ರಾಣ ಪಂಚಕವು, ಮನಸ್ಸು ದಶೇಂದ್ರಿಯಗಳು ಪುಟ್ಟಿ ನಿನ್ನಿಂದ ಸುಖ ದುಃಖ ಕಾರಣಶಕ್ತಿಯನ್ನು ಪೊಂದಿ ಜೀವರನ್ನು ದೇಹದಲ್ಲಿಟ್ಟು ನಡೆಸುತ್ತಿವೆ. ವೈಕುಂಠಾದಿ ಸ್ಥಾನದಲ್ಲಿದ್ದು ಪುರಾಣಪುರುಷನು ಬೇಕಾದಾಗ ಅವತರಿಸಿ ಜಗವನ್ನು ಪೊರೆವಂತೆ, ನೀನು ಸತ್ಯಲೋಕದಲ್ಲಿದ್ದು ಉಪಾಧ್ಯಾಯನಿಂದ ಶಕ್ತಿಯನ್ನು ಪಡೆದ ಶಿಶ್ಯನಂತೆ ಶ್ರೀಶನಿಂದ ಸರ್ವಶಕ್ತಿಗಳನ್ನು ಪಡೆದು ಮಹಿಮಾನ್ವಿತನಾಗಿರುವೆ. ನಿನಗೆ ನಮಸ್ಕಾರವು!

ನನ್ನ ವರಗಳನ್ನು ಕೊಡುವೆನೆಂದೆ ಅಲ್ಲವೇ? ಒಳ್ಳೆಯದು. ಮೊದಲು ನಿನ್ನಿಂದ ಸೃಷ್ಟವಾದ ಯಾವ ಭೂತದಿಂದಲು ನನಗೆ ಮರಣವು ಬರದಂತಾಗಲಿ!

ನನಗೆ ಒಳಗೆ ಮರಣವು ಬರಬೇಡ; ಹೊರಗೆ ಬೇಡ; ಹಗಲು ಬೇಡ; ರಾತ್ರಿ ಬೇಡ. ಇನ್ನೊಬ್ಬ ಜೀವನಿಂದ ಮರಣವು ಬರಕೂಡದು. ಆಯುಧದಿಂದ ಬರಲಾಗದು. ಭೂಮಿಯಲ್ಲಿ, ಆಕಾಶದಲ್ಲಿ ನನಗೆ ಮರಣವು ಬೇಡ. ನರ ಸುರಾಸುರ ಮಹೋರಗರಿಂದ ಬೇಡ. ಪ್ರಾಣಸಹಿತವಾದ ಹಾಗೂ ಪ್ರಾಣರಹಿತವಾದ ಯಾವ ವಸ್ತುವಿನಿಂದಲೂ ಎನಗೆ ಮರಣವು ಬರಬೇಡ.

ನಾನು ಯುದ್ಧದಲ್ಲಿ ಎದುರಿಲ್ಲದೇ ಗೆಲ್ಲುಂವತಾಗಬೇಕು. ಏಕಚ್ಛಾತ್ರಾಧಿಪತಿಯಾಗಬೇಕು. ಎಲ್ಲ ಲೋಕಪಾಲರ ದಿವ್ಯಶಕ್ತಿಗಳು ಎನ್ನ ಕೈಸೇರಬೇಕು. ನನ್ನ ತಪೋಮಹಿಮೆಯಿಂದ ಯಾವ ಕುಂದಿಲ್ಲದೆ ನಾನು ಆನಂದದಿಂದಿರಬೇಕು.

## ೪. ಹಿರಣ್ಯಕಶಿಪು — ದುಶ್ಚರಿತೆ — ಪ್ರಹ್ಲಾದ ಸಚ್ಚರಿತೆ

ಹಿರಣ್ಯಕನ ನುಡಿಯನ್ನು ಕೇಳಿ ಕಮಲಗರ್ಭನು ಅವನ ತಪಸ್ಸಿಗೆ ಮೆಚ್ಚಿ ಅವನು ಬೇಡಿದ ವರಗಳನ್ನು ಕೊಟ್ಟನು.

ವತ್ಸಾ! ದುರ್ಲಭವರಗಳನ್ನು ಬೇಡಿರುವೆ. ಆದರೂ ಕೊಟ್ಟಿರುವೆನು. ಎಲ್ಲ ವರಗಳೂ ಕೊನೆಗೆ ದುಃಖ ಪ್ರಾಪಕವೆಂದು ತಿಳಿ – ಎಂದು ಹೇಳಿ, ಅವನ ಪೂಜೆಯನ್ನು ಸ್ವೀಕರಿಸಿ, ಬ್ರಹ್ಮದೇವನು ಹೊರಟು ಹೋದನು.

ಲಬ್ಧವರನಾದ ದೈತ್ಯರಾಜನು ಗರ್ವಿತಚಿತ್ತನಾಗಿ ಶ್ರೀಹರಿಯಲ್ಲಿ ದ್ವೇಷವನ್ನು ಮಾಡಿದನು. ಸಮಗ್ರೈಶ್ವರ್ಯಾದಿಗುಣರತ್ನಾಕರನು, ರತ್ನಾಕರಸುತಾವರನು ಆದ ನಾರಾಯಣನನ್ನು ಅಸುರಾವೇಶಮತ್ತನಾಗಿ, ತಮ್ಮನನ್ನು ಕೊಂದನೆಂದು ನಿಂದಿಸಿ, ಹಗೆಯನ್ನು ಬಗೆದನು. ಸರ್ವಲೋಕಗಳನ್ನು ಗೆದ್ದು ದೇವಾಸುರ ಮನುಜ ಗಂಧರ್ವ ಗರುಡ ಸಿದ್ಧಚಾರಣ ವಿದ್ಯಾಧರರನ್ನು, ಯಕ್ಷರಕ್ಷಃ ಪಿಶಾಚರನ್ನು, ಪ್ರೇತಭೂತರನ್ನು ತನ್ನ ವಶದಲ್ಲಿಟ್ಟು ಪೀಡಿಸಿದನು. ಅವರ ಸ್ಥಾನಗಳನ್ನು, ತರುಣಿ, ರತ್ನಗಳನ್ನು ಕಸಿದು ಭೋಗಿಸಿದನು. ಅಮರಾವತಿಯ ಮಹೇಂದ್ರ ಭವನದ ಸಕಲವಿಭವವನ್ನು ದೇವರಮಣೀ ಪರಿಭವವನ್ನು ಒಂದೇ ಸಲ ಸಾಧಿಸಿದನು.

ವಿದ್ರುಮ ಸೋಪಾನಗಳು, ಮರಕತಕುಟ್ಟಿಮಗಳು, ಸ್ಫಟಿಕಕುಡ್ಯಗಳು, ವೈಡೂರ್ಯ ಸ್ತಂಭಗಳು, ಚಿತ್ರವಿಮಾನಗಳು, ಪದ್ಮರಾಗಾಸನಗಳು, ಫೇನನಿಭಶಯನಗಳು, ಮುಕ್ತಾಮಯ ದಾಮಗಳು, ಮೊದಲಾದ ಐಶ್ವರ್ಯದಿಂದ ತುಂಬಿ ತುಳುಕುವ ಮಹೇಂದ್ರಭವನದಲ್ಲಿ ಮಹಾಬಲನಾದ ಮಹಾಸುರನು, ಸಾಮಾನ್ಯಸುರಾದಿ ವಂದ್ಯನಾಗಿ ಮೆರೆಯುತ್ತಾ ಚಂಡಶಾಸನನಾಗಿ ಮೂರ್ಲೋಕಗಳನ್ನು ಆಳಿದನು. ಮಧುಮೈರೇಯ ಮತ್ತಚಿತ್ತನಾಗಿ, ಮಹೇಂದ್ರಾಸನದಿ ಮಂಡಿಸಿದ ಚಂಡದೈತ್ಯನಿಗೆ, ಭಯಪಟ್ಟು, ಯಜ್ಞಭಾಗ ಭೋಜನರಲ್ಲದ ಸಾಮಾನ್ಯ ಸುರರು ಕಪ್ಪಕಾಣಿಕೆಗಳನ್ನರ್ಪಿಸಿ ಸೇವಿಸಿದರು.ಗಂಧರ್ವರು ಗಾನ ಮಾಡಿದರು. ನಾನು ತುಂಬುರುನಿಂದ ಕಲೆತು, ಕಾಲಬಲವನ್ನರಿತು, ಆ ಸಭೆಯಲ್ಲಿ ದೇವ ದ್ವೇಷಿಯನ್ನು ತುತಿಸಿದೆನು. ಅಪ್ಸರೆಯರಾಡಿದರು. ವರ್ಣಾಶ್ರಮವಿಹಿತ ಯಜ್ಞಗಳನ್ನು ಭೂರಿದಕ್ಷಿಣೆಯನ್ನಿತ್ತು ಮಾಡುವ ಋಷಿವರರ ಆಶ್ರಮವನ್ನು ಹೊಕ್ಕು ಯಜ್ಞಹವಿರ್ಭಾಗಗಳನ್ನು ಬಲಾತ್ಕಾರದಿಂದ ಸ್ವೀಕರಿಸಿ, ದೇವತೆಗಳಿಗೆ ಸಲ್ಲಿಸದೆ ಆ ದುಷ್ಟನು ತಾನೇ ಭುಜಿಸಿದನು. ಅವನು ಸರ್ವ ದಿಕ್ಪಾಲ ಶಕ್ತಿ ಸರ್ವಸ್ವವನ್ನು ಹರಿಸಿ, ಸಿರಿಯ ಮದದಿಂದ ಕೊಬ್ಬಿ, ಆಳುತ್ತಿರಲು, ಭೂಮಿಯ ಉಳದೆ ಧಾನ್ಯಗಳನ್ನು ಬೆಳೆದು ಕೊಟ್ಟಿತು. ಆಕಾಶವು ಬೇಕಾದ ವರ್ಷಾದಿ ಸಂಪದವನ್ನು ಕಾಮಧೇನುವಿನಂತೆ ನೀಡಿತು. ರತ್ನಗಳನ್ನು ಸಮುದ್ರಗಳು, ಸಮುದ್ರಪತ್ನಿಯರು ತಂದರ್ಪಿಸಿದರು. ಕ್ಷಾರ ಮಧುರ ರಸಗಳು, ಘೃತ ಕ್ಷೀರ ಮಧು ದಧಿ ಸುಭೋದಕಗಳು ಸಮೃದ್ಧವಾದವು. ಪರ್ವತ ಕಂದರಗಳು ಸರ್ವತು ಫಲಪುಷ್ಪ ಭರಿತವು, ಸಸ್ಯಹರಿತವು ಆಗಿ ಶೋಭಿಸುತ್ತಿದ್ದುವು.

ನಿರ್ಜಿತ ಸಕಲಲೋಕನಾಗಿ ಇಚ್ಛಾಪ್ರಕಾರವಾಗಿ ವಿಷಯಸುಖಗಳನ್ನನುಭವಿಸುತ್ತಿದ್ದರೂ, ಆ ಅಜಿತೇಂದ್ರಿಯನು ತಣಿಯದೆ, ಶಾಸ್ತ್ರವಿಹಿತ ಮಾರ್ಗವನ್ನು ಬ್ರಹ್ಮವರಗರ್ವಿತನಾಗಿ ಮೀರಿ ನಡೆಯುತ್ತಾ ಮೈಮರೆತಿರಲು, ಬಹುಕಾಲ ಕಳೆದುಹೋಯಿತು.

ಅವನ ಚಂಡಶಾಸನ ಪೀಡಿತರಾದ ದೇವತಾ ಕಿನ್ನರ ಸಿದ್ಧಸಾಧ್ಯ ಮುನಿ ನಾಯಕರು ಅನ್ಯರಕ್ಷಕರಿಲ್ಲವೆಂದರಿತು ಭವಬಂಧ ವಿಮೋಚನನಾದ ಪದ್ಮಲೋಚನನಿಗೆ ಶರಣಾಗತರಾದರು.

ಎಲ್ಲಿರುವನೋ ಶ್ರೀಹರಿಯು? ಅವನ ಲೋಕವನ್ನು ಪೊಂದಿ ಶಾಂತರಾಗಿ ನಿರ್ಮಲ ಚಿತ್ತರಾಗಿ ಮುನಿವರರು ಹಿಂದಿರುವಗಿ ಬರದಿರುವರು. ಅಂತಹ ಶ್ರೀವೈಕುಂಠನಾಥನೇ ನಮಗೆ ಗತಿಯು – ಎಂದು ನಿಶ್ಚಯಿಸಿ ಅವರು ನಿದ್ರಾಹಾರಗಳನ್ನು ನೀಗಿ, ಚಿತ್ರವು ಪರಾಯತ್ತವಾಗದಂತೆ ಹೃಷೀಕೇಶಪದಾರವಿಂದದಲ್ಲಿಟ್ಟು ನುತಿಸಿ ನುತಿಸಿದರು–

ಮಹಾಪುರುಷ! ಮಹಾತ್ಮ! ಅಪ್ರಾಕೃತ ದಿವ್ಯಜ್ಞಾನಾನಂದ ಸ್ವರೂಪಾ! ನಮಸ್ಕಾರ. ನಮಗೆ ಬಂದ ಭಯವನ್ನು ಪರಿಹರಿಸು!– ಎಂದು ಬೇಡುವ ಆ ಸುಜನರಿಗೆ ಕಾಣಿಸದೆ ಶ್ರೀಹರಿಯು ಮೇಘಗಂಭೀರರವದಿಂದ ಇಂತು ನುಡಿದನು.

ಎಲೌ ವಿಬುಧವರರೇ! ಭಯಪಡಬೇಡಿ! ನಿಮಗೆಲ್ಲರಿಗೂ ಶುಭವಾಗುವುದು. ನನ್ನ ದರ್ಶನವು ಸರ್ವಶ್ರೇಯಸ್ಸಂಪಾದಕವು. ದಿತಿಸುತನ ಕುಮತಿಯನ್ನರಿತಿರುವೆನು. ಆ ನೀಚ ದೈತ್ಯನನ್ನು ನಾಶಮಾಡಿ ನಿಮಗೆಲ್ಲರಿಗೂ ಶಾಂತಿ ಸೌಖ್ಯಗಳನ್ನೊದಗಿಸುವೆನು. ಸ್ವಲ್ಪ ಕಾಲ ತಡೆಯಿರಿ. ದೇವ ವೇದ ಗೋ ವಿಪ್ರ ಸಾಧುಗಳಲ್ಲಿ, ಧರ್ಮದಲ್ಲಿ, ಧರ್ಮಪಾಲಕನಾದ ನನ್ನಲ್ಲಿ ದ್ರೋಹವನ್ನು ಬಗೆದ ಆ ದುಷ್ಟನು ಅಚಿರದಲ್ಲೇ ಅಳಿಯವನು. ತನ್ನ ಮಗನಾದ ಪ್ರಹ್ಲಾದನು ನಿರ್ವೈರನು, ಭಕ್ತವರನು, ಮಹಾತ್ಮನು, ಆಗಿರಲು ವೈರದಿಂದ ಸಹಿಸದೆ, ರೋಷದಿಂದ ಅವನನ್ನು ತಾನಾಗಿ ಕೊಲ್ಲಲು ಯತ್ನಿಸಿದಾಕ್ಷಣವೇ– ಸಾವಿರ ವರಗಳನ್ನೂ ಲೆಕ್ಕಿಸದೆ ನಾನೇ ಆ ಹಿರಣ್ಯಕನನ್ನು ಬಗೆದು ಕೊಲ್ಲುವೆನು.

ಎಂದುಸುರಿದ ದನುಜಮರ್ದನನಿಗೆ ನಮಸ್ಕರಿಸಿ ದೇವತೆಗಳು ದನುಜರು ಸಾಯುವುದು ನಿಜವೆಂದು ನಿಶ್ಚಯಿಸಿ ಶಾಂತರಾಗಿ ತಮ್ಮ ತಮ್ಮ ಮನೆಗಳನ್ನು ಸೇರಿದರು.

ಧರ್ಮರಾಜಾ! ಆ ದೈತ್ಯಪತಿಗೆ ನಾಲ್ವರು ಸುತರು. ಅವರಲ್ಲಿ ಪ್ರಹ್ಲಾದನು ಗುಣದಿಂದಲೂ ಹಿರಿಯನು.

ಶ್ರೀಹರಿಪಾದಕಂಜನಿಷೇವಣದಿಂದ ಸಮಸ್ತ ಸಂಪದ್ಭರಿತನಾದರೂ ಪ್ರಹ್ಲಾದನು, ಬ್ರಾಹ್ಮಣವರದನು, ಶೀಲಸಂಪನ್ನನು, ಸತ್ಯಸಂಧನು, ಜಿತೇಂದ್ರಿಯನಾಗಿ ಧವಲಯಶಶ್ಚಂದ್ರಿಕೆಯಿಂದ ಈ ಲೋಕವನ್ನಲ್ಲದೆ ದೇವಲೋಕವನ್ನು ಬೆಳಗಿದನು. 'ಶ್ರೀಹರಿಯು ನನ್ನ ಸ್ವಾಮಿಯಾಗಿರುವಂತೆ ಸರ್ವಸ್ವಾಮಿಯು ಆಗಿರುವನು' ಎಂದರಿತು ಸರ್ವಸುಜನರಿಗೆ ದಿವಿಜದ್ರುಮ ನೆನಿಸಿ ಸರ್ವಾಭೀಷ್ಟಾರ್ಥಸಿದ್ಧಿಯನ್ನಿತ್ತನು. ಸರ್ವವಿದ್ಯಾಪ್ರವೀಣನಾದರೂ ಮೋಹವನ್ನು ಪೊಂದದೆ, ಸುಂದರ ರೂಪನಾದರೂ ದುಷ್ಟಕಾಮಕ್ಕೆಡೆಗೊಡದೆ, ಸಂಪದ್ಭರಿತನಾದರೂ ಲೋಭವನ್ನು ಮುಟ್ಟದೆ, ಕುಲೀನನಾದರೂ ಮತ್ಸರಿ ಎನಿಸದೆ, ಚಿರಾಯುವಾದರೂ ಮದಮತ್ತನಾಗದೆ, ಪ್ರಭುಸುತನಾದರೂ ಕ್ರೋಧವಶನಾಗದೆ ಪ್ರಹ್ಲಾದನು ನಿರಸ್ತದೋಷನು, ನಿರವದ್ಯವೇಷನು ಆಗಿದ್ದನು. ಅವನಿಗೆ ವ್ಯಸನವು ಬರಲು ಉದ್ವೇಗವೇ? ನೋಡಿ ಕೇಳಿದ ಎಲ್ಲಾ ವಿಷಯಸುಖವು ಬರಲಿ ಎಂಬ ಸ್ಪೃಹೆಯೇ? ಸರ್ವತಂತ್ರ ಸ್ವತಂತ್ರನಾದ ಪ್ರಹ್ಲಾದನು ಹತಾನ್ಯತಂತನು ಹರಿಪರತಂತ್ರನಾಗಿ ಅಸುರ ಜಾತಿಯಾದರೇನು ದೇವ ಸ್ವಭಾವನೆನಿಸಿ ಮೆರೆದನು. ಬುದ್ಧೀಂದ್ರಿಯ ಮನಃಪ್ರಾಣಗಳನ್ನು

ಹರಿವಶವನ್ನಾಗಿಸಿ ಜಯಿಸಿ ಜ್ಞಾನ ಭಕ್ತಿಗಳನ್ನು ಗಳಿಸಿ ದಯಾ ದಾಕ್ಷಿಣ್ಯ ವೈರಾಗ್ಯ ವಾಕ್ಪಟದ ಮುಖ್ಯ ಗುಣ ಪರಂಪರಾಸಂಪನ್ನನಾದನು.

ಮಹಾರಾಜ! ಕವಿಜನರು ಅವನನ್ನು ವರ್ಣಿಸಲು ತೊಡಗಿ, ಅವನ ಮಹಾಗುಣ ಮಹಿಮೆಗೆ ಮಾರುಹೋಗಿ, ಸಂಪೂರ್ಣವಾಗಿ ಪೊಗಳಲಾರದೆ – ಬ್ರಹ್ಮಾದಿಗಳು ರಮಾ ರಮಣನನ್ನಂತೆ ತಿಳಿಯಲಾಗದೆ ಸುಮ್ಮನಾಗಿ ನಮಿಸುವರು. ಹೆಚ್ಚೇನೆಂದರೆ ಕೇಳು. ಜಾತ್ಯಾಶತ್ರುಗಳಾದ ದೇವತೆಗಳು ಕೂಡ ಸಾಧುಜನ ಗುಣಗಾನವನ್ನು ಮಾಡಿಸುವೆಡೆ ಭಕ್ತಿಗೆ ಪ್ರಹ್ಲಾದನೆಂದು ತಮ್ಮ ಸಭೆಗಳಲ್ಲಿ ಗಂಧರ್ವರಿಂದ ಪೊಗಳಿಸಿ, ಕೇಳಿ ಸಂತಸಿಸುವರು. ಅಂದಮೇಲೆ ಆ ಪ್ರಹ್ಲಾದನ ಚರಿತೆಯನ್ನು ನೀವು ಕೇಳಿ ಸಂತಸಿಸದಿರುವರೇ? ಅವನಿಗೆ ಶ್ರೀ ವಾಸುದೇವನಲ್ಲಿರುವ ಭಕ್ತಿ ಎಂಬ ಸಮುದ್ರದಲ್ಲಿ ಸಖಿಲಗುಣ ರತ್ನಗಳು ತುಂಬಿ ನಿಂತಿವೆ. ಅವನ ಭಕ್ತಿಯು ಸ್ವಭಾವ ಸುಂದರವಾಗಿದೆ. ಸಕರನ್ನು ಕೂಡದೆ, ಅಸುರ ಬಾಲರಿಂದಾಡದೆ, ಕೂಗಿದರೂ ಮಾತಾಡದೆ, 'ಇತರ ವಿಷಯ ಜಾತವನ್ನು ನೋಡದೆ ಶ್ರೀಕೃಷ್ಣನೆಂಬುವ ಗ್ರಹವು ಬಡಿಯಿತೋ' ಎನ್ನುವಂತೆ ಹರಿಪದಾಂಭೋಜಚಿಂತನಾಮೃತದಿಂದ ಅಂತರಂಗವು ತುಂಬಿ ತುಳುಕಲು ಜಡನಂತೆ, ಉನ್ಮತ್ತನಂತೆ ಕಾಣುತ್ತಿದ್ದನು. ಕೂತರೆ, ನಿಂತರೆ, ನಡೆದರೆ, ಉಂಡರೆ, ಕುಡಿದರೆ, ಮಾತಾಡಿದರೆ, ಆ ಕಾರ್ಯಗಳನ್ನು ಅಭಿಮಾನದಿಂದ ಮಾಡದೆ ಗೋವಿಂದಪರಿರಂಭಿತನಾಗಿ ಜಗವನ್ನೇ ಮರೆತುಬಿಡುತ್ತಿದ್ದನು. ಗೋವಿಂದ ಪಾದಾರವಿಂದ ಮಕರಂದರಸ ಮಿಳಿಂದನಾಗಿ ನಗುವನು, ಒಮ್ಮೆ ರೋದಿಸುವನು, ಮತ್ತೊಮ್ಮೆ ನಾಟ್ಯವಾಡುವನು. ಶ್ರೀಹರಿಧ್ಯಾನದಿಂದ ಪುಲಕಿತಗಾತ್ರನು, ಬಾಷ್ಪಾಕುನೇತ್ರನು ಆಗಿ ವಿಷಯಗಳನ್ನು ಮರೆತು ನಿಶ್ಚೇಷ್ಟನಾಗಿ ನಿಂತು ಬಿಡುವನು. ನಿಷ್ಕಿಂಚನ ಜನಸೇವಾ ಸಮಾಸಾದಿತವಾದ ಉತ್ತಮ ಶ್ಲೋಕ ಪದಾರವಿಂದ ಭಜನಾನಂದದಿಂದ ಮತ್ತೊಂದರಲ್ಲಿ ಮನವನ್ನೀಯದೆ ಆ ಬುಧಜನವಿಧೇಯನು ಮಹಾಭಾಗಧೇಯನಾದನು. ಇಂತಹ ಮಹಾ ಭಗವದ್ಭಕ್ತನಾದ ಪುತ್ರನನ್ನು ಮಹಾತ್ಮನೆಂದು ತಿಳಿಯದೆ, ಹಿರಣ್ಯಕಶಿಪುವು ಸಂಹರಿಸಲು ಯತ್ನಿಸಿದನು.

ಆಗ ಧರ್ಮರಾಜನು ಪ್ರಶ್ನಿಸಿದನು–

ದೇವರ್ಷೇ! ಸಾಧುವು, ಪರಮಶುದ್ಧನು ಆದ ಪುತ್ರನನ್ನು ಅವನ ತಂದೆ ಕೊಲ್ಲಲು ಯತ್ನಿಸಿದನೇ? ಲೋಕದಲ್ಲಿ ಪುತ್ರರು ಪ್ರತಿಕೂಲರಾಗಿದ್ದರೂ ಪುತ್ರವತ್ಸಲರಾದ ತಂದೆ ತಾಯಿಗಳು ಅವನನ್ನು ನಿಂದಿಸುವುದಿಲ್ಲ. ಶತ್ರುಗಳಂತೆ ದಂಡಿಸುವುದಂತೂ ಮೊದಲೇ ಇಲ್ಲ. ಹೀಗಿರಲು ಸ್ವವಶರು, ಸಾಧುಗಳು, ಗುರುಪ್ರಿಯರು ಆದ ಪುತ್ರನನ್ನು ದಂಡಿಸುವುದು ಪರಮಾಶ್ಚರ್ಯವೂ, ಅಸ್ವಾಭಾವಿಕವೂ ಆಗಿದೆ. ಅಂತೂ ಕೊನೆಗೆ ಪುತ್ರನಲ್ಲಿ ಪಿತೃಕೃತ ದ್ವೇಷವು ತಂದೆಯ ಮರಣವನ್ನು ತಂದೊಡ್ಡಿತೆಂದೆ. ಆ ಪವಿತ್ರ ಚರಿತ್ರವನ್ನು ಹೇಳು.

## ೫. ಗುರುಕುಲವಾಸ – ಪ್ರಹ್ಲಾದನಿರ್ವಿಕಾರತೆ

ನಾರದನಿಂತು ನುಡಿದನು–

ಧರ್ಮರಾಜ! ಕೇಳು. ಅಸುರ ಪುರೋಹಿತರಲ್ಲವೇ ಶುಕ್ರಾಚಾರ್ಯರು! ಅವರ ಮಕ್ಕಳು ಶಂಡ, ಮರ್ಕ, ಎಂಬೀರ್ವರು ದೈತ್ಯರಾಜನ ಮನೆಯಲ್ಲಿ ಪುರೋಹಿತರಾಗಿದ್ದರು. ಅವರು ಹರಿಪದಪಯೋರುಹಚಿಂತನ ಕ್ರಿಯಾಶೀಲನಾದ ಪ್ರಹ್ಲಾದ ಬಾಲನನ್ನು ಕರತಂದು ಅನ್ಯ ದನುಜ ಬಾಲರಿಂದ ಕೂಡಿಸಿ ಓದಿಸಿದರು. 'ಶ್ರೀಹರಿಯು ನಿರಾಕಾರನು, ಪ್ರಪಂಚವು ಮಿಥ್ಯೆ....' ಎಂದಿತ್ಯಾದಿ ವಿಷಯಗಳನ್ನು ಹೇಳುವ ಆ ಗುರುಗಳ ವಚನಗಳನ್ನು ಕಿವಿಗೊಟ್ಟಾಲಿಸದೆ ಪ್ರಹ್ಲಾದನು ವಿಷ್ಣುಭಕ್ತಿಪೂರ್ಣನಾಗಿದ್ದನು. ಒಂದು ಸಲ ಅಸುರ ರಾಜನು ಮಗನನ್ನು ಕರೆಯಿಸಿ, ತೊಡೆಯ ಮೇಲಿಟ್ಟು ಮುದ್ದಾಡಿ 'ವತ್ಸ! ನಿನಗೆ ಚೆನ್ನಾಗಿ ತಿಳಿದಿರುವ ಒಂದು ಒಳ್ಳೆ ಮಾತನ್ನು ಹೇಳು. ತನಯರ ಸಂಭಾಷಣೆಗಳು ಜನಕರ ಕರ್ಣಯುಗಳ ಭೂಷಣಗಳಲ್ಲವೇ?' ಎಂದನು. ಪ್ರಹ್ಲಾದನು ವಿನಯದಿಂದ ಮಾತಾಡಿದನು–

ಅಸುರವರ್ಯ! ದೇಹಭಾರಿಗಳು ಸದಾ ವಿಷಯಾಸಕ್ತರಾಗಿ ಮನಸ್ಸಮಾಧಾನವಿಲ್ಲದೆ, ದುಃಖಿಸುತ್ತಿರುವರು. ಸಂಸಾರವೆಂಬುವ ಹಾಳುಭಾವಿಯಿಂದ ಮೇಲೆ ಬಂದು, ಅಜ್ಞಾನಾಂಧಕಾರವನ್ನು ಕಳೆದು ಜ್ಞಾನಪ್ರಕಾಶವನ್ನು ಕೊಡುವ ಸಜ್ಜನರ ಸೇವೆಯನ್ನು ಮಾಡಿ ಶ್ರೀಹರಿಚರಣವನ್ನು ಆಶ್ರಯಿಸುವುದಕ್ಕೂ ಮಿಗಿಲಾದ ಒಳ್ಳೆಯದಿಲ್ಲ.

ಪರಪಕ್ಷಾನುರೂಪವಾದ ಪುತ್ರಸಲ್ಲಾಪವನ್ನು ಕೇಳಿ ದಾನವೇಂದ್ರನು ನಗುತ್ತಾ 'ಬಾಲಬುದ್ಧಿಯ ಪರಾನುಕರಣಶೀಲವಲ್ಲವೇ? ಯಾರೋ ಶತ್ರುಗಳಿವನಿಗೆ ಈ ಮಾತನ್ನು ಕಲಿಸಿ ಕೆಡಿಸಿರುವರು. ಇರಲಿ. ಇವನನ್ನ ಮನೆಗೆ ಕರೆದುಕೊಂಡು ಹೋಗಿ. ಗುರು– ಸುತರೇ! ವಿಷ್ಣು ಪಕ್ಷೀಯರ ಮಾತುಗಳು ಇವನ ಕಿವಿಗೆ ತಾಗದಂತೆ ಮಾಡಿ. ಚೆನ್ನಾಗಿ ತ್ರಿವರ್ಗಗಳನ್ನು ಕಲಿಸಿ!' ಎಂದಾಜ್ಞಾಪಿಸಿದನು.

ಮನೆಗೆ ಬಂದು ದೈತ್ಯಯಾಜಕರು ಪ್ರಹ್ಲಾದನನ್ನು ಕರೆದು ಸಾಮವಚನಗಳಿಂದ ಮುದ್ದಿಸಿ ಕೇಳಿದರು–

ವತ್ಸ! ಪ್ರಹ್ಲಾದ! ನಿನಗೆ ಶುಭವಾಗಲಿ! ಸುಳ್ಳಾಡಬೇಡ. ನಿಜವನ್ನೇ ಹೇಳು. ಇವರಾರಿಗೂ ಇರದ ವಿಷ್ಣುಭಕ್ತಿಯ ದೈತ್ಯಕುಲದಲ್ಲಿ ಪುಟ್ಟಿದ ನಿನಗೆ ಸಲ್ಲದು. ಯಾರಾದರೂ ಹೇಳಿಕೊಟ್ಟರೇನು? ಗುರುಗಳಾದ ನಮ್ಮಗಳಿಗೆ ತಥ್ಯವನ್ನು ಹೇಳುವಿಯಾ? ಎಂದು ಕೇಳಲು ಪ್ರಹ್ಲಾದನು ನುಡಿದನು–

ಪರಮ ಸ್ವತಂತ್ರನು ಸರ್ವಕರ್ತನಾದ ಶ್ರೀಹರಿಯೇ ಸರ್ವಬುದ್ಧಿಪ್ರೇರಕನು. ಹೀಗಿರಲು 'ನಾನೇ ಕರ್ತನು, ಇನ್ನೊಬ್ಬನು ನನ್ನ ಬುದ್ಧಿಪ್ರೇರಕನು' ಎನ್ನುವ ಅನ್ಯಥಾ ಜ್ಞಾನವು ಮೋಹಿತ ಬುದ್ಧಿಗಳಾದ ಜನರಿಗೆ ಶ್ರೀಹರಿಯ ಬಂಧಕಶಕ್ತಿಯಿಂದ ಹುಟ್ಟುತ್ತಿದೆ. ಅಂತಹ ಭಗವಂತನಿಗೆ ನಮಸ್ಕರಿಸುವೆನು. ಶ್ರೀಹರಿಯ ಅನುಗ್ರಹಿಸಲು ನಾನು ನನ್ನದು ಎನ್ನುವ ರಾಗವು, 'ನೀನು - ನಿನ್ನದು' ಎನ್ನುವ ದ್ವೇಷವು ನಶಿಸುವುದು; ನಾನೇ ಸ್ವತಂತ್ರನು – ನೀನು ಸ್ವತಂತ್ರನು' ಎನ್ನುವ ಪಶುಬುದ್ಧಿಯು ನಷ್ಟವಾಗಿ ಶ್ರೀಹರಿಯೇ ಸ್ವತಂತ್ರನು – ಸಮಸ್ತ ಬುದ್ಧೀಂದ್ರಿಯಾದಿ ಸ್ವತಂತ್ರ ಪ್ರೇರಕನು ಎನ್ನುವ ಯಥಾರ್ಥಜ್ಞಾನವು ಆಗುತ್ತಿದೆ. ಅನಂತಮಹಿಮನಾದ ನಾರಾಯಣನ

ಸ್ವರೂಪಜ್ಞಾನವು ಬ್ರಹ್ಮಾದಿಗಳಿಗೂ ಅಗೋಚರವಾಗಿರುವಾಗ ಇನ್ನು ಅನ್ಯಥಾ ಜ್ಞಾನಿಗಳವನ ನ್ನೆಂತು ತಿಳಿಯುವರು. ಆ ಸ್ವಾಮಿಯೇ ನನ್ನ ಅಂತರ್ಯಾಮಿಯಾದ ನನ್ನ ಬುದ್ಧಿಯನ್ನು ತನ್ನ ಚರಣಾರವಿಂದರತವನ್ನಾಗಿರಿಸುತ್ತಿರುವನು.

ಬ್ರಾಹ್ಮಣೋತ್ತಮ! ಅಯಸ್ಕಾಂತವು ಕಬ್ಬಿಣವನ್ನಂತೆ ಚಕ್ರಪಾಣಿಯ ಪದಾರವಿಂದವು ನನ್ನ ಮನೋಭ್ರಮರವನ್ನು ಆಕರ್ಷಿಸುತ್ತಿದೆ. ಅಂಬುಜೋದರ ದಿವ್ಯಪಾದಾರವಿಂದ ಚಿಂತನಾ ಮೃತಪೂರ ವಿಶೇಷಮತ್ತವಾದ ನನ್ನ ಚಿತ್ತವು ಅಪ್ರಯತ್ನವಾಗಿ ಶ್ರೀಹರಿಯನ್ನು ಸೇರಿ ನನ್ನನ್ನು ಅವಶನನ್ನಾಗಿಸಿದೆ. ಇದೂ ಅವನ ಅನುಗ್ರಹವೇ ಸರಿ!

ಎಂದು ಸುಮ್ಮನಾದ ಸುಜನಾವತಂಸನನ್ನು ಕಂಡು ಸಹಿಸದೆ, ರಾಜಸೇವಕನಾದುದರಿಂದ ಓಂಸಿಸಲು ಹೆದರಿ, ಚಂಡನು 'ಎಲವೋ! ಯಾರಲ್ಲಿ? ಬನ್ನಿರೋ ಇಲ್ಲಿ. ತನ್ನಿರೋ ಕೋಲನ್ನು. ಛಳಿಸಿಬಿಡುವೆನೀ ಬಾಲಸನ್ನು, ಕುಲಘಾತುಕನಾದ ಈ ಕುಮತಿಯು ನಮ್ಮ ಕೀರ್ತಿಯನ್ನೆಲ್ಲ ಹಾಳು ಮಾಡುವನು. ಇವನು ಸಾಮದಿಂದ ಬಾಗುವನೇ? ದಂಡವೇ ಇವನಿಗೆ ತಕ್ಕ ಮದ್ದು. ದೈತೇಯ ಚಂದನ ವನದಲ್ಲಿ ಜಾಲಿಯ ಮರದಂತೆ ಹುಟ್ಟಿರುವನು. ಇವನನ್ನು ಕಾವಾಗಿ ಕೈಯಲ್ಲಿ ಹಿಡಿದು ವಿಷ್ಣು ಕುಠಾರವು ಸರ್ವ ದಾನವಕುಲವನ್ನು ನಾಶಮಾಡದೆ ಬಿಡದು.

ಎಂದು ತರ್ಜನ ಭರ್ಜನಾದಿಗಳಿಂದ ಹೆದರಿಸಿ ಪ್ರಹ್ಲಾದನನ್ನು ನಯಕೋವಿದನನ್ನು ಮಾಡುವೆನೆಂದು ಸಟದಿಂದ ಅವನಿಗೆ ತ್ರಿವರ್ಗ ಪಾಠಗಳನ್ನು ಹೇಳಿಕೊಡಲು ತೊಡಗಿದನು. ಕೆಲಕಾಲ ಕಳೆಯಲು ಗುರುಪುತ್ರನು ಪ್ರಹ್ಲಾದನನ್ನು ಕರೆದುಕೊಂಡು ರಾಜಾಂತಃಪುರದಲ್ಲಿ ಸೇರಿದನು. ಕಯಾಧುವು ತನಯನನ್ನಲಂಕರಿಸಿ, ಮುತ್ತಿಟ್ಟು, ಜನಕ ಸಭೆಗೆ ಕಳುಹಿದಳು. ವಿನಯ ಶೀಲನಾದ ಬಾಲನು ಫಾಲವನ್ನೊತ್ತಿ ಪಾದತಲದಿ ನಮಿಸಿ ನಿಂತಿರಲು ನೋಡಿ, ಪುತ್ರಸ್ನೇಹಕಾತರ ನಾದ ದನುಜೇಂದ್ರನು ಕೈಯಿಂದೆತ್ತಿ, ತೊಡೆಯಲ್ಲಿ ಕೂಡಿಸಿಕೊಂಡು ಮುದ್ದಾಡಿದನು. ಕರ್ಪೂರ ಚಂದನಲೇಪಕ್ಕಿಂತಲೂ ತಂಪಾಗಿ ಸುಖತರವಾದ ಪುತ್ರಪರಿಷ್ವಂಗದಿಂದ ಫುಲಂಕಿತನಾಗಿ, ಶಿರವನ್ನು ಮೂಸಿ, ಕರದಿಂದ ಗಲ್ಲವನ್ನು ಪಿಡಿದು, ಆಶೀರ್ವದಿಸಿ ಹಿರಣ್ಯಕಶಿಪುವು ಹರುಷದಿಂದ ಮಾತಾಡಿದನು–

ವತ್ಸ! ಪ್ರಹ್ಲಾದ! ನೀನು ಓದಿರುವ ಒಂದು ಉತ್ತಮ ವಿಷಯವನ್ನು ಹೇಳು. ಎಷ್ಟು ದಿನಗಳಾದವು? ನೀನು ಗುರುಕುಲದಲ್ಲಿ ಕಲಿತುದಾದರೂ ಏನು?

ಎನ್ನಲು ಪ್ರಹ್ಲಾದನು ಕಲಮಧುರ ವಚನಗಳಿಂದ 'ತಂದೆಯೇ! ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನವೆಂಬ ಲಕ್ಷಣ ನವಕದಿಂದ ಕೂಡಿದ ಹರಿಭಕ್ತಿಯೇ ತಾರಕವು. ಅದು ನಿರ್ವ್ಯಾಜವೂ ನಿರಂತರವೂ ಆಗಿರುವಂತೆ ನಡೆಯುವುದೇ ಒಳ್ಳೆಯ ಅಧ್ಯಯನದ ಫಲವು' ಎಂದನು.

ಆ ಮಾತನ್ನು ಕೇಳಿ ಕೆರಳಿ ಗುರುಸುತನನ್ನು ವೀಕ್ಷಿಸಿ ರಾಕ್ಷಸರಾಜನು ಸಿಟ್ಟಿನಿಂದ ಇಂತೆಂದನು-

ದುರ್ಮತೇ! ನನ್ನನ್ನು ತಿರಸ್ಕರಿಸಿ ನನ್ನ ಕುಮಾರನಿಗೆ ವಿರೋಧಿ ಪಕ್ಷಾವಲಂಬಿಯಾದ ನೀನು ಕಲಿಸಿರುವುದು ಇದೇನೇನು? ನೀನು ಬ್ರಾಹ್ಮಣನೇ? ಈ ಅಸಾರವೆನಿಸಿದ ವೇದಾಂತವನ್ನು ಕಲಿಸಿ ಶಿಶುವನ್ನು ಕೆಡಿಸಿದ ನಿನ್ನನ್ನೇನು ಮಾಡಿದರೂ ತಪ್ಪಲ್ಲ. ಕಪಟವೇಷಧಾರಿಗಳಾಗಿ ಮಿತ್ರರಂತೆ

ನಟಿಸುವ ನಿಮ್ಮಂತಹ ದುರಾತ್ಮಕರ ಅಪರಾಧವು, ಕಾಲದಲ್ಲಿ ಪಾಪವು ಫಲಿಸಲು ಬರುವ ರೋಗದಂತೆ, ಪ್ರಕಟಿತವಾಗಿ ಕಾಣುವುದು.

ಆಗ ಗುರುಪುತ್ರನು ಭಯದಿಂದ ನಡುಗುತ್ತಾ – ಇಂದ್ರಶತ್ರೋ! ಈ ನಿನ್ನ ಮಗನ ಬುದ್ಧಿಯು ನಾನು ಕಲಿಸಿದುದಲ್ಲ. ಇನ್ನಾರು ಕಲಿಸಿಲ್ಲ. ನೈಸರ್ಗಿಕವಾದ ನಿನ್ನ ಸುತನ ಮತಿಯನ್ನು ಕಂಡು ನಮ್ಮನ್ನೇಕೆ ಕೋಪಿಸುವೆ? ಶಾಂತನಾಗು – ಎಂದನು. ಹಿರಣ್ಯಕನ ಆ ಮಾತನ್ನು ಕೇಳಿ, ಮತ್ತೆ ಮಗನನ್ನು ನೋಡಿ – ಎಲವೋ! ಗುರುಗಳು ಕಲಿಸಿಕೊಡದ ಈ ಕೆಡುಕು ಬುದ್ಧಿ ನಿನಗೆ ಹೇಗೆ ಬಂದಿತು? ಬೊಗಳು – ಎಂದು ಗರ್ಜಿಸಿ ಕೇಳಿದನು.

ಪ್ರಹ್ಲಾದನು ಶಾಂತವಾಗಿಯೇ ಇಂತೆಂದನು –

(ಗೃಹವು ಸುಖಕರವು, ವಿಷಯ ಭೋಗಗಳನ್ನು ಬಿಡದೆ ಸೇವಿಸುವುದೇ ಜೀವನ ಪ್ರಯೋಜನವು? ಎಂದು ನಿಶ್ಚಯಿಸಿ, ವೇದಗಳನ್ನು ಪಠಿಸಿದರೂ ವೇದವಾಕ್ಯವಿಷಯನಾದ ಶ್ರೀಹರಿಯನ್ನು ಭಜಿಸದೆ, ಇಂದ್ರಿಯದಾಸರಾಗಿ, ನಿತ್ಯಾನುಭುಕ್ತ ಹೇಯ ವಿಷಯಗಳನ್ನು ಬಿಡದೆ ಅನುಭವಿಸಿ ರಮಿಸುತ್ತಿರುವರು ಅಜ್ಞಾನಿಗಳೇ ಸರಿ! ಗುರುಗಳಾಗಿ ಉಪದೇಶಿಸಿದರೂ, ಶಿಷ್ಯರಾಗಿ ಪಠಿಸಿದರೂ ಶ್ರೀಕೃಷ್ಣಭಕ್ತಿಯು ಅವರಿಗೆ ಅಂಕುರಿತವಾಗಲಾರದು. ತಮಗೆ ಗತಿಪ್ರದವಾದ ಮುಕುಂದನನ್ನು ಬಿಟ್ಟು ಆ ಶ್ರುತಿತಾತ್ಪರ್ಯಜ್ಞಾನರಹಿತರು, ವಿಷಯಗಳಲ್ಲಿ ಮನವನ್ನಿಟ್ಟು, ಹಿತವಾದುದನ್ನೇ ಪರಿತ್ಯಜಿಸಿರುವರು. ನಾಮರೂಪಗಳೆಂಬುವ ವಿವಿಧ ಪಾಶಬದ್ಧರಾಗಿ ವೇದ್ಯೈಕವೇದ್ಯನಾದ ನಾರಾಯಣನ ವಶರಾದ ಜೀವರ ನಾಮರೂಪ ಕ್ರಿಯಾದಿ ಮುಖ್ಯವಿಷಯ ನಾದ ಅವನನ್ನೇ ಮರೆತು ಗರ್ವಿತರಾದ ಗುರುಗಳ ವಚನದಿಂದ ಸನ್ಮಾರ್ಗದಿಂದ ದೂರರಾಗಿ, ಕುರುಡನನ್ನು ಹಿಂಬಲಿಸಿದ ಕುರುಡರಂತೆ ಸಂಸಾರಕೂಪ ಪತಿತರಾಗುವರು. ಭಗವದ್ಭಕ್ತರ ಪಾದಾರವಿಂದರಜವನ್ನು ಶಿರದಲ್ಲಿ ಧರಿಸಿದವನಿಗೆ ಸಕಲ ಸಂಸಾರತಾಪ ಮೋಚಕನಾದ ಶ್ರೀತ್ರಿವಿಕ್ರಮನ ಪಾದಾರವಿಂದದಲ್ಲಿ ಭಕ್ತಿಯು ಪುಟ್ಟುವುದೇ ಇಲ್ಲ.

ಈ ಮಾತನ್ನು ಕೇಳಿ ರೋಷಕಷಾಯಿತಲೋಚನನಾಗಿ ದೈತ್ಯವಲ್ಲಭನು ಬಾಲನನ್ನು ಕೆಳಗೆ ದೂಡಿ, ಕಡುಕೋಪದಿಂದ ತರ್ಜಿಸಿದನು; ತನ್ನ ಅನುಚರರನ್ನು ನೋಡಿ ಹೀಗೆ ಆಜ್ಞಾಪಿಸಿದನು–

ಈ ಪಾಪಿಯನ್ನು ಕೊಂದುಬಿಡಿ. ನನ್ನ ತಮ್ಮನೂ ತನಗೆ ಚಿಕ್ಕಪ್ಪನೂ ಆದ ಹಿರಣ್ಯಾಕ್ಷನನ್ನು ಹಂದಿಯಾಗಿ ಕೊಂದ ವಿಷ್ಣುವಿನ ಪಾದಗಳನ್ನು ದಾಸನಂತೆ ಪೂಜಿಸುತ್ತಿರುವ, ಕೃತಘ್ನನು, ಕುಲನಾಶಕನು ಆದ ಈ ನೀಚನನ್ನು ಕ್ಷಮಿಸಿಬಿಡಬಹುದೇ? ಅಯೋಗ್ಯನಾದ ಇವನ ಸೇವೆಯಿಂದ ವಿಷ್ಣುವಿಗಾದರೂ ಆಗುವ ಲಾಭವೇನೋ? ಐದು ವರ್ಷದ ಬಾಲನಾದರೂ ಬಂಧುಸ್ನೇಹವನ್ನು ಕಡಿದು ಶತ್ರುವಿನಂತೆ ವರ್ತಿಸುವ ಈ ದುರ್ಗುಣ ಜಾಲನನ್ನು ಕೊಲ್ಲುವುದೇ ಲೇಸು. ಪರನಾದರೂ ಹಿತಕಾರಿಯಾದರೆ ಔಷಧವನ್ನಂತೆ ಸೇವಿಸುವುದೂ, ಸುತನಾದರೂ, ಅಹಿತಕಾರಿಯಾದರೆ ರೋಗದಂತೆ ಹೊರಗಟ್ಟಿ, ನಾಶಪಡಿಸುವುದೂ ನೀತಿಶಾಸ್ತ್ರಸಮ್ಮತವಾಗಿದೆ. ನನ್ನ ದೇಹದಿಂದ ಪುತ್ರಾಕಾರದಿ ಜನಿಸಿದ ಈ ವ್ಯಾಧಿಯನ್ನು ಕಳೆದು ನಿಶ್ಚಿಂತನಾಗುವೆನು. ಸರ್ಪದಷ್ಟವಾದ ಬೆರಳನ್ನು ಕಡಿದರಲ್ಲವೇ ಶೇಷಾಂಗವು ಜೀವಿಸಿರುವುದು? ಭಟರೇ– ಅನ್ನದಲ್ಲಿ ವಿಷವನ್ನಿಡಿ: ಭೂಮಿಯಲ್ಲಿ ಹೂತಿಡಿ ! ಕೂತಲ್ಲೇ ತುಂಡರಿಸಿ. ಸ್ವೇಚ್ಛಾಚಾರವಾದ ಇಂದ್ರಿಯವನ್ನು ನಿಗ್ರಹಿಸುವ ಮುನಿಯಂತೆ ಪುತ್ರಾಕಾರನಾದ ಈ ಶತ್ರುವಿನನ್ನು ಕೊಂದು ನಾನು ಸುಖಿಸು ವಂತೆ ಮಾಡಿ! ಎಂದನು.

ಆಗ ಸ್ವಭಾವ ಭಯಂಕರವಾದ ದೈತ್ಯರು ಶೂಲಗಳನ್ನು ಪಿಡಿದು 'ಕಡಿ! ಕೊಲ್ಲು!' ಎಂದು ಗರ್ಜಿಸುತ್ತಾ ಪ್ರಹ್ಲಾದನನ್ನು ಮುತ್ತಿದರು. ಕರಾಳ ಮುಖರು ಕಾಲಭಟಸಖರು, ಆದ ದೈತ್ಯರು ಕೆಂಪು ಮೀಸೆಗಳನ್ನು ತಿರುವುತ್ತಾ, ಕೋರೆಹಲ್ಲನ್ನು ಕಟಿಕಟಿ ಕಡಿಯುತ್ತಾ ಶೂಲಗಳಿಂದ ತನ್ನನ್ನು ತಿವಿಯಲು ಭಯಪಟ್ಟು ಹಿಂಜರಿಯದೆ ಪ್ರಹ್ಲಾದನು ಕಲ್ಯಾಣಗುಣ ಪೂರ್ಣನಾದ ಶ್ರೀನಾರಾಯಣ ಚರಣಕಮಲ ಧ್ಯಾನರತನಾಗಿದ್ದನು. ದೈತ್ಯರ ವಧಪ್ರಯತ್ನಗಳೆಲ್ಲವು ಪುಣ್ಯ ರಹಿತನ ಕರ್ಮಜಾಲದಂತೆ ವ್ಯರ್ಥವಾದವು. ಆಗ ದೈತ್ಯರಾಜನು ತಾನಾಗಿ ಬಂದು ಪ್ರಹ್ಲಾದನನ್ನು ಸಂಹರಿಸುವ ವಿವಿಧೋಪಾಯಗಳನ್ನು ಮಾಡಿದನು.

ಅವನ ಅಪ್ಪಣೆಯಂತೆ ದೈತ್ಯರು ಆ ಹರಿಭಕ್ತನನ್ನು ಮದಗಜಗಳಿಂದ ತುಳಸಿದರು; ಸರ್ಪಗಳಿಂದ ಕಚ್ಚಿಸಿದರು; ಬೆಟ್ಟಗಳಿಂದ ಕೆಡಹಿದರು; ಕುಣಿಯಲ್ಲಿ ಹೂತಿಟ್ಟರು; ಅನ್ನದಲ್ಲಿ ವಿಷವನ್ನಿಟ್ಟುಕೊಟ್ಟರು; ಕಡಲಲ್ಲಿ ನೂಕಿದರು; ಅಗ್ನಿಜ್ವಾಲೆಯಲ್ಲಿ ಹಾಕಿದರು; ಬೆಟ್ಟದ ಮೇಲೇರು ಎಂದರು; ಮಾಯೆಗಳನ್ನು ಶೂನ್ಯಚಾಟಕಗಳನ್ನು ಬಳಸಿದರು; ಎಷ್ಟು ಕಷ್ಟಪಟ್ಟು ಸಂಹರಿಸಲೆತ್ನಿಸಿದರೂ ನಿಷ್ಪಾಪನಾದ ಬಾಲಕನು ಸಾಯದೆ ನಿರಪಾಯನಾಗಿರಲು ನೋಡಿ ದೈತೇಂದ್ರನು ದೀರ್ಘಚಿಂತೆಯಿಂದ ಬೆಂದು ದಿಕ್ಕುತೋಚದೆ ಬೆರಗಾಗಿ ಹೀಗೆ ಆಲೋಚಿಸಿದನು–

ಆಹಾ! ಎಷ್ಟು ವಧೋಪಾಯಗಳನ್ನು ಮಾಡಿದರೂ ಇವನು ಸಾಯದಿರುವನು; ನಿಂದಿಸಿದೆ; ಹಿಂಸಿಸಿದೆ; ಆದರೂ ಅಳಿಯದೆ ಉಳಿದಿರುವುದು ಆಶ್ಚರ್ಯಕರವಾಗಿದೆ! ಯಾವ ತೇಜವು ಇವನಿಗೆ ರಕ್ಷಕವಾಗಿದೆಯೋ ಕಾಣೆ. ಬಾಲನಾದರೂ ಧೈರ್ಯದಿಂದ ನಿಶ್ಚಲನಾಗಿ, ನಾನು ಮಾಡಿದ ದ್ರೋಹವನ್ನು ನೆನಯದೆ ಶುನಶ್ಶೇಪದಂತೆ ನಿರ್ವಿಕಾರನಾಗಿರುವನು. ಇವನ ಮಹಿಮೆಯು ಅಪರಿಮೇಯವಾಗಿದೆ. ಇವನಿಗೆ ಭಯವೇ ಇಲ್ಲವಲ್ಲ! ಇವನೇನು ಅಮರನೋ! ಇವನ ವಿರೋಧದಿಂದ ಕೊನೆಗೆ ನನಗೇ ಮರಣವು ಬರುವಂತೆ ತೋರುತ್ತಿದೆ – ಇಂತು ಚಿಂತಾಕ್ರಾಂತನಾಗಿ, ದನುಜಕಾಂತನು ಕಳೆಗುಂದಿ, ಮುಖವನ್ನು ತಗ್ಗಿಸಿ ಕೂತಿರಲು ನೋಡಿ, ಶಂಡಾಮರ್ಕರು ರಹಸ್ಯವಾಗಿ ಇಂತೆಂದರು–

'ರಾಜನ್! ಸಮಸ್ತ ಲೋಕಗಳನ್ನು ಭ್ರೂಭಂಗಮಾತ್ರದಿಂದ ಗೆದ್ದು ಆಳುತ್ತಿರುವ ನಿನಗೇಕಿಷ್ಟು ಚಿಂತೆ? ಶಿಶುವಿಷಯದಲ್ಲಿಷ್ಟು ನಿಷ್ಠುರವೇ? ಮಕ್ಕಳಿಗೆ ಗುಣದೋಷಭೇದವು ಸ್ಥಿರವಾಗಿರುವುದಿಲ್ಲ. ಇವನನ್ನು ವರುಣಪಾಶದಿಂದ ಕಟ್ಟಿ ಗುರುಕುಲದಲ್ಲಿಟ್ಟು ಶುಕ್ರಾಚಾರ್ಯನು ಬರುವವರಿವಿಗೂ ರಕ್ಷಿಸುತ್ತಿರುವೆವು. ಹಿರಿಯರ ಸೇವೆ ಮಾಡುತ್ತಾ ವಯಸ್ಸು ಬಂದಂತೆ ಇವನಿಗೆ ಬುದ್ಧಿಯು ಬರದೆ ಇರದು'– ಅವರ ಮಾತನ್ನು ಕೇಳಿ ರಾಜನು ಹಾಗೆಯೇ ಆಗಲಿ! ಇವನಿಗೆ ಧರ್ಮವನ್ನು, ಅರ್ಥವನ್ನು ಕಾಮವನ್ನು ಮಾತ್ರ ಹೇಳಿಕೊಡಿ. ರಾಜ ಧರ್ಮವನ್ನು ಚೆನ್ನಾಗಿ ತಿಳಿಸಿರಿ. ಗೃಹಸ್ಥನ ಪ್ರವೃತ್ತಿ ಮಾರ್ಗದಲ್ಲಿ ನಡೆಯುವಂತೆ ಮಾಡಿ' ಎಂದು ಕಳಿಸಿದನು.

ಅಂತೆಯೇ ಗುರುಸುತರು ಪ್ರಹ್ಲಾದನಿಗೆ ತ್ರಿವರ್ಗೋಪದೇಶವನ್ನೇ ಮಾಡುತ್ತಿರಲು ಕೆಲಕಾಲ ಕಳೆಯಿತು. ಆ ಮಹಾಭಾಗನು ಇಂದ್ರಿಯಾರಾಮರ ವಿದ್ಯಾಜಾಲವೆಂದು ತಿಳಿದು, ಸಿಲುಕದೆ ಅಪವರ್ಗಮಾರ್ಗವನ್ನಾಶ್ರಯಿಸಿದನು.

ಒಂದು ದಿನ ಆಚಾರ್ಯರು ಮನೆಯ ಕೆಲಸದಲ್ಲಿ ತೊಡಗಿರಲು ನೋಡಿ ಅಸುರ ಬಾಲಕರು ಅವಸರವು ದೊರಕಿತೆಂದು ಆಡಲು ಕರೆದರು. ಆಗ ಪ್ರಹ್ಲಾದನು ಆ ಬಾಲರ ಸುಸ್ವಭಾವವನ್ನರಿತು

ಮೃದುಮಧುರವಚನಗಳಿಂದ ಇಂತು ನುಡಿದನು. ಅವರೆಲ್ಲರು ತಕ್ಷಣವೇ ಆಟಗಳನ್ನೆಲ್ಲ ಬಿಟ್ಟು ಆದರದಿಂದ ಬಂದು ಮುಂದೆ ಕೇಳುತ್ತ ಕುಳಿತರು. ಮುಖ್ಯ ಪ್ರಾಣಭಕ್ತನು ತದಾವೇಶಯುಕ್ತನು ಆದ ಪ್ರಹ್ಲಾದನು ತನ್ನನ್ನೇ ದಿಟ್ಟಿಸಿ ನೋಡುವ ಪರಿಶುದ್ಧಮನಸ್ಕರಿಗೆ ಪರಮ ಭಾಗವತ ತತ್ತ್ವವನ್ನು ಕರುಣೆಯಿಂದ ಉಪದೇಶಿಸಿದನು.

## ೬. ಪ್ರಹ್ಲಾದಕೃತ ಬಾಲಕೋಪದೇಶವು

ಬಾಲಕರೇ! ಪರಮ ಮಂಗಲ ವಿಷಯವನ್ನು ಹೇಳುವೆನು ಕೇಳಿ. ಸಂಸಾರವಿರಕ್ತಿ ಜನಕವು ಪುರುಷಾರ್ಥಸಾಧಕವಾದುದಾಗಿದೆ ಶ್ರೀಹರಿಚರಣ ಸೇವೆ. ನೋಡಿ ನಮ್ಮ ವಯಸ್ಸಿನ ಬಾಲಕರು ಎಷ್ಟೋ ಜನ ಮೃತರಾಗಿರುವರಲ್ಲವೇ? ಆಟಗಳಲ್ಲಿ ವ್ಯರ್ಥವಾಗಿ ಕಾಲವನ್ನು ಕಳೆಯಬೇಡಿ. ಪೂರ್ವದಲ್ಲಿ ಬಾಲಕರು ಮನವೆಂಬ ಮರ್ಕಟದ ವಶರಾಗಿ ಕುಣಿಯುತ್ತಿರಲಿಲ್ಲ. ಬಾಲ್ಯದಿಂದಲು ಮೋಕ್ಷಸಾಧನದಲ್ಲಿ ತೊಡಗಿ ಹರಿಲೋಕವನ್ನೈದಿದ ಧ್ರುವಾದಿಗಳಂತೆ ನಾವೂ ಜ್ಞಾನವನ್ನು ಗಳಿಸಬೇಕು. ನಮ್ಮ ಗುರುಗಳಾದ ಚಂಡಾಮರ್ಕರು ಅನರ್ಥವಾದ ಸಾಂಸಾರಿಕ ಸುಖವನ್ನೇ ಪರಮ ಪ್ರಯೋಜನವೆಂದು ಹೇಳಿಕೊಟ್ಟಿರುವರು. ಅಂತಹ ಅವಿವೇಕಿಗಳು ಗುರುಗಳಾದ ಮಾತ್ರಕ್ಕೆ ಅವರ ಮಾತಿನಂತೆ ನಡೆಯಲಾಗದು. ಅಜ್ಞಾನ ನಿದ್ರೆಯಿಂದೆಚ್ಚರಿಸಿ ಜ್ಞಾನಿಯಾಗಿರಿಸುವನೇ ಗುರುವು. ಅಂತಹನಲ್ಲದ ಅಜ್ಞಾನಿಯ ಉಪದೇಶವನ್ನನುಸರಿಸಿದವನು ಕುರುಡನ ಹಿಂದೆ ಹೊರಟ ಕುರುಡನಂತೆ ಗತಿಯನ್ನು ಕಾಣದೆ ಕೆಡುವನು. ನಾವು ದೈತ್ಯಕುಲದಲ್ಲಿ ಜನಿಸಿದ ಮಾತ್ರದಿಂದ ದನುಜವೈರಿಯು ನಮಗೆ ಶತ್ರುವಲ್ಲ. ನಿಜವಾಗಿ ವಿಚಾರಿಸಲು ಶತ್ರು–ಮಿತ್ರ–ಉದಾಸೀನ ಭಾವನೆಯು ಅಜ್ಞಾನ ಕಲ್ಪಿತವಾಗಿದೆ. ರಾಗದ್ವೇಷವರ್ಜಿತನಿಗೆ ಶತ್ರುಗಳಿಲ್ಲ–ಮಿತ್ರರೂ ಇಲ್ಲ. ಸರ್ವವೂ ಶ್ರೀ ಹರಿಲೀಲೆ. ನೀತಿಶಾಸ್ತ್ರದಿಂದ ಸಂಪತ್ಪ್ರಾಪ್ತಿ ಎಂದು ತಿಳಿಯುವುದು ಸರಿಯಲ್ಲ. ಶ್ರೀಹರಿಯೇ ಸಂಪತ್ಕಾರಣನು. ಅವನೆ ವಿಪತ್ಕಾರಣನು. ಅಸ್ವತಂತ್ರರಾದ ಇತರರು ಸಂಪದ್ವಿಪತ್ಕಾರಣರೆಂತಾಗುವರು?

ಶ್ರೀಹರಿಪ್ರೀತಿಯನ್ನು ಮಾತ್ರ ಬೇಡಿ, ಧರ್ಮಕಾಮಫಲಗಳನ್ನು ಪರಿತ್ಯಜಿಸಿ, ಇಂದ್ರಿಯಗಳನ್ನು ವಶದಲ್ಲಿಟ್ಟು, ಪುತ್ರಮಿತ್ರಾದಿ ಸ್ವಜನ ವಶನಾಗದೆ ಇರುವ ನಿವೃತ್ತಿ ಧರ್ಮರತನು ಬಹು ದುರ್ಲಭನಾಗಿರುವನು. ಅವನಿಗೆ ಬೇಡವೆಂದರೂ ಇಹಪರ ಸುಖವು ಶ್ರೀಹರೀಚ್ಛೆಯಿಂದ ಲಭಿಸುತ್ತಿರುವುದು. ಪುತ್ರಕಳತ್ರಾದಿಗಳವರ ಅನುಷ್ಠಾನಾದಿಗಳಿಗನುವಾಗಿರುವರು. ಅಂತಹವನು ಮುಕ್ತಾಂಧ್ಯನೆನಿಸುವನು; ಕಣ್ತೆರೆದು ಯಥಾರ್ಥಜ್ಞಾನಿಯಾಗಿರುವನು.

ಆದ್ದರಿಂದ ನಿವೃತ್ತಿ ಧರ್ಮವನ್ನೇ ಸೇವಿಸಬೇಕು. ಎಂದೋ ಸೇವಿಸುವೆನೆನ್ನದೆ ಬಾಲ್ಯದಿಂದ ಭಾಗವತಧರ್ಮಗಳನ್ನನುಸರಿಸಿ ನಡೆದು ಶ್ರೀಹರಿಭಕ್ತನಾಗಬೇಕು. ಮನುಜ ಜನ್ಮವು ದುರ್ಲಭವು. ಪುರುಷಾರ್ಥಸಾಧನವು ಆ ಜನುವ ಸಿಕ್ಕಾಗಲೇ ಆಗುವುದು. ಅದಾದರೂ ಚಿರಕಾಲೀನವಾದುದಲ್ಲ. ಇದನ್ನರಿತು ಶ್ರೀಹರಿಯೇ ಪ್ರಿಯತಮನೆಂದು ಮನಗಂಡು ಸರ್ವಭೂತಾಂತರ್ಯಾಮಿಯು, ಪ್ರಭುವು, ಅನಿಮಿತ್ತ ಬಂಧುವಾದ ಆ ಗೋವಿಂದನ ಪಾದಾರವಿಂದವನ್ನು ಬಿಡದೆ ಸೇವಿಸುವುದೇ ನೈಜಸುಖವು.

ಎಲೌ ದೈತ್ಯರೇ! ದೇಹವು ಬಂದೊಡನೆ ಸಾಕು. ನರಿ ನಾಯಿಯಾಗಿ ಪುಟ್ಟಿದಾಗಲು ಇಂದ್ರಿಯ ಜನ್ಮ ಸುಖವು ತಾನಾಗಿ ಸಿಗುವುದು. ಅದಾದರೂ ಶ್ರೀಹರಿಯು ಕೊಟ್ಟಾಗ ಕೊಟ್ಟಷ್ಟೇ ಸಿಗುವುದು. ದುಃಖವು ಬೇಕೆಂದು ಬೇಡುವವರಿಲ್ಲ – ಆದರೂ ಶ್ರೀಹರೀಚ್ಛೆಯಿಂದ ದುಃಖವು ಬಂದೇ ಬರುವಂತೆ ಸುಖವಾದರೂ ಸ್ವಾಮಿಯು ಕೊಟ್ಟರೇ ಬಂದೇ ಬರುವುದು. ಆದ್ದರಿಂದ ವಿಷಯ ಸುಖಗಳಿಗಾಗಿ ವ್ಯರ್ಥಪ್ರಯತ್ನವನ್ನು ಸರ್ವಥಾ ಮಾಡಬಾರದು. ಆ ಪ್ರಯತ್ನದಿಂದ ಆಯಸ್ಸು ವ್ಯರ್ಥವಾಗಿ ಹೋಗುವುದಾಗಲಿ ಬೇಡಿದುದೆಲ್ಲವೂ ಸಿಗುವುದೇ? ಮುಕುಂದನ ಚರಣಾಂಬುಜಸೇವೆಯು ಎಂದಿಗೂ ವ್ಯರ್ಥವಾಗುವುದಿಲ್ಲ. ಶರೀರವು ಬಿದ್ದು ಹೋಗುವ ಮುನ್ನ, ಜರಾಯಾದಿಗಳಿಂದ ಕೆಡದ ಮುನ್ನ, ನಮ್ಮ ಕ್ಷೇಮವನ್ನು ನಮ್ಮ ಶ್ರೇಯವನ್ನು ನಾವು ಸಂಪಾದಿಸುವುದೇ ಕರ್ತವ್ಯವು.

ಪುರುಷನ ಜೀವಿತ ಪ್ರಮಾಣವು ಒಂದು ನೂರು ವರ್ಷವೇ ಎಂದಿಟ್ಟುಕೊಂಡರೂ ಶ್ರೀಹರಿ ಸೇವೆಗಾಗಿ ಉಪಯುಕ್ತವಾದ ಕಾಲವು ಅತ್ಯಂತ ಅಲ್ಪವಾಗಿದೆ– ನೋಡಿ. ಇಂದ್ರಿಯ ಜಯರಹಿತನ ಜನ್ಮವೆಲ್ಲವೂ ವ್ಯರ್ಥವೇ ಸರಿ.

ಒಂದು ನೂರು ವರ್ಷದಲ್ಲಿ ಐವತ್ತು ವರ್ಷಗಳು ನಿದ್ರೆಯಲ್ಲಿ ಹಾಳಾಗುವುವು. ರಾತ್ರಿಯ ಕತ್ತಲಿನಲ್ಲಿ ಮುಳುಗಿ ಮಲಗಿದವನಿಗೆ ಸಾಧನವೆಲ್ಲಿಯದು? ಇನ್ನುಳಿದ ಐವತ್ತು ವರುಷಗಳಲ್ಲಿ ಬಾಲ್ಯ ಕೌಮಾರಗಳ ಇಪ್ಪತ್ತು ವರುಷಗಳ ಆಟಾಪಟದಲ್ಲಿ ಕಳೆದುಹೋಗುವುವು. ಜರೆಯು ಮುತ್ತಿ ಕೈಲಗಾದೆ ಇಪ್ಪತ್ತು ವರುಷಗಳು ನಷ್ಟವಾಗುವುವು. ಇನ್ನುಳಿದ ಯೌವನವು ಪಾರವಿಲ್ಲದ ಕಾಮವಾಹಿನಿಯಲ್ಲಿ ಕೊಚ್ಚಿಕೊಂಡು ಹೋಗುವ ಜೀವನನ್ನು ಗೃಹಾಸಕ್ತನನ್ನಾಗಿರಿಸಿ ಕೆಡಿಸುವುದು. ಮತಿಗೇಡಿ ಯುವಕರು ಮಾಡದ ಪ್ರಮಾದವಾವುದು? ನೋಡಿರುವಿರಾ ನಮ್ಮ ಬಂಧುಜನರ ಕಾದಾಟವನ್ನು? ಕುಟುಂಬವನ್ನು ಕಟ್ಟಿಕೊಂಡು ಅದರ ಪೋಷಣೆಗಾಗಿ ಪರಸ್ಪರವಾಗಿ ಕಡಿದಾಡಿ ಜಗಳವಾಡಿ ಒಂದು ಕ್ಷಣವಾದರೂ ಸುಮ್ಮನಿರದೆ ಕಷ್ಟಪಡುತ್ತಿರುವರು. ಬೇಡಿದುದು ಸಿಗದು. ಪಡುವ ಆಯಾಸವು ಫಲವನ್ನು ಕೊಡದು. ಇಂತು ಸಂಸಾರದಲ್ಲಿ ಅರ್ಥಕಾಮಗಳಲ್ಲಿ ತೊಳಲುವ ಜನರಿಗೆ ಧರ್ಮವೆಲ್ಲಿ? ಮೋಕ್ಷವೆಲ್ಲಿ?

ಭಾರ್ಯಾದಿ ಸ್ವಜನಾಸಕ್ತನಾದ ಇಂದ್ರಿಯಾರಾಮನು ತಾನಾಗಿ ಬಿಗಿದುಕೊಂಡ ಸ್ನೇಹಪಾಶದಿಂದ ತನ್ನನ್ನು ಬಿಡಿಸಿಕೊಳ್ಳಲು ಕೋರುವನೇ? ಕೋರಿದರೂ ಅದು ಬಿಡುವುದೇ?

ಅರ್ಥಾಶೆಯನ್ನು ಬಿಟ್ಟನೆಂಬರು ಶುದ್ಧ ವಂಚಕರು. ಅರ್ಥವು ಪ್ರಾಣಕ್ಕಿಂತಲೂ ಪ್ರಿಯತರವೆನಿಸಿದೆ. ತಸ್ಕರರು, ಪರಸೇವಕರು, ವರ್ತಕರು ಬಹಿಃಪ್ರಾಣವಾದ ಅರ್ಥದ ಸಲುವಾಗಿ ಅಂತಃಪ್ರಾಣಗಳನ್ನೂ ಲೆಕ್ಕಿಸರು. ಪ್ರಾಣವನ್ನು ಕೊಟ್ಟು ಅರ್ಥವನ್ನು ಗಳಿಸುವ ಜನರು ಅರ್ಥಾಶೆಯನ್ನೆಂತು ಬಿಡುವರು.

ಪ್ರಿಯಪತ್ನಿಯ ದಯಾಪಾತ್ರಳಾಗಿ ಚಿತ್ರವಚನಚತುರಳೆನಿಸಿ ಮನವನ್ನು ಸೆಳೆವಳು. ಈ ಏಕಾಂತದಲ್ಲಿ ನರ್ಮಾಲಾಪ ರತಿಸುಖದಾನದಿಂದ ಸಂತೈಸುವಳು. ಪುತ್ರಮಿತ್ರರು ಪ್ರೇಮವನ್ನು ಪ್ರಕಟಿಸುವರು. ಚಿಕ್ಕಮಕ್ಕಳ ಮುದ್ದಾದ ಅವ್ಯಕ್ತ ಮಧುರಾಲಾಪಗಳು ಕರ್ಣಮನಸ್ಸುಖಕರವಾಗಿರುವುವು. ಪ್ರಿಯರಾದ ದುಹಿತೆಯರ ಚಿಂತೆ, ದೀನರಾದ ಬಂಧು ಜನರ ಚಿಂತೆ, ವೃದ್ಧರಾದ ತಂದೆತಾಯಿಯರ ಚಿಂತೆ, ಬೆಳೆದು ನಿಂತ ಹೊಲದ ಚಿಂತೆ, ಮನೋಹರ ಭವನಾರಾಮಗಳ

ಚಿಂತೆ; ಇಷ್ಟು ಚಿಂತೆಯಿಂದ ಬೆಂದು ಬೆಂಡಾಗಿದ್ದರೂ ಪರಲೋಕದ ಚಿಂತೆ ಮಾತ್ರವಲ್ಲದೆ ಕಣಜದಂತೆ ಗೃಹಬದ್ಧನಾಗಿರುವ ಮೂಢನಿಗಿನ್ನೆಲ್ಲಿಯ ಧರ್ಮಾಚರಣವಿನ್ನೆಲ್ಲಿ ಹರಿಸೇವೆ?

ಲೋಭದಿಂದ ಪ್ರವೃತ್ತಿಕರ್ಮವನ್ನೇ ಮಾಡುವ ಮನುಜನಿಗೂ ಶ್ರೀಹರಿಗೂ ಬಲುದೂರ. ಕಾಮವೇ ಲೋಭನ ಪಿತನಲ್ಲವೇ? ಕಾಮವಶನಾಗಿ 'ಲೋಕದಲ್ಲಿ ಔಪಸ್ಥ್ಯ ಜೈಹ್ವ್ಯಗಳೆಂಬುವ ಎರಡೇ ಸುಖಗಳಿರುವುವು; ಅವೇ ಪರಮ ಪ್ರಯೋಜನವೆಂಬ' ಮೂಢನಿಗೆ ವೈರಾಗ್ಯವಂಪುರಿಸುವುದಿಲ್ಲ. ಕುಟುಂಬವನ್ನು ಸಲಹುತ್ತಾ ವಯಸ್ಸೆಷ್ಟು ವ್ಯರ್ಥವಾಯಿತೆಂಬುದನ್ನರಿಯದೆ ಮೈಮರೆತಿರುವ ಕುಟುಂಬರಾಮನಿಗೆ ತಾಪತ್ರಯ ದುಃಖ ಮಾತ್ರವು ಉಳಿಯುವುದಾಗಲೀ ಜ್ಞಾನೋದಯವಾಗುವುದಿಲ್ಲ. ಪರವಿತ್ತಹರಣವನ್ನು ಮಾಡಿದ ಚೋರನಿಗೆ ರಾಜದಂಡವು ತಪ್ಪದೆಂದು ನೋಡಿ ನೋಡಿ, ಒಂದು ವೇಳೆ ರಾಜದಂಡವನ್ನು ತಪ್ಪಿಸಿಕೊಂಡರೂ ಪರಲೋಕದಲ್ಲಿ ಯಮರಾಜದಂಡವು ತಪ್ಪದೆಂದು ಕೇಳಿ ಕೇಳಿಯೂ, ಕಾಮತೃಪ್ತಿಯನ್ನು ಕಾಣದ ಕುರುಡನು ವಿತ್ತಹರಣವನ್ನು ಮಾಡಿ ಕುಟುಂಬ ಪೋಷಣದಕ್ಷನೆನಿಸಿ, ಕೊನೆಗೆ ವಿತ್ತವನ್ನಿಲ್ಲೇ ಬಿಟ್ಟು, ಪಾಪವನ್ನು ಮಾತ್ರ ಕೊಂಡುಹೋಗುತ್ತಿರುವನು.

ವಿದ್ವಾಂಸನೆನಿದವನು ಕೂಡ ನಾನು – ನನ್ನವರು – ಪರರು – ಪರಕೀಯರು ಎಂಬ ದುಷ್ಟ ಬುದ್ಧಿಯಿಂದ ಕುಟುಂಬಪೋಷಣರತನಾಗಿ ಪರದ್ರೋಹವನ್ನೆಸಗಿ, ಮೋಕ್ಷಸಾಧಕ ಜ್ಞಾನಮಾರ್ಗ ದೂರನಾಗುವನು. ಈ ವಿಷಯದಲ್ಲಿ ಮೂಢನಂತೆ ವಿಪರೀತ ಜ್ಞಾನದಿಂದ ನಡೆಯುವ ವಿದ್ವಾಂಸನಿಗೂ ದಡ್ಡನಿಗೂ ಭೇದವೇ ಇಲ್ಲ.

ಶಾಸ್ತ್ರಜ್ಞಾನದಿಂದ ಸಂಸಾರವು ಅನಿತ್ಯವೆಂದು ತಿಳಿದು ಇತರರಿಗುಪದೇಶಿಸುವ ವಿದ್ವಾಂಸನು ಕೂಡ – ಮನೆ ಮಡದಿಯ ಸುಂದರ ಕಟಾಕ್ಷ ಪಾಶಬದ್ಧನಾಗಿ, ಕ್ರೀಡಾಮೃಗದಂತೆ ಹೇಯವಾಗಿ ನಡೆಯುವನೆಂದಮೇಲೆ ಮೂಢರ ಪಾಡೇನು? ಆದ್ದರಿಂದ ಬಾಲಕರೇ! ದೈತ್ಯಮತವನ್ನು, ತದನುವರ್ತಿಗಳಾದ ಅರ್ಥ ಕಾಮರತರನ್ನು ದೂರದಲ್ಲಿಟ್ಟು, ಆದಿದೇವನಾದ ನಾರಾಯಣನನ್ನು ಭಜಿಸುವುದೇ ಕ್ಷೇಮಂಕರವು. ಮುಕ್ತಸಂಗರಾದ ಮುನಿಜನರ ಕುಲದೈವನಲ್ಲವೇ ಗೋವಿಂದನು!

ಅಚ್ಯುತನನ್ನು ಮೆಚ್ಚಿಸುವುದು ದುಸ್ಸಾಧ್ಯವಲ್ಲ. ಅವನು ಅಂತರ್ಯಾಮಿಯಾಗಿ ಹೃದಯದಲ್ಲೇ ಇರುವನು. ಪತ್ನೀಪುತ್ರ ಮಿತ್ರಾದಿಗಳಿಗಿಂತಲೂ ಪ್ರಿಯನಾಗಿರುವನು. ಎಲ್ಲೆಡೆಯಲ್ಲೂ ವ್ಯಾಪ್ತನಾಗಿಯೂ ಇರುವನು; ಬ್ರಹ್ಮಾದಿ ತೃಣಾಂತ ಜೀವರಲ್ಲಿಯೂ ನಿಯಮಾಕನಾಗಿ ನೆಲಿಸಿ ಕಾಲಕಾಲಕ್ಕೆ ತಕ್ಕ ಭೌತಕವಿಕಾರಗಳಿಗೂ ಅವನೇ ಕಾರಣನಾಗಿರುವನು. ದೂರರಾದವರಿಗೆ ದೂರತರನು, ಸೇರಿದವರಿಗೆ ಸಮೀಪಸ್ಥನು ಆಗಿ ಸದಾ ಸಲುಹಲು ಸಿದ್ಧನಾದ ಹರಿಯನ್ನು ಸೇವಿಸದೆ ಜೀವರು ಕೆಡುತ್ತಿರುವರು. ಸೃಷ್ಟಿ ಪ್ರಳಯಗಳಲ್ಲಿಯು ಅವನು ನಿರ್ವಿಕಾರನಾಗಿ ಜೀವ ಜಡವಿಲಕ್ಷಣನಾಗಿರುವನು. ಹೊರಗೆ ಕಾಲರೂಪನಾಗಿ ವ್ಯಾಪ್ತನಾಗಿ ಒಳಗೆ ಪುರುಷರೂಪನಾಗಿ ಅಣುವಾಗಿರುವನು. ಅಣುವು, ಬೃಹತ್ತು, ಕೃಶ, ಸ್ಥೂಲ, ಗುಣಭರಣ, ನಿರ್ಗುಣ, ಅಂತಸ್ಥ, ವ್ಯಾಪ್ತ ಎಂಬ ವಿರುದ್ಧವಾದ ರೂಪಗಳನ್ನು ಸ್ವೀಕರಿಸಿದರೂ ಅವನಿಗೆ ಸ್ವಗತಭೇದವಿಲ್ಲ. ಅಪ್ರಾಕೃತ ಜ್ಞಾನಾನಂದದೇಹನು ಸರ್ವೇಶನು, ಆದಿಪುರುಷನು, ಸರ್ವತ್ರವ್ಯಾಪ್ತನು ಆದ ನಾರಾಯಣನು ಸತ್ತ್ವಾದಿ ಗುಣಪ್ರೇರಕಳಾದ ತಮೋರೂಪ ದುರ್ಗೆಯಿಂದ ಆವರಿಸಲ್ಪಟ್ಟು ಕಾಣದಿರುವನು. ಆ ದುರ್ಗೆಯು ಅವನನ್ನು ಆಲಂಗಿಸಿ ನುತಿಸುತ್ತಿರುವಳು.

ಆದ್ದರಿಂದ ದೈತ್ಯಭಾವವನ್ನು ತೊರೆದು, ಶ್ರೀಹರಿಯು ನೆಲೆಮಾಡಿ ನಿಂತಿರುವ ಸರ್ವ ಭೂತಗಳಲ್ಲಿಯು ದಯೆತೋರಿ ನಡೆಯಿರಿ. ಅದರಿಂದ ಶ್ರೀರಮಣನು ಸಂತುಪಷ್ಟನಾಗುವನು. ಶ್ರೀಹರಿಯು ಸಂತುಷ್ಟನಾದರೆ ಲೋಕದಲ್ಲಿ ದುರ್ಲಭವಾದುದೊಂದುಂಟೇ? ಆದರೂ ಸಕಲ ಯೋನಿಗಳಲ್ಲಿಯು ಜನ್ಮಪ್ರಭೃತಿಸಿದ್ಧವಾದ ವಿಷಯಸುಖಗಳನ್ನುಕಾಂಕ್ಷಿಸಬಾರದು. ಶ್ರೀಹರಿಯು ಮೋಕ್ಷಪ್ರದನಾಗಿರುವಾಗ ವಿಷಯಗಳನ್ನು ಬೇಡುವವನು ಕಲ್ಪವೃಕ್ಷವನ್ನು ಆರಾಧಿಸಿ ಕಾಷ್ಠವನ್ನು ಬೇಡಿದವನಂತೆ ಮೂರ್ಖನೇ ಸರಿ! ಮೋಕ್ಷದಲ್ಲಿಯು ಸುಖವನ್ನು ಬೇಡದೆ ಕೇಶವನ ಸೇವೆಗಾಗಿ ಮೋಕ್ಷವನ್ನು ಬಯಸುವ ಪಕ್ವಭಕ್ತನಿಗೆ ಸಿಗುವ ಸುಖವು, ಸುಖಕ್ಕಾಗಿ ಮೋಕ್ಷವನ್ನು ಬಯಸುವ ಅಪಕ್ವಭಕ್ತನಿಗೆ ಸಿಗಲಾರದು. ಹರಿಗುಣ ಮಕರಂದ ಪಾನವೇ ಸರ್ವಸಾರವೆಂದು ತಿಳಿದು ಭಜಿಸುವ ಭಕ್ತರ ಚರಣಾರವಿಂದ ಸೇವೆಯು ನಮಗೆ ಸದಾ ಸಿಗುವುದೇ ಜನ್ಮಲಾಭವು. ಧರ್ಮಾರ್ಥ ಕಾಮಗಳೆಂಬುವ ತ್ರಿವರ್ಗದ ಅನುಷ್ಠಾನವು, ಮೂರು ವೇದಗಳ ಅಧ್ಯಯನವು, ನೀತಿ ದಂಡ ಶಾಸ್ತ್ರ ಪರಿನಿಷ್ಠೆಯು, ಕೃಷಿವಾಣಿಜ್ಯಾದಿ ವಿವಿಧ ಜೀವಿಕಾಚರಣವು, ಮೊದಲಾದುದೆಲ್ಲವು ಶ್ರೀಹರಿಪ್ರೀತಿಗಾಗಿ ಸಂಕಲ್ಪಿಸಿ, ಅನಿಮಿತ್ತ ಬಂಧುವು, ಪರಮಪುರುಷನಾದ ಗೋವಿಂದನಿಗರ್ಪಿಸಿದರೇನೇ ಸಫಲವಾಗುವುದು.

ಈ ಜ್ಞಾನವೆನಗೆ ನಾರದರಿಂದ ಬಂದಿದೆ; ನನ್ನ ಸ್ವಮನೀಷಾಕಲ್ಪಿತವಲ್ಲ. ಶೇಷಶಯನ ನಿದನ್ನು ಬ್ರಹ್ಮನಿಗೂ, ಬ್ರಹ್ಮನು ನಾರದನಿಗೂ ಪೇಳಿರುವರು. ಭಾಗವತ ಜ್ಞಾನವು ದುರ್ಲಭವಾಗಿದ್ದರೂ, ಭಗವದೇಕಾಂತ ಭಕ್ತರು, ತದೇಕ ಶರಣರು ಆದ ಸುಜನರ ಚರಣಾರವಿಂದ ರಜಸ್ಸನ್ನು ಸಿರಸ್ಸಿನಲ್ಲಿಟ್ಟವರಿಗೆ ಸುಲಭವಾಗಿಯೇ ಇದೆ. ಜ್ಞಾನವಿಜ್ಞಾನ ಕಾರಣವು. ಪರಮ ಶುದ್ಧವು ಆದ ಈ ಭಾಗವತ ಧರ್ಮವನ್ನು ನಾನು ಹಿಂದೊಂದು ಸಲ ನಾರದರಿಂದ ಕೇಳಿ ತಿಳಿದಿರುವೆನು.

ಎಂದುಪದೇಶಿಸಿದ ಪ್ರಹ್ಲಾದನ್ನು ನೋಡಿ ದೈತ್ಯಪುತ್ರು ವಿಸ್ಮಿತರಾಗಿ ಇಂತೆಂದರು–

ಪ್ರಹ್ಲಾದ! ನೀನು ನಾವು ಕೂಡ ಶಂಡಾಮರ್ಕರನ್ನು ಬಿಟ್ಟನ್ಯಗುರುಗಳನ್ನು ಸೇರಿ ಅರಿಯೆವು, ಅಕ್ಷರಾಭ್ಯಾಸನಿರತರಾದ ನಮಗೆ ಈಶ್ವರವಿಷಯಕ ವಿಜ್ಞಾನವನ್ನು ಹೇಳಿ ಕೊಡುವ ಕಾರಣವೂ ಇಲ್ಲ. ಬಾಲಕರಿಗೇಕೆ ಈಶ್ವರನ ಗೊಡವೆ ಎಂದಿರಲು ನೀನು ಪೇಳಿದ ವಿಜ್ಞಾನವು ನಮ್ಮ ಕಣ್ದೆರೆದಿದೆ. ನೀನು ಅಂತಃಪುರದಲ್ಲಿರುವನಾದ್ದರಿಂದ ನಾರದನಂತಹ ಗುರುಗಳ ಸಂಗವು ನಿನಗೆ ಹೇಗಾಯಿತು? ಎಂದು ?ಎಂತು? ಎಂಬುವ ನಮ್ಮ ಸಂಶಯವನ್ನು ಬಿಡಿಸು.

## ೭. ಪ್ರಹ್ಲಾದನ ಜನ್ಮಚರಿತೆ

ನಾರದನು ಪೇಳಿದನು–

ಧರ್ಮರಾಜ! ಅವರ ಮಾತನ್ನು ಕೇಳಿ ನಗುತ್ತಾ, ಭಕ್ತಿಯಿಂದ ನನ್ನ ಉಪದೇಶವನ್ನು ನೆನೆದು, ಆ ಭಾಗವತ ಶಿಖಾಮಣಿಯು ಇಂತು ನುಡಿದನು–

ನಮ್ಮ ತಂದೆಯು ಮಂದರಾಚಲದಿ ತಪವನ್ನು ಮಾಡಲು ಹೋಗಿದ್ದಾಗ ದೇವತೆಗಳು ಸಮಯವನ್ನು ಸಾಧಿಸಿ ದಾನವಪುರವನ್ನು ಮುತ್ತಿದರು. 'ಪಿಪೀಲಿಕಗಳು ತಿಂದು ಕೊಂದ ಹಾವಿನಂತೆ ಪಾಪಿಯಾದ ಹಿರಣ್ಯಕನು ತನ್ನ ಪಾಪದಿಂದಲೇ ತಾನು ಹಾಳಾದನು. ಲೋಕಗಳಿಗೆ

ಸುಖವಾಯಿತು' ಎಂದು ಹೇಳುತ್ತಾ ವಾಸವಾದಿ ದೇವತೆಗಳು ದಾನವರನ್ನು ಸದೆಬಡಿದರು. ಅತಿಬಲಶಾಲಿಗಳಾದ ಅಮರರಿಗೆ ಸೋತು ದೈತ್ಯರು ಭೀತರಾಗಿ ದಿಕ್ಕಾಪಾಲಾಗಿ ಓಡಿಹೋದರು. ಪುತ್ರ ಮಿತ್ರ ಕಳತ್ರರನ್ನು ವಿಚಾರಿಸದೆ, ಗೃಹಾರಾಮ ಪಶುಪದಾರ್ಥಗಳನ್ನು ಲೆಕ್ಕಿಸದೆ, ತಾವು ಉಳಿದರೆ ಸಾಕೆಂದು ಪಲಾಯನ ಮಂತ್ರವನ್ನು ಪಠಿಸಿದರು. ಜಯಶಾಲಿ ದೇವತೆಗಳು ರಾಜಶಿಬಿರ ವನ್ನು ದೋಚಿದರು. ಇಂದ್ರನು ನಮ್ಮ ತಾಯಿಯನ್ನು ಹಿಡಿದು ಸೆಳೆದೊಯ್ಯುತ್ತಿದ್ದನು. ದೈವೇಚ್ಛೆ ಯಿಂದ ಅಲ್ಲಿಗೆ ನಾರದನು ಕುರಿಯಂತೆ ರೋದಿಸುವ ನಮ್ಮ ತಾಯಿಯನ್ನು ಬಿಡಿಸಿ ಅಭಯ ವನ್ನಿತ್ತನು; ಇಂದ್ರನನ್ನು ನೋಡಿ 'ಸುರರಾಜ! ನಿನಗಿದು ಯೋಗ್ಯವಲ್ಲ. ಇವಳೇನು ಮಾಡಿರು ವಳು? ಪಾಪ! ನಿರಪರಾಧಿನಿಯಾದ ಇವಳನ್ನು ಬಿಡು. ಪರಸ್ತ್ರೀಯರ ಪೀಡೆ ಸಲ್ಲದು'ಎಂದನು. ಆಗ ಇಂದ್ರನು 'ಇವಳ ಜಠರದಲ್ಲಿರುವ ಹಿರಣ್ಯಕನ ಮಗನು ಅವನನ್ನು ಮೀರಿದ ದುಷ್ಟನಾದೆಡೆ ಮಾಡುವುದೇನು? ಇವಳನ್ನು ನನ್ನ ವಶದಲ್ಲಿಟ್ಟು, ಪ್ರಸವಿಸಿದ ಮಗುವನ್ನು ನಾಶಪಡಿಸಿ, ಅನಂತರ ಇವಳನ್ನು ಬಿಟ್ಟುಬಿಡುವೆನು' ಎಂದನು. ನಾರದನು 'ಇಂದ್ರಾ! ಇವಳ ಗರ್ಭದಲ್ಲಿರುವ ಅರ್ಭಕನು ನಿಷ್ಪಾಪನು ಹಾಗೂ ಮಹಾಭಾಗವತನು. ಅನಂತಾನುಚರನಾದ ಅವನನ್ನು ನೀನು ಕೊಲ್ಲ ಲಾಗದು' ಎಂದನು. ನಾರದನ ವಚನವನ್ನು ಮನ್ನಿಸಿ ನಮ್ಮ ತಾಯಿ ಯನ್ನು ನಾರದರಿಗೊಪ್ಪಿಸಿ, ಶೇಷಶಯನಭಕ್ತನು ವಾಯ್ವಾವೇಶಯುಕ್ತನು ಆದ ಗರ್ಭಸ್ಥನಿಗೆ ಪ್ರದಕ್ಷಿಣೆಸಿ ಸ್ವರ್ಗಲೋಕ ವನ್ನು ಸೇರಿದನು.

ನಾರದನು ನನ್ನ ತಾಯಿಯನ್ನು ಆಶ್ರಮಕ್ಕೆ ಕರೆತಂದಿಟ್ಟು ಕಾಪಾಡುತ್ತಿದ್ದನು. ನಾರದ ವಚನದಂತೆ ಆಕೆಯು ದೈತ್ಯಪತಿಯು ತಪವನ್ನು ಮುಗಿಸಿ ಬರುವವರೆಗೂ ಅಲ್ಲೇ ಇರುತ್ತಿದ್ದಳು. ಭಕ್ತಿಯಿಂದ ಋಷಿಯನ್ನು ಸೇವಿಸುತ್ತಾ ಆ ಪರಮಪತಿವ್ರತೆಯು 'ನನ್ನ ಗರ್ಭಸ್ಥ ಶಿಶುವು ನನ್ನ ಇಚ್ಛೆ ಬಂದಾಗ ಹುಟ್ಟಬೇಕು ಮತ್ತು ನನ್ನ ಗರ್ಭದಲ್ಲಿರುವ ಶಿಶುವು ಅಲ್ಲಿಯವರಿವಿಗೂ ಸುಕ್ಷೇಮದಿಂದಿರಬೇಕೆಂ'ದು ಎರಡು ವರಗಳನ್ನು ಬೇಡಿದಳು. ನಾರದನು 'ಅಸ್ತು' ಎಂದನು. ಆಕೆಗೆ ಧರ್ಮವನ್ನು ಜ್ಞಾನವನ್ನು ಉಪದೇಶಿಸುವಾಗ ಹೊಟ್ಟೆಯಲ್ಲಿದ್ದ ನನ್ನನ್ನೂ ಕಟಾಕ್ಷಿಸಿ ದಯದಿಂದ ಹೇಳುತ್ತಿರಲು ನಿನಗೆ ಜ್ಞಾನೋದಯವಾಯಿತು. ಬಹು ಕಾಲ ಕಳೆದುದರಿಂದಲೂ ವನಿತೆಯಾದುದರಿಂದಲೂ ನಮ್ಮ ತಾಯಿ ಅದನ್ನೆಲ್ಲ ಮರೆತಿರುವಳು. ನಾರದಾನುಗ್ರಹದಿಂದ ನನ್ನ ಜ್ಞಾನವು ಅಚ್ಚಳಿಯದಿದೆ.

'ನಿನಗೆ ಜ್ಞಾನವಾದರೆ ನಮಗೇನು? ಅಲ್ಲ ಮಾರುವವನಿಗೆ ಬೆಲ್ಲದ ಚಿಂತೆಯೇ' ಎನ್ನಬೇಡಿ. ನನ್ನ ಮಾತಿನಲ್ಲಿ ವಿಶ್ವಾಸವಿಡಿ. ಶ್ರದ್ಧೆಯಿಂದ ಭಗವದ್ ಜ್ಞಾನವಾಗುವುದು. ನಿಮಗೆ ಮಾತ್ರವಲ್ಲ. ಶ್ರದ್ಧೆಯುಳ್ಳ ಸ್ತ್ರೀ ಬಾಲಾದಿಗಳಿಗೂ ಯಥಾಯೋಗ್ಯವಾದ ಜ್ಞಾನವು ನನಗಾದಂತೆ ಆಗುವುದು.

ಜನನ ವೃದ್ಧಿ ಕ್ಷುತ್ ಪಿಪಾಸಾ, ಹ್ರಾಸ ಮರಣಗಳು ದೇಹಕ್ಕೆ ಆಗಲಿ ಶ್ರೀಹರಿಗಿಲ್ಲ. ವಸಂತಾದಿ ಕಾಲಗಳಲ್ಲಿ ತತ್ತತ್ಕಾಲೀನವಾದ ಫಲ ಕುಸುಮ ಪ್ರಾಪ್ತಿಯಾಗುವಂತೆಯೇ ದೇಹವು ಕಾಲನಾಮಕ ಪರಮಾತ್ಮಾಧೀನವಾಗಿ ಜೀರ್ಣವಾಗುತ್ತಿರುವುದು. ಶ್ರೀಹರಿಯು ಸ್ವರೂಪನಾಶ ರಹಿತನು, ನಿತ್ಯನು, ಅಪ್ರಾಕೃತ ದಿವ್ಯದೇಹನು, ಮುಖ್ಯನು, ಸಕಲತತ್ತ್ವ ನಿಯಾಮಕನು, ಶರೀರಪ್ರವರ್ತಕನು, ಜವನಪ್ರದನು, ವಿಕಾರರಹಿತನು, ಶಶ್ವದೇಕ ಪ್ರಕಾರನು, ಅಂತರ್ಬಹಿಸ್ಸರ್ವ ಗತನು, ಕರ್ಮಫಲಸಂಗವರ್ಜಿತನು, ಅವಿದ್ಯಾದೂರನು ಆಗಿ ವಿರಾಜಿಸುವನು. ಅಂತಹ ಮಹಮಹಿಮನಾದ ವಿಷ್ಣುವು ಆಡಿಸಿದಂತೆ ಆಡುವ ಅಸ್ವತಂತ್ರರಾದ ಜೀವರು ಶರೀರದಲ್ಲಿರುವ

ಅಹಂಕಾರ ಮಮಕಾರಗಳನ್ನು ಬಿಡುವುದು ನ್ಯಾಯವು, ಜ್ಞಾನಕಾರಣವೂ ಆಗಿದೆ. ಬಂಗಾರದ ಗಣಿಯಲ್ಲಿ ಸಿಕ್ಕ ಕಲ್ಲಿನಿಂದ ಬಂಗಾರವನ್ನು ಬೇರ್ಪಡಿಸಿ ಪಡೆಯುವ ಹೇಮಕಾರನಂತೆ, ಭಕ್ತಿ ಯೋಗದಿಂದ ಜ್ಞಾನರಸವನ್ನು ಬೆರಸಿ ವೈರಾಗ್ಯಜ್ವಾಲೆಯಲ್ಲಿ ಕಲ್ಮಷವನ್ನೆಲ್ಲ ಸುಟ್ಟು ಬ್ರಹ್ಮಾನಂದವನ್ನು ಪೊಂದಲು ಪ್ರಯತ್ನಿಸುವುದೇ ಮನುಜ ಜನ್ಮದ ಸಾರ್ಥಕ್ಯವು.

ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚಭೂತಗಳಿಗೆ ಅಷ್ಟಪ್ರಕೃತಿ ಎಂಬುವರು. ಆ ಪ್ರಕೃತಿಯ ಗುಣಗಳು ಮೂರೇ. ಅವು ಸತ್ತ್ವರಜಸ್ತಮಸ್ಸುಗಳು. ಹನ್ನೊಂದು ಇಂದ್ರಿಯಗಳು ಐದು ಶಬ್ದಾದಿಗಳು ಕಲೆತು ಹದಿನಾರು ವಿಕಾರಗಳು. ಪ್ರಕೃತಿ ಗುಣವಿಕಾರಾದಿ ಲೇಪವಿಲ್ಲದೆ ಶುದ್ಧನಾಗಿರುವವನು ಶ್ರೀಹರಿ ಒಬ್ಬನೇ.ಅನ್ಯರಿಲ್ಲ. ಅನ್ಯಜೀವರು ಪ್ರಕೃತಿನಿರ್ಮಿತ ಶರೀರ ವಿಯೋಗ ಸಂಯೋಗಗಳನ್ನುಳ್ಳವರು. ಜಂಗಮಸ್ಥಾವರ ಜೀವರಲ್ಲಿ ಮನುಜ ಜನ್ಮವು ಬಂದಾಗ 'ಪ್ರಕೃತಿಯು ಅಲ್ಲ. ಬ್ರಹ್ಮನು ಅಲ್ಲ, ರುದ್ರನೂ ಅಲ್ಲ, ಶ್ರೀಹರಿಯೇ ಸರ್ವೋತ್ತಮನು' ಎಂದು ಶಾಸ್ತ್ರದಿಂದ ವಿಚಾರಿಸಿ ತಿಳಿಯಲು ಬರುವುದು. ಜಗಜ್ಜನ್ಮಾದಿ ಕಾರಣನು ಯಾರು? ನಿರ್ದೋಷ ವೇದಪ್ರತಿಪಾದ್ಯನು ಯಾರು? ಎಂದು ಚೆನ್ನಾಗಿ ವಿಚಾರಿಸಲು ಶ್ರೀಹರಿಯ ಮಹಿಮೆಯು ನಿಧಾನವಾಗಿ ತಿಳಿದುಬರುವುದು.

ಜೀವನಿಗೆ ಪ್ರಕೃತಿಬಂಧವು. ಅದರಿಂದ ದೇಹ ಪ್ರಾಪ್ತಿ ನಾಶಗಳು. ಜೀವನಿಗೆ ಸ್ವಪ್ನಸುಷುಪ್ತಿ ಜಾಗ್ರದ್ದಶೆಗಳನ್ನು ತಂದುಕೊಡುವವನೇ ಶ್ರೀಹರಿಯು. ಆ ಪ್ರಭುವೇ ಜನ್ಮಸ್ಥಿತಿ ನಾಶಕರ್ತನೂ ಅಹುದು. ಶ್ರೀಹರಿಯು ಶರೀರಗತನಾಗಿ ಇಂದ್ರಿಯಗಳನ್ನು ನಡೆಸಿ ಜೀವನಿಗೆ ಸುಖದುಃಖಾದಿ ಭೋಗವನ್ನು ನಿದ್ರಾದ್ಯವಸ್ಥೆಗಳನ್ನು ಮರಣಾದಿಗಳನ್ನು ಸ್ವತಂತ್ರವಾಗಿ ಕೊಡುತ್ತಿರುವನು. ಅವನನ್ನು ಕಾಣದೆ 'ಶ್ರೀಹರಿಯು ಜೀವನಾಗಿರುವನು. ಬೇರಲ್ಲ' ಎಂಬುವರು ಮೂಢರಲ್ಲವೇ? ಗಂಧದಿಂದ ಬೇರಾದ ವಾಯುವಿನನ್ನು ತಿಳಿಯದೆ – ಸುಗಂಧ ಮಾರುತ ದುರ್ಗಂಧ ವಾಯುವು ಎಂದು ತಿಳಿಯುವಂತೆ – ಜೀವನು ಬ್ರಹ್ಮಸ್ವರೂಪನು, ಬ್ರಹ್ಮನಿಗೆ ಅಜ್ಞಾನವು ಬಂತು, ಎಂದು ತಿಳಿಯುವುದೂ ಸರಿಯಲ್ಲ. ಇಂತಹ ಅನ್ಯಥಾ ಜ್ಞಾನದಿಂದ ಜನನ-ಮರಣ-ರೂಪ ಸಂಸಾರ ಬಾಧೆಯು ತಪ್ಪುವುದಿಲ್ಲ. ಕೊನೆಗೆ ಅಂಧಂತಮಃ ಪ್ರಾಪ್ತಿಯು ಕೂಡ ಅನ್ಯಥಾಜ್ಞಾನದಿಂದಲೇ ಎಂದು ತಿಳಿಯಿರಿ.

ಜಾಗ್ರದ್ದಶೆಯಲ್ಲಿ ಕರ್ಮನಿರ್ಮಿತ ಪದಾರ್ಥಗಳನ್ನು ನೋಡಿ ಸತ್ಯವೆಂದು ತಿಳಿದಿರುವೆವಲ್ಲವೇ? ಅಂತೆಯೇ ಮನೋವಾಸನಾಜನಿತ ಸ್ವಾಪ್ನಪದಾರ್ಥಗಳೂ ಸತ್ಯವೆಂದೇ ತಿಳಿಯಿರಿ. ಜಾಗ್ರತ್‌ಸ್ವಪ್ನ ಪದಾರ್ಥಗಳೆಲ್ಲವೂ ಶ್ರೀಹರಿನಿರ್ಮಿತವು, ಅಶಾಶ್ವತವು, ಹೇಯವು ಆಗಿದೆ. ಸಂಸಾರವು ಹೇಯವಾದುದೆಂದು ತಿಳಿಯದೆ ಭಜಿಸುವ ನರನು ಶೋಕ ಮೋಹ ಭಯಗಳನ್ನು ಹೊಂದುವನು. ಸ್ವಭಾವದಿಂದ ಜೀವನಿಗೆ ಜನನ ಮರಣಗಳಿಲ್ಲ. ಆದರೂ ಅಭಿಮಾನದಿಂದ ದೇಹವಿಕಾರಾದಿ ಸಂಬಂಧಾನುಭವಗಳನ್ನು, ನನ್ನದೆಂದು ಪೊಂದಿ, ಜೀವನು ದುಃಖಪಡುತ್ತಿರುವನು. ಈ ಸಂಸಾರವು ಸತ್ಯವೇ ಆದರೂ, ಗರುಡ ಮಂತ್ರದಿಂದ ವಿಷವು ಹರಿಸಿ ಹೋಗುವಂತೆ– ಶ್ರೀಹರಿಪ್ರಸಾದದಿಂದ ನಾಶವಾಗುವುದು.

ಶ್ರೀಹರಿ ಪ್ರಸಾದವು ಜ್ಞಾನಸಾಧ್ಯವಾಗಿದೆ. ಆ ಜ್ಞಾನವು ನಿವೃತ್ತಿಕರ್ಮಾನಿಷ್ಠಾನಪೂರ್ವಕ ಶ್ರವಣ ಮನನ ಧ್ಯಾನಗಳಿಂದ ಸಿಗುವುದು. ಆದ್ದರಿಂದ ಕರ್ಮಬೀಜಗಳು ಫಲಿಸಿದಂತೆ ಬೆಂದು ಹೋಗಲು, ಫಲಾಪೇಕ್ಷೆಯನ್ನು ಬಿಡುವದೇ ಉಪಾಯವು. ಬುದ್ಧಿಯು ಸಂಸಾರವಾಹಿನಿ ಯಲ್ಲಿ

ಬಿದ್ದು ಮುಳುಗದಂತೆ ಸಾವಿರಾರು ಉಪಾಯಗಳಿದ್ದರೂ, ಅವುಗಳ ಮಧ್ಯದಿ ಶ್ರೀಹರಿಭಕ್ತಿಯೇ ಉತ್ತಮ ಮಾರ್ಗವಾಗಿದೆ.

ಸರ್ವಸ್ವವನ್ನರ್ಪಿಸಿ ಭಕ್ತಿಯಿಂದ ಗುರುಶುಶ್ರೂಷೆಯನ್ನು ಮಾಡಿ. ಸಾಧು ಭಕ್ತರ ಸಂಗದಲ್ಲಿ ಶ್ರೀಹರಿಮಹಿಮೆಯನ್ನು ಶ್ರದ್ಧೆಯಿಂದ ಬಿಡದೆ ನಿತ್ಯವೂ ಕೇಳಿ. ಶ್ರೀಹರಿಯನ್ನು ಪೂಜಿಸಿ, ಅವನ ಗುಣಕರ್ಮಗಳನ್ನು ಬಾಯಾರ ಪೊಗಳಿ, ಅವನ ಪಾದಾರವಿಂದವನ್ನು ಧ್ಯಾನಿಸಿ. ಅವನ ಚಿಹ್ನೆಗಳಾದ ಪ್ರತಿಮೆಗಳಿಗೆ ಶಿರಬಾಗಿ ನಮಿಸಿ. ಚರಪ್ರತಿಮೆಗಳೆನಿಸಿ ಶ್ರೀಹರಿಸನ್ನಿಧಾನಯುಕ್ತರಾದ ಸಜ್ಜನರಿಗೆ ಪೂಜೆಯನ್ನು ಸಲ್ಲಿಸಿ. ಶ್ರೀಶನು ಸರ್ವಭೂತ ಹೃದಯಗುಹಾನಿವಾಸನೆಂದು ಅನುಸಂಧಾನದಿಂದ ಸರ್ವಜೀವರಿಗೂ ಅವರವರ ಯೋಗ್ಯತಾನುಸಾರವಾದ ಗೌರವ ಪ್ರೀತಿ ದಯಾ ಗುಣಗಳನ್ನು ತೋರಿ ಸಂತೋಷಪಡಿಸಿ, ಈ ಉಪಾಯಗಳಿಂದ ಷಡ್ವಿಕಾರಗಳು ದೂರವಾಗಿ ಮನವು ಶುದ್ಧವಾಗುವುದು. ಆಗ ಶ್ರೀವಾಸುದೇವನ ಅಡಿದಾವರೆಯಲ್ಲಿ ಅಳಿಯಾಗಿ ಜೀವನು ಸಚ್ಚಿದಾನಂದನ ಉಪಾಸನೆಯು ಲಭಿಸಲು ಸಂಸಾರಯುಕ್ತನಾಗುವನು.

ಶ್ರೀರಮಣನ ಸೃಷ್ಟಿ, ಸ್ಥಿತಿ ಸಂಹಾರಾದಿ ಲೀಲೆಗಳನ್ನು ಕೇಳಿ, ಲೀಲಾಶರೀರಗಳಿಂದ ಶ್ರೀಹರಿಯು ಮಾಡಿದ ಲೋಕೋತ್ತರ ಚರಿತೆಯನ್ನು ಕೇಳಿ, ಹರ್ಷೋದ್ರೇಕದಿಂದ ಗಾತ್ರವು ಪುಲಕಾಂಕುರಿತವಾಗಲು, ನೇತ್ರವು ಆನಂದಬಾಷ್ಪಪೂರಿತವಾಗಲು, ಮೈಮರೆತು ಹಾಡಿ, ಪಾಡಿ, ಕುಣಿದು, ರೋದಿಸಿ 'ಹರೇ! ನಾರಾಯಣ! ಜಗತ್ಪತೆ!' ಎಂದು ಗಟ್ಟಿಯಾಗಿ ಚೀರಿ, ಲಜ್ಜೆಯನ್ನು ತೂರಿ ಮತ್ತೆ ಮತ್ತೆ ಗ್ರಹವು ಬಡಿದವನಂತೆ ವರ್ತಿಸುವ ಏಕಾಂತ ಭಕ್ತನು ಜೀವನ್ಮುಕ್ತನೆಂದು. ತಿಳಿಯಿರಿ. ಅವನ ಸಾಂಸಾರಿಕ ಬಂಧಗಳು ಸಡಿಲವಾಗಿವೆ. ಅವನ ಮನವು ಭಕ್ತಿರಸಭರಿತವಾಗಿದೆ. ಅವನ ಕರ್ಮಬೀಜಗಳು ಸುಟ್ಟು ಕರಕಾಗಿ ನಷ್ಟವಾಗಿವೆ. ಅಧೋಕ್ಷಜನ ಭಕ್ತನು ಮುಕ್ತನೇ ಸರಿ.

ಶ್ರೀಹರಿಯ ಮಹಿಮಾಶ್ರವಣವು, ಸಂಸಾರಮೋಚಕವೆಂದೇ ಅದು ಮೋಕ್ಷದಲ್ಲಿಯೂ ಆನಂದೋಸ್ಸಾಹ ಕಾರಣವೆಂದು ಮುಕ್ತರು, ಹಾಗೂ ಅಪರೋಕ್ಷ ಜ್ಞಾನಿಗಳೂ ಬಿಡದೆ ರಮಾರಮಣನ ಕಥನವನ್ನು ಮಾಡುತ್ತಿರುವರು. ಆದ್ದರಿಂದ ನಮ್ಮ ಮನಸ್ಸಿನಲ್ಲೇ ನೆಲಸಿರುವ ಸ್ವಾಮಿಯನ್ನೂ ನಾವೂ ಭಜಿಸಿ ಮುಕ್ತರಾಗುವುದು ಯುಕ್ತವಾಗಿದೆ.

ಅಸುರಬಾಲರೇ! ನಮ್ಮಲ್ಲಿ ನಿಂತು ನಮ್ಮ ಸ್ವಾಮಿಯಾಗಿ ಕಾಪಾಡುತ್ತಿರುವ ಶ್ರೀಹರಿಯನ್ನು ಭಜಿಸುವುದರಲ್ಲಿ ಏನು ಕಷ್ಟವಿದೆ ಹೇಳಿ? ನಮಗೆ ನಿಜವಾದ ಬಂಧುವು ಶ್ರೀಶನೇ. ಮಿಕ್ಕವರು ದೇಹದ ಬಂಧುಗಳು. ವಿಷಯದಲ್ಲಿ ಲಂಪಟವನ್ನು ಬಿಟ್ಟು ಹರಿಯನ್ನು ಭಜಿಸೋಣ.

ಸಂಪತ್ತು, ಅದನ್ನು ಬೇಡುವ ಪತ್ನಿ; ಗೃಹಾರಾಮ ಪಶುಧನಗಳು, ಅದನ್ನು ಬೇಡುವ ಪುತ್ರರು; ಇನ್ನು ಗಜಾಶ್ವರಥಾದಿಗಳೇ ಮೊದಲಾದ ಅರ್ಥಕಾಮಸಾಧನಗಳಾದ ಸಕಲವೂ ಚಂಚಲವಾಗಿವೆ. ಕ್ಷಣಭಂಗುರ ದೇಹದಲ್ಲಿ ನಿಂತು ಶಾಶ್ವತನಲ್ಲದ ಜೀವನಿಗೆ ಅಚಂಚಲ ಪದಾರ್ಥಗಳಿಂದ ಏನು ಸುಖವಾಗುವುದು?

ಯಜ್ಞಯಾಗಾದಿಗಳಿಂದ ಸಿಗುವ ಸ್ವರ್ಗಲೋಕವೂ ಪ್ರಾಕೃತವು. ಅಶಾಶ್ವತವು, ದಿನೇ ದಿನೇ ಕ್ಷೀಯಮಾಣವು ಮತ್ತು ಮಹರ್ಲೋಕಾದಿಗಳಿಗೆ ಅಧಮವೂ ಆಗಿದೆ. ಆದ್ದರಿಂದ ಪ್ರವೃತ್ತಿ ಕರ್ಮವನ್ನು ಬಿಡಿ. ಸ್ವಸ್ವರೂಪ ಸುಖವನ್ನು ಶಾಶ್ವತವಾಗಿ ಕೊಡುವ ಮುಕ್ತ ಸಾಮ್ರಾಜ್ಯವನ್ನು ಸೇರಿಸುವ ಮುಖ್ಯಪ್ರಾಣನನ್ನೂ ಮುಕ್ತಿಯನ್ನು ಕೊಡುವ ಮುಕುಂದನನ್ನೂ ಭಕ್ತಿಯಿಂದ ಭಜಿಸಿರಿ.

ಇಲ್ಲಿ ನಾವು ಸುಖವು ಬೇಕು, ದುಃಖವು ಬೇಡವೆಂದೇ ಎಲ್ಲ ಕರ್ಮಗಳನ್ನೂ ಮಾಡುತ್ತಿರುವೆವು. ಆದರೂ ನಾವು ಬೇಡವೆಂದ ದುಃಖವು ಬೀವೇ ಬರುತ್ತಿದೆ, ಮತ್ತು ಬೇಕೆಂದು ಬೇಡಿದ ಸುಖವು ಬಾರದಿರುವುದು. ಸುಖಕ್ಕಾಗಿ ಮಾಡುವ ಪ್ರಯತ್ನ ಆಯಾಸವ್ಯಯಗಳೆಂಬ ದುಃಖವೇ ಸಿಕ್ಕು ಸದಾ ದುಃಖವನ್ನೇಪಡುತ್ತಿರುವ ನಮಗೆ ವಿವೇಕವಿದೆಯೇ? ಪ್ರವೃತ್ತಿಮಾರ್ಗವ ದುಃಖವನ್ನೇ ಕೊಡುವುದು. ನಿವೃತ್ತಿಮಾರ್ಗವು ಸುಖವನ್ನೇ ಕೊಡುವುದು. ಕಾಮವನ್ನು ಬೇಡುವ ದೇಹವು ನಮ್ಮದಲ್ಲ. ಕ್ಷಣಭಂಗುರವೂ ಆಗಿರುವ ದೇಹವು ಬಿದ್ದುಹೋದರೆ ಕಾಮಿತಗಳಿದ್ದೇನು ಫಲ? ಶರೀರವೇ ಹೀಗಾದಮೇಲೆ ಶರೀರಸಂಬಂಧಿಗಳಾದ ದಾರಾ ಗೃಹ ಪುತ್ರ ಧನಾದಿಗಳು, ರಾಜ್ಯ ಕೋಶಗಜಾಶ್ವಮಂತ್ರಿವಾಹನಾದಿಗಳು ಶಾಶ್ವತರೇ? ಅಲ್ಲ. ಸುಖಕರರೇ? ಅಲ್ಲ. ದೇಹವು ಅಳಿದ ಕ್ಷಣದಿಂದ ದೂರರಾಗಿ ಹೋಗುವ ಈ ದಾರಾ ಪುತ್ರ ಧನಾದಿಗಳಿಂದ ನಮಗೇನು ಪ್ರಯೋಜನವು? ನಿತ್ಯಾನಂದ ಮಹಾನಿಧಿಯಾದ ಶ್ರೀಹರಿಗೆ ಇವರಿಂದ ಪ್ರಯೋಜನವಿಲ್ಲವೆಂದು ಹೇಳಬೇಕೇ? ಗರ್ಭದಲ್ಲಿ ಬಿದ್ದಂದಿನಿಂದ ಚಿತೆಯ ಮೇಲೆ ಮಲಗುವವರಿವಿಗೂ ನಡೆದ ಕಾಲದಲ್ಲಿ ನಾವು ಮಾಡಿರುವ ಒಳ್ಳೆಯ ಕಾರ್ಯವೇನು? ಆಲೋಚಿಸಿ. ನಮ್ಮ ದೇಹದಿಂದ ನಮಗಾದ ಪ್ರಯೋಜನವಾದರೂ ಯಾವುದು? ಏನೂ ಇಲ್ಲ. ಶ್ರೀಹರಿಗೆ ವಶನಾಗಿ ದೇಹದಲ್ಲಿ ಬಂದು ಕರ್ಮಗಳನ್ನು ಮಾಡಿ ಆ ಕರ್ಮಫಲಗಳನ್ನು ಅನುಭವಿಸಲು ಮತ್ತೆ ದೇಹಗಳನ್ನು ಹೊಂದುತ್ತಿರುವ ಅವಿವೇಕಿಯು ಶ್ರೀರಮಣನ ಚರಣವನ್ನು ಸೇರುವುದೆಂತು? ಆದ್ದರಿಂದ ಧರ್ಮಾರ್ಥಕಾಮಗಳೆಲ್ಲವೂ ಅನರ್ಥಗಳೇ ಎಂದು ಮನಗಂಡು ನಿಶ್ಚಲರಾಗಿ ನಿವೃತ್ತ ಮಾರ್ಗದಿಂದ ನಡೆದು ಭಕ್ತಿಯಿಂದ ಭಗವಂತನನ್ನು ಭಜಿಸಿ.

ಶ್ರೀಹರಿಯು ಸರ್ವಭೂತಾಂತರ್ಯಾಮಿಯು ನಿಜವಾದ ಪ್ರಿಯನು ಆಗಿರುವನು. ಅವರವರು ಮಾಡಿದ ಕರ್ಮಫಲವನ್ನು ಅವರವರಿಗೆ ಕಟ್ಟಿ ಉಣಿಸುವನು.

ದೇವತೆಯಾಗಲಿ, ದಾನವನಾಗಲಿ, ಮಾನವನಾಗಲಿ, ಯಾರೇ ಆಗಲಿ, ಮುಕುಂದಚರಣವನ್ನು ಭಕ್ತಿಯಿಂದ ಭಜಿಸಿದವನು ಮುಕ್ತನಾಗಿ ಸುಖಿಸುವನು. ಈ ವಿಷಯದಲ್ಲಿ ನಾನೇ ನಿದರ್ಶನವು. ಮುಕುಂದನನ್ನು ಮೆಚ್ಚಿಸಲು ವಿಪ್ರನೇ ಆಗಬೇಕೆಂದಿಲ್ಲ. ದೇವತೆಗಳೇ ಬೇಕೆಂದಿಲ್ಲ. ಋಷಿಯಾಗಬೇಕಿಲ್ಲ. ಕೇವಲ ಆಚಾರ ಶಾಸ್ತ್ರ ಜ್ಞಾನಗಳು ದಾನ ವ್ರತ ಯಜ್ಞಯಾತ್ರಾದಿಗಳೂ ಹರಿಗೆ ಪ್ರೀತಿಕರವಲ್ಲ. ಯಾರೇ ಆಗಲಿ ಮಹಿಮೆಯನ್ನರಿತು ನಿರ್ವ್ಯಾಜ ಭಕ್ತಿಯನ್ನು ಮಾಡಿದರೆ ಶ್ರೀಹರಿಯು ಮೆಚ್ಚುವನು. ಭಕ್ತಿಯಿಲ್ಲದ ದಾನವ್ರತಗಳೆಲ್ಲವೂ ಬೂಟಕವೆಂದೇ ತಿಳಿಯಿರಿ.

ದಾನವರೇ! ನಮಗೆ ನಾವು ಪ್ರೀತಿಪಾತ್ರರಲ್ಲವೇ? ಅಂತೆಯೇ ಶ್ರೀಹರಿಯು ನಮಗೂ ಹೆಚ್ಚು ಪ್ರೀತಿಪಾತ್ರನೆಂದರಿತು ಭಕ್ತಿಯನ್ನು ಮಾಡಿ. ಅವನು ಸರ್ವಜೀವನಿಯಾಮಕನು ಮತ್ತು ಸರ್ವೋತ್ತಮನೆಂದು ತಿಳಿಯಿರಿ. ದೈತೇಯರು, ಯಕ್ಷರು, ಸ್ತ್ರೀಶೂದ್ರ ವ್ರಜವಾಸಿಗಳು, ಖಗಮೃಗಗಳು, ವೇದಾಂತಶಾಸ್ತ್ರವನ್ನೋದುವ ಪುಣ್ಯವನ್ನು ಪಡೆಯದಿದ್ದರೂ ಅನಂತ ಜನ್ಮ ಸಂಸ್ಕಾರವಶರಾಗಿ ಬಂದ ಭಕ್ತಿಯಿಂದ ಮುಕ್ತರಾದುದುಂಟು. ಶ್ರೀನಾರಾಯಣನು ಸರ್ವತ್ರ ನೆಲಸಿರುವನೆಂದು ನಂಬಿ ಯೋಗ್ಯತಾನುಸಾರವಾಗಿ ಆಯಾ ಅಧಿಷ್ಠಾನಗಳಲ್ಲಿರುವ ಸ್ವಾಮಿಯನ್ನು ತಕ್ಕಂತೆ ಪೂಜಿಸುವುದರಿಂದ ನಾವು ನಮ್ಮ ಪ್ರಯೋಜನವನ್ನು ಚೆನ್ನಾಗಿ ಹೊಂದುತ್ತಿರುವೆವು. ಶ್ರೀಹರಿಯೇ ನಮಃ ಎಂದು ಪ್ರಹ್ಲಾದನು ನಿಜೋಪದೇಶವನ್ನು ಮುಗಿಸಿದನು.

## ೮. ಶ್ರೀನೃಸಿಂಹ ಪ್ರಾದುರ್ಭಾವವು

ದೈತ್ಯಬಾಲಕರು ಪ್ರಹ್ಲಾದನ ವಚನಗಳನ್ನು ಕೇಳಿ ಅವರ ಉಪದೇಶವು ಪ್ರಾಮಾಣಿಕವು ಹಾಗೂ ನಿರ್ದೋಷವೆಂದರಿತು ಶಂಡಾಮರ್ಕರ ಓದನ್ನು ಬಿಟ್ಟು ಪ್ರಹ್ಲಾದನನ್ನನುಸರಿಸಿದರು.

ಆಚಾರ್ಯಪುತ್ರರು ನಡೆದ ವೃತ್ತಾಂತವನ್ನು ಕಂಡು ಭೀತರಾಗಿ ರಾಜನಿಗೆ ಪ್ರಹ್ಲಾದನ ದುರ್ನಯವನ್ನು ತಿಳಿಸಿದರು. ದುಸ್ಸಹವಾದ ತನಯನ ವಿರೋಧಿಮಾರ್ಗಾನುವರ್ತನವನ್ನು ಕೇಳಿ ಕೋಪದಿಂದ ನಡುಗುತ್ತಾ ದೈತ್ಯನು ಮಗನನ್ನು ಕೊಂದುಬಿಡಲು ನಿಶ್ಚಯಿಸಿದನು. ಕಠೋರ ಮನಸ್ಕನಾದ ಹಿರಣ್ಯಕನು ತನ್ನ ಮುಂದೆ ವಿನಯದಿಂದ ತಲೆಬಾಗಿ, ಕೈಜೋಡಿಸಿ ನಿಂತ ಮಗನನ್ನು ನೋಡಿ ಪಾದಾಹತ ಭುಜಂಗಮನಂತೆ ಕೆರಳಿ ಪರುಷವಚನದಿಂದ ಇಂತು ನುಡಿದನು–

'ಎಲವೋ ದುರ್ವಿನೀತ! ಬುದ್ಧಿಹೀನ! ಕುಲಭೇದವನ್ನು ಬಗೆವ ನೀಚನು, ನನ್ನ ಶಾಸನವನ್ನು ಧಿಕ್ಕರಿಸುವ ದುರಹಂಕಾರಿಯು ಆದ ನಿನ್ನನ್ನು ಈಗಲೇ ಯಮಮಂದಿರವನ್ನು ಸೇರಿಸುವೆನು. ಭ್ರೂಭಂಗಮಾತ್ರದಿಂದ ಮೂರು ಲೋಕದ ಜನರನ್ನೂ ರಾಜರನ್ನೂ ನಡುಗಿಸುವ ನನ್ನನ್ನು– ಮೂಢ !ನನ್ನ ಶಾಸನವನ್ನು– ಧಿಕ್ಕರಿಸುವೆಯಾ? ಯಾರಿಂದಲೋ ನಿನಗೀ ಬಲವು?' ಎನ್ನಲು ಪ್ರಹ್ಲಾದನು ನಿರ್ಭೀತನಾಗಿ ಹೇಳಿದನು–

ರಾಜನ್! ನಿನಗೆ, ನನಗೆ, ಬಲವಂತರೆಂದು ಪ್ರಸಿದ್ಧರಾದ ಸರ್ವರಿಗೂ ಬಲಪ್ರದನಾಗಿ ಶ್ರೀಹರಿಯು ಬಲನೆನಿಸಿರುವನು. ಅವರರಾದ ಜೀವರಲ್ಲಿ ಶ್ರೇಷ್ಠರೆನಿಸುವ ಬ್ರಹ್ಮಾದಿಗಳಿಗೂ ಅವನೇ ಬಲಪ್ರದನಾಗಿರುವನು. ಇತರರಿಗೆ ಬಲಪ್ರದನಾದ ಇಂದ್ರನಿಗೆ ಬಲಪ್ರದನು ರುದ್ರನು. ರುದ್ರನಿಗೆ ಒಲವು ಬ್ರಹ್ಮ ವಾಯುಗಳಿಂದ. ಬ್ರಹ್ಮವಾಯುಗಳಿಗೆ ಬಲನು ಶ್ರೀಶನು. ಶ್ರೀಹರಿಗೆ ಇನ್ನೊಬ್ಬರಿಂದ ಬಲವು ಇಲ್ಲ. ಅವನು ಸರ್ವೋತ್ತಮನು. ಓಜಸ್ಸು, ಸಹನ, ಬಲ, ಇಂದ್ರಿಯ ಪಾಟವಗಳಿಗೆ ಅವನು ಪ್ರಭುವಾಗಿರುವನು. ಕಾಲರೂಪದಿಂದ ವ್ಯಾಪ್ತನಾಗಿ ಆ ಪರಾಕ್ರಮ ಶಾಲಿಯು ತನ್ನ ಅಧೀನದಲ್ಲಿರುವ ತ್ರಿಗುಣಗಳಿಂದ ಬ್ರಹ್ಮಾಂಡವನ್ನು ಸೃಜಿಸಿ, ಪಾಲಿಸಿ, ಸಂಹರಿಸುತ್ತಿರುವನು. ಅಸುರಾಭಾವವನ್ನು ಬಿಡು. ಮನಸ್ಸನ್ನುರಮಾರಮಣನಲ್ಲಿಡು. ನಿನಗೆ ಶತ್ರುಗಳೆಂಬುವರು ಯಾರೂ ಇಲ್ಲ. ನಿನ್ನ ಮನಸ್ಸೇ ನಿನಗೆ ಶತ್ರುವಾಗಿ ತತ್ವವಿರುದ್ಧ ಮಾರ್ಗದಲ್ಲಿ ನಡೆಸಿ ಕೆಡಿಸಿತ್ತದೆ. ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಮನೋಧಾರಣವೇ ಶ್ರೀಹರಿಪೂಜೆ ಎಂದು ತಿಳಿ. ಜ್ಞಾನಭಕ್ತಿನಿಧಿಯನ್ನು ದೋಚುತ್ತಿರುವ ಇಂದ್ರಿಯ ಪಂಕಜಯುತ ಮನವೆಂಬ ಶತ್ರುಷಟ್ಕವನ್ನು ಜಯಿಸದೆ ಕೆಲವರು ಹತ್ತು ದಿಕ್ಕನ್ನು ಗೆದ್ದೆವೆಂಬುವರು! ಮನಸ್ಸನ್ನು ವಶದಲ್ಲಿಟ್ಟು ಇಂದ್ರಿಯದಾಸನಾಗದೆ, ಯಥಾಯೋಗ್ಯವಾಗಿ ಸರ್ವಭೂತಗಳಲ್ಲಿರುವ ಶ್ರೀಹರಿಯನ್ನು ನೆನೆದು ನಡೆಯುವ ಜ್ಞಾನಿಗೆ ಶತ್ರುಗಳಾರು? ಅಂತಃಶತ್ರುಗಳೂ ಇಲ್ಲ. ಅಂತಹವನಿಗೆ ಬಾಹ್ಯ ಶತ್ರುಗಳಾದರೂ ಏನು ಮಾಡುವರು? ನಮ್ಮ ಅಜ್ಞಾನದಿಂದ ನಾವು ಕಲ್ಪಿಸಿಕೊಂಡವರಲ್ಲವೇ ಶತ್ರು ಮಿತ್ರಾದಿಗಳು?

ಆಗ ಹಿರಣ್ಯಕಶಿಪುವು 'ಛೀ ಮೂರ್ಖಾ! ನೀನು ಸಾಯಬೇಕೆಂದಿರುವೆ. ಗೊತ್ತಾಯಿತು. ಎಷ್ಟು ಬೊಗಳುತ್ತಿರುವೆ! ಸಾಯುವವರಿಗೆ ಸನ್ನಿಬಡಿದಂತೆ ಬಡಬಡಿಸುವೆ. ನಿರ್ಭಾಗ್ಯ! ನಾನಲ್ಲದ ಜಗದೀಶನಿನ್ನಾರೋ? ಅವನೆಲ್ಲಿರುವನೋ? ಬೊಗಳು' ಎಂದು ಗರ್ಜಿಸಿದನು.

ಪ್ರಹ್ಲಾದನು 'ಇರುವನು ಜಗನ್ನಾಥನು. ಅವನು ಮುಖ್ಯಪ್ರಾಣನಲ್ಲಿ ನಿಂತಿಹನು' ಎಂದನು. ಹಿರಣ್ಯಕನು 'ಅವನೆಲ್ಲಿರುವನೋ?' ಎನ್ನಲು ಪ್ರಹ್ಲಾದನು 'ಅವನು ಸರ್ವತ್ರ ಸರ್ವದಾ ನೆಲೆಸಿಹನು' ಎಂದನು. ಹಿರಣ್ಯಕನು 'ಎಲವೋ! ಹಾಗಾದರೆ ಈ ಸ್ತಂಭದಲ್ಲಿರುವನೇ' ಎಂದನು. ಪ್ರಹ್ಲಾದನು 'ಇರುವನು! ಕಣ್ತೆರೆದು ನೋಡು' ಎಂದನು. ಆ ಮಾತನ್ನಾಲಿಸಿ ಕೋಪವೇಗವನ್ನು ತಡೆಯಲಾರದೆ 'ಇರಲಿ! ಈ ರೀತಿಯಾಗಿ ಪ್ರಲಪಿಸುವ ನಿನ್ನ ತಲೆಯನ್ನು ನಾನೀಗಲೇ ಕತ್ತರಿಸಿ ಬಿಡುವೆನು. ಬರಲಿ! ನಿನ್ನನ್ನು ಕಾಪಾಡಲು ಆ ನಿನ್ನ ದೊರೆ ಶ್ರೀಹರಿ!' ಎಂದು ಆರ್ಭಟಿಸಿದನು. ಸಿಂಹಾಸನದಿಂದಿಳಿದು ಖಡ್ಗ ಚರ್ಮಗಳನ್ನು ಹಿಡಿದು ರೋಷದಿಂದ ಮಹಾಭಾಗವತನನ್ನು ಕೊಲ್ಲಬೇಕೆಂದು ಬರುತ್ತಾ, ದೈತ್ಯರಾಜನು ಸ್ತಂಭವನ್ನು ಕಂಡು ನಿಂತು ಎಡಗಾಲಿನಿಂದ ಆ ಸ್ತಂಭವನ್ನು ಒದೆದು ಸಿಂಹನಾದವನ್ನು ಮಾಡಿದನು. ತತ್ಕ್ಷಣವೇ ಆ ಸ್ತಂಭದಿಂದ ಪ್ರಳಯ ಸಮಯ ಪರ್ಜನ್ಯಗರ್ಜಾಭೀಲವಾದ ಭೀಷಣಘೋಷಣವು ಹೊರಹೊಮ್ಮಿ ಬ್ರಹ್ಮಾಂಡ ಕಟಾಹವೇ ಒಡೆದು ಚೂರಾಯಿತೋ ಎನ್ನುವಂತೆ ಆಗಲು, ಬ್ರಹ್ಮಾದಿಗಳೆಲ್ಲರೂ ಪ್ರಳಯ ಕಾಲವೇ ಸಮೀಪಿಸಿತೆಂದು ದಿಗ್ಭ್ರಾಂತರಾದರು.

ಅದನ್ನು ಕೇಳಿ ಪುತ್ರವಧಾತುರನಾಗಿ ಹೋಗುತ್ತಿರುವ ದೈತ್ಯರಾಜನು ಭಯಚಕಿತನಾಗಿ, ಸಭೆಯಲ್ಲೆಲ್ಲಾ ಕಣ್ಣನ್ನು ಹಾಯಿಸಿ ಏನೂ ಕಾಣದೆ ಸುಮ್ಮನೆ ನಿಂತುಬಿಟ್ಟನು . ಅವನ ಪರಿವಾರದ ದನುಜನಾಯಕರು ಎದೆ ಒಡೆದು ಓಡತೊಡಗಿದರು. ಆಗ ಶ್ರೀನೃಸಿಂಹನು ತನ್ನ ಭೃತ್ಯನಾದ ಪ್ರಹ್ಲಾದನ ಸತ್ಯವಚನವನ್ನು ನಡೆಸಿಕೊಡಲು ಆ ಸ್ತಂಭದಿಂದ ಮೃಗವಲ್ಲದ, ನರನಲ್ಲದ ಹಾಗೂ ಮೃಗವೂ ಆದ, ನರನೂ ಆದ ಅದ್ಭುತ ರೂಪದಿಂದ ಪ್ರಾದುರ್ಭೂತನಾದನು. 'ನನ್ನನ್ನು ಅನನ್ಯಭಾವದಿ ಭಜಿಸುವ ಭಕ್ತರ ಯೋಗಕ್ಷೇಮವನ್ನು ನಾನು ವಹಿಸುವೆನು' ಹಾಗೂ 'ನನ್ನ ಭಕ್ತನೂ ಎಂದಿಗೂ ನಾಶವನ್ನು ಪೊಂದುವುದಿಲ್ಲ'ವೆಂಬ ತನ್ನ ಮಾತನ್ನೂ, 'ಬ್ರಹ್ಮನು ಸೃಜಿಸಿದ ಜೀವರಿಂದ ಸಾವು ಬೇಡವೆಂ'ದ ಹಿರಣ್ಯಕನ ಮಾತನ್ನೂ ಮೂರು ಜನ್ಮಗಳಲ್ಲಿ ದೈತ್ಯರಾಗಿ ಶ್ರೀಹರಿ ಸಂಹೃತರಾಗಿ ತಿರುಗಿ ಬನ್ನಿ' ಎಂದು ನುಡಿದ ಸನಕಾದಿ ವಚನವನ್ನೂ, 'ಶ್ರೀಹರಿಯು ಶುಕ್ಲರಕ್ತ ಪ್ರಭಾವ ಪ್ರಾಕೃತದೇಹವಲ್ಲ–ಅವನು ಆನಂದಮಯನು' ಎಂದ ಭಕ್ತರ ಮಾತನ್ನೂ, ಬ್ರಹ್ಮ ನಾರದ ಜಯವಿಜಯಾರ್ಜುನಾದಿ ಭಕ್ತರ ನುಡಿಗಳನ್ನೂ ಸತ್ಯವನ್ನಾಗಿಸಿ ಸಲಹಲು ಶ್ರೀ ನೃಸಿಂಹನು ಸ್ತಂಭದಿಂದಾವಿರ್ಭವಿಸಿದನು. ಪ್ರಹ್ಲಾದನು ತನ್ನ ಭೃತಿಗಾಗಿ ಮಾತಾಡದೆ 'ಮಾಧವನು ಸರ್ವವ್ಯಾಪಿಯು ಹಾಗೂ ಸರ್ವೇಶನು ಎಂದು ಜೀವಪಣವನ್ನಿಟ್ಟಿರುವನು, ಇವನನ್ನು ರಕ್ಷಿಸುವುದೇ ನನ್ನ ಕರ್ತವ್ಯ'ವೆಂದು ದಯಾಮಯನಾದ ಶ್ರೀಹರಿಯು ಅನಂತ ನೃಸಿಂಹಾಕಾರಗಳಿಂದ ಲೋಕವನ್ನು ತುಂಬಿ ನಿಂತು, ಹಿರಣ್ಯಕನಿಗಾಗಿ ಸಭಾಸ್ತಂಭದಿಂದಾ ವಿರ್ಭೂತನಾದನು. ಕುಂಭದಿಂದೆದ್ದು ಬರುವ ಭಯಂಕರಾಕಾರವನ್ನು ನೋಡಿ ಹಿರಣ್ಯಕಶಿಪು 'ಅಹೋ ಏನಿದು ಪರಮಾಶ್ಚರ್ಯವಾಗಿದೆ! ನರನೂ ಅಲ್ಲ ಮೃಗನೂ ಅಲ್ಲ! ಇದು ನೃಸಿಂಹರೂಪ ವಾಗಿದೆ' ಎಂದು ಚಿಂತಿಸುತ್ತಿದ್ದನು. ಧರ್ಮರಾಜಾ! ಆ ಸಭೆಯಲ್ಲಿ ಪ್ರಕಟನಾದ ಶ್ರೀ ನೃಸಿಂಹನ ದಿವ್ಯ ಮಂಗಲ ರೂಪವನ್ನು ವರ್ಣಿಸುವೆನು ಕೇಳು.

ಶ್ರೀಹರಿಯ ನೇತ್ರತ್ರಯವು ಕಾದ ಬಂಗಾರದಂತೆ ಪಿಂಗಳವರ್ಣದಿಂದ ಹೊಳೆಯುತ್ತಿತ್ತು. ಜಟಾಕೇಸರಜಾಲದಿಂದಾವೃತವಾಗಿ ಮುಖವು ಭಯಂಕರವಾಗಿತ್ತು. ಕೋರೆಗಳನ್ನು ಮಸೆದು, ಕರವಾಲ ಚಂಚಲವಾದ ನಾಲಿಗೆಯಿಂದ ತುಟಿಯಿಂದ ಸವರಿ ಹುಬ್ಬನ್ನು ಗಂಟಿಕ್ಕಿ, ಕಿವಿಗಳೆಬ್ಬಿಸಿ,

ಗುಹೆಯಂತೆ ಗಂಭೀರವಾದ ಬಾಯಿಯನ್ನು ತೆರೆದು ವಿದೀರ್ಣ ಕಪೋಲವಿಶಾಲನಾದ ನೃಸಿಂಹನು ದಿಕ್ಕುವಿದಿಕ್ಕುಗಳಲ್ಲಿ ವ್ಯಾಪಿಸಿ ನಿಂತನು. ಉನ್ನತ ವಿಸ್ತಾರ ವಕ್ಷಸ್ಥಲವನ್ನಾಕ್ರಮಿಸಿ ಚಂದ್ರಾರುಣ ಕೇಸರಗಳು ಹಾರಾಡುತ್ತಿದ್ದವು. ಶರೀರರೋಮಗಳು ಸೆಟೆದು ನಿಂತಿದ್ದವು. ಸಹಸ್ರ ಬಾಹುವಾದ ಸ್ವಾಮಿಯ ಕೈಗಳೆರಡೂ ನಖಮಾತ್ರಾಯುಧಗಳಾಗಿ, ಮಿಗಿಲಾದ ಕೈಗಳಲ್ಲಿ ವಿವಿಧಾಯುಧಗಳು ವಿರಾಜಿಸುತ್ತಿದ್ದವು. ಆ ಚಕ್ರಾದಿ ಹರಿ ಪ್ರಹರಣ ದರ್ಶನಮಾತ್ರದಿಂದ ದೈತ್ಯದಾನವರೆಲ್ಲರು ದಿಕ್ಕುತೋಚದೆ ಓಡಿಹೋದರು. ಇಂತು, ದುರ್ಧರ್ಷನು, ದುರಾಸದನು ಆದ ನೃಹರಿಯನ್ನು ಹಿರಣ್ಯಕನು ನೋಡಿ 'ಓಹೋ! ಪುತ್ರವಧೆಯನ್ನು ಮಾಡಲು ಪೋಗುವ ನನಗೆ ನಿಸರ್ಗಶತ್ರುವಾದ ಹರಿಯು ಪುತ್ರಪಕ್ಷಪಾತಿಯಾಗಿ ಈ ರೂಪದಿಂದ ಬಂದಿರುವಂತೆ ತೋರುತ್ತದೆ. ಇವನಿಂದ ನಾನು ಸಾಯುವೆನೋ ಏನೋ' ಎಂದಾಲೋಚಿಸಿ ಸುಮ್ಮನಿರದೆ ಗದೆಯನ್ನು ಪಿಡಿದು ಸಿಂಹವನ್ನು ಕೆರಳಿಸುವ ಆನೆಯಂತೆ ನೃಸಿಂಹನನ್ನೆದುರಿಸಿದನು. ನೃಸಿಂಹ ಮಹಾಗ್ನಿಜ್ವಾಲೆಗಳಲ್ಲಿ ಹಾರಿಬೀಳುವ ಪತಂಗದಂತೆ ಹಿರಣ್ಯಕನು ನಷ್ಟನಾದನೆಂದರೆ ಆಶ್ಚರ್ಯವೇನಿದೆ?ಬಲಜ್ಞಾನಾನಂದ ಮೂರ್ತಿ ಯಾದ ನೃಸಿಂಹನು ಪ್ರಳಯಕಾಲೀನವಾದ ತಮಸ್ಸನ್ನೇ ನುಂಗಿದ ಮಹಾಪರಾಕ್ರಮಿ ಅಲ್ಲವೇ?

ದೈತ್ಯನು ನೃಸಿಂಹನನ್ನು ತಾಗಿ, ಗದೆಯಿಂದ ಹೊಡೆದನು. ದೈತ್ಯನನ್ನು ಗರುಡನನ್ನು ಹಾವಿನಂತೆ ಹಿಡಿದು ನೃಸಿಂಹನು ಪ್ರಚಂಡ ಗರ್ಜನವನ್ನು ಮಾಡಿದನು. ಹಿರಣ್ಯಕನು ಹರಿಯ ಕೈಗಳಿಂದ ಬಿಡಿಸಿಕೊಂಡು ರಣಕ್ಕಂಜದೆ ಹರಿಯಮೇಲೇರಿ ಬಂದನು. ಇದನ್ನು ಕಂಡು ಚಂದ್ರಾದಿ ದೇವತೆಗಳು ಭಯದಿಂದ ಮೋಡಗಳಲ್ಲಿ ಅವಿತು ಕೂತು, 'ಶ್ರೀಹರಿಯು ದೈತ್ಯನನ್ನು ಕೊಲ್ಲದೆ ಬಿಟ್ಟಿರುವುದು ಒಳ್ಳೆಯದಲ್ಲ'ವೆಂದು ಚಿಂತಿಸುತ್ತಿದ್ದನು. ಯುದ್ಧಸನ್ನದ್ಧನಾದ ದಿತಿಸುತನು ಖಡ್ಗ ವನ್ನು ಢಾಲನ್ನು ಪಿಡಿದು ಗಿರಿಗಿರಿ ತಿರುವುತ್ತಾ ವೇಗದಿಂದ ಬರಲು ನೃಸಿಂಹನು ಅಟ್ಟಹಾಸವನ್ನು ಮಾಡಿ ಹೆಬ್ಬಾವು ಇಲಿಯನ್ನಂತೆ ಅನಾಯಾಸವಾಗಿ ಪಿಡಿದನು. ವಜ್ರಾಘಾತದಿಂದಲೂ ಮಣಿಯದೆ ನಿರಪಾಯನಾಗಿದ್ದ ದೈತ್ಯನು ಶ್ರೀಹರಿಯ ಕರಪೀಡಿತನಾಗಿ ನಿಶ್ಚೇಷ್ಟನಾದನು.

ಆಗ ನೃಸಿಂಹನು ಬ್ರಹ್ಮವರವನ್ನು ನೆನೆದು ಸಾಯಂಕಾಲವಾದುದನ್ನು ಕಾದು ಕಂಡು ಮನೆಯ ದ್ವಾರದೇಶದ ಹೊಸಲಿನಲ್ಲಿ ಕೂತು, ತೊಡೆಯಮೇಲಿಟ್ಟು, ಗರುಡನು ಮಹಾ ಸರ್ಪವನ್ನಂತೆ ಲೀಲಾಜಾಲವಾಗಿ ಅವನ ಉದರವನ್ನು ಬಗೆದು ಕೊಂದನು.

ತುಟಿಯನ್ನು ಚಾಚಿದ ನಾಲಿಗೆಯಿಂದ ನೆಕ್ಕುತ್ತ, ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತ ಭಯಂಕರನಾದ ನೃಸಿಂಹದೇವನು ರಕ್ತಸಿಕ್ತವಾದ ವದನದಿಂದಲೂ ಕರುಳುಮಾಲೆಗಳಿಂದಲೂ ಆನೆಯನ್ನು ಕೊಂದ ಸಿಂಹದಂತೆ ಪ್ರಕಾಶಿಸಿದನು. ನಖಮುಖದಿಂದ ಹಿರಣ್ಯಕನ ಎದೆಯನ್ನು ಬಗೆದು ಸೂಸಿಬಂದ ರಕ್ತಪ್ರವಾಹದಲ್ಲಿ ಬಿಳಿಯ ಕೇಸರುಗಳು ಕೆಂಪಾಗಲು, ಬಿಡದೆ ಹೊಟ್ಟೆ ಯನ್ನೂ ಸೀಳಿ ಕರುಳಮಾಲೆಯನ್ನೆತ್ತಿ ಕೊರಳಿಗೆ ಹಾಕಿಕೊಂಡು ದನುಜನ ದೇಹವನ್ನು ಕೆಳಗೆ ಕೆಡಹಿದನು. ತನ್ನ ವಿವಿಧಾಯುಧಗಳಿಂದ ಉದ್ಯತರಾದಿ ಬಂದ ದಿತಿಜ ಸೇನಾಪತಿಗಳನ್ನು ಸದೆ ಬಡಿದು, ಸಿಂಹಾಸನವನ್ನಲಂಕರಿಸಿ ಘುಡಿಘುಡಿಸುತ್ತಾ ಕೂತನು. ಅವನ ಜಟಾಕೇಸರಗಳಿಗೆ ತಗಲಿ ಮೇಘಗಳು, ನಕ್ಷತ್ರಗಳು, ವಿಮಾನಗಳು, ಉದುರಿ ಚಲ್ಲಾಪಿಲ್ಲಿಯಾದುವು. ಅವನ ದೃಷ್ಟಿಯಿಂದ ಗ್ರಹಗಳು ಕಳೆಗುಂದಿದವು. ಅವನ ಶ್ವಾಸದಿಂದ ಸಮುದ್ರವು ಉಕ್ಕೇರಿತು. ಅವನ ಗರ್ಜನದಿಂದ ದಿಗ್ಗಜಗಳು ಭೀತಿಗೊಂಡು ಭೂಭಾರವಹನ ಕರ್ಮವನ್ನು ಬಿಟ್ಟುಹೋದವು.

ಅವನ ಪದದ ಅಡಿಯಲ್ಲಿದ್ದ ಭೂತಲವು ಕಂಪಿಸಿ ನಮ್ರವಾಯಿತು. ಅವನ ನಡೆವ ವೇಗದಿಂದ ಬೆಟ್ಟಗಳುದುರಿ ಚೂರಾಗಿ ಬಿದ್ದವು. ಅವನ ತೇಜದಿಂದ ಮಿಕ್ಕೆಲ್ಲ ತೇಜಗಳು ಬಿಳುಚುಹರಿದವು.

ಸಭಾಮಧ್ಯದಲ್ಲಿ, ಸಿಂಹಾಸನಾಸೀನನಾಗಿ ಪ್ರಚಂಡ ತೇಜದಿಂದ ಮೆರೆಯುವ ನೃಸಿಂಹ ಸ್ವಾಮಿಗೆ ಎದುರಿಲ್ಲದಾಯಿತು. ಅವನ ಕೋಪವು ಮಿತಿಯಿಲ್ಲದಾಯಿತು. ಪ್ರಚಂಡ ಸಿಂಹ ವದನನಾದ ಲೋಕವಲ್ಲಭನನ್ನು ಕಣ್ಣೆತ್ತಿ ನೋಡಲು ಕೈಲಾಗದೆ, ದೇವಾದಿ ಸರ್ವಸುಜನರು ಲೋಕಜ್ವರನಾದ ಹಿರಣ್ಯಕನು ಸತ್ತನೆಂಬ ಸಂತೋಷದಿಂದ, ದೂರದಲ್ಲಿ ನಿಂತು ಶ್ರೀಹರಿಗೆ ವಂದಿಸಿದರು. ಸುರನಾರಿಯರು ಸುಮವೃಷ್ಟಿಯನ್ನು ಮಾಡಿದರು. ದೇವತೆಗಳು ವಿಮಾನದಲ್ಲಿ ಕೂತು ನೋಡಲು ಬಂದು, ಅಂಬರವನ್ನು ತುಂಬಿ ನಿಂತರು.

ದೇವದುಂದುಭಿಗಳು ಮೊಳಗಿದವು. ಗಂಧರ್ವರು ಗಾನಮಾಡಿದರು. ಅಪ್ಸರೆಯರು ಆಡಿದರು. ಆಗ ಬ್ರಹ್ಮ ರುದ್ರ ಸುರೇಂದ್ರ ಪ್ರಮುಖ ವೃಂದಾರಕರು ಋಷಿ ಪಿತೃ ಸಿದ್ಧ ವಿದ್ಯಾದರ ಮಹೋರಗ ಮನು ಪ್ರಜಾಪತಿ ಗಂಧರ್ವ ಚಾರಣ ಯಕ್ಷ ಕಿನ್ನರ ವೇತಾಳಾದಿಗಳಿಂದಲು ವಿಷ್ಣುಪಾರ್ಷದರಿಂದಲು ಕೂಡಿಬಂದು, ತಲೆಗಳ ಮೇಲೆ ಕೈಜೋಡಿಸಿ ನಮಿಸಿ ಕ್ರಮವಾಗಿ ತ್ರಿವಿಕ್ರಮನನ್ನು ಸ್ತೋತ್ರ ಮಾಡಿದರು.

ಬ್ರಹ್ಮನು 'ಅನಂತ! ದುರಂತಶಕ್ತನು, ಪವಿತ್ರಚರಿತನು, ವಿಚಿತ್ರಪರಾಕ್ರಮನು, ಆದ ನಿನಗೆ ವಂದನವು. ತ್ರಿಗುಣಗಳಿಂದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಲೀಲೆಯಿಂದ ಮಾಡುವ ನಿತ್ಯಜ್ಞಾನಾನಂದದೇಹನಾದ ನಿನಗೆ ನಮಸ್ಕಾರವು' ಎಂದು ನುತಿಸಿದನು.

ರುದ್ರನು 'ಭಕ್ತವತ್ಸಲ' ಪ್ರಳಯಕಾಲದಲ್ಲಿ ನಮ್ಮನ್ನೆಲ್ಲಾ ನುಂಗಿಬಿಡುವಾಗ ಮಾಡುವಷ್ಟು ಕೋಪವು ಈಗೇಕೆ? ಅಲ್ಪನಾದ ಅಸುಗನು ಹತನಾದನು. ಅವನ ಸುತನು ನಿನ್ನ ಭಕ್ತನು ಆದ ಪ್ರಹ್ಲಾದನನ್ನು ರಕ್ಷಿಸು' ಎಂದನು.

ಇಂದ್ರನು 'ಸರ್ವೋತ್ತಮ! ನಮ್ಮನ್ನು ರಕ್ಷಿಸಲು ಬಂದ ನಿನ್ನಿಂದ ನಮ್ಮ ಯಜ್ಞಭಾಗಗಳು ಮತ್ತೆ ನಮಗೆ ಲಭಿಸಿದವು; ದೈತ್ಯನ ಭಯದಿಂದ ತುಂಬಿದ ನಮ್ಮ ಹೃದಯಗಳು ಅವನ ಸಾವಿನಿಂದ ನಿಶ್ಚಿಂತವಾಗಿ ನಿನ್ನ ಪಾದಾರವಿಂದವನ್ನು ಧ್ಯಾನಿಸಲು ಅಣಿಯಾಗಿವೆ. ಇನ್ನು ನಮಗೆ ಯಾವ ವಿಷಯಸುಖಗಳೂ ಬೇಕಿಲ್ಲ' ಎಂದು ನುತಿಸಿದನು.

ಋಷಿಗಳು 'ಆದಿಪುರುಷ! ತಪೋರೂಪನಾದ ನೀನು ತಪೋಬಲದಿಂದ ಸರ್ವ ಲೋಕವನ್ನು ಸೃಜಿಸಿದೆ. ಅಂತಹ ತಪವೇ ಹರೇ! ನಿನ್ನ ಜ್ಞಾನಸಾಧನವಾಗಿದೆ ಎಂದು ನೀನೇ ನಮಗೆ ತಪಸ್ಸನ್ನು ಉಪದೇಶಿಸಿದೆ. ಈ ಪಾಪಿಯು ಅದನ್ನು ಕೆಡಿಸಿದ್ದನು. ನಿನ್ನ ದಯೆಯಿಂದ ಈಗ ಅದನ್ನು ನಾವು ಮತ್ತೆ ಪೊಂದಿ ಧನ್ಯರಾದೆವು' ಎಂದರು.

ಪಿತೃಗಳು 'ನಮಗೆ ನಮ್ಮ ವಂಶಜರು ತೀರ್ಥಾದಿಗಳಲ್ಲಿ ಕೊಟ್ಟ ತಿಲೋದಕ ಪಾರ್ವಣ ಗಳನ್ನು ನುಂಗಿ ನೀರು ಕುಡಿದ ದುಷ್ಟನ ಹೊಟ್ಟೆಯನ್ನು ಸೀಳಿ ನಮ್ಮನ್ನುಳಿಸಿದ ಕರ್ಮಪಾಲಕನೇ! ನಿನಗೆ ನಮಸ್ಕಾರ' ಎಂದರು.

ಸಿದ್ಧರು 'ನಮ್ಮ ಅಣಿಮಾದಿ ಸಿದ್ಧಿಗಳನ್ನೆಲ್ಲ ಅಪಹರಿಸಿದ ಗರ್ವಾಂಧನನ್ನು ನಖಗಳಿಂದ ಸೀಳಿ ನಮ್ಮನ್ನು ರಕ್ಷಿಸಿದ ನೃಸಿಂಹದೇವನಿಗೆ ನಮಸ್ಕಾರವು!' ಎಂದರು.

ವಿದ್ಯಾಧರರು 'ವಿಲಕ್ಷಣ ಪರಿಧ್ಯಾನದಿಂದ ನಮಗೆ ಬಂದ ಅಂತರ್ಧಾನಾದಿ ವಿದ್ಯೆಗಳನ್ನು ಕಸಿದು ಪೀಡಿಸಿದ ದೈತ್ಯನನ್ನು ಕೊಂದ ಗೋವಿಂದ! ನಿನಗೆ ನಮಃ– ಎಂದರು.

ನಾಗರು 'ಈ ಪಾಪಿಯು ನಮ್ಮ ಶಿರೋರತ್ನಗಳನ್ನಲ್ಲದೆ ನಾರೀರತ್ನಗಳನ್ನೂ ಕದ್ದಿದ್ದನು. ಅವನ ಎದೆಯನ್ನು ಸೀಳಿದ ನಿನ್ನನ್ನು ನೋಡಿ ನಮಗೆ ಸಂತಸವಾಗಿದೆ. ನಿನಗೆ ಅನಂತ ನಮಸ್ಕಾರಗಳು' ಎಂದರು.

ಮನುಗಳು 'ನಿನ್ನ ಆಜ್ಞೆಯಂತೆ ಪ್ರಜರನ್ನು ಪಾಲಿಸಲು ನಾವು ಮಾಡಿದ ಧರ್ಮಸೇತುವನ್ನು ಮುರಿದ ಖಲನನ್ನು ಕೊಂದೆ. ಆನಂದವಾಯಿತು. ನಾವೆಂತು ನಿನ್ನ ಸೇವೆಯನ್ನು ಸಲ್ಲಿಸೋಣ, ಆಜ್ಞಾಪಿಸು'ಎಂದರು.

ಪ್ರಜಾಪತಿಗಳು 'ಪರೇಶಾ! ಪ್ರಜೇಶರಾಗಿ ಪ್ರಜರನ್ನು ಸೃಜಿಸುವ ನಮ್ಮ ಕರ್ತವ್ಯ ಧರ್ಮವನ್ನು ಕೆಡಿಸಿದ ಪ್ರಜಾದ್ರೋಹಿಯನ್ನು ಬಗೆದು ಕೊಂದೆ. ಜಗನ್ಮಂಗಲಕರಾವತಾರ! ನಿನಗೆ ನಮಃ' ಎಂದರು.

ಗಂಧರ್ವರು 'ವಿಭೋ! ನಿನ್ನ ಕಥೆಯನ್ನು ಪಾಡುವ, ನಿನ್ನ ಮುಂದೆ ಕುಣಿಯುವ ನಮ್ಮನ್ನು ರಾಕ್ಷಸ ಹತಕನು ತನ್ನನ್ನು ಪೊಗಳುವಂತೆ ತನ್ನ ಮುಂದೆ ಕುಣಿಯುವಂತೆ ಮಾಡಿ ಪೀಡಿಸಿದನು. ಅಂತಹ ದುಷ್ಟನಿಗೆ ಆದ ಶಿಕ್ಷೆಯನ್ನು ನೋಡಿ ನಮಗೆ ಆನಂದವಾಗಿದೆ. ಕುತ್ಸಿತ ಮಾರ್ಗಾನುವರ್ತಿಗೆ ಕುಶಲವಾಗುವುದೇ?' ಎಂದರು.

ಚಾರಣರು 'ಹರೇ! ಭವಭಂಜಕವಾದ ನಿನ್ನ ಪಾದಪಂಕಜವನ್ನು ನಂಬಿ ಅಂಜದಿದ್ದ ನಮ್ಮನ್ನು ಪೀಡಿಸಿದ ಕಡುದುಷ್ಟನನ್ನು ಕೊಂದ ನಿನಗೆ ನಮಸ್ಕಾರವು' ಎಂದರು.

ಯಕ್ಷರು 'ನಿನ್ನ ಮನೋಜ್ಞಸೇವೆಯಲ್ಲಿ ತೊಡಗಿದ್ದ ನಮ್ಮನ್ನು ದಿತಿಸುತನು ತನ್ನ ಪಲ್ಲಕ್ಕಿಯನ್ನು ಹೊರಲು ಇರಿಸಿದ್ದನು. ನಿನ್ನವರಾದ ನಮ್ಮ ಕಷ್ಟವನ್ನರಿತು ಪೊರೆದ ನರಹರಿಯೇ! ತತ್ತ್ವನಿಯಾಮಕನಾದ ನಿನಗೆ ನಮಸ್ಕಾರವು' ಎಂದರು.

ಕಿಂಪುರುಷರು 'ಮಹಾಪುರುಷನು ನೀನು. ಕುಪುರುಷನಾದ ದೈತ್ಯನು ಕಿಂಪುರುಷರಾದ ನಮ್ಮನ್ನು ಛಲದಿಂದ ಪೀಡಿಸಿದನು. ಅವನನ್ನು ಕೊಂದುದು ಅವನು ಮಾಡಿದ ಸಾಧುಜನ ದ್ರೋಹವೇ ಸರಿ!' ಎಂದರು.

ವೇತಾಲರು 'ಸಭೆಗಳಲ್ಲಿ, ಸತ್ರಗಳಲ್ಲಿ ನಿನ್ನ ರಮಣೀಯ ಗುಣಗಾನವನ್ನು ಮಾಡಿ, ಗೌರವದಿಂದ ಜೀವಿಸುವ ನಮ್ಮ ಬದುಕನ್ನೇ ಹಾಳುಮಾಡಿದ ದೈತ್ಯನನ್ನು ಸಂಹರಿಸಿದೆ. ನಿನ್ನ ಸ್ಮರಣೆಯ ಸಕಲರೋಗ ನಿವಾರಕವಲ್ಲವೇ?' ಎಂದು ನುತಿಸಿದರು.

ಕಿನ್ನರರು 'ಬಿಟ್ಟಿಯ ಕೆಲಸಗಳನ್ನು ಮಾಡಿಸಿ ಕಷ್ಟಪಡುತ್ತಿದ್ದ ದುಷ್ಟನನ್ನು ಕೊಂದೆ. ಸರ್ವಪಾಪ ಪರಿಹಾರಕನಾದ ನೃಹರೇ! ನಮ್ಮನ್ನು ಭವದಿಂದಲೂ ಕಾಪಾಡು' ಎಂದು ಬೇಡಿದರು.

ವಿಷ್ಣುಪಾರ್ಷದರು 'ಸರ್ವಸುಜನರಕ್ಷಕ! ಪರಮಮಂಗಲವಾದ ನಿನ್ನ ರೂಪವು ಆಶ್ಚರ್ಯಕರವಾಗಿದೆ. ಈ ಹಿರಣ್ಯಕನು ಜಯನೆಂಬುವ ನಿನ್ನ ಸೇವಕನಲ್ಲವೇ? ಅವರನ್ನು ಸಂಹರಿಸಿ ಸಲಹಿದ ನಿನ್ನ ಕರುಣೆಗೆ ನಮೋ ನಮಃ' ಎಂದರು.

## ೯. ಪ್ರಹ್ಲಾದಕೃತ ನೃಸಿಂಹಸ್ತುತಿ

ನಾರದನು ಪುನಃ ಹೇಳಿದನು–

ಬ್ರಹ್ಮರುದ್ರಾದಿ ಸುರರು ನರಹರಿಯನ್ನು ಸ್ತುತಿಸಿ, ಜ್ಞಾನಸಾರವಾದ ಕೋಪವೇ ಆಕಾರ ಗೊಂಡಂತೆ ವಿರಾಜಿಸುವ ದೇವನನ್ನು ಸಮೀಪಿಸಲಾರದೆ ಸುಮ್ಮನೆ ನಿಂತಿದ್ದರು. ಆಗ ಬ್ರಹ್ಮಾದಿ ದೇವತೆಗಳ ಮಾತನ್ನು ಮನ್ನಿಸಿ, ಮಹಾಲಕ್ಷ್ಮಿಯು ಸಮೀಪಿಸಿ ನೋಡಿ, 'ಈ ಅದ್ಭುತವಾದ ರೂಪವನ್ನು ಹಿಂದೆ ಯಾರೂ ಕಂಡಿಲ್ಲ, ಕೇಳಿಲ್ಲ'ವೆಂದು ಸಾಮಾನ್ಯರು ತಿಳಿಯುವಂತೆ ನಟಿಸಿ, ತಾತ್ಕಾಲಿಕ ಪರಃ ಅನುಗ್ರಹ ಪಾತ್ರನಾದ ಪ್ರಹ್ಲಾದನಲ್ಲಿ ಪರಮವತ್ಸಲನಾದ ಪರಮಾತ್ಮನ ಮನಸ್ಸನ್ನರಿತವ ಳಾದುದರಿಂದ, ದೂರಸರಿದು ನಿಂತಳು. ಆಗ ಬ್ರಹ್ಮದೇವನು ಶ್ರೀಹರಿಸಂಕಲ್ಪಾನು ಸಾರವಾಗಿ, ಬಾಲನು, ವಿನಯಾನತಪಾಲನು ಆದ ಪ್ರಹ್ಲಾದನನ್ನು ಕರೆದು ಕರುಣಾರಸಾಲನಾದ ಶ್ರೀನೃಸಿಂಹನನ್ನು ಶಾಂತಮಾಡೆಂದು ಹೇಳಿ ಕಳುಹಿದನು. ತನ್ನ ತಂದೆಯಲ್ಲಿ ಕುಪಿತನಾದ ಲೋಕವಂದ್ಯನಿಗೆ ಬ್ರಹ್ಮನ ಆಜ್ಞಾಭಾರವನ್ನು ಪೊತ್ತು ಬಾಗಿದ ಶಿರದಿಂದ ವಂದಿಸಿ ಬಾಲನು ಕೈಮೋಡಿಸಿ ನಿಂತನು. ಪಾದಮೂಲದಿ ಬಾಗಿ ನಿಂತ ಬಾಲನನ್ನು ಕರುಣಾರಸವು ಉಕ್ಕೇರಿ ಬರುವ ಕಣ್ಣಿನ ಕುಡಿನೋಟದಿಂದ ಅನುಗ್ರಹಿಸಿ ದೇವನು ಅವನನ್ನು ಮೇಲಕ್ಕೆತ್ತಿ ತಲೆಯಮೇಲೆ ಕೈಯಿಟ್ಟು ಆಶೀರ್ವದಿಸಿದನು.

ಕಾಲವೆಂಬುವ ಹೆಬ್ಬಾವಿನ ಬಾಯತುತ್ತಾಗಿ ಸವೆಯುತ್ತಿರುವ ಜನರ ಭಯವನ್ನು ಪರಿಹರಿ ಸುವ ಹರಿಹಸ್ತನಿಕ್ಷೇಪವಾದಾಕ್ಷಣವೇ ಪ್ರಹ್ಲಾದನ ಸರ್ವಾನಿಷ್ಟನಿವೃತ್ತಿಯಾಯಿತು; ದೇವಿ ಜೀವರ ಈಶ ದಾಸಭಾವದ ಅಪರೋಕ್ಷವನ್ನು ಪಡೆದು ಪ್ರಹ್ಲಾದನು ಮೈನವಿರೆದ್ದು, ಕಣ್ಣೀರು ತುಂಬಿಬರುತ್ತಿರಲು ಭಕ್ತಿರಸಾರ್ದ್ರಹೃದಯನು, ಶ್ರದ್ಧಾರಸೋದಯನು ಆಗಿ ಪ್ರೇಮದಿಂದ ನಡುಗುವ ವಚನದಿಂದ, ಮನವನ್ನು ನಯನವನ್ನು ಮಾಧವನಿಗರ್ಪಿಸಿ ಇಂತು ನುತಿಸಿದನು–

ಬಲಜ್ಞಾನಾನಂದರೂಪ ಶ್ರೀಹರಿಯು ಸರ್ವೋತ್ತಮತ್ವವನ್ನರಿತು, ಅವನನ್ನು ತಮ್ಮ ವಾಕ್ಪ್ರವಾಹದಿಂದ ಪೊಗಳುವ ಬ್ರಹ್ಮಾದಿ ದೇವತೆಗಳು, ಮುನಿಸಿದ್ಧ ಮುಖ್ಯರು ಕೂಡ ಇಂದಿನ ವರೆಗೂ ಅನಂತನ ಗುಣವರ್ಣನವನ್ನು ಮುಗಿಸಲಾರದೆ ಭಕ್ತಿಮುಗ್ಧರಾಗಿರುವಾಗ ಉಗ್ರ ದೈತ್ಯಕುಲದಲ್ಲಿ ಪುಟ್ಟಿದ ನನ್ನಂತಹ ಪಾಮರನು ಸ್ವಾಮಿಯನ್ನೆಂತು ವರ್ಣಿಸಲು ಶಕ್ತನಾಗುವೆನು? ಆದರೂ ನನ್ನಿಂದ ನುತಿಸಿಕೊಳ್ಳಬೇಕೆಂದು ಮತಿಮಾಡಿ ಕೂತಿರುವ ಮಹಾಪ್ರಭುವಿನ ಕರುಣೆಗೇನೆಂಬೆ? ಅವನು ಭಕ್ತಿಯಿಲ್ಲದ ಧನ, ಕುಲ, ರೂಪ, ತಪಸ್ಸು, ವೇದಾಧ್ಯಯನ, ಕಾಂತಿ, ಸಹನ, ಬಲ, ಪರಾಕ್ರಮ, ಬುದ್ಧಿ, ಮೊದಲಾದ ಗುಣಗಳಿಗೆ ಒಲಿಯುವವನಲ್ಲ! ಭಕ್ತಿಯಿಂದಲೇ ಅವನು ಪ್ರಸನ್ನನಾಗುವನೆನ್ನಲು ಗಜರಾಜನು ದೃಷ್ಟಾಂತವೇ ಸಾಕು! ಜ್ಞಾನ, ಸತ್ಯ, ದಮ, ಶಮ, ಸ್ತೋತ್ರಮರಲ್ಲಿ ಮಾತ್ಸರ್ಯರಾಹಿತ್ಯ, ನಿಷಿದ್ಧಕಾರ್ಯಕರಣದಿ ಲಜ್ಜೆ, ದುಃಖಸಹನೆ, ಅಸೂಯಾವರ್ಜನ, ದಾನ, ಯಜ್ಞ, ತಪಸ್ಸು, ವೇದಾಧ್ಯಯನವೆಂಬ ಹನ್ನೆರಡು ಗುಣಗಳಿದ್ದೂ ಒಂದು ವೇಳೆ ದ್ವಾದಶಗುಣ ಮೂಲಕಾರಣವಾದ ಭಕ್ತಿಯಿಲ್ಲದ ಬ್ರಾಹ್ಮಣನು ಅರವಿಂದನಾಭ ಪಾದಾರವಿಂದ ವಿಮುಖನಾದನೆಂದರೆ ಅಂತಹ ವಿಪ್ರನಕಿಂತಲೂ ದ್ವಾದಶ ಬ್ರಾಹ್ಮಣ ಗುಣರಹಿತನಾದರೂ ಭಕ್ತಿಯಿಂದ ಹರಿಯಲ್ಲಿ ತನ್ನ ತನು ಮನ ಧನ ಭವನ ಬಂಧುಜನರೇ ಮೊದಲಾದ ಸರ್ವಸಮರ್ಪಣವನ್ನು ಮಾಡಿದ ಚಂಡಾಲನೇ ಲೇಸು. ಆತ್ಮ

ಸಮರ್ಪಣವಿಲ್ಲದ ಭಕ್ತಿಯು ಸಂಪೂರ್ಣವೆನಿಸಲಾರದು. ಆತ್ಮ ಸಮರ್ಪಣ ರೂಪ ಬಿಂಬೋಪಾಸಕನು ತಾನು ನಡೆದ ದೇಶವನ್ನು ನೋಡಿ ನುಡಿದ ಜನರನ್ನು ಪವಿತ್ರಗೊಳಿಸಿದನು. ದುರ್ಯೋಧನನಂತೆ ದುರಭಿಮಾನಿಯೂ ಕುಲ ಧನ ರೂಪಾದಿ ಸಮೇತನಾದರೂ ಶ್ರೀಹರಿಯು ಅವನ ಪೂಜೆಯನ್ನು ಸ್ವೀಕರಿಸುವುದಿಲ್ಲ. ಆನಂದಾದಿ ಸಕಲ ಕಲ್ಯಾಣಗುಣಪೂರ್ಣನಾದ ಶ್ರೀಹರಿಗೆ ಇನ್ನೊಬ್ಬರ ಪೂಜೆಯಿಂದ ಆಗುವ ಲಾಭವಿಲ್ಲ. ಆದರೂ ತನ್ನ ಭಕ್ತರನ್ನು ಪೊರೆವೆನೆಂಬ ತನ್ನ ಮಾತಿಗೆ ಸಿಲುಕಿ, ಕರುಣಾಶೀಲನಾದ ಲಕ್ಷ್ಮೀಲೋಲನು ಅವರು ಮಾಡಿದ ಪೂಜೆಯನ್ನು ಅವರ ಹಿತಕ್ಕಾಗಿ ಸ್ವೀಕರಿಸುವನು. ಅವಿದ್ಯಾಮಗ್ನರಾದ ದುರ್ಜನರು ಮಾಡುವ ಪೂಜೆಯನ್ನು ಕಣ್ಣೆತ್ತಿ ನೋಡದೇ ಕಡೆಗಣಿಸುವನು; ಅವರಿಗೆ ಪುಣ್ಯಸಂತತಿಯು ದೊರಕದಂತೆ ಮಾಡಿ ಕೊನೆಗೆ ತಮಸ್ಸನ್ನೇ ಅವರ ಯೋಗ್ಯತೆಯರಿತು ಕೊಡುವನು. ದರ್ಪಣದಲ್ಲಿ ಕಾಣುವ ಪ್ರತಿಮುಖವು ತಾನಾಗಿ ಮುಖದ ಸರ್ವಾಲಂಕಾರಸಹಿತವಾಗಿ ತೋರುವಂತೆ ಬಿಂಬನಾಗಿ ಶ್ರೀಶನಿಗೆ ಮಾಡಿದ ನಿರ್ದೋಷ ಜ್ಞಾನಾನಂದಾದಿ ಗುಣಧ್ಯಾನವೆಂಬ ಪೂಜೆಯ ಫಲವು ಪ್ರತಿಬಿಂಬನಾದ ಜೀವನಿಗೆ ಅಪ್ರಯತ್ನವಾಗಿ ಲಭಿಸಿ, ಅವನೂ ನಿರ್ದೋಷನಾಗಿ, ಸ್ವಯೋಗ್ಯ ಜ್ಞಾನಾನಂದಗಳನ್ನು ಶ್ರೀಹರಿಕರುಣೆಯಿಂದ ಪಡೆಯುವನು. 'ಈ ನೃಸಿಂಹನು ಜೀವನಂತೆ ದೇಹದಿಂದ ಪುಟ್ಟಿ ಬಂದವನಲ್ಲ. ಅವನಿಗೆ ಜನನಮರಣಗಳಿಲ್ಲ'ವೆಂದು ತಿಳಿದು ಪೂಜಿಸುವ ಭಕ್ತನನ್ನು ಶ್ರೀರಮಣನು ಜನನಮರಣ ರೂಪ ಸಂಸಾರ ಕರಾಳ ವಾಹಿನಿಯಿಂದ ಮೇಲಕ್ಕೆತ್ತಿ ಮೋಕ್ಷವನ್ನೇ ಕೊಟ್ಟು ಸಲಹುವನು. ಪೂಜೆಯಂತೆ ಫಲವನ್ನು ಕೊಡುವ ಶ್ರೀಹರಿಗೆ ಪಕ್ಷಪಾತಾದಿ ದೋಷವೆಲ್ಲಿಯದು? ಆದ್ದರಿಂದ ಭಕ್ತಿಯೇ ತಾರಕವೆಂದು ನಂಬಿ ನಾನು ಕೈಲಾದಷ್ಟು ಮಾತ್ರ ನುತಿಸಬಲ್ಲೆನಲ್ಲದೆ ಲಕುಮಿಯ ನಲ್ಲನ ಅನಂತ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಬಲ್ಲೆನೇ? ಪ್ರಕೃತಿ ಬಂಧದಿ ಸಿಲುಕಿ ಜನನ ಮರಣರೂಪ ಸಂಸಾರವಾಹಿನಿಯಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಮನುಜನಿಗೆ ಶ್ರೀಹರಿಕೀರ್ತನೆಯ ಹೊರತನ್ಯಪಾವನತರ ತರಣೋಪಾಯವಿಲ್ಲ. ಬ್ರಹ್ಮಾದಿ ದೇವತೆಗಳೂ ಭಕ್ತರೇ! ನಾವೂ ಭಕ್ತರೇ! ಆದರೂ ಪ್ರಧಾನಭಕ್ತರಾದ ಬ್ರಹ್ಮಾದಿಗಳಿಗೆ ಅನಂತ ಕಲ್ಯಾಣಗುಣನಿಧಿಯಾದ ನಿನ್ನ ಅವತಾರವು ಲೋಕದಲ್ಲಿ ಸುಜನರ ರಕ್ಷಣೆಗೂ, ಸುಖಪ್ರಾಪ್ತಿಗೂ, ಸಂಪತ್ತಿಗೂ ಕಾರಣವೆಂಬ ನಿಶ್ಚಯಜ್ಞಾನವಿರುವುದರಿಂದ ನಮ್ಮಂತಹವರಿಗೆ ಶ್ರೀನೃಸಿಂಹರೂಪಾವಲೋಕನದಿಂದ ಅವರಿಗೆ ಭಯೋದ್ವೇಗಗಳಿಲ್ಲ.

ಭಗವನ್! ನಿನ್ನ ರುಚಿರಾವತಾರಗಳೆಲ್ಲವೂ ಲೀಲಾವಿಲಾಸ ಮಧುರಗಳಾಗಿವೆ. ಶ್ರೀನೃಸಿಂಹ! ಸಿಟ್ಟನ್ನು ಬಿಡು! ಅಸುರನು ಹತನಾದನು. ಸರ್ಪ ವೃಶ್ಚಿಕಾದಿಗಳು ಸತ್ತರೆ ಅಹಿಂಸಾಪರನಾದ ಸಾಧುವು ಕೂಡ ಸಂತೋಷಪಡುವುದುಂಟು. ಅಂದಮೇಲೆ ಸರ್ವಲೋಕೋಪದ್ರವಕರನಾದ ಅಸುರನ ಸಾವಿನಿಂದ ಸಂತಸಿಸದೆ ಇರುವರುಂಟೇ? ಎಲ್ಲ ಲೋಕದ ಜನರು ನಿನ್ನ ದರ್ಶನದಿಂದಲು, ಅಸುರ ಮರ್ಷಣದಿಂದಲೂ ಹರ್ಷಿತರಾಗಿರುವರು. ಹುಬ್ಬುಗಂಟೇಕೆ? ಕೋರೆಯನ್ನೇಕೆ ಮಸೆಯುವೆ? ಜ್ಞಾನಾನಂದನಿಧಿಯಾದ ನಿನಗೆ ಕೋಪವೆಲ್ಲಿಯದು? ಪ್ರಸನ್ನಸುಂದರನಾಗು! ದುರಿತನಿವಾರಣವು, ಮೋಕ್ಷಾದಿ ಸುಖ ಕಾರಣವು ಆದ ನಿನ್ನ ಮಂಗಲರೂಪವನ್ನು ಹೃದಯದಲ್ಲಿಟ್ಟು, ಬಿಡದೆ ನೆನೆಯುತ್ತ, ಇಲ್ಲಿ ನೆರೆದಿರುವ ಹರಿದಾಸರು ತಮ್ಮ ತಮ್ಮ ಮನೆಗಳಿಗೆ ತೆರಳಲಿ.

ಅಜಿತ! ನಿನ್ನ ಭಯಾನಕ ಮುಖವನ್ನು ಅಗ್ನಿಕಣಗಳನ್ನು ಕಾರುವ ಕಣ್ಣುಗಳನ್ನು, ಹುಬ್ಬಿನ ಗಂಟನ್ನು, ಕೋರೆಯ ಕೊನೆಯನ್ನು, ಕರುಳುಮಾಲೆಯನ್ನು, ರಕ್ತಸಿಕ್ತ ಕೇಸರ ಜಾಲವನ್ನು, ನಿಗಿರಿದ ಕಿವಿಗಳನ್ನು, ದಿಗ್ಗಜಗಳನ್ನು ಹೆದರಿಸುವ ಗರ್ಜನವನ್ನು, ಶತ್ರುವನ್ನು ಸೀಳಿದ ಉಗುರುಗಳನ್ನು ನೋಡಿ ನಾನು ಹೆದರುವುದಿಲ್ಲ. ಆದರೆ ದಯಾನಿಧೇ! ದುಸ್ಸಹ ಸಂಸಾರ ಚಕ್ರಮಧ್ಯದಲ್ಲಿ ಸಿಕ್ಕಿಬಿದ್ದು ನರಳುತ್ತಿರುವ ನಾನು ಭವಜನಿತ ರಾಗದ್ವೇಷಾದಿ ಬಂಧನವನ್ನು ಕಂಡು ಹೆದರುತ್ತಿರುವೆನೆ. ಭವಭಂಜಕವಾದ ನಿನ್ನ ಪಾದಕಂಜಿ ಭಂಜನೆಯು ನನಗೆಂತು ದೊರೆಯುವುದು? ಉತ್ತಮಶ್ಲೋಕ ಶಿಖಾಮಣೇ! ಕರ್ಮಪಾಶವನ್ನು ನಾಶಪಡಿಸು! ನೀನೇ ನನ್ನ ಶರಣ್ಯದೇವನೆನಿಸು! ಸಕಲ ಯೋನಿಗಳಲ್ಲಿ ಪುಟ್ಟಿ ನೋಡಿದರೂ ಪ್ರಿಯವಿಯೋಗವು, ಅಪ್ರಿಯ ಸಂಯೋಗವು ಆಗುತ್ತಿದೆ. ಪ್ರಿಯವು ಬರಲಿಲ್ಲ; ಅಪ್ರಿಯವು ಬಿಡಲಿಲ್ಲ. ಜನ್ಮಶೋಕಗಳೆಂಬುವ ಬೇಗೆಯು ಬೇಯಿಸಿ ನೋಯಿಸುತ್ತಿರುವಾಗ, ದುಃಖದ ಔಷಧವೇನೆಂದು ಅಲೆದು, ಮತ್ತೆ ದುಃಖವನ್ನೇ ಪೊಂದುತ್ತಿರುವೆನು. ನಿಜವಾದ ದುಃಖ ಪರಿಹಾರೌಷಧವು ನಿನ್ನ ದಾಸ್ಯವಾಗಿದೆ ಎಂದರಿಯದೆ ಕಷ್ಟಪಡುವ ನನ್ನನ್ನು ದಾಸರದಾಸನೆನಿಸಿ ಉದ್ಧರಿಸು.

ನಿನ್ನಯ ಪಾದಕಮಲವನ್ನಾಶ್ರಯಿಸಿದ ಪರಮಹಂಸರ ಸೇವೆಯಿಂದ ದೊರೆಯುವ, ವಿರಿಂಚಾದಿ ದೇವತೆಗಳು ಪಾಡುವ ಪರದೇವತೆಯಾದ ನಿನ್ನ ಪ್ರಿಯಕರಲೀಲಾ ಕಥೆಗಳನ್ನು ಅವರಿಂದ ಅನುಶಿಕ್ಷಿತನಾಗಿ ನಾನೂ ಪಾಡಿ ಪೊಗಳಿ ಸಂಸಾರದಿಂದ ಮುಕ್ತನಾಗುವೆನು, ಇದಕ್ಕೆ ಸಂಶಯವಿಲ್ಲ. ಬಾಲನಿಗೆ ಜನನೀ ಜನಕರು, ರೋಗಾರ್ತನಿಗೆ ಔಷಧವು, ಸಮುದ್ರಮಗ್ನನಿಗೆ ನಾವೆಯು, ನಿದಾಘತಾಪಿತನಿಗೆ ಜಲವು, ಇಷ್ಟಸಾಧನವಾಗಿರುವಂತೆ ನಿನ್ನ ಪಾದಾರವಿಂದ ಭಜಕರಿಗೆ ನೀನೇ ಸಕಲಶ್ರೇಯೋದಾನದಿಂದ ಶರಣ್ಯನಾಗಿರುವೆ. ಕುಲಾಲನು ಭೂಮಾದ್ಯಧಿಷ್ಠಾನದಲ್ಲಿ ಮೃದಾದ್ಯುಪಾದಾನಕಾರಣಗಳಿಂದ, ತತ್ತದ ದೃಷ್ಟಾದಿ ಸಹಾಯದಿಂದ ಚಕ್ರ ಸಲಿಲಾದ್ಯುಪಕರಣಗಳನ್ನು ಪಡೆದು, ಜಲಾದಿಗಳನ್ನು ತರಲು ಉಪಯೋಗಪಡುವಂತೆ ಸರಿಯಾದ ವಿಧಿಯಿಂದ ಘಟಾದಿಗಳನ್ನು ಮಾಡುವಂತೆ ಬ್ರಹ್ಮಾದಿಗಳು ಸಾಮಾನ್ಯ ವಿಶೇಷ ಸೃಷ್ಟಿಯನ್ನು ಮಾಡುವರು. ಅವರಿಗೆ ನೀನೇ ಪ್ರೇರಕನು ಹಾಗೂ ಪ್ರಭುವೂ ಆಗಿರುವೆ. ಸರ್ವಲಕ್ಷಣನಾದ ನಿನ್ನ ಅಧೀನ ವಾಗಿದೆ. ಸಕಲ ಕಾರ್ಯಕಾರಣ ಪ್ರಪಂಚವು. ಪ್ರಕೃತಿ ನಿರ್ಮಿತವಾದ ಮನವು ನಾನಾ ವಿಕಾರ ಕೋಶವು. ಅನೇಕ ಜನ್ಮಕರ್ಮವಾಸನಾಮಯವು ಆಗಿದೆ; ರಜವೇ ಮೊದಲಾದ ಗುಣಗಳನ್ನನು ಸರಿಸಿ, ಅದೃಷ್ಟಕ್ಕೆ ತಕ್ಕಂತೆ ಕರ್ಮಫಲವನ್ನು ಉಣಿಸುತ್ತದೆ. ಹನ್ನೊಂದು ಇಂದ್ರಿಯಗಳು ಐದು ಪ್ರಾಣಗಳೆಂಬುವ ಷೋಡಷ ಕಲಾಭರಿತವಾದ ಲಿಂಗಶರೀರವು ಜೀವನನ್ನು ಸಂಸಾರಚಕ್ರ ಮಧ್ಯದಲ್ಲಿ ಕೆಡಹಿ ಪೀಡಿಸುತ್ತಿದೆ. ನಿನ್ನ ಅನುಗ್ರಹವಿಲ್ಲದೆ ಜೀವನು ಆ ಚಕ್ರವ್ಯೂಹದಿಂದ ಬಿಡುಗಡೆಯನ್ನು ಹೊಂದಲಾಗುವುದೇ? ಅತ್ಯಂತ ಮಹಿಮಾನ್ವಿತನಾದ ನಿನಗೆ ನಿನ್ನಿಂದ ಭಿನ್ನವಾದ ಪ್ರಾಕೃತಶರೀರವಿಲ್ಲ. ಶರೀರದಿಂದ ಬರುವ ಜನನ ಮರಣ ಚಿಂತಾಲೇಪಗಳೂ ಇಲ್ಲ. ಸ್ವರೂಪ ಭೂತ ಕಲ್ಯಾಣಗುಣಧಾಮನಾದ ನಿನ್ನನ್ನು ನಂಬಿದ ಶರಣಾಗತನನ್ನು ಸಂಸಾರಚಕ್ರದಲ್ಲಿ ದುಃಖ ಪಡುವುದನ್ನು ನೋಡುತ್ತಾ ಉದ್ಧರಿಸದಿರುವುದು ನ್ಯಾಯವೇ? ಪ್ರಭೋ! ಲೋಕದಲ್ಲಿ ವೈಭವೋ ಪೇತರನ್ನು ಅವರು ಮೀರಿಸುವ ಇಂದ್ರಾದಿ ಸುರರನ್ನು ಅವರನ್ನು ಭ್ರೂಭಂಗಮಾತ್ರದಿಂದ ಗೆದ್ದ ನಮ್ಮ ಜನಕನನ್ನು ನೋಡಿರುವೆನು. ಒಂದೇ ಕ್ಷಣದಲ್ಲಿ ಅಂತಹ ವೀರರನ್ನು ಕೀಟದಂತೆ ಸವರಿ ಕೊಂದ ನಿನ್ನನ್ನು ಕಂಡು, ಅವರ

ವೈಭವಾದಿಗಳೆಲ್ಲವೂ ನಿನ್ನ ಅಧೀನವೆಂದೂ ಮನಗಂಡಿರುವೆನು. ಶರೀರಧಾರಿಗಳು ಬೇಡುವ ಇಂದ್ರಿಯ ಸುಖಗಳು, ಸಂಪತ್ತು, ಆಯುಸ್ಸು, ಕಾಂತಿ, ವೀರ್ಯ ಮುಂತಾದುವೆಲ್ಲವೂ ನಶ್ವರವಾಗಿದೆ. ಅಬ್ರಹ್ಮಸ್ತಂಬಪರ್ಯಂತವಾದುದೆಲ್ಲವೂ ಅಸಾರವೂ ಅನಿತ್ಯವೂ ಎಂದು ತಿಳಿದು ನಾನು ವಿಷಯಸುಖ ಸಂಗವನ್ನು ಬಿಟ್ಟು ನಿನಗೆ ಶರಣಾ ಗತನಾಗಿ ಬಂದಿರುವೆನು. ಉದರಂಭರದಿಂದ ದೂರಮಾಡಿ ನನ್ನನ್ನು ನಿನ್ನ ಭಕ್ತರ ಸನ್ನಿಧಿಯಲ್ಲಿ ಸೇರಿಸು. ಕೃಷ್ಣಾ!

ಮೃಗತೃಷ್ಣಾರೂಪನಾದ ವಿಷಯಗಳೆಲ್ಲಿ? ಅಶೇಷ ರೋಗನಿದಾನವಾದ ಶರೀರವೆಲ್ಲಿ? ಆದರೂ ಕಾಮಾಗ್ನಿಯನ್ನು ಸುಖಲೇಶಜಲಸೀಕರಗಳಿಂದ ಆರಿಸಲು ಪ್ರಯತ್ನಿಸುತ್ತಿರುವ ಮೂಢನಿಗೆ ವೈರಾಗ್ಯವು ಹುಟ್ಟುವುದಿಲ್ಲ. ನಶ್ವರವಾದ ವಿಷಯಗಳು ನಶ್ವರ ಶರೀರವೆಂದು ಉಪದೇಶಿಸುವ ಪಂಡಿತನೆನಿಸಿದವನಿಗೂ ವೈರಾಗ್ಯವು ಪುಟ್ಟದಿರುವುದು; ಅಂದ ಮೇಲೆ ಇನ್ನು ಮೂಢರ ಪಾಡೇನು?

ಅಜ್ಞಾನತಮಃಪ್ರಚುರವಾದ ದೈತ್ಯಕುಲದಲ್ಲಿ ಜನಿಸಿದ ಪಾಮರನಾದ ನಾನೆಲ್ಲಿ! ಸರ್ವೋತ್ತಮನಾದ ನಿನ್ನ ಕರುಣೆ ಎಲ್ಲಿ? ನಿರಂತರ ಸೇವೆಯಿಂದ ಬ್ರಹ್ಮಾದಿಗಳೂ ಹಾಗೂ ರಮಾದೇವಿಯು ಪಡೆದ ಮಹಾಭಾಗದೇಯವೆನಿಸಿದ ಪದ್ಮಕರನಿಧಾನವನ್ನು ಪಡೆದು ನನ್ನ ಶಿರವು ನಿಜವಾಗಿ ಉತ್ತಮಾಂಗವೆನಿಸಿದೆ. ಇಂತಹ ಪರಮಾನುಗ್ರಹವನ್ನು ಒಂದು ಕ್ಷಣವಾದರೂ ನಿನ್ನ ಭಕ್ತರ ದಾಸನಾದ ನನ್ನಲ್ಲಿ ಮಾಡಿದ ನಿನ್ನ ಲೀಲೆಯು ವಿಚಿತ್ರವಾಗಿದೆ. ದೇವಜಾತಿ ಅಸುರಜಾತಿ ಎಂಬುವ ವೈಷಮ್ಯವು ನಿನಗಿಲ್ಲ. ಸಕಲವ ಜೀವಜಾತ ಹೃದಯಾಧಿನೇತನಾದ ನಿನಗೆ ನೈರ್ಘುಣ್ಯವೂ ಇಲ್ಲ. ನಿನ್ನ ಪ್ರಸಾದವು ಕಲ್ಪವೃಕ್ಷವು ಸೇವಾನುರೂಪವಾಗಿ ಕೊಡುವ ಫಲದಂತೆ ಯೋಗ್ಯತೆಯನ್ನು ಸೇವೆಯನ್ನು ಅನುಸರಿಸಿ ತತ್ಸಮವಾಗಿಯೇ ಇರುವುದು.

ಮೃತಿಜನನರೂಪವಾದ ಸಂಸಾರಗರ್ತದಲ್ಲಿ ಬಿದ್ದು, ವಿಷಯಸಂಗಪಾಶಬದ್ಧನೂ ಆಗಿ, ಕಾಲಾಹಿಯ ಬಾಯ ತುತ್ತಾಗುತ್ತಿರುವ ನನ್ನ ಆರ್ತಿಯನ್ನು ಕಂಡು ಮರುಗಿ, ನಿನ್ನವನಾದ ದೇವರ್ಷಿಯನ್ನು ಕಳುಹಿ ಉದ್ಧರಿಸಿ ಕಾಪಾಡಿದ ಅನಾಥನಾಥನಲ್ಲವೇ ನೀನು? ಇಂತಹ ನಿನ್ನ ಸೇವೆಯನ್ನು, ನಿನ್ನ ಭೃತ್ಯರ ಸೇವೆಯನ್ನು ನಾನೆಂತು ಬಿಡಲಿ? 'ನನ್ನಿಂದ ಅನ್ಯನಾದ ಜಗದೀಶನೆಲ್ಲಿರುವನೋ? ನಿನ್ನಲ್ಲಿ ನಾನು ಸಂಹರಿಸುವೆನು; ಆ ನಿನ್ನ ದೊರೆ ಇದ್ದರೆ ನಿನ್ನನ್ನು ಕಾಪಾಡಲಿ' ಎಂದು ಗರ್ಜಿಸುತ್ತ ಖಡ್ಗವನ್ನು ಕೈಯಲ್ಲಿ ಪಿಡಿದು ನನ್ನ ಮೇಲೇರಿ ಬಂದ ನಮ್ಮ ತಂದೆಯನ್ನು ಕೊಂದೆ, ಮತ್ತೂ ನನ್ನನ್ನೂ ಉಳಿಸಿದೆ; ಇದೆಲ್ಲವೂ ನಿನ್ನ ಭಕ್ತನಾದ ನಾರದನ ವಾಕ್ಯವನ್ನು ಸತ್ಯವನ್ನಾಗಿಸಲು ನೀನು ತೋರಿದ ಲೀಲೆಯಲ್ಲವೇ;

ಈ ಜಗತ್ತಿಗೆ ಪೂರ್ವದಲ್ಲಿಯೂ ಜಗತ್ಪ್ರಲಯವಾದ ಮೇಲೂ ಶಶ್ವದೇಕಪ್ರಕಾರನಾಗಿರುವ ಮಹಾಪ್ರಭುವು ನೀನು. ಯೋಗನಿದ್ರೆಯಿಂದೆಚ್ಚೆತ್ತು ಸ್ವಸಾಮರ್ಥ್ಯದಿಂದ ಲಕ್ಷ್ಮೀದೇವಿಯಿಂದ ಕ್ರೀಡಿಸಿ ತ್ರಿಗುಣಾತ್ಮಕವಾದ ಜಗವನ್ನು ಸೃಜಿಸಿ ಅದರಲ್ಲಿ ಸರ್ವತ್ರ ವ್ಯಾಪ್ತನಾಗಿದ್ದೂ ತದ್ಭಿನ್ನನು ತತ್‌ಕೃತ ವಿಕಾರರಹಿತನಾಗಿರುವೆ. ಲೋಕವಿಲಕ್ಷಣನಾದ ನೀನು ಜಡಜೀವರಲ್ಲಿ ನಿಯಾಮಕನಾಗಿ ಕಾಣದೇ ಲೀನವಾಗಿರುವುದರಿಂದ 'ಜೀವನೇ ಬ್ರಹ್ಮನು, ಜಗವೇ ಬ್ರಹ್ಮನು' ಎಂದು ಅಜ್ಞಾನಿಗಳು ತಿಳಿಯಲು ಕಾರಣವಾಗಿದೆ. ನಿನ್ನಿಂದ ಜೀವಿಸಿ ನಿನ್ನಧೀನವಾಗಿರುವ ಜೀವನಿಗೆ ಸ್ವಾತಂತ್ರ್ಯವಿಲ್ಲ; ಅವನಲ್ಲಿ ಸ್ವತಂತ್ರನಾಗಿ ನೆಲಸಿದ ನೀನೇ ಜೀವನೆನಿಸಿ ಜೀವನಪ್ರದನಾಗಿರುವೆ. ವೃಕ್ಷವು ವೃಕ್ಷದಾಹವು ಕಾಲಾಧೀನವಾಗಿದೆ; ಕಾಲವು ನಿನ್ನಧೀನವಾಗಿದೆ ಎಂದೇ ಕಾಲನೆಂಬುವರಲ್ಲವೇ?

ನೀನು ಪ್ರಳಯಜಲಧಿಯಲ್ಲಿ ಶೇಷಶಯನನಾಗಿ, ಪ್ರಕೃತಿಯ ತ್ರಿಗುಣಾತ್ಮಕವಾದ ಸೃಷ್ಟ್ಯಾದಿಗಳನ್ನೂ ಬಿಟ್ಟು ಜಾಗ್ರತ್‌ಸ್ವಪ್ನಸುಷುಪ್ತ್ಯಾವಸ್ಥಾತ್ರಯ ಪ್ರೇರಕನಾಗದೆ ತುರ್ಯನಾಗಿ, ಸ್ವಪ್ನರೂಪ ಸುಖಾನುಭವದಿಂದ ಪೂರ್ಣನಾಗಿ, ಸಕಲ ಜೀವ ಜಡಾತ್ಮಕ ಜಗವನ್ನು ಪೊಟ್ಟೆಯಲ್ಲಿಟ್ಟು ಯೋಗನಿದ್ರಾಮುದ್ರಿತ ನಯನನಾಗಿದ್ದೆ. ಅನಂತರದಲ್ಲಿ ಸೃಷ್ಟಿಕಾಲವು ಬರಲು ಎಚ್ಚೆತ್ತು ರಮೆಯಿಂದ ಕ್ರೀಡಿಸಿ ವಟಬೀಜದಂತೆ ಸೂಕ್ಷ್ಮವಾದ ಜಗವನ್ನು ಕಮಲಾಕಾರವಾಗಿ ಹೊರಗೆಡಹಿದೆ. ಅಲ್ಲಿ ಜನಿಸಿದ ವಿರಿಂಚನು ತನ್ನಲ್ಲಿ ಪುರುಷರೂಪದಿಂದ ಅಂತರ್ಯಾಮಿಯಾದ ನಿನ್ನನ್ನು ಕಾಣಲಾರದೆ ನೂರು ವರ್ಷಗಳ ಕಾಲ ನೀರಲ್ಲಿ ಹುಡುಕಿದನು. ಬೀಜದಲ್ಲಿರುವ ವೃಕ್ಷಾಭಿಮಾನಿ ದೇವತೆಯು ಅಂಕುರವಾದ ಮೇಲೆ ಅಂಕುರದಲ್ಲಿದ್ದು ಬೆಳೆಸುತ್ತ ಕಾಣದಿರುವಂತೆ ಶ್ರೀಹರಿಯು ಕಾರಣವಾದ ಪ್ರಕೃತಿಯಲ್ಲಿದ್ದು ಸೃಷ್ಟಿಕಾಲದಲ್ಲಿ ಕಾರ್ಯವಾದ ಬ್ರಹ್ಮಾಂಡವನ್ನು ಪೊಕ್ಕು ಕಾಣಬರದಿರುವನು; ಆದ್ದರಿಂದ ನಿನ್ನ ಅನುಗ್ರಹದಿಂದ ನಿನ್ನ ದರ್ಶನವಾಗುವುದೆಂದರಿತು ಕಮಲಾಸನನು 'ತಪ, ತಪ' ಎಂದು ಆಜ್ಞಾಪಿಸಿದ ನಿನ್ನ ವಚನವನ್ನು ಶಿರಸಾವಹಿಸಿ, ತಪವಂಗೈದು ಪರಿಶುದ್ಧಮನಸ್ಕನಾದನು. ಆಗ ಯೋಗಿಯು ಭೂಮಿಯಲ್ಲಡಗಿರುವ ಗಂಧದೇವಗುಣವನ್ನಂತೆ, ಸೂಕ್ಷ್ಮ ಭೂತೇಂದ್ರಿಯ ಮನೋರೂಪ ಜಗತ್ತಿನಲ್ಲಿ ವ್ಯಾಪ್ತನಾಗಿ ನಿಂತ ನಿನ್ನನ್ನು ನೋಡಿ ಹೃದಯಪದ್ಮದಲ್ಲಿಟ್ಟು ಪೂಜಿಸಿದನು. ಅನಂತ ವದನ ಚರಣ ಕರ ಶಿರಃಕರ್ಣಾದಿ ದಿವ್ಯಾಂಗನು, ಆನಂದಾದಿ ಕಲ್ಯಾಣಗುಣನು ಸರ್ವಾಭರಣಭೂಷಿತನು, ಮಹಾಪುರುಷನು ಆದ ನಿನ್ನ ದರ್ಶನದಿಂದ ಮಹಾಭಗವದ್ಭಕ್ತನಾದ ವಿರಿಂಚನು ಮಹಾನಂದವನ್ನು ಪೊಂದಿದನು.

ಆಗ ನೀನು ಹಯಗ್ರೀವರೂಪದಿಂದ ವೇದದ್ರೋಹಿಗಳಾದ ಮಧು ಕೈಟಭರನ್ನು ವಧಿಸಿ, ವೇದರಾಶಿಯನ್ನು ವಿರಿಂಚನಿಗೆ ತಂದುಕೊಟ್ಟೆ. ಸ್ಮರಣೆಮಾತ್ರದಿಂದ ಜ್ಞಾನಪ್ರದವಾದ ಆ ನಿನ್ನ ಪ್ರಿಯತಮರೂಪವು ನಮಗೆ ರಕ್ಷಕವಾಗಲಿ! ನರ ದೇವ ಋಷಿ ಮೀನಾದಿ ರೂಪಗಳಿಂದ ಅವತರಿಸಿ ಧರ್ಮವನ್ನು ರಕ್ಷಿಸಲು ಲೋಕಕಂಟಕ ದೈತ್ಯರನ್ನು ಸಂಹರಿಸುವೆ. ಕಲಿಯುಗದಿ ನಿನ್ನ ಅವತಾರವಿಲ್ಲವಾದುದರಿಂದ ನಿನ್ನನ್ನು ತ್ರಿಯುಗನೆಂಬುವರು.

ವಿಕುಂಠನಾಥ! ಮಾಡಿದ ಪಾಪದಿಂದ ಕೆಟ್ಟು ಕಾಮದುಷ್ಟನಾಗಿ, ಹರ್ಷಶೋಕ ಭಯಗಳಿಂದ ವ್ಯಾಕುಲವಾಗಿ, ದುಷ್ಕಾರ್ಯವನ್ನು ಮಾಡಲು ಓಡುವ ನನ್ನ ಮನಸ್ಸಿಗೆ ವಶನಾಗಿ ದೀನನಾದೆನಗೆ ನಿನ್ನ ಜ್ಞಾನವಾಗುವುದಾದರೂ ಹೇಗೆ ತಿಳಿಯದಾಗಿದೆ. ನಿನ್ನ ನಂಬಿ ಬಂದಿರುವೆನೆಂದಿಷ್ಟು ಮಾತ್ರ ತಿಳಿದು ಕಾಪಾಡು.

ಅಚ್ಯುತ! ಹತ್ತು ಜನ ಹೆಂಡಿರು ತಮಗೆ ವಶನಾದ ಗಂಡನನ್ನೆಳೆದು ಹಿಂಸಿಸುವಂತೆ ಈ ದೇಹದಲ್ಲಿರುವ ಜೀವನನ್ನು ಇಂದ್ರಿಯ ದಶಕವು ಸೇರಿ ಹೀರುತ್ತಿದೆ. ನಾಲಿಗೆ ರುಚಿಯನ್ನು ಕಂಡು ಮರಗಿ ಸಾಕೆನ್ನದೆ ತಿನ್ನುತ್ತಿದೆ. ಶಿಶ್ನವಿನ್ನೊಂದೆಡೆ ಲಗ್ನವಾಗಿದೆ. ಶ್ರವಣ ತ್ವಕ್ ಜಠರ ನಾಸಿಕೆಗಳು ಶಬ್ದಸ್ಪರ್ಶ ಭೋಜನ ಗಂಧಗಳನ್ನು ಬಯಸಿ ಹರಿದಾಡುತ್ತಿವೆ. ಇಂತು ಮಾಡಬಾರದ ಕುಕರ್ಮವನ್ನು ಮಾಡಿ ಸಂಸಾರವೈತರಣಿಯಲ್ಲಿ ಬಿದ್ದು ಜನನ ಮರಣ ರೋಗ ಭಯದಿಂದ ನೊಂದು, ಪರಸ್ಪರವಾಗಿ ಕಡಿದಾಡುವ ಮೂಢರಾದ ನಮ್ಮನ್ನು ನೀನಾಗಿ ಕರುಣೆಯಿಂದ ಪಾರುಗಣಿಸು.

ಅನನ್ಯಾಧಿಪತೇ! ಅಖಿಲಗುರುವು, ಜಗಜ್ಜನ್ಮಸ್ಥಿತಿಸಂಹಾರ ಕಾರಣನು ಆದ ನಿನಗೆ ನಮ್ಮನ್ನು ಉದ್ಧರಿಸಿ ಪೊರೆಯಲು ಆಗುವ ಪ್ರಯಾಸವಾದರೂ ಏನು? ಆರ್ತಬಂಧುವಾದ

ನೀನು ನಿನ್ನ ಪ್ರಿಯ ಜನರನ್ನು ಪೊರೆದು ಪಾರುಗಾಣಿಸುವುದು ನಿನ್ನ ಸ್ವಭಾವವು; ಅದರಿಂದ ನಿನಗಲ್ಲ ನಮಗೇ ಮೋಕ್ಷಾಖ್ಯ ಮಹಪ್ರಯೋಜನವು ಲಭಿಸುತ್ತಿದೆ.

ನಿನ್ನವನಾದ ನನಗೆ ಸಂಸಾರವೈತರಣಿಯ ಭಯವಿಲ್ಲ; ನಿನ್ನ ಪವಿತ್ರ ಚರಿತ್ರ ಸುಧಾಪಾನ ಮತ್ತ ಚಿತ್ತನಾಗಿ ನನ್ನ ಚಿಂತೆಯನ್ನು ಬಿಟ್ಟಿರುವೆನು; ಆದರೆ ಹಾ ಕಷ್ಟಂ! ದೇವ ಲಕ್ಷ್ಮೀಶ! ನಿನ್ನನ್ನು ಮರೆತು ಇಂದ್ರಿಯಾರ್ಥಗಳಿಂದ ದುಷ್ಟ ವಿಷಯ ಸುಖದಲ್ಲಿ ಮನವಿಟ್ಟು ಕುಟುಂಬ ಭರಣ ಭಾರದಿಂದ ತಲೆ ಎತ್ತಲಾರದೆ ಕೆಡುತ್ತಿರುವ ಮೂಢರನ್ನು ನೋಡಿ ಸಂಸಾರ ಪರಿವಾರದ ಪಾರವನ್ನಿವರೆಂತು ಕಾಣುವರೆಂದು ಚಿಂತೆಪಡುತ್ತಿರುವೆನು.

ದೇವತೆಗಳು ಮುನಿಗಳು ತಮ್ಮನ್ನು ನಂಬಿರುವ ಜನರ ವಿಮೋಚನಕ್ಕಾಗಿ ಯೋಚನೆಯನ್ನು ಮಾಡಿ ವಿಜನಸ್ಥಲದಲ್ಲಿ ಕಾಷ್ಟ ಮೌನದಿಂದ ತಪಸ್ಸೇ ಮೊದಲಾದ ಸತ್ಕಾರ್ಯಗಳನ್ನು ಮಾಡುತ್ತಿರುವರು. ಅಂತೆಯೇ ನಾನೂ ನನ್ನನ್ನಾಶ್ರಯಿಸಿದ ದೀನಜನರನ್ನು ಬಿಟ್ಟು ಮೋಕ್ಷವನ್ನು ಪೊಂದಲಾರೆ. ನನ್ನ ಮೇಲೆ ಹರಿದ ನಿನ್ನ ಅನುಗ್ರಹ ಗಂಗಾವಾಹಿನಿಯು ಇವರ ಮೇಲೂ ಹರಿಯಲಿ! ಅವರಿಗೆ ಅನುಕೂಲನಾದವನು ನಿನ್ನ ಹೊರತು ಅನ್ಯರಾರೂ ಇಲ್ಲವೆಂದು ಅರಿತು ನಿನಗೇ ಮೊರೆಹೊಕ್ಕ ನನ್ನ ಮಾತನ್ನು ಲಾಲಿಸು.

ಮೈಥುನಾದಿ ಗಾರ್ಹಸ್ಥ್ಯ ಸುಖವು ಕೈಗಾದ ಕಜ್ಜಿಯನ್ನು ತುರಿಸಿದಾಗ ಆಗುವ ಸುಖಾಭಾಸವು ಹಾಗೂ ಅನಂತರದಲ್ಲಿ ಮಹಾದುಃಖಪ್ರದವೂ ಆಗಿದೆ. ಇದನ್ನರಿಯದೆ ಕಡುಲೋಭಿಗಳು ಕೆಡುಕಾಮದಿಂದ ತೃಪ್ತರಾಗದೆ ದುಃಖಪಡುತ್ತಿರುವರು. ಆದ್ದರಿಂದ ಧೀರನು ತಿನ್ನಿಸನ್ನೆ ತಡೆದು ನಿಶ್ಚಿಂತನಾಗಿರುವುದೇ ಒಳಿತು. ಮೌನ, ವ್ರತ, ವೇದಾಧ್ಯಯನ, ತಪಸ್ಸು, ಧರ್ಮಾಚರಣೆ, ಪ್ರವಚನ, ಪುರಾಣಪಠನ, ಜಪ, ಸಮಾಧಿಗಳು ಮುಕ್ತಿಸಾಧನವೆನಿಸಿವೆ, ನಿಜ. ಆದರೆ ಇಂದ್ರಿಯ ಲೋಲರಿಗೆ ಅವುಗಳಿಂದ ಕೆಲಕಾಲ, ವಂಚಿತರಾದ ಜನರಿಂದ ಜೀವಿಕಾನಿರ್ವಹಣವಾಗುವುದಾಗಲಿ, ಅವರು ದಾಂಭಿಕರೆಂದು ಜನರು ತಿಳಿದ ಮೇಲ ಜೀವಿಕಾನಿರ್ವಹಣವು ಹೋಗುತ್ತಾ, ಗೌರವವು ಹಾಳಾಗಿಹೋಗುವುದು.

ಬೀಜದಲ್ಲಿ ಅಂಕುರ, ಜೀವ, ದೇವತಾ ಭಾಗತ್ರಯವು ಅಡಗಿರುವಂತೆ, ಕಾರ್ಯಕಾರಣ ರೂಪ ಜಗದಲ್ಲಿ ಬೀಜಗತ ದೇವತಾರೂಪದಂತೆ ಅಡಗಿರುವ ನಿನ್ನನ್ನು ಭಕ್ತಿಪೂರ್ವಕ ಶ್ರವಣಾದಿಗಳಿಂದ ವಿಚಾರಿಸಿ ಜ್ಞಾನಿಗಳು ಆನಂದ – ಜ್ಞಾನ – ರೂಪನಾದ ನಿನ್ನನ್ನು ಕಾರ್ಯಕಾರಣ ಜಗದ್ವಿಲಕ್ಷಣನೆಂದು ತಿಳಿಯುವರು. ಕಾಷ್ಟಗಳು ಭಿನ್ನಭಿನ್ನವಾದರೂ ಒಳಗಿರುವ ಅಗ್ನಿಯು ಒಬ್ಬನೇ ಆಗಿರುವಂತೆ ನಿನಗೆ ಸ್ವಗತಭೇದವಿಲ್ಲ. ಈ ಜಗವು ನಿನಗೆ ಪ್ರತಿಮೆಯಂತೆ ರೂಪಿಸಿದೆ. ಈ ರೂಪಗಳನ್ನೆರಡನ್ನು ಚೆನ್ನಾಗಿ ತಿಳಿದವನೇ ನಿಜವಾದ ಜ್ಞಾನಿಯು. ಸರ್ವಸ್ವಾಮಿಯು, ಸರ್ವಾಂತರ್ಯಾಮಿಯು, ಸರ್ವಶಕ್ತಿಪ್ರದನು ಆದ ನಿನ್ನನ್ನು ಅಗ್ನಿ, ಜಲ, ಆಕಾಶ, ಪ್ರಾಣ, ಇಂದ್ರಿಯ, ಹೃದಯ, ಚೇತನವೆಂದು ಕರೆವರು; ಅದೆಲ್ಲವೂ ನಿನ್ನ ಅಧೀನವಾಗಿದೆ. ಸಂಸಾರಿಗಳು ಮುಕ್ತರು ಕೂಡ ನಿನ್ನ ವಶದಲ್ಲಿದ್ದು ನಡೆಯುವರು. ಪೂರ್ಣಗುಣನಾದ ನೀನಲ್ಲದೆ ಮನೋವಾಗ್ಗೋಚರವಾದ ಸ್ವತಂತ್ರವಸ್ತುವಿನ್ನೊಂದಿಲ್ಲ.

ತ್ರಿಗುಣ ಮಾನಿನಿಯಾದ ರಮೆಯು, ಮಹದಾದಿ ತತ್ವೇಶರಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳೂ ಋಷಿ ಮನುಜರು ಕೂಡ ಜನನಮರಣಾದಿ ದೋಷರಹಿತನಾದ ನಿನ್ನನ್ನು ಸಂಪೂರ್ಣವಾಗಿ ತಿಳಿಯಲಾರದೆ ಇರುವರೆಂದು ವಿಚಾರವನ್ನು ಮಾಡಿ ತಿಳಿದ ವಿವೇಕಿಗಳು

ಯಥಾಯೋಗ್ಯವಾಗಿ ವೇದಾದಿಶಾಸ್ತ್ರಪ್ರತಿಪಾದಿತನಾದ ನಿನ್ನನ್ನು ಪೊಗಳಿ ಪಾಡಿ ಸುಖಿಸುತ್ತಿರುವರು.

ನಾನೂ ಇಷ್ಟೇ ಬೇಡುವೆನು. ಷಡಂಗ ಸೇವೆಯಿಂದಲ್ಲದೆ ಪರಮಹಂಸಜನಪಾಲಕನಾದ ನಿನ್ನ ಚರಣಕಮಲದಲ್ಲಿ ಭಕ್ತಿಯು ಪುಟ್ಟಲಾರದು. ನನ್ನ ಮನವು ನಿನ್ನ ದಿವ್ಯರೂಪ ಧ್ಯಾನದಲ್ಲಿ ರಮಿಸಲಿ! ಕಣ್ಣುಗಳು ನಿನ್ನನ್ನು ನೋಡಲಿ! ವಾಣಿಯು ನಿನ್ನನ್ನು ಪೊಗಳಲಿ! ಕೈಗಳು ನಿನ್ನ ಸೇವೆಯನ್ನು ಮಾಡಲಿ! ಕಿವಿಗಳು ನಿನ್ನ ಕಥೆಯನ್ನು ಕೇಳಲಿ! ಇಂತು ನಿನ್ನವನೆನಿಸಿ ನನ್ನನ್ನೂ ನನ್ನವರನ್ನೂ ಕಾಪಾಡು.

ಎಂದು ಭಕ್ತಿಯಿಂದ ಪ್ರಹ್ಲಾದನು ಮಾಡಿದ ಸ್ತುತಿಯನ್ನು ಕೇಳಿ ಪ್ರೀತನಾಗಿ ಸಿಟ್ಟನ್ನೆಲ್ಲಾ ಬಿಟ್ಟು, ಶ್ರೀನೃಸಿಂಹನು ಮಾತನಾಡಿದನು–

ವತ್ಸ! ಪ್ರಹ್ಲಾದ! ನಿನಗೆ ಮಂಗಳವಾಗಲಿ! ನಿನ್ನಲ್ಲಿ ಪ್ರೀತನಾಗಿರುವೆನು. ಬೇಕಾದ ವರನ್ನು ಬೇಡು. ಭಕ್ತರ ಸರ್ವಾಭೀಷ್ಟಪ್ರದನಾಗಿ ನಿಂತಿರುವೆನು. ಕೇಳು. ನನ್ನ ದರ್ಶನವು ಬಹು ದುರ್ಲಭವು. ಪ್ರಸನ್ನನಾಗಿರುವ ನನ್ನನ್ನು ನೋಡಿದವನನ್ನು ಸಂಸಾರವು ಮತ್ತೆ ಪೀಡಿಸಲಾರದು. ಮಂಗಳದೇವತಾಪತಿಯು, ಸರ್ವಕಾಮಿತ ವರದರಾಜನು ಆದ ನನ್ನನ್ನು ಬುದ್ಧಿವಂತರು ಪೂರ್ಣವಾದ ಭಕ್ತಿಯಿಂದ ಭಜಿಸುವರು.

ಎಂದು ಪೇಳಿದ ಪ್ರಭುವಿನ ಮಾತನ್ನಾಲಿಸಿ ಲೋಕದ ಜನರು ಬಿಡದೆ ಬೇಡುವ ಸರ್ವ ವರಗಳನ್ನು ಕೊಡುವೆನೆಂಬ ಮಾತಿಗೆ ಮನಸೋಲದೆ, ಏಕಾಂತಭಕ್ತನಾದ ಪ್ರಹ್ಲಾದನು ಶ್ರೀಹರಿಗೆ ವಂದಿಸಿ ಇಂತು ನುಡಿದನು.

## ೧೦. ಪ್ರಹ್ಲಾದ ಪಟ್ಟಾಭಿಷೇಕವು

ನಾರದನು ಪೇಳಿದನು–

ವರಗಳೆಲ್ಲವು ಕಾಮಜನಕಗಳು ಹಾಗೂ ಭಕ್ತಿವಿಘ್ನಕಾರಣಗಳೆಂದು ತಿಳಿದು ಬಾಲನಾದರೂ ಮಹಾಜ್ಞಾನಿಯಾದ ಪ್ರಹ್ಲಾದನು ನಸುನಕ್ಕು ಶ್ರೀಶನಿಗಿಂತೆಂದನು–

ಸ್ವಾಮಿ! ನೃಸಿಂಹ! ಸ್ವಭಾವದಿಂದ ಕಾಮೋಪರಕ್ತನಾದ ಮನಸ್ಸುಳ್ಳ ನಮ್ಮನ್ನೇಕೆ ಆಶೆಪಡಿಸಿ ಕೆಡಿಸುವೆ? ಕಾಮದಿಂದ ಭೀತನಾಗಿ, ವೈರಾಗ್ಯಭಾಗ್ಯವನ್ನಾಶ್ರಯಿಸಿ, ಮೋಕ್ಷವನ್ನು ಬಯಸಿ, ನಿನ್ನ ಚರಣಾರವಿಂದ ಮೂಲವನ್ನು ಪೊಂದಿರುವೆನು. ಅಂತಹ ನನ್ನ ಭಕ್ತಿಯನ್ನು ಪರೀಕ್ಷಿಸಲು ಕಾಮಗಳಲ್ಲಿ ಪ್ರೇರಿಸುವೆಯಾ! ಬೇಡ! ಜನನ ಮರಣ ಬೀಜಗಳಲ್ಲವೇ ಕಾಮಗಳು? ಅತ್ಯಂತ ಕರುಣಾನ್ವಿತನು ಅಖಿಲಲೋಕಜ್ಞಾನಪ್ರದನು ಆದ ನೀನು ವಂಚಿಸುತ್ತಿಲ್ಲ; ಪರೀಕ್ಷೆಗಾಗಿಯೇ ಪೇಳುತ್ತಿರುವೆ. ಸಂಸಾರಾಂಧತಮದಿಂದ ಪಾರುಗಾಣಿಸಿ ಪೊರೆವ ನಿನಗೆ ಶಿರಬಾಗಿ ವಿಜ್ಞಾಪಿಸುವೆನು.

ಪ್ರಭುವಿನನ್ನು ಕಂಡು, ಸುಮ್ಮನೆ ಕಾಮಿತಗಳನ್ನು ಬೇಡುವವನು ಭೃತ್ಯನಲ್ಲ! ಅಂತಹವನನ್ನು ವರ್ತಕನೆನ್ನಬಹುದು. ಕಾಮುಗಳನ್ನು ಬೇಡಿ ಪರಸ್ಪರಾಶ್ರಯವನ್ನು ಪಡೆದವರು ಸ್ವಾಮಿಯೂ ಇಲ್ಲ! ಭೃತ್ಯನೂ ಅಲ್ಲ. ಸ್ವಾಮಿಯಲ್ಲಿರುವ ವಸ್ತುಗಳನ್ನು ಬೇಡಿ ಭಜಿಸುವವನು, ವಸ್ತುಭಕ್ತನಾಗುವನಾಗಲಿ ಸ್ವಾಮಿಭಕ್ತನಲ್ಲ. ಭೃತ್ಯನ ಸೇವೆಯ ಗೌರವವನ್ನು ಕೋರಿ ಅವನ ಕಾಮಿತಗಳನ್ನೀಡೇರಿಸುವ ಸ್ವಾಮಿಯು ಅಪೂರ್ಣನೇ ಸರಿ! ನೀನು ಪೂರ್ಣನು – ನಾನು ನಿನ್ನ

ಏಕಾಂತ ಭಕ್ತನು. ನನಗೆ ಕಾಮಗಳು ಬೇಕಿಲ್ಲ. ನಿನ್ನ ಭಕ್ತನಾಗುವುದೇ ಬೇಕು. ನೀನು ಪರಾನಪೇಕ್ಷನಾದ ಸ್ವತಂತ್ರ ಪ್ರಭುವಾಗಿರುವೆ. ನಮ್ಮಿಬ್ಬರ ಈಶ-ದಾಸ ಭಾವವು ಪ್ರಯೋಜನವನ್ನನು ಸರಿಸಿದುದಲ್ಲ.

ಆದರೂ ನೀ ಕೊಡುವಾಗ ಬೇಡೆನ್ನಲಾರದೆ ನನ್ನ ಹೃದಯಕ್ಷೇತ್ರದಲ್ಲಿ ಕಾಮಬೀಜಗಳು ಪುಟ್ಟದೆ ನಷ್ಟವಾಗಲಿ ಎಂದೇ ಬೇಡುತ್ತಿರುವೆನು. ಕಾಮವು ಅಂಕುರಿಸಿದೊಡನೆ ಇಂದ್ರಿಯ ಮನಃಪ್ರಾಣಗಳು ಕೆಡುವುವು: ಭಕ್ತಿ, ಧರ್ಮ, ಧೈರ್ಯ, ವಿವೇಕ, ಲಜ್ಜೆ, ಶ್ರೀ, ತೇಜ, ಸ್ಮೃತಿ, ಮೊದಲಾದ ಸುಗುಣಗಳು ದೂರವಾಗುವುವು. ಮನಸ್ಸಿನಲ್ಲಿ ನೆಲೆಮಾಡಿ ನಿಂತ ಕಾಮಗಳನ್ನು ಮಾನವನು ಬಿಟ್ಟಾಗಲೇ ಸಂಸಾರದಿಂದ ಮುಕ್ತನಾಗುವನು. ನಾರದನು ಹೇಳಿಕೊಟ್ಟ ಈ ನಿನ್ನ ಮಂತ್ರವನ್ನು ಸದಾ ಜಪಿಸುವೆನು.

ಓಂ ಪರಮಪೂಜ್ಯನು ಬ್ರಹ್ಮವಂದ್ಯನು ಅದ್ಭುತ ಸಿಂಹರೂಪನು ಗುಣಪೂರ್ಣನು ಜೀವೇಶನು ಆದ ಲಕ್ಷ್ಮೀನೃಸಿಂಹನಿಗೆ ನಮಸ್ಕಾರವು! ಎಂದು ನಮಿಸಿದನು.

ಆಗ ಶ್ರೀನೃಸಿಂಹನು ಪ್ರಹ್ಲಾದನನ್ನು ನೋಡಿ – ನನ್ನ ಏಕಾಂತ ಭಕ್ತರು ಈ ಲೋಕದ ಹಾಗೂ ಪರಲೋಕದ ಸುಖಗಳನ್ನು ನನ್ನಿಂದ ಬೇಡದಿರುವರು. ನಿನ್ನಂತಹ ಭಗವದ್ಭಕ್ತರ ಸ್ವಭಾವವೇ ಅಂತಹದಾಗಿದೆ. ಆದರೂ ದೈತ್ಯೇಶ್ವರನಾಗಿ ಒಂದು ಮನ್ವಂತರ ಕಾಲವು ಸುಖಗಳನ್ನು ಅನುಭವಿಸು. ನನ್ನ ಪ್ರಿಯಾವತಾರ ಕಥೆಗಳನ್ನು ಕೇಳುತ್ತಾ, ನನ್ನಲ್ಲಿ ಚಿತ್ತವೃತ್ತಿಯನ್ನರ್ಪಿಸು. ಸರ್ವಭೂತಾಂತರ್ಯಾಮಿಯಾದ ನನ್ನನ್ನು ಸಂತೋಷಪಡಿಸುವ ಯಜ್ಞಾದಿ ಪವಿತ್ರ ಕರ್ಮಗಳನ್ನು ಮಾಡು. ಪುಣ್ಯವನ್ನು ಭೋಗದಾನಗಳಿಂದಲೂ ಪಾಪವನ್ನು ಪ್ರಾಯಶ್ಚಿತ್ತಾದಿಗಳಿಗಂದಲೂ ಕಳೆದು ಕಾಲವು ಬಂದಾಗ ಭೌತಿಕ ಶರೀರವನ್ನು ಬಿಟ್ಟು, ಸುರಲೋಕ ಗೀತವಾದ ಧವಳ ಕೀರ್ತಿ ಚಂದ್ರಿಕೆಯಿಂದ ಲೋಕವನ್ನು ಬೆಳಗಿ ಮುಕ್ತನಾಗಿ ಕೊನೆಗೆ ನನ್ನ ಲೋಕವನ್ನು ಪೊಂದುವೆ. ನಿನ್ನನ್ನು ನನ್ನನ್ನು ಸ್ಮರಿಸಿ, ಯುಕ್ತಕಾಲದಲ್ಲಿ ನೀನು ಮಾಡಿದ ನುತಿಯಿಂದ ನನ್ನನ್ನು ಪೊಗಳುವ ಸುಜನರು ಕರ್ಮಬಂಧದಿಂದ ಮುಕ್ತರಾಗುವರು – ಎಂದು ಅನುಗ್ರಹಿಸಿದನು.

ಪ್ರಹ್ಲಾದನು 'ಪರಮೇಶ! ವರದರಾಜನಾದ ನಿನ್ನಿಂದ ಒಂದು ವರವು ಬೇಡುವುದಿದೆ. ನಮ್ಮ ತಂದೆಯು ನಿನ್ನ ಸರ್ವೋತ್ತಮತ್ವವನ್ನರಿಯದೆ ತಮ್ಮನನ್ನು ಕೊಂದ ವೈರಿ ಎಂಬ ಮಿಥ್ಯಾಜ್ಞಾನದಿಂದ ಸರ್ವಲೋಕ ಗುರುವಾದ ನಿನ್ನನ್ನು ನಿಂದಿಸಿದನು; ಮತ್ತು ನಿನ್ನ ಭಕ್ತನಾದ ನನ್ನನ್ನ ವಧಿಸಲು ಬಂದನು. ಆದ್ದರಿಂದ ದುರಂತ ದುಸ್ತರವಾದ ಆ ಪಾಪ ಫಲವು ಅವನಿಗೆ ಆಗದಂತೆ ಮಾಡು. ನಿನ್ನ ನೋಟದಿಂದಲೇ ಪೂತನಾಗಿರುವನಾದರೂ ನನ್ನ ತಂದೆಯನ್ನು ಉದ್ಧರಿಸೆಂದು ಪುನಃ ಬೇಡುತ್ತಿರುವೆನು' ಎಂದನು.

ಭಗವಂತನು-ಕುಲಪಾವನನಾದ ನಿನ್ನಂತಹ ಸುಪುತ್ರನು ಜನಿಸಿದುದರಿಂದ ಇಪ್ಪತ್ತೊಂದು ತಲೆಮಾರಿನ ಪಿತೃಗಳೆಲ್ಲರೂ ಉದ್ಧೃತರಾಗಿರುವರು. ನನ್ನ ಭಕ್ತರು ಶಾಂತರು, ಸಮದರ್ಶಿಗಳು, ಸಮುದಾಚಾರರು;ಅವರು ಕೀಕಟದಲ್ಲಿ ಕಾಲಿಟ್ಟರೂ ಅದು ಪವಿತ್ರ ದೇಶವೆನಿಸುವುದು. ಕೃಕಲಾಸಾದಿ ಸರ್ವಜೀವರಿಗೂ ಯಾವ ವಿಧವಾದ ಹಿಂಸೆಯನ್ನು ಕೊಡದೆ ಅಲ್ಲಿ ಅಂತರ್ಯಾಮಿಯಾಗಿರುವ ನನ್ನ ದರ್ಶನದಿಂದ ಪೂತರಾಗಿ ಭಕ್ತಿಯನ್ನು ಮಾಡುವರು ಹಾಗೂ ಸರ್ವವಿಷಯಗಳಲ್ಲಿ ಆಶಾಸ್ಪರ್ಧೆಯನ್ನು ಬಿಟ್ಟಿರುವರು. ಇನ್ನು ಮುಂದಿನ ಭಕ್ತರು ಹಿಂಸಾರಹಿತನು, ಏಕಾಂತಭಕ್ತನು ಆದ ನಿನ್ನನ್ನು ನೋಡಿ ಭಕ್ತಿಯನ್ನು ಕಲಿಯುವರು.

ಯಥಾಯೋಗ್ಯವಾಗಿ ವೇದಾದಿಶಾಸ್ತ್ರಪ್ರತಿಪಾದಿತನಾದ ನಿನ್ನನ್ನು ಪೊಗಳಿ ಪಾಡಿ ಸುಖಿಸುತ್ತಿರುವರು.

ನಾನೂ ಇಷ್ಟೇ ಬೇಡುವೆನು. ಷಡಂಗ ಸೇವೆಯಿಂದಲ್ಲದೆ ಪರಮಹಂಸಜನಪಾಲಕನಾದ ನಿನ್ನ ಚರಣಕಮಲದಲ್ಲಿ ಭಕ್ತಿಯು ಪುಟ್ಟಲಾರದು. ನನ್ನ ಮನವು ನಿನ್ನ ದಿವ್ಯರೂಪ ಧ್ಯಾನದಲ್ಲಿ ರಮಿಸಲಿ! ಕಣ್ಣುಗಳು ನಿನ್ನನ್ನು ನೋಡಲಿ! ವಾಣಿಯು ನಿನ್ನನ್ನು ಪೊಗಳಲಿ! ಕೈಗಳು ನಿನ್ನ ಸೇವೆಯನ್ನು ಮಾಡಲಿ! ಕಿವಿಗಳು ನಿನ್ನ ಕಥೆಯನ್ನು ಕೇಳಲಿ! ಇಂತು ನಿನ್ನವನೆನಿಸಿ ನನ್ನನ್ನೂ ನನ್ನವರನ್ನೂ ಕಾಪಾಡು.

ಎಂದು ಭಕ್ತಿಯಿಂದ ಪ್ರಹ್ಲಾದನು ಮಾಡಿದ ಸ್ತುತಿಯನ್ನು ಕೇಳಿ ಪ್ರೀತನಾಗಿ ಸಿಟ್ಟನ್ನೆಲ್ಲಾ ಬಿಟ್ಟು, ಶ್ರೀನೃಸಿಂಹನು ಮಾತನಾಡಿದನು–

ವತ್ಸ! ಪ್ರಹ್ಲಾದ! ನಿನಗೆ ಮಂಗಳವಾಗಲಿ! ನಿನ್ನಲ್ಲಿ ಪ್ರೀತನಾಗಿರುವೆನು. ಬೇಕಾದ ವರನ್ನು ಬೇಡು. ಭಕ್ತರ ಸರ್ವಾಭೀಷ್ಟಪ್ರದನಾಗಿ ನಿಂತಿರುವೆನು. ಕೇಳು. ನನ್ನ ದರ್ಶನವು ಬಹು ದುರ್ಲಭವು. ಪ್ರಸನ್ನನಾಗಿರುವ ನನ್ನನ್ನು ನೋಡಿದವನನ್ನು ಸಂಸಾರವು ಮತ್ತೆ ಪೀಡಿಸಲಾರದು. ಮಂಗಳದೇವತಾಪತಿಯು, ಸರ್ವಕಾಮಿತ ವರದರಾಜನು ಆದ ನನ್ನನ್ನು ಬುದ್ಧಿವಂತರು ಪೂರ್ಣವಾದ ಭಕ್ತಿಯಿಂದ ಭಜಿಸುವರು.

ಎಂದು ಪೇಳಿದ ಪ್ರಭುವಿನ ಮಾತನ್ನಾಲಿಸಿ ಲೋಕದ ಜನರು ಬಿಡದೆ ಬೇಡುವ ಸರ್ವವರಗಳನ್ನು ಕೊಡುವೆನೆಂಬ ಮಾತಿಗೆ ಮನಸೋಲದೆ, ಏಕಾಂತಭಕ್ತನಾದ ಪ್ರಹ್ಲಾದನು ಶ್ರೀಹರಿಗೆ ವಂದಿಸಿ ಇಂತು ನುಡಿದನು.

## ೧೦. ಪ್ರಹ್ಲಾದ ಪಟ್ಟಾಭಿಷೇಕವು

ನಾರದನು ಪೇಳಿದನು–

ವರಗಳೆಲ್ಲವು ಕಾಮಜನಕಗಳು ಹಾಗೂ ಭಕ್ತಿವಿಘ್ನಕಾರಣಗಳೆಂದು ತಿಳಿದು ಬಾಲನಾದರೂ ಮಹಾಜ್ಞಾನಿಯಾದ ಪ್ರಹ್ಲಾದನು ನಸುನಕ್ಕು ಶ್ರೀಶನಿಗಿಂತೆಂದನು–

ಸ್ವಾಮಿ! ನೃಸಿಂಹ! ಸ್ವಭಾವದಿಂದ ಕಾಮೋಪರಕ್ತನಾದ ಮನಸ್ಸುಳ್ಳ ನಮ್ಮನ್ನೇಕೆ ಆಶೆಪಡಿಸಿ ಕೆಡಿಸುವೆ? ಕಾಮದಿಂದ ಭೀತನಾಗಿ, ವೈರಾಗ್ಯಭಾಗ್ಯವನ್ನಾಶ್ರಯಿಸಿ, ಮೋಕ್ಷವನ್ನು ಬಯಸಿ, ನಿನ್ನ ಚರಣಾರವಿಂದ ಮೂಲವನ್ನು ಪೊಂದಿರುವೆನು. ಅಂತಹ ನನ್ನ ಭಕ್ತಿಯನ್ನು ಪರೀಕ್ಷಿಸಲು ಕಾಮಗಳಲ್ಲಿಪ್ರೇರಿಸುವೆಯಾ! ಬೇಡ! ಜನನ ಮರಣ ಬೀಜಗಳಲ್ಲವೇ ಕಾಮಗಳು? ಅತ್ಯಂತ ಕರುಣಾನ್ವಿತನು ಅಖಿಲಲೋಕಜ್ಞಾನಪ್ರದನು ಆದ ನೀನು ವಂಚಿಸುತ್ತಿಲ್ಲ; ಪರೀಕ್ಷೆಗಾಗಿಯೇ ಪೇಳುತ್ತಿರುವೆ. ಸಂಸಾರಾಂಧತಮದಿಂದ ಪಾರುಗಾಣಿಸಿ ಪೊರೆವ ನಿನಗೆ ಶಿರಬಾಗಿ ವಿಜ್ಞಾಪಿಸುವೆನು.

ಪ್ರಭುವಿನನ್ನು ಕಂಡು, ಸುಮ್ಮನೆ ಕಾಮಿತಗಳನ್ನು ಬೇಡುವವನು ಭೃತ್ಯನಲ್ಲ! ಅಂತಹವನನ್ನು ವರ್ತಕನೆನ್ನಬಹುದು. ಕಾಮುಗಳನ್ನು ಬೇಡಿ ಪರಸ್ಪರಾಶ್ರಯವನ್ನು ಪಡೆದವರು ಸ್ವಾಮಿಯೂ ಇಲ್ಲ! ಭೃತ್ಯನೂ ಅಲ್ಲ. ಸ್ವಾಮಿಯಲ್ಲಿರುವ ವಸ್ತುಗಳನ್ನು ಬೇಡಿ ಭಜಿಸುವವನು, ವಸ್ತುಭಕ್ತನಾಗುವನಾಗಲಿ ಸ್ವಾಮಿಭಕ್ತನಲ್ಲ. ಭೃತ್ಯನ ಸೇವೆಯ ಗೌರವವನ್ನು ಕೋರಿ ಅವನ ಕಾಮಿತಗಳನ್ನೀಡೇರಿಸುವ ಸ್ವಾಮಿಯು ಅಪೂರ್ಣನೇ ಸರಿ! ನೀನು ಪೂರ್ಣನು – ನಾನು ನಿನ್ನ

ಏಕಾಂತ ಭಕ್ತನು. ನನಗೆ ಕಾಮಗಳು ಬೇಕಿಲ್ಲ. ನಿನ್ನ ಭಕ್ತನಾಗುವುದೇ ಬೇಕು. ನೀನು ಪರಾನಪೇಕ್ಷನಾದ ಸ್ವತಂತ್ರ ಪ್ರಭುವಾಗಿರುವೆ. ನಮ್ಮಿಬ್ಬರ ಈಶ-ದಾಸ ಭಾವವು ಪ್ರಯೋಜನವನ್ನನು ಸರಿಸಿದುದಲ್ಲ.

ಆದರೂ ನೀ ಕೊಡುವಾಗ ಬೇಡೆನ್ನಲಾರದೆ ನನ್ನ ಹೃದಯಕ್ಷೇತ್ರದಲ್ಲಿ ಕಾಮಬೀಜಗಳು ಪುಟ್ಟದೆ ನಷ್ಟವಾಗಲಿ ಎಂದೇ ಬೇಡುತ್ತಿರುವೆನು. ಕಾಮವು ಅಂಕುರಿಸಿದೊಡನೆ ಇಂದ್ರಿಯ ಮನಃಪ್ರಾಣಗಳು ಕೆಡುವುವು: ಭಕ್ತಿ, ಧರ್ಮ, ಧೈರ್ಯ, ವಿವೇಕ, ಲಜ್ಜೆ, ಶ್ರೀ, ತೇಜ, ಸ್ಮೃತಿ, ಮೊದಲಾದ ಸುಗುಣಗಳು ದೂರವಾಗುವುವು. ಮನಸ್ಸಿನಲ್ಲಿ ನೆಲೆಮಾಡಿ ನಿಂತ ಕಾಮಗಳನ್ನು ಮಾನವನು ಬಿಟ್ಟಾಗಲೇ ಸಂಸಾರದಿಂದ ಮುಕ್ತನಾಗುವನು. ನಾರದನು ಹೇಳಿಕೊಟ್ಟ ಈ ನಿನ್ನ ಮಂತ್ರವನ್ನು ಸದಾ ಜಪಿಸುವೆನು.

ಓಂ ಪರಮಪೂಜ್ಯನು ಬ್ರಹ್ಮವಂದ್ಯನು ಅದ್ಭುತ ಸಿಂಹರೂಪನು ಗುಣಪೂರ್ಣನು ಜೀವೇಶನು ಆದ ಲಕ್ಷ್ಮೀನೃಸಿಂಹನಿಗೆ ನಮಸ್ಕಾರವು! ಎಂದು ನಮಿಸಿದನು.

ಆಗ ಶ್ರೀನೃಸಿಂಹನು ಪ್ರಹ್ಲಾದನನ್ನು ನೋಡಿ – ನನ್ನ ಏಕಾಂತ ಭಕ್ತರು ಈ ಲೋಕದ ಹಾಗೂ ಪರಲೋಕದ ಸುಖಗಳನ್ನು ನನ್ನಿಂದ ಬೇಡದಿರುವರು. ನಿನ್ನಂತಹ ಭಗವದ್ಭಕ್ತರ ಸ್ವಭಾವವೇ ಅಂತಹದಾಗಿದೆ. ಆದರೂ ದೈತ್ಯೇಶ್ವರನಾಗಿ ಒಂದು ಮನ್ವಂತರ ಕಾಲವು ಸುಖಗಳನ್ನು ಅನುಭವಿಸು. ನನ್ನ ಪ್ರಿಯಾವತಾರ ಕಥೆಗಳನ್ನು ಕೇಳುತ್ತಾ, ನನ್ನಲ್ಲಿ ಚಿತ್ತವೃತ್ತಿಯನ್ನರ್ಪಿಸು. ಸರ್ವಭೂತಾಂತರ್ಯಾಮಿಯಾದ ನನ್ನನ್ನು ಸಂತೋಷಪಡಿಸುವ ಯಜ್ಞಾದಿ ಪವಿತ್ರ ಕರ್ಮಗಳನ್ನು ಮಾಡು. ಪುಣ್ಯವನ್ನು ಭೋಗದಾನಗಳಿಂದಲೂ ಪಾಪವನ್ನು ಪ್ರಾಯಶ್ಚಿತ್ತಾದಿಗಳಿಗಂದಲೂ ಕಳೆದು ಕಾಲವು ಬಂದಾಗ ಭೌತಿಕ ಶರೀರವನ್ನು ಬಿಟ್ಟು, ಸುರಲೋಕ ಗೀತವಾದ ಧವಳ ಕೀರ್ತಿ ಚಂದ್ರಿಕೆಯಿಂದ ಲೋಕವನ್ನು ಬೆಳಗಿ ಮುಕ್ತನಾಗಿ ಕೊನೆಗೆ ನನ್ನ ಲೋಕವನ್ನು ಪೊಂದುವೆ. ನಿನ್ನನ್ನು ನನ್ನನ್ನು ಸ್ಮರಿಸಿ, ಯುಕ್ತಕಾಲದಲ್ಲಿ ನೀನು ಮಾಡಿದ ನುತಿಯಿಂದ ನನ್ನನ್ನು ಪೊಗಳುವ ಸುಜನರು ಕರ್ಮಬಂಧದಿಂದ ಮುಕ್ತರಾಗುವರು – ಎಂದು ಅನುಗ್ರಹಿಸಿದನು.

ಪ್ರಹ್ಲಾದನು 'ಪರಮೇಶ! ವರದರಾಜನಾದ ನಿನ್ನಿಂದ ಒಂದು ವರವು ಬೇಡುವುದಿದೆ. ನಮ್ಮ ತಂದೆಯು ನಿನ್ನ ಸರ್ವೋತ್ತಮತ್ವವನ್ನರಿಯದೆ ತಮ್ಮನನ್ನು ಕೊಂದ ವೈರಿ ಎಂಬ ಮಿಥ್ಯಾ ಜ್ಞಾನದಿಂದ ಸರ್ವಲೋಕ ಗುರುವಾದ ನಿನ್ನನ್ನು ನಿಂದಿಸಿದನು; ಮತ್ತು ನಿನ್ನ ಭಕ್ತನಾದ ನನ್ನನ್ನ ವಧಿಸಲು ಬಂದನು. ಆದ್ದರಿಂದ ದುರಂತ ದುಸ್ತರವಾದ ಆ ಪಾಪ ಫಲವು ಅವನಿಗೆ ಆಗದಂತೆ ಮಾಡು. ನಿನ್ನ ನೋಟದಿಂದಲೇ ಪೂತನಾಗಿರುವನಾದರೂ ನನ್ನ ತಂದೆಯನ್ನು ಉದ್ಧರಿಸೆಂದು ಪುನಃ ಬೇಡುತ್ತಿರುವೆನು' ಎಂದನು.

ಭಗವಂತನು-ಕುಲಪಾವನನಾದ ನಿನ್ನಂತಹ ಸುಪುತ್ರನು ಜನಿಸಿದುದರಿಂದ ಇಪ್ಪತ್ತೊಂದು ತಲೆಮಾರಿನ ಪಿತೃಗಳೆಲ್ಲರೂ ಉದ್ಧೃತರಾಗಿರುವರು. ನನ್ನ ಭಕ್ತರು ಶಾಂತರು, ಸಮದರ್ಶಿಗಳು, ಸಮುದಾಚಾರರು;ಅವರು ಕೀಕಟದಲ್ಲಿ ಕಾಲಿಟ್ಟರೂ ಅದು ಪವಿತ್ರ ದೇಶವೆನಿಸುವುದು. ಕೃಕಲಾಸಾದಿ ಸರ್ವಜೀವರಿಗೂ ಯಾವ ವಿಧವಾದ ಹಿಂಸೆಯನ್ನು ಕೊಡದೆ ಅಲ್ಲಿ ಅಂತರ್ಯಾಮಿಯಾಗಿರುವ ನನ್ನ ದರ್ಶನದಿಂದ ಪೂತರಾಗಿ ಭಕ್ತಿಯನ್ನು ಮಾಡುವರು ಹಾಗೂ ಸರ್ವವಿಷಯಗಳಲ್ಲಿ ಆಶಾಸ್ಪರ್ಧೆಯನ್ನು ಬಿಟ್ಟಿರುವರು. ಇನ್ನು ಮುಂದಿನ ಭಕ್ತರು ಹಿಂಸಾರಹಿತನು, ಏಕಾಂತಭಕ್ತನು ಆದ ನಿನ್ನನ್ನು ನೋಡಿ ಭಕ್ತಿಯನ್ನು ಕಲಿಯುವರು.

ಭಗವದ್ವೇಷಿಯಾದ್ದರಿಂದ ಪ್ರೇತಕಾರ್ಯಗಳನ್ನು ಮಾಡುವುದು ಅಪ್ರಯೋಜಕವೆಂದು ಬಿಡಬೇಡ. ನನ್ನ ಸ್ಪರ್ಶಮಾತ್ರದಿಂದ ಪಾವಿತನಾಗಿ ನಿನ್ನಂತಹ ಮಗನನ್ನು ಪಡೆದ ನಿನ್ನ ತಂದೆಯು ಪುಣ್ಯಲೋಕವನ್ನೈದುವನು. ಪಿತೃಪ್ರಾಪ್ತ ರಾಜ್ಯವನ್ನಾಳು. ಬ್ರಹ್ಮವಾದಿಗಳು ಪೇಳಿದಂತೆ ನಡೆ. ನನ್ನಲ್ಲಿ ಮನವನ್ನಿಡು. ಸಕಲ ಕರ್ಮಗಳೆನ್ನ ಪೂಜೆ ಎಂದು ತಿಳಿ – ಎಂದನು.

ಧರ್ಮರಾಜಾ! ಪ್ರಹ್ಲಾದನು ಭಗವದಾಜ್ಞೆಯಂತೆ ತಂದೆಗೆ ಸಾಂಪ್ರದಾಯಿಕ ಕ್ರಿಯೆಗಳನ್ನು ಮಾಡಿದನು. ಆಮೇಲೆ ಶುಕ್ರಾದಿ ಗುರುಜನರವನನ್ನು ದೈತ್ಯರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದರು. ನಿಹತಕಂಟಕವಾದ ರಾಜ್ಯವನ್ನು ಪೊಂದಿ ಶ್ರೀಹರಿಗೆ ನಮಿಸಿದನು.

ಪ್ರಸನ್ನರಾದ ಶ್ರೀನೃಹರಿಯನ್ನು ಕಂಡು ಬ್ರಹ್ಮದೇವನು ದೇವತೆಗಳಿಂದ ಕೂಡಿ ಬಂದು ವಂದಿಸಿ ವೇದವಚನಗಳಿಂದ ನುತಿಸಿದನು-

'ದೇವದೇವ! ಸರ್ವೋತ್ತಮ! ಮಂಗಳರೂಪ! ಆದಿಪುರುಷ! ನಿನಗೆ ನಮಃ. ಲೋಕತಾಪಕರ ನಾದ ದೈತ್ಯನು ನಿನ್ನಿಂದ ಹತನಾದನು. ಲೋಕಕ್ಕೆ ನಿನ್ನಿಂದ ಸುಖವಾಯಿತು. ನಾನು ಸೃಜಿಸಿದ ಪ್ರಾಣಿಗಳಿಂದ ಸಾವು ಬೇಡವೆಂದ ದುಷ್ಟನು ತಪೋಬಲದಿಂದ ಉನ್ಮತ್ತನಾಗಿ ವೇದಮಾರ್ಗ ಗಳನ್ನು ಕೆಡಿಸಿದ್ದನು. ಏನು ಪುಣ್ಯವೋ! ಅವನ ಮಗನು ಸಾಧುವ ಮಹಾಭಾಗವತನು ಆದನು. ಆ ಬಾಲನನ್ನು ಇಂದು ನೀ ಪೊರೆದೆ. ಈ ನಿನ್ನ ಮಂಗಲರೂಪವು ಧ್ಯಾನಿಪರ ಪಾಪಪರಿಹಾರಕವು, ಆಪದ್ರಕ್ಷಕವು, ಮೃತ್ಯುನಿವಾರಕವು ಆಗಿರಲಿ!' ಎಂದನು.

ಶ್ರೀಭಗವಂತನು 'ಇನ್ನು ಮೇಲೆ ಇಂತಹ ದುಷ್ಕರ ವರವನ್ನು ಹಾವಿಗೆ ಹಾಲೆರದಂತೆ ಕ್ರೂರರಾದ ಇತರ ದೈತ್ಯರಿಗೆ ಕೊಡಬೇಡ' ಎಂದು ಬ್ರಹ್ಮನಿಗೆ ಪೇಳಿ ಬ್ರಹ್ಮನಿಂದ ಪೂಜಿತನಾಗಿ ಅಂತರ್ಹಿತನಾದನು. ಆಗ ಪ್ರಹ್ಲಾದನು ಬ್ರಹ್ಮನನ್ನು, ರುದ್ರನನ್ನು, ಪ್ರಜಾಪತಿಗಳನ್ನು ಭಗವದ್ಭಕ್ತರೆಂದರಿತು ವಿಧಿವಿಧಾನವನ್ನನುಸರಿಸಿ ವಿನಯದಿಂದ ಪೂಜಿಸಿದನು. ಬಹ್ಮನು ಶುಕ್ರ ನನ್ನು ಕರೆಯಿಸಿ, ಪ್ರಹ್ಲಾದನಿಗೆ ದೈತ್ಯದಾನವ ರಾಜ್ಯದ ಪಟ್ಟವನ್ನು ಕಟ್ಟಿಸಿದನು. ಭಗವಂತನಂತೆ ಬೇಕಾದ ವರಗಳನ್ನು ಕೊಟ್ಟು ಬ್ರಹ್ಮಾದಿದೇವತೆಗಳು ಪ್ರಹ್ಲಾದಕೃತ ಪೂಜೆಯನ್ನು ಕೈಕೊಂಡು ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಇಂತು ಜಯವಿಜಯರು ಶಾಪದಿಂದ ದಿತಿಪುತ್ರರಾದರು. ಹೃದಯದಲ್ಲಿದ್ದ ಸ್ವಾಮಿಯ ವೈರವೇ ಅವರ ಮರಣ ಕಾರಣವಾಯಿತು. ಆಮೇಲೆ ಅವರು ರಾವಣ ಕುಂಭಕರ್ಣರೆಂಬ ರಾಕ್ಷಸರಾದರು. ಹೃದಯದಿ ನಾಟಿದ ರಾಮಬಾಣದಿಂದ ಅವನನ್ನೇ ಚಿಂತಿಸಿ ಸತ್ತು ರಾಜರಾಗಿ ಜನಿಸಿದರು. ಆ ಶಿಶುಪಾಲ ದಂತವಕ್ತ್ರರು ವೈರನಿಮಿತ್ತವಾದ ಸ್ವಾಭಾವಿಕ ಭಕ್ತಿಯಿಂದ ಶ್ರೀಕೃಷ್ಣ ನಿಂದ ಸಂಹೃತರಾಗಿ ಆ ದಿವ್ಯ ಮಂಗಳಮೂರ್ತಿಯನ್ನು ನೋಡುತ್ತಾ ಅವರ ಪಾದಾರವಿಂದವನ್ನು ಪೊಂದಿ ತಮ್ಮ ಮೂಲರೂಪವನ್ನು ಸೇರಿದರು. ಭಕ್ತಿವಿಶೇಷದಿಂದ ಫಲವಿಶೇಷವು ನಿಶ್ಚಿತವು. ದ್ವೇಷವನ್ನು ಮಾಡಿದ ಚೈದ್ಯಾದಿಗಳು ಶ್ರೀಹರಿಯಂತೆ ನಿರ್ದೋಷರಾದುದು ಹೇಗೆ? ವೈರದಿಂದ ಮೋಕ್ಷವು ಬರುವುದೇ?' ಎಂದು ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಈ ಕಥೆಯನ್ನು ನಿನಗೆ ಪೇಳಿದೆನು. ಶ್ರೀರಾಮಕೃಷ್ಣ ನರಹರಿ ವೇದವ್ಯಾಸರ ಈ ಕಥೆಯು ಪವಿತ್ರವಾದುದು. ಆದಿದೈತ್ಯರ ವಧೆ, ಪ್ರಹ್ಲಾದನ ಭಕ್ತಿಜ್ಞಾನ, ವಿರಕ್ತಿ ರೂಪ ಮಹಿಮೆಗಳಿಂದ ಕೂಡಿದ ಈ ಪರಮ ಪವಿತ್ರಾ ಖ್ಯಾನವು ಸೃಷ್ಟಿ ಸ್ಥಿತಿ ಸಂಹಾರ ಕಾರಣನಾದ ನರಹರಿಯು ಗುಣಮಹಿಮೆಯಿಂದ ಬೆರೆತು, ಕಬ್ಬಿಗೆ ಜೇನಿಟ್ಟಂತಾಗಿ ಮಧುರ ಮನೋಹರವಾಗಿದೆ. ಶ್ರೀಹರಿಯು ನಿತ್ಯಾಪ್ರತಿಹತ ಸುಖಾತ್ಮ

ಕನು; ಅವನನ್ನು ಪೊಂದಲು ಭಕ್ತ್ಯಾದಿ ಭಾಗವತ ಧರ್ಮಗಳೇ ಸಾಧನವಾಗಿವೆ ಆಗಲಿ, ದ್ವೇಷ ವಿಲ್ಲ. ದ್ವೇಷ ಮಾಡಿದ ಅಸುರರಿಗೆ ತಮಸ್ಸನ್ನು, ಭಕ್ತರಾದ ಸುಜನರಿಗೆ ಮೋಕ್ಷವನ್ನುಕೊಡುವ ಶ್ರೀಹರಿಯು ಸಮನೇ ಸರಿ! ಈ ಪುಣ್ಯಕರವಾದ ಚರಿತೆಯನ್ನು ಶ್ರದ್ಧೆಯಿಂದ ಹೇಳುವವನು ಕೇಳುವವನು ಕೂಡ ದುಷ್ಕರ್ಮಪಾಶದಿಂದ ಮುಕ್ತಿಯನ್ನು ಪಡೆಯುವನು.

ದೈತ್ಯ ಗಜರಾಜನನ್ನು ಸೀಳಿ ಕೊಂದ ಆದಿಪುರುಷನಾದ ಶ್ರೀನೃಸಿಂಹನ ಲೀಲೆಯನ್ನು ಶ್ರದ್ಧೆಯಿಂದ ಪಠಿಸಿದವನು ಹಾಗೂ ಸಜ್ಜನ ಶಿಖಾಮಣಿಯು ದೈತ್ಯರಾಜಸುತನು ಆದ ಪ್ರಹ್ಲಾದನ ಮಹಿಮೆಯನ್ನು ಪಠಿಸಿ ಕೇಳಿದವನು ಕೂ ಶ್ರೀಹರಿಲೋಕದಲ್ಲಿ ನೆಲೆಸಿ ನಿರ್ಭಯನಾಗುವನು.

ಧರ್ಮರಾಜ! ನೀವೂ ಪ್ರಹ್ಲಾದನಂತೆ ದೊಡ್ಡ ಭಗವದ್ಭಕ್ತರಾಗಿರುವಿರಿ. ನಿಮ್ಮಂತಹ ಪುಣ್ಯವಂತರಿನ್ನಾರಿರುವರು? ಲೋಕಪಾವನರಾದ ಮುನಿಗಳು ತಾವಾಗಿ ಬಂದು ನಿಮ್ಮ ಪೂಜೆಯನ್ನು ಕೈಗೊಂಡು ನಿಮ್ಮ ಮನೆಯಲ್ಲಿ ನಿಂತ ನೀರಜಾಕ್ಷನ ಸಂದರ್ಶನಾನಂದವನ್ನು ಪಡೆಯಬೇಕೆಂದು ಕುತುಕದಿಂದಿರುವರು. ಈ ಕೃಷ್ಣನು ಸಾಕ್ಷಾದ್ವಿಷ್ಣುವೆಂದು ತಿಳಿ. ಜಲಪಾತ ಪ್ರಭವ ಭವ ಮುಖ ಸುರರು ಇವನ ಮಹಿಮೆಯನ್ನು ಸಾಕಲ್ಯೇನ ತಿಳಿಯಲಾರದಿರುವರು. ಅಪ್ರಾಕೃತ ಜ್ಞಾನಾನಂದ ಶರೀರನಾದ ಶ್ರೀಹರಿಯು ನಿಮಗೆ ಪ್ರಿಯನೆನಿಸಿ, ಮಿತ್ರನಾಗಿ, ದೂತ ನಾಗಿ, ಮಾತುಲೇಯನಾಗಿ ನಿಂತು ಸಲಹಿದ. ಹಾಗೂ ನಿಮ್ಮ ಅಗ್ರಪೂಜೆಯನ್ನು ಸ್ವೀಕರಿಸಿ ಮಹಾಫಲಪ್ರದನಾದ. ಇದು ನಿನ್ನ ಭಾಗ್ಯವು ಧರ್ಮರಾಜಾ! ಇವನು ಜ್ಞಾನ ಭಕ್ತಿ ವೈರಾಗ್ಯ ವಂತರಿಗೆ ಒಲಿದು ಅವರನ್ನು ಸಲಹುವನು. ಶ್ರೀಕೃಷ್ಣನಿಗೆ ನಾನು ನಮಸ್ಕರಿಸಿ ಈ ಪ್ರಹ್ಲಾದ ಚರಿತೆಯ ಕಥನ ಪುಣ್ಯವನ್ನು ಅವರ ಅಡಿದಾವರೆಯಲ್ಲಿ ಅರ್ಪಿಸುತ್ತಿರುವೆನು. ಶ್ರೀನೃಹರೇ! ಪ್ರಸನ್ನನಾಗು – ಎಂದು ನಾರದನು ಧರ್ಮರಾಜನಿಗೆ ಹೇಳಿದನು.

## ೧೧. ತ್ರಿಪುರ ಸಂಹಾರವು

ನಾರದನು ಹೇಳಿದನು–

'ಧರ್ಮರಾಜಾ! ಅನಂತ ಮಾಯಾ ವಿದ್ಯಾನಿಪುಣನಾದ ಮಯನ ಮಾಯೆಯಿಂದ ದಿಕ್ಕು ತೋಚದೆ ಸುಮ್ಮನಾದ ರುದ್ರನಿಗೆ ಈ ಶ್ರೀಹರಿಯ ಸಹಾಯಕನಾಗಿ ನಿಂತು ರುದ್ರನಿಗೆ ತ್ರಿಪುರ ಸಂಹರನೆಂಬ ಯಶವನ್ನು ಕೊಟ್ಟು ಸಲಹಿದನು' ಎನ್ನಲು ರಾಜನು 'ಸ್ವಾಮೀ! ಜಗದೀಶ ನಾದ ಈಶ್ವರನು ಮಾಡಿದ ಕೆಲಸವಾವುದು?ಶ್ರೀಕೃಷ್ಣನು ಈಶ್ವರನಿಗೆ ಸಹಾಯ ಮಾಡಿದುದು ಹೇಗೆ?' ಎಂದು ಕೇಳಿದನು.

ನಾರದನು ನುಡಿದನು–

ಶ್ರೀಹರಿಯ ದಯದಿಂದ ವಿಜೃಂಭಿಸಿನಿಂತ ದೇವತೆಗಳಿಗೆ ಸೋತು ದೈತ್ಯರು ಮಯನಿಗೆ ಶರಣಾಗತರಾದರು. ಮಾಯಾಜಾಲ ನಿಪುಣನಾದ ಮಯನು ಮೂರು ವಿಮಾನ ಪುರಗಳನ್ನು ನಿರ್ಮಿಸಿದನು. ಬಂಗಾರ, ಬೆಳ್ಳಿ, ಕಬ್ಬಿಣದಿಂದ ಮಾಡಿದ ಆ ಪುರಗಳು ಆಯುಧಾದಿ ಪರಿಕರ ಗಳಿಂದ ಪೂರ್ಣವಾಗಿ, ಶತ್ರುದುರ್ಭೇದ್ಯವಾಗಿದ್ದವು. ಅಸುರಸೇನಾ ನಾಯಕರು ತ್ರಿಪುರಸಂಚಾರಿ ಗಳಾಗಿ ಸ್ಮರಣಮಾತ್ರ ವೇಗದಿಂದ ಬಂದು ಹಿಂದಿನ ವೈರವನ್ನು ನೆನೆದು ತ್ರಿಲೋಕದ ಜನರನ್ನೂ, ದೇವತೆಗಳನ್ನೂ ಪೀಡಿಸುತ್ತಿದ್ದರು. ಇಂದ್ರಾದಿ ದೇವತೆಗಳಾದ ಶಂಕರನಿಗೆ ಮೊರೆಯಿಟ್ಟು 'ದೇವಾ!

ನಿನ್ನವರಾದ ನಮ್ಮನ್ನು ತ್ರಿಪುರಾಸುರರಿಂದ ಕಾಪಾಡು' ಎಂದು ಬೇಡಿದರು. ಶಿವನು ಅವರಲ್ಲಿ ದಯೆತೋರಿ 'ಭಯಪಡಬೇಡಿ' ಎಂದೆನ್ನುತ್ತ ಬಾಣಗಳನ್ನು ಹೂಡಿ ಪುರಗಳನ್ನು ಹೊಡೆದನು. ಸೂರ್ಯಮಂಡಲದಿಂದ ಹೊರಬರುವ ಕಿರಣಗಳಂತೆ ಶಿವಧನುರ್ಮುಕ್ತನಾರಾಚಗಳು ಪುರಗಳನ್ನು ಮುತ್ತಿದವು. ಬಾಣಾಗ್ನಿಯಿಂದ ಬಂದು ತ್ರಿಪುರವಾಸಿ ದೈತ್ಯರು ಕೆಳಗೆ ಬೀಳಲು, ಮಯನು ತಾನು ನಿರ್ಮಿಸಿಟ್ಟಿದ್ದ ಸಿದ್ಧಾಮೃತರಸಕೂಪದಲ್ಲಿ ಅವರನ್ನು ಅದ್ದಿ ತೆಗೆದು ಬದುಕಿಸಿದನು. ಆಗ ಅಸುರರು ದ್ವಿಗುಣ ಬಲದರ್ಪಿತರಾಗಿ ಮೇಘಮಂಡಲವನ್ನು ಖಂಡಿಸುವಂತೆ ಬೆಳೆದು ನಿಂತರು. ಮೇಘದಿಂದ ಸೂಸಿಬರುವ ಸಿಡಿಸ ಕುಡಿಯಂತೆ ಉರಿಯುವ ರಾಕ್ಷಸರು ಮತ್ತೆ ಮತ್ತೆ ಬರುವುದನ್ನು ನೋಡಿ ಭಗ್ನಸಂಕಲ್ಪನಾದ ರುದ್ರನು ನಿರುತ್ಸಾಹನಾಗಿ ಸುಮ್ಮನೆ ನಿಂತನು.

ಶ್ರೀಹರಿಯು ಶಿವನ ಕೀರ್ತಿವರ್ಧಕನಾಗಿ ಒಂದು ಉಪಾಯವನ್ನು ಹೂಡಿದನು. ತಾನು ಆಕಳಾದನು, ಬ್ರಹ್ಮನನ್ನು ಕರುವಾಗಿಸಿದನು;ಮಧ್ಯಂದಿನ ಮಾರ್ತಾಂಡನು ಲೋಕವನ್ನು ಸುಡುವ ಸಮಯದಲ್ಲಿ ಗೋವು ಕರುವಿನಿಂದ ಕೂಡಿ ಬಂದು ಅಮೃತರಸಕೂಪದಲ್ಲಿದ್ದ ಮೃತಸಂಜೀವ ನೀರಸವನ್ನೆಲ್ಲ ಕುಡಿದು ಬಾವಿಯನ್ನು ಬರಿದಾಗಿಸಿತು. ಈ ವಿಚಿತ್ರ ಗೋವತ್ಸಗಳನ್ನು ನೋಡಿ ಮೋಹಿತರಾದ ದೈತ್ಯರು ರಸವನ್ನು ಕುಡಿಯುವ ಆಕಳನ್ನು ಹೊಡೆದೋಡಿಸದೆ ಸುಮ್ಮನಿದ್ದರು. ನೋಡುತ್ತಿದ್ದಂತೆಯೇ ತುರುಕರುಗಳು ಮಾಯವಾಗಲು, ಮಯನು ಭಗವನ್ಮಹಿಮೆಯನ್ನು ತಿಳಿದು ಶೋಕಿಸದೆ ಚಿಂತೆಯನ್ನು ಮಾಡುತ್ತಲಿದ್ದ ದೈತ್ಯರನ್ನು ನೋಡಿ ಇಂತು ನುಡಿದನು– ದೇವನಾಗಲಿ, ಅಸುರನಾಗಲಿ, ಮಾನವನಾಗಲಿ, ದೈವವು ಕೊಟ್ಟ ಸುಖದುಃಖಾದಿಗಳನ್ನು ತಪ್ಪದೇ ಅನುಭವಿಸಬೇಕಾಗಿದೆ. ಶ್ರೀಶನಲ್ಲದ ಮತ್ತಾರೂ ಸ್ವತಂತ್ರರಿಲ್ಲ.

ಆಗ ಶ್ರೀಹರಿಯು ತನ್ನ ಭಾಮ್ಯಾದಿ ದೇವತಾಶಕ್ತಿಗಳಿಂದ ಶಂಭುವಿಗೆ ಯುದ್ಧೋಪಕರಣಗಳನ್ನು ಒದಗಿಸಿದನು. ಶಿವನಿಗೆ ಧರ್ಮ ಜ್ಞಾನ ವಿರಕ್ತಿ ತಪೋ ವಿದ್ಯಾ ಕ್ರಿಯಾ ಬಲಗಳನ್ನು ಅನುಗ್ರಹಿಸಿದನು. ರಥ, ಸೂತ, ಧ್ವಜ, ವಾಹನ, ಧನು, ಕವಚಗಳನ್ನೊದಗಿಸಿ ನಿಂತ ದೇವತೆಗಳಂತೆ ಶ್ರೀಶನು ಬಾಣರೂಪನಾಗಿ ಶಿವನಿಗೆ ಸಹಾಯ ಮಾಡಿದನು. ಅಭಿಜನ್ಮುಹೂರ್ತದಲ್ಲಿ ಶಂಕರನು ಭಗವತ್ತೇಜೋಪಬೃಂಹಿತನಾಗಿ ನಾರಾಯಣಬಾಣದಿಂದ ತ್ರಿಪುರಗಳನ್ನು ಸುಟ್ಟು ಅಸುರರ ಅಸುಗಳನ್ನಪಹರಿಸಿ ತ್ರಿಪುರಾರಿ ಎನಿಸಿ ಮೆರೆದನು. ಶಿವನ ವಿಜಯವನ್ನು ಕಂಡು ದೇವದುಂದುಭಿಗಳು ಮೊಳಗಿದವು. ಗಂಧರ್ವರು ಹಾಡಿದರು. ಅಪ್ಸರೆಯರಾಡಿದರು. ದೇವತೆಗಳು ದೇವದೇವನಾದ ಶಿವನ ಶಿರದಿ ಸುಮವೃಷ್ಟಿಯನ್ನು ಕರೆದರು. ಸನಕಾದಿಗಳು ತ್ರಿಪುರಾರಿಯನ್ನು ನುತಿಸಿ ವಂದಿಸಿದರು.

ಇಂತು ಶ್ರೀಹರಿಯು ನಾನಾವತಾರಗಳಿಂದ ಮನುಜನಂತೆ ನಟಿಸಿ ಮಾಡುವ ಲೀಲೆಗಳನ್ನು ಋಷಿಗಳು ಪಾಡಿ ಪೊಗಳುತ್ತಿರುವರು. ಈ ಲೋಕಗುರುವಿನ ಮಹಿಮೆಯು ಅನಂತವಾಗಿದೆ. 'ಧರ್ಮರಾಜಾ! ಮತ್ತೇನನ್ನು ಕೇಳಲಿಚ್ಛಿಸು?' ಎಂದು ನಾರದನು ಕೇಳಿದನು.

## ೧೨. ಸನಾತನ ಧರ್ಮನಿರೂಪಣೆ

ಪರೀಕ್ಷಿತನೇ! ನಾರದರು ವರ್ಣಿಸಿದ ಶ್ರೀನೃಸಿಂಹದೇವನ ಮಹಿಮೆಯನ್ನು ಮಹಾಭಕ್ತನಾದ ಪ್ರಹ್ಲಾದನ ಚರಿತವನ್ನು ಕೇಳಿ ಧರ್ಮರಾಜನು ಸಂತೋಷಪಟ್ಟು ಮತ್ತೆ ನಾರದನನ್ನಿಂತು ಪ್ರಶ್ನಿಸಿದನು–

ಪೂಜ್ಯನೇ! ವರ್ಣಾಶ್ರಮಾಚಾರಯುತವಾದ ಸನಾತನ ಧರ್ಮವನ್ನು ಕೇಳಲಿಚ್ಛಿಸುವೆನು. ಮೋಕ್ಷಸಾಧನವೆನಿಸುವ ಸನಾತನ ಧರ್ಮವನ್ನು ನಿನ್ನಂತೆ ಕರುಣಾಶಾಲಿಗಳು, ಸಾಧುಶೀಲಿಗಳು ಆದ ವಿಪ್ರರಲ್ಲದೆ ಮತ್ತಿನ್ನಾರು ತಿಳಿದಿರುವರು? ನೀನು ಸಾಕ್ಷಾದ್ಬ್ರಹ್ಮಸುತನು. ತಂದೆಗೆ ಸಮ್ಮತನು; ನಿನ್ನ ತಪೋಜ್ಞಾನಗಳಿಂದ ಆತನಿಗೆ ಪ್ರೀತಿಪಾತ್ರನು– ಎಂದು ಕೇಳಲು ನಾರದನು ಹೇಳಿದನು–

ಜನ್ಮರಹಿತನು, ಲೋಕಭರಿತನು, ಧರ್ಮಸೇತು ಪಾಲಕನು ಆದ ನಾರಾಯಣನಿಗೂ ಧರ್ಮೋಪದೇಶಕರನಾದ ವಿರಿಂಚನಿಗೂ ವಂದಿಸಿ ಶ್ರೀನಾರಾಯಣ ಮುಖ ನಿಃಸೃತವಾದ ಭಾಗವತ ಧರ್ಮಗಳನ್ನು ಹೇಳುವೆನು. ಧರ್ಮಪ್ರಜೇಶನಿಗೆ ಮೂರ್ತಿದೇವಿಯಲ್ಲಿ ಅವತರಿಸಿ ಬದರಿಕಾಶ್ರಮದಲ್ಲಿ ಲೋಕಕ್ಷೇಮಕ್ಕೆಂದು ತಪವನ್ನು ಮಾಡುವ ಶ್ರೀನಾರಾಯಣ ಋಷಿಯು ಸರ್ವಧರ್ಮ ಫಲಪ್ರದನಾಗಿರುವನು; ಧರ್ಮವಿಷಯನೂ ಅವನೇ. ಸರ್ವದೇವಪ್ರತಿಪಾದ್ಯನಾದ ಆ ದೇವೋತ್ತಮನು ಧರ್ಮದಿಂದಲೇ ಪ್ರೀತನಾಗುವನು.

ಸತ್ಯ, ದಯಾ, ತಪಸ್ಸು, ಶೌಚ, ತಿತಿಕ್ಷಾ, ಇಜ್ಯ, ಶಮ, ದಮ, ಅಹಿಂಸಾ, ಬ್ರಹ್ಮಚರ್ಯ, ತ್ಯಾಗ, ವೇದಾಧ್ಯಯನ, ಆರ್ಜವ, ತೃಪ್ತಿ, ಸಜ್ಜನಸೇವೆ, ವಿಷಯೇಚ್ಛಾ ನಿವೃತ್ತಿ, ಮನುಜರ ಮೋಕ್ಷದೂರ ಪ್ರವರ್ತನ ದರ್ಶನ, ಮಂತ್ರಜಪ, ಆತ್ಮವಿಚಾರ, ಅನ್ನಾದಿ ವಿಭಜನ, ಸರ್ವಾಂತರ್ಯಾಮಿ ಹರಿದರ್ಶನ, ಶ್ರವಣ, ಕೀರ್ತನ, ಸ್ಮರಣ, ಮಹಜ್ಜನ ಪೂಜನ, ಪಾದವಂದನ, ಸಖ್ಯ, ದಾಸ್ಯ, ಅರ್ಚನ, ಆತ್ಮಸಮರ್ಪಣವೆಂಬ ಮೂವತ್ತು ಲಕ್ಷಣಗಳಿಂದ ಕೂಡಿದ ಭಾಗವತ ಧರ್ಮವು ಹರಿತೋಷಕರವಾಗಿದೆ.

ಸಕಲ ಸಂಸ್ಕಾರಯುಕ್ತನಾದವನೇ ದ್ವಿಜನು. ಅವನೇ ಸಕಲ ಭಾಗವತ ಧರ್ಮವನ್ನು ನಡೆಸಲು ಅಧಿಕಾರಿ ಎನಿಸುವನು.

ಬ್ರಾಹ್ಮಣನಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಆರು; ಕ್ಷತ್ರಿಯನಿಗೆ ಯಜನ, ಅಧ್ಯಯನ, ದಾನಗಳೆಂಬ ಮೂರು; ವೈಶ್ಯನಿಗೆ ದಾನಾಧ್ಯಯನಗಳು ಅಥವಾ ದಾನವು ಒಂದೇ; ಎಂಬ ವರ್ಣಧರ್ಮಗಳು ವೇದಪ್ರತಿಪಾದಿತವಾಗಿವೆ. ಜನ್ಮಶುದ್ಧನು, ಆಚಾರಶುದ್ಧನು ಆದ ಬ್ರಾಹ್ಮಣನಿಗೇ ವೇದವಿಹಿತಕಾರೀಯಾದಿ ಯಜ್ಞಕರ್ಮಗಳಲ್ಲಿ ಅಧಿಕಾರವಿದೆ. ವಿಪ್ರೇತರರಿಗೆ ಪ್ರತಿಗ್ರಹಾಧಿಕಾರವಿಲ್ಲ. ರಾಜನಿಗೆ ಬ್ರಾಹ್ಮಣನಿಂದ ಬಿಟ್ಟನ್ಯರಿಂದ ಸ್ವೀಕರಿಸಿದ ಕರ ದಂಡಾದಿ ಧನದಿಂದ ವೃತ್ತಿಯು ವಿಹಿತವಾಗಿದೆ. ವೈಶ್ಯನು ಕೃಷಿ ಗೋಪಾಲನ ವಾಣಿಜ್ಯಗಳನ್ನು ಅವಲಂಬಿಸಿ ಬ್ರಾಹ್ಮಣಾನುಕೂಲನಾಗಿರಬೇಕು. ಶೂದ್ರನು ದ್ವಿಜನರ ಸೇವೆಯಿಂದ ಜೀವನವನ್ನು ನಡೆಯಿಸಲು ಬೇಕು.

ವಾರ್ತೆ, ಶಾಲೀನ, ಯಾಯಾವರ್ಯ, ಶಿಲೋಂಛನಗಳು ವಿಪ್ರವೃತ್ತಿಗಳು. ಅಧಮನು ಉತ್ತಮ ವರ್ಣವೃತ್ತಿಯನ್ನು ಆಪತ್ಸಮಯದಲ್ಲಿ ಅಲ್ಲದೆ ಇತರ ಸಮಯದಲ್ಲಿ ಅನುಸರಿಸ

ಬಾರದು. ಅಪತ್ತಿನಲ್ಲಿ ಇತರ ವರ್ಣವೃತ್ತಿಯನ್ನು ನಡೆಸಿದರೂ ಅದು ತೊಲಗಲು ತನ್ನದೇ ಆದ ವೃತ್ತಿಯನ್ನು ಸೇರಿಸುವದು ಅವಶ್ಯವಾಗಿದೆ.

ಋತ, ಅಮೃತ, ಮೃತ, ಪ್ರಮೃತ, ಸತ್ಯಾನೃತಗಳಿಂದ ಜೀವಿಸಬಹುದಾಗಲಿ ಶ್ವವೃತ್ತಿಯಿಂದ ಬದುಕುವುದು ಶಾಸ್ತ್ರವಿಹಿತವೆನಿಸುವುದಿಲ್ಲ.

ಋತವೆಂದರೆ ಕಣದಲ್ಲಿ ಆರಿಸಿ ತಂದ ಕಾಳಿನಲ್ಲಿ ಜೀವಿಸುವುದು;ಆಯಚಿತವಾಗಿ ಬಂದುದೇ ಅಮೃತವು; ನಿತ್ಯವೂ ಯಾಚಿಸಿದರೆ ಮೃತವು; ಕೃಷಿಗೆ ಪ್ರಮೃತವೆಂಬುವರು; ಸತ್ಯಾನೃತವೆಂದರೆ ವಾಣಿಜ್ಯವು; ಶ್ವವೃತ್ತಿ ಎಂದರೆ ನೀಚನಸೇವೆ;ಇದನ್ನು ಬ್ರಾಹ್ಮಣ ಕ್ಷತ್ರಿಯರು ಸರ್ವಥಾ ಮಾಡಲಾಗದು. ಸರ್ವವೇದಮಯನಾದ ವಿಪ್ರನು ಸರ್ವದೇವಮಯನಾದ ರಾಜನು ಶ್ವವೃತ್ತಿ ಯನ್ನು ಮಾಡಿ ಜೀವಿಸಬಾರದು.

ಶಮ, ದಮ, ತಪಸ್ಸು, ಶೌಚ, ತೃಪ್ತಿ, ಕ್ಷಮೆ, ಆರ್ಜವ, ದಾನ, ದಯಾ, ಅಚ್ಯುತ ಚಿಂತನೆ, ಸತ್ಯವಚನಗಳು ಬ್ರಹ್ಮವರ್ಣ ಲಕ್ಷಣಗಳು,

ಶೌರ್ಯ, ವೀರ್ಯ, ಧೈರ್ಯ, ತೇಜಸ್ಸು, ತ್ಯಾಗ, ಮನೋಜಯ, ಕ್ಷಮ, ಬ್ರಾಹ್ಮಣ ವಿಶ್ವಾಸ, ಪ್ರಸನ್ನತೆ, ರಕ್ಷಣೆಗಳು ಕ್ಷತ್ರಿಯ ಲಕ್ಷಣಗಳು.

ದೇವಗುರುಗೋಬ್ರಾಹ್ಮಣಪೂಜೆ, ಧರ್ಮಾರ್ಥಕಾಮಾಗಳಿಂದ ಹರಿಪ್ರೀತಿ ಸಂಪಾದನೆ, ದೈವಭಕ್ತಿ, ಪ್ರಯತ್ನಶೀಲತೆ, ನೈಪುಣ್ಯಗಳು ವೈಶ್ಯ ಲಕ್ಷಣಗಳು.

ಆಚಮನಮಾತ್ರದಿಂದ ಶೌಚಲಾಭ, ಸೇವೆ, ಸ್ವಾಮಿಭಕ್ತಿ, ನಿಷ್ಕಾಪಟ್ಯ, ಅಮಂತ್ರಕ ಯಜ್ಞ, ಚೌರ್ಯರಾಹಿತ್ಯ, ಕೇಶ ಸ್ಮಶ್ರು ನಖಾದಿ ಮುನಿವೇಷ ವರ್ಜನೆ, ಗೋವಿಪ್ರ ರಕ್ಷಣಗಳೇ ಶೂದ್ರ ಲಕ್ಷಣಗಳು.

ಸ್ತ್ರೀಯರಿಗೆ ಪತಿಯೇ ದೇವನೆನಿಸುವನು. ಅವನ ಸೇವೆಯನ್ನು ಅವನಿಗೆ ಅನುಕೂಲಳಾಗಿ ಮಾಡುವುದು ಗೃಹಿಣೀಧರ್ಮವು. ಭರ್ತೃಬಂಧುಗಳಿಗೆ ಅನುವ್ರತಳಾಗಿ ಪತಿಯಂತೆ ಇಷ್ಟಾನಿಷ್ಟ ಗಳನ್ನು ಸ್ವೀಕರಿಸುವವಳೇ ಪತಿವ್ರತೆಯು. ಮನೆಯನ್ನು ಸಾರಿಸಿ, ರಂಗವಲ್ಲಿಯನ್ನಿಟ್ಟು ಅಲಂಕರಿ ಸುವುದು, ತಾನೂ ಅಲಂಕೃತಳಾಗಿ ಶುಭ್ರವಸನಳಾಗಿರುವುದು, ಪತಿಯನ್ನು ಕಾಲಕಾಲದಲ್ಲಿ ತಕ್ಕ ವಿಷಯಗಳಿಂದಲೂ, ಪ್ರಿಯಹಿತವಾಕ್ಯಗಳಿಂದಲೂ, ಪ್ರೇಮದಿಂದಲೂ ಸೇವಿಸುವುದು ಕೂಡ ತರುಣೀ ಧರ್ಮವಾಗಿದೆ. ವನಿತೆಗೆ ಅಚೋಗ್ಯಾಭಿಲಾಷೆ ಕೂಡದು. ಅವಳು ತೃಪ್ತಳು, ಶಾಂತಳು, ದಾಂತಳು, ಧರ್ಮತತ್ಪರಳು, ಪ್ರಿಯಸತ್ಯವಚನಳು, ಶುದ್ಧಳು, ಪ್ರಮಾದಾಲಸ್ಯ ದೂರಳು ಆಗಿರಬೇಕು. ಪತಿಯು ಬ್ರಹ್ಮಹತ್ಯಾದಿ ಮಹಾಪಾತಕಿಯಾದೊಡೆ ಬಿಡಬಹುದಾಗಲಿ, ತಾನು ಅನ್ಯಪತಿಯನ್ನು ಸ್ವೀಕರಿಸಲಾಗದು. ಶ್ರೀದೇವಿಯು ಹರಿಪರಳಾಗಿರುವಂತೆ ಪತಿಯು ಅಂತರ್ಯಾಮಿಯನ್ನು ನೆನೆದು ಪತಿಸೇವೆಯನ್ನು ಮಾಡುವ ಮಾನಿನಿಯು ವೈಕುಂಠದಲ್ಲಿ ತನ್ನ ಪತಿಯೊಡಗೂಡಿ ಸುಖದಿಂದಿರುವಳು.

ಸಂಕರ ಜಾತಿಯವರ ವೃತ್ತಿಯು ಕುಲಕ್ಕೆ ತಕ್ಕಂತೆ ವಿವಿಧವಾಗಿದೆ. ರಜಕಾದಿ ಸಪ್ತಕಾರು ಜನರು, ಹಾಗೂ ಚಾಂಡಾಲಾದಿಗಳು ಕೂಡ ಕದಿಯದೆ ಪಾಪದೂರರಾಗಿ ಜೀವಿಸುವುದು ವಿಹಿತ ವಾಗಿದೆ. ವೇದವಿದ್ಬ್ರಾಹ್ಮಣರು ಯುಗಾನುಸಾರವಾಗಿ ಧರ್ಮವನ್ನು ನಿರೂಪಿಸುವ ಗ್ರಂಥಗಳನ್ನು ತಿಳಿದು, ತಿಳಿದವರಿಂದ ಕೇಳಿ ಸ್ವಧರ್ಮದಿಂದ ನಡೆಯುವವನು ಶುಭ ಫಲವನ್ನೂ ಕೊನೆಗೆ

ಮೋಕ್ಷವನ್ನೂ ಹೊಂದುವನು. ಪುಣ್ಯ ಪಾಪಲಕ್ಷಣ ಕರ್ಮಪಾಶದಿಂದ ಬದ್ಧನಾಗದೆ ಸ್ವಧರ್ಮಾಸಕ್ತನು ಭಕ್ತನೆನಿಸಿ ಶ್ರೀಹರಿಲೋಕವನ್ನು ಸೇರುವನು.

ಹೊಲವನ್ನು ಮತ್ತೆ ಮತ್ತೆ ಉತ್ತಿ ಫಲವನ್ನು ತೆಗೆಯಲು ಹೊಲದ ಸಸ್ಯಜನನ ಶಕ್ತಿಯೇ ನಾಶವಾಗುತ್ತ ಪೋಗುವುದು. ಕೊನೆಗೆ ಹಾಕಿದ ಬೀಜ ಕೂಡ ಸಿಗದೆ ನಷ್ಟವಾಗುವುದು. ಅಂತೆಯೇ ಕಾಮಸೇವನೆಯು ಹೆಚ್ಚಾದಂತೆ ಮನವು ನಿರ್ವೀರ್ಯವಾಗುವುದು. ಕ್ಷಯಾದಿ ರೋಗಬಾಧೆಯು ಉಂಟಾಗುವುದು. ಅಗ್ನಿಜ್ವಾಲೆಯನ್ನು ನೀರಬಿಂದುಗಳಿಂದ ಆರಿಸಲಾಗದೆಂದರಿತ ವಿವೇಕಿಯು ಮನವನ್ನು ವಿಷಯಗಳಿಂದ ಮರಳಿಸಿ ಶ್ರೀಹರಿಯಲ್ಲಿಟ್ಟು ವಿರಕ್ತನಾಗಿ ಜ್ಞಾನ ಭಕ್ತಿ ಸಹಾಯದಿಂದ ಮೋಕ್ಷವನ್ನು ಹೊಂದುವನು.

ಒಂದು ವರ್ಣಸೂಚಕವಾದ ಲಕ್ಷಣವು ಇನ್ನೊಂದೆಡೆ ಕಂಡುಬಂದರೆ ಅದು ಸಂಸ್ಕಾರ ಲಬ್ಧವಾದುದೆಂದು ತಿಳಿಯಬೇಕು. ವರ್ಣಲಕ್ಷಣ ವ್ಯತ್ಯಾಸದಿಂದ ಕುಲಜಾತಿ ವ್ಯತ್ಯಯವನ್ನು ಮಾಡಬಾರದು.

## ೧೨. ಬ್ರಹ್ಮಚರ್ಯ ವಾನಪ್ರಸ್ಥ ಧರ್ಮಗಳು

ನಾರದನು ಹೇಳಿದನು–

ಬ್ರಹ್ಮಚಾರಿಯು ಗುರುಕುಲದಲ್ಲಿರಬೇಕು. ಇಂದ್ರಿಯಗಳನ್ನು ವಶದಲ್ಲಿಟ್ಟು ಗುರುಗಳಿಗೆ ಹಿತವಾದುದನ್ನೇ ಮಾಡಬೇಕು. ಗುರುಗಳಲ್ಲಿ ವಿನಯದಿಂದ ನಡೆಯುತ್ತಾ ದೃಢಸ್ನೇಹವನ್ನು ಮಾಡಬೇಕು. ಗುರು, ಸೂರ್ಯ, ಅಗ್ನಿದೇವತೆಗಳನ್ನು ಸಾಯುಂಪ್ರಾತ್ಸಮಯಗಳಲ್ಲಿ ಪೂಜಿಸಬೇಕು. ಸಂಧ್ಯಾಕಾಲದಲ್ಲಿ ಮೌನವನ್ನು ಧರಿಸಿ ಗುಣಪೂರ್ಣನಾದ ನಾರಾಯಣನನ್ನು ಗಾಯತ್ರಿಯಿಂದ ಧ್ಯಾನಿಸಿ ಜಪಿಸಬೇಕು. ಗುರುಗಳು ತಾವಾಗಿ ಕರೆದಾಗ ಕೂತು ವೇದವನ್ನೋದಿ, ಪಾಠ ಪ್ರಾರಂಭದಲ್ಲಿಯೂ ಕೊನೆಯಲ್ಲಿಯೂ ಗುರುವಿಗೆ ವಂದಿಸಬೇಕು. ಮೇಖಲ, ಅಜಿನ, ಜಟ, ಕಮಂಡಲು, ದಂಡ, ಉಪವೀತ, ಕುಶ ಪವಿತ್ರಾದಿಗಳನ್ನು ವಿಹಿತವಾದಂತೆ ಧರಿಸಬೇಕು. ಎರಡು ಸಂಧ್ಯೆಗಳಲ್ಲಿ ತಂದ ಭಿಕ್ಷಾನ್ನವನ್ನು ಗುರುಗಳಿಗೆ ನಿವೇದಿಸಿ ಅವರು ಉಣ್ಣೆಂದರೆ ಉಣಬೇಕು. ಅಪರಾಧವಾದಾಗ ಒಪ್ಪತ್ತೂಟ ಮಾಡೆಂದರೆ ಅಂತೆಯೇ ಮಾಡಬೇಕು. ಸುಶೀಲನು, ಮಿತ ಭೋಜನನು,ಸೇವಾಸಮರ್ಥನು, ಶ್ರದ್ಧಾಯುಕ್ತನು, ಜಿತೇಂದ್ರಿಯನು ಆಗಿ ಸ್ತ್ರೀಯರಿಂದಲೂ ಸ್ತ್ರೈಣರಿಂದಲೂ ದೂರನಾಗಿರಬೇಕು. ತರುಣೀವಿಷಯಕ ಸಲ್ಲಾಪಗಳನ್ನಾಡದೆ ಕೆಲಸವಿಲ್ಲದಾಗ ಅವರ ಕೂಡ ಮಾತನಾಡದೆ ಎಚ್ಚರಿಕೆಯಿಂದಿರಬೇಕು.

ಇಂದ್ರಿಯಗಳು ಪ್ರಮಾದಕರಗಳು ಹಾಗೂ ಶೀಘ್ರವಿಷಯಗಾಮಿಗಳು ನಿರ್ಜಿತೇಂದ್ರಿಯನೆನಿಸಿದ ಯತಿಯ ಮನವನ್ನೂ ಕೆಡಿಸಿಬಿಡುವುವು.

ಸ್ನಾನ, ತೈಲಾಭ್ಯಂಗ, ಕೇಶವಿನ್ಯಾಸ, ಕ್ರೀಡಾದಿಗಳನ್ನು ಯುವತಿಯರಾದ ಗುರುಗೃಹ ನಾರಿಯರೊಡನೆ ಮಾಡಬಾರದು. ಮಧುಸೇವೆ, ಮಾಂಸಭಕ್ಷಣ, ಶುಲ್ಕಸ್ವೀಕಾರ, ಪ್ರಾಣಿ ಹಿಂಸೆಗಳನ್ನು ಸರ್ವಥಾ ಮಾಡಬಾರದು. ಕೆಟ್ಟ ಮಾತನ್ನು ನುಡಿಯಬಾರದು. ಪ್ರಮದಾ ಜನವು ಅಗ್ನಿಯಂತೆ ದುರ್ದಾಂತವಾಗಿರಲು ಘೃತಕುಂಭದಂತಿರುವ ಪುರುಷನು ಕರಗಿ ನೀರಾಗದಿರುವನೇ?

ಯೋಗ್ಯ ಲೋಕವ್ಯವಹಾರ ಸಮಯವಲ್ಲದ ಇತರ ಕಾಲದಲ್ಲಿ ಹಡೆದ ಕುವರಿಯೊಡನೆಯೂ ಏಕಾಂತದಲ್ಲಿರುವುದು ಪುರುಷನಿಗೆ ಉಚಿತವಲ್ಲ.

ದೇಹಾಭಿಮಾನವೂ ಬಂಧಕವಾಗಿದೆ. ಶ್ರೀಹರಿಯು ಈ ಅಜ್ಞಾನಪಾಶವನ್ನು ಬಿಚ್ಚಿ ಬಿಡಿಸುವವರೆಗೂ ನಾನು ನನ್ನದೆಂಬ ದುರಹಂಕಾರವು ಪೀಡಿಸಿ ಕೆಡಿಸುತ್ತಿರುವುದು. ಬ್ರಹ್ಮಚಾರಿ, ಗೃಹಸ್ಥ, ಯತಿ ಮೊದಲಾದ ಸರ್ವರಿಗೂ ಸ್ತ್ರೀವಿಷಯಕ ಪ್ರಮಾದದಿಂದ ಜಾಗ್ರತರಾಗಿರುವುದು ಕರ್ತವ್ಯವಾಗಿದೆ. ಗೃಹಸ್ಥನು ಋತುಕಾಲದಿ ಸ್ವಪತ್ನೀ ಸಂಪರ್ಕದಿಂದ ದೂಷಿತನಾಗದೆ ಇರುವನು. ಗೃಹಸ್ಥನಾದಮೇಲೆ ಗುರುಕುಲವಾದ ಭೈಕ್ಷ್ಯಚರ್ಯೆಗಳಿಲ್ಲ. ಆದರೂ ಪಂಚಯಜ್ಞಾಗಿ ಸುವ್ರತ ಶೀಲನಾದ ಬ್ರಾಹ್ಮಣನು ಬ್ರಹ್ಮಚಾರಿಯಂತಯೇ ಅಭ್ಯಂಜನ, ಮಧು, ಮಾಂಸ, ಸ್ರಕ್ಚಂದನ ಲೇಪಾಲಂಕರಣಗಳನ್ನು ವ್ರತಕಾಲದಲ್ಲಿ ಬಿಡಬೇಕು. ವೇದವಿಚಾರದಿಂದ ಬ್ರಹ್ಮಜ್ಞಾನವನ್ನು ಪಡೆದು, ಉಪನಿಷದ್ವೇದಶಾಸ್ತ್ರಗಳನ್ನುಪದೇಶಿಸಿ ಸಲಹಿದ ಗುರುವಿಗೆ ಬೇಕಾದ ಗುರು ದಕ್ಷಿಣೆ ಯನ್ನು (ಶಕ್ತಿಯಿದ್ದರೆ) ಶಿಷ್ಯನು ಕೊಡಬೇಕು; ಅನಂತರದಲ್ಲಿ ಬ್ರಹ್ಮಚಾರಿಯು ಗೃಹಸ್ಥನಾಗಲೂ ಬಹುದು; ಅಥವಾ ಸನ್ಯಾಸವನ್ನೂ ಸ್ವೀಕರಿಸಬಹುದು. ಅಗ್ನಿಯಲ್ಲಿ, ಗುರುವಲ್ಲಿ, ತನ್ನಲ್ಲಿ ನೆಲೆಸಿದ ಶ್ರೀಹರಿಯು ಸರ್ವೇಶನು, ಸರ್ವಶಕ್ತನು, ಸರ್ವಾಂತರ್ಯಾಮಿಯು ಎಂದು ತಿಳಿದು ಬ್ರಹ್ಮಚಾರಿಯು ತನ್ನ ಆಶ್ರಮ ಜೀವನವನ್ನು ಸಾರ್ಥಕವನ್ನಾಗಿಸುವವನು; ವಾನಪ್ರಸ್ಥ, ಯತಿ, ಬ್ರಹ್ಮಚಾರಿ, ಗೃಹಸ್ಥ ಎಂಬುವರು ಸ್ವಾಶ್ರಮವಿಹಿತ ಕರ್ಮಾನುಷ್ಠಾನದಿಂದ ಬ್ರಹ್ಮಜ್ಞಾನವನ್ನೂ ಮೋಕ್ಷವನ್ನೂ ಪೊಂದುವರು.

ಈಗ ಮುನಿಸಮ್ಮತವಾದ ವಾನಪ್ರಸ್ಥ ಲಕ್ಷಣಗಳನ್ನು ಪೇಳುವೆನು ಕೇಳು. ವಾನಪ್ರಸ್ಥ ಧರ್ಮಾಚರಣೆಯಿಂದ ನಾರಾಯಣ ಋಷಿಯ ವೈಕುಂಠ ಲೋಕದಲ್ಲಿ ಸ್ಥಾನವು ಸಿಗುವುದು.

ವಾನಪ್ರಸ್ಥನು ಉತ್ತು ಬೆಳೆದದ್ದನ್ನು, ಅಕಾಲ ಫಲಾದಿಗಳನ್ನೂ ತಿನ್ನಬಾರದು; ಅಗ್ನಿಪಕ್ವ ವನ್ನೂ ಸ್ವೀಕರಿಸಲಾಗದು. ಹಸಿಯ ನೆಲ್ಲಿಕಾಯಿ ಮೊದಲಾದವನ್ನು ಸೂರ್ಯನಿಂದ ಪಕ್ವವಾದ ಹಣ್ಣುಹಂಪಲುಗಳನ್ನು ಸ್ವೀಕರಿಸಬಹುದು. ನೀವಾರಾದಿ ವನ್ಯಧಾನ್ಯಗಳಿಂದ ಕಾಲಕ್ಕನುಸರಿಸಿ ಚರುಪುರೋಡಾಶಗಳನ್ನು ನಿರ್ಮಿಸಿ ಹೊಮಿಸಿ ಶೇಷವನ್ನು ಸ್ವೀಕರಿಸಬೇಕು; ಅನ್ನಾದಿಗಳೂ ಮಿಕ್ಕರೆ ನಾಳೆಗೆಂದಿಡಬಾರದು. ಅಗ್ನಿಹೋತ್ರವನ್ನು ರಕ್ಷಿಸಲು ಪರ್ಣಕುಟಿಯಾಗಲಿ ತನಗಲ್ಲ. ತಾನು ಚಳಿ ಗಾಳಿ ಎನ್ನದೆ ಮಳೆ, ಬಿಸಿಲುಗಳನ್ನು ಸಹಿಸಿ ಹೊರಗಿರಬೇಕು. ಜಟೆಯನ್ನು ಕಟ್ಟಿ, ಕೇಶ ರೋಮ ನಖ ಶ್ಮಶ್ರುಗಳನ್ನು ಧರಿಸಿರಬೇಕು. ಕಮಂಡಲು, ಅಜಿನ, ದಂಡ, ವಲ್ಕಲ, ದರ್ಭಗಳಂ ಬಿಟ್ಟು ಇತರ ವಸ್ತುಸಂಗ್ರಹವು ವಾನಪ್ರಸ್ಥನಿಗೆ ಕೂಡದೆ, ಕೈಲಾದರೆ ಹನ್ನೆರಡು ವರ್ಷ ಅಥವಾ ಎಂಟು ವರ್ಷ, ಇಲ್ಲದಿದ್ದರೆ 4, 2,1 ವರ್ಷ ಕಾಲ ವನದಲ್ಲಿರಬೇಕು. ಕಷ್ಟಗಳಿಗೆ ಹೆದರದಿರಬೇಕು. ಸ್ವಧರ್ಮಾನುಷ್ಠಾನದಲ್ಲಿ ಅಶಕ್ತನಾದಾಗ, ಜರಾವ್ಯಾಧಿ ಪೀಡಿತ ನಾದಾಗ, ಬ್ರಹ್ಮವಿಚಾರಪರನಾಗಿ ಅನಶನವನ್ನು ಅಥವಾ ಪ್ರಾಯೋಪವೇಶವನ್ನು ಮಾಡಬೇಕು.

ಅಹಂಕಾರ ಮಮಕಾರಗಳನ್ನು ತ್ಯಜಿಸಿ, ಅಗ್ನಿಗಳನ್ನು ತನ್ನಲ್ಲಿ ಆರೋಪಿಸಿ ಲಯಚಿಂತನ ವನ್ನು ತಾರತಮ್ಯಾನುಸಾರವಾಗಿ ಮಾಡಬೇಕು. ಕಾರ್ಯವಸ್ತುಗಳು ಕಾರಣವಾದ ಸೂಕ್ಷ್ಮ ವಸ್ತುಗಳಲ್ಲಿ ಲಯವನ್ನು ಹೊಂದುವುವು. ಶರೀರಗತ ಆಕಾಶಗಳು ಬಾಹ್ಯಾಕಾಶದಲ್ಲಿಯೂ, ನಿಃಶ್ವಾಸಾದಿಗಳು ವಾಯುವಿನಲ್ಲಿಯೂ, ಉಷ್ಣತೆಯು ಅಗ್ನಿಯಲ್ಲಿಯೂ, ರಕ್ತ ಶ್ಲೇಷ್ಮ ಪೂಯ ಗಳು ಜಲದಲ್ಲಿಯೂ, ಮಿಕ್ಕವೆಲ್ಲವೂ ಭೂಮಿಯಲ್ಲಿಯೂ ಲಯವಾಗುವುವು. ಅಗ್ನಿಯಲ್ಲಿ

ವಾಗಿಂದ್ರಿಯ ವಚನಗಳು; ಇಂದ್ರನಲ್ಲಿ ಹಸ್ತಶಿಲ್ಪಗಳು; ಜಯಂತಗತ ಯಜ್ಞದಲ್ಲಿ ಪಾದಗಮನಗಳು; ದಕ್ಷ ಪ್ರಜಾಪತಿಯಲ್ಲಿ ಉಪಸ್ಥರತಿಗಳು; ಯಮನಲ್ಲಿ ಪಾಯು ವಿಸರ್ಜನಗಳು; ಸೋಮಾದಿ ದಿಗ್ದೇವತೆಗಳಲ್ಲಿ ಶ್ರೋತ್ರಶಬ್ದಗಳು ; ಅಹಂಕಾರಿಕ ಪ್ರಾಣನಲ್ಲಿ ತ್ವಕ್ ಸ್ಪರ್ಶಗಳು, ಸೂರ್ಯನಲ್ಲಿ ಚಕ್ಷುರೂಪಗಳು ಲಯವನ್ನು ಹೊಂದುವುವು. ನಾಲಿಗೆ ಎಂಬ ಇಂದ್ರಿಯವು ವರುಣಾಧೀನವಾಗುವುದು; ನಾಸಿಕೆಯು ಗಂಧಶಕ್ತಿಯಿಂದ ಭೂಮಿಯಲ್ಲಡಗುವುದು; ಮನೋರಥದಿಂದ ಕೂಡಿದ ಮನವು ಚಂದ್ರನಲ್ಲಿ, ಬೋಧ್ಯಸಹಿತ ಬುದ್ಧಿಯು ಬೃಹಸ್ಪತಿಯಲ್ಲಿ ಅಹಂಕಾರಸಹಿತ ಕರ್ಮಗಳನ್ನು ರುದ್ರನಲ್ಲಿ ಚಿಂತಿಸಬೇಕು. ಅಹಂಕಾರದಿಂದಲೇ ಅಲ್ಲವೇ ಸಕಲ ಕ್ರಿಯೆಗಳು ನಡೆಯುವುದು? ಪುಣ್ಯಸಹಿತಚಿತ್ತವನ್ನು ವಿರಿಂಚನಲ್ಲಿ ಚಿಂತಿಸಿ, ಅವನನ್ನು ಶ್ರೀಹರಿಯಲ್ಲಿ ಅಧೀನನಾಗಿರುವನೆಂದು ಧ್ಯಾನಿಸಬೇಕು. ಭೂಮಿಯನ್ನು ಜಲದಲ್ಲಿ, ಜಲವನ್ನು ಅಗ್ನಿಯಲ್ಲಿ, ಅಗ್ನಿಯನ್ನು ವಾಯುವಿನಲ್ಲಿ, ವಾಯುವನ್ನು ಆಕಾಶದಲ್ಲಿ, ಆಕಾಶವನ್ನು ಅಹಂತತ್ವ ನಿಯಾಮಕ ರುದ್ರನಲ್ಲಿ, ರುದ್ರನನ್ನು ಮಹತ್ತತ್ವ ನಿಯಾಮಕ ವಿರಿಂಚನಲ್ಲಿ ಚಿಂತಿಸಿ, ಅವನು ಭೂಪತಿಯಾದ ಶ್ರೀಹರಿಯ ಅಧೀನನೆಂದೂ, ಆ ಹರಿಯು ಸರ್ವಥಾ ನಾಶರಹಿತನು, ಸ್ವಾಪ್ಯಯನೆಂದೂ ತಿಳಿದೂ ಚಿಂತಿಸಿ ಶರೀರವನ್ನು ಬಿಡುವವನು ಉತ್ತಮ ಯೋಗಿ ಎನಿಸುವನು. ಜ್ಞಾನಪೂರ್ಣನೂ, ಸ್ವಗತಭೇದಶೂನ್ಯನೂ ಆದ ಶ್ರೀಹರಿಯ ದಯದಿಂದ ಅಂತಹ ಜ್ಞಾನಿಯ ಅಚಿನ್ಮನವು ಕಾಷ್ಟದಂತೆ ತಾನು ಸುಟ್ಟು ಸಂಪೂರ್ಣವಾಗಿ ನಶಿಸಿ ಹೋಗುತ್ತಾ ಜ್ಞಾನಪ್ರಕಾಶವನ್ನು ತೋರಿ ಚಿನ್ಮನವನ್ನು ಬೆಳಗುವುದರಿಂದ ಅವನು ಮುಕ್ತನಾಗುವನು.

## ೧೪. ಯತಿಧರ್ಮ ನಿರೂಪಣವು

ಪ್ರಹ್ಲಾದ-ಅಜಗರ ಸಂವಾದ.

ನಾರದನು ಪೇಳಿದನು– ವೈರಾಗ್ಯಭಾಗ್ಯವನ್ನು ಪೊಂದಿ ಸಮರ್ಥನಾದವನು ಸಂನ್ಯಾಸವನ್ನು ಸ್ವೀಕರಿಸಬಹುದು. ದೇಹವನ್ನು ಬಿಟ್ಟು ಅನ್ಯ ವಸ್ತುಗಳನ್ನು ಸ್ವೀಕರಿಸದೆ ಮನೆಯಿಂದ ಹೊರಟು ನಿರಪೇಕ್ಷನಾಗಿ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುತ್ತಿರಬೇಕು. ಒಂದೂರಿನಲ್ಲಿ ಎರಡು ರಾತ್ರಿಗಳನ್ನು ಕಳೆಯಲಾಗದು, ವಸ್ತ್ರವನ್ನುಡಬೇಕೆನಿಸಿದರೆ ಕೌಪೀನವನ್ನು ಮಾತ್ರ ಹಾಕಬಾರದು. ಹೊದಿಯಲು ಒಂದು ವಸ್ತ್ರವಿದ್ದರೂ ಚಿಂತೆ ಇಲ್ಲ. ಕಮಂಡಲು, ದಂಡಕಾಷ್ಠ, ಶಂಖ-ಚಕ್ರಮುದ್ರೆಗಳನ್ನು ಧರಿಸಿ, ಏಕಾಕಿಯಾಗಿ ಸಂಚರಿಸುತ್ತಿರಬೇಕು. ಭಿಕ್ಷೆಗಾಗಿ ಮಾತ್ರ ಗ್ರಾಮಾದಿಗಳಲ್ಲಿ ಬರುತ್ತಾ ಸಾಯಾಹ್ನವಾದೊಡನೆ ಮಠ-ದೇವಾಲಯಗಳಲ್ಲಿ, ಅಪ್ರಮತ್ತನಾಗಿ ವಾಸಿಸಬೇಕು. ಸರ್ವತ್ರ ವ್ಯಾಪ್ತನಾದ ಹರಿಯಲ್ಲಿ ಆಧಾರಿತವಾದ ಜಗವನ್ನು ತಿಳಿದು, ಸರ್ವಭೂತಗಳಿಗೆ ಹಿತವನ್ನೇ ಬಯಸಬೇಕು. ತನ್ನ ಅಂತರ್ಯಾಮಿಯಾದ ನಾರಾಯಣನೇ ಹೊರಗೂ ವ್ಯಾಪ್ತನಾಗಿರುವನೆಂದು ನಂಬಿ ಜಾಗ್ರತಾದ್ಯವಸ್ಥಾ ಪ್ರೇರಕನಾದ ಭಗವಂತನಿಗೆ ಸರ್ವವನ್ನರ್ಪಿಸಿ ನಿಶ್ಚಿಂತನಾಗಬೇಕು. ಶ್ರೀಹರಿಯ ಇಚ್ಛೆಯಿಂದ ನಿರ್ಮಿತವಾದ ಜಗವು ಸತ್ಯವಾಗಿದೆ; ಶ್ರೀಹರಿಯ ಅನುಗ್ರಹದಿಂದ ಸಂಸಾರ ಬಂಧವು ಸತ್ಯವಾದರೂ ನಿವೃತ್ತವಾಗಿ ಮೋಕ್ಷ ಸಿಗುವುದೆಂದು ಶ್ರೀಶನ ಸರ್ವೋತ್ತಮತ್ವವನ್ನು ಅರಿತು ಭಜಿಸಬೇಕು. ಮೃತಿಯು ನಿಶ್ಚಿತವಾಗಿದೆ; ದೇಹವು ನಶ್ವರವಾಗಿದೆ; ಜೀವನ

ಮರಣಗಳು ಕಾಲಾಧೀನವಾಗಿವೆ; ಸಮಸ್ತವೂ ಶ್ರೀಶಾಧೀನವೆಂದು ಉದ್ವೇಗರಹಿತನಾಗಿರಬೇಕು. ಅಸಚ್ಛಾಸ್ತ್ರವನ್ನು ಓದಬಾರದು. ವಿದ್ಯೆಯನ್ನು ಮಾರಿ ಜೀವಿಸಬಾರದು. ಕುತರ್ಕವನ್ನು ಬಿಡಬೇಕು. ಮೋಕ್ಷ ವಿರುದ್ಧವಾದ ವಾತ್ಸ್ಯಾಯನಾದಿ ಶಾಸ್ತ್ರಗಳನ್ನು ಅಭ್ಯಸಿಸಬಾರದು. ಸಿಕ್ಕಿದ ಗ್ರಂಥಗಳನ್ನೆಲ್ಲ ವನ್ನು ಅಭ್ಯಸಿಸಲಾಗದು. ಸಿಕ್ಕಿದವರನ್ನೆಲ್ಲ ಶಿಷ್ಯರನ್ನಾಗಿ ಕೈಕೊಳ್ಳಬಾರದು. ಕೃಷ್ಯಾದಿಗಳನ್ನು ಮಾಡಬಾರದು.

ಜ್ಞಾನಾಧಿಕಾರಿಗೆ ಕರ್ಮಪ್ರವೃತ್ತಿಯು ಅಧಮವೆನಿಸುವುದರಿಂದ ಕೃಷ್ಯಾದಿಗಳು ಯತಿಗೆ ಪಾಪಕಾರಣವಾಗುವುವು. ನಿವೃತ್ತಿಕರ್ಮವನ್ನು ಮಾಡುತ್ತಾ ಶಾಂತನಾದ ಯತಿಯು ದಂಡಾದಿ ಗಳನ್ನು ಬಿಟ್ಟರೂ ಚಿಂತೆಯಿಲ್ಲ. ಬಾಹ್ಯಚಿಹ್ನೆಗಳಿಲ್ಲದಿದ್ದರೂ ವಿದ್ಯತಪಶ್ಶಮಾದಿ ಆಂತರಿಕ ಲಕ್ಷಣಗಳಿದ್ದರೆ ಸಾಕು. ಮಹಾಮತಿಯಾದರೂ ಮಂಕನಂತೆ, ಕವಿಯಾದರೂ ಮೂಕನಂತೆ ಜನರಿಗೆ ಕಾಣತ್ತಾ ತೋರಿಸಿಕೊಳ್ಳದೆ ಇರುವ ಅವಧೂತನು ಯತಿಶ್ರೇಷ್ಠನೆನಿಸುವನು.

ಈ ಅವಧೂತಚರ್ಯೆಯ ವಿಷಯವಾದ ಒಂದು ಕಥೆಯನ್ನು ಕೇಳು. ಪ್ರಹ್ಲಾದನು ಒಂದು ಸಲ ಸಹ್ಯಕಂದರದಲ್ಲಿ ಕಾವೇರಿತೀರದಲ್ಲಿ ತಿರುಗುತ್ತಾ ಅಜಗರ ಮುನಿಯನ್ನು ಕಂಡನು. ಬರಿ ನೆಲದ ಮೇಲೆ ಬಿದ್ದುಕೊಂಡಿದ್ದ ಆ ಮುನಿಯ ಬೂದಿಮುಚ್ಚಿದ ಕೆಂಡದಂತೆ ನಿಗೂಢ ತೇಜನಾಗಿ ದ್ದನು. ಅವನನ್ನು ಲೋಕದ ರೀತಿನೀತಿಗಳನ್ನರಿಯಲು ತಿರುಗುತ್ತಾ ಬಂದ ಪ್ರಹ್ಲಾದನು ನೋಡಿ ದನು. ದೈತ್ಯರಾಜನ ಹಿಂದೆ ಕೆಲವರು ಅಮಾತ್ಯರೂ ಇದ್ದರು. ಅವರು ಅವಧೂತನನ್ನು ನೋಡಿ, ಕರ್ಮವಚನ, ಚಿಹ್ನಕ್ರಿಯೆಗಳಿಂದ ಅವನ ವರ್ಣಾಶ್ರಮ ವಿಚಾರವನ್ನು ತಿಳಿಯದಾದರು.

ಭಗವದ್ಭಕ್ತನಾದ ಪ್ರಹ್ಲಾದನು ಆ ಬ್ರಾಹ್ಮಣನಿಗೆ ನಮಸ್ಕರಿಸಿ ಅವನ ವೃತ್ತಾಂತವನ್ನು ತಿಳಿಯಲಿಚ್ಛಿಸಿ ಇಂತೆಂದನು–

ನಿನ್ನ ಶರೀರವು ಭೋಗವಂತರ ದೇಹದಂತೆ ಪುಷ್ಟವಾಗಿದೆ. ವಿತ್ತವಿಲ್ಲದ ನಿನಗೆ ಭೋಗವೆಲ್ಲಿ ಯದು? ಭೋಗವಿಲ್ಲದ ನೀನು ಪುಷ್ಟನಾಗಿರುವದಾದರೂ ಹೇಗೆ? ಭೂಮಿಯ ಮೇಲೆ ಸುಮ್ಮನೆ ಮಲಗಿರುವ ನಿನಗೆ ಅರ್ಥವೆಲ್ಲಿಯದು? ಅರ್ಥಸಾಧ್ಯವಾದ ಭೋಗವು ದೂರತರವೇ ಸರಿ! ದಯಮಾಡಿ ಹೇಳು. ಪ್ರಹ್ಲಾದನ ವಾಗಾಮೃತಪಾನದಿಂದ ಸಂತೋಷಪಟ್ಟು ಆ ಮಹಾತ್ಮನು ಇಂತೆಂದನು.

ಶ್ರೀಹರಿಯ ದಯದಿಂದ ಜ್ಞಾನವನ್ನು ಪೊಂದಿರುವ ನಿನಗೆ ತಿಳಿಯದ್ದೇ ಇಲ್ಲ. ಪ್ರವೃತ್ತಿ ನಿವೃತ್ತಿ ಧರ್ಮಗಳಿಂದಾಗುವ ಲೋಕಗಳನ್ನೂ ಅರಿತಿರುವೆ. ಶ್ರೀನಾರಾಯಣನು ಸದಾ ನಿನ್ನ ಹೃತ್ಕಮಲದಲ್ಲಿ ವಿಶೇಷ ಸನ್ನಿಧಾನದಿಂದ ನೆಲೆಸಿರುವನು; ನಿನ್ನ ನಿರ್ವ್ಯಾಜ ಭಕ್ತಿಗೆ ಮೆಚ್ಚಿ ಅಚ್ಯುತನು ಹೃದಯಾಕಾಶವನ್ನು ಸೂರ್ಯನಂತೆ ಬೆಳಗುತ್ತಾ ಅಜ್ಞಾನ ಅಂಧಕಾರವನ್ನು ದೂರೀಕರಿಸಿ ನಿನ್ನನ್ನು ಬಿಡದೆ ಸಲಹುತ್ತಿರುವನು. ಆದ್ದರಿಂದ ನಿನ್ನ ಕೂಡಿ ಮಾತಾಡಿ ನಾನು ಪಾವನನಾಗುವೆನು ಕೇಳು.

ನಾನು ಸಂಸಾರವಾಹಿನಿಯಲ್ಲಿ ಬಿದ್ದು ಗ್ರಾಮ್ಯಸುಖಗಳನ್ನು ರುಚಿ ನೋಡಿ ತೃಪ್ತನಾಗದೆ ದುರಾಶೆಯಿಂದ ಕರ್ಮಗಳನ್ನು ಮಾಡಿದೆನು. ಕರ್ಮಫಲರೂಪವಾಗಿ ಬಹುಯೋನಿಗಳಲ್ಲಿ ಜನಿಸಿ ಕೊನೆಗೆ ಇಲ್ಲಿಗೆ ಬಂದೆನು. ಶ್ರೀಹರಿದಯದಿಂದ ಸ್ವರ್ಗಾಪವರ್ಗ ಕಾರಣವಾದ ವಿಪ್ರಜನ್ಮವು ಬಂತು, ವಿಚಾರವನ್ನೂ ಮಾಡಿದೆನು. ವಿಪ್ರಾದಿ ಸಕಲ ಶರೀರಧಾರಿಗಳು ಗಂಡಹೆಂಡಿರೆನಿಸಿ ಕೊಡುವುದನ್ನೂ ಸುಖಪ್ರಾಪ್ತಿ ದುಃಖನಾಶಗಳಿಗಾಗಿ ಶ್ರಮಪಡುವುದನ್ನು, ಕೊನೆಗೆ ದುಃಖಪ್ರಾಪ್ತಿ

ಸುಖನಾಶಗಳನ್ನು ಪೊಂದಿ ಶೋಕಿಸುವುದನ್ನೂ ಕಂಡೆ. ವಿರಕ್ತನಾದೆ. ನಿಜವಾದ ಸುಖವು ಸ್ವರೂಪ ಸುಖವು; ಬಾಹ್ಯವಲ್ಲ. ಸ್ವರೂಪ ಸುಖವು ಶ್ರೀಹರಿ ಕೃಪೆಯಿಂದ ಮಾತ್ರ ಸಿಗುವುದು; ಪ್ರಯತ್ನ ಮಾತ್ರದಿಂದಲ್ಲ 'ಬಾಹ್ಯವಿಷಯ ಸುಖವು ಮನಸ್ಸಿನ ಅಭಿಮಾನದಿಂದ ಮೋಹಕವಾಗಿದೆ. ಬುದ್ಧಿವಂತನು ನಶ್ವರವು, ಹೇಯವು, ಅಲ್ಪವು ಆದ ಸ್ರಕ್ಚಂದನ ವನಿತಾದಿಗಳಿಗಾಗಲಿ ಸ್ವರ್ಗಾದಿಗಳಿಗಾಗಲಿ ಆಶೆಪಡದೆ ಇರುವುದು ಅವನಿಗೇ ಒಳಿತು. ಆದರೂ ಜೀವನು ನಾನು ನನ್ನದೆಂಬ ಅನ್ಯಥಾಜ್ಞಾನದಿಂದ ವಿಷಯಲೋಲನಾಗಿ ಹುಟ್ಟುಸಾವುಗಳನ್ನಪ್ಪಿ ಮುಪ್ಪಾಗುತ್ತಿರು ವನು. ನೀರಡಿಸಿದ ಜೀವನು ಮೇಲೆ ಆಂತ್ರಗಂಗೆ ಮುಂತಾದ ಜಲಸಸ್ಯಗಳಿಂದ ಮುಚ್ಚಲ್ಪಟ್ಟು ಕಾಣದೆ ಒಳಗಿರುವ ಸರೋವರ ಜಲವನ್ನು ಬಿಟ್ಟು, ಬಿಸಿಲಕುದುರೆಯ ಬೆನ್ನಟ್ಟಿ ಪೋಗುವಂತೆ ಶ್ರೀಹರಿಯಿಂದಲ್ಲದೇ ಅನ್ಯರಿಂದ ಸುಖಾಭಿಲಾಷೆಯು ನೆರವೇರುವುದೆಂದು ತಿಳಿದವನು ಮೂಢನೇ ಸರಿ! ದೇವನ ಅಧೀನವೀ ದೇಹ; ದೇವನ ಅಧೀನವೀ ವಿಷಯಗಳು; ಹೀಗಿರಲು ಅವುಗಳ ಸಮ್ಮಿಲನದಿಂದ ನನಗೆ ಸುಖವಾಗಲಿ; ಎಂದು ಬಯಸುವ ಜೀವನು ಅಸ್ವತಂತ್ರನು. ಅವನು ಹರಿಭಕ್ತನಾದರೆ ಸುಖಗಳು ತಾವಾಗಿ ಸಿಗುವುವು; ಹರಿವಿರುದ್ಧನಾದರೆ ಸುಖವು ದೂರವಾಗುವುದು. ಅದಕ್ಕಾಗಿ ಅಂತಹವನ ಪ್ರಯತ್ನಗಳೆಲ್ಲವೂ ವ್ಯರ್ಥವಾಗುವುವು. ದುಃಖ ದರ್ಶನದಿಂದ ವಿರಕ್ತನಾಗದವನಿಗೆ ಬಹುಕಷ್ಟದಿಂದ ಸಾಧಿಸಿದ ಅರ್ಥ ಕಾಮಗಳಿಂದಲಾದರೂ ಏನು ಸುಖವಾಗುವುದು? ಡುಂಡುಭಗ್ರಸ್ತ ಮಂಡೂಕದಂತಿರುವ ವಿಷಯ ಸುಖಗಳಿಂದ ಪ್ರಯೋಜನವೇನು?

ಧನಿಕರು ಲೋಭದಿಂದ ಪೀಡಿತರಾಗಿ ಹೆಚ್ಚು ಧನಕ್ಕಾಗಿ ಕ್ಲೇಶಪಡುವುದನ್ನು, ಧನರಕ್ಷಣೆಗಾಗಿ ನಿದ್ರಾಹಾರವಿಹಾರಹೀನರಾಗಿ ಸರ್ವರಲ್ಲಿ ಅನುಮಾನದಿಂದ ವರ್ತಿಸುವುದನ್ನು ಕಂಡೆ. ರಾಜರು ಚೋರರು ಶತ್ರುಗಳು ಸ್ವಜನರು ಮೂಷಿಕ ಶುನಕಾದಿ ಪಶುಗಳು ಪಕ್ಷಿಗಳು ಮೊದಲಾದವರು ಧನಿಕನನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ಅವನ ಧನವನ್ನು ಪ್ರೀತಿಸಿ, ಕೊನೆಗೆ ಧನಕ್ಕಾಗಿ ಧನಿಕನ ಪ್ರಾಣವನ್ನೂ ತೆಗೆದುಬಿಡುವುದನ್ನೂ ನೋಡಿದೆ. ಶೋಕ ಮೋಹ ಭಯ ಕ್ರೋಧ ರಾಗ ದೀನತೆ ಶ್ರಮೆ ಮೊದಲಾದ ಅನರ್ಥಗಳಿಗೆ ಕಾರಣವಾದ ಅರ್ಥದಲ್ಲಿ ಆಶೆಯನ್ನು ಬಿಡಬೇಕು. ಈ ವಿಷಯದಲ್ಲಿ ದುಂಬಿ ಹಾವು ಎಂಬ ಎರಡು ಪ್ರಾಣಿಗಳು ನನಗೆ ಜ್ಞಾನವಾಗುವಂತೆ ಮಾಡಿದವು. ಕಷ್ಟಪಟ್ಟು ತೊಟ್ಟುತೊಟ್ಟಾಗಿ ಕೂಡಿಟ್ಟ ಜೇನನ್ನು ಕೆಡಹಿ ದುಂಬಿಯನ್ನು ಕೊಂದು ಅದರ ಸರ್ವಸ್ವಾಪಹಾರ ಮಾಡಿದ ಮನುಜನನ್ನು ನೋಡಿದೆ. ಏನನ್ನೂ ಮಾಡದೆ ದೇವರು ತಂದು ಕೊಟ್ಟದ್ದನ್ನುಂಡು ತಂದು ಕೊಡದಿರೆ ಉಪವಾಸ ಮಾಡುತ್ತಾ ಗಾಳಿಯನ್ನು ಹೀರಿ ಬದುಕಿರುವ ಹೆಬ್ಬಾವನ್ನೂ ನೋಡಿದೆ. ಅವರೀರ್ವರಿಂದ ಸರ್ವಕಾಮವಿರಾಗವನ್ನು ಸರ್ವೇಶ ಸಮರ್ಪಿತ ತುಷ್ಟಿಯನ್ನು ಕಲಿತು ಅವಧೂತನಾದೆ. ಸ್ವಲ್ಪವಾಗಲಿ, ಬಹುವಾಗಲಿ, ಮಿಷ್ಟಾನ್ನವಾಗಲಿ, ಕಷ್ಟಾನ್ನವಾಗಲಿ, ಬಂದು ಆದರದಿಂದ ಕೊಡಲಿ, ಬೈದು ಕೊಡಲಿ, ಶ್ರೀಹರಿ ಇತ್ತದ್ದೆಂದು ತಿಂದೆ. ಒಂದೇ ಸಲ ರಾತ್ರಿಯಾಗಲಿ ಹಗಲಾಗಲಿ ತಿಂದು ಶ್ರೀಹರಿಚಿಂತೆಯಲ್ಲೇ ಕಾಲ ಕಳೆದೆ. ಅನೇಕ ಜನ್ಮಗಳಲ್ಲಿ ಅನುಭವಿಸಿದ ವಿಷಯಗಳು ನೆನಪಿಗೆ ಬಂದವು.

ರಾಜನಾಗಿದ್ದೆ, ಪಟ್ಟಪೀತಾಂಬರಗಳನ್ನುಟ್ಟೆ; ಆಭರಣಗಳನ್ನಿಟ್ಟೆ; ಯತಿಯಾಗಿ ನಾರು ಸೀರೆಯನ್ನುಟ್ಟೆ; ಅವ್ಯಪ್ತನಿಯಾಮಕನಾದ ಸ್ವಾಮಿಯು ಕೊಟ್ಟದ್ದನ್ನುಂಡು ಸಂತೋಷವಾಗಿದ್ದೆ. ಪಶುವಾಗಿದ್ದೆ, ಭೂಮಿಯಲ್ಲಿ ಮಲಗಿದೆ; ನಾಯಿಯಾಗಿದ್ದೆ, ಬೂದಿಯಲ್ಲಿ ಹೊರಳಾಡಿದೆ; ರಾಜನಾದಾಗ ಪ್ರಾಸಾದಗಳಲ್ಲಿ ಹಂಸತೂಲಿಕಾತಲ್ಪದಮೇಲೆ ಮಲಗಿದೆ; ಸ್ನಾನಮಾಡಿ ಅಲಂಕೃತ

ನಾದೆ; ರಥದಲ್ಲಿ ಕೂತು ಊರಲ್ಲಿ ಮೆರೆದೆ. ಒಂದು ಸಲ ಉನ್ಮತ್ತನಂತೆ ದಿಗಂಬರನಾಗಿದ್ದೆ. ಒಂದು ಸಲ ಗ್ರಹಬಡಿದಂತೆ ಕೂಡುತ್ತಿದ್ದೆ. ಸಾತ್ವಿಕ, ರಾಜಸ, ತಾಮಸ, ಜನರು ಅವರವರ ಸ್ವಭಾವದಂತೆ ವರ್ತಿಸುವುದನ್ನು ನೋಡಿದೆ; ನಾನು ಅವರನ್ನು ಸ್ತುತಿಸಲೂ ಇಲ್ಲ, ನಿಂದಿಸಲೂ ಇಲ್ಲ; ಎಲ್ಲರೂ ಶ್ರೀಹರಿ ಅಧೀನರು. ಅವನೊಬ್ಬನೇ ಮಹಾಪ್ರಭುವು. ಆದ್ದರಿಂದ ಯಾವ ಜೀವರಿಗೂ ಕೆಡುಕನ್ನು ಬಯಸದೆ ಸರ್ವತ್ರ ತುಂಬಿ ನಿಂತ ರಮಾರಮಣನ ಚರಣನಲಿನವನ್ನು ಚಿಂತಿಸಿ ಧನ್ಯನಾದೆ. ಜಗತ್ತೆಲ್ಲವು ಅಗ್ನಿಯ ಅಧೀನವು; ಅಗ್ನಿಯು ಇಂದ್ರಾಧೀನನು; ಇಂದ್ರನು ರುದ್ರಾಧೀನನು; ರುದ್ರನು ಬ್ರಹ್ಮಾಧೀನನು. ಆ ಮಹತ್ತತ್ವನಿಯಾಮಕನಾದ ವಿರಿಂಚನು ಚಿತ್ಪ್ರಕೃತಿ ಎನಿಸುವ ರಮೆಗೆ ಅಧೀನನು. ಆತ್ಮಾನುಭೂತಿಯಾದ ರಮೆಯು ಶ್ರೀಹರಿಯಧೀನಳು. ಶ್ರೀಹರಿಯು ಅನನ್ಯಾಧೀನನು. ಆ ಸರ್ವೇಶನಿಗೆ ನಮಸ್ಕಾರವು.

ಪ್ರಹ್ಲಾದಾ! ಶ್ರೀಹರಿ ದಯೆಯಿಂದ ಅವನ ದಾಸನಾದ ನನ್ನ ವೃತ್ತಾಂತವನ್ನು ನಿನಗೆ ಹೇಳಿರುವೆನು. ನೀನು ಭಗವತ್ಪ್ರಿಯನು. ಶಾಸ್ತ್ರದಲ್ಲಿ ನೋಡದ ನಡತೆ ಎನ್ನದೆಂದು ತಿಳಿಯಬೇಡ; ಶಾಸ್ತ್ರ ನಿರ್ಣಯದಿಂದ ತಿಳಿದು ನುಡಿದ ನನ್ನ ವಚನವನ್ನು ನಂಬು ಎಂದನು.

ಆ ಮುನಿಯಿಂದ ಪರಮಹಂಸ ಮುನಿಗಳ ಧರ್ಮವನ್ನು ಕೇಳಿ ಸಂತೋಷಪಟ್ಟು ಪ್ರಹ್ಲಾದನು ಅವನಿಗೆ ವಂದಿಸಿ ಅಪ್ಪಣೆಯನ್ನು ಪಡೆದು ತನ್ನ ಮನೆಗೆ ತೆರಳಿದನು.

## ೧೫. ಗೃಹಸ್ಥಧರ್ಮ ನಿರೂಪಣವು

ಧರ್ಮರಾಜನು 'ನಾರದ! ವಾನಪ್ರಸ್ಥ ಯತಿಗಳು ಪೊಂದುವಂತೆ ಸದ್ಗತಿಯನ್ನು ಪೊಂದಲು ,ಗೃಹಸ್ಥನು ಯಾವ ಧರ್ಮಗಳನ್ನಾಚರಿಸಬೇಕು? ನನ್ನಂತಹ ಗೃಹಪಾಶಬದ್ಧನಿಗೆ ಉದ್ಧಾರೋಪಾಯವೇನು?' ಎಂದನು.

ನಾರದನು ನುಡಿದನು–

ಮಹಾಭಾಗ! ಲೋಕದ ಜನರಿಗಾಗಿ ದಯದಿಂದ ನೀನು ಕೇಳಿದ ಪ್ರಶ್ನೆಯು ಯೋಗ್ಯವಾಗಿದೆ. ಕರ್ಮಪ್ರಚುರರಾದ ಗೃಹಸ್ಥರು ಕೂಡ ಕರ್ಮಫಲವನ್ನು ಬಿಟ್ಟು ಮೋಕ್ಷವನ್ನು ಪೊಂದುವ ವಿಧಾನವನ್ನು ವಿವರಿಸುವೆನು.

ಗೃಹಸ್ಥನು ಮನೆಯಲ್ಲೇ ಇರಲಿ, ಗೃಹಕರ್ಮಗಳನ್ನು ಮಾಡಲಿ ಚಿಂತೆಯಿಲ್ಲ. ಆದರೆ ಮಾಡಿದ ಸರ್ವಶುಭಕರ್ಮ ಫಲವನ್ನು ಶ್ರೀಹರಿಗರ್ಪಿಸಿ ಶ್ರೀಹರಿಭಕ್ತರ ಸೇವೆಯನ್ನು ಮಾಡಬೇಕು. ನಿತ್ಯವೂ ನಾರಾಯಣನ ಪುಣ್ಯಾವತಾರ ಕಥೆಯನ್ನು ಶ್ರದ್ಧೆಯಿಂದ ವೈರಾಗ್ಯ ಭರಿತರಾದ ಸುಜನರ ಮುಖದಿಂದ ಕೇಳಬೇಕು. ಭಕ್ತಜನರ ಸಂಗದಲ್ಲಿರುತ್ತಾ ಮೆಲ್ಲನೆ ಗೃಹ ಜಾಯಾ ಪುತ್ರಮಿತ್ರಾದಿ ಸಂಗವನ್ನು ದೂರಮಾಡಬೇಕು. ಸ್ವಪ್ನದಿಂದೆಚ್ಚತ್ತವನು ಸ್ವಪ್ನ ಪದಾರ್ಥ ಸಂಗವನ್ನು ಬಿಡುವಂತೆ ಅವರಾಗಿ ನಮ್ಮನ್ನು ಕೈಬಿಡುವ ಬಂಧು ಜನರನ್ನು ತಾನಾಗಿ ಬಿಡಬೇಕು. ದೇಹವಾಗಲಿ, ಗೇಹವಾಗಲಿ, ತನಗೆ ಪ್ರಯೋಜನಕರವಾಗಿರುವಷ್ಟು ಮಾತ್ರ ಬಳಸಿ ವಿರಕ್ತನಾಗಬೇಕು ದೇಹಗೇಹರಕ್ತನಾದಂತೆ ತೋರಿಯೂ, ಕೊನೆಗೆ ವಿರಕ್ತಪಾಶದಿಂದ ಸನ್ಯಾಸವನ್ನಾದರೂ ತೆಗೆದುಕೊಳ್ಳಬಹುದು. ಜ್ಞಾತಿಗಳು ಬಂಧುಗಳು ಮಕ್ಕಳು ತಮ್ಮಂದಿರು ಮೊದಲಾದವರು ಆಡುವ ಮಾತನ್ನೇ ನಡೆಸಿ, ನನ್ನದೆಂಬ ಹಟವನ್ನು ದೂರ ಬಿಸುಟಿ ಅವರಂತೆ ಅನುವರ್ತಿಸಬೇಕು.

ಭೂಮಿಯಲ್ಲಿ, ನೀರಿನಲ್ಲಿ, ಅಂತರಿಕ್ಷದಲ್ಲಿ, ಆಕಾಶದಲ್ಲಿ ಸರ್ವತ್ರ ಶ್ರೀಶನು ವಿತ್ತವನ್ನು ತುಂಬಿಸಿರುವನು. ಜಲ ಧಾನ್ಯಾದಿ ಸಂಪತ್ತನ್ನು ಸರ್ವಜೀವರಿಗೆ ಸಮನಾಗಿ ಕೊಟ್ಟಿರುವ ಶ್ರೀಶನ ಕಟ್ಟಪ್ಪಣೆಯನ್ನು ಮೀರಿ, ನನಗೆಂದು ಕೂಡಿಟ್ಟು ಇತರ ದ್ರೋಹವನ್ನೆಸಗುವನು ಮಹಾ ಪಾಪಿಯು. ನಮ್ಮ ನಮ್ಮ ಹೊಟ್ಟೆಯಲ್ಲಿ ಹಿಡಿಸುವ ಆಹಾರಕ್ಕೆ ಮಾತ್ರ ನಾವು ಒಡೆಯರು ನಿಜ. ಆದರೆ ಹೆಚ್ಚಾಗಿ ಕೋರಿ ಇನ್ನೊಬ್ಬರಿಗಿಲ್ಲದಂತೆ ಮಾಡುವನು ಚೋರನೇ ಸರಿ. ಅವನಿಗೆ ಚೋರದಂಡವೇ ಸರಿಯಾದ ಶಿಕ್ಷೆ.

ಗೋವು, ಕತ್ತೆ, ಬೆಕ್ಕು, ಇಲಿ, ಹಲ್ಲಿ, ಹಾವು, ಪಕ್ಷಿ, ಮಶಕಗಳನ್ನು ಇತರ ನರರನ್ನು, ತನ್ನ ಪುತ್ರರನ್ನಂತೆ ನೋಡಿ ಯಥಾಯೋಗ್ಯವಾಗಿ ಸಲಹಬೇಕು. ಪುತ್ರರಂತೆ ಮನೆಯನ್ನು ಹಿಡಿದು ನಿಂತಿರುವ ಆ ಜೀವರು ಕೂಡ ಪರಾಪೇಕ್ಷರಲ್ಲವೇ? ಗೃಹಸ್ಥನಾದರೂ ಶೂದ್ರಪ್ರತಿ ಗ್ರಹವನ್ನು ಬಯಸದೆ, ದೇಶಕಾಲೋಚಿತವಾಗಿ ಶ್ರೀಹರಿಯು ಕೊಟ್ಟದ್ದನ್ನುಂಡು, ಚಂಡಾಲ ಪರ್ಯಂತ ವಾಗಿರುವ ಸರ್ವರಿಗೂ ತಕ್ಕಷ್ಟು ಕೊಟ್ಟು ತದಂತರ್ಯಾಮಿ ಹರಿಪೂಜೆ ಎಂದು ತಿಳಿಯಬೇಕು. ಗ್ರಾಮ್ಯಭೋಗಕ್ಕಾಗಿ ಪತ್ನೀಗ್ರಹಣವಲ್ಲ; ಕಾಮಾಶಾಪೂರಣವು ದುಸ್ಸಾಧ್ಯವಾಗಿದೆ; ವಿರಕ್ತನಾಗಿ ಧರ್ಮಕ್ಕಾಗಿ ಪತ್ನಿಯನ್ನು ಸ್ವೀಕರಿಸಿ ಯೋಗ್ಯವಾದ ಅರ್ಥಕಾಮಗಳನ್ನು ಅವಳೊಡನೆ ಅನು ಭವಿಸಿ, ಮನೋನಿಗ್ರಹವನ್ನು ಕ್ರಮವಾಗಿ ಪಡೆಯಬೇಕು. ಕಾಮಪತ್ನಿಯ ದುರಾಶಾಪೂರಣವನ್ನು ಮಾಡಲಿಚ್ಛಿಸುವ ನರನು ಧರ್ಮದೂರನಾಗುವನು. ತಂದೆ ತಾಯಂದಿರನ್ನು ವಂಚಿಸುವನು, ಕೊನೆಗೆ ತಾನು ಪ್ರಾಣವನ್ನಾದರೂ ಪಣವನ್ನಾಗಿಟ್ಟು ಹೆಣಗುವನು. ಸರಿಯಾದ ಮನೆತನದ ಕುವರಿಯನ್ನು ಮಡದಿಯನ್ನಾಗಿ ಪಡೆದು ಧರ್ಮರತನಾಗಿ ಶ್ರೀಹರಿಯನ್ನು ಭಜಿಸುವವನು ಧೀರನೆನಿಸುವನು. ಸ್ತ್ರೀಯು ವ್ಯಭಿಚಾರಿಣಿಯಾದೊಡೆ, ಪ್ರಾಣಾನಿಗ್ರಹಣ ಚತುರಭುಜಂಗಿ ಎಂದರಿತು ಅವಳನ್ನು ಪರಿತ್ಯಜಿಸುವುದು ಹಾಗೂ ದಾಸಿಯಂತೆ ಇಟ್ಟು ಮುಟ್ಟದೇ ಪರಿಭವಿಸು ವುದೇ ಗೃಹಪತಿಯ ಕರ್ತವ್ಯವಾಗಿದೆ.

ಎಲ್ಲಿ ಕ್ರಿಮಿ ವಿಡ್ಭಸ್ಮಾಂತವಾದ ತುಚ್ಛಶರೀರ! ಅದರಿಂದ ಆಗುವ ರತಿಸುಖವನ್ನರಸಿ ಪೋಗುವ ಜೀವನೆಲ್ಲಿ? ಅವನಲ್ಲಿ ಅಂತರ್ಯಾಮಿಯಾದ ಶ್ರೀಹರಿಯು ಆಕಾಶದಂತೆ ವ್ಯಾಪ್ತನಾಗಿ ನಿರ್ಲಿಪ್ತನಾಗಿ ಸಮೃದ್ಧಾನಂದರೂಪವಾಗಿರುವಾಗ ಆ ಪ್ರಭುವಿನ ಇಚ್ಛೆಯಿಲ್ಲದಿರೆ ಪತ್ನೀ-ಪತಿ ಸಂಯೋಗವಾದರೂ ಎಷ್ಟು ದುರ್ಲಭವಾಗಿದೆ!

ಶ್ರೀಹರಿಗರ್ಪಿಸಿದ, ಜ್ಞಾನಸಾಧನ ಯೋಗ್ಯಪದಾರ್ಥಗಳಿಂದ ಜೀವಿಸುವ ನರನು ಸಕಲವೂ ಶ್ರೀಹರಿಯು ಅಧೀನವೆಂದರಿತು ನಡೆದರೆ ಸನ್ಯಾಸಿಗಳಿಗಾಗುವ ಪುಣ್ಯಲೋಕಗಳು ಅವನಿಗೂ ಸಿಗುವುವು. ಸ್ವಧರ್ಮದಿಂದ ಬಂದ ನ್ಯಾಯಾರ್ಜಿತ ಧನದಿಂದ, ದೇವ, ಋಷಿ, ಪಿತೃ, ನರ, ಭೂತಯಜ್ಞಗಳನ್ನು ನಿತ್ಯವೂ ಮಾಡಿ ಶ್ರೀಶನಿಗರ್ಪಿಸುವ ನರನು ಜ್ಞಾನವನ್ನು ಪಡೆಯುವನು. ಅಧಿಕಾರವೂ ವೈಭವವೂ ಇದ್ದರೆ ಅಗ್ನಿಷ್ಟೋಮಾದಿ ಯಜ್ಞಗಳನ್ನು ವೈತಾನಕವಿಧಿಯಿಂದ ಗೃಹಸ್ಥನು ಮಾಡಬಹುದು. ಎಲ್ಲರಿಗೂ ಇದು ಸಾಧ್ಯವಲ್ಲ. ಬ್ರಾಹ್ಮಣ ಮುಖದಲ್ಲಿ ಹುತವಾದ ಅನ್ನಾದಿಗಳನ್ನು ಸ್ವೀಕರಿಸಿ ಯಜ್ಞೇಶನು ಅಗ್ನಿಮುಖದಿ ಹುತವಾದ ಅನ್ನಾದಿಗಳಿಗಿಂತಲು ಹೆಚ್ಚು ಪ್ರೀತನಾಗುವನು. ಆದ್ದರಿಂದ ಅವನನ್ನು ಬ್ರಾಹ್ಮಣಾನನನೆಂಬುವರು. ಮರ್ತ್ಯರು , ವಿಪ್ರರು, ದೇವತೆಗಳು, ಯಥಾ ಯೋಗ್ಯವಾಗಿ ಸಂಭಾವನೀಯರೇ, ಆದರೆ ವಿಪ್ರಮುಖದಿಂದ ಶ್ರೀಹರಿ ತುಷ್ಟಿಯನ್ನು ಗಹಸ್ಥನು ಸಂಪಾದಿಸುವುದು ಅವಶ್ಯವಿದೆ.

ಭಾದ್ರಪದ ಕೃಷ್ಣಪಕ್ಷದಲ್ಲಿ ಅಪರಪಕ್ಷೀಯಶ್ರಾದ್ಧವನ್ನು ಸಕಲ ಪಿತೃಪ್ರೀತಿಗಾಗಿ ಗೃಹಸ್ಥನು ಯೋಗ್ಯತೆಗೆ ತಕ್ಕಂತೆ ಮಾಡಬೇಕು. ಉತ್ತರ-ದಕ್ಷಿಣಾಯನ ಪ್ರಾರಂಭದಿನಗಳು. ಪೂರ್ಣಿಮೆ, ಸಂವತ್ಸರಾಂತಸಂಕ್ರಮಣ, ಅಮಾವಾಸ್ಯೆ, ವ್ಯತೀಪಾತ, ಗ್ರಹಣ, ದ್ವಾದಶಿ, ಶ್ರವಣಾದಿ ದಿನತ್ರಯ, ತ್ರಯೋದಶಿಗಳೆಂಬ ನಾಲ್ಕು ಅಷ್ಟಕತಿಥಿಗಳು, (ಹೇಮಂತ ಶಿಶಿರ ಋತುಗಳಲ್ಲಿ ಕಾರ್ತಿಕವಲ್ಲಿ) ಮಾಘಶುದ್ಧ ಸಪ್ತಮಿ, ಮಘಾಯುಕ್ತಪೂರ್ಣಿಮಾ, ಅನುರಾಧಾಯುಕ್ತದ್ವಾದಶಿ, ಜನ್ಮನಕ್ಷತ್ರ, ಈ ಮೊದಲಾದ ದಿನಗಳಲ್ಲಿ ಶ್ರಾದ್ಧವು ಶ್ರೇಯೋವರ್ಧಕ ಹಾಗೂ ಆಯುರ್ಬಲಪ್ರದವೂ ಆಗಿದೆ. ಈ ದಿನಗಳಲ್ಲಿ ಸ್ನಾನ ಜಪ ತಪ ವ್ರತ ಹೋಮ ದೇವಪೂಜಾ ವಿಪ್ರಪೂಜಾ ಪಿತ್ರಾದಿ ಯಜ್ಞ ಸಕಲ ಭೂತಸೇವೆ ಮುಂತಾದ ಕರ್ಮಗಳು ಅಕ್ಷಯಫಲವಾಗಿದೆ. ವಿವಾಹ ಕುಮಾರಜನ್ಮ ಕರ್ಮ ಪ್ರೇತಕಾರ್ಯ ಮೃತತಿಥಿಗಳು ದಾನಾದಿ ಬಹುಫಲಕಾರಣಗಳೆನಿಸಿವೆ.

ಧರ್ಮಫಲಶ್ರೇಯಸ್ಸನ್ನು ಹೆಚ್ಚಾಗಿ ಕೊಡುವ ದೇಶಗಳನ್ನು ಕೇಳು, ಸತ್ಪಾತ್ರನು ಎಲ್ಲಿ ಸಿಗುವನೋ ಅದೇ ಪುಣ್ಯತಮದೇಶವು. ಭಾಗವತನಲ್ಲಿ ಚರಾಚರ ಜಗದ ಸನ್ನಿಧಾನವಿದೆ. ತಪೋವಿದ್ಯಾದಯಾದಿ ಗುಣಾಕರನಾದ ಬ್ರಾಹ್ಮಣನು ಭಕ್ತನಾಗಿದ್ದರೆ ಅವನು ಉತ್ತಮ ಪಾತ್ರನೆನಿಸುವನು. ಶ್ರೀಹರಿಯ ಪಾವನಪ್ರತಿಮೆಗಳಿರುವ ದೇಶಗಳೂ ಪವಿತ್ರಗಳೇ; ಪುರಾಣ ಪ್ರಸಿದ್ಧ ಗಂಗಾನದಿಗಳು, ಪುಷ್ಕರಾದಿ ಸರೋವರಗಳು, ಕಾಶ್ಯಾದಿ ಕ್ಷೇತ್ರಗಳು, ಪರಮಪುಣ್ಯ ದೇಶಗಳು, ಕುರುಕ್ಷೇತ್ರ, ಗಯಾ, ಪ್ರಯಾಗ, ಪುಲಹಾಶ್ರಮ (ಗಂಡಕಿ), ನೈಮಿಷ, ಫಾಲ್ಗುಣಕ್ಷೇತ್ರ (ಹರಿಪುರ), ಸೇತೂರಾಮೇಶ್ವರ, ಪ್ರಭಾಸ, ದ್ವಾರಕಾ, ಕಾಶೀ, ಮಥುರಾ, ಪಂಪಾ, ಬಿಂದುಸರ, ನಾರಾಯಣಾಶ್ರಮ (ಬದರಿ), ನಂದಾತೀರ, ಸೀತಾರಾಮಾಶ್ರಮ, ಕಾಂಚೀ, ಮಹೇಂದ್ರಮಲ ಯಾದಿ ಕುಲಾಚಲಗಳು ಮೊದಲಾದವು ಶ್ರೀಹರಿಯ ದಿವ್ಯಸನ್ನಿಧಾನಯುಕ್ತಕ್ಷೇತ್ರಗಳು; ಅವನ್ನು ಶ್ರೇಯಸ್ಕಾಮನು ತಪ್ಪದೇ ಸೇವಿಸಬೇಕು. ಅಲ್ಲಿ ಮಾಡಿದ ಧರ್ಮವು ಸಹಸ್ರಗುಣಿತಫಲಪ್ರದ ವಾಗುವುದು.

ಇನ್ನು ಜ್ಞಾನಿಗಳು ಹೇಳಿದಂತೆ 'ಪಾತ್ರ'ನಾರೆಂದು ವರ್ಣಿಸುವೆನು. ಚರಾಚರ ಜಗದಿ ತುಂಬಿ ನಿಂತಿರುವ ರಮಾರಮಣನೇ ಮುಖ್ಯತಮ ಪಾತ್ರನು. ದೇವಋಷಿಗಳಿದ್ದರೂ ರಾಜಸೂಯದಲ್ಲಿ ಆ ಶ್ರೀಕೃಷ್ಣನೇ ಪಾತ್ರನೆಂದರಿತು ನೀನವನಿಗೆ ಅಗ್ರಪೂಜೆಯನ್ನು ಕೊಟ್ಟು ನನ್ನ ಯಜ್ಞವನ್ನು ಸಾರ್ಥಕವನ್ನಾಗಿ ಮಾಡಿದೆಯಲ್ಲವೇ? ಈ ಬ್ರಹ್ಮಾಂಡ ವೃಕ್ಷರಾಜವು ಜೀವರಾಶಿಗಳಿಂದ ತುಂಬಿದೆ. ಅದರ ಬುಡದ ಬೇರೇ ಅಚ್ಯುತನು. ಅವನ ಚರಣನಲಿನದಿ ನೀರೆರೆದರೆ ಬ್ರಹ್ಮಾಂಡವೇ ತೃಪ್ತವಾಗುವುದು. ಶ್ರೀಹರಿಯೇ ಮನುಜಾದಿ ಶರೀರಗಳನ್ನು ನಿರ್ಮಿಸಿರುವನು. ಮತ್ತು ಜೀವನಿಗೆ ಜೀವದ ಸುಖವನ್ನಿತ್ತು ಒಳಗಿರುವನು. ತಾರತಮ್ಯದಿಂದ ದೇವಮಾನವ ದಾನವರಲ್ಲಿರುವ ಶ್ರೀಹರಿಯನ್ನು ತಿಳಿದು ಪೂಜಿಸುವುದೇ ಮಹಾಯಜ್ಞವು. ಶ್ರೀಹರಿಯನ್ನು ಬ್ರಾಹ್ಮಣರಲ್ಲಿ ಪೂಜಿಸಲು ನೋಡಿ ಸಹಿಸದ ಕಾಲವು ತ್ರೇತಾಯುಗದಲ್ಲಿ ಬಂದಾಗ ಜ್ಞಾನಿಗಳು ಶ್ರೀಹರಿಪ್ರತಿಮಾ ಪೂಜನವನ್ನು ವಿಧಿಸಿ ತಾವು ದೂರವಾದರು. ಆಗ ಕೆಲವರು ಪ್ರತಿಮೆಗಳನ್ನೇ ಶ್ರದ್ಧೆಯಿಂದ ಪೂಜಿಸಿದರು. ಶ್ರೀಹರಿಭಕ್ತಿಯಿಲ್ಲದ ಪ್ರತಿಮಾಪೂಜೆಯಿಂದೇನೂ ಫಲವಿಲ್ಲ. ನರರಲ್ಲಿ ಒಳ್ಳೆಯ ಪಾತ್ರನೆಂದರೆ ಬ್ರಾಹ್ಮಣನೇ! ಅವನು ತಪಸ್ಸು, ವೇದಾಧ್ಯಯನ, ತೃಪ್ತಿಗಳನ್ನು ಧರಿಸಿದ್ದನೆಂದರೆ ಅವನಗಿಂತ ಉತ್ತಮ ಪಾತ್ರವಿನ್ನೊಂದಿಲ್ಲ. ಜಗತ್ಪ್ರಭುವಾದ ಶ್ರೀಕೃಷ್ಣನನ್ನೇ ನೋಡು!

ಮೂರ್ಲೋಕದ ದೇವನಾದರೂ ಬ್ರಾಹ್ಮಣರನ್ನು ಪೂಜಿಸಿ ಅವರ ಪಾದರಜವು ಪವಿತ್ರವೆಂದು ಲೋಕಶಿಕ್ಷಣವನ್ನು ಮಾಡುತ್ತಿರುವನು.

## ೧೬. ಲಯಚಿಂತನ – ಕರ್ಮಜ್ಞಾನಗಳು

ನಾರದನು ಹೇಳಿದನು–

ಬ್ರಾಹ್ಮಣರಲ್ಲಿ ಕರ್ಮನಿಷ್ಠರು, ತಪೋನಿಷ್ಠರು ವೇದನಿಷ್ಠರು, ಸಾಂಖ್ಯಯೋಗನಿಷ್ಠರು, ಜ್ಞಾನನಿಷ್ಠರೆಂದು ಹಲವು ವಿಧ. ನಾವು ಮಾಡುವ ಶ್ರಾದ್ಧಾದಿಗಳಿಗೆ ಅನಂತಫಲವು ದೊರೆಯ ಬೇಕಾದರೆ ಜ್ಞಾನನಿಷ್ಠನನ್ನು ಪೂಜಿಸಬೇಕು. ದೇವಕಾರ್ಯದಲ್ಲಿ ಅಂತಹನು ಸಿಗದಿದ್ದರೆ ಇತರರಿಗೆ ಪೇಳಿ ಪೂಜಿಸುವುದೂ ಸರಿಯೇ. ದೇವಕಾರ್ಯದಲ್ಲಿ ಇಬ್ಬರು ಪಿತೃಕಾರ್ಯದಲ್ಲಿ ಮೂರ್ವರು ವಿಪ್ರರು ಪೂಜನೀಯರು. ನಾನು ಸಂಪನ್ನನೆಂದು ಶ್ರಾದ್ಧ ದಿನದಲ್ಲಿ ಅನಾವಶ್ಯಕವಾದ ದುಂದನ್ನು ಮಾಡಬಾರದು. ಮನಬಂದಂತೆ ಮನೆಯ ತುಂಬ ಜನರನ್ನು ಉಣಿಸುವುದರಿಂದ ಪ್ರಾಯಃ ದೇಶಕಾಲಗಳಿಗೆ ತಕ್ಕಂತಾದರೂ ಶ್ರದ್ಧೆ ಕೆಡುವುದು. ಅಪಾತ್ರರು ಸ್ವೀಕರಿಸುವರು. ಆದ್ದರಿಂದ ಶ್ರೀಹರಿಗರ್ಪಿಸಿ ಶ್ರದ್ಧೆಯಿಂದ ಸತ್ಪಾತ್ರನಲ್ಲಿ ಸಮರ್ಪಿಸಿದ ಸ್ವಲ್ಪವಾದರೂ ಕಾಮಧೇನುವಾಗಿ ಪರಲೋಕಸುಖವನ್ನು ಶ್ರೀಹರಿ ಪ್ರೀತಿಯನ್ನು ತಂದು ಕೊಡುವುದು. ಶ್ರೀಶನು ಕೊಟ್ಟದ್ದನ್ನು ದೇವ ಋಷಿ ಪಿತೃಭೂತ ನರರಿಗೂ ತನಗೂ ತನ್ನವರಿಗೂ ಹಂಚಿ ಉಣ್ಣುವ ನರನು ನಿಷ್ಪಾಪನಾಗುವನು.

ಕೆಲವರು ಶ್ರಾದ್ಧಗಳಲ್ಲಿ ಮಾಂಸವನ್ನು ಉಪಯೋಗಿಸುವರು. ಮಾಂಸವನ್ನು ಕೊಡುವುದು ಉಂಬುವುದು ಧರ್ಮಶೀಲರಿಗೆ ಕೂಡದು. ಪಶುಹಿಂಸೆಯಿಂದ ಮುನಿಗಳು ಸಂತೋಷಿಸುವುದಿಲ್ಲ. ಸದ್ಧರ್ಮಮಾರ್ಗವನ್ನು ಹಿಡಿಯುವ ನರನು ಸರ್ವಭೂತಗಳಲ್ಲಿ ಮನಸಾ ವಚಸಾ ಶರೀರ ದಿಂದಲೂ ಹಿಂಸೆಯನ್ನೆಣಿಸಬಾರದು. ಕೆಲಜ್ಞಾನಿಗಳು ಕರ್ಮಮಯವಾದ ಯಜ್ಞಗಳನ್ನು ಬಿಟ್ಟು ಶ್ರೀಹರಿ ಪ್ರೀತಿಯನ್ನು ಮನದಲ್ಲಿಟ್ಟು ಇಂದ್ರಿಯನಿಗ್ರಹವನ್ನು ಪಡೆದು ಜ್ಞಾನಮಯವಾದ ಯಜ್ಞಗಳಿಂದ ಶ್ರೀಶನನ್ನು ಪೂಜಿಸುವರು.

ಪಶುಗಳನ್ನು ಕಟ್ಟಿ ದರ್ಪದಿಂದ ಯಜಿಸುವ ನರನನ್ನು ನೋಡಿ 'ಇವನು ಕರುಣೆಯನ್ನು ಬಿಟ್ಟು ನನ್ನನ್ನು ಕೊಲ್ಲುವ'ನೆಂದು ತಿಳಿದು ಪಶುವು ಭಯಪಡುತ್ತಿದೆ. ಆದ್ದರಿಂದ ಶ್ರೀಹರಿಯು ಕೊಟ್ಟದ್ದರಿಂದ ಸಂತುಷ್ಟನಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುವ ದ್ವಿಜನು ಹಿಂಸಾಮಯ ಯಜ್ಞದೂರನಾಗಿ ಇಹಪರಗಳೆರಡರಲ್ಲಿಯೂ ಸುಖಿಸುವನು.

ವಿಧರ್ಮ ಪರಧರ್ಮ ಆಭಾಸ ಉಪಮಾ ಛಲವೆಂಬ ಐದು ಅಧರ್ಮ ಶಾಖೆಗಳೂ ಅಧರ್ಮದಂತೆ ಬಿಡಲರ್ಹವಾಗಿವೆ.

ಧರ್ಮವಿರುದ್ಧವಾಗಿ ಧರ್ಮವನ್ನು ಕೆಡಿಸುವುದೇ ವಿಧರ್ಮವು; ಮತ್ತೊಬ್ಬರಿಗೆ ಹೇಳಿದ ಧರ್ಮವು ಪರಧರ್ಮವು; ದಂಭದಿಂದ ಮಾಡಿದುದು ಉಪಧರ್ಮವು; ಧರ್ಮ ಶಬ್ದವಾಚ್ಯನಾದ ಹರಿಯನ್ನು ಬಿಟ್ಟು ಮಾಡಿದುದು ಛಲವು; ಕಾಮ್ಯಫಲವನ್ನು ಕೋರಿ ಮಾಡಿದುದು ಆಭಾಸ ಧರ್ಮವು.

ಆಶ್ರಮವರ್ಣಗಳಿಗೆ ತಕ್ಕಂತೆ ವಿಹಿತವಾದ ಧರ್ಮವನ್ನು ಶ್ರೀಹರಿಸಮರ್ಪಿತವಾಗಿ ಮಾಡಿದುದೇ ಧರ್ಮವು, ಅದೇ ಸಂಸಾರಮೋಚಕವಾಗಿದೆ. ಸಾತ್ವಿಕಧರ್ಮವೇ ಮುಕ್ತಿಯನ್ನು ಕೊಡುವುದು. ರಾಜಸ ತಾಮಸ ಧರ್ಮಗಳು ಸ್ವರ್ಗ ನರಕ ತಮೋಹೇತುಕಗಳಾಗಿವೆ.

ಧರ್ಮಮಾಡಲು ಧನವು ಬೇಕೆಂದು ಕೃಷ್ಯಾದಿಗಳನ್ನು, ಯಾತ್ರೆಗಾಗಿ ಧನವು ಬೇಕೆಂದು ಯಾಚನೆಯನ್ನು ಮಾಡಬಾರದು. ಅಂತು ಮಾಡಿದ ಧರ್ಮದಿಂದ ಪ್ರಯೋಜನವಿಲ್ಲ. ಅಜಗರದ ಬಾಯಸಮೀಪದಲ್ಲಿ ಅದರ ಆಹಾರವನ್ನು ತಂದುಕೊಡುವ ತಂದೆಯು ಇರುವನೆಂದು ನಂಬಿ ದುಷ್ಟಪ್ರಯತ್ನವಿಮುಖನಾದ ಶ್ರೀಶಭಕ್ತನಿಗೆ ಸಿಗುವ ಸುಖಶಾಂತಿಗಳು ಕಾಮಲೋಭಗಳನ್ನೇರಿ ಹತ್ತು ಕಡೆ ಅಲೆಯುವ ವಿವೇಕರಹಿತನಿಗೆ ಸಿಗಲಾರದು. ಕಾಲಿನಲ್ಲಿ ಜೋಡನ್ನಿಟ್ಟವನಿಗೆ ಕಲ್ಲು ಮುಳ್ಳಿನ ಬಾಧೆ ಇಲ್ಲ; ಸಂತೋಷದಿಂದ ಕಾಮವನ್ನು ಬಿಟ್ಟವನಿಗೆ ದುಃಖ-ಚಿಂತೆಗಳಿಲ್ಲ. ತೃಪ್ತನಿಗೆ ಸರ್ವತ್ರ ಶಾಂತಿಯೇ ಕಾಣುವುದು. ದೇವರು ಕೊಟ್ಟ ನೀರನ್ನು ಕುಡಿದು ಮನೆಯಲ್ಲಿರು ವವನು ಸಿಂಹದಂತೆ ಗೌರವಿತನಾಗುವನು. ಹೊಟ್ಟೆಗಾಗಿ ಮಕ್ಕಳಿಗಾಗಿ ತಿರುಗುವವನು ನಾಯಿಯಂತೆ ಅವಮಾನಿತನಾಗುವನು. ತೃಪ್ತಿಯನ್ನು ಕಾಣದ ವಿಪ್ರನ ತೇಜೋ ವಿದ್ಯಾ ತಪೋ ಯಶಃ ಪ್ರಭೃತಿ ಗುಣಗಳು ಹಾಳಾಗುವುವು ಹಾಗೂ ಇಂದ್ರಿಯದಾಸನಾದವನ ಜ್ಞಾನವೂ ಕಾದ ಹಂಚಿನಲ್ಲಿಟ್ಟ ನೀರಿನಂತೆ ನಶಿಸಿ ಹೋಗುವುದು. ಕಾಮದ ಕೊನೆಯು ಒಂದು ವೇಳೆ ತಾತ್ಕಾಲಿಕ ಕಾಮಿತಲಾಭದಿಂದ ಕಾಣಬಂದಂತೆ ಆಗುವುದು. ಆದರೆ ಇನ್ನೂ ಬೇಕೆಂಬುವ ಲೋಭವು ಪ್ರಪಂಚವನ್ನೆಲ್ಲ ಜಯಿಸಿ ಕೈವಶ ಮಾಡಿಟ್ಟರೂ ಬಿಡದೆ ಪೀಡಿಸುತ್ತಿರುವುದು.

ರಾಜನ್! ಪಂಡಿತರು ಬಹುಜನರಿರುವರು; ಸಂಶಯಗಳನ್ನು ಬಿಡಿಸುವಗು, ಚೆನ್ನಾಗಿ ಓದಿರುವರು; ಯಜ್ಞಸಭಾಪತಿಗಳಾಗಿಯೂ ಇರುವರು. ಆದರೂ ಲೋಭವನ್ನು ಗಲ್ಲಲಾರದೆ ಪಾಪಾಗಳನ್ನು ಮಾಡಿ ಕೀಟಾದಿ ನೀಚಯೋನಿಯಲ್ಲಿ ಪುಟ್ಟುತ್ತಿರುವರು.

ನಿಷಿದ್ಧವಿಷಯಕ ಅಭಿಲಾಷೆಯನ್ನು ಬಿಡುವುದರಿಂದ ಕಾಮವನ್ನು, ಕಾಮವನ್ನು ತುಳಿದಿಡುವುದರಿಂದ ಕ್ರೋಧವನ್ನು ಅರ್ಥದ ರಾಜಚೋರವ್ಯಯಾದಿ ಅನರ್ಥಜ್ಞಾನದಿಂದ ಲೋಭವನ್ನು ತತ್ವಜ್ಞಾನದಿಂದ ಸಿದ್ಧಾಂತ ವಿಷಯಕ ಸಂಶಯ ಭಯವನ್ನು ಬ್ರಹ್ಮವಿದ್ಯೆಯಿಂದ ಶೋಕ – ಮೋಹಗಳನ್ನು ದೊಡ್ಡವರ ಸೇವೆಯಿಂದ ದಂಭವನ್ನು ಭಗವದುಪಾಸನಾ ವಿಘ್ನಗಳನ್ನು ಮೌನದಿಂದ ಕಾಮಕ್ರೋಧಾದಿ ವರ್ಜನದಿಂದ ವಿವಾಸ ಹಿಂಸೆಯನ್ನು ಜಯಿಸಬಹುದಾಗಿದೆ.

ಉನ್ಮಾದ ಮೊದಲಾದ ಭೌತಿಕ ದುಃಖವನ್ನು ಮಂತ್ರೌಷಧಗಳಿಂದ, ದೈವಿಕ ದುಃಖವನ್ನು ಇಂದ್ರಾದಿ ಧ್ಯಾನದಿಂದ ಆಧ್ಯಾತ್ಮಿಕ ದುಃಖವನ್ನು ಅಷ್ಟಾಂಗ ಯೋಗಬಲದಿಂದ ಅಜ್ಞಾನವನ್ನು ಸಾತ್ವಿಕ ಜನಸೇವೆಯಿಂದ ಕಳೆಯಬಹುದು. ರಜಸ್ತಮಗಳನ್ನು ಸತ್ವದಿಂದಲೂ, ಸತ್ವವನ್ನು ವೈರಾಗ್ಯದಿಂದಲೂ, ಮೇಲೆ ಹೇಳಿದ ಎಲ್ಲವನ್ನೂ ಹರಿಗುರು ಭಕ್ತಿಯಿಂದ ಮನುಜನು ಜಯಿಸಬಲ್ಲನು. ಭಗವತ್ಪದವನ್ನು ಜ್ಞಾನದೀಪವನ್ನು ಬೆಳಗಿಸಿ ತೋರುವ ಗುರುವಿನನ್ನು ಮೀರಿ ನಡೆಯುವನ ವಿದ್ಯೆ ಎಲ್ಲರೂ ಕುಂಜರ ಸ್ನಾನದಂತೆ ನಿರರ್ಥಕವೇ ಸರಿ!

ಈ ಶ್ರೀಕೃಷ್ಣನು ಸಾಕ್ಷಾದ್ವಿಷ್ಣುವೆಂದು ತಿಳಿ. ಬ್ರಹ್ಮಾದಿ ದೇವವಂದ್ಯನು ಸನಕಾದಿ ಯೋಗಿಜನ ವಿಚಾರವಿಷಯನು ಆದ ಈ ರಮೇಶನನ್ನು ಲೋಕದ ಜನರು ತಮ್ಮಂತೆ ಸಾಮಾನ್ಯ ನರನೆಂದು ತಿಳಿದಿರುವರು! ಎಲ್ಲ ವೇದಗಳು ಪೇಳುವ ಸರ್ವಕರ್ಮಯಜ್ಞ ತಪೋದಾನಾದಿಗಳು ಮಾನಸ್ಸಹಿತ ಪಂಚೇಂದ್ರಿಯ ಜಯ ಸಂಪಾದನೆಗಾಗಿಯೇ ಇರುವಾಗ ಅವು ಇದ್ದೂ

ಇಂದ್ರಿಯಜಯ ವಿಲ್ಲದಿರೆ ಸರ್ವವೂ ವ್ಯರ್ಥವೇ ಸರಿ! ವಾರ್ತಾಕೃಷಿ ಶಿಲ್ಪಾದಿಗಳು ವಿದ್ಯೆಗಳಾದರೂ ನರನಿಗೆ ಮೋಕ್ಷಸಾಧನವೆನಿಸಲಾರದೆ ಅನರ್ಥಗಳನ್ನು ತಂದೊಡ್ಡುವಂತೆ ದುಷ್ಟ ಮನುಜನ ಇಷ್ಟಾಪೂರ್ತಾದಿಗಳು ಕೂಡ ಶ್ರೇಯಃಕಾರಣವಾಗುವುದಿಲ್ಲ ಮತ್ತು ಆಯಾಸವನ್ನು ಕೊಟ್ಟು ಅಳಿಸುವುವು.

ಚಿತ್ತವನ್ನು ಹತ್ತಿಕ್ಕಿ ಜಯಿಸಬೇಕೆಂಬುವ ಧೀರರು ದುಷ್ಟಸಂಗವನ್ನು ದುಷ್ಪರಿಗ್ರಹವನ್ನು ಬಿಟ್ಟು ಏಕಾಕಿಯಾಗಿ ಭಿಕ್ಷಾಟನವನ್ನು ಮಾಡುತ್ತಿರಬೇಕು. ಮಿತವಾಗಿ ಉಣಬೇಕು. ಸಮವಾದ ಶುಚಿಸ್ಥಲದಲ್ಲಿ ಸ್ಥಿರಾಸನವನ್ನು ಹಾಕಿ ಕೂತು ಸಮಕಾಯನಾಗಿ 'ಓಂ' ಎಂಬ ಪ್ರಣವದಿಂದ ಪ್ರಾಣಾಯಾಮವನ್ನು ಮಾಡಬೇಕು. ಮನಸ್ಸಿನಿಂದ ಕಾಮ ವಾಸನೆಗಳು ಸರಿದುಹೋಗುವತನಕ ತನ್ನ ನಾಸಾಗ್ರವನ್ನು ನೋಡಿ, ಪ್ರಾಣಾಪಾನಗಳನ್ನು ನಿರೋಧಿಸಬೇಕು. ಮನಸ್ಸನ್ನು ಓಡುತ್ತಿರುವ ವಿಷಯಗಳಿಂದ ಸೆಳೆದು ಬುದ್ಧಿಯಲ್ಲಿಟ್ಟು ನಿಶ್ಚಲನಾಗಬೇಕು. ಇಂತು ಮಾಡಲು ಕೆಲದಿನಗಳಲ್ಲಿ ಮನವು ಕಾಷ್ಠವನ್ನು ಹಾಕದ ಅಗ್ನಿಯಂತೆ ತಾನಾಗಿ ಆರಿಹೋಗಿ ಕಾಮಾದಿ ಮಲವನ್ನು ಬಿಟ್ಟು ಶಾಂತವಾಗುವುದು. ಆಗ ಚಿತ್ತವು ಬ್ರಹ್ಮಾನಂದರಸಮಗ್ನವಾಗಿ ಎದ್ದು ಬರದೆ ಹರಿಗುಣ ಚಿಂತನೆಯನ್ನು ಮಾಡುವುದು.

ಧರ್ಮಾರ್ಥಕಾಮಪೂರಕವಾದ ಗೃಹಸ್ಥಾಶ್ರಮವನ್ನು ಬಿಟ್ಟು ಯತಿಯಾಗಿ ಪುನಃ ಮನೆಯನ್ನು ಸೇರಿದ ನರನು ಮಹಾಪಾಪಿಯು ನಿರ್ಲಜ್ಜನು ಆಗಿ ನರಕವನ್ನು ಸೇರುವನು. ವಟ್ ಕೃಮಿ ಮಲ ಭಸ್ಮವಾಗುವ ಶರೀರವೇ ಜೀವನಲ್ಲ. ಅಂತಹ ದೇಹವನ್ನೇ ತಾವೆಂದು ತಿಳಿದು ಪೊಗಳಿಸಿಕೊಳ್ಳುವವರು ಅಸುರರೇ ಸರಿ!

ಕರ್ಮವನ್ನು ಬಿಟ್ಟ ಗೃಹಸ್ಥನನ್ನು ವ್ರತವನ್ನು ಬಿಟ್ಟ ವಟುವನ್ನು ಊರಲ್ಲಿರುವ ವಾನಪ್ರಸ್ಥನನ್ನು ಇಂದ್ರಿಯಲೋಲನಾದ ಯತಿಯನ್ನು ಆಶ್ರಮಭಾಸರೆಂಬುವರು. ಇವರು ವರ್ಣವನ್ನು ಆಶ್ರಮವನ್ನು ಕೆಡಿಸುವ ನೀಚನಾಗಿರುವರು. ಅಹೋ! ನಮ್ಮ ಸ್ವಾಮಿಯ ಬಂಧಕ ಶಕ್ತಿಯ ಮಹಿಮೆ! ಎಂದಿಂತಹವರನ್ನು ನೋಡಿ ಶ್ರೀಶನಿಗೆ ಕೈಮುಗಿಯಬೇಕು. ಶ್ರೀಹರಿಯ ತನ್ನ ಬಿಂಬನು ಸ್ವಾಮಿಯು ಎಂದರಿತವನಾಗಿದ್ದರೆ ಇಂದ್ರಿಯಲಂಪಟನಾಗಿ ದೇಹವನ್ನು ಕೊಬ್ಬಿಸಿ ಬೆಳೆಸುತ್ತಿದ್ದನೇ?

ಶರೀರವು ರಥವು; ಇಂದ್ರಿಯಗಳೇ ಕುದುರೆಗಳು; ಮನವೇ ಕಡಿವಾಣವು; ವಿಷಯಗಳೇ ಮಾರ್ಗವು ; ಬುದ್ಧಿಯೇ ಸೂತನು; ಚಿತ್ತವೇ ಈಶನಿರುವ ಗೂಡು; ಜೀವನೇ ರಥಿಕನು; ಪ್ರಾಣಾಪಾನಾದಿ ದಶಪ್ರಾಣಗಳೇ ಇರಸು; ಅಧರ್ಮ ಧರ್ಮಗಳೇ ಎರಡು ಚಕ್ರಗಳು; ಅಭಿಮಾನದಿಂದ ರಥದಲ್ಲಿರುವ ಜೀವನಿಗೆ ಧನುಸ್ಸು 'ಓಂ' ಎಂಬ ಪ್ರಣವವೆನ್ನುವರು. ಜೀವನ ಜಿನ್ಮನವೇ ಬಾಣವು;ಅದರ ಗುರಿಯು ಪರಬ್ರಹ್ಮನಾಗಿರುವನು. ಜೀವನು ಗೆಲಿಯುವ ಶತ್ರುಗಳು ರಾಗ ದ್ವೇಷ ಲೋಭ ಶೋಕ ಮೋಹ ಭಯ ಮದ ದುರಭಿಮಾನಗಳು. ಹಸಿವು ನೀರಡಿಕೆಗಳೇ ಆಗಿರುವರು. ಇದರಲ್ಲಿ ಕೆಲವರು ರಾಜಸರು, ಕೆಲವರು ತಾಮಸರು; ಇದನ್ನರಿತು ಜೀವನು ತನಗೆ ನರದೇಹ ಬಂದಾಗ ಅದು ಸುಧೃಢವಾಗಿರುವಾಗ ತಡೆಯದೆ ಮಹಜ್ಜನಚರಣಸೇವಾ ನಿಶಿತವಾದ ಜ್ಞಾನಖಡ್ಗವನ್ನು ಪಿಡಿದೆತ್ತಿ ಶ್ರೀಹರಿ ಅನುಗ್ರಹದ ಬಲದಿಂದ ರಾಗಾದಿ ಶತ್ರುಗಳನ್ನು ಕೊಂದು, ವಿಷಯಾಲಂಬುದ್ಧಿಯ ರಾಜ್ಯವನ್ನು ಗೆದ್ದು ಸಂಸಾರದೂರನಾಗಬೇಕು.

ಅರಿಯದೆ ಇಂದ್ರಿಯವಶನಾಗಿ ರಾಗಾಂಧನಾದ ಜೀವನನ್ನು ಇಂದ್ರಿಯಾಶ್ವಗಳು ದಾರಿ ತಪ್ಪಿಸಿ, ಸಂಸಾರಗಹನವನ್ನು ಪೊಕ್ಕು ವಿಷಯಚೋರರ ಕೈಗೆ ಒಪ್ಪಿಸಿಬಿಡುವುವು. ಅವರು ಈ ಜೀವನನ್ನೂ ಅವನ ಸೂತನನ್ನೂ ಕುದುರೆಗಳನ್ನೂ ಕೂಡ ಸಂಸಾರವೆಂಬುವ ಹಾಳುಭಾವಿ ಯಲ್ಲಿ ಕೆಡಹಿ ಮೃತ್ಯುವಿಗೆ ತುತ್ತಾಗಿಸುವರು.

ಪ್ರವೃತ್ತ ನಿವೃತ್ತಗಳೆಂದು ಎರಡು ವಿಧ ಕರ್ಮಗಳು ವೇದದಲ್ಲಿ ಹೇಳಲ್ಪಟ್ಟಿವೆ. ಪ್ರವೃತ್ತ ಕರ್ಮಿಯು ಮತ್ತೆ ಪುಟ್ಟಿಬರುವನು. ನಿವೃತ್ತಕರ್ಮಿಯು ತಿರುಗಿ ಬರದೆ ಮುಕ್ತನಾಗುವನು.

ಹಿಂಸಾಯುಕ್ತವು ದ್ರವ್ಯಮಯವು ಕಾಮ್ಯವು ಆದ ಪ್ರವೃತ್ತದಿಂದ ಮೋಕ್ಷವಿಪರೀತ ಫಲವು ಸಿಗುವುದು. ಇದು ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶುಬಂಧ ಎಂದು ಅನೇಕ ವಿಧವಾಗಿ 'ಇಷ್ಟ' ಎನಿಸಿದೆ. ಹುತವೆಂದರೆ ವೈಶ್ವದೇವವು; ಪ್ರಹುತವೆಂದರೆ ಬಲಿಹರಣವು; ಪೂರ್ತವೆಂದರೆ ದೇವಾಲಯ ಆರಾಮಕೂಪ ಫಲವನ ಮುಂತಾದವುಗಳ ನಿರ್ಮಾಣ. ಪುರೋಡಾಶಾದಿ ದ್ರವ್ಯದಿಂದ ಅಪೂರ್ವವು ಪುಟ್ಟಲು ಅದರಿಂದ ಪಿತೃಯಾನವು ಸಿಗುವುದು. ಧೂಮರಾತ್ರಿ ಕೃಷ್ಣಪಕ್ಷ ದಕ್ಷಿಣಾಯನ ಚಂದ್ರಲೋಕಗಳನ್ನು ತದಭಿಮಾನಿ ದೇವತೆಗಳಿಂದ ಹೊಂದಿಸಲ್ಪಟ್ಟು ಜೀವನು ಕರ್ಮಫಲವು ಸವೆಯಲು ಮತ್ತೆ ಹುಟ್ಟುವನು. ಓಷಧೀವೃಕ್ಷಗಳು ತಂದೆ ತಾಯಿ ಎಂಬ ಮಾರ್ಗದಿಂದ ಹಿಂದಿರುಗಿ ಜನಿಸಿ ಬರುವನು. ಈ ಮಾರ್ಗವನ್ನು ಪಿತೃಯಾನವೆಂಬುವರು. ಪುಣ್ಯವಿಶೇಷಯುಕ್ತನು ನಿಷೇಕಾದಿ ಸ್ಮಶಾನಾಂತಸಂಸ್ಕಾರಗಳುಳ್ಳ ವಿಪ್ರಾದಿ ಕುಲದಲ್ಲಿ ಪುಟ್ಟುವನು.

ಅರ್ಚಿರಾದಿ ಮಾರ್ಗವನ್ನು ಕೇಳು. 'ಕ್ರಿಯಾಭಿಮಾನಿ ದೇವತೆಗಳು ಜ್ಞಾನೇಂದಿಯ ದೇವತಾ ಧೀನರು. ಇಂದ್ರಿಯಾಭಿಮಾನಿಗಳೆಲ್ಲರೂ ಮನೋಮಾನಿ ಇಂದ್ರಾಧೀನರು. ಇಂದ್ರನು ವೇದ ಮಾನಿನೀ ಪಾರ್ವತಿಗೆ ವಶನು. ಪಾರ್ವತಿದೇವಿಯು ಅ, ಉ,ಮ, ಎಂಬ ವರ್ಣತ್ರಯಾತ್ಮಕ ವಾದ ರುದ್ರಾಧೀನಳು. ರುದ್ರನು ಶೇಷನಲ್ಲಿ ಪ್ರಣವಾತ್ಮಕ ಶೇಷನು ಬಿಂದು ನಾದ ನಿಯಾಮಕ ರಾದ ಭಾರತೀ ಸರಸ್ವತಿಯರಲ್ಲಿ. ಅವರು ಪ್ರಾಣ ವಿರಿಂಚರಲ್ಲಿ ಆ ವಿರಿಂಚನು ಶ್ರೀಹರಿಯಲ್ಲಿ ಅಧೀನರಾಗಿ ಲಯವನ್ನು ಹೊಂದುವರು' ಎಂದು ಉತ್ಕ್ರಮಣ ಕಾಲದಲ್ಲಿ ಚಿಂತಿಸಿ ಜ್ಞಾನಿಯು ಅಗ್ನಿ ಸೂರ್ಯ ದಿವಾ ದೇವತೆ ಪ್ರವಹವಾಯು ಶುಕ್ಲಪಕ್ಷ ಪೂರ್ಣಿಮಾ ಉತ್ತರಾಯಣ ಸಂವತ್ಸರ ಇಂದ್ರಾದಿ ದೇವತೆಗಳು ಕರೆದುಕೊಂಡು ಹೋಗುವ ಅರ್ಚಿರಾದಿ ಮಾರ್ಗವನ್ನನುಸರಿಸಿ ಹೋಗು ವನು. ಇದನ್ನೇ ದೇವಯಾನ ವೆಂಬುವರು. ಕ್ರಮವಾಗಿ ಸುಖಾಭಿವೃದ್ಧಿಯನ್ನು ಪೊಂದುತ್ತಾ ಕೊನೆಗೆ ಪ್ರರಮಾತ ಲೋಕವನ್ನೈದಿ ಸ್ವಪೂರ್ಣಾನಂದಸ್ವರೂಪನಾಗಿ, ಹಿಂದಿರುಗಿ ಬರದಿರುವನು. ಈ ದೇವಯಾನ ಪಿತೃಯಾನಗಳೆರಡನ್ನು ಚೆನ್ನಾಗಿ ಶಾಸ್ತ್ರವಿಚಾರಗಳನ್ನು ಮಾಡಿ ತಿಳಿದ ಮನುಜನು ದೇಹಬಂಧದಲ್ಲಿದ್ದರೂ ಅಜ್ಞಾನಮಗ್ನರಂತೆ ಇರದೆ ಶ್ರೀಹರಿಜ್ಞಾನಿಯಾಗುವನು. ಪ್ರಳಯಸೃಷ್ಟಿ ಸಮಯಗಳಲ್ಲಿ ಹಾಗೂ ಮುಕ್ತಿಯಲ್ಲಿಯೂ ಕೂಡ ಶಶ್ವದೇಕಪ್ರಕಾರನಾಗಿರುವ ಜನರಿಗೆ ಜನನ ಮರಣಪ್ರದನಾದ ಅಂತರ್ಬಹಿಃ ಸರ್ವತ್ರವ್ಯಾಪ್ತನಾದ ಭೂತ ಭವಿಷ್ಯತ್ ಸರ್ವಜ್ಞನಾದ ಅಜ್ಞಾನಜ್ಞಾನಪ್ರದನಾದ ಬಂಧಮೋಕ್ಷಕಾರಣನಾದ ನಾರಾಯಣನ ಅಧೀನವೇ ಎಲ್ಲವೆಂದು ತಿಳಿದು ಆ ಜ್ಞಾನಿಯು ಮುಕ್ತನೆನಿಸುವನು.

ಈ ದೇಹವು ಅರ್ಥಕ್ರಿಯಾಕಾರಿಯಾಗಿದೆ, ಆದ್ದರಿಂದ ಸತ್ಯವೂ ಅಹುದು. ಇದರಿಂದಲೇ ಜೀವನಿಗೆ ಜ್ಞಾನಕ್ರಿಯೆಗಳು ನಡೆಯುತ್ತಿವೆ. ಈಶಪ್ರತಿಬಿಂಬವಾದ ಜೀವತತ್ತ್ವವು ಸತ್ಯ

ವಾದಂತೆಯೇ ಘಟಪಟಾದಿ ಇಂದ್ರಿಯವಿಷಯಕ ಜಗವು ಕೂಡ ಅರ್ಥಕ್ರಿಯಾಕಾರಿಯಾಗಿ ಒಂದು ಪ್ರಯೋಜನವನ್ನುದ್ದೇಶಿಸಿ ಪರಮಾತ್ಮನಿಂದ ರಚಿತವಾಗಿರುವುದರಿಂದ ಸತ್ಯವೇ ಆಗಿದೆ. ಶ್ರೀಹರಿಪ್ರೇರಣೆಯ ಹೊರತು ಪೃಥಿವ್ಯಾದಿಗಳಿಗೆ ಯಾವ ಪ್ರವೃತ್ತಿಯು ಹುಟ್ಟಲಾರದು. ಕಲೆಯುವುದಾಗಲಿ ಅಗಲುವುದಾಗಲಿ ವಿಕಾರವಾಗಲಿ ಪೃಥಿವೀಜಲವಹ್ನಿಗಳಿಗೆ ಸ್ವತಂತ್ರವಾಗಿಲ್ಲ. ಪೃಥಿವ್ಯಾದಿ ಭೂತಗಳು ಗಂಧಾದಿ ಅವಯವಗಳುಳ್ಳದ್ದಾಗಿವೆ. ತಂತುಗಳಿಲ್ಲದೆ ಪಟವಿರಲಾರದು. ಅಂತೆಯೇ ಗಂಧವಿಲ್ಲದೆ ಪೃಥಿವಿಯೂ ಇಲ್ಲವೆಂದು ಸಿದ್ಧವಾಗುವುದು. ಆದ್ದರಿಂದ ಪೃಥಿವೀ ಗಂಧಗಳಿರುವ ಅಂಗಾಂಗಿ ಭಾವವು ಕೂಡ ಸರ್ವಸ್ವಾಮಿಯಾದ ಶ್ರೀನಾರಾಯಣ ಕಟಾಕ್ಷ ಪ್ರಾಪ್ತವೆಂದು ತಿಳಿಯಬೇಕು. ಶುಕ್ತಿಯನ್ನು ನೋಡಿ ರಜತಸಾದೃಶ್ಯವಿರುವುದರಿಂದ ಭ್ರಮೆಯು ಬರುವುದು ನಿಜ. ಆದರೆ ಸಾದೃಶ್ಯವು ಸದಾ ಭೇದಘಟಿತವಾಗಿದೆ. ಎರಡು ಸತ್ಯವಸ್ತುಗಳ ಜ್ಞಾನದಿಂದ ಸಾದೃಶ್ಯವು ತೋರುವುದು; ಅದರಿಂದ ಭಮೆಯು ಅಜ್ಞಾನಿಗೆ ಬರುವುದು. ಅಂತೆಯೇ ಜೀವನು ಅನಾದಿಕಾಲದಿಂದ ಪರಮಾತ್ಮ ಸದೃಶನು ತದಧೀನನು ಆಗಿದ್ದರೂ ಅವಿದ್ಯೆಯಿಂದ ಸ್ವತಂತ್ರಭ್ರಾಂತಿಯನ್ನು ಹೊಂದುತ್ತಿರುವನು. ಜಾಗೃದ್ದಶೆ ಸ್ವಪ್ನದರ್ಶನ ಗಾಢನಿದ್ರಾದಿಗಳಿಗೆ ಅವನೇ ಸ್ವತಂತ್ರ ಪ್ರೇರಕನು. ಸರ್ವವಿಧಿನಿಷೇಧಗಳೂ ಶ್ರೀಹರಿಪ್ರೀತಿಗಾಗಿಯೇ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಶ್ರೀಶನೇ ಸರ್ವೋತ್ತಮನು– ಜೀವಭಿನ್ನರು– ಜಡಭಿನ್ನನು ಎನ್ನುವುದೇ ಯಥಾರ್ಥ ಜ್ಞಾನವು. ಶ್ರೀಹರಿಯ ದಯದಿಂದ ಯಥಾರ್ಥಜ್ಞಾನವನ್ನು ಪಡೆದವನು ನಿರ್ದೋಷನು. ಸ್ವಯೋಗ್ಯ ಗುಣಪೂರ್ಣನು ಆಗಿ ಮುಕ್ತನಾಗುವನು.

ಜ್ಞಾನಿಯು ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತಗಳೆಂಬುವ ಭಾವನೆಗಳನ್ನು ಮಾಡಿ ಆವಿರ್ಭೂತಸ್ವರೂಪಜ್ಞಾನಾನಂದನಾಗಿ ಜಾಗ್ರತ್ ಸ್ವಪ್ನ ನಿದ್ರಾವಸ್ಥೆಗಳನ್ನು ಮೂರನ್ನೂ ದಾಟಿ ಸುಖಿಸುವನು.

ಪಟತಂತುಗಳು ಕಾರ್ಯಕಾರಣಗಳೆನಿಸುವಂತೆ ಈ ಜಗವು ಕಾರ್ಯಾತ್ಮಕವು ಕಾರಣಾತ್ಮಕವು ಆಗಿದೆ. ಈ ಉಭಯವಿಧ ಜಗವು ತಾನಾಗಿ ಕಾರ್ಯವಾಗದು. ತಾನಾಗಿ ಕಾರಣವೂ ಆಗಲಾರದು. ಅದೆಲ್ಲವೂ ಶ್ರೀಹರಿಯ ಅಧೀನವಾಗಿದೆ. ಕಾರಣದಲ್ಲಿ ಜನಕಶಕ್ತಿಯನ್ನು - ಬಿಟ್ಟು ಕಾರಣ ನಾಗಿಯು, ಕಾರ್ಯದಲ್ಲಿ ಪರಿಣಾಮಶಕ್ತಿಯನ್ನಿತ್ತು ಕಾರ್ಯನಾಗಿಯೂ ಶ್ರೀಹರಿಯು ನೆಲಸಿರು ವನು – ಎಂಬುವ ಜ್ಞಾನವುಲ ಭಾವಾದ್ವೈತವೆನಿಸುವುದು.

ಗುಣಪೂರ್ಣನಾದ ಶ್ರೀನಾರಾಯಣನ ಚರಣಾರವಿಂದದಲ್ಲಿ ಭಕ್ತಿಯಿಂದ ಮನೋವಚನ ಶರೀರಗಳಿಂದ ಮಾಡಿದ ಸರ್ವಶುಭಕರ್ಮ ಫಲವನ್ನರ್ಪಿಸುವುದೇ ಕ್ರಿಯಾದ್ವೈತವು.

ತಾನು ತನ್ನದಾರಾಪುತ್ರಾದಿಗಳು ಧನಾರಾಮದಿಗಳೆಲ್ಲವು ಸದಾ ಈಶಾಧೀನ ಹಾಗೂ ಸಕಲ ಜೀವರು ಶ್ರೀಶಾಧೀಶರು. ಅವರ ಅರ್ಥಕಾಮಾದಿಗಳೆಲ್ಲವೂ ಆ ಪ್ರಭುವಿನ ಅಧೀನವಾಗಿದೆ– ಎಂದು ತಿಳಿಯುವುದೇ ದ್ರವ್ಯಾದ್ವೈತವು.

ಯಾವ ದೇಶ ಕಾಲ ವಸ್ತುಗಳು ಅನಿಷಿದ್ಧವಾಗಿಯೋ ಅವುಗಳಿಂದಲೇ ಕರ್ಮಗಳನ್ನು ಒಂದು ವೇಳೆ ಆಪತ್ಸಮಯದಲ್ಲಿ ಸ್ವೀಕರಿಸಿದರೂ ಆಪತ್ತು ಪಾರಾದ ತತ್‌ಕ್ಷಣವೇ ನಿಷಿದ್ಧಗಳನ್ನು ಬಿಟ್ಟು-ಮಾಡಿ ಶ್ರೀಹರಿಗರ್ಪಿಸಿದ ಮನುಜನು ಗೃಹಸ್ಥಾಶ್ರಮಿಯಾದರೂ ಭಕ್ತಿಯನ್ನು ಪಡೆದು ಮುಕ್ತನಾಗುವನು.

ಧರ್ಮರಾಜ! ಶ್ರೀಕೃಷ್ಣಪಾದಪಂಕೇರುಹಸೇವಾಪುಣ್ಯದಿಂದ ದಿಕ್ಪಾಲರನ್ನೂ ಗೆದ್ದೆ; ರಾಜಸೂಯವನ್ನೂ ಮಾಡಿದೆ; ಸಕಲ ಸಂಕಟಗಳಿಂದಲೂ ಪಾರಾದೆ. ಅಂತಹ ಮಹಾ ಮಹಿಮನಾದ ನಮ್ಮ ಕೃಷ್ಣನ ಭಕ್ತರೂ ದೊಡ್ಡವರೇ! ಅವರ ಸೇವೆಯು ಮಹಾಫಲಕಾರಿಯಾಗಿರುವಂತೆ ಅವರ ದ್ರೋಹವು ಅನರ್ಥಕಾರಿಯಾಗಿದೆ.

ನಾನು ಪೂರ್ವಬ್ರಹ್ಮ ಕಲ್ಪದಲ್ಲಿ ಉಪಬರ್ಹಣನೆಂಬ ಒಬ್ಬ ಗಂಧರ್ವನಾಗಿದ್ದೆನು. ರೂಪ ಸೌಕುಮಾರ್ಯ ಮಾಧುರ್ಯ ಸೌಗಂಧ್ಯಾದಿಗುಣಭರಿತನಾಗಿ ಗಂಧರ್ವರಿಗೆಲ್ಲ ಅಚ್ಚುಮಚ್ಚಾಗಿದ್ದೆ. ಸ್ತ್ರೀಯರಲ್ಲಿ ನನ್ನ ಓಡಾಟ, ಆಟಪಾಟ ಕುಣಿತಗಳು. ನಾನೂ ಸುಂದರ ತರುಣೀಲಂಪಟನಾಗಿದ್ದೆ. ಒಂದು ಸಲ ವಿಶ್ವಸೃಜ್ಮುನಿಗಳು ದೇವಸತ್ರದಲ್ಲಿ ಗಾಯನಕ್ಕಾಗಿ ಕರೆಕಳಿಸಿದರು. ನಾನು ಪ್ರಮದಾಜನಯುತಾಗಿ ಸಭೆಯಲ್ಲಿ ಕೂತು ಹರಿಗಾಥೋಪಗಾಯನವನ್ನು ಮಾಡದೆ ಶೃಂಗಾರ ಗಾನಗಳನ್ನು ಹಾಡಿದೆನು. ನಾನು ಪ್ರಮದಾವಶನಾಗಿ ಮಾಡಿದ ದೇವಹೇಲನವನ್ನು ಕಂಡು ಕುಪಿತರಾಗಿ ಆ ಮಹಾತ್ಮರು 'ಎಲವೋ ದುಷ್ಟ! ಮದಮತ್ತನಾಗಿ ನಮ್ಮನ್ನು ತಿರಸ್ಕರಿಸಿಗ ನೀನು ಶೂದ್ರನಾಗಿ ಹುಟ್ಟು' ಎಂದು ಶಾಪವನ್ನಿತ್ತರು. ಆದರಿಂದ ನಾನು ದಾಸೀಪುತ್ರನಾಗಿ ಜನಿಸಿದೆನು. ಇದು ಮಹನ್ನಿಂದಾಫಲವು.

ಬಹ್ಮವಾದಿಗಳ ಮನೆಯಲ್ಲಿ ಮಾಡಿದ ಅವರ ಸೇವೆ ಅವರ ಮನೆಗೆ ಬಂದ ಮಹಾತ್ಮರಾದ ಯತಿಪುಂಗವರ ಸೇವೆಯಿಂದ ನಾನು ಬ್ರಹ್ಮಪುತ್ರನಾದೆ. ಇದು ಮಹತ್ಸೇವಾಫಲ.

ಇಂತು ನಿನಗೆ ಗೃಹಸ್ಥಧರ್ಮವನ್ನು ವರ್ಣಿಸಿರುವೆನು; ಇದು ಪಾಪನಾಶಕವು. ಶ್ರೀಹರಿಪ್ರೀತಿ ಸಾಧಕವೂ ಆಗಿದೆ. ಗೃಹಸ್ಥನು ಈ ರೀತಿಯಾಗಿ ನಡೆದರೆ ಒಳ್ಳೆಯ ಸನ್ಯಾಸಿಗಳಿಗಾಗುವ ಮೋಕ್ಷ ಸದೃಶ ಮುಕ್ತಿಯನ್ನು ಪಡೆದು ಸುಖಿಸುವನು.

ಧರ್ಮರಾಜಾ! ಲೋಕದಲ್ಲಿ ನಿಮ್ಮಕಿಂತಲೂ ಧನ್ಯರಾರು! ನಿಮ್ಮ ಮನೆಗೆ ತಾವಾಗಿ ಲೋಕ ಪಾವನರಾದ ಮುನಿಗಳು ಬರುತ್ತಿರುವರು. ಇಲ್ಲಿ ಗೋವಿಂದ ಸಂದರ್ಶನ ಭಾಗ್ಯವು ಸಿಗುವುದು. ಪರಂಬ್ರಹ್ಮನು ಮನುಜರೂಪದಿಂದ ಅವತರಿಸಿ ಶ್ರೀಕೃಷ್ಣನೆಂದು ಖ್ಯಾತನಾಗಿರುವನು. ಬ್ರಹ್ಮಾದಿಗಳೂ ಇವನ ಅನಂತ ಕಲ್ಯಾಣ ಗುಣಾತ್ಮಕ ದಿವ್ಯರೂಪವನ್ನರಿಸಿ ಪೂರ್ಣವಾಗಿ ಕಾಣಲಾರದೆ ಭಕ್ತಿಯಿಂದ ತಲೆಬಾಗಿ ನಮಿಸುವರು. ಸನಕಾದಿ ವಿಚಾರ ವಿಷಯನು ನಿರ್ದೋಷನು ಪ್ರಾಕೃತಶರೀರರಹಿತನು ಸುಖಜ್ಞಾನಭರಿತನು ಆದ ಶ್ರೀಹರಿಗೆ ನಮಸ್ಕಾರವು!

ಈ ಶ್ರೀಕೃಷ್ಣನು ನಿಮ್ಮಲ್ಲಿ ಮಾಡಿದ ಪರಮಾನುಗ್ರಹವನ್ನು ನೋಡಿ ಆನಂದಾಶ್ಚರ್ಯ ರಸಮಗ್ನನಾಗಿರುವೆನು. ಇವನು ನಿಮಗೆ ಪ್ರಿಯಮಿತ್ರ–ದೂತ –ಬಂಧುವ – ಭಾವ– ಸ್ವಾಮಿ– ಶಾಸಕ– ಗುರುವು ಅಲ್ಲದೆ ಪೂಜಿತನೂ ಆಗಿ ಮಹಾಫಲವನ್ನು ನಿಮಗೆ ದಯಪಾಲಿಸಿದನು. ಇವನನ್ನು ಜ್ಞಾನದಿಂದಲೇ ಪೂಜಿಸಬೇಕು; ವಿರಕ್ತಿಯಿಂದಲೇ ಭಜಿಸಬೇಕು; ಭಕ್ತಿಯಿಂದಲೇ ಭಾವಿಸಬೇಕು; ಈ ಶ್ರೀಕೃಷ್ಣನಿಗೆ ನೀ ಕೇಳಿದ ನಾ ಪೇಳಿದ ಭಾಗವತ ಫಲವನ್ನು ಸಮರ್ಪಿಸಿ ನಮಸ್ಕರಿಸುವೆನು– ಎಂದು ನಾರದನು ಪೇಳಿದನು.

ಧರ್ಮರಾಜನಾಗ ನಾರದನನ್ನು ಪೂಜಿಸಿ ಶ್ರೀಕೃಷ್ಣನನ್ನೂ ಭಕ್ತಿರಸಪರಿಪ್ಲುತನಾಗಿ ಪೂಜಿಸಿದನು. ನಾರದನು ಕೃಷ್ಣ ಪಾರ್ಥರನ್ನು ಬೀಳ್ಕೊಟ್ಟು ತೆರಳಿದನು.

ಶ್ರೀಕೃಷ್ಣನೇ ಪರಬ್ರಹ್ಮನೆಂದರಿತು ಧರ್ಮರಾಜನು ಆಶ್ಚರ್ಯಭರಿತನಾದನು.

ದಾಕ್ಷಾಯಣಿಯರ ವಂಶವಿಂತು ಶಾಖೋಪಶಾಖಾವಿಸ್ತೃತವಾಗಿ ದೇವಾಸುರ ನರಪ್ರಮುಖ ಚರಾಚರ ಸಂತತಿರೂಪವಾಗಿ ನಿನಗೆ ವರ್ಣಿತವಾಯಿತು ಎಂದು ಶುಕನು ರಾಜನಿಗೆ ಹೇಳಿದನು.

ಸಪ್ತಮಸ್ಕಂಧವು ಸಂಪೂರ್ಣವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ॥

# ಶ್ರೀಮದ್ಭಾಗವತಮ್

## ಅಷ್ಟಮ ಸ್ಕಂಧವು

॥ ಹರಿಃ ಓಂ ॥

### ೧. ಯಜ್ಞಕಥಾ – ಮನ್ವಂತರಗಳ ವಿವರಗಳು

ರಾಜನು ಕೇಳಿದನು–

ಶ್ರೀ ಶುಕನೇ! ಸ್ವಾಯಂಭುವ ಮನುರಾಜನ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದೆ. ಇತರ ಮನುಗಳ ವಿಷಯವನ್ನೂ ಹೇಳು. ಆ ಮನ್ವಂತರಗಳಲ್ಲಿ ಚತುರ್ವರ್ಣದ ಜನರು ಮಾಡಿದ ವಿವಿಧ ಧರ್ಮಪ್ರಕಾರವೇನು? ಶ್ರೀಹರಿಯು ಅಲ್ಲಿ ಮಾಡಿದ ಅವತಾರಗಳಾವುವು? ಮಹಾ ಮಹಿಮರಾದ ಬ್ರಹ್ಮಾದಿಗಳು ಪೊಗಳುವ ಸ್ವಾಮಿಯ ಚಿತ್ರ ಚರಿತ್ರೆಗಳನ್ನು ಕೇಳಲಿಚ್ಛಿಸುವೆನು. ಈಗ ವೈವಸ್ವತ ಮನ್ವಂತರವನ್ನು ವಿಶೇಷವಾಗಿ ವರ್ಣಿಸು.

ಆಗ ಋಷಿಯು ಹೇಳಿದನು–

ಪರೀಕ್ಷಿದ್ರಾಜನೇ! ಸ್ವಾಯಂಭುವನೇ ಮೊದಲಾದ ಆರು ಮನುಗಳಾಗಿ ಹೋಗಿರುವರು. ಆಕೂತಿಯಲ್ಲಿಯು ದೇವಹೂತಿಯಲ್ಲಿಯು ಶ್ರೀಹರಿಯು ಯಜ್ಞನಾಗಿಯು ಕಪಿಲನಾಗಿಯು ಅವತರಿಸಿ ಧರ್ಮಜ್ಞಾನಗಳನ್ನು ಸಂರಕ್ಷಿಸಿದನು. ಕಪಿಲನ ಮಹಿಮೆಯನ್ನು ನಿನಗ ವರ್ಣಿಸಿರುವೆನು. ಈಗ ಯಜ್ಞನ ಕಥೆಯನ್ನು ಕೇಳು.

ಕಾಮಭೋಗಗಳಿಂದ ವಿರಕ್ತನಾಗಿ ಮನುರಾಜನು ಶತರೂಪೆಯಿಂದ ಕೂಡಿ ಅಲಕನಂದೆಯು ಮೂರು ಸರಳಾಗಿ ಹರಿಯುವ ಪವಿತ್ರ ಸ್ಥಲದಲ್ಲಿ ಕಠಿಣ ತಪವನ್ನಾಚರಿಸಿದನು. ಉಪನಿಷತ್ಪ್ರತಿಪಾದ್ಯನಾದ ಯಜ್ಞನನ್ನು ಕುರಿತು ಇಂತು ಸ್ತುತಿಸಿದನು–

ದೇವಾ! ನಿನ್ನಿಂದ ಈ ಜಗವು ಬೆಳಗುತ್ತಿದೆ. ನಿನ್ನ ತಾಪರೂಪ ತಪಸ್ಸಿನಿಂದ ಜಗವು ಅನ್ನಾದಿಗಳನ್ನು ಪಡೆಯುತ್ತಿದೆ. ಜಗವೆಲ್ಲವೂ ಅಜ್ಞಾನನಿದ್ರಾಮುದ್ರಿತವಾಗಿದ್ದಾಗ ನೀನು ಎಚ್ಚತ್ತು ಸರ್ವಪ್ರವರ್ತಕನಾಗಿರುವೆ. ನೀನು ಎಲ್ಲವನ್ನೂ ಚೆನ್ನಾಗಿ ತಿಳಿದಿರುವೆ. ನಿನ್ನನ್ನು ಸಾಕಲ್ಯೇನ ತಿಳಿದವರು ಯಾರೂ ಇಲ್ಲ. ಸೂರ್ಯಾದಿ ಪ್ರೇರಕನೇ! ನಿನಗೆ ನಮಸ್ಕಾರವು.

ಈ ಜಗವೆಲ್ಲವು ಶ್ರೀಶಾಧೀನವು ಮತ್ತು ಎಲ್ಲ ಕಡೆ ತುಂಬಿ ನಿಂತಿರುವ ಅವನಿಂದ ಪ್ರವರ್ತಿತವೂ ಆಗಿದೆ; ಜಂಗಮಸ್ಥಾವರ ಜೀವರಲ್ಲಿಯೂ ಅವನು ನಿಯಾಮಕನಾಗಿರುವನು. ಎಲವೋ ಮನವೇ! ಇದನ್ನರಿತು ಶ್ರೀಹರಿಯು ಕೊಟ್ಟದ್ದನ್ನು ಉಣ್ಣು. ಪರದ್ರವ್ಯಗಳಿಗೆ ಆಶೆಪಡಬೇಡ! ಶ್ರೀಹರಿಯ ಸ್ವಾತಂತ್ರ್ಯಾದಿ ಗುಣಗಳನ್ನು ಕದಿಯಲು ನೋಡಬೇಡ! ಸರ್ವಜ್ಞನೇ ನಾನೆಂದು ಭ್ರಮೆಪಡಬೇಡ! ಅವನು ನಮ್ಮನ್ನು ನೋಡುತ್ತಿರುವನು. ನಾವು ಅವನನ್ನು ಕಣ್ಣಿನಿಂದ

ನೋಡಲಾರೆವು. ಅವನ ಜ್ಞಾನವು ಅವ್ಯಾಹತವು, ಪೂರ್ಣವು, ಅನಿರೋಧವು ಆಗಿದೆ. ಇಂತಹ ಸರ್ವೇಂದ್ರಿಯ ನಿಯಾಮಕನು ಸರ್ವಭೂತನಿಲಯನು ಆದ ಪೂರ್ಣಾನಂದ ನನ್ನು ಸೇವಿಸು. ಆದಿಮಧ್ಯಾಂತರಹಿತನು ಅಂತರ್ಬಹಿಸ್ಸರ್ವತ್ರ ವ್ಯಾಪ್ತನು ಆದ ನಾರಾಯಣನು ಜಗತ್ತಿನ ಆದಿ ಮತ್ತು ಅಂತ್ಯವನ್ನೂ ಮಾಡುತ್ತಿರುವನು. ಸ್ವತಂತ್ರನಾದ ಆ ಹರಿಯು ಸರ್ವೋತ್ತಮನಾಗಿರುವನು. ಬ್ರಹ್ಮಾಂಡವೇ ಅವನ ಮನೆ; ಬ್ರಹ್ಮಾದಿ ಸರ್ವಶಬ್ದಗಳು ಅವನ ಹೆಸರು; ಲಕ್ಷ್ಮಿಯೇ ಅವನ ಹೆಂಡತಿಯು; ನಿರ್ದೋಷಜ್ಞಾನಾ ನಂದಾದಿಗುಣಗಳೇ ಅವನ ದೇಹ; ಸ್ವಶಕ್ತಿಯಿಂದ ಮಾಡುವ ಜನ್ಮಸ್ಥಿತಿನಾಶಗಳೇ ಅವನ ವ್ಯಾಪಾರ; ಇಷ್ಟಾಗಿದ್ದರೂ ಎಲ್ಲರ ಸ್ವಾಮಿಯಾಗಿ ನಿರ್ಲಿಪ್ತನಾಗಿ, ನಂಬಿದವರಿಗೆ ಮುಕ್ತಿಪ್ರದನಾಗುವುದೇ ಅವನ ಮಹಿಮೆ.

ಹಿಂದೆ ಋಷಿಗಳು ತಮ್ಮ ದುಷ್ಕರ್ಮ ಪರಿಹಾರವಾಗಲೆಂದು ಪರಿಪೂಜಾತ್ಮಕವಾದ ಯಜ್ಞಗಳನ್ನು ಮಾಡಿದರು. ಶ್ರೀಹರಿಗರ್ಪಿಸಿದ ನಿವೃತ್ತಿಕರ್ಮದಿಂದ ಮೋಕ್ಷವನ್ನೂ ಪಡೆದರು. ತನ್ನನ್ನು ನಂಬಿದ ಜ್ಞಾನಿಗಳನ್ನು ಕರ್ಮಪಾಶದಿಂದ ಬಿಡಿಸುವ ಸರ್ವೇಶನಿಗೆ ತಾನು ಮಾಡುವ ಜಗಜ್ಜನ್ಮಾದಿ ವ್ಯಾಪಾರದ ಲೇಪವಾದರೂ ಎಂತು! ಅವನ ಸ್ವಲಾಭಪೂರ್ಣನಾದುದರಿಂದ ಅವನಿಗೆ ಜಗದಿಂದ ಪ್ರಯೋಜನವೂ ಇಲ್ಲ. ಜೀವಜಡಾತ್ಮಕ ಜಗಜ್ಜನ್ಮಾದಿ ವ್ಯಾಪಾರವು ಅವನಿಗೆ ಲೀಲೆ. ಪ್ರಯೋಜನವಿಲ್ಲದೆ ಪ್ರಯತ್ನಿಸಿ ಭೌತಿಕ ಶರೀರವಿಲ್ಲದೆ ಅನುಭವಿಸುವ ಆನಂದಮಯನಿಗೆ ನಿಯಾಮಕರು ಬೇರೊಬ್ಬರಿಲ್ಲ. ಸಕಲ ಧರ್ಮಪಾಲಕನಾದ ಶ್ರೀಹರಿಯು ಮಾರ್ಗವನ್ನು ಬಿಟ್ಟು ನಡೆಯದಂತೆ ಸುಜನರನ್ನು ಸಲಹಿ ತಾನೂ ಧರ್ಮದಲ್ಲಿ ನಡೆಯುತ್ತಿರುವನು. ಅಂತಹ ಶ್ರೀಹರಿಯೇ ನನಗೆ ಗತಿ!

ಇಂತು ಶ್ರದ್ಧೆಯಿಂದ ಚಿಂತಿಸುವ ಮನುವಿನನ್ನು ನೋಡಿ ಸಿಟ್ಟಿನಿಂದ ಯಾತುಧಾನರು ಅವನನ್ನು ಕೊಂದು ತಿನ್ನಲು ಬಂದರು ಆಗ ಅವರ ದುರ್ನಿರ್ಣಯವನ್ನರಿತು ಸ್ವರ್ಗದಲ್ಲಿ ಇಂದ್ರಪದವಿಯಲ್ಲಿ ರಾರಾಜಿಸುವ ಯಜ್ಞನಾಮಕಹರಿಯು ಯಾಮರೆಂಬ ದೇವತೆಗಳಿಂದ ಕೂಡಿಬಂದು ಯಾತುಧಾನರನ್ನು ಕೊಂದು ಮನುವಿನನ್ನು ಕಾಪಾಡಿದನು.

ಅಗ್ನಿಸುತನಾದ ಸ್ವಾರೋಚಿಷನು ಎರಡನೆಯ ಮನುವಾದನು. ದ್ಯುಮತ್ ಸುಷೇಣ, ರೋಚಿಷ್ಮಂತ ಮೊದಲಾದವರು ಅವನ ಪುತ್ರರು. ಆಗ ಮುಖ್ಯಪ್ರಾಣನೇ ರೋಚನನೆಂಬ ಹೆಸರಿನಿಂದ ಇಂದ್ರನಾಗಿದ್ದನು; ತುಷಿತರೇ ದೇವತೆಗಳು. ಓಜಸ್ತಂಭ ಮುಂತಾದ ಏಳು ಜನರು ಸಪ್ತರ್ಷಿಸ್ಥಾನದಲ್ಲಿದ್ದರು. ವೇದಶಿರನೆಂಬ ಋಷಿಗೆ ತುಷಿತಳಲ್ಲಿ ವಿಭು ಎಂಬ ಹೆಸರಿನಿಂದ ಶ್ರೀಹರಿಯು ಅವತರಿಸಿ ಎಂಭತ್ತೆಂಟು ಸಾವಿರ ಋಷಿಗಳಿಗೆ ಕೌಮಾರಬ್ರಹ್ಮಚರ್ಯವನ್ನು ಕಲಿಸಿಕೊಟ್ಟನು.

ಪ್ರಿಯವ್ರತಸುತನಾದ ಉತ್ತಮನು ತೃತೀಯ ಮನುವೆನಿಸಿದನು. ಪವನ, ಸೃಂಜಯಾದಿಗಳು ಅವನ ಸುತರು. ವಶಿಷ್ಠನ ಸುತರು ಏಳು ಜನ ಋಷಿಗಳು ಆಗಿದ್ದರು. ಸತ್ಯರು, ವೇದಶ್ರುತರು, ಭದ್ರರೆಂದು ದೇವತೆಗಳ ನಾಮಗಳು. ಅವರಿಗೆ ಇಂದ್ರನಾಗಿ ಸತ್ಯಜಿತನಿದ್ದನು. ಧರ್ಮನಿಗೆ ಸೂನೃತಳಲ್ಲಿ ಸತ್ಯಸೇನನೆಂದು ಅವತರಿಸಿ ಸತ್ಯವ್ರತರೆಂಬ ತನ್ನ ಅನುಜರಿಂದ ಕೂಡಿ ಅನೃತಶೀಲರಾದ ಯಜ್ಞರಾಕ್ಷಸರನ್ನು ಸಂಹರಿಸಿ ಶ್ರೀಹರಿಯು ಸತ್ಯಜಿದಿಂದ್ರನನ್ನು ಕಾಪಾಡಿದನು.

ನಾಲ್ಕನೆಯ ಮನುವು ತಾಪಸನು. ಅವನು ಉತ್ತಮನ ತಮ್ಮನು. ತಾಪಸನೆಂಬ ಮನುವನ್ನು ಶ್ರೀಹರಿಯ ಅವತಾರವೆನ್ನುವರು. ಅವನಿಗೆ ವೃಷ, ಖ್ಯಾತಿ, ನರ, ಕೇತು ಮೊದಲಾದ ಹತ್ತು ಜನರು ಮಕ್ಕಳಿದ್ದರು. ಸತ್ಯಕರು, ಹರಿಗಳು, ವೀರರೆಂದು ದೇವತೆಗಳು ಕರೆಯಲ್ಪಡುತ್ತಿದ್ದರು.

ತ್ರಿಶಿಖನೆಂಬ ಇಂದ್ರನು ಸ್ವರ್ಗವನ್ನಾಳಿದನು. ಆಗ ಜ್ಯೋತಿರ್ಧಾನ ಮೊದಲಾದವರು ಸಪ್ತರ್ಷಿಗಳಾಗಿದ್ದರು. ವಿಧೃತಿದೇವಿಯ ಸುತರಾದ ವೈಧೃತಿನಾಮಕ ದೇವತೆಗಳು ತಮ್ಮ ತೇಜೋಬಲದಿಂದ ವೇದಗಳನ್ನು ಕೆಡದಂತೆ ಪರಿಸಿ ಧರಿಸಿದರು. ತಾಪಸ ಮನ್ವಂತರದಲ್ಲಿ ಭಗವಂತನು ಹರಿಣಿಯಲ್ಲಿ ಹರಿಮೇಧನಿಂದ ಜನಿಸಿ ಹರಿ ಎನಿಸಿ ಗಜರಾಜನನ್ನು ನಕ್ರಮುಖದಿಂದ ಬಿಡಿಸಿದನು – ಎನ್ನಲು ಕೇಳಿ ಪರೀಕ್ಷಿದ್ರಾಜನು 'ಬಾದರಾಯಣನೇ! ಶ್ರೀಹರಿಯು ಗಜರಾಜನನ್ನು ಮಕರಿಯ ಮುಖದಿಂದ ಬಿಡಿಸಿದ ಮಹತ್ಪುಣ್ಯ ಕಥೆಯನ್ನು ಕೇಳಲು ನಾವೆಲ್ಲರೂ ಉತ್ಸುಕರಾಗಿರುವೆವು. ಉತ್ತಮ ಶ್ಲೋಕನಾದ ಹರಿಯ ಮಹಿಮಾಗಾನ ವಿರುವ ಕಥೆಯ ಪರಮಮಂಗಳಪ್ರದವಲ್ಲವೇ?' ಎಂದು ಕೇಳಿಕೊಂಡನು.

ಪ್ರಾಯೋಪವಿಷ್ಟನಾದ ಪರೀಕ್ಷಿತನ ಪಾವನಪ್ರಶ್ನೆಯನ್ನಾಲಿಸಿ ಪರಮಾನಂದದಿಂದ ಶ್ರೀಶುಕನು ಋಷಿಸಭೆಯಲ್ಲಿ ರಾಜನಿಗೆ ಇಂತು ನುಡಿದನು.

## ೨. ಗಜೇಂದ್ರ – ನಕ್ರ – ಗ್ರಹಣವು

ಶ್ರೀಶುಕನು ಪೇಳಿದನು–

ಕ್ಷೀರವಾರಾಶಿಯ ತೀರದಲ್ಲಿ ತ್ರಿಕೂಟನೆಂಬ ಗಿರಿರಾಜವಿದೆ. ಅದು ಅಯುತ ಯೋಜನೋನ್ನತವು. ಅಯುತ ವಿಸ್ತೃತವೂ ಆಗಿದೆ. ತನ್ನ ಬಂಗಾರ ಬೆಳ್ಳಿ ಕಬ್ಬಿಣದ ಶಿಖರಗಳಿಂದ ದಿಕ್ಕುಗಳನ್ನು ಬೆಳಗುವ ಆ ಗಿರಿಯು ಕ್ರಮವಾಗಿ ವಿಷ್ಣುಬ್ರಹ್ಮ ಶಂಕರರ ಮನೆಗಳಿಂದ ವಿರಾಜಿಸಿತು.

ತ್ರಿಕೂಟದ ಕಂದರಗಳು ರತ್ನಧಾತುಗಳಿಂದಲೂ ರಮ್ಯವೃಕ್ಷ ಲತೆಗಳಿಂದಲೂ, ಸುಂದರವಾಗಿದ್ದವು. ನಿರ್ಝರ ನಿರ್ಘೋಷವನ್ನು ಶ್ರುತಿಯನ್ನಾಗಿರಿಸಿ ಪ್ರತ್ಯಂತ ಪರ್ವತವನ್ನು ಕೊರೆಯುತ್ತಾ ಹರಿಯುವ ನದೀಜಲದಲ್ಲಿ ಸ್ನಾನ ಮಾಡಿದ ಸಿದ್ಧ ಗಂಧರ್ವ ವಿದ್ಯಾಧರ ನಾಗವನಿತೆಯರು ಪತಿಗಳಿಂದ ಕೂಡಿ ಪಾಡುತ್ತಾ ಮರಕತಮಣಿ ನೀಲಶಾದ್ವಲಗಳಲ್ಲಿ ಸಂಚರಿಸುತ್ತಿದ್ದರು. ಕಿನ್ನರಾಪ್ಸರೆಯರು ಗುಹೆಗಳಲ್ಲಿ ಕ್ರೀಡಿಸುತ್ತಿದ್ದರು. ಅವರು ಪಾಡುವ ತಾರ ಸ್ವರವನ್ನು ಕೇಳಿ ಸಿಂಹಗಳು ಪ್ರತಿ ಸಿಂಹಗಳ ಗರ್ಜನವೆಂದು ತಿಳಿದು ತಾವೂ ಶ್ಲಾಘಾ ಗರ್ಜನವನ್ನು ಮಾಡುತ್ತಿದ್ದವು. ಎಲ್ಲಿ ನೋಡಿದರೂ ವನಮೃಗವ್ರಾತವು ಸಂಚರಿಸುವುದು ಕಾಣಬರುತ್ತಿತ್ತು. ಕಲಕಂಟಗಳ ಕುಹೂ ನಾದವು ಕರ್ಣಮಧುರವಾಗಿ ಉದ್ಯಾನ ತರುಗಳಿಂದ ಕೇಳಿಬರುತ್ತಿತ್ತು. ಮಣಿವಾಲುಕಾಪುಲಿನ ಮನೋಹರ ಸರಿತ್ತೀರಗಳಲ್ಲಿ ದೇವನರನಾರಿಯರು ವನಕ್ರೀಡಾನಿರತರಾಗಿದ್ದರು. ಸುರನಾರೀ ಕುಚ ಕುಂಕುಮ ಗಂಧದಿಂದ ಸರಿಜ್ಜಲವು ಗಂಧಿತವಾಗಿತ್ತು. ಆ ನೀರಿನ ಮೇಲೆ ಸೂಸಿಬರುವ ಮಂದಮಾರುತವು ಕಮಲ ಕಷಾಯ ಗಂಧವನ್ನು ವಹಿಸಿ ತಂಪಾಗಿ ಬೀಸುತ್ತಿತ್ತು.

ಆ ಕಂದರದಲ್ಲಿ ಋತುಮನ್ನಾಮಕ ವರುಣೋದ್ಯಾನವನವಿತ್ತು. ಸುರತರುಣೀ ವಿಹಾರ ಮನೋಹರವಾದ ಆ ವನವು ನಿತ್ಯವೂ ಫಲಪುಷ್ಪಸಮೃದ್ಧವಾಗಿ ಕಂಗೊಳಿಸಿತು.

ಮಂದಾರ ಪಾರಿಜಾತ ಪಾಟಲಾಶೋಕ ಚಂಪಕ ಚೂತ ಪ್ರಿಯಾಳ ಪನಸ ರಸಾಲಾ ಮಾತ್ರಕ ಕ್ರಮುಕ ನಾರಿಕೇಲ ಖರ್ಜೂರ ಬೀಜಪೂರ ಮಧೂಕ ಸಾಲ ತಾಲ ತಮಾಲಾರಿಷ್ಟಾರ್ಜುನೋದುಂಬರ ಪ್ಲಕ್ಷ ವಟ ಕಿಂಶುಕ ಚಂದನ ಪಿಚುಮಂದ ಕೋವಿದಾರ ಸರಲ ಸುರದಾರು ವೃಕ್ಷಗಳಿಂದಲೂ ದ್ರಾಕ್ಷೇಕ್ಷುರಂಭಾ ಜಂಬೂ ಬದರೀ ಬಿಲ್ವಾಮಲಕ ಕಪಿತ್ಥ ಜಂಬೀರ ಭಲ್ಲಾತಕಾದಿ

ತರುಗಳಿಂದಲೂ ಕುಮುದೋತ್ಪಲ ಕಲ್ಹಾರ ಶತಪತ್ರ ಚಿತ್ರಕಾಂಚನ ಪಂಕಜ ಪುಷ್ಪತರುಗಳಿಂದಲೂ ತುಂಬಿ ನಿಬಿಡವಾದ ಆ ವನಮಧ್ಯದಲ್ಲಿ ವಿಪುಲ ಸರೋವರಗಳು ಸ್ವಚ್ಛಜಲಪೂರ್ಣಗಳಾಗಿ ವಿರಾಜಿಸಿದವು. ಪುಷ್ಪಮಕರಂದರಸಪಾನಮತ್ತ ಮಧುಕರ ಝೇಂಕಾರದೊಂದಿಗೆ ಬೆರೆತು ವಿಹಗ ಕಲಕಲ ನಿನಾದವು ಕರ್ಣಸುಖಾವಹವೆನಿಸಿತು. ಹಂಸಕಾರಂಡವ ಚಕ್ರವಾಕ ಸಾರಸ ಜಲಕುಕ್ಕುಟ ಕೋಯಷ್ಠಿ ದಾತ್ಯೂಹಮುಖ ದ್ವಿಜ ಕುಲಕಲ ಕಮ್ರರವವನ್ನು ಕೇಳಿ, ಮತ್ಸ್ಯ ಸಂಚಾರಚಲಿತವಾದ ಪದ್ಮಸುಮವೃಂದವು ಮೆಚ್ಚಿ ತಲೆಯಾಡಿಸಿದಂತಿತ್ತು. ಮಲ್ಲಿಕಾಮಾಧವೀ ನಾಗಪುನ್ನಾಗ ನೀಪ ಕದಂಬ ವೇತಸಜಾತಿ ಪ್ರಮುಖ ತರುಲತಾ ಜಾತವು ತೀರದಲ್ಲಿ ಗುಂಪಾಗಿ ಬೆಳೆದು ನಿಂತು ಇಂಪಾಗಿ ಪುಷ್ಪವತಿಯರಾಗಿ ಮೀಯಲು ಬಂದು ಪದ್ಮರಜಸ್ವಲ ಜಲವನ್ನು ಮುಟ್ಟದೆ ದೂರ ಸರಿದು ನಿಂತಂತೆ ಶೋಭಿಸುವ ಆ ಕಾನನದ ಸೊಬಗನ್ನು ಆಕಾಶವೇ ಇಣಿಕಿ ನೋಡುತ್ತಿತ್ತು.

ಆ ಅರಣ್ಯದಲ್ಲಿ ವಾರಣರಾಜನೊಬ್ಬನು ಕರಿಣೀಯೂಥಪರಿವೃತನಾಗಿ ಅವಾರಿತಗತಿಯಿಂದ ಸಂಚರಿಸುತ್ತಿದ್ದನು. ಕೀಚಕ ವೇಣುಗುಲ್ಮವನ್ನೊತ್ತಿಕೊಂಡು ಗಿಡಗಳನ್ನು ಕೆಡಹಿ ಭೂಮಿಯನ್ನು ನಡುಗಿಸುತ್ತಾ ನಡೆದು ಹೋಗುವ ಗಜರಾಜನ ಗಂಧವು ಬಡಿದದ್ದೇ ತಡ ಆ ವನದಲ್ಲಿದ್ದ ವ್ಯಾಘ್ರ ಶರಭ ಖಡ್ಗ ವ್ಯಾಲಗಳು ಭಯದಿಂದ ದೂರ ಸರಿಯುತ್ತಿದ್ದವು. ಅವನು ಅಭಯವನ್ನು ನೀಡಲು ವೃಷಭ ವರಾಹ ಮಹಿಷ ಭಲ್ಲೂಕ ಶಲ ಶಾಲಾವೃಕ ಮರ್ಕಟ ಹರಿಣ ಶತಾದಿಕ್ಷುದ್ರ ಮೃಗಗಳು ಸಿಂಹಾದಿ ಭಯರಹಿತವಾಗಿ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದವು.

ಆ ಗಜರಾಜನೊಂದು ದಿನ ಬಿಸಿಲಿನ ತಾಪವನ್ನು ತಡೆಯಲಾರದೆ ಕರಿಣೀಯುತನಾಗಿ ಕಲಭಗಳು ಹಿಂಬಾಲಿಸುತ್ತಿರಲು ಗಿರಿಪ್ರದೇಶವನ್ನು ದಾಟಿ ನೀರಿಗಾಗಿ ತವಕಿಸಿ ಬಂದನು. ಆ ಕರಿಘಟಾಮದಾಂಬುಪಾನಮತ್ತವಾದ ದುಂಬಿಗಳು 'ಝಂ' ಎಂದು ವಂದಿಗಳಂತೆ ಹೊಗಳುತ್ತಿರಲು ಗಜರಾಜನು ಪಂಕಜಪರಾಗಪಿಂಗಲಮಂಗಲಜಲವಾದ ಸರೋವರವನ್ನು ಒಂದನ್ನು ಸೇರಿ ಅದರಲ್ಲಿ ಸ್ನಾನಮಾಡಿ ತನ್ನ ಸತೀಸುತರನ್ನು ಕರವೆತ್ತಿ ನೀರನ್ನಿತ್ತು ಸಂತೈಸಿದನು. ಗೃಹಸ್ಥಾಶ್ರಮಿಯಂತೆ ಪಾರವಿಲ್ಲದ ಸಂಸಾರದಲ್ಲಿಳಿದು ವಿಷಮವಿಷಯ ವಿಷವನ್ನು ಕುಡಿದು ದುರ್ಮದದಿಂದ ಕರೇಣುಗಣವನ್ನು ಕಲೆತು ಸಲ್ಲಾಪರತನಾಗಿ ಮೈಮರೆತಿದ್ದನು. ಶ್ರೀರಮಣನ ಬಂಧಕಶಕ್ತಿಯನ್ನು ಮೀರಲಾಗುವುದೇ?

ರಾಜನ್! ಅಂತು ನಿಶ್ಚಿಂತನಾಗಿದ್ದ ಗಜರಾಜನನ್ನು ದೈವಚೋತಿದವಾಗಿ ಬಲಶಾಲಿಯಾದ ಮಕರಿಯು ಕಾಲನ್ನು ಹಿಡಿದು ನೀರಲ್ಲಿ ಸೆಳೆಯಿತು. ಕರಿರಾಜನು ಬಿಡದೆ ದಡಕ್ಕೆ ಎಳೆದಾಡಿ ಮಕರಿಯಿಂದ ಬಿಡಿಸಿಕೊಳ್ಳಲು ಸೆಣಸಿದನು. ಕರಿಮಕರಿಗಳ ಕದನವನ್ನು ಕಾಲನಂತೆ ಕೋರೆಗಳನ್ನು ಮಸೆಯುವ ಜಲಚರರಾಜನನ್ನು ನೋಡಿ ಗಜತರುಣಿಯರು ದೀನರಾಗಿ 'ಹೋ' ಎಂದು ಗೋಳಿಟ್ಟರು. ಆಗ ಪರಿಚಾರಕ ಗಜನಾಯಕರು ಓಡಿಬಂದು ತಮ್ಮ ರಾಜನನ್ನು ಬಿಡಿಸಲು ಹೋರಾಡಿ ವಿಫಲ ಪ್ರಯತ್ನರಾಗಿ ಹಿಂದಿರುಗಿ ಹೋದರು. ಕರಿಯು ಹೊರಗೆ ಸೆಳೆದರೆ ಮಕರಿಯು ಒಳಗೆ ಎಳೆಯಿತು. ನಿರ್ಗತನಿದ್ರಾಹಾರರಾದ ಗಜಮಕರಗಳ ಕಲಹವಿಹಾರವು ಒಂದು ಸಾವಿರ ವರ್ಷ ಕಾಲ ಕಳೆದರೂ ಮುಗಿಯಲಿಲ್ಲ. ಇದನ್ನು ನೋಡಿ ದೇವತೆಗಳು ಆಶ್ಚರ್ಯಚಕಿತರಾದರು. ಅವಕ್ರಪರಾಕ್ರಮದಿಂದ ನಕ್ರವು ಬಿಡದೆ ಕಡಿದು ಸೆಳೆವಾಗ ವನಾಟನಾದ ವಾರಣರಾಜನು ಜೀವನ

ತ್ರಿಶಿಖನೆಂಬ ಇಂದ್ರನು ಸ್ವರ್ಗವನ್ನಾಳಿದನು. ಆಗ ಜ್ಯೋತಿರ್ಧಾನ ಮೊದಲಾದವರು ಸಪ್ತರ್ಷಿಗಳಾಗಿದ್ದರು. ವಿಧೃತಿದೇವಿಯ ಸುತರಾದ ವೈಧೃತಿನಾಮಕ ದೇವತೆಗಳು ತಮ್ಮ ತೇಜೋಬಲದಿಂದ ವೇದಗಳನ್ನು ಕೆಡದಂತೆ ಪಠಿಸಿ ಧರಿಸಿದರು. ತಾಪಸ ಮನ್ವಂತರದಲ್ಲಿ ಭಗವಂತನು ಹರಿಣಿಯಲ್ಲಿ ಹರಿಮೇಧನಿಂದ ಜನಿಸಿ ಹರಿ ಎನಿಸಿ ಗಜರಾಜನನ್ನು ನಕ್ರಮುಖದಿಂದ ಬಿಡಿಸಿದನು – ಎನ್ನಲು ಕೇಳಿ ಪರೀಕ್ಷಿದ್ರಾಜನು 'ಬಾದರಾಯಣನೇ! ಶ್ರೀಹರಿಯು ಗಜರಾಜನನ್ನು ಮಕರಿಯ ಮುಖದಿಂದ ಬಿಡಿಸಿದ ಮಹತ್ಪುಣ್ಯ ಕಥೆಯನ್ನು ಕೇಳಲು ನಾವೆಲ್ಲರೂ ಉತ್ಸುಕರಾಗಿರುವೆವು. ಉತ್ತಮ ಶ್ಲೋಕನಾದ ಹರಿಯ ಮಹಿಮಾಗಾನ ವಿರುವ ಕಥೆಯ ಪರಮಮಂಗಳಪ್ರದವಲ್ಲವೇ?' ಎಂದು ಕೇಳಿಕೊಂಡನು.

ಪ್ರಾಯೋಪವಿಷ್ಟನಾದ ಪರೀಕ್ಷಿತನ ಪಾವನಪ್ರಶ್ನೆಯನ್ನಾಲಿಸಿ ಪರಮಾನಂದದಿಂದ ಶ್ರೀಶುಕನು ಋಷಿಸಭೆಯಲ್ಲಿ ರಾಜನಿಗೆ ಇಂತು ನುಡಿದನು.

## ೨. ಗಜೇಂದ್ರ – ನಕ್ರ – ಗ್ರಹಣವು

ಶ್ರೀಶುಕನು ಪೇಳಿದನು–

ಕ್ಷೀರವಾರಾಶಿಯ ತೀರದಲ್ಲಿ ತ್ರಿಕೂಟನೆಂಬ ಗಿರಿರಾಜವಿದೆ. ಅದು ಅಯುತ ಯೋಜನೋನ್ನತವು. ಅಯುತ ವಿಸ್ತೃತವೂ ಆಗಿದೆ. ತನ್ನ ಬಂಗಾರ ಬೆಳ್ಳಿ ಕಬ್ಬಿಣದ ಶಿಖರಗಳಿಂದ ದಿಕ್ಕುಗಳನ್ನು ಬೆಳಗುವ ಆ ಗಿರಿಯು ಕ್ರಮವಾಗಿ ವಿಷ್ಣುಬ್ರಹ್ಮ ಶಂಕರರ ಮನೆಗಳಿಂದ ವಿರಾಜಿಸಿತು.

ತ್ರಿಕೂಟದ ಕಂದರಗಳು ರತ್ನಧಾತುಗಳಿಂದಲೂ ರಮ್ಯವೃಕ್ಷ ಲತೆಗಳಿಂದಲೂ, ಸುಂದರವಾಗಿದ್ದವು. ನಿರ್ಝರ ನಿರ್ಘೋಷವನ್ನು ಶ್ರುತಿಯನ್ನಾಗಿರಿಸಿ ಪ್ರತ್ಯಂತ ಪರ್ವತವನ್ನು ಕೊರೆಯುತ್ತಾ ಹರಿಯುವ ನದೀಜಲದಲ್ಲಿ ಸ್ನಾನ ಮಾಡಿದ ಸಿದ್ಧ ಗಂಧರ್ವ ವಿದ್ಯಾಧರ ನಾಗವನಿತೆಯರು ಪತಿಗಳಿಂದ ಕೂಡಿ ಪಾಡುತ್ತಾ ಮರಕತಮಣಿ ನೀಲಶಾದ್ವಲಗಳಲ್ಲಿ ಸಂಚರಿಸುತ್ತಿದ್ದರು. ಕಿನ್ನರಾಪ್ಸರೆಯರು ಗುಹೆಗಳಲ್ಲಿ ಕ್ರೀಡಿಸುತ್ತಿದ್ದರು. ಅವರು ಪಾಡುವ ತಾರ ಸ್ವರವನ್ನು ಕೇಳಿ ಸಿಂಹಗಳು ಪ್ರತಿ ಸಿಂಹಗಳ ಗರ್ಜನವೆಂದು ತಿಳಿದು ತಾವೂ ಶ್ಲಾಘಾ ಗರ್ಜನವನ್ನು ಮಾಡುತ್ತಿದ್ದವು. ಎಲ್ಲಿ ನೋಡಿದರೂ ವನಮೃಗವ್ರಾತವು ಸಂಚರಿಸುವುದು ಕಾಣಬರುತ್ತಿತ್ತು. ಕಲಕಂಟಗಳ ಕುಹೂ ನಾದವು ಕರ್ಣಮಧುರವಾಗಿ ಉದ್ಯಾನ ತರುಗಳಿಂದ ಕೇಳಿಬರುತ್ತಿತ್ತು. ಮಣಿವಾಲುಕಾಪುಲಿನ ಮನೋಹರ ಸರಿತ್ತೀರಗಳಲ್ಲಿ ದೇವನರನಾರಿಯರು ವನಕ್ರೀಡಾನಿರತರಾಗಿದ್ದರು. ಸುರನಾರೀ ಕುಚ ಕುಂಕುಮ ಗಂಧದಿಂದ ಸರಿಜ್ಜಲವು ಗಂಧಿತವಾಗಿತ್ತು. ಆ ನೀರಿನ ಮೇಲೆ ಸೂಸಿಬರುವ ಮಂದಮಾರುತವು ಕಮಲ ಕಷಾಯ ಗಂಧವನ್ನು ವಹಿಸಿ ತಂಪಾಗಿ ಬೀಸುತ್ತಿತ್ತು.

ಆ ಕಂದರದಲ್ಲಿ ಋತುಮನ್ನಾಮಕ ವರುಣೋದ್ಯಾನವನವಿತ್ತು. ಸುರತರುಣೀ ವಿಹಾರ ಮನೋಹರವಾದ ಆ ವನವು ನಿತ್ಯವೂ ಫಲಪುಷ್ಪಸಮೃದ್ಧವಾಗಿ ಕಂಗೊಳಿಸಿತು.

ಮಂದಾರ ಪಾರಿಜಾತ ಪಾಟಲಾಶೋಕ ಚಂಪಕ ಚೂತ ಪ್ರಿಯಾಳ ಪನಸ ರಸಾಲಾ ಮಾತ್ರಕ ಕ್ರಮುಕ ನಾರಿಕೇಲ ಖರ್ಜೂರ ಬೀಜಪೂರ ಮಧೂಕ ಸಾಲ ತಾಲ ತಮಾಲಾರಿಷ್ಟಾರ್ಜುನೋದುಂಬರ ಪ್ಲಕ್ಷ ವಟ ಕಿಂಶುಕ ಚಂದನ ಪಿಚುಮಂದ ಕೋವಿದಾರ ಸರಲ ಸುರದಾರು ವೃಕ್ಷಗಳಿಂದಲೂ ದ್ರಾಕ್ಷೇಕ್ಷುರಂಭಾ ಜಂಬೂ ಬದರೀ ಬಿಲ್ವಾಮಲಕ ಕಪಿತ್ಥ ಜಂಬೀರ ಭಲ್ಲಾತಕಾದಿ

ತರುಗಳಿಂದಲೂ ಕುಮುದೋತ್ಪಲ ಕಲ್ಹಾರ ಶತಪತ್ರ ಚಿತ್ರಕಾಂಚನ ಪಂಕಜ ಪುಷ್ಪತರುಗಳಿಂದಲೂ ತುಂಬಿ ನಿಬಿಡವಾದ ಆ ವನಮಧ್ಯದಲ್ಲಿ ವಿಪುಲ ಸರೋವರಗಳು ಸ್ವಚ್ಛಜಲಪೂರ್ಣಗಳಾಗಿ ವಿರಾಜಿಸಿದವು. ಪುಷ್ಪಮಕರಂದರಸಪಾನಮತ್ತ ಮಧುಕರ ಝೇಂಕಾರದೊಂದಿಗೆ ಬೆರೆತು ವಿಹಗ ಕಲಕಲ ನಿನಾದವು ಕರ್ಣಸುಖಾವಹವೆನಿಸಿತು. ಹಂಸಕಾರಂಡವ ಚಕ್ರವಾಕ ಸಾರಸ ಜಲಕುಕ್ಕುಟ ಕೋಯಷ್ಟಿ ದಾತ್ಯೂಹಮುಖ ದ್ವಿಜ ಕುಲಕಲ ಕಮ್ರರವವನ್ನು ಕೇಳಿ, ಮತ್ಸ್ಯ ಸಂಚಾರಚಲಿತವಾದ ಪದ್ಮಸುಮವೃಂದವು ಮೆಚ್ಚಿ ತಲೆಯಾಡಿಸಿದಂತಿತ್ತು. ಮಲ್ಲಿಕಾಮಾಧವೀ ನಾಗಪುನ್ನಾಗ ನೀಪ ಕದಂಬ ವೇತನಜಾತಿ ಪ್ರಮುಖ ತರುಲತಾ ಜಾತವು ತೀರದಲ್ಲಿ ಗುಂಪಾಗಿ ಬೆಳೆದು ನಿಂತು ಇಂಪಾಗಿ ಪುಷ್ಪವತಿಯರಾಗಿ ಮೀಯಲು ಬಂದು ಪದ್ಮರಜಸ್ವಲ ಜಲವನ್ನು ಮುಟ್ಟದೆ ದೂರ ಸರಿದು ನಿಂತಂತೆ ಶೋಭಿಸುವ ಆ ಕಾನನದ ಸೊಬಗನ್ನು ಆಕಾಶವೇ ಇಣಿಕಿ ನೋಡುತ್ತಿತ್ತು.

ಆ ಅರಣ್ಯದಲ್ಲಿ ವಾರಣರಾಜನೊಬ್ಬನು ಕರಿಣೀಯೂಥಪರಿವೃತನಾಗಿ ಅವಾರಿತಗತಿಯಿಂದ ಸಂಚರಿಸುತ್ತಿದ್ದನು. ಕೀಚಕ ವೇಣುಗುಲ್ಮವನ್ನೊತ್ತಿಕೊಂಡು ಗಿಡಗಳನ್ನು ಕೆಡಹಿ ಭೂಮಿಯನ್ನು ನಡುಗಿಸುತ್ತಾ ನಡೆದು ಪೋಗುವ ಗಜರಾಜನ ಗಂಧವು ಬಡಿದದ್ದೇ ತಡ ಆ ವನದಲ್ಲಿದ್ದ ವ್ಯಾಘ್ರ ಶರಭ ಖಡ್ಗ ವ್ಯಾಲಗಳು ಭಯದಿಂದ ದೂರ ಸರಿಯುತ್ತಿದ್ದವು. ಅವನು ಅಭಯವನ್ನು ನೀಡಲು ವೃಷಭ ವರಾಹ ಮಹಿಷ ಭಲ್ಲೂಕ ಶಲ ಶಾಲಾವೃಕ ಮರ್ಕಟ ಹರಿಣ ಶತಾದಿಕ್ಷುದ್ರ ಮೃಗಗಳು ಸಿಂಹಾದಿ ಭಯರಹಿತವಾಗಿ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದವು.

ಆ ಗಜರಾಜನೊಂದು ದಿನ ಬಿಸಿಲಿನ ತಾಪವನ್ನು ತಡೆಯಲಾರದೆ ಕರಿಣೀಯುತನಾಗಿ ಕಲಭಗಳು ಹಿಂಬಾಲಿಸುತ್ತಿರಲು ಗಿರಿಪ್ರದೇಶವನ್ನು ದಾಟಿ ನೀರಿಗಾಗಿ ತವಕಿಸಿ ಬಂದನು. ಆ ಕರಿಘಟಾಮದಾಂಬುಪಾನಮತ್ತವಾದ ದುಂಬಿಗಳು 'ಝಂ' ಎಂದು ವಂದಿಗಳಂತೆ ಪೊಗಳುತ್ತಿರಲು ಗಜರಾಜನು ಪಂಕಜಪರಾಗಪಿಂಗಲಮಂಗಲಜಲವಾದ ಸರೋವರವನ್ನು ಒಂದನ್ನು ಸೇರಿ ಅದರಲ್ಲಿ ಸ್ನಾನಮಾಡಿ ತನ್ನ ಸತೀಸುತರನ್ನು ಕರವೆತ್ತಿ ನೀರನ್ನಿತ್ತು ಸಂತೈಸಿದನು. ಗೃಹಸ್ಥಾಶ್ರಮಿಯಂತೆ ಪಾರವಿಲ್ಲದ ಸಂಸಾರದಲ್ಲಿಳಿದು ವಿಷಮವಿಷಯ ವಿಷವನ್ನು ಕುಡಿದು ದುರ್ಮದದಿಂದ ಕರೇಣುಗಣವನ್ನು ಕಲೆತು ಸಲ್ಲಾಪರತನಾಗಿ ಮೈಮರೆತಿದ್ದನು. ಶ್ರೀರಮಣನ ಬಂಧಕಶಕ್ತಿಯನ್ನು ಮೀರಲಾಗುವುದೇ?

ರಾಜನ್! ಅಂತು ನಿಶ್ಚಿಂತನಾಗಿದ್ದ ಗಜರಾಜನನ್ನು ದೈವಚೋತಿದವಾಗಿ ಬಲಶಾಲಿಯಾದ ಮಕರಿಯು ಕಾಲನ್ನು ಹಿಡಿದು ನೀರಲ್ಲಿ ಸೆಳೆಯಿತು. ಕರಿರಾಜನು ಬಿಡದೆ ದಡಕ್ಕೆ ಎಳೆದಾಡಿ ಮಕರಿಯಿಂದ ಬಿಡಿಸಿಕೊಳ್ಳಲು ಸೆಣಸಿದನು. ಕರಿಮಕರಿಗಳ ಕದನವನ್ನು ಕಾಲನಂತೆ ಕೋರೆಗಳನ್ನು ಮಸೆಯುವ ಜಲಚರರಾಜನನ್ನು ನೋಡಿ ಗಜತರುಣಿಯರು ದೀನರಾಗಿ 'ಹೋ' ಎಂದು ಗೋಳಿಟ್ಟರು. ಆಗ ಪರಿಚಾರಕ ಗಜನಾಯಕರು ಓಡಿಬಂದು ತಮ್ಮ ರಾಜನನ್ನು ಬಿಡಿಸಲು ಹೋರಾಡಿ ವಿಫಲ ಪ್ರಯತ್ನರಾಗಿ ಹಿಂದಿರುಗಿ ಹೋದರು. ಕರಿಯು ಹೊರಗೆ ಸೆಳೆದರೆ ಮಕರಿಯು ಒಳಗೆ ಎಳೆಯಿತು. ನಿರ್ಗತನಿದ್ರಾಹಾರರಾದ ಗಜಮಕರಗಳ ಕಲಹವಿಹಾರವು ಒಂದು ಸಾವಿರ ವರ್ಷ ಕಾಲ ಕಳೆದರೂ ಮುಗಿಯಲಿಲ್ಲ. ಇದನ್ನು ನೋಡಿ ದೇವತೆಗಳು ಆಶ್ಚರ್ಯಚಕಿತರಾದರು. ಅವಕ್ರಪರಾಕ್ರಮದಿಂದ ನಕ್ರವು ಬಿಡದೆ ಕಡಿದು ಸೆಳೆವಾಗ ವನಾಟನಾದ ವಾರಣರಾಜನು ಜೀವನ

ಸಂಕಟದಿ ಸಿಲುಕಿ ಸೋತು ಸುರುಕಿ ಸುಕ್ಕಾದನು. ಗ್ರಾಹವು ದುರಾಗ್ರಹದಿಂದ ಅವನನ್ನು ಪೀಡಿಸುತ್ತಿರಲು ಸರೋವರದ ಮೀನ ಕರ್ಕಟ ವೃಶ್ಚಿಕ ಮಕರಾದಿ ಜಲಚರರಾಶಿಗಳು ತಳಮಳ ಗೊಂಡವು.

ಇಂತು ದಂತಿನಾಥನು ಪ್ರಾಣಸಂಕಟದಿಂದ ಪಾರಾಗುವ ಬಗೆಯನ್ನು ಕಾಣದೆ ತನ್ನನ್ನು ಬಿಡಿಸಲಾಗದೆ ಬಿಟ್ಟು ಹೋದ ಪರಿವಾರವನ್ನು ಕಾಣದೆ ಪೂರ್ಣಪುಣ್ಯಫಲ ದಿವ್ಯಜ್ಞಾನ ಸಂಪತ್ತಿಯನ್ನು ಕಂಡು ಈ ರೀತಿಯಾಗಿ ಚಿಂತಿಸಿದನು–

ಇದನ್ನು ಹೇಗೆ ಗೆದಿಯಲಿ? ಏನು ಗತಿ ನನಗೆ? ಈ ವಾರಿಚರನ ಕರಾಳ ವದನದಿಂದ ನನ್ನನ್ನು ಯಾರು ಬಿಡಿಸುವರು? ಇದು ದೈವವು ತಂದೊಡ್ಡಿದ ಪಾಶವಲ್ಲದೆ ಮಕರಿಯೇ? ಕರಿಣೀಗಣನಾಥನಾಗಿ ವನದಲ್ಲಿ ಚಂದನಚ್ಛಾಯೆಯಲ್ಲಿ ಸುಮ್ಮನೆ ಸುಖದಿಂದಿರದೆ ಇಲ್ಲಿಗೇಕೆ ಬಂದೆ? ಬಲವಂತವಾಗಿ ಕೃತಾಂತನು ಹೆಬ್ಬಾವಿನಂತೆ ನುಂಗಲು ಬರುವಾಗ ಅವನ ಕರಾಳ ವೇಗವನ್ನು ತಡೆಯುವವನು ಶ್ರೀಶನಲ್ಲದೆ ಮತ್ತೊಬ್ಬರಿಲ್ಲ. ಪ್ರಪನ್ನ ವರದನು ಅಭಯಪ್ರದನು ಯಮರುದ್ರದುರ್ಗಾದಿ ನಿಯಾಮಕನು ಆದ ನಾರಾಯಣನೇ ಎನಗೆ ಗತಿಯು– ಎಂದು ನಿಶ್ಚಯಿಸಿದನು.

## ೩. ಗಜೇಂದ್ರಮೋಕ್ಷಣವು

ಶ್ರೀಶುಕನು ಹೇಳಿದನು–

ಗಜೇಂದ್ರನು ಇಂತು ನಿಶ್ಚಯಿಸಿ ಮನವನ್ನು ಬುದ್ಧಿಯಲ್ಲಿಟ್ಟು ನಿಶ್ಚಲವನ್ನಾಗಿಸಿ, ಪೂರ್ವಜನ್ಮ ಪರಂಪರಾಪ್ರಾಪ್ತ ಜ್ಞಾನಪ್ರಕಾಶವನ್ನು ಪೊಂದಿ, ಇಂತು ಹರಿಯನ್ನು ತುತಿಸಿದನು–

ಓಂ ಗುಣಪೂರ್ಣ ನಾರಾಯಣಾ! ಎಲ್ಲ ಚೇತನರೂ ನಿನ್ನಿಂದ ಜನಿಸಿರುವರು. ನೀನು ಆದಿಬೀಜನು, ಪೂರ್ಣಷಡ್ಗುಣನು, ಲಕ್ಷ್ಮೀಪತಿಯು ಆಗಿರುವೆ. ನಿನ್ನನ್ನು ಹೊಂದಿ ನಿಂತಿದ್ದು, ಸೃಷ್ಟಿ ಕಾಲದಲ್ಲಿ ನಿನ್ನಿಂದ ಜನಿಸಿ, ನಿನಗಾಗಿ ನಿನ್ನಿಂದ ಬದುಕಿ ನಿನ್ನದಾಗಿ ನಿನ್ನಲ್ಲಿರುವ ಈ ಚರಾಚರಜಗವೆಲ್ಲವು ನಿನ್ನಧೀನವಾಗಿದೆ. ಅದರಿಂದ ಭಿನ್ನನಾದ ನೀನು ಜಗದ ಪ್ರಭುಳಾದ ಶ್ರೀರಮೆಗೂ ಪ್ರಭುವಾಗಿ ನಿರಾಜಿಸುವೆ. ನಿನಗೆ ಶರಣು!

ತನ್ನ ಇಚ್ಛೆಯಂತೆ ಜಗವನ್ನು ಉದರದಲ್ಲಿಟ್ಟದ್ದು ಬೇಕಾದಾಗ ಸೃಜಿಸಿ, ಪಾಲಿಸಿ, ಪುನಃ ಸಂಹರಿಸುವ ಅವ್ಯಾಹತ ಜ್ಞಾನರೂಪನು, ಸಾಕ್ಷಾತ್ಸರ್ವಜಗದ್ವ್ಯಪಾರವೀಕ್ಷಕನು, ಜೀವಜಾತ ನಿಯಾಮಕನು ಆದ ಪರಾತ್ಪರನು ನನ್ನನ್ನು ರಕ್ಷಿಸಲಿ! ಕಾಲನಾಮಕನಾಗಿ ಪೃಥಿವ್ಯಾದಿ ಮಹದಂತ ಕಾರಣವರ್ಗಸಹಿತವಾದ ಜಗವನ್ನೆಲ್ಲ ನುಂಗಿ, ಸುತ್ತು ವ್ಯಾಪಿಸಿನಿಂತ ಪ್ರಳಯಕಾಲೀನ ತಮಸ್ಸಿನಿಂದ ಮುತ್ತಲ್ಪಡದೆ ಮಹಾ ಪ್ರಕಾಶನಾಗಿರುವ ವಿಭುವು ನನಗೆ ಗತಿಯಾಗಲಿ! ದೇವರ್ಷಿಗಳೇ ಅವನ ಸ್ವರೂಪವನ್ನು ಸಾಕಲ್ಯೇನ ತಿಳಿಯಲಾರರೆಂದ ಮೇಲೆ ನನ್ನಂತಹ ಜಂತುವಿಗೆ ಅವನ ಜ್ಞಾನವಾಗುವುದೆಂತು? ನಟನಂತೆ ವಿವಿಧರೂಪನಾಗಿ ಅಪರಿಜ್ಞೇಯ ವರ್ತನನಾದ ಲಕ್ಷ್ಮೀಭರ್ತನು ನನ್ನನ್ನು ಸಲುಹಲಿ! ಅವನ ದಿವ್ಯ ಮಂಗಳಮೂರ್ತಿಯನ್ನು ನೋಡಲಿಚ್ಛಿಸಿ ಸಾಧು ಮುನಿಗಳು ದುಸ್ಸಂಗದೂರರಾಗಿ ಲೋಕೋತ್ತರ ತಪಶ್ಚರ್ಯೆಯನ್ನು ಮಾಡುವರು. ಅಂತಹ ಇತರ ದುಷ್ಕರ ಸೃಷ್ಟ್ಯಾದಿ ಕರ್ತನು ಅಕ್ಷತಪವಿತ್ರಗಾತ್ರನು ಸರ್ವಜೀವಭಕ್ತಿರಸಪಾತ್ರನು ಆದ ಹರಿಯ ಪದಾರವಿಂದವೆ ನನಗೆ ಗತಿಯಾಗಲಿ! ಅವನಿಗೆ ಪ್ರಾಕೃತಜನ್ಮ ಕರ್ಮನಾಮರೂಪಗಳಿಲ್ಲ.

ನಿರನಿಷ್ಟನಿಗೆ ಗುಣದೋಷಕೃತಲೇಪವಿಲ್ಲ; ನಿರವದ್ಯನಿಗೆ ದೋಷವಿಲ್ಲ. ಆದರೂ ಲೋಕತ್ರಯದ ಸುಜನ ಸುಖವನ್ನುಂಟು ಮಾಡಿ ಅವರನ್ನು ರಕ್ಷಿಸಲು ಸೃಷ್ಟ್ಯಾದಿ ಕಾಲಾನುಸಾರವಾಗಿ ಅಪ್ರಾಕೃತ ನಾಮರೂಪಗಳಿಂದಾವಿರ್ಭವಿಸಿ ಕರ್ಮಲೇಪವಿಲ್ಲದಿರುವ ಶ್ರೀಹರಿಗೆ ನಮಸ್ಕಾರವು.

ಪರೇಶ! ಅನಂತಶಕ್ತಿಯು ಗುಣಪೂರ್ಣನು ಅಪ್ರಾಕೃತದಿವ್ಯರೂಪನು ಆಶ್ಚರ್ಯಕರ ಚರಿತನು ಆದ ನಿನಗೆ ನಮಃ. ನಿನ್ನಿಂದ ನಿನಗೆ ಪ್ರಕಾಶವು; ಇನ್ನೊಬ್ಬರಿಂದಲ್ಲ. ಶಬ್ದಗಳು ಮನಸ್ಸು ಬುದ್ಧಿ ಮುಂತಾದ ಇಂದ್ರಿಯಗಳು-ತದಭಿಮಾನಿಗಳಾದ ಇಂದ್ರ ರುದ್ರ ಬ್ರಹ್ಮಾದಿ ದೇವತೆಗಳೂ ನಿನ್ನನ್ನು ಪೂರ್ಣವಾಗಿ ತಿಳಿಯಲಾರರು. ಜ್ಞಾನಿಗಳು ಕರ್ಮಫಲವನ್ನು ಸಮರ್ಪಿಸಿ ಜ್ಞಾನದಿಂದ ಭಜಿಸಲು ಅವರಿಗೆ ಮೋಕ್ಷವನ್ನು ಕೊಟ್ಟು ಅಪ್ರಾಕೃತ ದಿವ್ಯರೂಪರನ್ನು ಮಾಡುವ ಪರ ಮಾತ್ಮನೇ! ನಿನಗೆ ನಮಃ. ವಾಸುದೇವನಾಗಿ ಸತ್ವಗುಣವನ್ನು ಪರಶುರಾಮನಾಗಿ ರಜೋಗುಣ ವನ್ನು ವರಾಹನಾಗಿ ತಮೋಗುಣವನ್ನು ಪ್ರೇರಿಸಿ ಕ್ರಮವಾಗಿ ಶಾಂತನು ಘೋರನು ಮೂಢನು ಎನಿಸಿ ತತ್ತದ್ಯೋನಿಗತ ವಿಶಿಷ್ಟಗುಣಕರ್ಮಗಳಿಗೆ ನಿಯಾಮಕನಾಗಿ ಮತ್ಸ್ಯಾದಿಸ್ವರೂಪಗತ ಭೇದವಿಲ್ಲದೆ ಜ್ಞಾನಾನಂದರೂಪನಾಗಿರುವ ಶ್ರೀಹರಿಯೇ! ನಿನಗೆ ನಮಃ. ಸರ್ವೇಂದ್ರಿಯಗಳು ನಿನ್ನಿಂದ ವಿಷಯಗಳಲ್ಲಿ ನಡೆಯುವುವು. ಎಲ್ಲ ಜ್ಞಾನವು ನಿನ್ನಿಂದ; ಅಸ್ವತಂತ್ರ ಜಗದ್ಭಿನ್ನನಾದ ನೀನು ಸರ್ವದಾ ಪ್ರಕಾಶಮಾನನಾಗಿರುವೆ. ಸರ್ವಜಗಜ್ಜನ್ಮಾದಿಕಾರಣ! ಭಕ್ತಾರ್ತಿ ನಿವಾರಣ! ವೇದಭಾರತ ಪಂಚರಾತ್ರದಿ ಸಚ್ಛಾಸ್ತ್ರ ಪರಾಯಣಮೋಕ್ಷ ಕಾರಣ! ನಾರಾಯಣ! ನಿನಗೆ ನಮಸ್ಕಾರ. ಸತ್ವಾದಿಗುಣ ಕಾಷ್ಠದಲ್ಲಿ ಅಡಗಿರುವ ಜ್ಞಾನಜ್ಯೋತಿಯನ್ನು ಆರದಂತೆ ಕಾಪಾಡಿ, ಆ ಗುಣಗಳ ಲೇಪವಿಕಾರಗಳಿಲ್ಲದೆ ಜ್ಞಾನಸ್ವರೂಪನಾಗಿರುವ ಭಗವಂತನಿಗೆ ವಂದನವು. ಮನಸ್ಸನ್ನು ಗೆದ್ದ ಮಹಾಯೋಗಿ ಜನರು ನಿನ್ನನ್ನು ತಮ್ಮ ಅಂತರ್ಯಾಮಿ ಎಂದು ಭಾವಿಸಿ ಪೂಜಿಸುವರು. ಧರ್ಮಾರ್ಥಕಾಮಗಳೆಂಬುವ ತ್ರಿವರ್ಗಜಾಲವಾದ ಸಂಸಾರದಿಂದ ತಮ್ಮನ್ನು ಬಿಡಿಸಿಕೊಳ್ಳಲು ಕೋರಿ ಸಾತ್ವಿಕರು ನಿನ್ನ ಅನುಗ್ರಹದಿಂದ ನಾಶರಹಿತವಾದ ಸ್ವರೂಪದೇಹವನ್ನು ಪೊಂದಿ ಮುಕ್ತರಾಗುವರು. ಅಂತಹ ಅನಂತ ದಯಾಸಮುದ್ರನಿಗೆ ನನ್ನ ಮೇಲೆ ದಯಬಾರದೇಕೆ? ಅತ್ಯಂತಾಶ್ಚರ್ಯಕರವು. ಪರಮಮಂಗಲವು ಆದ ನಿನ್ನ ಚರಿತವನ್ನು ಗಾನ ಮಾಡಿ ಆನಂದ ಸಮುದ್ರಮಗ್ನರಾದ ಏಕಾಂತ ಭಕ್ತರು ನಿನ್ನಿಂದ ಇತರರನ್ನು ಬೇಡದೆ ನಿನ್ನ ಭಕ್ತಿಯನ್ನೇ ಬೇಡು ವರು. ನೀನು ನಾಶರಹಿತನು, ಜೀವಭಿನ್ನನು, ಮುಕ್ತರ ದೊರೆಯು, ಭಕ್ತಿಮಾರ್ಗ ಸುಲಭನು, ಮನೋವಾಚಾಮಗೋಚರನು, ಇಂದ್ರಿಯಪ್ರೇರಕನು ಹಾಗೂ ಸರ್ವಗುಣ ಪೂರ್ಣನಾಗಿರುವೆ ಎಂದು ಅನಂತವೇದಗಳು ನಿನ್ನನ್ನು ಹೊಗಳುತ್ತಿವೆ. ನಿನ್ನ ಭಿನ್ನಾಂಶರಾದ ಬ್ರಹ್ಮಾದಿ ದೇವತೆಗಳು ನಿನ್ನ ಅಧೀನರಾಗಿ ನೀನು ಕೊಟ್ಟ ನಾಮರೂಪಗಳಿಂದ ಯುಕ್ತರಾಗಿರುವರು. ಚರಾಚರ ಲೋಕಗಳು ನಿನಗೆ ಪ್ರತಿಮೆ ಎನಿಸಿವೆ. ಅಗ್ನಿಯಿಂದ ಜ್ವಾಲೆಗಳು ಸೂರ್ಯನಿಂದ ಕಿರಣಗಳು ಬರುವಂತೆ ಬುದ್ಧಿಮನಃಶರೀರೇಂದ್ರಿಯರೂಪ ಜಗತ್ತೆಲ್ಲವು ಪ್ರಕೃತಿಯಿಂದ ಬಂದು ಪುನಃ ಅಲ್ಲೇ ಸೇರುತ್ತಿರುವುವು. ಸ್ವಪ್ರಕಾಶನಾದ ನೀನೇ ಆ ಜಗತ್ತನ್ನು ಸೃಜಿಸಿ, ನಿಮಿತ್ತಕಾರಣನೆನಿಸಿ ಮೆರೆಯುವೆ. ಜಗತ್ತು ಪ್ರವಾಹತಃ ನಿತ್ಯವೂ ಹಾಗೂ ಸತ್ಯವೂ ಆಗಿದೆ. ನೀನು ದೇವನಲ್ಲ, ದಾನವನಲ್ಲ, ಮಾನವನಲ್ಲ, ಸ್ತ್ರೀಪುರುಷ ಷಂಡರೂಪ ಪ್ರಾಕೃತ ಲಿಂಗಭೇದವು ನಿನಗಿಲ್ಲ. ಮೂರ್ತಾಮೂರ್ತವಾದ ಜಗವು ನೀನಲ್ಲ. ಜಗತ್ಕಾರಣವಾದ ತ್ರಿಗುಣಗಳು ಫಲಪ್ರದವಾದ ಕರ್ಮಕಲಾದಿಗಳು ನೀನಲ್ಲ. ಯಾವುದೂ ಅಲ್ಲವಾದರೂ ಎಲ್ಲದರಲ್ಲಿಯೂ ನಿಯಾಮಕನಾಗಿ

ಎಲ್ಲವೂ ನೀ ಎನಿಸಿರುವ ನಿನ್ನ ಮಹಿಮ ಅಪ್ರಾಕೃತವು ಅಚಿಂತ್ಯವೂ ಆಗಿದೆ. ಪ್ರಕೃತಿಯ ಬಂಧವು ಆನೆಯ ರೂಪವಾಗಿದೆ. ಅನಾದ್ಯ ವಿದ್ಯಯು ಲಿಂಗಶರೀರರೂಪವಾಗಿದೆ. ಈ ಎರಡು ಶರೀರ ಗಳಿಂದ ನನಗೆ ಅಜ್ಞಾನವೇ ಆಗಲಿ ನಿಜವಾದ ಪ್ರಯೋಜನವಿಲ್ಲ. ಈ ಶರೀರವನ್ನು ಉಳಿಸು ಎಂದು ನಾನು ಕೇಳಿಕೊಳ್ಳುವುದೂ ಇಲ್ಲ. ಪ್ರಳಯಕಾಲವೇ ಬಂದರೂ ನಾಶವಾಗದಿರುವ ಆತ್ಮಜ್ಞಾನವನ್ನು ಕೊಟ್ಟು ಸ್ವರೂಪಜ್ಞಾನವಾಗದಂತೆ ಮುಚ್ಚಿರುವ ಲಿಂಗ ಶರೀರವನ್ನು ನಾಶಪಡಿಸಿ ಬಿಂಬನಾದ ದಿವ್ಯಜ್ಞಾನದ ಪ್ರಕಾಶವನ್ನಿತ್ತು ಪಾಲಿಸು. ವಿಶ್ವಜನಕನು ವಿಶ್ವನಾಮಕನು ವಿಶ್ವ ಲಕ್ಷಣನು ವಿಶ್ವಜ್ಞಾನಪ್ರದನು ವಿಶ್ವಪಾಲಕನು ವಿಶ್ವೋತ್ತಮನು ಆದ ನಿನಗೆ ನಮಸ್ಕಾರವು. ನಿನ್ನ ದಯೆಯನ್ನು ಪೊಂದಿದ ಮೇಲೆ ಬೇಡಲರ್ಹವಾದುದು ಇನ್ನೊಂದಿಲ್ಲ. ಕರ್ಮಪಾಶವನ್ನು ಯೋಗಬಲದಿಂದ ತುಂಡರಿಸಿ ಭಕ್ತಿಯಿಂದ ಭಾವಿಸುವ ಜ್ಞಾನಿಜನರಿಗೆ ಒಲಿದು ಮೈದೋರಿ ಪೊರೆಯುವ ಯೋಗೇಶನಿಗೆ ನಮಸ್ಕಾರವು. ಅಜಿತನೇ! ಅಖಿಲಜ್ಞಾನಪ್ರೇರಕನೇ! ಅನಂತ ಪರಾಕ್ರಮನೇ! ತ್ರಿಗುಣಾತೀತನೇ! ಬುದ್ಧೀಂದ್ರಿಯ ಮನೋವಲ್ಲಭನೇ! ಶರಣಾಗತ ರಕ್ಷಕನೇ! ನಿನ್ನ ಬಂಧಕಶಕ್ತಿಯಿಂದ ಬಂದ ಅಜ್ಞಾನವಶನಾಗಿ ನಿನ್ನನ್ನು ಹಾಗೂ ನನ್ನ ಸ್ವರೂಪವನ್ನು ಕೂಡ ತಿಳಿಯಲಾರದೆ ಇರುವೆನು. ಅತ್ಯಂತ ದಯಾವಂತನಾದ ನೀನು ಕರುಣಿಸದಿರೆ ನಿನ್ನ ಜ್ಞಾನವು ಎನಗೆಂತಾಗುವುದು? ಸಂರಕ್ಷಿಸು ಎಂದು ಗಜರಾಜನು ನುತಿಸಿದನು.

ಶ್ರೀಶುಕನು ಹೇಳಿದನು–

ಇಂತು ನುತಿಸಿದ ಗಜೇಂದ್ರನ ಮೊರೆಯನ್ನಾಲಿಸಿ ಬ್ರಹ್ಮಾದಿ ದೇವತೆಗಳು ಪಾಶಪದ್ಮ ವಜ್ರ ಶೂಲಾದಿ ಧರರು ಹಂಸ ವೃಷಭ ಮಕರಾದಿ ವಾಹನರು ಆದ ತಮ್ಮನ್ನು ಗಜರಾಜನು ಕರೆಯಲಿಲ್ಲವೆಂದು ತಿಳಿದು ಸುಮ್ಮನಿರಲು ಸ್ವಗತಭೇದವರ್ಜಿತನು ಪೃಥಿವ್ಯಾದಿ ವಿಲಕ್ಷಣನು ಸರ್ವೋತ್ತಮನು ಸರ್ವದೇವನಿಯಾಮಕನು ಆದ ಶ್ರೀಹರಿಯು ಸರಸರನೆ ಬಂದು ಪ್ರಸನ್ನನಾಗಿ ಗರುಡಾರೂಢನಾಗಿ ಗಗನದಿ ನಿಂತನು. ಆರ್ತನಾದ ಗಜರಾಜನು ಮಕರ ಪೀಡೆಯನ್ನು ಬಿಡಿಸಲು ಒಡಿಬಂಗ ಶ್ರೀನಿವಾಸನನ್ನು ಅವನ ಕೈಯಲ್ಲಿ ಕಂಗೊಳಿಸುತ್ತಿರುವ ಚಕ್ರರಾಜವನ್ನು ಕಂಡು ಕಮಲವನ್ನೊಂದನ್ನು ಕರಾಗ್ರದಲ್ಲಿ ಎತ್ತಿ ಪಿಡಿದು ಕಡುಕಷ್ಟದಿಂದ 'ನಾರಾಯಣ! ಅಖಿಲ ಗುರೋ! ಭಗವನ್! ನಮಸ್ತೇ' ಎಂದು ಕೂಗಿ ವಂದಿಸಿದರು.

ತತ್‌ಕ್ಷಣವೇ ಸರಸಿಜನಾಭನು ಗರುಡನಿಂದ ಕೆಳಗಿಳಿದು ಬಂದು ಚಕ್ರದಿಂದ ನಕ್ರಶಿರವನ್ನು ಕತ್ತರಿಸಿ, ಗಜರಾಜನನ್ನು ನೀರಿನಿಂದ ಹೊರಸರಿಸಿ ಕಾಪಾಡಿದನು. ಆ ದಯಾಸಮುದ್ರನ ಭಕ್ತ ವಾತ್ಸಲ್ಯನ್ನು ಕಂಡು ದೇವತೆಗಳು ಮುದದಿಂದ ಗೋವಿಂದನಿಗೆ ವಂದಿಸಿದರು.

## ४. ಗಜೇಂದ್ರಮೋಕ್ಷಣ ಫಲವರ್ಣನೆ

ಶ್ರೀಶುಕನು ಪೇಳಿದನು–

ಆಗ ಬ್ರಹ್ಮರುದ್ರೇಂದ್ರ ಪ್ರಮುಖ ದೇವತೆಗಳು ಋಷಿಗಂಧರ್ವಾದಿ ಸುಜನರು ಶ್ರೀಹರಿ ಶಿರದಿ ಕುಸುಮವರ್ಷವನ್ನು ಮಾಡಿ ಹರ್ಷದಿದ ಪಾಡಿ ಪೊಗಳಿದರು. ದೇವತೆಗಳು ದುಂದುಭಿ ಗಳನ್ನು ಬಾರಿಸಿದರು. ಗಂಧರ್ವರು ಗಾನಮಾಡಲು ಅಪ್ಸರೆಯರು ಆಡಿದರು. ಋಷಿ ಚಾರಣ ಸಿದ್ಧರು ಪುರುಷೋತ್ತಮನನ್ನು ಸ್ತುತಿಸಿ ಪೂಜಿಸಿದರು.

ಮಕರಿಯ ರೂಪದಿಂದಿದ್ದ ಹೂಹೂ ಎಂಬ ಗಂಧರ್ವನು ದೇವಲರ ಶಾಪದಿಂದ ಮುಕ್ತನಾದನು. ಪರಮ ಸುಂದರ ಗಂಧರ್ವರೂಪವನ್ನು ತಾಳಿ ಪರಮೇಶನಿಗೆ ಶಿರಸಾ ನಮಿಸಿ ಕೀರ್ತನೀಯ ಪವಿತ್ರಚರಿತ್ರನಾದ ಹರಿಯ ಗುಣಗಾನವನ್ನು ಮಾಡಿದನು. ಶ್ರೀಶನ ದಯಾಪಾತ್ರನಾಗಿ ಸಕಲಪಾಪಪರಿಮುಕ್ತನಾಗಿ, ಗಂಧರ್ವನು ಶ್ರೀಹರಿಗೆ ಪ್ರದಕ್ಷಿಣೆಸಿ ವಂದಿಸಿ, ಗಂಧರ್ವಲೋಕವನ್ನೈದಿದನು.

ಗಜರಾಜನು ಶ್ರೀರಮಣನ ಕರಕಮಲಸ್ಪರ್ಶದಿಂದ ಅಜ್ಞಾನವನ್ನು ಕಳೆದುಕೊಂಡು ಸಾರೂಪ್ಯವನ್ನು ಪೊಂದಿದನು. ಪೀತಾಂಬರವನ್ನುಟ್ಟು ಚತುರ್ಭುಜನಾಗಿ ಹರಿಪಾರ್ಷದನೆನಿಸಿದನು. ಪೂರ್ವಜನ್ಮದಲ್ಲಿ ಇಂದ್ರದ್ಯುಮ್ನನೆಂಬ ರಾಜನಾಗಿ ವಿಷ್ಣುಭಕ್ತನಾಗಿದ್ದನು. ಆಗೊಂದು ದಿನ ಮೌನವನ್ನು ಧರಿಸಿ ಹರಿಪೂಜೆಯನ್ನು ಮಾಡುತ್ತಿದ್ದ ರಾಜನ ಮನೆಗೆ ಕುಲಾಚಲಾಶ್ರಮಯನಾದ ಅಗಸ್ತ್ಯನು ಯಾದೃಚ್ಛಿಕನಾಗಿ ಬಂದನು. ಶಿಷ್ಯಗಣಪರಿವೃತನಾದ ಆ ಮಹಾತ್ಮನನ್ನು ನೋಡಿಯು, ಆತಿಥ್ಯವನ್ನು ಮಾಡದೆ, ಸುಮ್ಮನೆ ಕೂತಿದ್ದ ರಾಜನನ್ನು ಕಂಡು ಕೆಂಡವಾಗಿ ಶಾಪವನ್ನಿತ್ತು ಇಂತೆಂದನು– ಈ ದುರಾತ್ಮನು ನನ್ನನ್ನು ನೋಡಿಯು ಗಜದಂತೆ ಮದಮತ್ತನಾಗಿ ಕರ್ತವ್ಯಭ್ರಷ್ಟನಾಗಿರುವನಾದ್ದರಿಂದ ಗಜರಾಜನಾಗಿ ಪುಟ್ಟಲಿ! ಎಂದು ಶಾಪವನ್ನಿತ್ತು ಸಾನುಚರ ನಾಗಿ ಮಲಯಸಾನುಚರನಾದನು.

ಇಂದ್ರದ್ಯುಮ್ನನು ಅದೃಷ್ಟನಿಯಾಮಕನಾದ ಹರಿಯ ಇಚ್ಛೆಯನ್ನರಿತು, ಸಕಲ ಜ್ಞಾನನಾಶಕವಾದ ಪಶುಯೋನಿಯಲ್ಲಿ ಜನಿಸಿದನು. ಆದರೂ ಹಿಂದೆ ಮಾಡಿದ ಗೋವಿಂದ ಪಾದಾರವಿಂದ ಸಮರ್ಚನಾ ಮಹಿಮೆಯಿಂದ ಅವನ ಬುದ್ಧಿಶಕ್ತಿಯುತ ಜ್ಞಾನಭಕ್ತಿಗಳು ಅಚ್ಚಳಿಯದಿದ್ದವು.

ಇಂತು ಗಜರಾಜನನ್ನು ಬಿಡಿಸಿ, ಪಾರ್ಷದನನ್ನಾಗಿರಿಸಿ, ಗಂಧರ್ವಸಿದ್ಧವಿಬುಧರ ಸ್ತುತಿಯನ್ನಂಗೀಕರಿಸಿ, ಅದ್ಭುತಚರಿತನಾದ ಹರಿಯು ಗರುಡಾರೂಢನಾಗಿ ಹೊರಟು ಹೋದನು.

ಮಹಾರಾಜ! ಕೃಷ್ಣಮಹಿಮಾಬೋಧಕವು ಸ್ವರ್ಗಯಶಸ್ಸಾಧಕವು ಕಲಿ ಕಲ್ಮಷ ಹರವು ದುಸ್ವಪ್ನಫಲ ವಿನಾಶಕರವು ಆದ ಗಜೇಂದ್ರಮೋಕ್ಷಣ ಕಥೆಯನ್ನು ನಿನಗೆ ಪೇಳಿದೆನು. ದ್ವಿಜರು ಪ್ರಾತಃಕಾಲದಿ ಶುಚಿಗಳಾಗಿ ಇದನ್ನು ಪಠಿಸಲು ದುಃಸ್ವಪ್ನ ಫಲವು ದೂರ ಸರಿಯುವುದು.

ಶ್ರೀಹರಿಯೇ ಸರ್ವಜನರು ಕೇಳುವಂತೆ ಗಜರಾಜನಿಗೆ ಹೇಳಿದ ಅಭಯ ವಚನಗಳನ್ನು ಪೇಳುವೆನು, ಕೇಳು.

ಶ್ರೀ ಭಗವಂತನಿಂತೆಂದನು–

ಗಜೇಂದ್ರ! ನಿನ್ನನ್ನು, ನನ್ನನ್ನು, ಈ ಸರೋವರವನ್ನು, ಗಿರಿ ಕಂದರ ಕಾನನಗಳನ್ನು, ನನ್ನ, ಬ್ರಹ್ಮನ, ಶಿವನ ಮನೆಗಳಾದ ತ್ರಿಕೂಟ ಶಿಖರಗಳನ್ನು ಕ್ಷೀರಸಮುದ್ರವನ್ನು, ಅಲ್ಲಿ ನನಗೆ ಪ್ರಿಯಧಾಮವಾದ ಶ್ವೇತದ್ವೀಪವನ್ನು, ಶ್ರೀವತ್ಸವನ್ನು, ಕೌಸ್ತುಭಮಣಿಯುಕ್ತ ವನಮಾಲೆಯನ್ನು, ಕೌಮೋದಕೀಗದೆಯನ್ನು, ಸುದರ್ಶನ ಪಾಂಚಜನ್ಯನಂದಕಾದ್ಯಾಯುಧಗಳನ್ನು, ಗರುಡ ಶೇಷರನ್ನು, ಪ್ರಿಯಳಾದ ರಮೆಯನ್ನು, ಬ್ರಹ್ಮ ನಾರದ ರುದ್ರಪ್ರಹ್ಲಾದ ಧ್ರುವ ಸಪ್ತರ್ಷಿಗಳನ್ನು, ಮತ್ಸ್ಯ ಕೂರ್ಮ ವರಾಹಾದಿ ರೂಪಗಳಿಂದ ನಾನು ಮಾಡಿದ ಪುಣ್ಯಕರ್ಮವನ್ನು, ಸೂರ್ಯ ಸೋಮ ವಹ್ನಿಯರನ್ನು, ಗೋವಿಪ್ರರನ್ನು, ಓಂಕಾರವನ್ನು, ವೇದವನ್ನು, ಧರ್ಮವನ್ನು, ಮೂರ್ತಿದೇವಿಯನ್ನು, ಸೋಮ ಕಶ್ಯಪರ ಪತ್ನಿಯರನ್ನು, ಗಂಗಾ ಸರಸ್ವತಿ ಯಮುನಾ ಕಾವೇರಿ

ಸುನಂದಾದಿ ನದಿಗಳನ್ನು, ಪುಣ್ಯಕೀರ್ತಿಗಳಾದ ಮನುಚಕ್ರವರ್ತಿಗಳನ್ನು ಪ್ರಾತಃಕಾಲದಲ್ಲಿ ಶ್ರದ್ಧೆಯಿಂದ ಸ್ಮರಿಸುವ ಜನರು ಸಕಲ ಪಾಪದಿಂದ ಮುಕ್ತರಾಗುವರು.

ನೀನು ನುಡಿದ ಸ್ತುತಿಯನ್ನು ಪಠಿಸಿ ಭಕ್ತಿಯಿಂದ ನಿತ್ಯವೂ ನನ್ನನ್ನು ಪೊಗಳುವ ಜನರಿಗೆ ನಾನು ಒಲಿದು ಅವರ ಅಂತ್ಯಕಾಲದಲ್ಲಿ ನನ್ನ ಸ್ಮೃತಿಯನ್ನು ಜ್ಞಾನವನ್ನು ಕೊನೆಗೆ ಮೋಕ್ಷವನ್ನೂ ಕೊಟ್ಟು ಸಲಹುವೆನು– ಎಂದು ಶ್ರೀಹೃಷಿಕೇಶನು ಅನುಗ್ರಹಿಸಿ ಶಂಖಧ್ವಾನದಿಂದ ವಿಬುಧಜನ ಸಮ್ಮೋದ ಸಂಧಾಯಕನಾಗಿ ಹೊರಟುಹೋದನು.

## ೫. ಮಹಾವಿಭೂತಿ ಸ್ತುತಿ

ಶ್ರೀಶುಕನು ಹೇಳುವನು–

ರಾಜನ್! ಕೇಳಿದೆಯಾ ಗಜೇಂದ್ರಮೋಕ್ಷಣ ಪವಿತ್ರ ಚರಿತ್ರವನ್ನು. ನಾವೂ 'ಶ್ರೀಶಾ! ಗಜರಾಜನನ್ನು ಪೊರೆಯುವಾಗ, ದ್ರೌಪತಿಯನ್ನುಳಿಸಲು ಬರುವಾಗ ಅಜಾಮಿಲನನ್ನು ಬಿಡಿಸು ವಾಗ ನೀ ತೋರಿದ ತ್ವರೆಯಲ್ಲಿ ಒಂದು ಕೋಟ್ಯಂಶದ ತ್ವರೆಯನ್ನು ನಮ್ಮಲ್ಲಿ ತೋರಿ ಕಾಪಾಡು' ಎಂದು ಬೇಡುವುದು ನಮ್ಮ ಕರ್ತವ್ಯವಾಗಿದೆ.

ರೈವತನು ಐದನೆಯ ಮನುವಾದನು. ಅವನು ತಾಪಸಸೋದರನು. ಅವನಿಗೆ ಬಲವಿಂಧ್ಯಾ ರ್ಜುನ ಪೂರ್ವಕರು ಸುತರು. 'ವಿಭು'ನೆಂಬ ಹೆಸರಿನಿಂದ ಶ್ರೀಶನೇ ಇಂದ್ರನಾಗಿದ್ದನು. ಭೂತರ ಯಾದಿಗಳೇ ಆ ಕಾಲದ ದೇವತೆಗಳು. ಹಿರಣ್ಯರೋಮ ವೇದಶಿರ, ಊರ್ಧ್ವಬಾಹು ಮುಖರೇ ಸಪ್ತರ್ಷಿಗಳು. ಶುಭ್ರನ ಮಡದಿಯಾದ ವಿಕುಂಠಾದೇವಿಯ ಮಗನಾಗಿ ನಾರಾಯಣನು ಜನಿಸಿ ವೈಕುಂಠನೆನಿಸಿದನು. ರಮಾದೇವಿಯ ಮಾತನ್ನು ಲಾಲಿಸಿ ಮಮತೆಯಿಂದ ವೈಕುಂಠನು ತನ್ನ ವೈಕುಂಠಲೋಕವನ್ನು ಸರ್ವಲೋಕೋತ್ತರ ವೈಭವೋಪೇತವನ್ನಾಗಿ ವಿಸ್ತರಿಸಿದನು. ಭೂಮಿ ಯಲ್ಲಿರುವ ಮಣ್ಣಿನ ಕಣಗಳನ್ನು ಎಣಿಸಲಹುದಾಗಲಿ, ವಿಷ್ಣುದೇವನ ವಿಭವವನ್ನು ಸುಗುಣ ಗಳನ್ನು ಎಣಿಸಿ ಮುಗಿಸಲಾಗುವುದೇ?

ಆರನೆಯ ಮನುವು ಚಕ್ಷುಪ್ರಜೇಶನ ಮಗನಾದ ಚಾಕ್ಷುಷನು. ಪುರಷ ಸುದ್ಯುಮ್ನರಾದಿಯಾಗಿ ಅವನ ಸುತರು ಹತ್ತು ಜನರು. ಇಂದ್ರನ ಹೆಸರು ಮಂದ್ರದ್ರುತನೆಂಬರು. ಆಪ್ಯಾದಿಗಳೇ ಆಗಿನ ದೇವತೆಗಳು. ಹವಿಷ್ಮದ್ವೀರಕಾದಿಗಳು ಸಪ್ತಮುನಿಗಳು. ಆಗ ಜಗತ್ಪತಿಯು ವೈರಾಜನಿಂದ ಸಂಭೂತಿಯಲ್ಲಿ ಅಜಿತನೆನಿಸಿ ಜನಿಸಿದರು. ಅಜಿತನಾಗಿ ಮಥಿಸಿದ ಕ್ಷೀರವಾರ್ಧಿಯಿಂದ ಬಂದ ಸುಧೆಯನ್ನು ಸುರರಿಗೆ ಮೋಹಿನೀರೂಪದಿಂದ ಹಂಚಿದ ದೊರೆಯು ಚರಿತೆಯ, ಸುಜನ ಮನೋ ಹರವಾಗಿದೆ.

ರಾಜನು ಕೇಳಿದನು–

ಬ್ರಹ್ಮಜ್ಞಾನಿಯೇ! ಕ್ಷೀರಸಾಗರವನ್ನು ಯಾರಾರು ಮಥಿಸಿದರು? ಯಾತಕ್ಕಾಗಿ? ಯಾವ ಸಾಧನಗಳಿಂದ? ಶ್ರೀಶಕನು ಕೂರ್ಮನಾಗಿ ಮಂದರವನ್ನು ಹೊರಲು ಕಾರಣವೇನು? ಸುರರು ಸುಧೆಯನ್ನು ಪಡೆದದ್ದೆಂತು? ಮುಂದೇನಾಯಿತು? ಇದೆಲ್ಲವೂ ಪಾಪಹರಹರಿಚರಿತವೇ ಆಗಿದೆ. ನೀನು ಸಜ್ಜನವರದನಾದ ಸರ್ವೇಶನ ಮಹಿಮೆಯನ್ನು ವರ್ಣಿಸುತ್ತಿರಲು ಕೇಳುವ ನನ್ನ ಮನವು ಅನಂತ ಜನ್ಮ ತಾಪತ್ರಯ ದುಃಖಿತವಾಗಿದ್ದುದರಿಂದ ತೃಪ್ತವಾಗದೆ ಹರಿಕಥಾ ಸುಧಾಪಾನದಿಂದ

ಶಾಂತವಾಗಲು ಬಯಸುತ್ತಿದೆ– ಎಂದು ಕೇಳಲು ಶ್ರೀಶುಕನು ರಾಜನನ್ನು ಅಭಿನಂದಿಸಿ ಹೀಗೆಂದನು–

ದೇವಾಸುರ ಯುದ್ಧದಲ್ಲಿ ಒಮ್ಮೆ ರಾಕ್ಷಸರ ತೀಕ್ಷ್ಣಾಯುಧ ಕ್ಷುಣ್ಣಗಾತ್ರರಾಗಿ ಸುರರು ಅಸುವನ್ನು ನೀಗಿದವರಂತೆ ಪ್ರಾಣಬಲರಹಿತರಾಗಿ ಬಿದ್ದಿದ್ದರು. ಅದನ್ನು ನೋಡಿ ಮಹೇಂದ್ರ ವರುಣಾದಿಗಳು 'ದೂರ್ವಾಸರ ಶಾಪ ಪರಿಪಾಕದಿಂದ ಬಂದ ವಿಪತ್ತನ್ನು ನಾವು ಸ್ವಯಂ ಪರಿಹರಿಸ ಲಾರೆವು. ಯಜ್ಞಾದಿ ಹವಿರ್ಭಾಗಗಳಿಲ್ಲದೆ ನಿಸ್ತೇಜಸ್ಕರಾಗಿರುವ, ನಮಗೆ ನಾರಾಯಣನೇ ಗತಿ' ಎಂದು ನಿಶ್ಚಯಿಸಿ, ಮೇರುಶಿಖರದಿ ನೆಲೆಸಿರುವ ಶತಕೋಟಿ ಎಂಬುವ ಬ್ರಹ್ಮಸಭೆಯನ್ನು ಸೇರಿ, ಆ ಪರಮೇಷ್ಠಿಗೆ ತಮ್ಮ ಕಷ್ಟವನ್ನು ತಿಳುಹಿ, ಕಾಪಾಡೆಂದು ಬೇಡಿದರು. ನಿಷ್ಪ್ರಭರಾದ ಇಂದ್ರಾಗ್ನಿ ವಾಯು ವರುಣಾದಿ ದೇವತೆಗಳನ್ನು, ಅಮಂಗಲಪ್ರಾಯವಾದ ಲೋಕಗಳನ್ನು ನೋಡಿ ಶತಾನಂದನು ಸಮಾಹಿತಮನಸ್ಕನಾಗಿ, ಪುರುಷೋತ್ತಮನನ್ನು ನೆನೆದು ವಿಕಸಿತ ವದನನಾಗಿ ಇಂತೆಂದನು–

ನಾನು, ನೀವು, ಅಸುರರು, ಮನುಜರು, ಪಶುಪಕ್ಷಿ ವೃಕ್ಷಗಳು ಕೂಡ ಅವನ ಭಿನ್ನಾಂಶರಾಗಿ, ಬಿಂಬನಾಗಿ ನಡೆಸುವ ಆ ಹರಿಯ ಅಧೀನರಾಗಿರುವೆವು. ಅವ್ಯಯನು ದಯಾಮಯನು ಆದ ಆ ಪ್ರಭುವೇ ನಮಗೆ ರಕ್ಷಕನು. ಪಕ್ಷಪಾತವಿಲ್ಲದ ಅವನಿಗೆ ವಧ್ಯರಾರು? ರಕ್ಷಣೀಯರಾರು? ಯೋಗ್ಯತೆಯನ್ನರಿತು, ತತ್ತದ್ಗುಣ ಸ್ವಭಾವಕರ್ಮಗಳಿಗನುಗುಣವಾಗಿ ಫಲವನ್ನು ಕೊಡುವ ಶ್ರೀಶನಿಗೆ ನನ್ನವರು ಪರರೆಂಬುವ ಭೇದ ಬುದ್ಧಿಯು ಇಲ್ಲ. ಆದರೂ ಸೃಜಿಸಲು ರಜವನ್ನು, ರಕ್ಷಿಸಲು ಸತ್ವವನ್ನು, ಸಂಹರಿಸಲು ತಮಸ್ಸನ್ನು ಸ್ವೀಕರಿಸುವ ಕಾಲನಾಮಕ ಹರಿಯ ಮಹಿಮೆ ಯನ್ನು ನಾನು ಸ್ವಲ್ಪ ತಿಳಿದಿರುವೆನು. ಈಗ ಅವನು ಸತ್ತ್ವಗುಣವರ್ಧಕನಾಗಿರುವನು. ದೇಹಧಾರಿ ಗಳಿಗೆ ಮಂಗಳಪ್ರದನಾಗಿ ಸುಮುಖನಾಗಿರುವ ಜಗದ್ಗುರುವಿಗೆ ಶರಣಾಗತರಾಗಿ ನಾವೆಲ್ಲರೂ ಹೋಗೋಣ. ಸುರಪ್ರಿಯನು ನಮಗೆ ಸುಖವನ್ನು ತಪ್ಪದೆ ಕೊಡುವನು– ಎಂದು ನುಡಿದು ವಿರಂಚನು ಇಂದ್ರಾದಿಗಳನ್ನು ಕರೆದುಕೊಂಡು, ಕ್ಷೀರನೀರಧಿ ತೀರದಿ ನಿಂತು ಅದೃಷ್ಟ ಸ್ವರೂಪನಾದ ಶ್ರೀಹರಿಯನ್ನು ಶ್ರದ್ಧೆಯಿಂದ ಪೊಗಳಿದನು–

ಜನನಾದಿ ವಿಕಾರರಹಿತನು, ನಿತ್ಯನಿರ್ದುಃಖರತಿಶಯಾನಂದ ಜ್ಞಾನರೂಪನು ದೇಶ ಕಾಲ ಗುಣಗಳಿಂದ ಕೊನೆಯಿಲ್ಲದವನು, ಜಗದಾದಿ ಕಾರಣನು, ಹೃದಯ ಗುಹಾವಾಸನು, ಷೋಡಶ ಕಲಾತ್ಮಕಲಿಂಗ ಶರೀರರಹಿತನು, ಅಪ್ರಮೇಯನು, ಮನೋವಚನಗಳಿಗತೀತನು, ದೇವ ವರೇಣ್ಯನು, ಸುಂದರನು, ಸರ್ವಜ್ಞನು, ಜೀವಜಾತರ ಪ್ರಾಣಮನೋಬುದ್ಧೀಂದ್ರಿಯ ಪ್ರವರ್ತಕನು, ಅಜ್ಞಾನರಹಿತನು, ಮಿಥ್ಯಾಜ್ಞಾನ ನಿವರ್ತಕನು, ಪ್ರಾಕೃತ ದೇಹರಹಿತನು, ಚತುರ್ವಿಧ ನಾಶಹೀನನು, ತ್ರಿಯುಗ ಸಂಭೂತನು ಆದ ಶ್ರೀಹರಿಗೆ ಶರಣು. ಜೀವನಿಗೆ ಶಾಸ್ತ್ರ ಜನ್ಯ ಜ್ಞಾನವೆಂಬ ಬಿಸಿಲಿನಿಂದ ಬೆಳಕು, ಅವಿದ್ಯೆಯಿಂದ ಕತ್ತಲು ಉಂಟು; ಆದರೆ ಆ ಛಾಯಾ ತಪಗಳು ಶ್ರೀಹರಿಗಿಲ್ಲ.

ಆಹಾ! ಇವನ ಕಾಲಚಕ್ರದ ಮಹಿಮೆಯು ಎಷ್ಟು ಅದ್ಭುತವಾಗಿದೆ. ಪ್ರಕೃತಿಯೇ ಇದನ್ನು ನಡೆಸುವಳು. ಮನಃಪ್ರಧಾನವಾದ ಈ ಚಕ್ರವನ್ನು ಹತ್ತಿಂದ್ರಿಯಗಳು ಐದು ಭೂತಗಳು ಕಲೆತು ಹದಿನೈದು ಅರೆಗಳಂತೆ ಇರುವುವು. ತ್ರಿಗುಣಗಳೇ ಕುಂಭಿಯು, ಬ್ರಹ್ಮನೇ ಬಲಪ್ರದನು, ದೇವಾಸುರನರ ತಿರ್ಯಕ್ಪಶುಪಕ್ಷಿಮತ್ಸ್ಯಸರ್ಪಗಳೆಂಬ ಎಂಟು ಜಾತಿಗಳೆ ನೇಮಿಗಳು; ಇಂತಹ

ಚಕ್ರವನ್ನು ಆಧಾರವಾದ ಅಕ್ಷದಂತೆ ನಿಂತು ನಡೆಸುವ ಲಕ್ಷ್ಮೀರಮಣನಿಗೆ ಶರಣು. ಓಂ ಎಂಬುವ ಅಕ್ಷರವಾಚ್ಯನಾಗಿ, ಅಜ್ಞಾನರಹಿತನಾಗಿ, ಲೋಕಾತೀತನಾಗಿ, ಅನಂತಮಹಿಮನಾಗಿ, ಇರುವ ಸ್ವಾಮಿಯನ್ನು ಧೀರರು ತಮ್ಮ ಹೃದಯಕಮಲ ಪೀಠದಲ್ಲಿ ಸ್ಥಾಪಿಸಿ, ಸದಾ ಪೂಜಿಸುವರು. ಇವನ ಮಹಿಮಾಜ್ಞಾನವು ತಾಮಸರಿಗೆ ಆಗುವುದೇ ಇಲ್ಲ. ಸಾತ್ವಿಕರು ಕೂಡ ಅವನ ಅನುಗ್ರಹ ದಿಂದ ಯಥಾಯೋಗ್ಯವಾಗಿ ತಿಳಿದಿರುವರು. ಅವನನ್ನು ತಿಳಿಯದವರಿಗೆ ಅವನಿಂದಲೇ ಬರುವ ಮೋಕ್ಷಫಲದ ಅರಿವಾದರೂ ಆಗುವುದೆಂತು? ಜೀವನಿಗಿರುವ ಚಿಂತೆ, ಸಂತಾಪ, ಹಸಿವು, ತೃಷೆ, ಜನನ, ಮರಣಗಳವನಿಗಿಲ್ಲ. ನಿತ್ಯಮುಕ್ತಳಾದ ರಮೆಗೂ ಒಡೆಯನಾದ ಅವನ ದಯೆ ಯಿಂದ, ಜೀವರು ಚಿಂತಾದಿ ದೂರರಾಗಿ ಮುಕ್ತರಾಗುವರು. ಅವನ ದಯೆಯಿಂದ ಸತ್ವಗುಣ ಪ್ರಚುರರೆನಿಸಿರುವ ನಾವೂ ಋಷಿಗಳೂ ಕೂಡ ಒಳಹೊರಗೆ ನಿಂತು ನಡೆಸುವ ರಮೇಶನ ಮಹಿಮೆಯನ್ನು ಚೆನ್ನಾಗಿ ತಿಳಿಯದೇ ಇರುವಾಗ, ತಮಃಪ್ರಧಾನರಾದ ಅಸುರಾದಿಗಳೆಂತು ತಿಳಿಯುವರು?

ತನ್ನ ಪಾದದಿಂದ ಭೂಮಿಯನ್ನು, ಅಲ್ಲಿ ನೆಲಸಿದ ಜರಾಯುಜಸ್ವೇದಜಾಂಡಜೋದ್ಭಿಜ್ಜ ಗಳೆಂಬ ಚತುರ್ವಿಧ ಪ್ರಾಣಿಗಳನ್ನು ಸೃಜಿಸಿದ ಸ್ವತಂತ್ರನಾದ ಮಹದೈಶ್ವರ್ಯ ಸಂಪನ್ನನು ನಮಗೆ ಪ್ರಸನ್ನನಾಗಲಿ!

ತನ್ನ ರೇತಸ್ಸಿನಿಂದ ಜಲವನ್ನು, ಅದರಿಂದ ಜೀವಿಸಿ ಬೆಳೆಯುವ ಲೋಕಪಾಲರನ್ನು, ತ್ರಿಲೋಕಪ್ರಾಣಿಗಳನ್ನು ಸೃಜಿಸಿದ ಗುಣಪೂರ್ಣವಾದ ಮಹದೈಶ್ವರ್ಯಸಂಪನ್ನನು ನಮಗೆ ಒಲಿಯಲಿ!

ತನ್ನ ಮನದಿಂದ ಚಂದ್ರನನ್ನು, ಅವನಿಂದ ದೇವತಾ ಬಲಾಹಾರಗಳನ್ನು, ಸುಧೆಯನ್ನು, ಆಯುಸ್ಸನ್ನು, ಅಂಕುರ ಜನನಶಕ್ತಿಯನ್ನು ಪುರುಷಪ್ರಜನನ ಸಾಮರ್ಥ್ಯವನ್ನು ಸೃಜಿಸಿದ ಮಹದೈಶ್ವರ್ಯಸಂಪನ್ನನು ನಮಗೆ ದಯಮಾಡಲಿ!

ತನ್ನ ಮುಖದಿಂದ ಅಗ್ನಿಯನ್ನು, ಅವನಿಂದ ಕ್ರಿಯಾಕಾಂಡವನ್ನು, ಜಠರ ಸಮುದ್ರದಲ್ಲಿದ್ದು ನಾಲ್ಕು ವಿಧ ಅನ್ನವನ್ನು, ಪಚನ ಮಾಡುವ ಶಕ್ತಿಯನ್ನೂ ಸೃಜಿಸಿದ ಮಹದೈಶ್ವರ್ಯಸಂಪನ್ನನು ನಮಗೆ ಪ್ರಸನ್ನನಾಗಲಿ!

ತನ್ನ ಕಣ್ಣಿಂದ ಸೂರ್ಯನನ್ನು, ಅವನಿಂದ ದೇವಯಾನ ಸ್ಥಾನವನ್ನು ತನಗೆ ಇರಲು ಬೇಕಾದ ಸ್ಥಾನವನ್ನು, ಸಂಸಾರದಿಂದ ಮುಕ್ತರಾಗುವ ಜ್ಞಾನಿಜನಮಾರ್ಗವನ್ನೂ ನಿರ್ಮಿಸಿದ ಮಹದೈಶ್ವರ್ಯಸಂಪನ್ನನು ನಮಗೆ ಪ್ರಸನ್ನನಾಗಲಿ!

ತನ್ನ ಪ್ರಾಣದಿಂದ, ಚರಾಚರ ಪ್ರಾಣಿಗಳ ಜೀವನಕರ ಪ್ರಾಣನನ್ನು, ಅವನಿಂದ ಓಜೋಬಲ ಶಕ್ತಿಗಳನ್ನು, ಭೌತಿಕ ವಾಯುವಿನನ್ನು ಸೃಜಿಸಿ, ಸಾಮ್ರಾಟನಿಗೆ ಅಧೀನರಾಗಿರುವ ಸಾಮಂತರನ್ನಂತೆ ನಮ್ಮನ್ನು ಆ ಮುಖ್ಯಪ್ರಾಣನ ಅಧೀನರಾಗಿಟ್ಟು ಪೊರೆವ ಮಹದೈಶ್ವರ್ಯಸಂಪನ್ನನು ನಮಗೆ ಪ್ರಸನ್ನವಾಗಲಿ!

ತನ್ನ ಕಿವಿಯಿಂದ ದಿಕ್ಕುಗಳನ್ನು, ಹೃದಯದಿಂದ ಇಂದ್ರಿಯಗಳನ್ನು, ನಾಭಿಯಿಂದ ಆಕಾಶ ವನ್ನು, ಸೃಜಿಸಿದ ಪೃಥಿವೀಶರೀರನು, ಪ್ರಾಣೇಂದ್ರಿಯವ್ಯಾಪ್ತನು ಆದ ಮಹದೈಶ್ವರ್ಯ ಸಂಪನ್ನನು ನಮಗೆ ಪ್ರಸನ್ನವಾಗಲಿ!

ತನ್ನ ಬಲದಿಂದ ಮಹೇಂದ್ರನನ್ನು, ಪ್ರಸಾದ ಶಕ್ತಿಯಿಂದ ದೇವತೆಗಳನ್ನು, ಮನ್ಯು (ಕ್ರೋಧ)ದಿಂದ ರುದ್ರನನ್ನು, ಬುದ್ಧಿಯಿಂದ ವಿರಿಂಚನನ್ನು, ಸಪ್ತೇಂದ್ರಿಯಗಳಿಂದ ಸಪ್ತ ಚ್ಛಂದಸ್ಸುಗಳನ್ನು ಮತ್ತು ಋಷಿಗಳನ್ನು, ಮೇಢ್ರದಿಂದ ದಕ್ಷಪ್ರಜಾಪತಿಯನ್ನು ಸೃಜಿಸಿದ ಮಹದೈಶ್ವರ್ಯಸಂಪನ್ನನು ನಮಗೆ ದಯಮಾಡಲಿ!

ವಕ್ಷಸ್ಥಲದಿ ಶ್ರೀದೇವಿಯನ್ನಿಟ್ಟು, ಛಾಯೆಯಿಂದ ಪಿತೃಗಳನ್ನು, ಸ್ತನದಿಂದ ಧರ್ಮನನ್ನು, ಬೆನ್ನಿನಿಂದ ಅಧರ್ಮನನ್ನು, ಶಿರದಿಂದ ದ್ಯುಲೋಕವನ್ನು, ವಿಹಾರದಿಂದ ಅಪ್ಸರೆಯರನ್ನು ಸೃಜಿಸಿದ ಮಹದೈಶ್ವರ್ಯನಿಧಿಯು ನಮಗೆ ಒಲಿಯಲಿ!

ಮುಖದಿಂದ ವೇದವಿಪ್ರರನ್ನು, ಭುಜದಿಂದ ಬಲಕ್ಷತ್ರಿಯರನ್ನು, ತೊಡೆಯಿಂದ ವಾರ್ತಾ ವೈಶ್ಯರನ್ನು, ಪಾಪದಿಂದ ಸೇವಾಶೂದ್ರರನ್ನು ಸೃಜಿಸಿದ ಮಹದ್ಭಾಗ್ಯನಿಧಿಯು ನಮಗೆ ಪ್ರಸನ್ನನಾಗಲಿ!

ಅಧರೋಷ್ಠದಿಂದ ಲೋಭವನ್ನು ಉತ್ತರೋಷ್ಠದಿಂದ ಪ್ರೀತಿಯನ್ನು, ನಾಸಿಕೆಯಿಂದ ಕಾಂತಿ ಪಶುಜೀವನಗಳನ್ನೂ, ಸ್ಪರ್ಶದಿಂದ ಕಾಮವನ್ನು, ಹುಬ್ಬಿನಿಂದ ಯಮನನ್ನು, ಕಣ್ಣರೆಪ್ಪೆಗಳಿಂದ ಕಾಲಮೃತ್ಯುವನ್ನು ಸೃಜಿಸಿದ ಮಹದ್ಭಾಗ್ಯನಿಧಿಯು ನಮಗೆ ದಯಮಾಡಲಿ!

ಪಂಚಭೂತಾತ್ಮಕ ದ್ರವ್ಯ, ಆಯಸ್ಸು, ಕರ್ಮ, ಶುಕ್ಲ ರಕ್ತಾದಿ ಗುಣಗಳು, ಸ್ವಭಾವ ಜೀವ ಕಾಲಾದಿಗಳೆಲ್ಲವೂ ಅವನ ಉಪೇಕ್ಷೆಯಿಂದ ಸ್ವಕಾರ್ಯಕರಣಾಶಕ್ತವಾಗಿ ಬಿದ್ದಿರುವುವು. ಅವನ ಮಹಿಮೆಯು ಬ್ರಹ್ಮಾದಿಗಳಿಗೂ ಅಚಿಂತ್ಯವಾಗಿದೆ. ಅವನೇ ಜ್ಞಾನದಾತನಾಗಿರುವನು. ಅಂತಹ ಪರಿಪೂರ್ಣೈಶ್ವರ್ಯನು ನಮಗೆ ಪ್ರಸನ್ನನಾಗಲಿ!

ನಿತ್ಯಾವಿರ್ಭೂತಾನಂದ ಸ್ವರೂಪನು, ನಾನಾರೂಪ ರಮಾನಂದಪ್ರದನು, ಸ್ವಾಧೀನ ಪ್ರಕೃತಿ ನಿರ್ಮಿತ ವಿಷಯ ಪ್ರವರ್ತಕನು, ತತ್ಕೃತ ದುಃಖಾದಿರಹಿತನು ಆದ ಪೂರ್ಣೈಶ್ವರ್ಯ ಸ್ವರೂಪ ನಿಗೆ ನಮಸ್ಕಾರವು.

ಗೋವಿಂದ! ನಮಗೆ ದಯೆಯಿಂದ ಮೈದೋರು! ಮಂದಸ್ಮಿತ ಸುಂದರವದನಾರವಿಂದವನ್ನು ತೋರು! ಭರಿಸಲಾಗದ ದುಃಖಭಾರದಿಂದ ಅಸುರಪೀಡೆಯನ್ನು ಬಿಡಿಸೆಂದು ಬೇಡುವ ನಮ್ಮನ್ನು ಆಗಾಗ ಅವತರಿಸಿ ಪೊರೆಯುವವನು ನೀನೇ ಅಲ್ಲವೆ? ದೇಹಭಾರಿಗಳು ಮಾಡುವ ಕರ್ಮಗಳಿಗೆ ಸುಖಫಲವಿಲ್ಲ, ದುಃಖಾಯಾಸಗಳೇ ಹೆಚ್ಚು; ಆದರೆ ಕರ್ಮಗಳನ್ನು ನಿನಗೆ ಅರ್ಪಿಸಲು ದುಃಖ ನಿವಾರಕಗಳು, ಮಹಾಫಲಪ್ರದಾಯಕಗಳೂ ಆಗುತ್ತಿವೆ.

ಸ್ವಲ್ಪವೇ ಆದರೂ, ಅಂಗೋಪಾಂಗರಹಿತವಾದರೂ ಸತ್ಕರ್ಮವು ಭಗವದ್ಚರಿತವಾದರೆ ನಿಷ್ಫಲವಾಗುವುದಿಲ್ಲ. ಅನಿಮಿತ್ತ ಬಂಧುವಾದ ಅಂತರ್ಯಾಮಿಯ ಅಡಿದಾವರೆಯಲ್ಲಿಟ್ಟ ಶುಭಕರ್ಮವು ಜೀವನಿಗೇ ಮಹಾಫಲವನ್ನು ತಂದುಕೊಡುವುದು. ತರುಮೂಲದಿ ನೀರೆರೆದರೆ, ಕೊಂಬೆರೆಂಬೆಗಳಿಗೂ ತೃಪ್ತಿಯಾಗುವಂತೆ ವಿಷ್ಣುವಿನ ಪೂಜೆಯು, ಸರ್ವದೇವತಾ ಪ್ರೀತಿಸಾಧಕ ವಾಗಿ ಪೂಜಕನ ಮಹಾಫಲಕ್ಕು ಕಾರಣವಾಗುವುದು. ಶ್ರೀಹರೇ! ಅಪ್ರಮೇಯಮಹಿಮನು, ಅಚಿಂತ್ಯಾದ್ಭುತಕರ್ಮನು ಪ್ರಕೃತಿಗುಣಲೇಪರಹಿತನು, ಸುಖಾದಿಗುಣಭರಿತನು ಆದ ಅನಂತವೇ! ನಿನಗೆ ನಮಃ. "ಸತ್ವಗುಣೋನ್ನಾಹ ಕಾರಣನಾಗಿರುವ ನೀನೀಗ ನಮ್ಮನ್ನು ಕಾಪಾಡು" ಎಂದು ಬ್ರಹ್ಮನು ವಿಜ್ಞಾಪಿಸಿದನು.

## ೬. ಕ್ಷೀರಸಾಗರ — ಮಥನ ಪ್ರಯತ್ನ

ಆಗ ಸುರಗಣ ಪ್ರಾರ್ಥನೆಯನ್ನು ಮನ್ನಿಸಿ ಸುರೇಶನು ಸೂರ್ಯಕೋಟಿ ಪ್ರಭಾಭಾಸನಾಗಿ ಪ್ರತ್ಯಕ್ಷನಾದನು. ಆ ಕಾಂತಿಪುಂಜನನ್ನು ಕಣ್ಣೆತ್ತಿ ನೋಡಲಾರದೆ ದೇವತೆಗಳು ದಿಗ್ಭ್ರಮೆ ಗೊಂಡಿರಲು ಪೂಜ್ಯನಾದ ವಿರಿಂಚನು ರುದ್ರನೊಡನೆ ಶ್ರೀಶನ ರೂಪವನ್ನು ನೋಡಿ ನಿಂತು ನಮಿಸಿದನು. ಸ್ವಚ್ಛ ಮರಕತವರ್ಣನು, ಕಮಲಾರುಣೇಕ್ಷನು, ಪೀತಾಂಬರಧರನು, ಪ್ರಸನ್ನ ಮನೋಹರನು, ಸರ್ವಾವಯವ ಸುಂದರನು, ಕೌಸ್ತುಭಾಮುಕ್ತಕಂಧರನು, ಸುರುಚಿರಮಂದ ಹಾಸನು, ರಮಣೀಯ ಭ್ರೂವಿಲಾಸನು, ಮಹಾಮಣಿಖಚಿತ ಕಿರೀಟ ಕಟಕ ಕೇಯೂರ ಭೂಷಿತನು, ಮೃದಮಧುರಭಾಷಿತನು, ಮರಕಕುಂಡಲ ಶೋಭಿ ಗಂಡಸ್ಥಲನು, ಶ್ರೀವತ್ಸರಾಜ ದ್ವಕ್ಷೋವಿಶಾಲನು, ವನಮಾಲಾಯುತನು, ಸುದರ್ಶನಾದಿ ದಿವ್ಯಾಸ್ತ್ರ ದೇವೋಪಾಸಿತನು ಆದ ಶ್ರೀಹರಿಗೆ ನಮಿಸಿ ರುದ್ರಪ್ರಮುಖ ಸುರರು ಕೈಜೋಡಿಸಿ ನಿಂತರೆ ಬ್ರಹ್ಮನು ಪುನಃ ನುತಿಸಿದನು–

ಶ್ರೀಶಾ! ನಿನಗೆ ಜನನಾದಿಗಳಿಲ್ಲ. ಜಗತ್ತಿಗೆ ಜನನಪಾಲನ ಸಂಹರಣಗಳನ್ನು ನೀನೇ ಮಾಡುವೆ. ಸುಖಸಮುದ್ರನು ಭಕ್ತಭದ್ರಪ್ರದನು, ಅಣೋರಣೀಯನು, ಮಹತೋಮಹೀಯನು ಆದ ನಿನಗೆ ನಮಃ. ಮಹಾನುಭಾವಾ! ಶ್ರೇಯಸ್ಕಾಮರು ಈ ನಿನ್ನ ರೂಪವನ್ನು ವೈದಿಕ ತಾಂತ್ರಿಕ ಮಾರ್ಗದಿಂದ ಪೂಜಿಸಿ ಪೊಗಳುವರು. ನಿನ್ನ ಈ ರೂಪದಲ್ಲಿ ಮೂರು ಲೋಕವೂ ಅಡಗಿರುವು ದನ್ನು ನಿನ್ನ ದಯೆಯಿಂದ ತಿಳಿದು ನೋಡುತ್ತಿರುವೆನು. ಈ ವಿಶ್ವವು ನಿನ್ನ ಪ್ರತಿಮೆಯಾಗಿದೆ. ನೀನು ಸ್ವತಂತ್ರನು. ಪ್ರಳಯದಲ್ಲಿ ಜೀವಜಡಜಾತವು ನಿನ್ನಲ್ಲಿತ್ತು. ಈ ಜಗತ್ತಿಗೆ ನೀನೇ ಆದಿ, ನೀನೇ ಅಂತ್ಯ ಮತ್ತು ಮಧ್ಯದಲ್ಲಿಯೂ ನೀನೇ. ಶಶ್ವದೇಕಪ್ರಕಾರನಾಗಿ ಪ್ರಭುವಾಗಿರುವೆ. ನಿನ್ನ ನಾಮಗಳನ್ನು ಮಣ್ಣುಗಡಿಗೆಗಳಿಗೆ ಕೊಟ್ಟು, ಕಾರ್ಯಕಾರಣ ಶಕ್ತಿಯನ್ನು ಪುಟ್ಟಿಸಿ ವ್ಯಾಪ್ತ ನಾಗಿರುವಂತೆ ಜಗತ್ತಿಗೆ ನಿನ್ನ ಹೆಸರನ್ನಿಟ್ಟು, ಅದರ ಸತ್ತಾಶಕ್ತಿಗಳಿಗೆ ನಿಯಾಮಕನಾಗಿ ಜಗವೇ ನೀನು ಎನಿಸಿರುವೆ. ನೀನಿಲ್ಲದಿರೆ ಜಗವಿಲ್ಲ. ನಿನ್ನ ಅಧೀನಳಾದ ರಮೆಯಿಂದ ಕೂಡಿ ತ್ರಿಗುಣಾತ್ಮಕ ಪ್ರಕೃತಿಯಿಂದ ಜಗತ್ತನ್ನು ನಿರ್ಮಿಸಿ ಅದರಲ್ಲಿ ಪ್ರವೇಶಿಸಿ ಗುಣಗಣ ನಿಮಿತ್ತ ದೋಷವಿಲ್ಲದೆ ಪ್ರಕಾಶಮಾನನಾಗಿರುವೆ. ಕಾಷ್ಠದಲ್ಲಿರುವ ಅಗ್ನಿಯನ್ನು, ಗೋವಿನಲ್ಲಿರುವ ಕ್ಷೀರಘೃತಗಳನ್ನು, ಭೂಮಿಯಲ್ಲಿರುವ ಅನ್ನವನ್ನು, ನೀರನ್ನು, ಮನುಜರು ಮಥಿಸಿ, ಕೃಷಿಗೈದು, ತೋಡಿ ಪಡೆಯು ವಂತೆ ಪ್ರಕೃತಿಗುಣಗಳಲ್ಲಡಗಿ ತದ್ಭಿನ್ನನಾದ ನಿನ್ನನ್ನು ಜ್ಞಾನಿಗಳು ಶ್ರವಣಾದಿ ವಿಚಾರದಿಂದ ತಿಳಿಯುವರು. ಇಂದು ಮತ್ತೆ ನಮ್ಮ ನೇತ್ರಾನಂದಕರನಾಗಿ ತೋರಿನಿಂದ ನಿನ್ನನ್ನು ನೋಡಿ ಭಾಗೀರಥಿಯನ್ನು ಕಂಡ ದಾವಪೀಡಿತ ಗಜವೃಂದದಂತೆ ಆನಂದತುಂದಿಲ ರಾಗಿರುವೆವು. ನಿನ್ನನ್ನು ನಂಬಿ ಬಂದಿರುವ ಲೋಕಪಾಲಕರ ಕಷ್ಟವನ್ನು ಪರಿಹರಿಸು, ಅಂತರ್ಬಹಿಸ್ಸರ್ವತ್ರ ವ್ಯಾಪ್ತನು, ಸಕಲ ಸಾಕ್ಷಿಯು ಆದ ನಿನಗೆ ವಿಜ್ಞಾಪಿಸುವದೇನಿದೆ? ನಾನು, ರುದ್ರ, ದಕ್ಷಾದಿಗಳೆಲ್ಲರೂ ನಿನ್ನ ಕಿಂಕರರಲ್ಲವೇ? ಸ್ವಾಮೀ? ದೇವಬ್ರಾಹ್ಮಣ ಪರಿಪಾಲಕ! ನಮ್ಮ ಸೇವೆಯನ್ನು ಸ್ವೀಕರಿಸು. ನಮ್ಮನ್ನು ಉದ್ಧರಿಸು.

ಎಂದು ವಿರಿಂಚನು ದೇವಪರವಾಗಿ ನುಡಿದ ಮಾತನ್ನಾಲಿಸಿ, ಅವರೆಲ್ಲರ ಅಭಿಪ್ರಾಯವನ್ನು ತಿಳಿದು ಸರ್ವಜ್ಞನಾದ ಶ್ರೀಹರಿಯು ಮೇಘ ಗಂಭೀರ ಸ್ವರದಿಂದ ಅವರನ್ನು ಸಂತೈಸುತ್ತಾ ಇಂತು ನುಡಿದನು. ಈ ಸುರಕಾರ್ಯದಲ್ಲಿ ಸುರರಾಜನಾದ ತನಗಲ್ಲದೆ ಮತ್ತಾರಿಗೂ

ಸಾಮರ್ಥ್ಯವಿಲ್ಲವೆಂದು ತಿಳಿದು ಕರುಣೆಯಿಂದ ಸುರರ ಕೂಡಾಡಿ ಸುಧೆಯನ್ನವರಿಗಿತ್ತು ಸಲುಹಲು ಮನಮಾಡಿ ಶ್ರೀಶನು ಇಂತೆಂದನು–

ಬ್ರಹ್ಮನೇ! ಶಿವನೇ! ದೇವತೆಗಳಿರಾ! ನಿಮಗೆ ಮೊದಲಿನಂತೆ ಶ್ರೇಯಸ್ಸು ಸಂಪತ್ತುಗಳು ಸಿಗುವ ಮಾರ್ಗವನ್ನು ಹೇಳುವೆನು, ಕೇಳಿ. ಅಲ್ಲಿಯವರೆಗೂ ಶತ್ರುಗಳೆನ್ನದೆ ದೈತ್ಯದಾನವರಿಂದ ಕೂಡಿ ಒಂದು ಮಹತ್ಕಾರ್ಯವನ್ನು ಮಾಡಿ. ನಮ್ಮ ಪ್ರಯೋಜನವಿರುವಾಗ ತಾತ್ಕಾಲಿಕವಾಗಿ ಶತ್ರುಗಳಿಂದಲೂ ಸ್ನೇಹವನ್ನು ಬೆಳೆಸುವುದು ಬೆರೆತಿರುವುದು ತಪ್ಪಲ್ಲ, ಕೇಳಿ. ಬುಟ್ಟಿಯಲ್ಲಿ ಹಿಡಿದಿಟ್ಟ ಹಾವಿಗೆ ಆಹಾರವಾಗಿ ಎಸೆಯಲ್ಪಟ್ಟ ಮೂಷಿಕವು ಹಾವನ್ನು ಬಿಡಿಸುವೆನೆಂದಿತು. ಅದರ ಮಾತಿನಂತೆ ಹಾವು ತನ್ನ ಹೆಡೆಯ ಮೇಲೆ ಇಲಿಯನ್ನೇರಿಸಿ ಎತ್ತಲು, ಇಲಿಯು ಬುಟ್ಟಿಯಲ್ಲಿ ರಂಧ್ರವನ್ನು ಕೊರೆದು 'ಓಡಿಹೋಗುವ! ಬಾ' ಎಂದು ಹಾವನ್ನು ಕರೆಯಿತು. ತತ್‌ಕ್ಷಣವೇ ಸರ್ಪವು ಇಲಿಯನ್ನು ಹಿಡಿದು ನುಂಗಿ, ತಾನೂ ರಂಧ್ರದ್ವಾರದಿಂದ ತಪ್ಪಿಸಿಕೊಂಡು ಹೋಯಿತು. ಕೆಟ್ಟವರಿಗೆ ಕೆಡುಕನ್ನು ಮಾಡುವುದರಲ್ಲಿ ತಪ್ಪಿಲ್ಲ. ನೀವೂ ಅಂತೆಯೇ ದೈತ್ಯರಿಂದ ಕೂಡಿ ತಡಮಾಡದೆ ಅಮೃತೋತ್ಪಾದನ ಯತ್ನವನ್ನು ಮಾಡಿ! ಅಮೃತಪಾನದಿಂದ ಜರಾಮರಣಗಳು ದೂರವಾಗುವುವು. ನೀವು ಅಮೃತಪಾನ ಮಾಡಲು ಯೋಗ್ಯರಾಗಿಯೇ ಇರುವಿರಿ. ಕ್ಷೀರಸಮುದ್ರದಲ್ಲಿ ಸರ್ವತೃಣ ಲತೌಷಧಿಗಳನ್ನು ಹಾಕಿ, ಮೇಲೆ ಮಂದರ ಗಿರಿಯನ್ನಿಟ್ಟು, ವಾಸುಕಿಯಸ್ನು ಹಗ್ಗವನ್ನಾಗಿಸಿ ಮಥಿಸಿರಿ. ನಾನೂ ನಿಮಗೆ ಅಚಿತರೂಪದಿಂದ ಸಹಾಯ ಮಾಡುವೆನು. ಅಯೋಗ್ಯರಾದ ದೈತ್ಯರಿಗೆ ಕ್ಲೇಶವಿಷಗಳು, ನಿಮಗೆ ಅಮೃತವೂ ಸಿಗುವುದು. ಹೋಗಿ! ಅಸುರರು ಬೇಡುವ ಪದಾರ್ಥಗಳನ್ನು, ಆಶೆಯನ್ನು ಬಿಟ್ಟು ಕೊಟ್ಟುಬಿಡಿ. ದ್ವೇಷಾ ಸೂಯಾ ಕೋಪಗಳಿಂದ ಕೆಲಸಗಳಾಗುವುದಿಲ್ಲ. ಸಮಾಧಾನದಿಂದ ಪ್ರಯತ್ನಿಸಿದವನೇ ಫಲವನ್ನು ಹೊಂದುವನು. ಕಾಲಕೂಟವು ಹಾಗೂ ಸರ್ಪವಿಷವು ಸುಡುತ್ತ ಬರುವುದು, ಆಗ ಹೆದರಬೇಡಿ. ಲೋಭ ರೋಷ ಕಾಮಗಳೇ ಭಯಕಾರಣಗಳು. ಅವನ್ನು ಬಿಡಿ ಎಂದು ನುಡಿದು ಪುರುಷೋತ್ತಮನು ಅಂತರ್ಹಿತನಾದನು.

ಅನಂತರ ಭಗವಂತನಿಗೆ ನಮಸ್ಕರಿಸಿ ಬ್ರಹ್ಮನು ಸತ್ಯಲೋಕಕ್ಕೂ ಶಿವನು ಕೈಲಾಸಕ್ಕೂ, ದೇವತೆಗಳು ಬಲಿರಾಜಸಭೆಗೂ ಹೊರಟರು. ಬಂದ ವೃಂದಾರಕರನ್ನು ಕಂಡು ದರ್ಪದಿಂದ ದಂಡಿಸಲುನಿಂತ ದೈತ್ಯನಾಯಕನನ್ನು ತಡೆದು ಸಂಧಿ ವಿಗ್ರಹ ಕಾಲಗಳನ್ನರಿತ ದೈತ್ಯರಾಜನು ದೇವತೆಗಳನ್ನು ಬರಮಾಡಿಕೊಂಡನು. ಸಿಂಹಾಸನದಿ ಕೂತು ದೈತ್ಯತಂಡವು ಸೇವಿಸುತ್ತಿರಲು ವಿರಾಜಿಸುವ ವಿರೋಚನ ಸುತನನ್ನು ನೋಡಿ ಮಹೇಂದ್ರನು ಮಧುರವಚನಗಳಿಂದ ಮಧುವೈರಿ ಕಲಿಸಿ ಕಳಿಸಿದಂತೆ ಎಲ್ಲ ವಿಷಯವನ್ನು ತಿಳಿಸಿದನು. ಶಂಬರಾರಿಷ್ಟನೇಮಿ ತ್ರಿಪುರಾಸುರರೇ ಮುಂತಾದ ಸೇನಾಪತಿಗಳ ಸಮ್ಮತಿಯಿಂದ ಬಲಿರಾಜನು ದೇವತೆಗಳಿಂದ ಸಂಧಿಮಾಡಿಕೊಂಡನು. ಆಗ ದೇವದಾನವರು ಪರಮೋತ್ಸಾಹಭರಿತರಾಗಿ ಅಮೃತವನ್ನು ಪಡೆಯಲು ನಿಶ್ಚಯಿಸಿದರು.

ಮಂದರಗಿರಿಯನ್ನು ಸೇರಿ ದುರ್ಮದರಾದ ಸುರಾಸುರರು ಗಿರಿಯನ್ನೆತ್ತಿ ಹೊತ್ತು ಕೇಕೆ ಹಾಕುತ್ತ ಕ್ಷೀರನೀರಧಿಯನ್ನು ಸೇರಬರುತ್ತಿದ್ದರು. ಅತಿ ದೂರವಾದ್ದರಿಂದ ಹೊರಲಾರದೆ ಶ್ರಾಂತರಾದ ಶಕ್ರ ವೈರೋಚನಾದಿಗಳು ಹಾದಿಯಲ್ಲೇ ಬೆಟ್ಟವನ್ನು ಕೈಬಿಟ್ಟು ತೊಲಗಲು ಅದರ ಕೆಳಗಿದ್ದ ದಾನವರು ಸಾವಿರಾರು ಜನರು ಪುಡಿಪುಡಿಯಾದರು. ಕೈಕಾಲು ಮುರಿದು ಉತ್ಸಾಹವಿಲ್ಲದಿರುವ ಸುರಾಸುರರನ್ನು ಹುರಿದುಂಬಲು ಗರುಡಧ್ವಜನು ಬಂದು ತನ್ನ ಕರುಣಾಕಟಾಕ್ಷ

ದಿಂದ ವೀಕ್ಷಿಸಿ ಅವರನ್ನೆಲ್ಲ ಉಜ್ಜೀವಿಸಿ ಪೂರ್ಣಾಂಗರನ್ನಾಗಿ ಮಾಡಿದನು. ಗಿರಿಯನ್ನು ಗೋಲಿಯಂತೆ ಕರದಿಂದೆತ್ತಿ ಸುಪರ್ಣನ ಮೇಲಿಟ್ಟನು. ಹಾಗೂ ತಾನೂ ಗರುಡಾರೂಢನಾಗಿ ಕ್ಷೀರ ಸಮುದ್ರವನ್ನು ಸೇರಿ ಮಂದರಪರ್ವತವನ್ನು ತೀರದಲ್ಲಿಟ್ಟ, ಗರುಡನಿಗೆ ಅಪ್ಪಣೆಯನ್ನಿತ್ತು ಕಳುಹಿದನು. ಸುರಾಸುರರೂ ಅಲ್ಲಿಗೆ ಬಂದರು.

## ೭. ಕ್ಷೀರಸಾಗರ ಮಥನ

ಶ್ರೀಶುಕನು ಹೇಳಿದನು–

ಆಗ ಅಮೃತಾಕಾಂಕ್ಷಿಗಳಾದ ಇಂದ್ರಾದಿ ಸುರರು ಅಮೃತಭಾಗವನ್ನು ಕೊಡವವೆಂದು ವಾಸುಕಿಯನ್ನು ಕರೆತಂದು, ಗಿರಿಗೆ ಸುತ್ತಿ, ಸುತ್ತುಮುತ್ತು ನಿಂತು ಕಡಿಯಲು ತೊಡಗಿದರು. ಶ್ರೀಹರಿಯು (ಅಜಿತನು) ಮೊದಲು ಹಾವಿನ ಹೆಡೆಯನ್ನು ಹಿಡಿಯಲು, ಮಿಕ್ಕ ದೇವತೆಗಳು ಅವನ ಹಿಂದೆ ನಿಂತರು. ದೈತ್ಯರು ಶ್ರೀಹರಿಚೇಷ್ಟೆಯನ್ನು ಸಹಿಸದೆ 'ಆ ಅಮಂಗಲವಾದ ಹಾವಿನ ಬಾಲವನ್ನು ನಾವೆಂದಿಗೂ ಹಿಡಿಯಲಾರೆವು. ನಾವೇನು ವೇದಗಳನ್ನೋದದ ದಡ್ಡರೇ? ಜನ್ಮ ಕರ್ಮಾಚಾರಗಳಿಂದ ಕಡಿಮೆಯೇ?' ಎಂದು ಸುಮ್ಮನೆ ಕೂತರು. ಆಗ ಪುರುಷೋತ್ತಮನು ನಗುತ್ತಾ ಸುರರಿಂದ ಕೂಡಿ ಸರ್ಪಪುಚ್ಛವನ್ನು ಪಿಡಿದನು. 'ಸರಿ' ಎಂದು ದೈತ್ಯರು ಹೆಡೆಗಳನ್ನು ಹಿಡಿದು ನಿಂತರು.

ಇಂತು ಕಾಶ್ಯಪಸುತರಾದ ಸುರಾಸುರರು ಸುಧೆಗಾಗಿ ಸುಧಾನಿಧಿಯನ್ನು ಮಥಿಸತೊಡಗಲು ಮಂದರವು ಆಧಾರವಿಲ್ಲದೆ ತಳವನ್ನು ಸೇರಿ ಕದಲದೆ ನಿಂತಿತು. ಅದನ್ನೆತ್ತಲಾರದೆ ಅಮರದಾನವರು ನಿರ್ವಿಣ್ಣರಾಗಿ ದೈವಬಲದಿಂದ ಪೌರುಷವು ಕೆಡುವುದನ್ನು ಕಂಡು ಚಿಂತಾಕ್ರಾಂತರಾದರು. ವಿಘ್ನೇಶ್ವರನ ಕಾರ್ಯವನ್ನು ಕಂಡು ವಿಶ್ವಂಭರನು ವಿಘ್ನನಿವಾರಕನಾಗಿ, ಕಚ್ಛಪರೂಪವನ್ನು ತಾಳಿ ಕಡಲನ್ನು ಪೊಕ್ಕು ಗಿರಿಯನ್ನು ಬೆನ್ನಮೇಲೆತ್ತಿ ನಿಲ್ಲಿಸಿದನು. ಅದನ್ನು ನೋಡಿ ದೇವದಾನವರು ಮತ್ತೆ ಮಥಿಸತೊಡಗಿದರು. ಕೂರ್ಮನು ಲಕ್ಷಯೋಜನಾತ್ಮಕವಾದ ತನ್ನ ಬೆನ್ನ ಮೇಲೆ ಧರಿಸಿದ ಗಿರಿಯ ಘುರಘುರನಾದಿತ ಘರ್ಷಣದಿಂದ ತುರಿಸಿದಂತಾಗಿ ಅರೆಗಣ್ಣಿನಿಂದ ನಿದ್ರಿಸಿದಂತೆ ಸುಖವಾಗಿದ್ದನು. ಅಪ್ರಮೇಯಮಹಿಮನಾದ ಶ್ರೀಹರಿಗೆ ಇದೇನಾಶ್ಚರ್ಯವು!

ಅಸುರರಲ್ಲಿ ಅಸುರರೂಪನಾಗಿ ಪ್ರವೇಶಿಸಿ ಅವರ ಬಲವೀರ್ಯಗಳನ್ನು ಹೆಚ್ಚಿಸಿ, ದೇವತೆಗಳನ್ನು ತದ್ರೂಪನಾಗಿ ಉತ್ಸಾಹಭರಿತರನ್ನಾಗಿಸಿ, ವಾಸುಕಿಯನ್ನು, ಪರ್ವತವನ್ನು ಪ್ರವೇಶಿಸಿ ಬಲವನ್ನು ತುಂಬಿ ಸಹಸ್ರಬಾಹುವಾದ ಅಜಿತನು ಮಥಿಸುತ್ತಿರಲು ಬ್ರಹ್ಮ ಭವಾದಿ ಸುರರು ಸುಮನೋವೃಷ್ಟಿಯನ್ನು ಗೈದು ಪೂಜಿಸಿದರು. ಇಂತು ಸರ್ವತ್ರ ಸರ್ವಾಕಾರದಿಂದ ಸರ್ವಪ್ರೇರಕನಾದ ಶ್ರೀಹರಿಯು ಕೊಟ್ಟ ಬಲದಿಂದ ದಾನವವೃಂದಾರಕರು ಸಮುದ್ರವನ್ನು ಮಥಿಸುವಾಗ ಮೀನ ನಕ್ರ ಕೂರ್ಮ ವೃಶ್ಚಿಕಾದಿ ಜಲಜಂತುಗಳು ತಳಮಳಿಸಿದವು. ವಾಸುಕಿಯ ಸಾವಿರ ವದನಗಳಿಂದ ಬಂದ ವಿಷಧೂಮಗಳು ವ್ಯಾಪಿಸಿ ಸುಡಲು ಪೌಲೋಮ ಕಾಲೀಯ ಬಲೀಲ್ವಲಾದಿ ದಾನವರು ದಾವಾಗ್ನಿದಗ್ಧವಾದ ಶಲಭಗಳಂತೆ ಕೆಳಗುರುಳಿದರು. ಅದರ ವಿಷವಾಯುವು ವ್ಯಾಪಿಸಿ ದೇವತೆಗಳು ಕಂಗೆಟ್ಟರು. ಅವರ ವಸ್ತ್ರಮಾಲ್ಯಗಳು ಹೊಗೆ ಸೂರಿ ಕಪ್ಪಾದವು; ಮುಖಗಳು ಬಾಡಿದವು. ಆಗ ಶ್ರೀಹರಿಯ ಆದೇಶದಂತೆ ಆ ದೇಶದಲ್ಲಿ ಮಳೆಗರೆ ಯಿತು. ಸಮುದ್ರದ

ಮೇಲೆ ಸೂಸಿಬಂದ ಮಂದಮಾರುತವು ದೇವದಾನವರ ಆಯಾಸವನ್ನೂ ವಿಷಬಾಧೆಯನ್ನೂ ಅಡಗಿಸಿತು.

ಎಷ್ಟು ಕಡೆದರೂ ಅಮೃತವು ಪುಟ್ಟದಿರಲು, ಅಜಿತನು ಎರಡನೆಯ ಬೆಟ್ಟದಂತೆ ಮಂದರ ಗಿರಿಯ ಮುಂದೆ ನಿಂತು ಹಾವನ್ನು ಸಜ್ಜನಾಭಯಪ್ರದವಾದ ಕೈಗಳಿಂದ ಪಿಡಿದು ಮಥಿಸಲು ಉಪಕ್ರಮಿಸಿದನು. ಮೇಘಶ್ಯಾಮನು, ಕನಕ ಕಾಂಚೀಕಲಾಪನು, ಕರ್ಣಕುಂಡಲ ಕಾಂತಿ ಶೋಭಿತನು, ರಕ್ತನೇತ್ರನು ಆಗಿ ಅಜಿತನು ಮಥಿಸುತ್ತಿರಲು ಶಿರದಿ ಮುಡಿದ ವನ ಮಾಲೆಯು ಜಾರಿ ಅವನ ಮುಖವನ್ನಲಂಕರಿಸಿತು.

ಮಹೋದಧಿಯು ಮಥಿತವಾಗಿ ಗುಡುಗುಡಿಸಿತು. ಅದರಲ್ಲಿದ್ದ ಮೀನ ಮಕರ ಸರ್ಪ ಕಚ್ಛಪ ತಿಮಿತಿಮಿಂಗಿಲಾದಿ ಜಲಪ್ರಾಣಿಗಳು ಆಕುಲ ವ್ಯಾಕುಲವಾದವು. ಇದ್ದಕ್ಕಿದ್ದಂತೆ ಸಮುದ್ರದಿಂದ ಮಹಾ ಭಯಂಕರ ಜ್ವಾಲೆಗಳನ್ನು ಕಾರುತ್ತಾ ಹಾಲಾಹಲವೆಂಬ ವಿಷವು ಪುಟ್ಟಿ ಮಹಾವೇಗದಿಂದ ವ್ಯಾಪಿಸಿ ದಿಕ್ಕುಗಳಲ್ಲಿ ಕಾರ್ಮೋಡದಂತೆ ತುಂಬಿತು. ಅದರ ತಾಪವನ್ನು ತಡೆಯಲಾರದೆ ಭೀತರಾಗಿ ಪ್ರಜರು ಲೋಕಪಾಲಕರಿಂದ ಕೂಡಿ ಸದಾಶಿವನಿಗೆ ಶರಣಾಗತ ರಾದರು. ಲೋಕಸಂಹಾರಕಾರಣನಾದ ರುದ್ರನು ತನ್ನ ಸಂಹಾಕರ ಶಕ್ತಿಯನ್ನು ಕೊಟ್ಟು, ಶ್ರೀಹರಿಯ ಪ್ರೀತಿಗಾಗಿ ವಿಷವನ್ನು ನುಂಗಿ ಲೋಕವನ್ನು ಕಾಪಾಡಿದನೆಂಬ ಕೀರ್ತಿಯನ್ನು ಮೊಮ್ಮಗನಿಗೆ ಕೊಡಲಿಚ್ಛಿಸಿ ಸಮರ್ಥನಾದರೂ ಅಜಿತನು ಸುಮ್ಮನಿದ್ದನು.

ಪ್ರಜರು ಕೈಲಾಸವಾಸಿಯು, ತ್ರಿಲೋಕಸ್ವಾಮಿಯು, ಪಾರ್ವತೀಸಹಿತನು ಮೋಕ್ಷಾರ್ಥ ತಪೋಮಹಿಮನು ಆದ ಮುನಿವಲ್ಲಭನನ್ನು ಕಂಡು, ಅವನ ಅಂತರ್ಯಾಮಿ ನೃಸಿಂಹನಿಗೂ ಅವನಿಗೂ ಸಾಷ್ಟಾಂಗವಾಗಿ ನಮಿಸಿ ಸ್ತುತಿಸಿದರು–

ಶಂಕರ ನಾರಾಯಣ! ದೇವ ದೇವ! ಮಹಾದೇವ! ನಿನಗೆ ಶರಣಾಗತರಾಗಿ ಬಂದ ನಮ್ಮನ್ನು ರಕ್ಷಿಸಿ. ಈ ವಿಷವು ಲೋಕಂಗಳನ್ನೆಲ್ಲ ಸುಡುತ್ತಿದೆ. ಶ್ರೀ ಸಂರಕ್ಷಣ! ಬಂಧ ಮೋಕ್ಷಗಳು ನಿನ್ನಿಂದ. ಜ್ಞಾನಿಗಳು ಮೋಕ್ಷ ಸಾಧನ ಜ್ಞಾನವನ್ನೂ ನಿನ್ನಿಂದಲೇ ಪಡೆಯುವರು. ಜಗದ್ಗುರುವಾದ ನೀನು ನಂಬಿದವರನ್ನು ಕೈಬಿಡದೆ ಪೊರೆಯುವೆ. ಪ್ರಕೃತಿ ಗುಣಗಳಿಂದ ಜಗದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡಿ, ಬ್ರಹ್ಮ, ವಿಷ್ಣು, ಶಿವರೆಂಬ ರೂಪತ್ರಯವನ್ನು ಧರಿಸಿ, ಬ್ರಹ್ಮರುದ್ರರಲ್ಲಿ ನಿಂತು ಅವರಿಂದ ಸೃಷ್ಟಿಲಯಗಳನ್ನು ಮಾಡಿಸುವೆ. ದೇವಾಸುರ ನರಪಶುಗಳೆಲ್ಲರೂ ನಿನ್ನ ಪ್ರಜರು. ನಿನ್ನ ಸರ್ಜನಾದಿ ಶಕ್ತಿಯುತರು ಬ್ರಹ್ಮರುದ್ರೇಂದ್ರಾದಿಗಳು. ನಿನ್ನ ಮಹಿಮೆಯು ವೇದದಿಂದಲೇ ತಿಳಿಯಬಹುದಾಗಿದೆ. ಪ್ರಾಣಗಳು, ಇಂದ್ರಿಯಗಳು, ಮನಸ್ಸು, ಪಂಚಭೂತಗಳು ನಿನ್ನ ಅಧೀನವಾಗಿ ಸೃಷ್ಟಿ ಸಹಕಾರಿಗಳೆನಿಸಿವೆ. ಕಾಲನಾಗಿ ಕರ್ಮಫಲಪ್ರದನು, ಯಜ್ಞನಾಗಿ ಕರ್ಮಪ್ರವರ್ತಕನು, ಧರ್ಮನಾಗಿ ಲೋಕರಕ್ಷಕನು ಆಗಿ ಶಶ್ವದೇಕಪ್ರಕಾರನಾದ ನಿನ್ನನ್ನು ಓಂ ಎಂದು ಕರೆವರು. ಅ, ಉ, ಮ ಎಂಬ ಮೂರಕ್ಷರಗಳು ನಿನ್ನ ನಿರ್ದೋಷ ಜ್ಞಾನಾನಂದ ರೂಪವನ್ನು ಪೇಳುತ್ತಿವೆ.

ಹವಿರ್ದಾನವನ್ನು ಸ್ವೀಕರಿಸಿ ಹಂಚುವ ಅಗ್ನಿಯು ನಿನ್ನ ಮುಖದಲ್ಲಿ ನೆಲಸಿ, ಮುಖಶಕ್ತಿ ಯನ್ನು ಹೊಂದಿರುವನು. ಭೂಮಿಯು ನಿನ್ನ ಪಾದದಿಂದ ಪುಟ್ಟಿ ಪಾದವೆನಿಸಿದೆ. ನೀನು ನಡೆಯುವುದೇ ಕಾಲಗತಿಯು. ನಿನ್ನ ಕಿವಿಯಿಂದ ದಿಗ್ದೇವರು, ನಾಲಿಗೆಯಿಂದ ವರುಣ, ನಾಭಿಯಿಂದ ಆಕಾಶವು, ಉಸಿರಿನಿಂದ ಪ್ರಾಣನು, ಕಣ್ಣಿನಿಂದ ಸೂರ್ಯನು, ರೇತಸ್ಸಿನಿಂದ

ಜಲವು, ಬುದ್ಧಿಯಿಂದ ಸಕಲಲೋಕ ಪ್ರಭುವಾದ ವಿರಿಂಚನು, ಮನದಿಂದ ಚಂದ್ರ, ಶಿರದಿಂದ ದ್ಯುಲೋಕವು, ಹೊಟ್ಟೆಯಿಂದ ಸಮುದ್ರಗಳು, ಅಸ್ಥಿಗಳಿಂದ ಗಿರಿಗಳು, ರೋಮಗಳಿಂದ ಔಷಧಿ ವೃಕ್ಷಗಳು, ಧಾತುಗಳಿಂದ ಸಪ್ತ ಛಂದಸ್ಸುಗಳು, ಹೃದಯದಿಂದ ಧರ್ಮನು ಪುಟ್ಟಿ ತತ್ತಚ್ಛಕ್ತಿ ಯನ್ನೂ ನಿನ್ನಿಂದಲೇ ಪೊಂದಿರುವರು. ನಿನ್ನ ಐದು ಮುಖಗಳಿಂದ ಐದು ರುದ್ರೋಪ ನಿಷನ್ಮಂತ್ರಗಳು ಪ್ರಾದುರ್ಭೂತವಾಗಿವೆ. ಮೂವತ್ತೆಂಟು ರುದ್ರ ಮಂತ್ರಗಳಿಗೂ ನೀನೇ ಮುಖ್ಯಾರ್ಥನಾಗಿರುವೆ. ಶಿವನೆಂಬ ಶಿವಾಂತರ್ಯಾಮಿಯು ಪರಮಾತ್ಮನಾದ ನಿನ್ನ ಒಂದು ರೂಪವಾಗಿದೆ. ನೀನೇ ಶಿವಾಧರನೂ ಆಗಿರುವೆ. ನಿನ್ನ ನೆರಳೇ ಅಧರ್ಮವು. ನಿನ್ನ ಕಣ್ಣುಗಳೇ ಸತ್ತ್ವರಜಸ್ತಮೋಗುಣಗಳು. ಅವೇ ಶಿವನ ಮೂರು ಕಣ್ಣುಗಳಾಗಿ ನಿಂತಿವೆ. ನಿನ್ನ ಶಾಸ್ತ್ರಜ್ಞಾನದಿಂದ ಮನುರಾಜನು ಪುಟ್ಟಿ, ಧರ್ಮೋಪದೇಶನಾಗಿರುವನು. ನಿನ್ನ ಇಚ್ಛೆಯಿಂದ ದೇವರ್ಷಿಯು ಜನಿಸಿರುವನು. ಗಿರೀಶ! ವಿಕುಂಠ! ಸತ್ತ್ವರಜಸ್ತಮೋಗುಣಗಳ ವ್ಯಾಪಾರವಿಲ್ಲದ ನಿನ್ನ ಲೋಕವನ್ನು ಬ್ರಹ್ಮರುದ್ರ ಸುರೇಂದ್ರಾದಿಗಳು ಪೊಂದಿಲ್ಲ. ನಿನ್ನ ಜ್ಞಾನವನ್ನೂ ಇವರು ಸಾಕಲ್ಯೇನ ಪಡೆದಿಲ್ಲ. ಸ್ವಗತಭೇದವಿವರ್ಜಿತನಾದ ನೃಸಿಂಹನೇ! ನೀನು ಪ್ರಳಯಕಾಲದಲ್ಲಿ ಹಿಂದೆ ಸೃಜಿಸಿದ್ದ ಸರ್ವಜಗ ವನ್ನು ಫಾಲನೇತ್ರಾಗ್ನಿಯಿಂದ ಭಸ್ಮೀಕರಿಸಿ ನಾಶಪಡಿಸುವೆ. ನಿನ್ನ ಶಕ್ತಿಯಿಂದ ಶಿವನು ಕಾಮನನ್ನು ಸುಟ್ಟನು, ಅಧ್ವರವನ್ನು ಧ್ವಂಸ ಮಾಡಿದರು. ತ್ರಿಪುರಗಳನ್ನು ಕೆಡಹಿದನು, ಯಮನನ್ನು ಗೆದ್ದನು, ಅಂತಹ ರುದ್ರನನ್ನೂ ನೀನು ನಿನ್ನಲ್ಲಿ ಸೇರಿಸಿಕೊಂಬುವೆ.

ಶಿವನು ಸನಕಾದಿ ಯೋಗಿ ಚಿಂತಿತ ಪಾದಾರವಿಂದನು ಉಮೆಗಾಗಿ ತಪಸ್ಸನ್ನು ಮಾಡುವನು. ವಾಸುದೇವನ ಆಜ್ಞೆಯಂತೆ ಘೋರ ವೇಷದಿಂದ ಸ್ಮಶಾನದಲ್ಲಿ ಮನೆಮಾಡಿಕೊಂಡು ಭೈಕ್ಷ ಚರ್ಯೆಯಿಂದ ತಿರುಗುವನು. ಇಂತಹ ಮಂಗಳಮೂರ್ತಿಯ ಮಹಾವಿಭವವನ್ನರಿಯದ ಲಜ್ಜಾಹೀನರು, ಶಿವನನ್ನು ಉನ್ಮತ್ತನಾಥನೆಂಬುವರು. ಪೂರ್ಣ ಜ್ಞಾನಾದಿಗುಣನಾದ ಶಿವಾಂತ ರ್ಯಾಮಿಯ ಸ್ವರೂಪನ್ನು ಶಿವಸ್ವರೂಪವನ್ನು ಸನಕಾದಿ ಯೋಗಿಗಳು ಕೂಡ ಚೆನ್ನಾಗಿ ತಿಳಿಯ ಲಾರದಿರುವಗು. ಇಂತಿರಲು ಶಿವನೇ! ನಿನ್ನ ದೆಶೆಯಿಂದ ಸೃಷ್ಟರಾದ ನಾವು ನಿನ್ನ ಮಹಿಮೆ ಯನ್ನೆಂತು ತಿಳಿಯುವೆವು? ಇನ್ನೆಂತು ಪೊಗಳುವೆವು? ನಮ್ಮ ಭಕ್ತಿಯನ್ನು ಕಂಡು ನೀನಾಗಿ ಪ್ರೀತನಾಗು. ನೃಸಿಂಹದೇವ! ನಿನಗೆ ನಮಸ್ಕಾರ.

ಮಹೇಶ್ವರ! ನಿನ್ನನ್ನು ಪ್ರತ್ಯಕ್ಷನಾಗಿ ಕಂಡರೂ ನಿನ್ನ ಸ್ವಾಮಿಯನ್ನು ಕಾಣದಿರುವೆವು. ಮುಕ್ಕಣ್ಣನು ದಯಾಮಯನು ಆದ ನೀನಲ್ಲದೇ ಲೋಕರಕ್ಷಕರನ್ನು ನಾವು ಕಾಣದಿರುವೆವು. ಪಾಹಿ ಪಾಹಿ! ಎಂದು ನುತಿಸಿದ ಪ್ರಜರ ನೃಸಿಂಹ ಸ್ತುತಿಯನ್ನು ಕೇಳಿ, ತನ್ನ ನುತಿಯಿಂದಲೂ ಹೆಚ್ಚಾಗಿ ಸಂತಸಿಸಿ, ಸರ್ವಭೂತ ಕೃಪಾಕರನಾದ ಶಂಕರನು ಸತೀದೇವಿಯನ್ನು ನೋಡಿ ಇಂತೆಂದನು–

ಭವಾನಿ! ಪ್ರಜರ ವ್ಯಸನವನ್ನು ಕಂಡೆಯಾ? ಕ್ಷೀರೋದಧಿ ಮಥನ ಕಾಲದಲ್ಲಿ ಪುಟ್ಟಿದ ಕಾಲಕೂಟದಿಂದ ಪ್ರಾಣಾಪಾಯವನ್ನು ಪೊಂದಿ ಓಡಿಬಂದು ಶರಣೆಂದ ಪ್ರಜರಿಗೆ ಅಭಯವನ್ನು ಕೊಡುವುದು ನನ್ನ ಕರ್ತವ್ಯವಾಗಿದೆ. ದೀನರನ್ನು ಪಾಲಿಸದವನು ಪ್ರಭುವೇ? ಸಾಧುಗಳು ಕ್ಷಣಭಂಗುರವಾದ ದೇಹವನ್ನೂ ಅರ್ಪಿಸಿ ಪ್ರಾಣಿಗಳಿಗೆ ಹಿತವನ್ನು ಮಾಡುವರು. ಪ್ರಾಣಿಗಳೋ ಶ್ರೀಹರಿಬಂಧಕಶಕ್ತಿಯಿಂದ ಮೋಹಿತರಾಗಿ 'ನಾನು - ನನ್ನದೆಂದು' ಕಡಿದಾಡುತ್ತಿರುವರು. ಜೀವರಲ್ಲಿ ಕೃಪೆ ತೋರಿಸಿದವನಿಗೆ ಶ್ರೀ ವಾಸುದೇವನು ಪ್ರಸನ್ನನಾಗುವನು. ಶ್ರೀಹರಿಯು

ಪ್ರೀತನಾಗಲು ಚರಾಚರ ಜಗದಿಂದ ಕೂಡಿ ನಾನು ಪ್ರೀತನಾಗುವೆನು. ಆದ್ದರಿಂದ ನನ್ನ ಪ್ರಜರಿಗೆ ಮಂಗಳವಾಗುವಂತೆ ಈ ವಿಷವನ್ನು ಭಕ್ಷಿಸಿಬಿಡುವೆನು. ನನಗೂ ಆ ಮಹತ್ಕಾರ್ಯದಿಂದ ಶ್ರೀಶಪ್ರೀತಿಯು ದೊರಕುವುದು.

ಎಂದು ಸೂತ್ರನಾಮಕ ಮುಖ್ಯಪ್ರಾಣಪುತ್ರನಾದ ರುದ್ರನು ಲೋಕಕ್ಷೇಮವಾಗಲೆಂದು ಆ ವಿಷವನ್ನು ಕುಡಿಯಲು ಸಿದ್ಧನಾದನು. ಶಿವಪ್ರಭಾವವನ್ನರಿತ ಭವಾನಿಯು ಸಮ್ಮತಿಯನ್ನಿತ್ತಳು. ತಂದೆಯಾದ ಮುಖ್ಯಪ್ರಾಣನು ಆಗ ಆ ವಿಷವನ್ನು ಕೈಗಳಲ್ಲಿ ತಿಕ್ಕಿ ನಿರ್ವೀರ್ಯವನ್ನಾಗಿಸಿ, ತಾನೂ ಕುಡಿದು, ರುದ್ರನಿಗೂ ಕೊಟ್ಟನು. ಕೃಪಾಸಮುದ್ರನಾದ ರುದ್ರನು ಅದನ್ನು ಕುಡಿದು ಪ್ರಜರನ್ನು ಕಾಪಾಡಿದನು. ಆದರೂ ಆ ವಿಷಪ್ರಭಾವವು ರುದ್ರನನ್ನು ಕಾಡಿ ಕಂಠದಲ್ಲಿ ಕಪ್ಪು ಮಚ್ಚೆಯಾಗಿ ನಿಂತಿತು. ಸಾಧುಸತ್ತಮನಾದ ಶಿವನ ಕಂದುಗೊರಳು ಕುಂದೆನಿಸದೆ, ಅಂದವಾದ ಭೂಷಣವೇ ಆಯಿತು. ಅಚ್ಯುತಾನಂದ ಗೋವಿಂದ ನಾಮೋಚ್ಚಾರಣವು ಸಕಲರೋಗ ನಿವಾರಣವೆನಿಸಿದೆ. ಶಿವನು ನಿರ್ವಿಷನಾಗಿ ಲೋಕಶಂಕರನೆಂದು ಖ್ಯಾತನಾದನು.

ಸಾಧುಜನರು ಲೋಕತಾಪವನ್ನು ಕಂಡು ತಾವೂ ಅನುತಾಪದಿಂದ ಕಷ್ಟಪಟ್ಟು ಲೋಕಕ್ಷೇಮ ವನ್ನು ಸಾಧಿಸಿ ಅದುವೇ ಸರ್ವಸ್ವಾಮಿಯಾದ ಶ್ರೀಹರಿ ಪೂಜೆ ಎಂದು ತಿಳಿಯವರು. ದೇವ ದೇವನು, ಸಮರ್ಥನು ಆದ ಶಂಭುವು ವಿಷವನ್ನು ಕುಡಿದು ಲೋಕ ಕ್ಷೇಮವನ್ನು ಮಾಡಿದುದನ್ನು ಕಂಡು ಪ್ರಜರು, ಭವಾನಿಯು, ಬ್ರಹ್ಮನು ಹಾಗೂ ಶ್ರೀಹರಿಯು ಕೊಂಡಾಡಿ ಹರಸಿದರು. ಶಿವನು ಕುಡಿಯುವಾಗ ಕೈಯಿಂದ ಜಾರಿಬಿದ್ದ ವಿಷವನ್ನು ವೃಶ್ಚಿಕ ಸರ್ಪಾದಿ ಜಂತುಗಳು, ವಿಷವೃಕ್ಷಗಳು, ಔಷಧಿಗಳು ಸ್ವೀಕರಿಸಿ ಭಯಂಕರಗಳಾದವು.

## ೮. ಶ್ರೀದೇವಿಯ ವಿವಾಹ – ಅಮೃತೋತ್ಪತ್ತಿ

ಶ್ರೀಶುಕನು ಹೇಳಿದನು–

ಶಂಕರನು ವಿಷವನ್ನು ಕಡಿದು ಕ್ಷೇಮಂಕರನಾದುದನ್ನು ಕಂಡು ಪ್ರೀತರಾಗಿ ಸುರಾಸುರರು ಮತ್ತೆ ಸಮುದ್ರವನ್ನು ಮಥಿಸಿದರು. ಆಗ ಸಮುದ್ರದಿಂದ ಕಾಮಧೇನು ಬರಲು ಬ್ರಹ್ಮವಾದಿ ಗಳಾದ ಋಷಿಗಳು ಯಜ್ಞಸಾಧನವೆಂದು ಅದನ್ನು ಸ್ವೀಕರಿಸಿದರು. ಯಜ್ಞಹವಿರ್ದ್ರವ್ಯಗಳು, ದೇವತೆಗಳ ಸೋಮರಸ ಮೊದಲಾದ ಯೋಗ್ಯ ಪದಾರ್ಥಗಳನ್ನು ಋಷಿಗಳು ಕಾಮಧೇನು ವಿನಿಂದ ಪಡೆದರು. ಆಮೇಲೆ ಚಂದ್ರಧವಳವಾದ ಉಚ್ಚೈಶ್ರವವು ಪುಟ್ಟಿತು. ಆ ಕುದುರೆಯನ್ನು ಬಲಿರಾಜ ಬಯಸಿದನು. ಆಗ ಇಂದ್ರನು ಅಜಿತನ ಸೂಚನೆಯನ್ನು ಮನ್ನಿಸಿ ಸ್ವರ್ಗಾಶ್ವವನ್ನು ಬಲಿಗೆ ಬಿಟ್ಟು ಸುಮ್ಮನಿದ್ದನು. ಮುಂದೆ ಐರಾವತವೆಂಬ ಚತುರ್ದಂತದಂತಾವಳವು ಬರಲು ಆ ಶ್ವೇತಗಜರಾಜನನ್ನು ಇಂದ್ರನು ತೆಗೆದುಕೊಂಡನು. ಕ್ರಮವಾಗಿ ಸಮುದ್ರದಿಂದ ಸುರಲೋಕ ಭೂಷಣವಾದ ಪಾರಿಜಾತವು ಪುಟ್ಟಿತು. ನಿನ್ನಂತೆ ಅರ್ಥಿಜನರ ಕಾಮಿತಗಳನ್ನು ಆ ವೃಕ್ಷರಾಜನು ಪೂರೈಸುತ್ತಿರುವುದು. ಮಂದಗಮನದಿಂದ ಮನೋಹರರಾದ ಅಪ್ಸರೆಯರು ಆಮೇಲೆ ಹೊರಬಂದರು. ನಿಷ್ಕಾಭರಣಗಳನ್ನಿಟ್ಟು ಪೀತಾಂಬರವನ್ನುಟ್ಟ ಆ ಸ್ವರ್ಗ ರಮಣಿಯರು ತಮ್ಮ ಹಾವಭಾವ ವಿಲಾಸಗಳಿಂದ ದೇವದಾನವರ ಮನವನ್ನು ಸೆಳೆದರು.

ಆಗ ಭಗವತ್ಪ್ರಿಯಳಾದ ರಮೆಯು ಸಮುದ್ರದಿಂದ ಹುಟ್ಟಿ ದಿಕ್ಕುಗಳನ್ನು ಬೆಳಗುತ್ತಾ ಮಿಂಚಿನ ಬಳ್ಳಿಯಂತೆ ನಡೆದುಬಂದಳು. ಸುರಾಸುರ ಮಾನವರು ಆಕೆಯ ರೂಪೌದಾರ್ಯ ವರ್ಣವಯೋವಿಲಾಸಗಳನ್ನು ಕಂಡು ಮೋಹಿತರಾದರು. ಇಂದ್ರನು ದಿವ್ಯಸಿಂಹಾಸನವನ್ನು ತಂದಿತ್ತನು. ನದೀದೇವತೆಗಳು ಬಂಗಾರದ ಕಲಶಗಳಲ್ಲಿ ತಮ್ಮ ಜಲವನ್ನು ತಂದಿಟ್ಟರು. ಭೂದೇವಿಯ ಓಷಧಿಗಳನ್ನು, ಗೋವುಗಳು ಕ್ಷೀರಾದಿ ಪಂಚಪದಾರ್ಥಗಳನ್ನು, ವಸಂತನು ಫಲಕುಸುಮಗಳನ್ನು ತಂದುಕೊಡಲು ಋಷಿಗಳು ಲೋಕಮಾತೆಯನ್ನು ಸಿಂಹಾಸನದಲ್ಲಿ ಕೂಡಿಸಿ ಮಹಾಭಿಷೇಕವನ್ನು ಮಾಡಿದರು. ಗಂಧರ್ವರು ಪಾಡುತ್ತಿರಲು ಅಪ್ಸರೆಯರಾಡಿದರು. ಮೇಘಮಂಡಲದಿ ನಿಂತು ದೇವತೆಗಳು ವೀಣಾವೇನು ಶಂಖ ಮೃದಂಗ ಪಣವಾನಕ ದುಂದುಭಿಗಳನ್ನು ಬಾರಿಸಿ ಜಯಜಯ ನಾದವನ್ನು ಮಾಡಿದರು. ದಿಗ್ಗಜಗಳು ಕರಾಗ್ರದಿ ಪಿಡಿದ ಕನಕ ಪೂರ್ಣ ಕಲಶಗಳಿಂದ ಅಭಿಷೇಕ ಮಾಡಿದವು. ವಿಪ್ರರ ವೇದಘೋಷವು ಇಂಪಾಗಿ ಕೇಳಿಸಿತು. ಸಮುದ್ರರಾಜನು ಮಗಳಿಗೆ ದಿವ್ಯದುಕೂಲದ್ವಯವನ್ನಿತ್ತನು. ವರುಣನು ಭ್ರಮ ಝುಂಕಾರ ಸಂಕುಲವಾದ ವೈಜಯಂತೀಮಾಲೆಯನ್ನಿತ್ತನು. ವಿಶ್ವಕರ್ಮನು ವಿವಿಧ ಭೂಷಣರಾಜಿಯನ್ನರ್ಪಿಸಿದನು. ಸರಸ್ವತಿಯು ಹಾರವನ್ನು, ಬ್ರಹ್ಮನು ಕರಕಮಲವನ್ನು, ಶೇಷನು ಕುಂಡಲಗಳನ್ನು ಸಮರ್ಪಿಸಿದರು.

ವಿಪ್ರರು ಸ್ವಸ್ತಿವಾಚನವನ್ನು ಮಾಡಿದರು. ಕೈಯಲ್ಲಿ ಮಧುಕರನಿನಾದ ಕಮನೀಯವಾದ ಉತ್ಪಲಮಾಲಿಕೆಯನ್ನು ಲೀಲೆಯಿಂದ ಪಿಡಿದು, ಕುಂಡಲ ಮಂಡಿತ ಕಪೋಲಳು, ಮಂದಹಾಸ ಸುಂದರಳು, ಲಜ್ಜಾಬಂಧುರಳು ಆಗಿ ಶ್ರೀರಮಣೀಯು ಮುಖವನ್ನೆತ್ತಿ ದೇವದಾನವ ಮಾನವರನ್ನು ವೀಕ್ಷಿಸಿದಳು. ಕುಂಕು ಪಂಕರೂಪಿತ ಸ್ತನದ್ವಯ ಭಾರದಿಂದ ಬಳುಕುವ ನಡುವಿನಿಂದ ಮಂದ ಗಮನೆಯಾಗಿ, ಕಾಲಲ್ಲಿಟ್ಟ ಕನಕನೂಪುರ ಸಿಂಜಿತರವದಿಂದ ಸಕಲರ ಮನವನ್ನು ಸೆಳೆದಳು. ನಡೆದು ಬರುವ ಬಂಗಾರದ ಬಳ್ಳಿಯಂತೊಪ್ಪುವ ಶ್ರೀಲಲನೆಯು ನಿರಂತರ ಕಲ್ಯಾಣ ಗುಣ ನಿಲಯನು ನಿರ್ದೋಷನಾದ ವರನನ್ನು ಗಂಧರ್ವ ಯಕ್ಷಾಸುರಸಿದ್ಧಚಾರಣ ದೇವಾದಿಗಳಲ್ಲಿ ಕಾಣದೆ ಸುಮ್ಮನೆ ನಿಂತಳು.

ದುರ್ವಾಸನಿಗೆ ತಪಸ್ಸಿದೆ – ಕೋಪವು ಇದೆ; ಸೂರ್ಯನಿಗೆ ಪ್ರಕಾಶವಿದೆ – ತೀಕ್ಷ್ಣ ತಾಪವೂ ಇದೆ; ಬೃಹಸ್ಪತಿಗೆ ಜ್ಞಾನವಿದೆ – ಫಲಾಪೇಕ್ಷೆಯೂ ಇದೆ; ಬ್ರಹ್ಮನಿಗೆ ಲೋಕಾಧಿಪತ್ಯವಿದೆ– ಕಾಮನಿರ್ಜಯವಿಲ್ಲ; ಈಶ್ವರನಿಗೆ ಪ್ರಭುತ್ವವಿದೆ – ಆದರೂ ಅವನು ವಾಸುದೇವ ನನ್ನಾಶ್ರಯಿಸಿ ಈಶ್ವರನೆನಿಸಿರುವವನು; ಯಮಧರ್ಮನಿಗೆ ಧರ್ಮಗುಣವಿದೆ – ಭೂತದಯೆ ಇಲ್ಲ; ವಾಯುವಿಗೆ ತ್ಯಾಗವಿದೆ– ಆದರೂ ಮೋಕ್ಷವನ್ನು ಸ್ವತಃ ಅವನು ಕೊಡಲಾರದಿರುವವನು; ಚಂದ್ರನಿಗೆ ತಾಪನಿವಾರಕತ್ವವಿದೆ – ಕಾಲವೇಗದಿಂದ ಕರಗಿ ಹೋಗುವ ಕ್ಷಯ ರೋಗವೂ ಇದೆ; ಪ್ರಕೃತಿಗುಣ ಲೇಪವಿಲ್ಲದ ವಸ್ತುವೆಂದರೆ ಶ್ರೀಹರಿಯೇ ಸರಿ! ಮಾರ್ಕಂಡೇಯನಿಗೆ ಚಿರಾಯುವಿದೆ – ವೇಷವು ಚೆನ್ನಾಗಿಲ್ಲ; ರಾಜರಿಗೆ ವೇಷಭೂಣಗಳಿಗವೆ – ಅವರ ಆಯುಸ್ಸೇ ಅವರಿಗೆ ಗೊತ್ತಿಲ್ಲ; ಅಶ್ವತ್ಥಾಮನಿಗೆ ವೇಷಭೂಷಣಗಳೂ ಚಿರಾಯುವೂ ಇವೆ – ಆದರೆ ಅವನಿಗೆ ದುರಹಂಕಾರವು ತಲೆ ಮೀರಿದೆ; ಇನ್ನು ಮುಕ್ತರು ನಿರ್ದೋಷರಿರುವರು ನಿಜ; ಅವರು ನನ್ನನ್ನೇಕೆ ಕಾಂಕ್ಷಿಸುವರು? ಒಂದು ವೇಳೆ ಕಾಂಕ್ಷಿಸಿದರೆ ಅಂತಹವರು ಮುಕ್ತರೇ ಅಲ್ಲ.

ಹೀಗೆ ಚಿಂತಿಸಿ ರಮಾಕಾಂತೆಯು ನಿರವರತನಿರ್ದೋಷ ಗುಣಪೂರ್ಣನು ತನ್ನನ್ನು ಆಶ್ರಯಿಸಿದವರ ಸದ್ಗುಣಗಣ ನಿಯಾಮಕನು ಸರ್ವಾಪೇಕ್ಷಿತನು, ಮೋಕ್ಷಪ್ರದನು ಆದವನು ಅಜಿತನೊಬ್ಬನೇ, ಇತರರಾರೂ ಅಲ್ಲವೆಂದು ನಿಶ್ಚಯಿಸಿ, ಅವನನ್ನು ಸಮೀಪಿಸಿ, ಅವರ ಕಂಠದಲ್ಲಿ ನವಕಂಜಮಾಲೆಯನ್ನರ್ಪಿಸಿ, ಅವನ ವಿಶಾಲ ಹೃದಯ ದೇಶವನ್ನು ಲಜ್ಜೆಯಿಂದ ತಲೆಬಾಗಿ ನೋಡುತ್ತಾ ಬದಿಯಲ್ಲಿ ನಿಂತಳು. ಭೀತಳಂತೆ ಬಳುಕುವ ಜಗಜ್ಜನನಿಯನ್ನೆತ್ತಿ ಪರಮೈಶ್ವರ್ಯನಿಧಿಯಾದ ರಮೆಯನ್ನು ತನ್ನ ವಕ್ಷದಲ್ಲಿಟ್ಟು ಜಗಜ್ಜನಕನು ಆಕೆಯನ್ನು ಸಮ್ಮಾನಿಸಿದನು. ಅಲ್ಲಿ ನಿಂತು ತನ್ನ ಕಡೆಗಣ್ಣಿನ ನೋಟದಿಂದ ಕರುಣಾಪಾತ್ರರಾದ ತ್ರಿಲೋಕ ಪಾಲಕರನ್ನು ಸಜ್ಜನರನ್ನು ಅನುಗ್ರಹಿಸಿ ಅವರ ಸಂಪದ್ವಿಭವ ಯಶೋಭಕ್ತಿಜ್ಞಾನಗಳನ್ನು ಹೆಚ್ಚಿಸುವ ಮಾಧವ ರಮಣಿಯ ದರ್ಶನದಿಂದ ಆನಂದಿತರಾಗಿ ದೇವತೆಗಳು ಶಂಖತೂರ್ಯ ಮೃದಂಗಮುಖ ಮಂಗಳವಾದ್ಯಗಳನ್ನು ಬಾರಿಸಿದರು. ಗಂಧರ್ವರು ತಮ್ಮ ನಾರಿಯರಿಂದ ಕೂಡಿ ಹಾಡಿ ಕುಣಿದರು.

ಬ್ರಹ್ಮರುದ್ರೇಂದ್ರಾದಿ ದೇವತೆಗಳು, ಋಷಿಗಳು, ಪ್ರಜಾಪತಿಗಳು ಶ್ರೀಸೂಕ್ತಾದಿ ಮಂತ್ರ ಗಳಿಂದ ನುತಿಸಿ, ಸಮತತಿಯನ್ನು ವರ್ಷಿಸಿ, ರಮಾನಾರಾಯಣರಿಗೆ ನಮಿಸಿ ಸಂತೋಷಭರಿತ ರಾದರು. ಶ್ರೀದೇವಿಯ ಕಟಾಕ್ಷವನ್ನು ಪಡೆದ ದೇವತೆಗಳು, ಋಷಿಗಳು, ಪ್ರಜರು ಶೀಲ ಸೌಭಾಗ್ಯ ಗಳನ್ನು ಪಡೆದು ಧನ್ಯರಾದರು. ಲಕ್ಷ್ಮಿಯು ಉಪೇಕ್ಷಿಸಿ ತ್ಯಜಿಸಿದ ದೈತ್ಯದಾನವರು ನಿಸ್ಸತ್ವರು, ಇಂದ್ರಿಯಲೋಲುಪರು, ನಿರುದ್ಯೋಗರು, ನಿರ್ಲಜ್ಜರೂ ಆದರು.

ಅನಂತರವು ಆ ಸಮುದ್ರದಿಂದ ವಾರುಣಿಯು ಪುಟ್ಟಿ ಬಂದಳು. ಸುರಾಭಿಮಾನಿನಿಯಾದ ಆ ಕಮಲಾರುಣ ನಯನೆಯನ್ನು ಕೇಶವನನ್ನೊಪ್ಪಿಸಿ ದೈತ್ಯ ದಾನವರು ಸ್ವೀಕರಿಸಿದರು.

ಮತ್ತೆ ಕಾಶ್ಯಪರು ಮಥಿಸಲು ಸಮುದ್ರದಿಂದ ಪ್ರಾದುರ್ಭೂತನಾದ ಮಹಾಪುರುಷನು ಪುಟ್ಟಿದನು. ಆಜಾನುಲಂಬಿ ಬಾಹುದಂಡನು, ಅರುಣೇಕ್ಷಣನು, ಶಂಖಸಮಕಂಠನು, ಶ್ಯಾಮಲ ವರ್ಣನು, ಸರ್ವಾಭರಣಭೂಷಿತನು, ಪುಷ್ಪಮಾಲಾಲಂಕೃತನು ಪಿತಾಂಬರಧರನು, ವಿಶಾಲ ಹೃದಯದೇಶವಿಲಸಚ್ಛ್ರೀವತ್ಸನು, ಮಣಿಮಯಕುಂಡಲ ಶೋಭಿಗಂಡನು, ನೀಲಕುಂಚಿತ ಮೃದುಕೇಶನು, ಸಿಂಹವಿಕ್ರಮನು ಆದ ಧನ್ವಂತರಿಯು ವಲಯಾದಿ ಸಕಲ ಭೂಷಣ ಭೂಷಣ ವಾದ ತನ್ನ ಕರಕಮಲ ಮಧ್ಯದಲ್ಲಿ ಅಮೃತ ಕಲಶವನ್ನು ಪಿಡಿದು ಹೊರಬಂದನು. ಸಾಕ್ಷಾದ್ವಿಷ್ಣು ವಾದ ಸ್ವಾಮಿಯ ಪರಾಕ್ರಮನ್ನರಿಯದೆ ಮೂಢರಾದ ದೈತ್ಯರು ಸರ್ವವಸ್ತುಗಳನ್ನು ಬೇಕೆಂಬುವ ತಮ್ಮ ದುಷ್ಟ ಸ್ವಭಾವವನ್ನನುಸರಿಸಿ ಓಡಿ ಬಂದು ಸುಧಾಕಲಶವನ್ನು ಧನ್ವಂತರಿಯ ಕೈಯಿಂದ ಕಸಿದುಕೊಂಡರು. ಅದನ್ನು ನೋಡಿ ದೇವತೆಗಳು ವಿಷಣ್ಣರಾಗಿ ಶ್ರೀಹರಿಗೆ ಮೊರೆಹೊಕ್ಕರು.

ಸ್ವಭಕ್ತಕಾಮದನಾದ ಶ್ರೀಹರಿಯು ದೇವತೆಗಳ ದೀನದಶೆಯಂ ಕಂಡು ಅಭಯವನ್ನಿತ್ತು ತನ್ನ ಮಾಯೆಯನ್ನು ದಾನವರ ಮೇಲೆ ಬೀರಿದನು. 'ನಾನು ಮೊದಲು ಕುಡಿಯುವೆ– ನೀನಲ್ಲ– ನಾನು' ಎಂದು ದಾನವರು ಪರಸ್ಪರವಾಗಿ ಕಾದಾಡತೊಡಗಿದರು. ಕೆಲ ದೈತ್ಯರು 'ಎಲ್ಲರೂ ಹಂಚಿಕೊಳ್ಳೋಣ, ದೇವತೆಗಳೂ ನಮ್ಮಂತೆ ಕಷ್ಟಪಟ್ಟಿರುವರು. ಇದು ಸತ್ರಯಾಗವಿದ್ದಂತೆ, ಸಕಲರಿಗೂ ಇದರಲ್ಲಿ ಪಾಲುಂಟು, ಇದು ಸನಾತನ ಧರ್ಮಸಮ್ಮತವಾಗಿದೆ' ಎಂದು ಪ್ರಬಲ ದೈತ್ಯರಿಗೆ ನೀತಿಗಳನ್ನು ಹೇಳಿದರು. ದುರ್ಬಲದಿಂದ ಪ್ರಬಲರು ಕಸಿಯಲು ಕಲಶವು ಕೈಯಿಂದ ಕೈ ಸೇರುತ್ತಿತ್ತು.

ಈಗ ಸರ್ವೋಪಾಯ ಸಮರ್ಥನಾದ ಸರ್ವೇಶನು ಪರಮಾಶ್ಚರ್ಯಕರವಾದ ತರುಣೀ ವೇಷದಿಂದ ಅವರ ಮುಂದೆ ಬಂದು ನಿಂತನು.

ಅವಳ ಉತ್ಪಲಶ್ಯಾಮ ವರ್ಣವಾದ ಸರ್ವಾವಯವ ಸುಂದರ ದೇಹದಿಂದ ನವಯೌವನ ಲಾವಣ್ಯ ರಸವು ಉಕ್ಕೇರಿ ಬರುತ್ತಿತ್ತು. ಕರ್ಣಗಳೆರಡೂ ಸಮನಾಗಿ ಕರ್ಣಕುಂಡಲ ಪ್ರಕಾಶವು ನಾನಾಭರಣ ಕಾಂತಿಯಿಂದ ಸ್ಪರ್ಧಿಸುತ್ತಿರಲು, ರಕ್ತಾಧರಬಿಂಬದಿಂದ ಹೊರಸೂಸಿ ಬಂದ ಮಂದಹಾಸವು ಆ ಕಾಂತಿದ್ವಯವನ್ನೂ ಮೀರಿತ್ತು. ಸ್ತನಜಘನ ಭಾರದ್ವಯ ಮಧ್ಯದಲ್ಲಿ ಸಿಕ್ಕು ನಡುವು ಕೃಶನಾಗಿ ಮುರಿಯುವಂತಿತ್ತು. ಮುಖಕಮಲ ಗಂಧದಿಂದಾಕರ್ಷಿತವಾಗಿ ಮುತ್ತಿದ ಮಧುಕರ ಝುಂಕಾರದಿಂದ ನಯನಮೀನಗಳು ಚಂಚಲವಾಗಿ ಹೊಳೆಯುತ್ತಿದ್ದವು. ತುರುವಿನಲ್ಲಿ ಮುಡಿದಿಟ್ಟ ಮಲ್ಲಿಗೆಯ ಸುಮವೃಂದವು ಜಾರಿ ಉದುರುತ್ತಿತ್ತು. ಹಾಕಿರುವ ಕಂಠಾಭರಣ, ಭುಜಾಂಗದ ಭೂಷಣ, ಉಟ್ಟ ಪೀತವಸನದ ಮೇಲಿಟ್ಟ ಕಾಂಚೀಕಲಾಪ, ಕಾಲಲ್ಲಿಟ್ಟ ಕಾಲಂದುಗೆಯ ಝುಣಝುಣ ಧ್ವಾನ, ಮುಖದಿಂದ ಬರುವ ಮಂದಹಾಸದಿಂದ ಮನೋಹರ ವಾದ ವಿಲಾಸಾವಲೋಕನಗಳೆಲ್ಲವೂ ಸೇರಿ ದೈತ್ಯನಾಯಕರ ಮನಸ್ಸನ್ನು ಸೂರೆಗೊಂಡು ಅವರನ್ನು ಕಾಮದಾಸರನ್ನಾಗಿರಿಸಿದವು.

ಅಮೃತಪಾತ್ರೆಯನ್ನು ಹರಿಸಿ, ಬಂಧುಜನ ಸೌಹಾರ್ದವನ್ನು ತ್ಯಜಿಸಿ, ಕಳ್ಳರಂತೆ ಕಾದಾಡುವ ದಾನವರು ಮೋಹಿನಿಯನ್ನು ನೋಡಿದರು.

'ಅಹೋ! ಏನೀ ರೂಪವೈಭವ! ಏನು ಕಾಂತಿ! ಎಷ್ಟು ನೂತನವಿವಳ ವಯಸ್ಸೌಭಾಗ್ಯ!' ಎಂದು ನುಡಿಯುತ್ತಾ ಅವರು ಅವಳನ್ನು ಸಮೀಪಿಸಿ ಕಾಮವಶರಾಗಿ ಇಂತೆಂದರು–

ಎಲೌ ಕಂಜಾಕ್ಷಿ! ಯಾರೇ ನೀನು? ಇಲ್ಲಿಗೇಕೆ ಬಂದೆ? ಎಲ್ಲಿಂದ? ಯಾರವಳು ನೀನು? ನಮ್ಮ ಮನಸ್ಸೇ ಕೆಟ್ಟಿದೆ ನಿನ್ನ ನೋಟದಿಂದ. ದೇವಗಂಧರ್ವ ಚಾರಣಾದಿಗಳೂ ನಿನ್ನ ಸ್ಪರ್ಶದಿಂದ ಧನ್ಯರಾಗಿಲ್ಲವೆಂದೇ ತೋರುತ್ತಿದೆ. ಇನ್ನು ಮನುಜರೆಲ್ಲಿ? ವಿರಿಂಚನು ವಿವಿಧ ಜನರ ಮನಸ್ಸಂತೋಷವನ್ನು ಇಂದ್ರಿಯಪ್ರೀತಿಯನ್ನು ಸಂಪಾದಿಸಲು ನಿನ್ನನ್ನು ಸೃಜಿಸಿ ಕರುಣೆಯಿಂದ ನಮ್ಮಲ್ಲಿ ಕಳಿಸಿರುವನೇ?

ಕೇಳಿಲ್ಲಿ! ನಮಗೆ ಈ ವಸ್ತುವಿಗಾಗಿ ಜಗಳವಾಗಿದೆ. ವೈರದಿಂದ ಕೆಡುವ ಜ್ಞಾತಿಗಳಿಗೆ ಕ್ಷೇಮ ವನ್ನು ತಂದುಕೊಡು. ನಾವೇನು ಸಾಮಾನ್ಯರಲ್ಲ. ಕಶ್ಯಪಸುತರು, ಪೌರುಷಯುತರು ಆದ ದೇವದಾನವರು ಅಣ್ಣತಮ್ಮಂದಿರು. ಆದುದರಿಂದ ನಮಗೆ ನ್ಯಾಯವಾಗುವಂತೆ ಈ ಅಮೃತ ವನ್ನು ಹಂಚು. ನಮಗೆ ನೀನಿರಲು ಸಾಕು. ಅಮೃತವಿನ್ನೇಕೆ ಎಂದು ಸುಧಾಪಾತ್ರೆಯನ್ನು ಕೊಡಲು ಬಂದ ದಿತಿಸುತರನ್ನು ವಾರಿಸಿ, ವಾರೆನೋಟದಿಂದ ಅವರ ಮತಿಯನ್ನು ಕೆಡಿಸಿ, ನಗುತ್ತಾ ಆ ವಾರಿಜಾಕ್ಷಿಯು ಇಂತೆಂದಳು–

ಏನೇನು? ನೀವು ಕಶ್ಯಪಸುತರೇನು? ನಿಮಗೆ ನನ್ನಂತರ ಸ್ವೈರಿಣಿಯ ಸಾಂಗತ್ಯವು ಸಲ್ಲದು. ಪಂಡಿತರು ಕಾಮಿನಿಯಲ್ಲಿ ವಿಶ್ವಾಸವನ್ನಿಡುವುದಿಲ್ಲ. ನೂತನ ವಸ್ತುಕಾಂಕ್ಷೆಯಿಂದ ಸ್ವೇಚ್ಛಾ ಚಾರಿಣಿಯರಾದ ಸ್ತ್ರೀಯರನ್ನೂ ತೋಳಗಳನ್ನೂ ನಂಬಲಾಗದು. ಅವರ ಸ್ನೇಹವು ನಿಜವಲ್ಲ ಎಂದು ಛಲೋಕ್ತಿಗಳನ್ನಾಡುವ ಮೋಹಿನಿಗೆ ಮೋಸಹೋಗಿ, ಭಾವಗಂಭೀರವಾಗಿ ನಕ್ಕು, ದೈತ್ಯರು ಅಮೃತಭಾಜನವನ್ನು ಅವಳಿಗೆ ಕೊಟ್ಟರು. ಶ್ರೀಶನು ಅದನ್ನು, ಅವರ ಅದೃಷ್ಟ ವಿವೇಕ ಗಳನ್ನೂ ತೆಗೆದುಕೊಂಡು ಮಂದಹಾಸ ಸುಂದರವದನಾರವಿಂದನಾಗಿ ಇಂತೆಂದನು–

ನಾನೇನೇ ಮಾಡಲಿ? ಅಮೃತವನ್ನು ಕೊಡಲಿ ಬಿಡಲಿ ಪಿಟ್ಟೆನ್ನದೆ ಸುಮ್ಮನಿರಲು ಸಮ್ಮತವಾದರೆ, ನಾನೀ ಅಮೃತವನ್ನು ಸರಿಯಾಗಿ ಹಂಚುವೆನು ಎಂದ ಸುಂದರಿಯ ಮಾತನ್ನು ಕೇಳಿ, ಶ್ರೀಹರಿಯ ಮಹಾಮಹಿಮೆಯನ್ನರಿಯದ ಮಹಾಮೂಢರು 'ಹಾಗೇ ಆಗಲಿ' ಎಂದೊಪ್ಪಿದರು.

ಆ ದಿನವು ಉಪವಸಿಸಿ, ಪ್ರಾತಃಕಾಲವಾಗಲು ದೇವದಾನವರು ಸ್ನಾತಾಲಂಕೃತರಾದರು. ಹೋಮವನ್ನು ಮಾಡಿ, ಗೋವಿಪ್ರಭೂತಗಳನ್ನು ಪೂಜಿಸಿದರು. ಸ್ವಸ್ತಿವಾಚನವನ್ನು ಮಾಡಿ, ಮಡಿಗಳನ್ನುಟ್ಟು, ಪ್ರಾಗಗ್ರಕುಶಾಸ್ತರಣಗಳಲ್ಲಿ ಪೂರ್ವಾಭಿಮುಖರಾಗಿ ಕೂತರು. ಆ ಮಹಾ ಮಂದಿರವು ಪುಷ್ಪತೋರಣ ಸಮಲಂಕೃತವಾಗಿತ್ತು. ಧೂಪ ಸುರಭಿಳವಾದ ಆ ಸಭೆಯನ್ನು ಮೋಹಿನಿಯು ಪಾದನೂಪುರಗಳ ಝಣ ಝಣ ರವದಿಂದ ಕಲಶಪಾಣಿಯಾಗಿ ಪೊಕ್ಕಳು. ದುಕೂಲವನ್ನುಟ್ಟು ಜಘನ ಭಾರದಿಂದ ಮೆಲ್ಲನೆ ನಡೆಯುತ್ತಾ, ಮದವಿಹ್ವಲ ನೇತ್ರಗಳಿಂದ ಕಟಾಕ್ಷ ಬಾಣಗಳನ್ನು ಬೀರುತ್ತಾ ಬಂದ ಕಲಶಸ್ತನಿಯನ್ನು ನೋಡಿ, ಅವಳ ಕನಕರತ್ನ ಕುಂಡಲ ಕಾಂತಿಯಿಂದ ಪ್ರಕಾಶಿಸುವ ಸುಂದರ ಕಪೋಲ ನಾಸಿಕೆಗಳ ಸೊಬಗಿಗೆ ಮಾರುಹೋಗಿ ಬೇಕಾಗಿ ಸೀರೆಯ ಸೆರಗಿನ ಮರೆಗಿರುವ ಬಟ್ಟ ಕುಚಪಟ್ಟಿಕೆಯಲ್ಲಿ ನಟ್ಟಮನದಿಂದ ಕಣ್ಣನ್ನು ತಿರುಗಿಸಲಾರದೆ, ದಿಗ್ಭ್ರಮೆಗೊಂಡ ದಾನವರನ್ನು, ಪರದೇವತೆ ಎಂದರಿತು ಭ್ರಮವಿಲ್ಲದೆ ಭಕ್ತಿನಮ್ರರಾದ ದೇವತೆಗಳನ್ನು ಕಂಡು ಮೋಹಿನಿಯು ಚಿಂತಿಸಿದಳು–

ಈ ರಾಕ್ಷಸರಿಗೆ ಸುಧೆಯನ್ನು ಕುಡಿಸುವುದೆಂದರೆ ಹಾವಿಗೆ ಹಾಲೆರೆದಂತೆಯೇ ಸರಿ. ಸ್ವಭಾವದಿಂದ ದುಷ್ಟರಾದ ಇವರನ್ನು ವಂಚಿಸುವುದೇ ಸರಿ– ಎಂದು ಮೋಹಿನಿಯು ದೇವದಾನವರನ್ನು ಬೇರಾಗಿಸಿ ಎರಡು ಗುಂಪಾಗಿ ಕೂಡಿಸಿದಳು. ಕಲಶವನ್ನು ಹಿಡಿದು ದೈತ್ಯರ ಪಂಕ್ತಿಯನ್ನು ಹಾದು ನಡೆಯುತ್ತಾ ದೂರದಲ್ಲಿದ್ದ ದೇವತೆಗಳಿಗೆ ಸುಧೆಯನ್ನುಣಿಸುವ ಮೋಹಿನಿಯ ಮೋಸವನ್ನು ನೋಡಿ ದೈತ್ಯರು ಆಕೆಯ ಸ್ನೇಹ ಸಂಗಗಳು ಹಾಳಾಗುವವೇನೋ ಎಂಬ ಭಯದಿಂದಲೂ ಆಕೆಯ ಮಾತನ್ನು ತಾವೇ ಒಪ್ಪಿರುವುದರಿಂದಲೂ, ಸ್ತ್ರೀವಿವಾದವು ಸರಿಯಲ್ಲವೆಂದು ಸುಮ್ಮನಿದ್ದರು. ಆಕೆಯ ಪ್ರೇಮವಿದ್ದರೆ ಸಾಕು, ಅಮೃತವು ಕೂಡ ಬೇಡವೆಂದು ಮೋಹಿನಿಗೆ ಎದುರಾಡದೆ ಮಂಕರಾಗಿದ್ದ ದೈತ್ಯರನ್ನು ನೋಡಿ ರಾಹುವು ಸುಮ್ಮನಿರದೆ ದೇವವೇಷದಿಂದ ಬಂದು ಸೋಮ ಭಾಸ್ಕರರ ಮಧ್ಯದಲ್ಲಿ ಕುಳಿತು ಅಮೃತವನ್ನು ಕುಡಿದನು. ತತ್‌ಕ್ಷಣವೇ ಪುಷ್ಪವಂತರು ಸೂಚಿಸಲು ಅದನ್ನರಿತು ಸರ್ವಜ್ಞನಾದ ಶ್ರೀಹರಿಯು ಚಕ್ರಧಾರೆಯಿಂದ ಅವನ ತಲೆಯನ್ನುರುಳಿಸಿದನು. ಕಬಂಧವು ಸಮುದ್ರದಲ್ಲಿ ಪತಿತವಾಗಲು ಶಿರವು ರಾಹುಗ್ರಹವೆನಿಸಿತು. ಬ್ರಹ್ಮನ ವರದಾನದಂತೆ ದೈತ್ಯನು ಗ್ರಹನಾಗಿ ಪರ್ವಸಮಯದಲ್ಲಿ ಪೂರ್ವವೈರವನ್ನು ಸ್ಮರಿಸಿ, ಛಾಯಾಸ್ವರೂಪನಾಗಿ ಸೂರ್ಯಚಂದ್ರರನ್ನು ಪೀಡಿಸುತ್ತಿರುವನು. ಇಂತು ದೇವತೆಗಳಿಗೆಲ್ಲರಿಗೂ ಅಮೃತವನ್ನೂ ಕುಡಿಸಿ, ಶ್ರೀಹರಿಯು ದೈತ್ಯರು ನೋಡುತ್ತಿರಲು ಶಂಖಚಕ್ರಧರನಾಗಿ ಸ್ವರೂಪದಿಂದ ವಿರಾಜಿಸಿದರು.

ರಾಜನ್! ದೇಶವು ಒಂದೇ, ಕಾಲವೂ ಒಂದೇ. ಸಾಧನದ್ರವ್ಯಗಳೂ ಸಮವೆ. ಮಥನಾದಿ ಉಪಾಯಗಳನ್ನೂ ಸಮನಾಗಿ ಮಾಡಿದರೂ, ದೇವದಾನವರಿಗೆ ಫಲವನ್ನು ಪೊಂದುವೆಡೆ ಬೇರೆ ವಿಧವೇ ಆಯಿತು. ಪೂರ್ಣಗುಣನಾದ ನಾರಾಯಣನ ಪಾದಪಂಕಜವನ್ನು ನಂಬಿದ ದೇವತೆಗಳಿಗೆ ಸಮುದ್ರ ಮಥನ ಕಾರ್ಯದ ಉತ್ತಮ ಫಲವಾದ ಅಮೃತವು ಸಿಕ್ಕಿತು. ಶ್ರೀಹರಿಯನ್ನು ನಂಬದ ದೈತ್ಯರಿಗೆ ಸಕಲ ಸಾಧನವಿದ್ದೂ ನಿಷ್ಫಲವಾಯಿತು. ವಿತ್ತಾದಿಗಳಿಂದ ನರರು, ಹರಿಯನ್ನು ಬಿಟ್ಟು

ಅನ್ಯದೇವತೆಗಳನ್ನು ಪೂಜಿಸಿದರೂ, ಅವರಿಗೆ ಉತ್ತಮ ಫಲವಿಲ್ಲ. ಅದೇ ದ್ರವ್ಯದಿಂದ ಹರಿಯನ್ನು ಪೂಜಿಸಲು ಉತ್ತಮಫಲವು ನಿಶ್ಚಯವಾಗಿ ಸಿಗುವುದು. ದೇಹದಾರಾಪುತ್ರರಿಗಾಗಿ ವಿತ್ತವ್ಯಯವು ವ್ಯರ್ಥವಾಗುವುದು. ಅದೇ ವಿತ್ತವನ್ನು ಶ್ರೀಹರಿಗರ್ಪಿಸಿ, ದೇಹದಾರಾ ಪುತ್ರರಿಗೂ ಉಪಯೋಗಿಸಲು ಮಹಾಫಲಪ್ರದವಾಗುವುದು. ತರುಮೂಲದಲ್ಲಿ ನೀರೆರೆದರೆ ಶಾಖಾಪರ್ಣಗಳಿಗೂ ತೃಪ್ತಿಯಾಗುವುದಲ್ಲವೇ?

## ೯.ದೇವಾಸುರ ಯುದ್ಧವು

ಶ್ರೀಶುಕನು ಹೇಳಿದನು–

ರಾಜನೇ! ದಾನವ ದೈತೇಯರು ವಾಸುದೇವ ವಿಮುಖರಾದುದರಿಂದ ಎಷ್ಟೇ ಕಷ್ಟಪಟ್ಟರೂ ಅಮೃತವನ್ನು ಪೊಂದಲಿಲ್ಲ. ಇಂತು ಅಮೃತವನ್ನು ಸಾಧಿಸಿ, ದೇವತೆಗಳಿಗೆ ಉಣಿಸಿ, ಎಲ್ಲರೂ ನೋಡುತ್ತಿರಲು ಶ್ರೀಹರಿಯು ಗರುಡವಾಹನನಾಗಿ ಹೊರಟು ಹೋದನು. ದಿತಿನಂದನರಾಗ ತಮ್ಮ ಶತ್ರುಗಳ ಶ್ರೇಯಸ್ಸನ್ನು ಕಂಡು ಸಹಿಸಲಾರದೆ ಉದ್ಯತಾಯುಧಪಾಣಿಗಳಾಗಿ ದೇವತೆಗಳನ್ನು ತಾಕಿದರು. ಸುರರು ಸುಧಾಪಾನದಿಂದ ಸಮೃದ್ಧಬಲರಾಗಿ, ಶ್ರೀ ನಾರಾಯಣನನ್ನು ನೆನೆದು ವಂದಿಸಿ, ತಾವೂ ಯುದ್ಧಸನ್ನದ್ಧರಾದರು. ಆಗ ಸಮುದ್ರತೀರದಲ್ಲಿ ದೇವಾಸುರ ಯುದ್ಧವೆಂಬುವ ಪರಮ ದಾರುಣ ಸಂಗ್ರಾಮವು ತುಮುಲವಾಗಿ ನಡೆಯಿತು. ಸಿಟ್ಟಿನಿಂದ ದೇವದಾನವರು ಬಾಣಗಳಿಂದಲೂ ವಿವಿಧಾಯುಧಗಳಿಂದಲೂ ಕಾದಾಡಿದರು. ಶಂಖ ತೂರ್ಯ ಮೃದಂಗ ಭೇರಿ ಡಮರು ಶಬ್ದಗಳು, ಭಟರ ಸಿಂಹನಾದ, ಗಜಘೀಂಕಾರ, ಹಯಹೇಷಾರವ, ರಥನೇಮಿಧ್ವಾನಗಳಿಂದ ಬೆರೆತು ಭೂನಭೋಂತರವನ್ನು ತುಂಬಿ ಪ್ರತಿಧ್ವನಿಸಿದವು. ರಥಿಕರಿಂದ ರಥಿಕರು, ಸವಾರರಿಂದ ಸವಾರರು, ಗಜಗಳಿಂದ ಗಜಗಳು, ಪದಾತಿಗಳಿಂದ ಪದಾತಿಗಳು ಹೊಡೆದಾಡುವಾಗ ಕದನವು ಕಡುಘೋರವಾಯಿತು. ಒಂಟೆ, ಕತ್ತೆ, ಕರಡಿ, ಹುಲಿ, ಸಿಂಹ, ಹದ್ದು, ಗಿಡುಗ, ಶರಭ, ಕೋಣ, ಖಡ್ಗಮೃಗ ಮೊದಲಾದ ವಾಹನಗಳನ್ನೇರಿ ಭಟರು ಶತ್ರುಸೈನ್ಯದಲ್ಲಿ ನುಗ್ಗಿ ದೇಹವನ್ನು ಮರೆಮಾಚದೆ ಪರಾಕ್ರಮದಿಂದ ಹೋರಾಡಿದರು. ಚತುರ್ವಿಧ ಬಲದಿಂದಲೂ ಚಿತ್ರಧ್ವಜ ಛತ್ರ ಚಾಮರಗಳಿಂದಲೂ ಕೂಡಿದ ರಣರಂಗವು ಜಲಜಂತು ಯುತವಾದ ಸಮುದ್ರದಂತೆ ಘೂರ್ಣಿಸಿತು.

ಸರ್ವಾಸುರ ಸೇನಾಪತಿಯಾಗಿದ್ದ ಬಲಿರಾಜನು ವೈಹಾಯಸವೆಂಬ ಮಯನಿರ್ಮಿತ ವಿಮಾನದಲ್ಲಿ ಸರ್ವಾಯುಧ ಸಮೇತನಾಗಿ ಕೂತು ಸುರವೈರಿಗಳು ಸುತ್ತುಗಟ್ಟಿ ಸಿಂಹನಾದವನ್ನು ಮಾಡುತ್ತ ಬರುತ್ತಿರಲು, ವಾಲ ವ್ಯಜನ ಛತ್ರಗಳಿಂದ ಕೂಡಿ ಚಂದ್ರನಂತೆ ಶೋಭಿಸಿದನು. ನಮುಚಿ ಶಂಬರ ಬಾಣ ವಿಪ್ರಚಿತ್ರ ಕಾಲನಾಭ ಹೇತಿ ಪ್ರಹೇತಿ ಶಕುನಿ ಭೂತ ಸಂತಾಪನ ವಿರೋಚನ ವಜ್ರದಂಷ್ಟ್ರ ಹಯಗ್ರೀವ ಕಪಿಲ ಶಂಕುಶಿರ ತಾರಕ ಶುಂಭ ನಿಶುಂಭ ಜಂಭ ತ್ರಿಪುರಪತಿ ಪೌಲೋಮ ಕಾಲಕೇಯ ನಿವಾತಕವಚಮುಖ ದಾನವೇಶರು ಸಿಂಹನಾದವನ್ನು ಮಾಡುತ್ತಾ ಶಂಖಗಳನ್ನೂದಿದರು. ಅಮೃತವಿಲ್ಲದೆ ಅಸುರಾರಿಯಿಂದ ವಂಚಿತರಾದ ಸಿಟ್ಟಿನಿಂದ, ಎಷ್ಟೋ ಸಲ ಸೋತು ಓಡಿದ ದೇವತೆಗಳನ್ನು ದಿಟ್ಟಿಸಿ, ದರ್ಪದಿಂದ ನೋಡಿ, ದೈತ್ಯಸೇನಾದಿಪತಿಗಳು ಪ್ರಾಣಗಳನ್ನು ಪಣವಾಗಿಟ್ಟು ರಣರಂಗದಲ್ಲಿ ವಿಜೃಂಭಿಸಿದರು.

ಬಲಗರ್ವಿತರಾದ ದೇವತೆಗಳನ್ನು, ಐರಾವತವನ್ನೇರಿ, ನಿರ್ಝರ ಜಲಸಿಕ್ತಪೂರ್ವ ಪರ್ವತವನ್ನೇರಿ ಬಂದ ಸೂರ್ಯನಂತೆ ಮೆರೆವ ಇಂದ್ರನನ್ನು ನೋಡಿ ಬಲಿರಾಜನು ಬಂದು ಮುತ್ತಿದನು. ಅನ್ಯೋನ್ಯನಿಂದಾಪರುಷ ವಚನಗಳಿಂದ ದೇವದಾನವರು ದ್ವಂದ್ವಯುದ್ಧವನ್ನು ಮಾಡ ತೊಡಗಿದರು. ತಾರಕ ಸೂರ್ಯರು, ಹೇತಿ ವರುಣರು, ಪ್ರಹೇತಿ ಮಿತ್ರರು, ಕಾಲನಾಭಯ ಮರು, ಮಯ ವಿಶ್ವಕರ್ಮರು, ಶಂಬರ ತ್ವಷ್ಟರು ವಿರೋಚನ ಸವಿತೃಗಳು, ನಮುಚ್ಯಪರಾಜಿತರು, ವೃಷಪರ್ವಾಶ್ವಿನಿಗಳು, ರಾಹುಚಂದ್ರರು, ಪುಲೋಮಾಗ್ನಿಗಳು, ನಿಶುಂಭಶುಂಭ ಭದ್ರಕಾಲಿಗಳು, ಮಹಿಷ ವಿಭಾವಸುಗಳು, ಶುಕ್ರಬೃಹಸ್ಪತಿಗಳು, ನರಕ ಶನ್ಯೆಶ್ಚರರು, ಕ್ರೋಧವಶ ರುದ್ರರು, ಕಾಲೇಯವಸುಗಳು, ಇಂತು ಸುರಾಸುರರು ಉತ್ಸಾಹದಿಂದ ಅನ್ಯೋನ್ಯ ಜಯಕಾಂಕ್ಷಿಗಳಾಗಿ ಕಡಿದಾಡಿದರು. ಭೃಶುಂಡಿ ಗದಾ ಪಟ್ಟಿಶ ಶಕ್ತಿ ಪ್ರಾಸ ಪರಶು ಭಲ್ಲೆ ಪರಿಘ ಮುದ್ಗರ ಖಡ್ಗಾದಿ ವಿವಿಧಾಯುಧಗಳಿಂದ ಘೋರಯುದ್ಧವನ್ನು ಮಾಡುವಾಗ ರಣರಂಗವು ಖಂಡಿತಾಂಗವು, ರಕ್ತಪ್ರವಾಹ ಭಯಂಕರವು ಆಗಿ ಭೀಭತ್ಸವೆನಿಸಿತು. ಕಿರೀಟಯುಕ್ತ ಶಿರಗಳು, ಖಡ್ಗಹಸ್ತಗಳು, ಭುಜಗಳು, ಕಬಂಧಗಳು ಚೆಲ್ಲಾಪಿಲ್ಲಿಯಾಗಿ ಯುದ್ಧಭೂಮಿಯು ಕಾಣದಂತೆ ಬಿದ್ದಿದ್ದವು.

ಬಲಿಯು ಹತ್ತು ಬಾಣಗಳಿಂದ ಇಂದ್ರನನ್ನು, ಮೂರರಿಂದ ಇಂದ್ರಗಜವನ್ನು, ನಾಲ್ಕು ನಾರಾಚಗಳಿಂದ ಕುದುರೆಗಳನ್ನು ಹೊಡೆಯಲು, ನಡುವೆ ಆ ಬಾಣಗಳನ್ನೆಲ್ಲ ತುಂಡರಿಸಿ ಇಂದ್ರನು ಗರ್ಜಿಸಿದನು ಆಗ ಬಲಿಯು ಶಕ್ತಿಯನ್ನೆಸೆಯಲು ಅದನ್ನೂ ಹಾಗೆಯೇ ಶೂಲಪ್ರಾಸ ತೋಮರಾದಿ ಸಕಲಾಸ್ತ್ರಗಳನ್ನೂ ಇಂದ್ರನು ಖಂಡಿಸಿದನು. ಬಲಿರಾಜನಾಗ ಆಸುರೀ ಮಾಯೆಯನ್ನು ಸೃಜಿಸಿದನು. ಇದ್ದಕ್ಕಿದ್ದಂತೆ ಬಲಿಯು ಕಾಣದಾದನು. ದೇವಸೈನ್ಯದ ಮೇಲೆ ಒಂದು ಪರ್ವತವು ಬಂದು ನಿಂತಿತು. ಅದರಿಂದ ಉರಿಯುವ ಗಿಡಗಳು, ಬಂಡೆಗಳು ಬಿದ್ದವು. ಸರ್ಪಗಳು, ಸಿಂಹಾದಿ ಕ್ರೂರಮೃಗಗಳು, ರಾಕ್ಷಸಿಯರು ಕೆಳಗಿಳಿದು ಕೇಕೆಗಳನ್ನು ಹಾಕುತ್ತಾ ದೇವತೆಗಳನ್ನು ಪೀಡಿಸಿದರು. ಬೆಂಕಿಯ ಮಳೆಗರೆಯಿತು. ದೈತ್ಯನು ಪುಟ್ಟಿಸಿದ ಅಗ್ನಿಯು ಪ್ರಳಯಕಾಲ ವಹ್ನಿಯಂತೆ ಉರಿಯುತ್ತಾ ಬಿರುಗಾಳಿಯಿಂದ ವಿಜೃಂಭಿಸಿ ದೇವಬಲವನ್ನು ಸುಡುತ್ತಾ ಬಂತು. ಸಮುದ್ರವು ನಾಲ್ಕು ನಿಟ್ಟಿನಿಂದ ಉಕ್ಕೇರಿ ಬಂತು. ಈ ದೈತ್ಯಮಾಯೆಗೆ ಪ್ರತಿಕಾಣದೆ ದೇವತೆಗಳು ಶ್ರೀಹರಿಯನ್ನು ಧ್ಯಾನಿಸಿದರು.

ಆಗ ಗರುಡನ ಭುಜದಲ್ಲಿಟ್ಟ ಪಾದಪಂಕಜದಿಂದ, ಉಟ್ಟ ಪೀತಾಂಬರದಿಂದ, ಪಿಡಿದ ಅಷ್ಟಾಯುಧಗಳಿಂದ, ಮೆರೆವ ಕೌಸ್ತುಭ ಮಣಿಯಿಂದ ಪುಂಡರೀಕ ಲೋಚನನು ಕಿರೀಟ ಕುಂಡಲ ಶೋಭೆಯಿಂದೊಪ್ಪುತ್ತಾ ಪ್ರತ್ಯಕ್ಷನಾದನು. ತತ್‌ಕ್ಷಣವೇ ಎಚ್ಚರಿಕೆಯಾಗಲು ನಾಶವಾಗುವ ಕೆಟ್ಟಸ್ವಪ್ನದಂತೆ ಅಸುರ ಮಾಯೆಗಳು ಆ ಸರ್ವೇಶನ ಸನ್ನಿಧಾನದಲ್ಲಿ ನಿಲ್ಲಲಾರದೆ ಹಾಳಾದವು. ಶ್ರೀಹರಿ ಸ್ಮರಣವೇ ಸಮಸ್ತ ಸಂಕಟ ನಿವಾರಣವಾಗಿದೆ. ಸಾಕ್ಷಾತ್ತಾಗಿ ಶ್ರೀಶನೇ ಬಂದ ಮೇಲೆ ಮಾಯಾಜಾಲವೆಲ್ಲ ಮಾಯವಾಯಿತೆಂದು ಹೇಳಬೇಕೇ?

ಶ್ರೀಹರಿಯನ್ನು ನೋಡಿ ಕಾಲನೇಮಿಯು ಸಿಂಹವನ್ನೇರಿಬಂದು ಶೂಲವನ್ನೆಸೆದನು. ಗರುಡನ ತಲೆಗೆ ತಗುಲಿನ ಶೂಲವನ್ನೇ ಪಿಡಿದು ಶ್ರೀಶನು ಅದರಿಂದ ವಾಹನ ಸಿಂಹವನ್ನು, ಕಾಲನೇಮಿಯನ್ನು ಕೊಂದನು. ಚಕ್ರದಿಂದ ಮಾಲಿ ಸುಮಾಲಿಗಳನ್ನೂ ಸಂಹರಿಸಿದನು. ಆಗ ಮಾಲ್ಯವಂತನು ಎದುರಿಸಲು ಗರುಡನು ಗದೆಯಿಂದ ಹೊಡೆದನು. ಶ್ರೀಹರಿಯು ಚಕ್ರದಿಂದ ತಲೆಯನ್ನೂ ಕೆಡಹಿದನು.

## ೧೦. ದೇವಾಸುರ ಯುದ್ಧವು

ಶ್ರೀಹರಿಯ ದಯದಿಂದ ಮತ್ತೆ ಬಲದರ್ಪಸಮನ್ವಿತರಾಗಿ ಇಂದ್ರವಾಯ್ವಾದಿ ದೇವತೆಗಳು ರಕ್ಕಸರನ್ನು ಸದೆಬಡಿಯಲು ತೊಡಗಿದರು.

ಇಂದ್ರನು ಬಲಿಯನ್ನೆದುರಿಸಿ ವಜ್ರವನ್ನು ಎತ್ತಲು, ಪ್ರಜರು ಹಾಹಾಕಾರ ಮಾಡಿದರು. ಆಗ ನಗುತ್ತ ಇಂದ್ರನಿಂತೆಂದನು–

ನಟನಂತೆ ವೇಷಗಳನ್ನು ಹಾಕಿ, ಮಹಾಮಹಿಮರಾದ ನಮ್ಮನ್ನು ಗೆಲ್ಲಲು ಹವಣಿಸುವ ಮಾಯಾವಿಯಾದ ನಿನ್ನ ತಲೆಯನ್ನು ಇಂದೇ ವಜ್ರದಿಂದ ಕೆಳಗೆ ಕೆಡಹುವೆನು. ಕರೆ ನಿನ್ನ ಜ್ಞಾತಿಗಳನ್ನು! ನಿಲ್ಲು ಸರಿಯಾಗಿ ಯುದ್ಧದಲ್ಲಿ! ಮಾಯಾವಿದ್ಯಾಬಲದಿಂದ ಸ್ವರ್ಗವನ್ನು ಸೇರಲು ಬರುವ ಕಳ್ಳರಿಗೆ ಶಾಸಕನು ಅವರನ್ನು ಅಧೋಗತಿಗೆ ಅಟ್ಟುವನು ಆದ ನನ್ನನ್ನು ಮರೆತೆಯಾ? ಮೂಢ! ಬಾಲಕರನ್ನು ಮೋಸಗೊಳಿಸಿ ಕಣ್ಣುಗಳನ್ನು ಕಟ್ಟಿ ಅವರ ಧನವನ್ನು ಕದಿಯುವ ಖಲನಂತೆ ಕಪಟಿಯಾದ ನಿನ್ನ ಹುಡುಗಾಟವನ್ನು ಕಟ್ಟಿಡು.

ಅದನ್ನು ಕೇಳಿ ಬಲಿಯು ಇಂತು ನುಡಿದನು–

ಯುದ್ಧರಂಗದಲ್ಲಿ ಕಾದುನಿಂತವರಿಗೆ ಜಯವೋ ಅಪಯಜವೋ, ಕೀರ್ತಿಯೋ ಅಪಕೀರ್ತಿಯೋ, ಮೃತ್ಯುವೋ ಜೀವನವೋ ಆಗುವುದು ತಪ್ಪದು. ಅವುಗಳನ್ನು ಕೊಡುವ ಕಾಲಪಾಶವನ್ನು ಜ್ಞಾನಿಗಳು ನೋಡಿ ಸುಖವನ್ನು ದುಃಖವನ್ನು ಸಮನಾಗಿ ಸ್ವೀಕರಿಸುವರು. ನೀವು ಅಜ್ಞಾನಿಗಳಾದುದರಿಂದ ಅಹಂಕಾರದಿಂದ 'ನಾವು ಗೆದ್ದೆವು' ಎಂದು ಕೊಚ್ಚುವಿರಿ. ನಿಮ್ಮನ್ನು ನೋಡಿ 'ಅಯ್ಯೋ! ಪಾಪ! ಎಷ್ಟು ಭ್ರಾಂತರಿವರು' ಎಂದೆನಿಸುತ್ತಿದೆ. ನಿನ್ನ ಮಾತನ್ನು ನಾನು ಲೆಕ್ಕಿಸುವುದಿಲ್ಲ. ಮಾತಿನಿಂದ ಮರ್ಮಗಳನ್ನು ಭೇದಿಸುವುದು ಪರಾಕ್ರಮವಲ್ಲ. ಪಿಡಿ ಧನುವನ್ನು – ಎಂದು ನಿಶಿತ ನಾರಾಚಗಳಿಂದ ಹೊಡೆದನು. ಅವನ ಬಾಣದಕಿಂತಲೂ ಅವನ ಸತ್ಯ ನಿಷ್ಠುರ ವಚನಗಳು ಹೆಚ್ಚಾಗಿ ನೋಯಿಸಲು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಕೆರಳಿ, ವಜ್ರಾಯುಧನು ವಜ್ರವನ್ನೆತ್ತಿ ಹೊಡೆದನು. ಬಲಿಯು ವಿಮಾನದಿಂದ ಕೂಡಿ ನೆಲಕ್ಕುಳಿದನು. ಬಲಿಸಖನಾದ ಜಂಭವು ಸಿಂಹವನ್ನೇರಿ ಬಂದು ಗದೆಯಿಂದ ಐರಾವತವನ್ನೂ ಸುರೇಶನನ್ನೂ ಹೊಡೆಯಲು ದೇವಗಜವು ಹೀಂಕಾರವನ್ನು ಮಾಡುತ್ತಾ ಮೊಳಕಾಲೂರಿ ಬಾಗಿ ಗೋಳಿಟ್ಟಿತು. ಮಾತಲಿಯು ತತ್‌ಕ್ಷಣವೇ ರಥವನ್ನು ತಂದನು. ಅದನ್ನೇರಿ ಬಂದ ಇಂದ್ರನನ್ನು ಶೂಲದಿಂದ ತಿವಿದು ಜಂಭವು ವಿಜೃಂಭಿಸಿದನು. ಆಗ ಕ್ರುದ್ಧನಾಗಿ ದೇವರಾಜನು ವಜ್ರದಿಂದ ಜಂಭನ ಶಿರವನ್ನು ಕತ್ತರಿಸಿ ಒಗೆದನು. ಜಂಭನ ಬಂಧುಗಳಾದ ನಮುಚಿ ಬಲಪಾಕರು ನಾರದರಿಂದ ಜಂಭನ ಸಾವನ್ನು ಕೇಳಿ ಇಂದ್ರನನ್ನೆದುರಿಸಿ ನಿಂತರು. ತೀಕ್ಷ್ಣ ಶರಗಳಿಂದ ಮೂವರು ದೈತ್ಯರು ಮುತ್ತಿ ಹೊಡೆಯಲು, ಇಂದ್ರನು ಮಳೆಯ ಧಾರೆಗಳಿಂದ ಕಾಣಿಸಿಗದೆ ಬೆಟ್ಟದಂತೆ ಬಾಣವರ್ಷದಲ್ಲಿ ಮುಳುಗಿದನು. ಅದನ್ನು ನೋಡಿ ದೇವತೆಗಳು ಸಮುದ್ರಮಧ್ಯದಲ್ಲಿ ಸಿಡಿದ ನೌಕೆಯಲ್ಲಿದ್ದ ವರ್ತಕರಂತೆ ದಿಕ್ಕೆಟ್ಟು ಆಕ್ರಂದಿಸಿದರು. ಇಂದ್ರನು ಬಾಣಪಂಜರದಿಂದ ಹೊರಬಂದು, ಉದಿಸುವ ಸೂರ್ಯನಂತೆ ಬೆಳಗುತ್ತಾ ರೋಷದಿಂದ ಬಲಪಾಕರನ್ನು ವಜ್ರದ ಒಂದೇ ಏಟಿನಿಂದ ಕೊಂದನು. ಅವರ ಅಣ್ಣನಾದ ನಮುಚಿಯು ಆರ್ಭಟಿಸಿ ಶೂಲವನ್ನೆತ್ತಿ ಸುರರಾಜನನ್ನು ಹೊಡೆದನು. ಉರಿಯುತ್ತ ಬರುವ ಶೂಲವನ್ನು ಕತ್ತರಿಸಿ ಇಂದ್ರನು ವಜ್ರಾಯುಧದಿಂದ

ನಮುಚಿಯ ಶಿರದಿ ಹೊಡೆದನು. ಅಮೋಘವಾದ ಕುಲಿಶವು ಕೂಡ ನಮುಚಿಯ ಶಿರವನ್ನು ಕೊನೆಗೆ ಚರ್ಮವನ್ನಾದರೂ ಭೇದಿಸಲು ಕೈಲಾಗದೆ ಹಿಂದಿರುಗಲು ಇಂದ್ರನು ಭೀತನಾಗಿ ಆಲೋಚಿಸತೊಡಗಿದನು–

ಏನೀ ನಮುಚಿಯ ಮಾಯೆ. ಇದೇ ವಜ್ರದಿಂದ ವೃತ್ರನನ್ನು ಕೊಂದೆ. ಇದೇ ವಜ್ರದಿಂದ ಭೂಲೋಕಜನ ಪೀಡಾಕರವಾದ ಪರ್ವತಗಳ ಪಕ್ಕಗಳನ್ನು ಕಡಿದೆ. ಇತರಾಸ್ತ್ರಗಳಿಂದ ಸಾಯದ ಬಲಪಾಕಾದಿ ದೈತ್ಯರನ್ನೂ ವಜ್ರದಿಂದ ಕೊಂದೆ. ಈ ನೀಚ ನಮುಚಿಯನ್ನು ಬ್ರಹ್ಮತೇಜೋಮಯವಾದ ವಜ್ರಾಯುಧವು ಕೊಲ್ಲಲಾರದಾಯಿತಲ್ಲ! ಏನಾಶ್ಚರ್ಯವು!' ಎಂದು ಚಿಂತಿಸುತ್ತಿರಲು ಆಕಾಶವಾಣಿಯು ಇಂದ್ರನಿಗೆ ಇಂತೆಂದಿತು–

'ಈ ನಮುಚಿಯು ಹಸಿಯಾದ ಪದಾರ್ಥದಿಂದಲೂ ಅಥವಾ ಒಣಗಿದ ಪದಾರ್ಥದಿಂದಲೂ ಮರಣವನ್ನು ಹೊಂದದಿರುವನು. ಇಂತು ತಾನೇ ವರವನ್ನು ಕೊಟ್ಟಿರುವೆನು. ಇಂದ್ರ! ಸರಿಯಾದ ಉಪಾಯವನ್ನು ಚಿಂತಿಸಿ ಇವನನ್ನು ಸಂಹರಿಸಿ' ಎಂದು ದೈವೀವಾಣಿಯನ್ನು ಕೇಳಿ, ಶ್ರದ್ಧೆಯಿಂದ ಬುದ್ಧಿವಂತನಾದ ಇಂದ್ರನು ಆಲೋಚಿಸಿ ಹಸಿಯಲ್ಲದ ಒಣಗಿಲ್ಲದ ಫೇನವೇ ನಮುಚಿ ಮಾರಕವೆಂದು ಮನಗಂಡನು. ಸಮುದ್ರದಲ್ಲಿದ್ದ ನೊರೆಯನ್ನು ಹಚ್ಚಿ ವಜ್ರಾಯುಧವನ್ನೆತ್ತಿ ಇಂದ್ರನಾಗ ನಮುಚಿಯನ್ನು ಸಂಹರಿಸಿದನು. ನಮುಚಿಸೂದನನನ್ನು ಕಂಡು ಮುನಿಗಳು ಕೊಂಡಾಡಿದರು. ದೇವಕಾಂತೆಯರು ಪೂಮಳೆಗರೆದರು. ವಿಶ್ವಾವಸು ಪರಾವಸುಗಳೆಂಬ ಗಂಧರ್ವರು ಹಾಡಿ ಹರಸಿದರು. ಅಪ್ಸರೆಯರು ಕುಣಿದಾಡಿದರು. ದೇವದುಂದುಭಿಗಳು ಮೊಳಗಿದವು.

ಇತರ ರಾಕ್ಷಸರನ್ನೂ ದೇವತೆಗಳು ಸಿಂಹಗಳಂತೆ ವಿಜೃಂಭಿಸಿ ಸಂಹರಿಸಿದರು. ಆಗ ಬ್ರಹ್ಮನು ಕಳಿಸಲು ನಾರದನು ಬಂದು ದಾನವ ಕ್ಷಯವನ್ನು ತಡೆದು ದೇವತೆಗಳನ್ನು ನೋಡಿ ಇಂತೆಂದನು–

ಶ್ರೀನಾರಾಯಣ ಭುಜಕಲ್ಪ ಲತೆಯನ್ನಾಶ್ರಯಿಸಿ ನೀವೆಲ್ಲರೂ ಸುಧೆಯನ್ನು ಪಡೆದಿರಿ. ನಿಮ್ಮ ಸಂಪತ್ತೆಲ್ಲವು ಪುನಃ ನಿಮ್ಮ ಕೈಸೇರಿತು. ಇನ್ನೇಕೆ ಯುದ್ಧ? ಸಾಕು ನಿಲ್ಲಿಸಿ.

ದೇವಮುನಿಯ ಮಾತನ್ನು ಮನ್ನಿಸಿ ಇಂದ್ರಾದಿ ದೇವತೆಗಳು ಜಯಕಾಶಿಗಳಾಗಿ ಸ್ವರ್ಗವನ್ನು ಸೇರಿದರು. ಸಾಯದೇ ಉಳಿದ ದೈತ್ಯರನ್ನು ಕರೆದುಕೊಂಡು ಬಲಿಯು ಅಸ್ತಾದ್ರಿಯನ್ನು ಸೇರಿದನು. ದೈತ್ಯಸೈನ್ಯದಲ್ಲಿ ಕೈಕಾಲುಗಳು ಇಲ್ಲದಿದ್ದರೂ, ತಲೆಯಾದರೂ ಉಳಿದಿರುವ ಭಟರನ್ನು ಶುಕ್ರನು ಮೃತಸಂಜೀವಿನಿಯ ಪ್ರಭಾವದಿಂದ ಬದುಕಿಸಿ, ಪೂರ್ಣಾಂಗರನ್ನಾಗಿರಿಸಿದನು. ಬಲಿಯು ಶುಕ್ರದಯದಿಂದ ಪುನಃ ಸಿಂಹಸಂಹನನವಾಗಿ ಮೆರೆದನು. ಲೋಕದಲ್ಲಿ ಜಯಾಪಜಯಗಳು ದೈವಾಧೀನವೆಂದು ತಿಳಿದು ನಿಶ್ಚಿಂತನಾಗಿದ್ದನು.

## ೧೧. ಮೋಹಿನೀ ವಿಶ್ವನಾಥವು

ಶ್ರೀಶುಕನು ಪೇಳಿದನು–

ಶ್ರೀಹರಿಯು ಸ್ತ್ರೀವೇಷದಿಂದ ಅಸುರರನ್ನು ಮೋಸಗೊಳಿಸಿ ದೇವತೆಗಳಿಗೆ ಅಮೃತವನ್ನು ಕುಡಿಸಿ ಸಲುಹಿದ ವೃತ್ತಾಂತವನ್ನು ನಾರದರಿಂದ ತಿಳಿದು, ಶಂಕರನು ನಂದಿಯನ್ನೇರಿ, ಸುಂದರಿಯಾದ ಉಮೆಯಿಂದಲೂ ಪ್ರಮಥರಿಂದಲೂ ಕೂಡಿ, ಮಧುಸೂದನನ ವೈಕುಂಠ ಮಂದಿರವನ್ನು

ಸೇರಿದನು. ಶ್ರೀಹರಿಯ ಸತ್ಕಾರವನ್ನು ಸ್ವೀಕರಿಸಿ, ನಮಸ್ಕರಿಸಿ, ಉಮೆಯಿಂದ ಕಲೆತು ಆಸನವನ್ನಲಂಕರಿಸಿ ನಗುತ್ತಾ ವಿಶ್ವನಾಥನಿಂತೆಂದನು–

ದೇವದೇವ! ಜಗನ್ನಾಥ! ಸರ್ವೋತ್ತಮನಾದ ನೀನು ಜಗವೆಲ್ಲ ತುಂಬಿರುವೆ. ಎಲ್ಲ ವಸ್ತುಗಳೂ ನಿನ್ನಿಂದ ಹುಟ್ಟಿ, ಬೆಳೆದು, ಸಾಯುತ್ತಿವೆ. ಶ್ರೇಯಸ್ಕಾಮರಾದ ಮುನಿಗಳು ಸಕಲ ವಿಷಯಾಶೆಯನ್ನು ಬಿಟ್ಟು, ಇಹ ಸ್ವರ್ಗಫಲಗಳನ್ನು ಬೇಡದೆ ನಿನ್ನ ದಿವ್ಯಚರಣಾಂಭೋಜನವನ್ನು ಪೂಜಿಸುತ್ತಿರುವರು. ಹರೇ! ಗುಣಪೂರ್ಣನಾದ ನಿನಗೆ ದೇಹದಿಂದಲೂ ನಾಶವಿಲ್ಲ. ಪ್ರಕೃತಿಗುಣರಹಿತನಾದ ನಿನಗೆ ಶೋಕ ಮೋಹಗಳಿಲ್ಲ. ಆನಂದಮಯನಾದ ನಿನಗೆ ಸಮರಿಲ್ಲ. ಜಗಜ್ಜನ್ಮಪಾಲನ ಸಂಹರಣ ನಿಯಮನಾದಿಗಳ ಸ್ವತಂತ್ರಕರ್ತನಾದ ನಿನಗೆ ಅಪೇಕ್ಷಣೀಯವಾದ ವಸ್ತುವಿಲ್ಲ. ಬಂಗಾರವು ಕಟಕ ಕಂಕಣರೂಪ ಭೇದದಿಂದ ಕರೆಯಲ್ಪಟ್ಟರೂ ಬಂಗಾರವೇ ಆಗಿರುವಂತೆ, ಮತ್ಸ್ಯ ಕೂರ್ಮ ರೂಪಗಳಿಂದ ವಿರಾಜಿಸುವ ನಿನಗೆ ಸ್ವಗತ ಭೇದವಿಲ್ಲ. ನಿನ್ನಲ್ಲಿ ನಮ್ಮಲ್ಲಿದ್ದಂತೆ ಭೇದಾಭೇದವೂ ಇಲ್ಲ. ಸ್ಥಾನಾದಿಗಳಿಂದ ಭೇದವಿಲ್ಲದ ನಿನ್ನನ್ನು ಮೂಢರು ತಿಳಿಯಲಾರದೆ ಭೇದವನ್ನೆಣಿಸಿ ಕೆಡುವರು. ನಿನ್ನನ್ನು ವೇದಾಂತಿಗಳು ಬ್ರಹ್ಮನೆಂದರೆ – ಮೀಮಾಂಸಕರು ಕರ್ಮನೆಂಬುವರು; ಸ್ಮಾರ್ತರು ಧರ್ಮನೆಂದರೆ – ಪುರಾಣಿಕರು ಪರಮಪುರುಷನೆಂಬುವರು; ಪಾಂಚರಾತ್ರಿಕರು ನವಶಕ್ತಿಯುತನೆಂದರೆ – ಏಕಾಂತಭಕ್ತರು ಸ್ವತಂತ್ರನಾದ ಸರ್ವೋತ್ತಮನೆನ್ನುವರು; ನಿಜವೇ. ನಿನ್ನ ಮಹಿಮೆಯ ಜ್ಞಾನವು ನಮ್ಮಪ್ಪನಾದ ವಿರಿಂಚನಿಗೂ ಸಾಕಲ್ಯೇನ ಆಗದಿರುವಾಗ ನಾನಿನ್ನೆಂತು ತಿಳಿಯುವೆನು? ಇನ್ನು ಮರೀಚಿ ಪ್ರಮುಖರೆಂತು ತಿಳಿಯುವರು? ಸಾತ್ವಿಕರಾದ ಇವರ ಪಾಡೇ ಹೀಗಾದ ಮೇಲೆ ನಿನ್ನ ಬಂಧಕಶಕ್ತಿಗೆ ಸಿಲುಕಿ ನಾನು ನನ್ನದೆಂಬುವ ಮಾನವ ದಾನವರು ಹೇಗೆ ತಿಳಿದಾರು?, ಸೃಷ್ಟಿ, ಸ್ಥಿತಿ, ಸಂಹೃತಿ ನಿಯಮಗಳನ್ನು ಮಾಡಿ, ಜ್ಞಾನಾಜ್ಞಾನ ಬಂಧಮೋಕ್ಷಗಳನ್ನು ಕೊಡಲು ನೀನು ಚರಾಚರ ಜಗದಿ ವಾಯುವಿನಂತೆ ತುಂಬಿ ಶೋಭಿಸುವೆ. ನಿನಗೆ ನಮಸ್ಕಾರ.

ಶ್ರೀಶಾ! ಗುಣಗಳಿಂದ ಕೂಡಿ ಆಡುವ ನಿನ್ನ ಅವತಾರಗಳನ್ನು ನೋಡಿರುವೆನು. ಆದರೆ ತರುಣೀ ವೇಷದಿಂದ ದೈತ್ಯರನ್ನು ವಂಚಿಸಿ, ದೇವತೆಗಳಿಗೆ ಸುಧೆಯನ್ನಿತ್ತ ರಮಣೀಯ ರೂಪವನ್ನು ನಮಗೆ ನೋಡಿಸು. ನಾವೆಲ್ಲ ಕುತೂಹಲದಿಂದ ಆ ರೂಪವನ್ನು ನೋಡಲೆಂದೇ ಬಂದಿರುವೆವು– ಎಂದನು.

ಶೂಲಪಾಣಿಯು ವಾಣಿಯಲ್ಲಿ ಲಾಲಿಸಿ ನಸುನಕ್ಕು ಶ್ರೀ ಭಗವಂತನಿಂತೆಂದನು–

ನಿಜ! ದೈತ್ಯರಿಗೆ ಆಶ್ಚರ್ಯಭ್ರಮೆಗಳನ್ನು ಪುಟ್ಟಿಸಿದ ರಮಣೀ ವೇಷವನ್ನು ನಾನು ಧರಿಸಿದೆನು. ಸುಧಾಪಾತ್ರೆಯನ್ನು ದುಷ್ಟರು ಅಪಹರಿಸಿದರು. ಸುರಕಾರ್ಯವು ನನ್ನನು ಕರೆಯಿತು. ಮತ್ತೇನು ಮಾಡಲಿ! ನೀನು ದೇವಶ್ರೇಷ್ಠನು ಅಹುದು. ಆದರೆ ಶ್ರೀಜನವನ್ನೂ ಮೋಹಪಡಿಸುವ, ಸಂಕಲ್ಪ ಮಾತ್ರದಿಂದ ನಾನು ಸ್ವೀಕರಿಸುವ ಮೋಹಿನೀರೂಪವನ್ನು ಕಂಡು ಬೆರಗಾಗಬೇಡ– ಎಂದು ಹೇಳಿ ಶ್ರೀಶನು ಅಲ್ಲೇ ಅಂತರ್ಹಿತನಾದನು.

ಭವಾನಿಯಿಂದ ಕೂಡಿದ್ದ ಭವನು ಭಗವಂತನೆಲ್ಲಿ ಪೋದನೋ ಎಂದು ಸುತ್ತು ಸುತ್ತು ನೋಡಿದನು. ರಾಜನ್! ಕೇಳು.

ರುದ್ರನಿಗಾಗ ಒಂದು ವಿಚಿತ್ರ ಪುಷ್ಪಫಲಭರಿತವಾದ ಉದ್ಯಾನವನವು ಗೋಚರವಾಯಿತು. ಅಲ್ಲಿ ಬಂಗಾರದ ಚೆಂಡನ್ನಾಡುವ ಸುಂದರಾಂಗಿಯೊಬ್ಬಳು ಕಾಣಿಸಿದಳು. ಪಟ್ಟದುಕೂಲ

ವನ್ನುಟ್ಟು, ಮೇಲೆ ಗೆಜ್ಜೆಯ ಡಾಬನ್ನಿಟ್ಟು ನಡೆದುಬರುವ ಮೋಹಿನಿಯ ಕಾಲಕೆಳಗೆ ಕಮಲಗಳು ಹಾಸಿದಂತಿತ್ತು. ಅವಳ ಸ್ತನಗಳು ಏರಿಳಿಯುವ ಚೆಂಡಿನಂತೆ ಏರಿಳಿಯುತ್ತಾ, ಮೇಲೆ ಹಾಕಿದ ಹಾರಗಳನ್ನು ದೂರ ಸರಿಸಿ ಕಾಣಬರುತ್ತಿದ್ದವು. ಹೆಜ್ಜೆಗಳನ್ನಿಡುವ ಅವಳ ಸ್ತನಜಘನಭಾರದಿಂದ ನಡುವು ಮುರಿದುಬೀಳುವಂತೆ ಬಳುಕುತ್ತಿತ್ತು. ಪ್ರವಾಲಗಳನ್ನು ರಾಗದಿಂದ ಧಿಕ್ಕರಿಸುವ ಕರಗಳಲ್ಲಿ ಆಡುವ ಕಂದುಕವು ಹಾರಿದಂತೆ ಅವಳ ಕಮಲದಳಾಯತ ನೇತ್ರಗಳೂ ವಿಚಿತ್ರವಾದ ಮೀನದ್ವಂದ್ವದಂತೆ ಹಾರಿ ಇಳಿಯುತ್ತಿದ್ದವು. ಕಣ್ಣುಗಳಿಂದ ಹೊರಟ ಕಡೆಗಣ್ಣಿನ ನೋಟ, ಭ್ರೂಲತೆಯಿಂದುದುರಿದ ಕುಸುಮ ಬಾಣನ ಬಾಣದಂತೆ ಶಿವನ ಮನದಿ ನೆಟ್ಟಿ ನಿಂತಿತು. ಕಿವಿಯಲ್ಲಿಟ್ಟ ಕುಂಡಲಗಳ ಕಾಂತಿ ಕಪೋಲಗಳವರೆಗೂ ಮುಟ್ಟಿ ಮಂದಹಾಸ ಚಂದ್ರಿಕೆಯಿಂದ ಹೆದರಿ ಹಿಂದೆ ಸರಿಯಿತು. ಮುಂಗುರುಳೆಂಬ ಕತ್ತಲು ಮುಖಚಂದ್ರನನ್ನು ನುಂಗಲಾರದೆ ಇಣಿಕಿ ನೋಡುತ್ತಾ ಮೇಲೆ ನಿಂತಿತು. ಮುಡಿ ಬಿಚ್ಚಿ, ಒಳಗಿಟ್ಟ ಮಲ್ಲಿಗೆಯ ಗುಂಪು ಕಂಪನ್ನು ಸೂಸುತ್ತಾ ಚರಣ ಪಂಕಜವನ್ನು ಪೂಜಿಸಿತು. ಉಟ್ಟ ದುಕೂಲವೂ ಬಿಚ್ಚಲು ಸಂಭ್ರಮಕಾತರಳಾಗಿ ಎಡಗೈ ಯಿಂದ ಹಿಡಿದು ನಿಲ್ಲಿಸಿ, ಬಲಗೈಯಿಂದ ಚೆಂಡನ್ನು ಹೊಡೆಯುವ ಅವಳ ಸೊಬಗನ್ನು ನೋಡಿ ರುದ್ರನಿಗೆ ಎರಡೂ ಕೈಗಳನ್ನು ಕಷ್ಟದಿಂದ ಬಿಡಿಸಿ ತನ್ನ ಕೈಗಳಲ್ಲಿಡಬೇಕೆನಿಸಿತು. ಆ ಕಂದುಕ ಕ್ರೀಡೆ, ಕ್ರೀಡೆಯನ್ನಾಡುವ ರಮಣಿ, ರಮಣಿಯ ಲಜ್ಜಾನತವನದ, ವದನ ಚಂದ್ರನ, ಮಂದ ಹಾಸ, ಹಾಸರಸಪೂರ್ಣ ಪ್ರೇಮಕಟಾಕ್ಷ ಎಲ್ಲವೂ ಸೇರಿ ಕಾಮವೈರಿತಾನೆಂಬುದನ್ನು ಮರೆತು, ಕಾಮಜನಕನ ಕಾಮಿತವನ್ನರಿಯಲಾರದೆ, ಕಾಮಿನೀ ಜನರು ನೋಡುತ್ತಿರಲು ಲಜ್ಜೆಯನ್ನು ಬಿಟ್ಟು, ಕಾಮಿನೀರತ್ನವನ್ನು ಕಾಮಿಸಿ, ಕರಿಣಿಯನ್ನನುಸರಿಸುವ ಗಜರಾಜನಂತೆ ಕೃತಿವಾಸನು ವಾಸುದೇವತೆಯನ್ನನುಸರಿಸಿ ಓಡಿದನು.

ಇತಿ ವೇಗದಿಂದೋಡಿ 'ಬೇಡ ಬೇಡ' ಎನ್ನುವ ಮಡದಿಯ ಮುಡಿಯನ್ನು ಪಿಡಿದು ಸೆಳೆದು ರುದ್ರನು ಗಟ್ಟಿಯಾಗಿ ಬಿಗಿದಪ್ಪಿದನು. ಕರಿರಾಜನ ಕೈಗೆ ಸಿಕ್ಕ ಕರಿಣಿಯಂತೆ ಸೆಣಸಿ, ಕೇಶಾಪಾಶವು ಹಾರಾಡುತ್ತಿರಲು, ಮೋಹಿನಿಯು ಶಿವನ ಕೈಯಿಂದ ತಪ್ಪಿಸಿಕೊಂಡು ಓಡತೊಡಗಿದಳು.

ಅಹೋ! ಏನು ಹೇಳಲಿ ಶ್ರೀರಮಣನ ಮಹಾಶಕ್ತಿಯನ್ನು! ಅದ್ಭುತಕರ್ಮನಾದ ಸ್ವಾಮಿಯ ಹಿಂದೆ ಓಡುವ ರುದ್ರನು ಕಾಮವಶನಾಗಿ ಚಟಪಟಿಸಿದನೆಂದರೆ ಶ್ರೀಹರಿಯ ಪ್ರೇರಣೆಯಲ್ಲದೆ ಮತ್ತಿನ್ನೇನು? ವಾಸಿತ ಕರಿಣಿಯನ್ನು ವೀರ್ಯವದ್ಗಜರಾಜನಂತೆ ಹಿಂಬಾಲಿಸಿ ಹೋಗುವ ಅಮೋಘ ವೀರ್ಯನಾದ ವಿಶ್ವನಾಥನ ವೀರ್ಯವು ಸ್ಖಲಿತವಾಯಿತು. ಆ ಮಹಾತ್ಮನ ಹಿರಣ್ಯ ವೀರ್ಯವು ಬಿದ್ದಲ್ಲೆಲ್ಲಾ ರುದ್ರಕ್ಷೇತ್ರಗಳು, ಬಂಗಾರದ ಗಣಿಗಳೂ ಆದವು. ಸರಿತ್ಸರ ಶೈಲಾದಿ ಗಳಲ್ಲಿ ರೇತಸ್ಖಲನವಾದಾಗ ಅಲ್ಲಿ ವಿಶ್ವನಾಥ ಮಲ್ಲಿಕಾರ್ಜುನಾದಿ ಲಿಂಗಗಳು ಸ್ವಯಂಭೂಲಿಂಗ ಗಳಾಗಿ ನಿಂತವು.

ಆಗ ದೇವಮಾಯಾ ಮೋಹಿತನಾದೆನೆಂಬ ಅರಿವು ಮೂಡಿ, ಶ್ರೀಹರಿಯ ಅಪರಿಜ್ಞೇಯ ಮಹಾಮಹಿಮೆಗೆ ಮನಸೋತು, ಮಹಾದೇವನು ಕೈಮುಗಿದು ನಿಂತನು. ಮಧುಸೂದನನು ಅವರಲ್ಲಿ ಪ್ರೀತನಾಗಿ, ಪುರುಷರೂಪದಿಂದ ನಿಂತು ಇಂತೆಂದನು–

ಅದೃಷ್ಟದಿಂದ ಉಳಿದೆ – ದೇವಶ್ರೇಷ್ಠ! ನಿನ್ನ ಮನಸ್ಸಿನಲ್ಲಿರುವ ನನ್ನ ಭಕ್ತಿಯೇ ನಿನ್ನನ್ನು ಕಾಪಾಡಿತು. ವತ್ಸ! ನನ್ನ ಮಾಯೆಯು ದುಸ್ತರವೇ ಸರಿ! ಆದರಿಂದ ನೀನು ಮೋಹಿತನಾದುದೇನು ಆಶ್ಚರ್ಯವು! ನಿನ್ನನ್ನು ಬಿಟ್ಟು ಅನ್ಯನಿಗೆ ನನ್ನ ಮಾಯೆಯನ್ನು ತಿಳಿದು, ದಾಟಲಾಗುವುದೇ?

ಮನೋಜಯ ಹೀನರನ್ನು ಆಡಿಸುವ ನನ್ನ ಮಾಯೆ ಇನ್ನು ಮುಂದೆ ನಿನ್ನನ್ನು ಪೀಡಿಸದಿರಲಿ! ನನ್ನ ಮಡದಿ ಮಾಯೆ. ಅವಳಿಂದ ಗುಣ ಮಾಯೆಯ ಜಾಲ. ಅದರಿಂದ ಬಿಡಿಸಿಕೊಳ್ಳಲು ನನ್ನ ಭಕ್ತರಿಗೆ ಶಕ್ಯವಾಗಿದೆ. ಇರಲಿ ಹೋಗು – ಎಂದು ನುಡಿದ ಗೋವಿಂದನಿಗೆ ವಂದಿಸಿ, ಸತ್ಕಾರವನ್ನು ಸ್ವೀಕರಿಸಿ ರುದ್ರನು ಪರಿವಾರದೊಡನೆ ತೆರಳಿ ಕೈಲಾಸವನ್ನು ಸೇರಿದನು.

ಅಲ್ಲಿ ಋಷಿಸಭಾಮಧ್ಯದಲ್ಲಿ ತನ್ನ ಮನಸ್ಸಿನಂತೆ ಮಾತಾಡುವ ಸತೀಮಣಿಯನ್ನು ನೋಡಿ ಮನೋದೇವನಿಂತೆಂದನು–

ಪ್ರಿಯೇ! ಪರದೇವತೆಯಾದ ಪರಮಪುರುಷನ ಮಾಯಾವೈಭವವನ್ನು ನೋಡಿದೆಯಾ? ಹದಿನಾರು ಕಲಾದೇವತೆಗಳಲ್ಲಿ ಶ್ರೇಷ್ಠನಾದ ನಾನೇ ಆ ಮಾಯೆಗೆ ಸಿಲುಕಿದನೆಂದ ಮೇಲೆ ಇತರ ಅಲ್ಪರ ಪಾಡೇನು? ಒಂದು ಸಾವಿರ ವರುಷದ ಯೋಗದಿಂದ ಎಚ್ಚತ್ತ ನನ್ನ ಉಪಾಸನಾ ಮೂರ್ತಿ ಆರೆಂದು ನೀ ಕೇಳಿದ್ದೆ. ಕಾಲವೇಗಕ್ಕೆ ಸಿಲುಕದ, ವೇದಕ್ಕೆ ನಿಲುಕದ ಪುರಾಣಪುರುಷನೇ ನನ್ನ ಮನೆದೈವವೆಂದು ಇಂದು ನಿನಗೆ ತೋರಿಸಿದೆ.

ರಾಜನ್! ಶಾರ್ಙ್ಗಧನುರ್ಧನರು ಕ್ಷೀರಾಬ್ಧಿಮಥನಕಾಲದಲ್ಲಿ ಮಂಧರಧರನು ಆದ ನಾರಾಯಣನ ಮಹಾಪಾವನಚರಿತವನ್ನು ಪುನಃ ಪುನಃ ಕೇಳುವವನು ಅಥವಾ ಪೇಳುವವನು ಮಾಡುವ ಸತ್ಕ್ರಿಯತ್ನಗಳು ವ್ಯರ್ಥವಾಗುವುದಿಲ್ಲ. ಉತ್ತಮಶ್ಲೋಕನ ಗುಣಾನುವರ್ಣನವು ಸಮಸ್ತ ಸಂಸಾರ ಪರಿಶ್ರಮ ನಿವಾರಣವಲ್ಲವೇ?

ದುರ್ಜನರಿಗೆ ದುರ್ಲಭವಾದ ತನ್ನ ಪಾದಾರವಿಂದವನ್ನು ನಂಬಿದ ಸುರರಿಗೆ ಕಪಟ ಯುವತಿಯ ವೇಷದಿಂದ ಸುರಾರಿಗಳನ್ನು ವಂಚಿಸಿ, ಸುಧೆಯನ್ನು ಉಣಿಸಿ ಸಲಹಿದ ಭಕ್ತಜನ ವರದರಾಜನಿಗೆ ನಮಸ್ಕಾರವು.

## ೧೨. ಸಪ್ತಮಾದಿ ಮನ್ವಂತರಗಳು

ಶ್ರೀಶುಕನು ಹೇಳಿದನು–

ಸೂರ್ಯನ ಮಗನಾದ ಶ್ರಾದ್ಧದೇವನೇ ಈಗಿನ ಮನುವಾಗಿರುವನು. ಏಳನೆಯವನಾದ ವೈವಸ್ವತ ಮನುವಿಗೆ ಇಕ್ಷ್ವಾಕು, ನಭಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷ, ಪೃಷ, ವಸುಮಂತನೆಂಬ ಹತ್ತು ಮಕ್ಕಳು, ವಸುರುದ್ರಾದಿತ್ಯರು ದೇವತೆಗಳು, ಪುರಂದರನೆಂಬುವನು ಇಂದ್ರನು. ಕಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಭರದ್ವಾಜರೇ, ಸಪ್ತರ್ಷಿಗಳು. ಈ ಮನ್ವಂತರದಲ್ಲಿಯೂ ಭಗವಂತನು ಕಶ್ಯಪರಿಂದ ಅದಿತಿಯಲ್ಲಿ ವಾಮನರೂಪನಾಗಿ ಪ್ರಾದುರ್ಭವಿಸಿದನು. ಇಂತು ಏಳು ಮನ್ವಂತರಗಳನ್ನು ವರ್ಣಿಸಿದುದಾಯಿತು. ಶ್ರೀಹರಿಸನ್ನಿಧಾನಪಾತ್ರರಾದ ಮುಂದಿನ ಮನುಗಳನ್ನು ತಿಳಿಸುವೆನು. ಕೇಳು.

ಸೂರ್ಯನಿಗೆ ಇಬ್ಬರು ಸತಿಯರು. ವಿಶ್ವಕರ್ಮಸುತೆಯರಾದ ಸಂಜ್ಞಾದೇವಿ ಹಾಗೂ ಛಾಯಾದೇವಿಯರಲ್ಲದೆ ವಡವಾದೇವಿಯೆಂಬುವ ಮೂರನೆಯ ಪತ್ನಿಯೂ ಇದ್ದಳು. ಸಂಜ್ಞಾದೇವಿಯ ಮಕ್ಕಳು ಯಮ, ಯಮುನೆ, ಶ್ರಾದ್ಧದೇವ. ಛಾಯಾದೇವಿಯಲ್ಲಿ ಸಂವರಣಪತ್ನಿ - ತಪತಿ, ಸಾವರ್ಣಿ, ಶನಿರಾಜರು ಪುಟ್ಟಿದರು. ಅಶ್ವಿನಿಗಳಿಬ್ಬರು ವಡವಾಪುತ್ರರು.

ಸಾವರ್ಣಿಯೇ ಮುಂದೆ ಎಂಟನೆಯ ಮನುವಾಗುವನು. ನಿರ್ಮೋಹ ವಿರಜಸ್ಕರು ಅವನ ಸುತರು. ಸುತಪ ವಿರಜ ಅಮಿತ ಪ್ರಜರು ದೇವತೆಗಳು. ಅವರಿಗೆ ಬಲಿರಾಜನು ಇಂದ್ರನಾಗುವನು. ಶ್ರೀ ವಿಷ್ಣುವಿಗೆ ಮೂರು ಪಾದದ ನೆವದಿಂದ ಕೊಟ್ಟ ಸರ್ವಸ್ವ ದಾನ ಮಹಿಮೆಯಿಂದ ಇಂದ್ರನಾಗು ವುದಿರಲಿ, ಮುಂದೆ ಮೋಕ್ಷಾನಂದವನ್ನೂ ಹೊಂದುವನು. ಭಗವಂತನಿಂದ ಕಟ್ಟಿ ಲ್ಪಟ್ಟರೂ ನಿರ್ವಿಕಾರನಾಗಿದ್ದುದರಿಂದ ಸ್ವರ್ಗವನ್ನು ಮರೆಸುವ ಸುತಲ ಲೋಕದಲ್ಲಿ ಇಂದ್ರನಂತೆ ಈಗ ಮೆರೆಯುತ್ತಿರುವನು. ಗಾಲವ, ದೀಪ್ತಿಮಂತ, ಪರಶುರಾಮ, ಅಶ್ವತ್ಥಾಮ, ಕೃಪ, ಋಷ್ಯಶೃಂಗ, ವೇದವ್ಯಾಸರು ಆಗ ಸಪ್ತರ್ಷಿ ಪದವಿಯಲ್ಲಿರುವರು. ಭಕ್ತಿಯೋಗದ ಮಹಿಮೆ ಯಿಂದ ಈ ಋಷಿಗಳು ಅಲ್ಲಿಯವರೆಗೂ ತಮ್ಮ ಆಶ್ರಮಗಳಲ್ಲಿರುವರು. ಮುಂದೆ ಸರಸ್ವತಿಯ ತೀರದಲ್ಲಿ ಈಗಿನ ಪುರಂದರನಿಂದ ಸ್ವರ್ಗವನ್ನು ತೆಗೆದುಕೊಂಡು ಶ್ರೀಹರಿಯ ಬಲಿರಾಜನಿಗೆ ಕೊಡುವನು.

ದಕ್ಷ ಸಾವರ್ಣಿಯೇ ಒಂಭತ್ತನೆಯ ಮನುವು. ಅವನು ವರುಣಪುತ್ರನು. ಭೂತ ಕೇತು ದೀಪ್ತಿಕೇತು ಪ್ರಮುಖರು ಅವನ ಪುತ್ರರು. ಪರಾಮರೀಚಿಗರ್ಭರು ದೇವತೆಗಳು. ಅದ್ಭುತ ನೆಂಬುವ ಇಂದ್ರನು ಸ್ವರ್ಗವನ್ನಾಳುವನು. ದ್ಯುತಿಮಂತನೇ ಮೊದಲಾದವರು ಸಪ್ತರ್ಷಿಗಳಾಗು ವರು. ಆಯುಷ್ಮಂತನಿಗೆ ಅಂಬುಧಾರೆಯಲ್ಲಿ ಋಷಭೆಂದು ಜನಿಸಿ ಶ್ರೀಶನು ಇಂದ್ರನನ್ನು ಸಲಹುವನು.

ಹತ್ತನೆಯ ಮನುವು ಬ್ರಹ್ಮಸಾವರ್ಣಿಯು. ಅವನು ಉಪಶ್ಲೋಕನ ಮಗನು. ಭೂರಿಷೇಣಾದಿ ಗಳು ಹವಿಷ್ಮಂತ ಮುಂತಾದವರು ಅವನ ಮಕ್ಕಳು. ಶ್ರೀಮೂರ್ತಿ ಎಂದು ಹೆಸರಾಗಿ ಶ್ರೀಶನು ವಿಶ್ವಸೃಜರ ಮನೆಯಲ್ಲಿ ಪುಟ್ಟುವನು. ಹವಿಷ್ಮಂತ, ಸುಕೃತ, ಸತ್ಯ, ಜಯ ಮೂರ್ತಿ ಮೊದಲಾದ ವರು ಋಷಿಗಳು. ಸುಧಾಮ, ವಿಬುಧರು ದೇವತೆಗಳು. ಶಂಭುವೆಂಬುವನೆ ಇಂದ್ರನಾಗುವನು. ವಿಷೂಚೀದೇವಿಯಲ್ಲಿ ಜನಿಸಿದ ಕಾಂತ ಶ್ರೀ ಮೂರ್ತಿಯು ಲೋಕಕ್ಷೇಮವನ್ನು ಸಾಧಿಸುವನು.

ಧರ್ಮಸಾವರ್ಣಿಯು ಹನ್ನೊಂದನೆಯ ಮನುರಾಜನಾಗುವನು. ಸತ್ಯಧರ್ಮಾದಿಗಳು ಹತ್ತು ಜನರು ಅವನ ಸುತರು. ವಿಹಂಗಮರು, ಕಾಮಗಮರು, ನಿರ್ವಾಣರುಚಿಗಳು ಆಗಿನ ದೇವತೆಗಳು. ಋಷಿಗಳು ಅರುಣಾದಿಗಳು. ವೈಧೃತಿ ಎಂಬುವನೇ ಇಂದ್ರನು. ಆರ್ಯಕನ ಮಗನಾಗಿ ವೈಧೃತಿ ಯಲ್ಲಿ ಧರ್ಮಸೇತುವೆಂಬ ನಾಮದಿಂದ ಜನಿಸಿ ಶ್ರೀಹರಿಯು ಮೂರು ಲೋಕಗಳನ್ನೂ ಧರ್ಮ ದಲ್ಲಿಟ್ಟು ಕಾಪಾಡುವನು.

ಮೇರುಸಾವರ್ಣಿಯು ಹನ್ನೆರಡನೆಯ ಮನುವು. ದೇವವಂತ, ಉಪದೇವ, ದೇವಶ್ರೇಷ್ಠರೇ ಅವನ ಸುತರಾಗುವರು. ಹರಿತಾದಿ ದೇವತೆಗಳಿಗೆ ಋತಧಾಮನೆಂಬ ಇಂದ್ರನು ರಾಜನಾಗಿರು ವನು. ತಪೋಮೂರ್ತಿ, ತಪ, ಅಗ್ನೀಧ್ರಕಾದಿಗಳೇ ಋಷಿಗಳು. ಸತ್ಯಮಹನಿಗೆ ಸೂನೃತೆಯಲ್ಲಿ ಜನಿಸಿ ಸ್ವಧಾಮನೆಂಬುವ ನಾಮದಿಂದ ಶ್ರೀಹರಿಯು ಧರ್ಮರಕ್ಷಕನಾಗಿರುವನು.

ದೇವಸಾವರ್ಣಿಯು ಹದಿಮೂರನೆಯ ಮನುವಾಗಿರುವನು. ಚಿತ್ರಸೇನ ವಿಚಿತ್ರಾದಿಗಳು ಅವನ ಸುತರು. ಸುಕರ್ಮ, ಸುತ್ರಾಸರು ದೇವತೆಗಳು. ದಿವಸ್ಪತಿ ಎಂಬುವನೇ ಇಂದ್ರನು. ನಿರ್ಮೋಕ, ತತ್ವದರ್ಶಿ ಮುಂತಾದವರು ಋಷಿಗಳು. ದೇವಹೋತ್ರನಿಗೆ ಬೃಹತೀದೇವಿಯಲ್ಲಿ ಯೋಗೇಶ್ವರನೆಂದು ಜನಿಸಿ ಶ್ರೀಶನು ಇಂದ್ರಸಹಾಯಕನಾಗುವನು.

ಇಂದ್ರಸಾವರ್ಣಿಯು ಹದಿನಾಲ್ಕನೆಯ ಮನುರಾಜನಾಗುವನು. ಜಂತು, ಭೀರವ, ವರ್ಯಾದಿಗಳು ಅವನ ಸುತರು. ವಿಚಿತ್ರರು, ಚಾಕ್ಷುಷರು ದೇವತೆಗಳು. ಶುಚಿ ಎಂಬುವನೇ ಇಂದ್ರನು. ಅಗ್ನಿ, ಬಾಹು, ಶುಚಿ, ಶುದ್ಧ, ಮಾಗಧಾದಿಗಳು ಋಷಿಗಳು. ನಾರಾಯಣನಿಗೆ ವಿನತೆಯಲ್ಲಿ ಬೃಹದ್ಭಾನುವೆನಿಸಿ ಶ್ರೀಹರಿಯು ಅವತರಿಸಿ, ಕರ್ಮಕಾಂಡವನ್ನು ಚೆನ್ನಾಗಿ ಹೇಳಿ ಕೊಡುವನು.

ರಾಜನ್! ಪ್ರತಿಕಲ್ಪದಲ್ಲಿಯೂ ಆಗುವ ಹದಿನಾಲ್ಕು ಮನ್ವಂತರಗಳ ವಿಷಯವನ್ನು ನಿನಗೆ ವರ್ಣಿಸಿರುವೆನು. ಮನ್ವಂತರವೆಂದರೆ ೭೧ ಮಹಾಯುಗಗಳು ಹಾಗೂ ಕಲ್ಪವೆಂದರೆ ಸಾವಿರ ಮಹಾಯುಗಗಳು. ಅದೇ ಬ್ರಹ್ಮದೇವನ ಒಂದು ದಿನವಾಗಿದೆ.

## ೧೩. ಮನ್ವಾದಿಗಳ ಕರ್ತವ್ಯ

ರಾಜನು ಕೇಳಿದನು–

ಸ್ವಾಮೀ! ಮನ್ವಂತರಗಳಲ್ಲಿ ಮನುಗಳ ಕಾರ್ಯವಾವುವು? ಶ್ರೀಹರಿಯು ಅವತರಿಸಿ ಮಾಡುವ ಪವಿತ್ರ ಚರಿತೆಯು ಯಾವುದು? ಇಂದ್ರಾದಿಗಳ ವಿವಿಧ ಕರ್ಮಗಳೇನು?

ಶ್ರೀಶುಕನು ಪೇಳಿದನು–

ಇಂದ್ರ, ಮನು, ಮನುಪುತ್ರರು, ಮುನಿಗಳು, ದೇವತೆಗಳು ಎಲ್ಲರೂ ಶ್ರೀಹರಿಯ ಆಜ್ಞಾಪಾಲಕ ರೆಂದು ತಿಳಿ. ಸ್ವಾಯಂಭುವ ಮನ್ವಂತರದಲ್ಲಿ ಯಜ್ಞನಾಗಿ ಮನ್ವಾದಿಗಳನ್ನು ಪೊರೆದಂತೆಯೇ ಪ್ರತಿ ಮನ್ವಂತರದಲ್ಲಿಯೂ ಶ್ರೀಹರಿಯು ಅವತರಿಸಿ ಮನು ಮುಂತಾದವರಿಂದ ಲೋಕಯಾತ್ರೆ ಯನ್ನು ನಡೆಸುವನು. ನಾಲ್ಕು ಯುಗಗಳಾಗಿ ಹೋಗಲು ಕಾಲಬಲದಿಂದ ಲುಪ್ತವಾದ ವೇದ ಗಳನ್ನು ಋಷಿಗಳು ಶ್ರೀಹರಿಕೃಪೆಯಿಂದ ಕಂಡು, ತಿಳಿದು, ಉಪದೇಶಿಸುವರು. ಅವನ ವಚನದಂತೆ ಮನುಗಳು ಶ್ರೀಹರಿಸಹಾಯದಿಂದ ಧರ್ಮವನ್ನು ನಾಲ್ಕು ಪಾದಗಳಿಂದ ನಡೆಸುವರು. ಮನುವಂಶದ ರಾಜರು ತಮ್ಮ ತಮ್ಮ ರಾಜ್ಯ ಭಾಗಗಳನ್ನು ಧರ್ಮದಿಂದ ಪಾಲಿಸುವರು. ದೇವತೆಗಳಾದವರು ಯಜ್ಞದ ಹವಿರ್ಭಾಗಗಳನ್ನು ಸ್ವೀಕರಿಸಿ, ತುಷ್ಟರಾಗಿ ಪ್ರಜರ ಅಭೀಷ್ಟಗಳನ್ನು ಪೂರೈಸುವರು. ಶ್ರೀಹರಿಯು ಕೊಟ್ಟ ತ್ರಿಲೋಕಿ ರಾಜ್ಯವನ್ನು ಆಳುತ್ತಾ ಇಂದ್ರನು ವರ್ಷಾದಿಗಳನ್ನು ಕೊಟ್ಟು ರಕ್ಷಿಸುವನು. ಶ್ರೀಹರಿಯು ಆಯಾ ಯುಗಗಳಿಗೆ ತಕ್ಕಂತೆ ಧರ್ಮಸಂರಕ್ಷಕನಾಗಿ ಅವತರಿಸುವನು. ಅವನು ಸಿದ್ಧರೂಪದಿಂದ ಜ್ಞಾನವನ್ನು, ಋಷಿರೂಪದಿಂದ ಕರ್ಮವನ್ನು, ಯೋಗೇಶರೂಪದಿಂದ ಯೋಗವನ್ನು ಉಪದೇಶಿಸುವನು. ಮತ್ತೂ ಪ್ರಜಾಪತಿಗಳಲ್ಲಿದ್ದು ಸೃಷ್ಟಿಯನ್ನು ಹೆಚ್ಚಿಸುವನು. ಕ್ಷತ್ರಿಯರಲ್ಲಿ ಇಂದ್ರರೂಪನಾಗಿದ್ದು ಕಳ್ಳಕಾರರನ್ನು ಸರ್ವವನ್ನೂ ಸಂಹರಿಸುವನು. ಅನೇಕ ರೂಪದಿಂದ ಸರ್ವಪ್ರವರ್ತಕನಾದ ಪ್ರಭುವನ್ನು ಕಾಣದೆ ವ್ಯರ್ಥನಾದ ವಿವಿಧ ದುಷ್ಟಮತಗಳನ್ನು ಆಶ್ರಯಿಸಿ, ಅಸಜ್ಜನರು ಕೆಡುತ್ತಿರುವನು. ನಾಲ್ಕು ಯುಗವಾದರೆ ಮಹಾಯುಗವು; ಅವು ೭೧ ಆದರೆ ಮನ್ವಂತರವು; ಅವು ಹದಿನಾಲ್ಕಾದರೆ ಕಲ್ಪವು ಎಂದು ವಿಜ್ಞಾನಿಗಳು ತಿಳಿದಿರುವರು.

## ೧೪. ಬಲಿರಾಜ ವಿಜಯ

ರಾಜನು ಕೇಳಿದನು–

ಸಕಲ ಭೂತಪಾಲಕನಾದ ಶ್ರೀಶನು ದೀನನಂತೆ ಬಲಿಯನ್ನು ಯಾಚಿಸಲು ಕಾರಣವೇನು? ಕೇಳಿದ ದಾನವನ್ನು ಕೊಟ್ಟ ಬಲಿಯನ್ನು ಕಟ್ಟಿದುದೇತಕ್ಕೆ? ಪೂರ್ಣನಾದ ಹರಿಯು ಬೇಡಿದುದನ್ನು ನೋಡಿ ನನಗೆ ಸಖೇದಾಶ್ಚರ್ಯವಾಗಿದೆ. ವಿವರವಾಗಿ ಹೇಳಿ ಎನ್ನಲು ಶ್ರೀಶುಕನು ಹೇಳಿದನು–

ಬಲಿರಾಜನು ಯುದ್ಧದಲ್ಲಿ ಪ್ರಾಣಾವಶಿಷ್ಟನಾಗಿ ಓಡಿ ಬಂದು ಶುಕ್ರಾಚಾರ್ಯನನ್ನು ಆಶ್ರಯಿಸಿದನು. ಶುಕ್ರನು ಅವನನ್ನು ಸಿಂಹಬಲನನ್ನಾಗಿ ಮಾಡಿದನು. ಆಗ ಬಲಿಯು ಆಚಾರ್ಯನಿಗೆ ಸರ್ವಸ್ವ ದಾನವನ್ನಿತ್ತು ಸಂತೋಷಪಡಿಸಿದನು. ಶುಕ್ರನು ಪ್ರೀತನಾಗಿ ಬಲಿಯಿಂದ ವಿಶ್ವಜಿದ್ಯಾಗವನ್ನು ಮಾಡಿಸಿ, ಮಹಾಭಿಷೇಕ ವಿಧಾನದಿಂದ ಅವಭೃತಪರ್ಯಂತವಾಗಿಸಿ ಹರಿಸಿದರು. ಆಗ ಅಗ್ನಿಕುಂಡದಿಂದ ಕಾಂಚನರಥವು, ಇಂದ್ರಾಶ್ವಗಳಂತೆ ಶೋಭಿಸುವ ದಿಯ ಹಯಗಳು, ದಿವ್ಯಧನುಸ್ಸು, ಅಕ್ಷಯ ತೂಣೀರಗಳ ಜತೆ, ಅಭೇದ್ಯ ದಿವ್ಯಕವಚಗಳು ಬರಲು ಬಲಿರಾಜನವನ್ನು ಸ್ವೀಕರಿಸಿ ಶುಕ್ರನಿಗೂ ತಾತಾನಾದ ಪ್ರಹ್ಲಾದನಿಗೂ ನಮಿಸಿದನು. ಪ್ರಹ್ಲಾದನು ಬಾಡದಿರುವ ಪೂಮಾಲೆಯನ್ನು, ಶುಕ್ರನು ಶಂಖವನ್ನು ಕೊಟ್ಟು ಹರಸಿದರು.

ಮಹಾನುಭಾವರಾದ ಶುಕ್ರಾದಿ ಬ್ರಾಹ್ಮಣರ ಅನುಗ್ರಹದಿಂದ ಬಂದ ಯುದ್ಧ ಪರಿಕರಗಳನ್ನು ಅವರ ಸ್ವಸ್ತಿವಾಚನ ವೇದಾಶೀರ್ವಾದಗಳನ್ನೂ ಪಡೆದು, ಬಲಿರಾಜನು ಪೂಮಾಲೆಗಳನ್ನೂ, ಧನುರ್ಬಾಣ ಖಡ್ಗತೂಣೀರಗಳನ್ನೂ ಧರಿಸಿ ರಥವನ್ನೇರಿದನು. ಅಂಗದ ಮಕರ ಕುಂಡಲಾದಿ ದಿವ್ಯಾಭರಣಾಲಂಕೃತನಾಗಿ ಕುಂಡದಲ್ಲಿ ಉರಿಯುವ ಅಹವನೀಯಾಗ್ನಿಯಂತೆ ಶೋಭಿಸಿದನು. ತನ್ನಂತೆ ಧನವಯಃಶ್ರೀ ಸಮನ್ವಿತರಾದ ದೈತ್ಯನಾಯಕರು ಆಕಾಶವನ್ನೇ ನುಂಗುವರೋ ಕಣ್ಣಿನಿಂದ ಲೋಕಗಳನ್ನೆಲ್ಲಾ ಸುಡುವರೋ ಎಂಬಂತೆ ಸುತ್ತುಗಟ್ಟಿ ಬರುತ್ತಿರಲು ಮಹಾಬಲ ಸಮೇತನಾಗಿ ಬಲಿಯು ಇಂದ್ರಪುರಿಯನ್ನು ಮುತ್ತಿ ಆರ್ಭಟಿಸಿದನು.

ನಂದನಾದಿ ವನಗಳು, ವನಗಳಲ್ಲಿರುವ ಪುಷ್ಪಫಲ ವೃಕ್ಷಗಳು, ವೃಕ್ಷಗಳ ಮೇಲೆ ಕೂತು ಕಲಕಲ ರವವನ್ನು ಗೈಯುವ ವಿಹಗ ಮಿಥುನಗಳು, ಮಿಥುನರಾಗಿ ಸಂಚರಿಸುವ ದೇವನರನಾರಿಯರು ಅವರಾಡುವ ಆಕಾಶಗಂಗೆ, ಅದರಲ್ಲಿ ವಿಕಸಿಸಿದ ಕಮಲ ಷಂಡ, ಅಲ್ಲಿ ನಲಿಯುವ ಭ್ರಮರ ಝುಂಕಾರ, ಆ ಪುರವನ್ನು ಸುತ್ತಿ ಬರದುವ ಪ್ರಾಕಾರಗಳು, ಒಳಗೆ ಹೊಳೆಯುವ ಕನಕ ಗೋಪುರ ಹರ್ಮ್ಯಗಳು, ಮೇಲೆ ತಿರುಗುವ ವಿಮಾನಗಳು ಕಲೆತು ಬಲಿರಾಜನ ಮನವನ್ನು ಸೆಳೆದವು.

ಅಲ್ಲಿರುವ ಸಭಾ ಚತ್ವರ ಶೃಂಗಾಟಕ ವೇದೀಭವನಗಳು ವಜ್ರಮಯವಾಗಿ ಪ್ರಕಾಶಿಸುತ್ತಿದ್ದವು. ನಿತ್ಯ ಯೌವನರಾದ ಕನಕಾಂಗಿಯರು ಪೀತಾಂಬರವನ್ನುಟ್ಟು ಪುರುಷರಿಂದ ಸಂಚರಿಸುತ್ತ ಅಗ್ನಿಜ್ವಾಲೆಯಂತೆ ಪ್ರಕಾಶಿಸಿದರು. ಸುರನಾರಿಯರು ಮುಡಿದ ಸೌಗಂಧಿಕ ಮಾಲೆಯ ಆಮೋದವನ್ನು ಹೊತ್ತು ಆ ಭಾರದಿಂದ ಮಾರುತನು ಮೆಲ್ಲನೆ ಬೀಸುತ್ತಿದ್ದನು. ಭವನಗಳ ಗವಾಕ್ಷಗಳಿಂದ ಹೊರಬಂದು ಪಾಂಥರನ್ನಾಕರ್ಷಿಸುವ ಧೂಪವು ಬೀದಿಗಳಲ್ಲಿ ನಿಂತು ಕರೆಯುವಂತೆ ತೋರುತ್ತಿತ್ತು. ಮುಕ್ತಾವಿತಾನ ಧ್ವಜಪತಾಕೆಗಳಿಂದ ತಂಪಾಗಿರುವ ರಾಜವೀಥಿಗಳ ಇಕ್ಕೆಲದಲ್ಲಿರುವ ಮಂದಿರಗಳು ಶಿಖಂಡಿ ಪಾರಾವತ ಭೃಂಗರವವನ್ನು ಷಡ್ಜ ಪಂಚಮ ಮಧ್ಯಮ ಶ್ರುತಿಗಳ

ನ್ನಾಗಿರಿಸಿ ಪಾಡುವ ಬೃಂದಾರಕ ಸುಂದರೀಸಂಗೀತ ಮಂಗಲವಾಗಿ ಕಂಗೊಳಿಸಿದವು. ಮೃದಂಗ ಶಂಖ ದುಂದುಭಿಗಳಲ್ಲಿ ಮೇಳವಿಸಿದ ತಾಲವೀಣಾವೇಣುಧ್ವಾನಗಳಿಗೆ ಕುಣಿಯುವ ರಮಣಿಯರು ಮೇಘದ ಮಧ್ಯದಲ್ಲಿ ಮಿಂಚಿನ ಬಳ್ಳಿಗಳಂತೆ ಮಂದಿರ ಪ್ರಾಂಗಣದಿ ಶೋಭಿಸಿದರು.

ಧರ್ಮಬಾಹಿರರು, ಇಂದ್ರಿಯಾರಾಮರು, ಭೂತದ್ರೋಹಿಗಳು, ಶಠರು, ದುರಭಿಮಾನಿಗಳು, ಕಾಮಾಂಧರು, ಲೋಭಿಗಳು ಮುಂತಾದ ಪಾಪಿಗಳಿಗೆ ಸಿಗಲಾರದ ಸ್ವರ್ಗ ದ್ವಾರವನ್ನು ಮುತ್ತಿ ಬಲಿಯು ಆಚಾರ್ಯಾನುಗ್ರಹದಿಂದ ಬಂದ ಶಂಖವನ್ನೂದಿದನು. ಇಂದ್ರನಾದರೂ ಬಲಿಯ ಮಹಾಪ್ರಯತ್ನವನ್ನು ಕಂಡು ಭೀತನಾಗಿ ಸರ್ವಸುರ ಸಮೇತನಾಗಿ ಬೃಹಸ್ಪತಿಯನ್ನು ನೋಡಿ ಇಂತೆಂದನು–

ಪೂಜ್ಯನೇ! ನಮ್ಮ ಪೂರ್ವವೈರಿಯ ಸಾಹಸವನ್ನು ನೋಡಿದೆಯಾ? ಇಂಥ ತೇಜವು ಇವನಿಗೆ ಹೇಗೆ ಬಂತು? ಇವನನ್ನೀಗ ಎದುರಿಸಿ ನಿಲ್ಲುವುದು ಅಶಕ್ಯವೆಂದೇ ತೋರುತ್ತಿದೆ. ಬಾಯನ್ನು ತೆಗೆದು ಲೋಕವನ್ನೇ ನುಂಗುವನಂತೆ, ನಾಲಿಗೆಯನ್ನು ಚಾಚಿ ದಿಕ್ಕುಗಳನ್ನು ನೆಕ್ಕಿಬಿಡುವನಂತೆ, ಕಣ್ಣಿನಿಂದ ಆಕಾಶವನ್ನು ಸುಡುವನಂತೆ ಭಯಂಕರನಾಗಿ, ಎರಡನೆಯ ಪ್ರಳಯಾಗ್ನಿಯಾಗಿ ಉರಿಯುತ್ತಿರುವನು. ಇವನು ಇಂತಹ ದುರ್ಧರ್ಷನಾಗಲು ಕಾರಣವೇನು? ಇವನ ಓಜಸ್ಸಹೋಬಲ ತೇಜಗಳು ದುಸ್ಸಹವಾಗಿವೆ– ಎನ್ನಲು ಗುರುವಿಂತೆಂದನು–

ಇಂದ್ರ! ಇವನ ತೇಜವು ಬ್ರಹ್ಮವಾದಿಗಳಾದ ಶುಕ್ರಾದಿ ಗುರುಗಳಿಂದ ಸಂಪಾದಿತವಾಗಿದೆ. ಯಜರಾಜನನ್ನೆದುರಿಸಿ ಜನರು ನಿಲ್ಲಲಾರದಂತೆ, ಇವನನ್ನೆದುರಿಸಿ ನೀನು ಹಾಗೂ ಶ್ರೀಹರಿಯನ್ನು ಉಳಿದ ಅನ್ಯರಾರೇ ಆಗಲಿ ನಿಲ್ಲಬಾರದು. ಆದ್ದರಿಂದ ದೇವಧಾನಿಯನ್ನವನಿಗೆ ಬಿಟ್ಟುಕೊಟ್ಟು, ಜನೋಲೋಕವನ್ನು ಪೊಂದಿ ಶ್ರೀಹರಿಯು ಅನುಕೂಲಿಸುವವರೆಗೂ ಕಾಲವನ್ನು ಕಳೆಯಿರಿ. ಬಲಿರಾಜನ ವಿಕ್ರಮವು ವಿಪ್ರಪ್ರಸಾದದಿಂದ ಲಭಿಸಿದುದಾಗಿದೆ. ಮುಂದೆ ಶುಕ್ರನನ್ನು ತಿರಸ್ಕರಿಸಿ ಬಲಿಯು ಸಾನುಚರನಾಗಿ ನಶಿಸುವನು, ಹೋಗಿ.

ದೇವಗುರುವಿನ ಕಾಲಾನುಗುಣ ವಚನವನ್ನು ಮನ್ನಿಸಿ, ಇಂದ್ರಾದಿ ದೇವತೆಗಳು ಸ್ವರ್ಗವನ್ನು ತ್ಯಜಿಸಿ, ಕಾಮರೂಪಿಗಳಾಗಿ ಚರಿಸಿದರು. ಬಲಿಯು ಸ್ವರ್ಗವನ್ನಾಕ್ರಮಿಸಿ ಜಗತ್ತ್ರಯವನ್ನು ವಿಕ್ರಮದಿಂದ ಪಾಲಿಸುತ್ತಿದ್ದನು. ಇಂತು ಜಯಶಾಲಿಯಾದ ಶಿಷ್ಯನ ದೇವಸಿಂಹಾಸನಾಧಿ ಪತ್ಯವನ್ನು ಸ್ಥಿರವಾಗಿರಿಸಲು ಮನನ ಮಾಡಿ ಶುಕ್ರನು ಅವನಿಂದ ನೂರಶ್ವಮೇಧಯಾಗಗಳನ್ನು ಮಾಡಿಸಿದನು. ಅದರಿಂದ ಬಲಿರಾಜನ ಕೀರ್ತಿಯು ಸಕಲ ಲೋಕಗಳಲ್ಲಿ ತುಂಬಲು ಅವನು ಚಂದ್ರನಂತೆ ವಿರಾಜಿಸಿದನು. ಸಮೃದ್ಧವಾದ ದೇವಲೋಕದ ಸಿರಿಯು ಕೈವಶವಾಗಿ, ಬ್ರಹ್ಮಣಾನುಗ್ರಹದಿಂದ ಬಲಿರಾಜನು ಕೃತಕೃತ್ಯನಾಗಿ ಸುಖವಾಗಿದ್ದನು.

## ೧೫. ಅದಿತಿಯ ಪರಿತಾಪ - ಪಯೋವ್ರತ

ಶ್ರೀಶುಕನು ಹೇಳಿದನು–

ತನ್ನ ಮಕ್ಕಳಾದ ಸುರರು ಸ್ವರ್ಗರಾಜ್ಯಭ್ರಷ್ಟರಾಗಿ ಕಷ್ಟಪಡುತ್ತಿರಲು, ಅದಿತಿಯು ಚಿಂತಾಕ್ರಾಂತಳಾಗಿದ್ದಳು. ಒಂದು ದಿನ ಪೂಜ್ಯನಾದ ಕಶ್ಯಪನು ಅವಳ ಆಶ್ರಮಕ್ಕೆ ಚಿರತಪವಂ ಗೈದು

ಬಂದನು. ಆಶ್ರಮವು ನಿರಾನಂದವೂ ನಿರುತ್ಸವವೂ ಆಗಿತ್ತು. ಅದಿತಿಯು ಆಸನವನ್ನು ಕೊಟ್ಟು ಪೂಜಿಸಿ ಚಿಂತೆಯಿಂದ ಖಿನ್ನಳಾಗಿ ನಿಂತಿರಲು ನೋಡಿ ಮುನಿಯು ನುಡಿದನು–

ಸತಿ! ಬ್ರಾಹ್ಮಣರಿಗೆ ಕ್ಷೇಮವೇ? ಧರ್ಮವು ಚೆನ್ನಾಗಿ ರಕ್ಷಿತವಾಗಿದೆಯೇ? ಮೃತ್ಯುವಿಗೆ ಎದುರಿಲ್ಲ ನಿಜ. ಅದರಿಂದ ಯಾರಾದರೂ ನೊಂದಿರುವರೇ? ಸಂಸಾರಿಗಳಿಗೆ ಧರ್ಮಾರ್ಥ ಕಾಮಗಳು ಕೆಡದೇ ಇರಲು ಬೇಕು. ಅವುಗಳಿಗೆ ತಡೆಯಿಲ್ಲವಲ್ಲ? ಅಥವಾ ಅತಿಥಿಗಳು ಬಂದು ಮನೆಕೆಲಸದಿ ಮಗ್ನಳಾಗಿ ಮಾತಾಡಿಸದ ನಿನ್ನನ್ನು ಕಂಡು, ಹಿಂದಿರುಗಿ ಪೋದರೇ? ಮನೆಗೆ ಬಂದವರಿಗೆ ನೀರಾದರೂ ಸಿಗದಿದ್ದರೆ ಅದು ಮನೆಯೋ ಮಸಣವೋ? ಒಂದು ವೇಳೆ ಸಮಿತ್ತನ್ನು ಪೂರೈಸಿ ಅಗ್ನಿಗಳ ಸಂರಕ್ಷಣವನ್ನು ಮಾಡುವುದನ್ನು ಮರೆತೆಯಾ ಹೇಗೆ? ನಾನಿಲ್ಲದಿರಲು ಉದ್ವಿಗ್ನಳಾಗಿ ದೇವಾತಿಥಿ ಪೂಜೆಗಳನ್ನು ಬಿಟ್ಟೆಯಾ ಏನು? ಸರ್ವದೇವವಲ್ಲಭನಾದ ವಿಷ್ಣುವಿನ ಮುಖವೆನಿಸುವ ಬ್ರಾಹ್ಮಣರ ಹಾಗೂ ಅಗ್ನಿಹೋತ್ರಿಗಳ ಸೇವೆಯಿಂದಲೇ ಗೃಹಸ್ಥರು ಸಕಲ ಸುಖಗಳನ್ನೂ ಪುಣ್ಯಲೋಕಗಳನ್ನೂ ಹೊಂದಬೇಕಾಗಿದೆ. ನಿನ್ನ ಮುಖವನ್ನು ನೋಡಿದರೆ ಅಸ್ವಸ್ಥಳಾದಂತೆ ಕಾಣುವೆ. ನಿನ್ನ ಪುತ್ರರಿಗೆ ಕುಶಲವೇ? ಎಂದು ಕೇಳಲು ಅದಿತಿಯು ಇಂತೆಂದಳು-

ಬ್ರಹ್ಮಜ್ಞಾನಿಯೇ! ಗೋಬ್ರಾಹ್ಮಣರಿಗೆ ಕುಶಲವಾಗಿದೆ. ಧರ್ಮವು ಚೆನ್ನಾಗಿ ಸಂರಕ್ಷಿತ ವಾಗಿದೆ. ಧರ್ಮದಿಂದ ಅರ್ಥಕಾಮಗಳೂ ಕೆಡದಿವೆ. ಅಗ್ನಿಹೋತ್ರಗಳ ಮತ್ತು ಅತಿಥಿಗಳ ಸೇವೆಯೂ ಸರಿಯಾಗಿ ನಡೆದಿದೆ. ಭಿಕ್ಷುಕರು, ಅನಾಥರು ನನ್ನ ಮನೆಯಿಂದ ಬರಿಗೈಲಿ ಹಿಂದಿರುಗ ಲಿಲ್ಲ. ಇದೆಲ್ಲವೂ ಪೂಜ್ಯನಾದ ನಿನ್ನಿಂದ ನನಗೆ ಸಂಪನ್ನವಾಗಿದೆ. ಪರಮ ಪವಿತ್ರ ಧರ್ಮಗಳನ್ನು ಉಪದೇಶಿಸುವ ನಿನ್ನಂತಹ ಪತಿಯನ್ನು ಪಡೆದನನಗೆ ಯಾವ ಕಾಮಿತವೂ ಕಡಿಮೆಯಾಗಿಲ್ಲ. ಮರೀಚಿಪುತ್ರ! ಈ ನಿನ್ನ ಮಕ್ಕಳು ಸಾತ್ವಿಕ ರಾಜಸತಾಮಸರೆಂದು ಖ್ಯಾತರಾಗಿರುವರು. ಅವರ ಕುಶಲಾಕುಶಲಗಳು ನಿನ್ನ ಕೈಯಲ್ಲಿವೆ. ಅವರ ಮನೋರಥಗಳನ್ನು ಪೂರೈಸುವುದು ಸಮರ್ಥನಾದ ನಿನ್ನ ಕರ್ತವ್ಯವೂ ಅಹುದು. ಆದರೆ ಈಗ ನನ್ನ ಮಕ್ಕಳ ಶ್ರೇಯಸ್ಸನ್ನು ಕುರಿತು ಚಿಂತಿಸುವ ನನ್ನ ಬಿನ್ನಹವನ್ನು ಲಾಲಿಸು. ದೈತ್ಯರಿಗೆ ಸೋತು, ಸ್ಥಾನಭೋಗ ದೂರರಾಗಿ ವ್ಯಸನಸಾಗರದಲ್ಲಿ ಮಗ್ನರಾದ ದೇವತೆಗಳ ಐಶ್ವರ್ಯ, ಯಶೋರಾಜ್ಯಕಾಂತಿ ವೈಭವಗಳು ಪುನಃ ಅವರಿಗೆ ಸಿಗು ವಂತಾಗಲೆಂದು ಹಾರೈಸುವುದು ತಪ್ಪಲ್ಲವಲ್ಲ? ಹಾಗೆ ಮಾಡೆಂದು ನಿನ್ನನ್ನು ಸೆರಗೊಡ್ಡಿ ಮಕ್ಕಳಿ ಗಾಗಿ ಬೇಡುತ್ತಿರುವೆನು.

ಎನ್ನಲು ಕಶ್ಯಪನು ನಸುನಕ್ಕು 'ಅಹೋ! ಶ್ರೀಹರಿಯ ಮಾಯಾಬಲವು ಎಷ್ಟು ಅದ್ಭುತ ವಾಗಿದೆ! ಪರಸ್ಪರ ಸ್ನೇಹಪಾಶದಿಂದ ಈ ಪ್ರಜರನ್ನು ಬಿಗಿಸಿ ಆಳುತ್ತಿರುವನಲ್ಲ! ಪಾಂಚಭೌತಿಕ ವಾದ ದೇಹವೆಲ್ಲಿ? ಭೂತಭಿನ್ನನಾದ ಜೀವಾತ್ಮವೆಲ್ಲಿ? ಯಾರು ಯಾರಿಗೆ ಪತಿ ಪುತ್ರಾದಿ ಬಂಧು ಗಳು? ಏನು ಸಂಬಂಧ? ಎಲ್ಲವೂ ಅಜ್ಞಾನ ಮೂಲವಲ್ಲವೇ? ಇರಲಿ. ಅದಿತಿ! ಸರ್ವಭೂತ ಗುಹಾವಾಸನು, ಜಗದ್ಗುರುವಾದ ಜನಾರ್ದನನನ್ನು ಭಕ್ತಿಯಿಂದ ಭಜಿಸು. ದೀನದಯಾಪರನಾದ ಪರಮೇಶನು ನಿನ್ನ ಕೋರಿಕೆಯನ್ನು ಈಡೇರಿಸುವನು. ದೇವತಾಭಜನವು ಒಂದು ವೇಳೆ ವ್ಯರ್ಥವಾಗಬಹುದು. ಆದರೆ ಶ್ರೀಹರಿ ಸೇವೆಯು ಎಂದಿಗೂ ವ್ಯರ್ಥವಲ್ಲ' ಎಂದನು.

ಅದಿತಿಯ ಆಗ 'ಸ್ವಾಮೀ! ಜಗತ್ಪತಿಯನ್ನು ನಾನು ಪೂಜಿಸುವ ವಿಧಾನವಾವುದು? ಸತ್ಯ ಸಂಕಲ್ಪನಾದ ಸ್ವಾಮಿಯು ನನ್ನ ಇಚ್ಛೆಯನ್ನು ಪೂರೈಸುವ ಉತ್ತಮ ವ್ರತವಿಧಿಯನ್ನು ನನಗೆ

ಉಪದೇಶಿಸು. ಪುತ್ರರಿಂದ ಕೂಡಿ ಕಷ್ಟಪಡುವ ನನ್ನಲ್ಲಿ ಬೇಗನೆ ಪ್ರಸನ್ನನಾಗಿ ಶ್ರೀಹರಿಯು ಅನುಗ್ರಹಿಸುವಂತೆ ಮಾಡು' ಎಂದು ಬೇಡಿದಳು.

ಈಗ ಕಶ್ಯಪನು ಅದಿತಿಗೆ ಪಯೋವ್ರತವನ್ನು ಪೇಳಿದನು–

ಅದಿತಿ! ಪ್ರಜಾಕಾಮನಾಗಿ ನಾನು ಕೇಳಿಕೊಂಡಾಗ ಬ್ರಹ್ಮನೇ ಈ ಕೇಶವ ಪರಿತೋಷಕರ ವಾದ ವ್ರತವನ್ನು ನನಗೆ ಹೇಳಿದನು. ಅದನ್ನು ನೀನು ಮಾಡು.

ಫಾಲ್ಗುಣ ಮಾಸದ ಶುಕ್ಲಪಕ್ಷದಲ್ಲಿ ಹನ್ನೆರಡು ದಿನಗಳು ಈ ಪಯೋವ್ರತವನ್ನು ಮಾಡ ಬೇಕು. ಪರಮಭಕ್ತಿಯಿಂದ ಶ್ರೀಶನನ್ನು ಪೂಜಿಸಬೇಕು. ಮಾಘ ಬಹುಳ ಚತುರ್ದಶಿದಿನವೇ ವಿಶೇಷ ನಿಯಮಗಳನ್ನು ಪ್ರಾರಂಭಿಸಬೇಕು. ಹಂದಿಯು ತೋಡಿದ ಮಣ್ಣಿನಿಂದ ಮೃತ್ತಿಕಾ ಶೌಚವನ್ನು ಮಾಡಿ, ಹರಿಯುವ ನದಿ ದೊರೆತರೆ ನದಿಯಲ್ಲಿ ಅಥವಾ ಸರೋವರಾದಿಗಳಲ್ಲಿ ಸ್ನಾನ ಮಾಡಬೇಕು.

'ಭೂದೇವಿ! ಭೂತಗಳು ನಿಲ್ಲುವ ಸ್ಥಾನವಾಗಿರಿಸಲು ಆದಿವರಾಹನಿಂದ ಉದ್ಧೃತಳಾಗಿರುವೆ. ನನ್ನ ಪಾಪಗಳನ್ನು ನಾಶಮಾಡು. ನಿನಗೆ ನಮಃ' ಎಂದು ಮೃತ್ಪ್ರಾರ್ಥನವನ್ನು ಮಾಡಬೇಕು. ಅನಂತರ ಸ್ನಾನಸಂಧ್ಯಾದಿಗಳನ್ನು ಮಾಡಿ ಶ್ರೀದೇವನನ್ನು ಪೂಜಿಸಬೇಕು. ಪ್ರತಿಮೆ, ಭೂಮಿ, ಸೂರ್ಯ, ಜಲ, ಅಗ್ನಿ, ಗುರುಗಳಲ್ಲಿ ಶ್ರೀಹರಿಯನ್ನು ಪೂಜಿಸಬಹುದು.

ಸರ್ವೋತ್ತಮ! ಪೂರ್ಣಷಡ್ಗುಣ! ಸರ್ವಭೂತಗಳಲ್ಲಿ ಸಾಕ್ಷಿಯಾಗಿರುವ ವಾಸುದೇವ! ಅವ್ಯಕ್ತೈಕ ಸ್ವರೂಪನು, ಅತಿ ಸೂಕ್ಷ್ಮನು ಪ್ರಕೃತಿಪುರುಷ ನಿಯಾಮಕನು ಚತುರ್ವಿಂಶತಿ (24) ತತ್ವನಿಯಾಮಕನು, ತತ್ತ್ವದೇವತಾಸ್ವಾಮಿಯು ಆದ ಕಪಿಲನೇ! ನಿನಗೆ ನಮಸ್ಕಾರ.

ಚತ್ವಾರಿಶೃಂಗಾದಿ ಶ್ರುತಿ ಪತಿಪಾದ್ಯ ಅಗ್ನಿನಿಯಾಮಕನೇ! ನಾಲ್ಕು ದೇವತೆಗಳು ನಿನ್ನ ನಾಲ್ಕು ಕೊಂಬುಗಳು; ಪ್ರಾತರ್ಮಾಧ್ಯಂದಿನ ಸಾಯಂ ಸವನಗಳು ನಿನ್ನ ಮೂರು ಪಾದಗಳು; ಪ್ರಾಯಣೀಯ ಉದಯನೀಯಗಳು ನಿನ್ನ ಎರಡು ತಲೆಗಳು. ಏಳು ಛಂದಗಳು ನಿನ್ನ ಏಳು ಕೈಗಳು. ಗಾಯತ್ರಿ, ಉಷ್ಣಿಕ್, ತ್ರಿಷ್ಟುಪ್, ಅನುಷ್ಟುಪ್, ಪ್ರಕೃತಿ, ಜಗತಿ, ಪ್ರತಿಷ್ಠಾ ಎಂಬುವ ಛಂದೋಬದ್ಧ ಮಂತ್ರಗಳಿಂದ ನೀನು ಫಲಗಳನ್ನು ಹವಿರಾದಿ ರೂಪದಿಂದ ಸ್ವೀಕರಿಸಿ ಮಹಾಫಲಪ್ರದನಾಗುವೆಯಲ್ಲವೇ? ಮಂತ್ರ ಬ್ರಾಹ್ಮಣಕಲ್ಪಗಳು ನಿನ್ನನ್ನು ಕಟ್ಟಿ ನಿಲ್ಲಿಸುವ ಕಣ್ಣುಗಳಂತಿವೆ. ಶಸ್ತ್ರ ಉದ್ಗಾತೃ ಸ್ತುತಿ ಶಬ್ದಗಳಿಂದ ನೀನು ಋತ್ವಿಜರ ಮುಖದಲ್ಲಿ ನಿಂತು ಗುಟುರು ಹಾಕುವೆ. ಧರ್ಮಸ್ವರೂಪನಾದ್ದರಿಂದ ನಿನ್ನನ್ನು ವೃಷಭವೆನ್ನುವರು. ಫಲವನ್ನು ಚೆನ್ನಾಗಿ ಪೂರ್ಣಮಾಡಿ ಕೊಡುವುದರಿಂದ ದೇವನೆಂದೂ ಖ್ಯಾತನಾದ ನಿನಗೆ ನಮಸ್ಕಾರ. ವಂಶಸಂತತಿ ವರ್ಧಕನು ವ್ಯಾಪ್ತನು ಸೋಮಪಾನ ದೇವಾಂತರ್ಯಾಮಿಯು ಆದ ನಿನಗೆ ನಮಸ್ಕಾರ. ಶಿವನೇ! ರುದ್ರನೇ! ಮಂಗಳ ಸ್ವರೂಪನು ರೋಗನಿವಾರಕನು ನೀನೇ! ಸರ್ವವಿದ್ಯೆಗಳು ನಿನ್ನಿಂದ ಫಲಿಸು ವುವು. ಬ್ರಹ್ಮಾಂತರ್ಯಾಮಿಯೇ! ದುಃಖವನ್ನು ಕಳೆದು ಸುಖವನ್ನು ಕೊಡುವ ಹಿರಣ್ಯಗರ್ಭನೇ! ನೀನೇ ಜಗತ್ಪ್ರಭುವು. ಯೋಗಗಮ್ಯನು, ಯೋಗೇಶನು, ಆದಿದೇವನು, ದೇವವಂದ್ಯನು, ನಾರಾಯಣ ಋಷಿರೂಪನು, ನರಾಂತರ್ಯಾಮಿಯು ಆದ ಶ್ರೀಹರೇ! ನಿನಗೆ ನಮಃ!

ಮರಕತಶ್ಯಾಮ ಮಂಗಳಾಕಾರ! ಶ್ರೀವತ್ಸಧರ! ಬ್ರಹ್ಮರುದ್ರೇಂದ್ರ ಪ್ರವರ್ತಕ! ಪೀತಾಂಬರ ಧರ! ಸರ್ವ ಪುರುಷರಿಗೆ ವರವು ನಿನ್ನಿಂದ. ವರದರಾದ ದೇವತೆಗಳಿಗೆ ನೀನು ವರದರಾಜನು. ಅಂತೆಯೇ ನಿನ್ನ ಪಾದಾರವಿಂದ ಪರಾಗವನ್ನು ಕೋರಿ ಧೀರರು ನಿನ್ನನ್ನೇ ಪೂಜಿಸುವರು.

ಕಾಂತಿಯಿಂದ ಪದ್ಮವನ್ನೂ, ಪದ್ಮರಾಗವನ್ನೂ ಧಿಕ್ಕರಿಸುವ ನಿನ್ನ ಪಾದಾಂಬುಜಗಳ ಗಂಧವನ್ನು ದೇವತೆಗಳು ಆಸಕ್ತರಾಗಿ ಭಜಿಸುವರು. ಶ್ರೀ ಭಗವಾನ್! ನನ್ನಲ್ಲಿ ದಯಮಾಡು.

ಎಂಬೀ ಮಂತ್ರಗಳಿಂದ ಶ್ರೀಹೃಷೀಕೇಶನನ್ನು ನುತಿಸಿ ಆವಾಹಿಸಿ, ಪಾದ್ಯ,ಅರ್ಘ್ಯ, ಆಚಮನಾದಿಗಳನ್ನು ಕೊಟ್ಟು ಕ್ಷೀರಾಭಿಷೇಕವನ್ನು ಮಾಡಿ ಗಂಧ ಪುಷ್ಪ ವಸ್ತ್ರೋಪವೀತಾ ಭರಣಗಳಿಂದ ಅಲಂಕರಿಸಬೇಕು. ವಾಸುದೇವ ಮಂತ್ರದಿಂದ ಧೂಪ ದೀಪ ನೈವೇದ್ಯಗಳನ್ನರ್ಪಿಸ ಬೇಕು. ದೇವರು ಕೊಟ್ಟಿದ್ದರೆ ಪಾಯಸ ಘೃತ ಶಾಲ್ಯನ್ನ ಭಕ್ಷ್ಯಗಳನ್ನರ್ಪಿಸಿ, ಮೂಲಮಂತ್ರದಿಂದ ಹೋಮಿಸಿ, ಶೇಷವನ್ನು ಭಕ್ತರಿಗೂ ಕೊಟ್ಟು, ತಾನೂ ಸ್ವೀಕರಿಸಬೇಕು. ಮತ್ತೆ ಆಚಮನವನ್ನಿತ್ತು ಪೂಜಿಸಿ, ತಾಂಬೂಲ ದಕ್ಷಿಣೆಗಳನ್ನು ಕೊಟ್ಟು, ಶ್ರೀಹರಿಯನ್ನು ಸ್ತುತಿಸಿ, ಪ್ರದಕ್ಷಿಣ ನಮಸ್ಕಾರ ಗಳನ್ನು ಮಾಡಿ, ಶ್ರೀಹರಿ ನಿರ್ಮಾಲ್ಯವನ್ನು ಶಿರದಿ ಧರಿಸಿ, ಅನಂತರ ಉದ್ವಾಸನೆಯನ್ನು ಮಾಡ ಬೇಕು. ನಿತ್ಯವೂ ಪಾಯಸಾನ್ನಗಳಿಂದ ಇಬ್ಬರಿಗೂ ಕಡಿಮೆಯಾಗದೆ, ಶಕ್ತಿಯಿದ್ದರೆ ಹನ್ನೆರಡು ಜನ ವಿಪ್ರರಿಗೆ ಉಣಿಸಿ, ಅವರಪ್ಪಣೆಯನ್ನು ಪಡೆದು ತಾನೂ ಹುತಶೇಷ ಕ್ಷೀರವನ್ನು ಸ್ವೀಕರಿಸ ಬೇಕು. ಇದೇ ರೀತಿಯಾಗಿ ದ್ವಾದಶಿಯವರೆಗೂ ಮಾಡಿ, ಪಯೋಭಕ್ಷನಾಗಿರಬೇಕು. ನಿತ್ಯವೂ ಹರಿಪೂಜೆ, ಹೋಮ, ವಿಪ್ರಭೋಜನಗಳು ಚತುರ್ದಶಿಯವರೆಗೂ ನಡೆಸಿ, ಅವಹಿತನಾಗಿ ಶ್ರೀಹರಿಯನ್ನು ಚಿಂತಿಸುತ್ತಿರಬೇಕು. ಬ್ರಹ್ಮಚರ್ಯ, ಅಧಶ್ಶಯನ, ಮೂರುಸ್ನಾನ, ಹರಿಯ ಆರಾಧನೆಗಳು ಇದರ ನಿಯಮಗಳು. ವಿಷಯಭೋಗಗಳನ್ನು ವರ್ಜಿಸಿ, ದುಷ್ಟರಿಂದ ಮಾತಾಡದೆ ಸರ್ವಭೂತಗಳಿಗೆ ಹಿಂಸೆ ಮಾಡದೆ ವಾಸುದೇವರತನಾಗಿರಬೇಕು.

ತ್ರಯೋದಶಿಯ ದಿನ ಮಹಾಭಿಷೇಕ ವಿಧಿಯಿಂದ ಶ್ರೀರಮಣೀ ರಮಣನನ್ನು ಪೂಜಿಸಿ, ಧನಲೋಭವಿಲ್ಲದೆ ಜ್ಞಾನಿಗಳನ್ನು ಪೂಜಿಸಬೇಕು. ಸೂರ್ಯರಶ್ಮಿ ಸ್ಥಿತವಾದ ಗರುಡಾರೂಢನನ್ನು ಧ್ಯಾನಿಸಿ ಆ ಶಿಪಿವಿಷ್ಟನೆನಿಸಿದ ಪ್ರಧಾನ ದೇವನಿಗೆ ಹಾಲಿನ ಅನ್ನದಿಂದ ಹೋಮಿಸಬೇಕು. ಶ್ರೀಹರಿಯು ಪ್ರೀತನಾಗಲಿ ಎಂದು ನೈವೇದ್ಯವನ್ನಿತ್ತು ಜ್ಞಾನಸಂಪನ್ನನಾದ ವಿಪ್ರನಿಗುಣಿಸಿ ವಸ್ತ್ರಮಾಲ್ಯಾಭರಣ ಗೋದಾನವನ್ನಿತ್ತು, ಇತರ ಋತ್ವಿಕ್ಜನರನ್ನು ಗೌರವಿಸಬೇಕು. ಅವರೆಲ್ಲ ರಿಗೂ, ಬಂದ ಇತರರಿಗೂ ಮೃಷ್ಟಾನ್ನವನ್ನು ದಾನಮಾಡಿ ಗುರು ಮೊದಲಾದ ವಿಪ್ರರಿಗೆ ದಕ್ಷಿಣೆ ಯನ್ನು ಕೊಡಬೇಕು. ಅನಂತರ ವಿಪ್ರಸ್ವಜನ ಭೋಜನಾವಶಿಷ್ಟ ಪದಾರ್ಥಗಳನ್ನು ಚಾಂಡಾ ಲಾಂತರಾದ ಜೀವರಿಗಿತ್ತು, ಶ್ರೀಹರಿಯು ಪ್ರೀತನಾಗಲಿ ಎಂದು ಸರ್ವಸಮರ್ಪಣವನ್ನು ಮಾಡ ಬೇಕು. ನೃತ್ಯ, ವಾದ್ಯ, ಗೀತಗಳಿಂದಲೂ, ಸ್ವಸ್ತಿವಾಚನಗಳಿಂದಲೂ ಶ್ರೀಹರಿಕಥಾ ಶ್ರವಣ ದಿಂದಲೂ ಕಾಲವನ್ನು ಕಳೆಯಬೇಕು. ಇದು ಪಯೋವ್ರತವು. ಇದರಿಂದ ನಿನ್ನ ಮನೋರಥವು ಪೂರ್ಣವಾಗುವುದು. ಬ್ರಹ್ಮನಿಂದ ಸ್ವೀಕರಿಸಿದ ಈ ವ್ರತರಾಜನನ್ನು ನಿನಗೆ ಹೇಳಿರುವೆನು. ಶುದ್ಧ ಶಕ್ತಿಯಿಂದಲೂ, ಶ್ರದ್ಧೆಯಿಂದಲೂ ಈ ತಪಸ್ಸಾರವಾದ ವ್ರತವನ್ನು ಮಾಡು. ಶ್ರೀಶನು ಪ್ರೀತನಾಗಲು ಬೇಕಾದ ದಾನಗಳನ್ನೂ ಮಾಡು. ಶ್ರೀ ಯಜ್ಞನಾಮಕ ಭಗವಂತನಿಗೆ ಪ್ರೀತಿಕರ ವಾದುದೇ ತಪವು, ಅದೇ ದಾನವು, ಅದೇ ನಿಜವಾದ ವ್ರತವು. ಆದ್ದರಿಂದ ಶ್ರದ್ಧೆಯಿಂದ ಶ್ರೀಹರಿ ಯನ್ನರ್ಚಿಸಿ ಈ ವ್ರತವನ್ನು ಮಾಡು. ಶ್ರೀಶನು ಪ್ರೀತನಾಗಿ ನಿನ್ನ ಇಷ್ಟವನ್ನು ಪೂರೈಸುವನು.

## ೧೬. ಅದಿತಿಗೆ ವರದಾನ

ಶ್ರೀಶುಕನು ಹೇಳಿದನು–

ಕಶ್ಯಪನ ಮಾತನ್ನು ಕೇಳಿ ಅದಿತಿಯು ಶ್ರದ್ಧೆಯಿಂದ ಸಕಾಲದಲ್ಲಿ ಆ ವ್ರತವನ್ನು ಮಾಡಿದಳು. ಇಂದ್ರಿಯಾಶ್ವಗಳನ್ನು ಮನಸ್ಸೆಂಬ ಕಡಿವಾಣದಿಂದ ಬಿಗಿದು, ಬುದ್ಧಿ ಸಾರಥಿಯ ಕೈಲಿಟ್ಟು, ಸರ್ವೇಂದ್ರಿಯ ನಿಯಾಮಕನು, ಸರ್ವತ್ರ ವ್ಯಾಪ್ತನು ಆದ ಶ್ರೀಹರಿಯನ್ನು ಭಕ್ತಿಯಿಂದ ಭಜಿಸಿದಳು. ಭಗವಂತನು ಅವಳ ತಪಸ್ಸಿಗೆ ವ್ರತ ಪೂಜಾದಿಗಳಿಗೆ ಮೆಚ್ಚಿ, ಶಂಖಚಕ್ರಗದಾಧರನು, ಪೀತಾಂಬರನು ಆಗಿ ಪ್ರತ್ಯಕ್ಷನಾದನು. ಆ ಚತುರ್ಭುಜನನ್ನು ಕಂಡು ಎದ್ದು ನಿಂತು, ಆದರದಿಂದ ಸಾಷ್ಟಾಂಗವೆರಗಿ, ಪ್ರೀತಿಯಿಂದ ಕೈ ಜೋಡಿಸಿ ನಿಂತು, ಅದಿತಿಯು ಆನಂದದಿಂದ ಮೈಮರೆತಳು. ಸ್ವಾಮಿಯ ದರ್ಶನದಿಂದ ಆನಂದತುಂದಿಲಳಾದ ಅದಿತಿಯ ಕಣ್ಣುಗಳು ಆನಂದಜಲಾಕುಲವಾದವು, ಅವಳ ಮೈ ಪುಳಕಿತವಾಯಿತು. ಮಾತಾಡಲು ಬಾರದಂತೆ ಗಂಟಲಸೆರೆಯು ಉಬ್ಬಿತು. ಭಕ್ತಿಯಿಂದ ಭಗವಂತನಾದ ರಮಾಪತಿಯನ್ನು ನೋಡುತ್ತ ಸಮಾಧಾನವನ್ನು ಹೊಂದಿ, ಮೆಲ್ಲನೆ ಸ್ತುತಿಸತೊಡಗಿದಳು–

ಯಜ್ಞೇಶ! ಯಜ್ಞಪುರುಷ! ನಾಶರಹಿತ! ತೀರ್ಥಪಾದ! ಶಾಸ್ತ್ರಶ್ರವಣನಿರತರಿಗೆ ಮಂಗಳಪ್ರದವಾದುದು ನಿನ್ನ ನಾಮ. ದೀನರಾಗಿ ನೊಂದಿರುವರ ಪಾಪವನ್ನು ದುಃಖವನ್ನು ನಾಶಮಾಡುವುದು ನಿನ್ನ ಅವತಾರ. ಆಪನ್ನ ಜನವತ್ಸಲ! ದೀನಬಂಧೋ! ನಮಗೆ ಮಂಗಳಪ್ರದನಾಗು. ವಿಶ್ವವ್ಯಾಪ್ತನು, ವಿಶ್ವಜನನ ಸ್ಥಿತಿನಾಶಕಾರಣನು, ಸ್ವೇಚ್ಛಾಗೃಹೀತ ಶುಭಾವತಾರನು, ಪರಿಪೂರ್ಣಗುಣನು, ಸದಾವೃದ್ಧ ಪೂರ್ಣಬೋಧ (ಮಧ್ವ) ನಾಶಿತ ತಮಸ್ಕನು ಪಾಪಹರನು ಆದ ಲೋಕೇಶಾ! ನಿನಗೆ ನಮಃ- ನೀನು ಸಂತೋಷಪಟ್ಟರೆ ಸಾಕು. ನಿನ್ನ ಅನುಗ್ರಹದಿಂದ ಆಯುಸ್ಸು, ಶರೀರಸೌಷ್ಠವ, ಸಾಟಿಯಿಲ್ಲದ ಸಂಪತ್ತು, ದ್ಯುಲೋಕ ಭೂಲೋಕಗಳ ಐಶ್ವರ್ಯ, ಅಣಿಮಾದಿ ಯೋಗಸಿದ್ಧಿಗಳು ಧರ್ಮಾರ್ಥಕಾಮಗಳು ಸಿಗುವುವು. ನಿನ್ನ ಅನುಗ್ರಹದಿಂದ ಮೋಕ್ಷೋಪಯೋಗಿಯಾದ ಉತ್ತಮ ಜ್ಞಾನವು ಲಭಿಸುವುದು! ಅಂದಮೇಲೆ ಶರಣಾಗತ ಜನ ಮನೋದುಃಖನಾಶವಾಗುವುದೆಂದು ಹೇಳಬೇಕೇ?

ಈ ರೀತಿ ನುತಿಸಿದ ಅದಿತಿಗೆ ಪ್ರೀತನಾಗಿ ಸರ್ವಭೂತಪತಿಯು ಇಂತೆಂದನು–

ದೇವಜನನಿ! ನಿನ್ನೀ ಚಿರಕಾಂಕ್ಷಿತವನ್ನರಿತಿರುವೆನು. ನಿನ್ನ ಮಕ್ಕಳ ಐಶ್ವರ್ಯವನ್ನು ಹರಿಸಿ, ಸ್ವರ್ಗದಿಂದೋಡಿಸಿದ ದುರ್ಮದರಾದ ಅಸುರರಾಜ್ಯರನ್ನು ಗೆದ್ದು ಮತ್ತೆ ತಮ್ಮ ರಾಜ್ಯ ಸಂಪತ್ತುಗಳನ್ನು ಪೊಂದಿದ ಆ ನಿನ್ನ ಸುತರಿಂದ ಕೂಡಿ ನನ್ನನ್ನು ಪೂಜಿಸಬೇಕೆಂದಿರುವೆ ಅಲ್ಲವೇ? ಇಂದ್ರಪ್ರಮುಖರಾದ ನಿನ್ನ ಸುತರು ಯುದ್ಧರಂಗದಿ ಕೊಂದ ಅಸುರರ ದೇಹಂಗಳನ್ನು ಸುತ್ತುಗಟ್ಟಿ ಅಳುವ ದೈತ್ಯಕಾಂತೆಯರನ್ನು ನೋಡಬೇಕೇ? ಸುಸಮೃದ್ಧವಾದ ಸ್ವರ್ಗರಾಜ್ಯವನ್ನು ಮತ್ತೆ ಪೊಂದಿ, ಯಶೋವಿಭವಸಮೇತರಾಗಿ ಕ್ರೀಡಿಸುವ ಪುತ್ರರನ್ನು ನೋಡಬೇಕೇ? ಇದಷ್ಟು ಸುಲಭವಲ್ಲ. ಕೇಳು. ಈಗ ಆ ದೈತ್ಯನಾಥರನ್ನು ರಣರಂಗದಲ್ಲಿ ಯಾರೂ ಗೆಲ್ಲಲಾರರೆಂದೇ ನನ್ನ ಅಭಿಪ್ರಾಯ. ಅವರಿಗೆ ದೈವಾನುಕೂಲ್ಯವು ಗುರ್ವನುಗ್ರಹದಿಂದ ಬಂದು ದೃಢನಾಗಿ ನಿಂತಿದೆ. ಪರಾಕ್ರಮದಿಂದ ಈಗ ಪ್ರಯೋಜನವಿಲ್ಲ. ಆದರೂ ನಿನ್ನಿಚ್ಛೆ ಫಲಿಸಲು ನಿನ್ನ ವ್ರತದಿಂದ ತುಷ್ಟನಾದ ನಾನೇನಾದರೊಂದು ಉಪಾಯವನ್ನು ಚಿಂತಿಸಬೇಕಾಗಿದೆ; ಶ್ರದ್ಧಾನುರೂಪವಾಗಿ

ಫಲವನ್ನು ಕೊಡುವ ನನ್ನ ವ್ರತವು ಎಂದಿಗೂ ವ್ಯರ್ಥವಾಗುವುದಿಲ್ಲ. ನೀನೋ ಕಡುಶ್ರದ್ಧೆಯಿಂದ ಪಯೋವ್ರತವನ್ನು ಮಾಡಿ, ಮಕ್ಕಳ ಕ್ಷೇಮವನ್ನೇ ಬೇಡುತ್ತಿರುವೆ. ಆದ್ದರಿಂದ ನಾನೇ ಒಂದಂಶ ದಿಂದ ನಿನಗೆ ಮಗನಾಗಿ ಜನಿಸಿ, ನಿನ್ನ ಮಕ್ಕಳನ್ನು, ಬಿಕ್ಕೆ ಬೇಡಿಯಾದರೂ, ಪೊರೆಯುವೆನು. ಚಿಂತಿಸಬೇಡ. ಕಶ್ಯಪತಪೋಬಲದಿ ನಿಂತು ಆಮೇಲೆ ನಿನ್ನ ಹೃದಯವನ್ನು ಪ್ರವೇಶಿಸುವೆನು. ಅದಕ್ಕಾಗಿ ನಿಷ್ಪಾಪನಾಗಿರುವ ಕಶ್ಯಪ ಪ್ರಜೇಶನನ್ನು ಚೆನ್ನಾಗಿ ಸೇವಿಸು. ಈ ರೂಪದಿಂದ ನಿನಗೆ ಮಗನಾಗಲೂ ಬಂದ ನನ್ನನ್ನೂ ಚಿಂತಿಸು. ನಾನು ಅವತರಿಸುವೆನೆಂದು ಇತರರಿಗೆ ಹೇಳಬೇಡ. ಇದು ದೇವರಹಸ್ಯವು. ಇದನ್ನು ಚೆನ್ನಾಗಿ ರಕ್ಷಿಸುವುದರಿಂದ ಮುಂದೆ ಸರ್ವಕಾರ್ಯವೂ ಸುಗಮವಾಗುವುದು ಎಂದು ಹೇಳಿ ಶ್ರೀಶನು ಅಂತರ್ಹಿತನಾದನು.

ಅದಿತಿಯು ತನ್ನಲ್ಲಿ ಶ್ರೀಹರಿಯವತಾರವಾಗುವುದೆಂಬ ನಂಬಿಕೆಯಿಂದ ಅತ್ಯಂತ ಕುತುಕ ಸ್ವಾಂತಳಾಗಿ, ಭಕ್ತಿಯಿಂದ ಕಶ್ಯಪನನ್ನು ಸೇವಿಸಿದಳು. ಆ ಪ್ರಜಾಪತಿಯು ಸಮಾಧಿ ಬಲದಿಂದ ಶ್ರೀಹರಿಯು ತನ್ನಲ್ಲಿ ಸನ್ನಿಹಿತನಾಗಿರುವುದನ್ನು ಕಂಡನು. ಚಿರಸಂಚಿತ ತಪೋವಿಭವನು, ಅಮೋಘ ಜ್ಞಾನಸಂಪನ್ನನು, ಆದ ಕಶ್ಯಪನಿಂದ ಸಮಾಹಿತಮನಸ್ಕಳಾದ ಅದಿತಿಯು ಗರ್ಭವನ್ನು ಧರಿಸಿ ದಳು. ಸನಾತನನು ಅವತರಿಸಲಿರುವುದನ್ನರಿತು, ಬ್ರಹ್ಮದೇವನು ಬಂದು ಗೋವಿಂದನನ್ನು ಸ್ತುತಿಸಿದನು–

ಉರುಗಾಯ! ಉರುಕ್ರಮ! ನಿನಗೆ ನಮಸ್ಕಾರ. ಬ್ರಾಹ್ಮಣತವತ್ಸಲನು, ತ್ರಿಗುಣಪ್ರೇರಕನು ಆದ ನಿನಗೆ ವಂದನವು ಹಿಂದೆ ನೀನು ಪೃಶ್ನಿಗರ್ಭನೆನಿಸಿದೆ. ನೀನು ಬೇಕಾದಾಗ ಸ್ವೇಚ್ಛೆಯಿಂದ ಅವತರಿಸುವೆ. ವೈಕುಂಠಾನಂತಾಸನ ಶ್ವೇತದ್ವೀಪಗಳಲ್ಲಿ ನೆಲೆಸಿರುವ ಗರುಡ ವಾಹನನು, ಜಗದಾದಿಯು, ಸ್ಥಿತಿಲಯಕಾರಣನು, ಅನಂತಶಕ್ತಿಸಂಪನ್ನನು ಆದ ಪರಮೇಶ! ನೀನು ಜಯಶೀಲನಾಗಿರುವೆ. ಕಾಲನಾಗಿ ಜೀವರಿಗಿರುವ ಜನನಮರಣಗಳನ್ನು ಧಿಕ್ಕರಿಸಿ, ಶಶ್ವದೇಕ, ಪ್ರಕಾರನಾಗಿ ನಿಂತಿರುವೆ. ನದೀಪಾತ್ರದಲ್ಲಿ ಗಂಭೀರಜಲವು ಹರಿಯುತ್ತಿರುವಂತೆ ನಿನ್ನ ಆಧಾರ ದಿಂದ ಈ ಜಗತ್ಪ್ರವಾಹವು ನಡೆಯುತ್ತಿದೆ. ಸಮುದ್ರದಲ್ಲಿ ಮುಣುಗುತ್ತಿರುವವನಿಗೆ ನೌಕೆಯಂತೆ ಸ್ವರ್ಗಭ್ರಷ್ಟರಾಗಿರುವ ದೇವತೆಗಳಿಗೆ ನೀನೇ ಈಗ ರಕ್ಷಕನಾಗು – ಎಂದು ವಿರಂಚನು ನುತಿಸಿ ಪೋದನು.

## ೧೭. ವಾಮನ ಪ್ರಾದುರ್ಭಾವ – ಬಲಿ – ಯಜ್ಞವಾಟ – ಗಮನ

ಶ್ರೀಶುಕನು ಹೇಳಿದನು–

ಮುಕ್ತಾಶ್ರಯನಾದ ನಾರಾಯಣನು ಬ್ರಹ್ಮನ ಪ್ರಾರ್ಥನೆಯಂತೆ ಅದಿತಿಯಲ್ಲಿ ಅವತರಿಸಿ ದನು.

ಚತುರ್ಭುಜನು, ಶಂಖಚಕ್ರಪದ್ಮಗದಾಧರನು, ಪೀತಾಂಬರನು, ಶ್ಯಾಮವರ್ಣನಾದ ಶ್ರೀಹರಿಯು, ನಲಿನವಿಶಾಲನೇತ್ರಗಳಿಂದ ಕರುಣಾಕಟಾಕ್ಷವನ್ನು ಬೀರುತ್ತಿದ್ದನು. ಮಕರ ಕುಂಡಲ ಗಳ ಕಾಂತಿಯಿಂದ ಮುಖಪಂಕಜವು, ಶ್ರೀವತ್ಸದಿಂದ ವಕ್ಷಸ್ಥಲವು, ವಲಯಾಂಗದ ಗಳಿಂದ ಬಾಹುಲತೆಗಳು, ಕಾಂಚೀನೂಪುರಗಳಿಂದ ಪಾದಾರವಿಂದಗಳು ಶೋಭಿಸಿದವು. ಮಧುಕರ ಝಂಕಾರ ವಿಲಸಿತ ದಿವ್ಯವನಮಾಲೆಯನ್ನು ಶ್ರೀ ಕೌಸ್ತುಭಮಣಿಯನ್ನು ಧರಿಸಿದ ಶ್ರೀಶನು

ತನ್ನ ದಿವ್ಯಕಾಂತಿಯಿಂದ ಕಶ್ಯಪನ ಮನೆಯ ಕತ್ತಲನ್ನು, ಹೃದಯದ ಕತ್ತಲನ್ನು ಕೂಡ, ನಾಶಪಡಿಸಿ ಬೆಳಗಿದನು. ಆಗ ದಿಕ್ಕುಗಳು ಪ್ರಸನ್ನವಾದವು. ಸರೋವರ ನದೀಜಲಗಳು ನಿರ್ಮಲವಾಗಿ ಪ್ರಕಾಶಿಸಿದವು. ಪ್ರಜರ ಹೃದಯವು ಆನಂದ ಭರಿತವಾಯಿತು. ಭೂಮ್ಯಂತರಿಕ್ಷ ದೇವಲೋಕದ ಜನರು, ವಿಪ್ರರು, ಗೋವುಗಳು ಮನಶ್ಶಾಂತಿ ಸಮಾಧಾನಗಳನ್ನು ಪೊಂದಿದರು.

ಭಾದ್ರಪದಮಾಸದ ಶುಕ್ಲದ್ವಾದಶಿಯ ಮಧ್ಯಾಹ್ನ ಸಮಯದಲ್ಲಿ ಅಭಿಜಿನ್ಮುಹೂರ್ತದ ಶುಭವೇಳೆಯಲ್ಲಿ ವಿಜಯಾ ಯೋಗದಲ್ಲಿ ಶ್ರೀ ವಾಮನನು ಪ್ರಾದುರ್ಭವಿಸಿದನು. ಆಗ ಗ್ರಹ ಗಳು ಶುಭಸ್ಥಾನಗಳಲ್ಲಿದ್ದುವು. ದೇವತೆಗಳು ಮೃದಂಗ ಪಣವತೂರ್ಯಾದಿ ವಾದ್ಯಗಳನ್ನು ಬಾರಿಸಿದರು. ಗಂಧರ್ವರು ಹಾಡಲು, ಅಪ್ಸರೆಯರು ನೃತ್ಯ ಮಾಡಿದರು. ದೇವ ಮನು ಪಿತೃ ವಹ್ನಿ ಸಿದ್ಧ ವಿದ್ಯಾಧರಾದಿಗಳು ಸ್ತುತಿಸಿದರು. ಗಾನಮಾಡಿ ಪೊಗಳುತ್ತಾ ಆದಿತ್ಯರು ಆಶ್ರಮ ಸ್ಥಲದಿ, ಕುಸುಮ ವರ್ಷವನ್ನು ಸುರಿಸಿದರು.

ಅದಿತಿಯು ತನ್ನ ಗರ್ಭಸಂಭೂತನಾದ ಪರಮಪುರುಷನನ್ನು ನೋಡಿ, ಆಶ್ಚರ್ಯಾನಂದ ಸಂಭ್ರಮಗಳಿಂದ ನಿಂತಿರಲು, ಕಶ್ಯಪನು ಸ್ವೇಚ್ಛೆಯಿಂದ ಅವತರಿಸಿ ಬಂದ ಶ್ರೀಹರಿಯನ್ನು ನೋಡಿ, ಜಯಜಯಕಾರವನ್ನು ಮಾಡಿ ನಮಿಸಿದನು. ಸ್ವಭಾವದಿಂದ ಅವ್ಯಕ್ತನಾದರೂ ಭಕ್ತಾನು ಕಂಪಾವಶನಾಗಿ, ದಿವ್ಯಚತುರ್ಬಾಹು ಸುಂದರರೂಪವಾಗಿ ತೋರಿದ ಸ್ವಾಮಿಯು ಅವರು ನೋಡುತ್ತಿರುವಂತೆ ವಟುವಾಮನನಾಗಿ ನಿಂತನು. ಅವನನ್ನು ನೋಡಿ ಮುದಿತ ಮಾನಸರಾಗಿ, ಮುನಿವರರು ಕಶ್ಯಪದಿಂದ ಅವನಿಗೆ ಸಕಲ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದರು. ಉಪನಯನಸಿದ್ಧನಾದ ಆ ಬಾಲಕನಿಗೆ ಸೂರ್ಯನು ಗಾಯತ್ರೀಮಂತ್ರವನ್ನು ಹೇಳಿಕೊಟ್ಟನು. ಬೃಹಸ್ಪತಿ ಉಪವೀತವನ್ನು, ಕಶ್ಯಪನು ಮೇಖಲೆಯನ್ನು, ಭೂದೇವಿ ಕೃಷ್ಣಾಜೀನವನ್ನು, ಸೋಮನು ದಂಡವನ್ನು, ಅದಿತಿ ಕೌಪೀನವನ್ನು, ಭಾರತೀದೇವಿ ಛತ್ರವನ್ನು, ಬ್ರಹ್ಮನು ಕಮಂಡಲುವನ್ನು, ಸಪ್ತರ್ಷಿಗಳು ಕುಶಗಳನ್ನು, ಸರಸ್ವತಿ ಅಕ್ಷಮಾಲೆಯನ್ನು ಕೊಟ್ಟು ಸತ್ಕರಿಸಿ ದರು. ಯಕ್ಷರಾಜನಾಗ ಭಿಕ್ಷಾಪಾತ್ರವನ್ನು ಕೊಡಲು ಸಾಕ್ಷಾದಂಬಿಕೆ ಭಿಕ್ಷೆಯನ್ನು ನೀಡಿದಳು. ಬ್ರಹ್ಮವರ್ಚಸ್ಸೇ ಮೂರ್ತೀಭವಿಸಿದಂತೆ ಸಭೆಯಲ್ಲಿ ನಿಂತು, ಬ್ರಹ್ಮರ್ಷಿಗಣ ಮಧ್ಯದಲ್ಲಿ ಚಂದ್ರನು ತಾರಾಗಣ ಮಧ್ಯದಲ್ಲಂತೆ ಪ್ರಕಾಶಿಸಿದನು. ಸಮಿದ್ಧಾಗ್ನಿಯನ್ನು ಪರಿಸಮೂಹನ ಪರಿಸ್ತರಣ ಸುಮುಖನನ್ನಾಗಿಸಿ, ಸಮಿಧಗಳನ್ನು ಹೋಮಿಸಿ ವಾಮನನು ತನಗೆ ಭಿಕ್ಷೆಯನ್ನಿತ್ತು, ಸಂತೈಸುವ ದಾತನಾರೆಂದು ವಿಚಾರಿಸಿದನು.

ಭೃಗುಪುತ್ರರಿಂದ ನಡೆಸಲ್ಪಡುವ ಅಶ್ವಮೇಧಗಳ ಯಜಮಾನರಾದ ಬಲಿರಾಜನು ನಿಜವಾದ ದಾನಶೂರನೆಂದು ಕೇಳಿ ವಾಮನನು ಅಶ್ವಮೇಧ ವಾಟವನ್ನು ಕುರಿತು ಹೊರಟನು. ಅವನ ಪಾದಪದ್ಮ ಸಮಲಂಕೃತಳಾಗಿ ನಮಿಸುವಳೆಂಬಂತೆ, ಭೂಮಿಯು ಆ ಬ್ರಹ್ಮಾಂಡೋದರನು ಕಾಲಿಟ್ಟಲ್ಲಿ ಬಾಗಿ ಬಗ್ಗುತ್ತಿತ್ತು. ಮುಕ್ತಿಮರ್ಮದೆಯು, ಸುಜನ ಶರ್ಮದೆಯು ಆದ ನರ್ಮದೆಯ ಉತ್ತರತಟದಲ್ಲಿ ಭೃಗುವತ್ಸವೆಂಬ ಆಶ್ರಮದಲ್ಲಿ ಅಶ್ವಮೇಧ ಯಜ್ಞವನ್ನು ಬಲಿರಾಜನಿಂದ ಮಾಡಿಸುತ್ತಿದ್ದ ಶುಕ್ರಾದಿ ವಿಪ್ರರು ಬರುವ ವಟುವನ್ನು ಕಂಡು, ಅವನ ತೇಜದಿಂದ ಕಣ್ಣು ಕುಕ್ಕಿದಂತಾಗಿ ಇಂತು ಚಿಂತಿಸಿದರು–

ಸೂರ್ಯನೇ ಬಂದನೋ?– ಅಥವಾ ಅಗ್ನಿಯೋ? ಈ ಯಜ್ಞವನ್ನು ನೋಡಲು ಬಂದು ಸನತ್ಕುಮಾರನೋ? ಎಂದಾಶ್ಚರ್ಯಪಡುವ ಋತ್ವಿಜರ ಸಭೆಯಲ್ಲಿ ವಾಮನನು ಪ್ರವೇಶಿಸಿದನು.

ದಂಡಚ್ಛತ್ರಗಳನ್ನು, ಜಲಕಮಂಡಲುವನ್ನು ಹಿಡಿದು, ಮೇಖಲಾಮೌಂಜೀಯುತನಾಗಿ, ಉಪವೀತವನ್ನು ಧರಿಸಿ ಜಟಾಧಾರಿಯಾದ ವಟು ವಾಮನನನ್ನು ನೋಡಿ ಶುಕ್ರಾಚಾರ್ಯನು ಅಗ್ನಿಗಳನ್ನು ಸಮಿತ್ತಿನಲ್ಲಿಟ್ಟು ಹಿಡಿದು ದಿನಕರನ ಕಿರಣ ಸಹಿತ ನಕ್ಷತ್ರಗಳಂತೆ ನಿಸ್ತೇಜಸ್ಕರಾಗಿ ನೋಡುವ ಶಿಷ್ಯರ ಸಹಿತವಾಗಿ ಎದ್ದು ನಿಂತನು.

ಬಲಿರಾಜನು ದರ್ಶನೀಯವಾದ ವಾಮನನ ಮೋಹರ ರೂಪವನ್ನು, ಅಂಗಸೌಷ್ಠವವನ್ನು ನೋಡಿ, ಸ್ವಾಗತವನ್ನಿತ್ತು, ಸಿಂಹಾಸನದಲ್ಲಿ ಕೂಡಿಸಿದನು. ಮುಕ್ತಜನ ಪೂಜಿತವು, ಜ್ಞಾನಾನಂದ ಭ್ರಾಜಿತವು, ಮನೋರಮವು, ಸೌಂದರ್ಯಧಾಮವು ಆದ ವಾಮನನ ಪಾದವನ್ನು ತೊಳೆದು ಪೂಜಿಸಿದನು. ದೇವದೇವನಾದ ಚಂದ್ರಶೇಕರನು ಭಕ್ತಿಯಿಂದ ಶಿರದಿ ಧರಿಸಿದ ಭಗವತ್ಪಾದಾರ ವಿಂದ ಮಂಗಲಜಲವನ್ನು, ಸಕಲಕಲ್ಮಷಹರವೆಂದರಿತು ಬಲಿಯು ಧರಿಸಿ ಇಂತೆಂದನು–

ಬ್ರಹ್ಮನ್! ನಿನಗೆ ಸ್ವಸ್ವಾಗತವು. ಬ್ರಹ್ಮರ್ಷಿಗಳ ತಪವೆಲ್ಲ ಒಟ್ಟುಗೂಡಿ ಮೂರ್ತೀಭವಿಸಿ ನಿಂತಂತಿರುವ ನಿನಗೆ ನಮಸ್ಕಾರವು. ಇಂದಿನ ದಿನವೇ ಸುದಿನವು. ನೀನು ಬಂದೆಯಾದ್ದರಿಂದ ಇಂದು ಈ ಯಜ್ಞವು ಸಂಪೂರ್ಣವೆನಿಸಿತು. ನಮ್ಮ ಪಿತೃಗಳು ಇಂದು ತೃಪ್ತರಾದರು. ನನ್ನ ಕುಲವೇ ಪಾವನವಾಯಿತು. ನಿನ್ನ ಚರಣಾವನೇಜನ ಜಲವನ್ನು ಧರಿಸಿದ ನನ್ನ ಯಜ್ಞಾಗ್ನಿಗಳು, ವಿಧಿವತ್ತಾಗಿ ಸುಹುತವಾಗಿವೆ. ನಾನು ನಿಷ್ಪಾಪನಾದೆ. ನಿನ್ನ ಕೋಪಲಾರುಣಪಾದ ಶುಭಚಿಹ್ನ ಲಕ್ಷಿತವಾದ ಈ ಕ್ಷಿತಿಯು ಪವಿತ್ರವಾಗಿದೆ. ನಿನಗೇನು ಬೇಕು ಕೇಳು! ನಿನ್ನನು ನೋಡಿದರೆ ಬೇಡಲು ಬಂದಿರುವಂತೆ ಕಾಣುತ್ತಿದೆ. ಭೂಮಿಯು ಬೇಕೇ? ಕಾಂಚನವೇ? ಕರಿತುರಗಗಳೇ? ಕಮ್ರಮಂದಿರವೇ? ಮೃಷ್ಟಾನ್ನವೇ? ಕನ್ಯಾಮಣಿಯೇ? ಕೇಳು. ಸಮೃದ್ಧಿ ಗ್ರಾಮಗಳನ್ನು ಕೊಡಲೇ? ಪಾತ್ರಸತ್ತಮನಾದ ನೀನೇನು ಬೇಡಿದರೂ ಕೊಡುವೆನು– ಎಂದನು.

## ೧೮. ಬಲಿ ಭೂದಾನ-ಶುಕ್ರವಚನ

ಶ್ರೀಶುಕನು ಹೇಳಿದನು.

ಇಂತು ನುಡಿದ ಬಲಿರಾಜನ ಧರ್ಮಸಮ್ಮತ ವಚನಗಳನ್ನು ಕೇಳಿ ಪ್ರೀತನಾಗಿ ಭಗವಂತ ನಿಂತೆಂದನು–

ರಾಜನ್! ನಿನ್ನ ಮಾತು ಸತ್ಯವು, ಧರ್ಮಯುತವು, ಯಶಸ್ಕರವೂ ಆಗಿದೆ. ನಿನ್ನ ಕುಲಕ್ಕೆ ತಕ್ಕದ್ದೂ ಆಗಿದೆ. ಪಾರತ್ರಿಕ ಸುಖ ಸಂಪಾದಕರಾಗಿ, ಶುಕ್ರಾಚಾರ್ಯರು ನಿನಗೆ ಗುರುಗಳಾಗಿ ಇರುವಲ್ಲಿ ಅನ್ಯಥಾ ಆಗಲಾರದು. ನಿನ್ನ ವಂಶದಲ್ಲಿ ನಿಸ್ಸತ್ವರೂ ಕೃಪಣರೂ ಪುಟ್ಟಿಲ್ಲ. ಕೊಡವೆ ನೆಂದು ಕರೆದು ಬ್ರಾಹ್ಮಣನನ್ನು ನಿರಾಶನಾಗಿಸಿದ ನೀಚರೂ ನಿನ್ನ ವಂಶದಲ್ಲಿಲ್ಲ. ಪ್ರತ್ಯರ್ಥಿಗಳಿಗೆ ರಣಭೀರುಗಳು, ಅರ್ಥಿಗಳಿಗೆ ವಿತರಣ ಭೀರುಗಳು, ನಿನ್ನವರಾರೂ ಇಲ್ಲ. ಆಕಾಶದಿ ಚಂದ್ರಮ ನಂತೆ ಪ್ರಹ್ಲಾದನು ನಿನ್ನ ವಂಶಾಲಂಕರಣನೆನಿಸಿರುವನು.

ನಿನ್ನ ಮುತ್ತಾತ ಹಿರಣ್ಯಾಕ್ಷನು ಗದಾಪಾಣಿಯಾಗಿ ಭೂಮಂಡಲದಿ ಪ್ರತಿವೀರನನ್ನು ಕಾಣದೆ ಧೀರೋದ್ಧತನಾಗಿರಲು ವಿಷ್ಣುವು ವರಾಹನಾಗಿ ಅವನನ್ನು ಕೊಲ್ಲುವಾಗ ಪಾತಾಳದಿಂದ ಭೂಮಂಡಲವನ್ನೆತ್ತುವಷ್ಟು ಕಷ್ಟಪಟ್ಟು ಅವನ ಶೌರ್ಯ ಪರಾಕ್ರಮಗಳನ್ನು ನೆನೆದು, ಇನ್ನಂತಹ ವೀರನನ್ನು ಕಾಣದಾದನು. ತಮ್ಮನನ್ನು ಕೊಂದನೆಂಬ ಕೋಪದಿಂದ ಹಿರಣ್ಯಕಶಿಪುವು ವೈಕುಂಠ

ತನ್ನ ದಿವ್ಯಕಾಂತಿಯಿಂದ ಕಶ್ಯಪನ ಮನೆಯ ಕತ್ತಲನ್ನು, ಹೃದಯದ ಕತ್ತಲನ್ನು ಕೂಡ, ನಾಶಪಡಿಸಿ ಬೆಳಗಿದನು. ಆಗ ದಿಕ್ಕುಗಳು ಪ್ರಸನ್ನವಾದವು. ಸರೋವರ ನದೀಜಲಗಳು ನಿರ್ಮಲವಾಗಿ ಪ್ರಕಾಶಿಸಿದವು. ಪ್ರಜರ ಹೃದಯವು ಆನಂದ ಭರಿತವಾಯಿತು. ಭೂಮ್ಯಂತರಿಕ್ಷ ದೇವಲೋಕದ ಜನರು, ವಿಪ್ರರು, ಗೋವುಗಳು ಮನಶ್ಶಾಂತಿ ಸಮಾಧಾನಗಳನ್ನು ಪೊಂದಿದರು.

ಭಾದ್ರಪದಮಾಸದ ಶುಕ್ಲದ್ವಾದಶಿಯ ಮಧ್ಯಾಹ್ನ ಸಮಯದಲ್ಲಿ ಅಭಿಜಿನ್ಮುಹೂರ್ತದ ಶುಭವೇಳೆಯಲ್ಲಿ ವಿಜಯಾ ಯೋಗದಲ್ಲಿ ಶ್ರೀ ವಾಮನನು ಪ್ರಾದುರ್ಭವಿಸಿದನು. ಆಗ ಗ್ರಹ ಗಳು ಶುಭಸ್ಥಾನಗಳಲ್ಲಿದ್ದುವು. ದೇವತೆಗಳು ಮೃದಂಗ ಪಣವತೂರ್ಯಾದಿ ವಾದ್ಯಗಳನ್ನು ಬಾರಿಸಿದರು. ಗಂಧರ್ವರು ಹಾಡಲು, ಅಪ್ಸರೆಯರು ನೃತ್ಯ ಮಾಡಿದರು. ದೇವ ಮನು ಪಿತೃ ವಹ್ನಿ ಸಿದ್ಧ ವಿದ್ಯಾಧರಾದಿಗಳು ಸ್ತುತಿಸಿದರು. ಗಾನಮಾಡಿ ಪೊಗಳುತ್ತಾ ಆದಿತ್ಯರು ಆಶ್ರಮ ಸ್ಥಲದಿ, ಕುಸುಮ ವರ್ಷವನ್ನು ಸುರಿಸಿದರು.

ಅದಿತಿಯು ತನ್ನ ಗರ್ಭಸಂಭೂತನಾದ ಪರಮಪುರುಷನನ್ನು ನೋಡಿ, ಆಶ್ಚರ್ಯಾನಂದ ಸಂಭ್ರಮಗಳಿಂದ ನಿಂತಿರಲು, ಕಶ್ಯಪನು ಸ್ವೇಚ್ಛೆಯಿಂದ ಅವತರಿಸಿ ಬಂದ ಶ್ರೀಹರಿಯನ್ನು ನೋಡಿ, ಜಯಜಯಕಾರವನ್ನು ಮಾಡಿ ನಮಿಸಿದನು. ಸ್ವಭಾವದಿಂದ ಅವ್ಯಕ್ತನಾದರೂ ಭಕ್ತಾನು ಕಂಪಾವಶನಾಗಿ, ದಿವ್ಯಚತುರ್ಬಾಹು ಸುಂದರರೂಪವಾಗಿ ತೋರಿದ ಸ್ವಾಮಿಯು ಅವರು ನೋಡುತ್ತಿರುವಂತೆ ವಟುವಾಮನನಾಗಿ ನಿಂತನು. ಅವನನ್ನು ನೋಡಿ ಮುದಿತ ಮಾನಸರಾಗಿ, ಮುನಿವರರು ಕಶ್ಯಪದಿಂದ ಅವನಿಗೆ ಸಕಲ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದರು. ಉಪನಯನಸಿದ್ಧನಾದ ಆ ಬಾಲಕನಿಗೆ ಸೂರ್ಯನು ಗಾಯತ್ರೀಮಂತ್ರವನ್ನು ಹೇಳಿಕೊಟ್ಟನು. ಬೃಹಸ್ಪತಿ ಉಪವೀತವನ್ನು, ಕಶ್ಯಪನು ಮೇಖಲೆಯನ್ನು, ಭೂದೇವಿ ಕೃಷ್ಣಾಜೀನವನ್ನು, ಸೋಮನು ದಂಡವನ್ನು, ಅದಿತಿ ಕೌಪೀನವನ್ನು, ಭಾರತೀದೇವಿ ಛತ್ರವನ್ನು, ಬ್ರಹ್ಮನು ಕಮಂಡಲುವನ್ನು, ಸಪ್ತರ್ಷಿಗಳು ಕುಶಗಳನ್ನು, ಸರಸ್ವತಿ ಅಕ್ಷಮಾಲೆಯನ್ನು ಕೊಟ್ಟು ಸತ್ಕರಿಸಿ ದರು. ಯಕ್ಷರಾಜನಾಗ ಭಿಕ್ಷಾಪಾತ್ರವನ್ನು ಕೊಡಲು ಸಾಕ್ಷಾದಂಬಿಕೆ ಭಿಕ್ಷೆಯನ್ನು ನೀಡಿದಳು. ಬ್ರಹ್ಮವರ್ಚಸ್ಸೇ ಮೂರ್ತೀಭವಿಸಿದಂತೆ ಸಭೆಯಲ್ಲಿ ನಿಂತು, ಬ್ರಹ್ಮರ್ಷಿಗಣ ಮಧ್ಯದಲ್ಲಿ ಚಂದ್ರನು ತಾರಾಗಣ ಮಧ್ಯದಲ್ಲಂತೆ ಪ್ರಕಾಶಿಸಿದನು. ಸಮಿದ್ಧಾಗ್ನಿಯನ್ನು ಪರಿಸಮೂಹನ ಪರಿಸ್ತರಣ ಸುಮುಖನನ್ನಾಗಿಸಿ, ಸಮಿಧಗಳನ್ನು ಹೋಮಿಸಿ ವಾಮನನು ತನಗೆ ಭಿಕ್ಷೆಯನ್ನಿತ್ತು, ಸಂತೈಸುವ ದಾತನಾರೆಂದು ವಿಚಾರಿಸಿದನು.

ಭೃಗುಪುತ್ರರಿಂದ ನಡೆಸಲ್ಪಡುವ ಅಶ್ವಮೇಧಗಳ ಯಜಮಾನರಾದ ಬಲಿರಾಜನು ನಿಜವಾದ ದಾನಶೂರನೆಂದು ಕೇಳಿ ವಾಮನನು ಅಶ್ವಮೇಧ ವಾಟವನ್ನು ಕುರಿತು ಹೊರಟನು. ಅವನ ಪಾದಪದ್ಮ ಸಮಲಂಕೃತಳಾಗಿ ನಮಿಸುವಳೆಂಬಂತೆ, ಭೂಮಿಯು ಆ ಬ್ರಹ್ಮಾಂಡೋದರನು ಕಾಲಿಟ್ಟಲ್ಲಿ ಬಾಗಿ ಬಗ್ಗುತ್ತಿತ್ತು. ಮುಕ್ತಿಮರ್ಮದೆಯು, ಸುಜನ ಶರ್ಮದೆಯು ಆದ ನರ್ಮದೆಯ ಉತ್ತರತಟದಲ್ಲಿ ಭೃಗುವತ್ಸವೆಂಬ ಆಶ್ರಮದಲ್ಲಿ ಅಶ್ವಮೇಧ ಯಜ್ಞವನ್ನು ಬಲಿರಾಜನಿಂದ ಮಾಡಿಸುತ್ತಿದ್ದ ಶುಕ್ರಾದಿ ವಿಪ್ರರು ಬರುವ ವಟುವನ್ನು ಕಂಡು, ಅವನ ತೇಜದಿಂದ ಕಣ್ಣು ಕುಕ್ಕಿದಂತಾಗಿ ಇಂತು ಚಿಂತಿಸಿದರು–

ಸೂರ್ಯನೇ ಬಂದನೋ?– ಅಥವಾ ಅಗ್ನಿಯೋ? ಈ ಯಜ್ಞವನ್ನು ನೋಡಲು ಬಂದು ಸನತ್ಕುಮಾರನೋ? ಎಂದಾಶ್ಚರ್ಯಪಡುವ ಋತ್ವಿಜರ ಸಭೆಯಲ್ಲಿ ವಾಮನನು ಪ್ರವೇಶಿಸಿದನು.

ದಂಡಚ್ಛತ್ರಗಳನ್ನು, ಜಲಕಮಂಡಲುವನ್ನು ಪಿಡಿದು, ಮೇಖಲಾಮೌಂಜೀಯುತನಾಗಿ, ಉಪವೀತವನ್ನು ಧರಿಸಿ ಜಟಾಧಾರಿಯಾದ ವಟು ವಾಮನನನ್ನು ನೋಡಿ ಶುಕ್ರಾಚಾರ್ಯನು ಅಗ್ನಿಗಳನ್ನು ಸಮಿತ್ತಿನಲ್ಲಿಟ್ಟು ಪಿಡಿದು ದಿನಕರನ ಕಿರಣ ಸಹಿತ ನಕ್ಷತ್ರಗಳಂತೆ ನಿಸ್ತೇಜಸ್ಕರಾಗಿ ನೋಡುವ ಶಿಷ್ಯರ ಸಹಿತವಾಗಿ ಎದ್ದು ನಿಂತನು.

ಬಲಿರಾಜನು ದರ್ಶನೀಯವಾದ ವಾಮನನ ಮೋಹರ ರೂಪವನ್ನು, ಅಂಗಸೌಷ್ಟವವನ್ನು ನೋಡಿ, ಸ್ವಾಗತವನ್ನಿತ್ತು, ಸಿಂಹಾಸನದಲ್ಲಿ ಕೂಡಿಸಿದನು. ಮುಕ್ತಜನ ಪೂಜಿತವು, ಜ್ಞಾನಾನಂದ ಭ್ರಾಜಿತವು, ಮನೋರಮವು, ಸೌಂದರ್ಯಧಾಮವು ಆದ ವಾಮನನ ಪಾದವನ್ನು ತೊಳೆದು ಪೂಜಿಸಿದನು. ದೇವದೇವನಾದ ಚಂದ್ರಶೇಕರನು ಭಕ್ತಿಯಿಂದ ಶಿರದಿ ಧರಿಸಿದ ಭಗವತ್ಪಾದಾರ ವಿಂದ ಮಂಗಲಜಲವನ್ನು, ಸಕಲಕಲ್ಮಷಹರವೆಂದರಿತು ಬಲಿಯು ಧರಿಸಿ ಇಂತೆಂದನು–

ಬ್ರಹ್ಮನ್! ನಿನಗೆ ಸ್ವಸ್ವಾಗತವು. ಬ್ರಹ್ಮರ್ಷಿಗಳ ತಪವೆಲ್ಲ ಒಟ್ಟುಗೂಡಿ ಮೂರ್ತೀಭವಿಸಿ ನಿಂತಂತಿರುವ ನಿನಗೆ ನಮಸ್ಕಾರವು. ಇಂದಿನ ದಿನವೇ ಸುದಿನವು. ನೀನು ಬಂದೆಯಾದ್ದರಿಂದ ಇಂದು ಈ ಯಜ್ಞವು ಸಂಪೂರ್ಣವೆನಿಸಿತು. ನಮ್ಮ ಪಿತೃಗಳು ಇಂದು ತೃಪ್ತರಾದರು. ನನ್ನ ಕುಲವೇ ಪಾವನವಾಯಿತು. ನಿನ್ನ ಚರಣಾವನೇಜನ ಜಲವನ್ನು ಧರಿಸಿದ ನನ್ನ ಯಜ್ಞಾಗ್ನಿಗಳು, ವಿಧಿವತ್ತಾಗಿ ಸುಹುತವಾಗಿವೆ. ನಾನು ನಿಷ್ಪಾಪನಾದೆ. ನಿನ್ನ ಕೋಪಲಾರುಣಪಾದ ಶುಭಚಿಹ್ನ ಲಕ್ಷಿತವಾದ ಈ ಕ್ಷಿತಿಯು ಪವಿತ್ರವಾಗಿದೆ. ನಿನಗೇನು ಬೇಕು ಕೇಳು! ನಿನ್ನನು ನೋಡಿದರೆ ಬೇಡಲು ಬಂಧಿರುವಂತೆ ಕಾಣುತ್ತಿದೆ. ಭೂಮಿಯು ಬೇಕೇ? ಕಾಂಚನವೇ? ಕರಿತುರಗಗಳೇ? ಕಮ್ರಮಂದಿರವೇ? ಮೃಷ್ಟಾನ್ನವೇ? ಕನ್ಯಾಮಣಿಯೇ? ಕೇಳು. ಸಮೃದ್ಧಿ ಗ್ರಾಮಗಳನ್ನು ಕೊಡಲೇ? ಪಾತ್ರಸತ್ತಮನಾದ ನೀನೇನು ಬೇಡಿದರೂ ಕೊಡುವೆನು– ಎಂದನು.

## ೧೮. ಬಲಿ ಭೂದಾನ-ಶುಕ್ರವಚನ

ಶ್ರೀಶುಕನು ಹೇಳಿದನು.

ಇಂತು ನುಡಿದ ಬಲಿರಾಜನ ಧರ್ಮಸಮ್ಮತ ವಚನಗಳನ್ನು ಕೇಳಿ ಪ್ರೀತನಾಗಿ ಭಗವಂತ ನಿಂತೆಂದನು–

ರಾಜನ್! ನಿನ್ನ ಮಾತು ಸತ್ಯವು, ಧರ್ಮಯುತವು, ಯಶಸ್ಕರವೂ ಆಗಿದೆ. ನಿನ್ನ ಕುಲಕ್ಕೆ ತಕ್ಕದ್ದೂ ಆಗಿದೆ. ಪಾರತ್ರಿಕ ಸುಖ ಸಂಪಾದಕರಾಗಿ, ಶುಕ್ರಾಚಾರ್ಯರು ನಿನಗೆ ಗುರುಗಳಾಗಿ ಇರುವಲ್ಲಿ ಅನ್ಯಥಾ ಆಗಲಾರದು. ನಿನ್ನ ವಂಶದಲ್ಲಿ ನಿಸ್ಸತ್ವರೂ ಕೃಪಣರೂ ಪುಟ್ಟಿಲ್ಲ. ಕೊಡವೆ ನೆಂದು ಕರೆದು ಬ್ರಾಹ್ಮಣನನ್ನು ನಿರಾಶನಾಗಿಸಿದ ನೀಚರೂ ನಿನ್ನ ವಂಶದಲ್ಲಿಲ್ಲ. ಪ್ರತ್ಯರ್ಥಿಗಳಿಗೆ ರಣಭೀರುಗಳು, ಅರ್ಥಿಗಳಿಗೆ ವಿತರಣ ಭೀರುಗಳು, ನಿನ್ನವರಾರೂ ಇಲ್ಲ. ಆಕಾಶದಿ ಚಂದ್ರಮ ನಂತೆ ಪ್ರಹ್ಲಾದನು ನಿನ್ನ ವಂಶಾಲಂಕರಣನೆನಿಸಿರುವನು.

ನಿನ್ನ ಮುತ್ತಾತ ಹಿರಣ್ಯಾಕ್ಷನು ಗದಾಪಾಣಿಯಾಗಿ ಭೂಮಂಡಲದಿ ಪ್ರತಿವೀರನನ್ನು ಕಾಣದೆ ಧೀರೋದ್ಧತನಾಗಿರಲು ವಿಷ್ಣುವು ವರಾಹನಾಗಿ ಅವನನ್ನು ಕೊಲ್ಲುವಾಗ ಪಾತಾಳದಿಂದ ಭೂಮಂಡಲವನ್ನೆತ್ತುವಷ್ಟು ಕಷ್ಟಪಟ್ಟು ಅವನ ಶೌರ್ಯ ಪರಾಕ್ರಮಗಳನ್ನು ನೆನೆದು, ಇನ್ನಂತಹ ವೀರನನ್ನು ಕಾಣದಾದನು. ತಮ್ಮನನ್ನು ಕೊಂದನೆಂಬ ಕೋಪದಿಂದ ಹಿರಣ್ಯಕಶಿಪುವು ವೈಕುಂಠ

ವನ್ನು ಸೇರಿ, ಹರಿಯನ್ನು ಕೊಲ್ಲುವೆನೆಂದು ಹುಡುಕಿ, ಸಿಗಲಾರದ ಶ್ರೀರಮಣನನ್ನು ನಿಂದಿಸಿದನು. ಶೂಲಪಾಣಿಯಾಗಿ ಯಮನಂತೆ ಬೆನ್ನಟ್ಟಿ ಬರುವ ವೈರಿಯನ್ನು ಕಂಡು ಜ್ಞಾನಿಜನವರದನು ಅಂತರ್ಹಿತನಾಗಿ ಇಂತು ಚಿಂತಿಸಿದನು–

'ಇವನೆಲ್ಲಿದ್ದರೇನು? ಮೃತ್ಯುರೂಪನಾಗಿ ನಾನೂ ಅಲ್ಲೇ ಇರುವೆನು. ಈ ಕಾಲವನ್ನರಿತು ನಾನು ಇವನ ನಾಸಾರಂಧ್ರಗಳಲ್ಲಿ ಇವನನ್ನಾಡಿಸುವ ಮುಖ್ಯಪ್ರಾಣನಲ್ಲಿ ಅಡಗಿರುವುದೇ ಲೇಸು. ಬಾಹ್ಯದೃಷ್ಟಿಯಾದ ಇವನಿಗೆ ಅಂತಸ್ಥನಾದ ನಾನು ಗೋಚರನಾಗುವೆನೇ?' ಎಂದು ನಿಶ್ಚಯಿಸಿ ಶ್ರೀಹರಿಯು ಅವನ ಶ್ವಾಸದಲ್ಲಿ ಸೂಕ್ಷ್ಮರೂಪದಿಂದ ಆ ರಾಕ್ಷಸನ ಆಯುಸ್ಸಾಕ್ಷಿಯಾಗಿದ್ದನು. ಈಗ ಹಿರಣ್ಯಕನು ವೈಕುಂಠವನ್ನೆಲ್ಲಾ ಹುಡುಕಿ ಶೂನ್ಯವಾದುದನ್ನು ಕಂಡು ಕೋಪದೀದಿತೆಂದನು-

'ಭೂ ಪಾತಾಳ ಗಗನಗಳನ್ನು ಜಾಲಿಸಿದೆನು. ಸಮುದ್ರಗಳನ್ನು ಶೋಧಿಸಿದೆನು. ಆದರೂ ನನ್ನ ತಮ್ಮನನ್ನು ಕೊಂದ ವೈರಿಯನ್ನು ಕಾಣದಿರುವೆನು. ಹೋದವರು ಹಿಂದಿರುಗಿ ಬರಲಾರದ ಸ್ಥಳವನ್ನು ಸೇರಿದನೋ ಏನು? ಸತ್ತವನಲ್ಲಿ ದ್ವೇಷವೇಕೆ? ಅಹಂಮಮಕಾರದಿಂದಲ್ಲವೇ ದ್ವೇಷಾಸೂಯೆಗಳು?' ಎಂದು ಸುಮ್ಮನಾದನು. ಅಂತಹ ವೀರವರನ ಸುತನೇ ಪ್ರಹ್ಲಾದನು. ಸಜ್ಜನಾಹ್ಲಾದಕನಾದ ಪ್ರಹ್ಲಾದನ ಸುತನೇ ವಿರೋಚನನು. ಬ್ರಾಹ್ಮಣರಾಗಿ ಬೇಡಿದ ದೇವತೆಗಳಿಗೆ ಆಯುಸ್ಸನ್ನೇ ಕೊಟ್ಟ ಆ ದಾನಶೌಂಡನ ಮಗನಾದ ನೀನೇನು ಕಡಿಮೆಯೇ? ಎಲ್ಲ ಧರ್ಮಗಳನ್ನು ಚೆನ್ನಾಗಿ ನಡೆಸಿರುವೆ. ಬ್ರಹ್ಮಾದಿಗಳು, ವಿಪ್ರರು, ಶೂರರು ನಡೆದ ಮಾರ್ಗ ದಲ್ಲಿ ಬಿಡದೆ ನಡೆದು, ಕೀರ್ತಿಯನ್ನು ಪಡೆದಿರುವೆ. ಆದ್ದರಿಂದ ನಿನ್ನಲ್ಲಿ ಬೇಡಲು ಬಂದೆ ನಿಜ. ಸ್ವಲ್ಪ ಮಾತ್ರ ಭೂಮಿಯನ್ನು ಈ ನನ್ನ ಪಾದದಿಂದ ಅಳೆದುಕೊಂಬ ಮೂರು ಪಾದದ ಭೂಮಿಯನ್ನು ಮಾತ್ರ ಕೊಡು ಸಾಕು. ನೀನು ದಾನಶೂರನೆಂದು ಹಾಗೂ ಜಗದೀಶನೆಂದು ಹೆಚ್ಚು ಕೇಳಬಹುದೇ? ನನ್ನ ಪ್ರಯೋಜನವು ಅದರಿಂದಲೇ ಆಗುವುದು. ಎಂತಹ ಪ್ರತಿಗ್ರಹ ದೋಷನಿವಾರಣ ಸಮರ್ಥನಾದ ವಿದ್ವಾಂಸನಾದರೂ ಹೆಚ್ಚು ಬೇಡಿದರೆ ಪಾಪವನ್ನೇ ಪೊಂದು ವನು – ಎನ್ನಲು ಬಲಿಯು ನುಡಿದನು–

ಅಯ್ಯೋ! ಬ್ರಾಹ್ಮಣಪುತ್ರ! ನಿನ್ನ ಮಾತನ್ನು ಹಿರಿಯರು ಮೆಚ್ಚಲಾರರು. ನೀನು ಬಾಲಕನೇ ಅಲ್ಲದೆ ಬಾಲಿಶನೂ ಅಹುದು. ನಿನ್ನ ಪ್ರಯೋಜನವನ್ನೇ ನೀನು ತಿಳಿಯದಿರುವೆ. ಸಕಲ ಲೋಕೇಶನಾದ ನನ್ನಂತಹ ದಾತನನ್ನು ಮಧುರ ವಚನಗಳಿಂದ ಸಂತೋಷಪಡಿಸಿ, ದ್ವೀಪವನ್ನಾ ದರೂ ಕೊಡುವ ನನ್ನಿಂದ ಮೂರು ಪಾದ ಭೂಮಿಯನ್ನು ಬೇಡುವವನು ಬುದ್ಧಿವಂತನೇ? ಕೇಳಿಲ್ಲಿ! ನನ್ನನ್ನು ಬೇಡಿದವನು ಮತ್ತೊಬ್ಬರನ್ನು ಕೈಯೊಡ್ಡಿ ಬೇಡಬಾರದು. ಆದ್ದರಿಂದ ಸಸ್ಯಭರಿತವಾದ ಸಾಕಷ್ಟು ಭೂಮಿಯನ್ನು ಬೇಡು, ಕೊಡುವೆನು.

ಆಗ ಭಗವಂತನಿಂತೆಂದನು–

ರಾಜೇಂದ್ರ! ಜಿತೇಂದ್ರಿಯನಾಗದವನಿಗೆ ಮೂರು ಲೋಕದಲ್ಲಿರುವ ಸುಖ ಸೌಭಾಗ್ಯ ಗಳೆಲ್ಲವೂ ದೊರೆತರೂ ಅವನ ಆಶಾಪಾಶವು ಬೆಳೆಯುತ್ತಲೇ ಇರುವುದು. ಮೂರು ಪಾದದಿಂದ ತೃಪ್ತನಾಗದವನಿಗೆ ದ್ವೀಪದಿಂದ ಮಾತ್ರ ಸಾಕೆನಿಸುವುದೇ? ದ್ವೀಪವನ್ನು ಕೊಡುವೆ. ಸಪ್ತದ್ವೀಪ ಗಳನ್ನೂ ಬೇಡುವ ಮನಸ್ಸಿಗೆ ಅದರಿಂದಲೂ ತೃಪ್ತಿಯಾಗುವುದಿಲ್ಲ. ಸಪ್ತದ್ವೀಪಾಧಿಪತಿಗಳಾದ ಪೃಥುರಾಜ, ಗಯರಾಜರಿದ್ದಿಲ್ಲವೆ? ಅರ್ಥಕಾಮಗಳಲ್ಲಿ ಅವರಿಗೆ ಅಲಂಬುದ್ಧಿಯು ಜನಿಸಿತೇ? ಇಲ್ಲ. ಸಂತುಷ್ಟನಾದವನು ದೈವಲಬ್ಧ ಧನಾದಿಗಳಿಂದ ಸುಖವಾಗಿರುವನು. ಅಸಂತುಷ್ಟನಿಗೆ

ಮನೋಜಯವೇ ಇಲ್ಲದಿರುವುದರಿಂದ ಎಷ್ಟು ದೊರೆತರೂ ಕೊನೆಗೆ ಮೂರು ಲೋಕದ ರಾಜ್ಯವು ಕೈಸೇರಿದರೂ ಅಳುತ್ತಿರುವನು. ಅರ್ಥಕಾಮಾಶೆಯೇ ಸಂಸಾರಕಾರಣಾಗಿದೆ. ಯದೃಚ್ಛಾ ಲಾಭ ಸಂತೋಷವೇ ಮೋಕ್ಷಕಾರಣವಾಗಿದೆ. ಯದೃಚ್ಛಾಲಾಭ ಸಂತುಷ್ಟನಾದ ಬ್ರಾಹ್ಮಣನ ತೇಜವು ಹೆಚ್ಚುವುದು. ಅಸಂತುಷ್ಟನಾದವನ ತೇಜವು ನೀರಿನಿಂದ ಅಗ್ನಿಯಂತೆ ಆರಿ ಕೆಡುವುದು. ನಾನು ಸಂತುಷ್ಟನಾಗಿರುವವನು. ನೀನು ಕೊಡುವವನೆಂದು ಹೆಚ್ಚು ಬೇಡಲಾರೆ. ನನ್ನ ಕಾರ್ಯವು ಈ ಮೂರು ಪಾದದ ಭೂದಾನದಿಂದಲೇ ಪೂರ್ಣವಾಗಿ ನೆರವೇರುತ್ತಿರುವುದು. ಪ್ರಯೋಜನವು ತೀರಿದ ಮೇಲೆ ಇನ್ನು ವಿತ್ತಾದಿಗಳೇಕೆ? ಮೂರು ಪಾದ ಭೂಮಿಯನ್ನು ಕೊಡು ಸಾಕು' ಎಂದ ವಾಮನನ ಮಾತನ್ನು ಕೇಳಿ ನಗುತ್ತಾ 'ಒಳ್ಳೆಯದು, ಸ್ವೀಕರಿಸು' ಎಂದು ಬಲಿಯು ಜಲಪಾತ್ರೆಯನ್ನು ಪಿಡಿದು, ಭೂದಾನ ಕೊಡಲು ಸಿದ್ಧನಾದನು.

ಆಗ ಕಾವ್ಯನು ಸಾಕ್ಷಾದ್ವಿಷ್ಣುವಿಗೆ ದಾನವನ್ನು ಕೊಟ್ಟು ಕೆಡುವ ಶಿಷ್ಯನನ್ನು ವಾರಿಸಿ, ಇಂತೆಂದನು–

ಎಲವೋ ಬಲಿ! ಇವನಾರೆಂದು ತಿಳಿದೆ. ಸಾಕ್ಷಾದ್ವಿಷ್ಣುವು ಕಶ್ಯಪನಿಂದ ಅದಿತಿಯಲ್ಲವತರಿಸಿ, ದೇವಕಾರ್ಯವನ್ನು ಸಾಧಿಸಲು, ವಾಮನನಾಗಿ ಬಂದಿರುವನು. ಮುಂದೆ ಬರುವ ಅನರ್ಥವನ್ನು ಕಾಣದೆ, ಭೂದಾನವನ್ನು ಕೊಡುವೆನೆಂದೆ. ಇದರಿಂದ ದೈತ್ಯರಿಗೆ ಮಹದ್ವಿಪತ್ತೇ ಒದಗಲಿದೆ. ಇವನು ದಾನದ ನೆವದಿಂದ ನಿನ್ನ ಸ್ಥಾನವನ್ನು ಹಾಗೂ ಐಶ್ವರ್ಯ ತೇಜೋಯಶ ಶ್ರೀ ವೈಭವಗಳನ್ನೆಲ್ಲಾ ನಿನ್ನಿಂದ ಕಸಿದು, ಇಂದ್ರನಿಗೆ ಕೊಡುವನು. ಈ ಕಪಟವಟುವನ್ನು ನಂಬಬೇಡ. ವಿಶ್ವವ್ಯಾಪ್ತನಾಗಿ ಮೂರು ಪಾದಗಳಿಂದ ಮೂರ್ಲೋಕಗಳನ್ನೂ ಕಸಿಯಲು, ನೀನು ಜೀವಿಸುವುದಾದರೂ ಹೇಗೆ? ಒಂದು ಪಾದದಿಂದ ಭೂಮಿಯನ್ನು, ಮತ್ತೊಂದರಿಂದ ನಾಕವನ್ನು, ಶರೀರದಿಂದ ಆಕಾಶವನ್ನೆಲ್ಲ ತೆಗೆದುಕೊಂಡು 'ಮೂರನೆ ಪಾದವನ್ನು ಕೊಡು' ಎಂದರೆ ಹೇಗೆ ಕೊಡುವೆ ಹೇಳು? ಕೊಡುವೆನೆಂದು ಕೊಡದವನಿಗೆ ಕೊಡುವವರೆಗೂ, ಕಡುಘೋರ ನರಕವಾಗುವುದು. ಕೊಡುವೆನೆಂಬುದನ್ನು ಕೊಡಲಾರದ ಅಸಮರ್ಥನಾದ ನೀನು, ನರಕದಿಂದ ಪಾರಾಗುವ ಬಗೆಯಾದರೂ ಉಂಟೇ? ಯಾವ ದಾನದಿಂದ ಜೀವಿಕೆಯು ಹಾಳಾಗುವುದೋ ಅದು ದಾನವೇ ಅಲ್ಲ. ಅರ್ಥವಂತನಿಗೆ ಜೀವನು ಜೀವನವಂತನಿಗೆ ದಾನ ತಪೋ ಯಜ್ಞಗಳು ಸುಕರವೆನಿಸಿವೆ. ಜೀವನವೇ ಕೆಟ್ಟ ಮೇಲೆ ದಾನಾದಿಗಳಿನ್ನೆಲ್ಲಿ? ಆದ್ದರಿಂದ ಬುದ್ಧಿವಂತನು ತನ್ನ ಧನವನ್ನು ಧರ್ಮ, ಯಶಸ್ಸು, ಕೋಶ, ಕಾಮ, ಸ್ವಜನರೆಂಬ ಐವರಿಗೆ ಭಾಗಿಸಿ ಇಹಪರ ಸುಖವನ್ನು ಪೊಂದುವನು.

ಋಗ್ವೇದದಲ್ಲಿರುವ ಒಂದು ಸತ್ಯವಿಷಯವನ್ನು ಕೇಳು.

ಓಂ(ಕೊಡುವೆನು) ಎನ್ನುವುದೇ ಸತ್ಯವು; ನ (ಕೊಡಲಾರೆ) ಎನ್ನುವುದೇ ಅನೃತವು. ಆತ್ಮವೃಕ್ಷದಲ್ಲಿ ಈ ಸತ್ಯವೇ ಪುಷ್ಪ ಫಲರೂಪವಾಗಿದೆ. ವೃಕ್ಷವು ಬದುಕಿದ್ದರೆ ತಾನೇ ಫಲಪುಷ್ಪಗಳ ಸಮೃದ್ಧಿ! ಅದು ಒಣಗಿಹೋದರೂ ಬೇರಿದ್ದರೆ ಸಾಕು, ಮತ್ತೆ ವೃಕ್ಷವು ಬದುಕಿ ಫಲಪುಷ್ಪಗಳನ್ನೀಯಲು ಶಕ್ತವಾಗುವುದು. ವೃಕ್ಷವನ್ನು ಬೇರಿಂದ ಕಿತ್ತೊಗೆದರೆ, ಪೂರ್ತಿಯಾಗಿ ನಷ್ಟವಾಗುವುದಲ್ಲವೇ? ಅಂತೆಯೆ ಬೇರಿನಂತೆ ಇರುವ ಅನೃತವನ್ನು ಪೂರ್ತಿ ಬಿಟ್ಟುಕೊಟ್ಟರೆ, ನಿನ್ನ ಜೀವನವೇ ಹಾಳಾದೀತು! ಇನ್ನೊಬ್ಬರಿಗೆ ಕೊಡುವುದೆಂದು ತೆಗೆದಿಟ್ಟ ಧನವನ್ನು ಸರ್ವವನ್ನು ಕೊಡು; ಚಿಂತೆಯಿಲ್ಲ. ಜೀವನಾತಿರಿಕ್ತ ಧನದಾನದಿಂದ ಯಾರೂ ಕೆಡುವುದಿಲ್ಲ. ಈಗ ನೀನು ಈ

ಭಿಕ್ಷುಕನಿಗೆ ಎಲ್ಲವನ್ನೂ ಕೊಟ್ಟು ಕೆಡಲಿರುವೆ. ಬೇಡ, ನಿನಗಾಗಿ ಇಟ್ಟುಕೊಂಡು ಮಿಕ್ಕುದನ್ನು ಕೊಡು. 'ಅನೃತ'ವೆಂಬ ಬೇರನ್ನೂ ಕೊಲ್ಲಬೇಡ. ಏನೂ ಕೊಡುವುದಿಲ್ಲವೆಂದು ಹೇಳುವುದೂ ತಪ್ಪಾಗದೆ. ಹಾಗೆ ಹೇಳಿಕಳಿಸುವವನು ಜೀವನ್ಮೃತನೇ ಸರಿ! ಅವನಿಗೆ ಅಪಕೀರ್ತಿಯು ತಪ್ಪದು. ಸಂಭಾವಿತನಿಗೆ ದುಷ್ಕೀರ್ತಿಗಿಂತಲೂ ಮರಣವೇ ಲೇಸು. ಕೊಟ್ಟ ಮಾತಿನ ಗತಿ ಏನೆನ್ನಬೇಡ? ಸ್ತ್ರೀಯರಿಗೆ, ಹಾಸ್ಯ ಸಮಯದಲ್ಲಿ, ವಿವಾಹಸಾಧಗಾಗಿ ಜೀವಿಕೆಯು ಕೆಡದಿರಲು, ಪ್ರಾಣ ಸಂಕಟವು ಒದಗಿದಾಗ ಹಾಗೂ ಗೋ ಬ್ರಾಹ್ಮಣ ಹಿತಕ್ಕಾಗಿಯೂ ಸುಳ್ಳನ್ನಾಡಿದರೂ ತಪ್ಪಲ್ಲ.

## ೧೯. ಬಲಿಯ ಭೂದಾನ

ಶ್ರೀಶುಕನು ಹೇಳಿದನು–

ಯಜಮಾನನಾದ ಬಲಿಯು ತನ್ನ ಕುಲಾಚಾರ್ಯನಾದ ಶುಕ್ರನ ವಚನವನ್ನು ಕೇಳಿ, ಸ್ವಲ್ಪಕಾಲ ಸುಮ್ಮನಿದ್ದು, ಶ್ರದ್ಧೆಯಿಂದ ಶುಕ್ರನಿಂಗಿಂತೆಂದನು-

ಪೂಜ್ಯನೇ! ನೀನು ಹೇಳಿದ ಗೃಹಸ್ಥಧರ್ಮವು ವೇದವಿಹಿತವಾಗಿದೆ ನಿಜ. ಗೃಹಸ್ಥನು ಅರ್ಥಕಾಮಗಳನ್ನಂತೆ ಯಶೋವೃತ್ತಿಗಳನ್ನೂ ಕೆಡಿಸಿಕೊಳ್ಳದೆ ಉಳಿಸಿಕೊಳ್ಳುವುದು ಅಗತ್ಯವೇ ಸರಿ. ಆದರೆ ಈಗ ನಾನು ಧನಲೋಭದಿಂದ ಕೊಟ್ಟ ಮಾತಿಗೆ ತಪ್ಪಿ, ವಟುವಿಗೆ ಕೊಡಲಾರೆನೆನ್ನುವುದಾದರೂ ಹೇಗೆ?ಪ್ರಹ್ಲಾದನ ಮೊಮ್ಮಗನಿಗಿದು ಸರಿಯೇ? ಧೂರ್ತನಾಗಿ ಸುಳ್ಳನಾಡಲೇ? ಭೂದೇವಿಯು – ಅಸತ್ಯದಿಂದ ಬೇರೊಂದು ಹೆಚ್ಚು ಅಧರ್ಮವಿಲ್ಲ. ಎಲ್ಲವನ್ನೂ ಹೊರಬಲ್ಲೆಯ ನಾದರೂ ಅಸತ್ಯವಾದಿಯನ್ನು ಮಾತ್ರ ಹೊರಲಾರೆನು– ಎಂದಿರುವಳಲ್ಲವೇ? ಸ್ವಾಮೀ! ನರಕವಾಗುವುದೆಂದರೆ ನನಗೆ ಭಯವಿಲ್ಲ; ಅಧರ್ಮದಿಂದ ಬಂದ ದುಃಖಸಮುದ್ರವೇ ಉಕ್ಕೇರಿ ಬಂದು ಮುಣುಗಿಸಿದರೂ ಭಯವಿಲ್ಲ; ರಾಜ್ಯ ಭ್ರಷ್ಟನಾಗುವೆನೆಂಬ ಚಿಂತೆಯಿಲ್ಲ. ಸಾವು ಬಂದರೂ ಹೆದರೆನು; ಆದರೆ ಬ್ರಾಹ್ಮಣನಿಗೆ ಕೊಟ್ಟ ವಚನ ಕೆಡುವುದೆಂದು ಭಯಪಡುತ್ತಿರುವೆನು. ಮೃತನಾಗುವ ಮನುಜನು ತನ್ನ ಹಿಂದೆ ಬರದಿರುವ ಧರಾಧನಗಳನ್ನು ಅಪೇಕ್ಷಿಸುವ ವಿಪ್ರನಿಗೆ ಕೊಡದೆ ದುರಾಸೆಯಿಂದ ಸಾಧಿಸುವ ಪ್ರಯೋಜನವಾದರೂ ಏನು? ದಧೀಚಿ ಶಿಬಿ ಮುಂತಾದ ಮಹನೀಯರು ದುಸ್ತ್ಯಜವಾದ ಪ್ರಾಣಗಳನ್ನು ಕೂಡ ಕೊಟ್ಟು ಸುಜನಶ್ರೇಯವನ್ನು ಸಾಧಿಸಿರುವಾಗ, ಧರಾ ಧನಗಳನ್ನು ಕೊಡದೆ ಕಡುಲೋಭಿಯಾದ ಖಲನ ಜೀವನವ ವ್ಯರ್ಥವೇ ಅಲ್ಲವೇ? ಯುದ್ಧದಲ್ಲಿ ಬೆನ್ನು ತೋರದೆ ಕಾದಿದ ರಾಕ್ಷಸವೀರರು ಯಮನು ಬಾಯತುತ್ತಾಗಿ, ತಮ್ಮ ಸಿರಿಸಂಪತ್ತೆಲ್ಲವನ್ನೂ ಬಿಟ್ಟುಹೋದರು. ಅವರ ಹೆಸರಾದರೂ ಉಳಿದಿರುವುದೇ?

ಬ್ರಾಹ್ಮಣೋತ್ತಮ! ಯುದ್ಧದಲ್ಲಿ ಹಿಂತಿರುಗದೆ ಶರೀರತ್ಯಾಗವನ್ನು ಮಾಡುವ ವೀರರು ಬಹುಜನರಿರುವರು, ಆದರೆ ಶ್ರದ್ಧೆಯಿಂದ ಪಾತ್ರನಾದ ಸದ್ವಿಪ್ರನಲ್ಲಿ ಧನತ್ಯಾಗವನ್ನು ಮಾಡುವ ದಾನಶೂರರು ಬಹು ವಿರಲ.

ಅರ್ಥಕಾಮನಾಗಿ ಬರುವ ವಿಪ್ರವರನಿಗೆ ದಾನ ಕೊಡುವುದರಿಂದ ದಾರಿದ್ರ್ಯವು ಬಂದರೆ – ಕರುಣಾಶೀಲನಾದ ಮನೋಜಯವಂತನಿಗೆ ದಾರಿದ್ರ್ಯವೇ ಶೋಭಕರವೆನಿಸುವುದು; ಸತ್ಪಾತ್ರದಾನ ದಿಂದ ಅವನಿಗೆ ಇಹಪರಲೋಕಸುಖವು ಕಟ್ಟಿಟ್ಟ ಗಂಟಾಗಿದೆ. ಇನ್ನು ನಿಮ್ಮಂತಹ ಬ್ರಹ್ಮಜ್ಞಾನಿ

ಗಳಿಗೆ ಕೊಡುವ ದಾನದಿಂದ ಕ್ಲೇಶವು ಬಂದರೂ ಸುಖಕರವೇ ಎನಿಸುವುದೆಂದು ಹೇಳಬೇಕೇ? ಆದ್ದರಿಂದ ಈ ವಟುವಿನ ವಾಂಛಿತವನ್ನು ಪೂರೈಸುವುದೇ ಕರ್ತವ್ಯವಾಗಿದೆ.

ವೇದವಿಧಾನಚತುರರಾದ ತಮ್ಮಂತಹ ಬ್ರಹ್ಮಜ್ಞಾನಿಗಳು, ಆದರದಿಂದ ಯಜ್ಞಗಳನ್ನು ಮಾಡಿ ಪೂಜಿಸುವ ವರದರಾಜನು ಬಂದಿರುವನೆಂದೆ. ವಿಷ್ಣುವೇ ಆಗಲಿ ಅನ್ಯನಾಗಲಿ ಚಿಂತೆಯಿಲ್ಲ. ಅವನು ಬೇಡಿದ ಭೂದಾನವನ್ನು ಈಗಲೇ ಕೊಟ್ಟು ಧನ್ಯನಾಗುವೆನು.

ಒಂದು ವೇಳೆ ನಿರಪರಾಧಿಯಾದ ನನ್ನನ್ನು ಕಟ್ಟಿದರೂ ಕಟ್ಟಲಿ! ಬ್ರಾಹ್ಮಣರೂಪನಾದ ಇವನನ್ನು ಹಿಂಸಿಸಲಾರೆನು. ಇವನು ಉತ್ತಮಶ್ಲೋಕನೆಂದೆ. ನಿಜ, ಇವನ ಕೀರ್ತಿಯು ಆಚಂದ್ರಾರ್ಕವಾಗಿದೆ. ಇವನನ್ನು ಗೆಲ್ಲಲು ಯಾರಿಗೂ ಶಕ್ಯವಿಲ್ಲ. ನನ್ನನ್ನು ರಣರಂಗದಿ ಮಲಗಿಸಿ, ನನ್ನಿಂದ ಈ ಭೂಮಿಯನ್ನು ಕಸಿಯಲು ಕೂಟ ಸಮರ್ಥನಾದ ಶ್ರೀಶನಿಗೆ ದಾನವನ್ನು ಕೊಟ್ಟು ಅವನ ಪ್ರೀತಿಯನ್ನು ಗಳಿಸುವೆನು– ಎಂದು ನುಡಿದ ಶಿಷ್ಯನ ಮಾತನ್ನು ಕೇಳಿ ಶುಕ್ರನು ತನ್ನಾಜ್ಞೆಯನ್ನು ಮೀರಿ ನಡೆದ ಬಲಿಯನ್ನು ನೋಡಿ, ದೈವಪ್ರೇರಿತನಾಗಿ ಕೋಪಗೊಂಡು–

'ಮೂರ್ಖ! ಪಂಡಿತನಂತೆ ಮಾತನಾಡುವೆ. ನನ್ನ ಮಾತನ್ನು ಮನ್ನಿಸದೆ ಮದಿಸಿದ ನೀನು ಶೀಘ್ರದಲ್ಲಿಯೇ ರಾಜ್ಯಭ್ರಷ್ಟನಾಗು'– ಎಂದು ಶಪಿಸಿದರೂ, ಮನಸ್ಥೈಯದಿಂದ ಚಲಿಸದೆ ಸತ್ಯಸಂಧನಾದ ಬಲಿರಾಜನು ವಾಮನನನ್ನು ಪೂಜಿಸಿ ಭೂದಾನವನ್ನು ಮಾಡಿದನು. ಅವನ ಪತ್ನಿಯಾದ ವಿಂಧ್ಯಾವಳಿಯು, ಮಲ್ಲಿಕಾವೇಣೀಸಮಲಂಕೃತಳಾಗಿ ಬಂಗಾರದ ಕಲಶದಿಂದ ನೀರನ್ನು ಹಾಕಲು ವಾಮನ ಪಾದಾರವಿಂದವನ್ನು ತೊಳೆದು ಬಲಿಯು, ಆ ಪವಿತ್ರ ತೀರ್ಥವನ್ನು ಶಿರಸಾ ಧರಿಸಿ ಧಾರಾಪೂರ್ವಕವಾಗಿ ತ್ರಿಪಾದಧರಣೀ ದಾನವನ್ನು ಶ್ರೀರಮಣೀನಾಥನಿಗೆ ಸಮರ್ಪಿಸಿದನು.

ಆಗ ದೇವದುಂದುಭಿಗಳು ಮೊಳಗಿದವು. ಗಂಧರ್ವರು ಪಾಡಿದರು, ಅಪ್ಸರೆಯರು ನರ್ತಿಸಿದರು. ವಿದ್ಯಾಧರಚಾರಣರು ಕೀರ್ತಿಸಿದರು. ದೇವಸುಂದರಿಯರು ನಂದನದ ಮಂದಾರಾದಿ ಸುಮವರ್ಷವನ್ನತಿ ಹರ್ಷದಿಂದ ಮಾಡಿದರು.

ಆಗ ವಾಮನನು ಅದ್ಭುತವಾಗಿ ಬೆಳೆದು ತ್ರಿವಿಕ್ರಮನಾದನು. ಗುಣತ್ರಯ ನಿರ್ಮಿತ ಬ್ರಹ್ಮಾಂಡವೇ ಅವನ ವಿಗ್ರಹವಲ್ಲವೇ? ರಾಜನ್? ಆ ರೂಪದಲ್ಲಿ ಭೂಮ್ಯಾಕಾಶ ಸ್ವರ್ಗಗಳು, ಸಮುದ್ರಗಳು, ದೇವಋಷಿ ಪ್ರಮುಖ ಸಮಸ್ತ ಜೀವರಾಶಿಗಳು, ಋತ್ವಿಜ ಸದಸ್ಯಾಚಾರ್ಯರು, ತ್ರಿಗುಣಗಳು, ಭೂತೇಂದ್ರಿಯ ಮನೋದೇವರನ್ನು ನೋಡಿ ಬಲಿಯು ದಿಗ್ಭ್ರಮೆಗೊಂಡನು.

ಆ ವಿಶ್ವರೂಪನ ಪಾದತಲದಿ ರಸಾತಲವನ್ನು ಜಂಘೆಯಲ್ಲಿ ಮಹೀಮಂಡಲ ಪರ್ವತಗಳನ್ನು, ಜಾನುವಿನಲ್ಲಿ ಪಕ್ಷಿಗಳನ್ನು, ತೊಡೆಯಲ್ಲಿ ವಾಯುಗಣವನ್ನು, ವಸ್ತ್ರದಲ್ಲಿ ಸಂಧ್ಯೆಗಳನ್ನು, ಗುಹ್ಯದಲ್ಲಿ ಪ್ರಜಾಪತಿಗಳನ್ನು, ಜಘನದಲ್ಲಿ ಮನುರಾಜನನ್ನು, ನಾಭಿಯಲ್ಲಿ ಆಕಾಶವನ್ನು, ಕುಕ್ಷಿಯಲ್ಲಿ ಸಪ್ತಸಮುದ್ರಗಳನ್ನು, ಉರದಲ್ಲಿ ನಕ್ಷತ್ರಗಣವನ್ನು, ಹೃದಯದಲ್ಲಿ ಧರ್ಮವನ್ನು, ಸ್ತನಗಳಲ್ಲಿ ಸತ್ಯಋತುಗಳನ್ನು, ಮನಸ್ಸಿನಲ್ಲಿ ಚಂದ್ರನನ್ನು ವಕ್ಷಸ್ಥಲದಲ್ಲಿ ಅರವಿಂದಹಸ್ತಳಾದ ಇಂದಿರೆಯನ್ನು, ಕಂಠದಲ್ಲಿ ಸಾಮಾದಿ ವೇದಗಳನ್ನು, ಭುಜಗಳಲ್ಲಿ ಇಂದ್ರಾದಿ ದೇವಗಣವನ್ನು, ಕಿವಿಯಲ್ಲಿ ದಿಕ್ಕುಗಳನ್ನು, ತಲೆಯಲ್ಲಿ ದ್ಯುಲೋಕವನ್ನು, ಕೇಶಗಳಲ್ಲಿ ಮೇಘಗಳನ್ನು, ನಾಸಿಕೆಯಲ್ಲಿ ವಾಯುವಿನನ್ನು, ಕಣ್ಣಲ್ಲಿ ಸೂರ್ಯನನ್ನು, ಬಾಯಿಯಲ್ಲಿ ಅಗ್ನಿಯನ್ನು, ವಾಕ್ಕಿನಲ್ಲಿ ಛಂದೋಗಣವನ್ನು, ನಾಲಿಗೆಯಲ್ಲಿ ವರುಣನನ್ನು, ಹುಬ್ಬುಗಳಲ್ಲಿ ವಿಧಿನಿಷೇಧ

ಗಳನ್ನು, ಕಣ್ಣಾರೆಪ್ಪೆಗಳಲ್ಲಿ ಅಹೋರಾತ್ರಿಗಳನ್ನು, ಲಲಾಟದಿ ಮನು ರುದ್ರನನ್ನು, ಕೆಳತುಟಿಯಲ್ಲಿ ಲೋಭವನ್ನು, ಸ್ಪರ್ಶದಲ್ಲಿ ಕಾಮನನ್ನು, ರೇತಸ್ಸಿನಲ್ಲಿ ನೀರನ್ನು, ಬೆನ್ನಲ್ಲಿ ಅಧರ್ಮವನ್ನು, ಹೆಜ್ಜೆಯಲ್ಲಿ ಯಜ್ಞಗಳನ್ನು, ನೆರಳಲ್ಲಿ ಮೃತ್ಯುವನ್ನು, ನಗುವಿನಲ್ಲಿ ಮೋಹಶಕ್ತಿಯನ್ನು, ತನೂರುಹುಗಳಲ್ಲಿ ಓಷಧೀವಿರುಧಗಳನ್ನು, ನಾಡಿಗಳಲ್ಲಿ ನದೀನದಗಳನ್ನು, ನಖಗಳಲ್ಲಿ ಶಿಲೆ ಗಳನ್ನು, ಬುದ್ಧಿಯಲ್ಲಿ ಬ್ರಹ್ಮನನ್ನು, ಪಂಚಪ್ರಾಣಗಳಲ್ಲಿ ದೇವ ಋಷಿಗಳನ್ನು, ಇತರಾಂಗ ಗಳಲ್ಲಿ ಚರಾಚರ ಜೀವರನ್ನು ಕಂಡು, ಸರ್ವೇಶನ ಮಹಾಮಹಿಮೆಗೆ ದಿಗ್ಭ್ರಮೆಗೊಂಡು, ಅಸುರರು ನಿರ್ವಿಣ್ಣರಾಗಿ ನಿಂತರು.

ಅಸಹ್ಯ ತೇಜದಿಂದ ಉರಿಯುವ ಸುದರ್ಶನಚಕ್ರ, ಸಿಡಿಲಂತೆ ಗರ್ಜಿಸುವ ಶಾಡರ್ಙ್ಗ ಧನುಸ್ಸು, ಮೇಘದಂತೆ ಗುಡುಗುವ ಪಾಂಚಜನ್ಯ ಶಖ, ಮಿಂಚಿನ ವೇಗದಿಂದ ಬೀಸುವ ಕೌಮೋದಕೀ ಗದೆ, ವಿದ್ಯಾಧರ ಸಂಬಂಧಿಯಾದ ನಂದಕ ಖಡ್ಗ, ಶತಚಂದ್ರವೆಂಬುವ ಢಾಲು, ಅಕ್ಷಯಬಾಣಗಳ ಎರಡು ತೂಣೀರಗಳು, ಮೊದಲಾದ ಆಯುಧಗಳು ಮೂರ್ತಿಮಂತವಾಗಿ ಶ್ರೀಹರಿಯ ಸುತ್ತು ನಿಂತು ಸೇವಿಸಿದವು. ಸುನಂದ ಪ್ರಮುಖ ಪಾರ್ಷದರು ಪರಾಕು ಹೇಳಿದರು.

ಮಣಿ ಪ್ರಕಾಶಮಾನ ಕಿರೀಟಾಂಗದ ಮಕರ ಕುಂಡಲ ಕೌಸ್ತುಭ ಕಾಂಚೀಕಲಾಪಗಳನ್ನು ಧರಿಸಿ, ದಿವ್ಯಪೀತಾಂಬರವನ್ನುಟ್ಟು, ಮಧುಕರ ಝುಂಕಾರಯುತ ಪುಷ್ಪಹಾರಗಳನ್ನು ಹಾಕಿ ಕೊಂಡು, ಶ್ರೀಹರಿಯು ವಿರಾಜಮಾನನಾಗಿ ಕ್ಷಣಾರ್ಧದಲ್ಲಿ ಬ್ರಹ್ಮಾಂಡವನ್ನು ತುಂಬಿ ನಿಂತನು. ಒಂದು ಪಾದದಿಂದ ಬಲಿಯ ಭೂಮಂಡಲ ರಾಜ್ಯವನ್ನಾಕ್ರಮಿಸಿದನು. ಶರೀರದಿಂದ ಆಕಾಶ ವನ್ನು, ಬಾಹುಮಂಡಲದಿಂದ ದಿಙ್ಮಂಡಲವನ್ನು ಆಕ್ರಮಿಸಿ ಎರಡನೆ ಪಾದದಿಂದ ಸ್ವರ್ಗವನ್ನು ಸ್ವೀಕರಿಸಿದನು. ಹಾಗೂ ಮಹರ್ಜನಸ್ತಪೋಲೋಕಗಳನ್ನೂ, ದಾಟಿ, ಸತ್ಯಲೋಕಗಳನ್ನತಿಕ್ರಮಿಸಿ, ಬ್ರಹ್ಮಾಂಡ ಖರ್ಪರವನ್ನು ಪಾದಾಂಗುಷ್ಠದಿಂದ ಸೀಳಿದನು. ಮೂರನೆಯ ಪಾದವು ಹಾಗೇ ಉಳಿಯಿತು.

## ೨೦. ಬಲಿ ಬಂಧನ

ಶ್ರೀಶುಕನು ಹೇಳಿದನು–

ತ್ರಿವಿಕ್ರಮನ ಪಾದನಖಪ್ರಕಾಶದಿಂದ ಬೆಳಗಿದ ಸತ್ಯಲೋಕವನ್ನು ನೋಡಿ ಕಮಲಭವನು ಮರೀಚಿ ಮುಖ್ಯರಾದ ಮುನಿಜನರೊಡಗೂಡಿ ಬಂದು ಶ್ರೀಹರಿಯ ಅಡಿದಾವರೆಯನ್ನು ಪೂಜಿಸಿದನು. ಮುನಿಗಳು, ಸನಂದವಾದಿ ಯೋಗಿಗಳು, ವೇದವೇದಾಂಗ ಚತುರರು, ತರ್ಕೇತಿ ಹಾಸ ಪುರಾಣ ಕುಶಲರು, ಯೋಗಾಗ್ನಿದಗ್ಧಕಲ್ಮಷರಾದ ಇತರ ಜನರು ಕೂಡಿ, ಸತ್ಯಲೋಕ ವಾಸವನ್ನು ತಮಗೆ ಅನುಗ್ರಹಿಸಿದ ಶ್ರೀಶನ ಚರಣಪಂಕಜವನ್ನು ಪೊಗಳಿ ವಂದಿಸಿದರು. ಮೇಲ ಕ್ಕೆತ್ತಲ್ಪಟ್ಟ ತ್ರಿವಿಕ್ರಮೂರ್ತಿಯ ಪಾದಪದ್ಮವನ್ನು ಗಂಗೆಯ ಜಲದಿಂದ ತೊಳೆದು, ಪಂಕೇರುಹ ಸಂಭವನಾದ ಬ್ರಹ್ಮನು ಪೂಜಿಸಿದನು. ಆಗ ತ್ರಿವಿಕ್ರಮನ ಪಾದದಿಂದ ಹರಿದುಬಂದ ದೇವ ಗಂಗೆಯು, ಶಿವನ ಜಟಾಜೂಟವನ್ನಲಂಕರಿಸಿ, ತನ್ನಲ್ಲಿ ಸ್ನಾನ ಮಾಡುವವರ ಸಕಲ ಪಾಪ ವನ್ನು ಹರಿಸಿ, ಭಗವಂತನ ಧವಳಕೀರ್ತಿ ಎಂಬಂತೆ ಮೂರು ಲೋಕಗಳನ್ನು ದಾಟಿ ಪ್ರಖ್ಯಾತ ಳಾದಳು.

ಆಗ ಬ್ರಹ್ಮಾದಿ ಲೋಕನಾಥರು ತಮ್ಮ ನಾಥನಿಗೆ ಆದರದಿಂದ ಕಾಣಿಕೆಗಳನ್ನರ್ಪಿಸಿ ಅಪರಿಚ್ಛಿನ್ನ ಸ್ವರೂಪ ಭೂತ ಮಹದೈಶ್ವರ್ಯಸಂಪನ್ನನಾದ ಶ್ರೀಶನನ್ನು ದಿವ್ಯಗಂಧ ಮಾಲ್ಯ ಧೂಪ ದೀಪ ಲಾಜಾಕ್ಷತ ಫಲಾಂಕುರಗಳಿಂದ ಪೂಜಿಸಿದರು. ಜಯ ಜಯ ಶಬ್ದವು ಬಾಗಿಲು ಮುಟ್ಟಿತು. ವಾದ್ಯ ಗೀತ ನೃತ್ಯ ಶಂಖ ದುಂದುಭಿ ಸ್ವನಗಳಿಂದ ಬ್ರಾಹ್ಮಣ ಸ್ತುತಿ ಘೋಷವು ಮೇಳವಿಸಿತು. ಜಾಂಬವಂತನಾಗ ಮನೋವೇಗದಿಂದ ಮೇರುವಿನ ಸುತ್ತಲೂ ತಿರುಗಿ ವಾಮನ ವಿಜಯವನ್ನು ಭೇರಿ ನಿನಾದ ಪೂರ್ವಕವಾಗಿ ಸರ್ವಲೋಕಗಳಲ್ಲಿ ಚಾಚಿದನು.

ದೀಕ್ಷಿತನಾಗಿ ನಿಯಮದಿಂದಿದ್ದ ತಮ್ಮ ರಾಜನ ರಾಜ್ಯವೆಲ್ಲವು ಮೂರು ಪಾದದಾನದ ನೆವದಿಂದ ಕಸಿದ ವಾಮನನನ್ನು ನೋಡಿ ಅಸುರರು ಕೋಪದಿಂದ ಇಂತೆಂದರು–

ಇವನು ಬ್ರಾಹ್ಮಣನಲ್ಲ. ಕಪಟವೇಷಚತುರನಾದ ವಿಷ್ಣುವೇ ವಿಪ್ರರೂಪದಿಂದ ಬಂದು ದೇವಕಾರ್ಯವನ್ನು ಮಾತಿನಿಂದಲೇ ಸಾಧಿಸಿರುವನು. ವಟುರೂಪದಿಂದ ಬಂದು ಈ ಮೋಸ ಗಾರನು ಯಜ್ಞವನ್ನು ಮಾಡುತ್ತ ದೀಕ್ಷಿತನಾಗಿ ಅಸ್ತ್ರವನ್ನು ಮುಟ್ಟದ ನಮ್ಮ ರಾಜನ ಸರ್ವಸ್ವ ವನ್ನೂ ಅಪಹರಿಸಿದನು. ನಮ್ಮ ಪ್ರಭುವು ಸತ್ಯವ್ರತನು, ಬ್ರಾಹ್ಮಣ ಭಕ್ತನು ಹಾಗೂ ದಯಾ ವಂತನು. ಸುಳ್ಳಾಡಲಾರದೆ ಸುಮ್ಮನಿರುವ ನಮ್ಮ ಸ್ವಾಮಿಯ ಹಿತವನ್ನು ಸಾಧಿಸುವುದು ನಮ್ಮ ಕರ್ತವ್ಯವಾಗಿದೆ. ಈ ವಟುವನ್ನು ಸಂಹರಿಸಿಬಿಡುವೆವು– ಎಂದು ಆಯುಧಗಳನ್ನು ಪಿಡಿದು ಬರುವ ಅನುಚರರನ್ನು ಬಲಿಯು ನಿವಾರಿಸಿದನು. ಆದರೂ ಅಸುರರು ಶೂಲಪಟ್ಟಿಶಪಾಣಿಗಳಾಗಿ ಮೇಲೇರಿ ಬರುವುದನ್ನು ಕಂಡು ನಂದ ಸುನಂದರು, ಜಯವಿಜಯರು, ಬಲಪ್ರಬಲರು, ಕುಮುದಕುಮುದಾಕ್ಷರು, ವಿಷ್ವಕ್ಸೇನ ಗರುಡರು, ಜಯಂತಶ್ರುತದೇವರು, ಪುಷ್ಪದಂತ ಸಾತ್ವತರು ಮುಂತಾದ ವೀರರು - ಒಬ್ಬೊಬ್ಬರು ಹತ್ತು ಸಾವಿರ ಆನೆಗಳ ಬಲವುಳ್ಳವರು – ಲೀಲಾಜಾಲವಾಗಿ ಅಸುರರನ್ನು ಗೆದ್ದು ಅವರ ಸೇನೆಯನ್ನು ಓಡಿಸಿದರು. ಅಮರರ ಕೈಸಿಕ್ಕು ಸಾಯುವ ತನ್ನ ಸೇನೆಯನ್ನು ನೋಡಿ, ಬಲಿಯು ಅವರನ್ನು ಕುರಿತಿಂತೆಂದನು–

ವಿಪ್ರಚಿತ್ತೇ! ರಾಹೋ! ಕೇಳಿ ನನ್ನ ಮಾತನ್ನು, ಯುದ್ಧವನ್ನು ನಿಲ್ಲಿಸಿ ಹೊರಟು ಹೋಗಿ! ಕಾಲವು ನಮಗೆ ಅನುಕೂಲವಾಗಿಲ್ಲ. ಸರ್ವಭೂತಗಳಿಗೆ ಸುಖದುಃಖಪ್ರದನಾದ ಪ್ರಭುವನ್ನು ಪುರುಷ ಪ್ರಯತ್ನದಿಂದ ಮೀರಿ ನಡೆಯಲು ಯಾರೂ ಶಕ್ತರಲ್ಲ. ಹಿಂದೆ ನಮಗೆ ಹಿತವನ್ನೂ, ದೇವತೆಗಳಿಗೆ ದುಃಖವನ್ನೂ ಕೊಟ್ಟ ಭಗವಂತನೇ ಈಗ ನಮಗೆ ದುಃಖವನ್ನು, ಅಮರರಿಗೆ ಸುಖವನ್ನು ಕೊಡುತ್ತಲಿರುವನು. ಬಲದಿಂದ, ಅಮಾತ್ಯತಂತ್ರದಿಂದ, ಬುದ್ಧಿಯಿಂದ, ಮಂತ್ರೌ ಷಧಾದಿಗಳಿಂದ, ಸಾಮಾದಿಗಳಿಂದ ಕೂಡ ಕಾಲವನ್ನು ಜಯಿಸಲಾಗುವುದಿಲ್ಲ. ಈ ಹರಿಯ ಅನುಚರರನ್ನು ನೀವೆಷ್ಟು ಸಲ ಗೆದ್ದಿಲ್ಲ? ಈಗ ದೈವಾನುಕೂಲ್ಯದಿಂದ ಬಲವಂತರಾಗಿ ನಮ್ಮನ್ನು ಗೆದ್ದು ಕುಣಿದಾಡುವ ಸುರರನ್ನು ಮತ್ತೆ ದೈವಾನುಗ್ರಹದಿಂದ ನಾವೂ ಗೆದ್ದು ಸುಖಪಡಲು ಬಹುದು. ಆದ್ದರಿಂದ ಆ ಕಾಲವನ್ನು ನಿರೀಕ್ಷಿಸಿ ಸುಮ್ಮನಿರಿ.

ಇಂತು ನುಡಿದ ರಾಜನ ಮಾತನ್ನಾಲಿಸಿ ದೈತ್ಯರು ರಸಾತಲವನ್ನು ಪೊಕ್ಕರು. ಆಗ ವಿರಾಟ್ಪು ರುಷನ ಮನದಿಂಗಿತವನ್ನರಿತು ಗರುಡನು ಸೋಮಪಾನ ದಿನದಲ್ಲಿ ಬಲಿಯನ್ನು ವಾರುಣ ಪಾಶಗಳಿಂದ ಕಟ್ಟಿದನು. ಅದನ್ನು ನೋಡಿ ಎಲ್ಲರೂ ಹಾಹಾಕಾರವನ್ನು ಮಾಡಿದರು. ಬದ್ಧನಾಗಿ ನಿಂತ ಬಲಿಯನ್ನು ನೋಡಿ ವಾಮನನಿಂತೆಂದನು–

ದೈತ್ಯಸತ್ತಮ! ಮೂರು ಪಾದ ಭೂಮಿಯನ್ನು ನೀನು ಧಾರೆ ಎರೆದಿರುವೆ ಅಲ್ಲವೇ? ಎರಡು ಪಾದದಿಂದ ಬರಬೇಕಾದ ಪ್ರದೇಶವನ್ನು ಪಡೆದಿರುವೆನು. ಮೂರನೆಯ ಪಾದವನ್ನು ಪೂರೈಸಿ ಕೊಡು. ಸೂರ್ಯಚಂದ್ರ ನಕ್ಷತ್ರಗಳ ಕಾಂತಿಯು ವ್ಯಾಪಿಸಿರುವ ಪರ್ಜನ್ಯನು ಮಳೆಗರೆಯುವ ಈ ನಿನ್ನ ಭೂಮಿಯನ್ನು ಕೆಳಗಿನ ಅತಲಾದಿ ವಿವರಗಳನ್ನು ಒಂದು ಪಾದದಿಂದಲೂ, ಸ್ವರ್ಗ ಲೋಕವನ್ನು ಎರಡನೆಯ ಪಾದದಿಂದಲೂ ನಾನು ಪಡೆದಿರುವೆನು. ಮೂರನೆಯ ಪಾದವನ್ನು ಎಲ್ಲಿಂದ ಕೊಡವೆ ಹೇಳು. ಕೊಡವೆನೆಂದ ದಾನವನ್ನು ಕೊಡದ ನಿನಗೆ ನಿನ್ನ ಗುರುವಚನ ದಂತೆಯೇ ನರಕವು ತಪ್ಪದು. ಬ್ರಾಹ್ಮಣನಿಗಾಶೆಯನ್ನು ಹುಟ್ಟಿಸಿ ಏನೂ ಕೊಡದವನಿಗೆ ಸ್ವರ್ಗಾದಿ ಲೋಕಗಳಾಗುವುದಿಲ್ಲ. ಸ್ವಲ್ಪವಾಗಿ ಕೊಟ್ಟವನಿಗೆ ಸ್ವರ್ಗವು ಲಭಿಸಿದರೂ, ಪುಣ್ಯಫಲವು ನಶಿಸಲು, ಮತ್ತೆ ತಿರ್ಯಗ್ಯೋನಿಯಲ್ಲಿ ಹುಟ್ಟುವನು. ನೀನು ದರ್ಪದಿಂದ ಬೇಡಿದ್ದನ್ನು ಕೊಡುವೆ ನೆಂದು, ಕೊಡದೆ ನನ್ನನ್ನು ವಂಚಿಸಿದೆ. ಆ ಸುಳ್ಳಿನ ಫಲವನ್ನು ನರಕದಲ್ಲಿ ಅನುಭವಿಸಬೇಕಾಗು ವುದು ಎಂದನು.

## ೨೧. ಬಲಿವರದಾನ

ಶ್ರೀಶುಕನು ಹೇಳಿದನು–

ಭಗವಂತನ ಮರ್ಮಭೇದಕ ವಾಕ್ಯಗಳಲ್ಲಿ ಕೇಳಿ ಬಲಿಯು ಮತಿಗೆಡದೆ, ಶಾಂತವಾಗಿ ಇಂತು ನುಡಿದನು-

ಉತ್ತಮಶ್ಲೋಕ! ನಾನು ಸುಳ್ಳಾಡಿದೆನೆಂದು ನೀನು ನುಡಿದೆ. ನಿನ್ನನ್ನು ಮೋಸ ಮಾಡಿದೆ ನೆಂದೆ. ಆದರೂ ನಿನ್ನ ದಯವಿರಲು ನಾನು ನಿಜವನ್ನೇ ಆಡಿದಂತಾಗಿ, ವಂಚಕನೆಂಬ ಅಪಕೀರ್ತಿಯು ದೂರವಾದೀತು. ಶ್ರೀಶಾ! ನಿನ್ನ ತೃತೀಯಚರಣವನ್ನು ನನ್ನ ಶಿರದಲ್ಲಿಡು, ನನ್ನ ಮಾತನ್ನು ನಿಜಮಾಡು. ನನಗೆ ನರಕದ ಭಯವಿಲ್ಲ. ರಾಜ್ಯಭ್ರಷ್ಟನಾಗಿ, ಪಾಶದಿಂದ ಬಿಗಿಯಲ್ಪಟ್ಟರೂ ನನಗೆ ಭಯವಿಲ್ಲ. ನಿನ್ನ ನಿಗ್ರಹಕ್ಕೆ ಗುರಿಯಾದೆ; ಐಶ್ವರ್ಯವೆಲ್ಲವೂ ನಷ್ಟ ವಾಯಿತು. ಆ ಚಿಂತೆ ನನಗಿಲ್ಲ. ಆದರೆ ಲೋಕದಲ್ಲಿ ನಿಲ್ಲುವ ಅಪಕೀರ್ತಿಗೆ ಹೆದರುತ್ತಿರು ವೆನು. ಸರ್ವೋತ್ತಮನಾದ ನಿನ್ನಿಂದ ಶಿಕ್ಷಿತನಾದೆ. ಇದು ನನ್ನ ಭಾಗ್ಯ. ಇಂತಹ ಶಿಕ್ಷೆಯನ್ನು ತಂದೆ, ತಾಯಿ, ಅಣ್ಣ, ಮಿತ್ರ ಮುಂತಾದವರು ಕೂಡ ಕೊಡಲಾರರು. ಅಸುರರಿಗೆ ರಾಜನೆಂಬ ಮದದಿಂದ ಕೊಬ್ಬಿದ ನನ್ನ ಕಣ್ತೆರೆದ ನೀನು ನಮಗೆ ಪರೋಕ್ಷ ಗುರುವೆನಿಸಿರುವೆ. ದೇವತೆಗಳಲ್ಲ ದವರು ಕೂಡ, ವೈರನಿಮಿತ್ತಕ ಭಕ್ತಿಯಿಂದ ನಿನ್ನಲ್ಲಿ ಮನವಿಟ್ಟು ಕೊನೆಗೆ ಏಕಾಂತಭಕ್ತರಿಗೆ ಸಿಗುವಂತಹ ಸಿದ್ಧಿಯನ್ನು ಪೊಂದಿರುವುದೂ ಉಂಟು.

ನನ್ನನ್ನು ನಿಗ್ರಹಿಸಿ ವಾರುಣಪಾಶದಿಂದ ಕಟ್ಟಿಸಿದೆ. ನನಗೆ ವ್ಯಸನವಾಗಲೀ, ಲಜ್ಜೆಯಾಗಲೀ ಇಲ್ಲ. ನಿನಗೆ ಸಮ್ಮತನೆನಿಸಿ, ಸಾಧುಜನ ಶ್ಲಾಘಾಪಾತ್ರನಾದ ಪ್ರಹ್ಲಾದನ ಪುಣ್ಯಸ್ಮರಣೆಯಿಂದ ನಾನು ಶಾಂತನಾಗಿರುವೆನು. ಆ ನಮ್ಮ ತಾತನನ್ನು ನಿನ್ನ ಶತ್ರುವಾದ ಹಿರಣ್ಯಕನು ಚಿತ್ರಹಿಂಸೆಗೆ ಗುರಿ ಮಾಡಿದಾಗ ನೀನು ಬಂದು ಸಂಕ್ಷಿಸಿದೆ.

ಪುರುಷನ ದೇಹವು ಸಂಪಾದಿಸಿಟ್ಟ ವಿಷಯಗಳನ್ನು ಇಲ್ಲೇ ಬಿಟ್ಟು ಸಾಯುವುದು. ಸ್ವಜನರು ಕಳ್ಳರಂತೆ, ಅವನ ಧನವನ್ನು ಕಣ್ಣೆದುರಿಗೇ ಕೊಳ್ಳೆ ಹೊಡೆಯುವರು. ಹೆಂಡತಿಯು ಸಂಸಾರದ

ಹಳ್ಳಕ್ಕೆ ತಳ್ಳುವಳು. ಮನೆ ಮೊದಲಾದುವನ್ನು ಮಾಡುವಾಗ ಆಯುಸ್ಸೇ ಹಾಳಾಗುವುದು. ಈ ದೇಹ ಸ್ವಜನ ಧನ ಗೇಹಾದಿಗಳಿಂದ ಏನು ಪ್ರಯೋಜನ? ಎಂದು ನಿಶ್ಚಯಿಸಿ ಮಹಾಜ್ಞಾನಿಯು ಸಜ್ಜನಶ್ರೇಷ್ಠನು ಆದ ನನ್ನ ತಾತನು, ನಿನ್ನ ಪಾದಪದ್ಮವನ್ನು ಗಟ್ಟಿಯಾಗಿ ನಂಬಿದನು. ಅಸುರ ನಾಶಕನೆನ್ನದೆ ಅಭಯಪ್ರದನೆಂದು ತಿಳಿದು ದುರ್ಜನ ಸಂಗದಿಂದ ದೂರನಾದನು. ಜಾತ್ಯಾ ಶತ್ರುವಾದರೂ ಕುಲದೈವವಾದ ನಿನ್ನ ಪಾದಸನ್ನಿಧಿಯನ್ನು ನಾನು ಅದೃಷ್ಟದಿಂದ ಕಂಡು ಸೇರಿದೆನು. ಯಮರಾಜನು ನುಂಗಲಿರುವ ಕಾಯವನ್ನು ಮೂಢನಾಗಿ ಶಾಶ್ವತವೆಂದು ತಿಳಿದು, ಮದಮತ್ತನಾಗಲು ಕಾರಣವಾದ ರಾಜ್ಯೈಶ್ವರ್ಯವನ್ನು ನೀನಾಗಿ ಕಳೆದು ದಯಮಾಡಿದೆ. ಹೊಡೆದು ಹಾಲು ಕುಡಿಸಿದಂತಾಯಿತು.

ಆಗ ಭಗವತ್ಪ್ರಿಯನಾದ ಪ್ರಹ್ಲಾದನು ಚಂದ್ರಮನಂತೆ ಬೆಳಗುತ್ತಾ ಅಲ್ಲಿಗೆ ಬಂದನು. ನಲಿನ ವಿಶಾಲ ಲೋಚನನು, ದಿವ್ಯತೇಜೋ ವಿರಾಜಿತನು, ಉನ್ನತ ಶ್ಯಾಮಲ ದೇಹನು, ಪ್ರಲಂಬ ಪೀವರಬಾಹು ದಂಡಮಂಡಿತನು ಆದ ತಾತನನ್ನು ನೋಡಿ ಇಂದ್ರಸೇನನು, (ಬಲಿ) ವರುಣ ಪಾಶಬದ್ಧನಾಗಿರುವುದರಿಂದ ಪೂರ್ವದಂತೆ ಪೂಜಿಸಲಾರದೆ, ಶಿರಬಾಗಿ ನಮಿಸಿ, ಲಜ್ಜೆಯಿಂದ ಮುಖವನ್ನು ತಗ್ಗಿಸಿ, ಬಾಷ್ಪಾವಿಲನೇತ್ರನಾಗಿ ನಿಂತಿದ್ದನು. ಸುನಂದ ನಂದಾದಿ ಪಾರ್ಷದರ ಸೇವೆಯನ್ನು ಕೈಕೊಂಡು ಸಿಂಹಾಸನದಲ್ಲಿ ಕೂತು ವಿರಾಜಿಸುವ ಶ್ರೀಪತಿಯನ್ನು ಕಂಡು ಪ್ರಹ್ಲಾದನು, ಆನಂದ ಬಾಷ್ಪಪೂರಿತ ನೇತ್ರನು ಪುಲಕಾಂಕುರಿತ ಗಾತ್ರನು ಆಗಿ ಸಮೀಪಿಸಿ ಸಾಷ್ಟಾಂಗವೆರಗಿ, ನಿಂತು ಕೈ ಜೋಡಿಸಿ ಇಂತೆಂದನು–

ಶ್ರೀಹರೇ! ನೀನಾಗಿ ಇವನಿಗೆ ಇಂದ್ರಪದವಿಯನ್ನು ಕೊಟ್ಟೆ. ಈಗ ನೀನಾಗಿ ಕಸಿದೆ. ಒಳ್ಳೆಯದೇ ಆಯಿತು. ಮನಸ್ಸನ್ನು ಕೆಡಿಸಿ ಮದವನ್ನು ಕೂಡಿಸುವ ಸಂಪತ್ತನ್ನು ಕಳೆದು ನನ್ನ ಮೊಮ್ಮಗನೆಂದು, ಮಹಾನುಗ್ರಹವನ್ನು ತೋರಿದೆ. ವಿದ್ವಾಂಸರೆನಿಸಿದವರು ಕೂಡ ಧನ ವಿಷಯದಲ್ಲಿ ಮೋಹವಶರಾಗುತ್ತಿರುವರು. ನಿನ್ನ ಲೀಲಾವಿಲಾಸವನ್ನು ತಿಳಿದದವರೇ ಇಲ್ಲ. ಹರೇ! ಜಗದೀಶ! ಅಖಿಲಲೋಕ ಸಾಕ್ಷಿಯಾದ ನಿನಗೆ ನಮಸ್ಕಾರ – ಎಂದು ನಮಿಸಿದರು.

ಬಲಿರಾಜನ ಬಂಧನವನ್ನು ನೋಡಿ ಭಯವಿಹ್ವಲಳಾಗಿ, ಅವನ ಪತ್ನಿ ವಿಂಧ್ಯಾವಳಿಯು ವಿನಯದಿಂದ ವಂದಿಸಿ, ಗೋವಿಂದನಿಗಿಂತೆಂದಳು–

ಜಗನ್ನಾಥ! ನೀನು ಕ್ರೀಡಿಸಲು ರಚಿಸಿದ ಜಗವನ್ನು ಕೆಲ ಕುಮತಿಗಳು, ನಮ್ಮದೆಂದು ಅಹಂಕಾರದಿಂದ ತಿಳಿಯುವರು. ಅದರಿಂದ ನಿನ್ನ ಪ್ರಭುತೆಗೆ ಲೋಪವೇ? ನಿನ್ನ ಸ್ವಾತಂತ್ರ್ಯವನ್ನು ಅಪಹರಿಸಲಿಚ್ಛಿಸುವ ಅವರ ಮಾತನ್ನು ಕೇಳಿ ನಾಚಿಕೆಯಾಗುತ್ತಿದೆ.

ಆಗ ಪ್ರಹ್ಲಾದನು ಕೇಳುತ್ತಿರಲು ಬ್ರಹ್ಮನು ಕೈಜೋಡಿಸಿ ತ್ರಿವಿಕ್ರಮನನ್ನು ನೋಡಿ ಹೀಗೆಂದನು–

ದೇವದೇವ! ಇವನ ಬಂಧನವನ್ನು ಬಿಡಿಸು. ಬಲಿಯು ನಿಗ್ರಹಪಾತ್ರನಲ್ಲ. ಕಷ್ಟದಿಂದ ಸಂಪಾದಿಸಿದ ಭೂರಾದಿಲೋಕದ ಸಿರಿಯನ್ನೆಲ್ಲಾ ನಿನಗೆ ದಾನ ಮಾಡಿ ಮನಸ್ಸಮಾಧಾನದಿಂದ ತನ್ನನ್ನೇ ಶಿರಸಾ ಸಮರ್ಪಿಸಿದ ಇಂದ್ರಸೇನನು ನಿನ್ನನುಗ್ರಹ ಪಾತ್ರನಾಗಲಿ! ಗೋವಿಂದ! ನಿನ್ನ ಪಾದಾರವಿಂದದಲ್ಲಿ ಒಂದು ಬಿಂದು ಗಂಗೋದಕವನ್ನು, ಒಂದು ದಳ ಶ್ರೀ ತುಳಸಿಯನ್ನು ಭಕ್ತಿಯಿಂದ ಸಮರ್ಪಿಸಿ, ದೂರ್ವಾಂಕುರದಿಂದ ಪೂಜಿಸಿದವನು ಉತ್ತಮ ಗತಿಯನ್ನು ಹೊಂದುವನೆಂದ ಮೇಲೆ ತ್ರಿಲೋಕವನ್ನರ್ಪಿಸಿ, ಕಂದದೆ ಕುಂದದೆ ಇರುವ ಭಕ್ತನಿಗೆ ದುಃಖವೇ? ಎಂದಿಗೂ ಇಲ್ಲ.

ಆ ಮಾತನ್ನಾಲಿಸಿ ಭಗವಂತನಿಂತೆಂದನು–

ಬ್ರಹ್ಮನ್! ನಾನು ಅನುಗ್ರಹಿಸುವ ನರನ ವಿತ್ತವನ್ನು ಮೊತ್ತಮೊದಲು ಕಸಿದು ಬಿಡುವೆನು. ಧನಮದದಿಂದ ಸುಜನರನ್ನೂ ಅವರಲ್ಲಿರುವ ನನ್ನನ್ನೂ ಅವಮಾನಿಸುವಂತೆ ಆಗಬಾರದೆಂದು ಮದಕಾರಿಯಾದ ಸಿರಿಯನ್ನು ಕಸಿದು ಅನುಗ್ರಹಿಸುವುದೇ ನನ್ನ ಸ್ವಭಾವವು. ಮಾಡಿದ ಕರ್ಮಗಳಿಂದ ಅನೇಕ ಯೋನಿಗಳಲ್ಲಿ ಪುಟ್ಟಿ ಬರುವ ಜೀವಾತ್ಮನಿಗೆ ಪುಣ್ಯದಿಂದ ಪುರುಷ ದೇಹವು ಬರುವುದು. ನರನಾದಾಗಲೂ ಕುಲ, ಕರ್ಮ, ರೂಪ, ವಿದ್ಯಾಧನಾದಿಗಳು ಪುಣ್ಯದಿಂದಲೇ ಲಭಿಸುವುವು. ನರಜನ್ಮ ಬಂದಾಗ, ಕುಲ ರೂಪ ವಿದ್ಯಾಧನಾದಿಗಳಿದ್ದಾಗ, ಜೀವನಿಗೆ ಮದವು ಪುಟ್ಟಿಲ್ಲವೆಂದರೆ ಅದೂ ನನ್ನ ಅನುಗ್ರಹವೇ ಸರಿ. ನನ್ನ ಭಕ್ತನು ಜನ್ಮಾದಿಗಳ ಮದವು ಸರ್ವಶ್ರೇಯೋವಿಘಾತಕವೆಂದು ತಿಳಿದು ನಿರಹಂಕಾರದಿಂದಿರುವನು.

ಈ ದಾನವವಲ್ಲಭನು ನನ್ನ ದುರ್ಜಯವೆನಿಸಿದ ಮಾಯೆಯನ್ನು ತಿಳಿದು ಗೆದ್ದಿರುವನು. ಎಷ್ಟೇ ಕಷ್ಟ ಬಂದರೂ ಉದ್ವೇಗ ಮೋಹಾದಿ ವಿಕಾರವನ್ನು ಪೊಂದದೆ ನನ್ನ ಮೆಚ್ಚಗೆಯನ್ನು ಗಳಿಸಿರುವನು. ಒಂದೇ ಕ್ಷಣದಲ್ಲಿ ಪದವಿಯಿಂದುರುಳಿಸಿದೆನು, ನಿಂದಿಸಿದೆನು, ಕಟ್ಟಿದೆನು, ಜ್ಞಾತಿಗಳೆಲ್ಲರೂ ಬಿಟ್ಟುಹೋದರೂ, ಮಹಾವ್ಯಸನವು ಒದಗಿ ಬಂತು, ಗುರುಗಳು ಬೈದು ಶಾಪವನ್ನಿತ್ತರು. ಆದರೂ ಸತ್ಯವನ್ನು ಬಿಡದಿರುವನು. ನಾನೂ ಛಲೋಕ್ತಿಗಳಿಂದ ಹೆದರಿಸಿದೆ ನಾದರೂ ಧರ್ಮವನ್ನು ಬಿಡದೆ ದೃಢವ್ರತನಾಗಿ ನನ್ನ ಭಕ್ತೋತ್ತಮನೆನಿಸಿರುವನು. ಸಾವರ್ಣಿ ಮನ್ವಂತರದಲ್ಲಿ ಇವನು ಮಹೇಂದ್ರನಾಗಿ ತ್ರಿಲೋಕ ರಾಜ್ಯವನ್ನಾಳಲಿ! ಅಲ್ಲಿಯವರೆಗೂ ವಿಶ್ವಕರ್ಮ ನಿರ್ಮಿತವು ಆಧಿವ್ಯಾಧಿರಹಿತವು ಆದ ಸುತಲದಲ್ಲಿ ವಸಿಸಲಿ! ಇಂದ್ರಸೇನ! ಹೋಗು ಸುತಲಕ್ಕೆ. ನಿನಗೆ ಮಂಗಳವಾಗಲಿ! ಸ್ವರ್ಗವನ್ನೂ ಮೀರಿಸುವ ವೈಭವಯುಕ್ತವಾದ ಸುತಲಲೋಕ ದಲ್ಲಿ ಜ್ಞಾನಿಜನ ಸೇವಿತನಾಗಿರು. ಲೋಕೇಶರೇ ನಿನ್ನನ್ನು ಮೀರಿ ನಡೆಯಲಾರರೆಂದ ಮೇಲೆ ಇತರರು ನಿನಗೆ ವಿಧೇಯರಾಗಿ ನಡೆಯುವರೆಂದು ಹೇಳಬೇಕೇ? ನಿನ್ನ ಆಜ್ಞೆಯನ್ನು ತಿರಸ್ಕರಿಸುವ ದೈತ್ಯರನ್ನು ನನ್ನ ಚಕ್ರವು ಸಂಹರಿಸುವುದು.

ಅನುಚರಪರಿವಾರಸಹಿತನಾದ ನಿನ್ನನ್ನು ಸರ್ವದಾ ಸಂರಕ್ಷಿಸುತ್ತಿರುವೆನು. ಬಲಿರಾಜ! ಸದಾ ಸನ್ನಿಹಿತನಾಗಿ ನಿನ್ನ ಬಾಗಿಲ ಕಾಯುವ ಗದಾಪಾಣಿಯಾದ ನನ್ನ ದರ್ಶನವು ನಿನಗೆ ಪ್ರತಿನಿತ್ಯವೂ ಆಗುತ್ತಿರುವುದು. ನನ್ನ ದರ್ಶನದಿಂದಲೂ, ನನ್ನ ಮಹಿಮೆಯ ಶ್ರವಣ ಮನನಗಳಿಂದಲೂ ದೈತ್ಯದಾನವ ಸಂಗದಿಂದಾಗುವ ಆಸುರ ಭಾವವು ನಿರ್ಮೂಲವಾಗಿ ನಶಿಸುವುದು ಎಂದು ಅನು ಗ್ರಹಿಸಿದನು.

## ೨೨. ಉಪೇಂದ್ರ ಪಟ್ಟಾಭಿಷೇಕ

ಪುರಾಣಪುರುಷನ ಮಧುರವಚನವನ್ನಾಲಿಸಿ ಬಲಿರಾಜನು ಕಣ್ಣೀರನ್ನೊರೆಸಿ, ಕೈಜೋಡಿಸಿ, ಭಕ್ತಿಯಿಂದ ಬಾಗಿ, ಗದ್ಗದವಚನಗಳಿಂದ ಇಂತು ನುಡಿದನು–

ಅಹೋ! ಏನು ನಿನ್ನ ಅನುಗ್ರಹದ ವೈಭವ! ನಂಬಿದ ಭಕ್ತರನ್ನು ಪೊರೆಯುವೆಡೆ ನಿನಗೆ ಸಮರುಂಟೇ? ಲೋಕಪಾಲರಾದ ಸುರರಲ್ಲಿಯೂ ತೋರದ ದಯೆಗೆ, ಈ ಅಲ್ಪ ದೈತ್ಯನು ಪಾತ್ರನಾದನೇ? ಶ್ರೀಶಾ! ನಿನಗೆ ನಮಃ.

ಆಗ ಗರುಡನು ವರುಣಪಾಶವನ್ನು ಬಿಚ್ಚಲು ಪ್ರೀತನಾಗಿ ಬಲಿಯು, ಅಸುರರಿಂದ ಕೂಡಿ ಸುತಲಕ್ಕೆಂದು ಹೊರಟುನಿಂತನು. ವಂಶಕೀರ್ತಿವರ್ಧನನಾದ ಬಲಿಯನ್ನು ಅವನ ರಾಜ್ಯವನ್ನು ಕಸಿದು ಇಂದ್ರನಿಗಿತ್ತು, ಅದಿತಿಯ ಕೋರಿಕೆಯನ್ನು ಪೂರೈಸಿದ ತ್ರಿಲೋಕನಾಥನನ್ನು ನೋಡಿ ಪ್ರಹ್ಲಾದನು ಭಕ್ತಿಯಿಂದ ಇಂತು ನುತಿಸಿದನು–

ಸಕಲ ಜನವಂದ್ಯರಾದ ಬ್ರಹ್ಮಾದಿ ದೇವತೆಗಳು ವಂದಿಸುವ ಪಾದಕಮಲದಿಂದ ಅಸುರರ ದ್ವಾರದೇಶದಿ ನಿಂತು ಪೊರೆಯುವ ಮನಸ್ಸನ್ನು ಮಾಡಿದ ಮಹಾನುಗ್ರಹಕ್ಕೇನೆಂಬೆ? ಇಂತಹ ಪ್ರಸಾದವು ಶ್ರೀ ಬ್ರಹ್ಮರುದ್ರಾದಿಗಳಿಗೂ ದುರ್ಲಭವಾಗಿದೆ. ಪ್ರಸಾದವನ್ನೇ ಬಯಸಿ ಬ್ರಹ್ಮ ರುದ್ರೇಂದ್ರ ಪ್ರಮುಖ ವೃಂದಾರಕರು ನಿನ್ನ ದಿವ್ಯ ಪಾದಾರವಿಂದವನ್ನು ಭಕ್ತಿಯಿಂದ ಭಜಿಸಿ, ಮಹಾವೈಭವ ಪದವಿಗಳನ್ನೂ ಪೊಂದಿ ಸುಖದಿಂದಿರುವರು. ಕೆಟ್ಟ ಮಾರ್ಗದಿ ನಡೆಯುವ ದುಷ್ಟ ಜಾತಿಯವರಾದ ನಮ್ಮ ಮೇಲೆ, ನಿನ್ನ ದಾಕ್ಷಿಣ್ಯಾಮೃತವಾಹಿನಿಯು ಹರಿಯಿತೆಂದರೆ, ಅದು ನಿನ್ನ ಭಕ್ತವಾತ್ಸಲ್ಯವೇ ಸರಿ! ಯೋಗಮಾಯಾ ಬಲದಿಂದ ಸಕಲ ಭುವನವನ್ನು ನಿರ್ಮಿಸಿ ರಕ್ಷಿಸುವ ಸರ್ವಸಸ್ವಾಮಿಯಾದರಂ ಭಕ್ತಪ್ರಿಯನಾಗಿರುವೆ; ಸಮನಾಗಿದ್ದರೂ ವಿಷಮನಂತೆ ತೋರುವೆ; ಕಲ್ಪವೃಕ್ಷದಂತೆ ಭಕ್ತಪ್ರಿಯನು, ಸಮನು ಮಾತ್ರವಲ್ಲದೆ ಸರ್ವಸ್ವಾಮಿಯು, ವಿಷಮನು ಕೂಡ ಆಗಿ ಮೆರೆವ ನಿನ್ನ ಚೇಷ್ಟಿತವು ಅಂಚಿಂತ್ಯಾದ್ಭುತವಾಗಿದೆ. ನಿನಗೆ ನಮಃ.

ಶ್ರೀಭಗವಂತನಿಂತೆಂದನು–

ವತ್ಸ! ಪ್ರಹ್ಲಾದ! ನಿನಗೆ ಶುಭವಾಗಲಿ! ಸುತಲದಲ್ಲಿ ಮೊಮ್ಮಗನಿಂದ ಸುಖವಾಗಿರು. ಗದಾಪಾಣಿಯಾಗಿ ನಿಂತ ನನ್ನ ದರ್ಶನವು ನಿನಗೂ ನಿತ್ಯವೂ ಆಗುವುದು. ಅದರಿಂದ ಧ್ವಸ್ತಪಾಪನಾಗಿ ಆನಂದವನ್ನು ಪಡೆಯುವೆ.

ಎಂದ ಭಗವಂತನ ಆಜ್ಞೆಯನ್ನು ಶಿರಸಾವಹಿಸಿ, ಪ್ರಹ್ಲಾದನು ಬಲಿಯಿಂದ ಕೂಡಿ ಶ್ರೀಶನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಅಪ್ಪಣೆಯನ್ನು ಪಡೆದು ಸರ್ವದಾನವರೊಡನೆ ಸುತಲ ವನ್ನು ಪ್ರವೇಶ ಮಾಡಲು ಹವಣಿಸಿದನು. ಆಗ ಭಗವಂತನು ಸಭೆಯಲ್ಲಿ ಕೂತಿದ್ದ ಶುಕ್ರಾ ಚಾರ್ಯನನ್ನು ಕರೆದು 'ಬ್ರಹ್ಮಜ್ಞಾನಿಯೇ! ಶಿಷ್ಯನ ಯಜ್ಞವು ವಿಘ್ನದೂಷಿತವಾಯಿತು. ಕರ್ಮ ಲೋಪವು ಬ್ರಾಹ್ಮಣರ ವಚನದಿಂದಲು, ಅವರು ಮಾಡಿಸುವ ಪ್ರಾಯಶ್ಚಿತ್ತಾದಿಗಳಿಂದಲು ಸರಿಹೋಗುವುದು. ಹಾಗೂ ಫಲದಾನ ಸಮರ್ಥನಾಗುವುದು. ಆದ್ದರಿಂದ ಕರ್ತವ್ಯ ಪರಿಹಾರವನ್ನು ಅವನಿಂದ ಮಾಡಿಸು ಎಂದನು.

ಆ ಮಾತನ್ನಾಲಿಸಿ ಶುಕ್ರನು 'ನಮ್ಮ ಶಿಷ್ಯನ ಯಜ್ಞವು ನಿರ್ವಿಘ್ನವಾಗಿದೆ. ಯಜ್ಞೇಶನು ಯಜ್ಞಫಲಪ್ರದನು ಆದ ನಿನ್ನ ಚರಣಾರವಿಂದರಜವನ್ನು ಶಿರಸಾ ಧರಿಸಿ, ಸರ್ವಸ್ವವನ್ನರ್ಪಿಸಿದ ಬಲಿರಾಜನ ಯಜ್ಞವು ಸಂಪೂರ್ಣವಾಗಿದೆ. ಮಂತ್ರ ತಂತ್ರ ದೇಶ ಕಾಲ ವಸ್ತು ಪಾತ್ರಾದಿ ಲೋಪ ಗಳಿದ್ದರೂ, ನಿನ್ನ ಪವಿತ್ರನಾಮ ಸಂಕೀರ್ತನ ಮಾತ್ರದಿಂದ ಎಲ್ಲವೂ ಪೂರ್ಣವಾಗುವುದು. ಆದರೂ ಪೂರ್ಣಗುಣನಾದ ನಿನ್ನಾಜ್ಞೆಯನ್ನು ಪಾಲಿಸಿ ನಡೆಯುವುದರಿಂದ ಸರ್ವಶ್ರೇಯಸ್ಸಿದ್ಧಿ, ಎಂದರಿತು ಅದರಂತೆ ಮಾಡುವೆನು' ಎಂದು ನುಡಿದನು, ಹಾಗೂ ವಿಪ್ರರ್ಷಿಗಳಿಂದ ಕೂಡಿ ಬಲಿರಾಜನ ಯಜ್ಞವನ್ನು ಮುಗಿಸಿದನು.

ರಾಜನ್! ರಾಜೀವಾಕ್ಷನು ರಕ್ಷೋವಲ್ಲಭನನ್ನು ಭಕ್ಷಿಸಿ ಅಣ್ಣನಾದ ಸಹಸ್ರಾಕ್ಷನಿಗೆ ತ್ರಿದಿವ ರಾಜ್ಯವನ್ನು ತಂದುಕೊಟ್ಟು ಸಂರಕ್ಷಿಸಿದನು. ಆಗ ಬ್ರಹ್ಮನು ರುದ್ರೇಂದ್ರ ದಕ್ಷಾದಿಗಳಿಂದಲೂ

ದೇವರ್ಷಿಪಿತೃನರಾಧಿಪರಿಂದಲೂ ಕೂಡಿ ಸರ್ವಭೂತ ಸುಖವಾಗಲೆಂದು ವಾಮನನನ್ನು ವೇದಗಳಿಗೆ, ದೇವತೆಗಳಿಗೆ, ಧರ್ಮಯಶ ಶ್ರೀ ಮಂಗಲ ವ್ರತಗಳಿಗೆ ಪತಿಯನ್ನಾಗಿ ಪಟ್ಟಗಟ್ಟಿ ತಾನು ಧನ್ಯನಾಗಿ ಸಕಲ ಭೂತಗಳಿಗೆ ಶ್ರೇಯವನ್ನು ಸಂಪಾದಿಸಿದನು. ಆಗ ಇಂದ್ರನು ದಿವ್ಯ ವಿಮಾನದಲ್ಲಿ ವಾಮನಮೂರ್ತಿಯನ್ನಿರಿಸಿ ಬ್ರಹ್ಮನ ಅನುಜ್ಞೆಯಿಂದ ಸ್ವರ್ಗಲೋಕವನ್ನು ಸೇರಿಸಿದನು. ಉಪೇಂದ್ರನೆನಿಸಿ ಶ್ರೀಹರಿಯು ರಕ್ಷಿಸುತ್ತಿರಲು ಸಕಲ ವ್ಯಸನರಹಿತವಾಗಿ ಸುರೇಶನು ಸುಖದಿಂದಿದ್ದನು.

ಆಗ ಬ್ರಹ್ಮಾದಿ ದೇವತೆಗಳು ಪರಮಾದ್ಭುತವಾದ ವಿಷ್ಣುಕೀರ್ತಿಯನ್ನು ಪೊಗಳುತ್ತಾ ತಮ್ಮ ತಮ್ಮ ಲೋಕಗಳಿಗೆ ಪೋದರು. ಅದಿತಿಯ ಆನಂದತುಂದಿಲಳಾಗಿ ಉಪೇಂದ್ರನೊಂದಿಗೆ ಪೂಜೆಯನ್ನು ಕೊಳ್ಳುತ್ತಾ ಸ್ವರ್ಗದಲ್ಲಿ ನೆಲಸಿದಳು.

ರಾಜನ್! ಸರ್ವಪಾಪ ಪರಿಹಾರಕವು, ಮನೋಹರವು ಆದ ತ್ರಿವಿಕ್ರಮನ ಪಾವನ ಚರಿತವನ್ನು ನಿನಗೆ ಪೇಳಿದೆನು. ಪೃಥಿವೀಕಣಗಳನ್ನಾದರೂ ಎಣಿಸಲಹುದಾಗಲಿ ಮುರಾರಿಯ ವಿಕ್ರಮ ಚರಿತ್ರೆಯನ್ನೆಣಿಸಿ ಮುಗಿಸಲು ಬ್ರಹ್ಮನಿಗೂ ಸಾಧ್ಯವಿಲ್ಲ. ಹಿಂದಾಗಿ ಹೋದ ಅಥವಾ ಮುಂದೆ ಬರುವ ಬ್ರಹ್ಮಾದಿಗಳಿಗೂ ಅಪರಿಜ್ಞೇಯವಾದ ಮಹಿಮೆಯಿಂದ ಶೋಭಿಸುವ ಶ್ರೀ ವಾಮನನಿಗೆ ನಮಸ್ಕಾರವು. ದೇವದೇವನ ಪರಮಾದ್ಭುತ ವಿಕ್ರಮಲೀಲೆಯನ್ನು ಕೇಳಿದವನು ದಿವ್ಯಜ್ಞಾನವನ್ನೂ, ಸದ್ಗತಿಯನ್ನೂ ಹೊಂದುವನು. ದೇವಪಿತೃ ಕರ್ಮಗಳಲ್ಲಿ ಈ ವಿಷ್ಣುಚರಿತೆಯನ್ನು ಪಠಿಸಲು ಆ ಕರ್ಮಗಳದರಿಂದಲೇ ಸಂಪೂರ್ಣವಾಗುವುವು.

## ೨೩. ಮತ್ಸ್ಯಾವತಾರ ಕಥೆ

ರಾಜನು ಪ್ರಶ್ನಿಸಿದನು–

ಪೂಜ್ಯನೇ! ಅದ್ಭುತಕರ್ಮನಾದ ಶ್ರೀಹರಿಯು ಮತ್ಸ್ಯನಾದ ಕಥೆಯನ್ನು ಪೇಳು. ಲೋಕದಲ್ಲಿ ಅಸಹ್ಯವೆನಿಸಿದ ಮೀನ ರೂಪವನ್ನು ಸ್ವೇಚ್ಛಾವತಾರನಾದ ಶ್ರೀಹರಿಯು ಧರಿಸಲು ಕಾರಣವೇನು? ಕರ್ಮಫಲವನ್ನು ತಪ್ಪಿಸಿಕೊಳ್ಳಲಾರದ ಜೀವನಂತೆ, ಮತ್ಸ್ಯ ಶರೀರವನ್ನೆಂತು ಪ್ರವೇಶಿಸಿದನು? ಉತ್ತಮಶ್ಲೋಕನ ಚರಿತವು ಸರ್ವಲೋಕ ಸುಖಕಾರಣವಲ್ಲವೇ?

ಇಂತು ಪ್ರಶ್ನಿಸಿದ ರಾಜನಿಗೆ ಶ್ರೀಶುಕನು ಮತ್ಸ್ಯಾವತಾರ ಚರಿತವನ್ನು ನಿರೂಪಿಸಿದನು. – ಗೋವಿಪ್ರ ಸುರ ಸಾಧುಜನರಿಗೂ, ವೇದಗಳಿಗೂ, ಧರ್ಮಾರ್ಥಗಳಿಗೂ ರಕ್ಷಕನಾದ ಭಗವಂತನು ಬೇಕಾದಂತೆ, ಕಾಲ ದೇಶಗಳಿಗನುಸರಿಸಿ ವಿವಿಧ ಯೋನಿಗಳಲ್ಲಿ ಅವತರಿಸುವನು. ಅದರಿಂದ ಅವನಿಗೆ ಲೇಪವಿಲ್ಲ. ಪ್ರಾಕೃತ ಗುಣರಹಿತನಿಗೆ ಪ್ರಕೃತಿವಿಕಾರ ದೇಹಯೋಗ ವಿಯೋಗಗಳೂ ಇಲ್ಲ. ಅವನ ಸರ್ವಾವತಾರಗಳು ಆನಂದಮಯವೇ ಆಗಿರುವುವು.

ಹಿಂದಿನ ಕಲ್ಪಾಂತದಲ್ಲಿ ಬ್ರಹ್ಮ ನಿದ್ರಾನಿಮಿತ್ತಕ ಪ್ರಳಯವಾದಾಗ ಭೂಲೋಕ ಮೊದಲಾದ ಒಂಭತ್ತು ಲೋಕಗಳು ಸಮುದ್ರದಲ್ಲಿ ಮುಳುಗಿದವು. ಬ್ರಹ್ಮನು ನಿದ್ರಿಸುತ್ತಿರಲು ನೋಡಿ ಮುಖದಿಂದ ವ್ಯಕ್ತವಾಗುತ್ತಿರುವ ವೇದರಾಶಿಗಳನ್ನು ಕದ್ದು ಓಡಿದ ಹಯಗ್ರೀವನನ್ನು ಸಂಹರಿಸುಲ ನಿರ್ದೋಷ ಜ್ಞಾನಾಂದಸ್ವರೂಪನಾದ ಶ್ರೀಶನು ಸ್ವಚ್ಛ ಮತ್ಸ್ಯನಾದನು. ಹಯದೈತ್ಯನನ್ನು ಕೊಂದು ವೇದಗಳನ್ನು ತಂದು ಬ್ರಹ್ಮದೇವನಿಗಿತ್ತನು.

ಆಗ ಸತ್ಯವ್ರತನೆಂಬ ರಾಜರ್ಷಿಯಿದ್ದನು. ಅವನು ನಾರಾಯಣಪರಾಯಣನಾಗಿ, ನದೀತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದನು. ಒಂದು ದಿನ ಕೃತಮಾಲಾ ನದಿಯಲ್ಲಿ ಜಲ ತರ್ಪಣವನ್ನು ಮಾಡುತ್ತಿದ್ದ ರಾಜನ ಕೈಯಲ್ಲಿ ಮೀನೊಂದು ಬಂತು. ಆಗ ದ್ರವಿಡರಾಜನು ಕೈಲಿದ್ದ ನೀರನ್ನು ಮೀನ ದೂಷಿತವೆಂದು ನದಿಯಲ್ಲಿ ಬಿಡಲು, ಆ ಮತ್ಸ್ಯವು ಕರುಣೆ ಪುಟ್ಟುವಂತೆ ದೀನವಾಗಿ 'ರಾಜನ್! ಜ್ಞಾತಿಘಾತುಕರಾದ ಜಲಜಂತುಗಳಿಂದ ಭೀತನಾಗಿ, ನಿನಗೆ ಶರಣಾಗತನಾದ ನನ್ನನ್ನು ಕೈಬಿಡುವುದು ನ್ಯಾಯವೇ?' ಎಂದಿತು. ಆ ಮಾತಿನಿಂದ ಮರುಕಗೊಂಡು ರಾಜನು ಮೀನನ್ನು ಕಮಂಡಲುವಿನಲ್ಲಿಟ್ಟು, ಆಶ್ರಮಕ್ಕೆ ತಂದನು. ಮರುದಿನ ನೋಡಿದಾಗ ಕಲಶವನ್ನು ತುಂಬಿ ನಿಂದ ಮತ್ಸ್ಯವಿಂತು ನುಡಿಯಿತು – 'ರಾಜನ್! ಇಲ್ಲಿ ನನಗೆ ಸ್ಥಲವು ಸಾಲದು. ಸುಖವಾಗಿರುವ ಜಲರಾಶಿಯಲ್ಲಿಡು'– ಲೋಕವಿಲಕ್ಷಣ ಮತ್ಸ್ಯವನ್ನು ಮಹಾರಾಜನು ದೊಡ್ಡ ಗಚ್ಚಿನಲ್ಲಿರಿಸಿದನು. ಒಂದೇ ಮುಹೂರ್ತದಲ್ಲಿ ಮೂರುಮಾರುದ್ದ ಬೆಳೆದು ನಿಂತ ಮೀನನ್ನು ಸರೋವರದಲ್ಲಿ ಹಾಕಿಸಿದನು. ಅಲ್ಲಿಯೂ ಬೆಳೆದು ಸರೋವರವು ಸಾಲದೆಂದ ಮೀನನ್ನು ಸಮುದ್ರದಲ್ಲಿ ಹಾಕಲು ನಿಂತ ರಾಜನನ್ನು ನೋಡಿ 'ರಾಜನ್! ಬಿಡಬೇಡ. ಇಲ್ಲಿ ಮಕರ ತಿಮಿಂಗಲಾದಿ ಕ್ರೂರ ಜಂತುಗಳಿಗೆ ತುತ್ತಾಗದಂತೆ ನನ್ನನ್ನು ಕಾಪಾಡು' ಎಂದು ಬೇಡಿತು. ಇಂತು ಮನಮೋಹಕವಾಗಿ ಮಾತಾಡುವ ಮಾಯಾಮತ್ಸ್ಯನಾದ ಮಾಧವನ ಮಹಿಮೆಗೆ ಮಾರುಹೋಗಿ, ಮಹಾರಾಜನು 'ಮಹಾಸ್ವಾಮೀ! ನೀನಾರು? ಮತ್ಸ್ಯರೂಪವನ್ನು ಧರಿಸಿ ನಿಂತ ನಿನ್ನ ಮಹಿಮೆಯು ಮೋಹಕವಾಗಿದೆ. ಒಂದೇ ದಿನದಲ್ಲಿ ಶತಯೋಜನಾಯತವಾದ ಸರೋವರವನ್ನು ತುಂಬಿ ನಿಂತ ನೀನು ಭಗವನ್ನಾರಾಯಣನೇ ಸರಿ. ಭಕ್ತಾನುಗ್ರಹಕಾತರನಾಗಿ ಮತ್ಸ್ಯರೂಪದಂದಿರುವ ಪುರುಷೋತ್ತಮ! ನಿನ್ನಿಂದ ಜಗತ್ತಿಗೆ ಜನನ ಸಂರಕ್ಷಣ ಸಂಹರಣಗಳಾಗುತ್ತಿರುವುವು. ಶರಣಾಗತ ಪರಿಪಾಲಕನಾದ ನೀನೇ ನಮಗೆ ಸ್ವಾಮಿಯು. ನೀನೇ ಗತಿಯು. ನೀನು ಭಕ್ತಜನ ರಕ್ಷಣವನ್ನು ಮಾಡಲು ಧರಿಸುವ ಅವತಾರಗಳೆಲ್ಲವೂ ಆನಂದ ಲೀಲಾಮಯವಾಗಿವೆ. ಈಗ ಮತ್ಸ್ಯನಾದುದೇತಕ್ಕೆ?

ಅರವಿಂದಾಕ್ಷ! ಸರ್ವಹೃದಯವಾಸಿಯು, ಅನಿಮಿತ್ತ ಬಂಧುವು ಆದ ನಿನ್ನ ಪಾದಾರವಿಂದ ಸೇವೆಯು ಎಂದಿಗೂ ವ್ಯರ್ಥವಾಗದು. ಆದರೆ ವಿಷಯರತರಾದ ಇಂದ್ರಿಯಲೋಲುಪರು ಕಾಮಾಶೆಯಿಂದ ನಿನ್ನನ್ನು ಪೂಜಿಸಿ, ಮೋಕ್ಷದೂರರಾಗುತ್ತಿರುವರು. ನೀನು ಭಕ್ತ ಸುಲಭನು. ಆದ್ದರಿಂದಲೇ ಈ ನಿನ್ನ ಅದ್ಭುತ ಮತ್ಸ್ಯರೂಪವನ್ನು ನಮಗೆ ತೋರಿಸಿರುವೆ.

ಸತ್ಯವ್ರತನ ವಚನವನ್ನು ಕೇಳಿ ಏಕಾಂತಭಕ್ತಪ್ರಿಯನಾದ ಮತ್ಸ್ಯನು ಪ್ರಳಯಾರ್ಣವದಲ್ಲಿ ಕ್ರೀಡಿಸುವ ಇಚ್ಛೆಯಿಂದ ಇಂತು ಆಜ್ಞಾಪಿಸಿದನು–

ರಾಜನ್! ಇಂದಿನಿಂದ ಏಳನೆಯ ದಿನದಲ್ಲಿ ಪ್ರಳಯಸಮುದ್ರವು ಉಕ್ಕೇರಿ ಬಂದು ತ್ರಿಲೋಕಗಳನ್ನೂ ಮುಳುಗಿಸುವುದು. ಆಗ ಒಂದು ನೌಕೆ ನಿನ್ನನ್ನು ಸಮೀಪಿಸುವುದು. ಅಷ್ಟರಲ್ಲೇ ನೀನು ಸರ್ವಬೀಜ ಲತೌಷಧಿಗಳನ್ನು ಶೇಖರಿಸು. ಸಪ್ತರ್ಷಿಗಳಿಂದಲೂ, ಸಕಲ ಜೀವ ಪ್ರತಿನಿಧಿಗಳಿಂದಲೂ ಕೂಡಿ ಆ ವಿಶಾಲ ನೌಕೆಯನ್ನೇರಿ ನಾಶವಿಲ್ಲದೆ ವಿಹರಿಸು. ತಮಃಪ್ರಾಯವಾಗಿರುವ ಆ ಪ್ರಳಯೋದಧಿಯಲ್ಲಿ ಸಪ್ತರ್ಷಿತೇಜದಿಂದ ಮುಂದೆ ಸಾಗುತ್ತಾ ಮೀನರೂಪದಿಂದ ಬಂದ ನನ್ನ ಕೋಡಿನ ಕೊನೆಗೆ ನಾವೆಯನ್ನು ಮುಣುಗದಂತೆ ಸರ್ಪರಜ್ಜುವಿನಿಂದ ಕಟ್ಟು. ನಿಮ್ಮಿಂದ ಕೂಡಿದ ನೌಕೆಯನ್ನು ರಕ್ಷಿಸಿ ನಿಲ್ಲಿಸುತ್ತಾ, ಪ್ರಳಯ ಕಾಲವು ಮುಗಿಯುವವರೆಗೂ ವಿಹರಿಸುವೆನು. ಪರಬ್ರಹ್ಮನಾದ ನನ್ನ ಮಹಿಮೆಯನ್ನು ಚೆನ್ನಾಗಿ ಕೇಳಿ ನೀನು ತಿಳಿಯುವೆ – ಎಂದಾಜ್ಞಾಪಿಸಿ

ಸ್ವಾಮಿಯು ಅಂತರ್ಹಿತನಾದನು. ಶ್ರೀ ಹೃಷೀಕೇಶನು ಪೇಳಿದ ಸಮಯವನ್ನು ನಿರೀಕ್ಷಿಸುತ್ತಿದ್ದ ರಾಜನು ಪ್ರಾಗಗ್ರವಾದ ದರ್ಭಾಸನದಲ್ಲಿ ಉತ್ತರಾಭಿಮುಖವಾಗಿ ಕೂತು, ಶ್ರೀಹರಿಚರಣಚಿಂತನ ರತನಾಗಿದ್ದನು. ಮಹಾಮೇಷವರ್ಷದಿಂದ ಸಮುದ್ರವು ಉಕ್ಕೇರಿ, ಮಹೀಮಂಡಲವನ್ನೆಲ್ಲಾ ಮುಳುಗಿಸಿತು. ಶ್ರೀಹರಿಯ ವಚನವನ್ನು ನೆನೆದ ರಾಜನಿಗೆ, ನಾವೆಯು ಗೋಚರವಾಯಿತು. ವಿಪ್ರವರರಿಂದಲೂ ಔಷಧಿ ಬೀಜಗಳಿಂದಲೂ ಕೂಡಿ ರಾಜನು ಅದನ್ನೇರಿ ಕುಳಿತನು. ಋಷಿಗಳು 'ರಾಜನ್! ಕೇಶವನನ್ನು ಧ್ಯಾನಿಸು. ಅವನೇ ಈ ಸಂಕಟದಿಂದ ನಮ್ಮನ್ನು ಪಾರು ಮಾಡುವವನು' ಎಂದರು. ಆಗ ಅವರಿಂದ ಧ್ಯಾತನಾದ ಶ್ರೀಹರಿಯು ಏಕಶೃಂಗ ಮೀನರೂಪನಾಗಿ ಬಂದನು. ಹತ್ತು ಲಕ್ಷ ಯೋಜನಾತ್ಮಕವಾದ ಕನಕಶರೀರದಿಂದ ಪ್ರಕಾಶಿಸುತ್ತ ಬಂದ ಮತ್ಸ್ಯನ ಶೃಂಗದಲ್ಲಿ ನೌಕೆಯನ್ನು ಕಟ್ಟಿ ರಾಜನು ಆ ಸಂಸಾರ ವೈರಿಯನ್ನಿಂತು ನುತಿಸಿದನು- ಅನಾದ್ಯವಿದ್ಯೆಯಿಂದ ಶ್ರೀಹರಿಯ ಜ್ಞಾನವಿಲ್ಲದೆ, ಕಾಮಕರ್ಮದಿಂದ ಬಂದ ಸಂಸಾರದಲ್ಲಿ ನರಳುತ್ತಿರುವ ಜೀವನು ನಿನಗೆ ಶರಮಾಗತನಾಗಲು ಅನಾದ್ಯವಿದ್ಯಾಕಾಮಕರ್ಮಗಳಿಂದ ಮುಕ್ತನಾಗುವನು. ಅಂತಹ ಮೋಕ್ಷಪ್ರದನಾದ ನೀನೇ ನಮಗೆ ಪರಮಗುರುವೆನಿಸಿ ಜ್ಞಾನಪ್ರದನಾಗಿರುವೆ. ಸ್ವಾಮಿ! ಈ ಜೀವನು ಸುಖಕ್ಕಾಗಿ ಹುಡುಕುತ್ತಾ ಕಷ್ಟವನ್ನೇ ಪಡುತ್ತಿರುವನು. ಸುಖದುಃಖಗಳು ನಮ್ಮ ಕೈಯಲ್ಲಿ ಇರುವವೆಂಬ ಭ್ರಾಂತಿಯನ್ನು ಕಳೆದು, ನಮ್ಮ ಹೃದಯದಲ್ಲಿ ಜ್ಞಾನದೀಪವನ್ನು ಬೆಳಗಿಸುವ ನಾರಾಯಣನಿಗೆ ನಮಸ್ಕಾರವು. ಅಗ್ನಿಯಲ್ಲಿಟ್ಟ ಬಂಗಾರವು ದಶವಿಧ ಮಲದೋಷ ವನ್ನು ಕಳೆದು ಸುವರ್ಣವೆನಿಸುವಂತೆ, ನಿನ್ನ ಸೇವೆಯಿಂದ ದಶೇಂದ್ರಿಯ ವಿಷಯ ದೋಷಮುಕ್ತ ನಾಗಿ ಜೀವನು ಸುಖರೂಪನೆನಿಸುವನು. ಇಂತಹ ಮುಕ್ತಿದಾನ ಸಮರ್ಥನಾದ ಲಕ್ಷ್ಮೀಶನೇ ನಮಗೆ ಪರಮಗುರುವಾಗಿರುವನು. ಇತರ ದೇವತೆಗಳು, ಗುರುಗಳು, ಸುಜನರು ಕಲೆತು, ಶ್ರೀಹರಿಯ ಸಂಸಾರಮೋಚಕವಾದ ಪ್ರಸಾದದ ಕೋಟ್ಯಂಶ ಪ್ರಸಾದವನ್ನೂ ಅವನ ದಯೆ ಇಲ್ಲದೇ ಮಾಡಲಾರರು. ಅಂತಹ ಲಕ್ಷ್ಮೀರಮಣನಿಗೆ ಶರಣು. ಕಣ್ಣಿಲ್ಲದ ಕುರುಡನಿಗೆ ಕಣ್ಣುಳ್ಳ ವನೇ ಮಾರ್ಗದರ್ಶಕನು, ಅಂತೆಯೇ ಅಜ್ಞಾನಿಗಳಿಗೆ ಪಂಡಿತನೇ ಗುರುವೆನಿಸಿ ನಡೆಸುವನು. ನೀನೂ ಸರ್ವೇಂದ್ರಿಯ ಪ್ರೇರಕನಾಗಿ ನಮ್ಮ ಹಿತಕರವಾದ ಮೋಕ್ಷಮಾರ್ಗದಲ್ಲಿ ನಮ್ಮನ್ನು ನಡೆಯಿಸಿ ಸುಗತಿಪ್ರದನಾಗುವೆ. ಆದ್ದರಿಂದ ಪರಮಗುರುವೆನಿಸಿದ ನಿನಗೆ ನಮಸ್ಕಾರವು. ಲೋಕ ದಲ್ಲಿ ದೇಹಾಭಿಮಾನಿ ಜನರು ಇಹಪರ ಸುಖಸಾಧನವೆಂದು ತಾವು ತಿಳಿಸಿರುವ ಅರ್ಥಕಾಮ ಗಳನ್ನು ಮಾತ್ರ ಇತರ ಜನರಿಗೆ ಉಪದೇಶಿಸುವರು. ಅದರಿಂದ ಅವರು ಜ್ಞಾನದೂರರಾಗಿ ತಮಸ್ಸನ್ನೇ ಪೊಂದುತ್ತಿರುವರು. ನೀನು ಹಾಗಲ್ಲ. ವ್ಯರ್ಥವಾಗದ ಮೋಕ್ಷ ಫಲವನ್ನೀವ ಸ್ವರೂಪಜ್ಞಾನವನ್ನು ದಯಪಾಲಿಸಿ ನಿನ್ನ ಲೋಕದಲ್ಲಿಟ್ಟು ಸುಖಪಡಿಸುವೆ. ಅನಿಮಿತ್ತ ಬಂಧೋ! ಗೋವಿಂದ! ನೀನಲ್ಲದೆ ನಮಗಿನ್ನಾರು ಗತಿ? ಗುರುವಾಗಿ ಜ್ಞಾನವನ್ನೂ, ಸ್ವಾಮಿಯಾಗಿ ಮುಕ್ತಿ ಯನ್ನೂ ಕೊಟ್ಟು ಸಲಹುತ್ತಿರುವೆ. ಬಿಂಬನಾಗಿ ಹೃದಯದಲ್ಲೇ ನೆಲೆಸಿದ್ದರೂ ನಿನ್ನನ್ನು ನೋಡದೆ ಕಾಮದೂಷಿತ ಲೋಚನರಾಗಿ ಕುರುಡರಂತೆ ಮಾರ್ಗವನ್ನು ಬಿಟ್ಟು ನಡೆದು ಕೆಡುವವರೇ ಹೆಚ್ಚಾಗಿ ಕಾಣಬರುತ್ತಿರುವರು. ಇದನ್ನರಿತು ನಾನು ಸ್ವರೂಪ ಜ್ಞಾನಪ್ರದನಾಗೆಂದು ಬೇಡಿ ನಿನಗೆ ಶರಣಾಗತನಾಗಿ ಬಂದಿರುವೆನು. ದೇವ ಶ್ರೇಷ್ಠ! ಯಥಾರ್ಥ ಜ್ಞಾನವನ್ನಿತ್ತು ಹೃದಯತಮವನ್ನು ಕಳೆದು ನಿನ್ನ ಪರಮಪ್ರಿಯ ಮಹದಾನಂದ ಮೂರ್ತಿಯನ್ನು ನಾನು ಕಾಣುವಂತೆ ಅನುಗ್ರಹಿಸು.

ಆ ಭಕ್ತನ ಮಾತನ್ನು ಕೇಳಿ, ಭಗವಾನ್ ಮತ್ಸ್ಯನು ಮಹಾಂಬೋಧಿ ವಿಹಾರವನ್ನು

ಮಾಡುತ್ತಾ ಸಾಂಖ್ಯಯೋಗ ಕರ್ಮಭಕ್ತಿ ಕಾಂಡಗಳಿಂದ ಕೂಡಿದ ಮತ್ಸ್ಯಪುರಾಣವನ್ನು ಸತ್ಯವ್ರತನಿಗೆ ಉಪದೇಶಿಸಿದನು. ಆತ್ಮತತ್ವವನ್ನು ಸಮಗ್ರವಾಗಿ ಕೇಳಿ ಮಹಾರಾಜನು ನಿಸ್ಸಂಶಯ ವಾದ ಬ್ರಹ್ಮಜ್ಞಾನದಿಂದ ವಿರಾಜಿಸಿದನು. ಸಪ್ತರ್ಷಿಗಳೂ ಧನ್ಯರಾದರು.

ಹಿಂದಿನ ಪ್ರಳಯದಲ್ಲಿ ಮತ್ಸ್ಯರೂಪಿಯಾದ ಶ್ರೀಹರಿಯು ಹಯಗ್ರೀವ ದೈತ್ಯನನ್ನು ಸಂಹರಿಸಿ, ಅವನು ಹರಿಸಿದ್ದ ವೇದಗಳನ್ನು ವಿಧಿಗಿತ್ತು, ಸತ್ಯವ್ರತನನ್ನು ಪ್ರಳಯೋದಧಿಯಿಂದ ಉಳಿಸಿ ಕಾಪಾಡಿದ ಪವಿತ್ರ ಚರಿತ್ರವನ್ನು ನಿನಗೆ ಪೇಳಿರುವೆನು.

ಆ ಸತ್ಯವ್ರತನೇ ಜ್ಞಾನ ವಿಜ್ಞಾನ ವಿಜೃಂಭಿತ ತಪೋಬಲದಿಂದ ವಿಷ್ಣುಪ್ರಸಾದಪಾತ್ರನಾಗಿ, ಈ ಮನ್ವಂತರದಲ್ಲಿ ಮನುವಾಗಿ ವೈವಸ್ವತನೆನಿಸಿರುವನು.

ರಾಜರ್ಷಿಯಾದ ಸತ್ಯವ್ರತನಿಗೆ ಶ್ರೀಶನಾದ ಮತ್ಸ್ಯನು ಪ್ರಸನ್ನನಾದ ಪರಮಮಂಗಲ ಕಥೆಯನ್ನು ಕೇಳಿದ ನರನು ಸರ್ವಪಾಪದಿಂದ ಮುಕ್ತನಾಗುವನು.

ಶ್ರೀಹರಿಯು ಸ್ವೇಚ್ಛೆಯಿಂದ ಕೈಕೊಂಡ ಸ್ವಚ್ಛಮತ್ಸ್ಯನ ಚರಿತವನ್ನು ಕೇಳಿದ ಭಕ್ತನ ಕೋರಿಕೆಗಳೆಲ್ಲ ಈಡೇರುವುವು, ಹಾಗೂ ಅಂತಹವನು ಸದ್ಗತಿಯನ್ನೂ ಹೊಂದಿ ಸುಖಿಸುವನು. ತನಗೆ ವಾಸಸ್ಥಲವಾಗಿ ಅಂಜಲಿಯನ್ನೂ ಹಾಗೂ ಕಮಂಡಲು ಸರೋವರಾದಿಗಳನ್ನೂ ಕೊಟ್ಟು ಅಭಯವನ್ನಿತ್ತ ಮಹಾರಾಜನನ್ನು ಪ್ರಳಯೋದಧಿಯಿಂದ ಕಾಪಾಡಿ, ಅಭಯವನ್ನೂ ಜ್ಞಾನವನ್ನೂ ಕೊಟ್ಟ ಅನಂತ ಫಲಪ್ರದನಾದ ಶ್ರೀಶನಿಗೆ ನಮಸ್ಕಾರವು.

ಪ್ರಳಯ ಸಮುದ್ರದಿ ನಿದ್ರಾಮುದ್ರಿತ ನೇತ್ರನಾದ ವಿಧಾತನ ಮುಖದಿಂದ, ವೇದಗಲನ್ನು ಕದ್ದ ದೈತ್ಯನನ್ನು ಕೊಂದು, ವೇದಗಳನ್ನು ತಂದು ವಿರಿಂಚನಿಗಿತ್ತು, ಸತ್ಯವ್ರತನಿಗೆ ವೇದವಿಜ್ಞಾನ ರಹಸ್ಯವನ್ನು ಪೇಳಿ ಸಲಹಿದ ಜಗಜ್ಜನ್ಮಾದಿ ಕಾರಣ ಸ್ವಚ್ಛಮತ್ಸ್ಯ ರೂಪನಿಗೆ ನಮಸ್ಕಾರವು!

ಅಷ್ಟಮಸ್ಕಂಧವು ಸಂಪೂರ್ಣವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ನವಮ ಸ್ಕಂಧವು

|| ಹರಿಃ ಓಂ ||

### ೧. ಸುದ್ಯುಮ್ನ ಕಥೆ

ಶ್ರೀಶುಕನು ಹೇಳಿದ ಮತ್ಸ್ಯಾವತಾರದ ಕಥೆಯನ್ನು ಕೇಳಿ ಪರೀಕ್ಷಿದ್ರಾಜನು ಪುನಃ ಪ್ರಶ್ನಿಸಿದನು–

ಮನ್ವಂತರಗಳಲ್ಲಿ, ಅಲ್ಲಿ ಶ್ರೀಶನು ಅವತರಿಸಿ ತೋರಿದ ಅನಂತವೀರ್ಯ ಮಹಿಮೆಗಳನ್ನು ಕೇಳಿದನು. ಪ್ರಳಯಾಂತ್ಯದಲ್ಲಿ ಶ್ರೀಹರಿಯಿಂದ ಜ್ಞಾನೋಪದೇಶವನ್ನು ಪೊಂದಿದ ಸತ್ಯವ್ರತನೆಂಬ ದ್ರವಿಡೇಶನು ಈ ಮನ್ವಂತರದಲ್ಲಿ ಸೂರ್ಯಸುತನಾಗಿ, ಮನುವಾಗಿರುವನೆಂದು ನೀನು ಪೇಳಿದೆ. ಆ ವೈವಸ್ವತನ ಸುತರಾದ ಇಕ್ಷ್ವಾಕು ಪ್ರಮುಖ ರಾಜನ್ಯರ ಚರಿತವನ್ನು ನಮಗೆ ಪೇಳು. ಹಿಂದೆ ಆಗಿಹೋದವರು ಹಾಗೂ ಮುಂದೆ ಬರುವವರಾದ ರಾಜರು– ಪುಣ್ಯಕೀರ್ತಿಗಳಾದವರಿದ್ದರೆ- ಅವರ ಚರಿತವನ್ನು ನಿರೂಪಿಸು– ಎಂದು ಕೇಳಲು ಬ್ರಹ್ಮವಾದಿ ಸಭೆಯಲ್ಲಿ ಶ್ರೀಶುಕನು ಪೇಳಲು ಪಕ್ರಮಿಸಿದನು–

ರಾಜನ್! ಮನುವಂಶವನ್ನು ಸಂಗ್ರಹವಾಗಿ ಹೇಳುವೆನು ಕೇಳು! ವಿಸ್ತಾರವಾಗಿ ಹೇಳಲು ನೂರು ವರ್ಷಕಾಲವಾದರೂ ಸಾಲದು.

ಚರಾಚರಾ ಜೀವಲೋಕ ಪ್ರಭುವಾದ ನಾರಾಯಣನು ಕಲ್ಪಾಂತಕಾಲದಲ್ಲಿ ಎಲ್ಲ ಜಗವನ್ನು ಪೊಟ್ಟೆಯಲ್ಲಿಟ್ಟು ಮಲಗಿದ್ದನು. ಸೃಷ್ಟಿಕಾಲದಲ್ಲಿ ಆ ಪದ್ಮನಾಭನ ನಾಭಿಕಮಲದಿಂದ ಬ್ರಹ್ಮನು ಜನಿಸಿದನು. ಬ್ರಹ್ಮನು ಮಾನಸಪುತ್ರನಾದ ಮರೀಚಿಯ ಪುತ್ರನು ಕಶ್ಯಪನು. ಅದಿತಿ–ಕಶ್ಯಪರ ಮಗನಾದ ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಶ್ರಾದ್ಧದೇವನೆಂಬ ಮನುವು ಪುಟ್ಟಿದನು. ಅವನ ಪತ್ನಿಯು ಶ್ರದ್ಧಾದೇವಿ. ಅವಳಲ್ಲಿ ಇಕ್ಷ್ವಾಕು, ನೃಗ, ಶರ್ಯಾತಿ, ದಿಷ್ಟ, ಧೃಷ್ಟ, ಕರೂಷಕ, ನರಿಷ್ಯಂತ, ಪೃಷಧ್ರ, ನಾಭಾಗ, ಕವಿ, ವಿಭು ಎಂಬ ಹತ್ತು ಮಕ್ಕಳಾದರು.

ಇವರು ಪುಟ್ಟಿದ ಪೂರ್ವದಲ್ಲಿ ನಡೆದ ಒಂದು ವಿಚಿತ್ರ ಘಟನೆಯನ್ನು ಕೇಳು. ಮನುರಾಜನು ವಶಿಷ್ಠರು ಅಧ್ವರ್ಯುಗಳಾಗಿರಲು ಮಕ್ಕಳಿಗಾಗಿ ಮಿತ್ರಾವರುಣೇಷ್ಟಿಯನ್ನು ಮಾಡಿದನು. ಪಯೋವ್ರತವನ್ನು ಮಾಡುತ್ತಿದ್ದ ಶ್ರದ್ಧಾದೇವಿಯ ಹೋತೃವಾಗಿದ್ದ ಋಷಿವರನಿಗೆ ನಮಸ್ಕರಿಸಿ, ಹೆಣ್ಣುಮಗುವಾಗುವಂತೆ ಸಂಕಲ್ಪಿಸಿ ಹೋಮಿಸೆಂದು ಬೇಡಿಕೊಂಡಳು. ಅವನು ಶ್ರದ್ಧೆಯಿಂದ ವಷಟ್ಕಾರವನ್ನುಚ್ಚರಿಸಿ, ಸ್ತ್ರೀಸವನಮಂತ್ರದಿಂದ ಹವಿರ್ದಾನ ಮಾಡಿದನು. ಕೆಲಕಾಲವಾದ ಮೇಲೆ ಶ್ರದ್ಧಾದೇವಿಗೆ ಇಲೆ ಎಂಬ ಕನ್ಯೆ ಹುಟ್ಟಿದಳು. ಆಗ ಮನುರಾಜನು ಪ್ರೀತನಾಗದೆ ವಶಿಷ್ಠನಿಗಿಂತೆಂದನು–

ಪೂಜ್ಯನೇ! ಬ್ರಹ್ಮವಾದಿಗಳಾದ ತಮ್ಮ ಕರ್ಮಗಳೂ ವಿಪರೀತಫಲಕವಾದರೆ ಇನ್ನೇನು ಗತಿ? ಪುತ್ರನಿಗೆಂದು ಮಾಡಿದ ಯಜ್ಞದಿಂದ ಪುತ್ರಿಯಾದಳಲ್ಲ! ಹೀಗಾಗಬಾರದಿತ್ತು. ನೀವುಗಳೆಲ್ಲರು ಮಂತ್ರವೇತ್ತರು, ಯೋಗಯುಕ್ತರು, ತಪೋನಿರ್ಧೂತ ಕಲ್ಮಷರು! ದೇವತೆಗಳು ಸುಳ್ಳಾಡಿದಂತೆ ಆಯಿತಲ್ಲ?

ಆ ಮಾತನ್ನಾಲಿಸಿ ವಸಿಷ್ಠನು ಆಲೋಚಿಸಿದನು. ಆಗ ಇದು ಹೋತೃವಿನ ತಪ್ಪೆಂದು ತಿಳಿದು ಮನುರಾಜನಿಗೆ 'ಮಹಾರಾಜಾ' ಇದು ಹೋತೃವಿನ ತಪ್ಪಾಗಿದೆ. ಚಿಂತೆ ಬಿಡು. ನನ್ನ ತಪೋಬಲದಿಂದ ನಿನ್ನ ಮಗಳು ಮಗನಾಗುವಂತೆ ಸಾಧಿಸುವೆನೆಂದು ಹೇಳಿದನು. ಇಲೆಯು ಪುರುಷನಾಗಬೇಕೆಂದು ಆದಿಪುರುಷನನ್ನು ಸ್ತುತಿಸಿ ಪ್ರಸನ್ನೀಕರಿಸಿಕೊಂಡನು. ಶ್ರೀಹರಿಯ ವರದಿಂದ ಇಲೆಯು ಸುದ್ಯುಮ್ನನೆಂಬ ಪುರುಷರೂಪದಿಂದ ರಾರಾಜಿಸಲು ನೋಡಿ ಸಂತೋಷಿಸಿದನು.

ಒಂದು ದಿನ ಸುದ್ಯುಮ್ನನು ತನ್ನ ಮಂತ್ರಿಜನರಿಂದ ಉತ್ತಮಾಶ್ವಗಳನ್ನೇರಿ ಶರಚಾಪಧರನಾಗಿ, ಬೇಟೆಯಾಡುತ್ತಾ ಮೇರುವಿವ ದಕ್ಷಿಣಪ್ರದೇಶದಲ್ಲಿದ್ದ ಸುಕುಮಾರವನವನ್ನು ಪ್ರವೇಶಿಸಿದನು. ಉಮಾಶಂಕರರ ಕ್ರೀಡಾಭೂಮಿಯಾದ ಆ ವನವನ್ನು ಪೊಕ್ಕದ್ದೇ ತಡ ಸುದ್ಯುಮ್ನನು ತಾನು ತರುಣಿಯಾದದ್ದಲ್ಲದೆ ತನ್ನ ಮಿತ್ರರು ಕುದುರೆಗಳೆಲ್ಲವೂ ಹೆಣ್ಣಾದದ್ದನ್ನು ಕಂಡು ಖಿನ್ನನಾದನು. ಅವರು ಪರಸ್ಪರವಾಗಿ ನೋಡುತ್ತ ಲಜ್ಜೆಯಿಂದ ತಲೆಬಾಗಿ ನಿಂತರು.

## ೨. ಇಲಾ ಚರಿತೆ

ರಾಜನು 'ಸ್ವಾಮೀ! ಎಂತಹ ದೇಶವದು? ಅಲ್ಲಿ ಲಿಂಗವ್ಯತ್ಯಯವಾಗಲು ಕಾರಣವೇನು?' ಎಂದು ಪ್ರಶ್ನಿಸಿದನು.

ಶ್ರೀಶುಕನು ಹೇಳಿದನು–

ಒಂದು ಸಲ ಅಲ್ಲಿದ್ದ ಗಿರಿಜಾರಮಣನನ್ನು ನೋಡಲು ಸುವ್ರತರಾದ ಕೆಲ ಋಷಿಗಳು ಅಗ್ನಿಯಂತೆ ಬೆಳಗುತ್ತಾ ಸುಕುಮಾರವನಕ್ಕೆ ಬಂದರು. ಅವರನ್ನು ನೋಡಿ ಅಂಬಿಕೆ ಲಜ್ಜಿತಳಾಗಿ ಭರ್ತೃಸಮೀಪದಿಂದ ದೂರಸರಿದಳು. ರಮಮಾಣರಾದ ಉಮಾಶಂಕರರನ್ನು ಕಂಡು ಋಷಿಗಳಲ್ಲಿಂದ ಹೊರಹೊರಟು ನರನಾರಾಯಣಾಶ್ರಮಕ್ಕೆಂದು ತೆರಳಿದರು. ಆಗ ಮಹಾದೇವನು ದೇವಿಯು ಸಂತಸಿಸುವಂತೆ 'ಈ ವನವನ್ನು ಪೊಕ್ಕು ಪುರುಷನು ಹೆಣ್ಣಾಗಲಿ' ಎಂದು ಕಟ್ಟಪ್ಪಣೆಗೈದನು. ಆದ್ದರಿಂದ ಅಂದಿನಿಂದ ಗೌರೀವರನ ವಿವಿಕ್ತ ರಮಣಸ್ಥಾನವಾದ ಆ ವನವನ್ನು ಪುರುಷರು ಸಮೀಪಿಸುತ್ತಿರಲಿಲ್ಲ.

ಗೊತ್ತಿಲ್ಲದೆ ಬಂದು ಹೆಣ್ಣಾದ ಸುದ್ಯುಮ್ನನು ಪರಿವಾರದಿಂದ ಕೂಡಿ ವಿಹರಿಸುವಾಗ, ಬುಧನು ಅವಳನ್ನು ಕಾಮಿಸಿ ಬಂದನು. ಇಲೆಯು ಬುಧನಿಂದ ಲಕೂಡಿ ಆ ವನದಿ ವಿಹರಿಸಿ, ಪುರೂರವನೆಂಬ ಸುತನನ್ನು ಪಡೆದಳು.

ಸುದ್ಯುಮ್ನನು ಖಿನ್ನನಾಗಿ ಬೇಡಲು ಕುಲಾಚಾರ್ಯನಾದ ವಸಿಷ್ಠನು ಕೃಪಾಪೀಡಿತನಾಗಿ ಶಂಕರನನ್ನು ಶರಣುಹೋದನು. ಪ್ರೀತನಾದ ಭಗವಂತನು ತನ್ನ ಮಾತೂ ಹಾಗೂ ವಸಿಷ್ಠನ ಪ್ರಾರ್ಥನೆಯೂ ಸತ್ಯವಾಗಲೆಂದು 'ಒಂದು ಮಾಸ ಹೆಣ್ಣು, ಮತ್ತೊಂದು ಮಾಸ ಪುರುಷ'ನಾಗಲಿ ಎಂದು ವರವಿತ್ತು ಕಳುಹಿಸಿದನು.

ಇಂತು ಮಾಸವ್ಯವಸ್ಥೆಯಿಂದ ಪುರುಷನಾದಾಗ ಪಾಲಿಸುತ್ತಾ, ಇಲೆಯಾದಾಗ ಬುಧಪತ್ನಿಯಾಗಿದ್ದ ರಾಜನನ್ನು ಪ್ರಜರು ಮೆಚ್ಚದಾದರು. ಸುದ್ಯುಮ್ನನಿಗೆ ಉತ್ಕಲ, ಗಯ, ವಿಮಲರೆಂಬ ಮೂವರು ಪುತ್ರರಿದ್ದರು. ಅವರು ದಕ್ಷಿಣಾಪಥದಲ್ಲಿ ಧರ್ಮದಿಂದ ರಾಜ್ಯವಾಳಿದರು. ಪ್ರತಿಷ್ಠಾನ ಪತಿಯಾದ ಸುದ್ಯುಮ್ನನು ವೃದ್ಧನಾಗಿ ಪುರೂರವನಿಗೆ ರಾಜ್ಯವನ್ನರ್ಪಿಸಿ, ತಾನು ವನವನ್ನು ಪ್ರವೇಶಿಸಿ ತಪಸ್ಸಿದ್ಧನಾದನು.

## ೩. ಪೃಷಧ್ರಾದಿ ಮನುಸುತ ಚರಿತೆ

ಸುದ್ಯುಮ್ನನ ಗತಿಯನ್ನು ಕಂಡು ಮನುರಾಜನು ಮತ್ತೆ ಮಕ್ಕಳಿಗಾಗಿ ಯಮುನಾತೀರದಲ್ಲಿ ನೂರುವರ್ಷ ತಪವನ್ನು ಮಾಡಿ, ಹರಿಯ ಪರಮಾನುಗ್ರಹದಿಂದ ಇಕ್ಷ್ವಾಕು ಪ್ರಮುಖ ದಶ ಸುತರನ್ನು ಪಡೆದನು.

ಪೃಷಧ್ರನೆಂಬುವ ಎಂಟನೆಯ ಮಗನ ಕಥೆಯನ್ನು ಕೇಳು. ವಸಿಷ್ಠರಿಂದ ಗೋರಕ್ಷಣ ಕಾರ್ಯದಲ್ಲಿ ನಿಯುಕ್ತನಾದ ಪೃಷಧ್ರನು ರಾತ್ರಿಯಲ್ಲಿಯೂ ಎಚ್ಚರದಿಂದ ವೀರಾಸನಸ್ಥನಾಗಿ ಆಕಳ ಗುಂಪನ್ನು ಕಾಯುತ್ತಿದ್ದನು. ಒಂದು ರಾತ್ರಿ ಕಗ್ಗತ್ತಲು ಕವಿದಿತ್ತು. ಮಳೆಹನಿ ಉದುರುತ್ತಿತ್ತು. ಆಗ ಹುಲಿಯೊಂದು ಗೋಷ್ಠದಲ್ಲಿ ಹಾರಿ ಬಂದು ಭೀತಿಯಿಂದ ಓಡುತ್ತಿದ್ದ ಗೋವುಗಳಲ್ಲೊಂದನ್ನು ಕಂಠದಲ್ಲಿ ಹಿಡಿಯಿತು. ಆಕಳ ಆಕ್ರಂಧನವನ್ನು ಕೇಳಿ, ಕಗ್ಗತ್ತಲಿನಲ್ಲಿ ಕಾಣದೆ ಪೃಷಧ್ರನು ಕತ್ತಿಯನ್ನೆತ್ತಿ ಹೊಡೆದನು. ಆದರಿಂದ ಆಕಳ ಕುತ್ತಿಗೆಯು ಕತ್ತರಿಸಿ ಬಿತ್ತು. ಹುಲಿಯು ಕಿವಿಯನ್ನು ಮಾತ್ರ ಕಳೆದುಕೊಂಡು ಭೀತವಾಗಿ ರಕ್ತವನ್ನು ಸುರಿಸುತ್ತಾ ಓಡಿಹೋಯಿತು. ವೀರವರನಾದ ರಾಜಕುಮಾರನು ಹುಲಿಯನ್ನೇ ಕೊಂದೆನೆಂದು ತಿಳಿದು ಬೆಳಗಾಗುವವರೆಗೂ ಸುಮ್ಮನಿದ್ದನು. ಆಗ ತಾನು ಗೋಹತ್ಯೆಯನ್ನು ಮಾಡಿರುವುದನ್ನು ಕಂಡು ದುಃಖಿತನಾಗಲು ವಸಿಷ್ಠನು ತಿಳಿಯದೆ ಮಾಡಿದ ಅಪರಾಧವೆಂದು 'ನೀನು ಶೂದ್ರಕರ್ಮನಾಗು' ಎಂದು ಶಪಿಸಿದನು. ಪೃಷಧ್ರನು ಸಿಟ್ಟಾಗದೆ ಗುರುಶಾಪವನ್ನು ಸ್ವೀಕರಿಸಿ ವಿರಕ್ತನಾದನು.

ಸರ್ವಭೂತಗಳಿಗೆ ದ್ರೋಹವೆಸಗದೆ, ಸರ್ವಸ್ವಾಮಿಯಾದ ವಾಸುದೇವನ ಏಕಾಂತಭಕ್ತನಾಗಿ ಪೃಷಧ್ರನು ಇಂದ್ರಿಯಗಳನ್ನು ನಿಗ್ರಹಿಸಿದನು; ಊರ್ಧ್ವರೇತಸ್ಕನಾಗಿ ಶ್ರೀಹರಿಕೊಟ್ಟದ್ದರಿಂದ ತೃಪ್ತನಾಗಿದ್ದನು. ಪರಿಗ್ರಹವನ್ನು ಪರಿತ್ಯಜಿಸಿದನು. ಶ್ರೀಹರಿಯನ್ನಲ್ಲದೆ ಇತರರನ್ನು ಚಿಂತಿಸದೆ ಜಡನಂತೆ, ಕುರುಡನಂತೆ, ಕಿವುಡನಂತೆ ತಿರುಗುತ್ತಾ ಅವಧೂತನಾದನು. ಒಂದು ದಿನ ದಾವಾಗ್ನಿಯು ಸುಡುತ್ತ ಬರಲು ಅದನ್ನು ಪ್ರವೇಶಿಸಿ ಪರಬ್ರಹ್ಮ ಚರಣವನ್ನು ಸೇರಿದನು. ವಿಷಯದೂರನಾಗಿ ಬಂಧುಜನ ಪ್ರೀತಿಯನ್ನು ಕಡಿದು ಸ್ವಪ್ರಕಾಶನಾದ ನಾರಾಯಣನಲ್ಲಿ ಚಿತ್ತವನ್ನಿಟ್ಟು, ಎಳೆಯ ವಯಸ್ಸಿನಲ್ಲಿಯೇ ಪೃಷಧ್ರನು ಮುಕ್ತನಾದನು.

ಮನುಪುತ್ರ- ಕರೂಷನಿಂದ ಜನಿಸಿದ ಕಾರೂಶರು ಉತ್ತರದೇಶದ ರಾಜರಾಗಿ ಧರ್ಮದಿಂದ ಬ್ರಾಹ್ಮಣವತ್ಸಲರಾಗಿದ್ದರು.

ಮನುಸುತನಾದ ಧೃಷ್ಟನ ಮಕ್ಕಳು ವಿಪ್ರರಂತೆ ಶ್ರೋತ್ರಿಯರಾದರು. ನಭನೆಂಬ ಮನುಪುತ್ರನಿಗೆ ಸ್ವಾತಿಮೂಲನೆಂಬ ಸುತನಿದ್ದನು. ಅವನಿಗೆ ವಸು, ಅವನಿಗೆ ಪ್ರತೀಕನು; ಪ್ರತೀಕನಿಗೆ ಓಘುವಂತನು ಜನಿಸಿದರು. ಪ್ರತೀಕಪುತ್ರಿಯಾದ ಓಘುವತಿಯು ಸುದರ್ಶನ ರಾಜನ ಮಡದಿ

ಯಾದಳು. ಮನುಪುತ್ರನಾದ ನರಿಷ್ಯಂತನಿಗೆ ಚಿತ್ರಸೇನನು ಪುಟ್ಟಿದನು. ಆ ವಂಶದಲ್ಲಿ ಕ್ರಮವಾಗಿ ದಕ್ಷ, ಮೀಢ್ವಾಂಸ, ಕೂರ್ಚ, ಇಂದ್ರಸೇನ, ವೀತಿಹೋತ್ರ, ಸತ್ಯಶ್ರವ, ಉರುಶ್ರವ, ದೇವದತ್ತ, ಜಾತುಕರ್ಣ್ಯರು ಜನಿಸಿದರು. ಜಾತುಕರ್ಣ್ಯನು ಅಗ್ನಿಯ ಅಂಶದಿಂದ ಕಾನೀನನಾಗಿ ಹುಟ್ಟಿದನು. ಅವನ ಅನಂತರ ಆ ದೇಶವು ಅಗ್ನಿವೇಶ್ಯಾಯನವೆಂಬ ಬ್ರಹ್ಮಕುಲವೆನಿಸಿತು.

ಇನ್ನು ದಿಷ್ಟವಂಶವನ್ನು ಕೇಳು. ದಿಷ್ಟಪುತ್ರನಾದ ನಾಭಾಗನು ವೈಶ್ಯಕರ್ಮರತನಾದನು. ಅವನ ವಂಶವು ಕ್ರಮವಾಗಿ ಭಲಂದನ, ವತ್ಸಪ್ರೀತಿ, ಪ್ರಾಂಶು, ಪ್ರಮಿತಿ, ಖನಿತ್ರ, ಚಾಕ್ಷುಷ, ವಿವಿಂಶತಿ, ರಂಬ, ಖನಿನೇತ್ರ, ಕರಂಧಮ, ಅವೀಕ್ಷಿತರಿಂದ ಅಲಂಕೃತವಾಯಿತು. ಅವೀಕ್ಷಿತನ ಮಗನಾದ ಮರುತ್ತನು ಆಂಗೀರಸ ಸುತನಾದ ಸಂವರ್ತನನ್ನು ಅಧ್ವರ್ಯುಸ್ಥಾನದಲ್ಲಿಟ್ಟು ಮಹಾಯಜ್ಞವನ್ನು ಮಾಡಿದನು. ಆ ಯಜ್ಞದಲ್ಲಿ ಸ್ರುಕ್ಸುವ ಚಮಸಾದಿಗಳೆಲ್ಲ ಕನಕಮಯ ವಾಗಿದ್ದುವು. ಸಾಟಿಯಿಲ್ಲದ ಆ ಯಜ್ಞದಲ್ಲಿ ಸೋಮರಸದಿಂದ ಇಂದ್ರನೂ ದಕ್ಷಿಣೆಗಳಿಂದ ವಿಪ್ರರೂ ಸಂತುಷ್ಟರಾದರು. ಅಲ್ಲಿ ದೇವತೆಗಳು ಬಡಿಸಿದರು. ವಿಶ್ವೇದೇವತೆಗಳು ಪ್ರತ್ಯಕ್ಷರಾಗಿ ಸಭಾಸದರಾದರು. ಶ್ರೀನಾರಾಯಣನುಗ್ರಹದಿಂದ ಮಹಾಯೋಗಿಯಾದ ಆ ಮರುತ್ತನಿಗೆ ದಮನೆಂಬ ಸುತನಾದನು. ಅವನಿಗೆ ರಾಜ್ಯವರ್ಧನ ಸೋಧೃತಿ, ನರ, ಕೇವಲ, ಬಂಧುಮಂತ, ವೇಗವಂತ, ಬಂಧಗಳು ಕ್ರಮವಾಗಿ ವಂಶಜರಾದರು. ಬಂಧುಪುತ್ರನಾದ ತೃಣಬಿಂದುವಿನ ಗುಣಗಳಿಗೆ ಮೆಚ್ಚಿ ಅಲಂಬುಸಾ ಎಂಬ ಅಪ್ಸರೆಯು ತಾನಾಗಿ ವರಸಿ ಬಂದಳು. ಅವಳಲ್ಲಿ ಅನೇಕ ಪುತ್ರರನ್ನೂ, ಇಲಬಿಲಾ ಎಂಬ ಕನ್ಯೆಯನ್ನೂ ಪಡೆದು, ತೃಣಬಿಂದು ಮಗಳನ್ನು ವಿಶ್ರವ ಋಷಿಗೆ ಕೊಟ್ಟು ಆ ಯೋಗೇಶನಿಂದ, ಯೋಗವಿದ್ಯೆಯನ್ನು ಪಡೆದನು. ವಿಶ್ರವನಿಗೆ ಇಲಬಿಲೆಯಲ್ಲಿ ಕುಬೇರನೆಂಬ ಮಗನಾದನು. ಅವನೇ ಧನಾಧಿಪನು.

ತೃಣಬಿಂದುಸುತರು ವಿಶಾಲ, ಶೂನ್ಯಬಂಧು, ಧೂಮಕೇತುಗಳು, ವಿಶಾಲನು ವೈಶಾಲೀ ಪುರಿಯನ್ನು ನಿರ್ಮಿಸಿದನು. ಅವನ ವಂಶದಲ್ಲಿ ಹೇಮಚಂದ್ರ, ಧೂಮ್ರಾಕ್ಷ, ಸಹದೇವ, ಕೃಶಾಶ್ವ, ಸೋಮದತ್ತರು ಜನಿಸಿದರು. ಸೋಮದತ್ತನು ಅಶ್ವಮೇಧಗಳನ್ನು ಮಾಡಿ ಶ್ರೀಹರಿಗರ್ಪಿಸಿ, ಯೋಗಗತಿಯನ್ನು ಪೊಂದಿದನು. ಸೋಮದತ್ತನ ಮಗನು ಸುಮತಿ; ಅವನಿಗೆ ಜನಮೇಜಯನು ಸುತನಾದನು. ಈ ವೈಶಾಲಿಯ ನೃಪಾಲರು ತೃಣಬಿಂದುವಿನ ಹೆಸರನ್ನುಳಿಸಿದರು.

## ೪. ಚ್ಯವನ ಕಥಾ

ಶ್ರೀಶುಕನು ಹೇಳತೊಡಗಿದನು–

ಮನುಪುತ್ರನಾದ ಶರ್ಯಾತಿಯು ವೇದವಿದ್ಯಾವಿಶಾರದನಾಗಿದ್ದನು. ಆಂಗೀರಸರೆಂಬ ಋಷಿಗಳ ಯಜ್ಞದಲ್ಲಿ ಎರಡನೆಯ ದಿನದಲ್ಲಿ ಹೇಳುವ ಮಂತ್ರಗಳನ್ನು ಪಠಿಸಿ ಅವರ ಮೆಚ್ಚುಗೆ ಯನ್ನು ಪಡೆದಿದ್ದನು.

ಒಂದು ದಿನ ಶರ್ಯಾತಿಯು ತನ್ನ ಮಗಳಾದ ಸುಕನ್ಯೆ ಎಂಬ ಸುಂದರಿಯಿಂದ ಕೂಡಿ ವನದಲ್ಲಿ ತಿರುಗುತ್ತಾ ಚ್ಯವನಾಶ್ರಮವನ್ನು ಸೇರಿದನು. ಸಖೀಪರಿವೃತಳಾಗಿ ಪುಷ್ಪಗಳನ್ನಾರಿಸುತ್ತಾ ಸುಕನ್ಯೆ ಒಂದು ಹುತ್ತದಲ್ಲಿ ಎರಡು ರಂಧ್ರಗಳಿಂದ ಹೊರಸೂಸಿ ಬರುವ ಬೆಳಕನ್ನು ಕಂಡಳು.

ದೈವಚೋದಿತಳಾಗಿ ಆ ಬಾಲೆಯು ಎರಡು ಮುಳ್ಳಿನಿಂದ ಆ ಜ್ಯೋತಿಗಳನ್ನು ಚುಚ್ಚಿದಳು. ಅಲ್ಲಿಂದ ರಕ್ತವು ಹರಿದಾಗ ಭಯದಿಂದ ಓಡಿ ಆ ಮುಗ್ಧೆಯು ಸಖೀಸಹಿತವಾಗಿ ಶಿಬಿರವನ್ನು ಸೇರಿದಳು. ಆ ಕ್ಷಣದಿಂದ ಶರ್ಯಾತಿಗೂ ಸೈನಿಕಾದಿ ಸಮಸ್ತರಿಗೂ ಮಲಮೂತ್ರನಿರೋಧವಾಗಿ ಹೊಟ್ಟೆಯುಬ್ಬಿತು.

ಆಗ ಶರ್ಯಾದಿ ಇಂತೆಂದನು– 'ಯಾರಾದರೂ ಆಶ್ರಮದೂಷಣಗಳನ್ನು ಮಾಡಿರುವಿರೇನು? ಇದು ಭಾರ್ಗವನಾದ ಚ್ಯವನನ ಮಹಿಮೆಯೇ ಸರಿ' ಎನ್ನಲು ಸುಕನ್ಯೆ ತಾನು ಮಾಡಿದ ತಪ್ಪನ್ನು ಹೇಳಿ ಭಯದಿಂದ ನಿಂತಳು. ಶರ್ಯಾತಿಯು ಅವಳನ್ನು ಕರೆದುಕೊಂಡು ಹೋಗಿ ಚ್ಯವನನ ಕ್ಷಮೆಯನ್ನೂ ಯಾಚಿಸಿದನು. ಚ್ಯವನನ ಇಷ್ಟದಂತೆ ಕನ್ಯೆಯನ್ನವನಿಗಿತ್ತು ಕಷ್ಟದಿಂದ ಪಾರಾಗಿ ಮಗಳನ್ನು ಬೀಳ್ಕೊಂಡು ಸ್ವಪುರವನ್ನು ಸೇರಿದನು.

ಸುಕನ್ಯೆಯು ಮುಂಗೋಪಿಯಾದ ಪತಿಯನ್ನು ಇಂಗಿತವನ್ನರಿತು ಅಪ್ರಮತ್ತಳಾಗಿ ಸೇವಿಸಿ, ಅವನ ಪ್ರೀತಿಯನ್ನು ಗಳಿಸಿದಳು. ಕೆಲವು ದಿನಗಳು ಕಳೆದವು. ಒಂದು ದಿನ ಚ್ಯವನನ ಆಶ್ರಮವನ್ನು ಕುರಿತು ಬಂದ ಅಶ್ವಿನೀದೇವತೆಗಳನ್ನು ತನಗೆ ಯೌವನವನ್ನು ನೀಡಬೇಕೆಂದು ಮುನಿಯು ಬೇಡಿದನು.

'ಯಜ್ಞದಲ್ಲಿ ಸೋಮಪಾನವನ್ನು ಸ್ವೀಕರಿಸಲು ಅನರ್ಹರೆನಿಸುವ ನಿಮಗೆ ಯಜ್ಞಭಾಗವನ್ನು ನಾನು ಕೊಡಿಸುವೆನು. ನನಗೆ ನೀವು ಪ್ರಮದಾಜನಮೋಹಕ ರೂಪಯೌವನಗಳನ್ನು ಕೊಡಿ' ಎಂದು ಬೇಡಿದ ಚ್ಯವನನನ್ನು ದೇವವೈದ್ಯರು ಸಿದ್ಧರಸಪೂರ್ಣವಾದ ಹ್ರದದಲ್ಲಿಳಿಸಿ, ತಾವೂ ಅವನ ಜತೆಯಲ್ಲಿ ಮುಳುಗಿದರು. ಸುಕನ್ಯೆಯು ನೋಡುತ್ತಿರಲು ಆ ಮಡುವಿನಿಂದ ಮೂವರು ಸುಂದರ ತರುಣರೆದ್ದು ಬಂದರು. ಕನಕಮಾಲಾಲಂಕೃತರಾಗಿ ಕುಂಡಲಗಳನ್ನಿಟ್ಟು ಪೀತಾಂಬರಗಳನ್ನುಟ್ಟು ಸೂರ್ಯನಂತೆ ಬೆಳಗುವ ಅವರನ್ನು ನೋಡಿ ಪತಿಯನ್ನು ತಿಳಿಯಲಾರದೆ ಸುಕನ್ಯೆಯು ಅಶ್ವಿನಿಗಳಿಗೆ ನಮಿಸಿ ಪ್ರಾರ್ಥಿಸಿದಳು. ಅವರು ಪ್ರೀತರಾಗಿ ಚ್ಯವನನನ್ನು ಆ ಪತಿವ್ರತೆಗೆ ಸಮರ್ಪಿಸಿ, ವಿಮಾನದಿಂದ ಸ್ವರ್ಗವನ್ನು ಸೇರಿದರು.

ಒಂದು ದಿನ ಶರ್ಯಾತಿಯು ಯಜ್ಞ ವನ್ನು ಮಾಡಲಿಚ್ಛಿಸಿ ಋತ್ವಿಜನಾಗಲು ಚ್ಯವನನನ್ನು ಪ್ರಾರ್ಥಿಸಿ, ಕರೆದೊಯ್ಯಲು ಬಂದನು. ಮಗಳ ಹತ್ತಿರ ಕೂತ ಯುವಕನನ್ನು ನೋಡಿ ಆಶ್ಚರ್ಯ-ಕೋಪಗಳಿಂದ ವಂದಿಸಿದ ಮಗಳಿಗೆ ಆಶೀರ್ವದಿಸದೆ ಇಂತೆಂದನು-'ಲೋಕವಂದಿತನಾಗ ಪತಿಯನ್ನು ವಂಚಿಸಿ, ನೀನಿಂತಹ ಅಕಾರ್ಯ ವನ್ನು ಮಾಡಬಹುದೇ? ಕುಲಟೇ! ಮುದುಕನೆಂಬ ಪತಿಯನ್ನು ಪರಿತ್ಯಜಿಸಿ ಪಾಂಥನಿಂದ ಮೆರೆಯುವ ನಿನ್ನ ಮುಖವನ್ನು ನೋಡಬಾರದು. ನನ್ನ ಕುಲಕಲಂಕಿನಿ ಎನಿಸಿ ದುಷ್ಟಮಾರ್ಗದಲ್ಲಿ ನಡೆದ ನಿನ್ನ ಬುದ್ಧಿಗೇನೆಂಬೆ? ಹುಟ್ಟಿದ ಹಾಗೂ ಮೆಟ್ಟಿದ ಮನೆಗಳೆರಡನ್ನೂ ಕೆಡಿಸಿದೆ. ಛೀ!' ಎಂದು ದೂಷಿಸುವ ತಂದೆಯನ್ನು ನೋಡಿ ನಗುತ್ತಾ ಮಗಳು– 'ತಂದೆಯೇ! ಸಿಟ್ಟಾಗಬೇಡ. ಇವರು ನಿನ್ನ ಅಳಿಯ'ನೆಂದು ನಡೆದ ವೃತ್ತಾಂತವನ್ನು ತಿಳಿಸಿದಳು. ಅದರಿಂದಲೂ ಚ್ಯವನನ ವಚನದಿಂದಲೂ ಪ್ರೀತನಾಗಿ ಶರ್ಯಾತಿ ತಾನು ಬಂದ ಕಾರ್ಯವನ್ನು ತಿಳುಹಿದನು.

ಚ್ಯವನನು ಅಶ್ವಿನಿಗಳಿಗೆ ಪ್ರತ್ಯುಪಕರಿಸುವ ಸಮಯವು ಬಂದಿತೆಂದು ಆನಂದದಿಂದ ಅಂಗೀಕರಿಸಿ, ಶರ್ಯಾತಿಯು ಯಜ್ಞವನ್ನು ಹೋತೃಸ್ಥಾಲದಲ್ಲಿದ್ದು ನಡೆಸಿದನು. ಆಗ ಅಸೋಮಪ ರಾದ ಅಶ್ವಿನಿಗಳಿಗೆ ಹವಿಸ್ಸನ್ನೀಯಲು ನಿಶ್ಚಯಿಸಿದ ಚ್ಯವನನನ್ನು ಸಂಹರಿಸುವೆ

ನೆಂದು ಇಂದ್ರನು ವಜ್ರವನ್ನೆತ್ತಿ ನಿಂತನು. ಭಾರ್ಗವನು ಭಯಪಡದೆ ವಜ್ರದಿಂದ ಕೂಡಿದ ಇಂದ್ರಭುಜವನ್ನು ಕೆಳಗಿಳಿಯದಂತೆ ಸ್ತಂಭಿಸಿ ನಿಲ್ಲಿಸಿದನು. ವೈದ್ಯರೆಂಬ ಕಾರಣದಿಂದ ಸೋಮಪಾನದಿಂದ ಬಹಿಷ್ಕೃತರಾಗಿದ್ದ ಅಶ್ವಿನಿಗಳಿಗೆ ಸೋಮವನ್ನು ಕೊಡುವಂತೆ ದೇವತೆಗಳು ಒಪ್ಪಿದ ಮೇಲೆ ಚ್ಯವನನು ಇಂದ್ರಬಾಹುವನ್ನಿಳಿಸಿ ಯಜ್ಞಭಾಗಿಗಳಾದ ಇಂದ್ರಾದಿಗಳನ್ನು ಪೂಜಿಸಿ ಕಳುಹಿದಳು.

ಶರ್ಯಾತಿ ರಾಜನಿಗೆ ಉತ್ತಾನಬರ್ಹಿ, ಅನರ್ತ, ಭೂರಿಷೇಣರೆಂಬ ಮೂವರು ಪುತ್ರರು, ಅನರ್ತನ ಮಗನೇ ರೇವತನು. ಅವನು ಸಮುದ್ರಮಧ್ಯದಲ್ಲಿ ಕುಶಸ್ಥಲಿ ಎಂಬ ನಗರವನ್ನು ನಿರ್ಮಿಸಿ ಆನರ್ತದೇಶವನ್ನಾಳುತ್ತಿದ್ದನು. ರೇವತನಿಗೆ ಕುಕುದ್ಮಿ ಮೊದಲಾದ ನೂರು ಜನ ಪುತ್ರರಿದ್ದರು. ರೈವತ(ಕುಕುದ್ಮಿ)ನು ತನ್ನ ಮಗಳಾದ ರೇವತಿಗೆ ವರನಾರೆಂದು ತಿಳಿಯಲು ಬ್ರಹ್ಮಲೋಕವನ್ನು ಸೇರಿ, ಬ್ರಹ್ಮಸಭೆಯಲ್ಲಿ ನಡೆಯುತ್ತಿದ್ದ ಸಂಗೀತವನ್ನು ಕೇಳುತ್ತಾ ಒಂದು ಕ್ಷಣ ನಿಂತನು. ಗೀತಾವಸಾನದಲ್ಲಿ ಬ್ರಹ್ಮನಿಗೆ ವಂದಿಸಿ ತನ್ನ ಮಗಳಿಗೆ ವರನಾರೆಂದು ಕೇಳಿದನು. ಅದನ್ನು ಕೇಳಿ ವಿಧಿಯು ನಕ್ಕು 'ರಾಜನ್! ನಿನ್ನ ಮನದಿವರರೆಂದುಕೊಂಡ ರಾಜರು ಈಗ ಮೃತರಾಗಿರುವರು. ಅವರ ಮಕ್ಕಳು ಮೊಮ್ಮಕ್ಕಳು ಕೂಡ ಇಲ್ಲ. ನರಲೋಕ ದುರ್ಲಭವಾದ ಈ ದಿವ್ಯಸಂಗೀತವನ್ನು ನೀನು ಕೇಳುತ್ತಾ ನಿಂತ ಸಮಯದಲ್ಲಿ ಇಪ್ಪತ್ತೇಳು ಮಹಾಯುಗಗಳು ಕಳೆದಿವೆ. ಈಗ ಭೂಲೋಕದಲ್ಲಿ ಶೇಷನು ಶುಕ್ಲಕೇಶಾವೇಶಯುಕ್ತನಾಗಿ ಬಲರಾಮನೆಂದು ಅವತರಿಸಿರುವನು. ಆ ವರರತ್ನನಿಗೆ ನಿನ್ನ ಕನ್ಯಾರತ್ನವನ್ನು ಕೊಡು. ಶ್ರೀವಾಸುದೇವನು ಕೂಡ ಭೂಭಾರವನ್ನಿಳುಹಿ ಸುಜನಸುಖವನ್ನು ಸಾಧಿಸಲು ಶ್ರೀಕೃಷ್ಣನೆಂದು ಬಲರಾಮನ ತಮ್ಮನಾಗಿರುವನು. ಆ ಪುಣ್ಯಶ್ರವಣಕೀರ್ತನನಾದ ಶ್ರೀಶನ ದರ್ಶನವೂ ನಿನಗಾಗುವು'ದೆಂದು ಎಂದು ಆಜ್ಞಾಪಿಸಿದನು.

ಆಗ ರೈವತನು ಬ್ರಹ್ಮನಿಗೆ ವಂದಿಸಿ ತನ್ನ ಪುರವನ್ನು ಸೇರಿ, ಅದು ರಾಕ್ಷಸಪೀಡಿತವಾಗಿ ಪಾಳುಬಿದ್ದದ್ದನ್ನು ಕಂಡನು. ಅಲ್ಲಿಂದ ಹೊರಟು ದ್ವಾರಾವತಿಯನ್ನು ಮುಟ್ಟಿ ಬಲರಾಮನಿಗೆ ರೇವತಿಯನ್ನು ಮದುವೆ ಮಾಡಿಕೊಟ್ಟು, ನಾರಾಯಣಾಶ್ರಮದಲ್ಲಿ ತಪವನ್ನು ಮಾಡಲು ಹೊರಟುಹೋದನು.

## ೫. ನಾಭಾಗ ಚರಿತೆ

ಶ್ರೀಶುಕನು ಹೇಳಿದನು–

ನಾಭಾಗನೆಂಬ ಮನುಪುತ್ರನು ಬಹು ಬುದ್ಧಿಶಾಲಿಯಾಗಿದ್ದನು. ವೇದಜ್ಞಾನಿಯಾದ ನಾಭಾಗನು ಬ್ರಹ್ಮಚಾರಿಯಾಗಿದ್ದಾಗ ಅವನ ಅಣ್ಣಂದಿರು ಪಿತೃಧನವನ್ನು ಹಂಚಿಕೊಂಡರು. ತನಗೆ ಭಾಗವನ್ನು ಕೊಡದ ಸೋದರರನ್ನು 'ನನಗೆ ಭಾಗವಿಲ್ಲವೇ?' ಎಂದು ನಾಭಾಗನು ಕೇಳಿದನು. ಅವರು ನಿಮ್ಮ ತಂದೆಯನ್ನು ಕೇಳು ಎಂದರು. ಅವರೊಡನೆ ಕೂಡಿಹೋಗಿ ನಾಭಾಗನು ಭಾಗವನ್ನು ಕೊಡಿಸೆಂದನು. ಮನುವು 'ಪುತ್ರ! ಆ ದ್ರವ್ಯದಲ್ಲಿ ಆಶೆಯನ್ನು ಬಿಡು' ಎಂದನು. 'ನನ್ನ ಜೀವನವು ಹೇಗೆ' ಎಂದ ನಾಭಾಗನಿಗೆ ತಂದೆಯು 'ದಿವ್ಯಜ್ಞಾನಿಗಳಾದ ಆಂಗಿರಸರು ಯಜ್ಞಕರ್ಮನಿರತರಾಗಿರುವರು. ಅವರು ಆರನೆಯ ದಿನದ ವೈಶ್ವದೈವತ್ಯ ಕರ್ಮವ

ಎರಡು ಸೂಕ್ತಗಳನ್ನು ಮರೆತಾಗ ನೀನು ಅದನ್ನು ಜ್ಞಾಪಕ ಮಾಡು. ಅವರು ಪರಿತುಷ್ಟರಾಗಿ ನಿನಗೆ ಸತ್ರಪರಿಶೇಷಿತವಾದ ಧನವನ್ನಿತ್ತು ಸ್ವರ್ಗಕ್ಕೆ ಹೋಗುವರು. ಬೇಗ ಹೋಗು' ಎಂದಾ ಜ್ಞಾಪಿಸಿದನು. ನಾಭಾಗನು ಅದರಂತೆ ಮಾಡಿದನು. ಅಂಗೀರಸರು ಯಜ್ಞಶಿಷ್ಟದ್ರವ್ಯವನ್ನವನಿಗಿತ್ತು ಸ್ವರ್ಗಕ್ಕೆ ಹೋದರು.

ನಾಭಾಗನು ಆ ಧನರಾಶಿಯನ್ನು ಮೂಟೆ ಕಟ್ಟುವಾಗ ಯಜ್ಞಶಾಲೆಯ ಉತ್ತರ ದಿಗ್ಭಾಗ ದಿಂದ ಬಂದ ಒಬ್ಬ ಲೋಕವಿಲಕ್ಷಣ ಪುರುಷನು ವಾಸ್ತುಭವವಾದ ಈ ಧನವು ನನ್ನದು ಎಂದನು. 'ನನ್ನದು ಈ ಧನವು, ಇದನ್ನು ಆಂಗಿರಸರೆನಗೆ ಕೊಟ್ಟರೆಂದು' ನಾಭಾಗನೆಂದನು. 'ನಮಗೇಕೆ ಜಗಳ? ನಿಮ್ಮ ತಂದೆಯನ್ನು ಕೇಳು. ಅವರು ಹೇಳಿದಂತೆ ನಡೆಯೋಣ'ವೆಂದು ಕೃಷ್ಣಪುರುಷನು ನುಡಿದನು. ಆಗ ನಾಭಾಗನು ತಂದೆಯನ್ನು ಕೇಳಿದನು. 'ದಕ್ಷಯಜ್ಞಪ್ರಸಂಗದಲ್ಲಿ ಯಜ್ಞವಾಸ್ತುಗತವಾದ ಅವಶಿಷ್ಟದ್ರವ್ಯವೆಲ್ಲವೂ ರುದ್ರಭಾಗವೆಂದು ಋಷಿಗಳು ಕಲ್ಪಿಸಿರುವರು. ಆದ್ದರಿಂದ ಆ ಮಹಾದೇವನದೇ ಎಲ್ಲವೂ' ಎಂದು ತಂದೆಯಾಡಿದ ಮಾತನ್ನು ಕೇಳಿ ನಾಭಾಗನು ಯಜ್ಞಶಾಲೆಗೆ ಬಂದನು. ಆ ಮಹಾದೇವನಿಗೆ ಸಮಸ್ಕರಿಸಿ 'ಈ ವಾಸ್ತುದ್ರವ್ಯವು ನಿನ್ನದೆಂದು ನಮ್ಮ ತಂದೆ ಹೇಳಿರುವರು. ಪೂಜ್ಯನೇ! ನಿನಗೆ ಶಿರಸಾ ವಂದಿಸುತ್ತಿರುವೆನು.' ಎಂದನು. ಆಗ ರುದ್ರನು 'ನಿಮ್ಮ ತಂದೆ ಧರ್ಮವನ್ನು ಹೇಳಿದನು. ನೀನು ಸತ್ಯವನ್ನೇ ನುಡಿದೆ. ಆದ್ದರಿಂದ ಪ್ರಸನ್ನನಾಗಿರುವೆನು. ವೇದಪ್ರಮಿತವಾದ ಬ್ರಹ್ಮಜ್ಞಾನವನ್ನು ಮಂತ್ರದರ್ಶಿತ್ವವನ್ನು ಕೊಟ್ಟಿರು ವೆನು. ಈ ಧನವನ್ನಾದರೂ ತೆಗೆದುಕೊಂಡು ಹೋಗು' ಎಂದು ಹೇಳಿ ಸತ್ಯವತ್ಸಲನಾದ ಶಿವನು ಅಂತರ್ಹಿತನಾದನು. ಈ ನಾಭಾಗ ಚರಿತವನ್ನು ಸಾಯಂಪ್ರಾತಃಕಾಲಗಳಲ್ಲಿ ಸ್ಮರಿಸಿದವನು ತತ್ವಜ್ಞಾನಿಯಾಗಿ ದಿವ್ಯಗತಿಯನ್ನು ಪೊಂದುವನು.

## ೬. ಅಂಬರೀಷ ಚರಿತೆ

ಶ್ರೀಶುಕನು ಹೇಳಿದನು–

ಸತ್ಯವಂತನಾದ ನಾಭಾಗನಿಗೆ ಅಂಬರೀಷನೆಂಬ ಮಗನಿದ್ದನು. ಅವನು ಮಹಾ ಭಗವದ್ಭ ಕ್ತನು. ಆ ಪುಣ್ಯವಂತನಿಗೆ ಬ್ರಹ್ಮಶಾಪವು ಕೂಡ ಬಡಿಯದೆ ಚಕ್ರನಿರಸ್ತವಾಗಿ ಹೋಯಿತು.

ಆಗ ರಾಜನು ಕೇಳಿದನು–

ಪೂಜ್ಯನೇ! ಬ್ರಹ್ಮದಂಡವು ಅನಿವಾರ್ಯವಾಗಿದೆ. ಅಂತಹ ಬ್ರಹ್ಮದಂಡಕ್ಕೂ ಗುರಿಯಾಗದೆ ಉಳಿದ ಆ ರಾಜರ್ಷಿಯ ಕಥೆಯನ್ನು ಪೇಳು.

ಶ್ರೀಶುಕನು ಹೇಳಿದನು–

ಮಹಾಚಕ್ರವರ್ತಿ ಎನಿಸಿದ ಅಂಬರೀಷನು ಸಪ್ತದ್ವೀಪಗಳಿಗೂ ಒಡೆಯನಾಗಿ ಅಖಂಡೈ ಶ್ವರ್ಯವೈಭವೋಪೇತನಾಗಿದ್ದನು. ಇತರ ಪುರುಷರಿಗೆ ದುರ್ಲಭವೆನಿಸಿ ಮೋಹಕವಾಗುವ ಆ ಸಂಪತ್ತನ್ನು ನೋಡಿ ಸ್ವಪ್ನದಂತೆ ನಶ್ವರವೆಂದು ತಿಳಿದು, ಮದಮೋಹಕಾರಣವಾದ ಐಶ್ವರ್ಯದಿಂದ ಮೋಹಿತನಾಗದೆ, ವಾಸುದೇವನಲ್ಲಿ ಅಚಂಚಲಭಕ್ತಿಯನ್ನು, ಅವನ ಭಕ್ತರಾದ ಸಾಧುಜನರಲ್ಲಿ ಆದರವನ್ನು ಮಾಡಿ ಧನ್ಯನಾದನು; ಈ ಪ್ರಪಂಚವೆಲ್ಲವನ್ನು ಒಂದು ಮಣ್ಣಿನ ಹೆಂಟೆಯಂತೆ ನಿರ್ಲಕ್ಷ್ಯವಾಗಿ ಕಂಡನು. ಅನ್ಯವಿಷಯಸಂಗದಿಂದ ದೂರವಾದ ಷಡಿಂದ್ರಿಯ

ಗಳನ್ನು ಶ್ರೀಹರಿಸೇವೆಗಾಗಿ ಮೀಸಲು ಮಾಡಿದನು. ಚಿತ್ತವು ಕೃಷ್ಣಪದಾರವಿಂದಾಯತ್ತವಾಗಿ, ವಾಣಿಯು ಹರಿಗುಣವರ್ಣನರತವಾಯಿತು. ತನ್ನ ಕರಗಳಿಂದ ಹರಿಮಂದಿರ ಮಾರ್ಜನವನ್ನು; ಕರ್ಣಗಳಿಂದ ಅಚ್ಯುತಕಥಾಶ್ರವಣವನ್ನು ಮಾಡಿದನು! ನೇತ್ರಗಳಿಂದ ಮುಕುಂದನ ಪವಿತ್ರ ಮೂರ್ತಿಗಳನ್ನು, ಪ್ರತಿಮೆಯಂತಿರುವ ಭಕ್ತರನ್ನು ನೋಡಿ; ಆ ಭಕ್ತರ ಅಂಗಾಲಿಂಗನ ಸ್ಪರ್ಶ ಗಳಿಂದ ಆನಂದಪುಲಕಿತನಾದನು! ಶ್ರೀಹರಿಪಾದ ಸರೋಜ ಗಂಧದಿಂದ ಧನ್ಯಳಾದ ಶ್ರೀತುಲಸಿ ಯನ್ನು ಮೂಸಿ ನಾಸಿಕೆಯನ್ನು ; ನಿವೇದಿತವನ್ನುಂಡು ರಸನವನ್ನು; ವಿಷ್ಣುಕ್ಷೇತ್ರ ಸಂಚಾರದಿಂದ ಪಾದಗಳನ್ನು, ; ಹೃಷೀಕೇಶನಿಗೆ ವಂದಿಸಿ ಶಿರವನ್ನು ಪಾವನಗೊಳಿಸಿದ ಆ ಮಹಾನುಭಾವನು ಶ್ರೀಶನಿಗೆ ಅಚ್ಚುಮೆಚ್ಚಾಗಿದ್ದನು. ಶ್ರೀಹರಿದಾಸ್ಯದಲ್ಲೇ ಕಾಮವನ್ನೂ, ಉತ್ತಮಶ್ಲೋಕ ಜನಸೇವೆ ಯಲ್ಲಿ ರತಿಯನ್ನೂ ಮಾಡುತ್ತಾ ಸರ್ವಕರ್ಮಫಲವನ್ನು ಶ್ರೀಹರಿ ಗರ್ಪಿಸಿದರು. ಸರ್ವಸ್ವಾಮಿ ಯಾದ ಅಧೋಕ್ಷಜನನ್ನು ಪೂರ್ಣಭಕ್ತಿಯಿಂದ ಭಜಿಸುವ ಆ ಭಕ್ತನು, ಹರಿನಿಷ್ಠಬ್ರಾಹ್ಮಣ ವಿಧೇಯನಾಗಿ ರಾಜ್ಯವನ್ನಾಳುತ್ತಿದ್ದನು. ಮಹಾವೈಭವದಿಂದ ಸಮೃದ್ಧದಕ್ಷಿಣಾದಿ ದಾನದಿಂದ ಸರಸ್ವತೀನದಿಗೆ ಸಮ್ಮುಖದಲ್ಲಿದ್ದ ಕ್ಷೇತ್ರಗಳಲ್ಲಿ ಅನೇಕ ಅಶ್ವಮೇಧಗಳನ್ನು ಮಾಡಿ ಶ್ರೀಹರಿ ಗರ್ಪಿಸಿದನು. ವಸಿಷ್ಠ, ಅಸಿತ, ಗೌತಮ, ಮುಂತಾದ ಋತ್ವಿಕರನ್ನು ಸಂತೋಷಪಡಿಸಿದನು. ಅವನ ಯಜ್ಞ ಸಮಯದಲ್ಲಿ ದೇವತೆಗಳು ಪ್ರತ್ಯಕ್ಷರಾಗಿ ಸದಸ್ಯ ಋತ್ವಗ್ಜನರಿಂದ ಕೂಡಿ ವಿಹರಿಸಿದರು. ಅವನ ಪ್ರಜರು ಮುಕುಂದಸುಂದರಗಾಥಾಶ್ರವಣಾ ನಂದ ತುಂದಿಲರಾಗಿ ಅಮರಪ್ರಿಯವಾದ ಸ್ವರ್ಗಾದಿ ಭೋಗಗಳನ್ನು ಧಿಕ್ಕರಿಸಿದನು; ಸಿದ್ಧರಿಗೂ ಸಿಗಲಾರದ ಭೋಗ ಸಾಮಗ್ರಿಯು ಸಮೃದ್ಧವಾಗಿದ್ದರೂ ಹೃದಯ ಪೇಟಿಕೆಯಲ್ಲಿಟ್ಟುಕೊಂಡ ಮುಕುಂದನಿಧಿ ಲಾಭದಿಂದ ತೃಣದಂತೆ ತೋರಿತು. ಇಂತು ಸ್ವಧರ್ಮದಿಂದ ಹರಿಪ್ರೀತಿಯನ್ನು ಗಳಿಸಿ ಜ್ಞಾನಬಲ ದಿಂದ ಸರ್ವಸಂಗವನ್ನು ದೂರಮಾಡಿ ಆ ಮಹಾಭಕ್ತನು ಗೃಹಾರಾಮಗಳು, ದಾರಾಸುತರು, ಬಂಧುಮಿತ್ರರು, ವಾಜಿವಾರಣಗಳು, ರಥಸೈನ್ಯ ಯೂಥಪರು, ಅಕ್ಷಯ ರತ್ನಾಭರಣಗಳು, ಅನಂತಕೋಶಗಳು– ಎಲ್ಲವೂ ಶ್ರೀಹರಿಯ ಅಧೀನ– ನಶ್ವರವೆಂದು ತಿಳಿದನು. ಇಂತು ಅಪರೋಕ್ಷಜ್ಞಾನಿಯಾದ ಅಂಬರೀಷನ ಏಕಾಂತಭಕ್ತಿಯಿಂದ ಪ್ರೀತನಾಗಿ ಶ್ರೀಹರಿಯು ಶತ್ರು ಭಯನಾಶಕವಾದ ಸುದರ್ಶನ ಚಕ್ರವನ್ನು ಅವನ ರಕ್ಷಣೆಗೆಂದು ಕೊಟ್ಟಿದ್ದನು.

ಸಮಾನಶೀಲಳಾದ ಸತೀಮಣಿಯಿಂದ ಕೂಡಿ ಸಮ್ರಾಟಂಬರೀಷನು ಸಂವತ್ಸರಾತ್ಮಕ ವಾದ ದ್ವಾದಶೀ (ಅಖಂಡ) ವ್ರತವನ್ನು ಯಮುನಾತೀರದ ಮಧುವನದಲ್ಲಿ ಮಾಡಿದನು. ಉತ್ಥಾನದ್ವಾದಶಿಯ ದಿನ ವ್ರತಸಮಾಪ್ತಿಯನ್ನು ಮಾಡಲು ಕಾಳಿಂದಿಯಲ್ಲಿ ಮಿಂದು ಮಧುವನದಲ್ಲಿ ಮಧುವೈರಿಯನ್ನರ್ಚಿಸಿ ಮಹಾಭಿಷೇಕವನ್ನು ಮಾಡಿದನು. ದಿವ್ಯಾಭರಣಗಳಿಂದ, ಗಂಧಮಾಲ್ಯಧೂಪದೀಪಗಳನ್ನು ಸಮರ್ಪಿಸಿ, ಸ್ವಯಂಪೂರ್ಣರಾದ ಬ್ರಾಹ್ಮಣರನ್ನೂ ಭಕ್ತಿ ಯಿಂದ ಪೂಜಿಸಿದನು.

ಬಂಗಾರದ ಕೋಡು, ಬೆಳ್ಳಿಯ ಗೊರಸನ್ನಿಟ್ಟು ಪೀತಾಂಬರವನ್ನು ಹೊದಿಸಿ, ಶೀಲವಯೋ ರೂಪಯುಕ್ತವಾದ ಆರು ಲಕ್ಷ ಗೋವುಗಳನ್ನು ಕರುಗಳಿಂದ, ಕರೆಸುವ ಪಾತ್ರೆಗಳಿಂದ, ದಕ್ಷಿಣೆ ಯಿಂದ ಕೂಡಿಸಿ, ಸಾಧುವಿಪ್ರರಿಗೆ ದಾನವಿತ್ತು, ಮೃಷ್ಟಾನ್ನವನ್ನುಣಿಸಿದನು. ಅನಂತರ ಅಂಬ ರೀಷನು ಬ್ರಾಹ್ಮಣರು ಅನುಜ್ಞೆಯನ್ನು ಪಡೆದು ಪಾರಣೆಗೆಂದು ಕೂತನು. ಆಗ ಸಾಕ್ಷಾತ್ ದೂರ್ವಾಸನು ಅತಿಥಿಯಾಗಿ ಬಂದನು. ಎದುರ್ಗೊಂಡು ಕರೆತಂದು ರಾಜನು ಮುನಿಯನ್ನು

ಪೂಜಿಸಿ, ಪಾದಮೂಲದಿ ಕೂತು, ಭೋಜನವನ್ನು ಮಾಡಲು ಬೇಡಿಕೊಂಡನು. ಮುನಿಯು ಔತಣವನ್ನು ಸ್ವೀಕರಿಸಿ ಸ್ನಾನಮಾಡಿ ಬರುವೆನೆಂದು ಯಮುನೆಯನ್ನು ಸೇರಿದನು. ನದಿಯಲ್ಲಿ ಳಿದು ಮಿಂದು ಹರಿಧ್ಯಾನರತವಾಗಿ ದುರ್ವಾಸನಿರಲು ಎರಡೇ ಘಳಿಗೆಯ ಸಾಧನದ್ವಾದಶಿಯು ಮುಗಿಯುತ್ತ ಬಂತು. ಅದನ್ನು ಕಂಡು ಧರ್ಮಜ್ಞನಾದ ಅಂಬರೀಷನು ಧರ್ಮಸಂಕಟದಿಂದ ಪಾರುಮಾಡಿರೆಂದು ಬ್ರಾಹ್ಮಣರನ್ನು ಕೇಳಿಕೊಂಡನು.

'ಬ್ರಾಹ್ಮಣನನ್ನು ಬಿಟ್ಟು ಪಾರಣೆ ಮಾಡಲಾಗದು. ದ್ವಾದಶಿಯನ್ನು ಮೀರದ ಪಾರಣೆ ಮಾಡಲು ಬೇಕು. ಈ ಸಂಕಟವನ್ನು ಬಿಡಿಸಿ ನನಗೆ ಅಧರ್ಮವು ಸೋಂಕದಂತೆ ಕಾಪಾಡಿ' ಎಂದು ಕೇಳಿದ ರಾಜನಿಗೆ 'ಜಲಪಾನ ಮಾಡಿದರೆ ಪಾರಣೆ ಮಾಡಿದಂತೆಯೂ ಆಗುವುದು; ಉಪವಾಸವಿದ್ದಂತೆಯೂ ಆಗುವುದು. ಇದರಿಂದ ನಿನಗೆ ಬ್ರಾಹ್ಮಣಾತಿಕ್ರಮ ದೋಷವು ಬರದೆ, ದ್ವಾದಶೀವ್ರತಫಲವು ಉಳಿಯುವುದು' ಎಂದು ವಿಪ್ರರು ನುಡಿದರು.

ಆಗ ಅಂಬರೀಷನು ಶ್ರೀಹರಿಯನ್ನು ನೆನೆದು ತೀರ್ಥಪ್ರಾಶನಮಾಡಿ ವಿಪ್ರಾಗಮನವನ್ನು ನಿರೀಕ್ಷಿಸುತ್ತಿದ್ದನು. ಸ್ವಲ್ಪ ಕಾಲವಾದಮೇಲೆ ದುರ್ವಾಸನು ಬಂದು, ರಾಜನು ತೀರ್ಥಪಾರಣೆ ಮಾಡಿರುವೆನೆಂದು ತಿಳಿದು, ಸಿಟ್ಟಿನಿಂದ ನಡುಗುತ್ತಾ ಹುಬ್ಬನ್ನು ಗಂಟಿಕ್ಕಿ, ಹಸಿವೆಯಿಂದ ಇಮ್ಮಡಿ ಯಾದ ಕ್ರೋಧದಿಂದ, ಕೈಜೋಡಿಸಿ ನಿಂದ ರಾಜನನ್ನು ಧಿಕ್ಕರಿಸಿ ಇಂತೆಂದನು–

'ಈ ನೀಚನು ಐಶ್ವರ್ಯಮದದಿಂದ ಮಾಡಿದ ಮಹದತಿಕ್ರಮಣವನ್ನು ಕಂಡಿರಾ? ಇವನು ವಿಷ್ಣುವಿನ ಭಕ್ತನೇ? ತಾನೇ ಭಕ್ತನೆಂದು ಕೊಬ್ಬಿ, ಕಣ್ಣು ಕಾಣದಿರುವನು. ಅತಿಥಿಯಾಗಿ ಬಂದ ನನ್ನನ್ನು ಕರೆದುದೇತಕ್ಕೆ? ಕರೆದಮೇಲೆ ನನಗೆ ನೀಡದೆ ತಾನು ಉಂಡು ಕೂತದ್ದಂತು ಸುತರಾಂ ಅಧರ್ಮವಾಗಿದೆ. ಇಂತು ನನ್ನನ್ನು ಅವಮಾನಿಸಿದ ಫಲವನ್ನು ಈಗಲೇ ತೋರಿಸಿಬಿಡುವೆನು' ಎಂದು ಗುಡುಗಿ, ಜಟೆಯನ್ನು ಕಿತ್ತಿ, ನೆಲಕ್ಕಪ್ಪಳಿಸಿದನು. ಅದರಿಂದ ಹೊರಟ ಕೃತ್ಯೆ ಪ್ರಳಯಕಾಲಾ ಭೀಲವಹ್ನಿಜ್ವಾಲೆಯಂತೆ ಉರಿಯುತ್ತಾ ಕೈಯಲ್ಲಿ ಕರಾಳಖಡ್ಗವನ್ನು ಪಿಡಿದೆತ್ತಿ, ನಡೆಯುವಾಗ ಭೂತಲವನ್ನು ನುಡುಗಿಸುತ್ತಾ ರಾಜನ ಮೇಲೇರಿ ಬಂದಿತು. ಒಂದು ಹೆಜ್ಜೆಯನ್ನು ಹಿಂದಕ್ಕಿಡದೆ, ಅಂಜದೆ, ನಿಂತ ರಾಜನನ್ನು ನೋಡಿ, ಭಕ್ತರಕ್ಷಾದೀಕ್ಷಾದಕ್ಷವಾದ ಅಧೋಕ್ಷಜನ ಚಕ್ರವು ತತ್‌ಕ್ಷಣ ದಲ್ಲೇ ಆ ಕೃತ್ಯೆಯನ್ನು ದಾವಾಗ್ನಿಯು ಹಾವನ್ನು ಸುಡುವಂತೆ, ಭಸ್ಮೀಕರಿಸಿತು. ಅಷ್ಟಕ್ಕೆ ಬಿಡದೆ ಸುದರ್ಶನವು ದುರ್ದರ್ಶ ತೇಜದಿಂದುರಿಯುತ್ತಾ ದುರ್ವಾಸನನ್ನು ಸುಡಲು ಬಂತು.

ತನ್ನ ಪ್ರಯಾಸವು ನಿಷ್ಫಲವಾಗಿ, ತನ್ನನ್ನು ಹಿಂಬಾಲಿಸಿದ ಚಕ್ರದಿಂದ ಪರಿತಾಪವನ್ನು ಹೊಂದಿ, ದುರ್ವಾಸನು ಭೀತಿಯಿಂದೋಡಿದನು. ಚಕ್ರವು ಬಿಡದೆ ಬೆನ್ನಟ್ಟಿತು. ಮೇರು ಗುಹೆ ಯಲ್ಲಿ ಹೊಕ್ಕರೂ, ಸಮುದ್ರದಿ ಮುಳುಗಿ ನಿಂತರೂ, ಪಾತಾಳವನ್ನು ಪ್ರವೇಶಿಸಿದರೂ, ಬಿಡದೆ, ಸುಡುತ್ತಾ ಬರುವ ದುಸ್ಸಹಚಕ್ರವನ್ನು ನೋಡಿ, ಕಂಗೆಟ್ಟು, ಮುನಿಯು ವಿಧಾತನನ್ನು ಶರಣಾ ಗತನಾಗಿ 'ಸ್ವಾಮಿ! ಅಚಿತಚಕ್ರವು ಸುಡುತ್ತಿದೆ– ನನ್ನನ್ನು ಕಾಪಾಡು' ಎಂದು ಬೇಡಿದನು.

ಆಗ ಬ್ರಹ್ಮನಿಂತೆಂದನು–

ದುರ್ವಾಸಾ! ನನ್ನ ಸತ್ಯಲೋಕವು ಎರಡು ಪರಾರ್ಧಗಳಾಗುತ್ತಿರಲು ಶ್ರೀಹರಿಯ ಭ್ರೂಭಂಗ ಮಾತ್ರದಿಂದ ಸುಟ್ಟು ನಾಶವಾಗುವುದು. ಈ ಜಗವನ್ನು ಸೃಜಿಸಿ, ಜೀವರನ್ನು ಬೊಂಬೆಗಳಂತೆ ಆಡಿಸುವ ಆ ಕಾಲನಾಮಕ ಹರಿಗೆ ಎದುರುಮಾಡಲು ಸಮರ್ಥರಿಲ್ಲ. ನಾನು, ರುದ್ರ, ಭಕ್ಷ, ಭೃಗು ಮೊದಲಾದ ಎಲ್ಲ ದೇವದಾನವ ಮಾನವ ಜೀವರು ಆ ಶ್ರೀಹರಿಯ ಆಜ್ಞೆಯನ್ನು

ಪಾಲಿಸುವ ದಾಸರಾಗಿರುವೆವು. ಅವನ ಆಜ್ಞಾಪಾಲನೆಯೇ ಲೋಕಹಿತವೆಂದು ಶಿರಸಾ ವಹಿಸಿರುವೆವು.

ವಿರಿಂಚನ ಮಾತನ್ನು ಕೇಳಿ ಮುನಿಯು ಚಕ್ರತಾಪವನ್ನು ವಾರಿಸೆಂದು ಕೈಲಾಸವಾಸಿಯಾದ ಶಂಕರನಿಗೆ ಶರಣಾಗತನಾದನು. ಶ್ರೀಶಂಕರನಿಂತೆಂದನು–

ವತ್ಸ! ಪೂರ್ಣಗುಣನಾದ ನಾರಾಯಣನ ಅಸ್ತ್ರವನ್ನು ತಪ್ಪಿಸಲು ನಮಗೆ ಸಾಧ್ಯವಿಲ್ಲ. ನನಂತಹ ರುದ್ರರು, ನಮ್ಮಪ್ಪನಂತಹ ಬ್ರಹ್ಮರು ತತ್ತತ್ಕಾಲದಲ್ಲಿ ಶ್ರೀಹರಿಯ ಇಚ್ಛೆಯಂತೆ ಆಗಿಹೋಗಿರುವರು. ಅವ್ಯಯನಾದ ಶ್ರೀಹರಿಯ ಆಧೀನವಾಗಿ ಅನಂತ ಬ್ರಹ್ಮಾಂಡಗತ ಜೀವಸಂಘಗಳು ಅವನಲ್ಲಿ ಅಡಗಿ ನಿಂತಿವೆ. ನಾನು, ಸನತ್ಕುಮಾರ, ನಾರದ, ಪೂಜ್ಯನಾದ ನಮ್ಮ ತಂದೆ ಬ್ರಹ್ಮ, ಕಪಿಲ, ಅಪಾಂತರತಮ, ದೇವಲ, ಧರ್ಮ, ಅಸುರಿ, ಮರೀಜಿ ಪ್ರಮುಖರಾದ ಬ್ರಹ್ಮಜ್ಞಾನಿಗಳು– ಎಲ್ಲರೂ ಆ ಶ್ರೀಹರಿಯ ಬಂಧಕ ಮಾಯೆಗೆ ಸಿಲುಕಿ ಅವನನ್ನು ಸಂಪೂರ್ಣವಾಗಿ ಅರಿಯಲಾಗದೆ ಇರುವೆವು. ಅನಂತನ ಅಸ್ತ್ರವಾದರೂ ದುರ್ವಿಷಹವಾಗಿದೆ. ಶ್ರೀಹರಿಯೇ ನಿನ್ನನ್ನು ರಕ್ಷಿಸಲು ಸಮರ್ಥನು. ಹೋಗಿ ಅವನನ್ನೇ ಬೇಡು. ಶ್ರೀಶನು ನಿನಗೆ ಮಂಗಳನ್ನು ಮಾಡುವನು.

ಶಂಕರನ ವಚನವನ್ನು ಕೇಳಿ ನಿರಾಶನಾದ ದುರ್ವಾಸನು ವಾಸುದೇವನ ವಿಕುಂಠಲೋಕವನ್ನು ಸೇರಿ ಶ್ರೀದೇವಿಯಿಂದ ಶೋಭಿಸುವ ಶ್ರೀನಿವಾಸನನ್ನು ಕಂಡನು. ಚಕ್ರತಾಪವನ್ನು ತಡೆಯಲಾರದೆ ಓಡಿಬಂದು ಪಾದಮೂಲವನ್ನು ಪಿಡಿದು ಗಡಗಡನೆ ನಜುಗುತ್ತಾ 'ಅಚ್ಯುತ! ಅನಂತ! ಗೋವಿಂದ! ಪ್ರಭೋ! ಎಲ್ಲವನ್ನೂ ವಶದಲ್ಲಿಟ್ಟು ನಡೆಸುವ ಸರ್ವಸ್ವಾಮಿಯೇ! ನನ್ನನ್ನು ಕಾಪಾಡು. ಗೊತ್ತಿಲ್ಲದೆ ನಿನ್ನ ಪ್ರಿಯರಿಗೆ ಅಪರಾಧವನ್ನು ಮಾಡಿರುವೆನು. ಮಹಾಮಹಿಮನೇ! ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸು. ಶಿರಸಾ ವಹಿಸುವೆನು. ನಿನ್ನ ನಾಮೋಚ್ಚಾರಣೆಯಿಂದ ನರಕಸ್ಥನು ಕೂಡ ಪಾಪಮುಕ್ತನಾಗುವನಲ್ಲವೇ? ಎಂದು ಬೇಡಿದನು. ಆಗ ಭಗವಂತನು ನುಡಿದನು.

ಬ್ರಾಹ್ಮಣೋತ್ತಮ! ಕೇಳು, ಅಸ್ವತಂತ್ರರಾದ ಇತರರಂತೆಯೇ ನಾನೂ ಭಕ್ತಪರಾಧೀನನೆನಿಸಿರುವೆನು. ಭಕ್ತಜನಪ್ರಿಯನಾದ ನನ್ನ ಹೃದಯವನ್ನು ಅವರು ಸೆಳೆದಿಟ್ಟು ನನ್ನನ್ನು ಭಜಿಸುತ್ತಾ ಇರುವರು. ಅವರಿಗೆ ನಾನೇ ಪ್ರಿಯನು. ಅವರಿಗೆ ಅಪ್ರಿಯವಾದೊಡೆಯೂ ಸುಮ್ಮನಿದ್ದರೆ, ನನ್ನ ಪ್ರಭುತೆಯಿಂದ ಏನು ಪ್ರಯೋಜನವು? ನೋಡು! ನನಗೆ ನಾನು ಹೆಚ್ಚಲ್ಲ. ನನ್ನ ಪ್ರಿಯಳಾದ ಏಕಾಂತಭಕ್ತಳಾದ ಲಕ್ಷ್ಮೀದೇವಿಯೂ ಹೆಚ್ಚಲ್ಲ. ಸಾಧುಗಳೆಂದರೆ ಭಕ್ತರೆಂದರೆ ಸಾಕು! ಸಕಲ ಪದಾರ್ಥಗಳಲ್ಲಿ ಅವರೇ ಹೆಚ್ಚಾಗಿ ನನ್ನ ಪ್ರೀತಿಪಾತ್ರರಾಗಿರುವರು. ದಾರಾಪುತ್ರ ರನ್ನೂ, ಗೃಹಾರಾಮಗಳನ್ನೂ, ಪ್ರಾಣವನ್ನೂ, ಪ್ರಾಣಾಧಿಕವಾದ ಧನವನ್ನೂ, ಸ್ವರ್ಗಾದಿಲೋಕ ಸುಖವನ್ನೂ ಬೇಡದೆ, ವೈರಾಗ್ಯದಿಂದ ಪರಿತ್ಯಜಿಸಿ, ನನ್ನನ್ನು ನಂಬಿ ಭಜಿಸುವ ಭಕ್ತಜನರನ್ನು ನಾನು ಹೇಗೆ ಬಿಡಲಿ? ನನ್ನಲ್ಲೇ ಮನವನ್ನಿಟ್ಟು ಸಮದರ್ಶಿಗಳಾದ ನನ್ನ ಭಕ್ತರು ಸತ್‌ತರುಣಿಯರು ಸತ್‌ಪತಿಯನ್ನಂತೆ ನನ್ನನ್ನು ವಶೀಕರಿಸಿಟ್ಟು ಭಜಿಸುತ್ತಿರುವರು. ನಾನು ಪ್ರಸನ್ನನಾಗಿ ಕೊಡುವ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಮೋಕ್ಷವನ್ನೂ ಸೇವಾಫಲ ರೂಪವಾಗಿ ಸ್ವೀಕರಿಸದೆ ಸೇವಾಸುಖವನ್ನೇ ಬಯಸುವರು. ಇನ್ನು ಕಾಲದಿಂದ ನಷ್ಟವಾಗುವ ಸರ್ಗಾದಿ ವಿಷಯಗಳನ್ನೆಂದಿಗೂ ಬೇಡರೆಂದು ಹೇಳಬೇಕೇ? ಸಾಧುಗಳು ನನ್ನ ಪ್ರಿಯರು. ನಾನು ಸಾಧುಗಳಿಗೆ ಪ್ರಿಯನು. ನನ್ನನ್ನು ಹೊರತಿನ್ನೊಂದು ಅವರಿಗೆ ಬೇಕಿಲ್ಲ.

ನನಗೂ ಅವರೇ ಬೇಕು. ನೀನೂ ಭಕ್ತನೇ ಸರಿ. ಆದರೂ ರಾಗದ್ವೇಷವಶನಾಗಿ ವಿವೇಕವನ್ನು ಕಳೆದುಕೊಂಡು ಕಷ್ಟಪಟ್ಟೆ. ನಿನಗೊಂದು ಉಪಾಯವನ್ನು ಹೇಳುವೆನು ಕೇಳು. ಕೃತ್ಯಾರೂಪವಾದ ಅಭಿಚಾರವನ್ನು ಪ್ರಯೋಗಿಸಿದ ನಿನಗೆ ಕೆಡುಕನ್ನು ಬಗೆಯದ ರಾಜನನ್ನು ಬೇಡು. ಸಾಧುಜನ ದ್ರೋಹವನ್ನು ಮಾಡಿ ಅದರಿಂದ ನೀನೇ ಕಷ್ಟಪಟ್ಟೆ. ಬ್ರಾಹ್ಮಣರಿಗೆ ತಪಸ್ಸು, ವಿದ್ಯೆ ಇವೆರಡು ಮೋಕ್ಷ ಸಾಧನವೆನಿಸಿವೆ. ಆದರೆ ದುರಂಹಕಾರಿಯಾದವನಿಗೆ ತಪೋವಿದ್ಯಾಬಲವು ಗರ್ವವನ್ನು ಹುಟ್ಟಿಸಿ ಕೆಡಿಸುವುದು. ಇರಲಿ! ನಾಭಾಗಸುತನಿಂದಲೇ ನಿನಗೆ ಕ್ಷೇಮವಾಗುವುದು. ಅವನನ್ನು ಕ್ಷಮಿಸೆಂದು ಯಾಚಿಸು ಹೋಗು' ಎಂದನು.

ಆಗ ಗೋವಿಂದನಿಗೆ ವಂದಿಸಿ ದುರ್ವಾಸನು ಚಕ್ರವು ಹಿಂಬಾಲಿಸಿ ಬರುತ್ತಿರಲು ಅಂಬರೀಷನನ್ನು ಸಮೀಪಿಸಿ, ಅವನ ಪಾದಗಳನ್ನು ಹಿಡಿಯಲು ಹೋದನು. ಮುನಿಯ ವ್ಯಸನವನ್ನು ನೋಡಿ ಸಹಿಸಲಾರದೆ ಪಾದವನ್ನು ಮುಟ್ಟಲು ಬಂದ ಮಹಾಮುನಿಯನ್ನು ಕೈಹಿಡಿದೆಬ್ಬಿಸಿ, ಕರುಣೆಯಿಂದ ರಾಜನು ಅಭಯವನ್ನಿತ್ತನು. ಚಕ್ರವು ಶಾಂತಿಸುವಂತೆ ಏಕಾಗ್ರಚಿತ್ತನಾಗಿ ಇಂತು ಸ್ತುತಿಸಿದನು–

ಸುದರ್ಶನ! ನೀನು ಅಗ್ನಿ ಸೂರ್ಯ ಚಂದ್ರರಲ್ಲಿ ತೇಜೋರೂಪನಾಗಿರುವೆ. ಜಲ ಭೂಮ್ಯಾಕಾಶ ವಾಯುಗಳು ನಿನ್ನಿಂದ ಜೀವಧಾರಕ ಶಕ್ತಿಯನ್ನು ಪಡೆದಿವೆ. ಶಬ್ದಾದಿ ಮಾತ್ರೆಗಳಲ್ಲಿ ಇಂದ್ರಿಯಗಳು ಹರಿಯುವುವು ನಿನ್ನ ಪ್ರೇರಣೆಯಿಂದ. ಸಾವಿರದಲದಿಂದ ತಿರುಗುವ ನೀನು ಕಾಲವೆನಿಸಿ ಮನುಜರ ಆಯುಸ್ಸನ್ನು ಕತ್ತರಿಸಿಬಿಡುವೆ. ನಿನಗೆದುರಿಲ್ಲ. ಎಲ್ಲ ಅಸ್ತ್ರಗಳೂ ನಿನಗಡಿ; ಅನ್ನವನ್ನು ವರ್ಷಿಸುವ ಸಮೃದ್ಧ ಕಾಮಸ್ವರೂಪನಾದ ನಿನಗೆ ನಮಃ! ಈ ವಿಪ್ರನನ್ನು ಕಾಪಾಡು.

ನೀನು ಧರ್ಮ, ಧೃತಿ, ಸತ್ಯ, ಯಜ್ಞಗಳ ಸಂರಕ್ಷಕನಾಗಿ ಯಜ್ಞಫಲವನ್ನು ಕೊಡುವೆ. ಲೋಕಪಾಲರಲ್ಲಿ ನೆಲಸಿ ತೇಜಃಪೌರುಷವಂತರನ್ನಾಗಿರಿಸುವ ಸುನಾಭನೇ! ಅಖಿಲಧರ್ಮಪಾಲಕನು, ಅಧರ್ಮಶೀಲರಾಕ್ಷಸಶಿಕ್ಷಕನು, ತ್ರಿಲೋಕರಕ್ಷಕನು, ಮನೋಜವನು, ಆಶ್ಚರ್ಯಕರ ಚರಿತ್ರನು ಆದ ನಿನಗೆ ನಮಸ್ಕಾರವು.

ಶ್ರೀಹರಿಯಿಂದ ಪ್ರಯುಕ್ತವಾದ ನಿನ್ನ ದರ್ಶನದಿಂದ ಅಸುರರು ಕಂಗೆಟ್ಟು ಪಲಾಯನ ಮಂತ್ರವನ್ನು ಪಠಿಸುವರು. ನಿನ್ನ ಪರಾಕ್ರಮದಿಂದ ಅವರ ತಲೆ, ಕಾಲು, ಕೈ, ಕಂಠಗಳು ಕತ್ತರಿಸಿ ರಣರಂಗದಲ್ಲಿ ನಿನಗಿಟ್ಟ ಬಲಿಯಂತೆ ಕಾಣುವುವು. ಧರ್ಮಸ್ವರೂಪನಾದ ನಿನ್ನ ತೇಜದಿಂದ ಮಹಾತ್ಮರ ಹೃದಯಾಂಧಕಾರವು ದೂರವಾಗಿ, ಜ್ಞಾನಜ್ಯೋತಿಯು ಅಂಟಿ ಬೆಳಗುವುದು. ಗದಾಧರನು ನಿನ್ನನ್ನು ಸುಜನ ರಕ್ಷೆ ದುರ್ಜನ ಶಿಕ್ಷೆಗಳನ್ನು ಮಾಡಲು ನಿಲ್ಲಿಸಿರುವನು.

ನಮ್ಮ ಕುಲದೈವವಾದ ಶ್ರೀಶನಲ್ಲಿ ಭಕ್ತಿಯನ್ನು ಉಪದೇಶಿಸುವ ವಿಪ್ರನಿಗೆ ಕ್ಷೇಮವನ್ನು ಮಾಡು! ಇದೇ ನೀನೆನ್ನಲ್ಲಿ ಮಾಡುವ ಮಹದನುಗ್ರಹವು.

ನಾನು ಇಷ್ಟಾಪೂರ್ತ ದಾನಾದಿಗಳನ್ನು ಮಾಡದಿದ್ದರೆ, ಧರ್ಮದಲ್ಲಿ ನಡೆದಿದ್ದರೆ, ವಿಪ್ರರಲ್ಲಿ ಕುಲದೈವ ರೂಪರೆಂಬ ಭಕ್ತಿಯು ನನಗಿದ್ದರೆ, ಈ ಬ್ರಾಹ್ಮಣೋತ್ತಮನಿಗೆ ಹಿತವಾಗಲಿ! ಸರ್ವಕಲ್ಯಾಣಗುಣಪೂರ್ಣನಾದ ರಮಾನಾರಾಯಣನು ಸರ್ವಭೂತಾಂತರ್ಯಾಮಿಯಾಗಿರುವನೆಂಬ ಭಕ್ತಿ ಎನಗಿದ್ದರೆ, ಅದರಿಂದ ಸರ್ವೋತ್ತಮನಾದ ಶ್ರೀಹರಿಯು ಪ್ರೀತನಾಗಿದ್ದರೆ, ದ್ವಿಜನಿಗೆ ಸುಖವಾಗಲಿ!– ಎಂದು ಸ್ತುತಿಸಲು ಚಕ್ರವು ಶಾಂತವಾಯಿತು.

ಚಕ್ರತಾಪಯುಕ್ತನಾದ ದುರ್ವಾಸನು ಪರಮಸುಖವನ್ನು ಹೊಂದಿ, ರಾಜನನ್ನು ಆಶೀರ್ವದಿಸಿ, ಪ್ರಶಂಸಿಸಿದನು–

ಇಂದು ಗೋವಿಂದ ಭಕ್ತರ ಮಹಿಮೆಯನ್ನು ಕಂಡೆನು. ರಾಜನ್! ನಾಮಾಡಿದ ಅಪರಾಧವನ್ನೆಣಿಸದೆ ನನಗೆ ಕ್ಷೇಮವನ್ನೇ ಮಾಡಿದೆ. ಸಾಧುಜನರಿಗೆ ದುಷ್ಕರವಿಲ್ಲ; ಮಹಾತ್ಮರಿಗೆ ದುಸ್ತ್ಯಜವೂ ಇಲ್ಲ, ಸಜ್ಜನವಲ್ಲಭನಾದ ಶ್ರೀಹರಿಯನ್ನೇ ಭಕ್ತಿಪಾಶದಿಂದ ಕಟ್ಟಿಟ್ಟು ಭಜಿಸುವ ಭಕ್ತ ಜನರಿಗೆ ನಮೋನಮಃ. ಶ್ರವಣಮಾತ್ರದಿಂದ ಶ್ರೀಶನು ನಾಮವು ಮನುಜನನ್ನು ಪಾಪದೂರನನ್ನಾಗಿಸಿ ಹೊರೆಯುವುದು. ಅಂತಹ ಗಂಗಾಜನಕನ ಮಂಗಲ ಪಾಸ್ತ್ರವನ್ನು ಪಠಿಸಿ ಪಾವನರಾದ ಭಕ್ತರಿಗೆ ದೊರಕದಿರುವ ವಸ್ತುವು ಉಂಟೇ? ರಾಜನ್! ನಿನ್ನ ಕರುಣೆಯಿಂದ ಬದುಕಿದೆ. ತಪ್ಪನ್ನೆಣಿಸದೆ ಅನುಗ್ರಹಿಸಿ ನನ್ನ ಪ್ರಾಣವನ್ನುಳಿಸಿದೆ. ಎಂದು ನುಡಿದ ಮುನಿರಾಜನ ಕಾಲಿಗೆ ಬಿದ್ದು ಬೇಡಿ, ನಿಗರ್ವಿಯಾದ ಅಂಬರೀಶನು ಮೃಷ್ಟಾನ್ನವನ್ನುಣಿಸಿದನು. ಅಂದಿನವರಿ ವಿಗೂ ಜಲಪಾನದಿಂದ ಜೀವಿಸಿ ಮುನಿಯ ಪ್ರತ್ಯಾಗಮನವನ್ನುನ್ನೆದುರು ನೋಡುತ್ತಿದ್ದ. ರಾಜನು ತಾನೂ ಭುಂಜಿಸಿ ಮುನಿಯನ್ನು ಪೂಜಿಸಿ ಕಳಿಸಿದನು. ದುರ್ವಾಸನು ಪ್ರೀತನಾಗಿ 'ಭಾಗವತ ಶಿರೋಮಣಿಯಾದ ನಿನ್ನ ದರ್ಶನ ಸ್ಪರ್ಶನ ಸಲ್ಲಾಪಗಳಿಂದ ಧನ್ಯನಾದೆನು. ನಿನ್ನ ಬ್ರಹ್ಮಜ್ಞಾನವನ್ನು ಕಂಡು ಮೆಚ್ಚಿದೆನು. ನಿನ್ನ ಕೀರ್ತಿಯನ್ನು ಸ್ವರ್ಗಸುಂದರಿಯರು ಗಾನಮಾಡಲಿ' ನಿನ್ನ ಪುಣ್ಯಚರಿತ್ರವನ್ನು ಭೂಲೋಕದ ಜನರು ಕೇಳಿ ಭಾಗವತರಾಗಲಿ ಎಂದು ಪ್ರಶಂಸಿಸಿ ಬ್ರಹ್ಮಲೋಕವನ್ನು ಸೇರಲು ಹೋದನು.

ಒಂದು ವರ್ಷದವರೆಗೂ ತಿರುಗಿ ಬರದ ಮುನಿರಾಜನನ್ನು ಕಾದು ರಾಜನು ಜಲದಿಂದ ಮಾತ್ರ ಜೀವಿಸುವನು. ಆ ಋಷಿಯನ್ನು ಪೂಜಿಸಿ ಅಂಬರೀಷನು, ತನ್ನಲ್ಲಿದ್ದು, ಋಷಿಯ ಸಂಕಟ ನಿವಾರಣೆಯನ್ನು ಮಾಡಿದುದು ಶ್ರೀಹರಿಯೇ ಎಂದು ತಿಳಿದು ನಿಗರ್ವಿಯಾಗಿದ್ದನು. ಇಂತು ಭಕ್ತ್ಯಾದಿಗುಣಸಂಪನ್ನನಾದ ಅಂಬರೀಷನು ಸರ್ವಕಾಲದಲ್ಲಿ ಮಾಡಿದ ಸರ್ವಕರ್ಮಫಲವನ್ನು ಹರಿಗರ್ಪಿಸಿ, ಬ್ರಹ್ಮರುದ್ರಾದಿ ದೇವತೆಗಳ ದಯೆಯನ್ನು ಪಡೆದು, ಆ ಕಾಲದ ಭಕ್ತರಲ್ಲಿ (ಭಲೋಕದಲ್ಲಿ) ತನಗೆ ಸಮಾನರಿಲ್ಲವೆಂಬ ಖ್ಯಾತಿಯಿಂದ ಪ್ರಕಾಶಿಸಿದನು. ಮುಂದೆ ಸಮಗುಣರಾದ ನಿಜಪುತ್ರರಿಗೆ ರಾಜ್ಯವನ್ನರ್ಪಿಸಿ, ವನವನ್ನು ಪ್ರವೇಶಿಸಿದನು. ಶ್ರೀವಾಸುದೇವನನ್ನು ಚಿಂತಿಸಿ ಮುಕ್ತನಾದನು.

ಅಂಬರೀಷ ಪುಣ್ಯಚರಿತೆಯನ್ನು ನಿನಗೆ ಪೇಳಿದೆನು. ರಾಜನ್! ಇದನ್ನು ಪೇಳಿದವನು ಮತ್ತು ಕೇಳಿದವನು ಭಗವದ್ಭಕ್ತನಾಗುವನು.

## ೬. ಮಾಂಧಾತೃ ಚರಿತೆ – ಸೌಭರಿಕಥಾ – ಹರಿಶ್ಚಂದ್ರ ಚರಿತೆ

ಶ್ರೀಶುಕನು ಹೇಳಿದನು –

ಅಂಬರೀಷನಿಗೆ ವಿರೂಪ, ಕೇತುಮಾನ್, ಶಂಭು ಎಂಬ ಮೂವರು ಸುತರು. ವಿರೂಪನ ಮಗನಾದ ಪೃಷದಶ್ವನಿಗೆ ರಥೀತರನು ಮಗನು. ಅವನಿಗೆ ಮಕ್ಕಳಾಗಲಿಲ್ಲ. ಆಂಗೀರಸ ವರದಾನದಿಂದ ಜನಿಸಿದ ರಾಥೀತರರು ವಿಪ್ರಕರ್ಮನಿರತರಾದರು.

ಮನುರಾಜನು ಸೀತಾಗ ಹುಟ್ಟಿದವನು ಇಕ್ಷ್ವಾಕುವೆಂದು ಪ್ರಸಿದ್ಧನಾದನು. ಅವನಿಗೆ ವಿಕುಕ್ಷಿ, ನಿಮಿ, ದಂಡಕರೇ ಮೊದಲಾದ ನೂರು ಜನ ಮಕ್ಕಳಾದರು. ಅವರಲ್ಲಿ 25 ರಾಜಸುತರು ಆರ್ಯಾವರ್ತದ ಪೂರ್ವದಲ್ಲಿಯು, 25 ರಾಜಸುತರು ಪಶ್ಚಿಮದಲ್ಲಿಯು, ಮಧ್ಯದಲ್ಲಿ ಮೂರು ರಾಜರು, ಇತರ ಭಾಗಗಳಲ್ಲಿ 37 ರಾಜಕುಮಾರರು ಪಾಲಕರಾದರು.

ಒಂದು ದಿನ ಅಷ್ಟಕಾಶ್ರಾದ್ಧವನ್ನು ಮಾಡುತ್ತಿದ್ದ ಇಕ್ಷ್ವಾಕು 'ಒಳ್ಳೆಯ ಮಾಂಸವನ್ನು ತೆಗೆದುಕೊಂಡು ಬೇಗನೆ ಬಾ' ಎಂದು ವಿಕುಕ್ಷಿಗೆ ಆಜ್ಞಾಪಿಸಿದನು. ವಿಕುಕ್ಷಿಯು ವನಕ್ಕೆ ಪೋಗಿ ಮೇಧ್ಯಪಶುಗಳನ್ನು ಸಂಹರಿಸಿ, ತೆಗೆದುಕೊಂಡು ಬರುತ್ತಿದ್ದನು. ಹಾದಿಯಲ್ಲಿ ಹಸಿವೆಯನ್ನು ತಡೆಯಲಾರದೆ ವಿವೇಕರಹಿತನಾಗಿ ಕೈಯಲ್ಲಿ ಹಿಡಿದಿದ್ದ ಮೊಲದ ಮಾಂಸದಲ್ಲಿ ಸ್ವಲ್ಪವನ್ನು ತಿಂದು ಮಿಕ್ಕಿದ್ದುದನ್ನು ತಂದೆಗೆ ತಂದುಕೊಟ್ಟನು. ಅವನು ಶ್ರಾದ್ಧದಲ್ಲಿ ನಿಮಂತ್ರಿತನಾದ ಗುರುವಿಗೆ ಅದನ್ನು ಬಡಿಸಲು ಪ್ರೋಕ್ಷಣ ಸಮಯದಲ್ಲಿ ಮಾಂಸವು ಕರ್ಮಾಯೋಗ್ಯವೆಂದು ತಿಳಿದು ಗುರುವು ಪೇಳಿದನು. ಇಕ್ಷ್ವಾಕು ಕುಪಿತನಾಗಿ ಮಗನನ್ನು ದೇಶದಿಂದ ಹೊರಹಾಕಿದನು. ವಿಕುಕ್ಷಿಯು ಜಾಪಕನೆಂಬ ವಿಪ್ರನಿಂದ ತತ್ತ್ವವಿಚಾರವನ್ನು ಮಾಡಿ ಮುಕ್ತನಾದನು.

ಆ ವಿಕ್ಷುವಿಗೆ ಶಶಾದನೆಂದು ಹೆಸರು ಬಂದಿತು. ಅವನ ಮಗನು ಪುರಂಜಯನು. ಪುರಂಜಯನನ್ನು ಅವನ ಕರ್ಮಗಳಿಂದ ಕಕುತ್ಸನೆಂದೂ ಇಂದ್ರವಾಹನೆಂದೂ ಕರೆಯುವರು.

ಕೃತಯುಗಾಂತ್ಯದಲ್ಲಿ ದೇವದಾನವ ಸಮರವಾಗಿ, ದೈತ್ಯರಿಗೆ ದೇವತೆಗಳು ಸೋತರು. ಅವರು ಪುರಂಜಯನ ಸಹಾಯವನ್ನು ಬೇಡಿದರು. ಶ್ರೀಹರಿಯ ವಚನದಂತೆ ಇಂದ್ರನು ದೊಡ್ಡ ಎತ್ತಾಗಿ ಪುರಂಜಯನಿಗೆ ವಾಹನನಾದನು. ಆ ಎತ್ತಿನ ಡುಬ್ಬದ ಮೇಲೆ ಕೂತು ಶ್ರೀವಿಷ್ಣು ತೇಜೋಪಬೃಂಹಿತನಾದ ಇಂದ್ರವಾಹನು ಪಶ್ಚಿಮದಿಶೆಯಲ್ಲಿದ್ದ ದೈತ್ಯಪುರವನ್ನು ಮುತ್ತಿದನು. ಆ ಕಕುತ್ಸನ ಪ್ರಳಯಾಗ್ನಿ ಭಯಂಕರ ಬಾಣಗಳಿಗೆ ತುತ್ತಾಗಿ ದೈತ್ಯರು ಯಮರಾಜನ ಪುರವನ್ನೈದಿದರು. ಕೆಲವರು ದೈತ್ಯರು ಮನೆಗಳನ್ನೂ ಬಿಟ್ಟು ಓಡಿಹೋದರು. ಇಂತು ದೈತ್ಯದಾನವರನ್ನು ಗೆದ್ದು, ಇಂದ್ರನಿಗೆ ರಾಜ್ಯೈಶ್ವರ್ಯಗಳನ್ನರ್ಪಿಸಿ, ಪುರಂಜಯನು ಕಕುತ್ಸನೆಂದು ಹೆಸರಾದನು.

ಪುರಂಜಯನ ಕುಲದಲ್ಲಿ ಕ್ರಮವಾಗಿ ಅಮೇನಸ, ವಿಶ್ವಗಂಧಿ, ಚಂದ್ರ, ಯುವನಾಶ್ವ, ಶಾವಸ್ತಿ ಎಂಬುವರು ಜನಿಸಿದರು. ಶಾವಸ್ತಿಯು ಶಾವಸ್ತಿ ಎಂಬ ನಗರವನ್ನು ನಿರ್ಮಿಸಿದನು. ಅವನ ಮಗನು ಬೃಹದಶ್ವನು. ಬೃಹದಶ್ವಪುತ್ರನಾದ ಕುವಲಯಾಶ್ವನು ಶ್ರೀಹರಿಪ್ರೀತಿಯನ್ನು ಸಾಧಿಸಲು ತನ್ನ ಇಪ್ಪತ್ತೊಂದು ಸಾವಿರ ತನಯರಿಂದ ಕೂಡಿ ಧುಂಧುನಾಮಕ ದೈತ್ಯನನ್ನೆದುರಿಸಿದನು. ಧುಂಧುವಿನ ಮುಖಾಗ್ನಿಯಿಂದ ತನಯರೆಲ್ಲರು ಸುಟ್ಟು ಬೂದಿಯಾದರು. ಅವರಲ್ಲಿ ಉಳಿದ ದೃಢಾಶ್ವ, ಕಪಿಲಾಶ್ವ, ಭದ್ರಾಶ್ವರೆಂಬವರಿಂದ ಕೂಡಿ ಕುವಲಯಾಶ್ವನು ಧುಂಧುವಿನನ್ನು ಕೊಂದು ಧುಂಧುಮಾರನೆಂದು ಪ್ರಸಿದ್ಧನಾದನು.

ಆ ಮೂವರಲ್ಲಿ ದೃಢಾಶ್ವನ ವಂಶದಲ್ಲಿ ಕ್ರಮವಾಗಿ ಹರ್ಯಶ್ವ, ನಿಕುಂಭ, ಬರ್ಹಣಾಶ್ವ, ಕೃಶಾಶ್ವ, ಸೈನಿಜತ್, ಯುವನಾಶ್ವರೆಂಬುವರಾದರು. ಯುವನಾಶ್ವನಿಗೆ ನೂರು ಪತ್ನಿಯರಿದ್ದೂ ಸಂತಾನವಿರಲಿಲ್ಲ. ಅವನು ನಿರ್ವಿಣ್ಣನಾಗಿ ವನವನ್ನು ಸೇರಿದನು. ಋಷಿಗಳ ಕೃಪೆಯಿಂದ ಇಂದ್ರದೇವತಾಕವಾದ ಯಾಗವನ್ನು ಅವನಿಂದ ಮಾಡಿಸಿದರು. ಒಂದು ದಿನ ರಾತ್ರಿ ಬಹಳ ನೀರಡಿಸಿ, ರಾಜನು ಯಜ್ಞಶಾಲೆಯನ್ನು ಹೊಕ್ಕು ಅಲ್ಲಿ ಪುತ್ರಾರ್ಥವಾಗಿ ಅಭಿಮಂತ್ರಿಸಿಟ್ಟ ಜಲವನ್ನು ಕುಡಿದನು. ಬೆಳಗಾಗಲು ನಡೆದ ವಿಪರೀತವನ್ನರಿತು, ವಿಪ್ರರು ಪುಂಸವನ ಜಲವು

ರಾಜನಿಂದ ಪೀತವಾಯಿತಿನ್ನೇನುಗತಿ? ಅದೃಷ್ಟ ನಿಯಾಮಕನಾದ ಶ್ರೀಹರೇ! ನೀನೇ ಸಂರಕ್ಷಿಸು' ಎಂದು ಪ್ರಾರ್ಥಿಸಿದರು. ನವಮಾಸವಗಲು ರಾಜನ ದಕ್ಷಿಣ ಕುಕ್ಷಿಯನ್ನು ಸೀಳಿಕೊಂಡು ಗಂಡು ಮಗುವು ಹುಟ್ಟಿತು. 'ಯಾರು ಈ ಕುಮಾರನಿಗೆ ಮೊಲೆಯುಣಿಸುವರು? ಕುಮಾರನು ಅಳುತ್ತಿರುವ ನಲ್ಲ' ಎಂದು ಚಿಂತಿಸುವ ಜನರ ಚಿಂತೆಯನ್ನು ಕಳೆದು, ಇಂದ್ರನು ತನ್ನ ತರ್ಜನಿ ಯನ್ನುಣಿಸಿ ಸಲಹಿದನು. ಮಾಂಧಾತ(ನನ್ನ ತರ್ಜನಿಯ ಅಮೃತವನ್ನು ಉಣ್ಣು!)ನೆಂದು ಹೆಸರಾದ ಮಗನಿಗೆ ರಾಜ್ಯವನ್ನೊಪ್ಪಿಸಿ, ವಿಪ್ರದೇವಪ್ರಸಾದದಿಂದ ಸಾಯದೆ ಉಳಿದ ಯುವನಾಶ್ವನು ವನವನ್ನೇ ಸೇರಿ ತಪವನ್ನು ಮಾಡಿ ಮುಕ್ತನಾದನು.

ರಾವಣಾದಿ ದಸ್ಯುಪ್ರಾಯರಾಜರು ಕೂಡ ಹೆದರಿ ಓಡುತ್ತಿದ್ದ ಕಾರಣದಿಂದ, ತ್ರಸದ್ದಸ್ಯು ವೆಂದು ಖ್ಯಾತನಾದ ಮಾಂಧಾತನು ಚಕ್ರವರ್ತಿ ಎನಿಸಿ, ಶ್ರೀಹರಿಯ ವಿಶೇಷಾನು ಗ್ರಹಪಾತ್ರನಾಗಿ, ಸಪ್ತದ್ವೀಪಗಳನ್ನಾಳಿದನು. ಬ್ರಹ್ಮಜ್ಞಾನಿ ಋತ್ವಿಜರಿಗೆ ಭೂರಿದಕ್ಷಿಣೆಗಳನ್ನಿತ್ತು ಅನೇಕ ಯಜ್ಞ ಗಳನ್ನು ಮಾಡಿ ಶ್ರೀಹರಿಗರ್ಪಿಸಿದನು. ದ್ರವ್ಯ, ಮಂತ್ರ, ವಿಧಿ, ದೇಶ, ಕಾಲಗಳವನಿಂದ ಪವಿತ್ರ ವಾಗುವುವೆಂದರಿತು, ಯಜಮಾನ, ಋತ್ವಿಕರಲ್ಲಿ ಅವನಿರುವನೆಂದು ನಿರಹಂಕಾರಿಯಾಗಿ, ಯಜ್ಞೇಶನನ್ನು ಪೂಜಿಸಿದನು.

ಸೂರ್ಯಕಾಂತಿ ಹಾಗೂ ಚಂದ್ರಕಿರಣಗಳು ವ್ಯಾಪಿಸಿದ ದೇಶವೆಲ್ಲವೂ ಮಾಂಧಾಂತನ ರಾಜ್ಯವಾಗಿತ್ತು. ಶಶಬಿಂದುವಿನ ಮಗಳಾದ ಬಿಂದುಮತಿಯನ್ನು ಮದುವೆಯಾಗಿ ಮಾಂಧಾತನು, ಪುರುಕುತ್ಸ, ಅಂಬರೀಶ, ಮುಚುಕುಂದರೆಂಬ ಮೂವರು ಪುತ್ರರನ್ನು ಪಡೆದನು. ಅವರ ತಂಗಿ ಯರು ಐವತ್ತು ಜನ. ಅವರು ಸೌಭರಿ ಋಷಿಯನ್ನು ವರಿಸಿದರು.

ಒಂದು ದಿನ ಯಮುನಾತೀರದಲ್ಲಿ ಕೂತಿದ್ದ ಸೌಭರಿಯು ಮಿಥುನೀಭಾವದಿಂದ ಸುಖ ಪಡುವ ಮೀನರಾಜನನ್ನು ನೋಡಿ, ತಾನೂ ಪತ್ನೀಸುಖವನ್ನು ಕೋರಿ, ಮಾಂಧಾತನನ್ನು ಸೇರಿ, ಒಬ್ಬ ಮಗಳನ್ನು ಕೊಡೆಂದು ಯಾಚಿಸಿದನು. ರಾಜನು 'ಬ್ರಾಹ್ಮಣ! ಅವಳಾಗಿ ವರಿಸಿದ ಕನ್ಯೆ ಯನ್ನು ತೆಗೆದುಕೊಂಡು ಹೋಗು' ಎಂದನು. 'ಅಹೋ! ನಾನು ಜರಠನಾಗಿರುವೆನು. ಸ್ತ್ರೀಯರಿಗೆ ಸಮ್ಮತನಲ್ಲ, ಮೈ ಮುದುಡಿದೆ. ತಲೆ ಅಲ್ಲಾಡುತ್ತಿದೆ ಎಂದು ಇಲ್ಲವೆನ್ನಲಾರದೆ 'ವರಿಸಿದ ಕನ್ಯೆಯನ್ನು ಸ್ವೀಕರಿಸು ಎಂದಿರುವನು. ಸುರಸುಂದರಿಯರು ಕೂಡ ಮೋಹಪಡುವಂತಹ ರೂಪದಿಂದ ಇವರೆಲ್ಲರ ಕೈಪಿಡಿಯುವೆನು' ಎಂದು ನಿಶ್ಚಯಿಸಿ ಸೌಭರಿಯು ನವಮನ್ಮಥ ರೂಪನಾಗಿ ಕನ್ಯಾಂತಃಪುರವನ್ನು, ತನ್ನ ನೋಡಿದ ಕನ್ಯೆಯರ ಹೃದಯವನ್ನೂ ಪ್ರವೇಶಿಸಿದನು. 'ಆ ವರನು ನನಗೆ ಅನುರೂಪನು – ನಿನಗಲ್ಲ' ಎಂದು ಕಾದಾಡುವ ಕನ್ಯೆಯರನ್ನು ಸೌಭರಿಯು ವರಿಸಿ, ಎಲ್ಲರನ್ನೂ ಮದುವೆಯಾದನು.

ಅತ್ಯಂತ ಕಾಂತಿಶೋಭಿತನಾಗಿ ದಿವ್ಯಭವನಗಳಲ್ಲಿ ಪ್ರಸೂನಸುಗಂಧವನಗಳಲ್ಲಿ ಸುಂದರ ಕಂದರಗಳಲ್ಲಿ ಐವತ್ತು ಪತ್ನಿಯರಿಂದ ಕೂಡಿ ವಿಹರಿಸಿದನು. ಬೆಲೆ ಇಲ್ಲದ ರತ್ನಾಭರಣಗಳು ವಸ್ತ್ರಮೌಲ್ಯಗಳು ಹಂಸತೂಲಿಕಾ ತಲ್ಪಗಳು ಸಮೃದ್ಧವಾಗಿರಲು ಸ್ನಾನ ಅನುಲೇಪನ ಭೋಜನ ಮುಖ ಸುಖಸಾಗರದಲ್ಲಿ ರಮಣೀಸಹಿತನಾಗಿ ಕ್ರೀಡಿಸಿ ಸೌಭರಿಯು ಪ್ರಾರಬ್ಧಪುಣ್ಯವನ್ನು ಶ್ರೀಹರಿಯ ಅನುಗ್ರಹದಿಂದ ಉಪಮರ್ದಿಸಿ ಕಳೆದುಕೊಂಡನು. ಅವನ ಗೃಹಸ್ಥ ವೈಭವವನ್ನು ನೋಡಿ, ಮಾವನಾದ ಮಾಂಧತೃಚಕ್ರವರ್ತಿಯು ತನ್ನ ಐಶ್ವರ್ಯವು ಅಲ್ಪವೆಂದು ತಿಳಿದು ಆಶ್ಚರ್ಯಚಕಿತನಾದನು.

ವಿಷಯಭೋಗವನ್ನು ಬೇಕಾದಂತೆ ಅನುಭವಿಸಿ ಸೌಭರಿಯು, ಉರಿಯುವ ಅಗ್ನಿಯನ್ನು ತುಪ್ಪದ ಬಿಂದುಗಳಿಂದ ಆರಿಸಲಾಗದೆಂದರಿತು, ವಿರಕ್ತನಾದನು. ಒಂದು ದಿನ ಸೌಭರಿಯು ತಾನು ಮಾಡಿದ ಅವಿವೇಕವನ್ನು ನೆನೆದು ಇಂದು ಚಿಂತಿಸಿದನು–

ಆಹಾ! ಎಂತಹ ಅವಿವೇಕಿಯಾದೆ! ವ್ರತನಿಷ್ಠನಾಗಿ ತಪವನ್ನು ಮಾಡುವ ನಾನು ಮೀನಸಂದರ್ಶನದಿಂದ ಮನವು ಕೆಟ್ಟು ಚಿರಕಾಲ ತಪೋಧನವನ್ನು ಕಳೆದುಕೊಂಡು ಹಾಳಾದೆ! ಮೋಕ್ಷವನ್ನು ಬೇಡುವ ನರನು ಮಿಥುನಸಂಗವನ್ನು ಸರ್ವಥಾ ಬಿಡಬೇಕು. ಇಂದ್ರಿಯಗಳನ್ನು ನಿಗ್ರಹಿಸಬೇಕು. ನಾನು ಬ್ರಹ್ಮಚಾರ್ಯನೆನಿಸಿದೆ. ಏಕಾಕಿಯಾಗಿ ವಸಿಸಿದೆ. ಇಂದ್ರಿಯಗಳಿಗೆ ದಾಸನಾಗದೆ ಚಿತ್ತವನ್ನು ಅನಂತ ಚರಣಾರವಿಂದದಲ್ಲಿ ನಿಲ್ಲಿಸುವುದು ನನ್ನ ಕರ್ತವ್ಯವಾಗಿದೆ. ಒಂದು ವೇಳೆ ಸಂಗವನ್ನು ಮಾಡಬೇಕಾದರೆ ನಿರ್ಮತ್ಸರರಾದ ಸಜ್ಜನರಲ್ಲಿ ಮಾಡಿ ಇತರ ಸಂಗವನ್ನು ಬಿಟ್ಟುಬಿಡುವೆನು. ಇದ್ದದು ನಾನೊಬ್ಬನು; ಮೀನಸಂಗದಿಂದ ಬಂದುದು ಐವರು ಪತ್ನೀಸಮೂಹ. ಆಮೇಲೆ ಜನಿಸಿದುದು ಐದು ಸಾವಿರ ಪುತ್ರೀಪುತ್ರಸಂಘ. ಕನ್ಯೆಯರು ವರರು, ಪುತ್ರರಿಗೆ ವಧುಗಳು, ಅವರ ಇಹಪರಸುಖ ಸಾಧನಗಳು–ಎಂದು ಹುಡುಕುತ್ತಾ, ವಿಷಯಸುಖ ಲೋಲುಪನಾಗಿ ಮನೋರಥಗಳನ್ನು ಮಾಡಿದೆ. ಇನ್ನು ಸಾಕು– ಎಂದು ಚಿಂತಿಸಿ ಸೌಭರಿಯು ಸರ್ವಸ್ವವನ್ನೂ ತ್ಯಜಿಸಿ. ಅವನ ವನವನ್ನು ಸೇರಿದನು. ಪತಿವ್ರತೆಯರಾದ ಅವನ ನಿಯತಪತ್ನಿಯರೂ ಅವನನ್ನು ಹಿಂಬಾಲಿಸಿದರು. ಸೌಭರಿಯು ಶರೀರವನ್ನು ಶೋಷಿಸಿ, ತೀಕ್ಷ್ಣತಪವನ್ನು ಮಾಡಿದನು. ಒಂದು ದಿನ ಅಗ್ನ್ಯಾದಿ ದೇವತೆಗಳಲ್ಲಿ ಲಯಚಿಂತನವನ್ನು ಮಾಡಿ ಆ ಮಹರ್ಷಿಯು ಶರೀರವನ್ನು ಯೋಗಾಗ್ನಿಯಲ್ಲಿ ತ್ಯಜಿಸಿ, ಸಾಯುಜ್ಯವನ್ನು ಪೊಂದಿದನು. ಅದನ್ನು ನೋಡಿ, ಸೌಭರಿಯ ಪ್ರಭಾವವನ್ನರಿತ ಪತ್ನಿಯರು ಅಗ್ನಿಯನ್ನು ಅನುಸರಿಸಿ ಆರುವ ಜ್ವಾಲೆಗಳಂತೆ ಸಹಗಮನವನ್ನು ಮಾಡಿ, ಪತಿಲೋಕವನ್ನು ಸೇರಿದರು.

ಸೌಭರಿಯ ಮಗನಾದ ಅಂಬರೀಷನು ಮಾತಾಮಹನಾದ ಮಾಂಧಾತನಿಗೆ ದತ್ತುಪುತ್ರನೆನಿಸಿದನು. ಅವನಿಗೆ ಯುವನಾಶ್ವನು ಮಗನಾದನು. ಅವನ ಮಗನು ಹಾರೀತನು.

ಇಕ್ಷ್ವಾಕುಪುತ್ರನಾದ ಪುರುಕುತ್ಸನು ನಾಗರಿಂದ ಕೊಡಲ್ಪಟ್ಟ ಸರ್ಪದಾದೇವಿಯನ್ನು ಮದುವೆಯಾಗಿ ಅವಳಿಂದ ಕೂಡಿ ರಸಾತಲವನ್ನು ಸೇರಿದನು. ಅಲ್ಲಿ ವಧ್ಯಶ್ವರೆಂಬುವ ಗಂಧರ್ವರನ್ನು ಸಂಹರಿಸಿ, ಸರ್ವಲೋಕಕ್ಷೇಮವನ್ನು ಸಂಪಾದಿಸಿದನು. ವಿಷ್ಣುಶಕ್ತಿಯಿಂದ ಸರ್ವಕ್ಷೇಮವನ್ನು ತಂದ ಕಥೆಯನ್ನು ಸ್ಮರಿಸುವ ಜನರಿಗೆ ಸರ್ಪಭಯವಿಲ್ಲವೆಂದು ನಾಗರು ವರವನ್ನು ಕೊಟ್ಟರು. ಪುರುಕುತ್ಸನ ಮಗನು ತ್ರಸದ್ದಸ್ಯುವು. ಅವನ ಮಗನೇ ಅನರಣ್ಯನು, ಅನರಣ್ಯನಿಗೆ ಹರ್ಯಶ್ವನು, ಅವನಿಗೆ ಅರುಣನು, ಅವನಿಗೆ ತ್ರಿಬಂಧುರನು, ಅವನಿಗೆ ಸತ್ಯವ್ರತನು ಜನಿಸಿದರು. ಅವನನ್ನೇ 'ತ್ರಿಶಂಕು'ವೆಂಬುವರು. ಗುರುಶಾಪದಿಂದ ಚಾಂಡಾಲನಾದ ಸತ್ಯವ್ರತನು ವಿಶ್ವಾಮಿತ್ರನ ತಪೋಬಲದಿಂದ ಸ್ವರ್ಗವನ್ನು ಸಶರೀರನಾಗಿ ಸೇರಿದನು. ದೇವತೆ ಗಳದನ್ನು ಸಹಿಸದೆ ಅವನನ್ನು ಕೆಳಗೆ ನೂಕಿಸಿದನು. ವಿಶ್ವಾಮಿತ್ರನ ತಪೋಬಲದಿಂದ ಮಧ್ಯದಲ್ಲಿ ತಲೆಕೆಳಗಾಗಿ ನಿಂತು ತ್ರಿಶಂಕುವು ಕಾಣಿಸುತ್ತಿರುವನು. ಅವನ ಮಗನು ಹರಿಶ್ಚಂದ್ರನು. ಅವನ ಸತ್ಯಪರೀಕ್ಷೆಗೆಂದು ವಿಶ್ವಾಮಿತ್ರವಸಿಷ್ಠರು ಬಹುಕಾಲ ಕಾದಾಡಿದರಲ್ಲವೇ? ಅವನಿಗೆ ಮಕ್ಕಳಿರ ಲಿಲ್ಲ. ನಾರದರ ಮಾತಿನಂತೆ ವರುಣನಿಗೆ ಬೇಡಿಕೊಂಡನು. ಪ್ರಭೋ! ನನಗೆ ವೀರನಾದ ಮಗನನ್ನು ಕೊಡು. ಅವನನ್ನೇ ಪಶುವನ್ನಾಗಿಸಿ, ವರುಣ ಯಜ್ಞವನ್ನು ಮಾಡುವೆನು' ಎಂದ ಹರಿಶ್ಚಂದ್ರನಿಗೆ ವರುಣ

ಪ್ರಸಾದದಿಂದ ರೋಹಿತನೆಂಬ ಮಗನಾದನು. ವರುಣನು ತತ್‌ಕ್ಷಣವೇ ಬಂದ 'ಮಗನಾದನಲ್ಲ, ಕೊಡು ಬಲಿಯನ್ನು' ಎಂದನು. 'ದಶಾಹಗಳು ದಾಟಲಿ, ಆಗ ಪಶು ಶುದ್ಧವಾಗುವುದು' ಎಂದು ಹರಿಶ್ಚಂದ್ರನು ಪ್ರೇಮಬದ್ಧನಾಗಿ ವರುಣಯಜ್ಞವನ್ನು ಮುಂದೆ ದೂಡಿದನು. ಹತ್ತು ದಿನವಾಯಿತು. ವರುಣನು ಬಂದು ಬಲಿಯನ್ನು ಬೇಡಲು, ರಾಜನು-'ಪಶುವಿಗೆ ಹಲ್ಲುಗಳು ಹುಟ್ಟಲಿ' ಎಂದನು. ರೋಹಿತನಿಗೆ ಹಲ್ಲುಗಳು ಹುಟ್ಟಿದವು. ಆಗ ಬಂದ ವರುಣನಿಗೆ, 'ಇವು ನಿಜವಾದ ದಂತಗಳಲ್ಲ– ನಿಜದಂತಗಳು ಬರಲಿ' ಎಂದನು. ಕಾಲಕ್ರಮದಿಂದ ನಿಜವಾದ ಹಲ್ಲುಗಳು ಬಂದವು. ಆಗ ರಾಜನು 'ವರುಣದೇವಾ! ಕ್ಷತ್ರಿಯ ಪಶುವಿದು. ಶಸ್ತ್ರಾಸ್ತ್ರ ಪ್ರವೀಣನಾಗಲಿ. ಆಗ ನಿನಗೆ ಬಲಿಯಾಗಿ ಕೊಡಲು ಯೋಗ್ಯವೆನಿಸುವನು' ಎಂದನು. ಹೀಗೆ ಪುತ್ರಪ್ರೀತಿಯಿಂದ ವಂಚಿಸುವ ರಾಜನನ್ನು ನೋಡಿ, ವರುಣನು ಅವನಿಗೆ ಮಹೋದರ ರೋಗ ಬರುವಂತೆ ಶಾಪವನ್ನಿತ್ತು ಹೊರಟುಹೋದನು. ಇದನ್ನರಿತು ತನ್ನನ್ನು ಬಲಿಕೊಡುವನೆಂದು ಹೆದರಿ, ರೋಹಿತನು ಊರನ್ನು ಬಿಟ್ಟು ಓಡಿಹೋದನು. ಕೆಲಕಾಲವಾಗಲು ತಂದೆಯ ಮಹೋದರವು ಉಲ್ಬಣಿಸಿತು. ತಂದೆಯ ಕಷ್ಟವನ್ನು ನೀಗಲು ಪ್ರಾಣವನ್ನಾದರೂ ಲಕ್ಷಿಸದೆ, ರೋಹಿತನು ಹಿಂದಿರುಗಿ ಬರುತ್ತಿದ್ದನು. ಆಗ ಇಂದ್ರನು ವೃದ್ಧವಿಪ್ರರೂಪದಿಂದ ಬಂದು 'ರೋಹಿತ! ಸುಮ್ಮನೆ ಕೂತವನ ಭಾಗ್ಯವು ಕೂತುಬಿಡುವುದು. ಪ್ರಯತ್ನಿಸಿ, ಸಂಚರಿಸುವವನ ಭಾಗ್ಯವು ಸಂಚರಿಸುತ್ತಾ ಬಂದು ಅವನನ್ನು ಕೂಡುವುದು. ಛಾಯೆಯಂತೆ ನಿದ್ರಿಸುವವನ ಭಾಗ್ಯವು ಪತಿತವಾಗುವುದು. ಊರಲ್ಲಿರಬೇಡ– ನಿನಗೆ ಮರಣಭಯವು ಊರಲ್ಲಿದೆ. ಹೋಗು ಪುಣ್ಯ ತೀರ್ಥಕ್ಷೇತ್ರಗಳಲ್ಲಿ ಸಂಚರಿಸು. ಮಹಾಪುಣ್ಯಶಾಲಿಯಾಗುವೆ' ಎಂದು ಉಪದೇಶಿಸಿದನು. ಇಂತು ಪ್ರತಿವರ್ಷವು, ಹರಿಶ್ಚಂದ್ರನಲ್ಲಿದ್ದ ಅಸೂಯೆಯಿಂದ, ಇಂದ್ರನು ರೋಹಿತನನ್ನು ನಿಷೇಧಿಸುತ್ತಿರಲು, ಆರು ವರ್ಷಗಳು ಕಳೆದವು. ಕೊನೆಗೆ ರೋಹಿತನು ತಂದೆ ವ್ಯಸನವನ್ನು ನಿವಾರಿಸಲು ನಿಶ್ಚಯಿಸಿ, ಅಜೀಗರ್ತನೆಂಬ ಋಷಿಗೆ ನೂರು ಆಕಳುಗಳನ್ನು ಕೊಟ್ಟು, ಅವನ ಮಧ್ಯಮ ಸುತನಾದ ಶುನಶ್ಶೇಪನನ್ನು ಕೊಂಡು ಕರೆತಂದು ತಂದೆಗೊಪ್ಪಿಸಿದನು. ಆಗ ಪುರುಷ ಮೇಧವನ್ನು ಮಾಡಿ ಹರಿಶ್ಚಂದ್ರನು ವರುಣನನ್ನು ಪೂಜಿಸಿದನು. ಶುನಶ್ಶೇಪನು ವಿಶ್ವಾಮಿತ್ರನ ಕೃಪೆಯಿಂದ ಕಲಿವ ವರುಣಮಂತ್ರವನ್ನು ಜಪಿಸಿ ವರುಣಾನುಗ್ರಹದಿಂದ ಸಾಯದೆ ಉಳಿದನು. ವರುಣನು ಮಂತ್ರ ಜಪದಿಂದಲೇ ಪ್ರೀತನಾಗಿ, ಹರಿಶ್ಚಂದ್ರನ ರೋಗ ನಿವಾರಣೆಯನ್ನು ಮಾಡಿದನು. ಆ ಯಜ್ಞದಲ್ಲಿ ವಿಶ್ವಾಮಿತ್ರನು ಹೋತೃವಾಗಿಯು ಜಮದಗ್ನಿಯು ಅಧ್ವರ್ಯುವಾಗಿಯು, ವಸಿಷ್ಠನು ಬ್ರಹ್ಮನಾಗಿಯು, ಆಯಾಸ್ಯನು ಸಾಮಗನಾಗಿಯು ನಿಂತು ಪೂರ್ಣಾಹುತಿಯನ್ನು ನೀಡಿದರು. ಇಂದ್ರನು ಪ್ರೀತನಾಗಿ ಹರಿಶ್ಚಂದ್ರನಿಗೆ ಬಂಗಾರದ ರಥವನ್ನು ಕೊಟ್ಟನು.

ಶುನಶ್ಶೇಪನ ಮಹಿಮೆಯನ್ನು ಮುಂದೆ ಹೇಳುವೆನು. ಹರಿಶ್ಚಂದ್ರನು ಅಂದಿನಿಂದ ಸತ್ಯವಚನ ಪಾರೀಣನೆನಿಸಿ ವಿಶ್ವಾಮಿತ್ರ– ವಸಿಷ್ಠ ಕಲಹದ ನೆವದಿಂದ ಪ್ರಸಿದ್ಧನಾದನು. ಸತ್ಯಪರೀಕ್ಷೆಯಲ್ಲಿ ಪಾರಾದ ಹರಿಶ್ಚಂದ್ರನಿಗೆ ಪ್ರಸನ್ನನಾಗಿ ವಿಶ್ವಾಮಿತ್ರನು ಬ್ರಹ್ಮವಿದ್ಯೆಯನ್ನು ಕೊಟ್ಟನು.

ಅನ್ನಮಯಜಡಮನವು – ಪೃಥಿವೀ – ಜಲ – ಅಗ್ನಿ – ವಾಯು – ಆಕಾಶ – ಅಹಂತತ್ವಬುದ್ಧಿ– ಮಹತ್ತತ್ವ – ಎಂಬೀ ಕ್ರಮದಿಂದ ಲಯಚಿಂತನವನ್ನು ಮಾಡಿ ಹರಿಶ್ಚಂದ್ರನು ಪ್ರಾಕೃತದೇಹ ರಹಿತನಾಗಿ ಸ್ವರೂಪ ಸುಖವನ್ನು ಪೊಂದುವ ಮೋಕ್ಷಪದವಿಯನ್ನೈದಿದನು.

## ೮. ಸಗರ - ಭಗೀರಥ - ಸೌದಾಸ - ಖಟ್ವಾಂಗ - ಶ್ರೀರಾಮರ ಚರಿತೆಗಳು

ಶ್ರೀಶುಕನು ಹೇಳಿದನು–

ರೋಹಿತಪುತ್ರನಾದ ಹರಿತನ ಮಗನು ಚಂಪನು. ಅವನು ಚಂಪಾಪುರಿಯನ್ನು ನಿರ್ಮಿಸಿದನು. ಚಂಪನ ಮಗನು ಸುದೇವನು. ಅವನಿಗೆ ವಿಜಯ, ವಿಜಯನಿಗೆ ಭೇರುಕ, ಅವನಿಗೆ ವೃಕ, ವೃಕನಿಗೆ ಬಾಹುಕನು ಪುತ್ರರಾದರು. ಬಾಹುಕನು ಶತ್ರುಗಳಿಗೆ ಸೋತು ವನವನ್ನು ಸೇರಿದನು. ಅವನು ಅಲ್ಲೇ ಮೃತನಾಗಲು ಅವನ ಹಿರಿಯ ಹೆಂಡತಿಯು ಸಹಗಮನಕ್ಕೆ ಸಿದ್ಧಳಾದಳು. ಆಗ ಔರ್ವನೆಂಬ ಋಷಿವರನು, ಅವಳು ಗರ್ಭವತಿ ಎಂದು ತಿಳಿಸಿ ನಿವಾರಿಸಿದನು. ಇದನ್ನರಿತು ಅಸೂಯೆಯಿಂದ ಅವಳ ಸವತಿಯರು ವಿಷವನ್ನರೆದು ಹಾಲಿನಲ್ಲಿಟ್ಟು, ಅವಳಿಗೆ ಕುಡಿಸಿದರು. ಆ ವಿಷದಿಂದ ಕೂಡಿ ಸಾಯದೆ ಕುಮಾರನು ಜನಿಸಿ ಸಗರನೆನಿಸಿದನು. ಅವನು ಚಕ್ರವರ್ತಿಯಾದನು. ಅವನ ಮಕ್ಕಳಿಂದ ವರ್ಧಿತವಾಗಿ ಸಮುದ್ರವು ಸಾಗರವೆನಿಸಿತು. ತಂದೆಗೆ ಶತ್ರುಗಳಾದ ತಾಲಜಂಘ, ಯವನ, ಶಕ ಹೈಹಯ, ಬರ್ಬರವನ್ನು ಗೆದ್ದು ಸಗರನು ಗುರುವಾಕ್ಯದಿಂದ ಕೊಲ್ಲದೆ ವಿಕೃತವೇಷರನ್ನು ಮಾಡಿ ಕಳಿಸಿದನು. ಪೂರ್ಣಮುಂಡಿತರು, ಅರ್ಧಮುಂಡಿತರು, ಶ್ಮಶ್ರುಕೂರ್ಚಧರರು, ಬಿರುಗೂದಲಿನವರು ಆಗಿ ಪುರುಷರು ಶಿಕ್ಷಿತರಾದರು. ಕುಬುಸವಿಲ್ಲದ ಸೀರೆಯನ್ನು ಸೆರಗಿಲ್ಲದ ವಸ್ತ್ರವನ್ನು ಉಟ್ಟು ಸ್ತ್ರೀಯರು ವಿಕೃತವೇಷಿಗಳಾದರು.

ಸರ್ವವೇದದೇವತಾಪ್ರಭುವಾದ ನಾರಾಯಣನ ಪ್ರೀತಿಗಾಗಿ, ಔರ್ವನು ಹೋತೃವಾಗಿರಲು, ಸಗರನು ಅನೇಕ ಅಶ್ವಮೇಧಗಳನ್ನು ಮಾಡಿದನು. ಅವನ ಯಜ್ಞಾಶ್ವವನ್ನು ಇಂದ್ರನು ಅಪಹರಿಸಲು, ಸುಮತಿ ಎಂಬ ಪತ್ನಿಯಲ್ಲಿ ಪುಟ್ಟಿದ ಅರವತ್ತು ಸಾವಿರ ಸಗರ ಪುತ್ರರು ಕುದುರೆಯನ್ನು ಹುಡುಕಲು ಹೋದರು. ಈಶಾನ್ಯದಿಶೆಯಲ್ಲಿ ಕಪಿಲಾಶ್ರಮದಲ್ಲಿದ್ದ ಕುದುರೆಯನ್ನು ಕಂಡು, ಆ ದುರ್ಮದರು ಕಪಿಲನೇ ಕಳ್ಳನೆಂದುಕೊಂಡು, ಆಯುಧಗಳನ್ನು ಹಿಡಿದು, ಮೇಲೇರಿ ಹೋದರು. ತತ್‌ಕ್ಷಣವೇ ಅವರ ಶರೀರಾಗ್ನಿಯೇ ಉರಿದೆದ್ದು, ಮಹದತಿ ಕ್ರಮದ್ರೋಹದಿಂದ, ಅವರೆಲ್ಲರೂ ಸುಟ್ಟು ಬೂದಿಯಾದರು.

ಕೆಲವರು ಮೂಢರು ಕಪಿಲನ ಕೋಪವಹ್ನಿಗೆ ಅವರು ಆಹುತಿಯಾದರೆಂಬುವರು; ಅದು ಸರಿಯಲ್ಲ. ಶುದ್ಧಜ್ಞಾನಾನಂದಮೂರ್ತಿಯಾದ ಶ್ರೀಹರಿಯ ಮನಃಪದ್ಮದಲ್ಲಿ ತಮೋಮಯವಾದ ಕ್ರೋಧವು ಕಾಲಿಡಲು ಸಮರ್ಥವಾಗುವುದೇ? ಆಕಾಶಕ್ಕೆ ಭೂಮಿ ಧೂಳಿಯ ಲೇಪವುಂಟೇ? ದುಸ್ತರ ಸಂಸಾರತಮೋನಿವಾರಕವೂ, ಮೋಕ್ಷಫಲಕವೂ ಆದ ಸಾಂಖ್ಯತತ್ತ್ವವನ್ನು ನಿರೂಪಿಸಿ ಭವತಾರಕನೆನಿಸಿದ ಶ್ರೀಕಪಿಲನಿಗೆ ರೋಷವೆಲ್ಲಿಯದು?

ಸಗರನಿಗೆ ಕೇಶಿನಿ ಎಂಬ ದ್ವಿತೀಯಪತ್ನಿಯಲ್ಲಿ ಅಸಮಂಜಸನೆಂಬ ಮಗನಿದ್ದನು. ಅವನು ಅಸಮಂಜಸ ವ್ಯಾಪಾರವನ್ನು ಮಾಡುತ್ತ ಸಾರ್ಥಕನಾಮಧೇಯನಾಗಿದ್ದನು. ಹಿಂದೆ ಯೋಗ ಭ್ರಷ್ಟನಾಗಿ ಸಾಧನಜೀವಿಯಾದ ಅಸಮಂಜಸನು ಜನಸಂಗಭೀತನಾಗಿ ಬೇಕೆಂದೇ ಗರ್ಹಿತವಾದ ಕೆಲವನ್ನಾಚರಿಸುತ್ತಿದ್ದನು. ಸರಯೂ ತೀರದಲ್ಲಿ ಆಡುತ್ತಾ ಬಾಲಕರನ್ನು ನದಿಯಲ್ಲಿ ಮುಳುಗಿಸಿ ಬಿಡುತ್ತಿದ್ದನು. ಇಂತಹ ದುಷ್ಟನೆಂದು ತಂದೆಯು ಅವನನ್ನು ಪರಿತ್ಯಜಿಸಿದನು. ಆಗ ಆ ಮಹಾಯೋಗಿಯು ಎಲ್ಲ ಬಾಲಕರನ್ನೂ ನದಿಯಿಂದ ಕರೆದು, ಹೊರತಂದು, ಅವರವರ ಪಿತೃ ಮಾತೃಜನರಿಗೆ ಒಪ್ಪಿಸಿ, ತಾನು ವನಪ್ರವೇಶವನ್ನು ಮಾಡಿದನು. ಈ ಆಶ್ಚರ್ಯವನ್ನು

ಕಂಡು ಅಯೋಧ್ಯಾವಾಸಿಗಳು ಬೆರಗಾಗಿ ಅನ್ಯಾಯವಾಗಿ ರಾಜಕುಮಾರನನ್ನು ನಿಂದಿಸಿದೆವೆಂದು ಚಿಂತಿಸಿ ದರು. ರಾಜನೂ ಪಶ್ಚಾತ್ತಾಪಪಟ್ಟನು.

ಅಸಮಂಜಸ ಪುತ್ರನಾದ ಅಂಶುಮಂತನು ಕುದುರೆಯನ್ನು ಹುಡುಕುತ್ತಾ ಕಪಿಲಾಶ್ರಮವನ್ನು ಸೇರಿ ಪಿತೃವ್ಯಭಸ್ಮರಾಶಿಗಳನ್ನು, ಕುದುರೆಯನ್ನು, ಆಸೀನನಾದ ಮುನಿವರನನ್ನು ಕಂಡನು. ಶ್ರದ್ಧೆಯಿಂದ ನಮಸ್ಕರಿಸಿ, ಕೈಜೋಡಿಸಿ ನಿಂತು, ಇಂತು ಸ್ತುತಿಸಿದನು. ಇಂದ್ರಿಯಾತೀತನಾದ ಕಪಿಲನಲ್ಲಿ ಅವನ ಸ್ತುತಿಯು ವಿದ್ಯಮಾನಾನಂತ ಗುಣೈಕದೇಶವನ್ನು ಪೇಳಿದರೂ ಸಾರ್ಥಕ ವೆನಿಸಿತು.

ಸಾಕ್ಷಾಚ್ಚತುರ್ಮುಖನು ಕೂಡ ಏಕಾಗ್ರಚಿತ್ತದಿಂದ ನಿನ್ನನ್ನು ಧ್ಯಾನಿಸಿ ಪೂರ್ಣವಾಗಿ ಕಾಣ ಲಾರದೆ ಇರುವನು. ಇನ್ನು ಅವನ ಮನಃಶರೀರಗಳಿಂದ ಪುಟ್ಟಿದ ರುದ್ರೇಂದ್ರಾದಿ ದೇವತೆಗಳೆಂತು ತಿಳಿಯುವರು? ತ್ರಿಗುಣದಿಂದ ರಚಿತವಾದ ದೇಹವನ್ನು ಪೊಕ್ಕ ತ್ರಿವಿದ ಜೀವರು ನಿನ್ನ ಅಧೀನರಾಗಿರುವರು. ರಾಜಸರು ಸ್ವರ್ಗಾದಿ ವಿಷಯಗಳನ್ನೇ ಬಯಸುವರು; ಮೋಕ್ಷವನ್ನಲ್ಲ. ತಾಮಸರು ಬಂಧಕ ಶಕ್ತಿಯಿಂದ ಬದ್ಧರಾಗಿ ಅನ್ಯಥಾಜ್ಞಾನಿಗಳಾಗಿ ಹೃದಯದಲ್ಲೇ ಇರುವ ನಿನ್ನನ್ನು ತಿಳಿಯದೆ ಕೆಡುವರು. ಸಾತ್ವಿಕರೇ ನಿನ್ನ ಜ್ಞಾನವನ್ನು ಪೊಂದಿ ಸ್ವರೂಪಸುಖವನ್ನನುಭವಿಸಿ ಮುಕ್ತರೆನಿಸುವರು. ನೀನು ಜ್ಞಾನಾನಂದಮಯನು. ನಿನಗೆ ಸ್ವಗತಭೇದವಿಲ್ಲ. ನಿನ್ನನ್ನು ಭಾವಿಸಿ ಭಜಿಸುವ ಸನಕಾದಿ ಯೋಗಿಗಳಿಗೂ ಅಜ್ಞಾನದ ಸೋಂಕಿಲ್ಲ. ಇಂತಹ ನಿನ್ನ ಮಹಾಮಹಿಮೆ ಯನ್ನು ನನ್ನಂತಹ ಮೂಢನನ್ನು ತಿಳಿಯಲಾಗುವುದೇ? ತ್ರಿಗುಣವ್ಯಾಪಾರಾತೀತನಾಗಿ, ತತ್ಕೃತ ಲಿಂಗಶರೀರಾದಿ ಬಂಧನವಿಲ್ಲದೆ, ಜೀವಜಡಭಿನ್ನನಾಗಿರುವ ಪುರಾಣಪುರುಷೋತ್ತಮನಾದ ಕಪಿಲನಿಗೆ ನಮಸ್ಕಾರವು. ಜ್ಞಾನೋಪದೇಶವನ್ನು ಮಾಡಲು ಅವತರಿಸಿರುವ ದಯಾಸಮುದ್ರನಿಗೆ ನಮಸ್ಕಾರವು. ನಿನ್ನ ಇಚ್ಛೆಯಿಂದ ನಿರ್ಮಿತವಾದ ಪ್ರಪಂಚದಲ್ಲಿ, ನಶ್ವರವಾದ ಗೃಹಾರಾಮ ದಾರಾಪುತ್ರ ಧನಾದಿಗಳನ್ನು ಶಾಶ್ವತವೆಂದು ತಿಳಿದು, ಮಾನವರು ಕಾಮಲೋಭಗಳ ಬಲೆಗೆ ಸಿಕ್ಕು ಮೋಹದಿಂದ ಕಂಗೆಟ್ಟು ರೋಷ ಮದ ಮತ್ಸರಗಳೆಂಬ ಸುಳಿಯಲ್ಲಿ ಸಿಕ್ಕು ಕಷ್ಟಪಡುತ್ತಿರು ವರು. ಶ್ರೀಶಾ! ಇಂದು ನಿನ್ನ ಪುಣ್ಯದರ್ಶನದಿಂದ ಕಾಮಕರ್ಮದಿಂದ ಬೆಳೆದು ನಿಂದ ಅವಿದ್ಯಾ ವೃಕ್ಷನು ನಿರ್ಮೂಲವಾಯಿತು. ಮೋಹಪಾಶವು ನಿನ್ನ ಕೃಪೆಯಿಂದ ಕಡಿಯಿತು.

ಎಂದು ಸ್ತುತಿಸಿದ ಭಕ್ತನಿಗೆ ಕಪಿಲಭಗವಂತನಿಂತೆಂದನು–

'ವತ್ಸ! ಈ ಕುದುರೆಯು ನಿಮ್ಮ ಪಿತಾಮಹನ ಯಜ್ಞಪಶುವು; ಇದನ್ನು ತಕ್ಕೊಂಡು ಹೋಗು. ಇವರು ನಿನ್ನ ಪಿತೃವ್ಯರು, ಸುಟ್ಟು ಬೂದಿಯಾಗಿರುವರು. ಇವರು ಪಾಪಮುಕ್ತರಾಗಬೇಕಾದರೆ ಗಂಗಾಜಲವನ್ನಿವರ ಚಿತೆಯಮೇಲೆ ಹರಿಸು, ಇನ್ನೊಂದು ಉಪಾಯವಿಲ್ಲ' ವೆಂದ ಭಗವಂತನಿಗೆ ವಂದಿಸಿ, ಕುದುರೆಯನ್ನು ತಂದು, ತಾತನಿಗೊಪ್ಪಿಸಿದರು. ಸಗರನು ತನ್ನ ಯಜ್ಞವನ್ನು ಮುಗಿಸಿ, ಅಂಶುಮಂತನಿಗೆ ರಾಜ್ಯವನ್ನರ್ಪಿಸಿ, ವನವನ್ನು ಸೇರಿದನು. ಔರ್ವಮುನಿಯು ಹೇಳಿದಂತೆ ತಪವನ್ನು ಮಾಡಿ ಮುಕ್ತನಾದನು.

ಅಂಶುವಂತನು ಗಂಗೆಯನ್ನು ತರಬೇಕೆಂದು ಬಹುಕಾಲ ತಪವನ್ನು ಮಾಡಿದನು; ತರಲಾರದೆ ಕೊನೆಗೆ ಮೃತನಾದನು. ಅವನ ಮಗನಾದ ದಿಲೀಪನು ಗಂಗಾನದಿಯನ್ನು ತರಲಾರದೆ ಕಾಲವಶ ನಾದನು. ಅವನ ಪುತ್ರನಾದ ಭಗೀರಥನು ಬಹುಕಾಲ ತೀವ್ರತಪವನ್ನು ಮಾಡಲು, ಗಂಗಾ

ದೇವಿಯು ಪ್ರಸನ್ನಳಾಗಿ ವರವನ್ನು ಕೊಡಲು ಬಂದಳು. ಭಗೀರಥನು ತನ್ನ ಮನೋರಥವನ್ನು ತಿಳಿಸಿದನು. ಆಗ ಲೋಕಪಾವನಿಯು ಇಂತೆಂದಳು–

ರಾಜನ್! ಸ್ವರ್ಗದಿಂದಿಳಿಯುವ ನನ್ನ ಮಹಾವೇಗವನ್ನು ಯಾರು ತಡೆದು ಹಿಡಿಯುವರು? ಇಲ್ಲದಿದ್ದರೆ ಭೂತಲವನ್ನು ಭೇದಿಸಿ ರಸಾತಲವನ್ನು ಸೇರುವೆನು. ಆಗ ಒಂದು ಬಿಂದುವಾದರೂ ಗಂಗಾಜಲ ನಿನಗೆ ಸಿಗಲಾರದು, ತಿಳಿ! ನರರು ಬಂದು, ನನ್ನಲ್ಲಿ ಮಿಂದು, ಪಾಪಗಳನ್ನೊಪ್ಪಿಸಿ, ತಾವು ನಿಷ್ಕಲ್ಮಷರಾಗಿ ಹೋಗುವರು. ಆ ಕ್ರೂರ ಪಾಪವನ್ನು ನಾನು ಎಂತು ಕಳೆಯಲಿ'- ಎಂದು ಕೇಳಿದಳು.

ಆಗ ರಾಜನು 'ಅಂಬ ! ಪೂರ್ಣಭಕ್ತರು, ಸ್ವರ್ಗಾದಿ ವಿಷಯ ವಿಮುಖರು, ಶಮದಮಾದಿ ಗುಣಸಂಪನ್ನರು, ಲೋಕಪಾವನರು ಆದ ಸುಜನರು, ತಮ್ಮ ಅಂಗಸಂಗದಿಂದ ಹೃದಯದಲ್ಲಿಟ್ಟ ಹರಿಯ ಧ್ಯಾನದಿಂದ, ನಿನ್ನಲ್ಲಿ ಪಾಪಿಗಳು ಬಿಟ್ಟ ಪಾಪರಾಶಿಯನ್ನು ತೊಳೆಯುವರು. ಗಂಗೇ! ನಿನ್ನ ನಾಮವೇ ಸರ್ವ ಪಾಪಹರಣಶೀಲವಮ್ಮಾ! ಇನ್ನು ನಿನ್ನ ವೇಗವನ್ನು ಸಕಲಜೀವ ಮನೋ ನಿಯಾಮಕನಾದ ಮಹಾದೇವನು ತಡೆದು, ವಿಷ್ಣುಪದಿಯಾದ ನಿನ್ನನ್ನು ಶಿರಸಾ ಧರಿಸುವನು. ಈ ವಿಶ್ವವೆಲ್ಲ ಆ ಮಹಾದೇವನಲ್ಲಿ ಕಂಥೆಯಲ್ಲಿ ನಿಂತ ದಾರದಂತೆ ಆಧಾರಮಾಡಿ ಇಂತಿದೆ. ಚಿಂತೆ ಬೇಡ' ಎಂದು ಸಮಾಧಾನಪಡಿಸಿ, ಆ ಮಹಾರಾಜನು ತಪವನ್ನು ಮಾಡಿ, ಅಶುತೋಷ ವನ್ನು ಸಂತೋಷಪಡಿಸಿದನು.

ಸರ್ವಲೋಕದ ಹಿತವನ್ನೆಣಿಸಿ, ಶಿವನು ಅವಹಿತನಾಗಿ ಹರಿಪಾದೋದಕವೆಂದು ಗಂಗೆಯನ್ನು ಜಟಾಜಾಲದಲ್ಲಿ ಧರಿಸಿದನು. ಭುವನಪಾವನಿಯಾದ ಆ ಭಾಗೀರಥಿಯು, ರಥದಿಂದ ಮುಂದೆ ಹೋಗುವ ಭಗೀರಥನನ್ನನುಸರಿಸಿ ಹರಿದಳು. ತಾನು ಹರಿದ ದೇಶಗಳನ್ನು ಪಾವನಗೊಳಿಸುತ್ತಾ, ಸಗರ ಸುತರ ಭಸ್ಮವನ್ನು ಕೊಚ್ಚಿಕೊಂಡು ಹೋದಳು. ಆ ಜಲಸ್ಪರ್ಶ ಮಾತ್ರದಿಂದ ಬ್ರಹ್ಮ ಪಾಪಹತರಾಗಿದ್ದೂ, ಸಗರಾತ್ಮಜರು, ಪಾಪಮುಕ್ತರಾಗಿ, ಸ್ವರ್ಗವನ್ನು ಸೇರಿದರು.

ಭಸ್ಮೀಭೂತ ಭೌತಿಕ ಶರೀರದ ಗಂಗಾಸಂಗದಿಂದ ಆ ಸಗರಸುತರು ಸ್ವರ್ಗವನ್ನು ಪೊಂದಿದ ರೆಂದಮೇಲೆ, ಶ್ರದ್ಧೆಯಿಂದ ಬಂದು, ದೃಢವ್ರತರಾಗಿ ಮಿಂದು, ಮಂದಾಕಿನಿಯನ್ನು ಪೂಜಿಸಿದ ಮಾನವೋತ್ತಮರು ಮುಕ್ತರಾಗುವರೆಂದು ಹೇಳಬೇಕೇ? ರಾಜನ್! ದೇವ ನದಿಯ ವಿಷಯದಲ್ಲಿ ನೀನು ಆಶ್ಚರ್ಯಪಡಬೇಡ. ಸಂಸಾರತರುಕುಠಾರನಾದ ವೈಕುಂಠನಾಥನ ಚರಣಾರವಿಂದ ಸಂಭೂತಳಾದ ಗಂಗಾದೇವಿಯು, ತನ್ನ ಜನಕನ ಚರಣದಿ ಮನವಿಟ್ಟು, ಪಾಪಗಳನ್ನು ಬಿಟ್ಟು, ದುಸ್ತ್ಯಜವಾದ ದೇಹಾಭಿಮಾನವನ್ನು ದೂರೀಕರಿಸಿ ಸಾಯುಜ್ಯಾದಿ ಮೋಕ್ಷವನ್ನು, ಪೊಂದಲರ್ಹ ರಾದ ಸುಜನರಿಗೆ ತನ್ನ ತೀರದಲ್ಲಿ ಜ್ಞಾನಿಜನಸಂಗವನ್ನಿತ್ತು ಉದ್ಧರಿಸುವುದೇನಾಶ್ಚರ್ಯವು?

ಭಗೀರಥನಿಗೆ ಶ್ರುತನು, ಅವನಿಗೆ ನಾಭನು, ಅವನಿಗೆ ಸಿಂಧುದ್ವೀಪನು, ಅವನಿಗೆ ಅಯುತಾ ಯುವು, ಅವನಿಗೆ ಋತುಪರ್ಣನು ಜನಿಸಿದನು. ಋತುಪರ್ಣನು ತನ್ನ ಅಕ್ಷಹೃದಯವಿದ್ಯೆಯನ್ನು ನಲರಾಜನಿಗಿತ್ತು, ಅವನಿಂದ ಅಶ್ವಹೃದಯ ವಿದ್ಯೆಯನ್ನು ಪಡೆದು ನಲಸಖನೆನಿಸಿದನು. ಋತುಪರ್ಣನ ವಂಶದಿ ಕ್ರಮವಾಗಿ, ಸರ್ವಕಾಮ, ಸುದಾಸರು ಪುಟ್ಟಿದರು. ಸೌದಾಸನು ಮದಯಂತೀ ಪತಿಯು, ಅವನನ್ನೇ ಮಿತ್ರಸಹ ಕಲ್ಮಷಪಾದನೆಂಬುವರು.

ಒಂದು ದಿನ ಸೌದಾಸನು ಬೇಟೆಯಾಡಲು ಹೋದಾಗ ಅರಣ್ಯದಲ್ಲಿ ಒಬ್ಬ ರಾಕ್ಷಸನನ್ನು ಕೊಂದನು. ಅವನ ತಮ್ಮನು ರಾಜನಲ್ಲಿ ಕುಪಿತನಾಗಿ ಸೇಡಿನಿಂದ ರಾಜಮಂದಿರವನ್ನು ಸೇರಿ

ಪಾಚಕನಾಗಿದ್ದನು. ಒಂದುದಿನ ವಸಿಷ್ಠನು ಭೋಜನ ನಿಮಂತ್ರಿತನಾಗಿ ಬಂದಿರಲು, ನರಮಾಂಸ ವನ್ನು ಬೇಕೆಂದೇ ಬಡಿಸಿದನು. ಪರಿಪೇಚನವನ್ನು ಮಾಡುತ್ತಾ, ನರಾಮಿಷವನ್ನು ಕಂಡು ಕುಪಿತನಾಗಿ ಗುರುವು 'ನೀನು ರಾಕ್ಷಸನಾಗೆಂದು' ರಾಜನಿಗೆ ಶಾಪವಿತ್ತನು. ವಿಚಾರಿಸಲು ಸೂದಾಕಾರನಾದ ರಾಕ್ಷಸನ ಅಪರಾಧವೆಂದು ತಿಳಿದು ವಸಿಷ್ಠನು 'ಹನ್ನೆರಡು ವರ್ಷ ರಾಕ್ಷಸನಾಗಿ ಆಮೇಲೆ ಮತ್ತೆ ರಾಜನಾಗಿ ಬಾ' ಎಂದು ವಿಶಾಪವನ್ನಿತ್ತನು. ನಿಷ್ಕಾರಣವಾದ ಗುರುಕೋಪದಿಂದ ತಾನು ಕುಪಿತನಾಗಿ ಸುದಾಸಪುತ್ರನು, ಕೈಲಿ ನೀರನ್ನು ಪಿಡಿದು ಮಂತ್ರಿಸಿ, ಶಾಪವನ್ನು ಕೊಡುತ್ತಿರಲು, ವಾರಿಸಿ, ಮದಯಂತೀ ದೇವಿ ಶಾಂತಪಡಿಸಿದಳು. ಆಗ ಸೌದಾಸನು ಮಂತ್ರಿತ ಜಲವು ಕ್ರೂರವಾಗಿರುವುದನ್ನು ಕಂಡು, ಸರ್ವತ್ರ ವಸಿಸಿರುವ ಜೀವರಾಶಿಯು ಇದರಿಂದ ನಾಶವಾಗಬಾರದೆಂದು, ಅದನ್ನು ತನ್ನ ಪಾದಗಳ ಮೇಲೆ ಹಾಕಿದನು. ತತ್‌ಕ್ಷಣವೇ ಅವನ ಪಾದಗಳು ಕಾಡು ಉದ್ದಿನಕಾಳಂತೆ ಕಪ್ಪಾದವು. ರಾಜನು ಅದರಿಂದ ಕಲ್ಮಾಷಪಾದನೆನಿಸಿದನು.

ಶಾಪಾನುಸಾರವಾಗಿ ಸೌದಾಸನು ರಾಕ್ಷಸನಾಗಿ ವನದಲ್ಲಿ ತಿರುಗುತ್ತಿದ್ದನು. ಒಂದು ದಿನ ವನದಲ್ಲಿ ಕ್ರೀಡಾರತನಾದ ಮುನಿದಂಪತಿಗಳನ್ನು ನೋಡಿ ಹಸಿವೆಯಿಂದ ಮತಿಗೆಟ್ಟು ಆ ಬ್ರಾಹ್ಮಣನನ್ನು ಹಿಡಿದು ತಿನ್ನಲು ಹೋದನು. ಆಗ ದೀನಳಾಗಿ ವಿಪ್ರಪತ್ನಿಯು ರಾಜ ನಿಗಿಂತೆಂದಳು – 'ನೀನು ರಾಕ್ಷಸನಲ್ಲ, ಇಕ್ಷ್ವಾಕುವಂಶ ಸಂಭವನು, ಮದಯಂತೀ ಪತಿಯಾದ ನಿನಗಿದು ಸಲ್ಲದು. ನಾನು ಅಪತ್ಯಕಾಮಳಾಗಿರುವೆನು. ನನ್ನ ಪತಿಯೂ ಅನುರಕ್ತನಾಗಿರುವನು. ಬ್ರಾಹ್ಮಣ ಹತ್ಯೆ ಸೌದಾಸನಾದವನಿಗೆ ಯೋಗ್ಯವಲ್ಲ. ಮನುಜಶರೀರವು ಸಕಲಪುರುಷಾರ್ಥ ಸಾಧನವೆನಿಸಿದೆ. ವೀರ! ಇವನನ್ನು ಕೊಂದರೆ ನನ್ನ ಸರ್ವನಾಶವಾಗುವುದು. ಬೇಡ! ಇವನು ಬ್ರಾಹ್ಮಣನಷ್ಟೇ ಅಲ್ಲ. ತಪಃಶೀಲಗುಣವಂತನಾದ ವಿದ್ವಾಂಸನೂ ಆಗಿರುವನು. ಸರ್ವಭೂತ ಗಳಲ್ಲಿದ್ದು ಅವರವರ ಸುಗುಣಾದಿಗಳಿಗೆ ಕಾರಣನಾದ ನಾರಾಯಣನ ಭಕ್ತನು, ವೇದಪಾರಂಗ ತನು ಆದ ಬ್ರಹ್ಮರ್ಷಿವರನನ್ನು ಮಗನು ತಂದೆಯನ್ನಂತೆ, ರಾಜರ್ಷಿಯಾದ ನೀನು ಕೊಲ್ಲುವುದು ನ್ಯಾಯವಲ್ಲ. ವೃಷಕಾಂಕ್ಷಿಣಿಯಾದ ಗೋವನ್ನು ಸಂಹರಿಸುವರುಂಟೇ! ಗಂಡನಿಲ್ಲದೆ ಒಂದು ಕ್ಷಣವಾದರೂ ಜೀವಿಸಲಾರದ ನನ್ನನ್ನು ಮೊದಲು ತಿಂದುಬಿಡು!'

ಎಂದು ದೀನಳಾಗಿ ಪತಿಭಿಕ್ಷೆಯನ್ನು ಬೇಡುವ ಬ್ರಾಹ್ಮಣಿಯು ರೋದನವನ್ನು ಲೆಕ್ಕಿಸದೆ ಸೌದಾಸನು ಶಾಪಮೋಹಿತನಾಗಿ ಪಶುವನ್ನು ಹುಲಿಯಂತೆ ಆ ದ್ವಿಜವನ್ನು ಕತ್ತುಮುರಿದು ಕೊಂದು ತಿಂದನು. ಅದನ್ನು ನೋಡಿ ಶೋಕ ರೋಷಗಳಿಂದ ತಳಮಳಿಸಿ, ತಡೆಯಲಾರದೆ, 'ಕಾರ್ಮಾತಳಾದ ನನ್ನ ಪತಿಯನ್ನು ಕೊಂದೆ; ನೀನು ಸತಿಯ ಸಂಗಮೋತ್ತರಕ್ಷಣದಲ್ಲಿಯೇ ಮೃತನಾಗು' ಎಂದು ಶಾಪವನ್ನಿತ್ತು ಆ ಪತಿವ್ರತೆಯು ಪತಿಯ ಅಸ್ಥಿಗಳನ್ನು ಚಿತೆಯಲ್ಲಿಟ್ಟು ತಾನೂ ಅಗ್ನಿಪ್ರವೇಶಮಾಡಿ, ಪತಿಲೋಕವನ್ನೈದಿದಳು.

ಹನ್ನೆರಡು ವರ್ಷಗಳು ಕಳೆಯಲು ಸೌದಾಸನು ಶಾಪಮುಕ್ತನಾದನು. ರಾಕ್ಷಸಭಾವವು ದೂರವಾಯಿತು. ರಾಜನು ಮನೆಗೆ ಬಂದು ಮದಯಂತಿಯನ್ನು ಸೇರಲು ಹವಣಿಸಲು ಆಕೆ ತನ್ನ ಪಾತಿವ್ರತ್ಯದ ಪ್ರಭಾವದಿಂದ ಬ್ರಾಹ್ಮಣೀಶಪವನ್ನರಿತು, ನಿವಾರಿಸಿ ಪತಿಯನ್ನು ರಕ್ಷಿಸಿದಳು. ಆಮೇಲೆ ಶಾಪವನ್ನನುಸರಿಸಿ, ಮೈಥುನದೂರನಾದ ರಾಜನು ಸಂತಾನವಿಲ್ಲದೆ ತಪಿಸಿದನು. ಆಗ ವಸಿಷ್ಠನ ವರದಿಂದ ಮದಯಂತಿ ಗರ್ಭವನ್ನು ಧರಿಸಿದಳು. ಏಳು ವರ್ಷಗಳ ಕಾಲ ಕಳೆದರೂ ಪ್ರಸವವಾಗದಿರಲು ಮದಯಂತಿಯು ಬೇಸತ್ತು, ಕಲ್ಲಿನಿಂದ ಹೊಟ್ಟೆಯನ್ನು ಕುಟ್ಟಿ

ಕೊಂಡಳು. ಆಗ ಜನಿಸಿದವನೇ ಅಶ್ಮಕನೆಂದು ಹೆಸರಾದನು. ಅವನ ಮಗನು ಮೂಲಕನು. ಪರಶುರಾಮಕುಠಾರಧಾರೆಗೆ ಬಲಿಯಾಗದಂತೆ ಸ್ತ್ರೀಯರು ಇವನನ್ನು ತಮ್ಮ ಮಧ್ಯದಲ್ಲಿಟ್ಟು ಸಂರಕ್ಷಿಸಿದನು. ಆದ್ದರಿಂದ ಇವನಿಗೆ ನಾರೀಕವಚವೆಂದು ಹೆಸರೂ ಬಂತು. ಇವನು ಮುಂದೆ ಭಾರ್ಗವನಿಂದ ನಷ್ಟಪ್ರಾಯವಾದ ಕ್ಷತ್ರಿಯ ಕುಲಕ್ಕೆ ಮೂಲಾಂಕುರನೆನಿಸಿ ಸಾರ್ಥಕ ನಾಮಧೇಯ ನಾದನು.

ಮೂಲಕನಿಗೆ ದಶರಥನು, ಅವನಿಗೆ ಐಲಬಿಲನು, ಅವನಿಗೆ ವಿಶ್ವಸಹನು, ಅವನಿಗೆ ಖಟ್ವಾಂಗಚಕ್ರವರ್ತಿಯು ಜನಿಸಿದರು. ದೇವತೆಗಳಿಗಾಗಿ ಹೋರಾಡಿ ದುರ್ಜಯದೈತ್ಯರನ್ನು ಸಂಹರಿಸಿ, ಖಟ್ವಾಂಗನು ವೀರನೆನಿಸಿದನು. ಮತ್ತೂ ಮರಣಕಾಲವನ್ನರಿತು ಸರ್ವವನ್ನು ತ್ಯಜಿಸಿ, ಶ್ರೀಹರಿಯನ್ನು ಭಜಿಸಿ ಮುಕ್ತಿಯನ್ನು ಪೊಂದಿದನು.

ಖಟ್ವಾಂಗನು ದೇವತಾನುಗ್ರಹದಿಂದ ತನಗೆ ಒಂದೇ ಮಹೂರ್ತದ ಆಯುಶ್ಶೇಷವಿರುವು ದೆಂತರಿತು ಚಿಂತಿಸಿದನು–

ಬ್ರಾಹ್ಮಣರಕಿಂತಲೂ ನನಗೆ ಪ್ರಾಣಗಳು ಹೆಚ್ಚಲ್ಲ. ಕುಲದೈವವಾದ ಶ್ರೀಹರಿಯಗಿಂತಲೂ ದಾರಾಸುತರು ಪ್ರೀತಿಪಾತ್ರರಲ್ಲ; ಸಂಪತ್ತು ರಾಜ್ಯಕೋಶಗಳು ಹೆಚ್ಚಲ್ಲ. ಬಾಲ್ಯದಿಂದಲೂ ಅಧರ್ಮದಲ್ಲಿ ಮನಮಾಡಿಲ್ಲ. ಉತ್ತಮಶ್ಲೋಕನಕಿಂತಲೂ ಅಪ್ರತಿಹುತ ಸರ್ವೋತ್ತಮ ವಸ್ತುವನ್ನು ಕಂಡಿಲ್ಲ. ದೇವತೆಗಳು ಪ್ರೀತರಾಗಿ ಬೇಕಾದ್ದನ್ನು ಬೇಡೆಂದರೂ ಸರ್ವಸ್ವಾಮಿಯು ಚರಣಾರಾಧನೆಯನ್ನಲ್ಲದೆ ಮತ್ತೇನನ್ನೂ ಬೇಡಲಿಷ್ಟಪಡದಿರುವೆನು. ಕರ್ಮದಿಂದ ಮೋಕ್ಷವು ಸಂಪಾದನೀಯವಲ್ಲ, ಜ್ಞಾನದಿಂದಲೇ – ಎಂದರಿತು, ದೇವತೆಗಳು ಇಂದ್ರಿಯಮನೋಬುದ್ಧಿ ಗಳನ್ನು ಶ್ರೀಹರಿಯಲ್ಲಿಟ್ಟು ಶಶ್ವತ್ಪ್ರಿಯನಾದ ನಾರಾಯಣನನ್ನು ಉಪಾಸಿಸಿದರೂ ಅವನ ಗುಣಾ ನಂತ್ಯವನ್ನು ಕಂಡು ಮುಗ್ಧರಾಗಿರುವರೆಂದಮೇಲೆ ನಮ್ಮಂತಹವರ ಸಾಡೇನು? ವಿಷಯಸುಖಗಳು ಹರೀಚ್ಛೆಯಿಂದಲೇ ಬರುವುವು. ಆದರೂ ಅವು ನಶ್ವರಗಳು, ಹೇಯಗಳು ಎಂದು ಮನಗಂಡು, ವಿಷಯಗಳಲ್ಲಿಂದ ಮನವನ್ನು ಸೆಳೆದು, ಭಕ್ತಿಯಿಂದ ಭುವನಭರ್ತನಾದ ಶ್ರೀಹರಿಗೆ ಶರಣಾಗತ ನಾಗಿರುವೆನು.

ಎಂದು ನಿಶ್ಚಯಿಸಿ, ಮುಕುಂದ ಪಾದಾರವಿಂದವನ್ನು ಚಿಂತಿಸಿ, ಖಟ್ವಾಂಗನು ಖಗೇಂದ್ರ ಧ್ವಜನ ಪಾದಮೂಲವನ್ನು ಪೊಂದಿದನು. ಬ್ರಹ್ಮನೆಂದು ವೇದಾಂತಿಗಳು, ಅತಿ ಸೂಕ್ಷ್ಮನೆಂದು ಯೋಗಿಗಳು, ಶೂನ್ಯವೆಂದು ಅವಿವೇಕಿಗಳು, ಭಗವಾನ್ ವಾಸುದೇವನೆಂದು ಪಾಂಚರಾತ್ರಿಕರು, ತೋಚಿದಂತೆ ಹೇಳುತ್ತಿರುವ ಸರ್ವೋತ್ತಮನನ್ನು ಯಥಾರ್ಥವಾಗಿ ಭಜಿಸಿ, ಖಟ್ವಾಂಗನು ಮುಕ್ತನಾದನು.

ಖಟ್ವಾಂಗನಿಗೆ ದೀರ್ಘಬಾಹು, ಅವನಿಗೆ ರಘುವು, ಅವನಿಗೆ ಅಜ, ಅಜನಿಗೆ ದಶರಥನು ಜನಿಸಿದರು. ಆ ದಶರಥನಿಗೆ ವೇದಾಮುಖ್ಯಾರ್ಥನಾದ ಶ್ರೀಹರಿಯು ರಾಮನೆಂಬ ಸುತನಾಗಿ ಜನಿಸಿದನು. ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳಿಂದ ಲಕ್ಷ್ಮಣ, ಭರತ, ಶತೃಘ್ನರಲ್ಲಿ ಆವೇಶದಿಂದಲೂ ಅವತರಿಸಿದನು. ರಾಜನ್! ಆ ಸೀತಾಪತಿಯ ಪಾವನ ಚರಿತವನ್ನು ಪರಮರ್ಷಿ ಗಳ ಮುಖದಿಂದ ನೀನು ಎಷ್ಟೋ ಸಲ ಕೇಳಿರುವೆ. ಆದರೂ ಸಂಗ್ರಹವಾಗಿ ನಾನೂ ಪೇಳುವೆನು.

ಶ್ರೀರಾಮಚಂದ್ರನು ತಂದೆಗಾಗಿ ರಾಜ್ಯವನ್ನು ಬಿಟ್ಟು, ಸೀತೆಯ ಮೃದು ಕರಪಲ್ಲವ ಸಂವಾಹನವನ್ನೂ ಸಹಿಸಲಾರದ ಕೋಮಲಾಂಘ್ರಿಕಮಲಗಳಿಂದ ಕಂಟಕಿತ ವನದಲ್ಲಿ ಸಂಚರಿಸಿ

ದನು. ಸೀತಾದೇವಿಯ ವದನಸುಧಾಕರನ ಮಂದಹಾಸಚಂದ್ರಿಕೆಯಿಂದ ವನವಾಸ ತಾಪವನ್ನು ಮರೆತನು. ಲಕ್ಷ್ಮಣನ ಪರಿಚರ್ಯೆಯಿಂದ ಪರ್ಣಕುಟಿಯೇ ವೈಕುಂಠವೆನಿಸಿತು. ಶೂರ್ಪಣಖೆಯ ವೈರೂಪ್ಯವು ಪ್ರಿಯಾವಿರಹಕಾರಣವಾಯಿತು. ದೀನವತ್ಸಲತೆಯು ಸುಗ್ರೀವ ಪಟ್ಟಾಭಿಷೇಕವನ್ನು ಸಾಧಿಸಿತು. ಮುದ್ರಿಕೆಯು ಚೂಡಾಮಣಿಯನ್ನೂ ಹನುಮದ್ಭಕ್ತಿಯನ್ನೂ ತೋರಿಸಿತು. ಭ್ರೂಭಂಗವು ಸಮುದ್ರನಿಗೆ ಸೇತುವನ್ನು ನಿರ್ಮಿಸಿತು. ಕೋದಂಡಟಂಕಾರಯುಕ್ತ ಬಾಣ ವಹ್ನಿಯು ರಾಕ್ಷಸವಂಶವನ್ನು ನಾಶಮಾಡಿತು. ಅನಾದಿ ದಂಪತಿಗಳು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತರಾಗಿ ಭಕ್ತಜನರಿಗೆ ಮುಕ್ತಿಯನ್ನಿತ್ತರು. ಶ್ರೀರಾಮಚಂದ್ರನಿಗೆ ನಮಃ.

ಶ್ರೀರಾಮನು ವಿಶ್ವಾಮಿತ್ರನ ಯಜ್ಞವನ್ನು ಕಾಪಾಡಿದನು. ಮಾರೀಚನನ್ನು ದೂರ ಕೆಡಹಿ, ಸುಬಾಹು ಪ್ರಮುಖ ಯಜ್ಞವೈರಿಗಳನ್ನು ಯಮಸದನಕ್ಕಟ್ಟಿದನು. ಅನೇಕ ಶತಭಟರು ಹೊತ್ತು ತರುವ ಭಯಂಕರ ಶಂಕರಶರಾಸನವನ್ನು, ಸೀತೆಗಾಗಿ, ಬಾಲಗಜವು ಕಬ್ಬಿನ ಕೋಲನ್ನಂತೆ ಮುರಿದು, ಅನುರೂಪ ಗುಣವಯಃಶೀಲಳಾದ ಸೀತೆಯನ್ನು ವರಿಸಿದನು. ಅವಿನಾಯೋಗಿನಿಯ್ಯು, ಅನವರತ ವಕ್ಷೋನಿವಾಸಿನಿಯು ಆದ ದೇವಿಯೊಡನೆ ಅಯೋಧ್ಯೆಗೆಂದು ತೆರಳಿದನು. ಮಾರ್ಗಮಧ್ಯದಲ್ಲಿ, ಕ್ಷತ್ರಿಯ ಬೀಜವೇ ಇರದಂತೆ ಪರಶುಧಾರೆಯಿಂದ ಕಡಿದು ಕೆಡಹಿದ ಭಾರ್ಗವನನ್ನು ನಿರ್ಗರ್ವನನ್ನಾಗಿಸಿದಂತೆ, ತೋರಿಸಿ, ಆ ಶ್ರೀಶನಲ್ಲಿದ್ದ ಅತುಲನೆಂಬ ಅಸುರರನ್ನು ಸಂಹರಿಸಿದನು. ಆ ಪರಶುರಾಮನೇ ತಾನೆಂದು ವಿಷ್ಣುಧನುಸ್ಸ್ವೀಕಾರದಿಂದ ಪ್ರಕಟಿಸಿದನು.

ಸತ್ಯಪಾಶಕ್ಕೆ ಕಟ್ಟುಬಿದ್ದ ತಂದೆಯನ್ನು ಸ್ತ್ರೈಣನೆನ್ನದೆ, ಕೈಕೇಯೀವರ ಪರಿಪಾಲನವನ್ನು ಮಾಡಲು ಅಯೋಧ್ಯಾ ಪರಿಪಾಲನವನ್ನು ಭರತನಿಗೆ ಬಿಟ್ಟು, ಸತಿಯೊಡನೆ ಕೂಡಿ, ಸೋದರನು ಹಿಂಬಾಲಿಸಲು ವನವನ್ನು ಸೇರಿದವು. ಮುಕ್ತಸಂಗನಾದ ಮುನಿಯು ತುಚ್ಛದೇಹವನ್ನಂತೆ, ನಿರ್ಲಕ್ಷವಾಗಿ ರಾಜ್ಯವನ್ನು ಬಿಟ್ಟ ರಾಮನನ್ನು ಕಂಡು, ಋಷಿಗಳು ತುಷಿತರಾದರು ಹಾಗೂ ರಾಕ್ಷಸರು ಭೀತರಾದರು.

ಶ್ರೀರಾಮನು, ಅಸುದ್ಧ ಬುದ್ಧಿಯಿಂದ ತನ್ನನ್ನು ವರಿಸಿ ಬಂದ ರಾವಣಭಗಿನಿಯಾದ ಶೂರ್ಪಣಖೆಯ ಕಿವಿಗಳನ್ನು ಮೂಗನ್ನೂ ಲಕ್ಷ್ಮಣನಿಂದ ಕೊಯಿಸಿದನು. ಅಯೋಗ್ಯರಿಗೆ ಕೀರ್ತನ್ಯ ಗುಣಕಥನ ಶ್ರವಣವಾಗಲಾರದೆಂದೂ, ರಮಾನಾರಾಯಣ ವಿಯೋಗಚಿಂತಕರಿಗೆ ಮುಖಭಂಗವು ತಪ್ಪಿದ್ದಲ್ಲವೆಂದೂ, ಸೂಚಿಸಿದನು. ಆ ದುಷ್ಟ ವಿಧವೆಯ ಮಾತನ್ನಾಲಿಸಿ ಕೆರಳಿ ಬಂದ ಖರದೂಷಣ ತ್ರಿಶಿರಾದಿ ಚತುರ್ದಶ ಸಹಸ್ರ ದನುಜಾನೀಕವನ್ನು ಲೆಕ್ಕಿಸದೆ, ಧನುರೇಕಸಹಾಯನಾಗಿ ಜನಸ್ಥಾನದಲ್ಲಿ ಸಂಹರಿಸಿದನು. ಚುಪ್ಪನಾತಿಯ ಚಾಡಿಯ ಮಾತುಗಳನ್ನೂ, ಇನ್ನೂ ಆದರದಿಂದ ಸೀತೆಯ ರೂಪದ ರೀತಿಯನ್ನೂ ಕೇಳಿ, ಕಾಮಕ್ರೋಧ ದಾಸನಾದ ರಾವಣನು ಕಳಿಸಿದ ಮಾರೀಚನನ್ನು, ಕನಕ ಮೃಗರೂಪದಿಂದ ಸೀತೆಯನ್ನು ವಂಚಿಸಿದ ಪಾಪಕ್ಕೆಂದು ಕೊಂದನು. ಉಗ್ರನಾದ ನೃಸಿಂಹನು ಕನಕಕಶಿಪುವನ್ನಂತೆ, ಅಥವಾ ರುದ್ರದೇವನು ಅಂಧಕನನ್ನಂತೆ, ಬಿಡದೆ ಹಿಂಬಾಲಿಸಿ ಮಾರೀಚನನ್ನು ಕೊಲ್ಲಲು ಪೋದ ರಾಮನು, ಮಾರೀಚನ ಆರ್ತನಾದದಿಂದ ಸೀತೆಯ ರಕ್ಷಣಕಾರ್ಯವನ್ನು ಬಿಟ್ಟು ಬಂದ ಲಕ್ಷ್ಮಣನನ್ನು ಕಂಡು, ಕಾತರನಂತೆ ಆತುರದಿಂದ ಆಶ್ರಮಕ್ಕೆ ಹಿಂದಿರುಗಿದನು. ಸಿಂಹದ್ವಯದ ಮರೆಯಲ್ಲಿ ಮೋಸದಿಂದ ಕದಿಯುವ ತೋಳನಂತೆ, ರಾವಣನು ಬಂದು ಸೀತಾಪಹಾರವನ್ನು ಮಾಡಿ ಓಡಿದಾಗ ಶ್ರೀರಾಮನು ಅಜ್ಞಜನದೃಷ್ಟಿಯಿಂದ ಸೀತಾವಿರಹದಿಂದ ಆರ್ತನಾದಂತೆ ವನದಲ್ಲಿ ಸಂಚರಿಸಿ

ದನು. ವಿಯೋಗದುಃಖಿತರಾದ ವಿಟಾದಿ ಸ್ತ್ರೀಸಂಗಿಗಳಂತೆ ನಟಿಸಿ, ನಿತ್ಯಜ್ಞಾನಸುಖಸಾರನಾದ ಶ್ರೀರಾಮನು ದುಷ್ಟ ಜನರನ್ನು ಮೋಹಗೊಳಿಸಿದನು; ಮಾನುಷಾದಿ ರೂಪರಾಗಿ ಅವತರಿಸಿದ ದೇವತಾಜನರನ್ನು ಅನುಶಿಕ್ಷಿಸಿದನು.

ಶ್ರೀರಾಘವನ ರೋಷಸಂಭ್ರಮ ಭ್ರೂಭಂಗದಿಂದ ಗಡಗಡನೆ ನಡುಗಿ, ಸದ್ದು ಮಾಡದೆ ಅಡಗಿ, ಮಕರಮೀನತಿಮಿಂಗಿಲಾದಿ ಜಲಜಂತುಗಳು ಸಂಭ್ರಾಂತವಾಗುತ್ತಿರಲು, ಸಮುದ್ರ ರಾಜನು ಸಡಗರದಿಂ ಬಂದು ಶಿರದಲ್ಲಿಟ್ಟು ತಂದ ಪೂಜೋಪರಾಹಗಳನ್ನರ್ಪಿಸಿ ವಂದಿಸಿ, ಇಂದು ನುತಿಸಿದನು–

ಶ್ರೀರಾಮ! ಜಡಬುದ್ಧಿಗಳಾದ ನಮಗೆ ನಿರ್ವಿಕಾರನು, ಜಗದ್ವಲ್ಲಭನು, ಆದಿಪುರುಷನು ಆದ ನಿನ್ನ ಮಹಿಮೆ ಎಂತು ತಿಳಿಯುವುದು? ಪ್ರಭೋ! ಸತ್ವಗುಣದಿಂದ ಸುರರನ್ನು, ರಜಸ್ಸಿನಿಂದ ನರರನ್ನು, ತಮಸ್ಸಿನಿಂದ ಅಸುರರನ್ನು ಸೃಜಿಸಿ ಪಾಲಿಸಿ ಹರಸುವ ರಮೇಶನಾದ ನೀನು ಪ್ರಕೃತಿ ಗುಣಗಳ ಲೇಪವಿಲ್ಲದೆ ಆನಂದಮಯನಾಗಿರುವೆ. ಬೇಕಾದೆಡೆಗೆ ಹೋಗು. ವಿಶ್ರವಸು ವಿನಿಂದ ಅಮೇಧ್ಯದಂತೆ ಜನಿಸಿಬಂದ ದುಷ್ಟ ರಾವಣನನ್ನು ಸಂಹರಿಸು. ಅವನ ಹಾಳು ದೇಹವು ರಣರಂಗದಲ್ಲಿ ಗೃಧ್ರಶುನಕಗಲಿಗೆ ಆಹಾರವಾಗಲಿ! ವೀರ! ನಿನ್ನ ಸತಿಯಾದ ಸೀತೆಯನ್ನು ಪೊಂದಿ ಸುಖಿಸಿ ನಮಗೆಲ್ಲರಿಗೂ ಆನಂದಪ್ರದನಾಗು! ಕಟ್ಟು ಸೇತುವಿನನ್ನು! ಮುಟ್ಟು ಲಂಕೆಯನ್ನು! ನಿನ್ನ ಕೀರ್ತಿಗಾನವನ್ನು ಮಾಡುತ್ತಾ ವೀರರಾದ ರಾಜರು ತಾವೂ ದಿಗ್ವಿಜಯವನ್ನು ಪೊಂದುವಂತಾಗಲಿ! ಯಶಶ್ಚಂದ್ರಿಕೆಯಿಂದ ಜಗತ್ತೆಲ್ಲ ಬೆಳಗಲಿ! ದಿಗ್ವಿಜಯ ರಾಮಚಂದ್ರಾ! ನಿನಗೆ ವಂದನವು.

ಅನಂತರ ಶ್ರೀರಾಮನು ಕಪಿರಾಜರು ತಂದನದ ಅದ್ರಿಕೂಟಗಳಿಂದಲು, ವೃಕ್ಷಗಳಿಂದಲು ಸೇತುವನ್ನು ಕಟ್ಟಿದನು. ವಾಯುಸುತನಿಂದ ದಗ್ಧನಾದ ಲಂಕೆಯನ್ನು ಸೇರಿದನು. ಸುಗ್ರೀವ ನೀಲ ಹನುಮ ಅಂಗದಾದಿ ವಾನರೇಂದ್ರರ ಭೀಷಣ ರಣಘೋಷಣವು ರಾಕ್ಷಸರನ್ನು ಕದನ ಭೂಮಿಗೆ ಸೆಳೆದುತರಲು, ತತ್‌ಕ್ಷಣವೇ ರಾಮನಿಶಿತ ಬಾಣಗಳು ಅವರನ್ನು ಯಮಸದನಕ್ಕೆ ಕಳಿಸಿದವು. ಲಂಕೆಯಲ್ಲಿದ್ದ ಪ್ರಾಕಾರ ಗೋಪುರ ವಿಹಾರ ಕೋಷ್ಠ ಭವನ ವನದ್ವಾರ ವಿಟಂಕ ಶೃಂಗಾಟಕಗಳು ಭಗ್ನವಾಗಿ ಪಾಳು ಬಿದ್ದಿದ್ದವು. ಗಜಯೂಥದಿಂದ ಕೆಟ್ಟ ಸರಸಿಯಂತೆ ಹಾಳಾದ ಲಂಕೆಯನ್ನೀಕ್ಷಿಸಿ ರಾಕ್ಷಸರಾಜನು ನಿಕುಂಭ ಕುಂಭ ಕುಂಭಕರ್ಣ ದುರ್ಮುಖ ಸಖರೊಡನೆ ರಣರಂಗವನ್ನು ಸೇರಿ, ಸಮರಸಂರಂಭದಿಂದ ನಿಂತು ಕಾದಿದನು. ಶ್ರೀರಾಮಾದಿ ವೀರರು ಪ್ರಹಸ್ತಪುತ್ರರನ್ನು ಅತಿಕಾಯವಿಕಂಪನಾದಿಗಳನ್ನು ಸಂಹರಿಸಿದರು. ಕುಂಭಕರ್ಣನನ್ನು ಶ್ರೀರಾಮನು ಕೊಂದನು. ಖಡ್ಗಚರ್ಮಶೂಲತೋಮರಾದಿ ನಿಶಿತಾಯುಧಪಾಣಿಗಳಾದ ದನುಜರನ್ನು ರಘುನಾಥನ ಯೂಥಪರು ಗಿರಿಗದಾತರುಗಳಿಂದಲೇ ಸಂಹರಿಸಿದರು. ಸೀತಾಪಹಾರವನ್ನು ಮಾಡಿದ ರಾವಣನ ಪಾಪದಿಂದ ರಾಕ್ಷಸರು ನಷ್ಟಪ್ರಾಯರೇ ಆಗಿದ್ದರಲ್ಲವೇ?

ಇಂತು ಸ್ವಸೈನ್ಯನಾಶವನ್ನು ಕಂಡು ಸಿಂಗರಿಸಿಕೊಂಡು ವಿವಿಧಾಯುಧಯುಕ್ತ ರಥವನ್ನೇರಿ ಬಂದ ರಾವಣನು, ಮಾತಾಲಿಸಾರಥಿಕನಾಗಿ ರಥಿಕನಾಗಿ ನಿಂದ ರಾಮನನ್ನು ನೋಡಿ, ಬಾಣಗಳನ್ನು ಹೂಡಿ ಹೊಡೆದನು. ಆಗ ರಾಮನಿಂತೆಂದನು–

ರಾಕ್ಷಸಾಧಮ! ನಾನಿಲ್ಲದಿರುವಾಗ ಕಳ್ಳನಂತೆ ಬಂದು ಸಲ್ಲದ ಕುಕಾರ್ಯವನ್ನು ಮಾಡಿ, ನೀನಾಗಿ ಸತ್ತಿರುವೆ. ನನಗೆ ಕುಕರ್ಮದಿಂದಾಗುವ ನಾಚಿಕೆಯೂ ಇಲ್ಲ. ಆ ನಿನ್ನ ಕರ್ಮದ

ದುಷ್ಫಲವನ್ನು ಕೊಡಲು ಬಂದಿರುವ ನಿನ್ನ ಪಾಲಿನ ಯಮನೆಂದು ತಿಳಿ. ಮೂಢ! ಯಮನೆಲ್ಲಿ! ಕಾಣೆನೆಂದೆನಬೇಡ! ಯಮನೇ ನಾನು, ಸಂದೇಹ ಬೇಡ. ಕಾಲದಿಂದ ಒದಗಿ ಬರುವ ಕಲುಷ ಕರ್ಮಫಲವು ಕೈಯಿಂದ ದೂಡಿದರೆ ಹೋಗುವುದೇ? ಕಾಲಸರ್ಪವು ಕಚ್ಚಿದೆಡೆ ಕೈಯಿಂದ ಒರೆಸಿ ಕೆಡಿಸಲಹುದೇ?

ಎಂದು ನುಡಿದು ಸಿಡಿಲಿನಂತೆ ಕಡು ಕಠೋರವಾದ ಬ್ರಹ್ಮಾಸ್ತ್ರದಿಂದ ಶ್ರೀರಾಮನು ರಾವಣನನ್ನು ಸಂಹರಿಸಿದನು. ಹತ್ತು ಮುಖಗಳಿಂದಲೂ ರಕ್ತವನ್ನು ಕಾರುತ್ತಾ ಅಸುರನು ಕೆಳ ಗುರುಳಿ ಬಿದ್ದನು. ಪುಣ್ಯಕ್ಷಯವಾದ ಆ ಕ್ಷಣವೇ ಸ್ವರ್ಗದಿಂದ ಉರುಳುವ ನರನಂತೆ ಬಿದ್ದು ವೀರಶಯನವನ್ನು ಪೊಂದಿದ ರಾಕ್ಷಸ ಪತಿಯನ್ನು ಕಂಡು ಮಂಡೋದರ್ಯಾದಿ ಸುಂದರಿಯರು ಸುತ್ತುಗಟ್ಟಿ ರೋದಿಸಿದರು. ರಾಮಲಕ್ಷ್ಮಣ ಬಾಣಹತರಾದ ಬಂಧುಗಳ ಬದಿಯಲ್ಲಿ ಕೂತು, ವಕ್ಷಸ್ಥಲವನ್ನು ಕೈಯಿಂದ ಬಡಿದುಕೊಳ್ಳುತ್ತಾ ಗೋಳಾಡಿದರು–

ಲೋಕವನ್ನಳಿಸಿ ರಾವಣನೆನಿಸಿದ ನಿನ್ನ ಸತಿಯರು ಅಳುವುದು ಕೇಳಿಸುವುದಿಲ್ಲವೇ? ಇನ್ನಾರು ನಮಗೆ ಗತಿ? ಲಂಕೆಯು ನಮ್ಮಂತೆ ವಿಧವೆಯಾಗಿ ಪರಪೀಡೆಗೊಳಗಾಗಿರುವುದು ಕಾಣಿಸದೇ? ಕಾಮವಶನಾಗಿ ಕಣ್ಣು ಕಾಣದೆ ಸೀತಾದೇವಿಯ ಮಹಾಮಹಿಮೆಯನ್ನು ತಿಳಿಯದೆ ಮಾಡಿದ ದ್ರೋಹದ ಫಲವಿಂತು ಅನುಭವಿಸಬೇಕಾಗಿ ಬಂತು. ನಮ್ಮನ್ನೂ ಲಂಕೆಯನ್ನೂ ಅನಾಥರನ್ನಾಗಿ ಮಾಡಿದೆ. ದೇಹವು ಹದ್ದು ನಾಯಿಗಳ ಪಾಲಾಗಲು, ನೀನು ನರಕದ ಪಾಲಾದೆ. ಅವರನ್ನು ಸಮಾಧಾನಪಡಿಸಿ, ವಿಭೀಷಣನು ಶ್ರೀರಾಮನಾಜ್ಞೆಯಂತೆ ಮೃತಬಂಧುಗಳಿಗೆ ಪರಲೋಕಸಾಧಕ ಕರ್ಮಗಳನ್ನು ಮಾಡಿ, ಲಂಕಾರಾಜ್ಯವನ್ನು ಪೊಂದಿದನು.

ಭಗವಾನ್ ಶ್ರೀರಾಮನು ಅಶೋಕವನದಲ್ಲಿ ತನ್ನ ವಿರಹಶೋಕದಿಂದ ಕರ್ಷಿತಳಾಗಿ ಶಿಂಶುಪಾತರು ಮೂಲದಲ್ಲಿದ್ದ ಸೀತೆಯನ್ನು ವಾತಸುತನಿಂದ ಕರೆಸಿದನು. ಅಸುರ ಜನರನ್ನು ಮೋಹಪಡಿಸಲು ನಿತ್ಯಾವಿಯೋಗಿನಿಯಾದ ಸೀತೆಯನ್ನು ಅಗಲಿದ್ದಂತೆ ತೋರ್ಪಡಿಸಿ ಅಗ್ನಿ ಪ್ರವೇಶಗಿಂದ ಲೋಕಾಪವಾದವನ್ನು ಕಳೆದನು. ಪ್ರಿಯತಮಳಾದ ಸತೀಮಣಿಯಲ್ಲಿ ಅನುಕಂಪಾ ವಶನಾಗಿ ಶ್ರೀರಾಮನು ಆಕೆಯನ್ನು ಸಂತೈಸಿದನು. ಶ್ರೀರಾಮಸಂದರ್ಶನ, ಸ್ವೀಕಾರಗಳಿಂದ ಸೀತೆಯ ವದನಕಮಲವು ವಿಕಸಿತವಾಯಿತು.

ರಕ್ಷೋಗಣೇಶನಾದ ವಿಭೀಷಣನನ್ನು, ಸುಗ್ರೀವಾದಿ ವಾನರರನ್ನು ಕರೆದುಕೊಂಡು ತಾನು ಲಕ್ಷ್ಮಣಾಂಜನೇಯ ಸೀತಾಸಮೇತನಾಗಿ ಪುಷ್ಪಕವಿಮಾನವನ್ನೇರಿ ಶ್ರೀರಾಮನು ವನವಾಸವು ಮುಗಿದ ದಿನವೇ ಭರತಾಶ್ರಮವನ್ನು ಸೇರಿದನು. ವಲ್ಕಲಗಳನ್ನುಟ್ಟು ಗೋಮೂತ್ರದಿಂದ ಮಾಡಿದ ಯವಾನ್ನವನ್ನುಂಡು ಜಟೆಯನ್ನು ಧರಿಸಿ ಬರಿಯ ನೆಲದ ಮೇಲೆ ಮಲಗುತ್ತಾ ರಾಮ ನಾಮವನ್ನು ಜಪಿಸುತ್ತಿದ್ದ ಭರತನಲ್ಲಿ ಬಹು ಕರುಣೆಯನ್ನು ತೋರಿ ಶ್ರೀರಾಮನು ಅವನನ್ನಪ್ಪಿ ಹರಸಿದನು. ಬ್ರಹ್ಮಾದಿ ದೇವತೆಗಳು ರಾಮಚರಿತವನ್ನು ಪಾಡುತ್ತಾ ಬರುತ್ತಿರಲು, ದೇವಾಂಗನೆ ಯರು ಶ್ರೀರಾಮನ ಶಿರದಿ ಪೂಮಳೆಯನ್ನು ಕರೆದರು. ಭರತನು ಗೀತವಾದ್ಯಗಳಿಂದ ಕೂಡಿ, ತನ್ನ ತಲೆಯ ಮೇಲಿಟ್ಟು ತಂದ ಪಾದುಕೆಗಳನ್ನರ್ಪಿಸಿದನು. ಬ್ರಹ್ಮವಾದಿಗಳು ವೇದಸೂಕ್ತಗಳಿಂದ ಪರಮಪುರುಷನನ್ನು ಪೊಗಳಿದರು. ಸ್ವರ್ಣರಥಗಳು, ಕನಕಪಟ್ಟಸಮಲಂಕೃತ ಗಜಾಶ್ವಗಳು, ಹೇಮಕವಚಧಾರಿ ವೀರಭಟರು, ಅಂಗರಕ್ಷಕರು, ವೇಶ್ಯೆಯರು, ಪರಿಚಾರಕರು ಮುಂತಾದ ಸಕಲೈಶ್ವರ್ಯವನ್ನು ಪ್ರೇಮದಿಂದ ತಂದೊಪ್ಪಿಸಿ, ಮನಸ್ಸರೋವರವು ಆನಂದದಿಂದ ಉಕ್ಕಿ

ಬಂದಂತೆ ಕಣ್ಣೀರಿಡುತ್ತಾ ಕೈಜೋಡಿಸಿ ನಿಂತ ಭರತನನ್ನಾಲಿಂಗಿಸಿ, ಆನಂದಬಾಷ್ಪಗಳಿಂದ ಭರತನ ಶಿರವನ್ನು ಶ್ರೀರಾಮನು ತೋಯಿಸಿ ಆದರಿಸಿದನು. ಲಕ್ಷ್ಮಣ- ಸೀತೆಯರಿಂದ ಕೂಡಿ ವಿಪ್ರರಿಗೆ ವಂದಿಸಿ, ಪ್ರಜಾವಂದನವನ್ನು ಸ್ವೀಕರಿಸಿದನು.

ಉತ್ತರಕೋಸಲವಾಸಿಗಳು ಚಿರಕಾಲ ತಮ್ಮನ್ನಗಲಿದ್ದ ರಾಮನನ್ನು ನೋಡಿ ಆನಂದದಿಂದ ಉತ್ತರೀಯವಸ್ತ್ರಗಳನ್ನು ಬೀಸುತ್ತಾ ಪೂಮಳೆಗರೆದು ಸಂಭ್ರಮದ ಸ್ವಾಗತವನ್ನಿತ್ತರು. ಆ ಪ್ರಭುಕಟಾಕ್ಷ ಪಾತ್ರರಾಗಿ ಹರ್ಷೋದ್ರೇಕದಿಂದ ಕುಣಿದಾಡಿದರು.

ಪಾದುಕೆಗಳನ್ನು ಶಿರದಲ್ಲಿಟ್ಟು ಭರತನು ಮುಂದೆ ನಡೆದನು. ಸುಗ್ರೀವ - ವಿಭೀಷಣರು ಚಾಮರಗಳನ್ನು ಹಾಕಿದರು. ಹನುಮಂತನು ಶ್ವೇತಚ್ಛತ್ರವನ್ನೆತ್ತಿ ಹಿಡಿದನು. ಬಾಣತೂಣೀರ ಧನುಃಪಾಣಿಯಾಗಿ ಶತ್ರುಘ್ನನು, ತೀರ್ಥಜಲ ಕಮಂಡಲುವನ್ನು ಪಡಿದು ಸೀತೆಯು, ಖಡ್ಗವನ್ನು ಧರಿಸಿ ಅಂಗದನು, ಬಂಗಾರದ ಗುರಾಣಿಯನ್ನು ಹಿಡಿದು ಜಾಂಬವಂತನು ಸೇವಿಸಿ ಬರುತ್ತಿರಲು ಸಮಲಂಕೃತವಾದ ಸಾಕೇತಪುರಿಯನ್ನು ಶ್ರೀರಾಮನು ಪ್ರವೇಶಿಸಿದನು.

ಶ್ರೀರಾಮನು ರಾಜಭವನವನ್ನು ಪೊಕ್ಕು ಗುರುಹಿರಿಯರಿಗೆ ನಮಸ್ಕರಿಸಿ, ರಾಜಮಾತೆಯರಿಗೆ ವಂದಿಸಿ, ಕಿರಿಯರ ನತಿಯನ್ನು ಸ್ವೀಕರಿಸಿದನು. ಸೀತಾ- ಲಕ್ಷ್ಮಣರು ಕೂಡ ಅಂತೆಯೇ ವಂದಿಸಿದರು. ಆಗ ಕೌಸಲ್ಯಾದಿ ರಾಜಮಾತೆಯರು ಪ್ರೇಮದಿಂದ ಪುತ್ರರನ್ನು ಆಲಿಂಗಿಸಿ ಚಿರಕಾಲೀನ ವಿಯೋಗದುಃಖವನ್ನು ಹೊರಗೆಡಹುವಂತೆ ಕಣ್ಣೀರು ಸುರಿಸಿದರು.

ಆಗ ವಸಿಷ್ಠನು ಶ್ರೀರಾಮಾದಿಗಳ ಜಟಾಬಂಧವನ್ನು ಬಿಚ್ಚಿಸಿ ಚತುಃಸಮುದ್ರ ಶುಭಜಲಗಳಿಂದ ಇಂದ್ರನನ್ನಂತೆ ರಾಮಚಂದ್ರನನ್ನು ಅಭಿಷೇಕಿಸಿ ಆಶೀರ್ವದಿಸಿದನು. ಪೀತಾಂಬರವನ್ನುಟ್ಟು ಆಭರಣಗಳನ್ನು ತೊಟ್ಟು ತನ್ನಂತೆ ಅಲಂಕೃತಳಾದ ತರುಣೀ ಮಣಿಯಿಂದ ದಿವ್ಯಸಿಂಹಾಸನವನ್ನೇರಿ ಮೆರೆಯುವ ಶ್ರೀರಾಮನನ್ನು ಅನುಜಾಮಾತ್ಯರು ಸೇವಿಸಿ ಅಭಿನಂದಿಸಿದರು! ಪ್ರಜರು ಶ್ರೀರಾಮನಿಗೆ ಕಾಣಿಕೆಗಳನ್ನಿತ್ತು ಧನ್ಯರಾದರು.

ಶ್ರೀರಾಮನು ಪ್ರಜರನ್ನು ತಂದೆಯಂತೆ ಪಾಲಿಸಿ ಪೊರೆದನು. ಪ್ರಜರು ಸ್ವವರ್ಣಾಶ್ರಮೋಚಿತ ಧರ್ಮನಿರತರಾಗಿ ಶ್ರೀರಾಮನೇ ನಿಜವಾದ ತಂದೆ ಎಂದು ತಿಳಿದರು. ತ್ರೇತಾಯುಗವಾದ ಆ ಕಾಲವು ಧರ್ಮಾದಿಗುಣಗಳಿಂದ ಕೃತಯುಗಸಮವೆನಿಸಿತು. ಧರ್ಮಜ್ಞನಾದ ಶ್ರೀರಾಮನ ರಾಜ್ಯದಲ್ಲಿ ಸರ್ವಭೂತಗಳಿಗೂ ಸುಖವಾಯಿತು. ವನ ನದೀ ಗಿರಿ ದ್ವೀಪ ಸಮುದ್ರಗಳು ಬೇಕಾದ ಸಂಪತ್ತನ್ನು ಪ್ರಜರಿಗೆ ಕಾಮಧೇನುವಿನಂತೆ ನೀಡುತ್ತಿದ್ದವು.

ಶ್ರೀರಾಮನ ರಾಜ್ಯದಲ್ಲಿ ಆಧಿವ್ಯಾಧಿಗಳಿಲ್ಲ. ದುಃಖ ಶೋಕ ಭಯ ಕ್ಲೇಶಗಳಿಲ್ಲ. ಬೇಡೆಂದವರಿಗೆ ಮರಣವೂ ಇದ್ದಿಲ್ಲ. ಸರ್ವೇಂದ್ರಿಯ ಸ್ವಾಮಿಯಾದ ಶ್ರೀರಾಮನು ಏಕಪತ್ನೀವ್ರತವನ್ನು ಧರಿಸಿ, ರಾಜರ್ಷಿಚರಿತವನ್ನಾಚರಿಸಿ, ಲೋಕವನ್ನು ಅನುಶಾಸಿಸಿದನು. ಸೀತೆಯು ಪ್ರೇಮ ವಿನಯಗಳಿಂದಲು, ಶೀಲವೃತ್ತಗಳಿಂದಲು, ಲಜ್ಜಾಭಯಗಳಿಂದಲು ಕೂಡಿ ಪತಿಯ ಭಾವವನ್ನರಿತು ನಡೆದು, ಪತಿವ್ರತೆಯರಿಗೆ ಮಾರ್ಗದರ್ಶಿನಿಯಾದಳು. ಶ್ರೀರಾಮನು ಸತಿಯ ಗುಣಗಳಿಗೆ ಮನಸೋತು ನಿತ್ಯಾವಿಯೋಗಿನಿಯಾದ ಸೀತೆಯಿಂದ ಆನಂದದಿಂದಿದ್ದನು.

## ೯. ಶ್ರೀರಾಮ ಕಥಾ

ಶ್ರೀಶುಕನು ಹೇಳಿದನು–

ಸಕಲಲೋಕ ಗುರುವಾದ ಶ್ರೀರಾಮಚಂದ್ರನು ಗುರುಜನರು ಪೇಳಿದಂತೆ ನಡೆದು, ಉತ್ತಮಕಲ್ಪದ ನೂರಾರು ಯಜ್ಞಗಳನ್ನು ಮಾಡಿದನು. ಸರ್ವದೇವಪ್ರಧಾನನಾದ ತನ್ನನ್ನು ತಾನೇ ಯಜ್ಞಾದಿಗಳಿಂದ ಪೂಜಿಸಿ, ಗುರುಸೇವೆ, ಯಜ್ಞ ದಾನಾದಿ ಕರ್ಮಗಳು ಅತ್ಯವಶ್ಯಕವಾಗಿವೆ ಎಂದು, ಲೋಕದ ಜನರಿಗೆ ಶಿಕ್ಷಿಸಿ ತೋರಿಸಿದನು. ಹೋತೃವಿಗೆ ಪೂರ್ವದ ರಾಜ್ಯ ಭಾಗವನ್ನು, ಬ್ರಹ್ಮನಿಗೆ ದಕ್ಷಿಣವನ್ನು, ಅಧ್ವರ್ಯುವಿಗೆ ಪಶ್ಚಿಮವನ್ನು, ಸಾಮಗನಿಗೆ ಉತ್ತರ ರಾಜ್ಯವನ್ನು, ಉಳಿದ ಮಧ್ಯರಾಜ್ಯವನ್ನು ಆಚಾರ್ಯನಿಗಿತ್ತು, ಪ್ರೀತನಾದನು. ಈ ಜಗದ ಸಂಪತ್ತಿನ ಒಡೆತನ ವೆಲ್ಲವು ನಿಃಸ್ಪೃಹವಾದ ಬ್ರಾಹ್ಮಣನಿಗೇ ಸಲ್ಲುವುದೆಂದು ತಿಳಿದು, ಉಟ್ಟಬಟ್ಟೆಗಳನ್ನುಳಿಸಿ, ಸರ್ವಾಭರಣಗಳನ್ನೂ ಧಾರೆ ಎರೆದನು. ಸೀತಾದೇವಿಯು ಮಂಗಲಸೂತ್ರವನ್ನಿಟ್ಟು, ಮಿಕ್ಕ ಸರ್ವಸ್ವವನ್ನೂ ದಾನಮಾಡಿ. ಬ್ರಹ್ಮಣ್ಯದೇವನ ಯೋಗ್ಯಸತಿ ಎನಿಸಿದಳು. ಬ್ರಾಹ್ಮಣರು ಪೂಜ್ಯ ರೆಂಬ ಭಾವನೆಯನ್ನು ಪ್ರಕಟಿಸಿದ ಭಗವಂತನನ್ನು ಕಂಡು ಸಜ್ಜನರಾದ ಆ ವಿಪ್ರವರರು ಅತ್ಯಂತ ಪ್ರೀತಿಯಿಂದ ಅದೆಲ್ಲವನ್ನೂ ಶ್ರೀರಾಮನಿಗರ್ಪಿಸಿ ಇಂತೆಂದರು–

ಸರ್ವಜಗದೀಶ್ವರ! ನೀನು ಕೊಡದೆ ಉಳಿಸಿದ್ದಿಲ್ಲ. ಹೃದಯಾಕಾಶದಿ ನೆಲೆಸಿ, ಅಜ್ಞಾನ ತಮವನ್ನು ನಾಶಗೊಳಿಸಿ, ಜ್ಞಾನಪ್ರಕಾಶವನ್ನು ಬೀರಿ ನಡೆಸುವ ನಿನ್ನ ಮಹದುಪಕಾರವೇ ಸಾಲದೇ? ಪ್ರಭೋ! ಅಖಂಡ ಜ್ಞಾನನಿಧಿಯು, ಆತ್ಮಾರಾಮನು, ಬ್ರಾಹ್ಮಣವತ್ಸಲನು, ಪುಣ್ಯ ಕೀರ್ತಿಯು ಆದ ನಿನ್ನ ಪಾದಕಮಲವನ್ನು ನಮ್ಮ ಹೃದಯಪೀಠದಲ್ಲಿಟ್ಟು ಪೂಜಿಸಿ, ನಿನ್ನ ದಿವ್ಯಜ್ಞಾನವನ್ನು ಪಡೆಯುವಂತೆ ಮಾಡು, ನಿನ್ನ ಭಕ್ತರಾದ ನಮಗೆ ಇತರ ವಿಷಯಗಳು ಬೇಡ – ಎಂದು ವಂದಿಸಿದರು.

ಒಂದು ಸಲ ಲೋಕವೃತ್ತವನ್ನು ಪರೀಕ್ಷಿಸಲು ಗೂಢನಾಗಿ ಚರಿಸುವ ಶ್ರೀರಾಮನು, ರಾತ್ರಿ ಕಾಲದಿ ಒಬ್ಬನ ಮನೆಯ ಮುಂದೆ ಪೋಗುತ್ತಿದ್ದ ದೂತದುರ್ಮುಖನ ಮುಖದಿಂದ, ಆ ನೀಚನಾಡಿದ ಮಾತನ್ನು ಕೇಳಿದನು.

'ಇನ್ನೊಬ್ಬನ ಮನೆಯಲ್ಲಿದ್ದು, ದುಷ್ಟಳಾದ ನಿನ್ನನ್ನು ಸ್ತ್ರೈಣನಾದ ರಾಮನಂತೆ ನಾನು ಸ್ವೀಕರಿಸುವುದಿಲ್ಲ' ಎಂದಾಡಿದ ನುಡಿಗಳನ್ನು ಕೇಳಿ, ಅದರಲ್ಲಿ ಅರ್ಥವಿಲ್ಲವೆಂದರಿತೂ ಲೋಕಾ ಪವಾದಭೀತನಾಗಿ ಶ್ರೀರಾಮನು ಪ್ರಾಚೇತಸ (ವರುಣಪುತ್ರ)ನಾದ ವಾಲ್ಮೀಕಿಯ ಆಶ್ರಮ ಸಮೀಪಾರಣ್ಯದಲ್ಲಿ ಸೀತೆ(ವರುಣಪುತ್ರಿ)ಯನ್ನು ಪರಿತ್ಯಜಿಸಿದನು. ಆಕೆಯು ಆಗ ಅಂತರ್ವತ್ನಿ ಯಾಗಿದ್ದಳು. ವಾಲ್ಮೀಕಿಯ ಆಶ್ರಮವನ್ನು ಸೇರಿ ಕಾಲಾಂತರದಲ್ಲಿ ಜಾನಕಿಯು ಸುತರನ್ನೀರ್ವ ರನ್ನು ಪೆತ್ತಳು. ಅವರು 'ಕುಶ ಲವ'ರೆಂದು ಖ್ಯಾತರಾದರು. ವಲ್ಮೀಕಭವನು ಅವರಿಗೆ ಕ್ಷತ್ರ ಯೋಗ್ಯಸಂಸ್ಕಾರವನ್ನು ಮಾಡಿ ಸಲಹಿ, ಸರ್ವವಿದ್ಯಾಚತುರರನ್ನು ಮಾಡಿದನು.

ಲಕ್ಷ್ಮಣನಿಗೆ ಅಂಗದ ಚಕ್ರಕೇತುಗಳು, ಭರತನಿಗೆ ತಕ್ಷ ಪುಷ್ಕಲರು, ಶತ್ರುಘ್ನನಿಗೆ ಸುಬಾಹು ಶ್ರುತಸೇನರು, ಪುತ್ರರಾದರು.

ಭರತನು ದಿಗ್ವಿಜಯವನ್ನು ಮಾಡಿ ಕೋಟಿಗಟ್ಟಲೆ ದುಷ್ಟ ಗಂಧರ್ವರನ್ನು ಕೊಂದು ಅವರ ಧನಾದಿಗಳನ್ನು ತಂದು ರಾಮನಿಗೆ ಅರ್ಪಿಸಿದನು. ಶತ್ರುಘ್ನನು ಮಧುದೈತ್ಯನ ಮಗನಾದ

ಲವಣಾಸುರನನ್ನು ಸಂಹರಿಸಿ, ಮಧುವನವನ್ನು ಮಥುರಾ ನಗರವನ್ನು ನಿರ್ಮಿಸಿದನು.

ಲೋಕಭರ್ತನಾದ ಭರ್ತನು ಬಿಟ್ಟನೆಂದು ನೊಂದು, ಸೀತೆಯು ರಾಮಚರಣವನ್ನು ಮನದಲ್ಲಿಯು ರಾಮಸುತರನ್ನು ಮುನಿಯಲ್ಲಿಯು ನಿಲ್ಲಿಸಿ, ಭೂವಿವರವನ್ನು ಪ್ರವೇಶಿಸಿ, ಒಂದು ರೂಪದಿಂದ ಸದಾ ಎಡಬಿಡದೆ ಶ್ರೀರಾಮನ ಸೇವಾರತಳಾಗಿದ್ದಳು.

ಸ್ತ್ರೀಪುರುಷ ಸಂಬಂಧವು ಸರ್ವಥಾ ದುಃಖದಾಯಕವೇ ಆಗಿರುವುದರಿಂದ ನೋಡಿಸಲು ಶ್ರೀರಾಮನು ಸೀತಾವಿಯೋಗವನ್ನು ಪ್ರಕಟಿಸಿದನು. ಗ್ರಾಮ್ಯ ಮನುಜರು ಪಡುವ ಸಾಂಸಾರಿಕ ವ್ಯಸನಗಳ ಕಹಿಯನ್ನು ತಾನೂ ಅನುಭವಿಸಿದನೆಂಬಂತೆ ನಟಿಸಿದ ಸಂಸಾರವೈರಿಯಾದ ಕಂಸಾರಿಯು ವೈರಾಗ್ಯವೇ ಸಂಪಾದನೀಯವೆಂದು ನಡೆದು ನೋಡಿಸಿದನು. ಸೀತೆಯ ವಿಯೋಗವಿಲ್ಲದ ನಿತ್ಯಬ್ರಹ್ಮಚಾರಿಯು, ವೈಶ್ವಾನರನೆನಿಸಿ ಎಲ್ಲವನ್ನೂ ಮಲ್ಲುವ ನಿತ್ಯೋಪವಾಸಿಯು ಆದ ಶ್ರೀರಾಮನ ಅಗಾಧ ಮಹಿಮೆಯನ್ನು ಅಲ್ಪರೆಂದು ತಿಳಿಯುವರು.

ಶ್ರೀರಾಮನು ಹದಿಮೂರುಸಾವಿರ ವರ್ಷ ಕಾಲ ರಾಜ್ಯವಾಳಿ, ಸ್ಮರಿಸುವವರ ಹೃದಯ ಪೇಟಿಕೆಯಲ್ಲಿ ನಿಧಿಯಂತೆ ತನ್ನ ಚರಣಾರವಿಂದವನ್ನು, ಮೂರು ಲೋಕಗಳಲ್ಲಿ ಬೆಳದಿಂಗಳಿನಂತೆ ಧವಳ ಯಶಶ್ಚಂದ್ರಿಕೆಯನ್ನು ಬೆಳಗಿಸಿ, ಅಯೋಧ್ಯೆಯಿಂದ ಅದೃಶ್ಯನಾಗಿ ಅದ್ಭುತವಾದ ವೈಕುಂಠವನ್ನು ಸೇರಿದನು.

ರಾಜನ್! ಪೂರ್ಣಗುಣನಾದ ಶ್ರೀರಘುಪತಿಯು ತನ್ನಿಚ್ಛೆಯಿಂದ ತಾನಾಗಿ ಅವತರಿಸಿದ ಸಾಕ್ಷಾದ್ವೈಕುಂಠವಾಸನಲ್ಲವೇ? ನಿತ್ಯಮುಕ್ತಜ್ಞಾನಾನಂದ ಸ್ವರೂಪನಾದ ಶ್ರೀರಾಮನು ಕೋದಂಡ ಪಾಣಿಯಾಗಿ ಚಂಡದೈತ್ಯರನ್ನು ಗೆದ್ದನು. ಸೇತುವಿನಿಂದ ಸಮುದ್ರವನ್ನು ಬಂಧಿಸಿದನು. ಕಪಿಗಳಿಂದ ಕೂಡಿ ರಕ್ಕಸರನ್ನು ಜಯಿಸಿದನು – ಎನ್ನುವುದು ನಮ್ಮ ದಡ್ಡತನವಲ್ಲವೇ? ಅನನ್ಯ ಸಹಾಯನಾಗಿ ಲೋಕತ್ರಯಸಂಭವ ಸಂಭರಣ ಸಂಹರಣಗಳನ್ನು ಲೀಲಾಜಾಲವಾಗಿ ಮಾಡುವ ಲಕ್ಷ್ಮೀರಮಣನಿಗೆ ದುಃಸಾಧ್ಯವೆಂಬುದೊಂದುಂಟೇ?

ದಿಗ್ಗಜ ಸಂಚಾರ ರಮಣೀಯವಾದ ಲೋಕಾಲೋಕ ಪರ್ವತ ಪ್ರಾಂತಗಳಲ್ಲಿಯು, ಸಕಲ ರಾಜನ ಸಭೆಗಳಲ್ಲಿಯು ಋಷಿಗಳು ನಿಂತು ಆದರದಿಂದ ಅಮಲವು ಅಖಿಲಪಾಪಹರವು ಆದ ಶ್ರೀರಘುಪತಿಯ ಪಾವನ ಕೀರ್ತಿಯನ್ನು ಪಾಡುತ್ತಿರುವರು. ಅಂತಹ ಇಂದ್ರ ಕುಬೇರಾದಿ ಲೋಕ ಪಾಲ ಕಿರೀಟಮಣಿ ನೀರಾಜಿತವಾದ ರಾಮಪಾದಾರವಿಂದವೆನಗೆ ಗತಿಯಾಗಲಿ! ನಮಿಸುವಾಗ ಅವನನ್ನು ಮುಟ್ಟಿ, ರಮಣೀಯ ದರ್ಶನನೆಂದು ನೋಡಿ, ಶ್ರೀಹರಿಯೇ ರಾಮನೆಂದು ತಿಳಿದು, ಶ್ರೀರಾಮನ ಉಪದೇಶವನ್ನನುಸರಿಸಿ, ನಡೆದ ಕೋಸಲ ದೇಶದ ಜನರು ಭಕ್ತಿಜ್ಞಾನಭರಿತರಾಗಿ ಯೋಗಿದುರ್ಲಭವಾದ ಮುಕ್ತಿಯನ್ನು ಪಡೆದರು. ಶ್ರೀರಾಮಚರಿತವನ್ನು ಭಕ್ತಿಯಿಂದ ಕೇಳಿ, ರಾಮನಾಮವನ್ನು ಕೀರ್ತಿಸಿದವನು ಹಿಂಸಾಪರನಾಗಿದ್ದರೂ ಪೂತನಾಗಿ ಕರ್ಮಬಂಧದಿಂದ ಮುಕ್ತನಾಗುವನು. ಇದಕ್ಕೆ ವಾಲ್ಮೀಕಿಯೇ ಸಾಕ್ಷಿಯಲ್ಲವೇ? ಆಗಿನ ಪ್ರಜರೂ ಅಂತೆಯೇ ಶ್ರೀರಾಮಚಿಂತನರತರಾಗಿದ್ದರು.

ರಾಜನು 'ಭಗವಾನ್ ರಾಮನು ಅನುಜರನ್ನೆಂತು ಪಾಲಿಸಿ ಸಂತೈಸಿದನು? ಪ್ರಜರನ್ನೆಂತು ತಂದೆಯು ಮಕ್ಕಳನ್ನಂತೆ ಸುಖಪಡಿಸಿದನು? ಶ್ರೀರಾಮನನ್ನು ಶ್ರೀಹರಿಯೇ ಇರುವನೆಂದು ಜನರು ತಿಳಿದರೆಂದು?' ಎಂದು ಪ್ರಶ್ನಿಸಿದನು.

ಶುಕನು ಪೇಳಿದನು–

ದೇವಾಧಿದೇವನಾದ ರಾಮನು ತಮ್ಮಂದಿರನ್ನು ದಿಗ್ವಿಜಯ ಮಾಡಿ ಬರಲು ಕಳುಹಿಸಿದನು. ಭಕ್ತರನ್ನು ಉದ್ಧರಿಸಲು ಪುರಿಯಲ್ಲಿ ಜನರಿಗೆ ತನ್ನ ದರ್ಶನವನ್ನು ಕೊಡುತ್ತಿದ್ದನು. ಅವನ ದರ್ಶನದಿಂದ ಸುಜನರು ಆನಂದವಿಕಸಿತವದನರಾಗಿ ಅವನನ್ನು ಕೊಂಡಾಡಿ ಉದ್ಧೃತರಾಗುತ್ತಿದ್ದರು. ಥಳಿ ಹೊಡೆದು ತೋರಣಗಳನ್ನು ಕಟ್ಟಿ ಪ್ರಾಸಾದಗೋಪುರ ದೇವಸದನ ದ್ವಾರಗಳಲ್ಲಿ ಸುವರ್ಣಕಲಶಗಳನ್ನಟ್ಟು ಅಡಿಕೆ ಗೊಂಚಲಗಳನ್ನು ಬಾಳೆಯ ಗೊನೆಗಳನ್ನು ಇಳಿಬಿಟ್ಟು ತಾವೂ ಚೆನ್ನಾಗಿ ಅಲಂಕರಿಸಿಕೊಂಡು, ಕನ್ನಡಿಗಳನ್ನು ಪೂಮಾಲೆಗಳನ್ನೂ ನೂತರ ದುಕೂಲಗಲನ್ನು ಧರಿಸಿ ತಿಂದು ಶ್ರೀರಾಮನನ್ನು ಸೇವಿಸಿದ ಪ್ರಜರು 'ದೇವಾ! ಹಿಂದೆ ವರಾಹನಾಗಿ ಭೂಮಿಯನ್ನು ಮೇಲಕ್ಕೆ ತಂದೆ. ತಂದೇ! ಈಗ ರಾಮನಾಗಿ ನಮ್ಮನ್ನು ಪಾಲಿಸಿ ಸಂತೋಷಪಡಿಸು' ಎಂದು ಬೇಡಿದರು. ಪುರನಾರಿಯರು ಚಿರಾಗತನಾದ ಶ್ರೀರಾಮನನ್ನು ನೋಡಲು ಭವನಗಳನ್ನೇರಿ ಅಲ್ಲಿಂದ ಪೂಮಳೆಗರೆದರು. ಎಷ್ಟು ನೋಡಿದರೂ ಸಾಕೆನಿಸದ ಶ್ರೀರಾಮನ ದಿವ್ಯರೂಪವನ್ನು ಎವೆ ಇಕ್ಕದೆ ನೋಡಿ ಧನ್ಯರಾದರು.

ಆಗ ಪೂರ್ವರಾಘವರು ನಿವಸಿಸಿದ್ದ ರಮ್ಯಪ್ರಾಸಾದವನ್ನು ರಾಮನು ಪ್ರವೇಶಿಸಿದನು. ದಿವ್ಯಭವನಗಳು, ಭವನಗಳಲ್ಲಿ ತುಂಬಿದ ಅನರ್ಘ್ಯರತ್ನಮಯಾಸನ ಶಯನಗಳು, ತಾಮ್ರಮಯ ದ್ವಾರಗಳು, ವೈಡೂರ್ಯಸ್ತಂಭಗಳು, ಮುತ್ತಿನ ತೋರಣಗಳು, ಬೇಕಾದ ಭಕ್ಷ್ಯಭೋಜ್ಯ ಪಾನೀಯಗಳು, ಧೂಪದೀಪಗಳು, ಪುಷ್ಪಕರಂಡಗಳು, ಕೂಡಿ ಸಮೃದ್ಧಿಯನ್ನು ಸೂಚಿಸುವ ರಾಜಪ್ರಾಸಾದದಲ್ಲಿ ಸುರನಾರಿಯರಂತೆ ಸುಂದರರಾದ ಕಾಂತೆಯರು ಸಂಭ್ರಮದಿಂದ ಸಂಚರಿಸುತ್ತಿದ್ದರು. ಅವರಿಟ್ಟ ಆಭರಣಗಳಿಂದ ಅವರಿಗೆ ಸೊಬಗಲ್ಲದೆ, ಅವರಿಂದ ಆಭರಣಗಳಿಗೇ ಸೊಬಗು ಬಂದಿತ್ತು. ಇಂತಹ ಸ್ವಮಂದಿರದಲ್ಲಿ ಸುಂದರೀಮಣಿಯಾದ ಸೀತೆಯೊಡನೆ ಶ್ರೀರಾಮನು ಭಕ್ತಜನೈಕ ಗೋಚರವಾದ ಮಹಾಮಹಿಮೆಯನ್ನು ತೋರುತ್ತಾ ವಸಿಸಿದನು. ಧರ್ಮವನ್ನು ನೋಯಿಸದೆ, ಕಾಮವನ್ನು ಭುಜಿಸಿ ಬಹುಕಾಲ ಕಳೆದನು. ಅವನು ಪರಂಧಾಮವನ್ನೈದಲು ಆ ಭಕ್ತವತ್ಸಲನ ಆಂಘ್ರೀಪಲ್ಲವಗಳೇ ನಮಗೆ ಶರಣ್ಯವಾಗಿರುವುವು. ಶ್ರೀರಾಮಾಯ ನಮಃ

## ೧೦. ರಘುವಂಶ

ಶ್ರೀರಾಮಪುತ್ರನಾದ ಕುಶನಿಗೆ ಅತಿಥಿಯು, ಅವನ ವಂಶದಲ್ಲಿ ಕ್ರಮವಾಗಿ ನಿಷಧ, ನಲ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅನೀಹ, ಪಾರಿಯಾತ್ರ, ಬಲಸ್ಥನ, ವಜ್ರನಾಭ, ಅರ್ಕ, ಸ್ವಗುಣ ವಿಧೃತ, ಹಿರಣ್ಯನಾಭ ಎಂಬುವ ರಾಜನ್ಯರು ಹುಟ್ಟಿದರು. ಈ ಕೌಶಲ್ಯನೆಂಬ ವಂಶ ನಾಮದಿಂದ ಖ್ಯಾತನಾದ ಹಿರಣ್ಯನಾಭನು ಜೈಮಿನಿಯ ಶಿಷ್ಯನಾಗಿ, ಕಲಿತ ಮೋಕ್ಷಫಲಕವಾದ ಪರಮಾತ್ಮ ವಿದ್ಯೆಯನ್ನು ಯಾಜ್ಞವಲ್ಕ್ಯನಿಗೆ ಉಪದೇಶಿಸಿದನು. ಆ ಹಿರಣ್ಯನಾಭನಿಗೆ ಪುಷ್ಯನು, ಅವನಿಗೆ ಧ್ರುವಸಂಧಿಯು, ಅವನಿಗೆ ಸುದರ್ಶನನು, ಆ ವಂಶದಲ್ಲಿ ಅಗ್ನಿವರ್ಣ, ಶೀಘ್ರ, ಮರುದ್ರಾಜರು ಪುಟ್ಟಿದರು.

ಈ ಮರುದ್ರಾಜರು ಕಲಾಪಗ್ರಾಮದಲ್ಲಿ ಈಗಲೂ ಇರುವನು. ಕಲಿಯುಗದ ಕೊನೆಯಲ್ಲಿ ನಷ್ಟವಾದ ಸೂರ್ಯವಂಶವನ್ನು ಪುನಃ ಬೆಳಿಸಿ, ಧರ್ಮವನ್ನು ಸ್ಥಾಪಿಸುವನು. ಮರುತ್ತಿನ ಮಗನೇ

ಸುಶ್ರುತನು. ಸಂಧಿ, ಮರ್ಷಣ, ಮಹಸ್ವಂತ, ವಿಶ್ವಸಾಹ್ಯ, ಬೃಹದ್ಬಲರು ಆ ಸುಶ್ರುತನ ವಂಶಜರು. ಬೃಹದ್ಬಲನನ್ನು ನಿಮ್ಮ ತಂದೆಯಾದ ಅಭಿಮನ್ಯುವು ಕೌರವರಣದಲ್ಲಿ ಕೊಂದನು.

ಇನ್ನು ಮುಂದೆ ಆಗುವ ರಾಜರ ಹೆಸರನ್ನು ಕೇಳು. ಬೃಹದ್ಬಲವಂಶದಲ್ಲಿ ಬೃಹದ್ರುಣ, ಉರುಕ್ಷಯ, ವತ್ಸಪ್ರೀತ, ಪ್ರತಿವ್ಯೋಮ, ಭಾನು, ದಿವಾಕ, ಸಹದೇವ, ಬೃಹದಶ್ವ, ಭಾನುಮಂತ, ಪ್ರತೀಕಾಶ್ವ, ಸುಪ್ರತೀಕ, ಮರುದೇವ, ಸುನಕ್ಷತ್ರ, ರುಕ್ಷಕ, ಅಂತರಿಕ್ಷ, ಸುತಪ, ಅಮಿತ್ರಜಿತ್ ಬೃಹದ್ಬೋಜ, ಬರ್ಹಿ, ಕೃತಂಜಯ, ರಣಂಜಯ, ಸಂಜಯ, ಶಕ್ಯ, ಶುದ್ಧ, ದೋಲಾಂಗಲ, ಪ್ರಸೇನಜಿತ್, ಕ್ಷುದ್ರಕ, ಕುಣಕ ಸುರಥ ಹಾಗೂ ಸುಮಿತ್ರರೆಂಬುವ ರಾಜರು ಹುಟ್ಟುವರು. ಸುಮಿತ್ರನೇ ಸೂರ್ಯವಂಶದ ಕೊನೆಯ ರಾಜನು. ಅವನಿಂದ ಇಕ್ಷ್ವಾಕುವಂಶವು ಕಲಿಯುಗದಲ್ಲಿ ಮುಗಿಯುವುದು.

## ೧೧. ನಿಮಿವಂಶ

ಶ್ರೀಶುಕನು ಹೇಳಿದನು–

ಇಕ್ಷ್ವಾಕುಸುತನಾದ ನಿಮಿಯ ಚರಿತವನ್ನು ಕೇಳು. ಅವನೊಂದು ಸಲ ಸತ್ರಯಾಗ ವನ್ನಾರಂಭಿಸಿ, ವಸಿಷ್ಠನನ್ನು ಋತ್ವಿಜನಾಗೆಂದು ಕರೆದನು. ವಸಿಷ್ಠನು 'ಮೊದಲೇ ಇಂದ್ರನು ಯಾಗಕ್ಕೆಂದು ಕರೆದಿರುವನು. ಅದನ್ನು ಮುಗಿಸಿಕೊಂಡು ಬರುವೆನು. ಅಲ್ಲಿಯವರಿವಿಗೂ ನನಗಾಗಿ ಕಾದಿರು' ಎಂದನು. ನಿಮಿರಾಜನು ಅಸಮಾಧಾನದಿಂದ ಸುಮ್ಮನಿದ್ದನು. ಋಷಿಯು ಇಂದ್ರಯಾಗವನ್ನು ಮುಗಿಸಿಕೊಂಡು ಬಂದನು. ಅಷ್ಟರಲ್ಲಿಯೇ ನಿಮಿಯು ಬ್ರಹ್ಮವಾದಿ ಜನಸಂಶಯ ನಿವಾರಣಶಕ್ತನಾಗಿದ್ದುದರಿಂದ ಬೇರೆ ಋತ್ವಿಗ್ಜನರಿಂದ ಕೂಡಿ ಸತ್ರವನ್ನು ಮುಗಿಸಿದ್ದನು. ಅದನ್ನು ಕಂಡು ವಸಿಷ್ಠನು ಕೋಪಗೊಂಡು, ಶಿಷ್ಯನ ಅತಿಕ್ರಮವನ್ನು ಸಹಿಸದೆ, 'ಎಲವೋ ಪಂಡಿತಮಾನೀ' ನಿನ್ನ ದೇಹವು ಬಿದ್ದು ಹೋಗಲಿ' ಎಂದು ಶಪಿಸಿದನು. ನಿಮಿಯು ಗುರುವಾಗಿಯು ರೋಷದಿಂದ ಧರ್ಮವನ್ನು ಮರೆತು, ಬೈದ ವಸಿಷ್ಠನನ್ನು ' ಲೋಭಿಯಾದ ನಿನ್ನ ದೇಹವು ಕೂಡಾ ಬೀಳಲಿ' ಎಂದು ಶಾಪವನ್ನಿತ್ತನು. ಆಗ ಅವರಿಬ್ಬರಿಗೂ ದೇಹವು ಬಿದ್ದುಹೋಯಿತು. ವಸಿಷ್ಠನು ಮಾತ್ರ ಮಿತ್ರಾವರುಣರ ದೆಸೆಯಿಂದ ಊರ್ವಶಿಯಲ್ಲಿ ಪುನಃ ಜನಿಸಿದನು.

ವಸಿಷ್ಠನಾಗ ರೋಷವನ್ನು ಬಿಟ್ಟು, ನಿಮಿರಾಜನ ದೇಹವನ್ನು, ಹರಿದ್ರಾದಿ ಗಂಧ ವಸ್ತು ಗಳಲ್ಲಿ ಇಟ್ಟು, ಕಾಪಾಡುತ್ತಾ, ಸತ್ರಯಾಗದ ಅವಶಿಷ್ಟವನ್ನು ಮುಗಿಸಿದನು. ದೇವತೆಗಳು ಪ್ರಸನ್ನರಾಗಿ ಪ್ರತ್ಯಕ್ಷರಾಗಲು 'ತಾವು ಪ್ರಸನ್ನರಾಗಿದ್ದರೆ ರಾಜನ ಶರೀರವು ಜೀವಿಸಲಿ' ಎಂದು ಋಷಿಯು ಬೇಡಿದನು. ಸುರರು 'ತಥಾಸ್ತು' ಎಂದರು; ಆದರೂ ನಿಮಿರಾಜನು, ದೇಹಬಂಧವನ್ನೊಲ್ಲದೆ, ಇಂತೆಂದನು–

ಈ ಭೌತಿಕ ದೇಹವು ಬಾರದಿರುವುದೇ ಲೇಸು. ಏಕೆಂದರೆ ಬಂದಿತೆಂದರೆ ತಪ್ಪದೇ ಒಂದು ದಿನ ಬಿದ್ದುಹೋಗುವುದು. ಮುನಿಗಳು ದೇಹಾದಿಗಳಲ್ಲಿ ಮಮತೆಯನ್ನಿಡದೆ ಪಾಪಹರಣ ಶೀಲನಾದ ಶ್ರೀಹರಿಯನ್ನು ಎಡೆಬಿಡದೆ ಭಜಿಸುವರು. ಈ ಹಾಳು ದೇಹವು ದುಃಖ ಶೋಕ

ಭಯ ರೋಗಗಳಿಗೆ ನೆಲೆಯಾಗಿರುವುದು. ನೀರಿನಲ್ಲೇ ಹುಟ್ಟಿ, ಅಲ್ಲೇ ಸಾಯುವ ಮೀನಿನಂತೆ, ದೇಹದಲ್ಲೇ ಹುಟ್ಟಿ ಸಾಯುವ ದುರವಸ್ಥೆ ನನಗಿನ್ನೇಕೆ?

ಆ ಮಾತನ್ನಾಲಿಸಿ ದೇವತೆಗಳಿಂತೆಂದರು – ಒಳ್ಳೆಯದು. ವಿದೇಹನೆಂದು ಹೆಸರಾಗಿ, ದೇಹವಿಲ್ಲದೆ, ಮನುಜರ ಲೋಚನದಲ್ಲಿ ನೀನಿರು. ನಿಮೇಷೋನ್ಮೇಷಣಗಳಿಂದ ನಿನ್ನನ್ನು ತಿಳಿದು ಸುಜನರು ದೇಹಾದಿಗಳ ಅನತ್ಯತ್ವವನ್ನು ಉಪಾಸಿಸಲಿ! ನೀನೂ ಚಕ್ಷುರಂತಸ್ಥನಾದ ಶ್ರೀಹರಿಯನ್ನು ಉಪಾಸಿಸುತ್ತಿರು! ನಿಮಿ ಇರುವುದರಿಂದ ನಿಮಿಷವೆಂದು ಮಾತ್ರಾಕಾಲಕ್ಕೆ ನಾಮವಾಗುವುದು.

ಮಹರ್ಷಿಗಳಾಗ ಅರಾಜಕವಾಗಬಾರದೆಂದು, ನಿಮಿಯ ಶರೀರವನ್ನು ಮಥಿಸಲು, ಅಲ್ಲಿಂದ ಪುಟ್ಟಿದ್ದರಿಂದ ಜನಕನೆದು ಪೆಸರಾದ ಮಹಾರಾಜನು ಪುಟ್ಟಿ ಬಂದನು. ಮಥನ ಮಾಡಲು ಬಂದ ಆ ರಾಜನಿಗೆ ಮಿಥಿಲನೆಂದೂ ಹೆಸರುಂಟು. ಅವನೇ ಮಿಥಿಲಾನಗರವನ್ನು ನಿರ್ಮಿಸಿದನು.

ಆ ವೈದೇಹನ ವಂಶದಲ್ಲಿ ಕ್ರಮವಾಗಿ ಉದಾವಸು, ನಂದಿವರ್ಧನ, ಸುಕೇತು, ದೇವರಾತ, ಬಹದ್ರಥ, ಮಹಾವೀರ್ಯ, ಸುಧೃತ, ಧೃಷ್ಟಕೇತು, ಹರ್ಯಶ್ವ, ಮರು, ಪ್ರತೀಂಧಕ, ಕೃತರಥ, ದೇವಮೀಢ, ವಿಧೃತ, ಮಹಾಧೃತಿ, ಕೃತಿರಾತ, ಮಹಾರೋಮ, ಸ್ವರ್ಣರೋಮ, ಹ್ರಸ್ವರೋಮ, ಸೀರಧ್ವಜರು ಪುಟ್ಟಿದರು.

ಸೀರಧ್ವಜ ಜನಕನು ಯಜ್ಞವನ್ನು ಮಾಡಲು ಭೂಶೋಧವನ್ನು ನಡೆಸಿದಾಗ, ಲಾಂಗಲಾಗ್ರದಿಂದ ಸೀತೆಯು ಉದಿಸಿ ಬಂದಳು. ಆ ಸೀರಧ್ವಜನ ಪುತ್ರನೇ ಕುಶಧ್ವಜನು. ಅವನಿಗೆ ಧರ್ಮಧ್ವಜನು, ಅವನಿಗೆ ಕೃತಧ್ವಜ ಮಿತಧ್ವಜರು ಜನಿಸಿದರು. ಕೃತಧ್ವಜನ ಮಗನಾದ ಕೇಶಿಧ್ವಜನು ಆತ್ಮವಿದ್ಯಾವಿಶಾರದನಾಗಿದ್ದನು. ಮಿತಧ್ವಜನ ಮಗನಾದ ಖಾಂಡಿಕ್ಯನು ಕರ್ಮಕಾಂಡ ನಿಷ್ಣಾತನಾಗಿದ್ದನು. ಅಣ್ಣನಿಗೆ ಸೋತು ರಾಜ್ಯವನ್ನು ಬಿಟ್ಟು ಖಾಂಡಿಕ್ಯನು ಅರಣ್ಯದಲ್ಲಿದ್ದನು. ಕೇಶಿಧ್ವಜನಿಗೊಂದು ಸಲ ಕರ್ಮವಿಷಯಕ ಧರ್ಮ ಸಂಕಟವು ಬರಲು ತಮ್ಮನಿಗೆ ಶರಣಾಗತ ನಾದನು. ಆಗ ಖಾಂಡಿಕ್ಯನು ವೈರವನ್ನು ಮರೆತು, ಆ ಧರ್ಮಸಂದೇಹವನ್ನು ಕಳೆದನು, ಹಾಗೂ ಕೇಶಿಧ್ವಜನಿತ್ತ ರಾಜ್ಯಸರ್ವಸ್ವರೂಪ ಗುರುದಕ್ಷಿಣೆಯನ್ನು ಲೆಕ್ಕಿಸದೆ, ಆತ್ಮವಿದ್ಯೆಯನ್ನೇ ಬೇಡಿ, ವಿರಕ್ತನಾಗಿ ಮುಕ್ತನೂ ಆದನು.

ಆ ಖಾಂಡಿಕ್ಯನಿಗೆ ಭಾನುಮಂತನೆಂಬ ಸುತನಾದನು. ಶತದ್ಯುಮ್ನನು, ಅವನ ವಂಶದಲ್ಲಿ ಕ್ರಮವಾಗಿ ಶುಚಿ, ಸನದ್ವಾಜ, ಊರ್ಜಕೇತು, ಅಜ, ಕುರುಜಿತ್, ಉಪಗುರು, ಉಪಗುಪ್ತ, ವೈವಸ್ವತ, ಯುಯುಧಾನ, ಸುಭಾಷಣ, ಶ್ರುತ, ಜಯ, ವಿಜಯ, ಶುನಕ ವೀರಹವ್ಯ, ಧೃತಿ, ಬಹುಲಾಶ್ವ, ಧೃತ, ಕೃತಿ, ಮಹಾವಶಿ, ಮೊದಲಾದ ಆತ್ಮವಿದ್ಯಾವಿಶಾರದನಾದ ರಾಜರು ಪುಟ್ಟಿದರು. ಯಾಜ್ಞವಲ್ಕ್ಯರ ಪರಮ ಪ್ರಸಾದದಿಂದ ಯೋಗವಿದ್ಯೆಯನ್ನು ಕಲಿತು, ಗೃಹಾಶ್ರಮಿಗಳಾದರೂ ಶೀತೋಷ್ಣದಿ ದ್ವಂದ್ವವಿಕಾರ ರಹಿತರಾಗಿ ಪ್ರಖ್ಯಾತರಾದರು.

## ೧೨. ಚಂದ್ರವಂಶ – ಬುಧಚರಿತೆ – ಪುರೂರವನ ಕಥಾ

ಶ್ರೀಶುಕನು ಹೇಳಿದನು–

ಪುರುಷಾರ್ಥಪ್ರದನಾದ ಶ್ರೀಕೃಷ್ಣನು ಹುಟ್ಟಿದ ಪರಮಪಾವನವಾದ ಚಂದ್ರವಂಶದ, ಗುಣವಂತರಾದ ರಾಜರ ಚರಿತೆಯನ್ನು ವರ್ಣಿಸುವೆನು. ಪುಣ್ಯಕೀರ್ತಿಗಳಾದ ಪುರೂರವ ಮುಂತಾದ ರಾಜನ್ಯಮಣಿಗಳಿಗೆ ಆಕರವಾದ ಆ ವಂಶವು ಶ್ರೀನಾರಾಯಣನ ನಾಭಿಜಾತನಾದ ಬ್ರಹ್ಮನಿಂದಲೇ ಆರಂಭವಾಗಿದೆ. ಬ್ರಹ್ಮಪುತ್ರನಾದ ಅತ್ರಿಯ ಪುತ್ರನಲ್ಲವೇ ಚಂದ್ರನು? ಅತ್ರಿ ನೇತ್ರಜಾತನು, ಅಮೃತಕಿರಣನು, ಆದ ಚಂದ್ರನು ವಿಪ್ರರಿಗು, ಓಷಧಿಗಳಿಗು, ಕುಮುದಗಳಿಗು, ಪತಿಯಾದನು. ಅವನು ರಾಜಸೂಯವನ್ನು ಮಾಡಿ ಭುವನತ್ರಯವನ್ನು ಗೆದ್ದನು. ಮದದಿಂದ ಕಾಮವಶನಾಗಿ ಗುರುಪತ್ನಿಯಾದ ತಾರೆಯನ್ನು ಕದ್ದನು. ಬೃಹಸ್ಪತಿಯು ತನ್ನ ಪತ್ನಿಯನ್ನು ಕೇಳಿದರೂ ಚಂದ್ರನು ಆಕೆಯನ್ನು ಬಿಟ್ಟುಕೊಡಲಿಲ್ಲ. ಇದರಿಂದ ಭಯಂಕರವಾದ ದೇವದಾನವ ಸಂಗ್ರಾಮವು ಆರಂಭವಾಯಿತು. ಆಗ ಶುಕ್ರನು ಗುರುದ್ವೇಷಿಯಾದ್ದರಿಂದ ರಾಕ್ಷಸರಿಂದ ಕೂಡಿ ನಕ್ಷತ್ರರಾಜನನ್ನು ಬೆಂಬಲಿಸಿದನು. ಆಂಗಿರಸಸುತನ ಸ್ನೇಹದಿಂದ ಹರನು ಭೂತಗಣಾವೃತ ನಾಗಿಯು, ಗುರುವಾದ ಕಾರಣ ಇಂದ್ರನು ಸಕಲ ದೇವಾನೀಕ ಸಹಿತವಾಗಿಯು, ಬೃಹಸ್ಪತಿ ಕಡೆ ನಿಂತರು. ಇಂತು ತಾರೆಯ ನಿಮಿತ್ತದಿಂದ ಕೂಡಿ ಸುರಾಸುರರು ಅನೇಕರು ನಷ್ಟನಾದರು.

ಆಗ ಬೃಹಸ್ಪತಿಯ ಬಿನ್ನಹವನ್ನು ಲಾಲಿಸಿ ಬ್ರಹ್ಮದೇವನು, ಚಂದ್ರನನ್ನು ತರ್ಜಿಸಿ, ತಾರೆ ಯನ್ನು ಅವಳ ಪತಿಗೆ ಒಪ್ಪಿಸುವಂತೆ ಮಾಡಿದನು. ತಾರೆಯು ಗರ್ಭಿಣಿಯಾಗಿರುವುದನ್ನು ಕಂಡು ಬೃಹಸ್ಪತಿಯು 'ದುಷ್ಟಳೇ! ಗರ್ಭಿಣಿಯಾದುದರಿಂದ ನಿನ್ನನ್ನು ಕೊಲ್ಲದೆ ಬಿಟ್ಟಿರುವೆನು. ನನ್ನ ಕ್ಷೇತ್ರವೆನಿಸಿದ ನಿನ್ನಲ್ಲಿ, ಪರನಿಂದ ಬಂದ ಗರ್ಭವನ್ನು ಬಿಡು' ಎಂದನು. ತಾರೆಯು ಲಜ್ಜಿತಳಾಗಿ ಗರ್ಭವನ್ನು ತ್ಯಜಿಸಲು, ಕನಕಕಾಂತಿ ಮನೋಹರನಾದ ಕುಮಾರನು ಜನಿಸಿ ನಿಂತನು. ' ಆ ಕುಮಾರನು ನನ್ನವನು- ನಿನ್ನವನಲ್ಲ'ವೆಂದು ಬಡಿದಾಡುವ ಗುರುಚಂದ್ರರನ್ನು ನಿಲ್ಲಿಸಿ, ಋಷಿ ಗಳು, ದೇವತೆಗಳು, ತಾರೆಯನ್ನೇ ಇವನು ಯಾರ ಮಗ? ಹೇಳು ಎಂದು ಕೇಳಿದರು. ಲಜ್ಜಿತಳಾದ ತಾರೆಯು ಬದಲಾಡದಿರಲು, ಕುಪಿತನಾಗಿ ಕುಮಾರನು 'ದುರ್ಮಾರ್ಗಳೇ! ಏಕೆ ಮಾತನಾಡ ದಿರುವೆ? ಹೇಳು. ನನ್ನ ಜನಕನಾರು? ತಾಯಿಯೆನಿಸಿ, ಬದುಕಿದೆ. ಮಾಡಿದ ಅಪರಾಧವನ್ನು ಬಚ್ಚಿಡಲು ನೋಡುವ ನಿನ್ನನ್ನು ಸೀಳಿದರೂ ಪಾಪವಿಲ್ಲ' ಎಂದು ಬೈದನು.

ಆ ಸಮಯದಲ್ಲಿ ಬ್ರಹ್ಮದೇವನು ಬುಧನನ್ನು ಸುಮ್ಮನಾಗಿಸಿ, ರಹಸ್ಯದಲ್ಲಿ ಸಾಂತ್ವನ ಗೊಳಿಸಿ ಕೇಳಲು, ತಾರೆಯು ತಲೆಬಾಗಿ 'ಚಂದ್ರನ ಮಗ' ನೆಂದಳು. ಆದ್ದರಿಂದ ಚಂದ್ರನು ಆ ಕುಮಾರನನ್ನು ಸ್ವೀಕರಿಸಿದನು. ಬುದ್ಧಿಯಿಂದ ಗಂಭೀರನಾದುದರಿಂದ ಬುಧನೆಂದು ಪ್ರಸಿದ್ಧಿ ಯನ್ನು ಪಡೆದ ಅವನಿಗೆ ಇಲಾದೇವಿ(ಸದ್ಯುಮ್ನ)ಯಲ್ಲಿ ಪುರೋರವಸನು ಜನಿಸಿದನು. ಅವನ ರೂಪಗುಣದ್ರವಿಣವಿಕ್ರಮಗಳ ವರ್ಣನವನ್ನು ಮಾಡಿದ ಸುರಮುನಿಯು ಮಾತಿನಿಂದ ಮನಸೋತು, ಊರ್ವಶಿಯು ದೇವಲೋಕದಿಂದ ಬಂದು ಕಾಮಬಾಣಪೀಡಿತಳಾಗಿ ಆ ಸುಂದರನನ್ನು ವರಿಸಿದಳು. ಇಂತು ನರಲೋಕದಲ್ಲಿ ನರಸಂಗವಾಗಲೆಂದು ಮಿತ್ರಾವರುಣರ ಶಾಪದಿಂದ, ಮನ್ಮಥನಂತೆ ರಾಜಿಸುವ ರಾಜನನ್ನು ಕಂಡು, ಧೃತಿಗೆಟ್ಟು, ಅವನನ್ನು ಸೇರಿದಳು.

ಆ ಸುಂದರಿಯನ್ನು ನೋಡಿ ರಾಜನು ಆನಂದ ವಿಕಸಿತನೇತ್ರನಾಗಿ ಮಧುರ ಗಂಭೀರ ವಚನಗಳಿಂದ ಇಂತೆಂದನು–

'ಸುರಸುಂದರಿ, ನಿನಗೆ ಸ್ವಾಗತವು. ಬಾ, ಕೂಡು. ನನ್ನಿಂದೇನಾಗಬೇಕು? ನನ್ನವಳಾಗಿ ರಮಿಸು. ನಮ್ಮ ಸ್ನೇಹವು ಶಾಶ್ವತವಾಗಲಿ' ಎಂದ ರಾಜನಿಗೆ ಊರ್ವಶಿಯು 'ಸುಂದರ! ನಿನ್ನಲ್ಲಿ ನಟ್ಟು ನಿಂತ ನನ್ನ ಕಣ್ಣುಗಳು, ರಮಾಶ್ರಯನಾದ ಶ್ರೀನಿವಾಸ ಸನ್ನಿಧಾನ ಪಾತ್ರನು ನೀನೆಂದು ಹೇಳುತ್ತಿದೆ. ನನ್ನ ಮನವು ಅವಶವಾಗಿದೆ. ನಿನ್ನನ್ನು ಕೂಡಿರಲೆಂದೇ ಬಂದೆ. ಸ್ತ್ರೀಯರಿಗೆ ನಿನ್ನಂತಹ ಕಮನೀಯ ಪತಿಯು ದುರ್ಲಭವೇ ಸರಿ! ಆದರೆ ನನ್ನ ಮೂರು ನಿಬಂಧನೆಗಳಿವೆ. ಈ ಟಗರುಗಳೆರಡನ್ನು ನನ್ನ ಮಕ್ಕಳಂತೆ ಪ್ರೀತಿಸುತ್ತಿರುವೆನು. ಅವನ್ನು ಕಾಪಾಡು. ನಾನು ತುಪ್ಪವನ್ನು ಮಾತ್ರ ಆಹಾರವಾಗಿ ಸ್ವೀಕರಿಸುವೆನು. ಮೈಥುನ ಕಾಲದಲ್ಲಲ್ಲದೆ ಇತರ ವೇಳೆಗಳಲ್ಲಿ ನೀನು ವಿವಸ್ತ್ರನಾಗಿ ನನಗೆ ಕಾಣಬಾರದು' ಎಂದಳು.

ಪುರೂರವಸನು 'ಏನೀರೂಪ ಮಾಧುರಿ! ಏನು ಭಾವವೈಖರಿ! ಸುರಲೋಕ ಸುದತಿಯಾದ ನೀನು ತಾನಾಗಿ ವರಿಸಿ ಬಂದಿರಲು, ಸೇವಿಸದ ದಡ್ಡ ಮನುಜನಿರುವನೇ?' ಎಂದು ಹೇಳಿ, ಅನುನಯ ಚತುರನಾದ ರಾಜನು ಅವಳಿಂದ ಕೂಡಿ, ಚೈತ್ರರಥಾದಿ ದಿವ್ಯೋದ್ಯಾನಗಳಲ್ಲಿ ವಿಹರಿಸುತ್ತಾ, ಬಹುಕಾಲ ಕಳೆದನು. ಪದ್ಮಮಧುರಗಂಧಿಯಾದ ಆ ದೇವವನಿತೆಯ ಮುಖದಿಂದ ಸೂಸಿ ಬರುವ ದಿವ್ಯಾಮೋದಮೋಹಿತನಾಗಿದ್ದ ರಾಜನು, ಸಂತೋಷದಿಂದ ಕಾಲಗತಿಯನ್ನು ತಿಳಿಯದೆ ಕಮೋಪಭೋಗನಿರತನಾಗಿದ್ದನು.

ಸ್ವರ್ಗದಲ್ಲಿ ಊರ್ವಶಿಯನ್ನು ಕಾಣದೆ ದೇವೇಂದ್ರನು ಆಕೆಯನ್ನು ಕರೆತರಲು ಗಂಧರ್ವರನ್ನು ಕಳುಹಿದನು. ಆ ತರುಣಿ ಇಲ್ಲದೆ ಸುರಸಭಾಶೋಭೆಯನ್ನು ತುಂಬಲಾದದೆಂದು ಮಹಾರಾತ್ರಿಯಲ್ಲಿ ಬಂದು, ಗಂಧರ್ವರು ಕುರಿಗಳನ್ನು ಮಾಯೆಯಿಂದ ಕದ್ದೋಡಿದರು. ಮಕ್ಕಳಂತೆ ಸಾಕಿದ ಹೋತಗಳ ಆರ್ತನಾದವನ್ನು ಕೇಳಿ, 'ಅಯ್ಯೋ! ಕೆಟ್ಟೆ. ವೀರನೆಂದು ಕೊಚ್ಚಿಕೊಳ್ಳುವ ನಿನ್ನಂತಹ ನಿರ್ವೀರ್ಯನಾದ ಪತಿಯನ್ನು ನಂಬಿ, ಕಳ್ಳರು ಕಠೋರರಾಗಿ ಮಕ್ಕಳನ್ನು ಕದ್ದೊಯ್ಯುತ್ತಿರಲು ಅಳುವ ದೀನದೆಶೆಗೊಳಗಾದೆ. ಹಗಲು ಪುರುಷನಂತೆ ಮೆರೆದು, ಇರುಳಾಗುತ್ತಲೇ ಅಬಲೆಯಂತೆ ಬಿದ್ದುಕೊಂಡಿರುವ ನಿನಗೆ ಧಿಕ್ಕಾರವು' ಎಂದು ನಿಂದಿಸಿದ ದೇವವೇಶ್ಯೆಯ ವಾಗ್ಬಾಣಗಳಿಂದ ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಕೆರಳಿ ನಿಂತು, ಪುರೂರವಸನು ಗಂಧರ್ವರ ಹಿಂದೆ ಖಡ್ಗಪಾಣಿಯಾಗಿ ಓಡಿದನು. ಆಗ ಅವನು ವಿವಸ್ತ್ರನಾಗೇ ಇದ್ದನು. ಬಂದ ಕೆಲಸವಾದಂತೆ ತಿಳಿದು ಗಂಧರ್ವರು ಟಗರುಗಳನ್ನು ಬಿಟ್ಟು ಅದೃಶ್ಯರಾಗಿ ಹೋದರು.

ರಾಜನು ಅವುಗಳನ್ನು ಕರೆತಂದು ಊರ್ವಶಿಗೆ ಒಪ್ಪಿಸಲು ಬಂದಾಗ, ನಗ್ನನಾಗಿದ್ದ ರಾಜನನ್ನು ಕಂಡು, ಸಮಯ ಭಂಗವಾಯಿತೆಂದು, ಅವಳು ತತ್‌ಕ್ಷಣವೇ ಕಾಣದಾದಳು. ಇಲಾಪುತ್ರನು ಜಾಯೆಯನ್ನು ಶಯನದಲ್ಲಿ ಕಾಣದೆ, ವಿರಾಹಾರ್ತನಾಗಿ, ಹುಚ್ಚನಂತೆ ತಿರುಗುತ್ತಿದ್ದನು. ಒಂದು ಸಲ ಕುರುಕ್ಷೇತ್ರದ ಸರಸ್ವತೀರದಲ್ಲಿ, ಪಂಚಸಖಿಯರಿಂದ ಕೂಡಿ ಬಂದ ಊರ್ವಶಿಯನ್ನು ನೋಡಿ ರಾಜನು, ಮುದಿಂದ ಸುರತ ಮಂತ್ರಾಲಾಪವನ್ನು ಇಂತು ನುಡಿದನು–

ಸುರತ ಕುಶಲೇ! ಅಹೋ! ಪ್ರಿಯೆ! ನಿಲ್ಲು. ಮನಃಪೂರ್ವಕವಾಗಿ ಹಿಂದಿನಂತೆ ನನ್ನೊಡನೆ ವಿಹರಿಸು ನನ್ನನ್ನು ಬಿಟ್ಟು ಹೋಗಬೇಡ. ನನ್ನಲ್ಲಿ ಕರುಣೆ ತೋರು. ಸುರತ ಮಂತ್ರ ಪಠನವು ಇನ್ನು ಪೂರ್ತಿಯಾಗಿಲ್ಲ ದೇವಿ! ಈ ನನ್ನ ಜ್ಞಾನಸಾಧನವಾದ ದೇಹವು ಈಗ ಇಲ್ಲೇ ಆಧಾರ

ರಹಿತವಾಗಿ ಬಿದ್ದುಹೋಗುವುದು. ಭೂಮಿಯಲ್ಲಿ ಬಿದ್ದಿರುವ ನನ್ನ ಶರೀರವನ್ನು ಭಕ್ಷಣ ಸಂಭ್ರಮಾಕುಲವಾದ ತೋಳಗಳು ಕಿತ್ತಿ ತಿನ್ನುವುವು. ಶ್ರೀಹರಿ ಪ್ರಸಾದ ದೂರವಾದ ನರನ ಶರೀರವನ್ನು ಇಂದ್ರಿಯಗಳೆಂಬ ತೋಳಗಳು ಹೀರಿ ಜೀರ್ಣಿಸಿ ನಾಶಪಡಿಸುವಂತೆ, ನಿನ್ನ ಅನುಗ್ರಹ ವಿಲ್ಲದೆ ನೊಂದ ನನ್ನ ಶರೀರವನ್ನು ನಿನ್ನ ವಿಹರಾಗ್ನಿಯು ನಾಶಪಡಿಸದೆ ಬಿಡದು.

ಆಗ ಊರ್ವಶಿಯು ಇಂತೆಂದಳು-

ರಾಜನ್! ನನ್ನ ಸಂಗವನ್ನೇಕೆ ಬಯಸುವೆ? ನಿನ್ನೆಯ ಉಷಸ್ಸಿನ ಸಂಗವನ್ನು ಇಂದಿನ ಉಷಸ್ಸು ಬಯಸಿದರೆ ಸಿಗುವುದೇ? ನಾನು ನಿನಗೆ ಸಿಗಲಾರೆನು. ಗಾಳಿಯನ್ನು ಕಟ್ಟಲಾರದಂತೆಯೇ ನೀನು ನನ್ನನ್ನೂ ನಿನ್ನ ತೋಳಬಂಧನದಲ್ಲಿ ಕಟ್ಟಲಾರೆ. ಪುರುಷವರನಾದ ನೀನು ಅಬಲೆಯಂತೆ ಸಾಯುವೆನೆಂದು ಆಳಬಹುದೇ? ನೀನು ಸಾಯುವುದೂ ಬೇಡ. ತೋಳಗಳು ನಿನ್ನ ದೇಹವನ್ನು ತಿನ್ನುವುದೂ ಬೇಡ. ತೋಳದಂತೆ ಶರೀರವನ್ನಾಶೆಪಡುವ ವೇಶ್ಯಯರಿಗೆಲ್ಲಿಯ ಪ್ರೇಮ. ಕಾಮಪರವಶನಾಗಿ ಕೇಡಬೇಡ! ತರುಣೀ ಹೃದಯವು ಕಠಿನವಾದುದು; ಕಠಿನತರವಾದುದು ಅಂಗನಾಹೃದಯವು; ಕಠಿನತಮವೂ ಅದೇ. ನಾವು ಹೆಸರಿಗೆ ಅಬಲೆಯಾದರೂ ಕಾರ್ಯನಿರ್ವ ಹಣೆಯಲ್ಲಿ ಕ್ರೂರ, ದುರ್ಮುಖಿಯರು ಆಗುವೆವು. ಪ್ರಿಯರೆಂದು ಎಣಿಸದೆ ಬೇಕಾದಾಗ ಸ್ವಲ್ಪ ಲಾಭಕ್ಕಾಗಿಯೂ ಪತಿಯನ್ನಾಗಲಿ, ಸೋದರರನ್ನಾಗಲಿ ಪೀಡಿಸುವೆವು. ನಂಬಿ ನಡೆಯುವಂತೆ ನಟಿಸಿ, ನಮ್ಮನ್ನು ನಂಬಿದ ನಲ್ಲರನ್ನು ವಂಚಿಸುತ್ತಾ, ನವ ಪದಾರ್ಥಗಳನ್ನು ಬೇಡಿ ಪಡೆಯುತ್ತಿರು ವೆವು. ಸ್ವೈರವಾಗಿ ಚರಿಸುವ ನಮ್ಮ ಸ್ನೇಹವನ್ನು ಏಕೆ ಬಯಸುವೆ? ರಾಜನ್! ನಿನ್ನನ್ನು ನೋಡಿ ನಿನ್ನ ವಿರಹ ವ್ಯಥೆಯನ್ನೂ ನೋಡಿ ಮರುಕದಿಂದ ಪೇಳುವೆನು ಕೇಳು. ನಾನೀಗ ಗರ್ಭವತಿಯಾಗಿ ರುವೆನು. ಒಂದು ವರ್ಷ ತಾಳಿ ಬಾ. ಇಲ್ಲಿಯೇ ನಿನಗೆ ಸುಪುತ್ರನನ್ನು. ಪುನಸ್ಸಂಗಮವನ್ನು ಕೊಡುವೆನು.

ಅಂತೆಯೇ ನಡೆದು ರಾಜನು ಒಂದು ವರ್ಷವಾದ ಮೇಲೆ ಪುನಃ ಕುರುಕ್ಷೇತ್ರದಲ್ಲಿ ಊರ್ವಶಿ ಯನ್ನೂ ನೋಡಿ, ಆಕೆಯೊಡನೆ ಒಂದು ದಿನ ಸಂತಸದಿಂದಿದ್ದನು. ವಿರಹಾತುರನಾಗಿ, ಬಿಡಲಾರ ದಿದ್ದ ರಾಜನನ್ನು ನೋಡಿ 'ತ್ರಿಕರಣಶುದ್ಧಿಯಿಂದ ಗಂಧರ್ವರನ್ನು ಸ್ತುತಿಸು. ಪ್ರೀತರಾಗಿ ಅವರು ನನ್ನನ್ನು ನಿನಗೆ ಕೊಡುವರು' ಎಂದು ಉಪದೇಶಿಸಿದಳು. ರಾಜನ ಸ್ತುತಿಯಿಂದ ತುಷ್ಟರಾದ ಗಂಧರ್ವರು ಅವನಿಗೆ ಒಂದು ಅಗ್ನಿಸ್ಥಾಪನ ಪಾತ್ರೆಯನ್ನಿತ್ತರು. ಅದನ್ನೇ ಊರ್ವಶಿಯೆಂದು ತಿಳಿದು ಕಾಮೋನ್ಮಾದದಿಂದ ವನದಲ್ಲಿ ಚರಿಸುತ್ತಿದ್ದ ರಾಜನಿಗೆ ಅದು ಅಗ್ನಿಸ್ಥಾಲಿ-ಊರ್ವಶಿ ಅಲ್ಲವೆಂಬ ಅರಿವಾಯಿತು. ಆ ಸ್ಥಾಲಿಯನ್ನು ಅರಣ್ಯದಲ್ಲಿ ಬಿಟ್ಟು ಮನೆಗೆ ಹೋಗಿ ರಾಜನು ಒಂದು ರಾತ್ರಿಯನ್ನು ಕಳೆದನು. ಆ ದಿನ ತ್ರೇತಾಯುಗದ ಪ್ರಾರಂಭವಾಗಿತ್ತು. ಆ ವೀರನರವರನು ಅಗ್ನ್ಯಾಧಾನಾದಿ ಸಾಂಗವೇದ ಜ್ಞಾನವನ್ನು ಪೊಂದಿ 'ಗಂಧರ್ವರು ಅಗ್ನ್ಯಾಧಾನ ದಿಂದ ಯಜಿಸಿ ಊರ್ವಶೀಲೋಕವನ್ನು ಸೇರು – ಎಂದೇ ಸ್ಥಾಲಿಯನ್ನಿತ್ತಿರುವರೆಂಬುದನ್ನೂ ತಿಳಿದನು. ವನವನ್ನು ಸೇರಿ ಹುಡುಕಲು ಸ್ಥಾಲಿಯ ಸ್ಥಾನದಲ್ಲಿ ಶಮೀವೃಕ್ಷವನ್ನು ತನ್ನಲ್ಲಿಟ್ಟು ಕೊಂಡು ಬೆಳೆದು ನಿಂದ ಅಶ್ವತ್ಥವು ಕಂಡುಬಂತು. ಪಾತ್ರೆಯೇ ಶಮೀ (ಸ್ತ್ರೀಲಿಂಗ) –ಅಗ್ನಿಯೇ ಅಶ್ವತ್ಥ (ಪುಲ್ಲಿಂಗ) ವೆಂದು, ಆ ವೃಕ್ಷದಿಂದ ಎರಡು ಅರಣಿಗಳನ್ನು ಮಾಡಿ ಊರ್ವಶೀ ಮಂತ್ರದಿಂದ ಮಥಿಸಿದನು. ಊರ್ವಶಿಯೇ ಅಧರ ರಾಣಿಯು – ತಾನೇ ಉತ್ತರಾರಣಿಯು, ಪ್ರಜನನವೇ ಸಾಧನವೆಂದು ಅನುಸಂಧಾನವನ್ನು ಮಾಡಿ ಧ್ಯಾನಸಮರ್ಥನಾದ ರಾಜನು ಮಥಿಸಲು ಜಾತವೇದ ಎಂಬುವ

ಅಗ್ನಿಯು ಪುಟ್ಟಿದನು. ವೇದತ್ರಯನಾಮದಿಂದ ಖ್ಯಾತನಾದ, ಜ್ಞಾನ, ಕರ್ಮ, ಸ್ತುತಿರೂಪನಾದ, ಅಕಾರ, ಉಕಾರ, ಮಕಾರ, ಪ್ರತಿಪಾದ್ಯನಾದ ಶ್ರೀಹರಿಯು, ಆ ರಾಜನ ಯಜ್ಞದಿಂದ ಪ್ರೀತನಾಗಿ ಅವನಿಗೆ ಊರ್ವಶೀಲೋಕವನ್ನು ಕೊಡಿಸಿದನು.

ಹಿಂದೆ ಕೃತಯುಗದಲ್ಲಿ 'ಓಂ' ಎಂದೂ, 'ಅ' ಎಂದೂ ಒಂದೇ ಪ್ರಕಾರವಾಗಿ ಉಪಾಸಿಸಲ್ಪಡುತ್ತಿರುವ ಶ್ರೀಹರಿಯು, ಪುರೂರವಸನಿಗೆ ತ್ರೇತಾಗ್ನಿಗಳು ಪುತ್ರರಾಗಿ ಯಜ್ಞಾದಿ ಸಾಧನರಾಗುತ್ತಿರಲು ತಾನೂ 'ಅ, ಉ, ಮ' ಎಂದೂ ವೇದತ್ರಯರೂಪದಿಂದಲು ತ್ರೇತಾಮುಖದಲ್ಲಿ ಅಭಿವ್ಯಕ್ತನಾದನು. ಆ ಯಜ್ಞೇಶನಾದ ಶ್ರೀಹರಿಗೆ ಶಿರಸಾ ವಂದನವು.

## ೧೩. ಋಚೀಕ-ಪರಶುರಾಮ ಕಥಾ

ಐಲನಿಗೆ (ಪುರೂರವ) ಊರ್ವಶಿಯಿಂದ ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ, ಜಯ ಎಂಬ ಆರು ಸುತರಾದರು. ವಸುಮಂತನು ಶ್ರುತಾಯುವಿನ ಪುತ್ರನು. ಸತ್ಯಾಯುವಿಗೆ ಶ್ರುತಂಜಯನು, ರಯನಿಗೆ ಅದ್ಭುತನು, ಜಯನಿಗೆ ಅಮಿತನು, ವಿಜಯನಿಗೆ ಭೀಮನು ಸುತರು. ಭೀಮನ ಮಗನೇ ಕಾಂಚನನು. ಅವನಿಗೆ ಹೋತ್ರಕನು, ಅವನಿಗೆ ಜಹ್ನುವು ಸುತರಾದರು. ಜಹ್ನುವು ಗಂಗೆಯನ್ನು ಕುಡಿದುಬಿಟ್ಟನು, ಆದ್ದರಿಂದ ಆಕೆ ಜಾಹ್ನವಿ ಎಂದು ಖ್ಯಾತಳಾದಳು. ಜಹ್ನುಸುತನಾದ ಪುರವಿಗೆ ಬಲಾಕನು, ಅವನಿಗೆ ಅಜಕನು, ಅವನಿಗೆ ಕುಶನು ಪುಟ್ಟಿದರು. ಕುಶನಿಗೆ ಕುಶಾಂಬು, ತನಯ, ವಸು, ಕುಶನಾಭರೆಂಬ ನಾಲ್ವರು ಸುತರು. ಕುಶಾಂಬುವಿನ ಪುತ್ರನಾದ ಗಾಧಿಯು ಇಂದ್ರಾಂಶಜನು. ಅವನ ಮಗಳಾದ ಸತ್ಯವತಿಯನ್ನು ಋಚೀಕನೆಂಬ ಋಷಿವರನು ಯಾಚಿಸಿದನು. ತಕ್ಕ ವರನಲ್ಲವೆಂದು ರಾಜನು 'ಭೃಗುಕುಲ ತಿಲಕ! ಒಂದೇ ಕಿವಿ ಕಪ್ಪಾಗಿ ಚಂದ್ರಪಾಂಡುರವಾಗಿರುವ ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ತಂದುಕೊಡು. ಮಗಳನ್ನು ಕೊಡುವೆ'ನೆಂದನು. ಆ ಮುನಿವರನು ವರುಣನನ್ನು ಬೇಡಿ ಕುದುರೆಗಳನ್ನು ತಂದೊಪ್ಪಿಸಿದಾಗ, ರಾಜನು ಮದುವೆ ಮಾಡಿಕೊಟ್ಟು ಕಳಿಸಿದನು.

ಒಂದು ದಿನ ತನ್ನ ಪತ್ನಿಯು, ಅತ್ತೆಯು, ಸಂತಾನಾರ್ಥಿನಿಯರಾಗಿ ಬೇಡಲು, ಋಚೀಕನು ಯಜ್ಞವನ್ನು ಮಾಡಲು ಪ್ರಾರಂಭಿಸಿ, ಸಾತ್ತ್ವಿಕ ರಾಜಸ ಪುಂಸವನ ಮಂತ್ರಗಳಿಂದ ಅಭಿಮಂತ್ರಿತವಾದ ಚರುಗಳನ್ನು ಯಜ್ಞಶಾಲೆಯಲ್ಲಿಟ್ಟಿದ್ದನು. ಋಷಿಯು ನದಿಗೆ ಪೋದಾಗ, ತಾಯಿಯು ಉತ್ತಮವಾಗುವುದೆಂದು ಪತ್ನೀ ಪಕ್ಷಪಾತದಿಂದ ಅಭಿಮಂತ್ರಿಸಿಟ್ಟಿದ್ದ ಚರುವನ್ನು ನನಗೆ ಕೊಡು ಎಂದು ಬೇಡಲು, ಸತ್ಯವತಿಯು ತನ್ನ ಚರುವನ್ನವಳಿಗೆ ಕೊಟ್ಟು, ಅವಳ ಚರುವನ್ನು ತಾನು ಭಕ್ಷಿಸಿದಳು.

ಋಚೀಕನಿಗಿದು ಗೊತ್ತಾದಾಗ 'ಛೀ! ಎಂತಹ ಕೆಲಸವನ್ನು ಮಾಡಿದೆ! ನಿನ್ನ ಚರುವ್ಯತ್ಯಾಸದಿಂದ ನಿನಗೆ ಘೋರದಂಡಧರನಾದ ಪುತ್ರನು, ನಿನ್ನ ಜನನಿಗೆ ಬ್ರಹ್ಮವಿದನು ಪುಟ್ಟುವರು' ಎಂದನು. ಆಗ ಸತ್ಯವತಿಯು ಪಶ್ಚಾತ್ತಾಪದಿಂದ ಹಾಗಾಗಬಾರದೆಂದು ಬೇಡಲು, 'ಒಳ್ಳೆಯದು. ನಿನ್ನ ಮೊಮ್ಮಗನು ಕ್ರೂರನಾಗುವನು – ಮಗನು ಋಷಿಯೇ ಆಗುವನೆಂದು' ಕರುಣಿಸಿದನು. ಸತ್ಯವತಿಗೆ ಜಮದಗ್ನಿಯು ಪುಟ್ಟಿದನು. ಆ ಸತ್ಯವತಿಯೇ ಪರಮಪುಣ್ಯಪ್ರದ ಕೌಶಿಕೀನದಿಯಾಗಿ ಲೋಕವನ್ನು ಪವಿತ್ರೀಕರಿಸುತ್ತಿರುವಳು. ಜಮದಗ್ನಿಯು ರೇಣುಮುನಿಸುತೆಯಾದ ರೇಣುಕೆಯನ್ನು

ರಹಿತವಾಗಿ ಬಿದ್ದುಹೋಗುವುದು. ಭೂಮಿಯಲ್ಲಿ ಬಿದ್ದಿರುವ ನನ್ನ ಶರೀರವನ್ನು ಭಕ್ಷಣ ಸಂಭ್ರಮಾಕುಲವಾದ ತೋಳಗಳು ಕಿತ್ತಿ ತಿನ್ನುವುವು. ಶ್ರೀಹರಿ ಪ್ರಸಾದ ದೂರವಾದ ನರನ ಶರೀರವನ್ನು ಇಂದ್ರಿಯಗಳೆಂಬ ತೋಳಗಳು ಹೀರಿ ಜೀರ್ಣಿಸಿ ನಾಶಪಡಿಸುವಂತೆ, ನಿನ್ನ ಅನುಗ್ರಹ ವಿಲ್ಲದೆ ನೊಂದ ನನ್ನ ಶರೀರವನ್ನು ನಿನ್ನ ವಿಹರಾಗ್ನಿಯು ನಾಶಪಡಿಸದೆ ಬಿಡದು.

ಆಗ ಊರ್ವಶಿಯು ಇಂತೆಂದಳು-

ರಾಜನ್! ನನ್ನ ಸಂಗವನ್ನೇಕೆ ಬಯಸುವೆ? ನಿನ್ನೆಯ ಉಷಸ್ಸಿನ ಸಂಗವನ್ನು ಇಂದಿನ ಉಷಸ್ಸು ಬಯಸಿದರೆ ಸಿಗುವುದೇ? ನಾನು ನಿನಗೆ ಸಿಗಲಾರೆನು. ಗಾಳಿಯನ್ನು ಕಟ್ಟಲಾರದಂತೆಯೇ ನೀನು ನನ್ನನ್ನೂ ನಿನ್ನ ತೋಳಬಂಧನದಲ್ಲಿ ಕಟ್ಟಲಾರೆ. ಪುರುಷವರನಾದ ನೀನು ಅಬಲೆಯಂತೆ ಸಾಯುವೆನೆಂದು ಆಳಬಹುದೇ? ನೀನು ಸಾಯುವುದೂ ಬೇಡ. ತೋಳಗಳು ನಿನ್ನ ದೇಹವನ್ನು ತಿನ್ನುವುದೂ ಬೇಡ. ತೋಳದಂತೆ ಶರೀರವನ್ನಾಶೆಪಡುವ ವೇಶ್ಯಯರಿಗೆಲ್ಲಿಯ ಪ್ರೇಮ. ಕಾಮಪರವಶನಾಗಿ ಕೇಡಬೇಡ! ತರುಣೀ ಹೃದಯವು ಕಠಿನವಾದುದು; ಕಠಿನತರವಾದುದು ಅಂಗನಾಹೃದಯವು; ಕಠಿನತಮವೂ ಅದೇ. ನಾವು ಹೆಸರಿಗೆ ಅಬಲೆಯಾದರೂ ಕಾರ್ಯನಿರ್ವ ಹಣೆಯಲ್ಲಿ ಕ್ರೂರ, ದುರ್ಮುಖಿಯರು ಆಗುವೆವು. ಪ್ರಿಯರೆಂದು ಎಣಿಸದೆ ಬೇಕಾದಾಗ ಸ್ವಲ್ಪ ಲಾಭಕ್ಕಾಗಿಯೂ ಪತಿಯನ್ನಾಗಲಿ, ಸೋದರರನ್ನಾಗಲಿ ಪೀಡಿಸುವೆವು. ನಂಬಿ ನಡೆಯುವಂತೆ ನಟಿಸಿ, ನಮ್ಮನ್ನು ನಂಬಿದ ನಲ್ಲರನ್ನು ವಂಚಿಸುತ್ತಾ, ನವ ಪದಾರ್ಥಗಳನ್ನು ಬೇಡಿ ಪಡೆಯುತ್ತಿರು ವೆವು. ಸ್ವೈರವಾಗಿ ಚರಿಸುವ ನಮ್ಮ ಸ್ನೇಹವನ್ನು ಏಕೆ ಬಯಸುವೆ? ರಾಜನ್! ನಿನ್ನನ್ನು ನೋಡಿ ನಿನ್ನ ವಿರಹ ವ್ಯಥೆಯನ್ನೂ ನೋಡಿ ಮರುಕದಿಂದ ಪೇಳುವೆನು ಕೇಳು. ನಾನೀಗ ಗರ್ಭವತಿಯಾಗಿ ರುವೆನು. ಒಂದು ವರ್ಷ ತಾಳಿ ಬಾ. ಇಲ್ಲಿಯೇ ನಿನಗೆ ಸುಪುತ್ರನನ್ನು. ಪುನಸ್ಸಂಗಮವನ್ನು ಕೊಡುವೆನು.

ಅಂತೆಯೇ ನಡೆದು ರಾಜನು ಒಂದು ವರ್ಷವಾದ ಮೇಲೆ ಪುನಃ ಕುರುಕ್ಷೇತ್ರದಲ್ಲಿ ಊರ್ವಶಿ ಯನ್ನೂ ನೋಡಿ, ಆಕೆಯೊಡನೆ ಒಂದು ದಿನ ಸಂತಸದಿಂದಿದ್ದನು. ವಿರಹಾತುರನಾಗಿ, ಬಿಡಲಾರ ದಿದ್ದ ರಾಜನನ್ನು ನೋಡಿ 'ತ್ರಿಕರಣಶುದ್ಧಿಯಿಂದ ಗಂಧರ್ವರನ್ನು ಸ್ತುತಿಸು. ಪ್ರೀತರಾಗಿ ಅವರು ನನ್ನನ್ನು ನಿನಗೆ ಕೊಡುವರು' ಎಂದು ಉಪದೇಶಿಸಿದಳು. ರಾಜನ ಸ್ತುತಿಯಿಂದ ತುಷ್ಟರಾದ ಗಂಧರ್ವರು ಅವನಿಗೆ ಒಂದು ಅಗ್ನಿಸ್ಥಾಪನ ಪಾತ್ರೆಯನ್ನಿತ್ತರು. ಅದನ್ನೇ ಊರ್ವಶಿಯೆಂದು ತಿಳಿದು ಕಾಮೋನ್ಮಾದದಿಂದ ವನದಲ್ಲಿ ಚರಿಸುತ್ತಿದ್ದ ರಾಜನಿಗೆ ಅದು ಅಗ್ನಿಸ್ಥಾಲಿ-ಊರ್ವಶಿ ಅಲ್ಲವೆಂಬ ಅರಿವಾಯಿತು. ಆ ಸ್ಥಾಲಿಯನ್ನು ಅರಣ್ಯದಲ್ಲಿ ಬಿಟ್ಟು ಮನೆಗೆ ಹೋಗಿ ರಾಜನು ಒಂದು ರಾತ್ರಿಯನ್ನು ಕಳೆದನು. ಆ ದಿನ ತ್ರೇತಾಯುಗದ ಪ್ರಾರಂಭವಾಗಿತ್ತು. ಆ ವೀರನರವರನು ಅಗ್ನ್ಯಾಧಾನಾದಿ ಸಾಂಗವೇದ ಜ್ಞಾನವನ್ನು ಪೊಂದಿ 'ಗಂಧರ್ವರು ಅಗ್ನ್ಯಾಧಾನ ದಿಂದ ಯಜಿಸಿ ಊರ್ವಶೀಲೋಕವನ್ನು ಸೇರು – ಎಂದೇ ಸ್ಥಾಲಿಯನ್ನಿತ್ತಿರುವರೆಂಬುದನ್ನೂ ತಿಳಿದನು. ವನವನ್ನು ಸೇರಿ ಹುಡುಕಲು ಸ್ಥಾಲಿಯ ಸ್ಥಾನದಲ್ಲಿ ಶಮೀವೃಕ್ಷವನ್ನು ತನ್ನಲ್ಲಿಟ್ಟು ಕೊಂಡು ಬೆಳೆದು ನಿಂದ ಅಶ್ವತ್ಥವು ಕಂಡುಬಂತು. ಪಾತ್ರೆಯೇ ಶಮೀ (ಸ್ತ್ರೀಲಿಂಗ) –ಅಗ್ನಿಯೇ ಅಶ್ವತ್ಥ (ಪುಲ್ಲಿಂಗ) ವೆಂದು, ಆ ವೃಕ್ಷದಿಂದ ಎರಡು ಅರಣಿಗಳನ್ನು ಮಾಡಿ ಊರ್ವಶೀ ಮಂತ್ರದಿಂದ ಮಥಿಸಿದನು. ಊರ್ವಶಿಯೇ ಅಧರ ರಾಣಿಯು – ತಾನೇ ಉತ್ತರಾರಣಿಯು, ಪ್ರಜನನವೇ ಸಾಧನವೆಂದು ಅನುಸಂಧಾನವನ್ನು ಮಾಡಿ ಧ್ಯಾನಸಮರ್ಥನಾದ ರಾಜನು ಮಥಿಸಲು ಜಾತವೇದ ಎಂಬುವ

ಅಗ್ನಿಯು ಪುಟ್ಟಿದನು. ವೇದತ್ರಯನಾಮದಿಂದ ಖ್ಯಾತನಾದ, ಜ್ಞಾನ, ಕರ್ಮ, ಸ್ತುತಿರೂಪನಾದ, ಆಕಾರ, ಉಕಾರ, ಮಕಾರ, ಪ್ರತಿಪಾದ್ಯನಾದ ಶ್ರೀಹರಿಯು, ಆ ರಾಜನ ಯಜ್ಞದಿಂದ ಪ್ರೀತನಾಗಿ ಅವನಿಗೆ ಊರ್ವಶೀಲೋಕವನ್ನು ಕೊಡಿಸಿದನು.

ಹಿಂದೆ ಕೃತಯುಗದಲ್ಲಿ 'ಓಂ' ಎಂದೂ, 'ಅ' ಎಂದೂ ಒಂದೇ ಪ್ರಕಾರವಾಗಿ ಉಪಾಸಿಸಲ್ಪಡುತ್ತಿರುವ ಶ್ರೀಹರಿಯು, ಪುರೂರವಸನಿಗೆ ತ್ರೇತಾಗ್ನಿಗಳು ಪುತ್ರರಾಗಿ ಯಜ್ಞಾದಿ ಸಾಧನರಾಗುತ್ತಿರಲು ತಾನೂ 'ಅ, ಉ, ಮ' ಎಂದೂ ವೇದತ್ರಯರೂಪದಿಂದಲು ತ್ರೇತಾಮುಖದಲ್ಲಿ ಅಭಿವ್ಯಕ್ತನಾದನು. ಆ ಯಜ್ಞೇಶನಾದ ಶ್ರೀಹರಿಗೆ ಶಿರಸಾ ವಂದನವು.

## ೧೩. ಋಚೀಕ-ಪರಶುರಾಮ ಕಥಾ

ಐಲನಿಗೆ (ಪುರೂರವ) ಊರ್ವಶಿಯಿಂದ ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ, ಜಯ ಎಂಬ ಆರು ಸುತರಾದರು. ವಸುಮಂತನು ಶ್ರುತಾಯುವಿನ ಪುತ್ರನು. ಸತ್ಯಾಯುವಿಗೆ ಶ್ರುತಂಜಯನು, ರಯನಿಗೆ ಅದ್ಭುತನು, ಜಯನಿಗೆ ಅಮಿತನು, ವಿಜಯನಿಗೆ ಭೀಮನು ಸುತರು. ಭೀಮನ ಮಗನೇ ಕಾಂಚನನು. ಅವನಿಗೆ ಹೋತ್ರಕನು, ಅವನಿಗೆ ಜಹ್ನುವು ಸುತರಾದರು. ಜಹ್ನುವು ಗಂಗೆಯನ್ನು ಕುಡಿದುಬಿಟ್ಟನು, ಆದ್ದರಿಂದ ಆಕೆ ಜಾಹ್ನವಿ ಎಂದು ಖ್ಯಾತಳಾದಳು. ಜಹ್ನುಸುತನಾದ ಪುರವಿಗೆ ಬಲಾಕನು, ಅವನಿಗೆ ಅಜಕನು, ಅವನಿಗೆ ಕುಶನು ಪುಟ್ಟಿದರು. ಕುಶನಿಗೆ ಕುಶಾಂಬು, ತನಯ, ವಸು, ಕುಶನಾಭರೆಂಬ ನಾಲ್ವರು ಸುತರು. ಕುಶಾಂಬುವಿನ ಪುತ್ರನಾದ ಗಾಧಿಯು ಇಂದ್ರಾಂಶಜನು. ಅವನ ಮಗಳಾದ ಸತ್ಯವತಿಯನ್ನು ಋಚೀಕನೆಂಬ ಋಷಿವರನು ಯಾಚಿಸಿದನು. ತಕ್ಕ ವರನಲ್ಲವೆಂದು ರಾಜನು 'ಭೃಗಕುಲ ತಿಲಕ! ಒಂದೇ ಕಿವಿ ಕಪ್ಪಾಗಿ ಚಂದ್ರಪಾಂಡುರವಾಗಿರುವ ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ತಂದುಕೊಡು. ಮಗಳನ್ನು ಕೊಡುವೆ'ನೆಂದನು. ಆ ಮುನಿವರನು ವರುಣನನ್ನು ಬೇಡಿ ಕುದುರೆಗಳನ್ನು ತಂದೊಪ್ಪಿಸಿದಾಗ, ರಾಜನು ಮದುವೆ ಮಾಡಿಕೊಟ್ಟು ಕಳಿಸಿದನು.

ಒಂದು ದಿನ ತನ್ನ ಪತ್ನಿಯು, ಅತ್ತೆಯು, ಸಂತಾನಾರ್ಥಿನಿಯರಾಗಿ ಬೇಡಲು, ಋಚೀಕನು ಯಜ್ಞವನ್ನು ಮಾಡಲು ಪ್ರಾರಂಭಿಸಿ, ಸಾತ್ತ್ವಿಕ ರಾಜಸ ಪುಂಸವನ ಮಂತ್ರಗಳಿಂದ ಅಭಿಮಂತ್ರಿತವಾದ ಚರುಗಳನ್ನು ಯಜ್ಞಶಾಲೆಯಲ್ಲಿಟ್ಟಿದ್ದನು. ಋಷಿಯು ನದಿಗೆ ಪೋದಾಗ, ತಾಯಿಯು ಉತ್ತಮವಾಗುವುದೆಂದು ಪತ್ನೀ ಪಕ್ಷಪಾತದಿಂದ ಅಭಿಮಂತ್ರಿಸಿಟ್ಟಿದ್ದ ಚರುವನ್ನು ನನಗೆ ಕೊಡು ಎಂದು ಬೇಡಲು, ಸತ್ಯವತಿಯು ತನ್ನ ಚರುವನ್ನವಳಿಗೆ ಕೊಟ್ಟು, ಅವಳ ಚರುವನ್ನು ತಾನು ಭಕ್ಷಿಸಿದಳು.

ಋಚೀಕನಿಗಿದು ಗೊತ್ತಾದಾಗ 'ಛೀ! ಎಂತಹ ಕೆಲಸವನ್ನು ಮಾಡಿದೆ! ನಿನ್ನ ಚರುವ್ಯತ್ಯಾಸದಿಂದ ನಿನಗೆ ಘೋರದಂಡಧರನಾದ ಪುತ್ರನು, ನಿನ್ನ ಜನನಿಗೆ ಬ್ರಹ್ಮವಿದನು ಪುಟ್ಟುವರು' ಎಂದನು. ಆಗ ಸತ್ಯವತಿಯು ಪಶ್ಚಾತ್ತಾಪದಿಂದ ಹಾಗಾಗಬಾರದೆಂದು ಬೇಡಲು, 'ಒಳ್ಳೆಯದು. ನಿನ್ನ ಮೊಮ್ಮಗನು ಕ್ರೂರನಾಗುವನು – ಮಗನು ಋಷಿಯೇ ಆಗುವನೆಂದು' ಕರುಣಿಸಿದನು. ಸತ್ಯವತಿಗೆ ಜಮದಗ್ನಿಯು ಪುಟ್ಟಿದನು. ಆ ಸತ್ಯವತಿಯೇ ಪರಮಪುಣ್ಯಪ್ರದ ಕೌಶಿಕೀನದಿಯಾಗಿ ಲೋಕವನ್ನು ಪವಿತ್ರೀಕರಿಸುತ್ತಿರುವಳು. ಜಮದಗ್ನಿಯು ರೇಣುಮುನಿಸುತೆಯಾದ ರೇಣುಕೆಯನ್ನು

ಮದುವೆಯಾಗಿ ವಸುಮಾನ್ ಮುಂತಾದ ಸುತರನ್ನು ಪಡೆದನು. ಕೊನೆಯ ಮಗನೆ ಪರಶುರಾಮನು. ಶ್ರೀಹರಿಯ ಸ್ವರೂಪಾಂಶಜಾತನಾದ ಭಾರ್ಗವ ರಾಮನು, ದರ್ಪಿಸಿ ದುಷ್ಕಾರ್ಯರತರಾದ ರಾಜರನ್ನು ಇಪ್ಪತ್ತೊಂದು ಸಲ ದಂಡಯಾತ್ರೆಯನ್ನು ಮಾಡಿ ಕೊಂದು, ಭೂಮಿಯ ನಿಃಕ್ಷತ್ರಿಯವಾಗುವಂತೆ ಮಾಡಿದನು. ಧರ್ಮದೂರರು, ಪ್ರಜಾಪೀಡಕರು, ವಿಪ್ರವಿರೋಧಿಗಳು ರಜಸ್ತಮಃಸ್ವಭಾವರು, ದುರಹಂಕಾರಿಗಳು ಆದ ರಾಜರನ್ನು, ಒಬ್ಬ ರಾಜನ ಸ್ವಲ್ಪಾಪರಾಧದ ನೆವವಿಟ್ಟು, ಸಂಹರಿಸಿ, ಭೂಭಾರವನ್ನಿಳುಹಿದನು.

ರಾಜನು ಪ್ರಶ್ನಿಸಿದನು–

ಸ್ವಾಮೀ! ಕ್ಷತ್ರಿಯ ಕುಲವನ್ನೇ ಉಳಿಸದ ಪುನಃಪುನಃ ಸಂಹರಿಸಲು ಕಾರಣವೇನು? ಭಗವಂತನಲ್ಲಿ ಆ ರಾಜರು ಮಾಡಿದ ಅಪರಾಧವಾವುದು? ಅವರ ಸ್ವೇಚ್ಛಾಚಾರವನ್ನು ಕಂಡು ಕುಪಿತನಾಗಿ ಅವರನ್ನೆಲ್ಲ ಭಗವಂತನು ಸಂಹರಿಸಿದುದು ನ್ಯಾಯವಾಗಿದೆ.

ಶ್ರೀಶುಕನು ಹೇಳಿದನು–

ಹೈಹಯದೇಶಾಧಿಪತಿಯಾದ ಕೃತವೀರ್ಯನ ಸುತ ಅರ್ಜುನನು ಶ್ರೀನಾರಾಯಣಾಂಶನಾದ ದತ್ತಾತ್ರೇಯನನ್ನು ಸೇವಿಸಿ, ಯೋಗನಿಪುಣನಾದನು. ಅವನಿಗೆ ಶ್ರೀಹರಿ ದಯದಿಂದ ಅಣಿಮಾದಿ ಸಿದ್ಧಿಗಳು, ಇಂದ್ರಿಯಬಲ, ಕಾಂತಿ, ವೀರ್ಯ, ಯಶಃಪ್ರಭಾವಗಳು, ಕರಗತವಾಗಿದ್ದುವು. ಶತ್ರುಜಯವನ್ನು, ಯುದ್ಧಕಾಲದಲ್ಲಿ ಬಾಹುಸಹಸ್ರವನ್ನು ವರವಾಗಿ ಪಡೆದು ದುರ್ಮದನಾಗಿ ಅಡ್ಡಿಯಿಲ್ಲದೆ ಅನಿಲನಂತೆ ಅವನಿಯಲ್ಲಿ ಸಂಚರಿಸುತ್ತಿದ್ದನು.

ಒಂದು ಸಲ ಕಾರ್ತವೀರ್ಯನು ಸ್ತ್ರೀರತ್ನಸಮೇತನಾಗಿ ನರ್ಮದೆಯಲ್ಲಿ ಜಲಕ್ರೀಡೆಯನ್ನಾಡುತ್ತಿದ್ದನು. ಭುಜಸಹಸ್ರಗಳಿಂದ ನದಿಗೆ ಅಡ್ಡಕಟ್ಟಿ ಆಡುವಾಗ, ಆ ನದಿಯು ಹಿಮ್ಮೆಟ್ಟಿ ನೆರೆ ಬಂದಂತಾಗಿ ರಾವಣನ ಶಿಬಿರವೇ ಕೊಚ್ಚಿಹೋಯಿತು. ಅವನು ಸಿಟ್ಟಿನಿಂದ ಬಂದು ಅರ್ಜುನನನ್ನು ನಿಂದಿಸಿದನು. ಅರ್ಜುನನಾಗ ರಾವಣನನ್ನು ಸ್ತ್ರೀಯರು ನೋಡುತ್ತಿರಲು ಸುಲಭವಾಗಿ ಹಿಡಿದು ಸೆರೆಯಲ್ಲಿ ಬಂಧಿಸಿದನು. ಅನಂತರ ಬ್ರಹ್ಮವಚನವನ್ನು ಮನ್ನಿಸಿ ಮಾಹಿಷ್ಮತಿಪುರಿಯ ಸೆರೆಮನೆಯಿಂದ ರಾವಣನನ್ನು-ಕೋತಿಯನ್ನೂ ಪಂಜರದಿಂದಂತೆ – ಬಿಟ್ಟು, ಕಳುಹಿಸಿದನು.

ಒಂದು ದಿನ ಅರ್ಜುನನು ಬೇಟೆಯಾಡುತ್ತಾ ವನದಲ್ಲಿ ಜಮದಗ್ನಿಯ ಆಶ್ರಮವನ್ನು ಸೇರಿದನು. ಸೈನ್ಯದಿಂದ ಕೂಡಿಬಂದ ರಾಜನಿಗೆ, ಆ ತಪೋಧನನು ಕಾಮಧೇನುವನ್ನು ಪ್ರಾರ್ಥಿಸಿ, ಆ ಸುರಧೇನುವಿನ ದಯದಿಂದ, ಮೃಷ್ಟಾನ್ನವನ್ನುಣಿಸಿದನು. ಚಕ್ರವರ್ತಿಯಾದ ತನ್ನ ಐಶ್ವರ್ಯವನ್ನು ಮೀರಿದ ಆ ಮುನಿಯ ತಪೋಲಬ್ಧ ಸಂಪತ್ತನ್ನು ಕಂಡು, ರಾಜನು ಅಸೂಯೆಯಿಂದ, ಆಕಳನ್ನು ಅಪಹರಿಸಿಕೊಂಡು ಮಾಹಿಷ್ಮತಿಯನ್ನು ಸೇರಿದನು. ಅಂಬಾರವವನ್ನು ಮಾಡುತ್ತಾ ಅಳುತ್ತಿರುವ ಆಕಳನ್ನು ಕರುವನ್ನೂ ಕೂಡಾ ಬಲಾತ್ಕಾರವಾಗಿ ರಾಜನ ಸೈನಿಕರು ಎಳೆದೊಯ್ಯಲು, ಜಮದಗ್ನಿ ಸುಮ್ಮನಿದ್ದು, ರಾಮನು ಬಂದಮೇಲೆ ಅವನಿಗೆ ನಡೆದ ಸಮಾಚಾರವನ್ನು ಹೇಳಿದನು. ಆಗ ರಾಮನು ಶರಾಸನ ತೂಣೀರ ಕುಠಾರ ಭೀಮನಾಗಿ, ಐಣಸಟವನ್ನು ಹೊದೆದು, ಭ್ರೂಭಂಗ ದುರ್ನಿರೀಕ್ಷ್ಯ ಸಂರಂಭಸಿಂಹವು ಆನೆಯ ಹಿಂಡನ್ನಂತೆ, ರಾಜನನ್ನು ಹಿಂಬಾಲಿಸಿ ಬಂದು, ಮಾಹಿಷ್ಮತಿಯನ್ನು ಮುತ್ತಿದನು. ಜಟೆಯು ಜ್ವಾಲೆಯಾಗಿ, ಮುಖವು ಅಗ್ನಿಕುಂಡವಾಗಿ, ಕುಠಾರವು ಸ್ರುಕ್‌ಸ್ರುವರ್ಗಗಳಾಗಿರಲು, ರಾಮಧರಾಸುರವರನು. ರಾಜನ ಪರಿವಾರದ ಪ್ರಾಣಾಹುತಿಗಳನ್ನು ತೆಗೆದುಕೊಂಡು ತೃಪ್ತನಾಗದೆ ವಿಜೃಂಭಿಸಿ ಹದಿನೇಳು ಅಕ್ಷೌಹಿಣಿ ಸೈನ್ಯಕಕ್ಷವನ್ನು

ಸಂಪೂರ್ಣವಾಗಿ ಸಂಹರಿಸಿದನು. ಗಜಾಶ್ವಪದಾತಿಭಟರು, ನೋಡುತ್ತಿರಲು ಪರಶುಧಾರೆಗೆ ಬಲಿಯಾಗಿ ರಣರಂಗದಲ್ಲಿ ಬಿದ್ದರು. ರಕ್ತನದಿಗಳು ಹರಿದವು. ಕೈಗಳು, ಕಾಲುಗಳದರಲ್ಲಿ ತೇಲಿ ಹೋದವು. ರಥಗಳು ಮುರಿದು ಚೂರಾದವು.

ಆಗ ಅರ್ಜುನನು ಸಹಸ್ರ ಬಾಹುಗಳಿಂದ, ರಾಮನನ್ನೆದುರಿಸಿ ಕಾದಿದನು. ಐದುನೂರು ಕೈಗಳಲ್ಲಿ ಐದೂನೂರು ಬಿಲ್ಲುಗಳನ್ನು ಮಿಕ್ಕ ಕೈಗಳನ್ನು, ಐದುನೂರು ಬಾಣಗಳನ್ನು ಪಿಡಿದು, ಗುರಿಯಿಟ್ಟು ಒಂದೇ ಸಲ ಐದೂನೂರು ಬಾಣಗಳಿಂದ ರಾಮನನ್ನು ಹೊಡೆದನು. ಒಂದೇ ಧನುಸ್ಸಿನಲ್ಲಿ ಐದುನೂರು ಬಾಣಗಳನ್ನಿಟ್ಟು, ಬಿಟ್ಟು, ಶ್ರೀರಾಮನು ಅವನ ಬಾಣಗಳನ್ನೆಲ್ಲಾ ಮಧ್ಯದಲ್ಲೇ ತುಂಡರಿಸಿದನು. ಬೆಟ್ಟದ ಗುಂಡುಗಳನ್ನು, ಗಿಡಗಳನ್ನು ಕೈಗಳಲ್ಲಿ ಪಿಡಿದು, ಮೇಲೆ ರಗುವ ರಾಜನ ಕೈಗಳನ್ನು ಪರಶುಧಾರೆಯಿಂದ ಕಡಿದು, ಶ್ರೀಭಾರ್ಗವನು ನಗುತ್ತಾ, ಅವನ ಕುತ್ತಿಗೆಯನ್ನೂ ಕತ್ತರಿಸಿದನು. ಬೆಟ್ಟದ ಕೋಡುಗಲ್ಲಿನಂತೆ ಕೆಳಗುರುಳಿದ ತಂದೆಯ ತಲೆಯನ್ನು ನೋಡಿ, ಭಯದಿಂದ ಅವನ ಮಕ್ಕಳು ಹತ್ತು ಸಾವಿರ ಜನರು ದಿಕ್ಕೆಟ್ಟು ಪಲಾಯನ ಮಂತ್ರವನ್ನು ಪಠಿಸಿದರು. ಕರುವನ್ನು ಆಕಳನ್ನು ಕರೆದುಕೊಂಡು ರಾಮನು ಆಶ್ರಮವನ್ನು ಮುಟ್ಟಿ, ತಂದೆ ಗೊಪ್ಪಿಸಿ ವಂದಿಸಿದನು. ನಡೆದ ಸಮಾಚಾರವನ್ನು ವರ್ಣಿಸಲು, ಕೇಳಿ, ಜಮಒದಗ್ನಿಯು ಹೀಗೆಂದನು–

'ರಾಮ! ರಾಮ! ಎಂತಹ ಪಾಪಕಾರ್ಯವನ್ನು ಮಾಡಿದೆ! ಸರ್ವದೇವಾಂಶಯುತನಾಗಿ ನರದೇವನೆನಿಸುವ ರಾಜನನ್ನು ವೃಥಾ ಸಂಹರಿಸಿದೆ. ವತ್ಸಾ! ನಾವು ಬ್ರಾಹ್ಮಣರಲ್ಲವೇ? ಬ್ರಾಹ್ಮಣರು ಪೂಜ್ಯರಾಗಿರುವುದು ಕ್ಷಮಾಗುಣದಿಂದಲೇ. ಕ್ಷಮಾಗುಣದಿಂದಲೇ ಲೋಕಗುರು ವಾದ ಬ್ರಹ್ಮ ದೇವನು ಸತ್ಯಲೋಕಪತಿಯಾಗಿರುವನು. ಕ್ಷಮೆಯಿಂದ ಬ್ರಾಹ್ಮಣ ತೇಜವು ಸೂರ್ಯ ಪ್ರಭೆ ಯಂತೆ ಪ್ರಕಾಶಮಾನವಾಗಿರುವುದು. ಕ್ಷಮಾವಂತರನ್ನು ಕಂಡು ಸರ್ವಸಮರ್ಥ ನಾದ ಶ್ರೀಹರಿಯು ಸಂತೋಷಪಡುತ್ತಿರುವನು. ಮೂರ್ದಾಭಿಷಾಕ್ತನಾದ ರಾಜನ ವಧೆಯು ಬ್ರಹ್ಮಹತ್ಯೆಗಿಂತಲೂ ಪಾಪತರವಾಗಿದೆ. ಆದ್ದರಿಂದ ಒಂದು ವರ್ಷ ತೀರ್ಥಗಳಲ್ಲಿ ಸಂಚರಿಸಿ ಶ್ರೀಹರಿ ಚಿಂತಾಪಾವನನಾಗು, ಪಾಪದೂರನು ಪರಮಪವಿತ್ರನು ಆಗಿ ಬಾ, ಎಂದು ನಂದನನೆಂಬ ಅಭಿಮಾನದಿಂದ, ಗೋವಿಂದನೆಂದು ಮರೆತು, ಮಾತಾಡಿದ ತಂದೆಯ ವಚನವನ್ನು ಶಿರಸಾವಹಿಸಿ ಲೋಕಶಿಕ್ಷೆಗಾಗಿ ಭಾರ್ಗವ ರಾಮನು ತೀರ್ಥಯಾತ್ರೆಯನ್ನು ಪೂರೈಸಿ ಆಶ್ರಮವನ್ನು ಸೇರಿದನು.

## ೧೪. ಪರಶುರಾಮ ಕಥಾ

ಒಂದು ದಿನ ರಾಮಮಾತೆಯಾದ ರೇಣುಕೆ, ಗಂಗೆಯಲ್ಲಿ ಕ್ರೀಡಿಸುತ್ತಿದ್ದ ಚಿತ್ರರಥನೆಂಬುವ ಸುಂದರ ಗಂಧರ್ವರಾಜನನ್ನು, ಅವನೊಡನೆ ವಿಹರಿಸುವ ಅಪ್ಸರೆಯರನ್ನು ನೋಡುತ್ತಾ ನಿಂತು, ಅರ್ಘ್ಯೋದಕವನ್ನು ತರಲು ಬಂದಿರುವೆನೆಂಬುದನ್ನು ಮರೆತು ಹೋಮವೇಳೆಯನ್ನತಿಕ್ರಮಿಸಿ, ಆಲಸ್ಯವಾಗಿ ಆಶ್ರಮಕ್ಕೆ ಬಂದಳು. ಮುನಿರಾಜನೆದುರಿಗೆ ಕಲಶವನ್ನಿಟ್ಟು, ಶಾಪವನ್ನೇ ಕೊಡುವೆ ನೆಂದರಿತು ಭೀತಳಾಗಿ ನಿಂದ ಕಾಂತೆಯನ್ನು, ಅವಳ ಮಾನಸಿಕ ವ್ಯಭಿಚಾರವನ್ನು ಕಂಡು, ಕುಪಿತನಾಗಿ ಜಮದಗ್ನಿ 'ಇವಳನ್ನು ಸಂಹರಿಸಿರಿ' ಎಂದು ಸುತರಿಗಾಜ್ಞಾಪಿಸಿದನು. ತನಯರು ವಿನಯದಿಂದ ತಿರಸ್ಕರಿಸಲು, ಜಮದಗ್ನಿಯು 'ರಾಮಾ! ಕೊಲ್ಲು ನಿನ್ನ ತಾಯಿಯನ್ನು ಮತ್ತು

ಸೋದರರನ್ನು' ಎಂದು ರಾಮನಿಗೆ ಹೇಳಿದನು. ಮುನಿಪ್ರಭಾವವನ್ನು, ತಪೋಬಲವನ್ನು ಅರಿತ ಸರ್ವಜ್ಞನಾದ ಶ್ರೀಹರಿಯು, ಅವನನ್ನು ಲೋಕವರಿಯಲಿ ಎಂದು, ತಂದೆಯ ಮಾತಿನಂತೆ ಮಾತೆಯನ್ನು ಸೋದರರನ್ನು ಸಂಹರಿಸಿದನು. ಅದನ್ನು ಕಂಡು ಪ್ರೀತನಾಗಿ ಜಮದಗ್ನಿಯು ವರನನ್ನು ಕೇಳೆಂದನು. 'ಸತ್ತು ಹಿರಿಯರು ಬದುಕಲಿ! ಮತ್ತು ನಾನವರನ್ನು ಕೊಂದೆನೆಂಬುದನ್ನು ಮರೆಯಲಿ!'ಎಂದು ರಾಮನು ಬೇಡಿ ವಸುಮದಾದಿ ಸೋದರರನ್ನು, ರೇಣುಕೆಯನ್ನು ಬದುಕಿಸಿದನು. ನಿದ್ರೆಯಿಂದೆದ್ದವರಂತೆ ಎದ್ದು, ರಾಮನನ್ನಾಲಿಂಗಿಸಿ, ಅವರು ಪ್ರೀತರಾದರು.

ಕಾರ್ತವೀರ್ಯನ ಸುತರು ರಾಮನಿಗೆ ಸೋತು, ಸೇಡನ್ನು ತೀರಿಸಿಕೊಳ್ಳಲು ಸಮಯವನ್ನು ಕಾಯುತ್ತಿದ್ದನು. ಒಂದು ದಿನ ರಾಮಾದಿ ಸುತರು ಆಶ್ರಮದಲ್ಲಿ ಇಲ್ಲದುದನ್ನು ನೋಡಿ, ಪೊಕ್ಕು, ಅಗ್ನ್ಯಾಗಾರದಲ್ಲಿ ಅನವರತ ಹರಿಧ್ಯಾನರತನಾಗಿದ್ದ ಜಮದಗ್ನಿಯನ್ನು ಆ ಪಾಪಿಗಳು ಕಟುಕರಂತೆ ನಿಷ್ಕರುಣರಾಗಿ ರೇಣುಕೆಯ ದೀನಾಲಾಪವನ್ನೂ ಲೆಕ್ಕಿಸದೆ ಕೊಂದು ಆ ತಲೆಯನ್ನೆತ್ತಿ ಕೊಂಡು ಓಡಿಹೋದರು. 'ಓ'ಎಂದು ಎದೆಯನ್ನು ಬಡಿದುಕೊಂಡು, ಅಳುತ್ತಾ 'ರಾಮ ರಾಮ' ಎಂದು ದೀನಳಾಗಿ ಕೂಗುವ ತಾಯಿಯ ಆರ್ತನಾದವನ್ನು ಕೇಳಿ, ಸುತರು ಆಶ್ರಮವನ್ನು ಸೇರಿ, ನಡೆದ ಘೋರವನ್ನು ಕಂಡು ಗೋಳಾಡಿದರು.

ಅಯ್ಯೋ ತಾತ! ಧರ್ಮಿಷ್ಠ! ಇಂದೇಕೆ ನಮ್ಮನಗಲಿದೆ? ನಿನ್ನಂತಹ ಸಾಧುವರ್ತನನಿಗೆ ಇಂತಹ ಗತಿಯೇ? ನಾವಿದ್ದೂ ವ್ಯರ್ಥವಾಯಿತಲ್ಲ! ಎಂದು ರೋದಿಸಿದರು. ಆಗ ರಾಮನು 'ತಂದೆಯ ಡಿಂಬವನ್ನು ಕಾಪಾಡಿ' ಎಂದು ಅಣ್ಣಂದಿರನ್ನು ಬೀಳ್ಕೊಟ್ಟು ಕ್ಷತ್ರಿಯ ಕುಲವನಕುಠಾರ ನಾಗಿ ಕಠೋರ ಪ್ರತಿಜ್ಞೆಯನ್ನು ಮಾಡಿ, ಮಾಹಿಷ್ಮತಿಯನ್ನು ಸೇರಿದನು. ಬ್ರಹ್ಮಹತ್ಯಾ ಪಾಪಹತನಾದ ರಾಜರ ತಲೆಗಳು ರಣರಂಗದಲ್ಲಿ ಗುಡ್ಡಗಳಂತೆ ರಾಶಿಯಾಗಲು, ಅವರ ರಕ್ತವು ಪ್ರವಾಹವಾಗಿ ಹರಿಯಿತು. ಬ್ರಹ್ಮದ್ರೋಹಿ ಜನರು ಅಂಜುವಂತೆ ರಾಮನು ಅಮಂಗಲಕಾರ್ಯ ರತವಾದ ರಾಜರನ್ನು ಹುಡುಕಿ ಹುಡುಕಿ, ಬಿಡದೆ ಕೊಂದನು. ಇಪ್ಪತ್ತೊಂದು ಸಲ ಭೂಮಂಡಲ ವನ್ನೆಲ್ಲಾ ಸಂಚರಿಸಿ, ಸಂಹರಿಸಿದ ರಾಜರ ರಕ್ತವು ಮಡುವಾಯಿತು, ಭೂಮಿಯು ನಿಃಕ್ಷತ್ರಿಯ ವಾಯಿತು. ಅಂತಹ ರಕ್ತದ ಒಂಭತ್ತು ಮಡುವುಗಳನ್ನು ಸ್ಯಮಂತಪಂಚಕವೆಂಬ ಕುರುಕ್ಷೇತ್ರದಲ್ಲಿ ನಿರ್ಮಿಸಿ ಭಾರ್ಗವರಾಮನು ತಂದೆಗೆ ತರ್ಪಣವನ್ನಿತ್ತು, ಆಶ್ರಮವನ್ನು ಸೇರಿದನು.

ಅಲ್ಲಿ ತಂದೆಯ ತಲೆಯನ್ನು ಡಿಂಬಕ್ಕೆ ಜೋಡಿಸಿ, ದರ್ಭದಿಂದ ಬಿಗಿದು, ಸರ್ವದೇವ ಪ್ರಧಾನನಾದ ತನ್ನನ್ನೇ ಉದ್ದೇಶಿಸಿ, ತಾನೇ ನೂರಾರು ಯಜ್ಞಗಳನ್ನು ಮಾಡಿದನು. ಹೋತೃವಿಗೆ ಪೂರ್ವದಿಶೆಯನ್ನು ಬ್ರಹ್ಮ(ಋತ್ವಿಜ)ನಿಗೆ ದಕ್ಷಿಣವನ್ನು, ಅಧ್ವರ್ಯುವಿಗೆ ಪಶ್ಚಿಮವನ್ನು, ಉದ್ಗಾತೃವಿಗೆ ಉತ್ತರದಿಕ್ಕನ್ನು, ಕಶ್ಯಪನಿಗೆ ಮಧ್ಯಭೂಮಿಯನ್ನು, ಉಳಿದ ಅವಾಂತರ ದಿಕ್ಕಿನ ರಾಜ್ಯವನ್ನು ಮಿಕ್ಕ ವಿಪ್ರರಿಗೂ ಧಾರೆಯೆರೆದು ಸರ್ವಸ್ವ ದಾನವನ್ನಾಚರಿಸಿದನು. ಗಂಗೆಯನ್ನು ಅವಭೃಥವನ್ನು ಮಾಡಿ, ತನ್ನಿಂದ ಕೂಡಿ ಮಿಂದ ಸರ್ವಜನರ ಪಾಪವನ್ನು ನಿರ್ನಾಮಗೊಳಿಸಿ, ಮೇಘರಹಿತ ಗಗನದಲ್ಲಿ ಸೂರ್ಯನಂತೆ, ನಿಷ್ಕಳಂಕನಾಗಿ ಪ್ರಕಾಶಿಸಿದನು.

ಜಮದಗ್ನಿಯು ಜ್ಯೋತಿರ್ಮಯ ಶರೀರನಾಗಿ, ಮಗನ ಮಹಿಮೆಯಂತೆ ಸಪ್ತರ್ಷಿಮಂಡಲ ದಲ್ಲಿ ಏಳನೆಯವನಾಗಿ ಮೆರೆಯುತ್ತಿದ್ದನು. ಪರಶುರಾಮನು ಕೂಡ ಬರುವ ಮನ್ವಂತರದಲ್ಲಿ ಸಪ್ತ ಋಷಿಗಳಲ್ಲೊಬ್ಬನಾಗುವನು; ಹಾಗೂ ವೇದಪ್ರವರ್ತಕನೆನಿಸುವನು. ಈಗಲೂ ಮಹೇಂದ್ರಾದ್ರಿಯಲ್ಲಿ ಶಾಂತನು, ನಿರ್ವೈರನು ಆಗಿ ತಪವನ್ನಾಚರಿಸುವ ಪರಶುರಾಮ ದೇವನ

ಮಹಿಮೆಯನ್ನು ಸಿದ್ಧ, ಗಂಧರ್ವ, ಚಾರಣರು ಪಾಡಿ ಪೊಗಳುತ್ತಿದ್ದರು. ಇಂತು ಭೃಗುಕುಲದಲ್ಲಿ ಜನಿಸಿ, ರಾಜಕುಲಕುಠಾರನೆನಿಸಿ, ಭೂಭಾರವನ್ನಿಳಿಸಿ, ಸುಜನರನ್ನು ಸಲಹಿದ ಭಾರ್ಗವನಿಗೆ ನಮಸ್ಕಾರವು.

ಗಾಧಿರಾಜನಿಗೆ ವಿಶ್ವಾಮಿತ್ರನು ಜನಿಸಿದನು. ಆ ಮಹಾತೇಜಶ್ಶಾಲಿಯು ಕ್ಷತ್ರಿಯ ಜಾತಿಯನ್ನು ತ್ಯಜಿಸಿ, ತಪೋಬಲದಿಂದ ಬ್ರಹ್ಮಶರೀರವನ್ನು ಸಂಪಾದಿಸಿ, ಬ್ರಾಹ್ಮಣನೆಂದು ಖ್ಯಾತನಾದನು. ಉರಿಯುವ ಅಗ್ನಿಯಂತೆ ತೇಜೋವಂತನಾದ ವಿಶ್ವಾಮಿತ್ರನಿಗೆ ಮಧುಚ್ಛಂದ ಸನೇ ಮಧ್ಯಮನಾಗಿರುವ ನೂರೊಂದು ಜನ ಸುತರಿದ್ದರು. ಮಧುಚ್ಛಂದಸನ ತಮ್ಮಂದಿರು ಐವತ್ತು ಜನರೂ ಮಧುಚ್ಛಂದಸರೇ ಎಂದು ಖ್ಯಾತರಾಗಿದ್ದರು. ಈ ಮಧುಚ್ಛಂದಸರಿಗೆ ಅಣ್ಣನಿಲ್ಲದಿದ್ದರೂ ತಂದೆಯ ಆಜ್ಞೆಯಂತೆ ಅಣ್ಣನೆನಿಸಿದ ಮಹಾನುಭಾವನಾದ ಶುನಃಶೇಪನ ಕಥೆಯನ್ನು ಪೇಳುವೆನು.

ಭಾರ್ಗವ ಕುಲಜನಾದ ಅಜೀಗರ್ತನ ಮಧ್ಯಮ ಪುತ್ರನು ಶುನಶ್ಶೇಪನು. ಅವನನ್ನು ಕೊಂಡು ರೋಹಿತನು ತಂದೆಯ ಯಜ್ಞದಲ್ಲಿ ಪಶುವನ್ನಾಗಿಸಿ ಕಟ್ಟಿದ್ದನು. ವರುಣ ಬ್ರಹ್ಮಾದಿ ದೇವತಾ ಪ್ರಾರ್ಥನವನ್ನು ಮಾಡಿ ಶುನಶ್ಶೇಪನು ಬದುಕಿದನು. ಅವನನ್ನು ಬಿಡಿಸಿ ವಿಶ್ವಾಮಿತ್ರನು ರಕ್ಷಿಸಿದುದರಿಂದ, ದೇವತೆಗಳು ಅವನನ್ನು ವಿಶ್ವಾಮಿತ್ರನಿಗೆ ದತ್ತಪುತ್ರನಾಗೆಂದು ಒಪ್ಪಿಸಿದರು. ಶುನಶ್ಶೇಪನು ಅಂದಿನಿಂದ ದೇವರಾತನೆನಿಸಿದನು. ಆ ಶುನಶ್ಶೇಪನು ಜ್ಯೇಷ್ಠ ಸುತನಾಗಿ ಸ್ವೀಕರಿಸುವೆನೆಂದು ಮಾತನ್ನಿತ್ತ ವಿಶ್ವಾಮಿತ್ರನು ತನ್ನ ನೂರೊಂದು ಜನ ನಂದನರಿಗೆ, ಅವನನ್ನು ಅಣ್ಣನಾಗಿ ಸ್ವೀಕರಿಸಿ ಗೌರವಿಸಬೇಕೆಂದು ಕಟ್ಟಪ್ಪಣೆ ಮಾಡಿದನು. ಮೊದಲನೆಯ ಐವತ್ತು ಸುತರು ಆ ಮಾತನ್ನು ಲೆಕ್ಕಿಸದೆ ತಿರಸ್ಕರಿಸಿದರು. ವಿಶ್ವಾಮಿತ್ರನು ಅವರು ಮ್ಲೇಂಛರಾಗುವಂತೆ ಶಪಿಸಿ, ಪರಿತ್ಯಜಿಸಿದನು. ಮಧುಚ್ಛಂದಸನಾಗ ತಮ್ಮಂದಿರೊಡನೆ ಕೂಡಿ ಬಂದು ತಂದೆಯನ್ನು ನೋಡಿ, 'ಪೂಜ್ಯನೇ! ನಿನ್ನ ಆಜ್ಞೆಯನ್ನು ಶಿರಸಾ ವಹಿಸುವೆವು. ದೇವರಾತನು ನಮ್ಮ ಅಣ್ಣನಾಗಿರು ವೆನು' ಎಂದು ನುಡಿದನು. 'ದೇವರಾತನೇ! ನಾವು ತಮ್ಮಂದಿರಾಗಿ ಅನುವರ್ತಿಸಿ ನಡೆಯುವೆವು. ನೀನು ನಮಗೆ ಜ್ಯೇಷ್ಠನಾಗಿ ಗೌರವ ಪಾತ್ರನಾಗಿರುವೆ'ಎಂದು ದೇವರಾತನನ್ನೂ ಸಂತೈಸಿದನು.

ವಿಶ್ವಾಮಿತ್ರನು ಮಧುಚ್ಛಂದಸರಲ್ಲಿ ಪ್ರೀತನಾಗಿ ಅವರು, ವೇದ ದ್ರಷ್ಟೃಗಳಾಗುವಂತೆ ಅನುಗ್ರಹಿಸಿದನು. 'ನೀವು ನನ್ನನ್ನು ಸುಪುತ್ರವಂತನೆನಿಸಿದಿರಿ. ನನ್ನ ಮಾತನ್ನು ಪಾಲಿಸಿ ಗೌರವಿಸಿದ ನೀವೂ ಸುಪುತ್ರರನ್ನು ಪಡೆಯಿರಿ. ಈ ದೇವರಾತನನ್ನು ಜ್ಯೇಷ್ಠಪುತ್ರನಂತೆ ಗೌರವಿಸಿರಿ. ಕೌಶಿಕರೆನಿಸಿ ನೀವು ಅಷ್ಟಕ, ಹಾರೀತ, ಜಯ, ಕ್ರುತಮಾನ್ ಮುತಾದವರಿಂದ ಕೂಡಿ ದೇವರಾತನ ದಯದಿಂದ ಗೋತ್ರಪ್ರವರ್ತಕರಾಗಿರಿ' ಎಂದು ಕಳಿಸಿದನು.

ಪುರೂರವಸನ ಮಗನಾದ ಆಯುವಿಗೆ ನಹುಷ, ಕ್ಷತ್ರವೃದ್ಧ, ರಜೆ, ರಂಭ, ಅನೇನಾ ಎಂಬ ಐವರು ಸುತರು. ಕ್ಷತ್ರವೃದ್ಧಸುತನಾದ ಸುಹೋತ್ರನಿಗೆ ಮೂವರು ಸುತರು – ಕಾಶ್ಯ, ಕುಶ, ಗೃತ್ಸಮದರೆಂಬುವರು. ಗೃತ್ಸಮದನಿಗೆ ಶುನಕನು, ಅವನಿಗೆ ಋಗ್ವೇದ ನಿಪುಣನಾದ ಶೌನಕನು ಸುತರಾದರು. ಕಾಶ್ಯನ ಸುತನಾದ ಕಾಶಿಗೆ ಸುರಾಷ್ಟ್ರನು, ಅವನಿಗೆ ದೀರ್ಘ ತಪಸನು, ಅವನಿಗೆ ಧನ್ವಂತರಿಯು ಜನಿಸಿದನು. ಆ ಧನ್ವಂತರಿಯು ವಾಸುದೇವಾಂಶಸಂಭೂತನು ಮತ್ತು ಆಯುರ್ವೇದವನ್ನು ಪ್ರಚಾರ ಮಾಡಿದವನು. ಅವರ ಸ್ಮರಣವೇ ಸರ್ವದುಃಖ ರೋಗಭಯ ನಿವಾರಣವಾಗಿದೆ. ಅವನ ಮಗನಾದ ಕೇತುವಂತನಿಗೆ ಭೀಮರಥನು, ಅವನ ವಂಶದಲ್ಲಿ ಕ್ರಮ

ವಾಗಿ ದಿವೋದಾಸ, ದ್ಯುಮಂತ, ಪ್ರತರ್ದನ, ಶತ್ರುಜಿತ್, ಋತಧ್ವಜ, ಕುವಲಯಾಶ್ವ, ಅಲರ್ಕ ಮುಂತಾದವರು ಪುಟ್ಟಿದರು. ಅಲರ್ಕಾಧಿಭೂಪರು 66000 ವರ್ಷ ರಾಜ್ಯವಾಳಿದರು. ಅಲರ್ಕನಾದ ನಂತಹ ಆಳಿದ ರಾಜರು ಪ್ರಾಯಃ ವೃದ್ಧರಾದಮೇಲೇ ಪಟ್ಟವನ್ನೇರಿ ಪಾಲಿಸಿದರು. ಅಲರ್ಕ, ಸಂತತಿ, ಸುನೀಥ, ಸುಕೇತನ, ಧರ್ಮಕೇತು, ಸತ್ಯಕೇತು, ಧೃಷ್ಟಕೇತು, ಸುಕುಮಾರ, ವೀತಿಹೋತ್ರ, ಭರ್ಗ, ಭಾರ್ಗ, ಭೂಮಿ, ಮುಂತಾದ ರಾಜರು ಕ್ಷತ್ರವೃದ್ಧನ ವಂಶಜಾತರು ಹಾಗೂ ಕಶ್ಯಪ ಗೋತ್ರಜಾತರು ಆಗಿ ಪ್ರಸಿದ್ಧರಾದರು.

ಪುರೂರವಪುತ್ರ ಆಯುಸ್ಸುತನಾದ ರಂಭನ ವಂಶದಲ್ಲಿ ರಭಸ, ಗಂಭೀರ, ಚಕ್ರಕ, ಬ್ರಹ್ಮನೆಂಬುವರು ಪುಟ್ಟಿದರು. ಅನೇನಸನಿಗೆ ಶುದ್ಧ, ಅವನಿಗೆ ಶುಚಿ, ತ್ರಿಕಕುಪ್, ಧರ್ಮಸಾರಥಿ, ಶಾಂತರಜ, ಕೃತಕೃತ್ಯ ಕ್ರಮವಾಗಿ ವಂಶಜಾತರಾದರು. ಇನ್ನು ಆಯುಸ್ಸುತ ರಜೆಯ ಕಥೆಯನ್ನು ಕೇಳು–

ರಜಿಗೆ ಐವತ್ತು ಜನ ಮಕ್ಕಳಿದ್ದರು. ಆ ವೀರ ರಜಿಯು ದೇವತೆಗಳಿಂದ ಯಾಚಿತನಾಗಿ ಹೋಗಿ ದೈತ್ಯರನ್ನು ಗೆದ್ದು, ಸ್ವರ್ಗರಾಜ್ಯವನ್ನು ಇಂದ್ರನಿಗೆ ಕೊಟ್ಟನು. ಇಂದ್ರನು ಪ್ರಹ್ಲಾದನ ಭಯದಿಂದ ರಾಜ್ಯವನ್ನು ರಜಿರಾಜನಿಗೇ ಒಪ್ಪಿಸಿ, ಅವನ ಆಶ್ರಯದಲ್ಲಿ ಕ್ಷೇಮವಾಗಿದ್ದನು. ಕಾಲಾಂತರದಲ್ಲಿ ರಜಿಯು ಮೃತನಾದನು. ತನ್ನ ರಾಜ್ಯವನ್ನು ಬೇಡಿದ ಇಂದ್ರನಿಗೆ ಕೊಡದೇ ರಜಿಸುತರು ಮದಮತ್ತರಾಗಿ, ಯಜ್ಞಭಾಗಗಳನ್ನೂ ಕೂಡ ಅಪಹರಿಸಲಾರಂಭಿಸಿದರು. ಬೃಹಸ್ಪತಿಯಿಂದ ಯಜ್ಞವನ್ನು ಆರಂಭಿಸಿ, ಇಂದ್ರನು ಹವಿಸ್ಸನ್ನು ಅಪಹರಿಸಲು ಬಂದ ಐವತ್ತು ಜನ ರಜಿಪುತ್ರರನ್ನು ಸಂಹರಿಸಿದನು.

ಕ್ಷತ್ರವೃದ್ಧನಿಗೆ ಪ್ರತಿಕ್ಷತ್ರನೆಂಬ ಸುತನಿದ್ದನು. ಅವನಿಗೆ ಸಂಜಯ, ಅವನಿಗೆ ಜಯ, ಕೃತ, ವೀರ್ಯವರ್ಧನ, ಸಹದೇವ, ಅಹೀನ, ಜಯತ್ಸೇನ, ಸಂಕೃತಿ, ಜಯಕ್ಷತ್ರಧರ್ಮ, ಎಂಬುವರು ವಂಶಜಾತರಾದರು: ಇನ್ನು ಮುಂದೆ ನಹುಷವಂಶ ಚರಿತವನ್ನು ವರ್ಣಿಸುವೆನು.

## ೧೫. ಯಯಾತಿ ಚರಿತೆ

ದೇಹಾಧಾರಿಗೆ ಆರಿಂದ್ರಿಯಗಳಂತೆ, ನಹುಷನಿಗೆ ಆರು ಜನ ಪುತ್ರರಿದ್ದರು. ಅವರು ಯತಿ, ಯಯಾತಿ, ಸಂಯಾತಿ ಆಯಾತಿ, ವಿಯತಿ, ಕೃತಿ ಎಂದು ಪೆಸರಾಗಿದ್ದರು. ಅವರಲ್ಲಿ ಯತಿಯು ತಂದೆ ಕೊಟ್ಟ ರಾಜ್ಯವನ್ನು ಒಲ್ಲದೆ ಪರಿತ್ಯಜಿಸಿದನು. ರಾಜ್ಯವು ಪಾಪಭಾಜ್ಯವು, ಹಾಗೂ ಸಜ್ಜನ ಪರಿತ್ಯಾಜ್ಯವು ಆಗಿದೆ. ರಾಜ್ಯವನ್ನಾಳುವ ಪ್ರಭುವು ತನ್ನನ್ನೂ ತನ್ನ ಸ್ವಾಮಿಯಾದ ಶ್ರೀಹರಿಯನ್ನೂ ತಿಳಿಯದೆ ಅವಿವೇಕಿಯಾಗಿ ಕೆಡುವನೆಂದು ಯತಿರಾಜನು, ಯತಿಯೇ ಆದನು.

ನಹುಷನು ಸ್ವರ್ಗಾಧಿಪನಾಗಿ ಮದದಿಂದ ಶಚೀದೇವಿಯಲ್ಲಿ ಕೋರಿ ಪೋಗುತ್ತಾ, ಋಷಿಗಳಿಂತ ಶಿಕ್ಷಿತನಾಗಿ ದೊಡ್ಡ ಹೆಬ್ಬಾವಾಗಿ ಹಿಮವತ್ಕಂದರದಲ್ಲಿ ಬಿದ್ದನಲ್ಲವೇ? ಆಗ ಯಯಾತಿಯು ರಾಜನಾದನು. ತನ್ನ ತಮ್ಮಂದಿರಿಗೆ ನಾಲ್ಕು ದಿಕ್ಕಿನ ರಾಜ್ಯವನ್ನಿತ್ತು ಯಯಾತಿ ದೈತ್ಯಗುರುಸುತೆಯನ್ನು ಮದುವೆಯಾಗಿ ರಾಜ್ಯವನ್ನಾಳುತ್ತಿದ್ದನು.

ರಾಜನು ಪ್ರಶ್ನಿಸಿದನು–

ಪೂಜ್ಯ ಶುಕ್ರನು ಬ್ರಾಹ್ಮಣನು; ಯಯಾತಿಯು ಕ್ಷತ್ರಿಯನು. ಪ್ರತಿಲೋಮ ವಿವಾಹ ವಲ್ಲವೇ, ಯಯಾತಿ ಕಾವ್ಯಸುತೆಯರ ದಾಂಪತ್ಯ?

ಶ್ರೀಶುಕನು ಪೇಳಿದನು–

ವೃಷಪರ್ವನೆಂಬ ದಾನವೇಂದ್ರನ ಮಗಳು ಶರ್ಮಿಷ್ಠೆ, ಗುರುಪುತ್ರಿಯಾದ ದೇವಯಾನಿಯಿಂದ ಕೂಡಿ, ಸಾವಿರ ಸಖಿಯರು ಸೇವಿಸಿ ಬರುತ್ತಿರಲು, ಪುರಬಾಹ್ಯೋದ್ಯಾನದಲ್ಲಿ ವಿಹರಿಸುತ್ತಿದ್ದಳು. ಫಲಪಷ್ಪಗಳನ್ನಾರಿಸಿ ಬರುವ ಆ ಸುಂದರಿಯರು ವಿಹಾರಶ್ರಮವನ್ನು ನೀಗಲು ಜಲಾಶಯದಲ್ಲಿಳಿದು ನೀರಾಟವನ್ನಾಡುತ್ತಾ ಕಲಕಲ ನಗುತ್ತಾ, ಪಾಡಿ ಕೂಗುತ್ತಾ ಜಲವಿಹಾರರತರಾಗಿದ್ದರು. ನಯನಕಮಲದಿಂದ ಸ್ಪರ್ಧಿಸುವವೆಂದು ಕೋಪದಿಂದ ಕಮಲ ಗಳನ್ನು ಕಿತ್ತೆಸೆದರು.

ಆಗ ನಂದಿಯನ್ನೇರಿ, ಸುಂದರಿಯರಿಂದ ಕೂಡಿ ಪೋಗುತ್ತಿರುವ ಜಗದೀಶನನ್ನು ನೋಡಿ, ಆ ಕನ್ಯೆಯರು ಲಜ್ಜಿತರಾಗಿ ತೀರದಲ್ಲಿಟ್ಟಿದ್ದ ವಸ್ತ್ರಗಳನ್ನು ಸ್ವೀಕರಿಸಿದರು. ಆ ಸಂಭ್ರಮದಲ್ಲಿ ತಿಳಿಯದಂತಾಗಿ ಶರ್ಮಿಷ್ಠೆ, ದೇವಯಾನಿಯ ಪೀತಾಂಬರವನ್ನು ತನ್ನದೆಂದು ಕೊಂಡು ಧರಿಸಿದಳು. ಅದನ್ನು ಕಂಡು ಗುರುಪುತ್ರಿಯು ಕುಪಿತಳಾಗಿ ಇಂತೆಂದಳು–

'ಈ ನನ್ನ ದಾಸಿಯ ಅನುಚಿತಕಾರ್ಯವನ್ನು ಕಂಡೀರಾ? ನಾಯಿಯು ಯಜ್ಞದ ಹವಿಸ್ಸನ್ನು ತಿಂದಂತೆ, ಇವಳು ನನ್ನ ಬಟ್ಟೆಯನ್ನು ಉಟ್ಟಳೆಂತು? ಪರಮಪುರುಷನ ಮುಖದಿಂದ ಬಂದು, ತಪೋಬಲದಿಂದ ಜಗವನ್ನೆಲ್ಲ ನಿರ್ಮಿಪ ವಿಪ್ರರೆಲ್ಲಿ? ದೈತ್ಯಸುತೆಯಾದ ಈ ಶರ್ಮಿಷ್ಠೆಯೆಲ್ಲಿ? ವೇದಮಾರ್ಗವನ್ನು ತಿಳಿಸಿ ಲೋಕವನ್ನು ನಡೆಸುವವರು ಯಾರು? ಯಾರು ಶ್ರೀಹರಿಯನ್ನು ಹೃದಯದಿ ಬಿಡದೆ ಧರಿಸಿರುವ ಯೋಗಿಗಳು? ಯಾರನ್ನು ಹವಿರ್ದಾನವನ್ನು ಯಾಚಿಸಿ ದೇವತೆಗಳು ಕೂಡ ಬೇಡಿ ನಿಲ್ಲುವರು? ಪಾವನನಾದ ಶ್ರೀನಿಕೇತನಿಗೆ ಪ್ರಿಯರೆನಿಸಿದವರು ಯಾರು? ವಿಪ್ರರಲ್ಲವೇ? ಅದರಲ್ಲಿಯು ನಾವು ಸಾಮಾನ್ಯ ವಿಪ್ರರೇ? ಭೃಗುಕುಲಜರಾಗಿ ಗುರುಗಳೆನಿಸಿದ ನಮ್ಮ ವಸ್ತ್ರಗಳನ್ನು, ಶಿಷ್ಯನಾಗಿರುವ ವೃಷಪರ್ವನ ಮಗಳು ಧರಿಸಬಹುದೇ? ಶೂದ್ರನು ವೇದವನ್ನಂತೆ ಈ ಅನಿಷ್ಟೆ ಶರ್ಮಿಷ್ಠೆ ಧರಿಸಿ ಕೆಡಿಸಿದ ವಸ್ತ್ರವನ್ನು ಮತ್ತೆ ನಾನು ಸ್ವೀಕರಿಸಲಾರೆ' ಎಂದು ನಿಂದಿಸುವ ಗುರುಪುತ್ರಿಯನ್ನು ಕಂಡು, ತುಳಿದ ನಾಗರಹಾವಿನಂತೆ ಶರ್ಮಿಷ್ಠೆ ಬುಸುಗುಟ್ಟಿ ಹಲ್ಲುಕಡಿದು ಕೋಪದಿಂದ ಇಂತೆಂದಳು–

ಭಿಕ್ಷುಕೀ! ನಿನ್ನ ಜೀವನದ ವಿವರವೇ ನಿನಗೆ ಗೊತ್ತಿಲ್ಲ. ಪಾಪಾ! ವ್ಯರ್ಥವಾಗಿ ಬೊಗಳಬೇಡ. ನಿಲ್ಲಿಸು ನಿನ್ನ ಜಂಬದ ಕಥೆಯನ್ನು! ನಿಮ್ಮಪ್ಪ ನಮ್ಮ ಮನೆಯ ಬಾಗಿಲ ಬಳಿಗೆ ಬಂದು ನಾಯಿಯಂತೆ ಕೂಗಿ, ಕಾಗೆಯಂತೆ ಕದ್ದು, ನಾವು ನೀಡಿದ ಭಿಕ್ಷಕ್ಕೆ ಕೈಚಾಚಿ ತಂದುಹಾಕಿದರಲ್ಲವೇ ನಿನಗೆ ಅನ್ನ?

ಅಷ್ಟರಿಂದ ಶರ್ಮಿಷ್ಠೆ ಶಾಂತಳಾಗದೆ, ಬಟ್ಟೆಯನ್ನೂ ಕೊಡದೆ, ದೇವಯಾನಿಯನ್ನು ಅಲ್ಲಿದ್ದ ಹಾಳುಬಾವಿಯಲ್ಲಿ ನೂಕಿ, ಸಖಿಯರಿಂದ ಕೂಡಿ ಅರಮನೆಗೆ ಹೊರಟುಹೋದಳು.

ಸ್ವಲ್ಪ ಹೊತ್ತಾದ ಮೇಲೆ ಯಯಾತಿಯು ಬೇಟೆಯಾಡುತ್ತಾ ಅಲ್ಲಿಗೆ ಬಂದನು. ನೀರಡಿಸಿ ಬಾವಿಯನ್ನು ಸಮೀಪಿಸಿ ನೋಡಿದಾಗ, ಆಕಾಶದಿಂದ ಉದುರಿಬಿದ್ದ ತಾರೆಯಂತಿರುವ ದೇವಯಾನಿಯನ್ನು ಕಂಡನು. ಉತ್ತರೀಯವನ್ನು ಉಡಲು ಕೊಟ್ಟು ಅವಳನ್ನು ಕೈಯಿಂದ ಪಿಡಿದು ಮೇಲಕ್ಕೆತ್ತಿದನು. ಸಪ್ತಸಮುದ್ರಮುದ್ರಿತ ಧರಾವಹನ ದಕ್ಷವೆನಿಸಿದ ದಕ್ಷಿಣಕರದಿಂದೆತ್ತಿ ಕಾಪಾಡಿದ ರಾಜನನ್ನುನೋಡಿ, ಕಾಮಪೀಡಿತಳಾಗಿ, ದೇವಯಾನಿ 'ರಾಜನ್! ನನ್ನ ಕೈಯನ್ನು

ಹಿಡಿದೆತ್ತಿದೆ – ನೀನೇ ನನಗೆ ಪತಿಯು. ಇನ್ನಾರೆನ್ನ ಕೈಪಿಡಿಯುವರು ಹೇಳು? ನಾನು ವಿಪ್ರಕನ್ಯೆಯೆಂದು ಹೆದರಬೇಡ. ಶ್ರೀಹರೀಚ್ಛೆಯೇ ಅಂತಿದೆ. ನಿನಗೆ ಬ್ರಾಹ್ಮಣನು ಪತಿಯಾಗಲಾರನೆಂದು ಕಚನು ನನಗೆ ಪ್ರತಿಶಾಪವನ್ನಿತ್ತಿರುವನು. ಆ ಬೃಹಸ್ಪತಿಸುತನ ಶಾಪವು ವ್ಯರ್ಥವಾಗುವುದೇ?' ಎಂದಳು.

ಪ್ರತಿಲೋಮವಿವಾಹವು ತನಗೆ ಸಮ್ಮತವಲ್ಲದಿದ್ದರೂ, ಶ್ರೀನಾರಾಯಣನ ಇಚ್ಛೆಯಿಂದ ಬಂದುದೆಂದು ತಿಳಿದು, ತನ್ನ ಮನಸ್ಸು ಕೂಡಾ ಅವಳಲ್ಲಿ ಲಗ್ನವಾಗಿರುವುದನ್ನು ಕಂಡು, ಯಯಾತಿಯು ದೇವಯಾನಿಯ ಮಾತಿಗೆ ಒಪ್ಪಿ, ಅವಳ ತಂದೆಯ ಸಮ್ಮತಿಯನ್ನು ಪಡೆಯುವಂತೆ ಹೇಳಿ, ಹೊರಟುಹೋದನು.

ದೇವಯಾನಿಯು ತನ್ನನ್ನು ಹುಡುಕುತ್ತಾ ಬಂದ ಶುಕ್ರನಿಗೆ, ಶರ್ಮಿಷ್ಠೆಯ ಕುಚೇಷ್ಟೆಯನ್ನೂ, ಯಯಾತಿಯ ಮಹೋದಾರ ಚರಿತವನ್ನೂ ವರ್ಣಿಸಿ, ಹೇಳಿದಳು. ಮಗಳ ದುಃಖವನ್ನು ನೋಡಿ ಪೂಜ್ಯ ಶುಕ್ರಾಚಾರ್ಯನು 'ಹಾಳು ಪೌರೋಹಿತ್ಯವಿದು, ಗೌರವಪ್ರದವಲ್ಲ. ಕಪೋತಗಳಂತೆ ಕಾಡಿನಲ್ಲಿದ್ದು ಕಾಳನ್ನಾರಿಸಿ ತಿಂದು ಬದುಕುವುದು ಲೇಸು' ಎಂದು ಆಲೋಚಿಸಿ, ಮಗಳಿಂದ ಕೂಡಿ ಊರಿಂದ ಹೊರಹೊರಟನು.

ದಾನವ ಶತ್ರುಜನರಾದ ದೇವತೆಗಳಿಗಾನಂದವಾಗಿ ರಕ್ಕಸರ ಕೊಲ್ಲಲು ಕತ್ತಿಗಳ ಮಸೆದರು. ವೃಷಪರ್ವನು ಭೀತನಾಗಿ ಗುರುಪಾದಕಮಲಗಳನ್ನು ಹಿಡಿದು, ಬಿಡದೆ, 'ಕ್ಷಮಿಸಿ ಅನುಗ್ರಹಿಸಿ' ಎಂದು ಬೇಡಿಕೊಂಡನು. ಉತ್ತಮರ ಕೋಪವು ಕ್ಷಣಾರ್ಧಕಾಲೀನವಲ್ಲವೇ? ಶುಕ್ರನು ತನ್ನ ಮಗಳ ಕೋರಿಕೆಯನ್ನು ನೆರವೇರಿಸುವಂತೆ ವೃಷಪರ್ವನಿಗೆ ಸೂಚಿಸಿದನು. ಅವಳನ್ನು ಕಡೆಗಣಿಸಿದವರಲ್ಲಿ ತಾನಿರುವುದು ಶಕ್ಯವಲ್ಲವೆಂದು ನುಡಿದನು. ರಾಜನು ಗುರುಪುತ್ರಿಯನ್ನು ಕೇಳಲು, ಅವಳಿಂತೆಂದಳು –

'ನಾನು ಮದುವೆಯಾಗಿ ಹೋಗುವಲ್ಲಿಗೆ ನಿನ್ನ ಮಗಳು ಸಖಿಯರಿಂದ ಕೂಡಿ ಬಂದು, ನನ್ನ ಪರಿಚರ್ಯವನ್ನು ಮಾಡಿಕೊಂಡಿರಲಿ!' ಆ ಮಾತನ್ನು ಕೇಳಿ, ತನ್ನಿಂದ, ತನ್ನವರಿಗಾದ ಶತ್ರು ಸಂಕಟವನ್ನು ಪರಿಹರಿಸಲು ನಿಶ್ಚಯಿಸಿ ಶರ್ಮಿಷ್ಠೆ, ಸಾವಿರಸಖೀ ಜನರಿಂದ ಕೂಡಿ ದೇವಯಾನಿ ಯನ್ನು ದಾಸಿಯಂತೆ ಸೇವಿಸಿಕೊಂಡಿರಲು ಒಪ್ಪಿದಳು. ಶುಕ್ರನಾಗ ಮಗಳನ್ನೂ ಶರ್ಮಿಷ್ಠೆಯನ್ನೂ ಯಯಾತಿಗಿತ್ತು 'ರಾಜನ್! ಶರ್ಮಿಷ್ಠೆಯು ಎಂದಿಗೂ ನಿನ್ನ ಶಯನವನ್ನಾರೋಹಿಸದಂತೆ ವರ್ತಿಸು' ಎಂದಾಜ್ಞಾಪಿಸಿದನು.

ಕಾಲಕ್ರಮದಿ ದೇವಯಾನಿ ಯದು, ತುರ್ವಸು ಎಂಬ ಸುತರನ್ನು ಪಡೆದಳು. ಆಗ ಶರ್ಮಿಷ್ಠೆ ತನ್ನ ಸಖಿಯ ಪತಿಯಾದ ಯಯಾತಿಯನ್ನು ರಹಸ್ಯದಲ್ಲಿ ವರಿಸಿದಳು. ಆರ್ತವ ಸಮಯದಲ್ಲಿದ್ದು, ಅನನ್ಯಗತಿಕಳಾದ ಅವಳ ಪ್ರಾರ್ಥನೆಯನ್ನು ಮನ್ನಿಸದಿರೆ ಪಾಪವೆಂದರಿತು, ಯಯಾತಿಯು ಶುಕ್ರವಚನವನ್ನು ನೆನೆದು ಭಯದಿಂದ ಹಿಂಜರಿದರೂ, ಕೊನೆಗೆ ಶ್ರೀನಾರಾಯಣನೇ ಗತಿ ಎಂದು ನಿಶ್ಚಯಿಸಿ, ಶರ್ಮಿಷ್ಠೆಯನ್ನೂ ಸ್ವೀಕರಿಸಿದನು. ಅವಳಿಗೂ ದ್ರುಹ್ಯ, ಅನು, ಪೂರು ಎಂಬ ಮೂವರು ಸುತರಾದರು.

ಇದನ್ನರಿತು ಕೋಪವೇಗವನ್ನು ತಡೆಯಲಾರದೆ ದೇವಯಾನಿ, ತಂದೆಯ ಮನೆಗೆ ನಡೆದಳು. ಕಾಮಾರ್ತನಾದ ಯಯಾತಿ ಅವಳನ್ನು ಹಿಂಬಾಲಿಸಿ, ಅಂಗಲಾಚಿ, ಕೈಕಾಲು ಹಿಡಿದು ಬೇಡಿದನು.

ಶುಕ್ರನಿಗೆ ಹೇಳಬೇಡವೆಂದಂತೆಲ್ಲ, ಅವಳು ಚಂಡಿಯಾಗಿ – ತನ್ನ ಮಾರ್ಗವನ್ನು ತಾನೇ ಸಿಟ್ಟಿನಿಂದ ಕೊಯ್ಯುವ ಅವಿವೇಕಿಯಂತೆ – ತಂದೆಗೆ ನಡೆದ ವೃತ್ತಾಂತವನ್ನರುಹಿದಳು.

ಶುಕ್ರನು ಸಿಡಿದೆದ್ದು 'ಛೇ! ಸ್ತ್ರೈಣ! ಸುಳ್ಳನ್ನಾಡಿದ ನಿನ್ನ ಮೈ ಜರಾಜರ್ಜರಿತವಾಗಲಿ' ಎಂದು ಶಾಪವನ್ನಿತ್ತನು. ಯಯಾತಿ ಆಚಾರ್ಯನನ್ನು ಒಲಿಸಿಕೊಂಡು 'ನಿನ್ನ ಮಗಳಲ್ಲಿ ರಮಿಸಿ ತೃಪ್ತನಾಗದಿರುವ ನನ್ನನ್ನು ಕರುಣಿಸು. ನನಗೊದಗಿದ ಅಕಾಲಜರೆಯನ್ನು ಮತ್ತೊಬ್ಬನಿಗಿತ್ತು ನಾನು ತರುಣನಾಗುವಂತೆ ಅನುಗ್ರಹಿಸು' ಎಂದು ಬೇಡಿದನು. ಶುಕ್ರನು 'ಅಸ್ತು' ಎನ್ನಲು, ಯಯಾತಿ ಜ್ಯೇಷ್ಠಪುತ್ರನಾದ ಯದುವನ್ನು ನೋಡಿ, 'ವತ್ಸ! ನಿಮ್ಮ ತಾತ ಮಾಡಿದ ಕೆಡುಕನ್ನು ನೋಡು – ಮುದುಕನಾಗಿರಲು ಇಷ್ಟವಿಲ್ಲ. ನಿನ್ನ ವಯೋಭಾಗ್ಯವನ್ನು ಕೆಲಕಾಲ ಕೊಡು. ವಿಷಯಗಳಲ್ಲಿ ತೃಪ್ತಿಯನ್ನು ಹೊಂದಿ, ಪುನಃ ನನ್ನ ಜರೆಯನ್ನು ನಾನು ತೆಗೆದುಕೊಳ್ಳುವೆನು' ಎಂದು ಕೇಳಿದನು. ಯುದುವಿಂತೆಂದನು-

'ರಾಜನ್! ನಡುವೆ ಬಂದ ಮುಪ್ಪಿದು. ನಿನ್ನ ಮುಪ್ಪಿನ ಬವಣೆ ನನಗೇಕೆ? ಯಾವ ವಿಷಯಸುಖವನ್ನು ಅನುಭವಿಸಿ ಸಾಕಾಗಿದೆ ಎಂದು ವಿರಕ್ತನಾಗಲಿ? ಹೇಳು. ನಾನು ತಾರಣ್ಯವನ್ನು ಬಿಡಲಾರೆ'ನೆಂದ ಮಗನನ್ನು ಜರಿದು, ಯಯಾತಿಯು ದ್ರುಹ್ಯ, ತುರ್ವಸು, ಅನುರಾಜರನ್ನೂ ಯಾಚಿಸಿದನು. ವಾರ್ಧಕ್ಯವು ಕಾಂತಾಹೇಯವು. ಬಂಧುಜನರು ವೃದ್ಧನನ್ನು ನಿಂದಿಸುವರು. ಕಂಡೂತಿ ವಲೀಪಲಿತಯುತವಾದ ಶರೀರವು ವಿಕಾರವಾಗುವುದು. ಶರೀರದಲ್ಲಿ ರೋಗರುಜಿನ ಗಳು, ಹೃದಯದಲ್ಲಿ ಚಿಂತೆ ನೆಲೆಮಾಡಿ ನಿಲ್ಲುವುವು. ಚಾಪಲ್ಯವು ಹೆಚ್ಚುವುದು. ಇಂತು ಮುಪ್ಪನ್ನು ಕೈಯೊಡ್ಡಿ ಸ್ವೀಕರಿಸುವರುಂಟೇ?

ಯಯಾತಿಯು ಪೂರುವಿನನ್ನು ಕಂಡು 'ಮನಗೇ! ಅನಿತ್ಯವಾದ ದೇಹವನ್ನು ನಿತ್ಯವೆಂದು ಭ್ರಮಿಸಿ ನಿನ್ನ ಅಣ್ಣಂದಿರು ನನಗೆ ಯೌವನವನ್ನು ಕೊಡಲೊಲ್ಲದೆ ಕೆಟ್ಟರು. ಇರಲಿ! ನೀನು ವಯಸ್ಸಿನಿಂದ ಚಿಕ್ಕವನಾದರೂ, ಗುಣದಿಂದ ದೊಡ್ಡವನಾಗಿರುವೆ. ಅವರಂತೆ ನನ್ನ ಮಾತನ್ನು ತಿರಸ್ಕರಿಸಬೇಡ' ಎಂದನು. ಪೂರುವು 'ನರದೇವ! ಈ ದೇಹವನ್ನು ಕೊಟ್ಟಿರುವ ತಂದೆಯ ಋಣ ತೀರಿಸಲಾಗುವುದೇ? ನಿನ್ನ ದಯೆಯಿಂದ ಇಹಪರ ಸುಖಗಳೆರಡೂ ಸಿಗುವುವು. ತಂದೆಯ ಮನದಿಂಗಿತವನ್ನರಿತು ಮಾಡುವ ಮಗನು ಉತ್ತಮನು, ಹೇಳಿದಮೇಲೆ ಮಾಡುವವನು ಮಧ್ಯಮನು, ಅಶ್ರದ್ಧೆಯಿಂದ ಮಾಡುವವನು ಅಧಮನು, ಮಾಡದೆ ಧಿಕ್ಕರಿಸುವವನು ತಂದೆಯಿಂದ ಮಲದಂತೆ ಹೊರಬಂದವನು; ಎಂದು ತನ್ನಪ್ಪನ ಮುಪ್ಪನ್ನು ತೆಗೆದುಕೊಂಡನು.

ಪೂರುವಿನ ತಾರುಣ್ಯವನ್ನು ಪಡೆದು ಯಯಾತಿ, ತಂದೆಯಂತೆ ಪ್ರಜರನ್ನು ಪಾಲಿಸಿದನು. ಕುಗ್ಗದ ಇಂದ್ರಿಯ ಬಲದಿಂದ ಬಹುಕಾಲ, ಬೇಕಾದ ವಿಷಯಸುಖಗಳನ್ನೂ ಅನುಭವಿಸಿದನು. ಅತ್ಯಂತ ಪ್ರಿಯಳಾದ ದೇವಯಾನಿಯು ತನು ಮನೋ ವಾಕ್ಕಗಳಿಂದ ಸೇವಿಸುತ್ತಿರಲು ಸುಖ ವಾಗಿದ್ದನು. ಭೂರಿದಕ್ಷಿಣೆಗಳನ್ನಿತ್ತು, ಯಜ್ಞಗಳನ್ನೂ ಮಾಡಿ ಶ್ರೀಹರಿಗರ್ಪಿಸಿದನು. 'ಆಕಾಶದಲ್ಲಿ ಮೇಘಜಾಲದಂತೆ ಶ್ರೀಹರಿಯಲ್ಲಿ ಈ ಜಗವೆಲ್ಲ ನಿಂತಿದೆ. ಶ್ರೀಹರಿಯು ಸರ್ವವೇಧ ಪ್ರತಿ ಪಾದ್ಯನು-ಸರ್ವದೇವತಾ ಪ್ರಧಾನನು, ಸ್ವಪ್ನದಂತೆ ಅನಿತ್ಯವೂ, ಮನೋರಥ ದಂತೆ ಅಸ್ವತಂತ್ರವೂ ಆದ ಈ ವಿವಿಧ ಜಗವು ಶ್ರೀಹರಿಯ ಅಧೀನವಾಗಿದೆ. ಅಣುವಿಗೆ ಅಣುವಾಗಿ ಹೃದಯ ಗುಹೆಯಲ್ಲಿರುವ ಶ್ರೀವಾಸುದೇವನೇ ಗತಿ' ಎಂದು ಅಭಿಲಾಷೆಗಳನ್ನು ಹತ್ತಿಟ್ಟು, ಯಯಾತಿಯು ವಿರಕ್ತನಾದನು! 'ಒಂದು ಸಾವಿರ ವರ್ಷಗಳ ಕಾಲ ಬಿಡದೆ ಮನಸ್ಸಿನಿಂದ ಕೂಡಿದ ಪಂಚೇಂದ್ರಿಯ

ಗಳಿಂದ ಬೇಕಾದಷ್ಟು ವಿಷಯಸುಖಗಳನ್ನು ಅನುಭವಿಸಿದ್ದರೂ, ಇನ್ನು ಮನಸ್ಸಿಗೆ ಸಾಕಾಗಲಿಲ್ಲ– ಈ ಹಾಳು ಇಂದ್ರಿಯಗಳನ್ನು ವಿಷಯವಿರಕ್ತವನ್ನಾಗಿಸಿ ಶ್ರೀಹರಿಚರಣ ವನ್ನು ಸೇರುವೆ'ನೆಂದು ಚಿಂತಿಸಿದನು.

## ೧೬. ಯಯಾತಿ ವಿರಕ್ತಿ – ಹೋತನ ಕಥೆ

ಯಾಯಾತಿಯು 'ಕಾಮಾನುಭವದಿಂದ ತೃಪ್ತಿಯಾಗದು– ಜ್ಞಾನನಾಶವಾಗುವುದು' ಎಂದು ತಿಳಿದು, ವಿರಕ್ತನಾಗಿ ಒಂದು ದಿನ ದೇವಯಾನಿಯನ್ನು ಕರೆದು ಹೀಗೆಂದನು–

ಭಾರ್ಗವಿ! ಕೇಳೊಂದು ಕಥೆಯನ್ನು. ಗ್ರಾಮ್ಯ ಸಖರತವಾದ ಮೂರ್ಖರನ್ನು ನೋಡಿ, ವನದಲ್ಲಿ ಧೀರರು 'ಅಯ್ಯೋ! ಕೆಡುತ್ತಿರುವರಲ್ಲಾ!' ಎಂದು ಮರುಕಗೊಂಡು ಖಿನ್ನರಾಗಿರುವರು. ನನ್ನಂತಹ ಒಂದು ಹೋತದ ನೆನಪಾಗುತ್ತಿದೆ.

ವನದಲ್ಲಿ ಒಂದು ಹೋತವಿತ್ತು. ಪ್ರಿಯ ಜನರನ್ನು ಹುಡುಕುತ್ತಾ ಒಂದು ಬಾವಿಯಲ್ಲಿ ಬಿದ್ದು ಹೆಣ್ಣು ಮೇಕೆಯನ್ನು ನೋಡಿತು. ತಾನು ಮಾಡಿದ ಕರ್ಮದಿಂದ ನರಳುತ್ತಿರುವ ಹೆಣ್ಣನ್ನು ಮೇಲಕ್ಕೆತ್ತುವುದೆಂತು? ಚಿಂತಿಸಿ ಆ ಹೋತವು ಕೊಂಬಿನಿಂದ ಹಿಡಿದು ಹೊರಗೆ ಹಾಕಿತು. ಹೆಣ್ಣು ಅದನ್ನು ಕಾಮಿಸಲು, ಹೋತ ಅದರಿಂದ ಕೂಡಿ, ವನವಿಹಾರವನ್ನು ಮಾಡುತ್ತಿದ್ದಿತು. ಮಿಕ್ಕ ಮೇಕೆಗಳೂ ಸರಿಯಾದ ಗಂಡನೆಂದು ಆ ಹೋತದೊಡನೆ ಕ್ರೀಡಿಸಿದವು. ಬಲವಂತನು, ವೀರ್ಯ ವಂತನು, ಅನ್ನಭಕ್ಷಣ ಕುಶಲನು ಆದ ಹೋತಗೆ ದೊಡ್ಡ ಮೀಸೆಗಳಿದ್ದವು. ರೂಪವಂತನಾಗಿ ಬಹು ಮೇಕೆಗಳಿಗೆ ಪ್ರಿಯನಾಗಿದ್ದ ಹೋತನು ಕಾಮ ಪಿಶಾಚಬಡಿದವನಂತೆ ಕಣ್ಣು ಕಾಣದೆ ತಿರುಗುತ್ತಿದ್ದುದನ್ನು ನೋಡಿ ಮೊದಲಿನ ಮೇಕೆಯು ಅದರ ಯಜಮಾನನ ಹತ್ತಿರ ಸೇರಿ ದುಃ ಖದಿಂದ ದೂರಿಕೊಂಡಿತು. ಸ್ತ್ರೀವಶವಾದ ಹೋತವು ಆ ಮೇಕೆಯನ್ನು ಮನವೊಲಿಸಲು ಪ್ರಯತ್ನಿಸಿ ವಿಫಲವಾಯಿತು. ಮೇಕೆಯ ಸಾಕಿದ ಯಜಮಾನನು ಹೋತನಮೇಲೆ ಸಿಟ್ಟಾಗಿ ಅದರ ವೃಷಣವನ್ನು ಕಡಿದುಬಿಟ್ಟನು. ಮುಂದೆ ಮೇಕೆಗೆ ಹಿತವಾಗಲೆಂದು ಬೇರೆ ವೃಷಣವನ್ನು ಜೋಡಿಸಿ ಹೋತವನ್ನು ಕರುಣಿಸಿದನು. ಇಂತು ಮತ್ತೆ ಯುವಕನಾದ ಹೋತವು ಅದೇ ಮೇಕೆಯಿಂದ ವಿಷಯಸುಖವನ್ನು ಅನುಭವಿಸುತ್ತಾ ಬಹುಕಾಲವಾದರೂ ತೃಪ್ತವಾಗದೆ ಕಾಮ ದಾಸವಾಗಿದೆ.

ಆ ಹೋತನಂತೆ ಕೃಪಣನಾಗಿ ಕಾಮದಾಸನಾದ ನನ್ನ ಕಥೆಯನ್ನು ಕೇಳಿದೆಯಾ? ನಿನ್ನ ಸುರತಚಾತುರ್ಯಮೋಹಿತನಾಗಿ ಹರಿಯನ್ನೇ ಮರೆತೆನಲ್ಲ! ಕಾಮಮೋಹನಾಸ್ತ್ರದ ಹೊಡೆತ ವನ್ನು ತಿಂದ ಮನುಜನು ಭೂಮಿಯಲ್ಲಿರುವ ವ್ರೀಹ್ಯಾದಿ ಧಾನ್ಯಗಳನ್ನು, ಕನಕ ರಜತವಜ್ರಾದಿ ಗಳನ್ನು, ಗೋ ಕರಿ ತುರಗಾದಿ ಪಶುಗಳನ್ನು ರಂಭಾದಿ ತರುಣಿಯರನ್ನು ಸಕಲವನ್ನು ಪಡೆದರೂ ತೃಪ್ತನಾಗದಿರುವನು. ಕಾಮಗಳನ್ನು ಬೇಕಾದ ವಿಷಯಗಳನ್ನಿತ್ತು ಪೂರೈಸುವೆನೆಂಬುವನು ಹುಚ್ಚನೇ ಸರಿ! ತುಪ್ಪದಿಂದ ಅಗ್ನಿಜ್ವಾಲೆಯನ್ನಾರಿಸಿಬಿಡಲು ಬರುವುದೇ? ಸಮಸ್ತ ಜೀವರಲ್ಲಿಯು ಶ್ರೀಶನಿರುವನು. ಎಲ್ಲರೂ ಶ್ರೀಶಾಧೀನರೆಂದಮೇಲೆ, ಯಾರನ್ನೂ ನಾವು ಎಂದು ಹಿಂಸೆಯನ್ನು ಮಾಡಲಾಗದು. ಹಿಂಸೆಯು ಕಾಮ ಮೂಲವಾಗಿದೆ. ಶರೀರೇಂದ್ರಿಯಾದಿಗಳೆಲ್ಲವು ಜೀರ್ಣ ವಾದರೂ ತೃಷ್ಣೆ ಜೀರ್ಣವಾಗದಿರುವುದು. ತೃಷ್ಣೆಯಿಂದ ದುಃಖ. ಆ ತೃಷ್ಣೆಯನ್ನು ಬೇಗನೆ

ಬಿಡುವುದರಿಂದ ಮನುಜನು ಸುಖಿಯಾಗುವನು. ವಿಷಯಸೇವನೆಯಲ್ಲಿ ಮುಳುಗಿ ಮೈಮರೆತಿದ್ದ ನನಗೆ ಸಾವಿರ ವರ್ಷ ವಯಸ್ಸಾಯಿತು; ಆದರೆ ವಿಷಯವಿರಕ್ತಿಯು ಪುಟ್ಟಿತೇ? ಸಾಕಿನ್ನು ಈ ಕಾಮಾಭಿಲಾಷೆ. ಶ್ರೀಹರಿಯಲ್ಲಿ ಮನವನ್ನಿಟ್ಟು, ಸುಖದುಃಖಾದಿ ದ್ವಂದ್ವವಿಕಾರ ವನ್ನು ಬಿಟ್ಟು, ಅಹಂಕಾರದೂರನಾಗಿ ಹರಿಣಾದಿ ವನಮೃಗಗಳಂತೆ ನಿರ್ಲಿಪ್ತನಾಗಿ ಸುಜನಮಧ್ಯದಿ ಚರಿಸುವೆನು. ನೋಡಿದೆನು ರಾಜ್ಯಾದಿಗಳ ನಶ್ವರತೆಯನ್ನು! ಕೇಳಿರುವ ಸ್ವರ್ಗಾದಿಗಳೂ ನಶ್ವರಗಳೇ ಆಗಿವೆ. ಅವುಗಳ ಚಿಂತೆ ಇನ್ನೆನಗೇಕೆ? ವಿಷಯಾಭಿನಿವೇಶವೇ ಸಂಸಾರಕಾರಣವಾಗಿದೆ. ಸಂಸಾರದ ಸುಳಿಯಲ್ಲಿ ಸಿಕ್ಕಿಬಿದ್ದವನಿಗೆ ಸ್ವರೂಪಜ್ಞಾನವೆಲ್ಲಿಯದು? ಆತ್ಮಜ್ಞಾನಿಯಾದವನೇ ಬುದ್ಧಿವಂತನು.

ಯಯಾತಿಯು ಇಂತು ನಿಶ್ಚಯಿಸಿ, ತನ್ನ ಮಗನಾದ ಪೂರುವಿನನ್ನು ಕರೆದು ಅವನ ತಾರುಣ್ಯವನ್ನವನಿಗಿತ್ತನು; ತನ್ನ ಮುಪ್ಪನ್ನು ಸಂತೋಷವಾಗಿ ಸ್ವೀಕರಿಸಿ, ರಾಜ್ಯವನ್ನು ಸರ್ವವನ್ನು ಪೂರುವಿಗಿತ್ತು ಅಭಿಷೇಕಮಾಡಿದನು. ಆಗ್ನೇಯ ದಿಕ್ಕನ್ನು ದ್ರುಹ್ಯನಿಗೂ, ದಕ್ಷಿಣ ರಾಜ್ಯವನ್ನು ಯದುವಿಗೂ, ಪಶ್ಚಿಮವನ್ನು ತುರ್ವಸುವಿಗೂ, ಉತ್ತರವನ್ನು ಅನುರಾಜನಿಗೂ ಕೊಟ್ಟು, ಪೂರುವಿಗಿವರೆಲ್ಲರೂ ಅನುವ್ರತರಾಗಿರುವಂತೆ ಆಜ್ಞಾಪಿಸಿದನು.

ಬಹುಕಾಲ ಶಬ್ದಾದಿ ವಿಷಯಗಳಲ್ಲಿ ಆಸಕ್ತವಾಗಿ ಕೆಟ್ಟ ಇಂದ್ರಿಯಗಳ ಮನಗಳನ್ನು ಒಂದೇ ಕ್ಷಣದಲ್ಲಿ ಶ್ರೀಹರಿಕೃಪೆಯಿಂದ ಜಯಿಸಿ, ಶುದ್ಧನಾಗಿ ಯಾಯಾತಿಯು, ರೆಕ್ಕೆಗಳು ಬಂದ ಪಕ್ಷಿಯ ಗೂಡನ್ನಂತೆ, ಮನೆಯನ್ನು ಬಿಟ್ಟು, ದುಸ್ಸಂಗದೂರನಾದನು. ಅಪರೋಕ್ಷ ಜ್ಞಾನದ ಅನುಭವವಾಗಲು ತ್ರಿಗುಣಕಾರ್ಯವಾದ ಲಿಂಗಶರೀರದ ಅಭಿಮಾನವನ್ನೂ ತಿಳಿದು ದೂರವಾಗಿರಿಸಿ, ಗುಣಪೂರ್ಣನಾದ ವಾಸುದೇವನ ಲೋಕವನ್ನು ಹೊಂದಿ ಸುಖಿಸಿದನು.

ದೇವಯಾನಿಯು ಕಥೆಯನ್ನು ಕೇಳಿದಳು; ಅದು ನನ್ನ ಕಥೆ ಎಂದರಿತಳು! ಇಂದ್ರಿಯ ದಾಸಳಾಗಿ ಆತ್ಮವಂಚನೆ ಮಾಡಿಕೊಂಡೆನೆಂದು ಪಶ್ಚಾತ್ತಾಪದಿಂದ ನೊಂದಳು. ಅರವಟ್ಟಿಗೆಯಲ್ಲಿ ಕಲೆತ ಜನರಂತೆ, ಈಶ್ವರಾಧೀನವಾಗಿ ಕರ್ಮಫಲರೂಪದಿಂದ ಬಂದ ಪತಿಪುತ್ರಾದಿ ಸಂಬಂಧ ರೂಪ ಸಂಸಾರದಲ್ಲಿ ಕಲೆತಿರುವ ಸುತಾದಿಗಳಲ್ಲಿ ಮಮತಾಪಾಶವನ್ನು ಕಡಿದಳು. ಭಾರ್ಗವಪುತ್ರಿಯಾದ ಆ ಪುಣ್ಯವತಿ, ಶ್ರೀಕೃಷ್ಣನಲ್ಲೇ ಮನವಿಟ್ಟು 'ಭಗವಾನ್! ವಾಸುದೇವ! ಜಗತ್ಪಾಲನು, ಸರ್ವಭೂತ ನಿಯಮಾಕನು, ಸುಖಪೂರ್ಣನು, ಸರ್ವೋತ್ತಮನು ಆದ ನಿನಗೆ ನಮಸ್ಕಾರ' ಎಂದು ಜಪಿಸುತ್ತಾ, ಲಿಂಗಶರೀರ ಕಾರ್ಯವನ್ನು ವಿಫಲವಾಗಿಸಿ, ಮುಕ್ತಳಾದಳು.

## ೧೭. ದುಷ್ಯಂತ ಭರತ ಕಥಾ

ಶ್ರೀಶುಕನು ಹೇಳಿದನು–

ರಾಜನ್! ಪುರುವಂಶವನ್ನು ಕೇಳು. ನೀನು ಅದೇ ವಂಶಜನು. ಆ ವಂಶದಲ್ಲಿ ರಾಜರ್ಷಿಗಳು ಪುಟ್ಟಿರುವರು. ಕೆಲ ರಾಜನ್ಯರು ಬ್ರಹ್ಮವಂಶಜರೂ ಆಗಿದ್ದರು. ಪುರುರಾಜನ ಮಗನಾದ ಜನಮೇಜಯನ ವಂಶದಲ್ಲಿ ಕ್ರಮವಾಗಿ ಪ್ರವಿವಾನ್, ಪ್ರವೀರ, ನಮಸ್ಯು, ಚಾರುಪದ, ಸುದ್ಯು, ಬಹುಗವ, ಶಂಯಾತಿ, ಹಂಯಾತಿ, ರೌದ್ರಾಶ್ವರು, ಪುಟ್ಟಿದರು. ರೌದ್ರಾಶ್ವನಿಗೆ ಋತೇಯು, ಕುಕ್ಷೇಯು, ಸ್ಥಂಡಿಲೇಯು, ಕೃತೇಯು, ಜಲೇಯು, ಸಂತನೇಯು, ಧರ್ಮ, ಸತ್ಯ, ವ್ರತೇಯು,

ವನೇಯರೆಂಬ ಹತ್ತು ಪುತ್ರರಾದರು. ಮುಖ್ಯಪ್ರಾಣನಿಗೆ ಇಂದ್ರಿಯ ದಶಕದಂತೆ ರುದ್ರಾಶ್ವನಿಗೆ ಘೃತಾರ್ಚಿಯಲ್ಲಿ ಇವರು ಹತ್ತು ಜನ ಜನಿಸಿದರು. ಋತೇಯಸುತನಾದ ರಂತಿಭಾರನಿಗೆ ಸುಮತಿ, ಧ್ರುವ, ಪ್ರತಿರಥರೆಂಬ ಮೂವರು ಸುತರಿದ್ದರು. ಪ್ರತಿರಥಪುತ್ರನೇ ಕಣ್ವನು. ಅವನ ಪುತ್ರನು ಮೇಧಾತಿಥಿಯು. ಅವನ ಮಗನು ಪ್ರಸ್ಕಣ್ವನು. ಇವನ ವಂಶದವರು ಬ್ರಹ್ಮವಂಶ್ಯರೆನಿಸಿದರು.

ಸುಮತಿಯ ಮಗನು ರೈಭ್ಯನು. ಅವನ ಮಗನೇ ಪ್ರಸಿದ್ಧವಾದ ದುಷ್ಯಂತನು, ಒಂದು ದಿನ ದುಷ್ಯಂತನು ಬೇಟೆಯಾಡಲು ವನವನ್ನು ಪೊಕ್ಕು ಕಣ್ವಾಶ್ರಮವನ್ನು ಸೇರಿದನು. ಅಲ್ಲಿ ರಮೆಯಂತೆ ಬೆಳಗುವ ಕನ್ಯೆಯನ್ನು ಕಂಡು, ರೂಪ ಧರಿಸಿ ನಿಂತ ದೇವಮಾಯೆಯೇ ಎಂದು ಬೆರಗಾಗಿ ಮಾತನಾಡಿದನು.

'ಕಮಲನಯನೇ! ಮನೋಹರಳಾಗಿರುವೆ. ನೀನಾರು? ಇಲ್ಲೇಕೆ ಬಂದಿರುವೆ? ನಿಜವಾಗಿ ನೀನು ರಾಜಕನ್ಯೆಯೇ ಇರಬೇಕು. ಪೌರವರಾದ ರಾಜರ ಮನವು ಎಂದಿಗೂ ಅಧರ್ಮ ಪ್ರವೃತ್ತವಾಗುವುದಿಲ್ಲ. ನನ್ನ ಮನಸ್ಸು ನಿನ್ನಲ್ಲಿರತವಾಗಿದೆ.'

ಆ ಮಾತನ್ನಾಲಿಸಿ, ರಾಜನನ್ನು ಮೋಹಿಸಿದ ಶಕುಂತಲೆ 'ನಿಜ! ನಾನು ವಿಶ್ವಾಮಿತ್ರನ ಮಗಳು. ಮೇನಕೆ ಎನ್ನ ತಾಯಿ. ಆ ವಿವರವೆಲ್ಲಾ ಪೂಜ್ಯ ಕಣ್ವನು ತಿಳಿದಿರುವನು. ರಾಜನ್! ನನ್ನ ಸೇವೆ ಎಂತಾದೀತು?' ಎಂದಳು.

ದುಷ್ಯಂತನಾಗ 'ಸುಂದರಿ! ಕುಶಿಕಾನ್ವಯ ಜಾತಳೆಂತಾಯಿತು, ಸಂತೋಷ! ಸದ್ವಂಶಜಾತನು, ಸದೃಶನಾದ ವರನನ್ನು ತಾನಾಗಿ ವರಿಸಿ ಕೊಡುವುದು ರಾಜಕನ್ಯೆಗೆ ವಿಹಿತವೇ ಆಗಿದೆ. ನನ್ನನ್ನು ಮದುವೆಯಾಗು' ಎಂದನು. ಶಕುಂತಲೆ ಅಂಗೀಕರಿಸಲು, ಅವಳನ್ನು ಗಾಂಧರ್ವವಿಧಿಯಿಂದ ಮದುವೆಯಾಗಿ, ದುಷ್ಯಂತನು, ಅವಳಿಂದ ಕೂಡಿದ್ದು ಮರುದಿನ ಪ್ರಾತಃಕಾಲವಾಗಲು, ತನ್ನ ಪುರಿಗೆ ಹೊರಟುಹೋದನು. ಅಮೋಘವೀರ್ಯನಾದ ದುಷ್ಯಂತನಿಗೆ ಗರ್ಭವನ್ನು ಧರಿಸಿದ ಶಕುಂತಲೆ, ಕಾಲದಲ್ಲಿ ಗಂಡುಮಗುವನ್ನು ಹೆತ್ತಳು. ಕಣ್ವಋಷಿ ಆ ಕುಮಾರನಿಗೆ ಕ್ಷತ್ರಿಯೋಜಿತ ಸಂಸ್ಕಾರಗಳನ್ನು ಮಾಡಿ ಸಲಹಿ ಬೆಳೆಸಿದನು.

ಆ ವೀರಬಾಲಕನು ಸಿಂಹವನ್ನು ಹಿಡಿದು ಕಟ್ಟಿ ಆಟವಾಡುತ್ತಿದ್ದನು. ಆ ದುರ್ಲಲಿತನನ್ನು ಕರೆದುಕೊಂಡು ಶಕುಂತಲೆ ರಾಜನ ಸಭೆಗೆ ಬಂದಳು. ಅವನು ಶ್ರೀಹರಿಯ ಆವೇಶದಿಂದ ಯುಕ್ತನು, ಚಕ್ರವರ್ತಿ ಲಕ್ಷಣಲಕ್ಷಿತನು ಆಗಿದ್ದನು. ಲೋಕಾಪವಾದ ಭೀತಿಯಿಂದ ಪತ್ನೀ ಸುತರನ್ನು ಕೈಕೊಳ್ಳದಿದ್ದ ರಾಜನನ್ನು ಕಂಡು, ಶಕುಂತಲೆ ದುಃಖಿತಳಾದಳು. ಆಗ ಎಲ್ಲರೂ ಕೇಳುವಂತೆ ಆಕಾಶವಾಣಿ ಇಂತೆಂದಿತು–

ಅಗ್ನಿಶಕ್ತಿಯನ್ನು ಉದ್ದೀಪಿಸುವ ಭಸ್ರವೇ (ಕಮ್ಮಾರ ತಿತ್ತಿ) ತಾಯಿ; ತಂದೆಯೇ ಒಂದಂಶ ದಿಂದ ಮಗನಾಗಿ ಜನಿಸುವನು. ವೀರ್ಯಾಂಶದಿಂದ ಜಾತನಾಗಿ ಪುಟ್ಟುವ ಮಗನೆಂಬುವ ಅಗ್ನಿಯು, ಭಸ್ರದ ಗಾಳಿಯಿಂದ ವಿಜೃಂಭಿಸಿ ಕರಚರಣಾದ್ಯವಯವಯುತನಾಗಿ ರೂಪುಗೊಳ್ಳಲು ತಂದೆಯೇ ಮುಖ್ಯಕಾರಣನಾಗಿರುವನು. ಇವನು ದುಷ್ಯಂತ ಪುತ್ರನೇ ನಿಜ. ಇವನನ್ನು ಭರಿಸು. ದುಷ್ಯಂತಾ! ಶಕುಂತಲೆಯನ್ನು ಅವಮಾನಿಸಬೇಡ. ಸುಪುತ್ರನು ತನ್ನ ತಂದೆಯನ್ನು ಅಕ್ಷಯವಾದ ವೈಕುಂಠವನ್ನು ಸೇರಿಸುವನು; ಕುಪುತ್ರನಾದರೆ ತಂದೆಯನ್ನು ಯಮಕ್ಷಯವಾದ ನರಕವನ್ನು ಸೇರಿಸುವನು. ಶಕುಂತಲೆ ಸತ್ಯವನ್ನೇ ಹೇಳಿರುವಳು. ಅವಳ ಮಗನೇ ದುಷ್ಯಂತ ಸುತ ಭರತನೆಂದು ಪ್ರಸಿದ್ಧನಾಗುವನು.

ದುಷ್ಯಂತನು ಭರತನಿಗೆ ಪಟ್ಟಕಟ್ಟಿ, ತಾನು ತಪೋವನವನ್ನು ಸೇರಿದನು. ಮಹಾಮಹಿಮನಾದ ಭರತ ಚಕ್ರವರ್ತಿಯು ಶ್ರೀಹರಿಯ ಆವೇಶದಿಂದ ಕೂಡಿ ಧರ್ಮಪರಿಪಾಲನೆಯನ್ನು ಚೆನ್ನಾಗಿ ಮಾಡಿದನು. ಅವನ ಬಲಗೈಯಲ್ಲಿ ಚಕ್ರಪದ್ಮ ರೇಖೆಗಳಿದ್ದವು; ಪಾದಗಳಲ್ಲಿ ಧ್ವಜಪದ್ಮ ಚಿಹ್ನೆಗಳಿದ್ದವು. ಮಹಾಭಿಷೇಕವೆಂಬ ಯಜ್ಞವನ್ನು ಮಾಡಿ ಮಹತ್ಕೀರ್ತಿಯನ್ನು ಗಳಿಸಿದನು. ಅವನು ಗಂಗಾನದಿಯ ತೀರದಲ್ಲಿ ಐವತ್ತೈದು ಅಶ್ವಮೇಧಗಳನ್ನು, ಯಮುನಾನದಿಯ ತೀರದಲ್ಲಿ ಎಪ್ಪತ್ತೆಂಟು ಅಶ್ವಮೇಧಗಳನ್ನು ಮಾಡಿ ರತ್ನರಾಶಿಗಳನ್ನು ದಾನಮಾಡಿದನು. ದೀರ್ಘತಮಸನು ಪುರೋಹಿತನಾಗಿ ಮಾಡಿಸಿದ ಆ ಯಜ್ಞಗಳಿಂದ ಪ್ರೀತನಾಗಿ, ಅಗ್ನಿದೇವನು ಭರತನಿಗೆ ಸಚಿವನಂತೆ ಸಹಕರಿಸಿದನು. ಬ್ರಾಹ್ಮಣರು ಅವನಿತ್ತ ಗೋವುಗಳನ್ನು ಹಂಚಿಕೊಂಡಾಗ ಒಬ್ಬೊಬ್ಬರಿಗೆ ಎರಡು ಸಾವಿರ ಆಕಳುಗಳು ಸಿಕ್ಕವು. ಭರತನು ಮಾಡಿದ ನೂರಮೂವತ್ತುಮೂರು ಯಾಗಗಳನ್ನು ಕಂಡು ರಾಜರು ಆಶ್ಚರ್ಯಚಕಿತರಾದರು. ಆ ಯಜ್ಞಗಳಿಗೆ ವಿಘ್ನವನ್ನೊಡ್ಡಿ, ಪರೀಕ್ಷಿಸಿದ ದೇವತೆಗಳನ್ನು ಒಲಿಸಿಕೊಂಡು, ಭರತನು ಮಹಾಮಹಿಮಾನ್ವಿತನೆಂದು ಖ್ಯಾತನಾದನು. ವ್ರತ ಸಮಾಪ್ತಿ ಕಾಲದಲ್ಲಿ ಕನಕಾಭರಣಗಳಿಂದ ಸಮಲಂಕೃತವಾದ ಇಪ್ಪತ್ತೆಂಟು ಭದ್ರ ಗಜಗಳನ್ನೂ ವಿಪ್ರರಿಗೆ ದಾನಮಾಡಿದನು. ಭರತನಿಗೆ ಹಿಂದುಮುಂದಿನ ರಾಜನ್ಯರಾರೂ ಅವನಂತೆ ಉದಾರ ಕರ್ಮಗಳನ್ನು ಮಾಡಿಲ್ಲ. ಕೈಗಳಿಂದ ನಾಕವನ್ನು ಮುಟ್ಟಲಾಗದಂತೆ ಭರತನ ಕೀರ್ತಿಯನ್ನು ಇತರ ರಾಜರು ಪೊಂದಲಾರರು. ಕಿರಾತ ಹೂಣ ಯವನಾಂಧ್ರ, ಕಂಕ ಕಷ ಶಕಾದಿ ದ್ರೋಹಿ ರಾಜರನ್ನು, ಮ್ಲೇಂಚ್ಛರನ್ನು ಗೆದ್ದು ದಿಗ್ವಿಜಯಶಾಲಿಯೆನಿಸಿ ಭರತನು, ದೇವತೆಗಳಿಗೂ ಪ್ರಿಯ ಕಾರ್ಯವನ್ನೆಸಗಿದನು. ಅಸುರರು ಕಸಿದುಕೊಂಡ ಅವನ ಸ್ಥಾನಗಳನ್ನು, ಪಣಿನಾಮಕ ದೈತ್ಯರು ಅಪಹರಿಸಿದ ಅವರ ತರುಣಿಯರನ್ನು ಪುನಃ ಅವರಿಗೆ ಜಯಿಸಿಕೊಟ್ಟನು. ಇಪ್ಪತ್ತೇಳು ಸಾವಿರ ವರ್ಷ ರಾಜ್ಯವನ್ನಾಳಿ ಭರತನು ಪ್ರಜಾರಂಜಕನಾಗಿ ಧರ್ಮವನ್ನು ಸಂರಕ್ಷಿಸಿದನು. ಆಕಾಶ ಧರಣೀಮಂಡಲಗಳು ಅವನಿಗೂ ಅವನ ಪ್ರಜರಿಗೂ ಬೇಕಾದ ವಸ್ತುಗಳನ್ನು ಸಮೃದ್ಧವಾಗಿ ಕೊಡುತ್ತಿದ್ದವು. ಇಷ್ಟಿದ್ದೂ, ವೈರಾಗ್ಯಭರಿತನಾದ ಭರತನು ರಾಜ್ಯಕೋಶಗಳು, ಸ್ವರ್ಗಸುಖಗಳು ಎಲ್ಲವೂ ನಶ್ವರವೆಂದು ತಿಳಿದು, ಇಂದ್ರಿಯಾರಾಮನಾಗದೆ ಶ್ರೀಹರಿಭಕ್ತನಾಗಿದ್ದನು.

ಆ ಮಹಾರಾಜನಿಗೆ ವಿದರ್ಭರಾಜಸುತೆಯರು, ಮೂವರು ಮಹಿಷಿಯರಾಗಿ ಪ್ರೀತಿಪಾತ್ರರೆನಿಸಿದ್ದರು. ತನಗೆ ಅನುರೂಪರಲ್ಲವೆಂದು ತಿಳಿಸಿದ ರಾಜನ ಪ್ರೀತಿಗಾಗಿ ಅವರು ತಮ್ಮ ಶಿಶುಗಳನ್ನು ಪರಿತ್ಯಜಿಸಿದರು. ಆಗ ಭರತನ ವಂಶವು ನಿಲ್ಲುವ ಪ್ರಸಂಗ ಬಂದಿತು. ಮಗನಿಗಾಗಿ ಯಜ್ಞವನ್ನು ಮಾಡಿದ ರಾಜನಿಗೆ, ಮರುದ್ದೇವತೆಗಳು ಭರದ್ವಾಜನೆಂಬ ಮಗನನ್ನು ತಂದು ಕೊಟ್ಟರು.

ಬೃಹಸ್ಪತಿಯು ಪುತ್ರಾರ್ಥಿಯಾಗಿ ಮಮತೆ ಎಂಬ ತನ್ನ ಅತ್ತಿಗೆಯಲ್ಲಿ ಗರ್ಭಾದಾನ ಮಾಡಿದನು. ಆಗ ಅವಳು ಗರ್ಭಿಣಿಯಾಗಿದ್ದಳು. ಅವಳಲ್ಲಿರುವ ಶಿಶುವು ಬೃಹಸ್ಪತಿಯನ್ನು ವಾರಿಸಿತು; ಸಿಟ್ಟಿಗೆದ್ದು ಬೃಹಸ್ಪತಿಯು ಆ ಶಿಶುವನ್ನು 'ಕುರುಡನಾಗು' ಎಂದು ಶಪಿಸಿ, ವೀರ್ಯಾದಾನವನ್ನು ಮಾಡಿದನು. ಉಚಥ್ಯಪತ್ನಿಯಾದ ಮಮತೆಯು, ಬೃಹಸ್ಪತಿ ವೀರ್ಯಜನನ್ನು ಪರಿತ್ಯಜಿಸಲು ಪ್ರಯತ್ನಿಸಿದಳು. ಆಗ ದೇವತೆಗಳೆಂದರು–'ಮೂಢೇ! ಇವನು ಬೃಹಸ್ಪತಿಗೆ ಉಚಥ್ಯಕ್ಷೇತ್ರದಲ್ಲಿ ಜನಿಸಿದುದರಿಂದ ದ್ವಾಜನೆನಿಸುವನು; ಪಿತೃಗಳಾದ ಉಚಥ್ಯ ಬೃಹಸ್ಪತಿಗಳನ್ನು ದುಃಖದಿಂದ ಪಾರಾಗಿಸಿ ಸಂತೈಸುವನು; ಆದ್ದರಿಂದ ಭರದ್ವಾಜನೆನಿಸುವನು. ಇವನನ್ನು ಭರಿಸು; ಬಿಡಬೇಡ'.

ಆ ದೇವತೆಗಳ ಮಾತನ್ನು, ಪತಿತ್ಯಾಗಭಯಗ್ರಸ್ತಳಾದ ಮಮತೆ ಕೇಳದೆ, ಬೃಹಸ್ಪತಿ ನಿಮಿತ್ತಕ ಗರ್ಭವನ್ನು ತ್ಯಜಿಸಿದಳು. ಮರುದ್ದೇವತೆಗಳು ತಾವು ಧರಿಸಿದ್ದ ಅವನನ್ನು ತಂದು ಭರತನಿಗೆ ದತ್ತುಪುತ್ರನಾಗಿ ಸಮರ್ಪಿಸಿದರು. ಮಮತೆಗೆ ಉಚಥ್ಯನಿಂದ ಜನಿಸಿದ ಪುತ್ರನು ದೀರ್ಘ ತಮಸೆನಿಸಿದನು. ಬೃಹಸ್ಪತಿ ಪುತ್ರನು ಭರತವಂಶವು ವಿತಥವಾಗುತ್ತಿರಲು ಅದನ್ನು ಬೆಳೆಸಿ ದವನಾದ್ದರಿಂದ ವಿತಥನೆಂದೇ ಪ್ರಸಿದ್ಧನಾದನು.

## ೧೮. ರಂತಿದೇವ ಚರಿತ್ರೆ

ಶ್ರೀಶುಕನು ಹೇಳಿದನು–

ವಿತಥನ ಮಗನು ಮನ್ಯುವು. ಅವನಿಗೆ ಬೃಹತ್ ಕ್ಷೇತ್ರ, ಅವನಿಗೆ ಜಯ, ಅವನಿಗೆ ಮಹಾ ವೀರ್ಯ ನರ ಗರ್ಗರೆಂಬ ಮೂವರು ಸುತರು ಜನಿಸಿದರು. ನರನ ಮಗನು ಸಂಕೃತಿಯು, ಸಂಕೃತಿಗೆ ಗುರು ಮತ್ತು ರಂತಿದೇವ ಎಂಬ ಈರ್ವರು ಸುತರಾದರು. ಪುರುರಾಜನಿಂದ ಹದಿನೇಳನೆ ಯವನು ದುಷ್ಯಂತ ಭರತನು. ಅವನಿಂದ ಹತ್ತನೆಯವನು ರಂತಿದೇವನು. ಅವನ ಕೀರ್ತಿ ಸ್ವರ್ಗದಲ್ಲಿಯೂ ಹರಡಿತು.

ರಂತಿದೇವನು ದಾನಪರಾಯಣನು. ಸಿಕ್ಕಿದ್ದುದನ್ನೆಲ್ಲ ಕೊಡುವ ಆ ಮಹಾರಾಜನು ನಿಷ್ಕಿಂಚನ ನಾದನು. ದೊಡ್ಡ ಕುಟುಂಬವಿತ್ತು; ತಾನೂ ಕೃಶನಾಗಿದ್ದನು, ಭೋಗಸಾಮಗ್ರಿಗಳನ್ನು ಕೃಪಣ ನಾಗದೆ, ಇಂದ್ರಿಯಗಳಿಗೆ ವಶನಾಗದ ಆ ಮಹೋದರರು – ತನ್ನ ಆಲೋಚನೆಯನ್ನು ಬಿಟ್ಟು ಆಹಾರಾದಿಗಳನ್ನೂ ಕೊಟ್ಟುಬಿಡುತ್ತಿದ್ದನು. ನೀರು ಕೂಡಾ ಮುಟ್ಟದೆ ನಲವತ್ತೆಂಟು ದಿನ ಕಳೆದುಹೋದ ಮೇಲೆ ಸ್ವಲ್ಪ ಗೋಧೂಮಾನ್ನ ಪಾಯಸ-ತುಪ್ಪ-ನೀರು, ಸಿಗಲು, ಸಂತಸದಿಂದ ತಾನು-ತನ್ನ ಪರಿವಾರದವರು ಅದನ್ನುಣ್ಣಲು ಕೂತರು. ಆಗ ಒಬ್ಬ ವಿಪ್ರನು ಅತಿಥಿಯಾಗಿ ಬಂದನು. ರಂತಿದೇವನು ಆದರದಿಂದ ಆ ಹಸಿದ ಬ್ರಾಹ್ಮಣನಿಗೆ ಅನ್ನವನ್ನಿತ್ತು, 'ಶ್ರೀಕೃಷ್ಣಾ! ನೀ ಪ್ರೀತನಾಗು' ಎಂದನು. ಆ ಬ್ರಾಹ್ಮಣನು ಹೋದ ಕ್ಷಣವೇ ಒಬ್ಬ ಶೂದ್ರನು ಅನ್ನಾರ್ಥಿ ಯಾಗಿ ಬಂದನು. ಬ್ರಾಹ್ಮಣನಿಗೆ ಕೊಟ್ಟು ಉಳಿದ ಅನ್ನವನ್ನು, ತಾನು ಉಣ್ಣದೆ, ಆ ಶೂದ್ರನಲ್ಲಿ ಶ್ರೀಹರಿಯನ್ನು ಸ್ಮರಿಸಿ, ಅವನಿಗೆ ಸಮರ್ಪಿಸಿದನು. ಅನಂತರದಲ್ಲಿ ನಾಯಿಗಳಿಂದ ಕೂಡಿಬಂದ ಒಬ್ಬ ಕಿರಾತನು ಅತಿಥಿಯಾಗಿ ಬಂದನು. 'ರಾಜನ್! ಹಸಿವೆಯಾಗಿದೆ. ನನಗೂ ನನ್ನ ನಾಯಿ ಗಳಿಗೂ ಅನ್ನವನ್ನು ಕೊಡು' ಎಂದು ಬೇಡಿದ ಕಿರಾತನಿಗೆ, ಉಳಿದ ಅನ್ನಘೃತ ಪಾಯಸಾದಿ ಸರ್ವವನ್ನೂ ಕೊಟ್ಟು, ನಾಯಿಗಳಿಗೆ ನೀರನ್ನೂ ಹಾಕಿದನು. ಅವನಿಗೂ ಅವನ ನಾಯಿಗಳಿಗೂ ಅಂತರ್ಯಾಮಿಯಾದ ಶ್ರೀಹರಿಯನ್ನು ನೆನೆದು, ನಮಸ್ಕರಿಸಿ ಕಳಿಸಿದನು.

ಆಗ ರಾಜನಲ್ಲಿ ಒಬ್ಬನಿಗೆ ಮಾತ್ರ ಸಾಕಾಗುವಷ್ಟು ನೀರು ಉಳಿದಿತ್ತು. ಅದನ್ನು ಕುಡಿಯ ಲೆಣಿಸುವ ರಾಜನು ಒಬ್ಬ ಪುಲ್ಕಸನನ್ನು ಕಂಡನು. ಆ ಹೊಲೆಯನು ನೀರಡಿಸಿ ನಿಶ್ಶಕ್ತನಾಗಿದ್ದನು. ಮಾತಾಡಲು ಕೈಲಾಗದೆ ಕೈಸನ್ನೆಯನ್ನು ಮಾಡಿ ನೀರು ಬೇಡಿದ ಹೊಲೆಯನನ್ನು ಕಂಡು, ಕರುಣೆಯಿಂದ ಕರಗಿ, ಮಧುರವಚನದಿಂದಿಂತೆಂದನು–

ಅಣಿಮಾದಿ ಸಿದ್ಧಿಗಳೆನಗೆ ಬೇಡ; ಮಹರಾದಿ ಲೋಕಗಳನ್ನು ಬೇಡೆನು; ಮೋಕ್ಷವನ್ನೂ ಫಲವಾಗಿ ನಾನೊಲ್ಲೆ. ಆದರೆ ಶರೀರಧಾರಿಗಳಿಗೆ ನನ್ನಿಂದ ಸ್ವಲ್ಪವಾದರೂ ಸುಖವಾಗುವಂತಿದ್ದರೆ,

ಅವರ ಕಷ್ಟಗಳನ್ನು ಅನುಭವಿಸುವ ಭಾಗ್ಯವನ್ನು ಶ್ರೀಹರಿಯು ನನಗೆ ದಯಪಾಲಿಸಲಿ! ಆಹಾ! ಹಸಿವೆ, ನೀರಡಿಕೆ, ಶ್ರಮೆ, ಗಾತ್ರಾಯಾಸ, ದೈನ್ಯ, ಶೋಕ, ದುಃಖ, ಮೋಹ ಎಂಬುವ ಈ ಎಲ್ಲ ವ್ಯಸನಗಳು ಜಲದಿಂದ ನಿವೃತ್ತವಾಗುತ್ತಲಿವೆ. ಅಂತೆಯೇ ನೀರನ್ನು ಜೀವನವೆಂಬುವರು. ಅಣ್ಣಾ! ಅನ್ನವಿಲ್ಲ. ಕೆಲ ಜಲಕಣಗಳಿವೆ. ಕುಡಿ! ಬಾ! ನನಗೆ ಶ್ರೀಪುರುಷೋತ್ತಮನೇ ಗತಿ ಎಂದು ರಂತಿದೇವನು – ತಾನು ಜಲವಿಲ್ಲದೆ ಸಾಯುವ ಸ್ಥಿತಿಯಲ್ಲಿದ್ದೂ ಲಕ್ಷಿಸದೆ ಆ ಹೊಲೆಯನಿಗೆ ನೀರನ್ನಿತ್ತು ಕಾಪಾಡಿದನು. ಸ್ವಭಾವಕರುಣಾಶಾಲಿಗಳಿಗೆ ಅಶಕ್ಯವೆಂಬುವುದುಂಟೇ?

ಅವನ ಗುಣವನ್ನು ಮೆಚ್ಚಿ ಬ್ರಹ್ಮಾದಿ ಸುರರು ನಿಜರೂಪಗಳಿಂದ ಮುಂದೆ ನಿಂತು ತಾವು ಆ ರಾಜನನ್ನು ಪರೀಕ್ಷಿಸಲು ವೃಷಲಾದಿ ರೂಪದಿಂದ ಬಂದ ಚಂದವು, ಶ್ರೀಹರಿಯ ಅನುಗ್ರಹ ಸಂಪಾದಿತವೆಂದು ತಿಳಿಸಿ, 'ವರವನ್ನು ಬೇಡು' ಎಂದರು. ರಂತಿದೇವನು ಆ ದೇವತೆಗಳಿಗೆ ನಮಸ್ಕರಿಸಿ, ಅವರನ್ನು ವರವನ್ನು ಬೇಡದೆ, ಪೂಜಿಸಿ ಕಳುಹಿದನು. ನಾರಾಯಣ ಭಕ್ತಿಭಾಗ್ಯದಿಂದ ಆಶೆಗಳನ್ನು ಬಿಟ್ಟು, ದುಸ್ಸಂಗದೂರನಾಗಿ ಅನ್ಯಸಿದ್ಧಿಗಳನ್ನು ಬೇಡದೆ, ರಂತಿದೇವನು ಮುಕ್ತನಾದನು. ಸ್ವಪ್ನದಂತೆ ಅವನ ಸಾಂಸಾರಿಕ ಬಂಧಗಳೆಲ್ಲವೂ ನಷ್ಟವಾದವು. ರಂತಿದೇವನಂತೆ ಅವನ ಅನುವ್ರತರು ಕೂಡ ಹರಿಭಕ್ತರಾಗಿಪರಮಪದವಿಯನ್ನೈದಿದರು.

ಗರ್ಗತಸುತನಾದ ಶಿನಿಗೆ ಗಾರ್ಗ್ಯನು ಪುಟ್ಟಿದನು. ಗಾರ್ಗ್ಯನಿಂದ ಆ ವಂಶವು ಬ್ರಹ್ಮವ್ರತವಾಯಿತು.

ಮಹಾವೀರ್ಯನಿಗೆ ದುರಿತಕ್ಷಯನು, ಅವನಿಗೆ ತ್ರೈಯ್ಯಾರುಣಿ, ಕವಿ, ಪುಷ್ಕರಾರುಣಿ ಎಂಬ ಮೂವರು ಪುತ್ರರು ಜನಿಸಿದರು. ಅವರು ಕೂಡ ಬ್ರಾಹ್ಮಣಾಚಾರವಂತರಾದರು.

ಬೃಹತ್ಕ್ಷತ್ರನ ಮಗನಾದ ಹೋತ್ರನಿಗೆ ಹಸ್ತಿ ಎಂಬ ಮಗನಾದನು. ಅವನು ಹಸ್ತಿನಾಪುರವನ್ನು ನಿರ್ಮಿಸಿದನು. ಹಸ್ತಿಗೆ ಅಜಮೀಢ, ದ್ವಿಮೀಢ, ಪುರುಮೀಢರೆಂಬ ಮೂವರು ಪುತ್ರರು; ಅಜಮೀಢನ ವಂಶದ ಪ್ರಿಯ ಮೇಧಾವಿಗಳು ದ್ವಿಜರಾದರು. ಅಜಮೀಢನ ಮನಗು ಬೃಹದಿಷುವು. ಅವನ ವಂಶದಿ ಕ್ರಮವಾಗಿ ಬೃಹದ್ಧನು, ಬೃಹತ್ಕಾಯ, ಜಯದ್ರಥ, ವಿಶದ, ಶ್ಯೇನಜಿತ್, ರುಚಿರಾಶ್ವ, ದೃಢಹನು, ಕಾಶ್ಯವತ್ಸರು, ಯಾಜ, ಪೃಥುಸೇನ, ಪಾರ, ನೀಪರು ಪುಟ್ಟಿದರು. ನೀಪನಿಗೆ ಮೂರು ಜನ ಸುತರು. ನೀಪನು ಶುಕನ ಮಗಳಾದ ಸಂಕೃತಿಯಲ್ಲಿ ಬ್ರಹ್ಮದತ್ತನನ್ನು ಪಡೆದನು. ಆ ಬ್ರಹ್ಮದತ್ತನು ರುದ್ರಾಂಶನಾಗದೆ ಜೈಗೀಷವ್ಯನ ಉಪದೇಶವನ್ನು ಹೊಂದಿ, ಯೋಗ, ತಂತ್ರಶಾಸ್ತ್ರವನ್ನು ರಚಿಸಿದನು. ಅವನಿಗೆ ಗೋದೇವಿಯಲ್ಲಿ ವಿಷ್ವಕ್ಸೇನನೆಂಬ ಸುತನು, ಅವನಿಗೆ ಉದಕ್ಸೇನನು, ಅವನಿಗೆ ಭಲ್ಲಾದನು ಜನಿಸಿದರು.

ದ್ವಿಮೀಢನ ವಂಶದಲ್ಲಿ ಯವೀನರ, ಕೃತಿಮಂತ, ಸತ್ಯಧೃತಿ, ದೃಢನೇಮಿ, ಸುಪಾರ್ಶ್ವ, ಸುಮತಿ, ಸಂತತಿಮಂತ, ಕೃತಿ, ಎಂಬುವರು ಪುಟ್ಟಿದರು. ಕೃತಿ ಹಿರಣ್ಯನಾಭನಿಂದ ಯೋಗಮಾರ್ಗವನ್ನು ತಿಳಿದು, ಪೂರ್ವಸಾಮದ ಹನ್ನೆರಡು ಸಂಹಿತೆಗಳನ್ನು ಅಧ್ಯಯನ ಮಾಡಿದನು. ಅವನಿಗೆ ಉಗ್ರಾಯುಧನು, ಅವನ ವಂಶದಲ್ಲಿ ಕ್ಷೇಮ್ಯ, ಸುವೀರ, ರಿಪುಂಜಯ, ಬಹುತಿಥರು ಪುಟ್ಟಿದರು.

ಪುರುಮೀಢನಿಗೆ ಮಕ್ಕಳಾಗಲಿಲ್ಲ. ಅಜಮೀಢನಿಗೆ ನಳಿನಿಯಲ್ಲಿ ನೀಲನು, ಅವನ ವಂಶದಲ್ಲಿ, ಶಾಂತಿ, ಸುಶಾಂತಿ, ಪುರಾಜ, ಅರ್ಕ, ಹರ್ಮ್ಯಾಶ್ವರು ಪುಟ್ಟಿದರು. ಆ ಹರ್ಮ್ಯಾಶ್ವನಿಗೆ ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ, ಸಂಜಯರೆಂಬ ಐವರು ಸುತರಿದ್ದರು. ಐವರು ಸುತರನ್ನು ಕಂಡು ಹರ್ಮ್ಯಾಶ್ವರು ಐದು ವಿಷಯಗಳಿನ್ನೇಕೆ? ಸಾಕು (ಅಲಂ) ಎಂದನು; ಆದ್ದರಿಂದ

ಅವರು ಪಾಂಚಾಲರೆನಿಸಿದರು.

ಮುದ್ಗಲನಿಂದ ಮೌದ್ಗಲ್ಯಗೋತ್ರದ ಬ್ರಾಹ್ಮಣರು ಪ್ರವೃತ್ತರಾದರು. ಮುದ್ಗಲನಿಗೆ ದಿವೋದಾಸನೆಂಬ ಸುತನ, ಅಹಲ್ಯ ಎಂಬ ಕನ್ನೆಯು ಜನಿಸಿದರು. ಅಹಲ್ಯೆಯಲ್ಲಿ ಗೌತಮನಿಂದ ಶತಾನಂದನು, ಅವನಿಗೆ ಶತಧೃತಿಯು, ಅವನಿಗೆ ಧನುರ್ವೇದವಿಶಾರದನಾದ ಶರದ್ವಂತನು ಪುತ್ರರಾದರು. ಊರ್ವಶೀದರ್ಶನದಿಂದ ರೇತಃಪಾತವಾದಾಗ ಶಿರದ್ವಂತನಿಗೆ ಶರಸ್ತಂಬದಲ್ಲಿಟ್ಟ ವೀರ್ಯದಿಂದ, ಕೃಪಾಚಾರ್ಯನು, ಕೃಪೆಯು ಹುಟ್ಟಿದರು. ಕೃಪೆಯಿಂದ ಆ ಶಿಶುಗಳನ್ನು ಸಾಕಿದ ಶಂತನುರಾಜನು, ಅವರು ವಿಪ್ರರೆಂದರಿತು, ಕೃಪೆಯನ್ನು ದ್ರೋಣಾಚಾರ್ಯನಿಗೆ ಮದುವೆಮಾಡಿ ಕೊಟ್ಟನು. ಕೃಪನು ಕೌರವಕುಲಾಚಾರ್ಯನಾದನು.

## ೧೯. ಶಂತನುವಂಶ — (ಕ್ಷೇಮಕಪರ್ಯಂತ)

ದಿವೋದಾಸನಿಗೆ ಮಿತ್ರಾಯು, ಅವನಿಗೆ ಚ್ಯವನ, ಸುದಾಸ, ಸಹದೇವ, ಸೋಮಕರು ವಂಶಜ ರಾದರು. ಸೋಮಕಸುತನಾದ ಜಂತುನಿಗೆ ನೂರು ಪುತ್ರರು. ಕೊನೆಯ ಮಗನಾದ ಪೃಷತನ ಮಗನೇ ದ್ರುಪದನು. ದ್ರುಪದನಿಗೆ ದ್ರೌಪದಿಯು ಧೃಷ್ಟದ್ಯುಮ್ನಾದಿಗಳು ಹುಟ್ಟಿದರು. ಧೃಷ್ಟದ್ಯುಮ್ನ ನಿಗೆ ಧೃಷ್ಟಕೇತು, ಹರ್ಮ್ಯ ಮುಂತಾದ ಪಾಂಚಾಲಕರು ಪುಟ್ಟಿದರು.

ಅಜಮೀಢನಿಗ ಋಕ್ಷನೆಂಬ ಸುತನಲ್ಲಿ ಸಂವರಣನು ಮೊಮ್ಮಗನಾದನು. ಸೂರ್ಯ ಪುತ್ರಿಯಾದ ತಪತಿಯನ್ನು ಮದುವೆಯಾಗಿ, ಕುರುರಾಜನನ್ನು ಪಡೆದನು. ಕುರುಕ್ಷೇತ್ರಪತಿಯಾದ ಆ ಕುರುವಿಗೆ ಪರೀಕ್ಷಿತ್, ಸುಧನು, ಜಹ್ನು, ನಿಷೇಧಾಶ್ವರೆಂದ ನಾಲ್ವರು ಸುತರು. ಸುಧನು ಪುತ್ರನಾದ ಸುಹೋತ್ರನಿಗೆ ಚ್ಯವನ, ಕೃತಿ, ವಸು (ಉಪರಿಚರ) ಬಹದ್ರಥ ಮುಂತಾದವರು ವಂಶಜಾತರು. ವಸುರಾಜನ ವಂಶದಲ್ಲಿ ಕುಶಾಂಬು, ಮತ್ಸ್ಯ, ಪ್ರತ್ಸಗ್ರ ವೇದಿಷ, ಚೇದಿರಾಜರು ಪುಟ್ಟಿದರು. ಬೃಹದ್ರಥನಿಂದ ಕುಶಾಗ್ರನು, ಅವನಿಗೆ ಋಷಭನು, ಸತ್ಯಹಿತನು, ಪುಷ್ಪವಂತ, ಜಹು ಎನ್ನುವವರು ವಂಶಜಾತರಾದರು.

ಬೃಹದ್ರಥನಿಗೆ ಇನ್ನೊಬ್ಬ ಭಾರ್ಯಳಲ್ಲಿ ಎರುಡು ತುಂಡಾದ ಶಿಶುವು ಜನಿಸಲು, ಅವಳು ಅವನ್ನು ಬಿಸಾಟಿದಳು. ಜರೆ ಎಂಬ ರಾಕ್ಷಸಿ ಆ ಶಕಲಗಳನ್ನು ಸಂಧಿಸಿ ಜೀವ! ಜೀವ! ಎನ್ನುತ್ತಾ ಆಡುವಾಗ, ಆ ಕೂಸು ಬದುಕಿ ಜರಾಸಂಧನೆನಿಸಿತು. ವಿಪ್ರಚಿತ್ತಿಯೇ ಜರಾಸಂಧನು. ಅವನ ಮಗನಾದ ಸಹದೇವನಿಗೆ ಸೋಮಾಪಿಯು, ಅವನಿಗೆ ಶ್ರುತಶ್ರವನು ಜನಿಸಿದರು.

ಕುರುಪುತ್ರ ಪರೀಕ್ಷಿತನಿಗೆ ಮಕ್ಕಳಾಗಲಿಲ್ಲ. ಜಹ್ನುವಿಗೆ ಸುರಥನು, ಅವನ ವಂಶದಲ್ಲಿ ವಿದೂರಥ, ಸಾರ್ವಭೌಮ, ಜಯತ್ಸೇನ, ರಾಚೀಕ, ದ್ಯುಮಂತ, ಕ್ರೋಧನ, ದೇವಾತಿಥಿ, ಋಕ್ಷ, ದಿಲೀಪ, ಪ್ರತೀಪರು ಜನಿಸಿದರು. ಪ್ರತೀಪನಿಗೆ ದೇವಾಪಿ, ಶಂತನು, ಬಾಹ್ಲಿಕರು ಸುತರು. ದೇವಾಪಿ ತಂದೆಯ ರಾಜ್ಯವನ್ನೊಲ್ಲದೆ ವನವನ್ನು ಸೇರಿದನು. ಹಿಂದೆ ಮಹಾಭಿಷಕ್‌ನೆನಿಸಿದ್ದ ಶಂತನುವೇ ರಾಜನಾದನು. ಅವನ ಕರಸ್ಪರ್ಶದಿಂದ ಮುದುಕರು ಯುವಕರಂತೆ ಆಗತ್ತಿದ್ದುದ ರಿಂದ ಶಂತನು ರಾಜನು ಶಾಂತಕಾರ್ಯಗಳನ್ನು ಮಾಡಿ ಸಾರ್ಥಕನಾಮನಾದನು. ಅಣ್ಣನಿರುವಾಗ ದಾರಾಗ್ನಿಹೋತ್ರಗಳನ್ನು, ರಾಜ್ಯವನ್ನು ಸ್ವೀಕರಿಸಿ ಪರಿವೇತ್ತನೆನಿಸಿ ಶಂತನು ರಾಜನ ರಾಜ್ಯದಲ್ಲಿ, ಇಂದ್ರನು ಹನ್ನೆರಡು ವರ್ಷ ಮಳೆಗರೆಯಲಿಲ್ಲ.

'ನೀನು ಪರಿವೇತ್ತನಾಗಿರುವೆ. ಈ ದೋಷದಿಂದ ನಿನ್ನ ರಾಜ್ಯದಲ್ಲಿ ಮಳೆಯಾಗಿಲ್ಲ. ದೇವಾಪಿಗೆ ನಿನ್ನ ರಾಜ್ಯವನ್ನು ಕೊಡು' ಎಂದು ವಿಪ್ರರು ಉಪದೇಶಿಸಲು ಶಂತನು ರಾಜನು, ಅಣ್ಣನನ್ನು ರಾಜ್ಯಸ್ವೀಕಾರ ಮಾಡೆಂದು ಬೇಡಿಕೊಂಡನು. ಶಂತನುರಾಜನ ಅಶ್ಮಕನೆಂಬುವ ಮಂತ್ರಿಯು ದೇವಾಪಿಯ ತ್ಯಗ್ದ್ವೋಷವನ್ನರಿತು, ಅವನು ರಾಜ್ಯವಾಳಬಾರದೆಂದು, ಒಂದು ಉಪಾಯವನ್ನು ಹೂಡಿದನು. ಅವನಿಂದ ಕಳುಹಲ್ಪಟ್ಟ ವಿಪ್ರರ ಮಾತಿನಂತೆ ವಾದಮಾಡಿ ದೇವಾಪಿಯು, ವೇದವಿದ್ಯಾನಂದನವನ್ನು ಮಾಡಿದನು. ಆದರಿಂದ ಜ್ಯೇಷ್ಠನಾದರೂ, ತನಗಿದ್ದ ರಾಜ್ಯಾಧಿಕಾರವನ್ನು ಕಳೆದುಕೊಂಡನು. ಆಗ ಮಳೆಗರೆಯಲು ಪ್ರಜರು ಶಂತನಿಂದಲೇ ಪ್ರೀತ ರಾದರು.

ದೇವಾಪಿಯು ಯೋಗಾರೂಢನಾಗಿ ಕಲಾಪ ಗ್ರಾಮದಲ್ಲಿರುವನು. ಚಂದ್ರವಂಶವು ಕಲಿಯುಗದಿ ನಷ್ಟವಾಗಲು, ದೇವಾಪಿರಾಜನು ಅದನ್ನು ಕೃತಯುಗಾರಂಭದಲ್ಲಿ ಪುನಃ ಸ್ಥಾಪಿಸಿ ಬೆಳೆಸುವನು.

ಬಾಹ್ಲೀಕನಿಗೆ ಸೋಮದತ್ತನು, ಅವನಿಗೆ ಭೂರಿ, ಭೂರಿಶ್ರವಸ, ಶಲರು ಮೂವರು ಸುತರು. ಶಂತನುವಿಗೆ ಗಂಗೆಯಲ್ಲಿ ವೈಷ್ಣವಾಗ್ರಣಿಯಾದ ಬೀಷ್ಮನು ಜನಿಸಿದನು. ಅವನು ಭಗವದ್ಭಕ್ತನು, ಪಂಡಿತನು, ಸರ್ವಧರ್ಮಜ್ಞನು, ವೀರಾಗ್ರಣಿಯು, ಆಗಿ ಶ್ರೀ ಪರಶುರಾಮನನ್ನು ಯುದ್ಧದಲ್ಲಿ ಸಂತೋಷಪಡಿಸಿದನು.

ಶಂತನುವಿಗೆ ದಾಶರಾಜನ ಸಾಕುಮಗಳಾದ ಸತ್ಯವತಿಯಲ್ಲಿ ಚಿತ್ರಾಂಗದ ವಿಚಿತ್ರವೀರ್ಯರು ಜನಿಸಿದರು. ಚಿತ್ರಾಂಗದನೆಂಬ ಗಂಧರ್ವನು ಚಿತ್ರಾಂಗದನನ್ನು ಕೊಂದನು. ಸತ್ಯವತೀದೇವಿ ಯಲ್ಲಿ ಕನ್ಯಾದೆಶೆಯಲ್ಲಿ ಜನಿಸಿದ ಸಾಕ್ಷಾತ್ ಶ್ರೀಹರಿಯೇ ನಮ್ಮಪ್ಪ ವೇದವ್ಯಾಸನು. ರಾಜನ್! ವೇದವಿಭಾಗವನ್ನು ಮಾಡಿ ದೇವಋಷಿಗಳ ಮೊರೆಯಾಲಿಸಿ, ಸುಜನರನ್ನು ಸಲಹಿದ ಆ ಸ್ವಾಮಿಯು ಪೈಲಾದಿ ಶಿಷ್ಯರಿರಲು – ಬಿಟ್ಟು – ನನ್ನನ್ನು ಕರೆದು, ಕೃಪೆಮಾಡಿ, ಈ ಭಾಗವತ ಸಂಹಿತೆಯನ್ನು ಪ್ರೀತಿಯಿಂದ ಉಪದೇಶಿಸಿ, ಉದ್ಧರಿಸಿದನು. ಆ ಮಹಾಪ್ರಭುವಿಗೆ ನನ್ನ ಅನಂತ ನಮಸ್ಕಾರಗಳು.

ವಿಚಿತ್ರವೀರ್ಯನು ಕಾಶಿರಾಜನ ಸುತೆಯರಾದ ಅಂಬಿಕಾ ಅಂಬಾಲಿಕೆಯರನ್ನು-ಭೀಷ್ಮನು ಸ್ವಯಂವರ ಮಂಟಪದಿಂದ ಬಲಾತ್ಕಾರದಿಂದ ಕರೆತಂದ ಸುಂದರಿಯರನ್ನು ಮದುವೆಯಾಗಿ ಸದಾ ಅಂತಃಪುರದಲ್ಲಿರುತ್ತಾ, ಕೊನೆಗೆ ಕ್ಷಯರೋಗದಿಂದ ಮೃತನಾದನು. ಭೋಗಾಧಿಕ್ಯವೇ ರೋಗವಲ್ಲವೇ! ಆಗ 'ವಂಶವನ್ನುಳಿಸು' ಎಂಬ ಮಾತೆಯ ಮಾತನ್ನು ಮನ್ನಿಸಿ ಬಾದರಾಯಣನು, ತಮ್ಮನ ಕ್ಷೇತ್ರವೆನಿಸಿದ ಅವರನ್ನು ಸ್ಪರ್ಶಿಸುವುದರಿಂದಲೇ ಧೃತರಾಷ್ಟ್ರ ಪಾಂಡುರಾಜ ವಿದುರರನ್ನು ಸೃಜಿಸಿದನು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ಸುತಶತರು ಜನಿಸಿದರು. ಅವರಲ್ಲಿ ದುರ್ಯೋಧನನೇ ಜ್ಯೇಷ್ಠನು. ದುಶ್ಯಲೆಯು ಧೃತರಾಷ್ಟ್ರನ ಮಗಳು.

ಮುನಿಶಾಪದಿಂದ ಮೈಥುನದೂರನಾದ ಪಾಂಡುರಾಜನಿಗೆ ಧರ್ಮ ವಾಯು ಮಹೇಂದ್ರರ ಅನುಗ್ರಹದಿಂದ, ಕುಂತಿಯಲ್ಲಿ ಧರ್ಮ ಭೀಮಾರ್ಜುನರು ಜನಿಸಿದರು. ಮತ್ತು ಮಾದ್ರಿಯಲ್ಲಿ ಅಶ್ವಿನೀದೇವದ್ವಯವೇ ನಕುಲಸಹದೇವರಾದರು. ದ್ರೌಪದೀದೇವಿಯಲ್ಲಿ ಜನಿಸಿದ ಉಪ ಪಾಂಡವರ ಹೆಸರನ್ನು ಕೇಳು. ಧರ್ಮರಾಜಸುತನಾದ ಪ್ರತಿವಿಂಧ್ಯ, ವೃಕೋದರಸುತನಾದ ಶ್ರುತಸೇನ, ಅರ್ಜುನಸುತನಾದ ಶ್ರುತಕೀರ್ತಿ, ನಕುಲವಸುತನಾದ ಶತಾನೀಕ, ಸಹದೇವಸುತನಾದ

ಶ್ರುತಕರ್ಮನು, ಉಪಪಾಂಡವರೆನಿಸಿದರು.

ಯುಧಿಷ್ಠಿರನಿಗೆ ಪೌರವಿಯಲ್ಲಿ ದೇವಕನು, ಭೀಮಸೇನನಿಗೆ ಹಿಡಿಂಬೆಯಲ್ಲಿ ಘಟೋತ್ಕಚನು ಹಾಗೂ ಕಾಳೀದೇವಿಯಲ್ಲಿ ಶರ್ವತ್ರಾತನು, ಸಹದೇವನಿಗೆ ಪರ್ವತ ರಾಜಸುತೆಯಾದ ವಿಜಯಗಳಲ್ಲಿ ಸುಹೋತ್ರನು, ನಕುಲನಿಗೆ ಕರೇಣುಮತಿಯಲ್ಲಿ ನಿರಮಿತ್ರನು, ಅರ್ಜುನನಿಗೆ ಉಲೂಪಿಯಲ್ಲಿ ಇರಾವಂತನು, ಮಣಿಪೂರರಾಜಸುತೆ ಚಿತ್ರಾಂಗದೆಯಲ್ಲಿ ಬಭ್ರುವಾಹನನು, ಸುಭದ್ರೆಯಲ್ಲಿ ಅಭಿಮನ್ಯುವು ಜನಿಸಿದರು. ಬಭ್ರುವಾಹನನು ದೌಹಿತ್ರನ್ಯಾಯದಿಂದ ಮಣಿಪುರ ದರಸನಿಗೆ ಸುತನೆನಿಸಿದನು. ಅಭಿಮನ್ಯುವು ಶೌರ್ಯಧೈರ್ಯ ತೇಜೋ ವೈಭವದಿಂದ ಸಾಟಿ ಯಿಲ್ಲದೆ ಅತಿರಥನನ್ನು ಗೆದ್ದು ಮಹಾವೀರನೆನಿಸಿ ಮೆರೆದನು. ಅವನಿಗೆ ಉತ್ತರೆಯಲ್ಲಿ ನೀನು ಜನಿಸಿದೆ.

ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಸಾಯದಂತೆ ಶ್ರೀಕೃಷ್ಣನಿಂದ ರಕ್ಷಿತನಾದೆಯಲ್ಲವೇ? ರಾಜನ್! ನಿನಗೆ ಜನಮೇಜಯ, ಶ್ರುತಸೇನ, ಭೀಮಸೇನ, ಉಗ್ರಸೇನರು ನಾಲ್ವರು ಸುತರು. ನೀನು ತಕ್ಷಕನಿಂದ ಮೃತನಾದಮೇಲೆ, ಅದನ್ನು ಉದಂಕನಿಂದ ಅರಿತು, ಜನಮೇಜಯನು ರೋಷದಿಂದ ಸರ್ಪಯಾಗವನ್ನು ಮಾಡಿ ಬಹು ಸರ್ಪಗಳನ್ನು ನಾಶಪಡಿಸುವನು; ಕಾವಷೇಯನು ಪುರೋಹಿತನಾಗಿರಲು ಅಶ್ವಮೇಧವನ್ನು ಮಾಡಿ, ಸಮಸ್ತ ಭೂಮಂಡಲವನ್ನು ಪರಿಪಾಲಿಸುವನು; ಅನೇಕ ಯಜ್ಞಗಳನ್ನೂ ಮಾಡುವನು. ಅವನ ಮಗನಾದ ಶತಾನೀಕನು ಯಾಜ್ಞವಲ್ಕ್ಯನಿಂದ ವೇದತ್ರಯವನ್ನು ಓದಿ, ಶೌನಕನಿಂದ ಅಸ್ತ್ರಕ್ರಿಯಾ ಕಾಂಡಗಳನ್ನು ತಿಳಿಯುವನು. ಅವನಿಗೆ ಸಹಸ್ರಾನೀಕನು, ಅವನ ವಂಶದಲ್ಲಿ ಅಶ್ವಮೇಧಜ ವಿಸ್ರಂಭಕೃಷ್ಣ, ನೇಮಿಚಕ್ರನು ಜನಿಸುವರು. ನೇಮಿಚಕ್ರನು ಯಮುನಾ ನದಿಯಲ್ಲಿ ಹಸ್ತಿನಪುರಿಯು ಮುಣುಗಲು, ಕೌಶಾಂಬಿಯಲ್ಲಿ ವಾಸಿಸುವನು. ಅವನ ವಂಶದಲ್ಲಿ ಕ್ರಮವಾಗಿ ಉಕ್ತ, ಚಿತ್ರರಥ, ಶುಚಿರಥ, ಧೃಷ್ಟಿಮಂತ, ಸುಷೇಣ, ಮಹೀಪತಿ, ಸುನೀಥ, ನೃಚಕ್ಷು, ಸುಖೀನಲ, ಪಾರಿಪ್ಲವ, ಮೇಧಾವೀ, ಸುನಯ, ನೃಪಂಜಯ, ದುರ್ವ, ತಿಮಿ, ಬೃಹದ್ರಥ, ಶತಾನೀಕ, ಸುದಾಸ, ದುರ್ದಮನ, ಪ್ರಹೀತರ, ದಂಡಪಾಣಿ, ನಿಮಿ ಮತ್ತು ಕ್ಷೇಮಕರೆಂಬ ರಾಜರು ಜನಿಸುವರು. ಬ್ರಹ್ಮಕ್ಷತ್ರ ವಿಪುಲವಾದ ಈ ಚಂದ್ರವಂಶವು ಕಲಿಯುಗದಲ್ಲಿ ಕ್ಷೇಮಕನಿಂದಲೇ ಕೊನೆಗೊಳ್ಳುವುದು. ಈ ಪುಣ್ಯಶ್ಲೋಕ ರಾಜರ ನಾಮಕೀರ್ತನದಿಂದ ಪಾಪಗಳು ನಶಿಸುವುವು.

ಇನ್ನ ಮಾಗಧ ರಾಜರನ್ನು ವರ್ಣಿಸುವೆನು. ಜರಾಸಂಧಸುತ ಸಹದೇವನ ವಂಶದಲ್ಲಿ ಕ್ರಮವಾಗಿ ಸೋಮಾಪಿ, ಶ್ರುತಶ್ರವ, ಆಯುತಾಯು, ನಿರಮಿತ್ರ, ಸುನಕ್ಷತ್ರ, ಬೃಹತ್ಸೇನ, ಕರ್ಮಜಿತ, ಶ್ರುತಂಜಯ, ವಿಪ್ರಶುಚಿ, ಕ್ಷೇಮ, ಸುವ್ರತ, ಸುನೀಥ, ಸತ್ಯಜಿತ್, ವಿಶ್ವಜಿತ್, ರಿಪುಂಜಯ ಮುಂತಾದ ರಾಜರು ಒಂದು ಸಾವಿರ ವರ್ಷ ಕಾಲ ರಾಜ್ಯವಾಳಿ ಹೋಗುವರು.

## ೨೦. ಯದುವಂಶ

ಶ್ರೀಶುಕನು ಹೇಳಿದನು–

ಯಯಾತಿಪುತ್ರನಾದ ಅನುರಾಜನಿಗೆ ಸಭಾನರ, ಚಕ್ಷು, ಪರೇಕ್ಷು ಎಂಬ ಮೂವರು ಪುತ್ರರು. ಸಭಾನರನಿಗೆ ಕಾಲನರನು, ಅವನಿಗೆ ಸಂಜಯ, ಅವನಿಗೆ ಜನಮೇಜಯ, ಅವನಿಗೆ ಮಹಾಮನಸ ಜನಿಸಿದರು. ಮಹಾಮನಸನಿಗೆ ಉಶೀನರ, ತಿತಿಕ್ಷು ಎಂಬ ಇಬ್ಬರು ಸುತರು; ಅವರಲ್ಲಿ ಉಶೀನರಿಗೆ ಶಿಬಿ, ವೇನ, ಕೃಮಿ, ದಕ್ಷರೆಂಬ ನಾಲ್ಕರು ಸುತರಾದರು. ಶಿಬಿಯು ನಾಲ್ವರು ಸುತರನ್ನು ಪಡೆದನು. ತಿತಿಕ್ಷುವಿಗೆ ಪೃಷದ್ರಥ, ಅವನಿಗೆ ಹೇಮ, ಅವನಿಗೆ ಸುತಪ, ಅವನಿಗೆ ಬಲಿ, ಆ ಬಲಿಕ್ಷೇತ್ರದಲ್ಲಿ ದೀರ್ಘತಪಸನ ದಯದಿಂದ ಅಂಗ ವಂಗ ಕಲಿಂಗ ಸುಂಹ ಪುಂಡ್ರ ಆಂದ್ರರೆಂಬ ರಾಜರು ಪುಟ್ಟಿದರು. ಅವರು ತಮ್ಮ ಹೆಸರಿನಿಂದ ಪ್ರಸಿದ್ಧವಾದ ರಾಜ್ಯಗಳನ್ನು ಪೂರ್ವ ದೇಶದಲ್ಲಿ ಕಟ್ಟಿದರು.

ಅಂಗರಾಜನಿಗೆ ಖನಪಾನ, ಅವನಿಗೆ ದಿವಿರಥ, ಅವನಿಗೆ ಧರ್ಮರಥ, ಅವನಿಗೆ ಮಿತ್ರರಥನು ಜನಿಸಿದರು. ಮಿತ್ರರಥನೇ ರೋಮಪಾದನೆಂದು ಖ್ಯಾತನಾದನು; ಇವನು ದಶರಥನ ಸ್ನೇಹಿತನು. ಮಗಳಾದ ಶಾಂತೆಯನ್ನು ಋಷ್ಯಶೃಂಗನಿಗಿತ್ತು ಆ ಮಹರ್ಷಿಯ ಆಗಮನ ಪುಣ್ಯದಿಂದ ದೇಶದಲ್ಲಿದ್ದ ಅನಾವೃಷ್ಟಿದೋಷವನ್ನು ಕಳೆದನು. ಹರಿಣೀ ವಿಭಾಂಡಕರ ಸುತನಾದ ಋಷ್ಯಶೃಂಗನನ್ನು ವಾದ್ಯ ಸಂಗೀತ ನರ್ತನಗಳಿಂದಲೂ ನರ್ಮಾಲಾಪಾಲಿಂಗನ ಭೋಜನಗಳಿಂದಲೂ ಆಕರ್ಷಿಸಿ, ವಾರನಾರಿಯರು ಅಂಗದೇಶದಲ್ಲಿ ಕರೆತಂದರು. ರೋಮಪಾದನಿಗೆ ಮಕ್ಕಳಾಗುವಂತೆ ಇಂದ್ರ ವಿಷಯಕವಾದ ಇಷ್ಟಿವಿಶೇಷವನ್ನು ಮಾಡಲು ಚತುರಂಗನೆಂಬ ಸುತನು ಜನಿಸಿದನು. ಇದನ್ನರಿತು ದಶರಥನು ಋಷ್ಯಶೃಂಗರ ಅಧ್ವರ್ಯದಲ್ಲಿ ಪುತ್ರಕಾಮೇಷ್ಟಿಯನ್ನು ಮಾಡಿ ಪುತ್ರರನ್ನು ಪಡೆದನು. ಆ ಚತುರಂಗನ ವಂಶದಲ್ಲಿ ಕ್ರಮವಾಗಿ ಪೃಥುಲಾಕ್ಷ, ಬೃಹದ್ರಥ, ಬೃಹದ್ಭಾನು, ಬೃಹತ್ಕರ್ಮ, ಬೃಹನ್ಮನಸ, ಜಯದ್ರಥ, ವಿಜಯ, ಧೃತಿ ಧೃತವ್ರತ, ಸಧರ್ಮ, ಅಧಿರಥರು ಜನಿಸಿದರು.

ಅಧಿರಥನು ಗಂಗೆಯಲ್ಲಿ ಜಲಕ್ರೀಡೆಯಾಡುವಾಗ ಕಂತಿಯು ಪರಿತ್ಯಜಿಸಿ, ಮಂಜೂಷೆಯಲ್ಲಿಟ್ಟು ಬಿಟ್ಟ ಕರ್ಣನನ್ನು ಕಂಡು, ಮಕ್ಕಳಿಲ್ಲದವನಾದುದರಿಂದ ಮಗನೆಂದು ಸಾಕಿದನು. ಮಹಾವೀರನಾದ ಕರ್ಣನಿಗೆ ವೃಷಭಸೇನನು ಪುತ್ರನಾದನು.

ಯಯಾತಿಯ ಸುತನಾದ ದ್ರುಹ್ಯನಿಗೆ ಬಭ್ರು, ಅವನಿಗೆ ಸೇತು, ಆ ವಂಶದಲ್ಲಿ ಕ್ರಮವಾಗಿ ಆರಬ್ಧ, ಗಾಂಧಾರ, ಧರ್ಮ, ಧೃತ, ಕರ್ದಮ, ಪ್ರಚೇತಸರು ಪುಟ್ಟಿದರು. ಪ್ರಚೇತಸನ ನೂರು ಸುತರು ಮ್ಲೇಂಛದೇಶಾಧಿಪತಿಗಳಾಗಿ ಉತ್ತರ ದಿಕ್ಕಿನಲ್ಲಿ ರಾಜ್ಯವಾಳಿದರು.

ಯಯಾತಿ ಸುತನಾದ ತುರ್ವಸು ವಂಶದಲ್ಲಿ ವಹ್ನಿ, ಭರ್ಗ, ಭಾನುಮಂತ, ನೃಭಾನು, ಕರಂಧಮ, ಮರುತ್ತರು ಜನಿಸಿದರು. ಈ ಮರುತ್ತನಿಗೆ ಮಕ್ಕಳಾಗಲಿಲ್ಲ. ಅವನು ಪುರುವಂಶಜನಾದ ಪುಷ್ಯಂತನನ್ನೇ ಮಗನಂತೆ ತಿಳಿದನು.

ಯಯಾತಿಯ ಜ್ಯೇಷ್ಠಪುತ್ರನಾದ ಯದುರಾಜನ ವಂಶವನ್ನು ವರ್ಣಿಸುವೆನು. ಯದುವಂಶವು ಪರಮಪಾವನವು. ಪುಣ್ಯಕರವಾದ ಆ ವಂಶಕಥೆಯನ್ನು ಕೇಳಿದವನು ಸರ್ವಪಾಪಗಳಿಂದ ಮುಕ್ತನಾಗುವನು. ಭಗವಾನ್ ಶ್ರೀಹರಿಯು ಕೃಷ್ಣನಾಗಿ ಆ ವಂಶದಲ್ಲಿ ಅವತರಿಸಿದನು.

ಯದುರಾಜನಿಗೆ ಸಹಸ್ರಜಿತ್, ಕ್ರೋಷ್ಟು, ನಲ, ರಿಪು ಎಂಬ ನಾಲ್ವರು ಸುತರು. ಸಹಸ್ರಜಿತನಿಗೆ ಶತಜಿತ್, ಅವನಿಗೆ ಮಹಾಹಯ, ವೇಣುಹಯ, ಹೈಹಯರು-ಹೈಹಯನಿಗೆ ಧರ್ಮ, ನೇತ್ರ, ಕುಂತಿ, ಸೋಹಂಜಿ, ಮಹಿಷ್ಮಂತ, ಭದ್ರಸೇನ, ದುರ್ಮದ, ಧನಕರು ವಂಶಜರಾದರು. ಧನಕನಿಗೆ ಕೃತವೀರ್ಯ, ಕೃತ್ಯಾಗ್ನಿ, ಕೃತವರ್ಮ, ಕೃತೌಜರೆಂಬ ನಾಲ್ವರು ಸುತರು. ಕೃತವೀರ್ಯ ಸುತನಾದ ಅರ್ಜುನನು ಸಪ್ತದ್ವೀಪದೊಡೆಯನಾಗಿದ್ದನು. ಶ್ರೀಹರಿಯ ಸಾಕ್ಷಾದಂಶಸಂಭೂತನಾದ ದತ್ತಾತ್ರೇಯನನ್ನು ಸೇವಿಸಿ ಅಣಿಮಾದಿ ಯೋಗಗಳನ್ನು ಪಡೆದಿದ್ದನು. ಯಜ್ಞ ದಾನ ತಪೋಯೋಗ ಸಿದ್ಧಿಯಲ್ಲಾಗಲಿ, ವಿದ್ಯಾ ವೀರ್ಯ ಯಶೋ ಜಯ ವೈಭವಗಳಲ್ಲಾಗಲಿ, ಕಾರ್ತವೀರ್ಯಾಜುನನ ಸಮರಾದ ರಾಜರು ಯಾರೂ ಇಲ್ಲ. ಎಂಭತ್ತೈದು ಸಾವಿರ ವರುಷ ಕಾಲ ರಾಜ್ಯವನ್ನು ಎದುರಿಲ್ಲದೆ ಪಾಲಿಸಿ, ಪ್ರತಿ ಕ್ಷಣದಲ್ಲಿ ಶ್ರೀಹರಿಸ್ಮರಣೆಯನ್ನು ಮಾಡುತ್ತಾ, ಪ್ರಜರಿಂದ ಷಷ್ಠಾಂಶವನ್ನು ಕಪ್ಪವಾಗಿ ಸ್ವೀಕರಿಸಿ ಮೆರೆದನು. ಪುಣ್ಯಾಂಶವು ಹೆಚ್ಚಾಯಿತೆಂಬಂತೆ, ಭಾರ್ಗವದ್ರೋಹವನ್ನು ಮಾಡಿ ಮಡಿದನು. ಅವನಿಗೆ ಸಾವಿರ ಜನ ಸುತರಿದ್ದರು. ಅವರಲ್ಲಿ ಶ್ರೀಪರಶುರಾಮನ ಕೃಪೆಯಿಂದ ಜಯಧ್ವಜ, ಶೂರಸೇನ, ಋಷಭ, ಮಧು, ಊರ್ಜಿತ ಎಂಬ ಐವರು ಮಾತ್ರ ಸಾಯದೆ ಉಳಿದರು.

ಜಯಧ್ವಜಸುತನಾದ ತಾಲಂಜಘನಿಗೆ ನೂರ್ವರು ಸುತರು. ಅವರೆಲ್ಲರೂ ಔರ್ವಮುನಿಯ ತೇಜದಿಂದ ನಷ್ಟಪ್ರಾಯರಾದರು. ಅವರಲ್ಲಿ ವೀತಿಹೋತ್ರನೇ ಹಿರಿಯನು. ಮಧುಸುತನಾದ ವೃಷ್ಣನಿಗೆ ನೂರು ಜನ ಪುತ್ರರು. ಅವರಲ್ಲಿ ವೃಷ್ಣಿಯೇ ಜ್ಯೇಷ್ಠನು. ಅವನಿಂದ ಯಾದವರು ವೃಷ್ಣಿಗಳು ಮತ್ತು ಮಾಧವರು ಎನಿಸಿದರು.

ಯದುಪುತ್ರನಾದ ಕ್ರೋಷ್ಟುನಿಗೆ ವೃಜಿನವಂತ, ಅವನಿಗೆ ವಾಹಿತ, ವಾಹಿತನಿಗೆ ಭೇರುಶೇಕ, ಅವನಿಗೆ ಚಿತ್ರರಥ, ಅವನಿಗೆ ಶಶಬಿಂದುವು ಸುತರಾದರು. ಶಶಬಿಂದುವು ಮಹಾಯೋಗಿಯಾಗಿ ಅನಂತ ಸುಖಗಳನ್ನು ಅನುಭವಿಸಿದನು. ಅವನಲ್ಲಿ ಚತುರ್ದಶ ರತ್ನಗಳಿದ್ದವು; ಶತ್ರುಪರಾಜಿತನಾಗದೆ ಚಕ್ರವರ್ತಿ ಎನಿಸಿದನು. ಅವನ ಹತ್ತು ಸಾವಿರ ಮಹಿಷಿಯರಲ್ಲಿ ಹತ್ತು ಲಕ್ಷ ಸುತರಾದರು. ಆ ಸುತರಲ್ಲಿ ಆರು ಜನ ಮುಖ್ಯರು. ಅಲ್ಲಿ ಪೃಥುಶ್ರವಸನಿಗೆ ಧರ್ಮನು ಸುತನಾದನು. ಅವನ ಮಗ ಉಶನನು ವಾಜಿ ಮೇಧಯಾಗಗಳನ್ನು ಮಾಡಿದನು. ಅವನಿಗೆ ರುಚಕನು, ಅವನಿಗೆ ಪುರುಜಿತ್, ರುಕ್ಮ, ರುಕ್ಮೇಷು, ಪೃಥು, ಜ್ಯಾಮಘರೆಂಬ ಐವರು ಸುತರು.

ಜ್ಯಾಮಘನ ಪತ್ನಿ ಶೈಬ್ಯೆ; ಅವಳಲ್ಲಿ ಮಕ್ಕಳನ್ನು ಕಾಣದೆ ಜ್ಯಾಮಘನು ಶತ್ರುಗೃಹದಲ್ಲಿದ್ದ ಕನ್ಯಾಮಣಿಯನ್ನು ಅಪಹರಿಸಿ, ರಥದಲ್ಲಿರಿಸಿ ಕರೆತಂದನು. ಆಗ ಶೈಬ್ಯೆ ಸಿಟ್ಟಿನಿಂದ 'ರಾಜನೇ! ನೀನು ಮೋಸಗಾರನಿರುವೆ. ನಾನಿರಲು, ಇವಳನ್ನು ಏಕೆ ಕರೆತಂದೆ' ಎಂದು ಕೇಳಿದಳು. ಜ್ಯಾಮಘನು ಭಯದಿಂದ 'ಇವಳು ನನ್ನ ಸೊಸೆ' ಎಂದನು. ರಾಣಿಯು ನಗುತ್ತಾ 'ನಾನು ಬಂಜೆಯಾಗಿರುವೆನು – ನನಗೆ ಸವತಿಯೂ ಇಲ್ಲ – ಇನ್ನು ಸೊಸೆ ಎಲ್ಲಿಂದ? ಎಂದು ಆಕ್ಷೇಪಿಸಿದಳು. ಆಗ ಜ್ಯಾಮಘನು 'ನಿನಗೆ ಮುಂದೆ ಹುಟ್ಟುವ ಮಗನಿಗೆ ಇವಳು ಪತ್ನಿಯಾಗಿ ಸೊಸೆ ಎನಿಸುವುದಿಲ್ಲವೇ?' ಎಂದನು. ಆ ಶುಭಕಾಲದಲ್ಲಿ ವಿಶ್ವೇದೇವತೆಗಳು ಮತ್ತು ಪಿತೃಗಳು ಅಂತರಿಕ್ಷದಿಂದ 'ತಥಾಸ್ತು' ಎಂದು ನುಡಿದರು. ಶೈಬ್ಯೆ ಗರ್ಭವತಿಯಾಗಿ ವಿದರ್ಭನೆಂಬ ಮಗನನ್ನು ಪಡೆದಳು. ಆ ಕನ್ಯೆ ವಿದರ್ಭನ ಮಡದಿಯಾದಳು.

## ೨೧. ಶ್ರೀಕೃಷ್ಣಾವತಾರ – ಪ್ರಸ್ತಾವನೆ

ಶ್ರೀಶುಕನು ಪೇಳಿದನು–

ವಿದರ್ಭನಿಗೆ ಕುಶ, ಕ್ರಥ, ರೋಮಪಾದರೆಂಬ ಮೂವರು ಸುತರು. ರೋಮಪಾದನಿಗೆ ಬಭ್ರುವು, ವಿಭುವು, ಕೃತಿ, ಉಶಿಕ, ಚೇದಿ, ಚೈದ್ಯ ಮೊದಲಾದವರು ವಂಶಜರೆನಿಸಿದರು.

ಕ್ರಥನಿಗೆ ಕುಂತಿ, ಬಲಿ, ನಿರ್ವೃತ್ತಿ, ದಶಾರ್ಹ, ವ್ಯೋಮ, ಜೀಮೂತ, ವಿಕೃತಿ, ಭೀಮರಥ, ನವರಥ, ದಶರಥ, ಶಕುನಿ, ಕರಂಭಿ, ದೇವರಾತ, ದೇವಕ್ಷತ್ರ, ಮಧು, ಕುರುವಶ, ಅನುವು, ಆಯು, ಸತ್ವತರು ಕ್ರಮವಾಗಿ ವಂಶಜರಾದರು. ಸತ್ವತನಿಗೆ ಭಜಮಾನ, ಭಜಿ, ದಿವ್ಯ, ವೃಷ್ಣಿ, ದೇವಾವೃಧ, ಮಹಾಭೋಜ, ಅಂದಕ ಎಂಬ ಏಳು ಜನ ಮಕ್ಕಳು. ಯಜಮಾನನಿಗೆ ನಿಮ್ಲೋಚಿ, ಕಿಂಕಣ, ಧೃಷ್ಟಿ ಎಂಬ ಮೂವರು ಮತ್ತು ಇನ್ನೊಬ್ಬ ಪತ್ನಿಯಲ್ಲಿ ಶತಜಿತ್, ಸಹಸ್ರಜಿತ್, ಆಯುತಜಿತ್ ಎಂಬ ಮೂವರು ಪುತ್ರರಿದ್ದರು. ದೇವಾವೃಧನ ಮಗನಾದ ಬಭ್ರು ಬಹು ವಿಶ್ರುತನಾಗಿದ್ದನು.

'ಬಭ್ರುವು ಮನುಜರಲ್ಲಿ ಉತ್ತಮನು, ದೇವಾವೃಧನು ದೇವತೆಗಳಿಗೆ ಗುಣದಲ್ಲಿ ಸಮನು' ಈ ವಿಷಯವನ್ನು ದೂರದಿಂದ ಕೇಳಿದವರು ಬಂದು ಪರೀಕ್ಷಿಸಿ ನೋಡಿದಾಗ ಅದು ಸತ್ಯ ವಾಗಿಯೇ ಇತ್ತು' ಎಂದು ಆ ತಂದೆಮಕ್ಕಳನ್ನು ಸುಜನರು ಪೊಗಳುತ್ತಿದ್ದರು. ಅವರಿಂದ ಯೋಗಶಾಸ್ತ್ರವನ್ನರಿತು, ಉಪಾಸಿಸಿ ಹದಿನಾಲ್ಕು ಸಾವಿರದ ಅರವತ್ತೈದು ಪುರುಷರು ಮುಕ್ತಿ ಭಾಗ್ಯವನ್ನು ಪಡೆದರು.

ಮಹಾಭೋಜನು ಬಹುಧರ್ಮವಂತನಾಗಿ ಭೋಜವಂಶ ಮೂಲಪುರುಷನೆನಿಸಿದನು.

ವೃಷ್ಣಿಗೆ ಸುಮಿತ್ರನು, ಯುಧಾಜಿತ್, ಶಿನಿ, ಅನಮಿತ್ರ, ನಿಮ್ನನೆಂಬುವರು ವಂಶಜರಾದರು. ನಿಮ್ನನಿಗೆ ಸತ್ರಾಜಿತ್ ಪ್ರಸೇನರೆಂಬುವರು ಸುತರು. ಅನಮಿತ್ರನಿಗೆ ಶಿನಿ ಎಂಬ ಇನ್ನೊಬ್ಬ ಮಗನಿದ್ದನು. ಆ ಶಿನಿಯ ಮಗನೇ ಸತ್ಯಕನು. ಅವನ ಮಗನಾದ ಯುಯುಧಾನನನ್ನೇ ಸಾತ್ಯಕಿ ಎಂಬುವರು. ಸಾತ್ಯಕಿಗೆ ಜಯ, ಕುಣಿ, ಯುಗಂಧರರು ವಂಶಜರಾದರು.

ಅನಮಿತ್ರಪುತ್ರನಾದ ಪ್ರಶ್ನಿಗೆ ಶ್ವಫಲ್ಕ, ಚಿತ್ರರಥರೆಂಬ ಇಬ್ಬರು ಮಕ್ಕಳಿದ್ದರು. ಶ್ವಫಲ್ಕನಿಗೆ ಗಾಂದಿನೀದೇವಿಯಲ್ಲಿ ಅಕ್ರೂರನೇ ಮೊದಲಾದ ದ್ವಾದಶಪುತ್ರರಾದರು.

ಅಕ್ರೂರ, ಆಸಂಗ, ಸರಮೇಯ, ಮೃದುಕ, ಮೃದುವಿದ್ಗಿರಿ, ಧರ್ಮ ವಿಧೃಷ್ಣ ಕರ್ಮಾ, ಕ್ಷತ್ರೋಪೇಕ್ಷ, ಅರಿಮರ್ದನ, ಶತೃಘ್ನ, ಗಂಧಮೋದ, ಪ್ರತಿಬಾಹು ಎಂಬ ಗಾಂದಿನೀಸುತರು ಕೃಷ್ಣಭಕ್ತರಾಗಿ ವಿಖ್ಯಾತರಾದರು.

ಅಕ್ರೂರನಿಗೆ ಸುಚಾರು ಎಂಬ ತಂಗಿಯು ಇದ್ದಳು. ದೇವಮಾನ್, ಉಪದೇವರೀರ್ವರು ಅಕ್ರೂರಸುತರು, ಚಿತ್ರರಥನ ಮಕ್ಕಳು ಪೃಥು, ವಿಪೃಥು, ಧಾತ ಮೊದಲಾದವರು.

ಅಂಧಕನಿಗೆ ಕುಕುರ, ಭಜಮಾನ, ಶುಚಿ, ಕಂಬಲಬರ್ಹಿಷರೆಂಬ ನಾಲ್ವರು ಸುತರು. ಕುಕುರ ಸುತನಾದ ವೃಷ್ಣಿಗೆ, ವಿಲೋಮ, ಕಪೋತರೋಮ, ಅನು, ದುಂದುಭಿ, ದವಿದ್ಯೋತ, ಪುನರ್ವಸು – ಇವರು ವಂಶಜರಾದರು. ಪುನರ್ವಸುವಿಗೆ ಆಹುಕನೆಂಬ ಮಗನು, ಆಹುಕಿ ಎಂಬ ಮಗಳು ಇದ್ದರು. ಆಹುಕನಿಗೆ ದೇವಕ, ಉಗ್ರಸೇನರು ಮಕ್ಕಳು. ದೇವಕನಿಗೆ ದೇವವಂತ, ಉಪದೇವ, ಸುದೇವ, ದೇವವರ್ಧನರೆಂಬ ನಾಲ್ವರು ಸುತರು, ಹಾಗೂ ಶಾಂತಿದೇವಾ, ಉಪದೇವಾ,

ಶ್ರೀದೇವಾ, ದೇವರಕ್ಷಿತಾ, ಸಹದೇವಾ, ಧೃತದೇವಾ, ದೇವಕೀ ಎಂಬ ಏಳು ಕುವರಿಯರು ಇದ್ದರು. ಇವರನ್ನು ವಸುದೇವನೇ ಮದುವೆಯಾದನು. ಉಗ್ರಸೇನನಿಗೆ ಕಂಸ, ಸುನಾಮಾ, ನ್ಯಗ್ರೋಧ, ಕಂಹ್ವ, ಶಂಕ, ಸುಭುವು, ರಾಷ್ಟ್ರಪಾಲ, ಅಬ್ಬಸೃಷ್ಟಿ, ತುಷ್ಟಿಮಂತನೆಂಬ ಸುತರೂ, ಮತ್ತು ಕಂಸಾ, ಕಂಸವತಿ, ಕಂಕಾ, ಸುರಭೂ, ರಾಷ್ಟ್ರಪಾಲಿಕಾ ಎಂಬುವ ಕನ್ಯೆಯರಾದರು. ಆ ಕನ್ಯೆಯರನ್ನು ವಸುದೇವಾನುಜರಾದ ದೇವಭಾಗಾದಿ ರಾಜರು ಮದುವೆಯಾದರು.

ಭಜಮಾನಸುತ ವಿದೂರಥನಿಗೆ ಶೂರನು, ಶಿನಿಯು, ಭೋಜನು, ಹೃದಿಕನು, ವಂಶಜ ರಾದರು. ಹೃದಿಕನಿಗೆ ದೇವಬಾಹು, ಶತದನು, ಕೃತವರ್ಮರು ಸುತರಾದರು.

ಶೂರರಾಜನಿಗೆ ದೇವಮೀಢನೆಂದು ಹೆಸರಿತ್ತು. ಅವನಿಗೆ ಮಾರಿಷಾದೇವಿಯಲ್ಲಿ ವಸುದೇವ, ದೇವಭಾಗ, ದೇವಶ್ರವ, ಆನಕ, ಸೃಂಜಯ, ಶ್ಯಾಮಕ, ಕಂಕ, ಕಮಾನೀಕ ವತ್ಸಕ, ವೃಕ್ಷರೆಂಬ ಹತ್ತು ಪುತ್ರರು; ಪೃಥಾ, ಶ್ರುತದೇವಾ, ಶ್ರುತಕೀರ್ತಿ, ಶ್ರುತಶ್ರವ, ರಾಜಾಧಿದೇವಿ, ಎಂಬುವ ಐವರು ಕುಮಾರಿಯರು ಜನಿಸಿದರು. ಪೃಥೆಯನ್ನು, ಮಕ್ಕಳಿಲ್ಲದೆ ನೊಂದ ಕುಂತಿಭೋಜನಿಗೆ ಕೊಟ್ಟು, ಶೂರರಾಜನು ಸಂತೋಷಪಡಿಸಿದನು. ಅವಳಿಗೆ ಅಂದಿನಿಂದ ಕುಂತಿ ಎಂದೇ ಹೆಸರಾಯಿತು. ಕುಂತಿಯು ದೂರ್ವಾಸರ ದಯದಿಂದ ದೇವಾಹ್ವಾನಕಾರಿಣಿಯಾದ ವಿದ್ಯೆಯನ್ನು ಪಡೆದಿದ್ದಳು.

ಒಂದು ಮಂತ್ರ ಪರೀಕ್ಷೆಗೆಂದು ಕನ್ಯಾವಸ್ಥೆಯಲ್ಲಿದ್ದ ಕುಂತಿ ಪವಿತ್ರಳಾಗಿ ರವಿಯನ್ನು ಪೂಜಿಸಿ ಕರೆದಳು. ಆ ಕ್ಷಣವೇ ಬಂದ ಸಹಸ್ರಕಿರಣನನ್ನ ನೋಡಿ ಆಶ್ಚರ್ಯಭಯಚಕಿತಳಾಗಿ 'ದೇವಾ! ಮಂತ್ರಪರೀಕ್ಷೆಗೆಂದು ಕರೆದುದು ತಪ್ಪಾಯಿತು. ಕ್ಷಮಿಸು – ಹೊರಟು ಹೋಗು' ಎಂದು ಬೇಡಿದಳು. ದೇವತಾದರ್ಶವು ನಿಷ್ಫಲವಾಗಲಾರದೆಂದು ಸೂರ್ಯನು ಅವಳಲ್ಲಿ ತಾನೇ ಒಂದಂಶದಿಂದ ಜನಿಸಲು ನಿಶ್ಚಯಿಸಿ, ಕನ್ಯಾತ್ವವು ಕೆಡದಂತೆ ವರವನ್ನಿತ್ತು ಗರ್ಭವನ್ನಿತ್ತನು. ತತ್‌ಕ್ಷಣವೇ ಜನಿಸಿದ ಕುಮಾರನೇ ಕರ್ಣನೆಂದು ವಿಖ್ಯಾತನಾದನು. ಲೋಕಭೀತಿಯಿಂದ ಪರಿತ್ಯಜಿಸಿದ ಕರ್ಣನನ್ನು ಅತಿರಥನು ಸಾಕಿ ಸಲಹಿದನು. ಕುಂತೀದೇವಿಯನ್ನು ನುಹಾರಥನಾದ ಪಾಂಡುರಾಜನು ಮದುವೆಯಾದನು.

ವಸುದೇವಭಗಿನಿಯಾದ ಶ್ರುತದೇವಿಯನ್ನು ಕಾರೂಷಾಧಿಪನಾದ ವೃದ್ಧಶರ್ಮನು ಮದುವೆ ಯಾಗಿ ದಂತವಕ್ತ್ರನನ್ನು ಪಡೆದನು. ಶ್ರುತಕೀರ್ತಿಯು ಕೇಕಯರಾಜ ಧೃಷ್ಟಕೇತುವಿಂದ ಸಂತರ್ದ ನಾದಿ ಐವರು ಸುತರನ್ನು ಪಡೆದಳು. ರಾಜಾಧಿದೇವಿಯು ಜಯತ್ಸೇನನಿಂದ ಆವಂತಿ ರಾಜರಾದ ವಿಂದಾನುವಿಂದರನ್ನು, ಶ್ರುತಶ್ರವಾ ಎಂಬುವಳು ಚೇದಿರಾಜ ದಮ ಘೋಷನಿಂದ ಶಿಶುಪಾಲ ನನ್ನು ಪಡೆದರು. ಶಿಶುಪಾಲ ದಂತವಕ್ತ್ರರೇ ಜಯವಿಜಯರು – ಮುನಿಶಾಪದಿಂದ ಅಸುರಾವೇಶ ವಶರಾಗಿ, ಶ್ರೀಹರಿಯಲ್ಲಿ ವೈರಪೂರ್ವಕ ಭಕ್ತಿಯನ್ನು ಮಾಡಿ ಅವನಿಂದ ಸಂಹೃತರಾಗಿ ಮುಕ್ತಿಯನ್ನೈದಿದರು.

ವಸುದೇವನ ತಮ್ಮಂದಿರ ಸಂತಾನವನ್ನು ಕೇಳು. ಧೇವಭಾಗನಿಗೆ ಕಂಸೆಯಲ್ಲಿ ಚಿತ್ರಕೇತು, ಬೃಹದ್ಬಲರು ಜನಿಸಿದರು. ದೇವಶ್ರವನಿಗೆ ಕಂಸವತಿಯಲ್ಲಿ ಸುವೀರ ಇಷುಮಂತರು; ಕಂಕನಿಗೆ ಕಂಕೆಯಲ್ಲಿ ಬಕ, ಸತ್ಯಜಿತ್, ಪುರುಜಿತರು; ಸೃಂಜಯನಿಗೆ ರಾಷ್ಟ್ರಪಾಲಿಕೆಯಲ್ಲಿ ವೃಷ ದುರ್ಮ ರ್ಷಣಾದಿಗಳು; ಶ್ಯಾಮಕನಿಗೆ ಸುರಭೂಳಲ್ಲಿ ಹರಿಕೇಶ ಹಿರಣ್ಯಾಕ್ಷರು; ವತ್ಸನಿಗೆ ಮಿತ್ರಕೇಶಿ ಎಂಬ ಅಪ್ಸರೆಯಲ್ಲಿ ವೃಕಾದಿಗಳು; ವೃಕನಿಗೆ ಊರ್ವಶಿಯಲ್ಲಿ ತಕ್ಷ ಪುಷ್ಕರ, ಸಾಲಾದಿಗಳು;

ಅನೀಕನಿಗೆ ಸುದಾಮನಿಯಲ್ಲಿ ಸುಮಿತ್ರಾರ್ಜುನ ಬಾಣಾದಿಗಳು; ಆನಕನಿಗೆ ಕರ್ಣಿಕೆಯಲ್ಲಿ ಋತಧಾಮಜಯರು ಜನಿಸಿದರು.

ವಸುದೇವರಾಜನ ಸಂತತಿಯನ್ನು ಪೇಳುವೆನು. ಅವನಿಗೆ ಪೌರವೀ, ರೋಹಿಣೀ, ಭದ್ರಾ, ಮದಿರಾ, ರೋಚನಾ, ಇಲಾ, ದೇವಕೀ, ಮೊದಲಾದ ಪತ್ನಿಯರಿದ್ದರು. ಅವನು ಪುಟ್ಟಿದಾಗ ದೇವತೆಗಳು ಶ್ರೀಹರಿಯ ಅವತಾರಕಾರಣನಿವನೆಂದು ಆನಂದದಿಂದ ಆಗಸದಿ ನಿಂದು ಆನಕಗಳನ್ನು ದುಂದುಭಿಗಳನ್ನು ಬಾರಿಸಿದುದರಿಂದ ಆ ಮಹಾನುಭಾವನಿಗೆ ಆನಕ ದುಂದುಭಿ ಎಂಬ ಹೆಸರಾಯಿತು. ಅವನಿಗೆ ರೋಹಿಣಿಯಲ್ಲಿ ಬಲರಾಮ, ಗದ, ಸಾರಣ, ದುರ್ಮದ, ವಿಪುಲ, ಧ್ರುವರು ಪುಟ್ಟಿದರು; ಪೌರವಿಯಲ್ಲಿ ಸುಭದ್ರ, ಭದ್ರಬಾಹು, ದುರ್ಮದ, ಭದ್ರ, ಭೂತಾದಿ ಮೊದಲಾದ ದ್ವಾದಶ ಪುತ್ರರು; ಮದಿರೆ ಎಂಬ ವೈಶ್ಯಪತ್ನಿಯಲ್ಲಿ ನಂದ, ಉಪನಂದ, ಕೃತಕ, ಶ್ರುತಶೂರಾದಿ ಗಳು; ಕೌಸಲ್ಯೆಯಲ್ಲಿ ಕೇಶಿರಾಜ, ರೋಚನೆಯಲ್ಲಿ ಹಸ್ತ ಹೇಮಾಂಗದಾದಿ ಗಳು; ಇಲೆಯಲ್ಲಿ ಪುರುವಲ್ಕಾದಿಗಳು; ಧೃತದೇವಳಲ್ಲಿ ತ್ರಿಪೃಷ್ಠನು; ಶಾಂತಿದೇವಿಯಲ್ಲಿ ಪ್ರಶ್ರಮ ಪ್ರಶ್ರಿತ ಮುಂತಾದವರು; ಉಪದೇವಿಯಲ್ಲಿ ಕಲ್ಪವರ್ಷಾದಿ ಹತ್ತು ರಾಜರು; ಶ್ರೀದೇವಳಲ್ಲಿ ವಸುಹಂಸ ಸುಧನ್ವಾದಿ ಆರು ಸುತರು; ದೇವರಕ್ಷಿತಳಲ್ಲಿ ಗದಾದಿ ನವಪುತ್ರರು; ಸಹದೇವಳಲ್ಲಿ ಪುರುವಸ ಮೃದು ಮೊದಲಾದ ಎಂಟು ಸುತರು ಜನಿಸಿದರು.

ವಸುದೇವನು ದೇವಕಿಯಲ್ಲಿ ಎಂಟು ಜನ ಸುತರನ್ನು ಪಡೆದನು. ಕೀರ್ತಿಮಂತ ಸುಷೇಣ, ಭದ್ರಸೇನ, ಋಜು, ಸಂಮರ್ಧನ, ಭದ್ರ, ಸಂಕರ್ಷಣ ಎಂಬ ಸುತರಾದಮೇಲೆ, ಅಷ್ಟಮಗರ್ಭ ದಲ್ಲಿ ಸಾಕ್ಷಾತ್ ಶ್ರೀಹರಿಯೇ ಕೃಷ್ಣನಾಗಿ ಅವತರಿಸಿದನು. ನಿಮ್ಮ ಪಿತಾಮಹಿಯಾದ ಸುಭದ್ರೆ ಆ ಸ್ವಾಮಿಯ ತಂಗಿಯಾಗುವ ಮಹಾಭಾಗ್ಯವನ್ನು ಪಡೆದಳು.

ರಾಜನ್! ಧರ್ಮಹಾನಿಯು, ಪಾಪವೃದ್ಧಿಯು ಆದಾಗ, ಭಗವಂತನು ತನ್ನನ್ನು ತಾನೇ ಸೃಜಿಸಿಕೊಂಡು, ಅವತರಿಸಿ, ಸುಜನರನ್ನು ಸಲಹಿ, ದುರ್ಜನರನ್ನು ಮಡುಹಿ, ಧರ್ಮಸಂಸ್ಥಾಪನ ವನ್ನು ಮಾಡುವನು. ಜೀವಭಿನ್ನನು, ಸರ್ವಸ್ವಾಮಿಯು ದೇಹದಿಂದ ಕೂಡ ನಾಶರಹಿತನು. ಕರ್ಮಫಲಪ್ರದವಾದ ಶ್ರೀರಮಣನು ಹುಟ್ಟಿದನು ಹಾಗೂ ಕರ್ಮಗಳನ್ನು ಮಾಡಿದನೆಂದರೆ ಆ ಜನ್ಮ ಕರ್ಮಗಳು ಅವನ ಲೀಲಾವಿಲಾಸಗಳು. ಸ್ವೇಚ್ಛೆಯಿಂದ ಕ್ರೀಡಿಸುವ ಬ್ರಹ್ಮಾದಿವಂದ್ಯ ನಿಗೆ ನಮ್ಮಂತೆ ಜನನಮರಣಾದಿಗಳು, ಕರ್ಮಲೇಪಗಳು ಉಂಟೇ? ಯಾರ ದಯದಿಂದ ಜೀವಜಡಾತ್ಮಕ ಜಗತ್ತಿಗೆ ಜನನ ಸ್ಥಿತಿ ಸಂಹರಣ, ನಿಯಮಗಳೋ, ಯಾರ ಇಚ್ಛೆಯಿಂದ ಜೀವರಿಗೆ ಜ್ಞಾನಾಜ್ಞಾನ ಮೋಕ್ಷ ಬಂಧಗಳೋ, ಯಾರ ಕಟಾಕ್ಷವು ಮೋಕ್ಷಕಾರಣವೋ, ಅಂತಹ ಶ್ರೀಹರಿಗೆ, ಜೀವರಂತೆ ಜನನಮರಣಾದಿಗಳಿಲ್ಲ. ಅವನಿಗೆ ಕರ್ಮಬಂಧವಿಲ್ಲ. ಆ ಪ್ರಭುವು ಜೀವರ ಸ್ವರೂಪಾನಂದಸಿದ್ಧಿಗಾಗಿಯೇ ಜಗಜನ್ಮಾದಿಗಳನ್ನು ಅನಾಯಾಸವಾಗಿ, ಸ್ವೇಚ್ಛೆಯಿಂದ ಮಾಡುತ್ತಿರುವನು.

ರಾಜರೂಪದಿಂದ ಜನಿಸಿ ಬಂದ ದುಷ್ಟರಾಕ್ಷಸರ ಅಕ್ಷೌಹಿಣೀ ಲಕ್ಷವನ್ನು ಹೊರಲಾರದೆ ಶರಣಾಗತಳಾದ ಭೂದೇವಿಯನ್ನು ದುಷ್ಟಜನ ಪೀಡೆಯಿಂದ ನೊಂದ ಭೂ ದೇವರನ್ನು ರಕ್ಷಿಸುವುದೇ ಆ ಮಹಾಸ್ವಾಮಿಯ ಸಂಕಲ್ಪವು. ಸತ್ಯಸಂಕಲ್ಪನಾದ ಶ್ರೀಹರಿಯ ಅವತಾರ ಚರಿತೆಗಳನ್ನು ಬ್ರಹ್ಮಾದಿ ದೇವತೆಗಳು ಕೂಡ ಸಂಪೂರ್ಣವಾಗಿ ಪೊಗಳಿ ಮುಗಿಸಲಾರರೆಂದಮೇಲೆ ನಮ್ಮಂತಹ ಪಾಮರರ ಪಾಡೇನು?

ಬಲರಾಮನಿಂದ ಕೂಡಿ ಮಧುಸೂದನನು ಮಾಡಿದ ಅವತಾರ ಚರಿತಾಮೃತವು ಮುಂದೆ ಕಲಿಯುಗದಿ ಜನಿಸಿ, ಪಾಪಿ ಸಂಪರ್ಕದಿಂದ ನೊಂದು ದುಃಖಿಸುವ ಸುಜನರ ತಾಪ ನಿವಾರಕ ವಾಗಿದೆ. ಶ್ರೀಕೃಷ್ಣಚಂದ್ರನ ಕೀರ್ತಿ ಚಂದ್ರಿಕೆಯ ಭಕ್ತಜನ ಹೃದಯಾಂಧಕಾರನಿವರ್ತಕವಾಗಿದೆ. ಸುಜನರು ಕರ್ಣಾಮೃತವೆನಿಸುವ ಶ್ರೀಕೃಷ್ಣನ ಸುಚ್ಛಾಸ್ತ್ರ ಗಂಗೆಯಲ್ಲಿ ಮಿಂದು, ಅವನ ಕಥಾಮೃತ ವನ್ನು ಕರ್ಣಪುಟಗಳಿಂದ ತುಂಬಿ ಪಾನಮಾಡಿ, ಸಕಲ ಕರ್ಮಬಂಧದಿಂದ ಮುಕ್ತರಾಗುವರು. ಅವನ ಮಂದಹಾಸ, ನರ್ಮಾಲಾಪ, ಕರುಣಾವಲೋಕನಗಳಿಗೆ ಪಾತ್ರರಾಗಿ ಭೋಜನವೃಷ್ಣ್ಯಂಧಕ ಕುರುಪಾಂಡವ ಪ್ರಮುಖ ಸಜ್ಜನರು ಪಟ್ಟ ಆನಂದವು ಬ್ರಹ್ಮಾನಂದಸಮವಾಗಿ ಅವರನ್ನು ಮೈಮರೆಸಿತೆಂದರೆ ಅತಿಶಯೋಕ್ತಿಯಾಗಲಾರದು. ಸರ್ವಾಂಗರಮಣೀಯನಾದ ಶ್ರೀರಮಣನನ್ನು ನೋಡಿದ ನಯನಗಳೇ ನಯನಗಳು; ಅವನನ್ನು ಪಾಡಿದ ರಸನೆಯೇ ರಸನೆ; ಅವನನ್ನು ಪೊಗಳಲು ಕೇಳಿದ ಶ್ರವಣಗಳೇ ಶ್ರವಣಗಳು!

ಮಕರಕುಂಡಲ ಶೋಭಿತ ಗಂಡವು, ಮಂದಹಾಸ ಸುಂದರವು. ಕರುಣಾಮೃತ ರಸಭರಿತ ಕಟಾಕ್ಷ ಬಂಧುರವು ಆದ ಗೋವಿಂದನ ವದನಾರವಿಂದ ವಿಲಾಸ ಮಕರಂದವನ್ನು, ನಿತ್ಯವೂ ನಯನ ಮಧುಕರಗಳಿಂದ ಕುಡಿದು, ಯದು ನರನಾರಿಯರು ಆನಂದಪರವಶರಾಗಿ, ಸಾಕೆನಿಸದೆ, ಕಣ್ಣಿಗೆ ಎವೆಯನ್ನಿಟ್ಟ ವಿಧಿಯನ್ನು ದೂರುತ್ತಿದ್ದರು.

ಶ್ರೀಕೃಷ್ಣನು ಮಧುರೆಯಲ್ಲಿ ಪುಟ್ಟಿ, ವ್ರಜದಲ್ಲಿ ಬೆಳೆದನು. ಪೂತನಾದಿ ಕಂಸಾಂತ ದಾನವ ರನ್ನು ಸಂಹರಿಸಿದನು. ಶ್ರೀರುಕ್ಮಿಣ್ಯಾದಿ ಮಹೀಷಿಜನ ರಮಣನಾಗಿ, ಸ್ವರಮಣನಾದ ನಾರಾ ಯಣನು ಲೋಕದಂತೆ ಲೀಲಾಕೇವಲನಾಗಿ ನಟಿಸಿ, ಜನರನ್ನು ಸನ್ಮಾರ್ಗದಲ್ಲಿ ನಡೆಸಿದನು. ಸಾವಿರಾರು ಸುತರನ್ನು ಪಡೆದು, ಯಜ್ಞಗಳನ್ನು ಮಾಡಿದನು. ತನಗೆ ತಾನೇ ಹವಿರ್ದಾನವನ್ನು ಮಾಡಿ, ಯಜ್ಞವು ಕರ್ತವ್ಯವೆಂದೂ, ತಾನೇ ಯಜ್ಞವೆಂದೂ, ತನಗೆ ಇನ್ನೊಬ್ಬ ಪೂಜ್ಯನಿಲ್ಲ ವೆಂದೂ, ಪ್ರಕಟಿಸಿದನು. ಆ ಸರ್ವಜ್ಞನು ವೇದವಿಹಿತಮಾರ್ಗವನ್ನು ತಿಳಿಸಲು ಗೀತಾದಿ ಸಚ್ಛಾಸ್ತ್ರವನ್ನು ಅರ್ಜುನೋದ್ಧವಾದಿಗಳಿಗೆ ಉಪದೇಶಿಸಿದನು. ಆ ತ್ರಿವಿಕ್ರಮನು ಕೈಲಿ ಆಯುಧ ವನ್ನು ಪಿಡಿಯದೆ ಕಣ್ಣಿನ ನೋಟದಿಂದಲೇ ಭೂಭಾರಭೂತರಾದ ದುಷ್ಟರ ಆಯುಶ್ಶೇಷವನ್ನು ಹರಿಸಿ, ಅವರನ್ನು ಭೀಮಾರ್ಜುನಾದಿಗಳಿಂದ ಸಂಹರಿಸಿ, ಭೂಭಾರವನ್ನು ಇಳುಹಿ, ಸುಜನರನ್ನು ಸಲಹಿದನು.

ಶ್ರೀಕೃಷ್ಣನು ಸ್ವೇಚ್ಛೆಯಿಂದ ಪರಂಧಾಮವನ್ನು ಸೇರಿದ ಮಹಾಮಹಿಮೆಯು ಅತ್ಯದ್ಭುತ ವಾಗಿದೆ. ಆ ಶ್ರೀಕೃಷ್ಣನಿಗೆ ನಮಸ್ಕಾರವು.

ನವಮ ಸ್ಕಂಧವು ಸಂಪೂರ್ಣವಾಯಿತು.

॥ಶ್ರೀಕೃಷ್ಣಾರ್ಪಣಮಸ್ತು॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ದಶಮ ಸ್ಕಂಧವು

|| ಹರಿಃ ಓಂ ||

### ೧. ವಸುದೇವ ವಿವಾಹ

ಶ್ರೀರಾಜನು ಪ್ರಶ್ನೆ ಮಾಡಿದನು–

ಭಗವನ್! ಸೋಮ ಸೂರ್ಯರ ವಂಶವಿಸ್ತಾರವನ್ನು ಕೇಳಿದೆನು. ಆ ವಂಶಜರಾದ ರಾಜನ್ಯರ ಪಾವರ ಚರಿತೆಯು, ಶ್ರೀಹರಿಕಥಾ ಬಂಧುರವಾಗಿ ಅತ್ಯದ್ಭುತವಾಗಿದೆ. ಹರಿ ಸಮಾಧಿ ಯುಕ್ತನು, ಯಯಾತಿ ಪುತ್ರನು ಆದ ಯದುರಾಜನ ವಂಶವಾರ್ಧಿಕಚಂದ್ರಮನಾಗಿ ಅವತರಿಸಿದ ಶ್ರೀಹರಿಯ ಪವಿತ್ರ ಚರಿತ್ರವನ್ನು ನಮಗೆ ಪೇಳು. ಸಕಲಭೂತ ಪೋಷಕನು ವಿಶ್ವವ್ಯಾಪಿಯು ಆದ ಶ್ರೀಕೃಷ್ಣನ ಕಥೆಯನ್ನು ವಿಸ್ತಾರವಾಗಿ ಕೇಳಬೇಕೆಂದು ಅಪೇಕ್ಷಿಸುತ್ತಿರುವೆನು.

ಸಕಲ ಸಾಂಸಾರಿಕ ದುಃಖದರ್ಶನದಿಂದ ವಿರಕ್ತರಾಗಿ, ದುರಾಶೆಗಳನ್ನು ಬಿಟ್ಟು ಸುಜನರು ಭವರೋಗ ಹರಣವು, ಶ್ರವಣರಸಾಯನವು, ಮನೋಹರವು, ಆದ ಶ್ರೀಕೃಷ್ಣನ ಗುಣಾನುವಾದ ವನ್ನು ಆದರದಿಂದ ಕೇಳುವರು. ಅಂತಹ ಉತ್ತಮ ಕೀರ್ತಿಸಂಪನ್ನನ ಕಥಾ ಶ್ರವಣವನ್ನು ಮಾಡಿ ಸಾಕೆಂದು ಬಿಡುವವನು ಪಶುವೇ ಸರಿ. ಪ್ರವೃತ್ತಿಮಾರ್ಗನಿರತರಾಗಿ ಪಶುಹಿಂಸೆಯಿಂದ ಕೂಡಿದ ಯಜ್ಞಗಳನ್ನು ಮಾಡುವ ತ್ರೈವರ್ಗೀಕರು ಹಾಗೂ ಹುಚ್ಚರು ಶ್ರೀಹರಿಕಥಾದೂರ ರಾಗಿರುವರು. ಅಂತಹವರಿಗೆ ಸದ್ಗತಿಯೂ ದೂರವಲ್ಲವೆ?

ದೇವತೆಗಳನ್ನೂ ಕಾದು ಗೆಲ್ಲುವ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಶಲ್ಯಾದಿ ವೀರರು, ತಿಮಿ, ತಿಮಿಂಗಿಲದಂತೆ ಭಯಂಕರರಾಗಿ ಮೆರೆಯುವ ಘೋರ ಕೌರವನ ಸೈನ್ಯ ಸಮುದ್ರವನ್ನು ನಮ್ಮ ಭೀಮಾರ್ಜುನಾದಿ ಪಿತಾಮಹರು ಶ್ರೀಕೃಷ್ಣ ಪಾದಪೋತವನ್ನು ಆಶ್ರಯಿಸಿ ಕರುವಿನ ಹೆಜ್ಜೆಯ ಕುಣಿಯ ನೀರನ್ನಂತೆ ಅನಾಯಾಸವಾಗಿ ದಾಟಿ ಜಯಿಸಿದರು. ಅಶ್ವತ್ಥಾಮನು ನಿಷ್ಪಾಂಡವವನ್ನು ಮಾಡುವೆನೆಂದು ಹಟದಿಂದ ಬಿಟ್ಟ ಬ್ರಹ್ಮಾಸ್ತ್ರದಿಂದ ಪೀಡಿತನಾಗಿದ್ದ ನನ್ನನ್ನು, ನಮ್ಮ ತಾಯಿಯು 'ಕೃಷ್ಣಾ! ಕುರುಪಾಂಡವ ಸಂತಾನಬೀಜವನ್ನು ಉಳಿಸು' ಎಂದು ಬೇಡಲು, ಗದಾಪಾಣಿಯಾಗಿ ಹೊಟ್ಟೆಯನ್ನು ಹೊಕ್ಕು ಸಂರಕ್ಷಿಸಿದ ಶ್ರೀಕೃಷ್ಣನ ಮಹೋಪಕಾರವನ್ನೆಂತು ಮರೆಯಲಿ? ಅವನಿತ್ತುದೀ ದೇಹ. ಅವನದೆ ಸರ್ವವು. ಆ ಸ್ವಾಮಿಯ ಕಥೆಯನ್ನು ನಾನು ಕೇಳಲು ಉತ್ಸುಕನಾಗಿರುವೆನು.

ಎಲ್ಲ ದೇಹಧಾರಿಗಳಿಗೆ ಪುರುಷನೆನಿಸಿ ಅಂತರ್ಯಾಮಿಯು, ಕಾಲನೆನಿಸಿ ಕರ್ಮಫಲಪ್ರದನು ಆಗಿ ಒಳಹೊರಗೆ ವ್ಯಾಪ್ತನಾಗಿರುವ ಶ್ರೀಶನು, ಪ್ರಳಯವು ಬಂದಾಗ ಯೋಗ್ಯತಾನುಸಾರವಾಗಿ

ಜೀವರಿಗೆ ತಮಸ್ಸನ್ನೋ ಅಥವಾ ಮೋಕ್ಷವನ್ನೋ ಕೊಡುತ್ತಿರುವನು. ಸ್ಥಿತಿಕಾಲದಲ್ಲಿ ಅವತರಿಸಿ, ಮನುಜರ ಮಧ್ಯದಲ್ಲಿ ಮನುಜನಂತೆ ಸ್ವೇಚ್ಛೆಯಿಂದ ವಿಹರಿಸುತ್ತಿರುವ ಶ್ರೀಕೃಷ್ಣನ ಕಥೆಯನ್ನು ಹೇಳು.

ಬಲರಾಮನು ರೋಹಿಣೀನಂದನನೆಂದೆ, ದೇವಕಿಯ ಸಪ್ತಮಗರ್ಭದಲ್ಲಿದ್ದ ಸಂಕರ್ಷಣನಿಗೆ ರೋಹಿಣೀ ಗರ್ಭಸಂಬಂಧನು ಆದುದು ಎಂತು? ಅದೇ ದೇಹದಿಂದ ದೇವಕೀ ರೋಹಿಣಿಯರ ಪುತ್ರನೆನಿಸಿದ ರಾಮನ ಜನನದ ವಿಚಿತ್ರಕಥೆಯನ್ನು ಪೇಳು. ಮೋಕ್ಷಪ್ರದನಾದ ಕೃಷ್ಣನು ಭಯ ಪಟ್ಟವನಂತೆ ತಂದೆಯ ಮನೆಯಿಂದ ಗೋಕುಲವನ್ನು ಸೇರಪೋಗಲು ಕಾರಣವೇನು? ಬಂಧು ಗಳಿಂದ ಕೂಡಿ ಗೋವಿಂದನು ಎಲ್ಲೆಲ್ಲಿ ವಸಿಸಿದನು? ವ್ರಜದಲ್ಲಿ, ಮಧುರೆಯಲ್ಲಿ ಅವನ ಲೀಲೆಗಳನ್ನು ವಿವರಿಸು. ಸೋದರಮಾವನು ಪ್ರೇಮಾಸ್ಪದನಲ್ಲವೇ? ಅಂತಹ ಕಂಸನನ್ನು ಶ್ರೀಕೃಷ್ಣನು ಕೊಲ್ಲಲು ಕಾರಣವೇನು? ಮನುಜನಂತೆ ಭೂಮಿಯಲ್ಲಿ ಶ್ರೀಕೃಷ್ಣನು ಎಷ್ಟು ವರುಷಗಳಿದ್ದನು? ಅವನಿಗೆ ಪತ್ನಿಯರೆಷ್ಟು ಜನ? ಮಕ್ಕಳೆಷ್ಟು? ಶ್ರದ್ಧೆಯಿಂದ ಕೇಳಬಯಸುವ ನನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳು.

'ಹಸಿವೆ ನೀರಡಿಕೆಗಳಿಂದ ನೊಂದು ನೀರಸನಾಗಿರುವ ನಿನ್ನ ಇಂದ್ರಿಯಗಳು ವಿವಶವಾಗಿವೆ. ನಿನಗೆ ಏನು ಪೇಳಿದರೂ ಅರಣ್ಯಚಂದ್ರಿಕೆಯಂತೆ ವ್ಯರ್ಥ'ವೆಂದು ಚಿಂತಿಸಬೇಡ. ಪೂಜ್ಯ ಶುಕನೇ! ನಿನ್ನ ಮುಖಾರವಿಂದದಿಂದ ಹರಿದುಬರುವ ಹರಿಯ ಚರಿತಸುಧೆಯನ್ನು ಪಾನಮಾಡಿ ಸ್ವಸ್ಥಚಿತ್ತ ನಾಗಿರುವೆನು.

ಎಂದು ಕೇಳಿದ ಪರೀಕ್ಷಿತನಿಗೆ ಶ್ರೀಶುಕನು ಕಲಿಪಾಪಹರವಾದ ಶ್ರೀಕೃಷ್ಣನ ಕಥೆಯನ್ನು ಹೇಳಲು ಪ್ರಾರಂಭಿಸಿದನು.

ಶ್ರೀಶುಕನು ನುಡಿದನು–

ರಾಜನ್! ವಾಸುದೇವನ ಕಥಾಶ್ರವಣದಲ್ಲಿ ಪರಮಾದರವನ್ನು ತೋರುವ ನೀನು ಪ್ರಶಂಸನೀ ಯನು. ವಾಸುದೇವನ ಕಥೆಯು, ಆ ತ್ರಿವಿಕ್ರಮನ ಪಾದಜಾತಳಾದ ಗಂಗೆಯಂತೆ, ಕೇಳುವ, ಪೇಳುವ ಹಾಗೂ ಅನುಮೋದಿಸುವ ಸುಜನರನ್ನು ಪವಿತ್ರೀಕರಿಸುವುದು ಮತ್ತು ನಿಶ್ಚಲವೂ. ಹರಿಸರ್ವೋತ್ತಮ ಜ್ಞಾನಪೂರ್ವಕವು ಆದ ಭಕ್ತಿಯನ್ನೂ ಪುಟ್ಟಿಸುವುದು.

ಅಸಂಖ್ಯಾತ ರಾಕ್ಷಸರು ರಾಜರೂಪದಲ್ಲಿ ಪುಟ್ಟಿ, ಸುಜನಪೀಡಾಕರರು ದುಷ್ಟ ಕಾರ್ಯ ರತರೂ ಆಗಿ ಭೂಭಾರರೆನಿಸಿದಾಗ, ಭೂದೇವಿಯು ಆ ಪತಿನಿಂದಕರ ಭಾರವನ್ನು ಹೊರಲಾರದೆ ಖಿನ್ನಳಾಗಿ, ಬ್ರಹ್ಮದೇವನಿಗೆ ಶರಣಾಗತಳಾದಳು. ಗೋಬ್ರಾಹ್ಮಣಸುಜನ ಬಂಧುವೆಂದರಿತು ಗೋರೂಪವನ್ನು ಧರಿಸಿ ದಯೆ ಪುಟ್ಟುವಂತೆ ಕಣ್ಣೀರಿಡುತ್ತಾ, ಬ್ರಹ್ಮನಿಗೆ ತನ್ನ ವ್ಯಸನವನ್ನು ನಿವೇದಿಸಿ, ಪರಿಹರಿಸೆಂದು ಬೇಡಿಕೊಂಡಳು. ಆಗ ಬ್ರಹ್ಮನು ಶಿವ ಮಹೇಂದ್ರಾದಿ ವೃಂದಾರಕ ವೃಂದದಿಂದ ಕ್ಷೀರನೀರಧಿಯ ತೀರವನ್ನು ಸೇರಿದನು. ಷಡ್ಗುಣಪೂರ್ಣನು ಸ್ವಭಕ್ತದುಃಖ ಶೋಷಣನು ಧರ್ಮ ಪೋಷಣನು ಆದ ಶ್ರೀಹರಿಯನ್ನು ಪುರುಷ ಸೂಕ್ತದಿಂದ ಸ್ತುತಿಸಿ, ಸಮಾಹಿತ ಮನಸ್ಕನಾಗಿ ನಿಂತ ಬ್ರಹ್ಮನಿಗೆ ಆಕಾಶವಾಣಿಯು ಮುಖದಿಂದ ಜಗನ್ನಾಥನು ನುಡಿದ ಮಧುರ ವಚನಗಳು ಕರ್ಣಗೋಚರವಾಗಿ ಸುಖವನ್ನು ತುಂಬಿದವು. ತಾನು ಕೇಳಿದ ಭಗವದ್ವಚನ ಸಾರವನ್ನು ಚತುರಾನನನು ದೇವತೆಗಳಿಗೆ ಈ ರೀತಿಯಾಗಿ ತಿಳಿಸಿದನು.

ಶ್ರೀಹರಿಯು ಭೂಸುರಾದಿ ಸುಜನ ಸಂತಾಪಕಾರಿಯಾದ ಸುರವೈರಿಸಮೂಹವನ್ನು ಸಂಹರಿ ಸಲು ಇಷ್ಟರಲ್ಲೇ ವಸುದೇವನ ಪತ್ನಿಯಾದ ದೇವಕಿಯಿಂದ ಅವತರಿಸುವನು. ಅಷ್ಟರಲ್ಲೇ

ನೀವೆಲ್ಲರೂ ನಿಮ್ಮ ಅಂಶಗಳಿಂದ ಅವತರಿಸಿ, ಶ್ರೀಹರಿಸೇವೆಗಾಗಿ ಸನ್ನದ್ಧರಾಗಿರಿ. ಸ್ವರೂಪ ಸಂಹಾರಶಕ್ತಿಯಿಂದ ಶ್ರೀಕೃಷ್ಣನು ಭೂಮಂಡಲಾಭರಣನಾಗಿರುವವರಿವಿಗೂ ನೀವೂ ನಿಮ್ಮ ತರುಣಿಯರೂ ಯಾದವ ಪಾಂಡವಾದಿ ಕುಲಗಳಲ್ಲಿ ಜನಿಸಿ, ನಿವಸಿಸಿ, ಅವನ ಪ್ರೀತಿಯನ್ನು ಸಂಪಾದಿಸಿರಿ.

ಶ್ರೀಹರಿಪ್ರೀತಿಗಾಗಿ ಸಂಕರ್ಷಣಾವೇಶಯುಕ್ತನಾಗಿ ಶೇಷನು ಮೊದಲೇ ಪುಟ್ಟಿ ಅಣ್ಣನಾಗಿ ಶ್ರೀಕೃಷ್ಣನನ್ನು ಸೇವಿಸಿ ಧನ್ಯನಾಗುವನು. ಪೂಜ್ಯಳಾದ ಲೋಕಜನನಿ ದುರ್ಗಾದೇವಿಯು ಶ್ರೀಹರಿಯಿಂದ ಆಜ್ಞಾಪಿತಳಾಗಿ, ಸುರಕಾರ್ಯವನ್ನು ಸಾಧಿಸಲು ಯೋಗಮಾಯೆ ಎನಿಸಿ, ಯಶೋಧೆಯಲ್ಲಿ ಪುಟ್ಟುವಳು. ಆ ಮಂಗಳದೇವತೆಯ ಮಾಯೆಯನ್ನು ಮನುಜರೆಂತು ತಿಳಿಯುವರು?

ಇಂತು ನುಡಿದು ಶತಾನಂದನು ದೇವತೆಗಳಿಗೂ ಭೂದೇವಿಗೂ ಆನಂದವನ್ನು ಉಂಟು ಮಾಡಿ ಸತ್ಯಲೋಕಕ್ಕೆ ಪೋದನು.

ಆಗ ಮಥುರಾನಗರದಲ್ಲಿ ಯದುಶ್ರೇಷ್ಠನಾದ ಶೂರರಾಜನಿದ್ದನು. ಶೂರಸೇನದೇಶಾಧಿಪನಾದ ಆ ಶೂರನಿಗೂ ಉಗ್ರಸೇನಾದಿ ರಾಜರಿಗೂ ಮಥುರಾಪುರಿಯೇ ರಾಜಧಾನಿಯಾಗಿದ್ದಿತು.

ಮಥುರೆ ಎಂದರೆ ಸಾಮಾನ್ಯಕ್ಷೇತ್ರವೇ? ರಾಜನ್! ಅಲ್ಲಿ ಶ್ರೀನಾಥನ ನಿತ್ಯಸನ್ನಿಧಾನವಿರುವುದು. ಆ ಶೂರನಿಗೆ ಮಗನಾದ ವಸುದೇವನೊಂದು ಸಲ ದೇವಕಿ ಎಂಬ ಹದಿಮೂರನೆಯ ಪತ್ನಿಯನ್ನು ಮದುವೆಯಾಗಿ, ಅವಳೊಡನೆ ರಥವನ್ನೇರಿ ಮೆರೆದು ಬರುತ್ತಿದ್ದನು. ತಂಗಿಯಾದ ದೇವಕಿಯು ಹಿಗ್ಗಿ ನೋಡುತ್ತಿರಲು ಕಂಸನು ತಾನಾಗಿ ಸೂತನ ಸ್ಥಾನದಲ್ಲಿ ಕುಳಿತು ಕುದುರೆಗಳನ್ನು ನಡೆಸುತ್ತಿದ್ದನು. ಸುತೆಯಲ್ಲಿ ಮಮತೆಯಿಂದ ದೇವಕ ರಾಜನು ಕಾಸಿನ ಸರದಿಂದಲು ಬಂಗಾರದ ಅಂಬಾರಿಯಿಂದಲು ಅಲಂಕೃತವಾದ ನಾಲ್ಕು ನೂರು ಗಜಸಮೂಹಗಳನ್ನೂ ಹತ್ತುಸಾವಿರ ಕುದುರೆಗಳನ್ನೂ ಸಾವಿರದ ಎಂಟುನೂರು ರಥಗಳನ್ನೂ ಸುಕುಮಾರಿಯರಾದ ಇನ್ನೂರು ಜನ ದಾಸಿಯರನ್ನೂ ಉಡುಗೊರೆಯಾಗಿ ಕೊಟ್ಟು ಕಳುಹಿಸಿದನು.

ಶಂಖ ತೂರ್ಯ ಮೃದಂಗಗಳು ಭೋರ್ಗರೆಯುತ್ತಿರಲು, ತುಷ್ಟರಾಗಿ ರಥಾರೂಢರಾದ ದಂಪತಿಗಳು ಸಂಭ್ರಮಾನಂದಭಾಗಿಯಾದ ಕಂಸನನ್ನು ನೋಡಿ ಸಹಿಸದೆ, ಅಶರೀರವಾಣಿಯಿಂದ ದೇವತೆಗಳಿಂತೆಂದರು–

'ಮೂಢ! ನೀನು ಪ್ರೀತಿಯಿಂದ ಲಾಲಿಸುವ ಈ ನಿನ್ನ ತಂಗಿಯ ಎಂಟನೆಯ ಗರ್ಭಜಾತನು ನಿನಗೆ ಮೃತ್ಯುವೆನಿಸುವನು' ಎಂದು ನುಡಿದ ಆ ಕಠೋರವಚನವಾಲಿಸಿ, ನೀಚನಾದ ಕಂಸನು ರಥದಿಂದ ಕೆಳಗೆ ಧುಮುಕಿ, ದೇವಕಿಯನ್ನು ಹೆರಳು ಪಿಡಿದು ಸೆಳೆದು, ಸಂಹರಿಸಲು ಖಡ್ಗವನ್ನು ಕೈಲಿ ಪಿಡಿದೆತ್ತಿದನು. ಇಂತು ನೀಚಕರ್ಮವನ್ನು ಮಾಡುವ ಕ್ರೂರ ಕಂಸನನ್ನು ನೋಡಿ ವಸುದೇವನು ಸಾಮವಚನಗಳಿಂದ ವಾರಿಸಿ ಇಂತೆಂದನು–

ಭಾವ! ಭೋಜಕುಲವೇ ನಿನ್ನಿಂದ ಬೆಳಗಿದೆ. ನೀನೋ ಗುಣವಂತನೆನಿಸಿ ಕೀರ್ತಿಯನ್ನು ಗಳಿಸಿರುವೆ. ಇಂತಹ ನೀನು– ತಂಗಿಯನ್ನು, ಅವಳ ಮದುವೆಯ ಮೆರವಣಿಗೆಯಲ್ಲಿ ದಯೆಯನ್ನು ತೊರೆದು, ಕೊಲ್ಲಬಹುದೇ?

ಮೃತ್ಯುವು ದೇಹವು ಪುಟ್ಟಿದಾಗಲೇ ಹುಟ್ಟಿ, ಹಿಂಬಾಲಿಸಿ ಬರುತ್ತಿದೆ. ಪ್ರಾಣಿಗಳು ಇಂದಾದರೂ ಅಥವಾ ನೂರು ವರ್ಷವಾದ ಮೇಲಾದರೂ ಸಾಯುವುದು ತಪ್ಪದು. ದೇಹವು ಸಾಯುವುದಾಗಲಿ ಜೀವನಲ್ಲ. ದೇಹವು ಪಂಚಭೂತಗಳಲ್ಲಿ ಸೇರಿಹೋದಾಗ ಜೀವನು ಅದನ್ನು ಬಿಟ್ಟು

ಇನ್ನೊಂದು ದೇಹವನ್ನು ಪ್ರವೇಶಿಸಿ, ಜನಿಸಿದನೆನಿಸುವನು. ನಡೆಯುವಾಗ ಮನುಜನು ಒಂದಾದ ಮೇಲೆ ಒಂದು ಪಾದವನ್ನಿಟ್ಟು ಪೋಗುವಂತೆ ಜಿಗಳೆಯು ಒಂದು ತೃಣವನ್ನು ಬಿಟ್ಟು ಇನ್ನೊಂದು ತೃಣವನ್ನು ಪಿಡಿದು ಸರಿಯುವಂತೆ, ಜೀವನು ಕರ್ಮಾನುಸಾರವಾಗಿ ಬಂದ ದೇಹಗಳನ್ನು ಪೊಂದಿ ಸಂಸರಿಸುತ್ತಿರುವನು.

ಜಾಗ್ರದ್ದಶೆಯಲ್ಲಿ ಕಂಡು ಅನುಭವಿಸಿದ ಪದಾರ್ಥಗಳ ಸಂಸ್ಕಾರವು ಬುದ್ಧಿಯಲ್ಲಿ ಬೇರೂರಿ ನೆಲಸಿರುವಾಗ ಆ ಸಂಸ್ಕಾರದಿಂದ ಗಾಢಸುಷುಪ್ತಿಯಲ್ಲಿದ್ದ ಜೀವನು ಎಚ್ಚರಗೊಂಡ ಮನದಿಂದ ಅದರಂತೆ ಇರುವ ದೇಹವನ್ನು ಇತರ ದೇಹಗಳನ್ನು ಸ್ವಪ್ನದಲ್ಲಿ ನೋಡುವನು. ತಾನೊಬ್ಬ ನಾದರೂ ಸ್ವಪ್ನದಲ್ಲಿ ಕಂಡ ತನ್ನ ದೇಹ, ಹಾಗೂ ಮಲಗಿರುವ ತನ್ನ ದೇಹಗಳನ್ನು ಬೇರಾಗಿ ನೋಡುವಂತೆಯೇ ಜೀವನೊಬ್ಬನಾದರೂ ಅನೇಕ ದೇಹಗಳನ್ನು ಧರಿಸಿ, ಕಾರ್ಯವಾಸನಾ ಸಂಪಾದಿತ ಯೋನಿಗಳಲ್ಲಿ ಹುಟ್ಟುತ್ತಿರುವನು. ಹಿಂದಿನ ದೇಹದಲ್ಲಿ ನಾನೆಂಬ ಅಭಿಮಾನವು ಹೋಗಿ ಮುಂದಿನ ದೇಹದಲ್ಲಿ ಅಭಿಮಾನವು ಹುಟ್ಟುವುದನ್ನೇ ಮರಣ- ಜನನಗಳೆಂಬರು. ಅಭಿಮಾನವು ನಾಶವಾಗಿರುವುದರಿಂದ ಜೀವನಿಗೆ ಪೂರ್ವದೇಹಸ್ಮರಣೆಯು ಉಂಟಾಗದಿರು ವುದು.

ಸಂಕಲ್ಪವಿಕಲ್ಪನಿಷ್ಠನಾದ ಮನಸ್ಸು ಅದೃಷ್ಟನಿಯಾಮಕನಾದ ಶ್ರೀಹರಿಯ ಇಚ್ಛಾನುಸಾರ ವಾಗಿ ದೇವ ಗಂಧರ್ವ ಪಿತೃ ಮನುಷ್ಯ ದಾನವ ದೇಹಗಳನ್ನು ಚಿಂತಿಸಿ, ಸಾತ್ವಿಕ ರಾಜಸ ತಾಮಸ ಜೀವಯೋಗ್ಯ ಲೋಕಪ್ರಾಪ್ತಿಕಾರಣವಾದ ಜನುಮಗಳನ್ನೇ ತಂದೊಡ್ಡುವುದು.

ಜಲಪೂರ್ಣ ಶರಾವ (ಗಡಿಗೆ ಮುಚ್ಚಳ)ದಲ್ಲಿ ಪ್ರತಿಬಿಂಬಿತವಾದ ಸೂರ್ಯಪ್ರತಿಬಿಂಬವು ವಾಯುವೇಗದಿಂದ ಚಲಿಸದಂತೆ ಕಾಣವುದಿಲ್ಲವೇ? ಶರಾವವು ಭಿನ್ನವಾಗಿದ್ದಲ್ಲಿ ಪ್ರತಿಬಿಂಬ ರೂಪವೂ ಭಿನ್ನವಾದಂತೆ ತೋರುವುದಲ್ಲವೇ? ಅಂತೆಯೇ ಜೀವನು ಹರೀಚ್ಛಾನಿರ್ಮಿತ ಶರೀರದಲ್ಲಿ ಪ್ರವೇಶಿಸಿ, ಅಭಿಮಾನದಿಂದ ದೇಹದ ಛೇದ ಭೇದಾದಿಗಳು ತನಗಾದುವೆಂದು ದೇಹಮರಣದಿಂದ ತಾನು ಸತ್ತೆನೆಂದು ತಿಳಿದು ದುಃಖಿಸುವನು. ಅಭಿಮಾನದಿಂದ ಅಶೋಭನ ವಸ್ತುಗಳನ್ನು ಶುಭಕರವೆಂದು ತಿಳಿದು ಅವನ್ನು ಸಂಪಾದಿಸಲು ಕಷ್ಟಪಡುತ್ತಿರುವನು. ಆದ್ದರಿಂದ ತನ್ನ ದೇಹವೇ ನಶ್ವರವಾಗಿರುವಾಗ ಪರರಿಗೆ ದ್ರೋಹವನ್ನೆಸಗುವುದು ತಪ್ಪಲ್ಲವೇ? ಪರದ್ರೋಹ ದಿಂದ ತನಗೆ ಕ್ಷೇಮವೇ? ಅಂತಹವರಿಗೆ ಪರಲೋಕದಲ್ಲಿ ನರಕಾದಿ ಭಯವು ಇದ್ದೇ ಇರುವುದು.

ಇರಲಿ! ಕೇಳು. ಇವಳು ನಿನ್ನ ತಂಗಿ, ಇಂದು ಮದುವೆಯಾದ ಇವಳನ್ನು ಮಗಳನ್ನಂತೆ ಪ್ರೀತಿಯಿಂದ ಕಳುಹಲು ಬಂದ ನೀನು ಕೊಲ್ಲಬಹುದೇ? ಬೇಡ. ಕೈಯೊಡ್ಡಿ ಬೇಡುವೆನು. ಕರುಣಿಸು.

ಎಂದು ಸಾಮವಚನದಿಂದ ಯಾಚಿಸಿದ ವಸುದೇವನನ್ನು ಕಡೆಗಣಿಸಿ, ರಾಕ್ಷಸವರ್ತನನಾದ ಕಂಸನು ಆರ್ತಳಾಗಿ ಅಳುವ ದೇವಕಿಯನ್ನು ಕೊಲ್ಲಲು ನಿಶ್ಚಯಿಸಿ ನಿಂತನು. ಅವನ ದುಷ್ಟ ಭಾವವನ್ನು ತಿಳಿದು ವಸುದೇವನಿಂತು ಚಿಂತಿಸಿದನು–

ವ್ಯಸನಕಾಲವನ್ನು ಮುಂದೂಡುವುದೊಂದೆ ಈಗ ಉಳಿದಿರುವ ದಾರಿ. ಒಂದು ವೇಳೆ ಬುದ್ಧಿಶಕ್ತಿಯನ್ನು ಬಳಸಿ, ಇವಳನ್ನುಳಿಸಲಾದರೆ ಒಳಿತು- ವಿಧಿಮೀರಿ ಬಂದರೆ ಯಾರೇನು ಮಾಡುವರು? ಪತ್ನೀರಕ್ಷಣವನ್ನು ಕರ್ತವ್ಯವೆಂದು ತಿಳಿಸುವ ಶಾಸ್ತ್ರವನ್ನಾದರೂ ಶಿರಸಾ ವಹಿಸಿ ಪ್ರಯತ್ನಿಸುವುದು ಧರ್ಮಸಮ್ಮತವಾಗಿದೆ. ಈ ಮೃತ್ಯುರೂಪೀ ಕಂಸನಿಗೆ, ಮುಂದೆ ಹುಟ್ಟುವ ಮಕ್ಕಳನ್ನು ಸಮರ್ಪಿಸಿ, ದೀನಳಾಗಿ ರೋದಿಸುವ ಸುದತಿಯನ್ನು ರಕ್ಷಿಸುಕೊಳ್ಳುವೆನು. ನಮಗೆ

ಮಕ್ಕಳಾದಮೇಲಲ್ಲವೇ ಅವರ ಸಮರ್ಪಣೆ? ಅಷ್ಟರಲ್ಲಿ ಕಂಸನೇ ಸಾಯಬಾರದೇಕೆ? ಪುತ್ರನು ಹುಟ್ಟಿ ಉಳಿದು ಕಂಸನನ್ನೇ- ಆಕಾಶ ವಚನದಂತೆ– ಸಂಹರಿಸಲೂಬಹುದು. ಈಗ ಎದ್ದು ಕುಣಿಯುವ ಮೃತ್ಯವು ದೂರಸರಿಯಲಿ! ಮುಂದೆ ಗೋವಿಂದನಿದ್ದಾನೆ. ಕಾಳ್ಗಿಚ್ಚು ಉರಿಯುತ್ತಾ ಬರುವಾಗ ಕೆಲಗಿಡಗಳು ಸುಡದೆ ಉಳಿದವೆಂದರೆ ಆ ಗಿಡಜೀವರ ಅದೃಷ್ಟನಿಯಾಮಕ ಹರಿಯ ಅನುಗ್ರಹವೇ ಕಾರಣವಾಗಿರುವಂತೆ, ಜೀವನಿಗೆ ಶರೀರವಿಯೋಗ ಸಂಯೋಗಗಳು ಬರಲು ಶ್ರೀಹರಿಯೇ ಮುಖ್ಯಕಾರಣನಾಗಿರುವನು.

ಇಂತು ಚಿಂತಿಸಿ ವಸುದೇವನು ತನ್ನ ಬುದ್ಧಿಶಕ್ತಿಯನ್ನೆಲ್ಲ ಬಳಸಿ, ಬಹುಮಾನಪೂರ್ವಕವಾಗಿ ಸಮಾಧಾನ ಮಾಡಲೆಣಿಸಿ, ಮನಸ್ಸಿನ ಚಿಂತಾಗ್ನಿಯನ್ನು ಮಂದಹಾಸ ಚಂದ್ರಿಕೆಯಲ್ಲಿ ಅಡಗಿಸಿ, ನೀಚನು, ದುಷ್ಟಕಾರ್ಯ ಕರಣಲಜ್ಜಾರಹಿತನು ಆದ ಕಂಸನಿಗಿಂತೆಂದನು-

'ಕಂಸರಾಜ! ಇವಳಿಂದ ನಿನಗೆ ಮೃತ್ಯುವೆಂದು ಅಶರೀರವಾಣಿ ಹೇಳಿಲ್ಲ. ಇವಳ ಮಕ್ಕಳಿಂದ ಲೆಂದರೆ – ನಿಜ ಆ ಮಕ್ಕಳನ್ನೆಲ್ಲರನ್ನೂ ಹುಟ್ಟಿದಾಕ್ಷಣವೇ ತಂದು ನಿನಗೊಪ್ಪಿಸಿ ಬಿಡುವೆನು. ಇವಳನ್ನು ಬಿಡು' ಎಂದ ವಸುದೇವನ ಮಾತಿನ ಸ್ವಾರಸ್ಯವನ್ನರಿತು ಕಂಸನು ಸೋದರೀಸಂಹಾರ ವನ್ನು ಬಿಟ್ಟು ಹೊರಟುಹೋದನು. ವಸುದೇವನು ದೇವಕಿಯೊಡನೆ, ನಿಜಮಂದಿರವನ್ನು ಸೇರಿದನು.

## ೨. ಕಂಸಚರಿತೆ – ನಾರದವಚನ

ಕಾಲವು ಕಳೆದಂತೆ ಸರ್ವದೇವ ಸನ್ನಿಧಾನಪಾತ್ರಳಾದ ದೇವಕಿಯು ಎಂಟು ಜನ ಪುತ್ರರನ್ನು, ಒಬ್ಬ ಮಗಳನ್ನು ಪಡೆದಳು. ಮೊದಲನೆಯ ಮಗನೇ ಕೀರ್ತಿಮಂತನು, ಮನಸ್ಸಿಗೆ ಕಷ್ಟವಾದರೂ, ಮಮತೆಯನ್ನು ಹತ್ತಿಕ್ಕಿ, ವಸುದೇವರಾಜನು, ಆಡಿದ 'ಮಾತಿನಂತೆ, ಆ ಮಗುವನ್ನು ಕಂಸನಿಗರ್ಪಿ ಸಿದನು. ರಾಜನ್! ಸಾಧುಗಳು ಸಹಿಸಲಾರದ ಕಷ್ಟವಿಲ್ಲ. ಜ್ಞಾನಿಗಳು ಬೇಡುವ ಐಹಿಕ ಫಲವಿಲ್ಲ. ಸಾತ್ವಿಕರು ಬಿಡಲಾರದ ಭೋಗವಿಲ್ಲ. ಕುತ್ಸಿತರು ಮಾಡದಿರುವ ಕುಕರ್ಮವೂ ಇಲ್ಲ. ವಸುದೇವನ ಸತ್ಯನಿಷ್ಠೆಯನ್ನು ಕಂಡು ಕಂಸನ ಮನವು ಕೂಡ ಕರಗಿತು. ಅವನು ಪ್ರೀತನಾಗಿ ನಗುತ್ತಾ 'ಭಾವ! ಈ ಕುಮಾರನಿಂದ ನನಗೆ ಭಯವಿಲ್ಲ. ಎಂಟನೆಯವನಿಂದ, ಎಂದಲ್ಲವೇ ಮುಗಿಲು ನುಡಿದುದು? ಹೋಗು' ಎಂದು ಕಳಿಸಿದನು. ಅವ್ಯವಸ್ಥಿತ ಚಿತ್ತರ ಪ್ರಸಾದವು ಭಯಂಕರವೇ ಸರಿ. ಅದನ್ನರಿತು ವಸುದೇವನು, ಅವನ ವಾಕ್ಯದಲ್ಲಿ ವಿಶ್ವಾಸವಿಡದೆ, ಮನೆಗೆ ಬಂದು, ಮಡದಿಗೆ ಮಗುವನ್ನಿತ್ತು ನಿಶ್ಚಲಮನಸ್ಕನಾಗಿದ್ದನು.

ಆಗ ದೇವಕಾರ್ಯ ದುರಂಧರನಾದ ನಾರದನು ಕಂಸನಲ್ಲಿಗೆ ಬಂದು ಇಂತೆಂದನು–

'ನಂದಾದಿ ಗೋಪಾಲಕರು, ಅವರ ಸತಿಯರು, ವಸುದೇವಾದಿ ಯಾದವರು, ದೇವಕೀ ಮುಂತಾದ ಅವರ ಸತಿಯರು ಎಲ್ಲರೂ ದೇವತೆಗಳು. ಕಂಸಾ! ನೀನು ನಿನ್ನ ಅನುಚರರೆಲ್ಲರೂ ದೈತ್ಯರು. ಲೋಕೋಪದ್ರವನ್ನೇ ಮಾಡಬೇಕಾದ ನೀನು ದೇವತೆಗಳೊಡನೆ ವಿಹರಿಸುತ್ತ ಅವರನ್ನು ಸಂಹರಿಸದಿರುವುದು ಸರಿಯಲ್ಲ' ಎಂದು ಬ್ರಹ್ಮನಂದನನು ಕಂಸಾದಿ ದೈತ್ಯರನ್ನು ಕೊಲ್ಲಲು ಭೂಮಿಯಲ್ಲಿ ಶ್ರೀಹರಿಯು ಅವತರಿಸಲಿರುವುದನ್ನು ತಿಳಿಸಿ ಹೊರಟುಹೋದನು.

ದೇವಕೀ ವಸುದೇವರು ದೇವಾಂಶರು. ಅವರ ಮಗನಾಗಿ ವಿಷ್ಣುವು ತನ್ನನ್ನು ಕೊಲ್ಲುವನೆಂದು ಊಹಿಸಿ, ಕಂಸನು ಹಿಂಸಾಶೀಲನಾಗಿ, ದೇವಕೀ ವಸುದೇವರನ್ನು ಸೆರೆಯಲ್ಲಿಟ್ಟನು. ಅವರಿಗೆ ಕ್ರಮವಾಗಿ ಜನಿಸಿದ ಆರು ಜನ ಸುತರನ್ನು ಕರುಣಾರಹಿತನಾಗಿ ಸಂಹರಿಸಿದನು. ತಂದೆತಾಯಂದಿರನ್ನು, ಸೋದರರನ್ನು ಬಂಧುಗಳೆನ್ನದೆ ಬಂಧಿಸಿ, ಪೀಡಿಸಿದನು. ಕ್ರೂರರಾಗಿ ಲೋಭದಿಂದ ಮತಿಗೆಟ್ಟು, ತನ್ನ ಜೀವನಕ್ಕಾಗಿ, ಪರರನ್ನು ಕೊಲ್ಲುವುದು ಕ್ರೂರರಾಜರ ಲಕ್ಷಣವಲ್ಲವೇ? ಹಿಂದೆ ವಿಷ್ಣುವಿನಿಂದ ಸಂಹೃತನಾದ ಕಾಲನೇಮಿಯೇ ತಾನೆಂದರಿತು, ಆ ಮಹಾ ಅಸುರನು ಯದುಗಳನ್ನು ಪೀಡಿಸತೊಡಗಿದನು. ಯಧುಭೋಜರ ಪತಿಯಾಗಿದ್ದು ಉಗ್ರಸೇನನನ್ನು ತಂದೆಯೆನ್ನದೆ ಸೆರೆಯಿಟ್ಟು, ಶೂರಸೇನದೇಶವನ್ನು ತಾನೇ ಪಾಲಿಸಿದನು.

## ೨. ಯೋಗಮಾಯಾ ಮಹಿಮೆ – ಗರ್ಭಸ್ತುತಿ

ಕಂಸನು ಪ್ರಲಂಬ, ಬಕ, ಚಾಣೂರ, ತೃಣಾವರ್ತ, ಮಹಾಶನ, ಮುಷ್ಟಿಕಾರಿಷ್ಟ, ಪೂತನಾ, ದ್ವಿವಿದ, ಕೇಶಿ, ಧೇನುಕಾದಿ ದುಷ್ಟದಾನವ ಸಹಾಯದಿಂದ ಮದವೇರಿ ಕದನವನ್ನು ಮಾಡಲು, ಎದುರು ನಿಲ್ಲುವ ವದನವಿಲ್ಲದೆ, ಸದನಗಳನ್ನು ಬಿಟ್ಟು ಯಾದವರು ನಿಷದ ಕುರು ಕೋಸಲ ವಿದರ್ಭ ಕೇಕಯ ಪಾಂಚಾಲಾದಿ ದೇಶಗಳಿಗೆ ಓಡಿಹೋದರು. ಕೆಲವರು ವಿಧಿ ಇಲ್ಲದೆ ಮತ್ತು ಅಕ್ರೂರಾದಿಗಳು ಜನ್ಮಭೂಮಿಯನ್ನು ಬಿಡಲಾರದೆ ಕಂಸನನ್ನುಸರಿಸಿ ಜೀವಿಸುತ್ತಿದ್ದರು.

ದೇವಕಿಯ ಆರು ಪುತ್ರರು ಕಂಸನಿಂದ ಹತರಾದರು. ಏಳನೆಯ ಗರ್ಭದಲ್ಲಿ ಸಂಕರ್ಷಣನು ತನ್ನ ತೇಜಸನ್ನಿಧಾನಯುಕ್ತನಾದ ಶೇಷನಿಂದ ಪ್ರವೇಶಿಸಿದನು. ರಾಜರು ಪ್ರಯಾಣ ಮಾಡುವಾಗ ಮೊದಲು ಶಯನವನ್ನು ಕಳುಹುವಂತೆ ಶೇಷಶಯನನು ಶೇಷನನ್ನು ಕಳುಹಿ, ತಾನೂ ಅವತರಿಸುವ ಮನಮಾಡಿ ತನ್ನ ರಮಣಿಯಾದ ದುರ್ಗೆಯನ್ನು ಕರೆದಿಂತು ಆಜ್ಞಾಪಿಸಿದನು–

ದೇವಿ! ವ್ರಜವನ್ನು ಕುರಿತು ಪೋಗು. ಗೋಪಾಲಕರಿಂದ ಕೂಡಿದ ವ್ರಜದಲ್ಲಿ, ವಸುದೇವನ ಪತ್ನಿ ರೋಹಿಣಿಯು ಗರ್ಭವತಿಯಾಗಿರುವಳು. ವಸುದೇವನ ಇತರ ಪತ್ನಿಯರು ಗುಹೆಗಳಲ್ಲಿದ್ದಾರೆ. ಆ ರೋಹಿಣಿಯ ಗರ್ಭದಲ್ಲಿ ದೇವಕೀಗರ್ಭಪಿಂಡವನ್ನು ಸೆಳೆದು ಸ್ಥಾಪಿಸು. ಅವನೇ ಬಲರಾಮನೆನಿಸಿ ಹುಟ್ಟುವನು. ಅನಂತರದಲ್ಲಿ ನಾನು ಸ್ವಾಂಶದಿಂದ ಕೃಷ್ಣನೆನಿಸಿ ದೇವಕಿಯ ಅಷ್ಟಮಗರ್ಭದಲ್ಲಿ ಜನಿಸುವೆನು. ನೀನು ಅದೇ ದಿನ ನಾನು ಹುಟ್ಟಿದ ಎರಡು ಗಳಿಗೆಯ ನಂತರ ವ್ರಜವಾಸಿನಿಯಾದ ಯಶೋದೆಯ ಗರ್ಭದಿಂದ ಯಮುನಾತಟ ಶಿಬಿರದಲ್ಲಿ ಜನಿಸು. ನಿನ್ನನ್ನು ಸರ್ವಕಾಮ ಸಮೃದ್ಧಿಗಾಗಿ ಜನರು ಅನೇಕ ನಾಮಗಳಿಂದ ದೇವಸದನಗಳಲ್ಲಿಟ್ಟು, ಪೂಜಿಸಿ, ಕೃತಾರ್ಥರಾಗುವರು. ದುರಧಿಗಮ ಮಹಿಮಳಾದುದರಿಂದ ದುರ್ಗೆ, ಮಂಗಲಕರಳಾಗಿ ನೀಲವರ್ಣಳಾದುದರಿಂದ ಭದ್ರಕಾಲಿ, ವಿಜಯಶೀಲಳಾದುದರಿಂದ ವಿಜಯಾ, ವಿಷ್ಣುವಾದ ನನ್ನ ಪತ್ನಿಯಾದುದರಿಂದ ವೈಷ್ಣವೀ, ಕುವಲಯ ಮೋದಕರಿಯಾದುದರಿಂದ ಕುಮುದಾ, ಶತ್ರು ಖಂಡನ ಕೋಪಳಾದುದರಿಂದ ಚಂಡಿಕೆ, ಸದಾನಂದಳಾಗಿ ಕೃಷ್ಣೆ, ಮಾಧವ ಪತ್ನಿಯಾದುದರಿಂದ ಮಾಧವಿ, ನಿತ್ಯಕುಮಾರಿಯಾದುದರಿಂದ ಕನ್ಯಕೆ ಎನಿಸು. ಜ್ಞಾನಮಯಳು, ನರಸಮೂಹಾಶ್ರಯಳು, ಸರ್ವಸಮರ್ಥಳು, ಸಂಸಾರಚ್ಛೇದಕಳು, ಬ್ರಹ್ಮರುದ್ರೇಂದ್ರ ಜಗನ್ಮಾತೆಯು ಆದ್ದರಿಂದ ಮಾಯಾ, ನಾರಾಯಣಿ, ಈಶಾನಾ, ಶಾರದ, ಅಂಬಿಕಾ ಎಂದು ಖ್ಯಾತಳಾಗು. ಗರ್ಭದಿಂದ

ಸೆಳೆಯಲ್ಪಡುವ ಬಲರಾಮನು ರೋಹಿಣಿಯಲ್ಲಿ ಜನಿಸಿ ಸಂಕರ್ಷಣನೆಂದು ಹೆಸರಾಗುವನು; ಲೋಕಸುಖಕರನು ಬಲವಂತನು ಆಗಿ ಬಲರಾಮನೆನಿಸುವನು.

ಇಂತು ಭಗವಂತನಿಂದ ಆಜ್ಞೆಯನ್ನು ಪಡೆದ ಶ್ರೀದೇವಿಯು ಭೂಲೋಕವನ್ನು ಸೇರಿ, ಶ್ರೀಶನಾಜ್ಞೆಯಂತೆ ಎಲ್ಲರನ್ನೂ ನಡೆಸಿದಳು. ದೇವಕಿಗೆ ಗರ್ಭಸ್ರಾವವಾದುದನ್ನು ಕಂಡು 'ಅಯ್ಯೋ! ಪಾಪ!' ಎಂದು ಲೋಕದ ಜನರು ಮರುಗಿದರು. ವಿಶ್ವವ್ಯಾಪ್ತನಾದ ವಾಸುದೇವನು ಸ್ವಾಂಶದಿಂದ ಆನಕದುಂದುಭಿಯಾದ ವಸುದೇವನ ಹೃದಯವನ್ನು ಪ್ರವೇಶಿಸಿದನು. ಭಕ್ತಭಯ ಭಂಜನನಾದ ಭಗವಂತನ ತೇಜದಿಂದ ಆ ವಸುದೇವನು ಸೂರ್ಯನಂತೆ ದುರ್ಧರ್ಷನಾದನು. ಅವನನ್ನು ಕಣ್ಣೆತ್ತಿ ನೋಡಲು ಶಕ್ಯವಾಗದೆ ಜನರು ದೂರಸರಿದರು. ಕಾಲಕ್ರಮದಿಂದ ಜಗನ್ಮಂಗಲನಾದ ನಾರಾಯಣನ ಕೃಷ್ಣಕೇಶನೆನಿಸಿದ ಕೃಷ್ಣನನ್ನು ವಸುದೇವನಿಂದ ಧರಿಸಿ, ದೇವಕಿಯು ಆನಂದಕರ ಚಂದ್ರನನ್ನು ಧರಿಸಿದ ಪೂರ್ವದಿಶೆಯಿಂದ ರಾರಾಜಿಸಿದಳು. ಮುಕ್ತರಿಗೂ ಆನಂದಪ್ರದನಾದ ಶ್ರೀಹರಿಯು ದೇವಕಿಯ ಹೃದಯಾಕಾಶದಿಂದ ಅಭಿವ್ಯಕ್ತನಾಗಲು ನಿಶ್ಚಯಿಸಿ, ಅವಳಲ್ಲಿ ನೆಲಸಿದನು. ಸರ್ವಜಗನ್ನಿವಾಸನಾದ ಶ್ರೀನಿವಾಸನು ತನ್ನಲ್ಲಿರುವಾಗ ದೇವಕಿಯು ತೃಣಗಳಿಂದ ಮುಚ್ಚಲ್ಪಟ್ಟ ಅಗ್ನಿಜ್ವಾಲೆಯಂತೆ, ಹಾಗೂ ದ್ಯೂತರಂಗದಲ್ಲಿ ಅನೃತದಿಂದ ಸತ್ಯ ವಾಣಿಯಂತೆ ಬೆಳಗದೆ ನಿಗೂಢತೇಜಸ್ಕಳಾಗಿದ್ದರೂ ದುಸ್ಸಹ ಶೋಭಾಸಂಪನ್ನಳಾಗಿದ್ದಳು. ಅವಳು ಕಂಸನ ಮನೆಯಲ್ಲಿ ಸಂಚರಿಸುತ್ತಿರಲು ಮನೆ ಎಂಬ ಆಕಾಶದಿ ದೇವಕಿ ಎಂಬ ಮೂಡಲದಿಕ್ಕಿನಿಂದ ಕೃಷ್ಣನೆಂಬ ಸೂರ್ಯನೇ ಉದಯಿಸಿಬಂದನೆಂಬಂತೆ ಆಗಲು, ಅದನ್ನು ಕಂಡು ಭೀತಿಗೊಂಡ ಕಂಸನಿಂತು ಚಿಂತಿಸಿದನು–

ಆಹಾ! ಏನಿವಳ ತೇಜಸ್ಸು! ಇವಳ ಹೃದಯ ಗುಹೆಯಲ್ಲಿ ನನ್ನ ಪ್ರಾಣಹರನಾಗುವ ಹರಿಯೇ ನೆಲಸಿರುವನು. ನಿಜ. ಹಿಂದೆಂದೂ ಇಲ್ಲದ ಇವಳ ಕಾಂತಿಯನ್ನು ಕಂಡು ಹೆದರಿಕೆಯಾಗಿದೆ. ಏನು ಮಾಡಲಿ? ಇವಳ ಮಗನನ್ನೆಂತು ಕೊಲ್ಲಲಿ? ದೇವಕಾರ್ಯವನ್ನು ಸಾಧಿಸಲು ಬಂದ ಮಾಧವನನ್ನು ಕೊಂದರಲ್ಲವೇ ನನ್ನ ಕಾರ್ಯಸಿದ್ಧ? ಇವಳನ್ನೇ ಸಂಹರಿಸಲೇ? ಸ್ತ್ರೀಯನ್ನು ಕೊಂದರೆ ಯಶೋಹಾನಿ; ತಂಗಿಯನ್ನು ಕೊಂದರೆ ಐಶ್ವರ್ಯ ಹಾನಿ; ಗರ್ಭಿಣಿಯನ್ನು ಕೊಂದರೆ ಆಯುಶ್ಶೇಷಹಾನಿ, ಇವಳು ತರುಣಿಯು, ತಂಗಿಯು, ಅಂತರ್ವತ್ನಿಯೂ ಆಗಿರುವಳು. ಇವಳನ್ನು ಕೊಲ್ಲಲಾರೆ. ಇಂತಹ ಮಹಾನಿಂದನೀಯ ಕರ್ಮವನ್ನು ಮಾಡಿ ಬದುಕಿದವನು ಸತ್ತಂತೆಯೇ ಸರಿ. ಸುಟ್ಟ ದೇಹಾಭಿಮಾನದಿಂದ ಧರ್ಮದೂರನಾದರೆ, ದೇಹವೂ ಹೋಗುವುದು– ಅವರ ಹಿಂದೆ ಅರ್ಥಕಾಮಗಳೂ ನಶಿಸುವುವು– ಮತ್ತು ಯಶಸ್ಸು, ಪರಲೋಕಗಳು ಕೂಡ ಹಾಳಾಗು ವುವು. ಆಗಲಿ– ಆ ಗಂಡು ಹುಟ್ಟಲಿ! ಅದನ್ನು ಹಿಚುಕಿ ಕೊಲ್ಲದೆ ಬಿಡುವೆನೇ? ಈ ನಿನ್ನ ಬಲ ತೋಳಿನ ಹಿಡಿತದಿಂದ ಅದು ನುಸುಳುವುದಾದರೂ ಎಂತು?' ಎಂದು ದುರಹಂಕಾರಿಯಾದ ಕಂಸನು ಶಿಶುಜನನ ದಿನಗಳನ್ನೆಣಿಸುತ್ತಾ, ನಿರೀಕ್ಷಿಸುತ್ತಿದ್ದನು. ಶ್ರೀಹರಿಯಲ್ಲಿ ವೈರವನ್ನು ಮಾಡಿ ಕಾಲನೇಮಿಯಾದ ಕಂಸನು ಸದಾ ಕೃಷ್ಣಚಿಂತೆಯಲ್ಲೇ ಕಾಲವನ್ನುಐ ಕಳೆದನು. ಅವನಲ್ಲಿ ಸೆರೆಸಿಕ್ಕಂತೆ ಇದ್ದ ಭೃಗುವು, ಅವನ ಭಯದಿಂದ ಸಂತತಸ್ಮರಣವಾಗುತ್ತಿರಲು, ತಾನೂ ಭಕ್ತಿ ಯಿಂದ ಶ್ರೀಹರಿಸ್ಮರಣರತನಾಗಿದ್ದನು. ಕೂತರೆ, ನಿಂತರೆ, ಊಟ ಮಾಡುವಾಗ, ಪಾನೀಯಗಳ ಸ್ವೀಕರಿಸುವಾಗ, ತಿರುಗುತ್ತಾ ಸದಾ ಹೃಷಿಕೇಶನನ್ನು ಚಿಂತಿಸಿ, ಜಗವೆಲ್ಲ ಕೃಷ್ಣನಿಂದ ತುಂಬಿದೆ ಎಂದು ತಿಳಿದನು.

ಶ್ರೀಕೃಷ್ಣನ ಅವತಾರ ಸಮಯವು ಸಮೀಪಿಸಲು ಬ್ರಹ್ಮರುದ್ರಾದಿ ದೇವತೆಗಳು ನಾರದಾದಿ ಮುನಿಗಳಿಂದಲು ಗಂಧರ್ವಾದಿ ಪರಿಚರರಿಂದಲು ಕೂಡಿ ಬಂದು, ಶ್ರೀಶನನ್ನು ಸ್ತುತಿಸಿ ನಿಂತರು.

ಬ್ರಹ್ಮರುದ್ರರು ಈ ರೀತಿಯಾಗಿ ನುತಿಸಿದರು–

ನಿನ್ನ ನಿರ್ದುಃಖ ನಿರತಿಶಯಾನಂದ ಜ್ಞಾನರೂಪನು, ಪಂಚಭೂತ ವಿಲಕ್ಷಣನು, ತ್ರಿವೇದ ಮುಖ್ಯಾರ್ಥನು, ಅಬಾಧಿತ ಸತ್ಯಜಗನ್ನಿಮಿತ್ತ ಕಾರಣನು, ಸರ್ವಚರಾಚರ ಜೀವನಿಯಾಮಕನು, ಉತ್ತಮಜನ ಜ್ಞಾನಾನಂದಪ್ರದನು, ಸತ್ಯಜಗತ್ಪ್ರಭುವು, ಪ್ರಪಂಚೋಪ ಸಂಹಾರಕನು ಆದ ನಿನಗೆ ಗೋವಿಂದಾ! ವಂದಿಸುವೆವು, ನೀನೇ ನಮಗೆ ಗತಿಪ್ರದನಲ್ಲವೇ?

ಈ ಜಗತ್ತೆಂಬ ವೃಕ್ಷವು ನಿನ್ನಿಂದ ನಿಂತಿದೆ. ಇದಕ್ಕೆ ಸತ್ವರಜಸ್ತಮೋಗುಣಗಳೇ ಬೇರುಗಳು; ಪ್ರಕೃತಿಯೇ ಭೂಮಿಯಂತೆ ಆಶ್ರಯವು. ಪ್ರವೃತ್ತಿ ನಿವೃತ್ತಿ ಕರ್ಮಫಲಗಳಾದ ಸ್ವರ್ಗ ಮೋಕ್ಷ ಗಳೇ ಇವರ ಎರಡು ಫಲಗಳು; ಧರ್ಮಾರ್ಥ ಕಾಮಮೋಕ್ಷಗಳೇ ಇದರ ರಸಾಸಾರವು; ಶಬ್ದಸ್ಪರ್ಶ ರೂಪರಸಂಗಂಧಗಳೇ ಐದು ಶಿಫಗಳು. ಅಶನಾ, ಪಿಪಾಸಾ, ಶೋಕ, ಮೋಹ, ಜರಾ, ಮೃತ್ಯುಗಳೇ ಆರು ಸ್ವಭಾವಗಳು. ತ್ವಕ್, ಚರ್ಮ, ಮಾಂಸ, ರುಧಿರ, ಮೇದೋ, ಮಜ್ಜಾ, ಅಸ್ಥಿಗಳೇ ಏಳು ತೊಗಟೆಗಳು; ದೇವ ಗಂಧರ್ವ, ದಾನವ, ರಾಕ್ಷಸ, ಪಿಶಾಚ, ಪಶು, ಮನುಷ್ಯ, ಸ್ಥಾವರ, ಯೋನಿಗಳೇ ಎಂಟು ಶಾಖೆಗಳು; ನವದ್ವಾರಗಳೇ ನವಶಾಖಾಮಧ್ಯಪ್ರದೇಶಗಳು; ದಶೇಂದ್ರಿಯ ಗಳೇ ಹತ್ತು ಎಲೆಗಳು. ಪ್ರವೃತ್ತಿಕರ್ಮನಿರತರಾದ ರಾಜಸ ತಾಮಸರು, ನಿವೃತ್ತಿಕರ್ಮನಿರತರಾದ ಸಾತ್ವಿಕರು ಈ ವೃಕ್ಷದ ಫಲರೂಪವಾದ ಸ್ವರ್ಗ ನರಕ ತಮಸ್ಸುಗಳನ್ನೋ ಅಥವಾ ಮೋಕ್ಷ ವನ್ನೋ ಉಣ್ಣುತ್ತಾ ನವೆಯುತ್ತಿರುವರು. ಆದರೆ ಕರ್ಮವೃಕ್ಷದ ಫಲವನ್ನು ಬಯಸದೆ ಇರುವ, ಜೀವ ಲಕ್ಷಣ ಹರಿ ಎಂಬ ಪಕ್ಷಿಯು, ಪ್ರಕಾಶಮಾನವಾಗಿ ಹೃಷ್ಟಪುಷ್ಟವಾಗಿರುವುದು. ಆ ಜಗದ್ವೃಕ್ಷವೆಲ್ಲ ನಿನ್ನ ಅಧೀನವಾಗಿದೆ. ಶ್ರೀಹರೇ! ನಿನಗೆ ನಮಸ್ಕಾರವು. ಜಗತ್ಕಾರಣನು, ಜಗದಾಧಾರನು, ಜಗತ್ಪಾಲಕನು, ರಕ್ಷಕನು ಆಗಿ ನೀನಿರುವಾಗ, ಅಜ್ಞಾನಿಗಳು ನಿನ್ನ ಹೊರತು ಅನ್ಯರೂ ಜಗತ್ಪ್ರಭುಗಳೆಂದು ತಿಳಿದು ಕೆಡುತ್ತಿರುವರು. ಲೋಕಕ್ಷೇಮವನ್ನು ಮಾಡಲು ಅವತರಿ ಸುವ ನಿನ್ನ ರೂಪಗಳೆಲ್ಲವು ಪೂರ್ಣಜ್ಞಾನಾನಂದ ಬಲವೀರ್ಯ ತೇಜಶ್ಶಕ್ತಿ ಯುಕ್ತಗಳೇ ಆಗಿವೆ. ನಿನ್ನ ಸ್ಮರಣೆಯೇ ಸುಖಪ್ರದವು. ಸಜ್ಜನರಕ್ಷಣೆ, ದುರ್ಜನ ಶಿಕ್ಷಣೆಯೇ ನಿನ್ನ ಲೀಲಾ ವಿಲಾಸವು. ಅಂಬುಜಾಕ್ಷ! ಸಕಲಜೀವನಿಕಾಯನಿಲಯನಾದ ನಿನ್ನಲ್ಲಿ ನಿಶ್ಚಲವಾಗಿ ಮನವನ್ನಿರಿಸಿ, ನಿನ್ನ ಪಾದನೌಕೆಯನ್ನು ಆಧರಿಸಿ, ಸಂಸಾರ ಸಮುದ್ರವನ್ನು ಸುಜನರು ಸುಲಭವಾಗಿ ದಾಟಿ ಮುಕ್ತರಾಗು ವರು. ತೇಜೋರಾಶೇ! ಭಯಂಕರ ಭವಜಲಧಿ ಯನ್ನು ಸ್ವಯೋಗ್ಯ ಭಕ್ತಿಪೂರ್ಣ ರಾಗಿ ನಿನ್ನನ್ನೊಲಿಸಿ, ನಿನ್ನ ಪಾದಾಂಬುಜನಾಮವನ್ನು ಅವಲಂಬಿಸಿ ದಾಟಿ, ಸುಜನರು, ಅದನ್ನು ಸಜ್ಜನರ ಪ್ರಯೋಜನವಾಗಲೆಂದು, ಇಲ್ಲೇ ಬಿಟ್ಟು ತಾವು ಮುಕ್ತರಾಗಿರುವರು. ಅವರ ಉಪದೇಶವೇ ಅಲ್ಲವೇ ನಿನ್ನ ಅನುಗ್ರಹ ಸಂಪಾದಕವು?

ಅರವಿಂದಾಕ್ಷ! ಕೆಲದುಷ್ಟರು ತಾವು ಮುಕ್ತರಾದೆವೆಂದು ಹೇಳುತ್ತಾ, ನಿನ್ನಲ್ಲಿ ಭಕ್ತಿಯಿಲ್ಲದೆ, ದಂಭದಿಂದ ನಿನ್ನ ಪಾದಾರವಿಂದವನ್ನು ಭಜಿಸದೆ, ಹರಿಲೋಕಪ್ರಾಪಕವಾದ ವಿಪ್ರಾದಿ ಜನ್ಮ ವನ್ನೂ, ಯತ್ಯಾಶ್ರಮವನ್ನು, ಹೊಂದಿಯು ಫಲವಿಲ್ಲದೆ ನರಕಾದ್ಯನರ್ಥಭಾಗಿಗಳಾಗುತ್ತಿರುವರು.

ಮಾಧವ! ನಿನ್ನ ಭಕ್ತರು ಅವರಂತೆ ದುರ್ಮದರಾಗದೆ, ನಿನ್ನ ಪಾದಾರವಿಂದದಲ್ಲಿ ದೃಢಭಕ್ತಿಯನ್ನು ಮಾಡಿ, ನೀನೇ ರಕ್ಷಕನೆಂದು ನಂಬಿ ವಿಘ್ನನಿವಹವನ್ನು ತಲೆ ತುಳಿದು ದಾಟಿ,

ಮುಕ್ತಿಸುಖವನ್ನು ಸೂರೆಗೊಂಡು ವಿಹರಿಸುತ್ತಿರುವರು. ನಿನ್ನ ಭಕ್ತರ ಜ್ಞಾನವು ಸ್ಥಿರವಾಗಲೋಸುಗ ಬ್ರಹ್ಮಾದಿಸುರ ಜೀವರಿಗೆ ಶ್ರೇಯಸ್ಸಾಧನವನ್ನು ಉಪದೇಶಿಸಿ, ಅವರಲ್ಲಿದ್ದು, ಇತರ ಜನರನ್ನು ಜ್ಞಾನದಾನದಿಂದ ಅನುಗ್ರಹಿಸುವೆ. ಅದರಿಂದ ಅವರು ವೇದಾಧ್ಯಯನ, ಯೋಗಾನುಷ್ಠಾನ, ಯಜ್ಞಕರಣ, ಸಪಸ್ಸಮಾಧಿಗಳಿಂದ ನಿನ್ನನ್ನು ಪೂಜಿಸಿ ಧನ್ಯರಾಗುತ್ತಿರುವರು. ಇಂತು ಬ್ರಹ್ಮಾದಿ ದೇಹಸ್ಥಹರೇ! ನಿನ್ನ ಉಪದೇಶವನ್ನಿತ್ತು ಜೀವರ ಅಜ್ಞಾನ ಅನ್ಯಥಾ ಜ್ಞಾನಿಗಳನ್ನು ನೀನೇ ಕಳೆಯುವೆ. ನಿನ್ನ ಉಪದೇಶ ಪರಂಪರವಿಲ್ಲದಿರೆ, ಯಾರಿಗೂ ಜ್ಞಾನವೇ ಆಗುತ್ತಿದ್ದಿಲ್ಲ.

ಲೋಕದಲ್ಲಿ ಇಂದ್ರಾದಿ ನಾಮಗಳು ಸಾಂಕೇತಿಕವಾಗಿರುವುವು. ಅವುಗಳ ಪ್ರವೃತ್ತಿ ನಿಮಿತ್ತಗಳು ಇಂದ್ರಾದಿ ನಾಮಧಾರಿಗಳಿಗಿಲ್ಲ. ನೀನು ಹಾಗಲ್ಲ. ಅಪ್ರಾಕೃತಜ್ಞಾನಾನಂದಾದಿರೂಪನಾದ ನಿನ್ನನ್ನು ಸರ್ವಶಬ್ದಗಳು ಮುಖ್ಯತಃ ನಿರೂಪಿರುತ್ತಿವೆ. ಲೋಕದಲ್ಲಿರುವ ನಾಮ ರೂಪಗುಣಗಳು, ಕ್ರಿಯೆಗಳು ಎಲ್ಲವೂ ನಿನ್ನಿಂದ ಕಡವಾಗಿ ಬಂದವು. ಅವುಗಳ ಮುಖ್ಯಸಾಕ್ಷಿಯು, ಫಲಪ್ರದನು, ಅನಂತ ಸುಖ ಜ್ಞಾನರೂಪನು, ಆದ ನಿನ್ನನ್ನು ದೇವಾದಿ ಸುಜನರು ಮನಸ್ಸಿನಿಂದ ಮನನ ಮಾಡಿ, ವಚಸ್ಸಿನಿಂದ ಪೊಗಳಿ ಯಥಾಯೋಗ್ಯವಾಗಿ ತಿಳಿಯುವರು. ಅನಾಯಾಸೇನ ಕರ್ತನಾದುದರಿಂತ ಅಕರ್ತನು, ಜನನಾದಿರಹಿತನಾದುದರಿಂದ ನಿತ್ಯನು, ಅಲೌಕಿಕನಾಮ ಮುಖ್ಯಾರ್ಥನಾದುದರಿಂದ ಅನಾಮನು, ಗುಣರೂಪ ಬಾಹುಲ್ಯದಿಂದ ಅನಂತನು ಎಂದು ಖ್ಯಾತನಾದ ನಿನ್ನ ಪ್ರಸಾದದಿಂದಲೇ ಸಮೀಚೀನ ಜ್ಞಾನವು ಸಿದ್ಧಿಸುವುದು. ಆ ಜ್ಞಾನಸಿದ್ಧಿಗೆ ಮಾಡುವ ಪ್ರಯತ್ನವು ಕೂಡ ನಿನ್ನ ಪ್ರೇರಣೆಯಿಂದಲೇ.

ನಿನ್ನ ಮಂಗಳಕರವಾದ ರೂಪಗಳನ್ನು, ನಿನ್ನ ಪಾಪಹರವಾದ ನಾಮಗಳನ್ನು, ಕೇಳಿ, ಹೇಳಿ, ಸ್ಮರಿಸಿ, ಧ್ಯಾನಿಸಿ, ತಾವು ಮಾಡುವ ಸರ್ವಕರ್ಮಗಳ ಪ್ರೇರಕನಾದ ನಿನ್ನಲ್ಲಿ ಚಿತ್ತವನ್ನಿಟ್ಟ ನಿನ್ನ ಪಾದಾರವಿಂದ ಭಜಕರು, ಮತ್ತೆ ಯೋನಿಪ್ರವೇಶವಿಲ್ಲದೆ ಮುಕ್ತರಾಗುವರು.

ನಿನ್ನ ಈ ಅವತಾರದಿಂದ ಭೂಭಾರವೂ ಇಳಿದು, ಭೂದೇವಿಯು ಸುಖಿಸುವಳು. ನಿನ್ನ ದಯೆಯಿಂದ ನೀನವತರಿಸಿ, ನಡೆಯಾಡಿದಾಗ, ಮೂಡಿದ ನಿನ್ನ ಪವಿತ್ರವಾದ ಶುಭ ಲಕ್ಷಣ ಲಕ್ಷಿತಳಾಗಿ ಭೂಮಿಯೇ ಅಲ್ಲದೆ, ದ್ಯುಲೋಕವೂ ನಿನ್ನಿಂದ ಉದ್ಧೃತವಾಗುವುದು.

ಸಂಸಾರ ದೋಷರಹಿತನಾದ ನಿನಗೆ ಜನ್ಮವೆಲ್ಲಿಯದು? ಆದರೂ ದೇವಕೀ ಪುತ್ರನೆನಿಸಿರುವುದು ನಿನ್ನ ವಿನೋದವೇ ಸರಿ. ಮುಕ್ತರಿಗೂ ಒಡೆಯನಾದ, ನೀನು ಹುಟ್ಟಿದೆ– ಬೆಳೆದೆ– ಮೃತನಾದೆ ಎಂದು ಅಜ್ಞಾನಿ ನರರು ತಿಳಿಯುತ್ತಿರುವ; ಅದರಿಂದ ಅವರು ಸದಾ ಸಂಸಾರಿಗಳಾಗಿ ನರಳುತ್ತಿರುವುದೂ ನಿಜ.

ಕೃಷ್ಣ! ಮತ್ಸ್ಯನಾದೆ. ಸ್ವಚ್ಛಕಚ್ಛಪನಾದೆ, ನರಸಿಂಹನಾದೆ, ವರಾಹನೆನಿಸಿದೆ, ರಾಜರಲ್ಲಿಯು, ವಿಪ್ರರಲ್ಲಿಯು, ದೇವತೆಗಳಲ್ಲಿಯು, ರಾಮ, ಭಾರ್ಗವ ಮಹಿದಾಸನಾದೆ. ಇಂದು ಕೃಷ್ಣನಾಗಿ ಗೋವಿಂದ! ತ್ರಿಭುವನವಲ್ಲಭ! ನಮ್ಮನ್ನೂ, ಭೂಲೋಕದ ಸುಜನರನ್ನೂ ಕಾಪಾಡು! ಭೂಭಾರವನ್ನಿಳಿಸಿ, ದಾನವರನ್ನು ಅಳಿಸು. ಯದುನಾಥ! ನಿನಗೆ ನಮಸ್ಕಾರವು.

ಅಮ್ಮ ದೇವಕಿ! ನಿನ್ನಲ್ಲಿರುವ ಪರಮಪುರುಷನು ಸರ್ವಸುಜನರನ್ನು ಸಲಹಲು ಅವತರಿಸುವ ಸಮಯವಾಗಿದೆ. ನೀನು ಧನ್ಯಳಾದೆ. ಭೋಜರಾಜ ಕಂಸನಿಗೆ ಭಯಪಡುವ ಕಾರಣವಿಲ್ಲ. ನಿನ್ನ ಮಗನೇ ಕಂಸಾದಿದುಷ್ಟರನ್ನು ಶಿಕ್ಷಿಸಿ ಯಾದವಾದಿ ಸುಜನರನ್ನು ಪೊರೆಯುವನು.

ಇಂತು ಪುರುಷೋತ್ತಮನನ್ನು ನುತಿಸಿ, ವಂದಿಸಿ, ಜಗದ್ವಿಲಕ್ಷಣನಾದ ಅಧೋಕ್ಷಜನನ್ನು ಬೀಳ್ಕೊಟ್ಟು, ಬ್ರಹ್ಮರುದ್ರಾದಿ ದೇವತೆಗಳು ತಮ್ಮ ಲೋಕಗಳಿಗೆ ಪೋದರು.

## ೪. ಶ್ರೀಕೃಷ್ಣಾವತಾರ

ಶ್ರೀಶುಕನು ಹೇಳಿದನು.

ಆಗ ಶ್ರೀಹರಿಯು ಅವತರಿಸಲು ಸಂಕಲ್ಪಿಸಿದ ಶುಭ ಸಮಯವಾಯಿತು. ಶ್ರಾವಣ ಕೃಷ್ಣ ಅಷ್ಟಮಿಯ ದಿನ ರಾತ್ರಿಯ ಮಹಾಪವಿತ್ರವಲ್ಲವೇ? ಜನನ ರಹಿತನಾದ ಶ್ರೀಶನ ಜನನವು ಅಂದು ಆದದು, ಜನನಮರಣ ಪ್ರವಾಹದಲ್ಲಿ ಬಿದ್ದು ನರಳುವ ನರರನ್ನು ಉದ್ಧರಿಸಿ ಜನನರಹಿತ ವನ್ನು ಮಾಡಲಿಲ್ಲವೇ? ನಕ್ಷತ್ರಗಳು, ಗ್ರಹಗಳು, ಶಾಂತವಾಗಿ ಬೆಳಗುತ್ತಿದ್ದವು. ದಿಕ್ಕುಗಳು ಪ್ರಸನ್ನವಾಗಿದ್ದವು. ಆಕಾಶವು ನಿರ್ಮಲವಾಗಿ ಕಂಗೊಳಿಸಿತು. ಮಹೀಮಂಡಲವೇ ಮಂಗಲ ಮಾಯವಾಯಿತು. ಪುರಗ್ರಾಮಗಳು ವ್ರಜವನಗಳು ಶೋಭಾಸಂಪನ್ನವಾದುವು. ನದಿಗಳು ತಿಳಿ ನೀರಿನಿಂದ ಹರಿಯತೊಡಗಿದವು. ಸರೋವರಗಳಲ್ಲಿ ಕಮಲಗಳು ಚೆನ್ನಾಗಿ ವಿಕಸಿಸಿ, ಕಮಲಾಕ್ಷ ನಿಗೆ ಸ್ವಾಗತವನ್ನಿತ್ತವು. ವನಗಳಲ್ಲಿ ಅರಳಿದ ಮಲ್ಲಿಕಾದಿ ಸುಮಸುಗಂಧವನ್ನು ಹೊತ್ತು ಮಂದಮಾರುತನು ಮೆಲ್ಲನೆ ಸಂಚರಿಸಿದನು. ವಿಪ್ರರ ಮನೆಯಲ್ಲಿ ಅಗ್ನಿಹೋತ್ರಗಳು ಶಾಂತವಾಗಿ ಉರಿದವು. ವಿಪ್ರರ ಮನಸ್ಸಿನಲ್ಲಿ ವಿಲಕ್ಷಣಾನಂದವು ತಾಂಡವವಾಡಿತು–

ಜನ್ಮವೇ ಕಾಣದ ಜಗದ್ವಲ್ಲಭನ ಜನನವಾಗುತ್ತಿರಲು, ದೇವತೆಗಳು ಆಕಾಶದಿ ನಿಂತು ದುಂದುಭಿಗಳನ್ನು ಬಾರಿಸಿದರು. ಕಿನ್ನರ ಗಂಧರ್ವರು ಪಾಡುತ್ತಿರಲು, ಅಪ್ಸರೆಯರಾಡಿದರು. ಮುನಿಗಳು ಸುರರು ಪೂಮಳೆಗೆರೆದು ಸಂತೋಷದಿಂದ ಜಯಜಯ ಧ್ವಾನಗಳನ್ನು ಮಾಡಿದರು. ಸಮುದ್ರ ಸಮೀಪದಲ್ಲಿ ಬಾಗಿ ಮೇಘಗಳು ಮಂದಮಧುರವಾಗಿ ಗರ್ಜಿಸಿ, ಮೇಘಶ್ಯಾಮನು ಸಮುದ್ರಶಯನನು ಆದ ಕೃಷ್ಣನನ್ನು ಸ್ವಾಗತಿಸಿದವು.

ಕಾರ್ಗತ್ತಲು ಕವಿದಿರಲು, ಅಷ್ಟಮಿಯ ಅರ್ಧರಾತ್ರಿಯಲ್ಲಿ ಚಂದ್ರನು ಮುಗಿಲ ತೆರೆಯಿಂದ ಬಾಗಿ, ಇಣಿಕಿ ನೋಡುತ್ತಿರಲು, ದೇವನ ಅವತಾರಭೂಮಿಯಾದ ದೇವಕಿಯಿಂದ ಶ್ರೀಹರಿಯು, ಪೂರ್ವದಿಕ್ಕಿನಿಂದ ಮೇಲೇರಿಬಂದ ಚಂದ್ರನಂತೆ, ಚಂದ್ರಮನೊಂದಿಗೆ, ಚಂದ್ರಕುಲಲಲಾಮನಾಗಿ ಪ್ರಾದುರ್ಭವಿಸಿದನು. ಅವನನ್ನು ನೋಡಿ ತನ್ನ ಕುಲವಿವನ ಜನುಮದಿಂದ- ರಾಮ ಜನ್ಮದಿಂದ ಸೂರ್ಯಕುಲದಂತೆ – ಪಾವನವಾಯಿತೆಂದು ಹಿಗ್ಗಿ, ಅಷ್ಟರಲ್ಲೇ ಶ್ರೀಕೃಷ್ಣ ಮುಖಚಂದ್ರನ ಕಲೆಯನ್ನು ನೋಡಿ ಕುಗ್ಗಿ, ಸಮಸುಖ ದುಃಖಿಸಾದನೆಂಬಂತೆ ಅಷ್ಟಮಿಚಂದ್ರನು ಅರ್ಧವಾದನು.

ಸಕಲಭೂತಪಾಲಕನು, ಬ್ರಹ್ಮಜನಕನು, ಸೂರ್ಯಚಂದ್ರನಯನನು ಆದ ಶ್ರೀಹರಿಯೇ ತನಗೆ ಮಗನಾಗಿ ಜನಿಸಿರುವುದನ್ನು ಕಂಡು, ವಸುದೇವನು ಎವೆಯಿಕ್ಕದೇ ನೋಡುತ್ತಾ ನಿಂತನು.

ಆಶ್ಚರ್ಯಮಯನು, ಲೋಕವಿಲಕ್ಷಣನು, ಅಂಬುಜೇಕ್ಷಣನು, ಚತುರ್ಭುಜನು, ಶಂಖ ಚಕ್ರಗದಾಪದ್ಮಧರನು, ಪೀತಾಂಬರನು, ಶ್ರೀವತ್ಸವಕ್ಷನು, ಭಕ್ತಜನರಕ್ಷಕನು, ನೀಲಮೇಘ ಸುಂದರನು; ಕೌಸ್ತುಭಾಮುಕ್ತಕಂಧರನು, ವರವಜ್ರವೈಡೂರ್ಯಖಚಿತ ಕಿರೀಟ ಕುಂಡಲಮಂಡಿತ ಮುಖಮಂಡನನು, ಉದ್ದಾಮಕಾಂಚೀಕಲಾಪಾಂಗದ ಕಂಕಣಾದಿ ಮಂಡಲನು, ಕುಂತಲಪರಿವೃತ ಮುಖಾರವಿಂದನು, ಅಮಂದ ಸುಖಪ್ರದ ಮಂದಹಾಸನು, ಮನ್ಮಥಕೋಟಿ ವಿಲಾಸನು,

ಸುಗುಣಾಲವಾಲನು, ಕೃಪಾವಿಶಾಲನು ಆದ ಬಾಲನನ್ನು ಕಣ್ಣರಳಿಸಿ ನೋಡಿ, ನೋಡಿ ತಣಿಯದೆ, ವಸುದೇವನು ಆನಂದ ಜಲಸಮುದ್ರದಿ ಮಿಂದು ಹತ್ತುಸಾವಿರ ಗೋದಾನವನ್ನು ಸಂಕಲ್ಪಿಸಿ, ಶ್ರೀಕೃಷ್ಣ ಜನನೋತ್ಸವವನ್ನು ಆಚರಿಸಿದನು. ಶಿರಬಾಗಿ ನಮಿಸಿ, ನಿಂತು, ಕೈಜೋಡಿಸಿ, ಸೆರೆಯಲ್ಲಿದ್ದ ಸೂತಿಕಾಗೃಹದ ಕತ್ತಲನ್ನು ದೂರೀಕರಿಸಿ ಬೆಳಗುತ್ತಿರುವ ಹರಿಯ ಪ್ರಭಾವವನ್ನರಿತು, ಭಯವಿಲ್ಲದೆ, ಇಂತು ಸ್ತುತಿಸಿದನು–

ಪುರುಷೋತ್ತಮ! ಪ್ರಕೃತಿನಿಯಾಮಕಳಾದ ಲಕ್ಷ್ಮಿಗೂ ಅಧಿಕನಾದ ನಿನ್ನ ಈ ರೂಪವು ಅಪ್ರಾಕೃತ ಸ್ವರೂಪಾನಂದ ತುಂದಿಲವು. ಸರ್ವಜೀವರ ಬುದ್ಧಿಶಕ್ತಿಪ್ರೇರಕನಾದ ನಿನ್ನಿಂದ ನಮಗೆ ಜ್ಞಾನ. ನೀನು ನಿನ್ನವಳಾದ ರಮೆಯಿಂದ ಕೂಡಿ ಪ್ರಕೃತಿಯ ಮೂರು ಗುಣಗಳನ್ನು ಬೆರಸಿ, ಕ್ರೀಡಿಸಿ, ಬ್ರಹ್ಮಾಂಡವನ್ನು ಪುಟ್ಟಿಸಿದೆ; ಅದರಲ್ಲಿ ನೀನು ಪ್ರವೇಶಿಸಿ ಸರ್ವಜೀವರಿಗೆ ಪ್ರಕೃತಿಬಂಧವನ್ನಿತ್ತು, ನೀನು ಬಂಧರಹಿತನು, ನಿತ್ಯಮುಕ್ತನು, ಸ್ವತಂತ್ರನು ಆಗಿರುವೆ. ವಿಕಾರವಿಲ್ಲದೆ ಸೂಕ್ಷ್ಮವಾಗಿರುವ ಮಹದಹಂಕಾರ ಪಂಚತನ್ಮಾತ್ರಗಳೆಂಬ ಏಳು ಪದಾರ್ಥಗಳೂ ಸ್ಥೂಲವಾದ ಪೃಥಿವ್ಯಾದಿಗಳಿಂದಲೂ, ಪ್ರಾಣಿಕಾಮಕರ್ಮಾದಿಗಳಿಂದಲೂ ಕಲೆತು ವಿಕಾರವನ್ನು ಹೊಂದಿ, ಬ್ರಹ್ಮಾಂಡವನ್ನು ಪುಟ್ಟಿಸಿ, ಒಳಗೆ ಹೊಕ್ಕು ಇದ್ದರೂ, ಹೊರಗೂ ಇರುವುವು. ಅವುಗಳನ್ನು ಮಿಶ್ರಮಾಡಿ, ಅವಕಾಶದಾನಾದಿ ಶಕ್ತಿಗಳನ್ನು ಆಕಾಶಾದಿಗಳಿಗಿತ್ತು. ಅವರು ಪುಟ್ಟಿಸಿದ ಬ್ರಹ್ಮಾಂಡದಲ್ಲಿ ಶಯನಿಸಿ, ಒಳಹೊರಗೂ ವ್ಯಾಪ್ತನಾಗಿ, ಮಹದಾದಿ ತತ್ತ್ವನಿಯಾಮಕರಾದ ಬ್ರಹ್ಮಾದಿ ದೇವತೆಗಳನ್ನು ಪಾಲಿಸುವ ಮಹಾ ಪ್ರಭುವೇ! ನಿನಗೆ ನಮ್ಮ. ಮಹದಾದಿ ತತ್ತ್ವಗಳು ಅವಿಕೃತಗಳೇ ಆದರೂ ಬ್ರಹ್ಮಾಂಡದಲ್ಲಿ ಪ್ರವೇಶಿಸಿ, ಕಿಂಚಿದ್ವಿಕಾರವನ್ನು ಪೊಂದುವುವು. ತತ್ವಗಳು ಅಚೇತನಗಳು, ತತ್ವಾಭಿಮಾನಿಗಳು ವಿವಿಧ ಭಿನ್ನಶಕ್ತಿವಂತರು– ಅಸ್ವತಂತ್ರರು– ಆದ್ದರಿಂದ ಅವರು ಸ್ವತಂತ್ರವಾಗಿ ಮಿಲಿತರೂ ಆಗಲಾರರು ಮತ್ತು ಬ್ರಹ್ಮಾಂಡವನ್ನು ಸೃಜಿಸಲಾರರು. ಸ್ವಾತಂತ್ರ್ಯಾದಿ ಗುಣಗಳು ನಿನ್ನಲ್ಲಿವೆ. ಆದ್ದರಿಂದ ನೀನೇ ನಿಜವಾದ ಕ್ಷೇತ್ರಜ್ಞನು. ನಿನ್ನ ಜ್ಞಾನವು ಅವ್ಯಾಹತವಾಗಿದೆ. ಜೀವಾಂತರ್ಯಾಮಿಯು ಪೂರ್ಣನು ಆದ ನೀನು ಸರ್ವಸ್ವಾಮಿಯಾಗಿರುವೆ. ಕೊನೆಗೆ ಸರ್ವವನ್ನು ಸಂಹರಿಸಿ ಹೊಟ್ಟೆಯಲ್ಲಿಡುವ ನಿನಗೆ ಸಮರಿಲ್ಲ.

ಶರೀರಾದಿಗಳಲ್ಲಿ ಸೇರಿರುವ ನಿನ್ನನ್ನು ಜೀವಸಮನೆಂದು ಅಜ್ಞಾನಿಗಳು ತಿಳಿಯುವರು. ಅವರ ತಿಳುವಳಿಕೆ ವೇದವಿರುದ್ಧವಾಗಿದೆ. ಅಪೌರುಷೇಯವು, ನಿರ್ದೋಷವು ಆದ ವೇದವಚನವು ನಿನ್ನನ್ನು ಜೀವಲಕ್ಷಣನೆಂದು ಸಾರುತ್ತಿರಲು, ಅನ್ಯಥಾ ಜ್ಞಾನಿಗಳ ಮಾತನ್ನು ನಂಬಿ ನಡೆಯಬಹುದೇ? ಆ ಬ್ರಹ್ಮದ್ರೋಹಿಗಳನ್ನು ಕಣದಲ್ಲಿ ಕಾಳಿನನ್ನಂತೆ ತುಳಿದು ನಾಶಪಡಿಸುವ ನೃಸಿಂಹರೂಪಿಯಾದ ನಿನ್ನ ಯಥಾರ್ಥಜ್ಞಾನವನ್ನು ನಮಗೆ ದಯಪಾಲಿಸು!

ಈ ಜಗತ್ತಿನ ಜನನಪಾಲನ ಸಂಹರಣಗಳನ್ನು, ಪ್ರಕೃತಿಯಿಂದ ಮಾಡುವಾಗ ನಿನಗೆ, ಘಟವನ್ನು ಮಾಡುವ ಕುಲಾಲನಿಗಿಂತ ಆಯಾಸವಿಲ್ಲ. ಪ್ರಕೃತಿಯ ಲೇಪವೂ ಇಲ್ಲ. ನೀನು ಪೂರ್ಣಾನಂದನು, ಸರ್ವಸಮರ್ಥನು ಆದ ಕಾರಣ ಜಡವಾದ ಪ್ರಕೃತಿ ಗುಣಗಳನ್ನು ವಿಕಾರಗೊಳಿಸಲು ಪ್ರವೇಶಿಸಿದರೂ, ಗುಣಲೇಪವಿಲ್ಲದೆ ವಿರಾಜಿಸುವೆ. ಪ್ರಕೃತಿಗುಣವಿಕಾರವಿಲ್ಲದಿರುವುದರಿಂದ ನಿನ್ನನ್ನು ನಿರ್ಗುಣನೆನ್ನುವರು. ಐಶ್ವರ್ಯ ವೀರ್ಯಾದಿ ಸಕಲಕಲ್ಯಾಣ ಗುಣಪೂರ್ಣನಾದುದರಿಂದ ಸಗುಣನೆನ್ನುವರು. ನಿನ್ನ ಇಚ್ಛೆಯಿಂದ ಹಯಗ್ರೀವಾದಿ ರೂಪನಾಗಿ, ಸಜ್ಜನರಿಗೆ ಜ್ಞಾನದಾನವನ್ನು ಮಾಡಿ ರಕ್ಷಿಸುವೆ. ಪರಶುರಾಮಾದಿ, ರೂಪದಿಂದ ರಾಗದಾನವನ್ನು ಮಾಡಿ

ಸೃಜಿಸುವೆ, ಹಾಗೂ ಜ್ಞಾನರಕ್ಷಕನಾಗಿರುವೆ. ಕೃಷ್ಣಾದಿ ರೂಪದಿಂದ ತಮೋದೋಷನಾಶಕನಾಗಿ ಜ್ಞಾನವನ್ನು ಸ್ಥಾಪಿಸುವೆ. ಶುದ್ಧಸತ್ತ್ವವೆನಿಸುವ ಪೂರ್ಣಜ್ಞಾನಾನಂದ ರೂಪಗಳಿಂದ ಸರ್ವಾವತಾರಗಳಲ್ಲಿಯು ಪ್ರಕಟನಾಗಿ, ನಿರ್ಗುಣನೇ ಆಗಿರುವ ಶ್ರೀರಮಣನೇ! ನಿನಗೆ ನಮಸ್ಕಾರವು! ಅಖಿಲಲೋಕನಾಥ! ರಾಜರೂಪದಿಂದ ಹುಟ್ಟಿ ಬಂದಿರುವ ಕೆಟ್ಟ ರಾಕ್ಷಸರನ್ನು ಸಂಹರಿಸಿ, ಸುಜನ ಸಮೂಹವನ್ನು ಸಂರಕ್ಷಿಸಲು ನನ್ನ ಮನೆಯಲ್ಲಿ ಅವತಾರವನ್ನು ಮಾಡಿರುವೆ. ಕೃಷ್ಣಾ! ದೋಷಭೂಯಿಷ್ಠನಾದ ದುಷ್ಟ ಕಂಸನು, ನೀನೆಂಬ ಭ್ರಮೆಯಿಂದ, ನಿನ್ನ ಅಗ್ರಜರನ್ನು ಆರು ಜನರನ್ನು ಕೊಂದಿರುವರು. ಈಗ ಕಾವಲುದಾರರು ಓಡಿಹೋಗಿ ತಿಳಿಸಲು, ಆ ಪಾಪಿಯು ಖಡ್ಗಪಾಣಿಯಾಗಿ ಬರುವನು. ನಮ್ಮನ್ನು ರಕ್ಷಿಸು.

ಆಗ ಮಹಾಪುರುಷ ಲಕ್ಷಣನು, ಲೋಕವಿಲಕ್ಷಣನು, ಸುಕುಮಾರನು ಆದ ಕುಮಾರನನ್ನು ಕಂಡು ದೇವಕಿಯು ಕಂಸನಿಂದ ಭೀತಳಾಗಿಯು, ನಸುನಗುತ್ತಾ ಇಂತೆಂದಳು–

ಸಮಾರಾಧಿಸಿದರೂ ಅವ್ಯಕ್ತೈಕಸ್ವಭಾವನಾದ ನಿನ್ನನ್ನು ನಿನ್ನ ಅನುಗ್ರಹವಿಲ್ಲದೆ ಕಾಣಲಾಗದು. ಶ್ರೀಹರೇ! ಜಗದಾದಿಯು, ಗುಣಪೂರ್ಣನು, ಜ್ಞಾನಪ್ರಕಾಶನು, ಪ್ರಕೃತಿಗುಣವಿಕಾರರಹಿತನು, ಸರ್ವಾಶುಭವಿನಿರ್ಮುಕ್ತನು, ಜ್ಞಾನಾನಂದಾದಿ ಅನಂತಗುಣರೂಪನು, ಸ್ವಗತಭೇದ ವಿವರ್ಜಿತನು, ಸಮಾನಾಧಿಕಾರಹಿತನು ಆದ ವಿಷ್ಣುವೇ ನೀನು! ನಿನ್ನಿಂದ ದೇಹೇಂದ್ರಿಯಾದಿಗಳಿಗೆ ಪ್ರಕಾಶವು ಬರುವುದು. ಪರಾರ್ಧಗಳೆರಡಾದ ಮೇಲೆ ಪ್ರಳಯದಲ್ಲಿ, ಲೋಕವೆಲ್ಲವೂ ನಷ್ಟವಾದಾಗ, ಮಹಾಭೂತಗಳು ಅಹಂತತ್ವವನ್ನೂ, ಅದು ಮಹತ್ತತ್ವವನ್ನೂ ಆ ಮಹತ್ತು ಪ್ರಧಾನ ತತ್ವವನ್ನು ಸೇರಿ, ನಿನ್ನಲ್ಲಿ ಅಡಗಿರಲು ನೀನು ಮಾತ್ರ ಲಯವಿಲ್ಲದೆ ಶಶ್ವದೇಕಪ್ರಕಾರನಾಗಿ ಉಳಿದಿರುವೆ.

ಮುಖ್ಯಪ್ರಾಣಬಂಧೋ! ಈ ಕಾಲವು ನಿನ್ನಿಂದ ಪ್ರೇರಿತವು. ಕಾಲನಾಮಕನಾಗಿ ನೀನು ಜಗವನ್ನು ನಡೆಸಿ, ಕರ್ಮಫಲವನ್ನು ಸಕಲ ಜೀವರಿಗೆ ಉಣಿಸುವೆ. ನಿಮಿಷಮೊದಲುಗೊಂಡು ವತ್ಸರಪರ್ಯಂತವಾದ ಕಾಲಾವಯವಗಳು ನಿನ್ನ ಕಣ್ಣರೆಪ್ಪೆಯ ಅಧೀನವಾಗಿದೆ. ಭಕ್ತಕ್ಷೇಮಂಕರನಾದ ಶ್ವೇತದ್ವೀಪದೊಡೆಯನೇ! ನೀನೇ ನಮಗೆ ಗತಿಯು. ಮನುಷ್ಯನು ಮೃತ್ಯುವೆಂಬ ಹೆಬ್ಬಾವಿನ ಬಾಯಲ್ಲಿ ಸಿಲುಕಿ, ಭಯದಿಂದ ದಿಕ್ಕೆಟ್ಟು, ಓಡುತ್ತಾ, ಎಲ್ಲ ಲೋಕಗಳಲ್ಲಿಯು, ಯಾವ ಯೋನಿಯಲ್ಲಿಯು, ಅಭಯವನ್ನು ಕಾಣದೆ, ನಿನ್ನ ದಯೆಯಿಂದ ನಿನ್ನ ಪಾದಾರವಿಂದವನ್ನು ಸೇರಿದನೆಂದರೆ, ಭಯರಹಿತನಾಗುವನು. ಅಂತಹ ಭಕ್ತನಿಂದ ಮರಣವೂ ದೂರಾಗಿ ಹೋಗುವುದು. ಉಗ್ರಸೇನ ಸುತರು ಹಿಂಸಾಶೀಲನು ಆದ ಕಂಸನ ಭಯದಿಂದ ನಡುಗುವ ನಮ್ಮನ್ನು ಕಾಪಾಡು! ಭಕ್ತರಕ್ಷಣದಕ್ಷ! ಪೂರ್ಣಷಡ್ಗುಣವಾದ ನಿನ್ನ ರೂಪವು ಧ್ಯಾನವಿಷಯವಾಗಿರಲಿ! ಸಾಕು. ಇದನ್ನು ಉಪಸಂಹರಿಸು. ನೀನು ಹುಟ್ಟಿದುದನ್ನು ಕೇಳಿ ಆ ಪಾಪಿ ಕಂಸನು ಓಡಿಬರುವನು. ಮಧುಸೂದನ! ನಾರಾಯಣನೇ ನನ್ನ ಮಗನಾಗಿ ಬಂದನೆಂಬ ಜ್ಞಾನವನ್ನವನಿಗೆ ಕೊಡಬೇಡ. ಶಂಖಚಕ್ರಗದಾಪದ್ಮಧರವಾದ ನಿನ್ನ ಚತುರ್ಭುಜ ರೂಪವನ್ನು ಮರೆಮಾಡು! ಪ್ರಳಯದಲ್ಲಿ ಸಕಲ ಜಗವನ್ನು ಪೊಟ್ಟೆಯಲ್ಲಿಟ್ಟು, ನಗುತ್ತಾ ಮಲಗಿದ್ದ ಪುರುಷೋತ್ತಮನು ನನ್ನ ಗರ್ಭಗತನಾಗಿದ್ದನೆಂದರೆ ಇದಕ್ಕಿಂತ ಆಶ್ಚರ್ಯವಾವುದು? ನಿನ್ನ ವಿಡಂಬನೆಯ ನರಲೋಕ ಮೋಹಕವಾಗಿದೆ. ನಿನಗೆ ನಮಃ.

ಆಗ ಭಗವಂತನು ದೇವಕೀವಸುದೇವರನ್ನು ನೋಡಿ ಇಂತು ನುಡಿದನು–

'ಅಂಬ! ನೀನು ಸ್ವಾಯಂಭುವ ಮನ್ವಂತರದಲ್ಲಿ ಹಿಂದೆ ಪೃಶ್ನಿ ಎನಿಸಿದ್ದೆ. ಇವನು ಆಗ ಸುತಪನೆಂಬ ಪ್ರಜಾಪತಿಯಾಗಿದ್ದನು. ಬ್ರಹ್ಮದೇವನ ಆಣತಿಯನ್ನು ಶಿರಸಾ ವಹಿಸಿ, ಪ್ರಜಾಸೃಷ್ಟಿಯನ್ನು ಮಾಡಲೆಣಿಸಿ, ನೀವೀರ್ವರು ಇಂದ್ರಿಯಗಳನ್ನು ಜಯಿಸಿ, ದುಷ್ಕರ ತಪವನ್ನು ಮಾಡಿದಿರಿ. ಗಾಳಿ ಮಳೆ ಚಳಿ ಬಿಸಿಲು ಎಂಬ ಕಾಲಧರ್ಮಗಳನ್ನು ಸಹಿಸಿ ಶ್ವಾಸವನ್ನು ನಿಲ್ಲಿಸಿ, ಮನಸ್ಸನ್ನು ರಾಗದ್ವೇಷಮಲರಹಿತವಾಗಿರಿಸಿ, ನನ್ನನ್ನು ಭಜಿಸಿದಿರಿ. ಒಣ ಎಲೆಗಳನ್ನು, ವಾಯುವನ್ನು ಆಹಾರವಾಗಿ ಸ್ವೀಕರಿಸಿ, ಮಗನನ್ನು ಬಯಸಿ, ನೀವು ಮಾಡಿದ ತಪಸ್ಸಿಗೆ ನಾನು ಮೆಚ್ಚಿ, ಪ್ರತ್ಯಕ್ಷನಾದೆನು. ಹನ್ನೆರಡುಸಾವಿರ ವರುಷದ ತಪದಿಂದ ಕೃಶರಾಗಿ, ಶ್ರದ್ಧಾಭಕ್ತಿಯಿಂದ ಧ್ಯಾನಿಸಿದ ನಿಮ್ಮ ಕಾಮಿತವನ್ನು ಕೊಡುವೆನೆಂದನು. ವೈಷಯಿಕ ವಿಷಯದೂರರು, ಸಂತಾನಕಾಮರು ಆದ ನೀವು, ನನ್ನಿಂದ ಮೋಕ್ಷವನ್ನೊಲ್ಲದೆ, 'ನಿನ್ನಂತಹ ಮಗನನ್ನು ಕೊಡು' ಎಂದು, ವರದರಾಜನು, ಸುಂದರನು ಆದ ನನ್ನನ್ನು ಬೇಡದಿರಿ. ನನ್ನ ಮಾಯೆಯು ಎಂತಹ ಧೀರರನ್ನು ಕೂಡ ಮೋಕ್ಷವನ್ನು ಬೇಡದಂತೆ ಮಾಡಿ, ಸಂಸಾರಸುಖಗಳನ್ನು ಬೇಡಿಸುವುದು. ಆಗ ಪ್ರಾಪ್ತಮನೋರಥರಾಗಿ, ಸಂಸಾರ ಸುಖರತವಾದ ನಿಮ್ಮಲ್ಲಿ ನಾನೇ ಮಗನಾಗಿ ಜನಿಸಿದೆನು. ನನಗೆ ಶೀಲರೂಪ ಗುಣಗಳಿಂದ ಸಮರಾದವರು ಮತ್ತಾರೂ ಇಲ್ಲವೆಂದು ನಾನೇ ನಿಮಗೆ ಪೃಶ್ನಿಗರ್ಭನೆಂಬ ಮಗನಾಗಿ ಸಂತೈಸಿದನು. ಮುಂದೆ ಕಶ್ಯಪ ಅದಿತಿಯಾಗಿ ಪುಟ್ಟಿದ ನಿಮಗೆ ಸುಂದರ ವಾಮನನಾಗಿ ಜನಿಸಿ, ಉಪೇಂದ್ರನೆಂದು ಖ್ಯಾತನಾದೆನು. ಮೂರನೆಯ ಜನುಮದಲ್ಲಿ ಮತ್ತೆ ಅದೇ ಅಪ್ರಾಕೃತ ದಿವ್ಯಶರೀರದಿಂದ ನಿಮಗೆ ಪುತ್ರನಾಗಿ ಬಂದಿರುವೆನು. ನನ್ನ ವಾಕ್ಯವು ಸತ್ಯವು. ನನ್ನ ಹಿಂದಿನ ರೂಪಗಳ ಸ್ಮರಣೆಯನ್ನು ನಿಮಗೆ ಕೊಡಲೋಸುಗ ಈ ದಿವ್ಯರೂಪವನ್ನು ತೋರಿರುವೆನು. ನಾನು ದಯಮಾಡಿದರೆ, ನನ್ನ ದರ್ಶನವನ್ನು ಪೊಂದಲು ಮನುಜಾದಿಗಳಿಗೆ ಸಾಧ್ಯವೇ? ನೀವು ನನ್ನನ್ನು ಪುತ್ರನೆಂದು ತಿಳಿದು ಲಾಲಿಸಿರಿ! ಆದರೆ ಪೂರ್ಣಗುಣನಾದ ನಾರಾಯಣನೇ ಇವನೆಂದು ತಿಳಿದು ನಿತ್ಯವೂ ಚಿಂತಿಸಿ, ಭಕ್ತಿಭಾಗ್ಯವನ್ನು ಪೊಂದಿ ಮುಕ್ತರಾಗಿರಿ! ವಸುದೇವ! ನನ್ನನ್ನು ಗೋಕುಲಗಲ್ಲಿಡು. ಅಲ್ಲಿರುವ ಯಶೋದೆಯ ಹೆಣ್ಣು ಶಿಶುವನ್ನು ತಂದು ಇಲ್ಲಿಡು. ನಿನಗೆ ಅಭಯವಾಗಲಿ' ಎಂದು ನುಡಿದ ಶ್ರೀಶನು, ತಾಯಿ ತಂದೆಯರು ನೋಡುತ್ತಿರಲು, ಮನುಜ ಶಿಶುವಂತೆ ಶಿಶುವಾಗಿ ವಿರಾಜಿಸಿದನು.

ವಸುದೇವನು ಆ ಕೂಸನ್ನು ತಲೆಯಮೇಲಿಟ್ಟು ಸೆರೆಯಿಂದ ಹೊರಬರುಲು ಹೊರಟಾಗ ಗೋಕುಲದಲ್ಲಿ ಶ್ರೀರಮಣಿಯು ಯೋಗಮಾಯೆ ಎನಿಸಿ ಯಶೋದೆಗೆ ಜನಿಸಿದಳು. ಆ ದುರ್ಗೆಯ ಮಾಯೆಯಿಂದ ದ್ವಾರಪಾಲಕರು ಗಾಢನಿದ್ರಾಮುದ್ರಿತರಾದರು. ದುರ್ಗಾರಮಣನ ಮಾಯೆಯಿಂದ ಮುದ್ರಿತ ಕವಾಟಗಳು ಛಿದ್ರಬಂಧಗಳಾಗಿ ತೆಗೆದುಕೊಂಡವು. ಸಂಕೋಲೆಗಳು ಭವಮೋಚಕನ ವೀಕ್ಷಣದಿಂದ ಉದುರಿಬಿದ್ದವು. ವಸುದೇವ ನಾಗ ಕೃಷ್ಣನನ್ನು ಪೊತ್ತು ಹೊರಟುಬರುತ್ತಿರಲು ಸೂರ್ಯನು ಹುಟ್ಟಲು ಮಾಯವಾಗುವ ತೆರದಿ, ಕತ್ತಲು ದೂರ ಸರಿಯಿತು. ಪರ್ಜನ್ಯನು ಮೆಲ್ಲನೆ ಗರ್ಜಿಸಿ ಪೂಮಳೆಯನ್ನು ಕರೆದನು. ಶೇಷನು ಮಳೆಹನಿ ಬೀಳದಂತೆ ಹೆಡೆಗಳಿಂದ ಮುಚ್ಚಿ, ಅಚ್ಯುತನ ಹಿಂದೆ ನಡೆದನು.

ಗೋಕುಲದ ಹಾದಿಯಲ್ಲಿ ತುಂಬಿ ಹರಿಯುವ ಹರಿಸುತೆ ಯಮುನೆ ಹರಿಪತಿಯನ್ನು ನೋಡಿ ಹೆದರಿ, ಹಿಂದೆ ಸಮುದ್ರನು ರಾಮನಿಗೆ ಕೊಟ್ಟಂತೆ ಹಾದಿಯನ್ನಿತ್ತು ಸೇವಿಸಿದಳು. ಜನನಮರಣ ರೂಪ ಸುಳಿಗಳು ನುಸುಳಿದವು. ರಾಗದ್ವೇಷ ತರಂಗಗಳು ಭಂಗವನ್ನೈದಿದವು. ಯಾವುದೋ

ಬಂಧು ಸಂತಾವು ದೂರ ಸರಿಯಿತು. ಭಯಫೇನಿಲವು ಅನಿಲಹತವಾಯಿತು. ದುಃಖವಿಷವು ಇಂಗಿಹೋಯಿತು. ಶ್ರೀಕೃಷ್ಣ ಚರಣಾಶ್ರಿತರಿಗೆ ಸರ್ವಾನಿಷ್ಟನಿವೃತ್ತಿಯಾಗುವುದೇನಾಶ್ಚರ್ಯವು?

ವಸುದೇವನು ಗೋಕುಲವನ್ನು ಸೇರಿ, ಯಮುನಾತಟಶಿಬಿರದಲ್ಲಿ ಮಲಗಿದ್ದ ಗೋಪರನ್ನು ಒಳಗೆ ಪುತ್ರಿಕಾಪ್ರಸವ ವೇದನೆಯಿಂದ ಮೈಮರೆತಿದ್ದ ಯಶೋದೆಯನ್ನು ಕಂಡನು. ಪುತ್ರನನ್ನು ಯಶೋದೆಯ ಶಯನದಲ್ಲಿಟ್ಟು, ಪುತ್ರಿಯನ್ನು ತಲೆಯ ಮೇಲಿಟ್ಟನು. ಪುನಃ ಮಥುರೆಗೆ ಬಂದು, ಶಿಶುವನ್ನು ದೇವಕೀಶಯನದಲ್ಲಿ ಮಲಗಿಸಿದನು. ತತ್‌ಕ್ಷಣವೇ ದ್ವಾರಗಳ ಬೀಗಮುದ್ರೆಗಳು ಹಿಂದಿನಂತೆ ಬಿಗಿದುಕೊಂಡವು. ಕೃಷ್ಣನನ್ನು ಬಿಟ್ಟು ರಮೆಯನ್ನು ತಂದ ವಸುದೇವನ ಪದಗಳಲ್ಲಿ ಸಂಕೋಲೆಯ ಬಂಧನವು ನಿಂತಿತು.

## ೫. ದುರ್ಗಾವಚನ — ಕಂಸನ ಮಂತ್ರಾಲೋಚನೆ

ಶ್ರೀಶುಕನು ಹೇಳಿದನು–

ಸೆರೆಮನೆಯ ದ್ವಾರಗಳು ಹಿಂದಿನಂತೆ ಭದ್ರವಾಗಿ ಮುದ್ರಿತವಾದವು. ಹೆಣ್ಣುಕೂಸಿನ ರೋದನಧ್ವನಿಯನ್ನು ಕೇಳಿ, ಎಚ್ಚತ್ತು ದ್ವಾರಪಾಲಕರು ಸಂಭ್ರಮಕಾತರರಾದರು. ಕೆಲವರು ಓಡಿಹೋಗಿ ಕಂಸನಿಗೆ ಪ್ರಸವ ಸಮಾಚಾರವನ್ನು ತಿಳಿಸಿದರು. ಮೃತ್ಯುವೇ ಬಂದು ನಿಂತಂತಾಗಲು ಕಂಸನು ಜಾರುತ್ತಾ, ಎಡವುತ್ತಾ, ಕೂದಲು ಹಾರಾಡುತ್ತಿರಲು, ಓಡಿಬಂದು ಕೂಸಿನನ್ನು ಹಿಡಿದು ಸೆಳೆದು, ಕೊಲ್ಲಲು ಪ್ರಯತ್ನಿಸಿದನು. ಅದನ್ನು ಕಂಡು ಖತಿಗೊಂಡು ದೇವಕಿಯು ಅಳುತ್ತಾ, ಅಣ್ಣನನ್ನು ನೋಡಿ ಇಂತೆಂದಳು.

ಅಣ್ಣಾ! ಅಳಿಯನಲ್ಲ– ಸೊಸೆಯೋ! ಸ್ತ್ರೀಶಿಶುಹತ್ಯೆ ಮಾಡಬೇಡ. ಅಗ್ನಿಸಮತೇಜರಾದ ಆರು ಸುತರನ್ನು ಕಳೆದುಕೊಂಡಿರುವೆನು. ಹೋಗಲಿ! ದೈವೇಚ್ಛೆಯೇ ಅಂತಿರುವಾಗ ನಿನ್ನ ತಪ್ಪೇನಿದೆ? ಈ ಮಗಳನ್ನಾದರೂ ಕೊಡು. ನಿನ್ನ ತಂಗಿಯಾದ ನನ್ನ ಕಡೆಯಾದರೂ ನೋಡು! ಮಕ್ಕಳನ್ನು ಕಳೆದುಕೊಂಡು ದೀನಳಾಗಿ ರೋದಿಸುವ ನನ್ನ ಕಣ್ಣೀರನ್ನೊರೆಸು! ಇನ್ನು ಮಕ್ಕಳಾಗುವ ಆಶೆ ಎನಗಿಲ್ಲ. ಈ ಹೆಣ್ಣನ್ನಾದರೂ ನೋಡಿಕೊಂಡು ಕಾಲವನ್ನು ಕಳೆಯುವೆನು.

ಎಂದು ಅಂಗಲಾಚಿ ಬೇಡುವ ತಂಗಿಯನ್ನು ಕಂಸನು ತರ್ಜಿಸಿ, ಅವಳ ಕೈಯಲ್ಲಿ ಹಿಡಿದಿದ್ದ ಕೂಸನ್ನು ಕಿತ್ತುಕೊಂಡು, ಕಾಲುಗಳಿಂದ ಹಿಡಿದೆತ್ತಿ, ಬಂಡೆಯ ಮೇಲೆ ಒಗೆದನು. ಸ್ವಾರ್ಥಪರರಿಗೆ ಬಂಧಸ್ನೇಹವಿರುವುದೇ? ಆ ದುರುಳನ ಕೈಯಿಂದ ಜಾರಿ, ದೇವಿಯು, ಆಕಾಶದಲ್ಲಿ ದಿವ್ಯ ರೂಪದಿಂದ ನಿಂತಳು. ಅಷ್ಟಭುಜಗಳಲ್ಲಿ ಧನುಸ್ಸು, ಶೂಲ, ಬಾಣ, ಗುರಾಣಿ, ಖಡ್ಗ, ಶಂಖ, ಚಕ್ರ, ಗದೆಗಳನ್ನು ಪಿಡಿದು, ಪೂಮಾಲೆಗಳಿಂದ ಅಲಂಕೃತಳಾಗಿ, ದಿವ್ಯಗಂಧವನ್ನು ಹಚ್ಚಿ, ಸರ್ವಾಭರಣಭೂಷಿತಳಾಗಿ, ಸಿದ್ಧಚಾರಣ ಗಂಧರ್ವಜನರು ಸ್ತುತಿಸುತ್ತಿರಲು, ಯೋಗ ಮಾಯೆಯು ಕಂಸನಿಗೆ ಇಂತೆಂದಳು–

'ಮೂರ್ಖ! ನನ್ನನ್ನು ಕೊಲ್ಲುವುದರಿಂದೇನು? ನಿನ್ನ ಸಂಹಾರಕನು ಎಲ್ಲೋ ಹುಟ್ಟಿ ಇನ್ನೊಂದೆಡೆ ಬೆಳೆಯುತ್ತಿರುವನು. ದೀನರಾದವರನ್ನು ಹಿಂಸಿಸಲು ನೋಡಿ ಕೆಡುತ್ತಿರುವೆ' ಇಂತು ನುಡಿದು ಶ್ರೀಹರಿಗೆ ಅನುಜಳೆನಿಸಿದ ದುರ್ಗೆ, ಅಂತರ್ಧಾನಳಾದಳು. ಅಂದಿನಿಂದ ಅನೇಕ ನಾಮಗಳಿಂದ ಅನೇಕ ಮಂದಿರಗಳಲ್ಲಿ ಪೂಜೆಯನ್ನು ಕೈಕೊಂಡು, ಭಕ್ತರನ್ನು ಸಲಹುತ್ತಿರುವಳು.

ಅವಳ ಮಾತನ್ನು ಕೇಳಿ, ವಿವೇಕ ಬಂದಂತಾಗಿ, ಕಂಸನು ಆಶ್ಚರ್ಯಚಕಿತನಾದನು. ದೇವಕೀ ವಸುದೇವರನ್ನು ಸೆರೆಬಿಡಿಸಿ, ವಿನಯದಿಂದ ಮಾತನಾಡಿದನು–

'ಅಹೋ! ಭಾವ! ಅಮ್ಮಾ ದೇವಕೀ! ಎಂತಹ ಪಾಪಿಯಾದೆ? ರಾಕ್ಷಸನಂತೆ ಬಂದು ನಿಮ್ಮ ನಂದನರನ್ನೆಲ್ಲ ಕೊಂದೆ. ದಯಾರಹಿತನಾಗಿ ಬಂಧಗಳೆನ್ನದೇ, ಸ್ನೇಹಿತರೆನ್ನದೇ ಪೀಡಿಸಿದೆನು. ಅಯ್ಯೋ! ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದವನ ದುರ್ಗತಿಯು ನನಗೂ ಆಗದಿರುವುದೇ? ನಾನು ಬದುಕಿಯೂ ವ್ಯರ್ಥವೇ ಸರಿ! ಏನು ಮಾಡಲಿ? ದೇವತೆಗಳೂ ಸುಳ್ಳಾಡುವರೆಂದು ತಿಳಿದಿದ್ದಿಲ್ಲ. ಆ ಗಾಳಿಯ ಮಾತನ್ನು ನಂಬಿ ತಂಗಿಯ ಮಕ್ಕಳನ್ನು ಕೊಂದೆ. ಅಮ್ಮಾ! ಅಳಬೇಡ! ಅವರ ಕರ್ಮಾನುಸಾರವಾಗಿ ನಿನ್ನ ಮಕ್ಕಳು ನನ್ನಿಂದ ಹತರಾದರು ನಿಜ. ಆದರೆ ಕೊಲ್ಲಲು ನಾನಾರು? ಎಲ್ಲವೂ ದೈವಾಧೀನವಾಗಿ ನಡೆಯುವುದು. ಪ್ರಾಣಿಗಳು ಕಲೆತಿರುವುದು ಸತ್ತು ಅಗಲುವುದು ದೈವದಿಂದಲೇ. ಭೂಮಿಯಿಂದ ಹುಟ್ಟಿದ ಚತುರ್ವಿದ ಜೀವಶರೀರಗಳು ಬರುವವು ಹಾಗೂ ಸತ್ತುಹೋಗುವುವು. ಭೂಮಿಯು ಮಾತ್ರ ತಾನಾಗಿ ಉಳಿದಿರುವುದು. ಅಂತೆಯೇ ಪ್ರಕೃತಿನಿರ್ಮಿತ ಶರೀರಗಳು ಬರುವುವು, ಹೋಗುವುವು. ಜೀವನು ಬರುವುದಿಲ್ಲ– ಹೋಗು ವುದೂ ಇಲ್ಲ. ಅನ್ಯಥಾ ಜ್ಞಾನವು ಅನೇಕ ವಿಧವಾಗಿದೆ. ಅಹಂ ಬ್ರಹ್ಮಾಸ್ಮಿ ಎಂದು ತಿಳಿಯುವುದು ತಮಃಪ್ರಾಪ್ತಿ ಸಾಧನವಾಗಿದೆ. ಜೀವನಿಗೆ ದೇಹಾಭೇದವು ಅನ್ಯಥಾ ಜ್ಞಾನವೇ. ಆದರಿಂದ ದೇಹಯೋಗ ವಿಯೋಗರೂಪ ಸಂಸಾರವು ಮುಗಿಯುವುದೇ ಇಲ್ಲ. ಭಗವದ್ವಶರಾಗಿ ಜೀವರು ತಾವು ಮಾಡಿದ ಕರ್ಮಫಲವನ್ನು ಅನುಭವಿಸುವರು. ಆದ್ದರಿಂದ ನಾನು ನಿನ್ನ ಮಕ್ಕಳನ್ನು ಕೊಂದೆನೆನಬೇಡ. ದೇಹವು ಸತ್ತಾಗ ಜೀವನೇ ಸತ್ತನೆಂದು ತಿಳಿಯುವ ದೇಹಾಭಿಮಾನವು ಬಾಧಕವಾಗಿದೆ. ದೇಹಾಭಿಮಾನದಿಂದಲೇ ಜೀವನು ದುಃಖಭಾಜನನಾಗಿರುವನು. ನಾನು ಮಾಡಿರುವ ತಪ್ಪನ್ನು ಕ್ಷಮಿಸಿ! ನೀವು ಸಾಧುಗಳು– ಬಂಧುಪ್ರಿಯರು' ಇಂತು ನುಡಿದು ಕಣ್ಣೀರಿಟ್ಟು, ಕಾಲಲ್ಲಿ ಬಿದ್ದ ಕಂಸನನ್ನು ಕಂಡು, ಕಡುರೋಷವನ್ನು ಬಿಟ್ಟು ದೇವಕಿ ವಸುದೇವರು ಅವನನ್ನು ಕ್ಷಮಿಸಿದರು. ವಸುದೇವನು ನಕ್ಕು ಇಂತೆಂದನು–

ರಾಜನ್! ನೀನಾಡಿದುದು ನಿಜ. ಜೀವರಂತೆ ಪರಮಾತ್ಮನಿಗೆ ಜನನಮರಣಗಳು, ಪುತ್ರಮಿತ್ರಾದಿ ದುರಭಿಮಾನಗಳು ಇಲ್ಲವೆಂದೆ. ಸತ್ಯ! ಜೀವನಾವ ನನ್ನಿಂದ ಶ್ರೀಹರಿಯು ಭಿನ್ನನೆಂಬ ಯಥಾರ್ಥಜ್ಞಾನವು, ಅಜ್ಞಾನದಿಂದ ಬರುವ ನರಕಾದ್ಯನರ್ಥಗಳನ್ನು ನಾಶಪಡಿಸು ವುದು. ಭಗವದ್ದರ್ಶನ ವಿರೋಧಿ ಜನರು ಅನ್ಯಥಾ ಜ್ಞಾನದಿಂದ ಪರಹಿಂಸೆ ಮಾಡುವರು. ಇರಲಿ, ಹೋಗು ಎಂದು ಸಮಾಧಾನಪಡಿಸಲು, ಕಂಸನು ತನ್ನ ಮನೆಗೆ ಹೊರಟುಹೋದನು.

ಆ ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ಕಂಸನು ಮಂತ್ರಿ- ಸ್ನೇಹಿತರನ್ನು ಕರೆಯಿಸಿ, ಅವರಿಗೆ ದುರ್ಗೆಯ ವಚನವನ್ನು ತಿಳಿಸಿದನು. ಅದನ್ನು ಕೇಳಿ ಆ ದೇವದ್ರೋಹಿಗಳು ಬುದ್ಧಿ ಕಡಿಮೆಯಾದರೂ ರೋಷವು ಹೆಚ್ಚಾದುದರಿಂದ ವಿಜೃಂಭಿಸಿ, ಇಂತೆಂದರು–

ಭೋಜರಾಜ! ಕೇಳೊಂದು ಉಪಾಯವನ್ನು! ಪುರಗ್ರಾಮವ್ರಜಗಳನ್ನು ಪೊಕ್ಕು ಪುಟ್ಟಿ, ಹತ್ತುದಿನವಾಗದಿರುವ ಶಿಶುಗಳನ್ನೇ ಕೊಂದುಬಿಡುವೆವು. ಹತ್ತು ದಿನವಾದ ಶಿಶುಗಳನ್ನು ಕೊಲ್ಲದೆ ಬಿಡೆವು. ಆಗ ನಿನ್ನ ಹಂತಕನು ಸಾಯಲು ನೀನು ಅಜರಾಮರನಾಗುವೆ. ನಿನ್ನ ಧನುಷ್ಟಂಕಾರವನ್ನು ಕೇಳಿ, ಓಡುವ ದೇವತೆಗಳು ನಿನ್ನ ಮುಂದೆ ರಣರಂಗದಲ್ಲಿ ನಿಲ್ಲುವರೇ? ನಿಂತರೆ ನಿನ್ನ ನಿಶಿತ ಬಾಣಗಳಿಗೆ ತುತ್ತಾಗಿ ಬೀಳರೇ? ಬೀಳದವರು ಬದುಕಿನಾಶೆಯಿಂದ

ಬಾಣಾದಿಗಳನ್ನು ಬಿಸುಟಿ, ಪಲಾಯನ ಸೂಕ್ತವನ್ನು ಪಠಿಸದಿರುವರೇ? ಪಠಿಸದವರು ಕೈಜೋಡಿಸಿ, ನಿನ್ನ ಕಾಲಿಗೆ ಬಿದ್ದು ಭಯದಿಂದ ನಡುಗುತ್ತಾ 'ರಕ್ಷಿಸು ಕೊಲ್ಲಬೇಡ' ಎಂದು ಬೇಡುವರಲ್ಲವೇ? ಅಸ್ತ್ರರಹಿತರನ್ನು, ವಿರಥರನ್ನು, ಭಯಭೀತರನ್ನು, ಮೈಮರೆತವರನ್ನು, ನೀನು ಸಂಹರಿಸಲು ಹಿಂಜರಿಯುವೆ, ಎಂದೇ ದೇವತೆಗಳು ಇನ್ನೂ ಬದುಕಿರುವರು. ಅವರು ಕ್ಷೇಮಕಾಲದಲ್ಲಿ ಶೂರರು- ಯುದ್ಧದಲ್ಲಿ ಭೀರುಗಳು. ಅವರ ಒಡೆಯನಾದ ಹರಿ, ರಹಸ್ಯಮಂದಿರದಲ್ಲಿ ಅಡಗಿರುವನು. ಶಿವನು ವನವಾಸಿ. ಇಂದ್ರನು ವೀರ್ಯಮಹಿತನಲ್ಲ. ಬ್ರಹ್ಮನು ತಪಸ್ವಿಯು. ಇಂತಹವರ ಅನುಚರರಾದ ಸುರರು ನಮ್ಮನ್ನೇನು ಮಾಡುವರು? ಆದರೂ ಶತ್ರುಗಳನ್ನು ಉಪೇಕ್ಷಿಸಲಾಗದು. ಆದ್ದರಿಂದ ನಮಗೆ ಆಜ್ಞಾಪಿಸು. ಅವರನ್ನು ಬೇರುಸಹಿತವಾಗಿ ಕಿತ್ತೊಗೆದು ನಾಶಪಡಿಸುವೆವು. ಶರೀರದಲ್ಲಿಯ ರೋಗವನ್ನು ನಾಶಪಡಿಸದೆ ಉಳಿಸಿದರೆ, ಅದು ಬಲಿತು, ಮುಂದೆ ಔಷಧಕ್ಕೆ ಬಾಗದೆ, ಶರೀರವನ್ನೇ ನುಂಗಿಬಿಡುವುದು. ಅಂತೆಯೇ ಇಂದ್ರಿಯಗಳನ್ನು ಹರಿಬಿಟ್ಟರೆ ಮತ್ತೆ ವಶವಾಗದೆ, ಕಷ್ಟಪಡಿಸುವುವು. ಶತ್ರುವನ್ನಾದರೂ ಸಣ್ಣವನೆಂದುಬಿಟ್ಟರೆ ಮುಂದೆ ಬಲವನ್ನು ಗಳಿಸಿ ನಮ್ಮನ್ನೇ ಅಳಿಸಿಬಿಡುವನು. ದೇವತೆಗಳಿಗೆಲ್ಲ ಮೂಲವು ವಿಷ್ಣುವಂತೆ! ಅವನು ಸನಾತನಧರ್ಮರಕ್ಷಕನಂತೆ! ಆ ಧರ್ಮವು ವೇದ ಗೋ ವಿಪ್ರ ಯಜ್ಞ ದಕ್ಷಿಣೆಗಳಲ್ಲಿ ನೆಲಸಿದೆಯಂತೆ! ನಾವು ಹುಡುಕಿ ಆರಿಸಿ ತಪಶ್ಶೀಲರು, ಯಜ್ಞಶೀಲರು, ದಾನಶೀಲರು, ವೇದಪ್ರವಚನಶೀಲರಾದ ಬ್ರಾಹ್ಮಣರನ್ನು ಕೊಲ್ಲುವೆವು. ಹಾಲನ್ನು ಹಿಂಡುವ ಆಕಳ ಹಿಂಡನ್ನು ತುಂಡರಿಸುವೆವು. ಆಗ ದೇವ, ವಿಪ್ರ, ವೇದ, ಗೋ, ತಪಸ್ಸತ್ಯ, ದಮ, ಶಮ, ಶ್ರದ್ಧೆ, ದಯೆ, ತಿತಿಕ್ಷೆ ಇವುಗಳಲ್ಲಿ ನೆಲೆಯಾಗಿ ನಿಂತ ಆ ಹರಿಯು ತಾನಾಗಿ ಸಾಯುವನು. ಅವನು ದೇವತೆಗಳೆಲ್ಲರ ಚಕ್ರವರ್ತಿಯು, ದೈತ್ಯರ ದ್ವೇಷಮೂರ್ತಿಯು ಆಗಿರುವನು. ಸಿಗದ ಗುಹೆಯಲ್ಲೋ, ಸಮುದ್ರಮಧ್ಯದಲ್ಲೋ ಅಡಗಿರುವ ಹರಿಯನ್ನು ಸಂಹರಿಸಲು, ಚತುರ್ಮುಖ ಮುಖಲೇಖರನ್ನು ಕೊಲ್ಲುವುದೊಂದೇ ಉಪಾಯವು. ಆ ದೇವತೆಗಳಿಗೆ ಯಜ್ಞಭಾಗಗಳೇ ಇಲ್ಲದಂತೆ ಮಾಡಲು ಅವರೇ ಸಾಯುವರು– ಎಂದು ದುರ್ಮಂತ್ರಿಗಳು ಆಡಿದ ಮಾತನ್ನು, ಕೂಡಿದ ಸಭೆಯಲ್ಲಿ ಸಮರ್ಥಿಸಿ, ಅನರ್ಥಕರವಾದ ಬ್ರಹ್ಮಹಿಂಸೆಯನ್ನು ಮಾಡಿರೆಂದು ಅವರನ್ನು ಕಂಸನು ಆಜ್ಞಾಪಿಸಿದನು. ಕಾಲಪಾಶವು ಕುತ್ತಿಗೆಯನ್ನು ಹಿಚುಕುತ್ತಿರಲು ವಿವೇಕವು ಉಳಿಯುವುದೇ?

ಕಲಹಪ್ರಿಯರಾದ ಖಲರನ್ನು ಕಳುಹಿ, ಕಂಸನು ಮನೆಯನ್ನು ಹೊಕ್ಕನು. ತಮೋಮಯಶೀಲನಾದ ದಾನವರು ಕಾಮರೂಪದಿಂದ ಸಂಚರಿಸುತ್ತಾ ಸಜ್ಜನ ದ್ರೋಹವನ್ನೆಸಗಿದರು. 'ವಿನಾಶಕಾಲೇ ವಿಪರೀತ ಬುದ್ಧಿ'– ಎಂಬುವುದು ಅವರ ವಿಷಯದಲ್ಲಿ ನಿಜವಾಯಿತು. ಮಹಜ್ಜನರ ದ್ರೋಹದಿಂದ ಮನುಜನ ಆಯುಸ್ಸು, ಐಶ್ವರ್ಯ, ಕಾಂತಿ, ಯಶಸ್ಸು, ಧರ್ಮ, ಪುಣ್ಯಲೋಕಗಳು ಎಲ್ಲವೂ ನಷ್ಟವಾಗುವುವು.

## ೬. ಕೃಷ್ಣಜನ್ಮೋತ್ಸವ – ನಂದವಸುದೇವ ಸಂವಾದ

ಗೋಕುಲದಲ್ಲಿ ಶ್ರೀಕೃಷ್ಣನು ಪ್ರವೇಶಿಸಲು, ನಂದನು, ಮಗನು ಪುಟ್ಟಿದನೆಂಬ ಸಂತೋಷದಿಂದ, ಬ್ರಾಹ್ಮಣರನ್ನು ಕರೆಯಿಸಿದರು. ತಾನು ಸ್ನಾನಮಾಡಿ, ಸಿಂಗರಿಸಿಕೊಂಡನು. ವಿಪ್ರರು ಸ್ವಸ್ತಿವಾಚನ ವನ್ನು ಪಠಿಸಿದರು. ಕೂಸಿಗೆ ಜಾತಕರ್ಮವನ್ನು ಮಾಡಿ, ಪಿತೃದೇವತೆಗಳನ್ನು ಪೂಜಿಸಿ, ಹತ್ತು ಲಕ್ಷ ಗೋದಾನವನ್ನು, ಎಳ್ಳನ್ನು, ಸಪ್ತರತ್ನಗಳನ್ನು, ಬಂಗಾರದ ಗಡಿಗೆಗಳಲ್ಲಿಟ್ಟು ದಾನಮಾಡಿ ನಂದನು, ಆನಂದಭರಿತನಾದನು. ಸೂತಮಾಗಧವಂದಿಗಳು ಪೊಗಳಿದರು. ಗಾಯಕರು ಪಾಡಿದರು. ದುಂದುಭಿಗಳನ್ನು ಮೊಳಗಿಸಿ ಪ್ರಜರು ಸಂತಸವನ್ನು ಸೂಚಿಸಿದರು.

ಗೋಪರು, ವ್ರಜದ ಮಾರ್ಗದಲ್ಲಿ ಪನ್ನೀರನ್ನು ಚೆಲ್ಲಿ, ಮನೆಯ ಮುಂದೆ ಚೈಲ ಪಲ್ಲವ ತೋರಣಗಳನ್ನು ಕಟ್ಟಿ, ಧ್ವಜ ಪತಾಕೆಗಳನ್ನೆತ್ತಿದರು. ತಮ್ಮ ಗೋವುಗಳಿಗೆ, ಕರುಗಳಿಗೆ ಅರಿಷಿಣ ಎಣ್ಣೆಗಳನ್ನು ಹಚ್ಚಿ, ಧಾತು ವಸ್ತ್ರ ಕಾಂಚನಮಾಲೆಗಳಿಂದ ಅಲಂಕರಿಸಿದರು. ತಾವೂ ಬೆಲೆಬಾಳುವ ಆಭರಣಗಳನ್ನಿಟ್ಟು, ಕಂಚುಕ, ಶಿರೋವೇಷ್ಟನಗಳನ್ನು ಧರಿಸಿ, ಗೋಪಾಲಕರು ಗುಂಪುಗೂಡಿ, ಕೈಯಲ್ಲಿ ಕಾಣಿಕೆಗಳನ್ನು ಹೊತ್ತು ಬಂದರು. ಗೋಪತರುಣಿಯರು ಸಂಭ್ರಮದಿಂದ 'ನಮ್ಮ ಯಶೋದೆಗೆ ಮಗನಾದನು ನೋಡುವೆ'ವೆಂದು, ಅಲಂಕರಿಸಿಕೊಂಡು, ಕಾಣಿಕೆಗಳನ್ನು ಹೊತ್ತುತಂದರು. ಪೀತಾಂಬರಗಳನ್ನುಟ್ಟು, ಕಣ್ಣಿಗೆ ಕಾಡಿಗೆಯನ್ನಿಟ್ಟು, ಮನೆಕೆಲಸಗಳನ್ನು ಬಿಟ್ಟು, ಹಣೆಯಲ್ಲಿಟ್ಟ ಕುಂಕುಮರೇಖೆಯಿಂದ ಸೊಗಸಾದ ಮುಖಕಮಲಗಳಿಂದ ಮಂದಹಾಸವನ್ನು ಬೀರುತ್ತಾ ಬಂದು ಮಂದಗಮನೆಯರು ನಂದಾಲಯವನ್ನು ಸೇರಿದರು. ಜಘನಭಾರದಿಂದಲೇ ಮೆಲ್ಲನೆ ಬರುವ ನಲ್ಲೆಯರು ಕಚಕುಚ ಪಂಕ್ತಿಯಲ್ಲಿ ಹಾರಾಡುವ ಹಾರಗಳಿಂದ ಉದುರಿದ ಹೂಗಳಿಂದ, ನಂದನಿಗೆ ಹಾದಿಯಲ್ಲಿ ಮಡಿಯನ್ನು ಹಾಸಿದಂತೆ ಮಾಡಿ, ಹಾಡುತ್ತಾ, ಹರಸುತ್ತಾ ಬಂದು ಬಾಲನನ್ನು ಮುದ್ದಾಡಿದರು. ಕಪ್ಪು ಕೃಷ್ಣನಿಗೆ ಅರಿಷಿನ ಎಣ್ಣೆಗಳನ್ನು ಹಚ್ಚಿ ಎರೆದು ಮಲಗಿಸಿ ತೂಗಿದರು.

ಕೃಷ್ಣಜನನೋತ್ಸವದಲ್ಲಿ ವಾದ್ಯಗಳನ್ನು ನುಡಿಸಿದರು. ಗೋಪಾಲಕರು ಸಂತೋಷದಿಂದ ಕುಣಿದಾಡಿದರು. ಹಾಲು ಮೊಸರು ತುಪ್ಪಗಳನ್ನು ಒಬ್ಬರಮೋಲೊಬ್ಬರು ಉಗ್ಗಿ ಕುಣಿದಾಗ, ಗೋರಸಗಳ ಕಾಲುವೆಗಳು ಹರಿದವು. ಬೆಣ್ಣೆಯನ್ನು ಬಳಿದುಕೊಂಡು ಹಾಡುತ್ತಾ ಬಂದ ಗೋಪರಿಗೆ ನಂದನು ಬೇಡಿದ ವಸ್ತ್ರಾಲಂಕಾರ ಗೋಧನಗಳನ್ನಿತ್ತು ಸತ್ಕರಿಸಿದನು ಮತ್ತು ವಿದ್ಯೋಪಜೀವಿಗಳಿಗೆ ಅಪಾರಧನವನ್ನಿತ್ತು ಕಳಿಸಿದನು. ಶ್ರೀಹರಿಯು ಪ್ರೀತನಾಗಲಿ, ತನ್ನ ಪುತ್ರನಿಗೆ ಚಿರಾಯುರಾರೋಗ್ಯಾದಿ ಶ್ರೇಯವಾಗಲಿ– ಎಂದು ದಾನಗಳನ್ನು ಮಾಡಿದನು.

ರೋಹಿಣಿಯು ಪೀತಾಂಬರವನ್ನುಟ್ಟು ಕಂಠಾಭರಣಾದಿ ಭೂಷಣಗಳನ್ನಿಟ್ಟು, ಸಡಗರದಿಂದ, ಬಂದವರನ್ನು ಸತ್ಕರಿಸಿದರು. ಅಂದಿನಾರಭ್ಯನಂದವ್ರಜವು ಸರ್ವಸಂಪತ್ಸಮೃದ್ಧವಾಯಿತು. ಶ್ರೀಹರಿಯು ಬಂದಲ್ಲಿ ಹಿಂದೆಯೇ ರಮೆಯು ಬರದಿರುವಳೇ?

ಒಂದು ದಿನ ಗೋಪಾಲಕರಿಗೆ ಗೋಕುಲವನ್ನೊಪ್ಪಿಸಿ, ನಂದನು ತಾನು ಕಂಸನಿಗೆ ಕೊಡ ಬೇಕಾದ ಕಪ್ಪವನ್ನು ತೆಗೆದುಕೊಂಡು ಮಧುರೆಗೆ ಬಂದನು. ಕಪ್ಪವನ್ನು ಕೊಟ್ಟು ನಂದನನ್ನು ನೋಡಲು ಬಂದು ವಸುದೇವನು, ಅವನಿಂದ ಪ್ರೇಮದ ಆಲಿಂಗನ ಸ್ವಾಗತ ಸುಖಾಸನಗಳನ್ನು ಸ್ವೀಕರಿಸಿ ತನ್ನ ಸುತರನ್ನು ನೆನೆದು, ಕಣ್ಣೀರಿಟ್ಟು, ಇಂತೆಂದನು–

ತಮ್ಮನೇ! ಮಕ್ಕಳ ಆಶೆಯನ್ನೇ ಬಿಟ್ಟಿದ್ದ ನಿನಗೆ ಇಂದು ಶ್ರೀಹರಿದಯದಿಂದ ಮಗನು ಹುಟ್ಟಿರುವನು. ಹುಟ್ಟಿಸಾಯುತ್ತಿರುವ ಈ ಸಂಸಾರಚಕ್ರದಲ್ಲಿ ಸಿಕ್ಕಿಬಿದ್ದ ಮನುಜನಿಗೆ ಪ್ರಿಯಜನರ ದರ್ಶನವು ದುರ್ಲಭವಾಗಿದೆ. ದೇವರ ದಯದಿಂದ ನಾನಿಂದು ನಿನ್ನನ್ನು ನೋಡಿ, ದೇವರನ್ನೇ ನೋಡಿದಂತೆ ಆನಂದವನ್ನು ಹೊಂದಿರುವೆನು. ನಂದಾ! ಪುಣ್ಯ ಪಾಪರೂಪ ವಿಚಿತ್ರಕರ್ಮ ವಶರಾಗಿ, ಚರಿಸುವ ಜೀವರಿಗೆ ಪ್ರಿಯಕರ ಪದಾರ್ಥಗಳು ಸದಾ ಸಮೀಪದಲ್ಲಿರುವುದಿಲ್ಲ. ಪ್ರವಾಹದಲ್ಲಿ ಹೋಗುತ್ತಿರವ ಕಾಷ್ಠಗಳಂತೆ ಒಂದು ಸಲ ಕಲೆತು, ಇನ್ನೊಂದುಸಲ, ದೂರವಾಗು ತ್ತಿರುವೆವು. ಇರಲಿ! ನಿನ್ನ ವ್ರಜದಲ್ಲಿ ಜಲತೃಣಗಳು ಸಮೃದ್ಧವಾಗಿವೆಯೇ? ನಿನ್ನ ಬಂಧುಗಳಿಂದ ಕೂಡಿ ಸುಖವಾಗಿರುವೆಯಾ? ಪ್ರಿಯ ಸೋದರಾ! ನನ್ನ ಮಗನು ತಾಯಿಯೊಡನೆ ಕೂಡಿ, ನಿನ್ನನ್ನೇ ತಂದೆಯೆಂದು ಭಾವಿಸಿ ಬೆಳೆಯುತ್ತಿರುವನೇ? ಬಂಧುಜನರು ಕಷ್ಟಪಡುವಾಗ ಮನುಜನಿಗೆ ಧರ್ಮಾರ್ಥಕಾಮಗಳು ಸುಖಶಾಂತಿಗಳನ್ನು ಕೊಡಲಾರವು.

ನಂದನಿಂತು ನುಡಿದನು– 'ಅಣ್ಣಾ! ದೇವಕೀಸುತರು ಪಾಪ! ಕಂಸನಿಂದ ಸಂಹೃತರಾದರು. ಒಬ್ಬಳು ಕನ್ಯೆಯಾದರೂ ಉಳಿಯದೆ ದೇವಲೋಕವನ್ನು ಸೇರಿದಳು. ಅದೃಷ್ಟದಿಂದ ಬಂದ ಕಷ್ಟಸುಖಗಳನ್ನು ತಪ್ಪಿಸಿಕೊಳ್ಳಲಾಗದು. ನಾವೆಲ್ಲರೂ ಅದೃಷ್ಟಾಧೀನರು. ಅದೃಷ್ಟನಿಯಾಮಕ ನಾದ ಹರಿಯು ಯಾರ ಅಧೀನನಾಗಿಯೂ ಇಲ್ಲ. ಶ್ರೀಹರಿಯು ಸರ್ವತಂತ್ರಸ್ವತಂತ್ರನೆಂದರಿತ ಯಥಾರ್ಥಜ್ಞಾನಿಯು ಸುಖದುಃಖಾದಿಗಳಿಂದ ವಿಕಾರವನ್ನು ಹೊಂದುವುದಿಲ್ಲ. ನೀನು ಹರಿ ಭಕ್ತನು. ಋಷಿಸದೃಶನಾದ ನಿನಗೆ ನಾನು ಹೇಳಬೇಕೇ?' ಎನಲು ವಸುದೇವನಿಂತು ಪೇಳಿದನು-

'ವಾರ್ಷಿಕ ಕಪ್ಪವನ್ನು ಕೊಟ್ಟಿದ್ದಾಯಿತೇ? ಇಲ್ಲಿರಬೇಡ, ಹೊರಡು, ಗೋಕುಲದಲ್ಲಿ ಉತ್ಪಾತಗಳಾಗುತ್ತಿವೆ.' ಆ ಮಾತನ್ನು ಕೇಳಿ ನಂದಾದಿಗೋಪಾಲಕರು ಎತ್ತಿನ ಬಂಡಿಗಳಲ್ಲಿ ಕೂತು ಬೇಗಬೇಗನೇ ಗೋಕುಲಕ್ಕೆಂದು ಪಯಣಿಸಿದರು.

## ೭. ಪೂತನಾ ಸಂಹಾರ

ಶ್ರೀಶುಕನು ಪೇಳಿದನು–

ನಂದನು ಮಾರ್ಗದಲ್ಲಿ ಬರುತ್ತಾ 'ವಸುದೇವನ ಮಾತು ಎಂದೂ ಸುಳ್ಳಾಗಿಲ್ಲ. ಗೋಕುಲ ದಲ್ಲಿ ಏನು ಉತ್ಪಾತವೋ ಏನೋ? ಶ್ರೀಹರಿಯೇ ಗತಿ' ಎಂದು ಚಿಂತಿಸುತ್ತಾ ಬರುತ್ತಿದ್ದನು. ಅಷ್ಟರಲ್ಲೇ ಕಂಸನಿಂದ ಕಳಿಸಲ್ಪಟ್ಟ ಪೂತನೆ, ಗೋಕುಲದಲ್ಲಿ ಪ್ರವೇಶಿಸಿದಳು. ಆ ಬಾಲ ಘಾತುಕಿಯು ಪುರಗ್ರಾಮ ವ್ರಜಗಳನ್ನು ಹೊಕ್ಕು, ಅಲ್ಲಿದ್ದ ಶಿಶುಗಳನ್ನು ಸಂಹರಿಸುತ್ತಾ ಬರುತ್ತಿ ದ್ದಳು. ಅವಳು ಆಕಾಶದಲ್ಲಿ ಹಾರಿಬಂದು, ನಂದಗೋಕುಲದಲ್ಲಿ ಇಳಿದಳು. ಮಾಯೆಯಿಂದ, ರಾಕ್ಷಸರೂಪವನ್ನು ಮರೆಮಾಚಿ, ಸುಂದರ ತರುಣೀರೂಪದಿಂದ ಬಂದು, ಗೋಕುಲ ಪ್ರಜರ ಮನವನ್ನು ಸೆಳೆದಳು.

ಅವಳ ತುರುಬಿನಲ್ಲಿ ಮಲ್ಲಿಗೆಹೂಗಳನ್ನು ಮುಡಿದು, ಸ್ತನಜಘನ ಮಧ್ಯದಲ್ಲಿ ಬಡವಾಗಿ ಬಳಕುವ ನಡುವಿನಲ್ಲಿ ಒಡ್ಯಾಣವನ್ನಿಟ್ಟು, ಪೀತಾಂಬರಗಳನ್ನುಟ್ಟು, ಕುಂತಲ ಕುಂಡಲ ಮಂಡಿತವದನದಿಂದ ಕಿರುನಗೆಯನ್ನು ಬೀರುತ್ತಾ, ಕಡೆಗಣ್ಣಿನ ನೋಟದಿಂದ ವ್ರಜವಾಸಿಗಳನ್ನು ಮರುಳು ಮಾಡಿದಳು. ಕಮಲವನ್ನು ತ್ವರೆಯಲ್ಲಿ ಮರೆತು, ಪತಿಯನ್ನು ಹುಡುಕಿಕೊಂಡು

ಇಂದಿರೆಯೇ ಬಂದಳೆಂದು, ವ್ರಜವಾಸಿಗಳು ತಿಳಿದರು. ಶಿಶುಗಳನ್ನು ಅರಸಿ ಒರೆಸುತ್ತಾ ಬಂದ ಬಾಲಗ್ರಹಿಯು ದೇವನ ಇಚ್ಛೆಯಿಂದ, ದೇವನಿದ್ದ ನಂದನ ಮನೆಯನ್ನು ಪೊಕ್ಕಳು. ತನ್ನ ತೇಜವನ್ನಡಗಿಸಿ, ಸಮುದ್ರದಲ್ಲಿದ್ದ ಬಡಬಾಗ್ನಿಯಂತೆ– ತಲ್ಪದಲ್ಲಿ – ಅಲ್ಪಬಾಲನಂತೆ ಮಲಗಿದ್ದ ಅಸುರಾಂತಕನನ್ನು ನೋಡಿದಳು. ಚರಾಚರ ನಿಯಾಮಕನಾದ ಅಧೋಕ್ಷಜನು ಅರೆಮುಚ್ಚಿದ ಕಣ್ಣಿಂದ ಆ ಪಾಪಿಯನ್ನು ಕಂಡು, ಬಹುಲೈಶ್ವರ್ಯವನ್ನು ಬಾಲಭಾವದಿಂದ ತೋರಗೊಡದೆ, ಸುಮ್ಮನಿದ್ದನು. ಸ್ವಭಾವದಿಂದಲೇ ಸಕಲ ಜೀವ ವ್ಯಾಪಾರವನ್ನು ತಿಳಿದಿರುವ ಸರ್ವಜ್ಞನನ್ನು ಅರಿತು ತಿಳಿಯದೆ, ಪೂತನೆಯು– ಬುದ್ಧಿಹೀನನು ಮಲಗಿದ್ದ ಹಾವನ್ನು ಹಗ್ಗವೆಂದು ಕೈಲಿಪಿಡಿ ದಂತೆ– ಅನಂತನನ್ನು ಅಂತಗೊಳಿಸುವೆನೆಂದು, ತೊಡೆಯಮೇಲೆ ಕೂಡಿಸಿಕೊಂಡು ಮಾರಿಗೌತಣ ವನ್ನು ಕೊಟ್ಟಂತೆ, ಮೊಲೆಯನ್ನುಣಿಸತೊಡಗಿದಳು. ಮನದಲ್ಲಿ ಹಗೆಯನ್ನೂ, ಮುಖದಲ್ಲಿ ನಗೆಯನ್ನೂ ತುಂಬಿ, ಒರೆಯಲ್ಲಿಟ್ಟ ನಿಶಿತಕರವಾಲದಂತಿರುವ ಅವಳ ಕಾಪಟ್ಯವನ್ನರಿಯದ ಯಶೋದೆಯು ಬೆರಗಾಗಿ ನೋಡುತ್ತ, ನಿವಾರಿಸದೆ ನಿಂತಿದ್ದಳು. ಪೂತನಾಮವಾದ ಶ್ರೀಶನು ಪೂತನೆಯ ದುರ್ಜರವಿಷಲಿಪ್ತಸ್ತನಗಳನ್ನು ಗಟ್ಟಿಯಾಗಿ ಪಿಡಿದು ಬಿಡದೆ, ಪೀಡಿಸಿ ಕುಡಿದನು. ವಿಷವನ್ನೂ, ಹಾಲನ್ನೂ, ಪ್ರಾಣಗಳನ್ನು ಹೀರುವ ಪೋರನನ್ನು ಕಂಡು 'ಬಿಡು, ಬಿಡೋ' ಎಂದು ಗೋಳಿಟ್ಟು ಪೂತನೆಯು ಕೂಸನ್ನು ನೂಕಿದಳು. 'ನಾನು ಹಿಡಿದೆನೆಂದರೆ ಸುಜನರನ್ನು ರಕ್ಷಿಸದೆ, ಕುಜನರನ್ನು ಶಿಕ್ಷಿಸದೆ ಬಿಡುವವನಲ್ಲ' ಎಂದು. ಪ್ರಕಟಿಸುವಂತೆ ಗೋವಿಂದನು ಅವಳ ಪ್ರಾಣ ಗಳನ್ನು ಹೀರಿ ಬಿಸುಟಿದನು.

ಕಣ್ಣುಗುಡ್ಡುಗಳನ್ನು ತೆರೆದು, ಕೈಕಾಲುಗಳನ್ನು ಜಾಡಿಸುತ್ತಾ, ಮೈಬೆವರಿಟ್ಟು, ಗಟ್ಟಿಯಾಗಿ ಕೂಗಿ, ಪ್ರಾಣಗಳನ್ನು ಬಿಟ್ಟ ರಾಕ್ಷಸಿಯು ಕೆಳಗೆ ಬಿದ್ದಳು. ಅವಳ ಕೂಗನ್ನು ಕೇಳಿ, ಸಿಡಿಲು ಬಡಿದಂತಾಗಿ ಜನರು ಕೆಳಗುರುಳಿದರು; ಭೂಮಿಯು ನಡುಗಿತು; ಆಕಾಶದಿಂದ ನಕ್ಷತ್ರಗಳು ಉರುಳಿದವು; ಭೂನಭೋಂತರವು ಪ್ರತಿಧ್ವನಿಸಿತು. ಸ್ವರೂಪವನ್ನು ಹೊಂದಿ ಭಯಂಕರ ರಾಕ್ಷಸೀ ದೇಹದಿಂದ, ವಜ್ರಾಘಾತದಿಂದ ಹತನಾದ ವೃತ್ರನಂತೆ ಬಿದ್ದ ಪೂತನೆಯ ಕೆಳಗೆ ಸಿಕ್ಕು, ಗಿಡಗಳು ಪುಡಿಯಾದವು. ಆರು ಕ್ರೋಶದವರೆವಿಗೂ ಬಿದ್ದಿದ್ದ ಅವಳ ರೂಪವು ಭಯಾನಕವಾಗಿತ್ತು. ರಥದ ಇರುಸಿನಂತಿರುವ ಕೋರೆಗಳು, ಗಿರಿಗುಹೆಯಂತಿದ್ದ ಮುಖ, ಗಂಡಶಿಲೆಯಂತಿದ್ದ ಸ್ತನಗಳು, ಹಾಳುಬಾವಿಯಂತಿದ್ದ ಕಣ್ಣುಗಳು, ಮರಳಿನ ದಿಬ್ಬೆಯನ್ನು ಪೋಲುವ ಜಘನಗಳು, ಕೆರೆಯಂತಿದ್ದ ಹೊಟ್ಟೆ, ಸೇತುವೆಗಳಂತಿದ್ದ ಕೈಕಾಲುಗಳು– ಕೆದರಿ ಹಾರಾಡುವ ಕೇಶಪಾಶ– ಇಂತು ಭಯಂಕರವಾದ ಅವಳ ರೂಪವನ್ನು ಕಂಡು, ಮೊದಲೇ ಅವಳ ಗರ್ಜನವನ್ನು ಕೇಳಿ ಹೆದರಿದ್ದ ಗೋಪಾಲಕರು ಅಂಜಿ ಸಮೀಪಿಸದೆ, ನಡುಗುತ್ತಿದ್ದರು. ಪೂತನೆಯ ಎದೆಯಮೇಲೆ ಭಯವಿಲ್ಲದೆ ಆಡುತ್ತಿದ್ದ ಮುದ್ದುಕೃಷ್ಣನನ್ನು ಕೆಲಗೋಪಿಯರು ಧೈರ್ಯಮಾಡಿ ಓಡಿಬಂದು, ಎತ್ತಿಕೊಂಡು ಯಶೋದೆಯ ಕೈಲಿಟ್ಟರು. ಆಗ ಯಶೋದಾ ರೋಹಿಣಿಯರು ಮಗುವಿಗೆ ಆಕಳ ಬಾಲದಿಂದ ನಿವಾಳಿಸಿ, ಗಂಜಲವನ್ನು ಪ್ರೋಕ್ಷಿಸಿ, ರಕ್ಷೆಯನ್ನು ಮಾಡಿ, ಶ್ರೀಶನ, ದ್ವಾದ ಶನಾಮಗಳನ್ನು ಪಠಿಸಿ ಪ್ರಾರ್ಥಿಸಿದರು. ಕೈಕಾಲುಗಳ ತೊಳದು, ಶುಚಿಗಳಾಗಿ, ಬೀಜಾಕ್ಷರಗಳ ನ್ಯಾಸವನ್ನೂ ಮಾಡಿ, ಶಿಶುರಕ್ಷಾಸ್ತುತಿಯನ್ನು ಪಠಿಸಿದರು–

'ಅಂಗಾಲಿಗೆ ಅಜನ ರಕ್ಷೆ; ಮುಂಗಾಲಿಗೆ ಮುರಾರಿಯ ರಕ್ಷೆ; ಜಾನುಗಳಿಗೆ ಗರಿಮಾದಿ ಗುಣನ ರಕ್ಷೆ, ತೊಡೆಗಳನ್ನು ಯಜ್ಞನು, ಕಟಿತಟವನ್ನು ಅಚ್ಯುತನು, ಹೊಟ್ಟೆಯನ್ನು ಹಯವದ

ನನು, ಹೃದಯವನ್ನು ಕೇಶವನು, ಉದರವನ್ನು ಈಶನು, ಕಂಠವನ್ನು ಇನನು, ಭುಜವನ್ನು ವಿಷ್ಣುವು, ಮುಖವನ್ನು ಉರುಕ್ರಮನು, ತಲೆಯನ್ನು ಈಶ್ವರನು, ರಕ್ಷಿಸಲಿ! ಮುಂದೆ ಚಕ್ರಪಾಣಿ, ಹಿಂದೆ ಗದಾಧರ, ಪಕ್ಕಗಳಲ್ಲಿ ಧನುಃ ಖಡ್ಗಗಳನ್ನು ಹಿಡಿದು ಮಧುಸೂದನ ಅಜನರು, ಕೋಣಗಳಲ್ಲಿ ಶಂಖಪಾಣಿಯು, ಮೇಲೆ ಉಪೇಂದ್ರ ಗರುಡರು, ಕೆಳಗೆ ಹಲಧರ ಪುರುಷೋತ್ತಮರು, ನಿಂತು ರಕ್ಷಿಸಲಿ! ಇಂದ್ರಿಯಗಳನ್ನು ಹೃಷಿಕೇಶನು, ಪ್ರಾಣಗಳನ್ನು ನಾರಾಯಣನು, ಚಿತ್ತವನ್ನು ಶ್ವೇತದ್ವೀಪತಿಯು, ಮನವನ್ನು ಯೋಗೇಶನು, ಬುದ್ಧಿಯನ್ನು ಪೃಶ್ನಿಗರ್ಭನು, ಮಧ್ಯದೇಹವನ್ನು ಭಗವಂತನು ಸಂರಕ್ಷಿಸಲಿ! ಆಡುವಾಗ ಗೋವಿಂದನು ಪೊರೆಯಲಿ! ಮಲಗಿದಾಗ ಮಾಧವನು ಸಲಹಲಿ! ನಡೆಯುವಾಗ ವೈಕುಂಠನು, ಕೂತಾಗ ಶ್ರೀಯಃಪತಿಯು, ಉಣ್ಣುವಾಗ ಯಜ್ಞಭುಜನು, ಕಾಪಾಡಲಿ! ನಮಗೆ ಸರ್ವಗ್ರಹಗಳ ಪೀಡೆಯು ತೊಲಗಲಿ! ಡಾಕಿನೀ ಯಾತುಧಾನಕೂಷ್ಮಾಂಡ ಬಾಲ ಗ್ರಹಗಳು ಮತ್ತು ಭೂತಪ್ರೇತ ಪಿಶಾಚ ಯಕ್ಷರಕ್ಷೋ ವಿನಾಯಕರು, ಹಾಗೂ ಕೋಟರಾರೇವತೀ ಜ್ಯೇಷ್ಠಾಪೂತನಾ ಮಾತೃಕಾದಿ ಪೀಡಾಕರರು, ಶ್ರೀಹರಿ ದಯದಿಂದದ ತೊಲಗಿ ಹೋಗಲಿ! ದೇಹಪ್ರಾಣೇಂದ್ರಿಯಗಳನ್ನು ಕೆಡಿಸುವ ಉನ್ಮಾದಾಪಸ್ಮಾರಾದಿ ಬಾಧೆಗಳು, ಸ್ವಪ್ನ ದುಷ್ಟ ಫಲಗಳು, ಎಲ್ಲವೂ ಶ್ರೀಹರಿಯ ನಾಮಗ್ರಹಣ ಮಾತ್ರದಿಂದ ನಷ್ಟವಾಗಲಿ!'

ಎಂದು ಪ್ರೇಮದಿಂದ ರಕ್ಷೆಯನ್ನು ಮಾಡಿ, ಮಗುವಿಗೆ ಮೊಲೆಹಾಲನ್ನುಣಿಸಿ, ಮಲಗಿಸಿ ಯಶೋದೆಯು ತೂಗುತ್ತಿದ್ದಳು. ಆಗ ನಂದಾದಿ ಗೋಪಾಲಕರು ಮಧುರೆಯಿಂದ ಬಂದು, ಪೂತನೆಯ ದೇಹವನ್ನು ನೋಡಿ ಆಶ್ಚರ್ಯಚಕಿತರಾದರು.

'ಕಪಿಲಾದಿ ಯೋಗೇಶರಲ್ಲಿ ನಮ್ಮ ವಸುದೇವನೂ ಒಬ್ಬನಾಗಿರಬೇಕು. ಉತ್ಪಾತಗಳಿವೆ, ಹೊರಡು– ಎಂದು ಪೇಳಿದ ನಮ್ಮಣ್ಣನು ಯಾವ ಋಷಿಯೋ ಏನೋ?' ಎಂದು ನುಡಿದು, ಆ ಕಳೇವರವನ್ನು ಕಡಿದು ತುಂಡಾಗಿಸಿ, ರಾಶಿಯಿಟ್ಟು ಸುಟ್ಟರು. ಆ ಸುಡುವ ದೇಹದಿಂದ ಅಗುರುಚಕ್ಕೆ ಸುಟ್ಟಂತೆ ಸುವಾಸನೆಯು ಹೊರಬಂತು. ಶ್ರೀಕೃಷ್ಣನು ಅವಳ ಮೊಲೆಯನ್ನುಂಡು ಅವಳ ಪಾಪಗಳನ್ನು ಸುಟ್ಟನೆಂಬಂತೆ, ಪೂತನೆಯ ದೇಹವು ಭಸ್ಮವಾಯಿತು. ಲೋಕದ ಬಾಲಕರನ್ನು ಕೊಲ್ಲಲು ಬಂದ ರಾಕ್ಷಸಿಯಾದರೂ, ಶ್ರೀಹರಿಯನ್ನು ಸಂಹರಿಸಲು ಬಂದ ಪಾಪಿಯಾದರೂ, ತಾಯಿಯಂತೆ ಹಾಲನ್ನಿತ್ತುದುದರಿಂದ ಅವಳಿಗೆ ಶ್ರೀಶನು ದಿವ್ಯ ಲೋಕವನ್ನು ಕೊಟ್ಟು ಕಳುಹಿದನು. ಅವಳಲ್ಲಿದ್ದ ಊರ್ವಶಿಗೆ ಸ್ವರ್ಗವನ್ನು, ಸ್ವತಃ ದುಷ್ಟಳಾದ ಪೂತನೆಗೆ ತಮಸ್ಸನ್ನು ಕೊಟ್ಟು, ಇದೇ ವಿಷದ ಹಾಲನ್ನು ಮುಂದೆ ಬರುವ ಕಂಸನಿಗೆ ಕೊಡಲೋಸುಗ ಅವಳನ್ನು ಅಂಧಂತಮದಲ್ಲಿಟ್ಟನು.

ಲೋಕವಂದಿತ ಪಾದಾರವಿಂದ ಸ್ಪರ್ಶದಿಂದ ಪವಿತ್ರಳಾಗಿ ಊರ್ವಶಿಯು ಸ್ತನ್ಯದಾನ ಪುಣ್ಯದಿಂದ ಸ್ವರ್ಗವನ್ನು ಪೊಂದಿದಳೆಂದಮೇಲೆ, ಶ್ರದ್ಧೆಯಿಂದ ಯಶೋದಾದಿಮಾತೆಯರು ಭಕ್ತಚಿಂತಿತಪಾದಕಮಲನಾದ ಕಮಲೇಶನಿಗೆ ಮೊಲೆಯನ್ನುಣಿಸಿ, ಪ್ರಿಯತಮವಾದ ಪದಾರ್ಥಗಳನ್ನಿತ್ತು ಸೇವಿಸಿ ಸದ್ಗತಿಯನ್ನೈದಿದರೆಂಬುದೇನಾಶ್ಚರ್ಯವು? ಅವನಿಗೆ ಹಾಲನ್ನಿತ್ತು ಪುತ್ರಪ್ರೇಮದಿಂದ ಪೋಷಿಸಿದ ಮಾತೆಯರಂತೆ, ಹಾಲನ್ನಿತ್ತು ಸೇವಿಸಿದ ಗೋವುಗಳೂ ಉದ್ಧೃತವಾದವು. ಭಗವಂತನಾದ ಕೃಷ್ಣನು ಮೋಕ್ಷಾದಿ ಸಕಲಪುರುಷಾರ್ಥಪ್ರದನಲ್ಲವೇ? ಮಗ

ನೆಂದಾದರೂ ಸದಾ ದಾಸಪ್ರಿಯನಾದ ಕೃಷ್ಣನ ಸ್ಮರಣೆಯಲ್ಲಿ ಕಾಲವನ್ನು ಕಳೆದ ಗೋಪಿಕಾ ಜನರು ತಮ್ಮ ಅಜ್ಞಾನಪಾಶವನ್ನು ಕಡಿದು, ಸಂಸಾರದಿಂದ ಮುಕ್ತರಾದರು.

ಪೂತನಾ ದೇಹ ದಾಹದಿಂದ ಬಂದ ಸುಗಂಧವನ್ನು ಮೂಸಿ, ವ್ರಜವಾಸಿಗಳು 'ಏನಿದು! ಎಲ್ಲಿಂದ ಬಂದಿತೀ ಗಂಧ?' ವೆನ್ನುತ್ತಾ, ನಂದ ವ್ರಜವನ್ನು ಸೇರಿದರು. ನಡೆದ ಸಮಾಚಾರವನ್ನು ಕೇಳಿ, ಬಾಲಕನು ಸುಖಿಯಾಗಿರುವುದನ್ನು ನೋಡಿ, ಆನಂದಭರಿತರಾದರು. ನಂದನು ಮಧುರೆಯಿಂದ ಬಂದವನೇ, ನಂದನನನ್ನೆತ್ತಿ ಮುದ್ದಾಡಿ ಪರಮಾನಂದತುಂದಿಲನಾದನು.

ರಾಜನ್! ಪೂತನಾ ಮೋಕ್ಷಣವನ್ನು ಮಾಡಿದ ಬಾಲಕೃಷ್ಣನ ಲೀಲೆಯನ್ನು ಶ್ರದ್ಧೆಯಿಂದ ಕೇಳಿದವರು ಗೋವಿಂದನ ಭಕ್ತರಾಗುವರು.

## ೮. ಶಕಟಾಸುರವಧೆ – ತೃಣಾವರ್ತನಿಧನ

ಶ್ರೀಶುಕನು ಹೇಳಿದನು–

ನಂದನ ಮನೆಯಲ್ಲಿ ಗೋವಿಂದನು ಬೆಳೆಯುತ್ತಾ ಗೋಪಾಲನರನಾರಿಯರಿಗೆ ಆನಂದ ವನ್ನುಂಟುಮಾಡಿದನು.

ರಾಜನು ಪ್ರಶ್ನಿಸಿದನು–

ಭಗವಂತನು ಸರ್ವಸಮರ್ಥನು, ಅವನ ಕಥೆಯು ಶ್ರವಣಮನೋರಮಣೀಯವು ಹಾಗೂ ಪಾಪಹರವೂ ಆಗಿದೆ. ಶ್ರೀವಿಷ್ಣುಚರಿತೆಯ ಶ್ರವಣದಿಂದ ಅಶ್ರದ್ಧೆಯು ದೂರವಾಗುವುದು. ಪ್ರಪಂಚ ವಿಷಯಗಳಲ್ಲಿ ವಿರಕ್ತಿಯು ಪುಟ್ಟಿ, ಮನಸ್ಸು ಬೇಗನೆ ಶುದ್ಧವಾಗುವುದು. ಆಗ ಅವನ ಭಕ್ತರ ಸಂಗವು ದೊರೆಯುವುದು. ಅವರ ಸಂಗದಿಂದ ಹರಿಭಕ್ತಿ ಭಾಗ್ಯವು ಕೈಸೇರುವುದು. ಆದ್ದರಿಂದ ಶ್ರೀಹರಿಯ ಚರಿತವನ್ನೇ ನಮಗೆ ಪೇಳು!

ಶ್ರೀಕೃಷ್ಣನ ಬಾಲಲೀಲೆಗಳನ್ನು ವರ್ಣಿಸು! ಮನುಜರ ಮಧ್ಯದಲ್ಲಿ, ಮನುಜನಂತೆ ತೋರುತ್ತಾ ಮಾಧವನು ಮಾಡಿದ ಮಹನೀಯ ಚರಿತೆಗಳನ್ನು ವಿಸ್ತಾರವಾಗಿ ಹೇಳು! ನೀನು ದಯಾವಂತನು. ನಮ್ಮಲ್ಲಿ ಕರುಣೆಯಿಂದ ಸರ್ವಪಾಪಾ ನಿವಾರಣನಾದ ನಾರಾಯಣನ ಕಥೆಯನ್ನು ಹೇಳೆಂದು ನಾವು ಕೇಳಿಕೊಳ್ಳುತ್ತಿರುವೆವು.

ಶ್ರೀಶುಕನು ನುಡಿದನು-

ಒಂದು ದಿನ ಶ್ರೀಕೃಷ್ಣನ ಜನ್ಮನಕ್ಷತ್ರವಿರಲು ನೋಡಿ, ಅವನನ್ನು ಊರ ಹೊರಗೆ ಗುಡಿ ಗೆಂದು ಕರೆದುಕೊಂಡು ಗೋಪಾಲಕರು, ಊರ ಮುಂದಿನ ದುರ್ಗಾವನವನ್ನು ಸೇರಿದರು. ವಾದ್ಯಗಳು ಮೊಳಗುತ್ತಿರಲು, ಹಾಡುತ್ತಾ ಕುಣಿಯುತ್ತಾ ಮಹೋತ್ಸವವನ್ನು ಮಾಡಿದರು. ನಂದನು ನಂದನನಿಗೆ ದ್ವಿಜರಿಂದ ಸ್ವಸ್ತಿವಾಚನವನ್ನು ಮಾಡಿಸಿದನು; ವಿಪ್ರರಿಗೆ ಅನ್ನ ವಸ್ತ್ರ, ದಕ್ಷಿಣೆಗಳನ್ನು ಗೋವುಗಳನ್ನು ಕೊಟ್ಟು, ಕಳಿಸಿದನು. ನಿದ್ರೆಯಿಂದ ತೂಕಡಿಸುವ ಕೂಸನ್ನು ನೋಡಿ, ಯಶೋದೆಯು ಬಂಡಿಯ ಕೆಳಗೆ ಮಲಗಿಸಿ, ಬಂದವರನ್ನು ಸತ್ಕರಿಸುವ ಸಂಭ್ರಮದಲ್ಲಿ ಮುಳುಗಿದ್ದಳು. ಆಗ ಕೃಷ್ಣನು ಎಚ್ಚತ್ತು ಹಾಲನ್ನಪೇಕ್ಷಿಸಿ, ಅಳುತ್ತಾ ಕಾಲಿನಿಂದ ಗಾಡಿಯನ್ನು ಒದೆದನು. ಪ್ರವಾಲಕೋಮಲವಾದ ಪ್ರಭುವಿನ ಪಾದಘಾತದಿಂದ ಬಂಡಿಯು ಮುರಿದು

ಚೂರಾಗಿ ಬಿತ್ತು. ಅದರಲ್ಲಿಟ್ಟ ಗಡಿಗೆಗಳು ಒಡೆದವು. ಚಕ್ರಗಳು ರಥದ ಗೂಡು ಇರುಸು ಎಲ್ಲವೂ ಪುಡಿಯಾಗಲು ಅದರ ಜೊತೆಯಲ್ಲಿ ಕಂಸಭೃತ್ಯನಾದ ಶಕಟಾಸುರನು ಕೂಡ ಪುಡಿಯಾಗಿ ಮೃತನಾದನು.

ಆ ಭಯಂಕರ ಶಬ್ದವನ್ನು ಕೇಳಿ, ಯಶೋದೆ ರೋಹಿಣಿ ಮುಂತಾದ ಗೋಪಿಕಾವನಿತೆಯರು ಬಂದ ಭಯದಿಂದ ನೋಡುತ್ತ ನಿಂತರು. ನಂದಾದಿಗೋಪಾಲರು ಆಶ್ಚರ್ಯದಿಂದ ಬಂಡಿಯು ತಾನಾಗಿ ಉರುಳಿದುದು ಹೇಗೆ? ಎಂದು ನುಡಿಯುತ್ತಾ ಸುತ್ತುಗಟ್ಟಿ ನಿಂತರು. ಆಗ ಚಿಕ್ಕ ಬಾಲಕರು ಅವರನ್ನು ನೋಡಿ 'ಈ ಕೂಸು ಅಳುತ್ತಾ ಒದೆದುದರಿಂದ ಬಂಡಿಯು ಮುರಿಯಿತು' ಎಂದು ನುಡಿದರು. ಹುಡುಗರ ಮಾತೆಂದು ಅದನ್ನು ನಂಬದೆ, ನಂದಾದಿಗಳು ಕೂಸನ್ನೆತ್ತಿ ಯಶೋದೆಯ ಕೈಲಿಟ್ಟರು. ಅನಂತನು ಅಪ್ರಮೇಯನು ಆದ ಸ್ವಾಮಿಯ ಬಲವನ್ನು ಅವರೆಂತು ತಿಳಿಯುವರು? ರಾಜನ್! ಇಂತು ಶಕಟಾಸುರ ವೈರಿಯನ್ನು ಕರೆದೆತ್ತಿ, ರಕ್ಷೆಯನ್ನು, ಮಾಡಿ, ಯಶೋದೆ ಗ್ರಹಶಾಂತಿಯನ್ನು ಮಾಡಿಸಿದಳು.

ಬ್ರಾಹ್ಮಣರು ಸ್ವಸ್ತಿವಾಚನ ರಕ್ಷಾಸೂಕ್ತಗಳನ್ನು ಪಠಿಸಿ, ಹೋಮಿಸಿದರು ದಧ್ಯಕ್ಷತೆಗಳಿಂದಲು ಕುಶಾಗ್ರಜಲದಿಂದಲು ಶ್ರೀಕೃಷ್ಣನಿಗೆ ಪ್ರೋಕ್ಷಿಸಿ, ಆಶೀರ್ವದಿಸಿದರು.

ಅಸತ್ಯ, ದಂಭ, ಅಸೂಯೆ, ಹಿಂಸೆ, ದುರಭಿಮಾನ, ಮೊದಲಾದ ದೋಷಗಳಿಲ್ಲದೆ ಸತ್ಯ ಶೀಲರಾದ ವಿಪ್ರವರರ ಆಶೀರ್ವಾದವು ಎಂದಿಗೂ ವ್ಯರ್ಥವಲ್ಲ! ನಂದಗೋಪನಿಂತು ಸಮಾಹಿತ ನಾಗಿ ವಿಹಿತಸ್ವಸ್ತಿವಾಚನವನ್ನಾಚರಿಸಿ, ವಿಪ್ರರನ್ನು ಅನ್ನಾದಿಗಳಿಂದ ಸಂತೋಷಪಡಿಸಿದನು. ಬಂಗಾರದ ಸರಗಳಿಂದ, ಪೀತಾಂಬರಗಳಿಂದ ಅಲಂಕರಿಸಿದ ಗೋವುಗಳನ್ನು ಅವರಿಗಿತ್ತು, ಮಗನಿಗೆ ಮಹೋದಯವಾಗಲೆಂದು ಬೇಡಿ ಕೊಂಡನು. ಹಾಗೂ ಬಲರಾಮನಿಗೂ ವಿಪ್ರರಿಗೂ ಆಶೀರ್ವಚನಗಳನ್ನು ಕೊಡಿಸಿದನು; ಮಂತ್ರಾರ್ಥವಿದರಾದ ಸದ್ವಿಪ್ರರ ಆಶೀರ್ವಚನವು ವ್ಯರ್ಥ ವಾಗುವುದಿಲ್ಲವೆಂದು ನಂಬಿ, ಸಂತಸ ದಿಂದ ನಿವಸಿಸಿದನು.

ಒಂದು ದಿನ ಯಶೋದೆಯು, ಮಗನನ್ನು ತೊಡೆಯಮೇಲಿಟ್ಟು ಲಾಲಿಸುತ್ತಿರಲು, ಇದ್ದಕ್ಕಿದ್ದಂತೆ ಬೆಟ್ಟದಂತೆ ಭಾರವಾಗಿ ತೋರಿದ ಕೃಷ್ಣನನ್ನು ಕೆಳಗಿಟ್ಟಳು. ಮಹಾಪುರುಷನಿವನೆಂದು ಚಿಂತಿಸುತ್ತಾ, ಮನೆ ಕೆಲಸವನ್ನು ಮಾಡಲು ಹೊರಟಾಗ, ತೃಣಾವರ್ತನೆಂಬ ದೈತ್ಯನು ಸುಂಟರ ಗಾಳಿಯ ರೂಪದಿಂದ ಬಂದು, ಅಲ್ಲಿದ್ದ ಕೃಷ್ಣನನ್ನೆತ್ತಿಕೊಂಡು ಮೇಲಕ್ಕೆ ಹಾರಿಹೋದನು. ಅವನು ಬಂದಾಗ ಧೂಳಿಯಿಂದ ಗೋಕುಲವಾಸಿಗಳು ಕಣ್ಣುಕಾಣದಂತಾಗಿ, ಕಂಗೆಟ್ಟು, ಅವನ ಕಠೋರಶಬ್ದದಿಂದ ದಿಗ್ಭ್ರಾಂತರಾಗಿ, ಮುಂದಿರುವ ವಸ್ತುಗಳನ್ನೂ ಕಾಣಲಾರದೆ ನಿಂತರು. ಯಶೋದೆಯು ತಾನಿಟ್ಟಲ್ಲಿ ಮಗನನ್ನು ಕಾಣದೆ, ರೋದಿಸಿದಳು. ಸತ್ತ ಕರುವನ್ನು ನೋಡಿ ಅಳುವ ಆವಿನಂತೆ, ಹೊರಳಾಡಿ ಗೋಳಿಡುವ ಯಶೋದೆಯನ್ನು ಸಮೀಪಿಸಿ, ಇತರ ತರುಣಿಯರು, ತಾವೂ ಕಣ್ಣೀರಿಟ್ಟು, ಗೋಗರೆದರು.

ಆಗ ಧೂಳಿಯ ಮಳೆಯು ಶಾಂತವಾಯಿತು. ಗಾಳಿಯು ನಿಂತಿತು. ಆದರೂ ನಂದನಂದನನು ಕಾಣಬಾರದಾಗಲು, ದುಃಖದಿಂದ ಯಶೋದಾದಿ ರಮಣಿಯರು ಮಗುವನ್ನು ಹುಡುಕ ತೊಡಗಿ ದರು.

ತೃಣಾವರ್ತನು ಕೃಷ್ಣನನ್ನೆತ್ತಿ ಆಕಾಶಕ್ಕೆ ಹಾರುವಾಗ, ಭಾರವಾದ ಮಗುವನ್ನು ಹೊರಲಾರದೆ 'ಮಗುವೆಂದು ತಿಳಿದು, ದೂಳಿಯಿಂದ ಕಣ್ಣು ಕಳೆದುಕೊಂಡಂತಾಗಿ ಬಂಡೆಯನ್ನೆತ್ತಿ ತಂದೆ

ನೇನೋ'? ಎಂದು ತಿಳಿದು ಭ್ರಾಂತನಾದನು; ಕೆಳಗೆ ಬಿಸುಟಲು ಪ್ರಯತ್ನಿಸಿದರೂ, ಅಚ್ಯುತಬಾಲನ ಹಿಡಿತದಿಂದ, ಬಿಡಿಸಿಕೊಳ್ಳಲಾರದೆ, ಕುತ್ತಿಗೆಗೆ ಬಿಗಿದಿದ್ದ ಹರಿಯ ಚರಣಗಳಿಗೆ ಸಿಲುಕಿ, ಉಸಿರಾಡದಂತಾಗಿ, ಕೆಳಗೆ ಬಿದ್ದನು. ಎಂದಿಗೂ ಕೆಳಗೆ ಬೀಳದಿರುವನಾದ್ದರಿಂದ ಅಧೋಕ್ಷಜನೆನಿಸಿದ ಶ್ರೀಶನು. ಅವನನ್ನು ಕೆಳಗಿದ್ದ ಬಂಡೆಯಮೇಲೆ ಕೆಡಹಿ, ಅವನ ಮೈಮೇಲೆ ತಾನು ಧುಮುಕಿದನು. ಸರ್ವಾವಯವಗಳು ಮುರಿದು ಚೂರಾಗಲು ಬಿದ್ದ ರಾಕ್ಷಸನನ್ನು ನೋಡಿ ಗೋಪವನಿತೆಯರು ರುದ್ರಶರದಿಂದ ಬಿದ್ದ ತ್ರಿಪುರಗಳಂತಿದ್ದ ಭಯಂಕರ ರೂಪದಿಂದ ಹೆದರಿ ದೂರ ನಿಂತರು. ಅವನ ಮೇಲಾಡುತ್ತಿದ್ದ ಕೃಷ್ಣನನ್ನು ನಂದನು ತಂದನು; ಮೃತ್ಯುಮುಖವನ್ನು ಹೊಕ್ಕು ಹೊರಬಂದ ನಂದನನಿಗೆ ಸ್ವಸ್ತಿಯನ್ನು ಮಾಡಿಸಿ, ಸರ್ವಗೋಪಾಲಕರು ಪ್ರಮೋದಭರಿತರಾದರು.

'ಆಹಾ! ಈ ಕೂಸನ್ನು ಕೊಲ್ಲಲು ಬಂದ ರಾಕ್ಕಸನು ತನ್ನ ಪಾಪದಿಂದ ತಾನೇ ಸತ್ತನು. ಈ ಮಗುವು ಉಳಿದಿ ಬಂದುದು ಆಶ್ಚರ್ಯವೇ ಸರಿ! ಯಾವ ಜನುಮದಿ ಮಾಡಿದ ಜನಾರ್ದನನ ಪೂಜೆಯ ಫಲವೋ? ಯಾವ ತಪಸ್ಸಿನ ಸಿದ್ಧಿಯೋ? ಪೂರ್ತೇಷ್ಟ ದಾನಾದಿಗಳನ್ನು ಮಾಡಿದ ನಮ್ಮ ಹಿರಿಯರ ಪುಣ್ಯವೋ? ಅಥವಾ ನಾವೇ ಸಾಧುಜನರಿಗೆ ಮಾಡಿದ ಪೂಜಾಶ್ರೇಯವೋ? ಇಲ್ಲದಿರೆ ಸತ್ತನೆಂದು ಆಶೆಯನ್ನು ಬಿಟ್ಟಿದ ಬಾಲಕನು ಮತ್ತೆ ನಮಗೆ ದಕ್ಕುತ್ತಿದ್ದನೇ?'

ಇಂದು ಬಹುವಿಪರೀತಗಳನ್ನು ವ್ರಜದಲ್ಲಿ ಕಂಡು ನಂದನು ಬಾರಿಬಾರಿಗೂ ವಸುದೇವನ ನುಡಿಗಳನ್ನು ಸ್ಮರಿಸಿ, ಆಶ್ಚರ್ಯಚಕಿತನಾಗುತ್ತಿದ್ದನು.

ಒಂದು ದಿನ ಕೃಷ್ಣನಿಗೆ ಹಾಲನ್ನೀಯುತ್ತಾ ಕುಳಿತಿದ್ದ ಯಶೋದೆ, ಸ್ನೇಹದಿಂದ ಹರಿದುಹೋಗುವ ಹಾಲನ್ನು ಕುಡಿಯದೆ, ಕಿರುನಗೆಯನ್ನು ಬೀರಿ ತನ್ನನ್ನು ನೋಡುವ ಮುದ್ದು ಬಾಲನನ್ನು ಮುದ್ದಾಡಿ, ನೋಡುತ್ತಿರಲು, ಕೃಷ್ಣನು 'ಆ' ಎಂದು ಆಕಳಿಸಿ, ಬಾಯನ್ನು ತೆಗೆದನು. ಅವನ ಮುಖದಲ್ಲಿ ಆಕಾಶ-ಅಂತರಿಕ್ಷ, ಜ್ಯೋತಿಶ್ಚಕ್ರ ದಿಕ್ಕುಗಳು, ಸೂರ್ಯಚಂದ್ರ ನಕ್ಷತ್ರಗಳು, ಸಮುದ್ರ ಪರ್ವತಗಳು, ದ್ವೀಪನದಿಗಳು, ವನಗಳು, ಚರಾಚರ ಜೀವಸಮುದಾಯ ಮುಂತಾದ ಬ್ರಹ್ಮಾಂಡವನ್ನು ಕಂಡು, ಯಶೋದೆ ಕಣ್ಣುಮುಚ್ಚಿ ಭಯದಿಂದ ನಡುಗಿದಳು; ಮತ್ತೆ ಕಣ್ತೆರೆದು, ನಗುತ್ತ ನಿಂತ ಕುಮಾರನನ್ನು ಕಂಡು, ವಿಸ್ಮಿತಳಾಗಿ ಲಾಲಿಸಿದಳು.

## ೮. ನಾಮಕರಣ - ಕೃಷ್ಣಬಾಲಲೀಲೆ - ಮೃದ್ಭಕ್ಷಣ

ಶ್ರೀ ಬಾದರಾಯಣಿಯು ಹೇಳಿದನು–

ಒಂದು ದಿನ ಯಾದವರ ಪುರೋಹಿತನು, ಮಹಾತಪಸ್ವಿಯು, ಜ್ಯೋತಿಶ್ಶಾಸ್ತ್ರ ವಿಶಾರದನು ಆದ ಗರ್ಗಾಚಾರ್ಯನು ನಂದನ ಮನೆಗೆ ಬಂದನು. ವಸುದೇವನೇ ಅವನನ್ನು ಕಳಿಸಿದ್ದನು. ನಂದನು ಆಚಾರ್ಯರನ್ನು ಕಂಡು ಪ್ರೀತನಾಗಿ, ಎದುರ್ಗೊಂಡು ಕರೆತಂದು, ಶ್ರೀಹರಿಯ ಸನ್ನಿಧಾನ ವಿಶೇಷಪಾತ್ರವೆಂದು, ವಂದಿಸಿ ಪೂಜಿಸಿದನು. ಆತಿಥ್ಯವನ್ನಿತ್ತು, ಕೂಡಿಸಿ, ಕೈಜೋಡಿಸಿ ಮಧುರವಾದ ವಚನಗಳಿಂದಿಂತೆಂದನು–

'ಬ್ರಾಹ್ಮಣಶ್ರೇಷ್ಠನೇ! ಕೃತಕೃತ್ಯನಾಗಿ ಪರಾಪೇಕ್ಷಾರಹಿತನಾದ ನಿನಗೆ ನನ್ನಿಂದೇನಾಗಬೇಕು. ಆದರೂ ನಿನ್ನಂತಹ ಮಹಾತ್ಮರು, ಗೃಹಸ್ಥಾಶ್ರಮದ ತಾಪತ್ರಯದಿಂದ ನೊಂದು ಬೆಂಡಾದ

ನಮ್ಮಂತಹ ದೀನರನ್ನು ಜ್ಞಾನವನ್ನಿತ್ತು, ಉದ್ಧರಿಸಲು ಸಂಚರಿಸುತ್ತಿರುವರು. ತ್ರಿಕಾಲವಿಷಯಕ ಜ್ಞಾನವನ್ನು ಕೊಡು ಜ್ಯೋತಿಶ್ಶಾಸ್ತ್ರವನ್ನು ರಚಿಸಿ ಲೋಕೋಪಕಾರವನ್ನು ಮಾಡಿರುವೆ. ಬ್ರಹ್ಮ ಜ್ಞಾನಿಗಳಲ್ಲಿ ಶ್ರೇಷ್ಠನೂ ಆಗಿರುವೆ. ಈ ನನ್ನ ಬಾಲರಿಗೆ ನಾಮಕರಣ ಸಂಸ್ಕಾರವನ್ನು ಮಾಡೆಂದು ಬೇಡುತ್ತಿರುವೆನು. ಇತರ ವರ್ಣದವರಿಗೆ ಬ್ರಾಹ್ಮಣನು ಗುರುವಲ್ಲವೇ?

ಅದನ್ನು ಕೇಳಿ ಗರ್ಗನಿಂತು ನುಡಿದನು–

ನಾನು ಯಾದವರಿಗಾಚಾರ್ಯನು; ಇದು ಜಗತ್ಪ್ರಸಿದ್ಧವಾದ ವಿಷಯವು. ನಾನು ನಿನ್ನ ಮಗನಿಗೆ ಸಂಸ್ಕಾರವನ್ನು ಮಾಡಿದೊಡನೆಯೇ, ಕಂಸನು ಅವನನ್ನು ದೇವಕೀಸುತನೆಂದರಿತು, ನಿನ್ನ ಮಗನ ಕೇಡನ್ನೆಣಿಸಬಹುದು. ದೇವಕಿಯ ಅಷ್ಟಮ ಗರ್ಭದಲ್ಲಿ ಸ್ತ್ರೀ ಶಿಶುವು ಆಗಲು ಶಕ್ಯವಿಲ್ಲ. ಅವಳ ಅಷ್ಟಮಸುತನೇ ವಸುದೇವ ಸಖನಾದ ನಿನ್ನಲ್ಲಿ ಬೆಳೆಯುತ್ತಿರುವನೆಂದು– ಆಗಸದಿ ನಿಂತು ಪೇಳಿದ ದುರ್ಗಾವಚನದಿಂದಲೂ ನಿಶ್ಚಯಿಸಿ– ಬಂದು ಅನರ್ಥವನ್ನು ಮಾಡ ಬಹುದು. ನನಗೇಕೆ ಆ ಅಪರಾಧ? ನಾನು ಸಂಸ್ಕಾರವನ್ನು ಮಾಡದಿರುವುದೇ ಲೇಸು– ಎನ್ನಲು, ನಂದನು 'ಸ್ವಾಮೀ! ಯಾರಿಗೂ ಕಾಣದಂತೆ ರಹಸ್ಯವಾಗಿ ದ್ವಿಜಾತಿ ಸಂಸ್ಕಾರವನ್ನು ಮಾಡು! ಸ್ವಸ್ತಿವಾಚನಾದಿಗಳಿಂದ ನನ್ನ ಮಗನಿಗೆ ಶ್ರೇಯವಾಗಲಿ! ನನ್ನವರಿಗೂ ತಿಳಿಸದೆ ನಾಮಕರಣವನ್ನು ಮಾಡಿ ಮುಗಿಸೋಣ' ಎಂದನು.

ಸಂಸ್ಕಾರವನ್ನು ಮಾಡಲೆಂದೇ ಬಂದ ಗರ್ಗನ ನಂದನ ಮಾತಿಗೊಪ್ಪಿ, ರಹಸ್ಯಸ್ಥಲದಲ್ಲಿ ಬಾಲರಿಗೆ ನಾಮಕರಣವನ್ನು ಮಾಡಿ ಇಂತೆಂದನು–

ಈ ರೋಹಿಣೀಸುತನು, ತನ್ನವರಿಗೆ, ಸುಗುಣವಂತನಾಗಿ ಆನಂದವನ್ನು ತರುವನು; ಬಲದಿಂದ ಅಧಿಕನೆಂದು ಪೆಸರಾಗುವನು; ಆದ್ದರಿಂದ ಇವನನ್ನು ಬಲರಾಮನೆಂದು ಕರೆಯು ವರು. ಯಾದವರಿಗೆ ಐಕ್ಯಮತ್ಯವನ್ನು ತಂದು, ಸೇರಿಸುವುದರಿಂದ ಇವನನ್ನು ಸಂಕರ್ಷಣ ನೆನ್ನುವರು.

ಇವನು– ಈ ಕಪ್ಪಾಗಿರುವ ನಿನ್ನ ಮಗು– ಹಿಂದೆ ಶುಕ್ಲನು, ಪೀತನು ರಕ್ತನು ಆಗಿದ್ದನು. ಮೊದಲು ಇವನು ವಸುದೇವನ ಮಗನೇ ಆಗಿದ್ದು, ಈಗ ನಿನ್ನ ಮಗನಾಗಿರುವನು. ಜ್ಞಾನಿಗಳು ಇವನನ್ನು ವಾಸುದೇವನೆಂಬುವರು. ನಿನ್ನ ಮಗನ ನಾಮರೂಪಕ್ರಿಯೆಗಳು ಅನಂತವಾಗಿವೆ. ಅವನ್ನು ಬ್ರಹ್ಮನೊಬ್ಬನೇ ತಿಳಿದಿರುವನು-ರುದ್ರನೂ ತಿಳಿದಿರುವನು-ನನಗೂ ಸ್ವಲ್ಪ ತಿಳಿದಿದೆ. ಇವನಿಂದ ಗೋಕುಲವು ಆನಂದಪೂರ್ಣವಾಗುವುದು. ಇವನಿಂದ ನಿಮಗೆ ಶ್ರೇಯಸ್ಸಾಗುವುದು. ಇವನಿಂದ ನಿಮ್ಮ ಸರ್ವಕಷ್ಟಗಳು ನಷ್ಟವಾಗುವುವು. ನಂದರಾಜನೇ! ಕೇಳು, ಹಿಂದೆ ಅರಾಜಕ ವಾದಾಗ ಪೀಡೆಗೊಳಗಾದ ಪ್ರಜರು, ಇವನಿಂದ ಪೃಥುಪರಾಕ್ರಮರೆನಿಸಿ, ಕಳ್ಳಕಾಕರನ್ನೋಡಿಸಿ ಸುಖಿಸಿದರು. ಇವನನ್ನು ಪ್ರೀತಿಸುವ ಮಾನವರು, ವಿಷ್ಣುಪಕ್ಷಾಶ್ರಯವನ್ನು ಪಡೆದ ದೇವತೆಗಳು ರಾಕ್ಷಸರನ್ನಂತೆ, ತಮ್ಮ ಶತ್ರುಗಳನ್ನು ಸದೆಬಡಿದು, ಮಹಾಭಾಗ್ಯವಂತರಾಗುವರು. ಈ ನಿನ್ನ ಮಗನು ಗುಣಗಳಲ್ಲಿ ನಾರಾಯಣ ಸಮನೆಂದು ತಿಳಿ. ಶ್ರದ್ಧೆಯಿಂದ ಸಲಹಿ, ದಿವ್ಯಕೀರ್ತಿಯನ್ನೂ ಶ್ರೇಯಸ್ಸನ್ನೂ ಹೊಂದು, ಎಂದು ಹೇಳಿ ಗರ್ಗನು ಹೊರಟು ಹೋದನು. ಸಮಾಧಿಕರಹಿತನಾದ ನಾರಾಯಣನೇ ತನ್ನ ಮಗನೆಂದು, ನಂದನು ಆನಂದದಿಂದ ಕೃತ್ಯಕೃತ್ಯನಾದೆನೆಂದು ತಿಳಿದನು.

ಕೆಲಕಾಲ ಕಳೆಯಲು ರಾಮಕೃಷ್ಣರು ಅಂಬೆಗಾಲಿಟ್ಟು, ಸಂಚರಿಸತೊಡಗಿದರು. ಕಾಲಿನ ಗೆಜ್ಜೆಗಳು ಗಲುಗಲ್ಲೆಂದು ಮೊಳಗಲು, ಕಾಲನ್ನೆಳೆದುಕೊಂಡು, ಹಿಂದೆ ಬ್ರಹ್ಮಾಂಡವನ್ನೊಳ

ಗೊಂಡು ಈಗ ಬಡವಾದಂತಿರುವ ಹೊಟ್ಟೆಯನ್ನು ಹೆರರಿಗೆ ನೋಡಿಸದಿರುವವನೆಂಬಂತೆ, ಅಂಬೆಗಾಲಿಟ್ಟು ಬಂದು, ಕೃಷ್ಣನು ಗಂಜಲ, ಸೆಗಣಿಗಳಲ್ಲಿ ನಡೆಯಾಡುತ್ತಾ, ಅಲ್ಲಿಂದ ಹೆದರಿದ ವನಂತೆ ತಾಯಿಯನ್ನು ಸೇರಬರುತ್ತಿದ್ದನು. ಶ್ರೀಹರಿಯ ವಿಡಂಬನವು ಮೋಹಕವಾಗಿತ್ತು. ರಾಜನ್! ಕೆಸರಿನಿಂದ ಮತ್ತಿಷ್ಟು ಕಪ್ಪಾದರೂ ಮುದ್ದಾಗಿ ಕಂಡ ಮಕ್ಕಳನ್ನೆತ್ತಿ, ಯಶೋದಾ ರೋಹಿಣಿಯರು, ಮೊಲೆಯನ್ನುಣಿಸಿ, ಕುಡಿಯದೆ ನಸುನಗುತ್ತಾ ನೂತನ ದಂತಕಾಂತಿಯನ್ನು ತೋರಿ ಮೋಹಿಸುವ ಮಕ್ಕಳನ್ನು ಮುದ್ದಾಡಿ ಹಿಗ್ಗುತ್ತಿದ್ದರು, ಆ ರಮಣಿಯರು. ಅತಿ ರಮಣೀಯ ಬಾಲಲೀಲೆಗಳನ್ನು ತೆರುತ್ತಾ ಗೋಕುಲದ ಕರುಗಳ ಬಾಲಗಳನ್ನು ಸೆಳೆದಾಡುವ ಬಾಲರನ್ನು ನೋಡಿ, ನಗುತ್ತಾ ನಿಂತು, ಮನೆಕೆಲಸಗಳನ್ನು ಮರೆತುಬಿಡುತ್ತಿದ್ದರು.

'ಆಕಳನ್ನು ಸಮೀಪಿಸಬೇಡ, ತಿವಿದೀತು. ಅಗ್ನಿಷ್ಟಕೆಯನ್ನು ಮುಟ್ಟಬೇಡ, ಸುಟ್ಟೀತು; ಕೃಷ್ಣಾ! ನಾಯಿಯ ಬಾಲವನ್ನು ಜಗ್ಗಬೇಡ, ಕಚ್ಚೀತು; ಮೂಲೆ ಸೇರಬೇಡ; ಚೇಳಿದ್ದೀತು; ಬಾವಿಯ ಹತ್ತಿರ ಬರಬೇಡ, ಅಲ್ಲಿ ಮುಳ್ಳಿದೆ, ಆ ಹುತ್ತಿನಲ್ಲಿ ಹಾವಿದೆ, ಇಲ್ಲಿ ಸೆಗಣಿ' ಎಂದು ಬಾಲಕರನ್ನು ನಿರ್ಬಂಧಿಸುವುದರಲ್ಲೇ ಕಾಲವೆಲ್ಲವೂ ಕಳೆದು ಹೋಗಲು, ಮನೆಕಲಸಕ್ಕೆ ಹೊತ್ತಿಲ್ಲದೆ, ಅವರು ಪೇಚಾಡುತ್ತಿದ್ದರು.

ಇನ್ನು ಕೆಲಕಾಲವಾಗಲು, ಕೃಷ್ಣರಾಮರು ನಿಂತು ಓಡಾಡಿದರು. ಬ್ರಹ್ಮಾಂಡಭುವನಾರಂಭ ಮೂಲಸ್ತಂಭಾದ ಶ್ರೀಹರಿಯು ಗೋಡೆಯನ್ನೋ ತಾಯಿಯ ಬೆರಳನ್ನೋ ಪಿಡಿದು, ನಿಂತು, ಪುಟ್ಟಕಾಲಿನ ಗುರ್ತುಗಳಿಂದ ಗೋಕುಲವನ್ನು ಪಾವನಗೊಳಿಸಿದನು.

ಮನುಜ ಬಾಲಕರಿಗೆ ಆದಂತೆ ಐದು ವರ್ಷದವನಂತಾದಾಗ ಕೃಷ್ಣನು ಗೋಕುಲದಲ್ಲಿ ತೋರಿದ ರಮಣೀಯ ವಿಲಾಸಗಳಿಂದ ಪ್ರಹರ್ಷಿತರಾದ ಗೋಪರಮಣೀಯರು ಬಂದು, ಯಶೋದೆಯ ಮುಂದೆ, ನಂದನಂದನನನ್ನು ನಿಂದಿಸಿದರು-

ಯಶೋದೇ! ಸಮಯವಲ್ಲದ ಸಮಯದಲ್ಲಿ ಕರುಗಳನ್ನು ಬಿಚ್ಚಿ, ಹಾಲನ್ನು ಉಣಿಸಿದನೇ!

ಗೋಪೀ! ಸಿಟ್ಟಾಗಿ ಹಾಗೇಕೆ ಮಾಡುವೆ ಎಂದರೆ ನಕ್ಕು ನಗಿಸಿದವನೇ, ನೋಡೆ!

ಇವನಿಗೆ ಗೊತ್ತಿಲ್ಲದ ಚೋರಯೋಗವಿಲ್ಲ ನೋಡು. ನಮ್ಮ ಮನೆಯ ಹಾಲು ಮೊಸರು ಬೆಣ್ಣೆಗಳಿಗೆ ಉಳಿಗಾಲವಿಲ್ಲ. ತಾನು ತಿನ್ನಲಿ, ಸ್ನೇಹಿತರಿಗೂ ನೀಡಲಿ, ಆದರೆ ಕೋತಿಗಳಿಗೂ ಬೆಕ್ಕುಗಳಿಗೂ ಚೆಲ್ಲಿ ಈಡಾಡುವುದು ನ್ಯಾಯವೇ?

ಮನೆಯಲ್ಲಿ ಹಾಲು ಮೊಸರು ಇಡದಿರೆ, ನೋಡಿ ಸಿಟ್ಟಿನಿಂದ ಗಡಿಗೆಗಳನ್ನು ಒಡೆದು ಚೂರುಮಾಡಿದ ಈ ಚೋರನನ್ನು ದಂಡಿಸದೆ ಬಿಡೆವು.

ನನ್ನ ಮನೆಯಲ್ಲಿ ಬೆಣ್ಣೆಯನ್ನು ಕಾಣದೆ ಸಿಟ್ಟಾಗಿ, ತೊಟ್ಟಿಲಲ್ಲಿಟ್ಟ ಪುಟ್ಟ ಮಗುವನ್ನು ಚಿಟ್ಟನೆ ಚೀರುವಂತೆ, ಚುವಟಿದನಲ್ಲ!

ಕೈಗೆ ನಿಲುಕದ ನೆಲುವಿನಲ್ಲಿಟ್ಟ ಮೊಸರಗಡಿಗೆಯನ್ನು– ಪೀಠವನ್ನೂ, ಪೀಠದ ಮೇಲೆ ಒರಳನ್ನೂ ಇಟ್ಟು, ಅದರಮೇಲೆ ನಿಂತು, ಕೆಳಗಿಳಿಸಿ, ಕುಡಿದು ಒಡೆಯುವುದೇ!

ಮಡಿಕೋಲು ಮಡಿಕೆಗೆ ತೂತುಮಾಡಲು ಇಟ್ಟಿರುವೆವೇ? ಕತ್ತಲ ಕೋಣೆಯಲ್ಲಿಟ್ಟರೂ ಹಾಲು ಮೊಸರೂ ಉಳಿಯುತ್ತಿಲ್ಲ. ಒಳಗೆ ಬಂದೊಡನೆ ಕಣ್ಣಿಂದ ಸೂರ್ಯನನ್ನು ಪುಟ್ಟಿಸುವ ನಿನ್ನ ದುಷ್ಟ ಸುತನ ಎದುರಲ್ಲಿ ಅಂಧಕಾರವು ನಿಲ್ಲುವುದೇ?

ಯಶೋದೇ! ನಿನ್ನ ಮಗನ ಹೊಟ್ಟೆಯಲ್ಲಿ ಭೂತಗಳಿರಬೇಕು. ಇಲ್ಲದಿರೆ ಅಷ್ಟು ಮೊಸರು ಕುಡಿಯಲು ಸಾಧ್ಯವೇ? ಹಿಂದಿನಿಂದ ಹಿಡಿಯಹೋದರೆ ಬೆನ್ನಿಂದ ನೋಡಿ ಓಡುವನಮ್ಮಾ! ಹೊಸ್ತಿಲಮೇಲೆ ಹೇಸಿಗೆ ಮಾಡಿದನಲ್ಲ! ಒಂದು ಸಲ ನೀನು ಒರಳಿಗೆ ಕಟ್ಟಿದರೆ ಗಿಡಗಳನ್ನು ಕೆಡಹಿದ ಕಡು ದುಷ್ಟನನ್ನು ಮನೆಯ ಕಂಬಕ್ಕೆ ಕಟ್ಟಲು ಹೆದರುತ್ತಿರುವೆವು. ಇವನನ್ನು ಹಿಡಿಯಲು ನಾವು ಪಟ್ಟ ಬವಣೆ ಹೇಳತೀರದು. ಇವನಿಗೆ ಹೊತ್ತಿಲ್ಲ– ನಿದ್ದೆಯಿಲ್ಲ– ನೀರಡಿಕೆಯಿಲ್ಲ– ಭಯವಿಲ್ಲ– ಯಾವಾಗಲೂ ಕಾಡಿಸಿ ಪೀಡಿಸುವ ಇವನ ಚಿಂತೆಯಿಂದ ನಮಗೆ ಮನೆಕೆಲಸವು ನಿಂತುಹೋಗುತ್ತಿದೆ.

– ಎಂದು ಗೋಪಸುಂದರಿಯರು, ಪ್ರೇಮದಿಂದ ಆಡಿದ ಚಾಡಿಯ ಮಾತನ್ನು ಕೇಳುತ್ತಾ ಯಶೋದೆಯು ನಸುನಕ್ಕು, ಭಯಪಟ್ಟವನಂತೆ ಗೋಪಿಯರನ್ನು ನೋಡುತ್ತ ನಿಂತ ಮಗನನ್ನು ದಂಡಿಸಲು ಕೈಬಾರದೆ, ಕರದೆತ್ತಿ ಮುದ್ದಾಡಿ, ಗೋಪಿಯರನ್ನು ಬೈದು ಕಳಿಸಿದಳು.

ಒಂದು ಸಲ ಆಟವಾಡುತ್ತಾ ಶ್ರೀಕೃಷ್ಣನಿಗೆ ಸೋತು ಬಲರಾಮಾದಿ ಗೋಪಬಾಲರು ಓಡಿಬಂದು, ಯಶೋದೆಯ ಮುಂದೆ 'ಕೃಷ್ಣನು ಮಣ್ಣನ್ನು ತಿಂದನು' ಎಂದಾ ಚಾಡಿಯನ್ನು ಹೇಳಿ, ದಂಡಿಸುವಳೇನೋ ನೋಡಬೇಕೆಂದು ನಿಂತರು. ಮಣ್ಣು ತಿಂದವರ ಹೊಟ್ಟೆ ಕೆಡುವು ದೆಂದರಿತಿದ್ದ ಯಶೋದೆಯು ಸಿಟ್ಟಾಗಿ, ಕೃಷ್ಣನ ಕೈಯನ್ನು ಸೆಳೆದು ಪಿಡಿದು, ಹೆದರಿಸುತ್ತಾ 'ಕೃಷ್ಣಾ! ಏನು ದಾರಿದ್ರ್ಯವೋ? ಮನೆಯಲ್ಲಿ ಹಾಲು ಮೊಸರು ಬೆಣ್ಣೆ ತುಂಬಿರಲು ಮಣ್ಣನ್ನೇಕೆ ತಿಂದೆ? ಹೇಳು! ಯಾರಿಗೂ ಕಾಣದಂತೆ ಮಣ್ಣನ್ನು ತಿಂದದ್ದೇಕೋ? ನಿನ್ನ ಸ್ನೇಹಿತರು ಹೇಳುತ್ತಿರು ವರು. ಹೋಗಲಿ! ಅವರ ಮಾತು ಸುಳ್ಳೆಂದರೆ ನಿನ್ನ ಅಣ್ಣನೂ ಹೇಳುತ್ತಿರುವನಲ್ಲ' ಎಂದು ನುಡಿಯಲು ನಡುಗುತ್ತಾ ಕಣ್ಣನ್ನು ಪಿಳಿಪಿಳಿ ಬಿಡುತ್ತಾ, ಕೃಷ್ಣನಿಂತೆಂದನು–

ಅಮ್ಮ! ಇಲ್ಲವೇ. ನಾನು ಮಣ್ಣು ತಿಂದಿಲ್ಲ. ಇವರೆಲ್ಲರೂ ಸುಳ್ಳಾಡುತ್ತಿರುವರು. ನಾನೊಬ್ಬನೇ ಸತ್ಯಸಂಕಲ್ಪನು. ಕೇಳು, ಮಣ್ಣುತಿಂದವನ ಮುಖದಿಂದ ಮಣ್ಣಿನ ವಾಸನೆ ಬರದಿರುವುದೇ? ಎದುರಿಗೇ ನಿಂತಿರುವೆನಲ್ಲ! ನೋಡೆನ್ನ ಮುಖಗಂಧವನ್ನು!

ಆ ಮಾತನ್ನಾಲಿಸಿ ಯಶೋದೆಯು 'ತೆಗಿ ಬಾಯನ್ನು' ಎಂದಳು. ರಾಜನ್! ಅನುಪಹತ ಬಲವೀರ್ಯ ಜ್ಞಾನಾದ್ಯೈಶ್ವರ್ಯಯುತನಾದರೂ, ಲೋಕೋದ್ಧಾರಕ್ಕಾಗಿ ಮನುಜ ಬಾಲಕರಂತೆ ಆಟವಾಡುವ ಶ್ರೀಹರಿಯು ತನ್ನ ಬಾಯನ್ನು ತೆರೆದನು. ಏನು ಹೇಳಲಿ! ಅಲ್ಲಿ ಯಶೋದೆಯು ಬ್ರಹ್ಮಾಂಡವನ್ನೇ ಕಂಡಳು!

ಜಂಗಮ ಸ್ಥಾವರ ಜೀವರು, ಆಕಾಶಾದಿ ಪಂಚಭೂತಗಳು, ಪರ್ವತ ನದೀ ಸಮುದ್ರ ದ್ವೀಪಗಳು, ಸೂರ್ಯ ಚಂದ್ರಾಗ್ನಿ ತಾರಕೆಗಳು, ವೈಕಾರಿಕೇಂದ್ರಿಯಗಳು, ಅಹಂಕಾರ ಮಹತ್ಪ್ರಕೃತಿ ಗಳು, ತದಭಿಮಾನಿಸುರರು, ಮೊದಲಾದ, ಕಾಲಕರ್ಮಸಹಿತವಾದ, ಪರಸ್ಪರ ಭಿನ್ನವಾದ ಜಗ ವನ್ನು ಮಗನಲ್ಲಿ ನೋಡಿ, ತೆರೆದಿದ್ದ ಪುಟ್ಟ ಬಾಯಲ್ಲಿ ಜಗವನ್ನಲ್ಲದೆ, ಜಗದಲ್ಲಿ ಭರತ ವರ್ಷವನ್ನು, ಅಲ್ಲಿ ಗೋಕುಲವನ್ನು, ಅದರಲ್ಲಿ ತನ್ನನ್ನು, ತನ್ನ ಮುಂದೆ ಬಾಯ್ತೆರೆದು ನಿಂತ ಕೃಷ್ಣನನ್ನು ನೋಡಿ, ಆಶ್ಚರ್ಯ ಭಯ ಸಂಭ್ರಮಕಾತರಳಾಗಿ ಯಶೋದೆಯು ಇಂತೆಂದಳು–

ಓಹೋ! ಏನಿದು ಸ್ವಪ್ನವೋ? ನಿಜವೋ? ಅಥವಾ ಶ್ರೀಹರಿ ಮಾಯೆಯೋ? ನನಗೆ ಬುದ್ಧಿಯು ಭ್ರಮಿಸಿತೋ? ಈ ಚಿಕ್ಕಮಗುವೆಲ್ಲಿ? ಇವನ ಬಾಯಲ್ಲಿ ಬ್ರಹ್ಮಾಂಡವೆಲ್ಲಿ? ಅಥವಾ ನನ್ನ ಮಗನ ಸ್ವರೂಪಭೂತವಾದ ಮಹದೈಶ್ವರ್ಯ ಸಮೃದ್ಧಿಯೋ? ಇಂತು ಎಂದು, ನಿಶ್ಚಯಿಸಿ

ತಿಳಿಯಲು ಬಾರದಂತಿದೆ. ಚೇತನಮಾನಿ ಬ್ರಹ್ಮ, ಮನೋನಿಯಮಾಕ ರುದ್ರ, ಕರ್ಮಸ್ವಾಮಿ ಇಂದ್ರ, ವಾಕ್ಯಮಾನಿ ಪಾರ್ವತಿ, ಮೊದಲಾದ ದೇವತೆಗಳಿಗೂ ಸಾಕಲ್ಯೇನ ತಿಳಿಯಲು ಬಾರದ, ಜಗಜ್ಜನ್ಮಪಾಲನ ಸಂಹರಣದಕ್ಷನಾದ, ಜೀವಸುಖದುಃಖಪ್ರದನಾದ ಆ ಮಹಾಪುರುಷನ ಚರಣಾರವಿಂದಗಳಿಗೆ ಶರಣಾಗತಳಾಗುತ್ತಿರುವೆನು. ಕೃಷ್ಣ! ಶ್ರೀರಮಣಾ! ನಿನಗೆ ನಮಸ್ಕಾರವು!

'ನಾನು ನಂದನರಾಣಿ; ನಂದರಾಜನು ಗೋಕುಲದೊಡೆಯನು; ಈ ವ್ರಜದ ಐಶ್ವರ್ಯವೆಲ್ಲವೂ ನನ್ನದು; ಗೋಪಾಲಕರು, ಗೋಪಿಯರು ನನ್ನ ಪರಿವಾರ; ಕೃಷ್ಣನು ನನ್ನ ಮಗನು' ಎಂಬ ದುರಭಿಮಾನವನ್ನು ಹಬ್ಬಿಸಿದ ನಾರಾಯಣಾ! ನೀನೇ ನನಗೆ ಗತಿ.

ಇಂತು ತತ್ವಜ್ಞಾನದಿಂದ ಗೋವಿಂದನನ್ನರಿತು ನುಡಿದ ಮಾತೆಗೆ, ಮೋಹವನ್ನೊಡ್ಡಿ ನಗುತ್ತಾ, ಶ್ರೀಕೃಷ್ಣನು 'ನಾನು– ನನ್ನದು' ಎಂಬ ತನ್ನ ಬಂಧಕಶಕ್ತಿಯನ್ನು ಬೀರಿದನು. ಶ್ರೀಹರಿಯ ಶಕ್ತಿಯು ಸ್ನೇಹರೂಪವಾಗಿ ಬಂಧಿಸಿದಾಗ, ಬಿಡಿಸಿಕೊಳ್ಳಲು ಯಾರಿಗೆ ಸಾಧ್ಯ? ತತ್‌ಕ್ಷಣವೇ ಯಶೋದೆಯು 'ಕೃಷ್ಣಾ!' ಎಂದು ಅವನನ್ನೆತ್ತಿ, ತೊಡೆಯಮೇಲಿಟ್ಟು, ಸ್ನೇಹದಿಂದ ಉಕ್ಕಿಬಂದ ಹಾಲನ್ನಿತ್ತು, ಮುದ್ದಾಡಿ ಹರಸಿದಳು.

ರಾಜನ್! ಮೂರು ವೇದಗಳಿಂದ, ಹತ್ತಾರು ಉಪನಿಷದ್ವಚನಗಳಿಂದ, ಪಾಂಚರಾತ್ರಾಗಮ ಬ್ರಹ್ಮತರ್ಕಗಳಿಂದ, ವಿಚಾರಿತವಾದ ಮಹಾಮಹಿಮೆಯಿಂದ ಶೋಭಿಸುವ ಶ್ರೀರಮಣನನ್ನು ಯಶೋದೆಯು ಮಗನೆಂದೇ ತಿಳಿದು ಲಾಲಿಸಿದಳು.

ರಾಜನು ಕೇಳಿದನು–

ಬ್ರಹ್ಮಜ್ಞಾನಿಯೇ! ಯಶೋದಾ ನಂದಗೋಪರು ಪೂರ್ವಜನ್ಮದಲ್ಲಿ ಯಾರು? ಅವರು ಮಾಡಿದ ಮಹತ್ಪುಣ್ಯವಾದರೂ ಎಂತಹದು? ತಾಯಿಯಾದ ದೇವಕಿಗೆ ಇಲ್ಲದ ಕ್ಷೀರದಾನ ಭಾಗ್ಯವು ಯಶೋದೆಗೆ ಸಿಕ್ಕಿತಲ್ಲವೇ? ಅವನ ಬಾಲಲೀಲೆಯನ್ನು ಕಣ್ಣಾರ ಕಂಡು ಧನ್ಯರಾದ ನಂದಯಶೋದೆಯರ ವೃತ್ತಾಂತವನ್ನು ಹೇಳು!

ಶ್ರೀಶುಕನು ಹೇಳಿದನು–

ಅಷ್ಟವಸುಗಳಲ್ಲಿ ಶ್ರೇಷ್ಠನೆನಿಸಿದ ದ್ರೋಣನು ತನ್ನ ಪತ್ನಿಯಾದ ಧರೆಯೊಡನೆ, ಬ್ರಹ್ಮಾಜ್ಞೆಯಂತೆ ಪೃಥಿವಿಯಲ್ಲಿ ಪುಟ್ಟುವಾಗ, ಆ ಚತುರ್ಮುಖನನ್ನಿಂತು ಬೇಡಿದನು–

ದೇವಾಧಿದೇವನಾದ ಶ್ರೀಹರಿಯಲ್ಲಿ ನಮಗೆ ಅಚಂಚಲವಾದ ಭಕ್ತಿಯು ಇರಲಿ! ಭಕ್ತಿಯಿಂದ ನಮ್ಮ ದುಸ್ತರ ಭವಾಂಬುಧಿಯು ಇಂಗಲಿ!

ಚತುರ್ಮುಖನು 'ತಥಾಸ್ತು! ನಿಮಗೆ ಶ್ರೀಶನು ಮಗನಂತೆ ಇರುವನು. ಶ್ರೀಪತಿಯ ಸೇವೆಯಿಂದ ಧನ್ಯರಾಗುವಿರಿ' ಎಂದು ಕಳಿಸಲು, ದ್ರೋಣನೇ ನಂದನಾಗಿಯು, ಧರೆಯೇ ಯಶೋದೆಯಾಗಿಯು ಜನಿಸಿದರು. ಬ್ರಹ್ಮವಚನದಂತೆ ಅವರಿಗೆ ಮಗನಂತಾದ ಶ್ರೀಹರಿಯಲ್ಲಿ ಹೆಚ್ಚಾದ ಭಕ್ತಿಯು ಅಂಕುರಿಸಿತು. ಶ್ರೀಕೃಷ್ಣನು ಚತುರ್ಮುಖನ ವಾಣಿಯನ್ನು ಸತ್ಯವಾಗಿಸಲು, ಮಧುರೆಯಲ್ಲಿ ಪುಟ್ಟಿದರೂ, ವ್ರಜದಲ್ಲಿ ಬಂದು ನೆಲಸಿದನು; ತನ್ನ ಲೀಲೆಗಳಿಂದ ಸಕಲ ಗೋಪಾಲರಿಗೆ, ವಿಶೇಷವಾಗಿ ನಂದ ಯಶೋದೆಯರಿಗೆ ಆನಂದವನ್ನಿತ್ತು ಸಲಹಿದನು.

## ೧೦. ಉಲೂಖಲಬಂಧನ

ಶ್ರೀಶುಕನು ಹೇಳಿದನು–

ಒಂದು ದಿನ ದಾಸಿಯರು ಬೇರೆ ಕೆಲಸಗಳಲ್ಲಿ ತೊಡಗಿರಲು, ಯಶೋದೆಯು ತಾನೇ ಮೊಸರನ್ನು ಕಡೆಯಲಾರಂಭಿಸಿದಳು. ಕೃಷ್ಣನ ಬಾಲಚರಿತೆಗಳನ್ನು ಹಾಡುತ್ತಾ ಮಥಿಸುವ ಗೋಪಿದೇವಿಯು ಪಟ್ಟದುಕೂಲವನ್ನುಟ್ಟ, ದೊಡ್ಡ ಜಘನದಲ್ಲಿ ಕಾಂಚೀಕಲಾಪವನ್ನಿಟ್ಟು, ಸ್ತನಗಳ ಮೇಲಿರುವ ಹಾರಗಳಲ್ಲಾಡುತ್ತಿರಲು, ಹಗ್ಗವನ್ನು ಹಿಡಿದು ಜಗ್ಗುವ ಆಯಾಸದಿಂದ ಉಸ್ಸೆನ್ನುತ್ತಾ ಕಡೆಯುತ್ತಿದ್ದಳು. ಅವಳ ಲಲಾಟಗಗನದಿ, ಶ್ರಮಬಿಂದು ತಾರೆಗಳು ಮೂಡಿದವು; ಕಿವಿಯಲ್ಲಿಟ್ಟ ಬೆಂಡೋಲೆಯ ಕಾಂತಿಯಿಂದ ಮುಖವು ಶೋಭಾ ಸಂಪನ್ನವಾಯಿತು. ಮುಂಗುರುಳನ್ನು ಮೀಟಿ, ಸೆರಗನ್ನು ಸರಿಸಿ, ಮೊಸರನ್ನು ಕಡೆಯುವ ಮಾತೆಯನ್ನು ಸಮೀಪಿಸಿ ಕೃಷ್ಣನು ಹಾಲನ್ನುಣಿಸೆಂದು ಬೇಡಿ, ಕಡೆಗೋಲನ್ನು ಹಿಡಿದು ನಿಲ್ಲಿಸಿದನು. ಅವಳು ಅವನ ಸುಂದರ ವದನಾರವಿಂದ, ಅಲ್ಲಿಂದ ಸೂಸಿಬರುವ ಮಂದಹಾಸಗಳಿಗೆ ಮೋಹಿತಳಾಗಿ, ಅವನನ್ನು ತೊಡೆಯಲ್ಲಿಟ್ಟು, ಮೊಲೆಯನ್ನುಣಿಸುತ್ತಿದ್ದಳು. ಆಗ ಮನೆಯಲ್ಲಿ ಒಲೆಯಮೇಲಿಟ್ಟ ಹಾಲು ಉಕ್ಕುವುದನ್ನು ಕಂಡು, ಯಶೋದೆಯು ಬಾಲನನ್ನು ನೆಲದಮೇಲಿಟ್ಟು, ಒಳಗೆ ಓಡಿದಳು. ಕೃಷ್ಣನು ಅತೃಪ್ತನಾಗಿದ್ದುದರಿಂದ ಸಿಟ್ಟಾಗಿ, ತುಟಿಯನ್ನು ಕಡಿದು, ಅಲ್ಲಿ ಬಾಗಿಲಿಗಿಟ್ಟಿದ್ದ ಕಲ್ಲಿನಿಂದ ಮೊಸರಿನ ಗಡಿಗೆಯನ್ನು ಒಡೆದನು. ಮೊಸರೆಲ್ಲವೂ ಚೆಲ್ಲಿ ಹಾಳಾಗಲು, ಭೀತಿಯಿಂದ ಕಣ್ಣೀರಿಡುತ್ತಾ, ಬಾಗಿಲ ಹಿಂದಡಗಿ, ಕೈಯಲ್ಲಿ ಹೊಸಬೆಣ್ಣೆಯನ್ನು ಹಿಡಿದು ತಿನ್ನುತ್ತಿದ್ದನು.

ಹಾಲಿನ ಪಾತ್ರೆಯನ್ನಿಳಿಸಿ ಬಂದ ಗೋಪಿಯು, ದಧಿಭಾಂಡವು ಒಡೆದು, ಮೊಸರು ಹಾಳಾದುದನ್ನು ನೋಡಿ, ಇದು ತನ್ನ ಮಗನ ಹಾವಳಿಯೇ ಎಂದರಿತು, ಅವನನ್ನಲ್ಲಿ ಕಾಣದೆ, ನಗುತ್ತಾ ಸುತ್ತು ನೋಡಿದಳು. ಒರಳಮೇಲೆ ನಿಂತು ಬೆಕ್ಕುಗಳಿಗೆ ಬೆಣ್ಣೆಯನ್ನು ಕೊಡುತ್ತಾ, ಭಯದಿಂದ ಹಿಂದಿರುಗಿ ನೋಡುತ್ತಿದ್ದ ಕೃಷ್ಣನನ್ನು ಮೆಲ್ಲನೆ ಸಮೀಪಿಸಿದಳು. ಕೈಯಲ್ಲಿ ಕೋಲನ್ನು ಹಿಡಿದು, ಹೊಡೆಯುವವಳಂತೆ ಬರುವ ಅವಳನ್ನು ನೋಡಿ, ಭಯಪಟ್ಟವನಂತೆ, ಕೃಷ್ಣನು ಕೆಳಗಿಳಿದು ಓಡಿಹೋದನು. ಸ್ಥೂಲಕಾಯಳಾದ ಯಶೋದೆ ಅವನನ್ನು ಹಿಡಿಯಲು ಹಿಂಬಾಲಿಸಿದಳು. ಸನಕಾದಿ ಯೋಗಿವರರು ಮನದಲ್ಲಿ ಹಿಡಿದು ನಿಲ್ಲಿಸಲಾರದ ಶ್ರೀಹರಿಯನ್ನನುಸರಿಸಿ, ಕುಚಜಘನಭಾರದಿಂದ ನಡುವು ಬಳುಕುತ್ತಿರಲು, ತುರುಬಿನಿಂದ ಉದುರುತ್ತಿರುವ ಹೂಗಳು, ಮಗನ ಪಾದ ಚಿಹ್ನೆಗಳಲ್ಲಿ ಉದುರುತ್ತಿರಲು, ಆಯಾಸಪಡುತ್ತಾ ಬಂದು, ಅವನನ್ನು ಹಿಡಿದುಕೊಂಡಳು.

ಅಪರಾಧವನ್ನೆಸಗಿ ಭಯದಿಂದ, ಕೈಯಿಂದ ಕಾಡಿಗೆ ಕಣ್ಣನ್ನುಜ್ಜಿ, ಅಳುತ್ತಾ, ಕಣ್ಣನ್ನೆತ್ತಿ ಪಿಳಿಪಿಳಿ ನೋಡುತ್ತಾ ನಿಂತ ಕೃಷ್ಣನನ್ನು ಕಂಡು, ಕೈಕೋಲನ್ನು ಬಿಸುಟಿದಳು. ಕೂಸೆಲ್ಲಿ ಭಯಜ್ವರ ಪೀಡಿತನಾಗುವನೋ ಎಂದು ಹೆದರಿ, ಪ್ರೇಮದಿಂದ ಹೊಡೆಯಲಾರದೆ- ಹಾಗು ಅಪರಾಧವನ್ನು ಕ್ಷಮಿಸಲಾರದೆ– ಅವನನ್ನು ಕರುವಿನ ಕಣ್ಣಿಯಿಂದ ಕಟ್ಟಿ ಹಾಕುವೆನೆಂದು, ಹಗ್ಗವನ್ನು ತಂದಳು. 'ಅಪ್ರಮೇಯ ಮಹಿಮನಾದ ಶ್ರೀಹರಿಯು ವ್ಯಾಪ್ತನಾಗಿರುವನು; ಅವನಿಗೆ ಒಳಗಿಲ್ಲ; ಹೊರಗಿಲ್ಲ; ಹಿಂದಿಲ್ಲ; ಮುಂದಿಲ್ಲ; ಜಗತ್ತಿನಲ್ಲಿ ಸರ್ವಸ್ವಾಮಿಯಾಗಿ ತುಂಬಿರುವ'ನೆಂದು ತಿಳಿಯದೆ, ಮಗನೆಂದು ತಿಳಿದು, ಮನುಜಬಾಲಕನಂತಿದ್ದ ಮಾಧವನನ್ನು, ಸಮಾನಾಪರಾಧ

ಸಹಾಯಕವಾದ ಒರಳಿಗೆ ಕಟ್ಟಿಬಿಡುವೆನೆಂದಳು. ಆ ಹಗ್ಗವು, ಸುತ್ತಿತಂದಾಗ ಎರಡು ಬೆರಳು ಕಡಿಮೆ ಬೀಳಲು, ಮತ್ತೊಂದನ್ನು, ಹೀಗೆಯೇ ಮನೆಯಲ್ಲಿದ್ದ ಹಗ್ಗಗಳೆಲ್ಲವು ಸಾಲದೆ ಬಂದಾಗ, ಗೋಕುಲದ ಹಗ್ಗಗಳಿಂದ ಕಟ್ಟಿ ಎಲ್ಲವೂ ಎರಡೇ ಬೆರಳು ಸಾಲದಾಗಲು, ನಗುತ್ತಾ ಆಶ್ಚರ್ಯ ಚಕಿತಳಾಗಿ, ಸುಮ್ಮನಾದಳು. ಗೋಪ ನಾರಿಯರೂ ದಿಕ್ಕುತೋಚದೆ, ನೋಡುತ್ತಾ ನಿಂತರು.

ತುರುಬುಬಿಚ್ಚಿ, ಮೈಬೆವರಿಟ್ಟು ಕಷ್ಟಪಡುವ ಮಾತೆಯನ್ನು ನೋಡಿ, ಕರುಣೆಯಿಂದ ಕೃಷ್ಣನು ಮೊದಲಿನ ಹಗ್ಗದಿದೊಂದರಿಂದಲೇ ಬಂಧಿತನಾದನು. ಇಂತು ಮಗನನ್ನು ಕಟ್ಟಿ ಯಶೋದೆಯು ಮನೆಕೆಲಸವನ್ನು ಮಾಡಲು ಹೋದಳು.

ಇಂತು ಬ್ರಹ್ಮರೂದ್ರಾಧೀನವಾದ ಜಗವನ್ನೆಲ್ಲ, ತನ್ನ ವಶದಲ್ಲಿಟ್ಟು ಪಾಲಿಸುವ ಸರ್ವೋತ್ತಮನು, ತಾನು ಭಕ್ತಪರಾಧೀನನೆಂದು ತೋರಿದನು. ವಿರಕ್ತಿ, ಭಕ್ತಿ, ಇವೆರಡೇ ಜ್ಞಾನಸಾಧನಗಳೆಂದು ಪ್ರಕಟಿಸಿದನು. ಮೋಕ್ಷ ಪ್ರದನಾದ ಶ್ರೀನಾರಾಯಣನು ಇಂತಹ ಪರಮಾನುಗ್ರಹವನ್ನು ರುದ್ರನಲ್ಲಿ– ಬ್ರಹ್ಮನಲ್ಲಿ– ಕೊನೆಗೆ ತನ್ನ ವಕ್ಷಸ್ಥಲನಿವಾಸಿನಿಯಾದ ರಮೆಯಲ್ಲಿಯೂ ತೋರಿರಲಿಲ್ಲ. ತಾತ್ಕಾಲಿಕ ಪ್ರೀತಿಯು, ನಿತ್ಯಪ್ರೇಮ ವಿಷಯರಾದವರನ್ನು ಬದಿಗಿಡುವುದಲ್ಲವೇ? ಭಕ್ತಿಯಿಂದ ಭಗವತ್ಪಾದಾರವಿಂದವನ್ನು ಹಡಗನ್ನಾಗಿಸಿ, ಸಂಸಾರವಾರಿಧಿಯನ್ನು ದಾಟುವ ಜ್ಞಾನವಂತರಿಗೆ ಸಿಗುವಂತೆ, ಭಗವಂತನು ದೇಹಧಾರಿಗಳಿಗೆಲ್ಲರಿಗೂ ದೊರಕುವನೇ? ಇಲ್ಲ.

ಶ್ರೀಕೃಷ್ಣನು ತನ್ನ ತಾಯಿಯು ಹೊರಟು ಮನೆಕೆಲಸದಲ್ಲಿ ಮಗ್ನಳಾಗಿರುವುದನ್ನು ಕಂಡು, ಮನೆಯಿಂದ ಹೊರಗೆ, ಅಂಬೆಗಾಲಿಕ್ಕುತ್ತಾ ಬಂದು, ಮುಂದೆ ಅಂಗಣದಲ್ಲಿದ್ದ ಅರ್ಜುನವೃಕ್ಷವನ್ನು ನೋಡಿದನು. ದುರಹಂಕಾರದಿಂದ ನಾರದರ ಶಾಪಕ್ಕೆ ಗುರಿಯಾಗಿದ್ದ ನಲಕೂಬರ ಮಣಿಗ್ರೀವರೇ ವೃಕ್ಷಜನ್ಮದಿಂದ ನಿಂತಿರುವುದನ್ನರಿತು, ಸರ್ವಜ್ಞನಾದ ಶ್ರೀಕೃಷ್ಣನು ದಯೆತೋರಿ, ಅವರನ್ನು ಉದ್ಧರಿಸಲು ನಿಶ್ಚಯಿಸಿದನು.

## ೧೧. ನಲಕೂಬರ ಮಣಿಗ್ರೀವ ವಿಮೋಚನೆ

ರಾಜನು ಕೇಳಿದನು–

ಸ್ವಾಮೀ! ಕುಬೇರಸುತರಾದ ನಲಕೂಬರ ಮಣಿಗ್ರೀವರಿಗೆ ನಾರದರು ಶಾಪವನ್ನು ಕೊಡಲು ಕಾರಣವೇನು?

ಶ್ರೀಶುಕನು ಹೇಳಿದನು–

ಹಿಂದೆ ಕುಬೇರಸುತರೂ, ರುದ್ರದೇವನ ಅನುಚರರೂ ಆದ ನಲಕೂಬರ ಮಣಿಗ್ರೀವರು ಮದಮತ್ತರಾಗಿ ಕೈಲಾಸಸಮೀಪದ ಉಪವನದಲ್ಲಿ ತರುಣೀಸಮೇತರಾಗಿ ವಿಹರಿಸುತ್ತಿದ್ದರು. ಮಧುಪಾನದಿಂದ ಮೈಮರೆತು, ಮಂದಾಕಿನಿಯ ತೀರದಲ್ಲಿ ಹಾಡುತ್ತಿರುವ ಮಡದಿಯರಿಂದ ಕೂಡಿ ವಿಹರಿಸಿ, ಶ್ರಮಪರಿಹಾರಕ್ಕೆಂದು, ಗಂಗೆಯಲ್ಲಿಳಿದು ಜಲಕ್ರೀಡೆಯನ್ನಾಡುತ್ತಿದ್ದರು. ಆಗ ದೈವೇಚ್ಛೆಯಂತೆ, ಪೂಜ್ಯ ನಾರದನು, ಆ ಮಾರ್ಗವಾಗಿ ಬಂದನು. ಅಶ್ಲೀಲವರ್ತನರಾದ ದೇವದ್ವಯವನ್ನು ಕಂಡು ದೇವರ್ಷಿಯು ಸಹಿಸದಾದನು. ಈ ಋಷಿವರರನ್ನು ನೋಡಿ ಲಜ್ಜಿತರಾಗಿ, ತರುಣಿಯರು ತಮ್ಮ ತಮ್ಮ ವಸ್ತ್ರಗಳನ್ನುಟ್ಟು ದೂರದಲ್ಲಿ ತಲೆಬಾಗಿ ಶಾಪಭಯದಿಂದ ನಡುಗುತ್ತಾ ನಿಂತರು, ಯಕ್ಷವರರು ನಾರದನನ್ನು ಕಂಡು, ವಸ್ತ್ರವನ್ನುಡದೆ ಮದಾಂಧರಾಗಿರಲು

ನೋಡಿ, ಅವರಿಗೆ ಕಣ್ತೆರೆಸಿ ಅನುಗ್ರಹಿಸುವ ಮನಮಾಡಿ, ನಾರದನು ಶಾಪವನ್ನಿತ್ತು ಇಂತು ನುಡಿದನು.

ವಿಷಯಸೇವನೆಯಂತೆ ಬುದ್ಧಿನಾಶಕವಾದ ವಸ್ತುವಿನ್ನೊಂದಿಲ್ಲ. ವಿಷಯಗಳು ರಜೋ ಗುಣಾತ್ಮಕವಾಗಿ, ಜನರನ್ನು ಬಂಧಿಸುವುವು. ಧನದಿಂದ, ಕುಲದಿಂದ, ರೂಪದಿಂದ, ವಿದ್ಯೆ ಯಿಂದ, ಮದವು ಹುಟ್ಟಿ, ದುಷ್ಟಸ್ತ್ರೀಯರಿಂದ, ದ್ಯೂತರಿಂದ ಸುರಾಪಾನದಿಂದ ಹೆಚ್ಚಾಗುವುದು. ಆದರಿಂದ ದೇಹವನ್ನು ಅಜರಾಮರವೆಂದು ತಿಳಿದು, ಆ ದುರ್ಮಾರ್ಗರು ದಯೆಯಿಲ್ಲದೆ ಪಶುಹಿಂಸೆಯನ್ನು ಮಾಡುವರು, ಪರಧನದಾರೆಯರನ್ನು ಅಪಹರಿಸುವರು, ಪರಾವಮಾನವನ್ನು ಮಾಡುವರು. ದೇವತಾದೇಹವು ಕೂಡ ನಶ್ವರವಾಗಿರಲು ಮನುಷ್ಯದೇಹವು ನಷ್ಟವಾಗುವುದೆಂದು ಹೇಳಬೇಕೇ? ಸುಟ್ಟರೆ ಬೂದಿ; ಹುತಿಟ್ಟರೆ ಹುಳ, ಮಣ್ಣು; ಬಿಸುಟಿದರೆ ನರಿನಾಯಿಯ ಮಲವಾಗಿ ಹೋಗುವ ಹಾಳು ದೇಹದ ದುರಭಿಮಾನವು ಭೂತದ್ರೋಹಕಾರಣವಾಗಿ, ನರಕಕ್ಕೆ ದಾರಿಮಾಡಿಕೊಡುವುದು. ಇದನ್ನರಿಯದೆ, ದೇಹವನ್ನು ನನ್ನದೆಂಬರು ಮೂರ್ಖರೇ ಸರಿ. ಶ್ರೀಹರಿಯು ನಿರ್ಗುಣನು, ಜೀವನಾಗಿ ದುಃಖಪಡುತ್ತಿರುವನು, ಅವನು ಸೃಜಿಸಿದ ಜಗವು, ಮಿಥ್ಯೆ; ಅವನ ಅವತಾರಗಳೂ ನಮ್ಮಂತೆ ದುಃಖಸಹಿತವೆಂದು ತಿಳಿದ ಮಹಾಮೂರ್ಖರು ತಿರುಗಿ ಬಾರದ ಅಂಧತಮವನ್ನೇ ಪೊಂದುವರು, ಇರಲಿ, ಈ ದೇಹವು ಯಾರದು? ಅನ್ನವನ್ನಿತ್ತು ಪೋಷಿಸುವ ಪ್ರಭು, ಗರ್ಭಾದಾನವನ್ನು ಮಾಡಿದ ತಂದೆ, ಹೊತ್ತು ಹೆತ್ತ ತಾಯಿ, ಬಲದಿಂದ ಜಯಿಸಿ ಬಂಧಿಸುವ ಶತ್ರು, ಸುಡುವ ಅಗ್ನಿ, ತಿನ್ನುವ ನಾಯಿ ಇವರಲ್ಲಿ ಯಾರಿಗೆ ಸೇರಿದ್ದೀ ದೇಹ? ಪ್ರಕೃತಿಯ ಪಂಚಭೂತಗಳಿಂದ ಬಂದು, ಅಲ್ಲೇ ಲಯವಾಗುವ ದೇಹವನ್ನು, ನಾನೆಂದು ತಿಳಿಯುವವನು ವಿವೇಕಿಯೇ? ಅಂತಹ ದೇಹದ ಹೊಟ್ಟೆ ತುಂಬಲು ಪರರನ್ನು ಪೀಡಿಸುವ ಪಾಪಿಗೆ ದುರ್ಗತಿಯು ಆಗದಿರುವುದೇ? ಶ್ರೀಮದಾಂಧರನಾದ ಅಸಜ್ಜನರಿಗೆ ದಾರಿದ್ರ್ಯವೇ ಅಂಜನವಾಗಿ ಕಣ್ತೆರೆಯುವಂತೆ ಮಾಡುವ ಮದ್ದು, ದರಿದ್ರನು ಸುಖಾಸುಖಗಳನ್ನು ಹೊಂದಿ ತೊಳಲಾಡುವ ಜೀವರನ್ನು ನೋಡಿ, ಅನುಕಂಪೆಯನ್ನು ತೋರುವನು. ಮುಳ್ಳು ನಟ್ಟಿ ನೊಂದ ವನು, ಆ ವೇದನೆಯು ಇನ್ನೊಬ್ಬರಿಗಾಗಲಿ ಎನ್ನದೆ, ಕನಿಕರವನ್ನು ತೋರುವನು. ಎಂದು ಮುಳ್ಳನ್ನು ತುಳಿಯದ ಶ್ರೀಮಂತನಿಗೆ ಇತರ ಜೀವರ ಸುಖದುಃಖಗಳ ವಿಚಾರವಾದರೂ ಮನಸ್ಸಿ ನಲ್ಲಿ ಸುಳಿಯುವುದಿಲ್ಲ. ದರಿದ್ರನಿಗೆ ಅಹಂಕಾರವು ಬಲುದೂರ, ವಿದ್ಯಾಕುಲಾದಿಗಳ ಮದವಿಕಾರ ವಿಲ್ಲದೆ ಅವನು ದೇವರಿತ್ತುದರಿಂದ ತೃಪ್ತನಾಗಿರುವನು. ನಿತ್ಯವು ಹಸಿವೆಯ ಬೇಗೆಯಿಂದ ಬೆಂದು ಬೆಂಡಾದವನಿಗೆ, ದೇಹೇಂದ್ರಿಯಾದಿಗಳು ಒಣಗಿ ನಿರ್ಬಲವಾಗುವುವು. ಅಂತಹವನು ಪರಿಪೀಡೆಯನ್ನೆಂತು ಮಾಡುವನು? ದಾರಿದ್ರ್ಯದಿಂದ ಮದರಹಿತನಾದವನಿಗೇ ಸಜ್ಜನಸಂಗವು ದೊರೆಯುವುದು; ಅದರಿಂದ ವಿಷಯತೃಷೆಯು ದೂರಾಗುವುದು; ಅದರಿಂದ ಅವನು ಮುಕ್ತ ನಾಗುವನು. ಮುಕುಂದಚರಣಾಶ್ರಿತರು, ಸುಖದುಃಖಾದಿ ದ್ವಂದ್ವಸಮಚಿತ್ತರು ಆದ ಸಾಧುಗಳು ಧನಮದಾದಂಧರರಾದ ದುರ್ಜನರನ್ನು ಸೇರುವುದಿಲ್ಲವೆಂದಮೇಲೆ, ಸಾಧುಸಂಗತಿಯಿಂದಾಗುವ ಲಾಭವೂ ಅವರಿಗೆ ಆಗಲಾರದು. ಶ್ರೀಮದದಿಂದ ಮತಿಗೆಟ್ಟು, ಮದಿರೆಯನ್ನು ಕುಡಿದು ಕಣ್ಣು ಕಾಣದೆ, ಸ್ತ್ರೀಜನರಿಂದ ಕೂಡಿ ಕುಣಿದಾಡುವ ಸ್ವೇಚ್ಛಾವರ್ತನರಾದ ನಿಮ್ಮ ಮದವನ್ನಿಳಿಸು ವುದೇ ಲೇಸು.

ಲೋಕಪಾಲಕನಾದ ಕುಬೇರನ ಮಕ್ಕಳಂತೆ! ರುದ್ರದೇವನ ಅನುಚರರಂತೆ! ದುರ್ಮದರಾಗಿ ಮೈಮೇಲೆ ಬಟ್ಟೆ ಇರುವುದು– ಇಲ್ಲವೆಂದರಿಯದೆ ತಿರುಗುವರಂತೆ! ಛೀ! ಅಂತೆಯೇ ನೀವು ಗಿಡಗಳಾಗಿ ಹುಟ್ಟಿರಿ! ಮತ್ತೆ ಈ ದುರ್ಬುದ್ಧಿಯು ನಿಮಗೆ ಹುಟ್ಟದಿರಲಿ ಎಂದೇ ಶಾಪವನ್ನಿತ್ತಿರುವೆನು. ನಿಮ್ಮಲ್ಲಿ ಕನಿಕರದಿಂದ ಶ್ರೀಹರಿಯ ಸ್ಮರಣೆಯು ನಿಮಗೆ ವೃಕ್ಷ ಶರೀರದಲ್ಲಿದ್ದಾಗಲೂ ಆಗುತ್ತಿರುವಂತೆ ಅನುಗ್ರಹಿಸಿರುವೆನು. ನೂರು ದೇವವರ್ಷಗಳ ನಂತರ ವಾಸುದೇವನ ಮಂಗಳಕರಸ್ಪರ್ಶದಿಂದ ಪುನೀತರಾಗಿ, ಮತ್ತೆ ದೇವಲೋಕದಲ್ಲಿ ವಾಸ ಮಾಡುವಿರಿ, ಶ್ರೀಹರಿಯ ಭಕ್ತರೆನಿಸುವಿರಿ. ಹೋಗಿ- ಎಂದು ನುಡಿದು, ನಾರದನು ನರನಾರಾಯಣಾಶ್ರಮವನ್ನು ಕುರಿತು ಹೋದನು.

ನಲಕೂಬರ ಮಣಿಗ್ರೀವರು, ಯಮಲಾರ್ಜುನತರುಗಳಾಗಿ ಜನಿಸಿದರು. ಋಷಿಯ ವಾಕ್ಯವನ್ನು ಸತ್ಯವನ್ನಾಗಿಸಲು ಮನಮಾಡಿ, ದಾಮೋದರನು, ಒರಳನ್ನೆಳೆದುಕೊಂಡು, ಅವಳಿ ಗಿಡಗಳ ಮಧ್ಯಮದಲ್ಲಿ ತೂರಿ ಹೊರಟನು. ವೃಕ್ಷಗಳ ಮಧ್ಯದಿ ಬರಲಾರದ ಒರಳನ್ನು ಸೆಳೆದಾಗ, ಗಿಡಗಳು ಬೇರುಸಹಿತವಾಗಿ ಕಿತ್ತುಬಿದ್ದವು. ಅದರ ರೆಂಬೆಗಳು ಕೊಂಬೆಗಳು ಚಟಚಟ ಎಂದು ಮುರಿದು ಉದುರಿದವು. ಆ ತರುಗಳಿಂದ ಹೊರಹೊರಟು, ಕೋಟರದಿಂದ ಉರಿಯುತ್ತಿದ್ದ ಅಗ್ನಿಯಂತೆ ಬೆಳಗುವ ಯಕ್ಷರಾಜ ಕುಮಾರರು, ಶ್ರೀಕೃಷ್ಣನಿಗೆ ಶಿರಸಾ ನಮಿಸಿ, ಕೈಜೋಡಿಸಿ ನಿಂತು ಮಾತಾಡಿದರು–

ಕೃಷ್ಣ! ಸರ್ವಸಮರ್ಥ! ನೀನು ಪುರಾಣ ಪುರುಷನು, ಕಾಲ ನಿಯಾಮಕನು, ನಾಶರಹಿತನು, ಷಡ್ಗುಣೈಶ್ವರ್ಯಸಂಪನ್ನನು, ವ್ಯಾಪ್ತನು, ಸರ್ವನಿಯಾಮಕನು ಆದ ನಿನಗೆ ಈ ಜಗವು, ಪ್ರತಿಮೆಯಂತೆ ರೂಪವೆನಿಸಿದೆ. ಅದರಲ್ಲಿರುವ ಮಹತ್ತತ್ತ್ವ, ಅಹಂಕಾರ, ಸತ್ತ್ವರಜಸ್ತಮೋ ಗುಣಾತ್ಮಕ ಪ್ರಕೃತಿ ಮೊದಲಾದುವೆಲ್ಲವು ಪೂರ್ಣನಾದ ನಿನ್ನ ಅಧೀನವಾಗಿದೆ. ಕ್ಷೇತ್ರವೆನಿಸುವ ದೇಹದ ಇಪ್ಪತ್ತನಾಲ್ಕು ತತ್ತ್ವಗಳನ್ನು ಏಳು ವಿಕಾರಗಳನ್ನು ಕೂಡ ಚೆನ್ನಾಗಿ ತಿಳಿದು, ನಡೆಸುವ ಜಗದೊಡೆಯನಾದ ನೀನು ಸರ್ವಜ್ಞ(ಕ್ಷೇತ್ರಜ್ಞ)ನೆನಿಸಿರುವೆ. ನಿನ್ನನ್ನು ರಮಾಬ್ರಹ್ಮ ರುದ್ರಾದಿಗಳೂ ಸಾಕಲ್ಯೇನ ತಿಳಿದಿಲ್ಲ. ತ್ರಿಗುಣಸೃಷ್ಟಿಯ ಪೂರ್ವದಲ್ಲಿಯೂ, ಶಶ್ವದೇಕಪ್ರಕಾರನಾಗಿದ್ದ ಪ್ರಭುವಾದ ನಿನ್ನನ್ನು ತಿಳಿಯಲು ಯಾರಿಗೆ ಶಕ್ಯವು? ಯಥಾಯೋಗ್ಯವಾಗಿ ತಿಳಿದ ಭಕ್ತರಲ್ಲಿ ಬ್ರಹ್ಮದೇವನೇ ಉತ್ತಮನಾಗಿರುವನು. ನಿನ್ನಿಂದ ಪ್ರಕಾಶಿತವಾದ ಗುಣಗಳಿಂದ ಜೀವರ ದೇಹಾವರಣಗಳನ್ನು ಸೃಜಿಸಿ, ನೀನು ಗುಣಗಳಧೀನನಾಗದೆ ಗುಣಪೂರ್ಣನು, ಸೃಜನಾದಿ ಕ್ರೀಡಾವಿಶಿಷ್ಟನು, ಜೀವಗೋಚರನು, ಸರ್ವಾಧಾರಕನೂ ಆಗಿರುವೆ. ಜೀವಶರೀರಗಳಲ್ಲಿ ಅಂತರ್ಯಾಮಿಯಾಗಿ ನಡೆಸುತ್ತಾ, ಹೊರಗೆ ಮತ್ಸ್ಯಾದಿರೂಪನಾಗಿ ಸುಜನರನ್ನು ಪೊರೆಯುವೆ. ನಿನಗೆ ಯೋನಿ ಪ್ರವೇಶವಿಲ್ಲ. ನಿನ್ನ ಅವತಾರಗಲು ಲೀಲಾಸ್ವೀಕೃತಗಳು ಮತ್ತು ಲೋಕ ಕ್ಷೇಮಂಕರಗಳು. ಈಗ ಕೃಷ್ಣನಾಗಿ ನಮ್ಮ ವಾಂಛಿತಪ್ರದನಾಗಿ ಅವತರಿಸಿರುವ ಮಂಗಲಮೂರ್ತೇ! ಕೃಷ್ಣ! ವಾಸುದೇವ! ಯದುಪತೇ! ನಿನಗೆ ನಮಸ್ಕಾರವು. ಅನವಚ್ಛಿನ್ನಜ್ಞಾನಾನಂದ ಸ್ವರೂಪನಾದ ನಿನ್ನ ದರ್ಶನವು ನಾರದನ ದಿವ್ಯಕರುಣೆಯಿಂದ ನಮಗಾಯಿತು. ಧನ್ಯರಾದೆವು. ನಿನ್ನ ಕಿಂಕರರೆನಿಸಿ, ಬದುಕುವಂತೆ ಅನುಗ್ರಹಿಸು-ಅಪ್ಪಣೆಯನ್ನು ಕೊಡು. ನಮ್ಮ ವಾಣಿಯು ನಿನ್ನ ಗುಣವನ್ನು ವರ್ಣಿಸುವಂತೆ, ಕಿವಿಗಳು ನಿನ್ನ ಕಥೆಯನ್ನು ಕೇಳುವಂತೆ, ಕೈಗಳು ನಿನ್ನ ಸೇವೆಯನ್ನು ಮಾಡುವಂತೆ,

ಮನಸ್ಸು ನಿನ್ನ ಚರಣಾರವಿಂದವನ್ನೇ ಸ್ಮರಿಸುವಂತೆ ಶಿರಸ್ಸು ನಿನಗೆ ನಮಿಸುವಂತೆ, ಕಣ್ಣುಗಳು ನಿನ್ನ ಪ್ರತಿಮೆಗಳೆನಿಸುವ ಭಕ್ತರನ್ನು ನೋಡಿ ಹಿಗ್ಗುವಂತೆ ದಯಮಾಡು.

ಎಂದು ಕೀರ್ತಿಸಿ ನಿಂತ ಗುಹ್ಯಕರನ್ನು ನೋಡಿ, ಮಂದಸ್ಮಿತ ಸುಂದರನಾದ ದಾಮೋದರ ನಿಂತೆಂದನು–

**ಶ್ರೀಮದಾಂಧರಾಗಿದ್ದ ನಿಮ್ಮೀರ್ವರಿಗೆ** ನನ್ನ ಭಕ್ತವರನಾದ ನಾರದನು ಶಾಪವನ್ನೂ ನನ್ನಿಂದ **ಶಾಪಮುಕ್ತತೆಯನ್ನೂ** ಕರುಣಿಸಿ ಕೊಟ್ಟಿರುವುದನ್ನು ತಿಳಿದಿರುವೆನು. ಮನುಜನಿಗೆ ಸೂರ್ಯನು ಹುಟ್ಟುವ ಮಾತ್ರದಿಂದ ಕಣ್ಣಿಗೆ ಕವಿದ ಕತ್ತಲು ದೂರಸರಿಯುವಂತೆ ನನ್ನ ಭಕ್ತರು ಸಮಚಿತ್ತರು ಆದ ಸಾಧುಗಳ ದರ್ಶನದಿಂದ ಅಜ್ಞಾನಬಂಧವು ನಷ್ಟವಾಗುವುದು. ಕುಬೇರನ ಮನೆಯನ್ನು ಸೇರಪೋಗಿ! ನನ್ನಲ್ಲಿ ಭಕ್ತಭಾವದಿಂದ ಪೂತರಾಗಿರುವಿರಿ. ನಯನೋತ್ಸವಕರವಾದ ನನ್ನ ದರ್ಶನದಿಂದ ನಿಮ್ಮ ವಾಂಛಿತಗಳೆಲ್ಲವೂ ಸಿದ್ಧಿಸಿವೆ.

ಆಗ ಉಲೂಖಲಬದ್ಧನಾದ ಬಾಲಕೃಷ್ಣನಿಗೆ ವಂದಿಸಿ, ಪುನಃ ವಂದಿಸಿ, ನಲಕೂಬರ ಮಣಿಗ್ರೀವರು ಉತ್ತರದಿಶೆಯನ್ನು ಕುರಿತು ಹೊರಟುಹೋದರು.

## ೧೨. ವೃಂದಾವನ ಗಮನ – ವತ್ಸಾಸುರ ವಧೆ – ಬಕಾಸುರ ವಧೆ

ಶ್ರೀಶುಕನು ಹೇಳಿದನು–

ಅರ್ಜುನ ವೃಕ್ಷಗಳು ಬಿದ್ದ ಭಯಂಕರ ಶಬ್ದವನ್ನು ಕೇಳಿ, ನಂದಾದಿ ಗೋಪಾಲಕರು ಓಡಿಬಂದು, ಬಿದ್ದ ಮರಗಳನ್ನೂ, ಮರಗಳ ಮಧ್ಯದಲ್ಲಿದ್ದ ದಾಮೋದರಕೃಷ್ಣನನ್ನೂ ನೋಡಿದರು. ಆ ಮರಗಳೇಕೆ ಬಿದ್ದವೆಂದು ತಿಳಿಯದೆ, ಉತ್ಪಾತವೇನೋ ಎಂಬ ಭಯದಿಂದ ಕಾತರರಾದ ನಂದಾದಿಗಳನ್ನು ನೋಡಿ, ಅಲ್ಲಿ ಆಡುತ್ತಿದ್ದ ಬಾಲಕರು ಇಂತು ನುಡಿದರು–

'ಕೃಷ್ಣನು ಒರಳನ್ನಿರಿಕಿಸಿದಾಗ ಗಿಡಗಳೆರಡೂ ಬಿದ್ದವೆಂ'ದ ಬಾಲರ ನುಡಿಯನ್ನು ನಂಬಲಾರದೆ, ನಂದಾದಿಗಳು ಸಂಭ್ರಾಂತರಾದರು. ಒರಳನ್ನು ಸೆಳೆಯುತ್ತಾ ಹಗ್ಗದಿಂದ ಕಟ್ಟಲ್ಪಟ್ಟು ತನ್ನಕಡೆ ಬಂದ ಗೋವಿಂದನನ್ನು ನೋಡಿ, ನಗುತ್ತಾ ನಂದನು, ಪಾಶವನ್ನು ಬಿಚ್ಚಿ, ಕೂಸನ್ನೆತ್ತಿ ತಂದು ಯಶೋದೆಗೊಪ್ಪಿಸಿದನು.

ಗೋಪಿಯರು ಪುಸಲಾಯಿಸಿದಾಗ ಹಿಗ್ಗಿ, ಕೃಷ್ಣನು ಕುಣಿಯುವನು, ಒಂದು ಸಲ ಹಾಡುವನು. ಮತ್ತೊಂದು ಸಲ ಯಶೋದಾದಿ ಮಾತೆಯರು ಹೇಳಲು ಮಣೆ, ಸೇರು, ಪಾದುಕೆಗಳನ್ನು ತಂದುಕೊಡುವನು. ಕಟ್ಟಿಗೆಯ ಗೊಂಬೆಯಂತೆ, ಅವರ ವಶದಲ್ಲಿ ಲೋಕ ಬಾಲಕರನ್ನು ಕರಿಸಿ ತಾನು ಭಕ್ತವತ್ಸಲನೆಂದು ಪ್ರಕಟಿಸಿದನು. ಬಾಲಚೇಷ್ಟೆಗಳಿಂದ ವ್ರಜವನ್ನು ಸಂತೋಷಗೊಳಿಸಿದನು.

ವ್ರಜದಲ್ಲಿ ನಡೆದ ಮಹೋತ್ಪಾತಗಳನ್ನು ಕಂಡು ನಂದಾದಿಗೋಪರು, ಹೆದರಿ, ಸಭೆ ಸೇರಿ, ಮುಂದೇನು ಮಾಡುವುದೆಂದು ವಿಚಾರಮಾಡಿದರು. ಜ್ಞಾನವಯೋಧಿಕನಾಗಿದ್ದ ಉಪನಂದನೆಂಬ ಗೋಪನು ದೇಶಕಾಲಪ್ರಯೋಜನಗಳನ್ನರಿತು ಇಂತೆಂದನು–

ನಾವು ಗೋಕುಲವನ್ನು ಬಿಡುವುದೇ ಲೇಸು. ಇಲ್ಲಿ ಮಹೋತ್ಪಾತಗಳಿಂತ ವ್ರಜರು ಪೀಡಿತರಾಗಿ ಹೆದರಿರುವರು. ಶ್ರೀಹರಿ ದಯೆಯಿಂದ ನಮ್ಮ ಕೃಷ್ಣನು ಪೂತನೆಯಿಂದ ಬದುಕಿ

ದನು; ಬಂಡಿಯು ಮುರಿದುಬಿದ್ದರೂ ಗಾಯಗೊಳ್ಳದೆ ಉಳಿದನು; ಸುಂಟರಗಾಳಿಗೆ ಸಿಕ್ಕಿ ಬಂಡೆಯ ಮೇಲೆ ಬಿದ್ದ ಕೂಸನ್ನು ದೇವತೆಗಳನು ಕಾಪಾಡಿ ನಮಗಿತ್ತರಲ್ಲವೆ? ಈಗ ಅರ್ಜುನ ವೃಕ್ಷಗಳು ಮುರಿದು, ಮೇಲೆ ಬಿದ್ದಿದ್ದರೆ ಎಷ್ಟು ಅನಾಹುತವಾಗುತ್ತಿತ್ತು! ಎಲ್ಲ ಕಷ್ಟಗಳಿಂದಲೂ ಕಾಪಾಡಿದ ನಮ್ಮ ಸ್ವಾಮಿ ಶ್ರೀಹರಿಯೇ ನಮಗೆ ಗತಿಯು. ಇನ್ನಿಲ್ಲಿರುವುದು ಒಳಿತಲ್ಲ. ವೃಂದಾವನವು ಸುಂದರವಾಗಿದೆ– ಅಲ್ಲಿ ಹುಲ್ಲು ನೀರು ಸಮೃದ್ಧವಾಗಿದೆ. ಗೋಪರಿಗೂ ಗೋಗಳಿಗೂ ಹಿತಕರವೆನಿಸಿದೆ. ಇಂದೇ ಅಲ್ಲಿಗೆ ಹೊರಡೋಣ! ಬಂಡಿಗಳನ್ನು ಕಟ್ಟಿರಿ! ಗೋವುಗಳು ಮುಂದೆ ನಡೆಯಲಿ! ನಿಮಗೆಲ್ಲರಿಗೂ ಸಮ್ಮತವಾದರೆ ನಡೆಯಿರಿ.

ಆ ಮಾತನ್ನು ಕೇಳಿ, ಒಮ್ಮನಸ್ಸಿನಿಂದ ಗೋಪಾಲಕರೆಲ್ಲರು, ಮನೆಗಲಿಗೆ ಪೋಗಿ ವೃಂದಾವನ ಪ್ರಯಾಣ ಸನ್ನಾಹವನ್ನು ನಡೆಸಿದರು. ಆಡಲು ನದೀತೀರದಲ್ಲಿದ್ದ ಕೃಷ್ಣರಾಮರನ್ನು ರೋಹಿಣಿಯು ಕೂಗಿ ಕರೆದರೂ, ಬಾಲರಿಂದ ಕೂಡಿ ಆಡುತ್ತಿದ್ದ ಬಾಲಕೃಷ್ಣನು ಬರಲಿಲ್ಲ. ರಾಮನೂ ಬಾರಧುದನ್ನು ಕಂಡು ಆಕೆ, ಯಶೋದೆಯನ್ನು ಕಳಿಸಿದಳು. ಪುತ್ರಸ್ನೇಹದಿಂದ ಸ್ತನದ ಹಾಲು ಹರಿಯುತ್ತಿರಲು, ಯಶೋದೆ ಕೃಷ್ಣನನ್ನು ಕರೆದಳು–

ಕೃಷ್ಣಾ! ಅರವಿಂದಾಕ್ಷ! ಬಾರಪ್ಪಾ ಹಾಲನ್ನುಣಿಸುವೆನು. ಆಟ ಸಾಕು! ಹಸಿವುಗೊಂಡಿರುವೆ. ಊಟ ಮಾಡಲು ಬಾ! ರಾಮಾ! ತಮ್ಮನನ್ನು ಕರೆದುಕೊಂಡು ಬಾರೋ! ಬೆಳಿಗ್ಗೆ ಉಂಡಿದ್ದು ಬಹುಹೊತ್ತಾಯಿತು. ಆಟವಾಡಿ ಆಡಿ ಹಸಿವು ಆಗಿಲ್ಲವೇ? ನಿಮ್ಮ ತಂದೆ ಊಟಕ್ಕೆಂದು ಕೂತು ನಿನ್ನ ಆಗಮನವನ್ನು ನಿರೀಕ್ಷಿಸುತ್ತಿರುವನು. ಬಂದು ನಮಗೆ ಆನಂದವನ್ನಿತ್ತು ಹೋಗು! ಇಂದು ನಿನ್ನ ಜನ್ಮನಕ್ಷತ್ರವಿದೆ. ಬಂದು ವಿಪ್ರರಿಗೆ ಗೋದಾನವನ್ನು ಮಾಡು! ಮೈಯೆಲ್ಲಾ ಧೂಳಾಗಿದೆ. ಸ್ನಾನಮಾಡು ಬಾ! ನೋಡಬಾರದೇ ನಿನ್ನ ಸ್ನೇಹಿತರನ್ನು? ಅವರ ತಾಯಂದಿರು ಸಿಂಗಾರಿಸಲು ಎಷ್ಟು ಚೆನ್ನಾಗಿರುವರು. ನೀನೂ ಸ್ನಾನ ಮಾಡಿ, ಉಂಡು, ಅಲಂಕರಿಸಿಕೊಂಡು ಆಟವಾಡಲು ಹೋಗು!- ಎಂದು ಕರೆದು, ಬಂದ ಕೃಷ್ಣನನ್ನು ರಾಮನನ್ನು ಕರೆದುಕೊಂಡು ಮಂದಿರವನ್ನು ಪ್ರವೇಶಿಸಿದಳು. ಅವರಿಗೆ ಸ್ನಾನ ಭೋಜನಗಳನ್ನು ಮಾಡಿಸಿದಳು. ಸರ್ವೋತ್ತಮನಾದ ಶ್ರೀಹರಿಯನ್ನು ತನ್ನ ಮಗನೆಂಬ ಮಮತೆಯಿಂದ ಸಾಕಿ ಧನ್ಯಾಳಾದಳು.

ಮರುದಿನ ಬೆಳಗಾಗಲು ನಂದನ ಆಜ್ಞೆಯಂತೆ ಗೋಪಾಲಕರು ತಮ್ಮ ಬಂಡಿಗಳನ್ನು ಕಟ್ಟಿ, ಭಾಂಡಾದಿಗಳನ್ನಿಟ್ಟು, ವೃದ್ಧ ಬಾಲ ತರುಣಿಯರನ್ನು ಕೂಡಿಸಿ, ತಾವು ಬಾಣ ಶರಾಸನ ಗಳನ್ನು ಧರಿಸಿ, ಹಿಂದೆ ನಡೆದರು. ಕೊಂಬು ಕಹಳೆಗಳನ್ನೂದುತ್ತಾ, ಉತ್ಸಾಹದಿಂದ ಬೃಂದಾವನದ ಕಡೆ ಹೊರಟರು. ಪುರೋಹಿತನು ಸ್ವಸ್ತಿಯನ್ನು ಪಠಿಸುತ್ತಾ ನಡೆದರು. ಗೋಪಿಯರು ಬಂಡಿಗಳಲ್ಲಿ ಕೂತು ಕೃಷ್ಣಲೀಲೆಯನ್ನು ಪಾಡುತ್ತಾ ಸಂತೋಷದಿಂದ ಬರುತ್ತಿದ್ದರು. ಯಶೋದಾ ರೋಹಿಣಿ ಯರು ಒಂದೇ ಶಕಟದಲ್ಲಿ ಕೂತು, ತಮ್ಮ ತೊಡೆಗಳಲ್ಲಿ ಕೃಷ್ಣರಾಮರು ವಿರಾಜಿಸುತ್ತಿರಲು, ಸಂತೋಷದಿಂದ ಕೃಷ್ಣಲೀಲಾ ಗಾನವನ್ನು ಕೇಳುತ್ತಾ ಬೃಂದಾವನವನ್ನು ಸೇರಿದರು. ಅಲ್ಲಿ ಬಂಡಿಗಳನ್ನು ಅರ್ಧ ಚಂದ್ರಾಕಾರದಿಂದ ನಿಲ್ಲಿಸಿದರು.

ವಂದಾವನವನ್ನು, ಗೋವರ್ಧನ ಗಿರಿಯನ್ನು, ಯಮುನೆಯನ್ನು, ಯಮುನೆಯ ಮರಳು ದಿಬ್ಬೆಗಳನ್ನು ನೋಡಿ, ಬಾಲ ಬಲರಾಮಕೃಷ್ಣರಿಗೆ ಸಂತೋಷವಾಯಿತು. ಕೃಷ್ಣರಾಮರ ಬಾಲ ಚೇಷ್ಟೆಗಳನ್ನು, ಕಲಭಾಷಣವನ್ನು ಕೇಳಿ ವ್ರಜವಾಸಿಗಳಿಗೆ ಸಂತೋಷವಾಯಿತು. ಕೆಲಕಾಲವಾದ ಮೇಲೆ ರಾಮಕೃಷ್ಣರು ಕರುಗಳನ್ನು ಕಾಯಲು ಪ್ರಾರಂಭಿಸಿದರು. ವೃಂದಾವನದ ಸಮೀಪದಲ್ಲಿದ್ದ

ವನಗಳಲ್ಲಿ, ಗೋಪಾಲಬಾಲರಿಂದ ಕೂಡಿ ಕರುಗಳನ್ನು ಮೇಯಿಸುತ್ತಾ ಆಟವಾಡುತ್ತಾ ಒಂದು ದಿನ ಯಮುನಾತೀರದಲ್ಲಿ ಸಂತರಿಸುತ್ತಿದ್ದ ರಾಮಕೃಷ್ಣರನ್ನು ಸಂಹರಿಸಲಿಚ್ಛಿಸಿ, ವತ್ಸಾಸುರನೆಂಬ ದೈತ್ಯನು ಕರುವಿನ ರೂಪದಿಂದ ಬಂದನು. ಅವನನ್ನು ಕಂಡು, ನಗುತ್ತಾ, ಬಲರಾಮನು ನೋಡುತ್ತಿರಲು ಸಮೀಪಿಸಿ, ಕೃಷ್ಣನು ಹಿಂಗಾಲುಗಳನ್ನು ಪಿಡಿದೆತ್ತಿ ತಿರುಗಿಸಿ, ಬೆಳವದ ಗಿಡದಮೇಲೆ ಒಗೆದನು. ವತ್ಸಾಸುರನು ಸತ್ತುಬಿದ್ದನು; ಹಣ್ಣುಗಳೂ ಉದುರಿಬಿದ್ದವು. ಅವನ್ನು ತಿಂದು ಬಾಲಕರು ಕೃಷ್ಣನನ್ನು ಪೊಗಳಿದರು. ದೇವತೆಗಳು ಸಂತುಷ್ಟರಾಗಿ ಕೃಷ್ಣನ ಶಿರದಿ ಪುಷ್ಪವೃಷ್ಟಿಯನ್ನು ಕರೆದರು.

ವತ್ಸಪಾಲಕರಾದ ರಾಮಕೃಷ್ಣರು ಕವಣೆಯ ಆಟ, ಮುಟ್ಟೋಡುವ ಆಟ, ಕಣ್ಣುಮುಚ್ಚಾಲೆ, ಕುದುರೆ ಆಟಗಳನ್ನಾಡುತ್ತಾ, ವೇಣುವನ್ನು ಊದುತ್ತಾ, ತಮ್ಮ ತಮ್ಮ ಕರುಗಳನ್ನು ಹಿಂಡಾಗಿ ನಡೆಸಿಕೊಂಡು, ಬೆನ್ನಿಗೆ ಬುತ್ತಿಯನ್ನು ಕಟ್ಟಿ, ಬಂದು ಯಮುನೆಯ ತೀರದಲ್ಲಿ ಉಣ್ಣುತ್ತಿದ್ದರು. ಒಂದು ದಿನ ನೀರಿನಲ್ಲಿ ನಿಂತು ಬೆಟ್ಟದಂತೆ ಭಯಂಕರನಾಗಿದ್ದ ಬಕಾಸುರನೆಂಬ ದೈತ್ಯನು, ಹಠಾತ್ತಾಗಿ ಬಂದು ಕೃಷ್ಣನನ್ನು ತುಂಡದಿಂದ ಹಿಡಿದು ನುಂಗತೊಡಗಿದನು. ಅದನ್ನು ಕಂಡು ಗೋಪಬಾಲಕರಿಗೆ ಪ್ರಾಣವೇ ಹಾರಿಹೋದಂತಾಯಿತು.

ಜಗದ್ಗುರುವಾದ ಹಿರಣ್ಯಗರ್ಭನ ತಂದೆಯನ್ನು ನುಂಗಿದ ಬಕನಿಗೆ ಗಂಟಲಲ್ಲಿ ಕೆಂಡವಿಟ್ಟಂತೆ ಆಗಲು, ಕೃಷ್ಣನನ್ನು ಹೊರಗೆ ಹಾಕಿ, ಮತ್ತೆ ಕೊಕ್ಕಿನಿಂದ ಕುಕ್ಕಿ ಕೊಲ್ಲಬೇಕೆಂದು ಅಸುರನು ಬಂದನು. ಅವನ ಕೊಕ್ಕನ್ನು ಪಿಡಿದು ಕೃಷ್ಣನು ಬಿದಿರನ್ನು ಸೀಳಿದಂತೆ ಎರಡು ಹೋಳಾಗಿ ಸೀಳಿ ಬಕನನ್ನು ಸಂಹರಿಸಿದನು. ಕಂಸಸಖನಾದ ಬಕನ ಸಾವನ್ನು ಕಂಡು ದೇವತೆಗಳು ನಂದನವನದ ಮಂದಾರಸುಮಗಳ ಮಳೆಗರೆದು, ನಂದನಂದನನನ್ನು ಪ್ರಶಂಸಿಸಿದರು. ದುಂದುಭಿಗಳನ್ನು ಬಾರಿಸಿ ಕುಣಿದಾಡಿದರು.

ಬಕನಿಂದ ಅಳಿಯದೆ ಉಳಿದ ಬಾಲಕೃಷ್ಣನನ್ನು ನೋಡಿ, ಗೋಪಾಲಬಾಲಕರು ಮತ್ತು ಬಲರಾಮನು ಪ್ರಾಣವೇ ಬಂದಂತಾಗಿ, ಓಡಿಬಂದು ಅವನನ್ನಾಲಿಂಗಿಸಿ, ಲಾಲಿಸಿದರು. ವ್ರಜವನ್ನು ಸೇರಿ ಈ ಬಕಾರಿಯ ವೃತ್ತಾಂತವನ್ನು ನಂದಾದಿಗಳಿಗೆ ತಿಳಿಸಿದರು. ಅದನ್ನು ಕೇಳಿ ನಂದಾದಿಗಳು ಮೃತ್ಯುವಿನ ಬಾಯಿಗೆ ಸಿಲುಕಿ ತಪ್ಪಿಸಿಕೊಂಡು ಬಂದಿದ್ದ ಬಾಲನನ್ನು ಆಶ್ಚರ್ಯ ಸಂತೋಷಭರಿತ ಮಾನಸರಾಗಿ, ಬಿಗಿದಪ್ಪಿ ಇಂತೆಂದರು–

ಅಹೋ! ಏನಾಶ್ಚರ್ಯವು! ಈ ಬಾಲಕನಿಗೆ ಇಷ್ಟು ಗಂಡಗಳು ಬಂದುವಲ್ಲ! ಇವನನ್ನು ಕೊಲ್ಲಲು ಬಂದವರು ತಾವೇ ಸಾಯುತ್ತಿರುವರು. ಭಯಂಕರ ರಾಕ್ಷಸರು ಕೂಡ ಇವನನ್ನು ಸಮೀಪಿಸಿ, ಅಗ್ನಿಯಲ್ಲಿ ಬಿದ್ದ ಪತಂಗಗಳಂತೆ ನಾಶವಾಗುತ್ತಿರುವರು. ಬ್ರಾಹ್ಮಣರು ನುಡಿದ ಮಾತು ಸುಳ್ಳಾಗುವುದಿಲ್ಲ. ಗರ್ಗಋಷಿಯು ಹೇಳಿದಂತೆಯೇ ನಾವು ಶ್ರೀಕೃಷ್ಣನಿಂದ ಬಹು ವಿಪತ್ತಿನಿಂದ ಪಾರಾಗಿರುವೆವು.

ಇಂತು ರಾಮಕೃಷ್ಣರ ಮಹಿಮೆಯನ್ನು ಪಾಡುತ್ತಾ, ಅವರು ಶ್ರೀಹರಿಯ ಸ್ಮರಣೆಯಿಂದ ಸಂಸಾರತಾಪವನ್ನು ಮರೆಯುತ್ತಿದ್ದರು. ಕೋತಿ ಕೊಂಬಿನಾಟ, ಸೇತುಬಂಧ, ಮುಚ್ಚಾಲೆ ಮುಂತಾದ ಆಟಗಳನ್ನು ಆಡುತ್ತಾ ಬಾಲ್ಯವನ್ನು ಕಳೆದು ರಾಮಕೃಷ್ಣರು ಪೌಗಂಡದಲ್ಲಿ ಕಾಲಿಟ್ಟರು.

## ೧೩. ಧೇನುಕ ವಧೆ

ಎಂಟು, ಒಂಬತ್ತು ವರ್ಷದವರಾಗಲು ರಾಮಕೃಷ್ಣರು, ಆಕಳುಗಳನ್ನು, ಕಾಯುತ್ತಾ, ವೃಂದಾವನ ವನವನ್ನು ತಮ್ಮ ಪಾದಸಂಚಾರದಿಂದ ಪಾವನಗೊಳಿಸಿದರು. ತನ್ನನ್ನು ಪೊಗಳುವ ಗೋಪಬಾಲಕರಿಂದಲು, ಬಲರಾಮನಿಂದಲು ಕೂಡಿ, ಕೃಷ್ಣನು ಗೋವುಗಳನ್ನು ಹಿಂಬಾಲಿಸಿ, ವನದಲ್ಲಿ ಬಿಟ್ಟು, ಅವು ಮೇಯುತ್ತಿರಲು, ತಾನು ಸ್ನೇಹಿತರಿಂದ ಆಟವಾಡುತ್ತಿದ್ದನು.

ಮಧುರ ಝುಂಕಾರವನ್ನು ಮಾಡುವ ಭ್ರಮರಗಳಿಗೆ ಮಕರಂದರಸವನ್ನೀವ ಮಾಧವೀ ಮಂಟಪಗಳು, ಪಕ್ಷಿಗಳ ಕಲಕಲ ನಾದದಿಂದ ಕಂಗೊಳಿಸುವ ಮರಗಳು, ಮಾಧವ ಭಜಕರ ಮನದಂತೆ ಸ್ವಚ್ಛವಾದ ಸರೋವರಗಳು, ಕಮಲ ಸುಗಂಧವನ್ನು ಹೊತ್ತ ಭಾರದಿಂದ ಮೆಲ್ಲಗೆ ಸೂಸಿ ಬರುವ ಮಲಯ ವಾಯು ಪೋತಗಳು ಕಲೆತು ಕೃಷ್ಣನನ್ನು ಸೇವಿಸಲು ಸಿದ್ಧವಾಗಿದ್ದುವು. ತನ್ನ ಕಾಲ ಕೆಳಗೆ ಚಿಗುರೆಲೆಗಳನ್ನೂ ಪುಷ್ಪದಳಗಳನ್ನೂ ಹಾಸಿ, ಫಲಗಳನ್ನೂ ಕೊಂಬೆಗಳಿಂದ ಸಮರ್ಪಿಸಿ, ನಮಿಸುವಂತೆ, ಬಾಗಿದ ಮರಗಳನ್ನು ನೋಡಿ, ಪುರುಷೋತ್ತಮನು ಪ್ರೀತನಾಗಿ, ಬಲರಾಮನಾಗೆ ಇಂತೆಂದನು–

ಅಣ್ಣಾ! ದೇವೇಂದ್ರಾದಿಗಳು ಪೂಜಿಸುವ ನಿನ್ನ ಚರಣದಲ್ಲಿ ಫಲಪುಷ್ಪಗಳನ್ನು ಸಮರ್ಪಿಸಿ, ನಮಿಸಿ, ತಮ್ಮ ತಾಮಸ ಜನ್ಮದ ಅಜ್ಞಾನವನ್ನು ಕಳೆದುಕೊಳ್ಳಲು ಬೇಡುವ ಈ ಮರಗಳ ಜನ್ಮವೆಷ್ಟು ಧನ್ಯವು! ಈ ಮಧುಪಸಮೂಹವು ಸಕಲ ಲೋಕಪಾವನವಾದ ನಿನ್ನ ಮಹಿಮೆಯನ್ನು ತಿಳಿದು, ನಿನ್ನನ್ನು ಬಿಡದೆ, ಪೊಗಳುತ್ತಾ ಬರುತ್ತಿರುವುವು. ಹಿಂದೆ, ಬೃಂದಾರಕ ಕುಲದೈವವಾದ ನಿನ್ನ ಪ್ರೀತಿಗೆಂದು, ವನದಲ್ಲಿ ತೀವ್ರತಪವನ್ನು ಮಾಡಿದ ಮುನಿಗಳಿರಬಹುದೇ ಈ ಭ್ರಮರ ನಿಕರವು? ನಿನ್ನನ್ನು ನೋಡಿ ಹರುಷದಿಂದ ಕುಣಿಯುವ ನವಿಲು ಯಾವ ತಾಪಸನು? ಹರಿಣೀ ಕುಲವು ಗೋಕುಲದ ತರುಣಿಯರಂತೆ ನಿನ್ನನ್ನು ಎವೆಯಿಕ್ಕದೆ ನೋಡುತ್ತಲಿದೆ. ವನದಿ ಬಂದವರಿಗೆ ಸ್ವಾಗತವನ್ನೀವ ಋಷಿವನರಂತೆ, ಪಂಚಮಸ್ವರದಿಂದ ಕರೆವ ಕೋಗಿಲೆಯನ್ನು ಕಂಡೆಯಾ? ಈ ಮೃಗಪಕ್ಷಿಗಳು ಕೂಡ ಸುಜನಲಕ್ಷಣವನ್ನು ಸೂಚಿಸುತ್ತಿವೆ, ನೋಡು.

ಇಂತು ವೃಂದಾವನದಲ್ಲಿ ಪ್ರೀತಿಯಿಂದ ಸಂಚರಿಸಿ ಕೃಷ್ಣನ ಬಹುಲೀಲೆಗಳನ್ನು ತೋರಿ ತನ್ನವರಾದ ಗೋಪರನ್ನು ಸಂತೋಷಪಡಿಸಿದನು. ಒಂದು ಸಲ ಸ್ನೇಹಿತರಿಂದ ಕೂಡಿ ಹಾಡುವನು; ಒಂದು ಸಲ ಹಂಸಾದಿ ಕೂಜಿತಗಳನ್ನು ಅನುಕರಿಸುವನು; ಮತ್ತೊಂದು ಸಲ, ಆಡುವ ನವಿಲು ನಾಚುವಂತೆ, ನಟ್ಯವಾಡುವನು. ಒಂದು ಸಲ ದೂರದಲ್ಲಿ ಮೇಯುವ ಗೋವುಗಳನ್ನು 'ಕಪಿಲೇ! ತಾರೇ ! ಶಾಂತೆ! ಬಾರೇ' ಎಂದು ಕರೆಯುವನು. ಚಕೋರ ಚಕ್ರವಾಕ ಶಾರಿಕಾಕೀರ ಮುಖಪಕ್ಷಿಗಳಂತೆ ಕೂಗುವನು. ವ್ಯಘ್ರಸಿಂಹಗಳಂತೆ ಗರ್ಜಿಸಿ ಬಾಲರನ್ನು ಹೆದರಿಸುವನು. ಆಟವಾಡಿ ಆಲಸಿಕೆಯಿಂದ ಗೋಪಾಲರ ತೊಡೆಯಲ್ಲಿ ತಲೆಯಿಟ್ಟು ಮಲಗುವನು. ತಾನೂ ಅಣ್ಣನ ಕಾಲೊತ್ತುವನು. ಹಾಡಿ ಕುಣಿದು, ಕುಸ್ತಿ ಆಡಿ, ಗಿಡವನ್ನೇರಿ ಹಣ್ಣನ್ನಿಳಿಸಿ– ಶ್ರಾಂತನಾದ ಕೃಷ್ಣನ ಪಾದಸಂವಾಹನದಿಂದ ಗೋಪಬಾಲಕರು ಧನ್ಯರಾದರು; ಅವನಲ್ಲಿ ಸ್ನೇಹದಿಂದ ಪಾವನರಾದರು. ಗೋಪರ ಮಧ್ಯದಲ್ಲಿ ಗೋಪನಾಗಿ, ನಿಜವೈಭವವನ್ನು ತೋರಗೊಡದೆ ರಮಾಲಾಲಿತ ಪಾದಪಲ್ಲವನಾದ ಶ್ರೀಕೃಷ್ಣನು ವಲ್ಲಭ ಜನರನ್ನು ಸಂತಸಪಡಿಸಿದನು.

ರಾಜನ್! ಶ್ರೀಹರಿಯ ಪಾದಸ್ಪರ್ಶದಿಂದ ವೃಂದಾವನದ ಭೂಮಿಯು ಪವಿತ್ರವಾಯಿತು. ಕರಸ್ಪರ್ಶದಿಂದ ಗಿಡಬಳ್ಳಿಗಳು ಪಾವನವಾದವು. ದಯಾವೀಕ್ಷಣದಿಂದ ನದೀ ಪರ್ವತ ಖಗಮೃಗಗಳು ಕೃತಾರ್ಥವಾದವು. ಕೃಷ್ಣಜಾಲಿಂಗನದಿಂದ ಗೋಪಿಯರು ಧನ್ಯರಾದರು.

ಶ್ರೀದಾಮನೆಂಬುವ ರಾಮಕೃಷ್ಣರ ಸ್ನೇಹಿತನು, ಸುಬಲ ಅಶೋಕ, ಚಿಕ್ಕಕೃಷ್ಣನೆಂಬ ಬಾಲರಿಂದ ಕೂಡಿ ಬಂದು ಶ್ರೀಕೃಷ್ಣರಾಮರನ್ನಿಂತು ಬೇಡಿದನು–

ರಾಮ! ಮಹಾಶೂರ! ಕೃಷ್ಣ! ದುಷ್ಟಸಂಹಾರ! ಇಲ್ಲೇ ಸ್ವಲ್ಪದೂರದಲ್ಲಿ ತಾಳವನವೊಂದಿದೆ. ಅಲ್ಲಿ ತಾಳೆಯ ಫಲಗಳು ದಂಡಿಯಾಗಿವೆ. ಅವುಗಳ ರುಚಿಯೂ ಬಲು ಚೆನ್ನ. ಆದರೆ ಧೇನುಕ ನೆಂಬ ರಾಕ್ಷಸನು ಕತ್ತೆಯ ರೂಪದಿಂದ ಅಲ್ಲಿದ್ದು, ಬಂದವರನ್ನೊದೆದು ಕೊಂದುಬಿಡುವನು. ಅವನ ಬಂಧುಗಳೂ ಕತ್ತೆಗಳೇ. ಅವರ ಭಯದಿಂದ ನಾವು ಅಲ್ಲಿ ಹೋಗಲು ಅಂಜುತ್ತಿರುವೆವು. ಆ ವನದಲ್ಲಿ ಮೃಗ ಪಕ್ಷಿಗಳು ಸಹಿತ ಸುಳಿದಾಡಲು ಹೆದರುವುವು. ತಾಳೆಯ ಹಣ್ಣಿನ ಸವಿ ಹೇಳತೀರದು. ಅದರ ಸುವಾಸನೆಯಿಂದ ಮನಸೋತು ಬೇಡುವ ನಮಗೆ ಆ ಫಲಗಳನ್ನು ಕೊಡು! ಆ ದುಷ್ಟನನ್ನು ಶಿಕ್ಷಿಸು.

ಆ ಮಾತನ್ನು ಕೇಳಿ ರಾಮಕೃಷ್ಣರು ನಕ್ಕು, ಸ್ನೇಹಿತರಿಂದ ಕೂಡಿ, ತಾಳವನವನ್ನು ಪೊಕ್ಕು, ಗಿಡಗಳನ್ನು ಭುಜದಿಂದ, ಹೊಡೆದಲ್ಲಾಡಿಸಿ, ಫಲಗಳನ್ನು ಕೆಡಹಿದರು. ಹಣ್ಣು ಬೀಳುವ ಪಟಪಟ ಶಬ್ದವನ್ನು ಕೇಳಿ, ಧೇನುಕನು ಭೂಮಿ ನಡುಗುವಂತೆ ಗುಡುಗುತ್ತಾ ನಡೆದು ಬಂದು, ಬಲರಾಮನನ್ನು ಹಿಂಗಾಲಿನಿಂದ ಎದೆಯಲ್ಲಿ ಒದೆದನು. ಮತ್ತೆ ಹಿಂದುಮುಂದಾಗಿ, ಹಿಂಗಾಲನ್ನೆತ್ತಿ ಹೊಡೆಯಲು ಬಂದ ರಾಸಭದೈತ್ಯನನ್ನು, ಬಲರಾಮನು ಹಿಡಿದೆತ್ತಿ, ಗಿರಗಿರ ತಿರುಗಿಸಿ, ಅವನನ್ನು ತಾಳವೃಕ್ಷದ ಮೇಲೊಗೆದನು. ಆ ತಾಳವೃಕ್ಷವು ಮುರಿದು, ಮತ್ತೊಂದರ ಮೇಲೆರಗಿ, ಇಂತು ಅನೇಕ ತಾಳವೃಕ್ಷಗಳು ಮುರಿದು ಬಿದ್ದವು. ವನವೆಲ್ಲವೂ ಹಣ್ಣು ಹಾಸಿದಂತಾ ಗಲು, ಗೋಪಾಲ ಬಾಲರಿಗೆ ರಸದೂಟವಾಯಿತು. ಜಗದೀಶಶೇಷನು ಅಹಂಕಾರತತ್ತ್ವಸ್ವಾಮಿ ಯಲ್ಲವೇ? ಪಟದಿನಿಂದ ತಂತುಗಳಂತೆ ಅವನಲ್ಲಿ ಈ ಜಗವೆಲ್ಲ ನಿಂತಿದೆ. ಅಂತಹ ಶೇಷಾವತಾರ ನಾದ ಬಲರಾಮನಿಗೆ ತಾಳಗಳನ್ನು ಕೆಡಹುವುದೊಂದಾಶ್ಚರ್ಯವೇ?

ಆಗ ಧೇನುಕಬಂಧುಗಳಾದ ಕತ್ತೆಗಳು ಖಾತ್ಕಾರವನ್ನು ಮಾಡುತ್ತಾ, ಸಿಟ್ಟಿನಿಂದ, ಗೋಪ ರನ್ನು ಕೊಲ್ಲಲು ಬಂದವು. ಅವರನ್ನು ರಾಮಕೃಷ್ಣರು ಲೀಲೆಯಿಂದ ಕೊಂದು, ಗಿಡಗಳ ಮೇಲೊಗೆದು, ಹಣ್ಣುಗಳುದುರಿಸಿ, ಸಖರಿಗೆ ಸುಖದೂಟವನ್ನಿತ್ತರು. ರಾಮಕೃಷ್ಣರ ಮಹತ್ಕಾರ್ಯವನ್ನು ನೋಡಿ ದೇವತೆಗಳು, ಮುನಿಗಳು ಸಂತೋಷದಿಂದ ಪೂಮಳೆಗರೆದು, ದುಂದುಭಿಗಳನ್ನು ಬಾರಿಸಿ, ಅವರನ್ನು ಪೊಗಳಿದರು. ಅಂದಿನಿಂದ ಮನುಜರು ನಿರ್ಭಯರಾಗಿ, ತಾಳವನವನ್ನು ಪೊಕ್ಕು, ಹಣ್ಣನ್ನು ತಿನ್ನಲು ಪ್ರಾರಂಭಿಸಿದರು; ಪಶುಗಳೂ ಹುಲ್ಲನ್ನು ಮೇಯಲು ಸಂಚರಿಸಿದವು.

ಗೋಪಾಲಕರು ಕೊಂಡಾಡುತ್ತಿರಲು ಪವಿತ್ರಚರಿತ್ರನು, ಕಮಲನೇತ್ರನು ಆದ ಶ್ರೀಕೃಷ್ಣನೂ, ಬಲರಾಮನೂ ವೃಂದಾವನವನ್ನು ಪ್ರವೇಶಿಸಿದರು.

ಮೈಯೆಲ್ಲ ಗೋಧೂಳಿ ಮುಚ್ಚಿ, ಮುಖದ ಮೇಲೆ ಓಲಾಡುವ ಮುಂಗುರುಳ ಸೊಬಗಿ ನಿಂದ, ತಲೆಯ ಮೇಲೆ ನವಿಲಗರಿಯನ್ನು ಕಟ್ಟಿ, ವನಕುಸುಮರಾಜಿಯನ್ನು ಮುಡಿದು, ಕಟಾಕ್ಷ ಮಂದಹಾಸಗಳಿಂದ ಮನಸೂರೆಗೊಂಡು, ವೇಣುವನ್ನೂದುತ್ತಾ, ಸಂಗಡಿಗರಿಂದ ಕೂಡಿ ಬಂದ ಗೋವಿಂದನನ್ನು ನೋಡಬೇಕೆಂದು, ಗೋಪಿಯರು ಕೂಡಿ ಬಂದರು. ಬಂದು ನೀಲಮೇಘ

ಶ್ಯಾಮಸುಂದರನ ವದನ ಪಂಕಜ ಸೌಂದರ್ಯರಸವನ್ನು, ತಮ್ಮ ನಯನ ಭ್ರಮರಗಳಿಂದ ಕುಡಿದು, ತೃಪ್ತರಾಗದೆ, ಶ್ರೀಕೃಷ್ಣನ ಕ್ಷಣ ವಿರಹವನ್ನೂ ಸಹಿಸದಾದರು. ಆ ಗೋಪವನಿತೆಯರ ಲಜ್ಜೆಯನ್ನು ದೂರಮಾಡಿ, ಕಿರುನಗೆಯನ್ನು ತರುವ ಕೃಷ್ಣನ ಪ್ರೇಮಕಟಾಕ್ಷವೇ, ಅವರಿಗೆ ಬಹುಮಾನವಾಗಿತ್ತು. ಇಂತು ಬಂದ ರಾಮಕೃಷ್ಣರಿಗೆ ಯಶೋದಾ ರೋಹಿಣಿಯರು, ಹರಸಿ ಲಾಲಿಸಿದರು. ಶ್ರಮ ಪರಿಹಾರವಾದ ಮೇಲೆ, ಮಿಂದು, ಪುಟ್ಟದುಕೂಲಗಳನ್ನುಟ್ಟು, ಗಂಧವನ್ನು ಹಚ್ಚಿ, ಹಾರವನ್ನಿಟ್ಟು, ರಾಮಕೃಷ್ಣರು ತಾಯಿಯು ಪುಸಲಾಯಿಸಿ ಉಣ್ಣಬಡಿಸಲು, ಉಂಡು, ಅನಂತರ ಮೃದುತಲ್ಪಗಳಲ್ಲಿ ಮಲಗುತ್ತಿದ್ದರು.

ಒಂದು ದಿನ ಶ್ರೀಕೃಷ್ಣನು ಬಲರಾಮನನ್ನು ಬಿಟ್ಟು, ಇತರ ಬಾಲರಿಂದ ಕೂಡಿ, ಆಕಳ ಹಿಂಡನ್ನು ಹಿಂಬಾಲಿಸಿ, ಕಾಳಿಂದಿಯ ತೀರದ ವನದಲ್ಲಿ ಮೇಯುಸುತ್ತಿದ್ದನು. ಬಿಸಿಲುಗಾಲದ ದಗೆಯಿಂದ ಆಕಳುಗಳು, ಗೋಪಾಲಕರು, ಸಮೀಪದ ಮಡುವಿನಲ್ಲಿದ್ದ ಯಮುನೆಯ ನೀರನ್ನು ಕುಡಿದರು. ಕಾಳಿಯ ದೂಷಿತವಾದ ಆ ವಿಷಜಲವನ್ನು ಕುಡಿದು, ಅವರು ಮೂರ್ಛಿತರಾಗಿ, ಸತ್ತವರಂತೆ ಬಿದ್ದರು. ಅದನ್ನು ನೋಡಿ, ಮಹಾಯೋಗೇಶನಾದ ಕೃಷ್ಣನು, ತನ್ನ ಕಟಾಕ್ಷದ ಸುಧೆಯನ್ನು ಸುರಿದು ಅವರನ್ನೆಲ್ಲ ಬದುಕಿಸಿದನು. ಗೋಪಾಲಕರು ಒಬ್ಬರನ್ನೊಬ್ಬರು ನೋಡಿ, ವಿಸ್ಮಿತರಾಗಿ, ತಾವು ಶ್ರೀಗೋವಿಂದನ ಕೃಪೆಯಿಂದ ಬದುಕಿದೆವೆಂದು ತಿಳಿದು ಅವನಿಗೆ ವಂದಿಸಿದರು.

## ೧೪. ಕಾಳಿಯ ಮರ್ದನ

ಶ್ರೀಶುಕನು ಹೇಳಿದನು–

ಕಾಳಿಂದಿಯ ಮಡುವು ಕಾಳಿಯನಿಂದ ಕೆಟ್ಟಿದೆ ಎಂದು ತಿಳಿದು, ಸರ್ವಸಮರ್ಥನಾದ ಕೃಷ್ಣನು, ಆ ಕೃಷ್ಣಸರ್ಪವನ್ನು ಹೊರಹಾಕಿದನು.

ರಾಜನು ಕೇಳಿದನು–

ಸ್ವಾಮೀ! ಒಳಗೆ ಅಗಾಧವಾದ ಮಡುವಿನಲ್ಲಿ ನೆಲಸಿದ ಹಾವನ್ನು ಕೃಷ್ಣನು ಹೇಗೆ ಹಿಡಿದು ಹೊರಹಾಕಿದನು? ಅಲ್ಲಿ ಬಹುಕಾಲದಿಂದ ಕಾಳಿಯನು ಇದ್ದದ್ದೇಕೆ? ಪೂರ್ಣ ಗುಣನು, ಸರ್ವ ಸ್ವತಂತ್ರನು, ರಮಾರಮಣನು ಆದ ಕೃಷ್ಣನ ಗೋಪಾಲಲೀಲೆಯನ್ನು ಕೇಳಿ ಸಾಕೆನಿಸುವುದುಂಟೇ?

ಶ್ರೀಶುಕನು ಪೇಳಿದನು–

ಕಾಳಿಂದಿಯಲ್ಲಿ ಕಾಳಿಯನಿದ್ದ ಮಡುವು ಬಹು ಗಂಭೀರವು, ಭಯಂಕರ ವಿಷಪೂರಿತವೂ ಆಗಿತ್ತು. ವಿಷಾಗ್ನಿಯಿಂದ ಕುದಿಯುವ ಆ ನೀರಿನ ವಾಸನೆ ಬಡಿದು ಮೇಲೆ ಹಾರುವ ಹಕ್ಕಿಗಳು ಕೂಡ, ಸತ್ತುಬೀಳುತ್ತಿದ್ದವು. ಆ ನೀರಿನ ಮೇಲೆ ಸುಳಿದು ಬರುವ ಗಾಳಿಯು ಬಡಿಯಲು ತೀರದ ಮರಗಳು, ಹತ್ತಿರದ ಜಂತುಗಳು ಕೂಡ ನಾಶವಾಗುತ್ತಿದ್ದವು. ಇಂತು ವಿಷಜಲ ಭಯಂಕರವಾದ ನದಿಯನ್ನು ದುಷ್ಟ ಶಿಕ್ಷಕನಾದ ಕೃಷ್ಣನು, ನಿರ್ವಿಷವಾಗಿರಿಸಿ, ಸ್ವಚ್ಛಗೊಳಿಸಲು ನಿಶ್ಚಯಿಸಿದನು. ತೀರದಲ್ಲಿದ್ದ ಉನ್ನತವಾದ ಕದಂಬ ವೃಕ್ಷವನ್ನೇರಿ, ನಡುವು ಬಿಗಿದು, ವಿಷಹ್ರದದಲ್ಲಿ ಧುಮುಕಿದನು. ಪುರುಷೋತ್ತಮನ ಪಾತವೇಗವನ್ನು ಸಹಿಸಲಾರದೆ, ವಿಷಹ್ರದವು ಉಕ್ಕೇರಿ,

ಕೈಗಳೆತ್ತಿ ಮುಗಿಯುವಂತೆ ಅಲೆಗಳನ್ನು ಚಾಚಿ, ಅಲ್ಲಕಲ್ಲೋಲವಾಯಿತು. ನೂರುಧನುಃ ಪ್ರಮಾಣದಷ್ಟು ದೂರ ನೆರೆ ಬಂದು, ಒಳಗಿನ ಅಲೆಗಳ ಭಯಂಕರ ಶಬ್ದವು ಕರ್ಣಕಠೋರ ವಾಯಿತು. ಭುಜಗಳಿಂದ ಈಜುವ ಕೃಷ್ಣನು ಗುನ್ನಾನೆಯಂತೆ ಶೋಭಿಸಿದನು. ತನ್ನ ಮನೆಯನ್ನು ಹೊಕ್ಕು ತನ್ನನ್ನು ತಿರಸ್ಕರಿಸುವ ಕೃಷ್ಣನ ವೀರವಿಲಾಸವನ್ನು ಸಹಿಸದೆ, ಕಾಳಿಯನು ತನ್ನ ಪರಿವಾರದ ನಾಗರಿಂದ ಕೂಡಿ, ಮೇಲೆ ಬಂದನು. ಕೃಷ್ಣನ ಈಜುವ ಶಬ್ದವನ್ನು ಕೇಳಿ ಚಕ್ಷುಶ್ರವನಾದುದರಿಂದ, ನೀಲಮೇಘಶ್ಯಾಮಸುಂದರನು, ಪೀತಾಂಬರಧರನು, ಮಂದಸ್ಮಿತವದನಾರವಿಂದನು, ಶ್ರೀವತ್ಸ ವಕ್ಷನು, ಕಮಲಕೋಮಲಪಾದನು, ನಿರ್ಭಯನು ಆದ ಕೃಷ್ಣನನ್ನು ಕಣ್ಣಿಂದ ನೋಡಲಾರದೆ, ರೋಷದಿಂದ ಮೇಲೇರಿ ಬಂದು ಕಚ್ಚಿದನು; ಕೃಷ್ಣನ ಮೈಯನ್ನು ಸುತ್ತಿ ಅಲುಗದಂತೆ ಮಾಡಿದನು. ಅದನ್ನು ನೋಡಿ ಗೋಪಾಲಕರು– 'ಕೃಷ್ಣನೇ ಪರಮಾಪ್ತನು– ದೇಹಾಪತ್ಯ ಕಳತ್ರಾದಿಗಳು ಅವನಿತ್ತವು' ಎಂದು ನಂಬಿದರಾದ್ದರಿಂದ ದುಃಖದಿಂದ ಗೋಳಾಡಿದರು– ಶೋಕವೇಗವನ್ನು ತಡೆಯಲಾರದೆ ಮೂರ್ಛೆ ಹೊಂದಿದರು. ಆಕಳುಗಳು ಕರುಗಳು ಕೂಡ ದುಃಖದಿಂದ ಆಕ್ರಂದಿಸಿ, ಕೃಷ್ಣನನ್ನೇ ನೋಡುತ್ತಾ, ಅಳುತ್ತಾ ನಿಂತವು.

ಅಲ್ಲಿ ವ್ರಜದಲ್ಲಿ ಭಯಂಕರ ದುಃಶಕುನಗಳನ್ನು ಕಂಡು ಹೆದರಿ ನಂದಾದಿಗೋಪಾಲಕರು, ರಾಮನನ್ನು ಬಿಟ್ಟು ಹೋಗಿರುವ ಕೃಷ್ಣನು ಏನಾದನೋ ಎಂದು ತ್ವರೆಯಿಂದ ಬಂದರು. ಕೃಷ್ಣನಲ್ಲಿಟ್ಟ ಮನಃಪ್ರಾಣಗಳಿಂದ ಮತ್ತೇನನ್ನೂ ಕಾಣದೆ ಭಯಕಾತರರಾಗಿ ಗೋಕುಲದ ಬಾಲರು ವೃದ್ಧರು ತರುಣಿಯರು ಎಲ್ಲರೂ ಕೃಷ್ಣಾ! ಎಂದು ಕೂಗುತ್ತಾ ಯಮುನಾತೀರವನ್ನು ಸೇರಿ, ಅಲ್ಲಿ ದಿವ್ಯಲಕ್ಷಣಲಕ್ಷಿತವಾದ ಭಗವಂತನ ಪಾದಚಿಹ್ನೆಗಳನ್ನನುಸರಿಸಿ ನಡೆದರು. ಕೃಷ್ಣ ಪ್ರಭಾವವನ್ನರಿತ ಬಲರಾಮನು ಅವರನ್ನು ಕರೆದುಕೊಂಡು ಕಾಳಿಯನ ಮಡುವನ್ನು ಸಮೀಪಿಸಿದನು. ಹ್ರದದಲ್ಲಿ ಸರ್ಪದಿಂದ ಸುತ್ತಲ್ಪಟ್ಟು, ಕದಲದಿದ್ದ ಕೃಷ್ಣನನ್ನು, ಮೂರ್ಛಿತ ರಾಗಿದ್ದ ಗೋಪಬಾಲರನ್ನು, ಆಕ್ರಂದಿಸುವ ಗೋಗಣವನ್ನು ನೋಡಿ ಅತ್ಯಂತ ದುಃಖಿತರಾದರು. ಕೃಷ್ಣನ ಪ್ರೇಮಾಲಾಪ ಮಂದಹಾಸ ವಿಲಾಸಗಳಿಂದ ಮೋಹಿತರಾಗಿ ಕೃಷ್ಣನಲ್ಲೇ ಮನವಿಟ್ಟ ಗೋಪತರುಣಿಯರು, ಅವನ ಮಧುರ ವಚನಗಳನ್ನು ನೆನೆದು, ಅಳುತ್ತಾ ನಿಂತರು. ಪ್ರಿಯ ಕೃಷ್ಣನಿಲ್ಲದ ಲೋಕವು ಶೂನ್ಯವಾಗಿ ತೋರಲು, ಅವರ ಶರೀರವು ತೀರದಲ್ಲಿದ್ದರೂ, ಮನವು ಮಾಧವನಲ್ಲಿ ಸೇರಿತು. ಯಶೋದೆಯನ್ನು ಹಿಡಿದುಕೊಂಡು ಅಳುತ್ತಾ ಅಶ್ರುಜಲವು ನದಿಯಲ್ಲಿ ಕಲೆಯುತ್ತಿರಲು, ಕೃಷ್ಣಪ್ರಿಯ ಕಥೆಯನ್ನು ಪೊಗಳುತ್ತಿದ್ದ ಮುಖಪದ್ಮದಿಂದ ನಿಟ್ಟುಸಿರನ್ನು ಬಿಡುತ್ತಾ ಮಾತಾಡಲಾರದೆ ಮೃತಪ್ರಾಯರಾಗಿದ್ದರು. ಆಗ ನಂದಾದಿಗಳು ಕೃಷ್ಣನಿಲ್ಲದೆ ಬದುಕಿರಲಾರೆವೆಂದು ಮಡುವಿನಲ್ಲಿ ಬೀಳಪೋದರು. ಆದರೂ ಕೃಷ್ಣಮಹಿಮೆಯನ್ನು ತಿಳಿಸಿ ಬಲರಾಮನು ಅವರನ್ನು ನಿಲ್ಲಿಸಿದನು.

ಕೃಷ್ಣನು ತನ್ನನ್ನು ನಂಬಿ ನಿಂತ ಗೋಕುಲದ ಗೋಗೋಪಗಣವನ್ನು ನೋಡಿ, ಅವರು ತನಗಾಗಿ ದುಃಖಪಡುವುದನ್ನೂ ಕಂಡನು. ಮನುಜಬಾಲಕನಂತೆ ನಿಶ್ಶಕ್ತನಾಗಿ ತೋರುತ್ತಿದ್ದ ಕೃಷ್ಣನು ತನ್ನವರ ದುಃಖವನ್ನು ನಿವಾರಿಸಲು ನಿಶ್ಚಯಿಸಿ, ಅದ್ಭುತವಾಗಿ ಬೆಳೆದು, ಹಾವಿನ ಪಟ್ಟು ಬಿಡಿಸಿಕೊಂಡನು. ಕಾಳಿಯನು ಕುಪಿತನಾಗಿ, ಹೆಡೆಗಳನ್ನೆತ್ತಿ, ಬುಸುಗುಟ್ಟಿ, ಮೂಗಿನಿಂದ ಬಾಯಿಯಿಂದ ವಿಷವನ್ನು ಕಾರುತ್ತಾ, ಕೃಷ್ಣನನ್ನು ಕೆಂಡಗಣ್ಣಿನಿಂದ ನೋಡಿದನು; ಅಗ್ನಿಜ್ವಾಲೆ ಯಂತಿರುವ ನಾಲಿಗೆಗಳನ್ನು ಚಾಚಿ, ತುಟಿಯನ್ನು ಸವರುತ್ತಾ, ನೀರಾಟವಾಡುತ್ತಾ ನಿರ್ಲಕ್ಷ್ಯ

ವಾಗಿದ್ದ ಕೃಷ್ಣನನ್ನು ಕಚ್ಚಿಹಿಡಿಯಲು ಮುತ್ತಿದನು. ಗರುಡನಂತೆ ವಿಹರಿಸುವ ಯದುನಾಥನು ಅವನಿಗೆ ಸಿಗದೆ, ಮಡುವಿನಲ್ಲಿ ತಿರುಗಿ, ಚಂಗನೆ ಹಾರಿ, ಕಾಳಿಯನ ಹೆಡೆಯ ಮೇಲೇರಿ ನಿಂತನು. ಕಾಳಿಯ ಫಣಿ ಫಣಾಗ್ರ ಮಣಿಕಾಂತಿ ನೀರಾಜಿತಪಾದ ನೀರಜನಾದ ಶ್ರೀಹರಿಯು ಕಾಳಿಯನ ಮದವನ್ನಿಳಿಸಲು, ಅಲ್ಲಿ ನರ್ತಿಸತೊಡಗಿದನು.

ಅಮೃತಕಿರಣನ ಭಾವನಾದ ಕೃಷ್ಣನ ನರ್ತನವನ್ನು ಅನುಕರಿಸಿ ಗಂಧರ್ವ ಸಿದ್ಧ ವಿದ್ಯಾಧರರು ಪ್ರೀತಿಯಿಂದ ವಾದ್ಯಗೀತಗಳಿಂದ ನರ್ತಿಸಿದರು. ದೇವವನಿತೆಯರು ಪೂಮಾಲೆಗಳನ್ನರ್ಪಿಸಿದರು. ಮುನಿಗಳು ಶ್ರೀಕೃಷ್ಣನನ್ನು ನುತಿಸಿದರು. ಬ್ರಹ್ಮನು ವೇಣುವನ್ನು, ರುದ್ರನು ಮೃದಂಗವನ್ನು ನುಡಿಸಿದನು. ಹನುಮಂತನು ವೀಣೆಯನ್ನು ಬಾರಿಸಲು, ನಾರದನು ಪಾಡಿ ಪೊಗಳಿದನು. ಕಾಳಿಯನು ಮೇಲಕ್ಕೆತ್ತಿದ ಹೆಡೆಯನ್ನು ತುಳಿಯುತ್ತಾ, ಖಲಜನ ಶಿಕ್ಷಾದಕ್ಷನಾದ ಶ್ರೀಕೃಷ್ಣನು ನರ್ತಿಸಲು, ಬಾಯಲ್ಲಿ ರಕ್ತವನ್ನು ಕಾರಿ ಬಹು ಕಷ್ಟಪಟ್ಟು, ದುಷ್ಟಸರ್ಪನು, ನೀರವನಾದನು. ಅವನ ಕಣ್ಣಲ್ಲಿ ರಕ್ತವು ಹರಿಯಿತು. ರೋಷದಿಂದ ಅವನು ಬುಸುಗುಟ್ಟಿದನು. ಪುರುಷೋತ್ತಮನ ಚಿತ್ರತಾಂಡವದಿಂದ ಹೆಡೆಗಳು ಮುರಿಯಲು, ಮದವಿಳಿದು ಅವನಿಗೆ ಜ್ಞಾನೋದಯವಾಯಿತು. ಚರಾಚರಗುರುವಾದ ನಾರಾಯಣನೇ ಕೃಷ್ಣನೆಂದರಿತು ಕಾಳಿಯನು ಶ್ರೀಹರಿಗೆ ಮನಸಾ ಶರಣಾಗತನಾದನು.

ಜಗವೆಲ್ಲ ತನ್ನ ಉದರದಿ ಧರಿಸಿದ ಹರಿಯ ಹಿಂಬುಟದ ಕುಣಿತದಿಂದ ಹೆಡೆಗಳೆಲ್ಲ ಮುರಿದು, ರಕ್ತವನ್ನು ಕಾರಿ ಕಷ್ಟಪಡುವ ಪತಿಯನ್ನು ಕಂಡು ಕಾಳಿಯನು ಪತ್ನಿಯರು ದುಃಖ ದಿಂದ ಓಡಿಬಂದರು. ಅವರ ತುರುವು ಬಿಚ್ಚಿ ಕೇಶಗಳು ಹಾರಾಡಿದವು. ಭೂಷಣ ಹಾರಗಳು ಅಸ್ತವ್ಯಸ್ತವಾಗಿದ್ದವು. ಉಟ್ಟ ವಸನವು ಜಾರುತ್ತಿತ್ತು. ಇಂತು ಸಂಭ್ರಮಕಾತರರಾಗಿ, ಮನದಿ ನೊಂದು, ಪೂಜಾದ್ರವ್ಯಗಳನ್ನು ಹೊತ್ತು ತಂದು, ಶ್ರೀಕೃಷ್ಣನಿಗರ್ಪಿಸಿ, ಸಾಷ್ಟಾಂಗವೆರಗಿದರು. ಕೈಜೋಡಿಸಿ ನಿಂತು ಆ ಸಾಧ್ವಿಯರು ಕಾಳಿಯನ ಕಷ್ಟವನ್ನು ಬಿಡಿಸೆಂದು ಶರಣಾಗತರಾಗಿ ಇಂತೆಂದರು–

ಶ್ರೀಕೃಷ್ಣ! ನೀನು ನಮ್ಮ ಪತಿಯನ್ನು ದಂಡಿಸಿದುದು ನ್ಯಾಯವಾಗಿದೆ. ಅಪರಾಧವನ್ನೆಸಗಿದ ಇವನನ್ನು ಕ್ಷಮಿಸು! ನಿನ್ನ ಅವತಾರವೇ ದುಷ್ಟನಿಗ್ರಹ ಶಿಷ್ಟಪಾಲನೆಗಲ್ಲವೇ? ನಿನಗೆ ವೈಷಮ್ಯ ವಿಲ್ಲ. ನೀನು ಕರುಣಾರಹಿತನೂ ಅಲ್ಲ. ಶತ್ರುಗಳಾದರೂ ಸುಗುಣಿಗಳಾದರೆ ರಕ್ಷಿಸುವೆ. ಸುತ ರಾದರೂ ದುರ್ಗುಣಿಗಳಾದರೆ ಶಿಕ್ಷಿಸುವೆ. ಅಪರಾಧವನ್ನು ಮೀರಿದ ಶಿಕ್ಷೆಯನ್ನು ಕೊಡದಿರುವ ನಿನ್ನ ಅನುಗ್ರಹವನ್ನು ನಮ್ಮಲ್ಲಿ ತೋರು! ತಾಮಸಯೋನಿಯಲ್ಲಿ ಹುಟ್ಟಿ, ಪಾಪವನ್ನು ಮಾಡಿದವರೂ ಸ್ವಭಾವಸುಜನರಾಗಿದ್ದರೆ, ಅವರನ್ನು ನಿಷ್ಪಾಪರನ್ನು ಮಾಡಲು ಶಿಕ್ಷಿಸುವ ನಿನ್ನ ಕರುಣೆ ಅಗಾಧವಾಗಿದೆ. ಹಾವಾಗಿ ಪ್ರಾಣಿಗಳನ್ನು ಪೀಡಿಸುವವನನ್ನು ಶಿಕ್ಷಿಸಿ ಪಾಪದೂರನನ್ನಾಗಿ ಮಾಡುವುದು ನಿನ್ನ ಪರಮಾನುಗ್ರಹವೇ ಸರಿ! ಶ್ರೀಹರಿ ಕೊಟ್ಟ ಶಿಕ್ಷೆಯು ಒಳಿತಾಯಿತೆಂದು ಚಿಂತಿಸುವ ಜನರಿಗೆ ಶುಭವನ್ನೇ ಕೊಡುವೆ. ಪೂರ್ವಜನ್ಮದಲ್ಲಿ ಇವನು ಹಿರಿಯರನ್ನು ಪೂಜಿಸಿ, ದಂಭಾಹಂಕಾರಾದಿಗಳನ್ನು ತ್ಯಜಿಸಿ, ಭೂದಾನಾದಿಗಳಿಂದ ವಿಪ್ರರನ್ನು ಭಜಿಸಿ, ಸರ್ವಭೂತಗಳಲ್ಲಿ ದಯೆಯನ್ನು ತೋರಿಸಿ, ಮಾಡಿದ ತಪಃಪುಣ್ಯಫಲದಿಂದ, ಸರ್ವಜೀವನ ನಿಯಾಮಕನಾದ ನೀನು ಪ್ರೀತನಾಗಿರಬೇಕು. ಇಲ್ಲದಿರೆ ಲಕ್ಷ್ಮೀಬ್ರಹ್ಮರುದ್ರೇಂದ್ರಾದಿ ದೇವನಿಕರ ಕರಪೂಜಿತಚರಣ ಸರೋಜರೇಣುವನ್ನು ಶಿರದಿ ಧರಿಸುವ ಪುಣ್ಯಪಾತ್ರನಿವನಾಗುತ್ತಿದ್ದನೇ? ದೇವ! ನಿನ್ನ

ಪಾದಮಹಿಮಾನಿರೂಪಕ ಶಾಸ್ತ್ರಸುಧಾಪಾನಲೋಲರಿಗೆ ಸತ್ಯಲೋಕದ ಸುಖವು, ಸ್ವರ್ಗದ ಭೋಗವು, ಚಕ್ರವರ್ತಿಯ ಸಿರಿಸಂಪತ್ತು, ರಸಾತಲದ ವಿಷಯಪರಂಪರೆಯು, ಅಣಿಮಾದಿ ಸಿದ್ಧಿಗಳು ಕೂಡ ರುಚಿಸುವುದಿಲ್ಲ. ಶಂಕರವರದ! ತಮೋಮಯ ಸರ್ಪಕುಲದಲ್ಲಿ ಕ್ರೋಧವಶ. ನಾಗಿ ಹುಟ್ಟಿ, ಸಂಸಾರಚಕ್ರದಲ್ಲಿ ಸಿಕ್ಕು ನರಳುವ ಕಾಳಿಯನ್ನು ನಿನ್ನ ಸಾಕ್ಷಾತ್ಕಾರವನ್ನು ಪೊಂದಿದ ನೆಂದರೆ, ನಿನ್ನ ಅನುಗ್ರಹದಿಂದಲೇ ಅಲ್ಲವೇ? ಸರ್ವೋತ್ತಮನು ಬ್ರಹ್ಮಾದಿ ಸಕಲಭೂತ ಹೃದಯಗುಹಾ ನಿಲಯನು, ಶಶ್ವದೇಕಪ್ರಕಾರನು, ಜೀವಭಿನ್ನನು, ಜ್ಞಾನವಿಜ್ಞಾನಾನಂದಘನನು, ಅನಂತಶಕ್ತಿ ಸಂಪನ್ನನು, ಸತ್ವಾದಿಗುಣ ವಿಕಾರದೂರನು, ಅಪ್ರಾಕೃತ ದಿವ್ಯಶರೀರನು ಆದ ನಿನಗೆ ನಮಸ್ಕಾರವು! ಕಾಮಧೇನುವಿನಂತೆ ಕಾಲದಲ್ಲಿದ್ದು ಭಕ್ತರ ಕಾಮಿತವನ್ನು ಈಡೇರಿಸುವ, ಸರ್ವವನ್ನು ಸಾಕ್ಷತ್ತಾಗಿ ವೀಕ್ಷಿಸುವ, ಜಗವನ್ನು ನಡೆಸುವ ಸ್ವತಂತ್ರಕರ್ತನಾದ ನಿನಗೆ ನಮ ಸ್ಕಾರವು! ಪಂಚಭೂತಗಳು, ಪಂಚತನ್ಮಾತ್ರಗಳು, ಹತ್ತಿಂದ್ರಿಯಗಳು, ಹತ್ತುಪ್ರಾಣಾದಿ ವಾಯುಗಳು, ಮನಸ್ಸು, ಬುದ್ಧಿ ಎಂಬ ಸಕಲ ತತ್ವಗಳಿಗೊಡೆಯನು ನೀನೇ. ನಿನ್ನ ಮಹಾವೈಭವ ವನ್ನು ತೋರಗೊಡದೆ, ಸ್ವರೂಪಜ್ಞಾನದಲ್ಲಿ ಅಡಗಿ, ಅತೀಂದ್ರಿಯನಾಗಿರುವ ನಿನ್ನನ್ನು ಭಿನ್ನಭಿನ್ನ ರೀತಿಯಿಂದ ತಿಳಿಯುವ ಜನರ ಯೋಗ್ಯತೆಯಂತೆ, ಅವರಿಗೆ ತಕ್ಕ ಫಲವನ್ನು ನೀನು ಕೊಡುತ್ತಿ ರುವೆ. ನೀನು ವೃದ್ಧಿಹ್ರಾಸಗಳಿಲ್ಲದೆ ಸರ್ವಶಬ್ದಶಕ್ತಿಪ್ರೇರಕನಾಗಿ ಸರ್ವಜ್ಞನೆನಿಸಿರುವೆ. ನಿನ್ನನ್ನು ವೇದಾದಿ ಸಚ್ಛಾಸ್ತ್ರದಿಂದಲೇ ತಿಳಿಯಬಹುದಾಗಲಿ, ಪ್ರತ್ಯಕ್ಷದಿಂದ, ಅನುಮಾನದಿಂದ, ನೋಡಿ ಊಹಿಸಿ ತಿಳಿಯಲಾಗದು. ಪ್ರಳಯವಾಗಲು ಜಗದ್ವ್ಯಾಪಾರವನ್ನು ವಿರಮಿಸಿ, ಪ್ರಳಯವು ಮುಗಿಯಲು ಆರಂಭಿಸುವೆ. ಕೃಷ್ಣರಾಮಾದಿರೂಪಗಳಿಂದ ಅವತರಿಸಿ ಸುಜನರನ್ನು ಪೊರೆವೆ. ಪ್ರದ್ಯುಮ್ನಾನಿರುದ್ಧ ಸಂಕರ್ಷಣಾದಿರೂಪದಿಂದ ಯಾದವರಲ್ಲಿ ಆವೇಶಿಸಿ, ಅವರಿಂದ ಮಹತ್ಕಾರ್ಯ ಗಳನ್ನು ಮಾಡಿಸುವೆ. ಪ್ರಕೃತಿಯನ್ನು ಒಳಹೊಕ್ಕು ನಡೆಸುವೆ. ಜೀವರ ಭಕ್ತಜ್ಞಾನ ವೈರಾಗ್ಯಗಳನ್ನು ಹೆಚ್ಚಿಸುವೆ. ಇಂದ್ರಿಯಗಳ ಜ್ಞಾನದಿಂದ ನಿನ್ನನ್ನು ಊಹಿಸಿ, ಇಂದ್ರಿಯಪ್ರೇರಕನೆಂದು ತಿಳಿಯಬಹುದಾಗಿದೆ. ನೀನಿಲ್ಲದಿರೆ ಇಂದ್ರಿಯ ಜ್ಞಾನವೇ ಆಗಲಾರದು. ನಿನ್ನ ಜ್ಞಾನವು ಅನ್ಯಾಧೀನವಾಗಿಲ್ಲ. ನಿನ್ನ ವಿಹಾರಲೀಲಾವತಾರ ಮಹಿಮೆಯನ್ನು ಬ್ರಹ್ಮನೂ ನಿಶ್ಶೇಷವಾಗಿ ತಿಳಿಯಲಾರನು. ನಿನ್ನ ಅನುಗ್ರಹದಿಂದ ಬ್ರಹ್ಮಾದಿ ಜೀವರು ನಿನ್ನನ್ನು ಯಥಾಶಕ್ತಿ ತಿಳಿದಿರುವರು. ಸರ್ವಜ್ಞನು ಸರ್ವೇಂದ್ರಿಯ ನಿಯಾಮಕನು, ಕಾರ್ಯಕಾರಣವಸ್ತು ಶಕ್ತಿ ಪ್ರದನು,ಆದ ನಿನಗೆ ನಮಃ ವಿಶ್ವಭಿನ್ನನು ವಿಶ್ವವ್ಯಾಪ್ತನು, ವಿಶ್ವ ಜನ್ಮಪಾಲನ ಸಂಹಾರಕಾರಣನು ವಿಶ್ವಕಾರಣ ತ್ರಿಗುಣ ಲೇಪರಹಿತನು, ಸ್ವರೂಪಭೂತವಾದ ಇಚ್ಛಾ ಜ್ಞಾನಕ್ರಿಯಾಶಕ್ತಿತ್ರಯಸಮೇತನು, ಆದ ನಿನಗೆ ನಮಸ್ಕರಿಸಿ, ನಿನ್ನ ದಿವ್ಯಜ್ಞಾನವನ್ನು ದಯಪಾಲಿಸೆಂದು ಬೇಡುತ್ತಿರುವೆವು. ಪ್ರಪಂಚದಲ್ಲಿ ರುವ ಶಾಂತರಾದ ದೇವಮಾನವರು, ಅಶಾಂತರೆನಿಸುವ ಅಧಮ ಮಾನವರು, ಮೂಢರೆನಿಸುವ ಅಸುರ ಮಾನವರಲ್ಲಿ ನಿನಗೆ ದೇವತೆಗಳು ಪ್ರೀತಿಪಾತ್ರರಾಗಿರುವರು. ಅವರು ಜಗತ್ರಕ್ಷಣತತ್ಪರ ನಾದ ನಿನಗೂ, ನಿನ್ನ ಮಗನಾದ ಮುಖ್ಯಪ್ರಾಣನಿಗೂ ಸಹಾಯಕರಾಗಿ ನಿಂತು, ಸೇವೆಸಲ್ಲಿಸುವುದ ರಿಂದ, ನಿನ್ನ ಪ್ರೀತಿಯನ್ನು ಸಂಪಾದಿಸಿರುವರು.

ನಮ್ಮ ಪತಿಯು ಕಾಣದೆ, ಕಚ್ಚಿ, ಮಾಡಿದ ತಪ್ಪನ್ನು – ಇದೊಂದುಸಲ – ಕ್ಷಮಿಸು! ಅವನೂ ನಿನ್ನ ಭಕ್ತನಲ್ಲವೇ? ಸ್ವಾಮೀ! ಸಾಯಲಿರುವ ನಮ್ಮ ಪತಿಯನ್ನುಳಿಸು! ನಮ್ಮಲ್ಲಿ ದಯೆತೋರು! ಸ್ತ್ರೀಯರನ್ನು ಕಂಡು ಕನಿಕರಿಸದಿರುವರೇ? ನಾರಿಯರಿಗೆ ನಾಥನೇ ಪ್ರಾಣ

ವಲ್ಲವೇ? ಕೊಡು ನಮಗೆ ಪತಿಭಿಕ್ಷೆಯನ್ನು. ನಿನ್ನ ಕಿಂಕರಿಯರಾದ ನಮ್ಮನ್ನು ಸರಿಯಾದ ಮಾರ್ಗದಲ್ಲಿ ನಡೆಸು! ಉದ್ಧರಿಸು! ನಿನ್ನ ಆಜ್ಞಾಪಾಲನೆಯೇ ಸರ್ವಭಯ ಮೋಚಕವಾಗಿದೆ. ಕೃಷ್ಣಾ! ನಮೋ ನಮಃ.

ಇಂತು ನುತಿಸಿದ ನಾಗಪತ್ನಿಯರ ಮಾತನ್ನಾಲಿಸಿ, ಶ್ರೀಕೃಷ್ಣನು ಕುಣಿಯುವುದನ್ನು ನಿಲ್ಲಿಸಿ, ಕಾಳಿಯನನ್ನು ಕ್ಷಮಿಸಿಬಿಟ್ಟನು. ಮೆಲ್ಲನೆ ತಿಳಿದು ಬಲಗೊಂಡು ಕಾಳಿಯನು ನಿಟ್ಟುಸಿರನ್ನಿಡುತ್ತಾ, ಕೃಷ್ಣನಿಗೆ ವಂದಿಸಿ ಇಂತೆಂದನು-

ಶ್ರೀಕೃಷ್ಣ! ನಾವು ಸ್ವಭಾವದಿಂದಲೇ ಕ್ರೂರರು, ಸುಟ್ಟ ಸಿಟ್ಟನು ಬಿಡಲಾರೆವು. ಕೋಪದಿಂದ ಹಗೆ ಇಟ್ಟು ಮರೆಯದೆ ಪ್ರಾಣಿಹಿಂಸೆಯನ್ನು ಮಾಡುವೆವು. ನೀನು ಸೃಜಿಸಿದ ಲೋಕದಲ್ಲಿ ಅಗ್ನಿ, ವಾಯು ಮುಂತಾದ ವಿವಿಧ ಶಕ್ತಿಯುಕ್ತ ಭೂತಗಳು, ಭೂತಗಳಿಂದ ಆದ ವೀರ್ಯಜನಿತ ದೇಹಗಳು, ವಿವಿಧ ಮನೋವಿಕಾರಗಳೂ ತುಂಬಿವೆ. ಸರ್ಪಗಳನ್ನು ದೀರ್ಘಕೋಪಿಗಳಾಗಿಯೇ ಬ್ರಹ್ಮನು ಸೃಜಿಸಿರುವನು. ಆ ಸ್ವಭಾವವನ್ನು ಬಿಡಲಾರದೆ, ಕೆಡುಕನ್ನು ಮಾಡುವ ಮೂಢನನ್ನು ಪರಿಪಾಲಿಸು! ಕ್ಷಮಿಸು! ಸರ್ವಸ್ವಭಾವನಿಯಾಮಕನಾದ ನೀನು ಪ್ರೇರಿಸಿದಂತೆ ನಡೆಯುವ ನಮ್ಮ ಪುಣ್ಯಪಾಪಕೃತ್ಯಗಳಿಗೆ ತಕ್ಕಂತೆ ಫಲವನ್ನು ಕೊಡುವ ನಿನಗೆ ಮನಬಂದಂತೆ ಮಾಡು! ನೀರಿನಲ್ಲಿ ಅದ್ದು ಅಥವಾ ಹಾಲಿನಲ್ಲಿ ಅದ್ದು! ನಿನ್ನನ್ನು ನಂಬಿದೆನು.

ಕಾಳಿಯನ ಮಾತನ್ನು ಕೇಳಿ, ಗೋವಿಂದನು 'ಕಾಳಿಯನೇ ! ನೀನಿಲ್ಲಿರಬೇಡ. ಸಮುದ್ರ ಮಧ್ಯದ ರಮಣಕವನ್ನು ಸೇರು, ಹೋಗು! ಕಾಳಿಂದಿಯು ವಿಷರಹಿತವಾಗಲಿ! ನರರು, ಗೋಗಣವು ತಮ್ಮ ಪರಿವಾರದವರಿಂದ ಕೂಡಿ, ನದಿಯ ನಿರ್ವಿಷ ಜಲವನ್ನು ಕುಡಿದು ಸುಖವಾಗಿ ರಲಿ! ಕಾಳಿಯ ಮರ್ದನನಾದ ನನ್ನ ಕಥೆಯನ್ನು ಕೇಳಿದವನಿಗೆ ಸರ್ಪಭಯವಿರದಿರಲಿ! ನಾನು ವಿಹರಿಸಿದ ಈ ಕಾಳಿಂದಿಯ ಮಡುವಿಗೆ ಬಂದು, ಮಿಂದು, ದೇವ ಋಷಿ ಪಿತೃತರ್ಪಣವನ್ನಿತ್ತು, ಹಸಿತಿದ್ದು ನನ್ನ ಕಥೆಯನ್ನು ಭಕ್ತಿಯಿಂದ ಕೇಳಿದವನು, ನನ್ನ ದಯಾಪಾತ್ರನಾಗಿ, ಪಾಪವನ್ನು ಕಳೆದುಕೊಂಡು ಮುಕ್ತನಾಗುವನು. ನನ್ನ ಪಾದಲಾಂಛನದಿಂದ ಅಂಕಿತನಾದ ನಿನ್ನನ್ನು ಇನ್ನು ಮುಂದೆ ಗರುಡನು ಪೀಡಿಸದಿರುವಂತೆ ಅನುಗ್ರಹಿಸಿರುವೆನು' ಎಂದು ನುಡಿದನು.

ಆಗ ಕಾಳಿಯನು ಭಕ್ತಿಯಿಂದ ಭಗವಂತನನ್ನು ಪೂಜಿಸಿದನು. ಪೀತಾಂಬರಗಳನ್ನು, ಮಣಿ ಭೂಷಣಗಳನ್ನು ಕೊಟ್ಟು, ದಿವ್ಯಗಂಧವನ್ನು ಹಚ್ಚಿ, ಉತ್ಪಲಮಾಲೆಯನ್ನು ಹಾಕಿ, ನಾಗತರುಣಿ ಯರು ಜಗನ್ನಾಥನನ್ನು ಪೂಜಿಸಿದರು. ಕಾಳಿಯನು ಕೃಷ್ಣನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಪರಿವಾರದಿಂದ ಕೂಡಿ, ಕೃಷ್ಣನ ಅಪ್ಪಣೆಯನ್ನು ಪಡೆದು, ರಮಣಕ ದ್ವೀಪವನ್ನು ಕುರಿತು ಹೊರಟುಹೋದನು. ಶ್ರೀಶನ ಅನುಗ್ರಹದಿಂದ ಅಂದಿನಿಂದ ಕಾಳಿಂದಿಯು ನಿರ್ವಿಷ ಳಾಗಿ, ಸಕಲಭೂತಸುಖಾವಹಳೆನಿಸಿದಳು.

## ೧೫. ಕಾಳಿಯನ ಪೂರ್ವವೃತ್ತಾಂತ

ರಾಜನು ಪ್ರಶ್ನಿಸಿದನು–

ಗರುಡನಿಗೆ ಹೆದರಿ, ನಾಗನಿವಾಸವಾದ ರಮಣಕ ದ್ವೀಪವನ್ನು ಕಾಳಿಯನು ಬಿಟ್ಟು, ಕಾಳಿಂದಿಯ ಹ್ರದವನ್ನು ಸೇರಲು ಕಾರಣವೇನು? ಗರುಡನಿಗವನು ಮಾಡಿದ ಅಪರಾಧವೇನು?

ಶ್ರೀಶುಕನು ಹೇಳಿದನು–

ಒಂದು ಸಲ ನಾಗರು ಕೂಡಿ, ಗರುಡನ ಉಪದ್ರವವನ್ನು ನಿಲ್ಲಿಸಲು ನಿಶ್ಚಯಿಸಿ, ಪ್ರತಿ ಅಮಾವಾಸ್ಯೆಗೆ ಅವನಿಗೆ ಬಲಿಯನ್ನು ಸಮರ್ಪಿಸುತ್ತಿದ್ದರು. ಮಹಾತ್ಮನಾದ ಗರುಡನು ಅವರಿತ್ತ ಅನ್ನಾದಿಗಳನ್ನು ಹಾಗೂ ಸರ್ಪವನ್ನೂ ಸ್ವೀಕರಿಸಿ, ಇತರ ಸರ್ಪಗಳನ್ನು ಪೀಡಿಸದೆ ಹೊರಟು ಹೋಗುತ್ತಿದ್ದನು. ಈ ಏರ್ಪಾಟಿನಿಂದ ನಾಗರಿಗೆ ಸುಖವಾಯಿತು. ಹೀಗಿರಲು ಒಂದು ಸಲ ಬಲಿಯನ್ನು ಮದಮತ್ತನಾದ ಕಾಳಿಯನು ತಾನೇ ತಿಂದು, ಗರುಡನನ್ನು ಧಿಕ್ಕರಿಸಿದನು. ಗರುಡನು ಕೋಪದಿಂದ ಕದ್ರೂಪುತ್ರನಾದ ಕಾಳಿಯನನ್ನು ಕೊಲ್ಲಲು ಬಂದನು. ವಿಷ್ಣುವಾಹನನನ್ನೆದುರಿಸಿ, ವಿಷಾಯುಧನು ಹೋರಾಡಿ ಕೊನೆಗೆ ಸೋತು ಭಯದಿಂದ ಓಡಿಹೋದನು. ಕಾಳಿಂದಿಯ ಮಡುವಿನಲ್ಲಿ ಗರುಡನು ಬರಲಾರನೆಂದರಿತಿದ್ದ ಕಾಳಿಯನು ಅಲ್ಲಿ ಸೇರಿ, ಸಕುಟುಂಬನಾಗಿ ಸುಖವಾಗಿದ್ದನು.

ಹಿಂದೆ ಒಂದು ಸಲ ಕಾಳಿಂದಿಯ ಹ್ರದದಲ್ಲಿ ಮೀನುಗಳನ್ನು ಹಿಡಿದು ತಿನ್ನುವ ಗರುಡನನ್ನು ತಡೆದು ಸೌಭರಿ ಋಷಿಯು, 'ಇಲ್ಲಿಗೆ ಬರಬೇಡ'ವೆಂದನು. ಅದನ್ನು ಲಕ್ಷಿಸದೆ, ಮೀನಭಕ್ಷಣ ವನ್ನು ಮಾಡುವ ತಾರ್ಕ್ಷ್ಯನಿಗೆ ಹೆದರಿ, ಮೀನರಾಜನು ಸೌಭರಿಗೆ ಶರಣಾಗತನಾದನು. ಆ ಮುನಿವರನು ಸಿಟ್ಟಿನಿಂದ 'ಇಲ್ಲಿ ಬಂದು ಗರುಡನು ಮೀನುಗಳನ್ನು ತಿಂದನೆಂದರೆ ಶ್ರೀಶನಾಣೆ ಯಾಗಿ ಅವನು ಸಾಯುವನು– ನನ್ನ ಮಾತು ಸುಳ್ಳಾಗದಿರಲಿ!' ಎಂದು ಶಾಪವನ್ನಿತ್ತನು. ಸೌಭರಿಯ ಶಾಪವನ್ನು ತಿರಸ್ಕರಿಸಲು ಸಮರ್ಥನಾದ ಗರುಡನು, ತನ್ನ ಸ್ವಾಮಿಯಂತೆ, ಬ್ರಾಹ್ಮಣ ವಾಕ್ಯವನ್ನು ಮನ್ನಿಸಿ, ಮಡುವಿಗೆ ಬಾರದೆ, ದೂರವಿದ್ದನು. ಸರ್ಪಜನರಲ್ಲಿ ಕಾಳಿಯನು ಮಾತ್ರ ಈ ವಿಷಯವನ್ನು ತಿಳಿದಿದ್ದನು; ಅಂತೆಯೇ ಕಾಳಿಯನು ಆ ಹ್ರದವನ್ನು ಸೇರಿದ್ದು, ಕೊನೆಗೆ ಶ್ರೀಕೃಷ್ಣನಿಂದ ರಮಣಕ ದ್ವೀಪಕ್ಕೆ ಕಳಿಸಲ್ಪಟ್ಟನು.

ಇಂತು ಕಾಳಿಯಮರ್ದನನು ಮಡುವಿನಿಂದ ಸುಖವಾಗಿ ಹೊರಬಂದುದನ್ನು ನೋಡಿ, ಯಶೋದೆ ಮೊದಲಾದ ತರುಣಿಯರು, ನಂದಾದಿ ಗೋಪಾಲಕರು, ಹೋದಪ್ರಾಣವು ಬಂದಂತಾಗಿ, ಸಂತೋಷಭರಿತರಾದರು; ಬಾಲಕೃಷ್ಣನನ್ನು ಬಿಗಿದಪ್ಪಿ ಮುದ್ದಾಡಿದರು. ಅವರ ಮನಸ್ಸು ಹಗುರವಾಯಿತು. ಕೃಷ್ಣನ ಮಹಿಮೆಯನ್ನು ಅರಿತಿದ್ದ ಬಲರಾಮನು ತಮ್ಮನನ್ನಾ ಲಿಂಗಿಸಿ, ಮಂದಹಾಸವನ್ನು ಮಾಡಿ, ಪ್ರಶಂಸಿಸಿದನು. ಬ್ರಾಹ್ಮಣರು ಕಳತ್ರಪುತ್ರ ಶಿಷ್ಯರಿಂದ ಕೂಡಿಬಂದು, ನಂದನನ್ನು ಕಂಡು 'ರಾಜನ್! ನಿನ್ನ ಮಗನು ಕಾಳಿಯನಿಗೆ ಸಿಕ್ಕು, ದೇವರ ದಯದಿಂದ ಬದುಕಿ ಬಂದಿರುವನು. ನಿನಗೆ ಶುಭವಾಗಲಿ!' ಎಂದಾಶೀರ್ವದಿಸಿದರು. ಯಶೋದೆ ಕೃಷ್ಣನನ್ನು ತೊಡೆಯ ಮೇಲಿಟ್ಟು, ಮುದ್ದಾಡಿ, ಲಾಲಿಸಿದಳು. ಆ ವೇಳೆಗೆ ಸೂರ್ಯನು ಮುಳುಗಿ ದನು. ಎಲ್ಲ ಗೋಪಾಲಕರೂ, ಗೋವುಗಳೂ, ಆ ರಾತ್ರಿಯನ್ನು ಯಮುನಾತೀರದಲ್ಲೇ ಕಳೆದರು. ಹಸಿವೆಯಿಂದ ನೊಂದು ಮೈಮರೆತು ನಿದ್ರಿಸುವಾಗ, ಸುತ್ತಲು ಕಾಡುಕಿಚ್ಚು, ಉರಿಯುತ್ತಾ

ಬಂತು. ಮಲಗಿದವರನ್ನು ಸುಡಲಾರಂಭಿಸಿದಾಗ, ಎಚ್ಚತ್ತು, ನಂದಾದಿಗಳು ಕೃಷ್ಣನಿಗೆ ಶರಣಾಗತ ರಾದರು.

'ಕೃಷ್ಣ! ಸುತ್ತಲೂ ಸುಡುತ್ತಾ ಬರುವ ದಾವಾಗ್ನಿಯಿಂದ ನಮ್ಮನ್ನು ರಕ್ಷಿಸು! ಇದೇನು ಪ್ರಳಯಗ್ನಿಯೋ ಏನು? ನಾವು ನಿನ್ನವರಲ್ಲವೇ! ಸಂರಕ್ಷಿಸು!' ಎಂದು ಮೊರೆಯಿಟ್ಟ ಭಕ್ತ ಜನ ರಕ್ಷಕನು, ಅವರನ್ನು ಕಣ್ಣು ಮುಚ್ಚುವಂತೆ ಆಜ್ಞಾಪಿಸಿ, ಒಂದೇ ಕ್ಷಣದಲ್ಲಿ, ದಾವಾಗ್ನಿಯನ್ನು ಕುಡಿದುಬಿಟ್ಟನು. ರಕ್ಷಿತರಾದ ಸ್ವಜನರ ಪ್ರಶಂಸೆಗೆ ಪಾತ್ರನಾಗಿ ಚಿತ್ರಚರಿತ್ರನಾದ ತ್ರಿವಿಕ್ರಮನು, ಗೋವೃಂದವನ್ನು, ನಂದಾದಿಗಳನ್ನು ಕರೆದುಕೊಂಡು, ವೃಂದಾವನವನ್ನು ಸೇರಿದನು.

## ೧೬. ಗ್ರೀಷ್ಮರ್ತು ವರ್ಣನೆ – ಪ್ರಲಂಬ ವಧೆ

ಗೋಪಾಲರೂಪದಿಂದ ಗೋಕುಲದಲ್ಲಿ ವಿಹರಿಸುವ ಜಗತ್ಪಾಲಕನು ಬಲರಾಮನಿಂದ ಕೂಡಿ ಕಾಲ ಕಳೆಯುತ್ತಿರಲು, ಗ್ರೀಷ್ಮ ಋತುವು ಬಂತು. ಮನುಜರಿಗೆ ತಾಪದಾಯಕವಾದ ಗ್ರೀಷ್ಮವು, ಗೋಕುಲದಲ್ಲಿದ್ದ ಕಾಳಿಂದಿಯ ತಂಪಿನಿಂದ ವಸಂತದಂತೆ ತೋರಿತು. ಶ್ರೀರಾಮ-ಕೃಷ್ಣರ ಸಹವಾಸದಲ್ಲಿ ಗೋಪಾಲ ಬಾಲರು ತಾಪವನ್ನರಿಯದೆ ವನದಲ್ಲಿ ತಿರುಗುತ್ತಿದ್ದರು. ನಿರ್ಝರ ಗಳು ಜಲಜಲ ಹರಿಯುತ್ತಿರಲು, ಝಿಲ್ಲಿಕಾಕೀಟಗಳು 'ಜಂ' ಎಂದು ಶ್ರುತಿಗೂಡಿಸುತ್ತಿದ್ದವು. ವನವೃಕ್ಷಗಳ ನೆರಳಲ್ಲಿ, ಸೆಲೆಹೊಳೆಗಳ ತುಂತುರುಹನಿಯ ತಂಪಿನಿಂದ ಸುಖವಾದ ಪುಲಿನಗಳಲ್ಲಿ ಕೂತು, ನದಿಯಲ್ಲಿ ಅರಳಿದ ಕಮಲ ಕಲ್ಹಾರ ಕುಸುಮ ಪರಾಗವನ್ನು ಹೊತ್ತು ತರುವ ಮಂದ ಮಾರುತನ ಗಂಧವನ್ನು ಸೇವಿಸಿ, ಬಿಸಿಲ ಕಾಲದ ತಾಪವನ್ನು ತಿಳಿಯದೆ, ಗೋಪಾಲಕರು ಹಸಿರು ಪೀತಾಂಬರವನ್ನುಟ್ಟಂತೆ ಕಂಗೊಳಿಸುವ ಮೈದಾನಗಳಲ್ಲಿ ಸಂಚರಿಸುತ್ತಿದ್ದರು. ಆಳವಾಗಿ ಹರಿಯುವ ಯಮುನೆಯ ತೀರದಲ್ಲಿ, ದಟ್ಟವಾಗಿ ಬೆಳೆದಿದ್ದ ಮಹಾವೃಕ್ಷಗಳಲ್ಲಿ, ತೂರಿ ಬರಲಾರದ ಸೂರ್ಯಕಿರಣಗಳ ಝಳವನ್ನರಿಯದ ಮರಳುದಿಬ್ಬೆಗಳು ಸುಖಶೀತಲವಾಗಿ ಕಂಗೊ ಳಿಸುತ್ತಿದ್ದವು. ಪುಷ್ಪಗಂಧದಿಂದಲು, ಆಡುವ ನವಿಲುಗಳಿಂದಲು, ಪಾಡುವ ಶುಕಪಿಕ ಶಾರಿಕೆ ಗಳಿಂದಲು, ಕೂಗುವ ಮೃಗಪಕ್ಷಿಗಳಿಂದಲೂ ವೃಂದಾವನವು ಸುಂದರವಾಗಿತ್ತು.

ಆ ವನದಲ್ಲಿ ಬಲರಾಮಾದಿ ಸಖರಿಂದ ಕೂಡಿ ವೇಣುವನ್ನೂದುತ್ತಾ, ಕೃಷ್ಣನು ಪ್ರವೇಶಿಸಿ ದನು. ಅವರು ಚಿಗುರೆಲೆ, ಹೂವು, ನವಿಲುಗರೆಗಳಿಂದ ಅಲಂಕರಿಸಿಕೊಂಡು ಆಕಳುಗಳು ಮೇಯುತ್ತಿರಲು, ಆಟವಾಡುತ್ತಿದ್ದರು. ಕೊಳಲನ್ನೂದುವ ಕೃಷ್ಣನನ್ನು ಅನುಕರಿಸಿ, ಚಪ್ಪಾಳೆ ಯಿಟ್ಟು ಪಾಡುತ್ತಿದ್ದರು. ದೇವದೇವನನ್ನು ಅನುಕರಿಸಿ ಮನುಜರಲ್ಲಿ ಪುಟ್ಟಿ ದೇವತೆಗಳು ಗೋಪಾಲ ರೂಪದಿಂದ ಮಾಡಿದ ವಿಡಂಬನೆಯು ಅತ್ಯಾಶ್ಚರ್ಯಕರವಾಗಿತ್ತು. ಹಾರಿ, ಕುಣಿದು, ಜಿಗಿದಾಡಿ, ಎಳೆದಾಡಿ, ಕುಸ್ತಿ ಆಡಿ, ಹಾಡಿ, ಬಾಲ್ಯದ ಆಟಗಳನ್ನು ಗೋಪಾಲಕರಾಡಿ ಕಾಲ ಕಳೆಯುತ್ತಿದ್ದರು. ಕಣ್ಣುಮುಚ್ಚಾಲೆ, ಫಲಶಿಲ ಪ್ರಕ್ಷೇಪಣ, ಕಪ್ಪೆಕುಣಿತ, ಉಯ್ಯಾಲೆ, ರಾಜನ ಸಭೆ, ಮೊದಲಾದ ಆಟಗಳನ್ನು ರಾಮ-ಕೃಷ್ಣರು ತಮ್ಮ ಸ್ನೇಹಿತರಿಂದ ಕೂಡಿ ಆಡುತ್ತಾ, ಕಂದರಗಳಲ್ಲಿ, ಪುಲಿನತಲಗಳಲ್ಲಿ, ಸರಸ್ತೀರದಲ್ಲಿ ವಿಹರಿಸಿದರು.

ಒಂದು ದಿನ ಕಂಸಭೃತ್ಯನಾದ ಪ್ರಲಂಬಾಸುರನು, ಶ್ರೀರಾಮಕೃಷ್ಣರನ್ನು ಕೊಲ್ಲುವ ಕೋರಿಗೆ ಯಿಂದ ಗೋಪವೇಷದಿಂದ ಬಂದನು. ಸರ್ವಜ್ಞನಾದ ಕೃಷ್ಣನು ತಿಳಿದೂ ತಿಳಿದೂ ಅವನನ್ನು

## ೧೫. ಕಾಳಿಯನ ಪೂರ್ವವೃತ್ತಾಂತ

ರಾಜನು ಪ್ರಶ್ನಿಸಿದನು–

ಗರುಡನಿಗೆ ಹೆದರಿ, ನಾಗನಿವಾಸವಾದ ರಮಣನ ದ್ವೀಪವನ್ನು ಕಾಳಿಯನು ಬಿಟ್ಟು, ಕಾಳಿಂದಿಯ ಹ್ರದವನ್ನು ಸೇರಲು ಕಾರಣವೇನು? ಗರುಡನಿಗವನು ಮಾಡಿದ ಅಪರಾಧವೇನು?

ಶ್ರೀಶುಕನು ಹೇಳಿದನು–

ಒಂದು ಸಲ ನಾಗರು ಕೂಡಿ, ಗರುಡನ ಉಪದ್ರವವನ್ನು ನಿಲ್ಲಿಸಲು ನಿಶ್ಚಯಿಸಿ, ಪ್ರತಿ ಅಮಾವಾಸ್ಯೆಗೆ ಅವನಿಗೆ ಬಲಿಯನ್ನು ಸಮರ್ಪಿಸುತ್ತಿದ್ದರು. ಮಹಾತ್ಮನಾದ ಗರುಡನು ಅವರಿತ್ತ ಅನ್ನಾದಿಗಳನ್ನು ಹಾಗೂ ಸರ್ಪವನ್ನೂ ಸ್ವೀಕರಿಸಿ, ಇತರ ಸರ್ಪಗಳನ್ನು ಪೀಡಿಸದೆ ಹೊರಟು ಹೋಗುತ್ತಿದ್ದನು. ಈ ಏರ್ಪಾಟಿನಿಂದ ನಾಗರಿಗೆ ಸುಖವಾಯಿತು. ಹೀಗಿರಲು ಒಂದು ಸಲ ಬಲಿಯನ್ನು ಮದಮತ್ತನಾದ ಕಾಳಿಯನು ತಾನೇ ತಿಂದು, ಗರುಡನನ್ನು ಧಿಕ್ಕರಿಸಿದನು. ಗರುಡನು ಕೋಪದಿಂದ ಕದ್ರೂಪುತ್ರನಾದ ಕಾಳಿಯನನ್ನು ಕೊಲ್ಲಲು ಬಂದನು. ವಿಷ್ಣುವಾಹನನನ್ನೆದುರಿಸಿ, ವಿಷಾಯುಧನು ಹೋರಾಡಿ ಕೊನೆಗೆ ಸೋತು ಭಯದಿಂದ ಓಡಿಹೋದನು. ಕಾಳಿಂದಿಯ ಮಡುವಿನಲ್ಲಿ ಗರುಡನು ಬರಲಾರನೆಂದರಿತಿದ್ದ ಕಾಳಿಯನು ಅಲ್ಲಿ ಸೇರಿ, ಸಕುಟುಂಬನಾಗಿ ಸುಖವಾಗಿದ್ದನು.

ಹಿಂದೆ ಒಂದು ಸಲ ಕಾಳಿಂದಿಯ ಹ್ರದದಲ್ಲಿ ಮೀನುಗಳನ್ನು ಹಿಡಿದು ತಿನ್ನುವ ಗರುಡನನ್ನು ತಡೆದು ಸೌಭರಿ ಋಷಿಯು, 'ಇಲ್ಲಿಗೆ ಬರಬೇಡ'ವೆಂದನು. ಅದನ್ನು ಲಕ್ಷಿಸದೆ, ಮೀನಭಕ್ಷಣ ವನ್ನು ಮಾಡುವ ತಾರ್ಕ್ಷ್ಯನಿಗೆ ಹೆದರಿ, ಮೀನರಾಜನು ಸೌಭರಿಗೆ ಶರಣಾಗತನಾದನು. ಆ ಮುನಿವರನು ಸಿಟ್ಟಿನಿಂದ 'ಇಲ್ಲಿ ಬಂದು ಗರುಡನು ಮೀನುಗಳನ್ನು ತಿಂದನೆಂದರೆ ಶ್ರೀಶನಾಣೆ ಯಾಗಿ ಅವನು ಸಾಯುವನು– ನನ್ನ ಮಾತು ಸುಳ್ಳಾಗದಿರಲಿ!' ಎಂದು ಶಾಪವನ್ನಿತ್ತನು. ಸೌಭರಿಯ ಶಾಪವನ್ನು ತಿರಸ್ಕರಿಸಲು ಸಮರ್ಥನಾದ ಗರುಡನು, ತನ್ನ ಸ್ವಾಮಿಯಂತೆ, ಬ್ರಾಹ್ಮಣ ವಾಕ್ಯವನ್ನು ಮನ್ನಿಸಿ, ಮಡುವಿಗೆ ಬಾರದೆ, ದೂರವಿದ್ದನು. ಸರ್ಪಜನರಲ್ಲಿ ಕಾಳಿಯನು ಮಾತ್ರ ಈ ವಿಷಯವನ್ನು ತಿಳಿದಿದ್ದನು; ಅಂತೆಯೇ ಕಾಳಿಯನು ಆ ಹ್ರದವನ್ನು ಸೇರಿದ್ದು, ಕೊನೆಗೆ ಶ್ರೀಕೃಷ್ಣನಿಂದ ರಮಣಕ ದ್ವೀಪಕ್ಕೆ ಕಳಿಸಲ್ಪಟ್ಟನು.

ಇಂತು ಕಾಳಿಯಮರ್ದನನು ಮಡುವಿನಿಂದ ಸುಖವಾಗಿ ಹೊರಬಂದುದನ್ನು ನೋಡಿ, ಯಶೋದೆ ಮೊದಲಾದ ತರುಣಿಯರು, ನಂದಾದಿ ಗೋಪಾಲಕರು, ಹೋದಪ್ರಾಣವು ಬಂದಂತಾಗಿ, ಸಂತೋಷಭರಿತರಾದರು; ಬಾಲಕೃಷ್ಣನನ್ನು ಬಿಗಿದಪ್ಪಿ ಮುದ್ದಾಡಿದರು. ಅವರ ಮನಸ್ಸು ಹಗುರವಾಯಿತು. ಕೃಷ್ಣನ ಮಹಿಮೆಯನ್ನು ಅರಿತಿದ್ದ ಬಲರಾಮನು ತಮ್ಮನನ್ನಾ ಲಿಂಗಿಸಿ, ಮಂದಹಾಸವನ್ನು ಮಾಡಿ, ಪ್ರಶಂಸಿಸಿದನು. ಬ್ರಾಹ್ಮಣರು ಕಳತ್ರಪುತ್ರ ಶಿಷ್ಯರಿಂದ ಕೂಡಿಬಂದು, ನಂದನನ್ನು ಕಂಡು 'ರಾಜನ್! ನಿನ್ನ ಮಗನು ಕಾಳಿಯನಿಗೆ ಸಿಕ್ಕು, ದೇವರ ದಯದಿಂದ ಬದುಕಿ ಬಂದಿರುವನು. ನಿನಗೆ ಶುಭವಾಗಲಿ!' ಎಂದಾಶೀರ್ವದಿಸಿದರು. ಯಶೋದೆ ಕೃಷ್ಣನನ್ನು ತೊಡೆಯ ಮೇಲಿಟ್ಟು, ಮುದ್ದಾಡಿ, ಲಾಲಿಸಿದಳು. ಆ ವೇಳೆಗೆ ಸೂರ್ಯನು ಮುಳುಗಿ ದನು. ಎಲ್ಲ ಗೋಪಾಲಕರೂ, ಗೋವುಗಳೂ, ಆ ರಾತ್ರಿಯನ್ನು ಯಮುನಾತೀರದಲ್ಲೇ ಕಳೆದರು. ಹಸಿವೆಯಿಂದ ನೊಂದು ಮೈಮರೆತು ನಿದ್ರಿಸುವಾಗ, ಸುತ್ತಲು ಕಾಡುಕಿಚ್ಚು, ಉರಿಯುತ್ತಾ

ಬಂತು. ಮಲಗಿದವರನ್ನು ಸುಡಲಾರಂಭಿಸಿದಾಗ, ಎಚ್ಚೆತ್ತು, ನಂದಾದಿಗಳು ಕೃಷ್ಣನಿಗೆ ಶರಣಾಗತ ರಾದರು.

'ಕೃಷ್ಣ! ಸುತ್ತಲೂ ಸುಡುತ್ತಾ ಬರುವ ದಾವಾಗ್ನಿಯಿಂದ ನಮ್ಮನ್ನು ರಕ್ಷಿಸು! ಇದೇನು ಪ್ರಳಯಗ್ನಿಯೋ ಏನು? ನಾವು ನಿನ್ನವರಲ್ಲವೇ! ಸಂರಕ್ಷಿಸು!' ಎಂದು ಮೊರೆಯಿಟ್ಟ ಭಕ್ತ ಜನ ರಕ್ಷಕನು, ಅವರನ್ನು ಕಣ್ಣು ಮುಚ್ಚುವಂತೆ ಆಜ್ಞಾಪಿಸಿ, ಒಂದೇ ಕ್ಷಣದಲ್ಲಿ, ದಾವಾಗ್ನಿಯನ್ನು ಕುಡಿದುಬಿಟ್ಟನು. ರಕ್ಷಿತರಾದ ಸ್ವಜನರ ಪ್ರಶಂಸೆಗೆ ಪಾತ್ರನಾಗಿ ಚಿತ್ರಚರಿತ್ರನಾದ ತ್ರಿವಿಕ್ರಮನು, ಗೋವೃಂದವನ್ನು, ನಂದಾದಿಗಳನ್ನು ಕರೆದುಕೊಂಡು, ವೃಂದಾವನವನ್ನು ಸೇರಿದನು.

## ೧೬. ಗ್ರೀಷ್ಮರ್ತು ವರ್ಣನೆ – ಪ್ರಲಂಬ ವಧೆ

ಗೋಪಾಲರೂಪದಿಂದ ಗೋಕುಲದಲ್ಲಿ ವಿಹರಿಸುವ ಜಗತ್ಪಾಲಕನು ಬಲರಾಮನಿಂದ ಕೂಡಿ ಕಾಲ ಕಳೆಯುತ್ತಿರಲು, ಗ್ರೀಷ್ಮ ಋತುವು ಬಂತು. ಮನುಜರಿಗೆ ತಾಪದಾಯಕವಾದ ಗ್ರೀಷ್ಮವು, ಗೋಕುಲದಲ್ಲಿದ್ದ ಕಾಳಿಂದಿಯ ತಂಪಿನಿಂದ ವಸಂತದಂತೆ ತೋರಿತು. ಶ್ರೀರಾಮ-ಕೃಷ್ಣರ ಸಹವಾಸದಲ್ಲಿ ಗೋಪಾಲ ಬಾಲರು ತಾಪವನ್ನರಿಯದೆ ವನದಲ್ಲಿ ತಿರುಗುತ್ತಿದ್ದರು. ನಿರ್ಝರ ಗಳು ಜಲಜಲ ಹರಿಯುತ್ತಿರಲು, ಝಿಲ್ಲಿಕಾಕೀಟಗಳು 'ಜಂ' ಎಂದು ಶ್ರುತಿಗೂಡಿಸುತ್ತಿದ್ದವು. ವನವೃಕ್ಷಗಳ ನೆರಳಲ್ಲಿ, ಸೆಲೆಹೊಳೆಗಳ ತುಂತುರುಹನಿಯ ತಂಪಿನಿಂದ ಸುಖವಾದ ಪುಲಿನಗಳಲ್ಲಿ ಕೂತು, ನದಿಯಲ್ಲಿ ಅರಳಿದ ಕಮಲ ಕಲ್ಹಾರ ಕುಸುಮ ಪರಾಗವನ್ನು ಹೊತ್ತು ತರುವ ಮಂದ ಮಾರುತನ ಗಂಧವನ್ನು ಸೇವಿಸಿ, ಬಿಸಿಲ ಕಾಲದ ತಾಪವನ್ನು ತಿಳಿಯದೆ, ಗೋಪಾಲಕರು ಹಸಿರು ಪೀತಾಂಬರವನ್ನುಟ್ಟಂತೆ ಕಂಗೊಳಿಸುವ ಮೈದಾನಗಳಲ್ಲಿ ಸಂಚರಿಸುತ್ತಿದ್ದರು. ಆಳವಾಗಿ ಹರಿಯುವ ಯಮುನೆಯ ತೀರದಲ್ಲಿ, ದಟ್ಟವಾಗಿ ಬೆಳಿದಿದ್ದ ಮಹಾವೃಕ್ಷಗಳಲ್ಲಿ, ತೂರಿ ಬರಲಾರದ ಸೂರ್ಯಕಿರಣಗಳ ಝಳವನ್ನರಿಯದ ಮರಳುದಿಬ್ಬೆಗಳು ಸುಖಶೀತಲವಾಗಿ ಕಂಗೊ ಳಿಸುತ್ತಿದ್ದವು. ಪುಷ್ಪಗಂಧದಿಂದಲು, ಆಡುವ ನವಿಲುಗಳಿಂದಲು, ಪಾಡುವ ಶುಕಪಿಕ ಶಾರಿಕೆ ಗಳಿಂದಲು, ಕೂಗುವ ಮೃಗಪಕ್ಷಿಗಳಿಂದಲೂ ವೃಂದಾವನವು ಸುಂದರವಾಗಿತ್ತು.

ಆ ವನದಲ್ಲಿ ಬಲರಾಮಾದಿ ಸಖರಿಂದ ಕೂಡಿ ವೇಣುವನ್ನೂದುತ್ತಾ, ಕೃಷ್ಣನು ಪ್ರವೇಶಿಸಿ ದನು. ಅವರು ಚಿಗುರೆಲೆ, ಹೂವು, ನವಿಲುಗರೆಗಳಿಂದ ಅಲಂಕರಿಸಿಕೊಂಡು ಆಕಳುಗಳು ಮೇಯುತ್ತಿರಲು, ಆಟವಾಡುತ್ತಿದ್ದರು. ಕೊಳಲನ್ನೂದುವ ಕೃಷ್ಣನನ್ನು ಅನುಕರಿಸಿ, ಚಪ್ಪಾಳೆ ಯಿಟ್ಟು ಪಾಡುತ್ತಿದ್ದರು. ದೇವದೇವನನ್ನು ಅನುಕರಿಸಿ ಮನುಜರಲ್ಲಿ ಪುಟ್ಟಿ ದೇವತೆಗಳು ಗೋಪಾಲ ರೂಪದಿಂದ ಮಾಡಿದ ವಿಡಂಬನೆಯು ಅತ್ಯಾಶ್ಚರ್ಯಕರವಾಗಿತ್ತು. ಹಾರಿ, ಕುಣಿದು, ಜಿಗಿದಾಡಿ, ಎಳೆದಾಡಿ, ಕುಸ್ತಿ ಆಡಿ, ಹಾಡಿ, ಬಾಲ್ಯದ ಆಟಗಳನ್ನು ಗೋಪಾಲಕರಾಡಿ ಕಾಲ ಕಳೆಯುತ್ತಿದ್ದರು. ಕಣ್ಣುಮುಚ್ಚಾಲೆ, ಫಲಶಿಲ ಪ್ರಕ್ಷೇಪಣ, ಕಪ್ಪೆಕುಣಿತ, ಉಯ್ಯಾಲೆ, ರಾಜನ ಸಭೆ, ಮೊದಲಾದ ಆಟಗಳನ್ನು ರಾಮ-ಕೃಷ್ಣರು ತಮ್ಮ ಸ್ನೇಹಿತರಿಂದ ಕೂಡಿ ಆಡುತ್ತಾ, ಕಂದರಗಳಲ್ಲಿ, ಪುಲಿನತಲಗಳಲ್ಲಿ, ಸರಸ್ತೀರದಲ್ಲಿ ವಿಹರಿಸಿದರು.

ಒಂದು ದಿನ ಕಂಸಭೃತ್ಯನಾದ ಪ್ರಲಂಬಾಸುರನು, ಶ್ರೀರಾಮಕೃಷ್ಣರನ್ನು ಕೊಲ್ಲುವ ಕೋರಿಗೆ ಯಿಂದ ಗೋಪವೇಷದಿಂದ ಬಂದನು. ಸರ್ವಜ್ಞನಾದ ಕೃಷ್ಣನು ತಿಳಿದೂ ತಿಳಿದೂ ಅವನನ್ನು

ಆಟದಲ್ಲಿ ಸೇರಿಸಿಕೊಂಡನು. ವಿಹಾರವಿಶಾರದನಾದ ಶ್ರೀಕೃಷ್ಣನು ಗೋಪಾಲಕರನ್ನೆಲ್ಲ ಕರೆದು ಒಂದು ಹೊಸ ಆಟವನ್ನು ಪ್ರಾರಂಭಿಸಿದನು. ಸೋತವರು ಗೆದ್ದವರನ್ನು ಹೊತ್ತು ಭಾಂಡೀರಕ ವೆಂಬ ವಟವೃಕ್ಷದವರೆವಿಗೂ ಓಡಬೇಕೆಂದು ಗೊತ್ತಾಯಿತು. ಅಂತೆಯೇ ರಾಮಕೃಷ್ಣರು ಹಿರಿಯ ರಾಗಿರಲು, ಗೋಪಾಲರು ಎರಡು ಗುಂಪಾದರು. ಶ್ರೀದಾಮ, ವೃಷ ಮುಂತಾದವರು ರಾಮನ ಕಡೆ ನಿಂತರು. ಕೃಷ್ಣನ ಕಡೆಯಿದ್ದ ಭದ್ರಸೇನನು ಗೆದ್ದ ವೃಷನನ್ನು, ಸೋತ ಶ್ರೀದಾಮನು ಕೃಷ್ಣನನ್ನು ಪ್ರಲಂಬನು ಬಲರಾಮನನ್ನು ಹೊತ್ತು, ಕೆಳಕ್ಕಿಳಿಸದೆ, ಆಕಾಶಕ್ಕೆ ಹಾರಿದನು. ಬೆಟ್ಟದಂತೆ ಭಾರವಾದ ಬಲರಾಮನನ್ನು ಕಷ್ಟದಿಂದ ಹೊತ್ತು, ಓಡತೊಡಗಿದರು. ಇದ್ದಕ್ಕಿದ್ದಂತೆ ಪ್ರಲಂಬನು ನಿಜರೂಪವನ್ನು ಧರಿಸಿ, ಬಲರಾಮನನ್ನು ಮೇಘಮಂಡಲವನ್ನು ಮುಟ್ಟಿ ಪ್ರಲಂಬನು ಅವನನ್ನು ಕೆಡಹಿ ಕೊಲ್ಲಲು ಹವಣಿಸಿದನು. ಸ್ವರ್ಣಾಭರಣಗಳನ್ನು ತೊಟ್ಟ ಆ ದೈತ್ಯನು ಮಿಂಚಿನಿಂದ ಹೊಳೆಯುವ ಮೇಘದಂತಿದ್ದನು. ಅವನ ಕೊರೆ, ಕಿಡಿಗಳನ್ನು ಕಾರುವ ಕಣ್ಣುಗಳು, ಉರಿಯುತ್ತಿರುವಂತೆ ಕೆಂಪಾದ ಜುತ್ತು, ಕಟಕಕುಂಡಲಗಳು ಮೊದಲಾದುವನ್ನು ನೋಡಿ, ಅವನ ಗರ್ಜನೆಯನ್ನು ಕೇಳಿ, ಬಲರಾಮನು ಸ್ವಲ್ಪ ಭಯಪಟ್ಟನು. ಅಷ್ಟರಲ್ಲೇ ಕೃಷ್ಣನನ್ನು ಸ್ಮರಿಸಿ, ತಾನು ಶೇಷನೆಂದು ನೆನೆದು ವಿಜೃಂಭಿಸಿ, ಪ್ರಲಂಬನನ್ನು ತಲೆಯಮೇಲೆ ಗುದ್ದಿ ಕೆಡಹಿದನು. ಮೇಘದಿಂದ ಕೂಡಿ ಚಂದ್ರನು ಉದುರಿದನೋ, ಅಥವಾ ವಜ್ರಾಘಾತದಿಂದ ಗಿರಿಯು ಬಿತ್ತೋ ಎಂಬಂತೆ ರಾಕ್ಷಸನು ಕೆಳಗೆ ಬಿದ್ದು ತಲೆಯೊಡೆದು, ರಕ್ತವನ್ನು ಕಾರಿ, ಗಟ್ಟಿ ಯಾಗಿ ಚೀರಿ, ಮೃತನಾದನು. ಪ್ರಲಂಬನನ್ನು ಸಂಹರಿಸಿ, ಸುಖವಾಗಿ ಬಂದ ಬಲರಾಮನನ್ನು ಗೋಪಾಲಕರು ಭಾಪು! ಭಲಾ! ಎಂದು ಪೊಗಳಿ, ಹರಸಿ, ಹೊಗಳಿದರು; ಮೃತನಾಗಿ ಬಂದಂತೆ ಎಣಿಸಿ, ಅವನನ್ನಾಲಿಂಗಿಸಿ, ಆನಂದದಿಂದ ಕುಣಿದಾಡಿದರು. ದೇವತೆಗಳು ಪೂಮಳೆಗರೆದರು. ಪಾಪಿಯಾದ ಪ್ರಲಂಬನನ್ನು ಕೊಂದು ಲೋಕೋಪದ್ರವವನ್ನು ನಿವಾರಿಸಿದ ಬಲರಾಮನನ್ನು ಪೊಗಳಿದರು.

## ೧೭. ದಾವಾಗ್ನಿಪಾನ

ಕ್ರೀಡಾಲೋಲರಾಗಿ ಬಾಲಕರಿರುವಾಗ, ಅವರ ಆಕಳುಗಳು ಮೇಯುತ್ತಾ ದೂರವಾಗಿ ಹೊರಟು ಮುಂಜಾಟವಿಯನ್ನು ಹೊಕ್ಕವು. ಅವುಗಳ ಜೊತೆಯಲ್ಲಿ ಮೇಕೆಗಳೂ, ಎಮ್ಮೆಗಳೂ ಹೋದವು. ಬಿಸಿಲಿನ ತಾಪದಿಂದ ಬಳಲಿ ಪಶುಗಳನ್ನು ಹುಡುಕಿ ಕಾಣದಾದ ಗೋಪಾಲರು, ಹೆಜ್ಜೆಗಳನ್ನನು ಸರಿಸಿ ಬಂದು ಮಂಜಾಟವಿಯನ್ನು ಹೊಕ್ಕರು. ಆಗ ಶ್ರೀಕೃಷ್ಣನು ಗೋವುಗಳನ್ನು ಹೆಸರಿನಿಂದ ಕೂಗಿದನು. ಆ ಶಬ್ದವನ್ನು ಕೇಳಿ ಗೋವುಗಳು ಪ್ರತಿಯಾಗಿ ಅಂಬಾರವವನ್ನು ಮಾಡಿದವು. ಆ ಸಮಯದಲ್ಲಿ ಅಡವಿಯ ಕಿಚ್ಚು ಸುತ್ತಲೂ ಸುಡುತ್ತಾ, ಚಟಚಟಾತ್ಕಾರದಿಂದ ಕೂಡಿ ಬಿರುಗಾಳಿ ಯಿಂದ ಉರಿದೆದ್ದು ಗೋಪಾಲರನ್ನು ಸಮೀಪಿಸಿತು. ಅವರು ಅವರ ಹಸುಗಳಿಂದ ಕೂಡಿ, ಭಯಕಾತುರರಾಗಿ ಕೃಷ್ಣನ ಮೊರೆಹೊಕ್ಕರು.

'ಕೃಷ್ಣ! ರಾಮ! ದಾವಾಗ್ನಿ ಸುಡುತ್ತ ಬರುತ್ತಿದೆ, ನಮ್ಮನ್ನು ಸಂರಕ್ಷಿಸು! ನಿನ್ನ ಬಾಂಧವರೆನಿಸಿದ ನಾವು ನಷ್ಟರಾಗಬಹುದೇ? ನಿನ್ನನ್ನೇ ನಂಬಿ ಅನ್ಯಗತಿಕಾಣದ ನಮ್ಮನ್ನು ಸಲಹು!' ಎಂದು ಬೇಡಿದ ಅವರನ್ನು ಕಣ್ಣುಮುಚ್ಚಿಕೊಳ್ಳಿರೆಂದು ಹೇಳಿ, ಯೋಗೇಶನಾದ ಶ್ರೀಕೃಷ್ಣನು ದಾವಾಗ್ನಿ

ಯನ್ನು ಕುಡಿದು ಶಾಂತಗೊಳಿಸಿದನು. ಕಣ್ತೆರೆದು ನೋಡಿದ ಗೋಪಾಲಕರು, ಅಗ್ನಿಯು ಆರಿರುವುದನ್ನು ಕಂಡು, ವಿಸ್ಮಿತರಾದರು. ಭಾಂಡೀರವಟದ ಕೆಳಗೆ ಕೂತು ಕೃಷ್ಣನ ಮಹಿಮೆಯನ್ನು ಕೊಂಡಾಡಿದರು. ಸಾಯಂಕಾಲವಾಗಲು ಗೋಗಣವನ್ನು ಕರೆದುಕೊಂಡು ಕೃಷ್ಣನು ಕೊಳಲ ನಾದದಿಂದ ತನ್ನ ಆಗಮನವನ್ನು ಸೂಚಿಸಿ, ಗೋಕುಲನಾರಿಯರನ್ನು ಸಂತೋಷಗೊಳಿಸಿದನು. ಅವನು ಬಿಟ್ಟಿರುವಾಗ ಕ್ಷಣವೇ ಯುಗದಂತೆ ಕಳೆದ ಗೋಪಿಯರಿಗೆ ಅವನ ದರ್ಶನವು ಹರ್ಷಕರವಾಯಿತು. ಕೃಷ್ಣನು ದಾವಾಗ್ನಿಯನ್ನು ಶಾಂತವನ್ನಾಗಿಸಿ, ಗೋಗೋಪಾಲರನ್ನು ಕಾಪಾಡಿದ ವೃತ್ತಾಂತವನ್ನು ಕೇಳಿ, ನಂದಾದಿಗಳು, ದೇವಶ್ರೇಷ್ಠರೇ ರಾಮಕೃಷ್ಣರಾಗಿ ತಮ್ಮನ್ನು ಕಾಪಾಡಲು ಬಂದಿರುವರೆಂದು ತಿಳಿದು, ಸಂತೋಷಪಟ್ಟರು.

## ೧೮. ವರ್ಷರ್ತು ವರ್ಣನೆ — ಶರದೃತು ವರ್ಣನೆ

ಮುಂದೆ ಮಳೆಗಾಲವು ಬಂತು, ಕ್ರಿಮಿಕೀಟಾದಿ ಜಂತುಗಳು ಹೆಚ್ಚಾಗಿ ಪುಟ್ಟಿದವು. ಸೂರ್ಯಚಂದ್ರರಿಗೆ ಗೂಡು ಕಟ್ಟಿದವು. ಮಿಂಚು ಹೊಳೆಯಿತು. ಸಿಡಿಲು ಬಡಿದು ಅಡವಿ ಗಿಡಗಳು ಉರುಳಿದವು. ಮಿಂಚಿನಿಂದಲು ಗುಡುಗಿನಿಂದಲು ಕೂಡಿದ್ದರೂ ಕಾರು ಮುಗಿಲಡರಿ ತುಂಬಿದ ಆಕಾಶವು ಚತುರ್ಮುಖನಂತೆ ಅಸ್ಪಷ್ಟಪ್ರಕಾಶವಾಗಿತ್ತು. ಎಂಟು ತಿಂಗಳು ಭೂಮಿಯಲ್ಲಿದ್ದ ನೀರನ್ನು ಸೆಳೆದ ಸೂರ್ಯಪರ್ಜನ್ಯರು, ಅದನ್ನು ಪುನಃ ಅನಂತವಾಗಿಸಿ ಕೊಡಲಾರಂಭಿಸಿದರು. ಬಿರುಗಾಳಿಗೆ ಹಾರಾಡುವ ಮೇಘಗಳು ಪ್ರಾಣಿಗಳಲ್ಲಿ ದಯೆಯಿಂದ ಜೀವನವೆನಿಸುವ ನೀರನ್ನು, ಮಿಂಚಿನ ಬೆಳಕನ್ನು ಕೊಟ್ಟು, ತಾವು ಬರಿದಾದವು. ಕಾಮ್ಯಕರ್ಮವನ್ನು ಮಾಡಿ ಅದರ ಫಲವನ್ನು ಹೊಂದಿದವನಂತೆ, ಬಿಸಿಲಲ್ಲಿ ಒಣಗಿದ್ದ ಭೂಮಿಯು ಜಲಸಮೃದ್ಧಿಯಿಂದ ಹರುಷಗೊಂಡಿತು. ಕಲಿಯುಗದಲ್ಲಿ ದುರ್ಜನರು ಪ್ರಬಲಿಸಿ ಪಾಖಂಡಮತವು ಪ್ರಕಾಶಿಸಿದಂತೆ, ರಾತ್ರಿಯಲ್ಲಿ ಗ್ರಹಗಳು ಮರೆಯಾಗಲು ಹೊನ್ನೆಹುಳಗಳ ಪ್ರಕಾಶವೇ ಕಾಣಿಸುತ್ತಿತ್ತು. ಮಲಗಿ ಎಚ್ಚತ್ತು ವೇದಾಧ್ಯಯನವನ್ನು ಮಾಡುವ ಬ್ರಾಹ್ಮಣರಂತೆ, ಪರ್ಜನ್ಯಘೋಷದಿಂದೆಚ್ಚತ್ತು ಕಪ್ಪೆಗಳು ವಟಗುಟ್ಟಿದವು. ಬಿಸಿಲುಗಾಲದಿ ಬತ್ತಿ ಹೋದ ನದಿಗಳು, ಕ್ಷುದ್ರಕಾಲುವೆಗಳು ಕೂಡ, ರಾಜಸಗುಣದ ಮನುಜನಿಗೆ ಸಂಪತ್ಪ್ರಾಪ್ತಿಯಾಗಲು ಉಬ್ಬುವಂತೆ, ಉಕ್ಕಿ, ಸ್ವೇಚ್ಛೆಯಾಗಿ ಹರಿಯತೊಡಗಿದವು. ಹಸಿರು ಹುಲ್ಲಿನ ಮೈದಾನಗಳು, ಅದರ ಮೇಲಾಡುವ ಇಂದ್ರಗೋಪ ಕೆಂಪುಹುಳಗಳು, ಛತ್ರದಂತೆ ಕಾಣುವ ನಾಯಿಕೊಡೆಗಿಡಗಳು, ಕಲೆತು ಮನುಷ್ಯರಿಗೆ ಬಂದ ಸಂಪತ್ತಿನ ವಿವಿಧ ಶೋಭೆಯನ್ನು ಅನುಕರಿಸಿದವು. ಇಂದ್ರಿಯಸಹಿತ ದೇಹವು ಸಜ್ಜನ ಸೇವೆಯಿಂದ ಪುಣ್ಯವನ್ನು ಜ್ಞಾನವನ್ನು ಸಂಪಾದಿಸಿಕೊಟ್ಟು, ಸಜ್ಜನ ಸೇವೆಯನ್ನು ಮಾಡದಿರುವವನಿಗೆ ದುಃಖವನ್ನು, ಅನುತಾಪವನ್ನು ಕೊಡುವಂತೆ, ಕೃಷಿಮರ್ಮವನ್ನರಿತು ಕಷ್ಟಪಟ್ಟ ರೈತನಿಗೆ ಕ್ಷೇತ್ರಗಳು ಸಮೃದ್ಧ ಧಾನ್ಯವನ್ನಿತ್ತು, ಕಷ್ಟಪಡದ ದಡ್ಡನಿಗೆ ಹಾಕಿದ ಬೀಜವು ಕೂಡ ಪುಟ್ಟದಂತೆ ಮಾಡಿ ದುಃಖವನ್ನಿತ್ತವು. ಜಲಸ್ಥಲಾಂತರಿಕ್ಷಗಳಲ್ಲಿರುವ ಪ್ರಾಣಿಗಳು ಹೊಸ ನೀರನ್ನು ಕುಡಿದು, ಅದರಲ್ಲಿ ಮಿಂದು ಸೊಗಸಾಗಿ ಕಂಡವು. ಹರಿಸೇವೆಯಿಂದ ಸರ್ವಲೋಕದ ಸುಜೀವರು ಸಂಸಾರ ನಿವಾರಣೆಯನ್ನು ಹೊಂದಿ, ಸ್ವರೂಪದಿಂದ ಶೋಭಿಸುವರಲ್ಲವೇ? ಅಪಕ್ವಯೋಗಿಯ ಮನವು ಕಾಮಪೀಡಿತವಾಗಿ ಕೆಡುವಂತೆ, ನದಿಗಳ ನೀರಿನಿಂದ ಉಕ್ಕಿ, ಗಾಳಿಯಿಂದ ಅಲೆಗಳೆದ್ದು ಸಮುದ್ರನು

ಆಟದಲ್ಲಿ ಸೇರಿಸಿಕೊಂಡನು. ವಿಹಾರವಿಶಾರದನಾದ ಶ್ರೀಕೃಷ್ಣನು ಗೋಪಾಲಕರನ್ನೆಲ್ಲ ಕರೆದು ಒಂದು ಹೊಸ ಆಟವನ್ನು ಪ್ರಾರಂಭಿಸಿದನು. ಸೋತವರು ಗೆದ್ದವರನ್ನು ಹೊತ್ತು ಭಾಂಡೀರಕ ವೆಂಬ ವಟವೃಕ್ಷದವರೆವಿಗೂ ಓಡಬೇಕೆಂದು ಗೊತ್ತಾಯಿತು. ಅಂತೆಯೇ ರಾಮಕೃಷ್ಣರು ಹಿರಿಯ ರಾಗಿರಲು, ಗೋಪಾಲರು ಎರಡು ಗುಂಪಾದರು. ಶ್ರೀದಾಮ, ವೃಷ ಮುಂತಾದವರು ರಾಮನ ಕಡೆ ನಿಂತರು. ಕೃಷ್ಣನ ಕಡೆಯಿದ್ದ ಭದ್ರಸೇನನು ಗೆದ್ದ ವೃಷನನ್ನು, ಸೋತ ಶ್ರೀದಾಮನು ಕೃಷ್ಣನನ್ನು ಪ್ರಲಂಬನು ಬಲರಾಮನನ್ನು ಹೊತ್ತು, ಕೆಳಕ್ಕಿಳಿಸದೆ, ಆಕಾಶಕ್ಕೆ ಹಾರಿದನು. ಬೆಟ್ಟದಂತೆ ಭಾರವಾದ ಬಲರಾಮನನ್ನು ಕಷ್ಟದಿಂದ ಹೊತ್ತು, ಓಡತೊಡಗಿದರು. ಇದ್ದಕ್ಕಿದ್ದಂತೆ ಪ್ರಲಂಬನು ನಿಜರೂಪವನ್ನು ಧರಿಸಿ, ಬಲರಾಮನನ್ನು ಮೇಘಮಂಡಲವನ್ನು ಮುಟ್ಟಿ ಪ್ರಲಂಬನು ಅವನನ್ನು ಕೆಡಹಿ ಕೊಲ್ಲಲು ಹವಣಿಸಿದನು. ಸ್ವರ್ಣಾಭರಣಗಳನ್ನು ತೊಟ್ಟ ಆ ದೈತ್ಯನು ಮಿಂಚಿನಿಂದ ಹೊಳೆಯುವ ಮೇಘದಂತಿದ್ದನು. ಅವನ ಕೊರೆ, ಕಿಡಿಗಳನ್ನು ಕಾರುವ ಕಣ್ಣುಗಳು, ಉರಿಯುತ್ತಿರುವಂತೆ ಕೆಂಪಾದ ಜುತ್ತು, ಕಟಕಕುಂಡಲಗಳು ಮೊದಲಾದುವನ್ನು ನೋಡಿ, ಅವನ ಗರ್ಜನೆಯನ್ನು ಕೇಳಿ, ಬಲರಾಮನು ಸ್ವಲ್ಪ ಭಯಪಟ್ಟನು. ಅಷ್ಟರಲ್ಲೇ ಕೃಷ್ಣನನ್ನು ಸ್ಮರಿಸಿ, ತಾನು ಶೇಷನೆಂದು ನೆನೆದು ವಿಜೃಂಭಿಸಿ, ಪ್ರಲಂಬನನ್ನು ತಲೆಯಮೇಲೆ ಗುದ್ದಿ ಕೆಡಹಿದನು. ಮೇಘದಿಂದ ಕೂಡಿ ಚಂದ್ರನು ಉದುರಿದನೋ, ಅಥವಾ ವಜ್ರಾಘಾತದಿಂದ ಗಿರಿಯು ಬಿತ್ತೋ ಎಂಬಂತೆ ರಾಕ್ಷಸನು ಕೆಳಗೆ ಬಿದ್ದು ತಲೆಯೊಡೆದು, ರಕ್ತವನ್ನು ಕಾರಿ, ಗಟ್ಟಿ ಯಾಗಿ ಚೀರಿ, ಮೃತನಾದನು. ಪ್ರಲಂಬನನ್ನು ಸಂಹರಿಸಿ, ಸುಖವಾಗಿ ಬಂದ ಬಲರಾಮನನ್ನು ಗೋಪಾಲಕರು ಭಾಪು! ಭಲಾ! ಎಂದು ಪೊಗಳಿ, ಹರಸಿ, ಹೊಗಳಿದರು; ಮೃತನಾಗಿ ಬಂದಂತೆ ಎಣಿಸಿ, ಅವನನ್ನಾಲಿಂಗಿಸಿ, ಆನಂದದಿಂದ ಕುಣಿದಾಡಿದರು. ದೇವತೆಗಳು ಪೂಮಳೆಗರೆದರು. ಪಾಪಿಯಾದ ಪ್ರಲಂಬನನ್ನು ಕೊಂದು ಲೋಕೋಪದ್ರವವನ್ನು ನಿವಾರಿಸಿದ ಬಲರಾಮನನ್ನು ಪೊಗಳಿದರು.

## ೧೭. ದಾವಾಗ್ನಿಪಾನ

ಕ್ರೀಡಾಲೋಲರಾಗಿ ಬಾಲಕರಿರುವಾಗ, ಅವರ ಆಕಳುಗಳು ಮೇಯುತ್ತಾ ದೂರವಾಗಿ ಹೊರಟು ಮುಂಜಾಟವಿಯನ್ನು ಹೊಕ್ಕವು. ಅವುಗಳ ಜೊತೆಯಲ್ಲಿ ಮೇಕೆಗಳೂ, ಎಮ್ಮೆಗಳೂ ಹೋದವು. ಬಿಸಿಲಿನ ತಾಪದಿಂದ ಬಳಲಿ ಪಶುಗಳನ್ನು ಹುಡುಕಿ ಕಾಣದಾದ ಗೋಪಾಲರು, ಹೆಜ್ಜೆಗಳನ್ನನು ಸರಿಸಿ ಬಂದು ಮಂಜಾಟವಿಯನ್ನು ಹೊಕ್ಕರು. ಆಗ ಶ್ರೀಕೃಷ್ಣನು ಗೋವುಗಳನ್ನು ಹೆಸರಿನಿಂದ ಕೂಗಿದನು. ಆ ಶಬ್ದವನ್ನು ಕೇಳಿ ಗೋವುಗಳು ಪ್ರತಿಯಾಗಿ ಅಂಬಾರವವನ್ನು ಮಾಡಿದವು. ಆ ಸಮಯದಲ್ಲಿ ಅಡವಿಯ ಕಿಚ್ಚು ಸುತ್ತಲೂ ಸುಡುತ್ತಾ, ಚಟಚಟಾತ್ಕಾರದಿಂದ ಕೂಡಿ ಬಿರುಗಾಳಿ ಯಿಂದ ಉರಿದೆದ್ದು ಗೋಪಾಲರನ್ನು ಸಮೀಪಿಸಿತು. ಅವರು ಅವರ ಹಸುಗಳಿಂದ ಕೂಡಿ, ಭಯಕಾತುರರಾಗಿ ಕೃಷ್ಣನ ಮೊರೆಹೊಕ್ಕರು.

'ಕೃಷ್ಣ! ರಾಮ! ದಾವಾಗ್ನಿ ಸುಡುತ್ತ ಬರುತ್ತಿದೆ, ನಮ್ಮನ್ನು ಸಂರಕ್ಷಿಸು! ನಿನ್ನ ಬಾಂಧವರೆನಿಸಿದ ನಾವು ನಷ್ಟರಾಗಬಹುದೇ? ನಿನ್ನನ್ನೇ ನಂಬಿ ಅನ್ಯಗತಿಕಾಣದ ನಮ್ಮನ್ನು ಸಲಹು!' ಎಂದು ಬೇಡಿದ ಅವರನ್ನು ಕಣ್ಣುಮುಚ್ಚಿಕೊಳ್ಳಿರೆಂದು ಹೇಳಿ, ಯೋಗೇಶನಾದ ಶ್ರೀಕೃಷ್ಣನು ದಾವಾಗ್ನಿ

ಯನ್ನು ಕುಡಿದು ಶಾಂತಗೊಳಿಸಿದನು. ಕಣ್ತೆರೆದು ನೋಡಿದ ಗೋಪಾಲಕರು, ಅಗ್ನಿಯು ಆರಿರುವುದನ್ನು ಕಂಡು, ವಿಸ್ಮಿತರಾದರು. ಭಾಂಡೀರವಟದ ಕೆಳಗೆ ಕೂತು ಕೃಷ್ಣನ ಮಹಿಮೆಯನ್ನು ಕೊಂಡಾಡಿದರು. ಸಾಯಂಕಾಲವಾಗಲು ಗೋಗಣವನ್ನು ಕರೆದುಕೊಂಡು ಕೃಷ್ಣನು ಕೊಳಲ ನಾದದಿಂದ ತನ್ನ ಆಗಮನವನ್ನು ಸೂಚಿಸಿ, ಗೋಕುಲನಾರಿಯರನ್ನು ಸಂತೋಷಗೊಳಿಸಿದನು. ಅವನು ಬಿಟ್ಟಿರುವಾಗ ಕ್ಷಣವೇ ಯುಗದಂತೆ ಕಳೆದ ಗೋಪಿಯರಿಗೆ ಅವನ ದರ್ಶನವು ಹರ್ಷಕರವಾಯಿತು. ಕೃಷ್ಣನು ದಾವಾಗ್ನಿಯನ್ನು ಶಾಂತವನ್ನಾಗಿಸಿ, ಗೋಗೋಪಾಲರನ್ನು ಕಾಪಾಡಿದ ವೃತ್ತಾಂತವನ್ನು ಕೇಳಿ, ನಂದಾದಿಗಳು, ದೇವಶ್ರೇಷ್ಠರೇ ರಾಮಕೃಷ್ಣರಾಗಿ ತಮ್ಮನ್ನು ಕಾಪಾಡಲು ಬಂದಿರುವರೆಂದು ತಿಳಿದು, ಸಂತೋಷಪಟ್ಟರು.

## ೧೮. ವರ್ಷರ್ತು ವರ್ಣನೆ – ಶರದೃತು ವರ್ಣನೆ

ಮುಂದೆ ಮಳೆಗಾಲವು ಬಂತು, ಕ್ರಿಮಿಕೀಟಾದಿ ಜಂತುಗಳು ಹೆಚ್ಚಾಗಿ ಪುಟ್ಟಿದವು. ಸೂರ್ಯ ಚಂದ್ರರಿಗೆ ಗೂಡು ಕಟ್ಟಿದವು. ಮಿಂಚು ಹೊಳೆಯಿತು. ಸಿಡಿಲು ಬಡಿದು ಅಡವಿ ಗಿಡಗಳು ಉರುಳಿದವು. ಮಿಂಚಿನಿಂದಲು ಗುಡುಗಿನಿಂದಲು ಕೂಡಿದ್ದರೂ ಕಾರು ಮುಗಿಲಡರಿ ತುಂಬಿದ ಆಕಾಶವು ಚತುರ್ಮುಖನಂತೆ ಅಸ್ಪಷ್ಟಪ್ರಕಾಶವಾಗಿತ್ತು. ಎಂಟು ತಿಂಗಳು ಭೂಮಿಯಲ್ಲಿದ್ದ ನೀರನ್ನು ಸೆಳೆದ ಸೂರ್ಯಪರ್ಜನ್ಯರು, ಅದನ್ನು ಪುನಃ ಅನಂತವಾಗಿಸಿ ಕೊಡಲಾರಂಭಿಸಿದರು. ಬಿರುಗಾಳಿಗೆ ಹಾರಾಡುವ ಮೇಘಗಳು ಪ್ರಾಣಿಗಳಲ್ಲಿ ದಯೆಯಿಂದ ಜೀವನವೆನಿಸುವ ನೀರನ್ನು, ಮಿಂಚಿನ ಬೆಳಕನ್ನು ಕೊಟ್ಟು, ತಾವು ಬರಿದಾದವು. ಕಾಮ್ಯಕರ್ಮವನ್ನು ಮಾಡಿ ಅದರ ಫಲವನ್ನು ಹೊಂದಿದವನಂತೆ, ಬಿಸಿಲಲ್ಲಿ ಒಣಗಿದ್ದ ಭೂಮಿಯು ಜಲಸಮೃದ್ಧಿಯಿಂದ ಹರುಷಗೊಂಡಿತು. ಕಲಿಯುಗದಲ್ಲಿ ದುರ್ಜನರು ಪ್ರಬಲಿಸಿ ಪಾಖಂಡಮತವು ಪ್ರಕಾಶಿಸಿದಂತೆ, ರಾತ್ರಿಯಲ್ಲಿ ಗ್ರಹಗಳು ಮರೆಯಾಗಲು ಹೊನ್ನೆಹುಳಗಳ ಪ್ರಕಾಶವೇ ಕಾಣಿಸುತ್ತಿತ್ತು. ಮಲಗಿ ಎಚ್ಚತ್ತು ವೇದಾಧ್ಯಯನವನ್ನು ಮಾಡುವ ಬ್ರಾಹ್ಮಣರಂತೆ, ಪರ್ಜನ್ಯಘೋಷದಿಂದೆಚ್ಚತ್ತು ಕಪ್ಪೆಗಳು ವಟಗುಟ್ಟಿದವು. ಬಿಸಿಲುಗಾಲದಿ ಬತ್ತಿ ಹೋದ ನದಿಗಳು, ಕ್ಷುದ್ರಕಾಲುವೆಗಳು ಕೂಡ, ರಾಜಸ ಗುಣದ ಮನುಜನಿಗೆ ಸಂಪತ್ಪ್ರಾಪ್ತಿಯಾಗಲು ಉಬ್ಬುವಂತೆ, ಉಕ್ಕಿ, ಸ್ವೇಚ್ಛೆಯಾಗಿ ಹರಿಯ ತೊಡಗಿದವು. ಹಸಿರು ಹುಲ್ಲಿನ ಮೈದಾನಗಳು, ಅದರ ಮೇಲಾಡುವ ಇಂದ್ರಗೋಪ ಕೆಂಪುಹುಳಗಳು, ಛತ್ರದಂತೆ ಕಾಣುವ ನಾಯಿಕೊಡೆಗಿಡಗಳು, ಕಲೆತು ಮನುಷ್ಯರಿಗೆ ಬಂದ ಸಂಪತ್ತಿನ ವಿವಿಧ ಶೋಭೆಯನ್ನು ಅನುಕರಿಸಿದವು. ಇಂದ್ರಿಯಸಹಿತ ದೇಹವು ಸಜ್ಜನ ಸೇವೆಯಿಂದ ಪುಣ್ಯವನ್ನು ಜ್ಞಾನವನ್ನು ಸಂಪಾದಿಸಿಕೊಟ್ಟು, ಸಜ್ಜನ ಸೇವೆಯನ್ನು ಮಾಡದಿರುವವನಿಗೆ ದುಃಖವನ್ನು, ಅನುತಾಪವನ್ನು ಕೊಡುವಂತೆ, ಕೃಷಿಮರ್ಮವನ್ನರಿತು ಕಷ್ಟಪಟ್ಟ ರೈತನಿಗೆ ಕ್ಷೇತ್ರಗಳು ಸಮೃದ್ಧ ಧಾನ್ಯವನ್ನಿತ್ತು, ಕಷ್ಟಪಡದ ದಡ್ಡನಿಗೆ ಹಾಕಿದ ಬೀಜವು ಕೂಡ ಪುಟ್ಟದಂತೆ ಮಾಡಿ ದುಃಖವನ್ನಿತ್ತವು. ಜಲಸ್ಥಲಾಂತರಿಕ್ಷಗಳಲ್ಲಿರುವ ಪ್ರಾಣಿಗಳು ಹೊಸ ನೀರನ್ನು ಕುಡಿದು, ಅದರಲ್ಲಿ ಮಿಂದು ಸೊಗಸಾಗಿ ಕಂಡವು. ಹರಿಸೇವೆಯಿಂದ ಸರ್ವಲೋಕದ ಸುಜೀವರು ಸಂಸಾರ ನಿವಾರಣೆಯನ್ನು ಹೊಂದಿ, ಸ್ವರೂಪದಿಂದ ಶೋಭಿಸುವರಲ್ಲವೇ? ಅಪಕ್ವಯೋಗಿಯ ಮನವು ಕಾಮ ಪೀಡಿತವಾಗಿ ಕೆಡುವಂತೆ, ನದಿಗಳ ನೀರಿನಿಂದ ಉಕ್ಕಿ, ಗಾಳಿಯಿಂದ ಅಲೆಗಳೆದ್ದು ಸಮುದ್ರನು

ಅಲ್ಲೋಲಕಲ್ಲೋಲವಾದನು. ಅಧೋಕ್ಷಜನ ಭಕ್ತರು ವ್ಯಸನಗಳನ್ನು ಪೊಂದಿಯು ವಿಕಾರ ರಹಿತರಾಗಿರುವಂತೆ, ಮಳೆ ಹೊಡೆದರೂ ಬೆಟ್ಟಗಳು ಅಲುಗದೆ ಸ್ಥಿರವಾಗಿದ್ದವು.

ಅಭ್ಯಾಸಮಾಡದೆ ಮರೆತ ವೇದಗಳಂತೆ, ನಡೆಯದೆ ಹುಲ್ಲು ಬೆಳೆದಿದ್ದ ಹಾದಿಗಳು ಅಸ್ಪಷ್ಟ ವಾದವು. ಗುಣವಂತರಾದ ಪುರುಷರಲ್ಲಿ ಕಾಮಿನಿಯರಂತೆ, ಲೋಕೋಪಕಾರಿಗಳಾದ ಮೇಘ ಗಳಲ್ಲಿ ಮಿಂಚುಗಳು ಸ್ಥಿರವಾಗಿ ನಿಲ್ಲದೆ ಮಾಯವಾಗುತ್ತಿದ್ದವು. ಸೃಷ್ಟಿಯ ಪ್ರಾರಂಭದಲ್ಲಿ ಸ್ವಯಂ ನಿರ್ಗುಣನಾದರೂ ತ್ರಿಗುಣಗಳನ್ನು ಸ್ವೀಕರಿಸುವ ಹರಿಯಂತೆ, ಇಂದ್ರಚಾಪವು ತಾನು ಗುಣವಿಲ್ಲದುದಾದರೂ, ಗುಣವುಳ್ಳ ಆಕಾಶದಲ್ಲಿ ಮೂಡಿ ಕಾಣಿಸಿತು. (ಗುಣ-ತಾರ), ತನ್ನ ಕಾಂತಿಯಿಂದ ಕೆಂಪಾಗಿ ಕಾಣುವ ಮುಗಿಲಿನಲ್ಲಡಗಿ ಚಂದ್ರನು, ಅಹಂಕಾರದಿಂದ ರಕ್ತನಾಗಿ ಜ್ಞಾನರಹಿತವಾದ ಸಂಸಾರಿಯಂತೆ, ಬೆಳಗದಾದನು. ಗೃಹತಾಪಾದಿ ನೊಂದ ಸುಜನರು, ಹರಿ ಭಕ್ತರು ಬರಲು ಹರ್ಷಿಸುವಂತೆ, ನವಿಲುಗಳು, ಮೇಘವಂದವು ಬರಲು ನೋಡಿ ಕುಣಿದಾಡಿದವು. ಬೇಕಾದ ಕಾಮಗಳನ್ನು ಭುಜಿಸಿ ಇಂದ್ರಿಯಗಳು ದುರ್ಬಲವಾಗಲು, ಕುಟುಂಬ ಪೋಷಣೆಗಾಗಿ ಕಷ್ಟಪಟ್ಟವರು, ವೈರಾಗ್ಯವನ್ನು ತಾಳಿ, ಹರಿಯನ್ನು ಭಜಿಸಿ, ಕಂಡು, ತಲೆಬಾಗಿ ನಿಂತಂತೆ, ಬಿಸಿಲಲ್ಲಿ ಒಣಗಿ ನಿಂತಿದ್ದ ಮರಗಳು ಬೇರಿಂದ ನೀರನ್ನು ಹೀರಿ, ಹೂಹಣ್ಣುಗಳಿಂದ ತುಂಬಿ, ರೆಂಬೆಗಳನ್ನು ತಗ್ಗಿಸಿ ನಿಂತಿದ್ದವು. ನಿತ್ಯಕಲಹ ವ್ಯಸನಗಳಿಂದ ನೊಂದಿದ್ದರೂ, ಮನೆಯನ್ನು ಬಿಡಲಾರದ ನಿತ್ಯ ಸಂಸಾರಿಗಳಂತೆ, ಚಕ್ರವಾಕಗಳು ಉಕ್ಕೇರಿ ಮುರಿದ, ಕೆರೆಗಳ ದಡಗಳಲ್ಲೇ ಕೂತಿದ್ದವು. ವೇದವಿರುದ್ಧವಾದ ವಾಮಪಾಶುಪತಾದಿ ಮತಗಳಿಂದ ವೇದಮಾರ್ಗವು ಕಲಿಯುಗದಿ ಕೆಟ್ಟಂತೆ, ಉಕ್ಕೇರಿ ಹರಿದ ಕಾಲುವೆಗಳಿಂದ ಸೇತುವೆಗಳು ಮುರಿದುಬಿದ್ದವು. ದ್ವಿಜಪ್ರೇರಿತರಾಗಿ ರಾಜ ವರರು ಪ್ರಜೆಗಳಿಗೆ ಧನವನ್ನಿತ್ತಂತೆ, ವಾಯುಪ್ರೇರಿತ ಮೇಘಗಳು ಜನರಿಗೆ ಅಮೃತಜಲವನ್ನಿ ತ್ತವು. ವನದಲ್ಲಿ ನೇರಳೆ, ಖರ್ಜೂರ ಫಲಗಳು ಸಮೃದ್ಧವಾಗಿದ್ದವು.

ಆ ವನದಲ್ಲಿ ಪ್ರವೇಶಿಸಿ ಗೋಪಾಲಕರು ರಾಮಕೃಷ್ಣರಿಂದ ಕೂಡಿ ಕ್ರೀಡಿಸಿದರು. ಹುದುಗಿನ ಭಾರದಿಂದ ಮೆಲ್ಲನೆ ನಡೆಯುತ್ತಾ, ಕೃಷ್ಣನು ಕರೆದಾಗ ಗೋವುಗಳು ಪ್ರೀತಿಯಿಂದ, ಹಾಲನ್ನು ಹರಿಸುತ್ತಾ ಹೋಗಿ ಹರಿಯ ಸುತ್ತು ಸೇರಿದವು. ಮಳೆನಿಂತಾಗ ಜೇನನ್ನು ಹುಡುಕುತ್ತಾ ಗಿಡಗಳನ್ನು ಸೇರಿದ ಗೋಪಾಲಕರು, ಮಳೆ ಬಂದಾಗ ಗುಹೆಗಳನ್ನು ಸೇರುತ್ತಿದ್ದರು; ಗಿಡಗಳ ಪೊಟರುಗಳಲ್ಲಿ ಕಂದಮೂಲಗಳನ್ನು ತಿಂದು ದಿನಗಳೆಯುತ್ತಿದ್ದರು. ಮೊಸರುಬುತ್ತಿಯನ್ನು ನದೀತೀರದಲ್ಲಿ, ಕಲ್ಲಿನ ಮೇಲೆ ಕೂತು ತಿಂದು, ಹಸಿರುಹುಲ್ಲಿನ ಮೇಲೆ ಗೋವೃಷವತ್ಸಗಳು ಮೆಲುಕುಹಾಕುವು ದನ್ನು ನೋಡುತ್ತಾ ಗೋಪಾಲಕೃಷ್ಣನು ಕ್ರೀಡಿಸುತ್ತಿದ್ದನು. ಸರ್ವಭೂತಗಳಿಗೆ ಆನಂದವನ್ನು ತರುವ ಮಳೆಗಾಲದ ದಿವ್ಯಶೋಭೆಯನ್ನು ಕಂಡು ಸರ್ವಕಾಲ ಪ್ರವರ್ತಕನಾದ ಕೃಷ್ಣನು, ಬಲ ರಾಮನು ತುಷ್ಟರಾದರು.

ಆಗ ಶರದೃತುವು ಬಂತು, ನೀರು ಸ್ವಚ್ಛವಾಯಿತು. ಗಾಳಿಯಲ್ಲಿ ನದಿಯ ಶೀಕರಗಳು ಸೂಸಿ, ತಂಪಾಗಿ ಶರತ್ಕಾಲದ ಕಮಲಗಂಧವನ್ನು ಹೊತ್ತುತಂದವು.

ಯೋಗಭ್ರಷ್ಟರ ಮನಸ್ಸು ಪುನಃ ಯೋಗಸೇವೆಯಿಂದ ಸ್ವಚ್ಛವಾದಂತೆ ಪದ್ಮಾಕರಗಳ ನೀರು ಸ್ವಚ್ಛವಾಗಿ ತಿಳಿಗೂಡಿತು. ವರ್ಣಾಶ್ರಮಧರ್ಮರತರಾದ ಸುಜನರಿಗೆ ಕೃಷ್ಣಭಕ್ತಿಯು ಪಾಪವನ್ನು ಕಳೆದಂತೆ, ಶರದಾಕಾಶವು ಮುಗಿಲ ಮುಸುಕನ್ನೂ, ನೆಲದ ಕೆಸರನ್ನೂ ನೀರಿನ ಕೊಳಕನ್ನೂ ಕಳೆಯಿತು. ದಾರೇಷಣ ಧನೇಷಣ ಸುತೇಷಣಗಳನ್ನೂ ದೂರಮಾಡಿ ಶಾಂತರಾಗಿ, ನಿಷ್ಪಾಪರಾದ

ಮುನಿಗಳಂತೆ, ಮೇಘಗಳು ಸರ್ವಸ್ವವನ್ನೂ ದಾನ ಮಾಡಿಬಿಟ್ಟು, ಶುಭ್ರಕಾಂತಿಯಿಂದ ಬೆಳಗಿದವು. ಜ್ಞಾನಿಗಳು ಯೋಗ್ಯಕಾಲವನ್ನರಿತು ಜ್ಞಾನದಾನ ಮಾಡಿ, ಅಯೋಗ್ಯಕಾಲದಲ್ಲಿ ಮಾಡದಿರುವಂತೆ, ಗಿರಿಗಳು ಅಮೃತಜಲವನ್ನಿತ್ತು, ಒಂದೊಂದು ಸಲ ಕೊಡದೆ ಇರುತ್ತಿದ್ದವು. ನಿತ್ಯವೂ ಕ್ಷಯಿಸುವ ಆಯುಸ್ಸನ್ನು ಕಾಣದೆ ಮೂಢರಾಗಿರುವ ಕುಟುಂಬಿಗಳಂತೆ, ಅಲ್ಪಜಲಚರ ಪ್ರಾಣಿಗಳು ಸರೋವರ ನದಿಗಳಲ್ಲಿ ನೀರು ಕಡಿಮೆಯಾಗುತ್ತಿರುವುದನ್ನು ತಿಳಿಯದೆ ಇದ್ದವು. ಕುಟುಂಬಿಯು ದರಿದ್ರನು ಆದ ಕೃಪಣನಂತೆ, ಅಲ್ಪ ಜಲಚರಗಳು ಶರತ್ಕಾಲದ ಸೂರ್ಯನ ಬಿಸಿಲಿನಿಂದ ತಾಪವನ್ನು ಹೊಂದಿದವು. ಜಡ ಶರೀರಾದಿಗಳಲ್ಲಿ ಮಮತೆಯನ್ನು ಮೆಲ್ಲನೇ ಬಿಡುವ ಧೀರರಂತೆ, ಸ್ಥಲಗಳು ಕೆಸರನ್ನು ಬಿಟ್ಟು, ಗಟ್ಟಿಯಾದವು. ಧೀರನಿಗೆ ಜ್ಞಾನವು ಹುಟ್ಟುವಂತೆ, ಅಲ್ಲಿ ಮೊಳಕೆಗಳು ಅಂಕುರಿಸಿದವು. ನಿವೃತ್ತಶಾಸ್ತ್ರ ಶ್ರವಣದಿಂದ ಮನಸ್ಸು ವಿರಕ್ತವಾಗುವಂತೆ, ಸಮುದ್ರವು ಶರತ್ಕಾಲದಿಂದ ಅಲುಗಾಡದೆ ಶಾಂತವಾಯಿತು. ಇಂದ್ರಿಯ ಮಾರ್ಗಗಳನ್ನು ನಿರೋಧಿಸಿ ಜ್ಞಾನವನ್ನು ಮನದಿ ತುಂಬುವ ಯೋಗಿಗಳಂತೆ, ಕರ್ಷಕರು ಬೊದುವುಗಳನ್ನು ಚೆನ್ನಾಗಿ ಕಟ್ಟಿ, ನೀರನ್ನು ಮಡಿಗಳಲ್ಲಿ ನಿಲ್ಲಿಸಿದರು. ದೇಹಾದಿಗಳೇ ನಾನೆಂಬ ದುರಭಿಮಾನವನ್ನು ಕಳೆದು, ಕೃಷ್ಣನು ಆತ್ಮಜ್ಞಾನವನ್ನು ವ್ರಜಸುಂದರಿಯರಿಗಿತ್ತಂತೆ ಶರತ್ಸೂರ್ಯನ ತಾಪವನ್ನು ಕಳೆದು, ಚಂದ್ರನು ಬೆಳದಿಂಗಳನ್ನು ಜೀವರಿಗಿತ್ತನು. ಸಾತ್ವಿಕಚಿತ್ತವು ವೇದಮುಖ್ಯ ವಿಷಯನಾದ ಗೋವಿಂದನ ಜ್ಞಾನದಿಂದ ಶೋಭಿಸುವಂತೆ, ನಿರ್ಮೇಘವಾದ ಆಕಾಶವು ಸ್ವಚ್ಛತಾರೆಗಳಿಂದ ವಿರಾಜಿಸಿತು. ಯದುಪತಿಯು ವೃಷ್ಣಗಣದಿಂದ ಭೂಮಿಯಲ್ಲಿ ಪ್ರಕಾಶಿಸಿದಂತೆ, ಚಂದ್ರನು, ಅಖಂಡಮಂಡಲನಾಗಿ, ನಕ್ಷತ್ರಗಣದಿಂದ ಆಕಾಶದಲ್ಲಿ ಪ್ರಕಾಶಿಸಿದನು.

ಸಮಶೀತೋಷ್ಣವಾದ ಶರತ್ಕಾಲದ ವನ ವಾಯುವನ್ನು ಸೇವಿಸಿ ಎಲ್ಲ ಜನರೂ ತಮ್ಮ ತಾಪವನ್ನು ಮರೆತರೂ, ಗೋಪಿಕಾ ತರುಣಿಯರು ಕೃಷ್ಣವಿರಹತಾಪವನ್ನು ಮರೆಯದೆ, ಅವನನ್ನೇ ಸ್ಮರಿಸುತ್ತಿದ್ದರು. ಬೀಜಗಳಿಂದ ಕ್ಷೇತ್ರಗಳು ಸಸ್ಯಭರಿತವಾದವು; ಗೋವುಗಳು ನಾರಿಯರು ಕೂಡ ಗರ್ಭಿಣಿಯರಾದರು. ರಾಜನಿಂದ ಕಳ್ಳರಲ್ಲದ ಇತರ ಪ್ರಜರು ನಿರ್ಭಯರಾದಂತೆ, ಸೂರ್ಯನಿಂದ ಕುಮುದಗಳಲ್ಲದ ಪದ್ಮಗಳು ಹರ್ಷಿತವಾದವು. ಪುರ ಗ್ರಾಮಗಳಲ್ಲಿ ನಡೆದ ಆಗ್ರಾಯಣೇಷ್ಟಿಯ ಇಂದ್ರಯಾಗ ಮಹೋತ್ಸವಗಳಿಂದಲು, ಭೂಮಿಗಳಲ್ಲಿ ಬೆಳೆದು ನಿಂತ ಸಸ್ಯಗಳಿಂದಲು ಶ್ರೀಹರಿಯ ಮಹಾ ವೈಭವವೇ ಸೂಚಿತವಾಗಿತ್ತು. ಮಂತ್ರೌಷಧ ತಪಸ್ಸಂಪನ್ನರಾದ ಸಿದ್ಧರು, ತಪಸ್ಸಿದ್ಧಿಯ ಕಾಲವು ಬಂದಾಗ, ತಮ್ಮ ದೇಹ ಪಂಜರವನ್ನು ಬಿಟ್ಟು, ದಿವ್ಯದೇಹವನ್ನು ಹೊಂದುವಂತೆ, ವಣಿಗ್ಜನರು ವರ್ಷದಿಂದಲೂ ಕೂಡಿಟ್ಟ ಪದಾರ್ಥಗಳನ್ನು ತುಂಬಿಕೊಂಡು, ನಗರಗಳನ್ನು ಬಿಟ್ಟು, ಪರದೇಶದಲ್ಲಿ ವ್ಯಾಪಾರದಿಂದ ಲಾಭವನ್ನು ಗಳಿಸಲು ಹೊರಟರು.

## ೧೯. ಗೋಪೀಜನ ಕೃತ ವೇಣುಗಾನ ವರ್ಣನೆ

ಇಂತು ಸ್ವಚ್ಛ ಜನ ಸುಂದರ ತಟಾಕಗಳಲ್ಲಿ ಅರಳಿದ ಅರವಿಂದ ಗಂಧವನ್ನು ಹೊತ್ತು ತಂದ ಮಂದಮಾರುತನ ಆಹ್ವಾನವನ್ನು ಮನ್ನಿಸಿ, ಗೋಬೃಂದದಿಂದಲೂ, ಗೋಪಾಲರಿಂದಲೂ ಕೂಡಿ ಕೃಷ್ಣನು ವನವನ್ನು ಪ್ರವೇಶಿಸಿದನು. ಕುಸುಮಭರಿತವಾದ ವನಲತೆಗಳು, ಲತೆಗಳಿಗಾಧಾರವಾಗಿ ನಿಂತ ಫಲತರುಗಳು, ತರುಗಳಲ್ಲಿ ಕೂತು ಕಲಕಲ ನಾದವನ್ನು ಮಾಡುವ ಪಕ್ಷಿಗಳು, ಪಕ್ಷಿಗಳ ಮಧುರನಾದಕ್ಕೆ ಶ್ರುತಿಗೂಡಿಸುವ ಭ್ರಮರಗಳು, ಭ್ರಮರಗಳಿಗೆ ಮಕರಂದವನ್ನೀವ ಪದ್ಮಗಳು, ಪದ್ಮಗಳನ್ನು ಅಲೆಗಳಿಂದ ಅಲುಗಿಸುವ ಸರೋವರಗಳು, ಉಳ್ಳ ವನದಲ್ಲಿ ಸೇರಿ ಕೃಷ್ಣನು ಗೋಪತರುಣಿಯರ ಕಾಮಪೂರ್ವಕ ಭಕ್ತಿಯನ್ನು ಪಕ್ವಗೊಳಿಸಲು ಸಂಕಲ್ಪಿಸಿ, ಕೊಳಲನ್ನೂದಿದನು. ಅದನ್ನು ಕೇಳಿ ಕೆಲಗೋಪಿಯರು, ಕೃಷ್ಣನ ಚರಿತೆಯನ್ನು ಕೇಳಿ ಅರಿಯದ ಇತರ ಗೋಪಕನ್ನೆಯರಿಗೆ ವರ್ಣಿಸುತ್ತಾ, ಇಂತೆಂದರು. ಅವರ ಮನವು ಮದನ ಶರವೇಗದಿಂದ ವಿಚಲಿತವಾಗಿತ್ತು. ಆ ಪುಣ್ಯವತಿಯರು ಸರ್ವಸ್ವನ್ನು ಶ್ರೀಹರಿಗರ್ಪಿಸಿ, ಇತರ ಪ್ರಪಂಚದ ಚಿಂತೆಯನ್ನು ಬಿಟ್ಟು, ಯೋಗಿಗಳಂತೆ ಮೈಮರೆತಿದ್ದರು.

'ನೆತ್ತಿಯಲ್ಲಿ ನವಿಲಗರೆ, ನಟವರನಂತೆ ವೇಷ, ಕಿವಿಗಳಲ್ಲಿ ಕರ್ಣಿಕಾರ ಕುಸುಮ, ಮುಖದಲ್ಲಿ ಮಂದಹಾಸ, ಕೊರಳಲ್ಲಿ ವೈಜಯಂತೀಮಾಲೆ, ನಡುವಲ್ಲಿ ಪೀತಾಂಬರ, ಪಕ್ಕದಲ್ಲಿ ಗೋಪಾಲ ಬಾಲರು, ಒಪ್ಪುತ್ತಿರಲು ಕೈಬೆರಳುಗಳನ್ನಾಡಿಸಿ, ಅಧರಸುಧೆಯನ್ನು ತುಂಬುವ ವೇಣುವನ್ನೂದಿ, ತನ್ನ ಪಾದಚಿಹ್ನೆಗಳಿಂದ ವೃಂದಾವನವನ್ನು ಪಾವನವಾಗಿಸುವ ಶುಭಕೀರ್ತಿಯಾದ ಗೋಪಾಲ ಕೃಷ್ಣಮೂರ್ತಿಯನ್ನು ನೋಡಿರೇ! ಎಡಗೈಯಲ್ಲಿ ವೇಣುವನ್ನು ಪಿಡಿದು, ಬೆರಳುಗಳಿಂದ ಮುಚ್ಚಿ ತೆಗೆಯುತ್ತಾ ಕೊಳಲರಂಧ್ರಗಳಲ್ಲಿ ತನ್ನ ಅಧರಾಮೃತವನ್ನು ತುಂಬಿ ಊದುತ್ತಾ, ಹುಬ್ಬಿನ ಸೊಬಗಿನಿಂದ, ನೋಡುವರ ಮನವನ್ನು ಸೆಳೆವ, ನಮ್ಮ ಕೃಷ್ಣನ ಸಂಗೀತವೇ ಭರತಶಾಸ್ತ್ರದ ನಾಂದಿಯೋ? ಏನು? ಶ್ರೀದೇವಿಯೇ ವೇಣುವಲ್ಲಿ ನಿಂತು ಕೃಷ್ಣಾಧರಪಾನವನ್ನು ತೃಷ್ಣೆಯಿಂದ ಮಾಡುವಳೋ?' ಎಂದು ವರ್ಣಿಸಿ ವೇಣುಗಾನ ಶ್ರವಣದಿಂದ, ಆನಂದತುಂದಿಲರಾಗಿ ಇಂತೆಂದರು-

ಸಖಿ! ನಂದನ ನಂದನರಾದ ರಾಮಕೃಷ್ಣರು, ಗೋಪಾಲ ಬಾಲರಿಂದ ಕೂಡಿ, ವನದಲ್ಲಿ ಪಶುಗಳನ್ನು ಮೇಯಿಸುತ್ತಾ, ಕೊಳಲನ್ನೂದುತ್ತಾ, ಅನುರಾಗದಿಂದ ನೋಡುತ್ತಾ ವಿಹರಿಸುವಾಗ, ಅವರ ಸುಂದರರೂಪವನ್ನು ನೋಡುವುದೇ ಕಣ್ಣು ಪಡೆದುದರ ಫಲವಲ್ಲವೇ? ಮಾವಿನ ಚಿಗುರೆಲೆ, ನವಿಲಿನಗರೆ, ಉತ್ಪಲಕಮಲಮಾಲೆ, ದಿವ್ಯಪೀತಾಂಬರಗಳಿಂದೊಪ್ಪುವ ವಿಚಿತ್ರವೇಷರಾದ ನಮ್ಮ ರಾಮಕೃಷ್ಣರು, ಗೋಪಾಲ ಮಧ್ಯದಲ್ಲಿ, ನಟವರರಂತೆ ಸಂಚರಿಸುತ್ತಿರಲು ನೋಡಿ, ಅವರ ಕೊಳಲ ಮಧುರಗಾನವನ್ನು ಕೇಳಿದವರೇ ಧನ್ಯರು! ಗೋಪಿಯರೇ! ವನತರುಗಳು ಕೂಡ, ವೇಣುವನ್ನು ಕಂಡು, 'ಓಹೋ! ಏನು ಪುಣ್ಯವನ್ನು ಮಾಡಿ ಈ ವೇಣುದಂಡವು ಕೊಳಲಾಗಿ, ಕೃಷ್ಣನ ಅಧರಸುಧೆಯನ್ನು ಕುಡಿಯುತ್ತಿದೆ? ಇದರಿಂದ ನಮ್ಮ ತರುಜಾತಿಯೇ ಧನ್ಯವಾಯಿತೆಂ'ಬಂತೆ , ಕೃಷ್ಣನು ನಡೆದು ಬಂದ ಮಾರ್ಗದಲ್ಲಿ ಆನಂದಜಲವನ್ನುದುರಿಸಿದಂತೆ ಜಲಬಿಂದುಗಳು ಬೀಳುತ್ತಿರಲು, ಮೈಪುಲಕಿತವಾದಂತೆ, ಸುತ್ತಲು ಹುಲ್ಲಿಂದ ಕೂಡಿ, ಸೊಗಸಾಗಿ ಕಾಣುತ್ತಿವೆ. ಗೋವಿಂದನ ವೇಣುವನ್ನು ಕೇಳಿ, ನವಿಲು ಮದಿಸಿ ಕುಣಿಯುತ್ತಿದೆ. ಅದನ್ನು ನೋಡಿ ಇತರ ಪ್ರಾಣಿಗಳೂ ಆನಂದದಿಂದ ಅನುಕರಿಸುತ್ತಿವೆ. ದೇವಕೀ ನಂದನನ ಪಾದಾರವಿಂದ

ಶೋಭೆಯಿಂದ, ವೃಂದಾವನವು ಭೂತಲದಲ್ಲಿ ವೈಕುಂಠವೆನಿಸಿ, ಲಕ್ಷ್ಮೀನಿಲಯವಾಗಿ, ದಿವ್ಯಕೀರ್ತಿಯನ್ನು ಗಳಿಸಿದೆ.

ವಿಚಿತ್ರವೇಷನಾದ ನಂದನಂದನನನ್ನು ಎವೆಯಿಕ್ಕದೆ ಕಣ್ಣುಗಳನ್ನರಳಿಸಿ ನೋಡುವ ಹರೆಯ ತರುಣಿಯರು, ಕೃಷ್ಣಸಾರ ತರುಣರಿಂದ ಕೂಡಿ, ಅವನ ವೇಣುಸುಧಾರಸವನ್ನು ಕಿವಿಗಳಲ್ಲಿ ತುಂಬಿ ಕುಡಿದು, ತಲೆಯೆತ್ತಿ, ಪ್ರೇಮಾವಲೋಕನವನ್ನು ಬಹುಮಾನವಾಗಿ ಕೊಟ್ಟು ಪೂಜಿಸುತ್ತಿರುವರು. ಪಶುಜನ್ಮವಾದರೇನು? ಅವರೇ ಧನ್ಯರು!

ವನಿತಾಜನತಾ ಘನತಾಪಹಾರಿ ಮನೋಹರ ಕೃಷ್ಣನನ್ನು ನೋಡಿ, ಅವನ ಮುಖ ಮುಖರಿತ ವಿವಿಧ ರಸಭರಿತ ವೇಣುನಾದವನ್ನು ಕೇಳು, ವಿಮಾನದಲ್ಲಿ ಪೋಗುವ ದೇವನಾರಿಯರು, ಮಾರಶರದಿಂದ ಹೃದಯವು ಚೂರಾಗಿ, ನೀವೀಬಂಧವು ಜಾರಿ, ತುರುಬಿನಿಂದ ಹೂಗಳುದುರಿ ಬೀಳಲು, ಮೋಹವಶರಾಗುತ್ತಿರುವರು. ಗೋವುಗಳು ಕೃಷ್ಣನನ್ನು ತಲೆಯೆತ್ತಿ ನೋಡುತ್ತಾ, ಅವನ ವೇಣುಸುಧೆಯನ್ನು ಕಿವಿಗಳಿಂದ ಕುಡಿದು, ಅವನ ರೂಪವನ್ನು ಹೃದಯದಿ ಧರಿಸಿ, ತಣಿಯದೆ, ಆನಂದಬಾಷ್ಪಗಳನ್ನು ಸುರಿಸುತ್ತಾ ವಿನಯದಿಂದ ಬಂದು ಸುತ್ತು ನಿಂತಿವೆ. ಗಿಡಗಳನ್ನೇರಿ ಕುಳಿತು, ಮೌನದಿಂದ, ಕೃಷ್ಣನನ್ನೇ ಚಿಂತಿಸುತ್ತಾ, ಕೃಷ್ಣರೂಪವನ್ನು ಕಂಡು, ವೇಣುವನ್ನು ಕೇಳಿ ಹಿಗ್ಗುವ ಪಕ್ಷಿಗಳು, ಯಾವ ಋಷಿಗಳಿರಬಹುದು? ನದಿಗಳು ಕೂಡ ವೇಣುಗಾನದಿಂದಾಕರ್ಷಿಸಲ್ಪಟ್ಟು, ಸುಳಿಯ ರೂಪದಿ ಹಿಂದಿರುಗಿ ಬಂದು, ಮೆಲ್ಲನೆ ಹರಿಯುತ್ತಾ, ಕೃಷ್ಣನನ್ನಾಲಿಂಗಿಸಲು ಬರುವಂತೆ ತರಂಗಹಸ್ತಗಳನ್ನೆತ್ತಿ, ತಮ್ಮ ಹೃದಯ ಕಮಲಗಳನ್ನು ಕಾಣಿಕೆಯಾಗಿಟ್ಟು ಪೂಜಿಸುತ್ತಿವೆ. ಬಿಸಿಲಲ್ಲಿ ಗೋವುಗಳನ್ನು ಗೋಪಾಲಕರನ್ನು ಕೂಡಿ ತಿರುಗುವ ವೇಣುವಾದನ ವಿಶಾರದನನ್ನು ನೋಡಿ, ಪ್ರೇಮದಿಂದ ಪೂಮಳೆಗರೆದು ಪರ್ಜನ್ಯನು ಮೇಘಚ್ಛತ್ರವನ್ನು ಹಿಡಿಯುವನು. ಪ್ರಿಯಳ ಕುಚಮಂಡನವಾಗಿರಿಸಿದ ಕುಂಕುಮ ಪಂಕರಾಗವನ್ನು ಇಮ್ಮಡಿಯಾಗಿ ಮಾಡುವ ಪ್ರಿಯ ಕೃಷ್ಣನ ಪಾದಾರವಿಂದ ರಕ್ತಿಮೆಯು, ಕಣ್ಣಿಗೆ ಹಬ್ಬವಾಗಲು, ಕಿರಾತನಾರಿಯರು, ಕೃಷ್ಣನ ವಿರಹತಾಪವನ್ನೂ ಮನ್ಮಥಪೀಡೆಯನ್ನೂ ದೂರಮಾಡುವ ಆ ಕುಂಕುಮವು ಹತ್ತಿರುವ ತೃಣವನ್ನು ಕಪೋಲಕುಚಗಳಲ್ಲಿಟ್ಟು, ಕೃತ್ಯಕೃತ್ಯರಾಗುತ್ತಿರುವರು.

ಈ ಗಿರಿಯು ಹರಿದಾಸವರನಂತೆ ಕಾಣುತ್ತಿದೆ! ಇಲ್ಲದಿರೆ ರಾಮಕೃಷ್ಣರ ಚರಣ ರಜಸ್ಪರ್ಶನವು ಇವನಿಗೆ ಹೇಗೆ ಸಿಕ್ಕಿತು? ನೀರು, ಹುಲ್ಲು, ಕಂದರ, ಕಂದಮೂಲಗಳನ್ನಿತ್ತು ಈ ಗಿರಿರಾಜರು ಪೂಜಿಸುತ್ತಿರುವವನಲ್ಲವೇ? ಗೋವಿಂದನು ಗೋವುಗಳನ್ನು ಮೇಯಿಸುವಾಗ ಮಾಡಿದ ವೇಣುಗಾನದಿಂದ, ಶರೀರಗಳಿಗೆ ಭಕ್ತಿಪ್ರೇಮಗಳು, ಓಡುವವರಿಗೆ ನಿಶ್ಚಲತೆ, ಗಿಡಗಳಿಗೆ ಪುಲಕ ಪಲ್ಲವಗಳು, ಉಂಟಾದುವೆಂದರೆ, ಆ ಗೋವಿಂದ ಸಂಕರ್ಷಣದ ಯೋಗವೈಭವವು ಅತ್ಯದ್ಭುತವಲ್ಲವೇ?

ಎಂದು ವೃಂದಾವನ ಸುಂದರಿಯರು, ಗೋವಿಂದನ ವೇಣುಗಾನದಿ ಕ್ರೀಡೆಯನ್ನು ವರ್ಣಿಸುತ್ತಾ, ಕೃಷ್ಣಸಮರ್ಪಿತಚಿತ್ತರಾದರು.

## ೨೦. ಗೋಪಕುಮಾರೀ ಭಕ್ತಿ– ಕಾತ್ಯಾಯನೀ ವ್ರತ

ಶ್ರೀಶುಕನು ಪೇಳಿದನು–

ಕಾರ್ತಿಕಮಾಸದ ತೃತೀಯಾದಿನ, ನಂದವ್ರಜದ ಕನ್ಯೆಯರು ಕಾತ್ಯಾಯನೀ ವ್ರತವನ್ನು ಆರಂಭಿಸಿ, ಹವಿರ್ಯೋಗ್ಯ ಶುದ್ಧಾಹಾರವನ್ನುಂಡು, ಶ್ರೀಕೃಷ್ಣನು ಪ್ರೀತನಾಗಲೆಂದು ಪ್ರಾರ್ಥಿಸುತ್ತಿದ್ದರು. ಪ್ರತಿ ನಿತ್ಯವೂ ಅರುಣೋದಯದಲ್ಲೇ ಕಾಳಿಂದೀನದಿಯಲ್ಲಿ ಮಿಂದು, ಮರಳಗೌರಿಯನ್ನು ಮಾಡಿ, ಪೂಜಿಸುತ್ತಿದ್ದರು. ಗಂಧವನ್ನೂ ಅರಿಶಿನ ಕುಂಕುಮಗಳನ್ನಿತ್ತು, ಹಾರವನ್ನು ಹಾಕಿ, ಧೂಪ ದೀಪಗಳನ್ನು ಅರ್ಪಿಸಿ, ನೈವೇದ್ಯವನ್ನಿಟ್ಟು, ಪ್ರವಾಲ ಫಲ ತಾಂಬೂಲ ವಾಯನಗಳನ್ನು ಕೊಟ್ಟು, ಭಕ್ತಿಯಿಂದ ಇಂತು ಪ್ರಾರ್ಥಿಸುತ್ತಿದ್ದರು–

'ಕಾತ್ಯಾಯನಿ! ಶಿವಪ್ರಿಯೆ! ನಿನ್ನ ಮಹಿಮ ಅಗಾಧವು. ಸರ್ವೋತ್ತಮನಾದ ಶ್ರೀರಮಣನ ಪಾದಾರವಿಂದ ಸೇವೆಯನ್ನು ನಮಗೆ ಕೊಡಿಸುವ ಕರುಣೆ ಮಾಡಮ್ಮ! ನಂದಗೋಪ ಕುಮಾರನು ನಮಗೆ ಗಂಡನಾಗುವಂತೆ ಅನುಗ್ರಹಿಸು. ನಿನಗೆ ನಮಸ್ಕಾರವು!' ಎಂಬೀ ಮಂತ್ರವನ್ನು ಜಪಿಸುತ್ತಾ, ಕುಮಾರಿಯರು ಪೂಜಿಸುತ್ತಿದ್ದರು. ಇಂತು ಉಷಃ ಕಾಲದ ಸ್ನಾನ, ಪೂಜನ, ಪ್ರಾರ್ಥನಗಳಿಂದ ಒಂದು ತಿಂಗಳು ಕಳೆಯುತ್ತಾ ಬಂತು. ಒಂದು ದಿನ, ನದಿಗೆ ಬಂದು, ತೀರದಲ್ಲಿ ಉಟ್ಟವಸನಗಳನ್ನಿಟ್ಟು, 'ಕೃಷ್ಣ! ಕೃಷ್ಣ! ಬಾರೋ! ನಿನ್ನ ಮುಖಕಮಲವನ್ನು ತೋರೋ' ಎಂದು ಹಾಡುತ್ತಾ, ಹರ್ಷಿತರಾಗಿ ಹರಿಯುವ ನದಿಯಲ್ಲಿಳಿದರು.

ಶ್ರೀಕೃಷ್ಣನು ಅವರ ಮನದ ಕೋರಿಕೆಯನ್ನೀಡೇರಿಸುವ ಕರುಣೆಯಿಂದ, ವಯಸ್ಕ ಬಾಲರಿಂದ ಕೂಡಿ, ಅಲ್ಲಿಗೆ ಬಂದನು. ಅವರ ವರನಗಳನ್ನು ಕದ್ದು, ಸಮೀಪದ ನೀಪಮರವನ್ನೇರಿ, ನಗುತ್ತಾ, ಇಂತೆಂದನು–

ಬಾಲೆಯರೇ! ನಿಮ್ಮ ನಿಮ್ಮ ವಸ್ತ್ರಗಳನ್ನು ಇಲ್ಲಿಗೆ ಬಂದು ತೆಗೆದುಕೊಳ್ಳಿ, ಸತ್ಯವಾಗಿ ಹೇಳುತ್ತಿರುವೆನು, ಪರಿಹಾಸವಲ್ಲ. ವ್ರತದೀಕ್ಷಿತರಾದ ನಿಮಗೆ ಸುಳ್ಳನ್ನು ಹೇಳುವೆನೇ? ನಾನೆಂದಿಗೂ ಸುಳ್ಳನ್ನಾಡುವುದಿಲ್ಲವೆಂದು ಎಲ್ಲರಿಗೂ ಗೊತ್ತು. ಒಬ್ಬೊಬ್ಬರಾಗಿ ಬಂದು ವಸ್ತ್ರಗಳನ್ನು ಸ್ವೀಕರಿಸಿ!

ಆ ಪರಿಹಾಸ ವಚನವನ್ನಾಲಿಸಿ, ಪ್ರೇಮವು ಉಕ್ಕಿದಂತಾಗಲು, ಲಜ್ಜಾನತವದನೆಯರಾಗಿ, ಆ ಕನ್ಯೆಯರು ಪರಸ್ಪರವಾಗಿ ನೋಡಿಕೊಂಡು, ನಗುತ್ತಾ, ನೀರಿನಲ್ಲೇ ನಿಂತು ನಡುಗುತ್ತಿದ್ದರು; ಕೆಲವರು ಗೋವಿಂದನಿಗಿಂತೆಂದರು–

ನೀನು ನಂದಸುತನಲ್ಲವೇ! ನಮ್ಮ ರಾಜನ ಮಗನಾದ ನಿನ್ನಲ್ಲಿ ಗೌರವದಿಂದ ಕೇಳಿಕೊಳ್ಳುವೆವು. ಕೃಷ್ಣಾ! ನಂದವ್ರಜದಲ್ಲಿ ನಿನಗೆ ಸಮರುಂಟೇ? ನಮ್ಮ ಬಟ್ಟೆಗಳನ್ನು ಕೊಟ್ಟುಬಿಡು! ನಡುಗುತ್ತಿರುವ ನಮ್ಮಲ್ಲಿ ದಯಪುಟ್ಟದೇ? ಶ್ಯಾಮಸುಂದರ! ನಿನ್ನ ದಾಸಿಯರಲ್ಲವೇ ನಾವು? ನೀನು ಹೇಳಿದಂತೆ ಮಾಡುವೆವು. ಕೊಟ್ಟುಬಿಡು ಬಟ್ಟೆಗಳನ್ನು! ಚಳಿಯಿಂದ ನಡುಗುವ ನಮ್ಮನ್ನು ಪೀಡಿಸಬೇಡ, ಕೊಡು! ಕೊಡದಿದ್ದರೆ ನಂದರಾಜನಿಗೆ ಹೇಳುವೆನು ನೋಡು!

ಶ್ರೀಭಗವಂತನು ನುಡಿದನು–

ನೀವು ನನ್ನ ದಾಸಿಯರಾದೊಡೆ, ನನ್ನ ಮಾತಿನಂತೆ ನಡೆಯಬೇಕಲ್ಲವೇ? ಬನ್ನಿ– ನಿಮ್ಮ ಬಟ್ಟೆಗಳನ್ನು ತೆಗೆದುಕೊಂಡು ಹೋಗಿ. ಬರದಿರೆ ಬಟ್ಟೆಗಳನ್ನು ನಾನಾಗಿ ಎಂತು ಕೊಡುವೆನು? ರಾಜನಿಗೆ ಹೇಳುವಿರಾ? ಹೇಳಿ ಹೋಗಿ! ನನ್ನನ್ನವನೇನು ಮಾಡುವನು?

ಆ ಮಾತನ್ನು ಕೇಳಿ, ಶೀತವೇಪಿತರಾದ ಕುಮಾರಿಯರು, ಕೈಗಳಿಂದ ಮೈಯನ್ನು ಮುಚ್ಚಿಕೊಂಡು ದಡದಲ್ಲಿ ಬಂದು ನಿಂತರು. ಶ್ರೀಹರಿಯು ಅವರ ಮುಗ್ಧಮಧುರ ಭಕ್ತಿ ಭಾವವನ್ನು ನೋಡಿ ಪ್ರಸನ್ನನಾದನು. ವಸ್ತ್ರಗಳನ್ನು ರೆಂಬೆಗಳಲ್ಲಿಟ್ಟು, ನಸುನಗುತ್ತಾ 'ವಿವಸ್ತ್ರರಾಗಿ ನದಿಯಲ್ಲಿಳಿದುದು ಮೊದಲು ತಪ್ಪು. ವ್ರತವನ್ನು ಮಾಡುತ್ತಿರುವ ನೀವು ವಿವಸ್ತ್ರರಾಗಿ ನದೀತರುವನ ದೇವತೆಗಳಿಗೆ ಹೆದರದೆ, ನದಿಯಲ್ಲಿ ಮೀಯಲು ನೀರಿಗಿಳಿದುದು ತಪ್ಪಲ್ಲವೇ? ಆ ತಪ್ಪಿಗೆ ಪ್ರಾಯಶ್ಚಿತ್ತವಾಗಿ ತಲೆಯಮೇಲೆ ಕೈಗಳನ್ನೆತ್ತಿ ವಂದಿಸುತ್ತಾ ಬಂದು ನಾನು ಕೆಳಗೆ ಹಾಕುವ ನಿಮ್ಮ ವಸ್ತ್ರಗಳನ್ನು ಸ್ವೀಕರಿಸಿ!' ಎಂದನು. ಆಗ ಅವರು ಒಂದು ಕೈಯಿಂದ ವಂದಿಸುತ್ತಾ ಬರುವುದನ್ನು ಕಂಡು, ಧರ್ಮನನ್ನು ತಿಳಿಸಲು ಕೃಷ್ಣನಿಂತೆಂದನು–

ದೇವನಿಗೆ ಒಂದು ಕೈಯಿಂದ ವಂದಿಸುವುದು ಮಹಾಪಾಪವು. ಆ ಪಾಪದಿ ಶಿಕ್ಷೆಯು ಕರಚ್ಛೇದವೆಂದು ಧರ್ಮಜ್ಞರು ಹೇಳುವರು, ಆದ್ದರಿಂದ ನೀವು ಕೈಗಳನ್ನೆತ್ತಿ ನಮಿಸುವುದು ಒಳಿತು. ನಾನೂ ಪ್ರೀತವಾಗುವೆನು.

ಆಗ ತಾವು ವಿವಸ್ತ್ರರಾಗಿ ಸ್ನಾನ ಮಾಡಿದುದರಿಂದ ಆದ ಅಪರಾಧವನ್ನು ಕಳೆಯಲು, ಸಕಲ ಕರ್ಮಸಾಕ್ಷಿಯಾದ ಅಧೋಕ್ಷಜನಿಗೆ ಅವರು ನಮಸ್ಕರಿಸಿ, ಆತ್ಮಸಮರ್ಪಣೆಯನ್ನು ಮಾಡಿದರು. ಅದನ್ನು ಕಂಡು ಪುಂಡರೀಕಾಕ್ಷನು, ಸ್ನೇಹರೂಪ ಭಕ್ತಿಗೆ ಮೆಚ್ಚಿ, ಅವರ ಪುಟ್ಟಗಳನ್ನು ಕೊಟ್ಟು, ಸನ್ಮಾನಿಸಿದನು. ಆ ಕನ್ಯೆಯರು, ತಮ್ಮನ್ನು ವಂಚಿಸಿ, ವಸ್ತ್ರಗಳನ್ನಪಹರಿಸಿ, ಲಜ್ಜೆಗೆಡಿಸಿ, ಗೊಂಬೆಯಂತೆ ಮಾಡಿ ಆಡಿಸಿದ ಕೃಷ್ಣನನ್ನು ನೋಡಿ ಸಿಟ್ಟಾಗದೆ, ಅಸೂಯೆಯಿಲ್ಲದೆ, ಪ್ರಿಯನಾದ ಅವನ ಸಂಗದಿಂದ ಧನ್ಯರಾದೆವೆಂದು ತಿಳಿದರು. ವಸ್ತ್ರಗಳನ್ನುಟ್ಟು, ಪ್ರಿಯಕೃಷ್ಣನನ್ನು ಸಮೀಪಿಸಿ, ಚಿತ್ತಗಳಲ್ಲಿ ಅವನನ್ನಿಟ್ಟು, ಕಡೆಗಣ್ಣಿನಿಂದ ನೋಡುತ್ತಾ ನಿಂತರು. ತನ್ನ ಪಾದ ಸ್ಪರ್ಶವನ್ನಪೇಕ್ಷಿಸಿ ನಿಂತ ಕಾಂತೆಯರ ಮನವನ್ನರಿತು ಅವರ ವ್ರತಫಲಪ್ರದನಾಗಿ, ಶ್ರೀದಾಮೋದರನಿಂತು ನುಡಿದನು.

ಸಾಧ್ವಿಯರೇ! ನಿಮ್ಮ ಮನಸ್ಸಿನ ಕೋರಿಕೆಯನ್ನರಿತಿರುವೆನು. ನನ್ನ ಪೂಜೆ ವ್ಯರ್ಥವಾಗುವುದಿಲ್ಲ. ನಿಮ್ಮ ಅಭೀಷ್ಟವು ನೆರವೇರುವುದು. ನನ್ನಲ್ಲಿ ಬುದ್ಧಿಯನ್ನಿಟ್ಟವರ ಮನದಿಂದ ದುಷ್ಟಕಾಮವು ದೂರವಾಗಿ ಹೋಗುವುದು. ಅಗ್ನಿಯಲ್ಲಿ ಹುರಿದ ಬೀಜಗಳು ಅಂಕುರಿಸುವುವೇ? ಹೋಗಿ ತಪಸಿದ್ಧರಾಗಿರುವಿರಿ. ಈ ವನದಲ್ಲಿ ನಿಮಗೆ ಸಂಗವನ್ನಿತ್ತು, ನೀವು ಮಾಡಿದ ಗೌರೀ ವ್ರತವನ್ನು ಸಫಲಗೊಳಿಸುವೆನು.

ಇಂತು ನುಡಿದ ಗೋವಿಂದನ ಚರಣಾರವಿಂದವನ್ನು ಮುಟ್ಟಿ ನಮಿಸಿ, ವ್ರಜಕುಮಾರಿಯರು ಅವನನ್ನೇ ಸ್ಮರಿಸುತ್ತಾ, ಬಿಡಲಾರದೆ ಬಿಟ್ಟು ಗೋಕುಲಕ್ಕೆ ಪೋದರು.

ಮುಂದೆ ಗೋವಿಂದನು ಗೋಗೋಪಾಲರಿಂದ ಕೂಡಿ, ವೃಂದಾವನದಿಂದ ಬಲು ದೂರವಾಗಿ ಹೋದನು. ಬಲರಾಮಾದಿಗಳು ಅವನ ಹಿಂದೆ ಗೋಗಣವನ್ನು ಮೇಯಿಸುತ್ತಾ ಹೊರಟರು. ಮೇಲೆ ಬಿಸಿಲು ತಾಕದಂತೆ, ಛತ್ರಗಳನ್ನು ನೆರಳಿತ್ತು ಸಲಹುವ ತರುಗಳನ್ನು ಕಂಡು, ಕೃಷ್ಣನು ತನ್ನವರನ್ನು ನೋಡಿ ಇಂತೆಂದನು–

ಅಂಶೂ! ಚಿಕ್ಕಕೃಷ್ಣ! ಶ್ರೀರಾಮ! ಸುಬಲ! ಅರ್ಜುನ! ವಿಶಾಲರ್ಷಭ! ತೇಜಸ್ವೀ! ದೇವಪ್ರಸ್ಥ! ವರೂಥಪ! ಈ ಗಿಡಗಳನ್ನೂ ನೋಡಿರೋ! ಪರರಿಗಾಗಿಯೇ ಬದುಕುತ್ತಿರುವ ಇವು ಮಹಾನುಭಾವರೇ ಸರಿ! ತಾವು ಮಳೆಯನ್ನು, ಬಿಸಿಲನ್ನು, ಗಾಳಿಯನ್ನು, ಚಳಿಯನ್ನು, ತಲೆಬಾಗಿ ಸಹಿಸಿ,

ನಮಗೆ ಅವುಗಳ ಬಾಧೆಯಾಗದಂತೆ ಕಾಪಾಡುತ್ತಿರುವ ಹಾಗೂ ಇತರ ಸರ್ವಪ್ರಾಣಿಗಳ ಜೀವನಾಧಾರವೆನಿಸಿರುವ, ಈ ವೃಕ್ಷಜೀವನವು, ಬೇಡಿದ ಯಾಚಕರನ್ನು ಸಂತೋಷದಿಂದ ಕೊಟ್ಟು ಕಳುಹುವ ಸಜ್ಜನ ಜೀವನದಂತೆ ಧನ್ಯವಲ್ಲವೇ? ಹಣ್ಣು, ಹೂ, ಕಾಯಿ ಎಲೆ, ಬೇರು, ನಾರು, ಸೌದೆ, ಇದ್ದಿಲು, ಬೂದಿ, ಗೋಂದು, ಗಂಧ, ನೆರಳು, ಅಂಕುರ, ಧಾನ್ಯಾದಿ ಗಳಿಂದ ನಮ್ಮ ಸರ್ವಕಾಮಿತಗಳನ್ನೀವ ಇವುಗಳ ಜನ್ಮವೇ ಸಾರ್ಥಕವು. ದೇಹ ಬಂದೊಡೆ ಏನು ಪ್ರಯೋಜನ? ಪ್ರಾಣಗಳಿಂದ, ಧನದಿಂದ, ಬುದ್ಧಿಯಿಂದ, ವಚನದಿಂದ, ಪರೋಪಕಾರವನ್ನು ಮಾಡದವನ ಜನ್ಮವು ವ್ಯರ್ಥವೇ ಸರಿ.

ಇಂತು ನುಡಿದು ತನಗೆ ಚಿಗುರೆಲೆಗಳ ಮಡಿ ಹಾಸಿ, ಶಾಖಾಹಸ್ತಗಳಿಂದ ಫಲಪುಷ್ಪಗಳನ್ನು ಅರ್ಪಿಸುವ ವೃಕ್ಷಗಳನ್ನು ಸಂಭಾವಿಸುತ್ತಾ ಶ್ರೀಕೃಷ್ಣನು ಯಮುನೆಯ ದಡವನ್ನು ಮುಟ್ಟಿದನು. ಅಲ್ಲಿ ಆಕಳುಗಳಿಗೆ ನೀರು ಕುಡಿಸಿ, ಶೀತಲ ಸ್ವಚ್ಛಜಲವನ್ನು ತಾವೂ ಕುಡಿದು, ರಾಮಕೃಷ್ಣರು ವಿಶ್ರಮಿಸುತ್ತಿರಲು ಅವರನ್ನು ಸಮೀಪಿಸಿ, ಗೋಪಾಲಬಾಲರು ಇಂತು ನುಡಿದರು.

## ೨೧. ವಿಪ್ರಪತ್ನೀ ಪೂಜಾ ಸ್ವೀಕಾರ

ಶ್ರೀಶುಕನು ಪೇಳಿದನು.

ಗೋಪಾಲಬಾಲಕರು 'ಕೃಷ್ಣ! ರಾಮ! ನಮಗೆ ಹಸಿವಾಗುತ್ತಿದೆ. ಏನು ಮಾಡೋಣ' ವೆನ್ನಲು, ವಿಪ್ರಭಾರ್ಯರಲ್ಲಿ ಅನುಗ್ರಹಿಸಲು ಮನಮಾಡಿದ ಮಾಧವನು ಇಂತೆಂದನು–

ಅಲ್ಲಿ ಕಾಣಿಸುವ ಯಜ್ಞಶಾಲೆಗೆ ಹೋಗಿ, ವೇದವಾದರತರಾದ ವಿಪ್ರರು ಅಲ್ಲಿ ಬೃಹಸ್ಪತಿ ಕಥಿತವಾದ ಒಂದು ಯಜ್ಞವನ್ನು ಮಾಡುತ್ತಿರುವರು. ಬೃಹಸ್ಪತಿ ಸವನಾದಿ ಸತ್ರಯಾಗದಲ್ಲಿ ಅನ್ನದಾನವನ್ನೂ ಮಾಡಬೇಕಾದುದರಿಂದ, ನಾವು ಕಳಿಸಿರುವುದನ್ನು ತಿಳಿಸಿ, ಪೂಜ್ಯನಾದ ರಾಮಣ್ಣನಿಗೂ, ನನಗೂ ಅನ್ನವು ಬೇಕಾಗಿರುವುದೆಂದು ಯಾಚಿಸಿರಿ, ನಮ್ಮ ಹೆಸರನ್ನು ಹೇಳಿ– ಎಂದು ಹೇಳಲು ಅವರಲ್ಲಿಗೆ ಹೋಗಿ, ಕೈಜೋಡಿಸಿ, ನಮಿಸಿ, 'ಭೂಸುರರೇ! ಕೇಳಿ! ಕೃಷ್ಣನ ಆಜ್ಞೆಯಿಂದ ಬಂದಿರುವೆವು. ರಾಮನು ಕಳಿಸಲು ಬಂದ ಗೋವಳರೆಂದು ತಿಳಿಯಿರಿ. ಆಕಳ ಮೇಯಿಸುತ್ತಾ ವೃಂದಾವನದಿಂದ ಬಲುದೂರ ಬಂದ ರಾಮಕೃಷ್ಣರು ಹಸಿವೆಗೊಂಡು, ಹೇಳಿ ಕಳಿಸಿರುವರು. ಅವರಿಗೆ ಅನ್ನವನ್ನು ಕೊಡಿ. ಧರ್ಮಜ್ಞರಾದ ನಿಮಗೆ ಅನ್ನದಾನವು ಅವಶ್ಯವೆಂದು ಹೇಳಬೇಕೇ? ಅಗ್ನೀಷೋಮೀಯಗಳಲ್ಲಿ ಪಶ್ವಾಲಂಭನವಾದ ಮೇಲೂ, ಸೌತ್ರಾಮಣಿಯ ಬಿಟ್ಟನ್ಯಸವನಗಳಲ್ಲಿಯೂ ವ್ರತಸಂಗ್ರಹಣವನ್ನಾಚರಿಸಿ ದೀಕ್ಷಿತನಾದವನ ಅನ್ನವು ನಿಷಿದ್ಧವಲ್ಲ' ಎಂದು ಯುಕ್ತಿಪೂರ್ವಕವಾಗಿ ನುಡಿದ ಭಗವಂತನ ಯಾಚನೆಯನ್ನು ಮನ್ನಿಸದೆ, ಸ್ವರ್ಗಾದಿ ಕ್ಷುದ್ರಫಲಕ್ಕಾಗಿ ಕಷ್ಟಕರ ಯಜ್ಞಗಳನ್ನು ಮಾಡುವ ಆ ಮೂರ್ಖರು ಕೇಳಿಯೂ ಕೇಳದಂತೆ ಸುಮ್ಮನಿದ್ದರು. ದೇಶ, ಕಾಲ, ಪುರೋಡಾಶಾದಿ ದ್ರವ್ಯ, ಮಂತ್ರ, ತಂತ್ರ, ಋತ್ವಿಜ, ಅಗ್ನಿತ್ರಯ, ಇಂದ್ರಾದಿ ದೇವಗಣ, ಯಜಮಾನ, ಧರ್ಮ, ಸಂಕಲ್ಪ, ಫಲಗಳಿಗೊಡೆಯನು, ತತ್ತಚ್ಛಕ್ತಿಪ್ರದನು ಆದ ಭಗವಂತನನ್ನು ಮನುಜನೆಂದು ತಿಳಿದು ದುಷ್ಟ ದೇಹಾಭಿಮಾನದೂಷಿತ ಮತಿಗಳಾಗಿ ಆ ದುರ್ಮತಿಗಳು, 'ಕೊಡುವೆವು– ಇಲ್ಲ'– ಎನ್ನದೆ ಇರಲು ನೋಡಿ, ಬೇಸತ್ತು ಗೋಪಾಲಕರು ಹಿಂದಿರುಗಿ ಬಂದು ಕೃಷ್ಣನಿಗೆ ನಡೆದ ವೃತ್ತಾಂತವನ್ನು ಹೇಳಿದರು.

ಶ್ರೀಕೃಷ್ಣನು ನಸುನಕ್ಕು ಲೋಕದಲ್ಲಿ ಸಿದ್ಧವಾದ ಮಾನಿನೀ ಜನಮಾರ್ದವ ಧರ್ಮ-ಪ್ರೀತಿಗಳನ್ನು ಪ್ರಕಟಿಸಲು, ಇಂತೆಂದನು–

ಮತ್ತೆ ಹೋಗಿ ಯಜ್ಞಪತ್ನಿಯರಿಗೆ ನನ್ನ ಮತ್ತು ಅಣ್ಣನ ಪ್ರಾರ್ಥನೆಯನ್ನು ತಿಳಿಸಿ, ಬೇಕಾದಷ್ಟು ಅನ್ನಾದಿಗಳನ್ನವರು, ನನ್ನ ಪ್ರೀತಿಗಾಗಿ ಕೊಡುವರು.

ಆ ಮಾತಿನಂತೆ ಗೋವಳರು ಪತ್ನೀಶಾಲೆಯಲ್ಲಿದ್ದ ಬ್ರಾಹ್ಮಣ ಸತಿಯರಿಗೆ ನಮಸ್ಕರಿಸಿ, ವಿನಯದಿಂದ ಇಂತೆಂದರು– ಅಮ್ಮಾ! ವಿಪ್ರಸತಿಯರೇ! ಇಲ್ಲೇ ಬಂದಿರುವ ಕೃಷ್ಣನಿಂದ ಕಳಿಸಲ್ಪಟ್ಟು ಬಂದಿರುವೆವು. ಗೋವುಗಳನ್ನು ಮೇಯಿಸುತ್ತಾ, ಗೋಪಾಲರಿಂದಲು, ಬಲರಾಮನಿಂದಲು ಕೂಡಿ ಬಂದ ಗೋವಿಂದನಿಗೆ ಹಸಿವೆಯಂತೆ. ದಯಮಾಡಿ ಸಾನುಚರನಾದ ಕೃಷ್ಣನಿಗೆ ಅನ್ನವನ್ನು ತನ್ನಿ.

ಅಚ್ಯುತನು ಬಂದಿರುವನೆಂದಕೂಡಲೆ ಆ ದ್ವಿಜಸುಂದರಿಯರು, ದಿಗ್ಗನೆ ನಿಂತು, ನಮಿಸಿ, ಅವನನ್ನು ನೋಡಲು ಕುತುಕರಾಗಿ, ಮನಸ್ಸು ವಶವಾಗದೆ, ತತ್ತರಿಸಿ, ಚತುರ್ವಿಧಾನ್ನವನ್ನು ಶುದ್ಧಪಾತ್ರೆಯಲ್ಲಿಟ್ಟು, ತಲೆಯ ಮೇಲೆ ಹೊತ್ತು, ಸಮುದ್ರನನ್ನು ಸೇರಲು ಪೋಗುವ ತರಂಗಿಣಿಯರಂತೆ, ನಡೆದುಬಂದರು. ಪತಿಸುತ ಸಹೋದರ ಬಂಧುಜನರ ನಿಷೇಧವಚನವನ್ನು ಲೆಕ್ಕಿಸದೆ, ಭಗವಂತನ ಕೀರ್ತಿಶ್ರವಣವು, ಅಚ್ಯುತನ ದರ್ಶನ ಕಾರಣವೆಂದು ನಿರೂಪಿಸುವ ರೆಂಬಂತೆ, ಯಮುನೆಯ ದಡದಲ್ಲಿದ್ದ ಉಪವನವನ್ನು ಕುರಿತು ಸರಸರನೆ ಬಂದರು. ಅಲ್ಲಿ ಬಲರಾಮಾದಿ ಸಖರಿಂದ ಸಂಚರಿಸುವ ಶ್ಯಾಮಸುಂದರನನ್ನು ಚಕಿತರಾಗಿ ನೋಡುತ್ತಾ ನಿಂತರು. ಹಿರಣ್ಯಕಾಂತಿ ಪರಿವೀತನು, ಶರಣ್ಯವನ ವತ್ಸಲನು, ವನಮಾಲನು, ಧಾತು ಪ್ರವಾಲ ಬರ್ಹಾಂಚಿತ ಶೋಭಾವಿಶಾಲನು, ಮಂದಸ್ಮಿತಸುಂದರವದನನು ಆದ ಗೋವಿಂದನು ಒಂದು ಕೈಯನ್ನು ಶ್ರೀದಾಮನ ಭುಜದಲ್ಲಿಟ್ಟು, ಮತ್ತೊಂದರಿಂದ ಕಮಲವನ್ನು ಪಿಡಿದು ಅಲ್ಲಾಡಿಸುತ್ತಾ ಕರ್ಣಗಳಲ್ಲಿಟ್ಟ ಉತ್ಪಲಗಳಿಂದಲೂ, ಮುಖದ ಮೇಲೆ ಜಾರಿ ಬೀಳುವ ಮುಂಗುರುಳಿನಿಂದಲೂ, ಮನೋಹರನಾಗಿದ್ದನು. ಕರ್ಣಗಳಲ್ಲಿ ತುಂಬಿ ಕುಡಿದ ಕೃಷ್ಣ ಮಹಿಮೆಯಿಂದ ಮನವನ್ನವನಿಗಿತ್ತ ಮಾನಿನಿಯರು ಎವೆಯಿಕ್ಕದೆ ಅವನನ್ನು ನೋಡಿ, ಹೃದಯದಲ್ಲಿ ಬಚ್ಚಿಟ್ಟುಕೊಂಡು, ಆಲಿಂಗಿಸಿ, ಪ್ರಾಜ್ಞಾಲಿಂಗನವನ್ನು ಪಡೆದ ಇಂದ್ರಿಯ ವೃತ್ತಿಗಳಂತೆ ಶಾಂತನೀರವರಾಗಿ ನಿಂತರು. ಸರ್ವಾಶೆಗಳನ್ನು ಬಿಟ್ಟು, ತನ್ನನ್ನು ನೋಡುವ ದಿಕ್ಷೆಯನ್ನು ತೊಟ್ಟು, ಬಂದಿರುವ ಸುಂದರಿಯರನ್ನು ನೋಡಿ, ಗೋವಿಂದನು, ಮಂದಹಾಸವನ್ನು ಬೀರಿ, ಇಂತೆಂದನು–

ಮಾನಿನಿಯರೇ! ಕೂಡಿ. ನಿಮಗೆ ಸ್ವಾಗತವು! ನನ್ನನ್ನು ನೋಡಲು ಬಂದಿರುವುದು ನಿಮಗೆ ಯುಕ್ತವೇ ಆಗಿದೆ. ಶ್ರೀಹರಿಯೇ ಸರ್ವಶ್ರೇಯಃಕಾರಣನೆಂದರಿತ ಸುಜನರು ವಿಷಯಾಭಿಲಾಷೆಯನ್ನು ತ್ಯಜಿಸುವವರು. ಶ್ರೀಶನಲ್ಲಿ ಬಿಡದೆ, ಬೇಡದೆ, ಭಕ್ತಿಯನ್ನು ಮಾಡಿ, ಅವನೇ ಪ್ರಿಯತಮನೆಂದು ಮನಗಂಡಿರುವರು. ಅವನಿಂದ ಇಂದ್ರಿಯವ್ಯಾಪಾರ, ಅವನಿಂದ ಮನೋಬುದ್ಧಿ ಕಾರ್ಯ, ಅವನು ಕೊಟ್ಟ ದಾರಾಪತ್ಯಪತಿಧನಾದಿಗಳು ; ಅವನು ಮಾಡೆಂದು ಹೇಳಿಕೊಡಲು ನಾವು ಅವುಗಳಲ್ಲಿಡುವ ಪ್ರೀತಿ, ಅವು ಪ್ರೀತಿಜನಕವಾಗುವಂತೆ ಮಾಡುವ ನನ್ನಲ್ಲಿ ಪ್ರೀತಿಯನ್ನು ಮಾಡಿ, ನನಗಿಂತಲೂ ಪ್ರೀತಿಕರವಾದ ವಸ್ತು ಇನ್ನೊಂದಿಲ್ಲವೆಂದು ಬಂದಿರುವ ನಿಮ್ಮ ಭಕ್ತಿಯಿಂದ ಪ್ರೀತನಾಗಿರುವೆನು. ಇನ್ನು ಹೋಗಿ ನಿಮ್ಮ ಪತಿಸುತಾದಿ ಬಂಧುಗಳನ್ನು ಸಂತೈಸಿಸಿ! ಅವರೂ ನಿಮ್ಮಿಂದ ಕೂಡಿ ಪೂರ್ಣಾಹುತ್ಯಾದಿಗಳನ್ನು ಹಾಕಿ, ಯಜ್ಞಗಳನ್ನು ಮುಗಿಸಲಿ!

ಆ ಮಾತನ್ನಾಲಿಸಿ, ತರುಣಿಯರು ತಲೆಬಾಗಿ, ಕಣ್ಣೀರಿಡುತ್ತಾ ಇಂತೆಂದರು–

ಕೃಷ್ಣ! ಹೀಗೆನ್ನಬೇಡ. ಕ್ರೂರನಾಗಬೇಡ! 'ನನ್ನ ಭಕ್ತನಿಗೆ ನಾಶವಿಲ್ಲ'ವೆಂಬ ನಿನ್ನ ನುಡಿಯನ್ನು ಸತ್ಯವನ್ನಾಗಿಸು. ನಮ್ಮ ಕೈಬಿಡಬೇಡ! ನಿನ್ನ ಪಾದಮೂಲದ ತುಲಸೀಮಾಲೆಯನ್ನು ತಲೆಯ ಮೇಲಿಡುವ ಅಭಿಲಾಷೆಯೇ ನಮ್ಮನ್ನಿಲ್ಲಿ ಕರೆತಂದಿದೆ. ಗೋವಿಂದ! ಬಂಧುಜನರನ್ನು ಧಿಕ್ಕರಿಸಿ ಬಂದ ನಮ್ಮನ್ನು ಪತಿಗಳು ಸ್ವೀಕರಿಸರು, ತಂದೆಗಳು ಸಮ್ಮಾನಿಸರು. ಸೋದರರು ಸೇರಿಸರು. ಸುತಸ್ನೇಹಿತರೆಲ್ಲರೂ ತಿರಸ್ಕರಿಸುವರು. ಪ್ರಸನ್ನನಾಗು! ಕಾಲನ್ನು ಹಿಡಿದು ಬೇಡುವ ನಮ್ಮನ್ನು ಗತಿಯಾಗಿ ಸಲಹು. ಆಗ ಕೃಷ್ಣನು 'ಅಂಗನೆಯರೇ! ಪತಿಗಳು ಸಿಟ್ಟಾಗುವುದಿಲ್ಲ. ಅವರಲ್ಲಿಯು ನಿಮ್ಮಲ್ಲಿಯು ನಾನೇ ರಾಗದ್ವೇಷಾದಿನಿಯಾಮಕನಾಗಿರುವೆನೆಂದಮೇಲೆ, ದೇವತೆಗಳು ಕೂಡ ನನ್ನನ್ನು ಭಜಿಸುವವರಲ್ಲಿ ಪ್ರೀತರಾಗುವರೆಂದ ಮೇಲೆ ನಿಮ್ಮ ಪತಿಸುತಬಂಧುಗಳು ನಿಮ್ಮಲ್ಲಿ ಪ್ರೀತಿಯಿಂದಲೇ ವರ್ತಿಸುವರು. ಹೋಗಿ' ಎಂದನು. ಆದೇಶದಿಂದ, ಶ್ರೀಕೃಷ್ಣಾದೇಶದಂತೆ, ಯಜ್ಞಶಾಲೆಯನ್ನು ಸೇರಿ, ಬ್ರಾಹ್ಮಣ ವನಿತೆಯರು, ಅಸೂಯಾದಿರಹಿತರಾಗಿ ಸ್ವೀಕರಿಸಿದ ಪತಿಗಳಿಂದ ಕೂಡಿ, ಯಜ್ಞವನ್ನು ಮುಗಿಸಿದರು.

ಅವರಿಂದ ಕೂಡಿಬರಲಾಗದೆ ಪತಿಬಂಧಿತಗಳಾಗಿದ್ದ ವಿಪ್ರವನಿತೆಯೋರ್ವಳು, ಕೇಳಿದಂತೆ ಭಗವಂತನನ್ನು ಧ್ಯಾನಿಸಿ, ಭಕ್ತಿವೇಗ ವಿವಶಳಾಗಿ, ಕರ್ಮಪಾಶವನ್ನು ಕಡಿದು, ಶರೀರವನ್ನು ಬಿಟ್ಟು, ಹರಿಲೋಕವನ್ನೈದಿದಳು.

ಭಗವಾನ್ ಕೃಷ್ಣನು ಉತ್ಕೃಷ್ಟವಾದ ಅನ್ನಾದಿಗಳನ್ನು ಅನುಚರರಿಗಿತ್ತು, ತಾನೂ ಉಂಡು ತೃಪ್ತನಾದನು. ಇಂತು ಲೀಲಾಮನುಜನಾದ ಕೃಷ್ಣನು ಲೋಕದ ಬಾಲರಂತೆ ನಲಿಯುತ್ತಾ, ಗೋಗೋಪ ಗೋಪಿಯರಿಗೆ ಆನಂದವನ್ನು ತಂದನು. ಗೋವಿಂದನನ್ನು ಸೇವಿಸಿ ಬಂದ ನಿಜಪತ್ನಿಯರನ್ನು ನೋಡಿ, ಆ ವಿಪ್ರರು ಮನದಲ್ಲಿ ಪಶ್ಚಾತ್ತಾಪದಿಂದ ನೊಂದು, ಅವರನ್ನು ಪೊಗಳಿ, ತಮ್ಮ ದುರ್ಬುದ್ಧಿಯನ್ನು ತೆಗಳಿ, ಇಂತೆಂದುಕೊಂಡರು–

ಛೀ! ನಮ್ಮ ಜನ್ಮಕ್ಕೆ ಧಿಕ್ಕಾರವಿರಲಿ! ನಮ್ಮ ಬುದ್ಧಿ, ನಮ್ಮ ಆಚಾರ, ನಮ್ಮ ಬಹುಶಾಸ್ತ್ರ ಪಾಂಡಿತ್ಯ, ನಮ್ಮ ದೊಡ್ಡ ಕುಲ, ನಮ್ಮ ಕರ್ಮನಿಪುಣತೆ, ಎಲ್ಲವೂ ವ್ಯರ್ಥವೇ ಸರಿ! ಅಧೋಕ್ಷಜನ ಕರೆಯನ್ನು ಮನ್ನಿಸಿ ಪೋಗದಿದ್ದ ನಮ್ಮ ಜನ್ಮಕ್ಕೆ ಧಿಕ್ಕಾರವಿರಲಿ! ಭಗವನ್! ಕೃಷ್ಣ! ನಿನ್ನ ಬಂಧಕಶಕ್ತಿಯನ್ನು ಜ್ಞಾನಿಗಳು ತಿಳಿದು ದಾಟಲಾರರಿದು ನಿಜ. ಮನುಜರಿಗೆಲ್ಲಾ ಗುರುಗಳು, ವೇದಗಳೆಲ್ಲ ಅರಿತ ಪಂಡಿತರು ಆದ ನಾವು, ನಿನ್ನ ಮಹಿಮೆಯನ್ನರಿಯಲಾರದೆ ಪೋದೆವು. ಬ್ರಾಹ್ಮಣರಾದರೇನು? ನಮ್ಮ ತರುಣಿಯರಿಗಿದ್ದ ವಿವೇಕ, ಜಗದ್ಗುರುವಾದ ಕೃಷ್ಣನಲ್ಲಿ ಭಕ್ತಿ, ನಮಗಿಲ್ಲದೆ ಹೋದವು. ಮೃತ್ಯುಪಾಶವೆನಿಸುವ ಗೃಹಾಶ್ರಮದ ಬಂಧವನ್ನು ಬಿಡಿಸುವ ಗೋವಿಂದನನ್ನು ನಾವರಿಯಲಾಗದೆ, ಸುಮ್ಮನೆ ಕೂತೆವು. ಈ ಪತ್ನಿಯರಿಗೆ ಯಾವ ಸಂಸ್ಕಾರ? ಎಲ್ಲಿಯ ವೇದಾಧ್ಯಯನ? ಮತ್ತೆಲ್ಲಿಯ ಗುರುಕುಲ ವಾಸ? ತಪಸ್ಸೆಲ್ಲಿ? ಶೌಚಕ್ರಿಯಾ ಯಾಗಾದಿಗಳು ಇಲ್ಲವೇ ಇಲ್ಲ! ಆದರೂ ಯೋಗೇಶನಾದ ಶ್ರೀಕೃಷ್ಣನನ್ನು ಸರ್ವೋತ್ತಮನೆಂದರಿತು ದೃಢವಾದ ಭಕ್ತಿಯನ್ನು ಮಾಡಿ ಧನ್ಯರಾದರು. ನಮಗೆ ಅಂತಹ ಭಕ್ತಿಭಾಗ್ಯವು ದೊರಕಿದ್ದೂ, ದೂರವಾಯಿತು. ಮನೆಮಠವೆಂದು ಹಠದಿಂದ ನಮ್ಮ ಶ್ರೇಯವಾವುದೆಂದು ತಿಳಿಯದೆ ಮರೆತಿದ್ದ ನಮಗೆ 'ಆಹಾ! ಕರುಣಾಳು ಸ್ಮರಣೆಗೆ ತಂದು ಕೊಟ್ಟರೂ, ಗೋಪವಚನವೆಂದು ಧಿಕ್ಕರಿಸಿ ಪಾಪ ಮಾಡಿದೆವಲ್ಲ! ಪೂರ್ಣಕಾಮನಾದ ನಾರಾಯಣನಿಗೆ, ಮೋಕ್ಷಾದಿ ಸಕಲ

ಪುರುಷಾರ್ಥಪ್ರದನಾದ ಶ್ರೀಶನಿಗೆ ನಮ್ಮಿಂದ - ನಾವು ಕೊಡುವ ಅನ್ನಾದಿಗಳಿಂದ ಪ್ರಯೋಜನವು ಉಂಟೇ? ಈಶಾ! ಏನು ನಿನ್ನ ವಿಡಂಬನೇ! ಹರೇ! ನಿನ್ನ ಪಾದಸ್ಪರ್ಶವನ್ನು ಕೋರಿ ಶ್ರೀರಮಣಿಯು, ತನ್ನ ಭಜಿಸುವರ ಕಡೆ ನೋಡದೆ ಸ್ವಭಾವ ಚಾಂಚಲ್ಯವನ್ನು ತೊರೆದು ನಿನ್ನ ವಕ್ಷದಿ ಮನೆಮಾಡಿ ನಿಂತಿರುವಳು. ಅಂತಹ ಲಕ್ಷ್ಮೀರಮಣನು ಯಾಚಿಸಿದನೆಂದರೆ, ಅದು ನಿನ್ನ ಜನ ಮೋಹಕಲೀಲೆ ಯಲ್ಲವೇ? ದೇಶಕಾಲ ದ್ರವ್ಯಮಂತ್ರತಂತ್ರ ಯಜಮಾನ ದೇವತಾಕರ್ಮಧರ್ಮಫಲ ಪ್ರಮುಖ ಪದಾರ್ಥ ನಿಯಾಮಕನಾದ ಸರ್ವೋತ್ತಮ ನಾರಾಯಣನು ಭೂಮಿಯಲ್ಲಿ ಪುಟ್ಟಿರುವನೆಂದು ಕೇಳಿಯೂ ಕಿವುಡರಾದೆವು. ಇಂದು ನೋಡಿಯೂ ಕುರುಡರಾದೆವು! ಕೃಷ್ಣಾ! ಸರ್ವಜ್ಞಾ! ನಿನ್ನ ಬಂಧಕಶಕ್ತಿಯು ನಮ್ಮನ್ನು ಕರ್ಮಮಾರ್ಗದಲ್ಲಿ ಅಲೆಯುವಂತೆ ಮಾಡುತ್ತಿದೆ. ನಿನಗೆ ನಮಸ್ಕಾರ. ಆದಿಪುರುಷನಾದ ನಿನ್ನ ಮಹಿಮೆಯನ್ನರಿಯದ ನಮ್ಮ ಅಪರಾಧವನ್ನು ನೀನೇ ಕ್ಷಮಿಸು!

ಇಂತು ಪಶ್ಚಾತ್ತಾಪದಿಂದ ನೊಂದು ಶ್ರೀಕೃಷ್ಣನನ್ನು ನೋಡಬೇಕೆಂದ ಬ್ರಾಹ್ಮಣರು, ಮತ್ತೆ ಕಂಸನ ಭಯದಿಂದ ಮನೆಯಲ್ಲೇ ಕದಲದೆ ನಿಂತರು.

## ೨೨. ಇಂದ್ರಯಾಗ ಭಂಗ

ಶ್ರೀಶುಕನು ಪೇಳಿದನು–

ವೃಂದಾವನದಲ್ಲಿರುತ್ತಾ ಒಂದು ದಿನ ಇಂದ್ರಯಾಗ ಪ್ರಯತ್ನದಲ್ಲಿ ಗೋಪಾಲಕರನ್ನು ಕಂಡು ಶ್ರೀಕೃಷ್ಣನು, ಸರ್ವಜ್ಞನಾದರೂ, ಸರ್ವಾಂತರ್ಯಾಮಿಯಾದರೂ – ತೋರಗೊಡದೆ, ನಂದಾದಿಗಳನ್ನು ನೋಡಿ, ಇಂತೆಂದನು–

ತಂದೆಯೇ! ಏನೀ ಸಂಭ್ರಮ! ಯಜ್ಞವನ್ನು ಮಾಡುವಂತಿದೆ; ಯಾರನ್ನು ಕುರಿತು ಯಾವ ಫಲಕ್ಕಾಗಿ ಈ ಯಜ್ಞ? ಯಜ್ಞದ್ರವ್ಯಗಳಾವುವು? ಸಾಧುಗಳು ಸರ್ವಾತ್ಮನಾ ಜನರಿಗೆ ತಿಳಿಸದೆ ಬಚ್ಚಿಡುವ ವಿಷಯಗಳುಂಟೇ? ಕೇಳಬೇಕೆಂದು ನನಗೆ ಕುತೂಹಲವಾಗಿದೆ. ಸಾಧುಗಳಿಗೆ ಸ್ವಪರ ವಿಷಮ ಬುದ್ಧಿಯಿಲ್ಲ. ತನ್ನದೆಲ್ಲ ಒಳ್ಳೆಯದು – ಪರರದೆಲ್ಲ ಕೆಡುಕೆಂಬ ಪಕ್ಷಪಾತವಿಲ್ಲದೆ ಅವರು ಮಿತ್ರಶತ್ರುಗಳನ್ನು ಅವರ ಯೋಗ್ಯತೆಯಂತೆ ಅರಿತು ವರ್ತಿಸುವರು. ಶತ್ರುಗಳಂತೆಯೇ ಉದಾಸೀನರನ್ನೂ ವರ್ಜಿಸಿ, ಮಿತ್ರರನ್ನು ಆತ್ಮೀಯತೆಯಿಂದ ಕಾಣುವರು. ನಾನು ಮಿತ್ರನೆಂದ ಮೇಲೆ, ನನಗೆ ಹೇಳದೆ ಬಚ್ಚಿಡುವ ಅಗತ್ಯವಿಲ್ಲ. ಅಜ್ಞಾನದಿಂದ ಕರ್ಮಾಚರಣೆಯನ್ನು ಮಾಡುವವನಿಗೆ ಪೂರ್ಣಫಲವೂ ಸಿಗಲಾರದು. ತಿಳಿದು ಜ್ಞಾನದಿಂದ ಮಾಡಿದ ಕರ್ಮವು ಫಲಕಾರಿಯಾಗುವುದು. ದೇವತಾಕರ್ಮಗಳನ್ನು ತಿಳಿಯಲು, ಮೊದಲು ಕರ್ಮಪ್ರಕಾರವನ್ನು ತಿಳಿಯುವುದೊಳಿತು. ಈ ಯಾಗವು ವೃದ್ಧರು ಮಾಡಿರುವುದರಿಂದ ಪರಂಪರೆಯಾಗಿ ಬಂದದ್ದೋ? ಅಥವಾ ಅರ್ಥವಿಲ್ಲದೆ ಸುಮ್ಮನೆ ಮಾಡುವುದೋ? ಹೇಳಿ– ಎಂದ ಕೃಷ್ಣನಿಗೆ ನಂದನಿಂತು ನುಡಿದನು–

ಇಂದ್ರನು ಪರ್ಜನ್ಯನೆನಿಸಿ ಮೇಘಾಧಿಪತಿಯಾಗಿರುವನು. ಮೇಘಗಳೇ ಅವನಿಗೆ ಪ್ರತಿಮೆ ಯಂತೆ ದೇಹವಾಗಿದೆ. ಮೇಘಗಳಿಂದಲೇ ಪ್ರಾಣಿಗಳಿಗೆ ಜೀವನವೆನಿಸಿದ ನೀರು ಸಿಗುತ್ತಿದೆ.

ಆದ್ದರಿಂದ ನಾವೂ, ಎಲ್ಲ ಗೋಪಾಲರಂತೆಯೇ, ಮೇಘನಿಯಮಾಕನಾದ ಇಂದ್ರನನ್ನು, ಅವನಿತ್ತ ನೀರಿನಿಂದ ಬೆಳೆದ ದ್ರವ್ಯಗಳಿಂದ ಯಜ್ಞಗಳಲ್ಲಿ ಪೂಜಿಸುತ್ತಾ ಬಂದಿರುವೆನು. ಈ ಯಜ್ಞವನ್ನು ಮಾಡುಲು ಮರೆತರೆ – ಇಂದ್ರನು ತಪ್ಪದೆ ದಂಡಿಸುವನು. ಧರ್ಮಾರ್ಥಕಾಮ ಸಮೃದ್ಧಿಯು ಪರ್ಜನ್ಯನಿಂದಲೇ ಆಗುತ್ತಿದೆ. ಪಾರಂಪರ್ಯವಾಗಿ ಬಂದ ಈ ಯಾಗವನ್ನು, ವಿಷಯಾಶೆಯಿಂದಲೋ, ಲೋಭದಿಂದಲೋ, ರಾಜಭಯದಿಂದಲೋ ಬಿಟ್ಟವನಿಗೆ ಕ್ಷೇಮ ವಿಲ್ಲ.

ನಂದನ ವಚನವನ್ನಾಕರ್ಣಿಸಿ, ಇತರ ಗೋಪಾಲರ ಮಾತನ್ನೂ ಮನ್ನಿಸಿ ಶ್ರೀಕೃಷ್ಣನು ತಂದೆ ಯನ್ನು ನೋಡಿ ಇಂತೆಂದನು. ಆ ವನಜನಾಭನ ವಚನಗಳು ವಜ್ರಧರನಿಗೆ ಅಸಮಾಧಾನವನ್ನು ತರುವಂತಿದ್ದವು.

ಶ್ರೀಕೃಷ್ಣನು ಹೇಳಿದನು–

ಕರ್ಮದಿಂದ ಹುಟ್ಟಿ, ಕರ್ಮದಿಂದಲೇ ಸಾಯುವ ಜೀವನು ಸುಖದುಃಖ ಭಯ ಕ್ಷೇಮ ಗಳನ್ನೂ ಕರ್ಮಾನುಸಾರವಾಗಿಯೇ ಹೊಂದುತ್ತಿರುವನು. ಕರ್ಮವು ಜಡವಾದರೂ ಕರ್ಮ ಪ್ರೇರಕನು ಫಲಪ್ರದನು ಆದ ಈಶ್ವರನು ಕರ್ಮವನ್ನು ನೋಡಿಯೇ ಫಲವನ್ನು ಕೊಡುವನು. ಕರ್ಮವೇ ಮಾಡದವನಿಗೆ ಫಲವನ್ನು ಯಾವ ಈಶ್ವರನು ಕೊಡಬಲ್ಲನು? ತಮ್ಮ ತಮ್ಮ ಕರ್ಮಫಲವನ್ನು ಭುಜಿಸುವ ಜೀವರಿಗೆ ಅಸ್ವತಂತ್ರನು, ಕರ್ಮವಿರುದ್ಧ ಫಲದಾನಾಸಮರ್ಥನು, ಆದ ಇಂದ್ರನಿಂದ ಪ್ರಯೋಜನವಿಲ್ಲ. ಜನರು ಸ್ವಭಾವವನ್ನನುಸರಿಸಿ ಕರ್ಮಗಳನ್ನು ಮಾಡು ವರು. ಸ್ವಭಾವವೇ ಸರ್ವಪ್ರಧಾನಕಾರಣವಾಗಿದೆ. ನಿರ್ದೋಷನು, ಸ್ವತಂತ್ರನು, ಶಶ್ವದೇಕಪ್ರಕಾರ ನಾದವನೇ ಈಶ್ವರನೆನಿಸುವನು. ಇಂದ್ರನಂತಹವನಲ್ಲ. ಅವನಿಗೆ ಸತ್ತ್ವಾದಿಗುಣ ಕೃತ ವಿಕಾರವಿದೆ. ಅವನೂ ಕರ್ಮಫಲವನ್ನು ಅನುಭವಿಸುತ್ತಾನೆ. ತ್ರಿಲೋಕೇಶನಾದರೂ ಸರ್ವೋತ್ತಮನಲ್ಲ. ಕರ್ಮಪ್ರೇರಕನಾದ ಸರ್ವೋತ್ತಮನು ಕರ್ಮಫಲ ಭೋಜಿಯಲ್ಲ. ಸ್ವಭಾವವಿರುದ್ಧ ಕರ್ಮಫಲ ವನ್ನವನೆಂದಿಗೂ ಕೊಡುವುದಿಲ್ಲ. ದೇಹಿಗಳಿಗೆ ಜೀವನದಲ್ಲಿ ಶತ್ರುಮಿತ್ರೋದಾಸೀನರು ಕರ್ಮ ದಿಂದಲೇ ಸಿಗುವರು. ಆದ್ದರಿಂದ ಸ್ವಭಾವವನ್ನರಿತು ಸ್ವವಿಹಿತ ಕರ್ಮಾಚರಣವನ್ನು ಮಾಡುವರು. ಅದಕ್ಕೆ ತಕ್ಕ ಫಲವನ್ನು ಪೊಂದುವನು. ಶತ್ರುತ್ವ ಮಿತ್ರತ್ವಗಳು ಅಂತರ್ಯಾಮಿನಿಯತವಾಗಿದೆ. ನಾವು ಒಳ್ಳೆಯ ಕರ್ಮವನ್ನು ಮಾಡುವುದರಿಂದಲೇ ಅವನು ಪ್ರೀತನಾಗುವನೆಂದ ಮೇಲೆ ಇಂದ್ರನಿಂದ ನಮಗೇನು ಕೆಲಸ? ಕರ್ಮಸ್ವಭಾವಗಳೇ ನಮ್ಮ ದೇವರು. ಕರ್ಮಸ್ವಭಾವ ಇಂದ್ರ ವಿಘ್ನೇಶನಾಮಗಳಿಂದ ಆ ಸರ್ವೋತ್ತಮನೇ ಕರೆಯಲ್ಪಟ್ಟು, ತತ್ತಚ್ಛಕ್ತಿಪ್ರದನಾಗಿರುವನು.

ಬ್ರಾಹ್ಮಣರು ವೇದವಿಹಿತ ಯಾಗ ತಪಶ್ಚರ್ಯೆಗಳಿಂದಲು, ರಾಜರು ಭೂಜನ ರಕ್ಷಣ ದಿಂದಲು, ವೈಶ್ಯರು ಕೃಷ್ಯಾದಿ ವಾರ್ತೆಯಿಂದಲೂ, ಶೂದ್ರರು ದ್ವಿಜಸೇವನದಿಂದಲು, ನಡೆಯುವು ದೊಳಿತು. ಕೃಷಿ, ಗೋರಕ್ಷೆ, ವಾಣಿಜ್ಯ, ಕುಸೀದಗಳೆಂಬ ನಾಲ್ಕು ವಿಧ ವಾರ್ತೆಗಳಲ್ಲಿ, ನಾವು ಗೋರಕ್ಷಾತತ್ಪರರಾಗಿರುವೆವು. ತ್ರಿಗುಣಗಳಲ್ಲಿ ರಜೋಗುಣದಿಂದಲೇ ಜಗವು ಹುಟ್ಟುತ್ತದೆ. ರಜೋಗುಣದಿಂದ ಜಗವನ್ನು ರಂಜಿಸುವ ಸೃಷ್ಟಿಕರ್ತನ ಪ್ರೇರಣೆಯಿಂದ ಮೇಘಗಳು ಮಳೆಗರೆಯುತ್ತಿವೆ. ಮಳೆಯಿಂದ ಅಂಕುರಾದಿಗಳು, ಅವುಗಳಿಂದ ಜನರ ಜೀವನವು ಸಿದ್ಧವಾಗು ತ್ತಿರಲು, ಇಂದ್ರನಿಂದ ನಮಗೆ ಆಗುವ ಉಪಕಾರವಾದರೂ ಯಾವುದು? ನಾವೇನು ಪಟ್ಟಣ ಗ್ರಾಮ ಪಲ್ಲೀ ನಿವಾಸಿಗಳೇ? ಅಲ್ಲ. ವನದಲ್ಲಿದ್ದು, ಕಂದರಗಳಲ್ಲಿ, ಗಿರಿಗಳಲ್ಲಿ ಹುಲ್ಲಿಗಾಗಿ

ತಿರುಗವವ ಗೋಗಣಪಾಲಕರು ನಾವು. ಒಂದು ಸಿದ್ಧಾಂತವನ್ನವಲಂಬಿಸಿ ಬಂದು, ಅದನ್ನು ಬಿಟ್ಟು, ಮತ್ತೊಂದು ರೀತಿಯಾಗಿ ನಡೆಯವುದು ಕ್ಷೇಮಕರವಲ್ಲ. ನಾವು ಬ್ರಾಹ್ಮಣಗೋಗಣ, ಗಿರಿಕಂದರಗಳ ದಯದಿಂದ ಬದುಕುವವರು. ನಮಗೆ ಅವರೇ ಪೂಜನೀಯರಾಗಲಿ ಇಂದ್ರನಲ್ಲ, ಇಂದ್ರಯಾಗವನ್ನು ಮಾಡಲು ತಂದ ಸಂಭಾರಗಳಿಂದ ಗೋಬ್ರಾಹ್ಮಣಗಿರಿ ಪೂಜನವನ್ನು ಮಾಡುವುದು ನನಗೆ ಸಮ್ಮತವು. ತೊವ್ವೆ, ಪಾಯಸ, ಗೋಧಿಯ ಪರಮಾನ್ನ, ಅಪೂಪ, ಚಕ್ಕುಲಿಗಳನ್ನು ತಯಾರಿಸಿ, ದಧಿಕ್ಷೀರಘೃತಗಳನ್ನು ತರಿಸಿ, ಅಗ್ನಿಗಳಲ್ಲಿ ಆಹುತಿಯನ್ನಿತ್ತು, ಬ್ರಾಹ್ಮಣರಿಗೆ ಮೃಷ್ಟಾನ್ನವನ್ನು ಕೊಟ್ಟು, ದಕ್ಷಿಣೆಯನ್ನೂ ಸಮರ್ಪಿಸಿ, ಗೋದಾನವನ್ನು ಮಾಡಿ, ಚಂಡಾಲ ಪತಿತ ದೀನಜನರಿಗೂ ಅನ್ನವನ್ನಿತ್ತು. ಶ್ವಾನಾದಿ ಜಂತುಗಳಿಗೂ ಉಚ್ಛಿಷ್ಟದಿಂದ ತೃಪ್ತಿಪಡಿಸಿ, ಗೋವುಗಳಿಗೆ ಹಸಿಯ ಹುಲ್ಲನ್ನಿತ್ತು ಅಲಂಕರಿಸಿ, ಗೋವರ್ಧನಗಿರಿಗೆ ಬಲಿಯನ್ನು ರಾಶಿಯಾಗಿಟ್ಟು ಸಮರ್ಪಿಸಿ, ಪ್ರದಕ್ಷಿಣೆಯನ್ನು ಮಾಡೋಣ! ಗೋ ವಿಪ್ರಯಜ್ಞಪುರುಷ ಪರ್ವತಗಳಿಗೆ ವಂದಿಸಿ, ನಾವೂ ಸಿಂಗರಿಸಿಕೊಂಡು, ಉಂಡು, ಉತ್ಸವವನ್ನು ಮುಗಿಸಿ ನಲಿಯೋಣ! ಇದು ನನ್ನ ಅಭಿಪ್ರಾಯ. ನಿಮಗೆ ಸಮ್ಮತವಾದರೆ ಈ ಗೋಬ್ರಾಹ್ಮಣ ಗೋವರ್ಧನ ಗಿರಿಪೂಜೆಯನ್ನೇ ಮಾಡೋಣ.

ರಾಜನ್! ಇಂದ್ರಗರ್ವಾಪಹಾರವನ್ನು ಮಾಡಲಿಚ್ಛಿಸಿ ನುಡಿದ ಅಚ್ಯುತನ ಮಾತಿನಂತೆ ನಡೆಯಲು ನಿಶ್ಚಯಿಸಿ, ನಂದಾದಿಗಳು ಗೋಗಿರಿಪೂಜೆಯನ್ನು ಮಾಡಲು ಪ್ರಾರಂಭಿಸಿದರು. ಕಾಲ ನಿಯಮಾಕನಾದ ಶ್ರೀಹರಿಲೀಲೆಯು ಅತ್ಯಾಶ್ಚರ್ಯಕರವಲ್ಲವೇ? ಸ್ವಸ್ತಿವಾಚನವನ್ನು ಮಾಡಿ, ಗೋವಿಪ್ರಗಿರಿಗಳನ್ನು ಪೂಜಿಸಿದ ನಂದಾದಿಗಳು ಬಲಿರಾಶಿಯನ್ನಿಟ್ಟು, ಗೋವುಗಳನ್ನು ಹಿಂಬಾಲಿಸಿ ನಡೆಸುತ್ತಾ, ಗೋವರ್ಧನಗಿರಿಯನ್ನು ಸುತ್ತಿ ಬಂದರು. ಎತ್ತಿನ ಗಾಡಿಗಳಲ್ಲಿ ಕೂತು, ಕೃಷ್ಣಯಶೋಗಾನವನ್ನು ಮಾಡುತ್ತಾ, ಗೋಪವನಿತೆಯರು ಸುತ್ತಿಬಂದು, ವಿಪ್ರರಿಗೆ ವಂದಿಸಿ, ಅವರ ಆಶೀರ್ವಾದಗಳನ್ನು ಪಡೆದರು. ಕೃಷ್ಣನು ಮತ್ತೊಂದು ಗಿರಿರಾಜ ರೂಪದಿಂದ ನಿಂತು, 'ನಾನೇ ಗೋವರ್ಧನನು, ನಿಮ್ಮ ಬಲಿದಾನದಿಂದ ಪ್ರೀತನಾಗಿರುವೆ'ನೆಂದು ನುಡಿದು, ಬಲಿರಾಶಿಯನ್ನೆಲ್ಲ ಭಕ್ಷಿಸಿದನು. ತಾನೂ ನಂದಾದಿ ಗೋಪರಿಂದ ಕೂಡಿ 'ಅಹೋ! ನೋಡಿ! ನೋಡಿ! ಗೋವರ್ಧನಗಿರಿಯು ರೂಪುಗೊಂಡು ನಿಂತು, ನಮ್ಮ ಅನ್ನರಾಶಿಯನ್ನುಂಡು ಪರಮಾನುಗ್ರಹವನ್ನು ಮಾಡಿರುವುದು! ಇವನು ಕಾಮರೂಪಿಯಾಗಿ ವನದಲ್ಲಿದ್ದು, ತನ್ನನ್ನು ತಿರಸ್ಕರಿಸುವವನನ್ನು ಸದೆಬಡಿಯುವನು. ನಮಗೂ, ನಮ್ಮ ಗೋಗಣಗಳಿಗೂ ಕ್ಷೇಮವನ್ನು ಮಾಡೆಂದು ಬೇಡಿ. ಗೋವರ್ಧನಗಿರಿರಾಜನಿಗೆ ನಮಸ್ಕಾರ ಮಾಡೋಣ' ಎಂದು ಹೇಳುತ್ತಾ, ತನಗೆ ತಾನೇ ವಂದಿಸಿ, ಅವರಿಂದ ಗೋವರ್ಧನೋತ್ಸವವನ್ನು ಮಾಡಿಸಿ, ವೃಂದಾವನವನ್ನು ಸೇರಿದನು.

## ೨೩. ಗೋವರ್ಧನೋದ್ಧಾರ

ಶ್ರೀಶುಕನು ಪೇಳಿದನು–

ಆಗ ಇಂದ್ರನು, ಕೃಷ್ಣನ ವಚನವನ್ನು ನಂಬಿ ತನ್ನ ಯಾಗವನ್ನು ಬಿಟ್ಟ ಗೋಪಾಲಕರನ್ನು ನೋಡಿ, ಕುಪಿತನಾದನು. ಪ್ರಳಯದಲ್ಲಿ ಮಳೆಗರೆದ ಸಾಂವರ್ತಕ ಮೇಘಗಣವನ್ನು ಕರೆದು ಆ ಮೇಘದೇವತೆಗಳಿಗಿಂತೆಂದನು, ದೈತ್ಯಾವೇಶದಿಂದ ನಾನೇ ದೇವನೆಂದು ಬಗೆದು, ಇಂದ್ರನು

'ಕಾಡುಗೊಲ್ಲರಿಗೆ ಇಷ್ಟು ಮದವೇ? ಮನುಜನಾದ ಕೃಷ್ಣನು ಬಲದಿಂದ ಕೊಬ್ಬಿ, ದೇವತಾ ಹೇಲನವನ್ನು ಮಾಡಿರುವರಲ್ಲ! ಕರ್ಮಮಯವಾದ ಒಡಕು ಹಡಗಿನಲ್ಲಿ ಕೂತು, ಬ್ರಹ್ಮಜ್ಞಾನ ವೆಂಬ ಕರ್ಣಧಾರವಿಲ್ಲದೆ, ಭವಸಾಗರವನ್ನು ದಾಟುವ ದಡ್ಡರಂದೆ, ಈ ಗೋಪಾಲಕರು ವಾಚಾಲನು, ಮಾನವಿಶಾಲನು, ಮತ್ತನು, ಪಂಡಿತಮಾನಿಚಿತ್ತನು, ಮರ್ತ್ಯನು ಆದ ಕೃಷ್ಣನನ್ನಾ ಶ್ರಯಿಸಿ, ದುರ್ಮದರಾಗಿ, ನನಗೆ ಅಪ್ರಿಯವನ್ನು ಮಾಡಿರುವ ಈ ಶ್ರೀಮದಾಂಧರು ಕಣ್ತೆರೆಯು ವಂತೆ ಶಿಕ್ಷಿಸದೇ ಬಿಡುವೆನೇ? ನೀವು ಈಗಲೇ ಹೋಗಿ ಗೋಕುಲವನ್ನು ಮಳೆಯಿಂದ ನಾಶವಾಗು ವಂತೆ ಮಾಡಿ! ಗೋವುಗಳು ಹಾಳಾಗಲಿ! ನಾನೂ ಐರಾವತವನ್ನೇರಿ, ವ್ರಜವನ್ನು ಸೇರಿ, ನೀವು ಬಿರುಗಾಳಿಯಿಂದ ಹಾಳುಮಾಡಿದ ಗೋಕುಲವನ್ನು ನೋಡಿ, ತುಷ್ಟನಾಗುವೆನು.

ಇಂತು ಹೇಳಿ, ಸಂಕೋಲೆಯನ್ನು ಬಿಚ್ಚಿ ಕಳುಹಲು, ಪ್ರಳಯಕಾಲ ಮೇಘಗಳು, ಜಲ ಸ್ತಂಭರಹಿತವಾಗಿ ಮಳೆಯಿಂದ ಗೋಕುಲವನ್ನು ಪೀಡಿಸಲಾರಂಭಿಸಿದವು, ಮಿಂಚುಗಳು ಖಡ್ಗ ಗಳಂತೆ ಹೊಳೆದುವು. ಸಿಡಿಲು ವಜ್ರದಂತೆ ಬಡಿಯಿತು. ಗುಡುಗು ಭಯಂಕರವಾಯಿತು. ಬಿರು ಗಾಳಿ ಜೋರಾಗಿ ಬೀಸಿತು. ಆಣೆಕಲ್ಲುಗಳುದುರಿದವು. ಗಾಡಿಯ ಇರುಸಿನಷ್ಟು ದಪ್ಪವಾದ ನೀರಿನ ಧಾರೆ ಸುರಿಯಲು, ಭೂಮಿ ಎಲ್ಲವೂ ಸಮವಾಗಿ, ಕಾಲುವೆಗಳು ಹರಿದವು; ಗಾಳಿ ಮಳೆ ಚಳಿಗಳನ್ನು ತಡೆಯಲಾಗದೆ, ಗೋಗೋಪ ಗೋಪಿಯರು, ಗೋವಿಂದನಿಗೆ ಶರಣಾಗತ ರಾದರು. ತಲೆಯನ್ನೂ ಮಕ್ಕಳನ್ನೂ ಎದೆಗೆ ಅವಚಿಕೊಂಡು, ನಡುಗುತ್ತಾ 'ಕೃಷ್ಣ! ಕೃಷ್ಣ! ನಿನ್ನನ್ನು ನಂಬಿ ನಿಂತ ಗೋಕುಲವನ್ನು ಕುಪಿತನಾದ ಸುರೇಶನಿಂದ ರಕ್ಷಿಸು' ಎಂದು ಮೊರೆಯಿಟ್ಟರು. ಆಕಾಲದ ಮಳೆಯನ್ನು ಕಂಡು, ಇಂದ್ರಕೋಪವನ್ನರಿತು, ಸರ್ವೇಶನಾದ ಕೃಷ್ಣನು, ಸ್ವರೂಪ ಸಾಮರ್ಥ್ಯದಿಂದ, ಅವರ ಕಷ್ಟವನ್ನು ನಿವಾರಿಸುವೆನೆಂದು ನಿಶ್ಚಯಿಸಿದನು; ಇಂದ್ರನ ಅಜ್ಞಾನ ವನ್ನೂ ಕಳೆಯಲು ಸಂಕಲ್ಪಿಸಿದನು. 'ತನ್ನ ಭಕ್ತರಾದ ಸುರರಿಗೆ ದುರಹಂಕಾರವು ಯುಕ್ತವಲ್ಲ; ಸಜ್ಜನರಿಗೆ ಮದಮತ್ತರಾದಾಗ ಶಿಕ್ಷೆಯನ್ನೀಯುವುದರಿಂದ ಅವರು ಸ್ವಭಾವಶಾಂತರಾಗುವರು. ತನ್ನನ್ನು ನಂಬಿದ ಗೋಕುಲವೂ ಉಳಿಯುವುದು. ಭಕ್ತರಕ್ಷಣವೇ ತನ್ನ ವ್ರತದೀಕ್ಷೆ' ಎಂದು ನಿಶ್ಚಯಿಸಿ, ಕೃಷ್ಣನು ಒಂದು ಕೈಯಿಂದ ಗೋವರ್ಧನಗಿರಿಯನ್ನು ಸಮೂಲವಾಗಿ ಕಿತ್ತಿದನು; ಲೀಲೆಯಾಗಿ ಛತ್ರಾಕದಂತೆ ಅನಾಯಾಸವಾಗಿ ಮೇಲಕ್ಕೆತ್ತಿ ಪಿಡಿದು, ಗೋಪಾಲರನ್ನು ಕೂಗಿ ಕರೆದಿಂತೆಂದನು –

ಈ ಗಿರಿಗರ್ತದಲ್ಲಿ ಸುಖವಾಗಿದ್ದೆಡೆ, ಎಲ್ಲರೂ ಬನ್ನಿ! ಗೋವುಗಳನ್ನೂ, ಧನ ವಸ್ತ್ರಾದಿ ಗಳನ್ನೂ ತನ್ನಿ! ಭಯಪಡಬೇಡಿ! ನನ್ನ ಕೈಯಿಂದ ಪರ್ವತವು ಜಾರಿ ಬೀಳುವುದಿಲ್ಲ, ವಾತವರ್ಷ ಭಯದಿಂದ ದೂರರಾಗಿ, ಇಲ್ಲಿ ಸುಖವಾಗಿರಿ!

ಆ ಮಾಧವನ ಮಾತಿನಂತೆ ಗೋಪಾಲಕರೆಲ್ಲರೂ ತಂಡುಲಾದಿ ಸಂಭಾರಗಳನ್ನು ಗೋವು ಗಳನ್ನು ಕೂಡಿಬಂದು, ಹಸಿವೆ ನೀರಡಿಕೆಗಳನ್ನು ಮರೆತು, ಹರಿದಯದಿಂದ, ಶಯನಾಸನಾದಿ ಸುಖಾಪೇಕ್ಷೆಯನ್ನೂ ಬಿಟ್ಟು, ಕೃಷ್ಣನನ್ನು, ಅವನು ಪೊತ್ತ ಗಿರಿಯನ್ನು ನೋಡುತ್ತಾ ಏಳು ದಿನ ಸುಖವಾಗಿದ್ದರು. ಕೃಷ್ಣನ ಮಹಿಮೆಯಿಂದ ನಿರಪಾಯರಾಗಿದ್ದ ನಂದಾದಿಗಳನ್ನು ನೋಡಿ, ಇಂದ್ರನು, ದರ್ಪವನ್ನು ಬಿಟ್ಟು, ಮೇಘಗಳನ್ನು ಕಳಿಸಿಬಿಟ್ಟನು. ಮಳೆಯೊಡನೆ ಇಂದ್ರನ ಗರ್ವವೂ ನಿಂತಿತು, ಮೇಘದಂತೆ ಶಕ್ರನ ಮುಖವು ಬಿಳುಚು ಹರಿಯಿತು. ವಾತವರ್ಷಗಳಂತೆ ಗೋಕುಲದ ಕಷ್ಟವು ದೂರವಾಯಿತು. ಸೂರ್ಯನೊಡನೆ ಹೊರಬಂದ ಗೋಪಾಲಕರು,

ಶ್ರೀಕೃಷ್ಣಾಜ್ಞೆಯನ್ನು ಪಾಲಿಸಿ, ಗೋಧನ ವಸ್ತುಗಳನ್ನು ಗೋಕುಲದಲ್ಲಿ ಸೇರಿಸಿದರು. ಭಗವಂತನು ಆ ಶೈಲವನ್ನು ಯಥಾಪ್ರಕಾರವಾಗಿಟ್ಟು, ಬಂದು ನಂದಾದಿಗಳನ್ನು ಸಂತೈಸಿದನು. ಅವನು ಅವನನ್ನಪ್ಪಿ, ಹರಸಿ, ಪೊಗಳಿದರು. ಗೋಪಿಯರು ಪ್ರೇಮದಿಂದ ಕೃಷ್ಣನನ್ನು ದಧ್ಯಕ್ಷತ ಫಲಪುಷ್ಪಜಗಳನ್ನರ್ಪಿಸಿ, ಪೂಜಿಸಿ, ಆಶೀರ್ವದಿಸಿದರು. ಯಶೋದಾ ರೋಹಿಣೀ ರಾಮನಂದಾದಿಗಳ ಆನಂದವು ಮುಗಿಲು ಮುಟ್ಟಿತು. ದೇವತೆಗಳು ಸಿದ್ಧಚಾರಣ ಗಂಧರ್ವರೊಡನೆ ಕೂಡಿ, ಆಕಾಶದಿ ನಿಂತು, ಸುಮವರ್ಷವನ್ನು ಕರೆದು, ಕೃಷ್ಣನನ್ನು ಸ್ತುತಿಸಿದರು. ಗಂಧರ್ವರು ಹಾಡುತ್ತಿರಲು ಅಪ್ಸರೆಯರಾಡಿದರು. ತನ್ನನ್ನು ಪ್ರೀತಿಯಿಂದ ನೋಡುವ ಗೋವುಗಳಿಂದಲು, ಗೋಪಾಲರಿಂದಲು ಕೂಡಿ ಗೋವಿಂದನು ವೃಂದಾವನವನ್ನು ಪ್ರವೇಶಿಸಿದನು. ಅವನ ವಿವಿಧ ಲೀಲೆಗಳನ್ನು ಗೋಪವನಿತೆಯರು ಹಾಡಿ ಸಂತೋಷಭರಿತರಾದರು.

## ೨೬. ಗೋಪಾಲ ಸ್ತುತಿ – ನಂದವಚನ

ಶ್ರೀಶುಕನು ಹೇಳಿದನು–

ಇಂತು ಲೀಲೆಗಳನ್ನು ತೋರಿದ ಶೌರಿಯ ಮಹಿಮೆಯನ್ನು ತಿಳಿಯಲಾರದೆ, ಗೋಪಾಲಕರು, ಕೂಡಿ ಆಶ್ಚರ್ಯದಿಂದ ಇಂತು **ಚರ್ಚಿ**ಸಿದರು–

ನಮ್ಮ ಕೃಷ್ಣನು ಎಂತಹ ಅದ್ಭುತ ಕಾರ್ಯಗಳನ್ನು ಮಾಡಿರುವನು! ನಮ್ಮಂತಹ ಕಾಡು ಹಳ್ಳಿಗರಲ್ಲಿ ಪುಟ್ಟಿದ ಇವನ ಪರಾಕ್ರಮಾದಿಗಳು ಸಾಮಾನ್ಯವಲ್ಲ. ಆನೆಯು ಕಮಲವನ್ನಂತೆ ಅನಾಯಾಸವಾಗಿ ಏಳು ದಿನ ಗಿರಿಯನ್ನು ಪೊತ್ತು ನಿಂತಿದ್ದನು. ಪೂತನೆಯ ಹಾಲನ್ನು ವಿಷವನ್ನು ಪ್ರಾಣವನ್ನು ಕುಡಿದು ಹರಿಸಿದನು. ಕಾಲಿಂದ ಒದೆದು ಬಂಡಿಯನ್ನು ಕೆಡಹಿದನು. ಒಂದು ವರ್ಷದ ಕೂಸಿರುವಾಗ, ಆಕಾಶಕ್ಕೆ ತನ್ನನ್ನೆತ್ತಿಕೊಂಡು ಹೋದ ತೃಣಾವರ್ತದಾನವನನ್ನು ಕೊಂದು ಕೆಡಹಿದನು. ತಾಯಿಯು ಒರಳಿಗೆ ಕಟ್ಟಲು, ಅದನ್ನು ಸೆಳೆದುಕೊಂಡು ಪೋಗಿ ಅರ್ಜುನವೃಕ್ಷಗಳನ್ನು ಮುರಿದು ಬೀಳಿಸಿದನು. ಕೊಲ್ಲಲು ಬಂದ ಬಕಾಸುರನ ಮುಖವನ್ನು ಸೀಳಿ ಯಮಪುರಿ ಗಟ್ಟಿದನು. ವತ್ಸರೂಪಿ ವತ್ಸಾಸುರನನ್ನು, ಗಾರ್ದಭರೂಪಿ ಧೇನುಕಾದಿ ದೈತ್ಯರನ್ನು ಕೊಂದನು. ತಾಲವನವನ್ನು ನಿಷ್ಕಂಟಕವನ್ನು ಮಾಡಿದನು. ಬಲರಾಮನಿಂದ ಪ್ರಲಂಬವನ್ನು ಕೊಲ್ಲಿಸಿದನು. ದಾವಾಗ್ನಿಯಿಂದ ನಮ್ಮ ಬಾಲರನ್ನು ಪಶುಜಾಲವನ್ನು ಸಂರಕ್ಷಿಸಿದನು. ಭಯಂಕರ ಕಾಲಿಯನನ್ನು ಹೊರಗೆ ಕಳಿಸಿ, ಯಮುನೆಯನ್ನು ನಿರ್ವಿಷಗೊಳಿಸಿದನು. ಇವನಲ್ಲಿ ನಮಗೆ ತುಂಬ ಪ್ರೇಮವು ಉಕ್ಕಿಬರುತ್ತಿದೆ. ಬಂದ! ನಿನ್ನ ಮಗನೂ ನಮ್ಮನ್ನು ಅಭಿಮಾನದಿಂದ ಕಾಪಾಡಿಕೊಂಡು ಬರುತ್ತಿರುವನು. ಏಳು ವರ್ಷದ ಬಾಲನು ಲೀಲಾಜಾಲವಾಗಿ ಗೋವರ್ಧನಗಿರಿಯನ್ನೆತ್ತಿ, ಏಳು ದಿನ ಮಳೆಗಾಳಿಗಳಿಂದ ನಮ್ಮನ್ನು ಪೊರೆದುದನ್ನು ಕಂಡು, ಇವನು ಮಾನವನಲ್ಲ, ದೇವನಿರಬೇಕೆಂದು ನಮಗೆ ಸಂಶಯವಾಗಿದೆ – ಎನ್ನಲು, ನಂದನಿಂತು ನುಡಿದನು-

ಕೇಳಿ ನನ್ನ ಮಾತನ್ನು! ಬಿಡಿ ಸಂಶಯವನ್ನು! ಗರ್ಗಾಚಾರ್ಯನು ಇವನ ವಿಷಯದಲ್ಲಿ ನುಡಿದ ವಚನಗಳು ನೆನಪಿಗೆ ಬರುತ್ತಿವೆ. 'ಕೃತಯುಗದಿ ಶುಕ್ಲನು, ತ್ರೇತಾಯುಗದಲ್ಲಿ ರಕ್ತನು, ದ್ವಾಪರದಲ್ಲಿ ಪೀತವರ್ಣನು ಆಗಿ ಈ ನಿನ್ನ ಮಗನು ಈಗ ಕೃಷ್ಣವರ್ಣನಾಗಿರುವನು. ಹಿಂದೆ ವಸುದೇವನ ಮಗನಾಗಿದ್ದು, ಈಗ ಪುನಃ ನಿನಗೆ ಮಗನಾಗಿರುವ ಇವನನ್ನು ವಾಸುದೇವನೆಂದು

ಜ್ಞಾನಿಗಳು ಕರೆಯುವರು. ಇವನ ನಾಮರೂಪ ಗುಣಕರ್ಮಗಳನಂತಗಳು, ಅವನ್ನು ಬ್ರಹ್ಮ ಬಲ್ಲ, ಶಿವನೂ ಬಲ್ಲ, ಇತರ ಜನರಿಗೆ ಅವನ ಮಹಿಮೆಯು ತಿಳಿಯಲಾಗುವುದಿಲ್ಲ. ಗೋಗೋಪರಿಗೆ ಆನಂದಪ್ರದನಾಗಿ ಇವನು ನಿಮ್ಮ ಕಷಗಳನ್ನೆಲ್ಲ ನಿವಾರಿಸುವನು. ಪೂರ್ವದಲ್ಲಿ ಇವನನ್ನು ನಂಬಿ ಸಾಧುಗಳು ದುಷ್ಟಶತ್ರುಬಾಧೆಯಿಂದ ಪಾರಾಗಿ, ವಿರಾಜಿಸಿದರು. ಈ ಮಹಾತ್ಮನನ್ನು ಪ್ರೀತಿಸುವ ಭಕ್ತರಿಗೆ ವಿಷ್ಣು ಕಷ್ಟಪಕ್ಷೀಯರಿಗೆ ರಾಕ್ಷಸಪೀಡೆಯಾಗದಿರುವಂತೆ ಶತ್ರುಪೀಡೆಯು ಉಂಟಾಗುವುದಿಲ್ಲ. ನಂದ! ಈ ನಿನ್ನ ಮಗನು ಅನಂತಕಲ್ಯಾಣ ಗುಣಗಳಿಂದ ಶ್ರೀನಾರಾಯಣ ಸಮನೆನಿಸುವನು. ಶ್ರೀಕೀರ್ತಿ ಮಹಿಮೆಗಳಿಂದ ಪೂರ್ಣನಾದ ಇವನನ್ನು ಕಂಡು ಬೆರಗಾಗಬೇಡ!' ಎಂದು ಹೇಳಿರುವ ಗರ್ಗನ ಮಾತಿನಿಂದ ನಮ್ಮ ಕೃಷ್ಣನು ನಾರಾಯಣನ ಅಂಶಸಂಭೂತನೆಂದು ತಿಳಿದಿರುವೆನು.

ಆ ಮಾತನ್ನಾಲಿಸಿ, ತಮ್ಮನ್ನು ಪಾಲಿಸುವ ನಂದನನ್ನು, ಅವನು ಲಾಲಿಸುವ ಬಾಲ ಕೃಷ್ಣನನ್ನೂ ಮುದದಿಂದ ಪೂಜಿಸಿ, ಗೋಪಾಲಕರು ಸಂತೋಷಪರವಶರಾದರು.

ಶ್ರೀಶುಕನು ಹೇಳಿದನು–

ಯಜ್ಞಭಂಗ ಕುಪಿತನಾದ ಇಂದ್ರನು ಕಲ್ಲಿನ ಮಳೆಯನ್ನು ಕರೆಯಲು, ಕಷ್ಟಪಡುವ ಬಾಲ ಸ್ತ್ರೀಜಾಲ ಪಶುಪಾಲ ಸಹಿತ ಗೋಕುಲವನ್ನು ನೋಡಿ, ಕರುಣಾಲವಾಲನಾದ ಗೋಪಾಲ ಬಾಲನು ಲೀಲೆಯಿಂದ ಗಿರಿಯನ್ನೆತ್ತಿ, ಏಳು ದಿನ ನಿಂತು, ತನ್ನವರನ್ನು ಕಾಪಾಡಿದನು. ಮಹೇಂದ್ರ ಗರ್ವನಿರ್ವಾಪಣನಾದ ಗೋವಿಂದನಿಗೆ ವಂದನವು.

## ೨೫. ಇಂದ್ರಕೃತ ಕೃಷ್ಣಸ್ತುತಿ

ಗೋವರ್ಧನಗಿರಿಧಾರಿಯ ಮಹಿಮೆಯ ನೋಡಿ ಗತಮದನಾದ ಇಂದ್ರನು, ಗೋಲೋಕದಿಂದ ಬಂದ ಕಾಮಧೇನುವಿನಿಂದ ಕೂಡಿ ಬಂದು, ಏಕಾಂತದಲ್ಲಿ, ಶ್ರೀಕಾಂತನ ಪಾದಕ್ಕೆರಗಿ, ಮಾಡಿದ ಅಪರಾಧದಿಂದ ಲಜ್ಜಿತನಾಗಿ ನಿಂತು, ಕೈಜೋಡಿಸಿ ಇಂತೆಂದನು –

ಅಪ್ರಾಕೃತ ಜ್ಞಾನಾನಂದಸ್ವರೂಪನು, ತ್ರಿಗುಣವಿಕಾರರಹಿತನು, ಸ್ವೇಚ್ಛಾನಿರ್ಮಿತ ಜಗತ್ರಯನು, ದುರಭಿಮಾನ ದೂರೀಕರಣನು ಆದ ನಾರಾಯಣಾ! ನಿನಗೆ ಶರಣಾಗತನಾಗಿರುವೆನು. ಗುಣದಿಂದ ಸಂಸಾರ, ಸಂಸಾರದಿಂದ ಸಿಟ್ಟು, ಲೋಭ, ಮುಂತಾದ ಅಜ್ಞಾನಿ ಜನಲಕ್ಷಣಗಳು ಬರುವುವು. ನಿನಗೆ ಗುಣಕೃತ ಕ್ರೋಧಾದಿಗಳಿಲ್ಲ. ಆದರೂ ಶ್ರೀಹರೇ! ಧರ್ಮವನ್ನು ರಕ್ಷಿಸಲು ದುಷ್ಟರನ್ನು ಶಿಕ್ಷಿಸುವಾಗ ಸಿಟ್ಟಿನಿಂದ ದಂಡಿಸುವೆ. ಇದು ನಿನ್ನಾಟ. ಸಜ್ಜನರಿಗೆ ನೀನೇ ತಂದೆ, ನೀನೇ ಗುರುವು. ನಿನ್ನ ಮಹಿಮೆಯು ಅನಂತವಾಗಿದೆ. ಕಾಲದಲ್ಲಿದ್ದು ಕರ್ಮಫಲವನ್ನು ಕೊಡುವೆ; ದುಷ್ಟಶಿಕ್ಷಣ ಶಿಷ್ಟರಕ್ಷಣಗಳೇ ನಿನ್ನ ಅವತಾರ ಪ್ರಯೋಜನ. ಜಗದೀಶನು ನೀನಿರಲು ನಾವೇ ಜಗತ್ಪಾಲಕರೆಂಬ ದುರಭಿಮಾನವನ್ನು ಪೊಂದಿ, ನನ್ನಂತಹವರು ಕೆಡುತ್ತಿರುವೆವು. ನಾವು ಹಾಗೆ ಕೆಡದಂತೆ ಶಿಕ್ಷಿಸುವ ನಿನ್ನ ಕರುಣೆಗೆ ಎಣೆಯಿಲ್ಲ. ಅಸುರಾವೇಶದಿಂದ ಮದಮತ್ತರಾಗಿ, ಆರ್ಯಮಾರ್ಗದಿಂದ ಭ್ರಷ್ಟರಾಗಿರುವ ಸುಜೀವರನ್ನು ಶಿಕ್ಷಿಸಿ, ಅವರ ಮದವನ್ನಳಿಸಿ, ಸನ್ಮಾರ್ಗವನ್ನು ಪೊಂದಿಸುವ ಗೋವಿಂದಾ! ಮದದಿಂದ ನಿಮಗೆ ಅಪರಾಧವನ್ನೆಸಗಿದ ನನ್ನನ್ನು ಕ್ಷಮಿಸು! ಮೂಢನಾಗಿ ನಿನಗೆ ಅಪಚಾರವನ್ನೆಂದಿಗೂ ಮಾಡದಿರುವಂತೆ ಅನುಗ್ರಹಿಸು! ಭೂಭಾರಭೂತರಾದ

ಅಸುರ ಸೇನಾಪತಿಗಳನ್ನು ಸಂಹರಿಸಿ, ಭೂದೇವವಂದ್ಯನಾದ ನಿನ್ನ ಪಾದಾರನಿಂದ ಭಜಕರನ್ನು ಸಂರಕ್ಷಿಸಲು ಅವತರಿಸಿರುವ ಯಾದವ ಕೃಷ್ಣಾ! ನಿನಗೆ ನಮಸ್ಕಾರವು! ಸ್ವೇಚ್ಛಾಕೃತ ಲೀಲಾವತಾರನು, ಸರ್ವತ್ರವ್ಯಾಪ್ತನು, ವಿಜ್ಞಾನಾನಂದಮಯನು, ಸರ್ವಜೀವ ನಿಯಾಮಕನು ಆದನಿನಗೆ ನಮಸ್ಕಾರವು! ಯಜ್ಞವನ್ನು ನಿಲ್ಲಿಸಿದರೆಂಬ ಕೋಪದಿಂದ ಕಣ್ಣು ಕಾಣದೆ, ಗೋಕುಲವನ್ನು ನಾಶಮಾಡುವ ದುಷ್ಟಸಂಕಲ್ಪವನ್ನು ಮಾಡಿದ ನನ್ನ ಮದವನ್ನಿಳಿಸಿದೆ. ಲೋಕಗುರುವಾದ, ಸರ್ವಪ್ರಭುವಾದ, ನನ್ನ ಅಂತರ್ಯಾಮಿಯಾದ ಕೃಷ್ಣನೇ! ನೀನೇ ನನಗೆ ಗತಿ – ಎಂದು ಬೇಡಿದ ಇಂದ್ರನನ್ನು ನೋಡಿ ನಗುತ್ತಾ, ಕೃಷ್ಣನು ಗಂಭೀರವಚನದಿಂದಿಂತೆಂದನು–

ಇಂದ್ರನೇ! ನಿನ್ನ ಮದವನ್ನು, ಸಂಪನ್ಮದವನ್ನು ನಿರ್ಮೂಲಿಸಲು, ನಾನೇ ಯಜ್ಞವನ್ನು ನಿಲ್ಲಿಸಿದೆನು. ಐಶ್ವರ್ಯಮದದಿಂದ ಮತ್ತನಾಗಿ, ದಂಡಧರನಾಗಿ ವೀಕ್ಷಿಸುವ ಸಾಕ್ಷಿಯಾದ ನನ್ನನ್ನು ಕಾಣದೆ ಇರುವ ಸುಜನನ ಸಂಪತ್ತನ್ನು ಹರಿಸಿ, ಅದರಿಂದ ಅವನ ಮದವನ್ನೂ ಹರಿಸಿ, ನನ್ನ ಸ್ಮರಣೆಯನ್ನಿತ್ತು ಅನುಗ್ರಹಿಸುವೆನು. ಹೋಗು; ನಿನಗೆ ಮಂಗಳವಾಗಲಿ! ನಿನ್ನ ಅಧಿಕಾರವನ್ನು ಮತ್ತೆ ನಿನಗಿತ್ತಿರುವೆನು. ಅನಿತ್ಯಸಂಪತ್ತಿನಿಂದ ವಂಚಿತನಾಗದೆ, ನನ್ನ ಆಜ್ಞೆಯಂತೆ ನಡೆ!– ಎಂದು ಕೃಷ್ಣನು ನುಡಿದನು.

ಆಗ ಕಾಮಧೇನುವು ಕೃಷ್ಣನಿಗೆ ತನ್ನ ಪರಿವಾರದವರಿಂದ ಕೂಡಿಸಿ ವಂದಿಸಿ ಇಂತೆಂದಿತು–

ಕೃಷ್ಣ! ಮಹದೈಶ್ವರ್ಯನಿಧೇ! ಜಗಜ್ಜನ್ಮಾದಿಕಾರಣನೇ! ನಿನ್ನಿಂದ ನಾವು ಸನಾಥರಾದೆವು. ಸುಖಪ್ರದನು, ಐಶ್ವರ್ಯಸಂಪೂರ್ಣನಾದ ನೀನೇ ನಿಜವಾದ ಇಂದ್ರನು. ಗೋವಿಪ್ರದೇವಸಾಧುಜನರಿಗೆ ಕ್ಷೇಮವನ್ನು ಕೊಡುವ ನಿನ್ನನ್ನು, ನೀಕೊಟ್ಟ ಹಾಲಿನಿಂದ, ನಿನ್ನ ಮಗನಾದ ಬ್ರಹ್ಮನ ಮಾತಿನಂತೆ, ಅಭಿಷೇಕಿಸುವೆವು. ಭೂಭಾರಹರಣ! ನಾರಾಯಣ! ನಮಸ್ತೇ, ಎಂದು ಗೋವಿಂದನ ಅಪ್ಪಣೆಯನ್ನು ಪಡೆದು ಕಾಮಧೇನುವು, ಆಕಾಶ ಗಂಗಾಜಲವನ್ನೂ, ತನ್ನ ಹಾಲನ್ನೂ ಸಮರ್ಪಿಸಿತು. ಆಗ ಇಂದ್ರನು ದೇವಋಷಿಗಳಿಂದ ಕೂಡಿ ದೇವಮಾತೆಯರು ಹೇಳಿದಂತೆ ಸುಖದಾನಸಮರ್ಥನಾದ ಕೃಷ್ಣನಿಗೆ ಅಭಿಷೇಕವನ್ನು ಮಾಡಿದನು. ಐರಾವತವು ಕರದಿಂದ ತಂದ ಗಂಗಾಜಲಾಭಿಷೇಕವನ್ನು ಮಾಡಿ 'ಗೋವಿಂದ! ಗೋವಿಂದ!' ಎಂದು ಹೆಸರಿಟ್ಟು, ಕೃಷ್ಣನನ್ನು ಪೂಜಿಸಿ, ಇಂದ್ರನು ಧನ್ಯನಾದನು. ತುಂಬುರು ನಾರದಾದಿಗಳು ಪಾಡಿ ಪೊಗಳಿದರು. ಗಂಧರ್ವರು ಹಾಡುತ್ತಿರಲು, ಸುರಾಂಗನೆಯರು ಕುಣಿಯುತ್ತಾ, ನಂದನದ ಮಂದಾರಾದಿ ಸುಮವೃಂದವನ್ನು, ಗೋವಿಂದಶಿರದಿ ಮಳೆಗರೆದರು. ಲೋಕಗಳಿಗೆಲ್ಲಾ ಪರಮಾನಂದವಾಯಿತು. ವೇದಗಳು ತಾವಾಗಿ ನುಡಿದವು. ಆಕಳಮೊಲೆಯ ಹಾಲು ಹರಿದು ಕಾಲುವೆಯಾಗಿ, ವೃಕ್ಷಗಳಿಂದ ಬಂದ ಜೇನಿನ ಧಾರೆಯಿಂದ ಮಧುರವಾಯಿತು; ಗಿರಿಗಳಿಂದ ಮಣಿಕಾಂತಿಗಳು ಸೂಸಿಬಂದವು. ಭೂಮಿಯಲ್ಲಿ ಬೆಳೆ ನಿಂತು ಶೋಭೆಯನ್ನು ತುಂಬಿತು. ಕ್ರೂರಮೃಗಗಳು ಕೂಡ ತಾತ್ಕಾಲಿಕ ಸಾಧುವಾದವು. ಕೃಷ್ಣಾಭಿಷೇಕದಿಂದ ಜಗವೇ ನಿರ್ಮಲಾನಂದಪೂರ್ಣವಾಯಿತು. ಗೋವಿಂದನ ಅನುಜ್ಞೆಯನ್ನು ಪಡೆದು ಇಂದ್ರನು, ಕಾಮಧೇನುವು ತಮ್ಮ ತಮ್ಮ ಲೋಕಗಳನ್ನು ಸೇರಿದರು.

## ೨೬. ನಂದನ ವರುಣಪಾಶ ಮೋಚನ

ಶ್ರೀಶುಕನು ಪೇಳಿದನು–

ನಂದನು ಏಕಾದಶಿಯಲ್ಲಿ ಉಪವಸಿಸಿ, ದ್ವಾದಶಿಯ ಬೆಳಗುಜಾವವೆಂದು ತಿಳಿದು, ನಿಶೀಥದಲ್ಲಿ ಸ್ನಾನಮಾಡಲು ಯಮುನೆಯಲ್ಲಿಳಿದನು. ಆಗ ಅಲ್ಲಿದ್ದ ವರುಣಭೃತ್ಯನು ನಂದನನ್ನು ಪಿಡಿದು, ವರುಣಲೋಕಕ್ಕೆ ಎಳೆದೊಯ್ದನು. ನಂದನು ಮೇಲೆ ಬಾರದಿರಲು, ಭಯಸಂಭ್ರಾಂತರಾದ ಗೋಪಾಲಕರು 'ಕೃಷ್ಣ! ರಾಮ! ಎಂದು ಕೂಗಿಕೊಂಡರು. ತತ್‌ಕ್ಷಣವೇ ಶ್ರೀಕೃಷ್ಣನು, ತನ್ನವರಿಗಭಯವನ್ನಿತ್ತು, ವರುಣಸಭೆಗೆ ಬಂದನು. ಲೋಕಪಾಲಕನು ಬಂದ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿ, ಸಂತಸದಿಂದ ಇಂತೆಂದನು–

ಶ್ರೀಕೃಷ್ಣ! ಇಂದು ನಾನು ಬದುಕಿದ್ದಕ್ಕೆ ಸಾರ್ಥಕವಾಯಿತು. ನನ್ನ ಜೀವನ ಪ್ರಯೋಜನಗಳೆಲ್ಲವೂ ಕೈಗೂಡಿದವು. ನಿನ್ನ ಚರಣಾರವಿಂದಸೇವೆಯೇ ಸಂಸಾರಪಾರದರ್ಶಕವು. ಪೂರ್ಣಗುಣನು, ಪರಮಾನಂದಕಂದನು ಆದ ನಂದನಕಂದ! ಜೀವರಿಗೆ ವಿಪರೀತ 'ಜ್ಞಾನಕಾರಣವಾಗಿರುವ ನಿನ್ನ ಬಂಧಕಶಕ್ತಿಗೆ ನಮೋನಮಃ. ಗೊತ್ತಿಲ್ಲದೆ ನನ್ನ ಸೇವಕನು, ನಿನ್ನ ತಂದೆಯನ್ನು ಹಿಡಿದು ತಂದಿರುವನು. ನನ್ನನ್ನು ಕ್ಷಮಿಸು. ಗೋವಿಂದ! ನಂದನಿಲ್ಲೇ ಕ್ಷೇಮದಿಂದಿರುವನು, ಕರೆದುಕೊಂಡು ಹೋಗು! ನನ್ನಲ್ಲಿ ಸದಾ ನಿನ್ನ ಅನುಗ್ರಹವಿರಲಿ!

ಆಗ ಕೃಷ್ಣನು ತಂದೆಯನ್ನು ಕರೆದುಕೊಂಡು ಗೋಕುಲಕ್ಕೆ ಬಂದು, ಸ್ವಜನರನ್ನು ಸಂತೈಸಿದನು. ಲೋಕಪಾಲಪೂಜಿತನಾದ ಮಗನ ಮಹಾಮಹಿಮೆಯನ್ನು ಕಣ್ಣಾರ ಕಂಡಿದ್ದ ನಂದನು, ತನ್ನ ಬಂಧುಗಳಿಗೆ ಶ್ರೀಹರಿಯು ತನ್ನನ್ನು ರಕ್ಷಿಸಿದ ಕಥೆಯನ್ನು ವರ್ಣಿಸಿದನು. ಅದನ್ನು ಕೇಳಿ ಯೋಗ್ಯರಾದ ಆ ಗೋಪಾಲರು 'ಕೃಷ್ಣ! ಬ್ರಹ್ಮರುದ್ರೇಂದ್ರವಂದ್ಯ! ಗೋವಿಂದಾ ಗೋವಿಂದಾ! ನಿನ್ನ ಮಹಿಮೆಯು ಅಪಾರವು. ನಮಗೆ ನಿನ್ನ ಲೋಕವನ್ನು ನೋಡಿಸಬಾರದೇ?' ಎಂದು ಮನದಿ ಚಿಂತಿಸಿದರು. ಭಗವಂತನು ಅವರ ಇಚ್ಛೆಯನ್ನು ಪೂರೈಸಲು ನಿಶ್ಚಯಿಸಿದನು. ಅವಿದ್ಯಾಕಾಮಕರ್ಮಗಳಿಂದ ಅನೇಕ ವಿಧ ಯೋನಿಗಳಲ್ಲಿ ಜನಿಸಿ, ತನ್ನನ್ನು ತಿಳಿಯದೆ, ಹರಿಯನ್ನೂ ತಿಳಿಯದೆ, ಹುಟ್ಟಿ ಸಾಯುವ ಜೀವನು ತನ್ನ ಅನುಗ್ರಹವಿರದಿರೆ, ಜ್ಞಾನಲೇಶವನ್ನೂ ಪೊಂದಲಾರೆನೆಂಬ ಕರುಣೆಯಿಂದ, ಭಗವಂತನು ಅವರಿಗೆ ಕಾಳಿಂದಿಯ ಬ್ರಹ್ಮಹ್ರದದಲ್ಲಿ ಸ್ನಾನಮಾಡಿರೆಂದನು. ಅವರು ಅಲ್ಲಿ ಮಿಂದು ಶ್ರೀಹರಿಕರುಣೆಯಿಂದ ದಿವ್ಯಚಕ್ಷುಗಳನ್ನು ಪೊಂದಿ, ತಮಸ್ಸಿನಿಂದ ದೂರವಿರುವ ಶ್ರೀಹರಿಯ ವೈಕುಂಠವನ್ನು ನೋಡಿದರು. ಅಕ್ರೂರನು ನೋಡಿದ ಲೋಕವೂ ಅದೇ! ರಾಜನ್! ನಿತ್ಯನಿರ್ದುಃಖನಿರತಿಶಯಾನಂದ ಸ್ವರೂಪನು, ಸ್ವಗತ ಪರಗತ ಅಶೇಷ ವಿಶೇಷ ಜ್ಞಾನ ನಿಧಿಯು, ದೇಶ ಕಾಲಗುಣಾಪರಿಚ್ಛಿನ್ನನು, ಜಗಜ್ಜನ್ಮಾದಿಕಾರಣನು, ಶಶ್ವದೇಕಪ್ರಕಾರನು, ಪ್ರಳಯಾಂತ್ಯದಲ್ಲಿ ಸ್ವೇಚ್ಛೆಯಿಂದ ಸಕಲಾವರಣ ನಿವರ್ತಕನು, ಮುನಿಜನ ಧ್ಯಾನ ವಿಷಯನು, ಆದ ಶ್ರೀಹರಿಯನ್ನು ನೋಡಿ ನಂದಾದಿಗಳು ಪರಮಾನಂದಭರಿತರಾದರು. ವೇದವೇದ್ಯನನ್ನು ಸ್ತುತಿಸುವ ದೇವತೆಗಳನ್ನು ಕಂಡು ವಿಸ್ಮಿತರಾದರು.

## ೨೭. ವೇಣುಗಾನ – ವನವಿಹಾರ

ಶರದ್ರಾತ್ರಿಯಲ್ಲಿ ಉತ್ಫುಲ್ಲವಾದ ನವಮಲ್ಲಿಕಾ ಸುಮಗಂಧಗಂಧಿತವಾದ ಕಾನನದಲ್ಲಿ, ಶ್ರೀಕೃಷ್ಣನು ಸ್ವರೂಪಸಾಮರ್ಥ್ಯವನ್ನು ಪ್ರಕಟಿಸಿ, ಸಕಲ ಲೋಕವಲ್ಲಭತೆಯನ್ನು ತೋರಿ, ವಲ್ಲವೀಪಲ್ಲವಾಧರೆಯರಿಂದ ಕೂಡಿ ವಿಹರಿಸಲು ನಿಶ್ಚಯಿಸಿದನು. ಶರಚ್ಚಂದ್ರನು ಆಗ ತನ್ನ ಶಿಶಿರಕರಗಳಿಂದ ಪ್ರಾಚೀವನಿತೆಯ ಮುಖವನ್ನು ತಡವಿ, ವಿರಹಕಾತರಳಾದ ಪ್ರಿಯಳನ್ನು ಪ್ರಿಯನಂತೆ, ಲಾಲಿಸಿ, ತಾಪವನ್ನು ಕಳೆದನು. ನವಕುಂಕುಮ ಸುಮದಂತೆ ರಕ್ತನು, ವನಿತೆಯರ ವದನದಂತೆ ಅಖಂಡಮಂಡಲನು ಆದ ನಿಶಾನಾಥನ ಕೋಮಲ ಕಿರಣಕರ ಸ್ಪರ್ಶದಿಂದ ವನದೇವತೆಯೇ ರಂಜಿತಳಾಗಿ ಪುಲಕ ಪಲ್ಲವ ಸುಮಗಳನ್ನು ಧರಿಸಿದಳು. ಶ್ರೀಕೃಷ್ಣನು ಕೋಮಲ ಕರಾಂಗುಲೀ ಚಾಲನದಿಂದ ವೇಣುವನ್ನು ನುಡಿಸಿ, ಗಾನಸುಧೆಯಿಂದ ಜಗವನ್ನು ತುಂಬಿದನು. ಶ್ರೀರಮೆಯು ಗೋಪವನಿತಾಸನ್ನಿಹಿತಳಾಗಿ ಬಹುರೂಪದಿಂದ ಗೋವಿಂದನನ್ನು ಸೇವಿಸಲು ಭರದಿಂದ ಬಂದಳು.

ಶ್ರೀಕೃಷ್ಣನ ವೇಣುಗಾನವನ್ನಾಲಿಸಿ, ವ್ರಜ ತರುಣಿಯರು, ಕೃಷ್ಣ ದರ್ಶನಕಾತರರಾಗಿ, ಒಬ್ಬರಿಗೊಬ್ಬರು ತಿಳಿಸದೆ, ವನದಲ್ಲಿದ್ದ ಶ್ರೀಹರಿಯನ್ನು ಸೇರಲು ಬಂದರು. ಕರೆಸುವುದನ್ನು, ಹಾಲಿನ ಪಾತ್ರೆಯನ್ನೂ ಬಿಟ್ಟು ಕೆಲವರಂಗನೆಯರು, ಹಾಲನ್ನು ಹಾಕಿ ಪರಮಾನ್ನವನ್ನು ಮಾಡುತ್ತಿದ್ದು, ಕೆಳಗಿಳಿಸದೆ ಕೆಲ ಪದ್ಮಗಂಧಿಯರು, ಬಡಿಸುವುದನ್ನು ಬಿಟ್ಟು ಕೆಲನಾರಿಯರು, ಕೂಸಿಗೆ ಹಾಲನ್ನುಣಿಸುವುದನ್ನು ನಿಲ್ಲಿಸಿ, ಕೆಲವರು ಪಲ್ಲವಾಧರೆಯರು, ಪತಿಪಾದವನ್ನು ಸೇವಿಸುವುದನ್ನು ಬದಿಗಿಟ್ಟು ಕೆಲಸಾಧ್ವಿಯರು, ಭೋಜನವನ್ನು ಮುಗಿಸದೆ ಕೆಲ ವನಿತೆಯರು, ನೀರೆರೆದುಕೊಳ್ಳುತ್ತಿದ್ದ ಕೆಲ ಶುಭಗಾತ್ರಿಯರು, ಒಂದು ಕಣ್ಣಿಗೆ ಮಾತ್ರ ಕಾಡಿಗೆಯನ್ನಿಟ್ಟ ಕಮಲನೇತ್ರೆಯರು, ಮನೆ ಸಾರಿಸುತ್ತಿದ್ದ ಮದಿರೇಕ್ಷಣೆಯರು ತೃಷ್ಣಾವಶರಾಗಿ ಕೃಷ್ಣನಲ್ಲಿ ಬಂದು ನಿಂತರು. ವಸ್ತ್ರಾಭರಣಗಳನ್ನು ಅಸ್ತವ್ಯಸ್ತವಾಗಿ ಧರಿಸಿ, ಲೋಲಕುಂಡಲಮಂಡಿತಗಂಡ ಸ್ಥಲದಿ ಮಂದಹಾಸವು ವ್ಯಾಪಿಸಿರಲು, ಶೋಭಿಸುವ ಗೋಪನಾರಿಯರು ಗೋವಿಂದನ ವೇಣುಗಾನ ಶ್ರವಣದಿಂದ ಮನಸೋತು, ಪಿತೃಪುತ್ರಪತ್ಯಾದಿ ಬಂಧುಜನರನ್ನು ಲೆಕ್ಕಿಸದೆ, ಗೋವಿಂದನನ್ನು ಸಮೀಪಿಸಿದರು. ಗಂಡ, ಮಾವ, ಮೈದುನರು ಕದವನ್ನು ಮುಚ್ಚಿ ಬಂಧಿಸಲು – ಬರಲಾಗದೆ ವಿರಹಾತುರರಾದ ಗೋಪಿಯರು ಕಣ್ಣುಮುಚ್ಚಿ ಕಮಲಾಕ್ಷನನ್ನು ಧ್ಯಾನಿಸಿ, ಪರಮಪ್ರೇಮಿ ವಿವಶರಾದರು. ಅವರ ಪ್ರಾರಬ್ಧ ಶುಭಫಲವೇ ಕೃಷ್ಣದರ್ಶನವನ್ನು ಹೊಂದಿಸಿ ಅವರನ್ನು ಸ್ವರೂಪಾನಂದಮಗ್ನರನ್ನಾಗಿರಿಸಿತು. ಪರಮಾತ್ಮನನ್ನು ಪತಿಗಿಂತಲೂ ಶ್ರೇಷ್ಠನೆಂದು ಭಾವಿಸಿದ ಭಾಮಿನಿಯರು ಭವಬಂಧವನ್ನು ಕಡಿದು ಭಕ್ತಿಭಾಗ್ಯವನ್ನು ಪಡೆದು ಪಾವನರಾದರು.

ರಾಜನು ಕೇಳಿದನು –

ಗೋಪಿಯರು ಕೃಷ್ಣನನ್ನು ಪರಮಾತ್ಮನೆಂದು ತಿಳಿದಿದ್ದರೇ? ಇಲ್ಲವಲ್ಲ. ಜಾರನೆಂದು ತಿಳಿದು ಬಂದ ವಿಷಯಾಶಾಲೋಲುಪರಾದ ಗೋಪಿಯರಿಗೆ ಮೋಕ್ಷವೆಂತು ಲಭಿಸಿತು? ಎಂದು ಕೇಳಿದ ರಾಜನನ್ನು ನೋಡಿ ಶ್ರೀಶುಕನಿಂತು ನುಡಿದನು –

ರಾಜನ್! ಹಿಂದೆ ಶಿಶುಪಾಲನಿಗೆ ಮೋಕ್ಷಸಿದ್ಧಿಯಾಗಿ, ನಿಷ್ಪಾಪನಾದನೆಂದು ಹೇಳಿದೆನಲ್ಲವೇ? ನಿಂದಿಸಿದ ಚೈದ್ಯನೇ ಪಾಪಮುಕ್ತಿಯನ್ನು ಪೊಂದಿರಲು, ಪ್ರಿಯತಮನೆಂದು ಭಜಿಸಿದ

ಗೋಪಿಯರು ಪಾವನರಾದುದಾಶ್ಚರ್ಯವೇ? ಭಕ್ತಿಯಿಂದಲೇ ಮುಕ್ತಿಯು; ದ್ವೇಷದಿಂದಲ್ಲ. ದ್ವೇಷದಿಂದ ತಮಃಪ್ರಾಪ್ತಿನಿಶ್ಚಯವು, ಕಾಮವು ಅಶುಭಕಾರಿಯಾದರೂ ಭಕ್ತಿಕಾರಣವಾಗಿ ಪರಿಣಮಿಸಿದರೇ ವಿಷ್ಣುಪ್ರಸಾದವನ್ನು ತಂದುಕೊಡುವುದು. ಜಗತ್ಪಿತಾಮಹನಾದ ಕೃಷ್ಣನನ್ನು ಜಾರನೆಂದು ತಿಳಿಯುವುದು ಅಯುಕ್ತವೇ ಸರಿ. ಕೇಳು! ಸರ್ವರಿಗೂ ಅತ್ಯಂತ ಪ್ರಿಯತಮನಲ್ಲವೇ ಶ್ರೀಕೃಷ್ಣನು? ಅವನು ದುಷ್ಟಶಿಕ್ಷೆಯನ್ನು ಮಾಡಲು ಮಾತ್ರ ಅವತರಿಸುವನೆಂದು ತಿಳಿಯಬೇಡ. ಅವನ ಅವತಾರವು ಸಜ್ಜನಾನುಗ್ರಾಹಕವೂ ಆಗಿದೆ. ಅವನ ಅನುಗ್ರಹವು, ಸರ್ವಕಲ್ಯಾಣಗುಣ ಪೂರ್ಣನೆಂತಲೂ ಸರ್ವೋತ್ತಮನೆಂತಲೂ ಶ್ರೀಹರಿಯನ್ನು ತಿಳಿದವರಿಗೇ ಮೀಸಲಾಗಿದೆ. ದ್ವೇಷ, ಕಾಮ, ಭಯ, ಬಂಧುಸ್ನೇಹಾದಿಗಳಿಂದ, ನಿತ್ಯಸುಖಾನುಭವವು ಸಿಗುವುದೇ? ದ್ವೇಷದಿಂದ ಹರಿಯನ್ನು ಭಜಿಸಿದವರು ದ್ವೇಷಮಯರೇ ಆಗುತ್ತಾರೆ ಮತ್ತು ತಮಸ್ಸನ್ನೇ ಹೊಂದುತ್ತಾರೆ. ಕಾಮದಿಂದ ಭಜಿಸಲು ಕಾಮಮಯರಾಗಿ ನಿತ್ಯಸಂಸಾರಿಗಳಾಗಿರುವರು. ಭಕ್ತಿಯಿಂದ ನಿತ್ಯಕಾಮಿಗಳಾದ ಅಪ್ಸರೆಯರು ಹರಿಪ್ರಸಾದದಿಂದ ಮುಕ್ತರಾಗಿ, ವೈಕುಂಠದಲ್ಲಿಯು ವಿಷ್ಣುಕಾಮರತರಾಗಿರುವರು. ಗೋಪಿಯರೂ ಅಂತೆಯೇ ಕಾಮಭಕ್ತರು, ಅವರಂತೆ ಎಲ್ಲ ಸ್ತ್ರೀಯರು ಮಾಡಲಾಗದು. ಯೋಗ್ಯತೆಯನ್ನು ಮೀರಿದ ಉಪಾಸನೆಯು ಅಧಃಪತನವನ್ನು ತಂದೊಡ್ಡುವುದು. ಪತಿ ಎಂದು ಶ್ರೀದೇವಿಯು, ತಂದೆ ಎಂದು ಚತುರ್ಮುಖನು ಭಜಿಸುವರು. ನಿರ್ಗುಣನು, ಅವ್ಯಕ್ತನು, ಕಲ್ಯಾಣಗುಣಪೂರ್ಣನು, ಪ್ರಕೃತಿಪಾಲಕನು ಆದ ಶ್ರೀಹರಿಯು ತನ್ನನ್ನು ಭಜಿಸುವವರ ಯೋಗ್ಯತೆಯನ್ನರಿತು ಅವರಿಗೆ ಉಪಾಸನಾನುಕೂಲ ಫಲವನ್ನು ಕೊಡುತ್ತಿರುವನು. ಜಗದ್ಗುರುವಾದ ಬ್ರಹ್ಮನಿಗೂ ಗುರುವಾದ ಕೃಷ್ಣನ ವಿಷಯದಲ್ಲಿ ಆಶ್ಚರ್ಯವೇಕೆ? ಅವನಂತೆ ನಾವು ಆಚರಿಸಬಾರದೆಂದು ತಿಳಿದು ಅವನನ್ನು ಭಜಿಸುವುದೇ ನಮ್ಮ ಕರ್ತವ್ಯವಾಗಿದೆ. ಸೌಭರ್ಯಾದಿ ಋಷಿಗಳ ಯೋಗಶಕ್ತಿಯನ್ನು ಕೇಳಿರುವೆ. ಅವರ ಉಪಾಸ್ಯದೈವನಾದ ರಮಾನಾರಾಯಣನಿಲ್ಲದ ವಸ್ತುವಿಲ್ಲ. ದಂಪತಿಗಳಲ್ಲಿ ದಕ್ಷ – ಪ್ರಸೂತಿಗಳು, ಶತರೂಪಾ – ಮನುರಾಜರು, ಪಾರ್ವತೀ – ಪರಮೇಶರು, ಭಾರತೀ – ಪ್ರಾಣರು, ರಮಾನಾರಾಯಣರಿಲ್ಲದಿರೆ ಸಂಭೋಗವಿಲ್ಲ; ಇದ್ದರೆ ವ್ಯಭಿಚಾರವಿಲ್ಲ. ಅಪ್ರಾಕೃತದಿವ್ಯದೇಹನಿಗೆ ಪ್ರಾಕೃತ ದೇಹಸಂಪರ್ಕವಿಲ್ಲ; ಇದ್ದರೂ ವ್ಯಭಿಚಾರವಿಲ್ಲ. ಸರ್ವಸುಖಭೋಕ್ತನಾದ ಶ್ರೀಹರಿಗೆ ಹೊರತಾದ ಯಾವುದೂ ಸುಖವಲ್ಲ. ಹನ್ನೊಂದು ವರ್ಷದ ಕೃಷ್ಣನಿಗೆ ತರುಣೀ ವ್ಯಭಿಚಾರ ಶಂಕೆಯೇ ಇಲ್ಲ. ಇರಲಿ ಕೇಳು. ಬಂದು ಸುಂದರಿಯರನ್ನು ಕಂಡು ಆನಂದದಿಂದ ಗೋವಿಂದನು ವಚನಪಾಶದಿಂದ ಅವರನ್ನು ಕಟ್ಟಿ ಕೂಡಿಸಿ ಇಂತೆಂದನು–

ಓಹೋ! ಪುಣ್ಯನಾರಿಯರೇ! ನಿಮ್ಮ ಪ್ರೀತಿಗಾಗಿ ನಾನೇನು ಮಾಡಲಿ? ವ್ರಜದಲ್ಲಿ ಅಪಾಯವಿಲ್ಲವಲ್ಲ? ಏಕೆ ಬಂದಿರಿ? ರಾತ್ರಿಯು ಭಯಂಕರಾಂಧಕಾರ ಬಂಧುರವಾಗಿದೆ. ವನದಲ್ಲಿ ಭಯಂಕರ ಮೃಗಸಂಚಾರವಿದೆ. ಸ್ತ್ರೀಯರಲ್ಲಿ - ಈಗ -ನಿಲ್ಲಲಾಗದು. ಪೋಗಿ ನಿಮ್ಮ ಮನೆಗಳಿಗೆ! ನಿಮ್ಮ ಮಾತೃಪಿತೃಭ್ರಾತೃಬಂಧುಗಳು, ಪತಿಶ್ವಶುರಸ್ಯಾಲರು ನಿಮ್ಮನ್ನು ಹುಡುಕಿ ಕಾಣದೆ, ತತ್ತರಿಸುತ್ತಿರುವರು. ನೋಡಿದುದಾಯಿತು, ರಾಕಾಚಂದ್ರ ಚಂದ್ರಿಕಾ ಸುಂದರವನವನ್ನು; ಕಂಡುದಾಯಿತು ಯಮುನಾ ಪುಲಿನತಲಗಳನ್ನು; ತೀರಜಾತತರುಗಳನ್ನು; ಸೇವಿಸಿದಿರಿ ಮಂದಮಲಯಾನಿಲನನ್ನು; ಭಜಿಸಿದಿರಿ ನನ್ನ ಪಾದಮೂಲವನ್ನು; ಇನ್ನು ಹೊರಡಿ! ಪತಿಯರ ಸೇವೆ ಮಾಡಿ! ಬಾಲಕರು, ಬಾಲ ಕರುಗಳು ನಿಮಗಾಗಿ ಆಕ್ರಂದಿಸುತ್ತಿರುವರು. ಅವರನ್ನು ಸಮುದಾಯಿಸಿ!

ನನ್ನಲ್ಲಿ ಸ್ನೇಹದಿಂದ ಸಕಲವನ್ನು ಮರೆತು ಬಂದಿರುವ ನಿಮ್ಮನ್ನು ನೋಡಿ ಸಂತಸವಾಗಿದೆ. ನನಗೂ ಭಕ್ತರೆಂದರೆ ಬಲು ಪ್ರೀತಿ. ಒಂದು ಮಾತನ್ನಾದರೂ ಕೇಳಿ! ಮಾಯೆಯನ್ನು ತೊರೆದು ಪತಿಯನ್ನು ಸೇವಿಸುವುದೇ ಮಾನಿನಿಯರ ಮಹಾಧರ್ಮವು. ಪತಿಬಂಧುಗಳನ್ನು, ಪತಿಯಿಂದ ತನಗಾದ ಪ್ರಜೆಯನ್ನು ಪೋಷಿಸುವುದೂ ಸತಿಯ ಕರ್ತವ್ಯವು. ದುಃಶೀಲನಾಗಲಿ, ದರಿದ್ರನಾಗಲಿ, ಮುದುಕನಾಗಲಿ, ಜಡನಾಗಲಿ, ರೋಗಿಯಾಗಲಿ, ಪತಿಯನ್ನು – ಪಂಚಮಹಾಪಾತಕಿಯಲ್ಲ ದಿದ್ದರೆ ಸಾಕು – ಸತಿಯು ಬಿಡಲಾಗದು. ಕುಲಸ್ತ್ರೀಜನರ ಸ್ವರ್ಗಾದಿ ಪುಣ್ಯಲೋಕವನ್ನು, ಯಶಸ್ಸನ್ನು, ಜೀವನವನ್ನು, ತಾರಣ್ಯವನ್ನು ಜಾರನು ಹಾಳು ಮಾಡುವನು. ಮರಣಾದಿ ಭಯ ಪ್ರದನು, ತುಚ್ಛವು, ಅಸಹ್ಯವು ಆದ ವ್ಯಭಿಚಾರವು ಸರ್ವಥಾ ಸಲ್ಲದು. ಮುಖ್ಯಭರ್ತನಾದ ನನ್ನ ಭಕ್ತಿಯು ನಿಮಗೆ ಶ್ರವಣ, ದರ್ಶನ, ಕೀರ್ತನ, ಧ್ಯಾನಗಳಿಂದಲೇ ದೊರಕುವುದು; ಕೇವಲ ಸಾಮೀಪ್ಯದಿಂದಲ್ಲ. ಆದ್ದರಿಂದ ಮನೆಗೆ ನಡೆಯಿರಿ.

ಎಂದಾಡಿದ ಗೋವಿಂದನನ್ನು ಬಿಡಲಾರದ ಚಿಂತೆಯಿಂದ ತಲೆಬಾಗಿ, ಒಣಗಿದ ತುಟಿಯನ್ನು ಸವರುತ್ತಾ ಕಾಲಿನಿಂದ ನೆಲದಲ್ಲಿ ಬರೆಯುತ್ತಾ, ಕಣ್ಣೀರಿನಿಂದ ಕುಚಕುಂಚುಮ ಪಂಕವು ಜಾರುತ್ತಿರಲು, ದುಃಖಭರದಿಂದ ಮಾತು ಬರದೆ ಸುಮ್ಮನೆ ನಿಂತರು. ಕೃಷ್ಣನಿಗಾಗಿ ಸರ್ವಾಶೆ ಗಳನ್ನು ತೊರೆದು ಬಂದ ಸುಂದರಿಯರು, ವಿಪ್ರಿಯವಾಗಿ ಮಾತನಾಡಿದ ಕೃಷ್ಣನನ್ನು ಕಣ್ಣೊರೆಸಿ ಕೊಂಡು ಕಟಾಕ್ಷೀಕರಿಸಿ, ಗದ್ಗದವಚನಗಳಿಂದ ಇಂತೆಂದರು–

ಕೃಷ್ಣಾ! ಹೀಗೆನ್ನುವುದು ನಿನಗುಚಿತವೇ? ಸರ್ವವಿಷಯಗಳನ್ನು ಪೂರ್ಣವಾಗಿ ತ್ಯಜಿಸಿ, ದುರ್ಲಭವಾದ ನಿನ್ನ ಚರಣಾರವಿಂದವನ್ನು ಭಕ್ತಿಯಿಂದ ಭಜಿಸಲು ಬಂದಿರುವ ನಮ್ಮ ಕೈಬಿಡ ಬೇಡ. ಆದಿಪುರುಷನು ಪ್ರಿಯರಾದ ಮುಮುಕ್ಷು ಜನರ ಅಪೇಕ್ಷಾಪೂರಕನಾಗುವಂತೆ ನೀನು ನಮ್ಮ ಅಭಿಲಾಷೆಯನ್ನು ಪೂರೈಸು. ಧರ್ಮಜ್ಞನಾದ ನಿನ್ನ ವಚನ ನಿಜ. ಪತಿ ಸುತ ಮಿತ್ರಾದಿ ಪರಿಜನ ಸೇವೆ ಸ್ತ್ರೀಯರಿಗೆ ಪರಮ ಧರ್ಮವೇ ಸರಿ. ದೇವತಾ ಜನವರದಾತನು, ಪರಮಾನಂದ ಕಂದನು, ಐಶ್ವರ್ಯಮಹಿತನು ಆದ ನೀನು ನಮಗೆ ಮಾತ್ರವಲ್ಲದೆ ಸಕಲ ದೇಹಧಾರಿಗಳಿಗೂ ಪ್ರಿಯತಮನು, ಸಕಲ ಬಂಧುರೂಪನು, ಅಂತರ್ಯಾಮಿಯೂ ಆಗಿರುವೆ. ಸಾರಾಸಾರ ವಿವೇಕಿ ಗಳು ದುಃಖವನ್ನೇ ಕೊಡುವ ಪತಿಸುತಾದಿ ನಶ್ವರಬಂಧುಗಳನ್ನು ಬಿಟ್ಟು, ಸ್ವಾಮಿಯು ನಿತ್ಯ ಪ್ರಿಯನು ಸುಖಪ್ರದನಾದ ನಿನ್ನನ್ನೇ ಭಜಿಸುವರಲ್ಲವೇ? ವರದರಾಜ! ನಮ್ಮ ಆಶೆಯನ್ನೀ ಡೇರಿಸು! ನಮ್ಮಲ್ಲಿ ಪ್ರಸನ್ನನಾಗು! ನಿನ್ನಲ್ಲಿ ಚಿತ್ತವನ್ನಿಟ್ಟ ನಮ್ಮ ಕೈಗಳು ಮನೆಗೆಲಸಗಳನ್ನು ಮರೆತುಬಿಡುತ್ತಿವೆ. ನಿನ್ನ ಪಾದಮೂಲದಿಂದ ಒಂದು ಹೆಜ್ಜೆಯಾದರೂ ದೂರ ಸರಿಯದಾಗಿವೆ ನಮ್ಮ ಪಾದಗಳು. ವ್ರಜಕ್ಕೆ ಹೋಗುವುದಾದರೂ ಹೇಗೆ ಹೇಳು? ಹೋದರೂ ಮಾಡುವುದ ರೇನು? ನಿನ್ನ ಮಂದಸ್ಮಿತ ಕಟಾಕ್ಷಪಾತ, ಕಲಗೀತಗಳಿಂದ ಉದ್ದೀಪಿತವಾದ ಮನ್ಮಥಾಗ್ನಿಯನ್ನು ಅಧರಾಮೃತಧಾರೆಯಿಂದ ಶಾಂತವಾಗಿಸಲು; ಇಲ್ಲದಿರೆ ನಿನ್ನ ವಿರಹಾಗ್ನಿಯಿಂದ ಬೆಂದ ದೇಹ ಗಳನ್ನು ಬಿಟ್ಟು ನಿನ್ನ ಪಾದಾರವಿಂದವನ್ನೇ ಸೇರುವೆವು. ಪ್ರಿಯಕೃಷ್ಣ! ನಿನ್ನ ಚರಣನಲಿನವನ್ನು ರಮೆಯು ಆಶ್ರಯಿಸಿರುವಳು. ಅರಣ್ಯನಿವಸನಶೀಲರಾದ ಸನ್ಯಾಸಿಗಳು ಅದನ್ನೇ ನಂಬಿ ಭಜಿಸುತ್ತಿ ರುವರು. ಅಂತಹ ನಿನ್ನ ಪಾದಕಮಲರೇಣುವನ್ನು ಮುಟ್ಟಿ ಶಿರದಲ್ಲಿಟ್ಟು ಮತ್ತೆ ಮತ್ತೊಬ್ಬನನ್ನು ಮುಖವೆತ್ತಿ ನೋಡಲಾರೆದವು. ಸಕಲ ಸುರರು ಅಪೇಕ್ಷಿಸುವರು ಶ್ರೀದೇವಿಯ ಕಟಾಕ್ಷಭಾಗ್ಯ ವನ್ನು; ಅಂತಹ ಶ್ರೀದೇವಿಯು ಉನ್ನತ ವಿಶಾಲ ವಕ್ಷಃಸ್ಥಲದಲ್ಲಿದ್ದೂ ಸಾಲದೆಂಬಂತೆ ನಿನ್ನ

ಸುಂದರ ಚರಣಾರವಿಂದವನ್ನು ತುಲಸಿಯಂತೆ, ಭಕ್ತ ಜನರಂತೆ, ಪೊಂದಲಿಚ್ಛಿಸುವಳೆಂದಮೇಲೆ, ನಿನ್ನ ಚರಣದಾಸಿಯರಾದ ನಾವೂ ಅಂತೆಯೇ ಬೇಡುವುದೇನಾಶ್ಚರ್ಯವು! ದಯಮಾಡು! ಮನೆಮಾರುಗಳನ್ನು ದೂರೀಕರಿಸಿ, ಲಕ್ಷಿಸದೆ ಲಕ್ಷ್ಮೀರಮಣನಾದ ನಿನ್ನ ಚರಣಾರವಿಂದವನ್ನು ಸೇವಿಸಬೇಕೆಂಬ ಆಶೆಯಿಂದ ಬಂದೆವು. ನಿನ್ನ ಸುಂದರ ಮಂದಹಾಸವನ್ನು, ನಿನ್ನ ಕರುಣಾಕಟಾಕ್ಷ ವನ್ನು ಬಯಸಿ ನಿಂದಿರುವೆವು. ಕಾಮತಪ್ತನಾದ ನಮ್ಮ ಮನವನ್ನು ನಿನ್ನ ಚರಣನೀರೇಜ ಸ್ಪರ್ಶವನ್ನಿತ್ತು ಶಾಂತಗೊಳಿಸು. ನಿನ್ನ ದಾಸ್ಯಸೌಭಾಗ್ಯವನ್ನು ನಮಗೆ ದಯಪಾಲಿಸು.

ದರ್ಶನೀಯ ಪುಣ್ಯಮೂರ್ತೇ! ನಿನ್ನ ಅಲಕಾಲಿವೃತ ಮುಖ, ನಿನ್ನ ಮಂದಹಾಸ, ನಿನ್ನ ಕರುಣಾಕಟಾಕ್ಷ, ನಿನ್ನ ಮಕರಕುಂಡಲ ಶೋಭಿತ ಗಂಡಸ್ಥಲ, ನಿನ್ನ ಅಭಯಹಸ್ತ, ನಿನ್ನ ರಮಾ ನಿವಾಸೋಚಿತ ವಕ್ಷ, ನಿನ್ನ ತುಲಸಿಕಾಮೋದ ಸುಂದರ ಚರಣಾರವಿಂದ – ಇವನ್ನು ನೋಡಿ – ಮೋಹಿತರಾಗಿ ನಿನ್ನ ದಾಸಿಯರಾಗಿರುವೆವು. ನಿನ್ನ ವೇಣುಮಧುರಗಾನದಿಂದ ಮುಗ್ಧರಾಗಿರು ವೆವು. ಶ್ರೀನಿವಾಸ! ನಿನ್ನ ತ್ರಿಲೋಕಮಂಡನವಾದ ರೂಪವನ್ನು ನೋಡಿ ಗೋವುಗಳು, ಪಕ್ಷಿಗಳು, ಜಿಂಕೆಗಳು ಪುಲಕಾಂಚಿತವಾಗಿ ಕದಲದೆ ನಿಂತಿವೆ; ನಿನ್ನ ವೇಣುಗಾನ ಶ್ರವಣಾನಂದಭರಿತವಾಗಿ ತರುಲತಾಗುಲ್ಮಗಳು ಕೂಡ ಪಲ್ಲವ ಫಲ ಕುಸುಮ ಸ್ಫುರಣದಿಂದ, ಸೀರೆಯನ್ನುಟ್ಟು, ಹೂವನ್ನು ಮುಡಿದು ತಲೆಬಾಗಿ ನಿಂತು ನಮಸ್ಕರಿಸುವ ನಮಗೆ ಕರ್ತವ್ಯವಾದ ಆತ್ಮಸಮರ್ಪಣೆಯನ್ನು ಸೂಚಿಸುತ್ತಿವೆ. ಸರ್ವಸ್ವಾಮಿಯು, ಭರ್ತೃ ಗುಣಭರಿತನು, ವ್ರಜಭಯನಿವಾರಕನು, ಸುಂದರ ವಾಮನರೂಪನು ಆದ ನಿನ್ನನ್ನು ಬೇಡದ - ನಿನ್ನ ದಿವ್ಯಸಂಗಸುಖವನ್ನು ಕೋರದ ತರುಣಿಯು ತ್ರಿಲೋಕದಲ್ಲಿರುವಳೇ? ದೀನನಾಥ! ರಮಾನಾಥ! ತಪ್ತವಾದ ನಮ್ಮ ಸ್ತನಕಲಶಗಳಲ್ಲಿ ನಿನ್ನ ಕರಸರೋಜವನ್ನಿಡು. ನಮ್ಮ ತಲೆಯಲ್ಲಿ ಕೈಯಿಟ್ಟು, ತಾಪವನ್ನು ಪರಿಹರಿಸು.

ಇಂತು ಕಾಮಾರ್ತಕಾಂತೆಯರ ವಚನವನ್ನು ಕೇಳಿ, ಯೋಗಮಾಯಾವಲ್ಲಭನಾದ ಶ್ರೀಕೃಷ್ಣನು ನಸುನಕ್ಕು ಅವರಿಂದ ಕೂಡಿ ನಲಿದನು. ಆತ್ಮರಾಮನು ಅವರಲ್ಲಿ ರಮಿಸಿದನೆಂದರೆ ಅವನ ದಯೆ ಹೊರತು ಅನ್ಯಪ್ರಯೋಜನವು ರಮೇಶನಿಗಿರುವುದೇ? ವಿಕಸಿತ ಮುಖಿಯರಿಂದ ಕೂಡಿ ಕುಂದಕುಟ್ಮಲ ರಮಣೀಯದಂತಕಾಂತಿಯಿಂದಲೊಪ್ಪುವ ಮಂದಹಾಸ ಚಂದ್ರಿಕೆಯನ್ನು ಬೀರಿ ಶ್ರೀಶನು, ನಕ್ಷತ್ರಗಣಮಧ್ಯದ ಸುಧಾಕರನಂತೆ ವಿರಾಜಿಸಿದನು. ಅನೇಕ ಲಲನೆಯರಿಂದ ಕೂಡಿ ಹಾಡಿ ಕುಣಿಯುತ್ತಾ, ವೈಜಯಂತೀಮಾಲಾಧರನು ವನಸಂಚಾರವನ್ನು ಮಾಡಿದನು. ಶಿಶಿರವಾಲುಕಾಪುಲಿನಗಳಲ್ಲಿ ಕೂತು, ನದಿಯ ಕುಮುದಾಮೋದವನ್ನು ಪೊತ್ತು ತರುವ ವಾಯು ಪೋತಸೇವಿತನಾಗಿ, ಆಲಿಂಗನ, ಬಾಹುಪ್ರಸಾರ, ನರ್ಮಕರಪಾತಗಳಿಂದ ಗೋಪಿಯರನ್ನು ರಮಿಸಿ, ಸಂತೈಸಿದನು.

ಇಂತು ಕೃಷ್ಣರಮಣಿಯರಾಗಿ ತಾವು ಪೊಂದಿದ ಸುರತಸುಖಮತ್ತರಾದ ಮತ್ತಕಾಶಿನಿಯರು ಭೂಮಿಯಲ್ಲಿ ತಮ್ಮಂತಹ ಸುಂದರಿಯರಿಲ್ಲವೆಂದು ತಿಳಿದು ಗರ್ವಿತರಾದರು ಅವರ ಸೌಂದರ್ಯಮದವನ್ನಿಳಿಸಿ, ಕಾಮವನ್ನಳಿಸಲು ನಿಶ್ಚಯಿಸಿ ನೀರಜಾಕ್ಷನು, ತತ್‌ಕ್ಷಣವೇ ಕಣ್ಣಿಗೆ ಕಾಣದಾದನು.

## ೨೮. ಗೋಪಿಕಾಭಕ್ತಿ – ಅನ್ವೇಷಣ – ವನಗೀತೆ

ಶ್ರೀಶುಕನು ಹೇಳಿದನು–

ರಾಜನ್! ಕೇಳು, ಶ್ರೀಕೃಷ್ಣನು ಮರೆಯಾಗಲು ಮಾನಿನಿಯರು ಅವನ ಮಂದಹಾಸ ಕಟಾಕ್ಷಮಧುರಾಲಾಪ ವಿಹಾರ ವಿಲಾಸಗಳನ್ನು ನೆನೆನೆನೆದು, ಅವನಂತೆ ಅನುಕರಿಸಿ ತಿರುಗುತ್ತಾ, ಮನವನ್ನವನಿಗೊಪ್ಪಿಸಿ, ಮೈಮರೆತರು. ಅಕ್ಕೋ ಕೃಷ್ಣ, ಇಕ್ಕೋ ರಮಣನೆಂದು ಹುಡುಕುತ್ತಾ, ಹಾಡುತ್ತಾ, ಹುಚ್ಚರಂತೆ ವನದಂತೆ ವನವನ್ನು ಪೊಕ್ಕು ನೋಡಿದರು. ಆಕಾಶದಂತೆ ಎಲ್ಲ ಕಡೆಯು ನಿಂತಿರುವ ಶ್ರೀರಮಣನನ್ನು ಕಾಮದಿಂದ ಕಾಣಲಾರದೆ ಉನ್ಮತ್ತರಾಗಿ ಗಿಡಬಳ್ಳಿಗಳನ್ನೂ 'ಕೃಷ್ಣನನ್ನು ಕಂಡಿರಾ?' ಎಂದು ಕೇಳಿದರು.

ಅಶ್ವತ್ಥ; ಕಿಂಶುಕ! ನಂದನಂದನನು ಇಲ್ಲಿಗೆ ಬಂದಿದ್ದನಾ? ನೀವಾದರೂ ಅವನ ಕಟಾಕ್ಷ ಭಾಗ್ಯವನ್ನು ಪಡೆದಿರಾ? ಕುರುವಕ! ಅಶೋಕ! ಚಂಪಕ! ರಾಮನ ತಮ್ಮ, ನಮ್ಮ ಮನೋಹರ ನನ್ನು ಕಂಡಿರಾ? ಕೃಷ್ಣ! ಎಂಬ ನುಡಿಯೇ ಶ್ರವಣಾನಂದವಲ್ಲವೇ? ಅಂತೆಯೇ ಕೃಷ್ಣನಾಮ ಶ್ರವಣಾನಂದತುಂದಿಲರಾಗಿ ಮಾತಾಡದೆ ಸುಮ್ಮನಿರುವಿರೇನು? ಗೋವಿಂದಚರಣಪ್ರಿಯೇ! ತುಲಸಿ! ನಮಗೂ ಅವನ ಚರಣದರ್ಶನವನ್ನು ಮಾಡಿಸು! ಏನು ಬಲು ಸೊಗಸಾಗಿರುವೆ? ನಿನಗೂ ಅವನ ಕರಸ್ಪರ್ಶವಾಗಿರುವುದೇ? ಮಲ್ಲಿಕೇ! ಜಾತಿ! ಕರವೀರ! ವೀರಕೃಷ್ಣ ಕರಸ್ಪರ್ಶಾ ನಂದದಿಂದ ಅರಳಿ ನಿಂತಿರುವ ನಿಮ್ಮ ಭಾಗ್ಯದಿಂದ ದೂರವಾಗಿರುವ ನಮ್ಮಲ್ಲಿ ಕರುಣೆಯಿಂದ ಕೃಷ್ಣನೆಲ್ಲಿರುವನೋ ಪೇಳಿ!

ಮಾವಿನಮರವೇ! ನೀನಾದರೂ ಹೇಳು. ಕೃಷ್ಣನೆಲ್ಲಿ? ನೆಲ್ಲಿ! ಎಲ್ಲಿ ವಾರಿಜಾನನ? ಪನಸ! ಕೋವಿದಾರ! ಕೋವಿದಪ್ರಿಯನು ವಾರ್ತೆ ಏನು? ಬಿಲ್ವ! ಜಂಬು! ಕದಂಬ! ನೀಪ! ನೀವೆಲ್ಲರು ಪರಾರ್ಥೈಕಪರಾಯಣರಾಗಿಯು ನಮ್ಮಲ್ಲಿ ಮಾತ್ರ ಕರುಣೆಸದಿರುವುದುಚಿತವೇ? ಕೃಷ್ಣನ ಸುಮಧುರಗಂಧವೂ ನಿಮಗೆ ತಾಕಿಲ್ಲವೇ?

ಭೂದೇವಿ! ಪುಲಕತೃಣಗಣರಂಜಿತಳಾಗಿರುವೆ. ಏಕೆ? ಓಹೋ! ಕೃಷ್ಣನ ಪಾದಸ್ಪರ್ಶ ಫಲವಿದು, ತಿಳಿಯಿತು! ನೀನೇನು ಪುಣ್ಯವನ್ನು ಮಾಡಿದ್ದೆಯೋ ನಮಗೂ ಹೇಳು! ವರಾಹನಾಗಿ ಆಲಿಂಗಿಸಿದ ಸ್ವಾಮಿ, ಕೃಷ್ಣನಾಗಿ ಚರಣಸೇವೆಯನ್ನಿತ್ತು ನಿನ್ನನ್ನುದ್ಧರಿಸಿದಂತೆ ನಮ್ಮನ್ನೂ ಸಂಸಾರ ಮರುಭೂಮಿಯಿಂದ ಉದ್ಧರಿಸಿ, ಕರುಣೆಸಬಾರದೇ? ಸವತಿಯಾದ ನೀನು ನಮ್ಮ ದುಃಖವನ್ನು ಕಂಡು ಸಂತೋಷದಿಂದ ಪುಲಕಿತಳಾಗಿ, ಕೃಷ್ಣನನ್ನು ಪ್ರತಿಮೆಯಂತೆ ಒಳಗಿಟ್ಟುಕೊಂಡು, ಮಾತಾ ಡದೆ ಕಲ್ಲಾಗಿರುವೆಯಾ?

ಹರಿಣಿ! ಬಂದ ನಂದನಂದನನನ್ನು ನೋಡಿಲ್ಲವೇ? ಕಾಂತೆಯರ ಕುಚಕುಂಕುಮ ಗಂಧ ವನ್ನು, ಪೂಮಾಲೆಯ ವಾಸನೆಯನ್ನು, ಹೊತ್ತು ಮೆಲ್ಲನೆ ಸಂಚರಿಸುತ್ತಿರುವನೀ ಮಲಯ ಮಾರುತನು. ಬಂದಿರಬೇಕಿಲ್ಲಿ ಗೋವಿಂದ. ಏಕೆ ಮಾತಾಡದಿರುವೆ?

ಹಾಳಾಗಿ ಹೋಗಿ! ಯಾರೂ ಕೃಷ್ಣನ ವಾರ್ತೆ ಹೇಳದಿರುವಿ; ಇದು ಸಲ್ಲದು. ಅಶ್ವತ್ಥ! ನೀನು ಪಿಶಾಚನಿವಾಸನಾಗು! ನಾರಿಕೇಳ! ನಿನ್ನ ಫಲದಿಂದ ತಲೆಯೊಡೆಯಲು ಜನರು ನಿನ್ನನ್ನು ಸೀಳಿ ತಿನ್ನಲಿ! ಹರಿಣಿ! ನೀನು ಬೇಟೆಗೆ ತುತ್ತಾಗು. ಹುಣಸೆಮರವೇ? ನಿನ್ನ ಹಣ್ಣು ನಿನ್ನ ಮನದಂತೆ ವಕ್ರವಾಗಲಿ! ನೀನು ಹೊಡೆಯಲು ವಿನಿಯುಕ್ತನಾಗು. ನಿಮಗೆ ಶಾಪಮೋಕ್ಷವು ಬೇಕಾಗಿದ್ದರೆ

ಮಾತಾಡಿ! ಹೇಳಿ! ಕೃಷ್ಣನು ತನ್ನ ಸಖಿಭುಜದಲ್ಲಿ ಒಂದು ಕೈಯನ್ನಿಟ್ಟು, ಮತ್ತೊಂದರಲ್ಲಿ ಕಮಲವನ್ನು ಪಿಡಿದು, ಲೀಲಾಜಾಲವನ್ನು ಬೀರುತ್ತಾ, ಹಿಂದೆ ತುಲಸೀಧಾಮ ಮಕರಂದ ಪಾನ ಲೋಲವಾದ ಮಧುಕರಗಳು ಬರುತ್ತಿರಲು, ಕಡೆಗಣ್ಣಿನಿಂದ ನಿಮ್ಮ ಬಾಗಿದ ಕೈಗಳ ಕಾಣಿಕೆಯನ್ನು ಮುಟ್ಟಿ ಸ್ವೀಕರಿಸಿದವನೇ? ವನಸ್ಪತಿಗಳ ಬಾಹುಶಾಖಾಶ್ರಿತರಾಗಿದ್ದೂ ಲತೆಯರು ಆ ಕೃಷ್ಣನ ಕರಸ್ಪರ್ಶದಿಂದ ಪುಲಕಿತರಾಗಿರುವರಲ್ಲ.

ಇಂತು ತರುಗಳನ್ನು ಕೇಳುತ್ತಾ ನಡೆದುಬಂದು, ಒಂದು ಕಡೆ ಶ್ರೀಕೃಷ್ಣನ ಪದಶುಭ ಚಿಹ್ನೆಗಳನ್ನು ಕಂಡರು. ಧ್ವಜ ವಜ್ರಾಂಕುಶಯವ ಚಕ್ರಾದಿ ಶುಭಲಕ್ಷಣಲಕ್ಷಿತವಾದ ಪಾದದ ಗುರ್ತುಗಳು ನಂದನಂದನನವೇ ಎಂದು ನಿಶ್ಚಯಿಸಿ, ಅವನ್ನು ಪಿಡಿದು, ಮುಂದೆ ಸುಂದರಿ ಓರ್ವಳ ಪಾದ ಚಿಹ್ನೆಗಳನ್ನೂ ಕಂಡು, ಈರ್ಷ್ಯಾವಶರಾಗಿ ಇಂತೆಂದರು–

ಯಾರೇ ಇವಳು? ನಂದಸೂನುವಿನ ಹಿಂದೆಯೇ ಬಿಡದೆ ನಡೆದಿರುವಂತಿದೆ ಇವಳ ಪಾದದ ಮುದ್ರಿಕೆಗಳು! ಕರಿಣಿಯ ಮೇಲೆ ಸೊಂಡಿಲವನ್ನಿಟ್ಟು ನಡೆಯುವ ಭದ್ರಗಜದಂತೆ, ಗೋವಿಂದ ನಿವಳ ಹೆಗಲಲ್ಲಿ ಕೈಹಾಕಿ, ಕರೆದೊಯ್ದಿರುವನು! ನಮ್ಮನ್ನಲ್ಲವೆಂದು ಇವಳನ್ನು ಸ್ವೀಕರಿಸಲು, ಇವಳು ಮಾಡಿದ ಪೂರ್ವಸುಕೃತವೇನಿರಬಹುದು? ಎಷ್ಟು ಹರಿಪೂಜೆಯನ್ನು ಮಾಡಿದಳೋ? ಸಖಿಯರೇ! ರಮಾಬ್ರಹ್ಮ ರುದ್ರಾದಿ ದೇವತೆಗಳು ಶಿರದಲ್ಲಿಡುವ ಗೋವಿಂದನ ಪಾಪಪಂಕಜ ಪರಾಗವನ್ನು ಸೇವಿಪ ಭಾಗ್ಯ ಇವಳಿಗೆಂತು ಸಿಕ್ಕಿತು? ಏಕಾಂತದಲ್ಲಿ ಸ್ವವಶನಾದ ಕೇಶವನ ಅಧರಾಸವಪಾನವನ್ನು ಮನಸಾರೆ ಮಾಡುವ ಮಾನಿನೀಮಣಿಯನ್ನು ಕಂಡು ಮನಸ್ಸಿಗೆ ಮಹತ್ಕಷ್ಟ ವಾಗಿದೆ. ಅಲ್ಲವೇ! ಇಲ್ಲಿ ಅವಳ ಹೆಜ್ಜೆಗಳಿಲ್ಲ. ಹುಲ್ಲಿನಲ್ಲಿ ಕಾಣಲಿಕ್ಕಿಲ್ಲವೆಂದು ತೋರುತ್ತಿದೆ. ಇಲ್ಲಿಯೂ ಇಲ್ಲವಲ್ಲ! ಅವಳನ್ನೆತ್ತಿಕೊಂಡು ನಡೆದ ನಂದಸುತನ ಪಾದಗಳ ಗುರ್ತು ಆಳವಾಗಿವೆ. ಅವಳಿಗೆ ಕಾಲು ನೊಂದಿರಬಹುದೇ? ಅವಳ ಈ ಭಾಗ್ಯವನ್ನು ಕಂಡು ನಮಗೆ ಮನವೇ ನೊಂದಿದೆ. ನಮ್ಮ ಕಾಲು ನೋವನ್ನು ಕೇಳುವವರಾರು? ಇಕ್ಕೊ ಇಲ್ಲಿ ಹುವ್ವನ್ನಾರಿಸಲು ಇಳಿದು ನಡೆದ ಅವಳ ಗುರ್ತುಗಳಿವೆ. ಅವಳಿಗಾಗಿ ಕೃಷ್ಣನೂ ಹೂವನ್ನಾರಿಸಿ ಅವಳಿಗೆ ಮುಡಿಸಿರಬೇಕು. ಹಿಂಬುಟವೇ ಊರದ ಗುರ್ತು ಮತ್ತೇನನ್ನು ತಿಳಿಸುವುದು? ಕೃಷ್ಣನು ಇಷ್ಟು ಪ್ರಶಸ್ತನೇ ನಿಜ! ಆತ್ಮರತನಾದ ಶ್ರೀರಮಣನು ಅವಳಿಂದ ಕೂಡಿ ಕ್ರೀಡಿಸುವುದು ನಟವಿಡಂಬನದಂತೆಯಲ್ಲವೇ? ವಿಟನಂತೆ ಕಪಟಿಯಲ್ಲದ ಜಗನ್ನಾಟಕ ಸೂತ್ರಧಾರನಿಗೆ ನಮೋ ನಮಃ.

ಇಂತು ಪ್ರಲಪಿಸುತ್ತಾ ಗೋಪಿಯರು ವನದಲ್ಲಿ, ದುಷ್ಟನಾರಿಯರ ದೈನ್ಯಸಾಹಸ ದುರ್ಮಾನಸಗಳ ಪರಿಯನ್ನು ಪ್ರಕಟಿಸಿ, ತಿರುಗುತ್ತಿದ್ದರು. ಆಗ ಒಂದೆಡೆ ಗೋವಿಂದನ ಹಿಂದೆ ನಡೆದು ಬಂದ ಸುದತಿಯು ಸೌಂದರ್ಯದರ್ಪಿತಳಾಗಿ 'ಕೃಷ್ಣಾ! ನಾನು ನಡೆಯಲಾರೆ. ನಿನಗೆ ಬೇಕಾದಲ್ಲಿ ನನ್ನನ್ನು ಹೊತ್ತು, ಕರೆದುಕೊಂಡು ಹೋಗು' ಎಂದಳು. ಕೃಷ್ಣನು ಅವಳನ್ನು ಜಾಲಿಯ ಮರದ ಕೊಂಬೆಗೇರಿಸಿ, ಭುಜದ ಮೇಲೆ ಬಾ ಕೂಡೆಂದನು. ಅವಳು ನೋಡುವಷ್ಟರಲ್ಲೇ ಕೃಷ್ಣನು ಮಾಯವಾಗಿದ್ದನು. ಭಯಭೀತಳಾಗಿ ಆ ತಲೋದರಿ 'ನಾಥ! ಬಾ, ಪ್ರಿಯತಮ! ಎಲ್ಲಿರುವೆ? ನಿನ್ನ ದಾಸಿ! ದೀನಳಾಗಿರುವೆನು. ದರ್ಶನವನ್ನು ಕೊಡು. ಕೃಷ್ಣಾ!' ಎಂದೆರಲುವುದು ಇತರ ತರುಣಿಯರು ಕೇಳಿ, ಓಡಿಬಂದರು.

ಅವರು ಪ್ರಿಯರಹಿತಳಾಗಿ ದುಃಖಿಸುವ ಸತಿಯನ್ನು ಕಂಡು, ಅವಳ ಕಥೆಯನ್ನು ಕೇಳಿ ತಿಳಿದರು; ಅಪರೋಕ್ಷವನ್ನಿತ್ತ ಹರಿಯು, ದರ್ಪದಿಂದ ದುರ್ಮಾನವನ್ನು ತೋರಿದುದರಿಂದ

ದೂರನಾದುದನ್ನು ಕೇಳಿ, ಆಶ್ಚರ್ಯಪಟ್ಟರು. ವನದಲ್ಲಿ ಹುಡುಕುತ್ತ ಮೋಡಗಳ ಕತ್ತಲು ಕವಿಯಲು, ಮತ್ತೆ ಯಮುನಾಪುಲಿನವನ್ನು ಸೇರಿದರು; ಒಂದೇ ಮನದಿಂದ ಗೋವಿಂದನನ್ನು ನೆನೆದು, ಅವನ ಮಹಿಮೆಯನ್ನು ವರ್ಣಿಸಿದರು; ಅವನಂತೆ ಅನುಕರಿಸಿ ಮೈಮರೆತು ನಿಂತರು. ಮನೆಯ ವಿಷಯವನ್ನೆಲ್ಲ ಮರೆತು, ಕೃಷ್ಣ! ಎಂದು ಜಪಿಸಿದರು. ಅವನ ಬರುವಿಕೆಯನ್ನು ಕೋರಿ, ಆ ಕಲಕಂಠಿಯರು ಕಲೆತು ಪಾಡಿ, ಅವನನ್ನು ಕರೆದರು.

## ೨೯. ಗೋಪಿಗೀತೆ

ಕೃಷ್ಣ! ನಿನ್ನ ಹುಟ್ಟಿನಿಂದ ನಮ್ಮ ಗೋಕುಲವೇ ಸರ್ವಶ್ರೇಷ್ಠವೆನಿಸಿದೆ. ನೀ ಬಂದುದರಿಂದ ಇಂದಿರೆಯೂ ಬಂದು ಅಲ್ಲೇ ನೆಲೆಸಿರುವಳು. ಪ್ರಿಯತಮ! ನಿನ್ನ ನೋಡುವ ಆಶೆಯಿಂದ ಬಂದಿರುವೆವು. ನಿನ್ನಲ್ಲೇ ಪ್ರಾಣವನ್ನಿಟ್ಟು, ನಿನ್ನನ್ನು ಹುಡುಕುವ ನಮಗೆ ಗೋಚರನಾಗು. ಗರುಡವಾಹನ! ನಮ್ಮ ವ್ರಜದ ಜನರ ದುಃಖವನ್ನು ನೀನೇ ಅಲ್ಲವೆ ಕಳೆಯುವುದು? ಕಾಮ ಸಮೃದ್ಧಿಯನ್ನಿತ್ತು ನಿನ್ನ ಪ್ರೇಮಸಮೃದ್ಧಿಯನ್ನು ಬೇಡುವೆವು. ನಿನ್ನವರಾದ ನಮ್ಮ ಗರ್ವವನ್ನು ಕಳೆಯುವ ನಿನ್ನ ಮಂದಹಾಸವೇ ಸಾಕು. ನಿನ್ನ ದಾಸಿಯರಾದ ನಮಗೆ ವದನಕಮಲವನ್ನು ತೋರು! ಶರತ್ಕಾಲದ ಚೆನ್ನಾದ ಹೊಂದಾವರೆಯ ಸೊಬಗನ್ನು ಸೂರೆಗೊಂಡ ನಿನ್ನ ಕಟಾಕ್ಷವನ್ನು ಬೀರು! ನೀಕೊಂಡ ದಾಸಿಯರಲ್ಲವೇ ನಾವು? ಮರಣವನ್ನಾದರೂ ಕೊಡು; ವಿರಹವನ್ನಲ್ಲ.

ವಿಷಜಲದ ಕಾಳಿಯನಿಂದ, ತೃಣಾವರ್ತನಿಂದ, ಗಾಳಿಮಳೆಗಳಿಂದ, ಕಾಡುಕಿಚ್ಚಿನಿಂದ, ವತ್ಸಾಸುರನಿಂದ, ಇನ್ನು ಅನೇಕ ವಿಪದ್ಗಣದಿಂದ ನಮ್ಮನ್ನು ಪುನಃ ಪುನಃ ಕಾಪಾಡಿ, ಈಗ ವಿರಹಾಗ್ನಿಗೆ ಬಲಿಕೊಡುವೆಯಾ? ನೀನು ಗೋಪೀನಂದನನಲ್ಲ; ವಿರಿಂಚನಿಂದ ಪ್ರಾರ್ಥಿತನಾಗಿ ವಿಶ್ವಸುಜರನ್ನು ರಕ್ಷಿಸಲು ಯಾದವಕುಲದಿ ಜನಿಸಿದ ಸರ್ವಾಂತರ್ಯಾಮಿ ನಾರಾಯಣನೆಂದು ತಿಳಿದಿರುವೆವು. ಸಂಸಾರಭಯದಿಂದ ನಿನಗೆ ಶರಣು ಬಂದವರ ಭಯವನ್ನು ನಿವಾರಿಸಿ, ಸರ್ವ ಕಾಮಿತಗಳನ್ನು ಕೊಡುವ ಹಾಗೂ ಶ್ರೀರಮಣಿಯನ್ನು ಪಿಡಿದ ಮಂಗಲಹಸ್ತವನ್ನು ನಮ್ಮ ಮಸ್ತಕದಲ್ಲಿಡು. ನಮಸ್ಕರಿಸಿದವರ ಪಾಪವನ್ನು ಕಳೆವ, ಆಕಳನ್ನು ಮೇಯಿಸುವಾಗ ವನದಲ್ಲಿ ತಿರುಗಿದ, ಶ್ರೀದೇವಿನಿಲಯವಾದ ನಿನ್ನ ಪಾದಪದ್ಮವನ್ನು ಕುಂಕುಮಪಂಕರಾಗರಂಜಿತವಾದ ನಮ್ಮ ಸ್ತನಗಳಲ್ಲಿಟ್ಟು, ಕಾಳಿಯನ ಫಣೆಗಣಾರ್ಪಿತವಾದುದರಿಂದ ಆಗಿದ್ದ ಹೃತ್ತಾಪವನ್ನು ದೂರೀಕರಿಸು! ಪಂಡಿತಜನ ಮನೋಹರವು, ರಹಸ್ಯಾರ್ಥಗರ್ಭಿತವು ಆದ ನಿನ್ನ ಮಧುರ ವಚನಸುಧಾರಸವನ್ನು ನಮ್ಮ ಕರ್ಣಪುಟಗಳಲ್ಲಿ ತುಂಬು! ಅಂಬುಜೇಕ್ಷಣ! ನಿನ್ನ ಅಜ್ಞಾನು ವರ್ತನರಾದ ಈ ಮುಗ್ಧ ಮಾನಿನಿಯರು ನಿನ್ನ ಅಧರಾಮೃತಪಾನವನ್ನು ಬಯಸಿ ಬಂದಿರು ವರು. ಕಲಿಮಲ ಕಲ್ಮಷ ಹರವೆಂದು ಕವಿವರರು ಪಾಡುವ ನಿನ್ನ ಕಥಾಮೃತವು, ಶ್ರವಣ ಮಾತ್ರದಿಂದ ಮಂಗಲಪ್ರದವಾಗಿದೆ. ನಿನ್ನ ಕಥೆಯನ್ನು ಕೇಳಿ ಹೇಳುವವರೇ ಭಾಗ್ಯವಂತರು. ಕೇಳದವರು ಬಹು ದುಃಖಭಾಜನರಾಗುವರು. ನಿನ್ನ ಮಂದಹಾಸ, ಪ್ರೇಮಕಟಾಕ್ಷಪಾತ, ವಿಹಾರವಿಲಾಸಗಳನ್ನು, ನೀನಾಡಿದ ನರ್ಮವಚನಗಳನ್ನು ನೆನೆದು, ಹೃದಯಂಗಮನಾದ ನಿನ್ನನ್ನು ಸ್ಮರಿಸುವ ನಮ್ಮ ಮನವು ತಲ್ಲಣಿಸುತ್ತಿದೆ.

ವ್ರಜದಿಂದ ಪಶುಗಳನ್ನು ಕರೆದುಕೊಂಡು ವನದಲ್ಲಿ ಪ್ರವೇಶಿಸಿ ತಿರುಗುವಾಗ ಅರವಿಂದ ಕೋಮಲ ಚರಣಗಳಿಗೆ ಕಲ್ಲುಮುಳ್ಳಿನಿಂದ, ಎಷ್ಟು ನೋವಾಗುವುದೋ ಎಂದು ನೊಂದು, ನಮ್ಮ ಹೃದಯದಲ್ಲಿ ನಟ್ಟದಂತೆ ವ್ಯಥೆಪಡುತ್ತಿರುವೆವು. ಸಾಯಂಕಾಲದಲ್ಲಿ ನೀಲಕುಂತಲ ಸಮಲಂಕೃತವಾದ ವದನಕಮಲದಿ ವನರಜವನ್ನು ಧರಿಸಿ ಬಂದ ನಿನ್ನ ದರುಶನದಿಂದ, ಮನ್ಮಥ ಮಥಿತಮನಸ್ಕರಾಗಿ, ಮನೆಕೆಲಸವನ್ನು ಮರೆತುಬಿಡುವೆವು. ರಮಾಬ್ರಹ್ಮಪೂಜಿತವು, ಭಕ್ತಜನ ಕಾಮಪೂರಕವು, ಆಪನ್ನಿವಾರಕವು, ಭೂತಲಾಲಂಕಾರಕವು, ಸಂಸಾರ ತಾರಕವು ಆದ ನಿನ್ನ ಚರಣಪಂಕಜವನ್ನು ನಮ್ಮ ಹೃದಯಸೀಮೆಯಲ್ಲಿಟ್ಟು, ನಮ್ಮ ಮನೋವ್ಯಾಧಿಯನ್ನು ದೂರೀ ಕರಿಸು. ವೇಣುವನ್ನು ನುಡಿಸುವಾಗ ಜಾರಿದ ನಿನ್ನ ಅಧರಾಮೃತವು ಇತರ ವಸ್ತುರಾಗವನ್ನು ಮರೆಸುತ್ತಿದೆ. ಅಡವಿಯಲ್ಲಿ ನೀನಿರುವ ಹಗಲಿನ ತ್ರುಟಿಯೇ ಯುಗವಾಗಿ, ನೀನು ಬಂದಾಗ ಜಡರಂತೆ ಎವೆಯಿಕ್ಕದೆ ನೋಡುವ ಯುಗವೇ ತ್ರುಟಿಯಾಗಿದೆ. ಏನಾಶ್ಚರ್ಯವು! ನಿನ್ನ ದರ್ಶನದಿಂದ ಮನುಷ್ಯನೂ ಅನಿಮಿಷನಾಗಿ ಬಿಡುವನು!

ಪತಿಸುತರನ್ನು, ಸೋದರ ಬಂಧುಜನರನ್ನು ತಿರಸ್ಕರಿಸಿ, ನಿನ್ನಲ್ಲಿ ಬಂದು ಶರಣಾಗತರಾಗಿರುವ ನಮಗೆ ನೀನೇ ಗತಿ ಎಂದು ತಿಳಿದಿರುವೆವು. ಕಪಟಿಯಾಗಬೇಡ. ಕೃಷ್ಣಾ! ಕತ್ತಲರಾತ್ರಿಯಲ್ಲಿ ತತ್ತರಿಸುವ ನಮ್ಮ ಕೈಪಿಡಿ; ಬಿಡಬೇಡ! ರಹಸ್ಯದ ಸವಿಮಾತನ್ನಾಡು! ನಗುತ್ತಾ ನಲಿಯುತ್ತಾ ಪ್ರೇಮದಿಂದ ನೋಡು! ವಿಶಾಲವಕ್ಷದಿ ರಮಿಸುವ ರಮೆಯನ್ನು ನೋಡಿ, ನಮ್ಮ ಮನಸ್ಸು ಮೋಹಿತವಾಗಿ ನಿನ್ನ ಸಂಗಕ್ಕಾಗಿ ಹಾತೊರೆಯುತ್ತಿದೆ. ವ್ರಜಜನರ ಪಾಪನಿವಾರಣೆಗಲ್ಲವೇ ನೀನವತರಿಸಿರುವುದು? ನಿನ್ನ ಮಹಿಮೆಯು ಭುವನಮಂಗಲಕರವಾಗಿದೆ. ನಿನ್ನಲ್ಲಿ ಸರ್ವಾಶೆಗಳನ್ನಿಟ್ಟು, ಆತ್ಮಸಮರ್ಪಣವಿಧಿಯಿಂದ ನಿನ್ನನ್ನು ಸೇರಿದ ನಿನ್ನವರನ್ನು ದರ್ಶನವನ್ನಿತ್ತು ಸಂತೈಸು!

## ೩೦. ಗೋಪಿಯರ ಭಕ್ತ್ಯುದ್ರೇಕ

ಶ್ರೀಶುಕನು ಹೇಳಿದನು–

ಇಂತು ಗೋಪಕಾಂತೆಯರು ಕೃಷ್ಣಮಹಿಮಾಗಾನವನ್ನು ಮಾಡಿ ಬಲು ಮಾತಾಡಿ, ಕೃಷ್ಣ ದರ್ಶನವನ್ನು ಕೋರಿ, ಭಕ್ತ್ಯುದ್ರೇಕದಿಂದ ಸುಸ್ವರವಾಗಿ ರೋದಿಸಿದರು.

ಆಗ ಮಂದಸ್ಮಿತ ಸುಂದರ ವದನಾಂಬುಜನು, ಪೀತಾಂಬರಧರನು, ವನಮಾಲಾ ಮನೋಹರನು ಆಗಿ ಸೌಂದರ್ಯರಸಸಾಗರನು ಪ್ರತ್ಯಕ್ಷನಾದುದಂ ಕಂಡು ಇಂದ್ರ ಚಂದ್ರ ಕಾಮಾದಿ ಪುರುಷದೇವತೆಗಳೂ ಮೋಹಿತರಾದರು. ಗೋಪಿಯರು ಪ್ರಿಯದರ್ಶನದಿಂದ ಸಂಭ್ರಾಂತರಾಗಿ, ನಿಂತು, ಅವನಿಗೆ ಸುಸ್ವಾಗತವನ್ನಿತ್ತರು. ತನುವಿನಲ್ಲಿ ಪ್ರಾಣ ಬಂದಂತಾಗಿ, ತನ್ವಂಗಿಯರು, ತಣಿಯದೆ ನೋಡಿ ತನ್ಮಯರಾದರು.

ಒಬ್ಬ ಲತಾಂಗಿ ತನ್ನ ಕೈಯಿಂದ ಕೃಷ್ಣನ ಕೈಯನ್ನು ಹಿಡಿದು ಕುಲುಕಿದಳು. ಮತ್ತೋರ್ವಳವನ ಚಂದನಚರ್ಚಿತವಾದ ಹಸ್ತವನ್ನೆತ್ತಿ ತನ್ನ ಭುಜದ ಮೇಲಿಟ್ಟುಕೊಂಡಳು. ಒಬ್ಬಳು ಕೈನೀಡಿ ತಾಂಬೂಲಚರ್ವಿತವನ್ನು ಸ್ವೀಕರಿಸಿದಳು. ಬೇರೊಬ್ಬಳು ಕೃಷ್ಣನ ಪಾದಪಂಕಜವನ್ನು ತನ್ನ ಹೃದಯದಲ್ಲಿಟ್ಟು, ತಾಪವನ್ನು ಮರೆತಳು. ಪ್ರಣಯಕೋಪದಿಂದ ಹುಬ್ಬನ್ನು ಗಂಟಿಕ್ಕಿ, ಒಬ್ಬಳು

ತುಟಿಯನ್ನು ಕಡಿಯುತ್ತಾ, ಕುಡಿಗಣ್ಣಿನಿಂದ ನೋಡಿದಳು. ಮಗದೋರ್ವ ಮುಗುದೆ ಕೃಷ್ಣ ಮುಖಾರವಿಂದ ಮಕರಂದವನ್ನು ನೇತ್ರಪುಟಗಳಲ್ಲಿ ತುಂಬಿ ಕುಡಿದು, ಸಾಕೆನಿಸದೆ, ಅವನ ಚರಣಸೇವೆಯಿಂದ ತಣಿಯದ ಸುಜನರಂತೆ, ನಿಶ್ಚಲಳಾಗಿ ನಿಂತಳು. ಎವೆಯಿಕ್ಕದೆ ನೋಡಿ, ಕಣ್ಣಿನಿಂದ ಮನದಲ್ಲಿಟ್ಟು, ಯೋಗಿಯಂತೆ ಆನಂದನಿರ್ಭರಳಾಗಿ, ಪುಲಕಾಂಕುರಿತಗಾತ್ರಿಯಾದಳು. ಕೇಶವದರ್ಶನವವರಿಗೆ ಪರಮೋತ್ಸವವಾಯಿತು. ಅವರ ವಿರಹತಾಪವು, ಪಂಡಿತನ ಸೇವೆಯನ್ನು ಮಾಡಿ ತಿಳಿದ ಮನುಜನ ಶೋಕದಂತೆ, ಮಾಯವಾಯಿತು. ಶ್ರೀಕೃಷ್ಣನು ತನ್ನ ಲಕ್ಷ್ಮೀರೂಪ ವಿವಿಧ ಶಕ್ತಿಗಳಿಂದಂತೆ, ಅವರಿಂದ ಕೂಡಿ, ಯಮುನಾಪುಲಿನದಲ್ಲಿ ಕೂತನು.

ಅಲ್ಲಿಗೆ ಕುಂದಮಂದಾರಗಳ ವಾಸನೆ ಸೂಸಿಬರುತ್ತಿತ್ತು. ಭ್ರಮಗಳು ಝುಂಕಾರದಿಂದ ಪಾಡಿದವು. ಶರಚ್ಚಂದ್ರನು ಧವಳಕರಗಳಿಂದ ತಮಸ್ಸನ್ನು ದೂರಮಾಡಿದನು. ಕಾಳಿಂದಿಯು ತನ್ನ ಪ್ರವಾಹದ ಶೀಕರಗಳಿಂದ ತಳಿಲನೀರನ್ನು ಚಲ್ಲಿದಳು. ಮನೋರಥವು ಈಡೇರಿ, ಹೃದಯತಾಪವು ನಶಿಸಲು, ಮುದದಿಂದ ಗೋಪಿಯರು ತಮ್ಮ ಕುಚಕುಂಕುಮಪಂಕಸಾಂಕವಾದ ಸೆರಗನ್ನು ಆ ವಾಯುಬಂಧುವಿಗೆ ಹಾಸಿ – ವೇದನಿಶ್ಚಯ ಜ್ಞಾನಿಜನರು ಹೃದಯದಲ್ಲಿ ಕೂಡಿಸುವಂತೆ ಶ್ರೀಕೃಷ್ಣನನ್ನು ಕೂಡಿಸಿದರು. ಯೋಗೇಶ್ವರರ ಹೃದಯಪೀಠದಲ್ಲಂತೆ, ಅಲ್ಲಿ ಕೂತು ತ್ರಿಲೋಕ ಸೌಂದರ್ಯ ಸಾರಸರ್ವಸ್ವನಾದ ಶ್ರೀಹರಿಯು ಅವರನ್ನು ಸಂತೋಷಪಡಿಸಿದನು. ಮಂದಹಾಸ, ಕಟಾಕ್ಷ, ಭ್ರೂಭಂಗಗಳಿಂದ ಅವನನ್ನು ಕಟ್ಟಿ ನಿಲ್ಲಿಸಿ, ಅವನ ಸ್ಪರ್ಶನದಿಂದ ಉಕ್ಕಿಬರುವ ಕಾಮವಿಕಾರವನ್ನಡಗಿಸಿ, ಸುಂದರ ತರುಣಿಯರು ಪ್ರಣಯಕೋಪದಿಂದ ಗೋವಿಂದನಿಗಿಂತೆಂದರು–

ಕೆಲವರು ಸೇವಿಸಿದವರಿಗೆ ಅನುಕೂಲ ಫಲವನ್ನಿತ್ತು ಸೇವಿಸುವರು. ಕೆಲವರು ಸೇವಿಸದಿದ್ದರೂ ಫಲವನ್ನಿತ್ತು ಸೇವಿಸುವರು. ಮತ್ತೆ ಕೆಲವರು, ಸೇವಿಸಿದರೂ, ಸೇವಿಸದಿದ್ದರೂ ತಾವು ಫಲವನ್ನಿತ್ತು ಸೇವಿಸದಿರುವರು. ಕೃಷ್ಣಾ! ಇವರಲ್ಲಿ ನೀನಾರು?' ಅವರ ಮನದಿಂಗಿತವನ್ನರಿತು ಅಂಗಜಜನಕನಿಂತೆಂದನು-

ರಮಣಿಯರೇ! ಭಜಿಸುವರನ್ನು ಭಜಿಸುವುದೆಂದರೆ ಸ್ವಾರ್ಥವಲ್ಲವೇ? ಅಂತಹವರು ಅನಿಮಿತ್ತವಾದ ಸ್ನೇಹವಿಲ್ಲದವರು. ಅವರಿಗೆ ಸ್ವಪ್ರಯೋಜನದಲ್ಲಿಯೇ ದೃಷ್ಟಿ! ಫಲೇಚ್ಛೆಯಿಂದ ಭಜಿಸದವರಿಗೂ ಫಲವನ್ನು ಕೊಡುವವರು. ತಂದೆಯಂತೆ ಪರೋಪಕಾರಶೀಲರಾಗಿರುವರು. ಅವರಿಗೆ ಸ್ವಾರ್ಥವಿಲ್ಲ. ಅವರ ಸ್ನೇಹವು, ಸಂಪ್ರಜ್ಞಾತ ಸಮಾಧಿಸ್ಥನ ಭಕ್ತಿಯಂತೆ ನಿರ್ದೋಷವೂ ನಿಪೇಕ್ಷವೂ ಆಗಿದೆ. ಇನ್ನು ಅಸಂಪ್ರಜ್ಞಾತ ಸಮಾಧಿಸ್ಥರು, ಬಾಹ್ಯಜ್ಞಾನರಹಿತರು, ಪ್ರಾಪ್ತಸುಖರು, ಪೂರ್ಣಗುಣ ಹರಿಜ್ಞಾನರು, ಪಾಪದೂರರು ಆಗಿ ತಮ್ಮನ್ನು ಫಲಕ್ಕಾಗಿ ಬೇಡುವರನ್ನು ಕೂಡ ಫಲದಾನದಿಂದ ಸೇವಿಸದಿರುವರು. ಅವರಿಂದ ಅವರಿಗೆ ಯಾವ ಪ್ರಯೋಜನವೂ ಇಲ್ಲ; ಅಂದ ಮೇಲೆ ಬೇಡದವರ ಗೊಡವೆಯೇ ಅವರಿಗಿಲ್ಲ. ಕೆಲವರು ಕೃತಘ್ನರು ಶರಣಾಗಿ ಬಂದವರನ್ನೂ ಸ್ವೀಕರಿಸಿ ರಕ್ಷಿಸರು – ಇನ್ನು ಸೇವಿಸದವರನ್ನು ಲೆಕ್ಕಿಸುವರೇ? ತಾವು ಸುಖದಿಂದಿದ್ದು, ತಮ್ಮವರ ಕಾಮಗಳನ್ನು ತುಂಬುತ್ತಾ, ದೇವಾದಿಗುರುದ್ರೋಹವನ್ನೆಸಗಿ, ಪರೋಪಕಾರವನ್ನು ಮರೆತು ಬದುಕುವ ಅವರ ವಿಷಯ ನಮಗೇಕೆ? ಕೇಳಿ ಸಖಿಯರೇ! ನಾನು ಮೂವರಲ್ಲಿ ಯಾರೂ ಅಲ್ಲ. ನಾನು ಫಲಾಶೆಯಿಂದ ಭಜಿಸಲಿ, ಅಫಲಾಶೆಯಿಂದ ಭಜಿಸಲಿ, ಅವರ ಭಜನೆಗಾಗಿ ವಿಶಿಷ್ಟ ಫಲವನ್ನೀವನಲ್ಲ. ಅವರ ಭಜನೆಯಿಂದ ನನಗೇನೂ ಪ್ರಯೋಜನವಿಲ್ಲ. ಅವರ

ಸೇವೆ ನಿಷ್ಫಲವೂ ಅಲ್ಲ! ಅವರವರ ಸೇವೆಯಂತೆ ತಕ್ಕ ಫಲವು, ಕಲ್ಪವೃಕ್ಷದಂತೆ ನಿಷ್ಪಕ್ಷಪಾತಿಯಾದ ನನ್ನಿಂದ ಅವರಿಗೆ ತಪ್ಪದೆ ದೊರಕುವುದು. ನನ್ನ ಉಪಾಸನೆ ಹೀಗಿರಬೇಕು.

ಬಡವನಿಗೆ ಸಿಕ್ಕಿದ್ದ ಧನರಾಶಿಯು ನಷ್ಟವಾದಾಗ, ಅವನು ಅದನ್ನೇ ಚಿಂತಿಸುತ್ತಾ, ಪ್ರಪಂಚವನ್ನೇ ಮರೆತುಬಿಡುವಂತೆ, ನಾನು ಪೂರ್ಣವಾಗಿ ಸಿಗದೆ, ಅಂತರ್ಧಾನನಾಗಿದ್ದಾಗ ನನ್ನ ಭಕ್ತನು ಲೌಕಿಕ ವೈದಿಕ ಸರ್ವಪದಾರ್ಥಗಳನ್ನು ನನಗರ್ಪಿಸಿ, ನನ್ನನ್ನೇ ಭಜಿಸುವನು. ಹಾಗಾಗಲೆಂದೇ ನಾನು, ನನ್ನಿಚ್ಛೆಯಿಂದ, ಯೋಗ್ಯರಿಗೆ ಸಿಗುತ್ತಿರುವೆನು.

ನೀವು ನೋಡುತ್ತಿದ್ದಂತೆ ಅಂತರ್ಹಿತನಾದ ನನ್ನ ಪ್ರೇಮವನ್ನು ಶಂಕಿಸಿ ನೀವು ಸಿಟ್ಟಾಗಬಾರದು. ನನಗೆ ಪ್ರತ್ಯಕ್ಷದಕ್ಕಿಂತಲೂ ಪರೋಕ್ಷವೇ ಹೆಚ್ಚು ಪ್ರೀತಿಕರವಾಗಿದೆ. ನೀವು ತೋರಿದ ಸರ್ವಸ್ವ ಸಮರ್ಪಣರೂಪ ಪ್ರೇಮಕ್ಕೆ ಬದಲಾಗಿ ನಾನೇನೂ ಕೊಡಲಾರೆ. ನಿಮ್ಮ ಋಣವನ್ನು ಕಲ್ಪಾಂತ್ಯದವರೆವಿಗೂ ನಾನು ತೀರಿಸಲಾರೆನು. ನಿಮ್ಮ ಮನೋವೃತ್ತಿಯು ಸಾಧುಸಮ್ಮತವಾಗಿದೆ. ನಿಮ್ಮಲ್ಲಿ ಪರಮಾನುಗ್ರಹವನ್ನು ಮಾಡಿ, ಅಸೂಯಾದಿ ದೋಷರಹಿತ ಭಕ್ತಿಭಾಗ್ಯವನ್ನು ನಿಮಗಿತ್ತಿರುವೆನು. ನನ್ನ ಅನುಗ್ರಹವಿಲ್ಲದಿರೆ ಲಿಂಗಶರೀರ ಬಂಧವು ಬಿಡುವುದಿಲ್ಲ. ನನ್ನ ಭಕ್ತನು ಅದನ್ನೂ ಕಡಿದು, ಭಕ್ತಿ ಜ್ಞಾನ ಸಾಧನ ಸಾಮಗ್ರಿಯು ಸಂಪೂರ್ಣವಾದ ಜನ್ಮದಲ್ಲೇ ಮುಕ್ತನಾಗಿ, ನನ್ನ ಆನಂದಮಯಲೋಕದಲ್ಲಿ ವಸಿಸಲು ಯೋಗ್ಯನಾಗುವನು.

## ೩೧. ರಾಸಕ್ರೀಡೆ

ಶ್ರೀಶುಕನು ಹೇಳಿದನು–

ಗೋಪಾಲಸುಂದರನ ಸುಮಧುರ ವಚನಗಳಿಂದ ಗೋಪಿಯರ ವಿರಹತಾಪವು ದೂರವಾಯಿತು. ಅವರಿಗೆ ಶ್ರೀಶನ ಸಂಗವೇ ದೊರಕಿ, ಮೈಯುಬ್ಬಿತು. ಅವರು ಗೋವಿಂದನಿಂದ ರಾಸಕ್ರೀಡೆಯನ್ನಾರಂಭಿಸಿದರು. ಭಕ್ತಿಪ್ರಸನ್ನ ಭಗವತ್ಪ್ರೀತಿಯಿಂದ ಅವರ ಆನಂದವು ಮೋಕ್ಷಾನಂದವಾಗಿ, ಅವರು ಮೈಮರೆತು ವಿಹರಿಸಿದರು. ಕೈಕೈಹಿಡಿದು, ವೃತ್ತಾಕಾರವಾಗಿ ತಿರುಗುತ್ತಾ, ಸ್ತ್ರೀರತ್ನಮಂಡಲಮಂಡಿತನಾದ ಯೋಗೇಶ್ವರನು ನಾನಾ ರೂಪನಾಗಿ, ಈರ್ವರ ಮಧ್ಯದಲ್ಲಿ ಬಂದು ಕೃಷ್ಣರೂಪದಿಂದ ನಿಂತು, ಅವರ ಕಂಠದೇಶದಲ್ಲಿ ಕೈಯನ್ನಿಟ್ಟು, ಇನ್ನೊಂದು ಕೈಯಿಂದ ಅವರ ಕೈ ಪಿಡಿದು, ನರ್ತಿಸಲಾರಂಭಿಸಿದನು.

ರಾಸಕ್ರೀಡಾರಂಭವಾಗಲು, ದೇವತೆಗಳು ನಿಜರಮಣಿಯರಿಂದ ಕೂಡಿ, ವಿಮಾನಗಳಲ್ಲಿ ಕೂತು ಬಂದರು; ಆಕಾಶದಲ್ಲಿ ನಿಂತು ನೋಡುತ್ತಾ ಆದರ ಪ್ರೇಮಾರ್ದ್ರಹೃದಯರಾಗಿ, ಚಲಿಸದಿದ್ದರು. ದುಂದುಭಿಗಳು ಮೊಳಗಲು, ಆಕಾಶದಿಂದ ಪೂಮಳೆ ಕರೆಯಿತು. ಅಪ್ಸರೆಯರು ನರ್ತಿಸಲು, ಗಂಧರ್ವರು ಕೃಷ್ಣಕೀರ್ತಿಯನ್ನು ಪಾಡಿ ಪೊಗಳಿದರು. ದೇವಕಿ ನಂದನನಿಂದ ಕೂಡಿ, ಹಾಡಿ, ಕುಣಿಯುವ ತರುಣಿಯರ ಕಂಕಣನೂಪುರಕಿಂಕಿಣಾನಿ ಕ್ವಣನವು, ಆಕಾಶದಿ ನಿಂತ ದೇವವನಿತೆಯರ ಕರ್ಣವಿವರಗಳನ್ನು ಪೊಕ್ಕಿತು. ಮಾಣಿಕ್ಯಗಳ ಮಧ್ಯದಲ್ಲಿ ನೀಲಮಣಿಯಂತೆ ಶೋಭಿಸುವ ಕೃಷ್ಣನನ್ನನುಕರಿಸಿ ಆ ಚದುರೆಯರು, ಲಲಿತಪದ ವಿನ್ಯಾಸ ಭುಜಕಂಪನ, ಮಂದಹಾಸ, ಭ್ರೂವಿಲಾಸಗಳಿಂದ ಹೊಯಲು ಮೀರಿ ಮೆರೆದರು. ಅವರ ಲೋಲಕುಂಡಲಗಳ ಕಾಂತಿಯೂ ಗಂಡದಲ್ಲಿ ಕುಣಿದಾಡಿತು. ಅವರ ಸೆರಗು ಜಾರಿತು; ನಡುವು ಮುರಿಯುವುದೆಂಬಂತೆ

ಸೂಕ್ಷ್ಮಾವರ್ತದಿಂದ ಬಳುಕಿತು, ಮುಖದಲ್ಲಿ ಬೆವರು ಮೂಡಿತು. ಕಬರವು ಬಿಚ್ಚಿತು; ವಸನರಶನಾ ಬಂಧವು ಸಡಲಿತು. ತೀವ್ರಗಮನರಾದ ಆ ಲಲನೆಯರು ಕೃಷ್ಣನಿಂದ ಕೂಡಿ ತಿರುಗುತ್ತಾ ಮೇಘವನ್ನು ಮುತ್ತಿರುವ ಮಿಂಚಿನ ಬಳ್ಳಿಗಳಂತೆ ಪ್ರಕಾಶಿಸಿದರು. ತಾರಸ್ವರದಲ್ಲಿ ಹಾಡುತ್ತಾ, ಆ ಕಲಕಂಠಿಯರು ಕೃಷ್ಣಸ್ಪರ್ಶ ಸುಖದಿಂದ ವಿವಶರಾಗಿ ಗಾನಲಹರಿಗಳಿಂದ ಜಗವನ್ನು ತುಂಬಿಸಿದರು. ನಿಷಾದ ಷಡ್ಜಾದಿ ಸ್ವರ ಜಾತಿಭೇದದಿಂದಾಲಾಪಿಸಿ, ಮೂರ್ಛನವನ್ನು ಮುಟ್ಟಿ, ಮುಗುದಿ ಓರ್ವಳು ಮಾಧವನ ಮೆಚ್ಚುಗೆಯನ್ನು ಪಡೆದಳು; ಆಗ ಕೃಷ್ಣನೂ ಅದನ್ನು ಧ್ರುವತಾರೆಯಲ್ಲಿ ಸೇರಿಸುವಂತೆ ಹಾಡಿ, ದೇವಗಂಧಾರವೆಂಬ ಅದರ ನಾಮವನ್ನು ಸಾರ್ಥಕಗೊಳಿಸಿದನು.

ಗೋಪಿಯೊಬ್ಬಳು ತುರುವಿನ ಮಲ್ಲಿಗೆಯ ಮಾಲೆ ಜಾರುತ್ತಿರಲು, ರಾಸಕ್ರೀಡಾಶ್ರಾಂತಳಾಗಿ ನಿಲ್ಲಲಾರದೆ, ಕೃಷ್ಣನ ಕೈಯನ್ನು ಆಶ್ರಯಿಸಿ, ಲತೆಯಂತೆ ನಿಂತಳು. ಬಿಂಬಾಧರೆಯೋರ್ವಳು, ಉತ್ಪಲಸುರಭಿಳವು, ಚಂದನಶೀತಲವೂ ಆದ ತನ್ನ ಕೃಷ್ಣನ ಕೈಯನ್ನು ಮೂಸಿ, ಪ್ರೇಮದಿಂದ ಮುತ್ತಿಟ್ಟಳು. ನಾಟ್ಯವಾಡುವಾಗ ಲೋಲಕುಂಡಲ ಕಾಂತಿಯಿಂದ ಮಂಡಿತವಾದ ಸವತಿಯ ಗಂಡಸ್ಥಲದಲ್ಲಿ ಮಾತಾಡುತ್ತಾ ಮಾನಿನಿಯೋರ್ವಳು ತಾಂಬೂಲಚರ್ವಿತವನ್ನಿಟ್ಟು ಅವಳನ್ನು ರೇಗಿಸಿದಳು. ಹಾಡಿ, ಪೈಜಣೆಯ ಗಲ್ಲುಗಲ್ಲೆಂಬ ಶಬ್ದದಿಂದ ನರ್ತಿಸಿ, ಆಯಾಸಪಟ್ಟ ಮಗದೊಬ್ಬಳು ಕೃಷ್ಣನ ಕೈಯನ್ನು ವಕ್ಷದಲ್ಲಿಟ್ಟು, ಸಂತೋಷಪರವಶಳಾದಳು. ಇಂತು ಲಕ್ಷ್ಮೀರಮಣನಿಂದ ರಮಿಸಿ, ಹಾಡಿ, ಪಾಡಿ, ಗೋಪಿಯರು, ರಾಸಮಂಡಲದಲ್ಲಿ ಶೋಭಿಸಿದರು. ಅವರ ಕೇಶಬಂಧವು ಸಡಲಿ, ಹೂಮಾಲೆ ಜಾರಿ, ಶ್ರಮದಿಂದ ಮುಖದಲ್ಲಿ ಸ್ವೇದಬಿಂದುಗಳು ಮೂಡಿದವು. ವಲಯನೂಪುರ ಮಂಜೀರ ಮಂಜುಲನಾದದಿಂದ ಕೂಡಿ ಭ್ರಮರಗಳು ಶ್ರುತಿಗೂಡಿಸಿ, ರಾಸಕ್ರೀಡೆಯಲ್ಲಿ ಪಾಲ್ಗೊಂಡವು. ಆಲಿಂಗನ, ಕರಸ್ಪರ್ಶ, ಕಟಾಕ್ಷವೀಕ್ಷಣ, ಪ್ರೇಮದ ಮಂದಹಾಸಗಳು ರಾಸವಿಲಾಸದಲ್ಲಿ ಸೂರೆಯಾದವು. ವಿಧಿನಿಷೇಧಾದಿದೂರನಾದ ಶ್ರೀಹರಿಯು, ಲಕ್ಷ್ಮೀರಮಣನಾದರೂ, ಲೋಕವಿಡಂಬನವನ್ನು ತೋರಿ, ವ್ರಜಕಾಮಿನಿಯರಿಂದ ರಮಿಸಿದನು.

ಶ್ರೀಕೃಷ್ಣಸಂಗದಿಂದ ಆದ ಆನಂದಾತಿರೇಕದಿಂದ ಮೈಮರೆತ ವ್ರಜಮಾನಿನಿಯರು, ಮಾಧವನನ್ನು ಬಿಡಲಾರದಾದರು; ಕೇಶ ದುಕೂಲ ಕುಚಪಟ್ಟಿಕಾ ಹಾರಗಳು ಜಾರುತ್ತಿದ್ದರೂ ಲೆಕ್ಕಿಸದಾರದು. ಕೃಷ್ಣಕ್ರೀಡೆಯನ್ನು ಕಂಡು ಸುರವನಿತೆಯರು ಮೋಹಿತರಾದರು. ತಾರಾಗಣ ಮಧ್ಯಗತನಾದ ಚಂದ್ರನೂ ವಿಸ್ಮಿತನಾದನು. ಗೋಪಿಗೊಬ್ಬನಾಗಿ ಶ್ರೀಕೃಷ್ಣನು ಸ್ವರಮಣನಾದರೂ, ಅವರಿಗಾಗಿ ಗೋಪಿಯರೊಡನೆ ರಮಿಸಿದನು; ಅವರ ಶ್ರಮದಾರಿ ಚಿಹ್ನಿತವದನಗಳನ್ನು ಮಂಗಳಕರ ಕರದಿಂದ ಮುಟ್ಟಿ, ಶ್ರಮವನ್ನು ನಿವಾರಿಸಿದನು. ಅದರಿಂದ ಆನಂದಮತ್ತರಾದ ಗೋಪಿಯರು ಕೃಷ್ಣನ ಪುಣ್ಯಚರಿತವನ್ನು ಪಾಡುತ್ತಾ, ಅವನಿಂದ ಕೂಡಿ, ಜಲವಿಹಾರವನ್ನು ಮಾಡಲು, ಯಮುನೆಯನ್ನು ಸಮೀಪಿಸಿದರು. ಅವರ ಕುಚಕುಂಕುಮವು ಕರಗಿ ಹರಿಯಲು ನೀಲಯಮುನೆಯು ರಾಗರಂಜಿತಳಾಗಿ, ಹರಿಯನ್ನು ಸುತ್ತಿ ಹರಿದಳು. ಕರಿಣೆಯರಿಂದ ಕೂಡಾಡುವ ಗಜರಾಜನಂತೆ ಶ್ರೀಕೃಷ್ಣನವರಿಂದ ಕೂಡಿ ನೀರಾಟವಾಡಿದನು.

ಯುವತಿಯರು ಅವನ ಮೇಲೆ ನೀರೆರಚಿ ಕಿಲಕಿಲ ನಗುತ್ತಾ, ಪ್ರೇಮವೀಕ್ಷಣಮಾಲಿಕೆಗಳಿಂದ, ಅವನಿಗೆ ನೀರಾಜನ ಮಾಡಿದರು. ಸ್ವರತನಾದ ಶ್ರೀಕೃಷ್ಣನು, ಅವರಲ್ಲಿ ನೆಲಸಿದ ರಮಾವೇಶದಿಂದ, ಅವರಿಗೆ ಒಲಿದು, ಗಜರಾಜನು ಕರಿಣಿಗಳಿಂದಂತೆ, ಕ್ರೀಡಿಸಿ, ಹೊರ ಬಂದು, ವನವಿಹಾರವನ್ನಾರಂಭಿಸಿದನು. ಜಲಸುಮಗಳು, ಸ್ಥಲಸುಮಗಳು ಕಲೆತು, ತಮ್ಮ ಗಂಧವನ್ನಿತ್ತು,

ಕೃಷ್ಣಪರಿವಾರವನ್ನು ಸೇವಿಸಿದವು. ಭೃಂಗಗಳು ಪಾಡಿದವು. ಇಂತು ತಾರಾಕಾಂತನ ಕಿರಣಗಳಿಂದ ಧವಲರಂಜಿತವಾದ ರಾತ್ರಿಗಳು, ಸತ್ಯಕಾಮನಾದ ಕೃಷ್ಣನ ಇಚ್ಛೆಯನ್ನನುಸರಿಸಿದ ಇಚ್ಛೆಯುಳ್ಳ ಅಬಲೆಯರಿಂದಲು, ಪ್ರಕಾಶಿತ ಸೌಂದರ್ಯಸಾರದಿವ್ಯದೇಹನಾದ ಕೃಷ್ಣನಿಂದಲು, ಇಮ್ಮಡಿಯಾಗಿ ಶೋಭೆಯನ್ನು ಹೊಂದಿ, ಕಾವ್ಯಕಥಾರಸ ವಿಷಯಗಳಾದುವು.

ಆ ವರ್ಣನೆಯನ್ನು ಕೇಳಿ ರಾಜನಿಂತು ಪ್ರಶ್ನಿಸಿದನು – 'ಧರ್ಮವನ್ನು ಸ್ಥಾಪಿಸಿ, ಅಧರ್ಮವನ್ನು ತುಳಿಯಲು ಅವತರಿಸಿದ ಸಾಕ್ಷಾನ್ನಾರಾಯಣನೇ, ತಾನು ರಚಿಸಿದ ಧರ್ಮಸೇತುವನ್ನು ಕಾಪಾಡುವುದನ್ನು ಬಿಟ್ಟು, ತಾನೇ ಮುರಿದದ್ದು ಉಚಿತವೇ? ಪರದಾರಾಭಿಮರ್ಶನವು ಪಾಪವಲ್ಲವೇ? ಯದುನಾಥನು ಆತ್ಮಾರಾಮನು. ಸ್ವರಮಣನಾದ ಶ್ರೀಹರಿಯು, ಗೋಪೀ ವಿಷಯದಲ್ಲಿ, ಲೋಕನಿಂದಿತಕರ್ಮವನ್ನಾಚರಿಸಲು ಕಾರಣವೇನು? ನನಗೇ ಅಲ್ಲದೆ ಇಲ್ಲಿರುವ ಜನರ ಸಂಶಯವನ್ನೂ ನಿವಾರಿಸಬೇಕೆಂದು ಬೇಡುವೆನು.' ಆಗ ಶುಕನಿಂತೆಂದನು–

ನಾರಾಯಣ ಪರಾಯಣರಾದ ಮಹಾತ್ಮರೊಂದೊಂದು ಸಲ, ವಿಧಿನಿಷೇಧ ನಿರೂಪಕ ಸ್ಮೃತಿಯನ್ನು ಮೀರಿ ನಡೆದರೂ, ಅವರಿಗದು ದೋಷವೆನಿಸುವುದಿಲ್ಲ. ಅಂದಮೇಲೆ ವಿಧಿನಿಷೇಧ ಬಂಧವಿಲ್ಲದ ಶ್ರೀಹರಿಯ ವಿಷಯದಲ್ಲಿ ಸಂಶಯವೇತಕೆ? ರಾಜನ್! ಯೋಗೈಶ್ವರ್ಯ ಪಾರಂಗತರ ನಡತೆಯ ಕಾರಣವು ದುರೂಹ್ಯವಾಗಿರುವುದು. ಅದು ಶ್ರೀಹರೀಚ್ಛಾಧೀನವು. ಅಜೀಗರ್ತನು ಮಗನನ್ನು ಮಾರಿದನು; ವಿಶ್ವಾಮಿತ್ರನು ನಾಯಿಯ ಮಾಂಸ ತಿನ್ನಲು ಹೋದನು; ಸಪ್ತರ್ಷಿಗಳು ಶವವನ್ನು ತಿನ್ನಲು ಯತ್ನಿಸಿದರು. ಆದರೂ ಅವರ ಮಹಿಮೆಗೆ ಕುಂದಿಲ್ಲ. ಅವರು ತೇಜಶ್ಶಾಲಿಗಳಾದ್ದರಿಂದ ಅವರಿಗೆ ಅದರೀದ ಪಾಪವೂ ಬರಲಿಲ್ಲ. ಅಮೇಧ್ಯವನ್ನು ದಹಿಸುವ ಅಗ್ನಿಗೆ ಯಾವ ದೋಷ ಹೇಳು? ಅಸಮರ್ಥನಾದವನು ದೊಡ್ಡವರು ಮಾಡಿದ ಮಾಂಸಾಮೇಧ್ಯ ಭಕ್ಷಣಗಳನ್ನು ಮಾಡಲಾಗುವುದೇ? ಇಲ್ಲ. ಸತ್ಕರ್ಮ ವಿಷಯದಲ್ಲಿ ಮಾತ್ರ ಮಹಾತ್ಮರು ನಡೆದಂತೆ ನಡೆದು, ಇತರ ವಿಷಯದಲ್ಲಿ, ಅವರು ನುಡಿದಂತೆಯೇ ನಡೆಯುವವನು ಶ್ರೇಯೋಭಾಜನನಾಗುವನು. ಮೂರ್ಖನಾಗಿ 'ನಾನೂ ವ್ಯಭಿಚಾರವನ್ನು ಮಾಡುವೆನು' ಎಂದು ಹಠ ಮಾಡಿದವನು ಹಾಳಾಗುವನು. ರುದ್ರನು ವಿಷವನ್ನು ಕುಡಿದನಾದ್ದರಿಂದ, ಕುಡಿಯುವೆನೆಂಬ ಮೂರ್ಖರಿರುವರೇ? ಕುಡಿದರೆ ಉಳಿಯುವರೇ? ಆದ್ದರಿಂದ ಸ್ವರಮಣನಾದ ಶ್ರೀ ರಮಣನು ವ್ಯಭಿಚಾರಗೈದನೆಂಬ ಶಂಕೆಯನ್ನು ಬಿಡು! ಸರ್ವರಮಣನಿಗೆ, ಸರ್ವಾಂತರ್ಯಾಮಿಗೆ ದೋಷವೇ ಇಲ್ಲ. ಮಹಾತ್ಮರ ವಚನವು ಪರಮಾರ್ಥವು, ಪರಮಾಭೀಷ್ಟದವೂ ಆದ್ದರಿಂದ, ಅಂತೆಯೇ ನಡೆಯಬೇಕು. ಹಾಸ್ಯಕ್ಕಾಗಿ ಅಂದ ವಚನಗಳನ್ನು ಲೆಕ್ಕಿಸಬಾರದು. ವೇದವಿರೋಧವಾಗಿದ್ದರೆ ಅವರ ನುಡಿಯಂತೆ ನಡೆಯಬಾರದು. ವೇದಕ್ಕಾಗಲಿ, ಸ್ವವಚನಕ್ಕಾಗಲಿ ಅವರು ವಿರೋಧವನ್ನು ಆಚರಿಸಿದರೆ, ಅದರಂತೆ ಬುದ್ಧಿವಂತನು ಆಚರಿಸಬಾರದು. ಅವರ ಸುಚರಿತಗಳನ್ನು ಮಾತ್ರ ಅನುಸರಿಸಬೇಕು. ನಿರಹಂಕಾರಿಗಳಾದ ಮಹಾಮಹಿಮರಿಗೆ ಕುಶಲಕಾರ್ಯದಿಂದ ಸ್ವಪ್ರಯೋಜನ ವಿಲ್ಲದಿರುವಂತೆ, ಅಕುಶಲ ಕಾರ್ಯದಿಂದ ಹಾನಿಯೂ ಇಲ್ಲ. ಅಂದಮೇಲೆ ಸರ್ವನಿಯಾಮಕ ಶ್ರೀಹರಿಗೆ ಲೇಪವಿಲ್ಲವೆಂದು ಹೇಳಬೇಕೇ? ಅವನ ಪಾದಾರವಿಂದ ಪರಾಗವನ್ನು ಸೇವಿಸಿ, ಯೋಗಪ್ರಭಾವದಿಂದ ಕರ್ಮಬಂಧದೂರರಾದ ಸೌಭರ್ಯಾದಿ ಮುನಿಗಳು, ಬಂಧವಿಲ್ಲದೆ ಸಂಚರಿಸುತ್ತಿರುವಾಗ, ಸ್ವೇಚ್ಛಾಗೃಹೀತಲೀಲಾಶರೀರನಾದ ಶ್ರೀಹರಿಗೆ ಪುಣ್ಯಾಪಾಪಗಳ ಲೇಪವಿರುವುದೇ? ಗೋಪಿಯರಿಗೂ ಅವರ ಪತಿಯರಿಗೂ ಅವನೇ ಅಂತಃಸಾಕ್ಷಿಯಾಗಿ, ಕ್ರೀಡಿಸುವನ

ಲ್ಲವೇ? ಭಕ್ತರನ್ನನುಗ್ರಹಿಸಿ ಪೊರೆಯಲು ಮನುಜನಂತೆ ತೋರಿ ಮನುಜಮಧ್ಯದಲ್ಲಿ ಮನುಜನಂತೆ ಆಡಿ, ತನ್ನ ಲೀಲೆಗಳನ್ನು ಸ್ಮರಿಸುವವರ ಪಾಪನಿವಾರಕನಾದ ಕೃಷ್ಣನ ಮಹಿಮೆಯನ್ನು ಯಾರು ತಿಳಿಯಲಾದೀತು?

ರಾಜನೇ! ವ್ರಜವಾಸಿಗಳು ತಮ್ಮ ತಮ್ಮ ಶಯ್ಯಾಸಖಿಯರು ತಮ್ಮಲ್ಲೇ ಇರುವುದನ್ನರಿತು, ಆ ಸುಂದರಿಯರಲ್ಲಿ ಕುಪಿತರಾಗಲಿಲ್ಲ; ಶ್ರೀಕೃಷ್ಣನಲ್ಲಿ ದೋಷಬುದ್ಧಿಯನ್ನೂ ತಾಳಲಿಲ್ಲ. ಉಷಃಕಾಲವಾಗುತ್ತಿರಲು ವಾಸುದೇವನನ್ನಗಲಲಾರದೆ ಬಿಟ್ಟು ವ್ರಜನಾರಿಯರು ತಮ್ಮ ಮನೆಗಳಿಗೆ ಹೊರಟುಹೋದರು.

ಶ್ರೀರಮೇಶನ ವ್ರಜವಧೂವಿಲಾಸವನ್ನು ಶ್ರದ್ಧೆಯಿಂದ ವರ್ಣಿಸಿ, ಶ್ರದ್ಧೆಯಿಂದ ಕೇಳಿ, ಮನುಜನು ಶ್ರೀಕೃಷ್ಣನ ಭಕ್ತನಾಗುವನು, ಅವನ ಅನಿಷ್ಟಕಾಮಗಳು ನಶಿಸಿ ಅವನಿಗೆ ದಿವ್ಯಜ್ಞಾನವು ಲಭಿಸುವುದು.

## ೩೨. ನಂದಮೋಕ್ಷಣ — ಶಂಖಚೂಡವಧೆ

ಶ್ರೀಶುಕನು ಪೇಳಿದನು –

ಒಂದು ಸಲ ಜಾತ್ರೆಯು ಬರಲು ಗೋಪಾಲರು ಬಂಡಿಗಳಿಂದ ಅಂಬಿಕಾವನವನ್ನು ಸೇರಿದರು. ಅಲ್ಲಿ ನದೀಸ್ನಾನಮಾಡಿ, ಪಶುಪತಿಯನ್ನು ಅಂಬಿಕೆಯನ್ನು ಭಕ್ತಿಯಿಂದ ಪೂಜಿಸಿದರು. ಬ್ರಾಹ್ಮಣರಿಗೆ ಗೋ ಹಿರಣ್ಯ ವಸ್ತ್ರಾದಿ ದಾನವನ್ನಿತ್ತು. ಮೃಷ್ಟಾನ್ನವನ್ನುಣಿಸಿ, ಶ್ರೀಹರಿ ಪ್ರೀತನಾಗಲೆಂದು ದಕ್ಷಿಣೆಗಳನ್ನೂ ಕೊಟ್ಟರು. ವ್ರತಧಾರಿಗಳಾಗಿ ಆ ರಾತ್ರಿ ನಂದಸನ್ನಂದನಾದಿಗಳಿಂದ ಕೂಡಿ ನದೀತೀರದಲ್ಲೇ ಮಲಗಿದ್ದರು. ಯದೃಚ್ಛೆಯಿಂದ ಒಂದು ಮಹಾಸರ್ಪವು ಬಂದು, ಮಲಗಿದ್ದ ನಂದನನ್ನು ನುಂಗಲಾರಂಭಿಸಿತು. ಅವನು 'ಕೃಷ್ಣ! ಕೃಷ್ಣ! ಹಾವು ಹಿಡಿದಿವೆ. ನನ್ನನ್ನು ಕಾಪಾಡು' ಎಂದು ಮೊರೆಯಿಟ್ಟನು. ಅದನ್ನು ಕೇಳಿ ಗೋಪಾಲಕರು ಓಡಿ ಬಂದು ಅಲ್ಲಿದ್ದ ಕೊಳ್ಳಿಗಳಿಂದ ಸರ್ಪವನ್ನು ತಿವಿದರು. ಆದರೂ ಬಿಡದೆ ಪಿಡಿದು ನುಂಗುವ ಅಜಗರವನ್ನು ಶ್ರೀಕೃಷ್ಣನು ಪಾದದಿಂದ ಮುಟ್ಟಿದನು. ತತ್‌ಕ್ಷಣವೇ ಅವನ ಪಾಪವೆಲ್ಲವೂ ನಷ್ಟವಾಗಲು ವಿದ್ಯಾಧರರೂಪದಿಂದ ನಿಂತು ಅವನು ಕೃಷ್ಣನಿಗೆ ವಂದಿಸಿದರು.

'ಯಾರು ನೀನು? ಕಾಂತಿಯಿಂದ ಬೆಳಗುವ ನಿನ್ನನ್ನು ನೋಡಿ, ಇಂತಹ ನಿನಗೆ ಅಸಹ್ಯವಾದ ಅಜಗರದೇಹವೆಂದು ಬಂತೋ ಎಂದು ಆಶ್ಚರ್ಯವಾಗಿದೆ' ಎಂದು ಸರ್ವಜ್ಞಕೃಷ್ಣನು ಕೇಳಲು, ಅವನಿಂತೆಂದನು–

ನಾನು ಸುದರ್ಶನನೆಂಬ ವಿದ್ಯಾಧರನು. ಕಾಂತಿರೂಪಗಳಿಂದ ಮದಮತ್ತನಾಗಿ, ವಿಮಾನದಲ್ಲಿ ತಿರುಗುತ್ತಾ, ಒಂದು ದಿನ ವಿರೂಪರೆಂದು ಆಂಗೀರಸರನ್ನು ನೋಡಿ ನಕ್ಕನು. ಅದರಿಂದ ಅಜಗರನಾಗೆಂದು ಆ ಋಷಿಯು ಶಪಿಸಿದನು. ಅದು ಶಾಪವೆಂದು ನಾನು ತಿಳಿದಿಲ್ಲ, ವರವೆಂದೇ ತಿಳಿದಿರುವೆನು. ಅವರ ಕರುಣೆಯಿಂದ, ಲೋಕಗುರುವಾದ ನಿನ್ನ ಪಾದಸ್ಪರ್ಶನಭಾಗ್ಯವನ್ನು ಕಂಡೆನು. ನಾನು ಮಾಡಿದ್ದ ಪಾಪಗಳೆಲ್ಲ ನಷ್ಟವಾದವು. ಭವಭಯಭಂಜಕನು, ಭಕ್ತಜನರಂಜಕನು ಆದ ನಿನಗೆ ಶರಣು ಬಂದಿರುವೆನು. ಸರ್ವಲೋಕ ಪ್ರಭೋ! ಕೃಷ್ಣ! ಅಪ್ಪಣೆಯನ್ನು

ಕೊಡು, ನಿನ್ನ ಮಂಗಲದರ್ಶನವು ದುಸ್ತರ, ಬ್ರಹ್ಮದಂಡದಿಂದ ನನ್ನನ್ನು ಪಾರು ಮಾಡಿತು. ನಿನ್ನ ಶುಭನಾಮವು ಸಾಕು, ಶ್ರವಣಮಾತ್ರದಿಂದ ಪಾಪವನ್ನು ಕಳೆಯಲು, ನಿನ್ನ ಪಾದಸ್ಪರ್ಶವನ್ನು ಪೊಂದಿದ ನನ್ನ ಭಾಗ್ಯಕ್ಕೆ ಎಣೆಯುಂಟೇ? ನಮೋ ನಮಃ– ಎಂದು ವಂದಿಸಿ, ವಿದ್ಯಾಧರನು ಹೊರಟುಹೋದನು.

ನಂದಮೋಕ್ಷಣವನ್ನು ಮಾಡಿದ ಕೃಷ್ಣನ ಮಹಿಮೆಯನ್ನು ನೋಡಿ, ವ್ರಜವಾಸಿಗಳು ಆಶ್ಚರ್ಯಚಕಿತರಾದರು. ವ್ರತವನ್ನು ಮುಗಿಸಿ ಮನೆಗೆ ಪೋಗಿ ಆದರದಿಂದ ಕೃಷ್ಣಕೀರ್ತಿಯನ್ನೇ ಪಾಡುತ್ತಾ, ಕೃತಜ್ಞರಾಗಿದ್ದರು.

ಒಂದು ದಿನ ರಾತ್ರಿ ರಾಮಕೃಷ್ಣರು ವ್ರಜಸುಂದರಿಯರಿಂದ ಕೂಡಿ ವನವಿಹಾರವನ್ನು ಮಾಡುತ್ತಿದ್ದರು. ಅಲಂಕೃತರಾಗಿ ಹಾಡಿಪಾಡಿ ಕುಣಿದಾಡಿದರು. ಸರ್ವಭೂತಸುಖಕರವಾಗಿ ಕೊಳಲನ್ನೂದಿ, ಸಪ್ತಸ್ವರಗಳಲ್ಲಿ ತ್ರಿಗ್ರಾಮಸರಣಿಯಿಂದ ಇಪ್ಪತ್ತೊಂದು ವಿಧ ಮೂರ್ಛನಗಳನ್ನು ನುಡಿಸಿ, ಕ್ರೀಡಿಸುವಾಗ ಮೈಮರೆತಿರುವ ಗೋಪಿಯರನ್ನು ಶಂಖಚೂಡನೆಂಬ ಕುಬೇರ ಭೃತ್ಯನು ಅಪಹರಿಸಲಾರಂಭಿಸಿದನು. ರಾಮಕೃಷ್ಣರು ನೋಡುತ್ತಿರಲು ಒಬ್ಬೊಬ್ಬಳನ್ನೇ ಕದ್ದು, ಉತ್ತರ ದಿಕ್ಕಿನಲ್ಲಿ ಬಚ್ಚಿಡುತ್ತಿದ್ದನು. ಅವರ ಅಳುವನ್ನೂ ಕೃಷ್ಣಾ! ರಾಮಾ! ಎಂಬುವ ಕೂಗನ್ನೂ ಕೇಳಿ, ರಾಮಕೃಷ್ಣರು ಅವನನ್ನು ಹಿಂಬಾಲಿಸಿ, ಹಿಡಿದರು. ಕಾಲಮೃತ್ಯುವಿನಂತೆ ಬೆನ್ನಟ್ಟಿ ಬರುವ ತಾಲಹಸ್ತರಾದ ರಾಮಕೃಷ್ಣರನ್ನು ಕಂಡು, ಭೀತಿಗೊಂಡು, ಆ ಗುಹ್ಯಕಾಧಮನು ರಮಣಿಯರನ್ನು ಬಿಟ್ಟು ಓಡತೊಡಗಿದರು. ಸ್ತ್ರೀಜನ ರಕ್ಷಣೆಗೆಂದು ಬಲರಾಮನನ್ನಿಟ್ಟು, ಕೃಷ್ಣನು ಶಂಖಚೂಡನ ಹಿಂದೆ ಓಡಿ, ಹಿಡಿದು, ಅವನನ್ನು ಸಂಹರಿಸಿ, ಅವನ ನೆತ್ತಿಯಲ್ಲಿದ್ದ ಮಣಿಯನ್ನು ಕಿತ್ತಿ ತಂದು ಅಣ್ಣನಿಗೆ ಕೊಟ್ಟು ಸಂತೈಸಿದನು.

## ೩೩. ವೇಣುಗೀತೆ

ಕೃಷ್ಣನು ವನವನ್ನು ಸೇರಪೋದಾಗ ಅವನ ವಿರಹವ್ಯಥೆಯಿಂದ, ಗೋಪತರುಣಿಯರು ಹಗಲನ್ನು ಕೃಷ್ಣಲೀಲಾಗಾನವನ್ನು ಮಾಡುತ್ತ ಕಳೆದರು.

ಗೋಪಿಯರು ಇಂತು ವರ್ಣಿಸಿ ಪಾಡಿದರು–

ಗೋಪಿಯರೇ! ಎಡಗಲ್ಲದಲ್ಲಿ ಎಡಗೈಯನ್ನು ಸೊಗಸಾಗಿಟ್ಟು, ಹುಬ್ಬನ್ನು ಕುಣಿಸುತ್ತಾ, ಬೆರಳುಗಳನ್ನು ಕೊಳಲ ರಂಧ್ರಗಳಲ್ಲಿಟ್ಟು ಮುಕುಂದನು ನುಡಿಸುವ ವೇಣುವನ್ನು ಕೇಳಿರೇ! ವಿಮಾನದಲ್ಲಿ ಪತಿಗಳ ಪಕ್ಕದಲ್ಲಿರುವುದನ್ನು ಮರೆತು, ವೇಣುಗಾನ ಶ್ರವಣದಿಂದ ಮೂರ್ಛಿತರಾಗಿ, ಪತಿಗಳ ಎದೆಯಲ್ಲಿ ಬಾಗಿ, ನೀವೀಬಂಧವು ಸಡಲಿ, ಮದನ ವಿಕಾರವಶರಾದ ವಿಬುಧ ರಮಣಿಯರನ್ನು ನೋಡಿರೇ!

ಆಹಾ! ಹಾರಗಳಿಂದ ಶೋಭಿಸುವ ವಕ್ಷಃಸ್ಥಲದಿ ಮಿಂಚನ್ನಿಟ್ಟು ನಮ್ಮ ನಂದನಂದನನು ವೇಣುವನ್ನೂದಲು, ನಮ್ಮಂತಹ ಆರ್ತಜನರ ಆನಂದವನ್ನು ವರ್ಣಿಸಲಾಗುವುದೇ? ವ್ರಜದ ವೃಷಭಗಳೊಂದಿಗೆ ಬೆರೆದು ನವಹರಿಣಗಳು ಗಾನವನ್ನು ಕೇಳುತ್ತಾ ಬಂದು, ನಿದ್ರಿಸುತ್ತಿದ್ದಂತೆ, ಬರೆದ ಚಿತ್ರದಂತೆ, ನಿಂತು, ಬಾಯಲ್ಲಿ ಅರೆಕಚ್ಚಿದ ತೃಣವನ್ನು ಪಿಡಿದು, ಕಿವಿಗಳನ್ನೆತ್ತಿ, ಕೃಷ್ಣನನ್ನೇ ನೋಡುತ್ತಿದೆ. ಅವುಗಳಿಗಂತೆ ನೋಡುವ ಭಾಗ್ಯ ನಮಗಿಲ್ಲವಲ್ಲ!

ನವಿಲಗರಿಯನ್ನು, ವನಧಾತುಗಳನ್ನು, ಪಲ್ಲವಗಳನ್ನೂ, ಮಲ್ಲರಂತೆ ವೇಷವನ್ನೂ ಧರಿಸಿ, ಬಲರಾಮನಿಂದ ಕೂಡಿ ಕೊಳಲನ್ನೂದಿ, ಆಕಳುಗಳನ್ನು ಕರೆಯುವ ಕೃಷ್ಣನ ಕೂಗನ್ನೂ ಕೇಳಿ, ಅವನ ಪದಪಂಕಜಪರಾಗವನ್ನು ಹೊತ್ತು ತರುವ ಮಾರುತನಿಂದ ಅವನ ಕರುಣೆಯನ್ನರಿತು, ಮುಂದೋಡಲಾಗದೆ ಮೆಲ್ಲನೆ ಹರಿಯುವ ಯಮುನಾದಿ ನದಿಗಳು, ಕೈಗಳಂತಿರುವ ತೆರೆಗಳನ್ನೆತ್ತಿ, ಕುಣಿಯುತ್ತಾ ಬರುತ್ತಿವೆ, ನೋಡಿಲ್ಲವೇ? ನದಿಗಳೂ ಏನು ಪುಣ್ಯ ಮಾಡಿವೆಯೋ?

ಸನಕಾದಿವರ್ಣಿತವೀರ್ಯನಾದ ಆದಿಪುರುಷನೇ ಗೋಪಾಲರ ಸ್ತುತಿಗೆ ಒಲಿದನೇ? ಚಾಂಚಲ್ಯವನ್ನು ಬಿಟ್ಟು ಲಕ್ಷ್ಮಿಯಿಂದ ಸೇವಿತಪದನೇ ವನದಲ್ಲಿ ಗೊಲ್ಲಭಾಮೆಯರಿಗೆ ಸಿಕ್ಕನೇ? ಜಲರಾಶಿಯಲ್ಲಿ ಶಯನಮಾಡಿದವನೇ ಗಿರಿತಟಗಳಲ್ಲಿ ಮಲಗಿದವನೇ? ನಮ್ಮ ಕೃಷ್ಣನೆಂದರೆ ವಿಷ್ಣುವೆಂದು ವನದಲ್ಲಿ ಲತಾತರುಗಳಿಗೂ ಗೊತ್ತು; ಇಲ್ಲದಿರೆ ಅವನನ್ನು ಕಂಡು ಫಲಪುಷ್ಪ ಭಾರವನ್ನರ್ಪಿಸಿ, ಶಿರಬಾಗಿ ನಮಿಸಿ ಪೂಜಿಸುವರೇ? ಪ್ರೇಮದಿಂದ ರೋಮಾಂಚನವನ್ನು ತಾಳಿ, ಮರಂದಾನಂದಬಾಷ್ಪಗಳನ್ನು ಬಿಡುವರೇ?

ವಿಕಸಿತ ಕೋಮಲೋತ್ಪಲ ಮಾಲೆಗಳನ್ನು, ದಿವ್ಯಗಂಧತುಲಸೀಹಾರಗಳನ್ನು ಧರಿಸಿ, ಅಲ್ಲಿ ಇರುವ ಮಕರಂದ ರಸಪಾನಲೋಲುಪವಾಗಿ ಬಂದು ಹಾಡುವ ಮಧುಕರಗಳನ್ನು ಮೆಚ್ಚುತ್ತಾ, ವೇಣುವನ್ನೊಮ್ಮೆ ನಮ್ಮ ಸ್ವಾಮಿಯು ಬಾರಿಸಲು, ಆಹಾ! ಸಾರಸಹಂಸ ಚಕ್ರವಾಕಾದಿ ಜಲವಿಹಗಗಳು, ನೀರಿನಲ್ಲಿ, ಮಿಂದು, ಹೊರಬಂದು, ಮನವನ್ನವನಿಗಿತ್ತು, ಕಣ್ಣು ಅರೆಮುಚ್ಚಿ, ಮೌನದಿಂದ ಕೇಳುತ್ತಾ ಇವೆ. ಇವು ಯಾವ ಜನುಮದಿ ಋಷಿಗಳೋ!

ಕರ್ಣಗಳಲ್ಲಿ ಉತ್ಪಲ ಸುಮಗಳನ್ನು, ಕಂಠದಲ್ಲಿ ಮಲ್ಲಿಕಾ ತುಲಸೀಹಾರಗಳನ್ನು ಧರಿಸಿ, ಗಿರಿಕಂದರಗಳಲ್ಲಿ ಗೋವುಗಳನ್ನು ಹೆಸರಿಟ್ಟು ಕೂಗಿ, ವೇಣುವನ್ನೂಡುವ ಕೃಷ್ಣನನ್ನು ಕಂಡು ಜಗವೇ ಮೋಹಿಸುವುದು! ನಮ್ಮ ಪಾಡೇನು? ವೇಣುಶಬ್ದವನ್ನಡ್ಡಿ ಮಾಡಲಾಗದೆಂಬಂತೆ, ಮೇಘವೂ ಮಂದವಾಗಿಯೇ ಮೃದಂಗದಂತೆ ಗುಡುಗುವುದು! ತಮ್ಮಂತೆ ನೀಲನಾದ ಗೋವಿಂದನನ್ನು ಪೂಮಳೆಗರೆದು, ನೆರಳನ್ನಿತ್ತು ಪೂಜಿಸುವ ಮೇಘವೇ ಧನ್ಯವು!

ಯಶೋದೇ! ಏನು ಧನ್ಯಳೇ ನೀನು! ನಿನ್ನ ಮಗನು ವೇಣುವನ್ನೂದಿದನೆಂದರೆ ಗಂಧರ್ವರು ಗಾನಶಿಕ್ಷೆಯನ್ನು, ಗೊಲ್ಲರು ಆತ್ಮರಕ್ಷೆಯನ್ನು ಒಂದೇ ಸಲ ಪೊಂದುವರು. ಅವನ ಅಧರ ಬಿಂಬದ ರುಚಿಗಾಗಿ ಮನಸೋತು, ಇಂದಿರೆಯೇ ವೇಣುವಾಗಿ ಅವನನ್ನು ಪೊಗಳಿ ಪಾಡುವಳು! ದೇವತೆಗಳಾವೇಣುಗೀತೆಯನ್ನು ಕೇಳಿ – ಬ್ರಹ್ಮರುದ್ರೇಂದ್ರ ಚಂದ್ರರು ಕೂಡ – ಅವನ ಗಾನಮಧುರಿಮೆಯ ಪಾರವನ್ನರಿಯಲಾರದೆ ತಲೆಬಾಗಿ ನಮಿಸುವರು.

ನಮ್ಮ ಸ್ವಾಮಿಯ ಪಾದದ ಶಂಖ ಚಕ್ರ ಪದ್ಮ ಯವಾಂಕುಶ ಧ್ವಜಾದಿ ವಿಚಿತ್ರ ಶುಭಚಿಹ್ನೆಗಳು ಗೋಖುರದ ಗುರ್ತುಗಳ ಮೇಲೆ ಮೂಡಿ, ವ್ರಜದ ತಾಪನಿವಾರಕವಾಗಿವೆ. ಅವನು ಬಂದನೆಂದರೆ ವಿಲಾಸ ವೀಕ್ಷಣ ವಿಭ್ರಮಗಳಿಗೆ ಮನಸೋತು, ಮದನವಶರಾಗಿ, ನಿಶಿಯೆಲ್ಲವು ವಸನಕಬರ ವಿಚಾರವನ್ನು ಮರೆತುಬಿಡುತ್ತಿರುವೆವು! ಏನವನ ಬಂಧಕಶಕ್ತಿಯ ಮಹಿಮೆ!

ಕಂಠದಿ ತುಲಸೀಮಾಲೆಯನ್ನಿಟ್ಟು, ಪ್ರಿಯ ಸ್ನೇಹಿತನ ಭುಜದಲ್ಲಿ ಕೈಯನ್ನಿಟ್ಟು, ಎದೆಯಲ್ಲಿ ಶ್ರೀವತ್ಸ ಕೌಸ್ತುಭಗಳನ್ನಿಟ್ಟು, ನಡುವಿನಲ್ಲಿ ಕೊಳಲನ್ನಿಟ್ಟು, ಮನೆಗೆ ಬರುವ ಗೋಪಾಲಸುಂದರನಿಗೆ ಮನದಲ್ಲಿ ನಮ್ಮನ್ನಿಡಬೇಕೆಂದು ತೋಚುವುದಿಲ್ಲವೇ? ಅವನ ಹಿಂದೆ ವೇಣುಗಾನ ಮೋಹಿತವಾದ ಹರಿಣಿಗಳೂ, ನಮ್ಮಂತೆ ಪತಿಸುತ ವಸತಿಗಳನ್ನು ತೊರೆದು, ಮೈಮರೆತು ಬರುತ್ತಿವೆ!

ಗುಣಗಣನಿಲಯವಾದ ಶ್ರೀಕೃಷ್ಣನು ಮಲ್ಲಿಗೆಯ ಹಾರದಿಂದ ಮದುಮಗನಂತೆ ಸೊಗಸಾಗಿ, ಯಮುನಾತೀರದಲ್ಲಿ, ಗೋ ಗೋಪಾಲಕರಿಗೆ ನಯನೋತ್ಸವವನ್ನು ತರುವನೇ ಯಶೋದೇ! ನಂದ! ಕೇಳಿ. ಮಲಯಮಾರುತನು ಮೆಲ್ಲನೆ ಸೇವಿಸುವನು. ದೇವತೆಗಳು ವಂದಿಜನರಂತೆ ವಾದ್ಯಗೀತಗಳಿಂದ ಪಾಡಿ ಪೊಗಳುವರು.

ಗೋಗಣ ವತ್ಸಲನಾದ ನಮ್ಮ ಕೃಷ್ಣನಿಗೆ ಜ್ಞಾನವೃದ್ಧರೂ ನಮಿಸುವರು. ಅವನ ವೇಣುಗಾನ ದಿಂದ ಗೋವುಗಳು ಸಮೃದ್ಧ ರಸವನ್ನೀಯುವುದು. ಗೋಪಾಲರು ಸಕಲ ಸಂಪದ್ಭರಿತರಾಗುವರು. ತಾಪವನ್ನು ಕಳೆದು ನಯನೋತ್ಸವಪ್ರದನಾದ ಈ ದೇವಕೀಗರ್ಭಸಂಭೂತನು ಇಚ್ಛಾಮಾತ್ರ ದಿಂದ, ಪ್ರಿಯಜನರ ಸರ್ವಾಭೀಷ್ಟಗಳನ್ನೂ ಪೂರೈಸುವನು.

ಅವನ ಮದಸುಂದರ ಲೋಚನವೇ ನಮ್ಮ ಗರ್ವವನ್ನು ನಿರ್ಮೂಲಿಸಿ, ಯೋಚನೆಯನ್ನು ಕಳೆದು, ಸಂತೈಸುವುದು. ಮಕರಕುಂಡಲ ಮಂಡಿತಗಂಡಸ್ಥಲವೇ ನಮ್ಮ ಮನೋಮುಕುರವಾಗಿ, ಸರ್ವಾಶೆಗಳನ್ನು ಅವನಿಗೆ ತಿಳಿಸುವುದು. ವದನಚಂದ್ರಮಂಡಲವೇ ಕಳಾಪೂರ್ಣವಾಗಿ ನಮ್ಮನ್ನು ರಮಿಸುವುದು.

ಈ ಬಲರಾಮನು ಕೂಡ ಚಂದ್ರನಂತೆ ಧವಳಗಾತ್ರನು, ದ್ವಿರದರಾಜಗಮನಚಿತ್ರನು, ಆಗಿ, ಸಾಯಂಕಾಲವಾಗುತ್ತಲೇ ನಮ್ಮ ಗೋಕುಲದ ಸಕಲ ತಾಪನಿವಾರಣೆಯನ್ನು ಮಾಡುವನು.

ಶ್ರೀಶುಕನು ಹೇಳಿದನು–

ರಾಜನ್! ಇಂತು ಕೃಷ್ಣಲೀಲೆಗಳನ್ನು ಸ್ಮರಿಸಿ, ಹಾಡುತ್ತಾ ಹಗಲೆಲ್ಲ ಅವನನ್ನೇ ನೆನೆದು ಗೋಪಿಕೆಯರು ಭಕ್ತಿಭರಿತರಾದರು. ಆ ಗೋಪಿಕೆಯರ ಭಕ್ತಭಾವನೆಯು ನಿರಂತರವಾಗಿತ್ತು. ಅವರೇ ಧನ್ಯರು!

## ೩೪. ಅರಿಷ್ಟವಧೆ

ಶ್ರೀಶುಕನು ಹೇಳಿದನು–

ಸ್ವಲ್ಪಕಾಲವಾಯಿತು. ಆಗ ಅರಿಷ್ಟನೆಂಬ ವೃಷಭಾಕಾರ ದೈತ್ಯನು ಕಂಸನಾಣತಿಯಿಂದ, ಕೃಷ್ಣರಾಮರನ್ನು ಕೊಲ್ಲಬೇಕೆಂದು ವೃಂದಾವನಕ್ಕೆ ಬಂದನು. ಅವನು ಗೊರಸಿನ ತುಳಿತಕ್ಕೆ ಭೂಮಿಯು ನಡುಗಿತು; ಧೂಳಿ ಎದ್ದು ಗೋಷ್ಠವನ್ನಾವರಿಸಿತು. ಕಾಲನ್ನು ತಿಕ್ಕಿ, ಬಾಲವನ್ನೆತ್ತಿ, ಕೊಂಬುಗಳಿಂದ ಮೇಘಗಳನ್ನು ಎತ್ತೊಗೆಯುತ್ತಾ, ಭಯಂಕರವಾಗಿ ಗುಟುಕುಹಾಕಿ ಬರುವ ಅರಿಷ್ಟನನ್ನು ನೋಡಿ, ಹೆದರಿ, ಗೋಕುಲವು ಆಕುಲವಾಯಿತು. ಸ್ವಲ್ಪ ಸ್ವಲ್ಪವಾಗಿ ಗೋಮಯ ಮೂತ್ರಗಳನ್ನು ಬಿಡುತ್ತಾ ಕಣ್ಣುಗುಡ್ಡುಗಳನ್ನೆತ್ತಿ ಭಯಂಕರವಾಗಿ ನೋಡಿ, ಕೂಗುವ ಅವನನ್ನು ನೋಡಿ, ಅಕಾಲಗರ್ಭಪಾತಗಳಾದವು. ಅವನ ಡುಬ್ಬದ ಮೇಲೆ ಮೇಘಗಳಾಡಿದವು. ಮೊನಚಾದ ಕೋಡುಗಳಿಂದ ಚುಚ್ಚಿ ಕೊಲ್ಲಲು ಬರುವ ಅರಿಷ್ಟನನ್ನು ನೋಡಿ ಗೋಪಗೋಪಿಯರು ಹೆದರಿ ಓಡಿದರು. ಪಶುಗಳೂ ಭಯದಿಂದ ಓಡಿಹೋದವು. ಎಲ್ಲರೂ ಏಕಕಂಠದಿಂದ 'ಕೃಷ್ಣ! ಕೃಷ್ಣ! ಕಾಪಾಡು!' ಎಂದು ಶರಣಾಗತರಾದರು. ಆಗ ಕೃಷ್ಣನು ಗೋಕುಲಕ್ಕೆ ಅಭಯವನ್ನಿತ್ತು, ವೃಷಭಾಸುರನನ್ನು ಸಮೀಪಿಸಿ ಇಂತೆಂದನು–

ಮೂರ್ಖ! ಗೋ ಗೋಪಾಲಕರನ್ನೇಕೆ ಹೆದರಿಸುವೆ? ನಿನ್ನಂತಹ ದುಷ್ಟರ ಕೊಬ್ಬನ್ನು ಅಡಗಿಸುವ ನಾನಿಲ್ಲಿರುವೆನು. ಬಾ! ಎಂದು ಚಪ್ಪಾಳೆಯಿಟ್ಟು, ಕರೆದು ಕೃಷ್ಣನು ದೈತ್ಯನನ್ನು ರೇಗಿಸಿ, ಸ್ನೇಹಿತನ ಭುಜದಲ್ಲಿ ಕೈಯಿಟ್ಟು, ನಿರ್ಲಕ್ಷ್ಯದಿಂದ ನಿಂತನು. ಅದನ್ನು ಕಂಡು ಕೆಂಡವಾಗಿ, ಗೊರಸಿನಿಂದ ನೆಲವನ್ನು ಕೆದರುತ್ತಾ, ಗುಟುರುಹಾಕಿ ಬಾಲವನ್ನೆತ್ತಿ ಅರಿಷ್ಟನು ಓಡಿಬಂದು, ಕೃಷ್ಣನನ್ನು ತಿವಿಯಲು ತಲೆಬಾಗಿ ಮುತ್ತಿದನು. ಕೆಂಪುಗಣ್ಣಿನಿಂದ ಭಯಂಕರನಾಗಿ ಇಂದ್ರನ ವಜ್ರಾಯುಧದಂತೆ ವೇಗವಾಗಿ ಬರುವ ದೈತ್ಯನ ಕೊಂಬುಗಳನ್ನು ಪಿಡಿದು ಕೃಷ್ಣನು ಹದಿನೆಂಟು ಹೆಜ್ಜೆಗಳಷ್ಟು ದೂರ ಹಿಮ್ಮೆಟ್ಟಿಸಿ ಕೆಡಹಿದನು. ಅವನು ಮತ್ತೆ ಎದ್ದು ತ್ವರೆಯಿಂದ ಬುಸ್ಸೆಂದು ಉಸಿರಿಟ್ಟು ಕೋಪದಿಂದ ಮೇಲೇರಿ ಬಂದನು. ಮತ್ತೆ ಶ್ರೀಕೃಷ್ಣನು ಅವನ ಕೋಡುಗಳನ್ನು ಪಿಡಿದು ಕೆಳಗೆ ಕೆಡಹಿ, ತುಳಿದು ನಿಂತು, ಒದ್ದೆ ಬಟ್ಟೆಯನ್ನು ಹಿಂಡಿದಂತೆ ಹಿಂಡಿ ಕೊಂದನು. ಅರಿಷ್ಟನು ರಕ್ತವನ್ನು ಕಾರಿ ಮಲಮೂತ್ರಗಳನ್ನು ವಿಸರ್ಜಿಸಿ, ಕೈಕಾಲು ಜಾಡಿಸುತ್ತಾ ಕಣ್ಣು ಕೆಟ್ಟು ಸತ್ತನು.

ಆಗ ದೇವತೆಗಳು ಅರಿಷ್ಟಮರ್ದನನೆಂದು ಕೊಂಡಾಡಿ, ಶ್ರೀಕೃಷ್ಣನನ್ನು ಪೂಮಳೆಗರೆದು ಪೂಜಿಸಿದರು. ಇಂತು ದುಷ್ಟಾರಿಷ್ಟಸಂಹಾರವನ್ನು ಮಾಡಿ ತಮ್ಮನ್ನು ಕಾಪಾಡಿದ ಕೃಷ್ಣನನ್ನು ಗೋಕುಲವಾಸಿಗಳು ಪಾಡಿ, ಹರ್ಷಭರಿತರಾದರು.

ಆ ಸಮಯದಲ್ಲಿ ದೇವನನ್ನು ಚೆನ್ನಾಗಿ ಅರಿತು ತಿಳಿಸುವ ನಾರದನು, ಕಂಸನನ್ನು ಸೇರಿ ಇಂತೆಂದನು – 'ಕಂಸಾ! ಕೃಷ್ಣನು ಯಶೋದೆಯ ಮಗನಲ್ಲ; ದೇವಕಿಯ ಪುತ್ರನು. ಅವನನ್ನು ನಿನ್ನ ಭಯದಿಂದ ಯಶೋದೆಯಲ್ಲಿಟ್ಟು, ವಸುದೇವನು ಅವಳ ಮಗನಾದ ದುರ್ಗೆಯನ್ನು ತಂದು, ನಿನಗೆ ಮೋಸ ಮಾಡಿರುವರು. ಆ ರಾಮಕೃಷ್ಣರು ನೀನು ಕಳಿಸಿದ ನಿನ್ನ ಮಿತ್ರರನ್ನೆಲ್ಲ ಕೊಂದಿರುವರು. 'ಆ ಮಾತನ್ನು ಕೇಳಿ, ಕೋಪದಿಂದ ಕಂಸನು ಖಡ್ಗವನ್ನು ಪಿಡಿದು, ವಸುದೇವನನ್ನು ಕೊಲ್ಲುವೆನೆಂದನು. ವಸುದೇವಸುತನೇ ತನಗೆ ಮೃತ್ಯುವೆಂದು ತಿಳಿಸಿ, ನಿವಾರಿಸಿದ ನಾರದನ ಮಾತನ್ನು ಕೇಳಿ, ವಸುಗೇವದೇವಕಿಯರನ್ನು ಸೆರೆಯಲ್ಲಿಟ್ಟನು. ನಾರದನನ್ನು ಕಳಿಸಿ, ಕೇಶಿದೈತ್ಯನನ್ನು ಕರೆಸಿದನು. ರಾಮಕೃಷ್ಣರನ್ನು ಕೊಂದು ಬಾರೆಂದು ಅವನನ್ನು ಕಳಿಸಿದನು.

ಮುಷ್ಟಿಕ ಚಾಣೂರಶಲತೋಶಲಾದಿ ಮಲ್ಲರನ್ನೂ, ಅಮಾತ್ಯರನ್ನೂ, ಮಾವಟಿಗನನ್ನು ಸಭೆಗೆ ಕರೆಸಿ, ಅವರನ್ನು ನೋಡಿ ಇಂತೆಂದನು–

ವೀರಮಲ್ಲರೇ! ಕೇಳಿ, ನಂದವ್ರಜದಲ್ಲಿರುವ ರಾಮಕೃಷ್ಣರು ವಸುದೇವನ ಸುತರಂತೆ, ಅವರೇ ನನಗೆ ಮೃತ್ಯುವೆಂದು ಆಕಾಶವಾಣಿಯು ನುಡಿದಿತ್ತು. ಅವರನ್ನು ಇಲ್ಲಿಗೆ ಧನುರ್ಯಾಗಕ್ಕೆಂದು ಕರೆಸುವೆನು. ಆಗ ಮಲ್ಲಯುದ್ಧದಲ್ಲಿ ಅವರನ್ನು ಸಂಹರಿಸಿಬಿಡಿ. ಮಲ್ಲರಂಗವನ್ನಲಂಕರಿಸಿ, ಮಂಚಗಳನ್ನು ಜೋಡಿಸಿರಿ! ಪೌರರು, ಗ್ರಾಮೀಣರು ಬರಲಿ; ಚಾಟಿಸಿರಿ; ಕುಸ್ತಿಯಲ್ಲಿ ಆ ಬಾಲರು ಸಾಯುವುದನ್ನು ನೋಡಲಿ!

'ಎಲೌ ಮಹಾಮಾತ್ರ! ನನ್ನ ಮಾತನ್ನು ಚೆನ್ನಾಗಿ ಕೇಳು. ಕುವಲಯಾಪೀಡವನ್ನು, ಮದವೇರುವಂತೆ ಕುಡಿಸಿ, ಸೊಂಡಿಲದಲ್ಲಿ ಮುದ್ಗರವನ್ನು ಕೊಟ್ಟು, ರಂಗದ್ವಾರದಲ್ಲಿ ನಿಲ್ಲಿಸು! ವಸುದೇವಸುತರನ್ನು ಅದರಿಂದ ಕೊಲ್ಲಿಸು' ಎನ್ನಲು, ಆ ಮಾವಟಿಗನು, ಆಶ್ಚರ್ಯವ್ಯಸನಯುಕ್ತನಾಗಿ, ಇಂತೆಂದನು–

'ಭೋಜರಾಜನೇ! ನಿನ್ನ ತಂಗಿಯ ಮಕ್ಕಳನ್ನು ಕೊಲ್ಲಿಸಿಬಿಡಬಹುದೇ? ನಮಗೆ ಭಯವಾಗುತ್ತಿದೆ'. ಆ ಮಾತನ್ನು ಕೇಳಿ ನೀಚತರನಾದ ಕಂಸನಿಂತು ನುಡಿದನು–

ಸಭಿಕರೇ, ಕೇಳಿ! ನನಗೆ ಬಂಧುಗಳಾದ ವಸುದೇವಾದಿಗಳಲ್ಲಿಯು, ಉಗ್ರಸೇನನಲ್ಲಿಯು, ನಾನು ದ್ವೇಷವನ್ನೇಕೆ ಮಾಡುತ್ತಿರುವೆನೆಂಬುದನ್ನು ತಿಳಿಯಿರಿ.

ಒಂದು ದಿನ ನಮ್ಮ ತಾಯಿ ರಾಜಮಂದಿರೋಪವನದಲ್ಲಿ ವಿಹರಿಸುತ್ತಿದ್ದಳು. ಅಶೋಕ ಪೂಗಪುನ್ನಾಗಬಕುಳಾದಿ ಪುಷ್ಪಗಳರಳಿದ ಸುಗಂಧವನ್ನು ಹೊತ್ತು ಮಂದಮಾರುತವು ಬೀಸುತ್ತಿತ್ತು. ಭ್ರಮರಝುಂಕಾರಗಳಿಗೆ ಶ್ರುತಿಗೂಡಿಸಿ ಕೋಗಿಲೆಗಳು ಹಾಡುತ್ತಿದ್ದವು. ನವಿಲುಗಳು ಕುಣಿಯುತ್ತಿದ್ದವು. ಮರ್ಕಟಗಳ ಆಟೋಪವಿಲಾಸಗಳು ಹೇಳತೀರದು. ಅಂತಹ ಸುಂದರ ವಸಂತಕಾಲದಲ್ಲಿ, ವನದ ಸಾಲವೃಕ್ಷಗಳ ನೆರಳಿನಲ್ಲಿ ತಿರುಗುತ್ತಾ, ನಮ್ಮ ತಾಯಿ ತನ್ನ ಗಂಡನನ್ನು ನೆನೆಸಿದಳು. ಅಂದಾಕೆ ಋತುಸ್ನಾತಳಾಗಿ, ಅಲಂಕೃತಳಾಗಿದ್ದಳಂತೆ, ದ್ರುಮಿಲನೆಂಬುವ ದಾನವ ಗಂಧರ್ವನು ಅಂತರ್ಹಿತನಾಗಿ, ಅಲ್ಲೇ ತಿರುಗುತ್ತಿದ್ದವನು, ಏಕಾಕಿನಿಯಾದ ಆ ಸುಂದರಿಯನ್ನು ನೋಡಿ, ಅವಳ ಮನದಿಂಗಿತವನ್ನರಿತು, ಉಗ್ರಸೇನರೂಪವನ್ನು ಧರಿಸಿ, ನಗುತ್ತಾ ಬಂದು, ಅವಳೊಡನೆ ರಮಿಸಿದನು. ರಮಣ ಸಮಯದಲ್ಲಿ ಪವಿತ್ರತೆಯಾದ ಅವಳಿಗೆ, ಅವನು ತನ್ನ ಪತಿಯಲ್ಲವೆಂದು ತಿಳಿಯಿತು; ಬಹುಖೇದದಿಂದ ಅಳುತ್ತಾ 'ಯಾರು ನೀನು? ಮೋಸಗಾರ! ಎಂತಹ ಅನ್ಯಾಯವನ್ನು ಮಾಡಿದೆ!' ಎಂದು ನಿಂದಿಸುವ ಅವಳನ್ನು ನೋಡಿ, ಭೀತನಾಗಿ ಅವನಿಂತೆಂದನು–

'ನಾವು ಗಂಧರ್ವರು ಪ್ರಿಯೇ! ದೇವಸಮಾನರು; ಇಂದ್ರನ ಅನುಚರರು; ನಿನ್ನಂತಹ ಮನುಜ ನಾರಿಯರಿಗೆ ಸಿಗುವವರಲ್ಲ. ಜರಾಮರಣಗಳು, ಆಧಿವ್ಯಾಧಿಗಳುಳ್ಳ ನರರೆಲ್ಲಿ? ನಾವೆಲ್ಲಿ?' ಎಂದಾಡಿದ ಆ ತುಡುಗನನ್ನು ನೋಡಿ, ಕಡುಕೋಪದಿಂದ ನಮ್ಮ ತಾಯಿ, 'ಮೂರ್ಖ! ಮಾಡಿದ ದುಷ್ಟಚೇಷ್ಟೆ ಸಾಲದೆ, ಸಾಂತ್ವನ ವಚನಗಳಿಂದ ಏಕೆ ನೋಯಿಸುವೆ? ಪಾಪಿ! ಜನ ಭೂತಲಾನಿ ಲಾನಲ ಗಗನ ಚಂದ್ರ ಸೂರ್ಯರು, ದಿಕ್ಕುಗಳು, ಕಾಲ, ಧರ್ಮಗಳನ್ನು ಧಿಕ್ಕರಿಸಿ, ದುಷ್ಟಗಜವು ವನಮಧ್ಯದ ಪದ್ಮಸರವನ್ನಂತೆ, ನನ್ನನ್ನು ಕೆಡಿಸಿ, ಹಾಳು ಮಾಡಿದೆ - ನಾಚಿಕೆಯಿಲ್ಲದೆ ಮತ್ತೆ, ಸಮಾಧಾನದ ಮಾತನ್ನಾಡಲು ಬರುತ್ತಿರುವೆ ಹೋಗು!' ಎಂದು ನಿಂದಿಸಿದಳು. ಅವನಾಗ, 'ಸರೋಜನಯನೇ! ಸಿಟ್ಟೇಕೆ? ಕೇಳು! ದೇವತೆಗಳಿಗೆ ಮನುಜ ರಮಣೀ ರಮಣವು ಅನುಲೋಮವಾಗಿ ನಿಂದನೀಯವಲ್ಲ. ಶಂತನ್ವಾದಿಗಳು ಪೂರ್ವದೇವತೆಗಳಾದ್ದರಿಂದ ಗಂಗಾದಿ ದೇವವನಿತಾ ಸಂಗವು ಪ್ರತಿಲೋಮವೆನಿಸಿದರೂ ದೋಷವಾಗಲಿಲ್ಲ. ಆದ್ದರಿಂದ ನಾನು ಪಾಪವನ್ನು ಮಾಡಿಲ್ಲವೆಂದೇ ತಿಳಿ. ನನ್ನ ವೀರ್ಯವು ವ್ಯರ್ಥವಾಗದು. ನಿನಗೆ ಶ್ರೀಮಂತನು, ಬುದ್ಧಿವಂತನು, ಉತ್ಸಾಹವಂತನು ಆದ ಮಗನಾಗುವನಿದು ನಿಜ' ಎಂದು ಹೇಳಿದನು. ನಮ್ಮ ತಾಯಿಯು ಮತ್ತೆ ಸಿಟ್ಟಾಗಿ, ಸುದುರ್ಲಭವಾದ ಪಾತಿವ್ರತ್ಯವು ಹಾಳಾಯಿತೆಂದು ನೊಂದು, 'ಛೇ! ನಡತೆ ಕೆಟ್ಟು ಧರ್ಮವನ್ನು ಮುರಿದು, ಪಾಪವನ್ನೆಸಗಿದ ನಿನ್ನ ಮಗನು ಸಾಹಸಿಯು ನಿರ್ದಯನು ಕ್ರೂರನು ನಿರ್ಲಜ್ಜನು ಆಗಲಿ! ದೇವದ್ರೋಹಿಯಾಗಲಿ! ಬ್ರಹ್ಮದ್ರೋಹಿಯಾಗಲಿ! ಭೂತದ್ರೋಹಿಯಾಗಲಿ!– ಎಂದು ಬೈಯುತ್ತಿರಲು, ನಿಲ್ಲದೆ ಶಾಪಭಯದಿಂದ ದ್ರುಮಿಲನು ಅಂತರ್ಹಿತನಾದನು.

ಆಗ ಮಹೋದ್ಯಾನದಿಂದ, ಹಿಂದಿರುಗಿ ಬಂದು ನಮ್ಮ ತಾಯಿ, ಯಾರಿಗೂ ಆ ರಹಸ್ಯವನ್ನರುಹದೆ ಇದ್ದು, ಆಮೇಲೆ ನನ್ನನ್ನು ಪಡೆದಳು.

ಈ ವೃತ್ತಾಂತವನ್ನು ನಾರದನೇ ನಿನಗೆ ಪೇಳಿರುವನು. ಆದ್ದರಿಂದಲೇ ಇವರೆಲ್ಲರೂ ಬಂಧುಗಳಾದರೂ ನನ್ನ ಹಿತಕಾರಿಗಳಲ್ಲವೆಂದು ತಿಳಿದು, ದ್ವೇಷಿಸುತ್ತಿರುವೆನು. ನಮ್ಮ ತಂದೆ ಎಂದು ನೀವು ತಿಳಿದ ಉಗ್ರಸೇನ ವಸುದೇವ ಮುಂತಾದವರೂ ನನ್ನಲ್ಲಿ ದ್ವೇಷಿಗಳಾಗಿರುವುದು ನಿಮಗೂ ಗೊತ್ತಿದೆ. ಅವರನ್ನು ಕೊಂದರೂ ಗಂಧರ್ವಪುತ್ರನಾದ ನನಗೆ ಪಿತೃಹತ್ಯಾ ದೋಷವಿಲ್ಲ. ಆದ್ದರಿಂದಲೇ ರಾಮಕೃಷ್ಣರನ್ನು ಕೊಲ್ಲಲು ಹವಣಿಸುವ ನನಗೆ ನೀವು ಸಹಾಯಮಾಡಿರಿ! ವಸುದೇವೋಗ್ರಸೇನರು, ನಂದಾದಿಗೋಪಾಲಕರು ಕೃಷ್ಣರಾಮರ ಸಾವನ್ನು ಕಣ್ಣಾರೆ ಕಂಡು ದುಃಖಿಸಲಿ! ಕರೆಯಿಸಿರಿ ಗ್ರಾಮಜನರನ್ನು! ನೋಡಲಿ ನನ್ನ ಪೌರುಷವನ್ನು! ಕುವಲಯಾಪೀಡವನ್ನು ರಂಗದ್ವಾರದಲ್ಲಿ ನಿಲ್ಲಿಸಿ, ರಾಮಕೃಷ್ಣರು ಬರುತ್ತಲೆ, ತುಳಿಸಿ ಕೊಲ್ಲುವುದು ಮಾವಟಿಗನ ವಂತು. ಅದನ್ನು ಮೀರಿಬಂದರೆ ಚಾಣೂರ ಮುಷ್ಟಿಕರ ವಂತು; ಅವರನ್ನೂ ಸವರಿಬಂದಾಗ ನನ್ನ ವಂತು! ಆಗಲಿ! ಧನುರ್ಯಾಗವನ್ನು, ಕೃಷ್ಣಚತುರ್ದಶಿಯ ದಿನ – ಅವಧಿಯಿಂದಲೆ – ಚಿಂತೆಯಿಲ್ಲ, ಪ್ರಾರಂಭ ಮಾಡೋಣ! ಭೈರವ ರುದ್ರನಿಗೆ ಬಲಿಯಾಗಿ, ಪಶುಗಳನ್ನು ಸಂಹರಿಸಿ! ಬೇಕಾದ ವರಗಳನ್ನು ಪಡೆಯೋಣ! ಎಂದನು.

ಅನಂತರ ಅವರನ್ನು ಕಳಿಸಿ, ಅಕ್ರೂರನನ್ನು ಕರೆಸಿ, ಅವನ ಕೈಯಲ್ಲಿ ಕೈಯನ್ನಿಟ್ಟು, ಕರೆದುಕೊಂಡು ಏಕಾಂತಮಂದಿರದಲ್ಲಿ ಕೂತು, ಕಂಸನಿಂತು ನುಡಿದನು–

ಅಕ್ರೂರ! ನೀನು ನನಗೆ ಮಿತ್ರನಲ್ಲವೇ? ನಿನ್ನಿಂದ ಒಂದು ಉಪಕಾರವಾಗಬೇಕಾಗಿದೆ. ಭೋಜ ವೃಷ್ಣಿ ಯಾದವರಲ್ಲಿ ನಿನಗಿಂತ ಹಿತಕರರೆನಗಿಲ್ಲ. ಕಾರ್ಯಗೌರವವನ್ನರಿತು, ನಿನ್ನನ್ನೇ ಆಶ್ರಯಿಸಿ, ವಿಷ್ಣುವನ್ನು ನಂಬಿದ ಇಂದ್ರನಂತೆ, ಕಾರ್ಯವನ್ನು ಸಾಧಿಸಲಿರುವೆನು.

ನಂದವ್ರಜಕ್ಕೆ ಹೋಗಿ, ಅಲ್ಲಿ ವಸುದೇವನ ಮಕ್ಕಳು – ಆ ರಾಮಕೃಷ್ಣರು – ಇರುವರಲ್ಲ! ಅವರನ್ನು ಧನುರ್ಯಾಗಕ್ಕೆಂದು, ರಥದಲ್ಲಿ ಕೂಡಿಸಿಕೊಂಡು, ಕರೆತಾ! ವೈಕುಂಠ ಶರಣರಾದ ದೇವತೆಗಳೇ ಹೇಳಿರುವರಲ್ಲವೇ ಆಕಾಶವಾಣಿಯಿಂದ; ಅದರಂತೆ ನನಗೆ ಮೃತ್ಯು ವೆನಿಸಿದ ಆ ಬಾಲರನ್ನು ನಾನು ಕೊಲ್ಲುವುದರಲ್ಲಿ ತಪ್ಪೇನಿದೆ? ಕುವಲಯಾಪೀಡವೇ ಅವರನ್ನು ತುಳಿದುಬಿಡುವುದು. ತಪ್ಪಿದರೆ ಮಲ್ಲರಿಂದ ಕೊಲ್ಲಿಸುವೆನು. ಆಗ ಪುತ್ರರನ್ನು ಕಳೆದುಕೊಂಡು ಅಳುವ ದೇವಕೀ ವಸುದೇವರನ್ನು, ಮಿಕ್ಕ ಎಲ್ಲ ಯಾದವ ಬಂಧುಗಳನ್ನೂ ಕೊಂದುಬಿಡುವೆನು. ನಮ್ಮ ತಂದೆಯಾದ ಉಗ್ರಸೇನನನ್ನೂ ಕೊಂದು, ದೇವಕನನ್ನು, ಅಹುಕಾದಿಗಳನ್ನು, ಯಮಪುರಿಗೆ ಕಳಿಸಿ, ನಿಷ್ಕಂಟಕವಾದ ರಾಜ್ಯವನ್ನು, ಶಾಶ್ವತವಾಗಿ, ನಾನೇ ಆಳುವೆನು. ಜರಾಸಂಧ ನನಗೆ ಗುರುವು; ದ್ವಿವಿದನು ಸಖನು! ಶಂಬರ ನರಕ ಬಾಣರು ನನ್ನ ಹಿತೈಷಿಗಳು, ಅವರಿಂದ ಕೂಡಿ, ಬಲಿತು, ಸುರಪಕ್ಷರಾದವರನ್ನೆಲ್ಲಾ ಸಂಹರಿಸಿ, ಸುಖವಾಗಿರುವೆನು. ಹೋಗು, ಕರೆತಾ ರಾಮಕೃಷ್ಣರನ್ನು! ಧನುರ್ಯಾಗದ ನೆಪದಿಂದ, ಮಧುರಾ ಪುರಿಯನ್ನು ನೋಡಿಸುವೆನೆಂದು ಆಶೆ ತೋರಿಸಿ, ಅವರನ್ನು ಕರೆದುಕೊಂಡು ಬಾ!

ಆ ಮಾತನ್ನು ಕೇಳಿ ಅಕ್ರೂರನಿಂತೆಂದನು–

ರಾಜನ್! ನಿನ್ನ ಆಲೋಚನೆ ಸರಿಯಾಗಿದೆ. ಮರಣಪರಿಹಾರೋಪಾಯವನ್ನು ಎಲ್ಲರೂ ಅನುಸರಿಸುವುದು ಸಿದ್ಧವಾಗಿದೆ. ಆದರೆ ಅಂದುಕೊಂಡಂತೆ ಆಗದಿದ್ದರೂ ದುಃಖಪಡದಿರುವುದು

ಒಳಿತೆಂದು ಹೇಳಬೇಕೇ? ಕೇಳು! ಫಲವು ದೈವಾಧೀನವಾಗಿದೆ. ಮನೋರಥದಲ್ಲಿ ಸವಾರಿ ಮಾಡುವುದು ಮನುಜನ ಕೆಲಸ; ಮನೋರಥವನ್ನೇ ನುಚ್ಚುನೂರಾಗಿಸುವುದು ದೈವದ ಕೆಲಸ. ಹರ್ಷಶೋಕಗಳಿಗೆ ಗುರಿಯಾಗದಿರುವವನು ವಿವೇಕಿಯೆನಿಸುವನು. ನನಗೇಕೆ? ನೀ ಹೇಳಿದಂತೆ ಮಾಡಿದರಾಯಿತಲ್ಲ. ನಿನ್ನ ಮೃತ್ಯುವಾದ ಕೃಷ್ಣನನ್ನು ಇಲ್ಲಿಗೆ ಕರೆತಂದರಾಗ ನಿನಗೆ ಸಮ್ಮತವೇ?– ಎಂದು ಹೇಳಿ, ಕಂಸನಿಂದ ಅಪ್ಪಣೆಯನ್ನು ಪಡೆದು, ಅಕ್ರೂರನು ತನ್ನ ಮನೆಗೆ ಹೋದನು.

## ೩೫. ಕೇಶಿವಧೆ – ನಾರದಸ್ತುತಿ – ವ್ಯೋಮವಧೆ

ಕಂಸನಿಂದ ಆಜ್ಞೆಯನ್ನು ಪಡೆದು ಕೇಶಿದೈತ್ಯನು ಗೋಕುಲವನ್ನು ಸೇರಿದನು. ಗೊರಸಿನಿಂದ ನೆಲವನ್ನು ಕೆದರಿ, ಧೂಳಿ ಎಬ್ಬಿಸಿ, ಗೋಕುಲವನ್ನೆಲ್ಲ ತನ್ನ ಹೇಷಾರವದಿಂದ ಭಯಾಕುಲವನ್ನು ಮಾಡಿದನು. ಅವನ ಸಟಾಜಾಲವು ತಾಕಿ, ಮೇಘಗಳು, ಅಲ್ಲಿ ತಿರುಗುವ ವಿಮಾನಗಳು ಉದುರಿದವು. ಉಬ್ಬಾದ ಕಣ್ಣುಗುಡ್ಡೆಗಳಿಂದ ತೆರೆದು ಗುಹೆಯಂತಿರುವ ಬಾಯಿಯಿಂದ, ದೊಡ್ಡ ಕುತ್ತಿಗೆಯಿಂದ ಭಯಂಕರನಾದ ಕೇಶಿಯು, ಕಪ್ಪುಮೇಘದಂತೆ, ಕಪ್ಪಾದ ಮನಸ್ಸಿನಿಂದ, ಕಂಸಹಿತವನ್ನು ಸಾಧಿಸುವೆನೆಂದು ನಂದನ ವೃಂದಾವನ ಭೂಮಿಯು ನಡುಗುವಂತೆ ಬಂದನು. ಬಾಲವನ್ನಾಕಾಶದಲ್ಲೆತ್ತಿ ಬಡಿಯುವ ಕೇಶಿಯನ್ನು ಎದುರಿಸಿ ನಿಂತು ಕೃಷ್ಣನು ಸಿಂಹನಾದವನ್ನು ಮಾಡಿದನು. ಅದನ್ನು ಕೇಳಿ, ಕೆರಳಿದ ಕೇಶಿಯು ಕೇಶವನನ್ನು ನುಂಗಿಬಿಡುವಂತೆ ಮೇಲೇರಿ ಬಂದನು; ಚಂಡವೇಗದಿಂದ ಬಂದು, ಗೋವಿಂದನನ್ನ ಕಾಲುಗಳಿಂದ ಒದೆಯಲು, ಕೃಷ್ಣನು ತಪ್ಪಿಸಿಕೊಂಡು, ಅವನನ್ನು ಕೈಯಿಂದ ನೂರು ಧನುಸ್ಸಿನ ದೂರ ಮಾಡಿ, ಮೂರ್ಛೆ ಕೆಡಹಿದನು. ಅವನು ಮೆಲ್ಲನೆ ಮೂರ್ಛೆಯಿಂದೆದ್ದು, ಬಾಯ್ದೆರೆದು, ತ್ವರೆಯಿಂದ ನುಂಗಲು ಬಂದನು. ತತ್‌ಕ್ಷಣವೇ ಅಧೋಕ್ಷಜನು ತನ್ನ ಕೈಯನ್ನು ಅವನ ಬಾಯಲ್ಲಿಟ್ಟು, ಬೆಳೆಸಿದನು. ಅವನ ಹಲ್ಲುಗಳುದುರಿದವು. ಕಾದ ಕಬ್ಬಿಣದಂತೆ ಕೃಷ್ಣಕರವು ಅವನ ಬಾಯನ್ನೆಲ್ಲ ಸುಟ್ಟಿತು, ಹಾಗೂ ಉಪೇಕ್ಷಿತವಾದ ರೋಗದಂತೆ ಉದ್ದವಾಗಿಯು, ಅಗಲವಾಗಿಯು, ಬೆಳೆದು, ಉಸುರುಗಟ್ಟಿಸಿತು. ಅಸುರನು ಮೈಬೆವರಿಟ್ಟು, ಗುಡ್ಡುಮೇಲಾಗಿ, ಲದ್ದಿಯನ್ನಿಕ್ಕಿ, ಸತ್ತುಬಿದ್ದನು. ಕರ್ಕಟಿಕಾಫಲ ದಂತೆ ಅವನ ಹೊಟ್ಟೆ ಹೋಳಾಗಲು, ಕೃಷ್ಣನ ಭುಜವು ಸಹಜ ಸುಂದರವಾಗಿ ಹೊರಬಂತು. ದೇವತೆಗಳು ತರುಣಿಯರಿಂದ ಕೂಡಿ, ಕೇಶಿಮರ್ದನನ ಶಿರದಿ ಪೂಮಳೆಗರೆದು, ಪಾಡಿ ಪೊಗಳಿದರು.

ಆಗ ನಾರದನು ಕೃಷ್ಣನನ್ನು ಏಕಾಂತದಲ್ಲಿ ನೋಡಿ ಇಂತು ವಿಜ್ಞಾಪಿಸಿದನು -

ಕೃಷ್ಣ! ಅಪರಿಮೇಯ! ಮಹಾಮಹಿಮ! ವಾಸುದೇವ! ಜಗದಾಧಾರ! ಯದುವೀರ! ನೀನು ಸರ್ವಭೂತಾಂತರಾತ್ಮನು. ನಾನಾ ದಾರುಗಳಲ್ಲಿ ನೆಲಸಿರುವ ಅಗ್ನಿಯಂತೆ, ಭಿನ್ನಭಿನ್ನ ಜೀವರಲ್ಲಿ ಅಂತರ್ಯಾಮಿ ಆಗಿರುವ ನಿನಗೆ ಸ್ವಗತಭೇದವಿಲ್ಲ. ಹೃದಯದಲ್ಲಿದ್ದು, ಶರೀರೇಂದ್ರಿಯಾದಿ ಗಳನ್ನು ನಡೆಸುತ್ತಾ, ಹೊರಗೆ ಸಾಕ್ಷಿಯಾಗಿ, ಸರ್ವಕರ್ಮಫಲಪ್ರದನಾದ ಪುರುಷೋತ್ತಮನು ನೀನು, ನನಗೆ ಮತ್ತೊಬ್ಬ ನಿಯಾಮಕನಿಲ್ಲ. ನಿನ್ನಿಚ್ಛೆಯಿಂದ ಮಹದಾದಿ ಪ್ರಾಕೃತಜಗವನ್ನು ನಿರ್ಮಿಸುವೆ; ರಕ್ಷಿಸುವೆ; ಕೊನೆಗೆ ಸಂಹರಿಸುವೆ. ಭೂಭಾರರಾದ ರಾಕ್ಷಸರನ್ನು ಸಂಹರಿಸಿ, ಸೂಜನರನ್ನು ಪೊರೆವೆ. ಈ ಕೇಶಿನಾಮಕ ಹಯಾಸುರನನ್ನು ಲೀಲೆಯಾಗಿ ಕೊಂದ ಗೋವಿಂದ!

ನಿನಗೆ ವಂದನವು. ಈ ಪಾಪಿಯ ಕೂಗನ್ನು ಕೇಳಿ, ದೇವತೆಗಳು ಕೂಡ ಓಡಿಹೋಗುತ್ತಿದ್ದರು. ನಾಡಿದ್ದು ನೀನು ಚಾಣೂರ ಮುಷ್ಟಿಕರನ್ನು, ಕುವಲಯಾಪೀಡವೆಂಬ ದುಷ್ಟಗದ ದೈತ್ಯನನ್ನು, ಕಂಸನನ್ನು ಕೊಲ್ಲುವುದನ್ನು ನೋಡಲು ಉತ್ಸುಕನಾಗಿರುವೆನು.

ಕೃಷ್ಣ! ಪಂಚಜನನೆಂಬ ಶಂಖಾಸುರನನ್ನು, ಕಾಲಯವನನನ್ನು, ಮುರನರಕರನ್ನು ಸಂಹರಿಸ ಬೇಕು. ಇಂದ್ರನನ್ನು ಸೋಲಿಸಿ, ಪಾರಿಜಾತವನ್ನು ತರಬೇಕು. ನರಕನು ಸೆರೆಯಿಟ್ಟ ತರುಣಿಯರನ್ನು ತಂದು ಮದುವೆಯಾಗಬೇಕು. ನೃಗನನ್ನು ಓತಿಕಾಟದ ಜನ್ಮದಿಂದ ಬಿಡಿಸಬೇಕು. ದ್ವಾರಕೆಯಲ್ಲಿ ರುಕ್ಮಿಣೀರಮಣನಾಗಿ, ಸ್ಯಮಂತಕಮಣಿಯ ನೆವದಿಂದ ಸತ್ಯಭಾಮಾದೇವಿಯನ್ನು ಸ್ವೀಕರಿಸ ಬೇಕು. ಗುರುಗಳಾದ ಸಾಂದೀಪನಿಗಳಿಗೆ ಮೃತಪುತ್ರನನ್ನು ತಂದುಕೊಡಬೇಕು. ಪೌಂಡ್ರಕನನ್ನು ಕೊಂದು, ಕಾಶಿಯನ್ನು ಬೂದಿಯ ರಾಶಿಯನ್ನು ಮಾಡಬೇಕು. ರಾಜಸೂಯದಲ್ಲಿ ಅಗ್ರಪೂಜೆ ಯನ್ನು ಸ್ವೀಕರಿಸಿ, ಶಿಶುಪಾಲ ದಂತವಕ್ತ್ರರನ್ನು ಸಂಹರಿಸಬೇಕು. ಇನ್ನು ನೀ ಮಾಡುವ ಅನೇಕ ಲೀಲೆಗಳನ್ನೂ ನಾನು ನೋಡಬೇಕು! ಮುಂದೆ ಕವಿಗಳವನ್ನು ವರ್ಣಿಸಿ ಸಂಸಾರಸಾಗರ ವನ್ನು ನಿನ್ನ ದಯದಿಂದ ದಾಟಬೇಕು! ಕಾಲರೂಪಿಯಾಗಿ ಭೂಭಾರವನ್ನಿಳುಹುವ ನಿನ್ನ ಅರ್ಜುನ ಸಾರಥ್ಯವನ್ನೂ ನೋಡಿ ಧನ್ಯನಾಗುವೆನು. ಕೃಷ್ಣಾ! ಅಪ್ರಾಕೃತ ಜ್ಞಾನಾನಂದಮೂರ್ತಿಯು, ಅಪರಾಧೀನನು, ಪೂರ್ಣ ಕಾಮನು, ಪ್ರಕೃತಿದೂರನು, ಸತ್ವಾದಿ ಗುಣಪ್ರೇರಕನು, ಸ್ವಾಶ್ರಯನು, ದೇವ ಮಾನವ ದಾನವ ವ್ಯವಸ್ಥಾವಿಶೇಷನಿಪುಣನು, ಶಿಷ್ಟಪಾಲನ ದೀಕ್ಷಾದಕ್ಷನು, ಶ್ರೀ ಭೂ ದುರ್ಗಾರಮಣನು ಆದ ನಿನಗೆ ನಮೋನಮಃ.

ಇಂತು ನುತಿಸಿ, ನಮಿಸಿ, ಶ್ರೀಕೃಷ್ಣದರ್ಶನಾನಂದಭರಿತನಾದ ದೇವರ್ಷಿಯು ಹೊರಟು ಹೋದನು.

ಭಗವಂತನು ಪ್ರೀತರಾದ ಗೋಪಾಲಕರಿಂದ ಕೂಡಿ ವ್ರಜದಲ್ಲಿ ಸುಖವಾಗಿದ್ದನು. ಒಂದು ದಿನ ಪಶುಪಾಲಕನಾಗಿ, ಗಿರಿಕಂದರದಲ್ಲಿ ತಿರುಗುತ್ತಾ ಕೃಷ್ಣನು, ಗೋಪಾಲಬಾಲರಿಂದ ಕೂಡಿ, ಆಟಗಳನ್ನಾಡುತ್ತಿದ್ದನು. ಕೆಲವರು ಚೋರರಾದರು; ಕೆಲವರು ಕುರಿಗಳಾದರು; ಕೆಲವರು ಕುರಿಗಳನ್ನು ರಕ್ಷಿಸಲು ನಿಂತರು. ಆಗ ಮಯಪುತ್ರನಾದ ವ್ಯೋಮಾಸುರನು, ಗೋಪಾಲರೂಪ ದಿಂದಲ್ಲಿಗೆ ಬಂದು ಅವರಿಂದ ಕೂಡಿ ಆಡತೊಡಗಿದನು. ಕುರಿಗಳಾದ ಗೋಪಾಲರನ್ನು ಕದ್ದು, ಒಂದು ಗುಹೆಯಲ್ಲಿಟ್ಟು, ಬಂಡೆಮುಚ್ಚಿ ಬರುತ್ತಿದ್ದ ರಾಕ್ಷಸನನ್ನು ಶಿಕ್ಷಿಸಲು ನಿಶ್ಚಯಿಸಿ, ನೀಲ ನೀರದಗಾತ್ರನು, ಒಬ್ಬ ಬಾಲನನ್ನೆತ್ತಿಕೊಂಡು ಹೋಗುತ್ತಿದ್ದ ಅವನನ್ನು ಹಿಂಬಾಲಿಸಿ, ಸಿಂಹವು ತೋಳವನ್ನಂತೆ ಹಿಡಿದು, ನೆಲಕ್ಕೆ ಅಪ್ಪಳಿಸಿ ಕೊಂದನು; ಗುಹೆಯನ್ನು ಸೇರಿ, ಅಲ್ಲಿ ಬಂಧಿತರಾದ ಸಖರನ್ನು ಬಿಡಿಸಿ ಕಾಪಾಡಿ, ಅವರು ಕೊಂಡಾಡುತ್ತಿರಲು, ಗೋಕುಲವನ್ನು ಬಂದು ಸೇರಿದನು.

## ೩೮. ಅಕ್ರೂರ ಹರ್ಷೋತ್ಕರ್ಷ — ಕೃಷ್ಣದರ್ಶನ

ಶ್ರೀಶುಕನು ಹೇಳಿದನು–

ಅಕ್ರೂರನು ಆ ರಾತ್ರಿಯೆಲ್ಲಾ ನಿದ್ದೆ ಮಾಡಲಾರದವನಾಗಿ, ಮಧುರೆಯಲ್ಲಿ ಕಳೆದು, ಬೆಳಗಾದ ಕೂಡಲೇ ರಥವನ್ನೇರಿ, ನಂದಗೋಕುಲಕ್ಕೆಂದು, ಪರಮೋತ್ಸುಕನಾಗಿ ಪಯಣಿಸಿದನು. ಮಾರ್ಗಮಧ್ಯದಲ್ಲಿ ಹೋಗುತ್ತಾ, ಕೃಷ್ಣನನ್ನು ನೆನೆದು, ಭಕ್ತಿರಸವು ಉಕ್ಕೇರಿ ಬಂದಂತಾಗಿ, ಮೈಮರೆತು, ಇಂತು ಚಿಂತಿಸಿದನು–

ಯಾವ ಜನುಮದ ಪುಣ್ಯದ ಫಲವೋ, ಯಾವ ಮಹಾತಪಸ್ಸಿನ ಸಿದ್ಧಿಯೋ, ಯಾವ ವಿಷ್ಣುಭಕ್ತನಿಗಿತ್ತ ದಾನವ ಮಹಿಮೆಯೋ, ಇಂತು ನನಗೆ ಬ್ರಹ್ಮರುದ್ರೇಂದ್ರವಂದಿತನಾದ ಗೋವಿಂದ ಸಂದರ್ಶನವಾಗುತ್ತಿದೆ! ಶೂದ್ರಜನ್ಮನಿಗೆ ವೇದಾಧ್ಯಯನದಂತೆ, ವಿಷಯಾಸಕ್ತನಾದ ನನಗೆ ಉತ್ತಮಶ್ಲೋಕ ಶಿಖಾಮಣಿಯು ದರ್ಶನವು ದುರ್ಲಭವಲ್ಲವೇ? ಇರಲಿ! ನಾನೇಕೆ ಅಲ್ಪರಿಯಬೇಕು? ನಾನೇಕೆ ಬಡವನೋ, ನಾನೇಕೆ ಪರದೇಶಿ ಶ್ರೀನಿಧಿ ಹರಿಯು ನನ್ನ ಸ್ವಾಮಿಯಾಗಿರಲು; ಕಾಲನದಿಯಲ್ಲಿ ಕೊಚ್ಚಿಕೊಂಡು ಹೋಗುವವನಿಗೆ ಹರಿಭಕ್ತಿನಾವೆಯೊಂದು ಸಿಕ್ಕರೆ ಸಾಕು, ಸಂಸಾರದ ಪಾರವನ್ನು ಸೇರದಿರುವನೇ? ಇಂದು ನನ್ನ ಅಮಂಗಲವೆಲ್ಲವು ನಶಿಸಿತು. ನನ್ನ ಜನ್ಮವೇ ಸಾರ್ಥಕವಾಯಿತು! ಯೋಗಿ ಜನಚಿಂತಿತ ಪದಪಂಕಜನಾದ ಗೋವಿಂದನಿಗೆ ವಂದಿಸುವ ಭಾಗ್ಯವೆನ್ನದಾಯಿತು! ಕಂಸನು ನನ್ನಲ್ಲಿ ಒಂದು ರೀತಿಯಾಗಿ ದಯೆಯನ್ನೇ ತೋರಿರುವನು. ಅವನು ಕಳಿಸದಿದ್ದರೆ ಶ್ರೀರಮಣ ಚರಣದರ್ಶನವೆನಗೆ ಸಿಗುತ್ತಿತ್ತೇ? ಅವರ ಚರಣನುಖಚಂದ್ರ ಮಂಡಲ ಕಾಂತಿಯಿಂದ ಬ್ರಹ್ಮಾದಿಗಳು ಕೂಡ ಅಜ್ಞಾನ ಶೋಕಬಂಧಗಳೆಂಬ ಕತ್ತಲನ್ನು ಕಳೆದುಕೊಂಡು, ಜ್ಞಾನ ಪ್ರಕಾಶವನ್ನು ಪೊಂದಿರುವರು. ಯಾವರ ಚರಣಾರವಿಂದ ವೆಂದು ಬ್ರಹ್ಮಾದಿಗಳು ಮುನಿಗಳು ಪಾಂಚರಾತ್ರಿಕರು ಪೂಜಿಸುವರೋ ಯಾವ ಪಾದಪಂಕಜವು ವನದಲ್ಲಿ ಗೋಪಾಲಕರನ್ನು ಕಾಯುತ್ತಾ ಸಂಚರಿಸಿತೋ, ಯಾವ ಚರಣಕಮಲವನ್ನು ಗೋಪಿ ಯರು ಕುಚಮಂಡಲದ ಕುಂಕುಮಾಂಕಿತವನ್ನಾಗಿಸಿದರೋ, ಅಂತಹ ಗೋವಿಂದ ಶ್ರೀಪಾದ ಕಮಲ ದರ್ಶನವೆನಗೆ ಸಿಗುತ್ತಿದೆ. ನಾನೇ ಧನ್ಯನು!

ಚಂಪಕನಾಸವು, ಸುಂದರ ಮಂದಹಾಸವು, ಅರುಣಕಮಲನೇತ್ರವು, ಪರಮಪವಿತ್ರವು, ಸುಕಪೋಲವು, ಕರುಣಾರಸಾಲವಾಲವು, ಅಲಕಾವ್ರತವು, ಶ್ರೀರಮಣೀಸಮಾಶ್ರಿತವು ಆದ ಶ್ರೀಕೃಷ್ಣನ ಮುಖವನ್ನು ನಿಶ್ಚಯವಾಗಿ ನೋಡುವೆನೆಂದು ಈ ನರಿಯು ಪ್ರದಕ್ಷಿಣಾಕಾರವಾಗಿ ನಡೆದು ತೋರಿಸುತ್ತಿದೆ; ಈ ಭಾರದ್ವಾಜವೂ ಹೇಳುವಂತೆ ಕೂಗುತ್ತಿದೆ. ಶ್ರೀಕೃಷ್ಣನೆಂದರೆ ಸಾಮಾನ್ಯನೇ? ಸಾಕ್ಷಾದ್ವಿಷ್ಣುವೇ ತನ್ನಿಚ್ಛೆಯಿಂದ ಭೂಭಾರವನ್ನಿಳುಹಲು ಅವತರಿಸಿದ ಸೌಂದರ್ಯರಸಮೂರ್ತಿಯಲ್ಲವೇ? ಅವನನ್ನು ನೋಡುವುದರಿಂದ ನನಗೆ ಕಣ್ಣುಗಳಿದ್ದುದಕೆ ಸಾರ್ಥಕವಾಗಲಿದೆ. ವಸ್ತುತತ್ತ್ವಜ್ಞಾನಪೂರ್ಣನಾದ ಶ್ರೀಹರಿಯು ಅಜ್ಞಾನಾನ್ಯಥಾಜ್ಞಾನದಿಂದ ಹುಟ್ಟುವ ಭ್ರಮೆಯಿಲ್ಲದೆ, ಸರ್ವರ ಪುಣ್ಯಪಾಪಗಳನ್ನು ಸಾಕ್ಷಾತ್ತಾಗಿ ವೀಕ್ಷಿಸುತ್ತಾ, ತತ್ತದ್ಯೋಗ್ಯ ಫಲಪ್ರದನಾಗಿರುವನು. ತಾನು ಸ್ವೇಚ್ಛೆಯಿಂದ ನಿರ್ಮಿಸಿದ ಸರ್ವವಸ್ತುಗಳಲ್ಲಿ, ಸರ್ವ ಜೀವರಲ್ಲಿಯು, ಅಂತರ್ಯಾಮಿಯಾಗಿ ನಡೆಸುವನು. ಮುಖ್ಯ ಪ್ರಾಣಾದಿ ಸ್ವಭಕ್ತತತ್ತ್ವದೇವತೆ ಗಳಿಂದ ಕೂಡಿ ಜಂತು ಜಾಲ ಪ್ರೇರಕನಾಗಿರುವನು. ಅವನ ನಾಮೋಚ್ಚಾರಣವೇ ಸರ್ವ ಪಾಪ

ನಿವಾರಣವು. ಅವನ ಗುಣಕರ್ಮಗಳನ್ನು, ಅವತಾರಗಳನ್ನು ಪೊಗಳುವ ವಚನಗಳು ಸುಮಂಗಲ ಗಳು. ಅವನ ಗುಣವರ್ಣನ ಶ್ರವಣಗಳು ಜಗತ್ತನ್ನೇ, ಅವನ ಪಾದಜಾತೆಯಾದ ಗಂಗೆಯಂತೆ ಪಾವನಮಾಡಿ ಆನಂದಗೊಳಿಸುವುದು! ಅವನನ್ನು ಅವನ ಭಕ್ತರನ್ನು ಪೊಗಳದ ವಚನತತಿಯು ಅಮಂಗಲವು ಮತ್ತು ವ್ಯರ್ಥವೇ ಸರಿ! ಅಂತಹ ಸ್ವಾಮಿಯೇ ಯದುಕುಲದಲ್ಲಿ ತನ್ನ ಧರ್ಮವನ್ನು ನಿಲ್ಲಿಸಿ, ತನ್ನವರಾದ ಇಂದ್ರಾದಿ ಭಕ್ತರಿಗೆ ಸುಖವನ್ನೀಯಲು ಅವತರಿಸಿರುವನು. ದೇವತೆಗಳೂ ಅವನ ಪರಮಮಂಗಲಕೀರ್ತಿಯನ್ನು ಪಾಡಿ ಪೊಗಳಿ ಧನ್ಯರಾಗುತ್ತಿರುವರು!

ಎಲವೋ ಮನವೇ! ಮಹಜ್ಜನರಿಗೆ ಗುರುವೂ, ಸದ್ಗತಿಪ್ರದನೂ, ಶ್ರೀದೇವಿಯು ನೋಡ ಲಿಚ್ಛಿಸುವ ನೇತ್ರೋತ್ಸವರೂಪವನ್ನು ಧರಿಸಿ ಯದುಕುಲದಲ್ಲಿವತರಿಸಿದವನೂ ಆದ ಶ್ರೀಕೃಷ್ಣನ ಸಂದರ್ಶನವೆನಗೆ ಇಂದು ಆಗುತ್ತಿದೆ. ಈ ಪ್ರಾತಃಕಾಲವೆಷ್ಟು ಶುಭಕರವಾಗಿದೆ!

ನಾನು ಶ್ರೀಕೃಷ್ಣನನ್ನು ನೋಡಿ, ಪಾದಮೂಲದಲ್ಲಿ ನಮಸ್ಕರಿಸಿದಾಗ ಶ್ರೀಶನು ತನ್ನ ಕರಪಂಕಜವನ್ನು ನನ್ನ ಶಿರದಲ್ಲಿಟ್ಟು, ಹರಸಿದಾಗ ನನ್ನ ಪಾಪವೆಲ್ಲಾ ನಾಶವಾಗಿಬಿಡುವುದು! ಕಾಲವೆಂಬ ಹೆಬ್ಬಾವಿಗೆ ತುತ್ತಾಗಿ ತತ್ತರಿಸುವರು, ಶರಣಾಗತರಾದ ತತ್‌ಕ್ಷಣವೇ ಅವರ ದುಃ ಖವನ್ನು ದೂರಮಾಡಿ ಪೊರೆಯುವ ಪ್ರಶಸ್ತಹಸ್ತ; ಇಂದ್ರನು ಕಾಣಿಕೆಯನ್ನಿಟ್ಟ ಹಸ್ತ; ಬಲಿರಾಜನು ಭೂದಾನವನ್ನಿತ್ತ ಹಸ್ತ; ಜಗತ್ರಯೇಂದ್ರಪದವಿಯನ್ನು ಅವನಿಗಿತ್ತ ಹಸ್ತ; ವನವಿಹಾರ ಸಮಯದಿ ಗೋಪಿಯರ ಶ್ರಮವನ್ನು ಕಳೆದು ಲಾಲಿಸಿದ ಸೌಗಂಧಿಕಾ ಗಂಧಗಂಧಿತ ಹಸ್ತ; ಆ ನನ್ನ ಸ್ವಾಮಿಯ ಪ್ರಶಸ್ತಹಸ್ತ– ನನ್ನ ತಲೆಯಲ್ಲಿ ನಿಲ್ಲುವುದಲ್ಲವೇ! ನಾನೆಂತಹ ಧನ್ಯನಾಗುವೆನು!

ಕಂಸನು ಕಳಿಸಿದ ಭೃತ್ಯನೆಂದು ಶ್ರೀಕೃಷ್ಣನು ನನ್ನನ್ನು ಅಪ್ರಿಯರೆಂದು ತಿಳಿದು ಜರಿಯುವನೇ? ಇಲ್ಲ. ಸರ್ವಾಂತರ್ಯಾಮಿಯು ಸರ್ವಜ್ಞನು ಮನಸ್ಸಾಕ್ಷಿಯು ಆದ ಆ ಕ್ಷೇತ್ರಜ್ಞನು ನನ್ನ ಮನವನ್ನರಿಯದಿರುವನೇ? ಅವನ ದಿವ್ಯನೇತ್ರಗಳಿಗೆ ಈ ಪಾಮರ ಭಕ್ತನ ಮನಶ್ಶುದ್ಧಿ ಗೋಚರ ವಾಗುವುದಿಲ್ಲವೇ?

ಹೋಗಿ ಪಾದಾರವಿಂದವನ್ನು ಬಿಡದೆ ವಂದಿಸಿ, ದಂಡಾಕಾರವಾಗಿ ಬಿದ್ದಿರುವ ನನ್ನನ್ನೆಬ್ಬಿಸಿ, ನನ್ನ ಪ್ರಭುವು ನಸುನಗುತ್ತಾ, ಕರುಣಾರಸಪೂರ್ಣಕಟಾಕ್ಷದಿಂದ ನೋಡಿದ ತತ್‌ಕ್ಷಣವೇ ನನ್ನ ಸಮಸ್ತ ಪಾಪಗಳು ದಗ್ಧವಾಗಿ ಪೋಗುವುವು. ಕೈಜೋಡಿಸಿ ನಿಂತು ಕಣ್ಣಲ್ಲಿ ಆನಂದಜಲವು ಹರಿದುಹೋಗುತ್ತಿರಲು, ಶಂಕಾಶಂಕುಗಳನ್ನೆಲ್ಲ ಕಿತ್ತೊಗೆದು 'ಶ್ರೀಶಾ! ನಿನ್ನನ್ನೇ ನಂಬಿದವನೋ! ನನಗಿನ್ನಾರು ಗತಿಯೋ! ಕೃಷ್ಣಾ! ನಮೋ ನಮಃ' ಎಂದು ಮಾತಾಡಲು ಬಾರದಾಗಿ ಮನದಲ್ಲೇ ಚಿಂತಿಸುವ ನನ್ನನ್ನು ಕೈಯಿಂದ ಸೆಳೆದು ನಮ್ಮಪ್ಪ ಅಪ್ಪಿದಾಗ ನನ್ನ ಶರೀರವೇ ಪಾವನವಾಗುವುದು. ನನ್ನ ವಿಷಯಾಶಾಪಾಶಗಳೆಲ್ಲ ಕಡಿದುಹೋಗುವುವು. ಅಂಗಸಂಗದಿಂದ ಮೈಮರೆತು ಕೈಕಟ್ಟಿ ನಿಂತಿರುವ ನನ್ನನ್ನು ನೋಡಿ, 'ಅಕ್ರೂರ! ತಾತ!' ಎಂದು ಆ ಪೂರ್ಣಕೀರ್ತಿಮೂರ್ತಿಯು ನುಡಿದಾಗ ದೇಹವನ್ನು ಧರಿಸಿ ಬಂದುದಕೆ ಸಾರ್ಥಕವಾಗುವುದು. ಮಹಮಹಿಮನಾದ ಶ್ರೀಶನ ಆದರವನ್ನು ಗಳಿಸದ ಜನ್ಮಕ್ಕೆ ಧಿಕ್ಕಾರವಿರಲಿ.

ಅವನಿಗೆ ತನ್ನ ಹಾನಿ ಪ್ರಯೋಜನಗಳಿಗಾಗಿ ಯಾವ ಶತ್ರುಮಿತ್ರರೂ ಇಲ್ಲ. ಅವನು ಯಾರನ್ನೂ ಉಪೇಕ್ಷಿಸಿಯೂ ಇರುವನಲ್ಲ. ಯೋಗ್ಯತೆಯನ್ನರಿತು ಕಲ್ಪವೃಕ್ಷದಂತೆ ಪಕ್ಷಪಾತ ವಿಲ್ಲದ ತಕ್ಕ ಫಲವನ್ನು ಕೊಡುವ ವೈಷಮ್ಯ, ನೈರ್ಘೃಣ್ಯ ದೋಷರಹಿತನಿಗೆ ನಾನು ಅವನ

ದಾಸರ ದಾಸರ ದಾಸನೆಂದು ಗೊತ್ತೇ ಇದೆ. ಆ ಬಲರಾಮನೂ ನನ್ನನ್ನು ನೋಡಿ ನಗುತ್ತಾ ಬಂದು ಬಿಗಿದಪ್ಪಿ ಕೈಪಿಡಿದು ಮನೆಗೆ ಕರೆದುಕೊಂಡು ಹೋಗುವನು; ಮತ್ತು ಸತ್ಕಾರವನ್ನೂ ಮಾಡುವನು, ಪೂರ್ಣ್ಣರಾದ ರಾಮಕೃಷ್ಣರು ಕಂಸನ ವಿಷಯವನ್ನೂ ಕೇಳುವರು.

ಎಂದು ಚಿಂತಿಸುತ್ತಾ, ಅಕ್ರೂರನು ಗೋಕುಲವನ್ನು, ಸೂರ್ಯನು ಪಶ್ಚಿಮಗಿರಿಯನ್ನು ಒಂದೇಸಲ ಸೇರಿದರು. ಅಲ್ಲಿ ಪೋಗುತ್ತಾ ಅಕ್ರೂರನು ಸಕಲಲೋಕಪಾಲ ಶಿರೋಭೂಷಣ ವೆನಿಸಿದ ಶ್ರೀಕೃಷ್ಣಚರಣಮಂಗಲ ಚಿಹ್ನೆಗಳಾದ ಪದ್ಮಯವಾಂಕುಶರೇಖೆಗಳಿಂದ ರೋಮಾಂಚಿತ ಳಾವ ನವತೃಣಶೋಭಿತಳಾದ ಗೋಕುಲಭೂಮಿಯನ್ನು ಕಂಡನು. ಅದನ್ನು ನೋಡುತ್ತಲೇ ಉಕ್ಕೇರಿ ಬಂದ ಆನಂದದಿಂದ ಸಂಭ್ರಮಿಸಿ, ಪ್ರೇಮದಿಂದ ಮೈನವಿರೆದ್ದು, ಭಕ್ತಿರಸವು ಹೊರಸೂಸಿ ಬಂದಂತೆ ಆನಂದನೇತ್ರಜಲಬಿಂದುಗಳುದುರುತ್ತಿರಲು, ರಥದಿಂದ ಕೆಳಗಿಳಿದು 'ಓಹೋ! ನನ್ನ ಸ್ವಾಮಿಯ ಪಾದರಜವಿದು!' ಎಂದು ನೆಲದಲ್ಲಿ ಬಿದ್ದು ಹೊರಳಾಡಿದನು. ದೂರದಲ್ಲಿ ಗೋದೋಹನವನ್ನು ಮಾಡಲಿರುವ ರಾಮಕೃಷ್ಣರನ್ನು ನೋಡಿ ರಥವನ್ನೇರಿ ಬೇಗ ಬೇಗ ಸಮೀಪಿಸಿದನು.

ಶರದಂಬುಜಾತಪತ್ರನೇತ್ರರು ಕಿಶೋರವಯಸ್ಕರು, ದಿವ್ಯಕಾಂತಿ ಸಂಪನ್ನರು, ವಿಶಾಲ ವಕ್ಷರು, ಸುಂದರವದನರು, ಕುಂದರದನರು, ದ್ವಿರದಗಮನರು, ಕರುಣಾರಸ ಪೂರ್ಣ ವೀಕ್ಷಣರು, ವನಮಾಲಾಧರರು, ಮಧುರಮಂದಹಾಸರು, ರುಚಿರವಿಲಾಸರು, ಪುಣ್ಯಗಂಧ ಲಿಪ್ತರು, ಪರಮಾತ್ಮರು ಸ್ನಾತಾಲಂಕೃತರು ಜಗದ್ಧಿತಕೃತಾವತಾರರು ಆದ ರಾಮಕೃಷ್ಣರು ಅಲ್ಲಿ ಗೋವ್ರಜಭೂಮಿಯಲ್ಲಿ ತಮ್ಮ ಪಾದ ಶುಭಲಕ್ಷಣಗಳ ಚಕ್ರಾದಿರೇಖೆಗಳನ್ನು ಮುದ್ರಿಸುತ್ತಾ ನಡೆಯುತ್ತಿದ್ದರು. ಕೃಷ್ಣನು ಪೀತಾಂಬರವನ್ನುಟ್ಟು ರಾಮನು ನೀಲಾಂಬರವನ್ನುಟ್ಟು ತಮ್ಮ ನೀಲ ಧವಲ ದೇಹಕಾಂತಿಯಿಂದ ನುಗ್ಗಿಬರುತ್ತಿದ್ದ ಅಂಧಕಾರವನ್ನು ದೂರ ಓಡಿಸುತ್ತಿದ್ದರು. ಪ್ರಧಾನವೆನಿಸುವ ಅಹಂತತ್ವನಿಯಾಮಕಶೇಷನು ಸಂಕರ್ಷಣಾವೇಶದಿಂದ ಶೋಭಿಸಿ, ಬಲರಾಮನಾಗಿಯು, ಸಾಕ್ಷಾನ್ನಾರಾಯಣನೇ ಶ್ರೀಕೃಷ್ಣನಾಗಿಯೂ ಭೂಭಾರಹರಣಕಾರ್ಯ ನಿರತರಾಗಿ ಅವತರಿಸುವರಲ್ಲವೇ?

ಶ್ವೇತ-ನೀಲ ಗಿರಿಗಳಂತೆ ಶೋಭಿಸುವ ರಾಮಕೃಷ್ಣರನ್ನು ಸಮೀಪಿಸಿ, ಅಕ್ರೂರನು ರಥ ದಿಂದಿಳಿದು ಬಂದು ಸ್ನೇಹಪ್ರವಾಹವನ್ನು ತಡೆಯಲಾರದೆ ಅವರ ಪಾದವನ್ನು ನಮಿಸಿ, ನೇತ್ರಾ ನಂದಜಲದಿಂದ ಅಭಿಷೇಕಿಸಿದನು. ಅವನ ಮೈ ನವಿರೆದ್ದಿತು; ಕಣ್ಣೊರಸಿದಷ್ಟೂ ನೀರು ಹರಿಯುತ್ತಾ ಕಂಠಸರೆ ಬಿಗಿದು ಮಾತಾಡಲಾಗದಂತಾಯಿತು. ಭಗವಂತನವನ ಭಾವವನ್ನರಿತು ಚಕ್ರವನ್ನು ಪಿಡಿದ ಬಲಗೈಯಿಂದ ಅವನನ್ನು ಸೆಳೆದು ಪ್ರೇಮದಿಂದ ಬಿಗಿದಪ್ಪಿದನು. ಪ್ರಣ ತಜನವತ್ಸಲನಾದ ಶ್ರೀರಮಣನಂತೆ ಬಲರಾಮನೂ ಕೈಪಿಡಿದು ಕರೆದುಕೊಂಡು ಮನೆಗೆ ಹೋದನು. ಕೃಷ್ಣನೂ ಮನೆಯಲ್ಲಿ ಬಂದ ಅಕ್ರೂರನಿಗೆ ಸ್ವಾಗತವನ್ನಿತ್ತು ಪಾದಗಳನ್ನು ತೊಳೆದು ಮಧುಪರ್ಕವನ್ನು ಕೊಟ್ಟು ಗೋದಾನವನ್ನೂ ಮಾಡಿ ಸತ್ಕರಿಸಿದನು. ಅವನ ಪಾದವನ್ನೊತ್ತಿ ಶ್ರಮೆ ಕಳೆದನು. ಮೃಷ್ಟಾನ್ನವನ್ನುಣಿಸಿದನು. ಪ್ರೀತ್ಯಾದರಗಳಿಂದ ತಾಂಬೂಲಗಂಧ ಮಾಲ್ಯ ಗಳನ್ನಿತ್ತು ರಾಮಕೃಷ್ಣರು ಪೂಜಿಸಲು ಅಕ್ರೂರನು ಪರಮಾನಂದಭರಿತನಾದನು.

## ೩೭. ಮಧುರಾಗಮನ – ಅಕ್ರೂರ ಕಂಡ ದಿವ್ಯದರ್ಶನ

ಶ್ರೀಶುಕನು ಪೇಳಿದನು–

ರಾಜನ್! ಅಕ್ರೂರನಿಂತು ರಾಮಕೃಷ್ಣರಿಂದ ಸಮ್ಮಾನಿತನಾಗಿ, ಹಾದಿಯಲ್ಲಿ ತಾನು ಚಿಂತಿಸಿದ ಮನೋರಥಗಳನ್ನೆಲ್ಲ ಪೊಂದಿ ವಿಸ್ಮಿತನಾದನು.

ಶ್ರೀನಿಕೇತನು ಪಸನ್ನನಾದೊಡೆ ಸಿಗದ ಪದಾರ್ಥವೀಜಗದಲ್ಲುಂಟೇ? ಆದರೂ ರಾಜನ್! ಅವನ ಭಕ್ತನು ಅವನನ್ನೇ ಬೇಡುವರಾಗಲಿ ಇತರ ಪದಾರ್ಥಗಳನ್ನಲ್ಲ. ಅವನ ಪಾದಪಂಕಜವೇ ಮಹಾನಿಧಿಯಲ್ಲವೇ?

ಸಾಯಂಕಾಲದ ಊಟವಾದಮೇಲೆ ದೇವಕೀನಂದನನು ಬಂಧುಗಳ ಯೋಗಕ್ಷೇಮವನ್ನು ವಿಚಾರಿಸಿದನು; ಕಂಸನ ದುರ್ನಯವನ್ನೂ ತಿಳಿದನು – ಅಕ್ರೂರನು ಕಂಸವೈರವನ್ನು, ವಸುದೇವ ನನ್ನು ಸಂಹರಿಸಲು ಪೋದಾಗ ನಾರದನು ವಾರಿಸಿದುದನ್ನೂ ತಿಳಿಸಿದನು; ನಾರದನಿಂದ ಕೃಷ್ಣನು ವಸುದೇವಪುತ್ರನೆಂದರಿತು, ಧನುರ್ಯಾಗದಲ್ಲಿ ರಾಮಕೃಷ್ಣರನ್ನು ಸಂಹರಿಸಬೇಕೆಂದು ನಿಶ್ಚಯ ಮಾಡಿದುದನ್ನರುಹಿದನು; ಕರೆತರಲು ತನ್ನನ್ನು ಕಳಿಸಿರುವನೆಂದೂ ಆಜ್ಞಾಪಿಸಿದನು, ಆ ಮಾತನ್ನು ಕೇಳಿ ರಾಮಕೃಷ್ಣರು ನಕ್ಕರು. ನಂದನಿಗೆ ರಾಜಾಜ್ಞೆಯನ್ನು ತಿಳಿಸಿ, ಗೋಪಾಲರಿಗೆಲ್ಲಾ ಆಜ್ಞಾಪಿಸಿದರು–

ನಾಳೆ ಮಧುಪುರಿಗೆ ಧನುರ್ಯಾಗವನ್ನು ಮಾಡುವ ಮಾವನ ಮನೆಗೆ ಹೋಗಬೇಕಾಗಿದೆ. ನೀವೆಲ್ಲರೂ ಗೋರಸಗಳನ್ನೂ ಕಾಣಿಕೆ ಕೊಡಲು ತನ್ನಿ! ಬಂಡಿಗಳಲ್ಲಿ ಕೂತು, ಸಪರಿವಾರರಾಗಿ ಬನ್ನಿ! ಧನುರ್ಯಾಗವನ್ನು ನೋಡೋಣ!' ಎಂದು ಚಾಟಿಸಿದುದನ್ನು ಕೇಳಿ, ಗೋಪಾಲತರುಣಿಯರು ದುಃಖಾಕ್ರಾಂತರಾದರು. ಆ ಕಾಂತೆಯರ ವದನಕಮಲಗಳು ಬಾಡಿ ಕಣ್ಣೀರಿಟ್ಟವು. 'ಅಕ್ರೂರನಂತೆ! ನಮ್ಮ ರಾಮಕೃಷ್ಣರನ್ನು ಕರೆದೊಯ್ಯಲು ಬಂದಿರುವನಂತೆ!' ಎಂಬುವ ಮಾತು ಕಾಳ್ಗಿಚ್ಚಿನಂತೆ ಹರಡಿ, ಅದರ ತಾಪದಿಂದ ಬೆಂದು, ಕಮಲಮುಖಿಯರೊಂದು ಕಡೆ ಕೂಡಿದರು, ದುಕೂಲ ವಲಯಕೇಶಬಂಧಗಳು ಜಾರುತ್ತಿರಲು ಲೆಕ್ಕಿಸದೆ, ಗೋಪಿಯರು, ಕೃಷ್ಣಾಧ್ಯಾನದಿಂದೆಲ್ಲವನ್ನೂ ಮರೆತರು. ಮೋಕ್ಷವನ್ನು ಹೊಂದಿದವರಂತೆ, ದೇಹವನ್ನೂ ಮರೆತರು. ಶೌರಿಯ ಅನುರಾಗ ಪೂರ್ಣ ಮಧುರಾಲಾಪಗಳನ್ನು ನೆನೆದು, ಹೃದಯಂಗಮ ವಿಲಾಸಗಳನ್ನು ಸ್ಮರಿಸಿ, ಕೆಲಕಾಂತೆಯರು ಮೂರ್ಛಿತರಾದರು. ಮುಕುಂದನ ಭದ್ರಗಜಗಮನ, ಲಲಿತಕರುಣಾವಲೋಕನ, ವಿವಿಧ ವಿಕ್ರೀಡನ, ಮಂದಹಸನ, – ನರ್ಮವಚನಗಳನ್ನು ನೆನೆಯುತ್ತಾ, ಅವನ ವಿರಹವನ್ನು ಸಹಿಸಲಾರದೆ, ಕಣ್ಣೀರಿಡುತ್ತಾ ಕೂತು, ಇಂತು ಮಾತಾಡಿದರು.

ಎಲವೋ ಬ್ರಹ್ಮ! ನಿನಗೇಕೆ ದಯವಿಲ್ಲ? ಪ್ರೇಮವನ್ನು ಕೊಟ್ಟು ಕೂಡಿಸಿ, ಮತ್ತೆ ಪ್ರೇಮ ಫಲವನ್ನು ಬಾಯಿಂದ ಕಸಿದು, ಪ್ರಿಯರನ್ನು ದೂರಮಾಡುವುದು ನಿನಗೆ ತರವಲ್ಲ. ಏತಕೀ ಹುಡುಗಾಟ? ನೀಲಕುಂತಲಗಳಿಂದಲು, ದರ್ಪಣಕಪೋಲಗಳಿಂದಲು, ಚಂಪಕ ನಾಸಿಕೆಯಿಂದಲು, ಮಂದಹಾಸದಿಂದಲು ಶೋಭಿಸುವ ಶೋಕನಾಶಕಕೇಶವ ಮುಖಪದ್ಮವನ್ನೊಮ್ಮೆ ನೋಡಿಸಿ, ಅದರ ಗಂಧವನ್ನಾದರೂ ಮೂಸಿನೋಡುವ ಮುನ್ನ ದೂರ ಮಾಡುವುದು ಕ್ರೂರತೆ ಯಲ್ಲವೇ? ಕ್ರೂರನಾದ ಬ್ರಹ್ಮನೇ! ನೀನೇ ಅಕ್ರೂರನೆಂದು ಹೆಸರಿಟ್ಟುಕೊಂಡು, ಬಂದಿರುವೆಯಾ ಏನು?

ಶ್ರೀಕೃಷ್ಣಮುಖಕಮಲದ ಒಂದು ದಲದಲ್ಲಿ, ನಿನ್ನ ಸೃಷ್ಟಿಸೌಷ್ಠವವೆಲ್ಲವೂ ನಾವು ಕಾಣುತ್ತಿರುವೆವಲ್ಲ! ಅಂತಹ ಕಣ್ಣನ್ನು ಕಿತ್ತುಕೊಂಡು ಬಿಡುವೆಯಾ? ಹಾ ಕಷ್ಟಂ!

ಹೋಗಲಿ ಬಿಡು! ನಮ್ಮ ಕೃಷ್ಣನೇ ಒಂದೇ ಕ್ಷಣದಲ್ಲಿ ನಮ್ಮ ಪ್ರೇಮವನ್ನು ಮರೆತು, ನಮ್ಮನ್ನು ಕುರಿತು ಚಿಂತೆಯೇ ಇಲ್ಲದೆ, ಮನೆ, ಜನ, ಮಕ್ಕಳು, ಮಾವ, ಗಂಡದಿರನ್ನು ಬಿಟ್ಟು ತನ್ನ ದಾಸಿಯರಾಗಿ ಸೇವಿಸಿದ ನಮ್ಮ ದಾಕ್ಷಿಣ್ಯವನ್ನು ತೊರೆದು, ಹೊಸ ಹೊಸ ವಸ್ತುಗಳಿಗಾಗಿ ಓಡುತ್ತಿರುವನಲ್ಲ! ಇನ್ನು ನಮ್ಮ ಗೋಳನ್ನು ಕೇಳುವವರಾರು?

ಎಷ್ಟು ಸುಪ್ರಭಾತವಾ ಮಧುರಾನಗರ ರಮಣಿಯರಿಗೆ! ಅವರ ಆಶೆಗಳಿಂದು ಫಲಿಸಿದವು. ಮಧುರೆಯಲ್ಲಿ ತಿರುಗಾಡುವ ನಮ್ಮ ವ್ರಜನಾಥನ ಮಧುರ ಸುಂದರ ಮಂದಹಾಸ ರಸವನ್ನು ಕಣ್ಣುಗಳಿಂದ ತುಂಬಿ ಕುಡಿಯುವ ಭಾಗ್ಯವಿಂದು ಅವರದಾಯಿತು; ಅವರ ನರ್ಮಸಲ್ಲಲಿತ ವಚನಗಳನ್ನು ಮಂದಹಾಸವಿಲಾಸಗಳನ್ನು ನೋಡಿ, ನಮ್ಮ ಕೃಪ ಧೀರನಾದರೂ ಪರಾಧೀನನಾಗಿ ಬಿಡುವನಲ್ಲ; ಏನು ಮಾಡೋಣ? ಇನ್ನು ಮತ್ತೆ ಲಜ್ಜಾರಹಿತರಾಗಿ ನಗುತ್ತಾ ಹುಬ್ಬನ್ನು ಹಾರಿಸುವ ನಮ್ಮ ಗ್ರಾಮತರುಣಿಯರನ್ನವನು ಸೇರಬರುವನೇ?

ಹಾದಿಯಲ್ಲಿ ಹೋಗುವಾಗ ನಮ್ಮ ಶ್ರೀರಮಣನನ್ನು ನಮ್ಮ ಕಲ್ಯಾಣಗುಣಾಭರಣನನ್ನು, ನಮ್ಮ ವಾಸುದೇವನನ್ನು ನೇತ್ರೋತ್ಸವವಾಗಿ ನೋಡುವ ದಾಶಾರ್ಹ ಭೋಜಾಂಧಕ ವೃಷ್ಣಿ ಸಾತ್ವತ ಜನರೇ ಧನ್ಯರು!

ಅತಿ ದಾರುಣನಾಗಿ, ನಮ್ಮ ಕಣ್ಣೀರನ್ನೊರೆಸಲು ಕೂಡ ಬಿಡದೆ, ಪ್ರಿಯ ಕೃಷ್ಣನನ್ನು ದೂರವಾಗಿಸಿ ಕರೆದೊಯ್ಯುವ ಈ ಕರುಣಾರಹಿತನಿಗೆ ಯಾರೇ ಅಕ್ರೂರನೆಂಬ ಹೆಸರನ್ನಿಟ್ಟರು?

ನಮ್ಮ ಕೃಷ್ಣನನ್ನು ನೋಡೇ! ನಿಸ್ಸಂಗನಾಗಿ ರಥದಲ್ಲಿ ಕೂತು ಹೊರಟುಬಿಡುತ್ತಿರುವನಲ್ಲ! ಈ ಗೋಪರಿಗಾದರೂ ವಿವೇಕ ಬೇಡವೇ? ಬಂಡಿಗಳನ್ನು ಕಟ್ಟಿದರು! ಹಾಲು ಮೊಸರು ಬೆಣ್ಣೆಗಳನ್ನು ಹೇರಿದರು! ಹೊರಟುಬಿಟ್ಟರಲ್ಲ! ಈ ಕುಲವೃದ್ಧರೂ ಸುಮ್ಮನಿರುವರು! ದೈವವೂ ನಮಗೆ ಎದುರಾಯಿತೇ? ಹೋಗಿ, ರಥಕ್ಕಡ್ಡವಾಗಿ ನಿಂತು, ನಮ್ಮ ಸ್ವಾಮಿಯನ್ನು ನಿಲ್ಲಿಸಿ ಬಿಡೋಣವೇ? ನಮ್ಮನ್ನೇನು ಮಾಡುವರು ಈ ಕುಲವೃದ್ಧ ಬಾಂಧವರು? ಕೃಷ್ಣನನ್ನು ಬಿಟ್ಟವರು ನಮ್ಮನ್ನೂ ಬಿಟ್ಟುಬಿಡಲಿ! ಮುಕುಂದನನ್ನು ಬಿಟ್ಟು ಒಂದರೆಕ್ಷಣವೂ ಬದುಕಿರಲಾರೆವು. ದೈವಾಧೀನರಾಗಿ ವಂಚಿತರಾಗಿ ನಿಂತು ರೋದಿಸುವ ನಮ್ಮ ಕೂಗು ಕೇಳುವವರಾರು?

ಅನುರಾಗಪಾತ್ರೆಯರಾಗಿ ಮಂದಹಾಸಸುಂದರನಂದನಂದನನ ಆಲಿಂಗನದಲ್ಲಿ ಮೈಮರೆತು, ಕ್ಷಣದಂತೆ ರಾತ್ರಿಗಳನ್ನು ಕಳೆದ ನಾವುಈಗ ವಿರಹದುಃಖಸಾಗರವ ಪಾರಾಗುವುದೆಂತು?

ಸಾಯಂಕಾಲದಲ್ಲಿ ಗೋರಜದಿಂದ ಶೋಭಿಸುವ ಮುಖದಲ್ಲಿ ಸೂಸಿಬರುವ ವೇಣು ಮಧುರನಾದದಿಂದ ನಮ್ಮನ್ನು ಕರೆದು ಕರುಣಾಕಟಾಕ್ಷದಿಂದ ನಮ್ಮನ್ನು ವೀಕ್ಷಿಸಿ ನಮ್ಮ ಮನಸ್ಸನ್ನು ಹರಿಸಿ, ನಮ್ಮನ್ನು ಧನ್ಯರನ್ನು ಮಾಡಿದ ಶ್ರೀಮುಕುಂದನನ್ನು ಬಿಟ್ಟು ಬದುಕುವುದಾದರೂ ಹೇಗೆ?

ಎಂದು ವಿರಹಾತುರರಾಗಿ ಮಾತನಾಡುತ್ತಾ ಕೃಷ್ಣಧ್ಯಾನದಿಂದ ಮೈಮರೆತು, ಲಜ್ಜೆಯನ್ನು ದೂಡಿ ಗೋಪಿಯರು 'ಗೋವಿಂದ! ದಾಮೋದರ! ಮಾಧವ!' ಎಂದು ಸುಸ್ವರದಿಂದ ಪಾಡಿ ರೋದಿಸಿದರು.

ಆಗ ಸೂರ್ಯೋದಯವಾಗುತ್ತಿರುವುದನ್ನು ಕಂಡು ಅಕ್ರೂರರನು ಸಂಧ್ಯಾದಿಗಳನ್ನು ಮುಗಿಸಿ ರಥದಲ್ಲಿ ಕೂತು, ರಾಮಕೃಷ್ಣರನ್ನು ಕರೆದುಕೊಂಡು ಹೊರಟನು. ನಂದಾದಿ ಗೋಪಾಲಕರೂ ಗೋರಸಪೂರ್ಣಶಕಟಗಳನ್ನೇರಿ ಹೊರಟರು. ಪ್ರಿಯಕೃಷ್ಣನ ಹಿಂದೆ ಹೋದ ಮನಸ್ಸನ್ನು ತಿರಿಗಿ ಹಿಡಿಯಲೆಂಬಂತೆ ಗೋಪಿಯರ ದೇಹಗಳು ರಥದ ಹಿಂದೆ ವಿವಶವಾಗಿ ಹೋದವು. ಭಗವಂತನು ದುಃಖಕಾತರರಾದ ಕಾಮಿನಿಯರನ್ನು ಕಂಡು ಕರುಣೆಯಿಂದ 'ಮತ್ತೆ ಬರುವೆನೆಂದು' ಸಂದೇಶವನ್ನು ಕಳಿಸಿ ಅವರನ್ನು ಹಿಂದಿರುಗಿಸಿದನು. ಅವರು ಶ್ರೀಕೃಷ್ಣರಥಕೇತೂರ್ಧ್ವಭಾಗದಿ ಏಳುವ ಧೂಳನ್ನು ರಥಕೇತುವನ್ನು ಅದು ಕಾಣದಾಗಲು ಧೂಳನ್ನು ಮಾತ್ರ ನೋಡುತ್ತಾ ಬರೆದ ಗೊಂಬೆಗಳಂತೆ ನಿಂತು ನೋಡಿದರು. ಕೊನೆಗೆ ನಿರಾಶರಾಗಿ ಗೋವಿಂದನು ಇನ್ನು ಬರುವುದಿಲ್ಲ – ಎಂದು ಹಿಂತಿರುಗಿ ವಿರಹೋತ್ಕಂಠಿತರಾಗಿ, ಅವನನ್ನೇ ಪಾಡುತ್ತಾ, ಕಾಲ ಕಳೆದರು.

ಅಕ್ರೂರನು, ರಾಮಕೃಷ್ಣರು ಕೂಡಿ, ಮಧ್ಯಾಹ್ನವಾದಾಗ ಯಮುನೆಯ ದಡವನ್ನು ಮುಟ್ಟಿ ದರು. ಅಲ್ಲಿ ನೀರಿಗಿಳಿದು, ಕಾಲು ತೊಳೆದು, ಆಚಮನಮಾಡಿ, ನೀಲಮಣಿಪ್ರಭವಾಗ ಕಾಳಿಂದೀ ಜಲವನ್ನು ಕುಡಿದು ರಾಮಕೃಷ್ಣರು ಗಿಡದ ನೆರಳಿನಲ್ಲಿದ್ದ ರಥದಲ್ಲಿ ಕೂತಿದ್ದರು; ಆಗ ಅಕ್ರೂರನು ಅವನ ಅಪ್ಪಣೆಯನ್ನು ಪಡೆದು ಕಾಳಿಂದಿಯ ಮಡುವಿಗಿಳಿದು ವಿಧವಿಹಿತವಾಗಿ ಸಂಕಲ್ಪಿಸಿ ಸ್ನಾನಮಾಡಲು ಮುಳುಗಿದನು. ಅಘಮರ್ಷಣ ಸೂಕ್ತವನ್ನು ಹೇಳುತ್ತಾ, ಅಲ್ಲಿ ನೀರಿನಲ್ಲಿ ರಾಮಕೃಷ್ಣರನ್ನು ನೋಡಿ, ಆಶ್ಚರ್ಯದಿಂದ 'ರಥದಲ್ಲಿದ್ದ ರಾಮಕೃಷ್ಣರು ನೀರಿನಲ್ಲಿ ಕಾಣುವ ರಲ್ಲ! ರಥದಲ್ಲಿ ಇರಲಿಕ್ಕಿಲ್ಲ! ಎಂದು ಚಿಂತಿಸಿದನು; ಮೇಲಕ್ಕೇರಿ ಬಂದ ಯಥಾಪೂರ್ವವಾಗಿ ರಥದಲ್ಲಿ ನಗುತ್ತಾ ಕೂತಿರುವ ಅವರನ್ನು ನೋಡಿ, 'ನೀರಿನಲ್ಲಿ ನಾ ಕಂಡಿದ್ದು ಭ್ರಾಂತಿಯೋ ಏನೋ?' ಎಂದು ಆಲೋಚಿಸಿದ ಅಕ್ರೂರನು ಪುನಃ ನೀರಿಗಿಳಿದು ಮುಳುಗಿದನು. ಅಲ್ಲಿ ಆಗ ಸಿದ್ಧ ಭುಜಗಪತಿಗಳು ಸ್ತುತಿಸುತ್ತಿರುವ ಶೇಷನನ್ನು ಕಂಡನು. ಸಹಸ್ರಫಣಾಂಡಿತನು, ನೀಲಾಂ ಬರನು ಧವಲಶರೀರನು ಆದ ಶೇಷದೇವನು ಕೋಡುಗಳಿಂದೊಪ್ಪುವ ಶ್ವೇತಾದ್ರಿಯಂತೆ ಕಂಗೊಳಿಸಿದನು. ಅವನ ಉತ್ಸಂಗದಲ್ಲಿ ಮಲಗಿದ್ದ ಘನಶ್ಯಾಮನನ್ನೂ ನೋಡಿ ಅಕ್ರೂರನು ನಮಿಸಿ ನಿಂತನು.

ಪೀತಾಂಬರವನ್ನುಟ್ಟು, ಚತುರ್ಭುಜಗಳಲ್ಲಿ ಶಂಖ ಚಕ್ರ ಪದ್ಮ ಗದೆಗಳನ್ನು ಧರಿಸಿ, ಸುಂದರ ಮಂದಹಾಸವನ್ನು ಬೀರುವ ಪ್ರಸನ್ನವದನದಿಂದ ಕರುಣಾಕಟಾಕ್ಷಗಳನ್ನು ಪಸರಿಸುವ ಲಕ್ಷ್ಮೀ ರಮಣನು, ಅಕ್ರೂರನಿಗೆ ಕಾಣಿಸಿದನು. ಅವನ ಭ್ರೂಭಂಗಸೂಚಿತ ಭೂರಿದಯಾರಸದಲ್ಲಿ ಅಕ್ರೂರನು ಸ್ನಾನ ಮಾಡಿದನು. ಆ ಉನ್ನತನಾಸಿಕೆ, ಚಾರುಕರ್ಣಗಳು, ದರ್ಪಣಪ್ರಭ ಕಪೋಲ ಗಳು, ಅರುಣಾಧರ, ಉನ್ನತಭುಜಗಳು, ವಿಶಾಲವಕ್ಷಸ್ಥಲ, ಶ್ರೀವತ್ಸ, ಶಂಖದಂತಹ ಕಂಠದ ತ್ರಿವಲಿಗಳು, ಬಳಕುವ ತೆಲಳುವಾದ ಹೊಟ್ಟೆ, ದೊಡ್ಡ ಜಘನದಲ್ಲಿ ರಾಜಿಸುವ ಕಾಂಚೀಕಲಾಪ, ಕರಿಕರಸುಭಗವಾದ ಊರುದ್ವಯ, ಜಾನು ಜಂಘಾಸೌಷ್ಟವ, ತುಂಗ ಪಾದಪಂಕಜಗಳು, ಕೊನೆಗೆ ಹೊಳೆಯುವ ನಖಗಳು, ಇಂತು ಪ್ರತ್ಯಂಗಸೌಂದರ್ಯವನ್ನು ನೋಡಿ ಅಕ್ರೂರನು ತಣಿಯ ದಾದನು. ಶ್ರೀವತ್ಸವಕ್ಷಸ್ಕನು, ಕೌಸ್ತುಭಾಮುಕ್ತಕಂಧರನು, ಕಟಿಸೂತ್ರ ಬ್ರಹ್ಮಸೂತ್ರ ಹಾರನೂ ಪುರಕುಂಡಲ, ಕಟಕಾಂಗದ ಕಿರೀಟ ಶೋಭಾಸಂಪನ್ನನು, ಅಪನ್ನಜನರಕ್ಷಕನು, ಆದ ಶ್ರೀ ಹರಿಯನ್ನು ಸನಕಾದಿಮುನಿಗಳು, ಜಯಾದಿಪಾರ್ಷದರು, ಬ್ರಹ್ಮರುದ್ರಾದಿ ದೇವಪ್ರಧಾನರು, ಕಶ್ಯಪಾದಿನವ ಪ್ರಜೇಶರು, ಪ್ರಹ್ಲಾದ ನಾರದ ತುಂಬುರು ಪ್ರಮುಖ ಭಾಗವತರು, ಕೈಜೋಡಿಸಿ

ನಿಂತು, ವೈದಿಕ ತಾಂತ್ರಿಕ ಮಂತ್ರಗಳಿಂದ ಸ್ತುತಿಸುತ್ತಿದ್ದರು. ಶ್ರೀ, ಕೀರ್ತಿ, ಪುಷ್ಟಿ, ಗೀ, ಕಾಂತಿ, ತುಷ್ಟಿ, ಇಲಾ, ಅಜಾ, ವಿದ್ಯಾ, ಅವಿದ್ಯಾ, ಶಕ್ತಿ, ಮಾಯಾ, ಎಂಬ ಶಕ್ತಿರೂಪಳಾಗಿ ರಮೆಯು ಸೇವಿಸುತ್ತಿದ್ದ ಶ್ರೀರಮಣನ ದಿವ್ಯರೂಪ ಸಂದರ್ಶನದಿಂದ, ಆನಂದಪುಲಿಕತನಾಗಿ ಅಕ್ರೂರನು, ನೀರಲ್ಲೇ ಮೈನವಿರೆದ್ದು, ಕಣ್ಣುಗಳಾನಂದಬಿಂದುಗಳನ್ನುದುರಿಸುತ್ತಿರಲು, ಧೈರ್ಯವನ್ನು ತಂದು, ಪರಮಭಕ್ತಿಭಾವದಿಂದ ನೋಡುತ್ತಾ, ಸೆರೆಬಿಗಿದು ಮಾತಾಡಲಾರದೆ ತಡಪಡಿಸಿ, ಮೆಲ್ಲನೆ ಇಂತೆಂದನು–

## ೩೮. ಅಕ್ರೂರಕೃತ ಭಗವತ್ ಸ್ತುತಿ

ಇಂತು ಶ್ರೀಕಾಂತನ ದರ್ಶನದಿಂದ, ಹೃದಯವು ಹಗುರವಾಗಿ, ಇಂದ್ರಿಯಗಳು ಪ್ರಸನ್ನನಾಗಲು, ಭಕ್ತಸತ್ತಮನಾದ ಅಕ್ರೂರನು, ತಲೆಬಾಗಿ ನಮಿಸಿ, ಕೈಜೋಡಿಸಿ ನಿಂತು, ಇಂತು ನುತಿಸಿದನು–

ಪೂರ್ಣಷಡ್ಗುಣ ನಾರಾಯಣ! ನೀನು ಚತುರ್ವಿಧನಾಶರಹಿತನು, ಬ್ರಹ್ಮಾಂಡ ನಿಮಿತ್ತ ಕಾರಣನು, ಜೀವಸಂಸಾರಮೋಕ್ಷಾದಿ ಸ್ವತಂತ್ರಕಾರಣನಾದ ನಿನಗೆ ವಂದಿಸುವೆನು, ನಿನ್ನ ನಾಭಿ ಕಮಲದಿಂದ ಬಂದ ಶತಾನಂದನು ನಿನ್ನಾಜ್ಞೆಯಿಂದ ಎಲ್ಲ ಲೋಕಗಳನ್ನು ಪುಟ್ಟಿಸಿರುವೆನು.

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತು, ಪ್ರಕೃತಿ, ಮನ ಆದಿ ಇಂದ್ರಿಯಗಳು, ಇಂದ್ರಿಯ ವಿಷಯಗಳೆನಿಸಿದ ಶಬ್ದಾದಿಗಳು – ಇವೆಲ್ಲ ಜಡತತ್ವಗಳನ್ನು ನಡೆಸುವ ದೇವತಾದಿಜೀವರು, ಎಲ್ಲರೂ ಶ್ರೀಶಾ! ನಿನ್ನ ಅಂಗಗಳಿಂದ ಹುಟ್ಟಿ, ಆಶ್ರಯಿಸಿ, ನೀಕೊಟ್ಟ ಶಕ್ತಿಯಿಂದ, ನಿನ್ನನ್ನು ಸೇವಿಸುತ್ತಿರುವರು. ಅವರೆಲ್ಲರೂ ನಿನ್ನಿಂದ ಭಿನ್ನರು, ನಿನ್ನ ಅಧೀನರು, ಯತ್ಕಿಂಚಿತ್ಸದೃಶ್ಯರು. ಅವರಲ್ಲಿ ಪ್ರಧಾನರೆನಿಸಿದ ಶ್ರೀಬ್ರಹ್ಮ ರುದ್ರಾದಿಗಳು ಕೂಡ ನಿನ್ನ ಮಹಿಮೆಯನ್ನು ಚೆನ್ನಾಗಿ ತಿಳಿದಿಲ್ಲ. ಬ್ರಹ್ಮದೇವನೇ ಪ್ರಕೃತಿಯ ಗುಣಗಳಿಂದ ಬದ್ಧನಾಗಿ, ನಿನ್ನನ್ನು ಸಾಕಲ್ಯೇನ ತಿಳಿದಿಲ್ಲವೆಂದಮೇಲೆ ಇತರರ ಪಾಡೇನು?

ಯೋಗಿಜನರು ನಿನ್ನ ಪ್ರಸಾದದಿಂದ ನಿನ್ನ ಜ್ಞಾನವನ್ನು ಹೊಂದಿ, ದೇವತೆಗಳಲ್ಲಿ, ಅಧಿದೈವನಾಗಿಯು, ಭೂತಪಂಚಕದಲ್ಲಿ, ಆದಿಭೌತಿಕನಾಗಿಯು, ಜೀವರಲ್ಲಿ ಆಧ್ಯಾತ್ಮನೆನಿಸಿಯು, ಇದ್ದು ಸರ್ವೋತ್ತಮನು, ಸರ್ವಪ್ರೇರಕನು ಆದ ನಿನ್ನನ್ನು ಚೆನ್ನಾಗಿ ಭಜಿಸುವರು. ಕರ್ಮಪ್ರಕಾಶಕವಾದ ವೇದವಿಧಿಗಳನ್ನರಿತು, ಕೆಲವರು ಬ್ರಾಹ್ಮಣರು ನಿನ್ನ ಪ್ರೀತಿಗಾಗಿ ಅನೇಕ ಯಜ್ಞಗಳನ್ನು ಮಾಡುವರು; ಶುಕ್ಲಾದಿವರ್ಣ, ದಾಹಕತ್ವಾದಿ ಸ್ವಭಾವ, ಸ್ವರ್ಗಪಾಲನರೂಪ ಯಶಸ್ಸು – ಎಲ್ಲವೂ ವಿಶಿಷ್ಟವಾದ ವಿಷ್ಣುವಿನ ಅಧೀನವೆಂದು ಅಂತರ್ಯಾಮಿಬುದ್ಧಿಯಿಂದ ದೇವತೆಗಳಿಗೆ ಹವಿಸ್ಸನ್ನು ಕೊಡುವವರು, ನಿವೃತ್ತ ಕರ್ಮಾನುಷ್ಠಾನತತ್ಪರರೆನಿಸಿ, ಸಕಲಕರ್ಮಫಲವನ್ನು ನಿನಗೆ ಸಮರ್ಪಿಸಿ, ನಿನ್ನ ಪ್ರೀತಿಯನ್ನೇ ಬಯಸಿ, ಮುಕ್ತಿಯನ್ನು ಪೊಂದುವರು. ಜ್ಞಾನಿಗಳು ಕೂಡ ವೇದವಿಚಾರರೂಪ ಯಜ್ಞದಿಂದ ನಿನ್ನನ್ನರಿತು, ಭಗವನ್ನಿಷ್ಠೆಯಿಂದ ಮುಕ್ತರಾಗುವರು. ಕೆಲವರು ಪಾಂಚರಾತ್ರಿಕರು, ವಿಧಿಯನ್ನನುಸರಿಸಿ, ಐದು ಕಾಲಗಳಲ್ಲಿಯು ಬಿಡದೆ, ಸ್ವಭಾವದಿಂದ ಒಬ್ಬನಾದರೂ, ಭಕ್ತರನ್ನನುಗ್ರಹಿಸಲು ಅನೇಕರೂಪ ವಿಭ್ರಾಜಿತವಿಗ್ರಹನಾದ ನಿನ್ನನ್ನು ಪೂಜಿಸಿ ಧನ್ಯರಾಗುವರು. ಮತ್ತೆ ಕೆಲವರು ಶಿವನೇ ಹೇಳಿದಂತೆ, ಶಿವಾಂತರ್ಯಾಮಿಯಾದ ನಿನ್ನನ್ನು ಪೂಜಿಸುವರು. ದಧೀಚ್ಯಾದಿ

ಋಷಿಸಂಪ್ರದಾಯಾನುಸಾರವಾಗಿ, ಪೂಜಿಸುವ ಅವರು ನಾನಾದೇವತಾಭಕ್ತರೇ ಇರಬಹುದು. ಆದರೂ ಸರ್ವದೇವಸ್ವಾಮಿಯಾದ ನಿನ್ನನ್ನರಿತು ನಿನಗೆ ಸರ್ವಕರ್ಮಫಲವನ್ನರ್ಪಿಸುವವರು. ಕೊನೆಗೆ ನಿನ್ನನ್ನೇ ಹೊಂದುವರು. ನಿನ್ನ ಸ್ವಾತಂತ್ರ್ಯವನ್ನು ಇತರ ದೇವತೆಗಳಲ್ಲಿ ಚಿಂತಿಸಿದವರಿಗೂ ನೀನೇ ಪ್ರಭುವಾಗಿರುವೆ. ಆದರೂ ಅದನ್ನರಿಯದೆ, ಅವರು ಕೆಡುತ್ತಿರುವರು. ಪರ್ಜನ್ಯರು ಮಳೆಗರೆಯಲು ಬಿದ್ದ ನೀರೆಲ್ಲವೂ, ಕೊನೆಗೆ ಸಮುದ್ರವನ್ನೇ ಸೇರುವಂತೆ, ಜ್ಞಾನಯುತಪೂಜಾ ಮಾರ್ಗಗಳೆಲ್ಲವೂ, ಬ್ರಹ್ಮಾರ್ಪಣವೆಂದು ಮಾಡಿರುವುದರಿಂದ; ಗುಣಪೂರ್ಣನಾದ ನಿನ್ನನ್ನೇ ಹೊಂದಿಸುತ್ತಿವೆ.

ಪ್ರಕೃತಿಯ ಮೂರು ಗುಣಗಳಲ್ಲಿ ನಿರ್ಮಿತವಾದ ಶರೀರವನ್ನು ಪೊಂದಿ, ಬ್ರಹ್ಮಾದಿ ಸ್ಥಾವರ ಪರ್ಯಂತ ಜೀವರು ಪ್ರಾಕೃತರೆನಿಸುವರು. ಪ್ರಕೃತಿಬಂಧದೂರನಾದ ನೀನು ಮತ್ತು ಪ್ರಕೃತಿ ನಿಯಾಮಕಳಾದ ರಮೆಯು ಅಪ್ರಾಕೃತರೆನಿಸಿರುವಿರಿ. ನಿನ್ನ ಜ್ಞಾನವು ಅಪ್ರತಿಹತವಾಗಿದೆ. ನಿನಗೆ ನಮಃ! ಸರ್ವಸ್ವಾಮಿಯೇ! ನಮಃ! ಸರ್ವಮನೋಬುದ್ಧಿ ಪ್ರೇರಕನೇ! ನಮಃ! ಅವಿದ್ಯೆಯು ಅಸ್ವತಂತ್ರಕಾರಣವಾಗಿ, ನಿನ್ನಿಚ್ಛೆಯೇ ಸ್ವತಂತ್ರ ಕಾರಣವಾಗಿ ಬಂದ ತ್ರಿಗುಣಪ್ರವಾಹ ರೂಪ ಸಂಸಾರವನ್ನು, ದೇವನರದಾನವಪಶ್ವಾದಿಯೋನಿಗಳಲ್ಲಿ ಕೊಡುವ ಶ್ರೀನಾರಾಯಣಾ! ನಿನಗೆ ನಮಃ! ಅಂತಹ ಅವಿದ್ಯಾಬಂಧನವನ್ನು ಬಿಡಿಸು, ಶ್ರೀಹರೇ!

ಮುಖದಿಂದ ಅಗ್ನಿಯನ್ನು, ಪಾದಗಳಿಂದ ಭೂಮಿಯನ್ನು, ಕಣ್ಣಿಂದ ಸೂರ್ಯನನ್ನು, ನಾಭಿಯಿಂದ ಗಗನವನ್ನು, ಕಿವಿಗಳಿಂದ ದಿಕ್ಕುಗಳನ್ನು, ಶಿರಸ್ಸಿನಿಂದ ದ್ಯುಲೋಕವನ್ನು, ಬಾಹು ಗಳಿಂದ ಇಂದ್ರಾದಿ ಲೋಕಪಾಲರನ್ನು, ಕುಕ್ಷಿಯಿಂದ ಸಮುದ್ರವನ್ನು, ಪ್ರಾಣದಿಂದ ಮುಖ್ಯ ಪ್ರಾಣನನ್ನು, ರೋಮಗಳಿಂದ ವೃಕ್ಷೌಷಧಿಗಳನ್ನು, ಕೂದಲಿನಿಂದ ಮೇಘಗಳನ್ನು, ನಖಾಸ್ಥಿ ಗಳಿಂದ ಗಿರಿಗಳನ್ನು, ಎವೆಯಿಂದ ಹಗಲುರಾತ್ರಿಗಳನ್ನು, ಶಿಶ್ನದಿಂದ ದಕ್ಷನನ್ನು, ವೀರ್ಯದಿಂದ ಮಳೆಯನ್ನು, ಸೃಜಿಸಿ, ಸರ್ವಲೋಕಗಳನ್ನು, ಲೋಕಪಾಲರನ್ನು ಪಾಲಿಸುವ ಪರಮೇಷ್ಠಿ ವಂದ್ಯನೇ! ನಿನಗೆ ನಮಃ! ಜ್ಞಾನಸ್ವರೂಪನಾದ ನಿನ್ನಲ್ಲಿ ಸಕಲ ಜೀವರು ನೀರಿನಲ್ಲಿರುವ ಮೀನು ಗಳಂತೆ, ಅತ್ತಿಹಣ್ಣಿನಲ್ಲಿರುವ ಹುಳಗಳಂತೆ, ಅಧೀನರಾಗಿ, ನಿನ್ನಿಂದ ಜೀವಿಸಿ, ನಿನ್ನಲ್ಲೇ ಲಯ ವಾಗುತ್ತಿರುವರು. ನಿನ್ನ ಮಂಗಳ ರೂಪಗಳೆಲ್ಲವು, ಭಕ್ತಜನರ ದುಃಖವನ್ನು ನಿರ್ಮೂಲಿಸಿ, ಸುಖವನ್ನು ಕೊಡುತ್ತವೆ. ಆ ಕ್ರೀಡಾವತಾರಗಳನ್ನು ಪಾಡಿ ಸುಜನರು ಧನ್ಯರಾಗುವರು.

## ದಶಾವತಾರಸ್ತುತಿ

ಹಯಗ್ರೀವ ದೈತ್ಯನನ್ನು ಸಂಹರಿಸಿ, ಮನ್ವಾದಿ ಸುಜನರನ್ನು ರಕ್ಷಿಸಲು ಮತ್ಸ್ಯನಾಗಿ ಪ್ರಳಯಾಬ್ಧಿಯಲ್ಲಿ ವಿಹರಿಸಿದ ಮತ್ಸ್ಯಮೂರ್ತಿಯೇ! ನಿನಗೆ ನಮಃ.

ನೀನೇ ಹಯವದನನಾಗಿ ಮಧು-ಕೈಟಭರನ್ನು ಸಂಹರಿಸಿದೆ. ಮಂದರವನ್ನು ಧರಿಸಿದ ಕೂರ್ಮರೂಪನೇ! ನಿನಗೆ ನಮಃ! ಭೂಮಿಯನ್ನು ಉದ್ಧರಿಸುವ ವಿಲಾಸವನ್ನು ತೋರಿದ ವರಾಹನೇ! ನಿನಗೆ ನಮಃ! ಅತ್ಯದ್ಭುತಸಿಂಹರೂಪದಿಂದ ಸಾಧು ಪ್ರಹ್ಲಾದನನ್ನು ಪೊರೆದ ಶ್ರೀನೃಸಿಂಹನೇ! ನಿನಗೆ ನಮಃ! ಮೂರುಲೋಕವನ್ನಾಕ್ರಮಿಸಿ ನಿಂತ ವಾಮನನೇ ನಿನಗೆ ನಮ! ಕ್ಷತ್ರಿಯಾಪಸದವನಕುಲಕುಠಾರನಾದ ಪರಶುರಾಮನೇ! ನಿನಗೆ ನಮಃ! ರಾವಣಾದಿ ದುಷ್ಟರನ್ನು

ನಾಶಮಾಡಿದ ರಾಮಚಂದ್ರನೇ! ನಿನಗೆ ನಮಃ! ವಾಸುದೇವನೇ! ಬಲರಾಮನಲ್ಲಿರುವ ಸಂಕರ್ಷಣನೇ! ಪ್ರದ್ಯುಮ್ನನಲ್ಲಿ ಪ್ರದ್ಯುಮ್ನನೇ! ಅನಿರುದ್ಧನಲ್ಲಿ ಅನಿರುದ್ಧನೇ! ನಿನಗೆ ನಮಃ! ದೈತ್ಯದಾನವರನ್ನು ವಂಚಿಸಿ, ಸುಜನಮಾರ್ಗವನ್ನು ರಕ್ಷಿಸಲು ಬದ್ಧನೆನಿಸಿ ಅವತರಿಸುವೆ. ಮುಂದೆ ಕಲಿಯುಗಾಂತ್ಯ ದಲ್ಲಿ ಮ್ಲೇಚ್ಛಪ್ರಾಯರಾದ ರಾಜರನ್ನೆಲ್ಲ ಸವರಿನಾಶಮಾಡಿ, ಧರ್ಮರಕ್ಷಕನೆನಿ ಸುವ ಕಲ್ಕಿಯೇ! ನಿನಗೆ ನಮಃ!

ಭಗವಾನ್! ನಾನು ನನ್ನದೆಂಬ ಭ್ರಮೆಯಿಂದ ಜೀವರು ಹುಟ್ಟಿ ಸಾಯುತ್ತಾ, ಕರ್ಮಫಲ ವನ್ನುಣ್ಣುತ್ತಾ ಸರಳುತ್ತಿರುವರು. ಕೃಷ್ಣಾ! ನಾನು 'ದೇಹ, ದಾರಾಪುತ್ರರು, ಸುಹೃದ್ಬಂಧುಗಳು, ಧನಧಾನ್ಯಗಳು ಮುಂತಾದ ಪದಾರ್ಥಗಳು, ಸ್ವಪ್ನಪದಾರ್ಥಗಳಂತೆ ಭಗವದಿಚ್ಛಾಪ್ರಾಪ್ತವಾಗಿವೆ. ಹಾಗೂ ಅಶಾಶ್ವತಗಳು' ಎಂಬುದನ್ನರಿಯದೆ, ಅವೇ ಸುಖಕರವೆಂದು ತಿಳಿದು ಮೂಢನಾಗಿ ಅಲೆಯುತ್ತಿರುವೆನು. ಅವೆಲ್ಲ ಅನಿತ್ಯ ಜೀವಭಿನ್ನ ದುಃಖಪ್ರದವಾಗಿರಲು, ನಾನು ಅವನ್ನು ನಿತ್ಯ ನಾನೇ ಶರೀರ, ಅವೇ ಸುಖಕರವೆಂದು ತಿಳಿದು ಪ್ರಭೋ! ನಿನ್ನನ್ನು ತಿಳಿಯುವ ಗೋಜಿಗೆ ಹೋಗದೆ ಅಜ್ಞಾನ ವ್ಯಸನಗಳಲ್ಲಿ ಮಗ್ನನಾಗಿರುವೆನು. ಅಂತ್ರಗಂಗಾಲತೆಯಿಂದ ಮುಚ್ಚಲ್ಪಟ್ಟು ಕಾಣದಿರುವ ಶುದ್ಧ ಜಲವನ್ನು ಕಾಣದೆ, ನೀರಡಿಸಿ, ಬಿಸಿಲುಗುದುರೆಯ ಬೆನ್ನಟ್ಟುವ ದಡ್ಡನಂತೆ ನಾನೂ ನಿನ್ನನ್ನು ಕಾಣದೆ ಸಂಸಾರ ಮರುಭೂಮಿಯಲ್ಲಿ ಓಡುತ್ತಿರುವೆನು. ಇಂದ್ರಿಯಗಳೆಳೆ ದಾಡಲು ಕುಣಿದು ಕಾಮಕರ್ಮಮಾರ್ಗದಲ್ಲಿ ಓಡುವ ಮನಸ್ಸನ್ನು ಪ್ರಮಾದವಾಗುವಂತೆ ಸೆಳೆದು ಬಿಗಿಹಿಡಿದು ನಡೆಸಲು ಕೈಲಾಗದೆ ತತ್ತರಿಸುತ್ತಿರುವೆನು. ಆದರೂ ಈಗ ನಿನ್ನ ಪಾದಪಂಕಜವೆನಗೆ ದೊರೆತಿದೆ! ಅಸಜ್ಜನರಿಗೆ ಸಿಗದ ನಿನ್ನ ಪಾದಸೇವೆ ನನ್ನಂತಹ ಪಾಮರನಿಗೆ ಲಭಿಸಿತೆಂದರೆ, ಅದೂ ನಿನ್ನ ಅನುಗ್ರಹದಿಂದಲೇ ಅಲ್ಲವೇ? ಆ ನಿನ್ನ ಅನುಗ್ರಹವು ಸಜ್ಜನರ ಸೇವೆಯಿಂದ ಲಭಿಸಿದ ಜ್ಞಾನದಿಂದಲೇ ಆಹುದು. ಪಂಕಜನಾಭ! ನಿನ್ನ ಅನುಗ್ರಹದಿಂದಲೇ ಸಂಸಾರ ತಾರಣವು. ವಿಜ್ಞಾನೈಕದೇಹನು ಸರ್ವಜ್ಞಾನಪ್ರಧಾನಕಾರಣನು ಬ್ರಹ್ಮರುದ್ರನಿಯಾಮಕನು ಗುಣಪೂರ್ಣನು ಅನಂತಶಕ್ತಿಸಂಪನ್ನನು ಸರ್ವಭೂತಹೃದಯಗುಹಾನಿಹಿತನು ಸರ್ವವ್ಯಾಪ್ತನು ಸರ್ವೇಂದ್ರಿಯ ಪ್ರೇರಕನು ಆದ ವಾಸುದೇವನೇ! ನಿನಗೆ ಸಾಷ್ಟಾಂಗ ನಮಸ್ಕಾರವು!

## ೩೯. ರಜಕ ವಧೆ — ಸುಧಾಮ ವರದಾನ

ಇಂತು ನುತಿಸುವ ಅಕ್ರೂರನನ್ನು ಸಂತೈಸಿ ಶ್ರೀಕೃಷ್ಣನು ನಾಟಕದಲ್ಲಿಯ ನಟನಂತೆ ಲೀಲೆಯಾಗಿ ತನ್ನ ದಿವ್ಯರೂಪವನ್ನು ತೋರಗೊಡದಾದನು. ಆಗ ಅಕ್ರೂರನು ನೀರಿಂದ ಮೇಲಕ್ಕೆದ್ದು ಸಂಧ್ಯಾದಿಗಳನ್ನು ಮಾಡಿ, ಆಶ್ಚರ್ಯಾನಂದಸಂಭ್ರಮಗಳೇ ಮೂರ್ತಿವೆತ್ತಂತೆ ಬಂದು ರಥದಲ್ಲಿ ಕುಳಿತು ನಡೆಸಲಾರಂಭಿಸಿದನು. ಅವನನ್ನು ನೋಡಿ ಶ್ರೀಹೃಷಿಕೇಶನು 'ಅಕ್ರೂರ! ಏನೋ ಆಶ್ಚರ್ಯವನ್ನು ಕಂಡುಬಂದವನಂತೆ ಕಾಣುತ್ತಿರುವೆ. ಭೂಮಿಯಲ್ಲೋ? ಜಲದಲ್ಲೋ? ಆಕಾಶ ದಲ್ಲೋ? ಎಂದು ತನ್ನ ಮಹಿಮೆಯನ್ನವನ ವದನದಿಂದ ನುಡಿಸಬೇಕೆಂದು ದಯೆಮಾಡಿ ಕೇಳಿದನು.

ಆಗ ಅಕ್ರೂರನಿಂತೆಂದನು–

'ಕೃಷ್ಣಾ! ಭೂ ಜಲ ನಭ ಸ್ಥಲಗಳಲ್ಲಿರುವ ಅದ್ಭುತಗಳೆಲ್ಲಾ ವಿಶ್ವಕಾಯಕನಾದ ನಿನ್ನಲ್ಲೇ ಇವೆ. ನಿನ್ನನ್ನು ನೋಡುವ ನಾನು ಎಲ್ಲ ಆಶ್ಚರ್ಯವನ್ನು ಕಂಡಂತಾಯಿತಲ್ಲವೇ? ಆ ಮಾತನ್ನಾಲಿಸಿ, ವಾಸುದೇವನು ನಸುನಕ್ಕು ಸುಮ್ಮನಾದನು.

ಸ್ಯಂದನವನ್ನು ನಡೆಸಿ ಗಾಂದಿನೀಸುತನು, ಸಾಯಂಕಾಲದಲ್ಲಿ, ರಾಮಕೃಷ್ಣರನ್ನು ಮಧುರೆಗೆ ಸೇರಿಸಿದನು. ಮಾರ್ಗದಲ್ಲಿ ಬರುವಾಗ ಗ್ರಾಮವಾಸಿಗಳು, ಶ್ರೀರಾಮಕೃಷ್ಣರನ್ನು ನೋಡುತ್ತಾ ನಿಂತು, ಮೈಮರೆತುಬಿಟ್ಟಿದ್ದರು. ನಂದಗೋಪನು ಮೊದಲೇ ಬಂದು, ಮಧುರೆಯ ಹೊರಗಿನ ಉದ್ಯಾನದಲ್ಲಿ ಡೇರೆಗಳನ್ನು ನಿರ್ಮಿಸಿ, ಬಸತಿಮಾಡಿದ್ದನು. ಅಲ್ಲಿಗೆ ಬಂದು ರಾಮಕೃಷ್ಣರು ರಥದಿಂದಿಳಿದರು. ಶ್ರೀಕೃಷ್ಣನು ಅಕ್ರೂರನ ಕೈಯನ್ನು ಪಿಡಿದು, ನಗುತ್ತಾ 'ಅಕ್ರೂರ! ರಥದಿಂದ ಊರನ್ನು ಪ್ರವೇಶಿಸು, ಹೋಗು! ನಾವು ಇಲ್ಲೇ ಇಳಿದು, ನಾಳೆ ಊರನ್ನು ನೋಡಬೇಕೆಂದಿರುವೆವು' ಎಂದನು. ಆಗ ಅಕ್ರೂರನು ಖಿನ್ನನಾಗಿ ಇಂತೆಂದನು–

ನಿಮ್ಮಿಬ್ಬರನ್ನು ಬಿಟ್ಟು ನಾನು ಮಧುರೆಗೆ ಹೋಗಲಾರೆನು. ಭಕ್ತವತ್ಸಲ! ಆ ನಿನ್ನದಾಸನ ಕೈಬಿಡಬೇಡ! ಕೃಷ್ಣಾ! ನನ್ನ ಮನೆಗೆ ಬಾ, ನಮ್ಮನ್ನೂ ಕಾಪಾಡಿ ಧನ್ಯರನ್ನಾಗಿಸು! ಬಲರಾಮನು, ನಂದಾದಿಗೋಪಾಲರು, ಸ್ನೇಹಿತರು ಎಲ್ಲರು ಬನ್ನಿ! ನಿನ್ನ ಪಾದಪರಾಗ ಪವಿತ್ರವಾಗಲಿ, ನನ್ನಂತಹ ಗೃಹಸ್ಥನ ಮನೆ! ನಿನ್ನ ಪಾದತೀರ್ಥದಿಂದ ಪಿತೃಗಳು, ದೇವತೆಗಳು, ಅಗ್ನಿಗಳು ತೃಪ್ತರಾಗುವಂತೆ! ನಿನ್ನ ಪಾದಪಂಕಜವನ್ನು ತೊಳೆದಲ್ಲವೇ ಬಲಿರಾಜನು ಪಾವನನಾಗಿ, ಅತುಲಸುತಲೈಶ್ವರ್ಯವನ್ನು, ಏಕಾಂತಭಕ್ತಿಯನ್ನೂ ಪೊಂದಿದನು? ನಿನ್ನ ಪಾದಭವವಾರಿಯನ್ನು ಶಿವನು ಶಿರದಲ್ಲಿ ಧರಿಸಿಹನು, ಸಗರಾತ್ಮಜರು ಪಾಪಮುಕ್ತರಾಗಿ ಸ್ವರ್ಗವನ್ನೈದಿದರು! ತ್ರಿಲೋಕಪಾವನಿಯಾದ ಗಂಗೆಯ ಮಹಿಮೆ, ನಿನ್ನ ಪಾದಸೌಭಾಗ್ಯಸಂಪರ್ಕದಿಂದಲ್ಲವೇ? ಆ ನಿನ್ನ ಪಾದತೀರ್ಥವನ್ನು ಧರಿಸಿ, ನಾನೂ ಪಾವನನಾಗುವಂತೆ ಮಾಡು. ಅನುಗ್ರಹಿಸು; ದೇವದೇವ! ಜಗನ್ನಾಥ! ನಿನ್ನ ಮಹಿಮಾಶ್ರವಣವೇ ಸರ್ವಪುಣ್ಯಫಲಪ್ರದವು. ಉತ್ತಮಶ್ಲೋಕ! ನಾರಾಯಣ! ನಿನಗೆ ನಮಸ್ಕಾರವು.

ಅದನ್ನು ಕೇಳಿ ಶ್ರೀಕೃಷ್ಣನಿಂತು ನುಡಿದನು–

ಬರುತ್ತೇನೆ! ನಮ್ಮ-ಬಲರಾಮಣ್ಣನಿಂದ ಕೂಡಿ ನಿಮ್ಮ ಮನೆಗೆ ಬರುವೆನು- ತಡ, ಯಾದವ ದ್ರೋಹಿಯಾದ ದುರ್ಮಾರ್ಗನನ್ನು ಸಂಹರಿಸಿ, ಸುಹೃಜ್ಜನರ ಕ್ಷೇಮವನ್ನು ಸಂಪಾದಿಸುವೆನು– ಎಂದು ಗೋವಿಂದನು ಅಕ್ರೂರನನ್ನು ಕಳುಹಿಸಿಕೊಟ್ಟನು. ಅವನು ಕಂಸನಿಗೆ ಕೃಷ್ಣಾಗಮನವನ್ನು ತಿಳಿಸಿ, ತನ್ನ ಮನೆ ಸೇರಿದನು.

ಮಧ್ಯಾಹ್ನದ ನಂತರ ಶ್ರೀಕೃಷ್ಣಬಲರಾಮರು ಮಧುರೆಯನ್ನು ನೋಡಲಿಷ್ಟಪಟ್ಟು ಪರಿವಾರದ ಗೋಪಾಲರೊಡನೆ ನಗರವನ್ನು ಪ್ರವೇಶಿಸಿದರು. ಸ್ಫಟಿಕಗೋಪುರಗಳಿಂದಲು, ಬಂಗಾರದ ದ್ವಾರದೇಶಗಳಿಂದಲು, ತಳಿರುತೋರಣಗಳಿಂದಲು, ದುಸ್ತರಾಗಾಧ ಪರಿಖೆಯಿಂದಲು, ಉದ್ಯಾನೋಪವನಗಳಿಂದಲು, ಚತುರ್ವಿಧಪ್ರಾಸಾದಗಳಿಂದಲು, ಸತ್ರಸಭೆ ಗಳಿಂದಲು, ಕಂಗೊಳಿಸುವ ಮಧುರೆಯನ್ನು ನೋಡಿ, ಗೋಪಾಲರು ಆಶ್ಚರ್ಯಭರಿತರಾದರು. ಅಲ್ಲಿರುವ ಮನೆಗಳ ಮುಂದೆ ವಜ್ರವೈಡೂರ್ಯ ನೀಲಮುಕ್ತಾವಿದ್ರುಮಣಿಗಳ ವೇದಿಕೆಗಳ ಕಾಂತಿ, ಒಳಗೆ ಸ್ಫುಟಿಕಕುಟ್ಟಿಮರುಭೂಮಿಯಲ್ಲಿ, ಜಾಲರಂಧ್ರಗಳಿಂದ ತೂರಿಬಂದು, ಪ್ರಕಾಶವನ್ನು ಬೀರುತ್ತಿತ್ತು. ಕಟ್ಟಿದ ತೋರಣಗಳು, ಬಾಳೆಯ ಕಂಬಗಳು, ಎತ್ತಿಕಟ್ಟಿದ ಧ್ವಜಪತಾಕೆಗಳು, ಸೇರಿ,

ರಾಜವೀಧಿಯಲ್ಲಿ ಚೆಲ್ಲಿರುವ ಪುಷ್ಪಲಾಜಾಕ್ಷತೆಗಳ ಧಾವಳ್ಯವನ್ನು ಹಸುರಾಗಿಸುತ್ತಿದ್ದವು. ಚೆಲ್ಲಿದ ತಳಿಲನೀರಿನ ಸುಗಂಧ ಬೀದಿಯಲ್ಲಿ ಹರಡಿತ್ತು. ಮನೆಗಳ ಮುಂದೆ ಪೂರ್ಣಕುಂಭ ಗಳಲ್ಲಿ, ಪಲ್ಲವಪುಷ್ಪಗಳನ್ನು, ಜಲವನ್ನು, ಇಟ್ಟು ಮೇಲೆ ಗಂಧವನ್ನು ಹಚ್ಚಿದ್ದರು. ಮೇಲಿಂದ ದೇವತೆ ಗಳು ಬರಲು ಮಾರ್ಗವೆಂಬಂತೆ, ಕೇತುಸ್ತಂಭಗಳಿಗೆ ಕಟ್ಟಿದ ಅಡಿಕೆಯ ಮರದ ಗೊಂಚಲುಗಳು ನೇತಾಡುತ್ತಿದ್ದವು; ಕೈ ಬೀಸಿ ಕರೆಯುವಂತ ಪತಾಕಾ ವಸ್ತ್ರಗಳು ರೆಪರೆಪ ಹಾರಾಡುತ್ತಿದ್ದವು.

ರಾಜಮಾರ್ಗದಲ್ಲಿ ಬಂದ ರಾಮಕೃಷ್ಣರನ್ನು ನೋಡುವ ಕೌತುಕದಿಂದ ಮಧುರಾನಗರ ನಾರಿಯರು ಮಹಡಿಗಳನ್ನೇರಿದರು. ಕೆಲನಾರಿಯರು ವಸ್ತ್ರಗಳನ್ನು ಅಸ್ತವ್ಯಸ್ತವಾಗಿ ಉಟ್ಟಿದ್ದರು. ಕೆಲತರುಣಿಯರು ಕಿವಿಯ ಬೆಂಡೋಲೆಯನ್ನು ಮೂಗಿನಲ್ಲಿಟ್ಟು, ಕಾಲ ಕಡಗವನ್ನು ಕೈಯಲ್ಲಿ ಧರಿಸಿ, ಬೇಗನೇ ಬಂದರು. ಒಂದೇ ಬೆಂಡೋಲೆಯನ್ನಿಟ್ಟು, ಕೆಲಕಾಂತೆಯರು ಓಡಿಬಂದರು. ಒಂದು ಕಣ್ಣಿಗೆ ಕಾಡಿಗೆಯನ್ನು ಹಚ್ಚಿ ಕೆಲವರು ಬಂದರು. ಊಟವನ್ನು ಬಿಟ್ಟು ಕೆಲವರು, ಎರೆದುಕೊಳ್ಳುವುದನ್ನು ಮುಗಿಸದೆ ಕೆಲವರು, ನಿದ್ದೆಯಿಂದ ದಿಗ್ಗನೆ ಎದ್ದು ಕೆಲವರು, ಹಾಲು ಕುಡಿಯುತ್ತಿದ್ದ ಕೂಸನ್ನು ನೆಲದಮೇಲೆ ಬೋರಲುಹಾಕಿ ಕೆಲವರು, ಕೂಸನ್ನು ಮರೆತು ಬೆಕ್ಕನ್ನೆತ್ತಿಕೊಂಡು ಕೆಲವರು, ತ್ವರೆಯಿಂದ ಬಂದು, ಗೋವಿಂದನನ್ನು ಕಣ್ಣಾರೆ ಕಂಡು ಆನಂದಿತ ರಾದರು. ಅರವಿಂದನೇತ್ರನು ಆ ಕೋಮಲಗಾತ್ರಿಯರ ಚಿತ್ತವನ್ನು ನೋಟದಿಂದಲೇ ಸೂರೆ ಗೊಂಡು, ಅವರನ್ನು ನಿಜಮಂದಹಾಸದಿಂದ ಸತ್ಕರಿಸಿದನು. ಭದ್ರಗಜಗಮನನಾದ ಶ್ರೀಕೃಷ್ಣನನ್ನು ನೇತ್ರಾನಂದವಾಗಿ ನೋಡಿ, ಅವನನ್ನು ಹೃದಯ ಪಂಜರದಲ್ಲಿ ಹಿಡಿದಿಟ್ಟು, ಕೇಳಿದ್ದ ಅವನ ಗುಣಗಳನ್ನು ಧ್ಯಾನಿಸಿ, ಮೈನವಿರೆದ್ದು, ಪ್ರಮೋದಬಾಷ್ಪಗಳುದುರುತ್ತಿರಲು, ಆ ನಾರಿಯರು ಯೋಗಿವರರಂತೆ ಸರ್ವವ್ಯಸನದೂರರಾದರು. ಪ್ರೀತಿಯಿಂದ ಅವರ ಮುಖಕಮಲಗಳು ಅರಳಿದವು. ಅವರು ಪೂಮಳೆಗರೆದು ರಾಮಕೃಷ್ಣರನ್ನು ಸ್ವಾಗತಿಸಿದರು.

ಪೂಮಾಲೆಗಳು, ತಾಂಬೂಲ, ಜಲಪೂರ್ಣಕಂಭ, ದಧ್ಯಕ್ಷತ, ಉಡುಗೊರೆಗಳನ್ನು ಕೈಲಿ ಹಿಡಿದು, ಬ್ರಾಹ್ಮಣರು ವೇದಘೋಷದಿಂದ ಎದುರ್ಗೊಂಡು ಕಾಣಿಕೆಯಿತ್ತರು.

ರಾಜವೀಧಿಯಲ್ಲಿ ಬರುವ ರಾಮಕೃಷ್ಣರು, ಒಗೆದ ಬಟ್ಟೆಗಳ ಮೂಟೆಗಳನ್ನು ಹಿಡಿಸಿಕೊಂಡು ಬರುವ ಅಗಸನೊಬ್ಬನನ್ನು ಕಂಡು, ಆ ಉತ್ತಮ ವಸನಗಳನ್ನು ನಮಗೆ ಕೊಡೆಂದು ಬೇಡಿದರು. 'ನಾವು ಬಯಸುವ ಬಟ್ಟೆಗಳನ್ನು ಕೊಡು! ನಿನಗೆ ಕ್ಷೇಮವಾಗುವುದು; ನೋಡು! ಅನುಮಾನಿಸ ಬೇಡ' ಎಂದು ಬೇಡಿದ ಪೂರ್ಣೈಶ್ವರ್ಯನಾದ ಲಕ್ಷ್ಮೀಪತಿಯನ್ನು ಸಿಟ್ಟಿನಿಂದ ನೋಡಿ, ರಾಜಭೃತ್ಯನೆಂಬ ದುರ್ಮದದಿಂದ, ರಜಕನು ಇಂತೆಂದನು–

ಎಲವೋ ಗುಡ್ಡಗಾಡಿನ ಹಳ್ಳಿಕೊರಮರೇ! ನಿತ್ಯವೂ ನೀವು ರಾಜಯೋಗ್ಯವಾದ ಇಂತಹ ಬಟ್ಟೆಗಳನ್ನೇ ಉಡುತ್ತಿರುವಿರಾ? ಕೊಬ್ಬಿ ಕೆಡಬೇಡಿ! ರಾಜದ್ರವ್ಯವನ್ನು ಬೇಡಬಹುದೇ? ಹೋಗಿ, ಮೂರ್ಖರೇ! ನಿಮಗೆ ಜೀವಿಸಬೇಕೆಂಬ ಆಸೆ ಇದ್ದರೆ ಹೊರಡಿ ಇಲ್ಲಿಂದ! ರಾಜರು ನಿಮ್ಮಂತಹ ಗರ್ವಿತರನ್ನು ಸೆರೆಹಿಡಿದು ಕೊಲ್ಲದೇ ಬಿಡುವರೇ?– ಎಂದು ಬೊಗಳುವ ಅಗಸನ ಕುತ್ತಿಗೆಯನ್ನು ಶ್ರೀಶನು ಕೈಯಿಂದಲೇ ಕತ್ತರಿಸಿ ಕೆಡಹಿದನು. ಅವನ ಅನುಚರರು ಮೂಟೆಗಳನ್ನು ಬಿಟ್ಟೋಡಿ ದರು. ಶ್ರೀಕೃಷ್ಣನು ತನಗೆ ಒಪ್ಪುವ ಪೀತಾಂಬರವನ್ನುಟ್ಟು, ಅಣ್ಣನಿಗೆ ನೀಲಾಂಬರವನ್ನಿತ್ತರು; ಮಿಕ್ಕ ಬಾಲಕರು ಬೇಕಾದ ವಸ್ತ್ರಗಳನ್ನುಟ್ಟು, ಮಿಕ್ಕವನ್ನು ಬಿಟ್ಟು, ಮುಂದೆ ನಡೆದರು.

ಅಲ್ಲಿ ಬರುವ ವಾಯಕನನ್ನು ಕಂಡು, ಬೇಡಲು, ಅವನು ಆನಂದದಿಂದ ರಾಮಕೃಷ್ಣರಿಗೆ ಚಿತ್ರವಿಚಿತ್ರವರ್ಣಗಳಿಂದ ಮಕರಿಕಾದಿ ಚಿತ್ರಗಳನ್ನು ಬರೆದು, ಅಲಂಕರಿಸಿದನು. ಬಾಲಗಜ ಸುಂದರರಾದ ರಾಮಕೃಷ್ಣರು ಪೂರ್ಣಿಮಾ ಅಮಾಗಳಂತೆ ಧವಲನೀಲವರ್ಣಕಾಂತಿಯಿಂದ ಮನೋಹರರಾದರು. ಆಗ ಶ್ರೀಶನು ಪ್ರಸನ್ನನಾಗಿ ವಾಯಕನಿಗೆ ಸಾರೂಪ್ಯಮೋಕ್ಷವನ್ನಿತ್ತನು. ಅಷ್ಟೇ ಅಲ್ಲದೆ ಪರಮೈಶ್ವರ್ಯ ಬಲ ಬುದ್ಧಿ ದೀರ್ಘಾಯುರಿಂದ್ರಿಯ ದಾರ್ಢ್ಯಗಳನ್ನು ಕೊಟ್ಟು ಅನುಗ್ರಹಿಸಿದನು.

ಮುಂದೆ ಸುದಾಮನೆಂಬುವ ಮಾಲಾಕಾರನ ಮನೆ ಬಂತು, ಅಲ್ಲಿ ಬರುವ ರಾಮಕೃಷ್ಣರನ್ನು ನೋಡಿ ಸುದಾಮನು, ತಟ್ಟನೆ ಎದ್ದು ಬಂದು, ಕರೆದುಕೊಂಡು ತನ್ನ ಅಂಗಡಿಯಲ್ಲಿ ಕೂಡಿಸಿ, ಶಿರಸಾ ವಂದಿಸಿ, ಅವರನ್ನು ಪೂಮಾಲೆಗಳಿಂದ ಅಲಂಕರಿಸಿದನು. ಪರಿವಾರದವರನ್ನೂ ಚೆನ್ನಾಗಿ ಪೂಜಿಸಿದರು. ತಾಂಬೂಲ ಚಂದನಗಳನ್ನರ್ಪಿಸಿ, ಕೈಜೋಡಿಸಿ ನಿಂತು ಇಂತೆಂದನು–

ಕೃಷ್ಣಾ! ಇಂದು ನನ್ನ ಜನ್ಮವೇ ಪಾವನವಾಯಿತು! ನೀನು ಬರುವುದರಿಂದ ನನ್ನ ಕುಲವೇ ಉದ್ಧೃತವಾಯಿತು! ನಮ್ಮ ಪಿತೃಗಳು ತುಷ್ಟರಾದರು. ಸ್ವಾಮೀ! ಜಗತ್ತಿನ ಕ್ಷೇಮವನ್ನು ಸಂಪಾದಿಸಿ, ಸುಜನರನ್ನು ಕಾಪಾಡಲು ಅವತರಿಸಿದ ಸಾಕ್ಷಾನ್ನಾರಾಯಣನೇ ನೀನು! ಅಹಂಕಾರಾದಿ ಜಗತ್ತಿಗೆ ಸ್ವಾಮಿಯಾದ ಶೇಷನೇ ಬಲರಾಮನು! ನಿಮಗೆ ಪಕ್ಷಪಾತವಿಲ್ಲ. ನೀವು ಕರುಣಾ ರಹಿತರೂ ಅಲ್ಲ. ಜಗತ್ತಿಗೆ ಅನಿಮಿತ್ತ ಬಂಧುಗಳೆನಿಸಿದ ನೀವು, ಜೀವರ ಯೋಗ್ಯತೆಯನ್ನರಿತು ತಕ್ಕ ಫಲವನ್ನೇ ಕೊಡುತ್ತಿರುವಿರಿ. ಆಜ್ಞಾಪಿಸು ಈ ನಿನ್ನ ಕಿಂಕರನನ್ನು! ನಿನ್ನಿಂದ ಆಜ್ಞಾಪಿಸಲ್ಪಟ್ಟು, ನಿನ್ನ ಮಾತಿನಂತೆ ನಡೆಯುವುದೇ ಮಹಾಭಾಗ್ಯವೆಂದು ನಾನು ತಿಳಿದಿರುವೆನು. ಏನು ಮಾಡಲಿ?

ಎಂದು ನುಡಿದು ಸುದಾಮನು ಪ್ರಶಸ್ತ ಸುಗಂಧ ಪುಷ್ಪಮಾಲೆಯನ್ನರ್ಪಿಸಿ, ರಾಮಕೃಷ್ಣರನ್ನು ಪೂಜಿಸಿದನು. ಆ ವರದೇಶರು ಅವನಿಗೆ ಬೇಕಾದ ವರಗಳನ್ನು ಬೇಡೆಂದು ಪ್ರೀತಿಯಿಂದ ನುಡಿದರು. ಅವರು ಇತರ ವಿಷಯಗಳನ್ನು ಬೇಡದೆ, ಅಖಿಲಾಂತರ್ಯಾಮಿಯಾದ ರಮಾಕಾಂತ ನಲ್ಲಿ ಅಚಂಚಲಭಕ್ತಿಯನ್ನೇ ಬೇಡಿ, ಪಡೆದನು; ಹಾಗೂ ಹರಿಭಕ್ತರಲ್ಲಿ ಭಕ್ತಿಯನ್ನು, ಸಕಲಭೂತ ನಿಕಾಯದಯೆಯನ್ನೂ ವರವಾಗಿ ಪಡೆದ ಸುದಾಮನಲ್ಲಿ ಪ್ರೀತನಾಗಿ ಶ್ರೀಕೃಷ್ಣನು ವಂಶಪರಂಪರಾ ಗತವಾಗಿ ಬಿಡದೆ ನಿಲ್ಲುವ ಸಂಪತ್ತನ್ನು, ಬಲವನ್ನು, ದೀರ್ಘಯುವನ್ನು, ಕೀರ್ತಿಯನ್ನು, ಕಾಂತಿಯನ್ನೂ ಕೊಟ್ಟು, ಅಲ್ಲಿಂದ ಹೊರಟನು.

## ೪೦. ಕುಬ್ಜಾಸಮುದ್ಧಾರ

ಶ್ರೀಶುಕನು ಹೇಳಿದನು–

ರಾಜಮಾರ್ಗದಲ್ಲಿ ಪೋಗುತ್ತಾ ಸುಗಂಧಪಾತ್ರೆಯನ್ನು ಪಿಡಿದು ಬರುವ ರಮಣೀಯ ತರುಣಿಯರನ್ನು ನೋಡಿ, ರಾಮನುಜನು ನಗುತ್ತಾ, ಇಂತೆಂದನು–

ಸುಂದರಾಂಗಿ! ಯಾರೇ ನೀನು? ಈ ಗಂಧವನ್ನು ಯಾರಿಗೆ ಒಯ್ಯುತ್ತಿರುವೆ? ಹೇಳು. ಇದರ ಅಮೋದವು ಪ್ರಮೋದಕರವಾಗಿದೆ. ನಮಗೆ ಈ ಗಂಧವನ್ನು ಹಚ್ಚು. ನಿನಗೆ ಬೇಗನೆ ಕಲ್ಯಾಣವಾಗುವುದು.

ಸೈರಂಧ್ರಿಯು, 'ಕೃಷ್ಣಾ! ನಿನ್ನ ದಾಸಿಯೋ ನಾನು! ನನ್ನನ್ನು ತ್ರಿವಕ್ರೆ ಎಂಬುವರು. ನೋಡು, ನನ್ನ ಡೊಂಕಾದ ಶರೀರವನ್ನು! ನನ್ನ ಮನಸ್ಸು ಡೊಂಕಲ್ಲ. ಸುಂದರಾಂಗ! ಈ ನನ್ನ ಅಂಗಲೇಪ ವನ್ನು ಹೊರತಿನ್ನಾವುದೂ ಭೋಜಪತಿಗೆ ಸಮ್ಮತವಲ್ಲ. ಈ ಅಂಗಲೇಪವು ನಿಮ್ಮಿಬ್ಬರಿಗೆ ಒಪ್ಪುವಷ್ಟು ಮತ್ತಾರಿಗೂ ಶೋಭಿಸದು' ಎಂದು ಹೇಳಿ, ಶ್ರೀಕೃಷ್ಣನ ರೂಪ ಸೌಕುಮಾರ್ಯ ನರ್ಮಾಲಾಪ ಮಂದಹಾಸ ಕಟಾಕ್ಷಗಳಿಗೆ ಮನಸೋತು, ಗಂಧವನ್ನೇ ಅಲ್ಲದೆ, ತನ್ನನ್ನೇ ಅವನಿಗೆ ಸಮರ್ಪಿಸಿ, ಧನ್ಯಳಾದಳು. ರಜತಧವಳವು, ಕರ್ಪೂರಾದಿ ಗಂಧಿಲವು ಆದ ಅಂಗರಾಗಪಂಕದಿಂದ ಶೋಭಿಸಿ ರಾಮಕೃಷ್ಣರು, ತಮ್ಮ ಅಂಗಸಂಗದಿಂದ ಗಂಧವನ್ನು ಹೆಚ್ಚಾಗಿರಿಸಿ, ಪ್ರೀತರಾದರು. ತನ್ನ ದರ್ಶನವು ಸರ್ವವಕ್ರತಾನಿವಾರಕವೆಂದು ತೋರಲು ಮನಮಾಡಿ ಮಾಧವನು, ಆ ಮಾನಿನಿಯ ಮುಂಗಾಲಿನಲ್ಲಿ ಪಾದಗಳಿಂದ ತುಳಿದು, ಹೆಬ್ಬೆರಳ ತುದಿಗಳಿಂದ ಗದ್ದವನ್ನು ಪಿಡಿದೆತ್ತಿ, ಸೆಳೆದು ಅವಳನ್ನು ಸಮಕಾಯಳನ್ನು ಮಾಡಿದನು. ಮುಕುಂದನ ಸ್ಪರ್ಶದಿಂದ ಪಾವನಳಾದ ತ್ರಿವಕ್ರೆ, ಸಮಾನಾಂಗಿಯು, ಸುಂದರಿಯು ಆಗಿ ಶೋಭಿಸಿದಳು. ರೂಪಸಂಪನ್ನ ಳಾದ, ಕೃಷ್ಣಪತ್ನಿಯಾಗಲು ಅರ್ಹಳಾದ, ಆ ಅಪ್ಸರೆಯು, ಶ್ರೀಕೃಷ್ಣನ ಉತ್ತರೀಯವನ್ನು ಪಿಡಿದು, ನಗುತ್ತಾ, ಕಾಮವಶಳಾಗಿ, ಇಂತೆಂದಳು-

'ವೀರ! ನನ್ನ ಮನೆಗೆ ಬಾ! ನನ್ನನ್ನು ಬಿಟ್ಟು ಹೋಗಬೇಡ. ನನ್ನ ಮನಸ್ಸು ನನ್ನ ವಶವಾಗಿಲ್ಲ, ಪ್ರಸನ್ನನಾಗು.' ರಾಮನು ನೋಡುತ್ತಿರಲು, ತನ್ನನ್ನಿಂತು ಯಾಚಿಸಿದ ಅವಳ ಮಾತನ್ನಾಲಿಸಿ, ಪರಿವಾರದವರನ್ನು ನೋಡಿ ನಕ್ಕು, ಶ್ರೀಕೃಷ್ಣನು 'ಸುಂದರಿ! ಪುರುಷ ಮನೋರಂಜಕಳಾದ ನಿನ್ನ ಮನೆಗೆ ಬರುತ್ತೇನೆ. ಈಗಲ್ಲ; ನನ್ನ ಕೆಲಸವಾಗಲಿ ಬಿಡು! ಅಸಂಗರಾದ ನಮಗೆ ಭಕ್ತರ ಮನೋಮಂದಿರವೇ ಶರಣ್ಯವಲ್ಲವೇ?' ಎಂದು ಮಧುರಾಲಾಪಗಳಿಂದ, ಮಾನಿನೀಮಣಿಯನ್ನು ಕಳುಹಿ, ಮುಂದುವರಿದನು.

ವೈಶ್ಯವರರು ಸಾದರದಿಂದ ಸಮರ್ಪಿಸಿದ ಕಾಣಿಕೆಗಳನ್ನು, ತಾಂಬೂಲ ಮಾಲಾಗಂಧಗಳನ್ನು ರಾಮಕೃಷ್ಣರು ಸ್ವೀಕರಿಸಿ, ಪ್ರೀತರಾಗಿ, ಅವರಿಗೆ ಬೇಕಾದ ವರಗಳನ್ನಿತ್ತು– ಮುಂದೆ ಹೋಗಿ, ವಿಚಾರಿಸಿ, ಧನುಶ್ಶಾಲೆಯನ್ನು ಸೇರಿದರು.

ಶ್ರೀಕೃಷ್ಣನು, ಅಲ್ಲಿ ಇಂದ್ರಧನುವಿನಂತೆ ಮೆರೆಯುವ ಧನುಸ್ಸನ್ನು ನೋಡಿ, ಸಮೀಪಿಸಿದನು. ಧನೂರಕ್ಷಕರು ಬೇಡವೆಂದರೂ ಕೇಳದೆ, ಆ ಧನುವನ್ನೆತ್ತಿ, ರಾಮಾವತಾರವನ್ನು ನೆನೆದನೆಂಬಂತೆ, ಅವಲೀಲೆಯಿಂದ ಆನೆಯು ಕಬ್ಬಿನ ಕೋಲಿನನ್ನಂತೆ, ಸುಲಭವಾಗಿ ಮುರಿದು ಬಿಸುಟಿದನು. ಉರುಕ್ರಮ ಪರಾಕ್ರಮವನ್ನು ಚಾಟಲು ಹೋದಂತೆ ಧನುರ್ಭಂಗ ಶಬ್ದವು ಭೂನಭೋಂತರವನ್ನು ನಂಬಿ ಪ್ರತಿಧ್ವನಿಸಿತು. ಆ ಶಬ್ದವನ್ನು ಕೇಳಿ ಕಂಸನು, ಮೃತ್ಯುವಿನ ಕರೆಯೆಂದು ತಿಳಿದು, ಭಯ ಭ್ರಾಂತನಾದನು. ಶಾಲಾರಕ್ಷಕರು ಕುಪಿತರಾಗಿ ಮೇಲೇರಿ ಬರುವುದನ್ನು ಕಂಡು ರಾಮಕೃಷ್ಣರು ಬಿಲ್ಲಿನ ತುಂಡುಗಳಿಂದ ಅವರನ್ನೆಲ್ಲ ತುಂಡರಿಸಿ, ಆಗ ಕಂಸ ಕಳಿಸಿದ ಸೈನ್ಯವನ್ನೂ ಸಂಹರಿಸಿ, ಎದುರಿಲ್ಲದೆ ಊರಲ್ಲಿ ಸಂಚರಿಸಿ, ಮತ್ತೆ ಶಿಬಿರವನ್ನು ಸೇರಿದರು.

ಆಗ ಸೂರ್ಯನು ಮುಳುಗಿದನು. ಪುರಜನರು ರಾಮಕೃಷ್ಣರ ವಿಜಯವೀರ್ಯಗಾಥೆಯನ್ನು ಪೊಗಳುತ್ತಾ ರಾತ್ರಿಯನ್ನು ಕಳೆದರು. 'ಅವರೀರ್ವರು ದೇವಶ್ರೇಷ್ಠರೇ ನಿಜ' ಎಂದು ತಿಳಿದು, ಕಂಸನ ಸಾವನ್ನು ಬೇಡುತ್ತಾ, ಪ್ರಾತಃಕಾಲವನ್ನು ನಿರೀಕ್ಷಿಸುತ್ತಿದ್ದರು. ಶ್ರೀಕೃಷ್ಣರಾಮರು ಕೈಕಾಲು ತೊಳೆದು, ಕ್ಷೀರಾನ್ನವನ್ನುಂಡು ಸುಖವಾಗಿ ಮಲಗಿದರು.

ಅಂದು ಕಂಸನಿಗೆ ಭಯದಿಂದ ನಿದ್ರೆಯೇ ಬರಲಿಲ್ಲ. ರಾಮ- ಗೋವಿಂದರು ವಿಜೃಂಭಿಸಿ, ಧನುವನ್ನು ಮುರಿದು, ಸೈನ್ಯವನ್ನು ತರಿದು, ವಿಕ್ರಮಿಸಿದ ವಿಷಯವನ್ನು ಕೇಳಿ, ವಿಷ ತಿಂದಂತೆ ನೊಂದು, 'ಶ್ರೀಕೃಷ್ಣಾ! ಬಂದ– ಬಂದ ಗೋವಿಂದ' ಎನ್ನುತ್ತಾ, ಚಡಪಡಿಸುತ್ತಿದ್ದನು. ಅವನು ಕಂಡ ಅಪಶಕುನಗಳು ಮೃತ್ಯುದೂತರಂತೆ ತೋರಿದವು. ಶರೀರದ ನೆರಳಿಗೆ ತಲೆಯೇ ಇಲ್ಲದುದನ್ನು, ಚಂದ್ರಾದಿಗಳು, ಮನೆದೀಪಗಳು ಎರಡೆರಡಾಗಿ ತೋರುವುದನ್ನು, ಅನುಭವಿಸಿ, ಕಂಸನು ವ್ಯಾಕುಲನಾಗಿ ಕಂಗೆಟ್ಟನು. ನೆರಳಲ್ಲಿ ಜರಡಿಯಲ್ಲಂತೆ ತೂಬುಗಳನ್ನು ಕಂಡನು.; ಅವನಿಗೆ ಪ್ರಾಣಘೋಷವು ಕೇಳಿಸದಾಯಿತು; ಗಿಡಗಳು ಉರಿದೆದ್ದಂತೆ ತೋರಿದವು; ಭೂಮಿಯಲ್ಲಿಟ್ಟ ಹೆಜ್ಜೆಯ ಗುರ್ತುಗಳೇ ಮೂಡಿ ತೋರದಾದವು. ಸ್ವಪ್ನದಲ್ಲಿ ಕಂಸನನ್ನು ಪ್ರೇತಗಳು ಅಪ್ಪಿದವು. ಅವನು ಕತ್ತೆಯನ್ನೇರಿ ಪೋದಂತೆಯು, ತಾವರೆಯ ನಾಳವನ್ನು ತಿಂದಂತೆ, ಚಕ್ರರಕ್ತ ಕಣಗಿಲಹಾರವನ್ನಿಟ್ಟಂತೆ, ಎಣ್ಣೆಯನ್ನು ಮೈಯಲ್ಲಿ ಬಳಿದುಕೊಂಡಂತೆ, ದಿಗಂಬರನಾದಂತೆ, ಸ್ವಪ್ನಗಳನ್ನು ನೋಡಿ ಮರಣಭಯದಿಂದ ದಿಕ್ಕೆಟ್ಟು, ಚಿಂತಾಕ್ರಾಂತನಾಗಿ, ಆಯುಶ್ಶೇಷವಾದ ಆ ರಾತ್ರಿಯನ್ನು ಭಯದಿಂದ ಕಳೆದನು. ಮರುದಿನ ಬೆಳಗಾಗಲು, ಕಂಸನು, ಇಲ್ಲದ ಉತ್ಸಾಹವನ್ನು ತಂದುಕೊಂಡು, ಮಲ್ಲರಂಗವನ್ನು ಸಜ್ಜಾಗಿರಿಸಿದನು. ಸೇವಕರು ಕೊಂಬುಕಹಳೆಯನ್ನೂದಿದರು; ಭೇರಿದುಂದುಭಿಗಳನ್ನು ಬಾರಿಸಿದರು. ಪತಾಕೆಗಳಿಂದ, ವಸ್ತ್ರಖಂಡಗಳಿಂದ, ತೋರಣಗಳಿಂದ ಅಲಂಕೃತವಾದ ರಂಗಸ್ಥಲದಲ್ಲಿ, ಪೌರರು, ಹಳ್ಳಿಗರು ನಿಬಿಡವಾಗಿ ಬಂದು ಕೂತರು. ಬ್ರಾಹ್ಮಣ ಕ್ಷತ್ರಿಯರನ್ನು ಮುಂದೆ ಮಾಡಿ, ಇತರರೆಲ್ಲ ಸರಿಯಾದ ಸ್ಥಾನಗಳನ್ನರಿತು ಕುಳಿತಿದ್ದರು.

ಕಂಸನಾಗ ತನ್ನ ಮಂತ್ರಿಗಳಿಂದ ಕೂಡಿಬಂದು, ರಾಜಮಂಚವನ್ನಲಂಕರಿಸಿದನು. ಅವನನ್ನು ಸುತ್ತುಗಟ್ಟಿ ಮಂಡಲೇಶ್ವರರು ಕೂತಿದ್ದರು. ಕಂಸನ ಹೃದಯವು ಭಯದಿಂದ ನಡುಗಿ ಬಡಿಯುತ್ತಿತ್ತು. ಮಲ್ಲರ ತಾಲಶಬ್ದಗಳು, ಭೇರೀಭಾಂಕಾರಗಳು ಆಕಾಶವನ್ನು ಮುಟ್ಟುತ್ತಿದ್ದವು. ಮಲ್ಲರು ತಮ್ಮ ಉಪಾಧ್ಯಾಯರ ಹಿಂದೆ ರಂಗಮಧ್ಯದಲ್ಲಿ ನಿಂತು ಷಡ್ಡು ಹೊಡೆಯುತ್ತಿದ್ದರು. ಮನೋಹರ ವೀರವಾದ್ಯಗಳಿಂದ ಮೈತುಂಬಿದಂತಾಗಿ ಚಾಣೂರಮುಷ್ಟಿಕರು ಶಲ-ತೋಶಲರು ಕೂಟ-ಪ್ರಕೂಟರು ಕೃಷ್ಣಾಗ್ರಜ ಕೃಷ್ಣಾಗಮನವನ್ನು ಕಾದಿದ್ದರು. ನಂದನೇ ಮೊದಲಾದ ಗೋಪಾಲಕರು, ತಾವು ತಂದ ಕಾಪ್ಪಕಾಣಿಕೆಗಳನ್ನು ಕಂಸನಿಗೆ ಒಪ್ಪಿಸಿ ಒಂದೆಡೆ ಮಂಚದಲ್ಲಿ ಕೂತು ನೋಡುತ್ತಿದ್ದರು.

## ೪೧. ಕುವಲಯಾಪೀಡ ವಧೆ

ಶ್ರೀಶುಕನು ಹೇಳಿದನು–

ಮಂಗಲದೇವತಾರಮಣನಾದ ಶ್ರೀಕೃಷ್ಣನೂ ಬಲರಾಮನೂ ಶುಚಿರ್ಭೂತರಾಗಿ, ಕಾರ್ಯಗಳನ್ನು ಮುಗಿಸಿ, ದುಂದುಭಿಘೋಷವನ್ನಾಲಿಸಿ, ರಂಗಮಂಟಪವನ್ನು ಸಮೀಪಿಸಿದರು. ಅಲ್ಲಿ ದ್ವಾರದಲ್ಲಿರುವ ಗಜವನ್ನೂ, ಅದನ್ನು ತಮ್ಮ ಮೇಲೆ ಬಿಡುವ ಮಾವಟಿಗನನ್ನೂ ನೋಡಿ, ನಡುಗಟ್ಟಿ ನಿಂತರು. ಮುಖದಲ್ಲಿ ಬಾಗುವ ಮುಂಗುರುಳನ್ನು ದೂರ ಮಾಡಿ, ಶ್ರೀಕೃಷ್ಣನು ಮೇಘದಂತೆ ಗುಡುಗಿ, ಇಂತೆಂದನು-

ಅಂಬಷ್ಟ! ಎಲವೋ! ಬಿಡು ಮಾರ್ಗವನ್ನು, ಇಲ್ಲದಿರೆ ನಿನ್ನನ್ನೂ ನಿನ್ನಾನೆಯನ್ನೂ ಈಗಲೇ ಯಮಮಂದಿರಕ್ಕೆ ಕಳುಹುವೆನು.

ಆ ಮಾತನ್ನು ಕೇಳಿ ಮಾವಟಿಗನು ಕೆರಳಿ, ಹೆಂಡ ಕುಡಿದು ಮದವೇರಿದ ಕುವಲಯಾ ಪೀಡವನ್ನು ಕೃಷ್ಣನ ಮೇಲೆ ಹೊಡೆದನು. ಕಾಲಾಂತಕ ಯಮನಂತೆ ಕಡುಭೀಕರವಾದ ಆನೆಯು ಓಡಿಬಂದು ಕೃಷ್ಣನನ್ನು ಹಿಡಿದುಕೊಂಡಿತು. ಆಗ ಶ್ರೀಕೃಷ್ಣನು ತಪ್ಪಿಸಿಕೊಂಡು, ಅದನ್ನು ಮುಷ್ಟಿ ಯಿಂದ ಗುದ್ದಿ, ಪಾದಗಳ ಕೆಳಗೆ ಅಡಗಿ ನಿಂತನು. ಆನೆಯು ಮೂಸಿ, ಕೃಷ್ಣನನ್ನು ಹಿಡಿಯಲೋ ಸುಗ, ಸೊಂಡಿಲನ್ನು ಬೀಸಿತು. ಕೃಷ್ಣನು ಪುನಃ ತಪ್ಪಿಸಿಕೊಂಡು ಹೊರಗೆ ಬಂದು ಬಾಲವನ್ನು ಹಿಡಿದು, ಕರುವಿನನ್ನಂತೆ, ಆನೆಯನ್ನು ಗಿರಗಿರ ತಿರುಗಿಸಿ, ನೂರು ಧನುಸ್ಸಿನ ದೂರ ದೂಡಿದನು. ಹಾವನ್ನು ಹಿಡಿದಾಡುವ ಗರುಡನಂತೆ, ಕೃಷ್ಣನು ಆನೆಯನ್ನು ತಿರುಗಿಸಿ, ಒಗೆದಾಡಿ, ಮುಂದೆ ಬಂದು, ಕೈಯಿಂದ ಗುದ್ದಿ, ಅದು ಸಿಟ್ಟಿನಿಂದ ಹಿಡಿಯಲು ಬಂದಾಗ, ಓಡಿಹೋದನು. ಓಡುತ್ತಾ ಕೆಳಗೆ ಬಿದ್ದಂತೆ ಮಾಡಲು, ಕುವಲಯಾ ಪೀಡವು ಅವನನ್ನು ಕೋರೆಗಳಿಂದ ಚುಚ್ಚಿ, ನೆಲದಲ್ಲಿಟ್ಟು ತುಳಿದುಬಿಡಿಬೇಕೆಂದು ರಭಸದಿಂದ ಬಂದಿತು. ಆದರೆ ಅದು ದಂತಗಳಿಂದ ತಿವಿದಾಗ, ಶ್ರೀಕೃಷ್ಣನು ಎದ್ದು ತಪ್ಪಿಸಿಕೊಳ್ಳಲು, ಸಿಟ್ಟಿನಿಂದ ಘೀಂಕರಿಸಿ, ಆನೆಯು ಕೃಷ್ಣನನ್ನು ಬೆನ್ನಟ್ಟಿತು. ಅದರ ಶುಂಡಾದಂಡವನ್ನು ಹಿಡಿದೆಳೆದು ಕೃಷ್ಣನು, ಅದನ್ನು ನೆಲಕ್ಕುರುಳಿಸಿ, ಮೇಲೇರಿ ಕೂತು, ಅದರ ದಂತವನ್ನು ಕಿತ್ತಿ, ಮಾವಟಿಗನನ್ನು ಕೊಂದನು; ಸತ್ತುಬಿದ್ದ ಗಜದ ಹತ್ತಿರ ಸಿಂಹಗಳಂತೆ ನಿಂತ ರಾಮಕೃಷ್ಣರು ಭುಜದಲ್ಲಿಟ್ಟ ದಂತಗಳಿಂದಲು, ಬೆವರಿಟ್ಟ ಮುಖಕಮಲಗಳಿಂದಲು ವಿರಾಜಮಾನರಾದರು.

ದಂತಹಸ್ತರಾಗಿ ರಾಮಕೃಷ್ಣರು, ಕೆಲವರು ಗೋಪರಿಂದ ಕೂಡಿ, ರಂಗವನ್ನು ಪ್ರವೇಶಿಸಿದರು. ಆಗ ಅಣ್ಣನಿಂದ ಕೂಡಿ ರಂಗದ್ವಾರದಿ ಬಂದು ನಿಂತ ಗೋವಿಂದನನ್ನು ನೋಡಿ ತಮ್ಮ ಸ್ವಭಾವಕ್ಕೆ ತಕ್ಕಂತೆ ತಿಳಿದ ಜನರ ಭಾಷೆಯನ್ನು ಕೇಳು.

ಮಲ್ಲರಿಗೆ ಸಿಡಿಲ ತುಣುಕಿನಂತೆಯು, ಸಾಮಾನ್ಯ ಮನುಜರಿಗೆ ರಾಜಕುಮಾರನಂತೆಯು, ಸ್ತ್ರೀಜನಗಳಿಗೆ ಶರೀರವನ್ನು ಪೊತ್ತು ನಿಂತ ಮನ್ಮಥನಂತೆಯು, ಗೋಪಾಲಕರಿಗೆ ತಮ್ಮ ಕೃಷ್ಣ ನಂತೆಯು, ದುಷ್ಟರಾಜರಿಗೆ ಶಾಸಕನಾಗಿಯು, ಯಶೋದಾನಂದರಿಗೆ ಕೂಸಾಗಿಯು, ಭೋಜ ರಾಜನಾದ ಕಂಸನಿಗೆ ವಿಧಿಯು ಕಳಿಸಿದ ಮೃತ್ಯುವಿನಂತೆಯು, ಕಂಡ ಕೃಷ್ಣನು ಪರಮ ಯೋಗಿ ವರರಿಗೆ ಪರತತ್ವನಾಗಿ ಕಾಣಿಸಿದನು.

ಕುವಲಯಾಪೀಡವು ಹತ್ತು ಸಾವಿರ ಆನೆಗಳ ಬಲವುಳ್ಳದ್ದಾಗಿತ್ತು; ಅಂತಹ ಆನೆಯನ್ನು ಕೃಷ್ಣನು ಅನಾಯಾಸವಾಗಿ ಕೊಂದನೆಂದು ಕೇಳಿ, ಕಂಸನು ಎಷ್ಟು ಧೈರ್ಯವಂತನಾದರೂ ಎದಗುಂದಿ, ಚಿಂತಿಸಿದನು ರಾಮಕೃಷ್ಣರು ದುರ್ಜಯರೇ ಸರಿ, ಎಂದು ಮನಗಂಡನು. ವಿಶಾಲ ಭುಜಮಧ್ಯದಲ್ಲಿಟ್ಟ ಪುಷ್ಪಹಾರಾಭರಣಗಳಿಂದ ಶೋಭಿಸುವ ರಾಮಕೃಷ್ಣರು ನಟವರರಂತೆ ನೋಡುವ ಸಭಿಕರ ಮನವನ್ನು ಸೆಳೆದು ಅವರನ್ನು ಚಿತ್ರಪ್ರತಿಮೆಗಳಂತೆ ನಿಶ್ಚಲಗೊಳಿಸಿದರು. ಆನಂದದಿಂದ ನಯನಪಾತ್ರೆಗಳಲ್ಲಿ ನಂದನಂದನನ ಸೌಂದರ್ಯರಸವನ್ನು ತುಂಬಿ. ಕುಡಿದು, ತಣಿಯದ ಸಭಾಜನರು ಆಶ್ಚರ್ಯರಸಭಾಜನರಾದರು- ಕಣ್ಣಿಂದ ಕುಡಿದುಬಿಡುವರೋ, ನಾಲಿಗೆಯಿಂದ ರುಚಿಸುವರೋ, ಮೂಗಿನಿಂದ ಮೂಸಿ ಸುಖಿಸುವರೋ ಕೈಗಳಿಂದ ಕೃಷ್ಣರಾಮ ರರನ್ನು ಅಪ್ಪಿ ಮುದ್ದಾಡುವರೋ- ಎಂಬಂತೆ ವಿವಿಧ ವಿಕಾರ ವಿವಶರಾಗಿ, ಅಲ್ಲಿ ನೆರೆದವರು

ತಾವು ಕೇಳಿದ್ದನ್ನು ಮೀರಿದ ಸೊಬಗಿನ ರೂಪವನ್ನು ಕಣ್ಣಾರ ಕಂಡು, ಶ್ರೀಕೃಷ್ಣನ ಕಲ್ಯಾಣಗುಣಗಳನ್ನು ಸ್ಮರಿಸಿ, ಪರಸ್ಪರವಾಗಿ ಇಂತು ಮಾತಾಡಿದರು-

ಈ ಕೃಷ್ಣನು ವಸುದೇವನ ಮನೆಯಲ್ಲಿ ಪುಟ್ಟಿದ ಮಾಧವನಂತೆ! ಶೇಷನಂತೆ ಈ ಬಲರಾಮನು! ದೇವಕಿಯಲ್ಲಿ ಪುಟ್ಟಿ, ಗೋಕುಲದ ಯಶೋದೆಯಲ್ಲಿ ಬೆಳೆದು, ಪೂತನಾತೃಣಾವರ್ತ ಶಕಟ ಧೇನುಕಾರಿಷ್ಟ ಕೇಶಿ ಶಂಖಚೂಡಾದಿ ದಾನವರನ್ನು ಮಡುಹಿದ ಶೂರನಂತೆ ಈ ಕೃಷ್ಣ! ಅರ್ಜುನವೃಕ್ಷಗಳನ್ನು ಮುರಿದು, ಕಾಳಿಯನನ್ನು ಯಮುನಾಹ್ರದದಿಂದ ಹೊರದೂಡಿ, ದಾವಾಗ್ನಿಯನ್ನು ನುಂಗಿ, ಗೋವರ್ಧನಗಿರಿಯ ಅಡಿಯಲ್ಲಿಟ್ಟು ಗೋಕುಲವನ್ನು ಇಂದ್ರಕೋಪದಿಂದ ಕಾಪಾಡಿ, ಸರ್ವವಿಪತ್ತುಗಳಿಂದ ಪಾರುಮಾಡಲು ವಿಷ್ಣುವಲ್ಲದೆ ಮತ್ತೊಬ್ಬನಿಂದಾಗುವುದೇ? ನಿತ್ಯಪ್ರಮೋದಭರಿತವು ಮಂದಹಾಸಸುಂದರವು ಆದ ಶ್ರೀಕೃಷ್ಣನ ಮುಖವನ್ನು ನೋಡಿದ ಕೂಡಲೇ ಗೋಪಜನರ ಸಾಂಸಾರಿಕ ತಾಪವೆಲ್ಲವೂ ದೂರವಾಗಿ ಆನಂದವು ಸೂಸಿಬಂದುದೇನಾಶ್ಚರ್ಯವು? ಇವನಿಂದ ಯದುವಂಶದ ಕೀರ್ತಿ ಚಂದ್ರಿಕೆಯು ದಿಗಂತಗಳಲ್ಲಿ ಹರಡಿತು. ಇವನಿಂದ ಯಾದವರು ಶ್ರೀಕಾಂತಿ ವೈಭವ ಯಶೋಬಲಗಳನ್ನು ತುಂಬಿ ಪಡೆದರು.

ಈ ಬಲರಾಮನು ಎಷ್ಟು ಸುಂದರನಾಗಿರುವನು! ಆಹಾ! ಈ ಕಮಲಲೋಚನನು ಪ್ರಲಂಬಧೇನುಕಾದಿಗಳನ್ನು ಕೊಂದು ತನ್ನವರನ್ನು ಪೊರೆದನಂತೆ.

ಆಗ ಕೊಂಬು ಕಹಳೆಗಳು ಮೊಳಗಿದ ಶಬ್ದವನ್ನು ಕೇಳಿ, ಚಾಣೂರನು ರಾಮಕೃಷ್ಣರಿಗಿಂತೆಂದನು-

ಎಲವೋ ನಂದನಂದನ; ಎಲವೋ ರಾಮ! ನೀವು ಬಹು ಪರಾಕ್ರಮಿಗಳೆಂದು ಕೇಳಿರುವೆವು. ನಿಮಗೆ ಕುಸ್ತಿಯುದ್ಧದಲ್ಲಿರುವ ಬಿರುದನ್ನು ಕೇಳಿ, ನಮ್ಮ ರಾಜನು ನೋಡಿ ಸಂತೋಷಿಸಬೇಕೆಂದೇ ನಿಮ್ಮನ್ನು ಕರೆಕಳಿಸಿರುವನು. ಬನ್ನಿ! ರಾಜನಿಗೆ ಪ್ರಿಯವಾದ ಕಾರ್ಯವನ್ನು ಮಾಡೋಣ. ಅದರಿಂದ ಎಲ್ಲರಿಗೂ ಶ್ರೇಯಸ್ಸಾಗುವುದು. ರಾಜನನ್ನು ತ್ರಿಕರಣಶುದ್ಧರಾಗಿ ಸೇವಿಸಿಗವರಿಗೆ ಶ್ರೇಯವು, ಸೇವಿಸದವರಿಗೆ ನಾಶವು ಸಿದ್ಧವಾಗಿದೆ. ವನದಲ್ಲಿ ಪಶುಪಾಲಕರಾದ ನೀವು ಕುಸ್ತಿಯಲ್ಲಿ ನಿಪುಣರೆಂದು ಹೇಳಬೇಕೇ? ಸರ್ವಭೂತಪ್ರಧಾನನಾದ ರಾಜನಿಗೆ ಪ್ರಿಯವನ್ನು ಮಾಡಲು ನಿಂತಿರುವ ನಿಮ್ಮಿಂದ ಕುಸ್ತಿ ಆಡಿರಿ.

ಆ ವಚನವನ್ನಾಲಿಸಿ ಗೋಪಾಲನು ದೇಶಕಾಲೋಚಿತವಾಗಿ ಆಲೋಚಿಸಿ, ಇಂತೆಂದನು- 'ಸರಿಯೇ! ಆಗಲಿ! ನೀವು ಭೋಜನರಾಜನ ಪ್ರಜೆ ಆದಂತೆಯೇ ನಾವೂ ವನಚರರಾದರೂ ಅವನ ಪ್ರಜೆಗಳೇ ನಿಜ, ಅವನಿಗೆ ಪ್ರಿಯವನ್ನು ಮಾಡಲೆಂದೇ ಬಂದಿರುವೆವು. ವನದಲ್ಲಿ ಬಾಲರಿಂದ ಕೂಡಿ ಆಡಿದ ಮಾತ್ರದಿಂದ ನಿಮ್ಮಂತಹ ಪ್ರೌಢಮಲ್ಲರಿಂದ ಮಲ್ಲಯುದ್ಧವನ್ನಾಡ ಬಲ್ಲವೇ? ಬೇಡ, ಅದು ಅಧರ್ಮವೆನಿಸಿ, ಸಭಾಧರ್ಮಕ್ಕೆ ಭಂಗ ಬಂದೀತು' ಎಂದು ಗೋವಿಂದನಿಗೆ ಚಾಣೂರನು 'ಕೃಷ್ಣಾ! ನೀನು ಬಾಲನಲ್ಲ, ನಿರ್ಬಲನೂ ಅಲ್ಲ, ಸಾವಿರ ಆನೆಗಳ ಬಲವುಳ್ಳ ಕುವಲಯಾಪೀಡವನ್ನು ಲೀಲಾಜಾಲವಾಗಿ ಕೊಂದದ್ದನ್ನು ನೋಡಿರುವೆವು. ಆದ್ದರಿಂದ ಬಲವಂತರಾದ ನಿಮ್ಮಿಂದ ಕುಸ್ತಿ ಆಡುವ ನಮಗೆ ಅಧರ್ಮದ ಭಯವಿಲ್ಲ. ಬಾ! ಬಾ! ಮುಷ್ಟಿಕನು ಬಲರಾಮನೀಂದಲು, ನಾನು ನಿನ್ನಿಂದನು ಕುಸ್ತಿ ಆಡುವೆವು' ಎಂದು ಭುಜವನ್ನಪ್ಪಳಿಸಿದನು.

## ೪೨. ಮಲ್ಲಸಂಹಾರ-ಕಂಸವಧೆ

ಶ್ರೀಶುಕನು ಹೇಳಿದನು-

ತನ್ನ ಸಂಕಲ್ಪಾನುಸಾರವಾಗಿಯೇ ಯುದ್ಧಕ್ಕೆ ನಿಂತ ಚಾಣೂರನನ್ನು ಕೃಷ್ಣನೆದುರಿಸಿ ನಿಂತನು. ಬಲರಾಮನು ಮುಷ್ಟಿಕನಿಂದ ಕಾದಾಡಿದನು. ಕೈಗಳಿಂದ ಕೈಗಳನ್ನು ಹಿಡಿದೆಳೆದು, ಸೆಳೆದಾಡಿ, ಪಾದಗಳಿಂದ ಘಟ್ಟಿಸಿ, ಸುತ್ತಲೂ ತಿರುಗುತ್ತಾ, ನಡುವಿನಲ್ಲಿ ಹಿಡಿದು, ಕೆಳಕ್ಕೆ ಉರುಳಿಸಿ, ಎತ್ತಿತೋರಿ, ಕುಸ್ತಿಯನ್ನಾಡುವ ಬಾಲರನ್ನು ಮಲ್ಲರನ್ನು ನೋಡಿ, ತಡೆಯಲಾರದೆ, ಕೂಡಿದ ಮಡದಿಯರು, ಕಣ್ಣೀರಿಟ್ಟು ಗೋಳಾಡಿದರು-

ಅಯ್ಯೋ! ಎಷ್ಟು ಅನ್ಯಾಯವಿದು! ಬಾಲರಾದ ರಾಮಕೃಷ್ಣರಿಂದ ಸೆಣಸುವ ಚಾಣೂರ ಮುಷ್ಟಿಕರನ್ನು ನಿಲ್ಲಿಸುವ ನ್ಯಾಯಪರರಿಲ್ಲಲ್ಲವೇ? ರಾಜನೂ ಸುಮ್ಮನೆ ಕೂತಿರುವನಲ್ಲ! ಏನು ಗತಿ! ವಜ್ರಸಾರರಾದ ಮಲ್ಲರೆಲ್ಲಿ! ಸುಕುಮಾರ ಗೋಪಬಾಲಕರೆಲ್ಲಿ! ಇಂತಹ ಅನ್ಯಾಯ, ಯುದ್ಧದ ಪಾಪವು ಸಭೆಯಲ್ಲಿ ಸುಮ್ಮನೆ ಕೂತಿರುವವರಿಗೆಲ್ಲ ಬಡಿಯದಿರುವುದೇ? ಅಧರ್ಮವು ನಡೆಯುವಲ್ಲಿ ನಿಲ್ಲದೆ, ಎದ್ದು ಹೋಗಬೇಕೆಂದು ಮನುರಾಜನೇ ಧರ್ಮವನ್ನು ನಿರೂಪಿಸಿರುವನು. ಬುದ್ಧಿವಂತನು ದುಷ್ಟಸಭೆಗೆ ಬರಲೇಬಾರದು. ಏಕೆಂದರೆ ಮಾತಾಡದಿದ್ದರೆ ಪಾಪ. ಎದುರಾಗಿ ಮಾತಾಡಿದರೆ ವಿರೋಧ!

ಸಖಿಯರೇ! ಕೃಷ್ಣನ ಮುಖಕಮಲದಿಂದ ಜಾರುವ ಬೆವರನೀರನ್ನು ನೋಡಿರೇ! ರಾಮನ ಮುಖವೆಷ್ಟು ಕೆಂಪಾಗಿದೆ! ಮುಷ್ಟಿಕನನ್ನು ಮುಷ್ಟಿಗಳಿಂದ ಗುದ್ದಿ, ಸಿಟ್ಟಿನಿಂದ ನೋಡುವ ರಾಮನ ಮುಖದ ಸೊಬಗನ್ನೆಷ್ಟು ವರ್ಣಿಸಿದರೂ ಸಾಲದಲ್ಲವೇ?

ಈ ಪುರಾಣಪುರುಷೋತ್ತಮನು ಅವತರಿಸಿ, ಆಕಳುಗಳನ್ನು ಮೇಯಿಸುತ್ತಾ, ಕೊಳಲನ್ನೂದುತ್ತಾ, ವನಚಿತ್ರಪುಷ್ಪಹಾರಗಳನ್ನು ಧರಿಸಿ, ಅಮರಾಸುರಸಿದ್ಧವಂದಿತ ಪದಾರವಿಂದಗಳಿಂದ ಸಂಚರಿಸಿದ ಗೋಕುಲವೇ ಧನ್ಯವು! ಯಮುನಾತಟವನಗಳೇ ಮಹಾಪುಣ್ಯ ದೇಶಗಳು! ಶೃಂಗಾರ ರಸವನ್ನೇ ಅಚ್ಚೊತ್ತಿ ಮಾಡಿದಂತಿರುವ ಶ್ರೀಕೃಷ್ಣನ ಲಾವಣ್ಯರಸವನ್ನು ಕಣ್ಣಲ್ಲಿ ತುಂಬಿ ಕುಡಿಯುವ ಗೋಪತರುಣಿಯರು ಪೂರ್ವದಲ್ಲಿ ಎಂತಹ ತಪವನ್ನು ಮಾಡಿದ್ದರೋ! ಏನು ದಾನ ಕೊಟ್ಟಿದ್ದರೋ! ಶ್ರೀದೇವಿಯ ರಮಣನ ಸರ್ವಸ್ವಾಮಿತ್ವ ಜ್ಞಾನವು ಅವರಿಗೆ ಸುಲಭವಾಗಿ ದೊರಕಲು ಅವರು ಮಾಡಿದ ವ್ರತವಾವುದೋ! ಹಾಲು ಕರೆಯುವಾಗ, ನೆಲ್ಲು ಕುಟ್ಟುವಾಗ, ಮೊಸರನ್ನು ಕಡೆಯುವಾಗ, ಮಕ್ಕಳಾಡಿಸುವಾಗ, ಅಕ್ಕರದಿ ನಲಿವಾಗ, ಸೆಗಣಿಯ ತಳಿಲನ್ನು ಚಲ್ಲುವಾಗ, ಬಿಕ್ಕುವಾಗ, ಆಕಳಿಸುವಾಗ, ಸದಾ ಸರ್ವಕಾಲವು ಭಕ್ತಿಪೂರ್ವಕವಾಗಿ ದೇವಕೀತನಯನ ನೆನೆದು, ಕಣ್ಣೀರಿಟ್ಟು, ಮಾತಾಡಲು ಬರದೆ, ಮೈಮರೆತು, ಮಾಡುವ ಕೆಲಸವನ್ನು ಬಿಟ್ಟು, ಮಾಧವನ ಸ್ಮರಣಾಮೃತಪಾನದಿಂದ ದಿನಗಳನ್ನು ಕಳೆವ ವ್ರಜನಾರಿಯರ ಪುಣ್ಯಕ್ಕೆ ಎಣೆಯುಂಟೇ? ಬೆಳಗಾಗಲು ಹೊರ ಹೊರಡುವ, ಹಾಗೂ ಸಾಯಂಕಾಲದಿ ಒಳಗೆ ಬರುವ ಗೋವಿಂದನು ವೇಣುನಾದವು, ಗೋವುಗಳ ಕಿಂಕಿಣೀನಾದ ಮಿಲತ್ಕಮನೀಯವಾಗಿ ಕೇಳಿಬರಲು, ಮನೆ ಮುಂದೆ ಬಂದು ನಿಂತು, ಶ್ರೀಹರಿಯ ದಯಕಟಾಕ್ಷ ಸುಮಧುರ ಮಂದಹಾಸ ಸಮಲಂಕೃತವಾದ ಮುಖಪದ್ಮವನ್ನು ನೋಡುವ ಗೋಕುಲ ರಮಣೀಯರ ಪುಣ್ಯವು ಅಗತ್ಯವಾದುದೇ ಸರಿ!

ಆಗ ಶ್ರೀಕೃಷ್ಣನು ಶತ್ರುಸಂಹಾರವನ್ನು ಮಾಡಲು ನಿಶ್ಚಯಿಸಿ ವಿಜೃಂಭಿಸಿದನು. ಭಗವಂತನ ವಜ್ರಪಾತ ನಿಷ್ಠುರವಾದ ಹಿಡಿಹೊಡೆತದಿಂದ ಚಾಣೂರನ ಮೈಮುರಿದು ಚೂರಾಯಿತು. ಅವನು ಸಿಡಿದೆದ್ದು ಶ್ರೀಕೃಷ್ಣನನ್ನು ಎದೆಯಲ್ಲಿ ಎರಡು ಮುಷ್ಟಿಗಳಿಂದ ಗುದ್ದಿದನು. ಶ್ರೀಕೃಷ್ಣನು, ಹಾರದಿಂದ ಹೊಡೆಯಲ್ಪಟ್ಟ ಮದಗಜದಂತೆ ಕದಲದೆ, ಅವನ ಮೇಲೆ ಹಾರಿ, ಹಿಡಿದು ಮೇಲಕ್ಕೆತ್ತಿ, ಗಿರಗಿರನೆ ತಿರುಗಿಸಿ, ನೆಲಕ್ಕಪ್ಪಳಿಸಿ, ಚಾಣೂರನನ್ನು ಕೊಂದನು. ಅಲಂಕಾರ ವಸ್ತ್ರ ಹಾರಗಳೆಲ್ಲವು ಕಡಲು, ಕೆಳಗೆ ಬಿದ್ದು ಚಾಣೂರನು ಮೃತನಾದನು. ಅಂತೆಯೇ ಬಲರಾಮನು ಬಿಡದೆ ಗುದ್ದಿ ಮುಷ್ಟಿಕನನ್ನೂ ಸಂಹರಿಸಿದನು. ಬಾಯಲ್ಲಿ ರಕ್ತವನ್ನು ಕಾರಿ, ಬೇರು ಕಡಿದ ಗಿಡದಂತೆ ಮುಷ್ಟಿಕನು ಬಿದ್ದು ಮೃತನಾದನು. ಕೂಟನು ಏರಿರಬರುವುದನ್ನು ಕಂಡು ಬಲರಾಮನು, ಎಡಗೈಯಿಂದ ಅವನನ್ನು ಗುದ್ದಿ, ಕೆಡಹಿದನು, ಶಲನನ್ನು ಕೃಷ್ಣನನ್ನು ಕೊಂದನು. ಮಿಕ್ಕ ಮಲ್ಲರು ಮಹಾಮಲ್ಲಭಂಗವನ್ನು ಕಂಡು, ಪ್ರಾಣಭಯದಿಂದ ಓಡಿಹೋದರು. ರಾಮಕೃಷ್ಣರು ಸ್ನೇಹಿತರಿಂದ ಕೂಡಿ, ಬಾರಿಸುವ ವಾದ್ಯಗಳಿಗನುಸಾರವಾಗಿ ಸಂತೋಷದಿಂದ ಕುಣಿದಾಡಿದರು. ಅವರ ಪರಾಕ್ರಮವನ್ನು ನೋಡಿ, ಕಂಸನನ್ನು ಬಿಟ್ಟು, ಮಿಕ್ಕವರೆಲ್ಲರು 'ಸಾಧು! ಬಳೀ!' ಎಂದು ಪೊಗಳಿ, ಆನಂದ ಪೊಂದಿದರು. ವಿಪ್ರರು ಆಶೀರ್ವದಿಸಿದರು.

ಇದನ್ನು ಕಂಡು, ಕೆಂಡವಾಗಿ ಕಂಸರಾಜನು ವಾದ್ಯವನ್ನು ನಿಲ್ಲಿಸಿ, ಇಂತು ಬೊಗಳಿದನು–

ಎಲವೋ! ಯಾರಲ್ಲಿ? ಈ ವಸುದೇವ ಸುತರನ್ನಿಲ್ಲಿಂದ ಹೊರದೂಡಿ! ಗೋಪಾಲಕರ ಆಸ್ತಿಯನ್ನು ಕೊಳ್ಳೆ ಹೊಡೆದು, ಅವರನ್ನೆಲ್ಲ ಸಂಹರಿಸಿರಿ! ದುಷ್ಟರಾದ ನಂದವಸುದೇವರನ್ನು ಕೊಲ್ಲಿ! ಪರಪಕ್ಷವನ್ನು ವಹಿಸಿರುವ ಉಗ್ರಸೇನನನ್ನೂ, ನಮ್ಮಪ್ಪನೆಂಬ ದಾಕ್ಷಿಣ್ಯವಿಲ್ಲದೆ ಕೊಂದುಬಿಡಿ!

ಆ ಮಾತನ್ನು ಕೇಳಿ, ಕೇಸರಗಳನ್ನು ಕೀಳಿ ಕೆರಳಿಸಿದ ಸಿಂಹದಂತೆ ಗರ್ಜಿಸಿ, ಹಾರಿ, ಶ್ರೀಕೃಷ್ಣನು, ರಾಜಮಂಚವನ್ನು ಮುತ್ತಿದನು. ಇಂತು ತನ್ನ ಹಂತಕನು ಬರುವುದನ್ನು ಕಂಡು, ಧೀರನಾದ ಕಂಸನು, ಎದ್ದು ಕೈಗಳಲ್ಲಿ ಖಡ್ಗವನ್ನೂ ಗುರಾಣಿಯನ್ನೂ ಪಿಡಿದು, ಕೃಷ್ಣನನ್ನು ಎದುರಿಸಿದನು. ಗಿಡಗದಂತೆ ಕಡುವೇಗದಿಂದ ತಿರುಗುವ ಕಂಸನನ್ನು ದುಸ್ಸಹ ಪರಾಕ್ರಮನಾದ ಶ್ರೀಹರಿಯು, ಗರುಡನು ಹಾವಿನನ್ನಂತೆ, ಹಿಡಿದು, ಕೂದಲಿನಿಂದ ಕೆಳಗೆ ಸೆಳೆತಂದನು. ಕಂಸನ ಕಿರೀಟ ಹಾರಾದಿಗಳು ಕೆಳಗುರುಳಿದವು. ಅವನು ಭಯದಿಂದ ಭ್ರಾಂತನಾಗಿರಲು, ಸಕಲ ಬ್ರಹ್ಮಾಂಡಾ ಧಾರನಾದ ಶ್ರೀಧರನು ಅವನ ಎದೆಯ ಮೇಲೆ ಕೂತು, ಗುದ್ದಿ, ಕೊಂದನು. ಜಗತ್ತ್ರಯನಿವಾಸ ನಾದ ಶ್ರೀನಿವಾಸನು ಸಿಂಹನು ಆನೆಯನ್ನಂತೆ, ಕಂಸನನ್ನು ಸಂಹರಿಸುವ ವಿಕ್ರಮ ವಿಹಾರವನ್ನು ನೋಡಿ ಸಭಿಕರು, 'ಹಾ! ಹಾ!' ಎಂದು ವಿವಶರಾಗಿ ಉಚ್ಚರಿಸಿದರು.

ಕಂಸನು ನಿತ್ಯವೂ ಭಯದಿಂದ ಕೃಷ್ಣ! ಕೃಷ್ಣ! ಎಂದು, ಅನ್ನಪಾನಾದಿ ಸಮಯದಲ್ಲಿಯು, ಸ್ನಾನ ವಿಹಾರಾದಿಗಳಲ್ಲಿಯು, ನಿದ್ರಾಸ್ವಪ್ನಗಳಲ್ಲಿಯು, ಉಸಿರಾಡುವಾಗಲೂ ಕೂಡ ಬಿಡದೆ ಶ್ರೀಹರಿಯನ್ನು ನೆನೆದು, ತನ್ನಿಮಿತ್ತಭಕ್ತಿಯಿಂದ ಕಂಸನಲ್ಲಿದ್ದ ಭೃಗುವು, ಉದ್ಧೃತನಾಗಲು, ಕಾಲನೇಮಿಯಾದ ತಾನು ಚಕ್ರಾಯುಧನಲ್ಲಿ ದ್ವೇಷವನ್ನು ಮಾಡಿ ಅಂಧಂತಮವನ್ನೈದಿದರು. ಭಕ್ತನಾದ ಭೃಗುವಿಗೆ ಶ್ರೀಹರಿಯು ತನ್ನ ಲೋಕವನ್ನೇ ಕೊಟ್ಟನು.

ಕಂಸನ ವಧೆಯಿಂದ ಸಿಟ್ಟಾಗಿ, ಅವನ ತಮ್ಮಂದಿರು ಎಂಟು ಮಂದಿ, ಕಂಕ ನ್ಯಗ್ರೋಧ ಮುಂತಾದವರು, ಮೇಲೇರಿ ಬರುವುದನ್ನು ಕಂಡು, ಬಲರಾಮನು ಪರಿಘದಿಂದ ಅವರನ್ನು,

ಸಿಂಹವು ಕುರಿಗಳನ್ನಂತೆ, ಕೊಂದನು. ದುಷ್ಟಸಂಹಾರದಿಂದ ಹರ್ಷಿತರಾದ ದೇವತೆಗಳು ಆಕಾಶದಲ್ಲಿ ನಿಂತು ಪುಷ್ಪವೃಷ್ಟಿಯನ್ನುಗರೆದರು. ದೇವದುಂದುಭಿಗಳು ಮೊಳಗಿದವು. ಬ್ರಹ್ಮೇಶ ಶಕ್ರ ರವಿ ಧರ್ಮ ಶಶಾಂಕ ಪೂರ್ವಗೀರ್ವಾಣವರರು ವೇದ ಸೂಕ್ತಗಳಿಂದ ಶ್ರೀಶನನ್ನು ಸ್ತುತಿಸಿದರು. ಅಪ್ಸರೆಯರಾನಂದದಿಂದ ಕುಣಿದಾಡಲು, ಗಂಧರ್ವರು ಪಾಡಿದರು.

ಕಂಸಮರಣ ದುಃಖಿತರಾದ ಅವನ ಪತ್ನಿಯರಾಗ ಸಭೆಯಲ್ಲಿ ಬಿದ್ದಿದ್ದ ಕಂಸನನ್ನು ನೋಡಿ, ಹಣೆ ಬಡಿದುಕೊಂಡು, ಗಟ್ಟಿಯಾಗಿ ಅತ್ತರು. ಕಂಸಾಗಿ ಸೋದರ ಸತಿಯರು ಕೂಡ ತಮ್ಮ ತಮ್ಮ ಪತಿಗಳನ್ನಪ್ಪಿ ಗೋಳಾಡಿದರು.

'ನಾಥ! ಪ್ರಿಯಕರ! ಕರುಣೆಯನ್ನು ಬಿಟ್ಟು ನಮ್ಮನ್ನು ಅನಾಥರನ್ನಾಗಿ ಮಾಡಿದೆಯಲ್ಲ! ನಿನ್ನ ಸಾವಿನಿಂದ ನಾವೂ ಸತ್ತಂತೆ ಸರಿ. ಮನೆಯೇ ಹಾಳಾಯಿತು. ನಮಗಿನ್ನೇನು ಗತಿ?' ನಮ್ಮಂತೆ ಈ ನಗರವೂ ಪತಿವಿಹೀನವಾಗಿ ನಿರುತ್ಸವವು, ನಿರಾನಂದವೂ ಆಗಿದೆ. ನಿರಪರಾಧಿ ಜನರನ್ನು ಹಿಂಸಿಸಿದ ಪಾಪದಿಂದ ನೀನೂ ಕೆಟ್ಟೆ; ನಾವೂ ವಿಧವೆಯರಾದೆವು. ಭೂತದ್ರೋಹಿಗಳಿಗೆ ಮಂಗಳವಾಗುವುದೇ? ಸರ್ವಜೀವರ ಸೃಷ್ಟಿ – ಸಂಹಾರಗಳಿಗೊಡೆಯನಾದ ಭಗವಂತನನ್ನು ತಿರಸ್ಕರಿಸಿ ದ್ರೋಹವನ್ನೆಸಗಿದವನಿಗೆ ಸುಖವಿಲ್ಲ– ಎಂದು ರೋದಿಸುವ ರಾಜರಮಣಿಯರನ್ನು ಸಮಾಧಾನಪಡಿಸಿ, ಮಾಡಬೇಕಾದ ಉತ್ತರಕಾರ್ಯಗಳನ್ನು ಶ್ರೀಕೃಷ್ಣನು ಮಾಡಿಸಿದನು.

ತಂದೆ ತಾಯಂದಿರನ್ನು ಬಂಧನದಿಂದ ಬಿಡಿಸಿ, ಶ್ರೀರಾಮಕೃಷ್ಣರು ಅವರಿಗೆ ಕಾಲಿಗೆರಗಿ ವಂದಿಸಿದರು. ದೇವಕೀ ವಸುದೇವರಾಗ ಶ್ರೀಕೃಷ್ಣರಾಮರು ಜಗದೀಶರೆಂಬುವ ದಿವ್ಯಜ್ಞಾನದಿಂದ ಯುಕ್ತರಾಗಿದ್ದುದರಿಂದ, ನಮಸ್ಕರಿಸಿದ ಮಕ್ಕಳನ್ನು ಎತ್ತಿ ಆಲಿಂಗಿಸಲಿಲ್ಲ ಮತ್ತು ಆಶೀರ್ವದಿಸಿ ಮಾತಾಡಲಿಲ್ಲ.

## ೪೩. ಕುಮಾರೋಪನಯನ – ಗುರುಕುಲವಾಸ

ಶ್ರೀಶುಕನು ಹೇಳಿದನು –

ತಂದೆಯು ತಾಯಿಯು ಭಗವಂತನೆಂದು ತನ್ನನ್ನರಿತು, ಮಗನೆಂದು ಮಾತಾಡಿಸದಿದ್ದುದನ್ನು ನೋಡಿ, ಶ್ರೀಕೃಷ್ಣನು ತನ್ನ ಬಂಧಕಶಕ್ತಿಯನ್ನು ಅವನ ಮೇಲೆ ಬೀರಿದನು. ತತ್ತ್ವಜ್ಞಾನವು ಬಹುಕಾಲ ನಿಲ್ಲಲಾಗದು. ಯೋಗ್ಯತೆ, ದೇಶಕಾಲಗಳನ್ನನುಸರಿಸಿ ಮನುಜ ಮಧ್ಯದಿ ಮನುಜನಂತೆ ವಿಹರಿಸಲು ಬಂದ ತನ್ನ ಜನಮೋಹಕ ಮಂದಹಾಸದಿಂದ ಅವರು ತನ್ನನ್ನು ಮಗನೆಂದು ತಿಳಿಯುವಂತೆ ಮಾಡುತ್ತಾ ಇಂತೆಂದನು-

ಅಂಬ! ತಾತ! ನಿತ್ಯವೂ ಕಷ್ಟಪರಂಪರೆಗಳನ್ನು ನೀವು ಅನುಭವಿಸುತ್ತಿರಲು, ನಾವು, ನಿಮ್ಮ ಮಕ್ಕಳೆನಿಸಿ – ನಿಮ್ಮಿಂದ ದೂರರಾಗಿ, ನಿಸ್ಸಹಾಯಕರಾಗಿದ್ದೆವಲ್ಲ! ನಮ್ಮ ಬಾಲ್ಯ ಪೌಗಂಡ ಕೈಶೋರಾವಸ್ಥೆಗಳಲ್ಲಿ ನಿಮ್ಮ ಆಸ್ಥೆಯನ್ನು ವಹಿಸುವ ಸದವಕಾಶವು ನಿರ್ಭಾಗ್ಯರಾದ ನಮಗೆ ಸಿಗಲೇ ಇಲ್ಲ. ನಿಮ್ಮಲ್ಲಿ ನೆಲಸಿ, ಲಾಲನೆಯನ್ನು ಪಡೆಯಲಿಲ್ಲ. ತಂದೆ ತಾಯಂದಿರ ಲಾಲನೆಯನ್ನು ಕಾಣದ ಮಕ್ಕಳಿಗೆ ಸುಖವೆಲ್ಲಿಯದು? ಈ ಸರ್ವಪುರುಷಾರ್ಥಸಾಧನವಾದ ದೇಹವನ್ನು ಕೊಟ್ಟು, ಪೋಷಿಸಿದ ತಂದೆ ತಾಯಂಗಿರ ಋಣವನ್ನು, ನೂರು ವರ್ಷ ಬಾಳಿ ಸೇವಿಸಿದರೂ

ತೀರಿಸಲಾಗುವುದೇ? ಸಮರ್ಥನಾಗಿಯೂ ಹಿರಿಯರನ್ನು ಧನದಿಂದಲೂ, ಶರೀರ ಶ್ರಮೆಯಿಂದಲೂ, ಸೇವಿಸಿ, ಸಂತೋಷಪಡಿಸಿದವನಿಗೆ ನರಕದಲ್ಲಿ ಯಮಭಟರು ಅವನ ಮಾಂಸವನ್ನೇ ಅವನಿಂದ ತಿನಿಸುವರು. ವೃದ್ಧರಾದ ಮಾತಾಪಿತೃಗಳನ್ನು, ಪತಿವ್ರತೆಯಾದ ಪತ್ನಿಯನ್ನು, ಚಿಕ್ಕವರಾದ ಮಕ್ಕಳನ್ನೂ, ಕಷ್ಟಪಡುತ್ತಿರುವ ವಿಪ್ರಗುರುಗಳನ್ನೂ ಪೋಷಿಸಿದವನು ಜೀವನ್ಮೃತನೇ ಸರಿ! ಕಂಸನಿಂದ ಹೆದರಿ ದೂರವಿದ್ದ ನಿಮ್ಮ ಕಷ್ಟವನ್ನು ಕಳೆಯದೆ, ನಿಮ್ಮ ಚಿಂತೆಯನ್ನು ಪರಿಹರಿಸದೆ, ನಿಮ್ಮನ್ನು ಸೇವಿಸದೆ, ಇದ್ದು ಕಾಲವನ್ನು ವ್ಯರ್ಥವಾಗಿ ಕಳೆದ ನಮ್ಮಿಬ್ಬರನ್ನು ಕ್ಷಮಿಸಿ! ಏನು ಮಾಡೋಣ? ಪರಾಧೀನರಾಗಿ, ಪರರ ಮನೆಯಲ್ಲಿ ಬೆಳೆಯುತ್ತಿದ್ದ ನಾವು ನಿರ್ಭಾಗ್ಯರೇ ಸರಿ!

ಎಂದು ಮಾಯಾಮನುಜರೂಪಿಯಾದ ಶ್ರೀಕೃಷ್ಣನಾಡಿದ ವಚನದಿಂದ ಮೋಹಿತರಾಗಿ, ದೇವಕೀ ವಸುದೇವರು 'ಕೃಷ್ಣಾ! ರಾಮ! ಬಾರೋ! ವತ್ಸ!' ಎಂದು ಕರೆದು, ಬಿಗಿದಪ್ಪಿ, ಮುದ್ದಾಡಿದರು. ಅವರ ಕಣ್ಣಲ್ಲಿ ಹರಿದುಬಂದ ನೀರವರಿಗಭಿಷೇಕವಾಯಿತು. ಆನಂದದಿಂದ ಕಂಠದ ಸೆರೆಬಿಗಿದು ಬಂದು, ಮಾತಾಡಲಾರದೆ ನಿಂತ ತಾಯಿತಂದೆಯರನ್ನು ಸಂತೈಸಿ, ಕೃಷ್ಣನು ಮಾತಾಮಹನಾದ ಉಗ್ರಸೇನನನ್ನೂ, ಮಗನಿಟ್ಟ ಸೆರೆಯಿಂದ ಬಿಡಿಸಿ, ಯಾದವರ ರಾಜ್ಯಕ್ಕೆ ಪಟ್ಟಗಟ್ಟಿದನು.

'ಮಹಾರಾಜ! ನಿಮ್ಮ ಪ್ರಜೆಯಾದ ನಮ್ಮನ್ನು ಆಜ್ಞಾಪಿಸು! ಯದುರಾಜನ ಶಾಪದಿಂದ ನಾವು ರಾಜ್ಯವಾಳಲು ಅರ್ಹರಲ್ಲವೆಂದು ಶಂಕೆಯನ್ನು ಬಿಡು! ನಾನು ನಿನ್ನ ಆಳಾಗಿ ಸೇವಿಸುತ್ತಿರಲು, ದೇವತೆಗಳು ಕೂಡ ಶಿರಬಾಗಿ ನಮಿಸಿ, ಕಾಣಿಕೆಗಳನ್ನು ಸಮರ್ಪಿಸುವರು! ಇತರ ಮನುಜಾಧಿಪರ ಪಾಡೇನು! ಎಂದು ಭಿನ್ನವಿಸಿ ಕೃಷ್ಣನು, ಉಗ್ರಸೇನನನ್ನು ಸಂತೋಷಗೊಳಿಸಿದನು.

ಕಂಸಭಯದಿಂದ ಊರುಬಿಟ್ಟು ಹೋಗಿದ್ದ ಯದು ವೃಷ್ಣಿ ಮಧು ದಾಶಾರ್ಹಾದಿ ಸ್ವಜನರನ್ನು ಕರೆಯಿಸಿ, ಕೃಷ್ಣನು, ಅವರನ್ನು ಸಮಾಧಾನಪಡಿಸಿ, ಅವರವರ ಮನೆಗಳನ್ನು ಸಂಪದವನ್ನು ಅವರಿಗೊಪ್ಪಿಸಿ, ನಿಲ್ಲಿಸಿದನು. ಕೃಷ್ಣರಾಮರ ದಿವ್ಯಾಶ್ರಮದಲ್ಲಿ ಅವರು ಸುಖವಾಗಿ ಬಾಳಿದರು. ಶ್ರೀಮುಕುಂದನ ಮಂದಹಾಸ ಸುಂದರ ವದನಾರವಿಂದ ಸಂದರ್ಶನದಿಂದ ವೃದ್ಧರು ಕೂಡ ಯುವಕರಂತಾದರು.

ಬಲರಾಮನು, ಶ್ರೀಕೃಷ್ಣನು ನಂದನನ್ನು ಆಲಿಂಗಿಸಿ ಅವನನ್ನು ನಂದವ್ರಜಕ್ಕೆ ಕಳುಹಿಸುತ್ತಾ, ಇಂತೆಂದರು –

ತಂದೆ! ನಮ್ಮನ್ನು ಅಕ್ಕರೆಯಿಂದ ಸಾಕಿ ಸಲಹಿದಿರಿ. ತಾಯಿ ತಂದೆಯರೂ ತೋರಲಾರದ ಪ್ರೀತಿಯನ್ನು ನಿಮ್ಮಿಂದ ನಾವು ಪಡೆದೆವು, ನಿಮ್ಮ ಸುಖವನ್ನೆಣಿಸದೆ ನಮ್ಮನ್ನು ಕಾಪಾಡಿದ ನಿಮ್ಮ ಋಣವನ್ನು ತೀರಿಸಲಾಗುವುದೇ! ಮಕ್ಕಳಂತೆ ಬೆಳೆಸಿದವರೇ ತಂದೆತಾಯಿಗಳು! ತಮ್ಮನ್ನೇ ತಾವು ರಕ್ಷಿಸಿಕೊಳ್ಳಲು ಶಿಶುಗಳು ಸಮರ್ಥರೇ? ಅಂತಹ ಬಾಲ್ಯದಲ್ಲಿ ನಮ್ಮನ್ನು ಪ್ರೇಮದಿಂದ ಕಾಪಾಡಿದ ನಿಮ್ಮನ್ನು ಅಗಲಿರುವುದೇ ಕಷ್ಟವೆನಿಸುತ್ತದೆ. ನಿಮಗೂ ಹಾಗೆಯೇ ಅನಿಸುವುದೆಂದು ನನಗೆ ಗೊತ್ತಿದೆ. ಬರುತ್ತೇವೆ ಒಂದು ದಿನ ನಿಮ್ಮನ್ನೆಲ್ಲ ಮತ್ತು ಬಂಧುಗಳನ್ನೂ ನೋಡುವುದಕ್ಕೆ. ಹೋಗಿ ಬನ್ನಿ!

ಇಂತು ನುಡಿದು, ನಂದನನ್ನು ಬಿಗಿದಪ್ಪಿ, ವಸ್ತ್ರಾಲಂಕಾರ ಧನಗಳನ್ನಿತ್ತು ಕಳುಹಲು, ಅವನು ಕೃಷ್ಣವಿರಹದಿಂದ ಮತಿಗೆಟ್ಟವನಂತಾಗಿ, ಕಣ್ಣೀರಿಡುತ್ತಾ, ಗೋಕುಲಕ್ಕೆಂದು ಪ್ರಯಾಣಮಾಡಿ

ದರು.

ಆಗ ವಸುದೇವನು ಮಕ್ಕಳೀರ್ವರಿಗೂ ಉಪನಯನವನ್ನು ಮಾಡಿದನು. ಬ್ರಾಹ್ಮಣರಿಗೆ ಭೂರಿ ದಕ್ಷಿಣೆಗಳನ್ನು ಕೊಟ್ಟು, ಗೋದಾನದಿಂದ ಸತ್ಕರಿಸಿದನು; ಕೃಷ್ಣರಾಮರು ಹುಟ್ಟಿದಾಗ ಸಂಕಲ್ಪಿಸಿದ ಆಯುತ ಗೋದಾನವನ್ನೂ ಕೊಟ್ಟನು; ಕಂಸನು ಅನ್ಯಾಯವಾಗಿ ತನ್ನಿಂದ ಅಪಹರಿಸಿದ್ದ, ಗೋಗಣವನ್ನು ಪೀತಾಂಬರದಿಂದ ಅಲಂಕರಿಸಿ, ಕರುಗಳಿಂದ ಕೂಡಿಸಿ, ವಿಪ್ರರಿಗಿತ್ತು, ಅವರ ಆಶೀರ್ವಾದವನ್ನು ಪಡೆದನು. ಸರ್ವವಿದ್ಯಾಪತಿಯಾದ ಕೃಷ್ಣನು, ಸರ್ವ ಮುನಿಕುಲ ವಲ್ಲಭನಾದ ಬಲರಾಮನು, ತಮ್ಮ ದಿವ್ಯಜ್ಞಾನವನ್ನು ತೋರಗೊಡದೆ, ಯಾದವ ಕುಲ ಗುರುವಾದ ಗರ್ಗಾಚಾರ್ಯನಿಂದ, ಗಾಯತ್ರೀ ಮಂತ್ರವನ್ನು ಸ್ವೀಕರಿಸಿ, ಗುರುಕುಲ ವಾಸಕ್ಕೆಂದು ಆವಂತಿಯಲ್ಲಿದ್ದ ಸಾಂದೀಪನ್ಯಾಚಾರ್ಯನ ಆಶ್ರಮವನ್ನು ಸೇರಿದರು.

ಗುರುಕುಲದಲ್ಲಿ ಶಿಷ್ಯರು ಇಂದ್ರಿನ ಜಯದಿಂದ, ವಿನಯದಿಂದ, ಶ್ರದ್ಧೆಯಿಂದ ಇದ್ದು, ವಿದ್ಯೆಯನ್ನು ಕಲಿಯುವ ವಿಧಿಯನ್ನು ನಡೆದು ನೋಡಿಸಿ, ಅವರು ಅರವತ್ತುನಾಲ್ಕು ದಿನಗಳನ್ನು ಸಂಪೂರ್ಣವಾಗಿ ಕಲಿತರು. ಸಕಲ ವೇದಗಳನ್ನು, ಶಿಕ್ಷಾಕಲ್ಪ ನಿರುಕ್ತವ್ಯಾಕರಣಚ್ಛಂದೋ ಜ್ಯೋತಿಷಗಳೆಂಬ ವೇದಾಂಗಗಳನ್ನು, ಧನುರ್ವೇದಗಳನ್ನು, ಬ್ರಹ್ಮತರ್ಕವನ್ನು, ಮೀಮಾಂಸಾ ಶಾಸ್ತ್ರವನ್ನು, ಷಡ್ವಿಧ ರಾಜನೀತಿಯನ್ನು, ಕೇವಲ ಒಂದು ಸಲ ಹೇಳಿದ ಮಾತ್ರದಿಂದಲೇ ಕಲಿತು, ಆ ಶಿಷ್ಯವರರು, ಗುರುಗಳನ್ನು ನೋಡಿ, ಗುರುದಕ್ಷಿಣೆಯಾಗಿ ಏನನ್ನು ಕೊಡಬೇಕೆಂದು ಕೇಳಿದರು. ಲೋಕೋತ್ತರ ಪ್ರಾಜ್ಞರಾದ ಅವರ ಮಹಿಮೆಯನ್ನರಿತ ಸಾಂದೀಪನಿಯು, ತನ್ನ ಸತಿಯೊಡನೆ ಆಲೋಚಿಸಿ, ಪ್ರಭಾಸದ ಸಮುದ್ರದಲ್ಲಿ ಮುಳುಗಿ ಹೋಗಿದ್ದ ತನ್ನ ಪುತ್ರನನ್ನು ಮತ್ತೆ ಬದುಕಿಸಿ ತಂದುಕೊಡಬೇಕೆಂದು ಕೇಳಿಕೊಂಡನು. 'ಹಾಗೇ ಆಗಲಿ!' ಎಂದು ರಾಮಕೃಷ್ಣರು, ರಥವನ್ನೇರಿ, ಪ್ರಭಾಸಕ್ಕೆ ಬಂದರು. ಅಲ್ಲಿ ಆ ಮಹಾವೀರರು ಬಂದು ಕೂತಿರುವುದನ್ನು ತಿಳಿದು, ಸಮುದ್ರ ರಾಜನು ಬಂದು ಕಾಣಿಕೆಗಳನ್ನಿತ್ತು ಪೂಜಿಸಿದನು. 'ಇರಲಿ! ಮೊದಲು ನಿನ್ನ ಅಲೆಗಳಲ್ಲಿ ಕಾಣದಾದ ನಮ್ಮ ಗುರುಪುತ್ರನನ್ನು ತಂದು ನಮಗೆ ಒಪ್ಪಿಸು!' ಎಂದ ಕೃಷ್ಣನ ಮಾತನ್ನು ಕೇಳಿ, ವರುಣನಿಂತೆಂದನು –

'ದೇವ ದೇವ! ನಿಮ್ಮ ಗುರುಸುತನನ್ನು ಅಪಹರಿಸಿದವನು ನಾನಲ್ಲ, ಪಂಚಜನನೆಂಬ ರಾಕ್ಷಸನು ಇಲ್ಲಿ ನೀರಿನಲ್ಲಿರುವನು. ಶಂಖರೂಪಿಯಾದ ಆ ದುಷ್ಟನೇ ಗುರುಸುತನನ್ನು ನುಂಗಿರುವನು. ಅವನನ್ನು ನಾನು ಶಿಕ್ಷಿಸಲಾಗದಿರುವೆನು. ನೀನೇ ಅವನನ್ನು ಕೊಂದು, ಲೋಕ ಕ್ಷೇಮವನ್ನು ಮಾಡು!' ಎಂದ ವರುಣನ ಮಾತನ್ನು ಕೇಳಿ, ಶ್ರೀರಾಮಕೃಷ್ಣರು ಜಲವನ್ನು ಹೊಕ್ಕು, ಆ ಪಂಚಜನನನ್ನು ಹಿಡಿದು, ಸಂಹರಿಸಿದನು. ಅವನ ಹೊಟ್ಟೆಯಲ್ಲಿದ್ದ ಲಕ್ಷ್ಮೀಸಾನಿಧ್ಯಶೋಭಿತವಾದ ದಿವ್ಯಶಂಖವನ್ನು ಶ್ರೀಕೃಷ್ಣನು ಸ್ವೀಕರಿಸಿದನು. ಅದೇ ಪಾಂಚಜನ್ಯವೆಂದು ಖ್ಯಾತವಾದ ಶಂಖವರವು.

ಮುಂದೆ ಶ್ರೀರಾಮಕೃಷ್ಣರು ರಥದಿಂದ ಸಂಯಮನೀಪುರವನ್ನು ಸೇರಿದರು. ಶ್ರೀಕೃಷ್ಣನು ತನ್ನ ಪಾಂಚಜನ್ಯವನ್ನೂದಲು, ಕೇಳಿ, ಪ್ರಚಾಶಮನನಾದ ಯಮನು ಭಕ್ತಿಭರ ಸಂಭ್ರಮದಿಂದ ಬಂದು, ಅವರಿಬ್ಬರನ್ನೂ ಪೂಜಿಸಿದನು. ವಂದಿಸಿ, ಕೈಜೋಡಿಸಿ ನಿಂತು 'ಭೂತಾವಾಸ! ವಾಸುದೇವ! ಲೀಲಾಮನುಜನಾದ ನಿನ್ನ ಸೇವೆ ಎನ್ನಿಂದ ಎಂತಾದೀತು? ಎಂದು ಪ್ರಾರ್ಥಿಸಿದ ಯಮನಿಗೆ ಶ್ರೀಕೃಷ್ಣನು 'ತನ್ನ ಕರ್ಮದಂತೆ ಇಲ್ಲಿಗೆ ಬಂದಿರುವ ನಮ್ಮ ಗುರುಪುತ್ರನನ್ನು ತಂದೊಪ್ಪಿಸು'

ಎಂದು ಆಜ್ಞಾಪಿಸಿದನು. ತತ್‌ಕ್ಷಣವೇ ಯಮರಾಜನು ತಂದೊಪ್ಪಿಸಿದ ಗುರುಸುತನನ್ನು ರಥದಲ್ಲಿ ಕೂಡಿಸಿ, ಕರೆತಂದು ಹಿಂದಿನಂತೆ ಶೋಭಿಸುವ ಭೌತಿಕ ಶರೀರದಿಂದ ಕೂಡಿದ ಆ ಬಾಲಕನನ್ನು ಶ್ರೀರಾಮಕೃಷ್ಣರು ಆಚಾರ್ಯರಿಗೆ ಸಮರ್ಪಿಸಿ, ಮತ್ತೆ ವರಗಳನ್ನು ಬೇಡು! ಎಂದರು. ಸಾಂದೀಪನಿಯು ಸಂತೋಷಾಶ್ಚರ್ಯಭರಿತನಾಗಿ 'ವತ್ಸ ರಾಮ! ಕೃಷ್ಣ! ಗುರುಋಣವನ್ನು ನಿಮ್ಮಂತೆ ತೀರಿಸಿದವರುಂಟೇ? ನಿಮ್ಮಂತಹವರಿಗೆ ಗುರುಗಳಾದವನಿಗೆ ಸಿದ್ಧಿಸದ ಕೋರಿಕೆಯುಂಟೇ? ಮನೆಗೆ ಹೋಗಿ! ನಿಮ್ಮ ಕೀರ್ತಿಯು ಆಚಂದ್ರಾರ್ಕವಾಗಲಿ! ಸದಾ ಪಾವನವಾಗಲಿ!' ಎಂದು ಕಳಿಸಿದನು.

ರಾಮಕೃಷ್ಣರು ವಾಯುವೇಗ ರಥದಲ್ಲಿ ಕೂತು ಮಧುರೆಗೆ ಬಂದರು. ಕಳೆದು ಹೋಗಿದ್ದ ಧನರಾಶಿಯು ಮತ್ತೆ ದೊರೆದಂತಾಗಿ, ಮಧುರಾನಿವಾಸಿಗಳು ವಾಸುದೇವ ಸಂಕರ್ಷಣರನ್ನು ನೋಡಿ, ಆನಂದಭರಿತಮಾನಸರಾದರು.

## ೪೪. ಉದ್ಧವ ಗೋಕುಲ ಗಮನ

ಶ್ರೀಶುಕನು ಹೇಳಿದನು –

ವೃಷ್ಣಿಕುಲಶ್ರೇಷ್ಠನೆನಿಸಿದ ಉದ್ಧವನು ಶ್ರೀಕೃಷ್ಣನಿಗೆ ಮಂತ್ರಿಯಾಗಿದ್ದನು. ಪ್ರೀತಿಪಾತ್ರನಾದ ಸ್ನೇಹಿತನೂ ಆಗಿದ್ದನು. ಅವನು ಬೃಹಸ್ಪತಿಯ ಅಂಶದಿಂದ ಅವತರಿಸಿದ್ದನು. ಒಂದು ದಿನ ಅತ್ಯಂತ ಬುದ್ಧಿವಂತನಾದ ಆ ಉದ್ಧವನನ್ನು ಕರೆದು ಏಕಾಂತದಲ್ಲಿ ಶ್ರೀಕೃಷ್ಣನವನೊಡನೆ ಇಂತೆಂದನು –

ಉದ್ಧವ! ವ್ರಜಕ್ಕೆ ಹೋಗಿಬರುವೆಯಾ? ಅಲ್ಲಿರುವ ನಮ್ಮ ತಂದೆ ನಂದ, ತಾಯಿ ಯಶೋದೆ, ನಿನ್ನನ್ನು ನೋಡಿ, ನನ್ನನ್ನು ನೋಡಿದಂತೆ ಸಂತಸಿಸುವರು. ಆ ಗೋಪಿಯರಿಗೂ ಒಂದು ಸಂದೇಶವನ್ನು ಕೊಡುವೆನು. ಅದರಿಂದ ಅವರಿಗೆ ಸಮಾಧಾನವಾಗುವುದು. ಪಾಪ! ಅವರು ಸದಾ ನನ್ನನ್ನೇ ನೆನೆಯುತ್ತಾ, ಸರ್ವದೈಹಿಕ ವ್ಯಾಪಾರಗಳನ್ನೂ ಮರೆತುಬಿಡುತ್ತಿದ್ದರು. ನಾನೇ ಅವರಿಗೆ ಸರ್ವಬಂಧುಜನದಕಿಂತಲೂ ಪ್ರಿಯತಮನಾಗಿರುವೆನು. ನನಗಾಗಿ ಪ್ರಾಣವನ್ನು ಬಿಡಲು ಕೂಡ ಅವರು ಸಿದ್ಧರಿರುವರು. ದೇಹಧರ್ಮಗಳಾದ ಅಶನವಸನಾನುಲೇಪಾದಿಗಳನ್ನು ಮರೆತು, ನನ್ನ ಪ್ರೀತಿಗಾಗಿ, ಸ್ವರ್ಗಾದಿ ಸರ್ವಸುಖಗಳನ್ನು ಬೇಡದೆ, ಲೋಕದವರಂತೆ ನಡೆದುಕೊಳ್ಳದೆ, ವಿಲಕ್ಷಣಭಕ್ತಿಯಿಂದ ಭಜಿಸುವ ಅವರನ್ನು ನೋಡಿ, ಏನು ಕೊಡಲಿ ಇವರಿಗೆ? ಎಂದು ಅಂಜುತ್ತಿರುವೆನು. ಅವರಿಗೆ ನಾನೇ ರಕ್ಷಕನಾಗಿಯೂ ಇರುವೆನು. ವಿರಹವ್ಯಥೆಯಿಂದ ನೊಂದು ನನ್ನನ್ನು ಸ್ಮರಿಸಿ ಮೈಮರೆತುಬಿಡುವ ಆ ಗೋಪಿಯರು ಎಂತು ಪ್ರಾಣಗಳನ್ನು ಧರಿಸಿರುವರೋ ಎಂದು ಚಿಂತೆಯಾಗಿದೆ. 'ಬರುತ್ತಾನೆ ನಿಮ್ಮ ಕೃಷ್ಣನೆಂದು' ಅವರಿಗೆ ಹೇಳು!

ಶ್ರೀಕೃಷ್ಣಸಂದೇಶಹರನಾಗಿ ಉದ್ಧವನು ರಥವನ್ನೇರಿ ಗೋಕುಲವನ್ನು ಸೇರಿದನು. ಸಾಯಂಕಾಲವಾಗುತ್ತಿರಲು ಗೋಕುಲವನ್ನು ಪೊಕ್ಕ ಉದ್ಧವನ ರಥವನ್ನು ಗೋಧೂಳಿಯು ಮುಚ್ಚಿ ವ್ಯಾಪಿಸಿತು. ಮುಂದೆ ಹೋಗುತ್ತಿರುವ ಗೋವುಗಳನ್ನು, ಋತುಕಾಲದಿ ಬಂದಿರುವ ಗೋವುಗಳ ಸಂಗಕ್ಕಾಗಿ ಕಾದುವ ಗೂಳಿಗಳನ್ನು, ಕೆಚ್ಚಲು ಭಾರದಿಂದ ಮೆಲ್ಲನೆ ನಡೆಯುವ ಧೇನುವೃಂದವನ್ನು, ಕರುಗಳನ್ನು ನೋಡಿ, ಉದ್ಧವನು, ಹಳ್ಳಿಯನ್ನು ಪ್ರವೇಶಿಸಿದನು. ಅವನ ಕಿವಿಗಳು ಗೋವುಗಳನ್ನು

ಕರೆಯುತ್ತಿರುವ ಮಧುರಶಬ್ದವನ್ನು, ಅದರೊಂದಿಗೆ ಬೆರೆತುಬರುವ ಮೊಸರು ಕಡೆಯುವ ನಾದವನ್ನು, ಅದರೊಂದಿಗೆ ಹಾಡುವ ಮಡದಿಯರ ಶ್ರೀಕೃಷ್ಣಕಥಾಗಾನ ವನ್ನು, ಕೊಳಲ ಮಂಜುಲಸ್ವರವನ್ನು, ಅಂಭಾರವಗಳನ್ನು ಕೇಳಿ, ಅವರನ್ನು ವಿವಶನನ್ನಾಗಿ ಮಾಡಿದವು. ಬಿಳಿಯ ಕರುಗಳನ್ನು ಹಿಡಿದು, ಬಿಳಿಯ ಸೀರೆಗಳನ್ನುಟ್ಟು ಗೋಪಿಯರು ಅವನ ಕಣ್ಣಿಗಿಂಪಾಗಿ ಕಂಡರು. ಮನೆಗಳಲ್ಲಿ ಅಗ್ನಿಪೂಜೆ, ಬ್ರಾಹ್ಮಣ ಸತ್ಕಾರಗಳು, ಪಿತೃದೇವ ಸಮರ್ಚನೆ ಗಳು ನಡೆದಿದ್ದವು. ಧೂಪದೀಪಗಳಿಂದಲು, ತೋರಣಗಳಿಂದಲು, ಪುಷ್ಪಮಾಲೆಗಳಿಂದಲು ಅಲಂಕರಿಸಲ್ಪಟ್ಟ ಮನೆ ಗಳು ಮನೋಹರವಾಗಿದ್ದವು. ಉದ್ಯಾನಗಳಲ್ಲಿ ವಿಕಸಿಸಿದ ಪೂಗಳ ವಾಸನೆ ಹರಡಿತ್ತು. ಶುಕಪಿ ಕಾದಿಗಳ ಕಲಕಲ ನಿನಾದವು ಕೇಳಿಬರುತ್ತಿತ್ತು.

ಕೃಷ್ಣಾನುಚರನಾದ ಉದ್ಧವನನ್ನು ನೋಡಿ, ನಂದನು, ಕೃಷ್ಣನೇ ಬಂದನೆಂಬಂತೆ ತಿಳಿದು, ಪ್ರೀತಿಯಿಂದ ಅಪ್ಪಿ, ಪೂಜಿಸಿದನು. ಪರಮಾನ್ನವನ್ನುಂಡು, ಸುಖಾಸೀನನಾದ ಉದ್ಧವನನ್ನು ಉಪಚರಿಸಿ, ನಂದನಿಂತು ಕೇಳಿದನು –

ಮಹಾಭಾಗ! ನಮ್ಮಣ್ಣ ಶೂರ ಸುತ, ವಸುದೇವನಿಗೆ ಕುಶಲವೇ? ಅದೃಷ್ಟದಿಂದ ಸಕಲ ಕಷ್ಟದಿಂದ ಪಾರಾಗಿ, ಬಂಧು ಮಿತ್ರರಿಂದ ಸುಖವಾಗಿರುವನಲ್ಲವೇ? ಆ ಪಾಪಿ ಕಂಸನು ತನ್ನ ಪಾಪದಿಂದ, ತಾನು ಮೃತನಾದ. ಸಾಧುಗಳು ಧರ್ಮಿಷ್ಠರು ಆದ ಯಾದವರಿಗೆ ದ್ರೋಹವನ್ನು ಮಾಡಿದ ಪಾಪವು ಸುಮ್ಮನೆ ಹೋಗುವುದೇ? ನಮ್ಮ ಕೃಷ್ಣ ತನ್ನ ತಾಯಿಯನ್ನು, ಸ್ನೇಹಿತರನ್ನು, ಬಂಧುಗಳನ್ನು ಎಂದಾದರೂ ಸ್ಮರಿಸುತ್ತಿರುವನೇ? ಇಲ್ಲಿರುವ ನಾವೆಲ್ಲರೂ ಅವರ ಪಾದದಾಸ ರೆಂಬ ನೆನಪು ಅವನ ದಿವ್ಯಚಿತ್ತಕ್ಕೆ ಬಂದರೆ ಸಾಕು! ಒಂದು ಸಲವಾದರೂ ಬಂದು ನಮ್ಮನ್ನು ನೋಡಿಕೊಂಡು ಹೋಗಬಾರದೇ? ಸುಂದರ ಮಂದಹಾಸ, ಪ್ರೇಮಕಟಾಕ್ಷ, ಸುರುಚಿರ ನಾಸಾ ಸಮಲಂಕೃತವಾದ ನಮ್ಮ ಕೃಷ್ಣನ ಮುಖಾರವಿಂದವನ್ನು ನಾವು ಮತ್ತೆ ನೋಡುವೆವೇ? ಕಾಡುಗಿಚ್ಚಿನಿಂದ, ಮಳೆಗಾಳಿಗಳಿಂದ, ಎತ್ತು ಕುದುರೆ ರಾಕ್ಷಸರಿಂದ ಹಾವು ಕತ್ತೆಗಳಿಂದ, ನಾವು ಸಾಯದಂತೆ ಕಾಪಾಡಿದ ಕೃಷ್ಣನನ್ನು ನಾವು ಮರೆಯಲಾರೆವು. ಅವನ ನೆನಪು ಬಂದೊಡನೆ ನಮ್ಮ ಮನೆಕೆಲಸಗಳೆಲ್ಲ ನಿಂತೇಹೋಗುವುವು. ಮುಕುಂದನ ಚರಣಾಂಕಿತವಾದ ನದೀತೀರ ಗಳನ್ನು, ಗಿರಿಗಳನ್ನು, ಗೋಕುಲ ಪ್ರದೇಶಗಳನ್ನು ಕಂಡಾಗ, ಅವನು ಅಲ್ಲಿ ಆಡಿದ ಆಟಗಳನ್ನು ನೆನೆದು ನಾವು-ಸ್ತ್ರೀಯರು ಪುರುಷರು ಕೂಡ ತನ್ಮಯರಾಗಿಬಿಡುತ್ತಿರುವೆವು. ರಾಮಕೃಷ್ಣರು ದೇವಕಾರ್ಯಕ್ಕಾಗಿ ಅವತರಿಸಿದ ನರನಾರಾಯಣನೆಂದು ಗರ್ಗಋಷಿ ಹೇಳಿದ ಮಾತು ನಿಜ. ಹತ್ತುಸಾವಿರ ಆನೆಯ ಬಲವುಳ್ಳ ಕಂಸನನ್ನು, ಮಲ್ಲರನ್ನು, ಗಜವನ್ನು ಲೀಲೆಯಿಂದ, ಸಿಂಹವು ಪಶುಗಳನ್ನಂತೆ ಕೊಂದ ಕೃಷ್ಣರಾಮರು ಸಾಮಾನ್ಯಮನುಜರಲ್ಲ. ಆನೆಯು ಕಬ್ಬಿನನ್ನಂತೆ ಮಹಾಧನುಸ್ಸನ್ನು ಒಂದೇ ನಿಮಿಷದಲ್ಲಿ ಮುರಿದುದನ್ನು, ಒಂದೇ ಕೈಯಿಂದ ಗೋವರ್ಧನ ಗಿರಿಯನ್ನು ಏಳು ದಿನ ಎತ್ತಿ ಹಿಡಿದುದನ್ನು, ಪ್ರಲಂಬಧೇನುಕಾದಿ ದುಷ್ಟರನ್ನು ಲಕ್ಷ್ಯವಿಲ್ಲದೆ ಕೆಡಹಿದುದನ್ನು ನಾವೆಲ್ಲ ಕಂಡಿರುವೆವು. ಶ್ರೀಕೃಷ್ಣ! ಬಲರಾಮ! ನಿನಗೆ ನಮಸ್ಕಾರ!

ಇಂತು ಸ್ಮರಿಸಿ ನಂದನು, ಕೃಷ್ಣಭಕ್ತಿಯಿಂದ ಮೈಮರೆತನು. ಅವನ ಕಣ್ಣಲ್ಲಿ ಆನಂದ ಬಿಂದುಗಳು ತುಂಬಿ ತುಳುಕಿದವು; ಮುಂದೆ ಮಾತಾಡಲು ಬರದೆ ಅವನು ಪ್ರೇಮವಿಹ್ವಲನಾಗಿ ಸುಮ್ಮನೆ ಕೂತನು. ಯಶೋದೆಯು, ತನ್ನ ಪತಿಯು ವರ್ಣಿಸಿದ ಕೃಷ್ಣಮಹಿಮೆಯನ್ನು ಕೇಳುತ್ತಾ, ಸ್ನೇಹರಸವೇ ಹಾಲಾಗಿ ಸ್ತನಗಳಿಂದ ಹರಿಯಲು, ಕಣ್ಣೀರಿಂದ ಕಪೋಲಗಳು ಕಪ್ಪಾಗಲು, 'ಹರಿ!

ಹರಿ! ಕೃಷ್ಣ! ಕೃಷ್ಣ!' ಎನ್ನುತ್ತಾ ಮೈಮರೆತು ನಿಂತಿದ್ದಳು. ಆ ನಂದಯಶೋದೆಯರ ಭಕ್ತಿಭಾವವನ್ನು, ಅನುರಾಗಾನಂದಗಳನ್ನು ಕಂಡು, ಉದ್ಧವನು ಮುದದಿಂಬ ಇಂತು ನುಡಿದನು –

ಜೀವಜಾತದಲ್ಲಿ ನಿಮ್ಮಂತೆ ಧನ್ಯರಿಲ್ಲ! ಭಗವಂತನಾದ ಶ್ರೀಕೃಷ್ಣನಲ್ಲಿ ನಿನ್ನ ಭಕ್ತಿಯು ಅನುಕರಣೀಯವಾಗಿದೆ. ಜಗತ್ಕಾರಣನು, ಜೀವಾಧಾರಕನು, ಪೂರ್ಣಾನಂದರು ಆದ ಸಂಕರ್ಷಣವಾಸುದೇವರೇ ಬಲರಾಮಕೃಷ್ಣರಾಗಿ ಅವತರಿಸಿರುವರು. ಸಕಲಶರೀರ ಪ್ರವಿಷ್ಟರಾಗಿ ಜೀವರನ್ನು ಜ್ಞಾನಾದಾನಾದಿಗಳಿಂದ ರಕ್ಷಿಸುವ ಶ್ರೀಸಂಕರ್ಷಣವಾಸುದೇವರು ಜೀವಜಡಾತ್ಮಕವಾದ ಜಗತ್ತಿನಿಂದ ಭಿನ್ನರಾಗಿರುವರು. ಸಂಕರ್ಷಣನ ಆವೇಶದಿಂದ ಕೂಡಿದ ಶೇಷನೇ ಬಲರಾಮನು ಸಾಕ್ಷಾದ್ವಾಸುದೇವನೇ ಶ್ರೀಕೃಷ್ಣನು. ದೇಹ ವಿಯೋಗಕಾಲದಲ್ಲಿ ಒಂದು ಕ್ಷಣವಾದರೂ ಸಾಕು, ಈ ಶ್ರೀಕೃಷ್ಣನ ಚರಣಾರವಿಂದದಲ್ಲಿ ಶುದ್ಧವಾದ ಮನಸ್ಸನ್ನಿಟ್ಟು ಸ್ಮರಿಸಿ ನರನು ಕರ್ಮಪಾಶವನ್ನು ಕಡಿದುಕೊಂಡು, ಜ್ಞಾನಪ್ರಧಾನನು ಅತಿ ಸ್ವಚ್ಛನು ಆಗಿ ಹರಿಲೋಕವನ್ನು ಪೊಂದುವನು.

ಲೋಕರಕ್ಷಣ ಕಾರಣದಿಂದ ಅವತರಿಸಿದ ಜೀವೇಶನಾದ ಪರಮಪುರುಷ ಕೃಷ್ಣನಲ್ಲಿ ನೀವು ತೋರುವ ಭಕ್ತಿಯು ಬಂಧುರವಾಗಿದೆ. ನಂದ ಯಶೋದೆಯರೇ! ನಿಜವಾಗಿಯು ನೀವು ಧನ್ಯರು. ಇನ್ನು ನೀವು ಮಾಡದೆ ಇರುವ ಯಾವ ಸುಕೃತವೂ ಇಲ್ಲ. ಬರುತ್ತಾನೆ ಬೇಗನೆ ಭಗವಂತನು ಈ ನಿನ್ನ ವ್ರಜಕ್ಕೆ, ಮಾಡುತ್ತಾನೆ ನಿಮ್ಮ ಮನಃಪ್ರೀತಿಯನ್ನು ಸಜ್ಜನವಲ್ಲಭ. ಕಂಸನನ್ನು ರಂಗಮಧ್ಯದಲ್ಲಿ ಕುಟ್ಟಿ ಕೆಡಹಿದಾಗ, ನಿಮ್ಮನ್ನು ನೋಡಿ ಆಡಿದ ಮಾತನ್ನು ಶ್ರೀಕೃಷ್ಣನು ಮರೆಯುವುದಿಲ್ಲ. ಶೋಕಿಸಬೇಡಿ! ಕಾಷ್ಠದಲ್ಲಿ ಅಗ್ನಿಯಂತೆ ಶ್ರೀಕೃಷ್ಣನು ನಮ್ಮೆಲ್ಲರ ಹೃದಯಕಮಲದಲ್ಲಿ ನೆಲಸಿರುವನಲ್ಲವೇ? ದೇಹಹಂಭಾವಾದಿ ಸರ್ವದೋಷದೂರನಾದ ಶ್ರೀಹರಿಗೆ ನಮ್ಮಂತೆ ನಿಮಿತ್ತಮಾತ್ರಕೃತರಾದ ಶತ್ರುಮಿತ್ರರುಂಟೇ? ಅವನಿಗೆ ಸಮರೇ ಇಲ್ಲ. ಇನ್ನು ಅಧಿಕರೆಲ್ಲಿಹರು? ಮಾತಾಪಿತೃಗಳಾಗಲಿ, ಭ್ರಾತೃಬಂಧುಗಳಾಗಲಿ, ಭಾರ್ಯಾಸುತರಾಗಲಿ, ದೇಹೇಂದ್ರಿಯಗಳಾಗಲಿ, ಜನ್ಮಕರ್ಮಬಂಧ ಮರಣಗಳಾಗಲಿ, ಅವನಿಗಿಲ್ಲ. ಆದರೂ ಸುರನರತಿರ್ಯಗಾದಿರೂಪದಿಂದ ಅವನು ಅವತರಿಸಿದನೆಂದರೆ, ಅದೂ ಅವನಿಗೊಂದು ಆಟವೇ ಸರಿ! ಸತ್ವರಜಸ್ತಮೋಗುಣಗಳಿಂದ, ಪಾಲನ, ಸೃಜನ, ಸಂಹರಣಗಳನ್ನು ಲೀಲಾಜಾಲವಾಗಿ ಮಾಡುವ ಶ್ರೀಕೃಷ್ಣನು ಸರ್ವಶರೀರಗಳಲ್ಲಿ ಅಂತರ್ಯಾಮಿಯಾಗಿರುವನು. ಅವನು ನಿಮಗೆ ಮಾತ್ರವಲ್ಲ – ಎಲ್ಲರಿಗೂ ಪುತ್ರನಂತೆ ರಕ್ಷಕನಾಗಿರುವನು. ನಮಗೆಲ್ಲಾ ಅವನೇ ತಂದೆ – ಅವನೇ ತಾಯಿ – ಅವನೇ ಪ್ರಭುವು. ನಾವು ನೋಡಿರುವ ಅಥವಾ ಕೇಳಿರುವ ಚರಾಚರ ಜಗವೆಲ್ಲವು ಅವನಿಗೆ ಪ್ರತಿಮೆಯಂತೆ ವಿರಾಜಿಸುವುದು. ಅದೆಲ್ಲವು ಅವನ ಅಧೀನವು. ಅವನ ಹೊರತು ಸ್ವತಂತ್ರರು ಮತ್ತಾರೂ ಇಲ್ಲ. ನಿತ್ಯಾಪ್ರತಿಹತ ದಿವ್ಯಷಡ್ಗುಣಪೂರ್ಣನಾದ ಶ್ರೀಕೃಷ್ಣನಿಗೆ ನಮಸ್ಕಾರವು.

ಕೃಷ್ಣಾನುಚರನಾದ ಉದ್ಧವನ ಮಾತನ್ನು ಮೈಮರೆತು ಕೇಳುವ ನಂದ ಯಶೋದೆಯರಿಗೆ ರಾತ್ರಿಯು ಕ್ಷಣದಂತೆ ಕಳೆದದ್ದೇ ತಿಳಿದುಬರಲಿಲ್ಲ.

ಬೆಳಗಾಗುತ್ತಿರಲು, ಗೋಪಿಯರೆದ್ದು, ದೀಪಗಳನ್ನು ಹಚ್ಚಿ, ಹೊಸಲನ್ನು ಸಾರಿಸಿ, ರಂಗವಲ್ಲಿಗಳನ್ನಿಟ್ಟರು. ಅವರು ತಮ್ಮ ಕೈಗಳ ಕಂಕಣಗಳ ಝಣಝಣಧ್ವನಿಯಿಂದ ಕೂಡಿಸಿ, ಕಂಠಹಾರಗಳು ಸ್ತನಕಲಶಗಳನ್ನು ಮುತ್ತುತ್ತಿರಲು, ಕೃಷ್ಣಲೀಲೆಯನ್ನು ಪಾಡುತ್ತಾ, ಮೊಸರು ಕಡೆಯ

ತೊಡಗಿದರು. ಆ ಕಲಕಂಠ ಕಂಠಿಯರು ಪಾಡಿದ ಮಧುರ ಮಧುರಾನಾಥ ಗುಣಗಾನವು ದಧಿ ಮಥನ ಶಬ್ದದೊಡನೆ ದಿಕ್ಕುಗಳಲ್ಲಿ ಹರಡಿ ಸಕಲಾಮಂಗಲವನ್ನು ದೂರಸರಿಸಿ, ನಾಶಮಾಡಿತು.

ಸೂರ್ಯನು ಪುಟ್ಟಿದಾಗ ನಂದನ ಮನೆಯ ಮುಂದೆ ನಿಂತ ರಥವನ್ನು ನೋಡಿ, ವ್ರಜವಾಸಿ ಗ ೨ ಯಾರು ಬಂದವರೆಂದು ವಿಚಾರಿಸಿದರು.

'ಏನು! ಅಕ್ರೂರನೇ ಮತ್ತೆ ಬಂದಿರುವನೇ? ಕಂಸಕಾರ್ಯಧುರೀಣನಾಗಿ ಬಂದು ನಮ್ಮ ಕೃಷ್ಣನನ್ನು ಅಗಲಿಸಿದ ಆ ಕ್ರೂರನಿಗೆ ಇನ್ನೇನು ಸಾಧಿಸುವುದಿದೆಯೋ? ನಮ್ಮನ್ನಿಷ್ಟು ಕಷ್ಟಪಡಿಸು ವುದು ಸಾಲದೆ? ಮೃತನಾದ ಕಂಸನಿಗಿನ್ನೇನು ಪ್ರಿಯವಿದನಿಂದ ಆಗುವುದಿದೆಯೋ?' ಎಂದು ನುಡಿಯುತ್ತಿರುವ ಮಡದಿಯರನ್ನು ನೋಡಲು, ಕೃತಕಾಲ್ಯಕೃತ್ಯನಾದ ಉದ್ಧವನು ಬಂದನು.

## ೪೭. ಭ್ರಮರಗೀತೆ

ಶ್ರೀಶುಕನು ನುಡಿದನು –

ರಾಜನ್! ದೀರ್ಘಪೀವರ ಬಾಹುಯುಗಳನ್ನು, ನವಕಂಜದಳಲೋಚನನು, ಮಣಿಕುಂಡಲ ಮಂಡಿತ ಗಂಡಲಸ್ಥಲನು, ವದನಾರವಿಂದನಿಷ್ಯಂದಿ ಮಂದಹಾಸನು ಆದ ಉದ್ಧವನನ್ನು – ಆ ಕೃಷ್ಣ ಸಖನನ್ನು – ನೋಡಿ, ವ್ರಜಸುಂದರಿಯರು ಆಶ್ಚರ್ಯಭರಿತರಾದರು.

'ಯಾರೇ ಇವನು? ನಮ್ಮ ಅಚ್ಯುತನಂತೆ ವೇಷಭೂಷಣಗಳನ್ನು ಧರಿಸಿರುವನು. ಎಷ್ಟು ದರ್ಶನೀಯವಾಗಿದೆ ಇವನ ರೂಪು!' ಎಂದು ಗೋಪಿಯರು, ಆ ಉತ್ತಮ ಶ್ಲೋಕ ಪಾದಾರವಿಂದ ಮಧುಮಹಾದರಚಿತ್ತನಾದ ಉದ್ಧವನನ್ನು ಸೇರಿ, ಸುತ್ತುಗಟ್ಟಿ ನಿಂತರು. ವಿನಯವಿನಮಿತರಾಗಿ ಆ ವನಿತೆಯರು ಅವನಿಗೆ ಆಸನವನ್ನಿತ್ತು ಸತ್ಕರಿಸಿ, ಪ್ರೀತಿಯಿಂದ ಇಂತೆಂದರು –

ಗೊತ್ತಿದೆ ನಮಗೆ ನೀನು ನಮ್ಮ ಯದುನಾಥನ ದೂತನೆಂದು! ಶ್ರೀಕೃಷ್ಣನು ಅನುವ್ರತನಾದ ನಿನ್ನನ್ನು ನಂದ ಯಶೋದೆಯರಿಗೆ ವಿಯೋಗದುಃಖವನ್ನು ಪ್ರಿಯಸಂದೇಶ ವಚನಸುಧೆಯಿಂದ ದೂರಮಾಡೆಂದು ಕಳಿಸಿರುವನಲ್ಲವೇ? ಈ ಗೋಕುಲದಲ್ಲಿ ಅವರೀರ್ವರ ಹೊರತು ಶ್ರೀಸ್ವಾಮಿಗೆ ಸ್ಮರಣೀಯರಿನ್ನಾರೂ ಇಲ್ಲವೆಂದೇ ನಾವು ತಿಳಿದಿರುವೆವು. ನಿಜ! ಮುನಿಗಳಾದರೂ ತಂದೆ ತಾಯಿ ಎಂಬ ಅಭಿಮಾನವನ್ನು ಕಡಿದು ದೂಡಲಾರರು. ಇನ್ನು ಇತರರ ವಿಷಯವೆಂದರೆ – ಪ್ರಯೋಜನವು ಕೊನೆಗಾಣಲು ತಾನೂ ಕೊನೆಗಾಣುವ ಪ್ರೀತಿ ಮಾತ್ರವಾಗಿರುವುದು. ಪುರುಷರಿಗೆ ತರುಣಿಯರಲ್ಲಿರುವ ಪ್ರೀತಿಯು ಭ್ರಮರಗಳಿಗೆ ಸುಮಗಳಲ್ಲಿದ್ದಂತೆ ಕ್ಷಣಿಕವಾಗಿದೆ. ಧನವಿಲ್ಲದ ವನನ್ನು ವೇಶ್ಯೆಯರು, ಅಸಮರ್ಥ ರಾಜನನ್ನು ಪ್ರಜರು, ವಿದ್ಯಾಭ್ಯಾಸ ಮುಗಿಸಿದ ಶಿಷ್ಯರು ಆಚಾರ್ಯನನ್ನು, ದಕ್ಷಿಣಾದಿಗಳನ್ನಿತ್ತ ಯಾಜಮಾನನನ್ನು ಋತ್ವಿಜರು, ಫಲವಿಲ್ಲದ ಗಿಡವನ್ನು ಪಕ್ಷಿಗಳು, ಅತಿಥಿಗಳು ಉಂಡ ಮನೆಯನ್ನು, ಸುಟ್ಟುಹೋದ ಕಾಡನ್ನು ಮೃಗಗಳು, ಭೋಗಿಸಿದ ಪರತರುಣಿಯರನ್ನು ಜಾರನು ಬಿಟ್ಟುಬಿಡುವರು.

ಎಂದು ಗೋವಿಂದನಿಗೆ ತಮ್ಮ ತನುಮನವಚನಗಳನ್ನರ್ಪಿಸಿ, ಮನೆಕೆಲಸಗಳನ್ನು ತ್ಯಜಿಸಿ ಬಂದ ಗೋಪಸುಂದರಿಯರನ್ನು ನೋಡಿ, ಉದ್ಧವನು ಭಕ್ತಿರಭಸದಿಂದ ಮಾತಾಡದೆ ಸುಮ್ಮ ನಿದ್ದನು. ಪ್ರಿಯಕೃಷ್ಣನ ವಿರಹವನ್ನು ತಡೆಯಲಾರದೆ, ಅವನ ಪಾವನ ಬಾಲಚರಿತೆಗಳನ್ನು ಬಾಯಾರ ಪಾಡುತ್ತಾ – ಲಜ್ಜೆಯನ್ನು ಲಕ್ಷಿಸದೆ, ತನ್ಮಯಗಾದ ತನ್ವಂಗಿಯರು ಆಗ ಅಲ್ಲಿ

ಹಾರಾಡುತ್ತಾ ಬಂದ ಭ್ರಮರವನ್ನೊಂದನ್ನು ನೋಡಿ ಅದರ ಝುಂಕಾರವನ್ನು ಕೇಳಿ, ಕೃಷ್ಣನು ಕಳಿಸಿಕೊಟ್ಟ ಸಂದೇಶಹರನೆಂದು ಭ್ರಮಿಸಿ ಇಂತು ಪಾಡಲು ಪ್ರಾರಂಭಿಸಿದರು–

ಎಲವೋ ಮಧುಪ! ಕಳ್ಳಕೃಷ್ಣನ ಸಖನಾದ ನೀನೂ ಕಳ್ಳನೇ! ನಡೆ ಇಲ್ಲಿಂದ! ಮಧುರೆಯ ಮಾನಿನಿಯರ ಕುಚಕುಂಕುಮಪಂಕರಾಗರಂಜಿತವಾದ ನಿನ್ನ ಮೀಸೆಗಳ ಕರ್ಕಶ ಸ್ಪರ್ಶವೆಮಗೆ ಬೇಕಾಗಿಲ್ಲ. ಮಧುರೆಯಲ್ಲಿ ಯಾದವಸಭೆಯಲ್ಲಿ ವಿರಾಜಿಸುವ ರಾಜೀವಾಕ್ಷನ ಗೋಜೇಕೆ ನಮಗೆ? ಕುಸುಮವಿಸರದಂತೆ ಸುಗಂಧಿಯರು ನಿರ್ವಂಚಕಿಯರು ಎದುರಾಡದವರು ನವ ಯೌವನಭರಿತೆಯರು ಲಾವಣ್ಯಯುತೆಯರಾದ ನಮ್ಮನ್ನು ಬಿಡಲು ಕಾರಣವಾದರೂ ಏನು? ಒಂದು ಸಲ ಅಧರಸುಧೆಯನ್ನುಣಿಸಿ, ಆಶೆಪುಟ್ಟಿಸಿ, ಬಿಟ್ಟು ಹೋಗಲು ನಾವು ಮಾಡಿದ ಪಾಪ ವಾವುದು? ನಿನ್ನಂತಹ ಪೂಜ್ಯನಿಗೆ ಆಶ್ರಿತಜನಪರಿತ್ಯಾಗವು ಉಚಿತವೇ? ಇಂತಹ ಉನ್ಮತ್ತ ಚಿತ್ತನಾದ ನಿನ್ನಯ ಚರಣಾರವಿಂದವನ್ನು ಅರವಿಂದವಾಸಿನಿ ಬಿಡದೆ ಸೇವಿಸುವಳಂತೆ! ಅದೆಂತು? ಉತ್ತಮಶ್ಲೋಕ ಕೃಷ್ಣ! ನಿನ್ನ ಮಧುರಾಲಾಪವೆಂತಹ ಮೋಹವಿರಬೇಕು! ಇರಲಿ; ಇಂತಹ ನಿನ್ನ ಗೊಡವೆಯೂ ಬೇಡ.

ಎಲವೋ ಷಟ್ಪದನೇ! ಆ ಸನ್ಯಾಸಿಜನಪ್ರಿಯನ ಪುರಾಣವನ್ನು ನಮ್ಮ ಮುಂದೆ ಬಿಚ್ಚಿ ಮೆಚ್ಚಿ ಹಾಡುವುದನ್ನು ನಿಲ್ಲಿಸು! ಆ ಪಾರ್ಥಸಖನ ಸಖಿಯರಿರುವ ಮಧುರೆಯಲ್ಲಿ ನಡೆಯಲಿ ನಿನ್ನ ಕಥಾಕಲ್ಪ! ಅಲ್ಲಿ ನಿನ್ನ ಗಾನವನ್ನು ಕೇಳುವವರು ಇರುವರು. ನಿನ್ನ ಇಷ್ಟವನ್ನು ಪೂರೈಸು ವವರೂ ಇರುವರು.

ಆ ಕೃಷ್ಣನ ಕುಡಿನೋಟ ಅವನ ಮಂದಹಾಸ ಭ್ರೂವಿಲಾಸ ಅವನ ಕಪಟ ಸುರತ ಚಾತುರ್ಯ, ಅವರ ಸರಸವಚನಗಳಿಗೆ ಮನಸೋತು ಮಾರುಹೋಗದ ಮಾನಿನಿಯರು ಮೂರು ಲೋಕಗಳಲ್ಲಿಯೂ ಇಲ್ಲ. ಸಾಕ್ಷಾಲ್ಲಕ್ಷ್ಮಿಯೇ ಅವರ ಚರಣನಲಿನಯುಗಳನ್ನು ಬಿಡದೆ ಸೇವಿಸು ವಳೆಂದ ಮೇಲೆ ನಮ್ಮ ಚಿತ್ತವಾ ಉತ್ತಮಶ್ಲೋಕನ ಪದಾರವಿಂದಸಮತ್ತವಾಗಿರುದೇನಾ ಶ್ಚರ್ಯವು? ಆದರೂ ಆ ದೀನನಾಥನ ಕಟಾಕ್ಷವೇಕೆ ನಮ್ಮ ಮೇಲೆ ಬೀಳದಿರುವುದೋ ಕಾಣೆವು.

ಹೇ ಮುಕುಂದದಾಸ! ನೀನು ಬಾಗಿ ನಮಿಸುವ ಮಾಯೆ ಬಿಡು! ನಮ್ಮ ಪಾದದಿಂದ ದೂರ ಸರಿ! ನಿನ್ನ ಆಪಾತರಮಣೀಯ ವಚನಗಳಿಂದ ನಮ್ಮನ್ನು ನಂಬಿಸಿ ಕೆಡಿಸಿದ್ದು ಸಾಕು. ನಿನಗಾಗಿ ಪತಿಗಳನ್ನು ಸುತರನ್ನು ಬಂಧುತತಿಯನ್ನು ಸರ್ವಸ್ವವನ್ನು ಬಿಟ್ಟ ಕಾಂತೆಯರನ್ನು ಕೃತಘ್ನನಾಗಿ ಕೈಬಿಟ್ಟೆ. ಇನ್ನು ನಿನ್ನ ಸಂಧಿಸಮಾಧಾನವಚನಗಳಿಂದೇನು ಪ್ರಯೋಜನ? ನಿನ್ನ ಸ್ವಭಾವವೇ ಇಂತಹದು! ಬಿಡದೆ ಲೋಕವ ನುಂಗಿ ಕಡುಮೀನರೂಪದಲಿ ಕಡಲ ಮಧ್ಯದಿ ಆಡಿದೆ! ಧೀರ ದೇವಾಸುರರು ನೀರಧಿಯ ಮಥಿಸುತಿರೆ ಕಚ್ಛಪ! ಬಚ್ಚಿಟ್ಟುಕೊಂಡೆ. ತಾಯ ಕೈಯಲ್ಲಿ, ಮಗನ ತಲೆಹೊಡೆಸಿ ದಿತಿಸುತನ ಸತ್ತ್ವವನ ಮತ್ತೆ ಕೊಂದೆ! ಕಂದನ ನುಡಿ ಕೇಳಿ ಕಂಬದಿಂದಲಿ ಬಂದು ತಂದೆಯ ಸಂಹರಿಸಿದೆ! ತಾಯಿಗೋಸುಗ ಬೇಡಿ ಬೇಡಿದ್ದ ಕೊಟ್ಟವನ ತಲೆಯಲ್ಲಿ ಕಾಲಿರಿಸಿದೆ! ತಂದೆಯ ಮಾತಿಗೆ ತಾಯಿಯನ್ನೇ ಕೊಂದೆ! ತಾಯಿಯ ನುಡಿಗಾಗಿ ರಾಜರನು ಮುರಿದೆ! ಗಿಡದ ಬುಡದಲಿ ಅಡಕಿ ಕೆಡುಕೋತಿಯನ್ನು ಕೊಂದೆ! ವರಿಸಿದವಳ ಮೂಗು ತರಿದೆ! ಮಾತೆ ಒಡಹುಟ್ಟಿದ ಮಾವನ್ನ ಮಡುಹಿದೆ! ಹಡೆದವರ ಬಿಟ್ಹೋಡಿದೆ! ಹಾಲು ಕೊಟ್ಟವಳಿಗೆ ಕಾಲವನು ನೀ ಕೊಟ್ಟೆ! ಸರ್ವಸ್ವವಿತ್ತ ನಮ್ಮನ್ನು ನೀ ತೊರೆದೆ! ನಮ್ಮ ವಸ್ತ್ರಗಳನ್ನು ಕದ್ದ ಪಾಪಕ್ಕಾಗಿ ಬೆತ್ತಲೆಯಾಗಿ ತಿರುಗೋ! ನಮ್ಮ ಗೋಳನು ಕೇಳದಲೆ ಇದ್ದ ಪಾಪಕ್ಕೆ ಕುದುರೆ

ಮೇಲೇರಿ ಅಲೆಯೋ! ಉತ್ತಮ ಶ್ಲೋಕನೇ! ಮತ್ತಜನವಂದಿತನೇ! ನಿನ್ನ ಕಥೆ ದುಸ್ತ್ಯಜವೆಲೋ! ಅಶನಶಯನಾಸನವಸನ ಭೂಷಣಗಳಲಿ ನಿನ್ನನ್ನೇ ಸ್ಮರಿಸುತಿಹೆವೋ! ನಮ್ಮ ಕೈಬಿಟ್ಟಿರುವ ಕಟು ಹೃದಯವು ಮತ್ತೆ ಮರೆವು ತರವೇನೋ ನಿನಗೆ?

ನಿನ್ನ ಸುಂದರ ಪಾಪಹರ ಚರಿತಸುಧೆಯ ಬಿಂದುವೊಂದನ್ನು ಒಂದು ಸಲ ಪಾನಮಾಡಿ ದವನಿಗೆ ದ್ವಂದ್ವವಿಕಾರವೆಲ್ಲಿಯದು? ಕೃಷ್ಣಾ! ಅಂತಹವನ ಜ್ಞಾನದೀಪವು ಅನುಚ್ಛಿನ್ನವಾಗಿ ಬೆಳಗುವುದಲ್ಲವೇ? ತಾಪತ್ರಯದೂಷಿತವಾದ ಗೃಹಾದಿಗಳನ್ನು ಬಿಟ್ಟು ನಿರ್ದೋಷರಾದ ಯತಿವರರು ಬಿಕ್ಕೆಬೇಡಿದರೂ, ಆನಂದಮಯನಾದ ನಿನ್ನ ಧ್ಯಾನದಿಂದ ತಾವೂ ಆನಂದರೂಪ ರಾಗಿರುವರು. ಬೇಡರವನ ಗೀತವನ್ನು ಕೇಳುತ್ತಾ, ಅವನ ಭಲ್ಲಕ್ಕೆ ತುತ್ತಾಗುವ ಕೃಷ್ಣ (ಮೃಗ) ರಮಣಿಯರಂತೆ, ನಿನ್ನ ಕಪಟವಚನ ವಿಚಾರವನ್ನು ಮಾಡದೆ, ಇಂದೂ ವ್ಯಸನಕ್ರಾಂತರಾಗಿರು ವೆವು. ಸಾಕಿನ್ನು ನಿನ್ನ ವಾರ್ತೆ ಎಂದು ಸುಮ್ಮನಿದ್ದರೂ, ನಮ್ಮಸ್ತನಕಲಶಮುದ್ರಿತವಾದ ನಿನ್ನ ನಖಸುಖಸ್ಪರ್ಶಸೂಚಕ ಚಂದ್ರರೇಖೆಗಳು, ನಿನ್ನನ್ನು ಮರೆಯದಂತೆ ಮಾಡಿ ಕಾಣುತ್ತಿವೆ.

ಪ್ರಿಯಸಖ! ನಿನಗೆ ಸುಸ್ವಾಗತವಾಗಲಿ! ನಮ್ಮ ಪ್ರೇಷ್ಠನಿಂದ ಪ್ರೇಷಿತನಲ್ಲವೇ ನೀನು? ನೀನೂ ನಮಗೆ ಪ್ರಿಯನಾದೆ. ಬೇಡು, ಬೇಕಾದ್ದನ್ನೆಲ್ಲ ನೀಡುವೆವು. ನಮ್ಮ ಕೃಷ್ಣನ ಚರಣ ಚ್ಛಾಯೆಯಲ್ಲಿ ನಮ್ಮನ್ನು ನಿಲ್ಲಿಸು! ಅವನನ್ನು ಬಿಟ್ಟು ಬದುಕಿರಲಾರೆವು. ಇದು ನಿಜ. ಶ್ರೀದೇವಿಯು ಬಿಡದೆ ಎದೆಯಲ್ಲಿರಲಿ! ನಮಗೆ ಅವನ ಚರಣವೇ ಸಾಕು.

ಉದ್ಧವಾ! ಆರ್ಯಪುತ್ರನು ಮಥುರೆಯಲ್ಲಿ ಸುಖವಾಗಿರುವನೇ? ಇಲ್ಲಿರುವ ತಂದೆ ತಾಯಿಯರನ್ನು, ಬಂಧುಬಳಗವನ್ನು, ಗೋಗೋಪ ಗೋಪಿಕೆಯರನ್ನು ಸ್ಮರಿಸುತ್ತಿರುವನೇ? ಅವನ ಚರಣದಾಸಿಯರಾದ ನಮ್ಮನ್ನು ಅನುಗ್ರಹಿಸುವನೇ? ಅವನ ಚಂದನಚರ್ಚಿತವಾದ ಭುಜಾಲತೆಯನ್ನಾಲಿಂಗಿಸಿ ಚುಂಬಿಸುವ ಮಹದ್ಭಾಗ್ಯವು ಮತ್ತೆ ನಮಗೆಂದು ಸಿಗುವುದೋ?

ಶ್ರೀಶುಕನು ಹೇಳಿದನು –

ಕೃಷ್ಣದರ್ಶನಲಾಲಸರಾದ ಗೋಪಲಲನೆಯರ ಪ್ರಣಯ ಮಧುರ ವಚನಗಳನ್ನು ಕೇಳಿ, ಉದ್ಧವನು ಪ್ರಿಯನ ಪ್ರಿಯಸಂದೇಶದಿಂದ ಅವರನ್ನು ಆನಂದಪಡಿಸುತ್ತಾ, ಇಂತೆಂದನು –

ಅಹೋ! ಧನ್ಯರು ನೀವು! ಭಗವಂತನಾದ ವಾಸುದೇವನಲ್ಲಿ ಇಂತಹ ಸುಮಧುರ ಭಾವ ಬಂಧುರರಾದ ನೀವು ಲೋಕಕ್ಕೆಲ್ಲ ಸಂಭಾವನೀಯರಾಗಿರುವಿರಿ! ನಿಮ್ಮ ಜನ್ಮ ಧನ್ಯವಾಯಿತು! ದಾನ ವ್ರತಗಳಿಂದ, ಜಪ ತಪ ಹೋಮಗಳಿಂದ, ವೇದಾಧ್ಯಯನ ಪ್ರವಚನಗಳಿಂದ, ಇಂದ್ರಿಯ ನಿಗ್ರಹ ಮನೋಜಯಗಳಿಂದ – ಇನ್ನಿತರ ಹಿತಕರ ರೀತಿಗಳಿಂದ ಶ್ರೀಕೃಷ್ಣನಲ್ಲಿ ಭಕ್ತಿಯು ಲಭಿಸುವುದು ನಿಜ. ಆದರೆ ಅನಾಯಾಸವಾಗಿ ವಾಸುದೇವನಲ್ಲಿ ಅನಿತರ ಸಾಧ್ಯವಾದ ಭಕ್ತಿಯು ನಿಮಗೆ ದೊರಕಿತೆಂದರೆ, ಮುನಿಜನ ದುರ್ಲಭನಾದ ಮುರಹರನ ಪರಮಾನುಗ್ರಹವೇ ಸರಿ! ಪತಿ ಪುತ್ರಾದಿಗಳನ್ನು ಗೃಹಧನಗಳನ್ನು ಲಕ್ಷಿಸದೆ, ಲಕ್ಷ್ಮೀಪತಿಯ ಪಾದಾಂಬುಜ ಗಂಧತತ್ಪರರಾದ ನಿಮ್ಮ ಅದೃಷ್ಟವು ಅತಿ ದುರ್ಲಭವಾಗಿದೆ. ಸರ್ವೇಂದ್ರಿಯಾಗೋಚರನಾದ ಶ್ರೀಕೃಷ್ಣನೇ ಸರ್ವಸ್ವಾಮಿ ಎಂಬ ಭಾವವನ್ನು, ವಿರಹವ್ಯಥೆಯಿಂದ ದೃಢೀಕರಿಸಿದ ವಾಸುದೇವನು ನಿಮ್ಮಲ್ಲಿ ಮಹಾನುಗ್ರಹವನ್ನು ಮಾಡಿರುವನು. ನಿಮಗೆ ಸುಖಕರವಾದ ಶ್ರೀಶನ ಸಂದೇಶವನ್ನು ಕೇಳಿ! ಆ ಸಂದೇಶವನ್ನು ಪೊತ್ತು ತಂದ ನಂದನಂದನನ ಕಿಂಕರನಾದ ನನ್ನಲ್ಲಿ ದಯಮಾಡಿ!

ಶ್ರೀಭಗವಂತನು ಪೇಳಿರುವನು –

ನಿಮ್ಮ ವಿಯೋಗವೆನಗೆ ಸರ್ವಾತ್ಮನಾ ಇಲ್ಲ. ಪೃಥಿವ್ಯಪ್ತೇಜೋವಾಯು ಗಗನಗಳು ಜೀವಶರೀರಗಳಲ್ಲಿಯೂ, ಹೊರಗೂ, ಇದ್ದಂತೆ ನಾನು ಸರ್ವತ್ರ ವ್ಯಾಪ್ತನಾಗಿರುವೆನು ಮತ್ತು ಸ್ವತಂತ್ರನಾಗಿರುವೆನು. ಜೀವನ ಮನಃ ಪ್ರಾಣ ಬುದ್ಧೀಂದ್ರಿಯಾದಿ ವ್ಯಾಪಾರಗಳನ್ನು ನಡೆಸುತ್ತಾ, ನಿರ್ವಿಕಾರನಾಗಿ, ಸರ್ವಾಧಾರನಾಗಿ ಪ್ರಕಾಶಿಸುತ್ತಿರುವೆನು. ನನ್ನ ಇಚ್ಛೆಯಿಂದಲೇ ಸರ್ವವನ್ನು ವ್ಯಾಪಿಸಿ, ಸ್ವಾಮಿಯಾಗಿ ನಡೆಸುತ್ತಿರುವೆನು. ಜ್ಞಾನಮಯನು ಅಪ್ರಾಕೃತನು ಜೀವಜಡರೂಪ ಜಗದ್ವಿಲಕ್ಷಣನು ಆನಂದಜ್ಞಾನಾದ್ಯನಂತಗುಣಪೂರ್ಣನು ಆದ ನನ್ನನ್ನು ವೇದಗಳಿಂದಲೇ ಸಚ್ಛಾಸ್ತ್ರಗಳಿಂದಲೇ ತಿಳಿಯಬಹುದಾಗಿದೆ. ಸ್ವಪ್ನಸುಷುಪ್ತಿ ಜಾಗ್ರದ್ದಶೆಗಳಲ್ಲಿ ಸ್ವತಂತ್ರರಲ್ಲದ ಜೀವರಿಗೆ ಆ ತ್ರಿವಿಧಾವಸ್ಥೆಗಳನ್ನೀವ ಸ್ವತಂತ್ರನು ಈಶನು. ಅವನೇ ಶ್ರೀಕೃಷ್ಣನೆಂಬುವ ಅನುಮಾನವು ಕೂಡ ನನ್ನನ್ನು ತಿಳಿಸಿಕೊಡುತ್ತಿದೆ. ಜ್ಞಾನಿಪ್ರತ್ಯಕ್ಷವು ಕೂಡ ನನ್ನ ಸರ್ವೋತ್ತಮತ್ವ ವನ್ನೇ ತಿಳಿಸುತ್ತದೆ.

ದುಷ್ಟಶಾಸ್ತ್ರತ್ಯಾಗ, ತಪಸ್ಸು, ದಾನ, ಇಂದ್ರಿಯನಿಗ್ರಹ, ಸತ್ಯವಚನ, ವೇದವಿಚಾರಗಳೆಲ್ಲವೂ ವಾಸುದೇವನ ಜ್ಞಾನಸಾಧನವೆನಿಸಿದೆ. ಸರ್ವನದಿಗಳು ಸಮುದ್ರದಲ್ಲಿ ಸೇರುವಂತೆ, ಸಕಲ ಸಾಂಖ್ಯಾದಿಶಾಸ್ತ್ರಗಳು ಶ್ರೀಹರಿ ಪಾರಮ್ಯಪ್ರಬೋಧಕವಾಗಿದೆ.

ಇಂತಹ ಸರ್ವಾಂತರ್ಯಾಮಿಯಾದ ನಾನು ನಿಮ್ಮ ಸಮೀಪದಲ್ಲೇ ಸರ್ವದಾ ಇದ್ದರೂ ಕಣ್ಣಿಗೆ ದೂರನಾಗಿರುವುದು-ನಿಮ್ಮ ಮನವು ನನ್ನ ಧ್ಯಾನರತವಾಗಿ ಸದಾ ಹರಿಸ್ಮರಣಶೀಲ ವಾಗಲೆಂದೇ ಆಗಿದೆ. ಲೋಕದಲ್ಲಿ ಸ್ತ್ರೀಯರಿಗಾಗಲಿ, ಪುರುಷರಿಗಾಗಲಿ ದೂರದಲ್ಲಿದ್ದ ಪ್ರಿಯಕರರಲ್ಲಿ ಮನಸ್ಸು ತೀವ್ರಾವೇಶಯುಕ್ತವಾಗಿರುವಂತೆ, ಅವರೇ ಹತ್ತಿರದಲ್ಲಿರುವಾಗ ಅಷ್ಟು ತೀವ್ರವಾಗಿರುವುದಿಲ್ಲ. ನನ್ನ ಸ್ಮರಣೆ ವ್ಯರ್ಥವಲ್ಲ. ಇತರ ವಿಷಯ ವಿಚಾರವನ್ನು ಪೂರ್ಣವಾಗಿ ಬಿಟ್ಟು, ನನ್ನನ್ನೇ ಭಕ್ತಿಯಿಂದ ಸ್ಮರಿಸುವ ನೀವು ಬೇಗನೆ ನನ್ನ ಪಾದಾರವಿಂದ ಸಾನ್ನಿಧ್ಯವನ್ನು ಪೊಂದುವಿರಿ! ವ್ರಜದ ವನರಂಗದಲ್ಲಿ ಗೃಹಬಂಧು ಸುಖಗಳನ್ನು ತೊರೆದು ಬಂದು, ನನ್ನ ಭಕ್ತಿಭಾವಬಂಧುರರಾಗಿ ಮೈಮರೆತು ನನ್ನೊಡನೆ ಕ್ರೀಡಿಸಿದ ಸುಖರಾತ್ರಿಗಳಂತಹ ಸ್ವರೂಪಾ ನಂದಾನುಭವವು ನಿಮಗೆ ಮೀಸಲಾಗಿದೆ.

ಇಂತು ಪ್ರಿಯತಮನ ಸಂದೇಶವನ್ನು ಆಲಿಸಿ, ವ್ರಜಸುಂದರಿಯರು ಉದ್ಧವನನ್ನು ನೋಡಿ ಇಂತೆಂದರು –

ಯದುವರ್ಗದ್ರೋಹಿಯಾದ ಕಂಸನು ಸಪರಿವಾರನಾಗಿ ಮಡಿದನು. ಒಳ್ಳೆಯದಾಯಿತು. ಕೃಷ್ಣಭಕ್ತರು ಸರ್ವಾರ್ಥಪೂರ್ಣರಾದರು. ಮಧುರೆಯಲ್ಲಿ ಶ್ರೀಕೃಷ್ಣನು ಸುಕ್ಷೇಮದಿಂದಿರುವನೇ? ಗದಾಗ್ರಜನು ಆಗಾಗ ಮಧುರೆಯ ಮದಿರೇಕ್ಷಣೆಯರಿಗೆ – ಮಧುರ ಮಂದಹಾಸ, ಕಟಾಕ್ಷ, ಪ್ರಿಯವಿಲಾಸಗಳಿಂದ ಪೂಜಿತನಾಗಿ – ಹಿತಕರವಾಗಿರುವನೇ? ನಾಗರಿಕ ನಾರಿಯರ ವಿಭ್ರಮ ವಿಲಾಸಪ್ರಿಯ ನರ್ಮವಚನ ಮಂದಹಾಸಗಳಿಂದ ವಂಚಿತನಾಗದಿರುವನೇ ನಮ್ಮ ರವಿಶೇಷಜ್ಞ ನಾದ ಜಾರಕೃಷ್ಣ? ಇರಲಿ! ಎಂದಾದರೊಂದು ದಿನ ನಮ್ಮನ್ನೂ – ಪುರನಾರಿಯರ ಗ್ರಾಮ್ಯಸ್ವೈರ ಕಥಾರತನಾಗಿದ್ದಾಗಲಾದರೂ ಒಂದು ಸಲ ಸ್ಮರಿಸುವನೇ? ಕುಮುದಕುಂದಕುಸುಮಗಂಧಿತವು, ಕುಮುದಬಾಂಧವಬಂಧುರ ಚಂದ್ರಿಕಾ ಸುಂದರವು, ಆದ ವನದಲ್ಲಿ ಚರಣನೂಪುರಝಣತ್ಕಾರ ಮನೋಹರ ರಾಸಗೋಷ್ಠಿಯಲ್ಲಿ ನಮ್ಮ ನರ್ಮಾಲಾಪವನ್ನಾಲಿಸುತ್ತಾ ಕ್ಷಣದಂತೆ ಕಳೆದ ಪವಿತ್ರ ರಾತ್ರಿಗಳನ್ನು ಯಾವಾಗಲಾದರೊಮ್ಮೆ ನೆನೆಯುವನೇ? ತನ್ನ ವಿರಹದಿಂದ ನೊಂದಿರುವ ನಮ್ಮ

ಸರ್ವಾಂಗಸಂಜೀವಿನಿಯಾದ ಸುಮಧುರ ದರ್ಶನವಿತ್ತು, ಇಂದ್ರನು ಮಳೆಯಿಂದ ವನವನ್ನಂತೆ ಸುಖಪಡಿಸುವನೇ?

ಅಯ್ಯೋ! ನಮ್ಮ ಹುಚ್ಚಿಗೇನೆನ್ನಬೇಕು! ಆ ಕೃಷ್ಣ–ಶತ್ರುವನ್ನು ಕೊಂದ – ರಾಜ್ಯದ ಸಿರಿಯನ್ನು ತನ್ನವರಿಗೆ ತಂದ-ನಗರನಾರಿಯರ ಮುಂದೆ ನಲಿಯುತ್ತಾ ನಿಂದ – ಇನ್ನು ಅವನಿಗೆ ನಮ್ಮಂತಹ ಹಳ್ಳಿಗಾಡು ಹುಡುಗಿಯರಿಂದ ಏನಾಗಬೇಕು? ಆಪ್ತಕಾಮನು, ಶ್ರೀರಮಣನು, ಸ್ವರಮಣನು ಆದ ಆ ಮಹಾತ್ಮನಿಗೆ ಯಾರಿಂದಲೂ, ಯಾವ ಪ್ರಯೋಜನವೂ ಇಲ್ಲ. ನಮಗೆ ನಿರಾಶೆಯೇ ಉಳಿದಿರುವುದು. ಪಿಂಗಳೆಯಂತಹ ಸ್ವೈರಿಣಿಯು ಕೂಡ ನಿರ್ವೇದದಿಂದಲೇ ಶಾಂತಳಾದಳು. ನಾವೂ ನಿರ್ವೇದನಿರ್ಲಿಪ್ತರಾಗುವವೆಂದು ಎಷ್ಟು ಪ್ರಯತ್ನಿಸಿದರೂ, ಆ ಕೃಷ್ಣನಲ್ಲಿಯ ತೃಷ್ಣೆ ಹಿಂಗದಿರುವುದು, ನಿರಪೇಕ್ಷವಾದ ಅವನ ವಕ್ಷದಲ್ಲಿ ಲಕ್ಷ್ಮೀದೇವಿಯೇ ಎಡೆಬಿಡದೆ ಇರುವಳೆಂದ ಮೇಲೆ, ಆ ಉತ್ತಮ ಶ್ಲೋಕನನ್ನು ಬಿಟ್ಟಿರಲು ಯಾರಿಗೆ ಸಾಧ್ಯವಾದೀತು? ಬಲರಾಮನಿಂದ ಕೂಡಿ ನಮ್ಮ ಕೃಷ್ಣನು ಸಂಚರಿಸಿದ ಸರಿತ್ತೀರ ವನಪ್ರದೇಶಗಳನ್ನು ನೋಡಿ, ಅವನ ವೇಣು ಮಧುರ ರವವನ್ನು ನೆನೆದು ಉದ್ಧವಾ! ನಮ್ಮ ಮನವು ಅವನಲ್ಲೇ ನಿಂತು ಶ್ರೀನಿವಾಸನ ಸುಂದರ ಚರಣಾರವಿಂದವನ್ನು ಮರೆಯದಂತೆ ಮಾಡಿದೆ! ಲಲಿತಗತಿ, ಉದಾರಹಾಸ, ಅವಲೋಕನ ವಿಲಾಸ, ಮಧುರವಚನವಿನ್ಯಾಸಗಳಿಂದ ನಮ್ಮ ಚಿತ್ತದಲ್ಲಿ ಹತ್ತಿ ಮೂಡಿರುವ ಉತ್ತಮಶ್ಲೋಕನನ್ನು, ನಾವೆಂತು ಮರೆಯಲಾಗುವುದು ಹೇಳು!

ಹೇ ನಾಥ! ಹೇ ರಮಾನಾಥ! ವ್ರಜನಾಥ! ಆರ್ತಿನಾಶನ! ನಿನ್ನ ಗೋಕುಲವನ್ನು ಪಾಪಪಂಕದಲ್ಲಿ ಮಗ್ನವಾಗದಂತೆ ಉದ್ಧರಿಸು ಪ್ರಭೂ!

## ೪೬. ಉದ್ಧವಕೃತ ಗೋಪೀಸ್ತುತಿ

ಶ್ರೀಶುಕನು ಹೇಳಿದನು-

ಕೃಷ್ಣ ಸಂದೇಶವನ್ನು ಕೇಳಿ ಸರ್ವ ವಿರಹಪೀಡಾದೂರರಾಗಿ ವ್ರಜನಾರಿಯರು ಕೃಷ್ಣ ಪ್ರಿಯನಾದ ಉದ್ಧವನನ್ನು ಪೂಜಿಸಿ ಸತ್ಕರಿಸಿದರು.

ಉದ್ಧವನು ಕೆಲಮಾಸದಲ್ಲಿ ವಾಸವಾಗಿ, ವಾಸುದೇವನ ಮಹಿಮಾಗಾನದಿಂದ ಗೋಪ ನರನಾರಿಯರ ದುಃಖವನ್ನು ಕಳೆದು ಅವರನ್ನಾನಂದಪಡಿಸಿದನು. ಅವರಿಗೆ ಉದ್ಧವನ ಕೃಷ್ಣಕಥಾ ವಾರ್ತೆಯಿಂದ ದಿನಗಳು ಕ್ಷಣಗಳಾದವು. ಆ ಹರಿದಾಸನು ವನಗಿರಿ ಕಂದರಗಳಲ್ಲಿ, ನದೀ ತೀರದಲ್ಲಿ ಕೇಶವಕೃತ ಕೀಡಾ ವಿಲಾಸಗಳನ್ನು ನೆನಪಿಗೆ ತಂದು, ಆ ಗೋಪಿಯರ ಕೃಷ್ಣಭಕ್ತಿಭರವನ್ನು ಕಂಡು, ಪರಮಪ್ರೀತನಾಗಿ ಇಂತಿಯರಿಗೆ ನಮಸ್ಕರಿಸಿ ಇಂತೆಂದನು –

ಗೋವಿಂದನೇ ಸರ್ವಸ್ವಾಮಿ ಎಂಬ ಭಕ್ತಿಭಾಗ್ಯವನ್ನು ಪೊಂದಿರುವ ಈ ಗೋಪ ತರುಣಿಯರು ಧನ್ಯಧನ್ಯರು! ಸಂಸಾರದಲ್ಲಿ ಮುಳುಗಿ ಮುನಿಗಳು! ನಾವು ಕೂಡ ಪೊಂದಲೆಣಿಸಿದ ಭಕ್ತಿ ಇವರಿಗೆ ದೊರಕಿದೆ. ಅನಂತನ ಸುಂದರ ಕಥಾಶ್ರವಣವಿಲ್ಲದ ಬ್ರಾಹ್ಮಣಾದಿ ಜನ್ಮಗಳಿಂದ ಏನು ಪ್ರಯೋಜನ? ವನಚರರು ವ್ಯಭೀಚಾರಶೀಲರಾದ ಇವೆರೆಲ್ಲಿ? ಪರಮಾತ್ಮನಾದ ಶ್ರೀಕೃಷ್ಣನೆಲ್ಲಿ? ಆದರೂ ಭಕ್ತಿಭಾವದಿಂದ ತನ್ನನ್ನು ಭಜಿಸುವ ಸುಜನರಿಗೆ ಭಕ್ತಿವಶನಾದ ಶ್ರೀಹರಿಯು ಅವರವರ ಯೋಗ್ಯತೆ, ಕರ್ಮಗಳಿಗನುಕೂಲವಾದ ಫಲವನ್ನು ಕೊಡುತ್ತಿರುವನಲ್ಲವೇ? ಒಳ್ಳೆಯ

ಔಷಧದಂತೆ ಭಕ್ತಿಯು ಫಲಕಾರಿಯಾಗಿ ಭಗವತ್ಪ್ರಸಾದವನ್ನು ತಂದುಕೊಡುವುದು. ಈ ವಲ್ಲವೀಪಲ್ಲವಾಧರೆಯರಲ್ಲಿ ಮಾಡಿದ ಪ್ರಸಾದವನ್ನು ಶ್ರೀಶನು ಅಖಿಲ ವಿಲಾಸೋಪೇತ ಶರೀರ ಕಾಂತಿಕಾಂತೆಯರಾದ ಸ್ವರ್ಗಸುಂದರಿಯರಲ್ಲಿಯೂ ತೋರಿಲ್ಲ, ರಾಸೋತ್ಸವದಲ್ಲಿ ಶ್ರೀರಮಣನ ಭುಜವನ್ನಾಲಿಂಗಿಸಿ ಪಿಡಿದು, ಬೇಕಾದಂತೆ ಕ್ರೀಡಿಸಿದ ಆ ವ್ರಜನಾರಿಯರೇನು ಪುಣ್ಯವನ್ನು ಮಾಡಿರುವರೋ! ಇವರು ಚರಣರೇಣು ಸ್ಪರ್ಶಪಾತ್ರನೆನಿಸಿ, ವೃಂದಾವನದಲ್ಲಿ ತರು ಗುಲ್ಮ ಲತಾ ಜನ್ಮಗಳು ಬಂದರೂ, ನಾನು ಆನಂದದಿಂದ ಗುಲ್ಮಲತಾದಿಯಾಗೇ ಇರುವೆನು. ದುಸ್ತ್ಯಜರಾದ ಸ್ವಜನರನ್ನು, ಅನಿಂದಿತವಾದ ಆರ್ಯಮಾರ್ಗವನ್ನು – ಸಕಲವನ್ನೂ – ಬಿಟ್ಟು, ವೇದ್ಯೈಕ ಸಮಧಿಗಮ್ಯನಾದ ಮುಕುಂದಚರಣವನ್ನು ಸೇವಿಸಿ, ಶ್ರೀದೇವಿಯು – ಬ್ರಹ್ಮಾದಿಗಳು – ಯೋಗೇಶ್ವರರು ಪೂಜಿಪ ಭಗವಂತನ ಚರಣಾರವಿಂದವನ್ನು ಸ್ತನಕಲಶಗಳಲ್ಲಿಟ್ಟು, ಹೃತ್ತಾಪ ವನ್ನು ಕಳೆದುಕೊಂಡ ಈ ಗೋಪಿಯರೇ ಪುಣ್ಯವತಿಯರು! ಇವರ ಗೋವಿಂದ ಗುಣಗಾನವು ಭುವನತ್ರಯ ಪಾವನವಾಗಿದೆ. ಇವರ ಪಾದರೇಣುವನ್ನು ಸ್ತುತಿಸಿ, ಪುನಃ ಪುನಃ ನಾನು ಧನ್ಯ ನಾಗುತ್ತಿರುವೆನು.

ಅನಂತರ ಉದ್ಧವನು ನಂದಾದಿಗಳನ್ನು ಗೋಪಿಯರನ್ನು ಬೀಳ್ಕೊಟ್ಟು, ರಥವನ್ನಾರೋಹಿಸಿ ದನು. ನಂದಾದಿಗಳವನಿಗೆ ಪ್ರೀತಿಯ ಕಾಣಿಕೆಗಳನ್ನಿತ್ತು ಕಣ್ಣೀರು ಹರಿದುಹೋಗುತ್ತಿರಲು, ಇಂತೆಂದರು –

ನಮ್ಮ ಮನಸ್ಸು ದುಂಬಿಯಾಗಿ ಕೃಷ್ಣಪಾದಾಂಬುಜವನ್ನಾಶ್ರಯಿಸಲಿ! ಅವನ ಪವಿತ್ರ ನಾಮಗಳನ್ನು ನಮ್ಮ ನಾಲಿಗೆ ನುಡಿಯಲಿ! ಕಾಯವವನಿಗೆ ಭಕ್ತಿಭರದಿಂದ ಬಾಗಲಿ! ಕರ್ಮಾ ನುಸಾರವಾಗಿ ದೇವಾದಿ ಯೋನಿಗಳಲ್ಲಿ ಪುಟ್ಟಿ ಬಂದಾಗ ಮಾಡಿರುವ ಮಂಗಲಚರಿತಗಳಿಂದ ದಾನಗಳಿಂದ ನಮ್ಮ ಸ್ವಾಮಿಯಾದ ಶ್ರೀಕೃಷ್ಣನಲ್ಲಿ ಭಕ್ತಿಭಾಗ್ಯವು ದೊರಕಲಿ!

ಅವರ ಮಾತನ್ನು ಕೇಳಿ, ಪುಳಕಿತಗಾತ್ರನಾದ ಉದ್ಧವನು ಮಧುರೆಗೆ ಬಂದು ಆ ವೃತ್ತಾಂತ ವನ್ನೆಲ್ಲ ಗೋವಿಂದರಾಮರಿಗೆ ನಿರೂಪಿಸಿ, ಕಾಣಿಕೆಗಳನ್ನೂ ಸಮರ್ಪಿಸಿದನು.

## ೪೭. ಕುಬ್ಜಾಗೃಹಗಮನ — ಅಕ್ರೂರ ಸಂಪ್ರೇಷಣ

ಶ್ರೀಶುಕನು ಹೇಳಿದನು-

ಒಂದು ದಿನ ಸರ್ವಜ್ಞನಾದ ಶ್ರೀಕೃಷ್ಣನು, ಕಾಮತಪ್ತಳಾದ ಸೈರಂಧ್ರಿಯನ್ನು ಸಂತೈಸಲು ಅವಳ ಮನೆಗೆ ಪೋದನು.

ಬೆಲೆಬಾಳುವ ಆಸನಶಯನಾದಿಗಳಿಂದಲು, ಕಾಮೋಪಾಯಗಳಿಂದಲು, ಮುತ್ತಿನ ಸರ, ಧ್ವಜ ಪತಾಕೆಗಳಿಂದಲೂ, ಅಲಂಕೃತವಾದ ಅವಳ ಮನೆಯ ಧೂಪ ದೀಪಗಳು, ಪೂಮಾಲೆ ಗಳು, ಗಂಧಾಮೋದಗಳು ಮನೋಹರವಾಗಿದ್ದವು. ಕೃಷ್ಣನನ್ನು ನೋಡುತ್ತಲೇ ಕುಬ್ಜೆ ಎದ್ದು ಬಂದು, ಸ್ವಾಗತವನ್ನಿತ್ತು, ದಾಸಿಯರಿಂದ ಕೂಡಿ, ಆ ಪ್ರಭುವರನನ್ನು ಚೆನ್ನಾಗಿ ಸತ್ಕರಿಸಿದಳು.

ಉದ್ಧವನು ಕೂಡ ಪೂಜಿತನಾಗಿ, ಕೃಷ್ಣಪಾದ ಸಮೀಪದಲ್ಲಿ, ತನ್ನಾಸನವನ್ನು ಕೈಲಿ ಮುಟ್ಟಿ, ಕೆಳಗೆ ಕುಳಿತನು. ಕೃಷ್ಣನು ದಿವ್ಯದಾಂತಾಸನದಲ್ಲಿ ಕುಳಿತು, ಮಜ್ಜನ ಮಾಡಿ, ದುಕೂಲವನ್ನುಟ್ಟು, ಭೂಷಣಗಳನ್ನಿಟ್ಟು, ಗಂಧವನ್ನು ಹಚ್ಚಿ, ಮಾಲೆಗಳನ್ನು ಧರಿಸಿ, ತಾಂಬೂಲಾದಿಗಳನ್ನು ತಂದು,

ಸಮೀಪಿಸಿದ ಸುಂದರ ಸೈರಂಧ್ರಿಯನ್ನು ಕರೆದು, ಆಲಿಂಗಿಸಿ, ನವಸಂಗಮ ಸುಖವನ್ನಿತ್ತು, ಅವಳರ್ಪಿಸಿದ ಗಂಧದ ಪುಣ್ಯಲೇಶವನ್ನು ಅನಂತವಾಗಿರಿಸಿದನು.

ಆನಂದಮೂರ್ತಿಯನ್ನಾಲಿಂಗಿಸಿ, ಅವರ ಚರಣವನ್ನು ಸ್ತನಾದಿಗಳಲ್ಲಿಟ್ಟು, ದೀರ್ಘತಾಪವನ್ನು ಕಳೆದುಕೊಂಡು, ಕುಬ್ಜೆ, ಕೃಷ್ಣನೊಡನೆ ರಮಿಸಿದಳು. ಕೈವಲ್ಯಾದಿ ಪುರುಷಾರ್ಥಪ್ರದನು, ಯೋಗಿ ದುರ್ಲಭನು ಆದ ಶ್ರೀಹರಿ ತಾನಾಗಿ ಒಲಿದು ಬಂದಿರಲು, ಅವಳಿತ್ತ ಗಂಧದಿಂದ ಪ್ರಸನ್ನನಾಗಿರಲು, ವಿಷಯಾಶೆಯನ್ನು ಬಿಡದ ಆ ಕುಮತಿಯು, ಕಾಮವರವನ್ನೇ ಬೇಡಿದಳು. ಅನಂತರ ಶ್ರೀಕೃಷ್ಣನು ಅವಳ ಕೋರಿಕೆಯಂತೆ ಕೆಲದಿನವಲ್ಲಿದ್ದು, ಉದ್ಧವನಿಂದ ಕೂಡಿ ತನ್ನ ಮನೆ ಸೇರಿದನು. ಸರ್ವೇಶ್ವರನನ್ನು ಪೂಜಿಸಿ, ಒಲಿಸಿಕೊಂಡು, ಶಬ್ದಾದಿ ವಿಷಯಗಳನ್ನೇ ಬೇಡಿದ ಆ ಸೈರಂಧ್ರಿಯ ದಡ್ಡತನ ದೊಡ್ಡದಲ್ಲವೇ?

ಒಂದು ದಿನ ಬಲರಾಮೋದ್ಧವರಿಂದೊಡಗೂಡಿ, ಶ್ರೀಕೃಷ್ಣನು ಅಕ್ರೂರನಿಂದ ಒಂದು ಕೆಲಸವನ್ನು ಸಾಧಿಸಲಿಚ್ಛಿಸಿ, ಅವನಿಗೆ ತಾನಿತ್ತ ಪ್ರಿಯದರ್ಶನವರವನ್ನು ನೆನೆದು, ಅಕ್ರೂರನ ಮನೆಗೆ ಹೋದನು. ಅವರನ್ನು ನೋಡಿ, ಎದ್ದು ಬಂದು, ಅಕ್ರೂರನು, ಸುಸ್ವಾಗತವನ್ನಿತ್ತು, ಆಲಿಂಗಿಸಿ, ಪಾದಾರವಿಂದ ಜಲವನ್ನು ಶಿರಸ್ಸಿನಲ್ಲಿ ಧರಿಸಿದನು. ದಿವ್ಯಾಂಬರಾಭರಣಹಾರ ಗಂಧಗಳನ್ನರ್ಪಿಸಿ, ಪೂಜಿಸಿ, ವಂದಿಸಿದನು. ಶ್ರೀಕೃಷ್ಣನ ಚರಣನಲಿನವನ್ನು ತೊಡೆಯಲ್ಲಿಟ್ಟು, ಒತ್ತುತ್ತಾ, ವಿನಯದಿಂದ ಇಂತೆಂದನು –

ಪಾಪಿ ಕಂಸ ಸತ್ತನು; ಒಳ್ಳೆಯದಾಯಿತು; ನಮ್ಮ ಯಾದವಕುಲವೇ ನಿಷ್ಕಳಂಕವಾಯಿತು. ನಮ್ಮ ಕಷ್ಟಗಳೆಲ್ಲ ನಿಮ್ಮಿಬ್ಬರಿಂದ ಕೊನೆಗಂಡವು; ನೀವು ಸಾಮಾನ್ಯರೇ! ಜಗತ್ತಿಗೆ ಉಪಾದಾನವಾದ ಅಹಂಕಾರತತ್ವಕ್ಕೆ ಸ್ವಾಮಿಯಾದ ಶೇಷನಿವನಾದರೆ, ನೀನು ಸಾಕ್ಷಾತ್ ಪರಮಪುರುಷನಾದ ನಾರಾಯಣನಾಗಿರುವೆ! ಬ್ರಹ್ಮಾದಿ ಸರ್ವಜಗವೆಲ್ಲ ಕಾಲದಿ ನಿನ್ನಧೀನವಾಗಿದೆ. ವಿಶ್ವವನ್ನು ಇಚ್ಛಾಮಾತ್ರದಿಂದ ಸೃಜಿಸಿ, ಒಳಹೊಕ್ಕು ಪ್ರೇರಿಸಿ, ಸರ್ವಸ್ವಾಮಿಯಾಗಿರುವ ನಿನ್ನನ್ನು ಸಕಲವೇದಗಳು ಪೊಗಳುತ್ತಿವೆ – ಹಾಗೂ ಬ್ರಹ್ಮಾದಿ ಜ್ಞಾನಿಗಳು ನಿನ್ನನ್ನು ಪ್ರತ್ಯಕ್ಷೀಕರಿಸಿಕೊಂಡು ಧನ್ಯರಾಗಿರುವರು. ಪೃಥಿವ್ಯಾದಿ ಮಹಾಭೂತಗಳು ತಮ್ಮ ಭೋಗಸ್ಥಾನವೆನಿಸಿದ ಚರಾಚರ ಜೀವಶರೀರಗಳಲ್ಲಿ, ಅವರವರ ಅದೃಷ್ಟಕ್ಕನುಗುಣವಾಗಿ, ಶುಕ್ಲ ನೀಲಾದಿ ನಾನಾರೂಪದಿಂದ ವ್ಯಕ್ತನಾಗುವಂತೆ, ನೀನು ನಿನ್ನಿಂದ ಕಾರಣವಾಗಿರಿಸಲ್ಪಟ್ಟ ವಸ್ತುಗಳಲ್ಲಿ ನಾನಾ ರೂಪವಾಗಿ ವಿರಾಜಿಸುವೆ. ನೀನು ಸ್ವತಂತ್ರನಾದ್ದರಿಂದಲು, ಅಪ್ರಾಕೃತನಾದ್ದರಿಂದಲು, ಪೃಥಿವ್ಯಾದಿಗಳಂತೆ ವಿಕಾರವನ್ನು ಪೊಂದುವುದಿಲ್ಲ. ತ್ರಿಗುಣಗಳಿಂದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಸ್ವತಂತ್ರನಾಗಿ ಮಾಡುವ ನಿನಗೆ ಆ ತ್ರಿಗುಣ ಬಂಧವಾಗಲಿ, ಕರ್ಮಲೇಪವಾಗಲಿ ಇಲ್ಲ; ನಿನಗೆ ಕಾರಣರು ಮತ್ತಾರೂ ಇಲ್ಲ. ದೇಹಾದಿಗಳನ್ನು ತಂದೊಡ್ಡುವ ಕರ್ಮಗಳ ಬಂಧ ನಿನಗಿಲ್ಲ; ದೇಹದಿಂದ ಮೋಕ್ಷವೂ ಇಲ್ಲ. ಅಪ್ರಾಕೃತ ಜ್ಞಾನಾನಂದಾತ್ಮಕವಾದ ದೇಹವುಳ್ಳ ನಿನಗೆ ಬಂಧ ಮೋಕ್ಷಗಳಿಲ್ಲವೆಂಬ ತತ್ತ್ವಜ್ಞಾನವನ್ನು ನಮಗೆ ದಯಮಾಡಿ ಕೊಡು! ಜಗದ್ಧಿತವಾಗಲೆಂದು ನೀ ತೋರಿದ ವೇದಮಾರ್ಗವು ಪಾಖಂಡ ಮತಗಳಿಂದ ಕೆಟ್ಟ ಜನರಿಂದ ಪೀಡಿತವಾದಾಗ, ಲೋಕ ಸುಖವನ್ನುಂಟುಮಾಡಲು ಜ್ಞಾನಾನಂದ ದೇಹನಾಗಿ ನೀನು ಪ್ರಾದುರ್ಭವಿಸುವೆ. ಇಂದು ವಸುದೇವನ ಮನೆಯಲ್ಲಿ ಭೂಭಾರವನ್ನಿಳುಹಲು ಅವತರಿಸಿ, ರಾಕ್ಷಸರಾಜರ ಶತಾಯುತ ಸೈನ್ಯಗಳನ್ನು ನಾಶಮಾಡಿ, ಯದುಕುಲದ ಕೀರ್ತಿಯನ್ನು ಬೆಳಗಲಿರುವೆ. ಕೃಷ್ಣಾ! ನಾನಿಂದು ಪೂರ್ಣಭಾಗ್ಯ

ಶಾಲಿಯಾಗಿರುವೆನು. ಸರ್ವ ದೇವ ಪಿತೃ ಭೂತ ನರರಲ್ಲಿ ಅಂತರ್ಯಾಮಿಯಾದ ನಿನ್ನ ಭುವನ ಪಾವನ ಪಾದಜಲಧಾರಣದಿಂದ ನಾನು, ನನ್ನವರು, ನನ್ನ ಮನೆ, ಎಲ್ಲವು ಪಾವನವಾದವು.

ಭಜಿಸುವ ಭಕ್ತರ ಯೋಗ್ಯತೆಯನ್ನರಿತು ಸರ್ವಕಾಮಗಳನ್ನು ಪೂರೈಸುವೆ. ಕೊನೆಗೆ ಮೆಚ್ಚಿ, ನಿನ್ನನ್ನೇ ಕೊಟ್ಟಬಿಡುವೆ. ಸ್ವಾಮೀ! ಸಾರೂಪ್ಯ ಸಾಯುಜ್ಯಗಳನ್ನಿತ್ತು ಸಲಹುವ ನಿನ್ನಂತಹ ಸತ್ಯವಚನನು, ಅನಿಮಿತ್ತಬಂಧುವು, ಕೃತಜ್ಞನು, ಸರ್ವಜ್ಞನು, ಭಕ್ತಪ್ರಿಯನಾದ ಪ್ರಭುವನ್ನು ನಾನು ಕಾಣೆನು. ಅದ್ವಿತೀಯನೆನಿಸಿ ಮೆರೆವ ನಿನ್ನ ಚರಣಸೇವೆಯನ್ನು ಯಾವ ಬುದ್ಧಿವಂತನು ಬಿಟ್ಟಾನು? ನಿನಗೆ ನಮ್ಮಂತೆ ಬಾಲ್ಯಜರಾದಿ ವಿಕಾರಗಳಿಲ್ಲ. ಏನು ಪುಣ್ಯವು ಫಲಿಸಿತೋ ಕಾಣೆ ಕೃಷ್ಣಾ! ಸುರೇಶ ಯೋಗೇಶರು ಕಾಣಲಾರದ ನಿನ್ನ ಚರಣದರ್ಶನವನ್ನು ನಾನಿಂದು ಕಂಡೆ. ಮಕ್ಕಳು, ಮಡದಿ, ಮನೆ, ಧನ, ದೇಹಗಳಲ್ಲಿ ನಿನ್ನ ಆಜ್ಞೆಯಿಂದ ಬಂದಿರುವ ಬಂಧಕಶಕ್ತಿಫಲ ವಾದ ನಾನು ನನ್ನದೆಂಬ ಮೋಹಪಾಶವನ್ನು ಕುಡಿದುಬಿಡು!

ಭಕ್ತವತ್ಸಲನಾಗ ಭಕ್ತನಾ ಅಕ್ರೂರನ ನುಡಿಯನ್ನಾಲಿಸಿ, ನಸುನಕ್ಕು, ಮೋಹಪಡಿಸುತ್ತಾ, ಇಂತೆಂದನು –

ಅಕ್ರೂರ! ನೀನು ನಮಗೆ ಚಿಕ್ಕಪ್ಪನಲ್ಲವೇ? ಶ್ಲಾಘನೀಯ ಗುಣಶಾಲಿಯು, ಬಂಧುಸತ್ತ ಮನು ಆದ ನಿನಗೆ ನಮ್ಮಲ್ಲಿ, ವತ್ಸಲ್ಯ, ದಯೆ ಇರುವುದು ಸಹಜವಾಗಿದೆ. ಪೋಷಣ, ರಕ್ಷಣಾ ದಿಗಳಿಂದ ಮಕ್ಕಳನ್ನು ಸಲಹುವುದು ಹಿರಿಯರ ಕರ್ತವ್ಯಾವೇ ಸರಿ! ನಿನ್ನಂತಹ ಸಾಧು ಸಜ್ಜನರ ಸೇವೆ ನಮಗೆ ಶ್ರೇಯಸ್ಕರವೆನಿಸುವುದು. ಪೂಜೆಗೆ ತಕ್ಕ ಫಲವನ್ನು ಮಾತ್ರ ಕೊಡುವ ದೇವತೆ ಗಳಂತೆ, ಸ್ವಾರ್ಥವನ್ನು ಲಕ್ಷ್ಯದಲ್ಲಿಡದೆ ಪರಾರ್ಥೈಕ ಪರಾಯಣರಾದ ಸಾಧುಗಳೂ ಪೂಜನೀಯರಾಗಿರುವರು. ಕಾಣಿಸುವ ಜಲವೇ ತೀರ್ಥವಲ್ಲ. ಕಲ್ಲುಮಣ್ಣಿನ ಪ್ರತಿಮೆಗಳೇ ದೇವತೆಗಳಲ್ಲ; ಅನುಸಂಧಾನ ಉಳ್ಳವರಿಗೆ ತೀರ್ಥ ಪ್ರತಿಮಾದೇವತೆಗಳು ಚಿರಕಾಲಸೇವನೆಯಿಂದ ಪ್ರಸನ್ನರಾಗಿ, ಸಜ್ಜನೋಪದೇಶವನ್ನು ಕೊಡಿಸಿ, ಸಲಹುವರಾಗಲಿ, ಸಾಧುಗಳು ದರ್ಶನಮಾತ್ರ ದಿಂದಲೇ ಪ್ರಸನ್ನರಾಗಿ, ದರ್ಶನ ರಹಸ್ಯಗಳನ್ನು ತಿಳಿಸಿ, ಉದ್ಧರಿಸುವರು.

ನಿನ್ನಂತಹ ಬಂಧುವೆನಗಿಲ್ಲ. ಕೇಳು, ಸ್ವಲ್ಪಶ್ರೇಯಃ ಪ್ರಯೋಜನವನ್ನು ನಿನ್ನಿಂದ ಪಡೆಯ ಲೋಸುಗ ಬಂದಿರುವೆನು. ಪಾಂಡವರ ಸ್ಥಿತಿಗತಿಗಳನ್ನು ತಿಳಿದು ಬರಲು ಹಸ್ತಿನಾವತಿಗೆ ಹೋಗಿ ಬಾ! ಪಾಪ! ತಂದೆಯು ಮೃತನಾಗಲು, ತಾಯಿಯೊಡನೆ ನಮ್ಮ ಪಾಂಡವರು ಹಸ್ತಿನಾವತಿಯಲ್ಲಿ ಧೃತರಾಷ್ಟ್ರನ ಪೋಷಣೆಯಲ್ಲಿದ್ದಾರೆಂದು ಕೇಳಿರುವೆವು. ತಮ್ಮನ ಮಕ್ಕಳಾದ ಪಾಂಡವರಲ್ಲಿ, ಅಂಬಿಕಾಪುತ್ರನು, ಸರಿಯಾಗಿ, ಸಮನಾಗಿಲ್ಲವೆಂದು ಕೇಳಿರುವೆವು. ಅಂಧರಾಜನು, ದುಷ್ಟಸುತ ವಶವರ್ತಿಯು ಆದ ಅವನಿಂದ ಹೆಚ್ಚು ಧರ್ಮಕಾರ್ಯವಿನ್ನೇನು ನಡೆದೀತು? ಹೋಗು! ಪಾಂಡು ಸುತರ ವೃತ್ತಾಂತವನ್ನು ಚೆನ್ನಾಗಿ ತಿಳಿದು ಬಾ! ನಮ್ಮವರಿಗೆ ಕ್ಷೇಮವಾಗುವಂತೆ ಮಾಡುವುದು ನಮ್ಮ ಕರ್ತವ್ಯವಲ್ಲವೇ?

ಅಕ್ರೂರನಿಂತಾಜ್ಞಾಪಿಸಲ್ಪಟ್ಟು, ಹಸ್ತಿನಾವತಿಗೆ ಹೊರಟುಹೋದನು. ಶ್ರೀಕೃಷ್ಣನು ರಾಮೋದ್ಧವರಿಂದ ಕೂಡಿ ರಾಜಭವನವನ್ನು ಸೇರಿದನು.

# ೪೮. ಅಕ್ರೂರಕೃತ ಧೃತರಾಷ್ಟ್ರೋಪದೇಶ

ಶ್ರೀಶುಕನು ಹೇಳಿದನು–

ಪೌರವರಾಜಯಶೋವಿರಾಜಿತವಾದ ಹಸ್ತಿನಾವತಿಯನ್ನು ಸೇರಿ, ಅಕ್ರೂರನು ಧೃತರಾಷ್ಟ್ರನನ್ನು ಭೀಷ್ಮನನ್ನು, ವಿದುರ ಕುಂತಿಯರನ್ನು, ಪಾಂಡವರನ್ನು ಬಾಹ್ಲೀಕನನ್ನು, ದ್ರೋಣಕೃಪರನ್ನು, ಕರ್ಣನನ್ನು, ಸುಯೋಧನನನ್ನು, ಅಶ್ವತ್ಥಾಮನನ್ನು, ಇತರ ಮಿತ್ರ ಬಂಧುಜನರನ್ನು ಕ್ರಮವಾಗಿ ನೋಡಿ, ಅವರಿಂದ ಯೋಗಕ್ಷೇಮ ವಿಚಾರವನ್ನು ಮಾಡಿದನು.

ರಾಜನ ನಡತೆಯನ್ನು ಪರೀಕ್ಷಿಸಲು, ಕೆಲತಿಂಗಳಿದ್ದು, ಅಕ್ರೂರನು, ದುಷ್ಪರಂತೆ ನಡೆಯುವ, ಅಲ್ಪಮತಿಯಾದ ಧೃತರಾಷ್ಟ್ರನ ದುರ್ನೀತಿಯನ್ನು ಅರಿತನು. ಪಾಂಡವರ ತೇಜ, ಅವರ ವೀರ್ಯ, ವಿನಯ, ಬಲ ಮುಂತಾದ ಸುಗುಣಗಳಿಂದ ಪ್ರಜರು ಅವರನ್ನು ಪ್ರೀತಿಸುತ್ತಿರುವುದನ್ನು ಸಹಿಸದೆ, ಧಾರ್ತರಾಷ್ಟ್ರರು ಅವರಲ್ಲಿ ಅಸೂಯೆಯಿಂದ ವಿಷಭೋಜನಾದಿಗಳನ್ನಿತ್ತ ದುರ್ನಯವನ್ನೂ ತಿಳಿದನು. ವಿದುರ, ಕುಂತಿಯರು ಪೇಳಲಾಗಿ, ಸಮಸ್ತವನ್ನು ತಿಳಿದು, ಅಕ್ರೂರನು ಖಿನ್ನನಾದನು. ಆಗ ಅಣ್ಣನಾದ ಅಕ್ರೂರನನ್ನು ನೋಡಿ ಕುಂತೀದೇವಿಯು, ಕಣ್ಣೀರಿಟ್ಟು, ಕಡುದುಃಖದಿಂದ ಇಂತೆಂದಳು–

ಅಣ್ಣ! ನಮ್ಮ ತಂದೆ, ತಾಯಿ, ಅಣ್ಣಂದಿರು ನಮ್ಮನ್ನು ಸ್ಮರಿಸುತ್ತಿರುವರೆ? ತಂಗಿಯರು, ಅತ್ತಿಗೆಯರು, ಅಳಿಯಂದಿರು, ಸ್ನೇಹಿತರು ನಮ್ಮನ್ನು ಮರೆತಿಲ್ಲವಲ್ಲ? ಅಳಿಯನು ನಮ್ಮ ಪೆಸರೆತ್ತುವ ಮಾತ್ರವಾದರೂ ಭಾಗ್ಯ ಮಾಡಿರುವನೇ? ಶರಣ್ಯನು, ಭಕ್ತವತ್ಸಲನು ಆದ ಭಗವಂತ ಪುಂಡರೀಕಾಕ್ಷನು, ತೋಳಗಳಿಗೆ ಸಿಕ್ಕುಬಿದ್ದ ಜಿಂಕೆಯಂತೆ, ಶತ್ರುಮಧ್ಯದಲ್ಲಿ ದುಃಖಿಸುತ್ತಿರುವ ನನ್ನನ್ನು, ನನ್ನ ಪರದೇಶಿ ಮಕ್ಕಳನ್ನು ಬಂದು ಸಂತೈಸುವನೇ?

ಕೃಷ್ಣ! ಕೃಷ್ಣ! ಸರ್ವಸ್ವಾಮೀ! ಸರ್ವಪಾಲಕ! ಶ್ರೀಶ! ಮಕ್ಕಳಿಂದ ಕೂಡಿ ಕಷ್ಟಪಡುವ ಈ ಭಕ್ತಳನ್ನೇಕೆ ದಯದಿಂದ ನೋಡದಿರುವೆ? ಗೋವಿಂದಾ! ನರರಿಗೆ ನಿನ್ನ ಚರಣಾರವಿಂದವನ್ನು ಬಿಟ್ಟು ಅನ್ಯಶರಣ್ಯವಾದುದು ಉಂಟೇ? ಮೃತ್ಯುಸಂಸಾರದಿಂದ ಭೀತರಾಗಿ, ಮೋಕ್ಷಸಾಧನವಾದ ನರದೇಹವಿದ್ದಾಗ, ನಿನ್ನನ್ನು ಭಜಿಸಿ ಧನ್ಯರಾಗುವಂತೆ ಮಾಡು. ಕೃಷ್ಣ! ಪೂರ್ಣಗುಣ! ಜೀವವಲ್ಲಭ! ಬ್ರಹ್ಮಾದಿ ನಿಯಾಮಕ! ಸಕಲೋಪಾಯ ಪ್ರದರ್ಶಕ! ನಿನಗೆ ಶರಣು ಬಂದಿರುವೆನು. ನಮೋ ನಮಃ!

ಶ್ರೀಶುಕನು ಹೇಳಿದನು–

ರಾಜನ್! ಇಂತು ನಿಮ್ಮ ಪ್ರಪಿತಾಮಹಿಯಾದ ಪೃಥಾದೇವಿಯು, ಸ್ವಜನರನ್ನು ಮತ್ತು ಶ್ರೀಕೃಷ್ಣನನ್ನು ನೆನೆದು, ವಿವಶಳಾಗಿ, ರೋದಿಸತೊಡಗಿದಳು. ಅವಳ ದುಃಖದಲ್ಲಿ ಸಮಭಾಗಿಯಾಗಿ ಅಕ್ರೂರನು ಮತ್ತು ವಿದುರನು, ಕುಂತಿಯನ್ನು ಸಮಾಧಾನಪಡಿಸಿದರು; ಅವಳಿಗೆ ಪಾಂಡವರು ದೂರ್ವಾಸ ಮಂತ್ರತೋಷಿತರಾದ ದೇವಶ್ರೇಷ್ಠರ ಅಂಶದಿಂದ ಜನಿಸಿರುವ ವೃತ್ತಾಂತವನ್ನೂ ನೆನಪಿಗೆ ತಂದುಕೊಟ್ಟರು.

ಕೊನೆಗೆ ಹಿಂದಿರುಗಲು ಉದ್ಯುಕ್ತನಾದ ಅಕ್ರೂರನೊಂದು ದಿನ, ಸಭೆಯಲ್ಲಿ, ಸರ್ವಸಹೃದ್ಬಾಂಧವರ ಮಧ್ಯದಲ್ಲಿ ನೆರೆದಿದ್ದ ಧೃತರಾಷ್ಟ್ರನನ್ನು ನೋಡಿ, ಹಿತವಚನದಿಂದ ಇಂತೆಂದನು-

ರಾಜನ್! ವಿಚಿತ್ರವೀರ್ಯಪುತ್ರ! ಕುರುವಂಶದ ಕೀರ್ತಿಯು ನಿನ್ನಿಂದ ಬೆಳಗಲಿ! ಕೇಳು,

ತಮ್ಮನು ಮೃತನಾದನು; ಅವನ ಮಕ್ಕಳು ನಿನ್ನನ್ನು ನಂಬಿ ನಿಂತಿರುವರು. ಧರ್ಮದಿಂದ ಧರಾಪಾಲನವನ್ನು, ಶೀಲದಿಂದ ಪ್ರಜಾರಂಜನವನ್ನು, ನಿಷ್ಪಕ್ಷಪಾತವರ್ತನದಿಂದ ಸ್ವಜನ ಪ್ರೀತಿಯನ್ನು, ಸಂಪಾದಿಸು! ಆದರಿಂದ ನಿನಗೆ ಶ್ರೇಯವು ಸಿದ್ಧಿಸಿ, ಕೀರ್ತಿಯು ಬೆಳಗುವುದು. ಹಾಗೆ ಮಾಡದಿರೆ, ಈ ಲೋಕದಲ್ಲಿ ನಿಂದೆ, ಪರದಲ್ಲಿ ಹಾನಿ ನಿನಗೆ ತಪ್ಪಿದ್ದಲ್ಲ; ಇನ್ನು ಮೇಲಾದರೂ ನಿನ್ನ ಮಕ್ಕಳನ್ನಂತೆ ಪಾಂಡವರನ್ನೂ ಸಲಹಿ ಕಾಪಾಡು! ಯಾರೂ ಯಾರಿಂದಲೂ ಕೂಡಿ ಈ ಲೋಕದಲ್ಲಿ ಶಾಶ್ವತವಾಗಿ ಉಳಿಯುವುದಿಲ್ಲ. ರಾಜನ್! ತನ್ನ ದೇಹವೇ ತನ್ನನ್ನು ಬಿಟ್ಟೋಡುವಾಗ ಇನ್ನು ದಾರಾಪುತ್ರಾದಿಗಳು ಹಿಂದೆ ಬರುವರೇ? ಜಂತುವು ಒಬ್ಬನೇ ಹುಟ್ಟಿ ಬರುವನು– ಹೋಗುವಾಗಲೂ ಒಬ್ಬನೇ. ಸುಕೃತ ದುಷ್ಕೃತಗಳ ಫಲವನ್ನು ಉಣ್ಣುವವನು ಕೂಡ ಅವನೊಬ್ಬನೇ– ಆದರಿಂದ ಇತರರಿಗೆ ಸಂಬಂಧವಿಲ್ಲ. ಬುದ್ಧಿಹೀನನು ಕಷ್ಟಪಟ್ಟು ಅಧರ್ಮದಿಂದ ಸಂಪಾದಿಸಿದ ದ್ರವ್ಯವನ್ನು – ಅವನ ಸತಿಸುತರು – ಅಶನ ವಸನಗಳಿಗೆಂದು – ಕಸಿದು – ಮೀನುಗಳು ನೀರನ್ನು ಕುಡಿದಂತದೆ – ಕಾಣದೆ ಸುಲಿದು – ನುಂಗಿಬಿಡುವರು. ನನ್ನವರೆಂಬ ದುರ್ಮತಿಯಿಂದ ಅಪಂಡಿತನಾಗಿ ಪೋಷಿಸಿದ ಸುತರು, ಸತಿಯರು, ಹಿತವರೆಲ್ಲರು ಕೊನೆಗೆ ಅಸಮರ್ಥನಾದ ತನ್ನನ್ನು ಬಿಡಲು, ಜೀವನ ಪ್ರಯೋಜನವನ್ನು ಕಿಂಚಿತ್ತಾದರೂ ಸಾಧಿಸದ ಪಾಪಿಜೀವನು – ಪಾಪದ ಹೊರೆಯನ್ನು ಮಾತ್ರ ಹೊತ್ತು, ನರಕವನ್ನು ಸೇರುವನು. ಸ್ವಧರ್ಮವಿಮುಖನಾದ ಇಂತಹ ನರನಿಗಿಂತ ದಡ್ಡರುಂಟೇ? ಆದ್ದರಿಂದ ರಾಜನ್! ಈ ಲೋಕದ ಸುಖಗಳೆಲ್ಲವು ಸ್ವಪ್ನದಂತೆ ಈಶಾಧೀನ, ಮಾಯೆಯಂತೆ ಪ್ರಯೋಜನರಹಿತ, ಮನೋರಥದಂತೆ ಅಸಾಧ್ಯವೆಂದು ತಿಳಿದು, ನನ್ನವರು, ಪರರೆಂಬ ವಿಷಮಬುದ್ಧಿಯನ್ನು ತೊರೆದು ತಿಳಿಮನಸ್ಸಿನಿಂದ ಶ್ರೀಭಗವಂತನನ್ನು ಭಜಿಸಿ, ಶಾಂತನಾಗು!

ಆ ಮಾತನ್ನು ಕೇಳಿ ಧೃತರಾಷ್ಟ್ರನಿಂತೆಂದನು –

ಯದುಕುಲತಿಲಕ! ಅಕ್ರೂರ! ನಿಜ ನಿನ್ನ ಮಾತು! ಅಮೃತದಂತಿರುವ ನಿನ್ನ ವಚನವನ್ನು ಕೇಳಿ ಸಾಕೆನಿಸದೆ ಇದೆ. ಆದರೂ ಪುತ್ರಪ್ರೀತಿ ದೂಷಿತವಾಗಿ ಈ ನನ್ನ ಹೃದಯಾಕಾಶದಲ್ಲಿ, ನಿನ್ನ ಹಿತೋಪದೇಶವು ಮಿಂಚಿನ ಬಳ್ಳಿಯಂತೆ ಹಾದುಹೋಯಿತಾಗಲಿ, ಸ್ಥಿರವಾಗಿ ನಿಂತಿಲ್ಲ. ಇರಲಿ! ಈಶ್ವರೇಚ್ಛೆಗೆ ಬಂದಂತಾಗಲಿ! ಅದನ್ನು ಮೀರಿ ನಡೆಯಲು ಮನುಜರಿಂದ ಸಾಧ್ಯವೇ? ಯದುಕುಲದಲ್ಲಿ ಭೂಭಾರವನ್ನಿಳುಹಲು ಅವತರಿಸಿದ ಆ ಸ್ವಾಮಿಯ ಮನಸ್ಸಿಗೆ ಹೀಗೇ ಬಂದಂತಿದೆ.

ಎಣಿಸಲಾಗದ ಮಹಾಮಹಿಮೆಯಿಂದ ಆ ಶ್ರೀಹರಿಯು, ಜಗವನ್ನೆಲ್ಲ ಸೃಜಿಸಿ, ಪಾಲಿಸಿ, ಸಂಹರಿಸುತ್ತಿರುವನು. ಗುಣಗಳಿಂದ ಜಗತ್ಕಾರ್ಯವನ್ನು ನಡೆಸುತ್ತಾ, ಹೀಗೆಂದು ಸಂಪೂರ್ಣವಾಗಿ ತಿಳಿಯಲಶಕ್ಯವಾದ ಕ್ರೀಡಾದಿ ಗುಣವಿಶಿಷ್ಟನಾಗಿ, ಸಂಸಾರ ಚಕ್ರವನ್ನು ತನ್ನಿಚ್ಛೆಯಂತೆ ತಿರುಗಿಸುತ್ತಿರುವ ಆ ಪರಮೇಶ್ವರನಿಗೆ ನಮೋ ನಮಃ.

ಇಂತು ರಾಜನ ಅಭಿಪ್ರಾಯವನ್ನು ತಿಳಿದು, ಅಕ್ರೂರನು, ಬಂಧುಮಿತ್ರರ ಅಪ್ಪಣೆಯನ್ನು ಪಡೆದು, ಹಿಂದಿರುಗಿ, ಮಧುರೆಯನ್ನು ಸೇರಿದನು. ಅಲ್ಲಿ ಶ್ರೀಕೃಷ್ಣನಿಗೆ ವಂದಿಸಿ, ಧೃತರಾಷ್ಟ್ರನ ಚೇಷ್ಟೆಗಳನ್ನು ಪಾಂಡವರ ಸ್ಥಿತಿಗತಿಗಳ ವಿವರವನ್ನು ವರ್ಣಿಸಿ, ನಿರೂಪಿಸಿದನು.

ದಶಮಸ್ಕಂಧ ಪೂರ್ವಾರ್ಧವು ಸಂಪೂರ್ಣವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ದಶಮ ಸ್ಕಂಧವು - ಉತ್ತರಾರ್ಧ

|| ಹರಿಃ ಓಂ ||

### ೪೯. ಜರಾಸಂಧ ಪರಾಜಯ

ಶ್ರೀಶುಕನು ಹೇಳಿದನು–

ರಾಜನ್! ಸಚ್ಛಾಸ್ತ್ರದಿಂದ ಕಾದಾಡುವ ಅಸಚ್ಛಾಸ್ತ್ರದಂತೆ, ಶ್ರೀಕೃಷ್ಣನಿಂದ ಕಾದಾಡಿದ ಜರಾಸಂಧನ ಯುದ್ಧಪ್ರಕಾರವನ್ನು ವರ್ಣಿಸುವೆನು, ಕೇಳು. ಜರಾ ಅಂದರೆ ವಯೋಹಾನಿ– ತಾನು ಸತ್ತರೂ ಶ್ರೀಕೃಷ್ಣ ದ್ವೇಷವನ್ನು ಬಿಡುವುದಿಲ್ಲವೆಂಬ ದುಷ್ಟಹಟದಿಂದ, ಜರಾಸಂಧನೆನಿಸಿದ ಮಗಧ ರಾಜನಿಗೆ ಆಸ್ತಿ, ಪ್ರಾಸ್ತಿ ಎಂಬುವ ಕನ್ಯೆಯರಿದ್ದರು. ಅವರನ್ನು ಕಂಸನು ಅಪಹರಿಸಲು, ಸ್ವಕೀಯನೆಂಬ ಅಭಿಮಾನದಿಂದ ಕ್ಷಮಿಸಿ, ಜರಾಸಂಧನು, ಸುಮ್ಮನಿದ್ದನು. ಆಸ್ತಿ ಎಂದರೆ ಅಜ್ಞಾನ, ಪ್ರಾಸ್ತಿ ಎಂದರೆ ಅನ್ಯಥಾ ಜ್ಞಾನ. ಅವರಿಗೆ ಕಾಲನೇಮಿಯೇ ಗಂಡನು. ಕಂಸನೇ ಕಾಲನೇಮಿಯಲ್ಲವೇ? ಕಂಸನು ಮೃತನಾಗಲು, ದಿಕ್ಕಿಲ್ಲದೆ, ಅವರೀರ್ವರು ಜರಾಸಂಧನನ್ನು ಸೇರಿ, ತಮ್ಮ ವೈರೂಪ್ಯಕಾರಣನಾದ ಶ್ರೀಕೃಷ್ಣಚರಿತವನ್ನು ಹೇಳಿ, ಗೋಳಾಡಿದರು. ಅವನು ಅಪ್ರಿಯವಾದ ಆ ವೃತ್ತಾಂತವನ್ನು ಕೇಳಿ, ಕೆರಳಿ, ಈ ಜಗದಲ್ಲಿ ವಿಷ್ಣುಭಕ್ತರಿಲ್ಲದಂತೆ ಮಾಡಲು, ಪಣತೊಟ್ಟು ನಿಂತನು. ಇಪ್ಪತ್ತುಮೂರು ಅಕ್ಷೌಹಿಣಿಗಳ ಸೈನ್ಯವನ್ನು ತೆಗೆದುಕೊಂಡು ಬಂದು, ಮಧುರೆಯನ್ನು ಸುತ್ತು ಮುತ್ತಿದನು.

ಸಮುದ್ರದಂತೆ ಉಕ್ಕೇರಿ ಬರುವ ಸೈನ್ಯವನ್ನು ನೋಡಿ ಭಯಾಕುಲರಾದ ಸ್ವಜನರನ್ನು ಕಂಡು ಶ್ರೀಕೃಷ್ಣನು ಇಂತು ಚಿಂತಿಸಿದನು –

ಭೂಭಾರಭೂತವಾದ ಈ ದೊಡ್ಡ ಸೈನ್ಯವನ್ನು ನಾಶಪಡಿಸುವೆನು. ಆದರೆ ಮಾಗಧನನ್ನು ಕೊಲ್ಲದೆ ಬಿಡುವುದರಿಂದ, ಅವನು ಪುನಃ ಪ್ರಯತ್ನಿಸಿ ಇಂತಹ ಸೈನ್ಯಗಳನ್ನು ತರಲಿ, ಆಗ ಅದನ್ನೂ ಹಾಳುಮಾಡಿ, ನನ್ನ ಅವತಾರಕಾರ್ಯವನ್ನು ಪೂರ್ತಿಗೊಳಿಸುವೆನು. ಸಾಧುಗಳನ್ನು ರಕ್ಷಿಸಿ, ದುಷ್ಟರನ್ನು ಶಿಕ್ಷಿಸಿ ಅಧರ್ಮವನ್ನಳಿಸಿ, ಧರ್ಮವನ್ನುಳಿಸುವುದೇ ನನ್ನ ಅವತಾರ ಪ್ರಯೋಜನವಲ್ಲವೇ?

ಆಗ ಮಾಗಧನ ಆಜ್ಞೆಯಿಂದ ಕಲಿಂಗ, ಚೇಕಿತಾನ, ದಂತವಕ್ತ್ರ, ವಿದೂರಥ, ಉಲ್ಮುಕ, ವೇಣುದಾರಿ, ಶಾಲ್ವ ಮೊದಲಾದವರು ಪೂರ್ವದ್ವಾರವನ್ನು ಶಿಶುಪಾಲನೊಡಯಗೂಡಿ ಮುತ್ತಿದರು. ವಿಂದಾನುವಿಂದ, ವಿರಾಟ, ದರದ, ಏಕಲವ್ಯ, ಬಾಹ್ಲಿಕ, ಪಂಚನದೇಶ್ವರರು ಮಧುರೆಯ ದಕ್ಷಿಣದ್ವಾರವನ್ನು, ಪೌಂಡ್ರಕನ ನಾಯಕತ್ವದಲ್ಲಿ ನಿರೋಧಿಸಿದರು. ಯುಧಾ

ಮನ್ಯು, ಬೃಹತ್‌ಕ್ಷತ್ರ, ಭೂರಿಶ್ರವ, ಉತ್ತಮೌಜ, ರುಕ್ಮಿ, ದ್ರುಮ, ಸುದಕ್ಷಿಣ ಮೊದಲಾದವರು ಪಶ್ಚಿಮದ್ವಾರವನ್ನು; ದ್ರುಪದ, ದಮಘೋಷ, ತ್ರಿಗರ್ತ, ಜಯದ್ರಥ, ಶಕುನಿ, ಸೋಮದತ್ತ, ಕುಣಿಂದ ಮೊದಲಾದ ಬಲವಂತ ಸೇನಾನಿಗಳು ಉತ್ತಮದ್ವಾರವನ್ನು ಜರಾಸಂಧನಿಂದ ಕೂಡಿ ಮುತ್ತಿದರು. ಆ ಸೈನ್ಯವು ಸಮುದ್ರದಂತೆ ಉಕ್ಕೇರಿ ಬಂದು, ಮಾಡಿದ ಸಿಂಹನಾದ, ಊದಿದ ಶಂಖಗಳ ಭೀಕರ ಧ್ವನಿ, ಹೊಡೆದ ಭೇರಿಗಳ ಭಾಂಕಾರಗಳನ್ನು ಕೇಳಿ ಶ್ರೀಕೃಷ್ಣನು ನರಿಗಳ ಕೂಗನ್ನು ಕೇಳಿ ಚಲಿಸದ ಸಿಂಹದಂತೆ ಶಾಂತನಾಗಿದ್ದನು.

ಅದೇ ಸಮಯದಲ್ಲಿ ಗಗನದಿಂದ ಸೂರ್ಯಪ್ರಕಾಶವಾದ ಎರಡು ರಥಗಳು ಕೆಳಗಿಳಿದು ಬಂದವು. ದೈವೇಚ್ಛೆಯಿಂದ ಬಂದ ದಿವ್ಯಾಯುಧಗಳಲ್ಲಿದ್ದವು. ಸಹಸ್ರಾರ ಮನೋಹರವು ದೈತ್ಯಾನೀಕಭೀಕರವು ಆದ ಸುದರ್ಶನ ಚಕ್ರ, ದೊಡ್ಡ ಕೌಮೋ ದಕೀಗದೆ, ತ್ರಿನತವಾದ ಶಾರ್ಙ್ಗಧನುಸ್ಸು, ನಂದಕವೆಂಬ ನಿಶಿತ ಖಡ್ಗ, ಶರಪೂರ್ಣನಾದ ಅಕ್ಷಯ ತೂಣೀರಗಳೆರಡು, ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ದಿವ್ಯಾಶ್ವಗಳು ಶ್ರೀಕೃಷ್ಣನಿಗಾಗಿ ಬಂದವು. ಹಲಮುಸಲಗಳು ಬಲರಾಮನಿಗಾಗಿ ಅವತರಿಸಿದವು. ಆಗ ಶ್ರೀಕೃಷ್ಣನು ಅಣ್ಣನಿಗೆ ಇಂತೆಂದನು–

ಆರ್ಯ, ನಿನ್ನನ್ನು ನಂಬಿ ನಿಂತ ಯಾದವರಿಗೆ ಬಂದ ವ್ಯಸನವನ್ನು ನೋಡು! ನಿನ್ನ ರಥವನ್ನು ಆಯುಧಗಳನ್ನು ಸ್ವೀಕರಿಸು! ನಮ್ಮ ಭಕ್ತರ ವ್ಯಸನವನ್ನು ದೂರಮಾಡಲಲ್ಲವೇ ನಾವೀರ್ವರು ಅವತರಿಸಿರುವುದು? ಈ ದುಷ್ಟರ ಸೈನ್ಯವಿಪತ್ತು ಮೂರು ಅಕ್ಷೌಹಿಣಿಗಳನ್ನು ಕ್ಷಣದಲ್ಲಿ ನಾಶಮಾಡು!

ಶ್ರೀಕೃಷ್ಣರಾಮರು ತನ್ನ ಸೈನ್ಯದೊಡನೆ ಯುದ್ಧಸನ್ನದ್ಧರಾಗಿ ನಾಲ್ಕು ದ್ವಾರಗಳ ರಕ್ಷಣೆಗೆ ನಿಂತರು. ಪೂರ್ವದ್ವಾರದಲ್ಲಿ ವಸುದೇವ ನಿಶಠ, ಕೃತವರ್ಮ, ಉದ್ಧವರು ನಿಂತರು; ಉಗ್ರಸೇನ, ಸುದಾಮ, ಪೃಥುವಿ ಪೃಥುಗಳು ದಕ್ಷಿಣದ್ವಾರರಕ್ಷಕರಾದರು. ಸಾತ್ಯಕಿ, ಗದ, ಪ್ರಸೇನು, ಅಕ್ರೂರರನ್ನು ಪಶ್ಚಿಮದ್ವಾರದಲ್ಲಿಟ್ಟು, ಬಲರಾಮನಿಂದ ಕೂಡಿ ಶ್ರೀಕೃಷ್ಣನು ದಾರುಕ ಸಾರಥಿಕನಾಗಿ ಉತ್ತಮದ್ವಾರದಲ್ಲಿ ನಿಂತನು.

ಜಗದೀಶ್ವರನು ಉತ್ತಮದ್ವಾರದಿಂದ ಊರ ಹೊರಗೆ ಬಂದು, ದೈತ್ಯಭೀಷಣವಾದ ಪಾಂಚಜನ್ಯವನ್ನು ಊದಿ, ದಾರುಕನಿಗೆ ಚೈದ್ಯಮಾಗಧರಿದ್ದಲಿಗೆ ತನ್ನ ರಥವನ್ನು ಹೊಡೆಯುವಂತೆ ಆಜ್ಞೆ ಮಾಡಿದನು. ಶ್ರೀರಾಮಕೃಷ್ಣರ ಶಂಖನಾದವನ್ನು ಕೇಳಿ, ಶತ್ರುಗಳ ಗುಂಡಿಗೆ ಬಿಚ್ಚಿತು. ಇತರ ಪೂರ್ವದಕ್ಷಿಣ ದ್ವಾರಗಳಲ್ಲಿಯು ಜರಾಸಂಧ ಪಕ್ಷೀಯರಾದ ರಾಜರಿಗೂ ಯಾದವರಿಗೂ, ಘೋರ ಸಂಗ್ರಾಮವಾಯಿತು. ಬಲರಾಮ ಕೃಷ್ಣರನ್ನು ನೋಡಿ, ಚತುರಂಗಬಲದಿಂದ ಕೂಡಿ, ಜರಾಸುತನು-ವಾಯುವು ಮೇಘಜಾಲದಿಂದ ಸೂರ್ಯನನ್ನಂತೆ ಮುತ್ತಿ ಆರ್ಭಟಿಸಿದನು.

ಮಧುರಾನಗರ ಸೌಧಾಗ್ರಗಳಲ್ಲಿ ನಿಂತು ನೋಡುತ್ತಿದ್ದ ನಾರೀಗಣವು, ಗರುಡ ತಾಲ ಧ್ವಜಗಳು ಬಾಣವರ್ಷದಲ್ಲಿ ಅಡಗಿ ಕಾಣದಾಗಲು, ಭೀತಿಯಿಂದ ಮೂರ್ಛಿತರಾದರು. ಪರಸೈನ್ಯದ ಬಾಣವಿಜೃಂಭಣವನ್ನು ಕಂಡು, ಶ್ರೀಕೃಷ್ಣನು, ಶಾರ್ಙ್ಗಧನುಷ್ಟಂಕಾರವನ್ನು ಮಾಡಿ, ಚಂದ್ರಧವಳ ಪಾಂಚಜನ್ಯವನ್ನೂದಿ, ತನ್ನವರಿಗೆ ಧೈರ್ಯವನ್ನು ತುಂಬಿ, ನಿರಂತರ ಬಾಣಜಾಲ ದಿಂದ ಶತ್ರುಕುಂಜರತುರಗಪದಾತಿರಥಿಕರನ್ನು ಸಂಹರಿಸಿದನು. ಯಾದವರು ಕೂಡ ಬಹುರಾಜ ಬಲವನ್ನು ತುಂಡರಿಸಿದರು.

ಆಗ ಶಿಶುಪಾಲನು 'ಕೃಷ್ಣ! ನಿಲ್ಲ! ನಿಲ್ಲೆಂದು' ಬಂದು ಮುತ್ತಲು, ಅವನಿಗೆ ಬಾಣಗಳಿಂದಲೇ ಉತ್ತರವನ್ನಿತ್ತು ಗೋವಿಂದನು ವಿಜೃಂಭಿಸಲು ಶಿಶುಪಾಲನು ನಾಲ್ಕು ಬಾಣಗಳಿಂದ ಕುದುರೆಗಳನ್ನು, ಒಂದರಿಂದ ದಾರುಕನನ್ನು ಪೀಡಿಸಿ, ಹತ್ತು ಬಾಣಗಳಿಂದ ಕೃಷ್ಣನನ್ನ ಹೊಡೆದು, ಗರ್ಜಿಸಿದನು. 'ಸಾಧು! ಬಳಿ! ವೀರನಿರುವೆ! ಇನ್ನು ನನ್ನ ಕರವಿನ್ಯಾಸ ಕೌಶಲವನ್ನು ನೋಡು' ಎಂದು ಮುಂದೆ ಸರಿದ ಗೋವಿಂದನನ್ನು ರಾಜರು ಬಹುಮಂದಿ ಒಂದೇ ಸಲ ಎದುರಿಸಿ, ಬಾಣ ವರ್ಷವನ್ನು ಸುರಿಸಿದರು. ಅವರೆಲ್ಲರ ಬಾಣಗಳನ್ನು ಮುರಿದು, ಮುರವೈರಿಯು ಐದು ಬಾಣಗಳಿಂದ ಶಿಶುಪಾಲನ ಸಾರಥಿಯನ್ನು ಕುದುರೆಗಳನ್ನು ಯಮನ ಮನೆಗೆ ಕಳಿಸಿದನು. ಹಾಗೂ ತನನ್ನೆದುರಿಸಿದ ರಾಜರಿಗೆ ಮೂರು ಮೂರು ಬಾಣಗಳಿಂದ ಎದೆಯಲ್ಲಿ, ಮುಖದಲ್ಲಿ ಲಲಾಟದಲ್ಲಿ ಹೊಡೆದು ಪ್ರತ್ಯುತ್ತರವನ್ನಿತ್ತನು.

ಆಗ ಮೂವತ್ತು ರಾಜರು ಸೇರಿ ಬರಲು, ಶ್ರೀಶನು ಅವರ ಧನುಸ್ಸುಗಳನ್ನು ಮೂವತ್ತು ಬಾಣಗಳಿಂದ ತುಂಡರಿಸಿ, ಶಿಶುಪಾಲನ ಧನುವನ್ನು ಮುರಿದನು. ನಗುನಗುತ್ತಾ ಅವರ ಧ್ವಜ ಛತ್ರಗಳನ್ನು ಕಿರೀಟವನ್ನು ಮೂರು ಬಾಣಗಳಿಂದ ಕೆಡಹಿದನು. ಹತ್ತು ಬಾಣಗಳಿಂದ ಅವನನ್ನೂ ಪೀಡಿಸಿ, ಓಡಿಸಿದನು. ಅಲಾತಚಕ್ರದಂತೆ ನಿರಂತರ ಬಾಣವರ್ಷವನ್ನು ಬಿಡುವ ಕೃಷ್ಣನ ಮುಂದೆ ನಿಲ್ಲಲಾರದೆ ಮಾಗಧನ ಸೈನ್ಯವು ದಿಕ್ಕೆಟ್ಟು ಓಡತೊಡಗಿತು. ರಥಗಳು ಮುರಿದುಬಿದ್ದವು. ಆನೆಗಳು ಹೆಣಗಳಾಗಿ ನೆಲಕ್ಕುರುಳಿದವು. ಕುದುರೆಗಳ ಕುತ್ತಿಗೆಗಳು ಮುರಿದವು. ಪದಾತಿಗಳು ಕೈಕಾಲು ಕುತ್ತಿಗೆ ಮುರಿದು ಸತ್ತುಬಿದ್ದರು; ರಕ್ತದ ಕಾಲುವೆಗಳು ಹರಿದವು.

ಬಲರಾಮನು ಮುಸಲಾಯುಧನಾಗಿ ಮಗಧರಾಜನ ಸೈನ್ಯವನ್ನು ಸಿಂಹವು ಕುರಿಹಿಂಡಿನನ್ನಂತೆ ನಾಶಗೊಳಿಸಿದನು.

ಪರೀಕ್ಷಿತನೇ! ಜಗಜ್ಜನನ ಪಾಲನ ಸಂಹರಣ ವಿಕ್ರಮನಾದ ಶ್ರೀಶನಿಗೆ ಶತ್ರುಸೈನ್ಯ ಸಂಹರಣವು ಆಶ್ಚರ್ಯವಲ್ಲ! ಆದರೂ ಮನುಜರಲ್ಲಿ ಮನುಜನಂತೆ ಆಡಿದ ಶ್ರೀಮದನಂತನು ಮಹಾಮಹಿಮೆಯನ್ನು ಸ್ವವಚನಪಾವನತೆಯಾಗಿ ವರ್ಣಿಸುವೆನು. ಕೇಳು! ಮದವತ್ತ ಗಜರಾಜರಂತೆ ಬಲರಾಮ ಜರಾಸಂಧರು ಹೋರಾಡುವಾಗ ಜರಾಸಂಧನು ಮಹಾಗದೆಯಿಂದ ಬಲರಾಮನ ಎದೆಗೆ ಗುರಿಯಿಟ್ಟು ಹೊಡೆದನು. ಬಲನು ಆ ಗದೆಯಿಂದ ತಪ್ಪಿಸಿಕೊಂಡು, ನಗುತ್ತ ಮುಸಲವನ್ನೆತ್ತಿ ಜರಾಸಂಧನ ಸಾರಥಿಯನ್ನು ಕೊಂದು ರಥವನ್ನು ಚೂರುಮಾಡಿದನು. ಸೈನ್ಯವೆಲ್ಲ ಸಾಯಲು ತಾನೂ ವಿರಥನಾಗಿ ಓಡುವ ಜರಾಸಂಧನನ್ನು ಪಿಡಿದು ವರುಣಪಾಶದಿಂದ ಕಟ್ಟಿ, ಕೊಲ್ಲಲು ಮುಸಲವನ್ನೆತ್ತಿದ ಬಲರಾಮನನ್ನು ವಾರಿಸಿ ವಾರಿಜಾಕ್ಷನು – ಮುಂದಿನ ಕಾರ್ಯಗೌರವವನ್ನಾಲೋಚಿಸಿ, ಬಿಡಿಸಿ ಕಳಿಸಿದನು.

ವೀರಸಮ್ಮತವಾದ ಜರಾಸಂಧನು ಅವಮಾನಭಯದಿಂದ ವನಪ್ರವೇಶವನ್ನು ಮಾಡಲೆಣಿಸಲು, ರಾಜರು ಅವನಿಗೆ ಧೈರ್ಯವನ್ನು ತುಂಬಿ, ಮಗಧೆಗೆ ಕಳಿಸಿದರು.

ಮಗಧರಾಜನ ಧನವನ್ನು, ಸ್ತ್ರೀಗಣವನ್ನು, ಕೋಶವನ್ನು, ಗಜತುರಗಾದಿಗಳನ್ನು ತೆಗೆದುಕೊಂಡು ಶ್ರೀಕೃಷ್ಣನು, ತನ್ನ ಮುಕ್ಕಾಗದ ಸೈನ್ಯದಿಂದ, ಸೂತಮಾಗಧವಂದಿಗಳ ಜಯಘೋಷವನ್ನು ಕೇಳುತ್ತಾ, ಮಧುರಾನಗರವನ್ನು ಪ್ರವೇಶಿಸಿದನು. ಮಧುರೆಯ ಪ್ರಜರು ಆನಂದದಿಂದ, ಆ ನಂದನಂದನನ ಶಿರದಿ ಸುಂದಾರ ಸುಮವೃಷ್ಟಿಯನ್ನುಗರೆದು ಶಂಖದುಂದುಭಿಧ್ವಾನದಿಂದ ಸ್ವಾಗತಿಸಿದರು. ಬ್ರಾಹ್ಮಣರು ವೇದಘೋಷದಿಂದ ಆಶೀರ್ವದಿಸಿದರು. ನಾರಿಯರು ಪ್ರೀತಿ

ಯಿಂದ ಕಣ್ಣರಳಿಸಿ ನೋಡುತ್ತಾ ಮಾಲ್ಯಗಳಿಂದಲು ಅಕ್ಷತೆಗಳಿಂದಲು ಸತ್ಕರಿಸಿದರು. ತಂದ ಧನವನ್ನು ಉಗ್ರಸೇನನಿಗಿತ್ತು ಶ್ರೀಕೃಷ್ಣನು ಬಲರಾಮನಿಂದ ಸುಖವಾಗಿದ್ದನು.

## ೫೦. ಜರಾಸಂಧ ದ್ವಿತೀಯ ಪರಾಭವ

ಮತ್ತೆ ಮೂರು ತಿಂಗಳಾಗಲು ಜರಾಸಂಧನು ಇಪ್ಪತ್ತುಮೂರು ಅಕ್ಷೌಹಿಣೀಸೈನ್ಯದಿಂದ ಬಂದು ಮಧುರೆಯನ್ನು ಮುತ್ತಿದನು. ಯಮುನಾತೀರದಲ್ಲಿ ಸ್ಕಂಧಾವಾರವನ್ನು ಕಟ್ಟಿ, ಅನುಚರರಾಜರಿಂದ ಕೂಡಿ, ದುರ್ಮದನಾಗಿ, ಯಮುನೆಯಲ್ಲಿ ಸ್ನಾನಮಾಡಿದರೆ ಪಾಪವು ಪೋಗುವುದೆಂಬ ಭಯದಿಂದ ಸುಮ್ಮನಿದ್ದ ಪಾಪಿಯ ವೃತ್ತಾಂತವನ್ನು ಕೇಳಿ, ಕೆರಳಿದ ಸಿಂಹದಂತಾಗಿ, ಶ್ರೀಕೃಷ್ಣನು ಬಲರಾಮ ವಸುದೇವ ಶೈನೇಯ ಉದ್ಧವ ಸಾರಣ ಅಕ್ರೂರರಿಂದ ರಾತ್ರಿ ಏಕಾಂತದಲ್ಲಿ ಮಂತ್ರಾಲೋಚನೆಯನ್ನು ನಡೆಸಿದನು. ಕಾರ್ಯವನ್ನು ನಿಶ್ಚಯಿಸಿ, ಸೂರ್ಯನು ಹುಟ್ಟಿದ ಮುಂಚೆಯೇ ಮೂರುಭಾಗವಾಗಿರಿಸಿದ ತನ್ನ ಚತುರಂಗಬಲದಿಂದ ಕೂಡಿ, ಹೊರಟು ಯಮುನಾತಟವನ್ನು ಸೇರಿದನು. ಬಲರಾಮ ಕೃತವರ್ಮ ಗದ ಸಾರಣರು ಎಡಗಡೆ ನಡೆಯುವಂತೆಯು, ಸಾತ್ಯಕಿ ವಿಪೃಥು ಪೃಥೂದ್ಧವರು ಬಲಗಡೆ ನಡೆಯುವಂತೆಯು, ಹೇಳಿಕಳಿಸಿ, ಶ್ರೀಕೃಷ್ಣನು ಕೆಲವೀರರೊಡನೆ ಜರಾಸಂಧನಿಗಭಿಮುಖವಾಗಿ ನಡೆದನು.

ಜರಾಸಂಧನ ಸೈನ್ಯವು ಯಮುನಾತೀರದಲ್ಲಿ ಮೈಮರೆತು ಮಲಗಿತ್ತು. ಸೂರ್ಯನು ಉದಯಾದ್ರಿ ಶಿಖರವನ್ನೇರಿ ಪೂರ್ವದಿಕ್ಕಾಂತೆಯ ಮುಖವನ್ನು ಪಕ್ಷಿಗಳು ಶಾಖೆಗಳನ್ನೇರಿ ವಿಹಂಗಮಾಂಗನೆಯರ ಮುಖವನ್ನು ಭ್ರಮರಗಳು ಅರಳಿದ ಕಮಲಗಳ ಮುಖವನ್ನು ಮುತ್ತಿಡುವಾಗ, ಶ್ರೀಕೃಷ್ಣನ ಸೈನ್ಯವು ಹಠಾತ್ತಾಗಿ ಬಂದು ಜರಾಸಂಧನ ಸೈನ್ಯವನ್ನು ಮುತ್ತಿತು. ಆನೆಗಳಿಗಂಬಾರಿಗಳು ಕುದುರೆಗಳಿಗೆ ಜೇನುಗಳು ರಥಗಳಿಗೆ ವಾಹನಗಳು ಕಟ್ಟಿರದೆ ಆಯುಧಗಳನ್ನು ಅಸ್ತವ್ಯಸ್ತವಾಗಿಟ್ಟು, ಕವಚಗಳನ್ನು ಧರಿಸದೆ, ಅಸಿದ್ಧವಾಗಿದ್ದ ಜರಾಸುತನ ಸೈನ್ಯವು ಮೂರು ದಿಕ್ಕಿನಿಂದಲೂ ಮುತ್ತಿದ ಮುಕುಂದನ ಸೈನ್ಯವನ್ನು ಕಂಡು, ಹೆದರಿ ದಿಗ್ಭ್ರಮೆಗೊಂಡಿತು. ಕೆಲವರು ಓಡಿಹೋದರು. ಕೆಲವರು ಬರಿಗೈಯಿಂದ ಹೋರಾಡಿ ಮಡಿದರು. ಕಡಿವಾಣವೂ ಇಲ್ಲದ ಕುದುರೆಗಳನ್ನೇ ಏರಿ, ಹೋರಾಡಿ, ಮಡಿದು, ಕೆಲವರು ಕೀರ್ತಿಕಾಂತಿಯನ್ನು ವರಿಸಿದರು. ಕೆಲವರು ರಾಜರು ವನಪ್ರವೇಶಮಾಡಿದರು. ಕೆಲವರು ಯಮುನೆಯಲ್ಲಿ ಬಿದ್ದು ಸತ್ತರು.

ಏಕರಥಿಕನಾಗಿ ಗೋವಿಂದನು ಮತ್ತು ಬಲರಾಮನು ಜರಾಸಂಧ ಬಲವನ್ನು ಸಂಪೂರ್ಣವಾಗಿ ನಾಶಮಾಡಿದರು. ಸಾತ್ಯಕಿ ಮುಂತಾದ ವೀರರು ವಿಜೃಂಭಿಸಿ, ಬಿಡದೆ ಹೊಡೆಯುತ್ತಿರಲು, ತಡೆಯಲಾಗದೆ ಮಾಗಧನ ಬಲವು ದಿಕ್ಕೆಟ್ಟು ಓಡಿತು. ಐದು ಯೋಜನದವರಿವಿಗೂ ಅವರ ಬೆನ್ನಟ್ಟಿ, ಕೊಂದು, ಸಾತ್ಯಕಿಯು, ಜಯಲಕ್ಷ್ಮಿಯನ್ನು ತಂದು, ಶ್ರೀಕೃಷ್ಣನಿಗರ್ಪಿಸಿದರು. ಯುದ್ಧದಲ್ಲಿ ಗೆದ್ದ ಆನೆ ಕುದುರೆಗಳು, ರಥಗಳು, ಆಯುಧಗಳು, ಚಕ್ರರತ್ನಧ್ವಜ ವಸ್ತ್ರಗಳು ಮೊದಲಾದುವನ್ನು ತೆಗೆದುಕೊಂಡು ಬಲರಾಮನು ಬಂದು, ಮಧುರೆಯಲ್ಲಿ ಉಗ್ರಸೇನನಿಗರ್ಪಿಸಿ, ವಿಷ್ಣುವಾದ ಕೃಷ್ಣನೊಡನೆ ಸುಖದಿಂದಿದ್ದನು.

## ೫೧. ಬಾಣಸಹಾಯ – ಕುಂಭಾಂಡ ಕೂಪಕರ್ಣರ ಸೋಲು

ಶ್ರೀಶುಕನು ಪೇಳಿದನು – ಮಾಧವನಿಂದ ಸೋದ ಮಾಗಧನು, ರಣೋತ್ಸಾಹಗೆಡದೆ, ಬಲಿಸುತನಾದ ಬಾಣನನ್ನು ಸಹಾಯ ಮಾಡೆಂದು ಬೇಡಲು, ಶೋಣಿತಪುರವನ್ನು ಸೇರಪೋದನು. ಕೃಷ್ಣನಿಗೆ ಸೋತು, ಮಿತ್ರರಾಜರಿಂದ ಕೂಡಿಬಂದ ಜರಾಸಂಧನನ್ನು ಸಹಸ್ರಬಾಹುವಾದ ಬಾಣನು ಭೋರ್ಗರೆವ ವಾದ್ಯಗಳಿಂದ, ವಾರಕಾಂತೆಯರಿಂದ, ಸೂತವಂದಿಗಳಿಂದ, ಪತಾಕಾಧ್ವಜಚ್ಛತ್ರಾದಿ ಮಂಗಲ ವಸ್ತುಗಳಿಂದ ಎದುರ್ಗೊಂಡು, ಕರೆತಂದನು. ಪರಸ್ಪರ ಗೌರವಗಳು ಮುಗಿದಮೇಲೆ ಜರಾಸಂಧನು ಸಭಾಸದರೆಲ್ಲ ಕೇಳುತ್ತಿರಲು ಬಾಣನಿಗೆ ಇಂತೆಂದನು –

'ಬಲಿಪುತ್ರ! ದಾನವೇಂದ್ರ! ಕೇಳು, ಅಧರ್ಮಶೀಲನು, ಕಳ್ಳನು ಆದ ಕೃಷ್ಣನು, ರಾತ್ರಿಯಲ್ಲಿ ವಂಚಿಸಿ ನಮ್ಮನ್ನು ಸೋಲಿಸಿದನು. ನಮ್ಮ ಕರಿತುರಗ ಕಾಂಚನಾದಿಗಳು ಆ ದುರಾತ್ಮನ ಕೈಸೇರಿದವು. ಈ ರಾಜರ ಮಾತನ್ನು ಮನ್ನಿಸಿ, ಅವನ ಸಂಗಡ ದ್ವಂದಯುದ್ಧವನ್ನು ಮಾಡದೆ, ನಿನ್ನಲ್ಲಿಗೆ ಬಂದೆ. ನನಗೆ ಬೇಕಾದ ಸೈನ್ಯ ಸಹಾಯವನ್ನು ಮಾಡು!'

ಬಾಣನಾಗ ಜರಾಸುತನನ್ನು, ಮಿಕ್ಕ ರಾಜರನ್ನು ಭೋಜನ, ಸ್ನಾನ, ಶಯನ, ಗಂಧ, ತಾಂಬೂಲಾದಿ ಭೋಗಗಳನ್ನಿತ್ತು ಸತ್ಕರಿಸಿ, ಸಭೆಯಲ್ಲಿ ಜರಾಸಂಧನನ್ನು ಉನ್ನತ ಹೈಮಾಸನ ದಲ್ಲಿ ಕುಳ್ಳಿರಿಸಿ ಇಂತೆಂದನು-

'ಜರಾಸಂಧ! ಕೇಳು, ನಾನು ಸುಳ್ಳಾಡುವವನಲ್ಲ. ಈ ಗಜತುರಗಗಳು, ಈ ರಾಜ್ಯಕೋಶ ಪ್ರಜರು, ಎಲ್ಲವೂ ನಿನ್ನಧೀನವೆಂದು ತಿಳಿ' ಎಂದು ಹೇಳಿ, ಲಕ್ಷ ರಥಗಳಿಂದಲು, ಅರವತ್ತು ಸಾವಿರ ಆನೆಗಳಿಂದಲು, ಹತ್ತು ಲಕ್ಷ ಕುದುರೆಗಳಿಂದಲು, ಮಾಯಾಸಂಗ್ರಾಮ ಚತುರದಾನವ ಬಹುಸೈನಿಕರಿಂದಲು, ಮೂರು ನೂರು ಬಲಿಷ್ಠ ಸೇನಾನಿಗಳಿಂದಲು ಕೂಡಿದ ಸೈನ್ಯವನ್ನು ಕೊಟ್ಟನು. ಶಿಬಿಕಾಛತ್ರಚಾಮರ ವ್ಯಜನ ಭೂಷಣ ವಸನ ಭಾಂಡಶಯನಗಳನ್ನು ಲೆಕ್ಕವಿಡದೆ ಕೊಟ್ಟು, ತನ್ನ ಮಂತ್ರಿವರರಾದ ಕುಂಭಾಂಡ ಕೂಪಕರ್ಣರನ್ನು ಸಹಾಯಕರಾಗಿರಲು ಕೊಟ್ಟು ಕಳಿಸಿದನು.

ಆ ದೈತ್ಯರಿಗೆ ಕಾಲವು ಸಮೀಪಿಸಿತ್ತು! ಸುರಾಸುರರೆತ್ತಿ ಬಂದರೂ ಲೆಕ್ಕಿಸದೆ ಸಂಹರಿಸುವ ಶ್ರೀಹರಿಯು ಎಲ್ಲಿ? ನೀಚರಾದ ಕುಂಭಾಂಡ ಕೂಪಕರ್ಣರೆಲ್ಲಿ? ಶ್ರೀಹರಿಯ ಅನಂತಪರಾಕ್ರಮ ವನ್ನರಿಯದೆ, ರಾಜರು ಕೂಡ ಮಾಗಧನ ಸಹಾಯಕ್ಕಾಗಿ ಸೈನ್ಯವನ್ನು ತಂದರು. ಇಂತು ಮತ್ತೆ ಮಹಾಸೈನ್ಯಸಮೇತರಾಗಿ ಜರಾಸುತನು ಮಧುರೆಯನ್ನು ಮುತ್ತಿದನು. ದ್ವಾರಗಳನ್ನು ನಿರೋಧಿಸಿ, ಕುಠಾರಗಳಿಂದ, ಕುದ್ದಾಲಗಳಿಂದ, ಹಾರೆಕೋಲುಗಳಿಂದ ಕೋಟೆಯನ್ನು ಭೇದಿಸುವ ಮಾಗಧ ಸೈನ್ಯವನ್ನು ನೋಡಿ, ರಾಮಕೃಷ್ಣರು ರಣಭೇರಿಯನ್ನು ಹೊಡೆಸಿ, ರಥ ಗಜ ತುರಗ ಪದಾತಿಯುತ ರಾಗಿ, ರಣಕಣಕ್ಕಿಳಿದರು. ಸಾತ್ಯಕಿ ಕೃತವರ್ಮ ಗದಾ ಉಗ್ರಸೇನ ವಸುದೇವ ಪ್ರಮುಖರು ಹಿಂಬಾಲಿಸಲು, ಸಿಂಹದ್ವಯದಂತೆ ಶೋಭಿಸುವ ರಾಮಕೃಷ್ಣರು ಕದನಕ್ರೀಡಾಕುತೂಹಲಿಗಳಾಗಿ ಮಧುರೆಯಿಂದ ಹೊರಬಂದರು.

ದೈತ್ಯರು ಮಾಯಾರಣವನ್ನು ಮಾಡುವುದನ್ನು ಕಂಡು ಭಯಚಕಿತರಾಗಿ ತನ್ನವರ ಸಂಭ್ರಮ ವನ್ನು, ಶ್ರೀಹರಿಯು ವಿಜ್ಞಾನಾಸ್ತ್ರದಿಂದ ಪರಿಹರಿಸಿ, ಸಂಗರಲಾಲಸರಾದ ಕೃತವರ್ಮ ಸಾತ್ಯಕಿ ಯರನ್ನು ಕುಂಭಾಂಡ ಕೂಪಕರ್ಣರೊಡನೆ ಕಾದಲು ಕಳಿಸಿ, ತಾನು ನೂರು ರಾಜರಿಂದ

ಯುದ್ಧಮಾಡಿ, ಅವರನ್ನು ಸೋಲಿಸಿದನು. ಕೆಲವರು ಹತರಾದರು. ಕೆಲರಾಜರು ಓಡಿಹೋದರು. ತೋಳು ಕಾಲುಗಳು ಮುರಿದ ಸೈನಿಕರಿಂದಲು, ರುಂಡಗಳಿಲ್ಲದೆ ಸತ್ತುಬಿದ್ದ ಆನೆಗಳಿಂದಲು, ಕುತ್ತಿಗೆಗಳು ತುಂಡರಿಸಲ್ಪಟ್ಟ ಕುದುರೆಗಳಿಂದಲು, ರಣಮಂಡಲವು ಭೀಭತ್ಸವಾಯಿತು. ಕಂಕಮಯೂರ ಪಕ್ಷಗಳಿಂದ ಕಟ್ಟಿ, ತೈಲದಲ್ಲಿ ತೊಯಿಸಿ, ಬಂಗಾರದ ಬೆನ್ನು, ಕಬ್ಬಿಣದ ಮುಖ ವಿರಿಸಿ, ಶಾಣಸಿಶಿತವಾದ ಬಾಣಗಳು ಶಾರ್ಙ್ಗಧನುವಿನಿಂದ ಶತಶತಸಂಖ್ಯವಾಗಿ ಹೊರಬಂದು, ಭಟರಿಗೆ ದಶಾವತಾರವಿಕ್ರಮದ ರುಚಿಯನ್ನು, ಆನೆ ಕುದುರೆ ಸವಾರರಿಗೆ ಶತರೂಪನ ಶರವಿಲಾಸ ವನ್ನು, ರಥಿಕರಿಗೆ ಸಹಸ್ರನಾಮನ ವೀರವಿಹಾರ ವೈಭವವನ್ನು ತೋರಿ, ಮತ್ತೆ, ಅವನ ಅಕ್ಷಯ ತೂಣೀರವನ್ನು ಸೇರಿದವು. ವಿಶ್ವಾತ್ಮಕನಾದ ಶ್ರೀಶನಿಗೆ ಇದೊಂದಾಶ್ಚರ್ಯವಲ್ಲ.

ಆಗ ವರಾಹಧ್ವಜಶೋಭಿತನಾದ ರಥವನ್ನೇರಿ ಜರಾಸಂಧನು ಬಲರಾಮನನ್ನೆದುರಿಸಿದನು. ತಾಲಧ್ವಜಯುತರಥದಲ್ಲಿದ್ದ ಬಲರಾಮನನ್ನು ಕಂಡು ಪೂರ್ವವೈರವನ್ನು ಸ್ಮರಿಸಿ, ಕಿಡಿಗಣ್ಣಿನಿಂದ ನೋಡುತ್ತಾ 'ಮುಸಲವನ್ನು ಪಿಡಿದು ಗರ್ವಿತನಾದ ನಿನ್ನ ಬಾಹುಬಲವನ್ನು ತೋರು' ಎಂದು ಕೆರಳಿಸಿದನು. ಬಲರಾಮನಾಗ ಪ್ರಳಯಯಮನು ದಂಡವನ್ನಂತೆ, ಗಿರಿಗಿರಿತಿರುಗಿಸಿ, ಕಿಡಿಗಾರುವ ಮುಸಲವನ್ನೆಸೆದು ಗರ್ಜಿಸಿದನು. ಅಶ್ವಸೂತರು ಸತ್ತು, ರಥವು ಚೂರಾಗಲು, ದೊಡ್ಡ ಗದೆಯನ್ನು ಪಿಡಿದು, ಭೂಮಿಯು ನಡುಗುವಂತೆ ನಡೆದು ಬರುವ ಮಾಗಧನನ್ನು ನೋಡಿ, ಬಲರಾಮನು, ತಾನೂ ಪಾದಚಾರಿಯಾಗಿ, ಗದೆಯನ್ನು ಧರಿಸಿ ಮುತ್ತಿದನು.

ಜರಾಸಂಧನು ಬೀಸಿ ಒಗೆದ ಗದೆಯನ್ನು ಎಡಗೈಯಿಂದ ಪಿಡಿದು ಬಿಸುಟ, ಬಲರಾಮನು ತನ್ನ ಗದೆಯಿಂದ ಜರಾಸಂಧನನ್ನು ಹೊಡೆದು ಕೆಡಹಿದನು. ಕಾಲುಗಳಿಂದ ಅವನ ಹೊಟ್ಟೆಯನ್ನು ಬಿಗಿದಪ್ಪಿ, ಕೆಡಹಿ, ಬಲರಾಮನು ಮೇಲೆ ಕೂತಿರಲು ಕ್ಷಣದಲ್ಲಿ ಅವನನ್ನು ಕೆಳಗೆ ಮಾಡಿ ಜರಾಸಂಧನು ಮೇಲಾದನು. ಇಂತಾವೀರರು ಬಾಹಾಬಾಹವಿ, ಮುಷ್ಟಾಮುಷ್ಟಿಯಾಗಿ ಹೋರಾಡಿದರು. ಕೋಪದಿಂದ ಕಣ್ಣು ಕೆಂಪಾಗಿರಲು, ಹಲ್ಲುಗಡಿದು ಗರ್ಜಿಸುವ ಆ ವೀರರು ಮದವೇರಿದ ಮಾತಂಗರಾಜರಂತೆ, ಪರಸ್ಪರ ವಧಾತುರರಾಗಿ, ರಣಾಂಗಣದಲ್ಲಿದ್ದ ತರು ಪಾಷಾಣಗಳು ಪುಡಿಯಾಗುವಂತೆ ಕಾದಾಡಿದರು.

ಮುಂದೆ ಜರಾಸಂಧನು ಗದೆಯನ್ನು ಪಿಡಿದು ಬಂದನು. ರಾಮನು ಮುಸಲವನ್ನು ಪಿಡಿದು ಬಂದು ಕ್ಷಣಾರ್ಧದಲ್ಲಿ, ತಲೆ, ಕಾಲು, ಭುಜ, ನಾಭಿ, ಎದೆ, ತೊಡೆ, ಹೊಟ್ಟೆ, ಎನ್ನದೆ ಬಡಿಬಡಿದು, ಆ ದುಷ್ಟನನ್ನು ಪೀಡಿಸಲು, ಅವನು ಕೂಡ ಗದೆಯಿಂದ ಬಲನನ್ನು ಪೀಡಿಸಿದನು. ಇತರ ರಾಜರು ಬಲರಾಮನ ಕೈಮೇಲಾಗುವುದನ್ನು ಕಂಡು, ದೀನಮನಸ್ಕರಾಗಿ ನಿಂತರು.

ಸಾತ್ಯಕಿಯು ಕುಂಭಾಂಡನಿಂದ ಕಾದಾಡಿ ಐದು ಬಾಣಗಳಿಂದ, ಅವನ ನಾಭಿ, ಕಂಠ, ಲಲಾಟ, ಹೃದಯ, ಶಿರೋದೇಶಗಳನ್ನು ಹೊಡೆದನು. ಕುಂಭಾಂಡನು ರಥದಲ್ಲೇ ಮೂರ್ಛಿತನಾಗಲು, ದೈತ್ಯಸೈನ್ಯವು ಹಾಹಾಕಾರವನ್ನು ಮಾಡಿತು. ಕುಂಭಾಂಡನ ರಥವನ್ನು ಅವನ ಸಾರಥಿಯು ರಣರಂಗದಿಂದ ದೂರವಾಗಿ ಹೊಡೆದುಕೊಂಡು ಹೋದನು. ಇದನ್ನು ಕಂಡು ಕೂಪಕರ್ಣನು ಕೂಡ ಭೀತನಾಗಿ, ಕೃತವರ್ಮನಿಂದ ಕಾದುವುದನ್ನು ಬಿಟ್ಟೋಡಿದನು.

## ೫೨. ಸೃಗಾಲ ವಾಸುದೇವ ವಧೆ

ಕುಂಭಾಂಡ ಕೂಪಕರ್ಣರು ಪೋಗಲು, ದಾನವ ಸೈನ್ಯವು ಕೂಡ ಭಯದಿಂದ ಪಲಾಯನ ಮಾಡಿ ಶೋಷಿತಪುರವನ್ನು ಸೇರಿತು. ಮಿಕ್ಕ ರಾಜರು ರಣಶ್ರಾಂತರಾಗಿ ದುಃಖಿಸುತ್ತಿದ್ದರು. ಶ್ರೀಕೃಷ್ಣನು ಬಿಡದೆ ಕಾದು ವಿಜೃಂಭಿಸುತ್ತಿದ್ದನು. ಇದೆಲ್ಲವನ್ನು ಕಂಡು ಬಲರಾಮನಿಗೆ, ಬಲಪರಾಕ್ರಮಗಳು ಇಮ್ಮಡಿಯಾದವು. ಅವನು ಸಿಡಿದೆದ್ದು, ಹಠಾತ್ತಾಗಿ ಮಾಗಧನ ಮೇಲೇರಿ ಪೋಗಿ, ಅವನನ್ನು ಎಡಗೈಯಿಂದ ಗುದ್ದಿ ಕೆಳಗುರುಳಿಸಿ ಮುಸಲದಿಂದ ಕೊಲ್ಲಲು ಯತ್ನಿಸಿದನು. ಆಗ ಪರ್ಜನ್ಯಗರ್ಜಾನಿನಾದದಂತೆ ಗಂಭೀರವಾದ ಆಕಾಶವಾಣಿಯು 'ರಾಮ! ಜರಾಸುತನನ್ನು ಗೆದ್ದಿರುವೆ. ಸುಖಿಯಾಗಿ ರಣದಿಂದ ಹಿಂದಿರುಗು. ಆ ಪಾಪಿಯನ್ನು ಕೊಲ್ಲುವನಿನ್ನೊಬ್ಬ ವೀರಶಿಖಾಮಣಿ ಇರುವನು' ಎಂದು ಕೇಳಿಸಿತು.

ಆ ಮಾತನ್ನು ಕೇಳಿ ಬಲರಾಮನು ರಥವನ್ನೇರಿ ಮಧುರೆಯನ್ನು ಪೊಕ್ಕನು. ಬ್ರಹ್ಮರ್ಷಿಸಿದ್ಧ ಸಂಘದಿಂದಲು, ಮಾಗಧವಂದಿಗಳಿಂದಲು ಸ್ತುತನಾಗಿ ಬಲರಾಮನು, ರಾಜಸೈನ್ಯವನ್ನು ನಾಶಮಾಡಿ ಜಯಶಾಲಿಯಾದ ಕೃಷ್ಣನೊಡನೆ, ಅಲಂಕೃತವಾದ ಮಧುರಾ ನಗರವನ್ನು ಪ್ರವೇಶಿಸಿದನು. ಜರಾಸುತನು ತನಗಾದ ಅವಮಾನವನ್ನು ಸಹಿಸಲಾರದೆ, ಸೋತ ರಾಜರಿಂದ ಕೂಡಿ, ಸಾಯದೆ ಉಳಿದ ಸ್ವಲ್ಪ ಸೈನ್ಯವು ಹಿಂಬಾಲಿಸಲು, ಮಗಧವನ್ನು ಸೇರಿದನು.

ಪ್ರಾಕಾರಸೌಧಗಳನ್ನೇರಿ ಪುರಜನರು ಪೂಮಳೆಗರೆಯುತ್ತಿರಲು, ಪುಷ್ಪಲಾಜಾಕ್ಷತೆಗಳಿಂದ ನಿಬಿಡವಾದ ರಾಜಮಾರ್ಗದಲ್ಲಿ ವಿಜಯಲಕ್ಷ್ಮೀವಿಲಾಸದಿಂದ ಬರುವ ರಾಮಕೃಷ್ಣರಿಗೆ, ಉಪಾಯನಗಳನ್ನರ್ಪಿಸಿ, ಮಧುರೆಯ ಜನರು ಸಂತೋಷಭರಿತರಾದರು. ರಾಮಸಾತ್ಯಕಿಯರಿಂದ ಕೂಡಿದ ಕೃಷ್ಣನು ಸಭೆಯಲ್ಲಿ ಕೂತು, ಉಗ್ರಸೇನೋದ್ಧವ ಪ್ರಮುಖರಿಗೆ ಮುದವನ್ನುಂಟು ಮಾಡಿದನು.

ಒಂದು ದಿನ ಗೋವಿಂದನು ಬಲರಾಮನಿಂದ ಕೂಡಿ, ಉಗ್ರಸೇನಾದಿಗಳ ಅಪ್ಪಣೆಯನ್ನು ಪಡೆದು ಗೋಮಂತ ಪರ್ವತವನ್ನು ನೋಡಲು ಹೊರಟನು. ಯಮುನೆಯನ್ನು ದಾಟಿ, ದಕ್ಷಿಣ ಮಾರ್ಗದಿಂದ ಪಯಣಿಸಿದ ಗೋವಿಂದ ಸಂಕರ್ಷಣರು ಪರ್ವತ ನದೀ ಪ್ರದೇಶಗಳನ್ನು ಕ್ರಮಿಸಿ, ಒಂದೆಡೆ ತೇಜೋವಿರಾಜವನನಾದ ಒಬ್ಬ ಋಷಿವರನನ್ನು ಕಂಡರು. ವೃಕ್ಷಮೂಲದಿ ಕೂತು ಜಟಾಮಂಡಲಮಂಡಿತನು, ಚೀರವಲ್ಕಲಕೃಷ್ಣಾಜಿನೋಪವೀತಸಮೇತನು, ಭಾಸ್ಕರವರ್ಚಸ್ಕನು ಭಾರ್ಗವಕುಲತಿಲಕನು ಆದ ಋಷಿವರನನ್ನು ನೋಡುವ ಮಾತ್ರದಿಂದಲೇ ಪ್ರಹರ್ಷಿತರಾದ ರಾಮಕೃಷ್ಣರು ಪ್ರಣಾಮವನ್ನು ಮಾಡಿದರು.

ದುಷ್ಟಜನಮೋಹಕನಾಗಿ ಶ್ರೀಕೃಷ್ಣನು ತಾನೇ ಆದ ಪರಶುರಾಮನಿಗೆ ಇಂತೆಂದನು–

ಭಾರ್ಗವರಾಮ! ನಮಸ್ತೇ; ನನ್ನನ್ನು ಯಾದವಕೃಷ್ಣನೆಂಬುವರು. ಇವನು ನನ್ನ ಅಗ್ರಜನಾದ ಬಲರಾಮನು; ನಮ್ಮ ಹೆಸರನ್ನು ಕೇಳಿರಬಹುದಲ್ಲವೇ?

ಆ ಮಾತನ್ನು ಕೇಳಿ, ಬಲುಪ್ರೀತನಾಗಿ, ಪರಶುರಾಮನು 'ಯದುಶ್ರೇಷ್ಠರೇ! ನಿಮಗೆ ಸ್ವಾಗತವಿರಲಿ! ಭಗವಂತನಾದ ಅಧೋಕ್ಷಜನೇ ಯದುಕುಲದಲ್ಲಿ ಅವತರಿಸಿರುವನೆಂದು ಕೇಳಿರುವೆನು. ಜಗದೇಕಕಾರಣ! ನಾರಾಯಣ! ಸರ್ವಲೋಕ ನಮಸ್ಕೃತರಾದ ಸಂಕರ್ಷಣ ವಾಸುದೇವರು ಗೋಮಂತಗಿರಿಯನ್ನು ನೋಡುವ ನೆವದಿಂದ, ಇಲ್ಲಿಗೆ ಬಂದುದು ಚೆಂದವಾಯಿತು.

ನೋಡಿ, ಗೋಮಂತವನ್ನು! ಅಲ್ಲೇ ಪರ್ವತದಡಿಯಲ್ಲಿರುವ ಕರವೀರಪುರವನ್ನು ಸೃಗಾಲವಾಸುದೇವನು ಪಾಲಿಸುತ್ತಿರುವನು. ಅವನಿಗೆ ನಿಮ್ಮನ್ನು ಕಂಡರೆ ಆಗದು. ಈ ದುರ್ಮಾರ್ಗನನ್ನು ಸಂಹರಿಸಿ, ಮುಂದೆ ಗೋಮಂತಗಿರಿಗೆ ಪೋಗಿ! ಲೋಕಹಿತವನ್ನು ಸಾಧಿಸಿ!' ಎಂದಾಜ್ಞಾಪಿಸಿದನು. ಯದುಶಾರ್ದೂಲರು ಆ ವನಗಳಲ್ಲಿ ಸಂಚರಿಸುತ್ತಾ, ಅಂಬರಚುಂಬಿವಾದ ಗೋಮಂತವನ್ನೂ, ಅದರಡಿಯಲ್ಲಿ ಆ ಉತ್ತುಂಗ ಪ್ರಾಕಾರವಾದ ಕರವೀರಪುರವನ್ನೂ ನೋಡಿ, ಪುರದ್ವಾರವನ್ನೈದಿ, ಶಂಖಗಳನ್ನೂದಿದರು. ಅದನ್ನು ಕೇಳಿ ಸಹಿಸದೆ, ಸೃಗಾಲವಾಸುದೇವರು, ಚತುರಂಗಬಲಯುತನಾಗಿ, ಪುರದ್ವಾರದಿಂದ ಹೊರ ಬಂದನು. ಅವನ ಶರವರ್ಷದಿಂದ ಮುಚ್ಚಲ್ಪಟ್ಟು, ರಾಮಕೃಷ್ಣರು ಹೆದರದೆ, ಪದಾತಿಗಳಾಗಿಯೇ ಕಾದಾಡಿ, ಆ ರಾಜಾಧಮನ ಸೈನ್ಯವನ್ನು ಬಾಣಕೋಟಿಯಿಂದ ಸಂಹರಿಸಿದರು. ಅದನ್ನು ಕಂಡು, ಸಿಟ್ಟಿನಿಂದ ಮೇಲೇರಿಬರುವ ಸೃಗಾಲನನ್ನು, ಸಿಂಹವಿಕ್ರಮನಾದ ಶ್ರೀಕೃಷ್ಣನು– ಉಕ್ಕೇರಿಬರುವ ಉದಧಿಯನ್ನು ತೀರಪ್ರದೇಶದಂತೆ– ನಿಲ್ಲಿಸಿ ಕಡುಭೀಕರವಾಗಿ ಹೋರಾಡುವ ಆ ಪಾಪಿಯನ್ನು ಚಕ್ರದಿಂದ ಸಂಹರಿಸಿದನು. ಹತಶೇಷರು ಓಡಿಹೋಗುತ್ತಿರಲು, ರಾಮಗೋವಿಂದರು ಕರವೀರಪುರವನ್ನು ಪೊಕ್ಕು, ವಿಪ್ರಮಣಿಗ್ಗನರಿಂದ ಪೂಜಿತರಾಗಿ, ಅಲ್ಲಿದ್ದ ಅವನ ರಥಾಗಜಾಶ್ವಗಳನ್ನೂ, ಧನಾಭರಣಗಳನ್ನೂ ಮಧುರೆಗೆ ಕಳಿಸಿಕೊಟ್ಟರು.

## ೫೩. ಕಿರೀಟಪ್ರಾಪ್ತಿ ದ್ವಾರಕಾನಿರ್ಮಾಣ

ಶ್ರೀಶುಕನು ಹೇಳಿದನು –

ಗೋವಿಂದರಾಮರು ಮುಂದೆ ಗೋಮಂತಗಿರಿಯನ್ನು ಸೇರಿದರು. ಆ ಪರ್ವತವು ಉನ್ನತವೃಕ್ಷಗಳಿಂದಲು, ಲತೆಗಳಿಂದಲು, ಸಾಲತಾಲ, ತಮಾಲ, ಪ್ರಿಯಾಲ, ಕದಂಬ, ನಿಂಬ, ಹಿಂತಾಲ, ಪೂಗ, ಪುನ್ನಗಾದಿ ತರುಗಳಿಂದಲು, ಶೋಭಿಸುತ್ತಿತ್ತು. ಕದಲೀಖಂಡಮಂಡಿತವಾದ ಅದರ ಸಾನುಪ್ರದೇಶವು, ಪಕ್ಷಿಗಳ ಕಲಕಲನಾದದಿಂದಲು, ಭ್ರಮರ ಝುಂಕಾರಗಳಿಂದಲು, ರಮಣೀಯವಾಗಿತ್ತು. ಪ್ಲವಂಗವಿಕಟವಿಕ್ರಮದಿಂದ, ರಂಭಜಂಬೂ ನಾರಿಕೇಲಾದಿ ವೃಕ್ಷಗಳ ಫಲಗಳು ಭೂಮಿಯಲ್ಲಿ ಹರಡಿದಂತೆ ಹಾಸಿಬಿದ್ದಿದ್ದವು. ಗಿರಿ ಶಿಖರದಿಂದ ನಿರ್ಝರಗಳು ನಿರ್ಮಲನೀರಗಳಾಗಿ, ಭರದಿಂದಿಳಿದು, ಸುಚ್ಛಾಯವಾದ ವನದಲ್ಲಿ ಹರಿದು, ಅಚ್ಛಸರಗಳಲ್ಲಿ ಕಲೆತಾಡಿ, ಮುಂದೆ ಮಂದಗಮನದಿಂದ ಹೋಗಿ ಪಂಚಗಂಗಾನದಿಯಲ್ಲಿ ಲೀನವಾಗುತ್ತಿದೆ. ಗೋಮಂತಗಿರಿಯ ಪ್ರವರ್ಷಣವೆಂಬ ಕೋಡಿನಲ್ಲಿ, ಮೇಘಗಳು ಮನೆಮಾಡಿದ್ದವು. ಅಲ್ಲಿಯ ನೇತ್ರಾನಂದಕರದೃಶ್ಯದಿಂದ ಮುಗ್ಧರಾಗಿ, ರಾಮಕೃಷ್ಣರು ಕೆಲಕಾಲವಲ್ಲೇ ತಂಗಿದ್ದರು.

ಒಂದು ದಿನ ಕ್ಷೀರಸಾಗರದ ಶ್ವೇತದ್ವೀಪದ ಶಂಖಚಕ್ರಗದಾಧರನ ಮಂದಿರದಿ ನಡೆದ ಸೊಬಗಿನ ಕಥೆಯನ್ನು ಕೇಳು:

ಶ್ವೇತದ್ವೀಪದ ಅಮುಕ್ತಸ್ಥಾನದಲ್ಲಿ ಸೇರಿದ್ದ ಸುರಾದಿಗಳಿಂದ ಪೂಜೆಯನ್ನು ಸ್ವೀಕರಿಸಲು ವಿಜಯಂಗೈದ ಶ್ರೀನಾರಾಯಣನನ್ನು ನೋಡಿ ಪೂಜಿಸಲು ಬ್ರಹ್ಮಾದಿ ದೇವತೆಗಳು ಬಂದರು. ಬಲಿರಾಜನು ಕೂಡ ಬಂದಿದ್ದನು ಆಗ ಅವನಲ್ಲಿರುವ ಅಸುರಾವೇಶವನ್ನು ಹೊರಗೆಡಹಿ ತೋರಿಸಲು ಮನಮಾಡಿ ಶ್ರೀಹರಿಯು ನಿದ್ರೆಮಾಡಿದಂತೆ ನಟಿಸಿದನು. ಅವನ ಸಂಜ್ಞೆಯಂತೆ ಇತರ ದೇವತೆಗಳೂ ನಿದ್ರಿಸುವಂತೆ ನಟಿಸಿದರು. ಆಗ ಬಲಿಯು ಶ್ರೀನಾರಾಯಣನ ಶಿರದಲ್ಲಿದ್ದ

ಕಿರೀಟವನ್ನು, ತನ್ನ ತಲೆಯಮೇಲೆ ಕಾಲಿಟ್ಟು ತುಳಿದನೆಂಬ ಹಗೆಯಿಂದೆಂಬಂತೆ ಅಪಹರಿಸಿದನು. ಸಾವಿರಾರು ಇಂದ್ರನೀಲಗೋಮೇದಕ ಪದ್ಮ ರಾಗ-ಧವಳ-ವಜ್ರ ಮುಕ್ತಾಫಲಪುಷ್ಪ ರಾಗಗಳಿಂದ ಖಚಿತವಾದ ಕನಕ ಕಿರೀಟವನ್ನು ಕದ್ದೋಡುವ ಬಲಿಯನ್ನು, ಪುರಪಾಲಕನಾದ ಗರುಡನು ಬೆನ್ನಟ್ಟಿ, ಪಾತಾಳದಲ್ಲಿ ಮುಟ್ಟಿ ಸೋಲಿಸಿ, ಕಿರೀಟವನ್ನು ತರುತ್ತಾ, ಗೋಮಂತದಲ್ಲಿದ್ದ ಶ್ರೀಕೃಷ್ಣನನ್ನೂ ಬಲರಾಮನನ್ನೂ ನೋಡಿದನು. ಹಿಂದೆ ವರುಣಪಾಶದಿಂದ ಕಟ್ಟಿದ್ದ ಗರುಡನೇ ಮತ್ತೆ ಶಿಕ್ಷಿಸುವಂತೆ ಮಾಡಿದ ಮಾಧವನೇ ಶ್ರೀಕೃಷ್ಣನೆಂದರಿತು, ಗರುಡನು ಆ ಕಿರೀಟವನ್ನು ಶ್ರೀಕೃಷ್ಣನ ಶಿರಸ್ಸಿನಲ್ಲಿಟ್ಟು, ಪಾದಾಭಿವಂದನವನ್ನು ಮಾಡಿ, ಸ್ತುತಿಸಿದನು.

'ಲೋಕಹಿತಾರ್ಥವಾಗಿ ಅವತರಿಸಿದ ನಾರಾಯಣನೇ! ಸರ್ವಲೋಕವಲ್ಲಭನು ಸರ್ವಕರ್ಮ ಫಲಪ್ರದನು, ಸರ್ವಸುರವೈರಿಸಂಹರಣಶೀಲನು ಆದ ಶ್ರೀಕೃಷ್ಣನೇ! ನಿನಗೆ ನಮಸ್ಕಾರವು! ಹಿರಣ್ಯಗರ್ಭನಾದ ನೀನು ಸೃಷ್ಟಿಯಲ್ಲಿ ಹಿರಣ್ಯಗರ್ಭನಿಗೆ ನಿನ್ನ ನಾಮವನ್ನಿತ್ತು, ಸೃಜನಶಕ್ತಿಯನ್ನು ದಯಪಾಲಿಸಿದೆ. ಸಾಕ್ಷಾತ್ತಾಗಿ, ನೀನೀ ಜಗವನ್ನು ಸದಾ ಪಾಲಿಸುತ್ತಿರುವೆ; ಶಿವನಾದ ನೀನು ಶಿವನಿಗೆ ನಾಮವನ್ನಿತ್ತು, ಸಂಹಾರಶಕ್ತಿಯನ್ನು ದಯಪಾಲಿಸುವೆ! ಬ್ರಹ್ಮಶಂಕರರು ನಿನ್ನ ಕಿಂಕರರು. ಯದುವಂಶದಲ್ಲಿ ಅವತರಿಸಿದ ವೃಷಾಕಪೇ! ನಿನ್ನ ಕಿಂಕರನಾದ ವೈನತೇಯನು ನಾನು. ಆಜ್ಞಾಪಿಸಿ ನನ್ನನ್ನು!' ಎಂದು ಎಡಮೊಣಕಾಲೂರಿ ಕೂತು, ಕೈಜೋಡಿಸಿ ಬೇಡಿದ ಗರುಡನಿಗೆ 'ಸ್ಮರಿಸಿದಾಗ ಬಾ' ಎಂದು, ಮೈಮುಟ್ಟಿ ಶ್ರೀಕೃಷ್ಣನು ಆಶೀರ್ವದಿಸಿ ಕಳಿಸಿದನು.

ಗೋಮಂತ ಪರ್ವತದ ನಿರ್ಝರಜಲದಿಂದಲು, ಫಲಮೂಲಗಳಿಂದಲು, ಸಂತುಷ್ಟರಾಗಿ, ಕೆಳಗಿಳಿದು ರಾಮಕೃಷ್ಣರು, ಕರವೀರಪುರವನ್ನು ಸೇರಿದರು. ಅಲ್ಲಿ ನಾಲ್ಕು ತಿಂಗಳಿದ್ದು, ಬಹು ಸೇನಾಸಮೇತರಾಗಿ ಮಧುರೆಗೆ ಪಯಣಿಸಿದರು.

ಸೃಗಾಲವಾಸುದೇವನ ಮರಣವನ್ನು ಕೇಳಿ, ಜರಾಸಂಧನು, ಶೋಕ ಕೋಪಪರೀತನಾಗಿ, ಬಹುಸೈನ್ಯದಿಂದ ಕೂಡಿ, ಮಧುರೆಯನ್ನು ಸೇರಪೋಗುತ್ತಿರುವ ರಾಮಕೃಷ್ಣರನ್ನು ಎದುರಿಸಿ, ಹೋರಾಡಿದನು. ಏಳು ದಿನಗಳವರೆಗೂ ಕಾದ ಜರಾಸಂಧನು ಕೊನೆಗೆ ಸೋತು, ಹತಶೇಷರಿಂದ ಕೂಡಿ ಮಗಧ ದೇಶಕ್ಕೆ ಹಿಂದಿರುಗಿ ಹೋದನು. ರಾಮಕೃಷ್ಣರು ಜಯಲಕ್ಷ್ಮಿಯೊಡನೆ ಮಧುರೆಗೆ ಬಂದರು.

ಇಂತು ಪ್ರತಿ ಸಲ ಇಪ್ಪತ್ತುಮೂರು ಅಕ್ಷೌಹಿಣೀ ಸೈನ್ಯದಿಂದ, ದಂಡೆತ್ತಿ ಬಂದ ಜರಾಸಂಧನು, ಕೃಷ್ಣರಾಮರ ಪರಾಕ್ರಮದ ಮುಂದೆ ನಿಲ್ಲಲಾರದೆ, ಸೋತುಹೋಗುತ್ತಿದ್ದನು. ಹದಿನೇಳು ಸಲ ಬಂದ ಅವನ ಸೈನ್ಯವೆಲ್ಲ ನಾಶವಾಯಿತು. ಹದಿನೆಂಟನೆಯಸಲ ದಂಡೆತ್ತಿ ಬರಲು ಜರಾಸುತನು ಪ್ರಯತ್ನಿಸುತ್ತಿರುವಾಗ, ಕಾಲಯವನನ ಉಪಟಳವು ತಲೆದೋರಿತು, ನಾರದರಿಂದ ಪ್ರೇರಿಸಲ್ಪಟ್ಟ ಕಾಲಯವನನು ಮೂರುಕೋಟಿ ಮ್ಲೇಚ್ಛಸೈನ್ಯದಿಂದ ಬಂದು ಮಧುರೆಯನ್ನು ಮುತ್ತಿದನು. ನರಲೋಕದಲ್ಲಿ, ಯಾದವರಲ್ಲದೆ ಮತ್ತಾರೂ ಪ್ರತಿವೀರರಿಲ್ಲವೆಂದರಿತು, ಯಾದವನಾಶಕ್ಕಾಗಿಯೇ ಗರ್ಗಾಚಾರ್ಯನಲ್ಲಿ ಜನಿಸಿದ ಯವನನು ಬಂದುದನ್ನು ನೋಡಿ, ಬಲರಾಮನಿಂದ ಕೂಡಿ ಕೃಷ್ಣನಿಂತು ಆಲೋಚಿಸಿದನು–

'ಅಹೋ! ಯಾದವರಿಗೆ ಎಂತಹ ವಿಪತ್ತು ಬಂದೊದಗಿತು! ಯವನನು ಬಂದು ಮುತ್ತಿರುವನು. ಇಂದು ನಾಳೆ ಇದನ್ನು ಕೇಳಿ ಮಹಾಬಲಶಾಲಿಯಾದ ಜರಾಸಂಧನು ಬಂದು, ಕಾದುವನು. ಉಭಯ ಶತ್ರುಜನರ ಮಧ್ಯದಿ ಸಿಕ್ಕು, ಸಾಯದಂತೆ ಬಂಧುಜನರನ್ನು, ಉಳಿಸುವ

ಉಪಾಯವನ್ನು ಮಾಡಬೇಕು. ಶತ್ರುದುರ್ಗಮವಾದೊಂದು ದುರ್ಗವನ್ನು ಸಮುದ್ರಮಧ್ಯದಲ್ಲಿ ನಿರ್ಮಿಸುವೆನು. ಅಲ್ಲಿ ನಮ್ಮವರನ್ನಿಟ್ಟು, ಅನಂತರ ಶತ್ರುಗಳನ್ನು ಸಂಹರಿಸೋಣ' ವೆಂದು ನಿಶ್ಚಯಿಸಿ, ಶ್ರೀಕೃಷ್ಣನು, ಪಶ್ಚಿಮಸಮುದ್ರಮಧ್ಯದಲ್ಲಿ, ದುರ್ಗಮವಾದ ದ್ವಾರಾವತಿಯನ್ನು, ವಿಶ್ವಕರ್ಮನಿಂದ ನಿರ್ಮಿಸಿದನು.

ವಾಸ್ತುಶಾಸ್ತ್ರಾಗುಣವಾಗಿ ನಿರ್ಮಿಸಿದ ದ್ವಾರಾವತಿಯು ಅತ್ಯಾಶ್ಚರ್ಯಕರವಾಗಿತ್ತು. ಸುರ ತರುಲತಾಶೋಭಿತವಾದ ದಿವ್ಯೋದ್ಯಾನಗಳಿಂದಲು, ಹೇಮಪ್ರಾಕಾರಶೃಂಗಗಳಿಂದಲು, ಸ್ಫಟಿಕ ಗೋಪುರಗಳಿಂದಲು, ರಜತಕೋಷ್ಠಗಳಿಂದಲು, ರತ್ನಮಯ ಗೃಹಸಭೆಗಳಿಂದಲು, ಅತ್ಯಂತ ಸುಂದರವಾಗಿ, ದ್ವಾರಾವತಿಯು ಕಂಗೊಳಿಸಿತು. ನಾಲ್ಕು ವರ್ಣದ ಜನರ ಮನೆಗಳಲ್ಲದೆ, ಯಾದವರಿಗೆ ಪ್ರತ್ಯೇಕ ಮಂದಿರಗಳಲ್ಲಿ ಅಸಂಖ್ಯಾತವಾಗಿದ್ದವು.

ಮಹೇಂದ್ರನು ಸುಧರ್ಮಸಭೆಯನ್ನು, ಪಾರಿಜಾತಾದಿ ಕಲ್ಪವೃಕ್ಷಗಳನ್ನು ಸಮರ್ಪಿಸಿದನು. ಆ ಸುಧರ್ಮಸಭೆಯಲ್ಲಿ ಕೂತವರಿಗೆ ಜರಾದಿ ಮನುಷ್ಯ ಶರೀರದೋಷಗಳು, ದೌಗಂಧ್ಯಾದಿಗಳು ಕೂಡ ದೂರವಾಗುತ್ತಿದ್ದವು. ಕ್ಷೀರೋದವಾಸಿಯಾದ ವಾಸುದೇವನಿಗೆ ಅದು ಪ್ರಿಯಕರವೆಂದೇ ತಿಳಿದು ಮಹೇಂದ್ರನು ಶ್ರೀಕೃಷ್ಣನಿಗೆ ಆ ಸಭೆಯನ್ನು ಸಮರ್ಪಿಸಿ, ಕೃತಾರ್ಥನಾದನು. ಸಮುದ್ರ ರಾಜನು, ಪಶ್ಚಿಮದಿಗಧಿಪತಿಯು ಆದ ವರುಣನು ಶ್ಯಾಮೈಕಕರ್ಣ ವಾದ ಸಾವಿರ ಬಿಳಿಯ ಕುದುರೆಗಳನ್ನು ಕಳಿಸಿದನು. ಕುಬೇರನು ರತ್ನಪೂರ್ಣವಾದ ಅಕ್ಷಯನಿಧಿ ಗಳನ್ನು ಎಂಟನ್ನು ಕೊಟ್ಟನು. ಶ್ರೀಕೃಷ್ಣನು ಹಿಂದೆ ತಮಗೆ ಅಧಿಕಾರಸಿದ್ಧಿಯಾಗಲೆಂದು ಕೊಟ್ಟ ಶಕ್ತಿಸಂಪತ್ತುಗಳನ್ನು, ಭಕ್ತಿಯಿಂದ ಸರ್ವದೇವತೆಗಳು ಸಮರ್ಪಿಸಿ ಧನ್ಯರಾದರು.

ಭಗವಾನ್ ಶ್ರೀಕೃಷ್ಣರು ಸ್ವರೂಪಭೂತವಾದ ದಿವ್ಯಯೋಗಸಾಮರ್ಥ್ಯದಿಂದ ಮಧುರೆ ಯಲ್ಲಿದ್ದ ತನ್ನವರೆಲ್ಲರನ್ನೂ ಅವರವರ ಪರಿವಾರ ಧನವಾಹನವಸನಾದಿ ಸಮೇತವಾಗಿ ಒಂದೇ ಕ್ಷಣದಲ್ಲಿ ದ್ವಾರಕಾನಗರಕ್ಕೆ ತಂದು ಸೇರಿಸಿದನು. ಆಗ ಯವನ ನಾಶವನ್ನು ಸಂಕಲ್ಪಿಸಿ, ಶ್ರೀಶನು ಮಧುರಾನಗರದ್ವಾರದಿಂದ ನಿರಾಯುಧನು ಪಾದಚಾರಿಯು ಆಗಿ ಹೊರಬಿದ್ದನು.

## ೫೪. ಮುಚುಕುಂದ ಚರಿತೆ

ಶ್ರೀಶುಕನು ಹೇಳಿದನು–

ರಾಜನ್! ಉದಯಪರ್ವತದಿಂದ ಪುಟ್ಟಿಬರುವ ಚಂದ್ರಮನಂತೆ ಮಧುರೆಯಿಂದ ಹೊರ ಬಂದ ಗೋವಿಂದನನ್ನು ಕಾಲಯವನನು ನೋಡಿದನು.

ದರ್ಶನೀಯನು ಶ್ಯಾಮಲಾಂಗನು ಪೀತಾಂಬರಧರನು ಶ್ರೀವತ್ಸವಕ್ಷಸ್ಕನು ಕೌಸ್ತುಭ ಯುತನು ದೀರ್ಘಚತುರ್ಬಾಹುವಿಲಸಿತನು ನವತಾಮರಸದಳಲೋಚನು ನಿತ್ಯಾನಂದ ರೋಚನನು ಸುಕಪೋಲನು ಫಾಲತಲವಿಲೋಲ ಚಿಕುರಜಾಲನು ಮಂದಹಾಸಸುಂದರವದನಾರ ವಿಂದನು ಅತಿ ಸುಂದರನು ಆದ ಶ್ರೀಕೃಷ್ಣನನ್ನು ನೋಡಿ, ನಾರದನು ಪೇಳಿರುವ ಲಕ್ಷಣಗಳಿಂದ ತಿಳಿದು– ಬೇರೆಯವನಲ್ಲವೆಂದು ನಿಶ್ಚಯಿಸಿ, ಕಾಲಯವನನು ತಾನೂ ನಿರಾಯುಧನು ಪಾದಚಾರಿಯು ಆಗಿ ಕೃಷ್ಣನನ್ನು ಹಿಡಿಯಲು ಹಿಂಬಾಲಿಸಿದನು. ಯೋಗಿಜನರಿಗೆ ಸಿಗದ

ಸ್ವಾಮಿಯು ಸಿಕ್ಕಂತೆ ನಟಿಸುತ್ತಾ, ಆದುಷ್ಟನನ್ನು ದೂರ ಪರ್ವತದ ಗುಹೆಯ ಕಡೆಗೆ ಎಳೆದು ಕೊಂಡೇ ಹೋದನು.

'ಯದುಕುಲದಲ್ಲಿ ಪುಟ್ಟಿದ ನಿನಗೆ ಪಲಾಯನವು ಯೋಗ್ಯವಲ್ಲ; ಹಿಂದಿರುಗು. ನನ್ನ ಕೂಡ ಕಾದಾಡು!' ಎಂದು ಕೂಗುತ್ತಾ ಬರುವ ಪಾಪಿಗೆ ಮುಖವನ್ನು ತೋರಬಾರದೆಂಬಂತೆ ಓಡಿಪೋಗಿ, ಶ್ರೀಕೃಷ್ಣನು ಒಂದು ಗುಹೆಯನ್ನು ಪೊಕ್ಕನು. ಹಿಂದೆ ಬಂದ ಯವನನು ಗುಹೆಯನ್ನು ಪೊಕ್ಕು, ಅಲ್ಲಿ ಮಲಗಿದ್ದ ಮನುಜನೊಬ್ಬನನ್ನು ನೋಡಿದನು.

ಆಹಾ! ಇಷ್ಟು ದೂರ ಸೆಳೆತಂದು ಏನೂ ಗೊತ್ತಿಲ್ಲದವನಂತೆ ಇಲ್ಲಿ ಮಲಗಿರುವನಲ್ಲ! ಎಂದು ಆ ಮೂಢನು– ಮಲಗಿದ್ದ ಮನುಜನೇ ಮಾಧವನೆಂದು ಭ್ರಮಿಸಿ ಕಾಲಿನಿಂದ ಒದೆದನು. ಮಲಗಿದ್ದ ನರನೆದ್ದು ಮಲ್ಲನೆ ಕಣ್ಣು ತೆರೆದು ಅಲ್ಲಿಯೇ ನಿಂತಿದ್ದ ಯವನನನ್ನು ವೀಕ್ಷಿಸಿದನು. ತತ್‌ಕ್ಷಣವೇ ಆ ದೃಷ್ಟಿಪಾತದಿಂದ ಯವನನ ದೇಹವು ಒಳಗಿದ್ದ ಪಾಪಾಗ್ನಿಯಿಂದ ಸುಟ್ಟು ಬೂದಿಯಾಯಿತು.

ಆಗ ರಾಜನು ಕೇಳಿದನು–

ಶುಕನೇ! ಆ ಮನುಜನು ಯಾರು? ಅವನ ಸಾಮರ್ಥ್ಯವು ಆಶ್ಚರ್ಯಕರವಾಗಿದೆಯಲ್ಲವೇ? ನೋಟದಿಂದಲೇ ಯವನವನ್ನು ನಾಶಗೊಳಿಸಿದ ಆ ಮಹಾನುಭಾವನು ಗುಹೆಯಲ್ಲಿ ಮಲಗಿರಲು ಕಾರಣವೇನು?

ಶುಕನು ಹೇಳಿದನು–

ರಾಜನ್! ಅವನು ಇಕ್ಷ್ವಾಕು ಕುಲದವನು; ಮಾಂಧಾತನ ಮಗ ಮುಚುಕುಂದನೆಂಬ ರಾಜನು. ಬ್ರಾಹ್ಮಣಭಕ್ತನು, ಧರ್ಮಸಂಗ್ರಾಮಶಕ್ತನು ಆದ ಆ ರಾಜನನ್ನು ಇಂದ್ರಾದಿ ದೇವತೆಗಳು ಸ್ವರ್ಗಕ್ಕೆ ಕರೆದೊಯ್ದರು. ಅಲ್ಲಿ ಆ ವೀರನು ಅಸುರನನ್ನು ಸಂಹರಿಸಿ, ಬಹುಕಾಲ, ಸುರಹಿತ ವನ್ನು ಸಾಧಿಸಿದನು. ಕೆಲಕಾಲವಾದಮೇಲೆ ಕಾರ್ತಿಕೇಯನು, ಶಿವನಿಂದವತರಿಸಿ ಸುರಸೈನ್ಯಪಾಲಕ ನಾಗಲು, ದೇವತೆಗಳು ಮುಚುಕಂದನಲ್ಲಿ ಪ್ರೀತರಾಗಿ ಇಂತೆಂದರು–

ರಾಜನ್! ಬಹು ಕಷ್ಟಪಟ್ಟೆ; ನಮ್ಮನ್ನು ರಕ್ಷಿಸಲು ನಿನ್ನ ನಿಷ್ಕಂಟಕವಾಗಿದ್ದ ನರಲೋಕ ರಾಜ್ಯವನ್ನು ಬಿಟ್ಟೆ, ಕಾಮಭೋಗಗಳನ್ನು, ಸತೀಸುತರನ್ನು, ಅಮಾತ್ಯಮಿತ್ರರನ್ನು ತೊರೆದು, ನಿದ್ದೆನೀರಡಿಕೆಗಳಿಲ್ಲದೆ ನಮ್ಮನ್ನು ಕಾಪಾಡಿದೆ. ನಿನ್ನ ಕಾಲದ ಪ್ರಜರಾಗಲಿ, ರಾಜಾದಿಗಳಾಗಲಿ ಈಗ ಇಲ್ಲ. ಬಲವಂತರನ್ನೂ ನುಂಗಿಬಿಡುವ ಶ್ರೀಹರಿಯ ಕಾಲಚಕ್ರಕ್ಕೆ ಎದುರಿಲ್ಲ. ಪಶುಗಳನ್ನು ಕಾಪಾಡಿ, ಬೇಕಾದಾಗ ಸಂಹರಿಸುವ ಪಶುಪಾಲನಂತೆ, ನಾಶರಹಿತನಾದ ಶ್ರೀಶನು ಜೀವರನ್ನು ಸೃಜಿಸಿ, ಪಾಲಿಸಿ, ಸಂಹರಿಸುತ್ತಿರುವನು. ನಿನ್ನಲ್ಲಿ ನಾವು ಪ್ರೀತರಾಗಿರುವೆವು. ಬೇಕಾದ ವರವನ್ನು-ಮೋಕ್ಷವೊಂದನ್ನುಳಿದು– ಬೇಕಾದ್ದನ್ನು ಬೇಡು. ಮೋಕ್ಷವನ್ನು ಕೊಡಲು ಸಮರ್ಥನು ಶ್ರೀರಮಣನೊಬ್ಬನೇ; ಅನ್ಯರಲ್ಲ.

ಆ ಮಾತನ್ನು ಕೇಳಿ, ಮುಚುಕುಂದನು ಗುಹೆಯನ್ನು ಹೊಕ್ಕು, ಚಿರಕಾಲೀನವಾದ ನಿದ್ರೆ ಮಾಡುವಂತೆ ವರವನ್ನು ಬೇಡಿದನು. ಅದೇ ವರವನ್ನವರು ಕೊಡುವಾಗ, ನಿದ್ರಾವಸಾನದಲ್ಲಿ, ಮೋಕ್ಷೋಪಯಾಗಿಯಾದ ಕೃಷ್ಣದರ್ಶನವಾಗಲೆಂದು ಅನುಗ್ರಹಿಸಿದರು.

ಯವನನು ಬೂದಿಯಾದಾಕ್ಷಣವೇ, ಶ್ರೀಕೃಷ್ಣನು ಗುಹೆಯನ್ನು ಬೆಳಗುತ್ತಾ ಕಾಣಿಸಿ ಕೊಂಡನು. ಘನಶ್ಯಾಮನು, ಶ್ರೀವತ್ಸಕೌಸ್ತುಭವನಮಾಲೋದ್ಭಾಮನು, ಪೀತಾಂಬರನು,

ಚಕ್ರಶಂಖಪದ್ಮಗದಾಧರನು, ಚಾರುಪ್ರಸನ್ನವದನನು, ಕುಂದರದನನು, ಅನುರಾಗರಸಪೂರ್ಣ ನೇತ್ರನು, ಸಿಂಹವಿಕ್ರಮನು, ಮಕರಕುಂಡಲಶೋಭಿಗಂಡನು, ಆದ ಯದುಕುಲ ಮಂಡನನನ್ನು ನೋಡಿ, ಸಂಭ್ರಮದಿಂದೆದ್ದು ವಂದಿಸಿ, ಮುಚುಕುಂದನಿಂತೆಂದನು –

ಕಂಟಕಶರ್ಕರಾಕರ್ಕಶವಾದ ಗಹನವನದಲ್ಲಿ ಪದ್ಮಪಲಾಶ ಕೋಮಲಪದಗಳಿಂದ ಹೇಗೆ ನಡೆದು ಬಂದೆ? ನೀನಾರು? ತೇಜಸ್ಸುಗಳಿಗೆ ತೇಜವನ್ನೀವ ಪುಣ್ಯ ಸೂರ್ಯನೋ? ಅಗ್ನಿಯೋ? ಚಂದ್ರನೋ? ಇಂದ್ರನೋ? ಮತ್ತಾರಿರಬಹುದು? ಮೂರು ಮೂರ್ತಿಗಳಲ್ಲಿ ಉತ್ತಮನಾದ ಶ್ರೀಹರಿಯೇ ನೀನೆಂದು ತೋರುತ್ತಿದೆ. ದೀಪದಂತೆ ಗುಹಾಂಧಕಾರವನ್ನು ದೂರಸರಿಸುವ ನಿನ್ನನ್ನು ಕಂಡು ಮುಗ್ಧನಾಗಿರುವೆನು. ನಿನ್ನ ಜನ್ಮಕರ್ಮಗಳನ್ನು, ನಾಮಗೋತ್ರಗಳನ್ನು ಹೇಳಬಾರದೇ?

ನಾನು ಇಕ್ಷ್ವಾಕುವಂಶದ ಮಾಂಧಾತೃಚಕ್ರವರ್ತಿಯ ಮಗನು. ನನ್ನನ್ನು ಮುಚುಕುಂದ ನೆಂಬುವರು. ಬಹುಕಾಲ ನಿದ್ದೆಗೆಟ್ಟಿದ್ದು, ಈ ಗುಹೆಯಲ್ಲಿ ಬಂದು ಮಲಗಿದ್ದೆ. ವಿಜನಾರಣ್ಯ ದಲ್ಲಿಯೂ ಬಿಡದೆ ಯಾವನೋ ಬಂದು ನನ್ನನ್ನು ಒದ್ದು ಎಬ್ಬಿಸಿದನು. ಅವನು ತನ್ನ ಪಾಪದಿಂದಲೇ ಬೂದಿಯಾದುದನ್ನು ನೀನೇ ಕಂಡಿರುವೆ. ಶತ್ರುಶಾಸಕನಾದ ನಿನ್ನ ದರ್ಶನದಿಂದ ಧನ್ಯನಾದೆ. ನಿನ್ನ ತೇಜವು ದುಃಸಹವಾಗಿದೆ. ಮಹಾನುಭಾವ! ನಿನಗೆ ನಮಸ್ಕಾರ.

ಆಗ ಶ್ರೀಕೃಷ್ಣನು ಮೇಘಗಂಭೀರವಚನಗಳಿಂದ ಮುಚುಕುಂದನಿಗಿಂತೆಂದನು– ಸಾರ್ವ ಭೌಮ! ನನ್ನ ಜನ್ಮಗಳು, ನನ್ನ ಕರ್ಮಗಳು ಅನಂತವಾಗಿವೆ. ಅನಂತವೆಂದಮೇಲೆ ಸಂಖ್ಯಾ ಮಾಡಿ ನಾನೂ ಎಣಿಸುವುದಿಲ್ಲ. ಬ್ರಹ್ಮಜೀವನೊಂದುವೇಳೆ ಅನೇಕ ಜನ್ಮಗಳಲ್ಲಿ ಪ್ರಯತ್ನಿಸಿ, ಭೂಮಿಯ ಮಣ್ಣಿನ ಕಣಗಳನ್ನು ಎಣಿಸಿ ಬಿಡಬಹುದಾಗಲಿ, ನನ್ನ ಜನ್ಮಕರ್ಮ, ಗುಣಗಳನ್ನು ಯಾರೂ ಎಣಿಸಿ ಮುಗಿಸಲಾರರು. ಕಾಲಕೃತವಾದನಾಶವಿಲ್ಲದೆ ನನ್ನ ಜನ್ಮಗಳು, ಅವತಾರ ರೂಪಗಳು ಶಾಶ್ವತಗಳು. ಯಾವ ಜ್ಞಾನಿಯೂ ಅದರ ಕೊನೆಗಂಡಿಲ್ಲ. ಇರಲಿ, ಕೇಳು! ಈಗ ವಿರಿಂಚನ ಪ್ರಾರ್ಥನೆಯನ್ನಾಲಿ, ಧರ್ಮರಕ್ಷಣೆಗಾಗಿ, ಯದುಕುಲದ ವಸುದೇವನ ಗೃಹದಲ್ಲಿ ನಾನು ಅವತರಿಸಿರುವೆನು, ನನ್ನನ್ನು ವಾಸುದೇವಕೃಷ್ಣನೆಂಬುವರು. ಕಾಲನೇಮಿಯಾದ ಕಂಸನನ್ನು, ಸುಜನದ್ರೋಹಿಗಳಾದ ಪ್ರಲಂಬಾದಿಗಳನ್ನೂ ನಾಶಮಾಡಿರುವೆನು. ಈಗ ನಿನ್ನ ನೋಟದಿಂದಲೇ ಸತ್ತ ಈ ಯವನನನ್ನೂ ನಾನೇ ನಾಶಮಾಡಿರುವೆನೆಂದು ತಿಳಿ! ನಿನ್ನಲ್ಲಿ ಅನುಗ್ರಹಿಸಲು ಬಂದಿರುವೆನು. ಭಕ್ತನಾದ ನೀನೇ ಹಿಂದೆ ಬೇಡಿದಂತೆ ನನ್ನ ದಿವ್ಯದರ್ಶನವನ್ನಿತ್ತಿರುವೆನು. ಕೇಳು, ಬೇಕಾದ ವರವನ್ನು! ನನ್ನನ್ನು ನಂಬಿದವನಿಗೆ ಮತ್ತೆ ಶೋಕಮೋಹಗಳುಂಟೆ!

ಮುಚುಕುಂದನಾಗ, ಗೋವಿಂದನಿಗೆ ವಂದಿಸಿ, ಗರ್ಗವಾಕ್ಯದಂತೆ ಶ್ರೀನಾರಾಯಣನೇ ದರ್ಶನವಿತ್ತನೆಂದು ತಿಳಿದು ಸಂತೋಷದಿಂದ ಇಂತೆಂದನು –

ಈಶ! ನಿನ್ನ ಬಂಧಕಶಕ್ತಿಯಿಂದ ಮೋಹಿತರಾಗಿ, ನಿನ್ನನ್ನು ಭಜಿಸದೆ, ನಾನು ನನ್ನದೆಂದು ಭ್ರಮಿಸಿ, ಕೆಡುತ್ತಿರುವ ಜನರನ್ನು ಓಡಿ ಮನಮರುಗುತ್ತಿದೆ. ಗೃಹಸುಖಗಳಿಗಾಗಿ ದುಃಖಪಡುತ್ತಾ ಸ್ತ್ರೀಪುರುಷರು ಪರಸ್ಪರ ವಂಚಿತರಾಗಿ, ಅನರ್ಥವನ್ನೇ ಅರ್ಥವೆಂದು ತಿಳಿದು ಕಷ್ಟಪಡುತ್ತಿರುವರು. ಜೀವಪ್ರಯತ್ನ ಕರ್ಮಾದಿಗಳು ಸ್ವತಂತ್ರಗಳಲ್ಲ. ಸ್ವತಂತ್ರನಾದ ನಿನ್ನಿಚ್ಛೆಯಿಂದ ದುರ್ಲಭ ಮನುಜಶರೀರವು ಬಂದಾಗ, ದುಷ್ಟವಿಷಯಗಳ ಆಶೆಯಿಂದ ಗೃಹವೆಂಬ ಹಾಳುಭಾವಿಯಲ್ಲಿ ಬಿದ್ದು, ನಿನ್ನ ಪಾದಾರವಿಂದವನ್ನು ಮುಟ್ಟಿ ಭಜಿಸದೆ ಕೆಡುವ ನರನು ಪಶುವೇ ಸರಿ. ಅಜಿತ! ರಾಜ್ಯಾದಿ ಸಂಪನ್ಮೋಹಿತನಾಗಿ ಕಣ್ಣುಕಾಣದೆ, ಎಷ್ಟು ಕಾಲ ವ್ಯರ್ಥವಾಗಿ ಕಳೆದೆ! ಸುತದಾರ

ಕೋಶಗಳಲ್ಲಿ ನನ್ನದೆಂದು ಮನವಿಟ್ಟು ಕೆಟ್ಟೆ. ಗಡಿಗೆ, ಗೋಡೆಗಳಂತೆ – ಮುಖ್ಯಪ್ರಾಣನೊಬ್ಬ ತೊಲಗಲು-ಜಡವೆನಿಸುವ ಈ ದೇಹವನ್ನು ರಾಜನೆಂಬ ದುರಭಿಮಾನದಿಂದ ಪೊರೆದೆ. ರಥ ಗಜ ತುರಗ ಭಟರಿಂದ ಕೂಡಿ, ಪೊಡವಿ ನಡುಗುವಂತೆ ನಡೆದೆ. ದುರ್ಮದದಿಂದ ಕಣ್ಣುಮುಚ್ಚಿದ ನನಗೆ, ಕಾರ್ಯಾಲೋಚನಾತತ್ಪರನಾಗಿ, ಶಬ್ದಾದಿ ವಿಷಯ ಸುಖಮತ್ತನಾಗಿರುವಾಗ ಕಳೆದು ಹೋದ ಕಾಲವೇ ತಿಳಿಯಲಿಲ್ಲ. ಹೆಬ್ಬಾವು ಇಲಿಯನ್ನಂತೆ – ಅಪ್ರಮತ್ತನಾದ ನೀನು, ಪ್ರಮತ್ತರಾಗಿರುವ ಜೀವರನ್ನು ನುಂಗಿಬಿಡುವೆ. ಬಂಗಾರದ ರಥಗಳು, ಮತಂಗಜಗಳು, ತುರಂಗ ಗಳು, ಕೈಕಟ್ಟಿನಿಂತ ಭಟರು ಹಿಂದೆ ಬರುತಿರೆ, ನರದೇವನೆನಿಸಿ ಮೆರೆದ ಈ ದೇಹವು, ಒಂದುದಿನ ಸುಟ್ಟರೆ ಬೂದಿ, ಹೂತಿಟ್ಟರೆ ಮಣ್ಣು, ಬಿಸಾಟಿದಾಗ ಮೃಗಾಹಾರವಾದರೆ ಮಲವಾಗಿಬಿಡುವು ದೆಂದು ತಿಳಿದೂ, ತಿಳಿಯದೆ, ವ್ಯಥಾ ದುರಭಿಮಾನಿಯಾದೆ. ಘೋರ ರಣದಲ್ಲಿ ಕಾದು, ಕೊಂದು, ದಿಕ್ಚಕ್ರವನ್ನೆಲ್ಲ ಗೆದ್ದೆ. ವಯಃಕುಲವಿದ್ಯಾದಾನಾದಿಗಳಿಂದ ಸಮರಾದ ರಾಜನ್ಯರು ಸಭೆಯಲ್ಲಿ ಸಿಂಹಾಸನಾಸೀನನಾದೆನ್ನ ಪಾದಪೀಠವನ್ನು ಕಿರೀಟಗಳಿಂದ ಮುಟ್ಟಿ ವಂದಿಸಿದರು. ಆದರೂ ಅಂತಃಪುರದಲ್ಲಿ ಮೈಥುನಾನುನಯವೈಖರಿವಂಚಿತನಾಗಿ ಕ್ರೀಡಾಶುನಕದಂತೆ, ತರುಣೀ ಜನರ ದಾಸನಾದೆನು.

ನಿಷ್ಠೆಯಿಂದ ತಪಸ್ಸನ್ನು ಮಾಡುವರು. ಭೋಗಗಳನ್ನು ತ್ಯಜಿಸಿ, ಕರ್ಮಗಳನ್ನು ಮಾಡುವರು. ಸ್ವರ್ಗಾದಿಸುಖಗಳನ್ನು ಬೇಡಿ ಮಾಡುವ ಕರ್ಮತಪೋಯಜ್ಞಾದಿಗಳೆಲ್ಲವೂ ಗಜಸ್ನಾನದಂತೆ ವ್ಯರ್ಥವೇ ಸರಿ. ಮನುಜನಿಗೆ ಸಂಸಾರ ಮುಕ್ತಿಕಾಲವು ಒದಗಿ ಬಂದಾಗಲೇ ಸಜ್ಜನ ಸಮಾಗಮವು ಸಿಗುವುದು. ಸಜ್ಜನ ಸಮಾಗಮವಾದಾಗಲೇ ಬ್ರಹ್ಮರಮಾವಂದಿತನಾದ ನಿನ್ನ ಶ್ರವಣಾದಿಗಳು ಸಿಗುವುವು. ಅದರಿಂದಲೇ ಸದ್ಗತಿಯು ಲಭಿಸುವುದು. ಪರಮೇಶ! ಏಕಭಕ್ತರಾದ ಸಾಧು ಚಕ್ರವರ್ತಿಗಳು, ರಾಜ್ಯವನ್ನು ತೃಣೀಕರಿಸಿ ತ್ಯಜಿಸಿ, ವನವನ್ನು ಸೇರಿ, ಸಾಧುಸಂಗದಿಂದ ನಿನ್ನ ಭಕ್ತಿಭಾಗ್ಯವನ್ನು ಬೇಡುವರಲ್ಲವೇ? ಅನಾಯಾಸದಿಂದ ನಿನ್ನ ಕರುಣೆಯು ನನ್ನ ರಾಜ್ಯಸುತ ದಾರಾದಿ ಸಂಬಂಧವನ್ನು ಕಡಿದುಬಿಟ್ಟು, ವೈರಾಗ್ಯಭಾಗ್ಯವನ್ನು ದಯಪಾಲಿಸು. ಕೃಷ್ಣ! ನಿನ್ನ ಅನುಗ್ರಹವೇ ಸಾಕು. ಅಕಿಂಚನಜನಭಜನೀಯವಾದ ನಿನ್ನ ಪಾದಾರವಿಂದದ ಸೇವೆಯನ್ನು ಕೊಡು! ಮೋಕ್ಷಪ್ರದನಾದ ನಿನ್ನನ್ನು ನೋಡಿ, ತನ್ನನ್ನು ಸಂಸಾರಬಂಧದಲ್ಲಿ ಕೆಡಹುವ ಕರ್ಮ ಫಲಪಾಶವನ್ನು ಬೇಡುವ ದಡ್ಡನಿರುವನೇ? ಸತ್ವರಜಸ್ತಮೋಗುಣ ವಿಕಾರವಾದ ಸಕಲ ವಿಷಯ ಭೋಗಾಶೆಯನ್ನು ಬಿಟ್ಟೆ. ಅಪ್ರಾಕೃತನು, ದೋಷರಹಿತನು, ಜ್ಞಾನಾನಂದಶರೀರನು, ಭಕ್ತರಕ್ಷಣಧೀರನು ಆದ ನಿನಗೆ ಶರಣಾಗತನಾಗಿರುವೆನು. ಬಹುಕಾಲದಿಂದ ತಾಪತ್ರಯಗಳಿಂದ ನೊಂದೆನು. ಆಶೆಗಳನ್ನು ಮಾಡಿ ಬಿಡದೆ ಸಂಸಾರಾಟವಿಯಲ್ಲಿ ನಡೆದುಬಂದೆನು; ಇಂದು ನಿನ್ನ ದಯದಿಂದ ಜರಾಮರಣ ಭಯನಾಶಕವಾದ ನಿನ್ನ ಪಾದಾರವಿಂದವನ್ನು ಪೊಂದಿ ನಿಶ್ಚಿಂತ ನಾದೆನು. ಕೃಷ್ಣಾ! ರಕ್ಷಿಸು!

ಶ್ರೀಭಗವಂತನಿಂತೆಂದನು –

ಸಾರ್ವಭೌಮ! ನಿನ್ನ ವಿಮಲ ಭಕ್ತಿಗೆ ಮೆಚ್ಚಿರುವೆನು. ವರಾಶೆಗಳ ತೋರಿದರೂ ಬೇಡದ ನೀನು ನನ್ನ ಏಕಾಂತಭಕ್ತನಿರುವೆ. ನನ್ನ ಭಕ್ತರು ಪ್ರಮಾದವಶರಾಗದಿರಲೆಂದೇ ನಾನು ಆಗಾಗ ಅವರಿಗೆ ವರಗಳನ್ನು ಬೇಡುವಂತೆ ಹೇಳುವೆನು. ಆದರೂ ಅವರು ಬುದ್ಧಿಗೆಡದೆ, ಪ್ರಾಣಾಯಾ ಮಲಬ್ಧಪ್ರಾಣಪ್ರಸಾರದಿಂದ, ಸಂಸಾರವಿಷಯವಾಸನೆಯನ್ನು ಕಳೆದುಕೊಂಡಿರುವುದರಿಂದ, ನನ್ನ

ಭಕ್ತಿಯನ್ನು ಹೊರತನ್ಯವೇನನ್ನೂ ಬೇಡದಿರುವರು. ನನ್ನಲ್ಲಿ ಮನಸ್ಸಿಡು! ಆಯುಶ್ಶೇಷವಿದೆ. ಅಲ್ಲಿಯವರೆಗೂ ಮಹೀಮಂಡಲದಿ ನನ್ನ ಭಕ್ತನಾಗಿ ಸಂಚಾರ ಮಾಡು! ಕ್ಷತ್ರಿಯಧರ್ಮ ಪಾಲನೆ ಮಾಡುತ್ತಾ, ಅವಧ್ಯಮೃಗ ಸಂಹಾರವನ್ನು ಮಾಡಿಬಂದ ಪಾಪವನ್ನು ತಪಸ್ಸಿನಿಂದ, ನನ್ನ ಧ್ಯಾನದಿಂದ ನಾಶಮಾಡು! ಮುಂದಿನ ಜನ್ಮದಲ್ಲಿ, ಸರ್ವಭೂತಹಿತವಾದ ಬ್ರಾಹ್ಮಣನಾಗಿ, ಕೊನೆಗೆ ನನ್ನ ಲೋಕವನ್ನು ಸೇರುವೆ. ಹೋಗು!

## ೫೫. ಗೋಮಂತ ದಾಹ – ಶ್ರೀಕೃಷ್ಣ ಜಯ

ಶ್ರೀಶುಕನು ಪೇಳಿದನು –

ಕೃಷ್ಣಾನುಗ್ರಹಪಾತ್ರನಾದ ಮುಚುಕುಂದನು ಗೋವಿಂದನಿಗೆ ಪ್ರದಕ್ಷಿಣೆಸಿ, ವಂದಿಸಿ, ಗುಹೆಯಿಂದ, ಹೊರಬಂದನು. ಕ್ಷುಲ್ಲಕಪರಿಮಾಣಗುಣಗಳಿಂದ ಕೂಡಿ ಮನುಜರನ್ನು, ಪಶುಗಳನ್ನು, ಮರಗಳನ್ನು ನೋಡಿ, ಕಲಿಯುಗ ಬಂದಿರುವುದೆಂದರಿತು, ಉತ್ತರದಿಶೆಗೆ ಹೊರಟನು. ದುಷ್ಟಸಂಗದೂರನಾಗಿ, ತಪವನ್ನು ಮಾಡಿದನು. ಕೃಷ್ಣಾಧ್ಯಾನರತನಾಗಿ, ಗಂಧಮಾದನದ ಬದರಿಕಾಶ್ರಮದಲ್ಲಿ, ಶ್ರೀಹರಿಯನ್ನಾರಾಧಿಸಿದನು; ಹಾಗೂ ಸಂಶಯಗಳನ್ನೆಲ್ಲ ಕಳೆದುಕೊಂಡು ಮುಕ್ತನಾದನು.

ಶ್ರೀಕೃಷ್ಣನು ಮತ್ತೆ ಮಧುರೆಗೆ ಬಂದು, ಅಲ್ಲಿ ನಾಯಕರಹಿತವಾಗಿದ್ದ ಯವನ ಸೈನ್ಯವನ್ನು ಗೆದ್ದು, ಅವನ ಧನವನ್ನೆಲ್ಲ ದ್ವಾರಕೆಗೆ ಕಳಿಸಿದನು. ಮಾರ್ಗಮಧ್ಯದಲ್ಲಿ ಜರಾಸಂಧನು ಮತ್ತೆ ಇಪ್ಪತ್ತುಮೂರು ಅಕ್ಷೌಹಿಣೇಸೈನ್ಯದೊಡನೆ ಬಂದು, ಮಕರವ್ಯೂಹವನ್ನು ರಚಿಸಿ, ಕ್ಷಣದಲ್ಲಿ, ಗೋವಿಂದನನ್ನು ಸುತ್ತುಗಟ್ಟಿ ನಿರೋಧಿಸಿದನು.

ಆಗ ಶ್ರೀಕೃಷ್ಣನು ಭೀಮಬಲವನ್ನು ತೋರಿ ಒಂದು ಗಿಡವನ್ನೇ ಕಿತ್ತಿ ಅದರಿಂದ ಜರಾಸುತನ ಸೈನ್ಯವನ್ನು ಮರ್ದಿಸಿದನು. ರಥಗಳು ಚೂರಾದವು; ಗಜಗಳು ಸತ್ತು ಬೆಟ್ಟದಂತೆ ಬಿದ್ದವು. ತುರಗಗಳು ರಕ್ತನದಿಗಳಿಗೆ ಸೇತುಗಳಾಗಿ ಬಿದ್ದವು. ಭಟರು ಹೇಳಹೆಸರಿಲ್ಲದೆ ನಷ್ಟರಾದರು. ಆಗ ಬಲರಾಮನು ಚತುರಂಗಬಲದಿಂದ ಕೂಡಿಬಂದು, ಜರಾಸುತನ ಬಲವನ್ನು ನಾಶಮಾಡಿದನು, ಆದರೂ ಬಹುಸಂಖ್ಯಾಕವಾದ ಸೈನ್ಯವನ್ನು ತಂದು ಮತ್ತೆ ಜರಾಸುತನು ಮುತ್ತಲು, ಅಲ್ಪಯಾದವಸೈನ್ಯವು ನಾಶವಾಯಿತು. ಮತ್ತೆ ಯವನನ ಧನವಾಹಾದಿಗಳು ಜರಾಸುತನ ಕೈಸೇರಿದವು. ಆಗ ಜರಾಸುತನು, ಯುದ್ಧದಲ್ಲಿ ವಿರಥಿಗಳಾಗಿ, ನಿರಾಯುಧರಾಗಿ, ಕವಚಾದಿಗಳಿಲ್ಲದೆ, ಭೀತರಂತೆ ಓಡಿಪೋಗುತ್ತಿರುವ ರಾಮಕೃಷ್ಣರನ್ನು ನೋಡಿ, ನಗುತ್ತಾ ಶರವರ್ಷದಿಂದ ಅವರೀರ್ವರನ್ನು ಮುಳುಗಿಸುತ್ತಾ, ಹಿಂಬಾಲಿಸಿದನು. ರಾಮಕೃಷ್ಣರು ಬಹು ಯೋಜನೆಗಳ ದೂರ ಓಡಿ, ಗೋಮಂತನನ್ನು, ಏರಿ, ಅಡಗಿದರು. ಪ್ರವರ್ಷಣಗಿರಿಯನ್ನು ಫಲಮೂಲಾಶನರಾಗಿ, ಅಡಗಿದ್ದ ರಾಮಕೃಷ್ಣರನ್ನು ಹುಡುಕಿ, ಕಾಣದೆ, ಜರಾಸಂಧನು, ಹಿಂದೆ ಬಂದ ರಾಜರಿಗಿಂತಾಜ್ಞಾಪಿಸಿದನು –

ಜಯದ್ರಥ, ಸೋಮದತ್ತ, ಶಕುನಿ, ರುಕ್ಮಿ, ಸುದಕ್ಷಿಣ, ವಿರಾಟರೇ! ನೀವು ಪೂರ್ವದಿಶೆಯಿಂದ ಗೋಮಂತವನ್ನೇರಿ ಬನ್ನಿ! ದ್ರುಪದ, ದಮಘೋಷ, ಬ್ರಹ್ಮದತ್ತ, ಏಕಲವ್ಯ, ಬಾಹ್ಲೀಕ, ಯುಧಾಮನ್ಯು, ವಿಂದಾನುವಿಂದ, ಪೌಂಡ್ರಕರೇ! ನೀವು ದಕ್ಷಿಣದಿಂದ ಸುತ್ತಿ ಬನ್ನಿ! ದ್ರುಮ,

ದಂತವಕ್ರ, ವಿದೂರಥ, ಭೂರಿಶ್ರವ, ಬೃಹಚ್ಛಾಪ, ಶತಧ್ವಜ, ಸುವೀರ, ದರದರೇ! ನೀವು ಪಶ್ಚಿಮದಿಂದ ಬನ್ನಿ! ಸುಶರ್ಮ, ವೇಣುದಾರಿ, ಕುಲಿಂದ, ಕೇಕಯ, ಶಿಶುಪಾಲ, ಭೀಷ್ಮ ಕರೇ! ನೀವು ನನ್ನ ಹಿಂದೆ, ಉತ್ತರ ದಿಕ್ಕಿನಿಂದ ಏರಿಬನ್ನಿ!– ಎಂದಾಜ್ಞಾಪಿಸಿ, ಜರಾಸಂಧನು, ಕೃಷ್ಣರಾಮರನ್ನು ಹುಡುಕಿ ಕಾಣದೆ, ಗೋಮಂತಶಿಖರವನ್ನೇ ಸುಟ್ಟರೆ, ಕೃಷ್ಣರಾಮರು ತಾವಾಗಿ ಸಾಯುವರೆಂದೆಣಿಸಿದನು. ಪ್ರವರ್ಷಣ ಶಿಖರದ ಸುತ್ತಲು, ಗಿಡಗಳಿಗೆ ಬೆಂಕಿ ಹಚ್ಚಿಸಿ, ಕೃಷ್ಣರಾಮರು, ಸುಟ್ಟುಬೂದಿಯಾದರೆಂದು ನಿಶ್ಚಯಿಸಿ, ತನ್ನ ಬಲದಿಂದ ಮಿಥ್ಯಾಜ್ಞಾನಿಯಾದ ಜರಾಸಂಧನು ಮಗಧೆಗೆ ಹೋದನು. ಹದಿನೆಂಟನೆಯ ಯುದ್ಧದಲ್ಲಿ ಗೆದ್ದೆನೆಂದು, ಕೊಚ್ಚಿ ಕೊಳ್ಳುತ್ತಾ ದುರ್ಮದನಾಗಿ ಜರಾಸುತನು, ಸಕಲರಾಜ ಸೇವಿತನಾಗಿದ್ದನು.

ಶ್ರೀಕೃಷ್ಣರಾಮರು ಉರಿಯುತ್ತಿರುವ ಕೋಡಿನಿಂದ ಧುಮುಕಿ, ನಿರಪಾಯರಾಗಿ ಪ್ರಯಾಣಿಸಿ, ಸಮುದ್ರ ದುರ್ಗಮವಾದ ದ್ವಾರಕಾಪುರವನ್ನು ಸೇರಿ, ಸೂತ ಮಾಗಧ ವಂದಿಗಳಿಂದ ಸ್ತುತರಾಗಿ ಸುಖವಾಗಿದ್ದರು.

## ೫೬. ಪಾಂಡವ ಕ್ಷೇಮ ವಿಚಾರ

ಶ್ರೀಕೃಷ್ಣನು ಒಂದು ದಿನ ರಾಮಸಾತ್ಯಕಿಯರಿಂದ ಕೂಡಿ, ಸುಧರ್ಮಸಭೆಯಲ್ಲಿರಲು, ಬ್ರಾಹ್ಮಣರು ಬಂದು ಪಾಂಡವಬಾಲಕರು ದ್ರುಪದರಾಜರನ್ನು ಗೆದ್ದು ದ್ರೋಣನಿಗೆ ಒಪ್ಪಿಸಿದ ವೀರವಿಹಾರವನ್ನು ವರ್ಣಿಸಿದರು. ಅದನ್ನು ಕೇಳಿ, ಸಂತೋಷಪಟ್ಟು ಶ್ರೀಕೃಷ್ಣನು ಕೃತವರ್ಮನನ್ನು ವಿಚಾರಿಸಿ ಬರಲು ಹಸ್ತಿನಾವತಿಗೆ ಕಳುಹಿದನು.

ಕೃತವರ್ಮನು ಗಜಪುರಿಯನ್ನು ಸೇರಿ ಅಲ್ಲಿದ್ದ ಭೀಷ್ಮದ್ರೋಣ ವಿದುರರನ್ನು, ಕೃಪನನ್ನು ಪಾಂಡವರನ್ನು ನೋಡಿ, ಕುಂತಿಯನ್ನೂ ಕಂಡು ಸಂತೈಸಿದನು. ಕಂಸಮರ್ದನನು ಕಾಲಯವನನನ್ನು ಸಂಹರಿಸಿ, ಜರಾಸುತನನ್ನು ಗೆದ್ದು, ಸೃಗಾಲವಾಸುದೇವರನ್ನು ಕೊಂದು, ದ್ವಾರಾವತೀ ನಗರವನ್ನು ನಿರ್ಮಿಸಿ, ಹಂಸಡಿಭಕ್ತರನ್ನು ಜಯಿಸಿದ ವೃತ್ತಾಂತವನ್ನು ಕೇಳಿ ಧರ್ಮರಾಜನು ಮೂರು ಲೋಕವನ್ನು ಗೆದ್ದಷ್ಟು ಸಂತೋಷಪಟ್ಟನು. ಸ್ನೇಹರಸಪೂರಿತನೇತ್ರರಾಗಿ ಕುಂತೀ ದೇವಿಯು ಪಾಂಡವರು ಕಳಿಸಲು, ಕೃತವರ್ಮನು, ಗಾಂಗೇಯ ಧೃತರಾಷ್ಟ್ರ ವಿದುರ ದ್ರೋಣ ಕೃಪಾಶ್ವತ್ಥಾಮ ಸುಯೋಧನರಿಂದ ಅಪ್ಪಣೆಯನ್ನು ಪಡೆದು ದ್ವಾರಕೆಗೆ ಪೋದನು. ಅಲ್ಲಿ ಅನೇಕ ನೃಪಸೇವಿತನಾದ ಶ್ರೀಕೃಷ್ಣನನ್ನು ಕಂಡು, ತಾನು ಕಂಡದ್ದನ್ನು ಕೇಳಿದ್ದನ್ನು ಕೂಡ ತಿಳಿಸಿದನು. ಗಜಪುರದ ವೃತ್ತಾಂತವನ್ನು ಕೇಳಿ, ಪಾಂಡುಸುತರ ಪರಾಕ್ರಮವನ್ನರಿತು, ಶ್ರೀಶನು ಪರಮಾನಂದಭರಿತನಾದನು. ನಿತ್ಯಾನಂದ ಮಹೋದಧಿಯಾದ ಶ್ರೀಕೃಷ್ಣನಿಗೆ ನಮಸ್ಕಾರವು!

## ೫೭. ಬಲರಾಮ ವಿವಾಹ – ರುಕ್ಮಿಣೀ ಸಂದೇಶ

ಶ್ರೀಶುಕನು ಹೇಳಿದನು–

ಆನರ್ತಾಧಿಪತಿಯಾದ ರೇವತನೆಂಬ ರಾಜನಿದ್ದನು. ಆ ಧರ್ಮಜ್ಞನಿಗೆ ರೇವತಿ ಎಂಬ ಸುಂದರ ಕನ್ಯೆಯು ಇದ್ದಳು. ಅವಳನ್ನು ಮದುವೆಯಾಗಲು ಬಂದ ರಾಜಕುಮಾರನನ್ನು ತಿರಸ್ಕರಿಸಿ, ವಿಧಿವಿಧಾನವನ್ನೇ ತಿಳಿದು, ಬ್ರಹ್ಮನಾಜ್ಞಾಪಿಸಿದ ವರನಿಗೇ ಕೊಡುವೆನೆಂದು, ರೇವತನು ಬ್ರಹ್ಮಸಭೆಗೆ ಹೋದನು. ಆಗ ಜಗದ್ಗುರುವಾದ ವಿರಿಂಚನ ಸಭೆಯಲ್ಲಿ ಹಾಹಾ, ಹೂಹೂ, ಎಂಬೀರ್ವರು ಗಂಧರ್ವರು ಸ್ವರಮಂಡಲ, ಗ್ರಾಮತ್ರಯ, ಏಕವಿಂಶತಿ ಮೂರ್ಛನೆಗಳಿಂದ, ಅತಿ ಮನೋಹರವಾಗಿ ಹಾಡುತ್ತಿದ್ದರು. ಸಮಯವಲ್ಲವೆಂದು ರೇವತನು ತನ್ನ ಮಗಳಿಂದ ಕೂಡಿ, ಸ್ವಲ್ಪಕಾಲ ಹೊರಗೇ ನಿಂತಿದ್ದು, ಗೀತೆಯು ಮುಗಿದಾಗ ಒಳಗೆ ಬಂದು ಬ್ರಹ್ಮದೇವನಿಗೆ ವಂದಿಸಿದನು.

'ಭಗವಾನ್! ಇವಳು ನನ್ನ ಮಗಳು. ಯಾರಿಗೆ ಕೊಡಲಿ ಇವಳನ್ನು?' ಎಂದ ರೇವತನನ್ನು ನೋಡಿ, ವಿರಿಂಚನು 'ಕೆಲ ರಾಜಪುತ್ರರನ್ನು ಹೆಸರಿಸು' ಎಂದನು. ರೇವತನು ತನ್ನ ಕಾಲದ ಕೆಲರಾಜರ ನಾಮಗಳನ್ನು ಹೇಳಿದಾಗ, ಬ್ರಹ್ಮನು ನಕ್ಕು 'ರಾಜನ್! ನೀನು ಇಲ್ಲಿಗೆ ಬಂದು, ಗಾನವನ್ನು ಕೇಳುತ್ತಾ ಇರುವಾಗ ಕ್ಷಣದಂತೆ ಕಾಲವು ಕಳೆದುಹೋಗಿದೆ. ನೀನು ಹೇಳಿದ ರಾಜರು, ಅವರ ಗೋತ್ರಜರು ಕೂಡ ಈಗಿಲ್ಲ. ಕೃತತ್ರೇತೆಗಳು ಕಳೆದು ದ್ವಾಪರವೂ ಮುಗಿಯಲಿದೆ. ಈಗ ದ್ವಾರಕೆಯಲ್ಲಿರುವ ವಸುದೇವನ ಮನೆಯಲ್ಲಿ ಲೋಕಪ್ರಭುವರರಾದ ರಾಮಕೃಷ್ಣರಿರುವರು. ಆ ಬಲರಾಮನಿಗೆ ನಿನ್ನ ಮಗಳನ್ನು ಕೊಡು' ಎಂದು, ಕಳಿಸಿದನು.

ರೇವತನು ದ್ವಾರಕೆಗೆ ಬಂದು ತನ್ನ ಮಗಳಾದ ರೇವತಿಯನ್ನು ಬಲರಾಮನಿಗೆ ಮದುವೆ ಮಾಡಿಕೊಟ್ಟನು. ಕೃತಯುಗದವಳಾದ್ದರಿಂದ ದೀರ್ಘದೇಹಳಾದ ಆ ಮಡದಿಯನ್ನು, ಹಲಾಗ್ರದಿಂದ ಸರಿಮಾಡಿಕೊಂಡು ಬಲರಾಮನು ಸುಖವಾಗಿದ್ದನು.

ಭಗವಾನ್ ಶ್ರೀಕೃಷ್ಣನು ಕೂಡ ಭೀಷ್ಮಕಸುತೆಯಾದಿ ರುಕ್ಮಿಣೀದೇವಿಯನ್ನು, ಶಾಲ್ವಾದಿ ರಾಜಪುತ್ರರು ನೋಡುತ್ತಿರಲು – ಗರುಡನು ಅಮೃತವನ್ನಂತೆ – ಅಪಹರಿಸಿ ತಂದು ರಾಕ್ಷಸ ವಿವಾಹ ಕ್ರಮದಿಂದ ಮದುವೆಯಾದನು.

ಪರೀಕ್ಷಿತನು ಕೇಳಿದನು –

ಪೂಜ್ಯ ಶುಕನೇ! ಮಾಗಧ ಶಾಲ್ವಾದಿ ದುಷ್ಟರನ್ನು ಗೆದ್ದು, ರುಕ್ಮಿಣೀದೇವಿಯನ್ನು ಶ್ರೀಕೃಷ್ಣನು ತಂದು ಮದುವೆಯಾದ ಮಂಗಳಕರ ವೃತ್ತಾಂತವನ್ನು ವಿಸ್ತಾರವಾಗಿ ಕೇಳಬೇಕೆಂದಿರುವೆನು. ವಿಷ್ಣುಕಥೆಗಳು ಪುಣ್ಯಕರಗಳು, ಪಾಪಹರಗಳು, ಹಾಗೂ ನಿತ್ಯವೂ ಕೇಳುತ್ತಿದ್ದರೂ ಬೇಸರವಾಗದೆ ನೂತನ ಮನೋಹರವಾಗಿರುವುವು.

ಶ್ರೀಶುಕನು ಪೇಳಿದನು –

ವಿದರ್ಭ ದೇಶದಲ್ಲಿ, ಭೀಷ್ಮಕನೆಂಬ ರಾಜನ್ಯನಿದ್ದನು. ಅವನಿಗೆ ರುಕ್ಮಿ, ರುಕ್ಮರಥ, ರುಕ್ಮಬಾಹು, ರುಕ್ಮಕೇಶ, ರುಕ್ಮಮಾಲಿ ಎಂಬ ಐವರು ಸುತರಿದ್ದರು. ಅವರ ತಂಗಿಯೇ ಮಂಗಳಾಂಗಿಯಾದ ರುಕ್ಮಿಣಿಯು. ಮುಕುಂದನು ರೂಪ ವೀರ್ಯ ಗುಣಸಂಪನ್ನನು, ತಂದೆಯ ಸಭೆಯಲ್ಲಿ ವರ್ಣಿಸುವ ನಾರದಾದಿ ಮುನಿಗಳಿಂದ ತಿಳಿದು, ರುಕ್ಮಿಣೀದೇವಿಯು, ಶ್ರೀಕೃಷ್ಣನೇ ತನಗೆ ತಕ್ಕ

ಪತಿ ಎಂದು ನಿರ್ಧರಿಸಿದಳು. ಕೃಷ್ಣನಾದರೂ ಅಂತೆಯೇ ಅವಳ ಬುದ್ಧಿ, ಶುಭಲಕ್ಷಣ, ರೂಪ ಶೀಲ, ಗುಣಗಳನ್ನರಿತು ಅವಳನ್ನೇ ಮದುವೆಯಾಗಲು ನಿರ್ಧರಿಸಿದನು. ಬಂಧುಗಳೂ ಕೃಷ್ಣನಿಗೆ ರುಕ್ಮಿಣಿಯನ್ನು ಕೊಡಲು ನಿಶ್ಚಯಿಸಿದರು. ಆದರೆ ಕೃಷ್ಣದ್ವೇಷಿಯಾದ ರುಕ್ಮಿಯು ಅವರನ್ನೆಲ್ಲ ನಿವಾರಿಸಿ, ತಂಗಿಯನ್ನು ಮಿತ್ರನಾದ ಶಿಶುಪಾಲನಿಗೇ ಕೊಡುವೆನೆಂದು ಹಠ ತೊಟ್ಟನು. ಶಿಶುಪಾಲನವಳನ್ನು ಕಬ್ಬಿಣದ ಕಡಲೆಯಂತೆ ಜೀರ್ಣಿಸಿಕೊಳ್ಳಲಾರನೆಂಬುದನ್ನರಿಯದೆ ಮೂಢ ನಾದ ಅಣ್ಣನ ಮನವನ್ನರಿತು, ವ್ಯಸನಾಕ್ರಾಂತಳಾಗಿ, ಅಸಿತಲೋಚನೆಯಾದ ರುಕ್ಮಿಣಿ, ಆಪ್ತನಾದ ಬ್ರಾಹ್ಮಣನನ್ನು ದೂತನಾಗಿಸಿ, ದ್ವಾರಕೆಗೆ ಕಳುಹಿಸಿದಳು.

ಇಂದಿರಾಸಂದೇಶಹರನಾದ ಬ್ರಾಹ್ಮಣವರನು ದ್ವಾರಕೆಗೆ ಬಂದು, ಕೃಷ್ಣಮಂದಿರ ದ್ವಾರ ಪಾಲರಿಂದ ಕರೆಯಲ್ಪಟ್ಟು, ಕಾಂಚನಾಸನದಿ ಕೂತ ಕನಕಾಂಬರನನ್ನು ಕಂಡನು. ಬ್ರಹ್ಮಣ್ಯದೇವನು ಬ್ರಾಹ್ಮಣನಿಗೆ ಎದುರು ಹೋಗಿ ಕರೆತಂದು, ಆಸನದಿ ಕೂಡಿಸಿ, ತನ್ನನ್ನು ದೇವತೆಗಳು ಪೂಜಿಸು ವಂತೆ, ಸತ್ಕರಿಸಿದನು. ವಿಪ್ರನು ಉಂಡು ವಿಶ್ರಾಂತಿಯನ್ನು ತೆಗೆದುಕೊಂಡು ಬಂದಾಗ ಶ್ರೀಕೃಷ್ಣನು ಅವನ ಪಾದದಡಿಯಲ್ಲಿ ಕೂತು, ವಂದಿಸಿ, ಅವ್ಯಗ್ರಚಿತ್ತನಾಗಿ ಇಂತು ಕೇಳಿದನು–

ದ್ವಿಜವರಶ್ರೇಷ್ಠ! ವೃದ್ಧಜನರಿಗೆ ಸಮ್ಮತವಾಗುವಂತೆ ಧರ್ಮವನ್ನಾಚರಿಸುವೆಯಾ? ಅತಿಶ್ರಮಪಡದೆ, ತೃಪ್ತನಾಗಿರುವೆಯಾ? ದೈವೇಚ್ಛೆಯಿಂದ ಬಂದ ಧನಾದಿಗಳಿಂದ ಸಂತುಷ್ಟನಾದ ಬ್ರಾಹ್ಮಣನು ಧರ್ಮವಂತನೆನಿಸುನು. ಅವನ ಧರ್ಮವೇ ಅವನ ಸರ್ವಕಾಮಿತಗಳನ್ನು ಪೂರೈಸಿ ರಕ್ಷಿಸುವುದು. ಇಂದ್ರಪದವಿಯಿಂದಲೂ ಅತೃಪ್ತನಿಗೆ ಸುಖವಿಲ್ಲ. ದರಿದ್ರನಾದರೂ ತೃಪ್ತನಾಗಿ ದ್ದರೆ ಸುಖವಾಗಿರುವನು. ಸ್ವತಂತ್ರನಾದ ಪರಮಾತ್ಮನು ಕೊಟ್ಟಿದ್ದರಿಂದ ಸಂತುಷ್ಟರಾಗಿ, ಸರ್ವ ಭೂತಹಿತರತರಾಗಿ, ಅಹಂಕಾರವಿಲ್ಲದೆ ಶಾಂತರಾಗಿ, ಬ್ರಾಹ್ಮಣರು ಪೂಜ್ಯರೆನಿಸುವರು. ಅಂತಹ ವರಿಗೆ ನಾನೂ ಪುನಃ ಪುನಃ ವಂದಿಸುವೆನು.

ಬ್ರಾಹ್ಮಣವರ! ನಿನಗೆ ಕ್ಷೇಮವೇ? ವಿಪ್ರರನ್ನು, ಪ್ರಜರನ್ನು ಸುಖವಾಗಿಟ್ಟು, ಧರ್ಮದಿಂದ ಪಾಲಿಸುವ ರಾಜನನ್ನು ಕಂಡರೆ ನನಗೆ ಆನಂದವಾಗುವುದು. ದುರ್ಗಮವಾದ ದ್ವಾರಾವತಿಗೆ ನೀನು ಬರಲು ಕಾರಣವೇನು? ನಿನ್ನ ಕಾರ್ಯವನ್ನು ನಾನು ಮಾಡಿ ಕೊಡುವೆನು.

ಕೃಷ್ಣನ ಮಧುರವಚನವನ್ನಾಲಿಸಿ, ಬ್ರಾಹ್ಮಣನು ತಂದು ಸಂದೇಶಪತ್ರವನ್ನು ದೇವದೇವನ ಅಡಿದಾವರೆಯಲ್ಲರ್ಪಿಸಿ, ವಂದಿಸಿದನು. ಅದನ್ನು ಸ್ವೀಕರಿಸಿ, ನಗುತ್ತಾ ಶ್ರೀಕೃಷ್ಣನು ಕುತೂಹಲಿ ಯಾದವನಂತೆ ಓದತೊಡಗಿದನು.

ಶ್ರೀ ರುಕ್ಮಿಣಿಯು ಹೇಳುವಳು–

ಭುವನಸುಂದರ ಶ್ರೀನಿವಾಸ! ನಿನ್ನ ನಾಮಾಮೃತವು ನಾಲಿಗೆಗೆ ಸವಿಯೂಟ; ನಿನ್ನ ಮೂರ್ತಿ, ಕಣ್ಣಿಗೆ ಕರ್ಪೂರಶಲಾಕೆ; ನಿನ್ನ ಚಿಂತೆಯು, ದುಷ್ಟಚಿಂತಾನಿವರ್ತಕ; ನಿನ್ನ ರತಿ, ವಿಷಯತತಿಗುಹಪತಿ; ನಿನ್ನ ಚರಣಾರ್ಚನೆಯು, ಭವಸಿಂಧು ತರಣಿಯು; ನಿನ್ನ ಸ್ಮರಣೆ ಸರ್ವದುರಿತಹರಣ; ನಿನ್ನ ಕೀರ್ತಿ, ಶ್ರವಣ, ಕರ್ಣರಸಾಯನ, ನಿನ್ನ ಸಂಗ, ಭವಭಂಗ, ಮಂಗಲಾಂಗ! ಕೃಷ್ಣ! ನಿನ್ನಲ್ಲಿ ಉತ್ಕೃಷ್ಟತೃಷ್ಣೆಯಿಂದ, ನನ್ನ ಚಿತ್ತವು ನಟ್ಟನಿಂತಿದೆ. ರಮೇಶ! ನಾಚಿಕೆ ಅದೇಕೆ? ನನ್ನ ನನ್ನವಳ ಮಾಡು! ಕರುಣೆಯಂ ಬೀರು ಮೈದೋರಿ ಖಲವಿದಾರಿ! ಮುಕುಂದ! ಕುಲವತಿಯಾದಡೇನು? ಲಜ್ಜಾವತಿಯಾದೊಡೇನು? ಕುಲರೂಪ ಶೀಲವಿದ್ಯಾವಯೋವೈಭವಶೋಭಾಸಮನ್ವಿತನಾಗಿ ಅಸಮಾಧಿಕನೆನಿಸಿದ ನಿನ್ನಂತಹ ವರನನ್ನು, ಯಾವ ವರಾಂಗಿ ವರಿಸದಿರುವಳು? ಪೇಳು! ಸಮಾಸ

ಮಳೆನಿಪರಮಾಕಾಂತೆಯೇ ಕಾಂಕ್ಷಿಪಳೆಂದಮೇಲೆ– ನನ್ನ ಪ್ರೇಮ ನಿನಗೆ ಹೊಸತಾಗಿ ಹುಟ್ಟಿತೇ? ಭಕ್ತಪ್ರಿಯನು, ಶರಣಾಗತ ಪರಿಪಾಲನು, ದೀನಜನವತ್ಸಲನು ನೀನಹುದೆಂದು ನಂಬಿ, ವಿಷಯ ಸುಖದಾಶೆಯಿಂದಲ್ಲದೆ, ನಿನ್ನ ಪಾದಸರೋಜದಾಸ್ಯವನ್ನೇ ಬಯಸಿ, ವಂದಿಸಿ ಬೇಡುವ ವನಿತಾ ರಮಣಿಯ ವಾಂಛಿತವನ್ನು ಈಡೇರಿಸುವುದು ನಿನಗೆ ಉಚಿತವಲ್ಲವೇ? ಪ್ರಿಯತಮ! ಈ ಶರೀರ ನಿನ್ನ ಚರಣಕರ್ಪಿಸಿದೆನು. ಸರಿಬಂದಂತೆ ಮಾಡು, ಬಿರುದುಳ್ಳ ಉರಗಶಯನ! ಸಿಂಹಭಾಗವನ್ನು ವಂಚಿಸಿ ಹರಿಸಲು ಹೊಂಚುಹಾಕಿರುವ ಗೋಮಾಯುವಿನಂತೆ, ಪಾಪಿಚೈದ್ಯನು, ನಿನ್ನ ಪಾದಾರ ವಂದನಿರತಳಾದ ನನ್ನನ್ನು ಹರಿಸದಂತೆ ಮಾಡು. ಪೂರ್ತೇಷ್ಟಗಳನ್ನು ಮಾಡಿದ್ದರೆ, ದೇವ ವಿಪ್ರ ಗುರುಪೂಜೆಗಳನ್ನು ನಡೆಸಿದಿದ್ದರೆ, ಉತ್ತಮದಾನಗಳನ್ನು ನೀಡಿದ್ದರೆ, ಆ ಪುಣ್ಯಕಾರ್ಯಗಳಿಂದ ರಮಾಪತಿಯು ತುಷ್ಟನಾಗಿದ್ದರೆ, ಗದಾಗ್ರಜನೇ ನನ್ನ ಚಿತ್ತೇಶನಾಗಲಿ! ದಮಘೋಷ ಸುತ ಹತಕನು ನನ್ನನ್ನು ಕಣ್ಣೆತ್ತಿ ನೋಡದಿರಲಿ! ನಾಡಿದ್ದು ಮುಹೂರ್ತವಂತೆ; ಚತುರಂಗಬಲಗಳಿಂದ ಬಲರಾಮನಿಂದ ಬಂದು, ಶಿಶುಪಾಲ ಜರಾಸಂಧರನ್ನು ಹೊಡೆದೋಡಿಸಿ, ರಾಕ್ಷಸ ವಿವಾಹದಲ್ಲಿ ವೀರ್ಯಶುಲ್ಕವನ್ನಿತ್ತು, ನನ್ನನ್ನು ಸ್ವೀಕರಿಸು; ಬರುವೆನು.

ಅಂತಃಪುರದಲ್ಲಿರುವ ನನ್ನನ್ನು, ಬಂಧು ಹಿಂಸೆ ಮಾಡದೆ ತರುವ ಉಪಾಯವನ್ನೂ ಸೂಚಿಸುವೆನು, ಕೇಳು. ಕುಲದೇವಿಯ ಗುಡಿಗೆ, ಊರ ಹೊರಗೆ ಹೋಗಿ, ನವವಧುಗಳು ಗೌರೀಪೂಜೆಯನ್ನು ಮಾಡಿ ಬರುವುದು ನಮ್ಮ ಮನೆಯ ಪದ್ಧತಿ. ಅದರಂತೆ ನಾನೂ ನಾಳೆ, ಗೌರೀಮಂದಿರಕ್ಕೆಂದು ಬಂದಾಗ, ಬಂದು, ನಿನ್ನವಳಾದ ನನ್ನನ್ನು. ನಿನ್ನ ಪುರಿಗೆ ಕರೆದೊಯ್ದು, ನನ್ನ ಜನ್ಮವನ್ನು ಸಾರ್ಥಕಗೊಳಿಸು! ನಿನ್ನ ಪಾದೋದಕಮಂಗಲಶಿರನಾದ ಶಿವನಂತೆ, ಇತರ ಮಹಜ್ಜನರು ಕೂಡ ನಿನ್ನ ಪಾದಾರವಿಂದ ರಜಸ್ತುತಿನತಿಗಳನ್ನು, ತಮ್ಮ ಪಾಪಾಜ್ಞಾನಗಳನ್ನು ಕಳೆದುಕೊಂಡು ಪಾವನರಾಗಬೇಕೆಂದು ಸರ್ವದಾ ಮಾಡುತ್ತಿರುವರು. ಅಂತಹ ನಿನ್ನ ಪರಮ ಪಾವನ ಪದಪಂಕಜರಜಃ ಪ್ರಸಾದವನ್ನು ಪಡೆಯಲೋಸುಗ, ನೂರಾರು ಜನ್ಮಗಳಲ್ಲಿ ವ್ರತಕರ್ಶಿತ ಳಾಗಿ ತಪವನ್ನು ಮಾಡುವೆನಾಗಲಿ, ಎಡಗಾಲಿನ ಕಿರುಬೆರಳಿನಿಂದ ಕೂಡ ಇತರರನ್ನು ಮುಟ್ಟ ಲಾರೆನು. ಈ ತನು ಮನಃ ಪ್ರಾಣಗಳೆಲ್ಲವೂ ನಿನ್ನ ಚರಣಾಂಕಿತ ಮಾಡಿರುವೆನು.

ಇಂತು ಪತ್ರಗತಾಂಶವನ್ನು ತಿಳಿದು, ನಸುನಗುತ್ತಾ, ನಲಿನನಾಭನು, ಇನ್ನೇನು ವಿಷಯ ವೆಂದು, ಬ್ರಾಹ್ಮಣನ ಕಡೆ ನೋಡಿದನು– ಸ್ವಾಮೀ! ಯದುನಾಥ! ನಾ ತಂದ ಸಂದೇಶವಿಷ್ಟೇ! ವಿಷಯವಿಚಾರವು ನಿನ್ನದು– ಎಂದು ಬ್ರಾಹ್ಮಣನು, ನುಡಿದು ನಮಿಸಿದನು.

## ೫೮. ರುಕ್ಮಿಣೀ ಹರಣ

ಶ್ರೀಶುಕನು ಹೇಳಿದನು–

ಆಗ ಶ್ರೀಕೃಷ್ಣನು ಮಂದಸ್ಮಿತಸುಂದರನಾಗಿ, ವಿಪ್ರನ ಕೈಯನ್ನು ತನ್ನ ಕೈಲಿ ಪಿಡಿದು, ಇಂತೆಂದನು–

ಬ್ರಾಹ್ಮಣ! ನಾನೂ ರುಕ್ಮಿಣಿಯನ್ನು ಪ್ರೀತಿಸುತ್ತಿರುವೆನು. ಅವಳ ಚಿಂತೆಯಲ್ಲಿ ನನಗೆ ನಿದ್ರಾಹಾರಗಳೂ ಬೇಕಾಗುವುದಿಲ್ಲ. ಇದು ನಿಜ! ಆದರೆ ರುಕ್ಮಿಯು ನನ್ನಲ್ಲಿ ವೈರವನ್ನು ಮಾಡುತ್ತಾ, ಕೇಡುಮಾಡಿ, ತಂಗಿಯನ್ನು ಕಾಡುತ್ತಿರುವನು. ನನ್ನವಳೂ, ಹಾಗೂ ನಿರ್ದೋಷಳಾದ

ರುಕ್ಮಿಣಿಯನ್ನು ನೀಚರಾಜರನ್ನೋಡಿಸಿ, ಕಾಷ್ಠದಿಂದ ವಹ್ನಿಶಿಖೆಯನ್ನಂತೆ, ತಂದುಕೊಳ್ಳುವೆನು.

ಎಂದು ಮದುವೆಯ ನಕ್ಷತ್ರವನ್ನು ಕೇಳಿ, ತಿಳಿದು, ಶ್ರೀಕೃಷ್ಣನು, ಶೈಬ್ಯಸುಗ್ರೀವ ಮೇಘ ಪುಷ್ಪಬಲಾಹಕಗಳೆಂಬ ಕುದುರೆಗಳನ್ನು ಕಟ್ಟಿದ ರಥವನ್ನು, ದಾರುಕಸಾರಥಿಯಾಗಿ, ಬ್ರಾಹ್ಮಣ ನೊಡನೆ ಏರಿ ಕುಳಿತು, ಒಂದೇ ರಾತ್ರಿಯಲ್ಲಿ ವಿದರ್ಭದೇಶದ ಕುಂಡಿನ ನಗರೋಪಕಂಠದಲ್ಲಿ, ಬಂದಿಳಿದನು.

ಕುಂಡಿನಪುರವು ವಿವಾಹ ಮಹೋತ್ಸವಕ್ಕೆಂದು ಸಿಂಗರಿಸಲ್ಪಟ್ಟಿತು. ರಾಜವೀಥಿಗಳಲ್ಲಿ, ಪನ್ನೀರುಚಂದನಗಳಿಂದ ತಳಿಲನ್ನು ಚೆಲ್ಲಿ, ತೋರಣಪತಾಕಾಧ್ವಜಗಳನ್ನು ಕಟ್ಟಿದ್ದರು. ನರನಾರಿಯರು ಗಂಧಪುಷ್ಪದಿವ್ಯವಸನಭೂಷಿತರಾಗಿ, ಸಂಭ್ರಮಿಸುತ್ತಿದ್ದರು. ಮನೆಗಳ ಮುಂದೆ ಕಟ್ಟಿದ ರಂಭಾಸ್ತಂಭಗಳು, ಅಡಿಕೆಗೊಂಚಲುಗಳು, ಇಟ್ಟ ಪೂರ್ಣಕುಂಭಗಳು ಹಾಕಿದ ರಂಗ ವಲ್ಲಿಗಳು, ಬಲು ಮುದ್ದಾಗಿದ್ದವು.

ಭೀಷ್ಮಕನು ಪುತ್ರವಶನಾಗಿ, ಮಗಳನ್ನು ಶಿಶುಪಾಲನಿಗೆ ಕೊಡುವೆನೆಂದು, ಪಿತೃದೇವಾ ತಿಥಿಗಳನ್ನರ್ಚಿಸಿ, ಪುಣ್ಯಾಹವಾಚನವನ್ನು ಮಾಡಿಸಿದನು. ಕನ್ಯಾಮಣಿಗೆ ಪನ್ನೀರೆರೆದು, ಅಲಂ ಕರಿಸಿ, ಸೀರೆಗಳನ್ನುಡಿಸಿ, ತರಲು ಋಗ್ಯಜುಸ್ಸಾಮಾದಿಮಂತ್ರಗಳಿಂದ ಪುರೋಹಿತರು, ದುಷ್ಟ ಗ್ರಹಶಾಂತಿಯನ್ನು ಮಾಡಿ ಆಶೀರ್ವದಿಸಿದರು. ರಾಜನಾಗ, ಬಂಗಾರ, ಬೆಳ್ಳಿ, ವಸ್ತ್ರ, ತಿಲ, ಗುಡ ಮೊದಲಾದ ದಾನಗಳನ್ನು, ಗೋದಾನವನ್ನು ಮಾಡಿ, ವಿಪ್ರರನ್ನು ಸಂತೋಷಪಡಿಸಿದನು.

ಅಂತೆಯೇ ಬಿಡದಿಯ ಮನೆಯಲ್ಲಿ, ದಮಘೋಷನು, ಮಗನ ಮದುವೆಗಾಗಿ ಮಾಡ ಬೇಕಾದ ಮಂಗಲಕಾರ್ಯಗಳನ್ನು ಮಾಡಿಸಿದನು. ಭೀಷ್ಮಕನು, ಅವರಿಗೆ ವಸ್ತ್ರಾಲಂಕರಣಗಳ ನ್ನಿತ್ತು, ಅವರ ಹಿಂದೆ ಬಂದ ಶಾಲ್ವ, ಜರಾಸಂಧ, ದಂತವಕ್ತ್ರ, ವಿದೂರಥ, ಪೌಂಡ್ರಕಾದಿಗಳಿಗೂ ಮನೆಗಳನ್ನು ಕಲ್ಪಿಸಿಕೊಟ್ಟು ಸತ್ಕರಿಸಿದನು. ಸಮಗ್ರಬಲಾಯುಧವಾಹನಸಹಿತರಾಗಿ ಬಂದ ಆ ರಾಜರನ್ನು ಕಂಡು, ಪ್ರಜರು– ಇವರು ಮದುವೆಗೆ ಬಂದರೋ ಅಥವಾ ಯುದ್ಧಮಾಡಲು ಬಂದರೋ– ಎಂದು ಸಂಶಯಾಕುಲಿತರಾಗಿ ಬೆರಗಾಗಿ ನೋಡಿದರು.

ಕನ್ಯೆಯನ್ನು ಸಾಧಿಸುವಾಗ, ಕೃಷ್ಣರಾಮದ್ವೇಷಿ ರಾಜರು ಬಂದು ಮುತ್ತಿದರೆ, ಅವರಿಗೆ ಬುದ್ಧಿಯನ್ನು ಕಲಿಸಬೇಕೆಂದು ಬಲರಾಮನು, ತಮ್ಮನ ಮೇಲಿನ ಪ್ರೀತಿಯಿಂದ, ಚತುರಂಗ ಬಲಾಯುತನಾಗಿ, ಕುಂಡಿನವನ್ನು ಬಂದು ಸೇರಿದನು.

ಭೀಷ್ಮಕಸುತೆಯು, ಹರಿಯನ್ನು ಕರೆತರಲು ಕಳುಹಿಸಿದ ವಿಪ್ರವರನನ್ನು ನಿರೀಕ್ಷಿಸಿ, ಕಾಣದೆ, ಕಾತರಳಾಗಿ ಚಿಂತಿಸಿದಳು.

'ಅಹೋ! ರಾತ್ರಿಯೆಲ್ಲವು ಕಳೆದುಹೋಯಿತು! ನಾಳೆ ಮದುವೆಯಂತೆ. ಅರವಿಂದ ನೇತ್ರ ನೇತಕ್ಕೆ ಬಾರದಿರುವನೋ ಕಾಣೆ! ವಿಪ್ರನೂ ಬರಲಿಲ್ಲವಲ್ಲ? ಏನು ಮಾಡಲಿ? ನನ್ನ ಯಾವ ದೋಷವನ್ನು ಕಂಡು, ನಿರ್ದೋಷಗುಣರತ್ನಾಕರನಾದ ಶ್ರೀಕೃಷ್ಣನು ಬರದಿರುವನೋ? ವಿಧಾತೃ ಮಹೇಶ್ವರರು ಅನುಕೂಲರಾಗಿರುವರೋ ಇಲ್ಲವೋ? ದೇವಿ ಶರ್ವಾಣಿಯು ವಿಮುಖ ಳಾದಳೇ?' ಎಂದು ಕಣ್ಣೀರಿಡುತ್ತಾ, ಚಿಂತಿಸುವ ರುಕ್ಮಿಣಿಯ ಎಡಗಣ್ಣು ಭುಜಗಳು ಅದುರಿ, ಶುಭವನ್ನು ಸೂಚಿಸಿದವು.

ಆಗ ಕೃಷ್ಣನನ್ನು ಪುರೋದ್ಯಾನಗಳಲ್ಲಿ ಬೀಳ್ಕೊಂಡು, ಬ್ರಾಹ್ಮಣನು, ರಾಜಪುತ್ರಿಯ ಅಂತಃ ಪುರಕ್ಕೆ ಬಂದನು. ಶಾಂತಸಂತುಷ್ಟನಾದ ವಿಪ್ರನನ್ನು ಕಂಡು, ಸಮಾಧಾನಗೊಂಡು, ರುಕ್ಮಿಣಿಯು

ಕೇಳಲು, ವಿಪ್ರನು 'ಬಂದ ಕೃಷ್ಣ ಚಂದದಿಂದ ಬಂದ ನೋಡೇ, ವೃಂದಾರಕ ವಂದ್ಯ ನಿನ್ನ ಕರೆದೊಯ್ಯ ನೋಡೇ' ಎಂದನು. ಆ ಮಾತನ್ನು ಮನಸಾರೆ ಕೇಳಿ, ಕೃಷ್ಣಾಗಮನದಿಂದ ತೃಪ್ತಳಾದ ರುಕ್ಮಿಣಿ ನಿಷ್ಕಿಂಚನ ಭಕ್ತವರನಾದ ಆ ಬ್ರಾಹ್ಮಣನಿಗೆ ಇನ್ನೊಂದು ಪ್ರಿಯಕರವಿಲ್ಲವೆಂದರಿತು, ಶಿರಸಾ ನಮಸ್ಕರಿಸಿದಳು.

ರಾಮಕೃಷ್ಣರು ಮದುವೆಗೆ ಬಂದರೆಂದು ಕೇಳಿ, ಭೀಷ್ಮಕನು, ರುಚಿರವಸನ ಗಂಧಮಾಲ್ಯಾಭರಣಗಳನ್ನು ತಂದರ್ಪಿಸಿ, ಮಧುಪರ್ಕವನ್ನಿತ್ತು, ಪೂಜಿಸಿದನು. ನಗರವು ಜರಾಸಂಧ ಪೌಂಡ್ರಕಾದಿಗಳಿಂದ ತುಂಬಿ, ಸ್ಥಲವಿಲ್ಲದಿರುವುದರಿಂದ, ಬಾಹ್ಯೋದ್ಯಾನವನ್ನೇ ಬಿಡದಿಯಾಗಿ ಸ್ವೀಕರಿಸಲು ಬೇಡಿ, ಹೊರಟುಹೋದನು. ವಿದರ್ಭಪುರವಾಸಿಗಳು, ಕೃಷ್ಣಾಗಮನವನ್ನು ಕೇಳಿ, ಗುಂಪಾಗಿ ಬಂದು, ಶ್ರೀಶನ ಮುಖಪಂಕಜ ಸೌಂದರ್ಯರಸವನ್ನು, ನೇತ್ರಪಾತ್ರಗಳಲ್ಲಿ ತುಂಬಿ ಕುಡಿದರು.

'ರತ್ನವನ್ನು ಕಬ್ಬಿಣದಿ ಬಿಗಿದಂತೆ ಶಿಶುಪಾಲನಿಗೆ ನಮ್ಮ ರುಕ್ಮಿಣಿಯನ್ನು ಕೊಡುವುದನ್ನು ಬಿಟ್ಟು, ಈ ಕೃಷ್ಣನಿಗೆ ಕೊಡಬಾರದೇ? ಅವಳಿಗೆ ಇವನೇ ತಕ್ಕ ಪತಿಯಾಗಿರುವನು. ಈ ವರನಿಗೆ ನಮ್ಮ ರಾಜನಂದಿನಿಯೇ ತಕ್ಕ ಸತಿಯು. ನಾವೇನಾದರೂ ಪುಣ್ಯವನ್ನೆಸಗಿದ್ದರೆ, ಅದರಿಂದ ಬ್ರಹ್ಮದೇವನು ಪ್ರೀತನಾಗಿದ್ದರೆ, ಶ್ರೀಕೃಷ್ಣನೇ ಪರಮಾನುಗ್ರಹವನ್ನು ಮಾಡಿ, ನಮ್ಮ ರುಕ್ಮಿಣಿಯ ಕೈಹಿಡಿಯಲಿ!' ಎಂದು ಮಾತಾಡಿಕೊಳ್ಳುವ ಜನರ ಪ್ರೇಮವನ್ನು ಕಂಡು, ಶ್ರೀಹರಿಯು, ಮಂದ ಹಾಸದಿಂದ, ಅವರರನ್ನು ಸಂತೈಸಿದನು.

ಪ್ರಾತಃಕಾಲವಾಗುತ್ತಿರಲು, ನಿಜಜನಕನ ಗೃಹದೇವನಾದ ಮಹಾದೇವನ ಮಡದಿಯನ್ನು ಪೂಜಿಸುವ ಪಾರಂಪರ್ಯದಂತೆ, ರುಕ್ಮಿಣೀದೇವಿಯು ಕೆಲಪರಿವಾರದಿಂದ ಕೂಡಿ, ರಾಜವೀಥಿಯಲ್ಲಿ ನಡೆದು ಬಂದಳು. ಮುಕುಂದಚರಣಾರವಿಂದವನ್ನೇ ಚಿಂತಿಸುತ್ತಾ ಮೌನವನ್ನು ವಹಿಸಿ, ನಡೆಯುವ ಮಡದಿಯ ಇಕ್ಕೆಲಗಳಲ್ಲಿ ಬಿಚ್ಚುಗತ್ತಿಯ ಭಟರು, ವೇತ್ರಹಸ್ತರು, ವೃದ್ಧಕುಂಚುಕಿಯರು ನಡೆದುಬರುತ್ತಿದ್ದರು. ಮುಂದೆ ಮೃದಂಗ ಪಣವತೂರ್ಯ ಭೇರೀ ನಿನಾದಗಳು ಭೋರ್ಗರೆದವು. ನಾನಾ ಪೂಜಾದ್ರವ್ಯಗಳನ್ನು, ಗಂಧ, ಮಾಲ್ಯ, ವಸ್ತ್ರ, ಭೂಷಣಗಳನ್ನು ಹರಿದ್ರಾಕುಂಕುಮಾಕ್ಷತೆಗಳನ್ನು, ರಜತಕನಕ ಪಾತ್ರೆಗಳಲ್ಲಿ ಪಿಡಿದುಕೊಂಡು, ಬ್ರಾಹ್ಮಣಮುತ್ತೈದೆಯರು ಸುತ್ತುಗಟ್ಟಿ ನಡೆದರು. ವಾರನಾರಿಯರು ಹಾಡಿ, ಪಾಡುತ್ತಿದ್ದರು. ಸಾತಮಾಗಧವಂದಿಗಳು ಸ್ತುತಿಸುತ್ತಿರಲು, ಶ್ರೀ ರುಕ್ಮಿಣಿಯು, ಇಂದುಧರಸುಂದರೀ ಮಂದಿರವನ್ನು ಮುಟ್ಟಿದಳು. ಅಲ್ಲಿ ಕೈಕಾಲು ತೊಳೆದು, ಶುಚಿಯಾಗಿ, ಆಚಮಿಸಿ, ಶಾಂತಚಿತ್ತಳಾಗಿ, ರುಕ್ಮಿಣಿಯು, ಗರ್ಭಗುಡಿಯನ್ನು ಪ್ರವೇಶಿಸಿದಳು. ಅಲ್ಲಿ ವಿಧಿಗಳನ್ನರಿತ ವಿಪ್ರಸುಮಂಗಲಿಯರು ವಂದಿಸಿ, ಪೂಜಿಸಿದಂತೆ, ತಾನೂ ಶಿವಭವಾನೀಗಣನಾಥ ಕಾರ್ತಿಕೇಯಾದಿಗಳಿಗೆ ಶಿರಬಾಗಿ, ರುಕ್ಮಿಣಿಯು ಇಂತು ಬೇಡಿದಳು–

'ಅಂಬಿಕೆ! ಮಕ್ಕಳೊಡನೆ ಕೂಡಿ ನಲಿಯುವ ಸರ್ವಮಂಗಳೇ! ನಿನಗೆ ನಮಃ! ಶ್ರೀಕೃಷ್ಣನೇ ನನಗೆ ಪತಿಯಾಗಲಿ! ನೀನು ಅದನ್ನೇ ಅನುಮೋದಿಸು' ಎಂದು ಬೇಡಿ, ಗಂಧಾಕ್ಷತಾ ಧೂಪ ದೀಪಮಾಲ್ಯ ವಸ್ತ್ರಾಭರಣಗಳನ್ನರ್ಪಿಸಿ, ನೈವೇದ್ಯವನ್ನಿತ್ತು, ಪೂಜಿಸಿ, ರುಕ್ಮಿಣಿಯು, ಮುತ್ತೈದೆಯರಿಗೆ, ಲವಣವಾಯನಗಳನ್ನು ಕಂಠಸೂತ್ರ, ತಾಡಪತ್ರ, ಫಲ, ಇಕ್ಷುದಂಡ, ಅಪೂಪಗಳನ್ನು ದಾನವಾಗಿ ಕೊಟ್ಟಳು. ಅವರೂ ರಾಜಸ್ತ್ರೀಯರು, ಆಶೀರ್ವದಿಸಲು, ದೇವೀಪ್ರಸಾದವನ್ನು ಮುಡಿದು, ಮೌನವನ್ನು ಬಿಟ್ಟು, ಗೌರೀಮಂದಿರದಿಂದ ಹೊರಹೊರಟಳು. ಸಮೀಪದಲ್ಲಿದ್ದ

ರುಕ್ಮಿಣಿಯನ್ನು ನೀಚರಾಜರನ್ನೋಡಿಸಿ, ಕಾಷ್ಠದಿಂದ ವಹ್ನಿಶಿಖೆಯನ್ನಂತೆ, ತಂದುಕೊಳ್ಳುವೆನು.

ಎಂದು ಮದುವೆಯ ನಕ್ಷತ್ರವನ್ನು ಕೇಳಿ, ತಿಳಿದು, ಶ್ರೀಕೃಷ್ಣನು, ಶೈಬ್ಯಸುಗ್ರೀವ ಮೇಘ ಪುಷ್ಪಬಲಾಹಕಗಳೆಂಬ ಕುದುರೆಗಳನ್ನು ಕಟ್ಟಿದ ರಥವನ್ನು, ದಾರುಕಸಾರಥಿಯಾಗಿ, ಬ್ರಾಹ್ಮಣ ನೊಡನೆ ಏರಿ ಕುಳಿತು, ಒಂದೇ ರಾತ್ರಿಯಲ್ಲಿ ವಿದರ್ಭದೇಶದ ಕುಂಡಿನ ನಗರೋಪಕಂಠದಲ್ಲಿ, ಬಂದಿಳಿದನು.

ಕುಂಡಿನಪುರವು ವಿವಾಹ ಮಹೋತ್ಸವಕ್ಕೆಂದು ಸಿಂಗರಿಸಲ್ಪಟ್ಟಿತು. ರಾಜವೀಧಿಗಳಲ್ಲಿ, ಪನ್ನೀರುಚಂದನಗಳಿಂದ ತಳಿಲನ್ನು ಚೆಲ್ಲಿ, ತೋರಣಪತಾಕಾಧ್ವಜಗಳನ್ನು ಕಟ್ಟಿದ್ದರು. ನರನಾರಿಯರು ಗಂಧಪುಷ್ಪದಿವ್ಯವಸನಭೂಷಿತರಾಗಿ, ಸಂಭ್ರಮಿಸುತ್ತಿದ್ದರು. ಮನೆಗಳ ಮುಂದೆ ಕಟ್ಟಿದ ರಂಭಾಸ್ತಂಭಗಳು, ಅಡಿಕೆಗೊಂಚಲುಗಳು, ಇಟ್ಟ ಪೂರ್ಣಕುಂಭಗಳು ಹಾಕಿದ ರಂಗ ವಲ್ಲಿಗಳು, ಬಲು ಮುದ್ದಾಗಿದ್ದವು.

ಭೀಷ್ಮಕನು ಪುತ್ರವಶನಾಗಿ, ಮಗಳನ್ನು ಶಿಶುಪಾಲನಿಗೆ ಕೊಡುವೆನೆಂದು, ಪಿತೃದೇವಾ ತಿಥಿಗಳನ್ನರ್ಚಿಸಿ, ಪುಣ್ಯಾಹವಾಚನವನ್ನು ಮಾಡಿಸಿದನು. ಕನ್ಯಾಮಣಿಗೆ ಪನ್ನೀರೆರೆದು, ಅಲಂ ಕರಿಸಿ, ಸೀರೆಗಳನ್ನುಡಿಸಿ, ತರಲು ಋಗ್ಯಜುಸ್ಸಾಮಾದಿಮಂತ್ರಗಳಿಂದ ಪುರೋಹಿತರು, ದುಷ್ಟ ಗ್ರಹಶಾಂತಿಯನ್ನು ಮಾಡಿ ಆಶೀರ್ವದಿಸಿದರು. ರಾಜನಾಗ, ಬಂಗಾರ, ಬೆಳ್ಳಿ, ವಸ್ತ್ರ, ತಿಲ, ಗುಡ ಮೊದಲಾದ ದಾನಗಳನ್ನು, ಗೋದಾನವನ್ನು ಮಾಡಿ, ವಿಪ್ರರನ್ನು ಸಂತೋಷಪಡಿಸಿದನು.

ಅಂತೆಯೇ ಬಿಡದಿಯ ಮನೆಯಲ್ಲಿ, ದಮಘೋಷನು, ಮಗನ ಮದುವೆಗಾಗಿ ಮಾಡ ಬೇಕಾದ ಮಂಗಲಕಾರ್ಯಗಳನ್ನು ಮಾಡಿಸಿದನು. ಭೀಷ್ಮಕನು, ಅವರಿಗೆ ವಸ್ತ್ರಾಲಂಕರಣಗಳ ನ್ನಿತ್ತು, ಅವರ ಹಿಂದೆ ಬಂದ ಶಾಲ್ವ, ಜರಾಸಂಧ, ದಂತವಕ್ತ್ರ, ವಿದೂರಥ, ಪೌಂಡ್ರಕಾದಿಗಳಿಗೂ ಮನೆಗಳನ್ನು ಕಲ್ಪಿಸಿಕೊಟ್ಟು ಸತ್ಕರಿಸಿದನು. ಸಮಗ್ರಬಲಾಯುಧವಾಹನಸಹಿತರಾಗಿ ಬಂದ ಆ ರಾಜರನ್ನು ಕಂಡು, ಪ್ರಜರು– ಇವರು ಮದುವೆಗೆ ಬಂದರೋ ಅಥವಾ ಯುದ್ಧಮಾಡಲು ಬಂದರೋ– ಎಂದು ಸಂಶಯಾಕುಲಿತರಾಗಿ ಬೆರಗಾಗಿ ನೋಡಿದರು.

ಕನ್ಯೆಯನ್ನು ಸಾಧಿಸುವಾಗ, ಕೃಷ್ಣರಾಮದ್ವೇಷಿ ರಾಜರು ಬಂದು ಮುತ್ತಿದರೆ, ಅವರಿಗೆ ಬುದ್ಧಿಯನ್ನು ಕಲಿಸಬೇಕೆಂದು ಬಲರಾಮನು, ತಮ್ಮನ ಮೇಲಿನ ಪ್ರೀತಿಯಿಂದ, ಚತುರಂಗ ಬಲಾಯುತನಾಗಿ, ಕುಂಡಿನವನ್ನು ಬಂದು ಸೇರಿದನು.

ಭೀಷ್ಮಕಸುತೆಯು, ಹರಿಯನ್ನು ಕರೆತರಲು ಕಳುಹಿಸಿದ ವಿಪ್ರವರನನ್ನು ನಿರೀಕ್ಷಿಸಿ, ಕಾಣದೆ, ಕಾತರಳಾಗಿ ಚಿಂತಿಸಿದಳು.

'ಅಹೋ! ರಾತ್ರಿಯೆಲ್ಲವು ಕಳೆದುಹೋಯಿತು! ನಾಳೆ ಮದುವೆಯಂತೆ. ಅರವಿಂದ ನೇತ್ರ ನೇತಕ್ಕೆ ಬಾರದಿರುವನೋ ಕಾಣೆ! ವಿಪ್ರನೂ ಬರಲಿಲ್ಲವಲ್ಲ? ಏನು ಮಾಡಲಿ? ನನ್ನ ಯಾವ ದೋಷವನ್ನು ಕಂಡು, ನಿರ್ದೋಷಗುಣರತ್ನಾಕರನಾದ ಶ್ರೀಕೃಷ್ಣನು ಬರದಿರುವನೋ? ವಿಧಾತೃ ಮಹೇಶ್ವರರು ಅನುಕೂಲರಾಗಿರುವರೋ ಇಲ್ಲವೋ? ದೇವಿ ಶರ್ವಾಣಿಯು ವಿಮುಖ ಳಾದಳೇ?' ಎಂದು ಕಣ್ಣೀರಿಡುತ್ತಾ, ಚಿಂತಿಸುವ ರುಕ್ಮಿಣಿಯ ಎಡಗಣ್ಣು ಭುಜಗಳು ಅದುರಿ, ಶುಭವನ್ನು ಸೂಚಿಸಿದವು.

ಆಗ ಕೃಷ್ಣನನ್ನು ಪುರೋದ್ಯಾನಗಳಲ್ಲಿ ಬೀಳ್ಕೊಂಡು, ಬ್ರಾಹ್ಮಣನು, ರಾಜಪುತ್ರಿಯ ಅಂತಃ ಪುರಕ್ಕೆ ಬಂದನು. ಶಾಂತಸಂತುಷ್ಟನಾದ ವಿಪ್ರನನ್ನು ಕಂಡು, ಸಮಾಧಾನಗೊಂಡು, ರುಕ್ಮಿಣಿಯು

ಕೇಳಲು, ವಿಪ್ರನು 'ಬಂದ ಕೃಷ್ಣ ಚಂದದಿಂದ ಬಂದ ನೋಡೇ, ವೃಂದಾರಕ ವಂದ್ಯ ನಿನ್ನ ಕರೆದೊಯ್ಯ ನೋಡೇ' ಎಂದನು. ಆ ಮಾತನ್ನು ಮನಸಾರೆ ಕೇಳಿ, ಕೃಷ್ಣಾಗಮನದಿಂದ ತೃಪ್ತಳಾದ ರುಕ್ಮಿಣಿ ನಿಷ್ಕಿಂಚನ ಭಕ್ತವರನಾದ ಆ ಬ್ರಾಹ್ಮಣನಿಗೆ ಇನ್ನೊಂದು ಪ್ರಿಯಕರವಲ್ಲವೆಂದರಿತು, ಶಿರಸಾ ನಮಸ್ಕರಿಸಿದಳು.

ರಾಮಕೃಷ್ಣರು ಮದುವೆಗೆ ಬಂದರೆಂದು ಕೇಳಿ, ಭೀಷ್ಮಕನು, ರುಚಿರವಸನ ಗಂಧಮಾಲ್ಯಾಭರಣಗಳನ್ನು ತಂದರ್ಪಿಸಿ, ಮಧುಪರ್ಕವನ್ನಿತ್ತು, ಪೂಜಿಸಿದನು. ನಗರವು ಜರಾಸಂಧ ಪೌಂಡ್ರಕಾದಿಗಳಿಂದ ತುಂಬಿ, ಸ್ಥಲವಿಲ್ಲದಿರುವುದರಿಂದ, ಬಾಹ್ಯೋದ್ಯಾನವನ್ನೇ ಬಿಡದಿಯಾಗಿ ಸ್ವೀಕರಿಸಲು ಬೇಡಿ, ಹೊರಟುಹೋದನು. ವಿದರ್ಭಪುರವಾಸಿಗಳು, ಕೃಷ್ಣಾಗಮನವನ್ನು ಕೇಳಿ, ಗುಂಪಾಗಿ ಬಂದು, ಶ್ರೀಶನ ಮುಖಪಂಕಜ ಸೌಂದರ್ಯರಸವನ್ನು, ನೇತ್ರಪಾತ್ರಗಳಲ್ಲಿ ತುಂಬಿ ಕುಡಿದರು.

'ರತ್ನವನ್ನು ಕಬ್ಬಿಣದಿ ಬಿಗಿದಂತೆ ಶಿಶುಪಾಲನಿಗೆ ನಮ್ಮ ರುಕ್ಮಿಣಿಯನ್ನು ಕೊಡುವುದನ್ನು ಬಿಟ್ಟು, ಈ ಕೃಷ್ಣನಿಗೆ ಕೊಡಬಾರದೇ? ಅವಳಿಗೆ ಇವನೇ ತಕ್ಕ ಪತಿಯಾಗಿರುವನು. ಈ ವರನಿಗೆ ನಮ್ಮ ರಾಜನಂದಿನಿಯೇ ತಕ್ಕ ಸತಿಯು. ನಾವೇನಾದರೂ ಪುಣ್ಯವನ್ನೆಸಗಿದ್ದರೆ, ಅದರಿಂದ ಬ್ರಹ್ಮದೇವನು ಪ್ರೀತನಾಗಿದ್ದರೆ, ಶ್ರೀಕೃಷ್ಣನೇ ಪರಮಾನುಗ್ರಹವನ್ನು ಮಾಡಿ, ನಮ್ಮ ರುಕ್ಮಿಣಿಯ ಕೈಹಿಡಿಯಲಿ!' ಎಂದು ಮಾತಾಡಿಕೊಳ್ಳುವ ಜನರ ಪ್ರೇಮವನ್ನು ಕಂಡು, ಶ್ರೀಹರಿಯು, ಮಂದಹಾಸದಿಂದ, ಅವರನ್ನು ಸಂತೈಸಿದನು.

ಪ್ರಾತಃಕಾಲವಾಗುತ್ತಿರಲು, ನಿಜಜನಕನ ಗೃಹದೇವನಾದ ಮಹಾದೇವನ ಮಡದಿಯನ್ನು ಪೂಜಿಸುವ ಪಾರಂಪರ್ಯದಂತೆ, ರುಕ್ಮಿಣೀದೇವಿಯು ಕೆಲಪರಿವಾರದಿಂದ ಕೂಡಿ, ರಾಜವೀಥಿಯಲ್ಲಿ ನಡೆದು ಬಂದಳು. ಮುಕುಂದಚರಣಾರವಿಂದವನ್ನೇ ಚಿಂತಿಸುತ್ತಾ ಮೌನವನ್ನು ವಹಿಸಿ, ನಡೆಯುವ ಮಡದಿಯ ಇಕ್ಕೆಲಗಳಲ್ಲಿ ಬಿಚ್ಚುಗತ್ತಿಯ ಭಟರು, ವೇತ್ರಹಸ್ತರು, ವೃದ್ಧಕುಂಚುಕಿಯರು ನಡೆದುಬರುತ್ತಿದ್ದರು. ಮುಂದೆ ಮೃದಂಗ ಪಣವತೂರ್ಯ ಭೇರೀ ನಿನಾದಗಳು ಭೋರ್ಗರೆದವು. ನಾನಾ ಪೂಜಾದ್ರವ್ಯಗಳನ್ನು, ಗಂಧ, ಮಾಲ್ಯ, ವಸ್ತ್ರ, ಭೂಷಣಗಳನ್ನು ಹರಿದ್ರಾಕುಂಕುಮಾಕ್ಷತೆಗಳನ್ನು, ರಜತಕನಕ ಪಾತ್ರೆಗಳಲ್ಲಿ ಪಿಡಿದುಕೊಂಡು, ಬ್ರಾಹ್ಮಣಮುತ್ತೈದೆಯರು ಸುತ್ತುಗಟ್ಟಿ ನಡೆದರು. ವಾರನಾರಿಯರು ಹಾಡಿ, ಪಾಡುತ್ತಿದ್ದರು. ಸಾತಮಾಗಧವಂದಿಗಳು ಸ್ತುತಿಸುತ್ತಿರಲು, ಶ್ರೀ ರುಕ್ಮಿಣಿಯು, ಇಂದುಧರಸುಂದರೀ ಮಂದಿರವನ್ನು ಮುಟ್ಟಿದಳು. ಅಲ್ಲಿ ಕೈಕಾಲು ತೊಳೆದು, ಶುಚಿಯಾಗಿ, ಆಚಮಿಸಿ, ಶಾಂತಚಿತ್ತಳಾಗಿ, ರುಕ್ಮಿಣಿಯು, ಗರ್ಭಗುಡಿಯನ್ನು ಪ್ರವೇಶಿಸಿದಳು. ಅಲ್ಲಿ ವಿಧಿಗಳನ್ನರಿತ ವಿಪ್ರಸುಮಂಗಲಿಯರು ವಂದಿಸಿ, ಪೂಜಿಸಿದಂತೆ, ತಾನೂ ಶಿವಭವಾನೀಗಣನಾಥ ಕಾರ್ತಿಕೇಯಾದಿಗಳಿಗೆ ಶಿರಬಾಗಿ, ರುಕ್ಮಿಣಿಯು ಇಂತು ಬೇಡಿದಳು–

'ಅಂಬಿಕೆ! ಮಕ್ಕಳೊಡನೆ ಕೂಡಿ ನಲಿಯುವ ಸರ್ವಮಂಗಳೇ! ನಿನಗೆ ನಮಃ! ಶ್ರೀಕೃಷ್ಣನೇ ನನಗೆ ಪತಿಯಾಗಲಿ! ನೀನು ಅದನ್ನೇ ಅನುಮೋದಿಸು' ಎಂದು ಬೇಡಿ, ಗಂಧಾಕ್ಷತಾ ಧೂಪ ದೀಪಮಾಲ್ಯ ವಸ್ತ್ರಾಭರಣಗಳನ್ನರ್ಪಿಸಿ, ನೈವೇದ್ಯವನ್ನಿತ್ತು, ಪೂಜಿಸಿ, ರುಕ್ಮಿಣಿಯು, ಮುತ್ತೈದೆಯರಿಗೆ, ಲವಣವಾಯನಗಳನ್ನು ಕಂಠಸೂತ್ರ, ತಾಡಪತ್ರ, ಫಲ, ಇಕ್ಷುದಂಡ, ಅಪೂಪಗಳನ್ನು ದಾನವಾಗಿ ಕೊಟ್ಟಳು. ಅವರೂ ರಾಜಸ್ತ್ರೀಯರು, ಆಶೀರ್ವದಿಸಲು, ದೇವೀಪ್ರಸಾದವನ್ನು ಮುಡಿದು, ಮೌನವನ್ನು ಬಿಟ್ಟು, ಗೌರೀಮಂದಿರದಿಂದ ಹೊರಹೊರಟಳು. ಸಮೀಪದಲ್ಲಿದ್ದ

ಶಚೀಪುರಂದರ ಮಂದಿರವನ್ನು ಪೊಕ್ಕು ಕುಲದೇವರಾದ್ದರಿಂದ ಅವರಿಗೆ ವಂದಿಸಿ, ಕನಕ ರತ್ನಾಂಗುಳೀಯಪಲ್ಲವಕರದಿಂದ ಸಖಿಯ ಕೈಪಿಡಿದು, ಮದಮರಾಳದಂತೆ ನಡೆಯುತ್ತಾ, ಪುರಿಯ ಕಡೆ ಹೊರಟ ಆ ದೇವಮಾಯೆಯ ಮೋಹಕ ಸೌಂದರ್ಯವನ್ನೆಂತು ವರ್ಣಿಸಲಿ! ಕುಂಡಲಮಂಡಿತ ವದನಬಿಂಬ, ಬಿಂಬಫಲವನ್ನು ಧಿಕ್ಕರಿಸುವ ಅಧರ, ಅಧರದಲ್ಲಿ ಅನುರಾಗ ಪೊಂದಿರುವ ಕುಂದಧವಳ ದಂತಪಂಕ್ತಿ, ದಂತಪಂಕ್ತಿಯಿಂದ ಹೊರಸೂಸಿಬರುವ ಮಂದಹಾಸ, ಹಾಸಚಂದ್ರಿಕೆಯ ಮೇಲಡರುವ ಕಾಂಚೀಕಲಾಪಗತ ವಜ್ರಾದಿ ರತ್ನಕಾಂತಿಗಳಿಂದ ಶೋಭಿಸುವ ರುಕ್ಮಿಣಿಯ ಮುಖಾರವಿಂದಕ್ಕೆ ಬಂದು ಮುತ್ತುವ ಮುಂಗುರುಳ ದುಂಬಿಗಳನ್ನು ಬೆರಳಿಂದ ಹಿಂದೆ ಸರಿಸಿ, ಮಂದಗಮನವಿಂತಿರಬೇಕೆಂದು ಕಲಹಂಸಗಳಿಗೆ ಕಲಿಸುವ ತೆರದಿ ನಡೆದುಬರುತ್ತಿದ್ದಾಳೆ. ಸ್ತನಕಲಶಗಳನ್ನೆರಂತರ್ಯ ವಿಲಾಸವನ್ನು ಮುಚ್ಚುವ ಮುತ್ತಿನ ಹಾರಗಳು ಹಾರಾಡುತ್ತಿರಲು, ಕಮಲ ವಿಶಾಲ ಲೋಚನಗಳ ವೀಕ್ಷಣಬಾಣಗಳಿಂದ ವೀರಮಾನಿಗಳ ಮಾನಸವು ಮೋಹಿತವಾಗುವಂತೆ ನಗುತ್ತಾ ಬರುತ್ತಿರುವ ಆ ಲೋಕಮೋಹಕ ಸೌಂದರ್ಯವನ್ನು ಇತರರು ನೋಡದಿರಲೆಂದು ಮದನನು ಸಂಮೋಹಾಸ್ತ್ರವನ್ನೆಸೆದನೆಂಬಂತೆ ಸಕಲ ಭಟರು ನಿಶ್ಚೇತರಾಗಿ ನಿಂತರು. ಅವರ ಕೈಯ ಬಿಚ್ಚುಗತ್ತಿಗಳು ಗೊತ್ತಿಲ್ಲದೆ ಕೆಳಗೆ ಬಿದ್ದವು. ಶ್ರೀಶನಿಗೆ ಶ್ರೀದೇವಿಯ ಶ್ರೀ ಶೋಭೆಯನ್ನರ್ಪಿಸುವ ಆ ಶುಭವೇಳೆಯಲ್ಲಿ ಸಕಲ ಚೇತನರು ನಿಶ್ಚೇಷ್ಟನರಾದರು. ಮನುಜರ ಮಾತಿರಲಿ! ಮಾಯಾದೇವಿಯ ಮೋಹದಿಂದ ಆನೆಗಳು ಕುದುರೆಗಳು ವಿಹಗಾದಿಗಳು ಕೂಡ ವಿಮೋಹಿತರಾಗಿ ಚಿತ್ರಗತಪ್ರತಿಮೆಗಳಂತೆ ನಿಂತವು.

ಇಂತು ಮೆಲ್ಲನೆ ನಡೆದು ಬರುವ ಇಂದಿರಾಸುಂದರಿಯು, ಕಣ್ಣಿಗೆ ಮುತ್ತುವ ಅಲಕಗಳನ್ನು, ಎಡಗೈ ಬೆರಳುಗಳಿಂದ ಮೇಲಕ್ಕೊತ್ತಿ, ಅಚ್ಯುತನನ್ನು ಕಂಡು, ರಥಾರೋಹಣವನ್ನು ಬಯಸಿ, ಕೈಚಾಚಿದಳು. ತತ್‌ಕ್ಷಣವೇ ಶ್ರೀಕೃಷ್ಣನು– ಶತ್ರುಜನರು ನೋಡುತ್ತಿರಲು– ಅವರನ್ನು ಪರಿಭವಿಸಿ, ಲಕ್ಷ್ಯಮಾಡದೆ, ರುಕ್ಮಿಣೀಲಕ್ಷ್ಮಿಯನ್ನು ಗರುಡ ಕೇತನರಥದಲ್ಲಿ, ಸೆಳೆದು ಕುಳ್ಳಿರಿಸಿಕೊಂಡು– ನರಿಗಳ ಹಿಂಡಿನ ಮಧ್ಯದಿಂದ ಮದ್ದಾನೆಯು ತನ್ನ ಮಡದಿಯೊಡಗೂಡಿ ಹೋಗುವಂತೆ– ಸರಸರ ಪ್ರಯಾಣಿಸಿದನು. ಭಯಪಡಬೇಡವೆಂದು ಬಿಗಿದಪ್ಪಿ ಪೋಗುವಾಗ, ಶ್ರೀಕೃಷ್ಣನ ಮುಖಚಂದ್ರನು ತನ್ನ ಕಪೋಲದರ್ಪಣದಿ ಮೂಡಲು ಚುಂಬಿತಳಾದೆನೋ; ಅವನು ತನ್ನ ನಡುವನ್ನು ಸುತ್ತಿಬಳಸಲು ಆಲಿಂಗಿತಳಾದೆನೋ; ಭುಜವನ್ನೊತ್ತಲು ಪ್ರಮೋದ ಮಾಂಗಲ್ಯವನ್ನು ಕಟ್ಟಿದೆನೋ, ಎಂಬಂತಾಗಿ, ಇನ್ನು ವಿವಾಹವೇಕೆಂದು, ರುಕ್ಮಿಣಿದೇವಿಯು, ಆನಂದರಂಗಿತಳಾದಳು.

## ೫೪. ರುಕ್ಮಿಣೀ ಕಲ್ಯಾಣ

ಇಂತು ತಮಗಾದ ಅವಮಾನವನ್ನು ಸಹಿಸಲಾರದೆ. ಜರಾಸಂಧಾದಿ ರಾಜರು, ರೋಷಾವೇಶದಿಂದ 'ಛೀ! ಎಂತಹ ಅಕಾರ್ಯವಾಯಿತು! ಸಿಂಹಗಳ ಬಲಿಯನ್ನು ನರಿ ಕದ್ದಂತಾಯಿತಲ್ಲ!' ಎಂದು, ಆಯುಧಗಳನ್ನು ಹಿಡಿದು, ವಾಹನಗಳನ್ನೇರಿ, ಕೃಷ್ಣನ ರಥದ ಹಿಂದೆ, ರಭಸದಿಂದ ಹೋದರು. ಬಲರಾಮನು ಅವರನ್ನು ತಡೆದು, ಕಾದಾಡಿ, ಅವರ ಸೈನ್ಯವನ್ನೆಲ್ಲ ನಾಶಮಾಡಿದನು. ಕಾದಾಡುವ ವೀರರನ್ನು, ನೋಡಿ, ಸಂಭ್ರಾಂತಳಂತಾದ ರುಕ್ಮಿಣಿಯನ್ನು ಶ್ರೀಕೃಷ್ಣನು 'ಭಯಬೇಡ! ನನ್ನವರು

ಒಂದೇ ಕ್ಷಣದಲ್ಲಿ, ಶತ್ರುಬಲವನ್ನು ನಾಶಮಾಡುವರು. ನೋಡು' ಎಂದು ಸಂತೈಸಿ, ಮುಂದೆ ಹೊರಟನು. ರಥಿಕರು ಮಡಿದರು. ಗಜತುರಗಗಳು ಸತ್ತುಬಿದ್ದವು, ರಥಗಳು ಮುರಿದು ಚೂರಾದವು ಜಯಕಾಂಕ್ಷಿಗಳಾದ ಯಾದವರ ಮುಂದೆ ನಿಲ್ಲಲಾರದೆ, ಜರಾಸಂಧಾದಿ ರಾಜರು, ಸೋತು, ಹಿಂದಿರುಗಿದರು.

ಅವರು ಅಲ್ಲಿ ವರವೇಷದಿಂದ ಕೂತಿದ್ದ ಶಿಶುಪಾಲನನ್ನು ನೋಡಿದರು. ವದನವು ಬಾಡಿ, ಉತ್ಸಾಹವಿಲ್ಲದೆ ಮತಿಗೆಟ್ಟು, ಅಳುವ ಚೈದ್ಯನಿಗೆ ಜರಾಸಂಧನಿಂತೆಂದನು–

'ಪುರುಷಶಾರ್ದೂಲ' (ಸೃಗಾಲ) ಏಳೇಳು! ಅಳಬೇಡ; ಪ್ರಿಯಾಪ್ರಿಯಗಳು ಶಾಶ್ವತವಲ್ಲ. ನೋಡು ನನ್ನನ್ನು! ಹದಿನೇಳು ಶೌರಿಗೆ ಸೋತು, ಎಷ್ಟೋ ಸೈನ್ಯವು ಹಾಳಾದರೂ, ಎದೆಗುಂದದೆ ಕಾದು, ಹದಿನೆಂಟನೆಯ ಸಲ, ನಾನು ಗೆಲ್ಲಲಿಲ್ಲವೇ? ಸೋತಾಗ ಅಳಲಿಲ್ಲ; ಗೆದ್ದಾಗ ನಗಲಿಲ್ಲ; ದೈವವಶರಾಗಿ ಕಾಲವು ತಂದೊಡ್ಡುವ ಸುಖದುಃಖಗಳು ಬಂದೇ ಬರುವುವು. ಈಗ ಮಾಯಾವಿಗಳಾದ ಯಾದವರಿಗೆ, ಪರಾಕ್ರಮಿಗಳಾದ ನಾವು ಸೋತಿರುವೆವು. ಕಾಲವು ಅನುಕೂಲಿಸಲಿ! ನಾವೂ ಜಯಿಸುವೆವು. ಇರಲಿ! ನಿನಗೆ ತಕ್ಕ ಮಡದಿಯನ್ನು ತಂದು ಮದುವೆ ಮಾಡುವೆವು. ಬಾ.' ಎಂದು, ಚೈದ್ಯನನ್ನು ಅವನ ದೇಶಕ್ಕೆ ಕಳಿಸಿ, ಜರಾಸಂಧನು ಇತರ ರಾಜರೂ ತಮ್ಮ ದೇಶಗಳಿಗೆ ತೆರಳಿ ಪೋದರು.

ರುಕ್ಮಿ ಮಾತ್ರ ಹಠದಿಂದ, ಸರ್ವರಾಜರ ಸಮಕ್ಷಮದಲ್ಲಿ 'ಕೃಷ್ಣನನ್ನು ಕೊಲ್ಲದೆ ರುಕ್ಮಿಣಿಯನ್ನು ತರದೆ, ಕುಂಡಿನಪುರವನ್ನು ಪ್ರವೇಶಿಸುವುದಿಲ್ಲ. ಇದು ನಿಜ, ಎಂದು ಪ್ರತಿಜ್ಞೆ ಮಾಡಿ, ಕೃಷ್ಣರಥದ ಹಿಂದೆ, ತನ್ನ ರಥದಿಂದ ಹೊರಟನು. 'ನನ್ನ ತಂಗಿಯನ್ನು ಕದ್ದ ಕಳ್ಳ ಗೋಪಾಲನನ್ನು ಕಡಿದುಬಿಡುವೆನು. ಬಿಡು ರಥವನ್ನು ವೇಗವಾಗಿ' ಎಂದು ಸೂತನಿಗಪ್ಪಣೆ ಮಾಡಿ ತ್ವರೆಯಿಂದ ಕೃಷ್ಣನನ್ನು ಮುತ್ತಿದನು. 'ನಿಲ್ಲು! ನಿಲ್ಲು! ಕಳ್ಳ! ಯದುಕುಲಪಾಂಸನ! ಎಲ್ಲಿಗೆ ಓಡುವೆ. ಕಾಗೆ ಅನ್ನವನ್ನಂತೆ ನನ್ನ ತಂಗಿಯನ್ನು ಕದ್ದೋಡುವ ಮಾಯಾವಿಯಾದ ನಿನ್ನ ಮದವನ್ನಿಳಿಸುವೆನು. ನನ್ನ ನಿಶಿತಬಾಣಾಗ್ನಿಗೆ ತುತ್ತಾಗಿ ಸಾಯದ ಮುನ್ನ, ನನ್ನ ತಂಗಿಯನ್ನು ಬಿಟ್ಟು ಓಡು' ಎಂದು ಗರ್ಜಿಸಿ ಮೂರು ಬಾಣಗಳಿಂದ ಹೊಡೆದನು. ಆ ಬಾಣಗಳನ್ನು ತುಂಡರಿಸಿ, ಕೃಷ್ಣನು ನಗುತ್ತಾ, ಆರು ಬಾಣಗಳಿಂದ ರುಕ್ಮಿಯನ್ನು ನೋಯಿಸಿ, ಎಂಟು ಬಾಣಗಳಿಂದ ಕುದುರೆಗಳನ್ನೂ, ಎರಡರಿಂದ ಸಾರಥಿಯನ್ನೂ ಪೀಡಿಸಿದನು. ಮತ್ತೂ ಒಂದರಿಂದ ಅವನ ಧನುವನ್ನು ಮುರಿದನು. ರುಕ್ಮಿ ಮತ್ತೊಂದು ಬಿಲ್ಲನ್ನೆತ್ತಿ, ಐದು ಬಾಣಗಳನ್ನು ಬಿಟ್ಟಾಗ, ಶ್ರೀಕೃಷ್ಣನು ಆ ಧನುವನ್ನೂ ಮುರಿದು-ಅನಂತರ ಅವನು ತೆಗೆದ ಬಿಲ್ಲುಗಳನ್ನೆಲ್ಲಾ ತುಂಡರಿಸುತ್ತಾ ಬಂದನು. ಪರಿಘ ಪಟ್ಟಿಶಶೂಲ ಶಕ್ತಿ ತೋಮರಗಳೂ ನಾಶವಾಗಲು, ರುಕ್ಮಿ ರೋಷದಿಂದ ಕಣ್ಣು ಕಾಣದೆ, ಅಗ್ನಿಯಲ್ಲಿ ಬೀಳುವ ಪತಂಗದಂತೆ, ರಥದಿಂದ ಕೆಳಗಿಳಿದು, ಕೈಲಿ ಕತ್ತಿಯನ್ನೆತ್ತಿ ಮೇಲೇರಿ ಬಂದನು. ಅವನ ಖಡ್ಗವನ್ನು ಗುರಾಣಿಯನ್ನು ಪುಡಿಮಾಡಿ ಶ್ರೀಕೃಷ್ಣನು ತಾನೂ ಕೆಳಗಿಳಿದು, ರುಕ್ಮಿಯನ್ನು ಕೊಲ್ಲಲು ಖಡ್ಗವನ್ನೆತ್ತಿದನು. ಅದನ್ನು ಕಂಡು ಭಯಚಕಿತಳಾಗಿ ರುಕ್ಮಿಣಿ, ಶ್ರೀಶನ ಪಾದಗಳಿಗೆರಗಿ, ಯೋಗೇಶ! ದೇವದೇವ! ಜಗತ್ಪಾಲಕ! ಕಲ್ಯಾಣ ಸಮಯವಿದೆಂದು ನೋಡು. ನನ್ನ ಅಣ್ಣನನ್ನು ಕೊಲ್ಲಬೇಡ. ದಯಮಾಡು' ಎಂದು ಪ್ರಾರ್ಥಿಸಿದಳು. ಪಾದಗಳನ್ನು ಬಿಡದೆ ಪಿಡಿದು ಮಡದಿಯ ಕಣ್ಣೀರು, ನಡುಗುವ ಮೈಬಳ್ಳಿ, ತಡಬಡುವ ನುಡಿ, ಚಿಕ್ಕಾಗಿ ಹಾರಾಡುವ ಹಾರಗಳು, ಪ್ರಾರ್ಥಿಸುವ ವಿನಯ, ಇವುಗಳಿಂದ ಮನವು ಕರಗಿದಂತಾಗಿ, ಶ್ರೀಕೃಷ್ಣನು, ರುಕ್ಮಿಯನ್ನು

ಕೊಲ್ಲುವುದನ್ನು ನಿಲ್ಲಿಸಿದನು. ಆದರೆ ಆ ಪಾಪಕರ್ಮಗಳನ್ನು ಬಿಡಲಾಗದೆಂದು– ಅವನನ್ನು ಅವನ ರಥಕ್ಕೆ ಅವನ ವಸ್ತ್ರದಿಂದ ಬಿಗಿದು, ಭಲ್ಲನಿಶಿತಧಾರೆಯಿಂದ, ಅವನ ಮೀಸೆಕೇಶಗಳನ್ನು ಬೋಳಿಸಿದನು.

ಆಗ ಬಲರಾಮನು ಶತ್ರುಸೈನ್ಯವನ್ನು ಗೆದ್ದು ಅಲ್ಲಿಗೆ ಬಂದನು. ವಿರೂಪವಿಹ್ವಲನು, ಹತಪ್ರಾಯನು ಆದ ರುಕ್ಮಿಯನ್ನು ನೋಡಿ, ಬಂಧನವನ್ನು ಬಿಚ್ಚಿ, ಶ್ರೀಕೃಷ್ಣನಿಗಿಂತೆಂದನು–

ಎಂತಹ ಕ್ರೂರಕಾರ್ಯವನ್ನೆಸಗಿದೆ ಕೃಷ್ಣಾ? ಬಂಧುಮಿತ್ರರ ವಪನಾದಿಶಿಕ್ಷೆ ಮರಣಸಮವೆನಿಸುವುದು. ಅಮ್ಮಾ ರುಕ್ಮಿಣಿ! ಸಿಟ್ಟಾಗಬೇಡ. ಅಣ್ಣನ ಅವಮಾನದಿಂದ ನೊಂದಿರುವೆ; ನಿಜ. ಮನುಜನಿಗೆ ತಾನು ಮಾಡಿದ ಕರ್ಮನೇ ಸುಖದುಃಖಗಳನ್ನು ತಂದುಕೊಡುವುದು– ಅನ್ಯರಿಂದ ಸುಖದುಃಖಗಳೆಂಬುದು ತಪ್ಪು. ಮಹಾಪರಾಧಿಯಾದರೂ ಬಂಧುವು ವಧಾರ್ಹನಲ್ಲ. ತನ್ನ ತಪ್ಪಿನಿಂದಲೇ ಸತ್ತಂತಾದ ಅವನನ್ನು ಕೊಲ್ಲವುದು ನ್ಯಾಯವಲ್ಲ. ದೇಶದಿಂದ ಹೊರಡುವುದೇ ಅವನಿಗೆ ತಕ್ಕ ಶಿಕ್ಷೆ. ಘೋರತರವಾದ ಬಂಧು ಹನನಾದಿ ಕರ್ಮಗಳಿಂದ, ಧರ್ಮರಕ್ಷಕನಾದ ರಾಜನಿಗೆ ಪಾಪವಿಲ್ಲ. ಧರ್ಮಕ್ಕಲ್ಲದೆ, ಕೇವಲ ರಾಜ್ಯ, ಧನ, ದುರಭಿಮಾನ, ವನಿತಾಜನಗಳಿಗೆ ಕಾದಾಡಿ ಕೊಲ್ಲುವ ರಾಜರು ನೀಚರು ಹಾಗೂ ಮದಾಂಧರೇ ಸರಿ.

ಶ್ರೀದೇವನ ಬಂಧಕಶಕ್ತಿಯಿಂದ ದೇಹಾಭಿಮಾನ; ಅದರಿಂದ ಶತ್ರುಮಿತ್ರೋದಾಸೀನರೆಂಬುವ ಮನೋಭ್ರಮೆ. ಎಲ್ಲ ದೇಹಧಾರಿಗಳಿಗಂತರ್ಯಾಮಿಯಾದ ಶ್ರೀ ಪರಮಾತ್ಮನಿಗೆ ಸ್ವಗತಭೇದವಿಲ್ಲ. ಆಕಾಶದಂತೆ, ವಹ್ನಿಯಂತೆ ಸರ್ವತ್ರ ವ್ಯಾಪ್ತನಾಗಿ ನಿಯಮಿಸುವ ಶ್ರೀಹರಿಯು, ಪೃಥಿವ್ಯಾತಿ ದ್ರವ್ಯಗಳಿಂದಲು, ಸತ್ತ್ವಾದಿ ಗುಣಗಳಿಂದಲು, ಶಬ್ದಾದಿ ವಿಷಯಗಳಿಂದಲು, ಶ್ರವಣಾದೀಂದ್ರಿಯಗಳಿಂದಲು ಮಾಡಿರುವ ಈ ನಾನಾ ದೇಹಗಳನ್ನಿತ್ತು ಜೀವರನ್ನು ಸಂಸಾರದಲ್ಲಿ ನಡೆಸುತ್ತಿರುವನು. 'ನಾನೇ ದೇಹ'ವೆಂಬ ಅಜ್ಞಾನವಿರುವವರೆಗೂ ಜೀವನಿಗೆ ಸಂಸಾರ. ಶ್ರೀಹರಿ ಪ್ರಸಾದದಿಂದ ಜೀವನಿಗೆ– ಈ ಸಂಸಾರವು ಅನಿತ್ಯವು. ಸ್ವಪ್ನದಲ್ಲಿ ಬಂದ ಅನೇಕ ದೇಹಗಳಂತೆ ಈ ಶರೀರವು ಅನಿತ್ಯವು– ಶರೀರವೇ ಜೀವನಲ್ಲ– ಸ್ವಪ್ನಾದಿಗಳಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲದಿರುವಂತೆ– ಸಂಸಾರಾದಿ ಸರ್ವಕಾಲದಲ್ಲಿಯು, ಜೀವನು ಪರಮಾತ್ಮಾಧೀನ' ನೆಂಬ ವಿವೇಕವು ಬರುವುದು. ಆಗ ನಶ್ವರವಾದ ಸಂಸಾರದಿಂದ ಜೀವನಿಗೆ ಶಾಶ್ವತವಾದ ಮೋಕ್ಷ ಸುಖವು ಸಿಗುವುದು. 'ಆದ್ದರಿಂದ ಶೋಕವು ಅಜ್ಞಾನಕಾರ್ಯವಹುದು– ಎಂದು ನಿಶ್ಚಯಿಸಿ– ತತ್ತ್ವಜ್ಞಾನದಿಂದ ಶೋಕವನ್ನು ದೂರಮಾಡಿ ಶಾಂತನಾಗುವನೇ ಜ್ಞಾನಿ ಎನಿಸುವನು' ಎಂದಾಡಿದ ಬಲರಾಮನ ಮಾತಿಗೆ ನಕ್ಕು, ನಿತ್ಯಶುದ್ಧ ಜ್ಞಾನಸ್ವರೂಪಳಾದ ರುಕ್ಮಿಣಿಯು, ಸಮಾಧಾನ ಹೊಂದಿದಳು. ಲೋಕಾನುಕಾರಣ ವಿಲಾಸವು ದೇವೀದೇವರ ಸ್ವಭಾವವಲ್ಲವೇ?

ತೇಜೋಬಲರೂಪಗಳನ್ನು ಕಳೆದುಕೊಂಡು, ಪ್ರಾಣಗಳಿಂದುಳಿದು, ರುಕ್ಮಿಯು ತನ್ನ ಮಾತಿನಂತೆ, ಕುಂಡಿನವನ್ನು ಪ್ರವೇಶಿಸದೆ, ಹೊರಗೆ ಭೋಜಕಟವೆಂಬ ಪುರವನ್ನು ನಿರ್ಮಿಸಿ, ರೋಷದಿಂದ ಅಲ್ಲೇ ವಾಸಮಾಡಿದನು.

ಭಗವಂತನಾಗ ಭೀಷ್ಮಕಸುತೆಯೊಡನೆ ದ್ವಾರಕೆಗೆ ಬಂದು, ಬಂಧುಜನ ಮಧ್ಯದಲ್ಲಿ, ಮಹೋತ್ಸಾಹದಿಂದ, ನಿಖಿಲಸಂಪತ್ಕಾರಿಣಿಯು, ಮಹಾದಾರಿದ್ರ್ಯಸಂಹಾರಿಣಿಯು, ಗುಣವತೀ ಚೂಡಾಮಣಿಯು ಆದ ರುಕ್ಮಿಣೀದೇವಿಯನ್ನು ಮದುವೆಯಾದನು.

ಕೃಷ್ಣಭಕ್ತರಾದ ಯಾದವರು ಮನೆಮನೆಗಳಲ್ಲಿ ಮಹೋತ್ಸವವನ್ನು ಮಾಡಿ ಶ್ರೀ ರುಕ್ಮಿಣೀ ಕೃಷ್ಣಕಲ್ಯಾಣ ಪೂಜ್ಯಭಾಜನರಾದರು. ಅಲಂಕೃತವಾದ ನರನಾರಿಯರು ಬಗೆಬಗೆಯ ಉಡುಗರೆಗಳನ್ನಿತ್ತು ಪುಣ್ಯದಂಪತಿಗಳನ್ನು ಸತ್ಕರಿಸಿ, ಧನ್ಯರಾದರು. ಧ್ವಜಗಳನ್ನೆತ್ತಿ ಕಟ್ಟಿದರು; ತೋರಣ ಪಲ್ಲವರಂಭಾಸ್ತಂಭ ಪೂಗೀತರುಗಳಿಂದ ದ್ವಾರಗಳನ್ನು ಅಲಂಕರಿಸಿದರು; ತಳಿಲ ನೀರನ್ನು ಚೆಲ್ಲಿ, ರಂಗವಲ್ಲಿಗಳನ್ನು ಬರೆದಿಟ್ಟರು, ಪೂರ್ಣಕುಂಭಗಳನ್ನಿಟ್ಟು, ತಾವೂ ಚಿತ್ರವಸನಗಳನ್ನುಟ್ಟು, ಆಭರಣಗಳನ್ನು ತೊಟ್ಟು, ಸಂಭ್ರಮದಿಂದ ಸಂಚರಿಸುವ ಕುರುಸೃಂಜಯ ಕೈಕೇಯ ವಿದರ್ಭ ಯದು ಜನರು ಸಂತೋಷಸಾಗರನಿಮಗ್ನರಾದರು. ಶ್ರೀ ಕೃಷ್ಣರುಕ್ಮಿಣಿಯರ ಮಂಗಲ ಯಶೋಗಾನವನ್ನಾಲಿಸಿ, ರಾಜರು, ರಾಜರಮಣಿಯರು ಆಶ್ಚರ್ಯಭರಿತರಾದರು. ರಮಣನಿಂದ ರಮಿಸುವ ರುಕ್ಮಿಣೀರಮೆಯ ದರ್ಶನದಿಂದ ದ್ವಾರಕಾನಗರ ಜನರು ಅಪಾರ ಮೋದಭಾಜನರಾದರು.

## ೬೦. ಸತ್ಯಭಾಮಾ ಕಲ್ಯಾಣ — ಸ್ಯಮಂತಕನ ಕಥೆ

ಶ್ರೀಶುಕನು ಹೇಳಿದನು–

ಶ್ರೀಕೃಷ್ಣನು ಸತ್ರಾಜಿತನ ಮಗಳಾದ ಸತ್ಯಭಾಮೆಯನ್ನೂ ಮದುವೆಯಾದನು. ಮಾಡಿದ ತಪ್ಪಿಗಾಗಿ ನೊಂದು, ಸತ್ರಾಜಿತನು, ಸ್ಯಮಂತಕಮಣಿಯನ್ನೂ ಕನ್ಯಾಮಣಿಯನ್ನೂ ಕೃಷ್ಣನಿಗೆ ತಾನಾಗಿ ಕೊಟ್ಟನು.

ಎನ್ನಲು ರಾಜನು ಪೇಳಿದನು–

ಕೃಷ್ಣನಿಗೆ ಸತ್ರಾಜಿತನು ಮಾಡಿದ ಅಪರಾಧವಾವುದು? ಅವನಿಗೆ ಸ್ಯಮಂತಕ ಮಣಿಯು ಲಭಿಸಿದುದೆಂತು? ಮಗಳನ್ನೂ ಕೊಡಲು ಕಾರಣವೇನು?

ಶ್ರೀಶುಕನು ಹೇಳಿದನು–

ಸೂರ್ಯನು ತನ್ನ ಭಕ್ತನಾದ ಸತ್ರಾಜಿತನ ತಪಸ್ಸಿಗೆ ಮೆಚ್ಚಿ ಅವನ ಕೋರಿಕೆಯಂತೆ ಸ್ಯಮಂತಕಮಣಿಯನ್ನು ಕೊಟ್ಟು ಕಳಿಸಿದನು. ಮಣಿಯನ್ನು ಧರಿಸಿದ ಸತ್ರಾಜಿತನು ಎರಡನೆಯ ಸೂರ್ಯನಂತೆ ಬೆಳಗುತ್ತಾ ದ್ವಾರಕೆಗೆ ಬಂದನು. ಅವನ ಕಾಂತಿಯಿಂದ ಕಣ್ಣು ಕುಕ್ಕಿದಂತಾಗಿ, ಜನರು ಓಡಿಬಂದು, ಪಗಡೆಯಾಟವನ್ನಾಡುವ ಕೃಷ್ಣನಿಗಿಂತೆಂದರು–

'ದಾಮೋದರ! ಸೂರ್ಯನೇ ನಿನ್ನ ನೋಡಲು ಬರುತ್ತಿರುವನು. ಅವನ ತೇಜದಿಂದ ಕಣ್ಣು ಕಾಣದಂತಾಗಿದೆ. ಶಂಖಚಕ್ರಗದಾಧರ! ಯಾದವ ಮಧ್ಯದಿ ಅವತರಿಸಿದ ನಿನ್ನನ್ನು ಬ್ರಹ್ಮಾದಿ ದೇವತೆಗಳು ನೋಡಲು ಬರುವರಲ್ಲವೇ?' ಆ ಮಾತನ್ನು ಕೇಳಿ ಕೃಷ್ಣನು ನಸುನಕ್ಕು, 'ಅವನು ಸೂರ್ಯನಲ್ಲ ಸತ್ರಾಜಿತನು; ಮಣಿಕಾಂತಿಯಿಂದ ಅಂತು ತೋರುವನು' ಎಂದು ಸುಮ್ಮನಾದನು.

ಸತ್ರಾಜಿತನು ತನ್ನ ಮನೆಯ ದೇವಗೃಹದಲ್ಲಿ ಆ ಮಣಿಯನ್ನಿಟ್ಟು, ವಿಪ್ರರಿಂದ ಪೂಜೆ ಮಾಡಿಸುತ್ತಿದ್ದನು. ಪ್ರತಿ ದಿನವು ಎಂಟು ಸೇರು (160 ತೊಲೆ) ಬಂಗಾರವನ್ನು ಕೊಡುವ ಆ ಮಣಿಯಿಂದ ಅವನು ಶ್ರೀಮಂತನಾದನು. ಆ ದೇಶದಲ್ಲಿ ಕ್ಷಾಮಡಾಮರ ಮಾರಿಕಾದ್ಯರಿಷ್ಟಗಳು ಇಲ್ಲವಾದವು. ಆ ಮಣಿಯನ್ನು, ಯದುರಾಜನಾದ ಉಗ್ರಸೇನನಿಗೆ ಕೊಡೆಂದು ಶ್ರೀಕೃಷ್ಣನು ಬೇಡಿದರೂ, ಕೊಡದೆ ಸತ್ರಾಜಿತನು, ಧನಕನಕಲೋಭದಿಂದ ತಿರಸ್ಕರಿಸಿದ್ದನು.

ಒಂದು ದಿನ ಸತ್ರಾಜಿತನ ತಮ್ಮನಾದ ಪ್ರಸೇನನು ಕಂಠಹಾರದಲ್ಲಿ ಆ ಮಣಿಯನ್ನು ಧರಿಸಿ, ಕುದುರೆಯನ್ನೇರಿ ಬೇಟೆಯಾಡಲು ವನವನ್ನು ಸೇರಿದನು. ಅವನನ್ನೂ, ಕುದುರೆಯನ್ನೂ ಕೊಂದು, ಸಿಂಹವೊಂದು ಮಣಿಯನ್ನು ಕೊಂಡೊಯ್ಯುತ್ತಿರಲು, ಜಾಂಬವಂತನು ಆ ಸಿಂಹವನ್ನು ಸಂಹರಿಸಿ, ತನ್ನ ಗುಹೆಯನ್ನು ಸೇರಿದನು: ಆ ಮಣಿಯನ್ನು ಮಗನ ಆಟದ ಸಾಧನವಾಗಿ ಅಸಮಾನ್‌ಗಿರಿಯಲ್ಲಿ ಕಟ್ಟಿದನು.

ತಮ್ಮನು ಹಿಂದಿರುಗಿ ಬರದಿರುವುದನ್ನು ಕಂಡು, ಸತ್ರಾಜಿತನು ದುಃಖದಿಂದ, 'ಮಣಿಯನ್ನು ಧರಿಸಿ, ವನಕ್ಕೆ ಹೋದ ನನ್ನ ತಮ್ಮನನ್ನು ಕೃಷ್ಣನೇ ಕೊಂದಿರಬಹುದು' ಎಂದು ಕೃಷ್ಣನಿಂದೆಯನ್ನು ಮಾಡಿದನು. ಬಂದ ಅಪನಿಂದೆಯನ್ನು ಕಳೆಯಬೇಕೆಂದು ನಿರ್ಧರಿಸಿ, ಶ್ರೀಕೃಷ್ಣನು ಕೆಲಜನರಿಂದ ಕೂಡಿ, ಪ್ರಸೇನನನ್ನು ಹುಡುಕುತ್ತಾ ಹೋದನು. ವನದಲ್ಲಿ ಪ್ರಸೇನ ಮತ್ತು ಕುದುರೆಯು ಸಿಂಹಹತರಾಗಿ ಬಿದ್ದಿರುವುದನ್ನು ತೋರಿಸಿ, ಮುಂದೆ ಜಾಂಬವಂತನು ಕೊಂದಿದ್ದ ಸಿಂಹವನ್ನೂ ತೋಡಿಸಿ, ಜಾಂಬವಂತನ ಗುಹೆಯನ್ನು ಸೇರಿದನು. ಜನರನ್ನು ಹೊರಗಿರಿಸಿ, ತಾನೊಬ್ಬನೇ ಬಿಲವನ್ನು ಪೊಕ್ಕು ಭಗವಂತನು, ಬಾಲನ ಲೀಲಾವಸ್ತುವಾಗಿದ್ದ ಮಣಿಯನ್ನು ಕಂಡು, ತೆಗೆದು ಕೊಳ್ಳಲು ಹೋದನು. ಅಪೂರ್ವ ಮನುಜನನ್ನು ಕಂಡು, ಧಾತ್ರಿಯು ಭೀತಳಾಗಿ ಕಿರುಚಿ ಕೊಂಡಳು.

ತತ್‌ಕ್ಷಣವೇ ಜಾಂಬವಂತನು ಬಂದು, ಕೃಷ್ಣನನ್ನು ನೋಡಿ ಕುಪಿತನಾದನು. ಅವನೊಬ್ಬ ಮನುಜನೆಂದು ತಿಳಿದು, ಅವನಿಂದ ಕಾದಾಡಿದನು. ಮಾಂಸದ ತುಂಡಿಗಾಗಿ ಬಡಿದಾಡುವ ಗಿಡಗ ಗಳಂತೆ ಜಾಂಬವಂತ-ಕೃಷ್ಣರು, ಆಯುಧಗಳಿಂದ; ಆಮೇಲೆ ಗಿಡಗಳಿಂದ, ಕಲ್ಲುಗಳಿಂದ ಕೊನೆಗೆ ಮುಷ್ಟಿಗಳಿಂದ ಹೋರಾಡಿದರು. ಇಪ್ಪತ್ತೆಂಟು ದಿನಗಳ ಯುದ್ಧವು ಭೀಕರವಾಯಿತು. ಕೃಷ್ಣನ ಮುಷ್ಟಿಪ್ರಹಾರಗಳಿಂದ ಮೈಮುರಿದು, ಬಲಸೋತು, ಬೆವರಿಟ್ಟು ಜಾಂಬವಂತನು ನಿರ್ವಿಣ್ಣ ನಾದನು; ಕೊನೆಗೆ ಜ್ಞಾನೋದಯವಾಗಲು, ಜಾಂಬವಂತನು ಭಗವಂತನಿಗೆ ಕೈಮುಗಿ ದಿಂತೆಂದನು–

ಸರ್ವಭೂತಗಳಿಗೆ ಸಹನ, ಬಲ, ಓಜಶ್ಶಕ್ತಿಗಳನ್ನೀವ ಸಾಕ್ಷಾದ್ವಿಷ್ಣುವೇ ನೀನೆಂಬ ಅರಿವು ಬಂತು; ವಿಶ್ವವನ್ನು ಸೃಜಿಸುವ ಬ್ರಹ್ಮಾದಿಗಳನ್ನೂ ಸೃಜಿಸುವೆ. ನಿನಗೆ ಸೃಜಕರಿಲ್ಲ. ವಿಶ್ವವನ್ನು ಸಂಹರಿಸುವ ವಿಧಿಶಂಕರಾದಿಗಳು ನಿನ್ನ ಕಿಂಕರರು, ನಿನಗೆ ಸಂಹಾರಕರಿಲ್ಲ. ಜೀವಾತ್ಮರಿಗೆಲ್ಲಾ ಸ್ವಾಮಿಯಾದ ಪರಮಾತ್ಮನು ನೀನು, ನಿನ್ನ ಕಿಂಚಿತ್ ಕೋಪದಿಂದ ಕೆಂಪಾದ ಕಡೆಗಣ್ಣಿನ ನೋಟದಿಂದ ಗಡಗಡನೆ ನಡುಗಿ ತನ್ನಲ್ಲಿದ್ದ ತಿಮಿಂಗಿಲಾದಿ ಜಲಜಂತುಗಳು ಅಲ್ಲಕಲ್ಲೋಲ ವಾಗುತ್ತಿರಲು, ಓಡಿಬಂದು, ಸಮುದ್ರರಾಜನು, ಶಿರದೀ ಪೂಜಾದ್ರವ್ಯಗಳನ್ನು ತಂದು ನಿನ್ನನ್ನು ಪೂಜಿಸಿ, ಹಾದಿ ತೋರಿದನು. ನಿನ್ನ ಧವಳ ಕೀರ್ತಿಯನ್ನು ಇಂದಿಗೂ ಸಾರುವ ಸೇತುವನ್ನೂ, ನಿನ್ನ ಬಾಣಗಳಿಂದುರುಳಿದ ರಾವಣಾದಿ ದನುಜರ ನಾಶವನ್ನೂ, ನಿನ್ನ ಪ್ರಸಾದದಿಂದ ಚಿರಂಜೀವ ನಾಗಿ ಲಂಕೆಯನ್ನಾಳುವ ವಿಭೀಷಣನ ಸಿರಿಯನ್ನೂ, ನಿನ್ನ ದಾಸನಾದ ನನ್ನಲ್ಲಿ ನೀನಿತ್ತ ದರ್ಶನ ವರವನ್ನೂ ನಾನು ಮರೆತಿಲ್ಲ. ನಿನಗೆ ರಾಮಚಂದ್ರ! ಕೃಷ್ಣ! ನಿನಗೆ ನಮಸ್ಕಾರ.

ಆ ಮಾತನ್ನಾಲಿಸಿ, ಪ್ರೀತನಾಗಿ ಭೀತಿಯನ್ನು ಹರಿಸಿ, ದೇವಕೀಜಾತನಿಂತೆಂದನು– ಋಕ್ಷ ರಾಜ! ಮಣಿಗಾಗಿ ಬಂದೆನು. ಅಪನಿಂದೆಯನ್ನು ಕಳೆಯಬೇಕಲ್ಲವೇ, ಎಂದು ಅಮೃತಕರ ಸ್ಪರ್ಶವನ್ನಿತ್ತು. ಭಗವಂತನು, ಭಕ್ತನನ್ನನುಗ್ರಹಿಸಿದನು. ಜಾಂಬವಂತನು ತನ್ನ ಮಗಳಾದ

ಜಾಂಬವತಿಯನ್ನು, ವರಪೂಜೆಗಾಗಿ ಸ್ಯಮಂತಕ ಮಣಿಯನ್ನು ಕೊಟ್ಟು ಕಳಿಸಿದನು. ಇಷ್ಟರಲ್ಲೇ ಹೊರಗೆ ಕಾದಿದ್ದ ದ್ವಾರಕೆಯ ಜನರು 12 ದಿನಗಳಾದರೂ ಮಣಿಗಾಗಿ ಗುಹೆಯನ್ನು ಪೊಕ್ಕ ಕೃಷ್ಣನು ಬರದಿರಲು, ದ್ವಾರಕೆಗೆ ಸೇರಿ, ವೃತ್ತಾಂತವನ್ನರುಹಿದರು. ವಸುದೇವ ದೇವಕೀ ಪ್ರಮುಖ ಜನರೆಲ್ಲಾ, ಸತ್ರಾಜಿತನನ್ನು ನಿಂದಿಸಿ, ಆಪತ್ಪರಿಹಾರವಾಗಲೆಂದು, ದುರ್ಗೆಗೆ ಪೂಜೆಗಳನ್ನು ನಡೆಸಿದರು.

ಶ್ರೀಕೃಷ್ಣನು ಕನ್ಯಾಮಣಿಗಳಿಂದ ಬಂದಾಗ, ಎಲ್ಲರಿಗೂ ಆನಂದವಾಯಿತು. ಶ್ರೀಶನು ಸಭೆಯಲ್ಲಿ ಸತ್ರಾಜಿತನಿಗೆ ಮಣಿಯನ್ನಿತ್ತು, ನಡೆದ ಸಮಾಚಾರವನ್ನೆಲ್ಲ ಪ್ರಕಟಿಸಿದನು. ಸತ್ರಾಜಿತನು ಲಜ್ಜಾಭಯಗಳಿಂದ ತಲೆಯೆತ್ತಲಾರದೆ ಮನೆಗೆ ಪೋದನು. ಬಲವಂತನಾದ ಕೃಷ್ಣನ ದ್ವೇಷವು ಒದಗಿತೆಂಬ ಭಯದಿಂದ ಹಾಗೂ ಸುಮ್ಮನೆ ನಿಂದೆ ಹೊರಿಸಿದೆನೆಂಬ ಅನುತಾಪದಿಂದ ಚಿಂತಿಸಿದನು.

ಏನು ಮಾಡಿದರೆ ಕೃಷ್ಣನು ಪ್ರಸನ್ನನಾಗುವನು? ಅಪರಾಧವನ್ನು ಮಾಡಿದ ನನಗೆ ಏನು ಪ್ರಾಯಶ್ಚಿತ್ತ? ನನ್ನ ಮಗಳನ್ನು ಶ್ರೀಹರಿಗರ್ಪಿಸಿ, ಮಣಿಯನ್ನೂ ಕೊಟ್ಟುಬಿಡುವುದೊಂದೇ ಇದಕ್ಕೆ ತಕ್ಕ ಪರಿಹಾರವೆಂದು ಮನಗಂಡು, ಸತ್ರಾಜಿತನು, ಮಗಳಾದ ಸತ್ಯಭಾಮೆಯನ್ನು ಮಣಿಯ ಸಹಿತವಾಗಿ ಶ್ರೀಕೃಷ್ಣನಿಗೆ ಕೊಟ್ಟು, ಮಹೋತ್ಸವದಿಂದ ಮದುವೆ ಮಾಡಿದನು. ಅವಳ ರೂಪ ವಿಭ್ರಮಗಳಿಗೆ ಮನಸೋತು ಬೇಡಿದ ಶತಧನ್ವಾದಿ ಯಾದವರಿಗೆ ಕೊಡದೆ, ಶ್ರೀಹರಿಗಿತ್ತು ನಿಶ್ಚಿಂತನಾದನು. ಶ್ರೀಕೃಷ್ಣನು ಮಣಿಯನ್ನು ಸತ್ರಾಜಿತನಿಗೆ ಹಿಂದಿರುಗಿಸಿ ಕೊಟ್ಟು, ಕನ್ಯಾಮಣಿಯು ಸಾಕ್ಷಾದ್ರಮಾದೇವಿಯೇ ಆದ ಸತ್ಯಭಾಮಾದೇವಿಯೊಡನೆ ಸುಖವಾಗಿದ್ದನು.

## ೬೧. ಸ್ಯಮಂತಕ ಕಥಾ

ಶ್ರೀಶುಕನು ಹೇಳಿದನು–

ರಾಜನ್! ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುಹೋದರೆಂಬ ಕೆಟ್ಟ ವಾರ್ತೆಯನ್ನು ಕೇಳಿ, ಸರ್ವಜ್ಞನಾದ ಕೃಷ್ಣನು ಲೋಕದ ಜನರಂತೆ, ಬಂಧುಜನರನ್ನು ನೋಡಿ ಬರಲು ಕುರುಪುರಿಗೆ ಹೋದನು. ಅಲ್ಲಿ ಭೀಷ್ಮ ವಿದುರ ಧೃತರಾಷ್ಟ್ರ ಗಾಂಧಾರಿಯರನ್ನು ಕಂಡು, ಅವರೊಡನೆ ದುಃಖಿಸಿ, ಬಲರಾಮಕೃಷ್ಣರು ಕೆಲದಿನವಲ್ಲೇ ಇದ್ದರು.

ಆ ಸಮಯವನ್ನು ಸಾಧಿಸಿ ಶತಧನ್ವನು, ಅಕ್ರೂರ ಕೃತ್ಯವರ್ಮರ ಮಾತನ್ನು ಕೇಳಿ, ತನಗೆ ಕನ್ಯೆಯನ್ನು ಕೊಡಲಿಲ್ಲವೆಂದು ಸಿಟ್ಟಿನಿಂದ ಅವರ ನುಡಿಯಂತೆ ಮನೆಯಲ್ಲಿ ಮಲಗಿದ್ದ ಸತ್ರಾಜಿತನನ್ನು ಕೊಂದುಬಿಟ್ಟನು. ಸ್ತ್ರೀಜನರು ದಿಕ್ಕಿಲ್ಲದೆ ಗೋಳಿಡುತ್ತಿರಲು, ರಾಕ್ಷಸನಂತೆ ಸತ್ರಾಜಿತನನ್ನು ಕೊಂದು ಶತಧನ್ವನು ಮಣಿಯನ್ನು ಅಪಹರಿಸಿ ಓಡಿಹೋದನು.

'ಹಾ ತಾತ!' ಇನ್ನೇನು ಗತಿ?' ಎಂದು ರೋದಿಸಿ, ಸತ್ಯಭಾಮೆ, ತಂದೆಯ ಶವವನ್ನು, ಎಣ್ಣೆಯ ಕಡಾಯಿಯಲ್ಲಿ ಕರದಿಟ್ಟು, ಹಸ್ತಿನಾಪುರವನ್ನು ಸೇರಿ, ಕೃಷ್ಣನಿಗೆ, ವಿಷಾದವಾರ್ತೆಯನ್ನು ಮುಟ್ಟಿಸಿ ದಳು. ಮನುಜರಂತೆ ರೋದಿಸಿ ಶ್ರೀಕೃಷ್ಣರಾಮರು, ದ್ವಾರಕೆಗೆ ಬಂದರು. ಶತಧನ್ವನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿ ಶ್ರೀಕೃಷ್ಣನು ಸತ್ಯಾದೇವಿಯನ್ನು ಸಂತೈಸಿದನು.

ಆಗ ಪಾಂಚಾಲಪುರದಲ್ಲಿ ದ್ರೌಪದೀ ಸ್ವಯಂವರಕ್ಕೆಂದು ಆಹೂತರಾಗಿ ಬಲರಾಮಕೃಷ್ಣರು ಅಲ್ಲಿಗೆ ಹೋದರು. ಸ್ವಯಂವರ ಶಾಲೆಯಲ್ಲಿ ಪಾಂಡವರನ್ನು ಮೊದಲ ಸಾರಿ ನೋಡಿದರು. ಸಿಂಹ ಕಿಶೋರಗಳಂತೆ ವಿರಾಜಿಸುತ್ತಾ, ಬ್ರಹ್ಮವೇಷದಿಂದ, ಬೂದಿ ಮುಚ್ಚಿದ ಕೆಂಡದಂತಿದ್ದ ಪಾಂಡುಕುಮಾರರು ಕೃಷ್ಣರಾಮರನ್ನು ನೋಡಿ, ಆನಂದಭರಿತರಾದರು. ಅರ್ಜುನನು ಮತ್ಸ್ಯ ಯಂತ್ರವನ್ನು ಹೊಡೆದು, ಭೀಮರಕ್ಷಿತನಾಗಿ, ದ್ರೌಪದಿಯೊಡನೆ ಕುಂಬಾರನ ಮನೆ ಸೇರಿದಾಗ, ಶ್ರೀಕೃಷ್ಣರಾಮರೂ ಅಲ್ಲಿಗೆ ಬಂದರು. ಪಾಂಡವರನ್ನು ನೋಡಿ, ಅವರಿಂದ ಅಪ್ಪಣೆಯನ್ನು ಪಡೆದು, ಕೃಷ್ಣರಾಮರು ದ್ವಾರಕೆಗೆ ತ್ವರೆಯಿಂದ ಬಂದರು.

ಕೃಷ್ಣ ಬಂದನೆಂದು ತಿಳಿದು ಶತಧನ್ವನು ಪ್ರಾಣಭಯದಿಂದ ಮತಿಗೆಟ್ಟು, ಕೃತವರ್ಮನನ್ನು ಸಹಾಯವಾಗೆಂದು ಬೇಡಿದನು. ಅವನು 'ಸಮರ್ಥರಾದ ರಾಮಕೃಷ್ಣರಿಗೆ ವಿರೋಧವನ್ನು ಮಾಡಲಾರೆನು. ಕೃಷ್ಣರಾಮದ್ರೋಹಿಗಳಿಗೆ ಕ್ಷೇಮವಿಲ್ಲ. ಕೃಷ್ಣದ್ವೇಷಿ ಕಂಸನು ಸತ್ತ. ಕೃಷ್ಣನಿಗೆ ಸೋತು ಜರಾಸಂಧನು ವಿರಥನಾಗಿ ಓಡಿದ' ಎಂದು ಕಳಿಸಿದನು. ಆಗ ಶತಧನ್ವನು ಅಕ್ರೂರನನ್ನು ಕಾಪಾಡೆಂದು ಯಾಚಿಸಿದನು. 'ತಿಳಿದೂ ತಿಳಿದೂ ಕೃಷ್ಣರಾಮರ ವಿರೋಧವನ್ನು ಯಾರು ಕಟ್ಟಿ ಕೊಂಬುವರು? ಹೋಗು! ಕೈಲಾಸಪತಿ ಸಾಕ್ಷಾಚ್ಛಿವನೇ ಶಿರಬಾಗಿ ನಮಿಸಿ, ಕೃಷ್ಣನನ್ನು ಪೂಜಿಸಿ ದನು! ವರದುರ್ಮದರಾದ ಹಂಸ-ಡಿಭಕರು ಕೃಷ್ಣನಿಂದ ಸತ್ತರು. ಕಾಳಿಯನನ್ನು ಮಡುವಿನಿಂದ ಹೊರಹಾಕಿದ ಕೃಷ್ಣನು ಸಾಮಾನ್ಯ ಮನುಜನಲ್ಲ. ಸೃಷ್ಟಿಸ್ಥಿತಿಲಯಗಳನ್ನು ಲೀಲೆಯಾಗಿ ಮಾಡುವ ಅನಂತ ಮಹಿಮೆಯನ್ನು ಯಾರೂ ತಿಳಿಯಲಾರರು. ಏಳು ವರ್ಷದವನಿದ್ದಾಗ ಕೃಷ್ಣನು ಶಿಲೀಂಧ್ರದಂತ ಅನಾಯಾಸವಾಗಿ ಗೋವರ್ಧನಗಿರಿಯನ್ನು ಧರಿಸಿ, ಗೋಕುಲವನ್ನು ಕಾಪಾಡಿ ದನು. ಅಂತಹ ಅದ್ಭುತಕರ್ಮನಿಗೆದುರುಂಟೇ? ಆದಿಪುರುಷನು, ನಿರ್ಲಿಪ್ತನು, ಸರ್ವಸ್ವಾಮಿಯು ನಾರಾಯಣಾವತಾರನು ಆದ ಕೃಷ್ಣನಿಗೆ ನಮಸ್ಕರಿಸುತ್ತಿರುವೆನು' ಎಂದು ಅಕ್ರೂರನು ಹೇಳಲು, ಶತಧನ್ವನು ಮಣಿಯನ್ನವನಲ್ಲಿಟ್ಟು, ಗಂಟೆಗೆ ನೂರು ಯೋಜನ ವೇಗದಿಂದೋಡುವ ಕುದುರೆ ಯನ್ನೇರಿ, ಓಡಿಹೋದನು.

ಶ್ರೀಕೃಷ್ಣನಾಗ ಗರುಡಧ್ವಜವನ್ನೆತ್ತಿದ ರಥದಲ್ಲಿ ಬಲರಾಮನಿಂದ ಕೂತು, ಮಹಾ ವೇಗ ದಿಂದ ಹೋಗಿ, ಶತಧನ್ವನನ್ನು ಸಮೀಪಿಸಿದನು. ಶತಧನ್ವನ ಕುದುರೆಯು ಮಿಥಿಲಾ ನಗರದ ಉಪವನದಲ್ಲಿ ಕೆಳಗೆ ಬಿದ್ದು ಸಾಯಲು, ಅವನು ಪಾದಚಾರಿಯಾಗಿ ಓಡಿದನು. ಕೃಷ್ಣನು ಕೂಡ, ರಥದಿಂದಿಳಿದು, ಓಡಿ ಅವನನ್ನು ಹಿಡಿದು, ಚಕ್ರದಿಂದ ಸಂಹರಿಸಿದನು. ಅವನ ವಸ್ತ್ರ ಗಳಲ್ಲಿ ಮಣಿಯನ್ನು ಕಾಣದೆ, ಕೃಷ್ಣನು ಹಿಂದಿರುಗಿ ಬಂದು, 'ಅಣ್ಣಾ! ವೃಥಾ ಶತಧನ್ವನನ್ನು ಕೊಂದದ್ದಾಯಿತು. ಮಣಿ, ಅವನಲ್ಲಿಲ್ಲ'ವೆಂದನು. ಬಲರಾಮನು ಆ ಮಾತನ್ನಾಲಿಸಿ, 'ಇರಬಹುದು. ಶತಧನ್ವನು ಆ ಮಣಿಯನ್ನು ಯಾರಲ್ಲೋ ಇಟ್ಟಿರಬಹುದು. ಊರಿಗೆ ಹೋಗಿ, ಅವನನ್ನು ಹುಡುಕಿ, ನಿನಗೆ ಬೇಕಾದಂತೆ ಮಾಡು. ಮಿಥಿಲೆಯ ರಾಜನು ನನ್ನ ಸ್ನೇಹಿತನು. ಅವನನ್ನು ನೋಡಿ ಬರುವೆನು' ಎಂದು ಹೇಳಿ, ವಿದೇಹ ನಗರಕ್ಕೆ ಹೊರಟು ಹೋಗಲು, ಚಿಂತಾಕ್ರಾಂತನಾಗಿ ಕೃಷ್ಣನು ದ್ವಾರಕೆಗೆ ಬಂದನು.

ಮಿಥಿಲಾಧಿಪನು ಬಲರಾಮನನ್ನು ಪ್ರೀತಿಯಿಂದ ಪೂಜಿಸಿ, ಕೆಲಕಾಲವಲ್ಲೇ ನಿಲ್ಲಿಸಿ ಕೊಂಡನು. ಆಗ ಕೃಷ್ಣನಿಲ್ಲದುದನ್ನು ತಿಳಿದು, ದುರ್ಯೋಧನನು ಮಿಥಿಲೆಗೆ ಬಂದು, ಬಲರಾಮನಿಂದ ಗದಾವಿದ್ಯೆಯನ್ನು ಚೆನ್ನಾಗಿ ಕಲಿತನು.

ಕೃಷ್ಣನು ದ್ವಾರಕೆಯಲ್ಲಿ ಸತ್ರಾಜಿತನಿಗೆ ಉತ್ತರಕ್ರಿಯೆಗಳನ್ನು ಮಾಡಿಸಿ, ಸತ್ಯಭಾಮೆಯನ್ನು ಸಂತೈಸಿದನು. ಕೃಷ್ಣ ಬಂದನೆಂದು ತಿಳಿದು, ಭಯದಿಂದ ಕೃತವರ್ಮಾಕ್ರೂರರು ದೇಶ ಬಿಟ್ಟು ಓಡಿಹೋದರು. ಅಕ್ರೂರನಿಲ್ಲದಿರಲು ದ್ವಾರಕೆಯಲ್ಲಿ ದೈವಿಕ ಭೌತಿಕ ಶರೀರಿಕಾದಿ ಉಪದ್ರವಗಳು ತಲೆದೋರಿದವು. ಶ್ರೀಕೃಷ್ಣನಾದ ಉಗ್ರಸೇನಾದಿ ವೃದ್ಧರನ್ನು ಕೇಳಲು, ಅವರಿಂತೆಂದರು-

ಕೃಷ್ಣಾ! ನಿನ್ನ ನಾಮಸ್ಮರಣೆಯಿಂದ ಸಕಲಾನಿಷ್ಟಗಳು ನಿವೃತ್ತವಾಗುವುವು. ಆದರೂ ಹಿಂದಿನ ಕಥೆಯೊಂದಿದೆ ಕೇಳು. ಒಂದು ಸಲ ಕಾಶೀ ದೇಶದಲ್ಲಿ, ಮಳೆ ಬರದೆ ಕ್ಷಾಮವು ಬಂತು. ಆಗ ಅಲ್ಲಿಗೆ ಹೋಗಿದ್ದ ಶ್ವಫಲ್ಕನ ಮಹಿಮೆಯನ್ನರಿತು, ಅವನಿಗೆ ತನ್ನ ಮಗಳು ಗಾಂದಿನಿಯನ್ನೂ, ರಾಜ್ಯವನ್ನೂ ಕೂಡ ಕೊಟ್ಟನು. ಶ್ವಫಲ್ಕನಿದ್ದೆಡೆ ಕ್ಷಾಮವಿಲ್ಲ, ಮಾರಿಕಾದ್ಯುಪದ್ರವಗಳಿಲ್ಲ. ಆಗ ಕಾಶೀ ದೇಶದಿ ಮಳೆಗರೆದು, ಸುಭಿಕ್ಷವಾಯಿತು. ಶ್ವಫಲ್ಕನಂತೆ ಅವನ ಮಗನಾದ ಅಕ್ರೂರನು ಮಹಾತ್ಮನು. ಅವನಿದ್ದಲ್ಲಿ ಉಪದ್ರವಗಳಿಲ್ಲ. ಸ್ಯಮಂತಕವಿಲ್ಲದೆ, ಬಲರಾಮನೂ ದೂರವಾಗಿ, ದ್ವಾರಕೆಗೆ ಈ ದೆಶೆ ಬಂತು' ಎಂದಾಡಿದ ವೃದ್ಧರನ್ನು ಮನ್ನಿಸಿ, ಶ್ರೀಕೃಷ್ಣನು ಅಕ್ರೂರನನ್ನು, ರಾಮನನ್ನು ಕರೆಕಳಿಸಿದನು. ಅವರೀರ್ವರೂ ಬಂದರು. ಒಂದು ದಿನ ಸಭೆಯಲ್ಲಿ ಸರ್ವಜ್ಞನಾದ ಕೃಷ್ಣನು ನಗುತ್ತಾ, 'ಅಕ್ರೂರಾ! ಸ್ಯಮಂತಕವನ್ನು ನಿನ್ನಲ್ಲಿಟ್ಟ ಶತಧನ್ವನು ಮಡಿದನು. ಸತ್ರಾಜಿತನಿಗೆ ಮಕ್ಕಳಿಲ್ಲ. ಅವನ ದೌಹಿತ್ರರಿಗೆ ಆ ಮಣಿ ಸಲ್ಲತಕ್ಕದ್ದು. ಅವರಾದರೂ ಸತ್ರಾಜಿತನಿಗೆ ಜಲತಿಲಪಾರ್ವಣಗಳನ್ನಿತ್ತು, ಆ ಮಣಿಗೆ ಅಧಿಕಾರಿಗಳಾಗಿರುವರು. ಆದರೂ ಮಣಿಯು ದುರ್ಧರವಾದುದರಿಂದ, ನಿನಗೆ ಬಂದುದು, ನಿನ್ನಲ್ಲೇ ಇರಲು! ಒಂದು ಮಾತ್ರ ನಿನ್ನನ್ನು ಬೇಡುವೆನು. ಮಣಿಯ ದೆಶೆಯಿಂದ, ಅಣ್ಣನು ನನ್ನನ್ನು ಅನುಮಾನಿಸುತ್ತಿರುವನು. ಅದನ್ನು ಈಗ ಸಭೆಯಲ್ಲಿ ನೋಡಿಸು! ಬಂಧುಗಳಿಗೆ ಶಾಂತಿ ಸಮಾಧಾನವನ್ನುಂಟು ಮಾಡು! ಬಂಗಾರದ ವೇದಿಗಳಿಂದ ಬೆಳಗುವ ನಿನ್ನ ಕಾಶೀನಗರದ ಸತ್ರಯಾಗ ವೃಷ್ಟಾನ್ನ ದಾನಗಳು ನಿರ್ವಿಘ್ನವಾಗಿ ನಡೆಯಲ್ಲಿ! ಎಂದು ನಯದಿಂದ ನುಡಿದನು.

ಅಕ್ರೂರನು ವಸ್ತ್ರದಲ್ಲಿಟ್ಟ ಮಣಿಯನ್ನು ತೆಗೆದು ಶ್ರೀಕೃಷ್ಣನಿಗಿತ್ತನು. ಆಗ ಶ್ರೀಕೃಷ್ಣನು ಅದನ್ನು ಅಣ್ಣನಿಗೂ ಸತಿಯರಿಗೂ ತೋರಿದನು. ಲೋಕಾಪವಾದವು ಮಹಾ ಪ್ರಯತ್ನದಿಂದ ನಿವಾರಣೀಯವೆಂದು ಪ್ರಕಟಿಸಿ, ರಾಹುಮುಕ್ತ ರಾಕೇಶನಂತೆ ಪ್ರಕಾಶಿಸಿದನು. ಬಲರಾಮನು ಮಣಿಗಾಗಿಯೇ ವಿದೇಹದಿಂದ ಬಂದಿದ್ದರಿಂದ, ಅದನ್ನು ತನಗೆ ಕೊಡೆಂದನು. ಪಿತೃಧನವೆಂದು ಸತ್ಯಾಭಾಮೆ ಬೇಡಿದಳು. ಜಾಂಬವತಿಯು ಕೂಡ ತನ್ನ ತಂದೆ ಕೊಟ್ಟ ಶುಲ್ಕವೆಂದು ಮಣಿಯ ಪಡೆಯಲಿಚ್ಛಿಸಿದಳು. ಇದೆಲ್ಲವನ್ನೂ ತಿಳಿದು ಮಾಧವನು ಅಕ್ರೂರನಿಗೆ ಮಣಿಯನ್ನು ಕೊಟ್ಟು, ಕಾಶಿಗೆ ಕಳುಹಿದನು.

ಸರ್ವಪಾಪಹರವು ಅಪಸಿಂದಾನಿವಾರಕವು ಮಂಗಲಕರವು ವಿಷ್ಣುಮಹಿಮಾ ಪ್ರತಿಪಾದಕವು ಆದ ಈ ಸ್ಯಮಂತಕ ಕಥೆಯನ್ನು ಭಕ್ತಿಯಿಂದ ಹೇಳಿ ಕೇಳಿದವರು ಪಾಪದೂರರಾಗುವರು. ಅವರಿಗೆ ಬಂದ ದುಷ್ಕೀರ್ತಿಯು ತೊಲಗುವುದು. ಅವರು ಶಾಂತಿಸುಖವನ್ನು ಪೊಂದುವರು.

# ೬೨. ಕಾಳಿಂದೀ ಭದ್ರಾ ನೀಲಾ ಮಿತ್ರವಿಂದಾ ಲಕ್ಷಣ ವಿವಾಹ

ಶ್ರೀಶುಕನು ಹೇಳಿದನು–

ಒಂದು ಸಲ ಇಂದ್ರಪ್ರಸ್ಥದಲ್ಲಿದ್ದ ಪಾಂಡವರನ್ನು ನೋಡಿಬರಲು ಕೃಷ್ಣನು ಸಾತ್ಯಕಿ ಮೊದಲಾದವರಿಂದ ಕೂಡಿ ಹೊರಟನು. ಬಂದ ಗೋವಿಂದನಿಗೆ ಸ್ವಾಗತವಿತ್ತು ಪಾಂಡುನಂದನರು ಮುಖ್ಯಪ್ರಾಣನಿಗೆ ಇಂದ್ರಿಯಗಳಂತೆ ಎದ್ದು ನಿಂತು, ಆಲಿಂಗಿಸಿ, ಅವನ ಮಂದಹಾಸ ಸುಂದರ ವದನಾರವಿಂದ ದರ್ಶನದಿಂದ ಅಮಂದಾನಂದ ಕಂದಲಿತ ಹೃದಯಾರವಿಂದರಾದರು. ಧರ್ಮ ಭೀಮರಿಗೆ ವಂದಿಸಿ, ಅರ್ಜುನನನ್ನಪ್ಪಿ, ವಂದಿಸಿದ ನಕುಲಸಹದೇವರಿಗಾಶೀರ್ವದಿಸಿ, ಶ್ರೀಕೃಷ್ಣನು ಕಾಂಚನಾಸನವನ್ನು ಅಲಂಕರಿಸಿದನು. ಆಗ ನವೋಢೆಯಾದ ಪಾಂಚಾಲಿ ಲಜ್ಜೆಯಿಂದ ತಲೆಬಾಗಿ ಮೆಲ್ಲನೆ ಬಂದು ನಮಿಸಿದಳು. ಸಾತ್ಯಕಿ ಮೊದಲಾದ ಯಾದವರು ಪೂಜಿತರಾಗಿ ಆಸೀನರಾದರು.

ಶ್ರೀಕೃಷ್ಣನು ಸೋದರತ್ತೆಯಾದ ಕುಂತಿಗೆ ನಮಿಸಿ, ಕುಶಲಪ್ರಶ್ನೆಗಳ ನಡೆಸಿದನು. ಕೃಷ್ಣನನ್ನು ನೋಡಿ, ಕುಂತಿಗೆ ಕಣ್ಣೀರು ಬಂತು, ಮಾತಾಡಲು ಬರದಂತೆ ಕುತ್ತಿಗೆಯ ಸೆರೆ ಬಿಗಿಯಿತು, ಪಟ್ಟಕ್ಲೇಶಗಳು ಸ್ಮೃತಿಪಟಲದಲ್ಲಿ ಹಾದುಹೋದುವು; ಸಕಲ ಕ್ಲೇಶನಾಶಕನಾದ ಕೇಶವನನ್ನು ನೋಡಿ ಇಂತೆಂದಳು–

'ಕೃಷ್ಣ! ನೀನು ನಾಥನಾಗಿ ಪೊರೆಯುತ್ತಿರಲು, ನಮ್ಮ ಕ್ಷೇಮಗಳಿಗೆ ಲೋಪವೇ! ಅಣ್ಣ ವಾಸುದೇವನು ನಿನ್ನನ್ನಿಲ್ಲಿಗೆ ಕಳುಹಿ, ನಮಗೆ ಪ್ರೀತಿಯ ನೆನಪು ಕೊಟ್ಟಿರುವೆನು. ಪಾಂಚಾಲಪುರ ದಲ್ಲಿ, ಸ್ವಯಂವರ ಸಮಯದಲ್ಲಿ ಬಂದವನು ಮತ್ತೆ ಇಂದಿಗೆ ಬಂದೆ, ಒಳ್ಳೆಯದಾಯಿತು.' ಆ ಮಾತನ್ನಾಲಿಸಿ ಕೃಷ್ಣನು, 'ಪಾಂಚಾಲದಲ್ಲಿ, ಕುಂಭಕಾರನ ಮನೆಯಲ್ಲಿ ದ್ರೌಪದಿಯನ್ನು ತಂದು ನಿನಗೊಪ್ಪಿಸುವ ಯೋಗವನ್ನು ಕಂಡು, ಆನಂದಿಸಿ, ಅಂದೇ ಶತಧನ್ವನನ್ನು ಶಿಕ್ಷಿಸಲು ದ್ವಾರಕೆಗೆ ನಾನು ಹೋಗಬೇಕಾಯಿತು. ಶತಧನ್ವನನ್ನು ಕೊಂದೆನು. ಮಣಿಯ ಕಾರಣದಿಂದ ಅಣ್ಣನು ಸಿಟ್ಟಾಗಿ ಮನೆ ಬಿಟ್ಟು, ವಿದೇಹವನ್ನು ಸೇರಿದನು. ಅವನು ಬರಬೇಕೆಂದು ಕಾದು, ದ್ವಾರಕೆಯಲ್ಲೇ ಸೇರಬೇಕಾಯಿತು. ಏನು ಮಾಡಲಿ? ಕಾರ್ಯಬಾಹುಳ್ಯದಿಂದ ಇಷ್ಟು ದಿನ ಬರಲಾಗಲಿಲ್ಲ, ಕ್ಷಮಿಸು' ಎಂದನು. ಕುಂತಿಯು 'ಹಾಗಲ್ಲ! ಕೃಷ್ಣ! ನಿನಗೆ ನನ್ನದು ಪರಕೀಯ ವೆಂಬ ವೈಷಮ್ಯವಿಲ್ಲ. ಅನಿಮಿತ್ತ ಬಂಧುವಾದ ನೀನು ಬಂದರೆ ನಮ್ಮ ಕ್ಲೇಶವೆಲ್ಲಾ ನಾಶವಾಗು ವುದು. ನಿನ್ನ ಸ್ಮರಣೆಯೇ ಸಾಕು. ನಮ್ಮನ್ನು ಮರೆಯದೆ ಕಾಪಾಡು' ಎಂದು ಪ್ರೀತಿಯಿಂದ ನುಡಿದಳು.

ಇಂತು ಸಲ್ಲಾಪಗಳಿಂದ ತನ್ನವರಿಗೆ ಆನಂದವನ್ನು ಕೊಟ್ಟು ವರ್ಷಾಕಾಲದ ನಾಲ್ಕು ತಿಂಗಳು ಇಂದ್ರಪ್ರಸ್ಥದಲ್ಲೇ ನೆಲಸಿ, ಶ್ರೀಕೃಷ್ಣನು ತತ್ಪುರವಾಸಿ ಜನರ ನಯನಾನಂದಕರನಾಗಿದ್ದನು.

ಒಂದು ದಿನ ಅರ್ಜುನನು ಕೃಷ್ಣನೊಡನೆ ತನ್ನ ರಥವನ್ನೇರಿ ಬೇಟೆಯಾಡಲು ಹೊರಟನು. ಕಪಿಧ್ವಜನು ಗಾಂಡೀವನಿರ್ಮುಕ್ತ ನಾರಾಚಗಳಿಂದ ವ್ಯಾಘ್ರ ಶರಭ ಹರಿಣ ಶಶಿಸೂಕರಗಳನ್ನು ಕೊಂದು, ಭಟರಿಂದ ನಗರಕ್ಕೆ ಕಳಿಸಿದನು. ನೀರಡಿಸಿ, ಯಮುನೆಗಿಳಿದು, ನೀಲಮಣಿಪ್ರಭವಾದ ನೀರನ್ನು ಕುಡಿದು, ಬರುತ್ತಾ ಕೃಷ್ಣಾರ್ಜುನರು ಸುಂದರ ಕನ್ಯೆಯನ್ನೋರ್ವಳನ್ನು ಕಂಡರು, ಶ್ರೀಕೃಷ್ಣ ನಾಜ್ಞೆಯಂತೆ ಅರ್ಜುನನು ಅವಳನ್ನು ಸಮೀಪಿಸಿ, 'ಸುಂದರಾಂಗಿ! ಯಾರು ನೀನು? ಎಲ್ಲಿಂದ ಬಂದೆ? ಏಕಿಲ್ಲಿರುವೆ? ಪತಿಯನ್ನು ಬಯಸಿ ತಪಸ್ಸನ್ನು ಮಾಡುವಳಂತೆ ತೋರುವೆ'

ಎಂದನು. ಅವಳಿಂತೆಂದಳು- 'ನಿಜ! ಸೂರ್ಯಪುತ್ರಿ ನಾನು. ಕಾಳಿಂದಿ ನನ್ನ ಹೆಸರು. ವಿಷ್ಣುವೇ ಪತಿಯಾಗ ಬೇಕೆಂದು ಬೇಡಿ, ತಪವನ್ನು ಮಾಡುತ್ತಿರುವೆನು. ಶ್ರೀನಿವಾಸನ ಹೊರತನ್ಯರನ್ನು ವರಿಸೆನು. ಅನಂತಗುಣನು ಅನಾಥವತ್ಸಲನು ಆದ ಮುಕುಂದನು ನನ್ನ ತಪಃಫಲವಾಗಿ ನನ್ನನ್ನು ಸ್ವೀಕರಿಸಲಿ! ಅಚ್ಯುತನು ದರ್ಶನವಿತ್ತು ಸ್ವೀಕರಿಸುವವರೆಗೂ ತಂದೆಯು ಕಟ್ಟಿಸಿದ ಭವನದಲ್ಲೇ ಇಲ್ಲೇ ಯಮುನಾತೀರದಲ್ಲಿ ವಾಸವಾಗಿರುವೆನು.' ಆ ಮಾತನ್ನು ಕೇಳಿ ಅರ್ಜುನನು ಕೃಷ್ಣನನ್ನು ಕರೆತಂದನು. ಕಾಳಿಂದೀ ಕೃಷ್ಣರು ಅರ್ಜುನ ರಥದಲ್ಲಿ ಕುಳಿತು ಇಂದ್ರಪ್ರಸ್ಥವನ್ನು ಸೇರಿದರು. ವಿಶ್ವಕರ್ಮನಿಂದ ದಿವ್ಯನಗರನಿರ್ಮಾಣವನ್ನು ಮಾಡಿಸಿ, ಶ್ರೀಕೃಷ್ಣನು ಧರ್ಮರಾಜನಿಗಿತ್ತು ಅವನ ಅಪ್ಪಣೆಯನ್ನು ಪಡೆದು ದ್ವಾರಕೆಗೆ ಹೊರಟುಬಂದನು. ಅಲ್ಲಿ ಸ್ವಜನ ಸಮೂಹವು ನೋಡಿ, ಸಂತಸಿಸುವಂತೆ ಕಾಳಿಂದೀಸುಂದರಿಯನ್ನು ಮದುವೆಯಾದನು.

ಕೃಷ್ಣನ ಸೋದರತ್ತೆಯಾದ ರಾಜಾಧಿದೇವಿಯ ಮಗಳು ಮಿತ್ರವಿಂದೆ. ಅವಳ ಅಣ್ಣಂದಿರಾದ ವಿಂದಾನುವಿಂದರು ದುರ್ಯೋಧನನ ವಶರಾಗಿ, ಕೃಷ್ಣನನ್ನೇ ವರಿಸುವೆನೆಂದ ತಂಗಿಯನ್ನು ನಿರ್ಬಂಧಿಸಿ, ಸ್ವಯಂವರವನ್ನೇರ್ಪಡಿಸಿದರು. ದುರ್ಯೋಧನಾದಿ ರಾಜರು ನೆರೆದಿದ್ದರು. ಶ್ರೀಕೃಷ್ಣನಲ್ಲಿಗೆ ಬಂದು ತನ್ನವಳಾದ ಮಿತ್ರವಿಂದೆಯನ್ನು ಅಪಹರಿಸಿ, ರಾಜರನ್ನು ಸೋಲಿಸಿ, ದ್ವಾರಕೆಗೆ ಬಂದು, ಅವಳನ್ನೂ ಮದುವೆಯಾದನು.

ಕೋಸಲ ದೇಶದ ನಗ್ನಜಿದ್ರಾಜನಿಗೆ ನೀಲಾದೇವಿ ಎಂಬ ಮಗಳಿದ್ದಳು. ಅವಳನ್ನು ಮದುವೆ ಯಾಗುವವನು ಏಳು ಗೂಳಿಗಳನ್ನು ಬಲದಿಂದ ಗೆದ್ದು ಕಟ್ಟಬೇಕೆಂದು ನಗ್ನಜಿತನು ವೀರ್ಯ ಪರೀಕ್ಷೆಯನ್ನಿಟ್ಟಿದ್ದನು. ಮೇಘಗಳಂತೆ ಕಪ್ಪಾಗಿ, ಮೊನಚಾದ ಕೋಡುಗಳಿಂದ ಭಯಂಕರವಾಗಿ, ಮುದ್ಗರದಂತೆ ಕಠಿನವಾಗಿ, ದುರ್ಧರ್ಷವಾಗಿದ್ದ ಈ ಗೂಳಿಗಳನ್ನು ಸೆಣಸಿ ಕಟ್ಟಲಾಗದೆ, ಎಷ್ಟೋ ಜನ ರಾಜಪುತ್ರರು, ನಿರಾಶರಾಗಿ ಹೋಗಿದ್ದರು.

ಶ್ರೀಕೃಷ್ಣನು ಬಹುಸೈನ್ಯಸಮೇತನಾಗಿ ಕೋಸಲವನ್ನು ಸೇರಿ, ನಗ್ನಜಿದ್ರಾಜನನ್ನು ಕಂಡನು. ಪ್ರತ್ಯುತ್ಥಾನಾಸನಗಳಿಂದ ಪೂಜಿಸಿ, ಕೋಸಲನು ಪ್ರೀತಿಯಿಂದ ಇಂತೆಂದನು–

ಜಗತ್ಪತೇ! ಸ್ವತಃ ಪೂರ್ಣವಾದ ನಿನಗೆ ಅಲ್ಪನಾದ ನನ್ನಿಂದ ಏನಾಗಬೇಕು? ಹೇಳು. ಶ್ರೀದೇವಿಯು, ಬ್ರಹ್ಮರುದ್ರೇಂದ್ರಾದಿಸುರರು ನಿನ್ನ ಪಾದರಜವನು ಶಿರಸಾ ಧರಿಸಿ, ಪಾವನ ರಾಗಿರುವರು. ನೀನು ಪೇಳಿದ ಧರ್ಮವನ್ನು ನೀನಾಗಿ ಪೊರೆಯಲು ಅವತರಿಸುವ ಮಹಾ ಪ್ರಭು ವಾದ ನಿನಗೆ, ನಾನೇನು ಸೇವೆ ಸಲ್ಲಿಸಲಿ? ನನ್ನಲ್ಲಿರುವ ಅಂತರ್ಯಾಮಿಯಾಗಿ ನೀಮಾಡಿಸಿದ ಸತ್ಕರ್ಮಗಳಿಂದ ನೀನೇ ಪ್ರೀತನಾಗು!

ಶ್ರೀಕೃಷ್ಣನು, 'ರಾಜನ್! ಸ್ವಯಂವರಕಾಲವನ್ನು ಬಿಟ್ಟು, ಬೇರೆ ಕಾಲದಲ್ಲಿ ಕನ್ಯೆಯನ್ನು ಕೊಡೆಂದು ಯಾಚಿಸಿದವನೇ ಉತ್ತಮ ವರನು. ಆದರೂ ಪುರುಷಾರ್ಥವನ್ನು ಬಯಸುವ ಸಮರ್ಥ ರಾಜಕುಮಾರನು ಯಾಚಿಸಿದರೂ ತಪ್ಪಲ್ಲ; ಧರ್ಮರತನಾದ ಕ್ಷತ್ರಿಯನಿಗೆ ಯಾಚನೆ ಸಲ್ಲದು; ನಿನ್ನ ಬಂಧುತ್ವವನ್ನು ಬೇಡಿ, ನಿನ್ನ ಮಗಳಿಗಾಗಿ ಬೇಡುತ್ತಿರುವೆನು; ನಾನು ಕನ್ಯಾಶುಲ್ಕ ವನ್ನೀಯುವನಲ್ಲ.' ಎಂದನು.

ರಾಜನು 'ಕೃಷ್ಣ! ನಿನಕಿಂತಲು ಉತ್ತಮನಾದ ವರನು ಇಲ್ಲ. ಶ್ರೀದೇವಿಯು ಬಿಡದೆ ನಿನ್ನ ವಕ್ಷೋದೇಶವನ್ನಲಂಕರಿಸಿದಳು. ಗುಣಗಣನಿಲಯನಾದ ನಿನಗೆ ಇಲ್ಲ ಎಂಬೆನೇ? ಆದರೂ ವೀರ್ಯಪರೀಕ್ಷೆಗಾಗಿ ಒಂದು ನಿಬಂಧನೆಯನ್ನು ಮಾಡಿರುವೆನು. ದುರ್ದಾಂತವಾದ ಏಳು

ಗೂಳಿಗಳಿವೆ ನನ್ನ ಗೋಷ್ಠದಲ್ಲಿ; ಅದನ್ನು ಕಟ್ಟಿದವನಿಗೇ ನನ್ನ ಮಗಳು ಮಡದಿಯಾಗುವಳು. ಬಹುರಾಜ ಸುತರು ಅವನ್ನು ಕಟ್ಟಲೆಣಿಸಿ, ಕೈಕಾಲು ಮುರಿದುಕೊಂಡು ಹೋದರು. ನೀನವನ್ನು ಕಟ್ಟಿ ನಿಗ್ರಹಿಸು. ನನ್ನ ಮಗಳ ಪಾಣಿಯನ್ನು ಗ್ರಹಿಸು' ಎಂದನು. ತ್ರಿಲೋಕ ಮನೋಹರನಾದ ರಮಾಪತಿಯನ್ನು ಮನಸಾರ ವರಿಸಿ, ನೀಲಾದೇವಿಯು 'ನಾನು ಮಾಡಿರುವ ತಪೋದಾನವ್ರತಗಳ ಪುಣ್ಯದಿಂದ ಶ್ರೀಕೃಷ್ಣನೇ ನನಗೆ ಪತಿಯಾಗಲಿ' ಎಂದು ಮನಸ್ಸಿನಲ್ಲಿ ಪ್ರಾರ್ಥಿಸಿದಳು.

ಆಗ ಶ್ರೀಕೃಷ್ಣನು, ಏಳು ರೂಪಗಳನ್ನು ಸ್ವೀಕರಿಸಿ, ಆ ಗೂಳಿಗಳನ್ನು ಲೀಲೆಯಿಂದ ಗೆದ್ದು, ಹಗ್ಗಗಳಿಂದ ಕಟ್ಟಿ ಬಾಲನು ಕಟ್ಟಿಗೆ ಬಸವನನ್ನೆಳೆದಂತೆ ಸೆಳೆದು ಬಂಧಿಸಿದನು. ನಗ್ನಜಿದ್ರಾಜನು ಸಂತೋಷಾಶ್ಚರ್ಯಭರಿತನಾಗಿ, ನೀಲಾದೇವಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೆ ಮಾಡಿದನು. ರಾಜರಮಣಿಯರಾನಂದದಿಂದ ಸಮಲಂಕೃತರಾಗಿ, ನೀಲಾಕೃಷ್ಣರನ್ನು ನೋಡಿ, ಹಾಡಿ ಹರಸಿದರು. ಹತ್ತು ಸಾವಿರ ಆಕಳುಗಳನ್ನೂ ಭೂಷಿತರಾದ ದಾಸಿಯರನ್ನು ಮೂರು ಸಾವಿರ ಜನರನ್ನೂ ಒಂಭತ್ತು ಸಾವಿರ ಆನೆಗಳನ್ನೂ ಒಂಭತ್ತು ಲಕ್ಷ ರಥಗಳನ್ನೂ ಒಂಭತ್ತು ಕೋಟಿ ಕುದುರೆಗಳನ್ನೂ ಅರ್ಬುದ ಭಟರನ್ನೂ ಕಾಣಿಕೆ ಇತ್ತು ದಂಪತಿಗಳನ್ನು ಬಂಗಾರದ ರಥದಲ್ಲಿ ಕುಳ್ಳಿರಿಸಿ, ದುಹಿತೃವತ್ಸಲನಾದ ನಗ್ನಜಿತನು ಬಿಡಲಾರದೆ ಬಿಟ್ಟು ಕಳಿಸಿದನು. ನೀಲಾಕೃಷ್ಣರು ದ್ವಾರಕೆಗೆ ಬಂದು, ಆನಂದದಿಂದಿದ್ದರು.

ಸೋದರತ್ತೆಯಾದ ಶ್ರುತಕೀರ್ತಿಯ ಮಗಳಾದ ಭದ್ರಾದೇವಿಯನ್ನು ಅವಳ ಅಣ್ಣಂದಿರಾದ ಸಂತರ್ದನಾದಿ ಕೇಕಯರಾಜರು ಪ್ರೀತಿಯಿಂದ ಕೊಡಲು, ಶ್ರೀಕೃಷ್ಣನು ಭದ್ರಳನ್ನೂ ಸ್ವೀಕರಿಸಿದನು.

ಮದ್ರರಾಜನ ಮಗಳಾದ ಲಕ್ಷ್ಮಣೆಯನ್ನು ಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ಶ್ರೀಕೃಷ್ಣನು, ರಾಜರನ್ನು ಗೆದ್ದು, ಗರುಡನು ಅಮೃತವನ್ನಂತೆ ತಂದು, ದ್ವಾರಕೆಯಲ್ಲಿ ಮದುವೆಯಾದನು.

ನರಕಾಸುರನನ್ನು ಕೊಂದು, ಅವನ ಕಾರಾಗಾರದಲ್ಲಿದ್ದ ಹದಿನಾರು ಸಾವಿರ ತರುಣೀಮಣಿಗಳನ್ನು, ವಿವಾಹವಾಗಿ, ಶ್ರೀಕೃಷ್ಣನು ದ್ವಾರಕೆಯಲ್ಲಿ ಸುಖವಾಗಿದ್ದನು.

## ೬೩. ಮುರಾಸುರ ವಧೆ

ಶ್ರೀರಾಜನು ಹೇಳಿದನು–

ನರಕಾಸುರನನ್ನು ಸಂಹರಿಸಿ, ಅವನ ಸೆರೆಯಲ್ಲಿದ್ದ ತನ್ವಂಗಿಯರನ್ನು ಶಾರ್ಙ್ಗಧರನು ತಂದ ಸುಂದರ ಕಥೆಯನ್ನು ವಿಸ್ತರಿಸಿ ಹೇಳು.

ಶ್ರೀಶುಕನು ಪೇಳಿದನು–

ಒಂದು ದಿನ ಶ್ರೀಕೃಷ್ಣನು ಸುಧರ್ಮಸಭೆಯಲ್ಲಿರಲು, ಇಂದ್ರನು ಬಂದು, 'ಕೃಷ್ಣ! ನರಕಾಸುರನ ಬಾಧೆ ಹೆಚ್ಚಾಗಿದೆ. ನಮ್ಮ ಮೇರುಸ್ಥಾನವನ್ನು ಗೆದ್ದಿದ್ದಾನೆ. ನನ್ನ ಮೌಕ್ತಿಕ ಛತ್ರವನ್ನು ಕದ್ದಿದ್ದಾನೆ. ನಮ್ಮ ತಾಯಿಯಾದ ಅದಿತಿಯ ಕುಂಡಲಗಳನ್ನು ಹರಿಸಿದ್ದಾನೆ. ಅವನನ್ನು ಸಂಹರಿಸಿ, ನಮ್ಮನ್ನು ಸಲಹು' ಎಂದು ಬೇಡಿಕೊಂಡನು. ಇಂದ್ರನನ್ನು ಸಮಾಧಾನಪಡಿಸಿ,

ಕಳಿಸಿ, ಶ್ರೀಕೃಷ್ಣನು, ಸತ್ಯಭಾಮೆಯೊಡಗೂಡಿ, ಗರುಡಾರೂಢನಾಗಿ, ನರಕಾಸುರನ ಪ್ರಾಗ್ಜ್ಯೋತಿಷ ಪುರವನ್ನು ಸೇರಿದನು.

ಹಿಮಾಲಯದ ಉನ್ನತ ಶಿಖರದಲ್ಲಿದ್ದು, ಸುತ್ತಲು ಜಲಾಗ್ನಿವಾಯು ಗಿರಿ ಶಸ್ತ್ರ ದುರ್ಗಗಳಿಂದ ರಕ್ಷಿತವಾಗಿ, ಭಟರಿಂದ ಸಂರಕ್ಷಿತವಾದ ದಾನವಪುರವನ್ನು ಮುತ್ತಿದನು. ಗಿರಿದುರ್ಗವನ್ನು ಗದೆಯಿಂದ ಮುರಿದು, ಶಸ್ತ್ರದುರ್ಗವನ್ನು ಬಾಣಗಳಿಂದ ತುಂಡರಿಸಿದನು; ಮುರಪಾಶವನ್ನು ಚಕ್ರದಿಂದ ಕತ್ತರಿಸಿದನು; ಘೋರವಾದ ಕ್ಷುರಮಾಲೆಯನ್ನು ಖಡ್ಗದಿಂದ ಕಡಹಿದನು. ವಾಯುವ್ಯಾಸ್ತ್ರದಿಂದ ಜಲದುರ್ಗವನ್ನು, ವಾರುಣಾಸ್ತ್ರದಿಂದ ಅಗ್ನಿದುರ್ಗವನ್ನು ನಾಶಮಾಡಿ, ಪಾಂಚಜನ್ಯ ಶಂಖವನ್ನೂದಿದನು. ಭೀಕರ ಶಂಖಧ್ವನಿಯಿಂದೆಚ್ಚತ್ತು ಪಂಚಶಿರಸ್ಕನಾದ ಮುರಾಸುರನು, ಪ್ರಳಯಕಾಲ ಚಂಡಕಿರಣದಂತೆ ಉರಿಯುತ್ತಾ, ಶೂಲವನ್ನೆತ್ತಿ, ಗರುಡನನ್ನು ಹೊಡೆದು, ಗರ್ಜಿಸಿದನು. ಅವನು ತೆರೆದ ಬಾಯಿಗಳಿಂದ ದಿಕ್ಕುಗಳನ್ನು ನುಂಗಿಬಿಡುವಂತೆ ಬರುತ್ತಿರಲು, ಅವನೆಸೆದ ತ್ರಿಶೂಲವನ್ನು ಮುರಿದು, ಅವನ ಮುಖಗಳನ್ನು ಬಾಣಗಳಿಂದ ತುಂಬಿ, ಕೃಷ್ಣನು ವಿಜೃಂಭಿಸಿದನು. ಮುರಾಸುರನು ಸಿಟ್ಟಿನಿಂದ ಗದೆಯನ್ನೆಸೆಯಲು, ಕೃಷ್ಣನದನ್ನು ಚೂರುಮಾಡಿ, ಕೈಗಳನ್ನೆತ್ತಿ ಮೇಲೇರಿ ಬರುವ ಆ ದುಷ್ಟದೈತ್ಯನ ಶಿರವನ್ನು ಚಕ್ರದಿಂದ ಕತ್ತರಿಸಿದನು. ಪಕ್ಷಗಳನ್ನು ಇಂದ್ರನು ವಜ್ರದಿಂದ ಭೇದಿಸಲು ಕೆಳಗುರುಳಿದ ಪರ್ವತದಂತೆ, ಮುರಾಸುರನು ನೀರಿನಲ್ಲಿ ಬಿದ್ದು ಸತ್ತನು. ಮುರಾರಿಯ ಜಯದಿಂದ ಸಂತೋಷಪಟ್ಟು ದೇವತೆಗಳು ಕೃಷ್ಣನ ಶಿರದಲ್ಲಿ, ಪೂಮಳೆಗರೆದರು. ತಂದೆಯನ್ನು ಕೊಂದ ಕೃಷ್ಣನ ಮೇಲೆ ಸೇಡಿನಿಂದ ಧ್ರುವ, ವಿಷ್ಣು, ಶ್ರವಣ, ವಿಭಾವಸು, ನಭ, ವಸುಸ್ವಾನ್, ಅರುಣ ಎಂಬು ಮುರಸುತರು, ಎತ್ತಿನ ರಥಗಳನ್ನೇರಿ, ಶಕ್ತಿ, ಶೂಲ, ಪರಿಘಾದಿ ಭಯಂಕರಾಯುಧಗಳನ್ನು ಪಿಡಿದು ಬಂದರು. ಕೃಷ್ಣನು ಅವರ ಬಾಣಗಳನ್ನು ಪುಡಿಮಾಡಿ, ಧನುಶ್ಶೂಲಾದಿಗಳನ್ನು ಮುರಿದು, ತೀಕ್ಷ್ಣಶರಗಳಿಂದ, ಕರಚರಣ ಕಂಠಾದಿಗಳನ್ನು ಕತ್ತರಿಸಿ, ಅವರನ್ನು ಸಂಹರಿಸಿದನು.

ಈ ವೃತ್ತಾಂತವನ್ನು ಕೇಳಿ ಭೂಸುತನು ಸಿಟ್ಟಿನಿಂದ, ಸಮುದ್ರಾಜಾತವಾದ ಮದ್ದಾನೆಗಳ ಸೈನ್ಯದೊಡನೆ ಹೊರಟು ರಣಭೂಮಿಗೆ ಬಂದನು. ಅವನ ಸೈನ್ಯದ ರಥಗಜ ತುರಗ ಭಟರ ಗುಂಪನ್ನು ನೋಡಿ, ಗರುಡಾರೂಢನಾದ ಕೃಷ್ಣನು ಶಂಖವನ್ನೂದಿ ಸಿಂಹಾನಾದವನ್ನು ಮಾಡಿದನು. ಗರುಡನ ಮೇಲೆ, ಸತ್ಯಭಾಮೆಯಿಂದ ಕೂತು, ಶಾರ್ಙ್ಗಧನುಸ್ಸನ್ನು, ಶಂಖವನ್ನು ಪಿಡಿದಿದ್ದ ಕೃಷ್ಣನು, ಮೇರುಪರ್ವತದ ಶಿಖರದಲ್ಲಿ ಮಿಂಚಿನ ಬಳ್ಳಿಯಿಂದ, ಇಂದ್ರ ಚಾಪ (ಕಾಮನ ಬಿಲ್ಲು) ದಿಂದಲು, ಚಂದ್ರಮಂಡಲದಿಂದಲು ಕೂಡಿದ ಮೇಘದಂತೆ ಪ್ರಕಾಶಿಸಿದನು. ಆನೆಯನ್ನೇರಿ ಬಂದು ಕಪ್ಪು ಶರೀರದ ನರಕನನ್ನು ನೋಡಿ, ಕೃಷ್ಣನು ಬಾಣಗಳಿಂದ ಹೊಡೆದು ಅವನ ಸಕಲ ಸೈನ್ಯವನ್ನು ನಾಶಮಾಡಿದನು.

## ೬೪. ನರಕಾಸುರ ವಧೆ

ಶ್ರೀಶುಕನು ಹೇಳಿದನು–

ಕೇಶವನು ನಿಶಿತಬಾಣಗಳಿಂದ ಭಟರನ್ನು ಕೊಲ್ಲುತ್ತಿರಲು, ಗರುಡನು ರೆಕ್ಕೆಗಳಿಂದ ಬಡಿದಾ ಆನ ಕುದುರೆಗಳನ್ನು ಕೊಂದು ಕೆಡಹಿದನು. ಗರುಡನಿಗಂಜಿ ಓಡುವ ಸೈನ್ಯವನ್ನು ಕಂಡು, ನರಕಾಸುರನು ಶಕ್ತಿಯಿಂದ ಹೊಡೆದನು. ಹಾರದಿಂದ ಹೊಡೆಯಲ್ಪಟ್ಟ ಆನೆಯಂತೆ ಚಲಿಸದೆ ಗರುಡನು ನಿಂತಿರಲು, ಗರುಡಾರೂಢನು ನರಕನ ಬಾಣಗಳನ್ನು ಮಧ್ಯದಲ್ಲೇ ತುಂಡರಿಸಿದನು. ನರಕನು ಉಕ್ಕಿನ ಕಪ್ಪಗದೆಯನ್ನೆಸೆಯಲು, ಕೃಷ್ಣನದನ್ನು ಕ್ಷುರಪ್ರದಿಂದ ಚೂರುಮಾಡಿದನು; ಅವನು ಪರಶುವನ್ನೊಗೆಯಲು, ಇವನು ಖಡ್ಗದಿಂದ ಅದನ್ನು ಕತ್ತರಿಸಿದನು. ಅವನು ಇಪ್ಪತ್ತೈದು ತೋಮರಗಳಿಂದ ಹೊಡೆಯಲು, ಇವನು ಒಂದೇ ಬಾಣದಿಂದ ಎಲ್ಲವನ್ನೂ ಕೆಡಹಿದನು. ನರಕಾಸುರನು ಕುಪಿತನಾಗಿ, ಶೂಲವನ್ನೆತ್ತಿ ಹೊಡೆಯಲು ಸಿದ್ಧನಾದನು; ಅಷ್ಟರಲ್ಲೇ ಕೃಷ್ಣನು ಅವನ ಶಿರವನ್ನು ಚಕ್ರದಿಂದ ಕಡಿದು, ಕೆಳಗುರುಳಿಸಿದನು. ಕಿರೀಟಕುಂಡಲಭೂಷಿತವಾದ ಅವನ ಶಿರವು, ಭೂಮಿಯಲ್ಲಿ ಬಿದ್ದು 'ಅಮ್ಮಾ! ಮಗನೆಂಬ ಪಕ್ಷಪಾತವಿಲ್ಲದೆ ದಂಡಿಸಿದ ಈ ಶೌರಿಯ ಗುಣವನ್ನಾರು ಬಲ್ಲರು?' ಎಂದು ತಾಯಿಯಾದ ಭೂದೇವಿಗೆ ಹೇಳುತ್ತಿರುವಂತೆ ಧ್ವನಿ ಮಾಡಿತು.

ಆಗ ಸುರರು ನರಕಾಂತಕನನ್ನು ಪೊಗಳಿ ಪೂಮಳೆಗರೆದು, ಜಯ ಜಯಕಾರಗಳನ್ನು ಮಾಡಿದರು. ಋಷಿಗಳು ನುತಿಸಿದರು. ಶ್ರೀಕೃಷ್ಣನು ಲೋಕಪಾಲರಿಂದಲು, ಋಷಿಗಳಿಂದಲು ಕೂಡಿ, ಪೌರವರ ಪ್ರಾರ್ಥನೆಯನ್ನಂತೆ, ಪ್ರಾಗ್ಜ್ಯೋತಿಷವನ್ನು ಪೊಕ್ಕು, ಅಲ್ಲಿ ಮಣಿಪರ್ವತವನ್ನು, ಅಮೃತವನ್ನು ಗರೆವ ಮುತ್ತಿನ ಛತ್ರವನ್ನು ಕಂಡು, ಅವನ್ನು ಇಂದ್ರವರುಣರಿಗಿತ್ತು ಸಂತೋಷ ಪಡಿಸಿದನು.

ಮುಂದೆ ಗೋವಿಂದನು, ಸುರಮುನಿವರರಿಗಪ್ಪಣೆಯನ್ನಿತ್ತು, ನರಕಾಸುರಮಂದಿರವನ್ನು ಪ್ರವೇಶಿಸಿದನು. ಅಮರಾವತಿಯಂತೆ ಶೋಭಿಸುವ ಆ ನಗರದಲ್ಲಿ ಭೂದೇವಿಯು, ನರಕ ಸುತನಾದ ಭಗದತ್ತನೊಡನೆ ಶ್ರೀಕೃಷ್ಣನನ್ನು ಪೂಜಿಸಿದಳು. ರತ್ನಕುಂಡಲಗಳನ್ನು ಕೃಷ್ಣನಿಗೆ ಸಮರ್ಪಿಸಿ, ಭೂದೇವಿಯು ಭಕ್ತಿಯಿಂದ, ಭಗವಂತನಿಗೆ ಕೈಜೋಡಿಸಿ, ಇಂತು ಪ್ರಾರ್ಥಿಸಿದಳು–

ದೇವ ದೇವ! ಕೃಷ್ಣ! ನಿನಗೆ ನಮಸ್ಕಾರವು! ಭಕ್ತರ ಭಜನೆಯಂತೆ ರೂಪುಗೊಂಡು ಸಲಹುವ ಶಂಖಚಕ್ರಗದಾಧರನೇ! ಪಂಕಜನಾಭ! ಪಂಕಜಹಾರ! ಪಂಕಜಪಾದ! ಪಂಕಜನೇತ್ರ! ಪರಮ ಪವಿತ್ರ! ಸರ್ವತ್ರವಾಸಮಾಡಿ, ಜೀವರಿಂದಾಡುವ ಅಂತರ್ಯಾಮಿಯು, ಜಗದಾದಿ ಕಾರಣನು, ಪೂರ್ಣಷಡ್ಗುಣನು, ಪೂರ್ಣಬೋಧಪೂರ್ಣನು, ಜನನಮರಣರಹಿತನು, ಅನಂತಾಮಿತಶಕ್ತಿ ಸಂಪನ್ನನು, ಚರಾಚರವಲ್ಲಭನು, ಜೀವ ನಿಯಾಮಕನು ಆದ ನಿನಗೆ ವಂದನವು. ಸತ್ವರಜಸ್ತ ಮೋಗುಣಗಳನ್ನುದ್ರೇಕಗೊಳಿಸಿ, ಜಗತ್ತಿಗೆ ಪಾಲನ ಸೃಜನಸಂಹರಣಗಳನ್ನಿತ್ತು, ಆಳುವ ಪ್ರಭುವೇ! ನೀನು ಕಾಲದಲ್ಲಿದ್ದು, ಅವ್ಯಕ್ತದಲ್ಲಿದ್ದು, ಬ್ರಹ್ಮನಲ್ಲಿದ್ದು, ಜೀವರಿಗೆ ಕರ್ಮಫಲ ವನ್ನು, ಶರೀರೇಂದ್ರಿಯಗಳನ್ನು, ಜೀವಸಂಬಂಧವನ್ನು ಉಂಟುಮಾಡಿ, ಸ್ವತಃ ಲೇಪವಿಲ್ಲದೆ, ಅಪಾರ ಮಹಿಮೆಯಿಂದ ಮೆರೆಯುವೆ. ನಾನು (ಪೃಥಿವಿ), ಜಲ, ತೇಜಸ್ಸು, ವಾಯು, ಗಗನಗಳೂ, ಶಬ್ದಾದಿ ನಮ್ಮ ಗುಣಗಳು, ಮನ ಆದೀಂದ್ರಿಯಗಳು, ಅಸ್ವತಂತ್ರಕರ್ತನಾದ ಜೀವ, ಜೀವ ರೊಡೆಯನಾದ ಮುಖ್ಯ ಪ್ರಾಣನೂ, ಸರ್ವರು ಅಸ್ವತಂತ್ರರು; ಅಸಮಾಧಿಕನಾದ ನಿನ್ನ

ಅಧೀನರು. ನೀನಿರಲು, ಇತರರು ಸ್ವತಂತ್ರಕಾರಣರೆಂಬುವುದು ಭ್ರಮೆ. ಮುಖ್ಯಕಾರಣನಾದ ನಿನ್ನಿಂದ ಈ ಜಗವು ಪರಿವರ್ತಿಸಿ, ಹುಟ್ಟುಸಾವುಗಳನ್ನು ಹೊಂದುತ್ತಿದೆ. ಪ್ರಕೃತಿನಿರ್ಮಿತ ಶರೀರಗಳಿಗೇ ಜನನಮರಣಗಳು, ಜೀವರಿಗಿಲ್ಲವೆಂದು ತಿಳಿದವರೇ ಯಥಾರ್ಥಜ್ಞಾನವನ್ನು, ನಿನ್ನ ಪ್ರಸಾದವನ್ನು ಪೊಂದಿ, ಸಂಸಾರಬಂಧವು ಸತ್ಯವಾದರೂ, ಅದನ್ನು ನಿನ್ನನುಗ್ರಹದಿಂದ ಕಡಿದು ಮುಕ್ತರಾಗುತ್ತಾರೆ.

ನನ್ನ ಮೊಮ್ಮಗನಾದ ಈ ಭಗದತ್ತನು ಭಯದಿಂದ ನಿನಗೆ ಶರಣಾಗಿ ಬಂದಿರುವೆನು. ಸಕಲ ಪಾಪಕ್ಷಾಳನಶೀಲವಾದ ನಿನ್ನ ಕರಪಂಕಜವನ್ನಿವನ ಶಿರದಲ್ಲಿಟ್ಟು, ಇವನನ್ನು ಸಲಹು.

ಆಗ ಭೂದೇವಿಯ ಮಾತನ್ನು ಮನ್ನಿಸಿ, ಶ್ರೀಕೃಷ್ಣನು ಭಗದತ್ತನಿಗಭಯವನ್ನಿತ್ತು, ಅವನ ರಾಜ್ಯದಲ್ಲಿ ನಿಲ್ಲಿಸಿ, ಅಮಾತ್ಯರಿಗೂ ಅವರವರ ಪದವಿಗಳನ್ನು ಕೊಟ್ಟನು. ಕೃಷ್ಣನು ನರಕಾಸುರನ ಅಂತಃಪುರವನ್ನು ಪ್ರವೇಶಿಸಿ, ಅವನಿಂದ ಸೆರೆ ಇಡಲ್ಪಟ್ಟ ಹದಿನಾರು ಸಾವಿರ ರಾಜಕನ್ಯೆಯರನ್ನು ಕಂಡನು. ಆ ನವಯೌವನಾಂಗಿಯರು ಕೃಷ್ಣನನ್ನು ಕಂಡು, ಆ ಮಹೋನಾಂಗನೇ ಪತಿಯಾಗ ಲೆಂದು ಬ್ರಹ್ಮನನ್ನು ಮನಸಾರ ಪ್ರಾರ್ಥಿಸಿದರು. ಅವರನ್ನು ಸೆರೆ ಬಿಡಿಸಿ, ಕೃಷ್ಣನು ಪೀತಾಂಬ ರಾಭರಣಗಳನ್ನಿತ್ತು, ದ್ವಾರಕೆಗೆ ಪಲ್ಲಕ್ಕಿಗಳಲ್ಲಿ ಕೂಡಿಸಿ, ಕಳಿಸಿಕೊಟ್ಟನು. ಸುಪ್ರತೀಕವೆಂಬುವ ಒಂದು ಗಜವನ್ನು ಮಾತ್ರ ಭಗದತ್ತನಿಗೆ ಕೊಟ್ಟು ಮಿಕ್ಕ ಅರವತ್ತುನಾಲ್ಕು ನಾಲ್ಕುದಂತಗಳ ಬಿಳಿಯ ಆನೆಗಳನ್ನು ಮತ್ತು ಕತ್ತೆ ಒಂಟೆಗಳ ಮೇಲೆ ಹೇರಿದ ಧನರಾಶಿಯನ್ನು ರಥ ಕುದುರೆ ಗಳನ್ನು ಕಳಿಸಿ, ತಾನು ಗರುಡಾರೂಢನಾಗಿ, ದೇವಮಾತೆಗೆ ವಂದಿಸಿ, ಕಂಡಲಗಳನ್ನು ಸಮರ್ಪಿ ಸಲು ಸ್ವರ್ಗವನ್ನು ಮುಟ್ಟಿ, ಅಮರಾವತಿಯ ನಗರದ್ವಾರವನ್ನು ಸೇರಿದನು.

## ೬೫. ಪಾರಿಜಾತಾಪಹರಣ

ಶ್ರೀಶುಕನು ಪೇಳಿದನು–

ಸ್ವರ್ಗದ್ವಾರದಲ್ಲಿ ಗೋವಿಂದನನ್ನು ಕಂಡು, ಅವನ ಪಾಂಚಜನ್ಯಧ್ವನಿಯನ್ನು ಕೇಳಿ, ದೇವವರರು ಬಂದು ಅವನನ್ನು ಅವನ ಸತಿಯನ್ನು ಅರ್ಘ್ಯಪಾದ್ಯಾದಿಗಳನ್ನಿತ್ತು ಸತ್ಕರಿಸಿದರು. ಭಕ್ತರಾದ ಸುರವರರ ಪೂಜೆಯನ್ನು ಸ್ವೀಕರಿಸಿ, ಕೃಷ್ಣನು ಇಂದ್ರಮಂದಿರಕ್ಕೆ ಹೋದನು. ಅಲ್ಲಿ ಸುರೇಂದ್ರನು ಶಚೀದೇವಿಯಿಂದ ಕೂಡಿ, ಸತ್ಯಾಕೃಷ್ಣರನ್ನು ರತ್ನಾಭರಣ ಗಂಧಹಾರಗಳಿಂದ ಪೂಜಿಸಿದನು.

ಅನಂತರ ಶ್ರೀಕೃಷ್ಣನು ಸತ್ಯಾದೇವಿಯು ಅದಿತಿಯ ಮನೆ ಸೇರಿ, ಆ ದೇವಮಾತೆಗೆ ವಂದಿಸಿ ದಳು. ಯದುವಲ್ಲಭನನ್ನು ನೋಡಿ, ಅದಿತಿಯು ಪ್ರೀತಳಾಗಿ, ಆಶೀರ್ವದಿಸಿದಳು. ಕೃಷ್ಣನ ಸಂಕೇತವನ್ನರಿತು, ಸತ್ಯಭಾಮೆಯು ಕುಂಡಲಗಳನ್ನು ಅದಿತಿಗಿತ್ತು ಪುನಃ ನಮಸ್ಕರಿಸಿದಳು. ಸೊಸೆಯನ್ನಪ್ಪಿ ಮುದ್ದಾಡಿ, ಆನಂದಬಾಷ್ಪಗಳಿಂದ ಅಭಿಷೇಕ ಮಾಡಿ, ಅದಿತಿಯು 'ಸತ್ಯಭಾಮೇ! ನಿನಗೆ ಮುಪ್ಪು ಬಾರದಿರಲಿ! ವಿರೂಪಳಾಗದೆ ಸದಾ ಸುಂದರಿಯಾಗಿರು! ಕೃಷ್ಣವಿಯೋಗವು ನಿನಗೆಂದೂ ಇಲ್ಲದಿರಲಿ! ಅವನ ಕೂಡ ಜಗಳವಂತೂ ಬೇಡವೇ ಬೇಡ! ಇದನ್ನು ಅನುಗ್ರಹ ವೆಂದು ಅಂಗೀಕರಿಸು' ಎಂದಾಶೀರ್ವದಿಸಿದಳು.

ಅದಿತಿಯನ್ನು ದೇವತೆಗಳನ್ನು ಬೀಳ್ಕೊಂಡು ಶ್ರೀಸತ್ಯಾಮುಕುಂದರು ಗರುಡಾರೂಢರಾಗಿ ಹೊರಹೊರಟರು. ಆಕಾಶದಲ್ಲಿಳಿದು ಬರುವಾಗ ಸ್ವರ್ಗಸೀಮೆಯ ನಂದನವನವನ್ನು ಕಂಡು, ಅಲ್ಲಿಂದ ಸೂಸಿಬರುವ ಪುಣ್ಯಗಂಧವನ್ನು ಮೂಸಿ, ಸತ್ಯಭಾಮೆ ಕೈಯಿಂದ, ಕೃಷ್ಣಕರಪಂಕಜವನ್ನು ಲಾಲಿಸಿ, ನಗುತ್ತಾ ಮನೋಮೋಹಕಳಾಗಿ ಇಂತೆಂದಳು–

'ಕೇಶವ! ಒಂದು ಮುಹೂರ್ತ ಈ ವನದಲ್ಲಿ ವಿಹರಿಸಿ ಬರಲು ಮನಸ್ಸಾಗಿದೆ' ಎನ್ನಲು, ಶ್ರೀಕೃಷ್ಣನು ಅವಳಲ್ಲಿ ಪ್ರೇಮಗೌರವಗಳನ್ನು ತೋರಿ, ಕೆಳಗಿಳಿದನು. ಇಂದ್ರಕಿಂಕರಪಾಲಿತವಾದ ನಂದನವನವನ್ನು ಪ್ರವೇಶಿಸಿ, ಸತ್ಯಾಕೃಷ್ಣರಲ್ಲಿ ವಿಹರಿಸಿದರು. ದಿವ್ಯತರುಗಳು ಫಲಬಾರದಿಂದ ಶಿರಬಾಗಿ, ಶ್ರೀಕೃಷ್ಣ ಸತ್ಯೆಯರನ್ನು ಪೂಜಿಸಿದವು; ಬಹು ಪಲ್ಲವಗಳಿಂದ ಮಡಿಹಾಸಿದವು! ಪುಷ್ಪರಯದಿಂದ ರಂಗವಲ್ಲಿಯನ್ನು ರಚಿಸಿ, ಅಲ್ಲಾಡುವ ಚಿಗುರೆಲೆಗಳ ರೆಂಬೆಗಳಿಂದ ಕರೆದು, ಮೇಲಿದ್ದು ಮಾಡುವ ಶುಕಪಿಕಶಾರಿಕೆಗಳ ಕಲಕಲ ನಾದದಿಂದ ಪಾಡಿಪೊಗಳಿದವು. ಅಲ್ಲಿದ್ದ ಅದ್ಭುತವಾದ ಸುರಿಪಾರಿಜಾತವನ್ನು ನೋಡಿ ಸತ್ಯಭಾಮೆ, ಆಶ್ಚರ್ಯದಿಂದ ಕಣ್ಣರಳಿಸಿ ನೋಡುತ್ತಾ ಶ್ರೀಕೃಷ್ಣನಿಗಿಂತೆಂದಳು–

ದೇವ! ಏನು ಗಿಡವಿದು? ವಿಚಿತ್ರವಾಗಿದೆ. ಈ ತರುರಾಜವು ಯಾರದು? ನಿಜವಾಗಿ ಅವರು ಪುಣ್ಯವಂತರೇ ಸರಿ. ಪ್ರವಾಲಗಳು ಬೇರಾಗಿ, ಬಂಗಾರದ ಬುಡದಿಂದ ಶೋಭಿಸುತ್ತಿದೆ. ಎಲೆ ಗಳೆಲ್ಲಾ ಇಂದ್ರನೀಲಗಳು, ಮಾಣಿಕ್ಯಗಳೇ ಪುಷ್ಪಗಳು, ಮುತ್ತುಗಳೇ ಫಲಗಳು, ಗೋಮೇದ ಗಳೇ ಅತಿ ಪಕ್ವಫಲಗಳು, ವಜ್ರಗಳೇ ಕಿಂಜಲ್ಕಗಳು; ಇದರ ವೇದಿಕೆ ವೈಢೂರ್ಯ ರಚಿತವಾಗಿದೆ. ಮರಕತಶಾಖೆಗಳು ನೂರಾರು ಎಷ್ಟು ಸೊಗಸಾಗಿವೆ! ಜಗನ್ನಾಥ! ನನ್ನ ಮನವನ್ನು ಸೂರೆಗೊಂಬ ಈ ತರುವನ್ನು-ಕೃಷ್ಣ! ನಿನಗೆ ನನ್ನಲ್ಲಿ ಪ್ರೀತಿ ಇರುವುದಾದರೆ– ನಮ್ಮ ಮನೆಗೆ ತೆಗೆದುಕೊಂಡು ಬಾ. ಇದರ ನಿರಳಲ್ಲಿ ಕೂತು ಸುಖಿಸುವ ನನ್ನನ್ನು, ನಿನ್ನ ಇತರ ಸತಿಯರು ನೋಡಲಿ! ನಾನೇ ನಿನಗೆ ಪ್ರಿಯತಮಳಹುದೆಂದು ತಿಳಿಯಲಿ!

ಶ್ರೀಕೃಷ್ಣನು ಆ ಮಾತನ್ನು ಕೇಳಿ 'ಪ್ರಿಯೇ! ಈ ತರುವನ್ನು ನಂದನವನದಿಂದ ಕದಲಿಸ ಲಾಗದು. ಸುರಾಸುರರು ಕ್ಷೀರಾಂಬುಧಿಯನ್ನು ಮಥಿಸುವಾಗ ಈ ವೃಕ್ಷವು ಜನಿಸಿತು. ಅಮೃತಾಂಧ ಸರು ಅದನ್ನು ಇಂದ್ರನಿಗೆ ಕೊಟ್ಟರು. ಮಿತ್ರನಾದ ಇಂದ್ರನನ್ನು ಧಿಕ್ಕರಿಸಿ, ಈ ತರುವನ್ನು ಅಪಹರಿಸುವುದು ಧರ್ಮವಲ್ಲ. ಸರೋಜಾಕ್ಷಿ! ಈ ಪಾರಿಜಾತವನ್ನು ನಾವು ಒಯ್ಯುವಾಗ, ನಮ್ಮನ್ನು ಶಿಕ್ಷಿಸಲು ಬರುವ ದೇವಸೈನ್ಯದಿಂದ ಭಯಂಕರ ಯುದ್ಧವು ನಡೆಯಬಹುದು. ಬೇಡ! ಬಿಡು ನನ್ನ ಹಟವನ್ನು' ಎಂದು ಹೇಳಿದನು. ಆಗ ಸತ್ಯಾದೇವಿ 'ಕೃಷ್ಣಾ! ಕಂಸಮರ್ದನನಾದ ನಿನಗೆ ದೇವಸೈನ್ಯವು ಭಯಂಕರವಾಯಿತೇ? ನನ್ನನ್ನಂಜಿಸುವೆಯಾ? ನಾನು ಶಚಿಯ ಮನೆಗೆ ಹೋಗಿದ್ದಾಗ ಗಂಡ ಪೌರುಷದಿಂದ ಗರ್ವಿತಳಾದ ಆ ದೇವರಮಣಿ ನನ್ನನ್ನು ಸಾಮಾನ್ಯ ಮನುಜ ಕಾಂತೆಯಂತೆ ಕಂಡಳು. ಅವಳ ಗರ್ವಕಾರಣವು ಈ ತರುವೇ ಸರಿ! ಇದನ್ನು ಅಪಹರಿಸಿ, ಅವಳ ಗರ್ವವನ್ನು ಮುರಿಯುವುದೇ ಒಳಿತು' ಎಂದಳು.

ಆಗ ಕೃಷ್ಣನು ಪಾರಿಜಾತವನ್ನು ಸಮೂಲವಾಗಿ ಕಿತ್ತಿ ಗರುಡನ ಮೇಲಿಟ್ಟನು. ಇದನ್ನು ಕಂಡು ವನಪಾಲಕರು 'ಕೃಷ್ಣ! ಅಮರಪೂಜಿತವಾದ ಈ ಗಿಡವಿಲ್ಲೇ ಇರಲಿ. ಇದನ್ನು ಅಪಹರಿಸು ವುದು ಒಳಿತಲ್ಲ. ಅದರ ಫಲವನ್ನೀಗಲೇ ಅನುಭವಿಸಬೇಕಾದೀತು! ಈ ಗಿಡವನ್ನು ಬಿಡಗೆ,

ನಿರ್ಮ್ಮೂರನ್ನು, ನೀನು ಸೇರಲಾರೆ, ಹಿಂದೆ ಬೆನ್ನಟ್ಟಿ ಬರುವ ವಜ್ರಧರನನ್ನು ನೋಡುವೆ' ಎಂದು ಹೆದರಿಸಿದರು.

ಕೆಲ ವನರಕ್ಷಕರು ಸುರರಾಜನನ್ನು ಕಂಡು 'ಶಚೀಪತೇ! ಎಲ್ಲ ದೇವವೀರರನ್ನು ಶಚೀದೇವಿಯನ್ನು, ನಿನ್ನನ್ನು ಕೂಡ ಅಲ್ಲಗಳೆದು, ಸತ್ಯಭಾಮಾದೇವಿ ಗಂಡನ ಬಲದಿಂದ ಗರ್ವಿತಳಾಗಿ, ಹೇಳಿದರೂ ಬಿಡದೆ ಪಾರಿಜಾತವನ್ನು ಅಪಹರಿಸಿಕೊಂಡು ಹೋಗುತ್ತಿರುವಳು' ಎಂದು ನುಡಿದರು. ಅಪ್ರಿಯವಾದ ಆ ವಾರ್ತೆಯನ್ನು ಕೇಳಿ, ಕೋಲಿನಿಂದ ಪೆಟ್ಟು ತಿಂದ ಹಾವಿನಂತೆ ಕೆರಳಿ, ಮಗ್ಗುಲಲ್ಲಿ ಕೂತ ಶಚಿಯನ್ನು ನೋಡಿ, ಕೆಂಡವಾಗಿ, ಅವಮಾನ ಪ್ರತೀಕಾರವನ್ನು ಮಾಡುವೆನೆಂದು ದೇವೇಂದ್ರನು ದೇವಸೈನ್ಯದೊಡನೆ ಬಂದು ಕೃಷ್ಣನನ್ನು ತಡೆದನು.

ಚತುರ್ದಂತವಾದ ಐರಾವತವನ್ನೇರಿ ವಜ್ರವನ್ನು ಪಿಡಿದು ಬರುವ ಇಂದ್ರನ ಹಿಂದೆ ಎಲ್ಲ ದೇವಸೇನಾಪತಿಗಳು, ದಿಕ್ಪಾಲಕರೂ ಬಂದರು. ಸ್ರುವವನ್ನು ಕಟ್ಟಿದ ಶತಘ್ನಿಯನ್ನು ಪಿಡಿದು, ಮೇಷವನ್ನೇರಿ ಅಗ್ನಿಯು, ದಂಡಧಾರಿಯಾಗಿ ಮಹಿಷವನ್ನೇರಿ ಯಮನು, ಅವನ ಹಿಂದೆ ಮೃತ್ಯುಕಾಲರೂ ಬಂದರು. ಖಡ್ಗಹಸ್ತನಾಗಿ ಘೋರಪುರುಷನನ್ನೇರಿ ನಿರ್ಋತಿಯು, ಪಾಶಧರನಾಗಿ ಮಕರಿಯನ್ನೇರಿ ವರುಣನು, ಜಿಂಕೆಯನ್ನೇರಿ ತೋಮರಹಸ್ತನಾಗಿ ಕೋಣಾಧಿಪವಾಯುವು, ಪುರುಷಧೃತ ಶಿಬಿಕೆಯನ್ನೇರಿ ಮುದ್ಗರಾಯುಧನಾಗಿ ಕುಬೇರನು, ತ್ರಿಶೂಲಧರನಾಗಿ ವೃಷಭವನ್ನೇರಿ ಪ್ರಮಥ ಭೂತಕೋಟಿ ಪರಿವೃತನಾದ ರುದ್ರನೂ, ಇಂದ್ರ ಸಹಾಯಕರಾಗಿ, ಕೃಷ್ಣನೊಡನೆ ಕಾದಲು ಬಂದರು.

ಭೇರೀ ಮೃದಂಗ ಪಣವಾನಕ ಗೋಮುಖಗಳು ತುಮುಲವಾಗಿ ಧ್ವನಿಸುತ್ತಿರಲು, ಕಂಚಿನ ತಾಳಗಳನ್ನು ಕೊಂಬುಗಳನ್ನು ಊದುತ್ತಾ, ಬಂದ ದೇವಸೈನ್ಯವು ಭಯಂಕರವಾಗಿ ಸಿಂಹನಾದವನ್ನು ಮಾಡಿ 'ಕೃಷ್ಣ! ನಿಲ್ಲು, ನಿಲ್ಲು, ಓಡಿಹೋಗಬೇಡ' ಎನ್ನುತ್ತಾ ಮೇಲೇರಿ ಬಂತು. ಶಸ್ತ್ರಾಸ್ತ್ರಗಳನ್ನು ಝಳಪಿಸಿ, ವಾಹನಗಳನ್ನು ತ್ವರೆಯಿಂದೋಡಿಸಿ, ಧನುಷ್ಟಂಕಾರವನ್ನು ಮಾಡಿ, ನಾನು ನಾನೆಂದು ದೇವಸೇನೆಯು ನರಿಗಳ ಹಿಂಡು ಸಿಂಹವನ್ನಂತೆ ಕೃಷ್ಣನನ್ನೆದುರಿಸಿತು.

## ೬೬. ಲೋಕಪಾಲರ ಯುದ್ಧ

ಶ್ರೀಶುಕನು ಹೇಳಿದನು–

ಸುರರು ದಂಡೆತ್ತಿ ಬರುವುದನ್ನು ಕಂಡು, ಜಗದ್ವಲ್ಲಭನು ಸತಿಗಿಂತೆಂದನು–

'ಸುಂದರಿ! ಬಂದರೀಗ ಅತಿಥಿಜನರಾಗಿ ಬೃಂದಾರಕರು– ಬಾಣಗಳ ಔತಣವನ್ನು ಕೊಟ್ಟು ಸಂಭಾವಿಸುವೆನು. ನೋಡುತ್ತಿರು' ಎಂದನು.

ಕೃಷ್ಣನ ಮೇಲೆ ಶರವೃಷ್ಟಿಯನ್ನು ಗರೆದ ದೇವಭಟರನ್ನು ಕಂಡು, ಸಹಿಸದೆ ಸತ್ಯಭಾಮೆ, ಶಾರ್ಙ್ಗವನ್ನೆತ್ತಿಪಿಡಿದು, ತನ್ನ ಬಾಣಗಳಿಂದ ಅವರ ಶರಕರಗಳನ್ನೂ ಕತ್ತರಿಸಿದಳು. ಆಗ ಕುಬೇರನು ಬಂಗಾರದ ಧನುಸ್ಸಿನಿಂದ, ಕನಕ ಬಾಣಗಳನ್ನು ಬಿಡುತ್ತಾ, ಬರಲು ಸತ್ಯಭಾಮೆ, ಅವನ ಬಾಣಗಳನ್ನು ಮುರಿದು, ಐದು ಬಾಣಗಳಿಂದ ಅವನ ಲಲಾಟವನ್ನು ಹೊಟ್ಟೆಯನ್ನು ಹೊಡೆದಳು. ಕುಬೇರನು ಮೂರು ಭಲ್ಲೆಗಳಿಂದ ದೇವಿಯನ್ನು ಹೊಡೆದನು. ಅವನ್ನು

ಮಾರ್ಗದಲ್ಲೇ ತುಂಡರಿಸಿ, ಎಂಟು ವತ್ಸದಂತಬಾಣಗಳಿಂದ ಸತ್ಯೇ, ಕುಬೇರನ ಲಲಾಟವನ್ನು ನೋಯಿಸಿದಳು. ಕುಬೇರನು ಇಪ್ಪತ್ತೊಂದು ಬಾಣಗಳನ್ನು ಬಿಡಲು, ಏಳೇ ಬಾಣಗಳಿಂದ ಅವನ್ನು ಕತ್ತರಿಸಿ, ದೇವಿಯ ಅರ್ಧಚಂದ್ರ ಬಾಣದಿಂದ ಅವನ ಬಿಲ್ಲನ್ನು ಮುರಿದಳು. ಸಿಟ್ಟಾಗಿ ಹಾವಿನಂತೆ ಬುಸುಗುಟ್ಟಿ, ಅವನು ಬಿಟ್ಟ ಬಾಣಗಳನ್ನೆಲ್ಲಾ ಮುರಿದಾಗ, 'ದೇವಿಯನ್ನು ಕೊಲ್ಲುವೆ'ನೆಂದು ಪಣತೊಟ್ಟು, ಕುಬೇರನು ಅರ್ಧಚಂದ್ರ ಬಾಣವನ್ನು ಹೊಡೆದನು. ಅಷ್ಟರಲ್ಲೇ ಕ್ಷುರಪ್ರದಿಂದ ದೇವಿ, ಅವನ ಬಿಲ್ಲು ಮುರಿದಳು. ಕುಬೇರನು ಆಗ ಮುದ್ಗರವನ್ನು ಗಿರಗಿರನೆ ತಿರುಗಿಸಿ ದೇವಿಯ ಮೇಲೆಸೆದನು. ಅದನ್ನು ಕೃಷ್ಣನು, ಎಡಗೈಯಿಂದ ಹಿಡಿದು, ಗಟ್ಟಿಯಾಗಿ ನಕ್ಕನು. ಆಗ ಕುಬೇರನು ರಣರಂಗವನ್ನು ಬಿಟ್ಟು ಓಡಿದನು; ಶ್ರೀಕೃಷ್ಣನು ದೇವಿಯನ್ನು 'ಭಲಾ!' ಎಂದಭಿನಂದಿಸಿದನು.

ಇದನ್ನು ಕಂಡು ವರುಣನು ಪಾಶವನ್ನು ತಿರುಗಿಸುತ್ತಾ ಕೃಷ್ಣನ ಮೇಲೇರಿ ಬರುವಾಗ ಗರುಡನು ತಡೆದು ನಿಲ್ಲಿಸಿದನು. ದೇವಾಸುರ ಯುದ್ಧದಲ್ಲಿ ಬಲಿರಾಜ ಸುರರಾಜರಂತೆ, ಗರುಡ ವರುಣರು ಕಡುಘೋರವಾಗಿ ಕಾದಾಡಿದರು. ಜಲಪತಿಯು ತನ್ನ ಪಾಶವನ್ನೆಸೆದು ಗರುಡನ ಕಂಠವನ್ನು ಸುತ್ತಿ ಸೆಳೆದನು. ಗರುಡನು ರೋಷದಿಂದ, ವರುಣನನ್ನೂ, ಅವನ ವಾಹನವಾದ ಮಕರವನ್ನೂ ಹಿಡಿದು, ಎತ್ತಿ, ಸಮುದ್ರದಲ್ಲಿ ಎಸೆದುಬಿಟ್ಟನು. ಪಾಶವನ್ನು ಹಿಡಿದುಕೊಂಡು ವರುಣನು ರಣಾಂಗಣವನ್ನು ಬಿಟ್ಟೋಡಿದನು.

ಆಗ ವಾಯುಪಾವಕರು ಕಲೆತು ಕೃಷ್ಣನನ್ನು ಮುತ್ತಿ, ಮೂರೈದು ಬಾಣಗಳಿಂದ ಮುರಾರಿಯನ್ನು ಪೀಡಿಸಿ, ಆರ್ಭಟಿಸಿದರು. ಗೋವಿಂದನದನ್ನು ಸಹಿಸಿ, ಒಂದೇ ಬಾಣದಿಂದ ಅಗ್ನಿಯನ್ನು ಹೊಡೆದು, ರಣದಿಂದೋಡಿಸಿದನು; ಮತ್ತು ಏಳು ಬಾಣಗಳಿಂದ ಸಮೀರಣವನ್ನು ಹೊಡೆಯಲು, ಅವನು ಪ್ರಾಣತ್ರಾಣ ಪರಾಯಣನಾಗಿ ಪಲಾಯನಸೂಕ್ತವನ್ನು ಪಠಿಸಿದನು.

ಯಮನಾಗ ಕೋಪಸಂರಕ್ತನೇತ್ರನಾಗಿ, ದಂಡವನ್ನೆತ್ತಿ ಬಂದನು. ಕೃಷ್ಣನು ಗದೆಯಿಂದ ದಂಡವನ್ನು ಕೆಡಹಲು, ಮಹಿಷವಾಹನನು, ಭಯದಿಂದ ನಡುಗುತ್ತಾ, ಹಿಂದಿರುಗಿದನು. ಇದನ್ನು ಕಂಡು ನಿರ್ಋತಿಯು ದೂರದಿಂದಲೇ ಓಡಿಹೋದನು.

ಆಗ ರುದ್ರನು ವೃಷಭವನ್ನೇರಿ, ಶೂಲವನ್ನು ಹಿಡಿದು, ಪ್ರಮಥಗಣಗಳಿಂದ ಕೂಡಿ ಕೃಷ್ಣನನ್ನೆದುರಿಸಿದರು. ಲೋಕವಿಖ್ಯಾತ ಬಲಶಾಲಿಗಳಾದ ಶಂಕರ ಕೇಶವರು, ಪರಸ್ಪರ ಗೆಲ್ಲುವ ಛಲದಿಂದ, ಘೋರವಾಗಿ ಕಾದಾಡಿದರು. ಈಶಾನನು ಹತ್ತು ಬಾಣಗಳಿಂದ ಕೃಷ್ಣನನ್ನು, ಐದರಿಂದ ಗರುಡನನ್ನೂ ಹೊಡೆದು 'ನಿಲ್ಲುನಿಲ್ಲೆಂ'ದು, ಗರ್ಜಿಸಿದನು. ಕೃಷ್ಣನು ಶಾರ್ಙ್ಗಧನುವಿನಲ್ಲಿ, ಒಂದೇ ಸಲ ಮೂವತ್ತು ಬಾಣಗಳನ್ನು ಜೋಡಿಸಿ, ರುದ್ರನನ್ನು ಹೊಡೆದನು. ಗರುಡನೂ ಬಿಡದೆ, ಕಾಲಿನ ಉಗುರುಗಳಿಂದಲು, ರೆಕ್ಕೆಗಳಿಂದಲೂ, ಕೊಕ್ಕಿನಿಂದಲು, ವೃಷಭರಾಜನನ್ನು ಪೀಡಿಸಿ, ಸಿಂಹನಾದವನ್ನು ಮಾಡಿದನು. ಕೃಷ್ಣನು ಮತ್ತೆ ಇಪ್ಪತ್ತೈದು ಬಾಣಗಳನ್ನು ಬಿಡಲು, ನೋಡಿ ಕೆರಳಿ, ಶಂಕರನು ತ್ರಿಶೂಲವನ್ನೆತ್ತಿ, ಕೃಷ್ಣನ ಮೇಲೆ ಎಸೆದನು. ಅದನ್ನು ಖಂಡಿಸಲು ಕೃಷ್ಣನು ಕೌಮೋದಕಿಯನ್ನು ಬಿಟ್ಟನು. ಗದಾಶೂಲಗಳು ಆಕಾಶದಲ್ಲಿ ಕಾದಾಡಿ, ಉರಿಯುತ್ತಾ, ಕೆಳಗುರುಳಿ, ಸಮುದ್ರದಲ್ಲಿ ಬಿದ್ದವು; ಮತ್ತು ಅಲ್ಲಿಂದ ಹಾರಿ, ಗದಾಶೂಲಗಳು ಹರಿಹರರನ್ನು ಸೇರಿದವು.

ಅನಂತರ ಶಂಕರನು ನಿಶಿತಖಡ್ಗವನ್ನೆತ್ತಿ ಪಿಡಿದು, ಎತ್ತಿನನ್ನು ಜೋರಾಗಿ ತಿವಿದು, ಕೃಷ್ಣನನ್ನು ಕಡಿಯಲು ಬಂದನು. ಗರುಡನಾಗ ವೃಷಭದ ಕೋಡುಗಳನ್ನು ಪಿಡಿದು, ಅವನನ್ನೂ, ಶಂಕರನನ್ನೂ ಕೂಡ ನೂರು ಧನುಸ್ಸಿನಷ್ಟು ದೂರ ಎಸೆದು ಬಿಸುಟಿದನು. ಆಗ ಶಂಕರನು, ಯುದ್ಧವನ್ನು ಬಿಟ್ಟು, ನಿರುತ್ಸಾಹನಾಗಿ, ಪ್ರಮಥರಿಂದ ಕೂಡಿ, ಯುದ್ಧರಂಗವನ್ನು ಬಿಟ್ಟು ಹೋದನು.

## ೬೭. ಇಂದ್ರ ಪ್ರಾರ್ಥನೆ — ಪಾರಿಜಾತ ಸಮಾನಯನ

ಶ್ರೀಶುಕನು ಹೇಳಿದನು–

ಕೇಳು, ರಾಜನ್! ಇಂದ್ರನಾಗ ಗಜಾರೂಢನಾಗಿ, ಧನುಸ್ತೋಣೀರಗಳನ್ನು ಧರಿಸಿ, ಬಂದು, ಶಂಖಧ್ವಾನವನ್ನು ಮಾಡುತ್ತಿರುವ ಕೃಷ್ಣನನ್ನು ಕ್ಷುರಪ್ರದಿಂದ ಎದೆಯಲ್ಲಿ ಹೊಡೆದನು. ಶಕ್ರಪರಾಕ್ರಮವನ್ನು ಪೊಗಳಿ, ಅವನು ಬಿಟ್ಟ ಹತ್ತು ಬಾಣಗಳನ್ನು, ಮಧ್ಯದಲ್ಲೇ ತುಂಡರಿಸಿ, ಶ್ರೀಕೃಷ್ಣನು ಹತ್ತು ಬಾಣಗಳಿಂದ ಇಂದ್ರನನ್ನು ಪೀಡಿಸಿದನು. ಆ ಶರಗಳು ಇಂದ್ರಶರೀರವನ್ನು ತೂರಿ ಬಂದಾಗ, ರಕ್ತವರ್ಣಗಳಾಗಿದ್ದವು. ಇಂದ್ರನು ಸಿಟ್ಟಿನಿಂದ ಹದಿನಾರು ಬಾಣಗಳನ್ನು ಬಿಡಲು, ಗೋವಿಂದನು ಅವನ್ನೆಲ್ಲ ಖಂಡಿಸಿದನು; ಮೂವತ್ತು ಬಾಣಗಳಿಂದ ಇಂದ್ರನ ವಕ್ಷಸ್ಥಲವನ್ನು ಗಾಯಪಡಿಸಿದನು. ಇಂದ್ರನಾಗ ಕಟ್ಟಿಗೆಯ ಪೆಟ್ಟನ್ನು ತಿಂದ ಕರಿನಾಗರದಂತೆ ಕೆರಳಿ, ಗರುಡನನ್ನು ತುಳಿದುಬಿಡಬೇಕೆಂದು ಐರಾವತವನ್ನು ಅಂಕುಶದಿಂದ ತಿವಿದನು. ಐರಾವತವು ಘೀಂಕರಿಸಿ, ತನ್ನ ನಾಲ್ಕು ಕೋರೆಗಳಿಂದ ಗರುಡನ ಭುಜಮಧ್ಯವನ್ನು ತಿವಿದನು. ಗರುಡನು, ರೆಕ್ಕೆಗಳಿಂದ ಬಡಿದು, ಉಗುರುಗಳಿಂದ ಚೀರಿ, ಗಜವನ್ನು ಪೀಡಿಸಿದನು. ಆಗ ಇಂದ್ರನು, ವಜ್ರಾಯುಧವನ್ನೆತ್ತಿ, ಸರ್ವರು ನೋಡುತ್ತಿರಲು, ಕೃಷ್ಣನ ಮೇಲೆಸೆದನು. ಕೃಷ್ಣನದನ್ನು ಎಡಗೈಯಿಂದ ಪಿಡಿದು, ನಗುತ್ತಾ, ಕೆಳಗೆಸೆದನು. ನಿರಾಯುಧನಾಗಿ ಇಂದ್ರನು, ಗರುಡನು ಪೀಡಿಸುತ್ತಿರುವ ಆನೆಯು ಹಿಮ್ಮೆಟ್ಟುತ್ತಿರಲು, ರಣರಂಗದಲ್ಲಿ ನಿಲ್ಲಲಾರದೆ, ಓಡಿಹೋದನು.

ತಲೆ ತಗ್ಗಿಸಿಕೊಂಡು ಹೋಗುತ್ತಿರುವ ಶಚೀಪತಿಯನ್ನು ನೋಡಿ, ನಗುತ್ತಾ, ಸತ್ಯಭಾಮೆ ಇಂತೆಂದಳು–

ಶಕ್ರ! ಹಿಂದಿರುಗು, ಹೋಗಬೇಡ! ಶಚಿಯ ಗಂಡನಾದ ನಿನಗೆ ಪಲಾಯನವು ಸರಿಯಲ್ಲ. ನಿನ್ನ ಪೌರುಷದಿಂದ ಕೊಬ್ಬಿ, ಕಣ್ಣು ಕಾಣದಿರುವ ಶಚಿಯು ರಣವಿಮುಖನಾದ ನಿನ್ನನ್ನು ಅವಮಾನಿಸದೇ ಇರಳು.

ಇಂತು ನಿಂದಿಸಿ ನುಡಿದ ದೇವಿಯ ಮಾತನ್ನಾಲಿಸಿ, ಇಂದ್ರನು, ಹಿಂದಿರುಗಿ ಬಂದು, ಹಸನ್ಮುಖಿಯಾದ ಸತ್ಯಭಾಮೆಗೆ ಕೈಮುಗಿದಿಂತೆಂದನು–

ಅಮರರು, ಅಸುರರು, ಯಕ್ಷಸಿದ್ಧ ಗಂಧರ್ವರು, ಕಿನ್ನರ ಪಿಶಾಚ ನಿಶಾಚರರು ಮೊದಲಾದ ಸರ್ವಜೀವರನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ಜಗದೇಕವಲ್ಲಭನ ಮುಂದೆ ನಿಂತು ಸೋಲದವರುಂಟೇ? ಸಾಕಿನ್ನು ವಿರೋಧಗಳು; ಸಣ್ಣರು, ತಾನು ಹಾಲು ಕುಡಿಯುವಾಗ, ತಾಯಿಯ ಹುದುಗನ್ನು ತಿವಿದರೆ, ಗೋವಿಗೆ ನೋವೇ? ಅಂತೆಯೇ ಅಂಬ! ಯಜ್ಞಫಲ ಸ್ವಾಮಿನಿ ಯಾದ ನಿನ್ನಲ್ಲಿಯು, ನಿನ್ನ ಸ್ವಾಮಿಯಾದ ಲೋಕನಾಥನಲ್ಲಿಯು, ನಾನು ಅಜ್ಞಾನವಶರಾಗಿ, ವಿರೋಧ

ವನ್ನು ತೋರಿದರೂ, ಕರುಣೆಯಿಂದ ನೀವು ಕ್ಷಮಿಸಬೇಕಲ್ಲವೇ? ಎಂದು ಕೃಷ್ಣನಿಗೆ ವಂದಿಸಿ, ಪುರಂದರನಿಂತೆಂದನು–

ದೇವದೇವೇಶ! ಪುಂಡರೀಕಾಕ್ಷ! ಮಾಧವ! ನನ್ನೆಲ್ಲ ಅಪರಾಧವನ್ನು ಕ್ಷಮಿಸು! ಶರಣಾಗತ ವತ್ಸಲನಾದ ನಿನ್ನನ್ನು ನಂಬಿದ ಭಕ್ತನಾದ ನನ್ನ ಮೂರ್ಖತನವನ್ನೆಣಿಸಿ, ನನ್ನ ಕೈಬಿಡಬೇಡ! ಈ ಐರಾವತವೀವಜ್ರಾಯುಧವೀಪಾರಿಜಾತವೀ ಅಮರ ರಾಜ್ಯವೆಲ್ಲವು ನಿನ್ನದು. ಈ ಬ್ರಹ್ಮಾಂಡವೇ ನಿನ್ನಧೀನವಾಗಿದೆ. ನಾನು ನಿನ್ನ ಕಿಂಕರರ ಕಿಂಕರನು. ನಿನಗೆ ಇಷ್ಟವಾದುದನ್ನೆಲ್ಲ ತೆಗೆದುಕೊಂಡು ಹೋಗಲು ನಿನಗೆ ಸ್ವಾತಂತ್ರ್ಯವಿದೆ. ಪಾರಿಜಾತವನ್ನು ಕೊಡಲೊಪ್ಪದ ಕಾರಣ ವನ್ನು ಕೇಳು! ಮನುಜಲೋಕದಲ್ಲಿ ಮಾನುಜರಂತೆ ವಾಸಿಸುವ ನಿನ್ನಿಂದಲೇ ಅದು ಪಾವನವಾಗಿದೆ. ಪಾರಿಜಾತವನ್ನೂ ಒಯ್ದೊಡೆ, ಭೂಲೋಕವೇ ಸ್ವರ್ಗದಿಂದ ಮೇಲೆನಿಸುವುದಿಲ್ಲವೇ? ಈ ಭಾವನೆಯಿಂದ ನಿನಗೆ ವಿರೋಧ ಮಾಡಿದೆನು, ನಿಜ. ಕಾರ್ಯಕಾರ್ಯವನ್ನರಿತು, ನೀನು, ಅರಿಯದ ನನ್ನನ್ನು ಕ್ಷಮಿಸು!

ಕೃಷ್ಣನು ಆ ಮಾತನ್ನಾಲಿಸಿ ನಗುತ್ತಾ, ಇಂದ್ರನಿಗಿಂತೆಂದನು– ಶಕ್ರ! ನಿನ್ನದೇನೂ ತಪ್ಪಿಲ್ಲ. ತಪ್ಪಾಗಿರುವುದು ನನ್ನಿಂದ, ನನಗೆ ನಿನಗೆ ವಿರೋಧವಿಲ್ಲ. ನೀನು ಮಾಡಿದುದು– ಒಳ್ಳೆಯ ದಾಗಲಿ–ಕೆಟ್ಟದ್ದಾಗಲಿ– ಅದೆಲ್ಲವೂ ನನ್ನಿಂದ. ನನ್ನ ಪ್ರೇರಣೆಯಿಲ್ಲದಿರೆ ಯಾವ ಕಾರ್ಯವೂ ನಡೆಯಲಾರದು. ಈ ಪಾರಿಜಾತವು – ನಾನು ಭೂಲೋಕವನ್ನು ಬಿಟ್ಟೊಡನೆಯೇ– ಬಂದು ನಂದನವನ ವನ್ನು ಸೇರುವುದು. 'ಚಿಂತೆಬಿಡು' ಇಂದ್ರನು ಆಗ ಶ್ರೀ ಸತ್ಯಾಕೃಷ್ಣರನ್ನೂ ಗರುಡ ನನ್ನೂ ಪೂಜಿಸಿ, ನನ್ನ ಮಗನು ನಿನ್ನ ಭಾವಮೈದುನನಾದ-ಅರ್ಜುನನನ್ನು ಮರೆಯದೆ ಸಲಹು ತ್ತಿರು' ಎಂದು ಪ್ರಾರ್ಥಿಸಿ, ವಜ್ರವನ್ನು ಸ್ವೀಕರಿಸಿ, ಸಕಲ ದಿಕ್ಪಾಲರೊಡನೆ ಅಮರಾವತಿಯನ್ನು ಸೇರಪೋದನು.

ಪೂರ್ಣಷಡ್ಗುಣನಾದ ಕೃಷ್ಣನು ಗರುಡನಿಗೆ ದ್ವಾರಕೆಗೆ ಹೊರಡೆಂದಾಜ್ಞಾಪಿಸಿದನು. ಪುರಾಣ ದಂಪತಿಯರನ್ನು ಪಾರಿಜಾತವನ್ನೂ ಪೊತ್ತು, ಲೀಲೆಯಿಂದ ಹಾರಿ, ಗರುಡನು ದ್ವಾರಾವತಿಯನ್ನು ಮುಟ್ಟಿಸಿದನು. ತಳಿಲನೀರನ್ನು ಚೆಲ್ಲಿ, ತೋರಣಗಳನ್ನು ಕಟ್ಟಿ, ಅಲಂಕರಿಸಿದ್ದ ದ್ವಾರಕೆಯಲ್ಲಿ ಕೃಷ್ಣನು ಪ್ರವೇಶಿಸಿ, ಪುರಜನರ ಪೂಜೆಯನ್ನು ಸ್ವೀಕರಿಸಿ, ಸುಧರ್ಮಸಭೆಯಲ್ಲಿದ್ದ ಅಹುಕ ವಸುದೇವಾದಿಗಳೂ ಬಲರಾಮನಿಗೂ ವಂದಿಸಿ, ಕಾಂಚನಾಸನವನ್ನಲಂಕರಿಸಿದನು. ದೇವಗಣ ಸೇವಿತನಾದ ಇಂದ್ರನಂತೆ ಸಭಾಜನರ ಪೂಜೆಯನ್ನು ಕೈಕೊಂಡು, ಸತ್ಯಭಾಮೆಯ ಮಂದಿರದ ಮುಂಭಾಗದಲ್ಲಿ, ಪಾರಿಜಾತವನ್ನು ಸ್ಥಾಪಿಸಿದನು.

ಪಾರಿಜಾತವನ್ನು, ಅದನ್ನು ತಂದ ಸತ್ಯಾಕೃಷ್ಣರನ್ನು ನೋಡಲು ಬಂದು, ವಸುದೇವಾದಿ ಯಾದವರು, ದೇವಕೀ ರೋಹಿಣಿಯರು, ರುಕ್ಮಿಣ್ಯಾದಿ ಸಪ್ತಮಹಿಷಿಯರು, ರಾಮಸತಿ ರೇವತಿ, ತ್ರಿವಕ್ರೆ, ಚಿತ್ರಾ, ಕಾಲಿಯರು, ನೋಡಿ ಆನಂದತುಂದಿಲರಾದರು. ಶ್ರೀಕೃಷ್ಣನಿಗೆ ಕುಸುಮ ಲಾಜಾ ಕ್ಷತೆಗಳನ್ನರ್ಪಿಸಿ, ಅವರೆಲ್ಲರು, ಪ್ರೀತಿಯಿಂದ ನಗುನಗುತ್ತಾ, ತಮ್ಮ ತಮ್ಮ ಮನೆಗಳಿಗೆ ತೆರಳಿ ದರು.

## ೬೮. ಪ್ರದ್ಯುಮ್ನ ಜನನ – ಶಂಬರ ವಧೆ

ಶ್ರೀಶುಕನು ಹೇಳಿದನು–

ಶ್ರೀಕೃಷ್ಣನು ಲೋಕಸುಖಕರವಾದ ಶಂಕರನನ್ನು ತಪಸ್ಸಿನಿಂದ ಮೆಚ್ಚಿಸಿ, ರುದ್ರದಗ್ಧನಾಗಿದ್ದ ಕಾಮನನ್ನು ವರವಾಗಿ ಪಡೆದು ಬಂದನು. ಆ ರುದ್ರನಾದರೂ ಕೃಷ್ಣಾಗಮನದಿಂದ ಪ್ರೀತನಾಗಿ, ಭಕ್ತಿಯಿಂದ ಪೂಜಿಸಿ, ಪುನಃ ರುಕ್ಮಿಣೀಸುತನಾಗಿ ಜನಿಸೆಂದು, ಕಾಮನಲ್ಲಿ ಅನುಗ್ರಹವನ್ನು ತೋರಿದನು. ಅನಂಗನು ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿ, ಸರ್ವಾಂಗಸುಂದರನಾದ ಪ್ರದ್ಯುಮ್ನನೆನಿಸಿದನು. ತಂದೆಗೆ ತಕ್ಕ ಮಗನೆನಿಸಿ ವೀರ್ಯಬಲ ಜ್ಞಾನಾದಿಗುಣಸಂಪನ್ನನಾದನು.

ಅವನು ಪುಟ್ಟಿದ ತತ್‌ಕ್ಷಣವೇ, ಶಂಬರಾಸುರರು ಮಾಯಾಜಾಲವನ್ನೊಡ್ಡಿ, ಅವನನ್ನು ಅಪಹರಿಸಿ ಸಮುದ್ರದಲ್ಲೆಸೆದು, ತನ್ನ ಮಾರಕನಾದ ಮಾರನು ಮೃತನಾದನೆಂದು ನಿಶ್ಚಿಂತನಾಗಿದ್ದನು. ಆ ಕೂಸನ್ನು ಮೀನೊಂದು ನುಂಗಿತು. ಅದನ್ನು ಜಾಲರು ಪಿಡಿದು, ಶಂಬರನಿಗೆ ಕಾಣಿಕೆಯನ್ನಿತ್ತರು. ಅವನ ಅಡಿಗೆಯವರು ಅದನ್ನು ಸೀಳಿ, ಒಳಗಿದ್ದ ಶಿಶುವನ್ನು ಕಂಡು, ಮಾಯಾವತಿಗೆ ಪೇಳಿದರು. ನಾರದರಿಂದ ಅವನೇ ತನ್ನ ಗಂಡನೆಂದು ತಿಳಿದು– ಶಂಬರಗೃಹದಲ್ಲಿ, ಬ್ರಹ್ಮ ಶಾಪದಿಂದ ಮಾಯಾವತಿ ಎನಿಸಿ ಅವನ ವಶದಲ್ಲಿದ್ದ ರತೀದೇವಿಯು, ಸಂತೋಷದಿಂದ ಕೂಸನ್ನು ರಸಾಯನಾದಿಗಳಿಂದ ಪೋಷಿಸಿದಳು. ಅಚಿರದಲ್ಲೇ ರುಚಿರ ರೂಪನಾದ ಕಂದರ್ಪನು ಕಾಮಿನೀಜನದರ್ಪಹರನಾಗಿ, ಬೆಳೆದನು. ಪದ್ಮದಳ ವಿಶಾಲನಯನನು, ದೀರ್ಘಬಾಹುವಲಯನು, ನರಲೋಕ ಮನೋಹರನಾದ ಪ್ರದ್ಯುಮ್ನನಿಗೆ, ರತಿಯು, ಮುತ್ತಿನಂತಹ ಮಂದಹಾಸವನ್ನು, ಮಾವಿನ ಚಿಗುರೆಲೆಯಂತಹ ಕಡೆಗಣ್ಣ ನೋಟವನ್ನು ಕನಕರತ್ನವಿಕಾಸಗಳನ್ನು ಸೂಸುವ ಮೈಲಾವಣ್ಯದಿಂದ ತನ್ನ ಸರ್ವಸ್ವನ್ನು ಸಮರ್ಪಿಸಿ, ಸೇವಿಸಿದಳು. ತಾಯಿಯಂತಲ್ಲದೆ, ಮಡದಿಯಂತೆ ನಡೆಯುವ ಮಾನಿನಿಯನ್ನು ಕಂಡು ಕಾಮನು ಪ್ರಶ್ನಿಸಲು ರತಿಯು ಇಂತೆಂದಳು–

ನೀನು ನಾರಾಯಣ ಕುಮಾರನು. ನಾನು ನಿನ್ನ ನಿಯತ ಪತ್ನಿಯು. ಈ ಶಂಬರನು ನಿನ್ನನ್ನು ವೈರಿಯೆಂದರಿತು, ಸೂತಿಕಾಗೃಹದಿಂದ ಕದ್ದು ತಂದು, ಕಡಲಿಗೆ ಹಾಕಿದನು. ಅಲ್ಲಿ ಮೀನೋದರದಲ್ಲಿದ್ದ ನೀನು, ಜಾಲರಿಂದ ಕರೆತರಲ್ಪಟ್ಟು, ಪಾಕಶಾಲೆಯಲ್ಲಿ, ಮಹಾನ ಸಾಧ್ಯಕ್ಷಿಣಿಯಾದ ನನ್ನನ್ನು ಸೇರಿದೆ. ನಾವು ರತಿಕಾಮರು. ಇದನ್ನು ನಾರದರಿಂದ ತಿಳಿದೆನು. ಕರುವನ್ನು ಕಳೆದುಕೊಂಡ ಆಕಳಂತೆ, ರೋದಿಸುತ್ತಿರುವ ನಿನ್ನ ತಾಯಿ ರುಕ್ಮಿಣೀ ದೇವಿಯನ್ನು ಸಂತೈಸು! ಕುರರಿಯಂತೆ ಅಳುವ ಆ ನಮ್ಮತ್ತೆಯ ಕಣ್ಣೀರನ್ನೊರೆಸು! ಈ ಪಾಪಿ ಶಂಬರನನ್ನು ಮೋಹನಾದಿ ದಿವ್ಯಾಸ್ತ್ರ ಬಲದಿಂದ ಗೆದ್ದು, ಕೊಲ್ಲು! ಮಾಯಾವಿಯಾದ ಅವನನ್ನು ಗೆಲ್ಲುವ ಮಾಯಾವಿನಾಶಕ ವಿದ್ಯೆಯನ್ನು, ನನ್ನಿಂದ ಸ್ವೀಕರಿಸು! ಎಂದು ರತಿಯು, ಅವನಿಗೆ ಆ ವಿದ್ಯೆ ಯನ್ನಿತ್ತು, ಸರ್ವಸಮರ್ಥನನ್ನಾಗಿ ಮಾಡಿ, ರಣವಿಜಯಿಯಾಗೆಂದು ಹರಸಿದಳು.

ಕಾಮನು ತುಟಿಯನ್ನು ಕಚ್ಚಿ, ಸಿಟ್ಟಿನಿಂದ ನುಡಿದ ಪರುಷ ವಚನಗಳಿಂದ ಕೆರಳಿ, ಶಂಬರಾಸುರನು ಗದೆಯನ್ನು ಪಿಡಿದೆತ್ತಿ, ಪ್ರದ್ಯುಮ್ನನ ಎದೆಯಲ್ಲಿ ಹೊಡೆದು, ಸಿಂಹನಾದವನ್ನು ಮಾಡಿದನು. ಆ ಗದೆಯ ಪೆಟ್ಟನ್ನು ತಪ್ಪಿಸಿಕೊಂಡು ಪ್ರದ್ಯುಮ್ನನು ತನ್ನ ಗದೆಯನ್ನೆಸೆದನು. ಶಂಬರನಾಗ ಮಾಯಾಜಾಲವನ್ನು ಹಬ್ಬಿಸಿ, ಕಣ್ಣಿಗೆ ಕಾಣದಂತೆ ಆಕಾಶದಲ್ಲಿ ನಿಂತು, ಕಲ್ಲಿನ ಮಳೆ ಸುರಿದನು. ಪ್ರದ್ಯುಮ್ನನಾಗ ಸರ್ವಮಾಯಾಮರ್ದನನಾದ ವಿಜ್ಞಾನಾಸ್ತ್ರವನ್ನು ಪ್ರಯೋ

ಗಿಸಿ, ಆ ರಾಕ್ಷಸನ ಯಕ್ಷಗಂಧರ್ವ ಪೈಶಾಚೋರಗ ರಾಕ್ಷಸೀ ಮಾಯೆಗಳನ್ನೆಲ್ಲಾ ನಾಶಮಾಡಿ, ನಿಶಾತಖಡ್ಗದಿಂದ, ಕೆಂಪು ಮೀಸೆಯ ರಕ್ಕಸನನ್ನು ಕೊಂದು ಕೆಡಹಿದನು. ಅದನ್ನು ಕಂಡು ದೇವತೆಗಳು ಮದನನ ಶಿರದಿ ಕುಸುಮವರ್ಷವನ್ನು ಗರೆದು, ಪೊಗಳಿದರು, ಆಕಾಶಮಾರ್ಗದಿಂದ ಪ್ರದ್ಯುಮ್ನನು ರತಿಯಿಂದ ಕೂಡಿ ದ್ವಾರಕೆಗೆ ಬಂದು ಸೇರಿದನು.

ಮೇಘದಿಂದಿಳಿದ ಮಿಂಚಿನಂತೆ, ಅಂತಃಪುರ ಮುಖಶಾಲೆಯಲ್ಲಿಳಿದ ರತಿಕಾಮರನ್ನು, ಕೃಷ್ಣರಮಣಿಯರು ನೋಡಿದರು. ನೀಲಮೇಘಶ್ಯಾಮನು, ಪೀತಾಂಬರಧರನು, ಅಜಾನುಬಾಹು ವಿಲಸಿತನು, ರಕ್ತನೇತ್ರನು, ಮಂದಸ್ಮಿತರುಚಿರವದನನು, ನೀಲಕುಂಚಿತಕೇಶನು ಆದ ಪ್ರದ್ಯುಮ್ನನನ್ನು ನೋಡಿ, ಕೃಷ್ಣನೆಂದು ಭ್ರಮಿಸಿ, ಕೆಲ ಕಾಮಿನಿಯರು ಲಜ್ಜೆಯಿಂದ ಅಡಗಿ ನಿಂತರು. ಸ್ವಲ್ಪ ಹೊತ್ತಾದ ಮೇಲೆ ನಿರೀಕ್ಷಿಸಿ ನೋಡಿ, ಕೃಷ್ಣನಲ್ಲ– ಕೃಷ್ಣನಂತಿರುವನಿವನಾರೆಂದು ಕುತುಕದಿಂದ, ನಗುತ್ತಾ ಬಂದು, ಸುತ್ತುಗಟ್ಟಿ ನಿಂತರು. ಅವನನ್ನು ನೋಡುತ್ತಲೇ ರುಕ್ಮಿಣಿಗೆ- ತನ್ನ ಕುಮಾರನ ನೆನಪು ಬಂದು, ಸ್ನೇಹದ ಮೊಲೆ ಹಾಲು ಸೂಸಿ ಹರಿಯಿತು.

'ಯಾರೀ ನರವೈಡೂರ್ಯನು? ಯಾರಮಗನೀಕಮಲದಳನೇತ್ರನು? ಯಾವ ಪುಣ್ಯವತಿ ಇವನನ್ನು ಪೊಟ್ಟೆಯಲ್ಲಿ ಧರಿಸಿದ್ದಳು? ಯಾರಿವಳೀಗ ಇವನ ಕೈಪಿಡಿದು ಬರುತ್ತಿರುವಳು? ನನ್ನ ಮಗನು ಸೂತಿಕಾಗೃಹದಲ್ಲಿ ಕಾಣದಾದಾನಲ್ಲ! ಅವನೇ ಇದ್ದಿದ್ದರೆ, ಇವನಂತೆ ಇರುತ್ತಿದ್ದನಲ್ಲವೇ? ಕೃಷ್ಣನಂತೆ ರೂಪಸೌಭಾಗ್ಯವಿವನಿಗೆ ದೊರೆತುದೆಂತು? ನಡೆ, ನುಡಿ, ರೂಪು, ರಂಗು, ನಗು, ನೋಟಗಳಿಂದ ಕೃಷ್ಣನನ್ನೇ ಪೋಲುವ ಇವನು ನನ್ನ ಮಗನೇ ಇರಬಹುದೇ? ಏಕೆ ಇವನಲ್ಲಿ ನನ್ನ ಮನವಿಷ್ಟು ಪ್ರೀತಿಯಿಂದ ಹಾತೊರೆಯುತ್ತಿದೆ? ನನ್ನ ಎಡಭುಜವು ಕಂಪಿಸುತ್ತಾ, ಶುಭವನ್ನೇ ಸೂಚಿಸುತ್ತಿದೆ.'

ಎಂದು ರುಕ್ಮಿಣಿಯು ಚಿಂತಿಸಿದಳು. ಮತ್ತು ದೇವಕಿ ವಸುದೇವಾದಿ ಯಾದವರು ಆಶ್ಚರ್ಯಪಟ್ಟರು. ಆಗ ಕೃಷ್ಣನು ನಾರದನಿಂದ ಕೂಡಿ ಅಲ್ಲಿಗೆ ಬಂದನು. ಸರ್ವಜ್ಞನಾದ ಕೃಷ್ಣನು ಸುಮ್ಮನಿರಲು, ನಾರದನೇ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದನು. ಆಗ ಅವರೆಲ್ಲರಾನಂದದಿಂದ ರತೀಪ್ರದ್ಯುಮ್ನರಿಗೆ ಸ್ವಾಗತವನ್ನಿತ್ತು, ಆಲಿಂಗಿಸಿ, ಸತ್ಕರಿಸಿದರು. ರುಕ್ಮಿಣಿಯು ಮಗನನ್ನಪ್ಪಿ ಮುದ್ದಾಡಿ, ಅದೃಷ್ಟದಿಂದ– ಮೃತನೆಂದ ಬಾಲನು ಜೀವಿತನಾಗಿ ಬಂದ'ನೆಂದು ಸಂತೋಷ ಭರಿತಳಾದಳು. ದ್ವಾರಕೆಯ ಜನರ ಆನಂದವನ್ನು ಹೇಳತೀರದು. ಪ್ರದ್ಯುಮ್ನನನ್ನು ನೋಡಿ, ಅವನ ನಡೆನುಡಿಗಳಿಂದ ಕೃಷ್ಣನೆಂದು ಭ್ರಮಿಸಿ, ಮನಸಿಜ ಪರವಶರಾಗಿ, ಕೃಷ್ಣರಮಣಿಯರೇ ಮೋಸಹೋದರೆಂದಮೇಲೆ, ಇನ್ನು ಇತರ ನಾರಿಯರು, ರಮಾರಮಣನ ಅಖಂಡ ಲಕ್ಷಣ ದಿವ್ಯದೇಹದಿಂದ ಜನಿಸಿ ಸಾಕಾರನಾಗಿ ನಿಂತ ಮದನನನ್ನು ನೋಡಿ ಶೃಂಗಾರಚೇಷ್ಟಾಯುಕ್ತರಾಗುವರೆಂದು ಹೇಳಬೇಕೇ?

## ೬೯. ಪೌಂಡ್ರಕ ವಧೆ

ಶ್ರೀಶುಕನು ಹೇಳಿದನು–

ಆ ಕಾಲದಲ್ಲಿ ಪೌಂಡ್ರಕನೆಂಬ ಕಾಶಿರಾಜನು, ಕೃಷ್ಣನಿಲ್ಲದ ಸಮಯವನ್ನರಿತು, ದ್ವಾರಕೆಯನ್ನು ರಾತ್ರಿ ಬಂದು, ಮುತ್ತಿದನು. ಬಲರಾಮ, ಸಾತ್ಯಕಿ, ವಸುದೇವಾದಿ ಯದುಪುಂಗವರವನಿಂದ ಕಾದಾಡಿ, ಮನೆಗೆ ಬಂದ ಅತಿಥಿಗೆ ಭಕ್ಷ್ಯಗಳನ್ನಂತೆ, ಅವನಿಗೆ ಬಾಣಗಳನ್ನರ್ಪಿಸಿ, ಪೀಡಿಸಿದನು.

ಹಿಂದೆ ಕಾಶೀರಾಜನು, ತನ್ನ ಮಗಳಾದ ಸುತನು ಎಂಬುವಳನ್ನು ರಾಜ್ಯದೊಂದಿಗೆ ವಸುದೇವನಿಗಿತ್ತು ಮದುವೆ ಮಾಡಿದನು. ಅವಳು ಪೌಂಡ್ರಕನೆಂಬ ಬಲವೀರ್ಯತೇಜೋಯುತನಾದ ಮಗನನ್ನು ಹೆತ್ತಳು. ವಸುದೇವಸುತನಾದ ಅವನನ್ನು, ಕರವೀರಪುರದ ಸೃಗಾಲನಂತೆ, ವಾಸುದೇವನೆಂದೂ ಕರೆಯುತ್ತಿದ್ದರು. ಅವನು ಹುಟ್ಟಿದನಂತರ, ಅವನಿಗೆ ರಾಜ್ಯವನ್ನಿತ್ತು, ವಸುದೇವನು ಮಧುರೆಗೆ ಬಂದು, ಅಲ್ಲಿ ದೇವಕಿಯನ್ನು ವಿವಾಹವಾದನು. ಅನಂತರ ಕಂಸನ ಸೆರೆಯಲ್ಲಿದ್ದ ವಸುದೇವನು, ಕಾಶಿಗಾಗಲಿ, ಕರವೀರಪುರಿಗಾಗಲಿ ಹೋಗಲಾಗಲಿಲ್ಲ. ಪೌಂಡ್ರಕನು ತಮ್ಮಂದಿರನ್ನು ಕಾಣದೆ, ತಾಯಿಯ ಸವತಿಯ ಮಕ್ಕಳಾದ ಯದುಗಳಲ್ಲಿ ದ್ವೇಷ ಮಾಡಿದನು. ಒಂದು ದಿನ ಅವನು ದ್ವಾರಕೆಯನ್ನು ಮುತ್ತಿ, ಬಲಭದ್ರನಿಂದ ಸೋತು, ಸೈನ್ಯವನ್ನು, ರಥಗಜತುರಗಗಳನ್ನೂ ಕಳೆದುಕೊಂಡು, ಓಡಿಹೋದನು. ಬೆಳಗಾಗುತ್ತಿರಲು, ಬದರಿಕಾಶ್ರಮದಿಂದ ಹಿಂದಿರುಗಿ ಬಂದ ಗೋವಿಂದನು, ಆ ವೃತ್ತಾಂತವನ್ನು ಕೇಳಿ, ನಕ್ಕು, ಸುಮ್ಮನಾದನು.

ಒಂದು ಸಲ ಪೌಂಡ್ರಕನು ತಾನೇ ವಸುದೇವನು, ತಾನೇ ವೇದಪ್ರತಿಪಾದಿತನು, ತಾನೇ ಬ್ರಹ್ಮನು, ಎಂದು, ಒಬ್ಬ ದೂತನನ್ನು ಕೃಷ್ಣನಲ್ಲಿಗೆ ಕಳಿಸಿದನು. 'ನೀನೇ ವಾಸುದೇವನೆಂಬ ಭಗವಂತನು, ಎಂದು ಮೂರ್ಖರು ಪೊಗಳಿ ವಂಚಿಸಲು ಕೇಳಿ, ಆ ಮೂರ್ಖಾಗ್ರೇಸರನು 'ನಾನೇ ಬ್ರಹ್ಮ' ನೆಂದು ತಿಳಿದನು. ಅವನ ದೂತನು ದ್ವಾರಕೆಗೆ ಬಂದು ಸಭೆಯಲ್ಲಿ ನೆರೆದಿದ್ದ ಕೃಷ್ಣನಿಗಿಂತು ಸಂದೇಶವನ್ನು ತಿಳಿಸಿದನು–

ನಾನೊಬ್ಬನೇ ಭಗವಾನ್ ವಾಸುದೇವನು, ಮತ್ತೊಬ್ಬನಲ್ಲ. ಸಕಲಲೋಕದ ಬಲಶಾಲಿಯಾಗಿ ಅವತರಿಸಿರುವ ನನ್ನ ಮಾತನ್ನು ಕೇಳಿ! ನಿನ್ನ ಸುಳ್ಳು ಹೆಸರನ್ನು ಬಿಡು! ಮೂಢನಾದ ನೀನು ನನಗಂಜದೆ, ಪಿಡಿದಿರುವ ಚಕ್ರಾದಿ ಚಿಹ್ನೆಗಳನ್ನು, ಈ ಕ್ಷಣ ನನಗೆ ಕೊಟ್ಟು ಕಳಿಸು! ನನಗೆ ಶರಣೆಂದು ಶಿರಬಾಗು; ಇಲ್ಲವೇ ಯುದ್ಧಕ್ಕೆ ಸಿದ್ಧನಾಗು!

ಪೌಂಡ್ರಕನ ಸಂದೇಶವನ್ನು ಕೇಳಿ, ಉಗ್ರಸೇನಾದಿ ಸಭಿಕರು ಗಟ್ಟಿಯಾಗಿ ನಕ್ಕರು. ಪರಿಹಾಸ ಚತುರನಾದ ಕೃಷ್ಣನು ದೂತನನ್ನು ನೋಡಿ 'ಹೋಗು, ನಿಮ್ಮ ರಾಜನಿಗೆ ಈ ಸಂದೇಶವನ್ನು ತಲುಪಿಸು!' ಎಂದು.

'ಮೂಢ! ಚಕ್ರಗದಾಬಾಣಗಳನ್ನು ತಪ್ಪದೆ ಕಳಿಸುವೆನು. ಅವುಗಳಿಂದ ಸತ್ತುಬಿದ್ದ ನಿನ್ನ ಹೆಣವನ್ನು, ಕಂಕಗೃಧ್ರಬಕಾದಿ ಪಕ್ಷಿಗಳು, ಕಿತ್ತಿ, ತಿನ್ನುವಾಗ, ನೀನು ಶುನಕಗಳಿಗೆ ಶರಣುಹೋಗ.' ಎಂಬ ಸಂದೇಶವನ್ನಿತ್ತು ಕಳಿಸಿದನು.

ಅನಂತರ ಕೃಷ್ಣನು ಸೈನ್ಯದಿಂದ ಕಾಶೀ ನಗರವನ್ನು ಮುತ್ತಿದನು. ಪೌಂಡ್ರಕನೋ ಮಹಾ ಸೈನ್ಯಸಮೇತನಾಗಿ, ಊರ ಹೊರಗೆ ಬಂದು, ಘೋರವಾಗಿ ಹೋರಾಡಿದನು. ಗರುಡನ ಗೊಂಬೆಯ ಧ್ವಜವನ್ನೆತ್ತಿ, ರಥದಲ್ಲಿ, ಬಂಗಾರದ ಗರುಡನ ಮೇಲೆ ಕೂತು, ಎರಡು ಕನಕ ಬಾಹುಗಳಲ್ಲಿ, ಕೃತಕ ಶಂಖಚಕ್ರಗಳನ್ನು ಪಿಡಿದು, ಕುರುಳಕೆಂಡದಿಂದ ಎದೆಯನ್ನು ಸುಟ್ಟುಕೊಂಡ ಶ್ರೀವತ್ಸಚಿಹ್ನವನ್ನು ಮೂಡಿಸಿ, ಕೌಸ್ತುಭ ಮಕರಕುಂಡಲ ವನಮಾಲಾ ಪೀತಾಂಬರಗಳ ಆಭಾಸಗಳನ್ನು ಧರಿಸಿ, ಕೃಷ್ಣನಂತೆ ವೇಷವನ್ನು ಹಾಕಿ ಬರುವ ನಾಟಕ ವಾಸುದೇವನನ್ನು ನೋಡಿ, ಶ್ರೀಕೃಷ್ಣನು ಗಹಗಹಿಸಿ ನಕ್ಕನು.

ಪೌಂಡ್ರಕಸೈನಿಕರು – ಮೇಘಗಳು ಮಳೆಯಿಂದ ಬೆಟ್ಟವನ್ನಂತೆ – ಬಾಣಗಳಿಂದ ಕೃಷ್ಣ ಸೈನ್ಯವನ್ನು ಮುಚ್ಚಿ, ಗದಾಪರಿಘ ಪಟ್ಟಿಶಶೂಲ ಖಡ್ಗಾದಿ ವಿವಿಧಾಯುಧಗಳಿಂದ ಭೀಕರವಾಗಿ ಕಾದಿದರು. ಪೌಂಡ್ರಕನ ಅಂಗರಕ್ಷಕನಾಗಿ ಕಾಶಿ ರಾಜನು ತನ್ನ ಮೂರಕ್ಷೌಹಿಣೀ ಸೈನ್ಯದಿಂದ, ಕೃಷ್ಣಬಲವನ್ನೆದುರಿಸಿದನು. ಶ್ರೀಕೃಷ್ಣನು, ಕಾಶಿರಾಜ ಪೌಂಡ್ರಕರ ಸೈನ್ಯವನ್ನು ಪ್ರಳಯಕಾಲ ಭಯಂಕರ ವಹ್ನಿಜ್ವಾಲೆಯಂತೆ, ಸುಟ್ಟು, ಗದಾ, ಖಡ್ಗ, ಚಕ್ರ, ಬಾಣಗಳಿಂದ ತುಂಡರಿಸಿದನು. ರಣರಂಗವು ಭೂತನಾಥನ ಕ್ರೀಡಾಂಗಣವಾಯಿತು.

ಶೌರಿಯು ಪೌಂಡ್ರಕನನ್ನೆದುರಿಸಿ, ನಿಲ್ಲಿಸಿ ಇಂತೆಂದನು–'ಎಲವೋ! ಮೂಢ! ದೂತನಿಂದ ಹೇಳಿ ಕಳುಹಿದಂತೆ, ನನ್ನ ಚಕ್ರಾದ್ಯಸ್ತ್ರಗಳನ್ನು ನಿನಗಾಗಿ ಕಳಿಸುತ್ತಿರುವೆನು. ಪಾಪಾ! ನನ್ನ ಹೆಸರೇ ಸುಳ್ಳು ಎನಿಸಿರುವೆಯಲ್ಲವೇ? ಮಿಥ್ಯಾವ್ಯಾದಿ, ಬ್ರಹ್ಮಾತ್ಮೈಕ್ಯವಾದಿಯು ಆದ ನಿನ್ನ ಕೂಡ ಯುದ್ಧವನ್ನೊಲ್ಲದೆ ನಾನು ಶರಣಾಗುವೆನೆಂದು ತಿಳಿದೆಯಾ? ಕಾದುಕೋ ನಿನ್ನ ವೇಷವನ್ನು' ಎಂದು ಚಕ್ರದಿಂದ ಗೋವಿಂದನು, ಆ ವೇನಹತಕನ ಶಿರವನ್ನು ಕತ್ತರಿಸಿ, ಅದನ್ನು ಕಾಶೀನಗರದ ದ್ವಾರದೇಶದಲ್ಲಿ ಬೀಳುವಂತೆ ಮಾಡಿದನು.–

ಗಾಳಿಗೆ ಬಂದ ಕಮಲದಂತೆ ಬಿದ್ದಿರುವ ಆ ಶಿರವನ್ನು ಕಂಡು, ಕಾಶೀನಗರ ವಾಸಿಗಳು, 'ಏನಿದು? ಯಾರದೀತಲೆ?' ಎಂದು ಸಂಶಯಗೊಂಡು, ನೋಡಿ, ತಮ್ಮ ರಾಜನದೆಂದು ತಿಳಿದು, ಹಾಹಾಕಾರವನ್ನು ಮಾಡಿ ಗೋಳಾಡಿದರು. ಪೌಂಡ್ರಕನ ಪುತ್ರಕಳತ್ರ ಬಂಧು ಜನರೂ ಬಂದು 'ಹೋ' ಎಂದು ದುಃಖಿಸಿದರು. ಶ್ರೀಕೃಷ್ಣನು, ಮತ್ಸರದೂಷಿತಮತಿಯಾದ ಪೌಂಡ್ರಕನನ್ನು ಸಂಹರಿಸಿ, ಗೇಗೀಯಮಾನ ಪಾವನಚರಿತನಾಗಿ, ದ್ವಾರಕೆಗೆ ತೆರಳಿ ಹೋದನು.

ಕಾಶೀರಾಜನ ಮಗನಾದ ಸುದಕ್ಷಿಣನೆಂಬುವ ದುಷ್ಟನು, ತಂದೆಯ ಮರಣದ ಸೇಡನ್ನು ತೀರಿಸುವೆನೆಂದು ಪಣತೊಟ್ಟು, ಗುರುಸಹಿತನಾಗಿ, ಶಿವನಿಗೆ ಶರಣಾಗಿ ಕಠಿನ ತಪವನ್ನು ಮಾಡಿದನು. ಅವಿಮುಕ್ತೇಶ್ವರ ಘಟ್ಟದಲ್ಲಿ ತಪವನ್ನಾಚರಿಸುವ ಅವನಲ್ಲಿ ಶಿವನು ಪ್ರೀತನಾಗಿ, 'ವರ, ಬೇಡೆಂದನು.' ಆ ಪಾಪಿಯು ಪಿತೃಹಂತಕನು ಸಾಯುವ ಉಪಾಯವನ್ನು ಹೇಳಿ, 'ತತ್ಸಾಧನವನ್ನು ಕೊಡು' ಎಂದನು. ರುದ್ರನಾಗ 'ಬ್ರಾಹ್ಮಣರಿಂದ ಕೂಡಿ, ದಕ್ಷಿಣಾಗ್ನಿಯನ್ನು ಹೋಮಿಸು. ಅಭಿಚಾರವಿಧಾನಪ್ರೀತನಾದ ಅಗ್ನಿಯಿಂದ ಕೃತ್ಯೆ ಹುಟ್ಟುವುದರಿಂದ ನಿನ್ನ ಕೆಲಸ ತೀರುವುದು' ಎಂದು, ಮತ್ತೆ, 'ಕೇಳಲ್ಲಿ! ಬ್ರಾಹ್ಮಣ ವಿರೋಧಿಗಳಲ್ಲಿ ಮಾತ್ರ ನಿನ್ನ ಕ್ಷುದ್ರಮಾಟವು ನಡೆಯುವುದು. ನಡೆ,' ಎಂದು ಅಂತರ್ಹಿತನಾದನು.

ಸುದಕ್ಷಿಣನು, ಕೃಷ್ಣನನ್ನು ಕೊಲ್ಲಬೇಕೆಂದು ಅಭಿಚಾರ ಹೋಮವನ್ನು ಮಾಡಿದನು. ಆಗ ಆ ಅಗ್ನಿಕುಂಡದಿಂದ, ಕೃತ್ಯಾಗ್ನಿಯು ರೂಪುಗೊಂಡು ಮೇಲೆದ್ದು ಬಂತು. ಅದರ

ಕೂದಲುಗಳು ಕಾದ ತಾಮ್ರದ ಕಡ್ಡಿಗಳಾಗಿದ್ದವು; ಕಣ್ಣಿಂದ ಕಿಡಿಗಳು ಉದುರುತ್ತಿದ್ದವು. ಕೋರೆಗಳನ್ನು ಮಸೆದು, ಹಲ್ಲು ಕಟಕಟ ಕಡಿಯುತ್ತಾ, ಹುಬ್ಬನ್ನು ಹಾರಿಸಿ, ಕೇಕೆ ಹಾಕುತ್ತಾ, ನಾಲಿಗೆಯಿಂದ ತುಟಿಯನ್ನು ನೆಕ್ಕುತ್ತಾ, ತಾಲವೃಕ್ಷದಂತೆ ಭಯಂಕರವಾದ ಕಾಲಿನಿಂದ ನಡೆದು ಭೂಮಿಯನ್ನು ನಡುಗಿಸುತ್ತಾ, ಆ ಕೃತ್ಯೆಯು ಭಯಂಕರವಾಗಿ, ದ್ವಾರಕೆಯನ್ನು ಸಮೀಪಿಸಿ, ನಗರವನ್ನು ಸುಡಲಾರಂಭಿಸಿತು. ಅದನ್ನು ಕಂಡು, ಹೆದರಿ, ದ್ವಾರಕಾ ನಾಗರೀಕರು, ಓಡಿಹೋಗಿ, ಶ್ರೀಕೃಷ್ಣನಿಗೆ ಮೊರೆಯಿಟ್ಟರು. ಕಾಡುಕಿಚ್ಚಿಗೆ ಸಿಕ್ಕು ಓಡುವ ಮೃಗಗಳಂತೆ, ದಿಕ್ಕೆಟ್ಟು 'ಕೃಷ್ಣ! ಕೃಷ್ಣ! ರಕ್ಷಿಸು' ಎಂದು ಶರಣಾಗತರಾದ ತನ್ನವರ ಕಷ್ಟವನ್ನು ಆಳೆಯಲು, ದ್ಯೂತಕ್ರೀಡಾರತ ನಾಗಿದ್ದ ಕೃಷ್ಣನು, ತನ್ನ ಚಕ್ರವೇ ಆ ಕಾರ್ಯವನ್ನು ಮಾಡಲು ಸಮರ್ಥವೆಂದು, ಮಾಹೇಶ್ವರೀ ಶಕ್ತಿಯನ್ನು ಕೊಂದು, ವಾರಾಣಾಸಿಯನ್ನು ದಹಿಸಿ ಬಾ!' ಎಂದಾಜ್ಞಾಪಿಸಿ, ಸುದರ್ಶನವನ್ನು ಕಳುಹಿಸಿದನು.

ಚಕ್ರವು ಪ್ರಳಯಕಾಲಾಭೀಲವಹ್ನಿಯಂತೆ ಉರಿಯುತ್ತಾ ಏರಿಬರುವುದನ್ನು ಕಂಡು, ಭೂನಭೋಂತರವನ್ನು ವ್ಯಾಪಿಸಿ ನಿಂತ ಅದರ ತೇಜವನ್ನು ಕಣ್ಣೆತ್ತಿ ನೋಡಲಾರದೆ, ಕೃತ್ಯೆಯು, ಭಯದಿಂದ ಹಿಂದಿರುಗಿ ಓಡಿಬಂದು, ಕಾಶಿಯಲ್ಲಿದ್ದ ಸುದಕ್ಷಿಣನ ಕತ್ತನ್ನು ಮುರಿದು, ಸುಟ್ಟು ಬೂದಿಮಾಡಿತು. ಅದರ ಹಿಂದೆಯೇ ಬಿಡದೆ ಬಂದ ಚಕ್ರವು, ವಾರಾಣಸಿಯನ್ನೆಲ್ಲ ಸುಟ್ಟು, ಮಹಾ ಶ್ಮಶಾನವನ್ನಾಗಿರಿಸಿ, ಪುನಃ ಶ್ರೀಕೃಷ್ಣನ ಕೈಸೇರಿತು.

ಈ ಉತ್ತಮಶ್ಲೋಕನ ಪರಾಕ್ರಮಲೀಲಾಚರಿತ್ರವನ್ನು ಹೇಳಿ, ಕೇಳಿದ ಭಕ್ತ ಜನರು ಸರ್ವಪಾಪವನ್ನು ಕಳೆದುಕೊಂಡು ಶುದ್ಧಮನಸ್ಕರಾಗುವರು. ಬ್ರಹ್ಮಹತ್ಯಾದಿ ಪಾಪಗಳನ್ನು ಕೂಡ ಕಳೆವ ಶ್ರೀಹರಿಚರಿತಶ್ರವಣವು ವಿಷ್ಣುಲೋಕವನ್ನು ಪೊಂದಿಸುವ ಶ್ರೇಯಃಕಾರಣವಾಗಿದೆ.

## ೭೦. ಸೂರ್ಯಗ್ರಹಣ — ಕುರುಕ್ಷೇತ್ರಗಮನ

ಒಂದುಸಲ ಸೂರ್ಯಗ್ರಹಣವಾಗುವುದನ್ನು ಗಣಕವರರಿಂದ ತಿಳಿದು, ಸಕಲ ಭಾರತೀಪ್ರಜರು, ಪುಣ್ಯಕರವಾದ ಸ್ಯಮಂತಪಂಚಕಕ್ಷೇತ್ರವನ್ನು ಕುರಿತು ಬಂದರು. ಆ ಪುಣ್ಯಕರ ಕುರುಕ್ಷೇತ್ರದಲ್ಲಿ ಮಾಡಿದ ಪುಣ್ಯವು ಅನಂತವಾಗುವುದೆಂದು ನಂಬಿ, ಬಂದ ಜನರಿಂದ, ಆ ದೇಶವೇ ತುಂಬಿ ಹೋಯಿತು.

ನಿಃಕ್ಷತ್ರಿಯ ಮಹೀಮಂಡಲಸಾಧಕನೆನಿಸುವ ಶ್ರೀ ಪರಶುರಾಮನು, ರಾಜರಕ್ತದಿಂದ ನಿರ್ಮಿಸಿದ ಐದು ಮಡುವುಗಳಲ್ಲಿ, ಆ ಭಗವಂತನು ಪರಾಕ್ರಮ ವಿಲಾಸವನ್ನು ಸಾರುತ್ತಿರುವವ ಲ್ಲವೇ? ಅಲ್ಲಿಗೆ ಕೃಷ್ಣಾದಿ ಸರ್ವ ಯಾದವರೂ ಬಂದರು. ಲೋಕಸಂಗ್ರಹವನ್ನು ಮಾಡಲು, ಶ್ರೀ ಭಾರ್ಗವನು, ಹತ್ಯಾಪಾಪವನ್ನು ಕಳೆಯಬೇಕೆಂದು ತೋರಿಸಿ ಆಚರಿಸಿದ ಯಜ್ಞಪ್ರದೇಶ ವೆಂದರಿತು, ಪುತ್ರಪೌತ್ರಪರಿಜನಸಮನ್ವಿತರಾಗಿ, ವಸುದೇವ, ಬಲರಾಮ, ಗದ, ಪ್ರದ್ಯುಮ್ನ, ಸಾಂಬ, ಸಾರಣೋದ್ಧವಾಕ್ರೂರರು ಅಲ್ಲಿಗೆ ಬಂದರು. ದ್ವಾರಕೆಯಲ್ಲಿ ಆಹುಕ, ಕೃತವರ್ಮರು ನಗರರಕ್ಷಣೆಗಾಗಿ ನಿಂತರು. ಹಯಹೇಷಾರವಗಳು, ಗಜ ಘೀಂಕಾರಗಳು, ರಥನೇಮಿಧ್ವಾನಗಳು, ಭಟರ ಸಿಂಹಾನಾದಗಳು ಬೆರೆತು, ಕೃಷ್ಣಚರಿತ್ರಗಾನವನ್ನು ಮಾಡುವ ಸೂತಮಾಗಧವಂದಿ ಜನರ ಮಧುರ ನಿನಾದವು ಸರ್ವತ್ರ ತುಂಬಿ ಮೊಳಗಿತು. ಕೃಷ್ಣ! ಕೃಷ್ಣ! ಗೋವಿಂದ! ಎಂದು

ಭಕ್ತಿಯಿಂದ ಪಾಡುವ ಸುಜನರ ತುಂಡದ ಗಾನಲಹರಿಗಳು ತೇಲಿಬಂದು ಕಿವಿಗಿಂಪಾಗಿದ್ದವು. ಅವರು ಸ್ಯಮಂತಪಂಚಕವನ್ನು ಸೇರಿ, ಅಲ್ಲಿ ನಾನಾ ವಿಧ ವಸತಿಗಳನ್ನು ಕಲ್ಪಿಸಿ ನೆಲಸಿದರು. ತೃಣಪರ್ಣಗಳಿಂದಲು, ಕಾಷ್ಠಗಳಿಂದಲು, ಕಂಬಳಾಜಿನ ವಸ್ತ್ರಗಳಿಂದಲು ಮಾಡಿದ ಸಾವಿರಾರು ಕುಟಿಗಳು ತಲೆದೋರಿದವು. ಬ್ರಾಹ್ಮಣರು, ವೈಶ್ಯರು, ಶೂದ್ರರು, ಹೀನರು, ಅನ್ಯರೇ ಮೊದಲಾದ ಅಸಂಖ್ಯಾತ ಜನರ ಹಿಂಡು ನಾನಾಕಾರ್ಯವ್ಯಗ್ರವಾಗಿತ್ತು. ಉಪಾಧ್ಯಾಯರಿಂದ ಕೂಡಿ ವಿಖ್ಯಾತವ್ರತರಾದ ಋಷಿಗಳು, ಅಗ್ನಿಹೋತ್ರಗಳಿಂದ ಕೂಡಿ ಗೃಹಮೇಧಿ ಜನರು, ಸ್ನಾತಕರು, ಬಂದರು. ಅಂಧ ಪಂಗುಬಧಿರಾದಿವ್ಯಂಗಜನರು, ಜಡಮೂಕಾದಿಗಳು, ವಾಮನ ಕುಟಿಲಾಂಗ ಷಂಡಜನರು, ಕರ್ಮವನ್ನು ಕಳೆಯಬೇಕೆಂದು ಬಂದರು.

ಗೋವಿಂದ ಚರಣ ರಜವನ್ನು ಪೊತ್ತು, ಭಾರ್ಗವನ ಮಡುವಿನಲ್ಲಿ ಮಿಂದು, ಕಟಕಾಂಗದ ಹಾರ ಕುಂಡಲಗಳನ್ನಿಟ್ಟು, ಗಂಧವನ್ನು ಪೂಸಿ, ಪೀತಾಂಬರವನ್ನುಟ್ಟ, ಯಾದವಾದಿ ಸರ್ವಜನರು, ಕಳತ್ರ ಪುತ್ರ ಸಮೇತರಾಗಿ, ದೇವತೆಗಳಂತೆ ಶೋಭಿಸಿದರು. ಕ್ಷೇತ್ರೋಪವಾಸವನ್ನು ಮಾಡಿ, ಮರುದಿನ ಪಿತೃಕಾರ್ಯಗಳನ್ನು ನಡೆಸಿದರು. ಬ್ರಾಹ್ಮಣರಿಗೆ, ಪೀತಾಂಬರವನ್ನು ಹೊದಿಸಿ, ಬಂಗಾರದ ಸರವನ್ನಿಟ್ಟು ಅಲಂಕರಿಸಿದ ಆಕಳುಗಳನ್ನು ಕರುಗಳಿಂದ ಕೂಡಿಸಿ, ದಾನಮಾಡಿದರು. ಕೃಷ್ಣನಲ್ಲಿ ಭಕ್ತಿಯನ್ನು ಬೇಡಿ, ಬಂಗಾರವನ್ನೂ ಕೊಟ್ಟರು. ಆಮೇಲೆ ಉಂಡು, ವೃಕ್ಷಚ್ಛಾಯೆ ಗಳಲ್ಲಿ ಸುಖವಾಗಿ ವಿಶ್ರಮಿಸಿದರು. ತಮ್ಮವರಾರು ಬಂದಿರುವರೆಂದು, ತಿರುಗಿ, ನೋಡಿ, ಪರಸ್ಪರ ಸಂದರ್ಶನ ಸಲ್ಲಾಪಗಳಿಂದ ಹರ್ಷಭರಿತರಾದರು. ಸ್ತ್ರೀಯರು ಕೂಡ ತಮ್ಮ ಬಂಧು ಬಳಗ ದವರನ್ನು ಕಂಡು, ಮುಗುಳು ನಗೆಯಿಂದಲು, ಕಡೆಗಣ್ಣ ನೋಟದಿಂದಲೂ, ಮಾತಾಡಿಸಿ ದರು; ವೃದ್ಧರಿಗೆ ವಂದಿಸಿದರು; ಚಿಕ್ಕವರಿಗೆ ಆಶೀರ್ವದಿಸಿದರು. ಎಲ್ಲರೂ ಗುಂಪುಗುಂಪಾಗಿ ಕೂತು ಕೃಷ್ಣಕಥಾಲೋಲರಾದರು.

ಅಲ್ಲಿಗೆ ಪಾಂಡವರೂ ಬಂದಿದ್ದರು. ಕುಂತಿಯು ಅಣ್ಣತಂಗಿಯರನ್ನೂ, ಹಿರಿಯರನ್ನು ಅತ್ತಿಗೆ ನಾದಿನಿಯರನ್ನು ನೋಡಿದಳು. ಕೃಷ್ಣದರ್ಶನದಿಂದ ಆಕೆಯ ಮನಃಕಮಲವು ಅರಳಿತು.

ಆಗ ಕುಂತಿಯು ವಸುದೇವನನ್ನು ಕಂಡು 'ಅಣ್ಣಾ! ನಾನು ಎಷ್ಟು ನಿರ್ಭಾಗ್ಯಳು! ಆಪತ್ತಿ ನಲ್ಲಿದ್ದು, ಕಷ್ಟಪಡುವ ನಮ್ಮ ಸ್ಮರಣೆ ನಿಮಗೆ ಬರಲಿಲ್ಲವಲ್ಲ! ದೇವರ ದಯವಿಲ್ಲದವರನ್ನು ಯಾವ ಬಂಧಿಗಳು, ತಂದೆತಾಯಂದಿರು, ಅಣ್ಣತಮ್ಮಂದಿರು ಕೂಡ ಸ್ಮರಿಸುವುದಿಲ್ಲವಿದು ನಿಜ!' ಎಂದಳು. ಆ ಮಾತನ್ನಾಲಿಸಿ, ವಸುದೇವನು ನಿಟ್ಟುಸಿರನ್ನು ಬಿಟ್ಟು 'ತಂಗಿ! ಏಕೆ ನಮ್ಮಲ್ಲಿ ಕೋಪ? ನಾವೆಲ್ಲರೂ ದೇವರ ಕೈಲಿ ಆಡುವ ಗೊಂಬೆಗಳಲ್ಲವೇ? ಅವನು ಮಾಡಿಸಿದ್ದನ್ನು ನಾವು ಮಾಡುವೆವಾಗಲಿ ಸ್ವತಂತ್ರರಲ್ಲ. ಕೇಳು. ನಾವೇನು ಸುಖವಾಗಿದ್ದೇವೆಂದು ತಿಳಿದೆಯಾ? ಕಂಸನ ಕಾಟವೆಷ್ಟೆಂದು ನಿನಗೆ ಗೊತ್ತಿಲ್ಲವೇ? ದಿಕ್ಕಾಪಾಲಾಗಿ ಹೋಗಿದ್ದ ಯಾದವರು ಇಂದು, ಗೋವಿಂದನ ದಯದಿಂದ ಹೊಂದಿಕೊಂಡಿರುವರು' ಎಂದು ಸಂತೈಸಿದನು.

ಭೀಷ್ಮ ದ್ರೋಣ ಧೃತರಾಷ್ಟ್ರ ದುರ್ಯೋಧನಾದಿಗಳು, ಪತ್ನೀ ಕಳತ್ರ ಸಮೇತರಾಗಿ ಬಂದಿದ್ದರು. ವಿದುರ ಕೃಪ ಕೇಕಯ ಕುಂತಿಭೋಜ, ನಗ್ನಜಿದ್ದ್ರುಪದ, ಕಾಶಿರಾಜ, ದಮಘೋಷ, ಜನಕ, ಬಾಹ್ಲಿಕಾದಿ ಜನರು, ಶ್ರೀನಿವಾಸನನ್ನು ನೋಡಿ, ಆಶ್ಚರ್ಯಭರಿತರಾದರು; ಕೃಷ್ಣರಾಮ ರಿಂದ ಸಮ್ಮಾನಿತರಾಗಿ, ಸಂತೋಷದಿಂದ ಪ್ರಶಂಸಿಸಿದರು—

ಭೋಜಕುಲವೇ ಶ್ರೀಕೃಷ್ಣ ಜನ್ಮದಿಂದ ಪಾವನವಾಯಿತು. ಯಾದವರು ಸರ್ವದಾಯೋಗಿ ದುರ್ಲಭನಾದ ಶ್ರೀಶನನ್ನು ನೋಡಿ ತಣಿಯುತ್ತಿರುವರು. ಅವರೇ ಧನ್ಯರು! ಅವನ ಮುಖದಿಂದ ಬಂದ ಗೀತಾ ಬ್ರಹ್ಮಸೂತ್ರಾದಿ ಶಾಸ್ತ್ರವು, ಅವನ ಪಾದಾರವಿಂದದಿಂದ ಮಂದಾಕಿನಿಯು, ಜಗತ್ಪಾವನಕರಗಳಾಗಿವೆ. ಕಲಿಕಾಲಬಲದಿಂದ ನಿಸ್ಸತ್ತ್ವಳಾದ ಧರಣಿಯು ಅವನ ಪಾದಾರವಿಂದ ಸ್ಪರ್ಶದಿಂದ ಸಸ್ಯಸಂಪತ್ಸಮೃದ್ಧಳಾಗುವಳು. ಅಂತಹ ಶ್ರೀಕೃಷ್ಣನಿಂದ ಕೂಡಿ ಮಾತಾಡಿ, ಅವನಿಗೆ ನಮಿಸಿ, ಅವನನ್ನು ಮುಟ್ಟಿ, ಅವನಿಂದ ಪ್ರೇರಿತರಾಗಿ, ಅವನು ಹೇಳಿದಂತೆ ನಡೆದು, ಶಯನಾಸನ ಭೋಜನ ಸಮಯಗಳಲ್ಲಿ ಅವನನ್ನು ಬಿಡದೆ, ಜೀವಿಸುವ ಯದುಪುಂಗವರೇ ಕೃತಕೃತ್ಯರು! ನರಕಮಾರ್ಗವೆನಿಸುವ ಕೆಟ್ಟ ಗೃಹಾಶ್ರಯದಲ್ಲಿ ನರಳುವ ಸುಜೀವರಿಗೆ ಸ್ವರ್ಗಾಪವರ್ಗ ಪದವಿಯನ್ನೀವ ಶ್ರೀಕೃಷ್ಣನು, ಈ ಯಾದವರೊಡನಾಡುತ್ತಿರುವನಲ್ಲ!

ನಂದನು ಗೋಪಾಲರಿಂದ ಕೂಡಿ, ಕೃಷ್ಣರಾಮರನ್ನು ನೋಡಲು ಬಂದನು. ಚಿರಕಾಲಾನಂತರ ಕಂಡ ನಂದನನ್ನು ಆನಂದದಿಂದ ಬಿಗಿದಪ್ಪಿ, ವಸುದೇವನವರನ್ನೆಲ್ಲ ಸತ್ಕರಿಸಿದನು. ಕೃಷ್ಣರಾಮರು ನಂದನಿಗೆ ವಂದಿಸಿ, ಯಶೋದೆಗೆ ನಮಿಸಿ, ಪ್ರೇಮಾಶ್ರುನಯನರಾಗಿ ಮಾತಾಡಲು ಬರದೆ, ಸುಮ್ಮನೆ ನಿಂತರು. ಯಶೋದೆಯು ಅವರನ್ನು ಹತ್ತಿರ ಕೂಡಿಸಿಕೊಂಡು, ಮುದ್ದಾಡಿ, ಹರಸಿದಳು. ವ್ರಜರಾಣಿಯನ್ನಾಲಿಂಗಿಸಿ, ದೇವಕೀರೋಹಿಣಿಯರು ಅವಳು ತಮ್ಮ ಮಕ್ಕಳಿಗೆ ಮಾಡಿದ ಪೋಷಣ ಲಾಲನಾದಿಗಳನ್ನು ನೆನೆದು, 'ಯಶೋದೆ! ನೀ ಮಾಡಿದ ಉಪಕೃತಿಯನ್ನು ಮರೆಯಲಾರೆವು. ಇಂದ್ರಸಮಾನ ಸಂಪದವನ್ನಿತ್ತರೂ ನಿನ್ನ ಋಣ ತೀರದು. ತಂದೆ ತಾಯಿಯರಿಂದ ಅಗಲಿದ್ದ ರಾಮಕೃಷ್ಣರನ್ನು ಬೆಳೆಸಿ, ಮುದ್ದಾಡಿ, ಕಣ್ಣನ್ನು ರೆಪ್ಪೆಗಳಂತೆ ಸಲಹಿದೆ. ನಾವೂ ನಿಶ್ಚಿಂತರಾಗಿದ್ದೆವು. ಇಂತಹ ಸಜ್ಜನರ ಸ್ನೇಹವು ಸರ್ವಭಯನಿವಾರಕವಲ್ಲವೇ?' ಎಂದು, ಅವಳನ್ನು ಸತ್ಕರಿಸಿದರು.

ಗೋಪಿಯರು, ಕೃಷ್ಣನನ್ನು ಬಿಡದೆ ನೋಡಿ, ಕಣ್ಣಿಗೆ ಎವೆಯಿಟ್ಟ ವಿಧಿಯನ್ನು ಬೈಯುತ್ತಾ, ಕಣ್ಣೊಳಗಿದ್ದ ಕೃಷ್ಣಮೂರ್ತಿಯನ್ನು ತಮ್ಮೊಳಗೆ ತಂದು, ಅಲ್ಲೇ, ಮನಃಫಲಕದಲ್ಲಿ ಮೂಡಿದ ಶ್ರೀಶನನ್ನು ಬಿಗಿದಪ್ಪಿ, ತನ್ಮಯರಾದರು. ಅವರನ್ನು ಏಕಾಂತದಲ್ಲಿ ಕಂಡು, ಕುಶಲವನ್ನು ವಿಚಾರಿಸಿ, ಕೃಷ್ಣನು ನಸುನಗುತ್ತಾ ಇಂತೆಂದನು–

ದೀನ ಜನರ ಮೊರೆ ಕೇಳಿ ಮನ ಕರಗಿ, ಬೇರೆ ಕಾರ್ಯಗಳನ್ನು ಹಾಗೂ ಯಾದವರ ಪ್ರಯೋಜನವನ್ನು ಸಾಧಿಸಲು ನಿಮ್ಮನ್ನು ಬಿಟ್ಟು ದೂರವಾದ ನಮ್ಮ ಜ್ಞಾಪಕವಿದೆಯೇ? ಚೆನ್ನಾಗಿ ವಿಚಾರಿಸಲು ಭಗವಂತನೇ ಸ್ವತಂತ್ರನು. ಅವನು ಜೀವರನ್ನೊಂದು ಕಡೆ ಕಲೆಸುವನು; ಅವನೇ ಜೀವರನ್ನು ಅಗಲಿಸುವನು. ಗಾಳಿಯು ಮೇಘಜಾಲವನ್ನು ತೃಣ, ತೂಲ, ಧೂಳಿಗಳನ್ನು ಕಲೆಸಿ, ಬೇರ್ಪಡಿಸುವಂತೆ, ಆ ದೇವನ ಆಟವಾಗಿದೆ. ಅಂತಹ ಭಗವಂತನಾದ ನನ್ನಲ್ಲಿ ಭಕ್ತಿಯೇ ಸಂಯೋಗ ವಿಯೋಗರೂಪ ಸಂಸಾರದಿಂದ ಬಿಡಿಸಲು ಸಮರ್ಥವಾಗಿದೆ. ಅದೃಷ್ಟದಿಂದ ನಿಮಗೆ ಅಂತಹ ಭಕ್ತಿಯು ಅಂಕುರಿಸಿ ಆನಂದಪ್ರದವಾಗಿದೆ. ಅನಾದ್ಯನಂತನಾದ ನನ್ನಿಂದ ಪಂಚಭೂತ ರಹಿತ ಶರೀರಗಳು ಜೀವರಿಗೆ ಬರುತ್ತಿವೆ. ನನ್ನಿಂದ ಹೋಗುತ್ತಿವೆ. ನಾನು ಸಕಲ ಭೂತ ನಿಯಾಮಕನು, ಜೀವಜಡಾಧಾರನು, ನಾಶರಹಿತನು.

ಗೋವಿಂದನ ಆಧ್ಯಾತ್ಮ ಸುಂದರವಚನಗಳಿಂದ, ಅಜ್ಞಾನರಹಿತನಾಗಿ, ಗೋಪಿಯರು, ಭಕ್ತಿಯಿಂದ ಅವನನಿಂತು ಪೊಗಳಿದರು–

ನಾಥ! ಅಗಾಧ ಜ್ಞಾನಶೋಭಿತರಾದ ಬ್ರಹ್ಮಾದಿ ಯೋಗಿಜನ ವಂದ್ಯವಾದ ನಿನ್ನ ಪಾದಾರ ವಿಂದಗಳಿಗೆ ನಮೋ ನಮಃ! ಸಂಸಾರಕೂಪದಿಂದ ಉದ್ಧರಿಸಿ ಪೊರೆವ ನೀನಲ್ಲದೆ, ಗೃಹಧರ್ಮ ಮಗ್ನರಾದ ನಮಗಿನ್ನಾರು ಗತಿ? ಸದಾ ನಮ್ಮ ಹೃದಯದಲ್ಲಿ ವಾಸಮಾಡು ಶ್ರೀಹರೇ!

## ೭೧. ಕೃಷ್ಣಪತ್ನೀ ದ್ರೌಪದೀ ಸಂವಾದ

ಶ್ರೀಶುಕನು ಹೇಳಿದನು–

ಇಂತು ಗೋಪಿಯರನ್ನನುಗ್ರಹಿಸಿ, ಕಳಿಸಿ, ಯುಧಿಷ್ಠಿರಾದಿಗಳಲ್ಲಿ ಬಂದು, ಕೃಷ್ಣನು ಅವರ ಯೋಗಕ್ಷೇಮಗಳನ್ನು ವಿಚಾರಿಸಿ, ಅವರನ್ನು ಸಮಾಧಾನಪಡಿಸಿದನು. ಅವರು ಅವನ ಪಾದಾರವಿಂದದಲ್ಲೇ ಮನವಿಟ್ಟು, ಮುದದಿಂತೆಂದರು–

ಮುಕುಂದ! ಮಹಜ್ಜನರ ಮುಖಕಮಲದಿಂದ ಸೂಸಿಬರುವ ನಿನ್ನ ಸೊಗಸಾದ ಪಾದಾರ ವಿಂದ ವರ್ಣನ ಮಕರಂದರಸವನ್ನು ಕರ್ಣಪುಟಗಳಲ್ಲಿ ತುಂಬಿ ಕುಡಿವ ದೇಹಧಾರಿಗಳಿಗೆ, ಅಶುಭವೆಲ್ಲಿಯದು? ನಿನ್ನನ್ನು ಬಾಯಾರ ಪೊಗಳುವ ಭಕ್ತರಿಗೆ ಅಮಂಗಲವೆಲ್ಲಿಯದು? ಆತ್ಮಾ ಶ್ರಯನು, ದೇವ ಮಾನವ ದಾನವರಿಗೆ ಜಾಗ್ರತ್‌ಸ್ವಪ್ನ ಸುಷುಪ್ತಿ ರೂಪಜ್ಞಾನ, ಮಿಶ್ರಜ್ಞಾನ, ಅನ್ಯಥಾಜ್ಞಾನಪ್ರದನು, ಸಕಲಸ್ವಾಮಿಯು, ಆನಂದಮಯನು, ಅವ್ಯಾಹತ ನಿತ್ಯಜ್ಞಾನ ಸ್ವರೂಪನು, ಕಾಲದಿಂದ ನಷ್ಟಪ್ರಾಯವಾದ ವೇದಾದಿ ಸಚ್ಛಾಸ್ತ್ರ ವ್ಯಂಜಕನು, ಸ್ವರೂಪಭೂತೇಚ್ಛೆ ಯಿಂದ ಜನಿಸಿ ಬಂದ ಅಪ್ರಾಕೃತ ದಿವ್ಯದೇಹನು ಆದ ನಿನಗೆ– ಪರಮಹಂಸಮುನಿಗಳು ಸೂಚಿಸಿ ದಂತೆ ತಿಳಿದು, ವಂದಿಸುವೆವು.

ಅಲ್ಲಿ ಒಂದೆಡೆ ಸಭೆ ಸೇರಿದ ಕೌರವಯಾದವ ನಾರಿಯರೆಲ್ಲರು, ಗೋವಿಂದ ವರ್ಣನದಿಂದ ಧನ್ಯರಾಗಿ, ಪ್ರಸಂಗದಿಂದ ಲೋಕಾಭಿರಾಮವಾಗಿಂತು ಮಾತಾಡಿದರು.

ದ್ರೌಪದಿ 'ರುಕ್ಮಿಣಿ! ಸತ್ಯಭಾಮೇ! ಭದ್ರೇ! ಜಾಂಬವತಿ! ಮಿತ್ರವೃಂದೆ! ಲಕ್ಷ್ಮಣೆ! ಕಾಲಿಂದಿ! ನೀಲೇ! ಎಲೌ ಕೃಷ್ಣರಮಣಿಯರೇ! ಲೋಕಾನುಕರಣಮಾಡುತ್ತಾ ಕಾರಣ ಜನ್ಮನಾದ ಶ್ರೀಕೃಷ್ಣನು, ನಿಮ್ಮನ್ನು ಮದುವೆಯಾದ ಬಗೆ ಹೇಳಿ!' ಎಂದು ಕೇಳಿದಳು.

ರುಕ್ಮಿಣಿ 'ಚೈದ್ಯನಿಗೆ ಕೊಡಬೇಕೆಂದು, ಧನುರ್ಬಾಣಗಳನ್ನು ಪಿಡಿದು ನಿಂತ ರಾಜ ರಾಜಭಟರ ತಲೆಗಳ ಮೇಲೆ ತನ್ನ ಕಾಲಧೂಳಿಯನ್ನೆರಚಿ, ಸಿಂಹವು ನರಿ ಕುರಿ ಹಿಂಡಿನಲ್ಲಿ ತೂರಿಹೋಗುವಂತೆ, ಧೈರ್ಯದಿಂದ ನನ್ನನ್ನು ರಥದಲ್ಲಿಟ್ಟು ದ್ವಾರಕೆಗೆ ಕರೆತಂದ ಶ್ರೀನಿವಾಸನ ಚರಣದಾಸಿಯು ನಾನು' ಎಂದಳು.

ಸತ್ಯಭಾಮೆ, 'ತಮ್ಮನನ್ನು ಕೊಂದನೆಂದು ಅಪವಾದವನ್ನು ಹೊರಸಿದ ಪಶ್ಚಾತ್ತಾಪದಿಂದ – ನಮ್ಮ ತಂದೆ– ಶ್ರೀಕೃಷ್ಣನು, ಜಾಂಬವಂತನನ್ನು ಗೆದ್ದು ತಂದ ಮಣಿಯಿಂದ ನನ್ನನ್ನೂ ಶ್ರೀಶನಿಗಿತ್ತು ಮದುವೆ ಮಾಡಿದನು' ಎಂದಳು.

ಜಾಂಬವತಿಯು, 'ಇಪ್ಪತ್ತೇಳು ದಿನ ಯುದ್ಧಮಾಡಿದ ನಂತರ ನಮ್ಮ ತಂದೆ, ತನ್ನ ಕುಲ ದೈವವಾದ ಶ್ರೀರಾಮಚಂದ್ರನೇ ಬೇರೆ ರೂಪದಿಂದವತರಿಸಿರುವ ಕೃಷ್ಣನೆಂದರಿತು, ಕ್ಷಮಿಸೆಂದು ಬೇಡಿ, ನನ್ನನ್ನೂ ಮತ್ತು, ತಾನು ಸಿಂಹವನ್ನು ಸಂಹರಿಸಿ ತಂದ ಮಣಿಯನ್ನೂ ಕೊಟ್ಟು, ವಂದಿಸಿ, ಕಳಿಸಿದನು. ಆ ಕೃಷ್ಣಸ್ವಾಮಿಯ ದಾಸಿಯೇ ನಾನು, ಪಾಂಚಾಲಿ!' ಎಂದಳು.

ಕಾಳಿಂದಿ, 'ಶ್ರೀಕೃಷ್ಣಪಾದಸ್ಪರ್ಶಾಕಾಮಳಾಗಿ ತಪಸ್ಸು ಮಾಡಿ, ಅರ್ಜುನಕೃಷ್ಣರೇ ತಾವಾಗಿ ಬಂದಾಗ, ಶ್ರೀಹರಿಯ ಕೈಪಿಡಿದು, ಅವನ ಮನೆದಾಸಿಯಾಗಿ, ಆನಂದದಿಂದಿರುವೆ'ನೆಂದಳು.

ಮಿತ್ರವಿಂದೆ, 'ಸ್ವಯಂವರದಿ ನೆರೆದಿದ್ದ ರಾಜರನ್ನು ಗೆದ್ದು, ನನ್ನನ್ನೂ ಬೇರೆ ದುಷ್ಟನಿಗೆ ಕೊಡಲಿದ್ದ ಅಣ್ಣಂದಿರನ್ನು ವಂಚಿಸಿ, ದ್ವಾರಕೆಗೆ ತಂದು, ಶ್ರೀನಿವಾಸನು, ಮದುವೆಯಾಗಿರುವನು. ಅವನ ಪಾದಾರವಿಂದ ತೀರ್ಥವೆನಗೆ ಜನುಮಜನುಮದಲ್ಲಿ ಸಿಗುವಂತಾಗಲಿ!' ಎಂದಳು.

ನೀಲೆ, 'ಬಲಶಾಲಿಗಳು, ತೀಕ್ಷ್ಣಶೃಂಗಗಳಾದ ಏಳು ಗೂಳಿಗಳನ್ನು ಜಯಿಸಿ, ಕಟ್ಟಿ, ನಮ್ಮಪ್ಪನ ಕಟ್ಟಪ್ಪಣೆಯಂತೆ, ವೀರ್ಯಪರೀಕ್ಷೆಯನ್ನಿತ್ತು, ನನ್ನ ಕೈಪಿಡಿದ ಕೃಷ್ಣನೇ, ನನ್ನ ಪರದೈವವು' ಎಂದಳು.

ಭದ್ರೆ, 'ದ್ರೌಪದೀ! ಕೇಳು! ನಾನು ಕೃಷ್ಣಚಿತ್ತಳಾಗಿಹೆನೆಂದರಿತು, ನಮ್ಮ ತಂದೆ, ಆನಂದದಿಂದ ಗೋವಿಂದನಿಗಿತ್ತು, ದಾಸೀಜನರಿಂದ, ಸೈನ್ಯದಿಂದ ಕೂಡಿಸಿ, ಲಕ್ಷಣವಾಗಿ ಮದುವೆಯಾಗಿ ಕಳಿಸಿದನು. ಸರ್ವಶ್ರೇಯಃಕಾರಣವಾದ ಶ್ರೀಶನ ಪಾದಸ್ಪರ್ಶವೆನಗೆ ಸದಾ ಇರಲಿ' ಎಂದಳು.

ಲಕ್ಷ್ಮಣೆ ಹೇಳಿದಳು–

ದ್ರೌಪದೀ! ನಾರದರಿಂದ ಶ್ರೀಕೃಷ್ಣನ ಗುಣವರ್ಣನೆಯನ್ನು ಕೇಳಿ, ನನ್ನ ಮನವು ಅವನಲ್ಲೇ ನೆಲೆಸಿತು. ಸರ್ವಲೋಕಪಾಲಕರನ್ನು ಬಿಟ್ಟು ಶ್ರೀದೇವಿಯು ಅವನನ್ನೇ ವರಿಸಲಿಲ್ಲವೇ? ನನ್ನ ಅಭಿಲಾಷೆಯನ್ನರಿತು, ನಮ್ಮ ತಂದೆ ಬೃಹತ್ಸೇನನು ಕೃಷ್ಣನಿಗೇ ಕೊಡಲು ನಿಶ್ಚಯಿಸಿ, ಅನಿತರ ಸಾಧ್ಯವಾದ ಮತ್ಸ್ಯಯಂತ್ರವನ್ನಿಟ್ಟು, ಸ್ವಯಂವರವನ್ನು ಘೋಷಿಸಿದನು. ಪಾರ್ಥನಿಗಾಗಿಯೇ ಮತ್ಸ್ಯಯಂತ್ರವನ್ನು ನಿಮ್ಮ ತಂದೆ ಇಟ್ಟಂತೆಯೇ, ಕೃಷ್ಣನಿಗಾಗಿಯೇ ನಮ್ಮಪ್ಪ ಈ ಉಪಾಯವನ್ನು ಹೂಡಿದನು. ಒಂದು ವಿಶೇಷವೆಂದರೆ, ನಮ್ಮಪ್ಪನಿಟ್ಟ ಮತ್ಸ್ಯಯಂತ್ರದಲ್ಲಿ, ಮೀನು ಕಾಣದಂತೆ ಮುಚ್ಚಲ್ಪಟ್ಟಿತ್ತು! ಕೆಳಗೆ ನೀರಿನಲ್ಲಿ ಪ್ರತಿಬಿಂಬವಾಗಿ ಕಾಣುತ್ತಿತ್ತು. ಇಂತು ಕಠಿನತರ ಮತ್ಸ್ಯವೇಧವನ್ನು ಮಾಡಲೆಣಿಸಿ, ರಾಜರು ವಿಫಲ ಪ್ರಯತ್ನರಾದರು. ಕೆಲವರು ಜ್ಯಾಬಂಧವನ್ನು ಮಾಡುವಾಗ ಬಿಲ್ಲು ಸಿಡಿದು, ಕೆಳಗೆ ಬಿದ್ದರು. ನರಕ ದುರ್ಯೋಧನ ಜರಾಸಂಧರು, ದುರ್ಯೋಧನ ಕರ್ಣರು, ಮತ್ಸ್ಯವನ್ನೇ ಕಾಣಲಾರದೆ ಹಿಂದಿರುಗಿದರು. ಅರ್ಜುನನು ಮೀನನ್ನು ಕಂಡು, ಬಾಣವನ್ನು ಬಿಡಲು, ಅದು ಮೀನಿಗೆ ತಗಲಿತಗಲದಂತೆ ಹೋಯಿತು. ರಾಜರು ಭಗ್ನದರ್ಪರಾಗಿ ಹೋಗಲು, ಶ್ರೀಕೃಷ್ಣನು, ಬಿಲ್ಲನ್ನು ಕಟ್ಟಿ, ಬಾಣವನ್ನೂ ಹೂಡಿ, ಮೀನನ್ನು ಜಲದಿ ನೋಡಿ, ಛಿನ್ನಬಾಣದಿಂದಲೇ ಅದನ್ನು ಕೆಡಹಿದನು. ಆಗ ಅಭಿಜಿನ್ಮುಹೂರ್ತವಾಗಿತ್ತು. ಶ್ರೀಕೃಷ್ಣನ ಜಯದಿಂದ ಹರ್ಷಿತರಾಗಿ, ದೇವತೆಗಳು ದುಂದುಭಿಗಳನ್ನು ಮೊಳಗಿದರು; ಪೂಮಳೆಗರೆದರು.

ಕೋಮಲ ಪಾದಾರವಿಂದಗಳ ಪೈಜಣಿಯು ಗಲ್ಲುಗಲ್ಲೆಂದು ಧ್ವನಿಸುತ್ತಿರಲು, ನೋಡುವ ಜನರ ಮನವನ್ನು ಸೆಳೆಯುತ್ತಾ, ಪಟ್ಟಪೀತಾಂಬರವನ್ನುಟ್ಟು, ಬಟ್ಟಕುಚಗಳನ್ನು ಉತ್ತರೀಯಾಂಶುಕದಿಂದ ಬಚ್ಚಿಟ್ಟು, ನವಮಲ್ಲಿಕಾದಾಮವನ್ನು ಮುಡಿದು, ಕೈಯಲ್ಲಿ ವೈಜಯಂತೀಮಾಲೆಯನ್ನು ಪಿಡಿದು, ನಗುತ್ತಾ, ನಾನು ರಂಗವನ್ನು ಪೊಕ್ಕು, ಕೃಷ್ಣನನ್ನು ಸೇರಿದೆನು. ಶೀತಲ ಮಂದಹಾಸ ಚಂದ್ರಿಕೆ, ಮಕರಕುಂಡಲರಂಜಿತಗಂಡ ಕಾಂತಿ, ಚಿಕುರ ವಿಲಾಸ, ಕಟಾಕ್ಷಗಳಿಂದ ಸುಂದರವಾದ ನನ್ನ ಮುಖವನ್ನೆತ್ತಿ, ನೋಡಿ, ಲಜ್ಜೆಯಿಂದ ಶಿರಬಾಗಿ, ಪೂಮಾಲೆಗಳನ್ನು ಪ್ರೀತಿಯಿಂದ ಮುರಾರಿಯ ಕೊರಳಿಗೆ ಹಾಕಿ, ಅವನ ಹೃದಯಸೀಮೆಯಲ್ಲಿ ಸ್ವಲ್ಪಸ್ಥಲವನ್ನು ಬೇಡುವಂತೆ ನಿಂತೆ.

ಆಗ ಮೃದಂಗ ಪಟಹ ಶಂಖ ಭೇರಿನೀನಾದಗಳು ತುಮುಲವಾದವು. ನಟನರ್ತಕಿಯರಾ ನಂದರಿಂದ ಆಡಿದರು. ಗಾಯಕರು ಪಾಡಿದರು. ನಾನು ಶ್ರೀರಮಣನನ್ನು ವರಿಸಿದುದನ್ನು ಸಹಿಸದೆ, ಇದರ ದುಷ್ಟರಾಜರು, ಮೇಲೇರಿ ಬರುವುದನ್ನು ಕಂಡು, ಕೃಷ್ಣನು, ನಾಲ್ಕು ಕುದುರೆಗಳ, ಗರುಡಧ್ವಜದ, ಕನಕನಿರ್ಮಿತ ರಥದಲ್ಲಿ ಕೂತು, ನನ್ನನ್ನೂ ಕರೆದುಕೊಂಡು, ಅವರೆಲ್ಲರೆದುರಿಗೇ, ದ್ವಾರಕೆಗೆ ನಡೆದನು. ಮಾರ್ಗಮಧ್ಯದಲ್ಲಿ ಬಂದು ತಡೆದ ರಾಜರನ್ನು– ಶ್ರೀಕೃಷ್ಣನು– ಸಿಂಹವು ನರಿಗಳನ್ನಂತೆ– ಹೊಡೆದೋಡಿಸಿದನು. ಅಲಂಕೃತವಾದ ದ್ವಾರಕೆಯಲ್ಲಿ, ನಮ್ಮ ತಂದೆತಾಯಿ ಬಂಧುಗಳನ್ನು ಕರೆಸಿ, ಮಹಾವೈಭವದಿಂದ ನನ್ನನ್ನು ಮದುವೆಯಾದನು. ಬೆಲೆಯಿಲ್ಲದ ವಸ್ತ್ರಾ ಲಂಕಾರಗಳು, ಶಯನಾಸನ ಭೂಷಣಗಳು, ದಾಸಿಯರು, ರಥಗಜತುರಗಗಳು, ದಿವ್ಯಾ ಯುಧಗಳು ಮೊದಲಾದವನ್ನಿತ್ತು, ನಮ್ಮ ತಂದೆ, ಬೃಹತ್ಸೇನನು, ಸ್ವಯಂಪೂರ್ಣನಾದ ಕೃಷ್ಣ ನನ್ನು ಪೂಜಿಸಿ, ಧನ್ಯನಾದನು.

ಎಷ್ಟೋ ಜನ್ಮಗಳ ತಪಃಫಲದಿಂದ, ನಾವೆಲ್ಲರು, ಆತ್ಮಾರಾಮನಾದ ಶ್ರೀಕೃಷ್ಣನ ದಾಸಿಯ ರಾಗಿರುವೆವು' ಎಂದಳು. ಮಹಿಷಿಯರು 'ನಾವು ಭೌಮನ ಕಾರಾಗಾರದಲ್ಲಿ ನರಳುತ್ತಿದ್ದೆವು. ಸಂಸಾರಕಾರಾಗಾರ ನಿರ್ಮುಕ್ತಿಯನ್ನು ಕೊಡು!' ಎಂದು ಬೇಡಿದ ನಮ್ಮನ್ನು, ನರಕಸಂಹಾರ ಮಾಡಿ ಉದ್ಧರಿಸಿದ ಸ್ವರಮಣನ ಕೃಷ್ಣನ ಮಡದಿಯರಾಗಿ, ಅವನ ಸೇವೆಯೇ ಮಹಾಭಾಗ್ಯ ವೆಂದು ತಿಳಿದಿರುವೆವು. ದ್ರೌಪದಿ! ನಮಗೆ ಸಾಮ್ರಾಜ್ಯ, ಸ್ವರ್ಗರಾಜ್ಯ, ಅಂತರಿಕ್ಷರಾಜ್ಯ, ಪಾತಾಳರಾಜ್ಯ, ಬ್ರಹ್ಮಪದಬೇಡ. ಶ್ರೀಹರಿಯ ಶ್ರೀಕುಚ ಕುಂಕುಮ ಪಂಕರೂಷಿತ ಪದಪಂಕಜ ರಜವನ್ನು ಶಿರದಿ ಧರಿಸಿ, ಸುಖಪಡುವಾಗ, ಮೋಕ್ಷವೂ ಬೇಡವೆನಿಸಿದೆ. ಕಾಡುಜನರಾದ ಗೋಪತರುಣಿಯರು ಕೂಡ, ಆಕಳ ಹಿಂಡಿನ ಹಿಂದೆ ಬರುವ ಆ ಶ್ರೀಹರಿಯ ಪಾದಸ್ಪರ್ಶ ಕಾಮರಾಗಲಿಲ್ಲವೇ?' ಎಂದು ವಿಜ್ಞಾಪಿಸಿದರು.

## ೭೨. ಋಷಿ ಸಮಾಗಮ

ಇಂತು ನುಡಿದ ಕೃಷ್ಣಕಾಂತೆಯರ ಕಥೆಯನ್ನಾಲಿಸಿ, ಕುಂತೀ ಗಾಂಧಾರೀ ದ್ರೌಪದೀ ಪ್ರಮುಖ ನಾರಿಯರು, ಅವರ ಕೃಷ್ಣಾನುರಾಗವನ್ನು ಕಂಡು, ಆನಂದದಿಂದ, ಕಣ್ಣೀರಿಟ್ಟು, ಅವರನ್ನು ಕೊಂಡಾಡಿದರು.

ಆಗ ಕೃಷ್ಣಸಭೆಗೆ ಅವನ ದರ್ಶನಕ್ಕೆಂದು, ಮುನಿಗಳು ಬಂದರು. ವೇದವ್ಯಾಸರು, ನಾರದ, ಚ್ಯವಕ, ದೇವಲ, ಅಸಿತ ವಿಶ್ವಾಮಿತ್ರ, ಶತಾನಂದ, ಭಾರದ್ವಾಜ, ಗೌತಮ, ಭಗವಾನ್ ಪರಶು ರಾಮ, ವಸಿಷ್ಠ, ಗಾಲವ, ಭೃಗು, ಪುಲಸ್ತ್ಯ, ಕಶ್ಯಪ, ಅತ್ರಿ, ಮಾರ್ಕಂಡೇಯ, ಬೃಹಸ್ಪತಿ, ದ್ವಿತ, ತ್ರಿತ, ಏಕತ ಸನಕಾದಿಗಳು, ಆಂಗೀರಸ, ಅಗಸ್ತ್ಯ, ಯಾಜ್ಞವಲ್ಕ್ಯ, ವಾಮದೇವ ಮೊದಲಾದ ಋಷಿವರರು ಬರಲು, ನೋಡಿ, ರಾಜರೆಲ್ಲ ಎದ್ದುನಿಂತರು. ಕೃಷ್ಣರಾಮರು, ಪಾಂಡವರು, ಅವರಿಗೆ ವಂದಿಸಿ, ಆಸನಗಳಲ್ಲಿ ಕುಳ್ಳಿರಿಸಿ ಸ್ವಾಗತವನ್ನಿತ್ತರು. ಅರ್ಘ್ಯ ಪಾದ್ಯ ಮಾಲ್ಯ ಧೂಪ, ಗಂಧ, ಫಲಗಳಿಂದ ಪೂಜಿಸಿದರು. ಧರ್ಮರಕ್ಷಣ ದೀಕ್ಷಾದಕ್ಷನಾದ ಶ್ರೀಕೃಷ್ಣನು, ಸಭೆಯ ಜನರು ಕೇಳುತ್ತಿರಲು, ಇಂತು ನುಡಿದನು–

ಇಂದು ನಾವು ಶರೀರ ಧರಿಸಿ ಪುಟ್ಟಿದುದಕ್ಕೆ ಸಾರ್ಥಕವಾಯಿತು. ಇಂದು ಕೃತಾರ್ಥರಾದೆವು. ದೇವತೆಗಳಿಗೂ ಕಾಣಸಿಗದ ಯೋಗೇಶ್ವರರ ದರ್ಶನವಾಯಿತು. ಪ್ರತಿಮೆಯೇ ದೇವರೆಂಬುವ ಅಲ್ಪಮತಿಗಳಿಗೆ, ಹಾಗೂ ಸ್ವಲ್ಪ ಪುಣ್ಯವಂತರಿಗೆ ನಿಮ್ಮಂತಹ ಋಷಿವರರ ದರ್ಶನ ಸ್ಪರ್ಶನಾಲಾಪ ವಂದನಾದಿ ಲಾಭವು ಸಿಗುವುದೇ?

ಗಂಗಾನದಿಗಳಲ್ಲಿ ಕಾಣುವ ಜಲವೇ ತೀರ್ಥವಲ್ಲ. ಮಣ್ಣುಕಲ್ಲಿನ ಪ್ರತಿಮೆಗಳೇ ದೇವತೆಗಳಲ್ಲ. ಆದರೆ ಅಲ್ಲಿ ಸನ್ನಿಹಿತರಾದ ದೇವತೆಗಳನ್ನು, ತೀರ್ಥಮಾನಿ ಸುರರನ್ನು ಅನುಸಂಧಾನದಿಂದ ತಿಳಿದು ಭಕ್ತಿಯಿಂದ ಸೇವಿಸುವವರನ್ನು ಅವರು ಪಾವನಮಾಡುವರು. ಅವನ ಅನುಗ್ರಹವು ಚಿರಕಾಲ ಸೇವೆಯಿಂದ ಲಭಿಸಿ, ಆದರಿಂದ ತೀರ್ಥಾದಿ ಸ್ನಾನಕ್ಕೆಂತಲು, ದೇವಪ್ರತಿಮಾದರ್ಶನಕ್ಕೆಂತಲು ಬರುವ ಸಜ್ಜನ ಸಂಗವು ಸಿಗುವುದು; ಅದರಿಂದ ಜ್ಞಾನವು, ಅದರಿಂದಲೇ ಮೋಕ್ಷವು, ಸಾಧುಗಳು ಜ್ಞಾನಪ್ರದರಾದ– ಶ್ರೀಪಾದವಲ್ಲಭನ ಸಚ್ಛಾಸ್ತ್ರವನ್ನು ಉಪದೇಶಿಸಿ, ತತ್‌ಕ್ಷಣವೇ ಮನುಜರನ್ನು ಪಾವನಮಾಡುವರು. ಅಗ್ನಿ ಸೂರ್ಯ ಚಂದ್ರ ತಾರಾ ಭೂ ಗಗನ ಜಲ ವಾಯು ವಾಕ್ ಮನೋದೇವತೆಗಳು ಕೂಡ– ಎಷ್ಟು ಸೇವಿಸಿದರೂ– ನಾನೇ ದೇವರೆಂಬುವ ಮಿಥ್ಯಾವಾದಿಯ ಪಾಪವನ್ನು ಕಳೆಯದಿರುವರು; ಹರಿಸರ್ವೋತ್ತಮತ್ವವನ್ನೂ ಜೀವ ಜಡ ವೈಲಕ್ಷಣ್ಯವನ್ನೂ ಕಂಡ ವಿವೇಕಿಯನ್ನು ಒಂದು ಮುಹೂರ್ತದಲ್ಲೇ– ಮಾಡಿದ ಸೇವೆಗೆ ತೃಪ್ತರಾಗಿ, ಪಾಪವನ್ನು ಕಳೆದು, ಪಾವನಗೊಳಿಸುವರು. ದೇವತೆಗಳು ಪರೋಕ್ಷಪ್ರಿಯರಾದ್ದರಿಂದ, ಅರ್ಚಾತಿರೂಪದಿಂದ ಒಲಿದು ಸೇವೆಯನ್ನು ಸ್ವೀಕರಿಸಿ, ಋಷಿಗಳನ್ನು ಕಳಿಸಿ, ಜ್ಞಾನಲಾಭವಾಗುವಂತೆ ಮಾಡುವರು. ನೀರನ್ನು ನೋಡಿ ಅದೇ ತೀರ್ಥವೆಂದಲು, ಶವಸದೃಶವು, ವಾತಪಿತ್ತ ಶ್ಲೇಷ್ಮಾಕುಲವೂ ಆದ ಶರೀರವೇ ತಾನೆಂತಲು (ಜೀವನೆಂತಲು), ಪತ್ನೀಸುತರು ತನ್ನವರೆಂತಲು, ಶಿಲಾದಿ ಪ್ರತಿಮೆಗಳೇ ದೇವತೆಗಳೆಂತಲು ತಿಳಿದು, ಶಾಸ್ತ್ರತತ್ತ್ವಜ್ಞರಾದ ಸುಜನರನ್ನು ಗೌರವಿಸದೆ ಇರುವವನನ್ನು ಜ್ಞಾನಿಗಳು, ಮನುಜರೆಂದು ಪೇಳರು. ಅವನೊಂದು ಹೇಸರಕತ್ತೆಯೇ ಸೈ– ಎಂದು ನುಡಿದ ಗೋವಿಂದನನ್ನು ಕಂಡು ಭ್ರಮೆಗೊಂಡು, ಅವನ ಮಾತನ್ನು ಚಿರವಾಗಿ ವಿಚಾರಮಾಡಿ. ಮುನಿಗಳು, ಸರ್ವೇಶನು ಸಾಮಾನ್ಯ ಮನುಜರಂತೆ ನುಡಿದುದು ಲೋಕದ ಜನರಿಗೆ ಧರ್ಮಸಂಗ್ರಹವನ್ನು ಮಾಡಲೆಂದು ಮನಗಂಡು ಭಕ್ತಿಯಿಂದ ಇಂತೆಂದರು–

ತತ್ತ್ವವೇದಿ ಜನರಲ್ಲಿ ಶ್ರೇಷ್ಠರೆನಿಸಿದ ನಾವು, ಜಗಜ್ಜನನಮರಣಾದಿಕಾರಣರಾದ ಶ್ರೀ ಬ್ರಹ್ಮ ರುದ್ರ ಪ್ರಭೃತಿ ದೇವತೆಗಳಿಗೆ ವಲ್ಲಭನೆನಿಸಿ ಮೆರೆವ ನಿನ್ನ ಮಹಿಮೆಯನ್ನು ಸಾಕಲ್ಯೇನ ತಿಳಿಯಲಾರದೆ ಇರುವೆವು. ಈಗ ನೀನಾಡಿದ ಮಾತಿನಿಂದ ನೀನೂ ಒಬ್ಬ ಅಸ್ವತಂತ್ರ ಜೀವನೆಂದೇ ಭ್ರಮಿಸಿದೆವಲ್ಲ! ನಿನ್ನ ಚೇಷ್ಟೆಯು ಅತಿ ರಮಣೀಯವು, ಭಕ್ತಿ ಮಾತ್ರ ಸುಜ್ಞೇಯವು ಆಗಿದೆ. ಸ್ವಾಮಿನ್! ನಿನ್ನ ವಿಡಂಬನ ವೈಚಿತ್ರವು ಮೋಹಕವಾಗಿದೆ! ಸ್ವಪ್ರಯೋಜನವಿಲ್ಲದಿದ್ದರೂ ಸ್ವತಂತ್ರನಾದರೂ ನೀನು ಪ್ರಕೃತಿ ಗುಣಗಳಿಂದ ಜೀವಹಿತ ಸಾಧನೆಗಾಗಿ ಜನನ ಭರಣ ಹರಣ ವ್ಯಾಪಾರವನ್ನು ಮಾಡುತ್ತಿರುವೆ. ವಿಕಾರವನ್ನು ಹೊಂದಿದ ಭೂಮಿಯೇ ಬಹುನಾಮರೂಪಗಳಿಂದ ಕಾಣುವಾಗ ಆ ಪದಾರ್ಥಗಳನ್ನು ತಾನೂ ಉಪಾದಾನವಾಗಿದ್ದು ಬಂಧಿಸಲ್ಪಟ್ಟಿರುವಂತೆ ನೀನು ಬಂಧಿಸಲ್ಪಟ್ಟಿಲ್ಲ. ಇಂತಹ ನಿನ್ನ ರಮಣೀಯ ಚೇಷ್ಟೆಯು ಮನೋಹರವಾಗಿದೆ. ಸತ್ತ್ವವನ್ನು ವೃದ್ಧಿಗೊಳಿಸಿ, ಸುಜನರ ಸಲಹಲು ಆಗಾಗ ನೀನವತರಿಸಿ, ದುಷ್ಟರನ್ನು ನಾಶ ಮಾಡುವೆ; ವೇದಮಾರ್ಗವು ದೂಷಿತವಾಗದಂತೆ ನಿಷ್ಕಂಟಕವಾಗಿರಿಸುವೆ. ವರ್ಣಾಶ್ರಮಧರ್ಮ

ಪರಿಪಾಲನ ಲೀಲನಾದ ಗೋಪಾಲಬಾಲ! ನಮೋ ನಮಃ. ವೇದಮಾರ್ಗವನ್ನು ನಡೆಸಿ ನೋಡಿ ಸುವ ಬ್ರಾಹ್ಮಣರೆಂದರೆ ನಿನಗೆ ಬಲು ಪ್ರೀತಿ. ಅವರಲ್ಲಿ ನೆಲೆಸಿರುವ ನೀನು ಅವರ ನುಡಿ ಯಿಂದ ಕಾಣಿಸುವೆ. ಸುಶಾಸ್ತ್ರ ಸಮಧಿಗಮ್ಯನು, ಕುತರ್ಕಾಗೋಚರನು, ಪರೋಕ್ಷಪ್ರಿಯನು ಆದ ನೀನು ಶಾಸ್ತ್ರವನ್ನು ಉಪದೇಶಿಸಿ ಲೋಕವನ್ನು ಸನ್ಮಾರ್ಗದಲ್ಲಿ ನಡೆಸುವ ಬ್ರಾಹ್ಮಣರನ್ನು ಸತ್ಕರಿಸಿ ಪೊರೆವೆ; ಆದುದರಿಂದಲೇ ಬ್ರಹ್ಮಣ್ಯದೇವನೆನಿಸಿ ವಿರಾಜಿಸುವೆ.

ಇಂದು ನಮ್ಮ ಜನ್ಮ ಸಫಲವಾಯಿತು. ನಮ್ಮ ವಿದ್ಯೆ, ನಮ್ಮ ತಪಸ್ಸು, ನಮ್ಮ ಜ್ಞಾನಾದಿ ಗಳಿಂದು ಸಾರ್ಥಕವಾದವು. ನಿನ್ನ ಸಂಗದಿಂದ ನಾವು ಧನ್ಯರಾದೆವು. ನೀನೇ ನಮ್ಮ ಕುಲದೈವವು. ಹರೇ! ನಾರಾಯಣ! ಸ್ವರೂಪ ಸಾಮರ್ಥ್ಯದಿಂದ ನಿನ್ನ ಜ್ಞಾನಾನಂದ ಪ್ರಕಾಶವನ್ನು ಕಾಣದಂತೆ ಮಾಡಿ ತೋರುವ ಪರಮಾತ್ಮನೇ! ನಿನಗೆ ನಮಸ್ಕಾರವು. ಒಂದು ಕಡೆ ಕೂಡಿ ಆಡಿದರೇನು! ಈ ಯಾದವರು– ನಿನ್ನ ಮಾಯೇಚ್ಛೆಯಿಂದ ಕುರುಡರಂತಾಗಿ– ಕಾಲರೂಪಿಯಾದ ನಿನ್ನ ಸಾಮರ್ಥ್ಯವನ್ನು ಅರಿಯದಿರುವರು. ಅಂತಹ ನಿನ್ನನ್ನಿಂದು ಕಂಡೆವು. ಸರ್ವಪಾಪಪರಿಹಾರಕವು, ಸರ್ವಪಾವನ ಮಂಗಲವು, ಬ್ರಹ್ಮಾದಿ ಹೃದಯ ಸರೋಜಾತವು ಆದ ನಿನ್ನ ಪಾದಾರವಿಂದವನ್ನು ಕಂಡೆವು. ಜೀವರು ಭಕ್ತಿಯಿಂದ ನಿನ್ನನ್ನು ಧ್ಯಾನಿಸಿ ತಮ್ಮ ಅನಾದಿ ಬಂಧದಿಂದ ಮುಕ್ತರಾಗಿ ನಿನ್ನ ಲೋಕದಲ್ಲಿ ಸುಖರೂಪವಾಗಿ ವಿಹರಿಸುವರಂತೆ! ಅಂತಹ ಭಕ್ತಿಯನ್ನು ನಮಗೆ ಕೊಟ್ಟು ಅನುಗ್ರಹಿಸಿ ಪ್ರಭೋ!

ಎಂದು ಪೊಗಳಿ, ಆನಂದಮೂರ್ತಿಯನ್ನು ಬೀಳ್ಕೊಟ್ಟು, ಧೃತರಾಷ್ಟ್ರ ವಸುದೇವಾದಿಗಳ ಪೂಜೆಯನ್ನು ಸ್ವೀಕರಿಸಿ, ಪೋಗಲು ಹವಣಿಸುವ ಋಷಿವರರಿಗೆ ನಮಸ್ಕರಿಸಿ, ವಸುದೇವನು ಆದರದಿಂದ ಇಂತು ಕೇಳಿದನು–

ಸರ್ವದೇವತಾ ಸನ್ನಿಧಾನಯುಕ್ತರಾದ ಋಷಿವರರೇ! ನಿಮಗೆ ನಮಃ. ಕರ್ಮಗಳನ್ನು ಮಾಡದೆ ಇರಲು ಸಾಧ್ಯವಿಲ್ಲ ಅಂದಮೇಲೆ ಕರ್ಮಗಳಿಂದ ಕರ್ಮಗಳ ಮೂಲಚ್ಛೇದವು ಹೇಗಾಗುವುದು? ಈ ಸಂಶಯವನ್ನು ಬಿಡಿಸಿ.

ಅದನ್ನು ಕೇಳಿ ಆಶ್ಚರ್ಯಚಕಿತರಾಗಿದ್ದ ಋಷಿವರರಿಗೆ ನಾರದನಿಂತೆಂದನು–

ಋಷಿಗಳೇ! ಏಕೆ ಆಶ್ಚರ್ಯ? ಮನುಜಸ್ವಭಾವವೇ ಹೀಗಿರುವುದು. ತನ್ನ ಶ್ರೇಯಃ ಕಾರಣವಾವುದೆಂದು – ವಾಸುದೇವನಿರಲು ನಿಮ್ಮನ್ನು ಕೇಳಿಕೊಂಡ– ವಸುದೇವನು ಈಗ ಕೃಷ್ಣನನ್ನು ಮಗನೆಂದು ತಿಳಿದಿರುವನು. ಗಂಗಾತೀರನಿವಾಸಿಗಳು ಆ ಮಂಗಳತರಂಗೆಯನ್ನು ಬಿಟ್ಟು ದೂರದ ಬೇರೆ ತೀರ್ಥಗಳಲ್ಲಿ ಮಿಂದು ಪಾವನರಾಗಿರಲು ಬಯಸುವಂತೆ ಮನುಜರು ತಮ್ಮಲ್ಲಿದ್ದ ವಸ್ತುವಿನಲ್ಲಿ ಅನಾದರವನ್ನೂ ತೋರುವರು. ಉತ್ಪತ್ತಿ ಲಯಗಳುಳ್ಳ ಜಗದಂತೆ ಕಾಲಕೃತವಾದ ನಾಶವು ಶ್ರೀಹರಿಗಿಲ್ಲ. ಅವನಿಗೆ ಇನ್ನೊಬ್ಬರಿಂದ, ಪ್ರಕೃತಿಗುಣಗಳಿಂದ, ಅಧರ್ಮಾದಿಗಳಿಂದ, ಯಾವ ಕಾರಣದಿಂದಲು ನಾಶವಿಲ್ಲ. ಅನಂತ ಕಲ್ಯಾಣಗುಣನಿಗೆ ಕ್ಲೇಶ ದಾಯಕವಾದ ಕರ್ಮ ಬಂಧವಿಲ್ಲ; ಸರ್ವೋತ್ತಮನಿಗೆ ಸಮಾನರಿಲ್ಲ. ಮೇಘದಿಂದಲೋ ಅಥವಾ ಮಂಜಿನಿಂದಲೋ ಅಥವಾ ಗ್ರಹಣದಲ್ಲಿ ರಾಹುವಿನಿಂದಲೋ ಆಚ್ಛಾದಿತವಾದ ಸೂರ್ಯನು ಪ್ರಕಾಶಹೀನನೆಂದು ತಿಳಿವ ಅಜ್ಞನಂತೆ ವಸುದೇವನು ಅವಿದ್ಯಾ ಸ್ಮಯ ರಾಗ ದ್ವೇಷ ಕರ್ಮಬಂಧ ತಾಪತ್ರಯ ಜನನ ಮರಣಾದಿ ಸರ್ವದೋಷರಹಿತನಾದ ಶ್ರೀಕೃಷ್ಣನು ತನ್ನಂತೆ ಮನುಜನೆಂದು ತಿಳಿದು, ಅವನಿಂದ ತಿಳಿಯಲಿಚ್ಛಿಸದೆ, ನಿಮ್ಮನ್ನು ಕೇಳಿದನು. ಹೇ!

ಆಗ ಋಷಿಗಳಿಂತೆಂದರು–

ವಿದ್ವಾಂಸರು– ಶ್ರದ್ಧೆಯಿಂದ ಶ್ರೀಹರಿಯೇ ಸರ್ವೋತ್ತಮನು. ಸರ್ವಯಜ್ಞಫಲಭೋಕ್ತನು– ಎಂದು ತಿಳಿದು, ಸಕಲಯಜ್ಞಾದಿ ಕರ್ಮಗಳನ್ನು ಅವನಿಗೆ ಸಮರ್ಪಿಸುವದರಿಂದ ಕರ್ಮಗಳ ನಾಶವಾಗುವುದೆಂದು ಹೇಳಿರುವರು. ಕೆಸರನೀರಿನಿಂದ ಕೆಸರನ್ನು ತೊಳೆಯಲಾಗದು– ಅಂತೆಯೇ ಕರ್ಮದಿಂದ ಮಾತ್ರ ಕರ್ಮನಾಶವಾಗಲಾರದು. ಆದರೂ ಭಗವದೇಕ ನಿಷ್ಠೆಯಿಂದ ಶಾಸ್ತ್ರದಲ್ಲಿ ಹೇಳಿದಂತೆ ವಿಹಿತಕರ್ಮಗಳನ್ನು ಮಾಡಿ ಶ್ರೀಹರಿಗರ್ಪಿಸಿ, ಚಿತ್ತವನ್ನು ಅವನ ಧ್ಯಾನಾಯುತವಾಗಿ ಮಾಡುವುದೇ ಶ್ರೀಹರಿಪ್ರೀತಿಸಾಧನವೆನಿಸಿದೆ. ಇದು ಕರ್ಮಕ್ಷಯವಾಗುವ ಉತ್ತಮ ಮಾರ್ಗವು. ಗೃಹಸ್ಥನಾದ ದ್ವಿಜನ ಶ್ರದ್ಧೆಯಿಂದ ನ್ಯಾಯಾರ್ಜಿತ ಧನದಿಂದ ಹರಿಪೂಜಾತ್ಮಕವಾದ ಯಜ್ಞಗಳನ್ನು ಮಾಡುತ್ತಾ ಈಷಣತ್ರಯವನ್ನು ಬಿಡಲು ಯತ್ನಿಸುವುದು ಶ್ರೇಯಸ್ಕರವು. ವಿತ್ತೇಷಣವನ್ನು ಯಜ್ಞಾದಾನಗಳಿಂದಲು, ದಾರಾಸುತೇಷಣವನ್ನು ಗೃಹಕರ್ಮಗಳಿಂದಲು, ಇಹಾಮುತ್ರ ಭೋಗೇಷಣವನ್ನು ಹರಿಭಕ್ತಿಯಿಂದಲು ಮೆಲ್ಲನೆ ಜಯಿಸಿ, ಜ್ಞಾನಾರ್ಜನೆಯನ್ನು ಮಾಡಿ ಕೊನೆಗೆ ಸರ್ವಗ್ರಾಮ್ಯಸುಖಗಳನ್ನೂ ತ್ಯಜಿಸಿ ತಪೋವನದಲ್ಲಿ ಸಿದ್ಧಿಯನ್ನು ಪೊಂದುವುದು ಬುದ್ಧಿವಂತನ ಲಕ್ಷಣವು. ತ್ಯಾಗಶಕ್ತಿಯಿದ್ದೊಡೆ ಬ್ರಹ್ಮಚಾರಿಯಾಗಲಿ ಸನ್ಯಾಸಿಯಾಗಲಿ ಆಗಿದ್ದು ಶ್ರೀಹರಿಭಕ್ತಿಯಿಂದ ಮೋಕ್ಷವನ್ನು ಸಂಪಾದಿಸಲುಬಹುದು. ಸನ್ಯಾಸಾನಧಿಕಾರಿಗೆ ಮೂರು ಋಣಗಳಿವೆ. ದೇವ ಋಣವನ್ನು ಯಜ್ಞದಿಂದಲು, ಋಷಿಋಣವನ್ನು ಅಧ್ಯಯನದಿಂದಲು, ಪಿತೃಋಣವನ್ನು ಸಂತಾನದಿಂದಲು, ತೀರಿಸಿದ ಗೃಹಸ್ಥನು ನರಕಭಾಜನನಾಗುವನು. ಮೂರು ಋಣಗಳನ್ನು ತೀರಿಸಿ, ಗೃಹಸ್ಥನು ಬೇಕಾದ ವೈರಾಗ್ಯವಿದ್ದೊಡೆ, ಸನ್ಯಸನವನ್ನು ಮಾಡಿ ಶ್ರೀಹರಿಶರಣನಾಗಬಹುದು. ವಸುದೇವ! ನೀನು ಭಕ್ತಿಯಿಂದ ಪರಮಪುರುಷವನ್ನು ಭಜಿಸಿರುವೆ. ಆದ್ದರಿಂದಲೇ ಶ್ರೀಹರಿಯೇ ನಿನಗೆ ಮಗನಾಗಿರುವನು. ಬಹುಜನ್ಮಕೃತ ಪುಣ್ಯದ ಫಲದಿಂದ ಗೋವಿಂದನಿಗೆ ತಂದೆಯಾದೆ. ನೀನೇ ಧನ್ಯನು.

## ೭೩. ವಸುದೇವಕೃತ ಯಾಗ

ಆಗ ವಸುದೇವನೊಂದು ಯಜ್ಞವನ್ನು ಮಾಡಲೆಣಿಸಿ, ಆ ಋಷಿಗಳಿಗೆ ವಂದಿಸಿ, ಋತ್ವಿಜರಾಗಿರೆಂದು ಬೇಡಿದನು. ರಾಜಸೂಯ ಸಮವೆನಿಸುವ ಉತ್ತಮ ಯಾಗಗಳನ್ನು ಅವರು ಮಾಡಿಸುವಾಗ ವಸುದೇವನ ಪತ್ನಿಯರು ಅಲಂಕೃತೆಯಾಗಿ ಮಂಗಳದ್ರವ್ಯವನ್ನು ಪಿಡಿದು ಯಜ್ಞಶಾಲೆಯಲ್ಲಿ ಸಂಭ್ರಮದಿಂದ ಸಂಚರಿಸಿದರು. ಮೃದಂಗ ಪಟಹಗಳು ಮೊಳಗುತ್ತಿರಲು, ನರ್ತಕಿಯರಾಡುತ್ತಿರಲು, ಸೂತಮಾಗಧರು ಪೊಗಳಿ ಪಾಡಿದರು. ಆಗ ಋತ್ವಿಜರಿಂದ ಅಭಿಷಿಕ್ತನಾಗಿ, ದುಕೂಲ ವಲಯಹಾರನೂಪುರಕುಂಡಲಾಲಂಕೃತೆಯರಾದ ತನ್ನ ಹದಿನೆಂಟು ಪತ್ನಿಯರಿಂದ ಕೂಡಿ, ದೀಕ್ಷಿತನಾದ ವಸುದೇವನು ತಾರಾಪತಿಯಂತೆ ಶೋಭಿಸಿದನು. ಇಂದ್ರನ ಯಜ್ಞದಲ್ಲಿದ್ದಂತೆ ಹದಿನೇಳು ಜನ ಋತ್ವಿಜರು ನೂತನ ದೀಕ್ಷಾವಸನಗಳನ್ನುಟ್ಟು ಯಜ್ಞವನ್ನು ಪ್ರಾರಂಭಿಸಿದರು.

ಜೀವರೊಡೆಯನಾದ ರಾಮಕೃಷ್ಣರು ತಮ್ಮ ಸುತದಾರಾಸಹಿತರಾಗಿ ಅಣಿಮಾದಿಸಿದ್ಧಿಗಳಿಂದ ಕೂಡಿರುವ ಜಗತ್ಪ್ರಭುಗಳಾಗಿ ಸಂಚರಿಸಿದರು. ಅಗ್ನಿಹೋತ್ರೇಷ್ಟ್ಯಾದಿ ಲಕ್ಷಣಯುಕ್ತವಾದ ಸಪ್ತಪ್ರಾಕೃತ ಕ್ರತುಗಳನ್ನು, ಸೌತ್ರಾಮಣ್ಯಾದಿ ಉತ್ತರ ಕ್ರತುಗಳನ್ನು ಮಾಡಿ ವಸುದೇವನು ಋತ್ವಿಗ್ಗ

ಪರಿಪಾಲನ ಲೀಲನಾದ ಗೋಪಾಲಬಾಲ! ನಮೋ ನಮಃ. ವೇದಮಾರ್ಗವನ್ನು ನಡೆಸಿ ನೋಡಿಸುವ ಬ್ರಾಹ್ಮಣರೆಂದರೆ ನಿನಗೆ ಬಲು ಪ್ರೀತಿ. ಅವರಲ್ಲಿ ನೆಲೆಸಿರುವ ನೀನು ಅವರ ನುಡಿಯಿಂದ ಕಾಣಿಸುವೆ. ಸುಶಾಸ್ತ್ರ ಸಮಧಿಗಮ್ಯನು, ಕುತರ್ಕಾಗೋಚರನು, ಪರೋಕ್ಷಪ್ರಿಯನು ಆದ ನೀನು ಶಾಸ್ತ್ರವನ್ನು ಉಪದೇಶಿಸಿ ಲೋಕವನ್ನು ಸನ್ಮಾರ್ಗದಲ್ಲಿ ನಡೆಸುವ ಬ್ರಾಹ್ಮಣರನ್ನು ಸತ್ಕರಿಸಿ ಪೊರೆವೆ; ಆದುದರಿಂದಲೇ ಬ್ರಹ್ಮಣ್ಯದೇವನೆನಿಸಿ ವಿರಾಜಿಸುವೆ.

ಇಂದು ನಮ್ಮ ಜನ್ಮ ಸಫಲವಾಯಿತು. ನಮ್ಮ ವಿದ್ಯೆ, ನಮ್ಮ ತಪಸ್ಸು, ನಮ್ಮ ಜ್ಞಾನಾದಿಗಳಿಂದು ಸಾರ್ಥಕವಾದವು. ನಿನ್ನ ಸಂಗದಿಂದ ನಾವು ಧನ್ಯರಾದೆವು. ನೀನೇ ನಮ್ಮ ಕುಲದೈವವು. ಹರೇ! ನಾರಾಯಣ! ಸ್ವರೂಪ ಸಾಮರ್ಥ್ಯದಿಂದ ನಿನ್ನ ಜ್ಞಾನಾನಂದ ಪ್ರಕಾಶವನ್ನು ಕಾಣದಂತೆ ಮಾಡಿ ತೋರುವ ಪರಮಾತ್ಮನೇ! ನಿನಗೆ ನಮಸ್ಕಾರವು. ಒಂದು ಕಡೆ ಕೂಡಿ ಆಡಿದರೇನು! ಈ ಯಾದವರು– ನಿನ್ನ ಮಾಯೇಚ್ಛೆಯಿಂದ ಕುರುಡರಂತಾಗಿ– ಕಾಲರೂಪಿಯಾದ ನಿನ್ನ ಸಾಮರ್ಥ್ಯವನ್ನು ಅರಿಯದಿರುವರು. ಅಂತಹ ನಿನ್ನನ್ನಿಂದು ಕಂಡೆವು. ಸರ್ವಪಾಪಪರಿಹಾರಕವು. ಸರ್ವಪಾವನ ಮಂಗಲವು, ಬ್ರಹ್ಮಾದಿ ಹೃದಯ ಸರೋಜಾತವು ಆದ ನಿನ್ನ ಪಾದಾರವಿಂದವನ್ನು ಕಂಡೆವು. ಜೀವರು ಭಕ್ತಿಯಿಂದ ನಿನ್ನನ್ನು ಧ್ಯಾನಿಸಿ ತಮ್ಮ ಅನಾದಿ ಬಂಧದಿಂದ ಮುಕ್ತರಾಗಿ ನಿನ್ನ ಲೋಕದಲ್ಲಿ ಸುಖರೂಪವಾಗಿ ವಿಹರಿಸುವರಂತೆ! ಅಂತಹ ಭಕ್ತಿಯನ್ನು ನಮಗೆ ಕೊಟ್ಟು ಅನುಗ್ರಹಿಸಿ ಪ್ರಭೋ!

ಎಂದು ಪೊಗಳಿ, ಆನಂದಮೂರ್ತಿಯನ್ನು ಬೀಳ್ಕೊಟ್ಟು, ಧೃತರಾಷ್ಟ್ರ ವಸುದೇವಾದಿಗಳ ಪೂಜೆಯನ್ನು ಸ್ವೀಕರಿಸಿ, ಪೋಗಲು ಹವಣಿಸುವ ಋಷಿವರರಿಗೆ ನಮಸ್ಕರಿಸಿ, ವಸುದೇವನು ಆದರದಿಂದ ಇಂತು ಕೇಳಿದನು–

ಸರ್ವದೇವತಾ ಸನ್ನಿಧಾನಯುಕ್ತರಾದ ಋಷಿವರರೇ! ನಿಮಗೆ ನಮಃ. ಕರ್ಮಗಳನ್ನು ಮಾಡದೆ ಇರಲು ಸಾಧ್ಯವಿಲ್ಲ ಅಂದಮೇಲೆ ಕರ್ಮಗಳಿಂದ ಕರ್ಮಗಳ ಮೂಲಚ್ಛೇದವು ಹೇಗಾಗುವುದು? ಈ ಸಂಶಯವನ್ನು ಬಿಡಿಸಿ.

ಅದನ್ನು ಕೇಳಿ ಆಶ್ಚರ್ಯಚಕಿತರಾಗಿದ್ದ ಋಷಿವರರಿಗೆ ನಾರದನಿಂತೆಂದನು–

ಋಷಿಗಳೇ! ಏಕೆ ಆಶ್ಚರ್ಯ? ಮನುಜಸ್ವಭಾವವೇ ಹೀಗಿರುವುದು. ತನ್ನ ಶ್ರೇಯಃ ಕಾರಣವಾವುದೆಂದು – ವಾಸುದೇವನಿರಲು ನಿಮ್ಮನ್ನು ಕೇಳಿಕೊಂಡ– ವಸುದೇವನು ಈಗ ಕೃಷ್ಣನನ್ನು ಮಗನೆಂದು ತಿಳಿದಿರುವನು. ಗಂಗಾತೀರನಿವಾಸಿಗಳು ಆ ಮಂಗಳತರಂಗೆಯನ್ನು ಬಿಟ್ಟು ದೂರದ ಬೇರೆ ತೀರ್ಥಗಳಲ್ಲಿ ಮಿಂದು ಪಾವನರಾಗಿರಲು ಬಯಸುವಂತೆ ಮನುಜರು ತಮ್ಮಲ್ಲಿದ್ದ ವಸ್ತುವಿನಲ್ಲಿ ಅನಾದರವನ್ನೂ ತೋರುವರು. ಉತ್ಪತ್ತಿ ಲಯಗಳುಳ್ಳ ಜಗದಂತೆ ಕಾಲಕೃತವಾದ ನಾಶವು ಶ್ರೀಹರಿಗಿಲ್ಲ. ಅವನಿಗೆ ಇನ್ನೊಬ್ಬರಿಂದ, ಪ್ರಕೃತಿಗುಣಗಳಿಂದ, ಅಧರ್ಮಾದಿಗಳಿಂದ, ಯಾವ ಕಾರಣದಿಂದಲು ನಾಶವಿಲ್ಲ. ಅನಂತ ಕಲ್ಯಾಣಗುಣನಿಗೆ ಕ್ಲೇಶದಾಯಕವಾದ ಕರ್ಮ ಬಂಧವಿಲ್ಲ; ಸರ್ವೋತ್ತಮನಿಗೆ ಸಮಾನರಿಲ್ಲ. ಮೇಘದಿಂದಲೋ ಅಥವಾ ಮಂಜಿನಿಂದಲೋ ಅಥವಾ ಗ್ರಹಣದಲ್ಲಿ ರಾಹುವಿನಿಂದಲೋ ಆಚ್ಛಾದಿತವಾದ ಸೂರ್ಯನು ಪ್ರಕಾಶಹೀನನೆಂದು ತಿಳಿವ ಅಜ್ಞನಂತೆ ವಸುದೇವನು ಅವಿದ್ಯಾ ಸ್ಮಯ ರಾಗ ದ್ವೇಷ ಕರ್ಮಬಂಧ ತಾಪತ್ರಯ ಜನನ ಮರಣಾದಿ ಸರ್ವದೋಷರಹಿತನಾದ ಶ್ರೀಕೃಷ್ಣನು, ತನ್ನಂತೆ ಮನುಜನೆಂದು ತಿಳಿದು, ಅವನಿಂದ ತಿಳಿಯಲಿಚ್ಛಿಸದೆ, ನಿಮ್ಮನ್ನು ಕೇಳಿದೆನು. ಹೇಳಿ!

ಆಗ ಋಷಿಗಳಿಂತೆಂದರು–

ವಿದ್ವಾಂಸರು– ಶ್ರದ್ಧೆಯಿಂದ ಶ್ರೀಹರಿಯೇ ಸರ್ವೋತ್ತಮನು. ಸರ್ವಯಜ್ಞಫಲಭೋಕ್ತನು– ಎಂದು ತಿಳಿದು, ಸಕಲಯಜ್ಞಾದಿ ಕರ್ಮಗಳನ್ನು ಅವನಿಗೆ ಸಮರ್ಪಿಸುವದರಿಂದ ಕರ್ಮಗಳ ನಾಶವಾಗುವುದೆಂದು ಹೇಳಿರುವರು. ಕೆಸರನೀರಿನಿಂದ ಕೆಸರನ್ನು ತೊಳೆಯಲಾಗದು– ಅಂತೆಯೇ ಕರ್ಮದಿಂದ ಮಾತ್ರ ಕರ್ಮನಾಶವಾಗಲಾರದು. ಆದರೂ ಭಗವದೇಕ ನಿಷ್ಠೆಯಿಂದ ಶಾಸ್ತ್ರದಲ್ಲಿ ಹೇಳಿದಂತೆ ವಿಹಿತಕರ್ಮಗಳನ್ನು ಮಾಡಿ ಶ್ರೀಹರಿಗರ್ಪಿಸಿ, ಚಿತ್ತವನ್ನು ಅವನ ಧ್ಯಾನಾಯುತವಾಗಿ ಮಾಡುವುದೇ ಶ್ರೀಹರಿಪ್ರೀತಿಸಾಧನವೆನಿಸಿದೆ. ಇದು ಕರ್ಮಕ್ಷಯವಾಗುವ ಉತ್ತಮ ಮಾರ್ಗವು. ಗೃಹಸ್ಥನಾದ ದ್ವಿಜನ ಶ್ರದ್ಧೆಯಿಂದ ನ್ಯಾಯಾರ್ಜಿತ ಧನದಿಂದ ಹರಿಪೂಜಾತ್ಮಕವಾದ ಯಜ್ಞಗಳನ್ನು ಮಾಡುತ್ತಾ ಈಷಣತ್ರಯವನ್ನು ಬಿಡಲು ಯತ್ನಿಸುವುದು ಶ್ರೇಯಸ್ಕರವು. ವಿತ್ತೇಷಣವನ್ನು ಯಜ್ಞಾದಾನಗಳಿಂದಲು, ದಾರಾಸುತೇಷಣವನ್ನು ಗೃಹಕರ್ಮಗಳಿಂದಲು, ಇಹಾಮುತ್ರ ಭೋಗೇಷಣವನ್ನು ಹರಿಭಕ್ತಿಯಿಂದಲು ಮೆಲ್ಲನೆ ಜಯಿಸಿ, ಜ್ಞಾನಾರ್ಜನೆಯನ್ನು ಮಾಡಿ ಕೊನೆಗೆ ಸರ್ವಗ್ರಾಮ್ಯಸುಖಗಳನ್ನೂ ತ್ಯಜಿಸಿ ತಪೋವನದಲ್ಲಿ ಸಿದ್ಧಿಯನ್ನು ಪೊಂದುವುದು ಬುದ್ಧಿವಂತನ ಲಕ್ಷಣವು. ತ್ಯಾಗಶಕ್ತಿಯಿದ್ದೊಡೆ ಬ್ರಹ್ಮಚಾರಿಯಾಗಲಿ ಸನ್ಯಾಸಿಯಾಗಲಿ ಆಗಿದ್ದು ಶ್ರೀಹರಿಭಕ್ತಿಯಿಂದ ಮೋಕ್ಷವನ್ನು ಸಂಪಾದಿಸಲುಬಹುದು. ಸನ್ಯಾಸಾನಧಿಕಾರಿಗೆ ಮೂರು ಋಣಗಳಿವೆ. ದೇವ ಋಣವನ್ನು ಯಜ್ಞದಿಂದಲು, ಋಷಿಋಣವನ್ನು ಅಧ್ಯಯನದಿಂದಲು, ಪಿತೃಋಣವನ್ನು ಸಂತಾನದಿಂದಲು, ತೀರಿಸಿದ ಗೃಹಸ್ಥನು ನರಕಭಾಜನನಾಗುವನು. ಮೂರು ಋಣಗಳನ್ನು ತೀರಿಸಿ, ಗೃಹಸ್ಥನು ಬೇಕಾದ ವೈರಾಗ್ಯವಿದ್ದೊಡೆ, ಸನ್ಯಸನವನ್ನು ಮಾಡಿ ಶ್ರೀಹರಿಶರಣನಾಗ ಬಹುದು. ವಸುದೇವ! ನೀನು ಭಕ್ತಿಯಿಂದ ಪರಮಪುರುಷವನ್ನು ಭಜಿಸಿರುವೆ. ಆದ್ದರಿಂದಲೇ ಶ್ರೀಹರಿಯೇ ನಿನಗೆ ಮಗನಾಗಿರುವನು. ಬಹುಜನ್ಮಕೃತ ಪುಣ್ಯದ ಫಲದಿಂದ ಗೋವಿಂದನಿಗೆ ತಂದೆಯಾದೆ. ನೀನೇ ಧನ್ಯನು.

## ೭೩. ವಸುದೇವಕೃತ ಯಾಗ

ಆಗ ವಸುದೇವನೊಂದು ಯಜ್ಞವನ್ನು ಮಾಡಲೆಣಿಸಿ, ಆ ಋಷಿಗಳಿಗೆ ವಂದಿಸಿ, ಋತ್ವಿಜರಾಗಿರೆಂದು ಬೇಡಿದನು. ರಾಜಸೂಯ ಸಮವೆನಿಸುವ ಉತ್ತಮ ಯಾಗಗಳನ್ನು ಅವರು ಮಾಡಿಸುವಾಗ ವಸುದೇವನ ಪತ್ನಿಯರು ಅಲಂಕೃತೆಯಾಗಿ ಮಂಗಳದ್ರವ್ಯವನ್ನು ಪಿಡಿದು ಯಜ್ಞಶಾಲೆಯಲ್ಲಿ ಸಂಭ್ರಮದಿಂದ ಸಂಚರಿಸಿದರು. ಮೃದಂಗ ಪಟಹಗಳು ಮೊಳಗುತ್ತಿರಲು, ನರ್ತಕಿಯರಾಡುತ್ತಿರಲು, ಸೂತಮಾಗಧರು ಪೊಗಳಿ ಪಾಡಿದರು. ಆಗ ಋತ್ವಿಜರಿಂದ ಅಭಿಷಿಕ್ತನಾಗಿ, ದುಕೂಲ ವಲಯಹಾರನೂಪುರಕುಂಡಲಾಲಂಕೃತೆಯರಾದ ತನ್ನ ಹದಿನೆಂಟು ಪತ್ನಿಯರಿಂದ ಕೂಡಿ, ದೀಕ್ಷಿತನಾದ ವಸುದೇವನು ತಾರಾಪತಿಯಂತೆ ಶೋಭಿಸಿದನು. ಇಂದ್ರನ ಯಜ್ಞದಲ್ಲಿದ್ದಂತೆ ಹದಿನೇಳು ಜನ ಋತ್ವಿಜರು ನೂತನ ದೀಕ್ಷಾವಸನಗಳನ್ನುಟ್ಟು ಯಜ್ಞವನ್ನು ಪ್ರಾರಂಭಿಸಿದರು.

ಜೀವರೊಡೆಯನಾದ ರಾಮಕೃಷ್ಣರು ತಮ್ಮ ಸುತದಾರಾಸಹಿತರಾಗಿ ಅಣಿಮಾದಿಸಿದ್ಧಿಗಳಿಂದ ಕೂಡಿರುವ ಜಗತ್ಪ್ರಭುಗಳಾಗಿ ಸಂಚರಿಸಿದರು. ಅಗ್ನಿಹೋತ್ರೇಷ್ಟ್ಯಾದಿ ಲಕ್ಷಣಯುಕ್ತವಾದ ಸಪ್ತಪ್ರಾಕೃತ ಕ್ರತುಗಳನ್ನು, ಸೌತ್ರಾಮಣ್ಯಾದಿ ಉತ್ತರ ಕ್ರತುಗಳನ್ನು ಮಾಡಿ ವಸುದೇವನು ಋತ್ವಿಗ್ಭ

ರರನ್ನು ಚೆನ್ನಾಗಿ ದಕ್ಷಿಣಾದಿಗಳಿಂದ ಸತ್ಕರಿಸಿದನು; ಗೋ ಭೂ ಕನ್ಯಾ ದಾನಗಳನ್ನು ಮಾಡಿದನು. ಪತ್ನೀಸಂಯಾಜವಾದ ನಂತರ, ಅವಭೃತವನ್ನೂ ಮಾಡಿ, ವಂದಿಜನರಿಗೆ ಧನವನ್ನಿತ್ತು ಗೌರವಿಸಿದನು. ಆಚಂಡಾಲಾಂತವಾಗಿ ಸರ್ವರಿಗೂ ಮೃಷ್ಟಾನ್ನವನ್ನುಣಿಸಿ, ಬಂಧುಗಳಿಗೆ ಉಡುಗೊರೆಗಳನ್ನಿತ್ತು ಕಳುಹಿಸಿದನು. ಧೃತರಾಷ್ಟ್ರ ವಿದುರ ದ್ರೋಣ ಭೀಷ್ಮ ಅಶ್ವತ್ಥಾಮನು ಕೃಪ ನಾರದ ವೇದವ್ಯಾಸಾದಿಗಳು ಯದುಬಂಧುಗಳನ್ನು ಬಿಡಲಾರದೆ ಬಿಟ್ಟು ತಮ್ಮ ದೇಶಗಳಿಗೆ ಪೋದರು.

ಕೃಷ್ಣರಾಮರು ನಂದನನ್ನು ಬಲು ಸತ್ಕರಿಸಿ, ಕೆಲದಿನವಿರೆಂದು ನಿಲ್ಲಿಸಿದರು. ತನ್ನ ಯಜ್ಞ ಮಹೋತ್ಸವವು ಶ್ರೀಕೃಷ್ಣ ಪ್ರೀತಿಗಾಗಿ ಸಾಂಗವಾದುದಕ್ಕೆ ಸಂತೋಷದಿಂದ ವಸುದೇವನು ನಂದನನ್ನು ಆಲಿಂಗಿಸಿ ಅವನು ಮಾಡಿದುಪಕಾರವನ್ನು ನೆನೆದು ಕೈಯಿಂದ ಕೈಪಿಡಿದಿಂತೆಂದನು–

'ತಮ್ಮನೇ! ಸ್ನೇಹವೆಂಬುವ ಜಗದೀಶನ ಪಾಶದಿಂದ ಬಿಡಿಸಿಕೊಳ್ಳಲು ಸುರಯೋಗಿಗಳಿಗೂ ಸಾಧ್ಯವಿಲ್ಲ. ಜ್ಞಾನಿವರನಾದ ನೀನು ನಮಗೆ ಮಾಡಿದ ಸ್ನೇಹೋಪಕಾರಗಳಸದಳವಾಗಿದೆ. ನಾವು ಮರೆತರೂ ನೀನು ನಮ್ಮನ್ನು ಮರೆಯದೆ ನಮ್ಮ ಸುತರನ್ನು ಅತಿ ಪ್ರೀತಿಯಿಂದ ಯಾವ ಫಲಾಶೆಯು ಇಲ್ಲದೆ ಪಾಲಿಸಿ ಪೋಷಿಸಿದೆ. ಹಿಂದೆ ಅಸಮರ್ಥರಾಗಿ ನಿನಗೆ ಮಾಡಲಿಲ್ಲ; ಈಗ ಸಮರ್ಥರಾಗಿಯೂ ಶ್ರೀಮದಾಂಧರಾಗಿ ಮಾಡಲಿಲ್ಲ. ಬೇಡಪ್ಪಾ! ಈ ರಾಜ್ಯಾದಿ ಸಂಪತ್ಸಮೃದ್ಧಿ! ಶ್ರೇಯಸ್ಕಾಮನಿಗೆ ಇದು ಒಳಿತಲ್ಲ. ಶ್ರೀಮದನು ಕಣ್ಣಿದ್ದು ಕಾಣದೆ, ಸ್ವಜನರು ಬಂಧುಜನರು ಭೃತ್ಯರು ಎನ್ನದೆ, ಸರ್ವರನ್ನೂ ತಿರಸ್ಕರಿಸಿ ಕೆಡುವನು' ಎಂದು ವಸುದೇವನು, ಸ್ನೇಹರಸವೇ ಉಕ್ಕಿ ಬಂದಂತಾಗಿ, ಕಣ್ಣೀರಿಟ್ಟು, ನಂದನನ್ನು ಕೆಲದಿನವಿದ್ದು ಹೋಗೆಂದು ನಿಲ್ಲಿಸಿದನು. ರಾಮಕೃಷ್ಣರನ್ನು ಬಿಟ್ಟಿರಲಾರದೆ ನಂದನು ಕೆಲತಿಂಗಳು ಯಶೋದಾದಿ ಪರಿವಾರದಿಂದಿದ್ದು ಹಿಂದಿರುಗಿದನು. ವಸುದೇವ ಕೃಷ್ಣಾರ್ಜುನ ಬಲರಾಮ ಭೀಮರು ಅವನಿಗೆ ಉಡುಗೊರೆಗಳನ್ನಿತ್ತು ಕಳುಹಿದರು. ಶ್ರೀಕೃಷ್ಣಚರಣಪಂಕಜ ಪಂಜರದಲ್ಲಿ ಸಿಕ್ಕ ಮನಃಕೀರವನ್ನು ಬಿಟ್ಟು, ಮನಸ್ಸಿಲ್ಲದೆ, ಗೋಪಮಾನಿನಿಯರು ಮಧುರೆಗೆ ಮರಳಿ ಪೋದರು. ಅನಂತರ ದ್ರೋಣ ಭೀಷ್ಮ ಧೃತರಾಷ್ಟ್ರ ವಿದುರಾದಿಗಳು, ಮೂರು ತಿಂಗಳ ಕ್ಷೇತ್ರವಾಸವು ಪವಿತ್ರವಾಯಿತೆಂದು, ಸಂತೋಷದಿಂದ ಹಸ್ತಿನಾವತಿಗೂ ಕೃಷ್ಣವಿರಹಾಸಹಿಷ್ಣುರಾಗಿ ಪಾಂಡವರು ಇಂದ್ರಪ್ರಸ್ಥಪುರಗೂ ಹೊರಟು ಹೋದರು. ಕೃಷ್ಣನನ್ನು ಸುತ್ತುಗಟ್ಟಿ ಸೇವಿಸುತ್ತಾ ಯಾದವರೆಲ್ಲರು ಆನಂದದಿಂದ ದ್ವಾರಕೆಗೆ ಹೋದರು.

## ೭೪. ದೇವಕೀಮೃತಪುತ್ರ ಸಮರ್ಪಣ

ಶ್ರೀಶುಕನು ಹೇಳಿದನು–

ಒಂದು ದಿನ ತನಗೆ ಯಥಾವಿಧಿಯಾಗಿ ಬಂದು ವಂದಿಸಿದ ಗೋವಿಂದ ರಾಮರನ್ನು ಕಂಡು ವಸುದೇವನು– ಮುನಿಗಳಾಡಿದ ಮಕ್ಕಳ ಮಹಿಮೆಯನ್ನು ನೆನೆದು– ಶ್ರೀವಾಸುದೇವ ಸಂಕರ್ಷಣರೆಂದು ತಿಳಿದು– ಆಲಿಂಗಿಸಿ– ಭಕ್ತಿಯಿಂದ ಇಂತೆಂದನು–

ಕೃಷ್ಣ! ಮಹಾಮಹಿಮ! ರಾಮ! ಸಂಕರ್ಷಣ! ಜಗದ್ವಿಲಕ್ಷಣರಾದ ವಾಸುದೇವ ಸಂಕರ್ಷಣರೇ ನೀವಾಗಿ ಅವತರಿಸಿರುವಿರೆಂದು ನಿಮ್ಮ ದಯದಿಂದ ಅರಿತಿರುವೆನು. ಕೃಷ್ಣ! ನಿನ್ನಲ್ಲಿ ಈ ಜಗವಿದೆ. ನಿನ್ನಿಂದ ಬದುಕಿದೆ. ನಿನಗಾಗಿ ಕೊನೆಗೆ ಆಹಾರವಾಗುವುದಿದೆ. ನಿನ್ನ ದೆಶೆಯಿಂದ

ಇದರ ಸರ್ವೇದ್ರಿಯಗಳು ನಡೆಸಲ್ಪಡುತ್ತಿವೆ. ಇದಕ್ಕೆ ನೀನೇ ಸ್ವಾಮಿಯು, ಇದರ ಇಚ್ಛಾ ಜ್ಞಾನ ಕ್ರಿಯೆಗಳು ನಿನ್ನಧೀನವಾದ್ದರಿಂದ ಇದೇ ನೀನೆಂಬರು ಜ್ಞಾನಿವರರು. ನೀನಿಲ್ಲದಿರೆ ಯಾವ ಜೀವರೂ ಏನೂ ಮಾಡಲಾರರು. ಜಡವಾದರೂ ನಿನ್ನಿಂದ ವಿಕಾರ ಹೊಂದಿ ಪುನಃ ನಿನ್ನಲ್ಲೇ ಸೂಕ್ಷ್ಮವಾಗಿ ಲೀನವಾಗಿ ನಿಲ್ಲುತ್ತಿದೆ. ಜೀವನಪ್ರದನಾಗಿ ಜೀವನನ್ನು ಪ್ರವೇಶಿಸಿ, ನೀನೂ ಜೀವನೆನಿಸಿ ಜನ್ಮರಹಿತನಾಗಿರುವೆ. ಜೀವನನ್ನು ನಡೆಸುವ ಇಂದ್ರಿಯಾಭಿ ಮಾನಿ ದೇವತೆಗಳು ಕೂಡ ಅಸ್ವತಂತ್ರರು. ಅವರ ಶಕ್ತಿಗಳು ನೀನಾಗಿ ದಯಪಾಲಿಸಲು ಅವರಿಗೆ ಬಂದಿವೆ. ಆದ್ದರಿಂದ ನೀನು ಸರ್ವಜೀವ ಜಡ ವಿಲಕ್ಷಣನು, ಸರ್ವೋತ್ತಮನೂ ಆಗಿರುವೆ. ಚಂದ್ರನ ಕಾಂತಿ, ಅಗ್ನಿಯ ತೇಜಸ್ಸು, ಸೂರ್ಯನ ಪ್ರಭೆ, ವಿದ್ಯುತ್ತಿನ ವೀರ್ಯ, ಪರ್ವತಗಳ ಸ್ಥೈರ್ಯ, ಭೂಮಿಯ ಗಂಧ, ಸಸ್ಯಾದಿಗಳ ಜೀವನತ್ವ ಇವೆಲ್ಲವೂ ನಿನ್ನ ಹೆಸರಿನಿಂದ ಆಳುತ್ತಿವೆ. ನೀರಿನಲ್ಲಿ ಕಾಣುವ ತರ್ಪಣ ಪ್ರಾಣನ ದ್ರವತ್ವ ರಸತ್ವಗಳೂ, ವಾಯುವಿನ ಓಜಸ್ಸಹೋಬಲ ಚೇಷ್ಟಾಗಮನಗಳೂ, ಆಕಾಶದ ಅವಕಾಶ ಶಬ್ದ ಧ್ವನಿಗಳೂ, ಸರ್ವವರ್ಣಗಳೂ, ಸರ್ವರೂಪ ಗಳು. ಇಂದ್ರಿಯಗಳ ವಿಷಯ ಗ್ರಹಣ ಶಕ್ತಿಗಳೂ, ನಿನ್ನಿಂದ ಪ್ರಕಾಶಿತವಾಗುತ್ತಿದೆ. ಬುದ್ಧಿಯ ಜ್ಞಾನಜನಕ ಶಕ್ತಿ, ಬ್ರಹ್ಮಾದಿ ಸಕಲದೇವತೆಗಳ ಅನಿಮೇಷಾದಿ ಲಕ್ಷಣಗಳು, ಕಾಲ, ಜೀವನ, ಸ್ಮರಣಶಕ್ತಿ, ಎಲ್ಲವೂ ನಿನ್ನ ಅಧೀನವಾಗಿದೆ. ಪಂಚಭೂತ ಕಾರಣವಾದ ತಾಮಸಾಹಂಕಾರವು, ಇಂದ್ರಿಯಕಾರಣವಾದ ತೈಜಸಾಹಂಕಾರವು, ಜರಾದಿ ಶೂನ್ಯ ವಿವಿಧ ದೇವಶರೀರ ಕಾರಣವಾದ ವೈಕಾರಿಕಾಹಂಕಾರವು, ಜೀವರಿಗೆ ಸಂಸಾರವನ್ನೊಡ್ಡುವ ಮಹತ್ತು ಪ್ರಕೃತಿಗಳು ಇವೆಲ್ಲವೂ ಮತ್ತು ತದಭಿಮಾನಿ ದೇವಸಮೂಹವು ಕೂಡ ನಿನ್ನ ಅಧೀನವಾಗಿದೆ. ನಶ್ವರವಾದ ಈ ಜಗತ್ತಿಗೆ ಅನಶ್ವರನು, ಶಶ್ವದೇಕಪ್ರಕಾರನು ಆಗಿ ನೀನು ಸ್ವಾಮಿ ಎನಿಸಿರುವೆ. ಪೃಥಿವ್ಯಾದಿ ದ್ರವ್ಯಕಾರಣವಾದ ಪ್ರಕೃತಿ ಯಂತೆ, ಘಟಾದಿ ಕಾರಣವಾದ ಪರಮಾಣು ಪಂಜದಂತೆ, ಕಾರಣವು ಶಾಶ್ವತವಾಗಿರುವುದು. ಅಂತೆಯೇ ನೀನು ನಿಮಿತ್ತಕಾರಣನಾಗಿ, ಪ್ರಕೃತಿಗೂ ಭಿನ್ನನಾಗಿ, ನಿರ್ವಿಕಾರನಾಗಿ ರಾರಾಜಿಸುವೆ. ತ್ರಿಗುಣಗಳಿದ್ದಲ್ಲಿ ಇದ್ದು, ಅವಿಲ್ಲದಿದ್ದೆಡೆಯೂ ಇರುವ ನಿನ್ನ ಸ್ವರೂಪಭೂತ ಸಾಮರ್ಥ್ಯವು, ಗುಣಪೂರ್ಣನಾದ ನಿನಗೆ ಸಲ್ಲುತ್ತದೆ. ನೀನಿಲ್ಲದಿರೆ, ಅನಾಧಾರವಾಗಿ, ಯಾವ ಜೀವಜಡ ಜಾತವೂ ನಿಲ್ಲಲಾರದು. ಆದ್ದರಿಂದ ವಿವಿಧ ಪದಾರ್ಥಗಳಲ್ಲಿ ನೀನಿದ್ದು ನಡೆಸುತ್ತಾ, ಬೇಕಾದಾಗ ಸ್ವೀಕರಿಸಿ, ಬೇಡಾದಾಗ ಬಿಟ್ಟು, ಆಳುವ ನಿನ್ನ ಮಹಿಮೆ ಅತ್ಯದ್ಭುತವಾಗಿದೆ. ಇಂತಹ ನಿನ್ನನ್ನು ಸರ್ವಸ್ವಾಮಿ ಎಂದು ತಿಳಿಯದೆ ಸ್ಥೂಲಮತಿಗಳು ಸಂಸಾರದಲ್ಲಿ ಹುಟ್ಟಿ ಸಾಯುತ್ತಾ ನರಳುವರು.

ಸ್ವಾಮೀ! ನಿನ್ನ ದಯದಿಂದ ಬಂತು ಈ ನರಜನ್ಮ. ಸುಸಮರ್ಥವಾಗಿದ್ದಾಗಲೇ ದುರ್ಲಭ ವಾದ ಆ ದೇಹದ ಲಾಭವಾಗಲಿಲ್ಲ. ನಾನು–ನನ್ನದೆಂದು, ನಿನ್ನ ಮರೆತೆನು. ವಯಸ್ಸು ವ್ಯರ್ಥ ವಾಗಿ ಕಳೆದುಹೋಯಿತು. ಈ ನಾನು–ನನ್ನದು, ನನ್ನ ಕುಲ ಎಂಬ ಸ್ನೇಹಪಾಶವನ್ನು ಕಟ್ಟಿಬಿಗಿದು ಜಗವನ್ನಾಡಿಸುವ ಶ್ರೀನಾರಾಯಣ! ನೀನು ನನ್ನ ಮಗನಲ್ಲ. ಈ ರಾಮನು ಪ್ರಧಾನಕಾರಣವಾದ ಅಹಂತತ್ವನಿಯಾಮಕನಾದ ಶೇಷನು– ನನ್ನ ಮಗನಲ್ಲ. ತಿಳಿಯಿತು. ಭೂಭಾರ ಭೂತರಾದ ದೈತ್ಯರಾಜರನ್ನಳಿಸಿ ಸುಜನರನ್ನು ಸಲಹಲು ಅವತರಿಸಿರುವ ನಿನ್ನ ಚರಣಾರ ವಿಂದಗಳಿಗೆ ಶರಣಾ ಗತನಾಗಿರುವೆನು. ಸಂಸಾರವೆಂಬ ಹೆಬ್ಬಾವಿಗೆ ಹೆದರು ಬಂದ ನನ್ನನ್ನು ಪೊರೆ! ದೀನಬಂಧೋ! ಗೋವಿಂದ! ಸಾಕುಸಾಕು! ಇಂದ್ರಿಯದಾಸನಾಗಿ ಶರೀರವೇ ನಾನೆಂದು ತಿಳಿದು ಮಾಡಿದ ಪಾಪ ವನ್ನೆಂತು ಕಳೆಯಲಿ? ನಿನ್ನನ್ನು ಮಗನೆಂದೆನು– ಆಹಾ! ನನ್ನ ಬುದ್ಧಿಗೆ ಮಂಕು ಕವಿಯಿತು!

ಸೂತಿಕಾಗೃಹದಲ್ಲಿ ನೀನು ದಿವ್ಯಸುಂದರ ರೂಪದಿಂದ ಕಾಣಿಸಿ, 'ಯುಗಯುಗದಿ ಧರ್ಮ ರಕ್ಷಣೆಗೆಂದು ಅವತರಿಸುವ ಅಧೋಕ್ಷಜನೆಂದು ತಿಳಿ! ಅವ್ಯಾಕೃತಾಕಾಶದಂತೆ ಸರ್ವತ್ರ ವ್ಯಾಪ್ತನಾದರೂ ಭಕ್ತರಿಗಾಗಿ ಅವರ ಭಾವನೆಯಂತೆ ಧರಿಸಿ ಬಂದ ರೂಪವೆಂದು ತಿಳಿ' ಎಂದು ಎಷ್ಟು ಚೆನ್ನಾಗಿ ಬೋಧಿಸಿದೆ. ಉರುಗಾಯ! ಅದನ್ನು ಮರೆಸಿದ ನಿನ್ನ ಬಂಧಕ ಶಕ್ತಿಗೆ ನಮೋ ನಮಃ!

ಇಂತಾಡಿದ ತಂದೆಗೆ ಪುನಃ ವಂದಿಸಿ, ನಸುನಕ್ಕು, ಮಧುರ ವಚನಗಳಿಂದ ಗೋವಿಂದ ನಿಂತೆಂದನು–

ತಾತ! ನಿನ್ನ ಮಾತು ಶ್ರುತಿಸ್ಮೃತಿಗಳಿಗೆ ಅತ್ಯಂತ ಸಮ್ಮತವಾಗಿದೆ, ನಿಜ, ಒಪ್ಪಿದೆನು. ನಾವು ಪುತ್ರರೆಂಬ ಕರುಣೆಯಿಂದ ಒಳ್ಳೆಯ ತತ್ವಜ್ಞಾನವನ್ನು ಉಪದೇಶಿಸಿದೆ. ಇದು ನಿನ್ನ ದಯೆ. ನಾನು, ನೀನು, ನನ್ನ ಈ ಅಣ್ಣ, ದ್ವಾರಕಾವಾಸಿಗಳು, ಚರಾಚರ ಜಗವೆಲ್ಲವು ಭಗವಂತನಿಗ ಧಿಷ್ಠಾನವಾಗಿದೆ. ಅವನು ಸ್ವಪ್ರಕಾಶನು, ಚತುರ್ವಿಧ ನಾಶರಹಿತನು, ಪ್ರಕೃತಿ ಗುಣಕಾರ್ಯ ಲೇಪವಿದೂರನು, ಆನಂದ ಜ್ಞಾನಾದಿ ಗುಣಪೂರ್ಣನು ಆಗಿರುವನು. ಅವನಿಂದ ಸೃಷ್ಟವಾದೀ ಜೀವಜಡರಲ್ಲಿ ಅವನು ಅಂತರ್ಯಾಮಿಯಾಗಿ ತತ್ತನ್ನಾಮರೂಪ ಕ್ರಿಯಾವೃತ್ತಿ ಕಾರಣನಾಗಿರುವನು. ಪೃಥಿವ್ಯಾದಿ ಸರ್ವಭೂತಗಳ ಒಳಹೊರಗಿದ್ದು ಏಕಪ್ರಕಾರನಾಗಿದ್ದೂ ನಾನಾರೂಪಿಯಾಗಿ ತೋರುವವನು. ಮಹತ್ತಮನಾಗಿದ್ದೂ ಅಣುವಿನಲ್ಲಿರುವನು. ಅವನು ಸರ್ವೋತ್ತಮನು– ಸರ್ವಜಗದ್ವಿಲಕ್ಷಣನು, ದಿವ್ಯಸ್ವರೂಪನು.

ಆ ಮಾತನ್ನಾಲಿಸಿ ವಸುದೇವನು, ಅನಾದ್ಯವಿದ್ಯೆಯಿಂದ ಬಂದ ಕುತ್ಸಿತವಾದ ಮನೋವಿಕಾರ ರೋಗವನ್ನು ಕಳೆದುಕೊಂಡು ಸಂತೋಷದಿಂದಿದ್ದನು. ಆಗ ಸರ್ವದೇವತಾನುಗ್ರಹಪಾತ್ರಳಾದ ದೇವಕಿಯು– ಕೃಷ್ಣರಾಮರು ಗುರುಪುತ್ರನನ್ನು ಬದುಕಿಸಿ ತಂದುಕೊಟ್ಟ ವೃತ್ತಾಂತವನ್ನು ನೆನೆದು, ಕಂಸಹಿಂಸಿತರಾದ ಷಟ್ಕುಮಾರನನ್ನೂ ನೆನೆದು, ಹರ್ಷಶೋಕಗಳನ್ನೊಂದೇ ಸಲ ಪೊಂದಿ, ಕಣ್ಣೀರಿಡುತ್ತಾ ಇಂತೆಂದಳು–

ರಾಮ! ಕೃಷ್ಣ! ನಿಮ್ಮ ಸಾಮರ್ಥ್ಯವು ಅತ್ಯದ್ಭುತವಾಗಿದೆ. ನೀವು ಜಗತ್ಕಾರಣರಾದ ವಾಸುದೇವಸಂಕರ್ಷಣರೆಂದು ತಿಳಿದಿರುವೆನು. ದುರ್ಮಾರ್ಗರಾಜರನ್ನು ಶಾಸಿಸಿ, ಧರ್ಮವನ್ನು ನಿಲ್ಲಿಸಲು ಅವತರಿಸಿರುವ ನಿಮಗೆ ಶರಣಾಗಿ ಬಂದಿರುವೆನು. ವಿಶ್ವಸೃಜನ ರಕ್ಷಣ ಸಂಹರಣ ನಿರತರಾಗಿ ನಿಮಗೆ ಅಸಾಧ್ಯವೆಂಬುದಿಲ್ಲ. ಗುರುಗಳ ಮಗನನ್ನು ಯಮಲೋಕದಿಂದ ತಂದು ಗುರುದಕ್ಷಿಣೆಯಾಗಿತ್ತ ನಿಮ್ಮ ದಿವ್ಯಚಿತ್ತಕ್ಕೆ-ನನ್ನ ಮಕ್ಕಳನ್ನು ತಂದು ನೋಡಿಸಬೇಕೆನಿಸುವುದಿಲ್ಲವೇ? ಪಾಪಿ ಕಂಸನು ಕೊಂದ ಮಕ್ಕಳನ್ನು ನೋಡಲು ಬೇಡುವುದು ತಾಯಿಯ ಕರುಳ ತಪ್ಪೇ?

ತತ್ಕ್ಷಣವೇ ರಾಮಕೃಷ್ಣರು ತಮ್ಮ ನೈಜಮಹಿಮೆಯಿಂದ ಸುತಲವನ್ನು ಪೊಕ್ಕು ಬಲಿಯ ಮಂದಿರವನ್ನು ಸೇರಿದರು. ತನ್ನ ಕುಲಸ್ವಾಮಿಯು ಬಂದಿರುವುದನ್ನರಿತು ಬಲಿರಾಜನು ಅವರ ದರ್ಶನದಿಂದ ಮನ ವು ಆನಂದವಿವಶವಾಗುತ್ತಿರಲು, ಓಡಿಬಂದು ವಂದಿಸಿ, ಅವರನ್ನು ದಿವ್ಯಾಸನ ಗಳಲ್ಲಿ ಕೂಡಿಸಿ, ಅರ್ಘ್ಯಪಾದ್ಯಗಳನ್ನಿತ್ತು ಸತ್ಕರಿಸಿದನು. ಪಾದಜಲವನ್ನು ಶಿರಸಾ ಧರಿಸಿ, ಪಾವನನಾದೆನೆಂದನು; ಪೂಜಿಸಿ ಪುನೀತನಾದೆನೆಂದನು. ವಸ್ತ್ರಾಭರಣ ಗಂಧ ಧೂಪ–

ದೀಪ ಫಲಾಮೃತ ರಸಗಳನ್ನರ್ಪಿಸಿ, ಇಂದ್ರಸೇನನು, ಪ್ರೇಮಾನಂದಗಳು ಕಣ್ಣಲ್ಲಿ ನೀರಾಗಿ ತುಳುಕುತ್ತಿ ರಲು, ಮೈನವಿರೆದ್ದು, ಮಾತಾಡಲು ಬರದಂತೆ ಸೆರೆಬಿಗಿದು ಮೆಲ್ಲನೆ ಇಂತೆಂದನು–

ಅನಂತ! ಕೃಷ್ಣ! ಸರ್ವಜಗತ್ಕಾರಣ! ನಿಮಗೆ ನಮಃ. ಯಥಾರ್ಥಜ್ಞಾನವಿಸ್ತಾರಕನೇ ಸಂಸಾರಸಮುದ್ರತಾರನೇ! ನಿಮಗೆ ನಮಃ. ನಿಮ್ಮ ದರ್ಶನವು ಅತಿ ದುರ್ಲಭವಲ್ಲವೇ? ಅದರಲ್ಲಿ ರಜಸ್ತಮಃ ಸ್ವಭಾವರಾದ ರಾಕ್ಷಸರಿಗೆ ನಿನ್ನ ದರ್ಶನವಾಯಿತೆಂದರೆ– ಅದು ನಿನ್ನ ಅನುಗ್ರಹವೇ ಸರಿ! ಪ್ರತಿಮೆಯಲ್ಲಂತೆ, ಶಾಸ್ತ್ರದಲ್ಲಿ ನಿಂತು ತೋರುವ ಅಪ್ರಾಕೃತ ಕಲ್ಯಾಣಗುಣಧಾಮನಾದ ನಿನ್ನಲ್ಲಿ ನಿತ್ಯವೈರವನ್ನು ಮಾಡುವುದು ಈ ರಾಕ್ಷಸ ಜಾತಿಯ ಲಕ್ಷಣವಾಗಿದೆ. ನಿತ್ಯಾನುಸಂಧಾನ ವನ್ನು ವೈರದಿಂದ ಮಾಡಿದರೆ ಜ್ಞಾನೋದಯವಾಗುವುದಿಲ್ಲ. ಕೆಲವರು ಚೈದ್ಯಾದಿಗಳಂತೆ ದ್ವೇಷ ಮಾಡಿ ಕಳೆದುಕೊಂಡು ಭಕ್ತಿಯಿಂದಲೇ ಸಿದ್ಧರಾದರೆ, ಕೆಲವರು ಗೋಪಿಯರಂತೆ ಕಾಮದ ನೆವದಿಂದ ನಿತ್ಯಾನುಸಂಧಾನವನ್ನು ಭಕ್ತಿಯನ್ನು ಸಂಪಾದಿಸಿ ಸಿದ್ಧರಾಗಿರುವರು. ಸುರಗಂಧರ್ವಾದಿ ಸುಜನರು ಉದ್ರಿಕ್ತಸತ್ವಗುಣರಾದ್ದರಿಂದ, ಪ್ರಾಣಾಪಾಯ ಕಾಲದಲ್ಲಿ ಕೂಡ ನಿನ್ನಲ್ಲಿ ದೃಢಭಕ್ತಿ ಯನ್ನು ಮಾಡಿ ಶುದ್ಧಭಕ್ತರಾಗಿರುವರು. ಇಂತಹ ಜ್ಞಾನಿಜನರು ಕೂಡ ನಿನ್ನ ಜಗತ್ಸರ್ಜನಾದಿ ಮಹಾಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರರೆಂದಮೇಲೆ, ಅಸುರಯೋನಿಜನಿತರಾದ ನಮ್ಮಂತಹವರಿನ್ನೇನು ತಿಳಿಯುವರು!

ಪುತ್ರಾದಿ ಸ್ನೇಹಪಾಶಶತಬಂಧಕವಾದ ಗೃಹಾಂಧಕೂಪದಿಂದ ಹೊರಬಂದು, ನಿನ್ನ ನಂಬಿರುವ ಭಕ್ತಜನರ ಸಂಗದಲ್ಲಿ ಚರಿಸಿ, ಯೋಗಿಜನರು ಅರಸುವ ನಿನ್ನ ಚರಣಾರವಿಂದದಲ್ಲಿ ಮನವಿರಿಸಿ, ಸಕಲರಕ್ಷಕನಾದ ನಿನ್ನ ಚರಣಸೇವೆಯಿಂದ ಜೀವಿಸಿ, ನಿನ್ನ ದೃಢಭಕ್ತಿಯನ್ನು ಹೊಂದುವಂತೆ ಅನುಗ್ರಹಿಸು! ನಿನ್ನ ಶಾಸನವು ಶಾಸ್ತ್ರರೂಪವಾಗಿದೆ. ಅದರಂತೆ ನಡೆದವನು ಮುಕ್ತನಾಗುತ್ತಾನೆ. ಆದ್ದರಿಂದ ನನ್ನನ್ನು ಶಾಸಿಸು! ನನ್ನ ಕಾಮಗಳನ್ನು ನಾಶಿಸು! ಏನು ಮಾಡಲಿ ಆಜ್ಞಾಪಿಸು!

ಭಗವಂತನಿಂತೆಂದನು!

ಇಂದ್ರಸೇನ! ಕೇಳು! ಸ್ವಾಯಂಭುವ ಮನ್ವಂತರದಲ್ಲಿದ್ದ ಮರೀಚಿಗೆ, ಊರ್ಣಾದೇವಿಯಲ್ಲಿ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣಿ ಎಂಬುವ ಆರು ಜನ ಸುತರಿದ್ದರು. ಅವರೊಂದು ದಿನ ತನ್ನ ಮಕ್ಕಳನ್ನು ಬೈದು ಶಿಕ್ಷಿಸುವ ದೇವಲ ಋಷಿಯನ್ನು ನೋಡಿ ನಕ್ಕರು. ಅವನು ಸಿಟ್ಟಾಗಿ, ಅಸುರಯೋನಿಯಲ್ಲಿ ಪುಟ್ಟಿರೆಂದನು. ಆಗ ಅವರು ಕಾಲನೇಮಿಯ ಮಕ್ಕಳಾಗಿ ಜನಿಸಿದರು. ಅವರು ಬ್ರಹ್ಮನನ್ನು ಕುರಿತು ಅವಧ್ಯರಾಗಿರಬೇಕೆಂದು ಬೇಡಿ, ತಪವನ್ನು ಮಾಡಿದರು. ವಿಧಾತನು 'ಸರೇ' ಎಂದನು. 'ನನ್ನನ್ನು ಬಿಟ್ಟು, ನೀವು ಅನ್ಯರನ್ನು ಭಜಿಸಿದಿರಿ– ಆದ್ದರಿಂದ ಗರ್ಭದಿಂದ ಹುಟ್ಟಿದ ಕೂಡಲೇ ನಿಮ್ಮನ್ನು ನಮ್ಮ ತಂದೆಯೇ ಕೊಲ್ಲಲಿ!' ಎಂದು ದೈತ್ಯರಾಜನಾದ ಹಿರಣ್ಯಕಶಿಪುವಿನ ಶಾಪವೂ ಇತ್ತು. ಶ್ರೀಭಗವಂತನ ಆಜ್ಞೆಯಂತೆ, ದುರ್ಗಾ ದೇವಿಯು, ಅವರಿಗೆ ಸಾವಿಲ್ಲದ ನಿದ್ರೆಯನ್ನಿತ್ತು, ಸೆಳೆದುತಂದು, ದೇವಕಿಯು ಗರ್ಭದಲ್ಲಿಟ್ಟಳು. ಅವರನ್ನು ಕ್ರಮವಾಗಿ ಕಂಸನು ಕೊಂದನು. ಈಗ ಅವರು ಯಥಾಪೂರ್ವವಾಗಿ, ಇಲ್ಲಿಯೇ ನಿನ್ನ ಲೋಕದಲ್ಲಿರುವರು. ಕಾಲನೇಮಿಯಾದ ಕಂಸನಿಂದ ಸಂಹೃತರಾದರೂ ಬ್ರಹ್ಮವರದಿಂದ, ಮತ್ತೆ ಬಂದು ಇಲ್ಲಿರುವರು. ಇದು ದುರ್ಗೆಯ, ಅನಿತರಸಾಧ್ಯ ಮಹಿಮೆ! ನಮ್ಮ ತಾಯಿಯು, ಅವರನ್ನು ಪುನಃ ನೋಡುವ ತವಕದಿಂದ ನಮ್ಮನ್ನು ಕಳುಹಿಸಿರುವಳು. ಅವರನ್ನಿಲ್ಲಿಂದ

ಕರೆದೊಯ್ದು ತಾಯಿಗಿತ್ತು, ಆಕೆಯ ಶೋಕವನ್ನು ಕಳೆಯುವೆವು. ಆದರೂ ಶಾಪಮುಕ್ತರಾಗಿರಲಿ.

ಆಗ ಇಂದ್ರಸೇನನು ಅವರನ್ನು ತಂದೊಪ್ಪಿಸಿ ಶ್ರೀಕೃಷ್ಣರಾಮರನ್ನು ಪೂಜಿಸಿದನು. ಅವರು ಆ ಬಾಲಕರನ್ನು ತಂದು ಒಪ್ಪಿಸಲು, ದೇವಕಿಯು ಆನಂದದಿಂದ ಅವರನ್ನಪ್ಪಿ ಮುದ್ದಾಡಿ, ಪ್ರೇಮದಿಂದ ಸೂಸಿಬಂದ ಹಾಲನ್ನಿತ್ತು ಹರಸಿದಳು. ಆಹಾ! ಭಗವಂತನ ಸೃಷ್ಟೀಕಾರಣವಾದ ಬಂಧಕಶಕ್ತಿಯು ಬಹು ವಿಚಿತ್ರವಲ್ಲವೇ? ರಾಜನ್! ಶ್ರೀಕೃಷ್ಣನಿಗೆ ಕಾರಾಗಾರ ಮೋಚನ ಕಾಲದಲ್ಲಿತ್ತು ಪಾವನವಾದ ಸ್ತನಗಳನ್ನುಂಡು ಅವರು ಪಾವಿತರಾದರು. ಶ್ರೀಕೃಷ್ಣಪಾದಸ್ಪರ್ಶದಿಂದ ಅವರಿಗೆ ದಿವ್ಯಜ್ಞಾನವು ಜನಿಸಿತು. ಅವರು ಗೋವಿಂದನಿಗೆ ವಂದಿಸಿ, ದೇವಕೀ ವಸುದೇವ ಬಲರಾಮರಿಗೂ ನಮಿಸಿ, ಎಲ್ಲರೂ ನೋಡುತ್ತಿರಲು, ಆಕಾಶಮಾರ್ಗದಿಂದ ತಮ್ಮ ದೇವಲೋಕವನ್ನೈದಿದರು. ಕೃಷ್ಣನ ಮಹಾ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ಅನುಭವಿಸಿ ದೇವಕೀವಸುದೇವರು ಆಶ್ಚರ್ಯ ಸಂತೋಷಭರಿತರಾದರು. ಇಂತು ಅನಂತವೀರ್ಯನಾದ ಶ್ರೀಕೃಷ್ಣನ ಪಾವನಚರಿತೆಗಳ ನಂತವಾಗಿವೆ.

ಎಂದು ಶುಕರು ನುಡಿದರೆಂದು ಹೇಳಿ ಸೂತನು, ಶೌನಕಾದಿಗಳಿಗಿಂತೆಂದನು–

ನಿರ್ಮಲಕೀರ್ತಿಯಾದ ಮುರಾರಿಯ ಪವಿತ್ರಚರಿತ್ರವನ್ನು– ಶ್ರೀಶುಕನು ವರ್ಣಿಸಿದುದನ್ನು (ಶ್ರೀಭಾಗವತ) ಕೇಳಿದವನು, ಹೇಳಿದವನು ಕೂಡ, ಭಗವಂತನ ಭಕ್ತನಾಗಿ ಆ ಶ್ರೀವಾಸುದೇವನ ಶ್ವೇತದ್ವೀಪವನ್ನು ಹೊಂದುವನು. ಅಂತೆಯೇ ಜಗತ್ಪಾಪಸರ್ವಸ್ವನಿರ್ವಾಪಣವಾದ ಅವನ ಚರಿತವನ್ನು, ಗೀರ್ವಾಣಾದಿ ಸುಜನರು ಕರ್ಣಭೂಷಣವಾಗಿ ಸತತ ಧರಿಸಿ ಸುಖಿಸುತ್ತಿರುವರು.

## ೭೫. ರುಕ್ಮಿಣೀ ಕೃಷ್ಣ ಸಂವಾದ

ರಾಜನು ಕೇಳಿದನು–

ಗೋವಿಂದನಿಗೆ ತನ್ನಲ್ಲೇ ಪ್ರೇಮವು ಹೆಚ್ಚೆಂದು ತಿಳಿದು ಅವನನ್ನು ರಮಿಸುವ ರಮಣಿಯರಲ್ಲಿ ಶ್ರೀಕೃಷ್ಣನು ಸಮನಾಗಿ ವರ್ತಿಸಿದನೋ ಅಥವಾ ಪ್ರೀತಿಪಾತ್ರನಾಗಿ ಒಬ್ಬಳನ್ನು ಹೆಚ್ಚಾಗಿ ಕಂಡನೋ? ಹೇಳು.

ಶ್ರೀಶುಕನು ಹೇಳಿದನು–

ಮಹಿಷಿಯರಲ್ಲಿ ಮಾಧವನಿಗೆ ಅಚ್ಚುಮೆಚ್ಚಾದವಳೆಂದರೆ ರುಕ್ಮಿಣಿಯೇ; ಅವಳಲ್ಲಿ ಅವನು ಹೆಚ್ಚು ಪ್ರೀತಿಯನ್ನು ತೋರಿದನೆಂಬುದು ಪ್ರಸಿದ್ಧವೇ ಆಗಿದೆ. ಕೇಳೊಂದು ಕಥೆಯನ್ನು; ರುಕ್ಮಿಣಿಯನ್ನು ಕೆರಳಿಸಿ ಕಲಹವಾಡಿ, ಕೃಷ್ಣನು ಅವಳನ್ನು ಸಂತೈಸಿದ ರೀತಿಯನ್ನು ವರ್ಣಿಸುವೆನು–

ಒಂದು ದಿನ ಸೌಧಾಗ್ರಭಾಗದ ಚಂದ್ರಶಾಲೆಯ ಹಂಸತೂಲಿಕಾತಲ್ಪದಲ್ಲಿ ಶ್ರೀಕೃಷ್ಣನು ಸುಖಾಸೀನನಾಗಿದ್ದನು. ಆ ಜಗತ್ಪತಿಯಾದ ಪತಿಯನ್ನು ರುಕ್ಮಿಣಿಯು, ವ್ಯಜನವನ್ನು ಪಿಡಿದು ಸೇವಿಸುತ್ತಿದ್ದಳು. ಸಖೀಜನರೂ ದೂರ ನಿಂತು ಪರಿಚರಿಸುತ್ತಿದ್ದರು.

ರಾಜನ್! ಹರಿಚರಿತವು ಅತಿ ಚಿತ್ರವೂ! ಲೀಲೆಯಿಂದ ಜಗವನ್ನು ನಿರ್ಮಿಸಿ ಸಲಹಿ ಸಂಹರಿಸುವ ಶ್ರೀಮನ್ನಾರಾಯಣನೇ ತಾನು ಪೇಳಿದ ಧರ್ಮವನ್ನು ಕಾಪಾಡಲು ಯಾದವರಲ್ಲಿ ಕೃಷ್ಣನೆಂದು ಅವತರಿಸಿರುವನಲ್ಲವೇ?

ಆ ಅಂತಃಪುಗಮಂದಿರವು ಸುಂದರವಾಗಿ ಅಲಂಕೃತವಾಗಿತ್ತು. ಮೇಲೆ ಚಾಂದಿನಿಯನ್ನು ಕಟ್ಟಿ, ಮುತ್ತಿನ ಗೊಂಚಲುಗಳನ್ನಿಳಿಬಿಟ್ಟಿದ್ದರು. ಮಣಿಮಯ ದೀಪಗಳನ್ನು ಹಿಡಿದ ತನಕ ಪ್ರತಿಮೆಗಳು ಸ್ತಂಭಗಳಿಗಾತು ನಿಂತಿದ್ದವು. ಕಟ್ಟಿದ ಮಲ್ಲಿಗೆಯ ಹಾರಗಳ ಮಕರಂದ ರಸವನ್ನು ಹೀರಲು ಬಂದ ಭ್ರಮರಗಳ ಝುಂಕಾರವು ಶ್ರುತಿಮನೋಹರವಾಗಿತ್ತು. ಚಂದ್ರನು ಕಿರಣಗಳಿಂದ ತೂರಿ ಬಂದು ಚಂದ್ರವಂಶ ಲಲಾಮನು ಚಂದ್ರಮುಖಿಯನ್ನು ಅಳಿಸುವುದನ್ನು ನೋಡಬೇಕೆಂದು ಹೊಂಚಿ ನಿಂತಿದ್ದನು. ಮಂದಿರದ ಹಿಂದಿನ ವನದಿಂದ ಬಂದ ಮಂದಾರ ಪಾರಿಜಾತ ಸುಮ ಗಂಧವು ಒಳಗಿನ ಅಗರು ಧೂಪದ ವಾಸನೆ ಹೊತ್ತು, ಭಾರವಾಗಿ, ಸೌಧದಿಂದ ಕೆಳಗಿಳಿದು, ಹೊರಗೆ ಹೋಗುವ ರಸಿಕರ ಘ್ರಾಣತರ್ಪಣವನ್ನು ಮಾಡುತ್ತಿತ್ತು. ಹಾಲಿನ ನುರುಗಿನಂತೆ ಶುಭ್ರವಾದ ತನ್ನ ಪರ್ಯಂಕದಲ್ಲಿ ಕೂತು ತನ್ನ ಕಡೆ ನೋಡಿ ನಗುವ ಜಗದ್ವಲ್ಲಭನನ್ನು ರುಕ್ಮಿಣಿಯು ಕಾಲಿನ ಪೈಜಣಗಳಿಗೆ ಶ್ರುತಿಗೂಡಿಸಿ ಮಂದ್ರಮಧುರವಾಗಿ ಕೈಕಂಕಣಗಳು ಝಣಝಣತ್ಕಾರವನ್ನು ಮಾಡುತ್ತಿರಲು, ರತ್ನದಂಡಮಂಡಿತ ವ್ಯಜನದಿಂದ ಬೀಸಿ ಸೇವಿಸುತ್ತಿದ್ದಳು. ವಲಯಾಂಗುಲೀಯ ಕಾಂತಿಯು ಬಾಹುಮೂಲರುಚಿಯಿಂದ ಚೆಲ್ಲಾಟವಾಡುತ್ತಿತ್ತು. ಬಟ್ಟೆಟ್ಟ ವಸ್ತ್ರವನ್ನು ತೂರಿ ಹೊರಬರುವ ಬಟ್ಟಕುಚಗಳ ಕುಂಕುಮರಾಗದಿಂದ, ಹಾರವಾಗಿದ್ದ ಮಲ್ಲಿಗೆಗಳು ಪಾಟಲಗಳಾದವು. ನಡುವಿನಲ್ಲಿಟ್ಟ ವಜ್ರದ ಒಡ್ಯಾಣದಿಂದ ನಿಂತು, ಇಲ್ಲದಿರೆ ಮುರಿಯುವಂತಿದ್ದ ಕವಟಿಯು ಬಳುಕುತ್ತಿತ್ತು. ತಾನು ನಡೆದಂತೆ ನಡೆದು, ಅನನ್ಯಗತಿಕಳಾದ ಲೋಕಜನನಿಯನ್ನು ನೋಡಿ, ಅವಳ ಮುಖದ ಮಂದಹಾಸಕ್ಕೆ ಹೆದರಿದಂತೆ ಹಿಂಜರಿದು ನಿಲ್ಲುವ ಕುಂಡಲ ಕಂಠಾಭರಣ ಚೂಡಾಮಣಿಗಳ ಬಿಳುಪಾದ ಕಾಂತಿಯನ್ನು ಕಂಡು ನಗುತ್ತಾ ಶ್ರೀಕೃಷ್ಣ ನಿಂತೆಂದನು–

ರಾಜಪುತ್ರಿ! ಲೋಕಪಾಲಕರನ್ನು ಮೀರಿಸುವ ಐಶ್ವರ್ಯವಂತ ರಾಜರು ನಿನ್ನ ಸ್ವಯಂ ವರಕ್ಕೆಂದು ಬಂದ್ದಿದ್ದರಲ್ಲವೇ? ಓಹೋ! ಏನು ಆ ಮಹಾನುಭಾವರ ರೂಪ! ಎಂತಹ ಔದಾರ್ಯ! ಎಷ್ಟು ಬಲ! ನಿನ್ನನ್ನು ಬೇಡುವ ಸ್ಮರ ದುರ್ಮದರಾದ ಆ ಚೈದ್ಯಾದಿಗಳನ್ನು– ದೇವತೆಗಳಂತೆ ಮರೆವರನ್ನು– ನಿಮ್ಮ ಅಣ್ಣನ ಇಚ್ಛೆಯನ್ನೂ ಲೆಕ್ಕಿಸದೇ ಬಿಟ್ಟು, ನನ್ನನ್ನೇಕೆ ವರಿಸಿದೆ?

ನಾವು ರಾಜರಿಗೆ ಹೆದರಿ ಸಮುದ್ರ ಮಧ್ಯದಲ್ಲಿ ಅಡಗಿರುವೆವು. ಬಲವಂತರಿಂದ ನಮಗೆ ದ್ವೇಷವಿದೆ; ಆದ್ದರಿಂದ ಕ್ಷೇಮವಿಲ್ಲ; ನಮಗೆ ಪ್ರಾಯಃ ರಾಜಸಿಂಹಾಸನಾಧಿಕಾರವಿಲ್ಲ; ಲೋಕ ವಿಲಕ್ಷಣನಾಗಿ ನಡೆಯುವ ಗಂಡನ ಕೈಹಿಡಿದ ರಾಜಪುತ್ರಿಗೆ ಸುಖವಿಲ್ಲ. ನಾವು ನಿಷ್ಕಿಂಚನರು; ನಮ್ಮ ಪಾರಿವಾರದವರೂ ನಿಷ್ಕಿಂಚನರೇ. ಪ್ರಾಯಃ ಧನಿಕರು ನಮ್ಮಗೊಡವೆಗೆ ಬರುವುದಿಲ್ಲ. ಕೇಳು! ಸಮಾನ ಐಶ್ವರ್ಯ, ಸಮಾನ ಧನಸಂಪತ್ತಿ, ಸಮಾನ ವೈಭವ, ಸಮಾನ ರೂಪ, ಸಮಾನ ಕುಲವುಳ್ಳವರಿಗೇ ಪರಸ್ಪರ ವಿವಾಹವಾಗಲಿ, ವಿವಾದವಾಗಲಿ ಚಂದ; ಉತ್ತಮಾಧಮರಿಗೆ ಎರಡೂ ಚಂದವಲ್ಲ. ರುಕ್ಮಿಣಿ! ಗೊತ್ತಿಲ್ಲದೆ, ದೂರಾಲೋಚನೆ ಮಾಡದೆ, ಭಿಕ್ಷುಕರ ಹೊಗಳಿಕೆಗೆ ಮನಸೋತು, ಗುಣಹೀನನಾದ ನನ್ನಿ ಕೈಹಿಡಿದೆ. ಆದರೇನಾಯಿತು? ಈಗ ನಿನಗೆ ತಕ್ಕ ಕ್ಷತ್ರಿಯ ಸಿಂಹನನ್ನು ವರಿಸು! ಅವನಿಂದ ನಿನ್ನ ಇಹಪರಲೋಕ ಸುಖಗಳು ಪೂರ್ಣವಾಗಲಿ! ಶಿಶುಪಾಲ ಶಾಲ್ವ ಜರಾಸುತರಿಗೆ ನನ್ನನ್ನು ಕಂಡರಾಗದು. ನಿಮ್ಮಣ್ಣ ರುಕ್ಮಿಯೂ ಅಷ್ಟೇ! ಆ ದರ್ಪವಂತರ ಗರ್ವವನ್ನು ಮುರಿಯಲು ನಿನ್ನನ್ನು ತಂದೆನು; ಆದರೂ ನನಗೆ ಸ್ತ್ರೀ ಪುತ್ರ ಮಿತ್ರರಿಂದ ಆಗ

ಬೇಕಾದ್ದೇನೂ ಇಲ್ಲ. ನಮ್ಮ ಮನಸ್ಸಿನ ಸುಖಲಾಭವೇ ನಮಗೆ ಸಾಕು. ಇನ್ನಾವ ಅಪೇಕ್ಷೆಯೂ ಇಲ್ಲ. ಇತರ ಮನುಜರಂತೆ ಕರ್ಮಗಳನ್ನು ಮಾಡದೇ ತೀರದೆಂದಿಲ್ಲ– ಸದಾ ಬಿಡದಿರುವ ಶ್ರೀಕೃಷ್ಣನಿಗೆ ತಾನೇ ಪ್ರಿಯತಮಳೆಂದು ನಂಬಿ, ಸದಾ ಬಿಡದಿರುವ ರುಕ್ಮಿಣಿಯು ದರ್ಪವನ್ನು ಮುರಿಯಲೆಂಬಂತೆ ಲೋಕೇಶನಾಡಿದ ಅಪ್ರಿಯ ವಚನಗಳನ್ನು, ಹೊಸತಾಗಿ ಅಂದು ಕೇಳಿ ಭಯದಿಂದ ಗಡಗಡನೆ ನಡುಗಿ ರುಕ್ಮಿಣಿಯು ದುರಂತ ಚಿಂತಾಕ್ರಾಂತಳಾದಳು. ಕೆಂಪು ಉಗುರಿನ ಸೊಂಪಾದ ಪಾದದಿಂದ ಭೂಮಿಯ ಮೇಲೆ ಬರೆಯುತ್ತಾ ನಿಂತಳು. ಕುಂಕುಮ ವಂಕವನ್ನು ಹಚ್ಚಿದ ಬಿಂಕದ ಸ್ತನಗಳ ಮೇಲೆ, ಕಾಡಿಗೆ ಕಣ್ಣಿನ ಕಪ್ಪು ಕಣ್ಣೀರು ಬಿದ್ದು ಪುಟಿದು, ತಲೆಬಾಗಿ ನಿಂತ ತಲೋದರಿಯ ದುಃಖಾವೇಗವನ್ನು ಸೂಚಿಸುತ್ತಿತ್ತು. ಮಾತಾಡಲು ಬರದೆ ಅವಳ ಕುತ್ತಿಗೆಯ ಸೆರೆಬಿಗಿದು ಬಂತು. ದುಃಖ ಭಯ ಶೋಕಗಳು ಮುಪ್ಪುರಿಪಾಶರಾಗಿ ಬಿಗಿಯಲು, ಎಚ್ಚರ ತಪ್ಪಿದ ಅವಳ ಕೈಯಿಂದ ಸಡಿಲವಾದ ಕಂಕಣಗಳ ಜೊತೆಗೆ ಬೀಸಣಿಕೆಯೂ ಬೀಸಿ ಬಿತ್ತು. ದೇಹವು ಅವಶವಾಗಿ, ಬಿರುಗಾಳಿಗೆ ಬಾಳೆಯ ಗಿಡದಂತೆ, ಕೆಳಗುರುಳುತ್ತಿರಳು, ಕೇಶರಾಶಿ ಹಾರಾಡಿತು.

ಅದನ್ನು ಕಂಡು ಪ್ರಿಯಳ ಪ್ರೇಮಬಂಧನದ ಬಿಗಿಯನ್ನರಿತು, ಶ್ರೀಕೃಷ್ಣನು ತಾನಾಡಿದ ಹಾಸ್ಯದ ಪ್ರೌಢಿಮೆಯನ್ನರಿಯದೆ ಬಳಲುವ ಭಾಮೆಯಲ್ಲಿ, ಕರುಣೆಯಿಂದ ಕರಗಿ ಮರುಗಿದನು. ತಟ್ಟನೆ ತಲ್ಪದಿಂದಿಳಿದು, ಚತುರ್ಭುಜನಾಗಿ, ತನ್ನಿಯನ್ನು ಪಿಡಿದು, ಬೀಳದಂತೆ ಬಿಗಿದಪ್ಪಿ ಮಂಚದಲ್ಲಿಟ್ಟು, ಮಡದಿಯ ಹತ್ತಿರ ಕೂತನು. ಅವಳ ಕಣ್ಣೀರನ್ನೊರಸಿ, ಬಡಿಯುವ ಎದೆಯನ್ನು ನೇವರಿಸಿ, ಕೈಗಳಿಂದಾಲಿಂಗಿಸಿ, ಅನನ್ಯವ್ರತಳಾದ ಸತಿಯನ್ನು ಕೃಪೆಯಿಂದ ಸಂತೈಸಿದನು. ಹಾಸ್ಯಮಾಡಿದರೂ ತಿಳಿಯದೆ ತತ್ತರಿಸುವ ತರುಣಿಯನ್ನು ನೋಯಿಸಿದೆನೆಂದು ನೊಂದು ಶ್ರೀಹರಿಯು ಮೆಲ್ಲನೆ ಇಂತೆಂದನು–

ವಿದರ್ಭ ರಾಜಪುತ್ರಿ– ಅಲ್ಲ, ರುಕ್ಮಿಣಿ– ಪ್ರಿಯೇ! ಯಾಕಿಷ್ಟು ಅಸಮಾಧಾನ? ನೀನು ನನ್ನ ಪರಮಭಕ್ತಳೆಂದು ನನಗೆ ಚೆನ್ನಾಗಿ ಗೊತ್ತು. ನಿನ್ನ ನರ್ಮವಚನಗಳನ್ನು ಕೇಳಿ ತಣಿಯಬೇಕೆಂದಾಡಿದ ಹಾಸ್ಯದ ಮಾತಿನಿಂದಿಷ್ಟಾಯಿತು! ಇರಲಿ. ಪ್ರೇಮರಸರಂಜಿತ ಮುಖಕಮಲವು ಕೆಂಪಾಗಿ, ತುಟಿಗಳನ್ನು ಕಚ್ಚಿ, ಇಲ್ಲದ ಸಲ್ಲದ ಸಿಟ್ಟಿನಿಂದ ಕುಡಿನೋಟವನ್ನು ಬೀರಿ ಹುಬ್ಬನ್ನು ಗಂಟಿಕ್ಕಿ, ಪ್ರಣಯಕೋಪಮನೋಹರಳಾದ ಸತಿಯನ್ನು ನೋಡಿ ಹಿಗ್ಗುವ ಗೃಹಸ್ಥರೇ ಧನ್ಯರು! ಪ್ರಿಯಳಿಂದ ಕೂಡು ನಿರ್ಮಾಲಾಪಗಳಿಂದ ದಿನಗಳನ್ನು ಕಳೆವರೇ ಪುಣ್ಯವಂತರು.

ಇಂತು ಸಂತೈಸುವ ಕಾಂತ ನುಡಿಯನ್ನು ಕೇಳಿ ಹಿಂದಾಡಿದ ತ್ಯಾಗವಚನವು ಪರಿಹಾಸವೆಂದು ತಿಳಿದು ರುಕ್ಮಿಣಿಯು ಭಯರಹಿತಳಾದಳು. ಪುರುಷೋತ್ತಮನ ಮುಖವನ್ನೇ ದಿಟ್ಟಿಸಿ ನೋಡಿ, ಲಜ್ಜಾಪ್ರೇಮಗಳು ನಾ ಮುಂದು– ತಾ ಮುಂದು– ಎಂದು ಜಗಳವಾಡುತ್ತಿರಲು ಅವೆರಡನ್ನೂ ಬಿಟ್ಟು ಭಕ್ತಿಭರದಿಂದ ನಗುತ್ತಾ ಇಂತೆಂದಳು–

ನಿಜ! ಅರವಿಂದನಯನ! ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನಾದ ನಿನಗೆ ಮತ್ತಿನ್ನಾರು ಸಮರು? ನಿನಗೆ ನೀನೇ ಸಮನು. ಐಶ್ವರ್ಯಾದಿ ಭದ್ರಗುಣ ಸಮುದ್ರನಾಗಿ ನಿರಪೇಕ್ಷನಾದ ನೀನೆಲ್ಲಿ? ಸತ್ವಾದಿಗುಣಪ್ರವರ್ತಕಳು, ಸಕಲ ಬ್ರಹ್ಮಾದಿವಂದಿತಪಾದಳಾದರೂ ಅನಂತಗುಣಾಪರಳಾದ ನಾನೆಲ್ಲಿ? ತ್ರಿಲೋಕಗಳಲ್ಲಿಯೂ ತ್ರಿಗುಣರಹಿತನೂ ನೀನೆಂದು ತ್ರಿವೇದಗಳು ಸಾರುತ್ತಿವೆ. ಲೋಗೋಕಪಾಲರನ್ನು ಬ್ರಹ್ಮರುದ್ರಾದಿಗಳನ್ನು ಕೂಡ ಅವರ ಪದವಿಗಳನ್ನಿತ್ತು ಪಾಲಿಸುವ

ನಾನು ಅಪ್ರಾಕೃತಳಾದರೂ ನಿನ್ನಧೀನಳಾಗಿ ನಿನಗೆ ಅಸಮಳೇ ಆಗಿದ್ದೇನೆ. ಬಲಿರಾಜ ಶಿರಃ ಕಿರೀಟರತ್ನರಂಜಿತ ಪಾದ! ಸಮುದ್ರದಲ್ಲಿರುವುದು ನಿಜ– ಆದರೆ ರಾಜರಿಗೆ ಭಯಪಟ್ಟಲ್ಲ; ಸಂಸಾರಕಾರಣವಾದ ಪ್ರಕೃತಿಗುಣಗಳಿಂದ ಪೀಡಿತನಾದವನು ಸಮುದ್ರಾದಿ ತೀರ್ಥಗಳಲ್ಲಿ ತಪಸ್ಸನ್ನು ಮಾಡುವುದು ಒಳಿತೆಂದು ತೋರಿಸಲು ಭೂತಮಯ ಶರೀರದಲ್ಲೇ ಇದ್ದು ಅಂಗುಷ್ಠ ಮಾತ್ರನಾಗಿ ಭೂತಕೃತವಿಕಾರಗಳು, ಜೀವಸುಖದುಃಖಾದಿಗಳು ನಿನ್ನನ್ನು ಮುಟ್ಟದಂತೆ ದೂರ ವಿಟ್ಟು, ಕೇವಲ ಜ್ಞಾನಾನಂದಮಯನಾಗಿಲ್ಲವೇ? ಸ್ವರೂಪ ಸುಖವನ್ನುಂಡು ದುಃಖಲೇಶವನ್ನು ಸ್ವೀಕರಿಸದೆ ಬಲವದಿಂದ್ರಿಯಗ್ರಾಮವನ್ನು ಸ್ವರೂಪ ಸಾಮರ್ಥ್ಯದಿಂದ ಜಯಿಸಿ ಮುಟ್ಟಿದ ಸ್ವರೂಪೇಂದ್ರಿಯ ರಮಣಶೀಲನಾದ ನಿನಗೆ ಇಂದ್ರಿಯದಾಸರಾದ ರಾಜರು ಸಮರೆಂದಿಗೂ ಅಲ್ಲ. ನಿನ್ನ ಸೇವೆಗೈದ ನಾನು ದುಷ್ಟನೃಪರನ್ನು ಅಂಧತಮದಲ್ಲಿ ಕೆಡಹಿಬಿಟ್ಟಿರುವೆನು. ಸುಜನರಂಜಕನಾದ ನಿನಗೆ ನೃಪಾಸನವೇಕೆ? ಎಲ್ಲ ರಾಜರೂ ನಿನ್ನ ದಯೆ ಇಲ್ಲದಿರೆ ತತ್‌ಕ್ಷಣವೇ ಸಿಂಹಾಸನದಿಂದುರುಳಿ ಬೀಳುವರು. ನರಪಶುಗಳಿಗೆ ನಿನ್ನ ಲೋಕವಿಲಕ್ಷಣ ಮಹೋದಾರಚರಿತೆ ಅರ್ಥವಾಗುವುದಿಲ್ಲ; ಆದರೆ ನಿನ್ನ ಪಾದಾರವಿಂದಮಕರಂದಪಾನನಿರತರಾದ ಭಕ್ತರಿಗೆ ನಿನ್ನ ಚರಿತೆ, ನಿನ್ನ ನಡತೆ ಸದಾ ಪ್ರಕಾಶಿತವಾಗಿದೆ. ಪೂರ್ಣಗುಣನಾದ ನಿನ್ನ ಇಚ್ಛೆಯನ್ನರಿತು ಸದಾ ತದ್ವಿಧೇಯಳಾಗಿ ನಾನು ನಡೆಯುವೆನು. ನಿನಗನುಕೂಲಳಾಗಿ ನಡೆಯುವ ನನ್ನ ವರ್ತನವೇ ಇತರರಿಗೆ ತಿಳಿಯಲಾಗದೆಂದಮೇಲೆ, ಇನ್ನು ನಿನ್ನ ವರ್ತನವನ್ನು ಅವರೆಂತು ಬಲ್ಲರು? ಎಲ್ಲವೂ ಪೂರ್ಣವಾಗಿರುವುದರಿಂದ ನಿಷ್ಕಿಂಚನನು ನೀನು. ನಿನ್ನಲ್ಲಿ ಸ್ವಲ್ಪವಾದರೂ ಇಲ್ಲ ನಿಜ. ಬ್ರಹ್ಮಾದಿ ಗಳು ನಿನ್ನನ್ನು ಪೂಜಿಸುವರು.

ಐಶ್ವರ್ಯಮದಾಂಧರು ನಿನ್ನನ್ನು ತಿಳಿಯರು; ಆದ್ದರಿಂದ ಅವರಿಗೆ ನೀನು ಸಿಗದಿರುವೆ. ಲೋಕಪೂಜಿತರಾದ ಬ್ರಹ್ಮಾದಿಗಳಲ್ಲಿ ಅಂತರ್ಯಾಮಿಯಾಗಿ ನಡೆಸುವ ನೀನು, ತಮ್ಮಲ್ಲಿಯೂ ಇರುವನೆಂದು, ಆ ಇಂದ್ರಿಯಲೋಲುಪರು ತಿಳಿಯದೆ, ಕೆಡುವರು. ಜ್ಞಾನಿಗಳು ನಿನ್ನನ್ನು ಪ್ರಿಯ ತಮನೆಂದು ತಿಳಿದು, ಮುಕ್ತರಾಗುವರು.

ಪರಮಾನಂದಸ್ವರೂಪನಾದ ನೀನು ಸಮಸ್ತ ಪುರುಷಾರ್ಥಪ್ರಧಾನನಾಗಿರುವೆ. ನಿನ್ನ ಪ್ರಾಪ್ತಿಯೇ ಮೋಕ್ಷಾನಂದ. ಸರ್ವೋತ್ತಮ ಫಲಸ್ವರೂಪನು ನೀನೇ. ನೀನು ಒಲಿದರೆ ಸಾಕೆಂದು ಬುದ್ಧಿವಂತರು ಸರ್ವವನ್ನು ತ್ಯಜಿಸಿಬಿಡುವರು. ಅಂತಹವರಿಗೇ ನಿನ್ನ ಪ್ರಸಾದ ಮೀಸಲಾಗಿದೆ. ಸುಜನರು ದೇವವಿಹಿತ ಕರ್ಮಾನುಷ್ಠಾನ ತತ್ಪರರಾದರೆ, ನೀನು ವೇದಮುಖ್ಯಪ್ರತಿಪಾದ್ಯನು. ಜೀವರು ಸುಖದುಃಖವಂತರಾದರೆ, ನೀನು ಕೇವಲ ಸುಖ ಸ್ವರೂಪನು ಮತ್ತು ಜೀವರಿಗೆ ಸುಖದುಃಖ ರೂಪ ಕರ್ಮಫಲಪ್ರದಾತನು.

ನಿರ್ಜಿತೇಂದ್ರಿಯಗ್ರಾಮರಾದ ಭಿಕ್ಷುವರರಿಂದ ಸ್ತುತಿಸಿಕೊಂಬ ಮಹಾಮಹಿಮೆ ನಿನ್ನದು. ಸಾಯುಜ್ಯಮುಕ್ತಿಪ್ರದನಾದ ಜಗದ್ವಲ್ಲಭನೆಂದರಿತು, ನಿನ್ನ ಕಣ್ಣಸನ್ನೆಯಂತೆ ನಡೆಯುವ ಕಾಲದ ಸೊಕ್ಕಿನಿಂದ ಹೇಳಹೆಸರಿಲ್ಲದೆ ಹೋಗುವ ಬ್ರಹ್ಮರುದ್ರ ಸುರೇಂದ್ರ ಚಂದ್ರಾದಿ ವೃಂದಾರಕರನ್ನೂ ಬಿಟ್ಟು, ದೀರ್ಘಾಯುಗಳಲ್ಲದ ಶಿಶುಪಾಲಾದಿಗಳನ್ನು ಕಣ್ಣೆತ್ತಿ ನೋಡದೆ, ನಿನ್ನನ್ನೇ, ವರಿಸಿದ ನಾನು ದಡ್ಡಳೇ? ತನ್ನ ಬಲಿಯನ್ನು ನರಿಗಳ ಹಿಂಡಿನಲ್ಲಿ ತೂರಿ ಸ್ವೀಕರಿಸುವ ಸಿಂಹದಂತೆ, ನನ್ನನ್ನು ರಾಜರು ನೋಡುತ್ತಿರಲು, ಹರಸಿ ತಂದ ಶಾರ್ಙ್ಗಧನುರ್ಧರನಿಗೆ ಭಯವೇ?

ಶ್ರೀಕೃಷ್ಣ! ಅಂಗ, ಪೃಥು, ಭರತ, ಯಯಾತಿ, ಗಯ ಮುಂತಾದ ಚಕ್ರವರ್ತಿಗಳು, ಅಖಂಡ ಮಂಡಲಾಧಿಪತ್ಯವನ್ನು ನಿನಗಾಗಿ ತೊರೆದು ವನವನ್ನು ಸೇರಿ ಕೆಟ್ಟರೇ? ಅವರಿಗೆ ಆಗಲೇ ನಿನ್ನ ಪಾದಸಾನ್ನಿಧ್ಯವು ಸಿಕ್ಕಲಿಲ್ಲವೇ? ಅವರಂತೆ ಸರ್ವಸ್ವವನ್ನು ತೊರೆದ ಸ್ಥಿರಮತಿಗಳಾದ ಸತಿಯರೂ– ನಿನ್ನನ್ನು ಭಜಿಸಿ, ಸುಖಪಟ್ಟವರಿಲ್ಲವೇ? ಮಹಜ್ಜನ ಮುಖರಿತವಾದ ಮಧುಜಿಚ್ಚರಿತವು, ಸಂಸಾರ ತಾಪನಿವಾರಕವೆಂದು ಕೇಳಿ, ಶ್ರೀರಮಣೀಶರಣವಾದ ನಿನ್ನ ಚರಣಾರವಿಂದ ಗಂಧವನ್ನೊಂದು ಸಲ ಸೇವಿಸಿ– ಗುಣಗಣನಿಲಯಾದ ನಿನ್ನನ್ನು ಬಿಟ್ಟು– ಸಾವಿಗಂಜುವ ಹಾಗೂ ಆಯುವಿನ ಸ್ಥಿರವಲ್ಲದ ಮನುಜನನ್ನು, ಯಾವ ಹರಿಸರ್ವೋತ್ತಮತ್ವ ಸರ್ವ ವಿಲಕ್ಷಣತ್ವ ಜ್ಞಾನಿಯಾದ ತರುಣಿಯು ವರಿಸುವಳು? ನೀನು ಇಹಾಮುತ್ರ ಸರ್ವಕಾಮಪೂರಕನು, ಜಗದೇಕ ವಲ್ಲಭನೆಂದು ತಿಳಿದು ನನಗೆ ಸರಿಯಾದವನೆಂದೇ ನಿನ್ನನ್ನು ವರಿಸಿರುವೆನು. ತಾನು ಭ್ರಮಿಸದೆ, ಅನ್ನಕ್ಕಾಗಿ ಭ್ರಮಿಸುವ ಜೀವರನ್ನು ಪಾಲಿಸುವ ನನಗೆ ನಿನ್ನ ಚರಣವೇ ಶರಣವಾಗಿರಲಿ! ನಾಶರಹಿತ! ನೀನು ನುಡಿದ ಶಾಲ್ವ, ಜರಾಸುತರಾದ ರಾಜರ ಗೊಡವೆ ಎನಗೇಕೆ? ತಮ್ಮ ತರುಣಿಯರಿಗೆ, ಕತ್ತೆಯಂತೆ ಭಾರ ಹೊರುವ, ಎತ್ತಿನಂತೆ ಮುಗುದಾಣೆ ಕಟ್ಟಿಕೊಂಡು ವಶರಾಗಿರುವ, ನಾಯಿಯಂತೆ ಹಿಂದಿರುಗುವ, ಬೆಕ್ಕಿನಂತೆ ಕದ್ದು ತಿನ್ನುವ ಭೃತ್ಯರವರು. ಬ್ರಹ್ಮರುದ್ರಾದಿ ದಿವ್ಯ ಸಭೆಗಳಲ್ಲಿ ಬಾರಿಬಾರಿಗೂ ಸಾರಲ್ಪಡುವ ನಿನ್ನ ಪಾಪಹರ ಮನೋಹರಚರಿತವನ್ನು ಕೇಳುವ ಭಾಗ್ಯವು ಅವರ ನಿರ್ಭಾಗ್ಯ ಕಿವಿಗಳಿಗೆ ದೊರಕುವುದಿಲ್ಲ.

ಹೊರಗೆ ಚರ್ಮ ಮೀಸೆ ರೋಮ ನಖ ಕೇಶಗಳ ಹೊದಿಕೆ; ಒಳಗೆ ರಕ್ತಮಾಂಸ ಶಲ್ಯಗಳ ಗೂಡು; ಸುತ್ತು ಬಿಗಿದಿರುವ ನಾಡಿಗಳ ಕರುಳುಗಳ ಸೆಳೆತ; ನಾರುವ ಬೆವರು; ಮಲಮೂತ್ರಗಳ ನಾತ. ಇದು ಜೀವವಿಲ್ಲದಿರೆ ಶವವಾಗುವ ಮನುಜಶರೀರದ ಕತೆ. ನಿನ್ನ ಪಾದಾರವಿಂದದ ಸವಿಗಂಡವಳಾವಳೂ ಮೂಢಳಾಗಿ, ಅಂತಹ ಮನುಜನನ್ನು ಸೇವಿಸುವುದಿಲ್ಲ. ನನ್ನಲ್ಲಿ ಪರಮಾನುಗ್ರಹವು ನಿನಗಿದೆ. ಸ್ವರಮಣನಾದ ನಿನ್ನ ಚರಣದಲ್ಲಿ ಅನವರತ ರತಿಯು ನನಗಿದೆ. ಸೃಷ್ಟಿ ಸ್ಥಿತಿ ಸಂಹರಣಗಳನ್ನು ಮಾಡುವಾಗ ನನ್ನ ಅಧೀನದಲ್ಲಿರುವ ರಜಸ್ಸತ್ವ ತಮೋಗುಣಗಳನ್ನು ಹೆಚ್ಚಿಸಲೋಸುಗ ಕಟಾಕ್ಷಭಾಗ್ಯವನ್ನಿತ್ತು ನನ್ನನ್ನು ಕರೆಯುವೆ; ಆಗ ನನ್ನದೇ ಮಹಾಭಾಗ್ಯ. ಅಂತಹ ನಿನ್ನ ಕೃಪೆ ಎನ್ನಲಿ ಸದಾ ಇದೆ.

ಪ್ರವಿಮಲಾಕಾರ! ಭಕ್ತಮಂದಾರ! ನಿನ್ನ ಮಾತು ಸರ್ವಥಾ ಸುಳ್ಳಾಗುವುದಿಲ್ಲ. ಕನ್ಯಾಪ್ರದಾನ ಕಾಲದಲ್ಲಿ ಮಾತೆಯ ಮಾತಿನಲ್ಲಿ ಕಾಪಟ್ಯವಿರುವುದೇ? ಇಲ್ಲ. ಯೌವನ ಮದದಿಂದ ಸ್ವೈರಿಣಿಯು ಪುರುಷಾಂತರಾಸಕ್ತಳಾದುದನ್ನು ಕಂಡ ಪರಿಜ್ಞಾನಿಯಾದ ಪತಿಯು, ಅವಳನ್ನು ಬಿಟ್ಟುಬಿಡುವನು. ಅವಿವೇಕಿಯಾಗಿ, ಇಂದ್ರಿಯಲೋಲನಾಗಿ ಅವಳಲ್ಲೇ ರತನಾದನೆಂದರೆ, ಇಹಪರಲೋಕ ಸುಖ ದೂರನಾಗುವನು. ನೀನು ಸರ್ವಜ್ಞನು, ನಿಯತಪತಿಯು ಆಗಿರುವೆ. ನಾನು ನಿಯತಪತಿವ್ರತೆಯೂ ಅಹುದು.

ಎಂದು ಬಿನ್ನವಿಸಿದ ತನ್ನ ರಾಣಿಯ ಮಾತನ್ನಾಲಿಸಿ ನಗುತ್ತಾ ಶ್ರೀಭಗವಂತನು ಇಂತೆಂದನು–

ಸಾಧ್ವಿ! ನಿನ್ನ ವಚನಗಳು ಶ್ರವಣಸುಖಕರಗಳಾಗಿವೆ. ಇಂತು ನೀನಾಡಿದ ಮಾತುಗಳನ್ನು ಕೇಳಬೇಕೆಂದೇ, ನಾನಾವಚನಗಳನ್ನಾಡಿದೆನು, ನಿಜ. ಅವೆಲ್ಲವೂ ಸತ್ಯವಚನಗಳೆಂದು ಪರಮಪತಿವ್ರತಾಮಣಿಯಾದ ನಿನಗೆ ಕಂಡುಬಂದವು. ನನ್ನಿಂದ ನಿನಗೇನಾಗಬೇಕೋ ಕೇಳು! ಏಕಾಂತಭಕ್ತಳಾದ ನಿನಗೆ ನಿತ್ಯವು– ಸಪ್ತದ್ವೀಪಗಳು, ಸಪ್ತಸಮುದ್ರಗಳು, ಮಣಿಕಾಂಚನ ಪರ್ವತಗಳು,

ಬ್ರಹ್ಮಾದಿ ಪ್ರಜರು– ಎಲ್ಲವೂ ಕರಗತವಾಗಿರುವಂತೆ ಮಾಡಿಟ್ಟಿರುವೆನು. ಮುಖ್ಯವಾಗಿ ನನ್ನ ಪ್ರೇಮಕ್ಕೆ ಪಾತ್ರಳಾಗಿರುವೆ. ನೀನು ಪತಿವ್ರತಾಶಿರೋಮಣಿಯು: ಏಕೆಂದರೆ ನಾನಾಡಿದ ಕಿಡಿ ಮಾತುಗಳಿಗೆ ಕಿಂಚಿತ್ತೂ ಕೆಡದೆ, ಶುದ್ಧಬುದ್ಧಿಯಾಗಿರುವೆ. ತಪಸ್ಸನ್ನು ಯೋಗಾ ಭ್ಯಾಸವನ್ನು ಮಾಡಿ, ಮೋಕ್ಷೇಶನಾದ ನನ್ನಿಂದ, ದಾಂಪತ್ಯ ಸುಖಾದಿ ಕಾಮಗಳನ್ನು ಬೇಡುವವರು – ನನ್ನ ಬಂಧಕಶಕ್ತಿಯನ್ನು ತಿಳಿದು ದಾಟಿಲ್ಲ. ಮೋಕ್ಷಾದಿ ಸಕಲಪುರುಷಾರ್ಥಪ್ರದನಾದ ನನ್ನನ್ನು ಮೆಚ್ಚಿಸಿ, ಮತ್ತೆ ವಿಷಯಸಂಪತ್ತನ್ನೇ ಬೇಡುವವರು ಮಂದಭಾಗ್ಯರೇ ಸರಿ! ಹಂದಿ ನಾಯಿ ನರಿಗಳಿಗೂ ಊಟ ನಿದ್ರೆ ಸಂತಾನ ಮೊದಲಾದ ವಿಷಯಸುಖಗಳು ಬೇಡದಂತೆ ಬರುತ್ತಿವೆ ಎಂದರಿತೂ ಅವನ್ನೇ ಬೇಡಬೇಕೇ?

ಸಕಲೈಶ್ವರ್ಯಸಂಪನ್ನೇ! ದೇವಿ! ನೀನು ದೊಡ್ಡ ಭಕ್ತಳಿರುವೆ; ಭರಮೋಚಕವಾದ ಭಕ್ತಿಯು ಇಂದ್ರಿಯಾರಾಮರಿಗೆ ಸಿಗುವುದಿಲ್ಲ. ಪತಿಯಲ್ಲಿ ದುಷ್ಟಳಾಗಿ, ಕೆಟ್ಟ ಮಾತಾಡುತ್ತಾ, ತನ್ನ ಹೊಟ್ಟೆ ಹೊರೆಯಲು ಅವನನ್ನು ಕಟ್ಟಿಕೊಂಡಿರುವ ನಾರಿಯರಿಗೂ, ನನ್ನ ಭಕ್ತಿಗೂ– ನರಿಗೂ ನಾಕಕ್ಕೂ ಇರುವಷ್ಟು ದೂರ.

. ಬಂದ ರಾಜರನ್ನು ಕಣ್ಣೆತ್ತಿ ನೋಡದೆ, ಬ್ರಾಹ್ಮಣನಿಂದ ರಹಸ್ಯಸಂದೇಶವನ್ನು ಕಳಿಸಿದ ನಿನ್ನ ಪ್ರೇಮವನ್ನು ಮರೆತಿಲ್ಲ. ನಿಮ್ಮ ಅಣ್ಣನನ್ನು ತಲೆಬೋಳಿಸಿ ಯುದ್ಧರಂಗದಿಂದ ಕಳಿಸಿದು ದಲ್ಲದೆ– ಮದುವೆ ಮನೆಯಲ್ಲಿ ಪಗಡೆ ಆಟವನ್ನಾಡುತ್ತಾ ನಮ್ಮಣ್ಣ, ಅವನನ್ನು ಕೊಂದು ಹಾಕಿದುದನ್ನೂ ಪಿಟ್ಟೆನ್ನದೆ ಸಹಿಸಿದ ನಿನ್ನ ತಿತಿಕ್ಷಾ ಕ್ಷಮಾಗುಣವನ್ನು ಮರೆತಿಲ್ಲ. ನೀ ಕಳುಹಿದ ವಿಪ್ರನು ಆಲಸ್ಯಮಾಡಿದಾಗ– ಚಿಂತೆಯಿಂದ– ಅನನ್ಯಯೋಗ್ಯವಾದ ಈ ಶರೀರವನ್ನೇ ಬಿಡುವೆ ನೆಂದ ನಿನ್ನ ಭಕ್ತಿಯನ್ನೂ ಮರೆತಿಲ್ಲ. ಸಂತೋಷವಾಗಿದೆ. ಸತ್ಪತಿವ್ರತೆಯಾದ ನಿನಗೆ ಸತ್ಪತಿಯಾದ ನಾನು ವಶನಾಗಿರುವೆನು.

ಎಂದು ನರ್ಮಾಲಾಪಗಳಿಂದ ಗೋವಿಂದನು ನರಲೋಕ ವಿಡಂಬನೆಯನ್ನು ತೋರಿ ರುಕ್ಮಣೀ ದೇವಿಯನ್ನು ರಮಿಸಿ ಲಾಲಿಸಿದನು. ಇತರ ತರುಣಿಯರ ಮನೆಗಳಲ್ಲೂ ಯಥಾ ಯೋಗ್ಯವಾದ ಗೃಹಸ್ಥಧರ್ಮಗಳನ್ನು ನಡೆಸಿ, ಲೋಕವನ್ನೂ ನಡೆಸುತ್ತಾ ಶ್ರೀಕೃಷ್ಣನು ಸುಖದಿಂದಿದ್ದನು.

## ೭೬. ಕೃಷ್ಣಸಂತಾನ – ರುಕ್ಮಿ ವಧೆ

ಶ್ರೀಕೃಷ್ಣಪತ್ನಿಯರಿಗೆ ಹತ್ತುಹತ್ತುಜನ ಕುಮಾರರು ಹಾಗೂ ಕುವರಿಯರೂ ಜನಿಸಿದರು. ತಂದೆಯಂತೆ ಅನ್ಯೂನಶರೀರಸೌಂದರ್ಯಾದಿ ಗುಣಗಳಿಂದ ಶೋಭಿಸುವ ಮಕ್ಕಳಿಂದ ಕೂಡಿ, ರಾಣಿಯರೆಲ್ಲರೂ ಸಂತೋಷದಿಂದಿದ್ದರು. ನಾನೇ ಶ್ರೀಕೃಷ್ಣನಿಗೆ ಪ್ರೀತಿಪಾತ್ರಳೆಂದು ಪ್ರತಿ ಯೊಬ್ಬಳೂ ತಿಳಿದಿದ್ದಳು. ಎಲ್ಲರಲ್ಲಿಯೂ ನೆಲೆಸಿ ರಮಿಸುವ ರಮಾರಮಣನ ವಿಯೋಗವಿಲ್ಲದೆ, ಸ್ವರಮಣನಾದ ಕೃಷ್ಣನನ್ನು ಒಲಿಸಿಕೊಳ್ಳಲು ಹವಣಿಸುತ್ತಿದ್ದಳು. ಮಂದಹಾಸ, ಪ್ರೇಮರಸ ಪೂರ್ಣಕಟಾಕ್ಷ, ಭ್ರೂಭಂಗ ಸುಂದರವಾದ ಮುಖಾರವಿಂದದ ಸೊಬಗಿನಿಂದ ಶ್ರೀಕೃಷ್ಣನನ್ನು ವಶೀಕರಿಸಿಕೊಳ್ಳಲು ಪ್ರಯತ್ನಿಸುತ್ತಿರುವ ಆ ತರುಣಿಯರು ತಾವೇ ಸೋತು ಪೂರ್ಣಗುಣ ಸಮುದ್ರನ ವಶವಾಗುತ್ತಿದ್ದರು. ಬೆಡಗಿನಿಂದ ಕೂಡಿ ರಮಿಸುವ ರಮಣಿಯರು ಸ್ವರಮಣನಾದ ಶ್ರೀಶನ ಮನವನ್ನು ಕರಗಿಸಲು ಮಾಡಿದ ಸುರತಮಂತ್ರಗಳು ಕಾಮಜನಕನಿಗೆ ವಿಕಾರಜನಕವಾಗ

ಲಿಲ್ಲ. ಅತ್ಯಂತ ಪ್ರಿಯನಾದ ಕೃಷ್ಣನು, ತಮ್ಮ ಮನೆಯಲ್ಲಿ ಮಂಚಾರೂಢನಾಗಿರಲು, ಆ ಮಹಾನುಭಾವನ ಲಾವಣ್ಯರಸಮಯ ರೂಪಮಾಧುರ್ಯವನ್ನು ಸ್ತಂಭದ ಹಿಂದೆ ನಿಂತು– ಹೊಸತಾಗಿ ಬಂದ ಸೊಸೆಯಂತೆ– ಲಜ್ಜೆಯಿಂದ ನೋಡಿ, ಕಣ್ಣಿನಿಂದ ಹೀರಿ, ನಿತ್ಯನೂತನನಾದ ಶ್ರೀಲಲನಾಲಲಾಮನ ಲಾಲನೆಯಿಂದ ಧನ್ಯರಾಗುತ್ತಿದ್ದರು. ತಮ್ಮ ಮನೆಯಲ್ಲಿ ವಿಹರಿಸುವ ಶ್ರೀಕೃಷ್ಣನು ತಮ್ಮ ಕಣ್ಣನ್ನು ಮುಚ್ಚಿ ನಗುವಾಗ ತಾವೂ ಮಂದಹಾಸವನ್ನು ಬೀರಿ ಲಜ್ಜೆಯನ್ನು ತೊರೆದು ಕೃಷ್ಣಾಭಿಲಾಷೆಯನ್ನು ಪೂರ್ಣವಾಗಿಸಬೇಕೆಂದು, ಪಟಾದಿಗಳಿಂದ ತಮ್ಮ ಮುಖಾದಿಗಳನ್ನು ಶ್ರೀಕೃಷ್ಣನ ಮುಖಾದಿಗಳನ್ನೂ ಮುಚ್ಚಿ ಕಷ್ಟವಾದರೂ ಸಹಿಸಿ, ಚುಂಬನಾದಿನಿರತೆಯರಾಗುತ್ತಿದ್ದರು. ರಾಜನ್! ಆ ತರುಣಿಯರಲ್ಲಿ ಶ್ರೀಕೃಷ್ಣನು ಒಂದು ಎರಡು ಅಥವಾ ನಾಲ್ಕು ಹೆಣ್ಣುಮಕ್ಕಳನ್ನೂ ಪಡೆದಿದ್ದನು. ಪುತ್ರ ಸಂತಾನವನ್ನು ಹೆಸರಿಟ್ಟು ವಿವರಿಸುವೆನು ಕೇಳು.

ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಭದ್ರಚಾರು, ಚಾರುಚಂದ್ರ, ಅತಿಚಾರು, ಚಾರುಮಂತರು ಶ್ರೀರುಕ್ಮಿಣೀದೇವಿಯ ಪುತ್ರರು.

ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾಸುಮಾನ್, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀಭಾನು, ಪ್ರತಿಭಾನುಗಳು ಸತ್ಯಭಾಮೆಯ ಸುತರು.

ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ್, ದ್ರವಿಣ, ಕ್ರತುಗಳು ಜಾಂಬವತಿಯ ಮಕ್ಕಳು.

ಭಾನುಚಂದ್ರ, ಅಶ್ವಸೇನ, ಚಿತ್ರಗು, ವೇಗವಾನ್, ಕೃತಿ, ವೃಷ, ಅಮ, ಶಂಕು, ವಸು, ಶ್ರೀಮಂತರು ನೀಲಾದೇವಿಯ ಸುತರು.

ಶ್ರುತ, ಕವಿ, ವೃಷ, ಸುಬಾಹು, ಭದ್ರ, ಏಕಲ, ಶಾಂತಿ, ದರ್ಶ, ಪೂರ್ಣಮಾಸ್ಯ, ಸೋಮಕರು ಕಾಳಿಂದಿಯ ನಂದನರು.

ಪ್ರಘೋಷ, ಗಾತ್ರವಾನ್, ಸಿದ್ಧ, ಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜ, ಅಪರಾಜಿತರು ಲಕ್ಷ್ಮಣಾದೇವಿಯ ಮಕ್ಕಳು.

ವೃಕ, ಅರ್ಹಕ, ಅನಿಲ, ನೀಲ, ಬೃಹನ್ನ, ಅನ್ನಾದ, ಮಹಾಶ, ಪಾವನ, ವಹ್ನಿ, ಕೃತಿಗಳು ಮಿತ್ರವಿಂದೆಯ ಪುತ್ರರು.

ತಾಮ್ರಪತ್ರ, ಬೃಹತ್ಸೇನ, ಪ್ರಹರಣ, ಅರಿಜಿತ್, ಜಯ, ಸುಭದ್ರ, ವಾಮ, ಆಯು, ಸಾತ್ಯಕ, ದೀಪ್ತಿಮಂತರು (ಸು) ಭದ್ರಾದೇವಿಯ ಮಕ್ಕಳು.

ಇವರಲ್ಲದೆ ರುಕ್ಮಿಣಿಯಲ್ಲಿ ಚಾರುಮತಿ; ಸತ್ಯಭಾಮೆಗೆ ಭಾನು, ಗ್ರಾಮಣಿಕೆ, ತಾಮ್ರಪತ್ರೆ, ಜಲಂಧರೆ; ರೋಹಿಣಿ ಅಂದರೆ ಜಾಂಬವತಿಗೆ ತಾಮ್ರಪತ್ರೆ, ಮುಂತಾದ ಕುಮಾರಿಯರು; ಸಕಲ ತರುಣಿಯರಲ್ಲಿ ಜನಿಸಿದ ಅನೇಕ ಸುತೆಯರು ಕೃಷ್ಣನಿಗೆ ತಕ್ಕ ಮಕ್ಕಳೆನಿಸಿ ವಿರಾಜಿಸುತ್ತಿದ್ದರು.

ಪ್ರದ್ಯುಮ್ನನಿಗೆ ಭೋಜಕಟವಾಸಿಯಾದ ರುಕ್ಮಿಣಿಯು ತನ್ನ ಮಗಳನ್ನಿತ್ತಿದ್ದನು. ರುಕ್ಮವತಿ ಎಂಬ ಅವಳಿಗೆ ಅನಿರುದ್ಧನು ಜನಿಸಿದನು. ಅವನು ಬಹು ಬಲಶಾಲಿಯಾದನು.

ಈ ಹದಿನಾರು ಸಾವಿರ ಸತಿಯರು, ಸುತರು, ಸುತಸುತರು, ಬಹುಕೋಟಿಸಂಖ್ಯಾಕರಾಗಿದ್ದರು.

ಆಗ ಪರೀಕ್ಷಿದ್ರಾಜನು 'ಸ್ವಾಮೀ! ಹಿಂದೆ ಕೃಷ್ಣನಿಂದ ಅವಮಾನಿತನಾದ ರುಕ್ಮಿಣಿಯು ಅವನ ಮೇಲೆ ಸೇಡು ತೀರಿಸಿಕೊಳ್ಳಲು ಕಾದಿದ್ದನಲ್ಲವೆ? ಅಂತಹ ರುಕ್ಮಿಯು, ಶತ್ರುಪುತ್ರನಾದ

ಪ್ರದ್ಯುಮ್ನನಿಗೆ ತನ್ನ ಮಗಳನ್ನು ಹೇಗೆ ಕೊಟ್ಟನು, ದ್ವೇಷಿಗಳು ಬೀಗರೆ ಆದ ಬಗೆ ಹೇಗೆ? ಎಂದು ಕೇಳಲು ಶ್ರೀಶುಕನಿಂತೆಂದನು–

ರಾಜನ್! ರುಕ್ಮಿಯು ಪೂರ್ವವೈರವನ್ನು ಮರೆತಿದ್ದಿಲ್ಲ; ಆದರೂ ತಂಗಿಯಾದ ರುಕ್ಮಿಣಿಯು ಸಂತೋಷಪಡಲೆಂದು ಸೋದರಳಿಯನಾದ ಮದನನಿಗೆ ಮಗಳಾದ ರುಕ್ಮವತಿಯನ್ನು ಕೊಟ್ಟನು.

ಶ್ರೀಕೃಷ್ಣಾವಮಾನಿತನಾದ ರುಕ್ಮಿಯು, ಶ್ರೀಶೈಲವನ್ನು ಸೇರಿ, ಮಲ್ಲಿಕಾರ್ಜುನ ಸ್ವಾಮಿಯನ್ನು ಕುರಿತು ತೀವ್ರತಪವನ್ನು ಮಾಡಿದನು. ಪ್ರಸನ್ನನಾಗಿ 'ವರಬೇಡು' ಎಂದ ರುದ್ರನನ್ನು ನೋಡಿ ರುಕ್ಮಿಯು, 'ದೇವತೆಗಳಿಗೂ ಅಜೇಯವು, ಅಚ್ಛೇದ್ಯವು ಆದ ನಿನ್ನ ಪಿನಾಕನನ್ನು ಕೊಡು' ಎಂದನು. ಆ ಪಾಪಿಯ ದುರಭಿಪ್ರಾಯವನ್ನರಿತು, ಶಂಕರನು 'ಒಳ್ಳೇದು, ತೆಗೆದುಕೋ' ಎಂದು ಧನುವನ್ನುತ್ತು, ಮತ್ತು ಇಂತೆಂದನು–

'ವಿಷ್ಣುವಿಗೆ ವಿರೋಧವನ್ನು ಮಾಡಿದ ತತ್‌ಕ್ಷಣವೇ ಈ ಧನುವು ನಿನ್ನನ್ನು ಬಿಟ್ಟು ನನ್ನನ್ನೇ ಸೇರುವುದು, ತಿಳಿ' ಎಂದು ನುಡಿದು ಶಂಕರನು ಮತ್ತೆ ಮಾತಿಗಾಸ್ಪದವೀಯದೇ ಅಂತರ್ಹಿತನಾದನು.

ಆ ಧನುವನ್ನು ಪಿಡಿದು ರುಕ್ಮಿಯು ಭೋಜಕಟವನ್ನು ಸೇರಿದನು. ಆ ಧನುಸ್ಸಿನ ಭಯದಿಂದ ಪರಾಕ್ರಮವಂತನಾದ ಭೂಪಾಲರು ಬಹುಜನರು ರುಕ್ಮಿವಶರಾದರು. ಪೂರ್ವ ವೈರವನ್ನು ಮರೆಯದಿದ್ದರೂ ಶವನ ಮಾತನ್ನು ನೆನೆದು, ಧನುಸ್ಸನ್ನು ಕಳೆದುಕೊಳ್ಳುವೆನೆಂಬ ಭಯದಿಂದ, ಕೃಷ್ಣನ ಮೇಲೆ ಪ್ರತ್ಯಕ್ಷ ವಿರೋಧವಿಲ್ಲದೆ, ರುಕ್ಮಿಯು, ನಿಗೂಢದ್ವೇಷಿಯಾಗಿದ್ದನು.

ಅವನು ರುಕ್ಮವತಿಯ ಸ್ವಯಂವರವನ್ನೇರ್ಪಡಿಸಿರುವುದನ್ನರಿತು ಸಾಂಗವಾಗಿ ಕೃಷ್ಣನಲ್ಲಿ ಜನಿಸಿದ್ದ ಅನಂಗನು ಅಲ್ಲಿಗೆ ಹೋಗಿ ನೆರೆದ ರಾಜರನ್ನು ಗೆದ್ದು ರುಕ್ಮವತಿಯನ್ನು ತಂದು ಮದುವೆಯಾದನು. ಅವರ ಮಗನೇ ಮಹಾರಥನಾದ ಅನಿರುದ್ಧನು. ಬಾಣಪುತ್ರಿಯಾದ ಉಷಾದೇವಿಯ ಆದೇಶದಂತೆ ಚಿತ್ರರೇಖೆಯು ಅವನನ್ನು ಅಪಹರಿಸಿ, ಉಷೆಗಿತ್ತು– ಅವಳನ್ನು ಸನಾಥಳನ್ನಾಗಿರಿಸಿದಳು. ಅನಿರುದ್ಧನ ನೆವದಿಂದ ನಡೆದ ಯುದ್ಧದಲ್ಲಿ ಸಾವಿರ ಕೈಗಳ ಅಸುರ ಬಾಣನು, ನಾಲ್ಕು ಕೈಗಳ ಪ್ರಮಥಬಾಣನಾಗಿ ಉಳಿದನು.

ರುಕ್ಮಿಣಿತನಯಳಾದ ಚಾರುಮತಿಯನ್ನು ಕೃತವರ್ಮನ ಮಗನಾದ ವಿಶಾಲಾಕ್ಷನು ಮದುವೆಯಾದನು. ದೌಹಿತ್ರನೆಂಬ ಕಾರಣದಿಂದ ರುಕ್ಮಿಯು ಅನಿರುದ್ಧನಿಗೆ ತನ್ನ ಮಗನ ಮಗಳಾದ ರೋಚನಳನ್ನು ಕೊಟ್ಟು ಮದುವೆ ಮಾಡಿದನು. ತಂಗಿಯಲ್ಲಿ ಸ್ನೇಹದಿಂದ ರುಕ್ಮಿಯು, ವೈರವನ್ನು ಮುಚ್ಚಿಟ್ಟು ತೋರಗೊಡದೆ, ಬಂದ ಬೀಗರಾದ ರಾಮಕೇಶವಾದಿಗಳನ್ನು ಸತ್ಕರಿಸಿ ದನು. ಮದುವೆ ಒಂದೆಡೆ ಮಹಾಸಂಭ್ರಮದಿಂದ ನಡೆಯುತ್ತಿರಲು, ಮತ್ತೊಂದೆಡೆ ಕಳಿಂಗ ಮುಂತಾದ ರಾಜರು ಜೂಜಾಡುತ್ತಿದ್ದರು.

ಅವರು ರುಕ್ಮಿಯನ್ನು ನೋಡಿ 'ರಾಜನ್! ಬಲರಾಮನಿಗೆ ಜೂಜೆಂದರೆ ಬಲು ಇಷ್ಟ. ಆದರೆ ಅವನಿಗೆ ಜೂಜಾಡಲು ಗೊತ್ತಿಲ್ಲ. ಆದ್ದರಿಂದ ಅವನನ್ನು ಜೂಜಿನಲ್ಲಿಯಾದರೂ ಸೋಲಿಸಿ, ನಿನ್ನ ಮನಸ್ಸಿನ ಹಗೆಯನ್ನು ತೀರಿಸು' ಎಂದರು. ಆಗ ಬಲರಾಮನನ್ನು ಕರೆದು ರುಕ್ಮಿಯು ದ್ಯೂತವನ್ನಾಡತೊಡಗಿದನು. ನೂರು, ಸಾವಿರ, ಲಕ್ಷ ಹೊನ್ನುಗಳನ್ನಿಟ್ಟು ಬಲರಾಮನು ಸೋತಾಗ, ಕಳಿಂಗನು, ಗಟ್ಟಿಯಾಗಿ ನಕ್ಕನು. ಅದನ್ನು ಸಹಿಸದೆ ಬಲರಾಮನು ಲಕ್ಷ ವರಹಗಳನ್ನು ಪಣವಾಗಿಟ್ಟನು. ಈ ಸಲ ಬಲರಾಮನು ಗೆದ್ದಿದ್ದರೂ, ರುಕ್ಮಿಯು ಮೋಸದಿಂದ

'ನಾನೇ ಗೆದ್ದೆ' ನೆಂದು, ಪಣವನ್ನು ಸ್ವೀಕರಿಸಿದನು. ಸಿಟ್ಟಿನಿಂದ ಬಲರಾಮನು ದಶ ಲಕ್ಷ ಪಣವನ್ನಿಟ್ಟು, ಗೆದ್ದನು. ರುಕ್ಮಿಯು ತಾನೇ ಗೆದ್ದದ್ದೆಂದು ಛಲದಿಂದ ನುಡಿದು, ಬೇಕಾದರೆ ಮಧ್ಯವರ್ತಿಗಳನ್ನು ಕೇಳೆಂದನು. ರುಕ್ಮಿಯೇ ಗೆದ್ದನೆಂದು ಕಳಿಂಗನು ನುಡಿಯಲು ಕೇಳಿ, ಕಿಡಿಯಾಗಿ ಬಲರಾಮನು ಸುಮ್ಮನಿದ್ದನು. ಆಗ ಆಕಾಶವಾಣಿಯು 'ಧರ್ಮದಿಂದ ಬಲರಾಮನೇ ಗೆದ್ದಿರಿವನು. ರುಕ್ಮಿಯು ಸುಳ್ಳು ಹೇಳುತ್ತಿರುವನು' ಎಂದು ಸಾರಿತು. ಅದನ್ನು ಲಕ್ಷಿಸದೆ, ರುಕ್ಮಿಯು, ದುಷ್ಟ ರಾಜರ ಮಾತನ್ನು ಕೇಳಿ ಕೇಡುಮಾಡಿ, ಬಲರಾಮನನ್ನು ನೋಡಿ, ನಕ್ಕು, ಇಂತೆಂದನು–

ನೀನು ಕಾಡುಗೊಲ್ಲರು. ನಿಮಗೇನು ಗೊತ್ತು ಪಗಡೆಯಾಟದ ಗತ್ತು! ರಾಜರಿಗೇ ಪಗಡೆ ಯಾಟ! ರಾಜರಿಗೇ ಯುದ್ಧದಾಟ! ನಿಮ್ಮಂತಹವರಿಗಲ್ಲ.

ಆ ಬಿರುನುಡಿಯನ್ನಾಲಿಸಿ ರಾಜರು ಖೊಳ್ಳೆಂದು ನಕ್ಕದ್ದನ್ನೂ ಕೇಳಿ ಕೆರಳಿದ ಸಿಂಹದಂತಾಗಿ ಬಲರಾಮನು ಪಗಡೆ ಆಟದ ಮಣೆಯನ್ನೆತ್ತಿ ಹೊಡೆದು ರುಕ್ಮಿಯನ್ನು ಕೊಂದು ಕೆಡಹಿದನು; ಕಳಿಂಗನು ಭಯದಿಂದ ಓಡುತ್ತಿರಲು ಹತ್ತು ಹೆಜ್ಜೆ ಇಡುವಷ್ಟರಲ್ಲೇ ಅವನನ್ನು ಹಿಡಿದು, ಅವನ ವಕ್ರದಂತಗಳನ್ನು ಹೊಡೆದು ಉರುಳಿಸಿದನು. ಇತರ ರಾಜರ ಕೈಕಾಲು ಕತ್ತುಗಳನ್ನು ಮುರಿದು ಮದುವೆ ಮನೆಯಲ್ಲಿ ರಕ್ತದ ಓಕುಳಿಯನ್ನು ಹರಿಸಿದನು. ಅಣ್ಣನನ್ನು ಕೊಂದ ಭಾವನನ್ನು ಕಂಡು ಕೃಷ್ಣಭಯದಿಂದ ರುಕ್ಮಿಣಿಯು ಸುಮ್ಮನಿದ್ದಳು. ಹೌದೆಂದರೆ ಹೆಂಡತಿನಿವಳು; ಅಲ್ಲವೆಂದರೆ ಅಣ್ಣ ಸಿಡಿವನು ಎಂದು ಶ್ರೀಕೃಷ್ಣನು ಮಾತನಾಡದೆ ರೋಚನಾ ಅನಿರುದ್ಧರನ್ನು ಕೂಡಿಸಿಕೊಂಡು ರಥವನ್ನಾರೋಹಿಸಿ ದ್ವಾರಕೆಗೆ ಬಂದನು.

## ೭೭. ನಾರದಕೃತ ಅನಂತಕೃಷ್ಣ ಸಂದರ್ಶನ

ಶ್ರೀಶುಕನು ಹೇಳಿದನು–

ರಾಜನ್! ಇಂತು ಕಾಂತಾಮನಃಕಾಂತನಾಗಿ ಸಕಲ ಕಾಂತೆಯರ ಕಾಮಾದಿ ಪರಿಪೂರ್ಣತೆ ಯನ್ನು ಶ್ರೀಶುಕನು ಎಂತು ಮಾಡಿದನೆಂಬ ಚಿತ್ರಕಥೆಯನ್ನು ಕೇಳು!

ನರಕಾಸುರನನ್ನು ಕೊಂದು ತಂದ ತರುಣಿಯರನ್ನು-ಹದಿನಾರು ಸಾವಿರ ಸಂದರಿಯರನ್ನು – ಒಂದೇ ಮಹೂರ್ತದಲ್ಲಿ– ಅಷ್ಟು ರೂಪಗಳನ್ನು ಧರಿಸಿ, ಶ್ರೀಕೃಷ್ಣನು ಮದುವೆಯಾದನೆಂಬ ಕಥೆಯನ್ನು ಕೇಳಿ, ನೋಡಬೇಕೆಂದು ಕುತುಕದಿಂದ ನಾರದನು ಒಂದು ಸಲ ದ್ವಾರಕೆಗೆ ಬಂದನು. ಸುಂದರ ಸುಮಗಂಧಿತವಾದ ಉದ್ಯಾನಗಳು, ಅಲ್ಲಿ ಸ್ವಚ್ಛ ಜಲದಿಂದೊಪ್ಪುವ ಸರೋವರಗಳು, ಅಲ್ಲಿ ಅರಳಿದ ಕಮಲ ಕಲ್ಹಾರ ಕುಮುದೋತ್ಪಲಾದಿ ಲತೆಗಳು, ತೀರದಲ್ಲಿ ನಲಿಯುವ ಹಂಸ ಸಾರಸ ಚಕ್ರಶಾರಿಕಾದಿ ಪಕ್ಷಿಗಳ ಕಲಕಲ ನಾದ, ಅದನ್ನಾಲಿಸುವ ರಮಣೀಗಣ– ಅವರಿಂದ ತಿರುಗುವ ಸರಸವಚನ ಚತುರನರಶ್ರೇಣಿಗಳನ್ನು ನೋಡಿ ಪ್ರಾಕಾರವನ್ನು ದಾಟಿದನು.

ರಾಜವೀಥಿಯಲ್ಲಿ ಪನ್ನೀರನ್ನು ಚೆಲ್ಲಿ, ಎರಡು ಬದಿಯ ಸೌಧಗಳನ್ನು ಚೆನ್ನಾಗಿ ತೋರಣ ಧ್ವಜಗಳಿಂದ ಅಲಂಕರಿಸಿದ್ದರು. ಮನೆಗಳು ಮಾಣಿಕ್ಯರಚಿತವಾಗಿದ್ದವು. ಮರಕತಕುಟ್ಟಿಮಗಳಲ್ಲಿ ರತ್ನಕಂಬಳಿಗಳನ್ನು ಹಾಸಿದ್ದರು. ಚತ್ವರ ಶೃಂಗಾಟಕಗಳಲ್ಲಿದ್ದ ಸಭಾ ಶಾಲಾ ಸುರಾಲಯಗಳು

ಕಣ್ಣಿಗಿಂಪಾಗಿದ್ದವು. ಮನೆಗಳೊಳಗಿಂದ ಬರುವ ಮಾರ್ಗೀ ಸಂಗೀತವು ಕಿವಿಗಿಂಪಾಗಿ ನಾರದನನ್ನು ಮೋಹಗೊಳಿಸಿತು.

ಬ್ರಹ್ಮಾದಿಗಳಿಂದಲಂಕೃತವಾಗಿ ಸರ್ವೈಶ್ವರ್ಯಯುಕ್ತನಾದ ಶ್ರೀಕೃಷ್ಣನ ದಿವ್ಯಾಂತಃಪುರವು ವಿಶ್ವಕರ್ಮನ ಕಲಾಕೌಶಲದ ಪರಾಕಾಷ್ಠೆಯನ್ನು ಮುಟ್ಟಿತ್ತು. ಅಲ್ಲಿ ಹದಿನಾರು ಸಾವಿರ ಸ್ತ್ರೀಯರ ಮಂದಿರಗಳು ಕಂಗೊಳಿಸಿದ್ದವು. ಒಂದು ಭವನವನ್ನು ನಾರದನು ಪ್ರವೇಶಿಸಿದನು.

ವಿದ್ರುಮಸ್ತಂಭಗಳು, ವೈದೂರ್ಯ ಫಲಕಗಳು, ಇಂದ್ರನೀಲಕುಡ್ಯಗಳು, ಮರಕತ ಗವಾಕ್ಷಗಳು, ಮೇಲೆ ಕಟ್ಟಿದ ವಿತಾನದಿಂದ ಜೋತಾಡುವ ಮುತ್ತಿನ ಸರಗಳು, ದಂತದ ಆಸನಗಳು, ಮಂಚಗಳು, ಮಣಿಮಯ ಪರಿಕರಗಳು, ಸಾಲಾಗಿ ನೋಡುವ ನಾರದನ ಕಣ್ಣುಗಳನ್ನು ಕೊರೆದವು. ಕಾಸಿನ ಸರಗಳನ್ನಿಟ್ಟು ಪಟ್ಟೆದು ಕೂಲವನ್ನುಟ್ಟ ದಾಸಿಯರು, ಕಂಚುಕವನ್ನುಟ್ಟು ರುಮಾಲನ್ನುಟ್ಟ ದಾಸರು ಅಲ್ಲಿ ಸಂಭ್ರಮದಿಂದ ತಿರುಗುತ್ತಿದ್ದರು. ರತ್ನದೀಪಗಳಿಂದ ಅಲ್ಲಿ ಕತ್ತಲು ಸುಳಿವಂತಿದ್ದಿಲ್ಲ. ಒಳಗಿಟ್ಟಿದ್ದ ಧೂಪಪಾತ್ರೆಗಳಿಂದ ಹೊರಸೂಸಿ, ಗವಾಕ್ಷಗಳಿಂದ ತೂರಿಬಂದ ಅಗರುಧೂಪವನ್ನು ನೋಡಿ, ಚಂದ್ರಶಾಲೆಗಳಲ್ಲಿ ನಲಿಯುವ ನವಿಲುಗಳು, ಮೇಘವೆಂದು ಭ್ರಮಿಸಿ ಕುಣಿದಾಡುತ್ತಿದ್ದವು. ಸಮಾನ ರೂಪಗುಣ ವಯೋಲಸಿತರಾದ ವಿಲಾಸಿನಿಯರು ದಾಸಿಯರಾಗಿ ಸೇವಿಸುತ್ತಿರಲು, ಮಹಿಷಿಯು ತಾನಾಗಿ ರತ್ನದಂಡಮಂಡಿತ ವ್ಯಜನವನ್ನು ಬೀಸುತ್ತಾ ಶ್ರೀಕೃಷ್ಣನನ್ನು ಸೇರಿಸುತ್ತಿದ್ದಳು.

ಬಂದ ನಾರದರನ್ನು ನೋಡಿ ಶ್ರೀಕೃಷ್ಣನು ಓಡಿಬಂದು ಎದುರ್ಗೊಂಡು ಕಿರೀಟ ಖಚಿತ ಮಣಿಗಳ ಕಾಂತಿಯಿಂದ ಬಾಗಿ, ನೀರಾಜನವಿತ್ತು ಆಸನದಲ್ಲಿ ಕುಳ್ಳಿರಿಸಿದನು. ಸಕಲ ಧರ್ಮ ಪ್ರವರ್ತಕ ಚಕ್ರವರ್ತಿಯಾದ ಶ್ರೀಶನು ನಾರದನ ಪಾದಗಳನ್ನು ತೊಳೆದು ಪಾದೋದಕವನ್ನು ಶಿರಸಾ ಧರಿಸಿದನು. ಸಮಸ್ತ ತೀರ್ಥ ನಿಲಯವು, ಸಮಸ್ತ ಜಗತ್ ಪ್ರಶಸ್ತವು ಆದ ಪದಪಂಕಜದಿಂದ ಜಗತ್ಪಾವನೆಯಾದ ಗಂಗೆಯನ್ನು ಪೆತ್ತ ಜಗದ್ಗುರುವು, ಬ್ರಾಹ್ಮಣಪಾದೋದಕವನ್ನು ಶಿರಸಾ ಧರಿಸಿ, ಲೋಕ ಶಿಕ್ಷಣವನ್ನು ಮಾಡಿಂದನೆಂತಲೇ ಅವನ ಬ್ರಹ್ಮಣ್ಯದೇವನೆಂಬ ಬಿರುದು ಸಾರ್ಥಕವಾಗಿದೆ.

ಪುರಾಣಪುರುಷನಿಂತು ಶಾಸ್ತ್ರದಲ್ಲಿ ತಾನೇ ನಿರೂಪಿಸಿರುವಂತೆ ವಿಪ್ರನನ್ನು ಪೂಜಿಸಿ, ಮಿತವು, ಹಿತವು ಆದ ವಚನಗಳಿಂದ ಸಂತೋಷಪಡಿಸಿ, ಪ್ರಭೋ! ಏನಾಗಬೇಕು ನನ್ನಿಂದ? ಕೇಳು ಎಂದನು.

ಆಗ ನಾರದನಿಂತೆಂದನು–'ಸಕಲ ಸುಜನಶರಣ್ಯನು, ದುಷ್ಟದಮನನು ಆದ ನಿನ್ನಲ್ಲಿ ಅತಿಥಿ ವಿಪ್ರ ಪೂಜಾದಿಗಳು ಆಶ್ಚರ್ಯವಲ್ಲ. ಸ್ವೇಚ್ಛೆಯಿಂದ ಅವತರಿಸಿ, ಜಗತ್ತಿನ ರಕ್ಷಣೆಯನ್ನು ಮಾಡುವ ಮಹಾಮಹಿಮನಾದ ನಿನ್ನ ಪಾದಾರವಿಂದ ದ್ವಂದ್ವವನ್ನಿಂದು ಕಂಡೆನು. ಸಕಲ ಜನನ ಮರಣ ರೂಪ ಸಂಸಾರಕೂಪದಿಂದ ಮೇಲಕ್ಕೆತ್ತಿ ಕಾಪಾಡುವ ಬ್ರಹ್ಮಾದಿ ಜ್ಞಾನಿಜನವಂದ್ಯ ಚರಣಾರವಿಂದವನ್ನು ಸದಾ ನೆನೆಯುವಂತೆ ಅನುಗ್ರಹಿಸು!

ಆ ಯೋಗೇಶ್ವರ ಸ್ವರೂಪಸಾಮರ್ಥ್ಯವನ್ನು ಇನ್ನೂ ಚೆನ್ನಾಗಿ ತಿಳಿಯಲಿಚ್ಛಿಸಿ, ನಾರದನು ಇನ್ನೋರ್ವ ಮಹಿಷಿಯ ಮನೆಯನ್ನು ಪೊಕ್ಕನು. ಅಲ್ಲಿ ತನ್ನ ರಾಣಿಯಿಂದಲು, ಉದ್ಧವನಿಂದಲು ಕೂಡಿ ಪಗಡೆಯನ್ನಾಡುವ ಲೋಕದೊಡೆಯನನ್ನು ನೋಡಿದನು. ಕೃಷ್ಣನು ನಾರದನನ್ನೂ ಪೂಜಿಸಿ, ಏನು ಗೊತ್ತಿಲ್ಲದವನಂತೆ 'ಮುನಿವರ! ಪೂರ್ಣಜ್ಞಾನಿಗಳಾದ ನಿಮಗೆ ಅಪೂರ್ಣರಾದ

ನಮ್ಮಂತಹವರಿಂದೇನು? ಆದರೂ ಹೇಳು! ಏನಾಗಬೇಕು? ಸ್ವೀಕರಿಸಿ, ನಮ್ಮ ಜನ್ಮವನ್ನು ಸಾರ್ಥಕಗೊಳಿಸು!' ಎಂದನು. ಅದನ್ನು ಕೇಳಿ ವಿಸ್ಮಿತನಾದ ನಾರದನು ಎದ್ದು ಅಲ್ಲಿಂದ ಹೊರಟು ಇನ್ನೊಂದು ಮನೆಯನ್ನು ಸೇರಿದನು.

ಒಂದೊಂದು ಮನೆಯಲ್ಲಿಯೂ ಗೋವಿಂದನನ್ನು ಕಂಡು ನಾರದನು ದಿಗ್ಭ್ರಮೆಗೊಂಡನು. ಒಂದೆಡೆ ಮಕ್ಕಳನ್ನಾಡಿಸುತ್ತ, ಇನ್ನೊಂದೆಡೆ ಎಣ್ಣೆ ಹಚ್ಚಿಸಿಕೊಳ್ಳುತ್ತ, ಬೇರೆ ಕಡೆ ಪಂಚಯಜ್ಞ ಗಳನ್ನು ಮಾಡುತ್ತಾ, ಹೀಗೆಯೇ ಬ್ರಾಹ್ಮಣರನ್ನುಣಿಸುತ್ತಾ, ತಾನು ಉಣ್ಣುತ್ತಾ, ಸಂಧ್ಯಾವಂದನ ವನ್ನು ಮಾಡುತ್ತಾ, ಓಂ ಮಂತ್ರವನ್ನು ಜಪಿಸುತ್ತಾ, ಮಕ್ಕಳಿಗೆ ಕತ್ತಿ ಗುರಾಣಿಗಳನ್ನು ಪಿಡಿದು ಯುದ್ಧವನ್ನು ಕಲಿಸುತ್ತಾ, ಆನೆ, ಕುದುರೆಗಳನ್ನೇರಿ ಮೆರೆಯುತ್ತಾ, ಉದ್ಧವಾದಿಗಳಿಂದ ಮಂತ್ರಾ ಲೋಚನೆ ಮಾಡುತ್ತಾ, ಮಂಚದಲ್ಲಿ ಮಲಗಿ ನಿದ್ರೆ ಮಾಡುತ್ತಾ, ಜಲಕ್ರೀಡೆಯನ್ನಾಡುತ್ತಾ, ವೇಶ್ಯೆಯರ ನರ್ತನವನ್ನು ನೋಡುತ್ತಾ, ಗೋದಾನ ಮಾಡುತ್ತಾ ಪುರಾಣವನ್ನು ಕೇಳುತ್ತಾ, ಪ್ರಿಯಳಿಂದ ಹಾಸ್ಯಮಾಡುತ್ತಾ, ಅರ್ಥ ಕಾಮ ಸಂಪಾದನೆಯನ್ನಾಲೋಚಿಸುತ್ತಾ, ಗುರುಸೇವೆ ಗೈಯುತ್ತಾ, ಸಜ್ಜನ ಮಂಗಳ ವೆಂತೆಂದು ಬಲರಾಮನಿಂದಾಲೋಚಿಸುತ್ತಾ, ವಿವಾಹೋಪನಯನ ಗಳನ್ನು ಮಾಡುತ್ತಾ, ಕುವರಿ ಯನ್ನು ಕಳಿಸುತ್ತಾ, ಸೊಸೆಯನ್ನು ತರುತ್ತಾ, ಕೂಪಾರಾಮದೇವಾ ಲಯಗಳನ್ನು ನಿರ್ಮಿಸುತ್ತಾ, ಬೇಟೆಗೆ ಹೊರಡುತ್ತಾ, ತನ್ನನ್ನು ತಾನೇ ಧ್ಯಾನಿಸುತ್ತಾ– ಬಹು ವೈಭವದಿಂದ ಮೆರೆವ ಶ್ರೀಕೃಷ್ಣನನ್ನು– ಆ ಮಹಾನುಭಾವನ ಕೊನೆಯಿಲ್ಲದ ಮಹಿಮೆಯನ್ನೂ ನೋಡಿ ನಾರದನು, ಮನುಜನಂತೆ ನಟಿಸುವ ಮಾಧವನ ಮಹಿಮೆಗೆ ಮಾರುಹೋಗಿ, ನಗುತ್ತ ಇಂತೆಂದನು–

ಯೋಗೇಶ್ವರ! ಯೋಗಿವರರಿಗೂ ನಿಲುಕದ ನಿನ್ನ ಮಹಾಮಹಿಮೆಯನ್ನು– ನಿನ್ನ ಪರಮ ಕರುಣೆಯಿಂದ ಇಂದು ತಿಳಿದೆನು. ಅಪ್ಪಣೆ ಕೊಡು! ಈ ಲೋಕಗಳಲ್ಲೆಲ್ಲ ನಿನ್ನ ಕೀರ್ತಿಚಂದ್ರಿಕೆ ಯನ್ನು ಹಬ್ಬಿಸುವ ದಾಸನಾಗಿ, ಭುವನಪಾವನನಾದ ನಿನ್ನ ಲೀಲೆಯನ್ನು ಪಾಡುತ್ತಾ, ತಿರುಗು ವೆನು.' ಆ ಮಾತನ್ನಾಲಿಸಿ ಶ್ರೀಶನು, 'ಬ್ರಾಹ್ಮಣೋತ್ತಮ! ಧರ್ಮವನ್ನು ಹೇಳುವವನು–ಮತ್ತು ಮಾಡುವವನೂ ಆಗಿರುವೆ, ಧರ್ಮವನ್ನು ನಡೆಸುವವರನ್ನು ಕಂಡರೆ ನನಗೆ ಬಲು ಪ್ರೀತಿ. ಲೋಕಶಿಕ್ಷಣವನ್ನು ಮಾಡುವ ನನ್ನ ಲೀಲಿಗೆ ಮೋಸಹೋಗಬೇಡ!' ಎಂದು ಕಳಿಸಿ ಕೊಟ್ಟನು.

ಸರ್ವಗೃಹಗಳಲ್ಲಿ, ಸರ್ವಧರ್ಮಪರಿಪಾಲಕನಾಗಿ ವಾಸಿಸುವ ವಾಸುದೇವನ ಯೋಗ ಮಾಯಾ ಮಹೋದಯವನ್ನು ಕಣ್ಣಾರ ಕಂಡು, ನಾರದನು ಆಶ್ಚರ್ಯ ಪ್ರೇಮಾನಂದರಸ ಗಳು ಮುಪ್ಪಿರಿಯಾಗಿ ಒಸೆದು ತುಂಬಿದ ಮನವು ವಿವಶವಾಗಲು, 'ಕೃಷ್ಣ! ಕೃಷ್ಣ' ಎಂದು ಮೆಲ್ಲನೆ ಪಾಡುತ್ತಾ ಹೊರಟುಹೋದನು. ಇಂತು ಸಕಲ ಸುಜನ ಲೋಕಕ್ಷೇಮಾರ್ಥವಾಗಿ ಅವತರಿಸಿದ ಶ್ರೀಕೃಷ್ಣನು, ಹದಿನಾರು ಸಾವಿರ ಸುದತಿಯರ ಹಾಸ ಕಟಾಕ್ಷ ವಿಲಾಸ ಪ್ರೇಮ ರಸಗಳಿಗೆ ಪಾತ್ರನಾಗಿ, ಮಾಡಿದ ಲೋಕೋತ್ತರ ಪಾವನ ಚರಿತೆಯನ್ನು ಹೇಳಿದವನಿಗೆ, ಕೇಳಿ ದವನಿಗೆ-ಅನುಮೋದಿಸಿದವನಿಗೂ – ಶ್ರೀಕೃಷ್ಣಭಕ್ತಿಭಾಗ್ಯವು ದೊರೆಯುವುದು.

## ೭೮. ರಾಜಶರಣಾಗತಿ – ನಾರದವಚನ

ಶ್ರೀಕೃಷ್ಣನ ಮಡದಿಯರು, ಉಷಃಕಾಲವಾಗುವಾಗ – ಕೂಗನ್ನು ಕೋಳಿಗಳನ್ನು ಸೀಳಬೇಕೆಂಬಷ್ಟು ಸಿಟ್ಟಿನಿಂದ– ಎದ್ದು – ಕೃಷ್ಣ ವಿರಹವನ್ನು ಸಹಿಸಲಾರದೆ ಕಾರ್ಯನಿರತರಾಗುತ್ತಿದ್ದರು.

ವಂದಿಗಳಂತೆ ಶುಕಸಾರಿಕಾದಿ ಪಕ್ಷಿಗಳು ಕಲಕಲರವದಿಂದ ಪೊಗಳುತ್ತಿದ್ದವು. ಹಿಂದಿನ ಮಂದಾರವನದಿಂದ ಬಂದ ಸುಗಂಧವು ಮನೆಯಲ್ಲಿ ಹರಡಿತ್ತು. ಸೊಗಸಾದ ಉಷಸ್ಸು, ಪ್ರಿಯತಮನ ಪರಿರಂಭಣವನ್ನು ದೂರಮಾಡುವುದರಿಂದ ರುಕ್ಮಿಣಿಗೆ ಪ್ರಿಯವಾಗಲಿಲ್ಲ.

ಪ್ರಾತಃಕೃತ್ಯಗಳಾದ ಸ್ನಾನಾದಿಗಳನ್ನು ಮಾಡಿ ಮಾಧವನು ಪ್ರಸನ್ನಮನಃಫಲಕದಲ್ಲಿ ತನ್ನನ್ನು ತಾನೇ ಧ್ಯಾನಿಸುತ್ತಿದ್ದನು. ಸ್ವಗತಭೇದರಹಿತನು, ಪರಮ ಪ್ರಕಾಶ ಸಹಿತನು. ಅಸಮಾನಾಧಿಕನು, ನಿತ್ಯನಿರಸ್ತದೋಷನು, ಜಗಜ್ಜನ್ಮಪ್ರೇಮಪ್ರಳಯರಂಚನಾಶೀಲ ದಿವ್ಯ ವಪುಷ್ಯನು ಆದ ತನ್ನ ಧ್ಯಾನವು ಪರಮಾನಂದ ಸಂಧಾಯಕವೆಂದು ತನ್ನವರಿಗೆ ತಿಳಿಸಿದನು. ಅನಂತರ ಕೃಷ್ಣನು ಸೂರ್ಯನಿಗೆ ಅರ್ಘ್ಯವನ್ನಿತ್ತು ದೇವಋಷಿಪಿತೃಗಳಿಗೆ ತರ್ಪಣವಿತ್ತನು. ಹಿರಿಯರಿಗೆ, ವಿಪ್ರರಿಗೆ ನಮಸ್ಕರಿಸಿದನು. ವಿಪ್ರರಿಗೆ ಬಂಗಾರದ ಕೊಂಬು, ಬೆಳ್ಳಿಯ ಗೊರಜು, ಮುತ್ತಿನ ಮಾಲೆ, ಹೊದಿಸುವ ದುಕೂಲ, ಕರಸುವ ಪಾತ್ರೆಗಳಿಂದ ಕೂಡಿದ ಗೋವುಗಳನ್ನು ಕರುಗಳಿಂದ ಕೂಡಿಸಿ, ಒಬ್ಬರಿಗೆ ಎರಡರಂತೆ ಗೋದಾನ ಮಾಡಿದನು. ದೇವ ಗುರು ವೃದ್ಧರಿಗೆ ವಂದಿಸಿ, ತನ್ನ ಸನ್ನಿಧಾನ ದಿಂದ ಮಂಗಲವಾದ ತಿಲ ಹಿರಣ್ಯ ದಾನಗಳನ್ನು ಮಾಡಿದನು. ತಾನೂ ಕನ್ನಡಿಯನ್ನು ನೋಡಿ ಅಲಂಕರಿಸಿಕೊಂಡು ಸರ್ವವರ್ಣದವರನ್ನು ಯಥಾಯೋಗ್ಯವಾಗಿ ಸತ್ಕರಿಸಿದನು. ಮೊದಲು ವಿಪ್ರರಿಗುಣಿಸಿ, ತಾಂಬೂಲ ದಕ್ಷಿಣೆಗಳನ್ನು ಕೊಟ್ಟು, ತಾನುಂಡು, ಇತರರಿಗೂ, ಅನ್ನವಸ್ತ್ರ ಗಳನ್ನಿತ್ತು ಎಲ್ಲರನ್ನೂ ಸಂತೋಷಪಡಿಸಿದನು.

ಅನಂತರ ದಾರುಕನು ತಂದ ರಥವನ್ನು ಮುಟ್ಟಿ ನಮಿಸಿ, ಅವನ ಕೈಹಿಡಿದುಕೊಂಡು, ಏರಿ ಕುಳಿತು, ಶ್ರೀಕೃಷ್ಣನು ಸಾತ್ಯಕಿ ಉದ್ಧವ ಬಲರಾಮರು ಹಿಂಬಾಲಿಸಿ ಬರುತ್ತಿರಲು, ಅಂತಃಪುರ ದಿಂದ ಪೊರಮಟ್ಟು, ಸುಧರ್ಮಸಭೆಯನ್ನು ಮುಟ್ಟಿ, ಅಲ್ಲಿ ದಿವ್ಯಾಸನಾಸೀನನಾಗಿದ್ದನು. ಅವನ ದಿವ್ಯಕಾಂತಿಯಿಂದ ದಿಕ್ಕುಗಳು ಬೆಳಗಿದವು. ನಕ್ಷತ್ರ ಗಣಮಧ್ಯದಿ ವಿರಾಜಿಸುವ ಚಂದ್ರ ನಂತೆ, ಶ್ರೀಕೃಷ್ಣನನ್ನು ನಟನರ್ತಕಿಯರು ಕುಣಿದು ಪಾಡಿ ಸೇವಿಸಿದರು. ಸೂತ ಮಾಗಧ ವಂದಿ ಗಳು ನುತಿಸಿದರು. ಅಲ್ಲಿದ್ದ ವಿಪ್ರವರರು, ಪೂರ್ವ ರಾಜರ್ಷಿವರರ ಕಥೆಗಳನ್ನು ವರ್ಣಿಸಿದರು. ಇದು ಶ್ರೀಕೃಷ್ಣನ ನಿತ್ಯಕೃತ್ಯವಾಗಿತ್ತು.

ಒಂದು ದಿನ ಒಬ್ಬ ವಿದೇಶೀಯ ಪುರುಷನು ಅಪ್ಪಣೆ ಪಡೆದು ಸಭೆಯನ್ನು ಪ್ರವೇಶಿಸಿ, ಶ್ರೀಕೃಷ್ಣನಿಗೆ ವಂದಿಸಿ, ಜರಾಸಂಧನು ಯುದ್ಧದಿ ಗೆದ್ದು ಸೆರೆಯಿಟ್ಟ ರಾಜರ ದೂತನು ತಾನೆಂದು ವಿಜ್ಞಾಪಿಸಿ, ರಾಜರ ಸಂದೇಶವನ್ನು ಇಂತು ಹೇಳಿದನು–

ಕೃಷ್ಣ! ಶರಣಾಗತಭಯಹರಣನೆಂದರಿತು ನಾವು ನಿನಗೆ ಶರಣಾಗತರಾಗಿರುವೆವು. ನಮಗೆ ಬಂದಿರುವ ಅನ್ಯಥಾ ಜ್ಞಾನವನ್ನೂ ಅದರ ಕಾರ್ಯವಾದ ಸಂಸಾರ ಭಯವನ್ನೂ ಕಳೆದು ಉದ್ಧರಿಸು. ನೀನು ಪೇಳಿರುವಂತೆ, ನಿನ್ನ ಪಾದಾರವಿಂದವನ್ನರ್ಚಿಸದೆ, ಕ್ಷೇಮಂಕರ ಕರ್ಮಗಳನ್ನು ಮಾಡದೆ, ಕೆಟ್ಟ ಕರ್ಮಗಳನ್ನು ಮಾಡುತ್ತಿರುವ ಈ ಜೀವರು – ನೂರು ವರ್ಷ ಬಾಳುವೆವೆಂದು ಮೈಮರೆತಿರಲು– ನೀನು ಕಾಲವೆಂಬ ಖಡ್ಗದಿಂದ ಅವರ ಆಶಾಪಾಶಗಳನ್ನು ಕತ್ತರಿಸಿಬಿಡುವೆ.

ಪ್ರಮತ್ತನಾಗದೆ ಕಾಲಕಾಲದಿ ಜಗದ ಸುಜನರನ್ನು ಪೊರೆದು, ಕುಜನರನ್ನು ಶಿಕ್ಷಿಸುವ ನಿನ್ನ ಆಜ್ಞೆಯಾದ ಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿ ನಡೆಯುವವನಿಗೆ ಕ್ಷೇಮವು ಉಂಟೇ? ಯಾರಿಗೆ ಕ್ಷೇಮ, ಯಾರಿಗೆ ದುಃಖ– ಎಂಬುದು ನಿನಗೆ ಗೊತ್ತು.

ರಾಜ್ಯಸುಖವು ಸ್ವಪ್ನದಂತೆ ನಶ್ವರವು– ಸ್ವಾಧೀನವಲ್ಲ; ದೇಹವು ನಿಶ್ಚಿತಮರಣವಾದುದರಿಂದ ಮೃತಕಲ್ಪವೇ ಸರಿ; ಅದರಿಂದ ರಾಜ್ಯಭಾರವನ್ನು ಹೊರುವ ನಮಗೆ ಸುಖವೆಲ್ಲಿಯದು? ಆದರೂ, ನಿನ್ನ ಮಾಯೆಗೆ ಸಿಲುಕಿ, ನಿಷ್ಕಿಂಚನ ಜನರಿಗೆ ಸಿಗುವ ಮನಸ್ಸಂತೋಷದಿಂದ ದೂರರಾಗಿ, ಕಷ್ಟಪಡುವ ನಮ್ಮಲ್ಲಿ ಕೃಪೆತೋರು! ಮಾಗಧನ ಕಾರಾಗಾರವೆಂಬ ಕರ್ಮಪಾಶದಿಂದ ಕಟ್ಟಲ್ಪಟ್ಟ ನಮ್ಮನ್ನು ಬಿಡಿಸು. ನಿನ್ನ ಪಾದಮಧುಪಾನದಲ್ಲಿ ನಮ್ಮ ಮನೋಭ್ರಮರವನ್ನಿರಿಸು. ಹತ್ತು ಸಾವಿರ ಆನೆಗಳ ಬಲವುಳ್ಳ ಈ ಜರಾಸಂಧನಿಗೆ– ಸಿಂಹವನ್ನು ಕಂಡ ಕುರಿಗಳಂತೆ ನಾವು ಹೆದರುತ್ತಿರುವೆವು. ಹದಿನೇಳು ಸಲ ನಿನಗೆ ಸೋತು, ಅನಂತವೀರ್ಯನಾದ ನಿನ್ನನ್ನು ಹದಿನೆಂಟನೆಯ ಸಲ ಗೆದ್ದೆನೆಂದು ಕೊಚ್ಚಿಕೊಳ್ಳುವ ಈ ಜರಾಸಂಧನು ನಿನ್ನ ಭಕ್ತರನ್ನು ಪೀಡಿಸುತ್ತಿರುವನು; ನಿನ್ನ ಮಕ್ಕಳೆಂದು ಬಂದು ನಮ್ಮನ್ನು ಕಾಪಾಡು.

ಆಗ ಪಿಂಗಳ ಜಟಾಧರನು, ಧವಳ ಶರೀರನು ಆದ ನಾರದನು ಅಲ್ಲಿಗೆ ಬಂದನು. ಅವನು ವೀಣಾತಂತಿಗಳನ್ನು ಮೀಟದಾಗ, ಪಾಪಸಂಘವು ಕೂಡ ಸಿಡಿದುಬೀಳುತ್ತಿತ್ತು. ಅವನ ಮೃದು ಮಧುರ ಗಾನಲಹರಿಯಲ್ಲಿ ಜಗವೇ ಮುಳುಗಿ ಆನಂದಮಯವಾಗಿತ್ತು. ಅವನಿಗೆ ಸರ್ವಸಭ್ಯರಿಂದ ಕೂಡಿ ಎದುರ್ಗೊಂಡು ಕರತಂದು, ಕೃಷ್ಣನು ವಂದಿಸಿದನು; ಕೂಡಿಸಿ ಸತ್ಕರಿಸಿ ಅಮೃತ ವಚನಗಳಿಂದಿಂತೆಂದನು

ಪೂಜ್ಯನೇ! ಲೋಕದ ಜನರಿಗೆ ಕುಶಲವೇ? ಕುಶಾಲಾಕುಶಲ ವಿಚಾರದಿಂದ ತಿರುಗುತ್ತಾ, ಲೋಕದ ಜನರನ್ನು ಉದ್ಧರಿಸುವ ನೀನು ಪುಣ್ಯಶಾಲಿಯು, ನಿನಗೆ ಭಗವಂತನ ಸೃಷ್ಟಿಯಲ್ಲಿ ಗೊತ್ತಿಲ್ಲದಿಲ್ಲ. ನಮ್ಮ ಪಾಂಡವರೆಂತಿರುವರು? ಅವರ ವಿಷಯವೇನು?

ನಾರದನಿಂತೆಂದನು– ವಿಭೋ! ಸರ್ವಜ್ಞನು, ಜಗದೇಕ ಕಾರಣನು, ರಮಾರಮಣನು ಆದ ನಿನ್ನ ಮಹಿಮೆಗಳನ್ನು ಎಷ್ಟೋ ನೋಡಿರುವೆನು; ಆದರೂ ಅವು ಅನಂತವಾಗಿವೆ. ದಾರುವಿನಲ್ಲಿ ಅಡಗಿ ಕಾಣದಿರುವ ಅಗ್ನಿಯಂತೆ ಸರ್ವ ಭೂತಗಳಲ್ಲಿ ನಿಗೂಢನಾಗಿರುವ ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾಗದು. ಜೀವರು ಅಜ್ಞಾನದಿಂದ ನಿನ್ನನ್ನೂ ತಮ್ಮಂತೆ ಪರಾಧೀನನೆಂದು ತಿಳಿಯುವರು. ಸ್ವತಂತ್ರನು, ಸ್ವಾಮಿಯು ಆದ ನೀನು ಸರ್ವವಿಲಕ್ಷಣನಾಗಿರುವೆ. ಅನರ್ಥ ಪರಂಪರೆಯನ್ನು ತಂದೊಡ್ಡುವ ಸಂಸಾರಾಂಧಕಾರವನ್ನು ನಿನ್ನ ಲೀಲಾವತಾರವನ್ನು ನಿರೂಪಿಸುವ ಯಶಶ್ಚಂದ್ರಿಕೆಯಿಂದಲ್ಲದೆ, ಸಜ್ಜನ ಕರುಣಾದೀಪದಿಂದಲ್ಲದೆ, ದಾಟಲಾಗುವುದಿಲ್ಲ. ಆ ಯಶೋಗಾನವೆನಗೆ ಸದಾ ಇರಲಿ! ನರದೇವನಾಗಿ ನರರಲ್ಲಿ ನಟಿಸುವ ನಿನಗೆ, ನಿನ್ನಾಜ್ಞೆಯಂತೆ ಭಕ್ತಪಾಂಡವರ ವಾರ್ತೆಯನ್ನು ಹೇಳುವೆನು.

ಧರ್ಮರಾಜನು ರಾಜಸೂಯ ಯಾಗವನ್ನು ಮಾಡಿ, ನಿನಗೆ ಆ ಪುಣ್ಯವನ್ನರ್ಪಿಸಬೇಕೆಂದಿರುವನು. ಅದು ಬ್ರಹ್ಮಪದಪ್ರಾಪ್ತಿಕಾರಣವಲ್ಲವೇ? ಅದು ನಿನ್ನ ದಯದಿಂದ ಆ ಭೀಮಾಗ್ರಜನಿಗೆ ಕೈಗೂಡಬೇಕಾಗಿದೆ. ಆ ಯಜ್ಞವನ್ನು ಚಂಡಾಲನೂ ರಾಜರ್ಷಿಗಳೂ, ಬ್ರಹ್ಮರ್ಷಿಗಳೂ ಬರುವಂತಾಗಲಿ; ನಿನ್ನ ಸ್ಮರಣೆಯಿಂದ ಚಂಡಾಲನೂ ಪವಿತ್ರನಾಗುವನು. ಅಂದಮೇಲೆ ನಿನ್ನ ದರ್ಶನ ವಂದನಗಳಿಂದ ಸಕಲರೂ ಪಾವನರಾಗುವರೆಂದು ಹೇಳಬೇಕೇ? ನಿನ್ನ ಪಾದಾರವಿಂದರಜವನ್ನು

ಪೊತ್ತು, ನಿನ್ನ ಪಾದಪಂಕಜ ಕುಮಾರಿಯಾದ ಗಂಗೆ, ಲೋಕವನ್ನೆಲ್ಲ ಪಾವನಮಾಡುವಳು. ಪಾತಾಳ ಭೂತಲಸ್ವರ್ಗಗಳಲ್ಲಿಯು ತುಂಬಿ ನಿನ್ನ ಅಮಲ ಯಶೋಗಾನ ದುಂಧುಬಿಯು ಮೊಳಗುತ್ತಿರುವುವು. ಶ್ರೀಶಾ! ನಿನಗೆ ನಮಸ್ಕಾರವು!

## ೭೯. ಉದ್ಧವ ವಚನ – ಇಂದ್ರಪ್ರಸ್ಥ ಗಮನ

ಶ್ರೀಶುಕನು ಹೇಳಿದನು–

ನಾರದನ ಮಾತನ್ನು ಕೇಳಿ, ಕೃಷ್ಣನ ಅಭಿಪ್ರಾಯವನ್ನೂ ಅರಿತು, ಬುದ್ಧಿವಂತನಾದ ಉದ್ಧವನು ಇಂತೆಂದನು–

ದೇವ! ನಾರದನ ನುಡಿಯಂತೆ – ನಿನ್ನ ಸೋದರತ್ತೆಯ ಮಕ್ಕಳು, ಅನನ್ಯಶರಣಭಕ್ತರು ಆದ ಪಾಂಡವರಿಗೆ ನೀನು ಸಹಾಯಕನಾಗಿ, ರಾಜಸೂಯವನ್ನು ನಡೆಸಿಕೊಡುವುದು ನ್ಯಾಯ ವಾಗಿದೆ. ಕಾಪಾಡೆಂದು ಹೇಳಿಕಳಿಸಿದ ರಾಜರಕ್ಷಣೆಯೂ ಮಾಡದಿರಬಾರದು. ರಾಜಸೂಯ ಯಾಗದಿಂದ, ಜರಾಸಂಧವಧೆ, ರಾಜರಕ್ಷಣೆ, ಪಾಂಡವ ಕೀರ್ತಿಪ್ರಸಾರಗಳೆಂಬ ಬಹುಕಾರ್ಯ ಗಳನ್ನು ಸಾಧಿಸಿದಂತಾಗುವುದು. ಹತ್ತು ಸಾವಿರ ಆನೆಗಳ ಬಲವುಳ್ಳ ಜರಾಸಂಧನನ್ನು ಗೆಲ್ಲದೆ ರಾಜಸೂಯವಿಲ್ಲ. ಜರಾಸಂಧನನ್ನು ಕೊಲ್ಲಲು, ಭೀಮನಲ್ಲದೆ, ಅನ್ಯವೀರರಿಲ್ಲ. ಆದ್ದರಿಂದ ದ್ವಂದ್ವಯುದ್ಧದಲ್ಲಿ ಕಾಪಾಡಿ ಭೀಮನು ನಿನ್ನ ಸನ್ನಿಧಾನದಲ್ಲಿ ಜರಾಸಂಧ ಪಶುವಿನನ್ನು ಕೊಂದು, ಬಂದ ಪುಣ್ಯರಾಶಿಯನ್ನು ನಿನಗರ್ಪಿಸಲಿ! ಭೀಮನೇ ಜರಾಸಂಧನನ್ನು ಸಂಹರಿಸಿ, ನಿನ್ನ ಅನುಗ್ರಹ ದಿಂದ - ಮುಂದೆ ಬ್ರಹ್ಮಪದವಿಯನ್ನೈದುವ ಮುಖ್ಯಪ್ರಾಣನಲ್ಲವೇ? ಅವನು ರಾಜಸೂಯದ ಮುಖ್ಯ ಫಲಭಾಜನನಾಗಿರುವನು. ವಿರಿಂಚರುದ್ರರು ಕಾಲರೂಪಿಯಾದ ನಿನ್ನ ಸೃಷ್ಟಿಸಂಹಾರ ಕಾರ್ಯವನ್ನು ನಿನ್ನಾಜ್ಞೆಯಂತೆ ಮಾಡುವ ಕಿಂಕರರಾಗಿರುವರು ಮುಂದೆ ರಾಜನ್ಯರು ನಿನ್ನಿಂದ ರಕ್ಷಿತರಾಗಿ, ಅವರವರ ಮನೆ ಸೇರಲು ನೋಡಿ ಹಿಗ್ಗಿ ಅವರ ರಮಣಿಯಲು, ಜಗದ್ರಕ್ಷಕನಾದ ನಿನ್ನ ಯಶವನ್ನು ಮುಕ್ತಕಂಠದಿಂದ ಪೊಗಳುವರು. ಮಕರಿಯನ್ನು ಕೊಂದು ತಂದೆ ತಾಯಿಂದಿ ರನ್ನು ಬಿಡಿಸಿದ ಕಂದನೆಂದೂ, ರಾವಣಾದಿಗಳನ್ನು ಕೊಂದು ಕರಿಯನ್ನು ಬಿಡಿಸಿದ ಕರುಣನೆಂದೂ, ಕುವಲಯಾಪೀಡ ಚಾಣೂರ ಮುಷ್ಟಿಕ ಕಂಸಾದಿಗಳನ್ನೂ ಕೊಂದು ಸೀತೆಯನ್ನು ಬಿಡಿಸಿದ ವೀರನೆಂದೂ, ಗೋಪಿಯರು, ನಾವು ವಾಲ್ಮೀಕಾದಿ ಮುನಿಗಳು ಪೊಗಳಿದಂತೆ, ಈಗಲೂ ಜರಾಸುತನನ್ನು ಕೊಂದು, ರಾಜಸೂಯ ರಾಜರಕ್ಷಣಾದಿ ಬಹು ಕಾರ್ಯಗಳನ್ನು ಸಾಧಿಸಿದ ನಿನ್ನನ್ನು ಲೋಕದ ಜನರು ಪಾಡಿ ಪೊಗಳಲಿ! ಈ ಕಾರ್ಯವು ನಿನಗೆ ಸಮ್ಮತವೆಂದೇ ತಿಳಿದಿರು ವೆನು.

ಆ ಮಾತನ್ನಾಲಿಸಿ ಬಲರಾಮ ನಾರದ ವಸುದೇವಾದಿ ಸರ್ವ ಯದುಪುಂಗವರು ತನ್ನ ಸಮ್ಮತಿಯನ್ನು ಸೂಚಿಸಿದರು. ಆಗ ಕೃಷ್ಣನು ದಾರುಕನು ತಂದ ದಿವ್ಯರಥವನ್ನೇರಿ, ರಥ ಗಜ ತುರಗ ಪದಾತಿ ಬಲದಿಂದ ಕೂಡಿ, ಮೃದಂಗ ಭೇರಿ ಶಂಖ ಗೋಮುಖಗಳು ಮುಖರಿತವಾಗು ತ್ತಿರಲು ಪ್ರಯಾಣ ಮಾಡಿದನು. ಪರಿಜನರು, ಪಟಕುಟಿಗಳು, ವಾರಯುವತಿಯರು, ಪರಿಕರಗಳು ಹಿಂದೆ ಬರುತ್ತಿದ್ದವು. ಧ್ವಜ ಛತ್ರ ಚಾಮರ ಕಿರೀಟಾದ್ಯಾಭರಣ ಕಾಂತಿಗಳು ಸೂರ್ಯಕಿರಣಗಳಂತೆ ಅಂಬರದಿ ತುಂಬಿದವು. ತಿಮಿಂಗಿಲಗಳಿಂದ ಅಲ್ಲಕಲ್ಲೋಲವಾದ ಸಮುದ್ರದಂತೆ ತೋರಿ

ನಡೆಯುವ ಸೈನ್ಯರ ತುಮುಲನಾದವು ಮುಗಿಲನ್ನು ಮುಟ್ಟಿತು. ನಾರದನು ಶ್ರೀಕೃಷ್ಣನಿಗಿತ್ತ ಪೂಜೆಯನ್ನು ಸ್ವೀಕರಿಸಿ ಸಂತೋಷದಿಂದ ಹರಿಲೀಲೆಯನ್ನು ಪಾಡುತ್ತಾ ಆಕಾಶಮಾರ್ಗದಿಂದ ಹೊರಟುಹೋದನು. ರಾಜದೂತನಾದರೂ ಶ್ರೀಕೃಷ್ಣನ ಅಮೃತಾಭಯ ವಚನಗಳನ್ನು ಸ್ವೀಕರಿಸಿ, ಹೋಗಿ, ಅವರಿಗೆ ಶ್ರೀಕೃಷ್ಣಸಂದೇಶವನ್ನು ಅರುಹಿದನು.

ಶ್ರೀಕೃಷ್ಣನು ಆನರ್ತ ಸೌವೀರ ಕುರುದೇಶಗಳನ್ನೂ, ದೃಷದ್ವತೀ ಸರಸ್ವತೀ ನದಿಗಳನ್ನೂ ದಾಟಿ, ಪಾಂಚಾಲ ಮತ್ಸ್ಯದೇಶಗಳನ್ನತಿಕ್ರಮಿಸಿ ಇಂದ್ರಪ್ರಸ್ಥವನ್ನು ಮುಟ್ಟಿದನು. ಕೃಷ್ಣ ಬಂದ ನೆಂದು ತಿಳಿದು ಪಾಂಡವರು ವಾದ್ಯವೈಭವಗಳಿಂದ, ಉಪಾಧ್ಯಾಯ ಸಚಿವರಿಂದ ಕೂಡಿ ಬಂದು ಕೃಷ್ಣನನ್ನು ಎದುರ್ಗೊಂಡರು. ಶ್ರೀಕೃಷ್ಣನನ್ನು ನೋಡಿ ಪ್ರಾಣವೇ ಎದ್ದು ಬಂದಂತಾಗಿ ಧರ್ಮಜನು ಪ್ರೇಮದಿಂದ ಅವನನ್ನಾಲಿಂಗಿಸಿದನು. ಆ ರಮಾರಮಣನ ಗಾತ್ರಸ್ಪರ್ಶದಿಂದ ಅವನ ಪಾಪಗಳೆಲ್ಲವೂ ನಾಶವಾದವು; ಆನಂದವು ಉಕ್ಕೇರಿ ಕಣ್ಣಲ್ಲಿ ನೀರಾಗಿ ಹರಿಯಿತು; ಹೃದಯವು ಕರಗಿತು; ಮನವು ಅವಶವಾಯಿತು; ಮೈನವಿರೆದ್ದಿತು; ಮಾತಾಡಲು ಬಾರದಂತಾ ಯಿತು. ಭೀಮಸೇನನು ಇಷ್ಟದೈವನಾದ ಶ್ರೀಕೃಷ್ಣನ ಆಲಿಂಗನವನ್ನು ಪೊಂದಿ ಪರಮಾನಂದ ಪೂರ್ಣನಾದನು. ಅರ್ಜುನನನ್ನಾಲಿಂಗಿಸಿ, ನಕುಲ ಸಹದೇವರಿಗೆ ಆಶೀರ್ವದಿಸಿ, ಶ್ರೀಶನು ಹಿರಿಯರನ್ನು, ವಿಪ್ರರನ್ನು, ವಂದಿಸಿ ಸತ್ಕರಿಸಿದನು; ನರ್ತನ ಕೀರ್ತನಗಳಾದವು. ಪುರವನ್ನು ಚೆನ್ನಾಗಿ ಅಲಂಕರಿಸಿ ತಾವೂ ಸಿಂಗರಿಸಿಕೊಂಡು, ಶ್ರೀಕೃಷ್ಣನಿಗೆ ಪುರಜನರು ತಳಿರುತೋರಣಗಳಿಂದ ಸ್ವಾಗತವನ್ನು ಸಮರ್ಪಿಸಿದರು. ನರನಾರಿಯರು ಭೂಷಿತರಾಗಿ ದೇವತೆಗಳಂತೆ ಸಂಗೊಳಿಸಿದರು. ದೀಪಗಳನ್ನು, ಪೂರ್ಣಕಲಶಗಳನ್ನು ದ್ವಾರದಲ್ಲಿಟ್ಟು, ರಂಭಾಸ್ತಂಭಗಳನ್ನು ಕಟ್ಟಿ, ಅಲಂಕರಿಸಿದ್ದ ಮಂದಿರಗಳ ಮೇಲೆ ನಿಂತು, ನಾರಿಯರು ವಿಮಾನಾರೂಢನಾದ ದೇವವನಿತೆಯರಂತೆ ಕಾಣಿಸಿ ದರು. ಅವರು ಪತ್ನೀಸಮೇತನಾಗಿ ಬರುವ ಮುರಾರಿಯ ಮನೋಹರ ಸೌಂದರ್ಯ ರಸವನ್ನೆವೆ ಯಿಕ್ಕದೆ ನೋಡಿ, ಕೈಯಲ್ಲಿ ಪಿಡಿದ ಕುಸುಮಗಳನ್ನು ಕೃಷ್ಣನಿಗರ್ಪಿಸಿ, ಕೃಷ್ಣಪತ್ನಿಯರ ಪುಣ್ಯಾ ತಿಶಯವನ್ನು ಪೊಗಳಿ ಪಾಡಿದರು.

ಪುರಜನರು, ವಿಪ್ರರು, ವೈಶ್ಯರು ಬಂದು ನೀಡಿದ ಕಾಣಿಕೆಗಳನ್ನು, ಆಶೀರ್ವಾದಗಳನ್ನು, ರತ್ನಗಳನ್ನು ಸ್ವೀಕರಿಸಿ, ಶ್ರೀಕೃಷ್ಣನು ಅವರಿಗೆ ಅಖಂಡ ಪುಣ್ಯವನ್ನಿತ್ತನು. ಮುಂದೆ ನಡೆದು ಗೋವಿಂದನು ರಾಜಮಂದಿರವನ್ನು ಪ್ರವೇಶಿಸಿದನು. ಅಲ್ಲಿದ್ದ ಕುಂತಿಯು ಸೊಸೆಯರಿಂದ ಕೂಡಿ ಎದುರ್ಗೊಂಡು ಶ್ರೀಕೃಷ್ಣನನ್ನಪ್ಪಿ ಹರಸಿದಳು. ಧರ್ಮರಾಜನು ಮನೆಗೆ ಬಂದ ಗೋವಿಂದ ನನ್ನು ಆನಂದದಿಂದ ಪೂಜಿಸುತ್ತಾ, ಏನು ಮಾಡಬೇಕೆಂಬ ದಿಕ್ಕತೋಚದಂತಾಗಿ ಸುಮ್ಮನೆ ನೋಡುತ್ತಾ ನಿಂತನು. ಶ್ರೀಕೃಷ್ಣನು ಕುಂತಿಗೆ ವಂದಿಸಿದನು; ದ್ರೌಪದಿಯ ವಂದನವನ್ನು ಸ್ವೀಕರಿಸಿ, ನಿನ್ನನ್ನು ತಂಗಿ ಎಂದೆಣಿಸಿ ಸಲಹುವೆನೆಂದನು. ಅತ್ತೆಯ ಮಾತಿನಂತೆ ದ್ರೌಪದಿಯು ಅಷ್ಟ ಮಹಿಷಿಯರನ್ನೂ ಪೂಜಿಸಿ, ಅನ್ಯರನ್ನೂ ಸತ್ಕರಿಸಿ, ಅವರಿಗೆ ಗಂಧ ಮಾಲ್ಯ ಕುಂಕುಮ ವಸ್ತ್ರ ಗಳನ್ನು ಸಮರ್ಪಿಸಿದಳು. ಕೆಲಕಾಲದಲ್ಲಿ ಶ್ರೀಕೃಷ್ಣನು ಸಪರಿವಾರನಾಗಿ ವಾಸವಾಗಿದ್ದನು. ಆಗ ಖಾಂಡವವನವನ್ನು ಅಗ್ನಿಗಾಹುತಿಯಾಗಿತ್ತು ಮೆಚ್ಚಿಸಿ, ಗಾಂಡೀವವನ್ನು ಅರ್ಜುನನಿಗೆ ಕೊಡಿಸಿ ಸಲಹಿದನು. ಮಯನಿಂದ ಮಹಾಸಭೆಯನ್ನು ಕಟ್ಟಿಸಿ, ಶ್ರೀಕೃಷ್ಣನು ಧರ್ಮರಾಜನ ವೈಭವವನ್ನು ಹೆಚ್ಚಿಸಿದನು.

## ೮೦. ಜರಾಸಂಧ ವಧೆ

ಒಂದು ದಿನ ಸಭೆಯಲ್ಲಿ ಧರ್ಮರಾಜನು ಬ್ರಾಹ್ಮಣ ಕ್ಷತ್ರಿಯ ವೈಶ್ಯಪ್ರಜರು, ಮುನಿಗಳು, ಆಚಾರ್ಯರು, ಬಂಧುಜನರು ಕೂತು ಕೇಳುತ್ತಿರಲು ಶ್ರೀಕೃಷ್ಣನಿಗಿಂತೆಂದನು–

ಗೋವಿಂದ! ರಾಜಸೂಯ ಯಾಗದಿಂದ ನಿನ್ನನ್ನೂ, ನಿನ್ನ ಸನ್ನಿಧಾನಪಾವನರಾದ ಇಂದ್ರಾದಿ ದೇವತೆಗಳನ್ನೂ ಸೇವಿಸಲು ತವಕಿಸುವ ನನ್ನ ಕೋರಿಕೆಯನ್ನೀಡೇರಿಸು! ಸಕಲ ಅಶುಭ ವಿಧ್ವಂಸಕನಾದ ನಿನ್ನ ಪಾದಾರವಿಂದವನ್ನು ಎಡೆಬಿಡದೆ ಸೇವಿಸುವ ಸುಜನರು ಮೋಕ್ಷವನ್ನು ಹೊಂದುವರು. ಒಂದು ವೇಳೆ ಅವರು ಬೇಡಿದರೆ ಐಹಿಕ ಸುಖವೂ ಅವರಿಗೆ ಸಿಗದಿರದು; ಆದರೆ ನಿನ್ನನ್ನು ಸೇವಿಸಿದವರಿಗೆ ಎರಡೂ ಇಲ್ಲ. ಅಂತಹ ನಿನ್ನ ಹೃದಯಂಗಮ ಚರಣಾರವಿಂದ ಸೇವೆಯ ಮಹಿಮೆಯನ್ನು ಸಕಲ ಜನರು ಕಣ್ಣಾರ ನೋಡಲಿ! ನಿನ್ನನ್ನು ಭಜಿಸುವವರಿಗಾಗುವ ವೈಭವವನ್ನು, ಭಜಿಸದವರಿಗೆ ಆಗುವ ಅನರ್ಥವನ್ನು ಕೂಡ ನೋಡಿ ತಿಳಿಯಲಿ! ಸರ್ವ ಸ್ವಾಮಿಯು! ಪೂರ್ಣಾನಂದಾನುಭವಸ್ವರೂಪನು ಆದ ನಿನಗೆ ವೈಷಮ್ಯವಿಲ್ಲ. ಯೋಗ್ಯತೆಯಿಂದ ಫಲವನ್ನು ಕೊಡುವ ನಿನಗೆ ನೈಪುಣ್ಯವಿಲ್ಲ. ಸುರತರುವು ಸೇವೆಯನ್ನರಿತು ಫಲವನ್ನು ಕೊಡುವಂತೆ, ನೀನೂ ಜನರ ಯೋಗ್ಯತೆಯಂತೆ ವಿಬುಧಾಸುರ ಸೌಖ್ಯ ದುಃಖಸತ್ಕಾರಣನಾಗಿರುವೆ.

ಶ್ರೀಭಗವಂತನಿಂತೆಂದನು–

'ರಾಜನ್! ನಿನ್ನ ನಿಶ್ಚಯವು ಸರಿಯಾಗಿದೆ. ಇದರಿಂದ ನಿನ್ನ ಕೀರ್ತಿಯು ಮೂರು ಲೋಕ ಗಳಲ್ಲಿಯು ತುಂಬಿ ಬೆಳಗುವುದು. ಋಷಿದೇವ ಬಂಧುಮಿತ್ರರಿಗೆ, ನಮಗೂ ನಿನ್ನ ರಾಜಸೂಯ ವೈಭವವನ್ನು ನೋಡಬೇಕೆಂದಿದೆ. ಈ ನಿನ್ನ ತಮ್ಮಂದಿರು ಲೋಕಪಾಲಸಮರಾಗಿರುವರು. ನಿನಗೇನು ಕಡಿಮೆ? ನಾನು ನಿನ್ನ ವಶನಾಗಿ ನಿಂತಿರುವೆನು. ಮನಸ್ಸಿಗೆ ದಾಸರಾಗಿ ಕುಣಿಯುವ ಕುಜನರಿಗೆ ಸಿಗದ ನಾನು, ನನ್ನ ದಾಸರಿಗೆ ಬೇಕಾದ ಸಂಪತ್ತು, ಕೀರ್ತಿ, ತೇಜಸ್ಸು, ವೈಭವ ಮುಂತಾದುದೆಲ್ಲವನ್ನು ಕೊಟ್ಟು ದೇವತೆಗಳಿಗೆ ಮಿಗಿಲೆನಿಸುವೆನು. ಯಾವ ನರರಾಜನೂ ಅವರನ್ನು ಮೀರಲಾರನು. ಸರ್ವರಾಜರನ್ನೂ ಗೆದ್ದು, ಅದರಿಂದ ಕಪ್ಪವನ್ನು ಸ್ವೀಕರಿಸಿ, ಸರ್ವ ಸಂಭಾರಗಳನ್ನು ಅಣಿಯಾಗಿರಿಸಿ ಯಜ್ಞವನ್ನಾರಂಭಿಸು!

ಭಗವದ್ವಚನವನ್ನಾಲಿಸಿ ಧರ್ಮರಾಜನು ಪ್ರೀತನಾದನು. ವಿಷ್ಣುಪ್ರಭಾವಯುತರಾದ ಭೀಮಾರ್ಜುನ ನಕುಲ ಸಹದೇವರನ್ನು ಕ್ರಮವಾಗಿ ಪೂರ್ವ ಉತ್ತರ ಪಶ್ಚಿಮ ದಕ್ಷಿಣ ದಿಕ್ಕು ಗಳನ್ನು ಜಯಿಸಲು ಕಳಿಸಿದನು. ಅವರು ದಿಗ್ವಿಜಯವನ್ನು ಮಾಡಿ ತಂದ ಧನರಾಶಿಯು ಅಗಣಿತ ವಾಗಿತ್ತು. ಜರಾಸಂಧನನ್ನು ಗೆಲ್ಲದೆ ರಾಜಸೂಯಯಾಗವು ನಡೆಯಲಾರದೆಂದರಿತು ಶ್ರೀಕೃಷ್ಣನು ಉದ್ಧವನು ಪೇಳಿದ್ದ ಉಪಾಯವನ್ನು ಧರ್ಮರಾಜನಿಗರುಹಿದನು.

ಜರಾಸಂಧನಿಗೆ ಹೆದರಿ ಯಾಗವನ್ನೇ ಬಿಡಲು ನಿಶ್ಚಯಿಸಿದ ಧರ್ಮರಾಜನಿಗೆ, ಶ್ರೀಕೃಷ್ಣನು ಧೈರ್ಯವನ್ನು ತುಂಬುತ್ತಾ ಇಂತೆಂದನು – ಭೀಮಸೇನನು ಜರಾಸುತನನ್ನು ಕೊಲ್ಲುವನು. ನಾನು, ಅರ್ಜುನ ಹಾಗೂ ಭೀಮನು, ವಿಪ್ರರೂಪರಾಗಿ ಹೋಗಿ, ಯುದ್ಧವನ್ನು ಯಾಚಿಸಿ, ಆ ದುಷ್ಟನನ್ನು ಸಂಹರಿಸಿ ಬರುವೆವು.

ಇಂತು ನಿಶ್ಚಯಿಸಿ ಶ್ರೀಕೃಷ್ಣ ಭೀಮಾರ್ಜುನರು ಗಿರಿವ್ರಜವನ್ನು ಸೇರಿ ಮಧ್ಯಾಹ್ನ ವೇಳೆಯಲ್ಲಿ ಜರಾಸಂಧನನ್ನು ಕಂಡರು. ರಾಜನ್! ಅತಿಥಿಗಳಾಗಿ ಬಂದಿರುವ ನಮ್ಮ ಕೋರಿಕೆಯನ್ನೀಡೇರಿಸು.

ಧೀರರಿಗೆ ಸಹಿಸಲಾಗದ್ದಿಲ್ಲ; ದುರ್ಮಾರ್ಗರಿಗೆ ಮಾಡಬಾರದ್ದಿಲ್ಲ; ಸಮದರ್ಶಿಗಳಿಗೆ ಶತ್ರುಗಳಿಲ್ಲ; ದಾನಶೌಂಡರಿಗೆ ಕೊಡಲಾರದ್ದೂ ಇಲ್ಲ. ಸಮರ್ಥನಾಗಿದ್ದೂ, ಅನಿತ್ಯವಾದ ಶರೀರದಿಂದ ನಿತ್ಯವಾದ ಯಶವನ್ನು ಸಂಪಾದಿಸಿದವನ ಜನ್ಮ ವ್ಯರ್ಥವೇ ಸರಿ! ಹರಿಶ್ಚಂದ್ರ ರಂತಿದೇವ ಶಿಬಿ ಬಲಿರಾಜ ವ್ಯಾಧ ದಧೀಚಿ ಕಪೋತ ಉಂಚ ವಿಪ್ರ ಮೊದಲಾದವನರು ನಶ್ವರ ಶರೀರಗಳನ್ನು ಲೆಕ್ಕಿಸದೆ ಶಾಶ್ವತವಾದ ಕೀರ್ತಿಯನ್ನು ಗಳಿಸಲಿಲ್ಲವೇ? ಎಂದಾಡಿದ ಕೃಷ್ಣನ ಮಾತನ್ನು ಕೇಳಿ, ಜರಾಸಂಧನಿಂತು ಚಿಂತಿಸಿದನು–

ಇವರು ಬ್ರಾಹ್ಮಣರಲ್ಲ. ಸ್ವರದಿಂದ, ನಡೆನುಡಿಗಳಿಂದ, ಇವರನ್ನೆಲ್ಲೋ ನೋಡಿದಂತಿದೆ. ಇವರ ಭುಜಗಳಲ್ಲಿ, ಮುಂಗೈಗಳಲ್ಲಿ, ಕಾಯಿ ಕಟ್ಟಿರುವುದನ್ನು ಕಂಡಾಗ ಇವರು ಕ್ಷತ್ರಿಯರೇ ಇರಬೇಕೆನಿಸುತ್ತದೆ. ಬ್ರಾಹ್ಮಣವೇಷದಿಂದ ಬಂದು ಬೇಡಿದರೆಂದಮೇಲೆ ಏನಾದರೂ ಕೊನೆಗೆ ದುಸ್ತ್ಯಜ ಶರೀರವನ್ನಾದರೂ ಕೊಟ್ಟುಬಿಡುವೆನು. ಹಿಂದೆ ತನ್ನ ಐಶ್ವರ್ಯವನ್ನು ಕಸಿದು ಇಂದ್ರನಿಗೆ ಕೊಡಲಿಚ್ಛಿಸಿ, ವಿಷ್ಣುಮೂರ್ತಿಃಜ್ಞಿ ಬ್ರಾಹ್ಮಣ ವಟುವಾಗಿ ಬಂದು ಬೇಡಿದಾಗ, ಬಲಿರಾಜನು, ಶುಕ್ರನು ಬೇಡವೆಂದರೂ ಕೇಳದೆ ತಿಳಿದೂ ತಿಳಿದೂ ಸರ್ವಸ್ವವನ್ನು ಧಾರೆಯೆರೆದು ಕೀರ್ತಿಯನ್ನು ಗಳಿಸಲಿಲ್ಲವೇ? ಕ್ಷತ್ರಿಯನಿಗೆ ಬ್ರಾಹ್ಮಣ ಪ್ರೀತಿಯನ್ನುಳಿದ ಜೀವನ ಪ್ರಯೋಜನವಿಲ್ಲ. ವಿಪುಲ ಯಶಃ ಪ್ರಾಯಸಿಳಿಯ ಮುಂದೆ ಶರೀರದ ಲೆಕ್ಕವೇನು? ಎಂದು ಚಿಂತಿಸಿ, 'ವಿಪ್ರರೇ! ನಿಮಗೇನು ಬೇಕು? ಕೇಳಿ! ತಲೆಯನ್ನಾದರೂ ಕತ್ತರಿಸಿ ಕೊಡುವೆನು' ಎಂದು ನುಡಿದನು.

ಆಗ ಶ್ರೀಕೃಷ್ಣನಿಂತೆಂದನು–

'ರಾಜೇಂದ್ರ! ನಮಗೆ ಯುದ್ಧಭಿಕ್ಷೆಯನ್ನು ನೀಡು! ದ್ವಂದ್ವವನ್ನು ಬೇಡಿ ಬಂದವರಾಗಲಿ ಅನ್ನವನ್ನಲ್ಲ. ಇವನು ವೃಕೋಧರನು, ಇವನು ಅವನ ತಮ್ಮ ಅರ್ಜುನನು. ಇವರೀರ್ವರಿಗೂ ಮಾತಲೇಯನು, ನಿನಗೆ ಶತ್ರುವೂ ಆದ ಕೃಷ್ಣನೇ ನಾನು'. ಆ ಮಾತನ್ನಾಲಿಸಿ ಅರ್ಜುನನು ಹೆದರುತ್ತಿರಲು ಜರಾಸಂಧನು ಗಟ್ಟಿಯಾಗಿ ನಕ್ಕು ಸಿಟ್ಟಿನಿಂದ ಇಂತೆಂದನು–

ಯುದ್ಧವನ್ನು ಬಿಟ್ಟೋಡಿದ ನಿನ್ನಿಂದ ನಾನು ಯುದ್ಧವನ್ನಾಡುವುದಿಲ್ಲ. ಮಥುರೆಯನ್ನು ಬಿಟ್ಟು ಸಮುದ್ರದಲ್ಲಡಗಿದವನಲ್ಲವೇ ನೀನು? ಇನ್ನು ಈ ಅರ್ಜುನನು ವಯಸ್ಸಿನಿಂದ ಹುಡುಗನು; ಬಲದಿಂದ ನನಗೆ ಸಮನಲ್ಲ. ಇವನಿಂದ ಯುದ್ಧ ನನಗೇಕೆ? ಸಮಬಲನಾದ ಭೀಮಸೇನನಿಂದಲೇ ನಾನು ಕಾದಾಡುವೆನು.

ಆ ಮಾತನ್ನಾಲಿಸಿ ಅರ್ಜುನನು ನಿಟ್ಟುಸಿರಿಟ್ಟು ತನ್ನನ್ನು ಬಿಟ್ಟನಲ್ಲ! ಎಂದು ನಿಶ್ಚಿಂತನಾದನು. ಆಗ ಜರಾಸಂಧನೊಂದು ಗದೆಯನ್ನು ಹಿಡಿದು, ಭೀಮನಿಗೊಂದನ್ನಿತ್ತು, ಊರ ಹೊರಗಿರುವ ಬೈಲನ್ನು ಸೇರಿದನು. ಅವರ ದ್ವಂದ್ವಯುದ್ಧವನ್ನು ನೋಡಲು ಸಕಲ ಪೌರರು ಬಂದು ನೆರೆದರು.

ಸಮಬಲರು, ಮಹಾವೀರರು ಆದ ಭೀಮ ಜರಾಸುತರು ಗದಾಯುದ್ಧವನ್ನಾರಂಭಿಸಿ, ಬಲ ಎಡಗಳಿಗೆ ತಿರುಗುತ್ತಾ, ಗದೆಗಳಿಂದ ಒಬ್ಬರನ್ನೊಬ್ಬರು ಕಟಿ ಪಾದ ಹಸ್ತ ತೋಳುಗಳಲ್ಲಿ ಹೊಡೆಯುತ್ತಾ ಭೀಕರವಾಗಿ ಕಾದಾಡಿದರು. ವಜ್ರಾಘಾತದಂತೆ ಅವರ ಗದೆಗಳು ಖಣ್ ಖಣ್ ಎಂದು ಶಬ್ದಿಸಿದವು. ಆನೆಗಳಂತೆ ಹೊಡೆದಾಡುವ ಅವರ ಪದಾಘಾತದಿಂದ ಅಲ್ಲಿಯ ಭೂಪ್ರದೇಶವು ಚೂರ್ಣಿತವಾಯಿತು. ಗದೆಗಳು ಮುರಿದುಬಿದ್ದವು. ಆಗ ಅವರು ಮುಷ್ಟಿಯುದ್ಧ

ವನ್ನು ಮಾಡತೊಡಗಿದರು. ಚಪ್ಪಾಳೆ ಇಕ್ಕುತ್ತಾ ತೊಡೆಗಳನ್ನು ತಟ್ಟಿ ಗರ್ಜಿಸುವ ಅವರ ಮುಷ್ಟಿ ಯುದ್ಧವು ಭಯಂಕರವಾಗಿತ್ತು.

ಆಗ ಶ್ರೀಕೃಷ್ಣನು ಜರಾಸುತನ ಜನ್ಮ ಪ್ರಕಾರವನ್ನು ನೆನೆದು ಶತ್ರುಜಯವನ್ನು ಗಳಿಸುವ ಉಪಾಯವನ್ನು ಭೀಮನಿಗೆ ಸೂಚಿಸಿದನು. ಸಣ್ಣ ರೆಂಬೆಯನ್ನು ಎರಡಾಗಿ ಸೀಳಿ ಭೀಮನನ್ನೆಚ್ಚರಿಸಿ, ತಾನೂ ಭೀಮನಲ್ಲಿ ತೇಜೋಬಲರೂಪದಿಂದ ನಿಂತನು. ಆಗ ಭೀಮಸೇನನು ಕುಪ್ಪಳಿಸಿ ಪಿಡಿದು ಜರಾಸಂಧನನ್ನು ಕೆಡಹಿ, ಪಾದಗಳಲ್ಲಿ ಕೈಕಾಲುಗಳಿಂದ ಹಿಡಿದೆತ್ತಿ, ಎರಡು ಭಾಗವಾಗುವಂತೆ ಸೀಳಿದನು. ಆನೆಯು ರೆಂಬೆಯನ್ನಂತೆ ಭೀಮನು ಜರಾಸುತನ ಗುದಸ್ಥಾನದಿಂದ ನಿಲುವಾಗಿ ತಲೆಯವರೆಗೂ ಅವನ ಶರೀರವನ್ನು ಇಬ್ಭಾಗ ಮಾಡಿ, ಕೊಂದನು. ಒಂದುಪಾದ ಒಂದುತೊಡೆ ವೃಷಣ ಕಟಿ ಜಘನ ಸ್ತನ ಭುಜ ಕೈ ಕಣ್ಣು ಕಿವಿ ಎಲ್ಲವೂ ಒಂದೊಂದಾಗಿರಲು, ಎರಡು ತುಂಡಾಗಿ ಬಿದ್ದ ರಾಜನನ್ನು ನೋಡಿ ಪ್ರಜರು ಹಾಹಾಕಾರ ಮಾಡಿದರು. ಅರ್ಜುನಕೃಷ್ಣರು ಭೀಮನನ್ನಪ್ಪಿ, 'ಭಾಪು! ಬಳಿರೇ!' ಎಂದು ಪ್ರಶಂಸಿಸಿದರು. ಆಗ ಭಗವಂತನು, ಜರಾಸುತ ಪುತ್ರನಾದ ಸಹದೇವನಿಗೆ ಮಗಧ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿಸಿ, ಕಾರಾಗಾರದಲ್ಲಿದ್ದ ರಾಜರನ್ನೆಲ್ಲ ಬಿಡಿಸಿದನು.

## ೭೧. ರಾಜವಿಮೋಕ್ಷಣ

ಇಪ್ಪತ್ತೆರಡು ಸಾವಿರದ ಎಂಟುನೂರು ರಾಜಪುತ್ರರು ಗಿರಿಕಂದರಗಳಿಂದ ಹೊರಬಿದ್ದು ಶ್ರೀಕೃಷ್ಣನನ್ನು ಕಂಡರು. ಬಡವಾಗಿ, ಮುಖಬಾಡಿ, ಮೀಯದೆ ಮಲಿನರಾಗಿ, ಕಾರಾಗಾರವಾಸದಿಂದ ನೊಂದ ರಾಜನ್ಯರು, ಮೋಚಕನಾಗಿ ಬಂದ ಶ್ರೀಶನನ್ನು ಕಂಡರು. ಘನಶ್ಯಾಮ ಶರೀರನು, ಪೀತಾಂಬರಧರನು, ಶ್ರೀವತ್ಸಯುತನು, ಚತುರ್ಬಾಹು ವಿಲಸಿತನು, ಪದ್ಮದಲನಯನನು, ಪ್ರಸನ್ನವದನನು, ಮಕರಕುಂಡಲಭೂಷನು, ಮನೋಹರವೇಷನು, ಪದ್ಮಶಂಖ ಗದಾಚಕ್ರ ವಿರಾಜಿತನು, ಕಿರೀಟ ಹಾರ ಕಟಕ ಕಟಿಸೂತ್ರ ಭುಜಕೀರ್ತಿ ಮುದ್ರಿಕಾದಿ ಸರ್ವಾಭರಣ ಶೋಭಿತನು, ಕೌಸ್ತುಭವಿಲಾಸನು, ಸುಂದರ ಮಂದಹಾಸನು ಆದ ಶ್ರೀರಮಣನನ್ನು ಕಣ್ಣಿಂದ ಕುಡಿಯುವರೋ! ಜಿಹ್ವೆಯಿಂದ ಸವಿಯುವರೋ! ಮೂಗಿನಿಂದ ಮೂಸುವರೋ! ಮನದಿಂದ ಪೊಂದ ಬೇಡುವರೋ! ಎಂಬಂತೆ ಕಂಡು ಸಾಷ್ಟಾಂಗವೆರಗಿ ಕೈಜೋಡಿಸಿ ನಿಂತರು. ಶ್ರೀಕೃಷ್ಣ ಸಂದರ್ಶನದಿಂದ ಉಕ್ಕಿ ಬಂದ ಆನಂದರಸದಲ್ಲಿ ಅವರು ಕಾರಾಗಾರದಿ ಅನುಭವಿಸಿದ ಕ್ಲೇಶಗಳು ಕೊಚ್ಚಿಹೋದವು.

'ದೇವದೇವೇಶ! ನಂಬಿದವರ ಪಾಪವನ್ನು ನಾಶಮಾಡುವೆ. ಶ್ರೀಶ! ನಂಬಿ ಬಂದ ನಮ್ಮನ್ನು ಕಾಪಾಡಿದೆ. ಮುಂದೆಯೂ, ಸಂಸಾರವೆಂಬ ಸೆರೆಯಿಂದ ನೀನೇ ಬಿಡಿಸು! ಮಾಗಧನ ಮೇಲೆ ನಮಗೆ ಸಿಟ್ಟಿಲ್ಲ. ನಮ್ಮ ರಾಜ್ಯವನ್ನು ಕ ದು, ಸೆರೆಯಿಟ್ಟು ಈ ರೀತಿಯಾಗಿ ನಿನ್ನ ದರ್ಶನ ಭಾಗ್ಯವನ್ನು ಪೊಂದಿಸಿದ ಜರಾಸುತನು ನಮಗೆ ಉಪಕಾರಿ ಎಂದೇ ಭಾವಿಸುವೆವು. ನಿನ್ನ ಬಂಧಕಶಕ್ತಿಗೆ ಸಿಲುಕಿ, ಸಂಪತ್ತು ಶಾಶ್ವತವೆಂದು ಭ್ರಮಿಸಿ, ಐಶ್ವರ್ಯ ರಾಜ್ಯ ಯೌವನ ಬಲಗಳಿಂದ ಕೊಬ್ಬಿದ ಜನರಿಗೆ ಶ್ರೇಯಸ್ಸಾಗುವುದಿಲ್ಲ. ಬಿಸಿಲುಗುದುರೆಯನ್ನು ಕಂಡು ನೀರೆಂದು ತಿಳಿಯುವ ಮೂರ್ಖರಂತೆ, ಅನಿತ್ಯವಾದ ಅಶ್ವರಥ ಮಾತಂಗ ಕನಕ ಮೂಲ್ಯಾದ್ಯೈಶ್ವರ್ಯವನ್ನು

ನಿತ್ಯವೆಂದು ತಿಳಿಯುವವರು ಮೂರ್ಖರೇ ಸರಿ! ನಾವು ಅಂತೆಯೇ ರಾಜ್ಯೈಶ್ವರ್ಯ ಮದಮತ್ತ ರಾಗಿ, ರಾಜ್ಯಕ್ಕಾಗಿ ಕಾದಾಡಿದೆವು; ಪ್ರಜರನ್ನು ಕೊಂದು, ಕರುಣೆಯನ್ನು ತೊರೆದು ಮೆರೆವ ನಾವೂ ಸಾಯುವೆವೆಂದು ತಿಳಿಯದಿದ್ದೆವು. ಗಂಭೀರವೇಗದಿಂದ ಕಾಣದೆ ನುಂಗಲು ಬರುವ ಕಾಲಪ್ರವಾಹದಲ್ಲಿ ಸಿಲುಕಿ, ರಾಜ್ಯವನ್ನು ಕಳೆದುಕೊಂಡು, ಇಂದು ನಿನ್ನ ದಯದಿಂದ ದರ್ಪವನ್ನು ತೊರೆದು, ಚರಣಾರವಿಂದವನ್ನು ಸ್ಮರಿಸುತ್ತಿರುವೆವು. ದೇಹವೂ ಚಂಚಲವು; ರಾಜ್ಯವೂ ಚಂಚಲ ತರವು. ಅದನ್ನು ಬೇಡುವುದು ಪಾಪವನ್ನು ಬೇಡಿದಂತೆಯೇ ಸರಿ. ನಾವು ಮಾಡಿದ ಪುಣ್ಯದಿಂದ, ನಿನ್ನ ಶ್ರವಣ ಮನೋಹರ ಕಥೆಯನ್ನು ಕೇಳಿ ತಿಳಿದು ನಿನಗೆ ಶರಣಾಗತರಾಗಿ ಬದುಕಿದೆವು. ಮುಂದೆ ಸಂಸಾರದಲ್ಲಿ ನಿರತರಾಗುವ ನಮ್ಮ ಮನವು, ನಿನ್ನ ಚರಣಾರವಿಂದವನ್ನು ಮರೆಯ ದಿರುವಂತೆ ಕರುಣಿಸು! ಕೃಷ್ಣ! ವಾಸುದೇವ! ಸರ್ವಪಾಪ ಪರಿಹಾರಕ! ನತದುಃಖ ನಿವಾರಕ! ವೇದವೇದ್ಯ! ನಿನಗೆ ನಮಸ್ಕಾರವು.

ಇಂತು ಸ್ತುತಿಸಿದ ರಾಜರನ್ನು ನೋಡಿ ಕರುಣೆಯಿಂದ ಶ್ರೀಕೃಷ್ಣನಿಂತೆಂದನು–

ರಾಜನ್ಯರೇ! ನೀನು ಬೇಡಿದಂತೆ ಸರ್ವಸ್ವಾಮಿಯಾದ ನನ್ನ ಚರಣಾರವಿಂದ ದ್ವಂದ್ವದಲ್ಲಿ ಧೃಢಭಕ್ತಿಯನ್ನು ಅನುಗ್ರಹಿಸಿರುವೆನು. ರಾಜ್ಯ, ಸಂಪತ್ತುಗಳಿಂದ ಮದವೇರಿ ಕಾದಾಡುವ ಜನರ ಪಾಡನ್ನು ನೋಡಿ, ನೀವು ಮದದೂರರಾಗಬೇಕೆಂದು ನಿಶ್ಚಯಿಸಿದುದು ನ್ಯಾಯವಾಗಿದೆ. ಈ ಸುಬುದ್ಧಿಯು ನಿಮಗಂಕುರಿಸಿರುವುದು ನಿಮ್ಮ ಅದೃಷ್ಟವೆಂದೇ ತಿಳಿಯಿರಿ. ಹೈಹಯ ನಹುಷ ವೇನ ರಾವಣ ನರಕಾದಿ ದುಷ್ಟರಾಜರು, ಅಹಂಕಾರದಿಂದಲೇ ರಾಜ್ಯಭ್ರಷ್ಟರಾದರು. ದೇಹಾದಿ ಗಳಿಗೆ ಹುಟ್ಟು ಸಾವು ರೋಗ ಜರೆಗಳು ತಪ್ಪಿದ್ದಲ್ಲವೆಂದು ತಿಳಿದು ಅಹಂಕಾರವನ್ನು ಬಿಟ್ಟು ಪ್ರಜರನ್ನು ಧರ್ಮದಿಂದ ರಕ್ಷಿಸಿರಿ! ನನ್ನ ಪ್ರೀತಿಗಾಗಿ ಯಜ್ಞಯಾಗಗಳನ್ನು ಮಾಡಿರಿ! ನನ್ನಲ್ಲಿ ಮನವಿಟ್ಟು ಮುಟ್ಟಿ ಭಜಿಸಿ ಮುಕ್ತಿಯನ್ನೂ ಹೊಂದುವಿರಿ.

ಎಂದು ಅವರಿಗೆ ಮಜ್ಜನಾದಿ ಶುಭಕರ್ಮಗಳನ್ನು ಮಾಡಿಸಿ, ಭೂಷಣ ವಸನ ಲೇಪನ ಭೋಜನಗಳನ್ನಿತ್ತು, ರಾಜೋಚಿತಸತ್ಕಾರಗಳಿಂದ ಸಂತೋಷಪಡಿಸಿ, ಅವರವರ ದೇಶಗಳಿಗೆ ಕೊಟ್ಟು ಕಳಿಸಿದನು. ಶ್ರೀಕೃಷ್ಣ ಚರಣಾರವಿಂದವನ್ನೇ ನೆನೆಯುತ್ತಾ ಆ ರಾಜರು ತಮ್ಮ ರಾಜ್ಯಗಳಿಗೆ ಪೋಗಿ ಪ್ರಜರಿಗೆ ಶ್ರೀಕೃಷ್ಣಚರಿತವನ್ನು ಪೇಳಿ, ಧರ್ಮದಿಂದ ರಾಜ್ಯವನ್ನಾಳಿಕೊಂಡಿದ್ದರು.

ರಾಜಸೂಯಯಾಗ ಮುಖ್ಯಾಧಿಕಾರಿಯಾದ ಭೀಮಸೇನನಿಂದ ಜರಾಸುತನನ್ನು ಕೊಲ್ಲಿಸಿ, ಭೀಮಾರ್ಜುನರಿಂದ ಕೂಡಿ ಸಹದೇವನ ಪೂಜೆಯನ್ನು ಸ್ವೀಕಾರ ಮಾಡಿ ಹೊರಟು, ಶ್ರೀಶನು ಇಂದ್ರಪ್ರಸ್ಥವನ್ನು ಸಮೀಪಿಸಿ, ಶಂಖವನ್ನೂದಿ ತನ್ನವರಿಗೆ ಹರ್ಷವನ್ನಿತ್ತನು. ಅದನ್ನು ಕೇಳಿ, ಜಯಲಕ್ಷ್ಮಿಯೊಡನೆ ಬಂದ ಶ್ರೀಕೃಷ್ಣನನ್ನೂ ಭೀಮಾರ್ಜುನರನ್ನೂ ಎದುರ್ಗೊಂಡು ಪುರಜನರು ಅಭಿನಂದಿಸಿದರು. ಧರ್ಮರಾಜನು ಹಿಂದೆ ಹೇಳಿದಂತೆ ಜರಾಸುತನ ಮರಣದಿಂದ ನಿರ್ಭೀತನಾಗಿ, ನಾಲ್ಕು ದಿಕ್ಕುಗಳಿಗೆ ತಮ್ಮಂದಿರನ್ನು ಕಳಿಸಿದನು. ಅವರು ಗೆದ್ದು ತಂದ ಧನದಿಂದ ರಾಜಸೂಯ ವನ್ನು ಮಾಡಲೆಣಿಸಿ, ಧರ್ಮರಾಜನು ಕೃಷ್ಣಾನುಗ್ರಹದ ಮಹಿಮೆಯನ್ನರಿತು ಆನಂದತುಂದಿಲ ನಾದನು.

## ೮೨. ರಾಜಸೂಯ ಯಾಗ – ಶಿಶುಪಾಲ ವಧೆ

ಶ್ರೀಶುಕನು ಹೇಳಿದನು–

ಆಗ ಧರ್ಮರಾಜನಿಂತೆಂದನು–

ತ್ರಿಲೋಕ ಗುರುಗಳಾದ ಬ್ರಹ್ಮರುದ್ರೇಂದ್ರಾದಿಗಳು ಕೂಡ ನಿನ್ನ ಆಜ್ಞೆಯನ್ನು ಆದರದಿಂದ ಶಿರದಿ ವಹಿಸಿ, ಪಾಲಿಸುವರು. ಅರವಿಂದಾಕ್ಷ! ರಾಜರೆಂಬ ದುರಭಿಮಾನಿಗಳಾದ ನಮ್ಮಂತಹ ದೀನರ ಅನುಶಾಸನವನ್ನು ನೀನು ಪಾಲಿಸುವುದು ಅತ್ಯಂತ ಮೋಹಕವಾಗಿದೆ. ಪ್ರಭೋ! ಸರ್ವಸ್ವಾಮಿಯು, ಸಮಾನಾಧಿಕರಹಿತನು, ಗುಣಗಣನಿಲಯನು, ಜೀವನಿಯಾಮಕನು ಆದ ನಿನ್ನ ಮಹಿಮೆ, ನಾವು ಮಾಡುವ ಯಜ್ಞಗಳಿಂದ ಹೆಚ್ಚಾಗುವುದೂ ಇಲ್ಲ; ಮಾಡದಿರೆ ಕಡಿಮೆ ಯಾಗುವುದೂ ಇಲ್ಲ. ನಿನ್ನ ಕೃಪಾಪಾತ್ರರಾದ ಭಕ್ತರಿಗೂ ದುರಭಿಮಾನವಿರುವುದಿಲ್ಲ. ನನ್ನ ದೆಲ್ಲವು ಒಳಿತು– ಇನ್ನಿತರರದೆಲ್ಲವು ಕೆಡಕೆಂಬುವ ಪಶುಬುದ್ಧಿಯನ್ನು ಭಕ್ತರಿಗೆ ಕೊಡಬೇಡ ಶ್ರೀಶ!

ಅನಂತರ ಧರ್ಮರಾಜನು ಒಳ್ಳೆಯ ಮಹೂರ್ತದಲ್ಲಿ ಯಜ್ಞವನ್ನಾರಂಭಿಸಿದನು. ಕೃಷ್ಣನ ಸಮ್ಮತಿಯನ್ನು ಪಡೆದು, ವೇದಚತುರನಾದ ವಿಪ್ರರನ್ನು ಋತ್ವಿಜರನ್ನಾಗಿ ವರಿಸಿದನು. ವ್ಯಾಸರು, ಪರಶುರಾಮರು ಪರ್ಯವೇಕ್ಷಣ ನಿರತರಾಗಿದ್ದರು. ಸುಮಂತು ಗೌತಮ ಅಸಿತ ವಸಿಷ್ಠ ಚ್ಯವನ ಕಣ್ವ ಮೈತ್ರೇಯ ಕವಷ ತ್ರಿತ ವಿಶ್ವಾಮಿತ್ರ ವಾಮದೇವ ಸುಮತಿ ಜೈಮಿನಿ ಕ್ರತು ಪೈಲ ಪರಾಶರ ಗರ್ಗ ವೈಶಂಪಾಯನ ಅಥರ್ವಣ ಕಶ್ಯಪ ಧೌಮ್ಯ ಆಸುರಿವೀತಿಹೋತ್ರ ಮಧುಚ್ಛಂದ ವೀರಸೇನ ಅಕೃತವ್ರಣ ದ್ರೋಣ ಕೃಪಾದಿಗಳು ಋತ್ವಿಜರಾಗಿ ನಿಂತರು. ಭೀಷ್ಮ, ಧೃತರಾಷ್ಟ್ರರು, ದುರ್ಯೋಧ ನಾದಿ ಸುತಶತಸಹಿತರಾಗಿ ಬಂದರು. ವಿದುರನೂ ಬಂದನು. ನಾಲ್ಕು ವರ್ಣದವರು ಯಜ್ಞವನ್ನು ನೋಡಬೇಕೆಂದು ಬಂದರು.

ದೇವಯಜನಭೂಮಿಯನ್ನು ವಿಪ್ರರು ಬಂಗಾರದ ನೇಗಿಲುಗಳಿಂದ ಉತ್ತು ಶುದ್ಧೀಕರಿಸಿ ದರು. ಧರ್ಮರಾಜನು ದೀಕ್ಷೆಯನ್ನು ಸ್ವೀಕರಿಸಿದರು. ಧರ್ಮರಾಜನ ಯಜ್ಞ ಪಾತ್ರೆಗಳು, ಸ್ರುಕ್ ಸ್ರುವಚಮಸಾದಿಗಳು, ಎಲ್ಲವೂ ಬಂಗಾರದ್ದಾಗಿತ್ತು. ಇಂದ್ರಾದಿ ಲೋಕಪಾಲಕರು, ಭೂಲೋಕದ ಪ್ರಜರು ಕೂಡ ಧರ್ಮಜ ರಾಜಸೂಯ ಸಮಾರಂಭವನ್ನು ಕಂಡು, ಕೃಷ್ಣಭಕ್ತಿಯ ಪ್ರಭಾವವಿದೆಂದು ತಿಳಿದು, ವಿಸ್ಮಿತರಾದರು. ದೇವತೇಜಸ್ಕರಾದ ಋತ್ವಿಗ್ಜನರು ಮಾಡಿಸುವ ಆ ಧರ್ಮಜನ ಯಾಗವು ವರುಣನ ರಾಜಸೂಯದಂತೆ ಕಂಗೊಳಿಸಿತು. ಧರ್ಮಜನು ಸದಸಸ್ಪತಿ ಗಳಾದ ವೇದವ್ಯಾಸ ಪರಶುರಾಮರನ್ನೂ, ಯಾಜಕರನ್ನೂ, ಇತರ ರಾಜರನ್ನೂ ತಕ್ಕಂತೆ ಸತ್ಕರಿಸಿ ಅಗ್ರಪೂಜೆಯನ್ನು ಮಾಡಲು ಸಿದ್ಧನಾದನು. ಯಾರಿಗೆ ಮಾಡುವುದೆಂದು ಸಂಶಯಪಡುತ್ತಿರಲು, ಸಹದೇವನು ಇಂತು ನುಡಿದನು–

"ಸಾತ್ವತ ತಂತ್ರಜ್ಞರಿಗೆ ಪ್ರಿಯನಾದ ಶ್ರೀಕೃಷ್ಣನೇ ಸರ್ವೋತ್ತಮನು. ಸರ್ವದೇವಪ್ರಧಾನನು, ದೇಶ ಕಾಲ ವಸ್ತು ನಿಯಾಮಕನು, ಸರ್ವಜಗದಾಧಾರನು, ಸರ್ವಯಜ್ಞ ಫಲಭೋಕ್ತನು ಆದವನು ಶ್ರೀಕೃಷ್ಣನೇ! ಅಗ್ನಿ, ಆಹುತಿಗಳು, ಮಂತ್ರಗಳು, ಜ್ಞಾನ ಕರ್ಮಗಳು ಎಲ್ಲವೂ ಅವನ ಅಧೀನವಾಗಿವೆ. ಅವನಿಗೆ ಸಮಾನರಿಲ್ಲ; ಅಧಿಕರಿನ್ನೆಲ್ಲಿ? ಜೀವರಿಗೆಲ್ಲ ಅಂತರ್ಯಾಮಿಯು, ಸೃಷ್ಟಿ ಸ್ಥಿತಿ ಲಯ ಕಾರಣನು, ಅನಪೇಕ್ಷನು, ಧರ್ಮರಕ್ಷಕನು ಆದ ಈ ಕೃಷ್ಣನಿಗೇ ಅಗ್ರ

ಪೂಜೆಯು ಸಲ್ಲುವುದು. ಶ್ರೀಕೃಷ್ಣ ಪೂಜೆಯಿಂದ ಸರ್ವಭೂತಗಳನ್ನು ಪೂಜಿಸಿದಂತೆಯೇ ಆಗುವುದು. ತಾನು ಸರ್ವಸ್ವಾಮಿ ಎಂದು ಅರಿತಿರುವ ದೇವನಿಗಲ್ಲದೆ ತಮ್ಮನ್ನರಿಯದ ಇತರರಿಗೆ ಅಗ್ರಪೂಜೆ ಸಲ್ಲದು. ಪೂರ್ಣನಾದ ಶ್ರೀಕೃಷ್ಣನಿಗೆ ಕೊಡುವ ಪೂಜೆಯು ಅನಂತಫಲಪ್ರದವಾಗಿರುವುದು."

ಆ ಮಾತನ್ನಾಲಿಸಿ, ಭೀಷ್ಮನ ವಚನಗಳನ್ನೂ ಕೇಳಿ, ಧರ್ಮರಾಜನು, ಸಭೆಯು ಜಯಜಯಕಾರದಿಂದ ಸಮ್ಮತಿಯನ್ನು ಸೂಚಿಸಲು, ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನರ್ಪಿಸಿದನು. ಶ್ರೀಕೃಷ್ಣನ ಪಾದಪಂಕಜಗಳನ್ನು ತೊಳೆದು, ಪಾವನ ಪಾದೋದಕವನ್ನು, ತಾನೂ, ತಮ್ಮಂದಿರು, ತರುಣಿ ದ್ರೌಪದಿ, ತಾಯಿ ಕುಂತಿ, ಪರಿವಾರದವರು, ಶಿರದಲ್ಲಿ ಧರಿಸಿದರು. ಪೀತಾಂಬರಗಳನ್ನು, ಆಭರಣಗಳನ್ನು, ಗಂಧ ಹಾರ...ನ್ನು ಸಮರ್ಪಿಸಿ, ಸ್ವಾಮಿಯ ಸೊಬಗನ್ನು ನೋಡಿ ಕಣ್ಣು ತುಂಬಿ ತುಳುಕಲು, ಮನವು ವಿವಶವಾಗಲು, ಮಾತಾಡಲು ಬರದೆ ಸುಮ್ಮನೆ, ಆನಂದಭರದಿ ತಲೆಬಾಗಿ ನಿಂತನು.

ಆಗ ಸದಸ್ಯರೆದ್ದು ನಿಂತು, ಕೈಜೋಡಿಸಿ, 'ನಮೋ ನಮೋ! ಜಯ ಜಯ! ಕೃಷ್ಣ!' ಎಂದು ವಂದಿಸಿದರು. ಆಕಾಶದಿಂದ ದೇವತೆಗಳು ಸುಮವರ್ಷವನ್ನು ಗರೆದರು. ಅದನ್ನು ನೋಡಿ ಸಹಿಸದೆ, ಎದ್ದು ನಿಂತು, ಕೈಗಳನ್ನೆತ್ತಿ, ಪರುಷವಚನಗಳಿಂದ, ಶಿಶುಪಾಲನು ಸಭಿಕರಿಗೆ ಇಂತೆಂದನು–

ಕಾಲವೆಷ್ಟು ಕೆಟ್ಟುಬಂತು! ಕಾಲಬಲವನ್ನು ಮೀರಲಾಗದೆಂಬ ಶ್ರುತಿಯು ಸತ್ಯವಾಗಿದೆ. ಈಗ ಇಲ್ಲಿ ನೆರೆದಿರುವ ಹಿರಿಯರೆನಿಸಿಕೊಂಡವರ ಬುದ್ಧಿಯು ಕೂಡ, ಹುಡುಗನ ಮಾತಿಗೆ ಮತಿಗೆಟ್ಟು ಕೆಡಬೇಕೇ? ಪಾತ್ರಾಪಾತ್ರ ವಿಚಕ್ಷಣರಾದ ನೀವು ಬಾಲ ಭಾಷಣವನ್ನು ಮನ್ನಿಸಬಹುದೇ? ಸಭಿಕರೇ! ಸದಸಸ್ಪತಿಗಳೇ! ಈ ಕೃಷ್ಣನು ಅಗ್ರಪೂಜಾರ್ಹನೇ? ತಪಸ್ಸು ವಿದ್ಯೆ ವ್ರತ ಜ್ಞಾನ ಪಾಪರಾಹಿತ್ಯ ಮೊದಲಾದ ದೊಡ್ಡ ಗುಣಗಳುಳ್ಳ ಬ್ರಹ್ಮರ್ಷಿಗಳನ್ನು, ಲೋಕಪಾಲ ಪೂಜಿತರಾದ ಸದಸಸ್ಪತಿಗಳನ್ನು ಬಿಟ್ಟು, ಕುಲಪಾಂಸನನಾದ ಈ ಗೋಪಾಲನನ್ನು ಪೂಜಿಸುವುದು ಚಿತವೇ? ಪುರೋಡಾಶವನ್ನುಕಾಗೆಗೆ ಕೊಟ್ಟಂತಾಯಿತು! ಇವನಿಗೆ ವರ್ಣವೇ? ಕುಲವೇ? ಯಾವ ಗರ್ಮದವನಿವನು? ಸ್ವೇಚ್ಛೆಯಂತೆ ತಿರುಗುವ, ಗುಣಗಳಿಲ್ಲದ, ಲೋಕ ವಿಲಕ್ಷಣ ವರ್ತನನಾದ ಇವನಿಗೆ ಅಗ್ರಪೂಜೆಯನ್ನು ಕೊಟ್ಟು, ನೀವೇ ಕೆಟ್ಟಿರಿ! ಯಯಾತಿ ಶಾಪದಿಂದ ರಾಜ್ಯಭ್ರಷ್ಟನಾದ ಯದುಕುಲದವನಿಗೆ ಕುಲವಾವುದು? ಕುಡಿದವನಂತೆ ಉನ್ಮತ್ತನಾಗಿ, ಬ್ರಹ್ಮರ್ಷಿಗಣಸೇವಿತನಾದ ಪವಿತ್ರದೇಶವನ್ನು ಬಿಟ್ಟು, ಬ್ರಹ್ಮತೇಜೋವಿರಹಿತಪಾದ ಸಮುದ್ರಮಧ್ಯದಲ್ಲಿದ್ದ ಅಂಜುಬುರುಕನಿಗೆ, ಕಳ್ಳನಿಗೆ, ಪೂಜಾ ಪ್ರಿಯನಿಗೆ, ಬಂಧು ಪ್ರೀತಿ ವರ್ಜಿತನಿಗೆ, ಅಗ್ರಪೂಜೆಯನ್ನು ನಾನು ವಿರೋಧಿಸುವೆನು.

ಇಂತು ಕೇಡುಗಾಲವು ಒದಗಿ ಬಂದು, ಅಮಂಗಲವಚನಗಳನ್ನಾಡುವ ಶಿಶುಪಾಲನ ಕೂಗನ್ನು, ಸಿಂಹವು ನರಿಯ ಕೂಗನ್ನಂತೆ ಲೆಕ್ಕಿಸದೆ, ಅಧೋಕ್ಷಜನು ಸುಮ್ಮನಿದ್ದನು. ಭಗವಂತನ ನಿಂದೆಯನ್ನು ಕೇಳಲಾರದೆ ಸಭಾಸದರು ಶಿಶುಪಾಲನನ್ನು ಬೈಯುತ್ತಾ, ಕಿವಿಗಳನ್ನು ಮುಚ್ಚಿಕೊಂಡು ಸಭೆಯನ್ನು ಬಿಟ್ಟು ಹೊರಬಂದರು.

ಭಗವನ್ನಿಂದೆಯನ್ನಾಗಲಿ, ಭಕ್ತರ ನಿಂದೆಯನ್ನಾಗಲಿ ಕೇಳುತ್ತಾ, ಅಲ್ಲಿಂದ ಹೊರಡದೆ ಕಿವಿಗೊಟ್ಟು ನಿಂತಿರುವ ಮನುಜನು ತನ್ನ ಪುಣ್ಯವನ್ನೆಲ್ಲ ಕಳೆಗುಕೊಂಡು ನರಕದಲ್ಲಿ ಬೀಳುವನು.

ಆಗ ಭೀಮಸೇನನು ಅಚ್ಛಿನ್ನ ಭಗವದ್ಭಕ್ತನಾದುದರಿಂದ ಶ್ರೀಹರಿನಿಂದೆಯನ್ನು ಸಹಿಸದೆ, ಶಿಶುಪಾಲನನ್ನು ಕೊಂದುಬಿಡುವೆನೆಂದು ಗದೆಯನ್ನೆತ್ತಿ ಬಂದನು. ಭೀಷ್ಮನು ಅವನನ್ನು ತಡೆದು ನಿಲ್ಲಿಸಿದನು. ಮತ್ಸ್ಯ ಕೈಕೇಯ ಸೃಂಜಯಾದಿ ಬಂಧುಗಳೂ ಶಿಶುಪಾಲನನ್ನು ಕೊಲ್ಲಲು, ಉದ್ಯತಾಯುಧಪಾಣಿಗಳಾಗಿ ಮೇಲೇರಿ ಬಂದರು. ಶಿಶುಪಾಲನು ಜಗ್ಗದೆ, ಕತ್ತಿ ಗುರಾಣಿಗಳನ್ನೂ ಹಿಡಿದು, ಅವರನ್ನು ಬೈಯುತ್ತಾ ಎದುರಿಸಿದನು. ಎಲ್ಲರನ್ನೂ ನಿವಾರಿಸಿ, 'ಶಿಶುಪಾಲನು ಮಾಡಿದ ವಧಾರ್ಹವಾದ ನೂರು ಅಪರಾಧಗಳನ್ನು ಕ್ಷಮಿಸಿದೆನು; ಇನ್ನು ಕ್ಷಮಿಸಲಾಗುವುದಿಲ್ಲ'ವೆಂದು ಪ್ರಕಟಿಸಿ, ಶ್ರೀಕೃಷ್ಣನು, ಚಕ್ರದಿಂದ ಶಿಶುಪಾಲನ ಶಿರವನ್ನು ಕತ್ತರಿಸಿದನು. ಶಿಶುಪಾಲನು ಮೃತನಾಗಲು, ಸಭೆಯು ಗಗ್ಗೋಲಾಯಿತು. ದುಷ್ಟರಾಜರು ಭಯದಿಂದ ಸಭೆಯನ್ನು ಬಿಟ್ಟೋಡಿದರು. ಚೈದ್ಯ ದೇಹದಿಂದ ಜೀವಜ್ಯೋತಿಯು, ಮೇಘದಿಂದ ಬಂದ ಉಲ್ಕೆಯು ಭೂಮಿಯನ್ನಂತೆ, ಶ್ರೀಕೃಷ್ಣಚರಣಾಂಕಿತವಾಯಿತು. ಮೂರು ಜನುಮಗಳಲ್ಲಿ ದ್ವೇಷ ಭಾವನಾ ಸಂಭ್ರಮದಿಂದ ಅಸುರ ಜೀವನೂ, ಭಕ್ತಿಯುತ ಸತತ ಧ್ಯಾನದಿಂದ ಜಯನೂ, ಮುಕ್ತರಾಗಿ ಸ್ವಯೋಗ್ಯವಾದ ತಮೋ ವೈಕುಂಠ ಲೋಕಗಳನ್ನು ಪೊಂದಿದರು. ಭಕ್ತಿಯೇ ಪರಮ ಮಂಗಲ ಕರವು; ದ್ವೇಷವು ಅಮಂಗಲ ತಮವು. ವೈಕುಂಠನಿವಾಸಿಗಳಾದ ಜಯವಿಜಯರ ಚರಿತವನ್ನು ರಾಜನ್! ನಿನಗೆ ನಾನು ಬಹುಸಲ ವರ್ಣಿಸಿರುವೆನು.

ಆಮೇಲೆ ಧರ್ಮರಾಜನು ಋತ್ವಿಗ್ಜನರನ್ನು, ಸದಸ್ಯರನ್ನು ಚೆನ್ನಾಗಿ ಸತ್ಕರಿಸಿ, ಅವಭೃಥವನ್ನು ನೆರವೇರಿಸಿದನು. ಧರ್ಮರಾಜನ ಯಾಗವನ್ನು ಸಾಂಗವಾಗಿ ನಡೆಸಿಕೊಟ್ಟು, ಸರ್ವಸಮರ್ಥನಾದ ಶ್ರೀಹರಿಯು, ಬ್ರಹ್ಮ ಕ್ಷತ್ರ ಸಭೆಯಲ್ಲಿ ಇಂದ್ರನಂತೆ ಶೋಭಿಸುವ ಧರ್ಮರಾಜನನ್ನು ನೋಡಿ ಪರಮಾನಂಧಭರಿತನಾದನು. ದೇವ ಮಾನವ ಗಂಧರ್ವಾದಿಗಳು, ಧರ್ಮರಾಜನಿಂದ ಪೂಜಿತರಾಗಿ, ಶ್ರೀಕೃಷ್ಣನನ್ನು ಧರ್ಮಜಾದಿಪಾಂಡವರನ್ನು, ಯಾಗ ವೈಭವವನ್ನು ಪೊಗಳುತ್ತಾ ತಮ್ಮ ಮನೆಗಳಿಗೆ ತೆರಳಿದರು. ರಾಜರನ್ನು ಸೆರೆಯಿಂದ ಬಿಡಿಸಿ, ಜರಾಸಂಧಾಂತಕನಿಂದ ವಂದಿತನಾಗಿ ರಾಜಸೂಯವನ್ನು ನಿರ್ವಿಘ್ನವಾಗಿಸಲು, ಶಿಶುಪಾಲನನ್ನು ಸಂಹರಿಸಿ, ದುರ್ಯೋಧನ ಕುಲಾಂತಕನಾಗಲು ಹವಣಿಸುವ ಶ್ರೀಶನ ಕಥೆಯನ್ನು ಹೇಳಿ, ಕೇಳಿದವರು ಸರ್ವಪಾಪಮುಕ್ತರಾಗುವರು.

## ೮೩. ರಾಜಸೂಯ ಸಮಾಪ್ತಿ

ರಾಜನು ಕೇಳಿದನು–

ಧರ್ಮರಾಜನ ರಾಜಸೂಯ ವೈಭವವನ್ನು ನೋಡಿ ಸರ್ವಜನರೂ ಸಂತೋಷಪಟ್ಟರೆಂದೆ. ಆದರೆ ದುರ್ಯೋಧನನು ದುಃಖಪಟ್ಟನೆಂದು ನಾವು ಕೇಳಿರುವೆವು! ಏಕೆ? ಆ ಕಥೆಯನ್ನು ಹೇಳು!

ಶ್ರೀಶುಕನು ಹೇಳಿದನು–

ರಾಜನ್! ನಿಮ್ಮ ತಾತನ ಯಜ್ಞದಲ್ಲಿ ಸಂತೋಷಪಡದವರೆಂದರೆ ಕೌರವರೇ; ಮತ್ತಾರಿಲ್ಲ.

ಆ ಸಮಯದಲ್ಲಿ, ಭೀಮನು ಪಾಕಶಾಲಾಧ್ಯಕ್ಷನಾಗಿದ್ದನು. ದುರ್ಯೋಧನನು ಕೋಶಾಧಿಪನು. ಸಹದೇವರು ಮಾನಮರ್ಯಾದೆಗಳ ಸಲ್ಲಿಸುತ್ತಿದ್ದನು. ನಕುಲನು ದ್ರವ್ಯಸಂಪಾದಕನು. ಸಜ್ಜನರ ಕೊರತೆಗಳ ನೀಗಲು ಅರ್ಜುನನು, ಅವರ ಪಾದಪ್ರಕ್ಷಾಳನೆಯನ್ನು ಮಾಡಲು ಕೃಷ್ಣನು

ನಿಂತನು. ದ್ರೌಪದಿ, ಬಡಿಸುವುದನ್ನು ಪರ್ಯವೇಕ್ಷಿಸಿದಳು. ಕರ್ಣನು ದಾನಗಳನ್ನು ಕೊಡಲು ನಿಯೋಜಿತನಾದನು. ಇಂತು ಸಾತ್ಯಕಿ, ವಿಕರ್ಣ, ಕೃತವರ್ಮ, ವಿದುರ, ಭೂರಿಶ್ರವ ಸಂತರ್ದನಾದಿ ಗಳು, ನಾನಾಕಾರ್ಯರತರಾಗಿದ್ದರು. ಋತ್ವಿಗ್ಜನ ಸನ್ಮಾನ, ಸದಸ್ಯ ಸತ್ಕಾರಗಳಾದ ಮೇಲೆ, ಧರ್ಮಜಾದಿಗಳು, ಅವಭೃತ ಸ್ನಾನ ಮಾಡಲು ರಥರೂಢರಾಗಿ, ಗಂಗೆಗೆ ಹೊರಟರು. ಮೃದಂಗ ಶಂಖಪಣತೂರ್ಯ ಗೋಮುಖಾದಿ ವಾದ್ಯಗಳು ಮೊಳಗುತ್ತಿರಲು, ವಂದಿಮಾಗಧರು ಸ್ತುತಿ ಸುವ, ಗಾಯಕರು ಪಾಡುವ ನಿನಾದವು, ಬ್ರಹ್ಮಘೋಷವನ್ನು ಕೂಡಿ ಮನೋಹರವಾಗಿ ಕೇಳಿ ಬರುತ್ತಿರಲು, ಧರ್ಮಜನು ಕುರುಸೃಂಜಯ ಕೇಕಯಾದಿ ಬಂಧುಜನರು ರಥಗಜತುರಗಾ ರೂಢರಾಗಿ ಹಿಂಬಾಲಿಸಲು, ಹೊರಟು ಗಂಗಾತೀರವನ್ನು ಮುಟ್ಟಿದನು. ವಿಚಿತ್ರವಸನ ಗಳನ್ನುಟ್ಟು ನರನಾರಿಯರು, ಗಂಧ ತೈಲಾದಿಗಳನ್ನು ಹಚ್ಚಿಕೊಂಡು, ಹರಿದ್ರಾ ಕುಂಕುಮ ಕೇಸರೋದಕಗಳಿಂದ ವಸಂತೋತ್ಸವವನ್ನು ನೆರವೇರಿಸಿದರು. ರಾಜತರುಣಿಯರು ಭಟರಕ್ಷಿತರಾಗಿ ತಾವೂ ತಮ್ಮೊಳಗೆ ಚತುರ ಸರಸೋಕ್ತಿಗಳನ್ನಾಡುತ್ತಾ, ಗಂಧಕರ್ಪೂರ ಕೇಸರಪರಿಮಳ ಮಿಳತ್ಕಮನೀಯ ವಸಂತ ಜಲಗಳಿಂದ ಓಕುಳಿ ಆಟವನ್ನಾಡಿದರು. ಉಟ್ಟ ಪಟ್ಟದುಕೂಲಗಳು ತೊಯ್ದು, ಗಟ್ಟಿಯಾಗಿ ಹಿಡಿಯಲು, ಎದ್ದುಕಾಣುವ ಸ್ತನಕಲಶಗಳಿಂದ, ಕೇಶಶೈವಾಲದಿಂದ ಸಂಭ್ರಾಂತನೇತ್ರ ಮೀನ ಗಳಿಂದ, ಜಘನಪುಲಿನಗಳಿಂದ, ಉದುರುವ ಹಾರ ಸುಮಗಳಿಂದ ನಿಂತು, ಪತ್ನೀಸಂಯಾಜವನ್ನು ಮಾಡುವ ರಮಣೀಯರ ಮಹಾ ಮೋಹಪ್ರವಾಹದಲ್ಲಿ ಧೂರ್ತ ವಿಷಯಾಸಕ್ತ ದುಷ್ಟ ಚಿತ್ತಗಳು ಹುಲ್ಲುಕಡ್ಡಿಗಳಂತೆ ತೇಲಿಹೋದವು.

ಅವಭೃಥವನ್ನು ಮಾಡಿ ಸರ್ವ ವರ್ಣದವರು ಪುನೀತರಾದರು. ಆಕಾಶದಿ ದೇವದುಂದುಭಿ ಧ್ವಾನವು ಕೆಳಗೆ ನರ ದುಂದುಭಿಗಳ ಸದ್ದನ್ನಡಗಿಸಿತು. ಪೂಮಳೆಯು ಹೇರಳವಾಯಿತು. ಧರ್ಮ ರಾಜನು ವಸ್ತ್ರಾಲಂಕಾರಭೂಷಿತನಾಗಿ, ವಿಪ್ರರಿಗೆ ಅಂಬರ ಭೂಷಣ ದಕ್ಷಿಣೆಗಳನ್ನಿತ್ತು, ಬಂಧುಮಿತ್ರರನ್ನೂ ಅಚ್ಯುತನನ್ನೂ ಪೂಜಿಸಿದನು. ಮಣಿಕುಂಡಲಗಳನ್ನು, ಪೂಮಾಲೆಗಳನ್ನು, ಉಷ್ಣೀಷ ಕುಂಚುಕಗಳನ್ನು, ದುಕೂಲ ಮಣಿಹಾರಗಳನ್ನು ಧರಿಸಿದ ನರಪುಂಗವರು, ಕುಂಡಲ ಚೂಡಾಮಣಿ ಕನಕಮೇಖಲ ವಲಯಾದಿ ಭೂಷಣಗಳನ್ನಿಟ್ಟ ತರುಣೀರತ್ನಗಳಿಂದ ಕೂಡಿ, ಧರೆಗಿಳಿದು ಬಂದ ಸುರರಂತೆ ಕಂಗೊಳಿಸಿದರು.

ಋತ್ವಿಗ್ಜನರು, ರಾಜರು, ವಿಪ್ರರು, ಇತರ ಜನರು ತೆರಳಿಹೋದಮೇಲೆ, ಧರ್ಮರಾಜನು 'ಹರಿಯ ದಾಸ್ಯವೆಂಬ ಮಹಾಭಾಗ್ಯವನ್ನು ಪೊಂದಿದವನಿಗೆ ಇತರ ಭಾಗ್ಯಗಳು ದುರ್ಲಭವಲ್ಲ' ಎಂಬ ನುಡಿಗೆ ಸಾಕ್ಷೀಭೂತನಾಗಿ, ಸುಖವಾಗಿ ರಾಜ್ಯವಾಳುತ್ತಿದ್ದನು. ಬಂಧುಜನರು ಕೂಡ ಹೊರಟುಹೋದರು. ಧರ್ಮರಾಜನು ಶ್ರೀಕೃಷ್ಣನನ್ನು ಕಳಿಸಲಾರದೆ, ಸಾಂಬಾದಿ ಯದುವೀರ ರನ್ನು ದ್ವಾರಕೆಗೆ ಕಳುಹಿಸಿ, ಶ್ರೀಹರಿಯನ್ನು ನಿಲ್ಲಿಸಿಕೊಂಡನು.

ಇಂತು ಧರ್ಮಜನು ಮನೋರಥ ಸಮುದ್ರವನ್ನು, ಕೃಷ್ಣನೆಂಬ ಹಡಗಿನಿಂದ ಸುಖವಾಗಿ ದಾಟಿ, ಮನೋವ್ಯಥೆಯನ್ನು ಬಿಟ್ಟು ಮುದದಿಂದಿದ್ದನು. ಶ್ರೀಕೃಷ್ಣಭಕ್ತನ ಸಿರಿಸಂಪತ್ತು, ರಾಜಸೂಯ ಮಹೋದಯಗಳು ದುರ್ಯೋಧನನ ಕಣ್ಣು ಕುಕ್ಕಿದವು. ಬ್ರಹ್ಮನಿರ್ಮಿತವಾದ ದೇವ ಮಾನವ ದಾನವ ರಾಜೇಂದ್ರರ ಸಂಪತ್ಸಮೃದ್ಧಿಗಳಲ್ಲಿ ಕಲೆತಿದ್ದವು, ಆ ಸಂಪತ್ತನ್ನು, ಅದನ್ನನುಭವಿಸುವ ಪಾಂಡುಸುತರನ್ನು,ಅವರನ್ನು ಸೇವಿಸುವ ದ್ರೌಪದ್ಯಾದಿ ಲಲನಾಮಣಿ ಗಳನ್ನೂ ಕಂಡ ದುರ್ಯೋಧನನಿಗೆ ಗುಂಡಿಗೆಯಲ್ಲಿ ಕೆಂಡವೇ ಸುರಿದಂತಾಯಿತು. ಮಧುಸೂದನ

ಮಾನಿನಿಯರ ಹಾವಾಭಾವ ವಿಲಾಸಗಳು ಅವನನ್ನು ಕೋತಿಯನ್ನಂತೆ ಕುಣಿಸಿದವು. ಮಯಸಭೆಯಲ್ಲಿ, ತಮ್ಮಂದಿರಿಂದ ಕೂಡಿ, ಕೃಷ್ಣಕೃಪಾಛತ್ರದಡಿಯಲ್ಲಿ ಸುರಕ್ಷಿತನಾಗಿರುವ ಧರ್ಮರಾಜನನ್ನು ಪೊಗಳುವ ವಂದಿಮಾಗಧರ ಗಾನವು ಕುರುರಾಜನಿಗೆ ಕರ್ಣಶೂಲವಾಯಿತು. ಚಾಮರವ್ಯಜನಗಳಿಂದ ದೇವಪತಿಯಂತೆ ಶೋಭಿಸುವ ಧರ್ಮನನ್ನು ನೋಡಿ ಅಧರ್ಮನು ಸಹಿಸದಾದನು.

## ೮೪. ದುರ್ಯೋಧನ ಪರಾಭವ – ಸಾಲ್ವತಪಸ್ಸು

ಒಂದು ದಿನ ದುರ್ಯೋಧನನು ತನ್ನ ಅನುಜರಿಂದಲು, ಅನುಚರರಿಂದಲು ಕೂಡಿ ಮಯಸಭೆಯನ್ನು ಪೊಕ್ಕನು. ಅವನ ಕೈಯಲ್ಲಿ ಖಡ್ಗವು, ಬಾಯಲ್ಲಿ ಪಾಂಡವನಿಂದಾ ಧೂಮವು ಕಲೆತು ಹೃದಯದ ಅಸೂಯಾಗ್ನಿಯ ಧೂಮಜ್ವಾಲೆಗಳೆಂಬಂತೆ, ಆಡುತ್ತಿದ್ದವು. ಹರಿನೀಲರಚಿತವಾದ ಸ್ಥಲವನ್ನು ಪುಷ್ಕರಿಣಿಯೆಂದು ಭ್ರಮಿಸಿ, ಆ ಮಿಥ್ಯಾಜ್ಞಾನಿಯು ತನ್ನ ವಸ್ತ್ರಗಳನ್ನು ಕೈಗಳಿಂದ ಮೇಲಕ್ಕೆತ್ತಿ ಹಿಡಿದು ನಡೆದುದನ್ನು ನೋಡಿ ಎಲ್ಲರೂ ಖೊಳ್ಳೆಂದು ನಕ್ಕರು. ಸ್ಫಟಿಕರಚಿತಪುಷ್ಕರಿಣಿಯನ್ನು ಸ್ಥಳವೆಂದು ಭ್ರಮಿಸಿ, ದರ್ಪವೇಗದಿಂದ ಮುಂದೆ ಸಾಗಿ ನೀರಿನಲ್ಲಿ ಬಿದ್ದ ಧೃತರಾಷ್ಟ್ರಪುತ್ರಾಗೇಸರನನ್ನು ನೋಡಿ ಭೀಮನು, ಅವನ ಸಮ್ಮತಿಯನ್ನು ಗಮನಿಸಿದ ದ್ರೌಪದಿಯು, ಇತರ ನರನಾರಿಯರು ಕೂಡ, ಧರ್ಮರಾಜನು ಕೂಡದೆಂದರೂ ಕೇಳದೆ, ಕೃಷ್ಣನ ಕಣ್ಣಸನ್ನೆಯಿಂದ ಗಟ್ಟಿಯಾಗಿ ನಕ್ಕರು. ಆಗ ಧರ್ಮರಾಜನು ಕೃಷ್ಣನ ಮಾತಿನಂತೆ ಒಣ ಬಟ್ಟೆಗಳನ್ನು, ಒಳ್ಳೆಯ ಸಮಾಧಾನದ ನುಡಿಗಳನ್ನು ಕೌರವೇಶನಿಗೆ ಕಳುಹಿಸಿಕೊಟ್ಟರು. ಅವನ್ನು ಕೈಕೊಳ್ಳದೆ ಧಿಕ್ಕರಿಸಿ ಧೀರ ಧೂರ್ತನಾದ ದುರ್ಯೋಧನನು, ಲಜ್ಜೆಯಿಂದ ಬಾಗಿದ ತಲೆಯನ್ನೆತ್ತದೆ, ಧರ್ಮನನ್ನು ಸೇರಪೋಗದೆ, ಹಸ್ತಿನಾಪುರವನ್ನು ಕುರಿತು ಪ್ರಯಾಣಿಸಿದನು. ಅವನ ಹೃದಯವು ಅಗ್ನಿಪರ್ವತವಾಗಿತ್ತು; ಮನಸ್ಸು ಹಾಲಾಹಲಸರವಾಗಿತ್ತು; ಅವನ ದುಶ್ಶಾಸನಾದಿ ಪರಿಜನರೂ ಅವರ ಹಿಂದೆ ಹೊರಟುಹೋದರು.

ಧರ್ಮರಾಜನು ಇದೆಲ್ಲವನ್ನೂ ಕಂಡು ಮನದಿ ನೊಂದು, ಗೋವಿಂದನ ಚಿತ್ತಕ್ಕೆ ಬಂದುದಾಗಲೆಂದು ಸುಮ್ಮನಾದನು. ಭೂಭಾರಹರಣವಿಚಕ್ಷಣನಾದ ನಾರಾಯಣನು ಬೇಕೆಂದೇ ಸುಮ್ಮನಿದ್ದು, ಕುರುಕ್ಷೇತ್ರದ ಧರ್ಮಯುದ್ಧದ ಮಹಾವೃಕ್ಷಕ್ಕೆ ಅಂದು ಬೀಜವನ್ನು ನಟ್ಟು, ಆನಂದದಿಂದಿದ್ದನು. ಆಗ ನಾರದನು ಅಲ್ಲಿಗೆ ಬಂದು ಶ್ರೀಕೃಷ್ಣನಿಂದಲು, ಧರ್ಮರಾಜನಿಂದಲು ಪೂಜಿತನಾಗಿ ಆಸನವನ್ನಲಂಕರಿಸಿದನು; ಪೃಥಿವೀ ಮಂಡಲದಿ ಮಹಾಶೂರನಾರೆಂದು ಕೇಳಿದ ಧರ್ಮರಾಜನಿಗಿಂತು ನುಡಿದನು–

ಅಪ್ರಮೇಯಪರಾಕ್ರಮನಾದ ಶ್ರೀಕೃಷ್ಣನಿಗೂ, ನಿನ್ನ ವೀರವರ ಸೋದರರಿಗೂ ಸೋತ ರಾಜರು ಈಗ ದರ್ಪರಹಿತರಾಗಿ ತಮ್ಮ ದೇಶಗಳಲ್ಲಿ ಸುಮ್ಮನಿರುವರು. ಆದರೆ ದುರಾಗ್ರಹಿಯಾದ ಸಾಲ್ವನು ಮಾತ್ರ ಸೊಕ್ಕಿ ನಡೆಯುತ್ತಿರುವನು. ಅವನ ಅಣ್ಣಂದಿರಾದ ಹಂಸ ಡಿಭಿಕರನ್ನು ಕೊಂದ ಶ್ರೀಕೃಷ್ಣನ ಮೇಲಿನ ಹಗೆಯಿಂದ ಸಾಲ್ವನು, ಕುಂಡಿನ ನಗರದಲ್ಲಿ ದುಷ್ಟ ರಾಜರನ್ನು ಒಟ್ಟುಗೂಡಿಸಿ, ಅವನ ಮುಂದೆ 'ಈ ಭೂಮಂಡಲದಲ್ಲಿ ಯಾದವರಿಲ್ಲವೆನಿಸಿಬಿಡುವೆ'ನೆಂದು ಪ್ರತಿಜ್ಞೆ ಮಾಡಿದನು. ಸಾಲ್ವನು ತಪವನ್ನು ಮಾಡಲು ವನಕ್ಕೆ ಹೋದವನು ಬಹುಕಾಲ ಬರಲಿಲ್ಲ.

ಅವನ ತಮ್ಮನಿಗೆ ಪಟ್ಟಗಟ್ಟಿ ಮಂತ್ರಿಗಳು ರಾಜ್ಯವನ್ನು ನಡೆಸುತ್ತಿದ್ದರು. ಸಾಲ್ವನು ವನದಲ್ಲಿ, ಪ್ರತಿದಿನವೂ ಒಂದು ಹಿಡಿ ಮರಳನ್ನು ಆಹಾರವಾಗಿ ಸ್ವೀಕರಿಸುತ್ತಾ, ಕಠಿನ ತಪಸ್ಸನ್ನು ಮಾಡಿದನು. ಒಂದು ವರ್ಷವು ಮುಗಿಯುತ್ತಿರಲು, ಶಿವನು ಸಂತುಷ್ಟನಾಗಿ ಪ್ರತ್ಯಕ್ಷನಾದನು; 'ವರವನ್ನು ಬೇಡು' ಎಂದನು. ಸಾಲ್ವನು ದೇವಾಸುರ ಗಂಧರ್ವೋರಗ ರಾಕ್ಷಸ ಮಾನವರಿಗೆ ಅಭೇದ್ಯವೂ, ಕಾಮಗಮನವೂ, ಯದುಕುಲ ಭಯಂಕರವೂ ಆದ ವಿಮಾನವನ್ನು ಕೊಡೆಂದು ಬೇಡಿದನು. ಆಗ ಶಂಕರನ ಆಜ್ಞೆಯಂತೆ ಮಯನು ಸೌಭವೆಂಬ ಉಕ್ಕಿನ ವಿಮಾನವನ್ನು ನಿರ್ಮಿಸಿ ಸಾಲ್ವನಿಗಿತ್ತನು. ಅದು ರಹಸ್ಯರಕ್ಷಣ ಸ್ಥಲಗಳಿಂದ ಕೂಡಿ, ನೀಲಮಾಣಿಕ್ಯ ಕಾಂತಿಯಿಂದ ತುಂಬಿ, ದುರಾಸದವಾಗಿತ್ತು. ಅಂತಹ ವಿಮಾನದಲ್ಲಿ ತನ್ನ ಪುರಿಗೆ ಹಿಂದಿರುಗಿ, ಸಮಗ್ರಬಲ ವಾಹನನಾಗಿ ಮೆರೆಯುತ್ತಿರುವ ಸಾಲ್ವನೇ ಈಗ ಮಹಾದರ್ಪಶಾಲಿ ಎನಿಸಿರುವನು.

ಆ ಮಾತನ್ನಾಲಿಸಿ ಧರ್ಮರಾಜನು ನಸುನಗುತ್ತಾ ಕೃಷ್ಣನ ಮುಖವನ್ನೀಕ್ಷಿಸಿದನು. ಧೈರ್ಯಸಾರಸರ್ವಸ್ವ ನಿಧಿಯಾದ ಶ್ರೀಕೃಷ್ಣನೂ ನಿರಾಕುಲನಾಗಿ 'ಇರಲಿ! ನೋಡುವೆ'ನೆಂದು ನಕ್ಕು ಸುಮ್ಮನಾದನು. ಶತ್ರುಶೌರ್ಯಸಾಹಸಗಳಿಗೆ ಹೆದರದೆ, ಗಂಭೀರವದನರಾಗಿರುವುದು ಮಹಾತ್ಮರ ಲಕ್ಷಣವಲ್ಲವೇ!

ಆಗ ಶ್ರೀಕೃಷ್ಣನು, ಸಾತ್ಯಕಿ ಕೃತವರ್ಮ ಅಕ್ರೂರ ಉಗ್ರಸೇನಾದಿ ಯದುಪುಂಗವರನ್ನು ದ್ವಾರಾವತಿಯ ರಕ್ಷಣೆಗೆಂದು ಕಳಿಸಿ, ತಾನೂ ಹೊರಡಲನುವಾದನು.

## ೮೫. ಸಾಲ್ವನ ದಂಡಯಾತ್ರೆ

ಜರಾಸಂಧ ಶಿಶುಪಾಲನ ಮೃತಿಯನ್ನು, ರಾಜಸೂಯ ಕ್ರತು ಸಮಾಪ್ತಿಯನ್ನು ಕೇಳಿ, ಸಾಲ್ವನು ದುರ್ವಿಷಹ ಕ್ರೋಧವಶನಾದನು; ಆಲಸ್ಯವಿಲ್ಲದೆ ದ್ವಾರಾವತೀ ಪುರವನ್ನು ಮಹಾಸೈನ್ಯದಿಂದ ಬಂದು ಮುತ್ತಿದನು. ಅವನ ಸೈನಿಕರು ಕೂಟಯುದ್ಧ ಚತುರರಾಗಿದ್ದರು. ಅವನು ಪ್ರಾಕಾರೋಪ ವನಗಳನ್ನೂ ಗೋಪುರದ್ವಾರಗಳನ್ನೂ ಅಟ್ಟಾಲ ಪ್ರತೋಲಿಗಳನ್ನೂ ನಾಶಮಾಡಿದರು. ಸೌಭನ ವಿಮಾನದಿಂದ ಶಸ್ತ್ರವೃಷ್ಟಿ ಶಿಲಾವೃಷ್ಟಿಗಳು ಸುರಿದವು. ಸರ್ಪಗಳು ಆಣೆಕಲ್ಲುಗಳು, ಮೇಲಿಂದ ಉದುರಿದವು. ಬಿರುಗಾಳಿಯಿಂದೆದ್ದ ಧೂಳಿ, ದಿಕ್ಕುಗಳಲ್ಲಿ ತುಂಬಿ, ಜನರ ಕಣ್ಣು ಕಾಣದಂತಾಗಿ ಅವರು ಭಯಾಕ್ರಾಂತರಾದರು. ತನ್ನ ಪುರಜನರ ಪಾಡನ್ನು ಕಂಡು, 'ಭಯಪಡಬೇಡಿ' ಎಂದು ಅವರಿಗಭಯವಿತ್ತು, ಪ್ರದ್ಯುಮ್ನನು, ಸಾಲ್ವನನ್ನು ಎದುರಿಸಿ ನಿಂತನು. ಸಾತ್ಯಕಿ ಚಾರುದೇಷ್ಣ ಸಾಂಬ ಅಕ್ರೂರ ಕೃತವರ್ಮ ಭಾನುವಿಂದ ಗದ ಶುಕ ಸಾರಣಾದಿ ಯದುವೀರರು ಧನುರ್ಬಾಣ ಧರರಾಗಿ ದ್ವಾರಕೆಯನ್ನು ರಕ್ಷಿಸಲು ಹೊರಟರು. ರಥಗಳನ್ನೇರಿ, ಕವಚಕಿರೀಟಗಳನ್ನಿಟ್ಟು, ಆನೆ ಕುದುರೆ ಪದಾತಿಗಳ ಬಲವು ಹಿಂಬಾಲಿಸುತ್ತಿರಲು, ಅವರು ಸಾಲ್ವನ ಸೈನ್ಯವನ್ನು ನಿರೋಧಿಸಿ ಕಾದಿದರು. ದೇವಾಸುರಸಮರಭೀಕರವಾದ ಆ ರಣದಲ್ಲಿ ಪ್ರದ್ಯುಮ್ನನು ಸಾಲ್ವನನ್ನೆದುರಿಸಿದನು.

ಸಾಲ್ವನ ಮಾಯೆಯನ್ನು ರುಕ್ಮಿಣೀಸುತನು ಕತ್ತಲನ್ನು ಸೂರ್ಯನಂತೆ ಕ್ಷಣದಲ್ಲಿ ನಾಶಗೊಳಿಸಿ, ಇಪ್ಪತ್ತೈದು ಬಾಣಗಳಿಂದ ಸಾಲ್ವನ ಸೇನಾಪತಿಯನ್ನು ಹೊಡೆದನು; ನೂರು ಬಾಣಗಳಿಂದ ಸಾಲ್ವನನ್ನು, ಒಂದೊಂದು ಬಾಣದಿಂದ ಅವನ ಸೈನಿಕರನ್ನು, ಹತ್ತು ಬಾಣಗಳಿಂದ

ಅವನ ಸೇನಾಪತಿಗಳನ್ನು, ಮೂರು ಮೂರು ಬಾಣಗಳಿಂದ ಅವನ ಕುದುರೆಗಳನ್ನು ಹೊಡೆದನು. ಪ್ರದ್ಯುಮ್ನನ ಚಾತುರ್ಯವನ್ನು ಕಂಡು ಪುರಜನರು ಮೆಚ್ಚಿ ಜಯಜಯಕಾರವನ್ನು ಮಾಡಿದರು.

ಸಾಲ್ವನ ವಿಮಾನವು ಅಲಾತಚಕ್ರದಂತೆ, ಒಂದು ಸಲ ಭೂಮಿಯಲ್ಲಿಯು ಮತ್ತೊಂದು ಸಲ ಆಕಾಶದಲ್ಲಿಯು ಕಾಣಿಸುತ್ತಾ ತಿರುಗುತ್ತಿತ್ತು. ಸಾಲ್ವನ ಮಂತ್ರಿಯಾದ ದ್ಯುಮಂತನು ಗದೆಯಿಂದ ಪ್ರದ್ಯುಮ್ನನನ್ನು ಹೊಡೆದನು. ಆಗ ಪ್ರದ್ಯುಮ್ನನ ಎದೆಗೆ ಗಾಯವಾಗಿ, ಅವನು ಮೂರ್ಛೆ ಹೊಂದಿದನು. ಅವನ ಸಾರಥಿ ರಣಧರ್ಮವನ್ನರಿತು, ರಥವನ್ನು ರಣರಂಗದಿಂದ ದೂರಕ್ಕೆ ಸರಿಸಿಕೊಂಡು ಹೋದನು. ಒಂದೇ ಮುಹೂರ್ತದಲ್ಲಿ ಮೈತಿಳಿದು ಪ್ರದ್ಯುಮ್ನನು ದಾರುಕ ಸುತನನ್ನು ನೋಡಿ 'ಅನ್ಯಾಯ ಮಾಡಿದೆ. ರಣರಂಗದಿಂದ ಹಿಂದಿರುಗಿದನೆಂಬ ಅಪಕೀರ್ತಿಯನ್ನೆ ನಗೆ ತಂದೆ. ಯದುಕುಲದಲ್ಲಿ ರಣಹೇಡಿಗಳೆಂದರೆ ನನ್ನೊಬ್ಬನನ್ನು ಹೊರತು ಅನ್ಯರಿಲ್ಲ. ನಿನ್ನಿಂದ ನನಗೆ ನಿಂದೆ ಬಂದೊದಗಿತು–ರಾಮ ಕೇಶವರ ಮುಖವನ್ನು ಹೇಗೆ ನೋಡಲಿ! ಏನೆಂದು ಹೇಳಲಿ! ಭಾವ ಮೈದುನರು, ಸೋದರರು ನನ್ನನ್ನು ನೋಡಿ ರಣಹೇಡಿ ಎಂದು ನಗುವರಲ್ಲ! ರಣದಲ್ಲಿ ಶತ್ರುಬಾಣದಿಂದ ನನಗೆ ಎಚ್ಚರ ಬರುವಂತಾಗಿದ್ದರೆ ಅಥವಾ ರಣಮರಣವಾಗಿದ್ದರೆ ಲೇಸಾಗುತ್ತಿತ್ತು' ಎಂದನು. ಆ ಮಾತನ್ನು ಕೇಳಿ ದಾರುಕ ಸುತನು, 'ಆಯುಷ್ಮನ್! ಧರ್ಮವನ್ನರಿತೇ ನಾನು ನಿನ್ನ ರಥವನ್ನು ಇಲ್ಲಿಗೆ ತಂದಿರುವೆನು. ಶತ್ರುಗದೆಯ ಆಘಾತದಿಂದ ನೀನು ಮೂರ್ಛಿತನಾಗಿರಲು ಮತ್ತೇನು ಮಾಡಲಿ! ಆಪತ್ತಿನಲ್ಲಿ ರಥಿಕನನ್ನು ರಕ್ಷಿಸುವುದು ಸೂತನ ಕರ್ತವ್ಯವಾಗಿದೆ. ನಾನು ಅಧರ್ಮವನ್ನು ಮಾಡಿಲ್ಲ. ನಿನಗಿದರಿಂದ ಕುಂದೂ ಇಲ್ಲ' ಎಂದನು.

## ೮೬. ಸಾಲ್ವವಧೆ

ಆಗ ಪ್ರದ್ಯುಮ್ನನು ರಣರಂಗವನ್ನು ಹೊಕ್ಕು ದ್ಯುಮಂತನನ್ನು, ಅವನ ಕುದುರೆಗಳನ್ನು, ಅವನ ಸೂತನನ್ನು ಎಂಟು, ನಾಲ್ಕು, ಎರಡು ಬಾಣಗಳಿಂದ ಪೀಡಿಸಿ, ಎರಡು ಬಾಣಗಳಿಂದ ಅವನ ಧ್ವಜಪತಾಕೆಗಳನ್ನುರುಳಿಸಿದನು; ಮತ್ತು ಬಿಡದೆ ಒಂದು ನಿಶಿತಬಾಣದಿಂದ ಅವನ ತಲೆಯನ್ನು ಕೆಡಹಿದನು. ಗದ ಸಾತ್ಯಕಿ ಅಕ್ರೂರ ಸಾಂಬ ಶುಕ ಸಾರಣ ವಸುದೇವ ಉಗ್ರಸೇನ ಮುಂತಾದ ವೀರರು, ಸಿಡಿಲಕುಡಿಗಳಂತೆ ಅಡರಿ, ಶತ್ರುಸೈನಿಕರನ್ನು ಕೊಂದು ವೀರವಿಹಾರವನ್ನು ಮಾಡಿದರು. ಇಂತು ಇಪ್ಪತ್ತೇಳು ದಿನಗಳ ಭಯಂಕರ ಸಂಗ್ರಾಮವು ನಡೆಯುತ್ತಿರಲು, ಇಂದ್ರಪ್ರಸ್ಥದಲ್ಲಿ ಶ್ರೀಕೃಷ್ಣನು ದುಃಶಕುನಗಳನ್ನು ಕಂಡು, ಧರ್ಮರಾಜಾದಿಗಳನ್ನು ಬೀಳ್ಕೊಟ್ಟು, ಬಂಗಾರದ ಪಲ್ಲಕ್ಕಿಗಳಲ್ಲಿ ಕೂತು ಬರುವ ತನ್ನ ಶೃಂಗಾರವತಿಯರಿಂದ ಮತಂಗ ತುರಂಗ ಸ್ಯಂದನ ವೀರಭಟಬಲದಿಂದ ಕೂಡಿ ಪಯಣಿಸಿ, ದ್ವಾರಕಾನಗರವನ್ನು ತಲುಪಿದನು. ಸಾಲ್ವನು ದೇಶವನ್ನು ಹಾಳುಮಾಡಿ, ರಣರಂಗವನ್ನು ಬಿಟ್ಟೋಡಿ, ತನ್ನ ದೇಶವನ್ನು ಸೇರಿದನೆಂದು ಕೇಳಿದನು.

ಸಾಂಬನು ಸಾಲ್ವನ ಹಿಂದೆ ಬಿಡದೆ ಪೋಗಿ ಅವನ ಸೇನಾಪತಿಯಾದ ಕ್ಷೇಮಧೂರ್ತಿಯನ್ನು, ಪ್ರದ್ಯುಮ್ನನು ವಿವಿಂದನೆಂಬ ಸೇನಾನಿಯನ್ನು ಸಂಹರಿಸಿ, ಸಾಲ್ವನ ಸೈನ್ಯವನ್ನು ನಾಶಪಡಿಸಿದರು. ಶ್ರೀಕೃಷ್ಣನು ದ್ವಾರಕೆಯ ಪಾಡನ್ನು ನೋಡಿ ಕುಪಿತನಾಗಿ, ಸೌಭವನ್ನು ಚೂರುಮಾಡಿ, ಸಾಲ್ವನನ್ನು ಕೊಂದು ಬರುವುದಾಗಿ ಪ್ರತಿಜ್ಞೆ ಮಾಡಿ, ಅಶ್ವಚತುಷ್ಟಯಯುಕ್ತವು, ಆಯುಧ ಸಹಸ್ರನಿಕ್ಷೇಪವು, ದಾರುಕ ಚೋದಿತವು, ಗರುಡಧ್ವಜವು ಆದ ರಥವನ್ನೇರಿ, ಸಮುದ್ರಮಧ್ಯದಲ್ಲಿದ್ದ ಸೌಭವನ್ನು,

ಅದರಲ್ಲಿದ್ದ ಸಾಲ್ವನನ್ನು ಕಂಡನು.

ಸಾಲ್ವನೂ ಶೌರಿಯನ್ನು ಕಂಡು, ಭಯಂಕರವಾದ ಶಕ್ತ್ಯಾಯುಧವನ್ನು ದಾರುಕನಿಗೆ ಗುರಿಯಿಟ್ಟು ಎಸೆದನು. ಶ್ರೀಕೃಷ್ಣನು ಅದನ್ನು ಮಧ್ಯೇಮಾರ್ಗದಿ ತುಂಡಿರಿಸಿ, ಸೂರ್ಯನಕಿರಣಗಳಂತೆ ನಿಬಿಡವಾದ ಬಾಣಗಳಿಂದ ಸೌಭವಿಮಾನವನ್ನು ಮುಚ್ಚಿ, ಆರ್ಭಟಿಸಿದನು. ಸಾಲ್ವನು ನಿಶಿತಬಾಣದಿಂದ ಕೃಷ್ಣನ ಎಡಗೈಯನ್ನು ಹೊಡೆಯಲು, ಶಾರ್ಙ್ಗವು ಜಾರಿ ಕೆಳಗೆ ಬಿತ್ತು. ಆಗ ಸಾಲ್ವನು ನಕ್ಕು ಶ್ರೀಕೃಷ್ಣನಿಗಿಂತೆಂದನು–

'ದುರಾತ್ಮ! ನನ್ನ ಅಣ್ಣಂದಿರಾದ ಹಂಸಡಿಭಕರನ್ನು ಮೋಸದಿಂದ ಯಮುನೆಯಲ್ಲಿ ಕೆಡಹಿ ಕೊಂದೆ. ನನ್ನ ಸ್ನೇಹಿತನಾದ ಶಿಶುಪಾಲನ ಹೆಂಡತಿಯಾಗುವವಳನ್ನು ಅಪಹರಿಸಿ ಮದುವೆಯಾದೆ. ನಿನಗೆ ನಾಚಿಕೆಯಿಲ್ಲ. ಸಭೆಯಲ್ಲಿ ಪಾಪ! ಶಿಶುಪಾಲನನ್ನು ಕೊಂದೆ. ಅಲ್ಲಿದ್ದ ರಾಜರು ಹೇಡಿಗಳು; ನಿನಗೆ ಹೆದರಿ ಸುಮ್ಮನಿದ್ದರು. ಇಂದು ಸಿಕ್ಕಿರುವೆ; ನಿನ್ನ ಸೊಕ್ಕನ್ನು ಮುರಿದು, ನಿನ್ನನ್ನು ಹಿಂದಿರುಗಿ ಬಾರದ ಲೋಕಗಳಿಗೆ ಸಾಗಿಸುವೆನು. ಧೈರ್ಯದಿಂದ ಮುಂದೆ ನಿಲ್ಲು! ನನ್ನ ಮುಂದೆ ನಿನ್ನ ಆಟ ಸಾಗದು' ಎಂದು ನಿಂದಿಸಿದ ಸಾಲ್ವನನ್ನು ನೋಡಿ ಶಾರ್ಙ್ಗವನ್ನು ಮತ್ತೆ ಪಿಡಿದು, 'ಮಂದಬುದ್ಧೇ! ಸುಮ್ಮನೆ ಮಾತನ್ನಾಡಬೇಡ! ತೋರು ನಿನ್ನ ಪರಾಕ್ರಮವನ್ನು ಬಾಣಗಳಿಂದ' ಎಂದು ಹೇಳಿ ಸಾಲ್ವನನ್ನು ಗದೆಯಿಂದ ಹೊಡೆದನು. ಸಾಲ್ವನು ರಕ್ತವನ್ನು ಕಾರಿ ಕೆಳಗೆ ಬಿದ್ದನು. ಮತ್ತೆ ಮೇಲಕ್ಕೆದ್ದು ಆಕಾಶಕ್ಕೆ ಹಾರಿ, ಸಾಲ್ವನು ಮಾಯಾಬಲದಿಂದ ವಸುದೇವನನ್ನು ಪಿಡಿದು ತಂದು, ಅವನ ತಲೆಯನ್ನು ತುಂಡರಿಸಿ ಸೌಭದಲ್ಲಿ ಹೋಗಿ ಕೂತನು. ಅದನ್ನು ಕಂಡು ಶ್ರೀಕೃಷ್ಣನು, ಪಿತೃಮರಣ ಸಂತಾಪದಿಂದ ಮೂರ್ಛಿತನಾದಂತಾಗಿ, ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತು, ಸರ್ವಜ್ಞನಾದುದರಿಂದ, ಇದೆಲ್ಲವೂ ಸಾಲ್ವನ ಮಾಯಾಜಾಲವೆಂದರಿತನು. ಪಿತೃ ಕಳೇವರವಾಗಲಿ, ದೈತ್ಯನಾಗಲಿ ಕಾಣಬರದಾದಾಗ, ಸ್ವಪ್ನವನ್ನು ಕಂಡು ಎಚ್ಚರವಾದಾಗ ತಿಳಿಯುವ ಮನುಜನಂತೆ, ನರಲೋಕ ವಿಡಂಬನನಾದ ಶ್ರೀಶನು ಸೌಭವನ್ನು ಸಾಲ್ವನನ್ನೂ ನಾಶ ಮಾಡಲು ಸಂಕಲ್ಪಿಸಿದನು.

ರಾಜರ್ಷೇ! ಖೇಚರರು, ಮುನಿಗಳು ಇದೆಲ್ಲವನ್ನೂ ನೋಡಿ, 'ವೇದಗಳಲ್ಲಿ ಶ್ರೀಹರಿಗೆ ಶೋಕ ಮೋಹ ಭಯಗಳಿಲ್ಲವೆಂದೇ ಇದೆ. ಈಗ ನಾವು ನೋಡಿರುವ ಶ್ರೀಕೃಷ್ಣನ ಮೋಹವು ಅಸುರರನ್ನು ಮೋಹಪಡಿಸಲು, ಶ್ರೀಶನು ತೋರಿದ ಲೀಲಾಜಾಲವೇ ಹೊರತು ಅನ್ಯವಲ್ಲ. ಶೋಕ ಮೋಹ ಸ್ನೇಹ ಭಯಗಳು ಅಜ್ಞಾನಿಗಳಿಗೆ; ಶ್ರೀಹರಿಯು ಸ್ವತಂತ್ರನು, ಸರ್ವಜ್ಞನು, ಸರ್ವದಾ ಜಯಶೀಲನು, ಅನಾದಿ ಕಾಲದಿಂದ ಬಂದ ಅಜ್ಞಾನ ಶೋಕ ಮೋಹಾದಿಗಳನ್ನು ಜ್ಞಾನಿಜನರು, ಶ್ರೀಶನ ಪಾದಪಂಕಜ ಸೇವೆಯಿಂದ ಕಳೆದುಕೊಳ್ಳುತ್ತಿರುವನು. ಮತ್ತು ಸ್ವರೂಪಾನಂದಾವಿರ್ಭಾವವನ್ನು ಪೊಂದುತ್ತಿರುವರು. ಅಂತಹ ಮೋಕ್ಷಪ್ರದನಾದ ಶ್ರೀಕೃಷ್ಣನಿಗೆ ಮೋಹವೆಲ್ಲಿಯದು?' ಎಂದು ಪಾಡಿ ಪೊಗಳಿದರು.

ಆಗ ಶ್ರೀಕೃಷ್ಣನು ನಿಶಿತ ಚಕ್ರವನ್ನೂ ಆಗ್ನೇಯಾಸ್ತ್ರವನ್ನೂ ಪ್ರಯೋಗಿಸಲು, ಚಕ್ರವು, ಬ್ರಹ್ಮಲೋಕ ಪರ್ಯಂತವು ವ್ಯಾಪಿಸಿದ ಭಯಂಕರ ಜ್ವಾಲೆಗಳಿಂದ ಉರಿಯುತ್ತಾ ಬಂದು ಸೌಭ ವಿಮಾನವನ್ನು ಎರಡು ತುಂಡಾಗಿ ಕಡಿದು ಸಮುದ್ರದಲ್ಲಿ ಕೆಡಹಿ ಪುನಃ ಶ್ರೀಕೃಷ್ಣನನ್ನು ಸೇರಿತು.

ಸಾಲ್ವನು ಗದಾಪಾಣಿಯಾಗಿ ಬಂದು, ಅದನ್ನು ಕೃಷ್ಣನ ಮೇಲೆಸೆದನು. ಆಗ ಬಂದ ದೈತ್ಯಸೈನ್ಯದಿಂದ ಕೂಡಿ, ರಥಾರೂಢನಾಗಿ, ಬಾಣವರ್ಷವನ್ನು ಸುರಿಸುತ್ತ ಬರುವ ಸಾಲ್ವನನ್ನು ನೋಡಿ, ಶ್ರೀಕೃಷ್ಣನು ಅವನ ಗದೆಯನ್ನು ಬಾಣಗಳನ್ನು ನಡುವೇ ತುಂಡರಿಸಿದನು. ಶಂಖ ವನ್ನೂದಿ ಸಿಂಹನಾದ ಮಾಡಿ, ಶ್ರೀಕೃಷ್ಣನು ಒಂದು ಬಾಣದಿಂದ ಸಾಲ್ವನ ಧನುಸ್ಸನ್ನು ಮುರಿದನು; ಒಂದರಿಂದ ಕಿರೀಟವನ್ನು ಹಾರಿಸಿದನು; ಗದೆಯಿಂದ ರಥವನ್ನು ಚೂರಾಗಿಸಿದನು. ಆಗ ಸಾಲ್ವನು ಭೂತಲದಿ ನಿಂತು ಗದೆಯನ್ನು ಪ್ರಯೋಗಿಸಲು, ಹವಣಿಸುವಾಗ ಶೌರಿಯು, ಅವನ ಕೈಯನ್ನು ಖಂಡಿಸಿ ಚಕ್ರದಿಂದ ಅವನ ಶಿರವನ್ನು ಕತ್ತರಿಸಿದನು. ವಜ್ರದಿಂದ ಕಡಿಯಲ್ಪಟ್ಟ ವೃತ್ರನಂತೆ ಕೆಳಗುರುಳಿದ ಸಾಲ್ವನನ್ನು ನೋಡಿ, ಜನರು ಹಾಹಾಕಾರ ಮಾಡಿದರು. ಪಾಪಿಯ ಸೌಭವು ಸಮುದ್ರದ ಪಾಲಾಗಿ, ಸಾಲ್ವನು ನರಕದ ಪಾಲಾದುದನ್ನು ನೋಡಿ ಪ್ರಜರು ಸಂತೋಷದಿಂದ ಶ್ರೀಕೃಷ್ಣನನ್ನು ಪೊಗಳಿದರು. ದೇವತೆಗಳು ದುಂದುಭಿಗಳನ್ನು ಬಾರಿಸಿ ಪೂಮಳೆಗರೆದರು. ಮುನಿಗಳು ನುತಿಸಿದರು. ಸೂತಮಾಗಧ ವಂದಿಗಳು ಪೊಗಳಿ ಪಾಡಿದರು.

ಶ್ರೀಕೃಷ್ಣನು ಸುಕ್ಷೇಮವಾಗಿ ದ್ವಾರಾವತಿಯನ್ನು ಮುಟ್ಟಿ, ವಿಜಯೋತ್ಸವವನ್ನು ನೆರವೇರಿಸಿ ಸುಖದಿಂದಿದ್ದನು.

## ೮೭. ನೃಗರಾಗ ಚರಿತೆ

ಶ್ರೀಶುಕನು ಹೇಳಿದನು–

ಒಂದು ದಿನ ಶ್ರೀಕೃಷ್ಣನು ಸುಧರ್ಮ ಸಭೆಯಲ್ಲಿರಲು, ಇಂದ್ರಪ್ರಸ್ಥದಿಂದ ಬಂದ ಬ್ರಾಹ್ಮಣ ನೋರ್ವನು, ಅಪ್ಪಣೆಯನ್ನು ಪಡೆದು, ಸಭೆಯಲ್ಲಿದ್ದ ಶ್ರೀಕೃಷ್ಣನಿಗೆ ವಂದಿಸಿ, 'ಧರ್ಮಜನು ಅಧರ್ಮಪರನಾದ ದುರ್ಯೋಧನನಿಂದ ವಂಚಿತನಾಗಿ ದ್ಯೂತದಲ್ಲಿ ಸೋತು, ತಮ್ಮಂದಿ ರಿಂದಲು, ದ್ರೌಪದಿಯಿಂದಲು, ಕೂಡಿ, ವನವಾಸ ಮಾಡುತ್ತಿರುವನೆಂದು ತಿಳಿಸಿದನು. ದುಸ್ಸಹ ವಾದ ಆ ವಾರ್ತೆಯನ್ನು ಕೇಳಿ, ಶ್ರೀಕೃಷ್ಣನು ಕ್ರೋಧೋದ್ದೀಪಿತನಾಗಿ, ರಥವನ್ನೇರಿ ಸತ್ಯಾದೇವಿ ಯನ್ನು, ಸೈನ್ಯವನ್ನು, ಕರೆದುಕೊಂಡು ಪಾಂಡವರಿದ್ದ ದ್ವೈತವನವನ್ನು ಮುಟ್ಟಿದನು. ವಿಪ್ರರಿಂದ ಕೂಡಿ ವನವಾಸ ಕ್ಲೇಶಗಳನ್ನನುಭವಿಸುವ ಪಾಂಡುಸುತರನ್ನು ನೋಡಿ ಕೇಶವನು ಖಿನ್ನನಾದನು. ಆ ರಾತ್ರಿಯನ್ನಲ್ಲಿ ಕಳೆದು, ಅವರಿಗೆ ಸಮಾಧಾನ ವಚನಗಳಿಂದ ಧೈರ್ಯವನ್ನು ತುಂಬಿ, ಪಾಂಚಾಲೀ ಸಹಿತರಾದ ಪಾಂಡವರ ಅಪ್ಪಣೆಯನ್ನು ಪಡೆದು, ಸುಭದ್ರಾಭಿಮನ್ಯುಸಹಿತನಾಗಿ ದ್ವಾರಾವತಿಗೆ ಬಂದು ಸೇರಿದನು. ಪಾರ್ಥರನ್ನು ಬಿಟ್ಟು ಬಂದ ವ್ಯಸನದಿಂದ, ಅವರ ಯೋಗ ಕ್ಷೇಮ ವಿಧಾನವನ್ನು ಚಿಂತಿಸುತ್ತಿದ್ದನು.

ಒಂದು ದಿನ ಸಾಂಬ ಪ್ರದ್ಯುಮ್ನ ಚಾರುಭಾನು ಗದಾದಿ ಯದುಕುಮಾರರ ನಗಹೋಪವನ ದಲ್ಲಿ ಆಡುತ್ತಾ, ಶ್ರಮದಿಂದ ನೀರಡಿಸಿ, ಒಂದು ಬಾವಿಯನ್ನು ಸೇರಿದರು. ಅದರಲ್ಲಿ ನೀರಿರಲಿಲ್ಲ; ಆದರೆ ಒಂದು ದೊಡ್ಡ ಒಣ್ಣೆಕೇತವು ಅದರಲ್ಲಿದ್ದುದು ಕಾಣಲು, ಯದುವೀರರು ಚರ್ಮ ಪಾಶಗಳಿಂದಲು ಬಳ್ಳಿಗಳಿಂದಲು ಕಟ್ಟಿ ಅದನ್ನು ಮೇಲಕ್ಕೆ ಎತ್ತಲು ಪ್ರಯತ್ನಿಸಿದರು. ಅದನ್ನೆತ್ತ ಲಾರದೆ, ಅವರು ಆ ವೃತ್ತಾಂತವನ್ನು ಶ್ರೀಕೃಷ್ಣನಿಗೆ ತಿಳಿಸಿದರು. ಅರವಿಂದನಯನನು ಅಲ್ಲಿಗೆ ಬಂದು, ತನ್ನ ಎಪಗೈಯಿಂದ ಆ ಕೃಕಲಾಸವನ್ನೆತ್ತಿ ಅನಾಯಾಸವಾಗಿ ಮೇಲಕ್ಕೆಸೆದನು. ಶ್ರೀಕೃಷ್ಣನು

ಕರಾರವಿಂದ ಸ್ಪರ್ಶದಿಂದ ವಿಗತಪಾಪನಾಗಿ, ಕೃಕಲಾಸ ರೂಪವನ್ನು ಬಿಟ್ಟು, ದಿವ್ಯರೂಪದಿಂದ ನಿಂತ ಮಹಾಪುರುಷನು ಶ್ರೀಶನಿಗೆ ವಂದಿಸಿದನು. ಧರ್ಮಪ್ರಖ್ಯಾಪನ ಚತುರನಾದ ಶ್ರೀಕೃಷ್ಣನು, ತಾನು ಸರ್ವಜ್ಞನಾದರೂ ತನ್ನವರು ಧರ್ಮವನ್ನು ತಿಳಿದು ನಡೆಯಲೆಂದು, ಆ ಪುರುಷನನ್ನು ಪ್ರಶ್ನಿಸಿದನು–

'ಮಹಾಭಾಗ! ನೋಡಿದರೆ ದೇವನಂತಿರುವೆ. ನಿನಗೆ ಈ ಹಾಳು ಜನ್ಮವು ಬಂದ ಬಗೆ ಹೇಳು. ನಿನ್ನ ಚರಿತವನ್ನು ತಿಳಿಯಲು ನಾವು ಉತ್ಸುಕರಾಗಿರುವೆವು!' ಆ ಮಾತನ್ನಾಲಿಸಿ ಅವನಿಂತೆಂದನು–

"ನಾನು ಇಕ್ಷ್ವಾಕುನಂದನನು! ನನ್ನನ್ನು ನೃಗನೆಂಬುವರು. ದಾನಿ ಜನರ ಮಧ್ಯದಲ್ಲಿ ನನ್ನನ್ನೂ ಗಣಿಸುವುದುಂಟು. ಶ್ರೀಶ! ನಿನಗೆ ಗೊತ್ತಿಲ್ಲದ್ದುಂಟೇ? ಆದರೂ ಸರ್ವಸಾಕ್ಷಿಯಾದ ನಿನ್ನ ಆಜ್ಞೆಯಂತೆ ವಿಜ್ಞಾಪಿಸುತ್ತಿರುವೆನು. ಕೇಳು!

ಭೂಮಿಯಲ್ಲಿರುವ ಮರಳಿನ ಕಣಗಳಿಗು, ಮಳೆಯಲ್ಲಿ ಬೀಳುವ ಜಲಕಣಗಳಿಗು, ಗಗನದಲ್ಲಿ ಮಿನುಗುವ ನಕ್ಷತ್ರಗಳಿಗೂ ಮಿಗಿಲಾದಷ್ಟು ಗೋವುಗಳನ್ನು ನಾನು ದಾನ ಮಾಡಿರುವೆನು. ಆಕಳುಗಳೆಲ್ಲವು ಸಮೃದ್ಧವಾಗಿ ಹಾಲನ್ನೀಯುವುವು, ಮುದಿಯಲ್ಲ; ರೂಪದಿಂದ ಚಂದವಾದವು, ಒದೆಯುವುದಿಲ್ಲ! ಬಂಗಾರದ ಕೋಡು, ಬೆಳ್ಳಿಯ ಗೊರಜನ್ನಿಟ್ಟು, ಪೀತಾಂಬರಗಳನ್ನು ಹೊದಿಸಿ, ಕರುಗಳಿಂದ ಕೂಡಿಸಿ, ಕರಸುವ ಪಾತ್ರೆ, ಮೇವು, ವಸ್ತ್ರಾಭರಣಗಳನ್ನು ಕೊಟ್ಟು ಅನಂತ ಗೋದಾನವನ್ನು ಮಾಡಿರುವೆನು. ನ್ಯಾಯದಿಂದ ಸಂಪಾದಿಸಿದ ಗೋವುಗಳನ್ನು ನಿನ್ನ ಪ್ರೀತಿಗಾಗಿ ಕೊಟ್ಟಿರುವೆನು. ಒಳ್ಳೆಯವರಾದ ವಿಪ್ರರಿಗೆ, ಪಾತ್ರರೆಂದರಿತು ಕೊಟ್ಟಿರುವೆನು. ಬಡವರು, ಕುಟುಂಬಿಗಳು, ಸುವ್ರತರು, ತಪೋಧನರು, ವೇದಚತುರರು, ಅಲ್ಲದವರಿಗೆ ಕೊಟ್ಟಿಲ್ಲ. ಗೋದಾನವೇ ಅಲ್ಲದೆ ಭೂಮಿ, ಬಂಗಾರ, ಮನೆ, ಆನೆ, ಕುದುರೆ, ಕನ್ಯೆ, ತಿಲ, ಶಯ್ಯೆ, ವಸ್ತ್ರ, ರತ್ನ, ಕಂಬಳ, ಭೂಷಣ ಮೊದಲಾದುವನ್ನು ಹೇರಳವಾಗಿ ದಾನಮಾಡಿದೆನು. ಯಜ್ಞಗಳನ್ನು ಚೆನ್ನಾಗಿ ಮಾಡಿದೆನು. ಕೆರೆ, ಬಾವಿ, ಆರಾಮ ತಟಾಕಗಳನ್ನೂ ನಿರ್ಮಿಸಿದೆನು.

ಒಂದು ದಿನ ನನಗೊಂದು ಪಾಪವು ಘಟಿಸಿತು. ಒಬ್ಬ ಬ್ರಾಹ್ಮಣನಿಗೆ ಕೊಟ್ಟಿದ್ದ ಆಕಳೊಂದು ತಪ್ಪಿಬಂದು ನನ್ನ ಮಂದೆಯಲ್ಲಿ ಸೇರಿತು. ಆ ಹಿಂಡಿನಲ್ಲಿದ್ದ ಅದನ್ನು ಗುರ್ತಿಸಲಾರದ ನಾನು ಮರುದಿನ ಅದನ್ನು ಮತ್ತೊಬ್ಬ ವಿಪ್ರನಿಗೆ ದಾನ ಮಾಡಿದೆನು. ಅವನು ಅದನ್ನು ಕೊಂಡು ಹೋಗುವಾಗ, ಪ್ರಥಮನು ಬಂದು ಇದು ನನ್ನದೆಂದು ಅವಳನ್ನು ತಡೆದನು. ದ್ವಿತೀಯನು ರಾಜನೀಗ ನನಗೆ ಇದನ್ನು ಕೊಟ್ಟಿರುವನು– ಈ ಗೋವು ನನ್ನದು ಎಂದನು. ಅವರೀರ್ವರು ಜಗಳ ಮಾಡುತ್ತ ನನ್ನೆಡೆಗೆ ಬಂದರು. ಪ್ರಥಮನು 'ನೀನು ಕೊಟ್ಟಿದ್ದನ್ನು ನೀನೇ ಅಪಹರಿಸಿದೆ' ಎಂದನು; ದ್ವಿತೀಯನು 'ನೀನೀಗ ಕೊಟ್ಟು, ಇಲ್ಲವೆನ್ನಬಹುದೇ ನೋಡು!' ಎಂದನು. ನನಗೆ ದಿಕ್ಕುತೋಚದಂತಾಯಿತು. ಅವರೀರ್ವರನ್ನು ನಾನು ಬೇಡಿಕೊಂಡೆನು. 'ನಿಮ್ಮಲ್ಲಿ ಯಾರು ಈ ಆಕಳನ್ನು ಮತ್ತೊಬ್ಬನಿಗೆ ಬಿಡುವರೋ ಅವನಿಗೆ ಲಕ್ಷ ಗೋವುಗಳನ್ನು ಕೊಡುವೆನು. ನನ್ನಲ್ಲಿ ಅನುಗ್ರಹಿಸಿ ನನ್ನನ್ನು ಕ್ಷಮಿಸಿ ಉದ್ಧರಿಸಿ! ಕೇಳಿ! ನರಕದಲ್ಲಿ ಬೀಳದಂತೆ ಕಾಪಾಡಿ!' ಎಂದು ಎಷ್ಟು ದೀನನಾಗಿ ಯಾಚಿಸಿದರೂ ನನ್ನ ಪ್ರಾರಬ್ಧಕರ್ಮಬಲದಿಂದ ಆ ಬ್ರಾಹ್ಮಣವರರು ಕಾದು ಕಾದು, ಲಕ್ಷಗಟ್ಟಲೇ ಆಕಳ ಗೊಡವೆ ಬೇಡ – ಕೊಟ್ಟರೆ ಆ ಗೋವನ್ನೇ

ಕೊಡು' ಎಂದು, ಕೊನೆಗೆ ನಮ್ಮನ್ನು ಕಾಯಿಸಿದ ನೀನು ಒಣ್ಣೆಕೇತವಾಗಿ ಹಾಳುಬಾವಿಯಲ್ಲಿ ಬೀಳು' ಎಂದು ಶಪಿಸಿ ಹೊರಟುಹೋದರು.

ಕೆಲಕಾಲವಾದಮೇಲೆ ನನಗೆ ಮರಣವು ಒದಗಿಬಂತು. ಯಮದೂತರು ನನ್ನನ್ನು ಯಮ ರಾಜನ ಮುಂದೆ ನಿಲ್ಲಿಸಿದರು. ವಿಚಾರಮಾಡಿ ಯಮರಾಜನು 'ರಾಜನ್! ನಿನ್ನ ಪುಣ್ಯಲೋಕ ಸುಖವು ಅನಂತವಾಗಿದೆ. ನೀನು ಬಹು ದಾನಮಾಡಿರುವೆ ನಿಜ. ಆದರೆ ಕಿಂಚಿ ತ್ಪಾಪವೂ ಇದೆ. ಅಶುಭಫಲವನ್ನು ಮೊದಲು ಉಣ್ಣುವೆಯೋ? ಅಥವಾ ಶುಭಫಲವನ್ನೋ? ಹೇಳು' ಎಂದನು. ಶ್ರೀಕೃಷ್ಣ! ನಾನಾಗ ಮೊದಲು ಪಾಪಫಲವನ್ನು ಅನುಭವಿಸುವೆನು' ಎಂದೆನು. 'ಬೀಳು' ಎಂಬ ಯಮರಾಜನ ವಚನದೊಂದಿಗೆ 'ಗೋವಿಂದ ಕರಸ್ಪರ್ಶದಿಂದ ನಿನಗೆ ಮೋಕ್ಷವಾಗಲಿ' ಎಂಬ ಅಭಯ ವಚನವು ಕೇಳಿಸಿತು. ತಾನು ಕೃಕಲಾಸವಾಗಿ ಇಲ್ಲಿ ಬಂದೆ. ಗೋವಿಂದ! ಪುರುಷೋತ್ತಮ! ಪುಣ್ಯಶ್ಲೋಕ ಶಿಖಾಮಣೀ! ನಿನ್ನ ದಯದಿಂದ ಮುಕ್ತನಾದೆನು. ಅಪ್ಪಣೆ ಕೊಡು! ಪುಣ್ಯ ಲೋಕಗಳನ್ನು ನೀನಾಗಿ ಕೊಟ್ಟಿರುವೆ. ಎಲ್ಲಿದ್ದರೂ ನನ್ನ ಮನವು ನಿನ್ನ ಪಾದಾರವಿಂದರತ ವಾಗಿರುವಂತೆ ಅನುಗ್ರಹಿಸು! ಸರ್ವಸ್ವಾಮಿಯು, ಅನಂತ ಶಕ್ತಿಸಂಪನ್ನನು, ಲೋಕಪಾಲಕ ಪಾಲಕನು ಆದ ನಿನಗೆ ನಮಸ್ಕಾರವು.' ಇಂತು ಪೇಳಿ, ಭಕ್ತನಾದ ನೃಗನು ಶಿರಬಾಗಿ ನಮಿಸಿ, ವ್ಯೋಮಯಾನವನ್ನಧಿರೋಹಿಸಿ ಹೊರಟುಹೋದನು.

ಆಗ ಶ್ರೀಕೃಷ್ಣನು, ರಾಜರೆನಿಸಿಕೊಂಡವರಿಗೆ ಬ್ರಾಹ್ಮಣಭಕ್ತಿಯನ್ನು, ಧರ್ಮಾಸಕ್ತಿಯನ್ನು ಶಿಕ್ಷಿಸಲೆಣಿಸಿ ತನ್ನವರಿಗಿಂತೆಂದನು–

ಮಕ್ಕಳಿರಾ! ಕೇಳಿ! ಬ್ರಹ್ಮಸ್ವವನ್ನು ಕಿಂಚಿತ್ತಾದರೂ ಅಪಹರಿಸಬಾರದು. ಎಷ್ಟು ತೇಜೋ ವಂತರಿಗೂ ಅದನ್ನು ದಕ್ಕಿಸಿಕೊಳ್ಳಲಾಗುವುದಿಲ್ಲ. ಹಾಲಾಹಲವಷ್ಟು ಭಯಂಕರವೆಂದು ನಾನು ತಿಳಿದಿಲ್ಲ; ಅದಕ್ಕೆ ಪ್ರತಿಕ್ರಿಯೆ ಉಂಟು; ಆದರೂ ಬ್ರಹ್ಮಸ್ವವೇ ನಿಜವಾದ ವಿಷವು' ಅದಕ್ಕೆ ಪ್ರತಿಕ್ರಿಯೆ ಇಲ್ಲ. ವಿಷವು ತಿಂದವನನ್ನು ಮಾತ್ರ ಕೊಲ್ಲುವುದು; ಬ್ರಹ್ಮಸ್ವವು ಕುಲವನ್ನು ಸಮೂಲಾವಾಗಿ–ಇಪ್ಪತ್ತೊಂದು ತಲೆಗಳನ್ನೂ ನಾಶಪಡಿಸುವುದು. ಇಲ್ಲಿ ರಾಜ್ಯನಾಶವನ್ನು, ನರಕದಲ್ಲಿ ಆತ್ಮನಾಶವನ್ನು ಬೇಡುವ ರಾಜರಿಗೆ, ಬ್ರಹ್ಮಸ್ವವನ್ನು ಕದಿಯಬೇಕೆಂದಲು ಅಥವಾ ಬಲಾತ್ಕಾರದಿಂದ ಕಸಿದುಕೊಳ್ಳಬೇಕೆಂತಲು ದುರ್ಬುದ್ಧಿ ಪುಟ್ಟುವುದು. ವದಾನ್ಯರು, ಕುಟುಂಬಿಗಳು ಆದ ಬ್ರಾಹ್ಮಣರನ್ನು–ಆಸ್ತಿಯನ್ನು ಕಸಿದು ಅಳಿಸುವ ರಾಜರು, ರಾಜಾಧಿಕಾರಿಗಳು ಕೂಡ, ಅವರ ಕಣ್ಣೀರಲ್ಲಿ ತೊಯ್ದ ಮಣ್ಣಿನ ಕಣಗಳಷ್ಟು ಸಾವಿರ ವರ್ಷಗಳು ನರಕದಲ್ಲಿ ತೀವ್ರಯಾತನೆಯನ್ನು ಪೊಂದುವರು. ತಾನೇ ಕೊಟ್ಟದ್ದಾಗಲಿ, ಪರರಿತ್ತದ್ದಾಗಲಿ, ಬ್ರಾಹ್ಮಣರ ವೃತ್ತಿಯನ್ನು ಕದ್ದವನು, ಅರವತ್ತು ಸಾವಿರ ವರ್ಷಗಳ ಕಾಲವೂ ವಿಷ್ಠಾಕ್ರಿಮಿಯಾಗಿ ಹುಟ್ಟಿ ಸಾಯುತ್ತಿರುವನು. ಬ್ರಹ್ಮಧನವನ್ನು ತಿಂದವನ ಆಯುಸ್ಸೇ ನಾಶವಾಗುವುದು. ಅದನ್ನು ತಿಂದ ರಾಜರು ಅಲ್ಪಾಯುಷ್ಕರು, ರಾಜ್ಯಭ್ರಷ್ಟರು, ಶತ್ರುಪರಾಭೂತರು ಆಗಿರುವರು. ಒಂದು ವೇಳೆ ಬ್ರಾಹ್ಮಣನು ತಪ್ಪು ಮಾಡಿದ್ದರೂ, ಅವನಿಗೆ ನೀವು ದ್ರೋಹವನ್ನು ಮಾಡಬೇಡಿ! ನನ್ನವರಾದ ನಿಮಗೆ ಬ್ರಾಹ್ಮಣದ್ರೋಹವು ಒಳಿತಲ್ಲ. ವಿಪ್ರರೂ ಬೈದ್ಯರೂ, ಹೊಡೆದರೂ ನೀವು ಕೋಪಿಸದೆ, ಅವರನ್ನು ವಂದಿಸಿ ಸಮಾಧಾನಪಡಿಸಿರಿ! ನೋಡಿ! ನಾನು ನಿತ್ಯವೂ ಶ್ರದ್ಧೆಯಿಂದ ವಿಪ್ರರನ್ನು ಪೂಜಿಸುತ್ತಿರುವೆನು. ಅಂತೆಯೇ ನೀವೂ ನಮಸ್ಕಾರ, ಹಿತವಚನ, ದಾನಾದಿಗಳಿಂದ ಅವರಿಗೆ ಪ್ರೀತಿಪಾತ್ರರಾಗಿರಿ! ಇಲ್ಲದಿರೆ ಜಗತ್ಪಾಲಕನಾದ ನನ್ನ ಶಿಕ್ಷೆಗೆ ಗುರಿಯಾಗುವಿರಿ! ಗೊತ್ತಿಲ್ಲದೆ

ಬ್ರಹ್ಮಸ್ವವನ್ನು ಸ್ವೀಕರಿಸಿದ ನೃಗರಾಜನಿಗಾದ ಗತಿಯನ್ನಾದರೂ ನೋಡಿ ಎಚ್ಚರದಿಂದ ನಡೆಯಿರಿ!

– ಎಂದು ಮುಕುಂದನು ದ್ವಾರಕಾಪುರ ಜನರನ್ನು ಅನುಶಾಸನವನ್ನು ಮಾಡಿ ತನ್ನ ಮಂದಿರವನ್ನು ಸೇರಿದನು.

ರಾಜನ್! ಸಜ್ಜನಸಮಾಗಮದಿಂದ ನೃಗನಿಗೆ ಭಗವದನುಗ್ರಹವು ದೊರೆಯಿತು. ಆದ್ದರಿಂದ ಸಾಧುಜನರ ದರ್ಶನ ಸ್ಪರ್ಶನಗಳು, ಅವರ ನಾಮಸ್ಮರಣೆಯು ಕೂಡ, ಗಂಗಾದಿ ತೀರ್ಥಗಳಂತೆ ಅತ್ಯಂತ ಪಾವನವು. ಸಜ್ಜನರ ಸೇವೆ, ಬ್ರಹ್ಮಸ್ವಪರಿವರ್ಜನಗಳು ಅವಶ್ಯಕರ್ತವ್ಯವೆಂದು ತಿಳಿದು ವರ್ತಿಸುವವರು ಸದ್ಗತಿಯನ್ನು ಪೊಂದುವರು.

## ೬೮. ಬಲಭದ್ರ ಮಹಿಮೆ

ಶ್ರೀಶುಕನು ಹೇಳಿದನು–

ಒಂದು ಸಲ ಭಗವಾನ್ ಬಲರಾಮನು ಬಂಧುಮಿತ್ರರನ್ನು ನೋಡಬೇಕೆಂದು ರಥದಲ್ಲಿ ಪಯಣಿಸಿ ನಂದಗೋಕುಲವನ್ನು ಸೇರಿದನು. ಅಲ್ಲಿ ನಂದ ಯಶೋದೆಯರ ಆಶೀರ್ವಾದವನ್ನು ಪಡೆದು 'ದಾಶಾರ್ಹಕುಲಾವತಂಸ! ತಮ್ಮನಿಂದ ಕೂಡಿ ನಮ್ಮನ್ನು ಮರೆಯದೆ ಕಾಪಾಡುತ್ತಿರು' ಎಂದಾಡಿದ ಅವರ ಸ್ನೇಹಪೂರ್ಣನೇತ್ರಬಾಷ್ಪಗಳಿಂದ ಅಭಿಷಿಕ್ತನಾದನು. ಎಲ್ಲರಿಗೂ ವಾವಿಗೆ ತಕ್ಕಂತೆ ಗೌರವವನ್ನು ಸಲ್ಲಿಸಿ, ಪ್ರೇಮದಿಂದ ಕೇಳುವ ನಂದಗೋಪಾದಿಗಳ ಮುಂದೆ, ಬಂಧುಜನರ ಕುಶಲವನ್ನು, ಕಂಸವೈರಿಯ ಪವಿತ್ರಚರಿತ್ರವನ್ನು, ದ್ವಾರಕೆಯ ವೈಭವವನ್ನು ವರ್ಣಿಸಿದನು.

ರಾಮಸಂದರ್ಶನದಿಂದ ಮುದಿತರಾದ ಗೋಪಿಯರು ಅವನನ್ನು ಸುತ್ತುಗಟ್ಟಿ ಕೂತು ಕೃಷ್ಣವೃತ್ತಾಂತವನ್ನು ಪ್ರಶ್ನಿಸಿದರು –

ಕೃಷ್ಣನು ಸುಖವಾಗಿರುವನೇ? ಮಥುರೆಯ ನಾರಿಯರಿಗೆ ಅವನ ದರ್ಶನ ಆನಂದವಾಗುವುದೇ? ನಮ್ಮನ್ನು ಯಾವಾಗಲಾದರೂ ಸ್ಮರಿಸುವನೇ? ನಮ್ಮ ಸೇವೆಯು ಅವನ ಮನಸ್ಸಿಗೆ ಬಂದರೆ ಸಾಕು. ನಾವು ಶ್ರೀಕೃಷ್ಣನಿಗಾಗಿ, ತಂದೆ ತಾಯಿ ಬಂಧು ಬಳಗವನ್ನು ಪತಿಸುತರನ್ನು ಕೂಡ ಬಿಟ್ಟು, ಅವನಲ್ಲೇ ಮನವಿಟ್ಟು, ಅವನ ಪ್ರೀತಿಯೇ ಸ್ವರ್ಗವೆಂದಿದ್ದೆವು. ಅಂತಹ ನಮ್ಮ ಸ್ನೇಹವನ್ನು ಲೆಕ್ಕಿಸದೆ ಹೋದ ಕೃಷ್ಣನನ್ನು ನಾವು ಹೇಗೆ ನಂಬುವೆವು? ಅವನು ಸ್ಥಿರಮನಸ್ಕನಲ್ಲ. ನಾವು ಮಾಡಿದ ತ್ಯಾಗವನ್ನು ಮರೆತ ಆ ಕೃತಘ್ನನ ಮಾತಿಗೆ ಬೆಲೆಯಿಲ್ಲ. ಅವನು ಬರುವೆನೆಂದವನು ಬರಲಿಲ್ಲ. ಅವನ ನರ್ಮಾಲಾಪಗಳನ್ನು, ಸುಂದರ ಮಂದಹಾಸವನ್ನು, ಪ್ರೇಮಕಟಾಕ್ಷವನ್ನು, ನೆನೆದು ನಾವು ವಿರಹತಾಪದಿಂದ ನೊಂದಿರುವೆವು. ಹೋಗಲಿ ಬಿಡು! ಅವನ ಕಥೆ ಬೇಡ! ಅದರಿಂದ ನಮಗೆ ಪ್ರಯೋಜನವೇನು? ನಾವಿಲ್ಲದಿರೆ ಅವನಿಗೆ ಲೋಪವಿಲ್ಲ. ನಮಗೂ ಅವನಿಲ್ಲದಿರೆ ಲೋಪವಿಲ್ಲ!

ಇಂತು ಕೃಷ್ಣವಿಲಾಸವನ್ನು ಸ್ಮರಿಸಿ, ಮಧುರಸ್ವರದಿಂದ ಪಾಡಿ, ರೋದಿಸುವ ಗೋಪಿಕೆಯರನ್ನು ಬಲರಾಮನು, ಸರಸಾಲಾಪಗಳಿಂದ ಸಂತೈಸಿದನು. ಚೈತ್ರ ವೈಶಾಖ ಮಾಸಗಳನ್ನಲ್ಲೇ ಕಳೆದು ಶ್ರೀಬಲರಾಮನು, ಶುಕ್ಲಕೇಶಾವೇಶಯುಕ್ತನಾದುದರಿಂದ ಅಚಿಂತ್ಯಾದ್ಭುತ ಲೀಲೆಗಳನ್ನಾಡಿ ಗೋಪಿಯರನ್ನು ಸಂತೋಷಪಡಿಸಿದನು.

ಪೂರ್ಣಚಂದ್ರನ ಕಿರಣಗಳಿಂದ ಧವಲಿತವಾದ ಯಮುನೋಪವನಗಳಲ್ಲಿಯು, ಶೀತಲ ಪುಲಿನತಲಗಳಲ್ಲಿಯು, ಸ್ತ್ರೀಗಣಯುತನಾಗಿ ವರುಣಪ್ರೇಷಿತಳಾಗಿ ಬಂದ ವಾರುಣೀ ಮದಿರೆಯು ವೃಕ್ಷಕೋಟರದಿ ಸುರಿಯಲು, ಆ ಸುಗಂಧದಿಂದ ಆಕರ್ಷಿತನಾಗಿ, ಅದನ್ನು ತಾನು ತರುಣಿಯರು ಪಾನಮಾಡಿ ವಿಹರಿಸಿದರು. ಆಗ ದೇವದುಂದುಭಿಗಲು ಮೊಳಗಿದವು. ಗಂಧರ್ವರು ಪಾಡಿ ಪೂಮಳೆಗರೆದರು. ಶ್ರೀಬಲರಾಮನ ಮಹಿಮೆಯನ್ನು ಋಷಿಗಳು ಕೊಂಡಾಡಿದರು. ಮಹೇಂದ್ರ ಗಜೇಂದ್ರನಂತೆ ಮಧುಪಾನಮತ್ತನಾದ ಬಲಭದ್ರನು ಜಾತರೂಪ ವಜ್ರನಿರ್ಮಿತವಾದ ಏಕ ಕುಂಡಲವನ್ನು, ವೈಜಯಂತೀ ಮಾಲೆಯನ್ನು ಧರಿಸಿ, ಸ್ವೇದಹಿಮಜಲಬಿಂದುಸಂದೋಹ ಸುಂದರ ವಾದ ಮುಖಪಂಕಜದಿಂದ ಮನೋಹರನಾಗಿದ್ದನು. ಸಮರ್ಥನಾದ ಸಂಕರ್ಷಣನು ಜಲಕ್ರೀಡೆ ಗೆಂದು ಯಮುನೆಯನ್ನು ಕರೆದರೂ, ಆ ನದಿಯು ಬಾರದಿದ್ದುದನ್ನು ಕಂಡು ಕುಪಿತನಾದನು. 'ಪಾಪಿನೀ! ಕರೆದರೂ ಬಾರದಿರುವಷ್ಟು ಸೊಕ್ಕೇ? ಈ ಲಾಂಗಲಾಗ್ರದಿಂದ ನಿನ್ನನ್ನು ಸೆಳೆದು ನೂರು ಸರಳಾಗಿರಿಸುವೆನು. ನೋಡು! ಎಂದು ಘರ್ಜಿಸಿದ ಬಲಭದ್ರನಿಗೆ ಹೆದರಿ, ಮೂರ್ತಿ ಮತಿಯಾದ ಯಮುನೆಯು ಅವನ ಪಾದಗಳಿಗೆ ನಮಿಸಿ 'ರಾಮ! ನಿನ್ನ ಮಹಿಮೆಯನ್ನು ತಿಳಿಯದೇ ತಪ್ಪು ಮಾಡಿದ ನನ್ನನ್ನು ಕ್ಷಮಿಸು. ಈ ಜಗತ್ತನ್ನು ಸಾಸಿವೆ ಕಾಳಿನಂತೆ ತಲೆಯಲ್ಲಿ ಲೀಲೆಯಾಗಿ ಪೊತ್ತು ಧರಿಸಿರುವ ಜಗತ್ಪತಿಯಾದ ನಿನಗೆ ಶರಣಾಗತಳಾಗಿ ಬಂದ ನನ್ನನ್ನು ಕಾಪಾಡು!' ಎಂದು ಬೇಡಿದಳು. ಆಗ ಅವಳನ್ನು ಕ್ಷಮಿಸಿ, ಕಳಿಸಿ, ಬಲರಾಮನು ರಾಮೆಯರಿಂದ ಕೂಡಿ ಜಲಕ್ರೀಡೆಗಳನ್ನಾಡಿದನು. ಆಗ ಯಮುನೆಯು, ಲಕ್ಷ್ಮಿಯು, ಸಂಕರ್ಷಣನಿಗೆ ನೀಲಾಂಬರ ಯುಗ್ಮವನ್ನು, ಸಂಪಿಗೆಯ ಮಾಲೆಯನ್ನು, ಕನಕಹಾರಗಳನ್ನು ಸಮರ್ಪಿಸಿದರು. ವ್ರಜಕಾಮಿನಿ ಯರ ಮಧುರವಿಲಾಸ ವಶನಾಗಿ ಕಾಲವನ್ನು ಕಳೆದ ಬಲರಾಮನಿಗೆ ಎರಡು ತಿಂಗಳು ಕೂಡ ಒಂದೇ ರಾತ್ರಿಯಂತೆ ತೋರಿತು. ರಾಜನ್! ಇಂದು ಕೂಡ ಅನಂತವೀರ್ಯನಾದ ಸಂಕರ್ಷಣನ ಪರಾಕ್ರಮದ ಸಾಕ್ಷಿ ಎಂಬಂತೆ ಯಮುನೆಯ ದಡವು ಅಲ್ಲಿ ಎಳೆಯಲ್ಪಟ್ಟು ವಕ್ರಗತಿಯಿಂದ ಹರಿಯುವ ನದಿಯಿಂದ ವಕ್ರವಾಗಿ ಕಾಣುತ್ತಿದೆ.

## ೬೯. ದ್ವಿವಿಜ ವಧೆ

ರಾಜನು ಕೇಳಿಕೊಂಡನು–

ಅದ್ಭುತಕರ್ಮನಾದ ಬಲರಾಮನ ಮಹಿಮೆಯನ್ನು ಇನ್ನೂ ಹೇಳು. ಅನಂತನ ಮಹಿಮೆಯೂ ಅನಂತವಲ್ಲವೇ?

ಶ್ರೀಶುಕನು ಹೇಳಿದನು–

ನರಕಾಸುರ ಸಖನಾದ ದ್ವಿವಿದನೆಂಬ ವಾನರನಿದ್ದನು. ಅವನು ಹಿಂದೆ ತ್ರೇತಾಯುಗದಲ್ಲಿ ಸುಗ್ರೀವಸಖನಾಗಿದ್ದನು. ಅವನ ಅಣ್ಣನೇ ಮೈಂದನು. ಅವರೀರ್ವರು ಅಶ್ವಿನೀ ದೇವ ದ್ವಯಾಂಶ ಸಂಭೂತರು. ದ್ವಿವಿದನು ಅಸುರಾವೇಶದಿಂದನರಕಸಖನಾಗಿ, ಅವನನ್ನು ಕೊಂದ ಕೃಷ್ಣನ ಮೇಲೆ ಹಗೆಯಿಟ್ಟು, ದುಷ್ಟನಾಗಿ, ಪುರಗ್ರಾಮ ವನವ್ರಜಗಳಿಗೆ ಕೊಳ್ಳಿಯಿಟ್ಟು ನಾಶಪಡಿಸು ತ್ತಿದ್ದನು.; ಬೆಟ್ಟಗಳನ್ನೆತ್ತಿ ದೇಶಗಳ ಮೇಲೆಸೆದು, ತನ್ನ ಸಖನಾದ ನರಕನ ವೈರಿ ಎನಿಸಿದ ಶ್ರೀಕೃಷ್ಣನಿರುವ ಆನರ್ತ ದೇಶವನ್ನು ಹೆಚ್ಚಾಗಿ ಪೀಡಿಸುತ್ತಿದ್ದನು. ಒಂದೊಂದು ಸಲ, ಆ ಉನ್ಮತ್ತನು ಸಮುದ್ರ

ದಲ್ಲಿ ನಿಂತು ಕೈಗಳಿಂದ ನೂಕಿ ಮೇಲುಕ್ಕುವಂತೆ ಮಾಡಿ, ತೀರಪ್ರದೇಶಗಳನ್ನು ಹಾಳುಮಾಡುತ್ತಿದ್ದನು. ಆಶ್ರಮಗಳ ಫಲವೃಕ್ಷಗಳನ್ನು ಮುರಿದು, ಅಗ್ನಿಕುಂಡಗಳಲ್ಲಿ ಮಲಮೂತ್ರಗಳನ್ನು ವಿಸರ್ಜಿಸಿ, ನರನಾರಿಯರನ್ನು ಗುಹೆಗಳಲ್ಲಿ ದೂಕಿ ಬಂಡೆಗಳಿಂದ ಮುಚ್ಚಿ, ಕುಲನಾರಿಯರ ಶೀಲವನ್ನು ಕಲಕಿ ಎದುರಿಲ್ಲದೆ ತಿರುಗುತ್ತಾ, ದ್ವಿವಿದನು, ಒಂದು ದಿನ ಮಧುರ ಸಂಗೀತವನ್ನಾಲಿಸಿ ರೈವತಕ ಪರ್ವತ ಕಂದರವನ್ನು ಸೇರಿದನು. ಅಲ್ಲಿ ಬಲರಾಮನು, ಲಲನಾ ಜನಸೇವಿತನಾಗಿರುವುದನ್ನು ಕಂಡು ಆ ದುಷ್ಟನು ಗಿಡದ ಮೇಲೇರಿ ಗಿಡದ ಕೊಂಬೆಗಳನ್ನು ಅಲ್ಲಾಡಿಸಿ, ಕಿಲಕಿಲರಾವವನ್ನು ಮಾಡಿದನು. ಮೊದಲೇ ಕೋತಿ, ಹತ್ತು ಸಾವಿರ ಆನೆಗಳ ಬಲವುಳ್ಳಮದ, ದುಷ್ಟಸಂಸರ್ಗ ಎಲ್ಲವೂ ಕಲೆತು, ದ್ವಿವಿದನು ಮತಿಗೆಟ್ಟು ಆಡಿದ ಚೇಷ್ಟೆಗಳನ್ನು ನೋಡಿ ನಾರಿಯರು ನಕ್ಕರು. ಅವರನ್ನು ನೋಡಿ ದ್ವಿವಿದನು ತಾನೂ ನಕ್ಕು, ಹುಬ್ಬನ್ನೇರಿಸಿ, ಗುದವನ್ನು ತೋರಿಸಿ, ರಾಮನನ್ನೂ ಲಕ್ಷಿಸದೆ ಅಣಕಿಸಿದನು. ಬಲರಾಮನು ಸಿಟ್ಟಾಗಿ ಕಲ್ಲಿಂದ ಹೊಡೆದನು. ಅದನ್ನು ತಪ್ಪಿಸಿಕೊಂಡು ವಾನರನು ಮಧುಕಲಶವನ್ನು ಅಪಹರಿಸಿ, ವಸ್ತ್ರಗಳನ್ನು ಸೆಳೆದಾಡಿ, ಕುಚೇಷ್ಟೆಗಳನ್ನು ತೋರಿದನು. ಅವನ ದುರ್ನಯವನ್ನು ಕಂಡು ಕ್ರುದ್ಧನಾಗಿ ಬಲರಾಮನು ಮುಸಲವನ್ನೆತ್ತಿ ಬಂದನು. ದ್ವಿವಿದನ ಬಂಡೆಗಲ್ಲನ್ನೆತ್ತಿ, ಅದನ್ನು ಬಲರಾಮನ ತಲೆಯ ಮೇಲೆಸೆದನು. ಅದನ್ನು ಕೈಯಿಂದ ಹಿಡಿದು ಕೈಡಹಿ, ರಾಮನು ಮುಸಲದಿಂದ ಹೊಡೆಯಲು, ದ್ವಿವಿದನ ತಲೆ ಒಡೆದು, ಗಿರಿಯು ಗೈರಿಕಧಾತುವಿಂದಂತೆ, ಅವನ ಮೈಯೆಲ್ಲವೂ ರಕ್ತದಿಂದ ಕೆಂಪಾಯಿತು. ದ್ವಿವಿದನು ಹೆದರದೆ, ಗಿಡವನ್ನೊಂದನ್ನು ಕಿತ್ತಿ, ಬಲರಾಮನನ್ನು ಹೊಡೆದನು. ಅದನ್ನು ಬಲರಾಮನು ನೂರು ಚೂರಾಗಿ ಕಡಿದು, ಇಂದು ಅವನೆಸೆದ ಗಿಡಗಳನ್ನೆಲ್ಲ ಚೂರಾಗಿಸಿ ಕೆಡಹಿದನು. ಗಿಡಗಳಿಲ್ಲದಂತಾಗಲು, ಕಲ್ಲುಗಳ ಮಳೆ ಸುರಿಯುವ ದ್ವಿವಿದನನ್ನು ಮುಸಲಾಯುಧನು ಲೆಕ್ಕಿಸದೆ, ಕಲ್ಲುಬಂಡೆಗಳನ್ನೂ ನಾಶಪಡಿಸಿದನು. ಸಿಟ್ಟಾಗಿ ಮೇಲೇರಿ ಬಂದು ದ್ವಿವಿದನು ಎದೆಗೆ ಗುದ್ದಲು, ಬಲರಾಮನು ಮುಷ್ಟಿಯನ್ನೆತ್ತಿ, ಅವನ ಬೆನ್ನಮೇಲೆ ಗುದ್ದಿದನು. ವಾನರನಾಗ ರಕ್ತವನ್ನು ಕಾರಿ, ಕೆಳಗೆ ಬಿದ್ದು ಮೃತನಾದನು. ಅವನು ಬಿದ್ದಾಗ, ಸಮುದ್ರ ಮಧ್ಯದಲ್ಲಿರುವ ನೌಕೆಯು ಬಿರುಗಾಳಿಯಿಂದ ಕಂಪಿಸುವಂತೆ, ಭೂಮಿಯು ನಡುಗಿತು. ಆಕಾಶದಿಂದ 'ಜಯ! ನಮೋ ನಮಃ! ಸಂಕರ್ಷಣ! ಜಯ!' ಎಂಬ ಶಬ್ದಗಳು ಕೇಳಬಂದವು. ಮುನಿಸಿದ್ಧರು ಸಂತೋಷದಿಂದ ಬಲರಾಮನ ಶಿರದಿ ಪೂಮಳೆಗರೆದರು. ಇಂತು ಜಗದುಪದ್ರವಕರನಾದ ವಾನರನನ್ನು ಸಂಹರಿಸಿ, ಬಲರಾಮನು ಅಲ್ಲಿಂದ ಹೊರಟು ದ್ವಾರಕೆಯನ್ನು ಸೇರಿದನು.

## ೬೦. ಲಕ್ಷ್ಮಣಾ ಹರಣ

ಶ್ರೀಶುಕನು ಹೇಳಿದನು –

ರಾಜನ್! ದುರ್ಯೋಧನನ ಮಗಳಾದ ಲಕ್ಷ್ಮಣೆಯನ್ನು ಸ್ವಯಂವರ ಮಂಟಪದಿಂದ ಅಪಹರಿಸಿ, ಸಾಂಬನು, ರಥದಲ್ಲಿ ಕೂಡಿಸಿಕೊಂಡು, ದ್ವಾರಕೆಗೆ ಧಾವಿಸುತ್ತಿದ್ದನು. ಅದನ್ನು ನೋಡಿ ಕುರುಗಳು ಕುಪಿತರಾಗಿ ಇಂತೆಂದರು –

'ಎಂತಹ ದುರ್ವಿನೀತನು ಆ ಬಾಲಕನು! ತನ್ನನ್ನು ವರಿಸಿದ ಮುನ್ನ, ನಮ್ಮ ಕನ್ಯೆಯನ್ನು ಕದ್ದೋಡುವ ಈ ದುಷ್ಟನನ್ನು ಕಟ್ಟಿ ಸೆರೆಯಲ್ಲಿಡಿ. ನಮ್ಮ ಅನುಗ್ರಹದಿಂದ ಮುಂದೆ ಬಂದು,

ನಾವಾಗಿ ಬಿಟ್ಟಿರುವ ರಾಜ್ಯವನ್ನಾಳುವ ಯಾದವರಿಗಿಷ್ಟು ಕೊಬ್ಬೇ? ಮಗನನ್ನು ಸೆರೆಯಲ್ಲಿಟ್ಟ ರೆಂದು ಸಿಟ್ಟಿನಿಂದ ಯಾದವರೊಂದು ವೇಳೆ ಬಂದರೆ, ಬರಲಿ; ಹಲ್ಲು ಕೀಳಿದ ಹಾವಿನಂತೆ, ನಿರ್ವೀರ್ಯನಾದ ಕೃಷ್ಣಾದಿಗಳಿಂದ ನಮಗೆ ಭಯವಿಲ್ಲ' ಎಂದು ಕರ್ಣ ಶಕುನಿ ದುಶ್ಶಾಸನ ರೊಡನೆ ಕೂಡಿ ದುರ್ಯೋಧನನು, ಗಾಂಧಾರೀ ವಿದುರರು ವಾದಿಸಿದರೂ ಕೇಳದೆ, ಭೀಷ್ಮ ದ್ರೋಣಾದಿಗಳು ಬಾರದಿದ್ದರೂ ಲಕ್ಷ್ಯ ಮಾಡದೆ, ಸೈನ್ಯಸಮೇತನಾಗಿ ಸಾಂಬನನ್ನು ಮುತ್ತಿದನು. ಅವರನ್ನು ಕಂಡು ಸಿಂಹವಿಕ್ರಮನಾದ ಸಾಂಬನು ನಿಂತನು. ಕರ್ಣಾದಿಗಳು ಬಾಣಗಳಿಂದ ಪೀಡಿಸಲು, ಅವನು, ದಂಡತಾಡಿದ ಭುಜಂಗದಂತೆ ಕೆರಳಿ, ಅವರೆಲ್ಲರನ್ನೂ ಬಾಣಗಳಿಂದ ಹೊಡೆದು, ಸಿಂಹನಾದ ಮಾಡಿದನು. ಆಗ ನಾಲ್ಕು ಜನ ಮಹಾರಥರು ಕೂಡಿ, ಅವನನ್ನು ಮುತ್ತಿ, ಸಾರಥಿಯನ್ನು ಹೊಡೆದು ಕೆಡಹಿ, ಧನುವನ್ನು ಮುರಿದು ವಿರಥನನ್ನಾಗಿ ಮಾಡಿ, ಅತಿಕಷ್ಟದಿಂದ ಪಿಡಿದು, ಕಾರಾಗಾರದಲ್ಲಿ ಬಂಧಿಸಿದರು.

ಈ ವೃತ್ತಾಂತವನ್ನು ನಾರದನು ಯದುಸಭೆಗೆ ಮುಟ್ಟಿಸಿದನು. ಉಗ್ರಸೇನಾದಿಗಳು ಉಗ್ರ ರಾಗಿ, ಸಂಗ್ರಾಮಸನ್ನದ್ಧರಾದರು. ಕುರುವೃಷ್ಣಿಗಳಿಗೆ ಕಲಹವನ್ನು ಸಹಿಸದ ಬಲರಾಮನು, ಅವರನ್ನು ಸಮಾಧಾನಪಡಿಸಿ, ಲಕ್ಷ್ಮಣಾಸಾಂಬಕುಮಾರನನ್ನು ಸುಕ್ಷೇಮವಾಗಿ ತರುವೆನೆಂದು ವಚನವಿತ್ತು, ರಥದಿಂದ ಪಯಣಿಸಿ, ಹಸ್ತಿನಾವತಿಯ ಬಾಹ್ಯೋದ್ಯಾನದಲ್ಲಿಳಿದು, ಕೌರವನಿಗೆ ತಿಳಿಸಲು, ಉದ್ಧವನನ್ನು ಕಳುಹಿಸಿದನು. ಉದ್ಧವನು ಭೀಷ್ಮದ್ರೋಣ ಧೃತರಾಷ್ಟ್ರ ಬಾಹ್ಲಿಕರಿಗೆ ವಂದಿಸಿ, ದುರ್ಯೋಧನಾದಿಗಳಿಗೆ ಯಥೋಚಿತವಾಗಿ ಗೌರವಿಸಿ, ಬಲರಾಮನಾಗಮನವನ್ನು ತಿಳಿಸಿದನು.

ಕೌರವರು ಅತಿ ಪ್ರಿಯಮಿತ್ರನಾದ ಬಲರಾಮನನ್ನು ಮಂಗಲವಸ್ತುಹಸ್ತರಾಗಿ ಬಂದು ಅರ್ಘ್ಯಾದಿಗಳನ್ನು ನಿವೇದಿಸಿ ಸತ್ಕರಿಸಿದರು. ರಾಮಪ್ರಭಾವವನ್ನರಿತವರು ಶಿರಸಾ ವಂದಿಸಿದರು. ಉಭಯಕುಶಲಾದಿ ವಿಚಾರಾನಂತರ, ರಾಮನು ಗಂಭೀರವಚನಗಳಿಂದ ಇಂತೆಂದನು.–

ರಾಜಾಧಿರಾಜನಾದ ಉಗ್ರಸೇನನು ನಿಮಗೆ ಆಜ್ಞಾಪಿಸುವುದನ್ನು ಕೇಳಿ! ಅದರಂತೆ ಶೀಘ್ರವಾಗಿ ನಡೆಯಿರಿ! ನೀವು ಅನೇಕರು ಅಧರ್ಮಯುದ್ಧದಲ್ಲಿ, ಒಬ್ಬನೇ ಆಗಿದ್ದ ಕುಮಾರ ನನ್ನು ಮೋಸಮಾಡಿ ಬಂಧಿಸಿರುವಿರಿ. ಇರಲಿ! ಬಂಧುಗಳಿಗೆ ಹಿತಕರನಾದ ನಾನು ಅದನ್ನು ಸಹಿಸಿರುವೆನು. ಈಗ........

ಇಂತು ನುಡಿಯುತ್ತಿರುವಾಗ ಕೌರವರು ಕುಪಿತರಾಗಿ, ವೀರ್ಯ ಶೌರ್ಯ ಬಲಶಕ್ತಿ ಸಂಪನ್ನನಾದ ರಾಮನನ್ನು ನಿರ್ಲಕ್ಷಿಸಿ, ಗಹಗಹಿಸಿ ನಕ್ಕು ಇಂತು ನುಡಿದರು–

ಎಂತಹ ಮಾತು ಕೇಳಬಂತು! ಕಾಲಗತಿಗೇನೆನ್ನಬೇಕು? ಕಾಲಪಾಪಾಸು ತಲೆಗೇರಲು ಹವಣಿಸುತ್ತಿದೆ! ಈ ಯಾದವರು ಹಣ್ಣುಕೊಟ್ಟ ಬಂಧುಗಳೆಂದು ನಾವು ಉಪೇಕ್ಷಿಸಿದುದರ ಫಲವಿದು! ಶಯನ ವಸಲ ಅಶನಗಳಲ್ಲಿ ಅವರನ್ನು ಸಮಾನಸ್ಕಂಧರಂತೆ ನೋಡಿ, ಚಾಮರ ವ್ಯಜನಗಳನ್ನು, ಛತ್ರಗಳನ್ನು, ಕಿರೀಟ ಸಂಹಾಸನಗಳನ್ನು ಅನುಭವಿಸುತ್ತಿರಲು ಉಪೇಕ್ಷಿಸಿ, ಸುಮ್ಮನಿದ್ದ ನಮ್ಮದೇ ತಪ್ಪು! ಸಾಕಿನ್ನು ಅವರಿಗೆ ಆ ವೈಭವಗಳೇಕೆ? ದಾನ ಕೊಟ್ಟು ಪೋಷಿಸುವ ನಮ್ಮನ್ನೇ ಧಿಕ್ಕರಿಸುವ ಯಾದವರು, ಹಾಲನಿನ್ನಿಟ್ಟವನನ್ನು ಹೆಡೆ ಎತ್ತಿ ಕಚ್ಚುವ ಹಾವಿನಂತೆ ಕೃತಘ್ನರೇ ಸರಿ! ನಮ್ಮ ದಯೆಯಿಂದ ಬದುಕಿರುವ ಯಾದವರು ನಮಗೇ ಆಜ್ಞಾಪಿಸಲು ಹೊರಟ ರಲ್ಲ! ಇವರಿಗೆ ನಾಚಿಕೆ ಇದೆಯೇ? ಭೀಷ್ಮದ್ರೋಣ ಭೀಮಾರ್ಜುನಾದಿಗಳು ದಯಮಾಡಿ

ನೀಡದ ಭೋಗಭಾಗ್ಯಗಳನ್ನು ಇಂದ್ರನಿಗಾದರೂ ಪಡೆಯಲಹುದೇ? ಸಿಂಹದ ಬಾಯಲ್ಲಿ ಸಿಕ್ಕಿಬಿದ್ದ ಕುರಿಯಂತೆ ಈ ಯಾದವರು ಕಬಲವನ್ನಾದರೂ ತಂದು ಬದುಕುವರೇ? ಒಂದೇ ಕ್ಷಣದಲ್ಲಿ ಈ ತುಚ್ಛರಿಗೆ ಯಮದರ್ಶನವನ್ನೀಯುವ ಪರಾಕ್ರಮಶಾಲಿಗಳಾದ ನಮಗೆ ಯಾರ ಉಪದೇಶವೂ ಬೇಡ. ಯಾರ ಆಜ್ಞಾನುವರ್ತಿಗಳೂ ನಾವಲ್ಲ!

– ಎಂದು ದುರ್ವಚನಗಳನ್ನಾಡಿ, ದುರ್ಮದರಾದ ಕೌರವರು ಪುರವನ್ನು ಸೇರಿದರು. ಆಗ ಬಲರಾಮನು ಸಾವಿರ ಹೆಡೆಗಳ ಶೇಷನೇ ಆಗಿ, ಕೋಪಸಂರಂಭ ದುರ್ನಿರೀಕ್ಷ್ಯನಾದನು. 'ಈ ಮದೋನ್ಮತ್ತರು ಶಾಂತಿ ಸಮಾಧಾನ ವಚನಗಳಿಗೆ ಬಾಗರು. ಇವರಿಗೆ ದಂಡೋಪಾಯವೇ ಲೇಸು. ಪಶುಗಳಿಗೆ ಲಗುಡದಂತೆ ದುಃಶೀಲರಿಗೆ ಶಿಕ್ಷೆಯೇ ತಕ್ಕ ಮದ್ದು, ಆಹಾ! ಕೋಪದಿಂದ ಉರಿದೆದ್ದ ಉಗ್ರಸೇನಾದಿಗಳನ್ನು ತಡೆದು, ಸಿಟ್ಟಾಗುತ್ತಿದ್ದ ಕೃಷ್ಣಯ್ಯನನ್ನು ಸಮಾಧಾನಮಾಡಿ, ಸಂಧಿಗಾಗಿ ನಾನು ಬಂದರೆ, ಈ ಮಂದಮತಿಗಳು ಕಲಹಕ್ಕೆ ಕಾಲು ಕೆದರುತ್ತಿರುವರು. ನನ್ನನ್ನೇ ಧಿಕ್ಕರಿಸಿ, ಆಡಬಾರದ ಮಾತುಗಳನ್ನಾಡಿ ಹೋದರಲ್ಲೋ! ಭೋಜವೃಷ್ಣ್ಯಂಧಕರೊಡೆಯನಾದ ಉಗ್ರಸೇನ ರಾಜನೇ ಅಲ್ಲವಂತೆ! ಶಕ್ರಾದಿ ಲೋಕಪಾಲಕರು ಶಿರದಲ್ಲಿ ಯಾವನ ಆಜ್ಞೆಯನ್ನು ಧರಿಸುವರೋ, ಯಾವ ಮಹಾಮಹಿಮನು ಸುಧರ್ಮಸಭೆಯಲ್ಲಿ ಸಿಂಹಾಸನಾಸೀನನಾಗಿ ಧರ್ಮವನ್ನು ರಕ್ಷಿಸುವನೋ, ಯಾವ ವೀರನ ಉದ್ಯಾನದಲ್ಲಿ ಅಮರ ಪಾರಿಜಾತವು ಜಯಸ್ತಂಭದಂತೆ ನಿಂತಿರುವುದೋ, ಯಾವ ಸರ್ವೇಶ್ವರನ ಪದಾರವಿಂದವನ್ನು ಜಗಜ್ಜನನಿಯಾದ ಲಕ್ಷ್ಮೀದೇವಿಯು ಬಿಡದೆ ಸೇವಿಸುವಳೋ ಅಂತಹ ಶ್ರೀಕೃಷ್ಣನಿಗೆ ಸಿಂಹಾಸನಾಧಿಕಾರವಿಲ್ಲವಂತೆ! ಆ ನಮ್ಮ ಸ್ವಾಮಿಯ ಪದಪಂಕಜ ಪಾರಾಗವನ್ನು ಬ್ರಹ್ಮಾದಿ ದೇವವರರೂ ಶಿರಸಾ ವಹಿಸಿ ಧನ್ಯರಾಗುತ್ತಿರುವರು. ಆ ಪರಮಪಾವನನ ಪಾದವನ್ನಾಶ್ರಯಿಸಿ, ಬಾಗೀರಥ್ಯಾದಿ ತೀರ್ಥಗಳು ಇತರ ಪಾಪಕ್ಷಾಲನಶೀಲವಾಗಿವೆ. ಬ್ರಹ್ಮನು, ರುದ್ರನು, ನಾನು (ಶೇಷನು) ಮೊದಲಾದ ದೇವೇಶರು ಕೂಡ ಅವನ ಭಿನ್ನಾಂಶರಾಗಿ, ಅವನಲ್ಲಿ ಭಕ್ತಿಯನ್ನು ಬಿಡದೆ ಮಾಡುವೆವು. ಅಂತಹ ಸ್ವಾಮಿಗೆ ನೃಪಾಸನ ಯೋಗ್ಯತೆ ಇಲ್ಲವಂತೆ! ಕುರುರಾಜರು ಕೊಟ್ಟ ಭೂಮಿಯ ತುಂಡನ್ನು ನಾವು ಆಳುತ್ತಿರುವೆವಂತೆ! ಅಹೋ! ನಾವು ಕೌರವಹತಕರಿಗೆ ಪಾಪಾಸಾದೆವೇ? ಅವರು ತಲೆಯಾದರೇ? ಆಗಲಿ! ಈ ರಾಜ್ಯಸಂಪತ್ತನ್ಮತ್ತರಿಗೆ ಹೆದರಿ, ಲೋಕಶಾಸಕನಾದ ನಾನು ಸುಮ್ಮನೆ ಬಿಡುವೆನೇ? ಇಂದೇ ಕೌರವ ಹುಳುವಿಲ್ಲವೆಂದೆನಿಸಿಬಿಡುವೆನು. ಹೀಗೆಂದು ಬಲಭದ್ರನು, ರೋಷಭೀಷಣನಾಗಿ, ಹಲವನ್ನು, ಹಸ್ತಿನಾವತಿಯ ಬುನಾದಿಗೆ ಹಾಕಿ ಸೆಳೆದು, ಗಂಗೆಯಲ್ಲಿ (ಯಮುನೆಯಲ್ಲಿ) ಕೆಡಹಿಬಿಡುವೆನೆಂದು ಹಲವನ್ನು ಸೆಳೆದನು. ಆಗ ಪುರವು ನೀರಿನಲ್ಲಿ ಬಿರುಗಾಲಿಗೆ ನಡುಗುವ ನಾವೆಯಂತೆ ಕಂಪಿಸಿ, ಬಾಗಿ ನದಿಗೆ ಬೀಳತೊಡಗಿತು. ಮನೆಗಳು ಉರುಳಿದವು; ನಗರವೆಲ್ಲ ಅಲ್ಲಕಲ್ಲೋಲವಾಯಿತು. ಕೌರವರು ಭಯಭ್ರಾಂತರಾಗಿ, ತಮ್ಮ ಕುಟುಂಬಗಳ ನಾಶವನ್ನು ಕಣ್ಣಾರೆ ನೋಡಲಾಗದೆ, ಓಡಿ ಬಂದು, ಬಲಭದ್ರನ ಕಾಲಿಗೆ ಬಿದ್ದು, ಕಾಪಾಡೆಂದು ಬೇಡಿಕೊಂಡರು. ಲಕ್ಷಣಾಸಾಂಬರನ್ನು ತಂದೊಪ್ಪಿಸಿ, 'ರಾಮ! ರಾಮ!' ಎಂದು ಅಂಗಲಾಚಿದರು.

'ರಾಮ! ಅಖಿಲಾಧಾರ! ನಿನ್ನ ಮಹಿಮೆಯನ್ನರಿಯದೆ ಮಾಡಿದ ತಪ್ಪನ್ನು ಕ್ಷಮಿಸು! ನೀನೂ ಲೋಕ ಕುಟುಂಬಿಯು ಮತ್ತು ಲೋಕಪಾಲಕನು ಅಂದಮೇಲೆ ಕುಟುಂಬಿಗಳಾದ ನಮ್ಮನ್ನು ಕಾಪಾಡು! ಈ ಜಗದ ಜನ್ಮ ಪಾಲನ ಸಂಹರಣ ವ್ಯಾಪಾರಗಳನ್ನು ಮಾಡುವ ಶ್ರೀನಾರಾಯಣನೇ

ನಿನ್ನಲ್ಲಿ ಸಂಕರ್ಷಣರೂಪದಿಂದಿರುವನು. ಸರ್ವಲೋಕವನ್ನು ನೀವು ವಹಿಸಿ, ನಿಲ್ಲಿಸಿರುವೆ. ಎಲ್ಲ ಜನರು ನಿನ್ನ ಆಟದ ಗೊಂಬೆಗಳಂತೆ ನಿನ್ನ ಅಧೀನರು. ನಿನ್ನ ಸಾವಿರ ತಲೆಗಳಲ್ಲಿ, ಒಂದರಲ್ಲಿ, ಅಖಂಡಭೂಮಂಡಲವನ್ನು ಅನಾಯಾಸವಾಗಿ ಸಾಸುವೆ ಕಾಳಿನಂತೆ ಲಕ್ಷ್ಯವಿಲ್ಲದೆ ಹೊತ್ತಿರುವೆ. ಕೊನೆಗೆ ನಿನ್ನ ಮುಖದಿಂದ ಬಂದ ಅಗ್ನಿಜ್ವಾಲೆಯಿಂದ ಪ್ರಳಯವಾದಾಗ ನೀನು ಶ್ರೀಭಗವಂತನ ಉದರದಲ್ಲಿ, ಅವನನ್ನು ಭಜಿಸುತ್ತಾ ನಿವಸಿಸುವೆ. ನಿನ್ನಂತರ್ಯಾಮಿಗೆ ಸಮಾನಾಧಿಕರು ಎಂದಿಗೂ ಇಲ್ಲಿಯೂ ಇಲ್ಲ. ನಿನ್ನ ಕೋಪವು ದ್ವೇಷದಿಂದಲ್ಲ; ಮತ್ಸರದಿಂದಲ್ಲ; ನಮ್ಮನ್ನು ದಾರಿಗೆ ತರಲು ನಿನ್ನೆಲ್ಲ ಪ್ರಯತ್ನಗಳು. ಸತ್ವಗುಣದಿಂದ ಪಾಲನತತ್ಪರನಾಗಿರುವ ನಿನಗೆ ನಾವು ಶರಣಾಗತರಾಗಿ, ರಕ್ಷಿಸೆಂದು ಬೇಡುತ್ತಿರುವೆವು. ಪ್ರಪಂಚದ ಸುಜನರನ್ನು ಅನುಗ್ರಹಿಸಲು ವಿಲಕ್ಷಣಾದ್ಭುತ ಕರ್ಮಗಳನ್ನು ಮಾಡುವ ನಿನಗೆ ನಮಸ್ಕಾರವು' ಎಂದು ಭೀಷ್ಮಾದಿ ಸುಜನರು ಬೇಡಿದಂತೆ, ದಯಮಾಡಿ, ಅವರಿಗೆ ಅಭಯವನ್ನಿತ್ತು ಬಲರಾಮನು, ಹಸ್ತಿನಾವತಿಯನ್ನು ಅಳಿಸದೆ, ಉಳಿಸಿದನು.

ದುರ್ಯೋಧನನಾಗ ಮಗಳ ಮೇಲಿನ ಪ್ರೀತಿಯಿಂದ, ಇಪ್ಪತ್ತು ಸಾವಿರ ಆನೆಗಳನ್ನು, ಲಕ್ಷ ಕುದುರೆಗಳನ್ನು, ಆರು ಸಾವಿರ ರಥಗಳನ್ನು, ಸಾವಿರ ದಾಸೀರತ್ನಗಳನ್ನು, ಉಡುಗೊರೆಯಾಗಿ ಕೊಟ್ಟನು. ಬಲರಾಮನು ಮಗನನ್ನು, ಸೊಸೆಯನ್ನು, ಉಡುಗೊರೆಗಳನ್ನು, ಕೌರವರ ಗರ್ವರಹಿತ ನಮಸ್ಕಾರಗಳನ್ನು ಸ್ವೀಕರಿಸಿ, ಪ್ರಯಾಣಮಾಡಿ, ದ್ವಾರಕೆಯನ್ನು ಮುಟ್ಟಿ, ಬಂಧುಜನರಿಗೆ, ನಡೆದ ವೃತ್ತಾಂತವನ್ನರುಹಿ, ಸಂತಸವನ್ನುಂಟುಮಾಡಿದನು.

ರಾಜನ್! ರಾಮಪರಾಕ್ರಮಚಿಹ್ನವಿಂದಿಗೂ ಹಸ್ತಿನಾವತಿಯಲ್ಲಿದೆ. ನೋಡು! ನಿಮ್ಮ ನಗರವಿಂದೂ, ಎಡಗಡೆ, ಯಮುನೆಯ ಕಡೆ ಬಾಗಿದಂತಿದೆ. ಶ್ರೀ ಬಲಭದ್ರನಿಗೆ ನಮಃ.

## ೮೧. ಶ್ರುತದೇವ ಬಹುಲಾಶ್ವ ಚರಿತೆ

ಶ್ರೀಶುಕನು ಹೇಳಿದನು–

ಶ್ರುತದೇವನೆಂಬ ಯದುಶ್ರೇಷ್ಠನಿದ್ದನು. ಅವನು ಶ್ರೀಕೃಷ್ಣಭಕ್ತಿಯೇ ಭಾಗ್ಯವೆಂದು, ವಿಷಯಲಂಪಟನಾಗದೆ, ಜ್ಞಾನವಂತನೂ ಆಗಿದ್ದನು. ವಿದೇಹ ದೇಶದ ಮಿಥಿಲಾ ನಗರದಲ್ಲಿ ಅವನು ವಾಸಿಸುತ್ತಿದ್ದನು. ಗೃಹಸ್ಥನಾದರೂ ದೇವರು ಕೊಟ್ಟದ್ದರಿಂದ ತೃಪ್ತನಾಗಿ, ಅಂದು ದೊರಕಿದ ವಸ್ತುವನ್ನಂದೇ ವಿನಿಯೋಗಿಸುತ್ತಾ, ಜಪತಪೋನಿಯಮತತ್ಪರನಾಗಿದ್ದನು. ಅವನಂತೆ ಆ ದೇಶದ ರಾಜನಾದ ಬಹುಲಾಶ್ವನೂ ನಿರಹಂಕಾರಿಯು, ಕೃಷ್ಣಭಕ್ತನೂ ಆಗಿದ್ದನು. ಅವರಲ್ಲಿ ಪ್ರಸನ್ನನಾಗಿ ಶ್ರೀಕೃಷ್ಣನು, ದಾರುಕ ಸಾರಥಿಕವಾದ ರಥದಲ್ಲಿ ಕೂತು, ಬ್ರಾಹ್ಮಣರಿಂದ ಕೂಡಿ ಪಯಣಿಸಿ, ಮಿಥಿಲೆಗೆ ಬಂದನು. ನಾರದ ವಾಮದೇವ ಅತ್ರಿ ಕಣ್ವ ಅಸಿತ ಅರುಣಿ ನಾನು (ಶುಕ) ಬೃಹಸ್ಪತಿ ಮೈತ್ರೇಯ ಪರಾಶರ ವಸಿಷ್ಠ ಕಶ್ಯಪ ಭರದ್ವಾಜ ಗೌತಮ ಮೊದಲಾದವರು ಪರಶುರಾಮರನ್ನು, ವೇದವ್ಯಾಸರನ್ನು ಅನುಸರಿಸಿ, ಮಿಥಿಲೆಗೆ ಕೃಷ್ಣನ ಹಿಂದೆ ಹೊರಟೆವು.

ಹಾದಿಯಲ್ಲಿ ಬರುವ ಹರಿಯ ಮನೋಹರ ಮುಖಕಮಲ ಸೌಂದರ್ಯ ಮಕರಂದವನ್ನು ಕಣ್ಣಲ್ಲಿ ತುಂಬಿ ಕುಡಿಯುವ ಜನರ ಅಜ್ಞಾನವನ್ನೂ ಕಳೆದು, ಶ್ರೀಹರಿಯು ಅವರಿಗೆ ಅಪರೋಕ್ಷ ಜ್ಞಾನವನ್ನಿತ್ತನು. ದಿಗಂತ ವಿಶ್ರಾಂತವು, ಚಂದ್ರಿಕಾಧವಲವು, ಲೋಕಪಾಪ ವಿಧ್ವಂಸಕವು ಆದ

ಶ್ರೀಹರಿಯ ಉದಾರ ಯಶವನ್ನು ಸುರಮುನಿಗಳು ಪಾಡುತ್ತಿದ್ದರು. ಮಿಥಿಲಾ ನಗರದ ಪುರ ಜನರು, ಬೀದಿಗಳಲ್ಲಿ ನೆರೆದು ನಿಂದು, ಮೆರೆದುಬರುವ ಮುರವೈರಿಯನ್ನು ಪ್ರೀತಿಯಿಂದ ನೋಡಿ, ಲಾಜಾಪುಷ್ಪಾಕ್ಷತೆಗಳನ್ನು ಶಿರದಿ ಸುರಿದು, ಕಾಣಿಕೆಗಳನ್ನಿತ್ತು ವಂದಿಸಿದರು.

ಮಿಥಿಲಾಧಿಪನು, ಶ್ರುತದೇವನು ಒಂದೇ ಸಲ ಗೋವಿಂದನನ್ನು ಸ್ವಾಗತಿಸಲು ಬಂದರು. ಶ್ರೀಶನಿಗೆ ನಮಿಸಿ 'ಪ್ರಭೋ! ಮುನಿವರರಿಂದ ಕೂಡಿ ನನ್ನ ಮನೆಗೆ ಬಂದು ನನ್ನನ್ನು ಧನ್ಯ ನನ್ನಾಗಿಸು' ಎಂದು ಕೈಜೋಡಿಸಿ ಬೇಡಿಕೊಂಡರು. ಭಗವಂತನು ಅವರೀರ್ವರಿಗೂ ಸಂತೋಷ ವನ್ನುಂಟುಮಾಡಲು ನಿಶ್ಚಯಿಸಿ, ಬರುವೆನೆಂದು ಹೇಳಿ ಕಳಿಸಿದನು. ಎರಡು ರೂಪಗಳಿಂದ ಆ ಅನಂತಮೂರ್ತಿಯು, ಒಂದೇ ಸಲ ಅವರೀರ್ವರ ಮನೆಗಳನ್ನು ಪೊಕ್ಕನು. ಮುನಿಗಳು ಕೆಲವರಿಲ್ಲಿ, ಕೆಲವರಲ್ಲಿ ಪೋದರು. ಬಹುಲಾಶ್ವನು ತನ್ನ ಮನೆಗೆ ಬಂದ ಲೋಕ ಪಾವನರಾದ ಮುನಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಅವರ ಪಾದವನ್ನು ಕನಕ ಕಲಶದ ಉಷ್ಣೋದಕದಿಂದ ಬೆರೆತು ಆನಂದಾಶ್ರುಜಲದಿಂದ ತೊಳೆದು, ದಿವ್ಯಾಸನಗಳಲ್ಲಿ ಕೂಡಿಸಿ, ಭಕ್ತಿಯಿಂದ ಪೂಜಿಸಿದನು. ಶ್ರೀಕೃಷ್ಣನ ಪಾದಾರವಿಂದವನ್ನು ತೊಳೆದು, ಅಪಾರ ಮಹಿಮಾನ್ವಿತ ವಾದ ಆ ಪಾದೋದಕವನ್ನು ಶಿರಸಾ ಧರಿಸಿ, ಕುಟುಂಬದ ಜನರಿಗೂ ಪ್ರೋಕ್ಷಿಸಿದನು. ಶ್ರೀಕೃಷ್ಣ ನಿಗೆ ಅರ್ಘ್ಯಪಾದ್ಯಗಳನ್ನಿತ್ತು, ಗಂಧವನ್ನು ಹಚ್ಚಿ, ಪೂಮಾಲೆಗಳನ್ನು ಹಾಕಿ, ಧೂಪದೀಪ ಗಳನ್ನರ್ಪಿಸಿ, ಗೋದಾನ ಮಾಡಿದನು. ಸ್ವಾಮಿಯ ಪಾದಾರವಿಂದವನ್ನು ನಿಧಿಯಂತೆ ತೊಡೆ ಯಲ್ಲಿಟ್ಟು ಮೆಲ್ಲನೆ ಒತ್ತುತ್ತಾ, ಮಧುರವಚನಗಳಿಂದ ಇಂತೆಂದನು–

ಸರ್ವಾಂತರ್ಯಾಮಿಯು, ಸರ್ವಸಾಕ್ಷಿಯು, ಅನಿಮಿತ್ತ ಬಂಧುವು, ಸರ್ವಸ್ವಾಮಿಯು ಆದ ನಿನ್ನ ದಿವ್ಯದರ್ಶನದಿಂದ ಇಂದು ನಾವು ಪಾವನರಾದೆವು. ಏಕಾಂತ ಭಕ್ತರಿಗೆ ಅತ್ಯಂತ ಪ್ರಿಯನೆಂಬ ನಿನ್ನ ಬಿರುದು ಸಾರ್ಥಕವಾಯಿತು. ನಿಷ್ಕಿಂಚನ ಜನರಿಗೆ ಮೆಚ್ಚಿ ನಿನ್ನನ್ನೇ ಸಮರ್ಪಿಸಿ ಕೊಂಡು, ಅಪರೋಕ್ಷವೀವ ನಿನ್ನ ಚರಣಾಂಬುಜ ಸೇವೆಯನ್ನು ಯಾವ ರಸಜ್ಞನು ಮರೆಯ ಲಾದೀತು? ಯದುವಂಶದಲ್ಲವತರಿಸಿ, ಸಂಸಾರತಾಪನಿವಾರಕವಾದ ಧವಲಯಶಶ್ಚಂದ್ರಿಕೆಯನ್ನು ಬೀರಿ, ಮೂರು ಲೋಕದ ಜನರ ಪಾಪತಮವನ್ನು ನಾಶಮಾಡುವ ಶ್ರೀಕೃಷ್ಣ ಕುವಲಯ ಬಂಧುವೇ? ನಿನಗೆ ನಮಃ. ಆತ್ಮಸ್ವರೂಪವಾದ ಆನಂದದಿಂದ ಕ್ರೀಡಿಸುವ ನಾರಾಯಣನೇ! ನಿನಗೆ ನಮಃ. ಪರಿವಾರ ಸಮೇತನಾಗಿ ಕೆಲದಿನ ನನ್ನಲ್ಲಿರು. ಮಿಥಿಲಾನಗರ ನರನಾರಿಯರು ನಿನ್ನ ದಿವ್ಯದರ್ಶನದಿಂದ ಪುನೀತರಾಗಲಿ!

ಅಲ್ಲಿ ಶ್ರುತದೇವನು, ತಂದೆಯಂತೆ ವಾತ್ಸಲ್ಯದಿಂದ ತನ್ನ ಮನೆಗೆ ಬಂದ ಗೋವಿಂದನನ್ನು ಆನಂದದಿಂದ ಬರಮಾಡಿಕೊಂಡನು. ಹಿಂದೆ ಬಂದ ಮುನಿಜನರನ್ನು ಸ್ವಾಗತಿಸಿ, ಆನಂದವನ್ನು ತಡೆಯಲಾರದೆ, ಸಂಭ್ರಮದಿಂದ ಹೊದ್ದ ವಸ್ತ್ರವನ್ನು ಹಿಂದೆ ಮುಂದೆ ಹಾಕುತ್ತಾ ಕುಣಿದಾಡಿದನು. ಮುನಿಗಳು ಚಿಟಿ ಚಾಪೆ ಹಾಸಿ ಕೂಡಿಸಿ, ಅವನ ಕಾಲನ್ನು ತೊಳೆದು, ಮನೆಗೆ, ಮಡದಿಗೆ ಆ ನೀರನ್ನು ಪ್ರೋಕ್ಷಿಸಿ, ತಾನೂ ಶಿರದಿ ಧರಿಸಿದನು. ತನ್ನ ಸರ್ವ ಮನೋರಥಗಳು ಕೈಗೂಡಿದವೆಂದು ಆನಂದಭರಿತನಾದನು. ಬಿಳಿಸಾಸಿವೆ, ಬಾಡದ ಬೇರು, ಅಗ್ರೋದಕ, ತೊಗರಿ ಮಣ್ಣು, ಕಸ್ತೂರಿ, ತುಲಸಿ, ಕುಶ, ಕಮಲದಳಗಳು ಮೊದಲಾದ ಪವಿತ್ರ ವಸ್ತುಗಳನ್ನು ತಂದು ತನ್ನ ಯೋಗ್ಯತೆಗೆ ಮೀರಿ ಪೂಜಿಸಿ, ಮನದಲ್ಲಿ ಇಂತು ಚಿಂತಿಸಿದನು–

ಆಹಾ! ಸರ್ವತೀರ್ಥಗಳಿಗೆ ನಿದಾನವಾದ ಪಾದಪಂಕಜದಿಂದ ಭುವನವನ್ನು ಪಾವನಗೊಳಿಸುವ ಶ್ರೀಕೃಷ್ಣನೆಲ್ಲಿ? ಸಂಸಾರಕೂಪದಿಂದ ಪತಿತನಾದ ನನ್ನಂತಹ ಪಾಮರನೆಲ್ಲಿ? ಶ್ರೀಶನನ್ನು ಹೃದಯಮಂದಿರದಿ ನಿಲ್ಲಿಸಿರುವ ಈ ಮಹಾನುಭಾವರ – ಮಹರ್ಷಿಗಳ ಸಂಗವು ಯಾವ ಜನುಮದ ಪುಣ್ಯಫಲವೋ ನಾ ಕಾಣೆ.

ಆತಿಥ್ಯವೆಲ್ಲವು ಮುಗಿದಮೇಲೆ, ತನ್ನವರಿಂದ ಕೂಡಿ, ಶ್ರೀಕೃಷ್ಣನ ಅಡಿದಾವರೆಯ ಸಮೀಪದಲ್ಲಿ ಕುಳಿತು, ಶ್ರುತದೇವನು ಪಾದವನ್ನೊತ್ತುತ್ತಾ ಭಕ್ತಿಯಿಂದಿಂತೆಂದನು-

ಪರಮಪುರುಷ! ಶ್ರೀಹರೇ! ಇಂದು ನಿನ್ನ ದರುಶನವನ್ನಿತ್ತೆಯಾ? ನಿನ್ನವಳಾದ ಶ್ರೀದೇವಿಯಿಂದಲು, ಮಹಾದಾದಿ ತತ್ವಗಳಿಂದಲು ಕೂಡಿ ಜಗವನ್ನು ಸೃಜಿಸುವೆ; ಅದನ್ನು ನಿಯಮಿಸಲು, ಒಳಗೆ ಅಂತರ್ಯಾಮಿಯಾಗಿ ಪ್ರವೇಶಿಸುವೆ. ನಿದ್ರಿಸುವ ಮನುಜನು ಶ್ರೀಶೇಚ್ಛೆ ಯಿಂದ ಸ್ವಪ್ನವನ್ನು ನೋಡಿ, ಅವನಿಂದಲೇ ಸ್ವಪ್ನಾಂತವನ್ನೂ ಹೊಂದುವನು. ಆಗ ಮನಸ್ಸಿನಲ್ಲಿ ಸಂಸ್ಕಾರರೂಪವಾಗಿರುವ ಕರಿತುರಗಾದಿಗಳನ್ನು ಸ್ವಪ್ನದಲ್ಲಿಯು, ತನ್ನಿಂದ ಬೇರೆಯಾಗಿಯೇ ತಿಳಿಯುವನು. ಅಂತೆಯೇ ಶ್ರೀಹರಿಯು, ಪ್ರಕೃತಿಯಿಂದ ಜಗತ್ತನ್ನು ನಿರ್ಮಿಸಿ, ಸತ್ಯಭೂತವಾದ ಜೀವಜಡಾತ್ಮಕ ಪ್ರಪಂಚದಿಂದ ಭಿನ್ನನಾಗಿಯೇ ಇರುವನು. ಇಂತಹ ನೀನು, ನಿನ್ನ ಕಥೆಯನ್ನು ಕೇಳುವ, ಹೇಳುವ, ನಿನ್ನನ್ನು ಪೊಗಳುವ, ನಿನ್ನಲ್ಲೇ ಮನವಿಟ್ಟು ಧ್ಯಾನಿಸುವ ಸದಮಲಚಿತ್ತಸದನದಲ್ಲಿ ಕಾಣಬರುತ್ತಿರುವೆ. ಅನೇಕ ಕರ್ಮಫಲಾಸಕ್ತರ ಚಿತ್ತದಲ್ಲಿ ನೀನಿದ್ದರೂ ತೋರದೆ ದೂರನಾಗಿರುವೆ. ಕೇವಲ ಉಪಾಸನೆಯಿಂದ ನಿನ್ನನ್ನು ತಿಳಿಯಲಾಗದು. ನಿನ್ನ ದರ್ಶನವು ನಿನ್ನ ಅನುಗ್ರಹದಿಂದ ಮಾತ್ರ ಲಭ್ಯವಾಗಿದೆ; ಕಣ್ಣಿಂದ ನೋಡಲು ಸತ್ವಾದಿ ಗುಣ ನಿರ್ಮಿತ ದೇಹದವನಲ್ಲ; ನೀನು ಅಪ್ರತಿಹತ ಜ್ಞಾನಾನಂದದೇಹನಾದುದರಿಂದ ಒಳಗಣ್ಣಿಗೆ ಮಾತ್ರ ಗೋಚರಿಸುವೆ. ಅಂತಹ ನೀನಿಂದು ನಿನ್ನಿಚ್ಛೆಯಿಂದ ಕಣ್ಣಿಗೆ ಕಾಣಬಂದೆ. ನಿನ್ನ ದರ್ಶನವು ಸರ್ವದುಃಖಕರ್ಶನವಾಗಿದೆ. ನಿನ್ನ ಕಿಂಕರನಾದ ನನ್ನನ್ನು ಆಜ್ಞಾಪಿಸು! ಏನು ಮಾಡಲಿ?

ಪ್ರಣತಕ್ಲೇಶನಾಶನನಾದ ವಾಸುದೇವನು ಆ ಮಾತನ್ನಾಲಿಸಿ, ಕೈಯಿಂದ ಶ್ರುತದೇವನ ಕೈಯನ್ನು ಪಿಡಿದು, ನಸುನಗುತ್ತಾ ಇಂತೆಂದನು–

ಜ್ಞಾನಿಯೇ! ಕೇಳು. ಈ ಮುನಿಗಳು ಸಾಮಾನ್ಯರಲ್ಲ. ಇದರ ಪಾದರಜದಿಂದ ಲೋಕಗಳು ಪಾವನವಾಗುವುವು. ಇಂತಹ ಮಹಾನುಭಾವರು ನಿನ್ನಲ್ಲಿ ಅನುಗ್ರಹವನ್ನು ತೋರಲು ಬಂದಿರುವರು. ದೇವತೆಗಳು, ಕ್ಷೇತ್ರಗಳು, ತೀರ್ಥಗಳು, ಅರ್ಚನ ದರ್ಶನ ಸ್ಪರ್ಶನಗಳಿಂದ ಮನುಜರನ್ನು ಪಾವನಗೊಳಿಸುವುವು. ಆದರೆ ಬಹುಕಾಲ ಸೇವೆಯಿಂದ ಪ್ರೀತರಾಗಿ, ಸಜ್ಜನ ಸಂಗವನ್ನು ದೊರಕಿಸಿಕೊಟ್ಟು ಅವರ ದ್ವಾರಾ ಜ್ಞಾನಸಂಪಾದನೆಯಾಗುವಂತೆ ಅನುಗ್ರಹಿಸುವುವು. ತತ್ಕ್ಷಣವೇ- ಸಾಕ್ಷಾತ್ತಾಗಿಯು ಅಲ್ಲ. ಬ್ರಾಹ್ಮಣನು ಜನ್ಮದಿಂದಲೇ ಶ್ರೇಷ್ಠನು; ಇನ್ನು ತಪಸ್ಸು, ಜ್ಞಾನ, ನನ್ನ ಕಥಾಕಥನದೀಕ್ಷೆ ಇದ್ದವನು ಶ್ರೇಷ್ಠನೆಂದು ಹೇಳಬೇಕೇ? ಸರ್ವವೇದಗಳಲ್ಲಿಯು ಸರ್ವ ದೇವತಾ ಪ್ರಧಾನನು ನಾನೆಂದು (ಶ್ರೀಕೃಷ್ಣನೆಂದು) ವಿಚಾರಿಸಿ ತಿಳಿದ ನನ್ನ ಭಕ್ತರಾದ ಬ್ರಾಹ್ಮಣ ರಲ್ಲಿ ನಾನಿಟ್ಟಿರುವ ಪ್ರೀತಿ, ನನ್ನ ಚತುರ್ಭುಜ ರೂಪದಲ್ಲಿಯೂ ಇಲ್ಲ. ದುಷ್ಟರು ಅಸೂಯಾ ದೂಷಿತ ಮತಿಗಳಾಗಿ ವಿಪ್ರನು ನನ್ನ ಸನ್ನಿಧಾನ ಪಾತ್ರನೆಂದು ತಿಳಿಯದೆ ಅವನನ್ನು ಅವಮಾನಿಸು ತ್ತಿರುವರು. ಬ್ರಾಹ್ಮಣದ್ವೇಷಿಗಳು ಒಂದು ವೇಳೆ ಪ್ರತಿಮೆಗಳ ಪೂಜೆಯನ್ನು ಮಾಡಿದರೂ, ಆ ಪೂಜೆಯು ನನ್ನ ಅವಮಾನವೇ ಸರಿ! ಬ್ರಾಹ್ಮಣನಿಗೆ ದೇವರೆಂದರೆ ನಾನೇ!

ಅವರಿಲ್ಲದಿರೆ ನನ್ನ ಬ್ರಹ್ಮಜ್ಞಾನೋಪದೇಶಕರಿಲ್ಲದೆ, ಲೋಕವು ಅಜ್ಞಾನಾಂಧಕಾರಬಂಧುರವಾಗಿ ನಾಶವಾದೀತು! ಚರಾಚರ ವಿಶ್ವವೆಲ್ಲ ವಿಪ್ರಾಶ್ರಿತವಾಗಿದೆ. ಅಂತಹ ವಿಪ್ರರನ್ನು ಪೂಜಿಸು; ನಾನು ಪ್ರೀತನಾಗುವೆನು. ಅವರನ್ನು ಬಿಟ್ಟು, ಎಷ್ಟು ವೈಭವದಿಂದ ನನ್ನನ್ನು ಪೂಜಿಸಿದರೂ, ಅದನ್ನು ನಾನು ಸ್ವೀಕರಿಸ ದಿರುವೆನು.

ಆಗ ಶ್ರುತದೇವನು ಕೃಷ್ಣನನ್ನೂ, ವಿಪ್ರವರರನ್ನೂ ಚೆನ್ನಾಗಿ ಪೂಜಿಸಿದನು. ಏಕಾಂತ ಭಕ್ತನಾದ ಬಹುಲಾಶ್ವನಂತೆ, ಶ್ರುತದೇವನು ಕೂಡ ದಿವ್ಯಗತಿಯನ್ನು ಪೊಂದಿದನು. ಭಕ್ತವತ್ಸಲ ನಾದ ಶ್ರೀಶನು ಕೆಲವು ದಿನವಲ್ಲಿದ್ದು, ಪುನಃ ದ್ವಾರಕೆಯನ್ನು ಬಂದು ಸೇರಿದನು.

## ೯೨. ವೃಕದಾನವ ವಿನಾಶ – ಶಿವಕ್ಲೇಶ ನಿರಾಸ

ಶ್ರೀರಾಜನು ಪ್ರಶ್ನಿಸಿದನು–

ಲೋಕದೃಷ್ಟಿಯಿಂದ– ದಿಗಂಬರನು, ಪದ್ಮರಾಗಾದಿಭೂಷಣರಹಿತನು, ಹಿಮಾಚಲ ನಿಲಯನು-ಆಗಿ ನಿರ್ಧನನಾದ ಶಿವನನ್ನು ಭಜಿಸಿ ಧನಿಕರಾದವರು ದೇವಸುರಮಾನವರು ಅನೇಕರಿರುವರು. ಆದರೆ, ಲಕ್ಷ್ಮೀಪತಿಯಾದ ನಾರಾಯಣನನ್ನು ಭಜಿಸಿದವರು ದರಿದ್ರರಾಗು ವರು. ಈ ವಿಚಿತ್ರವನ್ನು ಕೇಳಿ ತಿಳಿಯಬೇಕೆಂದು ಕುತೂಹಲವಾಗಿದೆ. ನಿರ್ಧನ ಸಧನರಾದ ಪ್ರಭುವರರನ್ನು ಭಜಿಸಿದವರು ಸಧನ ನಿರ್ಧನರಾಗಿ ಕಾಣಬರುತ್ತಿರುವರು. ಇದಕ್ಕೆ ಕಾರಣವೇನು?

ಶ್ರೀಶುಕನು ಹೇಳಿದನು–

ರಾಜನ್! ಶಿವನು ಸ್ವಲ್ಪ ಸತ್ವ, ಹೆಚ್ಚಾದ ರಜಸ್ತಮೋಗುಣಗಳಿಂದ ರಚಿತವಾದ ಅಹಂಕಾರ ತತ್ವರಚಿತದೇಹನಾಗಿರುವನು. ಆಗ ಲೋಕೇಶನು ಹರಿನಿಯತ ಪ್ರಕೃತಿ ಗುಣಬದ್ಧನಾಗಿರುವನು. ಪ್ರಾಣಿಗಳಲ್ಲಿಯು, ದೇವ ದಾನವ ಮಾನವರೆಂಬ ತ್ರಿವಿಧ ಜೀವರಿರುವರು. ಅವರ ಸ್ವಭಾವಕ್ಕೆ ತಕ್ಕಂತೆ ಪೂಜಿಸಿ, ಅವರು ಯೋಗ್ಯತೆಯಂತೆ ಫಲಗಳನ್ನು ಪಡೆಯುತ್ತಿರುವರು. ಶಿವನು ಪ್ರಕೃತ್ಯ ತೀತನಲ್ಲ; ಆದ್ದರಿಂದ ಪ್ರಕೃತಿ ಬಾಹಿರವಾದ ಮೋಕ್ಷಾದಿ ಫಲಗಳನ್ನೀಯಲಾರದೆ, ಶ್ರೀಘ್ರುಪ್ರಸಾದ ಶೀಲನಾದುದರಿಂದ, ಭಜಿಪರು ವಾಂಛಿಸುವ ಪ್ರಾಕೃತಿಕ ಸುಖಗಳನ್ನು, ಧನಾದಿಗಳನ್ನು ಕೊಡುತ್ತಿ ರುವರು. ವೈಕಾರಿಕ ರುದ್ರನು, ಸಾತ್ವಿಕರ ಮನವನ್ನು ಶ್ರೀಹರಿಯಲ್ಲಿ ತೈಲಧಾರೆಯಂತೆ ಹರಿಸಿ, ಜ್ಞಾನ ಭಕ್ತಿ ವೈರಾಗ್ಯಗಳನ್ನಿತ್ತು, ಗುರುವಾಗಿ ಸಲಹುವನು. ತೈಜಸ ರುದ್ರನು, ಇಂದ್ರಿಯಗಳನ್ನು ವಿಷಯಪರವನ್ನಾಗಿಸಿ, ರಾಜಸರನ್ನು ಸಂಸಾರದಲ್ಲಿ ನರಳಿಸುವನು. ತಾಮಸ ರುದ್ರನು, ದೈತ್ಯರನ್ನು ಕೇವಲ ಪೃಥಿವೀಕನಕರಜತಾದಿ ಸಂಪದಗಳನ್ನಿತ್ತು, ದುರ್ಮದರನ್ನಾಗಿಸಿ, ಕೆಡಿಸುತ್ತಿರುವನು.

ಶ್ರೀಹರಿಯು ಅಪ್ರಾಕೃತನು. ತನ್ನನ್ನು ಭಜಿಪ ಸಾತ್ವಿಕರಿಗೆ ಸಂಪದಾದಿ ಪ್ರಕೃತಿಬಂಧವನ್ನು ಕೊಡಲು ಮನಮಾಡದೆ, ಅವರನ್ನು ಐಹಿಕ ದಾರಿದ್ರ್ಯದಲ್ಲಿ ಪರೀಕ್ಷಿಸಿ, ನಿಜವಾದ ಭಕ್ತರಾದರೆ, ಅಪ್ರಾಕೃತವಾದ ಸ್ವರೂಪಾನಂದವನ್ನಿತ್ತು, ಕಾಪಾಡುವನು. ಸಾತ್ವಿಕ ಸಂಪತ್ತಾದರೂ ಅವರಿಗೆ ಬೇಡವೆಂದರೂ, ಶ್ರೀಹರಿಯು ತಾನಾಗಿ ಕೊಟ್ಟಾಗ ಬಂದೇ ಬರುವುದು. ಹೇರಳವಾದ ಸಂಪತ್ತಿ ದ್ದರೂ ಸುಜನರು ಭಕ್ತಿಭಾಗ್ಯವನ್ನೇ ನಂಬಿ, ದುರ್ಮದರಾಗದೆ, ಶ್ರೀಹರಿಕೃಪಾಪಾತ್ರರಾಗುವರು.

ಶ್ರೀಹರಿಯು ನಿರ್ದೋಷಜ್ಞಾನಾನಂದದೇಹನಾದುದರಿಂದ, ತನ್ನ ಭಕ್ತರನ್ನು ಯಥಾಯೋಗ್ಯ ವಾಗಿ ನಿರ್ದೋಷರನ್ನು, ಜ್ಞಾನಾನಂದಾನುಭವವಂತರನ್ನು ಮಾಡಿ ಭಕ್ತರಲ್ಲದ ಅಸುರರಿಗೆ

ತಮಸ್ಸನ್ನೇ ಕೊಡುತ್ತಿರುವನು. ಶಿವನು ದೈತ್ಯಭಜಕರಿಗೂ ಯೋಗ್ಯತೆಯನ್ನರಿಯದೆ ವರವನ್ನಿತ್ತು, ಐಹಿಕ ಸಂಪನ್ಮದದಿಂದ ಅವರು ತನ್ನನ್ನೇ ತಿರಸ್ಕರಿಸಿದಾಗ, ಶ್ರೀಹರಿಶರಣನಾಗಿ, ಅವನ ಉಪದ್ರವವನ್ನು ತಪ್ಪಿಸಿಕೊಂಡು ಪಶ್ಚಾತ್ತಪ್ತನಾಗುತ್ತಾನೆ. ಹಿಂದೆ ನಿಮ್ಮ ಪಿತಾಮಹನು ಉತ್ತಮ ಕಲ್ಪದ ತ್ರಿಗುಣಫಲಕವಾದ ಐದಶ್ವಮೇಧಗಳನ್ನುಮಾಡಿ, ಶ್ರೀಕೃಷ್ಣನಿಗೆ ಆ ಪುಣ್ಯವನ್ನರ್ಪಿಸುವ ಕಾಲದಲ್ಲಿ ಅನೇಕ ಧರ್ಮರಹಸ್ಯಗಳನ್ನು ಶ್ರೀಶನಿಂದ ಕೇಳಿ ತಿಳಿದನು. ಆಗ ಈ ವಿಷಯವನ್ನೂ ಕೇಳಲಾಗಿ, ಶ್ರೀಕೃಷ್ಣನು, ಕೇವಲ ಭೂಭಾರಹರಣವಲ್ಲದೆ ಸಂಸಾರ ನಿರ್ಮೂಲನರೂಪ ಜ್ಞಾನೋಪದೇಶವೂ ತನ್ನ ಅವತಾರ ಪ್ರಯೋಜನವಾದುದರಿಂದ, ನಿಮ್ಮ ಪಿತಾಮಹನಿಗೆ ನಿರೂಪಿಸಿದ ವಿಷಯವನ್ನು ನಿನಗೆ ಹೇಳುವೆನು; ಕೇಳು.

ಶ್ರೀಕೃಷ್ಣನು ಧರ್ಮರಾಜನಿಗಿಂತೆಂದನು–

ಯಾವ ಮನುಜನನ್ನೂ ನನ್ನವನನ್ನಾಗಿ ಮಾಡಲು ಎಣಿಸಿ, ನಾನು ಮೆಲ್ಲನೆ ಅನುಗ್ರಹಿಸುವೆನೋ ಅವನನ್ನು, ನನ್ನಿಂದ ದೂರ ಮಾಡುವ ಅವನ ಹಣವನ್ನು, ಕಳೆದುಬಿಡುವೆನು. ಆಗ ದರಿದ್ರನಾದುದರಿಂದ ಕಷ್ಟಪರಂಪರೆಯಲ್ಲಿ ಮಗ್ನನಾದ ಅವನನ್ನು ಸ್ವಜನರು ಬಿಟ್ಟು ಬಿಡುವರು. ಅವನು ಮಾಡಿದ ಧನಾರ್ಜನ ಪ್ರಯತ್ನಗಳು ವ್ಯರ್ಥವಾಗುವುವು. ಕೊನೆಗೆ ಅವನು ನಿರ್ವಿಣ್ಣನಾಗಿ ಅಂತರ್ಮುಖನಾಗುವನು; ನನ್ನ ಭಕ್ತರಾದ ಜ್ಞಾನಿಜನಸೇವೆಯನ್ನು ಮಾಡಿ, ಜ್ಞಾನಿಯಾಗಿ, ನನ್ನ ಪ್ರಸಾದದಿಂದ ಮೋಕ್ಷವನ್ನೂ ಹೊಂದುವನು. ನಾನು ವೇದಾಂತವೇದ್ಯನು, ಅಣೋರಣೀಯನು, ನಿತ್ಯಾವ್ಯಕ್ತನು, ಜ್ಞಾನಾನಂದದೇಹನು, ಪ್ರಕೃತಿವಿಕಾರರಹಿತನು, ಪ್ರಶಾಂತನು, ದೇಶ-ಕಾಲ-ಗುಣಗಳಿಂದ ಅನಂತನು– ಆದುದರಿಂದಲೇ ದುರಾರಾಧ್ಯನೆಂದು ತಿಳಿದು ರಾಜಸತಾಮಸರು ನನ್ನನ್ನು ಭಜಿಸುವುದಿಲ್ಲ. ಶ್ರೀಘ್ರವರದಾನ ಕಾತರರಾದ ಇತರ ದೇವತೆಗಳನ್ನು ಅವರು ಭಜಿಸಿ, ಅವರಿಂದ ಬೇಕಾದ ಸಿರಿಸಂಪತ್ತನ್ನು ಹೊಂದಿ ದುರ್ಮದರಾಗಿ, ಆ ದೇವತೆಗಳನ್ನೇ ತಿರಸ್ಕರಿಸುವರು.

ರಾಜನ್! ಶಾಪವನ್ನಾಗಲಿ ಪ್ರಸಾದವನ್ನಾಗಲಿ ಕೊಡುವ ಬ್ರಹ್ಮ ವಿಷ್ಣು ಮಹೇಶರಲ್ಲಿ ಮಹೇಶನು ಶೀಘ್ರವಾಗಿ ವರವನ್ನು ಕೊಡುವವನು ಮತ್ತು ಶೀಘ್ರವಾಗಿ ಶಾಪವೀಯುವವನೂ ಅಹುದು. ಬ್ರಹ್ಮನು ಅಷ್ಟು ಸುಲಭನಲ್ಲ. ಶ್ರೀಹರಿಯಂತೂ ಅಪರೀಕ್ಷಿತದಾತನಲ್ಲವೇ ಅಲ್ಲ. ಈ ವಿಷಯದಲ್ಲಿ ಪುರಾತನವಾದೊಂದು ಇತಿಹಾಸವಿದೆ, ಕೇಳು–

ಶಕುನಿ ಎಂಬ ದೈತ್ಯನ ಮಗನಾದ ವೃಕಾಸುರನು ಒಂದು ದಿನ, ನಾರದನನ್ನು ಕಂಡನು. ಕೆಟ್ಟ ಮನಸ್ಸುಳ್ಳ ಆ ಪಾಪಿಯು, ಮೂರು ಜನ ದೇವೇಶರಲ್ಲಿ ಆಶುತೋಷನಾರೆಂದು ಕೇಳಲು, ನಾರದನು, 'ಗಿರೀಶನು ಆಶುತೋಷನು, ಸ್ವಲ್ಪಗುಣದಿಂದ ವರದನ್ನೂ, ಸ್ವಲ್ಪ ದೋಷದಿಂದ ನಾಶಕನ್ನೂ ಆಗಿರುವನು. ಹಿಂದೆ ದಶಕಂಧರ ಸ್ತುತಿಗೆ ಮನಸೋತು, ಸುಂದರಿಯನ್ನೇ ಕೇಳಿದಾಗ ಬಲು ನೊಂದನು. ಬಾಣದ ನುತಿಗೆ ಮೆಚ್ಚಿ, ಐಶ್ವರ್ಯವನ್ನಿತ್ತು, ಅವನು ಬಾಗಿಲ ಕಾಯುವ ದ್ವಾರರಕ್ಷಕನಾಗೆಂದಾಗ, ಸಂಕಟಕ್ಕೀಡಾದನು' ಎಂದು ನುಡಿದನು.

ಆ ಮಾತಿನಂತೆ ವೃಕನು ಕೇದಾರವನ್ನು ಸೇರಿ, ತನ್ನ ಮಾಂಸವನ್ನೇ ಆಹುತಿಯನ್ನಾಗಿರಿಸಿ, ಹೋಮಿಸುತ್ತಿದ್ದನು. ಆರು ದಿನಗಳಾದರೂ, ಶಿವನು ದರ್ಶನವಿತ್ತಿಲ್ಲವೆಂದು ಕುಪಿತನಾಗಿ, ಏಳನೆಯ ದಿನ ಅವನು ಸ್ನಾನಜಲದಿಂದ ತೊಟ್ಟಿಕ್ಕುವ ತಲೆಯನ್ನು ಖಡ್ಗದಿಂದ ಹೋಮಕುಂಡದಲ್ಲಿ ಬೀಳುವಂತೆ ಕತ್ತರಿಸಬೇಕೆಂದು ಸಿದ್ಧನಾದನು. ಆಗ ಕರುಣಾಸಮುದ್ರನಾದ ಮಹಾದೇವನು

ಅಗ್ನಿಕುಂಡದಿಂದ ಮೂರ್ತಿಮಂತನಾಗಿ ಎದ್ದು ಬಂದು ಅವನ ಕೈಪಿಡಿದು ತಡೆದು, ಇಂತೆಂದನು–

ಪ್ರಿಯ ವೃಕ! ನಿಲ್ಲು, ಸಾಹಸಿಸಬೇಡ! ಬೇಕಾದ ವರವನ್ನು ಬೇಡು, ಕೊಡುವೆನು. ಮೊದಲು ನೀನು ಸರ್ವಾವಯವ ಸಂಪನ್ನನಾಗುವಂತೆ ಅನುಗ್ರಹಿಸಿರುವೆನು. ಎಷ್ಟು ಕಷ್ಟಪಟ್ಟೆ! ಶರೀರ ವಿದ್ದರಲ್ಲವೇ ಸುಖಸೌಭಾಗ್ಯಗಳು? ಅಂತಹ ದೇಹವನ್ನು ವ್ಯರ್ಥ ಮಾಡಿದೆ! ಇರಲಿ; ಕೇಳು ವರವನ್ನು!

ಆ ಮಾತನ್ನಾಲಿಸಿ ಆ ಪಾಪಾತ್ಮನು 'ಯಾರ ತಲೆಯಲ್ಲಿ ನಾನು ಕೈಯಿಡುವೆನೋ, ಅವನು ಸುಟ್ಟು ಬೂದಿಯಾಗಲಿ!' ಎಂದು, ಸರ್ವಭೂತ ಭಯಂಕರವಾದ ವರವನ್ನು ಬೇಡಿದನು. ಆ ಮಾತು ಕೇಳಿ ರುದ್ರನು 'ಹರಿ! ಹರಿ!' ಎಂದು ಮನಸ್ಸಿನಲ್ಲಿ ನೊಂದು ತೋರಗೊಡದೆ ನಗುತ್ತಾ 'ಓಂ' ಎಂದು ಅವನ ವರವನ್ನು ಸಲ್ಲಿಸಿದನು. ತತ್‌ಕ್ಷಣವೇ ಆ ದುರಾತ್ಮಕನು ವರನನ್ನು ಪರೀಕ್ಷಿಸುವೆನೆಂದು, ಶಿವನ ಶಿರದಿ ಕರದಾನವನ್ನು ಮಾಡಲು ಮುಂದೆ ಬಂದನು. ತಾನು ಕೊಟ್ಟ ವರದಿಂದ ತಾನೇ ಭೀತನಾಗಿ ಶಿವನು ಓಡಿಹೋದನು. ವೃಕನು ಆಗ ದೇವನನ್ನು ಬಿಡದೆ ಬೆನ್ನಟ್ಟಿ ಬಂದನು. ಭೂ ಪಾತಾಲ ನಾಕಲೋಕಗಳಲ್ಲಿಯು ಬಿಡದೆ, ಕೈಯಿಡಲು ಬರುವ ವೃಕಾ ಸುರನ ಪೀಡೆಯನ್ನು ತೊಲಗಿಸುವ ಮಾರ್ಗವನ್ನರಿಯದೆ, ಸುರೇಶರು ಅವನಿಗೆ ಹೆದರಿ ಸುಮ್ಮ ನಿದ್ದನು. ಶಿವನು ಆಗ ತಮಸ್ಸಿಗೆ ದೂರವಾದ ವಿಕುಂಠ ನಿಲಯವನ್ನು, ಆರ್ತನಾಗಿ–'ನಾರಾ ಯಣಾ! ಭಕ್ತಜನರಿಗೆ ನೀನಲ್ಲದೆ ಗತಿ ಯಾರಯ್ಯಾ! ನಿನ್ನ ಲೋಕವನ್ನು ಪೊಂದುವ ಮಹಾತ್ಮರು ಸರ್ವ ಭೂತ ದಯಾಪರರು ಮತ್ತು ಹರಿಭಕ್ತಿನಿಷ್ಠರು. ಅಂತಹ ದಯಾಶಾಲಿಜನವಂದ್ಯನಾದ ಗೋವಿಂದಾ! ರಕ್ಷಿಸು' ಎಂದು ಮೊರೆಯಿಡುತ್ತಾ, ಸೇರಪೋದನು.

ಶ್ರೀಹರಿಯು ಆ ಮೊರೆಯನ್ನಾಲಿಸಿದನು; ರಕ್ಷಿಸುವೆನೆಂದನು; ವಟುವಾಗಿ ಸ್ವೇಚ್ಛೆಯಿಂದ ಬಂದನು; ವೃಕನು ಮುಂದೆ ನಿಂದನು; ಅವನನ್ನು ನಿಲ್ಲಿಸಿ ಹೀಗೆಂದನು–

ಶಾಕುನೇಯ! ಏನು ಓಡುತ್ತಿರುವೆ? ಎಷ್ಟು ಆಯಾಸಪಡುತ್ತಿರುವೆ! ಸ್ವಲ್ಪ ನಿಲ್ಲು. ಶರೀರ ವನ್ನು ಕಷ್ಟಪಡಿಸಬಾರದು. ಅದು ಸರ್ವಕಾಮಗಳಿಗೆ ನೆಲೆಯಾಗಿದೆ; ಸಮರ್ಥನಾದ ನಿನಗೆ ದುರ್ಘಟವಿಲ್ಲ. ನಿನ್ನ ಮನಸ್ಸಿನ ಸಂಕಲ್ಪವನ್ನು ಬಿಚ್ಚಿ ಹೇಳು! ಇಷ್ಟವಿಲ್ಲೆಂದರೆ ಬಿಡು! ಎಲ್ಲ ಪುರುಷರೂ ಸ್ವಾರ್ಥಕುಶಲರೇ ನಿಜ!

ಇಂತು ಅಮೃತರಸಪೂರ್ಣನಾದ ಭಗವಂತನ ವಚನಗಳನ್ನಾಲಿಸಿ, ಶ್ರಮೆ ನೀಗಿದಂತಾಗಿ, ವೃಕನು ನಡೆದೆ ಕಥೆಯನ್ನೆಲ್ಲ ಹೇಳಿದನು. ಆಗ ವಟುವಿಂತೆಂದನು–

'ಹೀಗೇನು? ರುದ್ರವಚನದಲ್ಲಿ ನಮಗಂತು ವಿಶ್ವಾಸವಿಲ್ಲ! ಅವನು ದಕ್ಷ ಶಾಪದಿಂದ ಪ್ರೇತಪಿಶಾಚನಾಥನಾಗಿರುವನು. ಅವನ ಮೈಯಲ್ಲಿ ರೋಷಕ್ರೋಧಗಳು ತುಂಬಿತುಳುಕುತ್ತಿವೆ. ಆ ಕ್ರೋಧನಾಥನ ನುಡಿಯನ್ನು ಸತ್ಯವೆಂದು ಬಂದ ನೀನು ಮೂಢನೇ ಸರಿ! ದಾನವನಾಥ! ಕೇಳಿಲ್ಲಿ! ತಲೆ-ಕೈಗಳೆರಡೂ ನಿನ್ನಲ್ಲಿವೆ. ಇಡು ಕೈಯನ್ನು ನಿನ್ನ ತಲೆಯಲ್ಲಿ! ಆಗ ಶಂಭುವಚನವು ಅಸತ್ಯವೆಂದು ಕಂಡುಬಂದರೆ, ತತ್‌ಕ್ಷಣವೇ ಆ ಸತ್ಯದೂರನನ್ನು ಕೊಂದುಬಿಡು. ಮತ್ತೆ ಇನ್ನೊಂದು ಸಲ ಹೀಗಾಗಬಾರದು ನೋಡು' ಎಂದು ಮನೋಹರ ವಚನಗಳನ್ನಾಡುವ ಮಾಯಾ ಮಾಣವಕನ ಮಾತಿಗೆ ಮನಸೋತು, ತಲೆಕೆಟ್ಟು, ವರದ ವಿಷಯವನ್ನೇ ಮರೆತು ಆ ಪಾಪಿಯು ತನ್ನ ಕೈಯನ್ನೆತ್ತಿ ತಲೆಯಲ್ಲಿಟ್ಟುಕೊಂಡನು. ತತ್‌ಕ್ಷಣವೇ ತಲೆ ಒಡೆದು, ವೃಕನು, ವಜ್ರದ ಆಘಾತದಿಂದೆಂಬಂತೆ ಕೆಳಗೆ ಬಿದ್ದು ಸುಟ್ಟು ಬೂದಿಯಾದನು.

ಆಗ ಆಕಾಶದಿಂದ 'ಜಯ! ನಮೋ ನಮ! ಸಾಧು!' ಎಂಬ ಶಬ್ದಗಳು ಕೇಳಿ ಬಂದುವು; ಪೂಮಳೆಗರೆಯಿತು. ದೇವಋಷಿಪಿತೃಗಂಧರ್ವಾದಿಗಳು ಸಂತೋಷಪಟ್ಟರು. ಶಿವನು ಸಂಕಟದಿಂದ ಪಾರಾದನು. ಪುರುಷೋತ್ತಮನು ಶಿವನಿಗಿಂತೆಂದನು–

ಶಿವ! ಮಹಾದೇವ! ಆ ಪಾಪಿಯು ತನ್ನ ಪಾಪದಿಂದ ತಾನೇ ಹಾಳಾದನು. ಪಾಪಕೃತ್ಯವನ್ನೆಸಗಿದವನಿಗೆ ಕ್ಷೇಮವು ಉಂಟೇ? ಅದರಲ್ಲಿ ಸರ್ವಪುರುಷ ಸಂಹಾರವನ್ನೆಸಗಿ, ಸರ್ವನಾರೀಜನಾಭಿಮರ್ಶನವನ್ನು ಮಾಡಲು ಬಯಸಿದ ಮಹಾಪಾಪಿಗೆ ಕ್ಷೇಮವೇ? ವಿಶ್ವೇಶನು, ಜಗತ್ತಿಗೆ ಗುರುಪ್ರಾಯನು ಆದ ನಿನಗೆ ದ್ರೋಹವನ್ನೆಸಗಿದ ಮಹಾಸುರನಿಗೆ ತಕ್ಕ ಶಾಸ್ತಿ ಆಯಿತು.

ಅಪ್ರಾಕೃತದಿವ್ಯಸಾಮರ್ಥ್ಯವಾರಿನಿಧಿಯಾದ ಪುರುಷೋತ್ತಮನು, ಶಿವನನ್ನು ಸಂಕಟದಿಂದ ಪಾರಾಗಿಸಿದ ಪವಿತ್ರಚರಿತ್ರವನ್ನು ಹೇಳಿ, ಕೇಳಿದ ಭಕ್ತರು ಸಂಸಾರ ಕಷ್ಟದಿಂದ ಪಾರಾಗುವರು– ಮತ್ತು ಅವರ ಶತ್ರುಜನರು ನಷ್ಟರಾಗುವರು.

## ೯೩. ಭೃಗುಕೃತ ಪುರುಷೋತ್ತಮ ದರ್ಶನ

ಶ್ರೀಶುಕನು ಹೇಳಿದನು–

ಹಿಂದೆ ಸರಸ್ವತಿಯ ತೀರದಲ್ಲಿ ಪರಮರ್ಷಿಗಳು ಸತ್ರಯಾಗವನ್ನು ಮಾಡುತ್ತಿದ್ದರು. ಅವರಲ್ಲಿ ಸಭೆ ಕೂಡಿದಾಗ ಬ್ರಹ್ಮ ವಿಷ್ಣು ಮಹೇಶರಲ್ಲಿ ಯಾರು ಉತ್ತಮರು ಎಂಬ ಪ್ರಶ್ನೆ ಬಂತು. ಈ ವಿಷಯವನ್ನು ತಿಳಿದು ಬರಲು ಚತುರಾನನಕುಮಾರನಾದ ಭೃಗು ಋಷಿಯೇ ಸಮರ್ಥನೆಂದು ಅವರು, ಭೃಗುವಿನನ್ನು ಕಳಿಸಿದರು.*

ಭೃಗುವು ಬ್ರಹ್ಮಸಭೆಯನ್ನು ಸೇರಿ, ಕಾಮಕ್ರೋಧಾದಿ ಪ್ರಾಕೃತವಿಕಾರಗಳಿಲ್ಲದವನೇ ಸರ್ವೋತ್ತಮನೆಂದು ನಿಶ್ಚಯಿಸಲು ಬಂದವನಾದ ಕಾರಣ, ಬ್ರಹ್ಮನಿಗೆ ನಮಸ್ಕರಿಸದೆ, ಸ್ತುತಿಸದೆ, ಸುಮ್ಮನೆ ನಿಂತಿದ್ದನು. ಅದನ್ನು ಕಂಡು ತಂದೆಯಾದ ಚತುರ್ಮುಖನು ಸಿಟ್ಟಿಗೆದ್ದು, ಮತ್ತೆ ಸರ್ವಜ್ಞನಾದುದರಿಂದ, ಸಿಟ್ಟನ್ನು ಮಟ್ಟಿಕ್ಕಿ, ಶಾಂತನಾದನು.

ಅಲ್ಲಿಂದ ಭೃಗುವು ಕೈಲಾಸವನ್ನೇ ಸೇರಿದನು. ತಮ್ಮನನ್ನು ನೋಡಿ, ಶಿವನು ಆಲಿಂಗಿಸಲು ಬಂದನು. ಕಪಾಲಮಾಲಿ, ಶ್ಮಶಾನವಾಸಿಯಾದುದರಿಂದ ಅಶುಭಾಚಾರನೆಂದು ಭೃಗುವು ಮುಟ್ಟದೆ ದೂರ ಸರಿದನು. ತತ್‌ಕ್ಷಣವೇ ರುದ್ರನು ಶೂಲದಿಂದ ಅವನನ್ನು ಕೊಲ್ಲಲು ಬಂದನು. ಕೆಂಡಗಣ್ಣಿನ ಶಿವನನ್ನು ತಡೆದು ನಿಲ್ಲಿಸಿ, ಗಿರಿಜೆ ಸಮಾಧಾನಪಡಿಸಿದಳು. ಅಂತೂ ಕಷ್ಟದಿಂದ ಮುಕ್ತನಾಗಿ, ಭೃಗುವು ಕೈಲಾಸದಿಂದ ವೈಕುಂಠವನ್ನು ಪೊಂದಿದನು. ಲೋಕಸಂಶಯ ನಿವಾರಣಕ್ಕೆಂದು ಮಹರ್ಷಿಗಳು ಕಳಿಸಿರಲು, ಅಸಮಾನಾಧಿಕನು, ಸರ್ವೋತ್ತಮನು ಶ್ರೀಹರಿಯೇ– ಅನ್ಯರಲ್ಲವೆಂದು ತಿಳಿದೂ, ಭೃಗುಋಷಿಯು ವೈಕುಂಠದಿ, ಶೇಷತಲ್ಪದಲ್ಲಿ, ಶ್ರೀದೇವಿಲಾಲಿತ ಚರಣಾರವಿಂದನಾದ ಗೋವಿಂದನನ್ನು ಸತ್ವ – ಪರೀಕ್ಷೆಗೆ ಗುರಿಪಡಿಸಿ, ಎದೆಯಲ್ಲಿ ಪದದಿಂದ ಒದೆದನು. ಶ್ರೀದೇವಿಯಿಂದ ಕೂಡಿ ಶ್ರೀ ಭಗವಂತನು ಎದ್ದು ಬಂದು ಮುನಿಗೆ ಶಿರಸಾ ನಮಿಸಿದನು ಮತ್ತು ನಗುತ್ತಾ ಇಂತೆಂದನು–

ಬ್ರಹ್ಮರ್ಷಿವರನೇ! ನಿನಗೆ ಸ್ವಾಗತವು! ಕೂಡು ಈ ಆಸನದಿ! ಕಾಣದೆ ನಾವು ಮಾಡಿದ ಅಪರಾಧವನ್ನು ಕ್ಷಮಿಸು! ತೀರ್ಥಗಳನ್ನು ಪಾವನಗೊಳಿಸುವ ನಿನ್ನ ಪಾದೋದಕದಿಂದ ನನ್ನನ್ನು,

ನನ್ನ ಲಕ್ಷ್ಮೀದೇವಿಯನ್ನು ನನ್ನವರಾದ ಸರ್ವಲೋಕಪಾಲರನ್ನು ಪವಿತ್ರೀಕರಿಸು! ಇಂದು ನಾನು ನಿನ್ನ ಪಾದಚಿಹ್ನವನ್ನು ಶ್ರೀವತ್ಸದಂತೆ ಧರಿಸಿ, ಸಕಲಭಾಗ್ಯ ನಿಲಯನಾದೆನು. ನಿನ್ನ ಪದವು ನನ್ನ ನಿತ್ಯಜ್ಞಾನಸ್ವರೂಪದಂತೆ, ಸಕಲ ಪಾಪನಿವಾರಕವಾಗಿದೆ.

ಇಂತು ನುಡಿದ ಶ್ರೀವೈಕುಂಠಪತಿಯ ಮಧುರ ವಚನಗಳಿಗೆ ಮಾರುಹೋಗಿ, ಭೃಗು ಋಷಿಯು ಭಕ್ತಿಭರದಿಂದ ಬಾಗಿ, ಶ್ರೀಹರಿಪೂಜೆಯನ್ನು ಸ್ವೀಕರಿಸಿ, ಆನಂದಬಾಷ್ಪಪೂರ್ಣ ನೇತ್ರನು, ಪುಲಕಾಂಚಿತಗಾತ್ರನು ಆಗಿ, ಮಾತಾಡಲು ಬರದೆ ನಿಂತನು. ಮತ್ತೆ ಸತ್ರಯಾಗ ಶಾಲೆಗೆ ಬಂದು, ಮುನಿಗಳಿಗೆ ತನ್ನನುಭವವನ್ನು ತಿಳಿಸಿದನು. ಅದನ್ನು ಕೇಳಿ ಮುನಿವರರೆಲ್ಲರು ಏಕಮನಸ್ಕರಾಗಿ ಶ್ರೀಹರಿಯೇ ಸರ್ವೋತ್ತಮನೆಂದು ಚೆನ್ನಾಗಿ ಪ್ರಕಟಿಸಿ, ಲೋಕಜನರ ಸಂಶಯವನ್ನು ನಿವಾರಿಸಿದರು. 'ಶ್ರೀಹರಿಯಿಂದ ಮೋಕ್ಷ; ಶ್ರೀಹರಿಯಿಂದ ಸಂಸಾರತಾಪ ನಿವೃತ್ತಿ; ಶ್ರೀಹರಿಯಿಂದ ಧರ್ಮಜ್ಞಾನವೈರಾಗ್ಯಲಬ್ಧಿ. ಚತುರ್ವಿದ ಪುರುಷಾರ್ಥಗಳು, ಅಷ್ಟವಿಧೈಶ್ವರ್ಯಗಳು, ಕೀರ್ತಿ, ಪಾಪನಿವಾರಣೆ, ಎಲ್ಲ ಶ್ರೇಯವೂ ಶ್ರೀಹರಿಯ ಅನುಗ್ರಹದಿಂದಲೇ. ಶಾಂತರು, ಸಮಚಿತ್ತರು, ಹಿಂಸಾರಹಿತರು, ನಿಷ್ಕಿಂಚನರು ಆದ ಸಾಧುಜನರಿಗೆ, ಶ್ರೀಹರಿಯೇ ಪರಮಗತಿ. ಅವನ ಶರೀರವು ನಿತ್ಯನಿರ್ದುಃಖನಿರತಿಶಯಾನಂದ ಜ್ಞಾನಮಯವು; ಅವನಿಗಿಷ್ಟರು ಬ್ರಾಹ್ಮಣರು; ಅವನನ್ನು ಪೊಂದುವರು; ನಿಷ್ಕಾಮರಾಗಿ ಸರ್ವಕರ್ಮಗಳನ್ನು ಅವನಿಗರ್ಪಿಸಿ, ಬಿಡದೆ ಭಜಿಸುವ ಸುಜನರು, ಅವನು ಸೃಜಿಸಿ, ಪ್ರವೇಶಿಸಿ, ನಿಯಮಿಸುವ ಮೂರು ಗುಣಗಳಲ್ಲಿ, ಸತ್ವವೇ ಅವನನ್ನು ತಿಳಿಸಿಕೊಡಲು ಕಾರಣವಾಗಿದೆ' ಎಂದು ಲೋಕದಲ್ಲಿ ಪ್ರಕಟಿಸಿ, ಸಾರಸ್ವತ ವಿಪ್ರವರರು ಪುರುಷೋತ್ತಮನ ಪಾದಾರವಿಂದ ಸೇವೆಯಿಂದ ದಿವ್ಯಗತಿಯನ್ನು ಪೊಂದಿದರು.

ಇಂತು ನಾರದ-ಭೃಗು-ಮುಖ ಮುನಿವರರು ನಿರ್ಣಯಿಸಿದಂತೆ ಶ್ರೀಹರಿಯ ಕಥಾಮೃತ ಮರ್ಮವನ್ನರಿತು, ಸಂಶಯವಿರ್ಯಯಗಳನ್ನು ಬಿಟ್ಟು, ಶ್ರೀಹರಿಕಥಾಮೃತವನ್ನು ಶ್ರವಣಪುಟದಿ ತುಂಬಿ, ಸದಾ ಸೇವಿಸುವ ಮನುಜಪಾಂಥನು, ಸಂಸಾರಟವೀಪರಿಭ್ರಮಣ ಆಯಾಸವನ್ನು ಕಳೆದುಕೊಂಡು, ಮುಕ್ತಿಸುಖವನ್ನು ಪೊಂದುವನು.

## ೮೪. ಶ್ರುತಿಗೀತೆ

ರಾಜನು ಪ್ರಶ್ನಿಸಿದನು–

ಬ್ರಹ್ಮಜ್ಞಾನಿಯೇ!

'ಸರ್ವವೇದಗಳು ಪರಮಾತ್ಮನ ಸ್ವರೂಪವನ್ನು ಪ್ರತಿಪಾದಿಸುವುವೆಂದು ವೇದ ವಚನವೇ ಇದೆ. ಅದೃಶ್ಯತ್ವಾದಿ ಗುಣಕನಾದ ಶ್ರೀಶನನ್ನು ಅವನು ಹೇಳುವುದಾದರೂ ಹೇಗೆ? ಲಕ್ಷಣಾ ವೃತ್ತಿಯಿಂದ ಹೇಳುತ್ತವೆ ಎಂದರೆ ಅವನು ಕೇವಲ ನಿರ್ಗುಣನು. ನಿರ್ಗುಣನಿಗೆ ಗುಣಗಳನ್ನು ಕೂಡಿಸುವುದಾದರೂ ಎಂತು? ಈ ವಿಷಯದಲ್ಲಿ ನಮಗೆ ಸಂಶಯವಿದೆ. ದಯಮಾಡಿ ನಮ್ಮ ಸಂಶಯವನ್ನು ನಿವಾರಿಸು.'

ಶ್ರೀಶುಕನು ಹೇಳಿದನು–

ಸರ್ವಸಮರ್ಥನಾದ ಶ್ರೀಹರಿಯು ಶಬ್ದಪ್ರವೃತ್ತಿಯನ್ನು, ಪುಣ್ಯವನ್ನು, ಪರಮಾತ್ಮ ಪ್ರೀತಿಯನ್ನು, ಅಪರೋಕ್ಷಜ್ಞಾನವನ್ನು, ಮೋಕ್ಷವನ್ನು ಪೊಂದುವ ಜೀವರಿಗಾಗಿ, ಬುದ್ಧಿ ಮನಸ್ಸು

ಇಂದ್ರಿಯ ಪ್ರಾಣಗಳನ್ನು ಸೃಜಿಸಿಕೊಟ್ಟನು. ಬುದ್ಧೀಂದ್ರಿಯಾದಿಗಳುಳ್ಳ ಜೀವನು, ಶಬ್ದವನ್ನು ಚೆನ್ನಾಗಿ ತಿಳಿದು ವಿನಿಯೋಗಿಸುವುದರಿಂದ, ಪರಬ್ರಹ್ಮಜ್ಞಾನವನ್ನು ಪೊಂದುವನು; ಕೇಳಿದ ಆನಂದ ಜ್ಞಾನಾದಿ ಗುಣಗಳನ್ನು ಯಥಾಯೋಗ್ಯವಾಗಿ ಧ್ಯಾನಿಸುವನು; ಅದರಿಂದ ಭಗವತ್ಪ್ರಸಾದ ವನ್ನು, ಅದರಿಂದ ಮೋಕ್ಷವನ್ನು ಹೊಂದುವನು. ಆದ್ದರಿಂದ ವೇದಾದಿ ಶಬ್ದಗಳು ಸಾಕ್ಷಾತ್ತಾಗಿಯೇ ಶ್ರೀಹರಿಯನ್ನು ನಿರೂಪಿಸುತ್ತಿವೆ. ಶ್ರೀಹರಿಯು ಅದೃಶ್ಯ ಅವಾಚ್ಯನೆಂಬ ವಾಕ್ಯಗಳಿಗೆ, ಸಾಕಲ್ಯೇನ ಅವಾಚ್ಯನೆಂದು ಅರ್ಥವೇ ಆಗಲಿ, ಸರ್ವಥಾ ಅವಾಚ್ಯನೆಂದಲ್ಲ. ಕೆಲವರು ರಾಜಸರು ವಿಷಯಭೋಗರೂಪಸಂಸಾರಕ್ಕೆಂದು ಇಂದ್ರಿಯಾದಿಗಳನ್ನು ಉಪಯೋಗಿಸುವರು. ಶ್ರೀಹರಿ ಕೊಟ್ಟ ಇಂದ್ರಿಯಾದಿಗಳನ್ನು ಕೆಲವರು ದುಷ್ಟವಿಷಯಗಳಲ್ಲಿಟ್ಟು, ಸರ್ವಸ್ವಾಮಿಯಾದ ಹರಿಯನ್ನು ದ್ವೇಷಿಸಿ ತಮಸ್ಸನ್ನು ಪೊಂದುವರು.

ಶ್ರೀಹರಿಯು ನಿರ್ಗುಣನೆಂದರೆ ಸತ್ವರಜಸ್ತಮೋಗುಣರಹಿತನು; ಅಪ್ರಾಕೃತನೆಂದರ್ಥವಾಗಲಿ, ನಿರ್ಧರ್ಮನೆಂದಲ್ಲ. ಆನಂದಾದಿ ಸಮಸ್ತ ಕಲ್ಯಾಣಗುಣಗಣನಿಧಿಯಾದ ಶ್ರೀಹರಿಯನ್ನು ಗುಣವೃತ್ತಿಗಳಾದ ವೇದಗಳು ಸಾಕ್ಷಾತ್ತಾಗಿ ಪೊಗಳುವುವು. ಎಲ್ಲಾ ಶಬ್ದಗಳ ಪ್ರವೃತ್ತಿ ನಿಮಿತ್ತಗಳಿಗೂ ಶ್ರೀಶನೇ ಮುಖ್ಯಾಶ್ರಯನಾದುದರಿಂದ, ವೇದಮುಖ್ಯಾರ್ಥನಾಗಿ ಸರ್ವದಾ ವಿರಾಜಿಸುವನು. ಕರ್ಮದೇವಕಾಂಡಗಳು ಸ್ಥಿತಿಕಾಲದಲ್ಲಿ ಕರ್ಮಗಳನ್ನು ದೇವತೆಗಳನ್ನು ಹೇಳುವುದು ನಿಜ; ಆದರೆ ಆಗಲೂ ಶ್ರೀಹರಿಯನ್ನೇ ಮುಖ್ಯವೃತ್ತಿಯಿಂದ ನಿರೂಪಿಸುವುವು. ಆದುದರಿಂದ ಅವನು ಅವಾಚ್ಯನಲ್ಲ. ಚಕ್ಷುರ್ನಿಮೀಲನರೂಪ ಯೋಗನಿದ್ರಾಮುದ್ರಿತನಾದ ಶ್ರೀಹರಿಯನ್ನು, ಪ್ರಳಯದಲ್ಲಿಯು, ದುರ್ಗಾದೇವಿಯು ಸ್ತುತಿಸುತ್ತಿರುವಳು. ಆಗ ಸ್ತುತಿರೂಪವಾಗಿರುವ ವೇದವಚನಗಳು, ಸ್ಥಿತಿಕಾಲದಲ್ಲಿ ಅಮುಖ್ಯಾರ್ಥವನ್ನೂ ಪೇಳುತ್ತಿರುವುವು; ವೇದಗಳಿಗೆ ಮೂರರ್ಥವಲ್ಲವೇ? ಜೀವದುಃಖವನ್ನು ಪರಿಹರಿಸಲು ಶ್ರುತಿಪ್ರವೃತ್ತಿ, ಆದುದರಿಂದ ಗುರುಶಿಷ್ಯರದನ್ನು ಅಧ್ಯಯನ ಮಾಡಿ, ದುಃಖಮುಕ್ತರಾಗಲೆಂದೇ ಶ್ರೀಶನು ಜೀವರಿಗೆ ಬುದ್ಧೀಂದ್ರಿ ಯಾದಿಗಳನ್ನಿತ್ತಿರುವನು. ವರ್ಣಾತ್ಮಕ ಶಬ್ದಗಳೇ ಅಲ್ಲದೆ ಧ್ವನ್ಯಾತ್ಮಕ ಶಬ್ದಗಳು ಕೂಡ ಶ್ರೀಹರಿ ವಾಚಕಗಳೆಂದು ತಿಳಿದು, ವೇದವೇದ್ಯನಾದ ಪರಮಾತ್ಮನನ್ನು ಜ್ಞಾನಿಗಳು ಭಜಿಸುವರು.

ಶ್ರೀನಾರಾಯಣ ಬುದ್ಧಿಸ್ಥವಾದ ವೇದಗಳು ಅನಾದಿನಿತ್ಯಗಳು–ಅಪೌರುಷೇಯಗಳು. ಅದನ್ನು ಬ್ರಹ್ಮಾದಿಗಳು ಅಧ್ಯಯನ ಮಾಡಿ, ತಮ್ಮ ಶಿಷ್ಯ ಜನರಿಗೆ ಉಪದೇಶಿಸಿರುವರು. ಗುಣಪೂರ್ಣನಾದ ನಾರಾಯಣನನ್ನು ತಿಳಿಸಿಕೊಡುವ ವೇದಗಳನ್ನು ಶ್ರದ್ಧೆಯಿಂದ ವೈರಾಗ್ಯಪೂರ್ಣನಾಗಿ ಪಠಿಸಿದ ನರನು, ಜ್ಞಾನವನ್ನೂ ಅದರಿಂದ ಮೋಕ್ಷವನ್ನೂ ಪಡೆಯುವನು. ಶ್ರುತಿ ತಾತ್ಪರ್ಯ ನಿರೂಪಕನಾದ ಶ್ರುತಿಗೀತೆಯನ್ನು ನಿನಗೆ ಹೇಳುವೆನು. ಶ್ರುತಿಗಳು ಶ್ರೀಹರಿಯನ್ನು ಎಂತು ನಿರೂಪಿಸುವವೆಂಬ ವಿಷಯದಲ್ಲಿ, ನಾರದ-ನಾರಾಯಣ ಋಷಿಸಂವಾದರೂಪವಾದ ಕಥೆಯನ್ನು ಕೇಳು–

ಒಂದು ಸಲ ಭಗವತ್ಪ್ರಿಯನಾದ ನಾರದನು ಲೋಕಗಳಲ್ಲಿ ತಿರುಗುತ್ತಾ, ಸನಾತನ ಋಷಿವರನಾದ ನಾರಾಯಣನನ್ನು ನೋಡಲು ಬದರಿಕಾಶ್ರಮಕ್ಕೆ ಬಂದನು. ಭರತವರ್ಷದ ಸುಜನರ ಕ್ಷೇಮವನ್ನು ಬಯಸಿ, ಶ್ರೀನಾರಾಯಣನು ಬದರಿಕಾಶ್ರಮದಿ ತಪವನ್ನು ಮಾಡುತ್ತಿರುವನಲ್ಲವೇ? ಧರ್ಮ, ಜ್ಞಾನ, ಶಮ, ದಯಾದಿ, ಕಲ್ಯಾಣಗುಣಸಮುದ್ರನಾದ ಭಗವಂತನಲ್ಲಿ,

ಕಲಾಪಗ್ರಾಮವಾಸಿ ಋಷಿಗಳಿಂದ ಕೂಡಿ, ಆಶ್ರಮತರುಖಂಡದ ನೆರಳಲ್ಲಿ ಕೂತಿದ್ದನು. ನಾರದನು ಶ್ರೀಹರಿಗೆ ನಮಸ್ಕರಿಸಿ, ವೇದನಿರೂಪಣ ವಿಧಾನವನ್ನು ಪೇಳೆಂದು ಕೇಳಿದಾಗ, ಸ್ವಾಮಿಯು, ಆ ಋಷಿವರರ ಸಭೆಯಲ್ಲಿ, ಜನೋಲೋಕನಿವಾಸಿಗಳು ನಡೆಸಿದ ಸತ್ರಯಾಗ ವಿವರವನ್ನು ನಾರದನಿಗೆ ತಿಳಿಸಿದನು.

ನಾರದಾ! ಜನಲೋಕದಲ್ಲಿ ಬ್ರಹ್ಮವಿಚಾರರೂಪ ಸತ್ರಯಾಗವನ್ನು ಬ್ರಹ್ಮಪುತ್ರರಾದ ಸನಕಾದಿಗಳು ನಡೆಸಿದರು. ಊರ್ಧ್ವರೇತಸ್ಕರಾದ ಆ ಮಹನೀಯರ ಯಜ್ಞದಲ್ಲಿ ನೀನಿದ್ದಿಲ್ಲ. ಅನ್ಯವಿಷಯವನ್ನು ಬಿಟ್ಟು ಕೇವಲ ಹರಿಗುಣಬೋಧಕಗಳಾಗಿ ವೇದಗಳು ಅಲ್ಲಿ ಶ್ರೀಹರಿಗುಣ ವನ್ನು ಕೊಂಡಾಡುತ್ತಿರುವುವು. ಅಂತಹ ಶ್ವೇತದ್ವೀಪಕ್ಕೆ ಶ್ರೀವಾಸುದೇವನನ್ನು ನೋಡಲು ಹೋಗಿದ್ದೆ. ಆಗ ಜನೋಲೋಕದ ಸತ್ರಯಾಗವು ನಡೆಯುತ್ತಿತ್ತು; ಅಲ್ಲಿ ಕೆಲವರು ಪ್ರವಚನ ವನ್ನು ಮಾಡುತ್ತಿರಲು, ಕೆಲವರು ಶ್ರದ್ಧೆಯಿಂದ ಕೇಳುತ್ತಿದ್ದರು. ಸನಂದನನು ಶ್ರೀಹರಿಯ ಸನ್ನಿಧಾನದಿಂದಲು, ವಯಸಾಜ್ಯೇಷ್ಠನಾದುದರಿಂದಲು, ಕೂತು ಪ್ರವಚನವನ್ನು ಮಾಡಿದನು.

ಬ್ರಹ್ಮಪ್ರಳಯವಾದಾಗ ಜಗತ್ತನ್ನು ಉಪಸಂಹರಿಸಿ, ಶ್ರೀಭೂದುರ್ಗಾರೂಪಳಾದ ಲಕ್ಷ್ಮೀ ದೇವಿಯಿಂದ ಕೂಡಿ, ಯೋಗನಿದ್ರೆಯನ್ನು ಮಾಡುತ್ತಿದ್ದ ಪರಮಾತ್ಮನನ್ನು, ಬ್ರಹ್ಮ- ಪ್ರಳಯಾವ ಸಾನದಲ್ಲಿ, ವೇದಗಳು ಸಂಸಾರ ನಿರ್ಮೂಲನ ದಕ್ಷನಾದ ಸ್ವಾಮಿಯನ್ನು ಸ್ತುತಿಸಿ ಎಚ್ಚರಗೊಳಿಸಿ ದವು. ಅನಂತ ವೇದಾಭಿಮಾನಿನಿಯಾದ ದುರ್ಗೆಯು, ವಂದಿಜನರು ಪ್ರತ್ಯೂಷ ಕಾಲದಲ್ಲಿ ಚಕ್ರವರ್ತಿಯನ್ನು ಪಾಡಿ ಪೊಗಳುವಂತೆ, ಶ್ರೀಹರಿಯ ವೀರ್ಯಜ್ಞಾನಕಾರಣ್ಯ ಸಮಗ್ರೈಶ್ವರ್ಯ ಯಶೋವಿಭವಗಳನ್ನು ಪೊಗಳುತ್ತಾ ಇಂತು ನುಡಿಯುವಳು–

ಹೇ ಅಜಿತ! ನೀನು ಸದಾ ಜಯಶೀಲನಾಗಿರುವೆ. ನಿನ್ನ ಜಯಶೀಲತೆಯನ್ನು ನಾವು ತಿಳಿಯುವಂತೆ ಅನುಗ್ರಹಿಸು! ಜನನಮರಣ ದುಃಖಾಜ್ಞಾನಗಳಿಂದ ಜೀವನ ಜ್ಞಾನಾದಿ ಗುಣಗಳು ಮುಚ್ಚಲ್ಪಟ್ಟಿವೆ. ಆಗ ಜೀವಗುಣಾಚ್ಛಾದನವನ್ನು ನಾಶಮಾಡು! ಪರಮೇಶಾ! ನಿನ್ನ ಇಚ್ಛೆಯಾದ ಪರಮಾಚ್ಛಾದಿಕೆಯನ್ನೂ ದೂರ ಸರಿಸಿ, ನೀನು ದೃಗ್ಗೋಚರನಾಗು! ನೀನು ಸ್ವತಂತ್ರನು, ಸುಖಜ್ಞಾನಸ್ವರೂಪನು, ಆವರಣರಹಿತನು ಆದುದರಿಂದ ಎಂದಿಗೂ ಐಶ್ವರ್ಯದ್ಯನಂತಗುಣ ನಿಧಿಯೇ ಆಗಿರುವೆ. ನಿನ್ನ ಪ್ರತಿಬಿಂಬನಾದ ಜೀವನಿಗೆ ಬಂದಿರುವ ಪ್ರಕೃತಿಬಂಧವು ನಿನ್ನ ಅನು ಗ್ರಹದಿಂದಲೇ ನಾಶವಾಗಿ, ಅವನಿಗೆ ಸ್ವರೂಪಭೂತ ಜ್ಞಾನಾದಿ ಗುಣಗಳ ಪ್ರಕಾಶವಾಗುವಂತೆ ಮಾಡು! ಜಗತ್ತಿಗೆ ಆಶ್ರಯಭೂತರಾದ ಶ್ರೀಬ್ರಹ್ಮರುದ್ರಾದಿ ದೇವತೆಗಳಿಗೂ ಸೃಜನ ರಕ್ಷಣ ಸಂಹರಣ ಶಕ್ತಿಗಳನ್ನಿತ್ತು ಅವರನ್ನು ಪಾಲಿಸುವ ಸರ್ವೋತ್ತಮನು ನೀನು. ತತ್ವನಿಶ್ಚಾಯಕವಾದ ವೇದವು ಸೃಷ್ಟಿಕಾಲದಲ್ಲಿ ಜೀವರಿಂದಲು, ಜಡಪ್ರಕೃತಿಯಿಂದಲು ಕೂಡಿ ಆಡುವ ನಿನ್ನ ಚಿತ್ತವನ್ನನುಸರಿಸಿ, ವಿಧಿನಿಷೇಧರೂಪವಾಗಿರುವುದು. ಲಯಕಾಲದಲ್ಲಿ ವಿಧಿನಿಷೇದರಹಿತನು, ಜೀವಜಡಪ್ರಪಂಚನಿಕ್ಷೇಪನು ಆದ ನಿನ್ನನ್ನು ಕೇವಲ ಸ್ತುತಿರೂಪಳಾಗಿ ವೇದಮಾನಿ ದುರ್ಗೆ ಹಾಗೂ ಇತರ ಅಭಿಮಾನಿ ಸುರರಿಂದ ಕೂಡಿ ಪಾಡುತ್ತಿರುವಳು. ನಿನ್ನ ಪ್ರಾಪ್ತಿಗಾಗಿ ವಿಧಿಗಳು; ನಿನ್ನ ಪ್ರೀತಿಯನ್ನು ಕಳೆದುಕೊಳ್ಳದಿರಲು ನಿಷೇಧಗಳು; ನಿನ್ನ ನಾಮಗಳೇ ಸರ್ವವೇದಗತ ಶಬ್ದ ಗಳು; ಅವುಗಳ ಮುಖ್ಯಾರ್ಥವು ಕರ್ಮಗಳು; ನೀನೇ ಮುಖ್ಯಾರ್ಥನು. ಆದ್ದರಿಂದ ಆಲಸ್ಯ ಮಾಡದೆ ನಮಗೆ ಜ್ಞಾನವನ್ನು ಕೊಟ್ಟು, ಜೀವರಿಗಿರುವ ಪ್ರಕೃತಿಬಂಧವನ್ನು ನಾಶಮಾಡು!

(ಶಾಂಡಿಲ್ಯ ಶ್ರುತಿ)

ತಮಸ್ಸಿನ ಪಾರದಲ್ಲಿ ಮೂಲಪ್ರಕೃತಿಗೂ ಉತ್ತಮನಾಗಿ ಪೂರ್ಣಗುಣನಾದ ನಿನ್ನ ದಿವ್ಯಸ್ವರೂಪವನ್ನು ವೇದಗಳು ಸಾರುತ್ತಿವೆ. ಭೂತಗಳಿಗೆ ಉತ್ತಮಳು ಭೂದೇವಿಯು; ಭೂಮಿಗುತ್ತಮರು ಜಲಮಾನಿ ವರುಣನು, ಬುಧನು; ಅವರಿಗುತ್ತಮನು ಓಷಧೀಶರಾದ ಚಂದ್ರಾದಿಗಳು; ಅವರಿಗೂ ಉತ್ತಮರು ಪುರುಷಮಾನಿ ರುದ್ರ ಶೇಷ ಗರುಡರು; ಅವರಿಗೆ ಉತ್ತಮಳು ಸರಸ್ವತಿ. ಆ ದೇವಿಯು ತಾನಾಗಿ ವಾಕ್ಕಿಗೆ ನಿಯಾಮಕಳಾಗಿದ್ದು, ಮುಖ್ಯಪ್ರಾಣ ಸನ್ನಿಧಾನ ವಿಶೇಷಯುಕ್ತಳಾದಾಗ ಋಕ್ಕಿಗೂ ಅಭಿಮಾನಿಯಾಗಿರುವಳು; ಆಕೆಗೆ ಉತ್ತಮನು ಸಾಮನಾಮಕ ಮುಖ್ಯ ಪ್ರಾಣನು. ಮುಖ್ಯಪ್ರಣವಲ್ಲಭನೇ ಉದ್ಗೀಥನಾಮಕ ಶ್ರೀ ರಮೇಶನು. ಅವನಿಗುತ್ತಮರಿಲ್ಲ. ಅವನೇ ಪರಾಗತಿಯು. ಅವಿಕೃತ ತಮೋಮಾನಿ ದುರ್ಗೆಗೂ ಅಗಾಧವಾದ ಮಹಿಮೆಯಿಂದ ಶೋಭಿಸುವ ಪ್ರಾಕೃತ ಗುಣಲೇಪಹಿತನಾದ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದು ಜ್ಞಾನಿಜನರು ಮನಸಾ ಭಜಿಸಿ, ವಚಸಾ ಸ್ತುತಿಸಿ ಕಾಯೇನ ಸೇವಿಸಿ ಅಂತೆಯೇ ನಿನ್ನನ್ನು ಪೊಂದುತ್ತಿರುವರು. ಮನುಷ್ಯನು ಭೂಮಿಯ ಏಕದೇಶದಲ್ಲಿ ಸಂಚರಿಸುತ್ತಿದ್ದರೂ, ಅವನನ್ನು ಭೂಸಂಚಾರಿ ಎಂದೇ ಅನ್ನುತ್ತಿದ್ದರು. ಹಾಗೆಯೇ ಶ್ರೀಹರಿಯನ್ನು ಸಾಕಲ್ಯೇನ ತಿಳಿಯಲಾರದಿದ್ದರೂ, ಏಕದೇಶಜ್ಞಾನದಿಂದ ಬ್ರಹ್ಮಾದಿಗಳು ಬ್ರಹ್ಮಜ್ಞಾನಿಗಳೆಂದೇ ಪ್ರಖ್ಯಾತರಾಗಿರುವರು. ಶ್ರೀಹರಿಯು ಸರ್ವೋತ್ತಮನೆಂದು ತಿಳಿಯುವುದರಿಂದ ಎಲ್ಲವೂ ತಿಳಿದಂತಾಗುತ್ತದೆ. ಶ್ರೀಹರಿಸರ್ವೋತಮತ್ವ ಜ್ಞಾನಿಗಳಿಗೆ ಅನ್ಯಥಾಗತಿ ಎಂದಿಗೂ ಇಲ್ಲ. ಆದ್ದರಿಂದ ಪರಮಾತ್ಮನು ಸರ್ವಥಾ ಅವಾಚ್ಯನೆಂದು ಹೇಳಬಾರದು. (ಉದ್ದಾಲಕಾಯನ ಶ್ರುತಿ)

ತ್ರಿವಿಧಜೀವಾಧಿಪತೇ! ಸರ್ವೋತ್ತಮ! ಅಖಿಲಲೋಕ ಪಾಪಕ್ಷಾಳನ ಕ್ಷಮವಾದ ನಿನ್ನ ಕಥಾಮೃತ ಸಮುದ್ರದಲ್ಲಿ ಮಗ್ನರಾದ ಜ್ಞಾನಿಗಳು ಸರ್ವತಾಪರಹಿತರಾಗುವರು; ಇನ್ನು ಅನನ್ಯಾಶ್ರಯನಾದ ನಿನ್ನನ್ನೇ ಪೊಂದಿ, ನಿನ್ನ ದಯದಿಂದ ದುಃಖಶೋಕಾದಿ ಮನೋವಿಕಾರಗಳನ್ನು, ಜನನಮರಣಾದಿ ಕಾಲೋಪದ್ರವವನ್ನು ಕಳೆದುಕೊಂಡ ಮುಕ್ತಜೀವರು, ನಿತ್ಯಾಭಿವ್ಯಕ್ತ ಸುಖ ಜ್ಞಾನಾನುಭವ ಸುಸ್ವರೂಪನನ್ನು ಸದಾ ಭಜಿಸುತ್ತಾ, ತಾವು ಸರ್ವತಾಪ ದೂರರಾಗಿ ಸುಖಿಸುವರೆಂದು ಹೇಳಬೇಕೇ? (ಇಂದ್ರದ್ಯುಮ್ನಶ್ರುತಿ)

ಸ್ವಾಮಿನ್! ಬ್ರಹ್ಮರುದ್ರಾದಿ ದೇವತೆಗಳಿಗೆ ಅಧೀನವಾಗಿ, ಅವನ ದೇಹವೆನಿಸಿರುವ ಮಹತ್ತತ್ವ, ಅಂಹಕಾರತತ್ವ ಮೊದಲಾದ ತತ್ವಗಳು, ನೀನು ಅವರಲ್ಲಿ, ಅವುಗಳಲ್ಲಿಯು ಪ್ರವೇಶಿಸಿ, ಅನುಗ್ರಹಿಸು, ಸಾಮರ್ಥ್ಯವನ್ನಿತ್ತಾಗ, ಬ್ರಹ್ಮಾಂಡವನ್ನು ಸೃಜಿಸಲು ಶಕ್ತರಾದರು. ಇಂತು ಅತ್ಯಂತೋಪಾಕಾರಕನು, ಅನಿಮಿತ್ತಬಂಧುವು ಆದ ನಿನ್ನನ್ನು ದ್ವೇಷಿಸುವರು- ಇಲ್ಲಿ ಸರ್ವಮಿಥ್ಯಾತ್ವವಾದಿಗಳು ನಿರ್ಗುಣಾದಿಗಳು – ಅಹಂಬ್ರಹ್ಮ ಎಂದುಪಾಸಿಸುವರು ಆಗಿ ಗಳಿಸಿದ ಪಾಪಪರಿಪಾಕದಿಂದ ಅಂಧಂತಮಸ್ಸನ್ನು ಸೇರುವರು. ಅಲ್ಲಿ ದುಃಖಭರಾಕ್ರಾಂತರಾಗಿ ಕಮ್ಮಾರ ತ್ರಿತ್ತಿ(ತಿದಿ)ಗಳಂತೆ ಕಷ್ಟದಿಂದ ನಿಟ್ಟುಸುರಿಟ್ಟು ಗೋಳಾಡುವರು. ಆದರೆ ನಿನ್ನ ಭಕ್ತರಾದ ಮುಕ್ತಿಯೋಗ್ಯರು ಮೂರು ವಿಧರಾದವರು ಕೂಡ ಬ್ರಹ್ಮದೇವರಿಗೆ ವಿಧೇಯರು, ಅನುಚರರು ಆಗಿರುವರು. ಚರಮರಾದ ಮನುಷ್ಯೋತ್ತಮರು, ಮಧ್ಯಮರಾದ ಋಷಿಗಂಧರ್ವರು, ಉತ್ತಮರಾದ ರುದ್ರೇಂದ್ರಾದಿ ದೇವತೆಗಳು ಕೂತ ಮುಕ್ತಿಯೋಗ್ಯರು. ಇವರಲ್ಲಿ ಯಾವ ಅಧಿಕಾರಿಯು, ಮೂರ್ತಾಮೂರ್ತ ಜಗದ್ವಿಲಕ್ಷಣನು ಪೂರ್ಣಸುಖನು, ಸ್ವಗತಭೇದವಿವರ್ಜಿತನು, ಶಶ್ವದೇಕ ಪ್ರಕಾರನು ಆದ ಶ್ರೀರಾಮಾರಮಣನನ್ನು ತಿಳಿದು, ಇತರ ಯೋಗ್ಯರಿಗೆ ಉಪದೇಶಿಸುವನೋ,

ಅವನು ಪುರುಷಶರೀರ ನಿಯಾಮಕನಾಗಿ, ಪುರುಷನಂತಿರುವ ಪೂರ್ಣ ಷಡ್ಗುಣನಾದ ನಿನ್ನ ಲೋಕದಲ್ಲಿ, ಸಾಯುಜ್ಯಾದಿ ಮೋಕ್ಷಸುಖವನ್ನು ಪೊಂದನು. (ಷೃಂಗಿಶ್ರುತಿ)

ಬ್ರಹ್ಮಮಾರ್ಗದಲ್ಲಿ ಭಗವದ್ವಿಷಯ ವಿಚಾರವನ್ನು ಮಾಡುವ ಶರ್ಕರಾಕ್ಷಸರೆಂಬುವ ಸೂಕ್ಷ್ಮದರ್ಶಿ ಋಷಿಗಳು, ಪರಿಸರನೆನಿಪ ಮುಖ್ಯಪ್ರಾಣನಲ್ಲಿ ಪರಮಾನುಗ್ರಹಮಾಡಿ, ಅವನಿಂದ ಕೂಡಿ ಶರೀರಪ್ರವೇಶಾದಿಗಳನ್ನು ಮಾಡುವ ಶ್ರೀಶನನ್ನು, ಉದರದಲ್ಲಿ, ಉದರ ನಾಮಕನಾಗಿ ನಿರ್ದೋಷನಾಗಿರುವನೆಂದು, ಉಪಾಸಿಸಿ, ಅಂತಹ ಸ್ವಾಮಿಯನ್ನು ಪ್ರತ್ಯಕ್ಷೀಕರಿಸಿಕೊಂಡು, ಮುಕ್ತರಾಗುವರು. ಆರುಣಿಗಳೆಂಬ ಋಷಿಗಳು, ದಹರನೆಂಬ ಅಣುಪರಿಮಾಣನಾಗಿ ಹೃದಯಲ್ಲಿದ್ದು ಹೃದಯನೆನಿಸುವ ಶ್ರೀಶನನ್ನು ಹೃದಯದಿ ಉಪಾಸಿಸಿ, ಪ್ರತ್ಯಕ್ಷೀಕರಿಸಿಕೊಂಡು, ಮುಕ್ತರಾಗುವರು. ಕೆಲವರಧಿಕಾರಿಗಳು ಸರ್ವೋತ್ಕೃಷ್ಟನಾದ ಶ್ರೀಹರಿಯನ್ನು ಮುಖ್ಯಪ್ರಾಣನಲ್ಲಿ ಉಪಾಸಿಸಿ, ಬ್ರಹ್ಮನಾಡೀಮಾರ್ಗದಿಂದ ಶಿರಃಪ್ರದೇಶವನ್ನು ಸೇರಿ, ಅಲ್ಲಿ ಶ್ರೀಹರಿಯನ್ನು ಅಪರೋಕ್ಷೀಕರಿಸಿಕೊಂಡು, ಮುಕ್ತರಾಗುವರು. ಎಲ್ಲ ಅಧಿಕಾರಿಗಳು ಇಂತೆಯೇ ಶ್ರೀಮುಖ್ಯ ಪ್ರಾಣಪತಿಯಾದ ರಮಾರಮಣನ ದಯದಿಂದ ಮುಕ್ತರಾಗಿ, ಮತ್ತೆ ಯಮರಾಜನ ಬಾಯತುತ್ತಾಗದೆ ಸಂಸಾರದುಃಖ ದೂರರಾಗುವರು. ಮುಖ್ಯಪ್ರಾಣನೇ ಸರ್ವಜೀವೋತ್ತಮನು. ಅವನು ಶ್ರೀದೇದಿಗಧೀನನು. ಶ್ರೀದೇವಿಯು ನಾರಾಯಣಪ್ರಿಯಳು. ಶ್ರೀಹರಿಯು ಮುಖ್ಯಪ್ರಾಣನಿಂದ ಶರೀರದಿಂದ ಉತ್ಕ್ರಾಂತಿಯನ್ನು ಶರೀರ ಪ್ರತಿಷ್ಠೆಯನ್ನು ಜೀವರಿಗೆ ಮಾಡಿಸುವನು. ಪ್ರಾಣನ ಹಿಂದೆ ಇತರ ದೇವತೆಗಳು. ಪ್ರಾಣನಿಗೆ ಮಿಗಿಲಾದ ಶ್ರೀಹರಿಭಕ್ತರಿಲ್ಲ. ಪ್ರಾಣನಿಂದ ಜೀವರಿಗೆ ಮೋಕ್ಷಾನಂದ ಸಾಧನವಾದ ಶ್ರೀಹರಿಪ್ರಸಾದ. (ಹಿರಣ್ಯನಾಭಶ್ರುತಿ)

ನೀನು ನಿರ್ಮಿಸಿದ ಸುರನರಾದಿ ನಾನಾವಿಧ ಶರೀರಗಳಲ್ಲಿ ನೀನು ನಿಯಾಮಕನಾಗಿರುವೆ. ಶ್ರೀಶ! ಆದರೆ ಅಜ್ಞಾನಿಗಳು, ಕಾಷ್ಠವನ್ನು ಕೊಂಡು ಪೋಗುವಾಗ, ಅಲ್ಲಿ ಉರಿಯುವ ಅಗ್ನಿಯು ಕೂಡ ಅನುಸರಿಸಿ ಪೋಗುವಂತೆ, ನೀನು ಶರೀರಗಳಲ್ಲಿ ಅನುವರ್ತಿಸಿ, ಜೀವನಂತೆ ಪ್ರಕೃತಿಬದ್ಧನಾಗಿರುವೆ ಎಂದು ತಿಳಿಯುವರು. ನಿನಗೆ ಪ್ರಕೃತಿಬಂಧದಿಂದ ಬರುವ ದುಃಖಾಜ್ಞಾನಾದಿಗಳನ್ನು ಕಲ್ಪಿಸುವ ಆ ಭ್ರಾಂತರು ದುಃಖವನ್ನೇ ಪೊಂದುವರು. ಜ್ಞಾನಿಗಳು ಹಾಗಲ್ಲದೆ ಸರ್ವನಿಮಿತ್ತ ಕಾರಣನು ನೀನೆಂತಲು, ಸರ್ವವಿಲಕ್ಷಣನೆಂತಲು ಮುಖ್ಯ ಪ್ರಾಣ ಗುರುರಾಜನಿಂದ ತಿಳಿಯುವರು. ಅಶಾಶ್ವತವು ಅತ್ಯಂತ ಹೇಯವು ಆದ ಶರೀರಗಳಲ್ಲಿ ಶಾಶ್ವತನು, ದೋಷರಹಿತನಾಗಿರುವ ನಿನ್ನ ಬಹುರೂಪಗಳನ್ನು, ಚೆನ್ನಾಗಿ ವಿಚಾರಿಸಿ ನೋಡಿ ಮಹಜ್ಜನರು, ಮನಮುಟ್ಟಿ ಭಜಿಸಿ, ಮುಕ್ತರಾಗಿ ಸುಖಿಸುವರು. (ಕಮಠಶ್ರುತಿ)

ಪೂರ್ಣಷಡ್ಗುಣ! ನಾರಾಯಣ! ಸಮಸ್ತ ಜೀವರ ಇಂದ್ರಿಯ ಮನೋಬುದ್ಧಿಗಳಲ್ಲಿಯೂ ಹೊರಗೂ ಇದ್ದು, ಹಾಗೂ ಶ್ರೇಷ್ಠಗುಣರಾದ ಶ್ರೀಬ್ರಹ್ಮಾದಿಗಳಲ್ಲಿಯೂ ನೆಲೆಸಿ, ಉತ್ತಮಕ್ರಮದಿಂದ ಅವರ ಗುಣಕರ್ಮಗಳ ಪ್ರೇರಕನಾಗಿರುವುದರಿಂದ, ಅವರೆಲ್ಲರೂ ಮಾಡಿರುವ ಪುಣ್ಯವನ್ನು ನೀನೇ ಮಾಡಿರುವೆ; ನೀನೇ ಸ್ವತಂತ್ರಕರ್ತನೆಂದು ಜ್ಞಾನಿಗಳು ತಿಳಿದಿರುವರು. ಅಸಜ್ಜನರಲ್ಲಿದ್ದು ಇಂದ್ರಿಯಾದಿಪ್ರೇರಕನಾಗಿ ಶ್ರೀಬ್ರಹ್ಮಾದಿಗಳು ಮಾಡಿಸಿದ ಪಾಪದಿಂದ ಅವರಿಗೆ ಅಧೋಗತಿಯಾಗುವಂತೆ ನಡೆಸುವ ಸ್ವತಂತ್ರಕರ್ತನೂ ನೀನೇ ಆಗಿ, ನಿನ್ನ ಸಂಕಲ್ಪಾನುಸಾರವಾಗಿ ನಡೆದ, ಪುಣ್ಯಪಾಪಗಳೆಲ್ಲವನ್ನೂ ನಿನ್ನ ಪೂಜೆಯಂತೆ ಎಣಿಸುವೆ. ಅಂತೆಯೇ ಅನುಸಂಧಾನದಿಂದ ವರ್ತಿಸಿ, ಅಸುರಪಾಪಪ್ರೇರಕನಾದ ಬ್ರಹ್ಮಾದಿಗಳಿಗೆ ಪಾಪದ ಲೇಪವಿಲ್ಲ. ಅಂತಹ ಸಕಲ

ಕರ್ಮವಿಷಯಕ ಶಕ್ತಿಧಾರಕನಾದ ನಿನ್ನ ಮಹಿಮೆಯು ಅತ್ಯಾಶ್ಚರ್ಯಕರವಾಗಿದೆ. ಆದ್ದರಿಂದಲೇ ಜ್ಞಾನಿಗಳು 'ನಾಹಂ ಕರ್ತಾ, ಹರಿಃ ಕರ್ತಾ' ಎಂದು ತಿಳಿದು, ನಿನಗೆ ಶರಣಾಗತರಾಗಿ, ಸುಖಿಸುವರು. (ಋಗ್ವೇದ)

ನಿನ್ನ ಪ್ರಸಾದವಿಲ್ಲದಿರೆ ಶ್ರೀಹರೇ! ನಿನ್ನ ಸ್ವರೂಪವು ದುರ್ಜ್ಞೇಯವಾಗಿದೆ. ವಿವಿಧ ಸಾಂಸಾರಿಕ ದುಃಖದರ್ಶನದಿಂದ ವಿರಕ್ತರಾಗಿ, ವೇದೈಕವೇದ್ಯನು, ವೇದೋಕ್ತಫಲಪ್ರದನು ಆದ ನಿನ್ನ ಚರಣಾರವಿಂದ ಸೇವಾಸಕ್ತವಾದ ವಾಗಾದಿ ಸರ್ವೇಂದ್ರಿಯಗಳಿಂದ ಶುದ್ಧರಾದ ಸಜ್ಜನರು, ವೇದಾದಿ ಸಚ್ಛಾಸ್ತ್ರ ವಿಚಾರವನ್ನು ಮಾಡುವರು. ನಿನ್ನ ಪರಮಮಂಗಳ ಚರಿತ ಸುಧಾಪಾನ ಚತುರರಾದ ಆ ಸುಜನರು ಸಂಸಾರ ವಿಷವಾರಿಧಿಯನ್ನು ದಾಟಿ ಬಿಟ್ಟು, ಮುಕ್ತರಾಗಿ, ಮತ್ತೆ ಆತ್ಮಸುಖಪ್ರದಾನಾದ ನಿನ್ನ ಪ್ರೀತಿಗಾಗಿ ಯಜ್ಞಗಳನ್ನು ಮಾಡುವರು; ನಿತ್ಯವೂ ನಿನ್ನನ್ನೇ ಧ್ಯಾನಿಸುವರು. (ಕುತಿಕಶ್ರುತಿ)

ಈಶ್ವರ! ನಿನ್ನ ಚರಣಸರೋಜಯುಗ್ಮದಲ್ಲಿ ಹಂಸದಂತೆ ಆಶ್ರಯಿಸಿದ ಭಾಗವತರ ಸಂಗದಿಂದ, ದಿವ್ಯಜ್ಞಾನವನ್ನು ಸಂಪಾದಿಸಿ, ಗೃಹಾರಾಮರಾಮಾದಿವಿರಕ್ತರಾಗಿ, ಕೆಲವರು ಉತ್ತಮಾಧಿಕಾರಿಗಳು, ನಿನ್ನಿಂದ ಮೋಕ್ಷವನ್ನು ಕೂಡ ಬೇಡದಿರುವರು. ಇನ್ನು ಆ ಕೈವಲ್ಯ ಬೋಗಸುಖ ಅವರಿಗೆ ಬೇಕೆ? ಅವರಿಗೆ ನೀನೇ ಪರಮ ಪ್ರಯೋಜನರೂಪನು. ನಿನಗಾಗಿ ಸರ್ವವಿತರವು. ಇತರ ಸುಖಕ್ಕಾಗಿ ನೀನಲ್ಲ. ಸರ್ವಭಕ್ತಜನವತ್ಸಲ! ನಿನ್ನ ಸೇವೆಗೆ ಅನುಕೂಲವಾದ ಬ್ರಾಹ್ಮಣಾದಿ ಶರೀರವನ್ನು ಜ್ಞಾನಸಾಧನವಾದುದರಿಂದ ಪ್ರೀತಿಯಿಂದ ನೋಡುವರು. ಪ್ರಿಯತಮನಾದ ನೀನು ಸ್ವಾಮಿಯೆಂದರಿತು, ಎಲ್ಲವನ್ನೂ ಬಿಟ್ಟು, ಸರ್ವಪ್ರಕಾರದಿಂದಲು, ನಿನ್ನನ್ನಾರಾಧಿಸುವರು. (ಋಗ್ವೇದ)

'ಬ್ರಹ್ಮನು ನಾ'ನೆಂಬ ದುಷ್ಟೋಪಾಸನೆಯಿಂದ, ತಮ್ಮನ್ನು ತಾವೇ ಅಂಧಂತಮದಲ್ಲಿ ಕೆಡಹಿಕೊಳ್ಳುವ ಜನರು ಆತ್ಮಘಾತುಕರೇ ಸರಿ! ನಿರಸ್ತಸಮಸ್ತ ಸುಖವು, ನಿತ್ಯನಿರತಿಯಶ ದುಃಖವು ಆದ ತಮಸ್ಸಿನಲ್ಲೇ ಭ್ರಮಿಸುತ್ತಿರುವ ಅವರಿಗೆ ಪುನುರುತ್ಥಾನವೇ ಇಲ್ಲ. ಕುತ್ಸಿತದುಃಖ ಮಯ ಶರೀರಗಳಿಗೆ ಸುಖವಿನ್ನೆಲ್ಲಿಯದು? ಮೋಕ್ಷೋಪಯೋಗಿಯಾದ ಜ್ಞಾನವನ್ನು ದಾನಧಾರೆಯಾಗಿ ಸುರಿಸುವ ಜವವಲ್ಲಭ ಮುಖ್ಯಪ್ರಾಣನ ಮಾತಿನಂತೆ ಮನನ ಶೀಲರಾದ ಸುಜನರನ್ನು ನಿಂದಿಸುವ ದುಷ್ಟರು ಕೂಡ ಅಂತಹ ದುಃಖಮಯ ಲೋಕವನ್ನೇ ಪೊಂದುವರು. ಅನ್ಯಥೋಪಾಸನೆಯಂತೆಯೇ ಹರಿತದ್ಭಕ್ತದ್ವೇಷವು ಕೂಡ ಅನರ್ಥಾಪಾದಕವಾಗಿದೆ. (ಈಶಶ್ರುತಿ)

ಸ್ಮರಣೆಯಿಂದಲೇ ಪ್ರೀತನಾಗಿ ಒಲಿಯುವ ಶ್ರೀನಾರಾಯಣನೇ! ನಿನ್ನಸಚ್ಚಿದಾನಂದ ಸ್ವರೂಪವನ್ನು ನೀನೇ ಅರಿತಿರುವೆ. ವೇಧಾಭಿಮಾನಿಗಳೆನಿಸಿದ ನಮಗೂ ನಿನ್ನ ಸ್ವರೂಪದ ಸಾಕಲ್ಯಜ್ಞಾನವಲ್ಲ. ಶೇಷಪರ್ಯಂಕಶನನಾದ ನಿನ್ನ ಪಾದಾರವಿಂದ ಸುಧೆಯನ್ನು ನಾವು ಸಂಪೂರ್ಣವಾಗಿ ತಿಳಿಯಲಾರದಿರುವೆವಾದುದರಿಂದ ಅಸಮದರ್ಶನರಾಗಿರುವೆವು ಮತ್ತು ಸ್ವಯೋಗ್ಯತಾನುಸಾರವಾಗಿ, ಸರಿಯಾಗಿ ತಿಳಿದಿರುವುದರಿಂದಲು, ವೇದಾಗಮ್ಯಜ್ಞಾನವಾದರೂ ವೇದಾದಿಗಮ್ಯವಾದುದರಿಂದಲು, ವೇದಾಭಿಮಾನಿಗಳಾದ ನಾವು ಸಮದರ್ಶನರೂ ಆಗಿರುವೆವು. ಇನ್ನು ಪ್ರಪಂಚದಲ್ಲಿರುವ ಜೀವರಿಗೆ ನಿನ್ನ ಮಹಿಮೆಯನ್ನು ವರ್ಣಿಸಿ ಮುಗಿಸಲಾಗುವುದೇ? ನಿನ್ನಿಂದ ಹುಟ್ಟಿದ ಬ್ರಹ್ಮನೂ ಅವನಿಂದ ಸೃಜಿಸಲ್ಪಟ್ಟ ದೇವತೆಗಳಿಗೂ, ಜನ್ಮಾದಿ ದೋಷರಹಿತನಾದ ನಿನ್ನನ್ನೆಂತು ಸಾಕಲ್ಯೇನ ತಿಳಿಯಲು ಶಕ್ತರಾಗುವರು? (ಸಾಂಕೃತಿಶ್ರುತಿ)

ಜನನಾದಿ ದೋಷರಹಿತ! ಲಕ್ಷ್ಮೀನಾಥ! ನೀನು ಪ್ರಳಯಕಾಲದಲ್ಲಿ, ಅಧ್ಯಾಪಕ ಪರಂಪರೆಯಿಂದ ಬಂದ ವೇದಾದಿಶಾಸ್ತ್ರವನ್ನು ನಿನ್ನಲ್ಲಿಟ್ಟು, ಶಯನಿಸಿದ್ದೆ. ಆಗ ಅಧ್ಯೇತೃಜೀವರಿಲ್ಲದ್ದರಿಂದ ಶಾಸ್ತ್ರಪ್ರವೃತ್ತಿಯು ಇದ್ದಿಲ್ಲ. ಸ್ಥೂಲವಾದ (ಸತ್) ಬ್ರಹ್ಮಾಂಡಾದಿಗಳಾಗಲು, ಸೂಕ್ಷ್ಮವಾದ (ಅಸತ್) ಮಹದಾದಿಗಳಾಗಲಿ ಇದ್ದಿಲ್ಲ. ಜರಾಮರಣಾದಿಗಳನ್ನು ತಂದೊಡ್ಡುವ ಕಾಲವಿರಲಿಲ್ಲ. ಯಾವ ವಸ್ತುವೂ, ಕಾಲಮಹಮದಾದಿಗಳು, ಜೀವರು ಕೂಡ ಸ್ವತಂತ್ರರಾಗಿರಲಿಲ್ಲ. ಸರ್ವದಾ ಅಸ್ವತಂತ್ರರಾದ ಜೀವರು, ಅಸ್ವತಂತ್ರಜಡವು, ಶ್ರೀಹರಿಯ ಅಧೀನವಿಶೇಷದಿಂದ, ತಮ್ಮ ವ್ಯಾಪಾರ ಮಾಡಲು ಅಸಮರ್ಥರಾಗಿದ್ದರು. ಆದುದರಿಂದ ಇದ್ದರೂ, ಇಲ್ಲವೆಂದೇ ಹೇಳಲ್ಪಟ್ಟರು. ಸ್ಥೂಲವಾಗಿ ಜಗವು ನಿನ್ನಿಂದ ಜನಿಸಿತು; ಕೊನೆಗೆ ನಿನ್ನಿಂದ ಸಂಹೃತವಾಗುವುದು. ನೀನು ಜೀವಜಡಾತ್ಮಕ ಸರ್ವಜಗತ್ತಿಗೂ ಭಿನ್ನವಾಗಿ, ಸರ್ವೋತ್ತಮನಾಗಿರುವೆ. ನಿನ್ನನ್ನು ಸೇವಿಸಿ, ಸುಖ ರೂಪಫಲವನ್ನೂ ಬೇಡುವುದು ವ್ಯಾಪಾರವೆನಿಸುವುದಾಗಲಿ, ಭಕ್ತಿಎಂದೆನಿಸ ಲಾರದು. ಯಾವ ಫಲವನ್ನೂ ಬೇಡದೆ, ನಿನ್ನನ್ನು ಭಜಿಸುವ ನಿಷ್ಕಿಂಚನರಲ್ಲಿ ನೀನು ವಿಶೇಷ ಸನ್ನಿಧಾನದಿಂದಿರುವೆ- ಮತ್ತು ಅವರ ಉಪದೇಶ ವಚನದಿಂದ ತಿಳಿಯಲ್ಪಡುತ್ತಿರುವೆ. ಅಂತಹ ಉಪದೇಶಕರಲ್ಲಿ ಮುಖ್ಯಪ್ರಾಣನೇ ಪ್ರಧಾನನಾಗಿರುವನು. ನೀನು ಜಗದೇಕವಲ್ಲಭನಾದ ದೇವೋತ್ತಮನು. ನಿನ್ನ ಪುತ್ರನಾದ ಮುಖ್ಯ ಪ್ರಾಣನು ಜಗದೇಕಗುರುವಾದ ಜೀವೋತ್ತಮನು. (ಶ್ರುತಿ)

ಜೀವನಿಗೆ ತ್ರಿಗುಣಗಳ ಬಂಧ. ಶ್ರೀಹರಿಗಿಲ್ಲ. ಇದು ಶ್ರುತಿಸಿದ್ಧವಾದ ಮಾತು. ಆದರೆ ಜೀವನಿಗಿರುವ ಬಂಧವು ಪರಮಾತ್ಮನನ್ನು ತಿಳಿಯದಿರುವುದರಿಂದ ಬಂದಿದೆ. ಶ್ರೀಹರಿಯು ಅಜ್ಞಾನಲೇಶರಹಿತನು ಹಾಗೂ ಸಾರಜ್ಞಾನನಾದುದರಿಂದ, ಎಂದಿಗೂ ಅವನಿಗೆ ಬಂಧವಿಲ್ಲ. ನಿನ್ನ ಮನೋದೇಹಾದಿಗಳು ತ್ರಿಗುಣಕೃತವೆಂದು ಅಸಜ್ಜನರು ತಿಳಿಯುವರು. ಮನುಜವಂದ್ಯನಾದ ದೇವತೆಗಳು, ನಿನ್ನ ಮನಶ್ಶರೀರಾದಿಗಳೆಲ್ಲವೂ, ತ್ರಿಗುಣಾತೀತವು ಮತ್ತು ಪರಮಾನಂದಮಯವೆಂದು ತಿಳಿಯುವರು. ಜೀವಜಾತವು ದುಃಖವುಳ್ಳದ್ದಾಗಲು ನಿನ್ನನ್ನು ತಿಳಿಯದಿರುವುದೇ ಕಾರಣವು, ನಿನ್ನ ಜ್ಞಾನ, ನಿನ್ನ ಪ್ರಸಾದಗಳೇ ಬಂಧವಿಧ್ವಂಸನ ಕಾರಣವಾಗಿದೆ. ಬಂಧವು ಅಸ್ವಾಭಾವಿಕವಾದುದರಿಂದ, ಜೀವನು ನಿನ್ನ ಯಥಾರ್ಥಜ್ಞಾನದಿಂದ ಮುಕ್ತನಾಗಿ ಸುಖಿಸುವನು. (ಶ್ರುತಿ)

ಕನಕದಿಂದ ಮಾಡಲ್ಪಟ್ಟ ಕುಂಡಲಾದಿಗಳು, ಕನಕವಲ್ಲವೇ ಹೋಗುವವೇ? ಕನಕಮಯವೇ ಆಗಿ ನಾಮಭೇದದಿಂದ ಕುಂಡಲವೆಂದು ಕರೆಯಲ್ಪಡುವಂತೆ, ಜಗತ್ತಿನಲ್ಲಿ ನಿಯಮಿಸಲು ಪ್ರವೇಶಿಸಿ ರುವ ನೀನು, ಶ್ರೀಹರೇ! ಮೂಲರೂಪದಿಂದ ಅಭಿನ್ನನಾಗಿಯೇ ನಾಮರೂಪಾನಂತನಾಗಿ ವಿರಾಜಿಸುವೆ. ಸರ್ವಗತನಾಗಿ, ಸರ್ವಶಬ್ದವಾಚ್ಯನಾಗಿ, ಸರ್ವಪ್ರೇರಕನಾಗಿ, ಸರ್ವೋತ್ತಮನಾಗಿರುವ ನಿನ್ನನ್ನು ತಿಳಿದು ಪೂಜಿಸುವ ಜ್ಞಾನಿಗಳು ಸಂಸಾರತಾಪಗಳನ್ನು ಲೆಕ್ಕಿಸದೆ, ಮೃತ್ಯುವಿನ ತಲೆತುಳಿದು, ವಿಷ್ಣುಲೋಕವನ್ನು ಸೇರಿ ಸುಖಿಸುವರು. (ಶ್ರುತಿ)

ಶ್ರೀಶ! ನಿನ್ನ ಪಾದಾರವಿಂದೈಕಾಶ್ರಯರಾದ ದೇವತೆಗಳು ಕೂಡ ವೇದೋಕ್ತ ಸತ್ಕರ್ಮಾನುಷ್ಠಾನತತ್ಪರರಾಗಿ, ಮುಗುದಾಣೆಯಿಂದ ಕಟ್ಟಲ್ಪಟ್ಟ ಗವಾದಿಪಶುಗಳಂತೆ, ನಿನ್ನ ಅಧೀನರಾಗಿ, ಭಕ್ತಿದೃಢಪಾಶದಿಂದ ನಿನ್ನ ಪಾದಾರವಿಂದವನ್ನು ಬಿಗಿದು, ಬಿಡದೆ ಭಜಿಸುವರು. ಅವನು ಧನ್ಯರಾಗುವುದಲ್ಲದೆ, ಅಂತಹ ನಿನ್ನ ಏಕಾಂತಭಕ್ತರು ಜಗತ್ತನ್ನೇ ಪಾವನ ಮಾಡುವರು. ವಿಷ್ಣುವೈಷ್ಣವ ದ್ವೇಷಿಗಳು ಜಗತ್ತನ್ನೇ ಕೆಡಿಸುವರು. ನಿಜವಾದ ಕರ್ತನು, ನಿಜವಾದ ಕಾರಯಿತನು

ನೀನೇ. ನಿನಗೆ ಸಮರಿಲ್ಲ. 'ಸ್ವಾಮಿ! ಏನಪ್ಪಣೆ' ಎಂದು ಕಣ್ಣುಮುಚ್ಚದೆ, ಎಚ್ಚರದಿಂದ ಭಜಿಸಿ ನಿನ್ನನ್ನು ಮೆಚ್ಚಿಸಲಿಚ್ಛಿಸುವ ದೇವತೆಗಳು ನಿನ್ನನ್ನು ಪೂಜಿಸಿದ ಪ್ರಭಾವದಿಂದ ಮಹಾಮಹಿಮರಾಗಿ, ಮನುಜರ ಹವಿರಾದಿ ಸ್ವೀಕಾರ ಪಾತ್ರರಾಗಿರುವರು. (ಶ್ರುತಿ)

ಜನ್ಮಮರಣಾದಿ ದೋಷರಹಿತ ಹರೇ! ನಿನ್ನಿಂದ ಅಧಿಕಾರವನ್ನು ಹೊಂದಿ, ಬ್ರಹ್ಮರುದ್ರೇಂದ್ರರೆನಿಸಿ, ಮೆರೆವ ದೇವತೆಗಳು ಕೂಡ, ನಿನಗೆ ಹೆದರಿ ನಡೆಯುತ್ತಿರುವರು; ಭಕ್ತಿಯಿಂದ ನಿನ್ನ ಪೂಜೆಯನ್ನು ಸಲ್ಲಿಸುವರು. ಅಖಿಲೇಶನಾದ ನಿನಗೆ, ಸಾಮಂತರು ಚಕ್ರವರ್ತಿಗಿತ್ತಂತೆ, ಪೂಜಾದ್ರವ್ಯಗಳನ್ನರ್ಪಿಸಿ– ಸಜ್ಜನಗತಿಪ್ರದನಾದ ನಿನ್ನಿಂದ ಮುಕ್ತಿ; ಸ್ಥಿರಚರ ಜಾತಿಗಳಲ್ಲಿ ಹುಟ್ಟಿ, ಸಂಸಾರ ದಲ್ಲಿ ನರಳುವ ಬಂಧವು ನಿನ್ನಿಂದ–ಎಂದು ತಿಳಿದು, ಭಜಿಸಿ, ಸುಖಿಸುವರು. ಅಜ್ಞಾನವೇ ಬಂಧಕಾರಣ, ಜ್ಞಾನವೇ ಮೋಕ್ಷಕಾರಣ; ಅವನ್ನು ಕೊಡುವ ನೀನೇ ಮುಖ್ಯ ಕಾರಣನು.

(ಶಾಂಡಿಲ್ಯ ಶ್ರುತಿ)

ಸರ್ವಧಾರಕ ಶ್ರೀಕರೇ! ನೀನು ಮುಖ್ಯಪ್ರಾಣನಿಗೂ ಉತ್ತಮನಾಗಿರುವೆ. ನಿನಗಿಂತ ಬೇರೆ ಸ್ವತಂತ್ರರಿಲ್ಲ. ನಿನಗೆ ಸಮಾನರೇ ಇಲ್ಲವೆಂದಮೇಲೆ ಅಧಿಕರುಂಟೇ? ಜೀವಸಮುದಾಯದಲ್ಲಿ ಮುಖ್ಯಪ್ರಾಣನು ಸರ್ವಜ್ಞನು. ಅವನ ಜನನಿ ರಮೆ; ಅವರೀರ್ವರೂ ಸ್ವತಂತ್ರರಲ್ಲ. ಅವರೊಡೆಯನಾದ ನೀನೇ ಸ್ವತಂತ್ರನು. ಪ್ರಾಣಾಧೀನರಾದ ಜೀವರು ಅಸಂಖ್ಯಾತರಿರುವರು. ಸ್ವರೂಪದಿಂದ ನಿತ್ಯರಾದರೂ ಶರೀರಸಂಯೋಗ ವಿಯೋಗಗಳನ್ನು ಪ್ರಾಣನಿಂದ ಹೊಂದುತ್ತಿರುವರು. ಆದ್ದರಿಂದ ಅವರು ಪ್ರಾಣಾಧೀನರು. ಪ್ರಾಣನು ನಿನ್ನಧೀನನು, ನೀನು ಯಾರ ಅಧೀನನೂ ಅಲ್ಲ. ನಿನ್ನಂತೆ ಸ್ವತಂತ್ರನಿನ್ನೊಬ್ಬನಿಲ್ಲ. ನಿನ್ನ ಅನಂತರೂಪಗಳಿಗೆ ಸ್ವಗತಭೇದವಿಲ್ಲ, ನಿನ್ನ ಎಲ್ಲ ಅವತಾರಗಳು ಪೂರ್ಣಸುಖಜ್ಞಾನಾತ್ಮಕಗಳು. (ಮಹಾಶಾಲೀನಶ್ರುತಿ)

ಲೋಕವಿಲಕ್ಷಣ ಶ್ರೀಹರೇ! ಪುರುಷನೆನಿಸುವ ನೀನು, ಪ್ರಕೃತಿ ಎನಿಸುವ ಶ್ರೀದೇವಿ– ಈರ್ವರು ದೇಶತಃ ಕಾಲತಃ ಕೂಡ ವ್ಯಾಪ್ತರು. ಇತರರು ಹಾಗಲ್ಲ. ಅವರಿಗೆ ಜನನ ಮರಣಾದಿಗಳುಂಟು. ಶ್ರೀದೇವಿಯಿಂದ ಅನಂತಗುಣಾಧಿಕನು ನೀನು. ಗುಣಗಳಿಂದ ನಿನಗೂ ಮೀರಿದವರಾರು ಇಲ್ಲ. ಇಂತು ತಿಳಿದು ಬೋಧಿಸುವ ಆಚಾರ್ಯರಿಂದ ಜ್ಞಾನವನ್ನು ಪಡೆದ ನರನು, ಅಜ್ಞಾನಕಲ್ಪಿತವಾದ ಸಂಸಾರದಿಂದ ಚೆನ್ನಾಗಿ ಮುಕ್ತನಾಗುವನು. ನೀರಿನಿಂದ ಬುದ್ಬುದಗಳು ಉದ್ಭವಿಸುವಂತೆ, ಎಡೆ ಬಿಡದೆ ಅವಿನಾಯೋಗದಿಂದಿರುವ ನಿಮ್ಮ ದೆಶೆಯಿಂದ, ಜೀವರು ಉದ್ಭವಿಸಿ, ಮುಖ್ಯಪ್ರಾಣಬಲದಿಂದ ಜೀವಿಸುವರು. (ಕಲಪಶ್ರುತಿ-ಕೌಂಠರವ್ಯಶ್ರುತಿ)

ಜಗಜ್ಜನಕ ಶ್ರೀಹರೇ! ಆನಂದಪೂರ್ಣನಾದುದರಿಂದ ನಿನಗೆ 'ಅ' ಎಂದು ಹೆಸರು. ಉತ್ಕೃಷ್ಟನಾದುದರಿಂದ 'ಉ' ಎಂದು ಹೆಸರು. 'ಅ' ಮತ್ತು 'ಉ' ಆದ ನೀನು, ಓ, ಓಂ ಎಂದು ನಿನ್ನನ್ನು ತಿಳಿದವರ ಪಾಪವನ್ನು ನಾಶಪಡಿಸುವೆ. ಮಕರಂದ ಮಧುರಸ ಸಮುದ್ರದಲ್ಲಿ ನಾನಾಗುಣ ಪುಷ್ಪರಸಗಳು ಮಿಳಿತವಾಗಿದ್ದಂತೆ, ಇಂದ್ರಾದಿ ಸರ್ವದೇವತೆಗಳ ನಾಮಗಳ ಶಬ್ದ ಪ್ರವೃತ್ತಿ ನಿಮಿತ್ತಗಳೆಲ್ಲವು, ಪರಮೈಶ್ವರ್ಯನಿಧಿಯು, ಸುವಿರುದ್ಧ ಸುಗುಣಗಣ ಸಮಾವೇಶನು ಆದ ನಿನ್ನಲ್ಲಿ ನೆಲೆಮಾಡಿ ನಿಂತಿವೆ. ಆದ್ದರಿಂದ ಸಮ್ಯಗ್ ಜ್ಞಾನಿಗಳು ನೀನು ಸ್ವತಂತ್ರನು, ಸಕಲಜಡ ಜೀವರೂಪ ಜಗದ್ವಿಲಕ್ಷಣನು ಎಂದು ವಿಚಾರಮಾಡಿ ತಿಳಿದು, ಮುಕ್ತರಾಗುವರು. ಇಂತು ತಿಳಿಯದ ಅಜ್ಞಾನಿಗಳು ದುಃಖರೂಪ ಸಂಸಾರದಲ್ಲಿ ನರಳುವರು. ನೀನು ಸರ್ವಜ್ಞನು, ಸರ್ವೇಶನು, ಸ್ವತಂತ್ರನು, ಸ್ವಗತಭೇದ ವರ್ಜಿತನು, ಸರ್ವತ್ರವ್ಯಾಪ್ತನು, ಜೀವರು ಅಲ್ಪಜ್ಞರು,

ಅಸ್ವತಂತ್ರರು, ಅಣುರೂಪರಾದ್ದರಿಂದ ಜೀವ – ಪರಮಾತ್ಮರ ಭೇದವು ಸುಸ್ಥಿರವಾಗಿದೆ. ಇಂತು ಭೇದದರ್ಶನದಿಂದ ನಿನ್ನ ಪ್ರಸಾದಪಾತ್ರರು, ನಿನ್ನ ಭ್ರುಕುಟ ಮಾತ್ರ ನಿರ್ಮಿತವಾಗುವ ಭವಭಯ ವನ್ನು ಪೊಂದುವರೇ? ಇಲ್ಲ ಪರಹಿಂಸಾಕರರಾದ ನಿನ್ನ ದ್ವೇಷಿಗಳು ಸುಖವನ್ನು ಪೊಂದುವರೇ? ಇಲ್ಲ. (ವಿಶ್ವಕರ್ಮಸೂಕ್ತ)

ಆನಂದತೀರ್ಥ ವರದ ಶ್ರೀಹರೇ! ನೀನು ಭಕ್ತರ ಭಕ್ತಿಗೆ ಒಲಿದು ಅವನ ವಶನಾಗುವೆ. ಬಲದಿಂದ ನಿನ್ನನ್ನಾಗಲಿ, ಮುಖ್ಯಪ್ರಾಣನನ್ನಾಗಲಿ ಗೆಲ್ಲಲು ಯಾರಿಗೂ ಸಾಧ್ಯವಿಲ್ಲ. ಸತ್ಪತ್ನಿಯು ಸತ್ಪತಿಯನ್ನಂತೆ, ನಿನ್ನ ಭಕ್ತರು ನಿನ್ನನ್ನು ಭಕ್ತಿಯಿಂದ ವಶೀಕರಿಸಿಕೊಂಬುವರು. ಕುದುರೆಗಳಂತೆ ಇಂದ್ರಿಯಗಳು, ಮನವೆಂಬ ಕಡಾಣಿ, ಬುದ್ಧಿಯೇ ಸಾರಥಿ, ಜೀವನೇ ರಥಿಕನು. ಇಂದ್ರಿಯ ಮನೋಬುದ್ಧಿ ದೇವತೆಗಳ ಪ್ರಸಾದದಿಂದ, ಮನಶ್ಚಾಂಚಲ್ಯವನ್ನು ತೊರೆದು ಮೋಕ್ಷಸಾಧನೋ ಪಾಸನೆಯನ್ನು ಮಾಡಿ, ಗುರುಗಳನ್ನು ಮಾಯೆ ಇಲ್ಲದೆ ಸೇವಿಸಿ, ಪ್ರಸನ್ನರಾದ ಗುರುಗಳ ಉಪದೇಶದಿಂದಲ್ಲದೆ, ಶತಾಧಿಕ ವ್ಯಸನಯುಕ್ತ ಸಂಸಾರ ಮಾರ್ಗವನ್ನು ದಾಟಲು ಬರುವುದೇ? ಸಮುದ್ರದಲ್ಲಿ ಹೊಯ್ದಾಡುವ ನೌಕೆಯಲ್ಲಿ, ವಿವಿಧ ಸಂಭಾರಗಳಿಂದ ಕೂಡಿರುವ ವರ್ತಕನಿಗೆ ಸರಿಯಾದ ಕರ್ಣಧಾರನು ಇಲ್ಲದಿರೆ, ಅಧೋಗತಿಯೇ ಅಲ್ಲವೇ? ಸಕಲ ಸಾಧನವಿದ್ದು ಗುರ್ವನು ಗ್ರಹವಿಲ್ಲದಿರೆ, ಹರಿಪ್ರೀತಿ ಪುಟ್ಟುವುದೇ? ದ್ವಾತ್ರಿಂಶಲ್ಲಕ್ಷಣೋಪೇತರಾದ ಶ್ರೀ ಮನ್ಮಧ್ವ ಗುರುವರರಿಗೆ ಸರಿಯಾದ ಗುರುಗಳು ಬೇರುಂಟೇ? ಇಲ್ಲ. ಆದುದರಿಂದ ಉತ್ತಮ ಯೋಗ್ಯತಾ ವಂತರು. ಚಾಂಚಲ್ಯವನ್ನು ಬಿಟ್ಟು, ನಿನ್ನನ್ನು ನಿಷ್ಕಾಮರಾಗಿ ಭಜಿಸಿ, ಮುಖ್ಯವಾಯು ದಯಾ ಪಾತ್ರರಾಗಿ, ಗುರೂಕ್ತ ಮಾರ್ಗದಿಂದ ನಡೆದು, ಸುಖಿಸುವರು. ಗುರುಚರಣಸೇವಾರಹಿತರು. ಸುಖರೂಪನಾದ ನಿನ್ನನ್ನು ತಿಳಿದು ಭಜಿಸದೆ, ಕೆಡುವರು. ಎಲ್ಲ ಸಾಧನವೂ ಶ್ರೀಹರಿ ಪ್ರೀತಿಗೇ ಎಂದು ತಿಳಿಸುವ ಗುರುವೇ ನಿಜವಾದ ಗುರುವು! ಅಂತಹವನ ಪ್ರಸಾದವೇ ಬಲ ವತ್ತರವು. ಪ್ರಯತ್ನಗಳೆಷ್ಟಿದ್ದೂ ಗುರುಪ್ರಸಾದವಿಲ್ಲದಿರೆ ವ್ಯರ್ಥವಾಗುವುವು. (ಶ್ರುತಿ)

ಪುರುಷೋತ್ತಮ ಶ್ರೀಹರೇ! ಲೋಕದಲ್ಲಿ ಕಾಣುವ ತೆರದಿ ಪರಬ್ರಹ್ಮ ಜ್ಞಾನವನ್ನು ಸಂಪಾದಿಸಲು ಪ್ರಯತ್ನಿಸಿದವರಿಗೆ– ಮತ್ತು ಸ್ತ್ರೀಪುರುಷ ಮಿಥುನೀಭಾವದಲ್ಲೇ ಮಗ್ನರಾದವರಿಗೆ -ಯಾವ ಸ್ವಾಮಿಯು, ಪರಮಾನಂದರೂಪವಾದ ಮೋಕ್ಷವನ್ನು ಕೊಡುವನು? ಆದುದರಿಂದ ಮೋಕ್ಷಫಲಕವಾದ ನಿನ್ನನ್ನು ಪ್ರತಿಪಾದಿಸುವ ಸಚ್ಛಾಸ್ತ್ರವೆಂಬ ತೀರ್ಥವನ್ನು ಸದಾ ಸೇವಿಸುತ್ತಾ ಜ್ಞಾನಿಗಳಾದ ದೇವಋಷಿಗಳು ವಿರಕ್ತರಾಗಿ, ನಿನ್ನ ಪದಾಂಬುಜವನ್ನು ನಂಬಿ, ಮನದಲ್ಲಿ ನಿಧಿ ಯಂತೆ ಬಚ್ಚಿಟ್ಟುಕೊಂಡು ಭಜಿಸುವರು; ಸರ್ವಪಾಪಶಮನಶೀಲವಾದ ಪದಾರವಿಂದದಿಂದ ಶೋಭಿಪ, ಸುಖಜ್ಞಾನರೂಪನಾದ ನಿನ್ನನ್ನೇ ಧ್ಯಾನಿಸುವರು. ಇಷ್ಟಾದ ಮೇಲೆ ಅಂತಹ ಜ್ಞಾನಿಗಳು, ರುದ್ರಾಭಿಮನ್ಯವಾದ ಅಹಂಕಾರವನ್ನು ಪೊಂದುವುದಿಲ್ಲ. (ಶ್ರುತಿ)

ನಿರಸ್ತಸಮಸ್ತದೋಷ ಶ್ರೀಹರೇ! ಕೆಲವರು ಮೂಢರು ಈ 'ಜಗತ್ತು ಮಿಥ್ಯೆ– ಜಗತ್ತಿಗೆ ಈಶ್ವರನೆಂಬುವನೋರ್ವನಿಲ್ಲ– ನಾನೇ ಈಶ್ವರನು– ನನ್ನಂತೆ ಚೇತನನಾದುದರಿಂದ ಈಶ್ವರನೂ ಜೀವನೇ' ಎಂದು ಇತ್ಯಾದಿ ಕುತರ್ಕಗಳನ್ನು ಮಾಡುವರು. ಆಹಾ! ಅವರು ಹಾಗೆ ಮಾತಾಡುವುದು ಕೂಡ ನಿನ್ನ ಪ್ರೇರಣೆಯಿಂದಲೇ ಸರಿ! ತರ್ಕವೆಲ್ಲವೂ ಪ್ರಮಾಣವೇ? ಅಲ್ಲ. ಕೆಲವೆಡೆ ತರ್ಕವು ದುಷ್ಟನಾರಿಯರಂತೆ ವ್ಯಭಿಚರಿಸುವುದು. ಅಂತಹ ತರ್ಕದಿಂದ ವೇದಸಿದ್ಧನಾದ ಈಶ್ವರನನ್ನು ಇಲ್ಲವೆನ್ನಲು ಬರುವುದಿಲ್ಲ. ಜೀವೇಶರು ಅಲ್ಪಜ್ಞತ್ವ, ಸರ್ವಜ್ಞತ್ವ ಮತ್ತು ಪಾರತಂತ್ರ್ಯ,

ಸ್ವಾತಂತ್ರ್ಯಗಳೇ ಮೊದಲಾದ ವಿರುದ್ಧ ಧರ್ಮವಂತರಾಗಿರುವುದರಿಂದ ಪರಸ್ಪರ ಭಿನ್ನರಾಗಿರುವರು.

ಜಲಪಾನದಿಂದ ತೃಪ್ತಿಯುಂಟು, ಆದರೆ ನೀರಡಿಸದವನಿಗೆ ಅದರ ಪ್ರಯೋಜನವಿಲ್ಲ. ಭೋಜನವು ಇಷ್ಟಸಾಧನವು ನಿಜ, ಆದರೆ ಜ್ವರಾರ್ತನಿಗೆ ಅದು ಹಿತವಲ್ಲ. ಸುಖದುಃಖಾನುಸಂಧಾನವೇ ಜೀವನೆಂಬುವ ಕ್ಷಪಣಕ ಮತವು, ಅಣುಶರೀರದಲ್ಲಿದ್ದವನಿಗೆ ಹಸ್ತಿ ಶರೀರವು ಕರ್ಮದಿಂದ ಬಂದರೆ ವಿಕಾರಿತ್ವವು ಬರಬೇಕಾದೀತೆಂಬ ಅನಿಷ್ಟಪೀಡಿತವಾಗಿದೆ. ಆದುದರಿಂದ ಕುಬುದ್ಧಿಗಳ ಬುದ್ಧಿಯನ್ನು ಕೆಡಿಸುವ ವಿಷಯದಲ್ಲಿ ಕುತರ್ಕಗಳು ಸಮರ್ಥವಾಗಿದೆ. ಧೀರರು ಕುತರ್ಕದಿಂದ ಕೆಡುವುದಿಲ್ಲ. ಜಗತ್ತು ಮಿಥ್ಯ– ಜೀವನೇ ಬ್ರಹ್ಮನು– ಜಗತ್ತು ಕ್ಷಣಿಕವಾಗಿದೆ– ಈಶ್ವರನಿಗೆ ಆರು ಗುಣಗಳು ಇತ್ಯಾದಿ ದುರ್ಮತಗಳು ಅಂಧಪರಂಪರೆಯಿಂದ ನಡೆದುಬಂದಿದೆ. ದುರ್ಜನರು ಕೆಡಲೆಂದೇ ವೇದವಾಣಿಯು ಕೂಡ, ಅನೇಕಾರ್ಥವಾಗುವಂತೆ ನುಡಿಯುತ್ತಿದೆ. ವೇದತಾತ್ಪರ್ಯಾರ್ಥವನ್ನು ತಿಳಿಯಲಾರದ ಅಜ್ಞಾನಿ ಜನರಿಗೆ ಹಾಗೆಯೇ ಅರ್ಥವಾಗುವಂತೆ ಶ್ರೀಹರಿ ಆಜ್ಞಾಧಾರಕಳಾದ ಭಾರತಿಯು, ವೇದವನ್ನುಚ್ಚರಿಸಿ, ಅವರಿಗೆ ಸರಿಯಾದ ಅರ್ಥವಾಗದಂತೆ ಮಾಡುತ್ತಿರುವಳು. ನಿನ್ನ ಅನಂತ ಗುಣಕರ್ಮಗಳನ್ನು ಪೇಳುವ ತ್ವರೆಯಲ್ಲಿ ವೇದವಾಣಿಯು ಬಹುರೀತಿಯಾಗಿ ಬಹುಸ್ಥಲಗಳಲ್ಲಿ ನಿರೂಪಿಸುವುದರಿಂದ ಮಂದಬುದ್ಧಿಗಳಿಗೆ ಅದರ ಅರ್ಥವನ್ನು ನಿರ್ಣಯಿಸುವುದಕ್ಕಾಗದೆ, ಸ್ವರೂಪಯೋಗ್ಯತೆಯಂತೆ, ದುರಾಗ್ರಹಪೂರಿತರಾಗಿ, ವೇದಕ್ಕೆ ತಮಗೆ ತೋಚಿದ್ದೇ ಅರ್ಥವೆಂದು ವಾದಿಸಿ, ಅಂಧರಾಗಿ, ತಾವು ನಡೆಸುವ ಇತರ ಜನರನ್ನು ನರಕಭಾಜನರನ್ನು ಮಾಡುವರು.

ಈಶ್ವರನ ಉದರದಲ್ಲಿದ್ದ ಜೀವರಿಗೆ ಈಶ್ವರತ್ವವಿದ್ದಿಲ್ಲ. ಸ್ಥಿತಿಯಲ್ಲಿ ಈಶ್ವರನೇ ಜೀವನೆಂಬುವ ಮಾತು ಪ್ರತ್ಯಕ್ಷವಿರೋಧವಾಗಿದೆ; ಮುಂದೆ ಯಾವಾಗಲೂ ಜೀವನು ಈಶ್ವರನಾಗಲಾರನು– ಗರ್ಭಸ್ಥನಂತೆ ಅಸ್ವತಂತ್ರನೇ ಆಗಿರುವನೆಂದು, ತರ್ಕದಿಂದಲೇ ತಿಳಿಯಬಹುದಾಗಿದೆ. ಈಶನಾದವನು ಸತ್ತು ನರಕಕ್ಕೆ ಹೋಗುವನೇ? ಎಂದಿಗೂ ಇಲ್ಲ. ಆದರೂ ಜೀವನೇ ಬ್ರಹ್ಮನೆಂಬ ಭ್ರಮೆಯು ಶ್ರೀಹರಿನಿರ್ಮಿತವಾಗಿ ತಮೋಯೋಗ್ಯರಿಗೆ ಹುಟ್ಟುತ್ತಿದೆ. ಸಂಸಾರದಲ್ಲಿ ದೇವದತ್ತನು ಧನವಂತನು, ಯಜ್ಞದತ್ತನು ಕುಲೀನನು, ಎಂಬಿತ್ಯಾದಿ ವಿಧಗಳಿಂದ ಜೀವನಿಗಿಲ್ಲದ ಧನಕುಲಾದಿ ಕಲ್ಪನೆಗಳನ್ನು ಅಜ್ಞರು ಮಾಡುವರು. ವಿದ್ವಾಂಸರು ಭಗವಂತನೇ ನಿಜವಾದ ಧನವಂತನು, ಕುಲವಂತನು ಎಂದು ನಿಶ್ಚಯಿಸುವರು. ಏಕೆಂದರೆ, ಧನ ಕುಲ ರೂಪ ಶೀಲಾದಿ ಗುಣಗಳು ನಿನ್ನಿಂದ; ಅವು ನಿನ್ನಲ್ಲಿ ಮುಖ್ಯವಾಗಿದೆ. ಆ ಮುಖ್ಯ ಗುಣಗಳನ್ನು ಮನೋವಿಲಾಸವೆಂದು ಜ್ಞಾನಿಗಳು ತಿಳಿಯುವರು. (ಶ್ರುತಿ)

ಕರುಣಾಳು ಶ್ರೀಹರೇ! ವೇದಾದಿ ಸಚ್ಛಾಸ್ತ್ರಗಳಲ್ಲಿ ಪ್ರತಿಪಾದಿತವಾದ ನಿನ್ನ ಕಲ್ಯಾಣ ಗುಣಗಳನ್ನು, ನಿನ್ನ ಪವಿತ್ರ ಕರ್ಮಗಳನ್ನು, ಪ್ರೀತಿಯಿಂದ ಕೇಳಿ, ಮನನ ಮಾಡಿ, ಗುರೂಪದಿಷ್ಟ ಮಾರ್ಗದಿಂದ ಧ್ಯಾನಮಾಡುವ ಭಕ್ತನು, ಸಂತತ ಸ್ಮರಣೆಯಿಂದ ಭಗವದಪರೋಕ್ಷ ಜ್ಞಾನವಂತನಾಗುವನು. ಪ್ರಾರಬ್ಧ ಭೋಗಾನಂತರದಲ್ಲಿ ಅವನ ದುಷ್ಟಪ್ರಕೃತಿಬಂಧವು ಧ್ವಸ್ತವಾಗುವುದು. ಜೀವಾಚ್ಛಾದಿಕಾ ಪರಮಾಚ್ಛಾದಿಕಾ ಎಂಬ ಎರಡು ಆವರಣಗಳು ನಾಶವನ್ನು ಅಪಸರಣವನ್ನು ಹೊಂದಿದಾಗ, ಅನಿಷ್ಟನಿವೃತ್ತಿಯಾಗುವುದು. ಆಮೇಲೆ ಭಗವತ್ಸರೂಪನಾಗುವನು. ಜೀವರ ಯೋಗ್ಯತೆಯಂತೆ ಅವರಿಗೆ ಸಾಯುಜ್ಯ ಸಾರೂಪ್ಯ ಸಾಮೀಪ್ಯ ಸಾಲೋಕ್ಯ ಮೋಕ್ಷಗಳು ಲಭಿಸಿ

ಸ್ವರೂಪಾನಂದಾವಿರ್ಭೂತಿಯಾಗುವುದು. ಅಧಿಕಾರಿಜೀವನು ಪರಮಜ್ಞಾನ ದಿಂದ ಪ್ರಸನ್ನನಾದ ಶ್ರೀಹರಿ ದಯದಿಂದ, ಎರಡು ವಿಧವಾದ ಪ್ರಕೃತಿಬಂಧವನ್ನು ಹಾವು ಪರೆಯನ್ನಂತೆ ತ್ಯಜಿಸಿ ಒಂದನ್ನು ನಾಶಮಾಡಿ ಮತ್ತೊಂದನ್ನು ದೂರಮಾಡಿಕೊಳ್ಳುವನು. ಆ ಬಂಧವನ್ನು ಅವನಿಗಾಗಿ ನೀನೇ ನಾಶಪಡಿಸುವೆ. ನೀನೇ ಬ್ರಹ್ಮಾದಿಗಳಲ್ಲಿ ನಿಂತು ನಿನ್ನ ಶ್ರವಣಾ ದಿಗಳನ್ನು ಮಾಡಿಸುವೆ. ಅಣಿಮಾದ್ಯಷ್ಟ ಗುಣನು, ಅಪರಿಮಿತೈಶ್ವರ್ಯನು ಆದ ನಿನ್ನ ಕರುಣೆಯೇ ಮುಖ್ಯ ಮೋಚಕ ವಾಗಿದೆ! (ಶ್ರುತಿ)

ಕಾಮದೂರ ಶ್ರೀಹರೇ! ಕಾಷಾಯವಸನ ದಂಡಾದಿ ಚಿಹ್ನೆಯಿಂದ ಯತಿಗಳೆನಿಸಿದವರೊಂದು ವೇಳೆ ಜಡಶರೀರಗತ ಕಾಮಾಭಿಲಾಷೆಗಳನ್ನು ಬಿಡದಿದ್ದರೆ ಅಂತಹ ಅಪ್ರಶಸ್ತ ಕರ್ಮಮೂಢರಿಗೆ ಕಂಠದಲ್ಲೇ ಇದ್ದೂ ಮರೆತುಹೋದ ಮಣಿಯಂತೆ, ಹೃದಯದಲ್ಲೇ ಇದ್ದೂ ಕಾಣಬರದಿರುವ ನಿನ್ನ ಅಪರಿಮೇಯ ಮಹಿಮೆಯು ಕೇವಲ ಗೃಹಸುಖಮತ್ತರಾದ ನರಮಾತ್ರರಿಗೆ ಕಾಣಸಿಗುವುದೇ?

ವಿಷಯಾಲಂಬುದ್ಧಿಯಿಂದ ನಿಷ್ಕಾಮರಾಗಿ, ನಿವೃತ್ತಿಮಾರ್ಗದಿಂದ ನಿನ್ನ ಪ್ರೀತಿಗಾಗಿ ನಡೆದು ಬರುವ ಭಕ್ತರನ್ನು– ನಿನ್ನ ಲೋಕದಲ್ಲಿ ತನ್ನ ಕೊಲ್ಲುವ ಕಾರ್ಯವನ್ನು ನಡೆಸಲಾರದ ಹಾಗೂ ಅಜ್ಞ ಜನರಿಗೆ ಗೊತ್ತಾಗದೆ ಬಂದು ನುಂಗುವ ಕಾಲದ ಭಯದಿಂದ ದೂರಮಾಡಿ, ಅನಿಷ್ಟನಿವೃತ್ತಿಯನ್ನು ಇಷ್ಟಪ್ರಾಪ್ತಿಯನ್ನೂ ಕೊಟ್ಟು ಸಂರಕ್ಷಿಸುವೆ. (ಬೃಹದಾರಣ್ಯಕ)

ಜೀವೋತ್ತಮ ಬ್ರಹ್ಮವಂದ್ಯ ಶ್ರೀಹರೇ! ಜೀವಸಮುದಾಯದಲ್ಲಿ, ಚತುರ್ಮುಖ ಪರಂಪರಾಗತವಾದ ಸದುಪದೇಶವನ್ನು ಪಡೆದಿರುವ ಜನರು, ಏನು ಕೇಳಿದರೂ, ಏನು ಪೇಳಿದರೂ ಸತ್ತ್ವಾದಿಗುಣ ಮಾನಿನಿ ಶ್ರೀದೇವಿಯನ್ನಾಗಲೀ, ನಿರ್ಗುಣನಾದ ಶ್ರೀರಮಣನನ್ನಾಗಲೀ ಯಥಾರ್ಥನಾಗಿ ತಿಳಿಯಲಾರರು. ಸದಾ ಶ್ರೀಹರಿಯ ಅಧೀನಳಾಗಿ, ಶ್ರೀಹರಿಯನ್ನು ಚೆನ್ನಾಗಿ ಅರಿತು ಭಜಿಸುವ ಶ್ರೀದೇವಿಯು, ಅನನ್ಯಾಧೀನನಾದ ಶ್ರೀಹರಿಯು ಉಭಯರೂ ನಿತ್ಯಾನಂದರು. ಚತುರ್ಮುಖ ಪರಂಪರೋಪದೇಶ ಪಡೆದ ಧನ್ಯರಿಗೇ ಶ್ರುತಿಗಳು ಲೋಕಜನನೀ ಜನಕರ ಯಥಾರ್ಥ ಜ್ಞಾನವನ್ನು ಪುಟ್ಟಿಸುವುವು. ಶ್ರುತಿತತಿಯು ನಿತ್ಯಸಂಸಾರಿಗಳಿಗೂ ಹಾಗೂ ತಮೋಯೋಗ್ಯರಿಗೂ ಕೂಡ ನಿಜವಾದ ಜ್ಞಾನವನ್ನು ಚಿರಕಾಲ ಪಠಿಸಿದರೂ ಕೊಡುವುದಿಲ್ಲ. ಹೊಟ್ಟಿನಿಂದ ಕೂಡಿರುವ ತಂಡುಲವನ್ನು ಧೂಳಿಮುಟ್ಟದೇ ಇರುವಂತೆ, ವೇದಪಠಣ ಫಲವು ರಾಜಸ ತಾಮಸರಿಗೆ ಆಗುವುದಿಲ್ಲ. ವೇದಗಳು ಸಾತ್ವಿಕರಿಗೆ ಮಾತ್ರ ಶ್ರೀಶನ ಗುಣಮಣಿಪ್ರಕಾಶ ವನ್ನಿತ್ತು, ಪುರುಷಾರ್ಥ ಹೇತುಗಳಾಗುವುವು. ವಿಧಿ ನಿಷೇಧ ರೂಪ ಶ್ರುತಿಗಳು ರಾಜಸರಿಗೆ ಮಿಶ್ರಫಲವನ್ನು, ತಾಮಸರಿಗೆ ತಮಸ್ಸನ್ನು ಕೊಡುವ ಸಂಶಯ ವಿಪರ್ಯಯ ಜ್ಞಾನಿಗಳನ್ನೇ ಪುಟ್ಟಿಸುವುವು.

(ಮಹೋಪನಿಷತ್)

ಇಂತು ಶ್ರುತಿಗೀತೆಯನ್ನು ಹೇಳಿ, ಶ್ರೀ ನಾರಾಯಣ ಋಷಿಯು ನಾರದನಿಗೆ ಇಂತೆಂದನು–

'ಇಂತು ಬ್ರಹ್ಮಜ್ಞಾನೋಪದೇಶವನ್ನಿತ್ತ ಸನಂದನನನ್ನು ಸನಕಾದಿ ಸಿದ್ಧಜನರು ಪೂಜಿಸಿದರು. ಪರಬ್ರಹ್ಮನನ್ನು ಆಶ್ರಯಿಸಿದ ಮಹಾತ್ಮರಾದ ಸನಕಾದಿ ಋಷಿಗಳು ಉದ್ಧರಿಸಿದ ಸಮಸ್ತದೇವ ಪುರಾಣಾದಿ ಸಚ್ಛಾಸ್ತ್ರಸಾರವನ್ನು ನಿನಗೆ ಪೇಳಿರುವೆನು. ಬ್ರಹ್ಮಕುಮಾರ ನಾರದ! ಈ ಪರಮಾತ್ಮ ವಿದ್ಯೆಯನ್ನು ಚೆನ್ನಾಗಿ ಧರಿಸು! ಇದು ಕಾಮ್ಯಕರ್ಮನಾಶಕವೂ, ಮೋಕ್ಷಸಾಧನ ಹರಿಪ್ರೀತಿ ಕಾರಣವೂ ಆಗಿದೆ.'

ಇಂತು ಲೋಕಗುರುವಿನ ಅನುಶಾಸನವನ್ನು ಶ್ರದ್ಧೆಯಿಂದ ಸ್ವೀಕರಿಸಿ, ಮನಸ್ಸು ಶ್ರೀಹರಿ ಚರಣರತವಾಗಿ ಅವಶವಾಗಲು, ಕೃತ್ಯಕೃತ್ಯನಾಗಿ, ನಾರದನು, ಪರಲೋಕ ಸುಖ ಸಾಧನವನ್ನು ತಿಳಿಸಿದ ನಾರಾಯಣರ್ಷಿಗೆ ವಂದಿಸಿ, ಇಂತೆಂದನು–

ಶ್ರೀಕೃಷ್ಣ! ಅಪ್ರಾಕೃತ ದಿವ್ಯವಿಗ್ರಹ! ಅವ್ಯಾಹತೈಶ್ವರ್ಯದ್ಯನಂತ ಗುಣನಿಧೇ! ನಿನಗೆ ನಮಸ್ಕಾರವು! ಸರ್ವಭೂತಗಳು ನಿನ್ನ ಪ್ರತಿಬಿಂಬಗಳು– ಭಿನ್ನಾಂಶರು ಅವರಿಗೆಲ್ಲ ಜನ್ಮಾದಿಗಳು ನಿನ್ನಿಂದ; ಭಯರಹಿತಮೋಕ್ಷವೂ ನಿನ್ನಿಂದಲೇ! ಶ್ರೀಹರೇ! ನಮೋ ನಮಃ

ಪರೀಕ್ಷಿದ್ರಾಜನೇ! ನಾರಾಯಣರ್ಷಿಗೂ, ಇತರ ತಚ್ಛಿಷ್ಯರಾದ ಮಹಾತ್ಮರಿಗೂ ನಮಿಸಿ, ಅಲ್ಲಿಂದ ಹೊರಟು ನಾರದನು, ನಮ್ಮಪ್ಪನ ವೇದವ್ಯಾಸನ, ಮಹಾಬದರಿಕಾಶ್ರಮವನ್ನು ಸೇರಿ, ಆ ಶ್ರೀಹರಿ ಹೇಳಿದ ಶ್ರುತಿಗೀತೆಯನ್ನು ಈ ಶ್ರೀಹರಿಗೆ ನಿರೂಪಿಸಿ, ಸಮರ್ಪಿಸಿದನು. ಅದನ್ನೇ ನಾನು ಸ್ವೀಕರಿಸಿ, 'ನಿರ್ಗುಣನಾದ ಶ್ರೀಹರಿಯನ್ನು ಗುಣವೃತ್ತಿಗಳಾದ ವೇದಗಳು ಹೇಗೆ ನಿರೂಪಿಸುವವೆಂ'ಬುವ ನಿನ್ನ ಪ್ರಶ್ನೆಗೆ, ಅನಂತಗುಣನಿಧಿಯಾದ ಶ್ರೀಕೃಷ್ಣನನ್ನು ಸಾಕ್ಷಾತ್ತಾಗಿ ಮುಖ್ಯವೃತ್ತಿಯಿಂದ ನಿರೂಪಿಸುತ್ತಿವೆ. ಅವನಲ್ಲಿ, ನಿರತಿಶಯ ಭಕ್ತಿಯು ಕರ್ತವ್ಯವಾಗಿದೆ– ಎಂಬ ಸಮಾಧಾನವನ್ನು, ನಿನಗೆ ನಿರೂಪಿಸಿರುವೆನು.

ಜಗಜ್ಜನ್ಮಸ್ಥೇಮ ಪ್ರಳಯರಚನಾಶೀಲ ದಿವ್ಯಶರೀರನು, ಜೀವಜಡೇಶ್ವರನು, ಋಷಿ ರೂಪದಿಂದ ಪುರಾಣ ಸಂಹಿತೆಯನ್ನು ರಚಿಸಿದವನು, ಬೆಳಗಾಗುತ್ತಲೇ ಗೂಡನ್ನು ಬಿಡುವ ಪಕ್ಷಿಯಂತೆ, ಜೀವನು ಶರೀರಾದ್ಯಭಿಮಾನ ತ್ಯಾಗದಿಂದ ಶಾಸ್ತ್ರಜ್ಞಾನ ಪ್ರಕಾಶವನ್ನು ಹೊಂದಿ ಮುಕ್ತನಾಗುವಂತೆ ಅನುಗ್ರಹಿಸುವವನು, ಸಮಾಧಿಕರಹಿತನು, ಸ್ವಕಾರಣರಹಿತನು, ಅನಂತಗುಣಭರಿತನು ಆದ ಶ್ರೀಹರಿಯನ್ನು ನಿರಂತರವು ಧ್ಯಾನಿಸುವೆವು.

## ೯೫. ಕೌರವ ಪಾಂಡವ ಯುದ್ಧ

ಶ್ರೀಶುಕನು ಹೇಳಿದನು–

ಶ್ರುತದೇವ ಬಹುಲಾಶ್ವರನ್ನು ಬೀಳ್ಕೊಟ್ಟು ಶ್ರೀಕೃಷ್ಣನು ದ್ವಾರಕೆಗೆ ಬಂದನು. ಅಲ್ಲಿ ಪಾಂಡವರು, ವಿರಾಟನಗರದಿ, ದಕ್ಷಿಣೋತ್ತರ ಗೋಗ್ರಹಣವನ್ನು ಮಾಡಿದ ಕೌರವ ಸೈನ್ಯವನ್ನು ಸದೆಬಡಿದೋಡಿಸಿ, ಅಜ್ಞಾತವಾಸವನ್ನು ಮುಗಿಸಿ, ಉಪಪ್ಲಾವ್ಯದಲ್ಲಿ ಬಂದಿರುವರೆಂದು ಕೇಳಿದನು. ಬಹುಸೇನೆಯಿಂದ ಕೂಡಿ ಕೃಷ್ಣನು, ಸಾತ್ಯಕಿ, ಉದ್ಧವ, ಶಠ, ಸಾರಣ, ಅಭಿಮನ್ಯು ಮುಂತಾದವರಿಂದ ಪಾಂಡವರನ್ನು ನೋಡಲು, ಉಪಪ್ಲಾವ್ಯವನ್ನು ಸೇರಿದನು. ದುರ್ಯೋಧನನಿಂದ ಸಂಧಿ ಪ್ರಯತ್ನಮಾಡಲು ಕಳಿಸಲ್ಪಟ್ಟು, ಹಸ್ತಿನಾವತಿಗೆ ಹೋದಾಗ, ದುಷ್ಟಚತುಷ್ಟಯವು ಶ್ರೀಹರಿಯನ್ನು ಬಂಧಿಸ ಬಂದಿತು. ಅವರಿಗೆ ವಿಶ್ವರೂಪವನ್ನು ನೋಡಿಸಿ ಹೆದರಿಸಿ, ಶ್ರೀಕೃಷ್ಣನು ಹಿಂದಿರುಗಿ ಬಂದನು. ಮುಂದೆ ಉಭಯಪಕ್ಷದವರು ಯುದ್ಧಸನ್ನದ್ಧರಾದರು. ವಿರಾಟನು ಒಂದಕ್ಷೌಹಿಣಿಯನ್ನು, ದ್ರುಪದ ಧೃಷ್ಟದ್ಯುಮ್ನ ಶಿಖಂಡಿಗಳು ಮೂರಕ್ಷೌಹಿಣಿಗಳನ್ನು, ಸಾತ್ಯಕಿಯು ಒಂದಕ್ಷೌಹಿಣಿಯನ್ನು, ಕೇಕಯರ ಐದು ರಾಜರು ಒಂದಕ್ಷೌಹಿಣಿಯನ್ನು, ಧೃಷ್ಟಕೇತು ಶೈಬ್ಯರು ಒಂದಕ್ಷೌಹಿಣಿಯನ್ನು, ತಂದು ಪಾಂಡವರ ಸಹಾಯಕ್ಕೆಂದು ಬಂದರು.

ದುರ್ಯೋಧನನು, ದ್ರೋಣ ಭೀಷ್ಮ ಕೃಪ ಅಶ್ವತ್ಥಾಮ ಕರ್ಣ ಬಾಹ್ಲಿಕ ಶಕುನಿ ಸಾಲ್ವ ಶಲ್ಯ ಭಗದತ್ತ ಜಯದ್ರಥರಿಂದ ಕೂಡಿ, ಹನ್ನೊಂದಕ್ಷೌಹಿಣಿಗಳ ಸೈನ್ಯದಿಂದ, ಭೂಮಿಯು ನಡುಗುವಂತೆ ಬಂದು ಕುರುಕ್ಷೇತ್ರದಲ್ಲಿ ಪಾಂಡವಸೇನೆಯ ಮುಂದೆ ದಕ್ಷಿಣ ಮುಖವಾಗಿ, ಬಲವನ್ನು ನಿಲ್ಲಿಸಿದನು. ಸ್ಯಮಂತಪಂಚಕದಲ್ಲಿ ವ್ಯೂಹಗಳಾಗಿ, ಪಾಂಡವ ಸೈನಿಕರು ಉತ್ತರ ಮುಖವಾಗಿ ನಿಂತರು.

ಆಗ ಶಂಖ ದುಂದುಭಿ ಕಾಹಳ ಭೇರಿ ಪಟಹಗಳು ಮೊಳಗಿದ ಶಬ್ದವು ಭೂನಭೋಂತರ ದಲ್ಲಿ ವ್ಯಾಪಿಸಿ ಭಯಂಕರವಾಯಿತು. ಆ ರಣರಂಗದಲ್ಲಿದ್ದ ತನ್ನ ಬಂಧುಗಳನ್ನು, ಉಪಾಧ್ಯಾಯ ರನ್ನು, ಶಿಷ್ಯರನ್ನು ನೋಡಿ, ಅರ್ಜುನನು ನಿರ್ವಿಣ್ಣನಾಗಿ, ಯುದ್ಧವಿಮುಖನಾದನು. ಶ್ರೀಶನು, ಕರ್ತವ್ಯವಿಮುಖನಾದ ಅರ್ಜುನನಿಗೆ ಗೀತೋಪದೇಶವನ್ನು ಮಾಡಿ, ವಿಶ್ವರೂಪವನ್ನು ನೋಡಿಸಿ, ಯುದ್ಧಸುಮುಖನನ್ನಾಗಿಸಿದನು. ಆಗ ಅರ್ಜುನನು ಗಾಂಡೀವವನ್ನು ಮತ್ತೆ ಧರಿಸಿ ಯುದ್ಧ ವನ್ನಾರಂಭಿಸಿದನು. ಬಲರಾಮನಲ್ಲಿಗೆ ಬಂದು, ರಣರಂಗದಲ್ಲಿ ನೆರೆದಿದ್ದ ಕೌರವಪಾಂಡವರಿಗೆ ಯುದ್ಧವಾಡುವುದುಚಿತವಲ್ಲವೆಂದು ಉಪದೇಶಿಸಿದನು. ಅವನ ಮಾತನ್ನು ಯಾರೂ ಕೇಳ ದಿರಲು, ಬಲರಾಮನು ನಿರ್ವಿಣ್ಣನಾಗಿ, ತೀರ್ಥಯಾತ್ರೆಗೆಂದು ಹೊರಟುಹೋದನು.

ಪಾಂಡವಸೇನಾಪತಿ ಧೃಷ್ಟದ್ಯುಮ್ನನು, ಕೌರವಸೇನಾಪತಿ ಭೀಷ್ಮನು, ಯುದ್ಧವನ್ನಾರಂಭಿಸಿ ದನು. ಭೀಷ್ಮನು ಹತ್ತು ದಿನಗಳು ಹೋರಾಡಿ, ಶರಪಂಜರದಲ್ಲಿ ಮಲಗಿದನು. ದ್ರೋಣನು ಸೇನಾಪತಿಯಾಗಿ ಮತ್ತೈದು ದಿನಗಳು ಕಾದು, ಧೃಷ್ಟದ್ಯುಮ್ನನಿಂದ ಮಡಿದನು. ದ್ರೋಣನು ಸೇನಾಪತಿಯಾಗಿದ್ದಾಗ, ನಿಮ್ಮ ತಂದೆಯಾದ ಅಭಿಮನ್ಯುವಿನನ್ನು, ಸೈಂಧವಾದಿಗಳು ಬಹು ವೀರರು ಕಲೆತು, ಅನ್ಯಾಯ ಯುದ್ಧದಲ್ಲಿ ಕೊಂದರು. ಪುತ್ರಶೋಕಸಂತಪ್ತನಾದ ಅರ್ಜುನನು ಮರುದಿನ ಸೂರ್ಯಾಸ್ತಮಾನವಾಗುವ ಮುಂಚೆ ಸೈಂಧವನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದನು. ಅಂದಿನ ರಾತ್ರಿ ಶ್ರೀಕೃಷ್ಣನು ಅರ್ಜುನ ನೊಡನೆ ಕೈಲಾಸವನ್ನು ಗರುಡಾರೂಢನಾಗಿ ಸೇರಿ ಅವನಿಗೆ ಶ್ರೀಮಹಾದೇವನ ಪ್ರಸಾದದಿಂದ ಪ್ರತಿಜ್ಞಾ ನಿರ್ವಹಣ ಸಾಮರ್ಥ್ಯವನ್ನು ಕಲ್ಪಿಸಿ, ಹಿಂದಿರುಗಿದನು. ಮರುದಿನ ಮಹಾ ಘೋರಯುದ್ಧವು ನಡೆಯಿತು. ಸಾಯಂಕಾಲದಲ್ಲಿ ಜಯದ್ರಥನು ಅರ್ಜುನನ ಪಾಶುಪತಾಸ್ತ್ರದಿಂದ ಮಡಿದನು. ದ್ರೋಣನು ಮೃತನಾಗಲು, ದುರ್ಯೋಧನನು ಕರ್ಣನನ್ನು ಸೈನ್ಯಾಧಿಪತ್ಯದಲ್ಲಿ ಅಭಿಷೇಕಿಸಿದನು. ಅವನು ಎರಡು ದಿನ ಮತ್ತು ಒಂದು ದಿನ ಮಧ್ಯಾಹ್ನದವರಿಗೂ ಕಾದು, ಅರ್ಜುನನಿಂದ ಸಂಹೃತನಾದನು. ಶಲ್ಯನು ಅರ್ಧ ದಿನ ಮಾತ್ರ ಸೇನಾಪತಿಯಾಗಿ, ಧರ್ಮರಾಜನಿಂದ ಮಡಿದನು.

ಆಗ ಕೊನೆಯ ದಿನ ದೀರ್ಘವೈರಿಗಳಾದ ಭೀಮ ದುರ್ಯೋಧನರಿಗೆ ಗದಾಯುದ್ಧವು ನಡೆಯಿತು. ಇಂತು ಹದಿನೇಳು ಮತ್ತರ್ಧ ದಿನಗಳಲ್ಲಿ ಹದಿನೆಂಟು ಅಕ್ಷೌಹಿಣಿಗಳ ಸೈನ್ಯವು ಪ್ರಾಯಃ ನಷ್ಟವಾಯಿತು.

## ೭೬. ಬಲರಾಮ ಯಾತ್ರೆ – ಉಗ್ರಶ್ರವ ವರದಾನ

ರಾಜನು ಕೇಳುದನು–

ಹದಿನೆಂಟು ದಿನಗಳಲ್ಲಿ ಹದಿನೆಂಟಕ್ಷೌಹಿಣೀ ಸೈನ್ಯವನ್ನು ನಾಶಮಾಡಿ, ಭೂಭಾರವನ್ನಿಳಿಸಿದ ಶ್ರೀಕೃಷ್ಣನಿಗೆ ನಮಸ್ಕರಿಸುತ್ತಿರುವೆನು. ಬ್ರಹ್ಮ ಜ್ಞಾನಿವರನೇ! ಅವನ ಪವಿತ್ರ ಚರಿತ್ರವು ಕೇಳುತ್ತಿರುವ ನನಗೆ ಆಶ್ಚರ್ಯವಾಗುತ್ತಿದೆ. ನಾನು ಪರವಶನಾಗುತ್ತಿರುವೆನು. ಒಂದೊಂದು ಸಲ ಶ್ರೀಹರಿಗೆ– ಅಪ್ರಿಯವಾಗಬಾರದೆಂದು– ಹೆದರಿ ವರ್ತಿಸುತ್ತಿರುವೆನು. ಪ್ರಾಯಃ ನನ್ನ ಪಾಪಗಳೆಲ್ಲವೂ ನಷ್ಟವಾಗಿವೆ ಎಂದು ನಾನು ತಿಳಿದಿರುವೆನು. ನನ್ನ ಇಂದ್ರಿಯಗಳು, ಮನಸ್ಸು ಪ್ರಸನ್ನವಾಗಿವೆ. ಹಸಿವೆ ನೀರಡಿಕೆಗಳ ಕಾಟವೇ ಇಲ್ಲ; ನಾನು ಆನಂದ ನಿರ್ಭರನಾಗಿರುವೆನು. ಇದೆಲ್ಲವೂ ನಿನ್ನ ಅನುಗ್ರಹವು; ಇದಕ್ಕೆ ಸಂಶಯವಿಲ್ಲ. ನಿನ್ನಿಂದ ನಾನು ಕೃತಾರ್ಥನಾದೆ. ಯುದ್ಧದಲ್ಲಿ ಬಂಧುಜನರ ಮರಣಾದಿಗಳನ್ನು ನೋಡಲಾರದೆ, ತೀರ್ಥಯಾತ್ರೆಗೆ ಹೊರಟುಹೋದ ಬಲರಾಮನ ವೃತ್ತಾಂತವನ್ನೂ ಹೇಳು!

ಶ್ರೀಶುಕನು ಹೇಳಿದನು–

ಬಲರಾಮನು ತೀರ್ಥಯಾತ್ರೆಗೆಂದು ಹೊರಟು, ಪ್ರಭಾಸವನ್ನು ಸೇರಿದನು. ಅಲ್ಲಿ ಸ್ನಾನ ಮಾಡಿ, ದೇವಋಷಿಪಿತೃತರ್ಪಣಗಳನ್ನಿತ್ತು, ಅಲ್ಲಿಂದ ಬ್ರಾಹ್ಮಣಜನರಿಂದ ಕೂಡಿ, ಸರಸ್ವತೀ ತೀರವನ್ನನುಸರಿಸಿ ಪ್ರಯಾಣಿಸಿದನು. ತೀರ್ಥಗಳಲ್ಲಿ ಮಿಷ್ಟಾನ್ನವನ್ನಿತ್ತು ವಿಪ್ರರನ್ನು, ಇತರರನ್ನು ಕೂಡ ಸಂತೋಷಪಡಿಸುತ್ತಾ, ಪೃಥೂದಕ, ಬಿಂದುಸರೋವರ, ತ್ರಿತಕೂಪ, ಸುದರ್ಶನ, ವಿಶಾಲ, ಬ್ರಹ್ಮತೀರ್ಥ, ಚಕ್ರತೀರ್ಥ, ಪ್ರಾಚೀನಸರಸ್ವತಿಗಳಲ್ಲಿ ಮಿಂದು, ಮುಂದೆ ಯಮುನಾ ನದಿಯನ್ನು ಮುಟ್ಟಿದನು; ಅಲ್ಲಿ ತೀರ್ಥವಿಧಿಗಳನ್ನಾಚರಿಸಿ, ಗಂಗಾತೀರವನ್ನು ಪಿಡಿದು ಪಯಣಿಸಿ, ನೈಮಿಷಾರಣ್ಯವನ್ನು ಸೇರಿದನು. ಬಂದ ಬಲರಾಮನನ್ನು ನೋಡಿ, ಸತ್ರ ಯಾಗದೀಕ್ಷಿತರಾಗಿದ್ದ ಶೌನಕಾದಿ ಋಷಿಗಳು, ಪರೀಕ್ಷಿದ್ರಾಜನೇ! ಕೇಳು! ಬಹು ಸಂಭ್ರಮದಿಂದ ಸ್ವಾಗತಿಸಿ, ಆಸನವನ್ನಿತ್ತು ಸತ್ಕರಿಸಿ, ಸಾಷ್ಟಾಂಗವೆರಗಿ, ಪೂಜಿಸಿದರು.

ತಾನು ಬಂದಾಗಲೂ ಏಳದೆ, ನಮಿಸದೆ, ಮುಂದೆ ಕೂತಿದ್ದ ರೋಮಹರ್ಷಣನನ್ನು ನೋಡಿ ವಿಪ್ರಜನರ ಮಧ್ಯದಲ್ಲಿ ಉಚ್ಚಾಸನದಲ್ಲಿ ಕೂತಿರುವುದನ್ನು ಸಹಿಸದೆ ಇಂತೆಂದನು–

'ಇವನು ಭಗವಾನ್ ವ್ಯಾಸಮಹರ್ಷಿಯ ಶಿಷ್ಯನಲ್ಲವೇ? ಇತಿಹಾಸ ಪುರಾಣ ಧರ್ಮಶಾಸ್ತ್ರಗಳನ್ನು ಓದಿದ ಮಾತ್ರದಿಂದ ಏನು ಪ್ರಯೋಜನ? ದುರ್ವಿನೀತನು, ಪಂಡಿತಮ್ಮನ್ಯಮಾನನು, ಅಜಿತಮನಸ್ಕನು ಆದ ಇವನ ಪುರಾಣಪ್ರವಚನಗಳೆಲ್ಲವು, ನಟನ ಪುರಾಣದಂತೆ ವ್ಯರ್ಥವೇ ಸರಿ! ಸಭೆಯಲ್ಲಿ ಉತ್ತಮರಾದ ವಿಪ್ರರಿರಲು, ಪ್ರತಿಲೋಮಜಾತನಾದ ಈ ಸೂತನು ಉತ್ತಮಾಸನದಲ್ಲಿ ಕೂತಿರುವನು ಮತ್ತು, ನಾನು ಬಂದಾಗಲೂ ಎದ್ದು ಸತ್ಕರಿಸದಿರುವನು! ಎಷ್ಟು ಕೊಬ್ಬಿವನಿಗೆ! ಧರ್ಮಧ್ವಜನಷ್ಟು ಪಾಪಿಗಳು ಮತ್ತಾರಿಲ್ಲ. ಇವನು ಶಿಕ್ಷಾಪಾತ್ರನಾಗಿರುವನು. ಇಂತಹ ದುಷ್ಟರನ್ನು ಶಿಕ್ಷಿಸಲಲ್ಲವೇ ನಾನವತರಿಸಿರುವುದು?' ಎಂದು ಬಲರಾಮನು, ಅಸದ್ವ್ಯಧರೂಪವಾದ ಭಾರತಯುದ್ಧವನ್ನು ನೋಡಲಾರದೆ ಬಂದವನಾಗಿದ್ದರೂ, ಬಲವದ್ವಿಧಿಯಿಂದ ಪ್ರೇರಿತನಾಗಿ, ಕೈಯಲ್ಲಿದ್ದ ಕುಶಾಗ್ರದಿಂದ, ಅವನನ್ನು ಹೊಡೆದನು. ರೋಮ

ಹರ್ಷಣನು ತತ್‌ಕ್ಷಣವೇ ಮೃತನಾದನು. ಋಷಿಗಳು ಹಾಹಾಕಾರಮಾಡುತ್ತ, ಖಿನ್ನರಾಗಿ ಇಂತೆಂದರು–

ದೇವಸಂಕರ್ಷಣ! ಅಧರ್ಮವಾಯಿತು ನಿನ್ನಿಂದ! ಇವನಿಗೆ ನಾವು ಬ್ರಹ್ಮಾಸನವನ್ನು ಕೊಟ್ಟಿದ್ದೆವು. ಈ ಸತ್ರಯಾಗವು ಮುಗಿಯುವವರೆವಿಗೂ ಅಕ್ಷಯವಾದ ಆಯುಸ್ಸನ್ನು ಕೊಟ್ಟಿದ್ದೆವು; ಇದೆಲ್ಲವನ್ನು ವಿಚಾರಿಸಿ ಅರಿಯದ ನಿನ್ನಿಂದ, ಬ್ರಾಹ್ಮಣವಧವೇ ಆದಂತಾಯಿತು. ಯೋಗೇಶ್ವರನಾದ ನಿನಗೆ ವಿಧಿನಿಷೇಧಗಳಿಲ್ಲ, ನಿಜ. ನಿನಗೆ ಹೇಳುವ ಯೋಗ್ಯತೆ ಇಲ್ಲ. ಆದರೂ ಹೇಳುತ್ತಿರುವೆವು. ಕೇಳು! ಲೋಕಸಂಗ್ರಹವನ್ನು ಮಾಡಲಾದರೂ ನೀನು ಈ ಬ್ರಹ್ಮಹತ್ಯೆಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದುಚಿತವಾಗಿದೆ.

ಬಲರಾಮನು ಆಗ 'ಒಳ್ಳೆಯದು! ಲೋಕಾನುಗ್ರಹಕಾಮನಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆನು. ಉತ್ತಮಕಲ್ಪದ ಪ್ರಾಯಶ್ಚಿತ್ತವಿಧಿಯನ್ನೇ ಹೇಳಿ! ಇವನಿಗೆ ನೀವು ದೀರ್ಘಾಯುವನ್ನು, ವ್ರತವಿಧಿಶಕ್ತಿಯನ್ನು, ಬಲವನ್ನು, ಇಂದ್ರಿಯಸೌಷ್ಠವವನ್ನು ಕೊಟ್ಟಿದ್ದಿರಲ್ಲವೇ? ಅವನಿಗೆ ಅವೆಲ್ಲವನ್ನೂ ನನ್ನ ಯೋಗಸಾಮರ್ಥ್ಯದಿಂದ ಮತ್ತೆ ಕೊಡುವೆನು' ಎಂದನು. ಆ ಮಾತನ್ನಾಲಿಸಿ ಋಷಿಗಳು 'ಭಗವನ್! ನೀನು ಸರ್ವಸಮರ್ಥನಿರುವೆ. ನಿನ್ನ ಅಸ್ತ್ರವು ವ್ಯರ್ಥವಾಗಬಾರದು; ಇವನಿಗೆ ಕಾಲಮೃತ್ಯುವಿನ ತುತ್ತಾಗದಿರಲಾರದು. ನಿನ್ನ ನಮ್ಮ ವಚನವೂ ಸತ್ಯವಾಗಬೇಕು. ಎಲ್ಲವೂ ಸರಿಹೋಗುವಂತೆ ಮಾಡು!' ಎಂದರು. ಬಲರಾಮನು, 'ಆತ್ಮಾ ವೈ ಪುತ್ರನಾಮಾಸಿ'– ಎಂದು ವೇದವಿದೆ. ರೋಮಹರ್ಷಣನಿಗೆ ಉತ್ತಮ ಗತಿಯಾಗುವಂತೆ ಅನುಗ್ರಹಿಸಿರುವೆನು; ಅವನ ಮಗನಾದ ಈ ಉಗ್ರಶ್ರವನಿಗೆ ದೀರ್ಘಾಯುರಾದಿಗಳನ್ನು, ಪುರಾಣಾಚಾರ್ಯಪದವಿಯನ್ನೂ ಕೊಟ್ಟಿರುವೆನು. ಇನ್ನೇನು ಬೇಕೋ ಕೇಳಿ! ನೀವು ಕೊಟ್ಟಿರುವ ವರವನ್ನು ತಿಳಿಯದೆ ಮಾಡಿದ ಪಾಪದ ಪ್ರಾಯಶ್ಚಿತ್ತವನ್ನೂ ತಿಳಿಸಿ!' ಎಂದನು. ಋಷಿಗಳಿಂತೆಂದರು- 'ಇಲ್ವಲ ದೈತ್ಯನ ಮಗನಾದ ಬಲ್ವಲನು, ಪ್ರತಿ ಹುಣ್ಣಿಮೆಯ ದಿನವೂ ಬಂದು, ನಮ್ಮ ಸತ್ರಯಾಗವನ್ನು ಕೆಡಿಸುತ್ತಿರುವನು. ಆ ಪಾಪಿಯನ್ನು ಕೊಲ್ಲು! ನಮ್ಮನ್ನು ಸಂತೋಷಪಡಿಸು! ಆಮೇಲೆ ಶ್ರದ್ಧೆಯಿಂದ ಭರತವರ್ಷದ ಪುಣ್ಯಕ್ಷೇತ್ರಗಳನ್ನು ಪವಿತ್ರೀಕರಿಸುತ್ತಾ ಸಂಚರಿಸುವುದೇ ನಿಜವಾದ ಪ್ರಾಯಶ್ಚಿತ್ತವು.'

## ೯೭. ಬಲ್ವಲ ವಧೆ – ಬಲರಾಮನ ತೀರ್ಥಯಾತ್ರೆ

ಶ್ರೀಶುಕನು ಹೇಳಿದನು–

ರಾಜನ್! ಹುಣ್ಣಿಮೆಯ ದಿನ ಸತ್ರವು ನಡೆಯುತ್ತಿರಲು, ಹಠಾತ್ತಾಗಿ ಬಿರುಗಾಳಿ ಭಯಂಕರವಾಗಿ ಬೀಸಿತು. ಎಲ್ಲ ಕಡೆಯಿಂದಲು, ದುರ್ಗಂಧವು ಪಸರಿಸಿತು; ಬಲ್ವಲನು ನಿರ್ಮಿಸಿದ ಅಮೇಧ್ಯವರ್ಷದಿಂದ ಯಜ್ಞಶಾಲೆಯು ಮಲಿನವಾಯಿತು. ಅವನು ಕೂಡ ಶೂಲವನ್ನು ಧರಿಸಿ ಬಂದನು. ಕಾಡಿಗೆಯಂತೆ ಕಪ್ಪಾದ ದೊಡ್ಡ ದೇಹದಿಂದಲು, ಕಾದ ತಾಮ್ರದಂತಿರುವ ಕೇಶಶ್ಮಶ್ರುಗಳಿಂದಲು, ಕಿಡಿಗಾರುವ ಕಣ್ಣುಗಳಿಂದಲು, ಗಂಟಿಕ್ಕಿದ ಹುಬ್ಬಿನಿಂದಲು, ಭಯಂಕರನಾದ ಆ ರಾಕ್ಷಸನನ್ನು ನೋಡಿ ಸುನಂದವೆಂಬ ತನ್ನ ಮುಸಲವನ್ನು ನೆನೆದನು. ತತ್‌ಕ್ಷಣವೆ ಬಂದ ಹಲ ಮುಸಲಗಳನ್ನು ಪಿಡಿದು ಬಲರಾಮನು, ಹಲದಿಂದ ಆ ದಾನವನನ್ನು ಸೆಳೆದು

ಬಾಗಿಸಿ, ಮುಸಲದಿಂದ ಹೊಡೆದು ಕೊಂದನು. ವಜ್ರಹತಶೈಲದಂತೆ– ಭಯಂಕರವಾಗಿ ಚೀರುತ್ತಾ– ಆ ದೈತ್ಯನು ಕೆಳಗುರುಳಿದನು. ಮುನಿಗಳು, ಬಲರಾಮನನ್ನು ಪೊಗಳಿ ಹರಸಿದರು. ದೇವತೆಗಳು ವೃತ್ರಹಣನಾದ ಇಂದ್ರನನ್ನಂತೆ ಪೂಜಿಸಿ, ದಿವ್ಯವಸ್ತ್ರಗಳನ್ನೂ, ಆಭರಣಗಳನ್ನೂ, ಬಾಡದಿರುವ ಕಮಲಮಾಲೆಯನ್ನೂ ಕೊಟ್ಟು, ಸತ್ಕರಿಸಿದನು.

ಅವರ ಅಪ್ಪಣೆಯನ್ನು ಪಡೆದು ಬಲರಾಮನು ಕೌಶಿಕಿಯಲ್ಲಿ ಸ್ನಾನಮಾಡಿ, ಸರಯೂ ನದಿಯು ಹೊರಬರುವ ಸರೋವರದಲ್ಲಿ ಮಿಂದು, ಅಲ್ಲಿಂದ ಪ್ರಯಾಗವನ್ನು ಸೇರಿದನು. ಅಲ್ಲಿ ತ್ರಿವೇಣೀಸಂಗಮದಿ ಸ್ನಾನಾದಿಗಳನ್ನು ಮಾಡಿ, ಪುಲಹಾಶ್ರಮದ ಗಂಡಕಿಯನ್ನು ಸೇರಿ, ಗಂಡಕೀ ವಿಪಾಶಾ, ಶೋಣನದಿಗಳಲ್ಲಿ ಕ್ರಮವಾಗಿ ಸ್ನಾನಮಾಡಿದನು. ಗಯೆಯಲ್ಲಿ, ಪಿತೃಗಳನ್ನು ಪೂಜಿಸಿ, ಗಂಗಾಸಾಗರಸಂಗಮ, ಮಹೇಂದ್ರಗಿರಿ, ಸಪ್ತಗೋದಾ, ಕೃಷ್ಣವೇಣಿ, ಪಂಪಾಸರ, ಕುಮಾರಶೈಲ, ಭೀಮರಥೀ, ಶ್ರೀಶೈಲ, ವೆಂಕಟಾದ್ರಿ, ಕಾಮಕೋಟಿ, ಕಂಚಿ, ಕಾವೇರಿ, ಶ್ರೀರಂಗ, ಋಷಭಗಿರಿ, ದಕ್ಷಿಣಮಧುರೆ, ಸೇತುರಾಮೇಶ್ವರ, ಪೂರ್ವಸಮುದ್ರ, ಕೃತಮಾಲ, ತಾಮ್ರಪರ್ಣಿ, ಮಲಯಾಚಲ, ಅಗಸ್ತ್ಯಗಿರಿ, ದಕ್ಷಿಣಸಮುದ್ರ, ಕನ್ಯಾಕುಮಾರಿ, ಅನಂತಶಯನ, ಫಲ್ಗುನಕ್ಷೇತ್ರ, ಪಂಚಸರ, ಗೋಕರ್ಣ, ಶೂರ್ಪಾಲಯ, ತಪತಿ, ನರ್ಮದಾ, ನಿರ್ವಿಂಧ್ಯಾ, ಮಾಹಿಷ್ಮತಿ, ಅನುತೀರ್ಥಗಳನ್ನು ಕ್ರಮವಾಗಿ ನೋಡಿಕೊಂಡು, ಅಲ್ಲಲ್ಲಿ ಗೋದಾನ, ಅನ್ನದಾನಗಳನ್ನು ಮಾಡುತ್ತಾ, ಪುನಃ ಪ್ರಭಾಸವನ್ನು ಸೇರಿದನು.

ಬ್ರಾಹ್ಮಣರ ವಚನದಿಂದ ಕುರುಪಾಂಡವಯುದ್ಧವು ಮುಗಿಯುತ್ತಾ ಬಂದಿದೆಂತಲು, ಸರ್ವರಾಜರು ಮೃತರಾಗಿ, ಭೂಭಾರಹರಣಶೀಲನಾದ ಶ್ರೀಹರಿಯ ಸಂಕಲ್ಪವೀಡೇರಿತೆಂತಲು ಕೇಳಿ ಭೀಮದುರ್ಯೋಧನರ ಗದಾಯುದ್ಧವನ್ನು ನಿವಾರಿಸುವೆನೆಂದು, ರಣಭೂಮಿಗೆ ಧಾವಿಸಿ ಬಂದನು. ಅವನಿಗೆ ನಮಸ್ಕರಿಸಿ, ಕೃಷ್ಣಪಾರ್ಥರು ಸುಮ್ಮನೆ ನಿಂತರು. ಇವನೇಕೆ ಬಂದಿರುವ ನೆಂದು ಚಿಂತಿಸುತ್ತಾ ನಿಂತ ಅವರಿಂದ ಸಮಾಧಾನವಿಲ್ಲದೆ, ಮಂಡಲಾಕಾರವಾಗಿ ತಿರುಗುತ್ತಾ, ಗದಾಯುದ್ಧವನ್ನು ಮಾಡುವ ಭೀಮ ದುರ್ಯೋಧನರಿಗೆ ಇಂತೆಂದನು, ಆ ಬಲರಾಮನು–

ರಾಜನ್! ಭೀಮ! ನೀವಿಬ್ಬರು ಸಮಾನಬಲರು; ವೀರವರರು; ನೀನು ನನಗೆ ಪ್ರಾಣಾಧಿಕ ನಾದ ಬಂಧುವು. ನೀನು ದುರ್ಯೋಧನಾ! ಪ್ರಿಯ ಶಿಷ್ಯನಾಗಿರುವೆ. ನಿಮ್ಮಿಬ್ಬರಲ್ಲಿ ಯಾರು ಜಯಿಸುವಿರೋ ಹೇಳಲಾಗುವುದಿಲ್ಲ; ನಿಮ್ಮಿಬ್ಬರಲ್ಲಿ ಯಾರ ಮರಣವೂ ನನಗಿಷ್ಟವಿಲ್ಲ; ಬಿಡಿ ಯುದ್ಧವನ್ನು! ವ್ಯರ್ಥವಾಗಿ ಸಾಯಬೇಡಿ!

ಪರಸ್ಪರ ದ್ರೋಹಗಳನ್ನು ಸ್ಮರಿಸಿ, ಪರಸ್ಪರ ವಧಾತುರರಾಗಿ ಕಾದಾಡುವ ಕೌರವ ಭೀಮ ಸೇನರು ಬಲರಾಮನ ಮಾತಿಗೆ ಕಿವಿಗೊಡದೆ, ಯುದ್ಧವನ್ನು ಮುಂದುವರಿಸಿದರು. ಶ್ರೀಕೃಷ್ಣೇಚ್ಛೆ ಯಂತೆ ಆಗುವುದೆಂದು ನಿಶ್ಚಯಿಸಿ, ಬಲರಾಮನು ದ್ವಾರಕೆಗೆ ಹೊರಟುಹೋದನು. ಅಲ್ಲಿ ಉಗ್ರಸೇನಾದಿಗಳಿಂದ ಕೂಡಿ ಸುಖವಾಗಿದ್ದನು. ಇಂತು ಅದ್ಭುತ ಬಲವೀರ್ಯಮಹಿಮೋ ಪೇತನಾದ ಬಲರಾಮನ ಪವಿತ್ರಚರಿತ್ರವನ್ನು ಕೇಳಿದವನು, ಹೇಳಿದವನು ಕೂಡ ಶ್ರೀಕೃಷ್ಣಭಕ್ತ ರಾಗಿ, ಸುಖಿಸುವರು.

## ೯೮. ಕುಚೇಲ ಚರಿತೆ

ಶ್ರೀಶುಕನು ಹೇಳಿದನು–

ಶ್ರೀಕೃಷ್ಣನು, ದುರ್ಯೋಧನನು ಮೃತನಾದ ನಂತರ ಶೂನ್ಯವಾದ ರಣರಂಗದಿಂದ ಹೊರಟು ಶಿಬಿರವನ್ನು ಸೇರಿದನು. ಪಾಂಡವ ಸೈನ್ಯದಲ್ಲಿ ಶ್ರೀಕೃಷ್ಣನ ದಯದಿಂದ ಉಳಿದವರು ಪಂಚಪಾಂಡವರು, ಸಾತ್ಯಕಿ ಮತ್ತು ವೈಶ್ಯಾಪುತ್ರನಾದ ಯುಯುತ್ಸು ಮಾತ್ರ. ಕೌರವ ಸೈನ್ಯದಲ್ಲಿ ಕೃಪ, ಕೃತವರ್ಮ, ಅಶ್ವತ್ಥಾಮರೆಂಬ ಮೂವರು ಮಾತ್ರ ಉಳಿದರು.

ಶ್ರೀಕೃಷ್ಣನು ಪಾಂಡವಾದಿಗಳನ್ನು, ಮುನಿವೃದ್ಧ ಜನರನ್ನು ಕರೆದುಕೊಂಡು, ಹಸ್ತಿನಾಪುರಿಗೆ ಹೋಗಿ, ಗಾಂಧಾರೀ ಧೃತರಾಷ್ಟ್ರರನ್ನು ಸಮಾಧಾನಪಡಿಸಿದನು. ಪಾಂಡವರನ್ನು ರಾಜ್ಯದಲ್ಲಿ ಸ್ಥಾಪಿಸಿ, ಅವರಿಂದ ಅಪ್ಪಣೆಯನ್ನು ಪಡೆದು, ತನ್ನ ದಿವ್ಯರಥದಲ್ಲಿ ಕೂತು ದ್ವಾರಕೆಗೆಂದು ಹೊರಟನು. ಪುರಜನರು ದ್ವಾರಕೆಯನ್ನು ಅಲಂಕರಿಸಿ, ಉಪಾಯನ ಪಾಣಿಗಳಾಗಿ ಕೃಷ್ಣನನ್ನೆದುರ್ಗೊಂಡು, ಜಯಘೋಷವನ್ನು ಮಾಡಿದರು. ವಾರನಾರಿಯರು ದೀಪ ದರ್ಪಣ ಕಲಶ ವಸ್ತ್ರ ಫಲ ಲಾಜಾಕ್ಷತೆಗಳಿಂತ ಸ್ವಾಗತವನ್ನಿತ್ತರು. ಬ್ರಾಹ್ಮಣರು ವೇದಘೋಷದಿಂದ ಆಶೀರ್ವದಿಸಿದರು. ಶ್ರೀಕೃಷ್ಣನು ಸುಮುಹೂರ್ತದಲ್ಲಿ ಪುರಪ್ರವೇಶವನ್ನು ಮಾಡಿದನು; ಸುಧರ್ಮ ಸಭೆಯಲ್ಲಿ ನಕ್ಷತ್ರಗಳಿಂದ ಬೆಳಗುವ ಪೂರ್ಣಿಮಾ ಚಂದ್ರನಂತೆ ವಿರಾಜಿಸಿದನು. ಭಾರತದ ಯುದ್ಧದ ನೆವದಿಂದ ಭೂಭಾರವನ್ನಿಳಿಸಿ, ಸಾಯದೆ ಉಳಿದ ರಾಜನ್ಯರಿಂದ ಸೇವೆಗೊಳ್ಳುತ್ತಾ, ಶ್ರೀಕೃಷ್ಣನು ಸುಖದಿಂದಿದ್ದನು. ಧರ್ಮರಾಜನು ಶ್ರೀಶನ ದಯದಿಂದ ಬಂದ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತ ತಮ್ಮಂದಿರಿಂದಲು ಪತ್ನೀಜನರಿಂದಲು ಕೂಡಿ ಸುಖವಾಗಿದ್ದನು.

ಅನಂತವೀರ್ಯನಾದ ಶ್ರೀಕೃಷ್ಣನ ಕಥೆಯನ್ನು ಇನ್ನೂ ಕೇಳಬೇಕೆನಿಸುತ್ತದೆ. ಉತ್ತಮ ಶ್ಲೋಕನ ಕಥಾಮೃತವು ಭವವಿಷ ಪೀಡಾ ಪರಿಹಾರಕವಲ್ಲವೇ? ಅನಂತನ ಗುಣಗಣ ವರ್ಣನವನ್ನು ಮಾಡುವ ನಾಲಿಗೆಯೇ ನಾಲಿಗೆ. ಶ್ರೀರಮಣನ ಸೇವೆಗೈಯುವ ಕೈಗಳೇ ಕೈಗಳು. ಸ್ಥಿರಜಂಗಮಾಂತರ್ಗತನಾದ ಶ್ರೀಹರಿಯನ್ನು ಸ್ಮರಿಸುವ ಮನಸ್ಸೇ ಮನಸ್ಸು. ಉತ್ತಮ ಶ್ಲೋಕನ ಕಥೆಯನ್ನು ಕೇಳುವ ಕಿವಿಗಳೇ ಕಿವಿಗಳು. ಅವನ ಪ್ರತಿಮೆಗಳಿಗೂ, ಪ್ರತಿಮೆಗಳಂತಿರುವ ವಿಪ್ರವರರಿಗೂ ವಂದಿಸುವ ತಲೆಯೇ ತಲೆ. ಅವನ ಮೂರ್ತಿಗಳನ್ನು ನೋಡುವ ಕಣ್ಣೇ ಕಣ್ಣು. ಶ್ರೀಹರಿಯ ಪಾದೋದಕವನ್ನು, ಶ್ರೀಹರಿಭಕ್ತರ ಪಾದಜಲವನ್ನು ಧರಿಸುವ ಅಂಗವೇ ಅಂಗವು.

ವಿಷ್ಣುರಾತನ ವಚನವನ್ನು ಕೇಳಿ, ಬ್ರಹ್ಮರಾತನು ವಾಸುದೇವನನ್ನು ಸ್ಮರಿಸಿ, ಆನಂದದಿಂದ ಇಂತೆಂದನು–

ಶ್ರೀಕೃಷ್ಣನಿಗೆ ಒಬ್ಬ ಬ್ರಾಹ್ಮಣ ಸಖನಿದ್ದನು. ಅವನು ವೇದವೇದಾಂಗಪಾರಂಗತನು, ಇಂದ್ರಿಯವಿಷಯವಿಮುಖನು, ಪ್ರಶಾಂತಮನಸ್ಕನು ಆಗಿದ್ದನು. ಶ್ರೀದೇವನಿತ್ತಿದ್ದರಿಂದ ಗೃಹಕೃತ್ಯಗಳನ್ನು ನಡೆಸಿಕೊಂಡು ಪತ್ನೀಸುತರನ್ನು ರಕ್ಷಿಸುತ್ತಿದ್ದನು. ಅವನು ಕುಚೇಲನೆಂದು ಖ್ಯಾತನಾಗಿದ್ದನು. ದರಿದ್ರನಾದುದರಿಂದ ಪತ್ನೀಪುತ್ರಾದಿಗಳು ಸದಾ ಕ್ಲೇಶಭಾಜನರಾಗಿದ್ದರು. ಅವನ ಪತ್ನೀ ಪತಿವ್ರತೆಯು, ಪತಿಸೇವಾಪರಾಯಣಳು, ವಿನಯಾದಿ ಗುಣವತಿಯು ಆಗಿದ್ದಳು. ಒಂದು ದಿನ ಆ ಸಾಧ್ವಿ, ಮಕ್ಕಳ ಹಸಿವೆಯನ್ನು ಹಿಂಗಿಸಲಾರದೆ, ದುಃಖದಿಂದ ಬಂದು, ಪತಿಯನ್ನು ನೋಡಿ, ಮೆಲ್ಲನೆ ಇಂತೆಂದಳು.

ಸ್ವಾಮೀ! ಶ್ರೀಯಃಪತಿಯಾದ ಶ್ರೀಕೃಷ್ಣನು ನಿನ್ನ ಸ್ನೇಹಿತನಲ್ಲವೇ? ಆ ಸಾತ್ವತಪುಂಗವನು ಬ್ರಾಹ್ಮಣವತ್ಸಲನು, ಶರಣಾಗತ ಪರಿಪಾಲನು, ಕರುಣಾಲವಾಲನೂ ಅಹುದು. ಮಹಾಭಾಗ! ಅವನನ್ನು ನೋಡಿ ಬರಬಾರದೇ? ಬಡವನು, ಕುಟುಂಬಿಯು ಆದ ನಿನಗೆ ಬೇಕಾದಷ್ಟು ಧನವನ್ನು ಕೊಟ್ಟು ಕಳುಹುವನು. ಭೋಜ ವೃಷ್ಣಂಧಕೇಶನಾದ ಕೇಶವನು ಸಮೀಪದ ದ್ವಾರವತಿಯಲ್ಲೇ ಇರುವನು. ತನ್ನ ಚರಣಾರವಿಂದ ದ್ವಂದ್ವವನ್ನು ಸ್ಮರಿಸುವವರ ಕುಂದುಕೊರತೆಗಳನ್ನೆಲ್ಲ ನೀಗಿ, ಮೆಚ್ಚಿದನೆಂದರೆ ತನ್ನನ್ನು ತಾನೇ ಕೊಟ್ಟುಕೊಳ್ಳುವನೆಂದ ಮೇಲೆ, ಅರ್ಥಕಾಮಗಳನ್ನು ಪೂರೈಸಿ ಕೊಡದಿರುವನೇ? ಕೊಟ್ಟೇ ಕೊಡುವನು.

ಎಂದು ಬಹು ಸಲ ಪ್ರಾರ್ಥಿಸುವ ಸತಿಯ ಮಾತನ್ನು ಕೇಳಿ 'ಒಳ್ಳೆಯದು! ಹೀಗಾದರೂ ಶ್ರೀಕೃಷ್ಣನ ದರ್ಶನವಾಗುವುದಲ್ಲ!' ಎಂದು ಕುಚೇಲನು ದ್ವಾರಕೆಗೆ ಹೊರಟು ನಿಂತನು; ಪತ್ನಿಯನ್ನು ನೋಡಿ 'ಏನಾದರೊಂದು ಪದಾರ್ಥವನ್ನು ಶ್ರೀಕೃಷ್ಣನಿಗೆ ಕಾಣಿಕೆಯಾಗಿ ಒಯ್ಯಲು ಕೊಡಬಾರದೇ?' ಎಂದು ಕೇಳಿದನು. ಆ ಸಾಧ್ವಿಯು, ನಾಲ್ಕು ಹಿಡಿ ಅವಲಕ್ಕಿಯನ್ನು ಬೇಡಿತಂದು, ಚೈಲಖಂಡದಲ್ಲಿ ಕಟ್ಟಿ, ಶ್ರೀಕೃಷ್ಣನಿಗರ್ಪಿತವಾಗಲೆಂದು, ಭಕ್ತಿಯಿಂದ ಕೊಟ್ಟಳು. ಕುಚೇಲನು ದ್ವಾರಕೆಯನ್ನು ಸೇರಿ, ಮೂರು ಬಿಡಿದಿಗಳನ್ನು ದಾಟಿ, ಮೂರು ಪುರಪ್ರಕೋಷ್ಠಗಳನ್ನು ಅತಿಕ್ರಮಿಸಿ, ಪೋಗುತ್ತಾ 'ಶ್ರೀಕೃಷ್ಣದರ್ಶನವು ನನಗೆಂತಾಗುವುದೋ?' ಎಂದು ಚಿಂತಿಸುತ್ತಿದ್ದನು; ಮುಂದೆ ಗೋವಿಂದ ಸುಂದರಿಯರ ಮಂದಿರಗಳನ್ನುನೋಡಿ ಅಲ್ಲಿ ಶ್ರೀ ರುಕ್ಮಿಣಿಯ ಮನೆಯನ್ನು ಪೊಕ್ಕನು; ದೂರದಲ್ಲಿ ಪ್ರಿಯಾಪರ್ಯಂಕಾರೂಢನಾಗಿದ್ದ ಶ್ರೀಕೃಷ್ಣನನ್ನು ನೋಡಿ, ಮಹಾನಂದ ವನ್ನು ಪೊಂದಿದನು. ಶ್ರೀಶನಾದರೂ ಬರುವ ಸ್ನೇಹಿತನನ್ನು ನೋಡಿ, ಸಂಭ್ರಮದಿಂದ ಮಂಚ ದಿಂದಿಳಿದು ಎದುರಾಗಿ ಬಂದು ಆಲಿಂಗಿಸಿ, ಕರೆದೊಯ್ದು ಪರ್ಯಂಕದಲ್ಲಿ ಕೂಡಿಸಿದನು; ಪ್ರಿಯಸಖನ ದರ್ಶನದಿಂದ ಶ್ರೀಕೃಷ್ಣನು ಆನಂದಬಾಷ್ಪಪೂರಿತ ನೇತ್ರನಾದನು. ಆ ಚಿತ್ರಚರಿತ್ರನು ತಾನಾಗಿ ಕುಚೇಲನನ್ನು ಸೇವಿಸಲು ನಿಂತನು.

ಕುಚೇಲನ ಪಾದಗಳನ್ನು ತೊಳೆದು, ಆ ವಿಪ್ರಪಾದೋದಕವನ್ನು ಶಿರಸಾ ಧರಿಸಿ, ಲೋಕಪಾವನವಾದ ಶ್ರೀಕೃಷ್ಣನು, ಅವನಿಗೆ ಗಂಧವನ್ನು ಹಚ್ಚಿದನು. ಅಗುರುಧೂಪವನ್ನಿಟ್ಟು, ದೀಪಾವಲಿಗಳನ್ನು ಹಚ್ಚಿ, ಹಾರವನ್ನು ಹಾಕಿ, ಗೋದಾನವನ್ನಿತ್ತು, ತಾಂಬೂಲವನ್ನು ಸಮರ್ಪಿಸಿ ದನು. ಆ ಹೊತ್ತಿಗೆ ಇತರ ಮಹಿಷಿಯರು ಅಲ್ಲಿಗೆ ಬಂದರು. ಬಡವನು, ಕೃಶನು ಆದ ಕುಚೇಲ ನನ್ನು ಪೂಜಿಸುವ ಕೃಷ್ಣನನ್ನು ನೋಡಿದರು. ಮಿತ್ರವಿಂದೆ ಚಾಮರವನ್ನು ಬೀಸತೊಡಗಿದಳು. ಶ್ರೀರುಕ್ಮಿಣಿ, ಕೃಷ್ಣನೊಡಗೂಡಿ ಬಡವನನ್ನು ಸೇವಿಸಿದಳು. ಅಂತಃಪುರದ ಜನರು ಆಶ್ಚರ್ಯ ದಿಂದಿಂತೆಂದರು –

ಅಮಲಕೀರ್ತಿಯಾದ ಕೃಷ್ಣಮೂರ್ತಿಯಿಂದ ಪೂಜೆಯನ್ನು ಕೊಂಬ ಈ ಪುಣ್ಯವಂತನನ್ನು ನೋಡಿರೇ! ಈ ಅವಧೂತ! ಈ ಭಿಕ್ಷುಕ! ಎಂತಹ ಪುಣ್ಯವನ್ನು ಮಾಡಿರುವನೇ? ಸಿರಿ ಇಲ್ಲ, ಸಂಪತ್ತಿಲ್ಲ! ಲೋಕದಲ್ಲಿ ಗರ್ಹಿತನಾದ ಈ ಬಡವನನ್ನು ತ್ರಿಲೋಕ ಗುರುವಾದ ಶ್ರೀಕೃಷ್ಣನು ತಾನೇ ನಿಂತು ಪೂಜಿಸುತ್ತಿರುವನಲ್ಲ! ಪರ್ಯಂಕದಲ್ಲಿ ರುಕ್ಮಿಣಿಯನ್ನೂ ಬಿಟ್ಟು, ಓಡಿಹೋಗಿ, ಬಲರಾಮದೇವನನ್ನಂತೆ, ಅಪ್ಪಿ, ಆನಂದದಿಂದ ತಬ್ಬಿಬ್ಬಾಗಿ ಪೂಜಿಸುತ್ತಿರುವನು.

ಶ್ರೀಕೃಷ್ಣನು ಕುಚೇಲನ ಕೈಯನ್ನು ತನ್ನ ಕೈಗಳಲ್ಲಿ ಪಿಡಿದು ಲಾಲಿಸುತ್ತಾ, ಹಿಂದೆ ತಾವು ಗುರುಕುಲದಲ್ಲಿ ಮಾಡಿದ ಕೃತ್ಯಗಳನ್ನು ನೆನಪಿಗೆ ತರುತ್ತಾ ಇಂತು ನುಡಿದನು–

ಸಖ! ಗುರುಕುಲವಾಸಮಾಡಿ, ಗುರುದಕ್ಷಿಣೆಯನ್ನಿತ್ತು, ನಿಮ್ಮೂರಿಗೆ ಹೋದೆಯಲ್ಲವೇ? ಅಲ್ಲಿ ಮದುವೆಯಾದೆಯಾ? ನಿನಗೆ ತಕ್ಕ ಮಡದಿ ದೊರಕಿದಳೇ? ಗೃಹಕೃತ್ಯಗಳಲ್ಲಿ ಮಗ್ನನಾಗಿ ಕಾಮಸಂತಪ್ತಚಿತ್ತನಾಗದೆ ಇರುವೆಯಾ? ಧನಾದಿಗಳಲ್ಲಿ ಮೊದಲಿನಿಂದಲು ವಿರಕ್ತನು ನೀನೆಂದು ನನಗೆ ಗೊತ್ತಿದೆ. ಕೆಲವರು ಸುಜನರು ಕಾಮಪಿಶಾಚಕ್ಕೆ ಚಿತ್ತಪೀಠದಲ್ಲೆಡೆಗೊಡದೆ ಪ್ರಾಕೃತ ವಿಷಯಗಳನ್ನು ಬಿಟ್ಟು, ನಾನು ಲೋಕವನ್ನು ಶಿಕ್ಷಿಸಲು ಮಾಡುವಂತೆ, ವಿಹಿತಕರ್ಮಗಳನ್ನು ನನ್ನ ಪ್ರೀತಿಗಾಗಿಯೇ ಮಾಡುವರು. ಅಂತಹವರೆಂದರೆ ನನಗೆ ಪ್ರಾಣವೋ ಕುಚೇಲಾ! ಕನಸಿನಂತೆ ಕಳೆದುಹೋಯಿತಲ್ಲ ನಮ್ಮ ಗುರುಕುಲವಾಸ; ಎಂದಾದರೂ ಅದನ್ನು ನೆನೆಸುವಿಯಾ? ತಿಳಿಯಬೇಕಾದ್ದನ್ನು ತಿಳಿಸಿಕೊಡುವ ಗುರು ಚಿರಣಾಂತೇವಾಸವು ಸಕಲ ಶ್ರೇಯಸ್ಸಾಧನವಾಗಿದೆ. ಬ್ರಾಹ್ಮಣಾದಿ ದ್ವಿಜರ ಸತ್ಕರ್ಮಗಳ ವಿವಿಧ ವಿಧಾನವನ್ನು ಗುರುಕುಲವಾಸದಲ್ಲೇ ಅರಿತು, ಸರ್ವವರ್ಣದವರಿಗೆ ಗುರುವಾದ ಬ್ರಾಹ್ಮಣ ಶ್ರೇಷ್ಠನಿಂದ ಕಲಿತು, ಗುರು ಹೃದಯಾಂತರ್ಗತ ನಾದ ನನ್ನ ಜ್ಞಾನೋಪದೇಶ ಭಾಗ್ಯವನ್ನು ಪೊಂದಿದವನೇ ಧನ್ಯನು. ಅಂತಹ ಉಪದೇಶವಿಲ್ಲದೆ, ಸಂಸಾರ ಸಮುದ್ರವನ್ನು ದಾಟಲಾದರೂ ಬರುವುದೇ? ಗುರು ಶುಶ್ರೂಷೆಯಿಂದ ನಾನು ತುಷ್ಟನಾಗುವಂತೆ, ಯಜ್ಞ, ತಪೋದಾನ, ವೈರಾಗ್ಯ, ಸಂತಾನಪ್ರಾಪ್ತಿಗಳಿಂದ ತುಷ್ಟನಾಗದಿರುವೆನು. ಗುರುಭಕ್ತರಲ್ಲದವರ ಯಜ್ಞದಾನ ಕ್ರಿಯಾದಿಗಳೆಲ್ಲವೂ ವ್ಯರ್ಥವೇ ಸರಿ. ಸರ್ವಾಂತರ್ಯಾಮಿ ಯಾದ ನಾನು ಗುರುವಿನ ಗುಲಾಮನಾದವನಿಗೇ ಸಿಗುತ್ತಿರುವೆನು. ಇರಲಿ! ಒಂದು ದಿನ ಗುರುಪತ್ನಿಯು ಕಳಿಸಿದಾಗ, ಇಂಧನಾದಿಗಳನ್ನು ತರಲು ನಾನು, ನೀನು, ಕೆಲಶಿಷ್ಯರು ವನಕ್ಕೆ ಹೋದಾಗ ನಡೆದ ವಿಚಿತ್ರವನ್ನು ಮರೆತೆಯಾ? ಏಕೆ ಮಾತಾಡದಿರುವೆ? ಕುಚೇಲಾ! ಮಳೆಗಾಲ ವಲ್ಲದಿದ್ದರೂ, ಮಳೆಯಲ್ಲಿ ಸಿಕ್ಕು, ಗಾಳಿ ಬೀಸಿದ ಚಳಿಗೆ ನಡುಗುತ್ತಾ, ಮಿಂಚು ಗುಡುಗಿಗೆ ಹೆದರುತ್ತಾ, ಮಹಾರಣ್ಯದಲ್ಲಿ, ರಾತ್ರಿಯೆಲ್ಲಾ ಕಾಲ ಕಳೆಯಬೇಕಾಯಿತಲ್ಲ! ನೀರಿನಲ್ಲಿ ಮುಳುಗಿ ನೆಲವೆಲ್ಲ ಸಮವಾಗಿ, ಕಣ್ಣುಕಾಣದಂತೆ ಕತ್ತಲು ಕವಿಯಲು ದಿಕ್ಕು ತೋರದೆ, ನನ್ನ ಕೈಯನ್ನು ಹಿಡಿದು, ಒಂದು ಗಿಡದ ಅಡಿಯಲ್ಲಿ ನೀನು ನಿಂತಿದ್ದನ್ನು ನಾನು ಮರೆತಿಲ್ಲ. ಪ್ರಾತಃಕಾಲ ವಾಯಿತು. ಪಾಪ! ನಮ್ಮ ಗುರು ಸಾಂದೀಪನಿಯು ನಮ್ಮನ್ನು ಹುಡುಕುತ್ತಾ ಬಂದನು. ನಮ್ಮನ್ನು ಕಾಣಲಾರದೆ ಆರ್ತನಾಗಿ, ಕಣ್ಣೀರೊರಸಿಕೊಳ್ಳುತ್ತಾ, ಕೃಷ್ಣಾ! ಕುಚೇಲಾ, ಎಂದು ಕೂಗಿದ ಗುರುವಿನ ವಾತ್ಸಲ್ಯವೇ ನಮ್ಮ ಸರ್ವಾಪನ್ನಿವಾರಕವಾಗಿದೆ.

ಕೃಷ್ಣ! ಕುಚೇಲ! ಮಕ್ಕಳಿರಾ! ಎಲ್ಲಿರುವಿರೋ? ನಮಗಾಗಿ ಎಷ್ಟು ಕಷ್ಟಪಟ್ಟಿರಿ! ಮನುಜರಿಗೆ ಶರೀರದಕಿಂತಲು ಪ್ರೀತಿಪಾತ್ರವಾದುದಿನ್ನೊಂದಿಲ್ಲ. ಅಂತಹ ಶರೀರವನ್ನು ಲಕ್ಷಿಸದೆ ನನ್ನ ಕಾರ್ಯನಿರ್ವಹಣೆಯಲ್ಲಿ ದೀಕ್ಷೆಯಿಂದ ನಡೆದ ನಿಮ್ಮ ಶೀಲವು, ನಿಮ್ಮ ಗುರುಭಕ್ತಿಯು, ಸಕಲ ಶಿಷ್ಯರಿಗೆ ಅನುಸರಣೀಯವಾಗಿದೆ. ನಿರ್ಮಲಮನದಿಂದ ಸರ್ವವನ್ನರ್ಪಿಸುವುದಕಿಂತಲು ಇನ್ನೊಂದು ಗುರುಪ್ರತ್ಯುಪಕಾರ ಉಂಟೇ? ನಿಮ್ಮಲ್ಲಿ ಸಂತುಷ್ಟನಾಗಿರುವೆನು. ದ್ವಿಜಬಾಲಕರೇ! ನಿಮ್ಮೆಲ್ಲರ ಮನೋರಥಗಳು ಈಡೇರಲಿ! ನೀವು ಓದಿರುವ ವೇದಾದಿವಿದ್ಯೆಯು ಸಫಲವಾಗಲಿ! ಇಹಪರ ಸುಖವನ್ನು ಪೊಂದಿ ಚೆನ್ನಾಗಿ ಬಾಳಿ!' ಎಂದು ಗುರು ಸಾಂದೀಪನಿ ನಮ್ಮನ್ನೆಲ್ಲಾ ಹರಸಿದನು. ಗುರುಕುಲದಲ್ಲಿ ನಾವು ಪಟ್ಟ ಪಾಡಿನ ಮಧುರಸ್ಮೃತಿಯು ಎಂದಿಗೂ ಅಳಿಸುವು ದಿಲ್ಲ. ಗುರ್ವನುಗ್ರಹದಿಂದ ಪೂರ್ಣನಾಗಿ ಮನುಜರು ಮೋಕ್ಷಯೋಗ್ಯನೆನಿಸುವನು.

ಕೃಷ್ಣನ ಮಾತನ್ನು ಮೈಮರೆತು ಕೇಳುತ್ತಿದ್ದ ವಿಪ್ರವರನು 'ಕೃಷ್ಣ! ದೇವದೇವ! ಜಗತ್ತಿಗೆ ಗುರುವಾದ ನಿನಗೆ ಗುರುಕುಲವಾಸವೆಂದರೆ, ಸತ್ಯಸಂಕಲ್ಪವಾದ ನಿನ್ನ ವೇದಾನು ಶಾಸನದಿಂದ– ಆಗಲಿ, ಅದರಿಂದ ನಿನಗೇನು ಪ್ರಯೋಜನ? ನಾವು ಗುರುಕುಲದಲ್ಲಿ ಏನು ಮಾಡಿದೆವು? ಏನಿಲ್ಲ? ಎಂದು ಎಣಿಸಲಾಗುವುದೇ? ಸರ್ವವನ್ನೂ ಗುರುಪ್ರೀತಿಗಾಗಿ ನಡೆಸಿ ಕೃತಾರ್ಥರಾಗಿರು ವೆವು. ಜಗಜ್ಜನ್ಮಾದಿಕಾರಣ ಚಿದಾನಂದ ದೇಹನಾದ ನೀನು ಸಕಲವೇದಾದಿ ಸಚ್ಛಾಸ್ತ್ರ ಮುಖ್ಯಪ್ರತಿಪಾದ್ಯನಾದ ನೀನು– ನಮ್ಮಂತೆ ಗುರುಕುಲವಾಸವನ್ನು ಮಾಡಿದೆ ಎಂದರೆ ಅದು ನಿನ್ನ ಲೀಲಾವಿಡಂಬನೆಯೇ ಸರಿ! ಎಂದು ಸುಮ್ಮನಾದನು.

## ೮೧. ಕುಚೇಲ ಚರಿತೆ – ಸಂಪದ್ದಾನ

ಶ್ರೀಶುಕನು ಹೇಳಿದನು–

ಇಂತು ದ್ವಿಜವರನಿಂದ ಕೂಡಿ ಮಾತನಾಡುವ ಮಾಧವನು– ಸರ್ವಭೂತಮನೋ ಗತವನ್ನರಿತವನಾದುದರಿಂದ ನಗುತ್ತಾ ಕುಚೇಲನಿಗಿಂತೆಂದನು–

ಬ್ರಾಹ್ಮಣೋತ್ತಮ! ನಮ್ಮ ಅತ್ತಿಗೆ ನನಗೆ ಏನು ಕೊಟ್ಟು ಕಳಿಸಿರುವಳು? ಕೊಡು ಆ ಉಪಾಯನವನ್ನು! ಅಲ್ಪವೆಂದು ಹೆದರಬೇಡ. ಪ್ರೇಮರಸಮಿಳಿತವಾದುದಲ್ಪವಾದರೂ ದೊಡ್ಡದೇ ಆಗುವುದು. ಅಭಕ್ತರು ಮೇರುಪರ್ವತವನ್ನಿತ್ತರೂ ನನಗೆ ಸಂತೋಷವಾಗುವುದಿಲ್ಲ. ಭಕ್ತರು ಕೊಟ್ಟ ಸ್ವಲ್ಪವೂ ನನಗೆ ಮಹಾಪ್ರೀತಿಕರವೆನಿಸುವುದು. ದ್ರೌಪದಿಯಂತೆ ಪತ್ರವನ್ನೋ, ಗಜರಾಜನಂತೆ ಹೂವನ್ನೋ, ಶಬರಿಯಂತೆ ಹಣ್ಣನ್ನೋ, ರಂತಿದೇವನಂತೆ ನೀರನ್ನೋ ನನ್ನ ಭಕ್ತರು ಆದರದಿಂದ ಕೊಟ್ಟರೆ, ಅದರಲ್ಲಿರುವ ಭಕ್ತಿರಸವಿವಶನಾಗಿ ನಾನು ಅದನ್ನು ಸ್ವೀಕರಿಸು ವೆನು.

ಇಷ್ಟು ಮಾತನ್ನಾಲಿಸಿ ಕುಚೇಲನು ಶ್ರೀಯಃಪತಿಯಾದ ಸಖನಿಗೆ, ಬಡ ಅವಲಕ್ಕಿ ಕಾಳುಗಳನ್ನೀಯಲಾರದೆ, ನಾಚಿಕೆಯಿಂದ ತಲೆತಗ್ಗಿಸಿ ಕುಳಿತಿದ್ದನು. ಸರ್ವಭೂತ ಹೃದಯ ನಿಲಯನಾದ ಶ್ರೀಕೃಷ್ಣನು, ಕುಚೇಲನು ಬಂದಿರುವ ಕಾರಣವನ್ನರಿತನು.

'ಹಿಂದೆಂದೂ ಇವನು ಶ್ರೀಕಾಮನಾಗಿ ನನ್ನನ್ನು ಸೇವಿಸಿ ಅರಿಯನು. ಪತಿವ್ರತೆಯಾದ ತನ್ನ ಪತ್ನಿಯ ಮಾತನ್ನು ಮೀರಲಾರದೆ, ನನ್ನ ದರ್ಶನವೇ ಸಾಕೆಂದು ಬಂದಿರುವನು. ಇವನಿಗೆ ಮರ್ತ್ಯರಾರಿಗೂ ಸಿಗಲಾರದಷ್ಟು ಐಶ್ವರ್ಯವನ್ನು ಕೊಟ್ಟುಬಿಡುವೆನು' ಎಂದು ಚಿಂತಿಸಿ, ಗೋವಿಂದನು, ಸ್ನೇಹಿತನ ಹರಕಲು ಬಟ್ಟೆಯ ಮೂಟೆಯನ್ನು 'ಏನಿದು' ಎನ್ನುತ್ತಾ, ತೆಗೆದು ಕೊಂಡನು. ಗಂಟನ್ನು ಬಿಚ್ಚಿ, 'ಆಹಾ! ಅವಲಕ್ಕಿ' ಎನ್ನುತ್ತಾ, ಒಂದು ಹಿಡಿಯನ್ನು ತಿಂದು, ಎರಡನೆಯ ಹಿಡಿಯನ್ನು, ಸ್ವೀಕರಿಸುವಾಗ, ರುಕ್ಮಿಣೀದೇವಿಯು, ತ್ವರೆಯಿಂದ ಬಂದು, ಶ್ರೀಶನ ಕೈಯನ್ನು ತಡೆದು ಇಂತೆಂದಳು–

ವಿಶ್ವಾತ್ಮಕನೇ! ನಿನ್ನ ಪ್ರೀತಿಸಾಧಕವಾದ ಒಂದು ಹಿಡಿ ಸಾಲದೇ? ಇವನಿಗೆ ಇದರಿಂದಲೇ ಸರ್ವಸಂಪತ್ತು, ಸಂಪೂರ್ಣವಾಗಿದೆ. ನಿನ್ನ ಪ್ರೀತಿಯು ಇಹಪರಸುಖ ಸಮೃದ್ಧಿಯನ್ನು ಕೊಡುವುದಿನ್ನು ಬಿಡು! ವಿಪ್ರಪ್ರಸಾದವನ್ನು ನಿನ್ನವರಾದ ನಮಗೆ ಕೊಡು!

ಕುಚೇಲನು ಆ ದಿನ ದ್ವಾರಕೆಯಲ್ಲಿ ಶ್ರೀಕೃಷ್ಣನಿಂದ ಕೂಡಿ ಇಂದ್ರಭೋಗವನ್ನು ಅನುಭವಿಸಿ, ಕ್ಷಣದಂತೆ ಸುಖವಾಗಿ ಕಳೆದನು. ಮರುದಿನ ಬೆಳಗಾಗುತ್ತಲೇ, ಶ್ರೀಕೃಷ್ಣನಿಂದ ವಂದಿತನಾಗಿ, ಕುಚೇಲನು, ಅಪ್ಪಣೆಯನ್ನು ಪಡೆದು, ತನ್ನ ಸುದಾಮಪುರಿಗೆಂದು ಹೊರಟನು. ಶ್ರೀಕೃಷ್ಣನು ಅವನಿಗೆ ಧನವನ್ನು ಕೊಡಲಿಲ್ಲ. ಕುಚೇಲನು ಅದನ್ನು ಯಾಚಿಸಲೂ ಇಲ್ಲ. ಶ್ರೀಕೃಷ್ಣದರ್ಶನ ದಿಂದ ಆದ ಆನಂದವೆಂಬ ನಿಧಿಯನ್ನು ಮನದಲ್ಲಿ ತುಂಬಿ, ಬೇಡಲು ಬಂದಿದ್ದುದನ್ನು ನೆನೆದು ನಾಚಿಕೆಯಿಂದ ತಲೆತಗ್ಗಿಸಿ, ಬೇಡದೆ ಇದ್ದುದಕ್ಕೆ ಸಮಾಧಾನ ಪಡುತ್ತಾ, ಕುಚೇಲನು, ಮಾರ್ಗ ದಲ್ಲಿ ಇಂತು ಚಿಂತಿಸುತ್ತಾ ನಡೆದನು–

ಅಹೋ! ನಮ್ಮ ದೇವನ ಬ್ರಾಹ್ಮಣ ವತ್ಸಲತೆಗೇನೆಂಬೆ! ಅವನ ಬ್ರಹ್ಮಣ್ಯವನಿಂದು ನಾನು ಕಂಡು ಧನ್ಯನಾದೆ. ದರಿದ್ರತಮನಾದ ನನ್ನಂತಹ ಪಾಪಿ ಎಲ್ಲಿ! ಲಕ್ಷ್ಮೀದೇವಿಯನ್ನು ವಕ್ಷದಲ್ಲಿಟ್ಟು ಮೆರೆಯುವ ಶ್ರೀಕೃಷ್ಣನೆಲ್ಲಿ! ಬ್ರಾಹ್ಮಣನೆಂದು ತಿಳಿದು; ಸ್ವಾಮಿ, ನನ್ನನ್ನು ಶ್ರೀಲಾಲಿತಭುಜ ಗಳಿಂದ ಅಪ್ಪಿ, ಶ್ರೀದೇವಿಯಿಂದ ತಾನು ಕೂಡುವ ದಿವ್ಯಾಸನದಲ್ಲಿ ನನ್ನನ್ನು ಕೂಡಿಸಿ, ಅಣ್ಣ ನನ್ನಂತೆ ಆದರಿಸಿದನಲ್ಲ! ಸಾಕ್ಷಾದ್ರುಕ್ಮಿಣಿದೇವಿಯು ಚಾಮರವ್ಯಜನಗಳಿಂದ ಬೀಸಿ, ಅನು ಗ್ರಹಿಸಿದ ನಾನೇ ಕೃತಾರ್ಥನು! ಶ್ರೀಕೃಷ್ಣಾ! ನನ್ನ ಪಾದವನ್ನೇಕೆ ಒತ್ತಿದೆ ಸ್ವಾಮಿ! ದೇವತೆಗಳಿಗೆ ದೇವನಾದ ನಿನಗೆ ಬ್ರಾಹ್ಮಣನೆಂದರೆ ಅಷ್ಟು ಪ್ರೀತಿಯೇ? ದೇವನನ್ನಂತೆ ಅವರನ್ನು ಪೂಜಿಸುವ ನಿನ್ನ ವಿಡಂಬನೆ ಆಶ್ಚರ್ಯಕರವಾಗಿದೆ. ಸ್ವರ್ಗಾಪವರ್ಗಗಳು, ರಸಾತಲಗತವಿಭವವು, ಅಣಿಮಾದಿ ಸರ್ವಸಿದ್ಧಿಗಳು, ಎಲ್ಲವೂ ನಿನ್ನ ಚರಣಾರ್ಚನೆಯ ಫಲವಾಗಿದೆ. ನನಗೆ ನಿನ್ನ ಚರಣಸೇವೆಯನ್ನೇ ಕೊಡು! ಮತ್ತೇನು ಬೇಡ! ನಿರ್ಧನನಾದ ನಾನು ಧನವಿತ್ತರೆ ಮದಿಸಿ, ತನ್ನನ್ನು ಮರೆತುಬಿಡುವೆನೆಂದು– ಭಕ್ತಕರುಣಾನಿಧಿಯು ನನ್ನನ್ನು ಕಳೆದುಕೊಳ್ಳುವೆನೆಂಬ ಭೀತಿಯಿಂದ ನನಗೆ ಧನವನ್ನಿತ್ತಿಲ್ಲ– ಒಳ್ಳೆಯದೇ ಆಯಿತು!

ಇಂತು ಶ್ರೀಕೃಷ್ಣಚಿಂತೆಯನ್ನೇ ಮಾಡುತ್ತಾ ನಡೆದು, ಕುಚೇಲನು ತನ್ನ ಪುರಿಯನ್ನು ಸೇರಿದನು. ಮುಂದೆ ಸೂರ್ಯನಂತೆ ಬೆಳಗುವ ವಿಮಾನಗಳು, ಉನ್ನತ ಸೌಧಗಳು, ಕಾಣಿಸಿದವು; ಉದ್ಯಾನವನಗಳು, ವಿಕಸಿತ ಕುಸುಮಗಂಧವನ್ನು ಹೊತ್ತುತರುವ ಮಾರುತ ಕಿಶೋರಗಳಿಂದ ಸ್ವಾಗತವಿತ್ತು, ಅವನನ್ನು ಫಲಗಳಿಂದ ಸತ್ಕರಿಸಿ, ಪಕ್ಷಿಗಣ ಕಲಕಲರವದಿಂದ ಪಾಡಿಪೊಗಳಿದವು. ಕುಚೇಲನಿಗೆ ಭ್ರಮೆಯಾಗಿ 'ಏನಿದು? ಯಾರ ನಗರವಿದು? ಇದೆಲ್ಲಿಂದ ಬಂತು?' ಎಂದು ಚಿಂತಿಸುತ್ತಾ ನಿಂತನು. ಆಗ ನಗರದ ನರನಾರಿಯರು ಗೀತವಾದ್ಯಗಳಿಂದ ಅವನನ್ನೆದುರ್ಗೊಂಡು, ಮನೆಗೆ ಕರೆದುಕೊಂಡು ಹೋದರು. ಕುಚೇಲನ ಪತ್ನಿಯು ಸಂಭ್ರಮದಿಂದ, ಅಲಂಕರಿಸಿಕೊಂಡು, ಅವನನ್ನೆದುರ್ಗೊಂಡಳು. ಎರಡನೆಯ ಶ್ರೀದೇವಿಯಂತೆ ಶೋಭಿಸುವ ಪತ್ನಿಯನ್ನು ನೋಡಿ, ಕುಚೇಲನು ವಿಸ್ಮಿತನಾದನು. ಆ ಸಾಧ್ವಿಯು ಪ್ರೇಮಾಶ್ರುಗಳುದುರುತ್ತಿರಲು, ಪತಿಯನ್ನು ಮನಸಾ ಆಲಿಂಗಿಸಿ, ಬುದ್ಧಿಯಿಂದ ವಂದಿಸಿ ಮನೆಗೆ ಕರೆದುಕೊಂಡು ಹೋದಳು. ಅವಳನ್ನು ಸೇವಿಸುವ ಸರ್ವಾಲಂಕಾರ ಭೂಷಿತೆಯರಾದ ದಾಸಿಯರನ್ನು, ಪ್ರೀತಳಾದ ಪತ್ನಿಯನ್ನು ಕುಚೇಲನು ನೋಡಿದನು. ಮನೆಯಲ್ಲಿ ಮಣಿಸ್ತಂಭಗಳು, ಮೃದುತಲ್ಪಗಳು, ದಂತನಿರ್ಮಿತ ದಿವ್ಯಾಸನಗಳು, ಹೇಮಪರ್ಯಂಕಗಳು, ಪೂಮಾಲೆಗಳು, ರತ್ನಾಭರಣಗಳು, ಮುತ್ತಿನ ತೋರಣಗಳು, ಪ್ರಕಾಶಮಾನವಿತಾನಗಳು, ರತ್ನಸ್ತಂಭಗಳಿಗಾತುನಿಂತ ಬಂಗಾರದ ನಾರಿಯರು, ಅವರ ಕೈಯಲ್ಲಿ ಉರಿಯುತ್ತಿದ್ದ ರತ್ನದೀಪಗಳು, ಎಲ್ಲ ಸಿರಿಸಂಪತ್ತನ್ನೂ ನೋಡಿದನು.

ಕುಚೇಲನು ಆ ಸಂಪತ್ತಿಗೆ ಮನಸೋಲದೆ, ಮದವೇರದೆ ಶ್ರೀಕೃಷ್ಣನಿತ್ತ ಸೌಭಾಗ್ಯವೆಂದು ಚೆನ್ನಾಗಿ ತಿಳಿದನು–

ಆಹಾ! ನಿತ್ಯದರಿದ್ರನಾದ ನನಗೆ ಇಂತಹ ಸಮೃದ್ಧಿಯೇ! ಯದುನಾಥನ ಕಟಾಕ್ಷವಲ್ಲವೇ, ಶ್ರೀ ರುಕ್ಮಿಣೀದೇವಿಯ ಕರಪಂಕಜನಿರ್ಮುಕ್ತನಲ್ಲವೇ? ಈ ಸಂಪತ್ತೆಲ್ಲ, ನಾನು ಕೇಳದಿದ್ದರೂ, ಆ ಮಹಾಪ್ರಭಾವನು, ಪರ್ಜನ್ಯನಂತೆ, ಅಗಣಿತಸೌಭಾಗ್ಯವನ್ನಿತ್ತಿರುವನು. ಕೊಟ್ಟಿರುವೆನೆಂದು ಕೊಚ್ಚಿಕೊಳ್ಳದಿರುವ ಆ ದಯಾಮಯನು– ಆ ದೇವದೇವನು– ಆ ಸಾಕ್ಷಾದ್ವಿಷ್ಣುಮೂರ್ತಿ– ಈ ದರಿದ್ರಕುಚೇಲನ ಸ್ನೇಹಿತನಂತೆ! ಎಂತಹ ವಿಡಂಬನ, ಎಂತಹ ವಿಸ್ಮಯಕರವವನ ಚರಿತೆ! ಸುಜನರು ಭಕ್ತಿಯಿಂದ ಕೊಟ್ಟ ಅಲ್ಪವನ್ನು ಅನಂತಫಲಕಾರಿಯನ್ನಾಗಿಸುವ ಶ್ರೀಕೃಷ್ಣನ ಭಕ್ತವಾತ್ಸಲ್ಯ ವಿಷಯದಲ್ಲಿ ನಾನೇ ಸಾಕ್ಷಿಯಾಗಿರುವೆನು. ಒಂದು ಮುಷ್ಟಿ ಅವಲಕ್ಕಿಗೆ ಇಷ್ಟು ಸಂಪತ್ತೇ? ಮಹಾಮಹಿಮ! ಶ್ರೀಶ! ನಿನ್ನ ಸೌಹೃದ, ನಿನ್ನ ಮೈತ್ರಿ, ನಿನ್ನ ದಾಸ್ಯ ನನಗೆ ಜನ್ಮ ಜನ್ಮಗಳಲ್ಲಿ ಇರಲಿ!ಮಹಾನುಭಾವನಾದ ನಿನ್ನ ಕಲ್ಯಾಣಗುಣ ಸ್ಮರಣೆಯನ್ನು ಮರೆಯದೆ ಕೊಡುವ ಸಜ್ಜನಸಂಗವನ್ನಿತ್ತು ಕಾಪಾಡು ತಂದೇ! ಕಲ್ಯಾಣಾದ್ಭುತಗಾತ್ರ! ಕಾಮಿತಾರ್ಥ ಪ್ರದಾಯಿನ್! ಶ್ರೀನಿವಾಸ! ನಿನಗೆ ಸಮಸ್ಕಾರ! 'ಭಕ್ತ ಜನರಿಗೆ ಐಹಿಕ ಸಂಪತ್ತನ್ನು ಶ್ರೀಶನು ಕೊಡುವುದಿಲ್ಲ' ವೆಂದು ಮಂದಬುದ್ಧಿಗಳಾಡುವ ಮಾತನ್ನು ಸುಳ್ಳಾಗಿಸಲೆಂಬಂತೆ, ಶ್ರೀಹರಿಯು ತನಗೆ ಈ ಸಂಪದವನ್ನಿತ್ತಿರುವನು. ಧನಿಗಳಾಗಿ ಮದದಿಂದ ಐಹಿಕಸುಖಮಗ್ನರಾಗಿ ಕೆಡುವರೆಂಬ ಭಯದಿಂದ ಶ್ರೀಶನು ಸಂಪತ್ತನ್ನು ಕೊಡದಿರುವನು ನಿಜ. ಅಂತಿರುವುದವನ ಕರುಣೆ' ಎಂದು ನಿಶ್ಚಯಿಸಿ ಕುಚೇಲನು ಭಕ್ತಿಭಾಗ್ಯನಿರತನಾಗಿ, ಅಹಂಭಾವವನ್ನು ಮಾಡದೆ, ವಿಷಯಲಂಪಟ ನಾಗದೆ, ಸತಿ-ಸುತರಿಂದ ಸುಖವಾಗಿದ್ದನು.

ರಾಜನೇ! ದೇವದೇವನು, ಯಜ್ಞಫಲಪ್ರದನು, ವೇದವೇದ್ಯನು ಆದ ಶ್ರೀಕೃಷ್ಣನಿಗೆ ಬ್ರಾಹ್ಮಣ ರೆಂದರೆ ಪ್ರಾಣ. ಆ ದೇವೇಶನಿಗೆ ಅವರೇ ದೇವತೆಗಳು. ಅವರಕಿಂತಲು ಉತ್ತಮರೀ ಲೋಕದಲ್ಲಿ ಅವನಿಗೆ ಮತ್ತೊಬ್ಬರಿಲ್ಲ. ಇಂತು ಭಗವನ್ಮಿತ್ರನಾದ ಕುಚೇಲನು ಆ ಚಿತ್ರಚರಿತ್ರನ ಭಕ್ತವಶ್ಯತೆ ಯನ್ನು ಕಂಡು, ಅನುಭವಿಸಿ, ಅವನ ಗುಣಧ್ಯಾನದಿಂದ ಅಜ್ಞಾನಾದಿಗಳನ್ನು ಕಳೆದುಕೊಂಡು, ಬೇಗನೆ ಶ್ರೀ ಪರಮಾತ್ಮನ ದಿವ್ಯಲೋಕವನ್ನೈದಿದನು. ಬ್ರಹ್ಮಣ್ಯದೇವನ ಪ್ರಿಯಸಖನಾದ ಕುಚೇಲನ ಪಾವನ ಚರಿತ್ರವನ್ನು ಕೇಳಿದವನು, ಶ್ರೀಹರಿಭಕ್ತನಾಗುವನು. ಅವನ ಕರ್ಮಬಂಧಗಳು ನಷ್ಟವಾಗಿ, ಅವನು ಮೋಕ್ಷ ಸುಖವನ್ನು ಪೊಂದುವನು.

## ೧೦೦. ಮೃತ ವಿಪ್ರಸುತಾನಯನ

ಶ್ರೀಶುಕನು ಹೇಳಿದನು–

ಒಂದು ಸಲ ಅಶ್ವಮೇಧ ಯಜ್ಞವನ್ನು ಮಾಡಲಿಚ್ಛಿಸಿ, ಶ್ರೀಕೃಷ್ಣನು, ಅಶ್ವವನ್ನು ಭೂಮಂಡಲ ಪ್ರದಕ್ಷಿಣೆಗಾಗಿ ಕಳಿಸಿದನು. ಹಿಂದೆ ಅದನ್ನು ಸಂರಕ್ಷಿಸಲು ಕೃತವರ್ಮ, ಯುಯುಧಾನರನ್ನು, ಚಾರುದೇಷ್ಣ - ಸುದೇಷ್ಣರನ್ನು, ಪ್ರದ್ಯುಮ್ನ ಸಾಂಬರನ್ನು, ಅಂಶುಮಂತ ಸುಭಾನುಗಳನ್ನು ಕಳಿಸಿದನು. ಅವರು ಬಹುಸೈನ್ಯಸಮೇತರಾಗಿ ಪೋಗಿ, ಭೂಪ್ರದಕ್ಷಿಣವನ್ನು ಮಾಡಿ, ಸಕಲ ರಾಜರಿಂದ ಕಾಣಿಕೆಗಳನ್ನು ತಂದರು. ಅಶ್ವಮೇಧವನ್ನು ಮಾಡುವನೆಂದು ತಿಳಿದು ಶ್ರೀಕೃಷ್ಣನ

ಯಾಗಶಾಲೆಗೆ ತಪಸ್ವಿಗಳಾದ ಮುನಿಗಳನೇಕರು ಬಂದರು. ಯಜ್ಞವಿದ್ಯಾವಿಚಕ್ಷಣ ರಾದ ಅಧ್ವರ್ಯು, ಹೋತೃ, ಉದ್ಗಾತೃ, ಸಾಮಗರಿಂದ ಕೂಡಿ, ಪುಣ್ಯಾಹವನ್ನು ನಡೆಸಿ ಶ್ರೀಕೃಷ್ಣನು ದೀಕ್ಷಿತನಾದನು. ಯಜ್ಞವನ್ನು ನೋಡಲು, ಪಾಂಡವರು ಮತ್ತು ಅನೇಕ ರಾಜನ್ಯರು ಬಂದರು. ದ್ವಿಜರು ಮೃಷ್ಟಾನ್ನದಿಂದಲು, ವಸ್ತ್ರ ಹಿರಣ್ಯ ಗೋ ಭೂದಾನಗಳಿಂದಲು ತೃಪ್ತರಾದರು. ಭೂಸುರರುಂಡು ದಾನಗಳನ್ನು ಸ್ವೀಕರಿಸುತ್ತಿದ್ದರು. ರಾಜರು ತಮ್ಮ ಸ್ಥಾನಗಳಲ್ಲಿ ಕೂತಿದ್ದರು. ವೇತ್ರಪಾಣಿಗಳು 'ಸದ್ದು! ಸದ್ದು!' ಎಂದು ಸಭೆಯನ್ನು ಸುಮ್ಮನಾಗಿರಿಸುತ್ತಿದ್ದರು. ಆಗ ಒಬ್ಬ ಬ್ರಾಹ್ಮಣನು, ತೃಣಮೂಲಧರನಾಗಿ, ಯಜ್ಞಶಾಲೆಯ ಮುಂದೆ ನಿಂತು, 'ಹೋ' ಎಂದು ಆರ್ತನಾಗಿ ಕೂಗಿದನು. ಅವನ ಕಂಠ ಒಣಗಿತ್ತು; ಕಣ್ಣಲ್ಲಿ ನೀರು ಹರಿಯುತ್ತಿತ್ತು; ಮುಖ ಬಾಡಿತ್ತು; ಅಳುತ್ತಾ ಅವನಿಂತೆಂದನು–

'ಬ್ರಹ್ಮದ್ವೇಷಿಯು, ಮೂಢನು, ಲೋಭಿಯು, ವಿಷಯಲಂಪಟನು ಆದ ಕ್ಷತ್ರಿಯಾಪಸದನ ದೋಷದಿಂದ, ನನ್ನ ಮಕ್ಕಳು ಮೃತರಾಗುತ್ತಿರುವರು. ಹಿಂಸಾಶೀಲನು, ದುಃಶೀಲನು, ವಿಷಯ ಲೋಲನು ಆದ ರಾಜನನ್ನು ಹೊಂದಿದ ಪ್ರಜರು ದರಿದ್ರರಾಗಿ ನಿತ್ಯವೂ ದುಃಖಪಡುವರು. ಈಗ ನನ್ನ ಸತಿಯು ಅಂತರ್ವತ್ನಿಯಾಗಿರುವಳು. ಕೂಸಿನನ್ನು ಕೊಂಡು ಹೋಗುವ ಭೂತಕ್ಕೆ ಹೆದರುತ್ತಿರುವೆನು.' ಇಂತು ಮತ್ತೆ ಮತ್ತೆ ಆಕ್ರೋಶಿಸುವ ಬ್ರಾಹ್ಮಣನ ಗೋಳನ್ನಾಲಿಸಿ, ಅರ್ಜುನನು ಸಿಟ್ಟಿಗೆದ್ದು ಎದ್ದು ಹೊರಗೆ ಬಂದು 'ಎಲೋ ಬ್ರಾಹ್ಮಣಾ! ಏನಾಯಿತು ನಿನ್ನ ಮಕ್ಕಳಿಗೆ? ಎಲ್ಲವನ್ನೂ ಕೇಳು! ನಿನ್ನ ಮಕ್ಕಳನ್ನು ಕೊಲ್ಲುವವನಾರು? ಅವನನ್ನು ಶಿಕ್ಷಿಸಿ, ನಿನ್ನನ್ನು ಈಗಲೇ ನಿಶ್ಚಿಂತನನ್ನಾಗಿ ಮಾಡುವೆನು' ಎಂದು ಕೇಳಿದನು. ಬ್ರಾಹ್ಮಣನು, 'ಹುಟ್ಟಿದ ತಕ್ಷಣವೇ ಯಾರೋ ನನ್ನ ಸುತರನ್ನು ಸೂತಿಕಾಗೃಹದಿಂದ ಕದ್ದುಕೊಂಡು ಹೋಗುತ್ತಿರುವರು. ಕಣ್ಣಿಗೆ ಕಾಣದೆ ಬಂದು ಕದಿಯುವವನು ಯಾರೆಂದು ನಾನರಿಯೆ' ಎಂದನು. ಆ ಮಾತಿಗೆ ನಕ್ಕು ಪಾರ್ಥನು 'ಏನೋ ವಿಪ್ರ! ನಿಮ್ಮ ಊರಿನಲ್ಲಿ ಧನುಸ್ಸನ್ನು ಪಿಡಿದ ವೀರನೇ ಇಲ್ಲವೇ? ಯಾಗ ನಡೆಯುತ್ತಿರುವುದರಿಂದ ರಾಜನ್ಯರೆಲ್ಲ ಇಲ್ಲೇ ಇರುವರು. ಎಲ್ಲರೂ ರಾಜರೇ! ಏನುಪಯೋಗ? ಯಾವ ರಾಜನ ದೇಶದಲ್ಲಿ ದಾರಾಸುತರಿಂದ ಕೂಡಿದ ಬ್ರಾಹ್ಮಣರು ದುಃಖ ಪಡುತ್ತಿರುವರೋ ಅಂತಹ ರಾಜರು, ನಾಟಕದ ರಾಜರೇ ಸರಿ! ಅಂತಹ ಉದರಂಭರರಿಂದ ಏನು ಪ್ರಯೋಜನ? ಹೋಗಲಿ ಬಿಡು! ನಾನು ನಿನ್ನ ಸಂತಾನವನ್ನು ರಕ್ಷಿಸುವೆನು. ಪೂಜ್ಯನೇ! ಒಂದು ವೇಳೆ ನಾನು ನಿಮ್ಮ ಮಗುವನ್ನು ಕಾಪಾಡದಿದ್ದರೆ, ಅಗ್ನಿಪ್ರವೇಶ ಮಾಡಿಬಿಡುವೆನು. ನಡೆ! ಎಂದನು.

ಬ್ರಾಹ್ಮಣನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾದಿ ಎದುರಿಲ್ಲದ ವೀರರು ಮಾಡಲಾರರೆಂದು ತೋರುವ ದುಷ್ಕರ ಕಾರ್ಯವನ್ನು ನೀನು ಮಾಡುವೆ ಎಂಬ ನಂಬಿಕೆ ನನಗಿಲ್ಲ. ಹುಡುಗಾಟಿಕೆ ಬಿಡು' ಎನ್ನಲು, ಅರ್ಜುನನು– 'ನಾನು ಸಂಕರ್ಷಣನಲ್ಲ, ಕೃಷ್ಣನಲ್ಲ, ಪ್ರದ್ಯುಮ್ನನೂ ಅಲ್ಲ; ಆದರೆ ನಾನು ಧನಂಜಯನೆಂದು ತಿಳಿ! ನೋಡೀ ನನಗೆ ಗಾಂಢೀವ ಧನುವನ್ನು! ಮುಕ್ಕಣ್ಣನನ್ನು ಯುದ್ಧವಾಡಿ ಮೆಚ್ಚಿಸಿದ ನನ್ನನ್ನು ಕಡೆಗಣಿಸಬೇಡ! ಮೃತ್ಯುವಿನೊಡನೆಯಾದರೆ ಕಾದಾಡಿ, ನಿನ್ನ ಆ ಸಂತಾನವನ್ನು ಉಳಿಸುವೆನು' ಎಂದು ನುಡಿದನು.

ಒಳಗಿದ್ದ ಕೃಷ್ಣನನ್ನು ಸಮೀಪಿಸಿ, ಕೃಷ್ಣ! ಬ್ರಾಹ್ಮಣನ ಶಿಶುವನ್ನು ಉಳಿಸಿಕೊಡಲು ಪೋಗುವ ನನಗೆ ಅಪ್ಪಣೆ ಕೊಡು! ಈ ಮಹಾತ್ಮರಿಂದ ಕೂಡಿ ನೀನಿಲ್ಲಿ ಯಜ್ಞವನ್ನು ನಡೆಸುತ್ತಿರು!–

ಎಂದು ನುಡಿಯುವ ಅರ್ಜುನನನ್ನು, ಅವನು ಧನುಸ್ತೂಣೀರಗಳನ್ನು ಪಿಡಿದು ಸಿದ್ಧವಾಗಿರುವುದನ್ನು ನೋಡಿ ನಗುತ್ತಾ ಶ್ರೀಕೃಷ್ಣನಿಂತೆಂದನು–

ಅರ್ಜುನ! ಈ ಕಾರ್ಯವು ನಿನ್ನಿಂದಾಗಲಿಕ್ಕಿಲ್ಲ, ನಾನೇ ಬರುವೆನಿರು! ಅರ್ಭಕರನ್ನು ಒಯ್ಯುವ ಭೂತವು ಸಾಮಾನ್ಯವಲ್ಲವೆಂದು ತೋರುತ್ತದೆ.

ಅರ್ಜುನನು 'ಕೃಷ್ಣ! ಹೆದರಿಸಬೇಡ! ಖಾಂಡವದಹನ ಸಮಯದಲ್ಲಿ ದೇವೇಂದ್ರಾದಿ ಲೋಕಪಾಲರನ್ನು ಗೆದ್ದೆನು. ಯುದ್ಧಮಾಡಿ ಕಿರಾತವೇಷಧಾರಿ ಶಿವನನ್ನು ಮೆಚ್ಚಿಸಿದೆನು. ಇಂದ್ರನು ಗೆಲ್ಲಲಾರದ ನಿವಾತಕವಚರನ್ನು ಹಿರಣ್ಯಪುರವಾಸಿ ದುರ್ಜಯದೈತ್ಯರನ್ನೂ ನಾನೇ ಕೊಂದೆನು. ಅಸುರಮರ್ದನ! ಅವರೆಲ್ಲರಿಕಿಂತಲು ಅಧಿಕಬಲವುಳ್ಳ ಭೂತವಿನ್ನಾವುದು? ಕೊಡು ಅನುಜ್ಞೆಯನ್ನು!' ಎಂದನು. ಇಂತು ಕೃಷ್ಣನ ಅಪ್ಪಣೆಯನ್ನು ಪಡೆದು, ಅರ್ಜುನನು, ಧನುರ್ಧಾರಿಯಾಗಿ, ರಥದಲ್ಲಿ ಕೂತು, ಮುಂದೆ ವಿಪ್ರನನ್ನು ಕೂಡಿಸಿಕೊಂಡು, ಅವರ ಊರಿಗೆ ಹೊರಟನು. ಕಪಿಧ್ವಜನು ಆ ವಿಪ್ರನ ಮಂದಿರದಲ್ಲಿ ಅವನನ್ನಿಳಿಸಿ 'ಬ್ರಹ್ಮನ್! ಹೋಗು. ನಿನಗೆ ಅಭಯವಾಗುವುದು. ಭಯಪಡಬೇಡ, ನಾನಿರುವಾಗ ನಿನ್ನ ಕೂಸಿಗೆ ಮೃತ್ಯುವಿನ ಕಾಟವು ಇಲ್ಲವೆಂದು ತಿಳಿ! ನಿನ್ನ ಪತ್ನಿಗೂ ಧೈರ್ಯಹೇಳು! ಪ್ರಸೂತಿ ಕಾಲದಲ್ಲಿ ನನ್ನನ್ನು ಬಂದು ಕರೆ!' ಎಂದು ಕಳಿಸಿದನು.

ಪ್ರಸೂತಿ ಕಾಲವು ಬಂತು. ಅರ್ಜುನನು ತತ್‌ಕ್ಷಣವೇ ಬಂದು, ಗಾಂಡೀವದಿ ಬಾಣವನ್ನೂ ಹೂಡಿ ನಿಂತನು. ಮಹೇಶನಿಗೆ ವಂದಿಸಿ, ನಾನಾಸ್ತ್ರಶಸ್ತ್ರಗಳಿಂತ ಸೂತಿಕಾಗಾರವನ್ನು ಮುಚ್ಚಿ, ಶರಪಂಜರವನ್ನು ನಿರ್ಮಿಸಿದನು. ಕುಮಾರನು ಹುಟ್ಟಿ, ಅತ್ತಶಬ್ದವು, ಅದರೊಡನೆ 'ಹಾಹಾ' ಎಂಬ ಆರ್ತನಾದವು ಕೇಳಿಬಂತು. ಕೂಸು ಕಣ್ಣಿಗೇ ಕಾಣದಂತೆ ಹೋಗಲು, ಆರ್ತನಾಗಿ ಬ್ರಾಹ್ಮಣನು, ಅರ್ಜುನನನ್ನು ನಿಂದಿಸತೊಡಗಿದನು–

ಕೃಷ್ಣನಿರುತ್ತಿರಲು ಬಿಟ್ಟು, ನಿನ್ನಂತಹ ನಪುಂಸಕನನ್ನು ಕರೆತಂದೆ; ನಿನ್ನ ಜಂಬದ ಮಾತಿಗೆ ಮೋಸಹೋದೆ; ಕೆಟ್ಟೆ. ನಿನಗೆ ಧಿಕ್ಕಾರವಿರಲಿ! ನೀನು ಪ್ರದ್ಯುಮ್ನಾನಿರುದ್ಧ ರಾಮಕೃಷ್ಣರಿಕಿಂತಲು ವೀರನೆಂದು ಬೊಗಳಿದೆ. ಆತ್ಮಶ್ಲಾಘಾತತ್ಪರನಾದ ನಿನ್ನನ್ನು ನಂಬಿ ತಂದುದು ನನ್ನ ತಪ್ಪೇ. ದೇವರ ಅಪಹರಿಸುವ ನನ್ನ ಶಿಶುವನ್ನು ತಂದುಕೊಡುವೆನೆಂದ ದುರ್ಮತಿಗೆ ಧಿಕ್ಕಾರವಿರಲಿ!

ಆ ಶಾಪೋಕ್ತಿಗಳನ್ನು ಕೇಳಿ, ರೋಷದಿಂದ ಅರ್ಜುನನು, ವಿದ್ಯಾಬಲದಿಂದ ಯಮರಾಜನ ಸಂಯಮನಿಯನ್ನು, ಅಲ್ಲಿಂದ ಅಮರಾವತಿಯನ್ನು, ವಿಭಾವರಿಯನ್ನು, ಅಲಕೆಯನ್ನೂ, ರಸಾತಲವನ್ನೂ, ಇನ್ನಿತರ ಲೋಕಗಳನ್ನು ಶೋಧಿಸಿ, ವಿಪ್ರಪುತ್ರರನ್ನು ಕಾಣದೆ, ಹಿಂದಿರುಗಿ ಬಂದನು. ಮಾಡಿದ ಪ್ರತಿಜ್ಞೆಯಂತೆ, ಅಗ್ನಿಪ್ರವೇಶ ಮಾಡಲಿಚ್ಛಿಸಿ, ಬ್ರಾಹ್ಮಣನೊಡನೆ, ಶ್ರೀಕೃಷ್ಣನಲ್ಲಿಗೆ ಬಂದನು. ಆಗ ಕೃಷ್ಣನು ಅರ್ಜುನನ ಅಗ್ನಿಪ್ರವೇಶವನ್ನು ತಡೆದು, ವಿಪ್ರಸುತರನ್ನು ತೋರುವೆನೆಂದು ಸಮಾಧಾನಪಡಿಸಿದನು. ಅರ್ಜುನ ಕೀರ್ತಿಯನ್ನು ಮನುಷ್ಯಲೋಕದಿ ಬೆಳಗಿಸುವೆನೆಂದು, ಪಾರ್ಥನಿಗೆ ಹೇಳಿ, ಅವನಿಂದ ಕೂಡಿ, ಪ್ರಾಚೀದಿಕ್ಕಿಗೆ ರಥಾರೂಢನಾಗಿ ಹೊರಟನು. ಸಪ್ತದ್ವೀಪ, ಸಪ್ತಸಮುದ್ರಗಳನ್ನು, ಲೋಕಾಲೋಕಾಚಲವನ್ನು, ತಮಃಪ್ರದೇಶವನ್ನು ಮುಟ್ಟಿದನು. ಅಲ್ಲಿ ಶೈಬ್ಯಸುಗ್ರೀವ ಮೇಘ ಪುಷ್ಪವಲಾಹಕಗಳ ಗತಿಯು, ಕುಂಠಿತವಾಯಿತು. ಆಗ ಶ್ರೀಕೃಷ್ಣನು, ಸಹಸ್ರಸೂರ್ಯ ಪ್ರಕಾಶವಾದ ಸುದರ್ಶನವನ್ನು ಮುಂದೆ ಕಳಿಸಿ, ಅದು ಘೋರವಾದ ತಮೋಘನವನ್ನು ಕೊರೆದು ಹೋಗುತ್ತಿರಲು, ಹಿಂದೆ ರಥವನ್ನು ನಡೆಸುತ್ತಾ, ಅನಂತಾಸನವನ್ನು

ಸೇರಪೋದನು. ಆಗ ಕೋಟಿ ಸೂರ್ಯಪ್ರಕಾಶದಿಂದ ಬೆಳಗುವ ಶ್ರೀಕೃಷ್ಣನನ್ನು ನೋಡಿ, ಅರ್ಜುನನು, ದಿಗಿಲಿನಿಂದ ಕಣ್ಣುಗಳನ್ನು ಮುಚ್ಚಿಕೊಂಡನು.

ಕೃಷ್ಣನು, ಬಿರುಗಾಳಿಯಿಂದ ಕ್ಷುಭಿತನಾಗಿ, ಭಯಂಕರ ತರಂಗಸಂಕುಲವಾದ ಸಮುದ್ರವನ್ನು ದಾಟಿ, ಅನಂತಾಸನಗಳನ್ನು ಸೇರಿದನು. ಅನಂತರತ್ನಸ್ತಂಭ ಸಂಶೋಭಿತವಾದ ದಿವ್ಯಮಂದಿರ ದಲ್ಲಿ, ಸಾವಿರಹೆಡೆಗಳ ರತ್ನಕಾಂತಿಯಿಂದ ಹರಿಯನ್ನು ನೀರಾಜಿಸುವ ಅನಂತನನ್ನು, ಅವನ ಭೋಗಶಯನದಲ್ಲಿ, ರಮೆಯಿಂದ ಕೂಡಿ ರಾಜಿಸುವ ಅನಂತಾಸನ ದೇವನನ್ನು ಕಂಡನು. ನೀಲಾಂಬುದನಿಭಗಾತ್ರನು, ಪೀತಾಂಬರನು, ಪ್ರಸನ್ನವದನ ಪಂಕಜನು, ಮಂದಹಾಸ ಸುಂದರ ಕರುಣಾರಸಪೂರ್ಣನೇತ್ರನು, ಮಹಾಮಣಿಗಣಖಚಿತ ಕಿರೀಟಕುಂಡಲ ಪ್ರಭಾವಿಭಾಸಿತನು, ಕುಂತಲಾಳಿಸೇವಿತ ಮುಖಕಮಲನು, ಕೌಸ್ತುಭಗ್ರೀವನು, ಪ್ರಲಂಬಪೀವರದೋರ್ದಂಡಿತನು, ಅಷ್ಟಭುಜವಿಲಸಿತನು, ಶ್ರೀವತ್ಸಶೋಭಿತನು, ವನಮಾಲಾಲಂಕಾರನು, ಆದ ಶ್ರೀಹರಿಯು, ತನ್ನ ಸುನಂದನಂದಾದಿ ಪಾರ್ಷದಗಣದಿಂದ ಸೇವಿತನಾಗಿದ್ದನು. ಚಕ್ರ, ಶಂಖ, ಗದಾಪದ್ಮಾದಿ ವಿವಿಧಾಯುಧಗಳು, ಪುಷ್ಟಿ, ಶ್ರೀಕೀರ್ತಿ, ಜಯ ಮೊದಲಾದ ಐಶ್ವರ್ಯಗಳು, ಮೂರ್ತೀಭವಿಸಿ, ನಿಂತು ಶ್ರೀಕಾಂತನನ್ನು ಸೇವಿಸುತ್ತಿದ್ದವು.

ಶ್ರೀಕೃಷ್ಣನು, ತನ್ನನ್ನು ತಾನೇ ವಂದಿಸಿ, ನಿಂತನು. ಅರ್ಜುನನು ಕೂಡ ರಮೇಶನಿಗೆ ವಂದಿಸಿ ದನು. ಆಗ ಶ್ರೀಮದನಂತಪದ್ಮನಾಭನು ನಗುನಗುತ್ತಾ ಇಂತೆಂದನು–

ಕೃಷ್ಣಾರ್ಜುನರೇ! ನಿಮ್ಮನ್ನು ಇಲ್ಲಿಗೆ ಕರೆಯಿಸಿ ದರ್ಶನವೀಯಬೇಕೆಂದು ನಾನೇ ವಿಪ್ರ ಬಾಲಕರನ್ನು ಇಲ್ಲಿಗೆ ತಂದಿರುವೆನು. ಭೂಭಾರಹರಣವನ್ನು ಮಾಡಲು, ಕಲಿಪೂರ್ವ ಸಮಯದಿ ಅವತರಿಸಿದ ನರನಾರಾಯಣರಲ್ಲವೇ ನೀವು? ನಿಮ್ಮ ಅವತಾರ ಕಾರ್ಯವು ಪ್ರಾಯಃ ಮುಗಿದಿದೆ. ಇನ್ನು ಶೀಘ್ರದಲ್ಲೇ ನಿಮ್ಮ ಅವತಾರಗಳನ್ನು ಉಪಸಂಹರಿಸಿ, ನನ್ನಲ್ಲಿ ಬಂದುಬಿಡಿ!

ಶ್ರೀಕೃಷ್ಣನು 'ಓಂ' ಎಂದು ವಂದಿಸಿ, ವಿಪ್ರಸುತರನ್ನೆಂಟು ಜನರನ್ನು ರಥದಲ್ಲಿ ಕೂಡಿಸಿ, ಕರೆತಂದು, ವಿಪ್ರನಿಗೊಪ್ಪಿಸಿ, ಅವನನ್ನು ಸಂತೋಷಪಡಿಸಿದನು. ಅರ್ಜುನನು ಶ್ರೀಕೃಷ್ಣನ ಮಹಿಮೆಯನ್ನು, ಅವನ ಲೋಕದ ವಿಭವವನ್ನು ಕಣ್ಣಾರ ಕಂಡು, ವಿಸ್ಮಿತನಾಗಿ, ಶ್ರೀಕೃಷ್ಣನಿಗೆ ವಂದಿಸಿದನು; ತನ್ನಲ್ಲಿ ಕಂಡುಬರುವ ಪರಾಕ್ರಮ, ವೀರರ್ಯ, ಬಲಾದಿಗಳೆಲ್ಲವು, ಶ್ರೀಕೃಷ್ಣನ ಪ್ರಸಾದವೆಂದು ತಿಳಿದು, ಅರ್ಜುನನು, ಗತಮದನಾದನು.

ಶ್ರೀಕೃಷ್ಣನು ಯಜ್ಞವಾಟವನ್ನು ಸೇರಿ, ದೀಕ್ಷೆಯನ್ನು ಬಿಟ್ಟು, ಹೋದುದಕ್ಕಾಗಿ ಪ್ರಾಯ ಶ್ಚಿತ್ತಾದಿಗಳನ್ನು ಮಾಡಿ, ವಿಪ್ರಾನುಮೋದಿತನಾಗಿ ಯಜ್ಞವನ್ನು ಪೂಣಗೊಳಿಸಿದನು. ಋತ್ವಿಗ್ಜನರನ್ನು ಚೆನ್ನಾಗಿ ಸತ್ಕರಿಸಿ, ಯಮುನೆಯಲ್ಲಿ ಅವಭೃಥವನ್ನೂ ಮಾಡಿ, ಸರ್ವಲೋಕದ ಸುಜನರನ್ನು ಧನ್ಯರನ್ನಾಗಿಸಿದನು.

## ೧೦೧. ದಂತವಕ್ತ್ರ ವಧೆ

ಶ್ರೀಶುಕನು ಹೇಳಿದನು–

ಶ್ರೀಕೃಷ್ಣನು ಅವಭೃಥಕ್ಕೆಂದು ಯಮುನೆಗೆ ಹೋಗಿರುವ ವೃತ್ತಾಂತವನ್ನು ಕೇಳಿ, ಕಳಿಂಗೇಶನಾದ ದಂತವಕ್ತ್ರನು, ಮಹಾಸೈನ್ಯದಿಂದ ಬಂದು, ಹಿಂದಿರುಗಿ, ಬರುತ್ತಿದ್ದ ಕೃಷ್ಣನನ್ನು ಮುತ್ತಿದನು. ರಾಜರು, ಮಹರ್ಷಿಗಳು, ಸಾವಿರಾರು ಕಾಂತೆಯರು, ಯದುಕುಮಾರಕರು, ಋತ್ವಿಗ್ಜನರೇ ಮೊದಲಾದವರಿಂದ ಕೂಡಿ ಹೋಗುತ್ತಿರುವ ಕೃಷ್ಣನನ್ನು, ಸಿಂಹವನ್ನು ನರಿಯಂತೆ–ಎದುರಿಸಿ, ದಂತವಕ್ತ್ರನು, ತನ್ನವರಾದ ಶಿಶುಪಾಲಾದಿಗಳ ಮರಣದ ಸೇಡನ್ನು ತೀರಿಸಲು, ಯುದ್ಧಸನ್ನದ್ಧನಾದನು. ಗದೆಯನ್ನು ಪಿಡಿದು ಮೇಲೇರಿ ಬರುವ ದಂತವಕ್ತ್ರನನ್ನು ನೋಡಿ, ಕೃಷ್ಣನು ಕೂಡ, ರಥದಿಂದಿಳಿದು, ಗದಾಪಾಣಿಯಾಗಿ, ಅವನನ್ನೆದುರಿಸಿ ನಿಂತನು. ಆಗ ಕಾಳಿಂಗ ನಿಂತೆಂದನು–

ಕೃಷ್ಣ! ನನ್ನ ಅದೃಷ್ಟದಿಂದ ಇಂದು ನಿನ್ನನ್ನು ಕಂಡೆ. ಈಗಲೇ ನಿನ್ನನ್ನು ದ್ವಂದ್ವಯುದ್ಧದಲ್ಲಿ ಕೊಂದು, ನೀನು, ನಮ್ಮ ಸೋದರಮಾವನಾದ ಪೌಂಡ್ರಕ, ರುಕ್ಮಿ, ಅಣ್ಣನಾದ ಶಿಶುಪಾಲ ಮೊದಲಾದವರನ್ನು ಬಂಧುಗಳೆನ್ನದೆ ಕೊಂದ ಸೇಡನ್ನು ತೀರಿಸಿಕೊಳ್ಳುವೆನು. ನೀನೂ ಸೋದರ ಮಾವನ ಮಗನೇ! ಆದರೂ ಮಿತ್ರದ್ರೋಹಿಯು, ಬಂಧು ಸಂಹಾರಿಯು ಆದ ನಿನ್ನನ್ನು ಕೊಂದು, ನಿನ್ನ ರಕ್ತದಿಂದ, ಅವರಿಗೆಲ್ಲ ತರ್ಪಣವನ್ನೀಯುವೆನು. ದೇಹದಲ್ಲಿದ್ದ ಎಂದು ವ್ಯಾಧಿಯನ್ನು ಉಪೇಕ್ಷಿಸುವರೇ? ಅಂತೆಯೇ ಬಂಧುವಾದರೂ ನೀನು ವಧ್ಯನೇ ಸರಿ!– ಎಂದು ರೂಕ್ಷವಚನಗಳನ್ನಾಡುವ ಕಳಿಂಗನು ಕೃಷ್ಣನನ್ನು ಎದೆಯಲ್ಲಿ ಗದೆಯಿಂದ ಹೊಡೆದನು.

ಕೃಷ್ಣನು ಚಲಿಸದೆ ಕೌಮೋದಕಿಯನ್ನೆತ್ತಿ ಕಳಿಂಗನ ವಕ್ಷಃಸ್ಥಲದಿ ಹೊಡೆದನು. ಅವನು ಎದೆಯೊಡೆದು, ರಕ್ತವನ್ನು ಕಾರಿ ಕೆಳಗೆ ಬಿದ್ದು ಮೃತನಾದನು. ಅವನ ಜೀವಜ್ಯೋತಿಯು ಶ್ರೀಹರಿಯ ಪಾದಾರವಿಂದವನ್ನು ಸೇರಿತು. ಅಣ್ಣನ ಮೃತಿಯನ್ನು ನೋಡಿ, ಸಹಿಸದೆ, ವಿದೂರಥನು ಖಡ್ಗ-ಚರ್ಮಗಳನ್ನು ಪಿಡಿದು, ಭೂಮಿಯು ನಡುಗುವಂತೆ ಕೃಷ್ಣನ ಮೇಲೇರಿ ಬಂದನು. ಯದುನಂದನನೊಂದು ಬಾಣದಿಂದ ಅವನ ಖಡ್ಗವನ್ನು ಕತ್ತರಿಸಿ, ಕೆಡಹಿದನು. ವಿದೂರಥನು ಘೋರ ಶಕ್ತಿಯನ್ನೆತ್ತಿ ಮಹಾವೇಗದಿಂದ ಬರುವುದನ್ನು ನೋಡಿ, ಶ್ರೀಕೃಷ್ಣನು ಚಕ್ರದಿಂದ ಅವನ ಕುತ್ತಿಗೆಯನ್ನು ಕತ್ತರಿಸಿದನು. ಅವರ ಸೈನ್ಯವನ್ನು ಕೂಡ ಕ್ಷಣಾರ್ಧದಲ್ಲಿ ನಾಶಪಡಿಸಿ, ಶ್ರೀಕೃಷ್ಣನು, ರಥವನ್ನೇರಿ, ದಿವಿಜರು, ಮುನಿಗಳು ಸ್ತುತಿಸಿ ಪೂಮಳೆಗರೆಯುತ್ತಿರಲು, ಪಯಣಿಸಿ, ದ್ವಾರಕೆಯನ್ನು ಸೇರಿದನು.

ರಾಜನ್! 'ಭಗವಂತನಾದ ದೇವಕೀ ಸುತನು ಗೆದ್ದನು, ಅವನು ಸೋತನು' ಎಂಬ ಮನುಜರು, ಮಂದಬುದ್ಧಿಗಳಲ್ಲವೇ? ಅವನಿಗೆ, ನಿತ್ಯಜಯಶೀಲನಿಗೆ, ಜಯವೆಂದರೆ, ನಮ್ಮಗಳ ಶ್ರೇಯಃಸಂಪಾದನವಷ್ಟೇ ಎಂದು ತಿಳಿ! ಆ ಮಹಾಮಹಿಮನ ಉದಾರ ಕರ್ಮಗಳನ್ನು ಹತ್ತಾರು ಸಾವಿರ ವರ್ಷಗಳವರೆವಿಗೂ ವರ್ಣಿಸಿದರೂ ಮುಗಿಸಲಾರೆವು. ಇಂತು ಪೂತನಾವಧೆಯಿಂದ ದಂತವಕ್ತ್ರ ಸಂಹಾರದವರೆವಿಗೂ ನಡೆದ ಭೂಭಾರಹರಣ ಕರ್ಮವನ್ನು ನಿನಗೆ ನಾನು ಶ್ರೀಕೃಷ್ಣನು ಪ್ರೀತನಾಗಲಿ! ಎಂದು ವರ್ಣಿಸಿರುವೆನು.

## ೧೦೨. ಶ್ರೀಕೃಷ್ಣವಿಹಾರ

ಶ್ರೀಶುಕನು ಹೇಳಿದನು–

**ಶ್ರೀಕೃಷ್ಣನು ಸರ್ವಸಂಪತ್ಸಮೃದ್ಧವು, ಯದುಪುಂಗವ ಸಮಲಂಕೃತವು ಆದ ದ್ವಾರಕೆಯಲ್ಲಿ ಸುಖವಾಗಿದ್ದನು.** ನವಯೌವನ ಕಾಂತಕಾಂತೆಯರು, ಕಂದುಕಗಳನ್ನಾಡುತ್ತಾ, ಸೌಧಾಗ್ರ ಭಾಗಗಳಲ್ಲಿ ಮೇಘದಲ್ಲೋಲಾಡುವ ಮಿಂಚಿನ ಬಳ್ಳಿಗಳಂತೆ ಶೋಭಿಸಿದರು. ರಾಜಮಾರ್ಗದಲ್ಲಿ ಚಲ್ಲಿದ ಪನ್ನೀರು ಆನೆಗಳ ಮಂದಜಲದಿಂದ ಬೆರೆತು, ಕಷಾಯಗಂಧವನ್ನು ಸೂಸುತ್ತಿತ್ತು. ಭಟರು ಅಲಂಕೃತರಾಗಿ ಸಂಚರಿಸುತ್ತಿದ್ದರು. ರಥಗಳ ಧ್ವಜಗಳು, ಮಂದಿರ ಪತಾಕೆಗಳಿಂದ ಚೆಲ್ಲಾಟವಾಡುತ್ತಿದ್ದವು. ಉದ್ಯಾನಗಳಲ್ಲಿ ಕುಸುಮಗಂಧದಿಂದ ಆಕರ್ಷಿತವಾದ ಮಧುಕರ ಬೃಂದವು ಝುಂಕಾರಗೀತೆಗಳಿಂದ ಶ್ರೀಕೃಷ್ಣನ ಮಹಿಮೆಯನ್ನು, ಅವನ ತರುಣಿಯರ ಕರ್ಣಮೂಲದಲ್ಲಿ ತುಂಬುತ್ತಿತ್ತು. ಹದಿನಾರುಸಾವಿರ ಕೃಷ್ಣಕಾಂತೆಯರು, ಅವರವರ ಮಂದಿರ ಗಳಲ್ಲಿ ಶ್ರೀಕೃಷ್ಣನಿಂದ ಕೂಡಿ ವಿಹರಿಸಿದರು. ಅಂಬುಜಗಂಧ ಮನೋಹರ ಜಲಾಕರಗಳಲ್ಲಿ ವಿಹರಿಸಿ, ತಮ್ಮ ಕುಚಕುಂಕುಮಪಂಕದಿಂದ, ಜಡಗಳೂ ರಮಣೀಯರಾಗ ರಂಜಿತವಾಗುವಂತೆ ಮಾಡುತ್ತಿದ್ದರು. ಗಂಧರ್ವರು ಪಾಡುತ್ತಿರಲು ಪಣವಾನಕ ವೀಣಾದಿ ವಾದ್ಯಗಳು ಮಂದ್ರ ಮಧುರವಾಗಿ ಮೊಳಗುತ್ತಿರಲು, ನಕ್ಕು ನಲಿಯುವ ನಲಿನ ಮುಖಿಯರನ್ನು ಕೂಡಿ ಶ್ರೀಕೃಷ್ಣನು ಜಲವಿಹಾರವನ್ನು ಮಾಡಿ, ನೀರನ್ನು ಚೆಲ್ಲಾಡಿದನು. ಆ ತರುಣಿಯರ ಕುಚಕಚ ಜಘನಾದಿ ತನೂವಿಲಾಸವನ್ನು ಹೊರಗೆಡಹುವ ಸೂಕ್ಷ್ಮ ದುಕೂಲಗಳವರ ಮಾತನ್ನು ಕೇಳದೆ, ಗಟ್ಟಿಯಾಗಿ ಬಿಡದೆ ಆಲಿಂಗಿಸಿ ನಿಂತಿದ್ದವು. ಅವರ ತುರುಪಿನ ಕಸುಮವಿರಸವು ಉದುರಿ ನೀರಿನಲ್ಲಿ ತೇಲಿ ಹೋಗಿ, ಶ್ರೀಕೃಷ್ಣನ ಪಾದವನ್ನಾಶ್ರಯಿಸಿ, ನಮ್ಮ ಒಡತಿಯರನ್ನು ಧನ್ಯೆಯರನ್ನಾಗಿಸೆಂದು ಬೇಡುತ್ತಿದ್ದವು. ಸ್ಮರವಿಲಾಸವತಿಯರ ಚಿತ್ತಾಕರ್ಷಕನಾದ ಕೃಷ್ಣನು ಸಾರ್ಥಕನಾಮಧೇಯ ನೆನಿಸಿದನು. ಅವನ ಸ್ತನ ಕುಂಕುಮ ರಕ್ತವಾಗಿ ಬಂದ ಮಾಲೆಯನ್ನು, ಮುಡಿದ ಹೂಗಳನ್ನು ಆತ್ಮಸಮರ್ಪಣ ವೆಂಬಂತೆ ಧರಿಸಿ, ಅವರನ್ನು ಆನಂದಜಲಧಿಯಲ್ಲಿ ಮುಳುಗಿಸುವಂತೆ, ಮೇಲೆ ನೀರನ್ನೆರಚಿ, ಶ್ರೀಶನು ಕರೇಣುಗಣದಿಂದ ಕೂಡಿ ಮೆರೆವ ಕರಿರಾಜನಂತೆ ವಿರಾಜಿಸಿದನು.

ನಿರಸ್ತ ಸಮಾಧಿಕನು, ಸ್ವರಮಣನು ಆದ ಶ್ರೀಕೃಷ್ಣನು ಇತರ ಸಾಮಾನ್ಯ ಗೃಹಸ್ಥರಂತೆ ತನ್ನ ಕಾಂತೆಯರಲ್ಲಿದ್ದ ರಮೆಯಿಂದ ಕೂಡಿ, ಬಹುವಿಧ ವಿಲಾಸಗಳ್ನಾಡಿ ಅವರನ್ನು ಧನ್ಯೆ ಯರನ್ನಾಗಿಸಿದನು. ರಮಾತಿಯನ್ನೇ ತಮ್ಮ ಸ್ವಾಮಿಯನ್ನಾಗಿ ಪಡೆದು, ಬ್ರಹ್ಮಾದಿ ಯೋಗಿ ಜನರಿಗೂ ದುರ್ಜ್ಞೇಯವಾದ ಮಹಿಮೆ ಉಳ್ಳ ಶ್ರೀಶನನ್ನು ನಿತ್ಯವರ್ಧಮಾನ ಪ್ರೇಮರಸ ದಿಂದಲು, ಅನುರಾಗ ಪೂರ್ಣಕಟಾಕ್ಷಗಳಿಂದಲು ಸೇವಿಸಿ, ನಿಯನೂತನನಾದ ಸ್ವಾಮಿಯ ಸಂಗದಿಂದ, ನವಸಂಗವಹ್ರೀ ಮಧುರ ಭಾವ ಪುಲಕಿತಗಾತ್ರೆಯರಾದ ಕೃಷ್ಣ ರಮಣಿಯರು ತಾವೇ ಧನ್ಯತಮರೆಂದು ತಿಳಿದು, ಆನಂದದಿಂದಿದರು.

## ೧೦೩. ದ್ವಾರಕಾಮಹಿಮೆ

ಶ್ರೀಶುಕನು ಹೇಳಿದನು–

ರಾಜನ್! ಕೇಳು! ಇಂತು ಗೃಹಧರ್ಮಗಳನ್ನು ವೇದೋದಿತವಾಗಿರುವಂತೆ ನಡೆಸಿ, ಸಜ್ಜನಗತಿಪ್ರದನಾದ ಶ್ರೀಶನು ಧರ್ಮಾರ್ಥಕಾಮಗಳ ಸದುಪಯೋಗ ವಿಧಾನವನ್ನು ತನ್ನವರಿಗೆ ತಿಳಿಸಿದನು. ಆಗ ದ್ವಾರಕೆಯು ಶ್ರೀಕೃಷ್ಣಪಾಲಿತವಾಗಿ ಬಹುವಾಗಿ ಶೋಭಿಸಿತು.

ದ್ವಾದಶ ಯೋಜನ ವಿಶಾಲವಾದ ದ್ವಾರಕಾನಗರದಲ್ಲಿ, ಮುನಿಗಳು, ಚತುರ್ವರ್ಣದ ಜನರು, ತುಂಬಿದ್ದರು. ಪಿಂಡಾರಕ, ಕುರುಕ್ಷೇತ್ರ, ಶಾಲಗ್ರಾಮ, ಪುಷ್ಕರ, ವಾರಣಾಸಿ, ಪ್ರಯಾಗ, ವೆಂಕಟಗಿರಿ, ಶ್ರೀಶೈಲ, ಗೋಕರ್ಣ, ಚಂದ್ರಪುಷ್ಕರಿಣಿ, ಸಹ್ಯಗಿರಿ, ಕೊಲ್ಹಾಪುರ, ಕುಮಾರಗಿರಿ, ಪುಣ್ಯಬದರಿಕಾಶ್ರಮ, ನೈಮಿಷಾರಣ್ಯ, ಬ್ರಹ್ಮದುರ್ಗ, ಮೊದಲಾದ ಪಾವನ ಕ್ಷೇತ್ರಗಳಿಂದ, ಶಾಂತರು, ನಿಷ್ಕಲ್ಮಷರು, ವ್ರತನಿಷ್ಠರು, ಜಲಭಕ್ಷಕರು, ವಾಯುಭಕ್ಷಕರು, ನಿರಾಹಾರರು ಆದ ಋಷಿವರರು ದ್ವಾರಕೆಗೆ ಬಂಧು, ಗೋವಿಂದನ ದರ್ಶನದಿಂದ ಆನಂದಪಡುತ್ತಿದ್ದರು. ಮೌನ ವ್ರತರು, ತ್ರಿಷವಣಸ್ನಾನ ತತ್ಪರರು, ವೇದನಿರತರು, ಸ್ತುತಿ ಪರಾಯಣರು, ಧ್ಯಾನಮಗ್ನರು, ಸಮಾಧಿಗತರು, ಚರ್ಮಮಾತ್ರಾವಿಶಿಷ್ಟ ಕೃಶದೇಹರು, ಆದ ಮುನಿಗಳು ಬಂದು, ತತ್ವ ಚಿಂತೆಯಲ್ಲಿ ಕಾಣದ ಸುಖವನ್ನು, ಕೃಷ್ಣದರ್ಶನದಲ್ಲಿ ಕಂಡು ಬ್ರಹ್ಮಾನಂದತುಂದಿಲರಾಗುತ್ತಿದ್ದರು. ಕ್ಷತ್ರಿಯ, ವೈಶ್ಯ, ಶೂದ್ರರೂ ಅನೇಕರು ಶ್ರೀಕೃಷ್ಣ ಭಕ್ತರಲ್ಲಿದ್ದರು. ದ್ವಾರಕೆಯಲ್ಲಿ ನೋಡಿದಲ್ಲಿ, ವೇದಮಂಗಳಘೋಷಗಳು, ಮಂಗಲವಾದ್ಯರವಗಳು, ಕ್ಷತ್ರಿಯ ವೀರರ ಆಯುಧ ಧ್ವಾನಗಳು, ಕಲಕಂಠಿಯರ ಮಧುರ ಗಾನನಾದಗಳು ಕೇಳಬರುತ್ತಿದ್ದವು. ಎಲ್ಲ ಕ್ಷೇತ್ರಗಳಿಗೆ ಮಿಗಿಲೆನಿಸಿ ದ್ವಾರಕೆ, ಶ್ರೀಕೃಷ್ಣ ಸನ್ನಿಧಾನದಿಂದ ವಿಶೇಷ ಶೋಭಾಕರವಾಗಿ ರಾರಾಜಿಸಿತು. ಶ್ರೀಕೃಷ್ಣ ಪುತ್ರರಲ್ಲಿ ಹದಿನೆಂಟು, ಜನರು– ಪ್ರದ್ಯುಮ್ನ, ಚಾರುದೇಷ್ಣ, ದೀಪ್ತಿಮಂತ, ಭಾನು, ಸಾಂಬ, ಮಿತ್ರ, ಬೃಹದ್ಭಾನು, ಭಾನು, ವಿಂದ, ವೃಕ, ಅರುಣ, ಪುಷ್ಕರ, ದೇವಬಾಹು, ಚಕ್ರದೇವ, ಸುನಂದನ, ಚಿತ್ರಭಾನು, ವರೂಥ, ನ್ಯಗ್ರೋಧರೆಂಬುವರು, ಮಹಾರಥರೆನಿಸಿದರು. ತ್ರಿವಕ್ರೆಯ ಮಗನಾದ ವಿಶೋಕನು, ನಾರದನ ಶಿಷ್ಯನಾಗಿ ಶ್ರೀಕೃಷ್ಣನಲ್ಲಿ ಅಖಂಡ ಭಕ್ತಿಯನ್ನು ಗಳಿಸಿದನು; ಪಂಚರಾತ್ರಾಗಮದಲ್ಲಿ ಪೇಳಿದಂತೆ ಸ್ತ್ರೀಶೂದ್ರಾದಿಗಳಿಗೂ ವೈಷ್ಣವದೀಕ್ಷೆ ಉಂಟೆಂದು ಅರಿತು ಶ್ರೀಕೃಷ್ಣನಿಗೆ ದಾಸನಾಗಿ ನಡೆದು ಮುಕ್ತನಾದನು.

ಶ್ರೀಕೃಷ್ಣಪುತ್ರರಲ್ಲಿ ಪ್ರದ್ಯುಮ್ನನೇ ಸರ್ವವಿಧದಿಂದಲು ಶ್ರೇಷ್ಠನೆನಿಸಿ, ಕೃಷ್ಣನಂತೆಯೇ ಜನಾನುರಾಗವನ್ನು ಪಡೆದನು. ಅವನು ರುಕ್ಮಿಯ ಮಗಳಾದ ರುಕ್ಮವತಿಯಲ್ಲಿ ಅನಿರುದ್ಧನನ್ನು ಪಡೆದನು. ಅನಿರುದ್ಧನು ಹತ್ತು ಸಾವಿರ ಆನೆಗಳ ಬಲವುಳ್ಳವನಾಗಿದ್ದನು. ಅವನು ರುಕ್ಮಿಯ ಪೌತ್ರಿಯಾದ ರಚನೆಯನ್ನು ಮದುವೆಯಾಗಿ, ವಜ್ರನೆಂಬುವ ಮಗನನ್ನು ಪಡೆದನು. ಅವನು ಯಾದವಕಲಹದಲ್ಲಿ ಅಳಿಯದೆ ಉಳಿದನು. ಅವನ ಮಗನು ಪ್ರತಿಬಾಹುವು, ಅವನಿಗೆ ಸುಬಾಹು, ಅವನಿಗೆ ಉಗ್ರಸೇನ, ಅವನಿಗೆ ಶತಸೇನರು ಪುಟ್ಟಿದರು. ಯದುಕುಲದಲ್ಲಿ, ನಿರ್ಧನರು, ನಿಸ್ಸಂತಾನರು, ಅಲ್ಪಯುಷ್ಕರು, ಅಲ್ಪವೀರ್ಯರು, ಅಬ್ರಹ್ಮಣ್ಯರು ಪುಟ್ಟಲಿಲ್ಲ. ಯದುಕುಲಜಾತರ ಸಂಖ್ಯೆಯನ್ನು ಹೇಳಲಾಗದು. ಯದುಕುಮಾರಕರ ಉಪಾಧ್ಯಾಯರು ಮೂರುಕೋಟಿ ಎಂಭತ್ತೆಂಟು ಸಾವಿರದ ಎಂಟುನೂರು ಜನರಿದ್ದರೆಂದು ನಾನು ಕೇಳಿರುವೆನು.

ಹಿಂದೆ ದೇವಾಸುರ ಸಂಗ್ರಾಮದಿ ಹತರಾದ ದೈತೇಯರು, ದ್ವಾಪರದಲ್ಲಿ ಮನುಜರಾಗಿ ಪುಟ್ಟಿ, ಪ್ರಜಾಪೀಡೆಯನ್ನು ಮಾಡುತ್ತಿರಲು, ಅವರನ್ನು ಸಂಹರಿಸುವುದಕ್ಕೆಂದು ಶ್ರೀಶನಿಂದ ಆಜ್ಞಪ್ತರಾದ ದೇವತೆಗಳೇ ಯದುಕುಲದ ನೂರೊಂದು ವಂಶಗಳಲ್ಲಿ ಜನಿಸಿ, ಶ್ರೀಕೃಷ್ಣನನ್ನು ಸೇವಿಸಿ, ಧನ್ಯರಾದರು. ಶಯನ, ವಸನ, ಭೋಜನ, ಸಂಲಪನ, ಆಸನ, ವಿಹರಣಗಳಲ್ಲಿ, ಶ್ರೀಶನೊಡಗೂಡಿ, ಅವನಲ್ಲೇ ಮನವಿಟ್ಟು ಭಕ್ತಿಯನ್ನು ಮಾಡಿ ಅವರು, ಸ್ವಯೋಗ್ಯಗತಿಯನ್ನೈದಿರು.

ಶ್ರೀಕೃಷ್ಣನು ಕುರುಕ್ಷೇತ್ರದಲ್ಲಿ ಹನ್ನೆರಡು ವರ್ಷಗಳಿದ್ದು, ಅನೇಕ ಯಜ್ಞಗಳನ್ನು ಮಾಡಿದನು. ವ್ಯಾಸ, ಪರಶುರಾಮ, ಅಸಿತ, ಸಾಂದೀಪನಿ, ವಿಶ್ವಾಮಿತ್ರರು, ಋತ್ವಿಜರಾಗಿರಲು, ಉದ್ಧವನು ಪರಿಚರಿಸುತ್ತಿರಲು, ಶ್ರೀಕೃಷ್ಣನು ಪಟ್ಟದಮಹಿಷಿಯರಿಂದ ಕೂಡಿ ದೀಕ್ಷಿತನಾಗಿ, ಬಲರಾಮನ ಅಧ್ವರ್ಯುತನದಲ್ಲಿ ಬಹು ಯಜ್ಞಗಳನ್ನು ಮಾಡಿ ಎಲ್ಲರನ್ನೂ ಸತ್ಕರಿಸಿದನು.

ಪರೀಕ್ಷಿತನೇ! ಶ್ರೀಕೃಷ್ಣನ ಮಹಿಮೆಯನ್ನು ನನ್ನಂತಹ ಪಾಮರನೇನು ವರ್ಣಿಸಲಾಗುವುದು! ಕೇಳು! ಅವನ ಕೀರ್ತಿಚಂದ್ರಿಕೆಯು ಸಂಸಾರತಾಪಶೋಷಕವು; ಅವನ ಪಾದಜಾತೆ, ದೇವನದಿ, ಸ್ಮರಣದಿಂದಲೇ ಸರ್ವಪಾಪಾ ನಿವಾರಣೆಯು; ಅವನ ಸ್ವರೂಪವು ಐಶ್ವರ್ಯ, ವೀರ್ಯ, ಯಶಃ, ಶ್ರೀ, ಜ್ಞಾನ ವಿಜ್ಞಾನ ಪೂರ್ಣವು; ಅವನ ವಕ್ಷಃಸ್ಥಲವು ಸರ್ವಸಂಪದಧಿನೇತ್ರಿಯಾದ ರಮೆಯ ಅರಮನೆ; ಅವನ ವಚನವು, ವೇದಾದಿಸಚ್ಛಾಸ್ತ್ರವು; ಅವನ ಪ್ರವರ್ತನೆಯು, ಧರ್ಮಾಧರ್ಮವಿವೇಕ ಸಂಪಾದಕವು; ಅವನ ಪರಮಮಂಗಲ ನಾಮವು ಸರ್ವದುಃಖ ನಿಷೂದನವು, ಸರ್ವಸುಖನಿವಾರಕವು; ಇಂತಹ ಕಾಲಚಕ್ರಾಯುಧನಾದ ಮಾಧವನು ಕ್ಷಿತಿಭಾರವನ್ನು ಹರಿಸಿದನೆಂದರೆ ಆಶ್ಚರ್ಯವಲ್ಲ.

ಸರ್ವಜನನಿವಾಸನು, ದೇವಕೀಗರ್ಭಮಾತ್ರನಿವಾಸನೇ? ಸ್ವನಿಯಮಪರಿಪಾಲನೆಗಾಗಿ, ಪಾದಾರವಿಂದಗಳಿಂದ ಭೂದೇವಿಯನ್ನಲಂಕರಿಸಿದ ಶ್ರೀಶನು ಮನುಜಮಾತ್ರನೇ? ಶ್ರೀದೇವಿಯ ನಿಲಯನಾದ ಸ್ಮರಮಣನು, ಗೋಪಿಕೆಯರು ತಮ್ಮಲ್ಲಿ, ದಹರಾಕಾಶಗತನಾದ ತನ್ನನ್ನು ಭಜಿಸಲು ಬಂದಾಗ, ತನ್ನ ಮಂದಹಾಸ ಕಟಾಕ್ಷ ಪ್ರೇಮಪೂರ್ಣ ಭಾಷಣಗಳಿಂದ ಅವರಿಗೆ ಮುದವನ್ನಿತ್ತು ಪೊರೆದನೆಂದಮೇಲೆ, ಭಕ್ತಿಯಿಂದ ಭಜಿಸುವ ಸುಜನಲಲಾಮರನ್ನು, ಸಂಸಾರ ಶರಧಿಯನ್ನು ದಾಟಿಸಿ, ರಕ್ಷಿಸದಿರುವನೇ? ಶ್ರೀಕೃಷ್ಣಾ! ನಿನಗೆ ಜಯವಾಗಲಿ! ಶ್ರೀಹರೇ! ನಿನಗೆ ಮಂಗಳವಾಗಲಿ! ಯಾವ ಸರ್ವೇಶನು ಜಗಜ್ಜನ್ಮಪಾಲನ ಸಂಹರಣಗಳನ್ನು ಲೀಲೆಯಿಂದ ಮಾಡುತ್ತಿರುವನೋ, ಯಾವ ಅಪ್ರಾಕೃತ ದಿವ್ಯ ದೇಹನು ಪ್ರಕೃತಿಪುರುಷರನ್ನು ನಡೆಸುತ್ತಿರುವನೋ, ಯಾವ ಕರುಣಾಸಮುದ್ರನು, ಋಷಿರೂಪನಾಗಿ ಭಾಗವತ ಭಾರತಾದಿ ಸಂಹಿತೆಯನ್ನು, ಸಜ್ಜನಹಿತಕ್ಕಾಗಿ ರಚಿಸಿದನೋ, ಯಾವ ರಮೇಶನ ಅಡಿದಾವರೆಯನ್ನು ಸೇರಿದ ಮುಕ್ತನು, ಗೂಡನ್ನು ಬಿಟ್ಟು ಹಾರಿ ಹೋಗುವ ಹಕ್ಕಿಯಂತೆ, ಸಂಸಾರಬಂಧ ದೂರನಾಗುವನೋ, ಅಂತಹ ನಿತ್ಯನಿರ್ದುಃಖ ನಿರತಿಶಯ ಜ್ಞಾನಾನಂದಾದಿ ಕಲ್ಯಾಣಾನಂತಗುಣ ಶರೀರನಾದ ಭಕ್ತಾ ಭಯಪ್ರದನಾದ ಶ್ರೀಹರಿಯನ್ನು, ಮನವೇ! ಸದಾ ಧ್ಯಾನಿಸು! ಶ್ರೀಕೃಷ್ಣನಿಗೆ ನಮೋ ನಮಃ!

ಇಂತು ಸರ್ವೋತ್ತಮನಾದ ಶ್ರೀಹರಿಯು, ತಾನು ನಿರೂಪಿಸಿದ ಧರ್ಮವನ್ನು ರಕ್ಷಿಸಲು, ಲೀಲಾಮನುಜನಾಗಿ ಅವತರಿಸಿ, ಕಂಸಾದಿ ದುಷ್ಟರನ್ನು ಸಂಹರಿಸಿ, ಪಾಂಡವಾದಿ ಸುಜನರನ್ನು ಸಂರಕ್ಷಿಸಿ, ಮನುಜನಂತೆ ಮಾಡಿದ ಪವಿತ್ರಚರಿತ್ರವು ಸರ್ವಪಾಪಕರ್ಮ ಲತಾಲವಿತ್ರವೆಂದರಿತು,

ಸರ್ವಸುಜನರು ಅವನ ಪಾದಾರವಿಂದ ಭಕ್ತರಾಗಿ, ಸಂಸಾರಮುಕ್ತರಾಗಿ, ಸುಖದಿಂದ ವೈಕುಂಠಾದಿ ಲೋಕಗಳಲ್ಲಿ ವಾಸಮಾಡುವರು. ಪ್ರತಿ ದಿನವು ಪ್ರವರ್ಧಮಾನವಾಗುತ್ತಿರುವ ಭಕ್ತಿಯಿಂದ, ಬಿಡದೆ ಶ್ರೀಕೃಷ್ಣ ಕಥಾಮೃತವನ್ನು ಪಾನಮಾಡುತ್ತಾ, ಅವನ ಪಾವನಪದಪಂಕಜ ಚಿಂತಾಲೋಲರಾದ ಮಾನವರು, ಇತರ ಜನ ದುರ್ಲಭವು, ಜನನಮರಣರಹಿತವು ಆದ ಶ್ರೀಹರಿಯ ಮಂದಿರದಲ್ಲಿ, ಸಾರ್ವಭೌಮರಾದ ರಾಜರ್ಷಿಗಳು, ರಾಜ್ಯಾದಿ ಸಕಲ ಸಂಪತ್ತನ್ನು ಅವನ ಸೇವೆಗಾಗಿ ತ್ಯಜಿಸಿ, ತಪಿಸಿ, ಋಷಿಜನೋಪದೇಶದಿಂದ ಪೊಂದಿದ ಆನಂದವನ್ನು, ಸ್ವಯೋಗ್ಯತಾನುಸಾರವಾಗಿ ಪೊಂದಿ, ಮುಕ್ತರಾಗುವರು.

ಸೂತನು ಹೇಳಿದನು–

ಶೌನಕಾದಿಗಳೇ! ಅಮೃತಕೀರ್ತಿಯಾದ ಶ್ರೀಕೃಷ್ಣಮೂರ್ತಿಯ ಪವಿತ್ರಚರಿತ್ರವನ್ನು, ಶ್ರೀಶುಕನು ವರ್ಣಿಸಿರುವ ಭಾಗವತಾಮೃತವನ್ನು ಮನವಿತ್ತು ಕೇಳಿದ ಮನುಜನು, ಶ್ರೀಹರಿಯ ಶ್ವೇತದ್ವೀಪಾದಿ ಲೋಕದಲ್ಲಿ ನಿರ್ದುಃಖನಾಗಿ ಸುಖಿಸುತ್ತಿರುವನು. ಶ್ರೀ ಭಾಗವತಾದಿ ಶ್ರೀಶನ ಕಥೆಯು ಸರ್ವಜಗತ್ತಿನ ಪಾಪತೂಲರಾಶಿಗೆ ಅಗ್ನಿಜ್ವಾಲೆಯಾಗಿದೆ. ಅಂತೆಯೇ ಸುಜನರವನ ಕಥಾಕುಸುಮವನ್ನು ಕರ್ಣಾವತಂಸವಾಗಿ ಧರಿಸಿ, ರಮಿಸುತ್ತಿರುವರು.

ದಶಮಸ್ಕಂಧ ಉತ್ತರಾರ್ಧವು ಸಂಪೂರ್ಣವಾಯಿತು

॥ಶ್ರೀಕೃಷ್ಣಾರ್ಪಣಮಸ್ತು॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಏಕಾದಶ ಸ್ಕಂಧವು

|| ಹರಿಃ ಓಂ ||

### ೧. ವಿಪ್ರಶಾಪ

**ಶ್ರೀಶುಕನು ಹೇಳಿದನು–**

ರಾಜನ್! ಈ ಲೋಕದ ನಾನಾವ್ಯಸನಭಾರದಿಂದ ಶಿರಬಾಗಿ, ಕಲಿಕಲ್ಮಷದೂಷಿತವಾದ ಮನದಿಂದ ಶ್ರೀಹರಿದೂರರಾಗಿ, ದುಃಖಪರಿಹಾರವೆಂತು? ಸುಖಪ್ರಾಪ್ತಿ ಎಂತು? ಎಂಬುದನ್ನು ಅರಿಯದೆ ಇರುವ ಸುಜೀವರಲ್ಲಿ ಅತ್ಯಂತ ಕರುಣೆಯಿಂದ ಬಾದರಾಯಣದೇವನು ರಚಿಸಿರುವ ಶ್ರೀಭಾಗವತ ಪುರಾಣ ಪಾರಿಜಾತದ, ಅನೇಕ ಸ್ಕಂಧಗಳಲ್ಲಿ ಅರಳಿದ ಪುಷ್ಪರಾಶಿಯ ಮಕರಂದರಸವಾದ ಏಕಾದಶ ಸ್ಕಂಧವನ್ನು ನಿನಗೆ ನಿರೂಪಿಸುವೆನು. ಕೇಳು!

ಶ್ರೀಕೃಷ್ಣನು ದೈತ್ಯವಧೆ ಮಾಡಿದನು; ರಾಮಾದಿಯಾದವರಿಂದ ಕೂಡಿದನು; ಭೂಭಾರವನ್ನು ಇಳಿಸಿದನು; ಕಲಿಯುಗದ ನೀಚಗುಣವನ್ನು ತುಳಿದಿಟ್ಟು, ತನ್ನ ಕೀರ್ತಿಗಾನದಿಂದ, ಮುಂದೆ ಸುಜನರು, ಕಲಿಬಾಧೆಯಿಂದ ಮುಕ್ತರಾಗಿ ಸುಖಿಸಲೆಂದು ಹಾರೈಸಿದನು. ಶತ್ರುಜನರು ಮಾಡಿದ ಮಾಯಾದ್ಯೂತ, ಪತ್ನೀಕೇಶಗ್ರಹಣಾದಿ ಕುಕಾರ್ಯಗಳಿಂದ ಸಿಟ್ಟಿಗೆದ್ದು – ಉರಿಯುವ ಅಗ್ನಿಯಂತೆ ವಿಜೃಂಭಿಸಿದ ಪಾಂಡುಪುತ್ರರಿಂದ – ಕುರುಕ್ಷೇತ್ರದಲ್ಲಿ ನೆರೆದ ಹದಿನೆಂಟಕ್ಷೌಹಿಣೀ ಸೈನ್ಯವನ್ನು ನಾಶಪಡಿಸಿ, ಶ್ರೀಹರಿಯು ಭೂಭಾರವನ್ನು ಇಳಿಸಿದನು. ತನ್ನ ಭುಜಬಲ ರಕ್ಷಿತರಾಗಿ ಉಳಿದಿರುವ ಯಾದವರ ಲಕ್ಷಗಟ್ಟಲೆ ಜನರನ್ನು ನೋಡಿ, ಪರಮೈಶ್ವರ್ಯನಿಧಿಯು, ಅಪ್ರಮೇಯಮಹಿಮನು ಆದ ಶ್ರೀಕೃಷ್ಣನು–'ಇನ್ನೂ ಈ ದುರ್ವಿಷಯಾದವ ಬಲವನ್ನಳಿಸಬೇಕಾಗಿದೆ' ಎಂದು ಚಿಂತಿಸಿದನು. 'ನನ್ನನ್ನಾಶ್ರಯಿಸಿರುವುದರಿಂದ ನಿತ್ಯ ವೃದ್ಧವಾಗುತ್ತಿರುವ ಈ ಯದುಕುಲಕ್ಕೆ ಮತ್ತೊಬ್ಬರಿಂದ ನಾಶವಾಗುವುದು ಶಕ್ಯವಲ್ಲ – ಆದುದರಿಂದ, ಬಿದಿರು ಪೊಳೆಯು ತಾನೇ ತಿಕ್ಕಾಡಿ ಸುಟ್ಟು ಬೂದಿಯಾಗುವಂತೆ, ಇವರು ಪರಸ್ಪರ ಕಾದಾಡಿ, ನಷ್ಟರಾಗಲಿ! ನಾನು ಆಗ ಸರ್ವಭೂಭಾರವನ್ನಿಳಿಸಿದಂತಾಗಲು, ನನ್ನ ಮಂಗಳಮಂದಿರವನ್ನು ಸೇರುವೆ' ನೆಂದು ನಿಶ್ಚಯಿಸಿ ದನು; ಅಂತೆಯೇ ವಿಪ್ರರ ಶಾಪದ ನೆವದಿಂದ ತನ್ನ ಕುಲವನ್ನು ಉಪಸಂಹರಿಸಿದನು.

ಇನ್ನಿಂತಹ ಸೌಂದರ್ಯಸಾರಸಮಾವೇಶವಿಲ್ಲವೆಂಬುವಂತಹ ತನ್ನ ರೂಪದಿಂದ ಜನರ ಕಣ್ಣನ್ನು, ಮಧುರ ವಚನಗಳಿಂದ, ಮನಮೋಹಕ ವಿಗ್ರಹದಿಂದ, ಅವರ ಮನವನ್ನು, ರಮಾಲಾಲಿತ ಪಾದಾರವಿಂದ ದ್ವಂದ್ವದಿಂದ ಅದನ್ನು ಧ್ಯಾನಿಪರಲೌಕಿಕ ಕ್ರಿಯಾ ಕಲಾಪವನ್ನು, ಆಕರ್ಷಿಸಿ, ಭೂಮಂಡಲದಲ್ಲಿ ತನ್ನ ಧವಳಯಶಶ್ಚಂದ್ರಿಕೆಯನ್ನು ಸದಾ ಪೂರ್ಣವಾಗಿರುವಂತೆ

ತುಂಬಿ, ಅದರ ಬೆಳಕಿನಲ್ಲಿ ನಡೆವ ಸುಜನರ ಮನಸ್ತಮವನ್ನು ಹರಿಸಿ, ಶ್ರೀರಮೇಶನು ತನ್ನ ಲೋಕವನ್ನೈದಿದನು.

ರಾಜನು ಕೇಳಿದನು–

ಕೃಷ್ಣಭಕ್ತರಾದ ವೃಷ್ಣಿವಂಶಜರಿಗೆ ವಿಪ್ರಶಾಪವೇ? ಬ್ರಾಹ್ಮಣಭಕ್ತರಿಗೆ, ದಾನಶೀಲರಿಗೆ, ವೃದ್ಧಜನಶರಣರಿಗೆ, ವಿಪ್ರಶಾಪವು ಬಂದಿತೆಂತು? ಐಕ್ಯಮತ್ಯದ ನೆಲೆಯಾಗಿದ್ದ ಯದುಗಳು ಪರಸ್ಪರವಾಗಿ ಕಡಿದಾಡುವ ಪ್ರಸಂಗವೆಂದು ಬಂತು? – ಹೇಳಿ.

ಶ್ರೀಬಾದಾರಾಯಣ ಹೇಳಿದನು–

ಸಕಲಕಲ್ಯಾಣಗುಣಸಾರಸರ್ವಸ್ವನಾದ ಶ್ರೀಕೃಷ್ಣನು, ಲೋಕಮಂಗಲಕರ್ಮಗಳನ್ನು ಮಾಡಿ, ಅದರ ಕೀರ್ತನದಿಂದ ಸುಜನರು ಕಲಿಕೃತ ಕಲ್ಮಷವನ್ನು ಕಳೆದುಕೊಂಡು, ಮುಕ್ತರಾಗುವಂತೆ ಅನುಗ್ರಹಿಸಿ, ತಾನು ಪೃಥ್ವೀಮಂಡಲವನ್ನು ಬಿಡಲು ನಿಶ್ಚಯಿಸಿದನು. ಯದುಕುಲ ನಾಶವನ್ನು ಸಾಧಿಸುವ ಸತ್ಯಸಂಕಲ್ಪನ ಪ್ರೇರಣೆಯಿಂದ ಮುನಿಗಳು ಕೆಲವರು ಪಿಂಡಾರಕ ಕ್ಷೇತ್ರವನ್ನು ಸೇರಬಂದರು. ಶ್ರೀಶನು ದ್ವಾರಕೆಯಲ್ಲಿದ್ದನು. ಶ್ರೀಕೃಷ್ಣಪರಿವಾರದವರಾದ ಯಾದವರು ಪಿಂಡಾರಕದಲ್ಲಿದ್ದರು. ಅವರು, ಅಲ್ಲಿಗೆ ಬಂದ ವಿಶ್ವಾಮಿತ್ರ ಅಸಿತ ಕಣ್ವ ದೂರ್ವಾಸ ಭೃಗು ಅಂಗಿರಸ ಕಶ್ಯಪ ವಾಮದೇವ ಅತ್ರಿ ವಸಿಷ್ಠ ನಾರದಾದಿ ಮುನಿಗಳನ್ನು ನೋಡಿ, ವಿಧಿಪ್ರೇರಿತರಾಗಿ, ಸಾಂಬನಿಗೆ ಗರ್ಭವತಿ ಸತಿಯಂತೆ ವೇಷವನ್ನು ಹಾಕಿ, ಅವರನ್ನು ಸಮೀಪಿಸಿ ಇಂತೆಂದರು–

'ತ್ರಿಕಾಲಜ್ಞಾನಿಗಳೇ! ಈ ಕುವಲಯದಳನಯನೆ ಗರ್ಭಿಣಿಯಾಗಿರುವಳು. ನಿಮ್ಮನ್ನು, ತಾವೇ ಕೇಳಲು ನಾಚುತ್ತಿರುವಳು. ಇವಳು ಏನನ್ನು ಪಡೆಯುವಳೋ ಹೇಳಿ' ಇಂತು ವಂಚಿತರಾದ ಆ ವಿಪ್ರವರರು; ತಾಳ್ಮೆಗೆಟ್ಟು 'ನಿರ್ಭಾಗ್ಯರೇ! ನಿಮ್ಮ ಕುಲನಾಶಕವಾಗುವ ಮುಸಲವನ್ನು ಹಡೆಯುವಳು' ಎಂದು ಹೇಳಿ, ಶ್ರೀಕೃಷ್ಣನಿಗೆ ಮನಸಾ ವಂದಿಸಿ, ಹೊರಟು ಹೋದರು. ಆಗ ಭಯಚಕಿತರಾದ ಯದುಕುಮಾರರು ಸಾಂಬನ ಹೊಟ್ಟೆಗೆ ಕಟ್ಟಿದ ಬಟ್ಟೆಗಳನ್ನು ಬಿಚ್ಚಿ ನೋಡಿದರು. ಹಠಾತ್ತಾಗಿ ಅಲ್ಲಿಂದ ಬಿದ್ದ ಆಯಸ್ಮಯವಾದ ಮುಸಲವನ್ನು ಕಂಡು, ಅವರು 'ಅಯ್ಯೋ! ಎಂತಹ ಕೆಟ್ಟ ಕೆಲಸವನ್ನು ಮಾಡಿದೆವಲ್ಲ! ಜನರೇನೆಂಬುವರು ನಮ್ಮನ್ನು ಕಂಡು? ಏನು ಮಾಡೋಣ?' ಎಂದು ಚಿಂತಾಕ್ರಾಂತರಾದರು. ಆ ಮುಸಲವನ್ನು ದ್ವಾರಾವತಿಗೆ ತಂದು, ಯಾದವ ಸಭೆಯಲ್ಲಿದ್ದ ಉಗ್ರಸೇನನಿಗೆ ತೋರಿದರು. ಅಮೋಘರಾದ ವಿಪ್ರಶಾಪವನ್ನು ಕೇಳಿ, ಶಾಪವೇ ಮೂರ್ತೀಭವಿಸಿದಂತಿರುವ ಮುಸಲವನ್ನು ಕಂಡು, ಸರ್ವದ್ವಾರಕಾವಾಸಿಗಳು ಆಶ್ಚರ್ಯಭಯ ಸಂಭ್ರಮಕಾತರರಾದರು. ಆಹುಕರಾಜನ ಅಪ್ಪಣೆಯಂತೆ, ಯಾದವಕುಮಾರರು ಆ ಮುಸಲವನ್ನು ಪುಡಿಮಾಡಿ, ಸಮುದ್ರದಲ್ಲಿ ಎಸೆದು, ನಿಶ್ಚಿಂತರಾದರು.

ಅದರ ಬಳೆಯ ತುಂಡೊಂದನ್ನು ಮೀನವು ನುಂಗಿತು; ಆ ಮೀನವನ್ನು ಜಾಲರು ಹಿಡಿದರು; ಅದರ ಹೊಟ್ಟೆಯ ಒಳಗಿದ್ದ ಕಬ್ಬಿಣದ ತುಂಡನ್ನು ಬೇಟೆಗಾರನೊಬ್ಬನು ತನ್ನ ಬಾಣದ ತುದಿಗೆ ಬಿಗಿದಿಟ್ಟನು.

ಶ್ರೀಕೃಷ್ಣನು ಇದೆಲ್ಲವನ್ನೂ ಅರಿತಿದ್ದನು; ವಿಪ್ರಶಾಪವನ್ನು ತಿರಸ್ಕರಿಸಲು ಸಮರ್ಥನೂ ಆಗಿದ್ದನು; ಆದರೂ ಕಾಲರೂಪಿಯಾಗಿ ತನ್ನಿಚ್ಛೆಯಂತೆ ಆಗುವ ಯದುಕುಲ ನಾಶವನ್ನು ಅನುಮೋದಿಸಿದನು.

## ೨. ಜಾಯಂತೇಯ ಚರಿತೆ (ಕವಿ, ಹರಿಗಳ ಉಪದೇಶ)

ಶ್ರೀಶುಕನು ಹೇಳಿದನು–

ರಾಜನ್! ಗೋವಿಂದನ ಚರಣಾರವಿಂದ ಸೇವಾಲಾಲಸನಾಗಿ ನಾರದನು, ವನದಿಂದ ಬಂದು, ಪ್ರಾಯಃ ಅಲ್ಲೇ ದ್ವಾರಕೆಯಲ್ಲಿ ಇರುತ್ತಿದ್ದನು. ಶ್ರೋತ್ರಾದೀಂದ್ರಿಯವಂತನಾದ ಮನುಜಮಾತ್ರನಿಗೆ ಮಾಧವಮಹಿಮೆಯು ಶ್ರವಣಮನೋಹರವಾಗಿದೆ; ಅಂದಮೇಲೆ ವಿಜ್ಞಾತತತ್ವನಾದ ನಾರದನಿಗೆ ಅಮರವರ ಚಿರಸಮಾರಾಧಿತವಾದ ಭಗವತ್ಪದಾರವಿಂದವು ಭಜನೀಯವೆನಿಸುವುದೇನಚ್ಚರಿಯು! ನೆತ್ತಿಯಲ್ಲಿ ಮೃತ್ಯುವು ನೃತ್ಯ ಮಾಡುತ್ತಿರುವುದನ್ನು ಕಾಣಲಾರದೆ, ಜನರು ಶ್ರೀಹರಿ ಚರಿತಶ್ರವಣಸುಧಾಪಾನದೂರರಾಗಿರುವುದೇ ಆಶ್ಚರ್ಯವು!

ಒಂದು ದಿನ ಮನೆಗೆ ಬಂದ ನಾರದನನ್ನು ಚೆನ್ನಾಗಿ ಪೂಜಿಸಿ, ವಸುದೇವನು ವಂದಿಸಿ, ವಿನಯದಿಂದ ಇಂತು ಕೇಳಿಕೊಂಡನು–

ಉತ್ತಮ ಶ್ಲೋಕಚರಣ ಶರಣರ ಮಾರ್ಗವನ್ನು ಬಿಡದೆ ನಡೆವ ನಿನ್ನಂತಹ ಸಾಧು ಜನರು, ಮಕ್ಕಳನ್ನು ಪೊರೆಯಲು ಬರುವ ತಂದೆತಾಯಂದಿರಂತೆ, ಕೇವಲ ದಯೆಯಿಂದ ಸಂಸಾರದುಃಖಿತರಾದ ಜೀವರನ್ನು ಉದ್ಧರಿಸಬೇಕೆಂದು ಸಂಚರಿಸುತ್ತಿರುವರು.

ದೇವತೆಗಳು ಸಾತ್ತ್ವಿಕ ಜನರಿಗೆ ದೇವಪೂಜಾದಿ ಸತ್ಕರ್ಮಗಳನ್ನು ಮಾಡುವ ಬುದ್ಧಿಯನ್ನಿತ್ತು, ಅವರಿಗೆ ಸುಖವನ್ನೇ ಕೊಡುವರು; ತಾಮಸರಿಂದ ದೇವದ್ರೋಹ ರೂಪ ಕುಕರ್ಮಗಳನ್ನು ಮಾಡಿಸಿ, ಅವರಿಗೆ ದುಃಖವನ್ನೇ ನೀಡುವರು; ರಾಜಸರಿಂದ ವಿಶ್ವಕರ್ಮಗಳನ್ನು ಮಾಡಿಸಿ, ಸುಖ - ದುಃಖ ರೂಪ ಮಿಶ್ರಫಲವನ್ನೇ ಕೊಡುವರು. ಪುರುಷನನ್ನನುಸರಿಸಿ ಪೋಗುವ ನೆರಳಿನಂತೆ, ದೇವತೆಗಳು ಪುರುಷಕರ್ಮವನ್ನು ನೋಡಿ ಸ್ವಭಾವಕ್ಕೆ ತಕ್ಕ ಫಲವನ್ನು ಕೊಡುವರು. ಅವರಿಗೆ ಪಕ್ಷಪಾತಾದಿ ದೋಷಗಳಿಲ್ಲ. ಆದರೆ ಸಾಧುಗಳು ಹಾಗಲ್ಲ; ಕೇವಲ ಕರುಣೆಯನ್ನೇ ಮಾಡಿ, ಸರ್ವಭೂತಹಿತರತರಾಗಿರುವರು. ಅವರು ಇತರರ ದುಃಖವನ್ನು ಸಹಿಸರು. ದೇವತೆಗಳು ಇತರ ಸುಖದುಃಖ ಕಾರಣರಾದರೂ ವಿಚಲಿತರಾಗದಿರುವರು; ಸಾಧುಗಳು ಇತರ ಸುಖಸಾಧನ ನಿರೂಪಕರಾಗಿ, ಜನರನ್ನು ದೇವತಾ ಪ್ರೀತಿವಿಷಯರನ್ನಾಗಿಸುವುದರಿಂದಲು, ನಮ್ಮ ಕಣ್ಣಿಗೆ ಕಾಣಬರುತ್ತಿರುವುದರಿಂದಲು, ಸೇವನೀಯರಾಗಿರುವರು. ಆದುದರಿಂದ ಭಾಗವತ ಧರ್ಮಗಳನ್ನು ನಿರೂಪಿಸು ಎಂದು ನಿನ್ನನ್ನು ಕೇಳಿಕೊಳ್ಳುತ್ತಿರುವೆನು. ಹಿಂದೆ ನಾನು ಮೋಕ್ಷಪ್ರದನಾದ ಶ್ರೀಹರಿಯನ್ನು ತಪದಿಂದ ಮೆಚ್ಚಿಸಿ, ಪ್ರಜಾವೃದ್ಧಿಯನ್ನು ಬೇಡಿದನು; ಮೋಕ್ಷವನ್ನು ಬೇಡಲಿಲ್ಲ; ಇದೂ ಅವನ ಬಂಧಕಶಕ್ತಿಯ ಮಹಿಮೆಯೇ ಸರಿ! ಸ್ವಾಮೀ! ಈ ಸಂಸಾರವನವೋ ವಿಚಿತ್ರ ವ್ಯಸನಾಕುಲವಾಗಿದೆ. ಇಲ್ಲಿ ಎಲ್ಲಿ ನೋಡಿದರೂ ಅಜ್ಞಾನ ಭಯ ನಾಶಗಳೇ ಎದ್ದು ಕುಣಿಯುತ್ತಿವೆ. ಇದರಿಂದ ಬಿಡಿಸಿಕೊಂಡು, ಶ್ರೀಶಚರಣವನ್ನೆಂತು ಸೇರುವುದೋ ತೋರದಾಗಿದೆ. ದಯಮಾಡಿ, ಶ್ರೀಶಸೇವಾ ಮಾರ್ಗವನ್ನು ತೋರಿಸಿ ನನ್ನನ್ನು ಕಾಪಾಡು!

ಶ್ರೀಶುಕನು ಹೇಳಿದನು.

ರಾಜನೇ! ವಸುದೇವನ ಪ್ರಶ್ನೆಯನ್ನು ಕೇಳಿ, ಪ್ರೀತನಾಗಿ ಶ್ರೀಹರಿಗುಣಸ್ಮರಣಾನಂದವಿವಶನಾಗಿ ನಾರದನಿಂತೆಂದನು–

ಯದುಕುಲತಿಲಕ! ನಿನ್ನ ಪ್ರಶ್ನೆಯು ಶ್ಲಾಘನೀಯವಾಗಿದೆ – ಅತಿ ಪ್ರಶಸ್ತವು, ಸಕಲ ಲೋಕಾಭೀಷ್ಟಸಾಧಕವು ಆದ ಭಾಗವತ ಧರ್ಮಗಳನ್ನು ಹೇಳೆಂದು ಕೇಳುತ್ತಿರುವೆ. ಸದ್ಧರ್ಮವನ್ನು ಶ್ರವಣ ಮಾಡಿದರೂ, ಪಠಿಸಿದರೂ, ಧ್ಯಾನಿಸಿದರೂ, ಆದರಿಸಿದರೂ, ಅನುಮೋದಿಸಿದರೂ ಸಾಕು; ಅದು ದೇವ ವಿಶ್ವ ಜನ ದ್ರೋಹಿಯನ್ನಾದರೂ ಪವಿತ್ರೀಕರಿಸಿ, ಪಾಪದೂರನನ್ನು ಮಾಡಿ ಸಂರಕ್ಷಿಸುವುದು. ಭಾಗವತ ಧರ್ಮವು ಹರಿಭಕ್ತಿ ಸಮಲಂಕೃತವಾಗಿದೆ. ಬ್ರಹ್ಮಹತ್ಯಾ ಸಹಕ್ಕೂ ಪ್ರಾಯಶ್ಚಿತ್ತವಿದೆ; ಆಗಲಿ, ಶ್ರೀಹರಿದ್ವೇಷರೂಪ ಪಾಪಕ್ಕೆ ಪರಿಹಾರವೇ ಇಲ್ಲ. ಪರಮ ಮಂಗಲನು, ಪವಿತ್ರ ಯಶೋವಿಶಾಲನು ಆದ ಶ್ರೀನಾರಾಯಣನು ದಿವ್ಯಸ್ಮರಣೆಯನ್ನು, ಹೆಚ್ಚಾಗಿಸಿದ ನೀನು ಪರಮ ಧನ್ಯನು! ಆ ನಾರಾಯಣರ್ಷಿಗೆ ನಮಿಸಿ, ನಿನಗೊಂದು ಪುರಾತನೇತಿಹಾಸವನ್ನು ಹೇಳುವೆನು, ಕೇಳು!

## ವಿದೇಹಾರ್ಷಭ ಸಂವಾದ

ಸ್ವಾಯಂಭುವಮನುರಾಜನಾದ ಸುತನಾದ ಪ್ರಿಯವ್ರತನೆಂಬ ರಾಜರ್ಷಿಯು ಇದ್ದನು. ಅವನಿಗೆ ಆಗ್ನಿಧ್ರನು, ಅವನಿಗೆ ನಾಭಿರಾಜನ, ಜನಿಸಿದರು. ನಾಭಿಗೆ ಮೇರುದೇವಿಯಲ್ಲಿ ಶ್ರೀವಾಸುದೇವನೇ ಮೋಕ್ಷಧರ್ಮ ನಿರೂಪಣವನ್ನು ಮಾಡಲೆಣಿಸಿ, ಋಷಭನೆಂಬ ಮಗನಾಗಿ ಜನಿಸಿದನು. ಋಷಭನಿಗೆ ನೂರು ಜನ ಸುತರು. ಅವರಲ್ಲಿ ಭರತನು ಶ್ರೇಷ್ಠನು. ಅವನಿಂದಲೇ ಈ ನಮ್ಮ ಖಂಡವು ಭರತವರ್ಷವೆನಿಸಿದೆ. ಪುಣ್ಯಸಾಧನ ನಿದಾನವಾದ ಈ ವರ್ಷವನ್ನು ಪಾಲಿಸಿ, ಭರತನು ವಿರಕ್ತನಾಗಿ, ಪುಲಹಾಶ್ರಮದಲ್ಲಿ ತಪಿಸಿ, ತ್ರಿಜನ್ಮಪ್ರಾರಬ್ಧ ಭೋಗಾನಂತರದಲ್ಲಿ, ಮುಕ್ತನಾದನು. ಅವನ ತಮ್ಮಂದಿರು ಒಂಬತ್ತು ಜನರು, ನವದ್ವೀಪಪತಿಗಳಾಗಿದ್ದರು. ಎಂಭತ್ತೊಂದು ಜನರು ಕರ್ಮಕಾಂಡವನ್ನು ನಡೆಸುತ್ತಾ, ಆಶ್ರಮನಿವಾಸಿಗಳಾದರು. ಉಳಿದ ಒಂಭತ್ತು ಮಹನೀಯರು ಸನ್ಯಾಸಿಗಳು, ದಿಗಂಬರರು, ಊರ್ಧ್ವರೇತಸ್ಕರು ಆಗಿದ್ದರು. ವೇದಾಂತವಿದ್ಯಾ ಪಾರಂಗತರಾದ ಅವರ ಹೆಸರುಗಳನ್ನು ನೆನೆದ ದಿನವೇ ಸುದಿನವು! ಕೇಳು! ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನರೆಂಬ ಆ ದ್ವಿಜವರರು ವ್ಯಾಪ್ತವಾದ ಭಗವಂತನ ರೂಪವನ್ನು ತಮ್ಮ ಅಂತರ್ಯಾಮಿಯ ರೂಪದಲ್ಲಿ ನೋಡುತ್ತಾ, ಈ ಜಗತ್ತೆಲ್ಲವೂ ಶ್ರೀಹರಿ ಭಿನ್ನವು, ಶ್ರೀಹರಿಯು ಜಡ ಜೀವ ರೂಪ ಜಗದ್ವಲ್ಲಭನು ಎಂದು ಚಿಂತಿಸುತ್ತಾ, ಬೇಕಾದೆಡೆ ಸಂಚರಿಸುತ್ತಿದ್ದರು. ಅವರಿಗೆ ಸುರ ಸಿದ್ಧ ಗಂಧರ್ವ ಯಕ್ಷ ಮನುಜಾದಿ ಲೋಕಗಳಲ್ಲಿ ಎಲ್ಲಿಯೂ ಆತಂಕವಿದ್ದಿಲ್ಲ. ಜೀವನ್ಮುಕ್ತರಾದ ಆ ಮುನಿನಾಥರು ಕರ್ಮದಿಂದ ಬದ್ಧರಾಗದೆ, ಸ್ವೇಚ್ಛೆಯಿಂದ, ಶ್ರೀಹರಿಪ್ರೇರಣಾನುಸಾರವಾಗಿ ತಿರುಗುತ್ತಾ, ಒಂದು ದಿನ ನಿಮಿರಾಜನ ಸತ್ರಯಾಗ ಶಾಲೆಗೆ ಬಂದರು. ಆ ಹರಿಪುತ್ರರು ಸೂರ್ಯನಂತೆ ಬೆಳಗುತ್ತಾ ಬರಲು ನೋಡಿ, ನಿಮಿಯು, ಋತ್ವಿಜರು, ಸಾಗ್ನಿಗಳಾಗಿ ಎದ್ದು ನಿಂತರು. ನಿಮಿರಾಜನವರಿಗೆ ವಂದಿಸಿ, ಆಸನಗಳಲ್ಲಿ ಕೂಡಿಸಿ, ಪೂಜಿಸಿದನು; ಸನಕಾದಿಗಳಂತೆ ಬ್ರಹ್ಮತೇಜೋವಿರಾಜಮಾನರಾದ ಅವರನ್ನು ವಿನಯದಿಂದ ಇಂತು ಪ್ರಶ್ನಿಸಿದನು.

ಮಹಾತ್ಮರೇ! ಸಾಕ್ಷಾತ್ಪರಮಾತ್ಮನ ಭೃತ್ಯವರರಿಂತೆ ಕಾಣುತ್ತಿರುವಿರು! ವಿಷ್ಣು ಭಕ್ತರು ನಮ್ಮಂತಹ ಪಾಮರರನ್ನು ಪಾವನಗೊಳಿಸಲು ಸಂಚರಿಸುತ್ತಿರುವರಲ್ಲವೇ? ಮಾನುಷ ದೇಹವು

## ೨. ಜಾಯಂತೇಯ ಚರಿತೆ (ಕವಿ, ಹರಿಗಳ ಉಪದೇಶ)

ಶ್ರೀಶುಕನು ಹೇಳಿದನು–

ರಾಜನ್! ಗೋವಿಂದನ ಚರಣಾರವಿಂದ ಸೇವಾಲಾಲಸನಾಗಿ ನಾರದನು, ವನದಿಂದ ಬಂದು, ಪ್ರಾಯಃ ಅಲ್ಲೇ ದ್ವಾರಕೆಯಲ್ಲಿ ಇರುತ್ತಿದ್ದನು. ಶ್ರೋತ್ರಾದೀಂದ್ರಿಯವಂತನಾದ ಮನುಜಮಾತ್ರನಿಗೆ ಮಾಧವಮಹಿಮೆಯು ಶ್ರವಣಮನೋಹರವಾಗಿದೆ; ಅಂದಮೇಲೆ ವಿಜ್ಞಾತತತ್ತ್ವನಾದ ನಾರದನಿಗೆ ಅಮರವರ ಚಿರಸಮಾರಾಧಿತವಾದ ಭಗವತ್ಪದಾರವಿಂದವು ಭಜನೀಯವೆನಿಸುವುದೇ ನಚ್ಚರಿಯು! ನೆತ್ತಿಯಲ್ಲಿ ಮೃತ್ಯುವು ನೃತ್ಯ ಮಾಡುತ್ತಿರುವುದನ್ನು ಕಾಣಲಾರದೆ, ಜನರು ಶ್ರೀಹರಿಚರಿತಶ್ರವಣಸುಧಾಪಾನದೂರರಾಗಿರುವುದೇ ಆಶ್ಚರ್ಯವು!

ಒಂದು ದಿನ ಮನೆಗೆ ಬಂದ ನಾರದನನ್ನು ಚೆನ್ನಾಗಿ ಪೂಜಿಸಿ, ವಸುದೇವನು ವಂದಿಸಿ, ವಿನಯದಿಂದ ಇಂತು ಕೇಳಿಕೊಂಡನು–

ಉತ್ತಮ ಶ್ಲೋಕಚರಣ ಶರಣರ ಮಾರ್ಗವನ್ನು ಬಿಡದೆ ನಡೆವ ನಿನ್ನಂತಹ ಸಾಧು ಜನರು, ಮಕ್ಕಳನ್ನು ಪೊರೆಯಲು ಬರುವ ತಂದೆತಾಯಂದಿರಂತೆ, ಕೇವಲ ದಯೆಯಿಂದ ಸಂಸಾರದುಃಖಿತರಾದ ಜೀವರನ್ನು ಉದ್ಧರಿಸಬೇಕೆಂದು ಸಂಚರಿಸುತ್ತಿರುವರು.

ದೇವತೆಗಳು ಸಾತ್ತ್ವಿಕ ಜನರಿಗೆ ದೇವಪೂಜಾದಿ ಸತ್ಕರ್ಮಗಳನ್ನು ಮಾಡುವ ಬುದ್ಧಿಯನ್ನಿತ್ತು, ಅವರಿಗೆ ಸುಖವನ್ನೇ ಕೊಡುವರು; ತಾಮಸರಿಂದ ದೇವದ್ರೋಹ ರೂಪ ಕುಕರ್ಮಗಳನ್ನು ಮಾಡಿಸಿ, ಅವರಿಗೆ ದುಃಖವನ್ನೇ ನೀಡುವರು; ರಾಜಸರಿಂದ ವಿಶ್ವಕರ್ಮಗಳನ್ನು ಮಾಡಿಸಿ, ಸುಖ - ದುಃಖ ರೂಪ ಮಿಶ್ರಫಲವನ್ನೇ ಕೊಡುವರು. ಪುರುಷನನ್ನನುಸರಿಸಿ ಪೋಗುವ ನೆರಳಿನಂತೆ, ದೇವತೆಗಳು ಪುರುಷಕರ್ಮವನ್ನು ನೋಡಿ ಸ್ವಭಾವಕ್ಕೆ ತಕ್ಕ ಫಲವನ್ನು ಕೊಡುವರು. ಅವರಿಗೆ ಪಕ್ಷಪಾತಾದಿ ದೋಷಗಳಿಲ್ಲ. ಆದರೆ ಸಾಧುಗಳು ಹಾಗಲ್ಲ; ಕೇವಲ ಕರುಣೆಯನ್ನೇ ಮಾಡಿ, ಸರ್ವಭೂತಹಿತರತರಾಗಿರುವರು. ಅವರು ಇತರರ ದುಃಖವನ್ನು ಸಹಿಸರು. ದೇವತೆಗಳು ಇತರ ಸುಖದುಃಖ ಕಾರಣರಾದರೂ ವಿಚಲಿತರಾಗದಿರುವರು; ಸಾಧುಗಳು ಇತರ ಸುಖಸಾಧನ ನಿರೂಪಕರಾಗಿ, ಜನರನ್ನು ದೇವತಾ ಪ್ರೀತಿವಿಷಯರನ್ನಾಗಿಸುವುದರಿಂದಲು, ನಮ್ಮ ಕಣ್ಣಿಗೆ ಕಾಣಬರುತ್ತಿರುವುದರಿಂದಲು, ಸೇವನೀಯರಾಗಿರುವರು. ಆದುದರಿಂದ ಭಾಗವತ ಧರ್ಮಗಳನ್ನು ನಿರೂಪಿಸು ಎಂದು ನಿನ್ನನ್ನು ಕೇಳಿಕೊಳ್ಳುತ್ತಿರುವೆನು. ಹಿಂದೆ ನಾನು ಮೋಕ್ಷಪ್ರದನಾದ ಶ್ರೀಹರಿಯನ್ನು ತಪದಿಂದ ಮೆಚ್ಚಿಸಿ, ಪ್ರಜಾವೃದ್ಧಿಯನ್ನು ಬೇಡಿದನು; ಮೋಕ್ಷವನ್ನು ಬೇಡಲಿಲ್ಲ; ಇದೂ ಅವನ ಬಂಧಕಶಕ್ತಿಯ ಮಹಿಮೆಯೇ ಸರಿ! ಸ್ವಾಮೀ! ಈ ಸಂಸಾರವನವೋ ವಿಚಿತ್ರ ವ್ಯಸನಾಕುಲವಾಗಿದೆ. ಇಲ್ಲಿ ಎಲ್ಲಿ ನೋಡಿದರೂ ಅಜ್ಞಾನ ಭಯ ನಾಶಗಳೇ ಎದ್ದು ಕುಣಿಯುತ್ತಿವೆ. ಇದರಿಂದ ಬಿಡಿಸಿಕೊಂಡು, ಶ್ರೀಶಚರಣವನ್ನೆಂತು ಸೇರುವುದೋ ತೋರದಾಗಿದೆ. ದಯಮಾಡಿ, ಶ್ರೀಶಸೇವಾ ಮಾರ್ಗವನ್ನು ತೋರಿಸಿ ನನ್ನನ್ನು ಕಾಪಾಡು!

ಶ್ರೀಶುಕನು ಹೇಳಿದನು.

ರಾಜನೇ! ವಸುದೇವನ ಪ್ರಶ್ನೆಯನ್ನು ಕೇಳಿ, ಪ್ರೀತನಾಗಿ ಶ್ರೀಹರಿಗುಣಸ್ಮರಣಾನಂದವಿವಶನಾಗಿ ನಾರದನಿಂತೆಂದನು–

ಯದುಕುಲತಿಲಕ! ನಿನ್ನ ಪ್ರಶ್ನೆಯು ಶ್ಲಾಘನೀಯವಾಗಿದೆ – ಅತಿ ಪ್ರಶಸ್ತವು, ಸಕಲ ಲೋಕಾಭೀಷ್ಟಸಾಧಕವು ಆದ ಭಾಗವತ ಧರ್ಮಗಳನ್ನು ಹೇಳೆಂದು ಕೇಳುತ್ತಿರುವೆ. ಸದ್ಧರ್ಮವನ್ನು ಶ್ರವಣ ಮಾಡಿದರೂ, ಪಠಿಸಿದರೂ, ಧ್ಯಾನಿಸಿದರೂ, ಆದರಿಸಿದರೂ, ಅನುಮೋದಿಸಿದರೂ ಸಾಕು; ಅದು ದೇವ ವಿಶ್ವ ಜನ ದ್ರೋಹಿಯನ್ನಾದರೂ ಪವಿತ್ರೀಕರಿಸಿ, ಪಾಪದೂರನನ್ನು ಮಾಡಿ ಸಂರಕ್ಷಿಸುವುದು. ಭಾಗವತ ಧರ್ಮವು ಹರಿಭಕ್ತಿ ಸಮಲಂಕೃತವಾಗಿದೆ. ಬ್ರಹ್ಮಹತ್ಯಾ ಸಹಕ್ಕೂ ಪ್ರಾಯಶ್ಚಿತ್ತವಿದೆ; ಆಗಲಿ, ಶ್ರೀಹರಿದ್ವೇಷರೂಪ ಪಾಪಕ್ಕೆ ಪರಿಹಾರವೇ ಇಲ್ಲ. ಪರಮ ಮಂಗಲನು, ಪವಿತ್ರ ಯಶೋವಿಶಾಲನು ಆದ ಶ್ರೀನಾರಾಯಣನು ದಿವ್ಯಸ್ಮರಣೆಯನ್ನು, ಹೆಚ್ಚಾಗಿಸಿದ ನೀನು ಪರಮ ಧನ್ಯನು! ಆ ನಾರಾಯಣರ್ಷಿಗೆ ನಮಿಸಿ, ನಿನಗೊಂದು ಪುರಾತನೇತಿಹಾಸವನ್ನು ಹೇಳುವೆನು, ಕೇಳು!

## ವಿದೇಹಾರ್ಷಭ ಸಂವಾದ

ಸ್ವಾಯಂಭುವಮನುರಾಜನಾದ ಸುತನಾದ ಪ್ರಿಯವ್ರತನೆಂಬ ರಾಜರ್ಷಿಯು ಇದ್ದನು. ಅವನಿಗೆ ಆಗ್ನಿಧ್ರನು, ಅವನಿಗೆ ನಾಭಿರಾಜನ, ಜನಿಸಿದರು. ನಾಭಿಗೆ ಮೇರುದೇವಿಯಲ್ಲಿ ಶ್ರೀವಾಸುದೇವನೇ ಮೋಕ್ಷಧರ್ಮ ನಿರೂಪಣವನ್ನು ಮಾಡಲೆಣಿಸಿ, ಋಷಭನೆಂಬ ಮಗನಾಗಿ ಜನಿಸಿದನು. ಋಷಭನಿಗೆ ನೂರು ಜನ ಸುತರು. ಅವರಲ್ಲಿ ಭರತನು ಶ್ರೇಷ್ಠನು. ಅವನಿಂದಲೇ ಈ ನಮ್ಮ ಖಂಡವು ಭರತವರ್ಷವೆನಿಸಿದೆ. ಪುಣ್ಯಸಾಧನ ನಿದಾನವಾದ ಈ ವರ್ಷವನ್ನು ಪಾಲಿಸಿ, ಭರತನು ವಿರಕ್ತನಾಗಿ, ಪುಲಹಾಶ್ರಮದಲ್ಲಿ ತಪಿಸಿ, ತ್ರಿಜನ್ಮಪ್ರಾರಬ್ಧ ಭೋಗಾನಂತರದಲ್ಲಿ, ಮುಕ್ತನಾದನು. ಅವನ ತಮ್ಮಂದಿರು ಒಂಬತ್ತು ಜನರು, ನವದ್ವೀಪಪತಿಗಳಾಗಿದ್ದರು. ಎಂಭತ್ತೊಂದು ಜನರು ಕರ್ಮಕಾಂಡವನ್ನು ನಡೆಸುತ್ತಾ, ಆಶ್ರಮನಿವಾಸಿಗಳಾದರು. ಉಳಿದ ಒಂಭತ್ತು ಮಹನೀಯರು ಸನ್ಯಾಸಿಗಳು, ದಿಗಂಬರರು, ಊರ್ಧ್ವರೇತಸ್ಕರು ಆಗಿದ್ದರು. ವೇದಾಂತವಿದ್ಯಾ ಪಾರಂಗತರಾದ ಅವರ ಹೆಸರುಗಳನ್ನು ನೆನೆದ ದಿನವೇ ಸುದಿನವು! ಕೇಳು! ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನರೆಂಬ ಆ ದ್ವಿಜವರರು ವ್ಯಾಪ್ತವಾದ ಭಗವಂತನ ರೂಪವನ್ನು ತಮ್ಮ ಅಂತರ್ಯಾಮಿಯ ರೂಪದಲ್ಲಿ ನೋಡುತ್ತಾ, ಈ ಜಗತ್ತೆಲ್ಲವೂ ಶ್ರೀಹರಿ ಭಿನ್ನವು, ಶ್ರೀಹರಿಯು ಜಡ ಜೀವ ರೂಪ ಜಗದ್ವಲ್ಲಭನು ಎಂದು ಚಿಂತಿಸುತ್ತಾ, ಬೇಕಾದೆಡೆ ಸಂಚರಿಸುತ್ತಿದ್ದರು. ಅವರಿಗೆ ಸುರ ಸಿದ್ಧ ಗಂಧರ್ವ ಯಕ್ಷ ಮನುಜಾದಿ ಲೋಕಗಳಲ್ಲಿ ಎಲ್ಲಿಯೂ ಆತಂಕವಿದ್ದಿಲ್ಲ. ಜೀವನ್ಮುಕ್ತರಾದ ಆ ಮುನಿನಾಥರು ಕರ್ಮದಿಂದ ಬದ್ಧರಾಗದೆ, ಸ್ವೇಚ್ಛೆಯಿಂದ, ಶ್ರೀಹರಿಪ್ರೇರಣಾನುಸಾರವಾಗಿ ತಿರುಗುತ್ತಾ, ಒಂದು ದಿನ ನಿಮಿರಾಜನ ಸತ್ರಯಾಗ ಶಾಲೆಗೆ ಬಂದರು. ಆ ಹರಿಪುತ್ರರು ಸೂರ್ಯನಂತೆ ಬೆಳಗುತ್ತಾ ಬರಲು ನೋಡಿ, ನಿಮಿಯು, ಋತ್ವಿಜರು, ಸಾಗ್ನಿಗಳಾಗಿ ಎದ್ದು ನಿಂತರು. ನಿಮಿರಾಜನವರಿಗೆ ವಂದಿಸಿ, ಆಸನಗಳಲ್ಲಿ ಕೂಡಿಸಿ, ಪೂಜಿಸಿದನು; ಸನಕಾದಿಗಳಂತೆ ಬ್ರಹ್ಮತೇಜೋವಿರಾಜಮಾನರಾದ ಅವರನ್ನು ವಿನಯದಿಂದ ಇಂತು ಪ್ರಶ್ನಿಸಿದನು.

ಮಹಾತ್ಮರೇ! ಸಾಕಾತ್ಪರಮಾತ್ಮನ ಭೃತ್ಯವರರಿಂತೆ ಕಾಣುತ್ತಿರುವಿರು! ವಿಷ್ಣು ಭಕ್ತರು ನಮ್ಮಂತಹ ಪಾಮರರನ್ನು ಪಾವನಗೊಳಿಸಲು ಸಂಚರಿಸುತ್ತಿರುವರಲ್ಲವೇ? ಮಾನುಷ ದೇಹವು

ದುರ್ಲಭವು! ಅದು ಕ್ಷಣಭಂಗುರವಾಗಿದೆ; ಅದರಲ್ಲಿಯು ವೈಕುಂಠಪ್ರಿಯರಾದ ನಿಮ್ಮಂತಹವರ ದರ್ಶನವು ದುರ್ಲಭತರವು! ಅದಾದರೂ ವೈಕುಂಠಪ್ರಿಯ ಶ್ರೀಮನ್ಮಧ್ವದರ್ಶನವು ದುರ್ಲಭತಮ ವಾಗಿದೆ! ಅದರಿಂದಲ್ಲವೇ ವೈಕುಂಠನ ಪ್ರಿಯದರ್ಶನವಾಗಬೇಕು? ಸಕಲಾನಿಷ್ಟ ನಿವೃತ್ತಿ ವಿಶಿಷ್ಟ ಪರಮಾನಂದ ಪ್ರಾಪ್ತಿಯನ್ನು ಪೊಂದುವ ಉಪಾಯವನ್ನು ದಯಮಾಡಿ ತಿಳಿಸಿ ಕೊಡಿ! ಈ ದುಃಖಮಯ ಸಂಸಾರದಲ್ಲಿ ಕ್ಷಣಾರ್ಧವಾದರೂ ಸಜ್ಜನಸಂಗವು ಸುಖನಿಧಿ ಎನಿಸುವುದು. ಭಾಗವತಧರ್ಮಗಳನ್ನು ಕೇಳಬೇಕೆಂದಿರುವ ನಮಗೆ, ನಲಿನದಳನಯನನು ಪ್ರಸನ್ನನಾಗಿ, ತನ್ನವರಿಗೆ ತನ್ನ ದಿವ್ಯರೂಪವನ್ನು ತೋರಿಸಿ ಕೊಡಲು ಸಾಧನವಾದ ಭಾಗವತ ಧರ್ಮವನ್ನು ನಿರೂಪಿಸಿ!

ಇಂತು ಪ್ರಶ್ನಿಸಿದ ನಿಮಿಯನ್ನು ಮೆಚ್ಚಿ, ಆ ಮಹಾನುಭಾವರು ಕ್ರಮವಾಗಿ ಭವಮೋಚಕ ಭಾಗವತ ಧರ್ಮಗಳನ್ನು ನಿರೂಪಿಸತೊಡಗಿದರು.

೧. ಕವಿಯು ಇಂತೆಂದನು– (ಸರ್ವಸಮರ್ಪಣೆ)

ಈ ಸಂಸಾರದಲ್ಲಿ ಅಮಂಗಲ ದೇಹಾದಿಗಳಲ್ಲಿ ನಾನು, ನನ್ನದೆಂಬ ದುರಭಿಮಾನದಿಂದ, ದುಃಖಿಸುತ್ತಿರುವ ಜೀವನಿಗೆ, ಹೇಯೋಪಾದೇಯರಹಿತನು, ಪಾಪಪರಿಹಾರಕನು ಆದ ಶ್ರೀಪತಿಯ ಶ್ರೀಪಾದಪದ್ಮೋಪಾಸನವೇ ಸರ್ವಭಯನಿವಾರಕವೆಂದು ನಾನು ತಿಳಿದಿರುವೆನು. ಶ್ರೀಹರಿಭಜಕನಿಗೆ ಸಾಂಸಾರಿಕ ಭೀತಿ ಉಂಟೇ? ಶ್ರೀಹರಿದರ್ಶನವನ್ನು ಪಡೆಯುವ ಉಪಾಯ ಗಳನ್ನು ಶ್ರೀಹರಿಯೇ ಋಷಿರೂಪನಾಗಿ ನಿರೂಪಿಸಿರುವನು. ಅವೇ ಭಾಗವತ ಧರ್ಮಗಳೆಂದು ಖ್ಯಾತವಾಗಿದೆ. ಅಜ್ಞಾನದಲ್ಲಿ ನರಳುವ ಜನರಿಗೆ ಜ್ಞಾನವನ್ನಿತ್ತು, ಆತ್ಮಾನಾತ್ಮ ವಿವೇಕವನ್ನು ಪುಟ್ಟಿಸುವ ಧರ್ಮದ ಮಾರ್ಗದಲ್ಲಿ ನಡೆಯುವವನು, ಚೆನ್ನಾಗಿ ಕಣ್ತೆರೆದು ನೋಡಿ ನಡೆಯುವ ಮನುಜನಂತೆ ಎಡವದೆ, ಬೀಳದೆ, ಸುಖವಾಗಿ ಗಮ್ಯವನ್ನು ಸೇರುವನು.

ಮುಖ್ಯಭಾಗವತ ಧರ್ಮವಿದು ತಿಳಿ – ಜೀವನು ಶ್ರೀಹರಿ ಕೊಟ್ಟ ಶರೀರ, ವಚನ, ಮನಸ್ಸು, ಇಂದ್ರಿಯಗಳು, ಬುದ್ಧಿ, ಅಹಂಕಾರ, ಸ್ವಯೋಗ್ಯತೆ, ಮೊದಲಾದವುಗಳಿಂದ ಕೂಡಿ ಮಾಡಿದ ಕರ್ಮಗಳ ಫಲವನ್ನು ತಾನು ಅಸ್ವತಂತ್ರಕರ್ತನು, ಶ್ರೀಶನು ಸ್ವತಂತ್ರಕರ್ತನು ಎಂದು ತಿಳಿದು ಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸುವುದು ದೊಡ್ಡ ಭಾಗವತ ಧರ್ಮವಾಗಿದೆ. ಸಂಸಾರದ ಭಯವು, ಅಹಂಕಾರ ಮಮಕಾರಗಳಿಂದ ಬಂದಿದೆ. ದೇಹಾಭಿಮಾನದಿಂದ, ಇಲ್ಲದ ಕರ್ತೃತ್ವ ವನ್ನು; ಗೇಹಾದ್ಯಭಿಮಾನದಿಂದ, ಇಲ್ಲದ ಸ್ವಾಮಿತ್ವವನ್ನು ಆರೋಪಿಸಿಕೊಂಡು ಜೀವನು ಕರ್ಮ ಬದ್ಧನಾಗಿ, ಅಜ್ಞಾನ ಅನ್ಯಥಾಜ್ಞಾನಗಳಿಗೆ ಸಿಕ್ಕು ಶಾಸ್ತ್ರಜ್ಞಾನವನ್ನು ಕಳೆದುಕೊಂಡು ಸಂಚರಿಸು ತ್ತಿರುವನು. ಇದೆಲ್ಲ ಶ್ರೀಹರಿಯ ಬಂಧಕಶಕ್ತಿಯ ಪ್ರಭಾವವೆಂದರಿತು, ಸರ್ವಸಮರ್ಪಣರೂಪ ಭಕ್ತಿಯಿಂದ ಗುರುಗಳನ್ನು ದೇವತೆಗಳನ್ನು ಶ್ರೀಹರಿಯನ್ನು ತಾರತಮ್ಯಾನುಸಾರವಾಗಿ ಸೇವಿಸುವ, ಸುಜನನು ಮುಕ್ತನಾಗುವನು. ದೇಹಗೇಹಾದಿಗಳು ತಾನಲ್ಲ; ಎರಡನೆಯವರ ವಸ್ತುವನ್ನು ತನ್ನದೆಂದು ತಿಳಿದು ಕೆಡುವ ಅಜ್ಞಾನಿಯಂತೆ, ಸ್ವಪ್ನದಂತೆ ಶ್ರೀಹರೀಚ್ಛಾನಿಯತವು, ಮನೋರಥ ದಂತೆ ದುರ್ಲಭವು ಆದ ವಿಷಯಸುಖದ ಧ್ಯಾನದಿಂದ ಜೀವನು, ಹುಟ್ಟಿ ಸಾಯುತ್ತಿರುವನು. ಅವನ ಮನವೇ ವಿಷಯರತವಾಗಿ ಸಂಸಾರಕಾರಣವಾಗಿದೆ. ಆದುದರಿಂದ ಅಂತಹ ಮನವನ್ನು ಶ್ರೀಹರಿಚರಣಾರವಿಂದದಲ್ಲಿಟ್ಟು, ಭಕ್ತನಾದವನಿಗೆ ಸರ್ವಭಯವು ದೂರವಾಗುವುದು.

ಪರಮಮಂಗಲಕರವಾದ ರಥಾಂಗಧರನ ಅವತಾರಗಳನ್ನು, ಕಂಸವಧಾದಿ ಚರಿತಗಳನ್ನು, ಕೃಷ್ಣರಾಮಾದಿ ನಾಮಗಳನ್ನು ಶ್ರವಣಮಾಡಿ, ಅವರ ಶುಭಗುಣಗಳನ್ನು ಸ್ಮರಿಸುತ್ತಾ, ದೇಹಾದ್ಯಭಿ ಮಾನವನ್ನು ತೊರೆದು ಚರಿಸುವ ನರನು ಭಕ್ತಸತ್ತಮನೆನಿಸುವನು; ಶ್ರೀಹರಿಯ ಪ್ರಿಯಕರ ಚರಿತಶ್ರವಣವೇ ವ್ರತವಾಗಿರಲು, ಭಕ್ತ್ಯುದ್ರೇಕದಿಂದ ಮನವು ಕರಗಿ, ಅಂತಹ ಉತ್ತಮಭಕ್ತನು ನಗುವನು, ರೋದಿಸುವನು, ನಾಟ್ಯವಾಡುವನು. ಗಟ್ಟಿಯಾಗಿ ಹಾಡಿ, ಮೈಮರೆತುಬಿಡುವನು. ಲೋಕವಿಲಕ್ಷಣನಾದ ಭಕ್ತರ ಲಕ್ಷಣಗಳು ಬಹುವಿಧವಾಗಿವೆ. ಶ್ರೀಹರಿಯ ಕಥಾಶ್ರವಣದಿಂದ ಮುಖವು ಸುಪ್ರಸನ್ನವಾಗಿ, ಭಕ್ತಿಯ ಭರದಿ ಮೈಮರೆತವನು ನಿಜವಾದ ಭಕ್ತನು.

ಕೆಲವರು ಭಕ್ತರು ಶ್ರೀಹರಿಯನ್ನು, ಆಕಾಶ, ವಾಯು, ವಹ್ನಿ, ಜಲ, ಭೂಮಿ, ತಾರಾ, ಸೂರ್ಯ, ಚಂದ್ರ, ದಿಕ್, ದ್ರುಮ, ನದೀ, ಸಮುದ್ರಗಳಲ್ಲಿ ನಿಯಾಮಕರೂಪದಿಂದ, ತತ್ತನ್ನಾಮ ನಾಗಿ, ತದ್ಗುಣಪ್ರದನಾಗಿ ಇರುವನೆಂದು, ಉಪಾಸಿಸಿ, ಸರ್ವಭೂತಗಳ ಅಂತರ್ಯಾಮಿಯು, ಸ್ವಾಮಿಯು ಆದ ಭಗವಂತನಿಗೆ ನಮಿಸುತ್ತಿರುವರು. ಅಂತಹ ಉಪಾಸಕನಿಗೆ ಶ್ರೀಹರಿಯಲ್ಲಿ ಭಕ್ತಿಯು, ತದಿತರತ್ರ ಸಂಸಾರದಲ್ಲಿ ವಿರಕ್ತಿಯು, ತನ್ನ ಅಸ್ವಾತಂತ್ರ್ಯ ಜ್ಞಾನವು ಒಂದೇ ಸಲ ನಿಬಿಡವಾಗಿ– ಊಟ ಮಾಡುವಾಗ ಕವಲಕವಲಕ್ಕು ಅಲಂಬುದ್ಧಿ (ಉದರಪೂರ್ತಿ), ತುಷ್ಟಿ, ಪುಷ್ಟಿಗಳು ಹುಟ್ಟುವಂತೆ– ಹುಟ್ಟಿ, ಅವನು ಮುಕ್ತನಾಗುವನು. ಭಕ್ತಿಜ್ಞಾನಗಳು ವೈರಾಗ್ಯಾಗ್ನಿ ಯಲ್ಲಿ ಪಕ್ವವಾದೊಡನೆ ಅಪರೋಕ್ಷಜ್ಞಾನವು ಜನಿಸಿ, ಅದು ಪರಮೇಶನ ಪ್ರಸಾದವನ್ನು ಪುಟ್ಟಿಸುವುದು. ಶ್ರೀಹರಿಪ್ರಸಾದವೇ ಮೋಕ್ಷಾನಂದ ಸಂದಾಯಕವು.

ವಿದೇಹರಾಜನು ಪ್ರಶ್ನಿಸಿದನು–

ಭಾಗವತರ ಲಕ್ಷಣವನ್ನು ಹೇಳಿ! ಅವರ ನಡತೆ ಎಂತಿರುವುದು? ಉತ್ತಮ ಮಧ್ಯಮಾಧ್ಯಮ ಭಕ್ತರು ಎಂತಿರುವರು?

೨. ಶ್ರೀಹರಿಯು ಹೇಳಿದನು–

ಸರ್ವಭೂತಗಳಲ್ಲಿಯು ಅಂತರ್ಯಾಮಿಯಾಗಿರುವ ಶ್ರೀಹರಿಯು ಪೂರ್ಣನು; ಸರ್ವಜೀವ ಜಡಾತ್ಮಕ ಜಗವೆಲ್ಲವು ಶ್ರೀಹರಿಯ ಅಧೀನವಾಗಿದೆ. ಶ್ರೀಹರಿಯೇ ಸರ್ವಾಧಾರನು– ಎಂದು ತಿಳಿದವನೇ ಭಾಗವತೋತ್ತಮನು.

ಈಶ್ವರನಲ್ಲಿ ಭಕ್ತಿ, ತವಧೀನರಲ್ಲಿ ಮೈತ್ರಿ, ಅಜ್ಞರಲ್ಲಿ ಕೃಪೆ, ದ್ವೇಷಿಗಳಲ್ಲಿ ಉಪೇಕ್ಷೆಯನ್ನು ತೋರುತ್ತಾ, ಸರ್ವವು ಶ್ರೀಹರಿವಶವೆಂಬುದನ್ನು ಚೆನ್ನಾಗಿ ತಿಳಿಯದ ನರನು ಭಾಗವತ ಮಧ್ಯಮನು.

ಪ್ರತಿಮೆಯಲ್ಲಿ ಮಾತ್ರ ಶ್ರೀಶನಿರುವನು, ಇತರ ಭೂತಗಳಲ್ಲಿಲ್ಲವೆಂದು ಪ್ರತಿಮೆಯನ್ನೇ ಶ್ರದ್ಧೆಯಿಂದ ಪೂಜಿಸುತ್ತಾ, ತಾರತಮ್ಯಜ್ಞಾನವಿಲ್ಲದೆ, ವಿಷ್ಣುದ್ವೇಷಿಗಳಲ್ಲಿ ನಿಂದನವಿಲ್ಲದೆ ವರ್ತಿ ಸುವನು ಪ್ರಾಕೃತಭಕ್ತನು.

ಇಂದ್ರಿಯಗಳಿಂದ ವಿಷಯಗಳನ್ನು ಸ್ವೀಕರಿಸುವಾಗ, ಯೋಗ್ಯತಾತಿರೇಕೇಣ ದ್ವೇಷವನ್ನಾ ಗಲಿ, ಸ್ನೇಹವನ್ನಾಗಲಿ ಮಾಡದೆ, ಈ ಲೋಕಯಾತ್ರೆ ಎಲ್ಲವೂ ಹರೀಚ್ಛಾಧೀನವೆಂದು ತಿಳಿದವರು ಉತ್ತಮ ಭಕ್ತರು, ಶ್ರೀಹರಿಪ್ರೇರಣೆಯಿಂದಲೇ ಪ್ರೇಮದ್ವೇಷಗಳು. ಶ್ರೀಹರಿಯು ಪ್ರೇಮಪಾತ್ರ ಪರಮಾವಧಿಯು, ಇತರ ದೇವತೆಗಳು ತಾರತಮ್ಯದಿಂದ ಪೂಜ್ಯರು. ದೇವದ್ವೇಷಿಗಳಿಗೆ ಸಂಸಾರವು ತಪ್ಪದು ಮತ್ತು ದೇವತಾದ್ವೇಷ, ಶ್ರೀಹರಿದ್ವೇಷಗಳೆರಡೂ ಅಂಧತಮೋದ್ವಾರಗಳೆ ನಿಸಿವೆ.

ದೇಹೇಂದ್ರಿಯ, ಪ್ರಾಣ, ಮನೋಬುದ್ಧಿಗಳಿಂದ ಬಂದೊದಗುವ ಜನನ, ಮರಣ, ಹಸಿವೆ, ನೀರಡಿಕೆ, ಭಯ, ಆಶೆ, ಕಷ್ಟಗಳೆಂಬ ಸಂಸಾರ ಧರ್ಮಗಳ ಸ್ವರೂಪವನ್ನು ಸರಿಯಾಗಿ ತಿಳಿದು, ಶ್ರೀಹರಿಯ ಸಂತತಸ್ಮರಣೆಯಿಂದ ನಿರ್ವಿಕಾರನಾಗಿರುವವನು ಭಾಗವತೋತ್ತಮನು.

ದೇಹೇಂದ್ರಿಯ ಪ್ರಾಣಬುದ್ಧಿಗಳಿಗೆ ಅಭಿಮಾನಿಗಳು ಮೂರು ವಿಧ. ಉತ್ತಮರಾದ ದೇವತೆಗಳು ಸರ್ವದೋಷರಹಿತರು; ಮಧ್ಯಮರಾದ ಮನುಜರು ಗುಣದೋಷಯುತರು; ಅಧಮರಾದ ದೈತ್ಯರು ಸಕಲದೋಷಸಹಿತರು. ಅಂತೆಯೇ ಜೀವಮಾನಿಗಳು ಮೂರು ವಿಧ. ಉತ್ತಮಜೀವಮಾನಿನಿರಿಂಚನು; ಮಧ್ಯಮಜೀವಮಾನಿ ಪುರಂಜನನು; ಅಧಮ ಜೀವಮಾನಿಯು ಕಲಿಯು. ಮರಣ ಜನನ ಕ್ಷುಧ್ರಾದಿಗಳ ದುಃಖ ಜಡದೇಹಾದಿಗಳಿಗೂ ಇಲ್ಲ; ಉತ್ತಮದೇವತೆಗಳಿಗೂ ಇಲ್ಲ; ಜನನದುಃಖವು ದೇಹಮಾನಿ ದೈತ್ಯನಿಗೆ; ನಾಶಾದಿ ದುಃಖವು ಇಂದ್ರಿಯಮಾನಿ ದೈತ್ಯನಿಗೆ; ಹಸಿವೆಯ ದುಃಖವು ಪ್ರಾಣಮಾನಿ ದೈತ್ಯನಿಗೆ; ಭಯ ತೃಷ್ಣೆಗಳ ದುಃಖವು ಮನೋ ದೈತ್ಯನಿಗೆ; ಆಂತರಿಕ ದುಃಖತೀವ್ರತೆಯು ಬುದ್ಧಿಮಾನಿ ದೈತ್ಯನಿಗೆ; ನೀಚತ್ವದುಃಖವು ಅಹಂಕಾರಮಾನಿ ದೈತ್ಯನಿಗೆ; ಅತೀತಸ್ಮೃತಿಜನಿತ ದುಃಖವು ಚಿತ್ತಮಾನಿ ದೈತ್ಯನಿಗೆ; ಇದೆಲ್ಲ ದುಃಖಸಮುದಾಯವು ಜೀವಮಾನಿಯಾದ ಕಲಿಗೆ– ಎಂದು ದೈತ್ಯರ ದುಃಖಸ್ವರೂಪವನ್ನು ದೇವತೆಗಳಿಗಿರುವ ದುಃಖರಹಿತ ಸುಖಸ್ವರೂಪವನ್ನು ತಿಳಿದು, ಸರ್ವೋತ್ತಮನಾದ ಶ್ರೀಹರಿಯನ್ನು ಭಜಿಸುವವನು ಭಾಗವತೋತ್ತಮನು. ತತ್ತ್ವದೇವತೆಗಳು ಮಾಡಿಸುವ ಪಾಪದಿಂದ ಅವರಿಗೆ ಲೇಪವಿಲ್ಲ; ಅಷ್ಟೇ ಅಲ್ಲದೆ ಅದೂ ಶ್ರೀಹರಿಸೇವೆಗಾಗಿ ತತ್ಪ್ರೀತಿವರ್ಧಕವಾಗುವುದು. ದೇವತೆಗಳಿಗೆ ಕಿಂಚಿದಸುರಾವೇಶದಿಂದ ದುಃಖವಾಗುವುದುಂಟು; ಆದರೆ ಮುಖ್ಯ ಪ್ರಾಣನಿಗೆ ಅಸುರಾವೇಶವಿಲ್ಲ; ಅವನು ಶ್ರೀಹರಿಯ ಪೂರ್ಣಾನುಗ್ರಹವನ್ನು ಪಡೆದಿರುವನು. ದೇವತಾವೇಶದಿಂದ ಅಸುರರಿಗೆ ಸ್ವಲ್ಪ ಸುಖವಿದ್ದರೂ, ಸ್ವರೂಪವೇ ದುಃಖಮಯವಾದುದರಿಂದ, ಅದೂ ಇಲ್ಲದಂತೆಯೇ ಸರಿ?

ಅವಿದ್ಯಾಕಾಮಕರ್ಮಗಳಿಂದ ಪುಟ್ಟಿ ಪ್ರಕೃತಿಯಲ್ಲಿ ಬೆಳೆಯುತ್ತಿರುವ ಈ ಸಂಸಾರ ವಿಷವೃಕ್ಷವನ್ನು ಜ್ಞಾನಖಡ್ಗದಿಂದ ಕಡಿದು, ವೈರಾಗ್ಯಾಗ್ನಿಯಲ್ಲಿ ಸುಟ್ಟು, ಭಕ್ತಿಪ್ರವಾಹದಲ್ಲಿ ಕೊಚ್ಚಿ ಹೋಗುವಂತೆ ಮಾಡಿಕೊಂಡವನೇ ಭಾವತೋತ್ತಮನು; ಅವನಿಗೆ ವಿಪ್ರಾದಿ ಕುಲದಿಂದ ಗುರುಕುಲವಾಸಾದ್ಯಾಚಾರದಿಂದ, ಚತುರ್ಥಾಶ್ರಮಾದಿಗಳಿಂದ, ರೂಪವರ್ಣಗಳಿಂದ, ಈ ಶರೀರದಲ್ಲಿ ಅಹಂಭಾವಕೃತವಾದ ದುರ್ಮದವಿರುವುದಿಲ್ಲ. ಜೀವೇಶರು ಪರಸ್ಪರ ಭಿನ್ನರಾಗಿರುವರು; ಪ್ರಾಕೃತ ಮನವೇ ಜೀವನಲ್ಲ; ಸರ್ವಭೂತಗಳಲ್ಲಿ ತಾರತಮ್ಯವಿದ್ದರೂ ಅಂತರ್ಯಾಮಿ ಹರಿಗೆ ಸ್ವಗತಭೇದವಿಲ್ಲ ಎಂದು ತಿಳಿದು ವಾಸುದೇವೈಕ ಶರಣನಾದವನು ಭಾಗವತೋತ್ತಮನು.

ತ್ರಿಭುವನವಿಭವ ಕಾರಣವಾದುದು ವೈಕುಂಠಸರಸಿಜಚರಣಸ್ಮರಣವು! ಬ್ರಹ್ಮಾದಿ ಚಿಂತಿತರ ಪದಾರವಿಂದವನ್ನು ಕ್ಷಣಾರ್ಧವಾದರೂ ಬಿಡದೆ ಸ್ಮರಿಸುವವನೇ ವೈಷ್ಣವಾಗ್ರೇಸರನು; ಅವನು ಉರುವಿಕ್ರಮನಾದ ತ್ರಿವಿಕ್ರಮನ ಪಾದಾಂಗುಲೀನಖಚಂದ್ರಚಂದ್ರಿಕೆಯನ್ನಾಶ್ರಯಿಸಿ, ತೃಪ್ತನಾಗಿರುವುದರಿಂದ, ಸಂಸಾರಸಂತಾಪವನ್ನು ಪೂರ್ಣವಾಗಿ ಕಳೆದುಕೊಂಡಿರುವನು.

ಭಗವಾನ್ ಶಶಾಂಕನು ಬೆಳಗುವಾಗ ಭಾಸ್ಕರನ ತಾಪವಿರುವುದೇ? ಸ್ಖಲನಾದಿಗಳಲ್ಲಿಯು, ವಿವಶನಾಗಿ 'ಶ್ರೀಹರೇ!' ಎಂದುಚ್ಚರಿಸುವ ನರನ ಹೃದಯಸಿಂಹಾಸನದಿ ಕೂತು, ಅವನ ಪಾಪ ರಾಶಿಯನ್ನು ನಾಶಗೈದು, ಅವನ ಪ್ರೇಮಪಾಶದಿ ಕಟ್ಟಲ್ಪಟ್ಟವನಂತೆ ಬಿಡದಿರುವ ಪರಮ ಪುರುಷನ ಕೃಪಾಪಾತ್ರನೇ ಭಾಗವತೋತ್ತಮನು.

## ೩. ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರರ ಉಪದೇಶ

ವಿದೇಹನು ಕೇಳಿದನು–

ಶ್ರೀಹರಿಯು ಸ್ವರೂಪಸಾಮರ್ಥ್ಯದಿಂದ ಸೃಷ್ಟ್ಯಾದಿಗಳನ್ನು ಮಾಡುವ ಲೀಲೆಯ ಪಾರವನ್ನು ಬ್ರಹ್ಮಾದಿ ಜ್ಞಾನಿಗಳೂ ಮುಟ್ಟಲಾಗುವುದಿಲ್ಲ; ಅದನ್ನು, ಆ ವನಜಾಕ್ಷನ ವಶದಲ್ಲಿರುವ ಜಡ ಪ್ರಕೃತಿಯ ವೈಭವವನ್ನೂ, ನನಗೆ ನಿರೂಪಿಸಿ, ಸಾಂಸಾರಿಕ ತಾಪದಿಂದ ಬೆಂದುನೊಂದು, ಇಂದು ನಿಮ್ಮ ವಚನಾಮೃತಮಂದಾಕಿನಿಯಲ್ಲಿ ಮಿಂದು, ಕುಡಿದೂ, ತೃಪ್ತನಾಗದೆ ಇರುವೆನು.

೩. ಅಂತರಿಕ್ಷನು ಹೇಳಿದನು–

ಶ್ರೀಶನು ಶ್ರೀದೇವಿಯಿಂದ ಕೂಡಿ ಮಹದಹಂಕಾರಾದಿ ಇಪ್ಪತ್ತುನಾಲ್ಕು ತತ್ವಗಳನ್ನು ನಿರ್ಮಿಸಿದನು. ಅವರಲ್ಲಿ ತಾನು ಪ್ರವೇಶಿಸಿ ತತ್ತ್ವಾಭಿಮಾನಿ ದೇವತೆಗಳಿಂದ ಕೂಡಿ, ಬ್ರಹ್ಮಾಂಡವನ್ನು ಸೃಜಿಸಿದನು. ಭೂತಗಳಿಂದ ರಚಿತವಾದ ವಿವಿಧ ದೇಹಗಳಲ್ಲಿ, ಸಾತ್ವಿಕ ರಾಜಸ ತಾಮಸ ಜೀವರನ್ನು ಇಟ್ಟು, ಊರ್ಧ್ವಮಧ್ಯಮಾಧೋಲೋಕಗಳಲ್ಲಿ ನಿಲ್ಲಿಸಿದನು. ಅವರಲ್ಲಿ ಸಾತ್ವಿಕಜೀವರಿಗೆ ತನ್ನ ತತ್ವಜ್ಞಾನವನ್ನು ಉಂಟುಮಾಡಿ, ಮುಕ್ತಿಯನ್ನು ಕೊಡಬೇಕೆಂಬ ಕರುಣೆಯೇ ಹೊರತು ಮತ್ತಾವ ಪ್ರಯೋಜನವೂ ಶ್ರೀಹರಿಗಿಲ್ಲ. ಇಂತು ಪಂಚಭೂತಗಳಿಂದ ಸೃಷ್ಟವಾದ ದೇಹದಲ್ಲಿ ಮನೋನಿಯಂತನಾಗಿ ಒಂದು ರೂಪನು, ಇಂದ್ರಿಯ ನಿಯಂತನಾಗಿ ಹತ್ತು ರೂಪನು ಆಗಿ, ವಿಷಯಸಾರವಾದ ಆನಂದವನ್ನೇ ಭುಜಿಸುತ್ತಾ, ಶ್ರೀಶನು ಸ್ವತಂತ್ರನಾದುದರಿಂದ ದುಃಖಲೇಪವಿಲ್ಲದಿರುವನು. ಅಂತಹ ಪ್ರಭುವನ್ನು ಅಸ್ವತಂತ್ರನಾದ ಜೀವನೆಂದು ತಿಳಿದ ಅನ್ಯಥಾಜ್ಞಾನಿಯು, ಇಲ್ಲಿ ಸಂಸಾರದುಃಖವನ್ನೂ ಕೊನೆಗೆ ತಮೋದುಃಖವನ್ನು ಪೊಂದುವನು.

ಜೀವನು ಪೂರ್ವಕರ್ಮ, ಪ್ರಯತ್ನ, ಸಂಸ್ಕಾರಯುಕ್ತನಾಗಿ, ಇಂದ್ರಿಯಗಳಿಂದ ಕರ್ಮಗಳನ್ನು ಮಾಡಿ, ಆ ಕರ್ಮಫಲವನ್ನು ಹೊತ್ತು, ಅನೇಕ ಯೋನಿಗಳಲ್ಲಿ ತಿರುಗಿ, ದುಃಖಪಡುತ್ತಿರುವನು. ಅಲ್ಲಿ ಪುನಃ ಪಾಪಕರ್ಮಗಳನ್ನೇ ಮಾಡಿ, ಪ್ರಳಯಕಾಲ ಪರ್ಯಂತವೂ ಜನನ ಮರಣಗಳನ್ನು ಹೊಂದುವನು. ಜೀವೇಶ್ವರಾಭೇದ ಜ್ಞಾನಿಗೆ ತಮಸ್ಸಿನಿಂದ ಉದ್ಧಾರವೇ ಇಲ್ಲ.

ಪ್ರಳಯಕಾಲವು ಬರಲು, ಪಂಚಭೂತಗಳು, ಶಬ್ದಾದಿ ತನ್ಮಾತ್ರಗಳು, ಎಲ್ಲವೂ ಮೂಲ ಪ್ರಕೃತಿಯಲ್ಲಿ ಶ್ರೀಹರೀಚ್ಛೆಯಿಂದ, ಲೀನವಾಗಿಬಿಡುವುದು. ಮೊದಲು ನೂರು ವರ್ಷದ ಅನಾವೃಷ್ಟಿಯಿಂದ, ಆಗಿನ ಸೂರ್ಯನ ಪ್ರಚಂಡತಾಪದಿಂದ ಮೂರು ಲೋಕಗಳು ಒಣಗಿ ಬೆಂಡಾಗುವುವು. ಪಾತಾಳತಲದಿ ಇರುವ ಶೇಷಾಂತರ್ಯಾಮಿ ಸಂಕರ್ಷಣನ ಮುಖದಿಂದೆದ್ದ ಪ್ರಳಯಾಗ್ನಿಯು, ವಾಯು ವರ್ಧಿತವಾಗಿ ಪ್ರಪಂಚವನ್ನು ಸುಟ್ಟುಬಿಡುವುದು. ಆಗ ಒಂದು ನೂರು ವರ್ಷಕಾಲ, ಆನೆಯ ಸೊಂಡಿಲಷ್ಟು ದಪ್ಪವಾದ ಧಾರೆಗಳಿಂದ ಮಳೆ ಬರುವುದು; ಭೂಮಿ ಎಲ್ಲವೂ ನೀರಾಗಿಬಿಡುವುದು. ಅಂತೆಯೇ ಸರ್ವಭೂತಗಳು ಲೀನವಾದಾಗ ಬ್ರಹ್ಮಾಂಡ ವರ್ತಿವಿಧಾತನು ಸೂಕ್ಷ್ಮನಾದ ಪರಮಾತ್ಮನನ್ನು ಸೇರುವನು. ಕಟ್ಟಿಗೆಯನ್ನು ಹಾಕದೇ ಬಿಟ್ಟರೆ, ಅಗ್ನಿಯು ಆರಿ, ವ್ಯಾಪ್ತಾಗ್ನಿಯಲ್ಲಿ ಸೇರುವಂತೆ, ಎಲ್ಲ ಭೂತಗಳು ಅವ್ಯಕ್ತದಲ್ಲಿ ಸೇರುವುವು. ನೀರಿನಲ್ಲಿ ಗಂಧಗುಣದಿಂದ ಪೃಥಿವಿಯು, ನೀರು ರಸಗುಣದಿಂದ ಅಗ್ನಿಯಲ್ಲಿಯು, ಅಗ್ನಿಯು ರೂಪಗುಣದಿಂದ ವಾಯುವಿನಲ್ಲಿಯು, ವಾಯುವು ಸ್ಪರ್ಶದಿಂದ ಆಕಾಶದಲ್ಲಿಯು, ಆಕಾಶವು ಶಬ್ದಗುಣದಿಂದ ಸಂಹಾರಮೂರ್ತಿ ನೃಸಿಂಹನಲ್ಲಿಯು ಲಯವಾಗುವುದು. ಇಂದ್ರಿಯ ಮನೋ

ಬುದ್ಧಿಗಳು, ವೈಕಾರಿಕತೈಜಸ ತಾಮಸಾಹಂಕಾರತತ್ವದಲ್ಲಿ ಲೀನವಾಗುವುವು. ಅಹಂಕಾರವು ಮಹತ್ತಿನಲ್ಲಿ ಲೀನವಾಗುವುದು. ಇಂತು ಸೃಷ್ಟಿ ಸ್ಥಿತಿ ಸಂಹಾರ ರೂಪ ಭಗವನ್ಮಹಿಮೆಯನ್ನು ನನಗೆ ನಿರೂಪಿಸಿದೆನು.

ವಿದೇಹರಾಜನು ಕೇಳಿದನು–

ಶ್ರೀಹರಿಯ ಬಂಧಕ ಶಕ್ತಿಯನ್ನು ಇಂದ್ರಿಯಾರಾಮರು ತಿಳಿದು ದಾಟಲಾರರು. ನಮ್ಮಂತಹ ಸ್ಥೂಲಮತಿಗಳು– ನಾನು ನನ್ನದೆಂಬ ದುರ್ಮತಿಯ ಬಿಗಿತದಿಂದ ತಪ್ಪಿಸಿಕೊಂಡು ಪಾರಾಗುವ ಸಾಧನವೆನಿಸುವ ಭಾಗವತ ಧರ್ಮಗಳನ್ನು ನಿರೂಪಿಸಿ.

೪. ಪ್ರಬುದ್ಧನು ಹೇಳಿದನು–

ಈ ಪ್ರಪಂಚದ ಜೀವರು ದಂಪತಿಗಳಾಗಿ, ಸದಾ ದುಃಖಪರಿಹಾರವನ್ನು ಸುಖಪ್ರಾಪ್ತಿಯನ್ನೇ ಕುರಿತು ಆಲೋಚಿಸಿ, ಅನೇಕ ಕರ್ಮಗಳನ್ನು ಮಾಡುವರು. ಆದರೆ ಅವರಿಗೆ ಸುಖವು ದೂರವಾಗುವುದು; ದುಃಖವು ಹೋಗದಿರುವುದು– ಈ ವಿಷಯವನ್ನರಿತು, ಜ್ಞಾನಿಯು ಚಂಚಲವಾದ ವಿತ್ತಗ್ರಹ ಸುತ ಪಶುಗಳಿಂದ ನಿಜವಾದ ಸುಖವಿಲ್ಲವೆಂದರಿತು, ಶ್ರೀಹರಿಭಕ್ತನಾಗಬೇಕು; ಈ ಲೋಕದಂತೆಯೇ ಸ್ವರ್ಗಾದಿಗಳೂ ಅನಿತ್ಯ, ಹೇಯವೆಂದರಿತು ವಿರಕ್ತನಾಗಬೇಕು. ಯುದ್ಧರಂಗದಲ್ಲಿ ಕಾದಾಡುತ್ತಾ ಮಡಿಯುವ ಮಂಡಲಾಧಿಪತಿಗಳನ್ನಂತೆ– ಎದುರಿಲ್ಲದ ದೇವತೆಗಳು ಕರ್ಮಫಲವು ಮುಗಿದೊಡನೆ ಕೆಳಗೆ ಕೆಡಹುವುದರಿಂದ ಜೀವರು ಮತ್ತೆ ಮತ್ತೆ ಹುಟ್ಟಿಸುಯುತ್ತಿರುವರು. ಆದ್ದರಿಂದ ಉತ್ತಮ ಶ್ರೇಯಃಪ್ರಾಪ್ತಿ ಸಾಧನವಾದ ಬ್ರಹ್ಮವಿಚಾರವನ್ನು ಮಾಡುವ ಜೀವರೇ ಬುದ್ಧಿವಂತರು. ವೇದವನ್ನರಿತು ಶ್ರೀಹರಿಭಕ್ತನಗಿ, ವೈರಾಗ್ಯಶಾಲಿಯಾದ ಗುರುವನ್ನಾಶ್ರಯಿಸಿ, ಅವನಲ್ಲಿರುವ ಶ್ರೀಹರಿಯೇ ತನ್ನ ಉದ್ಧಾರಕ ದೈವವೆಂದು ನಂಬಿ, ಕಾಪಾಟ್ಯಾದಿ ಲೋಪವಿಲ್ಲದೆ, ಯಥಾಯೋಗ್ಯವಾಗಿ ಸಚ್ಛಾಸ್ತ್ರಶವಣ ಮನನ ಧ್ಯಾನ ರೂಪ ಬ್ರಹ್ಮ ಜಿಜ್ಞಾಸೆಯನ್ನು ಮಾಡಬೇಕು. ಅವನಲ್ಲಿರುವ ಶ್ರೀಹರಿಯನ್ನು ಮೆಚ್ಚಿಸಿ, ತೋರುವ ಭಾಗವತಧರ್ಮಗಳನ್ನು ಕೇಳು-

ಮೊದಲು ವೈರಾಗ್ಯವಿದ್ದರೇನೇ ಸರ್ವ ಭಾಗವತ ಧರ್ಮಗಳ ಅನುಷ್ಠಾನವು ಸಫಲವಾಗುವುದು. ಆದುದರಿಂದ ದುಷ್ಟಸಂಗವನ್ನು ಬಿಟ್ಟು, ಸತ್ಸಂಗವನ್ನೇ ಮಾಡಬೇಕು. (೧) ಸಕಲಭೂತಗಳಲ್ಲಿಯು ಹಿರಿಯರಲ್ಲಿ ಭಕ್ತಿ, ಸಮರಲ್ಲಿ ಮೈತ್ರಿ, ಅವರಲ್ಲಿ ದಯೆ- ಸಮನಾಗಿ ನಡೆಯಬೇಕು. (೨) ನಿಷ್ಕಾಮರೂಪ ಶೌಚ. (೩) ದೈಹಿಕ ಮಾನಸಿಕ ವಾಚನಿಕ ತಪಸ್ಸು. (೪) ತಿತಿಕ್ಷೆ = ದುಃಖವಿಕಾರ ಹೀನತೆ. (೫) ಮೌನ = ಹರಿಗುಣ ಚಿಂತನೆ. (೬) ಸ್ವಾಧ್ಯಾಯ = ವೇದಾಧ್ಯಯನ. (೭) ಅರ್ಜವ = ತ್ರಿಕರಣ ಶುದ್ಧಿ. (೮) ಬ್ರಹ್ಮಚರ್ಯ = ಪರಮಾತ್ಮ ಗುಣ ವಿಚಾರ ರತಿ. (೯)ಅಹಿಂಸೆ = ಶಾಸ್ತ್ರನಿಷಿದ್ಧ ಹಿಂಸಾಪರಿವರ್ಜನ. (೧೦) ದ್ವಂದ್ವಸಮತೆ. (೧೧) ದೇಶ ಕಾಲಾದಿ ಸರ್ವಾವಸ್ಥೆಗಳಲ್ಲಿ ಶ್ರೀಹರಿ ಸರ್ವೋತ್ತಮತ್ವ ಪರಿವೀಕ್ಷಣ. (೧೨) ಏಕಾಂತವಾಸ ಮತ್ತು ಪ್ರಾಕೃತ ವಿಕಾರರಾಹಿತ್ಯ. (೧೩) ಅನಿಕೇತನ = ಶರೀರ ಪ್ರಾಪಕ ಪ್ರವೃತ್ತಿಕರ್ಮಪರಿತ್ಯಾಗ. (೧೪) ವಲ್ಕಲಾದಿ ಧಾರಣ. (೧೫) ಅಲಂಬುದ್ಧಿ. (೧೬) ವೇದಾದಿ ಸಚ್ಛಾಸ್ತ್ರಗಳಲ್ಲಿ ಶ್ರದ್ಧೆ ಹಾಗೂ ಭಗವತ್ಪ್ರಣೀತವಾದ ಜ್ಯೋತಿಶ್ಶಾಸ್ತ್ರವೇ ಮುಂತಾದ ಇತರ ಶಾಸ್ತ್ರಗಳಲ್ಲಿ ನಂಬಿಕೆ, ದುಷ್ಟಶಾಸ್ತ್ರ ಪರಿವರ್ಜನ. (೧೭) ಮನೋದಂಡ, ವಾಗ್ದಂಡ, ದೇಹದಂಡರೂಪನಿಗ್ರಹ. (೧೮) ಸತ್ಯವಚನ. (೧೯) ಶಮ = ಭಗವನ್ನಿಷ್ಠಾಬುದ್ಧಿ. (೨೦) ದಮ = ಇಂದ್ರಿಯನಿಗ್ರಹ. (೨೧) ಶ್ರೀಕೃಷ್ಣ

ಕಥಾ ಶ್ರವಣ. (೨೨) ಶ್ರೀಹರಿಗುಣಕೀರ್ತನ. (೨೩) ಧ್ಯಾನ. (೨೪) ಶ್ರೀಹರಿಯ ಪರಮಾದ್ಭುತ ಚರಿತೆಯ ಶ್ರವಣಕ್ಕಾಗಿ ಇತರೆಲ್ಲ ವ್ಯಾಪಾರ ಪರಿತ್ಯಾಗ. (೨೫) ಕೃಷ್ಣಶರಣರಾದ ಬ್ರಹ್ಮಾದಿಗಳಲ್ಲಿಯು, ಮನುಜೋತ್ತಮರಾದ ಸ್ತೋತ್ತಮರಲ್ಲಿಯು ಯಥಾಯೋಗ್ಯವಾದ ಭಕ್ತಿ. (೨೬) ಶ್ರೀಹರಿ, ಹರಿಭಕ್ತರ ಪರಿಚರ್ಯೆ. (೨೭) ಭಗವಚ್ಚರಿತವನ್ನು ಕೂತು, ಪ್ರೀತಿಯಿಂದ ಹೇಳಿ ಕೇಳುವ ಕುತೂಹಲ. (೨೮) ಇನ್ನಿತರ ವಿಷಯಗಳಲ್ಲಿಲ್ಲದ ಸುಖವನ್ನು ಸುಜನರ ಸಭೆಯಲ್ಲಿ ಹೊಂದುತ್ತಾ ಕೇಳುತ್ತಾ ಮನೋದಾರ್ಢ್ಯ. (೨೯) ಆತ್ಮಸಮರ್ಪಣ = ತನಗಿಷ್ಟವಾದುದು; ತನಗೆ ಪ್ರಿಯವಾದುದು; ತಾನು ಜಪಿಸಿ, ದಾನವಿತ್ತು, ಯಜ್ಞಮಾಡಿ ಗಳಿಸಿದ ಪುಣ್ಯ; ತನ್ನ ದೇಹ; ತನ್ನ ಪತ್ನೀ ಸುತ ಆಪ್ತರು; ಕೊನೆಗೆ ತನ್ನ ಪ್ರಾಣಗಳು ಇವೆಲ್ಲವೂ ಶ್ರೀಹರಿಯ ಅಧೀನವು– ಶ್ರೀಹರಿಯೇ ಎಲ್ಲದರಕ್ಕಿಂತಲು ಪ್ರಿಯತರನೆಂದು ತಿಳಿದು, ಎಲ್ಲವನ್ನೂ ಶ್ರೀಶನಿಗೆ ಸಮರ್ಪಿಸುವುದು. (೩೦) ಇವು ತ್ರಿಂಶದ್ವಿಧ ಭಾಗವತ ಧರ್ಮಗಳೆಂದು ಪ್ರಖ್ಯಾತವಾಗಿದೆ.

ಭಾಗವತರೊಂದು ಕಡೆ ಕಲೆತು, ಕಲಿತ ಕಲಿಕಲ್ಮಷಹರವಾದ ಭಾಗವತ ಗೀತಾದಿಸಚ್ಛಾಸ್ತ್ರವನ್ನು ಇತರರಿಗೆ ಪೇಳುವರು; ಇತರರಿಂದ ಕೇಳುವರು. ಆಗ ಅವರು ಮೈಮರೆತು, ಭಕ್ತಿರಸವು ಉಕ್ಕಿ ಬರಲು ಆನಂದಬಾಷ್ಪಗಳನ್ನು ಸುರುಸುವರು; ಅವನ ಮೈನವಿರೇಳುವುದು, ರೋದಿಸುವರು; ಕೆಲವರು ಕುಣಿದಾಡುವರು; ಕೆಲವರು ಪಾಡಿ ಪೊಗಳುವರು. ಶ್ರೀಹರಿಯೇ ಗತಿ ಎಂದು ನಂಬಿ, ಅವರು ಪರಮಾನಂದಭರಿತರಾಗುವರು. ಇಂತು ಭಾಗವತ ಧರ್ಮಗಳನ್ನು ಅಭ್ಯಾಸಮಾಡಿ, ಅದರಿಂದ ಪುಟ್ಟಿದ ಭಕ್ತ್ಯುದ್ರೇಕದಿಂದ ಜೀವರು ದುಸ್ತರ ಮಾಯೆಯನ್ನು ದಾಟಿ, ನಾರಾಯಣ ಲೋಕವನ್ನು ಪೊಂದುವನು.

ವಿದೇಹನು ಪ್ರಶ್ನಿಸಿದನು–

ಬ್ರಹ್ಮಾದಿ ಜೀವ ವಿಲಕ್ಷಣನು, ಕಲ್ಯಾಣ ಗುಣಪೂರ್ಣನು ಆದ ಶ್ರೀನಾರಾಯಣನ ಸರ್ವೋತ್ಕರ್ಷತ್ವ ರೂಪಮಹಿಮೆಯನ್ನು ಕೇಳಿ, ತಿಳಿಯಲಿಚ್ಛಿಸುವೆನು. ಅದನ್ನು ತಿಳಿಸಲು ಬ್ರಹ್ಮಜ್ಞಾನಿವರರಾದ ನಿಮ್ಮಿಂದ ಬೇರೇ ಸಮರ್ಥರುಂಟೇ?

೫. ಪಿಪ್ಪಲಾಯನು ಹೇಳಿದನು–

ನರೇಂದ್ರ! ಈ ಜಗತ್ತಿಗೆ ಸೃಷ್ಟಿ ಸ್ಥಿತಿ ಲಯಾದಿಗಳನ್ನು ಮಾಡುತ್ತಾ, ತಾನು ಸೃಷ್ಟಿ ಲಯಾದಿಗಳಿಲ್ಲದವನು; ಜಾಗ್ರತ್ ಸ್ವಪ್ನ ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಪ್ರೇರಕನಾಗಿದ್ದು, ತಾನು ನಿದ್ರಾದಿದೋಷರಹಿತನು; ದೇಹೇಂದ್ರಿಯ ಪ್ರಾಣಮನಃ ಪ್ರವರ್ತಕನಾಗಿದ್ದು, ತಾನು ಕರ್ಣಾದೀಂದ್ರಿಯ ವಿದೂರನು; ಮುಕ್ತಲೋಕ ಶರಣ್ಯನು, ಲಕ್ಷ್ಮೀಪತಿಯು ಆದ ನಾರಾಯಣನೇ ಸರ್ವೋತ್ತಮನು. ಈ ಲಕ್ಷಣಗಳು ಮತ್ತಾರಲ್ಲಿಯು ಇಲ್ಲವೆಂದು ತಿಳಿ! ಮನೋಮಾನಿ ರುದ್ರನಾಗಲಿ, ವಾಗಭಿಮಾನಿನಿ ಸರಸ್ವತಿ ಆಗಲಿ, ಚಕ್ಷುರ್ದೇವ ಸೂರ್ಯನಾಗಲಿ, ಜೀವಮಾನಿ ಬ್ರಹ್ಮನಾಗಲಿ, ಪ್ರಾಣಾಧಿಪ ವಾಯುವಾಗಲಿ, ಆ ಶ್ರೀಹರಿಯನ್ನು, ಪ್ರಧಾನಾಗ್ನಿಯನ್ನು ಅವನ ಪುತ್ರರಾದ ಇತರಾಗ್ನಿ ದೇವತೆಗಳು ಅವನ ಪ್ರಸಾದವಿಲ್ಲದೆ ತಿಳಿಯಲಾರದಂತೆ, ಸಾಕಲ್ಯೇನ ತಿಳಿಯಲಾರದಿರುವರು. ನಿರ್ದೋಷ ವೇದಮಾನಿನಿಯಾದ ಮಹಾಲಕ್ಷ್ಮಿಯು ಕೂಡ ಅವನನ್ನು ಸ್ಫುಟವಾಗಿ ಹೇಳಿ ತಿಳಿಸಲಾರದಿರುವಳು; ಅವನು ಲೌಕಿಕಾನಂದಾದಿ ಗುಣ ವಿಲಕ್ಷಣ ಆನಂದಾದಿಗುಣ ಸ್ವರೂಪನಾಗಿರುವನೆಂದು, ಪರಿಶೇಷದಿಂದ ಎಲ್ಲ ಇತರ ವಸ್ತುಗಳನ್ನು ನಿರಾಕರಿಸಿ, ಶ್ರೀದೇವಿಯು

- ಇಂತಹನಲ್ಲ, ಇಂತಹನಲ್ಲ ಎಂದು ಜಡಜೀವ ವಿಲಕ್ಷಣನಾದ ತನ್ನ ಪತಿಯನ್ನು ವೇದ ವಚನಗಳಿಂದ ಪೊಗಳಿ ತಿಳಿಸುತ್ತಿರುವಳು.

ಇಂತಹ ಜಡಜೀವ ವಿಲಕ್ಷಣನಾದ ಶ್ರೀಹರಿಯನ್ನು ಕೆಲವರು ಸತ್ವರಜಸ್ತಮೋಗುಣ ರೂಪ ಪ್ರಕೃತಿಯೆಂಬುವರು. ಕೆಲವರು ಅವನನ್ನು ವಾಯುನೆಂಬುವರು. ಕೆಲವರು ಬ್ರಹ್ಮನೆಂಬುವರು. ಕೆಲವರು ಅವನೇ ಜೀವನೆಂಬುವರು. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಂದ ಬರುವ ಸುಖದುಃಖ ರೂಪನೆನ್ನುವರು. ಮತ್ತೆ ಕೆಲವರು ಕಾರ್ಯಕಾರಣರೂಪಿ ಎಂಬುವರು. ಇವರೆಲ್ಲರೂ ಅಜ್ಞಾನಿಗಳೇ ಸರಿ! ಜಡವೇ ಶ್ರೀಹರಿ ರೂಪವೆನ್ನುವರು ಜಡರಲ್ಲವೇ? ಪೂರ್ಣಜ್ಞಾನಾನಂದ ಬಲ ಸಮನ್ವಿತನು, ಸ್ವತಂತ್ರನು ಆದ ಶ್ರೀಹರಿಯೇ ಅಲ್ಪಜ್ಞಾನಾದಿಯುತನು ಅಸ್ವತಂತ್ರನು ಆದ ಜೀವನೆಂಬುವರು ಮಿಥ್ಯಾಜ್ಞಾನಿಗಳಲ್ಲವೇ? ರಾಜನ್! ಕಾರ್ಯವೇ ಹರಿ ಎಂದರೆ, ಕಾರ್ಯ ಭೂತವಾದ ಜಗತ್ತಿಗೆ ಜನನಮರಣಾದಿಗಳಿವೆ. ಆದುದರಿಂದ ಶ್ರೀಹರಿಗೂ ಜನನ ಮರಣಾದಿ ಗಳಿವೆ ಎನ್ನಬಹುದೇ? ಸ್ವತಂತ್ರನಾದುದರಿಂದ ಅವನಿಗೆ ಜನನ ಮರಣಾದಿಗಳಿಲ್ಲ. ಅಪ್ರಾಕೃತ ನಾದುದರಿಂದ ದುಃಖಜರಾಮಯಾದಿ ದೋಷಗಳಿಲ್ಲ. ಅವನು ಜನನ ಮರಣ ಕ್ಷುತ್ಪಿಪಾಸಾ ರಾಗದ್ವೇಷಾದಿದೋಷಯುತರಾದ ದೇಹಧಾರಿ ಜೀವರಲ್ಲಿ ಅಂತರ್ಯಾಮಿಯಾಗಿದ್ದರೂ, ನಿರ್ವಿಕಾರನು, ನಾಶಾದಿ ದೋಷರಹಿತನು ಆಗಿರುವನು. ಕಣ್ಣಿಗೆ ಕಾಣದಿರುವನಾದುದರಿಂದ ಅವನಿಲ್ಲವೆನ್ನಲಾಗದು. ದರ್ಶನಾದಿ ಶಕ್ತಿಪ್ರದನಾಗಿ ಪ್ರತ್ಯಕ್ಷನಾಗಿ ತೋರುವ ಪ್ರಾಣನಂತೆ, ಶ್ರೀಹರಿಯು ಪ್ರಾಣನಿಗೂ ಶಕ್ತಿಪ್ರದನಾಗಿ ಜ್ಞಾನಿಜನರಿಗೆ ಪ್ರತ್ಯಕ್ಷನಾಗಿರುವನು. ಪ್ರಾಣನಂತೆ ತಾನು ಅನೇಕೇಂದ್ರಿಯಗಳ ಪ್ರೇರಕನಾಗಿದ್ದು, ಪ್ರಾಣವಂದ್ಯನೂ ಆಗಿರುವನು.

ಅನೇಕ ಯೋನಿಗಳಲ್ಲಿ ಹುಟ್ಟುವ ಜೀವನಿಗೆ ದೇಹಾಂತರ ಪ್ರಾಪ್ತಿಯ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲ. ಅವನು ಪ್ರಾಣಾಧೀನನಾಗಿ ಪ್ರಾಣಪತಿಯಾದ ಶ್ರೀಹರೀಚ್ಛೆಯಿಂದ ಬಂದ ಶರೀರವನ್ನು ಪೊಂದುವನು. ಶಬ್ದಾದಿವಿಷಯ ವ್ಯಾಪಾರವು ನಿಂತುಹೋಗುವ ಗಾಢಸುಷುಪ್ತಿ ದಶೆಯಲ್ಲಿ ಜೀವನಿಗೆ ದೇಹಾದ್ಯಭಿಮಾನವೂ ಸುಪ್ತವಾಗುವುದು. ಇಂದ್ರಿಯ ದೇವತೆಗಳು ಜೀವರಂತೆ ಗಾಢನಿದ್ರೆಯಲ್ಲಿ ಬೀಳದೆ, ಈಷತ್ ಸುಪ್ತಿಯನ್ನು ಪೊಂದಿ ಶ್ರೀಮುಖ್ಯಪ್ರಾಣಾಧೀನ ರಾಗುವರು. ಅಂಡಜ, ಸ್ವೇದಜ, ಉದ್ಭಿಜ, ಜರಾಯುಜರೆಂಬ ನಾಲ್ಕು ವಿಧವಾಗಿರುವ ಸರ್ವ ಜೀವರು ಮುಖ್ಯಪ್ರಾಣಾಧೀನರಾಗಿ ಜನನಮರಣಾದಿಗಳನ್ನು, ನಿದ್ರಾಪ್ರಬೋಧಗಳನ್ನು ಪೊಂದುತ್ತಿರುವರು. ಮುಖ್ಯಪ್ರಾಣನು ನಿದ್ರಾದಿ ಸರ್ವದೋಷರಹಿತನಾಗಿ ಶ್ರೀಹರಿಯನ್ನು ಸದಾ ಬಿಡದೆ ಆಶ್ರಯಿಸಿರುವನು. ಅಂತಹ ಶ್ರೀಹರಿಯ ಅನುಗ್ರಹವಿಲ್ಲದಿರೆ, ಜೀವನಿಗೆ ನಿದ್ರೆಯಿಂದ ಎಚ್ಚರವೂ ಆಗಲಾರದು. ಆದುದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿ.

ಅರವಿಂದನಾಭ ಪಾದಾರವಿಂದ ಸೇವನದಿಂದ ದಿನ ದಿನ ಪ್ರವರ್ಧಮಾನವಾಗುವ ಭಕ್ತಿಯ ಪ್ರಭಾವದಿಂದ ಮನಸ್ಸಿನ ಅವಿದ್ಯಾಕಾಮಕರ್ಮಗಳೆಂಬುವ ಮಲವು ನಶಿಸಿ, ಆ ಶ್ರೀಹರಿಯ ಪ್ರಸಾದದಿಂದ ಜೀವನು, ಒಳ್ಳೆಯ ಕಣ್ಣಿನಲ್ಲಿ ಮೂಡುವ ಸೂರ್ಯಪ್ರಕಾಶದಂತೆ ತನ್ನ ಮನಫಲಕ ದಿಂದ ಮೂಡಿದ ಶ್ರೀಶನ ಅಪರೋಕ್ಷವನ್ನು ಪಡೆದು ಮುಕ್ತನಾಗುವನು.

ವಿದೇಹನು ಪ್ರಶ್ನಿಸಿದನು–

ಜೀವನ ಮನಃಶುದ್ಧಿಗೆ ಕಾರಣವಾದ ಕರ್ಮಯೋಗವನ್ನು ನಮಗೆ ತಿಳಿಸಿ ಕೊಡಿ! ಕರ್ಮಫಲ ವನ್ನಿಲ್ಲೇ ಕಳೆದುಕೊಂಡು ಮೋಕ್ಷವನ್ನು ಪಡೆಯುವ ಬಗೆ ಹೇಗೆ? ಹಿಂದೆ ನಮ್ಮ ತಂದೆಯ

ಸಭೆಗೆ ಬಂದಿದ್ದ ಬ್ರಹ್ಮಸುತ ಸನಕಾದಿಗಳನ್ನು ಇದನ್ನೇ ಕೇಳಿದೆನು. ಆದರೂ ಅವರು ಅದೇಕೋ ನನ್ನ ಪ್ರಶ್ನೆಗೆ ಉತ್ತರವನ್ನೇ ಕೊಡಲಿಲ್ಲ!

೬. ಆವಿರ್ಹೋತ್ರನು ಹೇಳಿದನು–

ಈ ಪ್ರಶ್ನೆಯು ಜ್ಞಾನಿಗಳಿಗೂ ದುಷ್ಪರಿಹಾರವೆಂದು ತಿಳಿಯಲು ಸನಕಾದಿಗಳು ನಿನಗೆ ಉತ್ತರವೀಯಲಿಲ್ಲ. ಇರಲಿ ಕೇಳು! ಕರ್ಮ, ಅಕರ್ಮ, ವಿಕರ್ಮಗಳನ್ನು ವೇದಬಹಿರ್ಮುಖ ಪುರುಷರು ತಿಳಿಯಲಾರರು. ವೇದವಿಚಾರ ಕುಶಲರಾದವರು ಅದನ್ನು ತಿಳಿದಿರುವರು. ಶ್ರೀಹರಿ ಪ್ರಸಾದವಿಲ್ಲದವರಿಗೆ ವೇದವಿಚಾರ ಮಾಡಿದಾಗಲೂ, ಸರಿಯಾದ ಜ್ಞಾನವು ಪುಟ್ಟಲಾರದು. ಎಲ್ಲ ವೇದಗಳೂ ಶ್ರೀಹರಿಪ್ರತಿಪಾದಕವಾಗಿದೆ. ಪರೋಕ್ಷ ವಚನಗಳಿಂದ ನಿರೂಪಿಸಲ್ಪಟ್ಟಿರುವುದ ರಿಂದ, ವೇದಪ್ರತಿಪಾದ್ಯವು ಶ್ರೀಹರಿಮಹಿಮೆ ಅಲ್ಲವೆಂದು ತಿಳಿದು, ಕರ್ಮಗಳನ್ನು ಸ್ವರ್ಗಾದಿ ಫಲಗಳಿಗಾಗಿ ಮಾಡಿ, ಮೂಢರು ಕೆಡುತ್ತಿರುವರು. ವೇದೋಕ್ತ ಕರ್ಮಗಳೆಲ್ಲವೂ ಶ್ರೀಹರಿ ಸಮರ್ಪಿತವಾಗಲೆಂದೇ ನಿರೂಪಿಸಲ್ಪಟ್ಟಿರುವುವು. ಚಿಕಿತ್ಸಿತವಾಗಿ ಶುದ್ಧವಾದ ದ್ರವ್ಯವು ಔಷಧ ವೆನಿಸಿ, ಮೊದಲು ಅಶುದ್ಧವಾಗಿರುವಾಗ ತನ್ನ ಸೇವನೆಯಿಂದ ಪುಟ್ಟಿದ್ದ ರೋಗವನ್ನು ಕಳೆವಂತೆ, ಕರ್ಮವು ಮಧ್ವೇಶಾರ್ಪಣವಾಗಿ ಸಕಲ ಕರ್ಮ ದುಷ್ಫಲವನ್ನು ನಾಶಮಾಡುವುದು.

ಆದುದರಿಂದ ಅಕರ್ಮವನ್ನು ಮಾಡದೆ, ಸುಕರ್ಮವನ್ನು ಬಿಡದೆ, ವಿಕರ್ಮದ ಗೊಡವೆಗೆ ಪೋಗದೆ, ಶ್ರೀಹರಿಗೆ ಕರ್ಮಫಲವನ್ನರ್ಪಿಸುವ ನರನು ಜ್ಞಾನಯೋಗ್ಯನಾಗುವನು.

ಸರ್ವಪೂಜಿತನು ಇಷ್ಟಪ್ರದನು ಆದ ಶ್ರೀನಾರಾಯಣನ ಸರ್ವೋತ್ತಮತ್ವಜ್ಞಾನವಿಲ್ಲದವನು ಏನು ವೇದೊಕ್ತ ಕರ್ಮಗಳನ್ನು ಮಾಡಿದರೂ, ಆ ಪುಣ್ಯದಿಂದ ಭ್ರಷ್ಟನಾಗಿ ಅತೀವ ದುಃಖ ವನ್ನು ಪೊಂದುತ್ತಾನೆ. ಅವನು ಶ್ರೀಹರಿಭಕ್ತನಲ್ಲವಾದುದರಿಂದ ವಿಷಯಲಂಪಟನಾಗಿ ಕೊನೆಗೆ ಅಂಧಂತಮವನ್ನೂ ಹೊಂದುತ್ತಾನೆ. ನಶ್ವರವಾದ ಫಲವನ್ನೀವ ಕರ್ಮಯೋಗಗಳಿಗೆ ಈಶ್ವರಾ ರ್ಪಣವೇ ದಿವ್ಯೌಷಧವಾಗಿದೆ. ಆದುದರಿಂದ ವೇದೋಕ್ತ ಕರ್ಮವನ್ನು ಫಲಾಸಕ್ತನಾಗದೆ ನಡೆಸಿ, ಬಂದ ಫಲವನ್ನು ಶ್ರೀಹರಿಗರ್ಪಿಸಿದವನು ಆನಂದರೂಪ ಮೋಕ್ಷವನ್ನು ಹೊಂದುವನು. ವೇದದಲ್ಲಿ ಕೆಲವೆಡೆ ಕರ್ಮಫಲವು, ಗುಡಜಿಹ್ವಿಕಾ ನ್ಯಾಯದಿಂದ, ಕರ್ಮಾನುಷ್ಠಾನದಲ್ಲಿ ಶ್ರದ್ಧೆ ಹುಟ್ಟಿಸಲು ಹೇಳಲ್ಪಟ್ಟಿದೆ.

ಅಜ್ಞಾನದೂರನಾಗಬೇಕೆಂದವನು ಪಂಚರಾತ್ರಾದಿ ತಂತ್ರಶಾಸ್ತ್ರದಲ್ಲಿ ಹೇಳಿರುವಂತೆ ಶ್ರೀಹರಿ ಯನ್ನು ಪೂಜಿಸಬೇಕು. ಗೊತ್ತಿಲ್ಲದವನು ಯೋಗ್ಯ ಆಚಾರ್ಯನಿಂದ ಕಲಿತು, ಶಾಸ್ತ್ರಸಂಪ್ರದಾಯ ವನ್ನನುಸರಿಸಿ, ನಿತ್ಯವೂ ಶ್ರೀಹರಿಪೂಜೆಯನ್ನು, ತನಗಿಷ್ಟವಾದ ಪ್ರತಿಮಾದ್ಯಧಿಷ್ಠಾನದಲ್ಲಿ ಮಾಡಬೇಕು.

ಶುಚಿರೂಪನಾಗಿ ದೇವನಿಗೆ ಸಂಮುಖನಾಗಿ ಕೊಡಬೇಕು. ಪ್ರಾಣಾಯಾಮಾದಿಗಳಿಂದ ಶರೀರಶುದ್ಧಿಯನ್ನು ಸಂಪಾದಿಸಿ, ಅವ್ಯಗ್ರನಾಗಿ, ಅಂಗನ್ಯಾಸಕರನ್ಯಾಸಗಳನ್ನು ಮಾಡಿ ಪೂಜೆಯ ನ್ನಾರಂಭಿಸುವುದು. ಪ್ರತಿಮೆ, ಹೃದಯ, ಕ್ಷಿತಿ, ಮೊದಲಾದ ಅಧಿಷ್ಠಾನಗಳಲ್ಲಿ ಶ್ರೀಹರಿಯನ್ನು ಚಿಂತಿಸಿ, ಪಾದ್ಯಾದಿಗಳನ್ನು ಮೂಲ ಮಂತ್ರದಿಂದ ಸಮರ್ಪಿಸುವುದು. ಮೂರ್ತಿಯಲ್ಲಿ ಸಾಂಗೋ ಪಾಂಗ ಪರಿವಾರ ಸಮನ್ವಿತನಾದ ಶ್ರೀಹರಿಯನ್ನು ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನ, ವಸ್ತ್ರ, ಗಂಧ, ಭೂಷಣ, ಅಕ್ಷತ, ಮಾಲ್ಯ, ಧೂಪ, ದೀಪ, ನೈವೇದ್ಯ, ಮಂಗಳಾರ್ತಿಕಾ, ಮಂತ್ರಪುಷ್ಪ, ಕ್ಷಮಾಯಾಚನೆ, ನಮಸ್ಕಾರ, ಸರ್ವಸಮರ್ಪಣಗಳೆಂಬ ಷೋಡಶೋಪಚಾರ

ಗಳನ್ನು ರಚಿಸುವುದು. ತನ್ನ ಬಿಂಬನಾದ ವಾಸುದೇವನನ್ನು ಪ್ರತಿಮೆಯಲ್ಲಿ ಧ್ಯಾನಿಸಿ, ಪೂಜಿಸಿ, ಶ್ರೀಹರಿನಿರ್ಮಾಲ್ಯವನ್ನು ಶಿರಸಾ ಧರಿಸುವುದು. ಉದ್ವಾಸನೆಯ ನಂತರ ಅಗ್ನಿ, ಸೂರ್ಯ, ಜಲ, ಪ್ರತಿಮಾದಿಗಳಲ್ಲಿರುವ ಸ್ವಾಮಿಯೇ ತನ್ನ ಅಂತರ್ಯಾಮಿ ಎಂದು ಪೂಜಿಸಿದವನು ಸರ್ವಪಾಪ ಮುಕ್ತನಾಗುವನು.

## ೪. ದ್ರುಮಿಲನ ಉಪದೇಶ

ವಿದೇಹರಾಜನು ಕೇಳಿದನು–

ಸ್ವೇಚ್ಛಾವತಾರನಾಗಿ ಹರಿ ಮಾಡಿದ ಶುಭಕರ್ಮಗಳನ್ನು, ಮುಂದೆ ಮಾಡುವ ಕರ್ಮಗಳನ್ನು ಕೇಳಬೇಕೆನಿಸಿದೆ. ದಯಮಾಡಿ ಹೇಳಿ!

೭. ದ್ರುಮಿಲನು ಹೇಳಿದನು–

ರಾಜನ್! ಅನಂತನ ಅನಂತಗುಣಗಳನ್ನು ಸಂಪೂರ್ಣವಾಗಿ ವರ್ಣಿಸಿಬಿಡುವೆನೆಂಬುವನು ಮೂಢನೇ ಸರಿ! ಭೂಮಿಯಲ್ಲಿರುವ ಧೂಳೀಕಣಗಳನ್ನು ಬಹು ಕಾಲದ ಪ್ರಯತ್ನದಿಂದ ಎಣಿಸಲಾಗಬಹುದಾಗಲಿ, ಸಕಲಶಕ್ತಿಪ್ರೇರಕನಾದ ಶ್ರೀಹರಿಯ ಗುಣರತ್ನಗಳನ್ನು ಯಾರಿಗೂ– ಬ್ರಹ್ಮನಿಗೂ– ರಮೆಗೂ ಎಣಿಸಿ ಮುಗಿಸಲಾಗುವುದಿಲ್ಲ.

ತ್ರಿಗುಣ ಮಹದಹಂಕಾರ ಪಂಚಭೂತ ದಶೇಂದ್ರಿಯ ಮಾತ್ರಾ ಪ್ರಾಣಗಳೆಂಬ ಇಪ್ಪತ್ತು ನಾಲ್ಕು ತತ್ವಗಳಿಂದ ರಚಿಸಲ್ಪಟ್ಟ ಈ ಬ್ರಹ್ಮಾಂಡದಲ್ಲಿ, ಸ್ಥಿತಿಯನ್ನು ಮಾಡಲು ಶ್ರೀಹರಿಯು 'ಪುರುಷ' ಎಂಬ ರೂಪದಿಂದ ಪ್ರವೇಶಿಸಿದನು. ಮತ್ತೆ ಬ್ರಹ್ಮದೇವನಲ್ಲಿ 'ಪುರುಷ' ರೂಪದಿಂದಲು ಜೀವರಲ್ಲಿ 'ಪುರುಷ' ರೂಪದಿಂದಲು ಪ್ರವಿಷ್ಟನಾದನು. ಅವನಿಗೆ ಜನನಮರಣ ರೂಪ ಸಂಸಾರವಿಲ್ಲ. ಭುವನತ್ರಯವೆಲ್ಲವೂ ಶ್ರೀಹರಿಯ ಪುರುಷಶರೀರದ ಆಧಾರದಿಂದ ನಿಂತಿದೆ. ಜೀವರ ಜ್ಞಾನ ಕರ್ಮೇಂದ್ರಿಯಗಳು ಶ್ರೀಹರಿಯ ದಿವ್ಯರೂಪಗಳಿಂದ ಪ್ರೇರಿತವಾಗಿ ವಿಷಯ ಸ್ವೀಕಾರವನ್ನು ಮಾಡುತ್ತಿವೆ. ಬಲ, ಓಜಸ್ಸು, ಸೌಂದರ್ಯ, ಪ್ರಯತ್ನಾದಿಗಳೆಲ್ಲವೂ ಶ್ರೀಹರಿಯಿಂದಲೇ! ತ್ರಿಗುಣಗಳು ಅವನ ಸೃಷ್ಟಿ ಸ್ಥಿತಿ ಲಯ ಕಾರ್ಯಸಾಧಕಗಳು, ಶತಾನಂದನಾದ ಬ್ರಹ್ಮನಲ್ಲಿ ಬ್ರಹ್ಮನೆಂಬ ರೂಪದಿಂದಿದ್ದು ರಜೋಗುಣ ಕಾರ್ಯಸೃಷ್ಟಿಯನ್ನು, ಸದಾಶಿವನೆನಿಸಿದ ರುದ್ರನಲ್ಲಿ ರುದ್ರನೆಂಬ ರೂಪದಿಂದ ತಮೋಗುಣ ಕಾರ್ಯಸಂಹರಣವನ್ನು, ತಾನಾಗಿ ಅನಿತರಸಾಧ್ಯವಾದ ಪಾಲನವನ್ನು ಸತ್ತ್ವಗುಣದಿಂದ ಮಾಡುವ ಶ್ರೀರಮಣನಲ್ಲದೇ, ಕಾಲಕಾಲದಿ ಪ್ರಜರ ಸೃಷ್ಟಿಸ್ಥಿತಿಗಳನ್ನು ನಡೆಸುವ ದೊರೆಗಳಿನ್ನಾರೂ ಇಲ್ಲ. ಅವನೇ ಸದಾ ಗೋಬ್ರಾಹ್ಮಣಹಿತನಾಗಿ ಧರ್ಮವನ್ನು ರಕ್ಷಿಸಲು ಅನೇಕ ಅವತಾರಗಳನ್ನು ಧರಿಸುತ್ತಿರುವನು.

ಅವನೆಲ್ಲ ರೂಪಗಳು ಪೂರ್ಣಜ್ಞಾನಾನಂದಮಯಗಳು, ಧರ್ಮಪ್ರಜೇಶನಿಗೆ ದಕ್ಷನ ಮಗಳಾದ ಮೂರ್ತಿದೇವಿಯಲ್ಲಿ, ಶ್ರೀಶನು ನರ, ನಾರಾಯಣ, ಹರಿ, ಕೃಷ್ಣ, ಎಂಬ ನಾಲ್ಕು ರೂಪದಿಂದವತರಿಸಿದನು. ನರನು ಶೇಷನು; ಅವನಲ್ಲಿ ಸಂಕರ್ಷಣಾವೇಶವಿದೆ ಎಂದು ತಿಳಿ! ನಾರಾಯಣ ಋಷಿ ಮಹಿಮೆಯನ್ನು ಕೇಳು! ಆ ಋಷಿವರನು ನರನಿಂದ ಕೂಡಿ ಬದರಿಕಾವನದಲ್ಲಿ ಮುಕ್ತಿಸಾಧನವಾದ ತಪಃಪ್ರಕಾರವನ್ನು ಸುಜನರಿಗೆ ತಿಳಿಸಿ ಕೊಡಲು, ತಪಸ್ಸನ್ನು ಮಾಡುತ್ತಿದ್ದನು. ಅವನು ಇಂದ್ರಪದವಿಯನ್ನು ಬಯಸಿ ತಪವನ್ನಾಚರಿಸುತ್ತಿರುವನೆಂದು ತಿಳಿದು, ಇಂದ್ರನು

ಕಾಮ, ವಸಂತ, ಭೃಂಗ, ಕೋಕಿಲ, ಗಣದಿಂದ ಕೂಡಿದ ರಂಭಾದಿ ಅಪ್ಸರೆಯರನ್ನು, ಅವನ ತಪೋವಿಘ್ನವನ್ನು ಮಾಡಲು ಕಳಿಸಿದನು.

ಮಂದಮಾರುತವು ಸುಗಂಧವಹವಾಗಿ ಬೀಸಿತು. ವಸಂತವು ಋತುಶೋಭೆಯಿಂದ ಮನೋಹರವಾಯಿತು. ಕೋಗಿಲೆಗಳು ಹಾಡಿದವು. ದುಂಬಿಗಳು ಝೇಂಕಾರಗೈದವು. ರಂಭಾದಿಗಳು ವಿಲಾಸದಿಂದ ಕುಣಿದಾಡಿದವು. ಸಮಯವನ್ನರಿತು ಕಾಮನು ಪೂಬಾಣದಿಂದ ನಾರಾಯಣರ್ಷಿಯ ಹೃದಯವನ್ನು ಹೊಡೆದನು. ಆ ಸ್ವಾಮಿಯ ಮಹಾಮಹಿಮೆಯನ್ನು, ಇಂದ್ರಪರಿವಾರವು ಮರೆತಂತಿರಲು, ಇಂದ್ರನ ಗರ್ವವನ್ನು ಮುರಿಯಲು ಮನಮಾಡಿ ಶ್ರೀನಾರಾಯಣನು ನಗುನಗುತ್ತಾ ಅವರಿಗಿಂತೆಂದನು–

ಮದನ! ವಸಂತ! ಬನ್ನಿ! ಭಯಪಡಬೇಡಿ! ಅಚ್ಚರಿ ಬೇಡ! ಅಪ್ಸರೆಯರೂ ಬರಲಿ! ನಮ್ಮ ಆಶ್ರಮವಿಂದು ದೇವಾಗಮನದಿಂದ ಕೃತಪೂರ್ಣವಾಯಿತು. ನಮ್ಮ ಆತಿಥ್ಯವಿದಿಗೋ ಸಿದ್ಧವಿದೆ.

ಇಂತು ಅಭಯವಚನವನ್ನಿತ್ತ ದೇವದೇವನ ಮಾತಿಗೆ ನಾಚಿಕೆಪಟ್ಟು, ಬಂದು ಶಿರಬಾಗಿ ನಮಿಸಿ, ಕಾಮಾದಿಗಳಿಂತೆಂದರು–

ಪ್ರಭೋ! ನಿರ್ವಿಕಾರನಾಗಿ ನೀನಿರುವುದೆಂದರೆ ಆಶ್ಚರ್ಯವಲ್ಲ. ನಿನ್ನ ಪಾದಾರವಿಂದ ಭಜಕರ ದಾಸರೂ ಕೂಡ, ನಮ್ಮ ಚೇಷ್ಟೆಗಳೆಂಬ ಬಲೆಗೆ ಸಿಗದಿರುವರು.

ನಿನ್ನನ್ನು ಭಜಿಸುವ ಜನರ ತಪವನ್ನು ಕೆಡಿಸಲು ದೇವತೆಗಳು ಬಹು ವಿಘ್ನಗಳನ್ನೊಡ್ಡುವರು. ಆ ವಿಘ್ನಗಳನ್ನು ಮುಖ್ಯಪ್ರಾಣನು ನಿರಾಘಾತವಾಗಿ ದಾಟುವನು; ಅವನು ಮೃತ್ಯುವಿನನ್ನೂ ಲೆಕ್ಕಿಸದೆ ಅಮೃತನೆನಿಸಿರುವನು. ಅವನ ಅನುಚರರಾಗಿ ನಿನ್ನನ್ನು ಭಕ್ತಿಯಿಂದ ಭಜಿಸುವವರ ಹವಿರಾದಿ ದ್ರವ್ಯಗಳನ್ನೂ ಪ್ರೀತಿಯಿಂದ ಸ್ವೀಕರಿಸಿ ನೀನು ಅವರ ವಿಘ್ನಗಳನ್ನು ನಿವಾರಿಸಿ, ಅವರಿಗೆ ಮುಕ್ತಿಯನ್ನು ಕೊಡುವೆ. ಹಸಿವು, ನೀರಡಿಕೆ, ಶೀತೋಷ್ಣವಾತ ವರ್ಷಗಳು, ಜೈಹ್ವ್ಯ ಚಾಪಲ್ಯ, ಔಪಸ್ಥ್ಯ ಸುಖಚಿಂತೆ ಮೊದಲಾದ ಸಾಂಸಾರಿಕ ವಿಷಯ ಸಮುದ್ರವನ್ನು ದಾಟಿದವರುಂಟು; ಆದರೆ ನಿನ್ನ ಅನುಗ್ರಹವಿಲ್ಲದೆ ಆ ಶುಷ್ಕ ಯೋಗಿಗಳು ಕ್ರೋಧವಶರಾಗಿ ಕೆಡುವರು. ಕ್ರೋಧಕ್ಕೆ ಪ್ರತಿಕ್ರಿಯೆಯನ್ನು ಮಾಡಿ ಶಾಂತರಾಗಲು ಶಕ್ತಿ ಸಾಲದೆ ಅವರು ತಪಃಕ್ಲೇಶವನ್ನು ಮಾತ್ರ ಹೊಂದುತ್ತಿರುವರು.

ಶ್ರೀನಾರಾಯಣರ್ಷಿಯು ಆಗ ತನ್ನ ತೊಡೆಯಿಂದ ಅದ್ಭುತರೂಪಸಂಪನ್ನೆಯರಾದ ಸಾವಿರಾರು ತರುಣೀರತ್ನವನ್ನು ಸೃಜಿಸಿ ತೋರಿದನು. ಆ ಪದ್ಮಗಂಧಿಯರ ರೂಪೌದಾರ್ಯ ಶ್ರೀವಿಲಾಸಗಳಿಗೆ ಮೋಹಿತರಾಗಿ, ಕಾಮಾದಿಗಳು ನಿಷ್ಚೇಷ್ಟರಾಗಿರಲು, ಶ್ರೀಶನು ನಗುತ್ತಾ ಅವರಿಗಿಂತೆಂದನು–

ಇವರಲ್ಲಿ ಒಬ್ಬ ಸುಂದರಿಯನ್ನು ಮಾತ್ರ ಸ್ವೀಕರಿಸಿ. ಅವಳು ಸ್ವರ್ಗಭೂಷಣವೆನಿಸುವಳು. ಇದೇ ನಮ್ಮ ಕಾಣಿಕೆ.

ಕಾಮಾದಿಗಳು ಊರ್ವಶಿಯನ್ನು ಕರೆದುಕೊಂಡು, ಸ್ವರ್ಗವನ್ನು ಸೇರಿ, ನಾರಾಯಣರ್ಷಿಯ ಪರಾಕ್ರಮವನ್ನು ನಿರೂಪಿಸಿದರು. ಇಂದ್ರನಿದನ್ನು ಕೇಳಿ ವಿಸ್ಮಿತನಾದನು.

ಶ್ರೀಶನು ಹಂಸರೂಪಿಯಾಗಿ ಬ್ರಹ್ಮನಿಗೆ ಆತ್ಮಜ್ಞಾನೋಪಾಯವನ್ನು ನಿರೂಪಿಸಿದನು. ಸನತ್ಕುಮಾರನಾಗಿ ಬ್ರಹ್ಮಚರ್ಯವನ್ನು ನಡೆಸಿ ನೋಡಿಸಿದನು; ನಮ್ಮ ತಂದೆ ಋಷಭನಾಗಿ ಅವಧೂತಚರ್ಯೆಯನ್ನು ನೋಡಿಸಿದನು; ಹಯವದನನಾಗಿ ದೈತ್ಯನನ್ನು ಕೊಂದು ವೇದಗಳನ್ನು

ಉದ್ಧರಿಸಿದನು. ಮತ್ಸ್ಯನಾಗಿ ಪ್ರಳಯಕಾಲದಲ್ಲಿ ವೈವಸ್ವತಮನುವಿನನ್ನು ಋಷಿಗಳನ್ನು ರಕ್ಷಿಸಿದನು; ವರಾಹನಾಗಿ ದೈತ್ಯನನ್ನು ಸಂಹರಿಸಿ ಭೂಮಿಯನ್ನುದ್ಧರಿಸಿದನು; ಕೂರ್ಮನಾಗಿ ಮಂದರವನ್ನು ಧರಿಸಿದನು; ಹರಿ ಎನಿಸಿ ಕರಿರಾಜನನ್ನು ಮಕರಿಯ ಬಾಯಿಯಿಂದ ಬಿಡಿಸಿದನು; ತಾಪಸಮನುವಾಗಿ ಸ್ತುತಿಸುವ ನಿಸ್ಸಂಗ ಮುನಿಗಳನ್ನು ಸಂಸಾರಕೂಪದಿಂದುದ್ಧರಿಸಿದನು; ವೃತ್ರವಧೆಯಿಂದ ಲೋಕನಿಂದಿತನು, ಕರ್ತವ್ಯಮೂಢನು ಆಗಿದ್ದ ಇಂದ್ರನ ಬ್ರಹ್ಮಹತ್ಯಾ ಭಯವನ್ನು, ಸರೆ ಸಿಕ್ಕ ಅಪ್ಸರೆಯರ ಭಯವನ್ನು, ತಂದೆಯ ಪೀಡೆಗೊಳಗಾದ ಪ್ರಹ್ಲಾದನ ಭಯವನ್ನು ನರಸಿಂಹನಾಗಿ ಕಳೆದು, ಭಕ್ತರನ್ನು ಕಾಪಾಡಿದನು. ಶ್ರೀಶನು ದೇವಾಸುರ ಕದನಗಳಲ್ಲಿ ಅಸುರಜನರನ್ನು ಮರ್ದಿಸಿ ದೇವಸುಜನರನ್ನು ಸಲಹಿದನು. ವಾಮನನಾಗಿ ಬಲಿಯಿಂದ ರಾಜ್ಯವನ್ನು ಬೇಡಿ ಅದಿತಿಪುತ್ರರಿಗೆ ಕೊಟ್ಟನು. ಪರಶುರಾಮನಾಗಿ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯನ್ನು ಮಾಡಿ ಕ್ಷತ್ರಿಯಕುಲವನ್ನು ನಾಶಪಡಿಸಿದನು. ದಶರಥರಾಮನಾಗಿ ಸಮುದ್ರವನ್ನು ಬಂಧಿಸಿ ದಶಕಂಧರನನ್ನು ಕೊಂದನು. ಭೂಭಾರವನ್ನು ಹರಿಸಲು ಯದುಕುಲದಲ್ಲಿ ಅವತರಿಸಿ, ಇತರ ದೇವದುಷ್ಕರ ಕಾರ್ಯಗಳನ್ನು ನಿರ್ವಹಿಸಿ, ಸುಜನರನ್ನೆಲ್ಲ ಸಂರಕ್ಷಿಸುವನು. ಅಯೋಗ್ಯರು ಯಜ್ಞಯಾಗಾದಿಗಳನ್ನು ಮಾಡುತ್ತಿರಲು ಬುದ್ಧನಾಗಿ ಅವರಿಗೆ ವೇದ ವಿರುದ್ಧ ಪಾಷಂಡ ಮಾರ್ಗಗಳನ್ನು ಬೋಧಿಸಿ, ಅವರನ್ನು ತದ್ಯೋಗ್ಯ ತಮಸ್ಸಿಗೆ ಕೆಡುಹುವನು. ಕಲ್ಕಿಯಾಗಿ ಕ್ಷಿತಿಮಂಡಲವನ್ನು ಆಳುವ ವೃಷಲಾದಿ ಧರ್ಮದ್ರೋಹಿ ರಾಜರನ್ನು ಸಂಹರಿಸಿ, ಪುನಃ ಧರ್ಮವನ್ನು ಸಂಸ್ಥಾಪಿಸುವನು. ಜಗತ್ಪತಿಯ ಉತ್ತಮ ಕೀರ್ತಿಯು ಆದ ಶ್ರೀನಿವಾಸನ ಪಾವನ ಚರಿತವನ್ನು ನಿನಗೆ ನಿರೂಪಿಸಿದನು.

## ೫. ಚಮಸ, ಕರಭಾಜನರ ಉಪದೇಶ

ವಿದೇಹನು 'ಬ್ರಹ್ಮಜ್ಞಾನಿಗಳೇ! ದುಷ್ಟಾಶೆಯಿಂದ ಕಾಮದಾಸರಾಗಿ ಶ್ರೀಹರಿಯನ್ನು ಭಜಿಸದಿರುವ ತಾಮಸಗೆ ಆಗುವ ಲೋಕಗಳಾವುವು?' ಎಂದು ಕೇಳಿದನು.

೮. ಚಮಸನು ಹೇಳಿದನು–

ಪುರುಷೋತ್ತಮನ ಮುಖಬಾಹೂರುಪಾದಗಳಿಂದ ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು, ಶಮದಮ, ವೀರ್ಯ, ಆರ್ಜವ, ಸೇವಾ, ನಿಷ್ಕಾಪಟ್ಯರೂಪ ವಿವಿಧ ಕರ್ಮಗಳು ಬೇರೆ ಬೇರೆಯಾಗಿ ಸೃಷ್ಟವಾದವು. ಇಂತು ಸಕಲಲೋಕ ಜನಕನಾದ ಶ್ರೀರಮಣನನ್ನು ಪೂಜಿಸದೆ ಅವಮಾನಿಸುವವರು ಪುಣ್ಯಲೋಕಗಳನ್ನು ಪೊಂದಲಾರರು. ಅವರಿಗೆ ಅಂಧಂತಮವೇ ಗತಿ. ಅಂತಹವರ ಲಕ್ಷಣವನ್ನು ಕೇಳು.

ಹರಿಕಥೆ ಎಂದರೆ ಬಲುದೂರ; ಹರಿಪೂಜೆ ಎಂದರೆ ತಲೆನೋವು; ಹರಿದ್ವೇಷವೆಂದರೆ ಹಬ್ಬ! ಇಂತಹ ದುರ್ಮಾರ್ಗರನ್ನು ದೂರದಲ್ಲಿಡುವುದು ಲೇಸು. ಕೆಲವರು ವೇದಾಧಿಕಾರವಿಲ್ಲದ ಸ್ತ್ರೀ ಶೂದ್ರಾದಿಗಳು ಯೋಗ್ಯರಾದರೆ ಅವರಲ್ಲಿ ದಯೆತೋರಿ ಸುಜನರು ಅವರಿಗೆ ಜ್ಞಾನೋಪಾಯವಾದ ಶ್ರವಣಾದಿಗಳನ್ನಿತ್ತು ಅವರನ್ನು ಕಾಪಾಡಬೇಕು. ವಿಪ್ರರೇ ಆಗಲಿ! ಶ್ರೌತವಿಚಾರಯೋಗ್ಯರೇ ಆಗಲಿ! ಹರಿಭಕ್ತಿರಹಿತರಾದರೆ ಅಂತಹವರಿಗೆ ಮೋಕ್ಷವಾಗುವುದಿಲ್ಲ. ಹರಿಭಕ್ತಿಸಹಿತರಾದ ಕ್ಷತ್ರಿಯ, ವೈಶ್ಯ, ಶೂದ್ರಾದಿಗಳೂ ಯೋಗ್ಯರಾಗಿ ಮೋಕ್ಷವನ್ನು ಪೊಂದಿರುವರು.

ಸುಮ್ಮನೆ ವಾದಮಾಡಲು ವೇದವನ್ನು ಓದಿದವರಿಗೆ, ಬುಧರ ಪಾದವನ್ನು ನಂಬದವರಿಗೆ ಶ್ರೀಹರಿಲೋಕದ ದಾರಿಯಾದರೂ ದೊರೆಯುವುದೇ? ಹರಿಭಕ್ತ ಲಕ್ಷಣ ಮುಖ್ಯ ಫಲವನ್ನು ಬಿಟ್ಟು, ಸ್ವರ್ಗಾದಿ ಕ್ಷುದ್ರ ಫಲಾಶೆಯಿಂದ ಯಜ್ಞಾದಿ ಕರ್ಮಗಳನ್ನು ಮಾಡುವವರು ಮೂಢರೇ ಸರಿ! ಅವರಿಗೆ ಕರ್ಮ ಮಾಡುವ ರೀತಿಯಾದರೂ ತಿಳಿದಿದೆಯೇ? ಇಲ್ಲ. ಆ ಗರ್ವಿಷ್ಠರು ಪಂಡಿತಮ್ಮನ್ಯರು ಶ್ರೀಶನ ಪಾದಮೂಲ ಸೇವೆಯ ಭಾಗ್ಯವನ್ನು ಪಡೆಯಲು ಪಾತ್ರರಲ್ಲ.

ಪಶುಹಿಂಸೆಯನ್ನು ಮಾಡಿ, ಸುರಾಮಾಂಸಲೋಲುಪರಾಗಿ, ದಂಧಾಚಾರದಿಂದ ಯಜ್ಞಗಳನ್ನು ನಡೆಸುವ ಪಾಪಿಗಳಿಗೆ ಅಚ್ಯುತಪ್ರಿಯರನ್ನು ಕಂಡರೆ ಆಗದೆ. ಅನ್ಯೋನ್ಯ ಸಂಪದಭಿಲಾಷಿಗಳಾಗಿ ಅವರು ವಂದಿಗಳಂತೆ ಮೈಥುನ್ಯಪರ ರಾಜಧೂರ್ತರ ಗುಣಗಳನ್ನು ಪ್ರಬಂಧಗಳ ರೂಪದಿಂದ ಪೊಗಳುವರು. ಗುರುದಕ್ಷಿಣೆಯನ್ನಿತ್ತು ಗುರುಪ್ರಸಾದವನ್ನು ಪಡೆಯದೆ ಅವರ ವಿದ್ಯಾಭ್ಯಾಸ, ಹರಿನಿವೇದಿತವಲ್ಲದ ಅವರ ಮೃಷ್ಟಾನ್ನದಾನ, ಹರಿಭಕ್ತಿರಹಿತವಾದ ಅವರ ಜ್ಞಾನ-ಎಲ್ಲವೂ ವ್ಯರ್ಥವೇ ಸರಿ! ಸಂಪತ್ತು, ಅಣಿಮಾದಿ ಸಿದ್ಧಿ ಸತ್ಕುಲಪ್ರಸೂತಿ, ವಿದ್ಯೆ, ದಾನ, ರೂಪ, ಬಲ ಕರ್ಮಾನುಷ್ಠಾನಗಳಿಂದ ಸುಜನರು ವಿನಯ ಸಂಪನ್ನರಾದಂತೆ, ಕುಜನರು ಆಗದಿರುವರು. ಅವರು ಗರ್ವಿತರಾಗಿ, ಕಣ್ಣು ಕಾಣದೆ ಶ್ರೀಹರಿಯನ್ನು ಶ್ರೀಹರಿಭಕ್ತರನ್ನು ಕೂಡ ತಿರಸ್ಕರಿಸಿ ಕೆಡುವರು.

ಸರ್ವಶರೀರಧಾರಿಗಳಲ್ಲಿಯು ಅಂತರ್ಯಾಮಿಯಾಗಿದ್ದು, ಅಭೀಷ್ಟ ಸುಖದಾನವನ್ನು ಮಾಡುತ್ತಿರುವ ಶ್ರೀಹರಿಯ ಮಹಿಮೆಗೆ ಕಿವಿಗೊಡದೆ ಆ ಇಂದ್ರಿಯಲಾಲಸರು ಲೋಕವಾರ್ತೆಯಿಂದಲೋ, ಮನೋರಥ ಪ್ರಯಾಣಗಳಿಂದಲೋ ಕಾಲವನ್ನು ವ್ಯರ್ಥವಾಗಿ ಕಳೆಯುವರು. ಅವರಿಗೆ ಮೈಥುನ, ಭೋಜನ, ಪಾನಗಳಲ್ಲೇ ರತಿ. ಅವು ಜಂತು ಸಾಮಾನ್ಯನಿಗಿವೆ; ಆದ್ದರಿಂದ ಅವರು ಪಶುಗಳೇ ಸರಿ. ವಿಪ್ರನಿಗೆ ಅರಾಗದಿಂದ ಪ್ರವೃತ್ತಿಯು ಹೇಳಲ್ಪಟ್ಟದೆ; ಆದ್ದರಿಂದ ಅವನು ಪಶುವಿನಂತೆ ವಿಷಯಲೋಲುಪನಾಗದೆ ಗೃಹಧರ್ಮಗಳಲ್ಲಿ ಯಥಾಯೋಗ್ಯವಾಗಿ ರತನಾಗಿದ್ದು, ಎಲ್ಲವೂ ಶ್ರೀಹರಿಪೂಜೆ ಎಂದು ತಿಳಿಯಬೇಕು. ಧನವೆಂಬ ವೃಕ್ಷದಲ್ಲಿರುವುದೊಂದೇ ಫಲ; ಅದು ಧರ್ಮವೇ ಆಗಿದೆ. ಆ ಧರ್ಮದಿಂದ ವಿಜ್ಞಾನಸಹಿತವಾದ ಜ್ಞಾನವು ಲಭಿಸುವುದು. ಅಂತಹ ವಿಜ್ಞಾನದಿಂದ ಮುಕ್ತಿಯೂ ಸಿಗುವುದು. ಇಂತು ಮೋಕ್ಷಸಾಧನವಾಗಬಹುದಾದ ಧನವನ್ನು ಗೃಹದಲ್ಲಿ ದಾರಾಸುತರಿಗೂ ಸ್ವಶರೀರದ ಪೋಷಣೆಗೂ ಮಾತ್ರ ಉಪಯೋಗಿಸಿ, ಸಂಸಾರಮಗ್ನರಾಗಿರುವ ಮೂಢರು ತಮ್ಮನ್ನು ನುಂಗಲು ಬರುತ್ತಿರುವ ಕಾಲವೆಂಬ ಹೆಬ್ಬಾವಿನ ದುರಂತವೀರ್ಯವನ್ನು ಕಾಣದೆ ಕುರುಡರಾಗಿರುವರು. ಇಂತಹವರು ಅಸುರರೇ ಅಲ್ಲವೇ? ದೇವತೋದ್ದೇಶದಿಂದ ಪಶ್ವಾಲಂಭನ, ಘ್ರಾಣಭಕ್ಷಾದಿಗಳು ವಿಹಿತವಾಗಿವೆ. ವಿಹಿತೇತರ ಹಿಂಸೆಯು ವಿಪ್ರನಿಗೆ ಸರ್ವಥಾ ವರ್ಜನೀಯವಾಗಿದೆ. ಅಂತೆಯೇ ಸಂತತಿಗಾಗಿ ಸಂಭೋಗವು ವಿಹಿತವಾಗಿ, ವಾಮದೇವ ಯಜ್ಞವೆನಿಸಿದೆ. ವೇದವಿಹಿತವಾದುದೆಂತಹದೆಂಬ ಪರಿಜ್ಞಾನವಿಲ್ಲದ ದುಷ್ಟರು, ನರಮಾಂಸದ ರುಚಿಕಂಡ ಹುಲಿಗಳಂತೆ, ಕೇವಲ ಹಿಂಸಾಪ್ರಿಯರಾಗಿ ಮಾಡಿದ ಯಜ್ಞದಿಂದ, ಅವರು ನರಕದಲ್ಲಿ ಯಜ್ಞಹತ ಪಶುಗಳ ಬಾಯ ತುತ್ತಾಗುವುದೇ ತತ್ವ ಬೇರೆ ಫಲವಿಲ್ಲ. ತನ್ನ ಕಾಯದಲ್ಲಿಯು, ಇತರ ಶರೀರಗಳಲ್ಲಿಯೂ, ಇರುವ ಶ್ರೀಹರಿಗೆ ಭೇದವಿಲ್ಲ. ಅವನು ಸ್ವತಂತ್ರನು ಎಂದು ತಿಳಿಯದೆ, ದುಷ್ಟರು ಶ್ರೀಹರಿಯನ್ನು ಪ್ರೀತಿಸದಿರುವರು. ದಾರಾ ಸುತಾದಿ ಸಹಿತವಾದ ಶರೀರದಲ್ಲಿ ನಾನು ನನ್ನದೆಂದು, ಅವರ ಸಾವನ್ನೂ ಕಾಣದೆ,

ಶಾಶ್ವತವೆಂದು ತಿಳಿದು, ಅವರು ನರಕಾದ್ಯನರ್ಥ ಭಾಜನರಾಗುವರು. ಯಥಾರ್ಥ ಜ್ಞಾನವಿಲ್ಲದ ಪಂಡಿತಮ್ಮನ್ಯಮಾನರು ಧರ್ಮಾರ್ಥಕಾಮಗಳೇ ಸಂಪಾದನೀಯವೆಂದು ತಿಳಿದು ಮೋಕ್ಷದೂರ ರಾಗಿ ನರಕದಲ್ಲಿ ಬೀಳುವರು. ಹರಿದ್ವೇಷಿಗಳಿಗೆ, ನಾನೇ ಬ್ರಹ್ಮನೆಂಬ ಮಿಥ್ಯಾಜ್ಞಾನಿಗಳಿಗೆ, ತಮಸ್ಸೇ ಗತಿಯಾಗುವುದು. ತಾವು ಕಷ್ಟಪಟ್ಟು ಸಂಪಾದಿಸಿದ ಮನೆ, ಮಕ್ಕಳು ಮಡದಿ, ಮಿತ್ರರು ಮೊದಲಾದುವನ್ನಿಲ್ಲೇ ಬಿಟ್ಟು, ಅವರು ಕೊನೆಗೆ ದುಃಖ ಪೂರ್ಣವಾದ ತಮಸ್ಸನ್ನೇ ಹೊಂದು ವರು. ರಾಜಸರು ಫಲಕಾಮನೆಯಿಂದ ಯಜ್ಞಗಳನ್ನು ಮಾಡಿ, ಪುಣ್ಯದಿಂದ ಬಂದ ಸುರಲೋಕ ಸುಖವನ್ನುಂಡು, ಪಾಪದಿಂದ ನರಕದುಃಖವನ್ನು ಅನುಭವಿಸಿ, ಸದಾ ಸಂಸಾರಸ್ಥಿತರಾಗಿ, ಹುಟ್ಟಿ ಸಾಯುತ್ತಿರುವರು.

ವಿದೇಹನು ಪ್ರಶ್ನಿಸಿದನು–

ವಿಪ್ರವರರೇ! ಯಾವ ಕಾಲದಲ್ಲಿ ಭಗವಂತನು ಯಾವ ರೂಪದಿಂದ ಪೂಜಿತನಾಗುವನು. ಅವನ ವಿವಿಧ ನಾಮರೂಪಗಳನ್ನು, ಪೂಜಾವಿಧಾನವನ್ನು ಯುಗಾನುಸಾರವಾಗಿ ನಿರೂಪಿಸಿ!

೯. ಕರಭಾಜನನು ಹೇಳಿದನು–

ಕೃತ ತ್ರೇತಾ ದ್ವಾಪರ ಕಲಿಯುಗಗಳಲ್ಲಿ ಶ್ರೀಹರಿಯು ನಾನಾರೂಪವಾಗಿ, ನಾನಾ ಭಕ್ತರಿಂದ ನಾನಾವಿಧ ಪೂಜೆಗೊಂಡು, ತಕ್ಕಫಲವನ್ನವರಿಗೆ ನೀಡುತ್ತಿರುವನು.

ಕೃತಯುಗದಲ್ಲಿ ಅವನು ಶುಕ್ಲವರ್ಣನು, ಚತುರ್ಬಾಹುವಿಲಸಿತನು, ಜಟಾಧರನು, ವಲ್ಕ ಲಾಂಬರನು, ಕೃಷ್ಣಾಜಿನ ಯಜ್ಞೋಪವೀತಾಕ್ಷಮಾಲಾ ದಂಡಕಮಂಡಲುಧರನು ಆಗಿರುವನು. ಅವನನ್ನು ಶಾಂತರು, ನಿರ್ವೈರರು, ಸಮಬುದ್ಧಿಗಳು, ಸಹೃದಯರು ಆದ ಅಧಿಕಾರಿ ಜೀವರು ಹಂಸ, ಸುಪರ್ಣ, ವೈಕುಂಠ, ಧರ್ಮ, ಯೋಗೇಶ, ಅಮಲ, ಈಶ್ವರ ಪರಮಾತ್ಮನೆಂಬ ನಾಮ ಗಳಿಂದ, ಗುಣಧ್ಯಾನಮಾಡಿ ಪೂಜಿಸುವರು.

ತ್ರೇತಾಯುಗದಲ್ಲಿ ಶ್ರೀಶನು ರಕ್ತವರ್ಣನು, ತ್ರಿಗುಣಿತ ಮೇಖಲನು ಸುಖಮಯ ಕೇಶನು, ಸ್ರುಕ್ ಸ್ರುವಾದಿಧರನು ಆಗಿ, ವೇದಪ್ರತಿಪಾದ್ಯನಾಗಿರುವನು. ಸರ್ವದೇವಪ್ರಧಾನನಾದ ಅವನ ಪ್ರೀತಿಗಾಗಿ ಜನರು ನಾನಾ ಯಜ್ಞಗಳನ್ನು ಮಾಡುವರು. ವಿಷ್ಣು, ಯಜ್ಞ, ಪೃಶ್ನಿಗರ್ಭ, ಸರ್ವ ದೇವ, ಉರುಕ್ರಮ, ವೃಷಾಕಪಿ, ಜಯಂತ, ಉರುಗಾಯನೆಂಬ ರೂಪಗಳಿಂದ ಶ್ರೀನಾರಾಯಣನು ಯಜ್ಞಫಲಪ್ರದನಾಗಿರುವನು.

ದ್ವಾಪರದಲ್ಲಿ ಶ್ಯಾಮವರ್ಣನಾದ ಶ್ರೀರಾಮನನ್ನು ಪೂಜಿಸುವರು. ಪೀತಾಂಬರನು, ಶ್ರೀವತ್ಸಾದಿ ಸರ್ವಲಕ್ಷಣಲಕ್ಷಿತನು, ಮಹಾರಾಜ ಸುಂದರವೇಷನು, ಆದ ಶ್ರೀಹರಿಯನ್ನು ವೈದಿಕತಾಂತ್ರಿಕವಿಧಾನದಿಂದ ಪೂಜಿಸಿ ಸೇವಿಸುವರು. ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಸರ್ವಭೂತಪತಿಯಾದ ನಾರಾಯಣ ಋಷಿಯನ್ನುಪಚರಿಸಿ ಧನ್ಯರಾಗುವರು.

ಕಲಿಯುಗದಲ್ಲಿ ಕೃಷ್ಣವರ್ಣನಾದ ಕೃಷ್ಣನನ್ನು ಸಪರಿವಾರವಾಗಿ, ಸಂಕೀರ್ತನಪ್ರಾಯವಾದ ಯಜ್ಞಗಳಿಂದ ಪೂಜಿಸುವ ಸುಜನರು ಇಂತು ಧ್ಯಾನಿಸುವರು.

ಸರ್ವಾಪದುದ್ಧಾರಕವು, ಸರ್ವಾಭೀಷ್ಟಪ್ರದವು, ತೀರ್ಥ ಜನ್ಮಭೂಮಿಯು, ಮಂಗಲ ಧಾಮವು ಶಿವವಿರಂಚನುತವು, ಶರಣಾಗತ ಜನರಕ್ಷಕವು, ಭಕ್ತಜನಭವಸಾಗರಪೋತವು ಆದ ನಿನ್ನ ಚರಣಾರವಿಂದಗಳಿಗೆ ವಂದಿಸುವೆವು. ಹೇ ರಾಮಚಂದ್ರ! ಸುರರು ಬೇಡಲರ್ಹವಾದ ಮಹಾಸಾಮ್ರಾಜ್ಯವನ್ನು ತಂದೆಗಾಗಿ ಪರಿತ್ಯಜಿಸಿ, ಅರಣ್ಯದಲ್ಲಿ ನೀನು ಪ್ರಿಯಳು ಕೋರಿದ

ಮಾಯಾ ಹರಿಣವನ್ನು ಹಿಂಬಾಲಿಸಿ ಹೋದ ನಿನ್ನ ಚರಣಾರವಿಂದಗಳಿಗೆ ಪುನಃ ಪುನಃ ವಂದಿಸುತ್ತಿರುವೆವು.

ಇಂತು ಯುಗಾನುರೂಪವಾಗಿ ನಾನಾ ರೂಪವಾಗಿ ಶ್ರೀಶನು ಮನುಜನ ಸೇವೆಯನ್ನು ಸ್ವೀಕರಿಸಿ, ಅವರ ಭಕ್ತಿಗೆ ಮೆಚ್ಚಿ, ಅವರಿಗೆ ಸರ್ವಶ್ರೇಯಸ್ಸನ್ನು ದಯಪಾಲಿಸುವನು. ಯಾವ ಯುಗದಲ್ಲಿ ಪುಟ್ಟಿದವನು ಅದರ ಹಿಂದಿನ ಯುಗದ ಅವತಾರ ರೂಪಗಳಲ್ಲಿ ತನ್ನ ಗುರುವು ಪ್ರೀತಿಯಿಂದ ಹೇಳಿಕೊಟ್ಟ ರೂಪವನ್ನು, ಅಥವಾ ನೃಸಿಂಹವ್ಯಾಸಾದಿ ಗುರೂಪದಿಷ್ಟ ರೂಪವನ್ನು ಉಪಾಸಿಸುವವನು, ಶ್ರೀಮದಾನಂದತೀರ್ಥರು ಯುಗತ್ರಯದಲ್ಲಿ ಅವತರಿಸಿ, ಹೇಳಿ ಉಪದೇಶಿಸಿದ ರಾಮಕೃಷ್ಣ ವೇದವ್ಯಾಸ ರೂಪಗಳನ್ನು ಉಪಾಸಿಸುವವನು, ಸರ್ವಶ್ರೇಯಃಪಾತ್ರನಾಗುವನು.

ಕಲಿಯುಗದಲ್ಲಿ ಸಂಕೀರ್ತನದಿಂದಲೇ ಪುಣ್ಯಸೌಲಭ್ಯವಿರುವುದೆಂದರಿತು, ಸಾರಗ್ರಾಹಿ ಬುದ್ಧಿವಂತರು ಕಲಿಯುಗವನ್ನು ಮೆಚ್ಚುವರು. ಸಂಸಾರಾಟವಿಯಲ್ಲಿ ಭ್ರಮಿಸುವ ನರನಿಗೆ ವೈಕುಂಠಾದಿ ಹರಿಮಂದಿರದಲ್ಲಿ ಆನಂದವಾಗಿರುವುದಕ್ಕಿಂತ ಹೆಚ್ಚಾದ ಲಾಭವು ಈ ಮನುಜ ದೇಹದಿಂದ, ಮತ್ತೊಂದಿಲ್ಲ. ಅಂತಹ ಮೋಕ್ಷ ಸಾಧನವಾದ ಸಂಕೀರ್ತನ ಸೌಲಭ್ಯವನ್ನು ಕಂಡು ಕೃತಯುಗದ ಜನರು ಕೂಡ ಕಲಿಯುಗದಲ್ಲಿ ಹುಟ್ಟಬೇಕೆಂದು ಕೋರುವರು. ನಾರಾಯಣ ಪರಾಯಣರಾದ ನಾರದ ಪ್ರಹ್ಲಾದ ಪ್ರಮುಖ ಭಾಗವತರು ಕಲಿಯುಗದಲ್ಲಿ ಪುಟ್ಟುವರು. ದ್ರುಮಿಲದೇಶದಲ್ಲಿ ಹೆಚ್ಚಿಗೆ ಭಾಗವತರ ಜನ್ಮವಾಗುವುದು. ತಾಮ್ರಪರ್ಣೀ, ಕೃತಮಾಲಾ, ಪಯಸ್ವನೀ, ಕಾವೇರೀ, ನೇತ್ರಾವತೀ, ತುಂಗಭದ್ರಾ, ಕೃಷ್ಣಾ, ಗೋದಾ ಮೊದಲಾದ ನದೀತೀರದ ಜನರು ತಜ್ಜಲಸ್ನಾನಪಾನಾದಿಗಳಿಂದ ಪೂತರಾಗಿ ಪ್ರಾಯಃ ಕೃಷ್ಣಭಕ್ತರಾಗಿರುವರು.

ರಾಜನ್! ಸರ್ವಪ್ರಕಾರದಿಂದ ಶ್ರೀಹರಿಯ ಶುಭಚರಣ ಸಮಾಶ್ರಯಣವನ್ನು ಮಾಡಿದ ನರನು ದೇವ, ಋಷಿ, ಪಿತೃ, ಭೂತ, ಮನುಜ ಋಣಗಳಿಂದ ಮುಕ್ತನಾಗಿರುವನೆಂದೇ ತಿಳಿ! ಅವನಿಗೆ ನರಕಾದ್ಯನರ್ಥವು ಎಂದಿಗೂ ಆಗಲಾರದು. ಭಗವದಧೀನನೆಂದರಿತು ಭಕ್ತನಾಗಿ ಭಗವಂತನ ಪಾದಪದ್ಮವನ್ನು ಭಜಿಸುವ ನರನು, ಬಲವದದೃಷ್ಟಪ್ರೇರತನಾಗಿ, ಒಂದು ವೇಳೆ ಪಾಪವನ್ನು ಮಾಡಿದ್ದರೂ ತನ್ನನ್ನು ಪರಿವಾರ ದೇವತಾಗಣವನ್ನು ಮರೆಯದೆ ಪೂಜಿಸುವ ಅವನ ಪಾಪವನ್ನು ಕಳೆದು, ಶ್ರೀಶನು ಅವನಿಗೆ ಸದ್ಗತಿಯನ್ನಿತ್ತು ಸಲಹುವನು.

ಇಂತು ಭಾಗವತ ಧರ್ಮಗಳನ್ನು ಕೇಳಿದ ನಿಮಿರಾಜನು, ಯಜ್ಞವು ಮುಗಿಯಲು, ಅವಧೂತ ನವಕವನ್ನು ಪೂಜಿಸಿದನು. ಆ ಮಹಾತ್ಮರು ಎಲ್ಲರೂ ನೋಡುತ್ತಿದ್ದಂತೆ ಅಂತರ್ಹಿತರಾದರು. ನಿಮಿಯು ಅವರು ನುಡಿದಂತೆ ಭಾಗವತ ಧರ್ಮಗಳನ್ನು ನಡೆಸಿ ಉತ್ತಮ ಲೋಕವನ್ನು ಪೊಂದಿದನು.

ವಸುದೇವ! ನೀನಾದರೂ ಮಹಾನುಭಾವನು, ಭಗವದ್ಭಕ್ತನೂ ಆಗಿರುವೆ. ಈ ಧರ್ಮಗಳನ್ನು ಅನುಷ್ಠಿಸು! ನಿನಗೆ ಮೋಕ್ಷವಾಗುವುದು. ನೀವೀರ್ವರು ಮಾಡಿದ ಪುಣ್ಯವು ಅನಂತವಾಗಿದೆ. ಅಂತೆಯೇ ನಿಮಗೆ ಶ್ರೀಹರಿಯೇ ಮಗನಾಗಿರುವನು! ನಿಮ್ಮ ಕೀರ್ತಿ ಜಗವೇ ತುಂಬಿ ನಿಂತಿದೆ. ಶ್ರೀಕೃಷ್ಣನು ಮಗನೆಂದು ಅವನನ್ನಪ್ಪಿ, ಅವನಿಂದ ಕೂಡಿ ಮಾತಾಡಿ, ಕೂತು, ಉಂಡು, ನಕ್ಕು ನಲಿದಾಡಿ, ಅವನಿಗಾಗಿ ಜೀವಿಸಿ, ಅವನ ದೆಶೆಯಿಂದ ಸುಖಪಟ್ಟು, ಅವನವರೆನಿಸಿ, ಅವನಲ್ಲೇ ಮನವಿಟ್ಟ ನೀವೇ ಧನ್ಯರು! ಶಿಶುಪಾಲ ಪೌಂಡ್ರ ಸಾಲ್ವ ಪ್ರಮುಖ ರಾಜರು, ಅವನಲ್ಲಿ ದ್ವೇಷಬುದ್ಧಿಯನ್ನು ಮಾಡಿದರೂ, ಅವನ ಗತಿವಿಲಾಸ ವಿಲೋಕನಗಳನ್ನೇ ಚಿಂತಿ

ಸುತ್ತಾ, ಭಕ್ತರಾಗಿದ್ದ ಸುಜೀವರು ಸದ್ಗತಿಯನ್ನು, ದ್ವೇಷಯುತರಾದ ದೈತ್ಯರು ತಮಸ್ಸನ್ನು ಪೊಂದಿದರು. ಜೀವದ್ವಯ ಸನ್ನಿವೇಶಯುತರಾದವರಲ್ಲಿ ತನ್ನ ಭಕ್ತರನ್ನು ಅಸುರಾವೇಶದಿಂದ ಬಿಡಿಸಿ ಯೋಗ್ಯಗತಿಯನ್ನು ಕೊಟ್ಟ ಶ್ರೀಹರಿಯು ಸಂತತ ಭಕ್ತರಾದ ನಿಮಗೆ ಸದ್ಗತಿಯನ್ನೀಯ ದಿರುವನೇ? ಸರ್ವಸ್ವಾಮಿಯಾದ ಕೃಷ್ಣನನ್ನು ಮಗನೆಂದು ತಿಳಿಯಬೇಡ! ವಸುದೇವ! ನಾಶರಹಿತ ನಾದ ನಾರಯಣನು ತನ್ನ ಪರಮ ಪ್ರಭಾವವನ್ನು ಮರೆಮಾಚಿ, ಮಾನವನಂತೆ ತೋರುತ್ತಿರು ವನೆಂದು ತಿಳಿ! ಭೂಭಾರಭೂತದೈತ್ಯರಾಜಸಂಹಾರಕನು, ಸಜ್ಜನೋದ್ಧಾರಕನು, ಭೂಗೋದ್ವಿ ಜಾನಂದ ಸಂಧಾಯಕನು, ತ್ರಿಲೋಕಯಶಃಪೂರಕನು ಆದ ಶ್ರೀಕೃಷ್ಣನಿಗೆ ನಮಸ್ಕರಿಸುವೆನು.

ಶ್ರೀಶುಕನು ಹೇಳಿದನು–

ನಾರದನ ವಚನಾಮೃತವನ್ನು ಪಾನಮಾಡಿ, ದೇವಕೀವಸುದೇವರು ತಮ್ಮ ಮನದ ಅಜ್ಞಾನ ವನ್ನು ಕಳೆದುಕೊಂಡು, ಆಶ್ಚರ್ಯಾನಂದಭರಿತರಾದರು. ಈ ಪುಣ್ಯೇತಿಹಾಸವನ್ನು ಶ್ರದ್ಧೆಯಿಂದ ಹೇಳಿದವರು, ಕೇಳಿದವರು, ಪಠಿಸಿದವರು, ಸಕಲಪಾಪದೂರರಾಗಿ, ಸ್ವಯೋಗ್ಯ ಮುಕ್ತಿಯನ್ನು ಪೊಂದುವರು.

## ೬. ವಿರಿಂಚ ಪ್ರಾರ್ಥನೆ – ಭಗವದ್ವಚನ

ಬಾದರಾಣಿಯು ಹೇಳಿದನು–

ಶ್ರೀಹರಿಗೆ ಜಯವಾಗಲಿ! ಬ್ರಹ್ಮದೇವನು, ಸನಕಾದಿ ಸುತರಿಂದಲೂ, ಮರೀಚ್ಯಾದಿ ಪ್ರಜಾ ಪತಿಗಳಿಂದಲು ಕೂಡಿ, ದ್ವಾರಕೆಗೆ ಬಂದನು; ವಸುರುದ್ರಾದಿತ್ಯ, ಪ್ರಭು, ವಿಶ್ವಾಶ್ವಿನ, ಸಾಧ್ಯಾದಿ ದೇವತೆಗಳಿಂದ ಇಂದ್ರನು ಬಂದನು; ಗಂಧರ್ವಾದಿಗಳು, ಋಷಿಗಳು, ಪಿತೃಗಳು, ವಿದ್ಯಾಧರಾದಿ ಗಳು, ಎಲ್ಲರು ಶ್ರೀಕೃಷ್ಣ ದರ್ಶನಕ್ಕೆಂದು ಬಂದರು. ನರಲೋಕ ಮನೋರಮ ರೂಪದಿಂದ ಯತಶ್ಚಂದ್ರಿಕೆಯನ್ನು ಬೀರುವ ಶ್ರೀ ಯದುಕುಲಾಂಬುಧಿಚಂದ್ರನನ್ನು, ಕಣ್ಣಾರೆ ನೋಡಿ ಆನಂದದಿಂದ, ನಂದನವನದ ಮಂದಾರಾದಿ ಸುಮವೃಂದವರ್ಷವನ್ನು ಅವನ ಶಿರದಿ ಮಾಡಿ, ಮಧುರ ಚಿತ್ರವಚನಗಳಿಂದ ಸ್ತುತಿಸಿ ಇಂತೆಂದರು–

ನಾಥ! ರಮಾನಾಥ! ಮನೋವಚನಬುದ್ಧೀಂದ್ರಿಯ ದೇವತೆಗಳು ತಮ್ಮ ಹೃದಯದಿ ಚಿಂತಿಸುವ, ಸಕಲ ಕರ್ಮಪಾಶಚ್ಛೇದಕವಾದ ನಿನ್ನ ಪಾದಾರವಿಂದಗಳಿಗೆ ವಂದಿಸುವೆವು. ನಿನ್ನ ಇಚ್ಛೆಯಂತೆ ನಡೆಯುವ ಪ್ರಕೃತಿಯನ್ನು ಉಪಾದಾನವಾಗಿರಿಸಿ, ಬ್ರಹ್ಮಾಂಡವನ್ನು ಸೃಜಿಸಿ, ಅದಕ್ಕೆ ನೀನೇ ಆಧಾರನಾಗಿ, ಜೀವನ ಜನನಮರಣನಾಶಾದಿಗಳನ್ನು ಸ್ವತಂತ್ರನಾಗಿ ಮಾಡುತ್ತಿರುವೆ. ನಿನಗೆ ಪ್ರಕೃತಿಲೇಪವಾಗಲು, ಕರ್ಮಬಂಧವಾಗಲಿ, ಜರಾದಿ ವಿಕಾರಗಳಾಗಲಿ ಇಲ್ಲ. ಸ್ವರೂಪ ಸುಖರತನು, ನಿರ್ದೋಷನು, ಅಪ್ರಾಕೃತನು, ಸ್ವತಂತ್ರನು ಆದ ನಿನಗೆ ನಮಸ್ಕಾರವು! ನಿನ್ನ ಭಕ್ತರಾದ ಸಾತ್ವಿಕಜನರಿಗೆ ಕರ್ಣಪೂರವೆನಿಸುವ ನಿನ್ನ ಕಥೆಯನ್ನು ಕೇಳುವುದರಿಂದ ಆಗುವ ಮನಸ್ಶುದ್ಧಿಯು, ದುಷ್ಟಮನಸ್ಕರಾಗಿ, ನಿನ್ನನ್ನು ಭಜಿಸದವರಿಗೆ, ಏನು ಓದಿದರೂ, ಏನು ಕೊಟ್ಟರೂ, ಏನು ತಪಿಸಿದರೂ, ಏನು ಕರ್ಮಗಳ ಮಾಡಿದರೂ, ಏನು ಕೇಳಿದರೂ ಆಗದಿರು ವುದು. ಮುನಿಗಳು ಕ್ಷೇಮವೆಂಬ ಶ್ವೇತದ್ವೀಪವನ್ನೆದಲು, ಭಕ್ತಿರಸಾದ್ರಹೃದಯದಲ್ಲಿ ನಿನ್ನ

ಪಾದಾರವಿಂದವನ್ನು ಚಿಂತಿಸುವರು; ಸಾತ್ವಿಕರಾದ ಬ್ರಹ್ಮಜ್ಞಾನಿಗಳು ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೆಂಬ ನಿನ್ನ ಚತುರ್ಮೂರ್ತಿ ವ್ಯೂಹವನ್ನು ಕೃದ್ಧೋಲ್ಕಾದಿ, ವಿಶ್ವಾದಿ ಅಜಾದಿ ವ್ಯೂಹಗಳನ್ನು ಭಜಿಸಿ, ನೀನು ಸರ್ವರೂಪಗಳಲ್ಲಿ ಸಮವಿಕ್ರಮನು – ಸ್ವಗತಭೇದ ವರ್ಜಿತನು – ಎಂದು ತ್ರಿಕಾಲಗಳಲ್ಲಿಯು ಬಿಡದೆಪೂಜಿಸುವರು; ಇಂತಹ ನಿನ್ನ ಪಾದಾರವಿಂದವು ನಮ್ಮ ಸರ್ವಾಶುಭ ವಿಧ್ವಂಸಕವಾಗಲಿ! ಶ್ರದ್ಧಾವಂತರು, ಕೈಯಲ್ಲಿ ಹವಿಸ್ಸನ್ನು ಪಿಡಿದು, ವೇದ ನಿರೂಪಿತ ಮಂತ್ರಗಳಿಂದ ಯಜ್ಞಾಗ್ನಿಯಲ್ಲಿ, ನಿನ್ನ ಪಾದಾರವಿಂದವನ್ನೇ ಚಿಂತಿಸುತ್ತಾ ಹೋಮಿ ಸುವರು. ಹೃದಯದಲ್ಲಿ ಧ್ಯಾನಿಸಿ ನಿನ್ನ ಸ್ವರೂಪ ಸಾಮರ್ಥ್ಯವನ್ನು ತಿಳಿಯಲಿಚ್ಛಿಸುವ ಪರಮ ಭಾಗವತರಿಗೆ ನಿನಕಿಂತ ಪ್ರಿಯತಮವಿನ್ನೊಂದಿಲ್ಲ.

ಶ್ರೀಶ! ನಿನ್ನ ವಕ್ಷಸ್ಥಲದಿ ಮನೆ ಮಾಡಿ ನಿಂತಿರುವ ಶ್ರೀವತ್ಸ ರೂಪಿಣೀ ರಮಾಕಾಂತೆ, ನಿನ್ನ ಭುಜದಿ ಜೋತುಬಿದ್ದು, ಬಾಡದಿರುವ, ಸೌಗಂಧಿಕ ವನಮಾಲಾ ರೂಪಿಣೀ ರಮಾಕಾಂತೆಯಿಂದ ಸ್ಪರ್ಧಿಸುತ್ತಿರಲು, ಈರ್ವರನ್ನು ಸಮಾಧಾನಪಡಿಸಿ, ಎರಡು ಪಾದಗಳ ಸೇವಾಸೌಭಾಗ್ಯವನ್ನಿತ್ತು ಅವರನ್ನು ಸಂತೈಸುವೆ. ಹೇ ರಮೇಶ! ನಿನ್ನ ಪಾದಾರವಿಂದವು ನಮ್ಮ ಸರ್ವಾಶುಭ ವಿಧ್ವಂಸಕ ವಾಗಲಿ! ಮೂರು ವೇದಗಳೇ ನಿನ್ನ ಜಯಧ್ವಜಗಳು! ನಿನ್ನ ಕರಾರವಿಂದವು ಅಸುರವಧೂ ಭಯಂಕರವೂ ದೇವವಧೂಕ್ಷೇಮಂಕರವೂ ಆಗಿದೆ. ನಿನ್ನ ಪಾದಾರವಿಂದವು ಸಾಧುಜನ ಮೋಕ್ಷದಾಯಕವೂ ದುಷ್ಟಜನ ದುಃಖದಾಯಕವೂ ಆಗಿದೆ. ಅಂತಹ ನಿನ್ನ ಪಾದಾರವಿಂದವು ನಮ್ಮ ಸರ್ವಪಾಪ ವಿಧ್ವಂಸಕವಾಗಲಿ!

ಜನರ ಸುಖ-ದುಃಖ ನಿಯಂತ್ರಗಳಾದ ಇಂದ್ರಿಯಾಭಿಮಾನಿ ದೇವತೆಗಳು ಮುಗುದಾಣೆ ಯಿಂದ ಕಟ್ಟಲ್ಪಟ್ಟ ಪಶುಗಳು ಯಜಮಾನನಿಗಂತೆ, ನಿನ್ನ ಪಾದಾರವಿಂದವಶರಾಗಿ ನಿನ್ನನ್ನು ಸೇವಿಸುವರು. ನೀನು ಜೀವರನ್ನು ನೂರು ವರ್ಷಗಳ ಕಾಲ ಶರೀರದಲ್ಲಿಟ್ಟು, ಅವರ ಕೂಡ ಇದ್ದರೂ ದುಃಖಾದಿ ಲೇಪವಿಲ್ಲದೆ ನಿರ್ವಿಕಾರನಾಗಿರುವೆ. ಇಂತಹ ಪ್ರಕೃತಿಪುರುಷನೆನಿಸಿದ ರಮಾ ಬ್ರಹ್ಮರಿಗೆ ಶ್ರೇಷ್ಠನಾಗಿ, ಪುರುಷೋತ್ತಮನೆನಿಸುವ ನಿನ್ನ ಚರಣಾರವಿಂದವು ನಮಗೆ ಸರ್ವ ಮಂಗಳಪ್ರದವಾಗಲಿ!

ಜಗತ್ತಿನ ಸೃಜಲ ಪಾಲನ ಸಂಹರಣಗಳ ಸ್ವತಂತ್ರನು ಕರ್ತನು, ಪ್ರಧಾನ, ಜೀವ, ಕಾಲ, ಕರ್ಮಗಳಿಗೊಡೆಯನು, ಯಾದವಾದ್ಯಖಿಲ ಜಗನ್ನಿರಾಸಕಾರ್ಯಪವೃತ್ತನು, ಅತರ್ಕಿತಾಪಾರ ವೇಗ ಕಾಲರೂಪನು ಆದ ನಿನಗೆ ನಮಸ್ಕಾರವು! ನೀನು ಪ್ರಕೃತಿ ಮಾನಿನಿ ರಮೆಯಿಂದ ಕೂಡಿ, ಪುರುಷನಾಮಕ ಬ್ರಹ್ಮನನ್ನು ಪ್ರಧಾನ ಮಾನಿನಿ ಗಾಯತ್ರಿದೇವಿಯನ್ನು ಸೃಜಿಸಿದೆ. ಅವನು ಮಹದಭಿಮಾನಿಯಾಗಿಯೂ ಗಾಂಿಿತ್ರಿ ಶ್ರದ್ಧೆಯಾಗಿಯೂ ಮತ್ತೆ ತಾವೇ ಸೃಜಿಸಿಕೊಂಡು ಹುಟ್ಟಿದರು. ಅವರ ಮಗನೇ ಅಹಂಕಾರಮಾನೀ ಶೇಷನು. ಮಹತ್ತತ್ವಾಭಿಮಾನಿ ಬ್ರಹ್ಮನಲ್ಲಿ ಪ್ರವೇಶಿಸಿ ಅವನಿಂದ ಕೂಡಿ ನೀನು ಬ್ರಹ್ಮಾಂಡವನ್ನು ಪಡೆದೆ; ಅದರ ಹೊರಗೆ ಇರುವ ನವಾವರಣಗಳನ್ನೂ ಸೃಜಿಸಿದೆ. ಜಂಗಮ ಸ್ಥಾವರ ಜಗತ್ತಿಗೆ ನೀನೇ ಒಡೆಯನು. ನಿನ್ನಿಚ್ಛೆಯಿಂದ ಪ್ರಕೃತಿ ವಿಕಾರಗಳಾದ ತ್ರಿಗುಣಗಳು ಬಂಧಕವಾಗಿವೆ; ಇಂದ್ರಿಯಗಳಿಗೆ ಪ್ರೇರಕನಾಗಿ ನಡೆಸುವ ನಿನಗೆ ವಿಷಯ ಸಂಪರ್ಕವಿಲ್ಲ. ನಿನ್ನ ಪ್ರಸಾದಪಾತ್ರರಾಗಿ ಸನಕಾದಿಗಳು ವಿಷಯಗಳು ಅನರ್ಥಕ ವೆಂದರಿತು ಭಯದಿಂದ ದೂರ ಮಾಡಿ ಗೆದ್ದಿರುವರು; ಅಂದಮೇಲೆ ನಿನಗೆ ದುಷ್ಟವಿಷಯ ಸಂಪರ್ಕವಿಲ್ಲವೆಂದು ಹೇಳಬೇಕೇ?

ಹದಿನಾರು ಸಾವಿರ ಸುಂದರ ಪತ್ನಿಯರು, ತಮ್ಮ ಕಿರುನಗೆ, ಕಟಾಕ್ಷ, ಭ್ರೂವಿನ್ಯಾಸ, ಸರಸವಚನ, ಆಲಿಂಗನ ಮೊದಲಾದ ಸೌರತ ವಿಲಾಸಗಳಿಂದ ನಿನ್ನನ್ನು ಗೆಲ್ಲಲು ಸಮರ್ಥರಾಗದೆ ಹೋದರು. ನಿನ್ನ ಪಾವನ ಕಥಾಮೃತಗಂಗೆ, ನಿನ್ನ ಪಾದರಜಃಪರಿಪೂತಮಂದಾಕಿನಿ ಎಂಬ ಎರಡು ತೀರ್ಥಗಳಲ್ಲಿ ಒಳಹೊರಗಿನ ಎರಡು ವಿಧ ಸ್ನಾನದಿಂದ ಹೋಗದ ಪಾಪಗಳುಂಟೇ? ಕಿವಿಗಳೆಂಬ ದೊನ್ನೆಗಳಲ್ಲಿ ತುಂಬಿ ಕುಡಿಯುವ ಸಚ್ಛಾಸ್ತ್ರ ಸರಸ್ವತಿಯೂ ಕಲೆತು ತ್ರಿವೇಣಿಯಾದಾಗ, ಮುಖ್ಯಪ್ರಾಣ ಹೃದಯಮಂದಿರನು, ಚಂದ್ರಾರ್ಕವಹ್ನಿಮಂಡಲ ಮಧ್ಯಗತನು ಆದ ನಿನ್ನ ದಿವ್ಯದರ್ಶನವಾಗದಿರುವದೇ? ನಮೋ ನಮಃ.

ಆಗ ಬ್ರಹ್ಮದೇವನು ಕೃಷ್ಣನಿಗೆ ವಂದಿಸಿ, ಅಂಬರದಿ ಕೈಜೋಡಿಸಿ ನಿಂತು ಇಂತೆಂದನು–

ಪ್ರಭೋ! ಹಿಂದೆ ನಾವು ಬೇಡಿಕೊಂಡಂತೆ ಅವತರಿಸಿ, ಭೂಭಾರವನ್ನು ಕಳೆದೆ! ಧರ್ಮವನ್ನೂ ಸ್ಥಾಪಿಸಿದೆ. ಸಜ್ಜನರು ಅನುಗ್ರಹೀತರೂ ಆದರು. ಸರ್ವಲೋಕ ಪಾಪಂಧಕಾರನಾಶಕವಾದ ನಿನ್ನ ಯಶಶ್ಚಂದ್ರಿಕೆಯಿಂದ ಲೋಕವೇ ಬೆಳಗಿತು. ಯದುವಂಶದಲ್ಲಿ ಅವತರಿಸಿ, ದಿವ್ಯರೂಪನಾಗಿ ಜಗದ್ಧಿತವಾದ ಉದಾರಕರ್ಮಗಳನ್ನಾಚರಿಸಿದೆ. ಕಲಿಯುಗದ ಸಾಧು ಮನುಜರು ನಿನ್ನ ಮಂಗಳ ಕಥೆಯನ್ನು ಕೇಳಿ, ಹೇಳಿ, ಅಜ್ಞಾನಾನ್ಯಥಾ ಜ್ಞಾನಗಳನ್ನು ಕಳೆದುಕೊಂಡು ಸದ್ಗತಿಯನ್ನೂ ಹೊಂದುವಂತಾಯಿತು. ಇಂದಿಗೆ ನೀನು ಅವತರಿಸಿ, ಒಂದು ನೂರು ನಾಲ್ಕು ವರ್ಷ ಎರಡು ತಿಂಗಳಾಯಿತು. ಪ್ರಾಯಃ ದೇವಕಾರ್ಯವೆಲ್ಲವೂ ಮಾಡಿ ಮುಗಿಸಿದಂತಾಯಿತು. ವಿಪ್ರಶಾಪವ್ಯಾಜದಿಂದ ಯದುಕುಲವೂ ಮುಗಿಯಲಿದೆ ಅಲ್ಲವೇ? ಇನ್ನು ನಿನಗಿಷ್ಟವಾದರೆ ಶ್ರೀಶ! ನಿನ್ನ ಪರಂಧಾಮವನ್ನು ಸೇರು! ನಿನ್ನ ಕಿಂಕರರಾದ ನಮ್ಮನ್ನು ಕಾಪಾಡು.

ಬ್ರಹ್ಮವಚನವನ್ನಾಲಿಸಿ ಮಾಯಾಮನುಜರೂಪೀ ಶ್ರೀಕೃಷ್ಣನು ನುಡಿದನು–

ದೇವಶ್ರೇಷ್ಠ! ನಿಜ! ನಾನೂ ನಿಮ್ಮ ಕಾರ್ಯವನ್ನೆಲ್ಲ ಮುಗಿಸಿ, ಭೂಭಾರವನ್ನೂ ಇಳಿಸಿ, ನನ್ನ ರೂಪವನ್ನು ಉಪಸಂಹರಿಸಿ, ವೈಕುಂಠವನ್ನು ಸೇರಲು ನಿಶ್ಚಯಿಸಿರುವೆನು. ಸ್ವಲ್ಪ ತಡೆಯಿರಿ! ವೀರ್ಯಶೌರ್ಯಶ್ರೀಬಲದಿಂದ ಗರ್ವಿತವಾದ ಯಾದವಕುಲವು ವೇಲಾಕೂಲವನ್ನು ದಾಟಿ ಬರುವ ಸಮುದ್ರದಂತೆ ಲೋಕವನ್ನು ನುಂಗಿಬಿಡುವದು. ಅದನ್ನು ಸಂಹರಿಸದಿದ್ದರೆ ಲೋಕಕ್ಷೇಮವಾಗಲಿಕ್ಕಿಲ್ಲ, ಮತ್ತೂ ಕಲಿಕಲ್ಮಷದಿಂದ, ಅವರಿಗೆ ಲೇಪವಾಗದಿರುವಂತೆ ಅವರನ್ನು ನಾಶಮಾಡಿ ಅನುಗ್ರಹಿಸುವೆನು. ದ್ವಿಜಶಾಪರೂಪ ಪ್ರಾರಂಭವಾದ ಯದುಕುಲನಾಶವು ಆದಮೇಲೆ ನಿನ್ನ ಪ್ರೀತಿಗಾಗಿ ವೈಕುಂಠವನ್ನು ಸೇರುವೆನು.

ಲೋಕನಾಥನ ಮಾತಿನಿಂದ ಸಂತುಷ್ಟನಾಗಿ, ಬ್ರಹ್ಮನು ಸಕಲ ದೇವತೆಗಳಿಂದ ಕೂಡಿ, ಶ್ರೀಕೃಷ್ಣನಿಗೆ ವಂದಿಸಿದನು. ಎಲ್ಲ ದೇವತೆಗಳೂ ತಮ್ಮ ತಮ್ಮ ಲೋಕಗಳಿಗೆ ಹೊರಟು ಹೋದರು.

ಆಗ ದ್ವಾರಕೆಯಲ್ಲಿ ಮಹೋತ್ಪಾತಗಳು ಕಂಡುಬಂದವು. ಶ್ರೀಕೃಷ್ಣನ ಯದುಗಳ ಸಭೆ ಕೂಡಿಸಿ, ಅವರಿಗಿಂತೆಂದನು–

ಎಲ್ಲಿ ನೋಡಿದರೂ ಉತ್ಪಾತಗಳು ಎದ್ದು ಕುಣಿಯುತ್ತಿವೆ. ದಾಟಲಾಗದ ದ್ವಿಜಶಾಪವೂ ನಮ್ಮ ಕುಲಕ್ಕೆ ಒದಗಿಬಂದಿದೆ. ನಾವಿಲ್ಲಿದ್ದರೆ ಪೂರ್ಣನಾಶವು ತಪ್ಪಿದ್ದಲ್ಲ. ಆಲಸ್ಯವಿಲ್ಲದೆ ಪುಣ್ಯಕರವಾದ ಪ್ರಭಾಸಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿರಿ, ಚಂದ್ರನು ದಕ್ಷಶಾಪದಿಂದ ಬಂದ ಕ್ಷಯರೋಗವನ್ನು ಆ ತೀರ್ಥಸ್ನಾನದಿಂದಲು, ಸೋಮನಾಥೇಶ್ವರನ ದಯದಿಂದಲು

ಕಳೆದುಕೊಂಡನು. ಅಲ್ಲಿ ಸ್ನಾನ ಮಾಡೋಣ! ಪಿತೃದೇವಋಷಿಗಳಿಗೆ ತರ್ಪಣವನ್ನು ಕೊಡೋಣ! ಅಗ್ನಿಗಾಹುತಿಗಳನ್ನು, ಬ್ರಾಹ್ಮಣರಿಗೆ ಮೃಷ್ಟಾನ್ನವನ್ನು ನೀಡೋಣ! ಪಾತ್ರರಿಗಿತ್ತ ದಾನವು– ನೌಕೆ ಸಮುದ್ರವನ್ನಂತೆ – ಸಕಲ ಪಾಪಪಂಕವನ್ನು ದಾಟಿಸಿಬಿಡುವುದು.

ಇಂತು ಭಗವಂತನ ವಚನಗಳನ್ನು ಕೇಳಿ, ಯಾದವರು ಹೊರಡಲನುವಾಗಿ ರಥಗಳನ್ನು ಕಟ್ಟಿದರು. ಇದೆಲ್ಲವನ್ನೂ ಕಂಡು ಭಗವಂತನ ವಾಕ್ಯವನ್ನು ನೆನೆದು, ಅರಿಷ್ಟಗಳ ಫಲವನ್ನು ತಿಳಿದು, ಕೃಷ್ಣಭಕ್ತನಾದ ಉದ್ಧವನು ಏಕಾಂತದಲ್ಲಿ ಶ್ರೀಕೃಷ್ಣನನ್ನು ಕಂಡನು. ಶಿರಸಾ ವಂದಿಸಿ, ಕೈಜೋಡಿಸಿ ನಿಂತಿಂತೆಂದನು–

ದೇವದೇವ! ಪುಣ್ಯಶ್ರವಣಕೀರ್ತನ! ಸ್ವಕುಲವನ್ನು ಸಂಹರಿಸಿ ನಿನ್ನ ಅವತಾರವನ್ನು ಉಪ ಸಂಹರಿಸಲು ಮನಮಾಡಿರುವೆ ಅಲ್ಲವೇ? ವಿಪ್ರಶಾಪವನ್ನು ಕೆಡಿಸಲು ಸಮರ್ಥನಾದರೂ ಕಾಲ ರೂಪಿಯಾಗಿ ಅನುಮೋದಿಸಿದರೆ ಅಲ್ಲವೆ? ಇರಲಿ! ನಿನ್ನ ಪಾದದ್ವಂದ್ವವನ್ನು ಕ್ಷಣಾರ್ಧ ವಾದರೂ ಬಿಟ್ಟಿರಲಾರೆನು. ನಿನ್ನ ಪರಂಧಾಮಕ್ಕೆ ನನ್ನನ್ನೂ ಕರೆದುಕೊಂಡು ಹೋಗು! ಕರ್ಣ ಪೀಯೂಷವು, ಪರಮ ಮಂಗಲವು ಆದ ನಿನ್ನ ಕ್ರೀಡಾವಿಲಾಸವನ್ನು ಕೇಳಿದವನು ಇತರ ಸರ್ವ ವಿಷಯಾಶೆಯನ್ನು ಬಿಟ್ಟುಬಿಡುವನು. ಅದರಲ್ಲಿ ನಿನ್ನೊಂದಿಗೆ ಕೂಡಿ, ಮಲಗಿ, ಉಂಡು, ತಿರುಗಿ, ಆಡಿ, ಕಾಲಕಳೆದ ಭಕ್ತರಾದ ನಾವು ಪ್ರಿಯನಾದ ನಿನ್ನನ್ನು ಬಿಟ್ಟು ಇರುವುದು ಶಕ್ಯವಲ್ಲವೇ? ನೀನು ಹಚ್ಚಿದ ಗಂಧವನ್ನು ಹಚ್ಚಿ, ನೀ ಹಾಕಿಕೊಟ್ಟ ಮಾಲೆಯನ್ನು ಹಾಕಿ, ನೀನು ಉಟ್ಟು ಬಿಟ್ಟ ಬಟ್ಟೆಯನ್ನುಟ್ಟು; ನೀ ಮುಡಿದ ಹೂವನ್ನು ಶಿರದಿ ಮುಡಿದು, ನೀನು ಉಂಡ ನೈವೇದ್ಯ ಶೇಷವನ್ನುಂಡು, ನಿನ್ನವರಾಗಿ ನಿನ್ನ ದಾಸ್ಯದಿಂದ ಸಾಂಸಾರಿಕ ಬಂಧನದಿಂದ ಮುಕ್ತರಾಗುವ ಹೆಬ್ಬಯಕೆಯಿಂದ ಕೂಡಿದ ನಮ್ಮ ಕೈಬಿಡಬೇಡ! ವಾತಾಶನರು ಶ್ರಮಣರು ಊರ್ಧ್ವರೇತಸ್ಕರು ಆದ ಮಹರ್ಷಿಗಳು ಪೂರ್ಣಗುಣನಾದ ನಿನ್ನ ಮಂದಿರವನ್ನು ಹೊಂದುವರು. ಪವಿತ್ರಚರಿತ್ರರಾದ ಯತಿಗಳು ನಿನ್ನ ಪಾದಮೂಲವನ್ನು ಸೇರಿ ಸುಖಿಸುವರು. ಪರಮೇಶ! ಕರ್ಮಮಾರ್ಗದಲ್ಲಿ ತಿರುಗುತ್ತಿರುವ ಗೃಹಸ್ಥರಾದ ನಾವು ನಿನ್ನ ಭಕ್ತಿಯೆಂಬ ನೌಕೆಯಲ್ಲಿ ಕೂತು, ನಿನ್ನ ಕಥೆಯೆಂಬ ದೀಪವನ್ನು ಪಿಡಿದುಕೊಂಡು, ಗುರು ಕರ್ಣಧಾರನ ಸಹಾಯದಿಂದ ಸಂಸಾರ ತಮಸ್ಸಮುದ್ರವನ್ನು ದಾಟುವೆವು. ನರಲೋಕ ವಿಡಂಬನೆಯನ್ನು ಮಾಡುತ್ತಾ ನೀನಾಡಿದ ಮಾತುಗಳನ್ನು ಸ್ಮರಿಸುವೆವು; ನಿನ್ನ ಕಥೆಯನ್ನು ಪಾಡುವೆವು; ನಿನ್ನ ಮಂದಹಾಸ, ಕರುಣಾಕಟಾಕ್ಷಗಳನ್ನು ನಂಬಿ ಉದ್ಧೃತ ರಾಗುವೆವು.

ಇಂತು ಉದ್ಧವನಾಡಿದ ಮಾತನ್ನಾಲಿಸಿ, ಭಗವಾನ್ ದೇವಕೀನಂದನನು ಮುಖ್ಯ ಪ್ರಾಣಾ ವೇಶಯುತನು, ಪ್ರಿಯನು ಆದ ಉದ್ಧವನಿಗಿಂತೆಂದನು.

## ೭. ಅವಧೂತ ಯದು ಸಂವಾದ

ಶ್ರೀಭಗವಂತನಿಂತೆಂದನು–

ಮಹಾಭಾಗ! ಉದ್ಧವ! ಅಹುದು. ಬ್ರಹ್ಮರುದ್ರರು, ಇಂದ್ರಾದಿ ಲೋಕಪಾಲರು ನನ್ನನ್ನು ಪ್ರಾರ್ಥಿಸುವಂತೆ ಈ ಭೂಲೋಕವನ್ನು ಬಿಟ್ಟು ಹೊರಡಲು ನಿಶ್ಚಯಿಸಿರುವೆನು. ಬ್ರಹ್ಮಾದಿ ಸುರ ಪ್ರಾರ್ಥಿತನಾಗಿ ನಾನು ಅವತರಿಸಿದ ದೇವಕಾರ್ಯವು ಮುಗಿದಿದೆ. ಅನ್ಯೋನ್ಯ ಕಲಹದಿಂದ

ಯದುಕುಲವು ಕೂಡ ನಾಶವಾಗುವುದು. ನಾನು ಸ್ವರ್ಗವನ್ನಾರೋಹಿಸಿದ ಏಳನೆಯ ದಿನ ಸಮುದ್ರವು ಉಕ್ಕೇರಿ ಈ ಪುರಿಯನ್ನು ಮುಳುಗಿಸಿ ಬಿಡುವುದು. ನಾನೀ ರೂಪದಿಂದಿರದಿರೆ, ಲೋಕವೆಲ್ಲ ಅಮಂಗಲಪ್ರಾಯವಾಗುವುದು. ಮತ್ತು ಕಲಿಬಾಧೆಯು ಕೂಡ ವಿಪರೀತವಾಗುವುದು. ಅಧರ್ಮಸಕ್ತನಾದ ಕಲಿಯುಗದ ಜನತೆಯ ಮಧ್ಯದಲ್ಲಿ ನಿ ನಿರಬೇಡ! ಸ್ವಜನರೆಂಬುವ ಅಭಿಮಾನವನ್ನು ಕಡಿದು ನನ್ನಲ್ಲಿ ಮನವನ್ನಿಟ್ಟು ನಿರ್ವಿಕಾರನಾಗಿ ಸಂಚರಿಸು! ಮನಸಾ, ವಾಚಾ, ಕರಣಗಳಿಂದ ಕಣ್ಣಿನಿಂದ ಕಾಣುವ ಜಗವೆಲ್ಲವೂ ಪ್ರಕೃತಿನಿರ್ಮಿತವು, ಮದಿಚ್ಛಾನಿಯತವು ಆಗಿರುವುದರಿಂದ ನಶ್ವರವೆಂದು ತಿಳಿ! ಮನವನ್ನು ನನ್ನಲ್ಲಿಟ್ಟು ಭಕ್ತನಾದವನಿಗೆ ನನ್ನಿಂದ ರಚಿತವಾದ ಪ್ರಾಪಂಚಿಕ ವಿಷಯಗಳಲ್ಲಿ ಭ್ರಮೆಯು ಇರುವುದಿಲ್ಲ. ನನ್ನ ಭಕ್ತನಾಗದವನಿಗೇ ಭ್ರಮೆ. ಈಶ್ವರಾಧೀನವಾದ ಕರ್ಮವನ್ನು ಅವನು – ನಾನು ಮಾಡಿದೆನು, ನಾನು ಇದನ್ನು ಮಾಡಲಿಲ್ಲ, ನಾನು ವಿರುದ್ಧವಾಗಿ ಮಾಡಿದೆನು – ಎಂದು ತಿಳಿಯುವವನು; ರಜಸ್ತಮೋಗುಣಗಳಿಂದ ಪುಟ್ಟುವ ಭ್ರಮೆಯನ್ನು ಪೊಂದಿದವನು ವಿಷಯಾಸಕ್ತನಾಗಿ, ಸ್ವರ್ಗನರಕಗಳಲ್ಲಿ ಅಲೆಯುತ್ತಿರುವನು. ಆದುದರಿಂದ ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸಿ, ಜಗವೆಲ್ಲವು ವಿರಿಂಚಾಧೀನವೆಂತಲು, ವಿರಿಂಚನು ಕಾರ್ಯಕಾರಣ ಜಗತ್ತಿಗೆ ಶಕ್ತಿಪ್ರದನಾದ ನನ್ನ ಅಧೀನವೆಂತಲು ತಿಳಿ! ಜ್ಞಾನವಿಜ್ಞಾನಯುಕ್ತನಾಗು! ಸರ್ವಾಂತರ್ಯಾಮಿಯೇ ನಿನ್ನ ಅಂತರ್ಯಾಮಿಯೆಂದು ತಿಳಿದು, ಇಂತಹ ನನ್ನ ವ್ಯಾಪ್ತತತ್ವಜ್ಞಾನದಿಂದ ಸಂತುಷ್ಟನಾಗು! ಆಗ ನಿನ್ನ ಸಂಚಿತ ಮತ್ತು ಆಗಾಮಿ ಕರ್ಮಗಳೆಲ್ಲವೂ ನಷ್ಟವಾಗುವುವು. ಅಂತಹ ಅಪರೋಕ್ಷಜ್ಞಾನಿಯು, ಕಾಮಕ್ರೋಧರಹಿತನು, ಸರ್ವಭೂತರಹಿತನು ಆಗಿರುವನು. ದೋಷವೆಂದು ನಿಷೇಧಿಸಲ್ಪಟ್ಟಿರುವುದರಿಂದ ಪಾಪಕರ್ಮವನ್ನು ಬಿಡನು; ಗುಣವೆಂದು ವಿಹಿತವಾಗಿರುವುದರಿಂದ ಪುಣ್ಯಕರ್ಮವನ್ನು ಮಾಡನು; ಕಿಂತು ಸ್ವಭಾವದಿಂದಲೇ ಪಾಪಗಳನ್ನು ಬಿಟ್ಟು, ಪುಣ್ಯಗಳನ್ನೇ ಮಾಡುತ್ತಾ, ಆ ಪುಣ್ಯವನ್ನು ಕೂಡ ಶ್ರೀಹರಿಗರ್ಪಿಸಿ, ಅವನೇ ಸ್ವತಂತ್ರಕರ್ತನೆಂಬ ಅನುಸಂಧಾನದಿಂದ ಹುಡುಗನಂತೆ, ಆಟವಾಡುವಂತೆ, ಕರ್ಮಗಳನ್ನು ಫಲಾನುಸಂಧಾನರಹಿತನಾಗಿ ಮಾಡುವನು, ಶುಭಸ್ವರೂಪನಾದ ದೇವನಿಗೆ ಅಶುಭಕರ್ಮಸಮರ್ಪಣವು ಕೂಡದೆಂದರಿತು, ನೈಜವಾಗಿ ಪಾಪವನ್ನು ಬಿಡುವ ಜ್ಞಾನಿಗೆ ವಿಘ್ನಗಳಿಲ್ಲ. ವಿಶ್ವವೆಲ್ಲವೂ ಶ್ರೀಹರಿಯ ಅಧೀನವೆಂದರಿತು ಇಂತಹ ಜ್ಞಾನಿಗೆ ಸಂಸಾರಪತನವಿಲ್ಲ.

ಭಗವಂತನ ಆದೇಶವನ್ನು ಶಿರಸಾ ವಹಿಸಿ ಉದ್ಧವನು ತತ್ವಜಿಜ್ಞಾಸುವಾಗಿ ಇಂತು ಪ್ರಶ್ನಿಸಿದನು–

ಯೋಗೇಶ! ದೇವತೆಗಳಿಗೆ ನೀನು ಉಪದೇಶಿಸಿರುವ ಯೋಗವನ್ನು ನನಗೆ ತಿಳಿಸು! ಸರ್ವದುಷ್ಟಸಂಗವನ್ನು ಬಿಡು! ಎಂದು ನನಗೆ ನೀನು ತಿಳಿಸಿದೆ. ಮೋಕ್ಷೋಪಯೋಗಿ ತ್ಯಾಗವು ಬಹು ದುಷ್ಕರವಾಗಿದೆ. ಕಾಮಪೂರಿತ ಮನಸ್ಕರಿಗೆ ನಿನ್ನಲ್ಲಿ ಮನವಿರಿಸುವ ಉಪಾಯವೇನು? ಅಭಕ್ತರಿಗಂತು ಸಾಧ್ಯವೇ ಅಲ್ಲದ ತ್ಯಾಗ ಸಂನ್ಯಾಸಗಳು ನಮಗೆಂತು ಸಿಗುವುವು? ನಾನು ನನ್ನದೆಂಬ ಮೂಢಮತಿಯಿಂದ ದೇಹಗೇಹಾದಿಗಳಲ್ಲಿ ಆಸಕ್ತರಾಗಿರುವ ನಮಗೆ ನಿನ್ನ ಮಾತಿನಂತೆ ನಡೆದು ಶ್ರೇಯಸ್ಸನ್ನು ಪಡೆಯುವ ರೀತಿಯನ್ನು ಚೆನ್ನಾಗಿ ನಿರೂಪಿಸು! ಸತ್ಯಜ್ಞಾನಾನಂದ ಸ್ವರೂಪನಾದ ನಿನ್ನ ಹೊರತು ಸಂಶಯನಿವಾರಕರನ್ನು ನಾನು ದೇವತೆಗಳಲ್ಲಿಯೂ ಕಾಣದಿರುವೆನು. ರುದ್ರಾದಿ ದೇವತೆಗಳೂ ಕೂಡ ನಿನ್ನನ್ನು ಮರೆತು ಒಂದೊಂದು ಸಲ ಮೋಕ್ಷ ತದುಪಯೋಗಿ ವಿಷಯಗಳಲ್ಲದ ಇತರ ವಸ್ತುಗಳಲ್ಲಿಯು ಕಾಮಯುಕ್ತರಾಗಿರುವರೆಂದಮೇಲೆ

ಇತರರ ಪಾಡೇನು?

ಇಂತು ನೀನೇ ಗತಿಯೆಂದರಿತು ಅನಾದಿ ಸಾಂಸಾರಿಕ ತಾಪದಿಂದ ನೊಂದು ವಿರಕ್ತನಾಗಿ ಪೂಜ್ಯನು, ನಿರ್ದೋಷನು, ಅನಂತಮಹಿಮನು, ಸರ್ವಜ್ಞನು, ಅವಿಹತ ಶಕ್ತಿಸಂಪನ್ನನು, ಅವಿನಾಶಿ ದಿವ್ಯಧಾಮನು, ನರಸಖನು ಆದ ನಿನಗೆ ಶರಣಾಗತನಾಗಿ ಬಂದಿರುವೆನು.

ಶ್ರೀಭಗವಂತನಿಂತೆಂದನು–

ಪ್ರಾಯಃ ಲೋಕದ ಜನರು ಸತ್‌ಸ್ನೇಹನಿರ್ಮುಕ್ತ ಪರೋಕ್ಷಾಜ್ಞಾನನಿಪುಣರಾಗಿರುವರು. ಅವರು ಎಷ್ಟು ಪ್ರಯತ್ನಿಸಿದರೂ ಪಾಪವಾದ ನರಕದಿಂದಲು, ತಮಸ್ಸನಿಂದಲು ಬಿಡಿಸಿಕೊಳ್ಳಲಾರದೆ ದುಃಖಪಡುತ್ತಿರುವರು. ಸತ್‌ಸ್ನೇಹಯುಕ್ತರಾದ ಸುಜನರು ಪರೋಕ್ಷ ಜ್ಞಾನವಿದ್ಯಾವಿಶಾರದರಾಗಿ, ತಮ್ಮ ಸಾತ್ವಿಕ ಮನದಿಂದ ಅಪರೋಕ್ಷ ಜ್ಞಾನವನ್ನೂ ಶ್ರೀಹರಿಯ ದಯದಿಂದ ಸಂಪಾದಿಸಿ, ಪಾಪಕೂಟ ರೂಪ ಸಂಸಾರದಿಂದ ಬಿಡಿಸಿಕೊಂಡು ಮುಕ್ತರಾಗುವರು. ಆದುದರಿಂದ ಭಕ್ತಿಯೇ ಅಪರೋಕ್ಷಸಾಧಕೆಂದರಿತು ನೀ ಕೇಳಿದ ಪ್ರಶ್ನೆಯು ಅತ್ಯಂತ ಪ್ರಶಂಸನೀಯವಾಗಿದೆ.

ಶ್ರೇಯಃಸಂಪಾದನೆಯ ಸಾಧನಗಳಲ್ಲಿ ಜೀವನಿಗೆ ಸಾತ್ವಿಕ ಮನಸ್ಸೇ ಪರಮೋಪಕಾರಕವಾಗಿದೆ. ಅಂತಹ ಮನವು ಸಶರೀರನಿಗೆ ಕಾರ್ಯಕಾರಿಯಾಗಿದೆ. ಚಕ್ಷುರಾದಿಗಳಿಂದ ಕಾಣಿಸುವಂತೆ ಮನಃಪೂರ್ವಕವಾದ ಕೃಷ್ಯಾದಿ ಪ್ರಯತ್ನದಿಂದ ವ್ರೀಹ್ಯಾದಿ ಧಾನ್ಯಲಾಭವು ಪ್ರತ್ಯಕ್ಷವಾಗಿದೆ. ಅಂತೆಯೇ ಯಾಗಗಳಿಂದ ಸ್ವರ್ಗಾದಿ ಶ್ರೇಯವೆಂದು ತಿಳಿದುಬರುತ್ತಿದೆ. ಮನುಜಶರೀರವು ಬಂದಾಗಲೇ ಸಾಂಖ್ಯಯೋಗವಿಶಾರದರಾದ ಸುಜೀವರು ನನ್ನನ್ನು ಚಿಂತಿಸುವರು! ಅವರವರ ಯೋಗ್ಯತೆಯಂತೆ ವಿಶ್ವರೂಪಪರ್ಯಂತವಾದ ನನ್ನ ರೂಪಗಳನ್ನು ಧ್ಯಾನಿಸಿ, ಧೀರರೆನಿಸಿ, ಮುಕ್ತರಾಗುವರು. ಏಕಪದ, ದ್ವಿಪದ, ಚತುಷ್ಪದ, ಬಹುಪದ, ನಿಷ್ಪಾದ ಪ್ರಾಣಿಗಳಲ್ಲಿ ನನಗೆ ಮನುಜಶರೀರಧಾರಿಗಳನ್ನು ಕಂಡರೆ ಬಲು ಪ್ರೀತಿ. ಏಕೆಂದರೆ ಮನುಜಶರೀರ ಬಂದಾಗಲೇ ಜೀವನು ಸತ್ತರ್ಕಬಲದಿಂದ ನನ್ನನ್ನು ತಿಳಿಯಬಹುದಾಗಿದೆ; ಮನಸ್ಸನ್ನು ನನ್ನಲ್ಲಿಡಲು ಬರುತ್ತಿದೆ. ಸ್ವತಃ ಅವ್ಯಕ್ತನಾದ ನನ್ನನ್ನು ಪ್ರತ್ಯಕ್ಷೀಕರಿಸಿಕೊಳ್ಳಲು ಇಲ್ಲೇ ಶಕ್ಯವು; ಇನ್ನೊಂದು ಯೋನಿಯಲ್ಲಿ ಆ ಭಾಗ್ಯವಿಲ್ಲ. ಇಲ್ಲಿ ಜೀವನು – ನೋಡಲು, ನಡೆಯಲು, ಸುಖಪಡಲು ಸ್ವಾತಂತ್ರ್ಯವಿಲ್ಲದಿರುವ ನೆಂದಮೇಲೆ ಅವನಿಗೆ ಸುಖಾದಿಪ್ರದನು ಇಂದ್ರಿಯಪ್ರೇರಕನು ಆದ ಪರಮಾತ್ಮನಿರುವನೆಂದು ಪಂಚಾವಯವಾತ್ಮಕ ಅನುಮಾನವು ತಿಳಿಸುತ್ತಿದೆ. ಈ ವಿಷಯದಲ್ಲಿ ಪುರಾತನವಾದ ಅವಧೂತ-ಯದು ಸಂವಾದವೆಂಬ ಇತಿಹಾಸವನ್ನು ಕೇಳು!

ಯದುರಾಜನೊಮ್ಮೆ ಭಯವಿಲ್ಲದೆ ತಿರುಗುವ ಅವನನ್ನು ನೋಡಿದನು. ಅವನು ಜ್ಞಾನಿಯೂ ನಿಪುಣನೂ ಆಗಿದ್ದರೂ ತೋರಗೊಡದಿದ್ದನು. ಅವನನ್ನು ನೋಡಿ ವಿಸ್ಮಿತನಾಗಿ ಯದುರಾಜನಿಂತೆಂದನು–

ಬ್ರಹ್ಮಜ್ಞಾನಿಯೇ! ನಿಷಿದ್ಧಾಚರಣಶೂನ್ಯನೂ ಅಶನಾದಿ ಪ್ರವೃತ್ತಿಶೂನ್ಯನೂ ಆದ ನಿನಗೆ ಇಂತಹ ಜ್ಞಾನವೆಂತು ಲಭಿಸಿತು? ವಿದ್ವಾಂಸನಾದರೂ ಬಾಲನಂತೆ ಲೋಕದಲ್ಲಿ ಚರಿಸುವ ನೀನು ಯಾವ ಪ್ರಯತ್ನವನ್ನೂ ಮಾಡದಿರುವೆ. ಪ್ರಾಯಃ ಮಾನವರು ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಸಾಧನ ತತ್ಪರರಾಗಿರುವರು. ಯಶಸ್ಸಿಗೂ ಸಂಪತ್ತಿಗೂ ದುಡಿಯದವರಿಲ್ಲ. ನೀನೂ ಸಮರ್ಥನಾದರೂ ಪ್ರಯತ್ನವಿಲ್ಲದಿರುವೆ; ಅಮೃತಭಾಷಣನಾದರೂ ಮೂಕನಂತಿರುವೆ; ಕವಿಯಾದರೂ ಜಡನಂತಿರುವೆ. ಸುಭಗನಾದರೂ ಪಿಶಾಚನಂತಿರುವೆ; ಕಾಮಲೋಭಗಳೆಂಬ

ದಾವಾಗ್ನಿದ್ಭಯ ಮಧ್ಯದಿ ಸುಡುತ್ತಿರುವ ಜನರ ಮಧ್ಯದಲ್ಲಿ ನಾನು ಅಗ್ನಿತಾಪವಿಲ್ಲದೆ ಗಂಗೆಯಲ್ಲಿ ಕೂತಿರುವ ಆನೆಯಂತೆ ನಿಶ್ಚಿಂತನಾಗಿರುವೆ. ನಿನ್ನ ಆನಂದದ ಕಾರಣವೇನು? ವಿಷಯಭೋಗರಹಿತನಿಗೆ, ಶರೀರ ಮಾತ್ರ ಪರಿಗ್ರಹನಿಗೆ, ಆತ್ಮಾನಂದವಾಗುವ ಬಗೆ ಹೇಗೆ ಹೇಳು?

ಬ್ರಹ್ಮಣ್ಯನಾದ ಯದುರಾಜನ ಮಾತನ್ನು ಕೇಳಿ ಬ್ರಾಹ್ಮಣನು ಇಂತೆಂದನು–

ರಾಜನ್! ನನಗೆ ಬುದ್ಧಿಯನ್ನು ಕಲಿಸಿರುವ ಗುರುಗಳು ಇಪ್ಪತ್ತುನಾಲ್ಕು ಮಂದಿ ನನಗೆ ದೊರೆತರು. ಅವರಿಂದ ಕಲಿತು, ಅಹಂ ಮಮತೆಗಳನ್ನು ಬಿಟ್ಟು, ನಿಶ್ಚಿಂತನಾಗಿರುವೆನು. ಅವರಾರೆಂದರೆ ಕೇಳು! ಭೂಮಿ, ನೀರು, ವಾಯು, ಆಕಾಶ, ಬೆಂಕಿ, ಚಂದ್ರ, ರವಿ, ಕಪೋತ, ಅಜಗರ, ಸಿಂಧು, ಪತಂಗ, ಜೇನುದುಂಬಿ, ಆನೆ, ಜೇನುಗಾರ, ಜಿಂಕೆ, ಮೀನ, ಪಿಂಗಲೆ, ಕುರುರಪಕ್ಷಿ, ಕೂಸು, ಕುಮಾರಿ, ಬಾಣಗಾರ, ಹಾವು, ಜೇಡರಹುಳ, ಕಣಜ – ಎಂಬ ಇಪ್ಪತ್ತುನಾಲ್ಕು ಗುರುಗಳಿಂದ ನಾನು ಶಿಕ್ಷೆಯನ್ನು ಪೊಂದಿ ಕಲಿತಿರುವ ವಿಷಯ ವಿವೇಕವನ್ನು ವರ್ಣಿಸುವೆನು ಕೇಳು!

ವಿವಿಧ ಭೂತಗಳು ತುಳಿದು ಗೋಳಾಡಿಸಿದರೂ ದೈವವಶರಾಗಿ ಬಂದ ಕಷ್ಟಕ್ಕೆ ಖಿನ್ನನಾಗದೆ, ದೈವನಿರೂಪಕ ಜ್ಞಾನಿಜನರು ಹಾಕಿಕೊಟ್ಟ ಮಾರ್ಗದಿಂದ ಅಚಲನಾಗಿರಬೇಕೆಂದು ಭೂಮಿಯಿಂದ ನಾನು ಕಲಿತೆನು. ನಮ್ಮೆಲ್ಲ ಚೇಷ್ಟೆಗಳೂ ಗುರುದೇವ ಸುಜನರ ಹಿತಕ್ಕಾಗಿ ಇರಬೇಕು. ದೇವರು ಕೊಟ್ಟಿರುವ ಐಹಿಕ ಸಂಪತ್ತು ಪರೋಪಕಾರಕ್ಕೆಂದು ತಿಳಿದು ತಾನು ಉಣ್ಣದೆ ಪರರಿಗೆ ಕೊಡುವ ಮಹೋದಾರ ಮನವನ್ನು ಭೂದೇವಿಯು ನನಗೆ ಕಲಿಸಿದಳು. ಇಂತು ಕಲಿತು ಜ್ಞಾನಿಯಾದವನು ಇಂದ್ರಿಯಪ್ರೀತಿಗಲ್ಲದೆ ಶರೀರಯಾತ್ರಾ ನಿರ್ವಹಣಮಾತ್ರ ದ್ರವ್ಯಗಳನ್ನು ಸಂಪಾದಿಸುತ್ತಾ, ಮನೋವಿಕ್ಷೇಪವನ್ನುಂಟುಮಾಡಿ, ಜ್ಞಾನವನ್ನು ಕೆಡಿಸುವ ದ್ರವ್ಯಗಳ ಗೊಡವೆಗೆ ಪೋಗದೆ ನಿರ್ವಿಕಾರನಾಗಿರುವನು.

ಯೋಗಿಜೀವನು ವಿಷಯಗಳನ್ನು ಶ್ರೀಹರಿ ಇಚ್ಛೆಗೆ ಬಂದಂತೆ ತಿಳಿದು ಅನುಭವಿಸುತ್ತಾ, ಗುಣದೋಷಗಳಿಂದಾಗುವ ಹರ್ಷಶೋಕಗಳಿಗೆಡೆಗೊಡದೆ, ವಾಯುವಿನಂತೆ ಸಂಬಂಧವಿಲ್ಲದವನಾಗಿರಬೇಕು. ಪಾರ್ಥಿವದೇಹಗಳಲ್ಲಿ ಬಂದ ಜೀವನಿಗೆ, ದೇಹಕ್ಕೆ ಬರುವ ಜನನ ರೋಗಾದಿ ದುಃಖಗಳ ಲೇಪವಾಗಬಾರದೆಂದರೆ, ನಿರ್ಲಿಪ್ತನು, ನಿರಭಿಮಾನಿಯು ಆಗಿರಬೇಕೆಂದು ವಾಯುವಿನಿಂದ ನಾನು ಕಲಿತೆನು.

ಶ್ರೀಹರಿಯು ಆಕಾಶದಿಂದ ಸ್ಥಿರ-ಚರ ಜೀವಕದಂಬದ ಒಳಗೂ ಹೊರಗೂ ವ್ಯಾಪ್ತನಾಗಿರುವನು. ಅವನು ಅಖಂಡನಾಗಿರುವನು; ದೇಹದಲ್ಲಿದ್ದರೂ ದೇಹದ ವಿಕಾರಗಳ ಲೇಪವಿಲ್ಲದಿರುವನು. ಅಣುವಾದ ಅಂತರ್ಯಾಮಿಗೂ, ವ್ಯಾಪ್ತನಾದ ಬ್ರಹ್ಮನಿಗೂ ಭೇದವಿಲ್ಲ. ವಾಯುವಿಗೆ ವಶವಾಗಿ ತಿರುಗುವ ಮೇಘಗಳಿಂದ ಲಿಪ್ತವಾಗದಿರುವ ಆಕಾಶದಂತೆ ಪರಮಪುರುಷನಾದ ಶ್ರೀಶನು ಕಾಲಕಾಲದಿ ಸೃಜಿಸಲ್ಪಡುವ ತೇಜೋಬನ್ನಮಯಭೂತ ಶರೀರಗಳಲ್ಲಿದ್ದರೂ ಅವುಗಳ ಸಂಪರ್ಕದೋಷವಿಲ್ಲದೆ ಅಸಂಗನೆನಿಸುವನು.

ಗಂಗಾದಿ ಶುದ್ಧ ಜಲದಂತೆ ಮನುಜನು ಸ್ವಭಾವದಿಂದಲೇ ಸ್ವಚ್ಛನಾಗಿರಬೇಕು; ಸ್ವತಂತ್ರನಾದ ಶ್ರೀಹರಿದಯೆಯಿಂದ ಜೀವನು ಶುದ್ಧನಾಗುವನು. ಅದಕ್ಕಾಗಿ ಅವನು ಸ್ನೇಹಮಯನು, ಇತರ ಸುಖಸಾಧಕನು ಆಗಿರಬೇಕೆಂದು ನಾನು ಜಲದಿಂದ ಕಲಿತೆನು. ತೀರ್ಥಗಳಿಗೆ ಜ್ಞಾನಿಗಳೂ ಕೂಡ ದರ್ಶನ, ಸ್ಪರ್ಶನ, ಕೀರ್ತನಗಳಿಂದಲೇ ಜಗವನ್ನು ಪಾವನ ಮಾಡುವರು.

ಅಗ್ನಿಯಂತೆ ತಪಸ್ಸಿನ ಪ್ರಕಾಶ ಉಳ್ಳವನಾಗಿ, ಹರಿಯಲ್ಲೇ ಮನವನಿಟ್ಟವನನ್ನು ಯಾರೂ ಪರಾಭವಗೊಳಿಸಲಾರರು; ಅವನು ದೂರದಿಂದಲೇ ಸೇವ್ಯನಾಗಿ ಪೂಜ್ಯನೆನಿಸುವನು. ಅಂತಹ ಜ್ಞಾನಿಯು ಪ್ರಾಣಾತ್ಯಯ ಸಮಯದಿ ಒಂದು ವೇಳೆ ಸರ್ವಭಕ್ಷಕನಾದರೂ ಅವನಿಗೆ ಪಾಪ ವಿಲ್ಲೆಂದು, ಅಗ್ನಿಯಿಂದ ಕಲಿತೆನು. ದುರ್ಜನರು ಬೂದಿಯಂತೆ ಮುತ್ತಿದರೆ ತಲೆದೋರದಿದ್ದು ಸುಜನರು ಗಾಳಿಯಂತೆ ಬಂದರೆ ಸ್ವರೂಪವನ್ನು ತೋರುತ್ತಾ, ಬೇಡಿದವರಿಗೆ ಅವರು ಕೊಟ್ಟ ಸ್ವಲ್ಪ ಹವಿಸ್ಸನ್ನುಂಡು ಹಿಂದುಮುಂದಿನ ಎಲ್ಲ ಪಾಪಗಳನ್ನು ಸುಡುವ ಶ್ರೇಯೋದಾಯಕ ನಾಗಿರಬೇಕೆಂದು ಅಗ್ನಿಯಿಂದ ಕಲಿತೆನು. ತನ್ನಿಚ್ಛೆಯಿಂದ ಲಕ್ಷ್ಮೀದೇವಿಯಿಂದ ಕೂಡಿ, ಪ್ರಾಕೃತ ಜಗವನ್ನು ನಿರ್ಮಿಸಿ, ಅದರಲ್ಲಿ ಪ್ರವಿಷ್ಟನಾದ ಸರ್ವನಿಯಾಮಕನು – ವಿವಿಧ ಕಾಷ್ಟಗಳಲ್ಲಿ ತತ್ತದ್ರೂಪನಾಗಿ ಉರಿಯುವ ಅಗ್ನಿಯಂತೆ – ತಾದೃಶರೂಪನಾಗಿದ್ದರೂ ತದ್ಭಿನ್ನನಾಗಿರುವನೆಂದು ನಾನು ತಿಳಿದೆನು.

ಕಣ್ಣಿಗೆ ಕಾಣದ ವೇಗದಿಂದೋಡುವ ಕಾಲಚಕ್ರದಲ್ಲಿ ತಿರುಗುವ ಚಂದ್ರಬಿಂಬದ ಕಲೆಗಳ ವೃದ್ಧಿಹ್ರಾಸಗಳನ್ನು ಕಂಡು, ಜನನಾದಿ ಸ್ಮಶಾನಾಂತವಾದ ಭಾವಗಳು ಶರೀರಕ್ಕೇ ಹೊರತು ಜೀವನಿಗಲ್ಲವೆಂದು–ನಿರ್ವಿಕಾರನಾಗಿ ಬಿಂಬಾಂತರ್ಗತನಾದ ಚಂದ್ರರೂಪದಿಂದ ನಾನು ಕಲಿತೆನು.

ಕಾಲವೇಗದಿ ಕೊಚ್ಚಿಹೋಗುತ್ತಿರುವ ದೇಹಾದಿಗಳಿಗೆ ಸೂಕ್ಷ್ಮವಾದ ಉತ್ಪತ್ತಿ ನಾಶಗಳು ಸದಾತನವಾಗಿದೆ. ಮಂದಬುದ್ಧಿಗಳು ಅವನ್ನು ಕಾಣಲಾರರು. ಅಗ್ನಿಜ್ವಾಲೆಗಳ ಪ್ರವಾಹ ಪರಂಪರೆ ಯಿಂದ ದೀಪವು ಒಂದೇ ಆಗಿದೆಯೆಂಬ ಭ್ರಮೆ ಬರುವಂತೆ ಮಾನವನು ಶೈಶವದಿಂದ ಮರಣ ದವರಿವಿಗೂ ನಡೆದುಹೋಗುವಾಗ ಆಗುವ ದೇಹದ ನಿತ್ಯಜನನ ನಾಶಗಳನ್ನು ತಿಳಿಯಲಾರದೆ ತಾನು ಶಾಶ್ವತನೆಂದು ನಂಬಿರುವನು. ಇದು ವಿಶಿಷ್ಟ ವಿಶೇಷಗಳಿಗೆ ಭೇದಾಭೇದ ದ್ಯೋತಕ ವಾಗಿದೆ. ಸ್ವಗತಭೇದವಿವರ್ಜಿತನಾದ ಶ್ರೀಹರಿಯ ಮಹಿಮೆಯು ಅಚಿಂತ್ಯಾದ್ಭುತವಾಗಿದೆ ಯೆಂದು ನಾನು ಚಂದ್ರನಿಂದ ಕಲಿತೆನು.

ಸೂರ್ಯನು ತನ್ನ ಕಿರಣಗಳಿಂದ ಜಲಗಳನ್ನು ಹೀರಿ ವರ್ಷಾಕಾಲದಿ ಬಿಡುವಂತೆ ಯೋಗಿಯು ಕಾಲಕಾಲದಿ ಬರುವ ವಿಷಯಗಳನ್ನು ಇಂದ್ರಿಯಗಳಿಂದ ಸ್ವೀಕರಿಸಿ, ಬಿಡುತ್ತಾ, ತಾನು ವಿಷಯಗಳಲ್ಲಿ ಅತಿಸಕ್ತನಾಗಬಾರದೆಂದು ಸೂರ್ಯನಿಂದ ಕಲಿತೆನು. ಬಾಹ್ಯಾಂತಃಕರಣ ದಿಂದಾಗುವ ಮಿಥ್ಯಾಜ್ಞಾನದಿಂದ ಶರೀರದಲ್ಲಿ ಜೀವದಿಂದ ಕೂಡಿ ಇರುವುದರಿಂದ ಶ್ರೀಹರಿಯು ಕೂಡ ಜೀವನಂತೆ ಸುಖದುಃಖಗಳನ್ನು ಅನುಭವಿಸುವನೆಂದು ತಿಳಿಯುವವರು ಅಜ್ಞಾನಿಗಳೇ ಸರಿ. ಪರಮಾರ್ಕಸ್ವರೂಪವನ್ನರಿಯದ ಅಜ್ಞಾನಿಗಳು ಜಲದಲ್ಲಿ ಮೂಡಿದ ಅರ್ಕಬಿಂಬವನ್ನು ನೋಡಿ, ಅದು ಚಲಿಸಿದರೆ ಸೂರ್ಯಬಿಂಬವೇ ಚಲಿಸಿತೆಂದು ತಿಳಿಯುವರು; ಸೂರ್ಯಮಂಡಲ ಮಧ್ಯಗನಾದ ಸೂರ್ಯದೇವನಿಗೆ ಚಲನಾದಿಗಳಿಲ್ಲದಿರುವಂತೆ, ತದಂತರ್ಯಾಮಿ ಶ್ರೀನಾರಾ ಯಣನಿಗೂ ಚಲನಾದಿಗಳಿಲ್ಲದಿರುವಂತೆ, ದೇಹಗತಬಿಂಬರೂಪೀ ಶ್ರೀಹರಿಗೆ ಸುಖದುಃಖಾದಿ ಲೇಪವಿಲ್ಲೆಂದು ಸೂರ್ಯನಿಂದ ನಾನು ಕಲಿತೆನು.

ಎಂದಿಗೂ ಯಾರಲ್ಲಿಯೂ ಬಹುಸ್ನೇಹವನ್ನು ಮಾಡಬಾರದು. ಪ್ರಸಂಗವು ದುಃಖಾ ಪಾದಕವೆಂದು ನಾನು ಕಪೋತದಿಂದ ಕಲಿತೆನು. ಒಂದು ಕಪೋತಮಿಥುನವು ಅರಣ್ಯದಲ್ಲಿದ್ದ ಒಂದು ಗಿಡದಲ್ಲಿ ಗೂಡನ್ನು ಕಟ್ಟಿಕೊಂಡು ಕೆಲಕಾಲವಲ್ಲಿ ವಾಸಮಾಡುತ್ತಿತ್ತು. ಆ ದಂಪತಿಗಳು ಸ್ನೇಹಪಾಶಬದ್ಧಹೃದಯರಾಗಿ, ಕಣ್ಣಲ್ಲಿ ಕಣ್ಣನ್ನಿಟ್ಟು, ಮನದಿಂದ ಮನವನ್ನು ಬಿಗಿದು ಎರಡು

ಶರೀರಗಳೊಂದಾಗಿ ಶಯನ ವಸನ ಸಂಚರಣ ಸ್ಥಾನ ಕ್ರೀಡಾ ಭೋಜನಗಳಲ್ಲಿ ಕೂಡಿ ಅಗಲದೆ, ವನಪ್ರದೇಶದಲ್ಲಿ ಸುಖವಾಗಿದ್ದವು. ಅವಳು ಬೇಡಿದುದೆಲ್ಲವನ್ನೂ ದುಡಿದು ತಂದು ಹಾಕಿ, ಅವಳಲ್ಲಿ ಪ್ರೇಮರಭಸದಿಂದ ಇಂದ್ರಿಯಾಲಾಲಸನಾಗಿ ಕಪೋತನು ಕಷ್ಟಪಡುತ್ತಿದ್ದನು. ಹೀಗಿರಲು ಕಪೋತಿ ಗರ್ಭವತಿಯಾಗಿ, ಕಾಲದಲ್ಲಿ ಗೂಡಿನಲ್ಲಿ ತತ್ತಿಗಳನ್ನಿಟ್ಟಳು. ಶ್ರೀಹರಿಯ ಅಚಿಂತ್ಯಾದ್ಭುತಶಕ್ತಿಯಿಂದ ಅವು ಮರಿಗಳಾದವು. ಅತಿಕೋಮಲರುಚಿರಾವಯವರಾದ ಸುತರನ್ನು ಪ್ರೀತಿಯಿಂದ ದಂಪತಿಗಳು ಸಾಕುತ್ತಿದ್ದರು. ಮಕ್ಕಳ ಕಲಕಲ ಕೂಜಿತವು ಅವರ ಕಿವಿಗೆ ಅಮೃತವಾಯಿತು! ಅವರ ಸ್ಪರ್ಶವು ಅಮೃತಾಭಿಷೇಕವೆನಿಸಿತು; ಅವರು ಚಂಚೂಪುಟ ಗಳಿಂದ ಮುಟ್ಟಲು ಅವರಿಗೆ ಸ್ವರ್ಗವೇ ಮುಟ್ಟಿದಂತಾಯಿತು; ಅವರು ಸಾಯಂಕಾಲದಿ ಎದುರು ಗೊಂಡಾಗ ಮಹಾನಂದವಾಯಿತು. ಆಹಾ! ಶ್ರೀಹರಿಮಾಯೆ! ಏನು ಹೇಳಲಿ! ರಾಜನ್! ಕೇಳು! ಶಿಶುಹಿತವನ್ನೇ ಬಯಸಿ, ದೀನ ಕಪೋತಗಳು ಚಿಂತಿಸುತ್ತಾ ಅವರ ಪೋಷಣ ಪಾಲನಾಸಕ್ತ ರಾಗಿ, ತಮ್ಮ ಸುಖವನ್ನು ಲೆಕ್ಕಿಸದೆ ಕಾಲಚಕ್ರದಲ್ಲಿ ಸಿಕ್ಕು ತಿರುಗುತ್ತಿದ್ದರು.

ಒಂದು ದಿನ ಆಹಾರಾರ್ಥವಾಗಿ ತಂದೆತಾಯಿಗಳು ಅರಣ್ಯದಲ್ಲಿ ತಿರುಗುತ್ತಿದ್ದರು. ಒಬ್ಬ ಬೇಡನು ಅವರ ಗಿಡದ ಸಮೀಪದಲ್ಲಿ ಬಲೆಯನ್ನೊಡ್ಡಿ, ಎಲ್ಲ ಮರಿಗಳನ್ನೂ ಹಿಡಿದುಬಿಟ್ಟನು. ಸಾಯಂಕಾಲವಾಗುತ್ತಿದ್ದಾಗ ಕಪೋತಗಳು ಮರಿಗಳಿಗಾಹಾರವನ್ನು ತಂದು, ಗೂಡನ್ನು ಸಮೀಪಿಸಿ ದರು. ಜಾಲದಲ್ಲಿ ನರಳುವ ಮರಿಗಳನ್ನು ಕಂಡು, ಕಪೋತಿಯು ದುಃಖಿತಳಾಗಿ, ಗೋಳಿಡುತ್ತಾ ಅವರನ್ನು ಸಮೀಪಿಸಿ, ತಾನೂ ಜಾಲದಲ್ಲಿ ಸಿಕ್ಕಿಬಿದ್ದು, ಮೂರ್ಛಿತಳಾದಳು. ಕಪೋತನು ಅರ್ಧಾಂಗಿಯನ್ನೂ ಮರಿಗಳನ್ನು ನೋಡಿ, ಅತಿ ದುಃಖಿತನಾದನು.

'ಅಹೋ! ಎಂತಹ ನಿರ್ಭಾಗ್ಯನು ನಾನು! ಏನು ಪಾಪಮಾಡಿದೆನೋ ನಾ ಕಾಣೆ! ತ್ರಿವರ್ಗ ಸುಖದಾಯಕವಾದ ಗೃಹಸ್ಥಾಶ್ರಮದ ರುಚಿಯನ್ನು ಸಾಕಷ್ಟು ನೋಡಿಲ್ಲ. ಅನುಕೂಲಳು ಪತಿವ್ರತೆಯು ಆದ ಹೆಂಡತಿ ಅವಳ ಅಮಾಯಿಕ ಮಕ್ಕಳೊಡನೆ ನನ್ನ ಕಣ್ಣೆದುರಿಗೇ ಸ್ವರ್ಗವನ್ನು ಸೇರ ಪೋಗುತ್ತಿದ್ದಾಳೆ. ಏನು ಮಾಡಲಿ! ಈ ಶೂನ್ಯಗೃಹದಲ್ಲಿ ದಾರಾಸುತರನ್ನೆಲ್ಲರನ್ನೂ ಕಳೆದು ಕೊಂಡು ನಾನೆಂತಿರಲಿ? ವಿಧುರನಾಗಿ ಅಳುತ್ತಾ ಬದುಕಿರುವುದಕ್ಕಿಂತ ಸಾಯುವುದೇ ಲೇಸು. ಮೃತ್ಯುವಿನ ದವಡೆಯಲ್ಲಿ ಸಿಕ್ಕು ಒದ್ದಾಡುವ ಪ್ರಿಯ ಸತೀಸುತರನ್ನು ನೋಡಲಾರೆನೆಂ'ದು ಗೋಳಿಟ್ಟು ತಾನೂ ದುಃಖವೇಗದಲ್ಲಿ ಮತಿಗೆಟ್ಟು ಬಲೆಯಲ್ಲಿ ಬಿದ್ದು ಸತ್ತಿತು. ಪಕ್ಷಿಗಳ ಯಮ ನಾಗ ಕಪೋತಕುಟುಂಬವನ್ನು ಸ್ವೀಕರಿಸಿ, ಕೃತಾರ್ಥನಾಗಿ, ತನ್ನ ಮನೆಯನ್ನು ಸೇರಿದನು.

ಕಪೋತದಂತೆ ಅಶಾಂತಕಾಮನು ಇಂದ್ರಿಯಾರಾಮನು ಆದ ಮನುಜನು ಸತಿಸುತರೆಂಬ ರೆಕ್ಕೆಗಳು ಕಡಿದುಬೀಳಲು, ದೀನನಾಗಿ ಕುಟುಂಬಪೋಷಣರತನಾಗಿ ಪಾಪವನ್ನು ಹೊತ್ತು ಕೊಂಡು, ತಾನೂ ಒಂದು ದಿನ ಮೃತನಾಗುವನು. ಮನುಜ ಶರೀರವು ಮುಕ್ತಿ ಮಂದಿರ ಸೋಪಾನ ವೆನಿಸಿದೆ. ಜೀವನು ಕಪೋತದಂತೆ ಶರೀರಾಸಕ್ತನಾಗಿ, ಕೆಟ್ಟರೆ ಅವನನ್ನು ಆರೂಢಪತಿತ ನೆಂಬುವರು. ಏಣಿಯ ಕೊನೆಯಿಂದ ಬಿದ್ದವನಿಗೆ ಪೆಟ್ಟು ಕೂಡ ಹೆಚ್ಚಲ್ಲವೇ?

## ೮. ಅವಧೂತ ಯದು ಸಂವಾದ

ಅವಧೂತನು ಹೇಳಿದನು–

ಯದುರಾಜ! ದೇಹಧಾರಣವನ್ನು ಮಾಡಿದ ಜೀವನಿಗೆ ದೇಹಪತನವೂ ನಿಶ್ಚಿತವಾದಂತೆ ಶರೀರಧಾರಣ ಸಮಯದಲ್ಲಿ ಸುಖದುಃಖಾದ್ಯನುಭವವು ಕೂಡ ನಿಶ್ಚಿತವಾಗಿದೆ. ದುಃಖವು ನಮ್ಮ ಪ್ರಯತ್ನವಿಲ್ಲದೆ ಬರುವಂತೆ, ಇಂದ್ರಿಯ ಸುಖವು ಕೂಡ ಶ್ರೀಹರಿದತ್ತವಾಗಿ ಬಂದೇ ಬರುವುದು. ಅಂದಮೇಲೆ ಅದಕ್ಕಾಗಿ ಪ್ರಯತ್ನಿಸುವುದು ಬುದ್ಧಿವಂತನ ಲಕ್ಷಣವಲ್ಲ.

ದೇಹವು ನಿಲ್ಲಬೇಕೆಂದರೆ ದಿಷ್ಟನಾಮಕ ಶ್ರೀಶನಿತ್ತ ಆಹಾರವೂ ನಿಶ್ಚಯವಾಗಿ ಬರುವುದು. ಅಲ್ಪವಾಗಲಿ ಬಹುಳವಾಗಲಿ ಬಂದ ಆಹಾರವನ್ನು ಶ್ರೀಹರಿ ಕೊಟ್ಟದ್ದೆಂದು ತಿಳಿದು ಮನಸಾ ಅವನಿಗರ್ಪಿಸಿ, ತಾನೂ ಸ್ವೀಕರಿಸಿ, ನಿಷ್ಪ್ರಯತ್ನನಾಗಿರಬೇಕೆಂದು ನಾನು ಅಜಗರವನ್ನು ನೋಡಿ ಕಲಿತೆನು. ಶ್ರೀಶನು ಕೊಡದಿರೆ ಹೇಗೂ ಇಲ್ಲವೆಂದರಿತು ನಿರಾಹಾರನಾಗಿ ಕಾಲವನ್ನು ಕಳೆಯ ಬೇಕು! ಮಹಾಸರ್ಪದಂತೆ ದಿಷ್ಟ-ಭೋಜನನಾಗಿ ನಿಶ್ಚಿಂತನಾಗಿರಬೇಕು. ಬಹಿರ್ಮುಖನಾದ ಮನುಜನು ಅನ್ನಾಭಾವದಿಂದ ಸಾಯುವನಾಗ. ಯೋಗಾರೂಢನು ಹಾಗಲ್ಲ, ಭಗವದ್ಗುಣ ಸುಧಾಮೃತ ಪಾನತೃಪ್ತನಾದ ಯೋಗಿಯು ಕರಚರಣಾದ್ಯವಯವಯುತನಾದರೂ, ಸರ್ವಪ್ರವೃತ್ತಿ ಶೂನ್ಯನಾಗಿ ಬ್ರಹ್ಮಧ್ಯಾನಬಲದಿಂದ ದೇಹಪತನಭೀತಿ ರಹಿತನಾಗಿ ಪ್ರಕಾಶಿಸುತ್ತಿರುವನು. ಅವನು ಶರೀರಯಾತ್ರೆಗಾಗಿ ಯತ್ನಿಸದಿರುವನು; ಅವನಿಗೆ ನಿದ್ರಾಜ್ಞಾನಗಳಿಲ್ಲ. ಅಚಿಂತ್ಯವಾದ ಶ್ರೀಶಶಕ್ತಿಯಿಂದ ಅವನ ಶರೀರವು ಅದೃಷ್ಟಕರ್ಮಕಾಲ ಸಂಯೋಗಪರ್ಯಂತವು ನಿಂತಿರುವುದು.

ಸಮುದ್ರದಂತೆ ಮುನಿಯು ಪ್ರಸನ್ನಗಂಭೀರನು ದುರ್ವಿಗಾಹ್ಯನು ದುರತ್ಯಯನು ಅನಂತಪಾರನು ಅಕ್ಷೋಭ್ಯನು ಆಗಿರಬೇಕು; ಅನಂತನಿಂದ ಅವನಿಗೆ ತೃಪ್ತಿಯಾಗುತ್ತದೆ. ಅವನ ಬುದ್ಧಿಯೂ ಅನಂತವಾಗಿದೆ. ಸ್ತಿಮಿತಜಲಗಳುಳ್ಳ ಸಮುದ್ರದಂತೆ ಗಂಭೀರನು ಜ್ಞಾನಜಲದ ಆಳತೆಯನ್ನು ತೋರಗೊಡದಿರುವನು ದುರ್ಜನರಿಗೆ ಹೆದರದವನು ಸ್ಥಿರವ್ರತನೂ ಆಗಿರುವುದು ಯೋಗಿಲಕ್ಷಣವು. ಪೂರ್ಣವಾಗಿ ಕಾಮಗಳನ್ನು ಬೇಡಬಾರದು; ದಾರಿದ್ರ್ಯವು ಬರಲು ಹೀನನಾಗ ಬಾರದು. ಸಂಪದ್ವಿಪತ್ತುಗಳು ಶ್ರೀಶಾಧೀನವೆಂದರಿತು ನಾರಾಯಣಪರಾಯಣನಾಗಿರ ಬೇಕು. ನದಿಗಳು ಬಂದರೆ ಉಬ್ಬದೆ ಬರದಿರೆ ಕುಗ್ಗದೆ ಇರುವ ಸಮುದ್ರದಿಂದ ಈ ಬುದ್ಧಿಯನ್ನು ನಾನು ಕಲಿತೆನು.

ಶ್ರೀರಮಣನ ಬಂಧಕಶಕ್ತಿಯೆನಿಸಿದ ಸ್ತ್ರೀಪುರುಷರನ್ನು ಪುರುಷ-ಸುದತಿಯರು ನೋಡಿ ಪರಸ್ಪರಾಕರ್ಷಣೆಯಿಂದ ಅಜಿತೇಂದ್ರಿಯರಾಗಿ, ರೂಪವೆಂಬ ಅಗ್ನಿಜ್ವಾಲೆಗೆ ಸಿಲುಕಿ ನಾಶವಾಗುವ ರೆಂದು ಶಲಭ(ಪತಂಗ)ದಿಂದ ನಾನು ಕಲಿತು, ಶೃಂಗಾರಚೇಷ್ಟಾಯುತರಾದ ದುಷ್ಟವನಿತೆಯ ರಿಂದ ದೂರನಾಗಿರುವೆನು. ಮಹಜ್ಜನವನಿತಾ ಕಾಮರು ಅಂಧಂತಮಸ್ಸನ್ನೇ ಪೊಂದುವರು. ಅನ್ಯವನಿತಾಕಾಮರಿಗಾದರೂ ನರಕವು ತಪ್ಪಿದ್ದಲ್ಲ. ಸ್ವತಂತ್ರನಾದವನು ಪರಮಾತ್ಮನೊಬ್ಬನೇ. ಅವನು ಸೃಜಿಸಿ, ನಾಶಮಾಡುವ ಜಗವೆಲ್ಲ ಅಸ್ವತಂತ್ರವಾಗಿದೆ, ಆದ್ದರಿಂದ ಇದ್ದರೂ ಇಲ್ಲ ದಂತೆಯೇ. ಅವನಿಂದ ಜೀವಜಡರಿಗೆ ಪ್ರವೃತ್ತಿಯೂ ವಿಸ್ತಾರವೂ ಸಂಭವಿಸುತ್ತದೆ. ಪ್ರಪಂಚವು ಇದೇ ಆದ್ದರಿಂದಲೇ ಅದು ಲಯವಾಗುತ್ತಿದೆ. ಇಲ್ಲದ (ಮಿಥ್ಯಾ) ಪ್ರಪಂಚಕ್ಕೆ ಜನನ ಲಯಾದಿಗಳು ಮಾಡುವದಾದರೂ ಹೇಗೆ? ಆದುದರಿಂದ ಪ್ರಪಂಚವಿದೆ. ಅಸ್ವತಂತ್ರವಾಗಿದೆ.

ಅದರಲ್ಲಿ ಸಿಗುವ ಭೋಗಸಾಧನಗಳಾದ ಪತ್ನೀ, ತಲ್ಪ, ಆಭರಣ, ಅಂಬರ ಮೊದಲಾದ ಪದಾರ್ಥಗಳೆಲ್ಲವೂ ಹರೀಚ್ಛಾ ನಿಯತವೆಂದು ತಿಳಿಯದ ಮೂಢನು ಪತಂಗದಂತೆ ಕುರುಡನಾಗಿ ವಿಷಯಾಗ್ನಿಯಲ್ಲಿ ನಷ್ಟವಾಗಿ ಹೋಗುವನು; ಇದು ಪತಂಗದಿಂದ ಕಲಿತ ಬುದ್ಧಿ.

ದೇಪವು ಜೀವಿಸಿರಲು ಸಾಕಾಗುವಷ್ಟು ಗ್ರಾಸವನ್ನು ಬಹು ಮಿತವಾಗಿ ಉಂಡು, ಗೃಹಸ್ಥಾಶ್ರಮದ ಧರ್ಮವನ್ನು ನಡೆಸಬೇಕೆಂದು ಮಧುಕರವನ್ನು ನೋಡಿ, ನಾನು ಕಲಿತೆನು. ಬುದ್ಧಿವಂತನು ಚಿಕ್ಕ ಗ್ರಂಥವೆಂದು ತಿರಸ್ಕರಿಸದೆ, ದೊಡ್ಡ ಪುಸ್ತಕವೆಂದು ಬೇಜಾರಾಗದೆ, ಎಲ್ಲ ಸಚ್ಛಾಸ್ತ್ರವನ್ನು ಓದಿ, ಅದರಲ್ಲಿ ಸಾರವೆಂದು ಸಾರಿರುವ ಭಕ್ತಿಯನ್ನು ಮಾತ್ರ ಅಳವಡಿಸಿಕೊಳ್ಳಬೇಕೆಂದು ಪುಷ್ಪಗಳ ಸಾರವನ್ನು ಮಾತ್ರ ಸ್ವೀಕರಿಸುವ ಜೇನುಹುಳುವು ನನಗೆ ಕಲಿಸಿತು. ಸಾಯಂತನಾನ್ನವನ್ನು ನಾಳೆಗೆಂದಾಗಲಿ ಬೆಳಗಿನ ಭಿಕ್ಷಾನ್ನವನ್ನು ಸಾಯಂಕಾಲಕ್ಕೆಂದಾಗಲಿ, ಸಂಗ್ರಹಿಸಿ ಇಡಬಾರದು. ಇಟ್ಟವನು ಮಧುಕರದಂತೆ ಇಟ್ಟ ವಸ್ತುವಿ(ಜೇನಿ)ನೊಡನೆ ತಾನೂ ನಷ್ಟವಾಗುವನು. ಯೋಗಿಗೆ ಅವನ ಕರವೇ ಪಾತ್ರೆ, ಹೊಟ್ಟೆಯೇ ಕಣಜ.

ರೂಪಕ್ಕೆ ಮಾರುಹೋಗಿ ಪತಂಗವು, ಗಂಧಕ್ಕೆ ಸಿಕ್ಕು ಮಧುರವು ಮಡಿದಂತೆ ಗಂಧಗಜವು ಕರಿಣಿಯ ಅಂಗಸಂಗದ ಸ್ವರ್ಗಸುಖಕ್ಕೆಂದು ಬಂದು, ಬಂಧಿಸಲ್ಪಟ್ಟು, ನಷ್ಟವಾಗುವುದೆಂದು ನೋಡಿ ತಿಳಿದು, ಭಿಕ್ಷುಕನಾದವನು ಕಟ್ಟಿಗೆಯ ಹೆಣ್ಣುಗೊಂಬೆಯನ್ನಾದರೂ ಪಾದದಿಂದ ಕೂಡ ಮುಟ್ಟಬಾರದೆಂದು ನಾನು ಗಜದಿಂದ ಕಲಿತೆನು. ಪ್ರಾಜ್ಞನಾದವನು ಸ್ತ್ರೀರತಿಗಾಗಿ ಪರದಾಡಿದರೆ, ಇತರ ಬಲವಂತರ ಕೈಲಿ ಸಾಯುವನೆಂದು, ಕರಿಣಿಗಾಗಿ ಕಾದಾಡಿ ಮಡಿದ ಕರಿರಾಜನನ್ನು ನೋಡಿ ನಾನು ಕಲಿತೆನು.

ಲೋಭಿಗಳು ಕೂಡಿಟ್ಟ ಧನವನ್ನು ದಾನವಾಗಿ ಕೊಡರು! ತಾವಾದರೂ ಭುಜಿಸರು. ಅವರ ತಪ್ಪಾರ್ಜಿತ ಧನವನ್ನು ಇತರರು ಪೊಂದಿ ಸುಖಿಸುವರು. ಆ ಧನಕ್ಕಾಗಿ ಅವರು ಅವನನ್ನು ಕೊಲ್ಲಲು ಹಿಂಜರಿಯರೆಂದು, ಜೇನುಗೂಡಿನಲ್ಲಿದ್ದ ಹುಳುಗಳಿಗೆ ಹೊಗೆಯಿಟ್ಟು ಕೊಂದು, ಜೇನನ್ನಪಹರಿಸಿದ ಮಧುಹಾರಿ ಪುರುಷನನ್ನು ನೋಡಿ ನಾನು ರಸನೆ ಕೆಟ್ಟದೆಂದು ತಿಳಿದೆನು. ಕಷ್ಟಪಟ್ಟು ಧನವನ್ನು ಸಂಪಾದಿಸಿ ಗೃಹಸ್ಥನು ಮನೆಯ ಸುಖವನ್ನುಣ್ಣಬೇಕೆಂದಿರುವಾಗ ಅವನ ಮನೆಗೆ ಬಂದ ಭಿಕ್ಷುಕನು ನಿರಾಯಾಸವಾಗಿ ಉಂಡು ಪೋಗುವುದನ್ನು ನೋಡಿ, ನಿರ್ಜಿತೇಂದ್ರಿಯನಿಗೆ ನಿಶ್ಚಿಂತೆಯೆಂದು ಮಧುಹಾರಿಯು ನನಗೆ ಕಲಿಸಿದನು.

ಗ್ರಾಮ್ಯಗೀತಗಳನ್ನಾಲಿಸಬಾರದು; ಯತಿವಾನಪ್ರಸ್ಥರಂತೂ ಶೃಂಗಾರಗಾನಕ್ಕೆ ಹುಲಿಗಳಂತೆ ಹೆದರಿ ದೂರರಾಗಿರಬೇಕು. ಬೇಟೆಗಾರನ ಮಧುರ ವೇಣುನಿನಾದಕ್ಕೆ ಕಿವಿಗೊಟ್ಟು ಪ್ರಾಣವನ್ನೇ ಕೊಟ್ಟು, ಕೆಟ್ಟ ಹರಿಣವನ್ನು ನೋಡಿ, ನಾನು ಯೋಷಿಜ್ಜನರ ನೃತ್ಯಗೀತ ವಾದ್ಯಗಳನ್ನು ಕೇಳಬಾರದು. ಹಾಗೆ ಕೇಳಿದವನು ಋಷ್ಯಶೃಂಗನಂತೆ ಕೆಡುವನೆಂದು ಕಲಿತೆನು.

ಜಿಹ್ವೆಯು ಬಲು ಕೆಟ್ಟದ್ದು. ಎಲ್ಲ ಇಂದ್ರಿಯಗಳನ್ನು ಗೆಲ್ಲಬಹುದಾಗಲಿ ರಸನೆಯನ್ನಲ್ಲ. ನಾಲಿಗೆಗೆ ಸಿಕ್ಕು ಮೀನವು ಗಾಳದಲ್ಲಿ ಸಿಕ್ಕು ಸತ್ತಂತೆ, ಪ್ರಾಣಗಳ ಕಳೆದುಕೊಂಬುವರೂ ಉಂಟು. ರಸನೇಂದ್ರಿಯವು ಇತರೇಂದ್ರಿಯಗಳು ವಿಕಲವಾದಂತೆ ಅವುಗಳ ಶಕ್ತಿಯನ್ನೂ ತಾನೇ ಪಡೆದು ಪ್ರಬಲವಾಗುವುದು. ಹಸಿವೆಯನ್ನು ಕಟ್ಟಿದೊಡೆ ಸಾಲದು. ಉಪವಾಸವಿದ್ದವನಿಗೆ ಪಾರಣೆಯ ಚಿಂತೆಯಂತೆ ಶ್ರೀಹರಿಚಿಂತೆಯೂ ಇರದು. ರಸನವನ್ನು ಗೆಲ್ಲದೆ ಯಾವ ಇಂದ್ರಿಯವನ್ನೂ ಗೆದ್ದಂತಲ್ಲ, ರಸನವನ್ನು ಗೆದ್ದವನು ಇತರೇಂದ್ರಿಯಗಳನ್ನೂ ಗೆದ್ದಂತೆಯೇ ಸರಿ! ವಿಷಯವನ್ನು

ಬಿಟ್ಟರೆ ಸಾಲದು. ವಿಷಯರಾಗವನ್ನು ಬಿಟ್ಟವನೇ ಇಂದ್ರಿಯಜಯವಂತನು. ಅಂತಹವನೇ ಅಪರೋಕ್ಷಜ್ಞಾನಿಯೆನಿಸುವನು.

ಪಿಂಗಲೆಯೆಂಬ ವೇಶ್ಯೆಯು ವಿದೇಹನಗರದಲ್ಲಿದ್ದಳು. ಸ್ವೈರಿಣೀವೃತ್ತಿಯಿಂದ ಬದುಕುತ್ತಿದ್ದ ಅವಳು ಮಾರ್ಗದಲ್ಲಿ ಪೋಗುವ ಪುರುಷರನ್ನು ನೋಡಿ, ಅವರಲ್ಲಿ ಧನವಂತರು ತನ್ನ ಮನೆಗೆ ಬರಲೆಂದು ಸಾಂಕೇತಿಕವಾಗಿ ಸೂಚಿಸುತ್ತಿದ್ದಳು. ಅವಳಿಗೆ ಬೇಕಾದುದು ಅವರಲ್ಲ; ಅವರ ಧನ. ಅವರು ಬರಲಿಲ್ಲ. ಅವಳಿಗೆ ನಿದ್ರೆ ಬರಲಿಲ್ಲ. ಮನೆ ಹೊರಗೆ ನಿಂತು ಸಾಕಾಗಿ, ಮನೆಯೊಳಗೆ ಹೋಗಿ ಕೂತು, ಮತ್ತೆ ಮನೆ ಮುಂದೆ ನಿಂತು ನೋಡುತ್ತಾ ಇರಲು, ನಡುರಾತ್ರಿಯಾಯಿತು. ಅವಳ ಮುಖ ಬಾಡಿತು. ಕಣ್ಣಲ್ಲಿ ನೀರು ತುಂಬಿ ಬಂತು. ನಿರಾಶೆಯಿಂದ ಅವಳಿಗೆ ನೆಮ್ಮದಿ ಆದಂತಾಯಿತು. ತನ್ನ ಜೀವನ ವಿಧಾನವನ್ನು ನೆನೆದು, ಜಿಗುಪ್ಸೆಯುಂಟಾಯಿತು. ಪೂರ್ವಪುಣ್ಯ ದಿಂದ ವೈರಾಗ್ಯವಂಕುರಿಸಿತು. ಆಗ ಅವಳು – ಆಶಾಪಾಶವನ್ನು ವೈರಾಗ್ಯ ಖಡ್ಗದಿಂದ ಕಡಿದು – ಇಂತು ಚಿಂತಿಸಿದಳು. ರಾಜನ್! ವೈರಾಗ್ಯವಿಲ್ಲದವನಿಗೆ ದೇಹಬಂಧವು ಬಿಡುವುದೇ? ಕೇಳು ಪಿಂಗಳೆಯ ವಚನವನ್ನು!

ಅಹೋ, ಎಷ್ಟು ಮೂಢಳಾದೆನು? ಮನಸ್ಸಿಗೆ ವಶವಾಗಿ, ಹಿತವನ್ನು ಮರೆತೆನು. ದುಷ್ಟಕಾಂತ ರಿಂದ ಸುಖವನ್ನು ಬಯಸಿದ ನನ್ನಕಿಂತಲೂ ನೀಚರುಂಟೇ? ನಿತ್ಯರಮಣಪ್ರದನು, ಸಮೀಪದಲ್ಲಿ ಎಡಬಿಡದಿರುವವನು, ನಾಶರಹಿತನು, ಬೇಕಾದುದನ್ನು ಕೊಡುವವನು ಆದ ಶ್ರೀರಮಣನನ್ನು ಬಿಟ್ಟು, ದುಃಖ ಭಯ ಶೋಕ ಮೋಹಾದಿ ವ್ಯಾದಿಗಳನ್ನು ಕೊಡುವವನು, ಬೇಕಾದುದನ್ನು ಕೊಡಲಾರದವನು, ತುಚ್ಛನು ಆದ ನೀಚ ಮಾನವನನ್ನು ಭಜಿಸಿದ ನನಕಿಂತಲೂ ದಡ್ಡರುಂಟೇ? ಆಹಾ! ದೇಹವನ್ನೆಷ್ಟು ಘಾಸಿಸಿದೆ! ಮನಕ್ಕೆ ಎಷ್ಟು ತಾಪವನ್ನು ಕೊಟ್ಟೆ! ಅತಿ ವಿಗರ್ಹಿತವಾದ ಸಾಂಕೇತಿಕ ವೃತ್ತಿಯಿಂದ ಜೀವಿಸಿದೆ. ನನ್ನ ಜೀವನವೇ ವ್ಯರ್ಥವಾಯಿತು. ದೇಹರತಿಯಾಶೆಯಿಂದ ಅರ್ಥವನ್ನಿತ್ತ ಸ್ತ್ರೀದಾಸಜನರ ವಿಷಯಸುಖದಾಟದ ಗೊಂಬೆಯಾದೆ.

ಈ ದೇಹವೆಂಬ ಮನೆ ಹಾಳಾಯಿತು! ಬೆನ್ನೆಲುಬೆಂಬ ದೂಲ; ಮಿಕ್ಕ ಎಲುಬುಗಳೇ ಜಂತಿ ಗಳು; ಮೇಲೆ ಬಿಗಿದ ಮಾಂಸದ ಗೂಡು; ನರಗಳೇ ಹಗ್ಗಗಳು; ಅದರ ಮೇಲೆ ಚರ್ಮದ ಹೊದಿಕೆ; ಸದಾ ಸೋರುವ ನಾರುವ ನವದ್ವಾರಗಳು; ಒಳಗಿರುವ ವಿಣ್ಮೂತ್ರಗಳು; ಇಂತಹ ಕೊಂಪೆಯಲ್ಲಿ ಸುಖವಿದೆಯೆಂದು ತಿಳಿದ ನನ್ನಂತಹ ಅವಿವೇಕಿಯು ಬೇರಿಲ್ಲ. ಈ ವಿದೇಹಪುರವು ಪುಣ್ಯವಂತರ ಬೀಡು. ಇಂತಹ ಪವಿತ್ರ ನಗರದಲ್ಲಿ ತನ್ನನ್ನೇ ಕೊಡುವ ನಾಶರಹಿತನಾದ ಶ್ರೀಹರಿ ಯೆಂಬ ಭರ್ತನನ್ನು ತೊರೆದು, ಪರಸಂಗವನ್ನು ಬಯಸಿದ ಕುಲುಟೆಯಾದ ನಾನೇ ಪಾಪಿಯು; ಆದುದರಿಂದ ಇನ್ನಾದರೂ ತಿಳಿದು, ಶ್ರೇಷ್ಠತಮನು ಐಶ್ವರ್ಯಾದಿ ಸಕಲ ಗುಣಧಾಮನು ಶರೀರಧಾರಿಗಳ ಅಂತರ್ಯಾಮಿಯು ಆದ ಶ್ರೀಹರಿಯನ್ನು ಇಂದು ಶುದ್ಧವಾಗಿರುವ ಮನವೆಂಬ ಮಣಿಯನ್ನಿತ್ತು ಕೊಂಡು, ಹೃದಯಪೇಟಿಕೆಯಲ್ಲಿ ಬಚ್ಚಿಟ್ಟು, ಅವನೊಡನೆ ರಮೆಯಂತೆ ಕೂಡಿ, ನಿಶ್ಚಿಂತಳಾಗುವೆನು.

ಬೇಡಿದುದನ್ನು ಕೊಡುವೆನೆಂಬ ನರರು ಏನು ಕೊಡುವರು? ಅವರೇ ಜನನ ಮರಣಗಳ ಮಧ್ಯದಲ್ಲಿ ತೊಳಲಾಡುತ್ತಿರುವಾಗ ಭಾರ್ಯಳ ಕಾಮಪೂರಣವಿನ್ನೆಂತು ಮಾಡುವರು? ದೇವತೆಗಳು ಕೂಡ ಕಾಲಗಜದ ಕಾಲಕೆಳಗೆ ನುಶಿಯಾಗುತ್ತಿರುವಾಗ ಮನುಜನ ಪಾಡೇನು? ಭಗವನ್! ನಾರಾಯಣಾ! ಯಾವ ಪುಣ್ಯಕರ್ಮದಿಂದ ಪ್ರೀತನಾಗಿ ನನಗೆ ಈ ಮತಿಯನ್ನಿತ್ತೆ?

ದುರಾಶಾದುಃಖಿತಳಾದ ದುರ್ಭಗಳಿಗೆ ವೈರಾಗ್ಯವಂಕುರಿಸುವಂತೆ ಮಾಡಿ, ನೀನಾಗಿ ಸುಖವನ್ನೀಯಲು ಬಂದು ಮನೋಮಂದಿರದಿ ನೆಲಸಿದೆ! ಶಬ್ದಾದಿ ವಿಷಯನಿಮಿತ್ತ ಕ್ಲೇಶಗಳನ್ನು ಈ ನಿರ್ಭಾಗ್ಯಳಿಗೆ ಕೊಡಬೇಡ ಪ್ರಭೋ! ವಿಶ್ವಬಂಧವಿಧ್ವಂಸನ ವಿಚಕ್ಷಣ ವಾಜ ನಿನ್ನ ಚರಣಾರಾಮವಿಹರಣವೆನ್ನಗೆ ದಯಪಾಲಿಸು! ನೀ ಕೊಟ್ಟ ವೈರಾಗ್ಯ ಭಾಗ್ಯವನ್ನು ಶಿರದಲ್ಲಿ ಧರಿಸುವೆನು. ನೀನಲ್ಲದಿತರ ದುರಾಶೆಗಳನ್ನು ಪರಿಹರಿಸುವೆನು. ನಿನ್ನ ಚರಣಾರವಿಂದ ಸೇವೆಯನ್ನು ಸ್ವೀಕರಿಸುವೆನು. ನೀನೇ ಆತ್ಮರಮಣನೆಂದು ವರಿಸುವೆನು. ಇದೇ ಭಕ್ತಿಶ್ರದ್ಧೆಯಿಂದ ನೀ ಕೊಟ್ಟದ್ದರಿಂದ ಸಂತುಷ್ಟಳಾಗಿ ಜೀವಿಸುವೆನು; ನಿನ್ನಿಂದ ಕೂಡಿ ಸುಖವಾಗಿ ವಿಹರಿಸುವೆನು. ಸಂಸಾರಕೂಪದಲ್ಲಿ ಬಿದ್ದು ವಿಷಯವಿಷದಿಂದ ವಿವೇಕವೆಂಬ ಕಣ್ಣನ್ನು ಕಳೆದುಕೊಂಡು ಕಾಲವೆಂಬ ಹೆಬ್ಬಾವಿನ ತುತ್ತಾಗಿ ನರಳುವ ನನ್ನನ್ನು ಶ್ರೀಹರೇ! ನೀನಿಲ್ಲದಿನ್ನಾರು ಕಾಪಾಡಬಲ್ಲರು? ಶ್ರೀಶ! ನೀನೇ ಜೀವರಕ್ಷಕನು. ಕಾಲಕರಾಳ ವದನಗ್ರಸ್ತವಾದ ಈ ಜಗತ್ತು ನಿನ್ನನ್ನು ಮರೆತಿದೆ; ಆದರೂ ನ್ನೀನದನ್ನು ಮರೆತಿಲ್ಲ. ವೈರಾಗ್ಯ ಭಕ್ತಿಗಳನ್ನಿತ್ತು ಕಾಪಾಡು.

ರಾಜನ್! ಕೆಲವು ಅಪ್ಸರೆಯರು ರಮಾವೇಶಸಮಯದಲ್ಲಿ ಭಗವದ್ಭಾರ್ಯರಾಗಲು ಯೋಗ್ಯರಿರುವರು. ಅವರಲ್ಲಿ ಒಬ್ಬಳಾದ ಪಿಂಗಳೆಗೆ ಇಂತು ಉಪಾಸನೆಯು ಸರಿಯಾಗಿದೆ. ಹಾಗೆಂದು ತದನ್ಯರು ಭರ್ತೃತೋಪಾಸನೆಯಿಂದ ಮಹಾದೋಷಯುತರಾಗುವರು. ಇಂತು ನಿಶ್ಚಯಿಸಿ, ದುರಾಶೆಯನ್ನು ಬಿಟ್ಟು, ವೈರಾಗ್ಯವನ್ನು ತೊಟ್ಟು, ಶಯ್ಯೆಯಲ್ಲಿ ನಿಶ್ಚಿಂತಳಾಗಿ ನಿದ್ರಿಸಿದಳು. ಅದನ್ನು ನೋಡಿ ನಾನು ಆಶೆಯೇ ದುಃಖಕಾರಣವು; ನಿರಾಶೆಯೇ ಪರಮ ಸುಖಸಾಧನವು ಎಂದು ಕಲಿತೆನು.

## ೯. ಅವಧೂತ ಯದು ಸಂವಾದ

ಅವಧೂತನು ನುಡಿದನು–

ನಮಗೆ ಇಷ್ಟಸಾಧನವೆಂದು ಕಷ್ಟಪಟ್ಟು ಸಂಪಾದಿಸಿದ ದ್ರವ್ಯವು ನಷ್ಟವಾದಾಗ ಬಲು ದುಃಖವಾಗುವುದು. ಅದನ್ನರಿತು ಅಕಿಂಚನನಾಗಿರುವ ಜ್ಞಾನಿಯು ಅನಂತ ಸುಖವನ್ನು ಪೊಂದುವನು. ಒಂದು ಕುರರಪಕ್ಷಿಯು ಸಿಕ್ಕ ಮಾಂಸಖಂಡವನ್ನು ತಿನ್ನುತ್ತಿರಲು, ಬರಿಗೈಲಿದ್ದ ಇತರ ಖಗಗಳದನ್ನು ಮುತ್ತಿ, ಎಲ್ಲಿ ಹೋದರೂ ಬಿಡದೆ ಪೀಡಿಸಿದೆವು. ಕುರರು ಆಗ ಮಾಂಸವನ್ನು ಬಿಟ್ಟು ಅವುಗಳ ಪೀಡೆಯಿಂದ ಪಾರಾಯಿತು. ಅದನ್ನು ನೋಡಿ ನಾನು ಪರಿಗ್ರಹವು ದುಃಖಾಪಾದಕವೆಂದು ಕಲಿತೆನು. ಮಾನಾಪಮಾನಗಳನ್ನು ದಾರಾಸುತವಿತ್ತಗಳೆಂಬ ಈಷಣತ್ರಯವನ್ನು ಪರಿತ್ಯಜಿಸಿ, ಶ್ರೀಹರಿಯಲ್ಲಿ ಮನವಿಟ್ಟು, ಬಾಲಕನಂತೆ ನಿಶ್ಚಿಂತನಾಗಿರುವೆನು. ಇದು ಕೂಸಿನಿಂದ ಕಲಿತ ಬುದ್ಧಿ.

ಲೋಕದಲ್ಲಿ ಅತ್ಯಂತ ಮುಗ್ಧನಾದ ನರನು ಮತ್ತು ಸತ್ವಾದಿದೂರನಾದ ಶ್ರೀಹರಿಯನ್ನು ತಿಳಿದವನು – ಇವರೀರ್ವರು ನಿಶ್ಚಿಂತರಾಗಿರುವರು.

ಒಬ್ಬಳು ಕನ್ಯೆ ತನ್ನನ್ನು ನೋಡಲು ಮನೆಗೆ ಬಂದ ಬಂಧುಗಳನ್ನು ತಾನು ಉಪಚರಿಸಬೇಕಾಯಿತು. ತಂದೆ ತಾಯಿ ಮೊದಲಾದವರೆಲ್ಲರು ಕಾರ್ಯಾಂತರಾಸಕ್ತರಾಗಿ ಹೋಗಿರುವುದರಿಂದ ಅವಳು ಒಳಳಲ್ಲಿ ನೆಲವನ್ನಿಟ್ಟು ಕುಟ್ಟತೊಡಗಿದಳು. ಇಂತು ಬಂದವರ ಊಟಕ್ಕೆಂದು ಅಕ್ಕಿಯನ್ನು

ಕುಟ್ಟುವ ಕನ್ಯೆಯ ಕೈಯ ಕಂಕಣಗಳು ಗಲುಗಲುರೆಂದು ಶಬ್ದಗೈದವು. ತಾನು ನೆಲ್ಲುಕುಟ್ಟುತ್ತಿರುವುದನ್ನು ಅವರಿಗೆ ತಿಳಿಯದಂತೆ ಮಾಡಬೇಕೆಂದು ವಿವಾಹಾರ್ಹಳಾದ ಆ ಕನ್ಯಾಮಣಿಯು ತನ್ನ ಕೈಯಲ್ಲಿದ್ದ ಬಳೆಗಳನ್ನು ಒಡೆಯುತ್ತಾ ಲಕ್ಷಣಹೀನಳಾಗಬಾರದೆಂದು ಎರಡೆರಡು ಬಳೆಗಳನ್ನುಳಿಸಿದಳು. ನೆಲ್ಲುಕುಟ್ಟುವಾಗ ಮತ್ತೆ ಶಬ್ದವಾಗಲು, ಅವಳು ಜಿಗುಪ್ಸೆಯಿಂದ ಒಂದೊಂದು ಕೈಯಲ್ಲಿ ಒಂದೊಂದೇ ಬಳೆಯನ್ನುಳಿಸಿ, ಇನ್ನೊಂದನ್ನು ಒಡೆದೊಗೆದಳು. ಆಗ ನಿಶ್ಶಬ್ದವಾಗಿ, ಅವಳು ತನ್ನ ಕಾರ್ಯವನ್ನು ಮಾಡಿ ಮುಗಿಸಿದಳು. ಕಂಕಣನಿಕ್ವಣನವನ್ನು ಕೇಳದೇ ಇದ್ದ ಬಂಧುಗಳು ಅವಳನ್ನು ವರಿಸಿ ಹೋದರು. ಆ ಕನ್ಯೆಯಿಂದ ನಾನು ಕಲಿತುದನ್ನು ಕೇಳು.

ಬಹುಜನರು ಕಲೆತ ಕಡೆ ಜಗಳವಾಡುವುದು – ಇಬ್ಬರಿದ್ದರೆ ಲೋಕವಾರ್ತೆಯು ನಡೆಯುವುದು. ಕುಮಾರೀ ಕಂಕಣದಂತೆ ಏಕಾಂತನಾಗಿದ್ದರೆ ನಿಶ್ಚಿಂತೆ. ಸಂಗವು ದುಷ್ಟರಿಂದ ಸರ್ವಥಾ ಕೂಡದು. ಸುಜನರು ಬಹುಜನರಿದ್ದರೂ, ಅವರ ಸಹವಾಸವು ವಾಂಛನೀಯವೇ. ಅದು ಶ್ರೀಹರಿವಾರ್ತಾ ಮಧುರವಾಗಿರುವುದು ಎಂದು ನಾನು ತಿಳಿದೆನು.

ಜಿತಶ್ವಾಸನು, ಜಿತಾಸನನು ಆಗಿ ಯೋಗಿಯು ಶ್ರೀಹರಿಯಲ್ಲಿ ಮನವನ್ನಿಡಬೇಕು. ವೈರಾಗ್ಯವಂತನಿಗೆ ಅಭ್ಯಾಸಬಲದಿಂದ ಮನವು ಏಕಾಗ್ರವಾಗಿ, ಮಿಕ್ಕೆಲ್ಲವನ್ನು ಮರೆತುಬಿಡುವುದು. ಆಗ ಮನದಲ್ಲಿದ್ದ ದುಷ್ಟಕರ್ಮಗಳೆಂಬ ಕಲ್ಮಷವು ನಷ್ಟವಾಗುವುದು. ಸತ್ವಗುಣದಿಂದ ರಜಸ್ತಮೋಹಾನಿಯಾದಂತೆಲ್ಲ ನರನು ಬಾಹ್ಯ ಪ್ರಾಕೃತ ಮದವನ್ನು ನಾಶಮಾಡುವನು. ಕಟ್ಟಿಗೆಯನ್ನು ಕೊಡದಾಗ ಆರುವ ಅಗ್ನಿಯಂತೆ, ಅಚಿನ್ಮನವು ನಷ್ಟವಾಗಲು, ಚಿನ್ಮನವು ತಾನಾಗಿ ಬೆಳಗಲಾರಂಭಿಸಿ, ಅಪರೋಕ್ಷಜ್ಞಾನವನ್ನು ಪುಟ್ಟಿಸುವುದು. ಆಗ ಬ್ರಹ್ಮಜ್ಞಾನಿಯ ಚಿತ್ತವು ಶ್ರೀಹರಿವಶವಾಗಿ, ಹೊರಗಿನ ವಿಷಯಗಳನ್ನೂ, ಒಳಗಿನ ವಿಷಯ ವಾಸನೆಯನ್ನೂ ಲಕ್ಷಿಸದೆ, ಶ್ರೀಶಾಯುತ್ತವಾಗುವುದೆಂದು ನಾನು ಶರಕಾರನಿಂದ ಕಲಿತೆನು. ಅವನ ಬಾಣದ ಗುರಿಯನ್ನು ನೋಡುತ್ತಾ, ಮಾರ್ಗದಿ ಹೋಗುತ್ತಿರುವ ರಾಜನನ್ನೂ ಹಾದು ಹೋದ ವೇಶ್ಯೆಯನ್ನೂ ಕಾಣದಾಗಿದ್ದನು. ಏಕಾಗ್ರಚಿಂತನವೇ ಶ್ರೀಹರಿಯ ಅಪರೋಕ್ಷ ಕಾರಣವೆಂದು ಅವನು ನನಗೆ ಕಲಿಸಿದನು.

ಒಬ್ಬನೇ ಇರಬೇಕು; ಕುಜನಸಂಗವನ್ನು ಬಿಡಬೇಕು. ಮನೆಮಾರೆಂದು ಕಷ್ಟಪಟ್ಟು ಫಲವಿಲ್ಲ. ಇಂತು ಗುಹಾವಾಸಿ ವಾಸುದೇವನನ್ನು ಬಿಡದೆ ಚಿಂತಿಸಬೇಕೆಂದು ಸರ್ಪವನ್ನು ನೋಡಿ ನಾನು ಕಲಿತೆನು. ಮನೆಮಾಡಿದೆಡೆ ಸಂಸಾರಬಂಧ; ಅನಂತದಃಖತರವಾದ ಗೃಹಾರಾಮಾದಿ ಸಂಪಾದನವು ಆಯುರ್ವ್ಯಯ ಕಾರಣವಾಗಿದೆ. ಅನಿತ್ಯದೇಹದಲ್ಲಿರುವ ಜೀವನಿಗೆ ಗೃಹಾರಾಮಾದಿಗಳಿಂದೇನು ಸುಖ? ಅವು ಇಲ್ಲೇ ನಿಲ್ಲುವುವು. ಅವನ್ನು ಬಿಟ್ಟು ಅವನು ಪೋಗುವನು. ಸರ್ಪವು ಇನ್ನೊಬ್ಬರು ನಿರ್ಮಿಸಿದ (ಇರುವೆಗಳು) ಮನೆಯಲ್ಲಿ ಸೇರಿಕೊಳ್ಳುವುವು. ಸ್ವಲ್ಪವೇ ಆಹಾರವನ್ನು ಒಂದೊಂದು ಸಲ ಗಾಳಿಯನ್ನು ಮಾತ್ರ ಸ್ವೀಕರಿಸಿ, ಅಷ್ಟರಿಂದಲೇ ಜೀವಿಸಿರುವುವು.

ಶ್ರೀನಾರಾಯಣನು ಸರ್ವೋತ್ತಮನು; ಸರ್ವಜೀವಜಡ ವಿಲಕ್ಷಣನು. ಕ್ರೀಡಾದಿ ಗುಣವಿಶಿಷ್ಟನಾಗಿ ಅವನು ಹಿಂದಿನ ಬ್ರಹ್ಮಾಂಡವನ್ನು ಪೊಟ್ಟೆಯಲ್ಲಿಟ್ಟು, ಮತ್ತೆ ಸೃಷ್ಟಿಕಾಲದಲ್ಲಿ ಅದನ್ನು ಹೊರಗೆಡಹುವನೆಂದು ಜೇಡರಹುಳುವನ್ನು ನೋಡಿ, ನಾನು ತಿಳಿದೆನು. ಶ್ರೀಹರಿಯೇ ಸರ್ವಾಧಾರನು; ಅವನಿಗೆ ಇತರರು ಆಧಾರವಲ್ಲ; ಅವನಿಗೆ ಸಮರಿಲ್ಲ; ಅಧಿಕರಂತೂ ಮೊದಲೇ ಇಲ್ಲ. ಆಧಾರಾಧೇಯಗಳಲ್ಲಿಯು ಕಾರ್ಯಕಾರಣಗಳಲ್ಲಿಯೂ ಕೂಡ ತತ್ತಚ್ಛಕ್ತಿಪ್ರದನಾಗಿ,

ಶ್ರೀಹರಿ ನೆಲಸಿರುವನು. ಆಯಾ ಕಾಲಕ್ಕೆ ತಕ್ಕಂತೆ ಸೃಜನಸಂಹರಣಸಮರ್ಥನಾದ ಶ್ರೀಹರಿಯು ಗುಣಗಳ ಸಾಮ್ಯದಿಂದ ಪ್ರಳಯವನ್ನೂ ತ್ರಿಗುಣಗಳ ಮಿಶ್ರಣದಿಂದ ಸೃಷ್ಟಿಯನ್ನೂ ಸ್ವತಂತ್ರನಾಗಿ ಮಾಡುತ್ತಿರುವನು. ಇದು ಅವನ ಆಟ.

ಸತ್ತ್ವಾದಿ ಗುಣಗಳ ಸಾಮ್ಯಾವಸ್ಥೆಯೆಂದರೆ ಪ್ರಳಯ. ಆಗ ಶ್ರೀಹರಿಯು ಕಾರ್ಯಕಾರಣಾತ್ಮಕ ಜಗತ್ತನ್ನು ನಿಯಮಿಸುವ ಬ್ರಹ್ಮ- ಸರಸ್ವತಿಯರನ್ನು ತನ್ನಲ್ಲಿಟ್ಟು, ಸಮಾಧಿಕರಹಿತನು ಸ್ವತಂತ್ರನು ಆಗಿ, ಜಗದ್ವ್ಯಾಪಾರರಹಿತನಾಗಿರುವನು. ಸೃಷ್ಟಿಕಾಲವು ಬರಲು, ತನ್ನನ್ನು ತಾನೇ ಬಹುರೂಪದಿಂದ ಸೃಜಿಸಿ, ರಮೆಯಿಂದ ಕೂಡಿ ವಿಹರಿಸುವನು. ಅಪ್ರಾಕೃತ ದೇಹರಾದ ರಮರಮೇಶರು ತ್ರಿಗುಣಗಳಿಂದ ಸೃಜಿಸುವರು. ಪ್ರಕೃತಿಯಿಂದ ಮೊದಲು ಬ್ರಹ್ಮಪ್ರಾಣರು ಉದಯಿಸಿದರು. ಅವರಲ್ಲಿ ಪ್ರಕೃತಿನಿಯಾಮಿಕೆಯರಾದ ಸರಸ್ವತೀ ಭಾರತಿಯರು ರಮಿಸಲು ಸರ್ವಜೀವಜಡ ಜಗವು ಉತ್ಪಾದಿತವಾಯಿತು.

ಜೇಡರಹುಳವು ತನ್ನ ಹೃದಯದ ಲಾಲಾದಿ ರಸದಿಂದ ಗೂಡನ್ನು ಕಟ್ಟಿ, ಆಟವಾಡಿ, ಮತ್ತೆ ನುಂಗಿಬಿಡುವಂತೆ ಪರಮೇಶ್ವರನು ಸೃಜನಾದಿಗಳನ್ನು ಮಾಡುವನೆಂದು ನಾನು ತಿಳಿದೆನು.

ದೇಹಧಾರಣಗಳನ್ನು ಮಾಡಿದ ಜೀವನು ಸ್ನೇಹಬುದ್ಧಿಯನ್ನೋ ಅಥವಾ ದ್ವೇಷಭಯ ಕಾಮಾದಿಗಳನ್ನೋ, ಹೆಚ್ಚಾಗಿ ಮಾಡಿದರೆ, ಅವನಿಗೆ ತದ್ವಿಷಯರಾದವರಲ್ಲಿ ಸಂತತ ಸ್ಮರಣವು ಬರುವುದು. ಸುಖರೂಪಿಯಾದ ಹರಿಯನ್ನು ಸ್ನೇಹದಿಂದ ಚಿಂತಿಸಿದವನು ಸುಖರೂಪಿಯೇ ಆಗುವನು. ಸುಖರೂಪಿ ಹರಿಯನ್ನು ದುಃಖಕಾರಕ ದ್ವೇಷದಿಂದ ಚಿಂತಿಸಿದವನು ದುಃಖವನ್ನು ಹೊಂದುವನು. ದ್ವೇಷದಿಂದ ಸುಖರೂಪ ಮೋಕ್ಷವೆಂದಿಗೂ ಇಲ್ಲ. ಉಪಾಸನೆಯಂತೆ ಫಲವು ನಿಯತವಾಗಿರುವುದರಿಂದ ಅಭಕ್ತರಿಗೆ ಮೋಕ್ಷವಿಲ್ಲ. ಭಕ್ತರಿಗೆ ತಮವಿಲ್ಲ. ಪೂರ್ಣಗುಣ(ಭೂ) ನೆಂದು ಉಪಾಸಿಸುವ ದೇವಾದಿ ಸುಜೀವರು ಮೋಕ್ಷವನ್ನು ಹೊಂದುವರು. ಅಪೂರ್ಣನು ದುಃಖರೂಪನು ಎಂಬಿತ್ಯಾದಿ ದೋಷವನ್ನು ಉಪಾಸಿಸುವ (ಅಭೂತಿ) ಅಸುರಜೀವರು ತಮಸ್ಸಿನಲ್ಲಿ ನಿರಂತರ ದುಃಖವನ್ನು ಹೊಂದುವರು.

ಕಣಜವು ತಂದಿಟ್ಟ ಹುಳವು ಮಣ್ಣಿನ ಮನೆಯಲ್ಲಿದ್ದು, ಅದನ್ನೇ ಚಿಂತಿಸುತ್ತಾ ಅಲ್ಪ ದ್ವೇಷವನ್ನು ಮಾಡಿದ್ದರೂ, ಅದನ್ನು ಬಿಟ್ಟು, ಆಹಾರದಾತನೆಂಬ ಸ್ನೇಹದಿಂದ ಅನುಸ್ಮರಿಸಿ, ಕೊನೆಗೆ ತಾನೂ ಅದರಂತೆ ಮತ್ತೊಂದು ಕಣಜವೇ ಆಗಿ, ಹಾರಿಹೋಗುವುದು. ಕಣಜದ ಅನುಗ್ರಹದಿಂದ ಅದು ಕಣಜವಾಯಿತೆಂದಿಲ್ಲ ಮತ್ತು ಅದರ ಕೈವಾಡವೂ ಇಲ್ಲ. ಸ್ವತಂತ್ರನಾದುದರಿಂದ ಶ್ರೀಹರಿಯು ಭಕ್ತರಿಗೇ ಮೋಕ್ಷವನ್ನೂ ದ್ವೇಷಿಗಳಿಗೆ ತಮಸ್ಸನ್ನೂ ತನ್ನ ಇಚ್ಛಾನುಸಾರವಾಗಿ ಕೊಡುವನು. ಕಣಜದ ಪೂರ್ವರೂಪವೇ ಬೇರಾಗುವುದೆಂದೂ ಇಲ್ಲದಿರುವಂತೆ ಜೀವನು ಮುಕ್ತನಾದರೂ ಜೀವನಾಗಿಯೇ ಇರುವನು. ಅವನು ಪರಬ್ರಹ್ಮನೆಂದಿಗೂ ಆಗಲಾರನು.

ಇನ್ನು ನನ್ನ ಶರೀರವೇ ನನಗೆ ಗುರುವೆನಿಸಿದೆ. ಅದರಿಂದ ಕಲಿತಿರುವ ಬುದ್ಧಿಯನ್ನು ಕೇಳು! ಈ ದೇಹದಲ್ಲಿಯೇ ನನ್ನ ಉಪಾಸ್ಯ ದೈವನಿರುವನು. ಅವನು ಬಲಜ್ಞಾನಾದ್ಯನಂತ ಕಲ್ಯಾಣಗುಣ ನಿಧಿಯಾಗಿರುವನೆಂದು ವಿವೇಕದಿಂದ ತಿಳಿದು, ವಿರಕ್ತಿಯಿಂದ ಇತರ ವಿಷಯಗಳನ್ನೆಲ್ಲ ಬಿಟ್ಟು, ಬ್ರಹ್ಮ ವಿಚಾರವನ್ನು ಮಾಡಲನುವಾಗಿದೆ ಈ ದೇಹ. ತತ್ವವಿಚಾರ ಸಾಧನರು ಗುರುಗಳಲ್ಲವೇ? ರಾಜನ್! ಆದರೂ ಇದು ಮಾತಾಪಿತೃಗಳ ಅಧೀನವು ಹಾಗೂ ಪಂಚಭೂತಾತ್ಮಕವು ಆಗಿದೆ.

ನನ್ನದಲ್ಲ; ಇಂತು ತಿಳಿದು ನಾನು ಇದರಿಂದ ವಿರಕ್ತಿಯನ್ನು ಕಲಿತಿರುವೆನು. ವೃಕ್ಷದಂತೆ ಈ ದೇಹವು, ಹೆಂಡತಿ, ಮಕ್ಕಳು, ಧನ, ಪಶು ಭೃತ್ಯ, ಮನೆ, ಬಂಧುವರ್ಗವನ್ನು ಸಂಪಾದಿಸಿ, ಅವರಿಗೆ ಬೇಕಾದ ಪ್ರಿಯಪದಾರ್ಥಗಳನ್ನು ತಂದುಕೊಡಲು ಹವಣಿಸಿ, ಕಷ್ಟಪಟ್ಟು, ಅವರನ್ನು ಪೋಷಿಸುತ್ತಿದೆ; ಹಾಗೆ ಶ್ರಮಿಸುತ್ತಾ, ಕಾಲಕಳೆದು ತನ್ನಂತೆ ಇರುವ ಮಕ್ಕಳಿಗೆ ಬೀಜವನ್ನಿತ್ತು ಪುಟ್ಟಿಸಿ, ತಾನು ಸಾಯುತ್ತಿದೆ.

ಜಿಹ್ವೆಯು ರುಚಿಗಾಗಿ ಈ ಜೀವನವನ್ನೊಂದೆಡೆ ಸೆಳೆಯುತ್ತಿದೆ. ಶಿಶ್ನವು ಮತ್ತೊಂದೆಡೆ. ತ್ವಕ್, ಉದರ, ಶ್ರವಣ, ಮೊದಲಾದ ಇಂದ್ರಿಯಗಳೆಲ್ಲವು ಹತ್ತು ಸವತಿಯರು ತಮ್ಮ ಗಂಡನನ್ನು ಅತ್ತಿತ್ತ ಎಳೆದಾಡಿದಂಗೆ ಜೀವನನ್ನು ಸೆಳೆದಾಡಿ ಕಷ್ಟಪಡಿಸುವುವು. ತನ್ನ ಅಧೀನಳಾದ ಪ್ರಕೃತಿಯಿಂದ ಕೂಡಿ, ಶ್ರೀರಮಣನು ತನ್ನಿಚ್ಛೆಯಂತೆ ವೃಕ್ಷ ಬೀಜಗಳನ್ನು ಸರ್ಪ ಪಶು ಪಕ್ಷಿ ದಂಶ ಮಶಕ ಮತ್ಸ್ಯ ಮೊದಲಾದ ಸಕಲ ಜೀವಶರೀರಗಳನ್ನು ಭೂತಗಳಿಂದ ಸೃಜಿಸಿದನು. ಆ ಯೋನಿಗತಜೀವರ ಸಾಧನವೈಕಲ್ಯವನ್ನರಿತು ಮನುಜ ಶರೀರವನ್ನು ನಿರ್ಮಿಸಿ, ಇದರಿಂದ ಜೀವನು ಪರಬ್ರಹ್ಮವಿಚಾರವನ್ನು ಮಾಡಿ ಜ್ಞಾನಿಯಾಗುವನೆಂದು ಕೃತ್ಯಕೃತ್ಯನಾದನು. ಅಂತಹ ಮನುಜಶರೀರವಿದು; ಬಹು ಜನ್ಮಗಳಾದ ಮೇಲೆ ಬಂದಿದೆ; ಮಹಾ ಪ್ರಯೋಜನಕಾರಿಯಾದುದಾದರೂ ಅಶಾಶ್ವತವಾಗಿದೆ ಎಂದರಿತು ಬುದ್ಧಿವಂತನು ಮರಣವು ಬಾರದ ಮುನ್ನ ಶರೀರೇಂದ್ರಿಯಾದಿ ಶೈಥಿಲ್ಯವಾಗದ ಮುನ್ನ ಬೇಗನೆ ತನ್ನ ಶ್ರೇಯಃಸಾಧನವಾದ ಜ್ಞಾನಕ್ಕಾಗಿ ಪ್ರಯತ್ನಿಸಬೇಕು. ಎಲ್ಲ ಯೋನಿಗಳಲ್ಲಿಯು ಶರೀರ ಯಾತ್ರೆ ಎಂತೋ ಒಂದು ವಿಧವಾಗಿ ಅಪ್ರಯತ್ನವಾಗಿದ್ದರೂ ನಡದೇ ನಡೆಯುವುದು. ಇಂತು ವೈರಾಗ್ಯವನ್ನು ಪೊಂದಿ, ಹೃದಯಮಂದಿರದಿ ನೆಲಸಿರುವ ಗೋವಿಂದಪಾದಾರವಿಂದನಖಮಣಿಚಂದ್ರಿಕೆಯ ಬೆಳಕಿನಲ್ಲಿ ದುಷ್ಟಸಂಗದೂರನಾಗಿ, ಅಹಂಕಾರವಿಲ್ಲದೆ ತಿರುಗುತ್ತಿರುವೆನು. ಒಬ್ಬ ಗುರುವಿನಿಂದ ಬಂದ ಜ್ಞಾನವು ಪೂರ್ಣವೆನಿಸುವುದಿಲ್ಲ. ಸಮಾಧಿಕರಹಿತನಾದ ಬ್ರಹ್ಮವಸ್ತುವೊಂದೇ ಆದರೂ ಅದನ್ನು ಜ್ಞಾನಿಗಳು ಅನೇಕ ವಿಧವಾಗಿ ವರ್ಣಿಸುವರು.

ಇಂತು ನುಡಿದು ಅವಧೂತನು ಸುಮ್ಮನಾದನು. ಆ ಮಹಾಜ್ಞಾನಿಯನ್ನು ವಂದಿಸಿ, ಯದುರಾಜರು ಪೂಜಿಸಿ, ಕಳಿಸಿದನು. ಅವನ ಉಪದೇಶವನ್ನು ಕೇಳಿ, ನಮ್ಮ ಪೂರ್ವಜನಾದ ಯದುರಾಜನು ಇಂದು ನಾಳೆ ಗೋವಿಂದನ ಭಜಿಸುವೆನೆಂಬುವ ನರನನ್ನು ಕಾಲವು ಗೊತ್ತಾಗದಂತೆ ಬಂದು ನುಂಗಿಬಿಡುವುದೆಂತರಿತು ಸರ್ವಸಂಗದೂರನಾಗಿ, ಭಾರತೀಶಾಂತರ್ಗತ ರಮಾರಮಣನನ್ನು ಪ್ರೀತಿಯಿಂದ ಭಜಿಸಿದನು.

## ೧೦. ಜ್ಞಾನ ಸಾಧನ ನಿರೂಪಣೆ

ಶ್ರೀಶುಕನು ಹೇಳಿದನು.

ಶ್ರೀಕೃಷ್ಣನು ಉದ್ಧವನಿಗಿಂತೆಂದನು. ನಾನು ಹೇಳಿರುವಂತೆ ನನ್ನನ್ನೇ ನಂಬಿ, ಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನವನ್ನು ಫಲಾಭಿಸಂಧಿರಹಿತವಾದ ಮನದಿಂದ ಮಾಡಬೇಕು. ಯಥಾವಸ್ತು ಜ್ಞಾನಿಯು ಸ್ವವಿಹಿತ ಕರ್ಮಾಚರಣದಿಂದ ಪರಿಪೂತಹೃದಯನಾಗುವನು. ಶಬ್ದಾದಿಗಳಲ್ಲಿ ವಿರಕ್ತನಾದವನಿಗೆ ಸರ್ವಕರ್ಮಾರಂಭಗಳು ದುಃಖಫಲಗಳೇ ಎಂಬ ಜ್ಞಾನವು ಪುಟ್ಟುವುದು.

ನಿದ್ರೆಯನ್ನು ಮಾಡುವಾಗ ಸ್ವಪ್ನವನ್ನು ನೋಡಿದ ಮನುಜನು ಸ್ವಪ್ನಪದಾರ್ಥಗಳನ್ನು ಜಾಗ್ರತ್ಪದಾರ್ಥಗಳೆಂದು ತಿಳಿದರೆ ಅದು ಭ್ರಮೆಯೇ ಸರಿ! ಅಂತೆಯೇ ಮನೋರಥ ಕಲ್ಪಿತಗಳು ವಾಸ್ತವವೆಂಬುದು ಭ್ರಮವೇ. ಭ್ರಮವು ಇದ್ದ ಭೇದವನ್ನು ತೋರಗೊಡದೆ ಅನ್ಯಥಾ ಜ್ಞಾನವನ್ನು ದೃಢಪಡಿಸುವುದು. ಭ್ರಮವು ಬಾಹ್ಯಮನಸ್ಸಿನಲ್ಲಿ ಪುಟ್ಟುತ್ತಿದೆ. ಆದುದರಿಂದ ಮನಶ್ಶುದ್ಧಿಯಾಗಿ, ಯಥಾರ್ಥಜ್ಞಾನವಾಗಬೇಕಾದರೆ ವಸ್ತುವಿನ ಯಥಾರ್ಥ ಸ್ಥಿತಿಯನ್ನು ವಿಚಾರಮಾಡಿ ತಿಳಿದು ಫಲಾಪೇಕ್ಷಾರಹಿತವಾದ ಕರ್ಮಗಳನ್ನು ಮಾಡಿ, ನನಗೆ ಸಮರ್ಪಿಸಬೇಕು. ವೇದಗಳಿಗೆ ಕರ್ಮಚೋದನದಲ್ಲಿ ಮಾತ್ರ ತಾತ್ಪರ್ಯವಲ್ಲ; ಅವು ಶ್ರೀಹರಿಗುಣ ಪ್ರತಿಪಾದಕವಾಗಿದೆ ಎಂದು ಚೆನ್ನಾಗಿ ವಿಚಾರಮಾಡಿ, ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು.

ಅಹಿಂಸಾ, ಸತ್ಯ, ಆಸ್ತೇಯ, ಅಸಂಗ, ದುಷ್ಟಕಾರ್ಯಲಜ್ಜೆ, ಅಸಂಚಯ, ಆಸ್ತಿಕ್ಯ, ಬ್ರಹ್ಮ ಚರ್ಯ, ಮೌನ, ವಿಷ್ಣುಧರ್ಮಸ್ಥೈರ್ಯ, ಕ್ಷಮೆ, ಅಭಯವೆಂಬ ಹನ್ನೆರಡನ್ನು ಯಮಗಳೆಂಬು ವರು; ಇವನ್ನು ಸದಾ ಅಭ್ಯಸಿಸಬೇಕು.

ಶೌಚ, ಜಪ, ತಪಸ್ಸು, ಹೋಮ, ಶ್ರದ್ಧೆ, ಅತಿಥಿಪೂಜೆ, ದೇವಪೂಜೆ, ತೀರ್ಥಯಾತ್ರೆ, ಪರೋಪಕಾರ, ತೃಪ್ತಿ, ಆಚಾರ್ಯಸೇವನ, ವೇದಾಧ್ಯಯನವೆಂಬ ಹನ್ನೆರಡನ್ನು ನಿಯಮಗಳೆಂಬು ವರು. ಇವನ್ನು ವಿಹಿತಕಾಲದಲ್ಲಿ ನಡೆಸಬೇಕು.

ಜ್ಞಾನವನ್ನು ಪಡೆಯಲು ನನ್ನನ್ನು ಧ್ಯಾನಿಸಲು ಸಮರ್ಥನು, ಶಾಂತನು, ನನ್ನ ಸರ್ವೋತ್ತಮತ್ವ ವನ್ನು ಅರಿತು ನಿರೂಪಿಸುವವನು ಆದ ಗುರುವನ್ನು ಸೇವಿಸಬೇಕು, ಶಿಷ್ಯನು ಗುರ್ವನುಗ್ರಹವನ್ನು ಗಳಿಸಲು ಗರ್ವವಿಲ್ಲದವನು, ಇತರ ಶಿಷ್ಯರಲ್ಲಿ ಮಾತ್ಸರ್ಯರಹಿತನು, ಮನನದಕ್ಷನು, ವೈಷ್ಣವ ಶಾಸ್ತ್ರದೃಢದೀಕ್ಷಿತನು, ತ್ವರೆಪಡದವನು, ಜ್ಞಾನಪಿಪಾಸುವು, ಅಸೂಯಾವರ್ಜಿತನು, ವ್ಯರ್ಥ ಮಾತುಗಳನ್ನಾಡದವನು ಆಗಿರಬೇಕು. ಹೆಂಡತಿ ಮಕ್ಕಳು ಮನೆ ಹೊಲ ಬಳಗ ಧನ ಮೊದಲಾದ ವಿಷಯಗಳಲ್ಲಿ ಉದಾಸೀನನಾಗಿ, ಬಂದರೆ ಹಿಗ್ಗದೆ, ಹೋದರೆ ಕುಗ್ಗದೆ, ಅವನ್ನು ಪ್ರಯೋಜನವು ತೀರುವವರೆಗೂ ಮಾತ್ರ ಸೇವಿಸಬೇಕು.

ಸ್ವಯಂಪ್ರಕಾಶನು, ಸರ್ವಸಾಕ್ಷಿಯು ಆದ ಪರಮಾತ್ಮನು ಸ್ಥೂಲಸೂಕ್ಷ್ಮದೇಹಗಳಕಿಂತ ಭಿನ್ನನು; ಹಾಗೂ ಜೀವನಿಗೂ ಭಿನ್ನನು; ಜೀವನು ಜಡದೇಹದಿಂದಲು, ಸ್ವತಂತ್ರ ಶ್ರೀಹರಿ ಯಿಂದಲು ಕೂಡ ಭಿನ್ನನು; ಕಟ್ಟಿಗೆಯಿಂದ ಬೇರೆಯಾದ ಅಗ್ನಿಗೆ ಪ್ರಕಾಶಕನು ಭಿನ್ನನಾಗಿರುವಂತೆ. ದೇಹಭಿನ್ನ ಜೀವನಿಗೆ ಪ್ರಕಾಶಕನು ಶ್ರೀಹರಿಯೇ. ಅವನು ಜಡಜೀವ ವಿಲಕ್ಷಣನೆಂದು ತಿಳಿಯ ಬೇಕು. ಜೀವನು ದೇಹಾಭಿಮಾನದಿಂದ ದೇಹಕ್ಕೊದಗುವ ಮರಣ, ಜನನ, ಅಣುತ್ವ, ಮಹತ್ವ, ಸುರನರದಾನವಾದಿಜಾತಿಯೆಂಬ ಪ್ರಾಕೃತ ಗುಣಗಳನ್ನು ತನ್ನವೆಂದು ತಿಳಿದು, ದುಃಖಪಡುವನು. ಶ್ರೀಶನು ದೇಹದಲ್ಲಿದ್ದರೂ, ಜೀವನಂತೆ ಜನನಮರಣಾದಿ ದುಃಖವನ್ನು ದೇಹಧರ್ಮಗಳನ್ನೂ ಹೊಂದದಿರುವನು. ಇಂತು ಜೀವೇಶರ ಭೇದವನ್ನು ತಿಳಿಯದೆ ದೇಹವನ್ನು ತಾನೆಂದು ತಿಳಿದ ಜೀವನು ಅನ್ಯಥಾಮತಿಯಾಗಿ, ಸಂಸಾರದಲ್ಲಿ ನರಳುತ್ತಿರುವನು. ಆದುದರಿಂದ ದೇಹಗುಹಾಂತ ರ್ಗತನಾದರೂ ದುರ್ಭಗದೇಹಿಭೋಗ್ಯ ದುಃಖರಹಿತನಾಗಿರುವ ಶ್ರೀಹರಿಯ ವಿಚಾರವನ್ನು ಗುರುವಿನಸ್ನಾಶ್ರಯಿಸಿ, ಶ್ರವಣಾದಿಗಳಿಂದ ಮಾಡಿ, ತಿಳಿದು ತನ್ನ ಅಸ್ವಾತಂತ್ರ್ಯವನ್ನು, ಶ್ರೀಶನ ಸ್ವಾತಂತ್ರ್ಯವನ್ನು ಕಂಡಾಗ ಜೀವನು ಜನನಮರಣರೂಪ ಸಂಸಾರಮುಕ್ತನಾಗುವನು.

ಜೀವೇಶಭೇದ ಜ್ಞಾನಪ್ರಕಾಶವಾಗಬೇಕಾದರೆ ಆಚಾರ್ಯನೆಂಬ ಅಧರಾರಣಿಯ ಜತೆಗೂಡಿ, ವಿಶೇಷಪ್ರಯತ್ನವಂತನಾದ ಶಿಷ್ಯನೆಂಬ ಉತ್ತರಾರಣಿಯು ಬ್ರಹ್ಮವಿಚಾರವೆಂಬ ಮಥನವನ್ನು ಮಾಡಿ, ಆಗ ಹುಟ್ಟುವ ವಿದ್ಯಾ ತೇಜದಿಂದ ಸುಖಿಯಾಗಬೇಕು.

ವಿವಿಧ ಸಾಂಸಾರಿಕ ದುಃಖನಾಶಕನಾದ ಶ್ರೀಹರಿಯ ಅಪರೋಕ್ಷಜ್ಞಾನವಾಗಲು ಜೀವನಿಗೆ ಅಯೋಗ್ಯ ಕಾಮಾದಿಗಳನ್ನು ಪುಟಿಸುವ ಸ್ವರೂಪಾಚ್ಛಾದಿಕೆಯನ್ನು ಕಳಚಿ ಶ್ರೀಹರಿಯು ತಾನಾಗಿ ಪರಮಾಚ್ಛಾದಿಕೆಯನ್ನೂ ಸರಿಸಿಬಿಡುವನು. ಆಗ ಬಾಹ್ಯಾಂತಃಕರಣವು ತಾನು ಅಗ್ನಿಯಂತೆ ಉರಿಯುತ್ತಾ, ಸ್ವರೂಪದ ಬೆಳಕನ್ನು ಬೀರಿ, ವಿಷಯಕಾಷ್ಠಗಳಿಲ್ಲದುದರಿಂದ ಕೊನೆಗೆ ತಾನೂ ಶಾಂತವಾಗುವುದು. ಆಗ ಸ್ವರೂಪಾಂತಃಕರಣದಿಂದಲೇ ಜೀವನು ತನ್ನನ್ನೂ ತನ್ನೊಡೆಯನಾದ ಶ್ರೀಶನನ್ನೂ ನೋಡಿ ಆನಂದದಿಂದಿರುವನು. ಆಗ ಅವನಿಗೆ ಲೋಕ, ಕಾಲ, ವೇದಗಳ ಜ್ಞಾನವು ಯೋಗ್ಯತಾನುಸಾರವಾಗಿರುವುದು.

ಪುಣ್ಯಕರ್ಮಗಳನ್ನು ಮಾಡಿ ಸುಖವನ್ನೂ ಪಾಪಕರ್ಮದಿಂದ ದುಃಖವನ್ನೂ ಉಣ್ಣುವ ಜೀವನು ದೇಶಕಾಲಗಳಿಂದ ಭಿನ್ನನಾಗಿರುವನು. ಜೀವರಲ್ಲಿ ಜ್ಞಾನತಾರತಮ್ಯವಿದೆ ಎಂಬುದೇ ಪ್ರತ್ಯಕ್ಷ ಸಿದ್ಧವಾಗಿದೆ. ದೇಶಕಾಲಗಳು ನಿತ್ಯವಾಗಿವೆ; ಜೀವನು ದೇಹಯೋಗ ಅನಿತ್ಯನಂತಿದ್ದಾನೆ. ಶ್ರೀಹರಿಯ ಜ್ಞಾನದಿಂದ ತನ್ನ ನಿತ್ಯತ್ವವನ್ನರಿತು ಸಾತ್ವಿಕಜೀವನು ಮುಕ್ತಲೋಕದಲ್ಲಿ ಆನಂದ ದಿಂದಿರುವನು. ಜೀವರಲ್ಲಿ ದೇವದಾನವರೆಂಬ ವ್ಯವಸ್ಥೆ ಇದೆ. ಅದು ಸ್ವಾಭಾವಿಕವೆಂದ ಮೇಲೆ, ಜೀವರಾಶಿಯ ಆಕಾರದಲ್ಲಿಯು ಬುದ್ಧಿವಿಚಾರದಲ್ಲಿಯು ಕೂಡ ಯಥಾಯೋಗ್ಯವಾದ ತಾರತಮ್ಯವೂ ವೈಲಕ್ಷಣ್ಯವೂ ಇದ್ದೇ ಇದೆ. ಸಂಸಾರದಶೆಯಲ್ಲಿ ನಿತ್ಯಜೀವನಿಗೆ ದೇಹಯೋಗವು ಬಂದ ಕೂಡಲೇ ರಾತ್ರಿಂದಿವಗಳೆಂಬ ಕಾಲಾವಯವಗಳಿಂದ ಜನನ ಮರಣ ರೂಪ ಸಂಸಾರಿಕ ನಾಶವು ತಪ್ಪಿದ್ದಲ್ಲ. ಕರ್ಮವನ್ನು ಮಾಡುವ ಜೀವನಿಗೆ ಕರ್ಮಕರಣದಲ್ಲಾಗಲಿ, ಫಲದಲ್ಲಾಗಲಿ, ಸ್ವಾತಂತ್ರ್ಯವಿಲ್ಲ. ಈ ಜಗತ್ತಿನಲ್ಲಿ ನೀನು ಕಂಡಿರುವಂತೆ ಉತ್ತಮರು ನೀಚರ ವಶವರ್ತಿಗಳಾಗಿರು ವರು. ಅಧಮರೇ ಉತ್ತರಂತೆ ಕಾಣುವರು. ಸ್ವತಂತ್ರ ನಾದವನಾಗಿರುವವನು ತನ್ನಕಿಂತ ನೀಚಜನರನ್ನು ಸೇವಿಸುತ್ತಿದ್ದನೇ? ದುಃಖಪಡುತ್ತಿದ್ದನೇ? ಇಲ್ಲ. ಉತ್ತಮನನ್ನು ಸೇವಿಸುವವನಿಗೆ ಸುಖವೇ ಆಗಲಿ ದುಃಖವಿಲ್ಲ. ಆದುದರಿಂದ ಸರ್ವೋತ್ತಮನಾದ ನನ್ನನ್ನು (ಕೃಷ್ಣನನ್ನು) ಸೇವಿಸ ಬೇಕು. ವಿದ್ವಾಂಸರೂ ದೇಹಾಭಿಮಾನದಿಂದ ದುಃಖಪಡುವರೆಂದಮೇಲೆ ಅಹಂಕಾರ ದೂಷಿತ ರಾದ ದುರ್ಜನರು ದುಃಖಪಡುವರೆಂದು ಹೇಳಬೇಕೇ?

ಲೋಕದಲ್ಲಿ ಸುಖಪ್ರಾಪ್ತಿ, ದುಃಖಪರಿಹಾರಗಳಿಗೆ ಉಪಾಯವನ್ನು ತಿಳಿದು, ಹೇಳುವ ವಿದ್ವಾಂಸರಿದ್ದಾರೆ; ಆದರೆ ಮೃತ್ಯುಗುಹಾಮುಖದಿಂದ ಹೊರಬೀಳುವ ಉಪಾಯವನ್ನವರೇ ತಿಳಿದಿಲ್ಲ. ಇನ್ನು ಹೇಳುವುದೆಂತು? ಮೃತ್ಯುವು ಹೆಡೆತಲೆಯಲ್ಲಿ ನೃತ್ಯವಾಡುತ್ತಿರುವ ಮನುಜನಿಗೆ ಈ ಲೋಕದ ಪದಾರ್ಥಗಳಿಂದ ಏನು ಸುಖವಾದೀತು? ವಧ್ಯಶಿಲೆಗೆ ಕರದೊಯ್ಯಲ್ಪಡುವ ಅಪರಾಧಿಯಂತೆ ಕುದಿಯುತ್ತಾ, ಅಜ್ಞಾನಮಗ್ನನಾದವನಿಗೆ ಸುಖವೆಲ್ಲಿಂದ ಬರಬೇಕು? ಈ ಲೋಕದ ವಿಷಯಸುಖದಂತೆಯೇ ಸ್ವರ್ಗಸುಖವೂ ಕೂಡ ನಶಿಸಿಹೋಗುವುದು. ಸ್ಪರ್ಧೆ, ಅಸೂಯೆ, ವ್ಯಯ, ಮರಣಗಳೆಂಬ ಅಡೆತಡೆಗಳು ಬರುತ್ತಿರಲು ಮನುಜನ ಸುಖಪ್ರಯತ್ನಗಳು ವಾಣಿಜ್ಯ ಕೃಷಿಗಳಂತೆ ನಿಷ್ಫಲವಾಗುವುವು. ವಿಘ್ನಗಳಿಲ್ಲದ ಧರ್ಮದಿಂದ ಸ್ವಲ್ಪ ಸ್ವರ್ಗಾದಿ ಲೋಕ ಸುಖಗಳಾವುವು ನಿಜ. ಆದರೆ ಸೋಮಯಾಜಿಯು ಸ್ವರ್ಗದಲ್ಲಿ ದೇವತೆಗಳಂತೆ ಸುಖ

ವನ್ನು ತಾನು ಮಾಡಿದ ಯಜ್ಞದ ಫಲವಾಗಿ ಬರಲು, ಕೆಲಕಾಲವನುಭವಿಸುವನು; ಪುಣ್ಯದ ಬೆಲೆಯಾಗಿ ಬಂದ ವಿಮಾನಗಳಲ್ಲಿ ಗಂಧರ್ವರಿಂದಲು, ಅಪ್ಸರೆಯರಿಂದಲು ಕೂಡಿ, ಸುಂದರ ವೇಷಭೂಷಣಯುತನಾಗಿ ಸಂಚರಿಸುವವನು ಕಾಮಿತಗಳೀಡೇರುತ್ತಿರಲು ಪುಣ್ಯಕ್ಷಯವಾಗುತ್ತಿರುವುದು. ತಾನು ಕೆಳಗೆ ಬೀಳಬೇಕೆಂಬುವ ಕಟುಸತ್ಯವನ್ನರಿಯದೆ, ನಂದಾದಿ ವನಗಳಲ್ಲಿ ವಿಹರಿಸಿ, ಪುಣ್ಯಕ್ಷಯವಾದ ತರ್ಕ್ಷಣವೇ ಕಾಲಬಲದಿಂದ ಕೆಳಗುರುಳುವನು.

ಇಲ್ಲಿ ಅಸಜ್ಜನ ಸಂಗದಿಂದ ಅಧರ್ಮವನ್ನು ಮಾಡಿದವನು, ಕಾಮಕೃಪಣನಾಗಿ, ಲೋಭದಿಂದ ಪಶುಗಳನ್ನು ಹಿಂಸಿಸಿ, ಪ್ರೇತಭೂತಗಣಗಳನ್ನು ಕುರಿತು ಯಾಗಾದಿಗಳನ್ನು ಮಾಡಿದರೂ, ಆ ಮನುಷ್ಯ ಯಾಜ್ಞಿಕನು ನರಕವನ್ನು ಹೊಂದಿ ಮಹಾವ್ಯಥೆಯನ್ನು ಪಡೆಯುವನು. ದುಃಖವೇ ಫಲವಾಗಿರುವ ಕರ್ಮಗಳನ್ನು ಒಂದು ದೇಹದಿಂದ ಮಾಡಿ, ಅದರಿಂದ ಕರ್ಮಫಲವಾಗಿ ಬಂದ ಇನ್ನೊಂದು ದೇಹವನ್ನು ಹೊಂದುತ್ತಾ, ಹುಟ್ಟಿ ಸಾಯುತ್ತಿರುವ ಮನುಜನಿಗೆ ಎಲ್ಲಿಯ ಸುಖ? ಕಲ್ಪಜೀವಿಗಳಿಂದ ದೇವತೆಗಳಿಗೂ ನನ್ನಿಂದ ಭಯವಿದೆ. ದ್ವಿಪರಾರ್ಧಾಯುಷ್ಮನಾದ ಬ್ರಹ್ಮದೇವನಿಗೂ ನನ್ನಿಂದ ಭಯವಿದೆ. ಆದರೆ ಈ ಅಜ್ಞ ಮನುಜನು ನನಗೆ ಭಯಪಡದೆ ತಾನು ಶಾಶ್ವತವೆಂದು ತಿಳಿದಿರುತ್ತಾನೆ!

ಸತ್ವಾದಿ ಗುಣಗಳು ಕಾಲೋಚಿತವಾಗಿ ಮಿಶ್ರಣ ಸಾಮ್ಯಗಳನ್ನು ಪೊಂದಿ, ಸೃಷ್ಟಿ ಲಯ ಕಾರಣವಾಗಿದೆ. ಪ್ರಕೃತಿ ನಿರ್ಮಿತ ದೇಹದಲ್ಲಿ ಜೀವನು ಬದ್ಧನಾಗಿ, ತ್ರಿಗುಣವಿಕಾರಗಳೆನಿಸಿದ ಸುಖ ದುಃಖಗಳನ್ನು ಹೊಂದುತ್ತಾನೆ. ಜಡಪ್ರಕೃತಿಗೂ, ತನ್ನಿರ್ಮಿತ ಜಡದೇಹಾದಿಗಳಿಗೂ ದುಃಖವಿಲ್ಲ; ಸ್ವತಂತ್ರನಾದ ಈಶನಿಗೂ ದುಃಖವಿಲ್ಲ. ಇರುವುದು ಜೀವನಿಗೇ ಸಾಂಸಾರಿಕ ದುಃಖವೆಲ್ಲವು!

ಕೆಲವರು 'ಪ್ರಳಯಕಾಲದವರಿವಿಗೂ ಮಾತ್ರ ಬ್ರಹ್ಮನೇ ನಾನಾ ಜೀವರೂಪದಿಂದಿದ್ದು, ಅಸ್ವತಂತ್ರನೆಂದು ಭ್ರಮೆ ಹೊಂದುವನೆಂತಲು, ಈ ಭ್ರಮೆ ಹೋದಾಗ ಬ್ರಹ್ಮನೇ ಆಗುವನೆಂತಲೂ ಅಲ್ಲಿಯವರೆಗೂ ಸಂಸಾರ ಭಯವೆಂತಲು' ಹೇಳುವರು. ಇದು ಅಸನ್ಮತವು, ಇಂತು ಚಿಂತಿಸುವವರು ಅಂಧಂತಮಸ್ಸಿನಲ್ಲಿ ನಿತ್ಯದುಃಖಿಗಳಾಗಿರುವರು. ಗುಣಮಿಶ್ರಣವಿಲ್ಲದ ಪ್ರಳಯದಲ್ಲಿ ನಾನೇ ಕಾಲ, ಜೀವ, ವೇದ, ಭುವನಗಳನ್ನು, ಸ್ವಭಾವ ಧರ್ಮಾದಿಗಳನ್ನು, ಕಾರ್ಯೋನ್ಮುಖವಾಗದಂತೆ ಮಾಡಿ, ನನ್ನಲ್ಲಿಟ್ಟುಕೊಂಡಿರುವೆನು, ಆದುದರಿಂದ ಜೀವರು ನಿತ್ಯವೂ ನನ್ನಧೀನರಾಗಿರುವರು. ಮುಕ್ತಿಯಲ್ಲಿ ಕೂಡ ಅವರು ಸ್ವೋತ್ತಮರ ಅಧೀನರಾಗೇ ಇರುವರು. ಇದು ನನ್ನ ಮತವು. ಇಂತು ಚಿಂತಿಸಿದವರು ಸಂಸಾರಮುಕ್ತರಾಗಿ ಮೋಕ್ಷಾನಂದ ಭಾಜನರಾಗುವರು.

ಉದ್ಧವನು ಕೇಳಿದನು–

ದೇಹಾದಿ ಸ್ಪರ್ಶಾದಿ ವಿಷಯಗಳಲ್ಲಿ ಬದ್ಧನಾಗದೆ ಶ್ರೀಶನಿರುವನೆಂದೆ. ಕೃಷ್ಣಾ! ಅದೆಂತು? ಬದ್ಧನಾಗಿರುವ ಜೀವನಿಗೂ, ಶ್ರೀಶನಿಗೂ ವೈಲಕ್ಷಣ್ಯವೇನು? ಜೀವನೇನು ಭುಂಜಿಸುವನು? ಅವನ ಲಕ್ಷಣವನ್ನು ಹೇಳು. ಅವನ ಚೇಷ್ಟೆಗಳನ್ನೆಂತು ತಿಳಿಯಲಾಗುವುದು? ಭೋಜನ ವಸನ ವಾಸ ಶಯನಾಸನ ಸಮಯಗಳಲ್ಲಿ ಜೀವನೆಂತಿರುವನು? ಅವನೊಡಗಿದ್ದ ಶ್ರೀಶನೆಂತಿರುವನು? 'ಜೀವೇಶರು ಬೇರೆ ಇಲ್ಲ. ಜೀವನೊಬ್ಬನೇ ಇರುವ'ನೆಂದೂ ಏಕೆ ತಿಳಿಯಬಾರದು? ಈ ವಿಷಯವನ್ನು ವಿವರಿಸಿ ಹೇಳು!

# ೧೧. ಜೀವೇಶ ಸ್ವರೂಪ ನಿರೂಪಣೆ

ಶ್ರೀಭಗವಂತನು ಉದ್ಧವನಿಗೆ ಹೇಳಿದನು–

ಬದ್ಧನಾಗುವವನೂ ಜೀವನೇ – ಮುಕ್ತನಾಗುವವನೂ ಜೀವನೇ – ಸ್ವತಃ ಚಿದ್ರೂಪನಾದ ಜೀವನಿಗೆ ಸತ್ವಾದಿ ಗುಣ ಸಂಬಂಧದಿಂದ ಸಾಂಸಾರಿಕ ಬಂಧನವಿದೆ. ಬಂಧವು ಸತ್ಯವಾದುದು; ಆದರೂ ನನ್ನ ಇಚ್ಛೆಯಿಂದ ಅದು ನಾಶವಾಗುವುದು. ನನಗೆ ಬಂಧವೇ ಇಲ್ಲ. ಇನ್ನು ಮೋಕ್ಷವೆಲ್ಲಿಂದ? ಜೀವ ಪ್ರಕೃತಿಗಳು ನನ್ನಧೀನರು. ವಸ್ತುತಃ ಜೀವನು ಚಿದ್ರೂಪನು. ಅದನ್ನು ವ್ಯಕ್ತಮಾಡಿ ಕೊಡುವ ನನಗೆ – ಅಪ್ರಾಕೃತನಿಗೆ ಬಂಧನವಿಲ್ಲ. ನಾನು ಸ್ವತಂತ್ರನಾದುದರಿಂದ ನನಗೆ ದುಃಖವಿಲ್ಲ. ಲೀಲೆಗೆಂದು ಯಾರಾದರೂ ತಮ್ಮ ಕಾಲಮೇಲೆ ಕಲ್ಲು ಹಾಕಿಕೊಂಡು ದುಃಖಪಡುವರೇ? ದುಃಖಿಸುವ ಜೀವನೂ ದೇಹಾಭಿಯಾನದಿಂದ ಶೋಕಮೋಕಸುಖದುಃಖ ಗಳನ್ನು ಸ್ವಪ್ನದಲ್ಲಿ ಹರಿ ನೋಡಿಸಿದಂತೆ ನೋಡುತ್ತಾ, ಸುಖದುಃಖಾನುಭವವನ್ನು ಹೊಂದು ವಂತೆಯೇ ಅಜ್ಞಾನದೆಶೆಯಲ್ಲಿ ಅನುಭವಿಸುವನು. ಸ್ವಪ್ನಸಂಸಾರಗಳು ಸತ್ಯವಾದರೂ ಸ್ವಪ್ನ ಪದಾರ್ಥವೇ ಜಾಗೃತಉದಾರ್ಥವೆಂದು, ತಿಳಿದು ಹುಡುಕಾಡುವುದು ಭ್ರಮೆ. ಸ್ವಪ್ನವು ಎಚ್ಚರವಾದ ಮೇಲೆ ನಷ್ಟವಾಗುವಂತೆ, ಸಂಸಾರವು ಕೂಡ ಬ್ರಹ್ಮಜ್ಞಾನದಿಂದ ನಷ್ಟವಾಗುವುದು. ನನ್ನಧೀನಳಾದ ರಮೆಯು ನನ್ನ ಆಜ್ಞೆಯಂತೆ ಎರಡು ರೂಪಗಳಾಗುವಳು. ಶ್ರೀದೇವಿ ಎನಿಸಿ, ಸತ್ವದಿಂದ ವಿದ್ಯೆಯನ್ನು ಪುಟ್ಟಿಸಿ, ಜೀವರಿಗೆ ಅದರಿಂದ ಮೋಕ್ಷವನ್ನು; ದುರ್ಗಾದೇವಿ ಎನಿಸಿ, ತಮೋಗುಣದಿಂದ ಅವಿದ್ಯೆಯನ್ನು ಪುಟ್ಟಿಸಿ, ಜೀವರಿಗೆ ಅದರಿಂದ ಬಂಧನವನ್ನು ಕಲ್ಪಿಸುವಳು. ನನ್ನಿಚ್ಛೆಯಿಂದ ಆಕೆಯ ಬಂಧ ವಿಧ್ವಂಸಕಳಾಗಿ, ಸಾತ್ವಿಕ ಜೀವರನ್ನು ಉದ್ಧರಿಸುವಳು.

ಜೀವನು ನನ್ನ ಭಿನ್ನಾಂಶನಾಗಿರುವನು. ಅವನಿಗೇ ವಿದ್ಯಾವಿದ್ಯೆಗಳಿಂದ ಮೋಕ್ಷ ಬಂಧಗಳಾ ಗಲಿ ನಿತ್ಯಮುಕ್ತನಾದ ನನಗಿಲ್ಲ. ನಾನು ಜೀವವಿಲಕ್ಷಣನೆಂದು ತಿಳಿಯಲು ನಿನಗೊಂದು ವೇದ ನಿರೂಪಿತ ದೃಷ್ಟಾಂತವನ್ನು ಹೇಳುವೆನು, ಕೇಳು!

ಚಿದಾನಂದರೂಪನಾದ ಜೀವ, ಈಶ, ಎಂಬ ಎರಡು ಪಕ್ಷಿಗಳು, ಒಂದೇ ದೇಹವೆಂಬ ಗಿಡದಲ್ಲಿ ಹೃದಯಗುಹೆ ಎಂಬ ಗೂಡಿನಲ್ಲಿದೆ. ಅವರೆಂದಿಗೂ ಒಬ್ಬರನ್ನೊಬ್ಬರು ಅಗಲದಿರು ವರು. ಜೀವನಿಗೆ ಬಿಂಬನಾದ ಈಶನು ಅನಿಮಿತ್ತಬಂಧುವಾಗಿ, ಜೀವನಿಗೆ ಇಂದ್ರಿಯಾದಿ ಪ್ರೇರಕನಾಗಿ ಉಪಕರಿಸುವನು. ಅವರೀರ್ವರಲ್ಲಿ ಜೀವನು ಕರ್ಮಫವನ್ನು ಉಣ್ಣುತ್ತಾ ಬಡವಾಗಿ ಕೊರಗುತ್ತಿರುವನು. ಈಶನು ಕರ್ಮಲೇಪವಿಲ್ಲದೆ ಫಲಭಕ್ಷಣ ನಿಮಿತ್ತವಾದ ಬಲವಿಲ್ಲದಿದ್ದರೂ ಸ್ವರೂಪದಿಂದಲೇ ಬಲಜ್ಞಾನಾನಂದಾತ್ಮಕನಾಗಿ ಪ್ರಕಾಶಿಸುತ್ತಿರುವನು. ಶ್ರೀಹರಿಯು ಸರ್ವಜ್ಞನು ತನ್ನನ್ನು ಪೂರ್ಣಾನಂದನೆಂದು ತಾನರಿತಿರುವನಲ್ಲದೇ ಸಕಲಜೀವ ಜಡಜಾತವೆಲ್ಲವನ್ನೂ ಸಂಪೂರ್ಣವಾಗಿ ತಿಳಿದಿರುವನು. ಜೀವರು ಅಲ್ಪಜ್ಞರು – ಅವರಲ್ಲಿ ಶ್ರೀಹರಿಪ್ರಸಾದಪಾತ್ರರೆನಿಸಿದ ಬ್ರಹ್ಮಾದಿಗಳೂ ಅವನನ್ನು ಯಥಾಯೋಗ್ಯವಾಗಿ ತಿಳಿದಿರುವರು. ಬ್ರಹ್ಮನೇ ಜೀವೋತ್ತಮನು. ಜೀವರ ಜ್ಞಾನದಲ್ಲಿಯೂ ತಾರತಮ್ಯವಿದೆ. ಜೀವರು ಅನಾದ್ಯವಿದ್ಯೆಯಿಂದ ಅಂಧರಾಗಿ ಅಂದರೆ ಭಗವದ್ ಜ್ಞಾನವಿಧುರರಾಗಿರುವರು. ಯೋಗ್ಯ ಜೀವರು ಪ್ರಯತ್ನಿಸಿದಂತೆ ಶ್ರೀಹರಿಯ ದಯ ದಿಂದ ಅವರ ಅಂಧತ್ವವು ನಶಿಸಿ, ಸ್ವರೂಪಜ್ಞಾನಾವಿರ್ಭೂತಿಯಾಗುವುದು. ಅಯೋಗ್ಯರು ನಿತ್ಯಾಂಧರಾಗೇ ಇದ್ದು ತಮೋಯೋಗ್ಯರೆನಿಸುವರು. ಮುಕ್ತಜೀವನು ಸಂಸಾರಬಂಧದಿಂದ

ಮುಕ್ತನಾದರೂ ಶ್ರೀಹರಿಯ ವಶನಾಗಿಯೇ ಇರುವುದರಿಂದ ಅವನೂ ನಿತ್ಯಬದ್ಧನೆನಿಸುವನು. ಸ್ವತಂತ್ರನಾದ ಹರಿಗೆ ಬಂಧವಿಲ್ಲ. ಅವನು ಕರ್ಮಫಲವನ್ನುಣ್ಣುವುದಿಲ್ಲ ಎಂದರೆ ಪರಾಧೀನನಾಗಿ ದುಃಖವನ್ನು ಉಣ್ಣುವುದಿಲ್ಲವೆಂದೇ ಅರ್ಥ; ಶ್ರೀಹರಿಯು ಸುಖವನ್ನೇ ಉಣ್ಣುತ್ತಿರುವನು. ಜೀವನಿಗೆ ಮುಕ್ತಿಯಲ್ಲಿ ದುಃಖಗಂಧವೇ ಇಲ್ಲದಿರುವುದು ಕೂಡ ಶ್ರೀಹರಿಯ ಪ್ರಸಾದದಿಂದ; ಆದುದರಿಂದ ಶ್ರೀಶನು ನಿತ್ಯಮುಕ್ತನೆನಿಸಿ, ಸರ್ವಜೀವಾಶ್ರಯನಾಗಿರುವನು ಮತ್ತು ಅವರಿಗಿರುವ ಷೋಡಶಕಲಾಬಂಧವನ್ನು ಬಿಡಿಸಿ, ಅವರಿಂದ ಪೂಜಿಸಲ್ಪಡುವನು.

ದೇಹದಲ್ಲಿದ್ದರೂ ನಿತ್ಯನಿರ್ದುಃಖಾನಂದಾನುಭವನು ಸರ್ವಜ್ಞನು ಆದ ಶ್ರೀಹರಿಯು ದೇಹಾಭಿಮಾನವನ್ನು ಪೊಂದದೆ ಸ್ವತಂತ್ರ ಸ್ವರೂಪಸುಖವನ್ನೇ ಸ್ವೀಕರಿಸುವನು. ಅಲ್ಪಜ್ಞನಾದ ಜೀವನು ದೇಹಾಭಿಮಾನದಿಂದ ದೇಹವೇ ನಾನೆಂದು ಭ್ರಮಿಸಿ, ದುಃಖವನ್ನು ಪೊಂದುವನು. ಎಚ್ಚತ್ತವನಿಗೆ ಸ್ವಪ್ನದುಃಖವಿಲ್ಲದಿರುವಂತೆ ಅಭಿಮಾನರಹಿತನಿಗೆ ದುಃಖವಿಲ್ಲ. ಸ್ವಪ್ನದಲ್ಲಿ ಶಿರಚ್ಛೇದಾದಿಗಳನ್ನನುಭವಿಸುವಂತೆ ಅಜ್ಞಾನಿಗೇ ದುಃಖ. ಆದುದರಿಂದ ಅಲ್ಪಜ್ಞ ಜೀವರು ಅಪ್ರಧಾನವಾದ ಇಂದ್ರಿಯಗಳಿಂದ ಬರುವ ವಿಷಯಗಳನ್ನು ಅಭಿಮಾನದಿಂದ ಸ್ವೀಕರಿಸಿ, 'ನಾನು ಕೃಶನಾದೆನು', 'ನಾನು ಸುಖಿ' ಎಂಬಿತ್ಯಾದಿ ವ್ಯಸನವನ್ನು ಕಳೆದುಕೊಳ್ಳಬೇಕಾದರೆ ಅಭಿಮಾನವನ್ನು ಬಿಟ್ಟು, ವಿರಕ್ತನಾಗಿ ಶ್ರೀಹರಿಯನ್ನು ಭಜಿಸಬೇಕು. ಅಸ್ವತಂತ್ರವಾಗಿ ದೈವಾಧೀನವಾಗಿರುವ ಶರೀರಾದಿಗಳಲ್ಲಿ, ಅಹಂಕಾರದಿಂದ ಜೀವನು ನಾನೆಂಬ ಭ್ರಮೆಯನ್ನೂ ನಾನೇ ಕರ್ತನೆಂಬ ಭ್ರಮೆಯನ್ನೂ ಹೊಂದಿ, ಸಂಸಾರದಲ್ಲಿ ನರಳುತ್ತಿರುವನು.

ಇಂತು ವಿಚಾರಿಸಿ ಸುಜೀವನು ವಿರಕ್ತನಾಗುವನು. ಶರೀರಯಾತ್ರಾರ್ಥವಾಗಿ ಮಾತ್ರ ವಿಷಯಗಳನ್ನು ಸ್ವೀಕರಿಸುತ್ತಾ ಶಯನ, ಆಸನ, ವಸನ, ಸಂಚರಣ, ಮಜ್ಜನ, ದರ್ಶನ, ಸ್ಪರ್ಶನ, ಭೋಜನ, ಶ್ರವಣಾದಿ ಶರೀರವ್ಯಾಪಾರಗಳಲ್ಲಿ ಅಭಿಮಾನವನ್ನಿಡದೆ, ಹರಿ ಸ್ವಾತಂತ್ರ್ಯವನ್ನರಿತು, ಸುಜನನು ಪ್ರಕೃತಿಯಲ್ಲಿದ್ದರೂ, ಆಕಾಶದಂತೆ ಸೂರ್ಯನಂತೆ, ಗಾಳಿಯಂತೆ, ನಿರ್ಲಿಪ್ತನಾಗಿ, ಕರ್ತೃತ್ವಭ್ರಮೆ ಉಳ್ಳ ಅಜ್ಞಾನಿಯಂತೆ ಬದ್ಧನಾಗದೆ, ಹರಿ ಪ್ರಸಾದದಿಂದ ಮುಕ್ತನಾಗುವನು. ಅಹಂಕಾರರಹಿತನಿಗೆ ದೇಹದಲ್ಲಿಯೂ ದುಃಖಾವೇಗವಿಲ್ಲವೆಂದಮೇಲೆ ಮುಕ್ತ ಜೀವನಿಗೆ ದುಃಖವಿಲ್ಲವೆಂದು ಹೇಳಬೇಕೇ? ವೈರಾಗ್ಯ ನಿಶಿತಖಡ್ಗದಿಂದ ಅವನ ಸಂಶಯ ಪಾಶಗಳು ನಷ್ಟವಾಗಿ, ಶ್ರೀಹರಿದಯದಿಂದ ಅವನು ಅಪರೋಕ್ಷವನ್ನು ಪೊಂದುವನು. ಇನ್ನು ಅವನಿಗೆ ಮಿಥ್ಯಾಜ್ಞಾನದ ಲೇಪವಿಲ್ಲ. ಪ್ರಾಣೇಂದ್ರಿಯ ಮನೋಬುದ್ಧಿಗಳ ವ್ಯಾಪಾರಗಳಲ್ಲಿ ಅಹಂಕಾರವನ್ನು, ಫಲಾನುಸಂಧಾನವನ್ನು ಬಿಟ್ಟು ನಡೆಯುವ ಯೋಗ್ಯಜೀವನು ಶುಷ್ಕನಾರಿಕೇಳದಂತೆ, ದೇಹದಲ್ಲಿದ್ದರೂ, ದೇಹಕೃತೋಪದ್ರವವಿಲ್ಲದೆ, ಜೀವನ್ಮುಕ್ತನೆನಿಸುವನು. ಇತರರಿಂದ ಹಿಂಸೆಯನ್ನಾಗಲು, ಚಂದನ ಮಾಲ್ಯಾದಿ ಪೂಜೆಯನ್ನಾಗಲಿ ಪೊಂದಿದಾಗ ಅವನು ವಿಕಾರವನ್ನು ಪೊಂದದೆ ಸಮಚಿತ್ತನಾಗಿರುವನು. ಜನರನ್ನು ಅವನು ಯೋಗ್ಯತಾತೀರೇಣ ನಿಂದಿಸದೆ, ಯೋಗ್ಯತಾತಿರೇಣ ಸ್ತುತಿಸದೆ, ತನ್ನನ್ನು ನಿಂದಿಸುವ, ಪೊಗಳುವ ಜನರ ವಚನಗಳಿಂದ ಕುಗ್ಗದೆ, ಹಿಗ್ಗದೆ ಸಮನಾಗಿ ಶ್ರೀಹರಿಗುಣ ಮನನಶೀಲನಾಗಿರುವನು. ಅಶುಭವನ್ನು ನುಡಿಯದೆ, ಸಾಧುಗಳಿಗೆ ಕೆಡುಕನ್ನು ಮಾಡದೆ, ಒಳ್ಳೆಯ ಕಾರ್ಯವನ್ನು ಬಿಡದೆ, ಶ್ರೀಹರಿಯಲ್ಲಿ ರಮಿಸಲು ಮರೆಯದೆ – ಜಡನಂತೆ ತೋರುತ್ತಾ ಆ ಮುನಿಯು ಸಂಚರಿಸುವನು.

ಉದ್ಧವಾ! ವೇದವನ್ನೋದಿದ್ದರಿಂದ ಏನು ಪ್ರಯೋಜನ? ಅದರಲ್ಲಿ ಪ್ರತಿಪಾದಿತನಾದ ಪರಬ್ರಹ್ಮನನ್ನು ತಿಳಿಯದಿದ್ದರೆ ಅಂತಹವನ ವೇದಾಧ್ಯಯನವು ಹಾಲು ಕೊಡದ ಆಕಳನ್ನು ಕಾಪಾಡಿದವನ ಧನಾರ್ಜನ ಪ್ರಯತ್ನದಂತೆ ನಿಷ್ಫಲವು. ಅವನಿಗೆ ಅಜ್ಞಾನವು ನಷ್ಟವಾಗದು. ಅದರಿಂದ ಸಂಸಾರದಲ್ಲಿ ಸುತ್ತುವುದೂ ತಪ್ಪದು.

ಹಾಲಿಗಾಗಿ ಆಕಳನ್ನು ಸಂರಕ್ಷಿಸಿದವನು ಪುಣ್ಯವನ್ನು ಪೊಂದಲಾರನು. ಅದು ಹಾಲನ್ನು ಕೊಡದಿರಲು ಅವನ ದುಃಖವು ಹೇಳತೀರದಲ್ಲವೇ? ಅಂತೆಯೇ ಅಪತಿವ್ರತಾ ಸತಿಯನ್ನು ಪರಸೇವಾಧಾವನಪರ ದೇಹವನ್ನು ಕೆಟ್ಟ ಮಕ್ಕಳನ್ನು ವಿಷಯದೂಷಿತವು, ಪಾತ್ರರಲ್ಲಿ ಕೊಡಲ್ಪಡದಿರುವುದು ಆದ ವಿತ್ತವನ್ನು ನನ್ನ ಕಲ್ಯಾಣಗುಣವರ್ಣನವನ್ನು ಮಾಡದ ಮಾತನ್ನು ಧರಿಸಿ, ಪೋಷಿಸುವಷ್ಟು ದುಃಖಿಗಳೂ ಮತ್ತಾರೂ ಇಲ್ಲ. ಪ್ರಿಯ ಉದ್ಧವ! ಯಾವ ವಾಕ್ಯಗಳಲ್ಲಿ ಜಗಜ್ಜನ್ಮಸ್ಥೇಮಪ್ರಳಯರಚನಾಶೀಲನಾದ ನನ್ನ ಮಂಗಳಕರ ಲೀಲಾವರ್ಣನವಿರುವುದಿಲ್ಲವೋ, ಯಾವ ವಾಕ್ಯಗಳಲ್ಲಿ ನನ್ನ ಪವಿತ್ರವಾದ ಅವತಾರ ಚರಿತೆಗಳ ವರ್ಣನವಿರುವು ದಿಲ್ಲವೋ, ಅಂತಹ ವ್ಯರ್ಥಪ್ರಲಾಪಗಳನ್ನು ಧೀರನು ಎಂದಿಗೂ ಆಡದಿರಬೇಕು.

ಇಂತು ಅನ್ಯಥಾಜ್ಞಾನವನ್ನು ಬ್ರಹ್ಮ ವಿಚಾರದಿಂದ ಕಳೆದುಕೊಂಡು ಪ್ರವೃತ್ತಿಮಾರ್ಗವನ್ನು ಬಿಟ್ಟು, ಆಗ ಶುದ್ಧವಾದ ಮನವನ್ನು ಸರ್ವತ್ರವ್ಯಾಪ್ತನಾದ ನನ್ನಲ್ಲಿ ನಿಲ್ಲಿಸಬೇಕು. ನಿಶ್ಚಲವಾಗಿ ಮನವನ್ನು ನಿಲ್ಲಿಸಲಾಗದಿದ್ದರೆ ಮೊದಲು ಮಾಡಿದ ಮುಂದೆ ಮಾಡಿದ ಕರ್ಮಗಳ ಪುಣ್ಯಫಲ ವನ್ನು ನನಗೆ ಸಮರ್ಪಿಸಬೇಕು. ಶ್ರದ್ಧೆಯಿಂದ ನನ್ನ ಲೋಕಪಾವನ ಕಥೆಯನ್ನು ಆಲಿಸಬೇಕು; ಕೈಲಾದರೆ ಪಾಡಿ ಕುಣಿದಾಡಬೇಕು. ನನ್ನ ಪಾವನ ಚರಿತೆಗಳನ್ನು ಸ್ಮರಿಸಿ, ಧರ್ಮಕಾಮಾರ್ಥ ಗಳನ್ನು ನನ್ನ ಪ್ರೀತಿಗಾಗಿ ಮಾಡಿ, ನನ್ನನ್ನೇ ನಂಬಿರುವ ಮನುಜನಿಗೆ ನಿಶ್ಚಲ ಭಕ್ತಿಭಾಗ್ಯವು ಲಭಿಸುವುದು. ಸತ್ಸಂಗದಿಂದ ಭಕ್ತಿಯು ಹೆಚ್ಚಾಗಿ ಸದ್ಗುರುಗಳು ಪೇಳಿದಂತೆ ಉಪಾಸನೆಯನ್ನು ಮಾಡಿದವನು ಮುಖ್ಯಫಲವಾದ ಮೋಕ್ಷವನ್ನು ಪೊಂದುವನು.

ಉದ್ಧವನು ಹೇಳಿದನು–

ಉತ್ತಮ ಶ್ಲೋಕ! ಸಾಧುಗಳಾದ ಮನುಜನ ಮನಸ್ಸೆಂತಹುದು? ಸಾಧುಗಳಾರು? ನಿನ್ನಲ್ಲಿ ಮಾಡಬೇಕಾದ ಭಕ್ತಿಯ ವಿಧಾನವೆಂದು? ನೀನು ಸ್ವೇಚ್ಛೆಯಿಂದ ಅವತರಿಸಿರುವ ಸಾಕ್ಷಾದ್ವಾಸು ದೇವನಿರುವೆ. ನಿತ್ಯಾನಂದಶರೀರನಾದ ನಿನಗೆ ವಸುದೇವಾದಿಗಳಲ್ಲಿ ಜನನವೆಂಬುವುದು ಭ್ರಮೆಯಲ್ಲವೇ? ವಿಶೇಷನಾಗಿ ಓಂ ಎಂದು ವೇದಾದಿಗಳಲ್ಲಿ ಪ್ರತಿಪಾದಿತನಾಗಿ ನೀನು ರಮೆಯ ಅರಸನಾಗಿರುವೆ! ನನಗೆ ಸಜ್ಜನರು ಆದರದಿಂದ ಮಾಡುತ್ತಿರುವ ಭಕ್ತಿಯ ವಿವರವನ್ನೂ ತತ್ಸಾಧನಗಳನ್ನೂ ಹೇಳು.

ಶ್ರೀಕೃಷ್ಣನಿಂತೆಂದನು–

ಸಾಧುಗಳ ಲಕ್ಷಣವನ್ನು ಕೇಳು! ಕೃಪಾಶೀಲನು, ಪ್ರರದ್ರೋಹಖರ್ಜಿತನು, ಸುಖದುಃ ಖವಿಕಾರರಹಿತನು, ಸತ್ಯಸಂಧನು, ನಿರ್ದೋಷಮನಸ್ಕನು, ಸರ್ವೋಪಕಾರಕನು, ನಿಷ್ಪಕ್ಷ ಪಾತಿಯು, ಕಾಮಕಲ್ಮಶರಹಿತನು, ಇಂದ್ರಿಯಜಯವಂತನು, ಮೃದುಸ್ವಭಾವನು, ಶುಚಿಯು, ಯದೃಚ್ಛಾಲಾಭಸಂತುಷ್ಟನು, ನಿಷಿದ್ಧವ್ಯಾಪಾರದೂರನು, ಮಿತಭೋಜನನು, ಭಗವನ್ನಿಷ್ಠಾ ಬುದ್ಧಿಯುಕ್ತನು, ವಿಷ್ಣುಧರ್ಮಸ್ಥಿರನು, ಮನನಶೀಲನು, ಅಪ್ರಮತ್ತಾಚಾರವಂತನು, ಗಂಭೀರ ಮನಸ್ಕನು, ಆಪತ್ಸಮಯಧೀರನು, ಕಾಮಕ್ರೋಧಾದಿ ಶತ್ರುಜಯಶಾಲಿಯು, ನಿರಹಂಕಾರಿಯು,

ಜ್ಞಾನಪ್ರದನು, ಕ್ರಿಯಾದಕ್ಷನು, ಮೈತ್ರಿಯುತನು, ಕರುಣಾಭರಿತನು ಆದವನನ್ನು ಸಾಧು ಎಂಬುವರು. ಆ ಜ್ಞಾನಿಯು ನನ್ನನ್ನೇ ನಂಬಿರುವನು.

ನಾನು ಪೇಳಿದ ಅಥವಾ ನನ್ನ ಭಕ್ತರು ಪೇಳಿದ ಧರ್ಮಗಳಲ್ಲಿ ತನಗೆ ವಿಹಿತವಾದವುಗಳನ್ನು ಚೆನ್ನಾಗಿ ತಿಳಿದು, ದೋಷಕರ್ಮಗಳನ್ನು ಬಿಟ್ಟು, ಸತ್ಕರ್ಮವನ್ನೇ ಮಾಡುತ್ತಾ, ಮಾಡಿದ ಸತ್ಕರ್ಮ ಫಲವನ್ನು ನನಗೆ ಸಮರ್ಪಿಸುವವನು ಭಕ್ತ ಶ್ರೇಷ್ಠನೆನಿಸುವನು. ಭಕ್ತಿಯು ಬಹುವಿಧವಾಗಿದೆ. ನನ್ನ ಮಹಿಮೆಯನ್ನು ತಿಳಿದು ಕೂಡ ಮತ್ತೆ ಚೆನ್ನಾಗಿ ತಿಳಿಯಲಿಚ್ಛಿಸಿ, ನನ್ನ ಪಾರಮ್ಯವನ್ನು ವ್ಯಾಪ್ತಿಯನ್ನು ಆನಂದಜ್ಞಾನಾದಿ ಗುಣಗಳನ್ನು ಚೆನ್ನಾಗಿ ಗುರುಮುಖದಿಂದ ವೇದವಿಚಾರ ಮಾಡಿ, ನನ್ನ ವಿಶೇಷಜ್ಞಾನವನ್ನು ಸಂಪಾದಿಸಿ, ಬಿಡದೆ ಸದಾ ಭಜಿಸುವವನು ನಿರತಿಶಯ ಭಕ್ತನೆಂದು ತಿಳಿ! ಅಂತಹ ಭಕ್ತರಲ್ಲಿ ಮುಖ್ಯಪ್ರಾಣನೇ ಶ್ರೇಷ್ಠನಾಗಿರುವನು.

ಈಗ ಸಾಧಾರಣ ಭಕ್ತರ ಲಕ್ಷಣಗಳನ್ನು ಕೇಳು! ಅವರು ನನ್ನ ಪ್ರತಿಮೆಗಳಿಗೂ ಚರಪ್ರತಿಮೆ ಎನಿಸಿದ ಭಕ್ತರಿಗೂ ವಂದಿಸಿ, ಸ್ತುತಿಸುವರು. ಭಕ್ತಜನರ ದರ್ಶನ, ಸ್ಪರ್ಶನ, ಅರ್ಚನ, ಪರಿಚರ್ಯೆ, ವಿನಯಪೂರ್ವಕ ವಂದನಗಳನ್ನು ಮಾಡಿ, ಅವರಿಂದ ನನ್ನ ಪಾವನ ಲೀಲಾವತಾರ ಕರ್ಮಗಳನ್ನು ಕೇಳುವರು. ಕಥೆಯನ್ನು ಕೇಳುವ ಶ್ರದ್ಧೆ, ನನ್ನ ಧ್ಯಾನ, ಸರ್ವಾಲಾಭಾರ್ಪಣ. ದಾಸ್ಯ, ಆತ್ಮನಿವೇದನ, ಕೀರ್ತನ, ಏಕಾದಶ್ಯಾದಿ ವ್ರತನುಷ್ಠಾನ, ವಿಷ್ಣುದೇವೋತ್ಸವ, ಹರಿನಾಮ ಕೀರ್ತನಗಾನ, ತಾಂಡವವಾದ್ಯತಾಲಗೋಷ್ಠಿ, ವಾರ್ಷಿಕ ಪರ್ವೋತ್ಸವ, ಬಲಿವಿಧಾನ, ವೈದಿಕ ತಾಂತ್ರಿಕ ಕರ್ಮಾಚರಣೆ, ದೇವಪ್ರತಿಮಾಪ್ರತಿಷ್ಠೆ, ವಿಷ್ಣುದೇವಾಲಯ ನಿರ್ಮಾಣ, ಉದ್ಯಾನ ರಚನೆ, ಪುರಮಂದಿರ ಕರ್ಮ, ಇವೆಲ್ಲವು ನನ್ನ ಪ್ರೀತಿಸಂಪಾದಕವೆಂದು ಅನುಷ್ಠಿಸುವರು.

ದೇವರಮನೆ ಮಾರ್ಜನ, ಅಲಂಕರಣ, ಚಂದನಾದಿ ಪ್ರೋಕ್ಷಣ, ಮಾಲಾದಿ ರಚನೆಗಳನ್ನು ಮಾಡಿ, ಮನೋಯ ಜನರು ನನ್ನನ್ನು ಪೂಜಿಸಿ, ದಾಸ್ಯಭಾವದಿಂದ ಕೀರ್ತಿಸುವರು. ನನ್ನ ಭಕ್ತರು ತಮಗೆ ಇಷ್ಟವಾದುದೆಲ್ಲವನ್ನು ನನ್ನ ಪ್ರೀತಿಗಾಗಿ ನನಗೆ ಸಮರ್ಪಿಸುವರು. ಇಂತು ಸರ್ವಸಮರ್ಪಣೆಯಿಂದ ಅವರು ಮೋಕ್ಷವನ್ನು ಪೊಂದುವರು.

ಸೂರ್ಯ ಅಗ್ನಿ ವಿಪ್ರ ಗೋವು ವಿಷ್ಣುಭಕ್ತ ಆಕಾಶ ಮುಖ್ಯಪ್ರಾಣ ಜನ ಭೂಮಿ ಮನಸ್ಸು ಸರ್ವಭೂತಗಳು ನನ್ನ ಪ್ರತಿಮೆಗಳಂತೆ ಪೂಜಾಧಿಷ್ಠಾನರಾಗಿರುವರು. ಸೂರ್ಯನಲ್ಲಿ ವೇದವಿದ್ಯೆಯಿಂದಲು, ಅಗ್ನಿಯಲ್ಲಿ ಹವಿರ್ದಾನದಿಂದಲೂ, ವಿಪ್ರೋತ್ತಮನಲ್ಲಿ ಅತಿಥಿ ಪೂಜೆ ಯಿಂದಲು, ಗೋವುಗಳಲ್ಲಿ ಯವಸದಾನದಿಂದಲು, ವಿಷ್ಣುಭಕ್ತರಲ್ಲಿ ಬಂಧು ಸತ್ಕಾರದಿಂದಲು, ಹೃದಯಾಕಾಶದಲ್ಲಿ ಧ್ಯಾನದಿಂದಲು, ಮುಖ್ಯವಾಯುವಿನಲ್ಲಿ ದೇವತಾ ಮುಖ್ಯಬುದ್ಧಿ ಯಿಂದಲು, ನೀರಿನಲ್ಲಿ ಪುಷ್ಪಪತ್ರಗಳಿಂದಲು, ಭೂಸ್ಥಂಡಿಲದಲ್ಲಿ ನಮಃ ನಮಃ ಎಂಬ ಮಂತ್ರಗಳಿಂದಲು, ಮನಸ್ಸಿನಲ್ಲಿ ವಿಷಯಭೋಗ ಸಮರ್ಪಣದಿಂದಲು, ಸರ್ವಭೂತಗಳಲ್ಲಿ ಕ್ಷೇತ್ರಜ್ಞ ಭಾವನದಿಂದಲು ಪೂಜಿಸಿ, ಆಯಾ ಅಧಿಷ್ಠಾನದಲ್ಲಿರುವ ನನಗೆ ಶ್ರದ್ಧೆಯಿಂದ ಸಮರ್ಪಿಸಬೇಕು. ಅಲ್ಲಿ ಶಂಖಚಕ್ರಗದಾಪದ್ಮಧರ ಚತುರ್ಭುಜನಾದ ನನ್ನ ಆನಂದಮಯ ಮೂರ್ತಿಯನ್ನು ಧ್ಯಾನಿಸಿ, ವಂದಿಸಬೇಕು. ಇಂತು ಪೂಜಿಸುವ ಭಕ್ತನು ಸತ್ಸಂಗಪುನೀತನಾಗಿ, ನನ್ನ ನಿರಂತರ ಸ್ನೇಹಿತನಾಗಿ ನನ್ನ ನಿರಂತರ ಸ್ನೇಹಿತನಾಗಿ ನನ್ನ ನಿರಂತರ ಸ್ಮರಣೆಯನ್ನು ಅದರಿಂದ ಸದ್ಗತಿಯನ್ನೂ ಪೊಂದುವನು. ಸಜ್ಜನರಿಗೆ ನಾನು ಮುಖ್ಯಾಶ್ರಯನಾಗಿರುವೆನು. ಯಥಾರ್ಥ ಜ್ಞಾನವನ್ನು ಭಕ್ತಿಯನ್ನು ಬಿಟ್ಟು, ನನ್ನ ಪ್ರೀತಿ ಸಾಧನವಾದ ಇನ್ನೊಂದು ಉಪಾಯ

ವಿಲ್ಲ. ಇನ್ನು ನಿನಗೆ ಪರಮರಹಸ್ಯವಾದ ವಿಷಯವನ್ನೊಂದನ್ನು ನೀನು ನನಗೆ ಸ್ನೇಹಿತನು ಭಕ್ತನು ಆದುದರಿಂದ ಹೇಳುವೆನು.

## ೧೨. ಭಕ್ತಜನ ಲಕ್ಷಣ – ಮುಖ್ಯಪ್ರಾಣ ಮಹಿಮೆ

ಶ್ರೀಭಗವಂತನು ಹೇಳಿದನು–

ಉದ್ಧವಾ! ಗುಣೋತ್ಕರ್ಷಜ್ಞಾನಪೂರ್ವಕವಾದ ಭಕ್ತಿಯು ನನ್ನ ಪ್ರೀತಿಸಾಧನವಾಗಿದೆ. ಭಕ್ತಿಯಿಲ್ಲದ ಯೋಗ, ಧ್ಯಾನ, ಧರ್ಮಾನುಷ್ಠಾನ, ವೇದಾಧ್ಯಯನ, ತಪಃಕರಣ, ದಾನ, ಇಷ್ಟಾಪೂರ್ತಗಳು, ವ್ರತದಕ್ಷಿಣೆಗಳು, ಯಜ್ಞಯಾಗಗಳು, ತೀರ್ಥಯಾತ್ರೆ, ಯಮನಿಯಮಗಳು – ಇವೆಲ್ಲವೂ ವಿವಕ್ಷಿತ ಪುರುಷಾರ್ಥ ಸಾಧನವಾಗುವುದಿಲ್ಲ. ಭಕ್ತಿಯೇ ಸರ್ವದುಃಖನಿವೃತ್ತಿವಿಶಿಷ್ಟ ಪರಮಾನಂದರೂಪ ಮೋಕ್ಷಸಾಧನವಾಗಿದೆ. ನನ್ನ ಗುಣ ಸಂಪ್ರೀತಿಯಿಂದ ದೇವತೆಗಳೇ ಅಲ್ಲದೆ ದೈತೇಯಯಾತುಧಾನ ಮೃಗಖಗ ಗಂಧರ್ವಸಿದ್ಧ ಚಾರಣ ಗುಹ್ಯಕ ವಿದ್ಯಾಧರ ಮನುಜರಾದಿ ಬಹು ಸುಚೇತನರು ಮುಕ್ತರಾಗಿರುವರು. ಮನುಜರಲ್ಲಿಯು ವೈಶ್ಯ ಶೂದ್ರರು ಸ್ತ್ರೀಜನರು ಅಂತ್ಯಜರು ಕೂಡ ಮುಕ್ತರಾಗಿರುವರು. ಹಿಂದಿನ ಜನ್ಮದ ಪಾಪದಿಂದ ಚಂಡಾಲಾದಿ ನೀಚ ಯೋನಿಯಲ್ಲಿ ಹುಟ್ಟಿದರೂ ಸಾತ್ವಿಕ ಜೀವರಾದುದರಿಂದ ನನ್ನ ಗುಣಪೂರ್ಣತ್ವವನ್ನು ಪ್ರೀತಿಯಿಂದ ಸ್ಮರಿಸಿ, ಸಂಸಾರಪಾಶ ಮುಕ್ತರಾಗಿರುವರು.

ವೃತ್ರ, ಅವಂತಿಯ, ಅವಧೂತ, ವೃಷಪರ್ವ, ಬಲಿ, ವಿಭೀಷಣ, ಮಯ, ಬಾಣ, ಸುಗ್ರೀವ, ಹನುಮಂತ, ಜಾಂಬವಂತ, ಜಟಾಯು, ತುಲಾಧಾರನೆಂಬ ವೈಶ್ಯ, ನಂದ, ಪಥನೆಂಬ ಶೂದ್ರ, ಧರ್ಮವ್ಯಾಧ, ಕುಬ್ಜೆ, ಗೋಪಿಕೆಯರು, ಕ್ರಿಮಿ, ಯಜ್ಞಪತ್ನಿಯರು ಮೊದಲಾದವರು ತಪಸ್ಸು ವೇದಾಧ್ಯಯನ ಗುರುಕುಲವಾಸಾದಿಗಳಿಲ್ಲದಿದ್ದರೂ ನನ್ನ ಮಹಿಮಾಜ್ಞಾನಪೂರ್ವಕ ಭಕ್ತಿಯಿಂದಲೇ ಮುಕ್ತರಾಗಿರುವರು. ಭಕ್ತಿಯು – ಅಪರೋಕ್ಷ ಜ್ಞಾನವಾಗಬೇಕಾದರೆ – ಪಕ್ವವಾಗಿರಬೇಕು. ಅಪಕ್ವಭಕ್ತಿಯಿಂದ ಐಹಿಕ ಸ್ವರ್ಗಸುಖ ಲಾಭವಾದೀತಾಗಲು ಮೋಕ್ಷವಾಗುವುದಿಲ್ಲ. ಅಂತಹ ಸುಧೃಡ ಸ್ನೇಹವನ್ನು ಮಾಡಿ, ಗೋವುಗಳು, ಮೃಗಗಳು, ನಾಗರು, ಮೊದಲಾದವರು ಮೂಢಯೋನಿಜರಾದರೂ ಮುಕ್ತರಾಗಿರುವರು. ಹರಿಭಕ್ತಿವಿಹೀನರು, ಹರಿದ್ವೇಷಿಗಳು ಮಾಡುವ ದಾನವ್ರತ ವೇದಾಧ್ಯಯನ ಸನ್ಯಾಸಾದಿಗಳು ಮೋಕ್ಷ ಸಂಪಾದಕವಲ್ಲ. ಗೋಪಿಕೆಯರು ಕೂಡ ಸ್ವರ್ಗಲೋಕವನ್ನು ಸೇರಿ, ಅಲ್ಲಿ ಹರಿಸ್ವರೂಪದ ಜ್ಞಾನವನ್ನು ಸಂಪಾದಿಸಿ, ಭಕ್ತಿಯಿಂದ ಮುಕ್ತರಾಗಿರುವರು. ಅವರು ನನ್ನಲ್ಲಿ ರತಿ ನಿಮಿತ್ತಕ ಪ್ರೇಮವನ್ನು ಮಾಡಿರಲಿಲ್ಲ ಕೇಳು!

ನಾನು ಅಣ್ಣ ಬಲರಾಮನಿಂದ ಕೂಡಿ ಮಧುರೆಗೆ ಪೋಗಲು, ಅಕ್ರೂರ ರಥವನ್ನಾರೋಹಿಸಿದೆನು. ಆಗ ನನ್ನಲ್ಲಿ ಪ್ರೀತಿಯಿಂದ ಗೋಪಿಕೆಯರು ಬಂದು ವಿಯೋಗತಾಪವನ್ನು ತಡೆಯಲಾರದೆ ಶೋಕಾರ್ತರಾದುದನ್ನು ನಾನು ಗಮನಿಸಿರುವೆನು. ನನ್ನ ಹೊರತು ಅವರಿಗೆ ಅನ್ಯ ಸುಖಕಾರಣವಾವುದೂ ಇರಲಿಲ್ಲ. ವೃಂದಾವನದಲ್ಲಿ ಪ್ರೇಷ್ಠತಮನಾದ ನನ್ನಿಂದ ಅವರು ಕಳೆದ ರಾತ್ರಿಗಳು ಅವರಿಗೆ ಕ್ಷಣದಂತೆ ಕಳೆದುಹೋದವು. ನಾನಿಲ್ಲದಿರೆ ಅವರಿಗೆ ರಾತ್ರಿಯು ಯುಗಸಮವಾಗಿ ತೋರಿತು. ನನ್ನ ಭಕ್ತಿಪಾಶದಿಂದ ಬದ್ಧವಾದ ಬುದ್ಧಿಯಲ್ಲಿ ಮುನಿಗಳು ಸಮಾದಿಯಲ್ಲಿಟ್ಟಂತೆ ನನ್ನನ್ನು ನಿಲ್ಲಿಸಿ, ಈ ಜಗವನ್ನೂ ಮರೆತರು. ತಮ್ಮನ್ನು ತಾವೇ ಮರೆತರು. ಸಮುದ್ರದಲ್ಲಿ

ಸೇರಿದ ನದಿಗಳ ನಾಮರೂಪಗಳು ಗೊತ್ತಾಗದಂತೆ, ತಾವೂ ಸರ್ವವನ್ನು ಮರೆತು ಭಕ್ತಿಪರವಶ ರಾಗಿದ್ದರು. ಸಂಸಾರವನ್ನು ಜೀರ್ಣಮಾಡುವ ಜಾರನೆಂದೂ, ನಿತ್ಯಾನಂದಪ್ರದನಾದ ರಮಣ ನೆಂದೂ, ಲೋಕವಿಲಕ್ಷಣ ಜ್ಞಾನಾನಂದ ಸ್ವರೂಪನೆಂದೂ ಚಿಂತಿಸಿ, ಪ್ರೀತಿಪೂರ್ವಕ ಭಕ್ತಿಯಿಂದ ಅವರು ಸಾವಿರಾರು ನಾರಿಯರು ನನ್ನನ್ನು ಭಜಿಸಿ, ಮತ್ತೆ ದ್ಯುಲೋಕದಲ್ಲಿ ಜ್ಞಾನಭಕ್ತಿಗಳನ್ನು ಪೂರ್ಣವಾಗಿ ಸಂಧಿಸಿ ಮುಕ್ತರಾಗಿರುವರು. ಆದುದರಿಂದ ಉದ್ಧವಾ! ಪ್ರವೃತ್ತಿಕರ್ಮವನ್ನು ಬಿಟ್ಟು, ಸಕಲ ಕರ್ಮಫಲವನ್ನು ನನಗರ್ಪಿಸು. ವೇದಗಳಲ್ಲಿ ಕೇಳಿರುವ ಕೇಳಬಹುದಾದ ಸಕಲ ಜ್ಞಾನವನ್ನು ನನ್ನ ಗುಣಸಂಪೂರ್ತಿಗೆಂದು ತಿಳಿ! ನನ್ನನ್ನೇ ನಂಬು! ನಾನು ಸರ್ವದೇಹಧಾರಿಗಳಿಗಾ ಧಾರನಾದ ದೊರೆ ಎಂದು ಭಕ್ತಿಯಿಂದ ಭಜಿಸು! ನನ್ನ ಅಭಯಲೋಕವು ನಿನಗೆ ಸಿಗುವುದು.

ಉದ್ಧವನು ಕೇಳಿದನು–

ಶ್ರೀಕೃಷ್ಣ! ಯೋಗೇಶ! ಗೋಪಿಯರ ಸ್ತುತಿಯನ್ನು ನೀ ಮಾಡಿದೆ. ಅದನ್ನು ಕೇಳಿ ಮುಖ್ಯ ಪ್ರಾಣನ ಭಕ್ತಿಗಿಂತಲು ಗೋಪಿಯರ ಭಕ್ತಿ ಹೆಚ್ಚೇ? ಎಂದು ತಿಳಿಯಲಪೇಕ್ಷಿಸುವೆನು. ದಯಮಾಡಿ ಹೇಳು!

ಶ್ರೀಕೃಷ್ಣನು ನುಡಿದನು–

ಮುಖ್ಯವಾಯುವೇ ಸರ್ವಗುಣದಿಂದಲು ಸರ್ವಜೀವೋತ್ತಮನಾಗಿರುವನು. ವಾಯುವೇ ಬ್ರಹ್ಮನಲ್ಲವೇ? ಅಹಂಕಾರಾದಿ ತತ್ವಗಳನ್ನು, ತದ್ದೇವತೆಗಳಾದ ಗರುಡಾದಿಗಳನ್ನು ಉತ್ಪಾದಿ ಸುವ ಬ್ರಹ್ಮಜೀವನು ಪ್ರಾಣಧಾರಕನಾಗಿರುವನು; ವಿಶಿಷ್ಟಾನಂದಪೂರ್ಣನಾದ ಹರಿಯ ಶ್ರೇಷ್ಠಾಧಿಷ್ಠಾನನಾದುದರಿಂದ ಬ್ರಹ್ಮನೆನಿಸಿರುವನು. ಆ ಜೀವೋತ್ತಮನು ವಿಷ್ಣುವಿನಿಂದಲು ವೇದ ಪ್ರಕೃತಿಗಳ ಸ್ವಾಮಿಯಾದ ಲಕ್ಷ್ಮೀದೇವಿಯಿಂದಲು ಕೂಡಿ, ರುದ್ರಾದಿಗಳ ಹೃದಯಗುಹೆ ಯಲ್ಲಿ ಪ್ರವೇಶಿಸಿ ಅವರ ಮನೋನಿಯಾಮಕನಾಗಿ, ಪರಮಾಣು ರೂಪನಾಗಿರುವನು; ಹಾಗೂ ಮಾತ್ರಾ, ಸ್ವರ, ವರ್ಣತ್ರಯಾತ್ಮಕವಾದ ವೇದದಲ್ಲಿಮಾತ್ರಾಸ್ವರವರ್ಣನಾಗಿ ಸ್ಥೂಲರೂಪವನ್ನು ಹೊಂದುವನು. ವೇದಗಳು ಬ್ರಹ್ಮ ಲಕ್ಷ್ಮೀನಾರಾಯಣ ಪ್ರತಿಪಾದಕವಾಗಿದೆ. ಅದರಲ್ಲೂ ನನ್ನನ್ನೇ ವಿಶೇಷವಾಗಿ ಪ್ರತಿಪಾದಿಸುತ್ತವೆ. ಆಕಾಶದಲ್ಲಿ ವಾಯುಸಖ ಅಗ್ನಿಯು ಮೊದಲು ದಾರುವಿನನ್ನು ಮಥಿಸಿದಾಗ ಅಣುವಾಗಿ ಹುಟ್ಟಿ ಘೃತಾದಿ ಹವಿಯಿಂದ ವರ್ಧಮಾನನಾಗುವಂತೆ ನಾನು ವೇದವಾಣಿಯಲ್ಲಿ ವ್ಯಕ್ತನಾಗುವೆನು. ವೇದಮುಖ್ಯಾರ್ಥನಾದ ನಾನು ಪಾದ, ಹಸ್ತ, ಉಪಸ್ಥ, ವಾಯು, ಘ್ರಾಣ, ರಸನ, ನಯನ, ಶ್ರವಣಗಳಲ್ಲಿ ಗತಿ, ಕ್ರಿಯಾ, ರತಿ, ವಿಸರ್ಜನ, ಗಂಧ, ರುಚಿ, ರೂಪ, ಶಬ್ದರೂಪನಾಗಿ, ಸರ್ವೇಂದ್ರಿಯಗಳಲ್ಲಿಯು ವ್ಯಕ್ತನಾಗಿ ಪ್ರೇರಕನೆನಿಸಿರು ವನು. ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸು ವಿಜ್ಞಾನಾತ್ಮಕವಾದ ಬುದ್ಧಿ, ಅಭಿಮಾನಜನಕವಾದ ಅಂತಃಕರಣ, ಸೂತ್ರನಾಮಕ ವಾಯು, ತ್ರಿಗುಣಮಯ ಬ್ರಹ್ಮಾಂಡಮಾನಿ ಬ್ರಹ್ಮ – ಇವರೆಲ್ಲರೂ ನನಗೆ ವ್ಯಕ್ತಿಸ್ಥಾನರೆನಿಸುವರು. ನಾನು – ರಮೆ – ಆದನಂತರ ವೇದಗಳಲ್ಲಿ ಪ್ರತಿಪಾದಿತನಾಗಿರುವವನು ಚತುರ್ಮುಖನು. ಅವರು ಜ್ಞಾನ, ಆನಂದ, ಬಲವೆಂಬ ಮೂರು ಗುಣಗಳಿಂದ ಕೂಡಿರುವನು. ಸೂಕ್ಷ್ಮವಾಗಿ ತಾನು ಸೃಜಿಸಿದ ಅಹಂಕಾರಾದಿಗಳಲ್ಲಿ ನಿಯಮಾಕ ನಾಗಿ ಪ್ರವೇಶಿಸಿ, ನನ್ನ ಅನುಗ್ರಹದಿಂದ ಹ್ರಾಸರಹಿತ ಸಾಮರ್ಥ್ಯದಿಂದ ಶೋಭಿಸುವನು. ಕಲಮಾದಿ ಧ್ಯಾನವು ಭೂಮಿಯಿಂದ ಬಹುರೂಪದಿಂದ ಅಂಕುರಿಸುವಂತೆ ಬ್ರಹ್ಮನು ಅಹಂಕಾ ರಾದಿ ಸಕಲ ತತ್ವಗಳಲ್ಲಿ ಬಹುರೂಪನಾಗಿರುವನು ಮತ್ತು ಸರ್ವಪ್ರೇರಕನಾಗಿ ಜೀವೋತ್ತಮನೆನಿಸಿರುವನು.

ತಂತು ವಿರಚಿತ ಪಟಾದ್ಯಾಕಾರವು ಪಟಭಿನ್ನವಾಗಿದೆ. ಅಂತೆಯೇ ವಿರಿಂಚಾಧಾರವಾಗಿರುವ ಜಗವು ವಿರಿಂಚಭಿನ್ನವೇ ಆಗಿದೆ. ವಿರಿಂಚ ಶ್ರೀದೇವಿಯರೂ ನನ್ನ ಆಧಾರದಿಂದಿದ್ದು ಮದ್ಭಿನ್ನರಾಗಿರುವರು. ಕಂಥೆಯಲ್ಲಿ ಆಧಾರವಾಗಿರುವ ತಂತುವಿನಂತೆ ನಾನು ಜಗದಾಧಾರನಾಗಿ ಜಗದ್ಭಿನ್ನನೂ ಆಗಿರುವೆನು. ಈ ಜಗದ್ವೃಕ್ಷವು ಕರ್ಮಾತ್ಮಕವಾಗಿದೆ. ಇದರಲ್ಲಿ ಸ್ವರ್ಗ ಮತ್ತು ಮೋಕ್ಷವೆಂಬ ಎರಡು ಫಲಗಳಿವೆ.

ಜಗದ್ವೃಕ್ಷಕ್ಕೆ ಬ್ರಹ್ಮ ಸರಸ್ವತಿಯರೇ ಬೀಜಭೂತರು; ಅನಂತಕರ್ಮಗಳೇ ಮೂಲ (ಬೇರು) ಗಳು; ಮನೋಬುದ್ಧಿ ಅಹಂಕಾರಗಳು ಮೂರು ನಾಲಗಳು; ಪಂಚಭೂತಗಳೇ ಬುಡಗಳು; ಶಬ್ದಸ್ಪರ್ಶರೂಪರಸಗಂಧಗಳೇ ಎಲೆಗಳು; ಹನ್ನೊಂದು ಇಂದ್ರಿಯಗಳೇ ಶಾಖೆಗಳು; ಮೂರು ಗುಣಗಳೇ ತೊಗಟೆಗಳು; ಪ್ರವೃತ್ತ ನಿವೃತ್ತ ಮಾರ್ಗದ್ವಯವನ್ನನುಸರಿಸಿ ಪೋಗುವ ಪಕ್ಷಿಗಳ ಗೂಡಾದ ಹೃದಯ; ಪ್ರವರ್ತಕಕರ್ಮಫಲವಾದ ಸ್ವರ್ಗವೆಂಬ ಪುಷ್ಪ; ನಿವೃತ್ತಕರ್ಮಫಲವಾದ ಮೋಕ್ಷವೆಂಬ ಫಲ; ವೃಕ್ಷವು ಆಕಾಶದಲ್ಲಿ ಪ್ರವಿಷ್ಟವಾಗಿರುವಂತೆ ಜಗವೆಲ್ಲವು ಶ್ರೀವಿಷ್ಣುವಿನ ಆಧಾರದಿಂದ ನಿಂತಿರುವುದು. ಭೂಜಲಗಳಂತೆ ವೃಕ್ಷಕ್ಕೆ ಆಧಾರವಾಗಿರುವ ಬ್ರಹ್ಮ ಸರಸ್ವತಿಯರು ತನ್ನಿಯಾಮಕರಾಗಿರುವರು. ಜೀವರನ್ನು ಯೋಗ್ಯತಾನುಸಾರವಾಗಿ ಪ್ರೇರಿಸಿ, ಶ್ರೀಹರಿಗುಣಧ್ಯಾನ ಮಾಡಿಸಿ, ಹರಿಭಕ್ತ್ಯಾದಿ ಸಾಧನ ಸಾಮಗ್ರಿಯನ್ನು ಸಂಪಾದನ ಮಾಡಿಸಿ, ಹರಿಪ್ರೀತಿಗೆ ಮುಖ್ಯ ಪಾತ್ರನಾದ ಚತುರ್ಮುಖನು ಉತ್ತಮೋತ್ತಮಾಧಿಕಾರಿಯಾಗಿರುವನು. ಆ ಮಹಾತ್ಮನು ನನ್ನ (ಕೃಷ್ಣ) ಅನಂತರ ಶ್ರೀದೇವಿಯ ಅನಂತರ ವೇದಾದಿ ಸರ್ವಶಬ್ದಮುಖ್ಯಾರ್ಥನಾಗಿರುವನು. ನನ್ನಲ್ಲಿ ಗೋಪಿಯರು ಭಕ್ತಿ ಮಾಡಿದರು ನಿಜ.

ಗೋಪಿಯರು ಕೃಷ್ಣರಮಣಿಯರು ಯಶೋದೆ ನಂದ ದೇವಕೀ ವಸುದೇವ ಅರ್ಜುನ ಬಲರಾಮ ಬ್ರಹ್ಮದೇವರು ಭಕ್ತಿಯಲ್ಲಿ ಉತ್ತರೋತ್ತರವಾಗಿ ಹಿರಿಯರು. ಸರ್ವಪ್ರೇರಕರಾಗಿರುವ ಬ್ರಹ್ಮಾದಿ ದೇವತೆಗಳಿಗೆ ಪ್ರಜರ ಭಕ್ತ್ಯಾದಿ ಗುಣಸ್ಪರ್ಶವೇ ಆಗಲಿ ಅವರು ಮಾಡುವ ಪಾಪದ ಸ್ಪರ್ಶವಿಲ್ಲ. ಪ್ರವೃತ್ತಕರ್ಮದಿಂದ ಬರುವ ಸ್ವರ್ಗರೂಪ ಫಲವನ್ನು ಗ್ರಾಮ್ಯವಿಷಯಲೋಲುಪರು ತಿನ್ನುವರು; ಅರಣ್ಯವಿರಕ್ತರಾದ ನಾರಾಯಣಕ್ಷೀರಪಾನ ಕುಶಲಹಂಸರು ನಿವೃತ್ತ ಕರ್ಮಫಲವಾದ ಮೋಕ್ಷರೂಪ ಫಲವನ್ನು ಉಂಬುವರು. ಇಂತು ಭೋಗಾಯತನವಾಗಿ ಇಷ್ಟವೆನಿಸಿದ ಈ ಜಗತ್ತರುವಿನ ಆಧಾರದ ಶ್ರೀಹರಿಯನ್ನರಿತವನು, ವೇದ ಪರಮ ಮುಖ್ಯಾರ್ಥವನ್ನು ಅರ್ಥಮಾಡಿಕೊಂಡವನೆನಿಸಿ ಮುಕ್ತನಾಗುವನು. ಇಂತು ಗುರೂಪಾಸನೆಯಿಂದ ಬಂದ ಪ್ರಾಕೃತಾಂತಃಕರಣವನ್ನು ಬೆಳಗುವ ಜ್ಞಾನವೆಂಬ ಪರಶುವಿನಿಂದ ಧೀರನಾದವನು ಅದನ್ನು ನಿರ್ಮಲೀಕರಿಸಿ, ಬಾಹ್ಯಾಂತಃಕರಣ ಜನ್ಮಪಾಶವನ್ನು ಭೇದಿಸಿ, ಅಪ್ರಮತ್ತನಾಗಿ, ಶ್ರೀಹರಿಯನ್ನು ಸೇರುವನು. ಇನ್ನು ಬಾಹ್ಯಾಂತಃಕರಣದಿಂದ ಅವನಿಗಾಗುವ ಪ್ರಯೋಜನವಾದರೂ ಇರುವುದಿಲ್ಲ.

## ೧೩. ಭಕ್ತಿಸಮುತ್ಪತ್ತಿ ಪ್ರಕಾರ – ಹಂಸೋಪದೇಶ

ಶ್ರೀಭಗವಂತನು ಹೇಳಿದನು–

ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಅಂತಃಕರಣದಲ್ಲಿವೆ; ಜೀವನ ನಲ್ಲಿಲ್ಲಯ ಸಾತ್ವಿಕ ಮನಸ್ಸಿನಿಂದ ರಾಜಸ ತಾಮಸಮನೋಭಾವಗಳನ್ನು ನಾಶಮಾಡಿ, ಸಾತ್ವಿಕಾಂತಃಕರಣಜನಿತಜ್ಞಾನದಿಂದ ಸಾತ್ವಿಕಾಂತಃಕರಣವನ್ನೂ ನಾಶಮಾಡಿದಾಗ ಶುದ್ಧವಾದ ಮನದಲ್ಲಿ ನನ್ನ ಭಕ್ತಿಶ್ರದ್ಧೆ ಅಂಕುರಿಸುವುದು. ಮತ್ತೆ ಸಾತ್ವಿಕಧರ್ಮಸೇವನೆಯಿಂದ ಸತ್ವೋದ್ರೇಕವು ಪುನಃ ಪುನಃ ಆಗಿ, ಭಕ್ತಿಯು ಹೆಚ್ಚುವುದು. ಧರ್ಮಸೇವನೆಯಿಂದ ಭಕ್ತಿ ಸ್ವಭಾವವು ಪಕ್ವವಾದಾಗ ರಜಸ್ತಮೋಗುಣಗಳ ವ್ಯಾಪಾರವಾದ ಅಧರ್ಮವು ಪೂರ್ಣವಾಗಿ ನಾಶವಾಗುವುದು. ಉದ್ರಿಕ್ತಭಕ್ತಿಪೂರಿತಾಂತಃಕರಣನಾದವನು ಧರ್ಮವನ್ನೇ ಮಾಡುವನು.

ಆಗಮ, ಯಜ್ಞ, ದೇಶ, ಕಾಲ, ಕರ್ಮ, ಜನ್ಮ, ಧ್ಯಾನ, ಮಂತ್ರ, ಸಂಸ್ಕಾರ ಇವೆಲ್ಲವೂ ಸಾತ್ವಿಕ ರಾಜಸತಾಮಸಭೇದದಿಂದ ತ್ರಿವಿಧವಾಗಿದೆ. ಜ್ಞಾನವೃದ್ಧರು ಸಾಧು ನಿರ್ದೋಷ ಎಂದು ಹೇಳಿದುದೇ ಸಾತ್ವಿಕವು; ಅವರು ನಿಂದಿಸಿ ದೂರಮಾಡಿರುವುದೇ ತಾಮಸವು; ಅವರು ಉಪೇಕ್ಷಿಸಿರುವುದೇ ರಾಜಸವು. ಇದನ್ನರಿತು ಮನಸ್ಸ್ವಭಾವ ಶುದ್ಧಿಯನ್ನು ಬೇಡುವವನು ಸಾತ್ವಿಕಗಳನ್ನೇ ಸ್ವೀಕರಿಸಬೇಕು. ಆಗ ಅವನಿಗೆ ಧರ್ಮಶ್ರದ್ಧೆಯು ಅದರಿಂದ ಭಕ್ತಿಯು ಅದರಿಂದ ಹರಿವಿಷಯಕ ಕೀರ್ತನವು ಹರಿಸ್ಮೃತಿಯು ಸಿಗುವುವು. ಹರಿವಿರುದ್ಧವಾದುದನ್ನವನೆಂದೂ ಮಾಡದಿರುವನು. ಅವನಿಗೆ ಆಗ ಉತ್ಪನ್ನವಾದ ವೃತ್ತಿಜ್ಞಾನವು ತನಗಾಧಾರವಾದ ಬಾಹ್ಯಾಂತಃಕರಣವನ್ನು ಸುಟ್ಟು, ತಾನೂ ಶಾಂತವಾಗುವುದು. ಅವರಿಗೆ ಸ್ವರೂಪಭೂತವಾದ ಚಿತ್‌ಜ್ಞಾನವು ಪುಟ್ಟಿರುವಾಗ ಇನ್ನು ಬಾಹ್ಯಾಂತಃಕರಣದಿಂದಲು, ಅಲ್ಲಿ ಪುಟ್ಟಿದ ವೃತ್ತಿಜ್ಞಾನದಿಂದಲು, ಏನು ಪ್ರಯೋಜನ? ಜಡಜ್ಞಾನರಹಿತರಾದ ಮುಕ್ತರು ಕೂಡ ಸ್ವರೂಪಾಂತಃಕರಣದ ದಿವ್ಯಜ್ಞಾನದಿಂದ ಶ್ರೀಹರಿಯನ್ನು ಸದಾ ಉಪಾಸಿಸುವರು.

ಉದ್ಧವನು ಕೇಳಿದನು–

ಮನುಜರಲ್ಲಿ ಬಹುಜನರು ಕಷ್ಟಸಾಧ್ಯವು ದುಃಖಾಂತವೂ ಆದ ವಿಷಯಸುಖವನ್ನೇ ಬೇಡುವರು. ಆ ದುಃಖಮಯ ವಿಷಯಸುಖವನ್ನೇ ಕಷ್ಟವನ್ನು ಮರೆತು ಭುಜಿಸುತ್ತಾ ಅಲ್ಲೇ ಮಗ್ನರಾಗಿರಲು ಕಾರಣವೇನು? ನಾಯಿ ಕತ್ತೆ ಮೇಕೆಗಳಂತೆ ವಿಷಯವಿಷವನ್ನೇ ನುಂಗುತ್ತಿರುವುದೇಕೆ?

ಶ್ರೀಭಗವಂತನು ಹೇಳಿದನು–

ಉದ್ಧವಾ! ತಾನೇ ಕರ್ತನೆಂಬ ಅಹಂರಾರಜ್ವರವು ಜೀವನಿಗೆ ಬಂದು ಅವರು ಪ್ರಮತ್ತನಾಗಿರುವನು. ರಜೋಗುಣವು ಘೋರಾಕಾರವಾಗಿ ವಿಜೃಂಭಿಸಿ, ಅವನ ಮನಸ್ಸಿನಲ್ಲಿ ಸಂಕಲ್ಪ ವಿಕಲ್ಪಗಳೇ ಮೊದಲಾದ ವಿವಿಧ ವಿಕಾರಗಳು ಹುಟ್ಟುವುವು. ಆಗ ಕಾಮವು ದುಃಸಹವಾಗಿ ರೇಗಿಸಲು, ಜೀವನು ಕಾಮವಶನಾಗಿ, ವನಿತಾದಿ ರೂಪಗಳನ್ನು ನೋಡಿ, ಇಂದ್ರಿಯದಾಸನಾಗುವನು. ಚೆನ್ನಾಗಿ ತಿಳಿದು ದುಃಖವನ್ನೇ ಕೊಡುವ ಕಷ್ಟಕರ್ಮಗಳನ್ನು ರಜೋವೀರ್ಯೋದ್ರೇಕದಿಂದ ಕಣ್ಣುಕಾಣದೆ ಮಾಡುವನು. ಹರಿಭಕ್ತನು ಮತ್ತೆ ಮತ್ತೆ ಬರುವ ರಜಸ್ತಮೋಗುಣವಿಕಾರವಾದ ವಿಷಯಗಳ ಸುಳಿಯಲ್ಲಿ ಸಿಕ್ಕು ಬುದ್ಧಿಗೆಡದೆ, ಅವುಗಳ ದೋಷವನ್ನರಿತು ಶರೀರಯಾತ್ರೆಗಾಗಿ

ಮಾತ್ರ ಸೇವಿಸುತ್ತಾ, ಆಸಕ್ತನಾಗದಿರುವನು. ಆಲಸ್ಯವಿಲ್ಲದೆ, ಅಪ್ರಮತ್ತನಾಗಿ, ಅವನು ತನ್ನ ಮನವನ್ನು ವಿಷಯಗಳಿಂದ ಸೆಳೆದು ನನ್ನಲ್ಲಿಟ್ಟು ಜಿತಶ್ವಾಸನಾಗಿ, ಜೀತಾಸನನಾಗಿ, ನನ್ನನ್ನು ಭಜಿಸುವ ಸುಖದಲ್ಲಿ ತೃಪ್ತನಾಗದೆ, ಸದಾ ಸೇವಿಸುತ್ತಿರುವನು. ವಿಷಯವನ್ನು ಬಿಟ್ಟು ಸೆಳೆದ ಮನವನ್ನು ನನ್ನ ಚರಣದಲ್ಲಿಡುವ ಯೋಗವನ್ನು ಹಿಂದೆ ನಾನು ಬ್ರಹ್ಮಶಿಷ್ಯರಾದ ಸನಕಾದಿಗಳಿಗೆ ಹೇಳಿದೆನು.

ಉದ್ಧವನು ಪ್ರಶ್ನಿಸಿದನು–

ಕೃಷ್ಣಾ! ನೀನು ಸನಕಾದಿಗಳಿಗೆ ಯಾವ ರೂಪದಿಂದ ಯೋಗವನ್ನು ನಿರೂಪಿಸಿದೆ? ನನಗೆ ತಿಳಿಸು.

ಶ್ರೀಕೃಷ್ಣನಿಂತೆಂದನು–

ಹಿರಣ್ಯಗರ್ಭನ ಮಾನಸಪುತ್ರರಾದ ಸಕನಾದಿ ಮುನಿಗಳು ಸೂಕ್ಷ್ಮವು ಸರ್ವೋತ್ತಮ ಹರಿಪ್ರೀತಿಕರವು ಆದ ಯೋಗವನ್ನು ಕುರಿತು ತಿಳಿಯಲಿಚ್ಛಿಸಿ, ತಂದೆಗಿಂತೆಂದರು–

ಶಬ್ದಾದಿವಿಷಯಗಳು ಮನಸ್ಸಿನಲ್ಲಿ ಸಂಸ್ಕಾರರೂಪವಾಗಿ ಇದ್ದೇ ಇವೆ. ಮನಸ್ಸಾದರೂ ವಿಷಯೋಪರಕ್ತವಾಗೇ ಇರುತ್ತದೆ. ಮನಸ್ಸಿನಿಂದ ವಿಷಯಗಳನ್ನು ದೂರಮಾಡುವುದು ಅಥವಾ ಮನಸ್ಸನ್ನು ವಿಷಯಗಳಿಂದ ಸೆಳೆದಿಡುವುದೂ ಕೂಡ ದುಶ್ಶಕವೆಂದೇ ಕಾಣುತ್ತಿದೆ. ಸಂಸಾರಸಿಂಧುವಿನನ್ನು ದಾಟಲು ಬೇಡುವ ಮುಮುಕ್ಷು ಜನರು ಎಂತು ಮನವನ್ನು ಶ್ರೀಹರಿಚರಣದಲ್ಲಿಡಬೇಕು?

ಆ ಮಾತನ್ನಾಲಿಸಿ, ಬ್ರಹ್ಮದೇವನು ಅನ್ಯಮನಸ್ಕನಾದವನಂತೆ ಪ್ರಶ್ನಪರಿಹಾರವನ್ನು ಚಿಂತಿಸಿದನು. ಕರ್ಮವೇ ವಿಷಯಾಸಕ್ತಿಕಾರಣವೆಂದು ಧ್ಯಾನಿಸಿ, ಆ ಕರ್ಮವು ಕರ್ಮನಾಮಕ ನಾರಾಯಣಾಧೀನವಾದುದರಿಂದ ಆ ಶ್ರೀಹರಿಯೇ ಅವರ ಪ್ರಶ್ನೆಗಳಿಗೆ ಉತ್ತರವನ್ನು ಹೇಳಲಿಚ್ಛಿಸಿದುದನ್ನು ತಿಳಿದು – ತಾನು ಮಾತಾಡದೆ ಸುಮ್ಮನಿದ್ದನು. ಪ್ರಶ್ನ ನಿರ್ಣಯವನ್ನು ಮಾಡಲು ನನ್ನನ್ನು ಪ್ರಾರ್ಥಿಸಿದನು. ಸೂರ್ಯಮಂಡಲದಲ್ಲಿ ಮಧ್ಯಾಹ್ನ ಸಮಯದಿ ಕ್ಷೋಭವಿದ್ದಂತೆ, ತೋರುವಂತೆ, ಸರ್ವಜ್ಞನಾದ ಬ್ರಹ್ಮದೇವನಿಗೆ ಮೋಹಭ್ರಮೆಗಳಿಲ್ಲದಿದ್ದರೂ ತೋರುವುದು. ಶ್ರೀಹರಿಯು ಪ್ರೀತನಾಗಲೆಂದೇ ಬ್ರಹ್ಮದೇವನು ಅಂತು ತೋರಿಸಿ, ಶ್ರೀಹರಿಯೇ ಪ್ರಶ್ನ ಪರಿಹಾರವನ್ನು ಮಾಡಲಿ ಎಂದು ಸುಮ್ಮನಾದನು. ಆಗ ನಾನು ಹಂಸರೂಪದಿಂದ ಬ್ರಹ್ಮನ ಮಂದಿರವನ್ನು ಪೊಕ್ಕು ಅವರಿಗೆ ದರ್ಶನವಿತ್ತೆನು. ಬ್ರಹ್ಮದೇವನು ನನಗೆ ನಮಸ್ಕರಿಸಿದನು. ನನ್ನನ್ನು ನೋಡಿ ಸನಕಾದಿಗಳು ಬ್ರಹ್ಮದೇವನನ್ನು ಮುಂದೆ ಮಾಡಿ ನಿಂತು, ವಂದಿಸಿದರು ಮತ್ತು ನೀನಾರೆಂದು ಕೇಳಿದರು. ಆ ತತ್ವಜಿಜ್ಞಾಸು ಮುನಿಗಳಿಗೆ ಹೇಳಿದ ವಿಷಯವನ್ನೇ ನಿನಗೂ ಹೇಳುವೆನು. ಕೇಳು!

ಸನಕಾದಿಗಳಿರೇ! ಶ್ರೀಹರಿಯು ಸ್ವಗತಭೇದ ವಿವರ್ಜಿತನಾಗಿ ಏಕಪ್ರಕಾರನಾಗಿರುವಾಗ, ನನ್ನನ್ನು ನೋಡಿ ನೀನಾರೆಂದು ಕೇಳಿದುದು ವ್ಯರ್ಥವಲ್ಲವೇ? ಇನ್ನು ಅನೇಕ ವಸ್ತುಗಳಲ್ಲಿ ನೀನಾರೆಂದು ಕೇಳಿದುದು ವ್ಯರ್ಥವೇ ಸರಿ! ದೇವ ಮನುಷ್ಯ ಪಿತೃ ಗಂಧರ್ವ ರಾಕ್ಷಸ ಭೇದದಿಂದ ಐದು ವಿಧರಾದ ಜೀವರು, ಹಿರಣ್ಯಗರ್ಭನಿಗೆ ವಂದ್ಯರಲ್ಲ. ಅವರೆಲ್ಲರಿಗೂ ಬ್ರಹ್ಮನು ಉತ್ತಮನೆಂದು ನಿಮಗೆ ತಿಳಿದಿದೆ. ಅಂತಹ ಬ್ರಹ್ಮನಿಂದವಂದಿತನಾದ ನನ್ನನ್ನು ಸರ್ವಜೀವರಿಂದ ಭಿನ್ನನಾದ ಶ್ರೀಹರಿಯೇ ಎಂದು ತಿಳಿದು ತಿಳಿದೂ, ನೀನಾರೆಂದು ಕೇಳಿ, ವಾಕ್ಯವನ್ನು ವ್ಯರ್ಥವಾಗಿ ಪ್ರಯೋಗಿಸಿದಿರಲ್ಲವೇ? ಮನ ಆದೀಂದ್ರಿಯಗಳಿಂದ ಸಿಗುವ ವಸ್ತುವೇ ನಾನು? ಇನ್ನು ನನ್ನನ್ನು

ನೋಡಿ, ನೀನಾರೆಂದು ಕೇಳಿದುದು ವ್ಯರ್ಥವಲ್ಲವೇ? ನನಕಿಂತ ಭಿನ್ನವಾದುದು ನಾನಲ್ಲವೆಂದು ಹೇಳಬೇಕೇ? ಜಗದ್ವಿಲಕ್ಷಣನು, ಬ್ರಹ್ಮವಂದ್ಯನು, ಸಕಲಸಂಶಯ ನಿರಾಸಕನು ಆದ ನನ್ನನ್ನು ನೋಡಿ ನೀವು ವಿಷಯಗಳಿಂದ ಮನವನ್ನು ಸೆಳೆದು ನನ್ನಲ್ಲಿಡುವ ಯೋಗವನ್ನು ಕುರಿತು ಪ್ರಶ್ನಿಸಬೇಕಾಗಲಿ ನೀನಾರೆಂದಲ್ಲ. ನನ್ನ ತತ್ತ್ವಜ್ಞಾನವು ನನ್ನ ಪ್ರಸಾದವಿಲ್ಲದಿರೆ ಯಾರಿಗೂ ಆಗದಿರುವುದು. ಅಂತೆಯೇ ನನ್ನ ಪ್ರೀತಿಗಾಗಿ ಬ್ರಹ್ಮನು ಕೂಡ ಪರಿಹಾರವನ್ನು ತಿಳಿದೂ, ಹೇಳದಿರುವನು. ಪರಮಾಪ್ತನು ಬ್ರಹ್ಮನು; ನಾನು ಪರಮಾಪ್ತತಮನು. ವೇದಸಿದ್ಧವಾದ ನನ್ನ ಮಾತನ್ನು ಕೇಳಿ!

ಬ್ರಹ್ಮಪುತ್ರರೇ! ನನ್ನ ಭಕ್ತಿಗಾಗಿ ನನ್ನ ಚರಣಾರವಿಂದದಲ್ಲಿ ಮನವನ್ನಿಟ್ಟ ಸುಜೀವನ ಮನಸ್ಸು – ಆ ಮನದ ವಿಷಯಗಳು – ಎಂಬ ಎರಡು ಪದಾರ್ಥಗಳು ಸುಟ್ಟು ಬೂದಿಯಾಗಿವೆ. ಎಂದು ತಿಳಿಯಿರಿ! ಆಗ ಜ್ಞಾನಾಗ್ನಿಯ ಉಪಕಾರವಾಗಿದೆ. ನಿರಂತರ ವಿಷಯ ಸ್ಮರಣೆಯಿಂದ ಚಿತ್ತವು ವಿಷಯನಿಷ್ಠವಾಗುವುದು ನಿಜ: ವಿಷಯಗಳು ಚಿತ್ತದಿಂದ ಸಂಸ್ಕಾರರೂಪವಾಗಿ ಬರುವುದೂ ಸರಿ. ಆದರೆ ಹರಿಸ್ಮರಣೆ ಅವು ಪ್ರತಿಬಂಧಕವಾಗದಂತೆ ಜ್ಞಾನವಂತನು ಆ ಮನಸ್ಸನ್ನು ವಿಷಯಗಳನ್ನು ಕೂಡ ನನ್ನ ಸ್ವರೂಪಚಿಂತನದಿಂದ ದೂರಮಾಡಲು ಸಮರ್ಥನಾಗುವನು.

ಮನ ಆದೀಂದ್ರಿಯಗಳ ಶ್ರೀಮದಂತರ್ಯಾಮಿ ಹರಿವಶವಾಗಿದೆ; ಅವನ ಪ್ರೇರಣೆಯಿಂದ ನಡೆಯುತ್ತಿವೆ. ವಿಷಯಗಳೂ ಅವನ ವಶರಾಗಿ, ಅವನ ಪ್ರೇರಣೆಯಿಂದ ನನ್ನ ಭೋಗಸಾಧನ ವಾಗಿವೆ – ಮುಮುಕ್ಷುವು ನಿತ್ಯವೂ ಇಂತು ಚಿಂತಿಸಿ, ಪ್ರಕತಿ, ಪ್ರಾಕೃತ ಬಂಧದಿಂದ ಮುಕ್ತನಾಗು ವನು. ಪ್ರಕೃತಿಗುಣಸಂಬಂಧದಿಂದ ಜೀವನಿಗೆ ಜಾಗ್ರತ್ ಸ್ವಪ್ನ, ಸುಷುಪ್ತಿ ಎಂಬ ಮೂರವಸ್ಥೆ ಗಳುಂಟಾಗುವುವು. ಆದುದರಿಂದ ಅವಸ್ಥೆಗಳಿಂದ ಜೀವನು, ಭಿನ್ನನಾಗಿರುವನು. ಅವುಗಳಲ್ಲಿ ಸಾಕ್ಷಿಯಂತಿರುವನೆಂದು ತಿಳಿದು ಗುಣಾತೀತನಾದ ತುರ್ಯರೂಪ ಹರಿಯಲ್ಲಿ ಮನಸ್ಸನ್ನು ನಿಲ್ಲಿಸಬೇಕು. ಆಗ ಅವನ ಬಾಹ್ಯಂತಃಕರಣವು ವಿಷಯದೂಷಿತವಾಗದೆ ಶಾಂತವಾಗುವುದು. ಅಹಂಕಾರಕೃತ ಬಂಧವಾದರೂ ಗುಣನಿಮಿತ್ತಕವೇ ಆಗಿದೆ. ವಿಷಯಗಳೆಲ್ಲವು ದುಃಖ ಲಕ್ಷಣವಾಗಿದೆ ಎಂದು ವಿರಕ್ತನಾಗಿ, ಶ್ರೀಹರಿಯ ಸ್ವಾತಂತ್ರ್ಯವನ್ನು ತನ್ನ ಅಸ್ವಾಂತಂತ್ರ್ಯವನ್ನು ತಿಳಿದ ಜೀವನಿಗೆ ಅಹಂಕಾರ ಬಂಧವು ಕೂಡ ನಾಶವಾಗುವುದು. ವಿಷ್ಣು ಜೀವರೊಂದೇ ಎಂಬ ಮಿಥ್ಯಾಜ್ಞಾನವು ನಾಶವಾಗುವವರೆಗೂ ಅಂತಹ ಮಿಥ್ಯಾಜ್ಞಾನಿಯು ಎಚ್ಚತ್ತಿದ್ದೂ ಮಲಗಿದವ ನಂತೇ ಸರಿ. ಸ್ವಪ್ನ ಪದಾರ್ಥವನ್ನು ಎಚ್ಚತ್ತಮೇಲೆ ಕಾಣುವ ಪದಾರ್ಥದಂತೆ ತಿಳಿದು ಹುಡು ಕಾಡುವ ಹುಚ್ಚನಂತೆ ಒಂದನ್ನು ಇನ್ನೊಂದೆಂದು ತಿಳಿವ ಅಜ್ಞಾನಿಗೆ ಸಂಸಾರಬಂಧವು ಎಂದಿಗೂ ಬಿಡದು.

ಬ್ರಹ್ಮಾದಿ ಜೀವರಿಗೂ ಶ್ರೀಹರಿಗೂ ಅಭೇದವೆಂದು ಹೇಳುವ ಪ್ರಮಾಣ ವಚನಗಳಾಗಲಿ, ಲಿಂಗಗಳಾಗಲಿ ಇಲ್ಲ. ಸ್ವಪ್ನವನ್ನು ಎಚ್ಚರಿಕೆಯೆಂದು ನೋಡಿದ ಮಿಥ್ಯಾಜ್ಞಾನಿಯಂತೆ, ಜೀವೇಶೈಕ್ಯ ವನ್ನು ಹೇಳುವವನು ಕೂಡ ಅವಿವೇಕಿಯಾಗಿರುವನು. ಅವನ ಮಾತಿಗೆ ಸಾಧಕಪ್ರಮಾಣಗಳು, ವೇದಗಳಿಲ್ಲ. ಅವನ ತರ್ಕವಂತೂ ವೇದ ಪ್ರತ್ಯಕ್ಷಗಳಿಗೆ ವಿರುದ್ಧವಾಗಿದೆ. ವಿಶ್ವನಾಮಕ ಹರಿಯು ದಕ್ಷಿಣಾಕ್ಷಿಯಲ್ಲಿ ಬಂದು ಎಚ್ಚರವನ್ನು ಕೊಟ್ಟಾಗ ಜೀವನಿಗೆ ಜಾಗ್ರದವಸ್ಥೆ; ಕಂಠದಲ್ಲಿ ತೈಜಸನಾಗಿ, ಮಾನಸಿಕ ಸಂಸ್ಕಾರವೇ ಉಪಾದಾನವನ್ನಾಗಿರಿಸಿ ಮಾಡಿದ ಸತ್ಯಸ್ವಪ್ನಪದಾರ್ಥ ಗಳನ್ನು ನೋಡಿಸಿದಾಗ ಸ್ವಪ್ನಾವಸ್ಥೆ; ಎಲ್ಲ ಇಂದ್ರಿಯಗಳನ್ನು, ಮನವನ್ನು ಕೂಡ ತನ್ನ ವಶದಲ್ಲಿ

ಸೆಳೆದುಕೊಂಡು ಹೃದಯದಲ್ಲಿ ಪ್ರಾಜ್ಞನಾಗಿ, ಜೀವನಿಗೆ ನಿದ್ರಾಸುಖವನ್ನೀವ ಸುಷುಪ್ತ್ಯಾವಸ್ಥೆ; ಈ ಮೂರು ರೂಪಗಳಿಂದ ಜೀವನಿಗೆ ಅವಸ್ಥಾತ್ರಯವನ್ನಿತ್ತು ನಡೆಸುವ ಶ್ರೀಹರಿಯು ಸ್ವತಂತ್ರನಾಗಿರುವನು. ಅವಸ್ಥೆಗಳನ್ನು ಅನುಭವಿಸುವ ಜೀವನು ಅಸ್ವತಂತ್ರನಾಗಿರುವನು. ಈ ವಿಷಯವನ್ನು ಶ್ರುತಿ ಸ್ಮೃತಿಗಳು ಸಾರುತ್ತಿರುವಾಗ ಜೀವೇಶರಿಗೆ ಭೇದವಿಲ್ಲವೆಂದು ಹೇಳುವ ಕುಜನರಿಗೆ ತಮಸ್ಸೇ ಗತಿಯಾಗುವುದು. ಸ್ವಯಂ ಸ್ವಪ್ನಾದಿ ಹೀನನಾದ ಪುರುಷೋತ್ತಮನು ಸ್ವತಂತ್ರಸಾಕ್ಷಿಯಾಗಿ, ಸುಖ ಮಾತ್ರ ಭೋಕ್ತನಾಗಿರುವನು. ಇಂತು ವಿಚಾರಮಾಡಿ, ಜೀವನಿಗೆ ವಿಷಯಸಂಬಂಧವನ್ನು ತಂದೊಡ್ಡುವ ಗುಣಮಯ ಪ್ರಕೃತಿಬಂಧವನ್ನು, ಶ್ರೀಹರಿಯ ಅನುಗ್ರಹದಿಂದ ದಾಟಬೇಕೆಂದು ನಿಶ್ಚಯಿಸಿ ನನ್ನಲ್ಲಿ ಭಕ್ತಿ ಮಡುವುದು ಕರ್ತವ್ಯವಾಗಿದೆ. ನನ್ನನ್ನು ನಂಬಿ ಭಜಿಸದವನ ಸರ್ವಸಂಶಯನಿವರ್ತಕನೂ, ಸದ್ಯುಕ್ತಿಭೋಧಕನೂ ವೇದಾದಿ ಮುಖ್ಯ ಪ್ರತಿಪಾದ್ಯನೂ ನಾನೇ ಆಗಿರುವನು. ನನ್ನ ಅನಂತವಿಶ್ವಾದಿ ರೂಪಗಳಲ್ಲಿ (ಸ್ವಗತ) ಭೇದಜ್ಞಾನವು, ಗುರೂಪದೇಶದಿಂದ ನಷ್ಟವಾಗುವುವು; ಶ್ರುತ್ಯಾದಿ ಶಾಸ್ತ್ರವಿಚಾರಶೀಲನಿಗೆ ಶೀಘ್ರುವಾಗಿ ಯಥಾರ್ಥಜ್ಞಾನವು ಪುಟ್ಟುವುದು. ಆಗ ಅಲಾತ ಚಕ್ರಾಕಾರ ಭ್ರಮದಂತೆ ತನಗೆ ಶ್ರೀಹರಿರೂಪಗಳ ಭೇದಭ್ರಮವೆಂದು ತಿಳಿದು ಜೀವನು ವಿಜ್ಞಾನಾನಂದಮಯನು, ಬಹುರೂಪ ವಿಭ್ರಾಜಿತನು ಆದ ಶ್ರೀಹರಿಯನ್ನು ಪೊಂದುವನು. ಸಚ್ಚಿದಾನಂದನು, ಏಕಲನು ಆದ ಶ್ರೀಶನನ್ನು ಭಿನ್ನ ಭಿನ್ನರೂಪನೆಂತಲೂ ಪರಸ್ಪರ ವಿಷಯನೆಂತಲೂ ತಿಳಿಯುವವರು ಅಸುರರೇ ಸರಿ! ಅವರ ಸ್ವಭಾವವೇ ಅಂತಹದು!

ಆದುದರಿಂದ ಸಜ್ಜೀವನು ಮಿಥ್ಯಾಜ್ಞಾನವನ್ನು ಬಿಟ್ಟು, ವಿಷಯವಾಸನೆಯನ್ನು ಅಡಗಿಸಿ, ಇಂದ್ರಿಯ ಜಯವನ್ನು ಪಡೆದು, ನಿಷಿದ್ಧಾಚರಣರಹಿತನು, ಸ್ವರೂಪ ಸುಖಾನುಭವನು ಆಗಿ ನಿರಂತರ ಧ್ಯಾನ ಮಗ್ನನಾಗುವನು. ಜೀವನಿಗೆ ಬರುವ ಶ್ರೀಹರಿವಿಷಯಕ ಮಿಥ್ಯಾಜ್ಞಾನವನ್ನು, ಸುಜನರು ಪೊಂದದಿರುವನು. ಜ್ಞಾನಿಜನರಿಂದ ಸ್ವಗತಭೇದ ವರ್ಜಿತನಾದ ಶ್ರೀಶನ ಮಹಿಮೆಯನ್ನು ತಿಳಿದು, ತನ್ನ ಅಸ್ವಾತಂತ್ರ್ಯವನ್ನೂ ಜಡೇಶ ಭೇದವನ್ನೂ ಅರಿತು ತಾರತಮ್ಯಜ್ಞಾನದಿಂದ ಅಪರೋಕ್ಷವನ್ನು ಪೊಂದುವನು. ಅಂತಹ ಸಿದ್ಧನು ತನ್ನ ದೇಹವು ಇದೆಯೋ ಇಲ್ಲವೋ ಎಂದು ಲಕ್ಷಿಸದೆ ಶ್ರೀಹರಿಯ ಇಚ್ಛೆಯಂತೆ ನಡೆಯಲಿ! ಎಂದು ನಿಶ್ಚಯಿಸಿರುವುದರಿಂದ ದೇಹಾಭಿಮಾನರಹಿತನಾಗಿರುವನು. ಮದ್ಯಪಾನಮಾಡಿ ಮೈಮರೆತವನು ಮೈಮೇಲೆ ಬಟ್ಟೆ ಇದೆಯೋ, ಇಲ್ಲವೋ ಎಂದು ತಿಳಿಯದಿರುವಂತೆ ಅಪರೋಕ್ಷಜ್ಞಾನಿಯು ಅದೃಷ್ಟಪ್ರೇರಕ ಹರಿವಶನಾಗಿ ಮೈಮರೆತಿರುವನು. ಪ್ರಾರಬ್ಧಕರ್ಮಾವಸಾನವನ್ನು ನಿರೀಕ್ಷಿಸಿ, ಶ್ರೀಮುಖ್ಯಪ್ರಾಣನ ದಯದಿಂದ ಜೀವಧಾರಣ ಮಾಡಿರುವನು. ಆಸಂಪ್ರಜ್ಞಾತಸಮಾಧಿಯಲ್ಲಿ ನಿಂತು, ಶ್ರೀಹರಿ ದಯದಿಂದ ಕೊನೆಗೆ ಆ ದೇಹವನ್ನು ಬಿಟ್ಟು ಮತ್ತೆ ಪಂಚಭೂತಾತ್ಮಕ ದೇಹವನ್ನು ಪೊಂದದಿರುವಂತೆ ನಿವೃತ್ತಕರ್ಮ ಹರಿಧ್ಯಾನರತನಾಗಿರುವನು; ಸಮಾಧಿರಹಿತಕಾಲದಲ್ಲಿಯು, ತನ್ನ ದೇಹಪೋಷಣ ವಿಷಯವಾದ ಆದರವನ್ನು ಮಾಡದಿರುವನು.

ವಿಪ್ರರೇ! ನಿಮಗೆ ಧರ್ಮೋಪದೇಶವನ್ನು ಮಾಡಲು ಬಂದಿರುವ ಹಂಸನಾಮಕ ಶ್ರೀಹರಿಯೇ ನಾನೆಂದು ಚೆನ್ನಾಗಿ ತಿಳಿದು ಭಜಿಸಿರಿ! ನಾನೇ ಕರ್ಮಫಲಪ್ರದನು ಯಥಾರ್ಥಜ್ಞಾನದಿಂದಲೇ ನನ್ನನ್ನು ಪೊಂದಬಹುದು. ವೇದಗಳಿಗೆ ಮುಖ್ಯಪ್ರತಿಪಾದ್ಯನು, ಬ್ರಹ್ಮವಂದ್ಯನು, ಆದ ನಾನು, ಸತ್ಯ, ಧರ್ಮ, ಕೀರ್ತಿ, ದಯಾ, ದಮ, ಶಮ, ಮೊದಲಾದ ಸದ್ಗುಣಭರಿತನೆಂದು ಬ್ರಹ್ಮಾದಿ

ಯೋಗಿಗಳು ನನ್ನನ್ನು ಧ್ಯಾನಿಸುವರು. ನಾನು ನಿರಪೇಕ್ಷನು, ಅನಿಮಿತ್ತಬಂಧುವು, ನಿತ್ಯ ನಿರ್ದೋಷನು ಆಗಿರುವೆನು. ಜ್ಞಾನಾನಂದಾದಿಗಳಂತೆ, ಸಾಮ್ಯ(ಸ್ವಗತಭೇದ ರಾಹಿತ್ಯ)ಮತ್ತು ಅಸಂಗತ್ವ(ಪ್ರಕೃತಿ ಬಂಧ ರಾಹಿತ್ಯ)ಗಳು ನನ್ನ ವಿಶೇಷ ಗುಣಗಳೆನಿಸಿವೆ.

ಉದ್ಧವಾ! ನಾನಾಡಿದ ಮಾತನ್ನಾಲಿಸಿ, ಸನಕಾದಿಗಳು ಸಂಶಯದೂರರಾದರು: ನನ್ನನ್ನು ಪೂಜಿಸಿ, ಭಕ್ತಿಯಿಂದ ಸ್ತುತಿಸಿದರು. ಅವರ ಪೂಜಾನತಿಗಳನ್ನತಿ ಪ್ರೀತಿಯಿಂದ ಸ್ವೀಕರಿಸಿ, ನಾನು ಬ್ರಹ್ಮದೇವನನ್ನು, ಅವರನ್ನು ಬೀಳ್ಕೊಟ್ಟು, ನನ್ನ ವೈಕುಂಠಧಾಮವನ್ನು ಸೇರಿದೆನು.

## ೧೪. ಶ್ರೇಯಸ್ಸಾಧನಗಳು – ಭಕ್ತಿ – ಧ್ಯಾನಪ್ರಕಾರ

ಉದ್ಧವನು ಕೇಳಿದನು–

ಶ್ರೀಕೃಷ್ಣ! ಬ್ರಹ್ಮವಾದಿಗಳು ಬಹುವಿಧ ಶ್ರೇಯಃಸಾಧನಗಳನ್ನು ನಿರೂಪಿಸಿರುವರು. ಅವುಗಳಲ್ಲಿ ಮುಖ್ಯವಾದುದಾವುದು? ಅವೆಲ್ಲವೂ ಕಲೆತು ಶ್ರೇಯಃಸಂಪಾದಕವೋ? ಅಥವಾ ಮುಖ್ಯಧರ್ಮ ಸಹಾಯಕಗಳೋ? ಹೇಳು! ಭಕ್ತಿಯೇ ಅನ್ಯಪೇಕ್ಷಾರಹಿತವಾದ ಮುಖ್ಯಸಾಧನ ವೆಂದು ನೀನು ಹೇಳಿರುವೆ. ಆದರೆ ಬ್ರಹ್ಮವಾದಿಗಳೋ ಸರ್ವಸಂಗವನ್ನು ಬಿಟ್ಟು, ನಿನ್ನಲ್ಲಿ ಮನವನ್ನಿಡಲು ಬಹುಸಾಧನವನ್ನು ಹೇಳಿರುವರು. ಅವರ ಮಾತಿನ ಅರ್ಥವೇನು?

ಶ್ರೀಭಗವಂತನು ಹೇಳಿದನು–

ಕಾಲಶಕ್ತಿಯಿಂದ ಪ್ರಳಯದಲ್ಲಿ ವೇದವು ನನ್ನಲ್ಲಿ ಅಡಗಿತ್ತು. ಸೃಷ್ಟಿ ಕಾಲದಲ್ಲಿ ನನ್ನನ್ನೇ ಪ್ರತಿಪಾದಿಸುವ ವೇದರಾಶಿಯನ್ನು ವ್ಯಕ್ತೀಕರಿಸಿ, ನಾನು ಬ್ರಹ್ಮನಿಗೆ ಹೇಳಿದೆನು. ಬ್ರಹ್ಮನು ರುದ್ರೇಂದ್ರ ಕುಮಾರರ ನಂತರ ಪೂರ್ವಜನೆನಿಸಿದ ಮನುರಾಜನಿಗೆ ಅದನ್ನು ಹೇಳಿದನು. ಕ್ರಮವಾಗಿ ಭೃಗಾದಿ ಋಷಿಗಳು, ತತ್ಪುತ್ರರು, ಸಿದ್ಧಗಂಧರ್ವರು ಮೊದಲಾದವರು ವೇದಗಳನ್ನು ಸ್ವೀಕರಿಸಿದರು. ಸ್ವಭಾವವನ್ನನುಸರಿಸಿ ಹಾಗೂ ಸತ್ವರಜಸ್ತಮೋಗುಣ ಮಯಪ್ರಕೃತಿಯಿಂದಲು ವಿವಿಧರಾದ ಜೀವರು ವೇದಗಳನ್ನೋದಿ, ತಮ್ಮ ಮನೋಗತ ವಿಷಯವನ್ನು ಅದು ಪ್ರತಿಪಾದಿಸು ತ್ತಿದೆ ಎಂದೇ ತಿಳಿದರು. ವೇದವು ಪರಮ ಮುಖ್ಯವೃತ್ತಿಯಿಂದ ನನ್ನನ್ನು ಪ್ರತಿಪಾದಿಸುತ್ತಿದ್ದರೂ ಮುಖ್ಯವೃತ್ತಿಯಿಂದ ವಾಯ್ವಾದಿದೇವತೆಗಳನ್ನು ಅಮುಖ್ಯವೃತ್ತಿಯಿಂದ ಕರ್ಮಾದಿಗಳನ್ನೂ ಪ್ರತಿಪಾದಿಸುತ್ತಿರುವುದರಿಂದ ವಿಚಿತ್ರ ವಿವಿಧಾರ್ಥಗಳನ್ನು ತದ್ಯೋಗ್ಯರು ಸ್ವೀಕರಿಸಿದರು.ನನ್ನಿಂದ ಉಪದಿಷ್ಟವಾದ ಪರಂಪರೆಯಿಂದ ಆಗಮಗಳನ್ನು ಸಾತ್ವಿಕರು ಮಾತ್ರ ಆದರದಿಂದ ಸ್ವೀಕರಿಸಿದರು. ಕೆಲವರು ರಾಜಸ ತಾಮಸರು ಪಾರಂಪರ್ಯಾಗತವಲ್ಲದ ಪಾಖಂಡ ಮತಗಳನ್ನು ಕಲ್ಪಿಸಿ, ಸ್ಥಾಪಿಸಿ, ಉಪದೇಶಿಸಿದರು. ಅವರು ಅನೇಕ ವಿಧವಾಗಿ ತಮಗೆ ತೋರಿದಂತೆ ಹೇಳಲು, ನನ್ನ ಬಂಧಕ ಶಕ್ತಿಯೇ ಕಾರಣವಾಗಿದೆ. ಅವರ ಸ್ವಭಾವಕ್ಕೆ ತಕ್ಕಂತೆ ಪ್ರೇರಿಸುವ ನಾನು ನಿಷ್ಪಕ್ಷಪಾತಿಯಾಗಿರುವೆನು.

ಕೆಲವರು ಧರ್ಮವೇ ಶ್ರೇಯಃಸಾಧನವೆಂಬುವರು; ಕೆಲವರು ಯಶವೆಂಬುವರು; ಕಾಮ ವನ್ನು, ಸತ್ಯವನ್ನು, ದಮ, ಶಮ, ಅರ್ಥ, ಐಶ್ವರ್ಯ, ಅಭಿಮಾನ, ತ್ಯಾಗ, ವಾಯು ಭೋಜನ, ಯಜ್ಞ, ತಪಸ್ಸು, ದಾನ, ವ್ರತ, ನಿಯಮ ಯಮಗಳನ್ನು ಶ್ರೇಯಃಸಾಧನಗಳೆಂದು ಹೇಳುವವರೂ ಇದ್ದಾರೆ. ಆದರೆ ಅವುಗಳಿಂದ ಬರುವ ಲೋಕಗಳು ಕರ್ಮನಿರ್ಮಿತಗಳಾಗಿವೆ. ಅವು

ಪುಣ್ಯಕ್ಷಯವಾದೊಡನೆ ಅವನಿಗಿಲ್ಲದಾಗುವುವು. ಕೆಲವು ಪಾಪಿಗಳು ನನ್ನ ಭಕ್ತಿಯನ್ನು ಮಾಡದೆ, ಕೊನೆಗೆ ತಮಸ್ಸನ್ನೇ ಹೊಂದುವರು. ಕಾಮ, ಅರ್ಥ, ಐಶ್ವರ್ಯಗಳ ಉನ್ಮದದಿಂದ ತಮಸ್ಸು, ಅಲ್ಪದಾನಾದಿಗಳಿಂದ ಅಲ್ಪಸುಖಕರವು, ದುಃಖಾಂತವು ಆದ ಸ್ವರ್ಗಾದಿಗಳು ಸಿಕ್ಕು ಹರಿಭಕ್ತಿ ವರ್ಜಿತರು, ದುಃಖಿತರಾಗೇ ಇರುವರು.

ಸಾಧುಗುಣಪೂರ್ಣನಾದ ನನ್ನಲ್ಲಿ ಮನವಿಟ್ಟ ನನ್ನ ಭಕ್ತರಿಗೆ ಸಿಗುವ ಸ್ವರೂಪಾನಂದವು ವಿಷಯಾತ್ಮಕರಾದ ಅಲ್ಪರಿಗೆ ಸಿಗುವುದಿಲ್ಲ. ನನ್ನ ಹೊರತು ಅನ್ಯಧನವನ್ನು ಲೆಕ್ಕಿಸದೆ ಭಕ್ತನಿಗೆ, ಇಂದ್ರಿಯನಿಗ್ರಹವಂತನಿಗೆ, ಸರ್ವೋತ್ತಹರಿಜ್ಞಾನವಂತನಿಗೆ ಯೋಗ್ಯತೆಯನ್ನರಿತು ತಕ್ಕಂತೆ ವರ್ತಿಸುವವನಿಗೆ, ನನ್ನಿಂದಲೇ ಸಕಲ ಲಾಭವೂ ಆಗುವುದು. ಅವನಿಗೆ ಸುಖಮಯವಾಗೇ ಇರುವುದೆಲ್ಲ ಲೋಕಗಳು. ಅಂತಹ ಏಕಾಂತಭಕ್ತನು ನನ್ನಲ್ಲಿ ಮನವಿಟ್ಟು, ನನ್ನ ಭಕ್ತಿಯಿಂದ ಸಂತುಷ್ಟನಾಗಿರುವನು. ಅವನು ಇತರ ಸರ್ವಾಕಾಂಕ್ಷೆಗಳನ್ನು ನನಗಾಗಿ ಬಿಟ್ಟಿರುವನು. ಅವನು ಬ್ರಹ್ಮಪದವಿಯನ್ನಾಗಲಿ, ಸ್ವರ್ಗಾಧಿಪತ್ಯವನ್ನಾಗಲಿ, ಸಾರ್ವಭೌಮ ಸಂಪತ್ತನ್ನಾಗಲಿ ರಸಾಧಿಪತ್ಯ ವನ್ನಾಗಲಿ, ಅಣಿಮಾದಿ ಸಿದ್ಧಿಗಳನ್ನಾಗಲಿ, ಕೊನೆಗೆ ಮೋಕ್ಷವನ್ನು ಕೂಡ, ನನ್ನ ಭಕ್ತಿಗೆ ಫಲವಾಗಿ ಬೇಡದಿರುವನು. ನನಗೆ ನನ್ನ ಭಕ್ತರೆಂದರೆ ಬಲು ಪ್ರೀತಿ. ಅಂತೆಯೇ ಸರ್ವಕಾಲಿಕಾಂತರಿಕ ಪ್ರೀತಿಪಾತ್ರರಾದ ಶ್ರೀದೇವಿ, ಬ್ರಹ್ಮ, ಶಂಕರ, ಶೇಷಾದಿಗಳು ಕೂಡ ನನ್ನ ಭಕ್ತರಂತೆ ಪ್ರೀತಿ ಪಾತ್ರರಲ್ಲ. ಭಕ್ತರೆಂದರೆ ಕೃಪೆದೋರಿ ನಾನು ಅವರನ್ನು ಹೆಂಡಿರು ಮಕ್ಕಳಿಗಿಂತ ಹೆಚ್ಚಾಗಿ ನೋಡುವ ಅತಿಥಿಗಳನ್ನು ನೋಡಿದಂತೆ, ಪ್ರೀತಿಸಿ ಕಾಪಾಡುವೆನು. ಸರ್ವಯಾದವರಲ್ಲಿ ನೀನೇ ನನಗೆ ಪ್ರೀತಿಪಾತ್ರನಾಗಿರುವೆ. ನಿರ್ವೈರನು ದುಷ್ಟಾಪೇಕ್ಷಾವರ್ಜಿತನು, ಮನನಶೀಲನು, ಸರ್ವತ್ರ ಹರಿಚಿಂತಕನು ಆದ ನನ್ನ ಭಕ್ತನ ಬೆನ್ನುಬಿಡದೆ ನಾನು ಹೋಗುತ್ತಿರುವೆನು. ಆಗ ನನ್ನ ಪಂಕಜಪದ ಧೂಳಿಯು ವಾತನೀತವಾಗಿ ಅವನನ್ನು ಪಾವನಗೊಳಿಸುತ್ತಿರುವುದು.

ನಿಷ್ಕಿಂಚನರು, ನನ್ನನ್ನೇ ಪ್ರೀತಿಸುವವರು, ಸರ್ವಭೂತರಹಿತನು, ದುಷ್ಟಕಾಮರಹಿತ ಶುದ್ಧ ಬುದ್ಧಿಯುತರು. ಭಗವನ್ನಿಷ್ಠಾಸಂಪನ್ನರು, ಆದ ನನ್ನ ಭಕ್ತವರರು ನನ್ನಿಂದ ವಿಷಯಾನಪೇಕ್ಷ ವಾದ ಸ್ವರೂಪಸುಖಾವಿರ್ಭೂತಿಯನ್ನೇ ಬೇಡುವರು. ನಾನೂ ಸ್ವರೂಪಾನಂದಮಯನಾದುದನ್ನ ರಿತು ನನ್ನಿಂದ ತಮ್ಮ ಸ್ವರೂಪಾವಿರ್ಭೂತಿಯನ್ನು ಪಡೆಯಲು ನಿಷ್ಕಾಮವೂ ಜ್ಞಾನಪೂರ್ವವೂ ಆದ ಭಕ್ತಿಯನ್ನೇ ಮಾಡುವರು.

ನನ್ನ ಭಕ್ತನು ವಿಷಯಗಳಿಂದ ಪೀಡಿತವಾದ ಇಂದ್ರಿಯಗಳ ವಶವಾಗಿ ನಡೆಯುತ್ತಿದ್ದರೂ, ನನ್ನ ಭಕ್ತಿಯಿಂದ ಅವನ್ನು ವಶೀಕರಿಸಿಕೊಂಡು, ವಿರಕ್ತನಾಗಿ, ವಿಷಯದೋಷದಿಂದ ಅಧಃ ಪಾತವನ್ನು ಪೊಂದದಿರುವನು. ಚೆನ್ನಾಗಿ ಉರಿಯುವ ಅಗ್ನಿಯು ಕಟ್ಟಿಗೆಗಳನ್ನು ಸುಟ್ಟು ಬೂದಿ ಮಾಡುವಂತೆ ನನ್ನ ಭಕ್ತಿಯು ಪಾಪಗಳನ್ನು ನಿಶ್ಶೇಷವಾಗಿ ಸುಟ್ಟು ನಾಶಪಡಿಸುವುದು. ಉದ್ಧವಾ! ಯೋಗಾಭ್ಯಾಸ, ಧರ್ಮವರ್ತನ, ಸಾಂಖ್ಯ, ಜ್ಞಾನ, ವೇದಾಧ್ಯಯನ, ತಪಃಕರಣ, ದಾನ, ಮೊದಲಾದ ಶ್ರೇಯಃಸಾಧನಗಳು ಭಕ್ತಿವರ್ಜಿತನಿಗೆ ಸಹಾಯಕವಾಗಲಾರವು. ಭಕ್ತಿಯೇ ಪ್ರಧಾನಸಾಧನವು; ಅದೊಂದೇ ಸಾಕು ನನ್ನ ಪ್ರೀತಿಸಂಪಾದನೆಗೆ. ಸಕಾಮನಾದವನನ್ನು ಕೂಡ ನನ್ನ ಉತ್ತಮ ಭಕ್ತಿಯು ತಾನು ಹುಟ್ಟಿದ ಶುಭಮುಹೂರ್ತದಿಂದಾರಂಭಿಸಿ, ಪಾವನಗೊಳಿಸು ವುದು ಮತ್ತು ಜನನಾದಿರೂಪಸಂಸಾರಕೂಪದಿಂದ ಉದ್ಧರಿಸುವುದು.

ಸತ್ಯ, ದಯಾಸಹಿತ ಧರ್ಮವಾಗಲಿ, ತಪಸ್ಸಹಿತ ವಿದ್ಯೆಯಾಗಲಿ, ಅಭಕ್ತನನ್ನು ಪಾವನಮಾಡಲಾರದು. ಮೈಪುಲಕಗಳು, ಕಣ್ಣಿನ ಆನಂದಜಲಗಳು, ಮನಸ್ಸಿನ ಆರ್ದ್ರತೆ, ಮುಖದ ಪ್ರಸನ್ನತೆ ಇವುಗಳಿಂದ ತೋರಿಬರುವ ಭಕ್ತಿಗಂಗೆ ಹರಿಯದೆ, ಮನಃಪುಂಕವೆಂತು ದೂರಾಗುವುದು? ಯಾವ ಭಕ್ತನು ಭಕ್ತ್ಯುದ್ರೇಕದಿಂದ ಕಣ್ಣಲ್ಲಿ ನಿಲ್ಲದೆ ಆನಂದಬಿಂದುಗಳುದುರುತ್ತಿರಲು, ಮೈನವಿರೇಳಲು, ಮನಸ್ಸು ಕರಗಿ ಹರಿಯಲು, ಮೈಮರೆತು, ನಗುವನೋ, ಅಳುವನೋ, ನಾಚಿಕೆಯನ್ನು ತೊರೆದು ಗಟ್ಟಿಯಾಗಿ ಕೂಗಿ ಪಾಡಿ, ಕುಣಿಯುವನೋ, ಅಂತಹವನು ಲೋಕಪಾವನನೆನಿಸುವನು. ತನ್ನಲ್ಲಿರುವ ಹದಿನೆಂಟು ದೋಷಗಳನ್ನು ಬಂಗಾರವು ಅಗ್ನಿಯಲ್ಲಿ ಸುಟ್ಟು, ಕರಗಿ, ಕಳೆದುಕೊಳ್ಳುವಂತೆ, ಸುಜೀವನು ಅವಿದ್ಯಾಕಾಮ ಕರ್ಮ ದೋಷಗಳನ್ನು ಭಕ್ತಿಕುಂಡದಲ್ಲಿ ಕಳೆದುಕೊಂಡು, ಮಂಗಲಮೂರ್ತಿಯಾದ ಲಕ್ಷ್ಮೀಶನಾದ ನನ್ನನ್ನು ಭಜಿಸುವನು. ಮನಶ್ಶುದ್ಧಿಯು ಆದಂತೆಲ್ಲ, ಭಕ್ತನು, ನನ್ನ ಪುಣ್ಯಕರಕಥಾಶ್ರವಣ ಕೀರ್ತನಗಳನ್ನು ಮಾಡುತ್ತಾ, ಚಿತ್ತವು ಸದಾ ಹರಿಸ್ಮರಣಾಯತ್ತವಾಗಿರಲು, ನನ್ನನ್ನೇ ಪೊಂದುವರು. ಅವನು ಪವಿತ್ರದೃಷ್ಟಿಯಿಂದ ಸೂಕ್ಷ್ಮವಾದ ನನ್ನನ್ನು ನೋಡುವನು. ಕಾಡಿಗೆಯಿಂದ ಕಾಮಕಾಮಲಾದಿದೋಷವು ದೂರವಾಗಲು ಶುದ್ಧವಾಗುವ ಕಣ್ಣು ವಿಷಯವೀಕ್ಷಣವಿಚಕ್ಷಣವಾಗುವಂತೆ, ಜ್ಞಾನಿಯಾದ ಭಕ್ತನು ನನ್ನ ಅಪರೋಕ್ಷ ಜ್ಞಾನವನ್ನು ಪೊಂದಿ ಸುಖಿಪನು. ವಿಷಯಧ್ಯಾನದಿಂದ ಚೈತನ್ಯವು ವಿಷಯಾಸಕ್ತವಾಗಿ ಕೆಡುವುದು. ನನ್ನ ಧ್ಯಾನದಿಂದ ಪವಿತ್ರವಾಗುವುದೆಂಬ ವಿಷಯವು ಸರ್ವಾನುಭವಸಿದ್ಧವಾಗಿದೆ.

ಆದುದರಿಂದ ಸ್ವಪ್ನದಂತೆ ನಶ್ವರವು, ಮನೋರಥದಂತೆ ನಿಷಲವು ಆದ ವಿಷಯಧ್ಯಾನವನ್ನು ಬಿಟ್ಟು, ಮನಸ್ಸು ಮಾಧವಮಯವಾಗುವಂತೆ ಭಕ್ತಿಯನ್ನು ಮಾಡು! ವಿಷಯಲೋಲುಪರಾದ ದುಷ್ಟ ಸ್ತ್ರೀ-ಪುರುಷರ ಸಂಗವನ್ನು ಬಿಡು! ಏಕಾಂತದಲ್ಲಿ ಕೂಡು! ಆಲಸ್ಯ ಪ್ರಮಾದಗಳಿಲ್ಲದೆ ನನ್ನ ದಿವ್ಯಸ್ವರೂಪವನ್ನು ಚಿಂತಿಸಿ, ಸಂಸಾರಸಾಗರದಿಂದ ಪಾರಾಗು! ಉದ್ಧವಾ! ಪಿಪಿಲಿಕಾದಿವಧ ರೂಪಪಾಪದಿಂದ ನರಕಾದಿಗಳಾಗದಂತೆ ಪ್ರಾಯಶ್ಚಿತ್ತಗಳಿವೆ; ಆದರೆ ವಿಷಯ ಮೃಗಗಳಾದ ಅನ್ಯಥಾಜ್ಞಾನಿಗಳ ಸಂಗ, ಅವರ ಸಂಗಿಜನರ ಸಂಗ ರೂಪ ಪಾಪಕ್ಕೆ ಅಂಧಂತಮವೇ ಗತಿಯಾಗಿದೆ.

ಅನ್ಯಸ್ತ್ರೀರತಿಯು ಉಪಪಾತಕವು; ಅದಕ್ಕೆ ಶಿಕ್ಷೆ ಯುಗಪರ್ಯಂತ ನರಕವಾಗಿದೆ ಪಿತ್ರಾದಿ ದಾರ ರತಿಯು ಮಹಾಪಾತಕವದಕ್ಕೆ ಚತುರ್ಯುಗಪರ್ಯಂತ ನರಕವಾಸವೇ ಶಿಕ್ಷೆ. ದೇವ ವನಿತಾ ಚಿಂತೆ ಅಧಿಕ ಪಾಪವು; ಅದರಿಂದ ಕಲ್ಪಾವಧಿ ನರಕವಾಗುವುದು. ವಿಷ್ಣುದಾರಾಚಿಂತೆಗೆ ಶಿಕ್ಷೆ.

ಉದ್ಧವನು ಕೇಳಿದನು–

ಅರವಿಂದನಯನ! ನಿನ್ನನ್ನು ಮುಮುಕ್ಷುಜನರು ಎಂತು ಧ್ಯಾನಿಸಬೇಕು?

ಶ್ರೀಭಗವಂತನೆಂದನು–

ಸಮನಾದ ಆಸನದಲ್ಲಿ (ಧರ್ಮ, ಚರ್ಮ, ವಸ್ತ್ರಗಳಲ್ಲಿ) ಕೊಡಬೇಕು. ಶರೀರವು ಸಮವಾಗಿರಬೇಕು. ಕೈಗಳನ್ನು ತೊಡೆಯ ಮೇಲಿಟ್ಟು, ಕಣ್ಣುಗಳ ನೋಟವನ್ನು ನಾಸಾಗ್ರದಿ ಕೇಂದ್ರೀಕರಿಸಿ, ಪೂರಕ, ಕಂಭಕ, ರೇಚಕ, ಕ್ರಮದಿಂದ ವಾಯು ಜಯವನ್ನು, ಪ್ರತ್ಯಾಹಾರದಿಂದ ಇಂದ್ರಿಯಜಯವನ್ನು ಸಂಪಾದಿಸಬೇಕು. ಜೀತೇಂದ್ರಿಯನಿಗೆ ಮನಸ್ಸಿನಲ್ಲಿ ಓಂಕಾರವಾಚ್ಯನು ಧ್ಯಾನಗೋಚರನಾಗುವನು. ತಾವರೆಯನಾಳದಿ ಬರುವ ಶಬ್ದದಂತೆ, ಬಿಡದೆ ಓಂ ಎಂಬ ನಾದವನ್ನು, ಹೃದಯದಲ್ಲಿರುವ ಸ್ವರನಾಮಕ ಶ್ರೀಹರಿರೂಪವೆಂದು ತಿಳಿದು, ಉದಾತ್ತಸ್ವರದಿ

ಉಚ್ಚರಿಸಿ ಜಪಿಸಬೇಕು. ಪ್ರಾಣಸಂಯಮನಾಭ್ಯಾಸಿಯು ಮೂರು ಹೊತ್ತು, ಇಂತು ಜಪಿಸಲು, ಒಂದು ತಿಂಗಳಲ್ಲಿ ಅವನು ಪ್ರಾಣಪ್ರಸಾದದಿಂದ ಪ್ರಾಣಾಯಾಮಫಲವಾದ ಸಂತುಷ್ಟಿಶುದ್ಧಿಗಳನ್ನು ಪೊಂದುವನು. ಒಳಗಿರುವ ಹೃದಯಕಮಲವು ಊರ್ಧ್ವನಾಳವು, ಅಧೋಮುಖವು ಆಗಿರುವುದು. ಅದನ್ನು ಮೇಲಕ್ಕೆಬ್ಬಿಸಿ, ಅರಳುವಂತೆ ಮಾಡಿ, ಸಕರ್ಣಿಕಾಷ್ಟದಲವಾದ ಆ ಪದ್ಮಕರ್ಣಿಕೆಯಲ್ಲಿ, ಸೂರ್ಯ, ಸೋಮ, ವಹ್ನಿ ಮಂಡಲಗಳನ್ನು ಚಿಂತಿಸಬೇಕು. ವಹ್ನಿಮಧ್ಯಗನಾದ ನನ್ನ ಧ್ಯಾನಮಂಗಲರೂಪವನ್ನು ಚಿಂತಿಸುವ ಪ್ರಕಾರವನ್ನು ಹೇಳುವೆನು.

ನಿರ್ದೋಷ ಪ್ರಕೃಷ್ಟಾನಂದ ಸ್ವರೂಪನು, ಚಾರುಚತುರ್ಭುಜನು, ಸುಂದರವದನನು, ಕುಂದರದನನು, ಪೀತಾಂಬರನು, ಲಕ್ಷ್ಮೀವರನು, ಶ್ರೀನಿಕೇತನು, ನೀಲಮೇಘ ದಿವ್ಯದೇಹ ಸಮೇತನು, ಶಂಖ ಚಕ್ರ ಗದಾ ಪದ್ಮ ವನಮಾಲಾ ಕೌಸ್ತುಭ ವೈಜಯಂತೀ ಹಾರನೂಪುರ, ಕಿರೀಟ, ಕಟಕ ಕಟಿಸೂತ್ರಾಂಗದ ವಿಭೂಷಿತನು, ಸರ್ವಾಂಗಸುಂದರನು, ಮನೋಹರನು, ಅನುಗ್ರಹಕಾತರನು, ಸುಕುಮಾರನು, ಸುಂದರ ಮಂದಹಾಸನು, ಆದ ಶ್ರೀನಿವಾಸನನ್ನು ವಿಷಯದೂರವಾಗಿರಿಸಿದ ಮನದಲ್ಲಿ, ನಿಲ್ಲಿಸಿ, ಭಕ್ತಿಪಾಶದಿಂದ ಪಾದಪಂಕೇರುಹವನ್ನು ಕಟ್ಟಿ, ಬಿಡದೆ ಧ್ಯಾನಿಸಿ, ಧೀರನು ನನಗೆ ವಂದಿಸಬೇಕು. ಎಲ್ಲ ಕಡೆಯು ಹರಿದಾಡುವ ಚಿತ್ತವನ್ನು ಬುದ್ಧಿಸಾರಥಿಕನಾಗಿ ನಿಶ್ಚಲವಾಗಿಸಿ, ಇತರರನ್ನೆಲ್ಲ ಬಿಟ್ಟು, ನನ್ನ ಸುಸ್ಮಿತ ಸುಂದರವದನ ಕಮಲವನ್ನು ಧ್ಯಾನಿಸಬೇಕು. ಅಲ್ಲಿ ಧ್ಯಾನವು ನಿಂತಮೇಲೆ, ಸರ್ವಾಂಗಗಳನ್ನು ಚಿಂತಿಸಿ, ಅಖಂಡಧ್ಯಾನ ಸಂಪನ್ನನಾಗುವನು.

ಇಂತು ಶ್ರದ್ಧೆಯಿಂದ ಜ್ಞಾನಪ್ರದನಾದ ನನ್ನನ್ನು ತನ್ನ ಹೃದಯದಲ್ಲಿರುವ ಜೀವವಿಲಕ್ಷಣ ಲಕ್ಷ್ಮೀರಮಣನೆಂದು ತಿಳಿದು-ಅಲ್ಲಿಂದ ಪುರುಷನಾಮಕ ಅಂತರ್ಯಾಮಿಗೂ, ಸರ್ವಾಧಾರನಾಗಿ, ಜ್ಯೋತಿಗಳಲ್ಲಿ ಬೆಳಗಿಸುವ ಕಾಲನಾಮಕ ಸ್ವಾಮಿಗೂ, ಭೇದವಿಲ್ಲವೆಂದು ತಿಳಿದು – ಧೀರನು – ದೇಹೇಂದ್ರಿಯಗಳೇ ತಾನೆಂಬ ಭ್ರಮೆಯನ್ನು ಕಳೆದುಕೊಂಡು, ಧ್ಯಾನ ತೀಕ್ಷ್ಣತೆಯನ್ನು ಗಳಿಸಿ, ಮನಶ್ಶುದ್ಧಿಯನ್ನು ಮುಕ್ತಿಯನ್ನು ಪೊಂದುವನು.

## ೧೫. ಅಣಿಮಾದಿ ಸಿದ್ಧಿಗಳು

ಶ್ರೀ ಭಗವಂತನಿಂತು ಪೇಳಿದನು–

ಜಿತೇಂದ್ರಿಯನು, ಜಿತಶ್ವಾಸನು, ಆದ ನನ್ನ ಭಕ್ತನಿಗೆ ಅಣಿಮಾದಿಸಿದ್ಧಿಗಳು ತಾವಾಗಿ ಸಿದ್ಧಿಸುವುವು.

ಉದ್ಧವನು ಕೇಳಿದನು–

ಶ್ರೀಕೃಷ್ಣ! ಯಾವ ಧಾರಣೆಯಿಂದ ಯಾವ ಸಿದ್ಧಿ ಹೇಳು? ಅದಾಗುವುದೆಂತು? ಸಿದ್ಧಿಗಳೆಷ್ಟು? ಸರ್ವಸಿದ್ಧಿಪ್ರದನು ನೀನಲ್ಲವೇ?

ಶ್ರೀಶನಿಂತೆಂದನು–

ಧಾರಣಾಯೋಗವನ್ನರಿತವರು ಹದಿನೆಂಟು ಸಿದ್ಧಿಗಳಿವೆ ಎಂಬುವರು. ಇವುಗಳಿಗೆ ಮೂಲಭೂತವಾದ ಎಂಟು ಸಿದ್ಧಿಗಳು ನನ್ನಲ್ಲಿ ಪೂರ್ಣವಾಗಿವೆ. ಇತರರಲ್ಲಿ ಅವು ಸ್ವಲ್ಪವಾಗಿ ಇವೆ; ಅದೂ ನನ್ನ ಪ್ರಸಾದದಿಂದಲೇ ಎಂದು ತಿಳಿ!

ಅಣಿಮಾ, ಮಹಿಮಾ, ಸ್ವರೂಪದಿಂದ ಲಘಿಮಾ ಇಂದ್ರಿಯಗಳ ಪ್ರಾಪ್ತಿ, ಶಕ್ತಿ ಪ್ರೇರಣ ರೂಪ ಈಶಿತ್ವ, ತ್ರಿಗುಣಗಳ ಲೇಪವಿಲ್ಲದಿರುವ ಅಸಂಗತ್ವರೂಪವಶಿತ್ವ, ಕೇಳಿ ನೋಡಿದು ದನ್ನೆಲ್ಲ ತಿಳಿಯುವ ಪ್ರಾಕಾಶ್ಯ, ಬೇಡಿದ್ದನ್ನು ಪೊಂದುವ ಪ್ರಾಕಾಮ್ಯ – ಇವು ಎಂಟು ಸಿದ್ಧಿಗಳು ನನ್ನಲ್ಲಿ ಸ್ವಾಭಾವಿಕವಾಗಿ ಏಕಪ್ರಕಾರವಾಗಿಯೂ ಇವೆ.

ಅನೂರ್ಮಿಮತ್ವ, ದೂರಶ್ರವಣ, ದೂರದರ್ಶನ, ಮನೋಜವ, ಕಾಮರೂಪ, ಪರಕಾಯ ಪ್ರವೇಶ, ಸ್ವಚ್ಛಂದಮೃತ್ಯು, ದೇವತಾಸಹಕ್ರೀಡಾ, ಸಂಕಲ್ಪಸಂಸಿದ್ಧಿ, ಆಜ್ಞಾ, ಅಪ್ರತಿಹತಗತಿ, ತ್ರಿಕಾಲಜ್ಞತೆ, ಅದ್ವಂದ್ವ, ಪರಚಿತ್ತಾಭಿಜ್ಞತೆ, ಅಗ್ನಿಸ್ಥಂಭನ, ಸೂರ್ಯಸ್ತಂಭನ, ಜಲಸ್ತಂಭನ, ವಿಷಸ್ತಂಭನ, ಅಪರಾಜಯವೆಂಬುವ ಹದಿನೆಂಟು ಸಿದ್ಧಿಗಳು. ಅಣಿಮಾದಿ ಸಿದ್ಧಿಗಳಿಂದ ಹುಟ್ಟಿ ಗರಿಮಾ ಎಂಬ ಸಿದ್ಧಿಯಿಂದ ಕೂಡಿ ಎಲ್ಲವೂ ಸೇರಿ ಇಪ್ಪತ್ತೇಳು ಸಿದ್ಧಿಗಳೆಂದು ತಿಳಿ. ಯಾವ ಧಾರಣಾಬಲದಿಂದ ಯಾವ ಸಿದ್ಧಿ ಬರುವುದೆಂದೂ ಹೇಳುವೆನು. ಇವು ಇಂದ್ರ, ಶಂಕರ, ವಾಯು, ರಮಾ, ನಾರಾಯಣರಲ್ಲಿ ಕ್ರಮವಾಗಿ ಹೆಚ್ಚುತ್ತಾ, ಶ್ರೀಹರಿಯಲ್ಲಿ ಪೂರ್ಣವಾಗಿ ಇವೆ. ಇತರ ಸುರರಲ್ಲಿ ಸ್ವಲ್ಪವಾಗಿ ಇರುತ್ತವೆ.

ಪರಮಾಣುವಿನಲ್ಲಿ ತನ್ನಿಯಾಮಕನಾಗಿ ತನ್ಮಾತ್ರಪರಿಮಿತನೆಂದು ಅಥವಾ ಆಕಾಶಾದಿಗಳಲ್ಲಿ ಶಬ್ದಾದಿಸೂಕ್ಷ್ಮ ಮಾತ್ರಾರೂಪನೆಂದು ಉಪಾಸಿಸಿದ ಯೋಗಿಯು 'ಅಣಿಮಾ' ಸಿದ್ಧಿಯನ್ನು ಪೊಂದುವನು.

ಆಯಾ ಭೂತಗಳಲ್ಲಿ ತುಂಬಿ ವಸ್ತುಪರಿಮಾಣನಾಗಿ ವ್ಯಾಪ್ತನಾಗಿರುವ ಶ್ರೀಹರಿಯನ್ನು ಚಿಂತಿಸುವ ಯೋಗಿಯು ಮಹತ್ವವನ್ನು ಪೊಂದುವನು. ವಸ್ತು ಪರಮಾಣುವಿನಲ್ಲಿಯು ಕಾಲಸೂಕ್ಷ್ಮ ಪರಮಾಣುವಿನಲ್ಲಿಯು ಇದ್ದ ನನ್ನ ಪರಮಾಣುರೂಪ ಚಿಂತನೆ ಮಾಡುವವನು ಅಣುತ್ವವನ್ನು ಸಂಪಾದಿಸುವನು. ಬಹಿರ್ವ್ಯಾಪಾರವನ್ನೆಲ್ಲ ಬಿಟ್ಟು ಅಹಂ ತತ್ವದಲ್ಲಿರುವ ನನ್ನಲ್ಲಿ ಮನವಿಟ್ಟು, ಸರ್ವೇಂದ್ರಿಯಸ್ವಾಮಿಯೆಂದು ಚಿಂತಿಸುವನು ಅನ್ಯೇಂದ್ರಿಯಗಳಿಂದ ವಿಷಯ ದರ್ಶನವೆಂಬುವ ಪ್ರಾಪ್ತಿಯನ್ನು ಪೊಂದುವನು. ಮಹತ್ತತ್ವ ಸೂತ್ರನಾಮಕ ಮುಖ್ಯ ಪ್ರಾಣರಲ್ಲಿ ಸ್ವಾಮಿಯಾಗಿರುವ ನನ್ನ ಚಿಂತನದಿಂದ ಪ್ರಾಕಾಶ್ಯ, ಪಾರಮೇಷ್ಠ್ಯಗಳನ್ನು ಹೊಂದುವನು. ಕಾಲನಿಯಾಮಕ ವಿಷ್ಣುಧ್ಯಾನದಿಂದ ಯೋಗಿಯು ಶರೀರಜೀವರನ್ನು ತನಗೆ ಬೇಕಾದಂತೆ ನಡೆಸುವ ಈಶಿತ್ವವನ್ನು, ಹೆಚ್ಚಿನ ಶಕ್ತಿಯನ್ನು ಹೊಂದುವನು. ತುರೀಯರೂಪ ನಾರಾಯಣನ ಐಶ್ವರ್ಯಾದಿ ಗುಣಚಿಂತಕನಿಗೆ ಅಸಂಗತ್ಯ ಅಥವಾ ವಶಿತ್ವ ಎಂಬ ಸಿದ್ಧಿಯು ಸಿಗುವುದು. ತ್ರಿಗುಣರಹಿತನು ಕಲ್ಯಾಣಗುಣಭರಿತನು ಆದ ನನ್ನಲ್ಲಿ ಮನವಿಟ್ಟ ಯೋಗಿಯು ಪ್ರಾಕಾಮ್ಯೆಂದರೆ ಆನಂದಾದಿ ಸ್ವಯೋಗ್ಯ ಗುಣಪೂರ್ತಿಯನ್ನು ಪೊಂದುವನು. ಧರ್ಮಫಲದನು ನಿರ್ದುಃಖನು ಶ್ವೇತದ್ವೀಪಪತಿಯು ಆದ ನನ್ನಲ್ಲಿ ಮನವಿಟ್ಟು ಚಿಂತಿಸಿದವನು ಷಡೂರ್ಮಿ (ಹುಟ್ಟು ಬೆಳವಣಿಗೆ ಮುಪ್ಪು ರೋಗ ವೈಕಲ್ಯ ಮರಣ) ರಹಿತನಾಗಿ ನಿರ್ದುಃಖನಾಗುವನು. ಆಕಾಶದಲ್ಲಿ ಪ್ರಾಣ ನಿಯಾಮಕನಾದ ಘೋಷರೂಪ ಹರಿಯನ್ನು ಉಪಾಸಿಸುವ ಯೋಗಿಯು ಶರೀರಾಭಿಮಾನವನ್ನು ಬಿಟ್ಟು ದೂರಶ್ರವಣವನ್ನು ಪೊಂದುವನು. ಕಣ್ಣಲ್ಲಿರುವ ಸೂರ್ಯನು ಸಕಲಚಕ್ಷುನಿಯಾಮಕ ನೆಂದು ತಿಳಿದು ಅವನಲ್ಲಿರುವ ನನ್ನ ಸೂಕ್ಷ್ಮ ರೂಪವನ್ನುಪಾಸಿಸುವನು ದೂರದರ್ಶನವನ್ನು ಪಡೆಯುವನು. ಮನಸ್ತತ್ವವನ್ನು ವಾಯುವಿನಿಂದ ಕೂಡಿ ಮನೋದೇವನಾದ ರುದ್ರನಲ್ಲಿ ಚಿಂತಿಸಿ, ಅವರೀರ್ವರನ್ನು ನನ್ನಲ್ಲಿ ಅಧೀನರೆಂದು ಚಿಂತಿಸಿದವನು ಮನೋಜವೆಂಬ ಸಿದ್ಧಿಯನ್ನು

ಪಡೆಯುವನು. ಮನಸ್ಸಿನ ಧ್ಯಾನವೇಗದಿಂದ ಯಾದವರೂಪವನ್ನು ಚಿಂತಿಸುವನೋ ಆ ರೂಪ ವನ್ನು ಯೋಗಿಯು ಹೊಂದುವನು. ಕಾಮರೂಪವೆಂಬ ಈ ಸಿದ್ಧಿಯು ಗಜಾದಿಸ್ಥಿತ ಹರಿರೂಪ ಚಿಂತನದಿಂದ ಬರುವುದು. ತನ್ನ ಅಂತರ್ಯಾಮಿಯನ್ನು ಇನ್ನೊಂದು ಶರೀರದಲ್ಲಿ ಚಿಂತಿಸಿದ ಯೋಗಿಯು ಪ್ರಾಣದೇವನ ದಯದಿಂದ ಪರಕಾಯ ಪ್ರವೇಶವನ್ನು ಪೊಂದುವನು. ತನ್ನ ದೇಹ ವನ್ನು ಬಿಡದೆ ಪರದೇಹಭೋಗವನ್ನೂ ಕೂಡ ಅಲ್ಲಿರುವ ಮುಖ್ಯಪ್ರಾಣ ನಾರಾಯಣರ ಅನು ಗ್ರಹದಿಂದ ಹೊಂದುವನು.

ಸತ್ವಗುಣನಿಯಾಮಕನೆಂದು ಭಾವಿಸಿದ ಪ್ರಾಣಾಯಾಮ ಪಾರಾಯಣನು ಸುರರಿಂದ ಕೂಡಿ ವಿಮಾನದಲ್ಲಿ ಇಂದ್ರಾದಿದೇವವಿಧೇಯನಾಗಿದ್ದು ಸಂಚರಿಸುವನು. ನನ್ನ ಸಂಕಲ್ಪ ಸತ್ಯತೆಯನ್ನು ಉಪಾಸಿಸಿ, ಸಂಕಲ್ಪಸಿದ್ಧಿಯನ್ನು ಪೊಂದುವನು.

ನನ್ನ ಈಶಿತ್ವ ವಿಶಿತ್ವ ಗುಣಗಣ ಉಪಾಸನೆಯಿಂದ ಸ್ಥಾವರಜನರಿಗೆ ವಂದ್ಯನು. ನನ್ನ ಉತ್ತಮ ಭಕ್ತನು ಶ್ರದ್ಧಿಯಿಂದ ಧಾರಣವನ್ನು ಮಾಡಿ ಸೃಷ್ಟಿಸಂಹಾರ ಕಾರಣನಾದ ನನ್ನ ದಯದಿಂದ ತ್ರಿಕಾಲಜ್ಞಾನಿಯು, ಅಗ್ನಿಜಲಾದಿ ನಿಷ್ಠ ಹರಿರೂಪಚಿಂತಕನು ಅಗ್ನಿಸ್ತಂಭ, ಜಲಸ್ತಂಭಾದಿ ಸಿದ್ಧಿವಂತನು ನನ್ನ ಶ್ರೀವತ್ಸ ನಂದಕ, ಚಕ್ರಾದಿಧ್ಯಾನದಿಂದ ಅಪರಾಜಿತನು ಆಗುವನು. ಮನುಜರು ಶ್ರದ್ಧೆಯಿಂದ ಭಾವಿಸಿದಂತೆ ಪಕ್ವಯೋಗದಿಂದ ಬೇಡಿದ ಸಿದ್ಧಿಗಳು ಲಭಿಸುವುವು.

ಜಿತೇಂದ್ರಿಯನು, ಪ್ರಾಣಪ್ರಸಾದ ಪಾತ್ರನು, ಮನನಶೀಲನು, ಭಕ್ತನು ಆದ ಮಹಾನುಭಾವ ನಿಗೆ ಯಾವ ಸಿದ್ಧಿಯೂ ದುರ್ಲಭವಲ್ಲ. ಆದರೂ ಮುಕ್ತಿಮಾರ್ಗದ ಪ್ರತಿಬಂಧಕವೆಂದು ಜ್ಞಾನಿಗಳು ಸಿದ್ಧಿಗಳನ್ನು ಬೇಡದೆ, ಅವೇ ತಾವಾಗಿ ಲಭಿಸಿದರೂ ಆಶೆಪಡದೆ, ನನ್ನ ಪ್ರಸಾದವನ್ನೇ ಬೇಡಿ, ಕಾಲವಿಲಂಬಕಾರಣನಾದ ಸಿದ್ಧಿಗಳನ್ನು ಬಿಟ್ಟು, ನನ್ನನ್ನು ಭಕ್ತಿಯಿಂದ ಭಜಿಸುವರು. ಜನ್ಮ, ಓಷಧಿ, ತಪೋ, ಮಂತ್ರ, ಮೊದಲಾದವುಗಳ ಸಿದ್ಧಿಯನ್ನು, ಧ್ಯಾನಬಲದಿಂದ ಉತ್ತಮ ರಾದ ದೇವಾದಿಭಕ್ತರು ಪೊಂದುವರು. ಎಲ್ಲ ಸಿದ್ಧಿಗಳೂ ನನ್ನಿಂದ; ಯೋಗದಿಂದಲು, ಯಥಾರ್ಥ ಜ್ಞಾನದಿಂದಲು, ವರ್ಣಾಶ್ರಮ ಧರ್ಮಗಳಿಂದಲು ಪ್ರೀತನಾಗಿ ಫಲವನ್ನು ಕೊಡುವ ಸರ್ವೋ ತ್ತಮನು ನಾನೇ! ನಾನು ಅಂತರ್ಯಾಮಿಯಾಗಿ ಶ್ರೇಷ್ಠನೆನಿಸಿರುವನು; ಅತ್ಯಂತ ಪ್ರಿಯನಾದ ನಾನು ಹೊರಗೆ ಬ್ರಹ್ಮರೂಪದಿಂದ ವ್ಯಪ್ತನಾಗಿ ಕಾಲವನ್ನು ನಡೆಸುವೆನು. ಪಂಚಭೂತಗಳು ಜೀವಶರೀರದಲ್ಲಿಯೂ, ಹೊರಗೂ ಇರುವಂತೆ, ಅಂತರ್ಬಹಿಶ್ಚ ವ್ಯಾಪ್ತನಾದ ನನ್ನ ಧ್ಯಾನವು ಪಾವನವೂ, ಸರ್ವಸಿದ್ಧಿಪ್ರದವೂ, ಸಂಸಾರಮೋಚಕವೂ ಆಗಿದೆ.

## ೧೬. ಯೋಗ್ಯೋಪಾಸನಾ ವಿಧಾನ – ವಿಭೂತಿಗಳು

ಉದ್ಧವನು ಪ್ರಶ್ನಿಸಿದನು–

ಕೃಷ್ಣಾ! ನೀನು ಗುಣಪೂರ್ಣನು, ಅನಾದ್ಯನಂತನು, ಪ್ರಕೃತಿನಿರ್ಮಿತಶರೀರರಹಿತನು, ಸರ್ವಪ್ರಾಣಿಪೋಷಕನು, ಸೃಷ್ಟಿಸ್ಥಿತಿಸಂಹಾರ ಸ್ವತಂತ್ರಕರ್ತನು ಆಗಿರುವೆ. ಮುನಿಜನರು ನಿನ್ನನ್ನು ಇದ್ದಂತೆ ತಿಳಿದು ನಿರ್ದುಃಖಜ್ಞಾನಾನಂದ ಸ್ವರೂಪನೆಂದು, ನಿನ್ನನ್ನು ಉಪಾಸಿಸುವರು. ಮನೋ ಜಯಹೀನರು ನಿನ್ನ ಮಹಿಮೆಯನ್ನಾಗಲಿ, ಸರ್ವಭೂತ ಹೃದಯನಿಲಯನಾದ ನಿನ್ನ ವ್ಯಾಪ್ತಿ

ಅಣಿಮಾ, ಮಹಿಮಾ, ಸ್ವರೂಪದಿಂದ ಲಘಿಮಾ ಇಂದ್ರಿಯಗಳ ಪ್ರಾಪ್ತಿ, ಶಕ್ತಿ ಪ್ರೇರಣ ರೂಪ ಈಶಿತ್ವ, ತ್ರಿಗುಣಗಳ ಲೇಪವಿಲ್ಲದಿರುವ ಅಸಂಗತ್ವರೂಪವಶಿತ್ವ, ಕೇಳಿ ನೋಡಿದು ದನ್ನೆಲ್ಲ ತಿಳಿಯುವ ಪ್ರಾಕಾಶ್ಯ, ಬೇಡಿದ್ದನ್ನು ಪೊಂದುವ ಪ್ರಾಕಾಮ್ಯ – ಇವು ಎಂಟು ಸಿದ್ಧಿಗಳು ನನ್ನಲ್ಲಿ ಸ್ವಾಭಾವಿಕವಾಗಿ ಏಕಪ್ರಕಾರವಾಗಿಯೂ ಇವೆ.

ಅನೂರ್ಮಿಮತ್ವ, ದೂರಶ್ರವಣ, ದೂರದರ್ಶನ, ಮನೋಜವ, ಕಾಮರೂಪ, ಪರಕಾಯ ಪ್ರವೇಶ, ಸ್ವಚ್ಛಂದಮೃತ್ಯು, ದೇವತಾಸಹಕ್ರೀಡಾ, ಸಂಕಲ್ಪಸಂಸಿದ್ಧಿ, ಆಜ್ಞಾ, ಅಪ್ರತಿಹತಗತಿ, ತ್ರಿಕಾಲಜ್ಞತೆ, ಅದ್ವಂದ್ವ, ಪರಚಿತ್ತಾಭಿಜ್ಞತೆ, ಅಗ್ನಿಸ್ಥಂಭನ, ಸೂರ್ಯಸ್ತಂಭನ, ಜಲಸ್ತಂಭನ, ವಿಷಸ್ತಂಭನ, ಅಪರಾಜಯವೆಂಬುವ ಹದಿನೆಂಟು ಸಿದ್ಧಿಗಳು. ಅಣಿಮಾದಿ ಸಿದ್ಧಿಗಳಿಂದ ಹುಟ್ಟಿ ಗರಿನಾ ಎಂಬ ಸಿದ್ಧಿಯಿಂದ ಕೂಡಿ ಎಲ್ಲವೂ ಸೇರಿ ಇಪ್ಪತ್ತೇಳು ಸಿದ್ಧಿಗಳೆಂದು ತಿಳಿ. ಯಾವ ಧಾರಣಾಬಲದಿಂದ ಯಾವ ಸಿದ್ಧಿ ಬರುವುದೆಂದೂ ಹೇಳುವೆನು. ಇವು ಇಂದ್ರ, ಶಂಕರ, ವಾಯು, ರಮಾ, ನಾರಾಯಣರಲ್ಲಿ ಕ್ರಮವಾಗಿ ಹೆಚ್ಚುತ್ತಾ, ಶ್ರೀಹರಿಯಲ್ಲಿ ಪೂರ್ಣವಾಗಿ ಇವೆ. ಇತರ ಸುರರಲ್ಲಿ ಸ್ವಲ್ಪವಾಗಿ ಇರುತ್ತವೆ.

ಪರಮಾಣುವಿನಲ್ಲಿ ತನ್ನಿಯಾಮಕನಾಗಿ ತನ್ಮಾತ್ರಪರಿಮಿತನೆಂದು ಅಥವಾ ಆಕಾಶಾದಿಗಳಲ್ಲಿ ಶಬ್ದಾದಿಸೂಕ್ಷ್ಮ ಮಾತ್ರಾರೂಪನೆಂದು ಉಪಾಸಿಸಿದ ಯೋಗಿಯು 'ಅಣಿಮಾ' ಸಿದ್ಧಿಯನ್ನು ಪೊಂದುವನು.

ಆಯಾ ಭೂತಗಳಲ್ಲಿ ತುಂಬಿ ವಸ್ತುಪರಿಮಾಣನಾಗಿ ವ್ಯಾಪ್ತನಾಗಿರುವ ಶ್ರೀಹರಿಯನ್ನು ಚಿಂತಿಸುವ ಯೋಗಿಯು ಮಹತ್ವವನ್ನು ಪೊಂದುವನು. ವಸ್ತು ಪರಮಾಣುವಿನಲ್ಲಿಯು ಕಾಲಸೂಕ್ಷ್ಮ ಪರಮಾಣುವಿನಲ್ಲಿಯು ಇದ್ದ ನನ್ನ ಪರಮಾಣುರೂಪ ಚಿಂತನೆ ಮಾಡುವವನು ಅಣುತ್ವವನ್ನು ಸಂಪಾದಿಸುವನು. ಬಹಿರ್ವ್ಯಾಪಾರವನ್ನೆಲ್ಲ ಬಿಟ್ಟು ಅಹಂ ತತ್ವದಲ್ಲಿರುವ ನನ್ನಲ್ಲಿ ಮನವಿಟ್ಟು, ಸರ್ವೇಂದ್ರಿಯಸ್ವಾಮಿಯೆಂದು ಚಿಂತಿಸುವನು ಅನ್ಯೇಂದ್ರಿಯಗಳಿಂದ ವಿಷಯ ದರ್ಶನವೆಂಬುವ ಪ್ರಾಪ್ತಿಯನ್ನು ಪೊಂದುವನು. ಮಹತ್ತತ್ವ ಸೂತ್ರನಾಮಕ ಮುಖ್ಯ ಪ್ರಾಣರಲ್ಲಿ ಸ್ವಾಮಿಯಾಗಿರುವ ನನ್ನ ಚಿಂತನದಿಂದ ಪ್ರಾಕಾಶ್ಯ, ಪಾರಮೇಷ್ಠ್ಯಗಳನ್ನು ಹೊಂದುವನು. ಕಾಲನಿಯಾಮಕ ವಿಷ್ಣುಧ್ಯಾನದಿಂದ ಯೋಗಿಯು ಶರೀರಜೀವರನ್ನು ತನಗೆ ಬೇಕಾದಂತೆ ನಡೆಸುವ ಈಶಿತ್ವವನ್ನು, ಹೆಚ್ಚಿನ ಶಕ್ತಿಯನ್ನು ಹೊಂದುವನು. ತುರೀಯರೂಪ ನಾರಾಯಣನ ಐಶ್ವರ್ಯಾದಿ ಗುಣಚಿಂತಕನಿಗೆ ಅಸಂಗತ್ವ ಅಥವಾ ವಶಿತ್ವ ಎಂಬ ಸಿದ್ಧಿಯು ಸಿಗುವುದು. ತ್ರಿಗುಣರಹಿತನು ಕಲ್ಯಾಣಗುಣಭರಿತನು ಆದ ನನ್ನಲ್ಲಿ ಮನವಿಟ್ಟ ಯೋಗಿಯು ಪ್ರಾಕಾಮ್ಯೆಂದರೆ ಆನಂದಾದಿ ಸ್ವಯೋಗ್ಯ ಗುಣಪೂರ್ತಿಯನ್ನು ಪೊಂದುವನು. ಧರ್ಮಫಲದನು ನಿರ್ದುಃಖನು ಶ್ವೇತದ್ವೀಪಪತಿಯು ಆದ ನನ್ನಲ್ಲಿ ಮನವಿಟ್ಟು ಚಿಂತಿಸಿದವನು ಷಡೂರ್ಮಿ (ಹುಟ್ಟು ಬೆಳವಣಿಗೆ ಮುಪ್ಪು ರೋಗ ವೈಕಲ್ಯ ಮರಣ) ರಹಿತನಾಗಿ ನಿರ್ದುಃಖನಾಗುವನು. ಆಕಾಶದಲ್ಲಿ ಪ್ರಾಣ ನಿಯಾಮಕನಾದ ಘೋಷರೂಪ ಹರಿಯನ್ನು ಉಪಾಸಿಸುವ ಯೋಗಿಯು ಶರೀರಾಭಿಮಾನವನ್ನು ಬಿಟ್ಟು, ದೂರಶ್ರವಣವನ್ನು ಪೊಂದುವನು. ಕಣ್ಣಲ್ಲಿರುವ ಸೂರ್ಯನು ಸಕಲಚಕ್ಷುನಿಯಾಮಕ ನೆಂದು ತಿಳಿದು ಅವನಲ್ಲಿರುವ ನನ್ನ ಸೂಕ್ಷ್ಮ ರೂಪವನ್ನುಪಾಸಿಸುವನು ದೂರದರ್ಶನವನ್ನು ಪಡೆಯುವನು. ಮನಸ್ತತ್ವವನ್ನು ವಾಯುವಿನಿಂದ ಕೂಡಿ ಮನೋದೇವನಾದ ರುದ್ರನಲ್ಲಿ ಚಿಂತಿಸಿ, ಅವರೀರ್ವರನ್ನು ನನ್ನಲ್ಲಿ ಅಧೀನರೆಂದು ಚಿಂತಿಸಿದವನು ಮನೋಜವೆಂಬ ಸಿದ್ಧಿಯನ್ನು

ಪಡೆಯುವನು. ಮನಸ್ಸಿನ ಧ್ಯಾನವೇಗದಿಂದ ಯಾದವರೂಪವನ್ನು ಚಿಂತಿಸುವನೋ ಆ ರೂಪವನ್ನು ಯೋಗಿಯು ಹೊಂದುವನು. ಕಾಮರೂಪವೆಂಬ ಈ ಸಿದ್ಧಿಯು ಗಜಾದಿಸ್ಥಿತ ಹರಿರೂಪ ಚಿಂತನದಿಂದ ಬರುವುದು. ತನ್ನ ಅಂತರ್ಯಾಮಿಯನ್ನು ಇನ್ನೊಂದು ಶರೀರದಲ್ಲಿ ಚಿಂತಿಸಿದ ಯೋಗಿಯು ಪ್ರಾಣದೇವನ ದಯದಿಂದ ಪರಕಾಯ ಪ್ರವೇಶವನ್ನು ಪೊಂದುವನು. ತನ್ನ ದೇಹವನ್ನು ಬಿಡದೆ ಪರದೇಹಭೋಗವನ್ನೂ ಕೂಡ ಅಲ್ಲಿರುವ ಮುಖ್ಯಪ್ರಾಣ ನಾರಾಯಣರ ಅನುಗ್ರಹದಿಂದ ಹೊಂದುವನು.

ಸತ್ವಗುಣನಿಯಾಮಕನೆಂದು ಭಾವಿಸಿದ ಪ್ರಾಣಾಯಾಮ ಪಾರಾಯಣನು ಸುರರಿಂದ ಕೂಡಿ ವಿಮಾನದಲ್ಲಿ ಇಂದ್ರಾದಿದೇವವಿಧೇಯನಾಗಿದ್ದು ಸಂಚರಿಸುವನು. ನನ್ನ ಸಂಕಲ್ಪ ಸತ್ಯತೆಯನ್ನು ಉಪಾಸಿಸಿ, ಸಂಕಲ್ಪಸಿದ್ಧಿಯನ್ನು ಪೊಂದುವನು.

ನನ್ನ ಈಶಿತ್ವ ವಿಶಿತ್ವ ಗುಣಗಣ ಉಪಾಸನೆಯಿಂದ ಸ್ಥಾವರಜನರಿಗೆ ವಂದ್ಯನು. ನನ್ನ ಉತ್ತಮ ಭಕ್ತನು ಶ್ರದ್ಧಿಯಿಂದ ಧಾರಣವನ್ನು ಮಾಡಿ ಸೃಷ್ಟಿಸಂಹಾರ ಕಾರಣನಾದ ನನ್ನ ದಯದಿಂದ ತ್ರಿಕಾಲಜ್ಞಾನಿಯು, ಅಗ್ನಿಜಲಾದಿ ನಿಷ್ಠ ಹರಿರೂಪಚಿಂತಕನು ಅಗ್ನಿಸ್ತಂಭ, ಜಲಸ್ತಂಭಾದಿ ಸಿದ್ಧಿವಂತನು ನನ್ನ ಶ್ರೀವತ್ಸ ನಂದಕ, ಚಕ್ರಾದಿಧ್ಯಾನದಿಂದ ಅಪರಾಜಿತನು ಆಗುವನು. ಮನುಜರು ಶ್ರದ್ಧೆಯಿಂದ ಭಾವಿಸಿದಂತೆ ಪಕ್ವಯೋಗದಿಂದ ಬೇಡಿದ ಸಿದ್ಧಿಗಳು ಲಭಿಸುವುವು.

ಜಿತೇಂದ್ರಿಯನು, ಪ್ರಾಣಪ್ರಸಾದ ಪಾತ್ರನು, ಮನನಶೀಲನು, ಭಕ್ತನು ಆದ ಮಹಾನುಭಾವನಿಗೆ ಯಾವ ಸಿದ್ಧಿಯೂ ದುರ್ಲಭವಲ್ಲ. ಆದರೂ ಮುಕ್ತಿಮಾರ್ಗದ ಪ್ರತಿಬಂಧಕವೆಂದು ಜ್ಞಾನಿಗಳು ಸಿದ್ಧಿಗಳನ್ನು ಬೇಡದೆ, ಅವೇ ತಾವಾಗಿ ಲಭಿಸಿದರೂ ಆಶೆಪಡದೆ, ನನ್ನ ಪ್ರಸಾದವನ್ನೇ ಬೇಡಿ, ಕಾಲವಿಲಂಬಕಾರಣನಾದ ಸಿದ್ಧಿಗಳನ್ನು ಬಿಟ್ಟು ನನ್ನನ್ನು ಭಕ್ತಿಯಿಂದ ಭಜಿಸುವರು. ಜನ್ಮ, ಓಷಧಿ, ತಪೋ, ಮಂತ್ರ, ಮೊದಲಾದವುಗಳ ಸಿದ್ಧಿಯನ್ನು, ಧ್ಯಾನಬಲದಿಂದ ಉತ್ತಮರಾದ ದೇವಾದಿಭಕ್ತರು ಪೊಂದುವರು. ಎಲ್ಲ ಸಿದ್ಧಿಗಳೂ ನನ್ನಿಂದ; ಯೋಗದಿಂದಲು, ಯಥಾರ್ಥ ಜ್ಞಾನದಿಂದಲು, ವರ್ಣಾಶ್ರಮ ಧರ್ಮಗಳಿಂದಲು ಪ್ರೀತನಾಗಿ ಫಲವನ್ನು ಕೊಡುವ ಸರ್ವೋತ್ತಮನು ನಾನೇ! ನಾನು ಅಂತರ್ಯಾಮಿಯಾಗಿ ಶ್ರೇಷ್ಠನೆನಿಸಿರುವನು; ಅತ್ಯಂತ ಪ್ರಿಯನಾದ ನಾನು ಹೊರಗೆ ಬ್ರಹ್ಮರೂಪದಿಂದ ವ್ಯಪ್ತನಾಗಿ ಕಾಲವನ್ನು ನಡೆಸುವೆನು. ಪಂಚಭೂತಗಳು ಜೀವಶರೀರದಲ್ಲಿಯೂ, ಹೊರಗೂ ಇರುವಂತೆ, ಅಂತರ್ಹಿಶ್ಚ ವ್ಯಾಪ್ತನಾದ ನನ್ನ ಧ್ಯಾನವು ಪಾವನವೂ, ಸರ್ವಸಿದ್ಧಿಪ್ರದವೂ, ಸಂಸಾರಮೋಚಕವೂ ಆಗಿದೆ.

## ೧೬. ಯೋಗ್ಯೋಪಾಸನಾ ವಿಧಾನ – ವಿಭೂತಿಗಳು

ಉದ್ಧವನು ಪ್ರಶ್ನಿಸಿದನು–

ಕೃಷ್ಣಾ! ನೀನು ಗುಣಪೂರ್ಣನು, ಅನಾದ್ಯನಂತನು, ಪ್ರಕೃತಿನಿರ್ಮಿತಶರೀರರಹಿತನು, ಸರ್ವಪ್ರಾಣಿಪೋಷಕನು, ಸೃಷ್ಟಿಸ್ಥಿತಿಸಂಹಾರ ಸ್ವತಂತ್ರಕರ್ತನು ಆಗಿರುವೆ. ಮುನಿಜನರು ನಿನ್ನನ್ನು ಇದ್ದಂತೆ ತಿಳಿದು ನಿರ್ದುಃಖಜ್ಞಾನಾನಂದ ಸ್ವರೂಪನೆಂದು, ನಿನ್ನನ್ನು ಉಪಾಸಿಸುವರು. ಮನೋಜಯಹೀನರು ನಿನ್ನ ಮಹಿಮೆಯನ್ನಾಗಲಿ, ಸರ್ವಭೂತ ಹೃದಯನಿಲಯನಾದ ನಿನ್ನ ವ್ಯಾಪ್ತಿ

ಯನ್ನಾಗಲಿ ತಿಳಿಯಲಾರರು. ಯಾವ ಪದಾರ್ಥಗಳಲ್ಲಿ ಶ್ರೇಷ್ಠತ್ವವಿದೆಯೋ ಆ ಪದಾರ್ಥಗಳಿಗೆ ಶ್ರೇಷ್ಠತ್ವಕಾರಣನಾಗಿ ನೀನಿರುವೆ. ಅದನ್ನರಿತು ನಿನ್ನ ವಿಭೂತಿರೂಪಗಳನ್ನು ಧ್ಯಾನಿಸುವವರಿಗೆ ನಿನ್ನ ಮಾಯೆ ದೂರಃಸಿದು ಮೋಕ್ಷಾನಂದವು ಕರಗತವಾಗುತ್ತಿದೆ. ಭೂ ಪಾತಾಳ ಸ್ವರ್ಗಾದಿಗಳಲ್ಲಿ ನೀನು ವಿವಿಧ ಪದಾರ್ಥಗಳಲ್ಲಿ ನೆಲೆಸಿ, ಬ್ರಹ್ಮಾದ್ಯಚಿಂತ್ಯ ಪರಮೈಶ್ವರ್ಯನಿಧಿಯಾಗಿರುವೆ. ನಿನ್ನ ಅಂತಹ ವಿಭೂತಿರೂಪಗಳನ್ನು ನಿನ್ನ ಪಾದಾರವಿಂದ ಭಕ್ತನಾದ ನನಗೆ ಹೇಳು.

ಶ್ರೀಭಗವಂತನಿಂತೆಂದನು–

ಉದ್ಧವ: ಚೆನ್ನಾಗಿ ಕೇಳಿದೆ; ಹಿಂದೆ ಯುದ್ಧರಂಗದಲ್ಲಿ ನಿಂತ ಬಂಧುಗಳ ಸಂಹರಣವು ಪಾಪವೆಂದು ಭ್ರಮಿಸಿ, ರಾಜ್ಯಾದಿಗಳನ್ನೊಲ್ಲದೆ ನಿವೃತ್ತನಾದ ಅರ್ಜುನನಿಗೆ ನಾನು ಗೀತೆಯನ್ನು ಉಪದೇಶಿಸಿದೆನು. ಆಗ ಅವನು ನೀನು ಕೇಳಿದಂತೆಯೇ ನನ್ನ ವಿಭೂತಿರೂಪಗಳನ್ನು ತಿಳಿಯಲು ಕೇಳಿದನು. ಆ ವಿಭೂತಿಗಳನ್ನು ನಿನಗೂ ಹೇಳುವೆನು ಕೇಳು!

ಉದ್ಧವಾ! ನಾನು ಸರ್ವಭೂತಹೃದಯದಲ್ಲಿ ಬಿಂಬರೂಪದಿಂದ ನಿಂತಿರುವೆನು. ಅನಿಮಿತ್ತ ಬಂಧುವಾದ ನನ್ನಿಂದ ಜನನಮರಣ ಸಂಹರಣಗಳು ಜೀವರಿಗೆ ಸಂಭವಿಸುವುವು. ಜ್ಞಾನವಂತರ ಉಪದೇಶಕ ಗುರುವು, ಸಂಹರಣಸಮರ್ಥರ ಬಲರೂಪನು, ಗುಣವಂತರ ಗುಣದಾತನು, ಸ್ವಾಭಾವಿಕವಾಗಿ ಸಾಮಾನ್ಯಾದ ಗುಣವಿಶಿಷ್ಟನ ಬ್ರಹ್ಮ ಮುಖ್ಯಪ್ರಾಣರಲ್ಲಿ ವಿಶೇಷ ಸನ್ನಿಧಿ ಯುಕ್ತನು ಆಗಿರುವ ನನ್ನ ಮಹಿಮೆ ಅನಂತವಾಗಿದೆ. ಆನಂದಾದಿಗುಣಪೂರ್ಣನಾದುದರಿಂದ ಸರ್ವೋತ್ತಮನೆಂದು ಉಪಾಸಿಸುವರಲ್ಲಿ, ನಾನು ಸೂತ್ರನಾಮಕ ಮುಖ್ಯಪ್ರಾಣನಲ್ಲಿ ಸೂತ್ರ ನೆನಿಸಿ, ತದ್ಭಿನ್ನನು ತದಧಿಪತಿಯು ತಚ್ಛಕ್ತಿಪ್ರದನು ಆಗಿರುವೆನು. ದೊಡ್ಡ ವಸ್ತುಗಳಲ್ಲಿ ನಾನು ಮಹತ್ತತ್ವದಲ್ಲಿ ಮಹತ್ತೆನಿಸಿರುವೆನು. ಮೋಕ್ಷಪ್ರಾಪ್ತಿಯೋಗ್ಯರಲ್ಲಿ ಮುಖ್ಯಪ್ರಾಣಬ್ರಹ್ಮರೇ ಅಧಿಕರಾಗಿ ಪ್ರೀತಿಪಾತ್ರರಾಗಿರುವರು.

ಸೂಕ್ಷ್ಮ ವಸ್ತುಗಳಲ್ಲಿ ನಾನು ಜೀವನು; ದುರ್ಜಯ ವಸ್ತುಗಳಲ್ಲಿ ನಾನು ಮನಸ್ಸು; ದೇವತೆ ಗಳಲ್ಲಿ ಹಿರಣ್ಯಗರ್ಭನು (ಆನಂದಮಯನು) ; ಮಂತ್ರಗಳಲ್ಲಿ ಪ್ರಣವ (ಅ+ಉ+ಮ); ಅಕ್ಷರ ಗಳಲ್ಲಿ ಅಕಾರ, ವೇದಗಳಲ್ಲಿ ತದ್ವಾಚ್ಯ, ದೇವತೆಗಳಲ್ಲಿ ಇಂದ್ರ (ರುದ್ರಾದಿಗಳನ್ನು ಬಿಟ್ಟು), ವಸುಗಳಲ್ಲಿ ಪಾವಕನು, ಆದಿತ್ಯರಲ್ಲಿ ವಿಷ್ಣುವು, ರುದ್ರರಲ್ಲಿ ಶಂಕರನು, ಬ್ರಹ್ಮರ್ಷಿಗಳಲ್ಲಿ ಶುಕ್ರನು (ಗುರುವಿನ ನಂತರ), ರಾಜರ್ಷಿಗಳಲ್ಲಿ ಮನುರಾಜನು, ದೇವರ್ಷಿಗಳಲ್ಲಿ ನಾರದನು, ಗೋವುಗಳಲ್ಲಿ ಕಾಮಧೇನುವು, ಸಿದ್ಧರಲ್ಲಿ ಕಪಿಲ, ಪಕ್ಷಿಗಳಲ್ಲಿ ಗರುಡ, ಪ್ರಜಾಪತಿಗಳಲ್ಲಿ ದಕ್ಷ, ಪಿತೃಗಳಲ್ಲಿ ಆರ್ಯಮ, ದೈತ್ಯರಲ್ಲಿ ಪ್ರಹ್ಲಾದ, ನಕ್ಷತ್ರಗಳಲ್ಲಿ ಚಂದ್ರ, ಓಷಧಿಗಳಲ್ಲಿ ಸೋಮಲತೆ, ಯಕ್ಷರಕ್ಷರಲ್ಲಿ ಕುಬೇರ, ಆನೆಗಳಲ್ಲಿ ಐರಾವತ, ಜಲಜಂತುಗಳಲ್ಲಿ ಮಕರ, ತಾಪ ಪ್ರಕಾಶಕರಲ್ಲಿ ಸೂರ್ಯ, ಮನುಜರಲ್ಲಿ ರಾಜ, ಕುದುರೆಗಳಲ್ಲಿ ಉಚ್ಚೈಃಶ್ರವ, ಗೈರಿಕಾದಿ ಗಳಲ್ಲಿ ಬಂಗಾರ, ಸಂಯಮನಶೀಲರಲ್ಲಿ ಯಮ, (ಶಂಕರನ ನಂತರ), ಸರ್ಪಗಳಲ್ಲಿ ವಾಸುಕಿ, ನಾಗರಲ್ಲಿ ಶೇಷ, ವನ್ಯಪಶುಗಳಲ್ಲಿ ಸಿಂಹ, ಆಶ್ರಮಗಳಲ್ಲಿ ಸನ್ಯಾಸ, ವರ್ಣಗಳಲ್ಲಿ ಬ್ರಾಹ್ಮಣ ವರ್ಣ, ತೀರ್ಥಗಳಲ್ಲಿ ಗಂಗೆ, ಸರಸ್ಸುಗಳಲ್ಲಿ ಸಮುದ್ರ, ಆಯುಧಗಳಲ್ಲಿ ವಜ್ರ-ಧನುಗಳು (ಚಕ್ರದ ನಂತರ) ಧನುರ್ಧಾರಿಗಳಲ್ಲಿ ತ್ರಿಪುರಾರಿ (ರಾಮನ ನಂತರ), ಗಿರಿಗಳಲ್ಲಿ ಮೇರು, ಗಂಭೀರಾರಣ್ಯಗಳಲ್ಲಿ ಹಿಮಾಲಯ, ವನಸ್ಪತಿಗಳಲ್ಲಿ ಅಶ್ವತ್ಥ, ಧಾನ್ಯಗಳಲ್ಲಿ ಯವ, ಮನುಜ ಪುರೋಹಿತರಲ್ಲಿ ವಸಿಷ್ಠನು, ವೈದಿಕರಲ್ಲಿ ಬೃಹಸ್ಪತಿ, ಸೇನಾಪತಿಗಳಲ್ಲಿ ಸ್ಕಂಧನು, ಶ್ರೇಷ್ಠವಸ್ತು

ಗಳಲ್ಲಿ ಲೋಕಪೂಜ್ಯ ಬ್ರಹ್ಮದೇವನು, ಯಜ್ಞಗಳಲ್ಲಿ (ವೇದಾಧ್ಯಯನ) ಬ್ರಹ್ಮಯಜ್ಞ, ವ್ರತಗಳಲ್ಲಿ ಅಹಿಂಸೆ; ವಾಯು, ಸೂರ್ಯ, ಜಲ, ಅಗ್ನಿ, ವಾಕ್ಯಗಳೆಂಬ ಪವಿತ್ರಕರ ಪದಾರ್ಥಗಳಲ್ಲಿ ಶುಚಿಕರನು. ಯೋಗಗಳಲ್ಲಿ ಮನೋಜಯನು, ಜಯಾಭಿಲಾಷಿಗಳಲ್ಲಿ ರಹಸ್ಯ ಮಂತ್ರಾಲೋಚನೆಯು ಶುಭಹೇತುಗಳಲ್ಲಿ ತತ್ವವಿದ್ಯೆ, ಜ್ಞಾನಿಮತಗಳಲ್ಲಿ ಜೀವೇಶಭೇದಮತವು, ಸ್ತ್ರೀಯರಲ್ಲಿ ಶತರೂಪೆ, ಪುರುಷರಲ್ಲಿ ಸ್ವಾಯಂಭುವಮನವು, ಮುನಿಗಳಲ್ಲಿ ನಾರಾಯಣರ್ಷಿಯು, ಬ್ರಹ್ಮಚಾರಿಗಳಲ್ಲಿ ಸನತ್ಕುಮಾರನು, ಧರ್ಮಗಳಲ್ಲಿ ತ್ಯಾಗವು, ಕ್ಷೇಮಗಳಲ್ಲಿ ಅಂತರ್ಯಾಮಿ ಜ್ಞಾನವು, ರಹಸ್ಯಗಳಲ್ಲಿ ಅಸಂಪ್ರಜ್ಞಾಸಮಾಧಿಯು, ದಂಪತಿಗಳಲ್ಲಿ ಪುರುಷನು, ಕಾಲಾವಯುವಗಳಲ್ಲಿ ಸಂವತ್ಸರನು, ಋತುಗಳಲ್ಲಿ ವಸಂತ, ಮಾಸಗಳಲ್ಲಿ ಮಾರ್ಗಶಿರನು, ನಕ್ಷತ್ರಗಳಲ್ಲಿ ಅಭಿಜಿತ್, ಯುಗಗಳಲ್ಲಿ ಕೃತ, ಧೀರರಲ್ಲಿ ದೇವಲಾಸಿತ, ವ್ಯಾಸರಲ್ಲಿ ಕೃಷ್ಣದ್ವೈಪಾಯನ, ಕವಿಗಳಲ್ಲಿ ಶುಕ್ರನು, ಷಡ್ಗಣೈಶ್ವರ್ಯವಂತರಲ್ಲಿ ವಾಸುದೇವನು, ಭಕ್ತರಲ್ಲಿ ನೀನು (ಭೀಮ, ಬಲರಾಮ, ಅರ್ಜುನರ ನಂತರ), ಕಿಂಪುರುಷರಲ್ಲಿ ಹನುಮಂತನು, ವಿದ್ಯಾಧರರಲ್ಲಿ ಸುದರ್ಶನನು, ರತ್ನಗಳಲ್ಲಿ ಪದ್ಮರಾಗ, ಮುಕುಲಗಳಲ್ಲಿ ಪದ್ಮಕೋಶ, ದರ್ಭಜಾತಿಗಳಲ್ಲಿ ಕುಶ, ಹವಿಸ್ಸುಗಳಲ್ಲಿ ಗೋಘೃತವು, ಪ್ರಯತ್ನಶೀಲರಲ್ಲಿ ಸಂಪತ್ತು, ಮೋಸದಲ್ಲಿ ದ್ಯೂತ, ಸಹನಶೀಲರಲ್ಲಿ ತಿತಿಕ್ಷೆ, ಬಲಶಾಲಿಗಳಲ್ಲಿ ಬಲ, ಓಜಶ್ಶಾಲಿಗಳಲ್ಲಿ ಅವಷ್ಟಂಭಕಶಕ್ತಿ, ಭಾಗವತತಂತ್ರಗಳಲ್ಲಿ ಪಂಚರಾತ್ರ, ನವಮೂರ್ತಿಗಳಲ್ಲಿ ಮೊದಲು ಪೂಜಿಸಬೇಕಾದ ಪ್ರಥಮ ಮೂರ್ತಿ, (ವಿಷ್ಣು, ಲಕ್ಷ್ಮೀ, ಬ್ರಹ್ಮ, ವಾಯು, ಶೇಷ, ಗರುಡರ ನವಮೂರ್ತಿಗಳಲ್ಲಿ ವಿಷ್ಣುನವಮೂರ್ತಿಗಳೇ ಮೊದಲು ಪೂಜಿಸ ಬೇಕಾದ ನವಮೂರ್ತಿ; ಅವಾವುವೆಂದರೆ, ನಾರಾಯಣ, ಪರಂಬ್ರಹ್ಮ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನರಸಿಂಹ, ವಾರಾಹ, ಪರಂಜ್ಯೋತಿಗಳೆಂಬ ನವಮೂರ್ತಿಗಳು ಸ್ವಗತ ಭೇದರಹಿತವು ಆನಂದಾದಿ ಸಕಲ ಕಲ್ಯಾಣಗುಣಪೂರ್ಣವು ಆಗಿವೆ) ಗಂಧರ್ವರಲ್ಲಿ ವಿಶ್ವಾವಸು, ಅಪ್ಸರೆಯರಲ್ಲಿ ಪೂರ್ವಚಿತ್ತಿ, ಪರ್ವತಗಳಲ್ಲಿ ಸ್ಥೈರ್ಯ, ಭೂಮಿಯಲ್ಲಿ ಗಂಧ, ನೀರಿನಲ್ಲಿ ರಸ, ತೇಜಸ್ಸುಗಳಲ್ಲಿ ಅಗ್ನಿ, ಸೂರ್ಯ ಚಂದ್ರ ತಾರೆಗಳಲ್ಲಿ ಪ್ರಭೆ, ಆಕಾಶದಲ್ಲಿ ಶಬ್ದ, ಬ್ರಾಹ್ಮಣ ಭಕ್ತರಲ್ಲಿ ಬಲಿ, ವೀರರಲ್ಲಿ ಅರ್ಜುನ, ಭೂತಗಳಲ್ಲಿ ಜನನಜೀವನನಾಶದಾತನು, ಪಾದದ ಗತಿ, ನಾಲಿಗೆಯ ವಾಕ್, ಅಪಾನದ ವಿಸರ್ಜನ, ಉಪಸ್ಥದ ಆನಂದ, ಚರ್ಮದ ಸ್ಪರ್ಶ, ಜಿಹ್ವೆಯ ರುಚಿ, ಕಿವಿಯ ಶ್ರವಣ, ಮೂಗಿನ ವಾಸನೆ, ಹಸ್ತದ ಆದಾನ, ಕಣ್ಣಿನ ರೂಪ, ಪಂಚ ಭೂತಗಳಲ್ಲಿ ಪೃಥಿವೀವಾಯುಗಗನಜಲತೇಜೋರೂಪನು, ಅಹಂತತ್ವ ಮಹತ್ತತ್ವ ನಿಯಾಮ ಕನು, ಬ್ರಹ್ಮಾಂಡದಲ್ಲಿ ಪುರುಷ, ಜಡಪ್ರಕೃತಿಯ ಸತ್ವರಜಸ್ತಮೋಗುಣನಿಯಾಮಕ – ಎಲ್ಲವೂ ನಾನೇ; ಎಲ್ಲದರಲ್ಲಿಯೂ ಇರುವ ಶ್ರೇಷ್ಠತೆಗೆ ಕಾರಣನಾದವನೂ ನಾನೇ; ವಿವಿಧ ಪದಾರ್ಥಗಳಲ್ಲಿ ತದ್ಭಿನ್ನನಾಗಿ, ತತ್ತಚ್ಛಕ್ತಿಪ್ರದನು, ತನ್ನಾಮಕನು, ಅನಂತಗುಣಯುಕ್ತನು ಆದ ನನ್ನ ವಿಭೂತಿರೂಪಗಳನ್ನು ನಿನಗೆ ಹೇಳಿದೆನು. ಆನಂದಜ್ಞಾನ ಬಲರೂಪನಾದ ನಾನು ಸರ್ವಪ್ರಾಣಾಧಾರಕನಾದ ಮುಖ್ಯಪ್ರಾಣನಿಂದ ಕೂಡಿ ಸರ್ವತ್ರ ವ್ಯಾಪ್ತನಾಗಿ ನಿರ್ದೋಷನಾಗಿರುವೆನು. ನಾನಿಲ್ಲದಿರೆ ಯಾವ ವಸ್ತುವೂ ಯಾವ ಕಾರ್ಯವನ್ನೂ ಮಾಡಲಾರದು. ನನ್ನ ಸ್ವರೂಪಭೂತವಾದ ವಿಭೂತಿರೂಪದಿಂದ ತತ್ತಜ್ಜಾತಿ ಶ್ರೇಷ್ಠತೆಯನ್ನು ಪೊಂದಿರುವ ಜೀವಾದಿ ಪದಾರ್ಥಗಳು ವಿಶೇಷ ವಿಭೂತಿಗಳು ಹಾಗೂ ಮದ್ಭಿನ್ನ, ಮಾದಧೀನವೆಂದು ತಿಳಿ!

ಸರ್ವಗುಣಾತ್ಮಕವಾದ ನಾನು ಪರಮಾಣುಗಳನ್ನು ಎಣಿಸಿ ಮುಗಿಸಬಲ್ಲೆನು. ಆದರೆ ನನ್ನ ಅನಂತವಿಭೂತಿಗಳನ್ನು ಅನಂತವೆಂದೇ ತಿಳಿದು, ಎಣಿಸದಿರುವೆನು. ಕೋಟಿಗಟ್ಟಲೆ ಬ್ರಹ್ಮಾಂಡ ಗಳನ್ನು ಸೃಜಿಸುವ ನನ್ನ ವಿಭೂತಿರೂಪಗಳಿಗೆ ಕೊನೆಯಿಲ್ಲ; ಎಣಿಯೂ ಇಲ್ಲ. ಎಲ್ಲಿ ತೇಜ, ಶ್ರೀ, ಕೀರ್ತಿ, ಐಶ್ವರ್ಯ, ನಿಷಿದ್ಧಕರಣಲಜ್ಜೆ, ತ್ಯಾಗ, ಭಗ, ವೀರ್ಯ, ತಿತಿಕ್ಷೆ, ವಿಜ್ಞಾನ, ಸೌಂದರ್ಯ ಮುಂತಾದ ಶುಭಗುಣಗಳಿವೆಯೋ, ಆ ಗುಣಗಳೆಲ್ಲವು ನನ್ನ ಸನ್ನಿಧಾನದಿಂದ ಬಂದಿವೆ, ನನ್ನ ಪ್ರತಿಬಿಂಬಾಂಶಗಳಾಗಿವೆ, ನನ್ನಧೀನವಾಗಿದೆ ಎಂದು ತಿಳಿ! ನನ್ನ ಹೊರತು ಇತರ ಪದಾರ್ಥಗಳಲ್ಲಿರುವ ಗುಣಗಳೆಲ್ಲವು ಅಲ್ಲಿ ಮುಖ್ಯವಾಗಿರದೆ, ನನ್ನಲ್ಲಿ ಮುಖ್ಯವಾಗಿಯೂ, ಪೂರ್ಣವಾಗಿಯೂ ಇವೆ.

ಉದ್ಧವಾ! ಸರ್ವಶಬ್ದಗಳೂ ನನ್ನಲ್ಲಿ ಪರಮಮುಖ್ಯವಾಗಿವ ಎಂದು ಮನಗಂಡು, ಬಹಿ ರ್ವಿಷಯ ಚಿಂತೆಯನ್ನು ಬಿಟ್ಟು, ವಾಗಿಂದ್ರಿಯವನ್ನು ಇಂದ್ರಿಯೇಶವಾದ ಮನಸ್ಸಿನ ಅಧೀನ ದಲ್ಲಿಡು; ಮನಸ್ಸನನ್ನು ಸರ್ವದುಷ್ಟಚೇಷ್ಟಾರಹಿತವಾಗಿಸಿ, ಶ್ರೀಹರಿಯನ್ನು ಸೇರುವ ಪ್ರಯತ್ನವನ್ನು ಮಾಡುತ್ತಾ ನನ್ನಲ್ಲಿಡು! ಮುಂದೆ ನಿನಗೆ ಸಂಸಾರ ಕಂಟಕಿತ ಮಾರ್ಗವು ತಪ್ಪಿ ಹೋಗುವುದು! ವಾಕ್ಯಚಿತ್ತಗಳನ್ನು ನಿಗ್ರಹಿಸದವನ ವ್ರತ ತಪೋ ಜ್ಞಾನಾದಿ ಗುಣಗಳು ಹಸಿಗಡಿಗೆಯಲ್ಲಿಟ್ಟ ನೀರಿನಂತೆ ಹರಿದುಹೋಗಿ, ನಿಷ್ಫಲವೆನಿಸುವುವು. ಆದ್ದರಿಂದ ಉದ್ಧವಾ! ನನಲ್ಲಿ ಮನವನ್ನಿಡು! ನನ್ನನ್ನು ವಚನದಿಂದ ಕೀರ್ತಿಸು! ನನ್ನಲ್ಲೇ ಶರಣಾಗತನಾಗು! ನನ್ನ ಭಕ್ತನಾಗು! ಆಗ ನಿನ್ನ ಜ್ಞಾನಸಾಧನವು ಸಂಪೂರ್ಣವಾಗಿ ನೀನು ಸಂಸಾರಮುಕ್ತನಾಗುವೆ!

## ೧೭. ವರ್ಣಾಶ್ರಮ ಧರ್ಮನಿರೂಪಣೆ

ಉದ್ಧವನು ಕೇಳಿದನು–

ಕೃಷ್ಣಾ! ನಿನ್ನಲ್ಲಿ ಭಕ್ತಿಯನ್ನು ಪುಟ್ಟಿಸುವ ಧರ್ಮವಾವುದು? ವರ್ಣಯುತರ ಧರ್ಮ, ಆಶ್ರಮಧರ್ಮ, ವರ್ಣಹೀನರ ಧರ್ಮ – ಮೊದಲಾದುವನ್ನು ನನಗೆ ನಿರೂಪಿಸು! ಧರ್ಮವನ್ನು ಎಂತು ಮಾಡಿದರೆ ಅದು ಭಕ್ತಿಭಾಗ್ಯವನ್ನು ತಂದುಕೊಡುವುದು? ನೀನು ಹಿಂದೆ ನಿನ್ನ ಭಕ್ತರಾದ ಬ್ರಾಹ್ಮಣಾದಿಗಳಿಗೆ ಆ ಧರ್ಮಸ್ವರೂಪವನ್ನು ಹೇಳಿದ್ದೆ, ನಿಜ. ಆದರೆ ಬಹುಕಾಲವಾಗಿ ಸಂಪ್ರ. ದಾಯವು ನಶಿಸಿ, ಆ ಧರ್ಮವು ನಷ್ಟಪ್ರಾಯವಾಗಿದೆ. ಅಂತಹ ಸ್ವಧರ್ಮವನ್ನು ನಡೆಸಿ, ನುಡಿದು, ನಡೆಸುವ ಮಹಾನುಭಾವರು. ಪ್ರಾಣಾದಿ ಕಲಾದೇವತೆಗಳು ಮೂರ್ತೀಭವಿಸಿ ನಿಂತಿರುವ ವಿರಿಂಚಸಭೆಯಲ್ಲಿ ಕೂಡ ನಿನ್ನಂತಹವರು ಸಿಗರು. ನೀನು ಸರ್ವಜ್ಞನು. ಸರ್ವಧರ್ಮ ಪ್ರವರ್ತ ಕನು, ಅಧರ್ಮಶಿಕ್ಷಕನು; ನೀನೀ ಲೋಕವನ್ನು ಬಿಟ್ಟು ಅಂತರ್ಹಿತನಾಗಿದ್ದ ಸಮಯದಲ್ಲಿ ನೀನು ಪೇಳಿದ ಧರ್ಮವೇ ಶರಣ್ಯವಾಗುವುದು. ಆದುದರಿಂದ ವರ್ಣಾಶ್ರಮಾದಿ ಧರ್ಮವನ್ನೆನಗೆ ಹೇಳು!

ಆ ಮಾತನ್ನಾಲಿಸಿ, ಮಾಧವನು ಭಕ್ತವರನಾದ ಉದ್ಧವನಲ್ಲಿ ಪ್ರೀತನಾಗಿ, ಮನುಜ ಲೋಕಹಿತವಾಗಲೆಂದು ಸನಾತನಧರ್ಮವನ್ನು ನಿರೂಪಿಸಿದನು.

ಶ್ರೀಭಗವಂತನಿಂತೆಂದನು–

ನೀನು ಕೇಳಿದ ಧರ್ಮವು ಮೋಕ್ಷಕಾರಣವಾಗಿದೆ. ವರ್ಣಾಶ್ರಮಧರ್ಮವನ್ನು ಹೇಳುವೆನು. ಕೇಳು!

ಕೃತಯುಗದಲ್ಲಿ ಮೊದಲು ಹಂಸವೆಂಬ ಒಂದೇ ವರ್ಣವೆಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರವರ್ಣಗಳು ಮಿಶ್ರವಾಗದೆ, ಸಂಕರವಿಲ್ಲದೆ ಶುದ್ಧವಾಗಿದ್ದವು. ಸಕಲ ಪ್ರಜರು ಸಂತುಷ್ಟಿಯಿಂದ ಕೃತಕೃತ್ಯರಾಗಿದ್ದರು. ಅಂತೆಯೇ ಅದು ಪೂರ್ಣಯುಗ(ಕೃತ)ವೆಂದೆನಿಸಿತು. ವೇದವೆಲ್ಲವೂ ಭಗವದ್ಗುಣ ವ್ಯಾಖ್ಯಾನರೂಪವಾಗೇ ಇತ್ತು. ಓಂಕಾರನಾದ ಹರಿಯ ಭಕ್ತರಾಗಿ ಬ್ರಹ್ಮಾದಿಗಳು ಪೂಜ್ಯರೆನಿಸಿದರು. ಧರ್ಮವು ವೃಷರೂಪಧರವಾಗಿತ್ತು. ತಪೋನಿಷ್ಠರಾದ ಪರಮ ಹಂಸರು ನನ್ನನ್ನು ಉಪಾಸಿಸಿ ಪಾಪರಹಿತರಾಗುವರು.

ತ್ರೇತಾಯುಗದ ಪ್ರಾರಂಭದಲ್ಲಿ ನನ್ನ ಹೃದಯದಿಂದ ಪ್ರಾಣ ಸರಸ್ವತೀ ವಿರಿಂಚರಿಂದ ಅಭಿಮನ್ಯ ಮಾನವಾದ ಋಗ್ಯಜುಸ್ಸಾಮ ವೇದಗಳ ತಯೀನಾಮಕವಾಗಿ ಪ್ರಾದುರ್ಭವಿಸಿದವು. ಅವನ್ನು ಬ್ರಾಹ್ಮಣರು ಅಧ್ಯಯನವನ್ನು ಮಾಡಿದಾಗ, ಆ ವೇದಾರ್ಥಭೂತನಾದ ನಾನು, ಅವರ ಮುಖದಿಂದ ಅಭಿವ್ಯಕ್ತನಾದೆನು.

ಬ್ರಹ್ಮಾಂತರ್ಯಾಮಿ ಪುರುಷರೂಪದ ಮುಖ, ಬಾಹು, ಊರು, ಪಾದಗಳಿಂದ ಕ್ರಮವಾಗಿ ವಿಪ್ರ, ಕ್ಷತ್ರಿಯ, ವೈಶ್ಯ, ಶೂದ್ರ, ವರ್ಣಗಳು, ತತ್ತದ್ವಿಹಿತಧರ್ಮಾಚಾರಲಕ್ಷಣಗಳೊಡನೆ ಪ್ರಾದುರ್ಭಿಸಿದವು. ತಲೆಯಿಂದ ಸನ್ಯಾಸವನ್ನು, ವಕ್ಷಸ್ಥಲದಿಂದ ವಾನಪ್ರಸ್ಥ ಧರ್ಮವನ್ನು, ಜಘನದಿಂದ ಗಾರ್ಹಸ್ಥ್ಯವನ್ನು, ಹೃದಯದಿಂದ ಬ್ರಹ್ಮಚರ್ಯವನ್ನು ನಾನು ಪುಟ್ಟಿಸಿದೆನು. ನನ್ನ ಅವಯವಗಳಲ್ಲಿ ಭೇದವಿಲ್ಲ. ಆದರೂ ಅಲ್ಲಿ ಪುಟ್ಟಿ ಬಂದ ವರ್ಣಾಶ್ರಮಗಳ ಧರ್ಮಗಳು ಅದಕ್ಕೆ ತಕ್ಕ ಗುಣದಿಂದ ಯುಕ್ತವಾಗಿದೆ. ಉತ್ತಮ ಮತ್ತ ನೀಚವರ್ಣಗಳಲ್ಲದೆ ನೀಚ ನೀಚ ಪ್ರಕೃತಿ ಉಳ್ಳ ಚಂಡಾಲಾದಿ ವರ್ಣಬಾಹ್ಯರೂ ನನ್ನಿಂದ ಅಭಿವ್ಯಕ್ತರಾಗಿ ಪುಟ್ಟಿರುವರು.

ಶಮ, ದಮ, ತಪಸ್ಸು, ಶೌಚ, ಸಂತುಷ್ಟಿ, ಕ್ಷಮೆ, ಆರ್ಜವ, ಸತ್ಯ, ಭಕ್ತಿ, ಮೊದಲಾದವು ಬ್ರಾಹ್ಮಣ ವರ್ಣದ ಸ್ವಾಭಾವಿಕ ಗುಣಗಳು. ತೇಜಸ್ಸು, ಶಕ್ತಿ, ಧೈರ್ಯ, ಶೌರ್ಯ, ತಿತಿಕ್ಷೆ, ಔದಾರ್ಯ, ಉದ್ಯಮ, ಸ್ಥೈರ್ಯ, ಬ್ರಾಹ್ಮಣ ವಿಶ್ವಾಸ, ಐಶ್ವರ್ಯ ಮೊದಲಾದವು ಕ್ಷತ್ರಿಯ ವರ್ಣದ ಸ್ವಾಭಾವಿಕ ಗುಣಗಳು. ಆಸ್ತಿಕ್ಯ, ದಾನನಿಷ್ಠೆ, ಆದಂಭ, ವಿಪ್ರಸೇವೆ, ಧನಸಂಪಾದನೆ, ಮೊದಲಾದವು ವೈಶ್ಯವರ್ಣದ ಸ್ವಾಭಾವಿಕ ಗುಣಗಳು, ವಿಪ್ರಸೇವೆ, ಗೋಸೇವೆ, ದೇವಪ್ರೀತಿ ಸಂಪಾದನೆ, ಕಾಪಟ್ಯರಾಹಿತ್ಯ, ಸಂತೋಷ ಮೊದಲಾದವು ಶೂದ್ರವರ್ಣದ ಸ್ವಾಭಾವಿಕ ಗುಣ ಗಳು.

ಅಶೌಚ, ಜೀವೇಶೈಕ್ಯವಚನ, ಕಳ್ಳತನ, ನಾಸ್ತಿಕ್ಯ, ಶುಷ್ಕತರ್ಕ, ಶುಷ್ಕಕಲಹ, ನಿಷಿದ್ಧ ಕಾಮ, ಸುಜನರಲ್ಲಿ ಕ್ರೋಧ, ಬ್ರಾಹ್ಮಣನಿಂದೆ, ಮೊದಲಾದವು ಚಾಂಡಾಲಸ್ವಭಾವ ಸಿದ್ಧ ಗುಣಗಳು.

ಎಲ್ಲ ವರ್ಣದವರಿಗೂ ಅಹಿಂಸೆ, ಸತ್ಯ, ಚೌರ್ಯವರ್ಜನ, ದುಷ್ಟಕಾಮವರ್ಜನ, ಕ್ರೋಧ ರಾಹಿತ್ಯ, ಲೋಭವರ್ಜನ, ಭೂತಹಿತಾಚರಣೆ, ಮೊದಲಾದ ಗುಣಗಳು ತಪ್ಪದೆ ಅನುಷ್ಠೇಯ ವಾಗಿವೆ.

ಬ್ರಾಹ್ಮಣನು ಉಪನೀತವಾದರೆ ಎರಡನೇ ಸಲ ಹುಟ್ಟಿದಂತೆಯೇ ಸರಿ! ಅವನು ವಿಷ್ಣುಭಕ್ತ ನಾಗಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ಗುರುಕುಲದಲ್ಲಿ ವಾಸಿಸುತ್ತಾ ವೇದಾಧ್ಯಯನ

ವನ್ನು ಮಾಡುತ್ತಾ ಮಿತಭೋಜಿಯಾಗಿ ಮೇಖಲಾಜಿನ ದಂಡಕಮಂಡಲು ಜಟಾ ಉಳ್ಳವನಾಗಿ ಶುಭ್ರದಂತೀ ಶುಭ್ರವಸ್ತ್ರ, ಉಳ್ಳವನಾಗಿ ಕೈಯಲ್ಲಿ ಕೃಷ್ಣಾಜಿನ ದರ್ಭೆಗಳನ್ನು ಹಿಡಿದವನಾಗಿ ಇರಬೇಕು. ಸ್ನಾನ ಭೋಜನ ಹೋಮಗಳಲ್ಲಿ ಜಪದಲ್ಲಿ ಅಭ್ಯಾಸದಲ್ಲಿ ವಾಙ್ನಿಯಮವನ್ನು ಪಾಲಿಸಬೇಕು. ಕೇಶಸ್ಮಶ್ರುನಖಲೋಮಗಳನ್ನು ತೆಗೆಯಬಾರದು. ಬ್ರಹ್ಮಚಾರಿಯು ಕಾಯೇನ ವಾಚಾ ಮನಸಾ ಬ್ರಹ್ಮಚರ್ಯವನ್ನು ಪಾಲಿಸಬೇಕು. ವೀರ್ಯಸ್ಖಲನ ಮಾಡಬಾರದು. ಒಂದು ವೇಳೆ ಸ್ವಪ್ನಾದಿಗಳಲ್ಲಿ ಆದರೆ ಅವಗಾಹನಸ್ನಾನ ಮಾಡಿ ಗಾಯತ್ರೀಜಪವನ್ನು ಮಾಡಬೇಕು. ಅಗ್ನಿ ಸೂರ್ಯ ಗುರುಗಳು ಆಕಳು ಬ್ರಾಹ್ಮಣರು ವೃದ್ಧರು ದೇವತೆಗಳೇ ಮೊದಲಾದವರನ್ನು ನಮಸ್ಕರಿಸಬೇಕು. ಎಚ್ಚರದಿಂದ ಸಂಧ್ಯಾಕಾಲದಲ್ಲಿ ಮೌನಿಯಾಗಿ ಜಪಿಸಬೇಕು. ಗುರುಗಳಲ್ಲಿ ಲಕ್ಷ್ಮೀನಾರಾಯಣನನ್ನು ನೆನೆದು ಯಾವ ಗುರುಗಳನ್ನೂ ಕಡೆಗಣಿಸಬಾರದು. ಸರ್ವದೇವಮಯ ನಾದುದರಿಂದ ಆಚಾರ್ಯನನ್ನು ಸಾಮಾನ್ಯ ಮನುಜನೆಂದು ತಿರಸ್ಕರಿಸಬಾರದು.

ಬ್ರಹ್ಮಚಾರಿಯು ಸಾಯಂಪ್ರಾತಃಕಾಲಗಳಲ್ಲಿ ತಂದ ಭಿಕ್ಷಾನ್ನವನ್ನು ಗುರುವಿಗರ್ಪಿಸಿ, ಅವನ ಅನುಜ್ಞೆಯಂತೆ ತಾನು ಉಣ್ಣಬೇಕು. ಆಚಾರ್ಯನನ್ನು ವಿನಯದಿಂದ ಸೇವಿಸಬೇಕು. ಪ್ರಯಾಣ ಶಯನ ಆಸನ ಕಾಲಗಳಲ್ಲಿ ಸ್ವಲ್ಪ ದೂರದಲ್ಲೇ ಕೈಜೋಡಿಸಿ ನಿಂತು, ಎಚ್ಚರದಿಂದಿರಬೇಕು, ಸ್ರಕ್‌ಚಂದನಾದಿ ಭೋಗವಸ್ತುಗಳನ್ನು ದೂರಮಾಡಬೇಕು. ವೇದಾಭ್ಯಾಸಿಯಾಗಿ, ವಿರಿಂಚಪರಿ ಪಾಲಿತ ಸತ್ಯಲೋಕವನ್ನು ಸೇರಲಿಚ್ಛಿಸಿದವನು, ವೇದಪಠನ ಗುರುಸೇವೆಗಳಿಗೇ ದೇಹವನ್ನು ಮೀಸಲಾಗಿರಿಸಿ, ನೈಷ್ಠಿಕಬ್ರಹ್ಮಚಾರಿ ಎನಿಸುವನು. ಅಗ್ನಿ ಗುರು ಸೂರ್ಯ ಹೃದಯಗಳಲ್ಲಿರುವ ನನ್ನನ್ನು ಮಿಥ್ಯಾಜ್ಞಾನವರ್ಜಿತನಾಗಿ ಉಪಾಸಿಸಿದ ಬ್ರಹ್ಮಚಾರಿಯು ತೇಜಸ್ವಿಯು, ನಿಷ್ಪಾಪನು ಆಗುವನು.

ಬ್ರಹ್ಮಚಾರಿಯು ಸ್ತ್ರೀಜನರ ದರ್ಶನ, ಸ್ಪರ್ಶನ, ಸಂಭಾಷಣ, ನರ್ಮವಚನ, ಮಿಥುನೀ ಭೂತಪ್ರಾಣಿಗಣಾವಲೋಕನಗಳನ್ನು ಮೊದಲು ಬಿಟ್ಟು ದೂರಸರಿಯಬೇಕು.

ಸರ್ವಾಶ್ರಮದವರಿಗೂ ಶೌಚ, ಆಚಮನ, ಸ್ನಾನ, ಸಂಧ್ಯಾವಂದನ, ಉಪಾಸನ, ಆರ್ಜವ, ತೀರ್ಥಸೇವಾ, ಜಪ, ಮೊದಲಾದ ನಿಯಮಗಳು ಸಾಮಾನ್ಯವಾಗಿವೆ. ಅಂತೆಯೇ ಅಸ್ಪೃಶ್ಯ ವರ್ಜನ, ಅಸಂಭಾಷ್ಯದೂರೀಕರಣ, ಅಭಕ್ಷ್ಯ ಪರಿತ್ಯಾಗಗಳೂ ವಿಹಿತವಾಗಿವೆ. ನನ್ನ ವ್ಯಾಪ್ತಿ ಯನ್ನರಿತು. ಸರ್ವಭೂತಾಂತರ್ಯಾಮಿಯಾದ ನನ್ನಲ್ಲಿ ಭಕ್ತಿಯು ಕರ್ತವ್ಯವಾಗಿದೆ. ಮನಸ್ಸು, ವಾಕ್ಕು, ಕಾಯವೆಂಬ ತ್ರಿಕರಣಗಳಲ್ಲಿ ಶುದ್ಧನಾಗಿ, ಸಂಯಮದಿಂದಿರುವುದೂ ಅವಶ್ಯವಾಗಿದೆ. ಇಂತಹ ಬ್ರಹ್ಮಚಾರಿಯು, ಅಗ್ನಿಯಂತೆ ತೇಜೋವಂತನಾಗಿ, ನನ್ನಲ್ಲಿ ಭಕ್ತಿಯನ್ನು ಮಾಡಿ, ಬಾಹ್ಯಮನಸ್ಸಿನ ಕಲ್ಮಷವನ್ನು ಕಳೆದುಕೊಂಡು ಮುಕ್ತನಾಗುವನು. ಗುರುದಕ್ಷಿಣೆಯನ್ನು ಯಥಾಯೋಗ್ಯವಾಗಿ ಕೊಟ್ಟು ಸ್ನಾತಕವನ್ನು ಮಾಡಿ, ಗುರುಗಳ ಅಪ್ಪಣೆಯನ್ನು ಪಡೆದು, ವಿರಾಗ ವಿದ್ದರೆ ಸನ್ಯಾಸಿಯೋ, ವನವಾಸಿಯೋ ಆಗಬಹುದು; ಇಲ್ಲದಿದ್ದರೆ ಗೃಹಾಶ್ರಮಿಯು ಆಗಬಹುದು.

ಗೃಹಸ್ಥನಾಗಬಯಸಿದವನು ತನಕಿಂತಲೂ ಚಿಕ್ಕವಳು ಸವರ್ಣಳು ಸುಶೀಲಳು ಕುಷ್ಠಾದಿ ರೋಗರಹಿತಳು ಆದ ಕನ್ಯೆಯನ್ನು ಮದುವೆಯಾಗಬೇಕು. ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ದ್ವಿಜರೆಂಬುವರು. ದ್ವಿಜರಿಗೆಲ್ಲ ಯಜ್ಞ, ಅಧ್ಯಯನ, ದಾನಗಳುಂಟು. ಬ್ರಾಹ್ಮಣನಿಗೆ ಮಾತ್ರ ಯಾಜನ ಅಧ್ಯಾಪನ ಪ್ರತಿಗ್ರಹಗಳೂ ಇವೆ; ಆದರೆ ಪ್ರತಿಗ್ರಹದಿಂದ ತಪಸ್ಸು ತೇಜಸ್ಸು ಯಶಸ್ಸು

ಕೆಡುವುದೆಂದರಿತವನು ಯಾಜನಾಧ್ಯಾಪನಗಳಿಂದ ಜೀವಿಸಬೇಕು; ಅದೂ ತಪ್ಪೆಂದು ತೋರಿದಾಗ, ಶಿಲೋಂಭವೃತ್ತಿಯಿಂದ ಜೀವಿಸಬೇಕು. ಬ್ರಾಹ್ಮಣನ ದೇಹವು ಕ್ಷುದ್ರಕಾಮಭೋಗಕ್ಕಾಗಿ ಬಂದುದಲ್ಲ. ಕಷ್ಟಪಟ್ಟು ತಪಸ್ಸನ್ನು ಮಾಡಿ ವಿರಕ್ತನಾಗಿ ಇಹವನ್ನು ತೊರೆದು ವೈಕುಂಠದ ಅನಂತಸುಖ ಸಾಧನವಾದುದೀ ವಿಪ್ರದೇಹ!

ಶಿಲೋಂಭವೃತ್ತಿಯಿಂದ ಸಂತುಷ್ಟನಾಗಿ ಪಾಪರಹಿತ ನಿಷ್ಕಾಮ ಕರ್ಮಗಳನ್ನು ಮಾಡಿ, ನನಗೆ ಸರ್ವವನ್ನು ಸಮರ್ಪಿಸುವ ಗೃಹಸ್ಥನು, ಅನತಿಲೋಲನಾಗಿದ್ದರೆ ಸಾಕು; ನನ್ನ ವೈಕುಂಠ ಲೋಕವನ್ನು ತಪ್ಪದೇ ಹೊಂದುವನು. ಇಂತು ಜೀವಿಕೆಗಾಗಿ ಕಷ್ಟಪಡುವ ಸದ್ಬ್ರಾಹ್ಮಣ ನನ್ನು ಕಾಪಾಡುವವರನ್ನು ನಾನು ಸಂಸಾರದಿಂದ ನೌಕೆಯು ಸಮುದ್ರವನ್ನಂತೆ ದಾಟಿಸಿ ಕಾಪಾಡುವೆನು. ರಾಜನಾದವನು ಎಲ್ಲ ಪ್ರಜರನ್ನೂ ತಂದೆಯಂತೆ ಕಾಪಾಡಬೇಕು; ಧೀರನಾಗಿ ತಾನು ತನ್ನನ್ನು ಸಾಂಸಾರಿಕ ಬಂಧದಿಂದ ಬಿಡಿಸಿಕೊಳ್ಳಲು ಯತ್ನಿಸುವ ರಾಜನು ವಿಪ್ರಭಕ್ತನು ಮತ್ತು ನನ್ನ ಭಕ್ತನು ಆಗಿದ್ದರೆ ಅಂತಹವನು ಸಕಲ ಪಾಪಮುಕ್ತನಾಗಿ, ದಿವ್ಯವಿಮಾನದಲ್ಲಿ ಕೂತು, ಇಂದ್ರಾದಿಗಳಿಂದ ಕೂಡಿ ಸ್ವರ್ಗದಲ್ಲಿ ಸುಖಿಯಾಗಿರುವನು.

ಅಪದ್ಧರ್ಮವನ್ನು ಕೇಳು!

ಕಷ್ಟಕಾಲವು ಬರಲು ವಿಪ್ರನು ಖಡ್ಗದಿಂದಲೋ ಅಥವಾ ವಣಿಗ್ವೃತ್ತಿಯಿಂದಲೋ ಜೀವಿಸಬಹುದು. ನೀಚವಾದ ಶ್ವವೃತ್ತಿಯನ್ನು ಅವಲಂಬಿಸಬಾರದು. ರಾಜನು ಆಪತ್ತಿನಲ್ಲಿ ಕೃಷಿ, ಗೋರಕ್ಷೆಗಳಿಂದ (ವೈಶ್ಯವೃತ್ತಿ) ಜೀವಿಸಿ, ಆಪನ್ನಿವೃತ್ತಿ ಆದೊಡನೆ, ವಿಪ್ರಾದಿಗಳಂತೆಯೇ ಸ್ವಧರ್ಮರತನಾಗಬೇಕು. ರಾಜನು ಬೇಟೆಯಿಂದ ಜೀವಿಸಬಹುದು, ಅಥವಾ ವಿಪ್ರರೂಪನಾಗಿ ಭಿಕ್ಷೆಯಿಂದ ಜೀವಿಸಬೇಕಾಗಲಿ ನೀಚಸೇವನವನ್ನು ಮಾಡಲಾಗದು. ವೈಶ್ಯನು ಆಪತ್ಸಮಯದಲ್ಲಿ ಶಿಲ್ಪಕಾರುಕಾದಿ ಶೂದ್ರವೃತ್ತಿಯನ್ನು ಭಜಿಸಬಹುದು.

ಬ್ರಾಹ್ಮಣನು ವೇದವನ್ನೋದಿ, ದೇವಕಾಯ (ಸ್ವಾಹಾ) ಪಿತೃಕಾರ್ಯ (ಸ್ವಧಾ) ಬಲಿಹರಣ ಅನ್ನದಾನಗಳಿಂದ ದೇವ ಪಿತೃ ಋಷಿ ಭೂತಗಳನ್ನು ನರರನ್ನು ಸಮ್ಮಾನಿಸಿ ಪಂಚಯಜ್ಞರತನಾಗಿರಬೇಕು. ಶುದ್ಧವಾದ, ನ್ಯಾಯಾರ್ಜಿತವಾದ ಧನದಿಂದ ಸಂತುಷ್ಟನಾಗಿ ಸೇವಕರನ್ನು ಪೀಡಿಸದೆ ನಿತ್ಯವೂ ನನ್ನನ್ನು ಹವಿರ್ದಾನದಿಂದ ಪೂಜಿಸಬೇಕು. ಕುಟುಂಬಿಯಾಗಿದ್ದರೂ ಪ್ರಮಾದವಿಲ್ಲದೆ, ಇಂದ್ರಿಯಾರಾಮನಾಗದೆ, ಇಹಸುಖವು ಸ್ವರ್ಗಸುಖವು ಕೂಡ ನಶ್ವರವೆಂದು ತಿಳಿದು ಭಕ್ತನಾಗಿರಬೇಕು. ಹಾದಿಕಾರರು ಕಲೆತಿರುವ ಅರವಟ್ಟಿಗೆಯಂತೆ ಪುತ್ರದಾರಾದಿ ಬಂಧುಗಳ ಸಂಗಮವಾದ ಗೃಹವು ನಶ್ವರವು; ಇವು ಯಾವ ದೇಹದಲ್ಲಾದರೂ ಬರುವುದೇ ಆಗಿವೆ. ಸ್ವಪ್ನವು ನಿದ್ರೆ ಮಾಡುವವನಿಗೆ ವಿನಾ ಎಚ್ಚತ್ತಿರುವವನಿಗಲ್ಲವೆಂದು ವಿಚಾರಿಸಿ, ನನ್ನಲ್ಲಿ ಮನವಿಟ್ಟು ಗೃಹದಲ್ಲಿ ಅತಿಥಿಯಂತೆ ನಿರ್ಲಿಪ್ತನಾಗಿರಬೇಕು. ಗೃಹಮೇಧಿಯ ಕರ್ಮಗಳಿಂದ ನನ್ನನ್ನು ಪೂಜಿಸಿ, ವನವನ್ನೋ ಸಂನ್ಯಾಸವನ್ನೋ ಸ್ವೀಕರಿಸಬಹುದು.

ಪುತ್ರ ದಾರ ಧನೇಷಣಗಳಿಂದ ಆಸಕ್ತನಾಗಿ, ಸ್ತ್ರೀದಾಸನು, ಕೃಪಣನು, ಮೂರ್ಖನು ಆಗಿ, 'ನಾನು, ನನ್ನ'ದೆಂಬ ದುರಭಿಮಾನದಿಂದ, ಜೀವನು ಸಂಸಾರದಲ್ಲಿ ನರಳುತ್ತಿರುವನು.

'ಅಯ್ಯೋ! ಏನು ಮಾಡಲಿ? ತಂದೆ ತಾಯಿ ಮುದುಕರಾಗಿರುವರು. ಹೆಂಡತಿ ಚಿಕ್ಕವಳು. ಮಕ್ಕಳು ಶಿಶುಗಳಾಗಿದ್ದಾರೆ. ಈ ಅನಾಥರು ನಾನು ಮೃತನಾದಮೇಲೆ ಹೇಗೆ ಬದುಕುವರು?'

ಇಂತು ದುರಂತ ಚಿಂತಾಕ್ರಾಂತನಾಗಿ ಮೂಢ ನರನು ಆಶಾಪಾಶದ ತುದಿಯಲ್ಲಿರುವ ಯಮ ಪಾಶದ ಉರುಲಿಗೆ ಸಿಕ್ಕು ಸಾಯುವನು; ಅವನಿಗೆ ನರಕವೇ ಗತಿಯಾಗುವುದು.

## ೧೮. ವಾನಪ್ರಸ್ಥ ಧರ್ಮ

ವಾನಪ್ರಸ್ಥನಾಗಬಯಸಿ, ವಿರಕ್ತಜೀವನು ತನ್ನ ಪತ್ನಿಯನ್ನು ಪುತ್ರರಿಗೊಪ್ಪಿಸಿ ಅಥವಾ ಒಡನೆ ಕರೆದುಕೊಂಡು ವನದಲ್ಲಿ ತನ್ನ ಆಯುಸ್ಸಿನ ತೃತೀಯ ಭಾಗವನ್ನು ಕಳೆಯಬೇಕು. ಅಲ್ಲಿ ವನ್ಯಗಳಾದ ಕಂದಮೂಲ ಫಲಗಳಿಂದ ಜೀವಿಸಬೇಕು. ನಾರಮಡಿ ಉಟ್ಟು, ಚಾಪೆಯಲ್ಲಿ ಮಲಗಿ, ಕೃಷ್ಣಾಜಿನದಲ್ಲಿ ಕೂತು, ಕಾಲ ಕಳೆಯಬೇಕು. ಕೇಶಲೋಮನಖಶ್ಮಶ್ರುಗಳನ್ನು ಬೆಳಸಿ ನಿಯಮ ದಿಂದಿರಬೇಕು. ಓಡುವುದು, ಆಯಾಸಪಡುವುದು ಕೂಡದು. ಮೂರು ಸಂಧ್ಯೆಗಳಲ್ಲಿ ಸ್ನಾನ ಮಾಡಬೇಕು. ನೆಲದಲ್ಲಿ ಮಲಗಬೇಕು. ಗ್ರೀಷ್ಮದಲ್ಲಿ ಪಂಚಾಗ್ನಿಮಧ್ಯದಲ್ಲಿ ಕೂತು, ಮಳೆಗಾಲ ದಲ್ಲಿ ಮಳೆಯಲ್ಲಿ ತೋಯುತ್ತಾ, ಶಿಶಿರದಲ್ಲಿ ಕಂಠದವರಿವಿಗೂ ನೀರಿನಲ್ಲಿದ್ದು, ತಪಸ್ಸನ್ನು ಮಾಡಬೇಕು. ಕಾಲದಿಂದ ಪಕ್ವವಾಗುವ ಅನಿಷಿದ್ಧವಾದ ಕದಲೀಕಪಿತ್ಥಬದರಾದಿ ಫಲಗಳನ್ನು ಕುಟ್ಟಿದ ಬೀಸಿದ ಧಾನ್ಯಗಳನ್ನು ಅಥವಾ ಕಲ್ಲಿನಿಂದ ಚೂರ್ಣಿತವಾದ ಹಿಟ್ಟನ್ನು ದಂತವೇ ಮರಳಂತೆ ಮಾಡಿಯಾದರೂ ತಿನ್ನಲಾಗುವ ಧಾನ್ಯಾದಿಗಳನ್ನು ಜೀವನಾಧಾರವಾಗಿರಿಸಿ, ತಾನೇ ಅವನ್ನು ಸಂಪಾದಿಸುತ್ತಾ ಬದುಕಬೇಕು. ದೇಶ, ಕಾಲ, ದೇಹಬಲಗಳನ್ನರಿತು – ಅನ್ಯರಿಂದ ಬಂದ ಆಹಾರವನ್ನು ಸ್ವೀಕರಿಸಬಾರದು. ಕಾಲಕಾಲದಿ ಚರು ಪುರೋಡಾಶಗಳಿಂದ ಹೋಮಿಸ ಬೇಕು. ಆದರೆ ವಾನಪ್ರಸ್ಥನಿಗೆ ಪಶ್ವಾಲಂಭನವು ಯುಕ್ತವಲ್ಲ. ಅಗ್ನಿಹೋತ್ರ ದರ್ಶಪೂರ್ಣಿಮಾ ಚಾತುರ್ಮಾಸ್ಯಗಳನ್ನು ಅನುಷ್ಠಾನ ಮಾಡಿ, ನನಗೆ ಸಂಪೂರ್ಣ ಫಲವನ್ನರ್ಪಿಸಬೇಕು. ಶರೀರದ ನರಗಳು ಕಾಣುವಂತೆ ಕೃಶನಾಗಿ ಜ್ಞಾನತೇಜಃಸಂಪೂರ್ಣನಾದ ವಾನಪ್ರಸ್ಥನು ನನ್ನ ದಯಾ ಪಾತ್ರನೆನಿಸಿ, ಋಷಿಲೋಕವನ್ನು ಸೇರುವನು. ನನ್ನ ಅಪರೋಕ್ಷಜ್ಞಾನ ಸಾಧನವಾದ ನಿಯಮ ತಪಂಗಳಿಗೆ ಅಲ್ಪವಿಷಯಸುಖಗಳೇ ಫಲವೆಂದು ಬೇಡಿ ಕೆಡುವ ನರನಿಂದಲೂ ಮೂರ್ಖ ರಿರುವರೇ? ಒಂದು ವೇಳೆ ವಾನಪ್ರಸ್ಥನು ನಿಯಮಪಾಲನದಲ್ಲಿ ಅಶಕ್ತನಾದರೆ ಆಗ ಅವನು ಗಡಗಡನೇ ನಡುಗುವ ಬಡಶರೀರದಿಂದ ಪ್ರಯೋಜನವೆಲ್ಲವೂ ತೀರಿರುವುದರಿಂದ ಚಿತಿಯಲ್ಲಿ ಅದನ್ನು ಚಿತ್ತದಲ್ಲಿ ನನ್ನನ್ನು ಇಟ್ಟು ಮುಕ್ತನಾಗಬೇಕು.

ನರಕಸಮಾನವಾದ ಲೋಕದ ಕರ್ಮಫಲಭೋಜನವನ್ನು ಮನಗಂಡ ವಿವೇಕಿಯು ವಿರಕ್ತ ನಾಗಿ, ಅಗ್ನಿಗಳನ್ನು ನುಂಗಿ, (ತನ್ನಲ್ಲಿ ಆರೋಪಿಸಿ) ಸನ್ಯಾಸವನ್ನು ಸ್ವೀಕರಿಸಬಹುದು. ಸರ್ವಸ್ವ ವನ್ನು ವಿಪ್ರರಿಗಿತ್ತು ಉಪದಿಷ್ಟನಾದ ನನ್ನಲ್ಲಿ ಮನವಿಟ್ಟು ನಿರಪೇಕ್ಷನಾಗಿ ಸನ್ಯಾಸವನ್ನು ಸ್ವೀಕರಿಸ ಬೇಕು. ಅವನಿಗೆ ವಿಘ್ನವನ್ನು ದಾರಾಪುತ್ರಾದಿ ರೂಪದಿಂದ ದೇವತೆಗಳೇ ಮಾಡುವರು. ದೇವತಾ ಪೂಜನವನ್ನು ಮಾಡಿ ಅವರಿಂದ ಅನುಜ್ಞೆ ಪೊಂದಿದವನ ಯಶಸ್ಸನ್ನು ಹೆಚ್ಚಿಸಿ, ದೇವತೆಗಳು ವಿಘ್ನಗಳನ್ನು ಪರಿಹರಿಸುವರು. ದೇವತಾನುಜ್ಞೆ ಪೊಂದದವನ ಸನ್ಯಾಸವು ನರಕಪಾತಕಾರಣ ವಾಗುವುದು. ಅವನ ಸನ್ಯಾಸವು ವಿಘ್ನದೂಷಿತವಾಗಿ ಕೆಟ್ಟುಹೋಗುವುದು; ಪರೀಕ್ಷೆ ಮಾಡಲು ದೇವತೆಗಳು ತಂದೊಡ್ಡಿದ ವಿಘ್ನಗಳನ್ನು ದೇವತಾನುಗ್ರಹದಿಂದ ದಾಟಿ, ನರನು ಯತಿಯಾಗ ಬೇಕು. ಒಂದು ಕೌಪೀನ ಒಂದು ಹೊದಿಕೆ ಬಿಟ್ಟು ಬೇರೆ ಬಟ್ಟೆಗಳನ್ನು ದಂಡಪಾತ್ರೆಗಳನ್ನು

ಬಿಟ್ಟು ಅನ್ಯಪದಾರ್ಥಗಳನ್ನು ಯತಿಯು ಸ್ವೀಕರಿಸಬಾರದು. ಆಪತ್ತಿನಲ್ಲಿ ಸ್ವೀಕರಿಸಿದರೂ ಅನಂತರ ಬಿಡಬೇಕು. ಕಣ್ಣಿನಿಂದ ನೋಡಿ ಕಾಲನ್ನಿಡಬೇಕು. ಬಟ್ಟೆಯಿಂದ ಶೋಧಿಸಿ ಜಲವನ್ನು ಕುಡಿಯಬೇಕು. ಸತ್ಯಪೂತವಾದ ಮಾತನ್ನೇ ಆಡಬೇಕು. ಮನಃಪೂತವಾದ ಕಾರ್ಯವನ್ನೇ ಮಾಡಬೇಕು.

ವಾಗೀಂದ್ರಿಯವನ್ನು ಮೌನದಿಂದಲು, ದೇಹವನ್ನು ದುಷ್ಟಚೇಷ್ಟಾವರ್ಜನದಿಂದಲು, ಮನಸ್ಸನ್ನು ಪ್ರಾಣಾಯಾಮದಿಂದಲು ದಂಡಿಸಿದವನು ನಿಜವಾದ ತ್ರಿದಂಡಿಯಾಗಲಿ, ವೇಣುದಂಡ ದಿಂದಲ್ಲ. ನಾಲ್ಕು ವರ್ಣದವರಲ್ಲಿಯೂ ನಿಂದಲೀಯರಲ್ಲದವರ ಭಿಕ್ಷೆಯನ್ನು ಯತಿಯು ಸ್ವೀಕರಿಸಬಹುದು. ಏಳು ಮನೆಗಳಿಂದ ಅಥವಾ ಸಾಕಾಗುವಷ್ಟು ಭಿಕ್ಷೆ ಸಿಗುವವರೆಗೂ – ಧಾನ್ಯಾದಿಗಳನ್ನು ಸ್ವೀಕರಿಸಬಹುದು. ಬ್ರಾಹ್ಮಣರ ಮನೆಗಳಿಂದ ತಂದ ಅನ್ನಾದಿಗಳನ್ನು ತೊಳೆದು, ನಿವೇದಿಸಿ, ದೇವಾಲಯ, ನದೀತೀರಾದಿಗಳಲ್ಲಿ, ಮೌನದಿಂದ ಸ್ವೀಕರಿಸಬೇಕು. ಏಕಾಕಿಯಾಗಿ ಮಹೀತಲದ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಬೇಕು. ಸಂಗವಾದರೆ ಸಾಧುಸಂಗ ವಾಗಲಿ! ಎನ್ನಬೇಕು. ಅವನಿಗೆ ಮನಸಾ ತುಷ್ಟಿ, ಪರಮಾತ್ಮನ ದರ್ಶನದಿಂದ ಆನಂದ; ವಶೀಕೃತೇಂದ್ರಿಯಗಳಿಂದ ವಿರಾಗ; ಸರ್ವತ್ರ ಅಂತರ್ಯಾಮಿಯಾಗಿರುವ ಶ್ರೀಶನ ಜ್ಞಾನದಿಂದ ಭಕ್ತ್ಯುದ್ರೇಕ; ನಾನಾವತಾರಗಳಲ್ಲಿ ಭೇದವರ್ಜಿತನಾದ ನನ್ನ ಚಿಂತನದಿಂದ ಲೋಕಬಾಹ್ಯನಾಗಿ ಯತಿಯು ಬಂಧ–ಮೋಕ್ಷಗಳೆರಡೂ ಶ್ರೀಹರಿವಶವೆಂದು ತಿಳಿಯುವನು. ವಿಷಯ ವಿಕ್ಷೇಪವೇ ಬಂಧ; ವಿಷಯ ನಿಗ್ರಹವೇ ಮೋಕ್ಷ; ಇದನ್ನರಿತು ಮುನಿಯು ಆರಿಂದ್ರಿಯಗಳನ್ನು ಜಯಿಸಿ, ನನ್ನಲ್ಲಿ ಮನವಿಟ್ಟು, ಕ್ಷುಲ್ಲಕ ಕಾಮಗಳನ್ನು ಬಿಟ್ಟು ನನ್ನ ದರ್ಶನ ಸುಖವನ್ನು ಪೊಂದುವನು.

ಯತಿಯು ಪುರಗ್ರಾಮ ವ್ರಜಗಳಲ್ಲಿ ಭಿಕ್ಷೆಗೆಂದು ಮಾತ್ರ ಬರಬೇಕು. ಅದರಲ್ಲಿಯು ಪುಣ್ಯ ಪ್ರದೇಶಗಳಿಗೆ ಮಾತ್ರ ಹೋಗಿ, ಅಲ್ಲಿ ವಾನಪ್ರಸ್ಥರಲ್ಲಿ, ಆಶ್ರಮವಾಸಿಗಳಲ್ಲಿ ಭಿಕ್ಷಾನ್ನವನ್ನು ಕಲ್ಲಿನ ಮೇಲಿಟ್ಟು ಸ್ವೀಕರಿಸಿದವನು, ಬೇಗನೇ ಶುದ್ಧಮನಸ್ಕನು, ನಿರಸ್ತಸಂಶಯನು ಆಗಿ ಅಪರೋಕ್ಷ ಜ್ಞಾನವನ್ನು ಪೊಂದುವನು. ಯತಿಯು ಎಂದಿಗೂ ಜಡಜಗತ್ತನ್ನಾಗಲಿ, ಜೀವನ ನ್ನಾಗಲಿ, ಬ್ರಹ್ಮಸ್ವರೂಪವೆಂದು ತಿಳಿಯಬಾರದು. ನಿತ್ಯನಾದ ಹರಿಯು ನಶ್ವರವಾದ ಜಗವಾಗು ವನೇ? ಸ್ವತಂತ್ರನಾದ ಹರಿಯು ಅಲ್ಪನಾದ ಜೀವನಾಗುವನೇ? ಇಂತು ಯಥಾರ್ಥ ಜ್ಞಾನದಿಂದ ಕೂಡಿ, ಕರ್ಮಫಲವನ್ನು ಬೇಡದೆ, ಎಲ್ಲ ಜಗವು ಶ್ರೀಹರೀಚ್ಛೆಯಿಂದ ಅಚೇತನಪ್ರಕೃತಿಕೃತ ವಾಗಿದೆ – ಅಸ್ವತಂತ್ರವಾಗಿದೆ – ಎಂದರಿತು ಅದರ ಸ್ಮರಣೆಯು ಬಂಧಕವೆಂದು ದೂರೀಕರಿಸಿ, ಶ್ರೀಹರಿಚಿಂತನಾನಂದಮಗ್ನನಾದ ಯೋಗಿಯು ಅಪರೋಕ್ಷಜ್ಞಾನವನ್ನು ಪೊಂದುವನು.

ಪರಿಪಕ್ವಜ್ಞಾನಿಯು ಲಕ್ಷಣವನ್ನು ಕೇಳು! ಉತ್ಕರ್ಷಜ್ಞಾನದಿಂದ ವಿಷಯವಿರಕ್ತನಾದ ನನ್ನ ಭಕ್ತನು ಶಿಷ್ಯರನ್ನು ಸಂಗ್ರಹಿಸುವ ಅಪೇಕ್ಷೆಯನ್ನು ಕೂಡ ಮಾಡದಿರುವನು; ಇನ್ನು ವಿಷಯಾ ಪೇಕ್ಷೆ ಮಾಡುವನೇ? ಯತಿ-ವ್ರತಿ-ಎಂದು ತಿಳಿಯಗೊಡುವ ದಂಡಾದಿ ಚಿಹ್ನೆಗಳಿಲ್ಲದೆ, ಅವನು – ವಿಧಿಯಿಂದಲ್ಲದೆ ಸ್ವಭಾವದಿಂದ ವಿಹಿತ ಕರ್ಮಗಳನ್ನು ಮಾಡಿ, ನಿಷಿದ್ಧಗಳನ್ನು ಮಾಡದಿರು ವನು. ಪಂಡಿತನಾಗಿಯೂ ಬಾಲನಂತೆ ಆಡುವನು; ಕುಶಲನಾಗಿದ್ದೂ ಜಡನಂತೆ ತಿರುಗುವನು; ಕವಿಯಾಗಿಯೂ ಹುಚ್ಚನಂತೆ ಮಾತಾಡುವನು. ಅಜ್ಞನಂತೆ ಕರ್ಮಗಳನ್ನು ಮಾಡುವಾಗ ವೇದ ಸಮ್ಮತವನ್ನೇ ಮಾಡುವನು. ವೇದವು ಜೀವೇಶೈಕ್ಯಪರವೆಂದು ಕುತರ್ಕವನ್ನು ಮಾಡದಿರುವನು. ಪಾಖಂಡಮತವನ್ನು ಅವಲಂಬಿಸಿ ಶುಷ್ಕ ವಿವಾದವನ್ನು ಮಾಡಿ, ದುಷ್ಟಪಕ್ಷವನ್ನು ಹಿಡಿದು

ವಾದಿಸದಿರುವನು. ದುರ್ಜನರಿಗೆ ಹೆದರದೆ, ತಾನು ಇತರರನ್ನು ಹೆದರಿಸದೆ, ಅತಿವಾದ ಮಾಡದೆ, ವಿಷ್ಣು ಭಕ್ತರನ್ನು ಅವಮಾನಿಸದೆ, ದೇಹಾಭಿಮಾನದಿಂದ ಪಶುವಿನಂತೆ ವೈರವನ್ನು ಮಾಡದೆ, ಶಾಂತನಾಗಿರುವನು, ಸರ್ವಾಂತರ್ಯಾಮಿಯು ಸರ್ವಸ್ವಾಮಿಯು ಆದ ಶ್ರೀಹರಿಯು, ಆಕಾಶ ದಂತೆ ವ್ಯಾಪ್ತನಾಗಿದ್ದರೂ, ಘಟಾದಿಗಳಲ್ಲಿದ್ದಂತೆ ಅಂತರ್ಯಾಮಿಯಾಗಿರುವನೆಂಬ ಜ್ಞಾನದಿಂದ ಪರದ್ರೋಹವನ್ನೆಸಗನು.

ಭಕ್ತನು ಕಾಲಕಾಲದಲ್ಲಿ ಸಿಕ್ಕ ಅನ್ನವು ಸ್ವಲ್ಪವಾಗಲಿ, ಸರಿಯಾಗಲಿ, ಸಂತುಷ್ಟನಾಗಿರಬೇಕು; ಸಿಗದಿದ್ದರೆ ದುಃಖಿಸಬಾರದು. ದೇಹದಿಂದ ತತ್ತ್ವವಿಮರ್ಶೆ; ವಿಮರ್ಶೆಯಿಂದ ಜ್ಞಾನ; ಜ್ಞಾನದಿಂದ ನನ್ನ ಪ್ರಸಾರ; ಪ್ರಸಾದದಿಂದ ಮೋಕ್ಷ; ಇಂತು ಮೋಕ್ಷಾನುಕೂಲವಾದ ದೇಹವನ್ನು ಪೋಷಿಸುವ, ಪ್ರಾಣಧಾರಣವನ್ನು ಮಾಡಲು ಉಪಯುಕ್ತವಾಗುವ, ಆಹಾರಕ್ಕಾಗಿ ಪ್ರಯತ್ನಿಸಿ, ಬಂದದ್ದರಿಂದ ತುಷ್ಟನಾಗಿರಬೇಕು. ಬಂದ ಆಹಾರವನ್ನು ಮೃಷ್ಟವಾಗಲಿ, ಕದನ್ನವಾಗಲಿ, ನಿಂದಿಸದಿರಬೇಕು. ವಾಸ, ಶಯಗಳಲ್ಲಿಯು ಶ್ರೀಹರಿಯಿಂದ ಬಂದುದನ್ನು ಸಂತೋಷದಿಂದ ಸ್ವೀಕರಿಸಬೇಕು.

ಶೌಚಾಚಮನ ಸ್ನಾನಾದಿ ಕರ್ಮಗಳನ್ನು ಅನ್ಯನಿಯಮಗಳನ್ನು ವೇದಶಾಸ್ತ್ರವಿಹಿತವಾಗ ಕಾರಣವೆಂದು ಮಾಡದೆ, ಸ್ವಾಭಾವಿಕವಾಗಿ ಹರಿಪ್ರೀತಿಸಾಧನವೆಂದು – ನಾನು ಲೀಲೆಗೆ ಮಾಡು ವಂತೆ – ಮಾಡಬೇಕು. ಫಲಾಪೇಕ್ಷೆ ಇರಬಾರದು. ಅಂತಹ ಜ್ಞಾನಿಯು ಶ್ರುತಿ ಸ್ಮೃತಿ ವಿರುದ್ಧ ಕರ್ಮವನ್ನು ಎಂದಿಗೂ ಮಾಡದಿರುವನು. ಒಂದು ವೇಳೆ ಪ್ರಾರಬ್ಧಕರ್ಮದಿಂದ ಪಾಪವನ್ನು ಮಾಡಿದರೂ, ಅವನಲ್ಲಿ ಪ್ರಸನ್ನನಾಗಿರುವ ನನ್ನ ಕಟಾಕ್ಷದಿಂದ, ಅವನಿಗೆ ನರಕಾದ್ಯನರ್ಥಗಳಾ ಗುವುದಿಲ್ಲ. ಪ್ರಾರಬ್ಧಕರ್ಮದಿಂದ ಬಂದ ದೇಹವು ಬಿದ್ದನಂತರ ಅವನು ನನ್ನ ಲೋಕವನ್ನು ಸೇರುವನು.

ಈ ಲೋಕದ ಕಾಮಿತ ವಿಷಯಗಳೆಲ್ಲವು ದುಃಖಾಂತವೆಂದು ವಿರಕ್ತನಾದ ಜಿಜ್ಞಾಸುವು, ಉಪಶಾಂತನು, ನನ್ನ ಭಕ್ತನು, ಜ್ಞಾನಿಯು ಆದ ಗುರುವಿನನ್ನು – ಮುಕ್ತಿ ಪರ್ಯಂತವು – ಆಶ್ರಯಿಸಬೇಕು. ಶ್ರದ್ಧೆಯಿಂದ ಕೂಡಿ, ಅಸೂಯೆ ಇಲ್ಲದೆ – ಅವರ ಸೇವೆ ಮಾಡಿ ಬ್ರಹ್ಮಜ್ಞಾನ ವನ್ನು ಸಂಪಾದಿಸಬೇಕು. ಯಾವ ಸನ್ಯಾಸಿಗೆ ಕಾಮಾದಿ ಶತ್ರುಜಯವಿಲ್ಲವೋ, ಇಂದ್ರಿಯಗಳಿಂದ ಕೂಡಿ ಮನವು ಕುಣಿಸುತ್ತಿದೆಯೋ, ಜ್ಞಾನ ವೈರಾಗ್ಯ ಗಂಧವಿಲ್ಲವೋ, ಅಂತಹ ಯತಿಯು, ತ್ರಿದಂಡದಿಂದ ಜೀವನವನ್ನೂ ನಡೆಸುವ ಧರ್ಮಧ್ವಜನೆನಿಸುವನು. ಅಂತಹ ದುರ್ಮತಿಯು ಒಳಗಿರುವ ನನಗೂ, ತತ್ವದೇವತೆಗಳಿಗೂ ದ್ರೋಹವನ್ನು ಮಾಡಿ, ತನ್ನನ್ನು ನರಕಕ್ಕೆ ಗುರಿ ಯಾಗಿರಿಸಿಕೊಳ್ಳುವನೆಂದು ತಿಳಿ! ಪಕ್ವವಾದ ವಿರಾಗವಿಲ್ಲದ ಯತಿಯು ಆಶ್ರಮಧರ್ಮದಿಂದ ಭ್ರಷ್ಟನಾಗಿ ಪತಿತನಾಗುವನು.

ಭಿಕ್ಷುವಿಗೆ ಶಮ, ಅಹಿಂಸೆ; ವಾನಪ್ರಸ್ಥನಿಗೆ ತಪಸ್ಸು, ಬ್ರಹ್ಮವಿಚಾರ; ಗೃಹಸ್ಥನಿಗೆ ಅನ್ನಾದಿ ದಾನ, ಯಜ್ಞ; ಬ್ರಹ್ಮಚಾರಿಗೆ ಆಚಾರ್ಯಸೇವೆ – ಸಂಧ್ಯಾ – ಇವು ವಿಶೇಷ ಕರ್ತವ್ಯಗಳಾಗಿವೆ. ಗೃಹಸ್ಥನು ತತ್ವಜಿಜ್ಞಾಸುಗಳಲ್ಲಿ ಮುಖ್ಯನಾಗಿ, ಬ್ರಹ್ಮಚರ್ಯ, ತಪ, ಶೌಚ, ತುಷ್ಟಿ, ಭೂತೋಪ ಕಾರ, ಮೊದಲಾದ ಧರ್ಮಗಳನ್ನು ಪಾಲಿಸಬೇಕು. ಸರ್ವವರ್ಣದವರಿಗೂ, ವರ್ಣಬಾಹ್ಯರಿಗೂ ಕೂಡ ಶ್ರೀಹರಿಸೇವೆ ಯಥಾಯೋಗ್ಯವಾಗಿ ಕರ್ತವ್ಯವಾಗಿದೆ.

ಇಂತು ನಾನು ಪೇಳಿದಂತೆ, ಸ್ವಧರ್ಮವನ್ನು ಶ್ರದ್ಧೆಯಿಂದ ಮಾಡಿ ನನಗರ್ಪಿಸುವ ಮನುಜನು, ಸರ್ವಾಂತರ್ಯಾಮಿಯ್ಹಾದ ನನ್ನ ದಯದಿಂದ, ಭಕ್ತಿಭಾಗ್ಯವನ್ನು ಪೊಂದುವನು.

ಉದ್ಧವಾ! ಬಿಡದೆ ಮಾಡಿದ ಭಕ್ತಿಯಿಂದ ಸರ್ವಲೋಕೇಶ್ವರನು, ಜಗಜ್ಜನ್ಮಾದಿಕಾರಣನು, ಗುಣಪೂರ್ಣನು ಆದ ನನ್ನನ್ನು ಪೊಂದಿ, ಜೀವನು ಮುಕ್ತನಾಗಿ ಸುಖಿಸುವನು. ಸ್ವಧರ್ಮದಿಂದ ಶುದ್ಧ ಮಾನಸ್ಸು, ಅದರಿಂದ ಜ್ಞಾನಲಾಭ; ಅದರಿಂದ ಮೋಕ್ಷ; ಇದನ್ನರಿತು ಜ್ಞಾನವನ್ನಾರ್ಜಿಸು! ವಿರಕ್ತನಾಗು! ನನ್ನ ಭಕ್ತಿ ಇಲ್ಲದಿರೆ – ಯಾವ ಧರ್ಮಾಚರಣವು ನರನ ಮೋಕ್ಷ ಸುಖಕ್ಕೆ ಕಾರಣವಾಗಲಾರದು. ಸಾಧೋ! ಉದ್ಧವ! ನೀ ಕೇಳಿದಂತೆ ವರ್ಣಾಶ್ರಮ ಧರ್ಮಸ್ವರೂಪವನ್ನು ನಿರೂಪಿಸಿರುವೆನು.

## ೧೯. ಜ್ಞಾನ – ಭಕ್ತಿ

ಶ್ರೀಭಗವಂತನಿಂತೆಂದನು–

ವೇದಾಂತ ಶಾಸ್ತ್ರ ಜ್ಞಾನದಿಂದ ಹರಿಯು ಅಂತರ್ಯಾಮಿಯೆಂದು ತಿಳಿದು, ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಪ್ರಮಾಣ ಬಲದಿಂದ ಸಂಶಯ ವಿಪರ್ಯಯ ಜ್ಞಾನಗಳನ್ನು ಕಳೆದು ಕೊಂಡು, ಜ್ಞಾನಿಯು ಭಕ್ತನಾಗುವನು. ಜಗತ್ತು ಶ್ರೀಹರೀಚ್ಛಾನಿರ್ಮಿತವೆಂತಲೂ, ಅದಕ್ಕೆ ಉಪಾದಾನವು ಪ್ರಕೃತಿ ಎಂತಲು, ಪ್ರಕೃತಿ ಪರಮಾತ್ಮಾಧೀನವೆಂತಲು ತಿಳಿದ ಜ್ಞಾನಿಯು, ಆ ಜ್ಞಾನವು ಕೂಡ ಹರಿಪೂಜೆ ಎಂದು ನನಗರ್ಪಿಸುವನು. ಜ್ಞಾನಿಯು ನಾನೇ ಸರ್ವೋತ್ತಮನಾದುದ ರಿಂದ ನನಕಿಂತಲು ಪ್ರಿಯತರವಿಲ್ಲವೆಂದು, ಉತ್ತಮ ಭಕ್ತಿಯನ್ನು ನನ್ನಲ್ಲೇ ಮಾಡುವನು. ನಾನೇ ಅವನಿಗೆ ಆ ಜ್ಞಾನವನ್ನು ಕೊಡುವೆನು; ಕೊನೆಗೆ ಪ್ರಸನ್ನನಾಗಿ ನನ್ನನ್ನೇ ಅವನಿಗೆ ಕೊಡುವೆನು. ಅವನಿಗೆ ಸ್ವರ್ಗಾಪವರ್ಗಗಳು ನನಗಾಗಿ. ನನ್ನ ಪದವೇ ಶ್ರೇಷ್ಠವೆಂದರಿತ ಜ್ಞಾನ ವಿಜ್ಞಾನ ಸಂಪನ್ನರೇ ವೈಕುಂಠಲೋಕವನ್ನು ಹೊಂದುವರು. ಜ್ಞಾನದಿಂದಲೇ ಅವನು ನನಗೆ ಪ್ರೀತಿಪಾತ್ರನಾಗಿರುವನು. ಜ್ಞಾನದಿಂದ ಆಗುವ ಮನಶ್ಶುದ್ಧಿ ಜೀವರಿಗೆ ತಪ, ತೀರ್ಥ, ಜಪ, ದಾನ, ಯಜ್ಞಾದಿಗಳಿಂದ ಕೂಡ ಆಗದಿರುವುದು. ಜ್ಞಾನವೇ ಇಲ್ಲದವನಿಗೆ ಭಕ್ತಿ ಎಂತು? ಆದುದರಿಂದ ಹೃದಯನಿಲಯನಾದ ನನ್ನನ್ನು ಜ್ಞಾನದಿಂದ ಭಜಿಸಿ, ಯಜ್ಞಫಲವನ್ನು ನನಗರ್ಪಿಸಿ, ಮುನಿಗಳು ಸಂಸಿದ್ಧರಾಗಿರುವರು. ಜನನ ಸ್ಥಿತಿ ಮರಣಗಳೆಂಬ ತ್ರಿವಿಧ ವಿಕಾರಗಳು ಮುಕ್ತ ಪ್ರಳಯಗಳಲ್ಲಿಲ್ಲ; ಸೃಷ್ಟಿಕಾಲದಲ್ಲಿವೆ; ಅವು ನನ್ನ ಇಚ್ಛೆಯಿಂದ ಜೀವನಿಗೆ ದೇಹ ಯೋಗವಿಯೋಗಾದಿಗಳಿಂದ ಆಗುತ್ತಿವೆ. ಜೀವನೂ ಚಿದಾನಂದರೂಪನೇ ಆದರೂ ಅಹಂ ಎಂಬ ಸ್ವಾತಂತ್ರ್ಯ ಭ್ರಮೆ, ಮಮ ಎಂಬ ಸ್ವಾಮಿತ್ವ ಭ್ರಮೆಗಳಿಂದ ಅವನು ಅಜ್ಞಾನಿಯಾಗಿರು ವನು. ನಿತ್ಯನಾದ ಜೀವನಿಗೆ ಜನನಾದಿಗಳಿಲ್ಲ. ಭ್ರಮೆಯು ನನ್ನ ಜ್ಞಾನದಿಂದ ನಿವೃತ್ತವಾಗುವುದು; ಆಗ ಅವನಿಗೆ ನಿತ್ಯವೂ ಅಸ್ವತಂತ್ರನೆಂದು ಅರಿವಾಗುವುದು.

ಉದ್ಧವನು ಕೇಳಿದನು–

ಶ್ರೀಕೃಷ್ಣ! ವಿಶ್ವೇಶ! ಪ್ರಪಂಚದಲ್ಲಿ ತುಂಬಿ ನಿಂತ ಅಂತರ್ಯಾಮಿಯು, ಸರ್ವಸ್ವಾಮಿಯು ಆದ ನಿನ್ನ ಜ್ಞಾನ, ವಿಜ್ಞಾನಗಳಾಗುವ ಬಗೆ ಹೇಗೆ? ನಿನ್ನ ಭಕ್ತಿಯೋಗವನ್ನೆನಗೆ ಹೇಳು! ಘೋರ ಸಂಸಾರಮಾರ್ಗದಲ್ಲಿ ನರಳಾಡುವ ಜನರ ತಾಪತ್ರಯವನ್ನು ದೂರ ಮಾಡಲು ನಿನ್ನ ಅಮೃತ ವರ್ಷಿಣಿಯಾದ ಪಾದಾರವಿಂದ ದ್ವಂದ್ವವೆಂಬ ಛತ್ರವೇ ಸಮರ್ಥವಾಗಿದೆ; ಅನ್ಯವಲ್ಲ. ನೋಡು ತ್ತಿರುವೆನು ಸಂಸಾರ ಕೂಪದಿ ಬಿದ್ದು ಕಾಲಸರ್ಪದಿಂದ ಕಚ್ಚಲ್ಪಟ್ಟು ಕ್ಷುದ್ರಸುಖಕ್ಕಾಗಿ ಅತಿ

ಕಷ್ಟ ಪಡುವ ಜನರನ್ನು; ಅವರನ್ನು ಎಂತು ಉದ್ಧರಿಸುವೆ ಪ್ರಭೋ! ಕೃಪೆದೋರು! ನಿನ್ನ ಅಮೃತವಾಣಿ ಯಿಂದ ಅವರ ತಾಪವನ್ನು ಕಳೆ!

ಶ್ರೀಭಗವಂತನಿಂತೆಂದನು–

ಉದ್ಧವ! ಹಿಂದೆ ಧರ್ಮರಾಜನು ಧರ್ಮಪ್ರವಕ್ತೃಗಳಲ್ಲಿ ಶ್ರೇಷ್ಠನಾದ ಭೀಷ್ಮನನ್ನು ಮೋಕ್ಷ ಧರ್ಮದ ಮಾರ್ಗವನ್ನು ಕುರಿತು ಪ್ರಶ್ನಿಸಿದನು. ದೇವವ್ರತನ ಮುಖದಿಂದ ಬಂದ ಆ ಜ್ಞಾನ ವಿಜ್ಞಾನ ವೈರಾಗ್ಯ ಭಕ್ತ್ಯಾದಿಗುಣ ನಿರೂಪಕ ವಚನಗಳ ಸಾರವನ್ನು ಹೇಳುವೆನು ಕೇಳು!

ಜೀವರಲ್ಲಿರುವ ಇಪ್ಪತ್ತೆಂಟು ತತ್ವಗಳ ಸ್ವರೂಪವನ್ನು, ಶಕ್ತಿಗಳನ್ನು, ದೇವತೆಗಳನ್ನು ತತ್ವಪತಿಯಾದ ನನ್ನನ್ನು – ತಿಳಿಯುವುದೇ ಜ್ಞಾನವು. ಪಂಚಭೂತ ಮಹದಹಂಕಾರ ಬುದ್ಧಿ ಮೂಲ ಪ್ರಕೃತಿಗಳು ಒಂಭತ್ತು; ಮನಸ್ಸಿನಿಂದ ಕೂಡಿ ಇಂದ್ರಿಯಗಳು ಹನ್ನೊಂದು; ಶಬ್ದಾದಿ ತನ್ಮಾತ್ರಗಳು ಐದು; ಸತ್ವಾದಿ ಗುಣಗಳು ಮೂರು; ಇವೆಲ್ಲ ತತ್ವಗಳಲ್ಲಿ ಒಬ್ಬನೇ ನಿಂತು ಅಷ್ಟು ರೂಪದಿಂದ ನಿಯಮಿಸುವ ತತ್ವೇಷನಾದ ಶ್ರೀಹರಿಯನ್ನು ತಿಳಿಯುವುದೇ ಜ್ಞಾನವು. ಸ್ವಯೋಗ್ಯಪುರುಷಾರ್ಥಸಾಧನವಾದ ಬಿಂಬಜ್ಞಾನವೇ ವಿಜ್ಞಾನವು. ಶ್ರೀಹರಿಯೇ ಸಕಲ ತತ್ವಪ್ರಧಾನನು. ಅವನಿಂದ ಜೀವರಿಗೆ ತ್ರಿಗುಣ ನಿರ್ಮಿತ ದೇಹಾದಿಗಳು ಬರುವುವು. ಅವನಿಂದಲೇ ತತ್ವದೇವತೆಗಳು ಪ್ರೇರಿತರಾಗಿರುವರು. ಆ ದೇಹದ ಸ್ಥಿತಿ ಜನನ ನಾಶಗಳನ್ನು ಇಚ್ಛೆಯಿಂದ ಕೊಡುತ್ತಿರುವ ಸ್ವತಂತ್ರ ಪ್ರಭುವಿನ ಸೇವಾರೂಪ ದೇಹವ್ಯಾಪಾರವನ್ನು ಅವನಿಗರ್ಪಿಸುವರು. ಜಗತ್ತಿನ ಸೃಷ್ಟಿ ಪ್ರಳಯ ಕಾಲದಲ್ಲಿಯೂ, ಮಧ್ಯದಲ್ಲಿಯೂ ಕೂಡ ಜಗತ್ತಿನ ಸ್ವಾಮಿಯಾಗಿ ಶ್ರೀಹರಿ ಸ್ವತಂತ್ರನಾಗಿರುವನು; ಅವನೇ ಪ್ರಳಯದಲ್ಲಿಯೂ ಸ್ವತಂತ್ರನಾಗಿ ಉಳಿದಿರುವನು. ಈ ವಿಷಯವು ವೇದದಲ್ಲಿ ಬಹುಸಲ ವರ್ಣಿತವಾಗಿದೆ. ಶ್ರೀಹರಿ ಸರ್ವೋತ್ತಮತ್ವವನ್ನು ಜ್ಞಾನಿಗಳು ಪ್ರತ್ಯಕ್ಷೀಕರಿಸಿಕೊಂಡಿರುವರು. ಸಕಲ ಜೀವರ ಸುಖವಿಯೋಗ ದುಃಖಯೋಗರೂಪ ಅಸ್ವಾತಂತ್ರ್ಯದಿಂದ ಅನುಮಾನವೂ ಈ ವಿಷಯ ದಲ್ಲಿ ಪ್ರಮಾಣವಾಗಿದೆ; ಪ್ರಮಾಣಗಳಲ್ಲಿ ವೇದವು ದೊಡ್ಡದು. ಅತೀಂದ್ರಿಯನಾದ ಶ್ರೀಹರಿ ಜ್ಞಾನವು ವೇದದಿಂದಲೇ ಆಗುವುದು. ಅಜ್ಞಾನಿಯು, ಅಸ್ವತಂತ್ರನು ಆದ ಜೀವನು ವಿರಕ್ತನಾದರೆ, ಶ್ರೀಹರಿಯ ಜ್ಞಾನವನ್ನು ಪೊಂದಲರ್ಹನಾಗುವನು.

ಕರ್ಮಫಲವಾದುದರಿಂದ ಮನುಷ್ಯನಿಂದ ವಿರಿಂಚನವರಿವಿಗೂ ಇರುವ ಜಗವು, ಅಮಂಗಲವು, ಅಸಾರವು ಆದುದರಿಂದ ನಶ್ವರವೆಂದು ತಿಳಿದು ಜ್ಞಾನಿಯು, ಸ್ವರ್ಗಲೋಕವು ಕೂಡ ಇಹಲೋಕದ ಗೃಹಾರಾಮಾದಿಗಳಂತೆ ನಷ್ಟವಾಗುವುದನ್ನು ಮನಗಂಡು ವಿರಕ್ತನಾಗಬೇಕು. ಹಿಂದೆ ಹೇಳಿದ್ದ ಭಕ್ತಿಯೋಗವನ್ನು ಮತ್ತೆ ಕಾರಣಸಹಿತನಾಗಿ ಹೇಳುವೆನು. ಕೇಳು! ಜರಾಮರಣ ಹಾರಿಣಿಯಾದ ನನ್ನ ಕಥೆಯಲ್ಲಿ ಶ್ರದ್ಧೆ, ನನ್ನ ಸಂತತ ಕೀರ್ತನ, ನನ್ನ ಪೂಜಾನಿಷ್ಠೆ, ನನ್ನ ಸ್ತುತಿ, ಪರಿಚರ್ಯಾದರ, ನಮಸ್ಕಾರ, ನನ್ನ ಭಕ್ತರಲ್ಲಿ ಆದರ, ಸರ್ವಭೂತಗಳಲ್ಲಿ ಅಂತರ್ಯಾಮಿಯಾದ ನನ್ನಲ್ಲಿ ದೃಷ್ಟಿಯಿಟ್ಟು ಸರ್ವಹಿತಕರಣ, ನನ್ನ ಪ್ರೀತಿಗಾಗಿ ಶರೀರ ವ್ಯಾಪಾರ, ವಚನದಿಂದ ನನ್ನ ಗುಣಕಥನ, ಸರ್ವಕರ್ಮ ಸಮರ್ಪಣ, ಕಾಮವರ್ಜನ, ನನ್ನ ಪ್ರೀತಿಗಾಗಿ ಭೋಗಪರಿತ್ಯಾಗ, ನನ್ನ ಪ್ರೀತಿಗಾಗಿ ಇಷ್ಟಾಪೂರ್ತಗಳು, ಇಂತು ಧರ್ಮಗಳನ್ನು ನಡೆಸುತ್ತಾ ಆತ್ಮಸಮರ್ಪಣವನ್ನು ಮಾಡುವ ನರನು ನನ್ನಲ್ಲಿ ಭಕ್ತಿಯನ್ನು ಪೊಂದುವನು. ಭಕ್ತಿಭಾಗ್ಯವು ಸಿಕ್ಕಿತೆಂದರೆ, ಇನ್ನುಳಿದುದಾದರೂ ಏನು? ನನ್ನ ಭಕ್ತಿಯಿಂದ ಧರ್ಮ ಜ್ಞಾನ ವೈರಾಗ್ಯಗಳು ಹೆಚ್ಚಾಗುವುವು.

ಇಂದ್ರಿಯಗಳಿಂದ ವಿಷಯಗಳತ್ತ ಓಡುವ ಮನುಜನ ಮನಃಕಮಲವು ರಜೋದೂಷಿತವು, ತಮಃಪಂಕಕಳಂಕಿತವು ಆಗಿ, ಅವನಿಗೆ ದುಃಖವನ್ನೇ ಕೊಡುವುದು. ಧರ್ಮವನ್ನು ಇಂದ್ರಿಯ ಜಯ ಸಹಿತನಾಗಿ ನಡೆಸಿದವನು, ನನ್ನ ಭಕ್ತನಾಗಿ, ವಿಷ್ಣು ಸರ್ವೋತ್ತಮತ್ವ ಜ್ಞಾನವನ್ನು, ವಿಷಯ ವಿರಕ್ತಿಯನ್ನು, ಬೇಕಾದ ಅಣಿಮಾದಿ ಸಿದ್ಧಿಗಳನ್ನು ಹೊಂದುವನು.

ಉದ್ಧವನು ಪ್ರಶ್ನಿಸಿದನು–

ಉದ್ಧವ – ಯಮಗಳಾವುವು? ನಿಯಮಗಳಾವುವು?

ಕೃಷ್ಣ– ಅಹಿಂಸೆ, ಸತ್ಯ, ಅಸ್ತೇಯ, ಅಸಂಗ, ಲಜ್ಜೆ, ಅಸಂಗ್ರಹ, ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮೆ, ಅಭಯ – ಇವು ಹನ್ನೆರಡು ಯಮಗಳು – ಸದಾ ಅನುಷ್ಠೇಯಗಳು ದೇವಪೂಜೆ, ತೀರ್ಥಯಾತ್ರೆ, ಪರೋಪಕಾರ, ತುಷ್ಟಿ, ಆಚಾರ್ಯಸೇವೆ, ಶೌಚ, ಜಪ, ತಪ, ಹೋಮ, ಶ್ರದ್ಧೆ, ಆತಿಥ್ಯ – ಇವು ಹನ್ನೆರಡು ನಿಯಮಗಳು – ತತ್ತತ್ಕಾಲದಲ್ಲಿ ಮಾಡತಕ್ಕವು. ಇವೆರಡೂ ಸರ್ವಕಾಮ ಫಲಪ್ರದವಾಗಿದೆ.

ಉದ್ಧವ – ಶಮ, ದಮ, ತಿತಿಕ್ಷಾ, ಧೃತಿಗಳೆಂದರೇನು?

ಕೃಷ್ಣ– ಶಮವೆಂದರೆ ಶ್ರೀಹರಿಯೇ ಸರ್ವೋತ್ತಮನೆಂಬ ನಿಷ್ಠೆ, ದಮವೆಂದರೆ ಇಂದ್ರಿಯ ನಿಗ್ರಹ, ತಿತಿಕ್ಷೆ ಎಂದರೆ ದುಃಖವು ಬಂದಾಗ ಮನೋವಿಕಾರವಿಲ್ಲದಿರುವುದು, ಧೃತಿ ಎಂದರೆ ಜಿಹ್ವಾ ನಿಗ್ರಹ – ಉಪಸ್ಥ ಜಯಗಳು.

ಉದ್ಧವ – ದಾನ, ತಪ, ಶೌರ್ಯ, ಸತ್ಯಗಳೆಂದರೇನು? ಪ್ರಭೋ!

ಕೃಷ್ಣ – ಅಶಾಸ್ತ್ರೀಯ ಹಿಂಸೆಯಿಂದ ದೂರನಾಗುವುದೇ ದೊಡ್ಡ ದಾನ; ದುಷ್ಟಕಾಮವನ್ನು ಬಿಡುವುದೇ ತಪ; ಮನಸ್ಸನ್ನು ನಿಗ್ರಹಿಸುವುದೇ ಶೌರ್ಯ; ಯಥಾ ವಸ್ತುಪ್ರದರ್ಶನವೇ ಸತ್ಯ.

ಉದ್ಧವ – ಅನ್ನ, ಋತ, ಶೌಚ, ಧನ, ಯಜ್ಞ, ದಕ್ಷಿಣಗಳನ್ನು ನಿರೂಪಿಸು.

ಕೃಷ್ಣ – ತೃಪ್ತಿಜನಕವಾದುದೇ ಅನ್ನ, ಸೂನೃತವಚನವೇ ಋತ, ಕರ್ತೃತ್ವಭ್ರಮನಿರಸನವೇ ಶೌಚ, ಕರ್ಮಫಲ ಸಮರ್ಪಣವೇ ತ್ಯಾಗ, ಧರ್ಮವೇ ಇಷ್ಟಧನ, ಪೂಜ್ಯತಮನಾದ ನಾನೇ ಯಜ್ಞನು, ಜ್ಞಾನಸಂದೇಶವೇ ದಕ್ಷಿಣೆ.

ಉದ್ಧವ – ಬಲ, ಭಗ, ಲಾಭ, ವಿದ್ಯಾ, ಹ್ರೀ, ಶ್ರೀಗಳೆಂದರೇನು?

ಕೃಷ್ಣ – ಪ್ರಾಣಾಯಾಮವೇ ಬಲ, ನನ್ನನ್ನು ಈಶ್ವರನೆಂದು ಚಿಂತಿಸುವುದೇ ಭಗ, ನನ್ನಲ್ಲಿ ಭಕ್ತಿಯೇ ದೊಡ್ಡ ಲಾಭ, ಜೀವೇಶಭೇದಜ್ಞಾನವೇ ವಿದ್ಯೆ, ನಿಷಿದ್ಧ ಕರಣ ಲಜ್ಜೆಯೇ ಹ್ರೀ, ನಿರಪೇಕ್ಷನಾಗಿರುವುದೇ ಶ್ರೀಃ.

ಉದ್ಧವ – ಸುಖ, ದುಃಖ, ಪಂಡಿತ, ಮೂರ್ಖ, ಪಂಥಾ, ಉತ್ಪಥಗಳಾವುವು?

ಕೃಷ್ಣ – ದುಃಖವು ಮತ್ತೆ ಬರದಿರುವ ಮೋಕ್ಷವೇ ಸುಖ, ಕಾಮಸುಖದ ಅಪೇಕ್ಷೆಯೇ ದುಃಖ, ಬಂಧಮೋಕ್ಷಗಳನ್ನರಿತವನೇ ಪಂಡಿತನು, ದೇಹವೇ ತಾನೆಂಬನು ಮೂರ್ಖ, ನನ್ನ ಮಹಿಮಾ ನಿರೂಪಕ ಶಾಸ್ತ್ರವೇ ಪಂಥಾ, ಚಿತ್ತ ವಿಕ್ಷೇಪವೇ ಉತ್ಪಥ.

ಉದ್ಧವ – ಸ್ವರ್ಗ, ನರಕ, ಬಂಧು, ಗೃಹ, ಆಢ್ಯ, ದರಿದ್ರ, ಕೃಪಣ, ಈಶ್ವರರ ಲಕ್ಷಣಗಳಾವುವು?

ಕೃಷ್ಣ – ಸತ್ವಗುಣ ವೃದ್ಧಿಯೇ ಸ್ವರ್ಗ, ಅಜ್ಞಾನ (ತಮಸ್ಸು) ದ ವೃದ್ಧಿಯೇ ನರಕ, ಗುರುವಾದ ನಾನೇ ನಿಜವಾದ ಬಂಧುವು. ಮನುಜ ಶರೀರವೇ ಗೃಹ, ಭಕ್ತ್ಯಾದಿ ಗುಣವಂತನೇ ಆಢ್ಯ, ಅಸಂತುಷ್ಟನೇ ದರಿದ್ರ, ದೋಷವೆಂದರಿತು ಕೂಡ ಇಂದ್ರಿಯಲೋಲನಾದವನೇ ಕೃಪಣ, ಗುಣ

**(ಶಬ್ದಾದಿ)ಗಳಲ್ಲಿ ಆಸಕ್ತನಾಗಿರುವವನೇ ಈಶ್ವರ, ಗುಣಕೂಪಮಗ್ನನೇ ಅಸಮರ್ಥನು. ಆಸಕ್ತರಲ್ಲಿ ಮುಖ್ಯನು ನಾನೇ ಎಂದು ತಿಳಿ!**

**ಇಂತು ನಿನ್ನ ಪ್ರಶ್ನೆಗಳಿಗುತ್ತರವಿತ್ತುದಾಯಿತು. ಗುಣದೋಷ ಗುಣವನ್ನು ದೋಷವೆನ್ನಬಾರದು, ದೋಷವನ್ನು ಗುಣವೆನ್ನಬಾರದು.**

## ೨೦. ಕರ್ಮ – ಜ್ಞಾನ – ಭಕ್ತಿಯೋಗಗಳು

ಉದ್ಧವನು ಪ್ರಶ್ನಿಸಿದನು–

**ಶ್ರೀಶಾ! ವೇದದಲ್ಲಿ ವಿಧಿನಿಷೇಧಗಳಿವೆ. ವಿಧಿಸಿದುದು ಗುಣವು. ನಿಷೇಧಿಸಿದುದು ದೋಷವು ಆಗಿರುವುದಲ್ಲವೇ? ವರ್ಣಾಶ್ರಮಗಳಿಗೆ ತಕ್ಕಂತೆ ಅಧಿಕಾರವಿದೆ. ಪ್ರತಿಲೋಮ ಜಾತರು ಅನಧಿಕಾರಿಗಳು-ಅನುಲೋಮಜರು ಅಧಿಕಾರಿಗಳೆಂದು ತಿಳಿದಿರುವೆನು. ಧರ್ಮಾರ್ಜಿತವಾದ ದ್ರವ್ಯ, ಕುರುಕ್ಷೇತ್ರಾದಿ ದೇಶ, ಕೃಷ್ಣಕೇಶತ್ವಾದಿ ವಯಸ್ಸು, ವಸಂತಾದಿ ಕಾಲ, ಪುಣ್ಯಫಲವಾದ ಸ್ವರ್ಗ, ಪಾಪಫಲವಾದ ನರಕ ಇವೆಲ್ಲವೂ ವೇದವಿಹಿತವೇ ಆಗಿವೆ. ಅಲ್ಲಿ ಗುಣದೋಷಗಳನ್ನು ತಿಳಿಯುವ ಬಗೆ ಹೇಗೆ? ನಿನ್ನ ಪ್ರೀತಿಪಾತ್ರವಾದುದೇ ಗುಣ, ನಿನ್ನ ಅಪ್ರೀತಿಕಾರಣವೇ ದೋಷವಲ್ಲವೇ? ಗುಣದೋಷಜ್ಞಾನದಿಂದ ವಿಧಿಯನ್ನು ಮಾಡಿ, ನಿಷೇಧವನ್ನು ಬಿಡಲು ಬರುತ್ತಿದೆ. ಅಪ್ರತ್ಯಕ್ಷನಾದ ಶ್ರೀಹರಿಯನ್ನು ತಿಳಿಸುವ ಪ್ರಮಾಣಗಳಲ್ಲಿ ವೇದವೇ ನೀನಿತ್ತ ದಿವ್ಯನೇತ್ರವಾಗಿದೆ. ಸುಖವನ್ನು, ತತ್ಸಾಧನ ಕರ್ಮಜಾತವನ್ನು ವೇದವೇ ಹೇಳುತ್ತಿದೆ. ವೇದದಲ್ಲಿ ಸ್ವಾಭಾವಿಕವಾಗಿ ವಿಧಿಸಿದುದು ಗುಣವು, ನಿಷೇಧಿಸಿದುದು ದೋಷವೇ ಆಗಿರುವಾಗ, ನೀನು ಗುಣವು ದೋಷವಾಗುವುದೆಂದೂ, ದೋಷವೇ ಗುಣವಾಗುವುದೆಂದೂ ಹೇಳಿದಂತೆ ತಿಳಿದಿರುವ ನನಗೆ ಭ್ರಮೆ ಉಂಟಾಗಿದೆ. ನಿಶ್ಚಯಿಸಿ ಹೇಳಿ ನನ್ನ ಭ್ರಮೆಯನ್ನು ದೂರಮಾಡು.**

ಶ್ರೀಕೃಷ್ಣನು ಹೇಳಿದನು–

ಉದ್ಧವಾ! ನನ್ನ ಪ್ರೀತಿಯೇ ಗುಣವು; ನನ್ನ ಪ್ರೀತಿ ಸಾಧನವಾಗದಿರುವುದೆಲ್ಲವೂ ದೋಷವೇ. ವೇದವಾದರೂ ನನ್ನ ಪ್ರೀತಿಯನ್ನು ಉದ್ದೇಶಿಸಿ, ಗುಣದೋಷಗಳೆನಿಸಿರುವ ವಿಧಿನಿಷೇಧಗಳನ್ನು ನಿರೂಪಿಸುತ್ತಿದೆ. ಗುಣದೋಷ ನಿರೂಪಣೆಯಲ್ಲಿ ಸ್ವತಂತ್ರವಲ್ಲದ ವೇದವು, ಕೇವಲ ನನ್ನ ಪ್ರೀತಿಯನ್ನು ಸಾಧಿಸದ ಗುಣವು ಕೂಡ ದೋಷವಾಗುವುದೆಂದು ನಿರೂಪಿಸುತ್ತಿದೆ. ಗುಣವೆನಿಸಿರುವ ಮೂರು ಯೋಗಗಳನ್ನು ನಾನೇ ನರರ ಶ್ರೇಯಸ್ಸಾಧನವಾಗಲೆಂದು ನಿರೂಪಿಸಿರುವೆನು. ಕರ್ಮ, ಜ್ಞಾನ ಭಕ್ತಿ ಯೋಗಗಳನ್ನು ಬಿಟ್ಟು ಮತ್ತೊಂದು ಶ್ರೇಯಸ್ಸಾಧನವಿಲ್ಲ.

ಮನುಜರು ಕರ್ಮಯೋಗಿಗಳು, ಸನಕಾದಿಗಳು ಜ್ಞಾನಯೋಗಿಗಳು, ದೇವತೆಗಳು ಭಕ್ತಿಯೋಗಿಗಳು, ಕರ್ಮಫಲ ನಿರ್ವಿಣ್ಣರಿಗೆ ಜ್ಞಾನಯೋಗ. ಕರ್ಮದಿಂದ ಉಂಟಾಗಬೇಕಾದ ಮನಶುದ್ಧಿ ಅವರಿಗೆ ಚೆನ್ನಾಗಿ ಲಭಿಸಿದೆ. ಕರ್ಮದಿಂದ ಸಾಕಷ್ಟು ಮನಶ್ಶುದ್ಧಿ ಜನರಿಗೆ ಮನುಜರಿಗೆ ಕರ್ಮಯೋಗ, ಅಷ್ಟು ಮಾತ್ರದಿಂದ ಅವರಿಗೆ ಜ್ಞಾನ ಭಕ್ತಿಗಳು ಬೇಕಾಗಿಲ್ಲವೆಂತಾಗಲಿ ಇಲ್ಲವೆಂತಾಗಲಿ ಅರ್ಥವಲ್ಲ. ಅಲ್ಪಜ್ಞಾನ ಭಕ್ತಿಗಳಿಂದ ಕೂಡಿದ ಕರ್ಮಯೋಗಿಗಳು, ಕರ್ಮಗಳನ್ನು ಹೆಚ್ಚಾಗಿ ಮಾಡುವರು.

ಶ್ರೀಶಾನುಗ್ರಹದಿಂದ ನನ್ನ ಕಥಾಮೃತಸ್ವಾದನದಲ್ಲಿ ವಿಶಿಷ್ಟ ಶ್ರದ್ಧೆ ಹುಟ್ಟಿ-ನಿತ್ಯವಿರಕ್ತರಾಗಿದ್ದೂ, ನಿತ್ಯ ಸಂಪೂರ್ಣ ಭೋಗವಂತರಾದ ದೇವತೆಗಳು ಭಕ್ತಿಯೋಗಾಧಿಕಾರಿಗಳು. ಅವರು ಭಗವದ್ಗುಣಾನುಸಾರವಾಗಿಯೇ ವೇದಾರ್ಥವನ್ನರಿತಿರುವರು. ಅವರಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳೆಲ್ಲವೂ ಹೆಚ್ಚಾಗಿರುವುವು. ಮನುಜರು ಕರ್ಮವನ್ನು ಮಾಡಿ ಅದರ ಫಲಪ್ರದವೆಂದು ವಿಷ್ಣುಗುಣವನ್ನರಿತು ಉಪಾಸಿಸಿದರೂ, ಭಗವಂತನ ಗುಣರಾಗಿತ್ವವು ಕಡಿಮೆಯಾಗಿರುವುದರಿಂದ, ಜ್ಞಾನಭಕ್ತಿಗಳಿದ್ದರೂ, ಅವರು ಕರ್ಮಯೋಗಿಗಳೇ ಎನಿಸುವರು. ಅವರಕಿಂತ ಹೆಚ್ಚಾದ ಜ್ಞಾನ ಉಳ್ಳ ಸನಕಾದಿಗಳು ಜ್ಞಾನಯೋಗಿಗಳೆನಿಸುವರು. ಮೂರು ಯೋಗಿಗಳಲ್ಲಿ ಬ್ರಹ್ಮನೇ ಉತ್ತಮಾಧಿಕಾರಿಯು. ಜ್ಞಾನ ಭಕ್ತಿಯೋಗಿಗಳು ಕೂಡ ಅಂತಃಕರಣ ಶುದ್ಧಿ ಕಾರಣವಾದ ವಿಹಿತ ಸತ್ಕರ್ಮವನ್ನೂ ಮಾಡುತ್ತಿರುವರು. ಶುದ್ಧಿಯಾದ ಮೇಲೂ ಸ್ವಾಭಾವಿಕವಾಗಿ ಮಾಡುವರಾಗಲಿ ಬಿಡುವುದಿಲ್ಲ. ಕರ್ಮಗಳು ಬಂಧಕವೇ ನಿಜ! ಆದರೂ ಸ್ವವಿಹಿತ ಕರ್ಮವು ಫಲಾಪೇಕ್ಷೆರಹಿತವಾದುದಾದರೆ, ಸ್ವರ್ಗ ನರಕಗಳೆಂಬ ಫಲಗಳನ್ನು ಕೊಡಲಾರದೆ, ಶ್ರೀಹರಿ ಸಮರ್ಪಿತವಾಗಿದ್ದರೆ ಜ್ಞಾನ ದ್ವಾರಾ ಮೋಚಕವೇ ಆಗುವುದು. ಜ್ಞಾನ ಭಕ್ತಿಗಳಿಗೆ ಸಾಧಕವಾದ ನರಜನ್ಮವನ್ನು ಸ್ವರ್ಗಸ್ಥರಾದವರು, ನಿರಯ ವಾಸಿಗಳು ಕೂಡ ಬೇಡುತ್ತಿರುವರು. ಜ್ಞಾನ ಭಕ್ತಿಸಾಧಕವಾಗದಿರುವ ನರದೇಹವು ವ್ಯರ್ಥವೇ ಸರಿ. ಸ್ವರ್ಗವನ್ನಾಗಲಿ ನರಕವನ್ನಾಗಲಿ ಪೊಂದಿಸುವ ಪುಣ್ಯಾಪಾಪ ಕರ್ಮಗಳನ್ನು ಮಾಡದೆ, ಬುದ್ಧಿವಂತನು ಮನಃಶುದ್ಧಿಕಾರಣವು, ಅನ್ಯದೇಹವನ್ನು ಹೊಂದಿಸದಿರುವುದು ಆದ, ನಿಷ್ಕಾಮಕರ್ಮವನ್ನೇ ಮಾಡಬೇಕು. ದೇಹವು ಅಹಂಕಾರವನ್ನು ಪುಟ್ಟಿಸಿ, ಪ್ರಮಾದದಲ್ಲಿ ಕೆಡಹುವದು. ಇದನ್ನರಿತು ಮೃತ್ಯುವು ಬಾರದ ಮುನ್ನ, ಮತ್ತೆ ಜನನ ಮರಣಗಳಿಲ್ಲದಂತೆ ಮಾಡಿಕೊಳ್ಳಲು ಪ್ರಯತ್ನಿಸುವ ನರನೇ ಬುದ್ಧಿವಂತನು. ಪುರುಷಾರ್ಥ ಸಾಧನವಾದ ಮನುಜ ಶರೀರವು ಕಾಲದ ದಿನ ಪಕ್ಷ ಮಾಸ ವತ್ಸರಗಳೆಂಬ ಕತ್ತಿಯಿಂದ ನಿತ್ಯವೂ ಕತ್ತರಿಸಲ್ಪಡುತ್ತಿದೆ. ಜೀವನಗೂಡಿರುವ ದೇಹದ ಬುಡಕ್ಕೆ ಕಾಲವ್ಯಾಧನು ಕೊಡಲಿಯಿಂದ ಪೆಟ್ಟುಗಳನ್ನು ಕೊಡುತ್ತಿರುವನೆಂದು ತಿಳಿದ ಜೀವನು, ಸೂಕ್ಷ್ಮೇಂದ್ರಿಯಗಳೆಂಬ ರೆಕ್ಕೆಗಳಿಂದ, ದೇಹವೃಕ್ಷಗಳನ್ನು ಬಿಟ್ಟು ಸ್ವೇಚ್ಛೆಯಿಂದ ಹಾರುವ ಹಕ್ಕಿಯಂತೆ ವಿಷಯಗಳನ್ನು ಬಿಟ್ಟು ಮುಕ್ತನಾಗುತ್ತಾನೆ. ನೃದೇಹವೆಂಬ ನಾವೆಯು ಅಭೀಷ್ಟಸಾಧನಸಮರ್ಥವಾಗಿದೆ. ಗುರುವೆಂಬ ಕರ್ಣಧಾರನನ್ನು ನಂಬಿ, ಮುಖ್ಯ ವಾಯುವಿಗೆ ಅನುಕೂಲವಾಗಿ ಅವನು ತೋರಿದ ಮಾರ್ಗದಲ್ಲಿ ನಡೆಯುವ ವಿವೇಕಿಯು ಸಂಸಾರ ಸಾಗರವನ್ನು ದಾಟಿಬಿಡುವನು. ಹಾಗೆ ಮಾಡದವನು ವೇಗವೆಂಬ ಸಂಸ್ಕಾರವಿಲ್ಲದ ಬಾಣದಂತೆ ಅಧಃಪತಿತನಾಗುವನು.

ಮಾಡಿದ ಪ್ರಯತ್ನಗಳು ವಿಫಲವಾದಾಗ ಸುಜೀವನು ವಿರಕ್ತನಾಗುವನು. ಇಂದ್ರಿಯಗಳನ್ನು ನಿಗ್ರಹಿಸಿ ಶ್ರೀಶನಲ್ಲಿಡುವನು. ಅಭ್ಯಾಸದಿಂದ ಮನಸ್ಸನ್ನು ಚಂಚಲವಾಗದಂತೆ, ವಿಷಯಗಳಿಂದ ಸೆಳೆದು ಶ್ರೀಶನನ್ನು ಧ್ಯಾನಿಸುವನು. ಪ್ರಾಣಾಯಾಮಬಲದಿಂದ ಮನಸ್ಸನ್ನು ನಿರ್ವಿಷಯವನ್ನಾಗಿಸುವನು. ಮತ್ತೆ ಮತ್ತೆ ನನ್ನಲ್ಲಿ ಪ್ರೀತಿಯು ಹೆಚ್ಚಾದಂತೆ, ಧ್ಯಾನವನ್ನು ಮಾಡಿ, ಬ್ರಹ್ಮಾದಿ ಸರ್ವಜೀವರ ಸೃಷ್ಟಿಸಂಹಾರ ಕಾರಣನಾದ ನನ್ನ ಗುಣಗಳನ್ನು ಚಿಂತಿಸುವನು. ಶ್ರೀಹರಿ ನಿರಂತರ ಸ್ಮರಣೆಯಿಂದ ಮನದ ಕಾಮಕಶ್ಮಲಗಳು ಅಳಿಸಿ ಹೋಗುವುವು. ಸ್ವರ್ಗಾದಿ ಸುಖಗಳು ಹೇಯವೆನಿಸುವುವು. ಶ್ರೀಹರಿಸ್ಮರಣವೇ ಸುಖವೆನಿಸುವುದು. ಯಾಮಾದಿಗಳಿಂದಲು, ತತ್ವವಿದ್ಯಾವಿಚಾರ

ದಿಂದಲು, ನನ್ನ ಪ್ರತಿಮೆಗಳಂತಿರುವ ಭಕ್ತರ ಚರಣಸೇವೆಯಿಂದಲು, ನನ್ನ ಪೂಜೆಯಿಂದಲು ಅವನ ದೃಢವಾದ ಯೋಗಸಿದ್ಧಿಯನ್ನು ಪೊಂದುವನು.

ಯೋಗಿಯು ಪ್ರಮಾದದಿಂದ ಪಾಪವನ್ನು ಮಾಡಿದಾಗ, ಅದನ್ನು ಯೋಗದಿಂದಲೇ ನಾಶ ಮಾಡುವನು. ಮನುಜನಿಗೆ ವಿಹಿತವಾದ ಕರ್ಮವು ಗುಣವೆನಿಸುವುದು; ನಿಷಿದ್ಧವಾದುದು ದೋಷವೇ ಸರಿ! ಗುಣದೋಷಗಳನ್ನು ವೇದವು ನಿರೂಪಿಸಿದುದು ಅಜ್ಞಜನರ ಮಾರ್ಗದರ್ಶನ ವನ್ನು ಮಾಡಲೆಂದು ತಿಳಿ. ಗುಣದೋ, ವಿಭಾಗವು ನನ್ನ ಪ್ರೀತಿ, ಅಪ್ರೀತಿಗಳನ್ನು ಅವಲಂಬಿಸಿ ಮಾಡಲ್ಪಟ್ಟಿವೆ ಎಂದು ಜ್ಞಾನಿಗಳು ತಿಳಿಯುವರು. ಇಂದ್ರನು ನನ್ನ ಪ್ರೀತಿಗಾಗಿ ವೃತ್ರನೆಂಬ ಬ್ರಾಹ್ಮಣನನ್ನು ಕೊಂದುದರಿಂದ ಅವನಿಗೆ ಆ ಬ್ರಹ್ಮಹತ್ಯೆಯು ಕೂಡ ಗುಣರೂಪವೇ ಆಯಿತು. ವೇದದಲ್ಲಿ ಗುಣದೋಷ ವಿಧಾನವು ವ್ಯರ್ಥವಲ್ಲ. ಏಕೆಂದರೆ ಆ ವಚನಗಳಿಗೆ ನನ್ನ ಪ್ರೀತಿಯಲ್ಲಿ ಮಹಾ ತಾತ್ಪರ್ಯವಿದೆ. ಕರ್ಮಾಚರಣದಲ್ಲಿ ಅಜ್ಞರನ್ನು ಪ್ರೇರಿಸಲು – ಗುಡಜಿಹ್ವಿಕಾ ನ್ಯಾಯದಿಂದ ವೇದವು ಸಕಲವನ್ನು ನಿರೂಪಿಸುತ್ತಿದೆ; ಆದರೂ ನನ್ನನ್ನೇ ಅದು ಮುಖ್ಯವಾಗಿ ವಿಷಯೀತರಿಸುತ್ತಿದೆ. ಈ ಜ್ಞಾನದಿಂದ ನನ್ನ ಮಹಿಮೆಯನ್ನು ಪೇಳುವ ಸಚ್ಛಾಸ್ತ್ರದಲ್ಲಿ ಶ್ರದ್ಧೆಯುಳ್ಳ, ಸರ್ವಕರ್ಮ ಫಲದಲ್ಲಿ ಅನಾಸಕ್ತನಾಗಿದ್ದ ಜ್ಞಾನಿಯು ಕೂಡ ಪ್ರಾರಬ್ಧದಿಂದ ಬಂದ ವಿಷಯಭೋಗವನ್ನು ಬಿಡಲು ಸಮರ್ಥನಾಗದೆ, ಅನುಭವಿಸುತ್ತಿರುವನು. ಆದುದರಿಂದ ಪ್ರಾಣಹಾನಿಯಾದರೂ, ನನ್ನಲ್ಲಿ ಭಕ್ತಿಯನ್ನು ಬಿಡದೆ, ನಿಷಿದ್ಧ ಭೋಗವರ್ಜನದಿಂದ ಶುದ್ಧನಾದ ಜೀವನು, ಸಂತತ ಭಜನೆಯಿಂದ ಅಪರೋಕ್ಷಜ್ಞಾನವನ್ನು ಪೊಂದುವನು. ಅವರ ಹೃದಯದ ಅಭೀಷ್ಟವಲ್ಲದ ಕಾಮಗಳೆಲ್ಲವೂ ನಷ್ಟವಾಗಲು, ಅವನಿಗೆ ಸಂಶಯವು ದೂರಾಗುವುದು. ನನ್ನ ಅಪರೋಕ್ಷ ಜ್ಞಾನಿಗೆ ಪ್ರಾಕೃತವಾದ ಲಿಂಗಶರೀರವು ನಷ್ಟಪ್ರಾಯವಾಗುವುದು. ಅವನ ಪ್ರಾರಬ್ಧ ವಲ್ಲದ ಸಂಚಿತಾಗಾಮಿ ಕರ್ಮಗಳು ನಾಶವನ್ನು ಪೊಂದುವುವು. ಭಕ್ತ್ಯನುಸಾರಿಯಾಗದ ಜ್ಞಾನ ವೈರಾಗ್ಯಗಳು ಶ್ರೇಯಸ್ಸಾಧನವಾಗಲಾರವು. ಆದುದರಿಂದ ನನ್ನಲ್ಲಿ ಭಕ್ತಿಯನ್ನು ಮಾಡು! ಕರ್ಮ, ತಪಸ್ಸು, ಜ್ಞಾನ, ವೈರಾಗ್ಯ, ಧ್ಯಾನ, ದಾನಾದಿಗಳಿಂಗ ಬರುವ ಶ್ರೇಯವೆಲ್ಲವೂ ನನ್ನ ಭಕ್ತಿಯಿಂದ ಪೂರ್ಣವಾಗಿ ಲಭಿಸುವುದು. ಭಕ್ತಿಯನ್ನು ಮಾಡಿದುದರ ಫಲವಾಗಿ ನಾನು ಕೊಟ್ಟ ಮೋಕ್ಷವನ್ನು ಕೂಡ ನನ್ನ ಏಕಾಂತಭಕ್ತರು ಇಷ್ಟದಿಂದ ಸ್ವೀಕರಿಸರು. ನಿರಪೇಕ್ಷ ಭಕ್ತಿಯ ಭವ್ಯಸುಖವನ್ನರಿತ ದೇವಾದ್ಯುತ್ತಮ ಭಕ್ತರು ಕಾಮಕಶ್ಮಲರಹಿತರಾಗಿ ಮೋಕ್ಷಾನಂದವನ್ನು ಬೇಡದಿರುವರು. ನನ್ನ ಏಕಾಂತಭಕ್ತರಿಗೆ, ಪ್ರಕೃತಿಬಂಧದ ಕೊನೆಕಾಣುತ್ತಿದೆ. ಅವರಿಗೆ ಗುಣದೋಷ ವಿಚಾರದಿಂದ ಪ್ರಯೋಜನವಿಲ್ಲ. ಅವರ ಮನವು ನನ್ನ ಪ್ರೀತಿಯನ್ನೇ ಮುಖ್ಯವಾಗಿ ಎಣಿಸಿ, ಸ್ವಾಭಾವಿಕವಾಗಿ ಗುಣವನ್ನೇ ಸ್ವೀಕರಿಸಿ ಆಚರಿಸುತ್ತಿರುವುದು. ಇಂತು ನಾ ಪೇಳಿದ ಯೋಗತ್ರಯವನ್ನು ನಡೆಸಿದವರು, ತಮ್ಮ ಯೋಗ್ಯತಾನುಸಾರವಾಗಿ, ಕರ್ಮಯೋಗಿಗಳಾದರೆ ಕ್ಷೇಮ(ಶ್ವೇತದ್ವೀಪ) ವನ್ನು, ಜ್ಞಾನಯೋಗಿಗಳು ವೈಕುಂಠವನ್ನು, ಭಕ್ತಿಯೋಗಿಗಳು, ನನ್ನ ಸಾಯುಜ್ಯವನ್ನು ಪೊಂದುವರು. ಭಕ್ತೋತ್ತಮನಾದ ಚತುರ್ಮುಖನು ಪೂರ್ಣಾಂಗ ಸಾಯುಜ್ಯ ಭಾಜನನಾಗು ವನು.

## ೨೧. ಶುದ್ಧಿ ವಿಚಾರ

ಶ್ರೀಭಗವಂತನು ಹೇಳಿದನು–

ಇಂತು ನಿರೂಪಿಸಿದ ಕರ್ಮಜ್ಞಾನ ಭಕ್ತಿ ಯೋಗಗಳನ್ನು ಅವಲಂಬಿಸದೆ, ಇಂದ್ರಿಯಲೋಲ ರಾಗಿ ವಿಷಯಲಾಲಸರಾದವರು ಸಂಸಾರದಲ್ಲಿ ಹುಟ್ಟಿ, ಸಾಯುತ್ತಾ ನರಳುತ್ತಿರುವರು. ನನ್ನ ಪ್ರಿಯಾಪ್ರಿಯಗಳೇ ಗುಣದೋಷಗಳಾಗಿರುವಂತೆ, ಪುಣ್ಯಪಾಪ ನಿಬಂಧನಗಳು, ಶುದ್ಧ್ಯ ಶುದ್ಧಿಗಳು ಕೂಡ ಜಾತ್ಯಧಿಕೃತವಾದುದರಿಂದ ಮಾತ್ರವಲ್ಲದೆ, ನನ್ನ ಪ್ರಿಯಾಪ್ರಿಯಗಳನ್ನನುಸರಿಸಿ ನಿಶ್ಚಿತವಾಗುವುವು. ಸ್ವಾಭಾವಿಕವಾದುದು ಗುಣವು, ತದ್ವಿರುದ್ಧವಾದುದು ದೋಷವೆಂದು ಹೇಳಿದೆ ನಲ್ಲವೇ? ಪಂಚಭೂತ ವಿಕಾರವಾಗಿರುವುದರಿಂದ ಸಮಾನವಾದ ವಸ್ತುಗಳಲ್ಲಿ, ಪುಣ್ಯಾಧಿಕ್ಯದಿಂದ ಸುಖಾಧಿಕ್ಯವಿದೆ ಎಂದು ಜ್ಞಾಪಿಸಿಕೊಡಲು, ಶುದ್ಧಿ, ಅಶುದ್ಧಿಗಳನ್ನು ನಿರೂಪಿಸಿ ರುವರು. ಧರ್ಮವು ನಡೆಯಬೇಕು; ಶರೀರ ಯಾತ್ರೆ ನಿಲ್ಲಬಾರದು; ಎಂದು ನಾನು ಧರ್ಮ ಸಾಧನವಾದ ಆಚಾರವಿಚಾರವನ್ನು ಚೆನ್ನಾಗಿ ನಿರೂಪಿಸಿರುವೆನು. ನನ್ನ ಸನ್ನಿಧಾನದಿಂದ ಶುದ್ಧಿ, ಸನ್ನಿಧಾನ ವಿಶೇಷಾಭಾವದಿಂದ ಅಶುದ್ಧಿ ಎಂಬ ತಾರತಮ್ಯಕ್ಕನುಸರಿಸಿ, ಪಂಚಭೂತನಿರ್ಮಿತ ಶರೀರರಾದ ಜೀವರಲ್ಲಿ, ತಾರತಮ್ಯ, ಭಿನ್ನನಾಮ ರೂಪಗಳು ಇರುವುದರಿಂದ ಅವರಿಗೆ ಸ್ವಯೋಗ್ಯತೆಗೆ ತಕ್ಕಂತೆ ಸ್ವಪ್ರಯೋಜನವಾಗಬೇಕೆಂದು, ಜಗದ್ಧಾತನು, ಸ್ವತಃ ಶುಚಿಯು ಆಗಿರುವ ನಾನು ನಿಶ್ಚಯಿಸಿರುವೆನು. ದೇಶ ಕಾಲಾದಿ ಪದಾರ್ಥಗಳ ಶುಭಾಶುಭಗಳನ್ನು ಶ್ರುತಿಸ್ಮೃತಿಗಳಿಂದಲೇ ನಿಶ್ಚಯಿಸಬೇಕು; ಅವು ನನ್ನ ಆಜ್ಞಾರೂಪಗಳಾಗಿವೆ. ಆ ರೀತಿಯನ್ನರಿತು ನಡೆದಾಗಲೇ ಫಲ ಸಿದ್ಧಿ ಎಂದು ತಿಳಿ!

ಬ್ರಾಹ್ಮಣರ ಕರ್ಮಕರಣಕ್ಕಾಗಿ ಕೃಷ್ಣಸಾರವು ಇರುವ ದೇಶವು ಶುಚಿಯಾದುದು. ನದೀ ಸಮುದ್ರ ಗಿರಿ ವನ ನಗರಗಳು, ಸಾಲಿಗ್ರಾಮ ಸನ್ನಿಧಾನ, ಕೃಷ್ಣಮೃಗಚರ್ಮ ಸಹಿತಾಸನ – ಇವು ಕೂಡ ಶುಚಿ ದೇಶಗಳಾಗಿವೆ. ಕೃಷ್ಣಸಾರ ಸಂಚಾರವಿದ್ದರೂ, ಸೌವೀರಕೀಕಟ ಈರಣ (ಸೌಳು) ಪ್ರದೇಶಗಳು ಶುದ್ಧವಲ್ಲ. ಚಕ್ರದಂತೆ ತಿರುಗುವ ಕಾಲದಲ್ಲಿ ವಸಂತಾದಿ ಕಾಲ, ಸಂಧ್ಯಾ ಕಾಲ, ಯೋಗ್ಯವೆನಿಸಿದೆ. ನಿಷಿದ್ಧವಲ್ಲದ ಕರ್ಮವನ್ನು ಮಾಡುವ ಕಾಲವೇ ಶುದ್ಧವಾದುದು. ನಿಶೀಥಾದಿ ಕಾಲಗಳು ಕರ್ಮಯೋಗ್ಯವಲ್ಲ. ದ್ರವ್ಯದ ಶುದ್ಧಿಯು ದ್ರವ್ಯ ಸಂಸ್ಕಾರದಿಂದಲು, ಸಜ್ಜನ ವಚನದಿಂದಲು ಕೆಲವಕ್ಕೆ ಕಾಲದಿಂದಲು, ಕೆಲವು ಬಹಳವಾಗಿ ಅಥವಾ ಸ್ವಲ್ಪವಾಗಿರು ವುದರಿಂದಲು, ನಿರ್ಣಯಿಸಲ್ಪಟ್ಟಿದೆ. ಅಭಿಮಾನ ಪರಿತ್ಯಾಗವನ್ನು ಮಾಡಿ ಸರ್ವವನ್ನು ಶ್ರೀನಾರಾ ಯಣನಿಗೆ ಸಮರ್ಪಿಸುವುದೇ ಸರ್ವದೋಷನಾಶಕವಾಗಿದೆ.

ಅನ್ನಾದಿಗಳು ಬಹುಳವಾಗಿರುವಾಗ ಶ್ವಾನಾದಿ ಸ್ಪರ್ಶವಾದೆಡೆ ಸ್ವಲ್ಪವಾಗಿ ಸ್ಪೃಷ್ಟಾನ್ನ ಪರಿತ್ಯಾಗದಿಂದ ಮಿಕ್ಕ ಅಂಶಕ್ಕೆ ಶುದ್ಧಿ, ಶಕ್ತನಾದವನಿಗೆ ತೀರ್ಥಯಾತ್ರಾದಿಗಳಿಂದ ಶುದ್ಧಿ, ಶಕ್ತನಾಗದವನಿಗೆ ಮನೆಯ ದೇವಪೂಜೆಯಿಂದಲೇ ಶುದ್ಧಿ. ಅಶುದ್ಧವೆಂದು ತೋರುವುದನ್ನು ದೊಡ್ಡವರು ಶುದ್ಧವಾಯಿತೆಂದು ಹೇಳುವ ವಚನದಿಂದಲೇ ಶುದ್ಧಿ. ಸಂಪತ್ತಿಗೆ ಸತ್ಪಾತ್ರದಾನ ದಿಂದ ಶುದ್ಧಿ. ಧಾನ್ಯದಿಗಳಿಗೆ ಕಾಲದಿಂದ ಶುದ್ಧಿ. ದಾರದ ವಸ್ತ್ರಾದಿಗಳಿಗೆ ನೀರಿನಿಂದಲು, ಮಣ್ಣಿನ, ಕಟ್ಟಿಗೆಯ, ಅಥವಾ ಅಸ್ಥಿ(ಶಂಖ) ಪಾತ್ರೆಗಳಿಗೆ, ನೀರು ಮಣ್ಣುಗಳಿಂದಲು, ತುಪ್ಪ, ಕಾಂಸ್ಯಾದಿ ಪಾತ್ರೆಗಳಿಗೆ ಅಗ್ನಿಸ್ಪರ್ಶದಿಂದ ಶುದ್ಧಿ. ಅಮೇಧ್ಯ ಲಿಪ್ತವಾಗಿದ್ದರೆ, ತದ್ಗಂಧ

ನಾಶದವರಿವಿಗೂ ಕ್ಷಾಳನದಿಂದ ಶುದ್ಧಿ. ಕರ್ಮಗಳಿಗೆ ಸ್ನಾನ, ದಾನ, ತಪಸ್ಸು, ಮೌನ ಶಕ್ತಿ, ಊರ್ಧ್ವಪುಂಡ್ರಾದಿ ಸಂಸ್ಕಾರಗಳಿಂದ ಮನಸ್ಸಿನ ನಿಷ್ಕಾಮತೆಯೇ ಶುದ್ಧಿ. ಋಷಿ, ಛಂದ, ದೇವತಾದಿ ಜ್ಞಾನಪೂರ್ವಕವಾಗಿ, ನ್ಯಾಸ ನಮನಗಳನ್ನು ಮಾಡಿ, ಜಪಿಸಿ, ತರ್ಪಣವನ್ನಿತ್ತು ಶ್ರೀಹರಿ ಸಮರ್ಪಣೆ ಮಾಡುವುದರಿಂದ ಮಂತ್ರಶುದ್ಧಿ. ಭಕ್ತಿಯಿಂದ ಧರ್ಮ ಶುದ್ಧಿ. ಅಭಕ್ತರು ಮಾಡುವ ಯಾವ ಕಾರ್ಯವೂ ಶುದ್ಧವಲ್ಲ.

ಗುಣದೋಷಗಳ ಫಲವು ನರರಿಗೇನೇ; ಅದು ಜ್ಞಾನವಿಲ್ಲದ ಪಶ್ವಾದಿಗಳಿಗಿಲ್ಲ. ಶೂದ್ರಾದಿಗಳಿಗೆ ಸ್ವಾಭಾವಿಕವೆನಿಸುವ ಲಶುನ (ಬೆಳ್ಳುಳ್ಳಿ) ಭಕ್ಷಣಾದಿಗಳಿಂದ ದೋಷವಿಲ್ಲ. ಸ್ವಧರ್ಮ ಪರಿತ್ಯಾಗವೇ ದೋಷವು. ವಿಷಯವನ್ನು ಸುಖಸಾಧನವೆಂದು ತಿಳಿದ ನರನು ವಿಷಯ ಸಂಗವನ್ನು, ಸಂಗದಿಂದ ಕಾಮವನ್ನು, ಕಾಮದಿಂದ ದುರ್ವಿಷಹ ಕ್ರೋಧವನ್ನು, ಕ್ರೋಧದಿಂದ ಮೋಹವನ್ನು ಪೊಂದುವನು; ಅವನ ಸುಖಾನುಭವ ಶಕ್ತಿಯೇ ಕುಂಠಿತವಾಗುವುದು; ಅಂತಹ ಅಸುರ ಜೀವನು ಸುಖನಾಶವನ್ನೇ ಅಲ್ಲದೆ, ಅಂಧಂತಮಸ್ಸಿನಲ್ಲಿ ಮಹಾ ದುಃಖವನ್ನು ಪೊಂದುವನು. ವಿಷ (ವನ್ನು ಉಣಿಸುವ)ಯಗಳಿಂದ ದುಃಖವೇ ಆಗಲಿ ಸುಖವೆಲ್ಲಿಯದು? ವೃಕ್ಷದಂತೆ ಸದಾ ಕಡಿಯಲ್ಪಡುತ್ತಾ, ತಮೋಗನು ನಿರಂತರ ದುಃಖದಿಂದ ನಿಟ್ಟುಸಿರುಬಿಡುತ್ತಿರುವನು.

ವೇದವು ಮೋಕ್ಷಫಲವನ್ನು ನಿರೂಪಿಸಿ, ಸ್ವರ್ಗಕುಸುಮವನ್ನು ನಶ್ವರವೆಂದು ತಿಳಿದು ಪರಿವರ್ಜಿಸೆಂದು ಆಜ್ಞಾಪಿಸುತ್ತಿದೆ. ರೋಗಿಯಾದ ಬಾಲಕನಿಗೆ ಕಬ್ಬಿನ ಕೋಲನ್ನು ಕೊಡುವ ಆಶೆ ತೋರಿಸಿ, ಔಷಧವನ್ನು ನುಂಗಿಸುವಂತೆ, ಸ್ವರ್ಗಾದಿಗಳನ್ನು ಬೇಡಬಾರದೆಂದು ಹೇಳಿ ಮೋಕ್ಷವನ್ನು ಪ್ರಾಪ್ಯವೆಂದು ನಿರೂಪಿಸುತ್ತಿದೆ. ಸ್ವಭಾವದಿಂದಲೇ ಕಾಮಾಸಕ್ತರಾಗಿ, ಅನರ್ಥ ಕಾರಣ ದುಷ್ಕರ್ಮಗಳನ್ನು ಮಾಡಿ, ಪಾಪದಿಂದ ನೊಂದು, ದುಃಖಿಸುವ ಜನರನ್ನು, ಸರ್ವಜ್ಞ ವೇದವು, ಮತ್ತೆ ಪ್ರವೃತ್ತಿಕರ್ಮದಲ್ಲಿ ಎಂದಿಗಾದರೂ ನಡೆಸುವುದೇ? ಇಂತು ನಿವೃತ್ತಿಕರ್ಮ ನಿರೂಪಕನಾದ ವೇದವನ್ನು, ಕೆಲರಸುರ ಜೀವರು, ಸರಿಯಾಗಿ ತಿಳಿಯದೆ, ಕುಸುಮ ಸದೃಶ ಸ್ವರ್ಗಾದಿ ಸುಖಗಳಿಗಾಗಿ, ಪಶುಹಿಂಸಾಯುತ ಯಾಗಗಳನ್ನು ಮಾಡಿ, ಅಗ್ನಿಯಲ್ಲಿ ಆಹುತಿಯನ್ನೀಯುವಾಗ, ನನ್ನ (ಶ್ರೀಹರಿ) ಸ್ಮರಣೆಯೂ ಇಲ್ಲದೆ, ತಾವು ಬೇಡುವ ಸ್ವರ್ಗಾದಿಗಳನ್ನು ಕೂಡ ಪೊಂದಲಾರದಿರುವರು. ವ್ಯಾಪ್ತನು, ಅಂತರ್ಯಾಮಿಯು ಆಗಿರುವ ನನ್ನಿಂದ ದೂರರಾದ ಆ ತಮೋಯೋಗ್ಯರು ಮಿಥ್ಯಾಜ್ಞಾನಿಗಳು ಮತ್ತು ಇಂದ್ರಿಯಾರಾಮರು ಆಗಿರುವುದರಿಂದ, ಮುಖ್ಯಪ್ರಾಣನ ಶಿಕ್ಷೆಗೊಳಗಾಗುವರು. ತಾವು ಕೊಂದ ಪಶು ಜೀವರಿಂದ ನರಕದಲ್ಲಿ ಪೀಡಿತರಾಗಿ, ಕೊನೆಗೆ ತಮಸ್ಸನ್ನೇ ಹೊಂದುವರು. ಹಿಂಸೆ ಮಾಡಿ ಮಾಂಸವನ್ನುಣ್ಣಬಯಸುವ ಸೋಮಯಾಜಿಗೂ ಪಸುಹಿಂಸ್ರಕನಾದ ಕಟುಕನಿಗೂ ಬೇದವಿಲ್ಲ. ಅನಿತ್ಯವು, ಅಸುಖವು, ಕೇವಲ ಶ್ರವಣ ರಮಣೀಯವು ಆದ ಸ್ವರ್ಗಾದಿಗಳನ್ನು ಬೇಡಿ, ಪಿತೃ, ಭೂತ ದೇವತೆಗಳಿಗೆ ಹವಿಸ್ಸನ್ನಿತ್ತು, ಮನಸ್ಸಿನ ತುಂಬ ಕಾಮಗಳನ್ನು ತುರುಕಿಕೊಂಡು, ವಣಿಜರಂತೆ ಲಾಭಮಾತ್ರದೃಷ್ಟಿಗಳಾದ ದುಷ್ಟರು, ಅಸುರಯೋಗ್ಯವಾದ ತಮಸ್ಸನ್ನೇ ಹೊಂದು, ನಿತ್ಯದುಃಖಿಗಳಾಗಿರುವರು. ವಿಷ್ಣುಭಕ್ತಿ ವರ್ಜಿತರಾದ ತ್ರಿವಿಧಯಾಜ್ಞಿಕರು ಕೂಡ, ಸ್ವರ್ಗದಲ್ಲಿ ಅಲ್ಪಸುಖವನ್ನು (ತಾಮಸ ಸಾತ್ವಿಕರು), ನರಕ ದುಃಖವನ್ನು (ತಾಮಸರಾಜಸರು) ಅಂಧಂತಮುಸ್ಸನ್ನು (ತಾಮಸ ತಾಮಸರು) ಪೊಂದುವರು.

ಸ್ವರ್ಗದಲ್ಲಿ ಸುಖಪಟ್ಟು, ಮತ್ತೆ, ಪುಟ್ಟಿ ಮಹಾಕುಲದಲ್ಲಿ ಪುಟ್ಟಿ ಯಾಜ್ಞಿಕರಾಗುವೆವೆಂಬ ಹಂಬಲದಿಂದ ಸ್ತಬ್ಧರಾದವರಿಗೆ, ಗುರುಸೇವಾದೂರರಿಗೆ ವಿಷಯದೂಷಿತ ಮನಸ್ಕರಿಗೆ ನನ್ನ

ಭಕ್ತಿಕಥೆ ರುಚಿಸುವುದಿಲ್ಲ. ವೇದಗಳು ನಾರಾಯಣಪರವಾಗಿವೆ. ಬ್ರಹ್ಮಕಾಂಡ, ದೇವಕಾಂಡ, ಕರ್ಮಕಾಂಡಗಳೆಂದು ತೋರಿಬರುವ ವೇದವೆಲ್ಲವೂ ಪರಮಮುಖ್ಯವೃತ್ತಿಯಿಂದ ಶ್ರೀಹರಿಯ ಗುರೋತ್ಕರ್ಷ ನಿರೂಪಕವಾಗಿದೆ. ದೇವತೆಗಳು ಪರೋಕ್ಷ ಪ್ರಿಯರು – ನಾನೂ ಪ್ರತ್ಯಕ್ಷನಾಗಿ ನಿಂತು ಹೇಳುವುದನ್ನು ಇಷ್ಟಪಡದಿರುವೆನು. ಅಂತೆಯೇ ವೇದವು ಪರೋಕ್ಷವಾಗಿ ಕರ್ಮಾದಿ ಗಳನ್ನು ನಿರೂಪಿಸುವಂತೆ ತೋರಿದರೂ, ಕರ್ಮಪ್ರೇರಕನು, ಫಲಪ್ರದನೂ ಆದ ನನ್ನನ್ನು ಪ್ರತಿಪಾದಿಸುತ್ತಿದೆ ಎಂಬುವ ಸತ್ಯವನ್ನು ಮುಖ್ಯಪ್ರಾಣ, ರುದ್ರ, ಸುರೇಂದ್ರಾದಿಗಳು ಅರಿತಿರು ವರು. ಅನಂತಪಾರನಾದ ನನ್ನ ಮಹಿಮೆಯು ಸಮುದ್ರದಂತೆ ದುರ್ಜ್ಞೇಯವೇ ಸರಿ! ಪೂರ್ಣ ಗುಣನು, ವೇದಮುಖ್ಯಾರ್ಥನು, ದೋಷದೂರನೂ ಆದ ನನ್ನನ್ನು ಮುಖ್ಯಪ್ರಾಣನು, ಘೋಷದಿಂದ ಪೊಗಳಿ, ನಮಿಸಿ, ಜಪಿಸುತ್ತಿರುವನು. ಊರ್ಣನಾಭಿಯು ತನ್ನ ಹೃದಯದಿಂದ ದಾರವನ್ನು ಹೊರಹಾಕಿ, ಮತ್ತೆ ನುಂಗುವಂತೆ, ಪ್ರಾಣನು ತನ್ನ ಮನಸ್ಸಿನಿಂದ 'ಹಂಸ'ನಾದ ನನ್ನ ರೂಪವನ್ನು ಧ್ಯಾನಿಸಿ, ಜಪಿಸುತ್ತಿರುವುದನ್ನು, ಜ್ಞಾನಿಗಳು ಕರ್ಣಘೋಷದಿಂದ ತಿಳಿದು ಧನ್ಯರಾಗುವರು. ವೇದಜ್ಞಾನಿಯಾದ ಮುಖ್ಯಪ್ರಾಣನು ನನ್ನ ಪ್ರಸಾದಮುಖ್ಯಪಾತ್ರನಾಗಿರುವನು; ನನ್ನ ಅನುಜ್ಞೆಯಿಂದ ಸಂಸಾರಮೋಕ್ಷವನ್ನೀಯಲು ಸಮರ್ಥನಾಗಿರುವನು; ಅವನು ನನ್ನ ತ್ರಿಮಾತ್ರ ಮೊದಲ್ಗೊಂಡು ಅನಂತಮಾತ್ರಾತ್ಮಕವಾದ ಓಂ ಎಂಬ ಪ್ರಣವದಿಂದ ಪುಟ್ಟಿ, ನನ್ನ ಅನಂತ ರೂಪಗಳನ್ನು ನಿರೂಪಿಸುವ ವೇದವನ್ನು ಕಲ್ಪಾಂತದಲ್ಲಿ ವ್ಯಕ್ತೀಕರಿಸಿ, ಉಚ್ಚರಿಸುವನು; ಸ್ವರ, ಸ್ಪರ್ಷ, ಊಷ್ಮ, ಅಂತಸ್ಥಗಳೆಂಬ ಅಕ್ಷರಗಳ ಶಬ್ದಶಕ್ತಿಯಿಂದ ಕೂಡಿ, ನಾಲ್ಕಕ್ಷರಗಳುಳ್ಳ ಉಷ್ಣಿಕ್ ಮೊದಲಾಗಿ ಒಂಭತ್ತಕ್ಷರದ (ಪಾದ) ಜಗತ್‌ಬಂಧ, ಎಂಟಕ್ಷರದ ಗಾಯತ್ರೀಛಂದ ಗಳಿಂದ, ನನ್ನನ್ನು ಪೊಗಳಿ, ರುದ್ರಾದಿಗಳಿಗೆ ಉಪದೇಶಿಸುತ್ತಿರುವನು. ಗುಹ್ಯ, ದರ್ಶನ, ಸಮಾಧಿ ಭಾಷೆಗಳ ಪ್ರಭೇದವೆನಿಸುವ (3 x 3 x 3 x 3 = 81) ಎಂಭತ್ತೊಂದು ಭಾಷಾವೈಖರಿಗಳಿಂದ ಗಾಯತ್ರಿ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ, ಅಷ್ಟೀ, ಅತ್ಯಷ್ಟೀ, ಜಗತ್, ವಿರಾಟ್ ಮೊದಲಾದ ಛಂದೋಬದ್ಧವಾದ ವೇದದಲ್ಲಿ ನನ್ನ ಅನಂತ ಮಹಿಮೆಯನ್ನು ತಿಳಿದಿರುವವರಲ್ಲಿ ಮುಖ್ಯಪ್ರಾಣನೇ ಉತ್ತಮ ಭಕ್ತನು. ಅವನಾದರೂ ನನ್ನ ಅನುಗ್ರಹದಿಂದಲೇ ವೇದಾರ್ಥವನ್ನು ಚೆನ್ನಾಗಿ ಅರಿತಿರುವನು.

ವಿಧಿನಿಷೇಧ ರೂಪ ವೇದವಾಕ್ಯಗಳಿಗೆ ನನ್ನ ಪ್ರೀತಿಯಲ್ಲಿ ತಾತ್ಪರ್ಯವಾದುದರಿಂದಲು, ವಿವಿಧ ರೂಪಗಳು ನನ್ನ ಪ್ರತಿಬಿಂಬಗಳಾಗಿ, ನನ್ನ ಅಧೀನವಾದುದರಿಂದಲು, ವೇದಗಳೆಲ್ಲವೂ ನನ್ನ ನಾಮಗಳೆನಿಸಿ, ನನ್ನನ್ನೇ ಪ್ರತಿಪಾದಿಸುತ್ತಿವೆ ಎಂದು ನಾನೊಬ್ಬನೇ ಸಂಪೂರ್ಣವಾಗಿ ಅರಿತಿರುವೆನು. ಸಂಧ್ಯಾದ್ಯನುಷ್ಠಾನವಿಧಿಯು ನನ್ನ ಪ್ರೀತಿಗಾಗಿ; ಸುರಾಪಾನ ನಿಷೇಧವು ಕೂಡ ನನ್ನ ಪ್ರೀತಿಗಾಗಿಯೇ ಎಂದು ತಿಳಿ!

ಸುರಾಪಾನವೆಂದರೆ ಹರಿಯ ಗುಣಗಳನ್ನು ತನಗಾಗಲಿ ಎಂದು ಚಿಂತಿಸುವುದು – ಆದ್ದರಿಂದ ಸುರಾಪಾನವು ನಿಷಿದ್ಧವಾಗಿದೆ. ಬ್ರಾಹ್ಮಣನೆಂದರೆ ಗುಣಪೂರ್ಣ ವಿಷ್ಣುವು; ಅವನು ವೇದಪ್ರತಿ ಪಾದಿತನಲ್ಲವೆಂಬುದು ಬ್ರಾಹ್ಮಣಹತ್ಯೆ; ಅದೂ ನಿಷಿದ್ಧವಾಗಿದೆ. ಇಂತು ಸರ್ವವೇದ ಮುಖ್ಯಾರ್ಥ ಜ್ಞಾನಿ ರಮೆಯೇ ವೇದಮಾನಿನಿಯಾಗಿ ನನ್ನನ್ನು ಸ್ತುತಿಸುವಳು. ಅವಳ ನಿರಂತರ ವೇದಜ್ಞಾನಿ ಮುಖ್ಯಪ್ರಾಣನು ಕೂಡ ನನ್ನ ಸ್ತುತಿಲಬ್ಧ ಪ್ರಸಾದದಿಂದ ಜೀವೋತ್ತಮನೆನಿಸಿರುವನು. ಇದು ಸರ್ವವೇದಾರ್ಥರಹಸ್ಯವು; ಇದನ್ನು ನಿನಗರುಹಿರುವೆನು. ನನ್ನ ಬಿಟ್ಟನ್ಯ ಮುಖ್ಯಾರ್ಥರಿಲ್ಲವೆಂದು

ತಿಳಿದು, ನನ್ನ ಇಚ್ಛಾದಿಂದ ನಿರ್ಮಿತವಾದ ಪ್ರಕೃತಿಬಂಧವನ್ನು ನಾಶಪಡಿಸಿ, ಸ್ವಗತಭೇದ ವರ್ಜಿತನಾದ ನನ್ನ ದಯದಿಂದಲೇ ಮೋಕ್ಷವಾಗುವುದೆಂದು ನಿರೂಪಿಸಿ ವೇದವು ಕೃತಕೃತ್ಯ ವಾಗುತ್ತಿದೆ.

## ೨೨. ತತ್ತ್ವಸಂಖ್ಯಾನ – ಪ್ರಕೃತಿಬಂಧಮೋಚನ ವಿಧಾನ

ಉದ್ಧವನು ಕೇಳಿದನು–

ವಿಶ್ವೇಶ! ತತ್ತ್ವಗಳಾವುವು? ಎಷ್ಟು? ನೀನು ಇಪ್ಪತ್ತೆಂಟೆಂದೆ! ಕೆಲವರು ಇಪ್ಪತ್ತಾರೆಂಬುವರು. ಕೆಲವರು ಇಪ್ಪತ್ತೈದು, ಮತ್ತೆ ಕೆಲವರು ಒಂಬತ್ತು, ಆರು, ಏಳು, ನಾಲ್ಕು, ಹನ್ನೊಂದು, ಹದಿನೇಳು ಎಂದು ಹಲವು ಬಗೆಯಿಂದ ಹೇಳುವರು. ಆ ಋಷಿವರರು ವಿಭಿನ್ನ ವಿವಿಧ ಸಂಖ್ಯಾನ್ನವನ್ನು ಮಾಡಲು ಕಾರಣವೇನು?

ಶ್ರೀಭಗವಂತನಿಂತೆಂದನು–

ಉದ್ಧವಾ! ಅವೆಲ್ಲ ಪಕ್ಷಗಳೂ ವೇದವಿಚಾರ ಕುಶಲರಾದ ಬ್ರಾಹ್ಮಣರು ಹೇಳಿರುವುವಾದುದರಿಂದಲೂ, ನನ್ನ ಸ್ವರೂಪಸಾಮರ್ಥ್ಯವನ್ನವಲಂಬಿಸಿ ಪೇಳಿದುವಾದುದರಿಂದಲು, ಎಲ್ಲವೂ ಸರಿಯಾಗುತ್ತಿದೆ. ಅಲ್ಪಬುದ್ಧಿಗಳು ನನ್ನ ಶಕ್ತಿಯನ್ನರಿಯದೆ, ವಿವಾದಶೀಲರಾಗುವರು. ನನ್ನ ಶಕ್ತಿ ಎನಿಸದ ಲಕ್ಷ್ಮೀದೇವಿಯ ಸೊತ್ತಾದ ಅವ್ಯಕ್ತಾದಿ ತತ್ತ್ವಗಳನ್ನು ಮಿಥ್ಯಾಜ್ಞಾನಿಗಳು ಚೆನ್ನಾಗಿ ತಿಳಿಯದೆ ವಾದಿಸುವರು. ಇಂದ್ರಿಯನಿಗ್ರಹದಿಂದ ಭಗವನ್ನಿಷ್ಠಾಬುದ್ಧಿಯುಕ್ತರಿಗೆ ವಿಕಲ್ಪವೂ ಇಲ್ಲ. ವಿವಾದವೂ ಇಲ್ಲ. ಕಾರ್ಯಕಾರಣರೂಪವಾಗಿರುವ ತತ್ತ್ವಗಳು ಪರಸ್ಪರ ಪ್ರವೇಶದಿಂದ, ಹೆಚ್ಚು ಕಡಿಮೆ ಸಂಖ್ಯಾಯುಕ್ತವಾಗುತ್ತವೆಂದು ತಿಳಿ! ಅದು ಹೇಳುವರ ವಿವಕ್ಷೆಗೆ ತಕ್ಕಂತೆ ಬೇರೆ ಬೇರೆಯಾಗಿರುವುದು. ಕಾರಣದಲ್ಲಿ, ಕಾರ್ಯವು ಜೋಡಿಸಿ ಹೇಳಲ್ಪಟ್ಟಾಗ, ಸಂಖ್ಯಾನವು ಬಹುವಿಧವಾಗುತ್ತದೆ. ಯುಕ್ತಿ ಸಮ್ಮತವಾಗಿರುವುದರಿಂದ ನೀನು ಹೇಳಿದ ತತ್ತ್ವ ಸಂಖ್ಯಾಗಳೆಲ್ಲವೂ ಸರಿಯಾಗಿವೆ. ಕೇಳು!

ಅನಾದ್ಯಾಕಾಮಕರ್ಮಗಳಿಂದ ಜೀವನು ಮುಚ್ಚಲ್ಪಟ್ಟಿರುವುದರಿಂದ, ಅವನಿಗೆ ತನ್ನಿಂದ, ತನ್ನ ಸ್ವರೂಪಜ್ಞಾನವು ಆಗಲಾರದು. ಜೀವನಿಗೆ ಇರುವ ಆವರಣಗಳನ್ನು ತೊಲಗಿಸಿ, ಅವನಿಗೆ ಸ್ವರೂಪಜ್ಞಾನವನ್ನೀವನೆಂದರೆ ಸ್ವತಂತ್ರನಾದ ಶ್ರೀಹರಿಯೇ; ಒಳಗಿದ್ದು ಜ್ಞಾನವೀವ ಪುರುಷ ರೂಪಕ್ಕು, ಹೊರಗೆ ವ್ಯಾಪ್ತನಾಗಿ, ಕಾಲಪಾಚಕನಾಗಿರುವ ಬ್ರಹ್ಮ(ಈಶ್ವರ) ರೂಪಕ್ಕು ಭೇದವಿಲ್ಲ. ಅವೆರಡು ಶ್ರೀಹರಿಯ ರೂಪಗಳೇ ಆಗಿವೆ. ಶ್ರೀಹರಿಯ ರೂಪಗಳಿಗೆ ಪರಸ್ಪರ ಭೇದವನ್ನೆಣಿಸುವುದು ಅನರ್ಥಕಾರಣವಾಗಿದೆ.

ಪ್ರಕೃತಿಯ ಸತ್ತ್ವಗುಣದಿಂದ ಜ್ಞಾನವಾಗುವುದು. ಪ್ರಳಯಕಾಲದಲ್ಲಿ ಜೀವನಿಗೆ ತ್ರಿಗುಣಗಳು – ಶ್ರೀಹರೀಚ್ಛೆಯಿಂದ ನಡೆಯದೆ ಇರುವುದರಿಂದ – ಬಂಧಕವಾಗಿರಲಾರವು. ಸೃಷ್ಟಿಯಿಂದಾರಂಭಿಸಿ, ಗುಣತ್ರಯವು ಜೀವನನ್ನು ಮುಚ್ಚಿ, ತಂತಮ್ಮ ಕಾರ್ಯವನ್ನು ನಡೆಸುವುದು. ಸತ್ತ್ವದಿಂದ ಜ್ಞಾನವು, ರಜೋಗುಣದಿಂದ ಕರ್ಮವು, ತಮೋಗುಣದಿಂದ ಅಜ್ಞಾನವು ಪುಟ್ಟುವುದು. ತ್ರಿಗುಣಪ್ರಕೃತಿಯಿಂದ, ಮಹದಾದಿತತ್ತ್ವಗಳು ಪುಟ್ಟುವುವು. ಬ್ರಹ್ಮಾದಿಗಳ ಇಷ್ಟಪ್ರದನು,

ಸ್ವತಂತ್ರನು, ಸರ್ವಾಧಾರಸೂತ್ರನು ಆದ ಶ್ರೀಹರಿಯಿಂದ ಸರ್ವಾಧಾರಸೂತ್ರನಾಮಕ ಮುಖ್ಯ ಪ್ರಾಣನು ಪುಟ್ಟುವವನು.

ಪುರುಷ (ಬ್ರಹ್ಮ), ಪ್ರಕೃತಿ (ಸರಸ್ವತಿ), ಅವ್ಯಕ್ತ (ರುದ್ರ), ಅಹಂಕಾರ (ಸ್ಕಂಧ), ಆಕಾಶ ವಾಯು ತೇಜೋ ಜಲಭೂಮಿಗಳು ಕಲೆತು ಒಂಭತ್ತು ತತ್ವಗಳೆಂಬರು. ಕೆಲವರು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಹತ್ತು, ಮನಸ್ಸು ಕಲೆತು, ಹನ್ನೊಂದಿಂದ್ರಿಯಗಳೆಂಬುವರು. ಶಬ್ದ ಸ್ಪರ್ಶ ರೂಪ ರಸ ಗಂಧಗಳು, ಗತಿ, ವಚನ, ವಿಸರ್ಜನ, ಶಿಲ್ಪ, ವಚನಗಳು ಕಲೆತು ಹತ್ತಾಗುವುವು; ಸರ್ಗಾದಿಗಳಲ್ಲಿ ಜಗತ್ಕಾರಣವಾದ ಪ್ರಕೃತಿಯ ತ್ರಿಗುಣಗಳನ್ನು ಕಲೆಸಿ ಪುರಷನಾಮಕ ಹರಿಯು ಬ್ರಹ್ಮ ಸರಸ್ವತಿಯರನ್ನು ಕೂಡ ಸೃಜಿಸುವನು. ಹರಿಕಟಾಕ್ಷದಿಂದ ವಿಕಾರವನ್ನು ಪೊಂದಿ, ಬ್ರಹ್ಮಾಂಡವನ್ನು ಸೃಜಿಸುವ ಸಾಮರ್ಥ್ಯವನ್ನು ಪೊಂದುವ ತ್ರಿಗುಣಗಳೇ ಮೂರಾಗುವುವು. ಏಳು ತತ್ವಗಳೆಂದರೆ,. ಪಂಚಭೂತಗಳು ಅವುಗಳ ಮಾತ್ರೆಗಳು ಕಲೆತು ಐದೂ; ಬ್ರಹ್ಮ, ತದಭಿಮಾನಿಗಳಿಂದ ಕೂಡಿ ಏಳು, ಪಂಚಪ್ರಾಣಗಳು, ದೇಹಮಾನಿ ದಿವಾಕರ, ಜ್ಞಾನ (ಬ್ರಹ್ಮ) ಆತ್ಮ (ಹರಿ), ಪಂಚೇಂದ್ರಿಯಗಳು – ಇವು ಒಂಭತ್ತು ತತ್ತ್ವಗಳು. ಪಂಚಭೂತ ಪರಮಾತ್ಮ ಗಳಾದರೆ ಆರು. ಆಕಾಶಾದಿಗಳಿಂದ ಸೃಜಿಸಿ, ಅಲ್ಲಿ ಪ್ರವಿಷ್ಟನಾಗಿರುವ ಶ್ರೀಹರಿಯೇ ತತ್ತ್ವೇಶನು. ತೇಜೋಬಲ, ಅನ್ನ(ಪೃಥಿವಿ)ಗಳಿಂದ ಹರಿಯು ಸೇರಿ ನಾಲ್ಕು ತತ್ವಗಳು. ಭೂತಗಳು ಐದು, ಐದು ಮಾತ್ರಾಗಳು, ಐದು ಇಂದ್ರಿಯಗಳು, ಮನಸ್ಸು ಶ್ರೀಹರಿ ಕಲೆತು ಹದಿನೇಳು; ಶ್ರೀಹರಿ ಯಲ್ಲದೆ ಹದಿನೈದು; ಭೂತೇಂದ್ರಿಯ ಮನೋಬ್ರಹ್ಮ ಶ್ರೀಶರರು ಹದಿಮೂರೆನಿಸುವರು.

ಇಂತು ನಾನಾ ರೀತಿಯ ತತ್ವ ಸಂಖ್ಯಾನವು ನ್ಯಾಯವಾಗಿಯೇ ಇದೆ. ವಿದ್ವಜ್ಜನರು ತಪ್ಪಾಗಿ ನುಡಿವರೇ?

ಉದ್ಧವನು ಪ್ರಶ್ನಿಸಿದನು–

ಶ್ರೀಹರಿಯು (ಪುರುಷ) ಜಡಪ್ರಕೃತಿಯಿಂದ ಭಿನ್ನನಾಗಿರುವನಾದರೂ, ಪರಸ್ಪರವಾಗಿ ಬಿಡದಿರುವುದರಿಂದ, ಅವರ ವೈಲಕ್ಷಣ್ಯವು ಸ್ಪಷ್ಟವಾಗದೆ ಇದೆ. ಅದೇಕೆ? ಪ್ರಕೃತಿಯಲ್ಲಿ ಶ್ರೀಹರಿ ಇರುವನು. ಶ್ರೀಹರಿಯ ಅಧೀನವೇ ಆಗಿ ಅವನಲ್ಲಿದೆ ಪ್ರಕೃತಿ. ಈ ಸಂಶಯವನ್ನು ಬಿಡಿಸು. ಪದ್ಮಾರಮಣ! ನಿನ್ನಿಂದಲ್ಲದೆ ಜೀವರಿಗೆ ತತ್ವಜ್ಞಾನವಾಗುವುದೇ? ಜ್ಞಾನವನ್ನು ನೀನೀವೆ. ಜ್ಞಾನ ತಿರೋಧಾನವನ್ನೂ ನೀನೇ ಕೊಡುವೆ. ನಿನ್ನ ಪ್ರಕೃತಿಯ ರೀತಿಯನ್ನು ಸ್ವರೂಪ ಸಾಮರ್ಥ್ಯದಿಂದ ನೀನರಿತಿರುವೆ. ನಿನಗೆ ಸಮರು ಮತ್ತೊಬ್ಬರಿಲ್ಲ.

ಶ್ರೀಭಗವಂತನಿಂತೆಂದನು–

ಉದ್ಧವಾ! ಪ್ರಕೃತಿಯೇ ಬೇರೆ. ಪುರುಷನೇ ಬೇರೆ. ಅವರ ವಿವೇಕ ಜ್ಞಾನವಾಗದಿರಲು, ಪ್ರಕೃತಿಯ ಅಹಂಕಾರತತ್ವದ ಪ್ರಭಾವವೇ ಕಾರಣವಾಗಿದೆ. ಸತ್ವಾದಿಗುಣ ನಿರ್ಮಿತ (ಪ್ರಕೃತಿ) ಮಹದಹಂಕಾರತತ್ವದ ಪ್ರಭಾವವು ಕೂಡ ನನ್ನ ಪ್ರೇರಣೆಯಿಂದ ಜೀವನಿಗೆ ಅಜ್ಞಾನಕಾರಣ ವಾಗಿದೆ. ಅಹಂಕಾರತತ್ವವು ತ್ರಿವಿಧವಾಗಿದೆ. ಅಧಿದೈವ, ಅಧಿಭೂತ, ಆಧ್ಯಾತ್ಮವೆಂಬವು ಈ ಮೂರು ವಿಧಗಳು. ತೈಜಸಾಹಂಕಾರದ ಇಂದ್ರಿಯಗಳು ಆಧ್ಯಾತ್ಮವೆನಿಸುವುವು. ಹೊರಗಿರುವ ರೂಪವು ಅಧಿಭೂತವು, ಇದು ತಾಮಸಾಹಂಕಾರ ಜನ್ಯವು. ಆಕಾಶದಲ್ಲಿರುವ ಸೂರ್ಯನು ಅಧಿದೈವತವು; ಇದು ಆಧಿದೈವಿಕವು. ಆಧಿದೈವತ, ಆಧ್ಯಾತ್ಮಿಕ, ಅಧಿಭೂತಗಳು ಮೂರೂ ಇದ್ದರೇನೇ ಜ್ಞಾನವಾಗುವುದು; ಒಂದಿಲ್ಲದಿದ್ದರೂ ಜ್ಞಾನವಾಗಲಾರದು. ಪ್ರಯತ್ನಯುಕ್ತನಾದ

ಜೀವನು ಹರೀಚ್ಛೆಯಿಂದ ಎಲ್ಲ ಜ್ಞಾನವನ್ನು ಹೊಂದುವನು. ಪ್ರಯತ್ನವು ಅಹಂಕಾರ ಪ್ರಯುಕ್ತವಾದಾಗ ಭ್ರಮೆ ಪುಟ್ಟಿಸುವುದು; ಪ್ರಕೃತಿ ಪ್ರಾಕೃತ ವಿಕಾರಗಳನ್ನು ಅಡಗಿಸಿ, ಅಹಂಕಾರಜನಿತ ಭ್ರಮೆಯನ್ನು ಕಳೆದುಕೊಂಡಾಗ ಜೀವನು ಮುಕ್ತನಾಗಿ ಸ್ವರೂಪಜ್ಞಾನವನ್ನು ಪಡೆಯುವನು, ಮತ್ತು ಶ್ರೀಹರಿಯ ಪ್ರಸಾದದಿಂದ ಶ್ರೀಹರಿ ಸ್ವರೂಪವನ್ನು ಯಥಾಯೋಗ್ಯವಾಗಿ ತಿಳಿಯುವನು. ಜ್ಞಾನವನ್ನು ಮತ್ತು ಅಜ್ಞಾನವನ್ನು ಕೂಡ ಕೊಡುವ ಸ್ವತಂತ್ರಕರ್ತನು ಶ್ರೀಹರಿಯೇ ಆಗಿರುವನು. ಇದೇ ರೀತಿಯಾಗಿ ಆಧ್ಯಾತ್ಮಿಕಾಧಿದೈವಿಕಾಧಿಭೌತಿಕವೆಂದು ಮೂರು ವಿಧವಾಗಿ ತ್ವಕ್, ಶ್ರವಣ, ಜಿಹ್ವಾ, ನಾಸಾದಿಗಳಲ್ಲಿಯು ಇರುವ ರೂಪಗಳನ್ನು ತಿಳಿದು – ಅವೆಲ್ಲವು ಅನ್ಯೋನ್ಯಾಪೇಕ್ಷವು, ಅದರಿಂದ ಆಗುವ ಜ್ಞಾನವು ಸಾದಿ, ಅನಿತ್ಯವು ಎಂದು ವಿಚಾರಿಸಿ, ವಿರಕ್ತನಾಗಬೇಕು. ಈ ತ್ರಿವಿಧಾಹಂಕಾರವು ಜಗತ್ಕಾರಣವಾಗಿ ಮಾಡಲ್ಪಟ್ಟಿದೆ; ಅದಕ್ಕೆ ಮಹತ್ತೇ ಮೂಲವು; ಅದಕ್ಕೆ ಅವ್ಯಕ್ತವೇ ಕಾರಣವಾಗಿದೆ. ಮಹದಾದಿ ತತ್ವಗಳಲ್ಲಿ ಅನುಪ್ರವಿಷ್ಟನಾಗಿದ್ದರೂ, ಜೀವನಿಗಿದ್ದಂತೆ, ಶ್ರೀಹರಿಗೆ ಪ್ರಕೃತಿ ಲೇಪವಿಲ್ಲ, ಅಹಂಕಾರವಿಲ್ಲ.

ಶ್ರೀಹರಿಯು (ನಾನು) ಪೂರ್ಣ ಜ್ಞಾನಸ್ವರೂಪನು. ನನ್ನ ಯಥಾರ್ಥ ಜ್ಞಾನವು ಬಹು ದುರ್ಲಭವು; ಸಜ್ಜನರು ನಾನಿರುವೆನೆಂಬುವರು – ಅಸಜ್ಜನರು ದೇಹನಿಲ್ಲವೆಂಬುವರು; ನನ್ನ ಪ್ರೇರಣೆಯಂತೆ ಅನ್ಯಥಾಮತಿಗಳಾಗಿ ನನ್ನ ಭಕ್ತರಲ್ಲದವರಿಗೆ ಜೀವೇಶಭೇದ-ಜಡೇಶಭೇದ-ಜಡಜಡಭೇದ, ಜೀವಜೀವಭೇದ-ಜೀವಜಡಭೇದವೆಂಬುವ ಪಂಚಭೇದಗಳ ಜ್ಞಾನವಾಗುವುದಿಲ್ಲ; ಅವರಿಗೆ ಅನ್ಯಥಾಜ್ಞಾನವೇ ಹೆಚ್ಚಾಗುತ್ತಾ, ತಮಃಪ್ರಾಪ್ತಿಗೆ ಕಾರಣವಾಗುತ್ತದೆ.

ಉದ್ಧವನು ಪ್ರಶ್ನಿಸಿದನು–

ನಿನ್ನನ್ನು ಮರೆತು, ಅಹಂಕಾರದಿಂದ ಹುಟ್ಟಿ ಸಾಯುತ್ತಿರುವ ಜೀವರು, ಅನೇಕ ದೇಹಗಳಲ್ಲಿ ಸಂಸರಿಸಲು ಕರ್ಮವಲ್ಲದೆ ಬೇರಾವ ಕಾರಣಗಳಿವೆ? ಎಂತಹ ಬುದ್ಧಿವಂತನಾಗಲಿ ನಿನ್ನ ಬಂಧಕ ಶಕ್ತಿಗೆ ಸಿಲುಕಿ ದೇಹ ಬಂಧನವನ್ನು, ತನ್ಮೋಚನ ಪ್ರಕಾರವನ್ನು ತಿಳಿಯದಿರುವನು.

ಶ್ರೀಭಗವಂತನಿಂತೆಂದನು–

ಈಶಪ್ರೇರಿತವಾದ ಮನಸ್ಸು ಕರ್ಮಗಳ ಸಂಸ್ಕಾರದಿಂದ ಕೂಡಿ ಸೂಕ್ಷ್ಮೇಂದ್ರಿಯಗಳನ್ನೂ ಕರೆದುಕೊಂಡು ಒಂದು ದೇಹದಿಂದ ಇನ್ನೊಂದು ದೇಹವನ್ನು ಸೇರುವ ಜೀವನನ್ನು ಅನುಸರಿಸಿ ಹೋಗುತ್ತಿರುವುದು. ಲಿಂಗಶರೀರಯುಕ್ತನಾಗಿರುವ ಜೀವನು ವಿಷಯಗಳನ್ನು ನೋಡಿ, ಕೇಳಿ, ಅವನ್ನೇ ಧ್ಯಾನಿಸುವನು. ಅವುಗಳ ಸಂಸ್ಕಾರವು ಒಂದು ದೇಹಾಭಿಮಾನವಿರುವವರಿಗೂ ಬಿಡದಿರುವುದು ದೇಹಾಭಿಮಾನವು ಇನ್ನೊಂದು ದೇಹದಲ್ಲಿ ಪುಟ್ಟಿದಾಗ ಬಿದ್ದುಹೋದ ದೇಹದಲ್ಲಿ ಅಭಿಮಾನವಿಲ್ಲದುದರಿಂದ, ಹಿಂದಿನ ಜನ್ಮದ ವಿಷಯಗಳು ಸ್ಥೂಲ ಮನದಲ್ಲಿ ಅಳಿಸಿ ಹೊಗುವುವು. ಆದುದರಿಂದ ಹಿಂದಿನ ಜನ್ಮದ ಜ್ಞಾಪಕವಿರಲಾರದು. ಹುಟ್ಟಿದ ದೇಹದಲ್ಲಿ ಸಿಗುವ ವಿಷಯಾಭಿನಿವೇಶವೂ ತೀವ್ರವಾಗಿರುವುದರಿಂದ, ಹಿಂದಿನ ಸ್ಮರಣೆಯನ್ನು ಮನಸ್ಸು ಮತ್ತೆ ತಂದುಕೊಳ್ಳಲು ಸಮರ್ಥವಾಗದಿರುವುದು. ಕರ್ಮವಶವಾಗಿ ದೇಹದಲ್ಲಿ ಅಭಿಮಾನ ಹುಟ್ಟುವುದು; ಅದೇ ಜೀವನಿಗೆ ಜನನವು. ಕರ್ಮವಶನಾಗಿ ದೇಹದಲ್ಲಿ ಅಭಿಮಾನ ನಾಶವಾಗುವುದೇ ಮೃತಿಯು. ಕರ್ಮ ಜನನಮರಣಾದಿಗಳೆಲ್ಲವು ಸ್ವತಂತ್ರ ಶ್ರೀಹರಿವಶವಾಗಿದ್ದು, ಅಸ್ವತಂತ್ರ ಜೀವನಿಗೆ ಆಗುವುವು. ಸ್ವತಃ ನಿತ್ಯನಾದರೂ, ಜೀವನು ದೇಹಾಭಿಮಾನದಿಂದ ಹುಟ್ಟಿ ಸಾಯುತ್ತಿರುವನು. ಸ್ವಪ್ನವನ್ನು ನೋಡುತ್ತಾ ಅದೇ ಜಾಗ್ರತ್ಪದಾರ್ಥವೆಂದು ತಿಳಿಯುವುದು

ಭ್ರಮೆಯಲ್ಲವೇ? ನೋಡು! ಮನೋರಥಗಳೆಲ್ಲವೂ ಯಥಾರ್ಥಗಳೇ? ಸ್ವಪ್ನದಿಂದ ಎಚ್ಚತ್ತ ನಂತರ ಆ ವಿಷಯಗಳನ್ನು ಮರೆತುಬಿಡುವಂತೆ, ದೇಹಾಭಿಮಾನವು ಸತ್ತ ನಂತರ, ಪೂರ್ವ ಸ್ಮರಣೆಯು ಕೂಡ ಮರೆತು ಹೋಗುವುದು. ಕೆಲ ಮಹಾತ್ಮರಿಗೆ ಪೂರ್ವಜನ್ಮಗಳ ಸ್ಮರಣೆ ಶ್ರೀಹರಿ ಪ್ರಸಾದ ಲಬ್ಧ ಧ್ಯಾನಬಲದಿಂದ ದೊರೆಯುವುದು. ನೂತನ ದೇಹದ ತೀವ್ರಾಭಿಮಾನ ದಿಂದಲು ಹಿಂದಿನ ಸ್ಮರಣೆಯನ್ನು ಸಾಮಾನ್ಯ ಜೀವರು ಹೊಂದಲಾರರು.

ಜೀವನು ಹಿಂದೆ ಇದ್ದನು, ಮುಂದೆ ಇರುವನು. ಈಗಂತೂ ಇದ್ದಾನೆ – ಎಂಬ ತ್ರಿಕಾಲ ನಿತ್ಯತ್ವವು ಜೀವನಿಗಿದೆ – ಜೀವನ ದೇಹವು ನಾಶಸಹಿತವಾಗಿರುವುದರಿಂದಲು, ಸಾದಿಯಾಗಿರು ವುದರಿಂದಲು, ಅನಿತ್ಯವೆಂದು ಚೆನ್ನಾಗಿ ತಿಳಿಯಬಹುದಾಗಿದೆ. ಗಿಟಕದ ನಾರಿಕೇಲ ಕಪಾಲವು ಬೇರೆ ಮತ್ತು ಒಳಗಿನ ಫಲವೇ ಬೇರೆಯಾಗಿದೆ. ಅಂತೆಯೇ ಅನಿತ್ಯ ದೇಹದಲ್ಲಿದ್ದರೂ ಜೀವನು ನಿತ್ಯನೇ ಆಗಿರುವನು. ಒಳ ಹೊರಗೆ ವ್ಯಾಪ್ತನಾದ ಶ್ರೀಹರಿಯಿಂದ ದೇಹಯೋಗ ವಿಯೋಗ ಗಳನ್ನು, ಸುಖದುಃಖಾದಿಗಳನ್ನು, ಅವಶನಾಗಿ ಪೊಂದುವ ಜೀವನು ಶ್ರೀಹರಿ ಭಿನ್ನನೂ ಆಗಿರು ವನು. ಪ್ರಾಯಃ, ದುಷ್ಟನ ಪುತ್ರನು ದುಷ್ಟನಾಗಿರುವಂತೆ ಅನಿತ್ಯದೇಹವು ಅನಿತ್ಯ ದೇಹಜನಕವೇ ಸರಿ! ಅನಿತ್ಯ ದೇಹದಿಂದ ನಿತ್ಯ ದೇಹವು ಹುಟ್ಟಲಾರದು. ಜೀವರಿಂದ ಕೂಡಿದ ದೇಹಗಳು ಪ್ರತಿನಿತ್ಯವು ಅಂಶತಃ ನಷ್ಟವಾಗಿ, ಅಂಶತಃ ಬೆಳೆಯುತ್ತಿವೆ. ವೃದ್ಧಿಹ್ರಾಸಗಳು ಸೂಕ್ಷ್ಮವಾಗಿರು ವುದರಿಂದ ಕಾಣಬರದಿರುವುವು. ಆದರೂ ಕಾಲದಿಂದ ಬರುವ ಕೌಮಾರ, ತಾರುಣ್ಯ, ವಾರ್ಧಕ್ಯಗಳು ತಪ್ಪುವುದಿಲ್ಲ: ಅಂತೆಯೇ ದೇಹವು ಬದಲಾಗುತ್ತಿದೆ. ದೀಪದ ಜ್ವಾಲೆಗಳು ಉರಿದು, ಆರಿಹೋಗುತ್ತಿದ್ದರೂ, ಸಂತತ ಪ್ರವಾಹದಿಂದ ಅದೇ ಜ್ಯೋತಿಯೇ ಉರಿಯುತ್ತಿದೆ ಎಂಬುವ ಭ್ರಮೆಯಂತೆ ಅನಿತ್ಯ ದೇಹದಲ್ಲಿ, ನಿತ್ಯತ್ವ ಭ್ರಮೆಯು ಹುಟ್ಟುತ್ತಿದೆ. ಆದುದರಿಂದ ಆ ದೇಹವೇ ಇದೆಯೆಂದು ತಿಳಿಯದೆ, ಆ ದೇಹಗಳಲ್ಲಿ ಇದ್ದು ತತ್ತದವಸ್ಥೆಗಳನ್ನು ಸ್ವೀಕರಿಸುವ ಜೀವನು, ದೇಹಾದಿಯಿಂದ ದೇಹಾಂತದವರಿವಿಗೂ ಒಬ್ಬನೇ ಎಂದು ತಿಳಿದು, ವಿವೇಕಿ ಸುಜನರು ದೇಹಾತ್ಮಗಳ ಭೇದವನ್ನರಿತು, ಜೀವೇಶನಾದ ಶ್ರೀಹರಿಯನ್ನು ಭಜಿಸಿ, ಅನಿತ್ಯದೇಹಮುಕ್ತ ರಾಗುವರು. ಶರೀರ ಸಂಯೋಗವಿಯೋಗಗಳಿಂದ ಜೀವನು ಹುಟ್ಟಿ ಸಾಯುತ್ತಿರುವನು. ನಿತ್ಯನು, ವೃದ್ಧಿಕ್ಷಯರಹಿತನು ಆದ ಜೀವನು, ಜನನಮರಣ ಸುಖದುಃಖಾದಿಗಳಿಗೆಲ್ಲವನ್ನೂ ತನ್ನದೆಂಬ ಅಭಿಮಾನದಿಂದಲೇ ಅನುಭವಿಸುತ್ತಿರುವನು. ಕಟ್ಟಿಗೆ ಉರಿದು ಉರಿದು ಆರಿಹೋದರೆ, ಅಗ್ನಿಯೇ ನಾಶವಾಗುವನೇ? ಜೀವನಿಗೆ ನಿಷೇಕ, ಗರ್ಭವಾಸ, ಜನನ, ಬಾಲ್ಯ, ಕೌಮಾರ, ಯೌವನ, ಮಧ್ಯವಯಸ್ಸು, ಜರೆ, ಮರಣವೆಂಬ ಅವಸ್ಥೆಗಳಿಲ್ಲ; ಅವು ದೇಹಕ್ಕೆ; ಆದರೂ ಅವಿವೇಕಿಯು ಶ್ರೀಹರಿನಿಯತವಾಗಿ ಬರುವ ದೇಹಾದಿಗಳಲ್ಲಿ, ಅಭಿಮಾನವನ್ನು ಮಾಡು ವುದರಿಂದ ದುಃಖಪಡುತ್ತಿರುವನು; ಅಭಿಮಾನವನ್ನು ಬಿಟ್ಟವನು ಸುಖಪಡುತ್ತಿರುವನು. ತಂದೆಯ ದೇಹದಿಂದ ಬಂದ ತನ್ನ ದೇಹವು ಬೇರೆ. ತನ್ನ ದೇಹದಿಂದ ಪುತ್ರದೇಹವು ಬೇರೆಯೇ ಎಂದು ಯಾರರಿಯರು? ತಂದೆಯ ದೇಹವು ಮೃತವಾದದ್ದು ನೋಡಿ, ಪುತ್ರನ ದೇಹವು ಪುಟ್ಟಿದ್ದು ನೋಡಿ, ತನ್ನ ದೇಹವೂ ಹುಟ್ಟಿತ್ತು – ಮುಂದೆ ಸಾಯುವುದೆಂದು ತಿಳಿಯಲಾರದವನು ಅವಿವೇಕಿಯಲ್ಲವೇ? ನಾನು ಹುಟ್ಟಿದೆ ನಾನು ಸಾಯುವೆನೆಂಬ ಭ್ರಮೆಯನ್ನು, ಜೀವನು ದೇಹವೇ ನಾನೆಂದು ತಿಳಿದು, ಹೊಂದಿ, ಹೊಂದಿ ಕೆಡುವನಲ್ಲದೆ, ವ್ಯರ್ಥಾಭಿಮಾನವನ್ನು ಪರಿತ್ಯಜಿಸಿ, ನನ್ನನ್ನು ಭಜಿಸುವನೇ?

ಉದ್ಧವ! ಕೇಳು! ತರುವಿನ ಬೀಜ, ಕಡಿದ ಕಟ್ಟಿಗೆಗಳನ್ನು ನೋಡಿ ಜನನಮರಣಗಳು ತಪ್ಪುವುದಿಲ್ಲವೆಂದರಿತು, ಬೀಜಕಾಷ್ಠಗಳಿಂದ ಭಿನ್ನವಾದ ತರುಜೀವನಂತೆ ತಾನೂ ದೇಹ ಭಿನ್ನನೆಂದು ತಿಳಿಯುವನೇ ವಿವೇಕಿಯು. ಜೀವನಿಯಾಮಕನಾದ ಕರ್ಮನಿರ್ಮಿತ ವಿವಿಧ ಶರೀರಗಳನ್ನು ಕೊಡುವ ಶ್ರೀಹರಿಯು ಜೀವಭಿನ್ನವೆಂದೂ ತಿಳಿಯುವವನೇ ವಿವೇಕಿಯು. ಪುಣ್ಯಕರ್ಮದಿಂದ ಋಷಿದೇವ ದೇಹಗಳು, ಮಿಶ್ರಕರ್ಮದಿಂದ ಅಸುರಮಾನುಷ ದೇಹಗಳು, ಪಾಪಕರ್ಮದಿಂದ ಭೂತಪಶ್ವಾದಿ ದೇಹಗಳು ಬರುವವೆಂದಮೇಲೆ ಜೀವನು ಕರ್ಮನಿರ್ಮಿತ ಶರೀರನಲ್ಲ – ತದ್ವಿಲಕ್ಷಣನಾದರು ಕೂಡ-ಕುಣಿದು ಪಾಡುವವರನ್ನು ನೋಡಿ ಅನುಕರಿಸುವರಂತೆ – ಮನಸ್ಸಿನ ಅಭಿಮಾನವನ್ನು ಆಗುವ ದುಃಖಾದಿಗಳನ್ನು, ಮನೋಧೀನನಾಗಿ ಜೀವನು ಅನುಭವಿಸುವನು. ಶ್ರೀಹರಿಯ ಅನುಗ್ರಹದಿಂದ ಅಖಿಲ ದುರಭಿಮಾನವು ನಷ್ಟವಾದಾಗ ಜೀವನಿಗೆ ತಾನು ದುಃಖಾದ್ಯನುಭವಯೋಗ್ಯನಲ್ಲವೆಂಬ ಅರಿವಾಗುವುದು. ಅಲ್ಲಾಡುವ ನೀರಿನಲ್ಲಿ ಮೂಡಿದ ಪ್ರತಿಬಿಂಬವು ಅಲ್ಲಾಡಿದಾಗ ದಡದಲ್ಲಿದ್ದ (ಬಿಂಬ) ವೃಕ್ಷವೂ ಅಲ್ಲಾಡಿತೆಂದು ತಿಳಿವಳಿಕೆ ಮತ್ತು ತಾನು ತಿರುತಿರುಗಿ ನೋಡಿದಾಗ ಭೂಮಿಯು ತಿರುಗುತ್ತಿದೆ ಎಂದು ತಿಳಿವಂತೆ, ಮನೋರಥ ಗಳೆಲ್ಲ ನಿಜವೆಂದು ತಿಳಿವಂತೆ, ಸ್ವಪ್ನಸುಖಾದಿಗಳು ಜಾಗ್ರತ್ ಸುಖವೆಂದು ತಿಳಿವಂತೆ, ಸಂಸಾರವು ಸುಖಮಯವೆಂದು ತಿಳಿವೂದೂ ವ್ಯರ್ಥವಾಗಿದೆ. ಅಲ್ಪ ಪ್ರಯೋಜನವಾದ ಸಂಸಾರವು ಜೀವನಿಗೆ ಇಲ್ಲದ ಸುಖದುಃಖಾದಿಗಳನ್ನು ವಿಷಯ ಸಂತತ ಧ್ಯಾನದಿಂದ ತಂದೊಡ್ಡುವುದು.

ಆದುದರಿಂದ ಉದ್ಧವಾ! ಅಸದಿಂದ್ರಿಯಗಳ ಆಳಾಗಬೇಡ! ಕೆಟ್ಟ ವಿಷಯವಿಷವನ್ನು ತಿಂದು ಹಾಳಾಗಬೇಡ! ಜೀವ ಪರಮಾತ್ಮನ ವೈಲಕ್ಷಣ್ಯವನ್ನು ತಿಳಿಯದವನಿಗೆ ಭ್ರಮೆ ದುಃಸಹವಾದ ವಿಪಯೋಪದ್ರವವು ಬಂದೊದಗಿದರೂ, ಅದನ್ನು ದೂರಮಾಡುವ ಗೋಜಿಗೆ ಹೋಗಬೇಡ! ವಿಷಯಗಳಿಂದ ಮನಸ್ಸನ್ನೇ ಬಿಡಿಸಿ, ಸಂಸಾರಸಾಗರ ತರಣ ಸಾಧನ ಚರಣನಾದ ರಮಾರಮಣ ನನ್ನು ಶರಣಾಗತನಾಗು!

ದುರಾತ್ಮರು ಬೈದರೂ, ಅಗೌರವಿಸಿದರೂ, ಮೋಸಮಾಡಿದರೂ, ಅಪಹರಿಸಿದರೂ, ಕಟ್ಟಿ ಹಾಕಿ ಹೊಡೆದರೂ, ಜೀವಿಕೆಯನ್ನು ಕೆಡಿಸಿದರೂ, ವಿಷ್ಠಾಮೂತ್ರಗಳನ್ನು ಮೇಲೆಸೆದರೂ ಏನು ಮಾಡಿದರೂ, ವಿಷ್ಣುಧರ್ಮದಿಂದ ಚಲಿಸದೆ, ಶ್ರೇಯಸ್ಕಾಮನಾದವನು, ಕಷ್ಟವನ್ನು ತುಳಿದಿಟ್ಟು, ಧೀರರಾಗಿ, ತನ್ನನ್ನು ತಾನು ಮನೋಮಂದಿರಗತ ರಮಾಪತಿಯ ನಿರಂತರ ಸ್ಮರಣೆಯ ಸಹಾಯ ದಿಂದ ಉದ್ಧರಿಸಿಕೊಳ್ಳಲು ಪ್ರಯತ್ನಿಸಬೇಕು.

ಉದ್ಧವನು ಕೇಳಿದನು–

ಶ್ರೀಕೃಷ್ಣ! ನಮಗೆ ನಡೆಯುವ ಅವಮಾನವನ್ನು ಸಹಿಸುವುದೆಂದು? ಅಸಜ್ಜನರು ಪೀಡಿಸಿ ದಾಗ, ವಿದ್ವಾಂಸರೂ ಕೂಡ ಕೋಪಿಸಿ ಪ್ರತೀಕಾರ ಮಾಡುವರು. ದೇಹಾಭಿಮಾನವು ಸ್ವಾಭಾವಿಕ ವಾಗಿದೆ. ನೀನೊಬ್ಬನಲ್ಲದೆ ಮತ್ತಿನ್ನಾರಿಗೂ ಪೂರ್ಣಾಭಿಮಾನ ರಾಹಿತ್ಯವು ಲಭಿಸುವುದಿಲ್ಲ. ನಿನ್ನ ದಯೆಯಿಂದ ನಿನ್ನ ಚರಣಾಶ್ರಯಣಪಾರೀಣರಾದ ಬ್ರಹ್ಮಾದಿ ಭಕ್ತರಿಗೂ ಯಥಾಯೋಗ್ಯ ವಾಗಿ ದೇಹಾಭಿಮಾನವು ದೂರವಾಗಿದೆ.

## ೨೩. ಭಿಕ್ಷುಗೀತೆ

ಶ್ರೀಶುಕನು ಹೇಳಿದನು–

ಭಾಗವತವರ ಉದ್ಧವನ ಮಾತನ್ನಾಲಿಸಿ ಕರ್ಣಮನೋಹರ ಕಥಾಶ್ರಯನಾದ ಕೃಷ್ಣನು ಅವನನ್ನು ಮೆಚ್ಚಿ ಇಂತೆಂದನು-

ಉದ್ಧನಾ! ಜೀವರಾಶಿಯಲ್ಲಿ ಸುಜೀವರು ಬಾಹ್ಯಶತ್ರುಗಳ ಪೀಡೆಯನ್ನು, ಇನ್ನೂ ಪ್ರಯತ್ನಿಸಿ ಅಂತಃಶತ್ರುಗಳ ಪೀಡೆಯನ್ನು ತಡೆದು, ನಿರ್ವಿಕಾರನಾಗಿರುವರು. ದುರ್ಜನರ ದುರುಕ್ತಿಗಳು ದುಃಖವನ್ನು ಕೊಡಲು ಅಸಮರ್ಥವಾಗುವಂತೆ ಮಾಡಿ, ಸಮಾಹಿತಮನಸ್ಕರಾಗಿರುವರು.

ನಿಜ! ಯುದ್ಧದಲ್ಲಿ ಬಾಣಗಳು ನಟ್ಟಿದರೆ ಆಗುವ ದುಃಖಕ್ಕಿಂತಲು, ಕುಜನರ ಕುಚೇಷ್ಟೆಗಳಿಂದ ಹೆಚ್ಚು ನೋವಾಗುವುದು. ಆದರೂ ಧೀರರು ಸರ್ವದುಃಖಗಳನ್ನು ಶ್ರೀಹರೀಚ್ಛಾಪ್ರಾಪ್ತವೆಂದರಿತು, ಸಹಿಸಿ, ನಿಶ್ಚಿಂತರಾಗಿರುವರು. ತನ್ನ ಕರ್ಮಫಲವೆಂದರಿತು, ಬಂದ ಕಷ್ಟಗಳನ್ನು ಧೈರ್ಯದಿಂದ ಸಹಿಸಿ, ದುರ್ಜನರ ಪೀಡೆಯ ಸಿಡಿಲನ್ನು ಶ್ರೀನಾರಾಯಣ ಸ್ಮರಣ ಕವಚದಿಂದ ತಡೆದ ಅವಂತೀ ಭಿಕ್ಷುವಿನ ಕಥೆಯನ್ನು ಕೇಳು!

ಅವಂತಿಯಲ್ಲಿ ಧನಿಕನಾದ ಬ್ರಾಹ್ಮಣನೋರ್ವನಿದ್ದನು. ಬಡ್ಡಿಯ ಧನವನ್ನು ಗಳಿಸಿ, ತಿನ್ನದೆ, ಕೊಡದೆ, ಕೂಡಿಟ್ಟು, ದೀನನಾಗಿ, ಆ ಲೋಭಿಯು ಧನವನ್ನು ಬೇಡುವವರನ್ನು ಕಂಡು– ಹೆಂಡಿರು ಮಕ್ಕಳೆನ್ನದೆ, ಅವರಿಗೂ ಕೊಡದೆ – ಕೋಪಿಸಿ, ಕೆಂಡವಾಗಿ ಉರಿಯುತ್ತಿದ್ದನು. ಅತಿಥಿಗಳನ್ನು ಬಂಧುಜನರನ್ನು ನೋಡಿ ಸಿಡಿದು, ಮಾತನ್ನಾದರೂ ಆಡಿಸದೆ, ಹೊರದೂಡುತ್ತಿದ್ದನು. ಮನೆಯಲ್ಲಿ ಹಣವಿದ್ದರೆ ಮಡದಿ ಮಕ್ಕಳು ಕೇಳುವರೆಂದು, ಕಾಲಕಾಲದಲ್ಲಿ ಬರುವ ಹಬ್ಬ ಹುಣ್ಣಿಮೆಗಳಿಗೆ ವ್ಯಯವಾಗುವುದೆಂದು, ಬೇರೆಯವರಿಗೆ ಬಡ್ಡಿಗಾಗಿ ಕೊಟ್ಟು, ಬರಿಗೈಯ ಬರಡನಾಗಿರುತ್ತಿದ್ದನು. ಅವನನ್ನು ನೋಡಿ ಅವನ ಮಡದಿ ಮಕ್ಕಳು ಕೂಡ ಪ್ರೀತಿಸದೆ – ಸತ್ತರೆ ಸಾಕೆಂದು ಕೋರಿ, ಕೊರಗುತ್ತಿದ್ದರು. ಇಂತು ಯಕ್ಷವಿತ್ತನಾಗಿ ಉಣದೆ, ಕೊಡದೆ, ಉಭಯಲೋಕ ಸುಖವನ್ನು ಸಾಧಿಸದೆ ಇದ್ದ ಅವನನ್ನು, ಧರ್ಮಕಾಮಗಳೊಡನೆ ದೇವತೆಗಳೂ ಕೈಬಿಟ್ಟರು. ಪಂಚಯಜ್ಞಗಳಿಂದ ದೇವ, ಋಷಿ, ಪಿತೃ, ನರ, ಭೂತಗಳನ್ನು ತಣಿಸದಿದ್ದ ಅವನ ಪುಣ್ಯದ ಬೇರು ಒಣಗಿ ಧನವೃಕ್ಷವು ಸತ್ತಿತು. ಕಷ್ಟದಿಂದ ಸಂಪಾದಿಸಿದ ಧನವು ಕೈಗೆ ಬಾರದಾಯಿತು. ಜ್ಞಾತಿಗಳು ಕಸಿದುಕೊಂಡರು; ಕಳ್ಳರು ಕೈಕೊಂಡರು; ಕಾಲವು ಧಾನ್ಯಾದಿಗಳನ್ನು ಕೆಡಿಸಿತು. ದೇವತೆಗಳು ಫಲಾದಿಗಳನ್ನು ಕೊಡದಾದರು. ರಾಜರು ದಂಡಿಸಿ ಅಪಹರಿಸಿದರು.

ಇಂತು ನಿರ್ಧನನಾಗಿ ಅವಂತೀದ್ವಜನು, ಸ್ವಜನತಿರಸ್ಕಾರದಿಂದ ನೊಂದು, ಧರ್ಮಕಾಮಗಳಿಲ್ಲದ ಅರ್ಥವೆಂಬ ಅಗ್ನಿಯಲ್ಲಿ ಬೆಂದು, ಚಿಂತಾಕ್ರಾಂತನಾದನು. ಮತ್ತೂ ಕಾಲ ಕಳೆದಂತೆ ಜರಾಕ್ರಾಂತನೂ ಆದನು. ಕಣ್ಣೀರಿನಲ್ಲಿ ಕೈತೊಳೆಯುತ್ತಾ ಪಶ್ಚಾತ್ತಾಪದಿಂದ ತೊಳೆದು, ಶುದ್ಧನಾದನು. ಅವನ ಮನಃಪದ್ಮವು ವೈರಾಗ್ಯಭಾಸ್ಕರನ ಉದಯದಿಂದ ಅರಳಿ ನಿಂತಿತು. ಅವನಿಂತು ಚಿಂತಿಸಿದನು–

'ಅಹೋ ಈ ದೇಹವನ್ನೆಷ್ಟು ಕಷ್ಟಪಡಿಸಿದೆ! ಧರ್ಮಕ್ಕೆ ಕೊಡದ, ಕಾಮಗಳಿಗೆ ಉಣದಿದ್ದ ನನ್ನ ಅರ್ಥವೇತಕ್ಕೆ? ವ್ಯರ್ಥವಾಗಿ ಕೂಡಿಟ್ಟು ಲೋಭಿಯಾದ ನನಗೆ ಅದರಿಂದ ಸುಖವಾಗಲಿಲ್ಲ. ಇಲ್ಲಿ ಉಡದೆ, ಉಣ್ಣದೆ ಕೆಟ್ಟೆ! ಅಲ್ಲಿ ಕೊಡದಿದ್ದ ನನಗೆ ಯಾವ ನರಕಗಳು ಕಾದಿವೆಯೋ!

ಯಶೋವಂತರ ಗುಣಗಳು, ವೀರ್ಯ, ಶೀಲ, ಪಾಂಡಿತ್ಯ, ಸೌಂದರ್ಯ, ತಪೋಬಲ, ಧರ್ಮ, ನೀತಿ, ಮೊದಲಾದವು ನಿಜ! ಆದರೆ ಲೋಭವೊಂದೇ ಸಾಕು; ಆ ಗುಣಗಳನ್ನೆಲ್ಲವನ್ನು ಅದು–ಸೌಂದರ್ಯರಾಶಿಯನ್ನು ಶ್ವೇತಕುಷ್ಠದಂತೆ – ಹಾಳು ಮಾಡಿ ಬಿಡುವುದು.

ಸಂಪಾದಿಸುವಾಗ ಆಯಾಸವನ್ನು, ಹೆಚ್ಚಿಸುವಾಗ ಸ್ಪರ್ಧಾತ್ರಾಸಗಳನ್ನು, ವೆಚ್ಚಿಸುವಾಗ ಚಿಂತೆಯನ್ನು, ನಾಶವಾಗುವಾಗ ಬುದ್ಧಿಭ್ರಮೆಯನ್ನು ಪುಟ್ಟಿಸಿ, ತಾನೂ ವಶವಾಗಿ, ಅವನನ್ನೂ ಕೆಡಿಸುವ ಧನವನ್ನು ಅರ್ಥವೆಂದೇಕೆ ಕರೆದರೋ! ಕಳ್ಳತನ, ಹಿಂಸೆ, ಸುಳ್ಳು, ದಂಭ, ಕಾಮ, ಕ್ರೋಧ, ಅಹಂಕಾರ, ಮದ, ವಿರೋಧ, ಅವಿಶ್ವಾಸ, ಸಂಸ್ಪರ್ಧೆ, ದುರ್ವ್ಯಸನ, (ಪಾನ, ದ್ಯೂತ, ವ್ಯಭಿಚಾರ) ವೈರಗಳೆಂಬ ಹದಿನೈದು ಅನರ್ಥಗಳಿಗೆ ಕಾರಣವಾಗಿರುವ ಧನವನ್ನು ಅನರ್ಥವೆನ್ನ ಬೇಕಾಗಲಿ, ಅರ್ಥವೆಂಬಲ್ಲ. ಅದನ್ನು ಶ್ರೇಯಸ್ಕಾಮನು ವರ್ಜಿಸುವುದೊಳಿತು. ಸೋದರರು, ದಾರಾಸುತರು, ಹಿರಿಯರು, ಮಿತ್ರರು, ಮತ್ತಿತರರು ಅರ್ಥದಿಂದ ಹಿತವರು; ಅರ್ಥವಿಲ್ಲದಾಗ ಸರ್ವಪ್ರಾಣಿಗಳು ಶತ್ರುಗಳಾಗಿಬಿಡುವರು. ಸ್ವಲ್ಪ ಧನದ ನೆವದಿಂದ ಕಲಹವಾಡಿ, ಕೊಂದು, ಸಾಯುವ ಜನರನ್ನು ನಾವು ನೋಡಿಲ್ಲವೇ?

ದೇವತೆಗಳು ಕೂಡ ಸಾಧನವಿಶೇಷವನ್ನು ಬಯಸಿ, ಬೇಡಿ ಪಡೆಯುವ ಮನುಷ್ಯ ಜನ್ಮವು ಬಂದಾಗ, ಅದರಲ್ಲಿಯು ವಿಪ್ರನಾದಾಗ, ಅರ್ಥವೇ ಶುಭವೆಂದು ಭ್ರಮಿಸಿ, ಅರ್ಥಸಾಧನೆಗಾಗಿ ಮನುಜ ಶರೀರವನ್ನು ವ್ಯರ್ಥವಾಗಿ ಹಾಳುಮಾಡುವವರಿಗಿಂತ ಅವಿವೇಕಿಗಳುಂಟೇ? ಇದು ಸ್ವರ್ಗಾಪವರ್ಗಗಳು ದ್ವಾರವಲ್ಲವೇ? ಅನರ್ಥಕವಾದ ಅರ್ಥಕ್ಕೆಂದು ಇಂತಹ ಶರೀರವನ್ನು ವ್ಯರ್ಥವಾಗಿಸಬಹುದೇ? ಅಕಟಾ! ದೇವತೆಗಳನ್ನರ್ಚಿಸಲಿಲ್ಲ; ಋಷಿಗಳನ್ನು ಓದಿ ಮೆಚ್ಚಿಸಲಿಲ್ಲ.; ಪಿತೃಗಳನ್ನು ಶ್ರಾದ್ಧಾದಿಗಳಿಂದ ಪೂಜಿಸಲಿಲ್ಲ; ಭೂತಗಳಿಗೆ ಬಲಿಯನ್ನು ನೀಡಲಿಲ್ಲ. ನರರಿಗೆ ಅನ್ನಾದಿಗಳನ್ನು ಕೊಡಲಿಲ್ಲ; ಯಾರಿಗೂ ಹಂಚದೆ, ನಾನೂ ಭುಜಿಸದೆ, ಧನವನ್ನು ಕೂಡಿಟ್ಟು, ನರಕಭಾಜನನಾದೆ. ಪ್ರಮತ್ತನಾದವನಿಗೆ ವಿತ್ತಾದಿಗಳಿಂದ ಶ್ರೇಯಸ್ಸಾಧನವಾಗುವುದಿಲ್ಲ. ವಯೋಬಲಗಳು ಕೆಟ್ಟು ಮುದುಕನಾದ ನನಗಿನ್ನಾವ ಶ್ರೇಯಸ್ಸಾಧನ? ಸುಮ್ಮನೆ ಕೆಲಸಕ್ಕೆ ಬಾರದ ಧನವನ್ನು ಗಳಿಸಲು ಕಷ್ಟಪಟ್ಟು ಬೆಂಡಾದೆ. ಲೋಕವಿಲಕ್ಷಣನಾದ ಶ್ರೀಹರಿಯ ಬಂಧಕ ಶಕ್ತಿಯಲ್ಲದೆ, ಜನರು ಧನ ಕಾಮಿನೀಲೋಲರಾಗಿ ಕೆಡುವ ಕಾರಣ ಬೇರಿಲ್ಲ.

ಮೃತ್ಯುವಿನ ಬಾಯಲ್ಲಿ ಸಿಕ್ಕಿರುವ ನನಗಿನಿಗೆ ಧನದಿಂದೇನು? ಧನವನ್ನು ಕೊಡುವ ಜನ ರಿಂದೇನು ಕಾಮಗಳಿಂದೇನು? ಕಾಮವನ್ನು ಪೂರೈಸುವ ದಾರಾಸುತರಿಂದೇನು? ಇತರ ಜನ್ಮಗಳಿಗೆ ಕಾರಣವಾದ ಕರ್ಮಗಳಿಂದೇನು ಪ್ರಯೋಜನ? ಭಗವಾನ್! ಶ್ರೀಶಾ! ನಿನ್ನ ದಯೆ ಎಂಬ ಬೆಳಕಿನಲ್ಲಿ ನಿಂತೆ. ಕಣ್ತೆರೆದೆ. ನೀನಾಗಿ ನಿರ್ಧನನನ್ನಾಗಿರಿಸಿ, ನನಗೆ ವೈರಾಗ್ಯ ಭಾಗ್ಯವನ್ನು ದಯಪಾಲಿಸಿದೆ. ವೈರಾಗ್ಯವನ್ನು ಹಡಗನ್ನಾಗಿಸಿ, ಸಂಸಾರನದಿಯನ್ನು ದಾಟಿ ಬಿಡುವೆನು. ಮಿಕ್ಕ ಜೀವಿತರನ್ನು ತಪಕ್ಕಾಗಿ ಮೀಸಲಿಟ್ಟು, ಮೈಮರೆಯದೆ, ವಿಷಯುಗಳನ್ನು ಸೇರದೆ, ನಿನ್ನ ಚರಣಾರವಿಂದ ಭಜಕನಾಗುವೆನು. ದಯೆದೋರು ಹರೇ! ನಮೋ ನಮಃ! ದೇವತೆಗಳಿರಾ! ದಯಮಾಡಿ ನನಗೆ ವಿಘ್ನಗಳನ್ನು ತರಬೇಡಿ! ನನ್ನ ಸಾಧನ ಸಂಪತ್ತು ಪೂರ್ಣವಾಗುವಂತೆ ಅನುಗ್ರಹಿಸಿ! ಅಲ್ಪನೆಂದು ಕಡೆಗಣಿಸಬೇಡಿ! ಒಂದೇ ಮುಹೂರ್ತದ ಸಾಧನೆಯಿಂದ ಬ್ರಹ್ಮ ಲೋಕವನ್ನು ಸೇರಲಿಲ್ಲವೇ ಖಟ್ವಾಂಗ ಮಹಾರಾಜನು?

ಶ್ರೀಭಗವಂತನಿಂತೆಂದನು–

ಇಂತು ನಿಶ್ಚಯಿಸಿ ಆ ಬ್ರಾಹ್ಮಣೋತ್ತಮನು ಹೃದಯಸಂಶಯವನ್ನು ಬಿಚ್ಚಿ ಬಿಸುಟು, ಮೌನವನ್ನು ತಾಳಿ, ಶಾಂತನಾದನು. ಪ್ರಾಣಪ್ರಸಾದದಿಂದ ಇಂದ್ರಿಯಗಳನ್ನು ವಶದಲ್ಲಿಟ್ಟನು. ಭಿಕ್ಷಾರ್ಥವಾಗಿ ನಗರ ಗ್ರಾಮಗಳಿಗೆ ಗೊತ್ತಾಗದಂತೆ ಬಂದು, ಭಿಕ್ಷಾನ್ನವನ್ನು ಬೇಡಿ, ನದೀತೀರ ವನ್ನು ಸೇರಿ, ಅಲ್ಲಿ ಅದನ್ನು ಉಣ್ಣುತ್ತಿದ್ದನು. ಆ ಮುದುಕ ಅವಧೂತನನ್ನು ಗರ್ವಾಂಧರಾದ ದುರ್ಜನರು ಪರಿಭವಿಸುತ್ತಿದ್ದರು. ಕೆಲವರು ತ್ರಿದಂಡವನ್ನು, ಕೆಲವರು ಕಮಂಡಲುವನ್ನು, ಕೆಲವರು ಪೀಠವನ್ನು, ಅಕ್ಷಮಾಲೆಯನ್ನು ಕಸಿದುಕೊಂಡರು. ಕೆಲವರು ಅವನ ಹಳೆಯ ಕಂಥೆ ಯನ್ನು, ಚೀರವಸ್ತ್ರವನ್ನು ತೆಗೆದು, ಹರಿದುಹಾಕಿದರು. ಭೀಕ್ಷಾನ್ನವನ್ನು ನದೀತೀರದಲ್ಲಿ ಉಣ್ಣು ತ್ತಿದ್ದ ಅವನ ತಲೆಯಮೇಲೆ ಮೂತ್ರವನ್ನು ಮಾಡಿ ಉಗುಳಿದರು. ಅನ್ನದಲ್ಲಿ ಕಶ್ಮಲವನ್ನು ಹಾಕಿ, ಉಣದಂತೆ ಮಾಡಿದರು. ಮೌನಿಯಾದವನನ್ನು ಕೆಣಕಿದರು; ಮಾತಾಡದಿರಲು ಹೊಡೆ ದರು. ಹೆದರಿಸಿದರು. ಕಳ್ಳನಿವನೆಂದು ಕೈಗಳನ್ನು ಕಟ್ಟಿದರು. ಕಟ್ಟು! ಕೊಲ್ಲು! ಎಂದು ಕೂಗಾಡಿ ನಿಂದಿಸಿದರು. 'ಈ ಧರ್ಮಧ್ವಜನನ್ನು ನೋಡಿರೋ! ಧನವನ್ನೆಲ್ಲ ಕಳೆದುಕೊಂಡು ಈ ವೇಷವನ್ನು ಹಾಕಿರುವನು. ಎಷ್ಟು ಧೈರ್ಯವಿವನಿಗೆ! ಬೆಟ್ಟದಂತೆ ಗಟ್ಟಿ ಮುಟ್ಟಾಗಿರುವನು. ಬಕಮೌನದಿಂದ ಏನಂದರೂ ಸುಮ್ಮನಿದ್ದು, ತನ್ನ ಹೊಟ್ಟೆಯೊರೆದುಕೊಳ್ಳುತ್ತಿರುವನು' ಎಂದು ಆ ಪಾಪಿಷ್ಠರು ನಕ್ಕು, ನಿಂದಿಸಿ, ಕಟ್ಟಿ ಹಾಕಿದರು; ಬಿಚ್ಚಿದರು; ಇಂತು ಬಹುವಿಧ ಹಿಂಸೆಗೊಳಗಾಗಿ ಆ ಬ್ರಾಹ್ಮಣಾವಧೂತನು, ಅದೆಲ್ಲವೂ ತನ್ನ ಕರ್ಮಫಲವೆಂದು ನಿಶ್ಚಯಿಸಿ, ಸುಮ್ಮನಿದ್ದನು. ಮತ್ತು ನಾನಾ ಪೀಡೆಗಳನ್ನೀವ ನರಾಧಮರನ್ನು ನೋಡಿ, ಸ್ವಧರ್ಮವನ್ನು ಬಿಡದೆ, ಸ್ವಾಭಾವಿಕ ವಾಗಿ ಸಾತ್ವಿಕನಾದುದರಿಂದ ಹೆದರದೆ, ಚಲಿಸದೆ, ಇಂತು ಚಿಂತಿಸಿದನು–

ಆ ಜನರು ನನಗೆ ಸುಖವನ್ನಾಗಲಿ, ದುಃಖವನ್ನಾಗಲಿ ಕೊಡುವ ಸ್ವಾತಂತ್ರ್ಯ ಉಳ್ಳವರಲ್ಲ. ದೇವತೆಗಳೂ ಅಲ್ಲ. ದೇಹವೂ ಅಲ್ಲ. ಗ್ರಹಗಳೂ ಅಲ್ಲ. ಕರ್ಮವೂ ಅಲ್ಲ. ಕಾಲವೂ ಅಲ್ಲ. ನನ್ನನ್ನು ಸಂಸಾರ ಚಕ್ರದಲ್ಲಿ ಅಹಂಕಾರ ಮಮಕಾರಗಳೆಂಬ ಪಾಶದಿಂದ ಕಟ್ಟಿ, ಅನೇಕ ಯೋನಿ ಗಳಲ್ಲಿ ತಿರುಗಿಸುತ್ತಿರುವ ಮನಸ್ಸೇ ಸುಖ ದುಃಖ ಕಾರಣವಾಗಿದೆ – ಹೀಗೆಂದು ಜ್ಞಾನಿಗಳು ಹೇಳುವರು.

ಪ್ರಾಕೃತ ಲಿಂಗಶರೀರ ರೂಪವಾದ ಮನಸ್ಸು. ಪ್ರಳಯದಲ್ಲಿ ಸೂಕ್ಷ್ಮವಾಗಿದ್ದು, ಸೃಷ್ಟಿಕಾಲ ದಲ್ಲಿ ತ್ರಿಗುಣಗಳಿಂದ ಮೂರು ವಿಧವಾಗಿ, ಬಾಹ್ಯಾವಯವಗಳಿಂದ ಕೂಡಿ, ಸ್ಥೂಲವಾಗುವುದು. ಅದು ಆಗ ಬಲಿಷ್ಠವಾಗಿ ಕಾರ್ಯಕಾರಣ ಸಮರ್ಥವಾಗುವುದು. ಸಾತ್ವಿಕಮನದಿಂದ ಪಾಪ ಕರ್ಮವು (ಶುಕ್ಲ), ರಾಜಸಮನದಿಂದ ಮಿಶ್ರಕರ್ಮವು (ಲೋಹಿತ), ತಾಮಸಮನದಿಂದ ಪಾಪ ಕರ್ಮವು ನಡೆಯುವುದು. ಆ ಕರ್ಮಗಳಿಗೆ ತಕ್ಕಂತೆ ಫಲವೂ ತ್ರಿವಿಧವಾಗಿರುವುದು. ಮನಸ್ಸು ಶ್ರೀಹರಿವಶವಾಗಿ ಕಾರಣವಾಗಿದೆ ಆಗಲಿ ಸ್ವತಂತ್ರವಾಗಿ ಅಲ್ಲ. ಶ್ರೀಹರಿಯು ಅಕ್ಲಿಷ್ಟಕಾರಿ ಯಾಗಿದ್ದಾನೆ. ಅವನು ಮನಸ್ಸಿನಿಂದಾಗುವ ಕರ್ಮವೆಲ್ಲವನ್ನು ಕರ್ಮಲೇಪವಿಲ್ಲದೆ ಪೂರ್ಣಾ ನಂದವಾಗಿ ಮೇಲೆ ನಿಂತು ಸಾಕ್ಷಿಯಾಗಿ ನೋಡುತ್ತಿರುವನು. ಅವನ ದಾಸನಾಗಿರುವ ನನಗೆ ದುಃಖವಿಲ್ಲವೆಂದಮೇಲೆ ಶ್ರೀಹರಿಗೆ ದುಃಖವೆಲ್ಲಿಯದು? ಅಚೇತನವಾದರೂ ಮನಸ್ಸು, ವಿಷಯಾಸಕ್ತನಾದ ಜೀವನಿಂದ ಕೂಡಿ ದುಃಖಾದಿ ಕಾರಣವಾಗಿದೆ – ಮನಸ್ಸಿಲ್ಲದೆ ಪುರುಷನಿರ ಬಲ್ಲನೇ? ದೇಹಾಭಿಮಾನದಿಂದ ಜೀವನು ಮನಸ್ಸಿನ ಅನುಭವವನ್ನು ಸ್ವೀಕರಿಸಿ, ಅನುಭವಿಸುತ್ತಿ

ರುವನು. ಆದುದರಿಂದ ಮನೋನಿಗ್ರಹವಿಲ್ಲದವನಿಗೆ ಸಂಸಾರನಿವೃತ್ತಿಯೂ ಇಲ್ಲ. ದಾನ, ಧರ್ಮಾಚರಣೆ, ಯಮನಿಯಮಾನುಷ್ಠಾನ, ವೇದಾಧ್ಯಯನ, ವ್ರತ, ಕರ್ಮಗಳೆಲ್ಲವೂ ಮನೋನಿಗ್ರಹವನ್ನೇ ಫಲವಾಗಿರಿಸಿ ಮಾಡಲ್ಪಡತಕ್ಕವಾಗಿದೆ. ಮನಸ್ಸಮಾಧಾನವೇ ಮಹಾಯೋಗವು. ಯಾವ ನರನಿಗೆ ಮನಸ್ಸು ಜಿತವಾಗಿ ಸಮಾಧಾನದಿಂದ ಇದೆಯೋ, ಅವನಿಗೆ ದಾನಾದಿಗಳಿಂದ ಆಗತಕ್ಕ ಪ್ರಯೋಜನವು ಪೂರ್ಣವಾಗಿದೆ. ಯಾವ ನರನು ಮನಸ್ಸಮಾಧಾನವಿಲ್ಲದೆ ವಿಷಯ ಲಾಲಸನಾಗಿರುವನೋ, ಅವನಿಗೆ ದಾನಾದಿಗಳಿಂದ ಪ್ರಯೋಜನವಿಲ್ಲ; ಅವನ್ನು ಮಾಡಿದರೂ ವ್ಯರ್ಥವೆಂದೇ ತಾತ್ಪರ್ಯವು.

ಮನಸ್ಸಿನ ದೇವನು ಮಹಾದೇವನು. ಅವನು ಬ್ರಹ್ಮಸರಸ್ವತೀ, ಲಕ್ಷ್ಮೀನಾರಾಯಣರ ವಶವಾಗಿರುವನು. ಆದರೆ ಇತರ ಇಂದ್ರಿಯ ದೇವತೆಗಳ ವಶನಾಗಿಲ್ಲ. ಇಂದ್ರಿಯ ದೇವತೆಗಳಾದ ಇಂದ್ರಾದಿ ದೇವತೆಗಳು ತಮ್ಮ ಸ್ವಾಮಿಯಾದ ಭೀಮ(ರುದ್ರ)ನ ವಶರಾಗಿ ನಡೆಯುವನು. ರುದ್ರನು ಅತಿಶಯ ಸಹನಶಕ್ತಿವಂತನಾದುದರಿಂದ ಬ್ರಹ್ಮಾದಿಗಳ ನಾಲ್ಕುಮಂದಿಯ ಅನುಗ್ರಹ ವಿಲ್ಲದೆ, ರುದ್ರನಿಂದ ನಡೆಸಲ್ಪಡುತ್ತಿರುವ ಮನೋವೇಗವನ್ನು ಯಾರೂ ತಡೆಯಲಾರರು. ಮನಸ್ಸು ತ್ರಿವಿಧವಾಗಿದೆ. ಸಾತ್ತ್ವಿಕಮನವು ರುದ್ರಾಧೀನವಾಗಿ ಪುಣ್ಯಕರ್ಮ ಕಾರಣವಾಗಿದ್ದಂತೆ, ತಾಮಸಮನವು ಕಾಲನೇಮಿದೈತ್ಯನ ಅಧೀನವಾಗಿರಿಸಲ್ಪಟ್ಟು ಪಾಪಕರ್ಮವನ್ನು ಮಾಡಿಸುತ್ತಿದೆ. ಆ ಕಾಲನೇಮಿಯು ಶ್ರೀಹರಿಯಿಂದಲೇ ಸಂಹೃತವಾಗಬೇಕಾಗಿದೆ. ಆದುದರಿಂದ ರುದ್ರನು ಕೂಡ ಅವನಿಗೆ ಜಿತನಾಗಿ ಶ್ರೀಹರಿ ವಿರೋಧವನ್ನು ಮಾಡುವುದುಂಟು.

ಇಂತಹ ತಾಮಸ ಮನವು ದೊಡ್ಡ ಶತ್ರುವಾಗಿ ನಮ್ಮನ್ನು ಶ್ರೇಯೋವಿಮುಖರನ್ನಾಗಿ ಮಾಡುತ್ತಿರುವುದು. ವಾಯುವಿನನ್ನು ಬಂಧಿಸಲಾಗದಂತೆ ಅದನ್ನು ಕಟ್ಟಿಡಲಾಗದು. ಮಹಾವೇಗ ದಿಂದ ಬಂದು, ಹುಣ್ಣಿನ ಮೇಲೆ ಉಪ್ಪನ್ನು ಎರಚಿದಂತೆ ದುಃಖವನ್ನು ಕೊಡುವ ಪಾಪಿ ಮನ ವನ್ನು, ಸ್ವೇಚ್ಛಾವಿಹಾರ ಮಾಡೆಂದು ಬಿಟ್ಟು ಕೆಲವರು ಮೂಢರು ಜೀವರಾಶಿಯಲ್ಲಿರುವ ಹರಿಮಿತ್ರರೊಡನೆ ಕಲಹವಾಡಿ, ಹರಿಶತ್ರುಗಳೊಡನಾಡುತ್ತಿರುವರು. ಇಂತು ಕಾಲನೇಮಿಯು ಹರಿಭಕ್ತರಲ್ಲದ ಜನರನ್ನು ಕೆಡಿಸುವೆನೆಂದು ತಿಳಿದು, ಶ್ರೀಹರಿಯ ದಯದಿಂದ ಅವನನ್ನು ಜಯಿಸಿ, ಪಾಪದಿಂದ ದೂರಾಗಿ, ಶ್ರೀಮಹಾದೇವನ ಸಾತ್ತ್ವಿಕ ಮನೋವ್ಯಾಪಾರವನ್ನು ನಡೆಸಿ ಶ್ರೀಸರಸ್ವತಿ ಬ್ರಹ್ಮ ರಮಾರಮಣರ ಪರಮಾನುಗ್ರಹದಿಂದ, ಸಂಸಾರ ಮುಕ್ತನಾಗುವುದು ವಿವೇಕಿ ಸುಜನನ ಕರ್ತವ್ಯವಾಗಿದೆ.

ಮನಸ್ಸಿನ ಸಂಸ್ಕಾರ ಕರ್ಮಗಳಿಗನುಸಾರವಾಗಿ ಬಂದಿರುವ ಶರೀರವು, ಭೌತಿಕವಾಗಿರಲು, 'ನಾನು, ನನ್ನದು' ಎಂದು ಭ್ರಮಿಸಿ, ಮನುಷ್ಯರು– 'ಈ ದೇಹ ನಾನು–ಆ ದೇಹ ಅವನು' ಎಂದು ದುರಹಂಕಾರದಿಂದ ಕರ್ಮಗಳನ್ನು ಮಾಡಿ ಕೊನೆಯಿಲ್ಲದ ಸಂಸಾರ ಶರಧಿಯಲ್ಲಿ ಮುಳಗಿ, ತೇಲಿ ಕಷ್ಟಪಡುತ್ತಿರುವರು. ದೇಹವೇ ನಾನೆಂದು ತಿಳಿದು – ನಾನು ಮಾಡುವೆನೆಂಬ ಸ್ವಾತಂತ್ರ್ಯವನ್ನು ಹೊತ್ತು, ಕುರುಡನಾಗಿ ಹೋಗುತ್ತಿರುವ ದುರ್ಮನಸ್ಕನಿಗೆ ತಮಸ್ಸೇ ಗತಿ.

ಮನಸ್ಸು ಸುಖದುಃಖಕಾರಣವಾಗಿದೆ ನಿಜ! ಆದರೆ ಅಭಿಮಾನ ಸಹಿತವಾದರೇನೇ ಅದು ಪೀಡಿಸುವುದು ಜೀವನನ್ನು. ಅಭಿಮಾನ ಬಿಟ್ಟ ಜೀವನಿಗೆ ಅದು ಬಂಧಕವಲ್ಲ. ಇಂತು ನಿರ್ಣಯಿಸಿ, ಸುಜೀವನು, ಸುಖ, ದುಃಖಾದಿಗಳು ತನ್ನ ಕರ್ಮಫಲರೂಪವಾಗಿ ತನಗೆ ಶ್ರೀಹರಿಯ ಇಚ್ಛೆಯಿಂದ ಬರುವಾಗ, ಇತರ ಜೀವದೇಹಾದಿಗಳು ನಿಜವಾದ ಕಾರಣರಲ್ಲವೆಂದು ತಿಳಿದು,

ಸಹಿಸಿ, ನಿಶ್ಚಿಂತನಾಗಿರುವನು; ಅವನು ದುಃಖಕಾರಣರೆಂದು ಯಾರಲ್ಲಿಯೂ ಕೋಪಿಸುವುದಿಲ್ಲ.

ಪರದೇಹವು ಸುಖ ದುಃಖ ಕಾರಣವಾಗಲಾರದು. ಏಕೆಂದರೆ ಗಿಟಿಕದಲ್ಲಿದ್ದಂತೆ ಇರುವ ಅಭಿಮಾನರಹಿತ ಜೀವನಿಗೆ, ದೇಹದ ದುಃಖವು ಎಂತು ಬರುವುದು? ಆ ದೇಹವನ್ನು ಈ ದೇಹವು ಹೊಡೆದರೆ, ನಿರ್ಲಿಪ್ತನಾದ ಜೀವನಿಗೆ ದುಃಖವಿಲ್ಲ. ತನ್ನ ನಾಲಿಗೆಯನ್ನು ತಾನೇ ಹಲ್ಲಿನಿಂದ ಕಚ್ಚಿಕೊಂಡಾಗ ಯಾರ ಮೇಲೆ ಸಿಟ್ಟಾಗಲಾದೀತು? ಹಲ್ಲನ್ನು ಮುರಿಯುವೆಯೋ? ನಾಲಿಗೆಯನ್ನು ಕೀಳುವೆಯೋ? ಎರಡೂ ಇಲ್ಲ. ಆದುದರಿಂದ ದೇಹವಲ್ಲ ದುಃಖಕಾರಣ– ಅಭಿಮಾನವೇ ಕಾರಣ.

ದೇವತೆಗಳು ದುಃಖಕಾರಣವೆಂಬುವುದೂ ಸರಿಯಲ್ಲ. ದೇಹಾಂಗ ದೇವತೆಗಳಿಂದ ಪರಸ್ಪರ ಪೀಡೆಯಾದಾಗ ನಿರ್ಲಿಪ್ತಜೀವನಿಗೆ ದುಃಖವಿಲ್ಲ – ಅಭಿಮಾನವನ್ನು ಬಿಟ್ಟು ಜೀವನು ನಿರ್ದುಃಖ ನಾಗಬೇಕಾಗಲು, ಸ್ವಾಮಿ ದೇವತೆಗಳ ಮೇಲೆ ಸಿಟ್ಟಾಗಿ ಪ್ರಯೋಜನವಿಲ್ಲ. ಕೈಬೆರಳಿನಿಂದ ಕಣ್ಣನ್ನು ಚುಚ್ಚಿಕೊಂಡಾಗ, ಸಹಿಸುವುದೇ ಅನಿವಾರ್ಯವಾಗಿದೆ. ಆಗಲಿ ಕೈಯನ್ನು ಕಡಿಯಲು ಬರುವುದೇ? ಆದುದರಿಂದ ದೇವತೆಗಳೂ ಸ್ವತಃ ಕಾರಣರಲ್ಲ.

ಮನಸ್ಸು ಕೂಡ ಸ್ವತಃ ಕಾರಣವಲ್ಲ. ಅಭಿಮಾನವಿದ್ದರೇನೇ ಮನವು ಸುಖದುಃಖಾದಿ ಕಾರಣವಾಗಿದೆ. ಸ್ವತಃ ದುಃಖವನ್ನೇ ಕೊಡುವುದೆಂದರೆ ಅದರಿಂದ ವಿಲಕ್ಷಣನು ಸುಖರೂಪನು ಆದ ಚೇತನನಿಗೆ ಅದು ದುಃಖವನ್ನು ತಾನಾಗಿ ಕೊಡಲಾರದು. ಮನಸ್ಸು ದುಃಖವನ್ನು ಕೊಡುವುದು, ಜೀವನು ಸುಖರೂಪನು ಎಂದು ಅಂಗೀಕರಿಸಿದಾಗ ಪರಸ್ಪರ ವಿಲಕ್ಷಣ ಜೀವ ಮನಸ್ಸುಗಳಿಗೆ ಅಭಿಮಾನರೂಪ ಸಂಬಂಧವಿಲ್ಲದೆ, ಸುಖದುಃಖಾದಿ ಅನುಭವವಾದರೂ ಹೇಗಾಗುವುದು? ಜೀವನು ಸುಖರೂಪನು – ಜಪಾಕುಸುಮವು ಶಂಖದ ಹತ್ತಿರ ಬಂದಾಗ ತನ್ನ ಕೆಂಪು ವರ್ಣವನ್ನು ಅದಕ್ಕೆ ಕೊಟ್ಟಂತೆ, ಮನಸ್ಸು ದುಃಖವನ್ನು ಕೊಡುವುದೆಂದರೆ ಜೀವಸ್ವಭಾವನಾದ ಸುಖವೇ ಕೆಟ್ಟುಹೋದಂತಾಯಿತು! ಆದುದರಿಂದ, ಸುಖರೂಪವಾದ ಜೀವರೂಪವು ದುಃಖಾರೂಪವಾಗುವುದಿಲ್ಲ. ದುಃಖರೂಪನಾದ ಜೀವರೂಪವೂ ಸುಖರೂಪವಾಗುವುದಿಲ್ಲ. ಆದುದರಿಂದ ಮನಸ್ಸು ಮಾತ್ರ ಸುಖ-ದುಃಖ ಕಾರಣವಲ್ಲ – ಜೀವಾಭಿಮಾನಯುಕ್ತ ಮನವೇ ಸುಖದುಃಖಾಪಾದಕವಾಗಲು ಸಮರ್ಥವಾಗಿದೆ – ಎಂದು ತಿಳಿಯಬೇಕು.

ತನ್ನ ದೇಹವೇ ತನಗೆ ದುಃಖವನ್ನು ನೀಡುವುದೆಂದರೆ ನಿಜ – ಅದು ಅವಿವೇಕಿಯಾದವನಿಗೆ. ಸ್ವತಃ ಜನ್ಮರಹಿತನು ಮಮತೆಯನ್ನು ಬಿಟ್ಟವನು ಆದ ವಿವೇಕಿ ಜೀವನಿಗೆ ದೇಹವು ಸ್ವತಃ ದುಃಖಾಪಾದಕವಾಗಲಾರದು. ದೇಹನಿಮಿತ್ತ ಪೀಡಾದಿಗಳು ದೇಹಕ್ಕೇ ಆಗಲಿ ಜೀವನಿಗಲ್ಲ. ಅಭಿಮಾನವು ಹುಟ್ಟಿದಾಗ ಮಾತ್ರ ಅದರಿಂದ ಆಗುವ ಕ್ಷುತ್ಪಿಪಾಸಾ ಜರಾದಿ ಪೀಡೆಗಳು ಮನಸ್ಸಿನ ದ್ವಾರಾ ಜೀವನಿಗೆ ಆಗುವುದೆಂದರಿತು ವಿವೇಕಿಯು ಅಭಿಮಾನವನ್ನು ತೊರೆದು ನಿಶ್ಚಿಂತನಾಗಬೇಕಾಗಲಿ, ಯಾರಮೇಲೆ ಸಿಟ್ಟಾಗಿ ಏನೂ ಪ್ರಯೋಜನವಿಲ್ಲ.

ಕರ್ಮಗಳು ದುಃಖಕಾರಣವೆಂಬುವುದೂ ಸರಿಯಿಲ್ಲ. ಅಜಡನಾದ ಜೀವನಿಗೆ ಜಡವಾದ ಕರ್ಮಗಳಿಂದ ಹಾನಿಯಾಗಲಾರದು. ಜಡಾತ್ಮಕ ಮನಸ್ಸಿಗೆ ಕರ್ಮಫಲ ದುಃಖವಾಗಲಿ! ಆದರೂ ದೇಹದಲ್ಲಿ ತದ್ಭಿನ್ನನಾದ ತನ್ನನ್ನೂ, ಸ್ವಭಿನ್ನ ಸ್ವಾಮಿಯಾದ ಭಗವಂತನನ್ನೂ ಅರಿತ ಜ್ಞಾನಿಯು, ತನ್ನ ಸುಖರೂಪವನ್ನು ನೋಡಿ ತಿಳಿದು, ದುಃಖವನ್ನು ಕೊಟ್ಟ ಯಾರ ಮೇಲೂ ಸಿಟ್ಟಾಗದಿರು

ವನು. ಕರ್ಮವೇನು ಮಾಡಿತು? ಮನಸ್ಸೇ ಅಭಿಮಾನ ಮೂಲಕ ದುಃಖವನ್ನಿತ್ತಿತೆಂದು ತಿಳಿದು ಬ್ರಹ್ಮಜ್ಞಾನಿಯು ಸಮಾಧಾನದಿಂದಿರುವನು.

ಕಾಲವೇ ದುಃಖವನ್ನು ತಂದೊಡ್ಡಿತೆಂಬುವುದೂ ಸರಿಯಲ್ಲ – ನಿತ್ಯಸುಖಿಯಾದ ಜೀವನಿಗೆ ಆಯಾ ಕಾಲದ ದುಃಖಾದಿಗಳಿಂದ ಬಾಧಕವಿಲ್ಲ. ಜೀವನು ಶ್ರೀಹರಿಪ್ರತಿಬಿಂಬನಾಗಿ ಕಾಲದಿಂದ ಹಾಳಾಗುವನಲ್ಲ; ದೇಹವು ಕಾಲಾಧೀನವಾಗಿ ಹಾಳಾಗುವುದೆಂದರೆ ಹೋಗಲಿ, ಜಡವಾದ ದೇಹಕ್ಕೆ ಪೀಡೆಯಾಗುವುದಾದರೂ ಹೇಗೆ? ಅಗ್ನಿಯನ್ನು ಅಗ್ನಿಯಿಂದ ಸುಡಲಾಗುವುದೇ? ಹಿಮಕ್ಕೆ ಚಳಿಯುಂಟೇ? ಆದುದರಿಂದ ಜಡದೇಹದಲ್ಲಿ ಬಂದ ಹರಿಗೂ ದುಃಖವಿಲ್ಲ; ಅವನು ಅಪ್ರಾಕೃತ ದಿವ್ಯಮಂಗಳ ವಿಗ್ರಹನಾಗಿರುವನು. ಇನ್ನು ಅಜ್ಞನಾದ ಜೀವನು ಮನೋಭಿಮಾನವಶನಾಗಿ ದೇಹಗತ ದುಃಖ[illegible]ನ್ನು [illegible]ಯುತ್ತಿರುವನೆಂದು ತಿಳಿದ ವಿವೇಕಿಯು ಯಾರಮೇಲೆ ಕೋಪಿಸುವನು?

ಎಲ್ಲರ ಮನೋನೇತನಾಗ ರುದ್ರನಿಗೂ, ಇಂದ್ರಿಯ ದೇವತೆಗಳಿಗೂ ಜೀವದೇಹಗತ ಸುಖದುಃಖಾದಿಗಳಿಲ್ಲದಿರಲು, ಅಭಿಮಾನರಾಹಿತ್ಯವೇ ಕಾರಣವಾಗಿದೆ. ರುದ್ರನು ಪ್ರಾಣ ವಶನಾಗಿರುವು. ಆ ಸರ್ವಜೀವೋತ್ತಮನು ಶ್ರೀರಮಾನಾರಾಯಣರ ವಶವರ್ತಿಯಾಗಿರುವನು. ಶ್ರೀಹರಿಯು, ದೇಹದಲ್ಲಿ ಮನೋವಶನಾಗಿ ದುಃಖಪಡುವ ಜೀವನಲ್ಲವಾದುದರಿಂದ, ದೇಹದಲ್ಲಿ ಸ್ವತಂತ್ರ ನಿಯಾಮಕನಾಗಿರುವುದರಿಂದ, ನಿತ್ಯಪ್ರಕೃತಿವಿಕಾರರಹಿತ ಸುಖದೇಹನಾದುದರಿಂದ, ಅವನಿಗೆ ಯಾವ ದುಃಖವೂ ಇಲ್ಲ; ಇಂತು ತಿಳಿದ ನನಗೂ ಯಾವ ದುಃಖವೂ ಇಲ್ಲ. ನನ್ನನ್ನು ಖಲರು ಏನು ಮಾಡುವರು? ಯಾರು ಒಲಿದರೇನು? ನಮಗೆ ಯಾರು ಮುನಿದರೇನೋ? ವಾರಿಜನಾಥ ಶ್ರೀ ವಸುದೇವಸುತನ ಒಲುವೆ ಉಳ್ಳ ಹರಿದಾಸರಿಗೆ ಯಾರೇನು ಮಾಡಿದರೇನು?

ಇಂತು ಮನಸ್ಸಂಯಮನದಿಂದ ಸುಖಿಯಾಗಿ, ಪೂರ್ವ ಮಹರ್ಷಿಗಳು ಹಾಕಿಕೊಟ್ಟ ಭಕ್ತಿ ಮಾರ್ಗದಲ್ಲಿ ನಡೆಯುತ್ತಾ, ದುರಂತಪಾರವಾದ ಸಾಂಸಾರಿಕವಾರಾಶಿಯನ್ನು ದಾಟಿ, ಮುಕುಂದ ಚರಣಾರವಿಂದ ಸೇವಾಸಮಾಸಾದಿತ ವೈರಾಗ್ಯಜ್ಞಾನಭಕ್ತಿಭಾಗ್ಯನಾಗಿ, ಮುಕ್ತನಾಗಲು ಪ್ರಯತ್ನಿಸುತ್ತಿರುವೆನು.

ಶ್ರೀಭಗವಂತನಿಂತೆಂದನು–

ಇಂತು ವೈರಾಗ್ಯದಿಂದ ಸನ್ಯಸಿಸಿ ಅವಂತಿಯ ಅವಧೂತನು ಅಸಜ್ಜನರ ಅವಮಾನಾದಿಗಳನ್ನು ಅವಗಣಿಸಿ, ಸ್ವಧರ್ಮದಿಂದ ಚಲಿಸದೆ, ನುಡಿದ ಗಾಥೆಯನ್ನು ನಿನಗೆ ನಾನು ನಿರೂಪಿಸಿರುವೆನು. ಮನಸ್ಸಿನ ವಿವಿಧ ಭ್ರಮೆಗಳಿಗೊಳಗಾಗದೆ – ಮಿತ್ರ, ರಿಪು, ಉದಾಸೀನ, ಎಂಬ ಸಂಸಾರವೆಲ್ಲವು ಅಭಿಮಾನ ನಿಮಿತ್ತವೆಂದರಿತು, ಅಭಿಮಾನವನ್ನು ಬಿಟ್ಟು, ಸರ್ವಾತ್ಮನಾ ಮನಸ್ಸನ್ನು ಬುದ್ಧಿಯ ಕೈಲಿಟ್ಟು, ನನ್ನನ್ನೆ ಚಿಂತಿಸಿ, ಪಾರಾಗಲು ಪ್ರಯತ್ನಿಸುವುದೇ ಸರ್ವ ಯೋಗ ಸಾರವಾಗಿದೆ. ಈ ಭಿಕ್ಷುಗೀತೆಯನ್ನು ಕೇಳಿ, ಶ್ರೀಹರಿಯ ಉತ್ಕರ್ಷಜ್ಞಾನಪೂರ್ವಕ ಮನೋನಿಗ್ರಹವನ್ನು ತಾಳಿದವನು ದ್ವಂದ್ವಾತೀತನಾಗಿ ಸುಖಿಸುವನು.

## ೨೪. ಸಾಂಖ್ಯ – ಸೃಷ್ಟಿಲಯ ವಿಚಾರ

ಶ್ರೀಭಗವಂತನಿಂತೆಂದನು–

ಉದ್ಧವಾ! ಈಗ ನಿನಗೆ ಯಥಾರ್ಥಜ್ಞಾನವನ್ನು ಹೇಳುವ ಸಾಂಖ್ಯವನ್ನು ಹೇಳುವೆನು. ಅದರಿಂದ ಅನ್ಯಥಾಜ್ಞಾನವು ನಶಿಸುವುದು. ಪೂರ್ವಋಷಿಗಳು ನಿಶ್ಚಯಿಸಿರುವಂತೆ ಸರಿಯಾಗಿ ಹೇಳುವೆನು. ಸೃಷ್ಟಿಸಮಯದಲ್ಲಿ ಅರ್ಥದಂತೆ ಜ್ಞಾನವಿತ್ತು – ಒಂದು ಪದಾರ್ಥವನ್ನು, ಇನ್ನೊಂದ ನ್ನಾಗಿ ತಿಳಿಯುವ ಭ್ರಮೆ ಇದ್ದಿಲ್ಲ. ಕೃತಯುಗದ ಆದಿಯಲ್ಲಿ ಜನರು ಸಾತ್ವಿಕರಾಗಿ, ಬುದ್ಧಿ ದೌರ್ಬಲ್ಯರಹಿತರಾಗಿದ್ದುದರಿಂದ ಅವರ ಜ್ಞಾನವು ಏಕಪ್ರಕಾರವಗೇ ಇತ್ತು. ಆಮೇಲೆ ಜೀವನ ಸ್ವಭಾವ ಯೋಗ್ಯತೆಗಳಿಗೆ ತಕ್ಕಂತೆ ಫಲಪ್ರದವಾದ ನಾನು ತಾಮಸಾದಿ ಜೀವಬುದ್ಧಿಗಳಿಗೆ ಶಬ್ದಾರ್ಥಗಳು ಹುಟ್ಟುವಂತೆ ನಾನಾ ವಿಧವಾಗಿ ಸಂಕಲ್ಪಿಸಿದೆನು. ತ್ರೇತೆಯಲ್ಲಿ ಜ್ಞಾನವು ಏಕಪ್ರಕಾರವಾಗಿರದೆ – ಇದೋ, ಅಥವಾ ಅದೋ ಎಂಬ ಸಂಶಯಾಸ್ಪದವಾಗಿ ಎರಡು ಪ್ರಕಾರ ವಾದರೆ, ದ್ವಾಪರದಲ್ಲಿ ಜ್ಞಾನವು ಜ್ಞಾನವಲ್ಲ, ಅನ್ಯಥಾ ಜ್ಞಾನವೇ ಜ್ಞಾನವೆಂದು ತಿಳಿಯಲ್ಪಟ್ಟು – ಎರಡು ಪ್ರಕಾರವಾಯಿತು.

ಚೆನ್ನಾಗಿ ವಿಷಯಗಳನ್ನು ತಿಳಿದವನಿಗೆ ಜ್ಞಾನ ಅರ್ಥಗಳೆರಡೂ ಒಂದೇ ರೀತಿಯಾಗಿರುವುವು. ಜ್ಞಾನ ಅರ್ಥಗಳ ದೇವತೆಗಳು ಬ್ರಹ್ಮ ಗಾಯತ್ರಿಯರೆಂದು ತಿಳಿ. ಅರ್ಥಾಭಿಮಾನಿನಿಯಾದ ಗಾಯತ್ರಿಯು ಶ್ರೀದೇವಿ ವಿಷ್ಣುರಿಂದ ಸೃಷ್ಟಳಾಗಿ, ಅವರ ಅನುಗ್ರಹದಿಂದ ಅರ್ಥಾಭಿಮಾನಿ ಯಾಗಿರುವಳು. ಜ್ಞಾನವು ಪುರುಷನಾಮಕ ಬ್ರಹ್ಮನಿಂದ ನಿಯಮಿತವು. ಅವನೂ ಶ್ರೀದೇವೀ ವಿಷ್ಣು ಸೃಷ್ಟನಾಗಿ ಅವರಿಂದ ಅನುಗೃಹೀತನಾಗಿರುವನು. ಪುರುಷ ಬ್ರಹ್ಮನಿಗೆ ಗಾಯತ್ರೀ ಸಾವಿತ್ರೀ ಸರಸ್ವತಿಯರಲ್ಲಿ ಸೂತ್ರನಾಮಕವಾಯುವು, ಸೂತ್ರನಿಗೆ ರುದ್ರನು ಪುಟ್ಟಿದರು; ಸೂತ್ರನ ಜತೆ ಯಾಗಿ ಪುಟ್ಟಿದ ಚತುರ್ಮುಖನ ಮನಗೇ ಅನಂತನು, ಅನಂತನ ಮಗನು ರುದ್ರನು; ಬ್ರಹ್ಮನ ಮಗನಾದ ರುದ್ರನು ಮೂರನೆಯ ರುದ್ರನು. ಬ್ರಹ್ಮಪುತ್ರನು ವೈಕಾರಿಕ ರುದ್ರನು. ವಾಯುಪುತ್ರನು ತೈಜಸ ರುದ್ರನು; ಅನಂತಪುತ್ರನು ತಾಮಸರುದ್ರನು; ಸೂತ್ರನು ಸರ್ವಾಧಾರನಾಗಿರುವುದು ನನ್ನಿಂದ ಎಂದು ತಿಳಿ! ಚೇತನಾಚೇತನ ನಿಯಾಮಕನಾದ ರುದ್ರನಿಂದ ವೈಕಾರಿಕ ದೇವತೆಗಳು, ಮನಸ್ಸೂ, (ತೈಜಸ) ಇಂದ್ರಿಯಗಳೂ, ಪಂಚಭೂತಗಳೂ (ತಾಮಸ) ಜನಿಸಿದವು. ಅವರಲ್ಲಿ ನಾನು ಪ್ರವೇಶಿಸಿ, ಪ್ರೇರಿಸಿ, ಶಕ್ತಿಯನ್ನಿತ್ತೆನು.

ನನ್ನಿಂದ ಪ್ರೇರಿಸಲ್ಪಟ್ಟು, ಇಪ್ಪತ್ತುನಾಲ್ಕು ತತ್ವದೇವತೆಗಳು ಕಲೆತು, ಬ್ರಹ್ಮಾಂಡವನ್ನು ಸೃಜಿಸಿದರು. ಅದು ನನ್ನ ಮನೆ. ಅದರಲ್ಲಿ ನಾನು ಪುರುಷರೂಪದಿಂದ ಪ್ರಾದುರ್ಭೂತನಾದೆನು. ನನ್ನ ನಾಭಿಯಲ್ಲಿ ಲೋಕಾತ್ಮಕ ಕಮಲವು ಪುಟ್ಟಿ, ಅದರಿಂದ ಚತುರ್ಮುಖನು ಉದಿಸಿದನು. ಅವನು ನನ್ನನುಗ್ರಹದಿಂದ, ತಪಸ್ಸು ಮಾಡಿ, ಸರ್ವಲೋಕಗಳನ್ನು, ಲೋಕಪಾಲಾದಿಗಳನ್ನು ಸೃಜಿಸಿದನು. ದೇವತೆಗಳಿಗೆ ಮನೆಯಾದ ಸ್ವರ್ಗಲೋಕವನ್ನು ಮನುಜನ ಮನೆಯಾದ ಭೂಲೋಕ ವನ್ನು, ಅಸುರಾದಿ ನಿವಾಸವಾದ ಅಧೋಲೋಕವನ್ನು, ಭೂತನಿಲಯ ಭುವರ್ಲೋಕವನ್ನು, ಸಿದ್ಧರ ನಿವಾಸವೆನಿಸುವ ಮಹರಾದಿ ಲೋಕಗಳನ್ನು ನಿರ್ಮಿಸಿ, ತ್ರಿವಿಧ ಕರ್ಮಗಳಿಗೆ ಪ್ರಾಪ್ತಿ ಸ್ಥಾನಗಳನ್ನಾರಿಸಿದನು. ಯೋಗ, ತಪೋ, ಜ್ಞಾನಗಳಿಗೆ ಮಹರ್ಜನಸ್ತಪಸ್ಸತ್ಯ ಲೋಕಗಳು, ನನ್ನ ಭಕ್ತರಿಗೆ, ವೈಕುಂಠಲೋಕವು ಸಿಗುವುವು. ವಿಷ್ಣುಭಕ್ತರಲ್ಲದವರಿಗೆ, ಊರ್ಧ್ವಲೋಕಗಳಿಲ್ಲ. ಭಕ್ತಿ ಜ್ಞಾನಗಳು ಕ್ರಮವಾಗಿ ಹೆಚ್ಚಾದಂತೆ ಮಹರಾದಿ ಊರ್ಧ್ವಗತಿಗಳು ಸಿಗುವುವು.

ಜ್ಞಾನಾತ್ಮಕನು, ಕಾಲಕರ್ಮಾದಿ ಪ್ರೇರಕನು, ಸ್ವತಂತ್ರನೂ ಆದ ನನ್ನಿಂದ ಪ್ರೇರಿತವಾಗಿ ಈ ಜಗವು ಸೃಷ್ಟಿಸಂಹಾರ ಸಮುದ್ರದಲ್ಲಿ ಮುಣುಗಿ ತೇಲುತ್ತಿದೆ. ಈ ಜೀವ ಜಡಾತ್ಮಕವಾದ ಜಗವು, ತ್ರಿಕಾಲೀನವು, ಅಣುಮಹದಾದಿ ಬಹುರೂಪವು ಆಗಿದೆ. ಅದೆಲ್ಲವೂ ಶ್ರೀದೇವಿ, ನಾರಾಯಣ, ವಾಣೀಬ್ರಹ್ಮನಿಂದ ಪ್ರೇರಿತನಾಗಿ, ಅವರ ಅಧೀನದಲ್ಲಿದೆ. ಸತ್ವಾದಿಗಳಿಂದ ಮಹದಾದಿಗಳು ಹುಟ್ಟುತ್ತವೆ. ಸತ್ವಾದಿಗಳಲ್ಲೇ ಎಲ್ಲ ತತ್ವಗಳು ಲಯವಾಗುತ್ತಿವೆ. ಮಧ್ಯದಲ್ಲಿಯೂ ಸತ್ವಾದಿ ಗುಣಗಳ ವ್ಯಾಪಾರವು ಇದ್ದೇ ಇದೆ. ಉಪಾದಾನ ಕಾರಣವಾದ ಲೋಹಮೃದಾದಿಗಳು ಕಾರ್ಯವಾದ ಘಟಾದಿಗಳಿಂದ ಭಿನ್ನವಾಗಿಲ್ಲ. ಒಂದಂಶದಿಂದ ನಷ್ಟವಾದಾಗಲೂ ಭೇದಾಭೇದವೇ ಆಗಲಿ, ಭೇದವಿಲ್ಲದಿರುವಂತೆ ಗುಣಗಳಿಗೂ ತತ್ವಗಳಿಗೂ ಭೇದವಿಲ್ಲ. ಪರಮಾತ್ಮನು ಕುಲಾಲನಂತೆ ನಿಮಿತ್ತಕಾರಣನಾಗಿ, ಸತ್ವಾದಿ ಗುಣದೂರನಾಗಿರುವನು. ಅವನ ಸಾಮರ್ಥ್ಯದಿಂದ ಕಾರ್ಯಕಾರಣಾತ್ಮಕವಾದ ಜಗವು ವಿಕಾರವನ್ನು ಹೊಂದಿ ವಿವಿಧ ರೂಪವಾಗಿದೆ. ಅವನು ಸ್ವತಂತ್ರನಾದುದರಿಂದ ನಿರ್ವಿಕಾರನಾಗಿ, ಜಗತ್ತಿನ ಆದಿಮಾಧ್ಯಾವಸಾನಗಳಲ್ಲಿಯೂ ಶಶ್ವದೇಕ ಪ್ರಕಾರನಾಗಿ ವಿರಾಜಿಸುತ್ತಿರುವನು. ಜಗತ್ತಿನ ಕಾರಣವಾದ ಪ್ರಕೃತಿಗೆ ಸರಸ್ವತಿಯು, ಜೀವರಿಗೆ ಹಿರಣ್ಯಗರ್ಭನು ನಿಯಮಕರಾಗಿ ಶ್ರೀಹರಿಯಿಂದ ನಿಯಮಿಸಲ್ಪಟ್ಟಿರುವರು. ಜಗತ್ತಿನ ಉಪಾದಾನವಾದ ಮಹತ್ತತ್ತ್ವ, ಕಾಲ, ಹಿರಣ್ಯಗರ್ಭ (ವ್ಯಂಜಕ) ಎಂಬ ಮೂರು ರೂಪದಿಂದ ಸತ್ಯವಾದ ಜಗತ್ತನ್ನು ನಿರ್ಮಿಸುವ ಬ್ರಹ್ಮನಲ್ಲಿ, ನಾನು ಶಕ್ತಿಪ್ರದನಾಗಿ, ತನ್ನಾಮಕನಾಗಿ, ನಿಯಮಿಸುತ್ತಿರುವೆನು. ಶ್ರೀಹರಿ (ನನ್ನ) ಕಟಾಕ್ಷಬಲವಿರುವವರೆಗೂ ಸೃಷ್ಟಿ ಪ್ರಳಯಗಳ ಮಧ್ಯವಾದ ಸ್ಥಿತಿ (ಜೀವನ)ಯು ನಡೆಯುತ್ತಿರುವುದು.

ಲೋಕಯುಕ್ತವಾದ ಹಿರಣ್ಮಯಾಂಡ ಕೋಶವು ಸತ್ವಾದಿಗುಣಗಳೆಂಬ ಸ್ವಕಾರಣದಲ್ಲಿ ಲಯವನ್ನು ಹೊಂದುವುದೇ ಪ್ರಳಯವು. ತತ್ವಗಳೆಲ್ಲವೂ ತಂತಮ್ಮ ಕಾರಣಗಳಲ್ಲಿ ಲಯವನ್ನು ಹೊಂದಲಾರಂಭಿಸಿದಾಗ ಅಭಿಮಾನಿ ದೇವತೆಗಳು ತಮ್ಮ ಕರಣಾಭಿಮಾನಿಗಳಿಂದ ಕೂಡಿ, ಪೋಗುತ್ತಿರುವರು. ಮರ್ತ್ಯಶರೀರಗಳು ಅನ್ನದಲ್ಲಿಯು, ಅನ್ನವು ಓಷದಿಗಳಲ್ಲಿಯು, ಅವು ಭೂಮಿಯಲ್ಲಿಯು, ಭೂಮಿ ತನ್ನ ಸೂಕ್ಷ್ಮ ರೂಪ ಗಂಧದಲ್ಲಿಯು, ಗಂಧವು ನೀರಿನಲ್ಲಿಯು, ನೀರು ರಸದಲ್ಲಿ, ಅದು ತೇಜದಲ್ಲಿ, ಅದು ರೂಪದಲ್ಲಿ, ಅದು ವಾಯುವಿನಲ್ಲಿ, ಅದು ಸ್ಪರ್ಶದಲ್ಲಿ, ಅದು ಆಕಾಶದಲ್ಲಿ, ಆಕಾಶವು ಶಬ್ದದಲ್ಲಿ, ಅವೆಲ್ಲವೂ ತಾಮಸಾಹಂಕಾರದಲ್ಲಿ, ಲಯವನ್ನು ಪೊಂದುವುವು. ಇಂದ್ರಿಯಗಳು ತೈಜಸಾಹಂಕಾರದಲ್ಲಿ, ತದ್ದೇವತೆಗಳು ವೈಕಾರಿಕಾಹಂಕಾರದಲ್ಲಿ, ಅದು ಮಹತ್ತತ್ವದಲ್ಲಿ, ಆ ಮಹತ್ತತ್ವ ನಿಯಾಮಕನಾದ ಚತುರ್ಮುಖನು, ಗಾಯತ್ರಿ ಸರಸ್ವತಿಯರಲ್ಲಿ, ಅವರು ತಮ್ಮ ಮೂಲರೂಪ ಪ್ರಕೃತಿಯಲ್ಲಿ, ಆ ಪ್ರಕೃತಿ ಕಾಲನಾಮಕ ವಿರಿಂಚನಲ್ಲಿ, ಅವನು ಮೂಲಪ್ರಕೃತಿಯಾದ ಅವ್ಯಕ್ತಮಾನಿನಿ ರಮೆಯಲ್ಲಿ ಲಯವನ್ನು ಹೊಂದಲು, ಆ ಜಗಜ್ಜನನಿಯು ವಿಶೇಷ ರತಿರೂಪಲಯದಿಂದ ಹರಿಗೆ ಅತ್ಯಂತ ಸಾಮೀಪ್ಯವನ್ನು ಹೊಂದುವಳು. ಪೂರ್ಣಗುಣನು, ಅಪ್ರಾಕೃತನು, ಸ್ವಾಶ್ರಯನು, ಅಸಮಾಧಿಕನು, ಅಪ್ರಾಕೃತ ಲಕ್ಷ್ಮೀರಮಣನು, ಸುಖಜ್ಞಾನಸ್ವರೂಪನು ಆದ ಶ್ರೀಹರಿಗೆ ಲಯವಿಲ್ಲ.

ಇಂತು ಚೆನ್ನಾಗಿ ಸೃಷ್ಟಿ ಪ್ರಳಯಗಳನ್ನರಿತ ವಿವೇಕಿ ಭಕ್ತನಿಗೆ ಅನ್ಯಥಾ ಜ್ಞಾನವಿಲ್ಲ. ಸಂಶಯವಿಲ್ಲ. ಒಂದು ವೇಳೆ ಸಂಶಯಾದಿಗಳು ಮನಸ್ಸಿನಲ್ಲಿ ಕತ್ತಲಿನಂತೆ ಮೂಡಿಯಾದರೂ ಸೂರ್ಯೋದಯವಾದಂತೆ ಇರುವ ಬ್ರಹ್ಮಜ್ಞಾನದ ಸಮ್ಮುಖವಾಗಿ ನಿಲ್ಲಲಾರದೆ ಅದೆಲ್ಲವೂ ನಷ್ಟವಾಗು

ವುದು. ಕ್ರಮದಿಂದ ಸೃಷ್ಟಿ, ವ್ಯುತ್ಕ್ರಮದಿಂದ ಲಯವನ್ನು ತಿಳಿದು ತಾರತಮ್ಯಾನುಸಾರವಾಗಿ ಭಕ್ತಿಯನ್ನು ಮಾಡುವ ನರನು ಸರ್ವಸಂಶಯದೂರನಾಗಿ ಅಪರೋಕ್ಷ ಜ್ಞಾನವನ್ನು ಪಡೆಯುವನು.

## ೨೫. ತ್ರಿಗುಣ ಲಕ್ಷಣ – ಗುಣಾತೀತ

ಶ್ರೀಭಗವಂತನಿಂತೆಂದನು–

ಸತ್ತ್ವಾದಿ ಗುಣಗಳು ಮಿಶ್ರಿತವಾಗದಿರುವಾಗ ಯಾವ ಗುಣದಿಂದ ನರನು ಯಾವ ಗುಣಕೃತ ವಿಕಾರವನ್ನು ಹೊಂದುವನೋ ಅದನ್ನು ನಿನಗೆ ವರ್ಣಿಸುವೆನು ಕೇಳು!

ಶಮ, ದಮ, ತಿತಿಕ್ಷೆ, ಜ್ಞಾನ, ತಪಸ್ಸು, ಸತ್ಯ, ದಯಾ, ಶಾಸ್ತ್ರಾರ್ಥಸ್ಮರಣೆ, ತುಷ್ಟಿ, ನಿಷಿದ್ಧ ತ್ಯಾಗ, ನಿಷಿದ್ಧೇಚ್ಛಾವರ್ಜನ, ಶ್ರದ್ಧೆ, ನಿಷಿದ್ಧಕರಣ ಲಜ್ಜಾ, ಕ್ಷಮಾ, ಆತ್ಮಸ್ತುತಿ ವರ್ಜನ, ಆಪತ್ತಿನಲ್ಲಿ ಚಿತ್ತಧೈರ್ಯ ಮೊದಲಾದವು ಸತ್ತ್ವಗುಣದ ವೃತ್ತಿಗಳು.

ಕಾಮ, ನಿಷಿದ್ಧ ಚೇಷ್ಟೆ, ಇಂದ್ರಿಯ ಲಾಲಸತೆ, ಅತೃಪ್ತಿ, ಗರ್ವ, ಧನಾಶೆ, ಅನ್ಯಥಾ ಜ್ಞಾನ, ದುಃಖ, ಮನೋತ್ಸಾಹ, ಯಶಃಪ್ರೀತಿ, ದಕ್ಷತೆ, ಬಲವೀರ್ಯ ಪ್ರಯತ್ನಗಳು ಮೊದಲಾದವು ರಜೋಗುಣ ವೃತ್ತಿಗಳು.

ಕ್ರೋಧ, ಲೋಭ, ಅಸತ್ಯ, ಹಿಂಸೆ, ಕಾಪಟ್ಯ, ದಂಭ, ಹಗೆ, ಕಲಹ, ಶೋಕ, ಮೋಹ, ವಿಷಾದ, ಆರ್ತಿ, ನಿದ್ರಾ, ದುರಾಶೆ, ಭಯ, ಅಪ್ರಯತ್ನ ಮೊದಲಾದವು ತಮೋಗುಣ ವೃತ್ತಿಗಳು.

ಈಗ ಗುಣಮಿಶ್ರವಿರುವ ಪುರುಷರ ಲಕ್ಷಣವನ್ನು ಹೇಳುವೆನು. ದೇಹವನ್ನು ನಾನೆಂಬುವುದು, ಗೇಹ ಸತೀ ಸುತ ಧನಾದಿಗಳನ್ನು ನನ್ನದೆಂಬುವುದು – ಇವೆರಡು ಅಹಂಕಾರ ಮಮಕಾರಗಳು; ಸತ್ತ್ವಾದಿ ಗುಣಗಳ ಮಿಶ್ರದಿಂದ ಆದ ಗೂಣಗಳು. ಮಿಶ್ರಣವಿದ್ದಾಗಲೇ ಮನಸ್ಸಿನಿಂದ, ಶಬ್ದಾದಿ ಮಾತ್ರಾಗಳ ಸಂಪರ್ಕ ಪೊಂದಿದ ಇಂದ್ರಿಯಗಳಿಂದ, ಜ್ಞಾನಾಜ್ಞಾನಾದಿಗಳು, ಧರ್ಮನಿಷ್ಠನಿಗೆ ಶ್ರದ್ಧೆ, ಅರ್ಥನಿಷ್ಠನಿಗೆ ಧನ, ಕಾಮನಿಷ್ಠನಿಗೆ ಭೋಗಾಶೆಗಳು ಪುಟ್ಟುವುದೂ, ಗೃಹಸ್ಥನು ಮಾಡುವ ಪ್ರವೃತ್ತಿಧರ್ಮಾದಿಗಳು. ಸ್ವಧರ್ಮಾಚರಣೆ, ಎಲ್ಲವೂ ಗುಣಮಿಶ್ರಣದಿಂದ ಪುಟ್ಟುವ ವ್ಯವಹಾರವೆಂದು ತಿಳಿ! ಶಮಾದಿಗಳಿಂದ ಯುಕ್ತನು ಸಾತ್ವಿಕನು, ಕಾಮಾದಿಯುಕ್ತನು ರಾಜಸನು, ಕ್ರೋಧಾದಿಯುಕ್ತನು ತಾಮಸನು, ಎಂದು ತಿಳಿಯಬಹುದು.

ನನ್ನ ಭಕ್ತರಲ್ಲಿಯು ಕೂಡ, ನಿರಪೇಕ್ಷನಾಗಿ, ಸ್ವವಿಹಿತ ಕರ್ಮಫಲವನ್ನರ್ಪಿಸಿ ಭಜಿಸುವ ಪುರುಷರನ್ನಾಗಲಿ, ಸ್ತ್ರೀಯರನ್ನಾಗಲಿ, ಸಾತ್ವಕಭಕ್ತರೆಂದು ತಿಳಿ. ಸಂಪತ್ಸಂತಾನಾದಿಗಳನ್ನು ಮನಸಾ ಆಶಿಸಿ, ಸ್ವಕರ್ಮದಿಂದ ಭಜಿಸುವವರು ರಾಜಸಭಕ್ತರು; ಮತ್ತು ಹಿಂಸಾರತರು ತಾಮಸರೆಂದು ತಿಳಿ. ತ್ರಿಗುಣವಿಕಾರವು ಜೀವನಿಗೆ ಆಗಲಿ ನನಗಿಲ್ಲ – ಭೂತಪಂಚಕಮಯ ಬಾಹ್ಯಂತಃಕರಣದಲ್ಲಿ ಹುಟ್ಟುವ ವಿಕಾರಗಳು ಅಪ್ರಾಕೃತನಾದ ನನಗೆಂತಾಗುವುವು?

ಪ್ರಕಾಶಮಾನವು, ಸುಖಕರವು, ಜ್ಞಾನಪ್ರದವು ಆದ ಸತ್ತ್ವವು, ರಜಸ್ತಮೋಗುಣಗಳನ್ನತಿಕ್ರಮಿಸಿ ನಿಂತಾಗ, ನರನು ಧರ್ಮಜ್ಞಾನಗಳನ್ನು ಪೊಂದಿ ಸುಖಿಸುವನು. ರಜಸ್ಸು ಹೆಚ್ಚಾದಾಗ ವಿಷಯಾಶೆ, ಅನ್ಯಥಾಜ್ಞಾನ, ಚಾಂಚಲ್ಯ, ಕೀರ್ತಿ ಧನಗಳ ಆಶೆಗಳನ್ನು ಪೊಂದಿ ದುಃಖಿಸುವನು. ಮಹಾಮೋಹರೂಪವಾದ ತಮಸ್ಸು ಹೆಚ್ಚಾದಾಗ, ನರನು ಶೋಕ, ಮೋಹ, ನಿದ್ರಾ, ಹಿಂಸೆ,

ಆಶೆಗಳಿಂದ ಮೂಢನಾಗುವನು. ಮನಃಪ್ರಸನ್ನತೆ, ಇಂದ್ರಿಯಗಳ ಆನಂದ, ದೇಹದ ಅಭಯ, ಮನಸ್ಸಿನ ಆಸಂಗ ಉಂಟಾದಾಗ ಸತ್ವವು; ಕ್ರಿಯಾವಿವಿಧಕರಣ, ಅಸಮಾಧಾನ, ಅಂಗಾಂಗಗಳ ವಿಜೃಂಭಣೆ, ಮನೋಭ್ರಾಂತಿಗಳಾದಾಗ ರಜವು; ಚಿತ್ತಸ್ಮೃತಿ ನಾಶ, ಅಸಾಮರ್ಥ್ಯ, ಅಜ್ಞಾನ, ಅನ್ಯಥಾಮತಿ, ಗ್ಲಾನಿಗಳಾದಾಗ ತಮಸ್ಸು; ಇಂತು ತ್ರಿಗುಣಗಳ ಪ್ರವರ್ತನವನ್ನು ತಿಳಿ!

ಸತ್ವೋನ್ನಾಹಕಾಲದಲ್ಲಿ ದೇವಜಯವನ್ನು, ರಜೋವೃದ್ಧಿಕಾಲದಲ್ಲಿ ಅಸುರ ಮನುಜರ ಜಯವನ್ನು, ತಮೋವೃದ್ಧಿಯಲ್ಲಿ ಭೂತರಾಕ್ಷಸನ ವೃದ್ಧಿಯನ್ನು ತಿಳಿಯಬಹುದು. ಸತ್ವದಿಂದ ಎಚ್ಚರ, ರಜದಿಂದ ಸ್ವಪ್ನ, ತಮದಿಂದ ನಿದ್ರೆ, ಮೂರವಸ್ಥೆಗಳಿಗೆ ಮೀರಿದುದು ತುರೀಯವೆಂದು ನಿರ್ಗುಣವೆಂದೂ ತಿಳಿ. ಜನರು ಸತ್ವಗುಣದಿಂದ ಬ್ರಹ್ಮಲೋಕ ಪರ್ಯಂತವು ಮೇಲಕ್ಕೆ ಹೋಗುವರು: ತಮಸ್ಸಿನಿಂದ ಅಂಧಂತಮಸ್ಸಿನವರಿವಿಗೂ ಕೆಳಕ್ಕೆ ಹೋಗುವರು; ರಜಸ್ಸಿನಿಂದ ಭೂಮಿ ಅಂತರಿಕ್ಷ ಸ್ವರ್ಗಗಳಲ್ಲಿ ಸುತ್ತುತ್ತಿರುವರು. ಸತ್ವಗುಣದಲ್ಲಿ ನಿಂತು ಮೃತರಾದವರಿಗೆ ಸ್ವರ್ಗಾದಿಗಳು, ರಜದಲ್ಲಿ ಮೃತರಾದವರಿಗೆ ನರಲೋಕವು, ತಮದಲ್ಲಿ ಮೃತರಾದವರಿಗೆ ನರಕಾದಿಗಳು ಆಗುವುವು – ನನ್ನ ಭಕ್ತರು ನಿರ್ಗುಣರಾಗಿ, ಅತ್ಯಂತಿಕಭಕ್ತಿ ಸಾಧನವಾಗಿ ನನ್ನ ಲೋಕವನ್ನು ಹೊಂದುವರು. ಸ್ವವಿಹಿತವು, ಫಲಾನುಸಂಧಾನರಹಿತವು, ನನಗರ್ಪಿತವು ಆದ ಕರ್ಮವು ಸಾತ್ವಿಕವೆನಿಸಿದೆ; ಫಲಸಂಕಲ್ಪಯುಕ್ತವು ರಾಜಸವಾಗಿದೆ; ಹಿಂಸಾಸಹಿತವಾದುದು ತಾಮಸವಾಗಿದೆ. ಮೋಕ್ಷಶಾಸ್ತ್ರ ಸಮ್ಮತವಾದುದು ಸಾತ್ವಿಕಜ್ಞಾನವು; ಕರ್ಮಮಯವಾದುದು ರಾಜಸಜ್ಞಾನವು. ವೈಷಯಿಕ ಜನಪ್ರಿಯವಾದುದು ತಾಮಸಜ್ಞಾನವು. ನನ್ನ ಪ್ರಸಾದ ಮುಕ್ತಿಸಾಧನವಾದುದು ನಿರ್ಗುಣಜ್ಞಾನವು. ಸಾತ್ವಿಕಜ್ಞಾನವು ಮೋಕ್ಷವನ್ನು ಮಾತ್ರ ಬೇಡಿದರೆ, ನಿರ್ಗುಣಜ್ಞಾನವು ಏನನ್ನೂ ಬೇಡದೆ, ನನ್ನ ಪ್ರೀತಿಯನ್ನೇ ಬೇಡುವುದು. ಕ್ಷೇತ್ರಗಳಲ್ಲಿ ಮನವು ಸಾತ್ವಿಕವು; ಗ್ರಾಮವು ರಾಜಸವು: ದ್ಯೂತಸದನವು ತಾಮಸವು; ದೇವಾಲಯಾದಿಗಳು ನಿರ್ಗುಣವು. ಕರ್ತೃಗಳಲ್ಲಿ ಫಲಾಸಕ್ತನು ಸಾತ್ವಿಕನು: ರಾಗಾಂಧನು ರಾಜಸನು. ಅವಿಹಿತಕಾರಿಯು ತಾಮಸನು – ನನ್ನಿಂದ ಮೋಕ್ಷವನ್ನು ಬೇಡುವವನು ನಿರ್ಗುಣನು. ಶ್ರದ್ಧೆಗಳಲ್ಲಿ ಶಾಸ್ತ್ರಯಥಾರ್ಥಜ್ಞಾನ ವಿಷಯ ಶ್ರದ್ಧೆಯು ಸಾತ್ವಿಕವು: ಕರ್ಮಶ್ರದ್ಧೆ ರಾಜಸವು; ಅಧರ್ಮ ಶ್ರದ್ಧೆಯು ತಾಮಸವು – ನನ್ನ ಸೇವಾಶ್ರದ್ಧೆಯೇ ನಿರ್ಗುಣವು ಅಂದರೆ ಪ್ರಮಾಣಗಳನ್ನು ಅಪೇಕ್ಷಿಸದೆ ವಾಸುದೇವೈಕ ನಿಲಯನಾಗುವ ಶ್ರದ್ಧೆ ಪಥ್ಯವು, ಅಕ್ಲಿಷ್ಟವು, ಯೋಗ್ಯವು ಆದ ಆಹಾರವು ಸಾತ್ವಿಕವು; ಇಂದ್ರಿಯ ಪ್ರಿಯವಾದುದು ರಾಜಸವು; ನಿವೇದನವಿಲ್ಲದುದು, ಅಶುಚಿಯಾದುದು, ದುಃಖವಾದುದು ತಾಮಸವು. ಸುಖಗಳಲ್ಲಿ ಶ್ರೀಹರಿಮಧ್ವಶಾಸ್ತ್ರ ಜನ್ಯಸುಖವು ಸಾತ್ವಿಕವು; ವಿಷಯಸುಖವು ರಾಜಸವು; ಮೋಹದೈನ್ಯಾದಿ ಜನ್ಯವಾದ ಸುಖವು ತಾಮಸವು; ಅಪರೋಕ್ಷ ಜ್ಞಾನಸುಖವು ನಿರ್ಗುಣವಾಗಿದೆ.

ದ್ರವ್ಯ, ದೇಶ, ಫಲ, ಕಾಲ, ಜ್ಞಾನ, ಕರ್ಮ, ಕರ್ತೃ, ಶ್ರದ್ಧೆ, ಅವಸ್ಥೆ, ಕಾರ್ಯ, ವ್ರದ – ಎಲ್ಲವೂ ತ್ರಿಗುಣಾತ್ಮಕವಾಗಿದೆ. ಅಂತೆಯೇ ಆಗುವಂತೆ ಶ್ರೀರಮೇಶನಾದ ನನ್ನ ವ್ಯವಸ್ಥೆ; ಗುಣನಿರ್ಮಿತ ಸಂಸಾರ ಜಯವಾಗಬೇಕಾದರೆ ಗುರುಮುಖದಿಂದ ಕಲ್ಯಾಣಗುಣನಾದ ರಮೇಶನನ್ನು ಪೇಳುವ ಶಾಸ್ತ್ರಗಳನ್ನು ಕೇಳಿ, ಜ್ಞಾನಿಯಾಗು! ಗುಣಗಳಿಂದಲೂ, ಕರ್ಮಗಳಿಂದಲೂ ಜನರನ್ನು ಕಟ್ಟಿಹಾಕುವ ಪ್ರಕೃತಿಬಂಧವನ್ನು, ಜ್ಞಾನಭಕ್ತಿಗಳಿಂದ ಕಡಿದು, ಗುಣಾತೀತನಾಗಿ ಸುಖಿಸುವವನೇ ವಿವೇಕಿಯು. ಜ್ಞಾನ ವಿಜ್ಞಾನಗಳ ಖನಿಯಾದ ಮನುಜ ದೇಹವು ಬಂದಾಗ,

ಗುಣಪೂರ್ಣವಾದ ನನ್ನ ಭಕ್ತಿಯಿಂದ ಚರಿತಾರ್ಥನಾಗಬೇಕು. ಪುರುಷನು ಹೊರಗಿನ ವಿಷಯ ವಿಷವನ್ನು ಕುಡಿದರೆ ದುಃಖಿಸುವನು; ಒಳಗಿನ ಶ್ರೀಭಾಗವತಾಮೃತವನ್ನು ಕುಡಿದರೆ ನನ್ನ ಭಕ್ತನಾಗಿ ನಿತ್ಯಸುಖವನ್ನು ಪೊಂದುವನು.

## ೨೬. ಐಲಗೀತಾ

ಶ್ರೀಭಗವಂತನಿಂತೆಂದನು–

ಉದ್ಧವಾ! ನನ್ನನ್ನು ತಿಳಿಯಲು ಸಾಧನವಾದ ಮನುಜ ಶರೀರವನ್ನು, ಅದರಲ್ಲಿಯೂ ಮಧ್ವಶಾಸ್ತ್ರದ ಪದ್ಧತಿಯಂತೆ, ದ್ವಾದಶನಾಮ ಪಂಚಮುದ್ರೆಗಳನ್ನು ಧರಿಸಿ, ಮನಸ್ಸಿನ ಮಂದಿರದಿ ನೆಲಸಿರುವ ಮಧ್ವರಮಣ ಮಾಧವನನ್ನು ತಿಳಿದ ಜ್ಞಾನಿಯು ತಪ್ಪದೆ ಮುಕ್ತನಾಗುವನು. ತ್ರಿಗುಣಮಯನಾದ ಲಿಂಗಶರೀರದಿಂದ – ಅವನು ತತ್ತ್ವಜ್ಞಾನ ಬಲದಿಂದ ಅಭಿಮಾನರಹಿತನಾಗಿ – ದೂರನಾಗುವನು. ಪ್ರಕೃತಿಯ ಲಿಂಗ ಭೌತಿಕ ಶರೀರಗಳಲ್ಲಿದ್ದರೂ, ಎಲ್ಲ ಜೀವಜಡಾತ್ಮಕ ಜಗವು ಅಸ್ವತಂತ್ರವೆಂದರಿತವನು, ಅಮಂಗಲ ಶಬ್ದಾದಿ ವಿಷಯಗಳ ಸಂಬಂಧವಿಲ್ಲದೆ, ಮುಕ್ತ ಪ್ರಾಯನಾಗಿರುವನು.

ಆದುದರಿಂದ ಜೀವನು ಶಿಶ್ನೋದರ ಪರಾಯಣರ ಸಂಗವನ್ನೆಂದಿಗೂ ಮಾಡಬಾರದು; ಒಂದು ವೇಳೆ ಮಾಡಿದನೆಂದರೆ, ಕುರುಡನನ್ನು ಹಿಂಬಾಲಿಸಿದ ನೂರು ಕುರುಡರಂತೆ, ಅವನು ಸಂಸಾರಾಂಧಕೂಪದಲ್ಲಿ ಬಿದ್ದು, ಕಷ್ಟಪಡಬೇಕಾದೀತು. ವಿಷಯಸಂಗದ ಕೆಡಕನ್ನರಿತು ಐಲ ರಾಜನು ಕೆಲವು ಶಿಕ್ಷಾವಚನಗಳನ್ನಾಡಿರುವನು. ಆ ಚಕ್ರವರ್ತಿಯು ಊರ್ವಶೀವಿರಹವನ್ನು ತಾಳಲಾರದೆ, ನಿರ್ವಿಣ್ಣನು, ಶೋಕಾಕ್ರಾಂತನು ಆದನು; ತನ್ನ ಬಿಟ್ಟೋಡುವ ರಮಣಿಯ ಹಿಂದೆ, ಹುಚ್ಚನಂತೆ ನಗ್ನನಾಗಿ, 'ಜಾಯೇ! ನಿಲ್ಲು! ಘೋರ ಸಂಸಾರದ ಕಾಡಿನಲ್ಲಿ ಬಿಟ್ಟು ಹೋಗಬೇಡ!' ಎಂದು ಕೂಗುತ್ತಾ, ತಾನು ಓಡಿದನು. ಸಾವಿರಾರು ರಾತ್ರಿಗಳ ಕಾಮಭೋಗದಿಂದ ತೃಪ್ತನಾಗದೇ ಊರ್ವಶೀಲೋಲನಾಗಿ, ಕಳೆದ ಕಾಲದ ಕರಾಳ ವೇಗವನ್ನು ಗುರುತಿಸದೆ, ಮೂಢನು ಇಂತಿದ್ದನು. ಐಲಗೀತೆಯನ್ನು ಕೇಳು!

ಅಹೋ! ಏನು ಮೋಹಸಾಗರ! ಎಷ್ಟು ಅಲ್ಲಕಲ್ಲೋಲ! ಹಾಳಾದೆನು. ಕಾಮದಿಂದ ಮನವು ಹೊಲಗೆಡಿಸಿತು. ದೇವಿಹ ಬಾಹುಲತೆಯು ಕಂಠವನ್ನು ಸುತ್ತಿದಾಗ, ಕಾಲಭುಜಗವೆಂದು ತಿಳಿಯದೆ, ಕಳೆದೆನು ದಿವಾರಾತ್ರಿಗಳನ್ನು! ಸೂರ್ಯ ಉದಿತನಾದನು! ನನಗೆ ಜ್ಞಾನವಾಗಲಿಲ್ಲ. ಸೂರ್ಯ ಮುಣುಗಿ ರಾತ್ರಿಯಾಯಿತು; ನನಗೆ ಮೋಹದ ಕತ್ತಲು ಕವಿಯಿತು; ನರದೇವ ಶಿಖಾಮಣಿ, ಚಕ್ರವರ್ತಿ ಎಂದು ಖ್ಯಾತನಾದೆ ಜನರಲ್ಲಿ: ಅಂತಃಪುರ ಯುವತಿಗೆ ಕ್ರೀಡಾಮೃಗವಾದೆನು. ಛತ್ರ, ಚಾಮರ, ಪರ್ಯಂಕ, ಗಂಧ, ಹಾರ, ವಸನ, ಭೂಷಣಾದಿ ಸಂಪತ್ಸಮೃದ್ಧನಾದ ನನ್ನನ್ನು ಹುಳುಕಡ್ಡಿಯಂತೆ ನಿರ್ಲಕ್ಷಿಸಿ, ಹೊರಟುಹೋದ ಒಬ್ಬ ಸ್ತ್ರೀಯಳನ್ನು ದೇವ ವೈಶ್ಯೆಯನ್ನು, ಲಜ್ಜೆಗೆಟ್ಟು, ಹುಚ್ಚನಾಗಿ, ಬರಿಮೈಲಿ, ಹಿಂಬಾಲಿಸಿದೆನು! ಆಹಾ! ಸ್ಮರಬಾಣ ಪೀಡಿತನಾದವನ ಹೃದಯದಿಂದ, ಬಾಣರಂಧ್ರದಿಂದೆಂಬಂತೆ, ಅವನ ತತ್ತ್ವನಿಶ್ಚಯಜ್ಞಾನ, ಯೋಗಶಕ್ತಿ, ವೀರ್ಯಾದಿಗಳೆಲ್ಲವೂ ಹರಿದು, ಹಾಳಾಗುವುವಲ್ಲವೇ?

ದುಷ್ಟಸ್ತ್ರೀಯರ ವಿಲಾಸಗಳಿಗೆ ಮೋಸಹೋದವನು ವಿದ್ಯಾವಂತನಾದರೇನು? ತಪೋ ಮಹಿಮನಾದರೇನು? ದಾನವಂತನಾದರೇನು? ವೇದ ಓದಿದರೇನು? ಮೌನಾದಿಗಳಿದ್ದೂ ಅವನಿಗೆ ಪ್ರಯೋಜನವೇನು? ನನ್ನ ಹಿತವನ್ನು ನಾನೇ ಅರಿಯದೆ ಕೆಟ್ಟೆ! ಮೂರ್ಖನಾದೆ! ರಾಜಶೇಖರನಾಗಿದ್ದೂ ಸ್ತ್ರೀಯಳ ಮುಂದೆ ಗೋಖರನಾದ ನನಗೆ ಧಿಕ್ಕಾರವಿರಲಿ! ಊರ್ವಶಿಯ ಅಧರಾಸವಪಾನಮತ್ತನಾಗಿ, ಕಣ್ತೆರೆಯದೆ, ಸ್ತ್ರೀದಾಸನಾದೆ. ಮನೋಭವನ ಬವಣೆಗೆ ಸಿಲುಕಿ. ವ್ಯಭಿಚಾರಿಣಿಗೆ ಮನಸೋತು, ತುಪ್ಪದಿಂದೆದ್ದು ಉರಿಯುವ ಅಗ್ನಿಯಂತೆ ಭಯಂಕರವಾದ ಕಾಮಾಗ್ನಿಯಲ್ಲಿ ಬೆಂದೆ. ಆತ್ಮಾರಾಮನು, ಅಖಿಲೇಶನು, ಇಂದ್ರಿಯವಿದೂರನು ಆದ ರಮಾಪತಿ ಯನ್ನುಳಿದು, ಮತ್ತಾರೂ ಕಾಮವನ್ನು ಗೆದ್ದವರಿಲ್ಲ. ಹೇಳಿದಳು ದೇವಿ ಊರ್ವಶಿ – ಸೂಕ್ತವಾಕ್ಯ ಗಳಿಂದ – ಈ ಮಾತನ್ನು ಬಿಡು ಎಂದು. ಅಜಿತಮನಸ್ಕನಾದ ನನಗೆ ಆ ಮಾತು ರುಚಿಸಲಿಲ್ಲ. ರಜ್ಜುವನ್ನು ನೋಡಿ ಸರ್ಪವೆಂದು ಭ್ರಮಿಸಿದವನಿಗೆ ಭಯವಲ್ಲದೆ ವಿವೇಕವಿರುವುದೇ? ಊರ್ವಶಿ ಯಿಂದ ನನಗೆ ದುಃಖವೇ ಆಗಲಿ ಸುಖವಾಯಿತೇ? ಅಜಿತೇಂದ್ರಿಯನಾದೆನಗೆ ನನಗೆ ಸ್ವರೂಪ ಜ್ಞಾನವು ಆಗಲಿಲ್ಲ. ಶ್ರೀಹರಿಯ ಜ್ಞಾನವೂ ಆಗಲಿಲ್ಲ.

ಎಂತಹ ಅಜ್ಞಾನ! ದುರ್ಗಂಧ ಭೂಯಿಷ್ಠವು, ಮಲಾದಿ ದೋಷಯುಕ್ತವು, ಅಶುಚಿಯು ಆದ ಶರೀರವೆಲ್ಲಿ? ಅದರಲ್ಲಿವೆ ಎಂದು ನಾನು ತಿಳಿದ ಸೌಗಂಧ್ಯ, ಸೌಕುಮಾರ್ಯಾದಿ ಗುಣ ಗಳೆಲ್ಲಿ? ಈ ದೇಹವು ಹಡೆದ ತಾಯಿತಂದೆಯರದೋ? ಕೈಹಿಡಿದು ಭೋಗಿಸುವ ಪತ್ನಿಯದೋ? ಪಾಲಿಸಿ ಕೂಳನ್ನೀವ ರಾಜನದೋ? ತಿನ್ನುವ ಹದ್ದುನಾಯಿಗಳದೋ? ಸುಡುವ ಅಗ್ನಿಯದೋ? ತನ್ನದೆಂದು ಭ್ರಮಿಸಿದ ಜೀವನದೋ? ಅಥವಾ ಲಾಲಿಸುವ ಮಿತ್ರರದೋ? ಒಂದು ಗೊತ್ತಾಗ ದಿದೆ. ಅಂತಹ ಕಳೇವರದಲ್ಲಿ – ಪಂಚಭೂತಗಳ ಎಲುವಿನ ಹಂದರವೆಂದು ತಿಳಿಯದೆ – ಸಕ್ತನಾದ ನನ್ನ ಅವಿವೇಕವನ್ನೆಷ್ಟು ಹಳಿದರೂ ಸಾಲದು.

'ಅಹೋ! ಏನು ಸುಂದರವದನ! ದರಹಾಸರದನ! ಚಂಪಕನಾಸಿಕೆ! ಮಂದ್ರಹಾಸ ಚಂದ್ರಿಕೆ!' ಎಂದು ಭ್ರಮಿಸಿ – ತ್ವಕ್, ಮಾಂಸ, ರಕ್ತ, ಸ್ನಾಯು, ಮೇದೋ, ಮಜ್ಜಾಸ್ಥಿಗಳೆಂಬ ಏಳು ಧಾತುಗಳಿಂದ ರಚಿತವಾದ – ವಿಷ್ಠಾಮೂತ್ರಕಫಾದಿ ದೂಷಿತವಾದ ಶರೀರದಲ್ಲಿ ರಮಿಸುವ ವರಿಗೂ, ತದ್ಗತಕ್ರಿಮಿಗಳಿಗೂ ಏನು ವ್ಯತ್ಯಾಸ? ಆದರೂ ಬಿಡದೆ ಸೇವಿಸಿ, ಸ್ತ್ರೀದಾಸನಾದೆನು! ದುಷ್ಟಸ್ತ್ರೀಯರನ್ನು ಸ್ತ್ರೀಜಿತರನ್ನು ಕೂಡ ದೂರದಲ್ಲಿಡುವುದೇ ಲೇಸು. ವಿಷಯಸಂಯೋಗವಿದ್ದ ರೇನೇ ಇಂದ್ರಿಯಕ್ಷೋಭ; ಇಲ್ಲದಿದ್ದರಿಲ್ಲ. ಎಂದೂ ಕೇಳದ – ನೋಡದ ವಸ್ತುವಿಗಾಗಿ ಮನವು ಹರಿದಾಡುವುದೇ? ಇಂದ್ರಿಯಗಳನ್ನು ಕಂಡ ವಿಷಯಗಳಲ್ಲಿ ಹರಿಯಗೊಡದೆ, ಶ್ರೀಹರಿಯಲ್ಲಿಟ್ಟ ಮನವೆಂಬ ಹಗ್ಗದಿಂದ ಕಟ್ಟಿ, ಬುದ್ಧಿಸಾರಥಿಯಾಗಿ, ಒಳ್ಳೆಯ ಹಾದಿಯನ್ನು ಹಿಡಿಯುವೆನು. ವಿದ್ವಾಂಸರು ಕೂಡ ಮನಸ್ಸೇ ಮೊದಲಾದ ಆರು ಶತ್ರುಗಳನ್ನು ನಂಬಿದರೆ ಕೆಡುವರು. ಇನ್ನು ನನ್ನಂತಹವರ ಪಾಡೇನು?

ಎಂದು ನಿಶ್ಚಯಿಸಿ, ಊರ್ವಶಿಯ ಚಿಂತೆಯನ್ನು ತೊರೆದು, ಪುರೂರವನು ತನ್ನ ಚಿತ್ತವನ್ನು ಶ್ರೀಹರಿಗರ್ಪಿಸಿ, ಜ್ಞಾನದ ಬೆಳಕಿನಲ್ಲಿ ನಿಂತು ನಿಶ್ಚಿಂತನಾದನು. ಆದುದರಿಂದ ದುಸ್ಸಂಗವು ಸರ್ವಥಾ ಬಿಡತಕ್ಕುದಾಗಿದೆ; ಸತ್ಸಂಗವು ಸರ್ವಥಾ ಮಾಡತಕ್ಕುದಾಗಿದೆ. ಮನಸ್ಸಿನ ದುಸ್ಸಂಗ ಜನಿತ ದೋಷಗಳನ್ನು ಸಜ್ಜನರೇ ಪರಿಹರಿಸಲರ್ಹರಾಗಿರುವರು. ಸಜ್ಜನರೆಂದರೆ – ದುಷ್ಟ ವಿಷಯಾ ಪೇಕ್ಷಾರಹಿತರು; ನನ್ನ ಭಕ್ತರು, ಶಾಂತರು, ಯೋಗ್ಯತಾನುಸಾರವಾಗಿ ನಡೆದು

ಕೊಳ್ಳುವವರು, ಅಹಂಮಮಕಾರ ವಿಧುರರು, ದ್ವಂದ್ವಸಹರು, ದುಷ್ಪರಿಗ್ರಹರಹಿತರೂ ಆಗಿರುವರು.

ಅಂತಹ ಸಜ್ಜನರು ನಿತ್ಯವೂ ನನ್ನ ಮಹಿಮೆಯನ್ನು ಕಥಾರೂಪವಾಗಿ ಹೇಳಿ, ಕೇಳಿ, ಸುಖಿಸುತ್ತಿರುವರು. ತಮ್ಮ ವಾಗಮೃತಧಾರೆಯಿಂದ ಜನರ ಪಾಪಪಂಕವನ್ನು ತೊಳೆದು ಬಿಡುವರು. ನನ್ನ ಕಥೆಯನ್ನು ಕೇಳಿ, ಹೇಳಿ, ಕೊನೆಗೆ ಅನುಮೋದಿಸುವ ಭಕ್ತರಿಗೆ ಪಾಪನಾಶ ವಾಗುವುದು. ಭಕ್ತಿಭಾಗ್ಯವು ದೊರಕಿ ಅವರು ಧನ್ಯರಾಗುವರು. ಅನಂತಗುಣಸಂಪನ್ನನು, ಆನಂದಮಯನು, ಸರ್ವಜ್ಞನು ಆದ ನನ್ನನ್ನಾಶ್ರಯಿಸಿ ಅವರು ತಮ್ಮನ್ನು ನಂಬಿದ ಸುಜನರ ಅಜ್ಞಾನವನ್ನು ಕಳೆದು, ಘೋರಸಂಸಾರಸಾಗರವನ್ನು ಅನಾಯಾಸವಾಗಿ ದಾಟಿಸುವರು. ಸೂರ್ಯನು ಹುಟ್ಟಿದಮೇಲೆ ಹಾದಿಕಾರನಿಗೆ ಭಯವಿಲ್ಲ; ಅಗ್ನಿಯ ಸಮೀಪದಲ್ಲಿ ಕೂತವನಿಗೆ ಚಳಿಯಿಲ್ಲ; ಅಂತೆಯೇ ಸಜ್ಜನ ಭಕ್ತನಿಗೆ ಸಂಸಾರದ ಭಯವಿಲ್ಲ, ಅಜ್ಞಾನದ ಚಳಿಯಿಲ್ಲ, ಪ್ರಾಣಿಗಳಿಗೆ ಅನ್ನದಂತೆ ನಾನು ಆರ್ತಜನರಿಗೆ ರಕ್ಷಕನಾಗಿರುವೆನು. ಸತ್ತವನಿಗೆ ಅವನು ಮಾಡಿದ ಧರ್ಮವೇ ಗಂಟಾಗಿರುವಂತೆ ನಾನು ಭಕ್ತರಿಗೆ ಶರಣ್ಯನಾಗಿ ಸುಖವನ್ನಿತ್ತು ಸಲಹುವೆನು. ಅಂತಹ ನನ್ನ ಜ್ಞಾನವನ್ನೀವ ಸಜ್ಜನರೇ ಸಂಸಾರಕಾನನ ಸಖರೆಂದು ತಿಳಿ! ಸೂರ್ಯನು ಹುಟ್ಟಿದಮೇಲೆ ಬೆಳಕನ್ನೀವನು; ಸುಜನರುಜ್ಞಾನನೇತ್ರವನ್ನೀವರು. ಸುಜನರಿಗೆ ಕುಲದೈವವಾದ ನನ್ನನ್ನು ಸರ್ವದೇವಬಂಧು ಸುಜಾನಾಂತರ್ಯಾಮಿ ಎಂದು ತಿಳಿದವನು ಮುಕ್ತನಾಗುವನು.

ಇಂತು ನಿಶ್ಚಯಿಸಿದ ಐಲನು ಸರ್ವದುಸ್ಸಂಗ ದೂರನಾಗಿ, ಶ್ರೀಹರಿಭಕ್ತಿಬಂಧುರಚಿತ್ತ ಸೌಖ್ಯಭರಿತನಾಗಿ, ಮಹೀಮಂಡಲದಿ ಸಂಚರಿಸಿದನು.

## ೨೭. ಕರ್ಮಯೋಗ

ಉದ್ಧವನು ಪ್ರಶ್ನಿಸಿದನು–

ನಿನ್ನ ಆರಾಧನಪ್ರಕಾರವನ್ನು ಪೇಳು! ಪಂಚರಾತ್ರೋಕ್ತ ಪೂಜಾ ಪ್ರಕಾರವನ್ನು ಮುನಿಗಳು ಶ್ರೇಯಸ್ಕರವೆಂದು ಪೇಳುವರು. ಭಗವಂತನಾದ ವ್ಯಾಸನು, ನಾರದ ಬೃಹಸ್ಪತಿಗಳೂ ಅದನ್ನೇ ಪೇಳಿರುವರು. ನೀನು ಮಹಿದಾಸನಾಗಿ ಪೇಳಿರುವೆ. ಬ್ರಹ್ಮದೇವನು ನಿನ್ನ ಮುಖಕಮಲದಿಂದ ಅದನ್ನು ಕೇಳಿ, ಪುತ್ರರಾದ ಭೃಗ್ವಾದಿ ಮುನಿಗಳಿಗೆ ಪೇಳಿರುವೆನು. ಪೂಜ್ಯ ಶಿವನು ತನ್ನ ಸತಿಗೂ ಪ್ರೇಮದಿಂದ ಪೇಳಿರುವನು. ನಿನ್ನ ಪೂಜೆಯು ಸರ್ವವರ್ಣದವರಿಗೂ, ಸರ್ವಾಶ್ರಮದವರಿಗೂ, ಸ್ತ್ರೀಶೂದ್ರಾದಿಗಳಿಗೂ, ಉತ್ತಮ ಶ್ರೇಯಸ್ಸಾಧನವಾಗಿದೆ. ಭಕ್ತನಾದ ನನಗೆ ಕರ್ಮಬಂಧ ವಿಧ್ವಂಸಕನಾದ ಕರ್ಮಯೋಗವನ್ನು ನಿರೂಪಿಸು!

ಶ್ರೀಭಗವಂತನಿಂತೆಂದನು–

ಕರ್ಮಕಾಂಡವು ಕೊನೆಮೊದಲಿಲ್ಲದಂತಿದೆ. ನಾನು ಸರ್ವವನ್ನರಿತಿದ್ದರೂ, ಜೀವರಲ್ಲಿ ಕರುಣೆ ಯಿಂದ ಅದನ್ನು ಸಂಗ್ರಹವಾಗಿ ವಿವರಿಸಿ ಪೇಳುವೆನು.

ಅಗ್ನಿಷ್ಟೋಮಾದಿ ವೈದಿಕ ಪುಷ್ಪಾಂಜಲ್ಯಾದಿ ತಾಂತ್ರಿಕ, ನಾಮಸಂಕೀರ್ತನಾದಿ ಮಿಶ್ರವಾಗಿ ಪೂಜೆಯು ಮೂರು ವಿಧವಾಗಿದೆ. ಅವರವರಿಗೆ ಯೋಗ್ಯವಾದ ವಿಧಾನದಿಂದ ಜನರು ನನ್ನನ್ನು

ಪೂಜಿಸಬೇಕು. ತನ್ನದಾದ ವೇದಶಾಖೆಯಲ್ಲಿ ಹೇಳಿದಂತೆ, ಉಪನೀತನಾದ ದ್ವಿಜನು, ನನ್ನನ್ನು ಶ್ರದ್ಧೆಯಿಂದ ಪೂಜಿಸಬೇಕಾದ ರೀತಿಯನ್ನು ವರ್ಣಿಸುವೆನು.

ಪ್ರತಿಮೆ, ಸ್ಥಂಡಿಲ, ಅಗ್ನಿ, ಸೂರ್ಯ, ಜಲ, ಮನಸ್ಸು, ಬ್ರಾಹ್ಮಣರು ನನ್ನ ಅಧಿಷ್ಠಾನವೆನಿಸಿ, ಕ್ರಮವಾಗಿ ಉತ್ತಮಾಧಿಷ್ಠಾನರಾಗಿರುವರು. ಲೋಕಗುರುವಾದ ನನ್ನನ್ನು, ಕಾಪಟ್ಯರಹಿತನಾಗಿ ಭಕ್ತಿಯಿಂದ, ದ್ರವ್ಯಗಳನ್ನು ಸಿದ್ಧವಾಗಿರಿಸಿ, ಪೂಜಿಸಬೇಕು. ಧೌತದಂತನಾಗಿ, ಶೌಚವನ್ನು ಮಾಡಿ, ವೈದಿಕ ತಾಂತ್ರಿಕ ಮಂತ್ರಗಳಿಂದ ಸ್ನಾನವನ್ನು ಮಾಡಬೇಕು. ಸಂಧ್ಯಾವಂದನ, ಜಪ, ಮಂತ್ರಗಳನ್ನು ಮಾಡಿ, ಪೂಜೆಯನ್ನು ಮಾಡಬೇಕು. ಎಲ್ಲ ಪುಣ್ಯಕರ್ಮವನ್ನು ನನಗೆ ಅರ್ಪಿತ ಮಾಡಿದರೇನೇ, ಅದು ಪಾವನವಾಗುವುದು.

ಶಿಲಾ, ದಾರು, ಲೋಹ ಪ್ರತಿಮೆಗಳಲ್ಲದೆ, ಲೇಪ್ಯಾ, ಲೇಖ್ಯಾ, ಸೈಕತೀ, ಮನೋಮಯೀ, ಮಣಿಮಯೀ ಎಂದು ಐದು ಪ್ರತಿಮೆಗಳಿವೆ. ಈ ಎಂಟು ವಿಧವಲ್ಲದೆ ಚಲ, ಸ್ಥಿರ ಎಂಬ ಎರಡು ವಿಧ ಪ್ರತಿಮೆಗಳಿವೆ. ಜೀವದೇಹವು ಚಲಪ್ರತಿಮೆ. ಸ್ಥಿರ ಪ್ರತಿಮೆಯಲ್ಲಿ ಆವಾಹನ ಉದ್ವಾಸನಗಳಿಲ್ಲ. ಅಸ್ಥಿರ ಪ್ರತಿಮೆಗಳಲ್ಲಿ ಉದ್ವಾಸನೆ ಮಾಡಬಹುದು; ಬಿಡಬಹುದು. ಸ್ಥಂಡಿಲದಲ್ಲಿ ಆವಾಹನೆ ಮತ್ತು ಉದ್ವಾಸನೆಗಳುಂಟು. ಸ್ಥಂಡಿಲ, ವಿಲೇಪ್ಯ, ವಿಲೇಖ್ಯಗಳಲ್ಲಿ ಪರಿಮಾರ್ಜನವೇ ಸ್ನಾನಸಮವೆಂದು ತಿಳಿ! ಪ್ರತಿಮಾದಿ ಪೂಜೆಯನ್ನು ಮಾಡುವಾಗ, ಭಕ್ತಿಯು ಮುಖ್ಯ; ಆದರದಿಂದ ಶ್ರೀಶನೇ ಸರ್ವೋತ್ತಮನೆಂಬ ಜ್ಞಾನವುಳ್ಳ ಭಕ್ತನು ಮಾಡಿದ ಪೂಜೆಯಿಂದ ನಾನು ತುಷ್ಟನಾಗುವೆನು. ಪ್ರತಿಮೆಯಾದರೆ ಸ್ನಾನ, ಅಲಂಕರಣ, ಎಲ್ಲವೂ ಉಂಟು. ಸ್ಥಂಡಿಲವಾದರೆ ತತ್ವಪತಿಯ ವಿನ್ಯಾಸದಿಂದಲು, ಅಗ್ನಿಯಲ್ಲಿ ಆಜ್ಯಚರುಹೋಮದಿಂದಲು, ಸೂರ್ಯನಿಗೆ ಅರ್ಘ್ಯಪ್ರದಾನದಿಂದಲು, ಜಲದಲ್ಲಿ ನೀರಿನಿಂದಲು, ನನ್ನ ಪೂಜೆಯನ್ನು ಶ್ರದ್ಧೆಯಿಂದ ಮಾಡಬೇಕು. ಧೂಪದೀಪಗಳನ್ನು, ಪುಷ್ಪಾಗಂಧಾಕ್ಷತೆಗಳನ್ನು, ನೈವೇದ್ಯವನ್ನು, ಸಕಲ ಪೂಜಾ ದ್ರವ್ಯಗಳನ್ನು ಸಿದ್ಧಮಾಡಿಕೊಂಡು, ಪೂಜೆಯನ್ನು ಮಾಡಬೇಕು. ಪ್ರಾಗ್ದರ್ಭಾಸನದಲ್ಲಿ, ಅಜಿನ, ವಸ್ತ್ರಗಳನ್ನು ಹಾಕಿಕೊಂಡು, ಪ್ರಾಙ್ಮುಖನಾಗಿ, ಅಥವಾ ಉತ್ತರಾಮುಖನಾಗಿ ಕೊಡಬೇಕು. ಅಥವಾ ಪ್ರತಿಮೆಗೆ, ಸಂಮುಖನಾಗಿ ಕೊಡಬಹುದು. ಷಡಂಗನ್ಯಾಸವನ್ನು ಮಾಡಿ, ತತ್ವನ್ಯಾಸದಿಂದ ಪ್ರತಿಮೆಯನ್ನು ಮುಟ್ಟಿ, ಮಾತೃಕಾನ್ಯಾಸದಿಂದ ತನ್ನಲ್ಲಿ ಧ್ಯಾನಿಸಿ, ಶ್ರೀಹರಿಯನ್ನು ಪ್ರತಿಮೆಯಲ್ಲಿ ಆವಾಹಿಸಬೇಕು. ಅಗ್ರೋದಕ ಕಲಶವನ್ನು, ಪುಷ್ಪಪಾತ್ರೆಯನ್ನು, ಅರ್ಘ್ಯ ಪಾದ್ಯಾದಿ ಪಾತ್ರೆಯನ್ನು ಕ್ರಮವಾಗಿ ಇಟ್ಟುಕೊಳ್ಳಬೇಕು. ಮಂತ್ರಿತಜಲದಿಂದ ದೇವಗೃಹ, ಪೂಜಾ ದ್ರವ್ಯಗಳನ್ನು, ತನ್ನನ್ನು, ಪಾತ್ರೆಗಳನ್ನು ಪ್ರೋಕ್ಷಿಸಬೇಕು. ಪ್ರಾಣಾಯಾಮದಿಂದ ಪಿಂಡ ಸಂಶೋಧನವನ್ನು ಮಾಡಿ, ಗುರುವಂದನ, ನ್ಯಾಸಾದಿಗಳನ್ನು ಮಾಡಿ, ಬಿಂಬರೂಪಿಯಾಗಿ ಹೃದಯ ಗತನಾದ ಶ್ರೀಹರಿಯನ್ನು ಪ್ರತಿಮೆಯಲ್ಲಿ ಆವಾಹಿಸಿ, ಅವನೇ ವ್ಯಾಪ್ತನಾಗಿರುವ ಪರಬ್ರಹ್ಮ ರೂಪನೆಂದು ಚಿಂತಿಸಿ, ಶರಣಾಗತನಾಗಬೇಕು. ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ, ಎಂಬ ನವಶಕ್ತಿಯುತನಾದ ನನ್ನನ್ನು ಪೂಜಿಸುವಾಗ, 'ಹೃದಯದ ಅಷ್ಟದಳಪದ್ಮದಲ್ಲಿ ನೆಲಸಿದ ಶ್ರೀಹರಿಯು ಸ್ವತಂತ್ರನು – ಅವನು ತನ್ನನ್ನು ತಾನೇ ಪೂಜಿಸಿಕೊಂಬುವನು; ನಾನು (ಜೀವನು) ಶ್ರೀಹರಿದಾಸನು –ಅವನ ಪ್ರೇರಣೆಯಿಂದ ಪೂಜಿಸುತ್ತಿರುವೆನು' ಎಂದು ಚಿಂತಿಸಿ, ವೇದ, ತಂತ್ರಮಂತ್ರಗಳಿಂದ ಪೂಜಿಸಬೇಕು.

ಸುದರ್ಶನ, ಪಾಂಚಜನ್ಯ, ಕೌಮೋದಕಿ, ಪದ್ಮ, ನಂದಕ, ಶಾಂರ್ಙ್ಗ, ಬಾಣ, ಹಲ ಮುಸಲ, ಶತಚಂದ್ರ(ಗುರಾಣಿ)ಗಳನ್ನು, ಕೌಸ್ತುಭಮಣಿಯನ್ನು, ವನಮಾಲೆಯನ್ನು, ಶ್ರೀವತ್ಸನನ್ನು ಪೂಜಿಸ ಬೇಕು.

ನಂದ, ಸುನಂದ, ಚಂಡ, ಪ್ರಚಂಡ, ಬಲ, ಮಹಾಬಲ, ಕುಮುದ, ಕುಮುದೇಕ್ಷಣರನ್ನು, ಗರುಡನನ್ನು, ದುರ್ಗಾವಿನಾಯಕರನ್ನು, ವ್ಯಾಸಾದಿ ಗುರುಗಳನ್ನು, ವಿಷ್ವಕ್ಸೇನಾದಿ ಪಾರ್ಷದರನ್ನು, ಪ್ರಧಾನದೇವನಾದ ನನಗೆ ಅಭಿಮುಖವಾಗಿರಿಸಿ. ತಾರತಮ್ಯಾನುಸಾರವಾಗಿ ಪೂಜಿಸಬೇಕು.

ದೇವನು ಕೊಟ್ಟಾಗ ಇರುವ ಚಂದನ, ಉಶೀರ, ಕರ್ಪೂರ, ಕುಂಕುನು, ಕೇಸರ, ಅಗುರು ಮೊದಲಾದ ಸುಗಂಧದ್ರವ್ಯಮಿಶ್ರಿತ ಜಲದಿಂದ ಅಭಿಷೇಕಿಸಬೇಕು. ವಿಷ್ಣುಸೂಕ್ತ, ಪುರುಷಸೂಕ್ತ, ಜಿತಂತೇಸ್ತೋತ್ರಗಳನ್ನು ಪಠಿಸಬೇಕು. ಪವಮಾನ, ಸಮುದ್ರಾದಿ ಸೂಕ್ತಗಳನ್ನು ಹೇಳಬೇಕು. ಪ್ರೇಮದಿಂದ ಕೂಡಿ, ಮೂಲಮಂತ್ರದಿಂದ, ವಸ್ತ್ರ, ಯಜ್ಞೋಪವೀತ, ಆಭರಣ, ಪತ್ರ, ಪುಷ್ಪ, ಮಾಲಾ, ಗಂಧ, ಅಕ್ಷತೆಗಳನ್ನು ಅಲಂಕರಿಸಬೇಕು. ಆಚಮನವಿತ್ತು, ಧೂಪ ದೀಪ ನೈವೇದ್ಯ ಗಳನ್ನರ್ಪಿಸಿ, ನೀರಾಜಿಸಬೇಕು. ಗುಡಪಾಯಸ, ತುಪ್ಪ, ಚಕ್ಕುಲಿ, ಅಪೂಪ, ಕಡುವು, ಗೋಧಿ ಪಾಯಸ, ಮೊಸರು, ತೊವ್ವೆಗಳನ್ನು, ಇದ್ದಾಗ ಶ್ರೀಹರಿಗರ್ಪಿಸಬೇಕು. ನಿತ್ಯವೂ ಅಭ್ಯಂಗ, ಆದರ್ಶ (ಕನ್ನಡಿ), ನೈವೇದ್ಯ, ನೃತ್ಯಗೀತೆಗಳು, ಛತ್ರಚಾಮರಗಳು, ಮೊದಲಾದವನ್ನರ್ಪಿಸಬೇಕು.

ತ್ರಿಮೇಖಲವೇದಿಯುಕ್ತವಾದ ಕುಂಡದಲ್ಲಿ, ಅಗ್ನ್ಯಾಧಾನವನ್ನು ಮಾಡಿ, ಉರಿಯುವಾಗ, ಅಗ್ನಿಗೆ ಪರಿಸಮೂಹನಾದಿಗಳನ್ನು ಮಾಡಿ, ನನ್ನ ಪ್ರೀತಿಗಾಗಿ ಚರು ಪಾಯಸಗಳನ್ನು ಹೋಮಿಸ ಬೇಕು. ಶಂಖಚಕ್ರಗದಾಪದ್ಮಧರನು, ತಪ್ತಹೇಮಶರೀರನು, ಚತುರ್ಭುಜ ವಿಲಸಿತನು, ಸ್ವರ್ಣೋಪವೀತನು, ಶಾಂತನು, ಮನಃಕಾಂತನು, ಪದ್ಮಕಿಂಜಲ್ಕವಸನನು, ಭ್ರಾಜತ್ ಕಿರೀಟ ಕಟಕಕಟಿಸೂತ್ರ ಭುಜಭೂಷಣನು, ಶ್ರೀವತ್ಸವಕ್ಷಸ್ಕನು, ವನಮಾಲಾ ಕೌಸ್ತುಭಸಮನ್ವಿತನು ಆದ ಪರಶುರಾಮ ಮೂರ್ತಿಯನ್ನು ಧ್ಯಾನಿಸಿ, ನಾರಾಯಣಾದಿಮಂತ್ರ ಸ್ವಾಹಾಕಾರದಿಂದ ಹೋಮಿಸಿ, ಷೋಡಶಾಹುತಿಗಳನ್ನಿತ್ತು – ಧರ್ಮಾದಿಗಳನ್ನು ಕುರಿತು ಹವಿಸ್ಸನ್ನಿತ್ತು, ಸ್ವಿಷ್ಟಿ ಕೃದ್ಧೋಮವನ್ನು ಮಾಡಬೇಕು. ಅಗ್ನಿಗೆ ನಮಸ್ಕರಿಸಿ, ಪಾರ್ಷದರಿಗೆ ಬಲಿಯನ್ನಿತ್ತು, ಮೂಲ ಮಂತ್ರವನ್ನು ಜಪಿಸಬೇಕು. ಉಚ್ಛೇಷವನ್ನು ವಿಶ್ವಕ್ಸೇನನಿಗಿತ್ತು – ಪೂಜಿಸಬೇಕು. ನನಗೆ (ಶ್ರೀಶನಿಗೆ) ಸುಗಂಧಿತ ಚಂದನ – ತಾಂಬೂಲಾದಿಗಳನ್ನು, ಚಾಮರಾದಿ ಸಕಲೋಪಚಾರಗಳನ್ನು ಸಮರ್ಪಿಸಬೇಕು. ಹಾಡಿ, ಪಾಡಿ, ಕೊಂಡಾಡಿ ಕುಣಿಯಬೇಕು. ನನ್ನ ಕಥೆಯನ್ನು ಒಂದು ಮುಹೂರ್ತ, ಒಂದು ಕ್ಷಣವಾದರೂ ಕೇಳಿ ಆನಂದಿಸಬೇಕು. ನಾನಾ ವಿಧ ವೈದಿಕ, ಪೌರಾಣಿಕ ಸ್ತುತಿಗಳಿಂದಲು, ಕನ್ನಡ, ಆಂದ್ರ, ತಮಿಳಾದಿ ಭಾಷಾ ಪದಪದ್ಯಗಳಿಂದಲೂ ನುಡಿಸಿ ಕೈಜೋಡಿಸಿ ನಿಂತು ಭಗವನ್! ಶ್ರೀಶ! ಶ್ರೀನಿವಾಸ! ಪ್ರೀತನಾಗು! ದಯಮಾಡು! ಎಂದು ಆರ್ತನಾಗಿ, ನಮಿಸಿ ಬಿಡಬೇಕು. ಎರಡು ಕೈಜೋಡಿಸಿ, ಶಿರವನ್ನು ನನ್ನ ಪಾದಾರವಿಂದದಿ ಭಾಗಿಸಿ, 'ಈಶ! ಶರಣಾಗತನಾಗಿರುವೆನು! ಸಂಸಾರ ಭಯಕಾತರನಾದ ನನಗೆ ಅಭಯವನ್ನು ಕೊಡು! ಮೃತ್ಯು ಸಂಸಾರಸಮುದ್ರದ ಪಾರುಗಾಣಿಸು ತಂದೆ!' ಎಂದು ಪುನಃ ವಂದಿಸಿ, ಮಾಲಾಕ್ಷತಾದಿ ನಿರ್ಮಾಲ್ಯವನ್ನು ಭಕ್ತಿಯಿಂದ ಶಿರದಲ್ಲಿ ಧರಿಸಬೇಕು. ಆದನಂತರ ಉದ್ವಾಸನೆ ಮಾಡುವಲ್ಲಿ – ಮಾಡಿ – ಪೂಜಾ ಫಲವನ್ನು ಮಧ್ವೇಶನಿಗೆ ಅರ್ಪಿಸಿ, ನಮಿಸಬೇಕು. ಇಂತು ಪೂಜಿಸಿದವನು ಆರ್ಚಾದಿಗಳ ಸಾಮರ್ಥ್ಯಾನುಸಾರವಾದ ಸತ್ಫಲವನ್ನು ಹೊಂದುವನು.

ನನ್ನ ಪ್ರತಿಮೆಯನ್ನು ಪ್ರತಿಷ್ಠಿಸಿ, ದೇವಾಲಯವನ್ನು, ಸುತ್ತು ಪೂದುಳಸಿವನವನ್ನು, ಉತ್ಸವಾದಿಗಳನ್ನು ಮಾಡಿದವನು, ಪರ್ವಗಳಲ್ಲಿ ರಥೋತ್ಸವಾದಿಗಳನ್ನು ಮಾಡಿದವನು ಸಾಲೋಕ್ಯ – ಸಾರೂಪ್ಯ ಮೋಕ್ಷಭಾಜನನಾಗುವನು. ಪ್ರತಿಷ್ಠಿಸಿದವನು, ಸಾರ್ವಭೌಮನು, ದೇವಾಲಯಕರ್ತನು, ಲೋಕತ್ರಯಾಧಿಪತ್ಯವನ್ನು ಪೂಜೋತ್ಸವಾದಿಗಳನ್ನು ನಡೆಯಿಸಿದವನು ಬ್ರಹ್ಮಲೋಕವನ್ನು, ಎಲ್ಲವೂ ಮಾಡಿ ನನ್ನ ಲೋಕವನ್ನು ಪೊಂದುವನು.

ನಿರಪೇಕ್ಷನಾಗಿ ಕೇವಲ ಭಕ್ತಿಯಿಂದ ನನ್ನನ್ನು ಪೂಜಿಸಿದವನು ಜ್ಞಾನವನ್ನೂ ಪೊಂದಿ, ಭಕ್ತಿಯ ಪರಿಪಾಕದಿಂದ ಮುಕ್ತನಾಗುವನು.

ತಾ ಕೊಟ್ಟ, ಅಥವಾ ಇತರರು ಕೊಟ್ಟಿದ್ದ ದೇವಬ್ರಾಹ್ಮಣ ವೃತ್ತಿಗಳನ್ನು ಅಪಹರಿಸಿದವನು ಹತ್ತಾರು ಸಾವಿರ ವರುಷಗಳವರಿವಿಗೂ ವಿಟ್ ಕ್ರಿಮಿಯಾಗಿ ಹುಟ್ಟಿ ಸಾಯುತ್ತಿರುವನು. ಪೂಜಾ ಕರ್ತನಿಗೆ ಅಲ್ಲದೆ, ಸಹಾಯಕನಿಗೂ, ಹಾಗೂ ಅನುಮೋದಕನಿಗೂ ಕೂಡ, ಯಥಾ ಯೋಗ್ಯ ವಾದ ಫಲವಾಗುವುದು, ಪುಣ್ಯಕರ್ಮದ ಘನತೆಯಿಂದ ಫಲವೂ ಹೆಚ್ಚುವುದು.

## ೨೮. ಶ್ರೀಹರಿಯ ಮಹಿಮೆ

ಶ್ರೀಕೃಷ್ಣನಿಂತೆಂದನು –

**ಶ್ರೀಹರಿಯೇ** ಸರ್ವೋತ್ತಮನು; ಸ್ವತಂತ್ರನು, ಇತರ ಜಡಜಗತ್ತು ಹಾಗೂ ಬ್ರಹ್ಮಾದಿ ಸರ್ವಜೀವ ಜಗತ್ತು ಅಸ್ವತಂತ್ರವು. ಶ್ರೀಹರಿಯು ವ್ಯಾಪ್ತನಾಗಿ ಎಲ್ಲದರಲ್ಲಿಯು ನೆಲಸಿರುವನು. ಅಂತಹ ಸ್ವಾಮಿಯನ್ನು ಗುರ್ತಿಸದ ಅಜ್ಞಾನಿಯು ಜೀವನೇ ಬ್ರಹ್ಮನೆಂಬುವನು. ವಿವೇಕಿ ಸಜ್ಜನನು ಜೀವೇಶ ಭೇದವನ್ನು ಚೆನ್ನಾಗಿ ತಿಳಿಯುವನು. ಮೋಕ್ಷದ ಎರಡು ದಳಗಳಾದ ಅನಿಷ್ಟಪರಿಹಾರ, ಇಷ್ಟಪ್ರಾಪ್ತಿಗಳು ಆಗಬೇಕಾದರೆ, ಅಸನ್ಮತವಾದ ಜೀವೇಶೈಕ್ಯನಾದ ನಿಂದನವು, ಹಾಗೂ ಸನ್ಮತವಾದ ಜೀವೇಶಭೇದ ಪ್ರಶಂಸೆಯು, ಅತ್ಯವಶ್ಯಕವಾಗಿದೆ. ಉದ್ಧವಾ! ಅಸಜ್ಜನ ಪ್ರಶಂಸೆಯನ್ನೂ, ಸಜ್ಜನ ನಿಂದೆಯನ್ನೂ ಮಾಡಬಹುದೇ? ಅಸನ್ಮತವನ್ನು ನಿಂದಿಸದೆ ಪೊಗಳಿ ಸ್ವೀಕಸಿದವನು ಮಿಥ್ಯಾಜ್ಞಾನಿ ಎನಿಸಿ, ಕೊನೆಗೆ, ಅಂಧಂತಮಸ್ಸನ್ನು ಪೊಂದುವನು.

ನಿತ್ಯವೂ ನಿದ್ರೆಯಲ್ಲಿ ಜೀವನು ತೈಜಸಾಹಂಕಾರದ ಇಂದ್ರಿಯಗಳೆಲ್ಲವೂ ಮನಸ್ಸಿನಲ್ಲಿ ಸೇರಿ ವ್ಯಾಪಾರವನ್ನು ಬಿಟ್ಟಿರಲು, ಈಶ್ವರೇಚ್ಛೆಯು ಮಾನಸಿಕ ಸಂಸ್ಕಾರದಿಂದ ನಿರ್ಮಿಸಿದ ನಾನಾ ಸ್ವಪ್ನಪದಾರ್ಥಗಳನ್ನು ತೋರಿಸಿದಾಗ, ಅವಶನಾಗಿ ನೋಡಿ ಅನುಭವಿಸುವನು; ದೀರ್ಘ ನಿದ್ರೆಯಾದೊಡನೆ ಶ್ರೀಶೇಚ್ಛೆಯಿಂದ ದೇಹವನ್ನು ಬಿಟ್ಟು ಇನ್ನೊಂದು ಶರೀರದ ಕಡೆಗೆ ಓಡುವನು. ಮನವು ಸ್ವಪ್ನ ಜಾಗ್ರದಾದಿ ಪದಾರ್ಥಗಳನ್ನು ನೋಡಿಸುವಾಗ, ಭ್ರಮಿಸಿ, ಸ್ವಪ್ನವನ್ನು ಜಾಗ್ರತ್ಸಮವೆಂದು ಸ್ವಪ್ನದಶೆಯಲ್ಲಿ ತಿಳಿಯುವಂತೆ, – ಸರ್ವವೂ ತನ್ನ ವಶವು – ಸಂಸಾರವು ಶಾಶ್ವತವು, ತಾನೇ ತಾನಾಗಿ ಶರೀರದಲ್ಲಿರುವನು – ಶ್ರೀಶನಿಲ್ಲ – ತಾನೇ ಬ್ರಹ್ಮನು – ಎಂಬ ಭ್ರಮೆಗಳನ್ನು ಪೊಂದಿ ಜೀವನು ಸಂಸಾರದಲ್ಲಿ ನರಳುತ್ತಿರುವನು. ಅಂತಹ ಮಿಥ್ಯಾಜ್ಞಾನಿಯು ನಿತ್ಯಾಪ್ರತಿಹತ ಪರಮಮಂಗಲಮೂರ್ತಿಯಾದ ಶ್ರೀಹರಿಯನ್ನು ತಿಳಿಯದಿರುವನು; ಅವನಿಗೆ ಇತರ ಸುಜನರ ಆಶೀರ್ವಾದದಿಂದ ಶುಭವಿಲ್ಲ; ಇತರ ಋಷ್ಯಾದಿಗಳ ಶಾಪದಿಂದ – ಆಗಬೇಕಾದ ದುಃಖವೆಲ್ಲವೂ ಸಿದ್ಧವಾಗಿರುವುದರಿಂದ – ಹಾನಿ ಇಲ್ಲ. ಶುಭವು ಒಂದು ವೇಳೆ

ಸಂಭವಿಸಿದರೂ ಬ್ರಹ್ಮಜ್ಞಾನಿಗಳಾದ ಆಚಾರ್ಯರನ್ನು ದಕ್ಷಿಣಾದಿಗಳಿಂದ ತೃಪ್ತಿಪಡಿಸಿದ ಫಲವಾಗಿದ್ದು ಅತ್ಯಲ್ಪಕಾಲಮಾತ್ರವಿರುವುದು. ಅಸತ್ಯ ಸ್ವರೂಪರಾದ ಕಲ್ಯಾದಿಗಳಿಗೆ ಕೊಟ್ಟ ಆಶೀರ್ವಾದಗಳು ಸತ್ಯವಾಗಲಾರವು. ಪರಮಾಂಧಂ ತಮೋದುಃಖದಲ್ಲಿಯು, ಅಜ್ಞಾನದಲ್ಲಿಯು ಮಗ್ನನಾದವನಿಗೆ, ಇನ್ನು ಹೆಚ್ಚು ದುಃಖವಾದರೂ ಎಂತು? ನೆರಳು, ನೀಹಾರ, ಸೂರ್ಯ ಕಾಂತಾದಿಗಳು ಜೀವರ ವಿಷಯದಲ್ಲಿ ನಿಶ್ಯಕ್ತವೇ ಆದರೂ ಅರ್ಥಕ್ರಿಯಾಕಾರಿಯಾಗಿ ಸತ್ಯವೇ ಆಗಿರುವುವು; ಸುಳ್ಳಲ್ಲ. ಅಂತೆಯೇ ದೇಹಾದಿಗಳು ಮಿಥ್ಯವಲ್ಲ. ಅಶುಭ ಜೀವರಿಗೆ ಅಂಧಂತಮಃ ಪ್ರಾಪ್ತಿಯಾಗುವವರೆಗೂ, ಆ ಪಾಪಿಗಳಿಗೆ ಶುಭಾ ಶುಭ ಫಲವನ್ನು ಮರಣಾದಿ ಭಯವನ್ನು ಕೊಡುತ್ತಲೇ ಇರುವುವು.

ಶ್ರೀಹರಿಗೆ ದೇಹಯೋಗವಿಯೋಗಾದಿಗಳಿಲ್ಲ; ಅವನು ಅವತರಿಸಬೇಕಾದಾಗ ಪ್ರಕೃತಿಯನ್ನು ಅಪೇಕ್ಷಿಸುವುದಿಲ್ಲ. ದೀಪದಿಂದ ದೀಪ ಹುಟ್ಟಿದಂತೆ, ತಾನೇ ತಾನಾಗಿ ಪ್ರಾದುರ್ಭೂತನಾಗಿ, ಇಷ್ಟಬಂದಷ್ಟು ಕಾಲವಿದ್ದು – ಕೊನೆಗೆ ತನ್ನ ಮೂಲರೂಪದಲ್ಲಿ ತಾನು ಐಕ್ಯವನ್ನು ಹೊಂದು ವನು. ಶ್ರೀಹರಿಯು ಸತ್ಯಸಂಕಲ್ಪನು, ಇಚ್ಛಾಮಾತ್ರದಿಂದ ಪ್ರಕೃತಿಯನ್ನು ಉಪಾದಾನವನ್ನಾಗಿರಿಸಿ, ಜಗವನ್ನು, ಸೃಜಿಸಿ, ಪಾಲಿಸಿ, ಸಂಹರಿಸಿ, ಮತ್ತೆ ಪ್ರಕೃತಿಯಲ್ಲಿ ಲಯವನ್ನು ಹೊಂದಿಸುವನು. ಜೀವರನ್ನು ಪ್ರಕೃತಿ ನಿರ್ಮಿತ ದೇಹಗಳಲ್ಲಿ ತಂದು, ಒಳಗೆ ಅಂತರ್ಯಾಮಿಯಾಗಿ ಪ್ರೇರಿಸಿ, ತತ್ತದ್ಯೋಗ್ಯ ಕರ್ಮಗಳನ್ನು ಮಾಡಿಸಿ, ತತ್ತದ್ಯೋಗ ಗತಿಯನ್ನು ಕೊಡುವನು. ಇಂತು ಸ್ವತಂತ್ರ ನಾದ ಶ್ರೀಹರಿಯ ಹೊರತು – ಅನ್ಯರು ಸ್ವತಂತ್ರರೆಂದು ತಿಳಿದವರು ಹಿರಣ್ಯಕಶಿಪುವಿನ ಕುಲ ದೇವರು – ಪ್ರಹ್ಲಾದನ ಕುಲದವರಲ್ಲ. ಶ್ರೀಹರೀಚ್ಛಾಧೀನ ಪ್ರಕೃತಿಯಿಂದ ಬಂದ ಅಜ್ಞಾನ ಭ್ರಮೆಗಳು ಜೀವನಿಗೇ ಆಗಲಿ, ಶ್ರೀಶನಿಗಲ್ಲ. ಇಂತು ಜೀವೇಶ ಭೇದವನ್ನು, ಸ್ವಗತಭೇದವರ್ಜಿತ ಶ್ರೀಹರಿ ಮಹಿಮೆಯನ್ನು ತಿಳಿದವನು. ನಿಂದಾಸ್ತುತಿಗಳ ವಿಷಯದಲ್ಲಿ ಯೋಗ್ಯತೆಯನ್ನರಿತು ನಡೆಯುವನು. ಮತ್ತು ಸೂರ್ಯನಂತೆ ತಾನು ನಿರ್ವಿಕಾರನಾಗಿದ್ದು, ಪ್ರತ್ಯಕ್ಷದಿಂದಲು, ತರ್ಕ ದಿಂದಲು, ವೇದಾದಿ ಸಚ್ಛಾಸ್ತ್ರಜ್ಞಾನದಿಂದಲು, ತನ್ನ ಅಸ್ವಾತಂತ್ರ್ಯವನ್ನೂ, ಶ್ರೀಹರಿಯ ಸ್ವಾತಂತ್ರ್ಯವನ್ನೂ ಚೆನ್ನಾಗಿ ಅರಿತು, ಶಾಂತನಾಗಿ ಸಂಸಾರದಲ್ಲಿ ಸಂಚರಿಸಿ, ಕೊನೆಗೆ ಮುಕ್ತನಾಗು ವನು.

ಉದ್ಧವನು ಕೇಳಿದನು–

ಶ್ರೀಹರಿಯು ಸರ್ವಜ್ಞನು. ಸರ್ವಸಾಕ್ಷಿಯು ಆದುದರಿಂದ ಅವನಿಗೆ ಸಂಸಾರ ಬಂಧವಿಲ್ಲ; ಇನ್ನು ದೇಹವು ಜಡವಾದುದರಿಂದ ಅದಕ್ಕೂ ಬಂಧವಿಲ್ಲ. ಮತ್ತಾರಿಗೆ ಈ ಬಂಧ? ಮುಕ್ತಿ ಎಂತು? ಅವ್ಯಯನು, ಅಪ್ರಾಕೃತನು, ಸ್ವಯಂಪ್ರಕಾಶನು, ಅಜ್ಞಾನಾದಿ ದೋಷದೂರನು ಆದ ಶ್ರೀಭಗವಂತನಿಗೆ ದೋಷರೂಪ ಸಂಸಾರವಿಲ್ಲ. ಸುಡುವ ಅಗ್ನಿಗೆ ತಾಪವಿಲ್ಲ ಹಾಗೂ ಜಡವಾದ ಕಟ್ಟಿಗೆಗೆ ಕೂಡ ತಾಪವಾಗಲಾರದು. ಅಂದಮೇಲೆ ಜೀವನಿಗೇ ಸಂಸಾರಬಂಧವಲ್ಲವೇ?

ಶ್ರೀಭಗವಂತನಿಂತೆಂದನು–

ಉದ್ಧವಾ, ಜೀವನಿಗೇ ಸಂಸೃತಿಬಂಧವು ನಿಜ! ದೇಹ, ಇಂದ್ರಿಯಗಳು ಪ್ರಾಣಗಳಿಂದ ಕೂಡಿದ ಜೀವನು – ಆ ದೇಹವೇ ತಾನೆಂದು ತಿಳಿದಿರುವವರಿವಿಗೂ – ಅಜ್ಞಾನಿಯಾಗಿ, ಸಂಚರಿಸು ತ್ತಿರುವರು. ವಿವೇಕಿಗೆ ಸಂಸಾರಬಂಧವು ನಾಶವಾಗುವುದು. ದೇಹವು ಜಡವು – ಅಂತರ್ಯಾಮಿ ಶ್ರೀಶನು ಸ್ವತಂತ್ರನು – ಇನ್ನು ತನಗೇ ಬಂಧವು ಎಂದು ಜೀವಜಡ ಶ್ರೀಶ ಭೇದವನ್ನು ತಿಳಿ

ದವನಿಗೆ ಬಂಧವು ಸತ್ಯವಾದರೂ, ಸೇತುದರ್ಶನದಿಂದ ಬ್ರಹ್ಮಹತ್ಯೆ ಹೋದಂತೆ. ಶ್ರೀಹರಿ ದಯದಿಂದ ನಾಶವಾಗುವುದು. ಸಂಸಾರವು ಪರಮ ಪ್ರಯೋಜನಕಾರಿ ಅಲ್ಲದಿದ್ದರೂ, ಅದೇ ಸಾರವೆಂದು ವಿಷಯಧ್ಯಾನರತನಾದವನನ್ನು ಬಿಡದೆ ಬಂಧಿಸಿ, ಜನನ ಮರಣಗಳ ಸುಳಿಯಲ್ಲಿ ಸುತ್ತಿಸುತ್ತಿರುವುದು. ಸ್ವಪ್ನದಲ್ಲಿ ಶಿರಚ್ಛೇದಾದ್ಯನರ್ಥವನ್ನು ಅನುಭವಿಸುವ ನರನಿಗೆ ಎಚ್ಚರ ವಾದರಲ್ಲವೇ ತದ್ದುಃಖನಾಶವಾಗುವುದು? ಅಂತೆಯೇ ಶ್ರೀಹರಿಯು ಕರುಣಿಸಿ, ಜ್ಞಾನಭಕ್ತಿ ವಿರಕ್ತಿಯುತನಾದ ಜೀವನನ್ನು, ಸಂಸಾರ ಸ್ವಪ್ನದಿಂದ ಎಬ್ಬಿಸಿ, ತನ್ನ ಪ್ರಕಾಶವನ್ನಿತ್ತು, ಬಂಧವನ್ನು ಬಿಡಿಸಿ ಮುಕ್ತಿಯನ್ನಿತ್ತು, ಕಾಪಾಡುವನು. ಜೀವನಿಗೆ ಶೋಕ, ಮೋಹ, ಹರ್ಷ, ಭಯ, ಕ್ರೋಧ, ಲೋಭ, ಸ್ಪೃಹಾದಿಗಳು, ಅಭಿಮಾನದಿಂದ ಆಗುತ್ತಿವೆ ಆಗಲಿ ಸ್ವಭಾವದಿಂದಲ್ಲ; ಜನನಮರಣ ಗಳೂ ದೇಹಕ್ಕೇ ಆಗಲಿ ಜೀವನಿಗಲ್ಲ. ಸರ್ವರಲ್ಲಿಯೂ ನಿಯಾಮಕನಾಗಿ ಸರ್ವವನ್ನು ಸ್ವೀಕರಿಸುವ ಬ್ರಹ್ಮನೂ ಕೂಡ, ಸ್ವಕರ್ಮಾನುವಶವಾಗಿ ಬಂದ ದೇಹದಲ್ಲಿದ್ದು, ಕಾಲಾ ಭಿಮಾನಿನಿಯಾದ ದುರ್ಗಾದೇವಿಯ ಅಧೀನನಾಗಿರುವನು. ಬ್ರಹ್ಮಸೂತ್ರರೀರ್ವರು ಕೂಡ ಸಂಸಾರದಲ್ಲಿರುವರೆಂದ ಮೇಲೆ ಇತರ ಜೀವರು ಅಭಿಮಾನ ಪ್ರಾಪ್ತ ಸಂಸಾರದಲ್ಲಿರುವರೆಂದು ಹೇಳಬೇಕೇ? ಆದುದರಿಂದ ಪುರುಷನು, ನಿರಂತರ ಸ್ಮರಣದಿಂದ ನಿಶಿತವಾಗಿರಿಸಿದ ಜ್ಞಾನ ಖಡ್ಗದಿಂದ, ಸಂಸಾರಕಾರಣವಾದ ಅಹಂಮಮತಾರೂಪ ಅಜ್ಞಾನಪಾಶವನ್ನು ಕಡಿದು, ಶ್ರೀಹರಿದಯ ದಿಂದ ಮುಕ್ತನಾಗಬೇಕು. ಬಂಧವನ್ನು ಕೊಟ್ಟ ಸ್ವಾಮಿಯು ಪ್ರಸನ್ನನಾಗಿ ಜ್ಞಾನವನ್ನೂ ಕೊಟ್ಟು, ಭಕ್ತನನ್ನು ಸಂಸಾರದಿಂದ ಬಿಡಿಸಿ ಪೊರೆಯುವನು. ಜೀವನಿಗೆ ದೇಹಾದಿಗಳ ಲ್ಲಿರುವ ಅಭಿಮಾನವೇ ಕರ್ಮಗಳನ್ನು ಮಾಡಿಸಿ ಬಂಧಕವಾಗಿದೆ. ಆ ಕರ್ಮವನ್ನೂ ಶ್ರೀಶನೇ ಭಕ್ತಿಪ್ರಸನ್ನನಾಗಿ ನಾಶಪಡಿಸುವನು.

ಸತ್ಯಜ್ಞಾನಾನಂದರೂಪನು, ಜಡಜೀವ ವಿಲಕ್ಷಣನು, ನಿಗಮವೇದ್ಯನು, ಪ್ರತಿಪ್ರತೀಂದ್ರಿಯ ಪ್ರೇರಕನು, ಸಂಪ್ರದಾಯಾಗತ ಸದುಪದೇಶವಿಷಯನು, ಸತ್ತರ್ಕಗೋಚರನು ಆದ ಶ್ರೀಹರಿಯೇ ಸ್ವತಂತ್ರನು; ಅವನೇ ಸರ್ವಕಾಮಫಲಪಾಚಕನು; ಅವನೇ ಜಗದಾದಿ ಮಧ್ಯನಿಧನ ಕಾಲ ದಲ್ಲಿಯು ಶಶ್ವದೇಕಪ್ರಕಾರನಾಗಿರುವನು. ನಿಮಿತ್ತ ಕಾರಣನಾಗಿರುವ ಶ್ರೀಹರಿಯು ರಥದ ದಾರುವಿನಲ್ಲಿ ಚಿತ್ರಿತವಾದ ಹಿರಣ್ಯದಂತೆ, ಜಗದ್ಭಿನ್ನನೇ ಆಗಿರುವನು; ಉಪಾದಾನ ಕಾರಣವಾದ ದಾರುವಿನಂತೆ ಅಲ್ಲದೆ ದಾರು ಪೂರ್ವದಲ್ಲಿಯು ಹಿರಣ್ಯವೇ, ದಾರು ತ್ಯಾಗವಾದ ಮೇಲೂ ಹಿರಣ್ಯವೇ ಆಗಿ, ದಾರು ಭಿನ್ನವಾದ ಹಿರಣ್ಯದಂತೆ, ಪ್ರಕೃತಿಯ ಸೃಷ್ಟಿ ಪ್ರಳಯಗಳಲ್ಲಿಯೂ, ಪ್ರಕೃತಿಭಿನ್ನನಾಗೇ ಇರುವನು. ಚಿತ್ರಿತವಾದ ಕಾಲಕ್ಕೆ ಕೂಡ ದಾರುಭಿನ್ನವಾದ ಸುವರ್ಣದಂತೆ ಶ್ರೀಹರಿಯು ಜೀವಶರೀರದಲ್ಲಿ ಬಿಂಬಾದಿರೂಪದಿಂದಿದ್ದರೂ, ಜೀವಭಿನ್ನನಾಗಿಯೇ ಇರುವನು. ಹಿರಣ್ಮಯ ರಥವೆಂದು ಕರೆಯಲ್ಪಡುವಂತೆ, ತತ್ತನ್ನಿಯಾಮಕನಾಗಿರುವ ಸ್ವತಂತ್ರನಾದ ಶ್ರೀಹರಿಯು ದೇವದಾನವ ಮಾನವರಲ್ಲಿದ್ದು ತತ್ತನ್ನಾಮಕನಾಗಿ ಕರೆಯಲ್ಪಡುವನು. ಸುವರ್ಣ ದಂತೆ ಮಹಾಫಲ ಹೇತುನಾಗಿ, ನಿರ್ವಿಕಾರನಾಗಿ ಸ್ವತಂತ್ರನಾಗಿರುವ ಶ್ರೀಶನ ಜ್ಞಾನವೇ ಮೋಚಕವು.

ಉದ್ಧವ! ಶ್ರೀಹರಿಯ (ನನ್ನ) ನಿರ್ದೋಷ ಜ್ಞಾನಸ್ವರೂಪವನ್ನು ತಿಳಿದವನೇ ಮುಕ್ತನಾಗು ವನು. ಜಗತ್ಪ್ರಭುವಾದ ನಾರಾಯಣನು ತ್ರಿವಿಧ ಜೀವರನ್ನು ತತ್ತದ್ಯೋಗ್ಯ ಸ್ಥಾನಗಳಲ್ಲಿ ಇಡುವನು. ಅವನೇ ಮೋಕ್ಷಸಂಸಾರ ತಮಸ್ಸುಗಳನ್ನವರಿಗೆ ಕೊಡಲು ಸ್ವತಂತ್ರನು. ವಿಜ್ಞಾನಾ

ನಂದ ಗುಣಪೂರ್ಣನು. ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಗಳಿಗತೀತನಾಗಿ ತುರ್ಯನಾದ ಶ್ರೀಹರಿಯು ಅನುಗ್ರಹಿಸಿದರೆ ಸತ್ತ್ವಾದಿಗುಣಗಳು ಕಾರಣವೆನಿಸಿ ಮಹದಹಂಕಾರಾದಿ ಕಾರ್ಯವನ್ನು ಹುಟ್ಟಿಸಲು ಸಮರ್ಥವಾಗುವುವು. ಕಾಲಕರ್ಮಾದಿಗಳೂ ಅವನ ಇಚ್ಛೆಯಂತೆ ಫಲಪ್ರದವಾಗಿರುವುವು. ಅವನ ಅನುಗ್ರಹವಿಲ್ಲದಿರೆ ಯಾವುದೂ ಏನೂ ಮಾಡಲಾರದು. ಅವನೇ ಸ್ವತಂತ್ರನು. ಶ್ರೀಶನು ಜೀವರಿಗೆ ಎಲ್ಲ ವಸ್ತುಗಳನ್ನೂ ಕೊಟ್ಟಿರುವನು ನಿಜ! ಆದರೆ ಕರ್ತೃತ್ವವನ್ನು, ಸ್ವಾತಂತ್ರ್ಯವನ್ನು, ಸ್ವಾಮಿತ್ವವನ್ನು ಮಾತ್ರ ಕೊಟ್ಟಿಲ್ಲ. ಹಿಂದೆ ಸ್ವತಂತ್ರರಲ್ಲದ, ಮುಂದೆಯೂ ಸ್ವತಂತ್ರರಲ್ಲದೆ ಕರ್ಮಬುದ್ಧ ಜೀವರು, ಜೀವನ ಕಾಲದಲ್ಲಿ ಇಲ್ಲದ ಸಲ್ಲದ ಸ್ವಾತಂತ್ರ್ಯವನ್ನೂ, ಸ್ವಾಮಿತ್ವವನ್ನೂ ವಹಿಸಿಕೊಂಡು, ದುರಭಿಮಾನದಿಂದ ಸಂಸರಿಸುತ್ತಿರುವರು. ಆದುದರಿಂದ ಪರಮಚೇತನನಾದ ಶ್ರೀಹರಿಯ ಸ್ವಾತಂತ್ರ್ಯ ಸ್ವಾಮಿತ್ವಗಳನ್ನು ತಿಳಿದು ಅವನನ್ನು ಭಜಿಸುವರೇ ಜ್ಞಾನಿಗಳು.

ವಿಕಾರವನ್ನು ಹೊಂದುವ ರಜೋಗುಣದಿಂದ ಆದ ಈ ಪ್ರಪಂಚವು ಅಸ್ವತಂತ್ರವೇ ಆಗಿದ್ದರೂ ಅಜ್ಞಾನಿಗಳು ಅದು ಸ್ವತಂತ್ರವೆಂಬುವರು; ಜ್ಞಾನಿಗಳು ಪೇಳುವ ಸ್ವತಂತ್ರ ಸೃಷ್ಟಿಕರ್ತನಿಲ್ಲವೆಂಬುವರು. ಅಂತಹ ಅಜ್ಞಾನಿಗಳು ತಮವನ್ನೇ ಪೊಂದುವರು. ಶ್ರೋತ್ರಾದೀಂದ್ರಿಯಗಳಿಂದ ಶಬ್ದಾದಿ ವಿಷಯಗಳನ್ನು ಸ್ವೀಕರಿಸುವ ಜೀವನು ತತ್ತ್ವದೇವತೆಗಳ ಸಹಾಯದಿಂದಲೇ ಸ್ವೀಕರಿಸುತ್ತಿರುವನು. ಆ ದೇವತೆಗಳೆಲ್ಲರೂ ಅವನ ಪ್ರಕಾಶದಿಂದ ಬೆಳಗುತ್ತಿರುವರು. ಇಂತು ಪರಬ್ರಹ್ಮನು, ಜೀವನಲ್ಲ, ಜಡನಲ್ಲ...........ಎಂದು ವೈಲಕ್ಷಣ್ಯ ಜ್ಞಾನದಿಂದ ನಿಶ್ಚಯಿಸಿ, ಮನಸ್ಸಂದೇಹವನ್ನು ದೂರೀಕರಿಸಿ, ಅಲಂಬುದ್ಧಿಯಿಂದ ತುಷ್ಣನಾಗಿ ವಿಷಯಗಳನ್ನು ಬಿಟ್ಟು, ಶ್ರೀಶ (ನನ್ನ) ಚರಣಾರವಿಂದವನ್ನು ಭಕ್ತಿಯಿಂದ ಭಜಿಸುವನು ಶ್ರೇಯೋಭಾಜನನಾಗುವನು

ಶ್ರೀಹರಿಯು ಪಾರ್ಥಿವವಾದ ಶರೀರವಲ್ಲ; ವಾಯುಜಲಾಗ್ನಿಕೃತ ಶರೀರನಾದ ಮುಖ್ಯಪ್ರಾಣನಲ್ಲ; ಇಂದ್ರಿಯಾಭಿಮಾನಿ ದೇವಗಣರಲ್ಲಿ ಸೇರಿಲ್ಲ; ಪ್ರಾಕೃತಮನಸ್ಸಲ್ಲ; ಭೂತಗಲ ಮಾತ್ರೆಗಳಾದ ಗಂಧಾದಿ ಗುಣವಲ್ಲ; ಪ್ರಾಕೃತಬುದ್ಧಿ ಅಲ್ಲ; ಮೂಲಪ್ರಕೃತಿ ಮಹದಹಂಕಾರಾದಿಗಳಲ್ಲ; ದರ್ಶನಾದಿ ಅಹಂಕಾರದಿಂದಾಗುವ (ನಾನು ನೋಡುವೆನಿತ್ಯಾದಿ) ಅಭಿಮಾನವೂ ಅಲ್ಲ; ಸರ್ವಜೀವಜಡ ವಿಲಕ್ಷಣನಾದ ಶ್ರೀಹರಿಯು ಪ್ರಾಕೃತೇಂದ್ರಿಯರಹಿತನು; ವಿಷಯರಕ್ತನಾದ ಪ್ರಾಕೃತೇಂದ್ರಿಯಗಳಿಂದಲು ಪ್ರಾಕೃತ ಮನದಿಂದಲು ಬರುವ ವಿಷಯಗಳಿಂದ ಶ್ರೀಹರಿಗೆ ಮನಸ್ಸಮಾಧಾನ(ಪ್ರಿಯ)ವೆಂದಾಗಲಿ, ವಿಷಯವಿಕ್ಷೇಪದಿಂದ (ಅಪ್ರಿಯ) ಪ್ರಕ್ಷೋಭವೆಂದಾಗಲಿ ಇಲ್ಲ. ಮೇಘಗಳಿಂದ ಸೂರ್ಯನಿಗೆ ಹಾನಿಯೂ ಇಲ್ಲ ಲಾಭವೂ ಇಲ್ಲ. ಅಂತೆಯೇ ಅಪ್ರಾಕೃತನಾದ ಶ್ರೀರಮಣನಿಗೆ ಪ್ರಕೃತಿ ವಿಕಾರವಿಲ್ಲ. ಆಕಾಶವು ಮಿಕ್ಕವಾಯ್ವಾದಿಗಳ ಸ್ಪರ್ಶ, ರೂಪ, ರಸ, ಗಂಧಗಳಿಂದ ಲೇಪವಿಶೇಷವಿಲ್ಲದಿರುವಂತೆ, ಗುಣಪೂರ್ಣನಾರಾಯಣನು ತ್ರಿಗುಣಕೃತರಾಗಾದಿಮಲದ ಸಂಬಂಧವಿಲ್ಲದೆ, ಅಸಂಗನೆನಿಸಿರುವನು. ಶ್ರೀಶನಿಂತಿದ್ದರೂ ಅಸ್ವತಂತ್ರ ಜೀವನಿಗೆ ವಿಷಯಸಂಗದಿಂದ ಮನಃಪ್ರಕ್ಷೋಭವಾಗದಿರದು. ಆದುದರಿಂದ ಶ್ರೀಹರೀಚ್ಛೆಯಿಂದ ಪ್ರಕೃತಿನಿರ್ಮಿತವಾಗಿ ಬರುವ ವಿಷಯಗಳಲ್ಲಿ ಮನೋಭಿಲಾಷೆಯನ್ನು ಬಿಟ್ಟು, ಧೃಢಭಕ್ತಿಯಿಂದ ಪಾಪದ ಕಷಾಯ ಇಂಗಿಹೋಗುವವರೆವಿಗೂ, ನನ್ನನ್ನು ಭಜಿಸಬೇಕು. ಹಾಗೆ ಮಾಡದಿದ್ದರೆ, ಸರಿಯಾದ ಔಷದ ಪಥ್ಯಗಳನ್ನು ಮಾಡದಿದ್ದಾಗ ಬೆಳೆದು ತೋರುವ ರೋಗದಂತೆ, ಅಪಕ್ವಮನವು

ವಿಷಯವಿಷದಿಂದ ಜೀವನನ್ನು ಮತ್ತೆ ಮತ್ತೆ ಪೀಡಿಸಿ, ಭಗವದ್ಧ್ಯಾನ ವಿಘ್ನವನ್ನು ಮಾಡುವುದು. ಧ್ಯಾನಪರಿಪಾಕರಹಿತನು ದೇವತೆಗಳಿಂದಲು, ವನಿತಾದಿ ಮನುಷ್ಯರಿಂದಲು, ಭೌತಿಕ ಪೀಡೆಗಳಿಂದಲು, ಯೋಗ ವಿಘ್ನಗಳನ್ನು ಪೊಂದಿದರೂ, ಪೂರ್ವ ಜನ್ಮಕೃತಧ್ಯಾನಾಭ್ಯಾಸಬಲದಿಂದ, ಮತ್ತೆ ಯೋಗವನ್ನು ಮಾಡಿ ನನ್ನ ಪರಮಾನುಗ್ರಹದಿಂದ, ಕರ್ಮಪಾಶಮುಕ್ತರಾಗಿ, ನನ್ನ ಲೋಕವನ್ನು ಸೇರುವರು. ಯೋಗಿಜೀವನು ಕರ್ಮವನ್ನು ಮಾಡುವಾಗ ಪೂರ್ಣಾನಂದನಾದ ಶ್ರೀಹರಿಪ್ರೇರಣೆಯಿಂದ, ಶರೀರಪಾತ ಪರ್ಯಂತವೂ ಮಾಡುತ್ತಿರುವನು; ಜ್ಞಾನಿಯು ವಿಷಯಾಶಾನಿವೃತ್ತನಾಗಿ ಭಗವದನುಗ್ರಹದಿಂದ ಬಂದೊದಗಿದ ಜ್ಞಾನ ವೈರಾಗ್ಯ ಬಲದಿಂದ ವಿಷಯಗಳನ್ನು ತಂದೊಡ್ಡುವ ದೇಹದಲ್ಲಿ ಆಸಕ್ತನಾಗದೆ ಇರುವನು. ನಿಂತಾಗ, ಕೂತಾಗ, ನಡೆಯುವಾಗ, ಮಲಗಿರುವಾಗ, ಉಣ್ಣುವಾಗ, ಸರ್ವಕಾಲವ್ಯವಸ್ಥೆಗಳಲ್ಲಿಯು ದೇಹಕ್ಕೆ ಬರುವ ಪ್ರಿಯಾಪ್ರಿಯಗಳನ್ನನುಭವಿಸುವಾಗ ಶ್ರೀಹರಿಯೇ ಮಾಡಿಸುವನೆಂಬ ಅನುಸಂಧಾನದಿಂದ, ದೇಹದ ಪರಿವೆ ಇಲ್ಲದೆ ಜ್ಞಾನಿಯು, ಅಸಂಪ್ರಜ್ಞಾತ ಸಮಾಧಿಸ್ಥನಾಗಿ ಮೈಮರೆತಿರುವನು. ಅಮಂಗಲ ವಿಷಯಗಳನ್ನು ನೋಡಿ ದೇಹಾಗೇಹಾದಿಗಳೆಲ್ಲವು ಉತ್ಪತ್ತಿನಾಶ ಸಹಿತಗಳೆಂದು ತಿಳಿವನು ಮತ್ತು ಅಸ್ವತಂತ್ರನಾದ ವಿಷಯಗಳು, ಸ್ವಪ್ನ ಪದಾರ್ಥದಂತೆ ನಶ್ವರಗಳೆಂದು, ಆಸಕ್ತನಾಗದೆ ಇರುವನು.

ಸ್ವತಂತ್ರ ಶ್ರೀಹರಿಯು ಅಸ್ವತಂತ್ರ ಜೀವನೇ ಆಗಿರುವನೆಂಬುವುದೂ, ಜೀವನು ಸ್ವತಂತ್ರನೆಂಬುವುದೂ ಮನೋಭ್ರಮವಾಗಿದೆ. ನಾಮರೂಪಗಳಿಂದ ತಿಳಿಯಲ್ಪಡುವ ಪ್ರಪಂಚವು ಸತ್ಯವೂ, ಪಂಚಭೇದ ಸಹಿತವೂ ಆಗಿದೆ. ಈ ಜೀವಜಡಜಾತವೆಲ್ಲವೂ ಸದಾ ಶ್ರೀಹರಿಯ ವಶದಲ್ಲಿದೆ ಎಂಬುವುದೇ ಸರಿಯಾದ ಜ್ಞಾನವು. ಜ್ಞಾನಿ ಜನರೆಲ್ಲರೂ ಜೀವೇಶರ ಭೇದವನ್ನು ತಿಳಿದೇ ಪರಮಾನಂದ ಭಾಜನರಾಗಿರುವರು. ಯೋಗಾಭ್ಯಾಸದಿಂದ ಪ್ರಭಾತಾದಿ ಸತ್ಕಾಲದಲ್ಲಿ ಮನವನ್ನು ಶ್ರೀಹರಿಯಲ್ಲಿಟ್ಟು ಚಿಂತಿಸುವ ಯೋಗಿಗೆ ಅಂತರಾಯುಗಳು ಬರುವವೆಂದು ಹೇಳಿದ್ದೆನಲ್ಲವೇ?

ಸ್ವಪ್ನ ನೋಡಿದ ಜೀವನಿಗೆ ಎಚ್ಚರವಾದಮೇಲೆ ನಾನು ಸ್ವಪ್ನ ನೋಡಿದೆನೆಂಬ ಜ್ಞಾನವು ಬರುವುದು – ಆದುದರಿಂದ ಸ್ವಪ್ನವು ಸುಳ್ಳಲ್ಲ. ಆದರೆ ಸ್ವಪ್ನಪದಾರ್ಥಾದಿಗಳು ಜೀವಾಧೀನವಲ್ಲವೆಂಬ ಜ್ಞಾನವು ಬರುವುದು – ಆದುದರಿಂದ ಜೀವರು ಸ್ವತಂತ್ರರಲ್ಲ. ಅಜ್ಞಾನ ದಶೆಯಲ್ಲಿ ಪರಮಾತ್ಮನ ಸ್ವಾತಂತ್ರ್ಯಜ್ಞಾನವಿರದಿದ್ದರೂ, ಶಾಸ್ತ್ರಜಿಜ್ಞಾಸುವಾಗಿ ವಿವೇಕದಿಂದ ಗುರುಸೇವೆಯಿಂದ ಜ್ಞಾನವನ್ನಾರ್ಜಿಸಿದವನು, ಜ್ಞಾನೋದಯವಾಗಲು, ಅಜ್ಞಾನದ ಕಗ್ಗತ್ತಲಿನಲ್ಲಿ ಮತ್ತೆ ಸಿಲುಕದೆ, ದೃಢಭಕ್ತಿಯಿಂದ ಶ್ರೀಹರಿಯನ್ನು ಭಜಿಸುವನು. ಸೂರ್ಯೋದಯವಾಗಲು ತಮವಿರುವುದೇ? ವೈರಾಗ್ಯಾದಿ ಸಾಧನ ಸಾಮಾಗ್ರೀ ನಿಪುಣರಾಗಿ, ಸರ್ವದಾ ಶ್ರೀ ನಾರಾಯಣ ಚರಣ ಶರಣಾಗತನಾದವನಿಗೆ ಅಜ್ಞಾನಮಿಥ್ಯಾಜ್ಞಾನಗಳು ದೂರವಾಗುವುವು. ಜೀವರ ಅಜ್ಞಾನದಿಂದ ನನಗೆ (ಕೃಷ್ಣ) ಹಾನಿಯಾಗಲಿ, ಅವರ ಜ್ಞಾನದಿಂದ ನನಗೆ ಲಾಭವಾಗಲಿ ಇಲ್ಲ. ಶಶ್ವದೇಕಸುಖನಾದ ನನ್ನ ಜ್ಞಾನದಿಂದ ಅವರಿಗೇ ಲಾಭವೆಂದು ತಿಳಿ! ನನ್ನ ಜ್ಞಾನವು ಶಾಸ್ತ್ರಸಮ್ಮತವಾದ ವಾಗುಪದೇಶದಿಂದಲೂ, ನನ್ನ ಅನುಗ್ರಹದಿಂದಲೂ ಆಗುವುದು. ಸ್ವಯಂಜ್ಯೋತಿಯು, ಜನ್ಮಾದಿ ದೋಷರಹಿತನು, ಅಪ್ರಮೇಯ ಮಹಾಮಹಿಮನು, ಸರ್ವಜ್ಞನು, ಸುಖಸಾಗರನು, ಸಮಾಧಿಕರಹಿತನು, ಸ್ವಗತಭೇದ ವಿವರ್ಜಿತನು, ವಾಚಾಮಗೋಚರನು, ಸರ್ವೇಂದ್ರಿಯ

ಪ್ರೇರಕನು – ಶ್ರೀಹರಿ ಎಂದು ತಿಳಿದು ನನ್ನನ್ನು ಧ್ಯಾನಿಸುವವನೇ ನಿಜವಾದ ಜ್ಞಾನಿಯು.

ಅಂತಹ ಜ್ಞಾನಿಯು, ಯಮನಿಯಮಗಳಿಂದಲು, ಆಸನ ಪ್ರಾಣಾಯಾಮಗಳಿಂದಲು, ಧಾರಣಾಧ್ಯಾನಗಳಿಂದಲು, ತಪೋಮಂತ್ರಗಳಿಂದಲು, ದಿವ್ಯೌಷಧಗಳಿಂದಲು ಮನಸ್ಸಿನ ಯೋಗದ ವಿಘ್ನಗಳನ್ನು ನಿವಾರಿಸಿ, ನಿರಂತರ ಸ್ಮರಣ ನಾಮಸಂಕೀರ್ತನಾದಿಗಳಿಂದ ಸರ್ವವಿಘ್ನಗಳನ್ನು ತಲೆಮೆಟ್ಟಿ, ಯೋಗ ಪರಿಪಾಕವನ್ನು ಸಾಧಿಸುವನು.

ಕೆಲಮೂರ್ಖರು ರಸಾಯನಾದಿಗಳಿಂದ ದೇಹವನ್ನು ಧೃಢವಾಗಿರಿಸಿ, ಯೋಗಸಿದ್ಧಿಗಳಿಗೆ ಪ್ರಯತ್ನಿಸುವರು; ಅದು ನಿಪುಣರು ಮಾಡತಕ್ಕುದಲ್ಲ. ದೇಹಪೋಷಣದ ಆಯಾಸವು ಒಂದು ಳಿಯುವುದಾಗಲಿ, ಅವರ ದೇಹವು – ಗಿಡದ ಫಲದಂತೆ ತಾನಾಗಿ ಜೀರ್ಣವಾಗಿ ಬೀಳದೇ ಇರಲಾರದು. ಭಗವದ್ಧ್ಯಾನವನ್ನೇ ದಿವ್ಯೌಷಧ ರಸಾಯನಗಳೆಂದು ನಂಬಿದವನಿಗೆ ಯೋಗದಿಂದ ಶರೀರ ದಾರ್ಢ್ಯವೇ ಆಗಲಿ, ರಸಾಯನಗಳಿಂದಲ್ಲವೆಂದು ತಿಳಿ! ನನ್ನ ಚರಣವನ್ನು ಸೇವಿಸು! ಉದ್ಧವಾ! ನಿಸ್ಪೃಹನಾದವನಿಗೆ, ಸ್ವಬಿಂಬ ಹರಿದರ್ಶನಾನಂದನಿರತನಿಗೆ ವಿಘ್ನವಿಲ್ಲ.

## ೨೯. ಭಕ್ತಿ ಭಾಗ್ಯ

ಉದ್ಧವನು ಕೇಳಿದನು –

ಮನೋಜಯರಹಿತನಿಗೆ ನೀನು ಪೇಳಿದ ಜ್ಞಾನ ಯೋಗಗಳು ದುಷ್ಕರವೆಂದು ಕಾಣುತ್ತಿರುವೆನು. ಮನುಜನು ಪೂರ್ಣಪುರುಷಾರ್ಥವನ್ನು ಹೊಂದಲು ಇನ್ನೇನು ಮಾಡಬೇಕು? ಪುಂಡರೀಕಾಕ್ಷ! ಯೋಗಾಚರಣ ಸಾಧನಗಳ ಪೂರ್ಣಜ್ಞಾನವಿಲ್ಲದವನ ಮನವು ಮೌನ ಸಂಯಮನಾದಿಗಳನ್ನು ಜಯಿಸಲಾರದೇ, ವಿಷಯಕ್ರಾಂತವಾಗಿ ಕೆಡುವುದಲ್ಲವೇ? ಪರಮಹಂಸರಾದರೆ, ನಿನ್ನ ಬಂಧಕಶಕ್ತಿಗೆ ಸಿಲುಕದೆ, ನಿನ್ನ ದಯದಿಂದ ಪಡೆದ ಜ್ಞಾನಬಲದಿಂದ, ಆನಂದಸಂದೋಹ ಸಂವರ್ಷಣನಾದ ನಿನ್ನ ಚರಣಾರವಿಂದವನ್ನು ಬಿಡದೆ ಯೋಗದಿಂದ ಮನದಲ್ಲಿ ನಿಲ್ಲಿಸಿ, ಸುಖಿಸುತ್ತಿರುವರು. ಸುರ್ವಸುಜನಬಂಧೋ! ಗೋವಿಂದ! ನಿನ್ನ ನಂಬಿದ ದಾಸರಿಗೆ ನೀನು ನಿನ್ನ ದಿವ್ಯಾನಂದ ಸ್ವರೂಪವನ್ನು ತೋರಿ ಪೊರೆವೆ! ಇದು ನಿಜ! ಬ್ರಹ್ಮಾದಿ ವೃಂದಾರಕವೃಂದ ಕಿರೀಟ ಮಣಿಘಟ್ಟಿತ ಪಾದಪೀಠನಾದ ನೀನು ಗೋಕುಲದಲ್ಲಿ ಪಶುಪಾಲರಿಂದ ಕೂಡಿ ಆಡಲಿಲ್ಲವೇ? ನೀನು ಜೀವರಿಗೆ ನಿಜವಾದ ಪ್ರಿಯನು! ಆಶ್ರಿತರಿಗೆ ಸರ್ವೇಷ್ಟಪೂರಕನು; ಸ್ವಲ್ಪ ಸೇವೆಯನ್ನು ಕೂಡ ಮರೆಯದೆ ಪೊರೆಯುವ ಕರುಣಾಯಮನು. ಇಂತರಿತು ನೀ ಮಾಡಿದುಪಕಾರವನ್ನು ಮರೆಯುವ ನರಾಧಮನುಂಟೇ? ಮರೆತು ನಿನ್ನನ್ನು ತೊರೆದು, ಅಸ್ವತಂತ್ರರಾದ ಇತರರನ್ನು ಸರ್ವೋತ್ತಮರೆಂದು ಭಜಿಸುವ ಅರಸಿಕರುಂಟೇ? ನನ್ನ ಪಾದಸೇವಾಸುಖವನ್ನರಿಯದವನು ನರನಲ್ಲ; ಪಶುವೇ ಸರಿ! ಬ್ರಹ್ಮಾದಿ ಜ್ಞಾನಿಗಳು ಶಿರಸಾ ಬಾಗಿ ನಮಿಸಿ, ನಿನ್ನ ಜ್ಞಾನ ಸುಖದಾನ ಸ್ಮರಣಶೀಲರಾಗಿ, ಎಷ್ಟು ಪೊಗಳಿದರೂ ತೃಪ್ತರಾಗದೆ, ನಿನಗೆ ಪ್ರತ್ಯುಪಕಾರವನ್ನು ಮಾಡಲರಿಯದೆ, ಕೃತಜ್ಞರಾಗಿರುವರು. ಬ್ರಹ್ಮದೇವನಲ್ಲಿ ವಾಸುದೇವರೂಪದಿಂದ ನಿಂತು ಅನಿಷ್ಟ ಪರಿಹಾರವನ್ನು ಮಾಡಿ, ಇಷ್ಟಪ್ರಾಪ್ತಿರೂಪ ಸ್ವರೂಪ ಜ್ಞಾನವನ್ನಿತ್ತು ಉದ್ಧರಿಸುವ ನಿನ್ನ ಅನಂತೋಪಕಾರವನ್ನು ಆಚಾರ್ಯನಲ್ಲಿ ನಿಂತು ಜ್ಞಾನಭಕ್ತಿ ವೈರಾಗ್ಯಗಳನ್ನು ಕೊಡುವ ನಿನ್ನ ಮಹೋಪಕಾರವನ್ನು ಎಂದು ತೀರಿಸಲಾಗುವುದು!

ಇಂತು ಕೇಳಿದ ಭಕ್ತನ ನುಡಿಯನ್ನಾಲಿಸಿ ಜಗವೆಂಬ ಚೆಂಡನ್ನಾಡಿ ನಲಿವ ಆತ್ಮ ಅಂತರಾತ್ಮ ಪರಮಾತ್ಮರೆಂಬ ಮೂರು ರೂಪದಿಂದ ಜೀವರಿಗೆ ಅವಸ್ಥಾತ್ರಯವನ್ನೀವ ಶ್ರೀಕೃಷ್ಣನು ಮಂದಸ್ಮಿತಸುಂದರವದನಾರವಿಂದನಾಗಿ ಇಂತು ನುಡಿದನು–

ಉದ್ಧವಾ! ಕೇಳು! ಪರಮಮಂಗಳಕರವಾದ ನನ್ನ ಭಾಗವತ ಧರ್ಮಗಳನ್ನು ನಿನಗೆ ಹೇಳುವೆನು. ಅವನ್ನು ಆಚರಿಸಿದವನು ದುರ್ಜಯವಾದ ಮೃತ್ಯುವಿನ ಬಾಯಿಗೆ ತುತ್ತಾಗದೆ, ಮುಕ್ತನಾಗುವನು. ಎಲ್ಲ ಕರ್ಮಗಳನ್ನು ನನ್ನ ಪ್ರೀತಿಗಾಗಿ ಸಂಕಲ್ಪಿಸಿ ನನ್ನ ಸ್ಮರಣೆಯಿಂದ ಮಾಡಿ ನನಗೆ ಕರ್ಮಫಲವನ್ನು ಸಮರ್ಪಿಸಬೇಕು. ನನ್ನ ರೂಪಗಳನ್ನು ಕರ್ಮಗಳನ್ನು ಧ್ಯಾನಿಸಬೇಕು. ನನ್ನ ಭಕ್ತರಿರುವ ದೇಶಗಳನ್ನೇ ಆಶ್ರಯಿಸಬೇಕು. ದೇವಾಸುರ ಮನುಜರಲ್ಲಿ ನನ್ನ ಭಕ್ತರಿರುವರು; ಅವರು ನಡೆದಂತೆ ನಡೆಯಬೇಕು. ನನಗೆ ಪರ್ವಗಳಲ್ಲಿ ಉತ್ಸವಗಳನ್ನು ಮಾಡಬೇಕು; ನೃತ್ಯಗೀತ ರಾಜೋಪಚಾರಗಳನ್ನು ಅರ್ಪಿಸಿ, ಸರ್ವಭೂತನಿವಾಸನು, ಆಕಾಶದಂತೆ ನಿರ್ಲಿಪ್ತನು ಆದ ನನಗೆ ನಮಸ್ಕರಿಸಬೇಕು. ಇಂತು ಅಪ್ರಾಕೃತನೆಂಬ ಜ್ಞಾನದಿಂದ ನನ್ನನ್ನು ಬ್ರಾಹ್ಮಣನಲ್ಲಿಯು ಚಂಡಾಲನಲ್ಲಿಯು, ಕಳ್ಳನಲ್ಲಿಯು, ಭಕ್ತನಲ್ಲಿಯು, ಸೂರ್ಯನಲ್ಲಿಯು, ಅಗ್ನಿಕಣದಲ್ಲಿಯು, ಅಕ್ರೂರ – ಕ್ರೂರರಲ್ಲಿಯು ಸಮನಾಗಿ ಅಂದರೆ ನಿರ್ದೋಷನಾಗಿಯೇ ಇರುವನೆಂದು ಕಾಣುವರು. ಭಕ್ತಿಯ ಪರಿಪಾಕವನ್ನು ಹೊಂದಿ, ಅಹಂಕಾರವನ್ನೊಡ್ಡುವ ನನ್ನ ಬಂಧಕಶಕ್ತಿಯನ್ನು ದಾಟಿ, ನನ್ನ ಪ್ರಸಾದದಿಂದ ಮುಕ್ತರಾಗುವರು.

ಪಕ್ವಭಕ್ತನು ಮನಸ್ಸಿನ ನಾಚಿಕೆಯನ್ನು ಬಿಟ್ಟು ಶ್ವಾನಚಂಡಾಲ ಗೋಖರಗಳಿಗೂ ವಂದಿಸುವನು. ಬ್ರಾಹ್ಮಣರಿಗೆ ಶಿರಸಾ ದಂಡಾಕಾರವಾಗಿ ನಮಿಸಿ, ಶ್ವಪಂಡಾಲಾದಿಗಳಿಗೆ ಮನಸಾ ಹರಿಯನ್ನು ನೆನೆದು ವಂದಿಸುವೆನು; ಅಲ್ಲಿ ಸ್ಮರಣವೇ ವಂದನವೆನಿಸುವುದು. ನನ್ನ ವ್ಯಾಪ್ತಿಜ್ಞಾನವು ಎಲ್ಲರಲ್ಲಿಯೂ ಆಗುವವರಿವಿಗೂ ಇಂತು ಉಪಾಸಿಸಿ, ನಾನೇ ಸ್ವಾಮಿ ಎಂದು ಮನಗಂಡು, ಇತರರನ್ನೆಲ್ಲ ಮರೆತ ಭಕ್ತನು, ಅಪರೋಕ್ಷಜ್ಞಾನವನ್ನು ಪಡೆಯುವನು. ಮೋಕ್ಷೋಪಾಯಗಳಲ್ಲಿ ಇದೇ ಭಕ್ತಿಯು ಉತ್ತಮವಾಗಿದೆ. ಪ್ರಿಯ ಉದ್ಧವ! ಈ ಧರ್ಮಾಚರಣೆಯು ಆಯಾಸಕರವಲ್ಲ; ಆರಂಭಿಸಿದವನನ್ನು ಕೂಡ ಉದ್ಧರಿಸದೆ ಬಿಡದು. ಅನ್ಯದೇವರನ್ನು ಪೂಜಿಸುವುದು – ಸರ್ವೋತ್ತಮರೆಂಬುವುದು ಎಲ್ಲವೂ ನಿರರ್ಥಕವು ಮತ್ತು ಆಯಾಸಕರವೆಂದು ತಿಳಿ! ನಿಷ್ಕಾಮ ಕರ್ಮಲಬ್ಧ ಮನಶ್ಶುದ್ಧಿಯಿಂದ ಭಕ್ತಿಜ್ಞಾನಗಳನ್ನಾಶ್ರಯಿಸಿ – ಜೀವನು ಕ್ಷಣಕ್ಷಣಕ್ಕೂ ಕ್ಷೀಣವಾಗುತ್ತಿರುವ ದೇಹದಿಂದ, ಶಾಶ್ವತವಾದ ಮೋಕ್ಷವನ್ನು ಹೊಂದುವನು. ಇಂತು ನಿಶ್ಚಯಿಸಿದ ಬ್ರಹ್ಮನಿರೂಪಕ ವೇದಾದಿಶಾಸ್ತ್ರ ಸಂಗ್ರಹವನ್ನು ನಿನಗೆ ಪೇಳಿರುವೆನು. ಇದು ದೇವತೆಗಳಿಗೂ ದುರ್ಲಭವಾದುದು! ನಿನಗೆ ದೊರೆತಿದೆ ನನ್ನಿಂದ ಈ ಜ್ಞಾನ! ಈ ಜ್ಞಾನವೇ ಸರ್ವ ಶ್ರೇಯಃ ಸಾಧನವಾಗಿದೆ. ವೇದಪ್ರತಿಪಾದ್ಯನಾದ ನನ್ನ ಮಹಿಮೆಯನ್ನು ನನ್ನ ಭಕ್ತರಿಗೆ ಹೇಳಿ, ಭಕ್ತಿರಸಾಮೃತವನ್ನು ಹಂಚುವ ನರನು ಬ್ರಹ್ಮಶಬ್ದವಾಚ್ಯನಾದ ಕೃಷ್ಣನ ಜ್ಞಾನವೆಂಬುವ ಪಿತ್ರಧನಕ್ಕೆ ಪಾಲುಗಾರನಾಗುವನು; ಅವನಿಗೆ ನನ್ನಿಂದ ಮೋಕ್ಷವಾಗುವುದು. ಇದನ್ನು ಓದಿದವರು ನಿತ್ಯವೂ ನನ್ನ ಮುಂದೆ ಜ್ಞಾನದ ನಂದಾದೀಪವನ್ನಿಟ್ಟವರೇ ಸರಿ! ಕೇಳಿದವರು ಕರ್ಮಬಂಧಮುಕ್ತರಾಗಿ, ನನ್ನ ಭಕ್ತರಾಗುವರು.

ಉದ್ಧವ! ಪ್ರಿಯಸಖ! ನಾ ಪೇಳಿದುದು ಅರ್ಥವಾಯಿತೆ! ನಿನ್ನ ಮೋಹಶೋಕಗಳು ನಷ್ಟವಾದವೆ? ಇದನ್ನು ನೀನು ದಾಂಭಿಕನಿಗೆ ಹೇಳಬೇಡ! ನಾಸ್ತಿಕನಿಗೆ, ಶಠನಿಗೆ, ಗುರು ಸೇವಾರಹಿತ

ನಿಗೆ, ನನ್ನ ಭಕ್ತನಾಗದವನಿಗೆ, ವಿನಯರಹಿತನಿಗೆ ಈ ಜ್ಞಾನಾಮೃತವನ್ನು ಕೊಡಬೇಡ!

ಬ್ರಾಹ್ಮಣಪ್ರಿಯನಿಗೆ, ರಾಗ ದ್ವೇಷ ರಹಿತನಿಗೆ, ಶುಚಿಗೆ, ಭಕ್ತನಿಗೆ ಕೊಡು ಭಾಗವತಾಮೃತವನ್ನು! ಶೂದ್ರರಿಗೂ, ಸ್ತ್ರೀಯರಿಗೂ ಕೊಡು, ಅವರು ಭಕ್ತರಿದ್ದರೆ ಸಾಕು! ಇದನ್ನು ತಿಳಿದವನು ಇನ್ನು ತಿಳಿಯಬೇಕಾದುದಿಲ್ಲ; ಅಮೃತವನ್ನು ಕುಡಿದವನಿಗೆ ಇನ್ನು ಪಾತವ್ಯವಿಲ್ಲ. ಪಂಚಪರ್ವವಾದ ಅವಿದ್ಯೆಯಿಂದ ನರನು ಚತುರ್ವಿಧ ಮೋಹವನ್ನು ಪೊಂದಿ, ತತ್ತ್ವಜ್ಞಾನವನ್ನು ಕೇಳಿ ತಿಳಿಯಲಿಚ್ಛಿಸುವುದಿಲ್ಲ. ಮನುಷ್ಯನು ನನಗೆ ಸರ್ವವಿಹಿತಕರ್ಮ ಸಮರ್ಪಣವನ್ನು ಮಾಡಿ, ಭಕ್ತಿಯಿಂದ ಭಜಿಸಿದಾಗ, ಮುಕ್ತಿ ಪಡೆಯಲು ಯೋಗ್ಯನಾಗಿ, ಸ್ವಯೋಗ್ಯಜ್ಞಾನಾನಂದ ಪೂರ್ಣನಾಗಲು ಪಾತ್ರನೆನಿಸುವನು.

ಶ್ರೀಶುಕನು ಪೇಳಿದನು–

ಇಂತು ಭಕ್ತಿಯೋಗ ಮಾರ್ಗವನ್ನು ಉಪದೇಶಿಸಿದ ಉತ್ತಮಶ್ಲೋಕನ ವಚನವನ್ನಾಲಿಸಿ, ಉದ್ಧವನು ಭಕ್ತಿಭರದಿಂದ ಮೈನವಿರೆದ್ದು, ಪ್ರೀತಿಯಿಂದ ಮಾತಾಡಲು ಬರದೆ, ಆನಂದಜಲಾಕುಲನೇತ್ರನಾಗಿ, ಕೈಜೋಡಿಸಿ, ಸುಮ್ಮನೆ ನಿಂತನು; ಪ್ರಣಯಪ್ರಪೂರಿತಚಿತ್ತವನ್ನು ಧೈರ್ಯದಿಂದ ಸಮಾಧಾನಮಾಡಿ, ಬಹು ಭಕ್ತಿಗೌರವದಿಂದ ಶಿರಬಾಗಿ, ಯದುಪುಂಗವನ ಪಾದಪದ್ಮವನ್ನು ವಂದಿಸಿ, ಮೆಲ್ಲನೆ ಇಂತೆಂದನು–

ಶ್ರೀಕೃಷ್ಣ! ಪ್ರಭೋ! ಹೋಯಿತು ನನ್ನ ಮೋಹಾಂಧಕಾರ. ಇದು ನಿನ್ನ ಸನ್ನಿಧಾನದ ಪ್ರಭಾವ! ಅಗ್ನಿಯ ಸಮೀಪದಲ್ಲಿದ್ದವನಿಗೆ ಚಳಿಯ ಕಾಟವೇ? ನಿನ್ನ ದಯೆಯನ್ನೆಷ್ಟು ಪೊಗಳಲಿ! ವಿಜ್ಞಾನದೀಪವನ್ನು ಕೈಗಿತ್ತು ದಾರಿತೋರಿಸಿದೆ. ಇಂತಹ ನಿನ್ನ ಚರಣಾರವಿಂದ ಸೇವೆಯನ್ನು ಬಿಟ್ಟು, ಕೃತಜ್ಞನಾದ ಭಕ್ತನು ಮತ್ತಿನ್ನಾರನ್ನೂ ಶರಣಾಗತನಾಗದಿರುವನು.

ಯಾದವಾದಿ ಬಂಧುಗಳಲ್ಲಿ ಸ್ನೇಹಪಾಶವು ಕಡಿದುಹೋಯಿತು. (ಏನಂ ಸಂಸಾರಯಾಮಿ) ಎಂಬ ನಿನ್ನ ಇಚ್ಛೆಯಿಂದ ಬಲೆಯ ರೂಪದಿಂದ ಬಂಧಿಸಿದ್ದ ಅಜ್ಞಾನಪಾಶವು ಜ್ಞಾನಖಡ್ಗದಿಂದ ಖಂಡಿತವಾಯಿತು. ಶ್ರೀಶ ಸರ್ವೇಶ! ದಾಸನಾದ ನನ್ನನ್ನು ಮಾರ್ಗತೋರಿ ನಡೆಸು! ನಿನ್ನ ಚರಣಾರವಿಂದದಲ್ಲಿ ನಿಶ್ಚಲಭಕ್ತಿಯು ಪುಟ್ಟುವಂತೆ ಅನುಗ್ರಹಿಸು!

ಶ್ರೀಭಗವಂತನಿಂತೆಂದನು–

ಉದ್ಧವ ಹೇಳಿದೆನಲ್ಲ! ಹೋಗು ಬದರಿಕಾಶ್ರಮಕ್ಕೆ! ನನ್ನ ಪಾದೋದಕವಾದ ಅಲಕನಂದೆಯ ದರ್ಶನವೇ ಸಾಕು ಸಕಲ ಪಾಪ ನಿರ್ಮೂಲನ ಮಾಡಲು. ಇನ್ನು ಸ್ನಾನಪಾನಗಳಿಂದ ಉದ್ಧೃತನಾಗುವೆ ಎಂದು ಹೇಳಬೇಕೇ? ವಲ್ಕಲವನ್ನುಡು! ವನ್ಯಫಲಗಳನ್ನು ಉಣ್ಣು, ಆಶೆಗಳನ್ನು ಬಿಡು! ಸುಶೀಲನಾಗಿ ಶಾಂತಿಯಿಂದ ಜ್ಞಾನ ವಿಜ್ಞಾನಗಳನ್ನು ಹೇಳಿರುವುದನ್ನು ಮನನ ಮಾಡು! ವಾಕ್ಯವನ್ನು ಉಪಸಂಹರಿಸು! ವೈಷ್ಣವಧರ್ಮನಿರತನಾಗು! ಜಾಗ್ರದಾದಿ ಅವಸ್ಥೆಗಳನ್ನು ದಾಟಿ, ಅಸಂಪ್ರಜ್ಞಾತ ಸಮಾಧಿಯಲ್ಲಿ ನನ್ನನ್ನು ಕಾಣುವೆ.

ಇಂತು ತನ್ನ ಭಕ್ತಿ ಭಾಗ್ಯವನ್ನಿತ್ತು ಪೊರೆದ ಕರುಣಾಮಯನಿಗೆ ಪ್ರದಕ್ಷಿಣೆಸಿ, ವಂದಿಸಿ, ಪಾದಗಳಲ್ಲಿ ಶಿರವನ್ನಿಟ್ಟು ಆನಂದಬಾಷ್ಪಗಳಿಂದ ತೊಳೆದು ಉದ್ಧವನು ಕೃಷ್ಣಪರಮಾತ್ಮನನ್ನು ಬಿಡಲಾರದೆ ಸುಮ್ಮನೆ ನಿಂತನು. ಶ್ರೀಹರಿವಿಯೋಗವಾಸಖವರನಿಗೆ ದುಸ್ಸಹವಾಯಿತು. ವಿರಹಕಾತರನಾಗಿ, ಅಳುತ್ತಾ, ಶ್ರೀಕೃಷ್ಣಪಾದುಕೆಗಳನ್ನು ಶಿರದಲ್ಲಿ ಧರಿಸಿ, ಬಿಡಲಾರದೆ ಬಿಟ್ಟು, ಹೊರಟುಹೋದನು. ಶ್ರೀಹರಿಯನ್ನು ಮನೋಮಂದಿರದಲ್ಲಿಟ್ಟು, ಆ ಭಾಗವತ ಶಿರೋ

ಮಣಿಯು ಬದರಿಯನ್ನು ಸೇರಿದನು. ಜಗದೇಕಬಂಧುವಾದ ಗೋವಿಂದನ ಉಪದೇಶದಂತೆ, ತಪವನ್ನು ಮಾಡಿ, ಶ್ರೀಹರಿಲೋಕವನ್ನು (ಬೃಹಸ್ಪತಿ ಮೂಲ ರೂಪವನ್ನು) ಪೊಂದಿದನು.

ಪರೀಕ್ಷಿತನೇ! ಆನಂದ ಸಮುದ್ರದ ಜ್ಞಾನಾಮೃತವಿದು. ಆನಂದಮಯನು ಭಕ್ತವರನಿಗೆ ನಿರೂಪಿಸಿರುವನಿದನ್ನು. ಆ ಯೋಗಿಜನವಂದ್ಯನ ಉಪದೇಶದಂತೆ ನಡೆದ ಸುಜನರೆಲ್ಲರೂ ಮುಕ್ತರಾಗುವರು.

ಭವಭಯವನ್ನು ಪರಿಹರಿಸುವ ವೇದಕುಸುಮ ಮಕರಂದ, ಸಾರವೆನಿಸುವ, ಹಾಗೂ ಶ್ರೀಹರಿಯಶೋನಿರೂಪಕವಾಗಿರುವ ಜ್ಞಾನವಿಜ್ಞಾನಗಳ ಅಮೃತಸಮುದ್ರವೀ ಭಗವಂತನ ಉಪದೇಶವು. ಇಂತು ಉಪದೇಶಿಸಿ ಭಕ್ತರನ್ನು ಪೊರೆವ ಪುರುಷೋತ್ತಮನಿಗೆ ನಮಸ್ಕಾರವು!

## ೩೦. ಯದುಕುಲೋಪಸಂಹಾರ

ರಾಜನು ಪ್ರಶ್ನಿಸಿದನು–

ಪೂಜ್ಯನೇ! ಉದ್ಧವನು ಬದರಿಗೆ ಹೋದಮೇಲೆ, ದ್ವಾರಕೆಯಲ್ಲಿ ಏನಾಯಿತು? ಬ್ರಹ್ಮ ಶಾಪದಿಂದ ಯದುಕುಲವು ನಷ್ಟವಾಗಲು, ಲೋಕ ನೇತ್ರ ಮನಃಕಾಂತವಾದ ತನ್ನ ದಿವ್ಯ ಶರೀರ ವನ್ನು ಶ್ರೀಹರಿಯು ಹೇಗೆ ಕಣ್ಮರೆಯಾಗಿರಿಸಿರಿದನು?

ಶ್ರೀಹರಿಯನ್ನು ನೋಡುವ ಕಣ್ಣುಗಳನ್ನು ಮರಳಿಸಲಾರದೆ, ಸುಮ್ಮನೇ ನೋಡುತ್ತ ನಿಂತರು ಶ್ರೀಶಕಾಂತೆಯರು! ಶ್ರೀಹರಿಕಥೆಯನ್ನು ಕೇಳುವ ಕಿವಿಗಳಿಂದ, ಆ ನಂದನಂದನನನ್ನು ಹೃದಯದಿ ಬಚ್ಚಿಟ್ಟು, ಬಿಡದೆ ಆನಂದಿಸುವರು ಸಜ್ಜನರು! ಶ್ರೀಹರಿಯ ವರ್ಚನಾಮೃತವು ಮನಃಕರ್ಣಾನಂದ ಜನಕವೆಂದು ಬಿಡದೆ ಹೇಳಿ, ಕೇಳಿ, ಧನ್ಯರಾಗುವರು ಭಾಗವತರು! ಶ್ರೀಹರಿಯ ಸುಖಪೂರ್ಣ ದಿವ್ಯದೇಹವನ್ನು ಅರ್ಜುನ ರಥದಲ್ಲಿ ಕೂತಾಗ ನೋಡುತ್ತಾ, ಪ್ರಾಣವನ್ನು ಬಿಟ್ಟು, ನಿರ್ದೋಷ ರಾದರು ಭೀಷ್ಮ ದ್ರೋಣಾದಿ ವೀರ ಭಕ್ತರು! ಅಂತಹ ಶ್ರೀಶನ ಕಥೆಯನ್ನು ಎಂತಹ ಕವಿಗಳೂ ಪೂರ್ಣವಾಗಿ ವರ್ಣಿಸಲಾರರು! ಇಂತಹ ರೂಪವನ್ನೆಂತು ಆಹರಿಸಿದನು?

ಶ್ರೀಶುಕನು ಹೇಳಿದನು–

ಆಕಾಶದಲ್ಲಿ, ಭೂಮಿಯಲ್ಲಿ ನಡೆದ ಉಲ್ಕಾಪಾತ, ಭೂಕಂಪಾದಿ ಉತ್ಪಾತಗಳನ್ನು ನೋಡಿ, ಶ್ರೀಕೃಷ್ಣನು ಸಭೆ ಕೂಡಿಸಿ, ಯಾದವರಿಗಿಂತೆಂದನು-

ದ್ವಾರಾವತಿಯಲ್ಲಿ ಇಂತಹ ಉತ್ಪಾತಗಳೇ? ಇಲ್ಲಿ ಒಂದು ಮಹೂರ್ತವಾದರೂ ನಿಲ್ಲ ಲಾಗದು. ಸ್ತ್ರೀಬಾಲವೃದ್ಧರು ಶಂಖೋದ್ಧಾರಕ್ಕೆ ಹೋಗಲಿ! ನಾವು ಪ್ರಾಚೀ ಸರಸ್ವತಿಯು ಹರಿ ಯುತ್ತಿರುವ ಪ್ರಭಾಸಕ್ಕೆ ಹೋಗೋಣ! ಅಲ್ಲಿ ಸ್ನಾನ ಮಾಡಿ, ಶ್ರದ್ಧೆಯಿಂದ ದೇವತೆಗಳನ್ನು ಪೂಜಿಸೋಣ! ಪವಿತ್ರಜ್ಞಾನವಂತರಾದ ಬ್ರಾಹ್ಮಣರಿಗೆ, ಗೋ, ಭೂ, ಹಿರಣ್ಯ, ವಸ್ತ್ರ, ಗಜ, ಗೃಹ, ತುರಗಾದಿಗಳನ್ನು ದಾನ ಕೊಟ್ಟು, ಉಟವನ್ನಿಟ್ಟು, ದಕ್ಷಿಣೆಗಳಿಂದ ಸಂತೋಷಪಡಿಸುವುದು, ಅಮಂಗಳಹರವಾಗಿದೆ.

ಆ ಮಾತನ್ನಾಲಿಸಿ ಯದುವೃದ್ಧರು ಅದಕ್ಕೊಪ್ಪಿ, ಪ್ರಭಾಸಕ್ಕೆ ಹೊರಟರು. ಅಲ್ಲಿ ಶ್ರೀಕೃಷ್ಣನ ಮಾತಿನಂತೆ, ಭಕ್ತಿಯಿಂದ, ಸ್ನಾನದಾನಾದಿಗಳನ್ನು ಮಾಡಿದರು; ಆಮೇಲೆ ಕದಂಬರಸದ ಮದ್ಯ ವನ್ನು ಕುಡಿದು ಮೈಮರೆತರು. ಅದೃಷ್ಟನಿಯಾಮಕನಾದ ಶ್ರೀಹರಿಯಿಂದ ಪ್ರೇರಿತನಾಗಿ, ಬುದ್ಧಿ

ಗೆಟ್ಟು ಕಡಿದಾಡಿದರು. ಕ್ರೋಧವಶರಾಗಿ, ಸಮುದ್ರತೀರದಲ್ಲಿ, ಎರಡನೆಯ ಸಮುದ್ರದಂತೆ ಉಕ್ಕೇರಿ ಮದದಿಂದ ಕಣ್ಣು ಕಾಣದೆ, ವಿವಿದಾಯುಧಗಳಿಂದ ಯುದ್ಧವಾಡಿದರು. ಪ್ರದ್ಯುಮ್ನ ಸಾಂಬರು, ಅಕ್ರೂರ ಭೋಜರು, ಅನಿರುದ್ಧ ಸಾತ್ಯಕಿಯರು, ಸುಭದ್ರ ಸಂಗ್ರಾಮಜಿತರು, ಸುಚಾರು ಗದರು, ಸುಮಿತ್ರ ಸುರಥರು, ನಿಶಠಭಾನು ಪ್ರಮುಖರು, ಮುಕುಂದಮಾಯಾಮೋಹಿತ ರಾಗಿ, ಸೌಹಾರ್ದವನ್ನು ತೊರೆದು, ಸರ್ವ ಯಾದವರು, ಪುತ್ರ ಪಿತೃ ಮಾತುಲಾದಿ ಬಾಂಧವ್ಯ ವನ್ನೆಣಿಸದೆ, ಹೊಡೆದಾಡಿದರು. ಆಯುಧ ಬಾಣಾದಿಗಳು ಮುಗಿಯಲು, ಅಲ್ಲಿ ಸಮುದ್ರದ ದಡದಲ್ಲಿ ಬೆಳೆದಿದ್ದ ಆಪನ್ನು ಕಿತ್ತಿ ಅನ್ಯೋನ್ಯ ಪ್ರಹಾರದಿಂದ ಪೀಡಿಸಿದರು. ಆಪಿನ ಕೋಲುಗಳು ಬ್ರಹ್ಮಶಾಪದಿಂದಾದ ಮುಸಲ ಕಣಗಳಿಂದ ಕೂಡಿ, ವಜ್ರಕಠಿನವಾಗಿದ್ದವು. ವೇಣುವನವು ಅಗ್ನಿಯಿಂದ ಹಾಳಾದಂತೆ, ಎಲ್ಲ ಯಾದವರು ನಷ್ಟರಾದರು. ಶ್ರೀಕೃಷ್ಣನದನ್ನು ಕಂಡು, ಭೂಭಾರ ವೆಲ್ಲವು ಇಳಿಯಿತೆಂದು ರಾಮನಿಗೂ ಅಪ್ಪಣೆಯನ್ನಿತ್ತನು.

ಸಮುದ್ರತೀರದಲ್ಲಿ ಕೂತು ಬಲರಾಮನು, ಪೂರ್ಣಷಡ್ಗುಣೈಶ್ವರ್ಯಸಂಪನ್ನಸಂಕರ್ಷಣ ನನ್ನು ಧ್ಯಾನಿಸಿ, ತನ್ನ ಅಂತರ್ಯಾಮಿಯಿಂದ ಹೊರಗಿನ ಭಾವದ್ರೂಪದಲ್ಲಿ ಐಕ್ಯವನ್ನು ಚಿಂತಿಸಿ, ದೇಹವನ್ನು ಸುಖವಾಗಿ ಪರಿತ್ಯಜಿಸಿದನು.

ರಾಮನಿರ್ಯಾಣವನ್ನು ಕಂಡು ಶ್ರೀಕೃಷ್ಣನು ಅಶ್ವತ್ಥವೃಕ್ಷದ ಬುಡದಲ್ಲಿ ಕೂತು, ತಾನೂ ನಿರ್ಯಾಣೋನ್ಮುಖನಾದನು. ಚತುರ್ಭುಜನು, ಶ್ರೀವತ್ಸಾಂಕನು, ಶಂಕಚಕ್ರ ಗದಾಪದ್ಮಧರನು, ಪೀತಾಂಬರನು, ಕನಕ ಮೇಖಲನು, ಮಕರಕುಂಡಲ ಮಂಡಿತಗಂಡನು, ಸುಂದರ ವದನಾರವಿಂದ ವಿಕನ್ಮಂದಹಾಸನು, ಪುಂಡರೀಕ ನಯನನು, ಕಟಿಸೂತ್ರ, ಬ್ರಹ್ಮಸೂತ್ರ, ಕಿರೀಟ, ಕಟಿಕಾಂಗದ, ಹಾರ, ಕೇಯೂರ, ನೂಪುರ, ಮುದ್ರಿಕಾದಿ ಸರ್ವಾಭರಣನು, ವನಮಾಲಾ ವೈಜಯಂತೀ ಯತನೂ ಆದ ಕೃಷ್ಣನು ತನ್ನ ಎಡತೊಡೆಯ ಮೇಲೆ ಬಲಗಾಲನ್ನಿಟ್ಟು ಆಡಿಸುತ್ತಾ, ಕೂತಿದ್ದನು. ಮುಸಲಾವಶೇಷನಾದ ಕಬ್ಬಿಣದ ತುಂಡನ್ನಿಟ್ಟ ಬಾಣದಿಂದ ಜರವ್ಯಾಧನು, ಶ್ರೀಕೃಷ್ಣ ಅರುಣ ಚರಣವನ್ನು ಮೃಗವೆಂದು ಭ್ರಮಿಸಿ, ಹೊಡೆದನು; ಓಡಿಬಂದ ವ್ಯಾಧನು ಶ್ರೀಕೃಷ್ಣನನ್ನು ತಾನು ಹೊಡೆದುದನ್ನು ಕಂಡು ಭೀತನಾಗಿ, ಹರಿಪಾದದಲ್ಲಿ ಬಿದ್ದು, ಇಂತೆಂದನು–

ಮಧುಸೂಧನ! ಗೊತ್ತಿಲ್ಲದೆ ನಾನು ಮಾಡಿದ ಅಪರಾಧವನ್ನು ಕ್ಷಮಿಸು! ಸ್ಮರಣ ಮಾತ್ರ ದಿಂದ ಜನರ ಅಜ್ಞಾನಧ್ವಾಂತನಾಶಕನಾದ ನಿನಗೆ ದ್ರೋಹವನ್ನೆಸಗಿದ ಈ ಪಾಪಿಯನ್ನು ಕೊಂದುಬಿಡು! ಮತ್ತೆ ಇಂತಹ ಮಹಜ್ಜನ ದ್ರೋಹವನ್ನು ಮಾಡದಂತೆ ಶಿಕ್ಷಿಸು! ನಿನ್ನ ಮಹಾ ಮಹಿಮೆಯ ಪಾರವನ್ನು ಬ್ರಹ್ಮ ರುದ್ರ ಶಕ್ರು ಗುರುಮುಖ ಬರ್ಹಿರ್ಮುಖರೇ ತಿಳಿಯರೆಂದ ಮೇಲೆ, ನಮ್ಮಂತಹ ಪಾಪಿಗಳೆಂತು ತಿಳಿಯುವರು?

ಶ್ರೀಭಗವಂತನಿಂತೆಂದನು-

ಜರ! ಏಳು! ಭಯಪಡಬೇಡ! ನಿನ್ನ ಅಪರಾಧವೇನೂ ಇಲ್ಲ. ಇದು ನನ್ನಿಚ್ಛೆಯಂತೆಯೇ ನಡೆದಿದೆ. ನಿನ್ನ ಅಕೃತ್ಯವು ಕೂಡ ನನ್ನ ಸಂಕಲ್ಪಾನುಸಾರವಾಗಿ ಸುಕೃತವೇ ಆಗಿದೆ. ಸ್ವರ್ಗವನ್ನು ಕೊಟ್ಟಿರುವೆನು ನಿನಗೆ.

ಶ್ರೀಶುಕನು ಹೇಳಿದನು–

ಭಗವಂತನ ಆಜ್ಞೆಯಂತೆ ಜರನು, ಶ್ರೀಶನಿಗೆ ಪ್ರದಕ್ಷಿಣಿಸಿ, ವಂದಿಸಿ ವಿಮಾನದಿಂದ ಸ್ವರ್ಗ ವನ್ನು ಸೇರಪೋದನು.

ಆಗ ದಾರುಕನು ಕೃಷ್ಣನನ್ನು ಹುಡುಕುತ್ತಾ, ಶ್ರೀಚರಣಾರವಿಂದ ಸಮರ್ಪಿತ ತುಲಸಿಕಾ ಮೋದವು ವಾಯುನೀತವಾಗಿ ಬರಲು, ತಿಳಿದು ಸಮೀಪಿಸಿದನು; ದಿಕ್ಕುಗಳನ್ನು ಸೂರ್ಯನಂತೆ ಬೆಳಗುವ ಶ್ರೀಕೃಷ್ಣನನ್ನು ಅಶ್ವತ್ಥದಡಿಯಲ್ಲಿ ಕಂಡನು; ಸ್ನೇಹಭರದಿಂದ ಬಾಗಿ ಆರ್ತನಾಗಿ ನಮಿಸಿದನು.

'ಶ್ರೀಕೃಷ್ಣ! ನಿನ್ನನ್ನು ಕಾಣದೆ ಕಬೋದಿಯಂತಾದೆನು! ಕತ್ತಲು ಕವಿದಂತಾಗಿದೆ, ದಿಕ್ಕೇ ತೋಚದಿದೆ; ಮನಕ್ಕೆ ಸುಖವಿಲ್ಲ. ತಾರಾಚಂದ್ರರಿಲ್ಲದ ಕಾರ್ಗತ್ತಲೆ ಮುತ್ತಿ ಬಂದಂತಿದೆ' ಎಂದು ರಥದಿಂದ ಸರಿದು ಬಂದು ಪುನಃ ವಂದಿಸಿದನು. ಆಗ ಗರುಡಲಾಂಛನವಾದ ಆ ರಥವು ತುರಗ ಧ್ವಜಗಳೊಡನೆ ಸ್ವರ್ಗಕ್ಕೆ ಹಾರಿಹೋಯಿತು. ಅದರ ಹಿಂದೆಯೇ ಶ್ರೀಹರಿಯ ಚಕ್ರಾದ್ಯಾಯುಧ ಗಳು ಹೊರಟುಹೋದವು. ವಿಸ್ಮಿತನಾಗಿ ನಿಂತಿದ್ದ ಸಾರಥಿಗೆ ಶ್ರೀಭಗವಂತನಿಂತೆಂದನು–

ದಾರುಕ! ಹೋಗು ದ್ವಾರಕೆಗೆ! ರಾಮನ ನಿರ್ಯಾಣವನ್ನು, ನನ್ನ ನಿರ್ಯಾಣವನ್ನು, ಯಾದವ ನಾಶವನ್ನು, ಅಲ್ಲಿರುವ ವಸುದೇವಾದಿಗಳಿಗೆ ತಿಳಿಸು! ಇನ್ನು ಅಲ್ಲಿರಕೂಡದೆಂದು ತಿಳಿಸು! ಇಂದಿನಿಂದ ಏಳು ದಿನಗಳಿಗೆ ದ್ವಾರಕೆಯು ಸಮುದ್ರದಲ್ಲಿ ಮುಳುಗಿಹೋಗುವುದು. ತಮ್ಮ ಪರಿವಾರದಿಂದ ಕೂಡಿ, ಬಂಧುಗಳು, ಅರ್ಜುನನ ಹಿಂದೆ, ಇಂದ್ರಪ್ರಸ್ಥಕ್ಕೆ ಹೋಗಲಿ! ದಾರುಕ! ತಿಳಿಯಿತೇ? ಹೋಗು! ನೀನು ನನ್ನನ್ನು ಭಕ್ತಿಯಿಂದ ಭಜಿಸು! ಪುತ್ರಾದಿಗಳಲ್ಲಿ ವಿರಕ್ತನಾಗು! ಜ್ಞಾನವನ್ನು ಸಜ್ಜನಸಂಗದಲ್ಲಿ ಸಂಪಾದಿಸು! ಎಲ್ಲ ಸಂಸಾರವೂ ನನ್ನಿಚ್ಛೆಯಿಂದ ನಿಂತಿರುವುದು – ಅಶಾಶ್ವತವೆಂದು ತಿಳಿ!

ಆಗ ದಾರುಕನು ಶ್ರೀಕೃಷ್ಣನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಆ ಸ್ವಾಮಿಯ ಪಾದದಿ ಶಿರವನ್ನು ಘಟ್ಟಿಸಿ, ವಿರಹವ್ಯಥೆಯಿಂದ ಕಣ್ಣೀರಿಡುತ್ತಾ, ಶ್ರೀಶಾಜ್ಞೆಯಂತೆ ದ್ವಾರಕೆಗೆ ಹೊರಟುಹೋದನು.

## ೩೧. ಶ್ರೀಕೃಷ್ಣ ಪರಂಧಾಮ ಗಮನ

ಶ್ರೀಶುಕನು ಹೇಳಿದನು–

ಆ ಸಮಯದಲ್ಲಿ ಬ್ರಹ್ಮದೇವನು, ಪಾರ್ವತೀಪರಮೇಶರು, ಇಂದ್ರಾದಿ ದೇವತೆಗಳು, ಪ್ರಜೇಶರು, ಪಿತೃ, ಸಿದ್ಧ, ಗಂಧರ್ವ ವಿದ್ಯಾಧರ ಚಾರಣ ಯಕ್ಷ ಕಿನ್ನರರು, ಋಷಿಗಳು, ಭಗವಂತನ ಪೃಥ್ವಿಲೋಕ ಸಂತ್ಯಾಗವನ್ನು ನೋಡಬೇಕೆಂದು ಬಂದರು; ಶೌರಿಯ ಅವತಾರ ಶುಭಚರಿತೆಗಳನ್ನು ಗಾನಮಾಡುತ್ತಾ, ವಿಮಾನಾವಲಿಗಳಲ್ಲಿಂದ ಪುಷ್ಪವರ್ಷವನ್ನು ಗರೆದರು. ಭಗವಂತನು ತನ್ನ ಸನ್ನಿಧಾನ ವಿಶೇಷ ಪಾತ್ರರಾದ ಅವರನ್ನು ನೋಡಿದನು; ತನ್ನ ಮೂಲ ರೂಪದಲ್ಲಿ ಐಕ್ಯವನ್ನು ಪೊಂದಿ, ಪದ್ಮನೇತ್ರಗಳನ್ನು ಮುಚ್ಚಿದನು. ಲೋಕಮನೋಹರವು, ಬ್ರಹ್ಮಾದಿ ಧಾತೃಜನ ಮಂಗಲಕರವು ಆದ ತನ್ನ ಶರೀರವನ್ನು ಯೋಗಧಾರಣೆಯಿಂದ ಹುಟ್ಟಿದ ಅಗ್ನಿಯಿಂದ ಬಿಡುವ ದೇವತೆಗಳಂತಲ್ಲದೆ ಹಾಗೇ ತಾನೇ ಸಮಸ್ತ ಸ್ವರೂಪ ಗತಭೇದ ವಿರ್ಜಿತನಾದುದರಿಂದ, ಅಂತರ್ಧಾನ ಮಾಡಿ, ಪರಂಧಾಮವನ್ನೈದಿದನು. ಆಕಾಶದ ಮೇಘ ಮಂಡಲವನ್ನು ಸೀಳಿಕೊಂಡು ಹೋಗುವ ಮಿಂಚಿನ ಕೋಲಿನಂತೆ, ಹೊರಟುಹೋದ ಶ್ರೀಕೃಷ್ಣ

ನನ್ನು, ಮರ್ತ್ಯರು, ದೇವತೆಗಳು, ಪೂರ್ಣವಾಗಿ ತಿಳಿಯಲಾರದೆ ಅವನ ಯೋಗಸಾಮರ್ಥ್ಯವನ್ನು ಕಂಡು, ವಿಸ್ಮಿತರಾದರು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು; ಪುಷ್ಪವೃಷ್ಟಿ ಯಾಯಿತು; ಬ್ರಹ್ಮಾದಿಗಳು ಸ್ವಧಾಮವನ್ನು ಪೊಕ್ಕ ಶ್ರೀಹರಿಯ ಮಹಿಮೆಯನ್ನು ಕಂಡು ಆಶ್ಚರ್ಯಭರಿತರಾದರು; ಶ್ರೀಹರಿಯನ್ನು ಪಾಡಿ ಹೊಗಳುತ್ತಾ, ಅವರೆಲ್ಲರು ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ರಾಜನ್! ಜಡಜೀವವಿಲಕ್ಷಣನಾದ, ಶ್ರೀಕೃಷ್ಣನ ಜನನವನ್ನು, ಅವತಾರ ಸಮಾಪ್ತಿಯನ್ನು ಕಂಡು ಮನುಜಸಮನೆಂದು ಭ್ರಾಂತನಾಗಬೇಡ! ಮನುಜನ ಮಧ್ಯದಿ ಮನುಜರಂತಾಡುವ ಶ್ರೀಶನ ಸ್ವೇಚ್ಛಾನುಕರಣವೆಂದು ತಿಳಿ! ನಾಟಕದಲ್ಲಿ ರಾಜರೂಪಗ್ರಹಣದಂತೆ, ಶ್ರೀಹರಿಯ ಲೀಲಾವಿಲಾಸವು ದುಷ್ಟಜನಮೋಹನಾರ್ಥವೂ ಆಗಿದೆ. ಅವನು ಸ್ವರೂಪಶಕ್ತಿಯಿಂದ ಜಗವನ್ನು ಸೃಜಿಸುವನು; ತಾನೇ ಪಾಲಿಸುವನು; ಒಳಗೆ ಪ್ರವೇಶಿಸಿ ನಡೆಸುವನು; ಅವತರಿಸಿ ಜೀವರಿಂದ ಕೂಡಿ ಆಡುವನು; ಪ್ರಳಯದಲ್ಲಿ ಎಲ್ಲವನ್ನೂ ಸಂಹರಿಸಿ,. ಸ್ವಮಹಿಮಾರತನಾಗಿರುವನು. ಇದು ಆ ಲೋಕವಲ್ಲಭನ ಸ್ವಭಾವವಾಗಿದೆ.

ಮನುಜನೇ ಶ್ರೀಕೃಷ್ಣನು? ಮೃತನಾಗಿದ್ದ ಗುರುಸುತನನ್ನು ಯಮಲೋಕದಿಂದ ತಂದು, ಮನುಜಶರೀರಯುತನನ್ನಾಗಿಸಿ, ಸಾಂದೀಪ್ಯಾಚಾರ್ಯನಿಗಿತ್ತ ಕೃಷ್ಣನು ಮರ್ತ್ಯನೇ? ಬ್ರಹ್ಮಾಸ್ತ್ರ ದಗ್ಧನಾಗಿದ್ದ ನಿನ್ನ ಶರೀರವನ್ನು, ನಿನ್ನ ತಾಯಿಯ ಮೊರೆಯನ್ನಾಲಿಸಿ, ಬದುಕಿಸಿದ ಕೃಷ್ಣನು ಮರ್ತ್ಯನೇ? ಬಾಣಪುರದಲ್ಲಿ ರುದ್ರನನ್ನು ಗೆದ್ದು, ಪಾರಿಜಾತಾಪಹರಣ ಕಾಲದಲ್ಲಿ ಯಮರುದ್ರ ರನ್ನು ಸೋಲಿಸಿದ ಕೃಷ್ಣನು ಮರ್ತ್ಯನೇ? ಆ ಲೋಕೇಶನಿಗೆ ಮರಣವೆಂದವನಿಗೆ ಅಂಧಂತಮವು ತಪ್ಪುವುದೇ? ಅಪ್ರಾಕೃತಳು, ನಿತ್ಯಮುಕ್ತಳೂ ಆದ ರಮೆಯ ಅರಸನು ತನ್ನ ದೇಹವನ್ನು ಉಳಿಸಿಕೊಳ್ಳಲು, ತಾನು ಸಮರ್ಥನಲ್ಲವೇ? ಶ್ರೀಹರಿಗೆ – ಸರ್ವಸಂಹಾರಕ ನರಸಿಂಹನಿಗೆ ಮತ್ತೊಬ್ಬ ಸಂಹಾರಕನಿಲ್ಲ. ಅನಂತನಿಗೆ ಜನನಮರಣಗಳಿಲ್ಲ. ಜರವ್ಯಾಧನು, ಸಶರೀರನಾಗಿ ಸ್ವರ್ಗವನ್ನು ಸೇರುವಂತೆ ಅನುಗ್ರಹಿಸಿ, ವಿಪ್ರಶಾಪವನ್ನು ಮೀರಲು ಶಕ್ತನಾದರೂ ಬ್ರಹ್ಮಣ್ಯ ದೇವನಾದುದರಿಂದ ಅನುಮೋದಿಸಿ, ಅವಿದ್ಧನಾದರೂ ವಿದ್ಧನಂತೆ ತೋರಿಸಿದ ಅಪ್ರಾಕೃತ ದಿವ್ಯ ಮಂಗಳವಿಗ್ರಹನಿಗೆ ಶರೀರ ತ್ಯಾಗವಿಲ್ಲ.

ಹೀಗಿದ್ದರೂ ಶ್ರೀಕೃಷ್ಣನು ಬಲಭದ್ರಾದಿಗಳನ್ನೂ ಶರೀರದಿಂದ ಕರೆದೊಯ್ಯಲು ಮನ ಮಾಡಲಿಲ್ಲ. ಮರಣಶೀಲನಾದ ಶರೀರದಿಂದ ಪ್ರಯೋಜನವಿಲ್ಲೆಂದು ಮನುಜರಿಗೆ ತಿಳಿಸಿ ಕೊಡಲು ಬಲಭದ್ರಾದಿಗಳನ್ನೂ ಹಾಗೆ ಕರೆದುಕೊಂಡು ಹೋಗಲಿಲ್ಲ. ಶ್ರೀಹರಿಯು ಜಗಜ್ಜನ್ಮಾದಿ ಕಾರಣನು, ಸ್ವತಂತ್ರನು, ಸರ್ವಪ್ರಕೃತ್ಯಾದಿಶಕ್ತಿಗಳೂ ಅವನ ಅಧೀನವಾಗಿವೆ. ಅವನಿಗೆ ಬೇರೆ ಸೃಜಕರು, ಸಂಹಾರಕರಿಲ್ಲ. ಆದುದರಿಂದ ಮೃತ್ಯುವರ್ಜಿತನಾದ ಶ್ರೀಹರಿಗೆ ದೇಹ ತ್ಯಾಗವಿಲ್ಲ. ಅವನ ದೇಹವೆಂದರೆ ಪೃಥಿವಿ; ಅದರ ತ್ಯಾಗವೆಂದರೆ ಅಂತರ್ಧಾನ ಎಂದು ತಿಳಿ!

ಇಂತು ನಾನು ವರ್ಣಿಸಿದಂತೆ ಶ್ರೀಕೃಷ್ಣನ ಪರಮ ಪದವಿಯ ಮಹಿಮೆಯನ್ನರಿತು, ಪ್ರಾತಃ ಕಾಲದಲ್ಲಿ ಭಕ್ತಿಯಿಂದ ಹೇಳಿದವರು, ಕೇಳಿದವರು ಕೂಡ, ಶ್ರೀಹರಿಲೋಕವನ್ನೇ ಪೊಂದುವರು.

ದಾರುಕನು ದ್ವಾರಕೆಗೆ ಬಂದನು; ವಸುದೇವೋಗ್ರಸೇನರ ಚರಣಗಳಲ್ಲಿ ಬಿದ್ದು, ಅಳುತ್ತಾ ನಡೆದ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳುತ್ತಲೇ ಜನರು ಶೋಕಮೂರ್ಛಿತರಾದರು.

ತಮ್ಮ ಬಂಧುಗಳು ಹೊಡೆದಾಡಿ ಬಿದ್ದ ಪ್ರಭಾಸದ ಸಮುದ್ರತೀರದಲ್ಲಿ, ತಾವೂ ಶೋಕದಿಂದ ಗೋಳಾಡಿದರು.

ಆ ವೃತ್ತಾಂತವನ್ನು ಕೇಳುತ್ತಲೇ ದೇವಕೀ ರೋಹಿಣೀ ವಸುದೇವರು ಶೋಕಾರ್ತರಾಗಿ ತಮ್ಮ ಶರೀರಗಳನ್ನು ತ್ಯಜಿಸಿದರು; ಪತ್ನಿಯರಾಗ ತಮ್ಮ ತಮ್ಮ ಪತಿಗಳ ದೇಹಗಳ ಸಂಗಡ ಚಿತೆಯನ್ನೇರಿದರು. ರುಕ್ಮಿಣೀ ಸತ್ಯಭಾಮೆಯರು ಸಾಕ್ಷಾಲ್ಲಕ್ಷ್ಮೀದೇವಿ ಅವತಾರವಾದುದರಿಂದ, ವನದಲ್ಲಿ ಅದೃಶ್ಯರಾಗಿ ವೈಕುಂಠವನ್ನು ಸೇರಿದರು.

ಕೃಷ್ಣವಿರಹದಿಂದ ದಿಕ್ಕು ತೋಚದಂತಾಗಲು, ಅರ್ಜುನನು ಭಗವದ್ಗೀತೆಯನ್ನು ನೆನೆದು, ತಾನಾಗಿ ಸಮಾಧಾನವನ್ನು ತಂದುಕೊಂಡನು. ಮೃತರಿಗೆ ವಿಧಿವಿಹಿತವಾಗಿ ಉತ್ತರಕಾರ್ಯಗಳನ್ನೂ ಮಾಡಿಸಿದನು. ದ್ವಾರಕೆಯು – ಶ್ರೀಭಗವನ್ಮಂದಿರವು ಒಂದುಳಿದು – ಸಮುದ್ರದಲ್ಲಿ ಮುಳುಗಿತು. ಅಲ್ಲಿ ನಿತ್ಯವೂ ಶ್ರೀಕೃಷ್ಣಸನ್ನಿಧಾನವಿರುವುದೆಂದು ತಿಳಿ! ಅವನ ಸ್ಮರಣೆಯ ಸರ್ವಪಾಪಹರವು – ಸರ್ವಶುಭಕರವೂ ಆಗಿದೆ. ಅರ್ಜುನನು ಮಿಕ್ಕ ಸ್ತ್ರೀಜನರನ್ನು, ಬಾಲವೃದ್ಧರನ್ನು ಕರೆದುಕೊಂಡು ಪೋದನು. ದ್ವಾರಕೆಯಲ್ಲಿ ವಜ್ರನನ್ನು ರಾಜನಾಗಿಸಿ ನಿಲ್ಲಿಸಿದನು. ಅರ್ಜುನನು ಇಂದ್ರಪ್ರಸ್ಥವನ್ನು ಸೇರಿ, ಧರ್ಮರಾಜಾದಿಗಳಿಗೆ ಶ್ರೀಕೃಷ್ಣ ನಿರ್ಯಾಣವನ್ನು ಅರುಹಿದನು. ಆಗ ಅವರೆಲ್ಲರೂ ಸ್ವರ್ಗಾರೋಹಣವನ್ನು ಮಾಡಿ, ಹಿಂದಿರುಗಿ ಬಾರದ ಪುಣ್ಯಲೋಕಗಳಲ್ಲಿ ತಮ್ಮ ತಮ್ಮ ಮೂಲರೂಪವನ್ನು ಪೊಂದಿದರು.

ಇಂತು ದೇವನಾದ ಶ್ರೀಕೃಷ್ಣನ ಅವತಾರ ಚರಿತ್ರೆಗಳನ್ನು ಶ್ರದ್ಧೆಯಿಂದ ಹೇಳಿಕೇಳಿದವರು ಸರ್ವಪಾಪಗಳಿಂದ ಮುಕ್ತರಾಗುವರು.

ಇಂತು ನಾನು ನಿನಗೆ ಅವ್ಯಾಹತ ಷಡ್ಗುಣೈಶ್ವರ್ಯಭರಿತನಾದ ಶ್ರೀಕೃಷ್ಣನ ರುಚಿರಾವತಾರ ಚರಿತ್ರೆಗಳನ್ನು ಪೇಳಿರುವೆನು. ವಿಷ್ಣುಪುರಾಣ, ಹರಿವಂಶ ಭಾರತಾದಿ ಸದ್‌ಗ್ರಂಥಗಳಲ್ಲಿಯೂ ಅವನ ಮನೋಹರ ಪಾವನಕಥೆಯು ವರ್ಣಿತವಾಗಿದೆ. ಅದನ್ನು ಕೇಳಿದವರು, ವರ್ಣಿಸಿದವರು ಸನಕಾದಿ ಪರಮಹಂಸ ಶರಣರಾದ ನಾರಾಯಣ ಚರಣಾರವಿಂದಗಳಲ್ಲಿ ಶುದ್ಧ ಭಕ್ತಿಯನ್ನು ಪಡೆಯುವರು.

ಏಕಾದಶಸ್ಕಂಧವು ಸಂಪೂರ್ಣವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ದ್ವಾದಶ ಸ್ಕಂಧವು

|| ಹರಿಃ ಓಂ ||

ಶ್ರೀಶುಕನು ಹೇಳಿದನು–

ಬೃಹದ್ರಥವಂಶದಲ್ಲಿ ಕೊನೆಯವನಾದ ರಿಪುಂಜಯನನ್ನು, ಅವನ ಅಮಾತ್ಯನಾದ ಮುನಿಕನು ಕೊಂದು, ತನ್ನ ಮಗನಾದ ಪ್ರದ್ಯೋತನನ್ನು ರಾಜ್ಯದಲ್ಲಿ (ಮಗಧ) ನಿಲ್ಲಿಸಿದನು. ಅವನ ಮಗನೇ ಪಾಲಕನು, ವಿಶಾಖಯೂಪ, ಅಜಕ, ನಂದಿವರ್ಧನರು ಕಲೆದು ಐದು ಪ್ರಾದ್ಯೋತನರು ೧೩೮ ವರ್ಷಗಳ ಕಾಲ ಮಗಧ ದೇಶದಲ್ಲಿ ರಾಜ್ಯವಾಳುವರು.

ಶಿಶುನಾಗನು ಆಮೇಲೆ ರಾಜನಾಗುವನು; ಕಾಕವರ್ಣ, ಕ್ಷೇಮಧನ್ವ, ಕ್ಷೇತ್ರಜ್ಞ, ವಿಧಿಸಾರ, ಅಜಾತಶತ್ರು, ದರ್ಭಕ ಅಜಯ, ನಂದಿವರ್ಧನ, ಮಹಾನಂದಿಗಳು ಶೈಶುನಾಗರು ಹತ್ತು ರಾಜರು ೩೬೦ ವರ್ಷಕಾಲ ಆಳುವರು. ಮಹಾನಂದಿಗೆ ಶೂದ್ರಾಳಲ್ಲಿ ಮಹಾಪದ್ಮನು ಜನಿಸುವನು. ಅಲ್ಲಿಂದ ಶೂದ್ರರೇ ರಾಜರಾಗುವರು. ಅವರು ಪ್ರಾಯಃ ಅಧಾರ್ಮಿಕರಾಗಿರುವರು. ಆ ಮಹಾಪದ್ಮನಿಗೆ ಸುಮಾಲಿ ಮೊದಲಾದ ರಾಜರು ಮಕ್ಕಳಾಗಿ, ಎಲ್ಲರೂ ಸೇರಿ ಒಂದುನೂರು ವರ್ಷಗಳವರೆಗೂ ಆಳುವರು. ಆ ನವನಂದರನ್ನು ಕೊಂದು ಒಬ್ಬ ವಿಪ್ರನ ಸಹಾಯದಿಂದ ಮೌರ್ಯನು ರಾಜ್ಯವನ್ನಾಳುವನು. ಮುರಳು ಕೈವರ್ತಜಾತಿಯವಳು. ಆ ಚಾಣಕ್ಯವಿಪ್ರನಿಂದ ಅಭಿಷಿಕ್ತನಾಗಿ ಇಂದ್ರಗುಪ್ತನೆಂಬ ಮೌರ್ಯನು ರಾಜ್ಯವಾಳುವನು. ಅವನ ಮಗನು ವಾರಿರಾಜನನು ಅವನಿಗೆ ಅಶೋಕ ವರ್ಧನನು ಸುತನಾಗುವನು. ಅವನ ವಂಶದಿ ಕ್ರಮವಾಗಿ ಸುಯಶನು, ಸಂಗತ, ಶಾಲಿಶೂಕ, ಸೋಮ, ಶತಧ್ವನ್ವ, ಬೃಹದ್ರಥರು ಆಗುವರು. ಆ ಮೌರ್ಯರು ೧೩೭ ವರ್ಷ ರಾಜ್ಯವಾಳುವರು.

ಬೃಹದ್ರಥನನ್ನು ಕೊಂದು, ಅವನ ಸೇನಾಧಿಪನಾದ ಪುಷ್ಯಮಿತ್ರನು ಶುಂಗರಾಜ್ಯವನ್ನು ಸ್ಥಾಪಿಸುವನು. ಅವನ ವಂಶದಲ್ಲಿ, ಅಗ್ನಿಮಿತ್ರ, ಸುಧೇಷ್ಟ, ವಸುಮಿತ್ರ ಭದ್ರಕ, ಪುಲಿಂದ, ಘೋಷ, ವಜ್ರಮಿತ್ರ, ಭಾಗವತ, ದೇವಭೂತಿ; ಕ್ರಮವಾಗಿ ಹತ್ತು ರಾಜರು ನೂರುವರ್ಷ ವಾಳುವರು. ಕಾಲಕ್ರಮವಾಗಿ ಕಲಿಪ್ರಭಾವದಿಂದ ರಾಜರು ದುಷ್ಟರು, ಇಂದ್ರಿಯಲೋಲರು ಪ್ರಜಾಪೀಡಕರು ಆಗುವರು. ಆದುದರಿಂದ ಭೂಮಿಯು ಸಸ್ಯಹೀನವಾಗುತ್ತಿರುವುದು.

ಸ್ತ್ರೀಲೋಲ ದೇವಭೂತಿಯನ್ನು ಕೊಂದು ಮಂತ್ರಿಯಾದ ಕಣ್ವವಂಶಜನಾದ ವಸುದೇವನು ರಾಜ್ಯವಾಳುವನು. ಅವನ ಮಗ ಭೂಮಿತ್ರನು ಅವನ ಸುತನು ನಾರಾಯಣನು ಅವನಿಗೆ ಸುಶರ್ಮ, ಇಂತು ಕಾಣ್ವರು ೩೪೫ ವರ್ಷ ರಾಜ್ಯವಾಳುವರು. ಕೊನೆಯವನಾದ ಸುಶರ್ಮನನ್ನು ಕೊಂದು, ವೃಷಲವಾದ ಆಂಧ್ರನು ರಾಜ್ಯವಾಳುವನು. ಅವನ ತಮ್ಮನು ಕೃಷ್ಣನೆಂಬುವನು,

ಅವನ ಮಗ ಶ್ರೀ ಶಾಂತಕರ್ಣ, ಅವನ ಸುತ ಪೌರ್ಣವಾಸ, ಅವನಿಗೆ ಲಂಬೋದರ, ಶಿಬಿಲ, ಮೇಘುಸ್ವನ, ಅಟಮಾನ, ಅನಿಷ್ಟಕರ್ಮ, ತಲಕ, ಪುರೀಷಸೇರು, ಸುನಂದನ, ಚಕೋರ, ಶಿವಖ್ಯಾತಿ, ಅರಿಂದಮ, ಪುರೀಮಾನ್ ಶಿವಶಿರ ಶಿವಸ್ಕಂದ, ಯಜ್ಞಶ್ರೀ, ವಿಷಯ, ಚಂದ್ರಬೀಜ, ಸುಲೋಮಧಿ, ಮೊದಲಾದ ಮೂವತ್ತು ರಾಜರು ೮೫೬ ವರ್ಷ ರಾಜ್ಯವಾಳುವರು. ಏಳು ಜನ ಗೊಲ್ಲರು, ಹತ್ತು ಜನ ಆಂಧ್ರರು, ಹದಿನಾರು ಕಂಕರು ಕೂಡ ಕಲಿಯುಗದಲ್ಲಿ ರಾಜ್ಯವಾಳುವರು. ಮುಂದೆ ಎಂಟು ಯಮನರು, ಹದಿನಾಲ್ಕು ತುರುಷ್ಕರು, ಹದಿಮೂರು ಪುರುಂಡರು, ಹನ್ನೊಂದು ಮೌನರು, ಎಲ್ಲರೂ ಸೇರಿ ಆಳುವ ಕಾಲವು ೧೯೯೯ ವರ್ಷವಾಗುವುದು. ಈ ರಾಜರು ಸಪ್ತಾಂಧ್ರರು – ಸಪ್ತಕೋಸಲರು, ನೈಷಧಾದಿಗಳು – ಏಕಕಾಲೀನರೆಂದು ತಿಳಿ! ನೈಷಧದ ವಿಶ್ವಸ್ಫೂರ್ಜಿಯು ಬಲವಂತವಾಗಿ ಪದ್ಮಪುರಿಯಲ್ಲಿದ್ದು ಗಂಗಾತೀರದ ಭೂಪ್ರದೇಶವನ್ನಾಳುವನು. ಇತರ ದೇಶಗಳಲ್ಲಿಯು ಶೂದ್ರರಾಜರಾಳುವರು.

ಬ್ರಾಹ್ಮಣರು ಕಲಿಯುಗದಲ್ಲಿ ಸಂಸ್ಕಾರಹೀನರಾಗುವರು. ರಾಜರೆಲ್ಲರು ಪ್ರಾಯಃ ಶೂದ್ರರೇ ಇರುವರು. ಸಿಂಧುತೀರ, ಕಾಂಚಿ, ಕಾಶ್ಮೀರಗಳಲ್ಲಿ ಅಬ್ರಹ್ಮಣ್ಯರಾದ ಮ್ಲೇಚ್ಛರು ಪಾಲಿಸುವರು. ರಾಜರು ಪ್ರಾಯಃ ಅಧರ್ಮಿಷ್ಠರು – ಅನೃತವಾದಿಗಳು, ಸ್ತ್ರೀಲೋಲರು ಗೋಬ್ರಾಹ್ಮಣ ಹಿಂಸಕರು, ಪರದಾರಾಧನಾಪಹಾರಕರು ಆಗಿರುವರು; ಚಂಚಲವಾದ ರಾಜ್ಯಸಂಪದಗಳನ್ನು ಪೊಂದಿ, ಅಲ್ಪಬಲರು, ಅಸಂಸ್ಕೃತರು, ಸುಕರ್ಮಹೀನರು, ಅನ್ಯಥಾ ಜ್ಞಾನಿಗಳು ಆದ ರಾಜರು ಪ್ರಜರನ್ನು ಸುಲಿದು ತಿನ್ನುವರು. ರಾಜರಂತೆ ಪ್ರಜರೂ ಕೂಡ, ಅವರವರ ರಾಜ್ಯದಲ್ಲಿ, ಅವರಂತೆ ವೇಷಗಳನ್ನು ಧರಿಸಿ, ಅವರ ಭಾಷೆಗಳನ್ನು ಕಲಿತು ಅವರ ನಡೆನುಡಿಗಳಲ್ಲಿ ಆದರದಿಂದ ಸ್ವಧರ್ಮಭ್ರಷ್ಟರಾಗುವರು. ತಾವೂ ಪರಸ್ಪರ ಪೀಡೆಯಿಂದ ಜೀವಿಸುತ್ತಿರುವರು.

## ೨. ಕಲಿಯುಗದ ಲಕ್ಷಣ

ಶ್ರೀಶುಕನು ಹೇಳಿದನು–

ರಾಜನ್! ಕಲಿಯುಗದಲ್ಲಿ ದಿನದಿನಕ್ಕೂ ಧರ್ಮವು ಕಡಿಮೆಯಾಗುವುದು. ಸತ್ಯ, ಶೌಚ, ದಯಾ, ಕ್ಷಮಾದಿ, ಸುಗುಣಗಳು ನಷ್ಟವಾಗಲು, ಜನರ ಆಯುಸ್ಸು, ಶ್ರೀ, ಕಾಂತಿ, ಬಲ, ಬುದ್ಧಿಗಳೂ ನಷ್ಟವಾಗುವುವು.

ಜನ್ಮ, ಆಚಾರ, ಕುಲ, ಗುಣಗಳಿಗಿಲ್ಲ ಗೌರವ; ಧನಕ್ಕೆ ಗೌರವ ಕಲಿಯುಗದಲ್ಲಿ; ಧರ್ಮವನ್ನು, ನ್ಯಾಯವನ್ನು ನಿರ್ಣಯಿಸುವಾಗ ಬಲವಂತನ ಪಕ್ಷವೇ ಗೆಲ್ಲುವುದು. ದಾಂಪತ್ಯ ಕಾರಣವು ಅಭಿರುಚಿ, ಪಿತೃಜನ ಸಮ್ಮತಿ ಅಲ್ಲ; ವ್ಯಾಪಾರವೆಲ್ಲವು ಮೋಸ, ಚೆನ್ನಾಗಿ ಕಾಣುವಂತೆ ಅಲಂಕರಿಸಿಕೊಂಡು ಸ್ತ್ರೀಯರು, ಪುರುಷರು, ರತಿಲೋಲರಾಗುವುದೇ ಗಾರ್ಹಸ್ಥ್ಯ, ಯಜ್ಞೋಪವೀತವಿದ್ದರಾಯಿತು, ಅವನೇ ಬ್ರಾಹ್ಮಣ; ಕಾವಿಯುಟ್ಟರಾಯಿತು ಸನ್ಯಾಸಿ; ಅನ್ಯಾಯವೇ ಆದಾಗ ಅದು ನ್ಯಾಯವೆಂದು ಸಾಧಿಸುವುದೇ ದಕ್ಷತೆ; ಸಮಯಾನುಸಾರಿ ವಚನಕೌಶಲವೇ ಪಾಂಡಿತ್ಯ; ದರಿದ್ರನಾಗಿರುವುದರಿಂದ ಸಾಧುತ್ವ; ಸ್ವೀಕರಿಸುವುದೇ ಮದುವೆ; ಸ್ನಾನವೇ ಅಲಂಕಾರ; ದೇಶ ನೋಡಿ ಬರುವುದೇ ಯಾತ್ರೆ; ಕೇಶಧಾರಣವೇ ಲಾವಣ್ಯ; ಹೊಟ್ಟೆಹೊರೆಯುವುದೇ ಸ್ವಾರ್ಥ; ಬಾಯಿಬಡಿದು ಸ್ಥಾಪಿಸುವುದೇ ಸತ್ಯ; ಕುಟುಂಬಪೋಷಣವೇ ದಕ್ಷತೆ; ಧರ್ಮಸೇವನೆಯು

ಯಶೋಭಿಲಾಷೆಯಿಂದ (ಹರಿಪ್ರೀತಿಗಲ್ಲ) ; ಎಷ್ಟೆಂದು ಹೇಳಲಿ! ಇಂತು ದುಷ್ಟಪ್ರಜರಿಂದ ಭೂಮಂಡಲವು ತುಂಬಿ ಅಧರ್ಮ ಭಾರದಿಂದ ಕುಗ್ಗಿಹೋಗುವುದು.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಲ್ಲಿ ಬಲವಂತನೇ ರಾಜ. ಅವನಂತೇ ಮಾತು. ರಾಜರು ಲೋಭಿಗಳು, ದಯಾಹೀನರು; ಕಳ್ಳನಂತೆ ಪ್ರಜರನ್ನು ಸುಲಿದು ಪೀಡಿಸುವ ರಾಜರ ಪೀಡೆಯಿಂದ ನೊಂದು ಪ್ರಜರು ಗಿರಿ ಕಾನನ ವನಗಳನ್ನು ಸೇರುವರು. ಅನ್ನವು ಸಿಗದೆ ಹೋಗುವುದು ಯಜ್ಞಾಭಾವದಿಂದ; ಶಾಕಗಳನ್ನು, ಗಡ್ಡೆ ಬೇರುಗಳನ್ನು, ಜೇನು, ಫಲ, ಪುಷ್ಪಗಳನ್ನು ತಿಂದು ಜನರು ಜೀವಧಾರಣ ಮಾಡುವರು. ಕೊನೆಗೆ ಜನರು ಅಲ್ಪಾಯುಷ್ಕರಾಗಿ ಮೂವತ್ತು ಅಥವಾ ಇಪ್ಪತ್ತು ವರ್ಷಗಳು ಮಾತ್ರ ಬದುಕುವರು. ದೇಹ ಪ್ರಮಾಣವು ಕಡಿಮೆಯಾಗುವುದು. ವರ್ಣ ದರ್ಮಗಳು ನಷ್ಟವಾಗುವುವು. ಪಾಖಂಡ ಧರ್ಮವು ಹೆಚ್ಚಾಗುವುದು. ರಾಜರು ಕಳ್ಳರಂತಿರಲು, ಜನರು ಚೌರ್ಯ, ಅಸತ್ಯ, ಹಿಂಸಾರತರಾಗಿ ಕೆಡುವರು. ಬ್ರಾಹ್ಮಣರೂ ಶೂದ್ರರಂತಾಗುವರು. ಆಕಳು ಮೇಕೆಯಂತಾಗುವುದು; ಎಲ್ಲ ಆಶ್ರಮಗಳು ಗೃಹಸ್ಥಾಶ್ರಮದಂತೆ ಆಗುವುವು. ಬಂಧು ಗಳೆಂದರೆ ಹೆಂಡತಿಯ ಕಡೆಯವರೇ – ಇತರರಾಗುವುದಿಲ್ಲ. ಸಸ್ಯಗಳು ಅಣುವಾಗಿ ಕಡಿಮಯಾಗು ವುವು. ಮೇಘಗಳಿಂದ ಮಿಂಚಾಗಲಿ, ಮಳೆ ಬರುವುದಿಲ್ಲ. ಮನೆಗಳು ಬರಿದಾಗುವುವು.

ಇಂತು ಕಲಿಯುಗದ ಅಧರ್ಮತಾಂಡವವು, ಅಕಾಂಡವಾದಾಗ, ಧರ್ಮರಕ್ಷಣೆಗಾಗಿ, ಭಗವಂತನು – ಶಂಬಲಗ್ರಾಮದ ವಿಷ್ಣುಯಶನೆಂಬ ವಿಪ್ರನಿಗೆ ಮಗನಾಗಿ, ಅವತರಿಸಿ, ಕಲ್ಕಿ ಎಂದು ಖ್ಯಾತನಾಗಿ, ಸುಜನರಕ್ಷಣೆ, ದುಷ್ಟಶಿಕ್ಷಣೆಗಳನ್ನು ಮಾಡಿ, ಮತ್ತೆ ಧರ್ಮವನ್ನು ಸ್ಥಾಪಿಸು ವನು. ಅತಿ ವೇಗವಾದ ಕುದುರೆಯನ್ನೇರಿ, ಆ ಜಗತ್ಪತಿಯು, ಖಡ್ಗಪಾಣಿಯಾಗಿ, ಬೀಸಿದರೆ ಸಾಸಿರ ದುಷ್ಟರನ್ನು ಕಡಿಯುತ್ತಾ, ಸಂಚರಿಸಿ, ಕೃತಯುಗವನ್ನು ಸ್ಥಾಪಿಸುವನು. ಆಗ ಉಳಿದ ಪ್ರಜರು ಶುದ್ಧಮನಸ್ಕರಾಗಿ, ವಾಸುದೇವನ ದಿವ್ಯದೇಹವನ್ನು ತಾಗಿ ಸೂಸಿ ಬರುವ ವಾಯುದೇವನ ಕೃಪೆಯಿಂದ, ಜ್ಞಾನವಂತರಾಗುವರು. ಅವರು ಪ್ರಜಾವೃದ್ಧಿಯನ್ನೂ ಮಾಡಿ, ಹೃದಯದಲ್ಲಿ ನೆಲಸಿರುವ ಧರ್ಮಪತಿವಾಸುದೇವನ ಧ್ಯಾನದಿಂದ ಪೂತರಾಗಿ– ಧರ್ಮದಿಂದ ನಡೆಯುವರು. ಪುಷ್ಯನಕ್ಷತ್ರ ಪ್ರಥಮಪಾದದಲ್ಲಿ, ಚಂದ್ರ, ಸೂರ್ಯ, ಗುರು ಗ್ರಹಗಳು ಒಂದೇ ಸಲ ಕಲೆತು ಪ್ರವೇಶಿಸುವ ದಿನ ಕೃತಯುಗವು ಪ್ರಾರಂಭವಾಗುವುದು.

ಪರೀಕ್ಷಿತನೇ! ನಿನ್ನ ಹುಟ್ಟಿನಿಂದಾರಂಭಿಸಿ, ನಂದಾಭಿಷೇಕದವರಿಗೂ ಆದ ವರುಷಗಳು ಒಂದು ಸಾವಿರದ ನಾಲ್ಕುನೂರ ತೊಂಭತ್ತೆಂಟೆಂದು ತಿಳಿ! ಸಪ್ತರ್ಷಿಗಳು ಶಕಟಾಕಾರರಾಗಿರುವರು. ಮರೀಚಿ, ಸಭಾರ್ಯವಸಿಷ್ಠ, ಅಂಗಿರ, ಪುಲಸ್ತ್ಯ, ಅತ್ರಿ, ಪುಲಹ, ಕ್ರತು – ಇವರಲ್ಲಿ ಕ್ರತು ಪುಲಹರ ಮಧ್ಯದಲ್ಲಿ – ರೇಖಾ ಸಮದೂರವಾಗಿರುವ ನಕ್ಷತ್ರವು – ಸಪ್ತರ್ಷಿಗಳ ನಕ್ಷತ್ರ ಸ್ಥಾನವೆನಿಸುವುದು. ಅಲ್ಲಿ ಅವರು ಒಂದು ನೂರು ವರ್ಷಗಳ ಕಾಲವಿದ್ದು – ಮುಂದೆ – ಅನಂತರ ನಕ್ಷತ್ರವನ್ನು ಸೇರುವರು. (೧೧೨ ವರುಷ) ಈಗ ಅವರು ಮಘಾ ನಕ್ಷತ್ರದಲ್ಲಿ ಇರುವರು. ಶ್ರೀಕೃಷ್ಣನು ಭೂಲೋಕವನ್ನು ಬಿಟ್ಟ ದಿನವೇ ಕಲಿಯುಗವು ಆರಂಭವಾಗುವುದು. ಕಲಿಯುಗದ ಪ್ರಮಾಣವು ದೇವಮಾನದ ಸಾವಿರದ ಇನ್ನೂರು ವರ್ಷಗಳು. ನಂದಕಾಲದಿಂದ ಕಲಿಯುಗದ ಅಧರ್ಮವು ಹೆಚ್ಚಾಗುವುದು.

ಇಂತು ಮಾನವವಂಶವನ್ನು, ಅದರ ರಾಜರ ವಿಷಯನ್ನು ವರ್ಣಿಸಿದೆನು. ರಾಜನ್! ಅವರ ಹೆಸರೇನಾದರೂ ಭೂಮಿಯಲ್ಲಿ ಉಳಿದಿದೆಯೇ? ಇಲ್ಲ. ಯಾರು ಕೀರ್ತಿವಂತರೋ, ಅವರ

ಹೆಸರು ಮಾತ್ರ ಉಳಿದಿದೆ. ಶಂತನುಭ್ರಾತನಾದ ದೇವಾಪಿಯು, ಇಕ್ಷ್ವಾಕು ವಂಶಜನಾದ ಮರುದ್ರಾಜನು ಕಲಾಪಗ್ರಾಮದಲ್ಲಿ, ಯೋಗಬಲದಿಂದ ಬದುಕಿರುವನು. ಅವರು ಕಲಿಯುಗದ ಕೊನೆಯಲ್ಲಿ, ಇಳಿದು ಬಂದು, ವಾಸುದೇವನಿಂದ ಶಿಕ್ಷಿತವಾದ ವರ್ಣಾಶ್ರಮ ಧರ್ಮವನ್ನು ಪ್ರಚಾರಮಾಡಿ, ಸ್ಥಾಪಿಸುವರು.

ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳೆಂಬ ಅರೆಗಳಿಂದ ಕೂಡಿದ ಕಾಲ ಚಕ್ರದ ವೇಗವನ್ನು ಕಾಣದ ಕುರುಡರಾಗಿ, ರಾಜರು – ನಾನು ನನ್ನದೆಂಬ ದುರಭಿಮಾನದಿಂದ, ಕಾದಾಡಿ, ಸ್ವಲ್ಪಭೂಮಿಯ ತುಣುಕಿಗಾಗಿ ಸಾಯುತ್ತಿರುವರು. ರಾಜರೆಂಬ ಹೆಸರಿನಿಂದ ಮೆರೆದ ದೇಹವೂ ಕೂಡ, ಕೊನೆಗೆ, ಕ್ರಿಮಿಗಳ ಪಾಲೋ, ಅಥವಾ ಅಗ್ನಿಯ ಪಾಲೋ ಆಗುವುದು; ಮೃಗಗಳು ತಿಂದು ಹಾಕಿದರೆ ಮಲವಾಗುವುದು. ಅದರಿಂದ ವರಪ್ರಯೋಜನವನ್ನು ಸಾಧಿಸದೆ, ಸ್ವಾರ್ಥಪರರಾಗಿ ನರರು ನರಕದಲ್ಲಿ ಬೀಳುವರು.

ಪೂರ್ವಜರಾಳಿದ ಈ ಭೂಮಂಡಲವು ನನ್ನದಾಗಿದೆ. ಅಖಂಡ ರಾಜ್ಯವು ನನ್ನ ವಂಶಜರಿಗೆ ಬಿಟ್ಟು, ನಾನು ಅವರನ್ನು ಉಳಿಸುವೆನು' ಎಂದು ತೇಜೋಬನ್ನ (ಪೃಥಿವೀ ಜಲಾಗ್ನಿ) ಮಯವಾದ ದೇಹದ ಅಭಿಮಾನದಿಂದ ಮೋಹಿತರಾಗಿ, ಮಹಿಯನ್ನು, ಮನುಜ ದೇಹವನ್ನು ಕೂಡ ಬಿಟ್ಟು, ತಾವು ಹೊರಟುಹೋದ ರಾಜರ ಹೆಸರಾದರೂ ಉಳಿದಿಲ್ಲ.

## ೩. ಕಲಿದೋಷ ಪರಿಹಾರ

ಶ್ರೀಶುಕನು ಹೇಳಿದನು–

ತನ್ನನ್ನು ಜಯಿಸಿದ ಆಳುವೆವೆಂಬ ದುರ್ಮದದಿಂದ ಕಾದಾಡುವ ರಾಜರನ್ನು ನೋಡಿ ಭೂದೇವಿಯು ನಗುತ್ತಿರುವಳು.

ಮೃತ್ಯುವಿನ ಕೈಗೊಂಬೆಗಳಾದ ಈ ರಾಜಾಭಾಸರು ನನ್ನನ್ನು ಗೆಲ್ಲುವರಂತೆ! ವಿದ್ವಾಂಸರೆನಿಸಿದ ನರೇಂದ್ರರು ಕೂಡ ಈ ದುರಾಶೆಗೆ ಸಿಲುಕಿ, ಜಲಬುದ್ಬುದದಂತೆ ಚಂಚಲವಾದ ಶರೀರವನ್ನು ಶಾಶ್ವತವೆಂದು ಭ್ರಮಿಸಿ, ಹಾಳಾಗುತ್ತಿರುವರು. 'ಷಡ್ವರ್ಗಮಂತ್ರಿ ಸಚಿವರನ್ನು ಗೆದ್ದು, ಪೌರರನ್ನು ವಶಪಡಿಸಿಕೊಂಡು, ರಾಜ್ಯಗಳನ್ನು ಗೆಲ್ಲುತ್ತಾ, ಭೂಮಂಡಲವನ್ನೇ ಆಳುವೆವು' ಎಂದು ದುರಾಶಾಬದ್ಧ ಹೃದಯರಾಗಿ, ಕಾದಾಡುತ್ತಾ, ತಮ್ಮನ್ನು ನುಂಗಲು ಬರುತ್ತಿರುವ ಯಮನನ್ನು ಕಾಣದಿರುವರು. ಮನಸ್ಸನ್ನು ಜಯಿಸದಿದ್ದವನಿಗೆ ಸಮುದ್ರ ಮುದ್ರಿತ ಧರಾವಲಯದಿಂದೇನು? ಮನೋಜಯವಂತನಿಗೇ ಮುಕ್ತಿ. ಮನುರಾಜ, ಮನುವಂಶಜಯ ನನ್ನನ್ನಿಲ್ಲೇ ಬಿಟ್ಟು ತಾವು ಹೊರಟುಹೋದರು. ಹಿಡಿ ಮಣ್ಣನ್ನೂ ಅವರು ಒಯ್ಯಲಾರದೆ ಹೋದರು. ಮತ್ಸರದಿಂದ ಕ್ರೋಧದಿಂದ, ತಂದೆ, ಮಗ, ಸೋದರರೆನ್ನದೆ, ನನ್ನದು – ನನ್ನದೆಂದು ಭೂಮಿಗಾಗಿ ಯುದ್ಧಮಾಡಿ ಮಡಿಯುತ್ತಿರುವರು.

ಪೃಥು, ಪುರೂರವ, ಗಾಧಿ, ಭರತ, ನಹುಷ, ಪಾರ್ಥ, ಮಾಂಧಾತ, ಸಗರ, ಖಟ್ವಾಂಗ, ಧುಂಧುಮಾರ, ರಘು, ತೃಣಬಿಂದು, ಯಯಾತಿ, ಶರ್ಯಾತಿ, ಶಂತನು, ಗಯ, ಭಗೀರಥ, ಕುವಲಯಾಶ್ವ, ನೈಷಧ, ಮೊದಲಾದ ರಾಜರು; ರಾವಣ, ಹಿರಣ್ಯಕಶಿಪು, ವೃತ್ರ, ನಮುಚಿ, ಶಂಬರ, ನರಕಾಸುರ, ಹಿರಣ್ಯಾಕ್ಷ, ತಾರಕ, ಮೊದಲಾದ ದೈತ್ಯರು, ಇತರ ರಾಜರು ಪ್ರಜೇಶರೆಂದು

ಆಳಿ ಹೋದರು. ಎಲ್ಲರೂ ಪಂಡಿತರೇ! ಎಲ್ಲ ದಿಕ್ಕಿನಲ್ಲಿಯೂ ವಿಜಯಸ್ತಂಭಗಳನ್ನು ನಟ್ಟು ನಿಲ್ಲಿಸಿದವರೇ! ಆದರೆ ಮಮತೆ ಬಿಡಲಿಲ್ಲ. ಶರೀರವನ್ನು ಕಾಪಾಡಿಕೊಳ್ಳಲಾರದೆ – ಎಲ್ಲರೂ ಕಥಾಮಾತ್ರಾವಶಿಷ್ಟರಾಗಿ ಹೋದರು. ಕಾಲವೆಂಬ ಅಜಗರದ ತುತ್ತಾಗದೆ ಉಳಿದವರಿಲ್ಲ.

ರಾಜನ್! ನಾನು ನಿನಗೆ ಹೇಳಿರುವ ರಾಜರು ಮಹಾನುಭಾವರು; ಯಶೋವಂತರು. ಅವರ ಕಥೆಗಳನ್ನು ನಿನಗೆ ಹೇಳಿದುದು ವೈರಾಗ್ಯ ಹುಟ್ಟಲೆಂದು – ಆಗಲಿ ಅದರಿಂದಲೇ ಮೋಕ್ಷ ವಾಗುವುದೆಂದಲ್ಲ. ಕೃಷ್ಣನಲ್ಲಿ ನಿಶ್ಚಲಭಕ್ತಿಯು ಆಗಬೇಕೆಂದವನು – ಇತರ ಕಥೆಗಳನ್ನು ಬಿಟ್ಟು, ನಿತ್ಯವೂ ಸಕಲಾಮಂಗಳ ಪರಿಹಾರಕನು, ಉತ್ತಮಶ್ಲೋಕಶಿಖಾಮಣಿಯು ಆದ ಶ್ರೀಹರಿಯು ಮಹಿಮೆಯನ್ನು ಪೊಗಳುವ ವಚನಗಳನ್ನೇ ನಿತ್ಯವೂ ಸೇವಿಸಬೇಕು.

ರಾಜನು ಕೇಳಿದನು–

ಸ್ವಾಮೀ! ಮುಂದೆ ಕಲಿಯುಗದ ಜನರು ಕಲಿದೋಷಗಳನ್ನು ಮೀರಿ, ಶ್ರೀಹರಿಯನ್ನು ಸೇವಿಸುವ ಬಗೆ ಎಂತು?

ಶ್ರೀಶುಕನು ಹೇಳಿದನು–

ಕೃತಯುಗದಲ್ಲಿ ಸತ್ಯ, ದಯಾ, ತಪ, ದಾನಗಳೆಂಬ ನಾಲ್ಕು ಪಾದಗಳು ಪೂರ್ಣವಾಗಿ, ಧರ್ಮವು ನಡೆಯುವುದು. ಆಗ ಜನರು – ಸಂತುಷ್ಟರು, ಸ್ನೇಹಪರರು, ಶಾಂತರು, ಇಂದ್ರಿಯಜಯವಂತರು, ಸಹನಶೀಲರು ಯಥಾರ್ಥ ಜ್ಞಾನಿಗಳು, ಶ್ರೀಹರಿಭಕ್ತರೂ ಆಗಿರುವರು.

ತ್ರೇತಾಯುಗದಲ್ಲಿ ಪಾದಗಳ ನಾಲ್ಕನೇ ಒಂದು ಭಾಗದಿಂದ ಧರ್ಮವು ಕಡಿಮೆ ಆಗುವುದು. ಕಲಿಯುಗವು ಬಂದು ಹೆಚ್ಚಾದಾಗ, ಸತ್ಯಪಾದವು ಅನೃತದಿಂದಲು, ದಯಾಪಾದವು ಹಿಂಸೆಯಿಂದಲು, ತಪಃಪಾದವು ಅಸಂತೋಷದಿಂದಲು, ದಾನಪಾದವು ಕಲಹದಿಂದಲು, ಕ್ರಮವಾಗಿ ಕೆಡುವುವು. ತ್ರೇತೆಯಲ್ಲಿ ಜನರು ಅತಿಹಿಂಸ್ರಕರಲ್ಲದೆ, ವಿಷಯಲಂಪಟರಲ್ಲದೆ, ಯಜ್ಞತಪೋನಿಷ್ಠರಾಗಿರುವರು. ವೇದವಿಶಾರದರಾಗಿ, ಧರ್ಮಾರ್ಥಕಾಮಗಳನ್ನು ಚೆನ್ನಾಗಿ ನಡೆಸುವರು. ಬ್ರಾಹ್ಮಣರನ್ನು ಅನುಸರಿಸಿ ಪ್ರಜರು ನಡೆದುಕೊಳ್ಳುವರು.

ದ್ವಾಪರದಲ್ಲಿ ತಪ, ಸತ್ಯ, ದಯಾ, ದಾನಗಳಲ್ಲಿ ಅರ್ಧ ಭಾಗವೇ ಕಡಿಮೆಯಾಗುವುದು. ಅಧರ್ಮಪಾದಗಳಾದ ಅನೃತ, ಹಿಂಸಾ, ಅತುಷ್ಟಿ, ವಿಗ್ರಹಗಳಿಂದ – ಎರಡು ಭಾಗವು ಕೆಟ್ಟು, ಎರಡೇ ಉಳಿಯುವುದು. ಆದುದರಿಂದ ಆ ಯುಗವನ್ನು ದ್ವಾಪರವೆನ್ನುವರು. ಆಗ ಜನರು ಯಶಃಕಾಮರಾಗಿ, ಯಜ್ಞಗಳನ್ನು ಮಾಡುವರು. ವೇದವನ್ನು ಓದುವರು. ಧನಿಕರು, ಕುಟುಂಬಿಗಳಾಗಿ, ಪ್ರಜರು ವಿಪ್ರಕ್ಷತ್ರಿಯರಿಗೆ ವಿಧೇಯರಾಗಿ ನಡೆಯುವರು.

ಕಲಿಯುಗದಲ್ಲಿ ಮೂರು ಪಾದ ಧರ್ಮಾಂಶವು ಕೆಡುವುದು. ಅಧರ್ಮವು ಹೆಚ್ಚಿ ಕೊನೆಗೆ ಸತ್ಯಾದಿಗಳೆಲ್ಲವೂ ಪೂರ್ಣವಾಗಿ, ನಾಶವಾಗುವುವು. ಪ್ರಜರು ದುರಾಚಾರರು, ನಿರ್ದಯರು, ಶುಷ್ಕವೈರಿಗಳು, ದೌರ್ಭಾಗ್ಯವಂತರು, ದರ್ಪಶಾಲಿಗಳು ಆಗಿ, ಶೂದ್ರರನ್ನು ಅನುಸರಿಸಿ, ನಡೆದು ಕೊಳ್ಳುತ್ತಾ, ಜೀವಿಸುವರು. ತ್ರಿಗುಣಗಳ ಪರಿವರ್ತನದಿಂದ, ತ್ರಿವಿಧ ಕರ್ಮಗಳನ್ನೂ ಮಾಡು ವರು. ಸತ್ವಗುಣದ ವೃದ್ಧಿಯಾಗಿ, ತಪಸ್ಸು, ಜ್ಞಾನಾಭಿರುಚಿ, ಮನಃಪ್ರಸಾದಗಳನ್ನು ಹೊಂದುವರು. ಕಾಮಭೋಗ, ಯಶಸ್ಸು, ಹುಟ್ಟಿದಾಗ, ತ್ರೇತೆಯ ರಜೋಗುಣದ ವೃದ್ಧಿ ಎಂದು ತಿಳಿ! ಲೋಭ, ಅಸಂತೋಷ. ದಂಭ, ಮತ್ಸರ, ಕಾಮ್ಯಕರ್ಮಗಳಿಂದ ದ್ವಾಪರದ

ರಜಸ್ತಮೋವೃದ್ಧಿ, ಮಾಯೆ, ಅನೃತ, ದಂಭ, ಆಲಸ್ಯ, ಹಿಂಸೆ, ದುಃಖ, ಶೋಕ, ಮೋಹ, ದೈನ್ಯಗಳಿಂದ ಕಲಿಯ ತಮೋಗುಣವೃದ್ಧಿಯ ಕಾಲವೆಂದು ತಿಳಿ!

ಕಲಿಯುಗದ ಮನುಜರ ದೃಷ್ಟಿಯು ಕ್ಷುದ್ರವಾಗಿರುವುದು. ಅವರೂ ಮಂದಭಾಗ್ಯರಾಗಿರುವರು. ತಿನ್ನುವುದೇನೋ ಅಮಿತವಾಗಿರುವುದು. ವೃತ್ತಿಹೀನರಾಗಿ, ಕಾಮಿಗಳಾಗಿರುವರು ಪುರುಷರು; ಸ್ವೈರಿಣಿಯರಾಗಿ ತಿರುಗುವರು ನಾಗಿಯರು. ಕಳ್ಳಕಾಕರು ಗ್ರಾಮಗಳನ್ನು ದೋಚುವರು. ಪಾಖಂಡ ಮತಗಳಿಂದ ವೇದಧರ್ಮವು ಮರೆಯಾಗುವುದು. ರಾಜರು ಪ್ರಜರನ್ನು ಕಿತ್ತಿ, ಸುಲಿದು ತಿನ್ನುವರು. ಬ್ರಾಹ್ಮಣರು ಶಿಶ್ನೋದರ ಪರಾಯಣರಾಗುವರು. ಬ್ರಹ್ಮಚಾರಿಗಳು ಸಂಧ್ಯಾ, ಅಗ್ನಿಕಾರ್ಯಗಳನ್ನು ಬಿಡುವರು. ಸನ್ಯಾಸಿಗಳು ಕುಟುಂಬಗಳನ್ನು ಕಟ್ಟಿಕೊಂಡು ನಗರಗಳಲ್ಲಿ ಮಹಡಿಗಳನ್ನು ಸುಖತಲ್ಪಗಳಲ್ಲಿ ಮೆರೆಯುವರು. ಸನ್ಯಾಸಿಗಳು ಧನಲೋಲರಾಗಿ – ಪೂಜಾ, ಜಪ, ಉಪದೇಶಾದಿಗಳಿಲ್ಲದೆ – ಜನರನ್ನು ಪೀಡಿಸುವರು.

ಗೃಹಸ್ಥರು ಗಿಡ್ಡರು, ತಿಂಡಿಬಾಕರು, ಲಜ್ಜಾರಹಿತರು, ಕರ್ಕಶವಚನರು, ಚೌರ್ಯಮಾಯಾ ಸಾಹಸವಂತರು ಆಗಿರುವರು. ಬಹುಸಂತಾನರಾಗಿ ದರಿದ್ರರಾಗುವರು. ಹಣ್ಣು ಹಂಪಲವನ್ನು ಮಾರಿ ಬದುಕುವರು. ಸಾಧುಜನರು ನಿಂದಿಸುವ ಬಡ್ಡೀವ್ಯಾಪಾರವನ್ನು ಆಪತ್ಸಮಯವಲ್ಲದಿದ್ದರೂ – ನಡೆಸುವರು. ಸ್ತ್ರೀಯರು ನಿರ್ಧನನಾದ ಪತಿಯನ್ನು ಬಿಡುವರು. ಭೃತ್ಯರು ಸ್ವಾಮಿದ್ರೋಹಿಗಳಾಗಿ ಹಿಂಸಿಸುವರು. ಪ್ರಭುಗಳು ಕಷ್ಟಪಡುವ ಸೇವಕನನ್ನು ನಿರ್ಲಕ್ಷಿಸುವರು. ಪ್ರಜರು ಹಾಲುಕೊಡುವ ಆಕಳನ್ನು ಕಟುಕರಿಗೆ ಮಾರಲು ಹೇಸರು. ತಪೋವೇಷದಿಂದ ಬದುಕುವ ಶೂದ್ರರು, ಉತ್ತಮಾಸನದಲ್ಲಿ ಕೂತು, ಧರ್ಮದ ಮರ್ಮವನ್ನರಿಯದವರಾಗಿದ್ದೂ, ಧರ್ಮೋಪದೇಶಗಳನ್ನು ಮಾಡುವರು. ದುರ್ಭಿಕ್ಷೆ, ಕಪ್ಪ, ಸುಂಕ, ಕಾಣಿಕೆಗಳಿಂದ ಪೀಡಿತರಾದ ಜನರು – ಮಳೆಯು ಬರದಿರೆ ಅನ್ನಪಾನ ವಾಸವಸನಗಳಿಲ್ಲದವರಾಗಿ – ಪಿಶಾಚದರ್ಶನರಾಗಿರುವರು.

ಕಲಿಯುಗದಲ್ಲಿ, ಕವಡಿಗಾಗಿ ಕಾದಾಡಿ, ಬಂಧುಮಿತ್ರರೆನ್ನದೆ ಶತ್ರುಗಳಾಗಿ, ಕೊನೆಗೆ ಪ್ರಾಣಗಳನ್ನೂ ಬಿಡಲು ಹಿಂಜರಿಯರು. ವೃದ್ಧರಾದ ತಂದೆತಾಯಿಯರನ್ನು ನರರು ರಕ್ಷಿಸದಿರುವರು; ಪತಿವ್ರತೆಯಾದ ಭಾರ್ಯಳನ್ನೂ, ಮಗಳನ್ನೂ ಕೂಡ ಕಾಪಾಡಲಾರದೆ, ತಮ್ಮ ಹೊಟ್ಟೆಹೊರೆದರೆ ಸಾಕೆಂಬುವರು.

ರಾಜನ್! ಏನು ಹೇಳಲಿ! ಕಲಿಯುಗದ ಜನರು, ಪಾಖಂಡಮತ ಶ್ರವಣದಿಂದ ಬುದ್ಧಿಗೆಟ್ಟು, ತ್ರಿಲೋಕೇಶರಾದ ಬ್ರಹ್ಮಾದಿಗಳಿಂದ ವಂದಿತನಾದ ಗೋವಿಂದನ ಚರಣಾರವಿಂದವನ್ನು ಭಜಿಸದಿರುವರು. ಶ್ರೀಹರಿಯ ನಾಮವನ್ನು ಮರಣಕಾಲದಲ್ಲಿ ಉಚ್ಚರಿಸುವ ಮಾತ್ರ, ಸಕಲಕರ್ಮಬಂಧ ದೂರನಾಗುವನು; ಜಾರಿದಾಗ, ಎಡವಿದಾಗ ಬಿಡದೆ 'ನಾರಾಯಣ' ಎಂದವನು ಉತ್ತಮಗತಿಯನ್ನು ಪೊಂದುವನು. ಅಂತಹ ಶ್ರೀಹರಿಯ ಪ್ರೀತಿಗಾಗಿ, ಕಲಿಯ ಜನರು, ಯಜ್ಞಾದಿಗಳನ್ನು ಮಾಡದಿರುವರು.

ಕಲಿಯುಗದ ದೋಷಗಳನ್ನು ಹರಿಸಲು ಒಂದೇ ಓಷಧವಿದೆ; ಭಗವಂತನಲ್ಲಿ ಚಿತ್ತವಿಟ್ಟು ಅವನ ಗುಣಕರ್ಮಗಳನ್ನು ಪಾಡಿ ಪೊಗಳುವುದೇ ಆ ದಿವ್ಯೌಷಧವು, ಶ್ರವಣ, ಕೀರ್ತನ, ಧ್ಯಾನ, ಪೂಜನಗಳಿಂದ ಸಂತೋಷಿತನಾದ ಶ್ರೀಹರಿಯು, ಪ್ರಥಮ ಕರ್ಮವನ್ನಾರಂಭಿಸಿ, ಇಲ್ಲಿಯವರಿಗೂ ಮಾಡಿದ, ಸಾಸಿರಾರು ಜನ್ಮಗಳ ಪಾಪವನ್ನು ನಾಶಮಾಡುವನು. ಹದಿನೆಂಟು ದೋಷಗಳಿಂದ ಕೂಡಿದ ಬಂಗಾರವನ್ನು ಅಗ್ನಿಯಲ್ಲಿಟ್ಟು ಶುದ್ಧವಾಗಿಸುವಂತೆ, ಮನವನ್ನು ಶ್ರೀಹರಿಯ

ಲ್ಲಿಟ್ಟು, ಮನಶ್ಶುದ್ಧಿಯನ್ನು ಪಡೆಯಬಹುದಾಗಿದೆ. ವಿದ್ಯಾ, ತಪಸ್ಸು, ಪ್ರಾಣಾಯಾಮ, ಭೂತದಯೆ, ತೀರ್ಥಯಾತ್ರೆ, ವ್ರತ, ದಾನ, ಜಪಗಳಿಂದ ಆಗದ ಮನಶ್ಶುದ್ಧಿಯು ಶ್ರೀಹರಿಯ ಸಂತತಸ್ಮರಣೆಯಿಂದ ಆಗುತ್ತಿದೆ.

ಆದುದರಿಂದ ರಾಜನೇ! ಕೇಶವನನ್ನು ಮನದಲ್ಲಿಡು! ಶ್ರದ್ಧೆಯಿಂದ ಅವನನ್ನು ಧ್ಯಾನಿಸುತ್ತಿರು! ಮರಣದುಃಖವನ್ನು ದಾಟಿ, ಅವನ ಲೋಕವನ್ನು ಸೇರುವೆ. ಮೃತಿಕಾಲದಲ್ಲಿ ಧ್ಯಾನಿಪ ಭಕ್ತರಿಗೆ ಶ್ರೀಶನು, ತನ್ನ ಲೋಕವನ್ನು ತಪ್ಪದೆ ಕೊಡುವನು. ಕಲಿಯುಗವು ದೋಷಗಳ ಗಣಿ, ನಿಜ. ಆದರೆ ಅದರಲ್ಲಿ ಒಂದು ದೊಡ್ಡ ಗುಣವಿದೆ. ಶ್ರೀಕೃಷ್ಣನನ್ನು ಭಕ್ತಿಯಿಂದ ಕೀರ್ತಿಸಿ, ನರನು, ಕರ್ಮಬಂಧಮುಕ್ತನಾಗಿ, ಶ್ರೀಹರಿಲೋಕವನ್ನೈದಬಹುದಾಗಿದೆ. ಕೃತಯುಗದಿ, ಧ್ಯಾನ, ತ್ರೇತೆಯಲ್ಲಿ ಯಜನ, ದ್ವಾಪರೆಯಲ್ಲಿ ಪರಿಚರಣವಾದರೆ, ಕಲಿಯಲ್ಲಿ ಕೀರ್ತನವೇ ಮೋಕ್ಷ ಸುಲಭಸಾಧನವಾಗಿದೆ.

## ೪. ಕಲ್ಪ – ಪ್ರಳಯ – ಶುಕ ವಚನ ಸಮಾಪ್ತಿ

ಶ್ರೀಶುಕನು ಹೇಳಿದನು–

ನಿನಗೆ ಹಿಂದೆ ಪರಮಾಣ್ವಾದಿ ಕಾಲದ ಲಕ್ಷಣವನ್ನು ಹೇಳಿದ್ದೆನು. ಕಲ್ಪಲಯಗಳನ್ನು ಕೂಡ ಕೇಳು! ನಾಲ್ಕು ಯುಗಗಳಾದರೆ ಮಹಾಯುಗವು. ಮಹಾಯುಗಗಳು ಸಾವಿರವಾದರೆ ಬ್ರಹ್ಮನ ದಿನ. ಅಲ್ಲಿ ಹದಿನಾಲ್ಕು ಜನ ಮನುಗಳಾಗಿ ಹೋಗುವರು. ಆಮೇಲೆ ಸಾವಿರ ಮಹಾಯುಗಗಳ ಕಾಲವಾಗುವ ಬ್ರಹ್ಮದೇವನ ರಾತ್ರಿಯಾಗುವುದು. ಆಗ ಭೂಃ, ಭುವಃ ಸ್ವಃ ಎಂಬ ಮೂರು ಲೋಕಗಳು ಪ್ರಳಯೋದಕ ಮಗ್ನವಾಗುವುವು. ಇದು ನೈಮಿತ್ತಿಕ ಪ್ರಳಯವು. ಶ್ರೀದೇವನು ಆಗ ಅನಂತಾಸನದಲ್ಲಿ ಮಲಗಿರುವರು. ಬ್ರಹ್ಮನು, ವಿಶ್ವವೆಲ್ಲವು ಅವನಲ್ಲಿ ಅಧೀನವಾಗಿರುವುದು. ಬ್ರಹ್ಮದೇವನ ಆಯುಸ್ಸಾದ ದ್ವಿಪರಾರ್ಧವು ಮುಗಿಯಲು, ಮಹತ್ತು, ಅಹಂಕಾರ, ಪಂಚಭೂತಗಳೆಂಬ ಏಳು ತತ್ವಗಳು ಪ್ರಕೃತಿಯಲ್ಲಿ ಲೀನವಾಗುವುವು. ಇದು ಪ್ರಾಕೃತಿಕ ಪ್ರಳಯವು.

ಆಗ ನೂರು ವರ್ಷಗಳ ಕಾಲ ಮಳೆಬಾರದಾಗುವುದು. ಅನ್ನಾಭಾವದಿಂದ ಜನರು ಹಸಿವೆಯನ್ನು ತಡೆಯಲಾರದೆ, ಪರಸ್ಪರವಾಗಿ ಕಡಿದಾಡಿ, ಕಿತ್ತಿತಿನ್ನುವರು. ಕಾಲನಾಮಕ ಶ್ರೀಹರಿಯ ಸಂಹಾರಕ ಶಕ್ತಿಗೆದುರಿಲ್ಲ; ಪ್ರಜರು ನಷ್ಟರಾಗಿ ಹೋಗುವರು. ಸೂರ್ಯನು ಪ್ರಚಂಡಕಿರಣನಾಗಿ, ಸಮುದ್ರಜಲವನ್ನು, ದೇಹದ ರೇತಸ್ಸನ್ನು, ಭೂಮಿಯ ತಿಕ್ತಾದಿರಸವನ್ನು ಹೀರಿಬಿಡುವನು. ಒಣಗಿ ನಿಂತ ಭೂವಿವರಗಳನ್ನು, ಪಾತಾಳದಿಂದ ಉರಿದೆದ್ದ ಸಂಕರ್ಷಣ ಮುಖವಹ್ನಿಯು, ಪ್ರಾಣಿಶೂನ್ಯವನ್ನಾಗಿಸಿ, ಸುಟ್ಟುಬಿಡುವುದು. ವಹ್ನಿಸೂರ್ಯರಿಂದ ಸುಡುವ ಭೂಗೋಲವು ಸುಟ್ಟ ಗೋಮಯಪಿಂಡವಾಗುವುದು. ಆಗ ಸಾಂವರ್ತಕ ಮೇಘಗಣವು, ಬಿರುಗಾಳಿಯಿಂದ ಕೂಡಿ ಭಯಂಕರವಾದ ವರ್ಷಧಾರೆಗಳನ್ನು, ನೂರು ವರ್ಷಗಳವರಿವಿಗೂ ಬಿಡದೆ ಸುರಿಯುವುದು. ಬ್ರಹ್ಮಾಂಡ ವಿವರವೆಲ್ಲವೂ ಜಲಮಯವಾಗುವುದು. ಭೂಮಿಯ ಗಂಧಗುಣವನ್ನು ನೀರು ಹೀರಿ, ತಾನೂ ಸುಟ್ಟು, ಅಗ್ನಿಯಲ್ಲಿ ಲಯ ಹೊಂದುವುದು. ಅಗ್ನಿಯು, ರೂಪಗುಣದಿಂದ ವಾಯುವಿನಲ್ಲಿಯು, ಅದು ಸ್ಪರ್ಶ ಗುಣದಿಂದ ಆಕಾಶದಲ್ಲಿಯು ಲಯವಾಗುವುದು. ಅದು

ಶಬ್ದಗುಣದಿಂದ, ಅಹಂಕಾರ ತತ್ವದಲ್ಲಿ ಲೀನವಾಗುವುದು. ವೈಕಾರಿಕಾಹಂಕಾರವು ದೇವ ದೇಹಗಳನ್ನು, ಮನವನ್ನೂ, ತೈಜಸಾಹಂಕಾರವು ಇಂದ್ರಿಯಗಳನ್ನು ತನ್ನಲ್ಲಿ ಸೇರಿಸಿಕೊಂಡು, ಭೂತಾದಿಯಾದ ತಾಮಸಾಹಂಕಾರದಿಂದ ಕೂಡಿ ಮಹತ್ತತ್ವದಲ್ಲಿ ಲೀನವಾಗುವುದು. ಮಹತ್ತು ಗುಣತ್ರಯಾತ್ಮಕವಾದ ಅವ್ಯಕ್ತ ತತ್ವದಲ್ಲಿ ಲೀನವಾಗುವುದು. ಕಾಲರೂಪೀ ಹರಿಯ ಅಧೀನ ವಾದ ಮೂಲ ಪ್ರಕೃತಿಯ ಅನಾದ್ಯನಂತವಾಗಿದೆ. ತ್ರುಟಿಲವಾದಿಕಾಲದಿಂದ ಅದಕ್ಕೆ ನಾಶವಿಲ್ಲ. ಅದರ ಅಭಿಮಾನಿನಿಯಾದ ಲಕ್ಷ್ಮೀದೇವಿಯು ಶ್ರೀಹರಿಗೆ ಅತ್ಯಂತ ಸಮೀಪಳಾಗಿ, ರತಳಾಗಿರುವ ಮಹಾಪ್ರಳಯದಲ್ಲಿ ಜಗದ್ವ್ಯಾಪಾರವಿಲ್ಲ. ಇಂದ್ರಿಯ ಮನೋಬುದ್ಧಿಗಳಿಂದ ಗೋಚರನಾಗದೆ, ಸ್ವಪ್ನ ಜಾಗ್ರತ್ ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ದಾಟಿ, ಸರ್ವವಿಲಕ್ಷಣನಾದ ಶ್ರೀಹರಿಯು ಸುಖನಿದ್ರಾಮುದ್ರಿತನಾಗಿರುವನು. ಅತಿ ಸೂಕ್ಷ್ಮವಾಗಿ, ಯಾರಿಂದಲೂ ತಿಳಿಯಲು ಬಾರದವನಾಗಿರುವ ಆ ಲಕ್ಷ್ಮೀರಮಣನೇ ಜೀವಜಡಾತ್ಮಕ ಸರ್ವಜಗತ್ತನ್ನು ತನ್ನ ಹೊಟ್ಟೆ ಯಲ್ಲಿಟ್ಟುಕೊಂಡು, ತಾನೇ ತಾನಾಗಿ ಆನಂದಮಯನಾಗಿರುವನು. ಇದು ಪ್ರಾಕೃತಿಕ ಪ್ರಳಯವು. ಪೃಥಿವ್ಯಾದಿಗಳ ಶಕ್ತಿಗಳೆಲ್ಲವು ಕಾಲದಿಂದ ಕೊನೆಗೊಂಡು, ಶ್ರೀಹರಿಯ ಅಧೀನವಾಗಿರುವುವು. ನಿತ್ಯನಿರ್ದೋಷ ಜ್ಞಾನರೂಪನು, ಜ್ಞಾನಾತ್ಮಕ ಲಕ್ಷ್ಮೀರಮಣನು ಆದ ಶ್ರೀನಾರಾಯಣನು ಪ್ರಪಂಚದ ಆಗುಹೋಗುಗಳ ನಿಯಾಮಕನಾಗಿ, ಶಶ್ವದೇಕ ಪ್ರಕಾರನಾಗಿರುವನು. ತೇಜಸ್ತತ್ವ ವಿಲ್ಲದಿರೆ ರೂಪ, ದೀಪ, ನೇತ್ರಗಳು, ಸ್ವತಂತ್ರವಾಗಿ ನೋಡಲಾರದಿರುವಂತೆ, ಮುಖ್ಯಪ್ರಾಣನ ಅಧೀನವಾಗಿರುವ ಬುದ್ಧ್ಯಾದಿ ಸರ್ವವೂ ಸ್ವತಂತ್ರವಾಗಿ ಏನೂ ಮಾಡಲಾರದಾಗಿರುವುದು. ಅಂತಹ ಮುಖ್ಯಪ್ರಾಣನಿಗೂ, ಪ್ರಾಣನಾದ ಶ್ರೀಹರಿಯ ಅಧೀನವಲ್ಲವೆಂದು ಹೇಳಬೇಕೇ?

ಜಾಗ್ರತ್, ಸ್ವಪ್ನ, ಸುಷುಪ್ತಿಗಳನ್ನು ಜೀವನಿಗೀವ ಶ್ರೀಹರಿಗೆ ಅವಿಲ್ಲ. ಅವನು ಸ್ವತಂತ್ರನು. ತನ್ನ ಸ್ವೇಚ್ಛೆಯಿಂದ, ಸ್ವಪ್ನಾದಿಗಳನ್ನಂತೆ, ವಿಶ್ವವೆಲ್ಲವನ್ನೂ ಸೃಜಿಸಿ, ಸಂರಕ್ಷಿಸಿ, ಸಂಹರಿಸುತ್ತಿರು ವನು. ಪರಮಾತ್ಮನ ವಿಶ್ವ, ತೈಜಸ, ಪ್ರಾಜ್ಞಾದಿ ರೂಪಗಳಿಗೆ ಪರಸ್ಪರ ಭೇದವಿಲ್ಲ. ಆಕಾಶದಲ್ಲಿ ಮೇಘಗಳು ಬಂದು ಹೋಗುತ್ತಿರುವಂತೆ, ಶ್ರೀಹರಿಯಲ್ಲಿ ತದಧೀನವು, ತದ್ಭಿನ್ನವು ಆದ ಜಗವು ಸೃಷ್ಟವು, ನಾಶಿತವೂ ಆಗುತ್ತಿರುವುದು. ಪಟದ ತಂತುಗಳು ಸಮುದಾಯ ರೂಪವಾಗಿ ಅಭಿನ್ನ ವಾದರೂ, ಪ್ರತ್ಯೇಕವಾಗಿ ಭಿನ್ನವಾಗೇ ಇರುವಂತೆ, ಮಹದಾದಿಗಳಿಂದ ಹುಟ್ಟಿಬಂದ ಆಕಾಶಾದಿ ಗಳು ಭಿನ್ನಭಿನ್ನವಾಗಿ, ವ್ಯವಹಾರ ವಿಷಯವಾಗಿದೆ. ಯಾವದ್ದ್ರವ್ಯಭಾವಿಯಾದುದು ಸಾಮಾನ್ಯ ವೆಂಬುವರು; ಆಯಾವದ್ದ್ರವ್ಯಭಾಮಿಯಾದದ್ದನ್ನು ವಿಶೇಷವೆಂಬುವರು, ಅಂದರೆ ಆ ಪದಾರ್ಥ ವಿರುವವರೆವಿಗೂ, ಆ ಗುಣವಿರುವುದಿಲ್ಲ; ಆದರೂ ಕಾರ್ಯಕಾರಣ ಪದಾರ್ಥಗಳಿಗೆ ಭೇದವಿರು ವುದಿಲ್ಲ. ಆ ಕಾರ್ಯಕಾರಣಭಾವವು ಕೂಡ ಶ್ರೀಹರಿನಿಯತವಾಗಿದೆ. ವಿಶೇಷವು ನಷ್ಟವಾದರೂ, ದ್ರವ್ಯವಿದ್ದೇ ಇರುವುದು – ಪಟದ ಬಣ್ಣವು ಬದಲಾದರೆ, ಪಟವು ಬೇರೆ ಅಲ್ಲ. ಅಂತೆಯೇ ಶ್ರೀಹರಿನಿಯತವಾದ ಜಗವು, ಕಾರ್ಯಕಾರಣಾತ್ಮಕವಾಗಿ, ಸದಾ ಇದ್ದೇ ಇದೆ. ಅದಕ್ಕೆ ನಾಶವಿಲ್ಲ. ಜಗವು ಪ್ರವಾಹತಃ ನಿತ್ಯವೂ, ಸತ್ಯವೂ ಆಗಿದೆ; ಮಿಥ್ಯೆ ಅಲ್ಲ.

ಶ್ರೀಹರಿಯ ವಿವಿಧ ರೂಪಗಳಲ್ಲಿ ಭೇದವೂ ಇಲ್ಲ. ಭೇದಾಭೇದವೂ ಇಲ್ಲ. ಸೂರ್ಯ, ಸೂರ್ಯರಶ್ಮಿಗಳಿಗೂ, ವಾಯು ಪ್ರಾಣರಿಗೂ – ಆಧ್ಯಾತ್ಮ ಅಧಿದೈವರೂಪರಾಗಿ ಭಿನ್ನವಾಗಿ ತೋರಿದರೂ – ಭೇದವಿಲ್ಲದಿರುವಂತೆ, ಶ್ರೀಹರಿಗೆ ಸ್ವಗತಭೇದವಿಲ್ಲ. ಕುಂಡಲ, ಕಟಕಾದಿ ನಾನಾ ವ್ಯವಹಾರದಿಂದ ಕರೆಯಲ್ಪಟ್ಟರೂ, ಮೂಲವಾದ ಸುವರ್ಣವು ಒಂದೇ ಆಗಿರುವಂತೆ,

ಮತ್ಸ್ಯ, ಕುರ್ಮಾದಿ ಬಹುರೂಪನಾಗಿ ತತ್ತತ್ಕಾಲದಲ್ಲಿ ತೋರಿದರೂ ಶ್ರೀಹರಿಗೆ ಸ್ವಾಂಶಗಳಿಲ್ಲ ಎಳ್ಳಷ್ಟೂ ಭೇದವಿಲ್ಲ.

ಸೂರ್ಯನಿಂದ ಆಕಾಶದಲ್ಲಿ ತೋರಿಸಲ್ಪಡುವ ತೋಜೋಜಲವಾಯುಮಯವಾದ ಮೇಘವು, ಸೂರ್ಯನನ್ನು ಜೀವರು ಕಾಣದಂತೆ ಮಾಡಿ, ಮುಚ್ಚುವುದು, ಅದು ಸೂರ್ಯನಿಗೆ ಮುಟ್ಟಿ ಮುಚ್ಚಲಾರದಿದ್ದರೂ, ಜನರ ಕಣ್ಣಿಗೆ (ಸೂರ್ಯಾಂಶ) ಕತ್ತಲು ಕವಿಸಿ, ಸೂರ್ಯನನ್ನು ನೋಡಲಾರದಂತೆ ಮಾಡುವುದು. ಅಂತೆಯೇ ಶ್ರೀಹರೀಚ್ಛೆಯಿಂದ ಬಂದ ಅಹಂಕಾರದಿಂದ ಮುಚ್ಚಲ್ಪಟ್ಟು ಶ್ರೀಹರಿ ಭಿನ್ನಾಂಶನಾದರೂ ಜೀವನು, ತನ್ನ ಬಿಂಬನಾದ ಪ್ರಭುವನ್ನು ಮರೆತು, ಅಜ್ಞಾನಿಯಾಗಿರುವನು. ತೀಕ್ಷ್ಣ ಸೂರ್ಯಕಾಂತಿಯಿಂದ ಮೇಘಪಟಲವು ಸೀಳಿ, ಚೂರಾಗಿ, ಸೂರ್ಯತೇಜವು ಕಣ್ಣಿಗೆ ಚೆನ್ನಾಗಿ ಕಾಣುವಂತೆ, ಶ್ರೀಹರಿ ಪ್ರಸಾದದಿಂದ ಜೀವನಿಗೆ ಕವಿದಿರುವ ಅಹಂಕಾರವು ನಷ್ಟವಾದಾಗ – ಶಾಸ್ತ್ರಜಿಜ್ಞಾಸೆಯಿಂದ ಜ್ಞಾನಪ್ರಕಾಶವು ಪುಟ್ಟಿ ಸ್ವಬಿಂಬನಾದ ಪರಮಾತ್ಮನನ್ನು ನೋಡಲು ಸಮರ್ಥನಾಗುವನು. ಇಂತು ಶ್ರೀಹರೀಚ್ಛೆಯು ಸ್ವತಂತ್ರ ನಿಮಿತ್ತ ಕಾರಣವಾಗಿ, ಪ್ರಕೃತಿಯು ಉಪದಾನ ಕಾರಣವಾಗಿ ಬಂದಿರುವ ದೇಹಗೇಹಾದಿಗಳಲ್ಲಿ ಮಮತೆಯನ್ನು, ವಿವೇಕದಿಂದ ತಿಳಿದು, ಜ್ಞಾನಖಡ್ಗದಿಂದ, ತುಂಡರಿಸಿ, ನಿತ್ಯನಿರ್ಮುಕ್ತದೋಷನು, ಆನಂದ ಜ್ಞಾನದ್ಯನಂತ ಗುಣಸ್ವರೂಪನು ಆದ ಶ್ರೀನಾರಾಯಣನ ಅಪರೋಕ್ಷ ಜ್ಞಾನವನ್ನು ಹೊಂದಿ, ಜೀವನು ನಿರ್ಮುಕ್ತಲಿಂಗ ದೇಹಾಭಿಮಾನನೆನಿಸಿ, ಮುಕ್ತನಾಗುವನು.

ಬ್ರಹ್ಮಾದಿ ಸರ್ವಜೀವರಿಗೆ ದೇಹದಿಂದ ನಿತ್ಯವೂ ಉತ್ಪತ್ತಿ ಪ್ರಳಯಗಳುಂಟೆಂದು ಸೂಕ್ಷ್ಮ ಜ್ಞಾನಿಗಳು ಹೇಳುವರು. ಕಾಲಪ್ರವಾಹ ವೇಗದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ದೇಹಗಳ ಪರಿಣಾಮಗಳು ಅನಿವಾರ್ಯವಾಗಿದೆ. ಅನಾದಿನಿತ್ಯನಾದ ಜೀವನಿಗೆ ಸ್ವರೂಪತಃ ನಾಶವಿಲ್ಲ. ಆಕಾಶದಲ್ಲಿ, ನಕ್ಷತ್ರಗಳು ತಿರುಗುತ್ತಿರುವಂತೆ ಅವಸ್ಥೆಗಳು ಬಂದರೂ ನಿತ್ಯನಾಗೇ ಇರುವನು.

ಇಂತು ನಿನಗೆ ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ ಪ್ರಳಯಗಳನ್ನು ನಿರೂಪಿಸಿರುವೆನು. ಕಾಲದ ಗತಿಯು ದುರೂಹ್ಯವಾಗಿದೆ. ಪರೀಕ್ಷಿತನೇ! ಜಗಜ್ಜನ್ಮಾದಿಕಾರಣನು, ಅಖಿಲಸತ್ವ ನಿಯಾಮಕನು, ಆದ ನಾರಾಯಣದೇವನ ಲೀಲಾಕಥೆಗಳನ್ನು ಸಂಗ್ರಹವಾಗಿ ಹೇಳಿರುವೆನು, ಸಂಪೂರ್ಣವಾಗಿ ಹೇಳಲು ಬ್ರಹ್ಮನಿಗೂ ಶಕ್ಯವಲ್ಲ. ವಿವಿಧ ದುಃಖಗಳೆಂಬ ಕಾಡುಕಿಚ್ಚಿನಿಂದ ಬೆಂದು ನೊಂದ ಜೀವನಿಗೆ, ಸಂಸಾರವೆಂಬ ದುಸ್ತರ ದುರಂತ ಸಮುದ್ರವನ್ನು ದಾಟಲು ಪುರುಷೋತ್ತಮನ ಲೀಲಾಕಥಾರಸಾಯನವನ್ನೂ, ಶ್ರೀಮಚ್ಚರಣನಾವೆಯನ್ನೂ ಬಿಟ್ಟರೆ, ಇನ್ನೊಂದು ಗತಿಯಿಲ್ಲ.

ಸರ್ವಜ್ಞನಾದ ಶ್ರೀನಾರಾಯಣನು ಈ ಪುರಾಣ ಸಂಹಿತೆಯನ್ನು ಬ್ರಹ್ಮನಿಗೆ ಪೇಳಿದನು. ಬ್ರಹ್ಮನು ನಾರದನಿಗೆ ಹೇಳಿದನು. ನಾರದನು ವೇದವ್ಯಾಸನಿಗೆ ವಿಜ್ಞಾಪಿಸಿ, ವಿಸ್ತರಿಸೆಂದನು. ಆ ನನ್ನ ತಂದೆಯು ವೇದಸಂಮಿತವಾದ ಭಾಗವತ ಪುರಾಣವನ್ನು ರಚಿಸಿ, ನನಗುಪದೇಶಿಸಿದನು. ಈಗ ನನ್ನಿಂದ ಕೇಳುತ್ತಿರುವ ಈ ಸೂತನು (ಉಗ್ರಶ್ರವ) ಇದನ್ನು ನೈಮಿಶಾರಣ್ಯದಲ್ಲಿ, ಶೌನಕಾದಿ ಸತ್ರಯಾಗ ದೀಕ್ಷಿತರಾದ ಋಷಿಗಳಿಗೆ ಹೇಳುವನು.

ಈ ಪುರಾಣದಲ್ಲಿ ಯಾವನ ಪ್ರಸಾದಗುಣದಿಂದ ಬ್ರಹ್ಮನು ಪುಟ್ಟಿದನೋ, ಯಾವನ ಕ್ರೋಧಗುಣದಿಂದ ರುದ್ರನು ಜನಿಸಿದನೋ, ಅಂತಹ ಲೋಕನಾಥ ಶ್ರೀಹರಿಯೇ ವರ್ಣಿತನಾಗಿರುವನು.

ರಾಜನೇ! 'ನಾನು ಸಾಯುವೆನು' ಎಂಬ ಪಶುಬುದ್ಧಿಯನ್ನು ಬಿಡು! ದೇಹವು ಹುಟ್ಟಿದಂತೆ ನೀನು ಹುಟ್ಟಿಲ್ಲ. ಅದರ ಪರಿಣಾಮದಂತೆ ನಿನಗೆ ಪರಿಣಾಮವಿಲ್ಲ. ಅದು ಸಾಯುವಂತೆ ನೀನು ಸಾಯುವುದಿಲ್ಲ. ದೇಹಾಂತರದಂತೆ ಮತ್ತೊಬ್ಬನಾಗುವುದಿಲ್ಲ. ಬೀಜಾಂಕುರ ಪರಂಪರೆಯಿಂದ ಪುತ್ರಪೌತ್ರರೂಪನಾಗಿ ನೀನು ಒಂದಂಶದಿಂದ ದೇಹದಿಂದಿರುವೆ. ಕಟ್ಟಿಗೆಯಿಂದ ಬೇರಾದ ಅಗ್ನಿಯಂತೆ, ದೇಹದಿಂದ ಭಿನ್ನವಾದ ಜೀವನಿಗೆ ಜನನನಾಶಗಳಿಲ್ಲ. ಸ್ವಪ್ನದಲ್ಲಿ ಕಂಡ ಶಿರಚ್ಛೇದ ದಂತೆ, ಮಾರಣಾದಿಗಳಿಂದ, ಜೀವನಿಗೆ ಹಾನಿ ಇಲ್ಲ. ಘಟವು ಭಿನ್ನವಾದರೆ, ಅದರಲ್ಲಿದ್ದ ಆಕಾಶವು, ಹೊರಗಿನ ಆಕಾಶವೇ ಆಗುವಂತೆ, ಜೀವನು ದೇಹ ನಾಶವಾದರೂ, ಜೀವನೇ ಆಗಿರುವನು! ಕರ್ಮವನ್ನನುಸರಿಸಿ ಸ್ವರ್ಗನರಕಾದಿಗಳನ್ನು ಹೊಂದುವನು; ಲಿಂಗಶರೀರನಾಶ ವಾದರೆ ಶ್ರೀಶನ ಲೋಕವನ್ನು ಹೊಂದುವನು.

ಜೀವನ ಮನಸ್ಸೇ ಪುಣ್ಯ ಪಾಪಕರ್ಮಗಳನ್ನು ಮಾಡಿಸಿ, ಶ್ರೀಹರಿಯ ಇಚ್ಛೆಯಂತೆ ಬಂದ ಸುರನರಾದಿ ದೇಹಗಳನ್ನು ತಂದುಕೊಡುವುದು. ಅಂತಹ ಬಾಹ್ಯಮನೋವಶನಾದಾಗ ಜೀವನಿಗೆ ಸಂಸಾರವು ಘಟಿಸುವುದು. ಪ್ರಣತಿಯಲ್ಲಿ ಉರಿಯುವ ಬತ್ತಿಗೆ ತುಪ್ಪವನ್ನೆರೆಯುವವರೆವಿಗೂ ಉರಿಯುತ್ತಿರುವಂತೆ, ದೇಹಕ್ಕೆ ಕರ್ಮವೇ ಕಾರಣವಾಗಿದೆ. ದೇಹಪ್ರಕೃತಿಗಳಿಂದ ಭಿನ್ನನಾದ ಜೀವನು ಜ್ಞಾನಸ್ವರೂಪನಾಗಿರುವನು. ಅವನಿಗೆ ಸತ್ತ್ವರಜಸ್ತಮೋಗುಣಗಳಿಂದ ವೃದ್ಧಿಹ್ರಾಸ ಗಳಿಲ್ಲ. ಆದುದರಿಂದ ಸರ್ವತ್ರವ್ಯಾಪ್ತನು, ಸರ್ವಾಧಾರನು, ತತ್ತದ್ವಸ್ತುಗುಣಪ್ರಭುವು ಆದ ಅಂತರ್ಯಾಮಿ ಹರಿಯನ್ನು, ಮನಸಾ ಚಿಂತಿಸು! ದುರ್ಮರಣ ಚಿಂತೆಯನ್ನು ಬಿಡು! ದೇಹ ಬಂಧವು ಸತ್ಯವಾದರೂ ಶ್ರೀವಾಸುದೇವನಿರಂತರ ಸ್ಮರಣೆಯಿಂದ ನಿವೃತ್ತವಾಗುವುದು. ವಿಪ್ರವಾಕ್ಯ ದಿಂದ ಪ್ರೇರಿತನಾಗಿ ಬಂದು, ತಕ್ಷಕನು ನಿನ್ನನ್ನಲ್ಲ – ನಿನ್ನ ದೇಹವನ್ನು – ಕಚ್ಚುವನು. ನಿನಗೆ ದುರ್ಮರಣಗೋಷವಾಗದಂತೆ ಅನುಗ್ರಹಿಸಿರುವೆನು.

ನಿರ್ಮಲನು, ನಿರ್ದೋಷನು, ಮೃತ್ಯುವಿಗೂ ಸಂಹಾರಕನು, ಹೇಯೋಪಾದೇಯರಹಿತನು, ವೃದ್ಧಿಹ್ರಾಸಮರಣಜನನವರ್ಜಿತನು ಆದ ಶ್ರೀಹರಿಯನ್ನು ಚಿಂತಿಸುತ್ತಾ, ಅಸ್ವತಂತ್ರವಾಗಿ ಬೀಳುವ ಶರೀರವನ್ನು ಅದನ್ನು ಕಡಿಯುವ ತಕ್ಷಕನನ್ನೂ ಲಕ್ಷಿಸದೆ ನಿರ್ಯಾಣವನ್ನು ಹೊಂದುವೆ. ವತ್ಸ! ಪರೀಕ್ಷಿತನೇ! ನಾನು ಪೇಳಿದುದಾಯಿತು. ಶ್ರೀಹರಿಯ ಪರಮ ಮಂಗಲ ಚರಿತವನ್ನೇ ನಿನಗೆ ಹೇಳಿರುವೆನು. ಇನ್ನೇನು ಕೇಳಬೇಕೆಂದಿರುವೆ?

## ೫. ಸರ್ಪಯೋಗ ನಿವಾರಣ

ಸೂತನು ಹೇಳಿದನು–

ಶ್ರೀಶುಕನು ಪೇಳಿದ ಭಾಗವತಾಮೃತವನ್ನು ಕೇಳಿ ಪರೀಕ್ಷಿತನು, ಆ ಸಮದರ್ಶಿ ಮಹಾನು ಭಾವನ ಪಾದಾರವಿಂದಗಳಿಗೆ ಶಿರಬಾಗಿ ನಮಿಸಿ, ಕೈ ಜೋಡಿಸಿ ನಿಂತು ಇಂತೆಂದನು-

ಪೂಜ್ಯನೇ! ಸಕಲ ಪುರುಷಾರ್ಥಗಳು ಕೈಗೂಡಿದವು. ಇದು ನನ್ನ ಅನುಗ್ರಹವೇ ಸರಿ! ನಿನ್ನ ಕರುಣೆಯಿಂದ ಅನಾದಿಮಧ್ಯಾಂತನಾದ ಶ್ರೀಹರಿಯ ಪಾವನಚರಿತಾಮೃತ ಸುಧಾಪಾನ ಮಾಡಿ ಧನ್ಯನಾದೆನು. ಶ್ರೀಹರಿಯ ಭಕ್ತರು, ದೀನರಾಗಿ ತಾಪತ್ರಯಾಗ್ನಿಯಲ್ಲಿ ಬೆಂದು ಕಷ್ಟಪಡುವ ಜೀವರಲ್ಲಿ ಕೃಪೆದೋರುವುದೇನಾಶ್ಚರ್ಯವಲ್ಲ! ನಿನ್ನ ಮುಖಕಮಲಗಲಿತವಾದ ಶ್ರೀ ಭಾಗವತಾ

ಮೃತವನ್ನು ಕೇಳಿದೆನು. ಮಹಾನುಭಾವ! ತಕ್ಷಕಾದಿ ಮೃತ್ಯುಗಳಿಗೆ ಅಂಜದಿರುವೆನು. ಪ್ರಾಕೃತ ಶರೀರರಹಿತನಾದ ಶ್ರೀಶನ ಅಭಯ ಪಾದಾರವಿಂದದಿ ಮನವಿಟ್ಟ ನನಗಿನ್ನೇತರ ಭಯ? ಇನ್ನು ನನಗೆ ಅನುಜ್ಞೆಯನ್ನು ಕೊಡು! ಸರ್ವೇಂದ್ರಿಯ ಸ್ವಾಮಿಯಾದ ಶ್ರೀಶನನ್ನು ನೆನೆಯುತ್ತಾ, ಮಾತನ್ನು ಬಿಟ್ಟುಬಿಡುವೆನು. ನನ್ನ ಅಜ್ಞಾನವೆಲ್ಲ ನಾಶವಾಯಿತು. ಜ್ಞಾನವಿಜ್ಞಾನಗಳೆಂಬ ನಂದಾ ದೀಪಗಳನ್ನು ಹಿಡಿದು, ಪರಮಮಂಗಲಧಾಮನ ಪಾದಾರವಿಂದ ಮಂದಿರವನ್ನು ಸೇರುವೆನು.

ಸೂತನು ನುಡಿದನು–

ಆಗ ಶ್ರೀಶುಕನು ರಾಜನ ಪೂಜೆಯನ್ನು ಸ್ವೀಕರಿಸಿ, ಮುನಿಗಳಿಂದಲು ರಾಜನಿಂದಲು ಅಪ್ಪಣೆಯನ್ನು ಪಡೆದು ಹೊರಟುಹೋದನು. ಪರೀಕ್ಷಿದ್ರಾಜರ್ಷಿಯು ಮನಸ್ಸಮಾಧಾನದಿಂದ, ಚಂಚಲನಾಗದೆ, ಸ್ಥಾಣುವಿನಂತೆ, ಶ್ರೀಹರಿಧ್ಯಾನರತನಾಗಿದ್ದನು. ಗಾಂಗಾನದಿಯ ಪ್ರಾಕ್ತೀರದಲ್ಲಿ, ಉತ್ತರಾಮುಖನಾಗಿ ಉತ್ತರಾತನಯನು ನಿಸ್ಸಂಗನಾದನು – ಸಂಶಯದೂರನಾದನು. ಶ್ರೀಹರಿ ಸಮರ್ಪಿತಚಿತ್ತನಾದನು.

ಶೌನಕಾದಿ ವಿಪ್ರರೇ! ಶೃಂಗಿಯ ಶಾಪವೆಂಬ ಅಂಕುಶದಿಂದ ತಿವಿಯಲ್ಪಟ್ಟವನಂತಾಗಿ ತಕ್ಷಕನು, ರಾಜನನ್ನು ಕಚ್ಚಲು ಬರುತ್ತಾ, ಹಾದಿಯಲ್ಲಿ ಕಾಶ್ಯಪನೆಂಬ ಜಾಂಗಲಿಕನನ್ನು ಕಂಡನು. ಅವನಿಗೆ ಬೇಡಿದ ಧನವನ್ನಿತ್ತು, ಹಿಂದಕ್ಕೆ ಕಳುಹಿ ತಕ್ಷಕನನ್ನು ವಿಪ್ರರೂಪನಾಗಿ ಬಂದು, ಪರೀಕ್ಷಿತನನ್ನು ಕಚ್ಚಿದನು. ಆ ರಾಜರ್ಷಿಯ ದೇಹವು ತಕ್ಷಕವಿಷಾಗ್ನಿಯಿಂದ ಸುಟ್ಟು ಬೂದಿಯಾಯಿತು. ಜನರು ಹಾಹಾಕಾರಗಳನ್ನು ಮಾಡಿದರು. ದೇವಾಸುರ ನರರು ಆಶ್ಚರ್ಯಚಕಿತರಾದರು. ದೇವದುಂದುಭಿಗಳು ಮೊಳಗಿದವು. ಅಪ್ಸರೆಯರಾಡಿದರು. ಗಂಧರ್ವರು ಪಾಡಿದರು. ವಿಬುಧರು ಸಾದು! ಸಾಧು! ಎಂದು, ಪುಷ್ಪವೃಷ್ಟಿ ಗರೆದರು.

ಜನಮೇಜಯನು ಪಟ್ಟಾಭಿಷಿಕ್ತನಾಗಿ, ಉದಂಕನೆಂಬ ವಿಪ್ರನ ಮುಖದಿಂದ ತನ್ನ ತಂದೆ ಮರಣವಿಧಾನವನ್ನರಿತು, ತಕ್ಷಕನ ಮೇಲಿನ ಸೇಡಿನಿಂದ ಸರ್ಪಯಾಗವನ್ನು ಮಾಡಿದನು. ತಕ್ಷಕನು ಭಯಗಿಂದ ಮಹೇಂದ್ರನಿಗೆ ಶರಣು ಎಂದನು. ಜನಮೇಜಯನು ತಕ್ಷಕನು ಕಂಡಾಗ್ನಿಯಲ್ಲಿ ಬೀಳುವುದನ್ನು ಕಾಣದೆ, ಕುಪಿತನಾಗಿ, ಋತ್ವಿಜರನ್ನು ಕೇಳಿದನು. ಅವನನ್ನು ಇಂದ್ರನು ಕಾಪಾಡುತ್ತಿರುವನೆಂದು ವಿಪ್ರರೆಂದರು. ರಾಜನು ತಕ್ಷಕಸಹಿತನಾದ ಇಂದ್ರನನ್ನೂ ಅಭಿಚಾರಾಗ್ನಿಯಲ್ಲಿ ಹೋಮಿಸಿ, ನಾಶಮಾಡಿದರೆಂದನು. ವಿಪ್ರರು ಇಂದ್ರ ತಕ್ಷಕರನ್ನು ಕರೆದಾಗ, ಇಂದ್ರನು ಸ್ಥಾನದಿಂದ ಚಲಿಸಿ ಬಂದು ತಕ್ಷಕಸಮೇತನಾಗಿ, ಅಗ್ನಿಕುಂಡದಲ್ಲಿ ಬೀಳುವಂತೆ ನಿಂತನು.

ಇಂದ್ರನು ಸಮರ್ಥನಾದರೂ ತನ್ನ ಮಗನಾದ (ಇಂದ್ರ) ಅರ್ಜುನನ ವಂಶಜನೆಂದು ಜನಮೇಜಯನಲ್ಲಿ ಕರುಣಿಸಿ, ಅವನಿಗೆ ಕೀರ್ತಿಯನ್ನು ಕೊಡಬೇಕೆಂದು ಅಸಮರ್ಥನಂತೆ ಬಂದನು. ಬ್ರಹ್ಮರ್ಷಿಗಳ ವೇದವಚನಗಳಿಗೆ ಗೌರವವನ್ನೂ ತೋರಿದನು. ಆಗ ಆಂಗಿರಸ ಗೋತ್ರಜನಾದ ಆಸ್ತೀಕನು ಬಂದು, ರಾಜನಿಗಿಂತೆಂದನು–

'ರಾಜನ್! ತಕ್ಷಕನು ಹಿಂದೆ ಅಮೃತಪಾನ ಮಾಡಿರುವುದರಿಂದ, ಅವನಿಗೆ ಮರಣವಿಲ್ಲ. ಜನನಮರಣಗಳು ಶ್ರೀಹರಿಪ್ರೇರಿತಕರ್ಮದಿಂದ ಬಂದೊದಗುವುವು. ಅಸ್ವತಂತ್ರರಾದ ಇತರರು, ಸುಖದುಃಖಕಾರಣರಲ್ಲ. ಸರ್ಪ, ಚೋರ, ಅಗ್ನಿ, ಜಲ, ವ್ಯಾಧಿ, ಕ್ಷುತ್, ಪಿಪಾಸಾದಿಗಳು ದ್ವಾರಾ, ಶ್ರೀಹರಿಯೇ ಸಂಹರಿಸುವನು. ಈ ಸತ್ರವು ಜನೋಪದ್ರವ ಕಾರಣವಾಗಿದೆ. ನಿಲ್ಲಿಸು ಇದನ್ನು! ನಿರಪರಾಧಿ ಸರ್ಪಗಳೆಷ್ಟೋ ಹಾಳಾದವು. ಇರಲಿ, ಅವರವರ ಅದೃಷ್ಟ ನಿಯಾಮಕನ ಇಚ್ಛೆಯಂತೆ ಆಗುವುದು.

ಆಗ ಜನಮೇಜಯನು ಆ ಮಹರ್ಷಿಯ ಮಾತನ್ನು ಮನ್ನಿಸಿ, ಸರ್ಪಹಿಂಸೆಯನ್ನು ನಿಲ್ಲಿಸಿಬಿಟ್ಟನು. ಇಂತು ಶ್ರೀನಾರಾಯಣನು ಅಸ್ವತಂತ್ರ ಜೀವರಲ್ಲಿದ್ದು ಬಾಧ್ಯನೂ ಬಾಧಕನೂ ಆಗಿ ತಾನು ನಿರ್ಲಿಪ್ತನಾಗಿರುವನು. ಶ್ರೀಹರಿಯ ಬಂಧಕಶಕ್ತಿಯಿಂದ ಜನರು ಅಹಂಕಾರವಶರಾಗಿ, ತಮ್ಮಲ್ಲಿಲ್ಲದ ಸ್ವಾತಂತ್ರ್ಯವನ್ನು ಮಾಡಿ ಕೆಡುತ್ತಿರುವರು. ಅಪ್ರಾಕೃತನು, ಸ್ವತಂತ್ರನಾದ ಶ್ರೀಹರಿಗೆ ಅಹಂಕಾರವು ಇಲ್ಲ – ಕರ್ಮಲೇಪವೂ ಇಲ್ಲ. ಉಪನಿಷಚ್ಚತುರರು ಶ್ರೀಹರಿಯನ್ನು ಮನೋವಾಗಾದೀಂದ್ರಿಯಗಳು ತಿಳಿಯಲಾರವೆಂತಲು, ಅವನ ಮನೋವಾಗೀಂದ್ರಿಯ ಪ್ರೇರಕ ಪ್ರಭುವೆಂತಲೂ ಹೇಳುವರು. ವಿಶ್ವಸೃಜನಸಂಹಾರಗಳಿಂದ ಶ್ರೀಹರಿಗೆ ಪ್ರಯೋಜನಹಾನಿಗಳಿಲ್ಲ. ದೇವಾಸುರರಿಗೆ ಯೋಗ್ಯತಾನುರೂಪವಾದ ಫಲವನ್ನು ಕೊಡುವ ಸರ್ವೇಶನಿಗೆ ವೈಷಮ್ಯವಿಲ್ಲ. ಜೀವರಿಂದ ಆಗುವ ಲಾಭವಿಲ್ಲ. ಇಂತು ತಿಳಿದವನು ಷಡೂರ್ಮಿಗಳಲ್ಲಿ ಕಷ್ಟಪಡುವುದಿಲ್ಲ. ಅವನಿಗೆ ಕರ್ತವ್ಯವಿನ್ನಿಲ್ಲ. ಎಲ್ಲ ಲೋಕಗಳಿಗೂ ವಿಲಕ್ಷಣವಾದ ವಿಷ್ಣುಲೋಕವು, ದುಷ್ಟ ಮನಸ್ಸನ್ನು ಗೆದ್ದು, ಸುದೃಢಭಕ್ತಿಯಿಂದ ಶ್ರೀಹರಿಯನ್ನು ಭಜಿಸುವ ಸುಜನರಿಗೆ ಲಭ್ಯವಾಗಿದೆ. ದೇಹ ಗೇಹಾದಿಗಳಲ್ಲಿ, 'ನಾನು ನನ್ನದು' ಎಂಬ ದುರಭಿಮಾನವಿಲ್ಲದವರಿಗೇ ಆ ಲೋಕವನ್ನು ಹೊಂದಿ, ಹಿಂದಿರುಗದೆ ಸುಖದಿಂದಿರುವರು. ಆದುದರಿಂದ ದೇಹಾಭಿಮಾನದಿಂದ ದುಷ್ಟವಾದಗಳನ್ನು ಮಾಡಬಾರದು – ಸುಜನರನ್ನು ಹಳಿಯಬಾರದು. ಭಕ್ತಜನರ ಕೂಡ ದ್ವೇಷವೂ ಒಳಿತಲ್ಲ. ಶ್ರೀಕೃಷ್ಣ ಚರಣಾರವಿಂದ ಸ್ಮರಣವನ್ನು, ಮನನವನ್ನು ಮಾಡಿ, ಅವನ ಕೃಪೆಯಿಂದ ಕಲಿತ ಈ ಭಾಗವತ ಸಂಹಿತೆಯನ್ನು ಶ್ರೀಕೃಷ್ಣನ ಅಡಿದಾವರೆಗಳಲ್ಲಿ ಅರ್ಪಿಸುತ್ತಿರುವೆನು.

## ೬. ವೇದ ವಿಭಾಗ

ಶೌನಕನು ಪ್ರಶ್ನಿಸಿದನು–

ವ್ಯಾಸಶಿಷ್ಯರಾದ ಪೈಲಾದಿ ಮಹರ್ಷಿಗಳು ವೇದಗಳನ್ನು ಎಷ್ಟು ಶಾಖೆಗಳನ್ನಾಗಿಸಿ, ಯಾರಿಗೆ ಉಪದೇಶಿಸಿದರು?

ಸೂತನು ಹೇಳಿದನು–

ನಿರ್ದುಃಖಾನಂದಾನುಭವ ಸ್ವರೂಪನಾದ ಶ್ರೀಹರಿಯನ್ನು ಧ್ಯಾನಿಸುವ ಚತುರ್ಮುಖನ ಹೃದಯಾಕಾಶದಿಂದ ನಾದವು ಹುಟ್ಟಿ ಹೊರಸೂಸಿ ಬಂತು. ಯೋಗಿಗಳು ಸರ್ವೇಂದ್ರಿಯಗಳನ್ನು ನಿಗ್ರಹಿಸಿ, ಪ್ರಾಣವೃತ್ತಿ ನಿರೋಧವನ್ನು ಮಾಡಿದಾಗ ಅದನ್ನು ಕೇಳಿ ತಿಳಿಯುವರು. ಘಂಟಾಸದೃಶವಾದ ಆ ಶಬ್ದವನ್ನು ಉಪಾಸಿಸಿ, ಮನಶ್ಶುದ್ಧಿಯನ್ನು ಸಂಪಾದಿಸಿದ ಯೋಗಿಗಳು ಭೂತೇಂದ್ರಿಯ ಮನೋಕಮಲವನ್ನು ತೊಳೆದುಕೊಂಡು, ಜ್ಞಾನಿಗಳಾಗಿ, ಮುಕ್ತಿಯನ್ನು ಹೊಂದುವರು. ನಾದದಿಂದ ಓಂಕಾರವು ಮೊದಲನೆಯದಾಗಿ ಹುಟ್ಟಿ, ಪ್ರಪಂಚವನ್ನು ಸೃಜಿಸುವ ಶ್ರೀಹರಿಯ ಗುಣಪ್ರಕಾಶಕವಾಯಿತು. ಅದರಲ್ಲಿರುವ ಅ, ಉ, ಮ ಎಂಬ ಮೂರಕ್ಷರಗಳಿಂದ ವ್ಯಾಹೃತಿ, ಗಾಯತ್ರಿ, ಪುರುಷಸೂಕ್ತ, ವೇದಗಳು ಪ್ರಕಟವಾದವು. ವೇದವೆಲ್ಲವು ಹರಿಯಿಂದ ವ್ಯಕ್ತನಾಗಿ, ಹರಿಗುಣ ಪ್ರತಿಪಾದಕವಾಗಿದೆ. ಅದು ಸ್ವಪ್ರಕಾಶನಾದ ಪರಮಾತ್ಮನನ್ನು ಪರಮ ಮುಖ್ಯವೃತ್ತಿಯಿಂದ ನಿರೂಪಿಸುತ್ತಿದೆ. ಇಂತು ಓಂಕಾರವು ಸರ್ವಶಬ್ದ ಪ್ರಪಂಚದ ಬೀಜಸ್ಥಾನವೆನಿಸಿದೆ.

ಭೂಃ ಭುವಃ ಸ್ವಃ ಎಂಬ ವ್ಯಾಹೃತಿಗಳು ಪೂರ್ಣ ಜ್ಞಾನಾನಂದ ಸ್ವರೂಪನಾದ ಹರಿಯನ್ನು

ನಿರೂಪಿಸುತ್ತಿವೆ. ಹಾಗೂ ಭೂರಾದಿ ಲೋಕಗಳಲ್ಲಿ ಶಬ್ದಾದಿ ಗುಣಗಳ ಭೋಗವನ್ನು ನಡೆಸುತ್ತಿವೆ. ಅವುಗಳಿಂದ ಅಕ್ಷರ ಸಮೂಹವು ವ್ಯಕ್ತವಾಯಿತು. ಸ್ವರ ವ್ಯಂಜನ, ಸ್ಪರ್ಶ, ಅಂತಸ್ಥ, ಊಷ್ಮಗಳೆಂಬ ಅಕ್ಷರಗಳು – ಹ್ರಸ್ವ, ದೀರ್ಘ, ಪ್ಲುತ, ಭೇದದಿಂದ ವಿಸ್ತೃತವಾಗಿ ವೇದ ವ್ಯಂಜಕವಾದವು. ನಾಲ್ಕು ಮುಖದಿಂದ ವ್ಯಕ್ತವಾದ ನಾಲ್ಕು ವೇದಗಳನ್ನು, ಚತುರ್ಮುಖನು, ಮರೀಚ್ಯಾದಿ ಮಹರ್ಷಿಗಳಿಗೆ ಉಪದೇಶಿಸಿದನು. ಆ ಬ್ರಹ್ಮಪುತ್ರರು ತಮ್ಮ ಸುತರಿಗಿತ್ತರು. ಶಾಖಾಭೇದದಿಂದ ಅವು ಪರಂಪರೆಯಾಗಿ ಬಂದವು. ದ್ವಾಪರದಲ್ಲಿ ಕಾಮಬಲದಿಂದ ಪ್ರಜ್ಞಾಬಲವಿಲ್ಲದ ಮನುಜರನ್ನು ಕಂಡು, ಮಹರ್ಷಿಗಳು ಶ್ರೀಹರಿ ಪ್ರೇರಣೆಯಿಂದ, ಶಾಖೋಪಶಾಖಗಳಾಗಿ ವೇದವನ್ನು ವಿಭಜಿಸಿ, ಶಿಷ್ಯರಿಗೆ ಹೇಳಿದರು.

ವೈವಸ್ವತಮನ್ವಂತರದಲ್ಲಿ ಕೂಡ ಭಗವಂತನು, ಬ್ರಹ್ಮರುದ್ರೇಂದ್ರಾದಿಗಳಿಂದ ಯಾಚಿತನಾಗಿ ಮನುಜರಲ್ಲಿ ಧರ್ಮವನ್ನು ಸ್ಥಾಪಿಸಲು, ಪರಾಶರರಿಂದ ಸತ್ಯವತಿಯಲ್ಲಿ ಅವತರಿಸಿದನು. ಋಗ್ಯಜುಸ್ಸಾಮಾಥರ್ವಗಳನ್ನು ಉದ್ಧರಿಸಿ ವರ್ಗವರ್ಗವಾಗಿ ವಿಭಜಿಸಿ, ತನ್ನ ನಾಲ್ಕು ಜನ ಶಿಷ್ಯರಿಗೆ ಉಪದೇಶಮಾಡಿದನು; ಪೈಲನಿಗೆ ಋಗ್ವೇದವನ್ನು, ವೈಶಂಪಾಯನನಿಗೆ ಯಜುರ್ವೇದವನ್ನು ಜೈಮಿನಿಗೆ ಸಾಮವೇದವನ್ನು, ಸುಮಂತುವಿಗೆ ಅರ್ಥರ್ವಣ ವೇದವನ್ನು ಕೊಟ್ಟನು.

ಪೈಲನು ಇಂದ್ರಪ್ರಮಿತಿಗೆ, ಅವನು ಬಾಷ್ಕಲನಿಗೆ, ಅವನು ಇತರ ಶಿಷ್ಯರಿಗೆ ತಮ್ಮ ಋಗ್ವೇದ ಶಾಖೆಯನ್ನು ಹೇಳಿಕೊಟ್ಟರು. ನಾಲ್ಕು ಶಾಖೆಗಳನ್ನು ಮಾಡಿ ಋಗ್ವೇದವನ್ನು ಬೋಧ್ಯ, ಯಾಜ್ಞವಲ್ಕ್ಯ, ಪರಾಶರ, ಅಗ್ನಿಮಿತ್ರರಿಗೆ ನಿರೂಪಿಸಿದ ಬಾಷ್ಕಲನ ಶಾಖೆಯು ಬೇರಾಯಿತು. ಇಂದ್ರಪ್ರಮಿತಿಯು ತನ್ನ ಶಾಖೆಯನ್ನು ಮಾಂಡೂಕೇಯನಿಗೆ ಕೊಟ್ಟನು. ಅವನ ಶಿಷ್ಯನು ವೇದಮಿತ್ರ – ಅವನು ಸೌಭರ್ಯಾದಿಗಳಿಗೆ ಹೇಳಿಕೊಟ್ಟನು. ವೇದಮಿತ್ರನ ಮಗನಾದ ಶಾಕಲ್ಯನು ಸ್ವಸಂಹಿತೆಗಳನ್ನು ಐದು ಭಾಗವನ್ನಾಗಿಸಿ, ವಾತ್ಸ್ಯ, ಮೌದ್ಗಲ್ಯ, ಶಾಲೀಯ, ಗೋಸತ್ಯ, ಶಿಶಿರರಿಗೆ ಉಪದೇಶಿಸಿದನು. ಶಾಕಲ್ಯ ಶಿಷ್ಯನಾದ ಜಾತುಕರ್ಣ್ಯನು ತನ್ನ ಶಾಖೆಯನ್ನು ವ್ಯಲೀಕ, ಪೈಂಗಿ, ಪೈಲಾಲ, ವಿರಜರಿಗೆ ಉಪದೇಶಿಸಿದನು. ಬಾಷ್ಕಲಿಯು ವಾಲಖಿಲ್ಯ ಸಂಹಿತೆಯನ್ನು ಬಾಲಾಯನಿ, ಗಾರ್ಗ್ಯ, ಕಾಸಾರರಿಗೆ ಕೊಟ್ಟನು. ಇಂತು ಋಗ್ವೇದ ವಿಭಾಗಗಳನ್ನು ಕೇಳಿದವನು ಸರ್ವಪಾಪಮುಕ್ತನಾಗುವನು.

ವೈಶಂಪಾಯನನ ಶಿಷ್ಯರು ತೀರ್ಥಸೇವಕರು, ಋತ್ವಿಜರೂ ಆದರು. ಗುರುಗಳ ಬ್ರಹ್ಮಹತ್ಯಾ ಪಾಪವನ್ನು ಕಳೆಯಲು ತಾವು ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರು. ಆಗ ಯಾಜ್ಞವಲ್ಕ್ಯನೆಂಬ ಶಿಷ್ಯನು 'ಈ ಅಲ್ಪಸಾರದಿಂದೇನಾಗುವುದು? ನಾನು ದುಶ್ಚರತಪಶ್ಚರ್ಯೆಯಿಂದ ನಿಮ್ಮ ಪಾಪವನ್ನು ಕಲೆಯುವೆ'ನೆಂದನು. ವೈಶಂಪಾಯನನಿಗಾಮತು ಸಹಿಸಲಾಗಲಿಲ್ಲ. "ವಿಪ್ರವಮಾನ ಮಾಡಿದ ನೀನು, ನಿನ್ನ ವಿದ್ಯೆಯನ್ನು ಬಿಟ್ಟು, ಹೋಗು" ಎಂದಾಜ್ಞಾಪಿಸಿದನು. ದೇವರಾತನ ಮಗನಾದ ಯಾಜ್ಞವಲ್ಕ್ಯನು ತಾನು ಕಲಿತಿದ್ದ ಯಜುರ್ವೇದವನ್ನು ವಮನರೂಪದಿಂದ ಪರಿತ್ಯಜಿಸಿದನು. ಉರಿಯುವ ವೇದರಾಶಿಯನ್ನು ಕಂಡು, ಮುನಿಗಳು ತಿತ್ತಿರಿ ಪಕ್ಷಿರೂಪದಿಂದ, ಅದನ್ನು ಸ್ವೀಕರಿಸಿದರು. ತೈತ್ತಿರೀಯಶಾಖೆ ಎಂದು ಆ ಕೃಷಯಜುರ್ವೇದವು ಪ್ರಸಿದ್ಧವಾಗಿದೆ. ಅಂತಹ ಮನೋಹರ ವೇದರಾಶಿಯನ್ನು ಬಿಟ್ಟು, ಚಿಂತೆಯಿಂದ ಯಾಜ್ಞವಲ್ಕ್ಯನು ಸೂರ್ಯಾಂತರ್ಯಾಮಿ ನಾರಾಯಣನನ್ನು ಶರಣಾಗತನಾಗಿ, ಗುರುಗಳರಿಯದ ವೇದವನ್ನು ಹೇಳೆಂದು, ಇಂತು ನುತಿಸಿದನು–

ಓಂ ಗುಣಪೂರ್ಣನಾರಾಯಣ! ಪುರಾತನನು, ಅಖಿಲ ಜಗದಂತರ್ಯಾಮಿಯು, ಬಹಿಃಕಾಲ ರೂಪಿಯು, ಆಗಿ ಬ್ರಹ್ಮಾದಿ ಸ್ಥಾವರಾಂತವಾದ ಜೀವರನ್ನು ನಿಯಮಿಸಿ ನಡೆಸುವ ನಿನಗೆ ನಮಸ್ಕಾರ! ಕ್ಷಣಲವಾದಿ ಕಾಲಾವಯವಗಳಿಂದ ಸಂವತ್ಸರ ಚಕ್ರವನ್ನು ನಡೆಸಿ, ಗ್ರೀಷ್ಮಾದಿ ಹೀರಿದ ಜಲವನ್ನು ವರ್ಷಋತುವಿನಲ್ಲಿ ಕೊಟ್ಟು ಕಾಪಾಡುವ ಜನಜ್ಞನಕನೇ! ನಿನಗೆ ನಮಃ.

ಹೇ ದೇವೋತ್ತಮ! ಜಗಜ್ಜನಕ! ಕಾಂತಿಮಯನೇ! ದಿನದಿನವು ಮಾಡುವ ಕರ್ಮಗಳನ್ನು ಸಾಕ್ಷಾತ್ತಾಗಿ ನೋಡುತ್ತಾ, ಸುಜನರ ಪಾಪಪಟಲವನ್ನು ನಾಶಮಾಡುವ ನಾರಾಯಣನಿಗೆ ನಮಸ್ಕಾರವು! ನೀನು ನಿವಸಿಸಿ ನಡೆಸುವ ಜೀವರು ನಿನ್ನ ಪ್ರೇರಣೆಯಿಂದ ದೇಹೇಂದ್ರಿಯಾದಿ ಪ್ರವೃತ್ತಿ ಉಳ್ಳವರಾಗಿರುವರು. ಕರಾಳಗಹನಾಂಧಕಾರವು ಅಜಗರದಂತೆ ಜಗವನ್ನಾವರಿಸಿ ನುಂಗಿ ಬಿಡಲು, ಮೃತವಾದಂತೆ ಬಿದ್ದಿರುವ ಜೀವಗಣವನ್ನು ನೋಡಿ, ಕರುಣೆಯಿಂದ ಎಚ್ಚರಗೊಳಿಸುವೆ. ಸ್ವಧರ್ಮಾನುಷ್ಠಾನ ಶ್ರೇಯಸ್ಸಂಪಾದನೆ ನಿನ್ನಿಂದ, ಇಂದ್ರಾದಿ ಲೋಕಪಾಲರ ಪುರಗಳನ್ನು ಸುತ್ತುತ್ತಾ, ಮಾನಸೋತ್ತರ ಪರ್ವತಾಗ್ರದಲ್ಲಿ, ಕಡುವೇಗದಿಂದ ಸಂಚರಿಪ ನಿನ್ನ ಚರಣ ನೀರೇಜ ಗಳನ್ನು, ನೀರ ನೀರಜಗಳಿಂದ ಪೂಜಿಸಿ, ದೇವಮಾನವರು ಧನ್ಯರಾಗುತ್ತಿರುವರು.

ಶ್ರೀನಾರಾಯಣ! ಇಂತಹ ಚರಣನಲಿನ ಶರಣನಾಗಿ, ನಾನು ಯಾರೂ ಅರಿಯದ ಯಜುಃ ಶಾಖೆಯನ್ನು, ಅಭ್ಯಸಿಸಲು ಬಂದಿರುವೆನು.

ಇಂತು ನುತಿಸಿದ ಯಾಜ್ಞವಲ್ಕ್ಯನಿಗೆ ಪ್ರಸನ್ನನಾದ ಶ್ರೀಹರಿಯು ಅಧಿಷ್ಠಾನನಾದ ಸೂರ್ಯನು ಯಾಜ್ಞವಲ್ಕ್ಯನಿಗೆ ಶುಕ್ಲಯಜುರ್ವೇದವನ್ನು, ವಾಜಿ(ಕುದುರೆ)ರೂಪನಾಗಿ ಬಂದು, ಉಪದೇಶಿಸಿ ದನು. ಆ ವಾಜಸನ ಶಾಖೆಗಳು ಹದಿನೈದಾದವು. ಅದನ್ನು ಸ್ವೀಕರಿಸಿದ ಋಷಿಗಳು, ಕಾಣ್ವ, ಮಾಧ್ಯಂದಿನರು ಶುಕ್ಲಯಜುಃ ಪ್ರವರ್ತಕರಾದರು.

ಜೈಮಿನಿಯು ತನ್ನ ಸಾಮಶಾಖೆಯ ಸಾವಿರ ಸಂಹಿತೆಗಳನ್ನು, ಹಿರಣ್ಯನಾಭ, ಕೌಸಲ್ಯ, ಪೌಷ್ಯಂಜಿ, ಸುಕರ್ಮಣರಿಗೂ, ಅವಂತಿಯೂ ೫೦೦ ಶಿಷ್ಯರಿಗೂ ಹೇಳಿ ಕೊಟ್ಟನು. ಪೌಷ್ಯಂಜಿ ಶಿಷ್ಯರು ಲೌಗಾಕ್ಷಿ ಮೊದಲಾದವರು; ಲಾಂಗಲಿ, ಕುಲ್ಯ, ಕುಸೀದ, ಕುಕ್ಷಿ, ನೂರುನೂರು ಸಂಹಿತಾ ಶಾಖೆಗಳನ್ನು ಕಲಿತರು.

ಸುಮಂತ ಋಷಿಯು ಪಥ್ಯ ವೇದದರ್ಶರಿಗೆ ಉಪದೇಶಿಸಿದನು. ವೇದದರ್ಶನು, ಶೌಕ್ಲಯನಿ, ಬ್ರಹ್ಮವಾಲಿ, ಮೋದೋಷ, ಪಿಪ್ಪಲಾಯನಿಗಳಿಗೂ, ಪಥ್ಯನು ಕುಮುದ, ಶುನಕ, ಜಾಜಲಿಗಳೂ ಉಪದೇಶಿಸಿದರು. ಪಥ್ಯಶಿಷ್ಯನಾದ ಶುನಕನಿಗೆ ಬಭ್ರು, ಸೈಂಧವಾಯನರು ಶಿಷ್ಯರು. ಅವರಿಗೆ ಸಾವರ್ಣ್ಯ, ನಕ್ಷತ್ರಕಲ್ಪ, ಶಾಂತಿ ಕಾಶ್ಯಪ, ಅಂಗಿರಸಾದಿಗಳು ಶಿಷ್ಯರು. ಇದು ಅಥರ್ವಣವೇದ ವಿಭಾಗವು.

ಇನ್ನು ಪೌರಾಣಿಕರನ್ನು ಪೆಸರಿಸುವೆನು. ತ್ರಯ್ಯಾರುಣಿ, ಕಶ್ಯಪ, ಸಾವರ್ಣಿ, ಅಕೃತವರ್ಣ, ವೈಶಂಪಾಯನ, ಹಾರೀತರೆಂಬರು ಆರು ಋಷಿಗಳು ಪೌರಾಣಿಕರು. ಅವರೆಲ್ಲರು ನಮ್ಮ ತಂದೆಯ ಶಿಷ್ಯರು. ನಾನು ಅವರಿಂದ ಎಲ್ಲ ಪುರಾಣಗಳನ್ನು ಕೇಳಿ ತಿಳಿದಿರುವೆನು. ನಾನು (ಸೂತ), ಕಾಶ್ಯಪ, ಸಾವರ್ಣಿ, ಪರಶುರಾಮರ ಶಿಷ್ಯನಾದ ಅಕೃತವರ್ಣ – ನಾಲ್ಕು ಜನರು ಮೂಲಪುರಾಣ ಸಂಹಿತೆಯನ್ನು ಶ್ರೀಶುಕರಿಂದ ಕಲಿತಿರುವೆವು.

ವೇದಶಾಸ್ತ್ರಾನುಸಾರವಾಗಿ ನಿರೂಪಿಸಿರುವ ಪುರಾಣ ಸಂಹಿತಾಲಕ್ಷಣವನ್ನು ನಿನಗೆ ಹೇಳುವೆನು, ಕೇಳು! ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಮನ್ವಂತರ, ಯಶ, ವಂಶಾನುಚರಿತ,

ಸಂಸ್ಥಾ, ಹೇತು, ಆಶ್ರಯ ಎಂಬ ಹತ್ತು ಲಕ್ಷಣಗಳಿಂದ ಯುಕ್ತವಾದ ಗ್ರಂಥವು ಪುರಾಣವೆನಿಸುವುದು. ಕೆಲವು ಪುರಾಣಗಳು ಐದೇ ಲಕ್ಷಣಗಳಿಂದ ಒಪ್ಪಿವೆ. ಪ್ರಕೃತಿಯ ಕ್ಷೋಭೆಯಿಂದ ಮಹತ್ತು, ತ್ರಿವಿಧಾಹಂತತ್ತ್ವ, ಪಂಚಭೂತ, ಏಕಾದಶೇಂದ್ರಿಯ, ಶಬ್ದಾದಿ ಪಂಚಮಾತ್ರೆಗಳ ಸೃಷ್ಟಿಗೆ ಸರ್ಗವೆಂಬುವರು. ಶ್ರೀಹರಿಯು ಪುರುಷರೂಪದಿಂದ ಆ ತತ್ತ್ವಗಣದ ಪ್ರವೇಶಿಸಿ, ಚೇತನಾಚೇತನ ಜಗವನ್ನು ನಿರ್ಮಿಸುವುದು (ಒಳಗೆ) ವಿಸರ್ಗವೆನಿಸುವುದು. ವೃತ್ತಿ ಎಂದರೆ ಜೀವನ, ಚರರಿಗೆ ಅಚರರನ್ನು ಸಹಸ್ತರಿಗೆ ಅಹಸ್ತರನ್ನು ಮಹತ್ಪ್ರಾಣಿಗಳಿಗೆ ಅಣುಪ್ರಾಣಿಗಳನ್ನು ಆಹಾರವಾಗಿರಿಸಿ, ಶ್ರೀಶನು ಜೀವದೇಹಧಾರಕನಾಗಿರುವನು. ಫಲಮೂಲಾದಿಗಳಿಂದ ಪುರೋಡಾಶವನ್ನು ಕಲ್ಪಿಸಿ, ಹೋಮಿಸಿ, ತಿಂದು ಸುಜನರು ಜೀವಿಸುತ್ತಿರುವರು. ಶ್ರೀಹರಿಯು ಮತ್ಸ್ಯ ಕೂರ್ಮ ವರಾಹಾದಿ ತಿರ್ಯಗ್ಯೋನಿಗಳಲ್ಲಿಯು, ವಾಮನ, ಭಾರ್ಗವ, ರಾಮ, ಕೃಷ್ಣಾದಿ ನರಜಾತಿಯಲ್ಲಿಯು, ಮಹಿದಾಸಾದಿ ದೇವ ಮಧ್ಯದಲ್ಲಿಯು, ಅವತಾರಗಳನ್ನು ಸ್ವೇಚ್ಛೆಯಿಂದ ಮಾಡಿ, ದುಷ್ಟಜನರನ್ನು ಸಂಹರಿಸುವುದೇ ರಕ್ಷೆ. ಒಂದು ಮನ್ವಂತರದಲ್ಲಿ ಮನುರಾಜ, ಮನುಪುತ್ರರು, ದೇವೇಂದ್ರ, ಋಷಿಗಳು, ದೇವತೆಗಳು; ಶ್ರೀಶಾವತಾರವೆಂಬ ಆರು – ಬೇರೆ ಬೇರಾಗಿ ಇರುವರು. ಮನುರಾಜನ ವಂಶದಲ್ಲಿ ಆಗಿ ಹೋದ ಹಾಗೂ ಬರುವ ರಾಜರ ಚರಿತೆಗೆ ವಂಶವೆಂದು ಹೆಸರು. ಅವರ ಪುತ್ರಾದಿ ಚರಿತೆಯೇ ವಂಶಾನುಚರಿತೆ. ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ, (ಅಸಂಪ್ರಜ್ಞಾತ ಸಮಾಧಿ) ವೆಂಬ ನಾಲ್ಕು ವಿಧ ಪ್ರಳಯ ವರ್ಣನವನ್ನು ಸಂಸ್ಥೆ ಎಂಬುವರು. ಅವಿದ್ಯಾಕಾಮ ಕರ್ಮಗಳಿಂದ ಕೂಡಿ, ಸೃಷ್ಟಿ, ಸ್ಥಿತಿ ಸಂಹಾರಾದಿಗಳನ್ನು ಹೊಂದುತ್ತಿರುವ ಜೀವನನ್ನು ಹೇತು - ಎಂಬುವರು. ಆಶ್ರಯನೆಂದರೆ ಜಗಜ್ಜನ್ಮಾದಿ ಸ್ವತಂತ್ರ ನಿಮಿತ್ತ ಕಾರಣನು, ಜಾಗ್ರದಾದ್ಯವಸ್ಥಾ ಪ್ರೇರಕನು, ಅವಸ್ಥಾಶ್ರಯ ವಿಕಾರರಹಿತನೂ ಆದ ಶ್ರೀಹರಿಯೇ ಎಂದು ತಿಳಿ!

ಪದಾರ್ಥಗಳಿಗೆ ರೂಪನಾಮಗಳಿವೆ; ಅವುಗಳಿಗೆ ಉಪಾದಾನ ಕಾರಣವಾದುದು ಪ್ರಕೃತಿಯು. ಪ್ರಕೃತಿ ರಚಿತ ದೇಹಾದಿಗಳು ಜನನ ಮರಣ ಸಹಿತವಾಗಿವೆ; ಜೀವನಿಗೆ ದೇಹನಾಶ, ದೇಹ ಯೋಗಗಳಾಗುತ್ತಿವೆ. ಸರ್ವಾವಸ್ಥೆಗಳಲ್ಲಿಯು – ಜೀವ ಪ್ರಕೃತಿಸಂಯೋಗವೆಂಬ ಸೃಷ್ಟಿ, ಜೀವ ಪ್ರಕೃತಿ ವಿಯೋಗವೆಂಬ ಪ್ರಳಯ – ಎಲ್ಲ ಕಾಲದಲ್ಲಿಯು ನಿರ್ವಿಕಾರನಾಗಿ ಜೀವರ ಬಂಧಮೋಕ್ಷ ಕಾರಣನಾದ ನಾರಾಯಣನೇ ಆಶ್ರಯನು. ಜಾಗ್ರದಾದ್ಯವಸ್ಥೆಗಳನ್ನು, ದಾಟಿ, ಯೋಗದಿಂದ ಮನಸ್ಸನ್ನು ಶ್ರೀಹರಿಯಲ್ಲಿಟ್ಟು, ವಿಷಯಪ್ರಪಂಚವನ್ನು ಬಿಡಿಸಿ, ತೀವ್ರಸಮಾಧಿಯಲ್ಲಿ ಶ್ರೀಹರಿಯನ್ನು ಕಂಡು ಜ್ಞಾನಿಯು, ಹಿಂದಿರುಗಿ ಬಾರದ ವಿಷ್ಣುಲೋಕವನ್ನು ಹೊಂದುವನು.

ಇಂತು ಹದಿನೆಂಟು ಪುರಾಣಗಳಿವೆ. ಸಣ್ಣ ಪುರಾಣಗಳೂ ಇವೆ. ಅವು ಶಬ್ದದಿಂದ ಸಣ್ಣವಾದರೂ ಅರ್ಥದಿಂದ ದೊಡ್ಡವಾಗಿವೆ. ಕೆಲವು ಶಬ್ದಾರ್ಥಗಳಿಂದಲು, ಫಲದಿಂದಲು ಕೂಡ ದೊಡ್ಡವಾಗಿವೆ. ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಲಿಂಗ, ಗಾರುಡ, ನಾರದ, ಭಾಗವತ, ಅಗ್ನಿ, ಸ್ಕಾಂಧ, ಭವಿಷ್ಯ, ಬ್ರಹ್ಮವೈವರ್ತ, ಮಾರ್ಕಂಡೇಯ, ವಾಮನ, ವಾರಾಹ, ಮಾತ್ಸ್ಯ, ಕೌರ್ಮ, ಬ್ರಹ್ಮಾಂಡಗಳೆಂಬವು ಹದಿನೆಂಟು ಪುರಾಣಗಳು. ಇಂತು ಶ್ರೀಹರಿಯ ಆಜ್ಞೆಯಂತೆ, ಶಿಷ್ಯ ಪ್ರಶಿಷ್ಯ ಪರಂಪರೆಯಿಂದ ನಡೆದ ವೇದಶಾಖಾ ಪ್ರಣಯನವನ್ನು ಓದಿದವನು ಬ್ರಹ್ಮವರ್ಚಸ್ವಿಯಾಗುವನು. ತಿಳಿದವನು ಶ್ರೀಹರಿಯನ್ನರಿತ ಜ್ಞಾನಿ ಎನಿಸುವನು.

## ೭. ಮಾರ್ಕಂಡೇಯ ಕಥೆ

ಶೌನಕನು ಪ್ರಶ್ನಿಸಿದನು–

ಸೂತ! ಚಿರಕಾಲ ಬಾಳು! ಕಥಾಕಥನದಲ್ಲಿ ನಿನ್ನ ಸಮರಿಲ್ಲ. ಸಾಧೋ! ಅಜ್ಞಾನದಿಂದ ನಮ್ಮನ್ನು ಪಾರುಗಾಣಿಸಿದೆ. ಕಲ್ಪಾಂತರದಲ್ಲಿಯೂ ಉಳಿದ ಮಾರ್ಕಂಡೇಯನನ್ನು ಚಿರಾಯುಷ್ಕನೆಂದು ತಿಳಿದಿರುವೆವು. ಅವನ ಕುಲದಲ್ಲೇ ನಾನೂ ಹುಟ್ಟಿರುವೆನು. ಆ ಭಾರ್ಗವಕುಲತಿಲಕನು ಪ್ರಳಯ ಸಮುದ್ರದಿ ಬಿದ್ದುಹೋಗುತ್ತಾ ವಟಪತ್ರ ಶಯನನಾದ ಆನಂದಮಯ ಶಿಶುರೂಪ ಹರಿಯನ್ನು ಕಂಡನಂತೆ! ಇನ್ನು ಯಾವ ಭೂತ ಪ್ರಳಯವೂ ಆಗಿಲ್ಲ. ಅವನು ಪ್ರಳಯವನ್ನೆಂತು ಕಂಡನೆಂಬ ನಮ್ಮ ಮನಸ್ಸಂಶಯವನ್ನು ದೂರ ಮಾಡು.

ಸೂತನು ಹೇಳಿದನು–

ಮಹರ್ಷೇ! ಲೋಕದ ಜನರ ಭ್ರಮೆಯನ್ನು ದೂರ ಮಾಡುವ ಈ ನಿನ್ನ ಪ್ರಶ್ನೆಯು ಪ್ರಶಂಸನೀಯವಾಗಿದೆ. ಶ್ರೀನಾರಾಯಣ ಕಥೆಯು ಕಲಿಮಲನಾಶಕವಲ್ಲವೇ? ಕೇಳು!

ಮೃಕಂಡುಋಷಿಯಿಂದ ಮುಂಜಿಯನ್ನು ಮಾಡಿಸಿಕೊಂಡು ಮಾರ್ಕಂಡೇಯನು, ವೇದಗಳನ್ನು ಓದಿದನು. ತಪವನ್ನೂ ಮಾಡಿದನು. ವಟುವ್ರತಧರನಾಗಿ, ಶಾಂತನು, ಜಟಾವಲ್ಕಲಧರನೂ ಆಗಿದ್ದನು. ಕಮಂಡಲು, ದಂಡ, ಉಪವೀತ, ಮೇಖಲ, ಕೃಷ್ಣಾಜಿನ, ಕಮಲಾಕ್ಷ ಮಾಲ, ಕುಶಗಳನ್ನು ಧರಿಸಿ, ನಿಯಮದಿಂದ ಕಾಲಕಾಲದಿ ಅಗ್ನಿ, ಗುರು, ಸೂರ್ಯ, ವಿಪ್ರರನ್ನು ಶ್ರೀಹರಿ ಪ್ರತಿಮೆಗಳೆಂದು ತಿಳಿದು ಪೂಜಿಸುತ್ತಿದ್ದನು. ಸಾಯಂಪ್ರಾತಃಕಾಲಗಳಲ್ಲಿ ತಂದ ಭಿಕ್ಷಾನ್ನವನ್ನು ಗುರುವಿಗೊಪ್ಪಿಸಿ, ಅವನು ಉಣ್ಣೆಂದರೆ ಉಂಡು, ಇಲ್ಲದಿದ್ದರೆ ಉಪವಸಿಸಿ, ತಪಃಸ್ವಾಧ್ಯಾಯನಿರತನಾಗಿದ್ದನು. ಸಾವಿರಾರು ವರ್ಷಗಳ ಕಾಲವು ಹೀಗೇ ಕಳೆದುಹೋಯಿತು. ಶ್ರೀ ಹೃಷೀಕೇಶಾನುಗ್ರಹದಿಂದ ಮಾರ್ಕಂಡೇಯನು ಸಕಲ ಕ್ಲೇಶಗಳನ್ನು ದೂರ ಮಾಡಿ, ತೀವ್ರ ತಪೋಬಲದಿಂದ ಮೃತ್ಯುವನ್ನೂ ಗೆದ್ದನು. ಆರು ಮನ್ವಂತರಗಳು ಕಳೆದುಹೋದರೂ ತಪಸ್ಸನ್ನು ನಿರಾತಂಕನಾಗಿ, ನಿಶ್ಚಲನಾಗಿ ಮಾಡುವ ಮಾರ್ಕಂಡೇಯನಿಗೆ ಹೆದರಿ, ಈ ಮನ್ವಂತರದ ಪುರಂದರನು ತಪೋವಿಘ್ನವನ್ನು ಮಾಡಲು ಹವಣಿಸಿದನು.

ಇಂದ್ರನು ಕಳಿಸಿದ ಗಂಧರ್ವರು, ಅಪ್ಸರೆಯರು, ಕಾಮ, ವಸಂತ, ಮಲಯಾನಿಲರು, ಹಿಮಾಲಯದ ತಪ್ಪಲಿನಲ್ಲಿದ್ದ ಮಾರ್ಕಂಡೇಯನ ಆಶ್ರಮಕ್ಕೆ ಬಂದರು. ಅಮಲ ಜಲಾಶಯ ತೀರಗಳಲ್ಲಿ, ಪುಷ್ಪ ಫಲವೃಕ್ಷಗಳು ನಿಬಿಡವಾಗಿ ಬೆಳೆದಿದ್ದವು. ಪಕ್ಷಿಗಳು ಕಲ ಕಲನಾದ ಮಾಡುತ್ತಿದ್ದವು. ಭ್ರಮರಗಳು ಝುಂಕಾರವನ್ನು ಕೋಗಿಲೆಗಳು ಕೂಜಿತವನ್ನು ಮಾಡುತ್ತಿದ್ದವು. ಹಿಮನಿರ್ಝರ ಜಲ ಶೀಕರಗಳನ್ನು ಹೊತ್ತು ಗಂಧರ್ವನು ಮೆಲ್ಲನೆ ಸಂಚರಿಸುತ್ತಿದ್ದನು. ಕುಸುಮ ಸಮಯವು ಬರಲು ವಸಂತನು ಪೂಮಾಲೆಗಳನ್ನು ಚಿಗುರೆಲೆಗಳನ್ನು ಧರಿಸಿ ಮೂರ್ತೀಭವಿಸಿ ದಂತಿತ್ತು. ಗಂಧರ್ವರು ಪಾಡುತ್ತಿರಲು, ಅಪ್ಸರೆಯರಾಡಿದರು.

ಮಾರ್ಕಂಡೇಯನು ಹೋಮಿಸಿ, ಆಶ್ರಮದಲ್ಲಿ ಕೂತಿದ್ದನು. ತನ್ನ ಮುಂದೆ ಕುಣಿಯುವ ಅಪ್ಸರೋಗಣವನ್ನು ನೋಡಿದನು. ಮೃದಂಗವೀಣಾದಿ ವಾದ್ಯಗಳನ್ನು ನುಡಿಸುತ್ತಾ ಪಾಡುವ ಗಂಧರ್ವರ ಗಾನವನ್ನು ಕೇಳಿದನು. ಪುಂಜಕಸ್ಥಲಿಯು ಸ್ತನಭಾರದಿಂದ ಬಳುಕುವ ನಡುವಿನಿಂದ ಬಾಗಿ, ಚೆಂಡಾಟವನ್ನಾಡುತ್ತಾ ಸಮೀಪಿಸಿದಳು. ವಾಯುವು ಅವನ ವಸನವನ್ನು ಸರಿಸಿದನು.

ಅದೇ ಸಮಯವೆಂದು, ಮದನನು ತನ್ನ ಪುಷ್ಪಭಲ್ಲವನ್ನು ಮುನಿಯ ಹೃದಯದಲ್ಲಿ ನಾಟಿಸಿದನು. ಇಷ್ಟು ಮಾಡಿದರೂ ನಿರ್ವಿಕಾರನಾಗಿದ್ದ ಮುನಿ ವರನಿಗೆ ಹೊಡೆದೆಬ್ಬಿಸಿದ ನಾಗರಹಾವಿನಂತೆ – ಹೆದರಿ, ಸುರೇಂದ್ರಪರಿವಾರವು ಹಿಂದಿರುಗಿ ಹೋಯಿತು. ಮಾರ್ಕಂಡೇಯನು ಶಾಂತನಾಗಿರುವುದನ್ನು ನೋಡಿ, ಇಂದ್ರನು ಆಶ್ಚರ್ಯಪಟ್ಟನು.

ಅಂತಹ ಋಷಿಯನ್ನು ನೋಡಲು ನರನಿಂದ ಕೂಡಿ ಶ್ರೀನಾರಾಯಣರ್ಷಿಯು ಬಂದನು. ನವವಿಕಸಿತಕಮಲಲೋಚನರು, ಚತುರ್ಭುಜರು, ರುರುಚರ್ಮವನು ಹೊದ್ದವರು, ಪವಿತ್ರವನ್ನಿಟ್ಟು ಕಮಂಡಲುವನ್ನು ಪಿಡಿದವರಾಗಿ, ನರನಾರಾಯಣರು ಬರುವುದನ್ನು ನೋಡಿ, ಮಾರ್ಕಂಡೇಯನ್ನು ಆದರದಿಂದೆದುರ್ಗೊಂಡು, ಕರತಂದು, ಕೂಡಿಸಿ, ಸಾಷ್ಟಾಂಗವಾಗಿ ವಂದಿಸಿದನು. ನರನು ಬೆಳ್ಳಗಿದ್ದನು; ನಾರಾಯಣನು ಕಪ್ಪಾಗಿದ್ದನು. ಅವರು ಚಾಪರ, ದರ್ಭಪಾಣಿಗಳಾಗಿದ್ದರು. ಅವರ ದರ್ಶನದಿಂದ ಮಾರ್ಕಂಡೇಯನಿಗೆ ಪರಮಾನಂದವಾಯಿತು. ಮೈ ಪುಲಕಗಳು ತೋರಿದವು. ಕಣ್ಣಲ್ಲಿ ಆನಂದಬಾಷ್ಪಗಳುದುರಿದವು. ಕಣ್ಣೊರೆಸಿಕೊಂಡು ಕೈಜೋಡಿಸಿ ನಿಂತು, ಮುನಿಯು ನಮೋನಮಃ ಎಂದು ಮುಂದೆ ಮಾತಾಡಲು ಬರದೆ, ಸುಮ್ಮನೆ ನಿಂತು, ಸ್ವಲ್ಪ ಹೊತ್ತಾದ ಮೇಲೆ, ಸಮಾಹಿತನಾಗಿ ಅವರನ್ನು ಪೂಜಿಸಿದನು. ಮತ್ತು ವಿನಯದಿಂದ ಇಂತೆಂದನು–

ವಾಗಾದೀಂದ್ರಿಯಗಳು ಮುಖ್ಯಪ್ರಾಣನಿಂದ ಪ್ರೇರಿತವಾಗಿ ಶಬ್ದಾದಿ ವಿಷಯಗಳನ್ನು ಸ್ವೀಕರಿಸುತ್ತಿವೆ. ಆ ಮುಖ್ಯಪ್ರಾಣನಿಗೂ, ಬ್ರಹ್ಮ ರುದ್ರರಿಗೂ ಕೂಡ ನೀನೇ ಪ್ರೇರಕನು. ನಿನಗಿನ್ನು ಬೇರೆ ಪ್ರೇರಕರಿಲ್ಲ. ಇಂತಹ ಅಪರಿಮಿತಮಹಿಮನಾದ ನಿನ್ನನ್ನು ನನ್ನಂತಹ ಪಾಮರನು ಏನೆಂದು ವರ್ಣಿಸುವನು?

ಮೂರು ಲೋಕದ ಸುಜನರ ಕ್ಷೇಮಕ್ಕೂ, ಆಸುರಕೃತತಾಪ ನಾಶಕ್ಕೂ, ತಪವನ್ನು ಮಾಡುವ ನಿನಗೆ ನಮಸ್ಕಾರ. ನಾರಾಯಣನೇ! ಊರ್ಣನಾಭಿಯಂತೆ ಜಗವನ್ನು ಸೃಜಿಸಿ, ಮತ್ತೆ ಬೇಕಾದಾಗ ಸಂಹರಿಸುವೆ. ಚರಾಚರ ಜಗದ್ವಲ್ಲಭನಾದ ನಿನ್ನ ಪಾದ ಮೂಲವನ್ನು ನಂಬಿ ಜನನಮರಣಾದಿ ದೂರರಾಗಿ, ಸುಜನರು, ಸುಖದಿಂದಿರುವರು. ನಿನ್ನನ್ನು ನುತಿಸಿ, ನಿನಗೆ ನಮಸ್ಕರಿಸಿ, ಬ್ರಹ್ಮಾದಿ ದೇವತೆಗಳು ನಿನ್ನ ಧ್ಯಾನದಿಂದ ಲೋಕವಂದ್ಯರಾಗಿರುವರು. ಅಂತಹ ವೇದತಾತ್ಪರ್ಯ ವಿಷಯನಾದ ನಿನ್ನ ಸೇವಕರ ದಾಸ ನಾನು, ನಿನ್ನ ಚರಣಾರವಿಂದವನ್ನು, ಕ್ಷಣವಾದರೂ ಬಿಟ್ಟಿರಲಾರೆನು. ಶ್ರೀಶ! ನಿನ್ನಿಂದ ದೂರರಾದವರಿಗೆ ಕ್ಷೇಮವು ಉಂಟೇ? ಕಾಲನಾಮಕನಾದ ನೀನು ದ್ವಿಪರಾರ್ಧದ ಕೊನೆಯಲ್ಲಿ ಬ್ರಹ್ಮನನ್ನೂ ನುಂಗಿಬಿಡುವೆ. ಇನ್ನು ಬ್ರಹ್ಮನಿಂದ ಪುಟ್ಟಿದ ಇತರ ಜೀವರ ಪಡೇನು? ಆದುದರಿಂದ ಶಶ್ವದೇಕ ಪ್ರಕಾರ ಜ್ಞಾನಸ್ವರೂಪನಾದ ನಿನ್ನನ್ನು ಬಿಡದೆ ಭಜಿಸುವೆನು. ಜೀವಗುರುವಾದ ನಿನ್ನ ದಯದಿಂದ, ನನ್ನ ಅಹಂಕಾರ, ಮಮಕಾರಗಳು ನಶಿಸಲಿ! ದೇಹವು ನಶ್ವರವೆಂದರಿತು, ಅಜ್ಞಾನವನ್ನು ಕಳೆದುಕೊಂಡು, ಶಾಶ್ವತಸುಖರೂಪನಾಗಿರುವುದು ಯಾರಿಗೆ ಇಷ್ಟವಿಲ್ಲ? ತ್ರಿಗುಣಗಳಿಂದ ಸ್ಥಿತಿ, ಸೃಷ್ಟಿ, ಲಯಗಳನ್ನು ಮಾಡುವ ನಿನ್ನ ಲೀಲೆಯ ಪ್ರಯೋಜನವಾದ ಮುಕ್ತಿಯು ಸಾತ್ವಿಕರಿಗೆ ಮಾತ್ರ ಆಗುವುದು. ರಾಜಸರಿಗೆ ವ್ಯಸನ, ತಾಮಸರಿಗೆ ಮೋಹ ಭಯಗಳನ್ನು ಕೊಡುವ ಲೀಲಾವತಾರಗಳಿಂದ, ನಿನಗೆ ಆಗತಕ್ಕ ಪ್ರಯೋಜನವಿಲ್ಲ. ಸಾಧಕರ ಮಧ್ಯದಲ್ಲಿ ಯೋಗ್ಯಜೀವರು ತಮಗೆ ಇಷ್ಟವಾದ ನಿನ್ನ ಅವತಾರ ರೂಪವನ್ನು ಭಜಿಸುವಸು. ಸತ್ವಗುಣ ಪ್ರವರ್ತಕನಾದ ನಿನ್ನನ್ನು ಭಜಿಸಿದವರು ನಿನ್ನ ಭಯರಹಿತವಾದ ಲೋಕವನ್ನು ಸೇರಿ,

ಜನನ ಮರಣ ಶೋಕ ಮೋಹರಹಿತರಾಗುವರು. ಇಂತಹ ಪೂರ್ಣ ಷಡ್ಗುಣನಿಗೆ ನಮಸ್ಕಾರ. ವಿಶ್ವಾದಿ ಸಹಸ್ರರೂಪನು, ವಿಶ್ವಗುರುವು, ಪರದೇವತೆಯು, ಋಷಿ ರೂಪನು, ಆದ ನಾರಾಯಣನಿಗೆ ವಂದಿಸುವೆನು. ಮಿತಭಾಷಿಯು, ಜೀವವರನು ಆದ ಶ್ರೀನರನಿಗೂ ವಂದಿಸುವೆನು. ವಿಷಯಾದಿಗಳಲ್ಲಿ ಸಿಕ್ಕಿ ಬಿದ್ದು, ಭ್ರಮಿಸಿ, ಸಂಸಾರ ಕಾನನದಲ್ಲಿ ತಿರುಗುವ ಅಜ್ಞಾನಿನರನು ನಿನ್ನನ್ನು ತಿಳಿಯಲಾರನು. ಇಂದ್ರಿಯ, ಪ್ರಾಣ, ಮನೋಮಂದಿರಗಳಲ್ಲಿದ್ದು ಅತ್ಯಂತ ಸಮೀಪಸ್ಥನಾದ ನಿನ್ನನ್ನು ತಿಳಿಯದಿರಲು, ನಿನ್ನ ಬಂಧಕಶಕ್ತಿಯೇ ಕಾರಣವಾಗಿದೆ. ನಿನ್ನನ್ನು ಸಾರಿ ಪೊಗಳುವ ವೇದವಾಣಿಯನ್ನು ಕೇಳಿಯೂ ಕಿವುಡನಂತಿರುವ ನರಾಧಮರಿಗೆ ನರಕವಲ್ಲದೆ, ಮತ್ತೆ ಸುಗತಿಯು ಇರುವುದೇ?

ಬ್ರಹ್ಮಾದಿ ದೇವತೆಗಳಿಗೂ ಸಾಕಲ್ಯೇನ ಗೋಚರವಾಗುವ ನಿನ್ನ ಅಗಾಧಮಹಿಮೆಯನ್ನು ವೇದಗಳು ತಮ್ಮಲ್ಲಿ ಬಚ್ಚಿಟ್ಟುಕೊಂಡಿವೆ. ತರ್ಕಾದಿ ಕುವಾದಗಳಿಗೆ ನೀನು ಸಿಗದಿರುವೆ. ಇಂತು ಜೀವಗಣದಿಂದ ಅಜ್ಞಾತವಾಗಿರುವ, ಅನಂತಮಹಿಮೆಯಿಂದ ಶೋಭಿತನಾದ ನಿನ್ನ ಚರಣಾರವಿಂದಕ್ಕ ವಂದಿಸುವೆನು.

## ೮. ಮಾರ್ಕಂಡೇಯ ಕಥೆ

ಸೂತನು ಹೇಳಿದನು–

ಇಂತು ಸ್ತುತಿಸಿದ ಮನಿವರನ ನುಡಿಗಾನಂದಿಸಿ, ನರಸಖನಾದ ನಾರಾಯಣನು ಇಂತೆಂದನು-

ಬ್ರಹ್ಮರ್ಷಿವರ! ಸಿದ್ಧನಾಗಿರುವೆ. ನನ್ನ ಉಪಾಸನೆಯಿಂದ ಬಂದ ಯಥಾರ್ಥಜ್ಞಾನ ಲಾಭದಿಂದ ಧನ್ಯನಾಗಿರುವೆ. ನಿನ್ನ ತಪೋವೇದಾಧ್ಯಯನು, ನಿಯಮಾದಿಗಳಿಗೆ, ಸಂತೋಷಪಟ್ಟಿರುವೆವು. ವರದೇಶನಾದ ನನ್ನಿಂದ ಬೇಕಾದ ವರವನ್ನು ಬೇಡು!

ಮಾರ್ಕಂಡೇಯನು ನುಡಿದನು–

ಶರಣಾಗತ ಜನರ ದುಃಖವನ್ನು ದೂರ ಮಾಡುವ ಹರೇ! ನಾಶರಹಿತ! ದೇವದೇವ! ನೀನು ಜಯಶೀಲನಾಗಿರುವೆ. ನಿನ್ನ ದರ್ಶನಕ್ಕಿಂತಲೂ ಶ್ರೀಯಸ್ಕರವಾದ ವರವು ಇರುವುದೇ? ನಿನ್ನ ಶ್ರೀಮತ್ಪಾದಾರವಿಂದ ದರ್ಶನವನ್ನು ಬ್ರಹ್ಮಾದಿಗಳೂ ಬೇಡುತ್ತಿರುವರು! ಅಂತಹ ನಿನ್ನ ದಿವ್ಯದರ್ಶನವೆನಗಾಯಿತು. ಸಾಕಿನ್ನೇನು ಬೇಕು? ಆದರೂ, ಅಘಟಿತ ಘಟಕನಾದ ನಿನ್ನ ದಿವ್ಯ ಪ್ರಳಯಶಕ್ತಿಯನ್ನು ನೋಡಬೇಕೆಂದು ಕೋರಿಕೊಳ್ಳುತ್ತಿರುವೆನು. ಅದರಿಂದ ನಿನ್ನ ಜಗದ್ವಿಲಕ್ಷಣ ಮಹಿಮೆಯು ಮನದಿ ದಿಟವಾಗಿ ನಿಲ್ಲುವುದು.

ಆ ಮಾತನ್ನಾಲಿಸಿ, "ಸರಿ! ಆಗಲಿ!" ಎಂದು ಅಪ್ಪಣೆಯನ್ನಿತ್ತು ನಾರಾಯಣನು ಬದರಿಕಾಶ್ರಮಕ್ಕೆಂದು ಹೊರಟುಹೋದನು. ಋಷಿಯು ಆ ಭಗವಂತನನ್ನೇ ಮನದಿ ಚಿಂತಿಸುತ್ತಾ, ಅಹಿಂಸಾವ್ರತದಿಂದ ಪೂಜಿಸಿ, ಸಕಲ ಭೂತನಿಕಾಯಾಧಾರನೆಂದು ಧ್ಯಾನಿಸುತ್ತಿದ್ದನು. ಒಂದೊಂದು ಸಲ ಅಸಂಪ್ರಜ್ಞಾತ ಸಮಾಧಿಯಲ್ಲಿ ನಿಂತು ಎಲ್ಲವನ್ನೂ ಮರೆಯುತ್ತಿದ್ದನು. ಒಂದು ದಿನ ಸಂಧ್ಯಾಕಾಲದಲ್ಲಿ ಇದ್ದಕ್ಕಿದ್ದಂತೆ ಬಿರುಗಾಳಿ ಚಂಡವೇಗದಿಂದ ಬೀಸುತ್ತಾ ಬಂತು. ಮೇಘಪಟಲವು ನಿಬಿಡವಾಗಿ, ಕಾರ್ಗತ್ತಲು ಕವಿಯಿತು. ಇರುಸಿನಷ್ಟು ದಪ್ಪವಾದ ಮಳೆಯ ಧಾರೆಗಳು ಬೀಳಲಾರಂಭಿಸಿ, ಕ್ಷಣದಲ್ಲಿ ನಾಲ್ಕು ನಿಟ್ಟಿನಿಂದ, ನಾಲ್ಕು ಸಮುದ್ರಗಳು ಉಕ್ಕೇರಿ

ಬಂದವು. ಸುಳಿಗಳು ಸುತ್ತುತ್ತಾ, ಅಲೆಗಳು ಏಳುತ್ತಾ, ಸಮುದ್ರದ ಜಂತುಗಳು ಅಲ್ಲಕಲ್ಲೋಲ ವಾಗುತ್ತಾ ಇರುವುದನ್ನು ನೋಡಿ, ಮಾರ್ಕಂಡೇಯನು ಅಂಜಿದನು. ಭೂಮಿಯನ್ನು ನುಂಗಿದ ಸಮುದ್ರವು, ಅಂತರಿಕ್ಷಕ್ಕೆ ನಾಲಿಗೆಗಳನ್ನು ಚಾಚುವಂತೆ ಉಕ್ಕೇರಿ, ಅವನ ಆಶ್ರಮವನ್ನು ಕೊಚ್ಚಿ ಹಾಕಿತು. ಮಾರ್ಕಂಡೇಯನು ಸಮುದ್ರದಲ್ಲಿ ಬಿದ್ದು, ತರಂಗಗಳಿಂದ ತೇಲುತ್ತಾ, ಮುಣು ಗುತ್ತಾ, ಜಲಜಂತುಗಳಿಂದ ತಪ್ಪಿಸಿಕೊಳ್ಳುತ್ತಾ, ಅತ್ಯಂತ ಭಯಭ್ರಾಂತನಾಗಿ, ಹೋಗುತ್ತಿದ್ದನು. ಕತ್ತಲು ಕವಿದು ದಿಕ್ಕಿನ ಜ್ಞಾನವಿಲ್ಲದೆ ಹೊಯ್ದಾಡುವ ಮುನಿವರನು, ಒಂದೊಂದು ಸಲ ಶೋಕಮೋಹಗಳನ್ನು, ಒಂದು ಸಲ ಜ್ಞಾನಪ್ರಕಾಶಗಳನ್ನು ಹೊಂದುತ್ತಾ, ಸಾವಿರಾರು ವರುಷಗಳ ಕಾಲವನ್ನು ಕಳೆದನು. ಶ್ರೀಹರಿಮಹಿಮೆಯಿಂದ ಸೃಷ್ಟವಾದ ಪ್ರಳಯವನ್ನು ನೋಡುತ್ತಿದ್ದ ಮೃಕಂಡು ಸುತನಿಗೆ – ಸಮುದ್ರ ಮಧ್ಯದಲ್ಲಿ ಒಂದು ದ್ವೀಪ. ಅಲ್ಲಿ ಒಂದು ಆಲದಮರ, ಅದರ ಈಶಾನ್ಯದಿಶೆಯು ರೆಂಬೆಯ ಎಲೆ. ಅಲ್ಲಿ ಮಲಗಿದ್ದ ಒಂದು ಸುಂದರಶಿಶುವು – ಕಂಡು ಬಂದವು.

ಆ ಶಿಶುವು ತನ್ನ ಕಾಂತಿಯಿಂದ ಕತ್ತಲನ್ನು ದೂರ ಮಾಡುತ್ತಿತ್ತು. ನೀಲಮರಕತ ಮಣಿಯ ದೇಹ ಪೂರ್ಣಚಂದ್ರವದನ, ಕಂಬು ಸುಂದರ ಕಂಠ ವಿಶಾಲವಾದ ವಕ್ಷಸ್ಥಲ. ಸುಮಧುರ ಮಂದಹಾಸ, ವಿದ್ರುಮರಾಗರಮಣೀಯಾಧರ ಬಿಂಬ. ಮಕರಕುಂಡಲಕಟಕಹಾರಾದಿ ಭೂಷಣ ಗಣಗಳಿಂದೊಪ್ಪುವ ಆ ಕುಮಾರನ ಮುಖದಿಂದ ಹೊರಬರುವ ಉಸಿರಿನ ವೇಗಕ್ಕೆ ಮುಂಗು ರುಳು ಹಾರಾಡುತ್ತಿದ್ದವು. ರೇಚಕ ಪೂರಕಗಳಿಂದ, ತೆಳುವಾದ ಹೊಟ್ಟೆ ಏರಿಳಿಯುತ್ತಿತ್ತು. ಬಲಗಾಲಿನ ಹೆಬ್ಬೆರಳನ್ನು ಕರಾರವಿಂದಗಳಿಂದೆತ್ತಿ, ಮುಖಾರವಿಂದದಲ್ಲಿಟ್ಟು ಚೀಪುತ್ತಿರುವ ಆ ಕೂಸನ್ನು ನೋಡಿದ ಮಾರ್ಕಂಡೇಯನು ಆಶ್ಚರ್ಯ ಸಂಭ್ರಮಗಳಿಂದ ಅವನನ್ನು ಸಮೀಪಿಸಿ ದನು. ಆಗ ಕೂಸು ಉಸಿರನ್ನು ಒಳಗೆ ಸೆಳಕೊಂಡಿತು. ಅದರ ಸಂಗಡ ಮುನಿಯು ಕೂಸಿನ ಹೊಟ್ಟೆಯನ್ನು ಪ್ರವೇಶಿಸಿದನು.

ಅಲ್ಲಿ ವಿಶ್ವವನ್ನೆಲ್ಲ ಕಂಡು ಮೃಕಂಡುಸುತನು ಅತ್ಯಾಶ್ಚರ್ಯಭರಿತನಾದನು. ಆಕಾಶ, ಅಂತರಿಕ್ಷ ನಕ್ಷತ್ರಗಣ, ಪರ್ವತ, ನದೀ, ನದ, ದ್ವೀಪ, ವರ್ಷಗಳನ್ನು, ಸುರಾಸುರ ಮಾನವಾದಿ ಜೀವರನ್ನು, ಪುರ, ಗ್ರಾಮ, ವನ, ಖೇಟಗಳನ್ನು, ಮಹದಾದಿತತ್ವದೇವರನ್ನು ಯಥಾರ್ಥವಾಗಿ ನೋಡಿದ ಮುನಿಗೆ, ಅಲ್ಲಿ ಹಿಮಾಲಯದ ತಪ್ಪಲಿನಲ್ಲಿದ್ದ ತನ್ನ ಆಶ್ರಮವು, ಸಮೀಪದಲ್ಲಿ ಹರಿಯುವ ಪುಷ್ಪ ಭದ್ರಾನದಿಯು ಕೂಡ ಕಂಡು ಬಂತು. ಆಶ್ರಮದ ಇತರ ಋಷಿಗಳೂ ಕಂಡುಬಂದರು. ಆಗ ಕೂಸಿನ ಉಸಿರಿನಿಂದ ಆ ಮುನಿಯು ಹೊರಬಂದು, ಸಮುದ್ರದಲ್ಲಿ ಬಿದ್ದನು. ಅದೇ ಕೂಸನ್ನು ಸಮೀಪಿಸಿ, ಅದರ ಪ್ರೇಮ ಸುಧಾರಸ ಪೂರ್ಣ ಕಟಾಕ್ಷಪಾತಕ್ಕೆ ಪಾತ್ರನಾಗಿ, ಮುಗ್ಧನಾದ ಮಾರ್ಕಂಡೇಯನು ಆಲಿಂಗಿಸಬೇಕೆಂದು ಹವಣಿಸಿದನು.

ಅಷ್ಟರಲ್ಲೇ ಶ್ರೀಭಗವಂತನು ತಾನು ಸೃಜಿಸಿದ ಪ್ರಳಯವನ್ನು ಇಂದ್ರಜಾಲದಂತೆ ಅತಿ ಶೀಘ್ರವಾಗಿ ಉಪಸಂಹರಿಸಿ, ತಾನೂ ಕಾಣದಾದನು. ಆಗ ಮಾರ್ಕಂಡೇಯನು ಯಥಾಪೂರ್ವ ವಾಗಿ, ತನ್ನ ಆಶ್ರಮದಲ್ಲಿ, ಧ್ಯಾನಿಸುತ್ತಾ ಕೂತಿದ್ದ, ತನ್ನನ್ನು ತಾನು ತಿಳಿದನು. ಇಂತು ಮಾರ್ಕಂಡೇಯನು ಧ್ಯಾನವೇಗದಿಂದ ತನ್ನ ಮನದಿ ಕಂಡ ಪ್ರಳಯಾದಿಗಳನ್ನು ನಿನಗೆ ವರ್ಣಿಸಿ ದೆನು.

## ೯. ಮಾರ್ಕಂಡೇಯ ಚರಿತೆ

ಸೂತನು ನುಡಿದನು–

**ಶೌನಕಾ!** ಇಂತು ಶ್ರೀಹರಿಯ ಸ್ವರೂಪಶಕ್ತಿಯ ವ್ಯಾಪ್ತಿಯನ್ನು ನೋಡಿ, ಆನಂದಿಸಿದ ಮಾರ್ಕಂಡೇಯನು ಶ್ರೀಹರಿಚರಣಗಳನ್ನು ಸ್ಥಿರವಾಗಿ ಮನದಲ್ಲಿಟ್ಟು, ಇಂತು ಚಿಂತಿಸಿದನು.

ಪ್ರಸನ್ನಜನವರದ! ಶ್ರೀಹರೇ! ನಿನ್ನ ಬಂಧಕಶಕ್ತಿಗೆ ಸಿಲುಕಿ, ಬ್ರಹ್ಮಾದಿಗಳು ಕೂಡ ಮೋಹಿತರಾಗಿರುವರೆಂದಮೇಲೆ, ನಮ್ಮಂತಹವರ ಪಾಡೇನು?

ಸೂತನಿಂತೆಂದನು–

ಇಂತು ಶ್ರೀಹರಿಧ್ಯಾನರತನಾಗಿ ಮೈಮರೆತಿದ್ದ ಮಾರ್ಕಂಡೇಯನನ್ನು ಪ್ರಮಥಗಣ ಸಮೇತರಾದ ಪಾರ್ವತೀಪರಮೇಶರು ನೋಡಿದರು. ಆಗ ಉಮಾದೇವಿಯು ಗಿರೀಶನಿಗಿಂತೆಂದಳು–

ಭಗವಾನ್! ಕಂಡೆಯಾ ಆ ಋಷಿವರನನ್ನು? ಋಷಿಚರ್ಯೆಯಿಂದ ಧನ್ಯನಾಗಿರುವ ಈ ಭಗವದ್ಭಕ್ತನು ವರ್ಷಾಕಾಲದ ಸಮುದ್ರದಂತೆ ಗಂಭೀರನು, ಶಾಂತನು ಆಗಿರುವನು. ಸಕಲ ತಪಸ್ಸಿದ್ಧಿಪ್ರದನಾದ ನೀನು ಇವನನ್ನು ಕರುಣಿಸು.

ಶ್ರೀರುದ್ರನಿಂತೆಂದನು–

ಪುರುಷೋತ್ತಮನಲ್ಲಿ ಭಕ್ತಿಭರದಿಂದ ತುಂಬಿದ ಈ ಮಹಾತ್ಮನು ಮೋಕ್ಷವನ್ನೂ ಫಲವಾಗಿ ಬೇಡುವವನಲ್ಲ. ಇವನಿಗೆ ಯಾವ ಕೋರಿಕೆಯೂ ಇಲ್ಲ. ಆದರೂ ಈ ಸಾಧುವಿನೊಡನೆ ಮಾತನಾಡೋಣ! ಸಾಧುಸಮಾಗಮವೇ ಸರ್ವಶ್ರೇಯಸ್ಕರವು!

ಎಂದು ಸಜ್ಜನ ವಲ್ಲಭನು, ಸರ್ವವಿದ್ಯಾಗುರುವು, ಜೀವೇಂದ್ರಿಯ ನಿಯಾಮಕನು ಆದ ಶಿವನು, ಸತಿಯೊಡನೆ ಮಾರ್ಕಂಡೇಯನ ಆಶ್ರಮವನ್ನು ಕುರಿತು ಬಂದನು. ಆಕಾಶದಿಂದಿಳಿದು ಬಂದ ಹರನನ್ನು, ಗೌರಿಯನ್ನು, ಮಾರ್ಕಂಡೇಯನು ಅಸಂಪ್ರಜ್ಞಾತನಾಗಿದ್ದುದರಿಂದ ನೋಡಲಾರದಿದ್ದನು. ಅದನ್ನರಿತು ಶಿವನು ಅಣಿಮಾದಿ ಯೋಗಸಿದ್ಧಿಯಿಂದ ವಾಯುವು ರೋಮಕೂಪವನ್ನಂತೆ ಅವನ ಹೃದಯವನ್ನು ಪ್ರವೇಶಿಸಿದನು. ವ್ಯಾಘ್ರಚರ್ಮವನ್ನುಟ್ಟು, ಶೂಲ, ದನುರ್ಬಾಣ, ಖಡ್ಗ, ಚರ್ಮ, ಡಮರು, ಕಪಾಲ, ಪರಶುಗಳನ್ನು ಪಿಡಿದು ಶಂಕರನು ಮನದಿ ತೋರಲು, ಮಾರ್ಕಂಡೇಯನು ವಿಸ್ಮಿತನಾಗಿ, ಕಣ್ತೆರೆದು, ಅಂತಹ ಶಂಕರನನ್ನೇ ಪ್ರತ್ಯಕ್ಷವಾಗಿ ಹೊರಗೂ ಕಂಡನು; ಪಾರ್ವತೀ ಪರಮೇಶ್ವರರಿಗೆ ಶಿರಸಾ ನಮಿಸಿ, ಸ್ವಾಗತವನ್ನಿತ್ತು ಕೂಡಿಸಿ, ಅರ್ಘ್ಯ ಪಾದ್ಯಾದಿಗಳನ್ನರ್ಪಿಸಿದನು; ಗಂಧವನ್ನು ಪೂಮಾಲೆಯನ್ನು ಕೊಟ್ಟು, ದೀಪವಿಟ್ಟು, ಕೈಜೋಡಿಸಿ 'ಶ್ರೀಹರಿಯ ಅನುಗ್ರಹದಿಂದ ಪೂರ್ಣಕಾಮನಾಗಿರುವ ಶಿವನೇ! ನಾನು ನಿನಗೇನು ಸಮರ್ಪಿಸುವುದಿದೆ? ಶಿವ! ಶಾಂತ! ಪರಾಕ್ರಮವಂತ! ಲೋಕಪಾಲಕ! ಲೋಕಪ್ರವರ್ತಕ! ಸಂಹಾರಕ! ನಿನಗೆ ನಮೋನಮಃ ಎಂದು ಸ್ತುತಿಸಿದನು.

ಶ್ರೀಮಹಾದೇವನಿಂತೆಂದನು–

ನಾನು, ನಿಮ್ಮ ತಂದೆ, ನಮ್ಮ ತಾತ – ಮೂವರು ವರಪ್ರದರು. ನಮ್ಮ ದರ್ಶನವು ಅಮೋಘವಾದುದು. ಮರ್ತ್ಯನಿಗೆ ಮುಕ್ತಿಯನ್ನು ಸಾಧಿಸುವ ದಯೆ ತೋರುವೆವು. ರಾಗದ್ವೇಷಹೀನರಾದ ಬ್ರಾಹ್ಮಣರೆಂದರೆ, ನಿಸ್ಸಂಗರೆಂದರೆ, ಭೂತದಯಾಪರರೆಂದರೆ, ನಮಗೆ ನಮಗೆ ಬಲು ಪ್ರೀತಿ! ಸರ್ವೋತ್ತಮನಾದ ಶ್ರೀಹರಿಯ ಮಹಿಮೆಯನ್ನು ತಿಳಿದು, ಯೋಗ್ಯತೆಯಂತೆ ಜೀವರಲ್ಲಿ

ನಡೆದುಕೊಳ್ಳುವ, ವಾಸುದೇವನ ಭಕ್ತರೆಂದರೆ ಬಲು ಪ್ರೀತಿ! ನಾನು, ನಮ್ಮ ತಂದೆಯಂತೆಯೇ ಸ್ವತಂತ್ರನಲ್ಲ. ನಮಗಿಬ್ಬರಿಗೂ ಒಡೆಯನಾದ ಶ್ರೀಲಕ್ಷ್ಮೀಪತಿಯೇ ಸ್ವತಂತ್ರನು. ನನ್ನಲ್ಲಿಯೂ, ಬ್ರಹ್ಮನಲ್ಲಿಯು ಅಂತರ್ಯಾಮಿಯಾಗಿರುವ ಶ್ರೀಹರಿಗೆ ಸ್ವಗತಭೇದವಿಲ್ಲ. ಎಲ್ಲ ಚರಾಚರರ ಅಂತರ್ಯಾಮಿಯು ಒಂದೇ – ಶ್ರೀಹರಿಯೇ ಸ್ವಾಮಿ ಎಂದು ತಿಳಿದಿರುವ ನಿನ್ನಂತಹ ವಿಪ್ರರನ್ನು ನೋಡಿ, ನಾನು ಪ್ರೀತನಾಗಿರುವೆನು. ತೀರ್ಥಗಳೆಂದರೆ, ಜಡಜಲವಲ್ಲ; ದೇವತೆಗಳೆಂದರೆ ಪ್ರತಿಮೆಗಳಲ್ಲ; ಅಲ್ಲಿ ಸನ್ನಿಹಿತರಾಗಿರುವ ದೇವತೆಗಳು ಬೇಗನೆ ಫಲವನ್ನು ಕೊಡುವುದಿಲ್ಲ. ಸಜ್ಜನರಂತಲ್ಲ; ನೋಡಿದ ಮಾತ್ರದಿಂದ ಶ್ರೀಹರಿಯ ಮಹಿಮೆಯನ್ನು ಜ್ಞಾಪಿಸಿಕೊಡುವ ಬ್ರಾಹ್ಮಣರಿಗೆ, ವೇದ ಮೂರ್ತಿಗಳಿಗೆ, ಸದಾಚಾರವಂತರಿಗೆ ನಾವು ನಮಸ್ಕರಿಸುವೆವು. ನಿಮ್ಮಂತಹ ವರ ದರ್ಶನ, ಸಂಭಾಷಣ, ಸ್ಮರಣಗಳಿಂದ ಪಾಪಿಗಳು ಶುದ್ಧರಾಗುವರು.

ಇಂತು ಚಂದ್ರಲಲಾಮನಾಡಿದ ಧರ್ಮಮರ್ಮನಿರೂಪಕ ವಚನವನ್ನಾಲಿಸಿ, ಅಮೃತಪಾನ ವಾದಂತಾಗಿ, ತೃಪ್ತನಾಗದೆ, ಸಮಾಧಿಯ ಸುಖವನ್ನರಿತ ಮಹಾಮುನಿಯು. ಶ್ರೀಹರಿಯ ಬಂಧಕ ಶಕ್ತಿಯ ಮಹಿಮೆಗೆ ಹೆದರಿ, ಶಿವನ ವಾಕ್ಯಾಮೃತಪಾನದಿಂದ ಸ್ವಲ್ಪ ಕ್ಲೇಶಗಳನ್ನು ಮರೆತು, ಭಕ್ತಿಯಿಂದ ಕೈಮೋಡಿಸಿ, ಇಂತು ಮಾತಾಡಿದನು–

ಅಹೋ! ಎಂತಹ ಮಾತು! ವಿಪ್ರರಿಗೆ ಜಗದೀಶರು ನಮಿಸುವಂತೆ! ತಮ್ಮ ಭಕ್ತರಾದ ವಿಪ್ರರಿಗೆ ಇತರರು ವಿನಯದಿಂದ ನಡೆಯಲಿ! ಎಂದು ಮಾರ್ಗದರ್ಶನವನ್ನು ಮಾಡುವ ಲೋಕ ಸಂಗ್ರಹದ ಮಹಿಮೆಯಲ್ಲದೆ ಮತ್ತೊಂದಲ್ಲ. ವಿಪ್ರಸ್ತುತಿಯಿಂದ ಲೋಕ ಪ್ರಭುಗಳ ಮಹಿಮೆ ಕಡಿಮೆಯಾಗುವುದಿಲ್ಲ; ಇನ್ನೂ ಹೆಚ್ಚೇ ಆಗುವುದು. ಶ್ರೀಹರಿಯು ತನ್ನಿಚ್ಛೆಯಿಂದ ಜಾಗವನ್ನು ಸೃಜಿಸಿ, ಜೀವದೇಹಗಳಲ್ಲಿ ಹೊಕ್ಕು, ಗುಣಕರ್ಮಾನುರೂಪವಾಗಿ ಅವರನ್ನು ನಡೆಸುತ್ತಾ, ಶರೀರದಲ್ಲಿದ್ದರೂ ಗುಣಕರ್ಮಗಳ ಲೇಪವಿಲ್ಲದೆ ಇರುವನು. ಅಂತಹ ನಿರ್ಲಿಪ್ತನಾದ ಶ್ರೀಹರಿಗೆ ನಮಸ್ಕರಿಸುವೆನು. ಸ್ವಾಮಿನ್! ಮಹಾದೇವ! ನಿನ್ನ ದರ್ಶನವಾದುದೇ ವರವು! ಮತ್ತಿನ್ನಾವ ವರವೂ ಬೇಡ. ಶ್ರೀಹರಿಯ ಜ್ಞಾನವನ್ನೀವ ಲೋಕಗುರುವೇ! ಮನೋನಿಯಾಮಕನೇ! ಗೌರೀಶ! ನಿನ್ನ ಉಪದೇಶದಿಂದ ನರನು ನಿರ್ದುಃಖನಾಗುವನು. ಆದರೂ ಈ ವರವನ್ನು ಬೇಡುತ್ತಿರುವೆನು. ಪ್ರಭೋ! ಭಗವಂತನಾದ ಅಚ್ಯುತನಲ್ಲಿ ಭಕ್ತಿಯನ್ನು ಕೊಡು! ಅವನ ಭಕ್ತರಲ್ಲಿ – ಮೊದಲು ನಿನ್ನಲ್ಲಿಯೂ ಭಕ್ತಿಯನ್ನು ಅನುಗ್ರಹಿಸು!

ಸೂತನಿಂತೆಂದನು–

ಆ ಪ್ರಾರ್ಥನೆಯನ್ನು ಮನ್ನಿಸಿ ಮಹಾದೇವನು ದೇವಿಯ ಮನವನ್ನರಿತು, ಮಹಾಮುನಿ ಯಲ್ಲಿ ದಯೆ ತೋರುತ್ತಾ, ಇಂತೆಂದನು–

ಮಹರ್ಷಿವರ! ಅಸ್ತು! ನಿನಗೆ ಭಗವಂತನಲ್ಲಿ ದೃಢಭಕ್ತಿಯು ಇರಲಿ! ನಿನ್ನ ಯಶವು ಲೋಕವನ್ನು ಬೆಳಗಲಿ! ಒಂದು ಕಲ್ಪದವರಿವಗೂ ಅಜರಾಮರನಾಗಿ ಬಾಳು! ತ್ರಿಕಾಲಜ್ಞಾನವನ್ನು, ಬ್ರಹ್ಮವರ್ಚಸ್ಸನ್ನು, ಬ್ರಹ್ಮಜ್ಞಾನವನ್ನು ಕೊಟ್ಟಿರುವೆವು. ನೀನು ಪುರಾಣಾಚಾರ್ಯನೆನಿಸುವೆ!

ಇಂತು ವರಗಳನ್ನಿತ್ತು, ದೇವಿಯಿಂದ ಕೂಡಿ, ಶ್ರೀಮಹಾದೇವನು, ಆ ಋಷಿಯ ಗುಣಗಣ ವನ್ನು ಪ್ರಶಂಸಿಸುತ್ತಾ ಹೊರಟುಹೋದನು. ಅಣಿಮಾದಿ ಸಿದ್ಧಿಗಳನ್ನು, ಜ್ಞಾನವಿಜ್ಞಾನಗಳನ್ನು ಪಡೆದ ಮಾರ್ಕಂಡೇಯನು, ಇಂದಿಗೂ ಹರಿಯ ಏಕಾಂತಭಕ್ತನಾಗಿ ಸಂಚರಿಸುತ್ತಿರುವನು.

ಶೌನಕಾ! ಶ್ರೀಹರಿಮಹಿಮೆಯನ್ನು ಕಣ್ಣಾರೆ ಕಂಡ ಮಾರ್ಕಂಡೇಯನ ಪರಮ ಪವಿತ್ರ ಚರಿತ್ರವನ್ನು ನಿನಗರುಹಿದೆನು.

ಕೆಲವರು ದಡ್ಡರು ಪ್ರಳಯಾದಿ ಸರ್ಜನ ಸಮರ್ಥನಾದ ಶ್ರೀಹರಿಮಹಿಮೆಯನ್ನು ಕಾದಾಚಿತ್ಕ ವೆನ್ನುವರು. ಅನಾದಿ ಕಾಲದಿಂದ ಶಶ್ವದೇಕಪ್ರಕಾರ ಮಹಿಮನಾದ ಶ್ರೀಹರಿಯ ವಿಷಯದಲ್ಲಿ, ಭಾವನಾಮಯ ಪ್ರಳಯ ಸರ್ಜನಾದಿಗಳಾವುವೂ ಆಶ್ಚರ್ಯವಲ್ಲ. ಈ ಕಥೆಯನ್ನು ಭಕ್ತಿಯಿಂದ ಹೇಳಿ ಕೇಳಿದವರು ದೇಹಬಂಧವಿಧ್ವಂಸನ ರೂಪವಾದ ಮುಕ್ತಿಯನ್ನು ಪಡೆಯುವರು.

## ೧೦. ಕ್ರಿಯಾಯೋಗ — ಮಾನಸಪೂಜೆ

ಶೌನಕನು ಕೇಳಿಕೊಂಡನು–

ಬ್ರಹ್ಮಜ್ಞಾನಿವರನಾದ ಸೂತನೇ! ಪಂಚರಾತ್ರಾದ್ಯಾಗಮ ತಂತ್ರಗಳಲ್ಲಿ ನೀನು ಕುಶಲನೆನಿಸಿ ರುವೆ. ಶ್ರೀನಾರಾಯಣ ಪೂಜಾವಿಧಾನವನ್ನು ತಿಳಿಸುವ ತಂತ್ರಶಾಸ್ತ್ರಗಳಲ್ಲಿ ಪರಿಣತರಾದ ಸುಜನರು ಕೇಶವ ಪೂಜಾವಿಧಿಯನ್ನೆಂತು ತಿಳಿಸಿರುವರು? ಅಂಗಗಳನ್ನು, ಗರುಡಾದಿ ಪರಿವಾರ ವನ್ನು, ಆಭರಣಗಳನ್ನು, ಭೂಮ್ಯಾದಿ ಪದಾರ್ಥಗಳನ್ನು ಚಿಂತಿಸಿ, ಪೂಜಿಸುವ ಬಗೆ ಹೇಗೆ? ಬ್ರಹ್ಮಾದಿಗಳು ವೇದಗಳಲ್ಲಿಯು, ತಂತ್ರಶಾಸ್ತ್ರಗಳಲ್ಲಿಯು ಹೇಳಿದ ರೀತಿಯಿಂದ ಪೂಜಿಸುವ ರೀತಿ ಯಾವುದು?

ಸೂತನಿಂತೆಂದನು–

ಗುರುನಮಸ್ಕಾರವನ್ನು ಮಾಡಿ ನೀನು ಕೇಳಿದ ಪೂಜಾವಿಧಾನವನ್ನು ಹೇಳುವೆನು. ಈ ಬ್ರಹ್ಮಾಂಡವು ಮಹದಹಂಕಾರ ಮನೋಭೂತಗಳಿಂದಲು, ಇಂದ್ರಿಯಗಳಿಂದಲು, ರಚಿತವಾಗಿ, ಚೇತನರಾಶಿಯಿಂದ ತುಂಬಿದೆ; ಇದು ಶ್ರೀನಾರಾಯಣನ ಪ್ರತಿಮೆ ಎಂದು ತಿಳಿ. ಹರಿಭಿನ್ನವು, ಹರ್ಯಧೀನವೂ ಆದ ಬ್ರಹ್ಮಾಂಡದಲ್ಲಿ ಸರ್ವವೂ ಶ್ರೀಶನ ವಶವಾಗಿ ನಡೆಯುತ್ತಿದೆ. ಪಾದ ದಿಂದ ಭೂಮಿ, ನಾಭಿಯಿಂದ ಅಂತರಿಕ್ಷ, ಶಿರದಿಂದ ಸ್ವರ್ಗ, ನಾಸಿಕೆಯಲ್ಲಿ ವಾಯು, ಕರ್ಣ ಗಳಲ್ಲಿ ದಿಕ್ಕುಗಳು, ಪ್ರಜನನೇಂದ್ರಿಯದಲ್ಲಿ ದಕ್ಷ, ಅಪಾನದಲ್ಲಿ ಮೃತ್ಯು, ಬಾಹುಗಳಲ್ಲಿ ಲೋಕಪಾಲಕರು, ಮನಸ್ಸಿನಲ್ಲಿ ಚಂದ್ರ, ಹುಬ್ಬುಗಳಲ್ಲಿ ಯಮ, ಉತ್ತರೋಷ್ಠದಲ್ಲಿ ಲಜ್ಜೆ, ಅಧರದಲ್ಲಿ ಲೋಭ, ಮೈಕಾಂತಿಯಲ್ಲಿ ಬೆಳದಿಂಗಳು, ದರ್ಪದಲ್ಲಿ ಭ್ರಮೆ, ರೋಮಗಳಲ್ಲಿ ಗಿಡಗಳು, ಕೇಶಗಳಲ್ಲಿ ಮೇಘಗಳು ಪುಟ್ಟಿ, ತನ್ನಾಮರೂಪಗಳಿಂದ ಯುಕ್ತವಾಗಿ, ಶ್ರೀಹರಿಯಿಂದ ಪ್ರವರ್ತಿಸುತ್ತಿವೆ. ಬ್ರಹ್ಮಾಂಡದಲ್ಲಿ ಪುರುಷನಾಮಕ ಶ್ರೀಹರಿಯು ತುಂಬಿ ನಿಂತಿರುವನು.

ಬ್ರಹ್ಮದೇವನು ಜ್ಯೋತಿರೂಪನಾಗಿ ಕೌಸ್ತುಭವೆನಿಸಿ, ಶ್ರೀಹರಿಸೇವೆಯನ್ನು ಮಾಡುತ್ತಿರು ವನು. ಶ್ರೀದೇವಿಯು ಶ್ರೀವತ್ಸವಾಗಿರುವಳು; ಮತ್ತೂ ವನಮಾಲಾರೂಪದಿಂದಿರುವಳು. ವೇದ ಗಳು ಪೀತಾಂಬರಗಳು; ಓಂ ಎಂಬ (ಅ, ಉ, ಮ) ಯಜ್ಞೋಪವೀತ; ಸಾಂಖ್ಯಯೋಗಗಳೆಂಬ ಮಕರಕುಂಡಲಗಳು; ಸತ್ಯಲೋಕವೆಂಬ ಕಿರೀಟ; ಅನಂತಾಸನವೆಂಬ ಪೀಠ; ಧರ್ಮಜ್ಞಾನಾದಿ ಗುಣಸಮೇತನಾದ ಸತ್ವಗುಣ(ಶ್ರೀದೇವಿ)ವೆಂಬುವ ಪದ್ಮ; ಓಜಸ್ಸಹೋಬಲಯುತನಾದ ಮುಖ್ಯಪ್ರಾಣನೆಂಬ ಗದೆ; ಜಲತತ್ವದ ಶಂಖ; ತೇಜಸ್ತತ್ವದ ಚಕ್ರ; ಆಕಾಶ ತತ್ವದ ಖಡ್ಗ; ತಮಸ್ತತ್ವದ ಗುರಾಣಿ; ಕಾಲರೂಪವಾದ ಶಾರ್ಙ್ಗಧನುಸ್ಸು; ಪುಣ್ಯಕರ್ಮಮಯವಾದ ಅಕ್ಷಯ

ತೂಣೀರ; ಇಂದ್ರಿಯಗಳೆಂಬ ಬಾಣಗಳು; ಭೂಮಿಯ ರಥ; ಶಬ್ದಾದಿಗಳೆಂಬ ಗುರಿಗಳು; ಚಕ್ರಪದ್ಮಾದಿ ಮಂಡಲವೆಂಬ ಪೂಜಾಸ್ಥಾನ; ಸರ್ವೋತ್ತಮ ಹರಿಪೂಜಾ ದೀಕ್ಷೆ ಎಂಬ ಸಂಸ್ಕಾರ; ಇಂತು ಉಪಾಂಗಗಳಿಂದ ಹರಿಪೂಜೆಯು ಸಕಲ ದುರಿತ ನಾಶಕವಾಗಿದೆ.

ಭಗ (ಐಶ್ವರ್ಯ, ವೀರ್ಯ, ಯಶ, ಶ್ರೀ, ಜ್ಞಾನ, ವಿಜ್ಞಾನ) ವೆಂಬ ಕಮಲವನ್ನು ಪಿಡಿದಿರುವ ಶ್ರೀಹರಿಯನ್ನು ಧರ್ಮಚಾಮರ, ಯಶೋ ವ್ಯಜನಗಳಿಂದ ಸೇವಿಸಿ, ವೈಕುಂಠವೆಂಬ ಮುತ್ತಿನ ಕೊಡೆಯನ್ನು ಹಿಡಿದು, ಮೂರು ವೇದಗಳ ಅಭಿಮಾನಿಯಾದ ಸುಪರ್ಣ(ಗರುಡ)ನ ಮೇಲೆ ಕೂಡಿಸಿ, ಅರ್ಧ ದೇಹವನ್ನಲಂಕರಿಸಿ ನಿಂತ ಜಗನ್ಮಾತೆಯಾದ ಲಕ್ಷ್ಮೀಯೊಡನೆ ಕೂಡಿ ಮೆರೆದು ಬರುವ ಅಂತರ್ಯಾಮಿಯನ್ನು ಕಣ್ಣಾರೆ ಕಂಡು, ಮುಂದೆ ನಡೆಯುವ ಜನಸಂದಣಿಯನ್ನು ವೇತ್ರಹಸ್ತನಾಗಿ ಸರಿಸುವ ವಿಷ್ವಕ್ಸೇನನಾಜ್ಞೆಯಂತೆ, ಸರಿದುನಿಂತ, ಕೈಜೋಡಿಸಿ ಗೋವಿಂದ, ಗೋವಿಂದ – ಎನ್ನುತ್ತಾ, ನಡದು, ಶ್ರೀನಿವಾಸನ ದಿವ್ಯಮಂದಿರದ್ವಾರವನ್ನು ಸೇರಿ, ಅಲ್ಲಿ ನಂದ ಸುನಂದ, ಬಲ ಪ್ರಬಲ, ಚಂಡ ಪ್ರಚಂಡ, ಜಯ ವಿಜಯರಿಗೆ ನಮಿಸಿ, ಒಳಹೊಕ್ಕು ವಾಸುದೇವಾ! ಸಂಕರ್ಷಣ! ಪ್ರದ್ಯುಮ್ನ! ಅನಿರುದ್ಧ! ಕಾಪಾಡು! ನಿನ್ನ ಚರಣಾರವಿಂದ ಸಂದರ್ಶನ ವನ್ನು ಕೊಡು! ಕೃಪೆಮಾಡು! ಎಂದು ವಂದಿಸಿ 'ವಿಶ್ವನಾಗಿ ಎಚ್ಚರಗೊಳಿಸುವೆ! ತೈಜಸನಾಗಿ ಕನಸನ್ನು ತೋರಿಸುವೆ! ಪ್ರಾಜ್ಞನಾಗಿ ನಿದ್ರಾಸುಖವನ್ನೀವೆ! ತುರೀಯನಾಗಿ ಅಸಂಪ್ರಜ್ಞಾತ ಸಮಾಧಿಯನ್ನಿತ್ತು, ನಿನ್ನ ದಿವ್ಯಚರಣ ಸನ್ನಿಧಾನವನ್ನು ಕೊಟ್ಟು, ಉದ್ಧರಿಸು!' ಎಂದು ದೀನನಾಗಿ ಬೇಡಿ – ಶ್ರೀನಿವಾಸನಿಗೆ ಸರ್ವಸಮರ್ಪಣೆ ಮಾಡಿದ ಧನ್ಯನೆ ನಿಜವಾದ ಪೂಜಕನು. ಅಂಗ, ಉಪಾಂಗ, ಆಭರಣ, ಆಯುಧಗಳಲ್ಲಿ ಚತುರ್ಮೂರ್ತಿಯಾಗಿ ನೆಲೆಸಿ, ನಡೆಸುವ ಶ್ರೀರಮಣನ ಪೂಜೆಯ ವಿಧಾನವನ್ನು ನಿನಗೆ ಪೇಳಿರುವೆನು. ಇಂತು ಪೂಜಿಸಿ, ಸ್ವೇಚ್ಛೆಯಿಂದ ಜಗತ್ತಿಗೆ ಜನನ ಪಾಲನ ಸಂಹರಣಗಳನ್ನು ಮಾಡುವ ಜಗತ್ಪ್ರಭುವಿನ ಗುಣಗಳನ್ನು, ಸ್ವಯೋಗ್ಯ ತಾನುಸಾರವಾಗಿ ಧ್ಯಾನಿಸುವ ಭಕ್ತನಲ್ಲಿ, ಶ್ರೀಶನು ತಾನಾಗಿ ದಯಮಾಡಿ, ಅವನಿಗೆ ತನ್ನ ದಿವ್ಯಸಂದರ್ಶನವನ್ನಿತ್ತು ಸಲಹುವನು.

ಶ್ರೀಕೃಷ್ಣ! ಪಾರ್ಥಸಖ! ಯದುನಾಥ! ಭೂಭಾರ ಭೂತ ದುಷ್ಟರಾಜ ಸಂಹಾರಕ! ಅನಂತ ಪರಾಕ್ರಮ! ಗೋವಿಂದ! ಗೋಬ್ರಾಹ್ಮಣ ದೇವ ಸುಜನ ವ್ಯಸನ ನಿವಾರಣ! ಪವಿತ್ರಚರಣ! ಶ್ರವಣಮಂಗಲ ನಾಮಧೇಯ! ಭಕ್ತಜನಭಾಗಧೇಯ! ನಾರಾಯಣ! ಶರಣು! ಶರಣು! ನಮೋನಮಃ!

ಇಂತು ಚಿಂತಿಸಿ, ಪ್ರಾತಃಕಾಲದಿ ಶ್ರೀನಾರಾಯಣನನ್ನು, ಹೃದಯಮಂದಿರದಲ್ಲಿ ಶ್ರದ್ಧೆಯಿಂದ ಪೂಜಿಸುವ ಭಕ್ತನು ಬ್ರಹ್ಮಜ್ಞಾನಿಯಾಗುವನು.

## ೧೧. ಸೌರವ್ಯೂಹ

ಶೌನಕನು ಪ್ರಶ್ನಿಸಿದನು–

ಸೂತನೇ! ವಿಷ್ಣುರಾತನಿಗೆ ಶುಕನು ಪೇಳಿದ ಸೌರವ್ಯೂಹವನ್ನು ನಿರೂಪಿಸು! ಅದು ಸೂರ್ಯಾಂತರ್ಗತ ನಾರಾಯಣನ ಮಹಿಮೆಯಲ್ಲವೇ?

ಸೂತನಿಂತೆಂದನು–

ಲೋಕದ ದಿನಂಪ್ರತಿ ಪ್ರವೃತ್ತಿಯನ್ನು ನಡೆಸುವ ಸೂರ್ಯಾಂತರ್ಗತ ನಾರಾಯಣನು ಚೇತನಾಚೇತನ ಜಗನ್ನಿಯಾಮಕನಾಗಿ, ದಿನ, ಮಾಸ, ಪಕ್ಷ ವತ್ಸರಾದಿ ಕಾಲಾವಯವಗಳಿಂದ, ಜೀವರ ಆಯುಸ್ಸನ್ನು ಕತ್ತರಿಸಿಬಿಡುತ್ತಿರುವನು. ಸರ್ವವೇದ ಸಮ್ಮಿತ ಕ್ರಿಯೆಗಳೆಲ್ಲವು ನಡೆಯುವುದವನಿಂದ, ಋಷಿಗಳಿದನ್ನರಿತು ಸಂಧ್ಯಾವಂದನಾದಿಗಳಿಂದ ಅವನನ್ನು ಪೂಜಿಸಿ, ದೀರ್ಘಾಯುರಾರೋಗ್ಯಾದಿಗಳನ್ನು ಪಡೆಯುತ್ತಿರುವರು. ಪ್ರಾತರಾದಿ ಕಾಲ, ಸಮವಿಷಯಾದಿ ದೇಶ ಅನುಷ್ಠಾನ, ಇಂದ್ರಿಯಗಳು, ಶರೀರ, ಶಾಸ್ತ್ರ, ಚರುಪುರೋಡಾಶಾದಿ ದ್ರವ್ಯ, ಸ್ವರ್ಗಮೋಕ್ಷಾದಿ ಫಲ, ಮಾಡುವ ಜೀವ ಎಂದು ಒಂಭತ್ತು ಪದಾರ್ಥಗಳಿಗೆ ಅಂತರ್ಯಾಮಿಯೂ, ಶಕ್ತಿಪ್ರದನು ಆದ ಶ್ರೀಹರಿಯ ಕಾಲಚಕ್ರವೆನಿಸಿದ ಸೂರ್ಯಮಂಡಲದ ಸೌರವ್ಯೂಹವನ್ನು ಹೇಳುವೆನು. ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ಸೂರ್ಯನ ದ್ವಾರಾ ಲೋಕಯಾತ್ರೆಯನ್ನು ನಡೆಸುವ ವಿಧ ವಿಂತಿದೆ.

ಶೌನಕಾ! ಇಂತು ಆದಿತ್ಯಾಂತರ್ಯಾಮಿಯ ವಿವಿಧ ರೂಪಗಳನ್ನು ಸಂಧ್ಯೆಗಳಲ್ಲಿ ಸ್ಮರಿಸಿದವನು ಪಾಪಮುಕ್ತನಾಗುವನು. ಹನ್ನೆರಡು ತಿಂಗಳಲ್ಲಿಯು ಆರು ಜನ ಪರಿವಾರದವರೊಡಗೂಡಿ, ರವಿಯು ತನ್ನನ್ನು ಧ್ಯಾನಿಪರ ಪಾಪನಿವಾರಕನಾಗಿ ಸಂಚರಿಸುತ್ತಿರುವನು.

ಋಷಿಗಳು ವೇದಮಂತ್ರಗಳಿಂದ ಶ್ರೀಸೂರ್ಯಾಂತರ್ಗತ ಹರಿಯನ್ನು ನುತಿಸುವರು. ಗಂಧರ್ವರು ಗಾನಮಾಡುವರು. ಅಪ್ಸರೆಯರು ಸೂರ್ಯರಥದ ಮುಂದೆ ನರ್ತಿಸುವರು. ನಾಗರಿಂದ ರಥದ ಕುದುರೆಯ ಕಡಿವಾಣದ ಕೆಲಸ ನಡೆಯುವುದು. ತಕ್ಷರು ರಥವನ್ನು ಸರಿಮಾಡುತ್ತಿರುವರು. ಬಲಶಾಲಿಗಳಾದ ರಾಕ್ಷಸರು ಹಿಂದೆ ನಿಂತು ರಥವನ್ನು ಮುಂದಕ್ಕೆ ದೂಡುವರು. ಇವರಲ್ಲದೆ ವಾಲಖಿಲ್ಯರೆಂಬ ಅರವತ್ತು ಸಾವಿರ ಬ್ರಹ್ಮರ್ಷಿಗಳು, ಅಭಿಮುಖರಾಗಿ ಸೂರ್ಯನನ್ನು ನುತಿಸುತ್ತಾ – ಸೂರ್ಯವ್ಯೂಹದ ವೇಗದಿಂದ ತಾವೂ ಮಾನಸೋತ್ತರ ಶಿಖರದಿ ಆದಿತ್ಯ ಮಾರ್ಗದಲ್ಲಿ ಸಂಚರಿಸುತ್ತಿರುವರು. ಇಂತು ಅನಾದಿ ಮಧ್ಯಾಂತನಾದ ಶ್ರೀಹರಿಯು ಸೂರ್ಯವ್ಯೂಹ ನಿಯಾಮಕನಾಗಿ ಪ್ರತಿಕಲ್ಪದಲ್ಲಿಯೂ ಲೋಕಯಾತ್ರೆಯನ್ನು ನಡೆಸುತ್ತಿರುವನು.

## ೧೨. ಅನುಕ್ರಮಣಿಕೆ – ಫಲಶ್ರುತಿ

ಶ್ರೀಸೂತನು ನಿರೂಪಿಸಿದನು–

ಧರ್ಮನಿಯಾಮಕನು, ಸರ್ವೋತ್ತಮನು ಆದ ಶ್ರೀಯಾದವ ಕೃಷ್ಣನಿಗೂ, ವಾಸಿಷ್ಠ ಕೃಷ್ಣನಿಗೂ, ನಮಸ್ಕರಿಸಿ, ವಿಪ್ರವರರಿಗೆ ವಂದಿಸಿ, ಸನಾತನ ಧರ್ಮಗಳನ್ನು ಪೇಳುವೆನು.

ಶೌನಕಾದಿ ಬ್ರಾಹ್ಮಣೋತ್ತಮರೇ! ಶ್ರೀಹರಿಯ ಅದ್ಭುತ ಚರಿತ್ರವನ್ನು ನೀವು ಕೇಳಿದ ಪ್ರಶ್ನೆಗಳಿಗುತ್ತರವಾಗಿ, ವರ್ಣಿಸಿರುವೆನು. ನಾನು ಪೇಳಿದ ಶ್ರೀಭಾಗವತದಲ್ಲಿ ಸಾಕ್ಷಾಚ್ಛ್ರೀಹರಿಯ ಪಾಪಹರ ಚರಿತವೇ ವರ್ಣಿತವಾಗಿದೆ, ಇನ್ನೊಂದಿಲ್ಲ.

ಸರ್ವೇಂದ್ರಿಯಪ್ರೇರಕನು, ಸಜ್ಜನಗತಿಪ್ರದನು, ಅವ್ಯಾಹತಷಡ್ಗುಣೈಶ್ವರ್ಯಸಂಪನ್ನನು, ಲಕ್ಷ್ಮೀರಮಣನು, ಜಗಜ್ಜನ್ಮಾದಿ ಕಾರಣನು, ವೇದೈಕವೇದ್ಯನು, ಆದ ನಾರಾಯಣನನ್ನು ಪೇಳುವ ಭಾಗವತವು ಶ್ರೀಹರಿಯ ಅನುಗ್ರಹ ಬಲದಿಂದ ಮುಗಿಯಿತು. ಸಜ್ಜನರ ಕಥೆಗಳ

ನೆವದಿಂದ, ಜ್ಞಾನವಿಜ್ಞಾನಗಳನ್ನು, ಭಕ್ತಿಯೋಗವನ್ನು ವಿಸ್ತರಿಸಿ, ವರ್ಣಿಸಿದುದಾಯಿತು. ನಮಗೆಲ್ಲ ನಿಜವಾದ ವೈರಾಗ್ಯವು ಅಂಕುರಿಸಿತು.

ನಾನು ಹೇಳಿರುವ ವಿವರಗಳಿಂತಿವೆ. ಪರೀಕ್ಷಿತನ ಭಾಗವತ ಶ್ರವಣ, ನಾರದನ ಪೂರ್ವ ಜನ್ಮದ ವೃತ್ತಾಂತ, ರಾಜರ್ಷಿವರನಾದ ಪರೀಕ್ಷಿತನಿಗೆ ವಿಪ್ರಶಾಪ, ಗಂಗಾತೀರದಿ ಪ್ರಾಯೋ ಪವೇಶ, ಶುಕಪರೀಕ್ಷಿತರ ಸಂವಾದ, ಅಖಂಡ ಸ್ಮರಣೆಯ ಮಹಿಮೆ, ಉತ್ಕ್ರಾಂತಿ ವಿಧಾನ, ನಾರದ ಬ್ರಹ್ಮಸಂವಾದ, ಅವತಾರವರ್ಣನೆ, ಚತುಶ್ಲೋಕೀಭಾಗವತ, ಪ್ರಾಕೃತಿಕ ಸರ್ಗ, ಪುರಾಣ ದಶಲಕ್ಷಣ, ವಿದುರೋದ್ಧವ ಸಂವಾದ, ಮೈತ್ರೇಯವಿದುರ ಸಂವಾದ, ಪುರುಷರೂಪ ವರ್ಣನೆ, ಪ್ರಾಕೃತ ವೈಕೃತ ಸೃಷ್ಟಿಗಳು, ಬ್ರಹ್ಮಾಂಡದಲ್ಲಿ ಪುರುಷರೂಪ ವರ್ಣನೆ, ಕಾಲದ ಗತಿ, ಪದ್ಮ ಸಂಭವ ಜನನ, ಭೂಮ್ಯುದ್ಧಾರ ವರಾಹಚರಿತೆ, ಹಿರಣ್ಯಾಕ್ಷ ವಧ, ರುದ್ರಸರ್ಗ, ಶತರೂಪಾಮನು ರಾಜರ ಚರಿತೆ, ಧರ್ಮಪತ್ನಿಯರ ಸಂತಾನ, ಕರ್ದಮ ಚರಿತೆ, ನವಬ್ರಹ್ಮ ವಿವಾಹ, ಕಪಿಲೋಪ ದೇಶ, ದಕ್ಷಯಜ್ಞವಿನಾಶ, ಧ್ರುವಚರಿತೆ, ಪೃಥು ರಾಜಕಥೆ. ಪ್ರಾಚೀನಬರ್ಹಿ ವೃತ್ತಾಂತ, ಪುರಂಜನಾಖ್ಯಾನ, ಪ್ರಿಯವ್ರತ ಚರಿತೆ, ನಾಭಿಕಥಾ, ಋಷಭಾವತಾರ, ಭರತಾಖ್ಯಾನ, ಭೂಗೋಲ - ಖಗೋಲ - ವಿಚಾರ, ಪಾತಾಲ - ನರಕ- ವರ್ಣನೆ, ಅಜಾಮಿಲಕಥಾ, ದಕ್ಷಸಂತಾನ ವಿಸ್ತಾರ, ನಾರಾಯಣವರ್ಮ, ವೃತ್ರವಧೆ, ಚಿತ್ರಕೇತು ಚರಿತೆ, ಮರುಜ್ಜನ್ಮ, ಪ್ರಹ್ಲಾದಕಥೆ, ಗಜೇಂದ್ರಮೋಕ್ಷ, ಹಯಶಿರಾದಿ ಅವತಾರಗಳು, ಅಮೃತಮಥನ, ಬಲಿಚರಿತ್ರೆ, ತ್ರಿವಿಕ್ರಮ ಪರಾಕ್ರಮ, ಮತ್ಸ್ಯಕಥೆ, ಸುದ್ಯುಮ್ನಕಥೆ, ಐಲವಂಶ, ತಾರಾವೃತ್ತಾಂತ, ಸೂರ್ಯವಂಶ ವರ್ಣನೆ, ಚ್ಯವನಕಥೆ, ಖಟ್ವಾಂಗ ಕಥೆ, ಸೌಭರಿಚರಿತೆ, ಶ್ರೀರಾಮಚಂದ್ರ ಚರಿತೆ, ನಿಮಿಕಥೆ, ಪರಶುರಾಮ ವೃತ್ತಾಂತ, ಚಂದ್ರವಂಶ ವಿಸ್ತಾರ, ಭರತಶಂತನುಗಳ ವೃತ್ತಾಂತ, ಯದುವಂಶ ವರ್ಣನೆ, ಶ್ರೀಕೃಷ್ಣಾವತಾರ, ಪೂತನಾಮಾರಣ, ಶಕಟಾಸುರಭಂಜನ, ತೃಣಾವರ್ತ, ಬಕ, ವತ್ಸ, ದೇನುಕ, ಪ್ರಲಂಬಾದಿ ರಾಕ್ಷಸಸಂಹಾರ, ದಾವಾಗ್ನಿಪಾನ, ಕಾಲಿಯ ದಮನ, ನಂದಮೋಕ್ಷಣ, ಕಾತ್ಯಾ ಯನೀವ್ರತ ಫಲದಾನ, ಯಜ್ಞಪತ್ನೀಭೋಜನ ಸ್ವೀಕಾರ, ಗೋವರ್ಧನೋದ್ಧರಣ, ರಾಸಕ್ರೀಡೆ, ಗೋಪಿಗೀತೆ, ವೇಣುಗೀತೆ, ಶಂಖಚೂಡವಧೆ, ಅರಿಷ್ಟಕೇಶಿಗಳ ಸಂಹಾರ, ಅಕ್ರೂರಾಗಮನ, ಮಧುರಾಗಮನ, ಗಜಚಾಣೂರಮುಷ್ಟಿಕ ಕಂಸಾದಿವಧೆ, ಗುರುದಕ್ಷಿಣಾದಾನ, ಪಾಂಡವ ಕ್ಷೇಮಾವಲೋಕನ, ಭ್ರಮರಗೀತೆ, ಜರಾಸಂಧ ಪರಾಜಯ, ಕಾಲಯವನ ಸಂಹಾರ, ಮಚು ಕುಂದಚರಿತೆ, ದ್ವಾರಕಾನಿರ್ಮಾಮ, ರುಕ್ಮಿಣ್ಯಾದಿ ರಮಣೀವಿವಾಹ, ನರಕಾಸುರವಧೆ, ಪಾರಿಜಾತಾ ಪಹರಣ, ಬಾಣಭುಜಕೃಂತನ, ಚೈದ್ಯ ಪೌಂಡ್ರಸಾಲ್ವ ದಂತವಕ್ತ್ರ ವಿಧೂರಥರ ವಧೆ, ಶಂಬರ ಸಂಹಾರ, ವಿವಿಧ ಮುರ ಪಂಚಜನರ ವಧೆ, ಪಾಂಡವ ವಿಜಯಸಾಧನ, ಭೂಭಾರಹರಣ, ವಿಪ್ರಶಾಪ, ಯದುಕುಲೋಪಸಂಹಾರ; ವಸುದೇವ ನಾರದರ ಸಂವಾದ, ಜಾಯಂತೇಯೋ ಪಾಖ್ಯಾನ, ವಾಸುದೇವೋದ್ಧವ ಸಂವಾದ, ವರ್ಣಾಶ್ರಮ ಧರ್ಮನಿರೂಪಣೆ, ಶ್ರೀಕೃಷ್ಣ ಪರಂಧಾ ಮಗಮನ, ಕಲಿಯುಗದ ಲಕ್ಷಣ, ಕಲಿಮಲನಿವಾರಣೋಪಾಯ, ಚತುರ್ವಿಧ ಪ್ರಲಯ, ರಾಜರ್ಷಿ ಪರೀಕ್ಷಿತನ ದೇಹತ್ಯಾಗ, ಸರ್ಪಯಾಗ, ವೇದವಿಭಾಗ, ಮಾರ್ಕಂಡೇಯಚರಿತೆ, ಮಹಾಪುರುಷ ಪೂಜಾವಿಧಾನ, ಸೂರ್ಯವ್ಯೂಹ ವಿವರಣೆ – ಎಂಬ ವಿಷಯಗಳನ್ನು ನಿಮಗೆ ನಿರೂಪಿಸಿರುವೆನು. ನಿಮ್ಮವನಾದ ನಾನು ಧನ್ಯನಾದೆನು. ಸರ್ವತ್ರ ಭಾಗವತದಲ್ಲಿ ಶ್ರೀಹರಿ ಲೀಲಾವತಾರ ಕರ್ಮಗಳನ್ನೇ ವರ್ಣಿಸಿರುವೆನು. ಬಿದ್ದಾಗ, ಜಾರಿದಾಗ, ಸೀತಾಗ, ಆಕಳಿಸಿದಾಗ,

| ಮಾಸ | ರವಿ | ಋಷಿ | ಗಂಧರ್ವ | ಅಪ್ಸರೆ | ನಾಗ | ತಕ್ಷ | ರಾಕ್ಷಸ |
|---|---|---|---|---|---|---|---|
| ಚೈತ್ರ | ಧಾತ | ಪುಲಸ್ತ್ಯ | ತುಂಬುರು | ಕೃತಸ್ಥಲಿ | ವಾಸುಕಿ | ರಥಕೃತ್ | ಹೇತಿ |
| ವೈಶಾಖ | ಅರ್ಯಮ | ಪುಲಹ | ನಾರದ | ಪುಂಜಕಸ್ಥಲಿ | ಕಚ್ಛನೀರ | ಓಜಸ | ಪ್ರಹೇತಿ |
| ಜ್ಯೇಷ್ಠ | ಮಿತ್ರ | ಅತ್ರಿ | ಹಾಹಾ | ಮೇನಕಾ | ತಕ್ಷಕ | ರಥಸ್ವನ | ಪೌರುಷೇಯ |
| ಆಷಾಢ | ವರುಣ | ವಶಿಷ್ಠ | ಹೂಹೂ | ರಂಭೆ | ಶುಕ್ರ | ಚಿತ್ರಸ್ವನ | ಸಹಜನ್ಯ |
| ಶ್ರಾವಣ | ಇಂದ್ರ | ಅಂಗಿರ | ವಿಶ್ವಾವಸು | ಪ್ರಮ್ಲೋಚೆ | ಏಲಾಪತ್ರ | ಸ್ರೋತಾ | ಸ್ವರ್ಯ |
| ಭಾದ್ರಪದ | ವಿವಸ್ವಾನ್ | ಭೃಗು | ಉಗ್ರಸೇನ | ಅನುಮ್ಲೋಚೆ | ಶಂಖಪಾಲ | ಅಸಾರಣ | ವ್ಯಾಘ್ರ |
| ಆಶ್ವಯುಜ | ತ್ವಷ್ಟಾ | ಬ್ರಹ್ಮರಾತ | ಧೃತರಾಷ್ಟ್ರ | ತಿಲೋತ್ತಮೆ | ಕಂಬಲ | ಶತಜಿತ್ | ಋಚೀಕತನಯ |
| ಕಾರ್ತೀಕ | ವಿಷ್ಣು | ವಿಶ್ವಾಮಿತ್ರ | ಸೂರ್ಯವರ್ಚ | ರಂಭೆ | ಅಶ್ವತರ | ಸತ್ಯಕ | ಅಶ್ವ |
| ಮಾರ್ಗಶಿರ | ಅಂಶು | ಕಶ್ಯಪ | ಧೃತಸೇನ | ಊರ್ವಶಿ | ಮಹಾಶಂಖ | ತಾರ್ಕ್ಷ್ಯ | ವಿದ್ಯುಚ್ಛಂಕು |
| ಪುಷ್ಯ | ಭಗ | ಅರಿಷ್ಟನೇಮಿ | ಊರ್ಣ | ಪೂರ್ವಚಿತ್ತಿ | ಕರ್ಕೋಟಕ | ಆಯು | ಸ್ಫೂರ್ಜ |
| ಮಾಘ | ಪೂಷಾ | ಗೌತಮ | ಸುರುಚಿ | ಘೃತಾಚಿ | ಧನಂಜಯ | ಸುಷೇಣ | ವಾತ |
| ಫಾಲ್ಗುಣ | ಪರ್ಜನ್ಯ | ಭರದ್ವಾಜ | ವರ್ಚಸ | ಋತು | ಐರಾವತ | ಸೇನಜಿತ್ | ವಿಶ್ವ |

ಬಿಡದೆ ಮನವಿಟ್ಟು ಶ್ರೀಹರಿಯೇ ನಮಃ, ಎಂದು ಉಚ್ಚರಿಸಿದವನು ಸರ್ವಪಾಪದೂರನಾಗುವನು.

ಸಂಕೀರ್ತಿಸುವ ಸುಜನ ಸಭೆಯಲ್ಲಿ ತನ್ನ ಮಹಿಮೆಗೆ ಮಾರುಹೋಗಿ ಮೈಮರೆತ ಭಕ್ತರ ಚಿತ್ತದಲ್ಲಿ ಬಂದು, ಗೋವಿಂದನು - ಸೂರ್ಯನು ಕತ್ತಲನ್ನಂತೆ, ಬಿರುಗಾಳಿಯು ಮೇಘಪಟಲವನ್ನಂತೆ – ಅವರ ಸರ್ವಪಾಪವನ್ನು ನಾಶಮಾಡುವನು.

ಭಗವಂತನಾದ ಅಧೋಕ್ಷಜನ ಕಥೆಯನ್ನು ವರ್ಣಿಸಿದ ವಚನವನ್ನು, ಅಸತಿಯಂತೆ, ಅಪವಿತ್ರವೆಂದು ತಿಳಿ! ಆಡುವ ಮಾತಿಗೆ ಫಲವೆಂದರೆ ಮಂಗಳದೇವತಾಪತಿಯಾದ ಗೋವಿಂದನ ಗುಣಗಾನವೇ ಸರಿ! ಭಗವದ್ಗುಣಯುತವಚನವೇ ಪುಣ್ಯಕರವು. ಅದೇ ನಿತ್ಯನೂತನವು; ಅದೇ ಮಾನಸಿಕ ಮಹೋತ್ಸವವು; ಅದೇ ಪಾಪಶೋಷಕವು, ಅದೇ ಸರ್ವಶೋಕನಾಶಕವೂ ಆಗಿದೆ. ಚಿತ್ರವಿಚಿತ್ರಪದಬಂಧಬಂಧುರವಾಗಿದ್ದರೂ, ಯಾವ ವಚನದಿಂದ ಜಗತ್ಪವಿತ್ರ ಶ್ರೀಹರಿಕಲ್ಯಾಣ ಗುಣವರ್ಣನವಾಗಿಲ್ಲವೋ ಆ ವಚನವನ್ನು ಕಾಗೆಗಳು ಮುಣುಗುವ ಕೊಳಕು ನೀರೆಂದು ತಿಳಿ! ಅಲ್ಲಿ ಹಂಸಗಳು ಬರುವುದಿಲ್ಲವೆಂದು ತಿಳಿದು, ಅಂತಹ ಮಾತನ್ನಾಡದಂತಿರುವುದೇ ಲೇಸು. ಶೌನಕಾ! ಎಲ್ಲಿ ಅಚ್ಯುತಕಥೆಗಳೋ ಅಲ್ಲಿ ಸಾಧುಗಳು. ಅವಿಲ್ಲದಲ್ಲಿ, ಅವರೂ ಇಲ್ಲ.

ಪ್ರತಿಶ್ಲೋಕ, ಶ್ಲೋಕಾರ್ಧಗಳು – ವ್ಯಾಕರಣಾದಿ ಶಾಸ್ತ್ರದೂಷಿತಶಬ್ದಯುತವಾಗಿದ್ದರೂ – ಆ ವಾಕ್ಯಗಳಲ್ಲಿ, ಶ್ರೀನಾರಾಯಣ ಪವಿತ್ರ ಕೀರ್ತಿಗಾನವಿತ್ತೆಂದರೆ ಸಾಕೆಂದು ಸಜ್ಜನರು. ಕಿವಿಗೊಟ್ಟು ಕೇಳುವರು. ಶಿರಸಾ ಶ್ಲಾಘಿಸುವರು. ಮತ್ತು ತಾವೂ ಆ ವಚನಗಳಿಂದ ಶ್ರೀಹರಿಯನ್ನು ಪೊಗಳುವರು. ಜ್ಞಾನವು ಪಾಪಪರಿಹಾರಕವಾಗಿದೆ. ಮತ್ತ ಮೋಕ್ಷಸಾಧಕವೂ ಅಹುದು; ಆದರೆ ಶ್ರೀಹರಿಭಕ್ತಿಯಿಲ್ಲದ ಜ್ಞಾನವು ಸುತರಾಂ ಪಾಪಪರಿಹಾರಕವು ಆಗಲಾರದು. ಭಕ್ತಿಯಿಲ್ಲದ ಜ್ಞಾನದಿಂದ ಮೋಕ್ಷವೂ ಸಿಗದು. ಇಂತಿರಲು ಬಂಧಕವಾಗಿ ಸ್ವರ್ಗನರಕ ಫಲವನ್ನೀವ ಪುಣ್ಯಪಾಪ ರೂಪವಾದ ಕರ್ಮವು ಶ್ರೀಹರಿಭಕ್ತಿಯಿಂದ ಶ್ರೀಶನ ಚರಣಾರವಿಂದದಲ್ಲಿ ಸಮರ್ಪಿತವಾಗದಿದ್ದರೆ, ಜನನಮರಣ ರೂಪ ಸಂಸಾರದಲ್ಲಿ ಕೆಡಹದಿರುವುದೇ? ಕರ್ಮಫಲವು ಶ್ರೀಹರಿಗೇ ಸೇರಿದುದಾಗಿದೆ. ವರ್ಣಾಶ್ರಮಾಚಾರಾದಿಗಳಿಂದ ಶ್ರೀಹರಿಭಕ್ತಿಯನ್ನು ಸಾಧಿಸಬೇಕು. ಶ್ರೀಹರಿಭಕ್ತಿಯಿಲ್ಲದವನ ಆಚಾರ ಧರ್ಮಗಳು, ಯಶಸ್ಸಿಗೂ, ಸಂಪತ್ತಿಗೂ ಕಾರಣವಾಗಬಹುದು. ಆಗಲಿ; ಆತ್ಯಂತಿಕ ಶ್ರೇಯೋರೂಪಮೋಕ್ಷಕ್ಕೆ ಭಕ್ತಿಯೇ ಸಾಧನವೆನಿಸಿದೆ. ಶ್ರೀಧರ ಪಾದಾರವಿಂದ ನಿರಂತರ ಸ್ಮರಣವು ಭಕ್ತಿವರ್ಧಕವಾಗಿದೆ. ಶ್ರೀಶಗುಣಾನುವಾದ, ಶ್ರವಣಾದಿಗಳಿಂದಲ್ಲದೆ ಸ್ಮರಣ ಭಕ್ತಿಗಳು ಪುಟ್ಟಲಾರವು. ಶ್ರೀಶನಿರಂತರಸ್ಮರಣೆಯು ಸರ್ವಪಾಪ ಪರಿಹಾರಕವು, ಸರ್ವಶುಭ ಫಲಪ್ರದವು, ಮನಶ್ಶುದ್ಧಿ ಸಂಪಾದಕವು, ಭಕ್ತಿ ಜ್ಞಾನ ವಿಜ್ಞಾನ ವೈರಾಗ್ಯ ಭಾಗ್ಯ ನಿದಾನವೂ ಆಗಿದೆ.

ಶೌನಕಾದಿ ಬ್ರಾಹ್ಮಣೋತ್ತಮರೇ! ನೀವೇ ಧನ್ಯರು – ಪುಣ್ಯವಂತರು! ಅಂತರ್ಯಾಮಿಯು, ಅಖಿಲಜೀವ ನಿಯಾಮಕನು, ದೇವದೇವನು, ಸರ್ವೋತ್ತಮನೂ ಆದ ಶ್ರೀನಾರಾಯಣನನ್ನು ಇತರ ವಿಷಯಗಳಲ್ಲಿ ಪೋಗದಂತೆ ಮಾಡಿದ ಮನವನ್ನಿಟ್ಟು ಭಕ್ತಿಯಿಂದ ಭಜಿಸುವ ಮಹಾನುಭಾವರಾದ ನಿಮಗೆ ನಮಸ್ಕರಿಸುತ್ತಿರುವೆನು.

ಒಳ್ಳೆಯದಾಯಿತು! ನಾನು ಧನ್ಯನಾದೆನು. ಹಿಂದೆ ಗಂಗಾತೀರದಲ್ಲಿ ಪ್ರಾಯೋಪವಿಷ್ಟನಾಗಿ ಕೂತಿದ್ದ ಪರೀಕ್ಷಿನ್ಮಹಾರಾಜನಿಗೆ ಶ್ರೀಶುಕರು, ಸದಸ್ಸಿನ ಸಜ್ಜನರು ಕೇಳುತ್ತಿರಲು, ಪೇಳಿದ

ಶ್ರೀಭಾಗವತದ ನೆನಪು ನನಗಾಗುವಂತೆ ಮಾಡಿದ ನಿಮಗೆ ನಾನು ಋಣಿಯಾಗಿರುವೆನು.

ಹೇಳಬೇಕು ಶ್ರೀಹರಿಯ ಕಥೆಯನ್ನು! ಪೊಗಳಬೇಕು ವಾಸುದೇವನನ್ನು! ಶ್ರೀಶನ ಮಹಿಮೆಯು ಸರ್ವಾಶುಭವಿನಾಶಕವಾಗಿದೆ. ನಿತ್ಯವೂ ಒಂದು ಜಾವ, ಅಥವಾ ಕ್ಷಣಕಾಲವಾದರೂ ಶ್ರದ್ಧೆಯಿಂದ ಹೇಳಿದವನು ಮತ್ತು ಕೇಳಿದವನು ಕೂಡ ನಿರ್ಮಲಮನಸ್ಕನಾಗುವನು. ದ್ವಾದಶೀ ಏಕಾದಶೀ ದಿನಗಳಲ್ಲಿ ಭಾಗವತವನ್ನು ಕೇಳಿದವನು, ಹೇಳಿದವನು ಪಾಪರಹಿತನಾಗುವನು; ಆಯುಸ್ಸು ಸಾರ್ಥಕಮಾಡಿಕೊಳ್ಳುವನು. ಉಪವಾಸವಿದ್ದು, ಭಾಗವತವನ್ನು ಕೇಳಿದವರು ಪಾಪಮುಕ್ತರಾಗುವರು.

ಪುಷ್ಕರ, ಮಥುರೆ, ದ್ವಾರಾವತಿ, ಕಾಶಿ, ಮುಂತಾದ ಪುಣ್ಯಸ್ಥಲಗಳಲ್ಲಿ ಭಾಗವತ ಶ್ರವಣ ಪಠನಗಳಿಂದ ಸಂಸಾರ ಭಯ ಪರಿಹಾರವಾಗುವುದು. ಅವರಿಗೆ ಶ್ರೀಶನಪ್ಪಣೆಯಂತೆ ದೇವ, ಮುನಿ, ಸಿದ್ಧ, ಪಿತೃ, ಭೂತಗಳು ಪ್ರಸನ್ನರಾಗಿ, ಬೇಡಿದ್ದನ್ನಿತ್ತು ಸಲಹುವರು. ಬ್ರಾಹ್ಮಣನು ಭಾಗವತವನ್ನು ಕೇಳಿ, ವೇದಗಳನ್ನೆಲ್ಲ ಓದಿದ ಫಲಕ್ಕೆ ಪಾತ್ರನಾಗುವನು. ಅವನ ಮನೆಯಲ್ಲಿ ಹಾಲಿನ ಕಾಲುವೆ, ಮೊಸರಿನ ಕಾಲುವೆ, ತುಪ್ಪದ ಕಾಲುವೆ, ಜೇನಿನ ಕಾಲುವೆಗಳು ಹರಿಯುವುವು. ಅವನಿಗೆ ಇಹದ ಸುಖ ಸಮೃದ್ಧಿಯಲ್ಲದೆ, ಶ್ರದ್ಧೆಯ ಫಲವಾಗಿ ಶ್ರೀವಿಷ್ಣುಲೋಕವು ಸಿಗುವುದು. ವಿಪ್ರನು ಪ್ರಜ್ಞಾವಂತನಾಗುವನು. ಕ್ಷತ್ರಿಯನು ರಾಜವೃದ್ಧಿಯನ್ನು, ವೈಶ್ಯನು ಧನವೃದ್ಧಿಯನ್ನು, ಶೂದ್ರನು ಪಾಪನಾಶವನ್ನು ಪಡೆಯುವರು.

ಕಲಿಕಾಲದ ಪಾಪವನ್ನು ತೊಳೆದುಬಿಡುವ ಮಹಿಮೆಯಿಂದ ಶೋಭಿತನಾದ ನಾರಾಯಣನು, ಇತರ ಪುರಾಣಗಳಲ್ಲಿ ಇಷ್ಟು ಚೆನ್ನಾಗಿ ಹೇಳಲ್ಪಟ್ಟಿಲ್ಲ; ಭಾಗವತದಲ್ಲಿ ಪ್ರತಿ ಪದದಲ್ಲಿಯು ಇತರ ಭಕ್ತರ ಕಥೆಗಳ ನೆವದಿಂದ ಶ್ರೀಹರಿಯೇ ವರ್ಣಿತನಾಗಿರುವನು. ಶ್ರೀಹರಯೇ ನಮಃ!

ಸರ್ವೋತ್ತಮ ಶ್ರೀಹರಿಯ ದಯದಿಂದ ಬಂದ ಜ್ಞಾನದಿಂದ ತುಂಬಿದ ಮನದಲ್ಲಿ ಶ್ರೀಶನನ್ನೇ ನೋಡುತ್ತಾ, ಇತರ ವಿಷಯಗಳನ್ನು ಮರೆತು, ಮಾಧವನ ಮಹಿಮೆಗೆ ಮಾರುಹೋದ ಮನದಿಂದ ಮೈಮರೆತು ಪಾಡುತ್ತಾ, ಪುರಾಣರತ್ನವಾದ ಭಾಗವತನನ್ನು ಕೈಯಲ್ಲಿ ದೀಪದಂತೆ ಪಿಡಿದು ತೋರುತ್ತಾ, ಸುಜನರಿಗೆ ಉಪದೇಶಿಸಿ, ದಾರಿ ತೋರಿದ ಗುರುವರರಾದ ಶ್ರೀಶುಕರಿಗೆ ನಾನು ನಮಸ್ಕರಿಸುತ್ತಿರುವೆನು. ಶ್ರೀಶುಕಾಯ ನಮಃ!

ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನು, ಸ್ವತಂತ್ರನು, ಜಗಜ್ಜನನ ಭರಣ ಹರಣ ಕಾರಣನು, ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ, ಎಂಬ ನವಶಕ್ತಿಗಳಿಂದ ಯುಕ್ತನು, ಜ್ಞಾನಿವರರಾದ ಬ್ರಹ್ಮ ರುದ್ರೇಂದ್ರ ಪ್ರಮುಖ ದೇವತೆಗಳಿಗೂ ನಿಲುಕದ ಅಗಾಧ ಮಹಿಮಾ ವಿಲಸಿತನು, ಚತುರ್ವಿಧ ನಾಶರಹಿತನೂ ಆದ ಶ್ರೀರಮಾರಮಣನಿಗೆ ಶಿರಸಾ ನಮಸ್ಕರಿಸುತ್ತಿರುವೆನು.

ಮೂಲ ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಮನಸ್ಸು, ಪಂಚಭೂತಗಳೆಂಬ ತನ್ನಧೀನವಾದ ಒಂಭತ್ತು ತತ್ತ್ವಗಳಿಂದ ಕೂಡಿ, ತನ್ನ ಆಧಾರದಲ್ಲಿ ನಿಲ್ಲಿಸಿದ ಜಗವನ್ನು ನಿರ್ಮಿಸಿ, ಪಾಲನೆ ಮಾಡಿ, ನಡೆಸುವ ಕೇವಲ ಜ್ಞಾನಾನಂದ ದೇಹನಾದ ಶ್ರೀರಮಣನಿಗೆ ನಮಸ್ಕಾರ! ವೇದವೇದ್ಯನು, ದೇವದೇವನು, ಶಶ್ವದೇಕಪ್ರಕಾರವನು ಆದ ಶ್ರೀಶನಿಗೆ ನಮಸ್ಕಾರ!

## ೧೩. ಸರ್ವಸಮರ್ಪಣೆ

ಸೂತನು ಹೇಳಿದನು–

ಬ್ರಹ್ಮರುದ್ರ ಸುರೇಂದ್ರ ವರುಣಾದಿ ದೇವವಂದ್ಯನೇ! ವೇದಗಳನ್ನು ಪಾಡುವ ಸಾಮಗರ ಪದಕ್ರಮಗಳಲ್ಲಿ ಪ್ರತಿಪಾದಿತವಾದ ಅನಂತ ಮಹಿಮೆ ನಿನ್ನದು. ಯೋಗಿಗಳು ಭಕ್ತಿಪೂರ್ವಕವಾಗಿ ಶುದ್ಧಮನದಿಂದ ಧ್ಯಾನಿಸಿ, ನಿನ್ನನ್ನು ಕಾಣುತ್ತಿರುವರು. ಅಪ್ರಮೇಯ ಮಹಾಮಹಿಮನಾದ ನಾರಾಯಣಾ! ನಿನಗೆ ನಮಸ್ಕಾರವು!

ಬೆನ್ನ ಮೇಲಿದ್ದ ಮಂದರಗಿರಿಯನ್ನು ದೇವದಾನವರು ಮಥಿಸುವಾಗ, ಆ ಗಿರಿಯ ಘರ್ಷಣದಿಂದ ತುರಿಸಿದಂತಾಗಿ, ಸುಖವಾಗಿ ಕಣ್ಣುಗಳನ್ನು ಅರಿಮುಚ್ಚಿರುವ ಶ್ರೀ ಕೂರ್ಮರೂಪೀ ಭಗವಂತನ ಶ್ವಾಸಾನಿಲಗಳೆಮ್ಮನ್ನು ರಕ್ಷಿಸಲಿ! ಆ ಉಸಿರಿನ ವೇಗದಿಂದಲೇ ಅಲ್ಲವೇ, ಸಮುದ್ರದಲ್ಲಿ ಅಲೆಗಳು ಉಕ್ಕೇರಿ ಬಂದು, ದಡವನ್ನು ಬಡಿಯುತ್ತಾ, ಇಂದಿನವರಿವಿಗೂ ನಿಲ್ಲದೆ, ಅವರ ಪರಾಕ್ರಮವನ್ನು ಸೂಚಿಸುವಂತಿದೆ!

ಶೌನಕಾ! ಪುರಾಣಸಂಖ್ಯೆಯನ್ನು, ಭಾಗವತ ವಿಷಯ ಪ್ರಯೋಜನಗಳನ್ನು, ದಾನಮಹಿಮೆಯನ್ನು, ಪಾರಾಯಣ ಫಲವನ್ನು ಕೇಳು!

ಬ್ರಹ್ಮಪುರಾಣ ೧೦,೦೦೦ ಗ್ರಂಥ (೩೨ ಅಕ್ಷರ = ಗ್ರಂಥ); ಪದ್ಮಪುರಾಣ ೫೫,೦೦೦; ವಿಷ್ಣುಪುರಾಣ ೨೩,೦೦೦; ಶೈವಪುರಾಣ ೨೪,೦೦೦; ಶ್ರೀಭಾಗವತ ೧೮,೦೦೦; ನಾರದೀಯ ಪುರಾಣ ೨೫,೦೦೦; ಮಾರ್ಕಂಡೇಯ ೯,೦೦೦; ಅಗ್ನಿಪುರಾಣ ೧೮,೦೦೦; ಭವಿಷ್ಯಪುರಾಣ ೧೪,೫೦೦; ಬ್ರಹ್ಮವೈವರ್ಯ ಪುರಾಣ ೧೮,೦೦೦; ಲಿಂಗಪುರಾಣ ೧೧,೦೦೦; ವರಾಹಪುರಾಣ ೨೪,೦೦೦; ಸ್ಕಾಂಧ ೮೧,೧೦೦; ವಾಮನ ೧೧,೦೦೦; ಕೂರ್ಮಪುರಾಣ ೧೭,೦೦೦; ಮಾತ್ಸ್ಯಪುರಾಣ ೧೪,೦೦೦; ಗರುಡಪುರಾಣ ೧೯,೦೦೦; ಬ್ರಹ್ಮಾಂಡಪುರಾಣ ೧೨,೦೦೦; ಇಂತು ಹದಿನೆಂಟು ಪುರಾಣಗಳು ಕಲೆತು ನಾಲ್ಕು ಲಕ್ಷ ಗ್ರಂಥಗಳಾಗುವುವು. ಶ್ರೀಭಾಗವತವು ಹದಿನೆಂಟು ಸಾವಿರ ಶ್ಲೋಕಗಳೆಂದು ತಿಳಿ!

ಶ್ರೀಭಾಗವತವನ್ನು ಭವಭೀತನಾದ (ಮಗ) ಬ್ರಹ್ಮದೇವನಿಗೆ, ಸಾಕ್ಷಾನ್ನಾರಾಯಣನು ಕರುಣೆಯಿಂದ ಉಪದೇಶಿಸಿದನು. ನಾಭಿಕಮಲದಿ ಕೂತ ಬ್ರಹ್ಮನದನ್ನು ಕೇಳಿ ಧನ್ಯನಾದನು. ಭಾಗವತದಲ್ಲಿ ಆದಿಮಧ್ಯಾಂತರಗಳಲ್ಲಿ, ಎಲ್ಲ ಕಡೆಯೂ ವೈರಾಗ್ಯವೇ ಹೇಳಲ್ಪಟ್ಟಿದೆ. ಶ್ರೀಹರಿಯ ಲೀಲಾವತಾರ ಚರಿತೆಗಳ ಅಮೃತಪೂರ್ಣ ದಿವ್ಯಾನಂದ ಜಲದಿಂದ ತುಂಬಿ ಹರಿದು, ಭಕ್ತರನ್ನು ಪಾವನಮಾಡುವುದೀ ಭಾಗವತ ಭಾಗೀರಥೀ! ಶ್ರೀಹರಿಯ ನಾನಾವತಾರಗಳಲ್ಲಿ ಸ್ವಗತ ಭೇದವಿಲ್ಲೆಂದು ಘೋಷಿಸುವ ವೇದಾಂತಸಾರವೀ ಭಾಗವತ. ಮೋಕ್ಷಸಾಧನವಾದ ಭಾಗವತದಲ್ಲಿ, ಸಮಾಧಿಕರಹಿತನಾದ ಶ್ರೀಶನೇ ನಿರೂಪಿತನಾಗಿರುವನು.

ಭಾದ್ರಪದ ಪೂರ್ಣಿಮಾ ದಿನದಲ್ಲಿ ಶ್ರೀಭಾಗವತ ಪುಸ್ತಕವನ್ನು ಹೇಮಸಿಂಹಾಸನದಲ್ಲಿಟ್ಟು ಕೊಟ್ಟ ಪುಣ್ಯವಂತರು ಉತ್ತಮ ವಿಷ್ಣುಲೋಕವನ್ನು ಹೊಂದುವರು. ಶೌನಕನೇ! ಶ್ರೀಭಾಗವತ ಪುರಾಣವು ಕಾಣದಿರುವವರಿವಿಗೂ, ಇತರ ಪುರಾಣಗಳ ಪ್ರಕಾಶ; ಭಾಗವತ ಸೂರ್ಯನು ಉದಿತನಾದನೆಂದರೆ, ಇತರ ಪುರಾಣಗಳು ತಾರೆಗಳಂತೆ ಅಡಗುವುವು. ಭಾಗವತವು ವೇದಾಂತ

ಶಾಸ್ತ್ರಸಾರವಾಗಿದೆ. ಶ್ರೀಭಾಗವತಾಮೃತ ಪಾನದಿಂದ ತೃಪ್ತನಾದವನಿಗೆ, ಇನ್ನೊಂದಾವುದೂ ರುಚಿಸುವುದಿಲ್ಲ.

ನದಿಗಳಲ್ಲಿ ಗಂಗೆ, ದೇವತೆಗಳಲ್ಲಿ ಅಚ್ಯುತ, ವಿಷ್ಣುಭಕ್ತರಲ್ಲಿ ಶಂಕರ, ಕ್ಷೇತ್ರಗಳಲ್ಲಿ ವಾರಣಾಸಿ ಹೇಗೋ, ಅಂತೆಯೇ ಪುರಾಣಗಳಲ್ಲಿ, ಶ್ರೀಭಾಗವತವು ಶ್ರೇಷ್ಠವಾಗಿದೆ.

ಶ್ರೀಮದ್ಭಾಗವತವು ವೈಷ್ಣವರಿಗೆ ಪರಮಪ್ರಿಯವಾದ ಪುರಾಣವು; ಅದಕ್ಕೆ ಸಾಟಿಯಾದ ಪುರಾಣವಿನ್ನೊಂದಿಲ್ಲ. ಪರಮಹಂಸವಂದಿತನಾದ ಗೋವಿಂದನ ಸರ್ವೋತ್ತಮತ್ವವನ್ನು ಉಪದೇಶಿಸುವ ಭಾಗವತವನ್ನು ಶ್ರದ್ಧೆಯಿಂದ ಕೇಳಿ, ವಿಚಾರಶೀಲನಾದ ನರನು ಮುಕ್ತನಾಗುವನು. ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಮುಕ್ತಿಯಾಗುವುದೆಂಬುದು ಭಾಗವತ ಸಾರವಾಗಿದೆ.

ಜ್ಞಾನದೀಪವಾದ ಭಾಗವತಪುರಾಣವನ್ನು ಶ್ರೀನಾರಾಯಣನು, ತನ್ನ ಮಗನು, ಜೀವೋತ್ತಮನು ಆದ ಚತುರ್ಮುಖನಿಗೆ ಉಪದೇಶಿಸಿದನು. ಬ್ರಹ್ಮನು ಅಂತೆಯೇ ನಾರದನಿಗೆ ಪೇಳಿದನು. ನಾರದನು ಭಗವಂತನಾದ ವೇದವ್ಯಾಸನಿಗೆ ವಿಜ್ಞಾಪಿಸಿದನು. ವ್ಯಾಸದೇವನು ವಿಸ್ತಾರವಾಗಿ ರಚಿಸಿ, ಶ್ರೀಶುಕನಿಗೆ ಪೇಳಿದನು. ಶ್ರೀಶುಕನು ಪರೀಕ್ಷಿತನಿಗೆ ಹೇಳಿದನು. ಸರ್ವತ್ರ ಸರ್ವ ಭಾಗವತ ವಕ್ತೃಗಳಲ್ಲಿ ವಾಸುದೇವ ರೂಪದಿಂದಲೂ, ಶ್ರೋತೃಗಳಲ್ಲಿ ಸಂಕರ್ಷಣರೂಪದಿಂದಲೂ ಇದ್ದು, ಜ್ಞಾನಪ್ರದಾತನು – ಜ್ಞಾನಸ್ವೀಕೃತನೂ ತಾನೇ ಆಗಿ ಸರ್ವಸುಜೀವರನ್ನು ಉದ್ಧರಿಸುವ ಶ್ರೀಲಕ್ಷ್ಮೀಶ್ರೀನಿವಾಸನ ಚರಣಾರವಿಂದಗಳಿಗೆ ಪುನಃ ಪುನಃ ನಮಸ್ಕರಿಸುವೆನು.

ಪರಬ್ರಹ್ಮನನ್ನು ಉಪದೇಶಿಸಿ ತೋರಿಸುವ ಶ್ರೀಶುಕನಿಗೆ ನಮಸ್ಕಾರವು! ಸಂಸಾರ ಸರ್ಪದಷ್ಟನಾದ ಪರೀಕ್ಷಿತನನ್ನು ಕಾಪಾಡಿದ ಗುರುವರನಿಗೆ ನಮಸ್ಕಾರವು!

ಪ್ರಭೋ! ಶ್ರೀಶ! ಜನ್ಮಜನ್ಮಗಳಲ್ಲಿ ನಿನ್ನ ದಿವ್ಯಪಾದಾರವಿಂದಗಳಲ್ಲಿ ದೃಢವಾದ ಭಕ್ತಿಯನ್ನು ಕೊಡು! ನೀನೇ ನನಗೆ ಗತಿಯು! ಯೋಗೇಶ! ನಿನ್ನ ನಾಮಸಂಕೀರ್ತನವೇ ಸರ್ವಪಾಪ ಪ್ರಣಾಶನವು; ನಿನಗೆ ಮಾಡುವ ನಮಸ್ಕಾರವೇ ಸರ್ವದುಃಖ ಶಮನವು; ಶ್ರೀಹರೇ! ನಮೋ ನಮಃ!

ನಿತ್ಯಾನಂದಾದಿ ಕಲ್ಯಾಣಗುಣಪೂರ್ಣನು, ನಿತ್ಯನಿರಸ್ತದೋಷನು, ಪಾಪಪರಿಹಾರಕನೂ ಆದ ಲಕ್ಷ್ಮೀರಮಣನಿಗೆ ನಮೋ ನಮಃ!

* * *

ಶ್ರೀಕೃಷ್ಣ! ಭಾಗವತವನ್ನು ರಚಿಸಿದ ನಿನ್ನ ಆದೇಶದಂತೆ ಭಾಗವತ ವ್ಯಾಖ್ಯೆಯನ್ನು ರಚಿಸಿದುದಾಯಿತು! ಇದು ನಿನ್ನ ಕೃಪೆ! ನಿನ್ನ ಪ್ರೀತಿಗಾಗಿ ಮಾಡಿದೆನಾಗಲಿ, ಈ ರಚನೆಗಿನ್ನೊಂದು ಪ್ರಯೋಜನಾಪೇಕ್ಷೆ ಎನಗಿಲ್ಲ. ನೀ ಪ್ರೀತನಾದರೆ ಸಾಕು! ತಂದೆ!

ಪ್ರೀತನಾಗಿದ್ದರೆ ಕೃಷ್ಣಾ! ಬೇಡುವೆನು ನಿನ್ನ ಅಡಿಗೆ ಮುಡಿಯನ್ನಿಟ್ಟು ಮೂರು ವರಗಳನ್ನು! ಕೊಡುವೆಯಾ! ಹಾಗಾದರೆ ಕೇಳು!

ಮೊದಲು ನನ್ನನ್ನು ಬಡವನನ್ನಾಗಿ ಮಾಡು! ಅತಿಥಿ ಅಭ್ಯಾಗತರ ಪೂಜೆಗೆ ಸಾಕಾಗುವಷ್ಟು ನ್ಯಾಯದಿಂದ ಬಂದ ಧನದಿಂದ ಗೋವಿಂದಾ! ನಿನ್ನ ಕರುಣೆ ಕೊಟ್ಟ ಸಾಂಸಾರಿಕ ಧರ್ಮವನ್ನು ನಿರ್ವರ್ತಿಸುವಷ್ಟು ಮಾತ್ರ ಧನಾದಿ ಸಂಪತ್ತನ್ನಲ್ಲದೆ ಮತ್ತೆ ಹೆಚ್ಚಿಗೆ ಬೇಡ! ಮದವೇರಿಸದ ಸಂಪತ್ತಿರಲಿ! ಸಂಪತ್ತು ನಿನ್ನ ಸೇವೆಗೆ ಅಣಿಯಾಗಲಿ!

ಕೇಶವ! ಎರಡನೆಯ ವರವೆಂದರೆ ಕೇಳು! ಜನ್ಮಜನ್ಮಗಳಲ್ಲಿಯೂ ನಿನ್ನ ಪಾದಾರವಿಂದ ಭಜಕರ ಸಂಗಸುಖವನ್ನು ಕೊಡು!

ಮೂರನೆಯದಾಗಿ ಮುರಾರೇ! ಶ್ರೀಮನ್ಮಧ್ವಗುರುವರರ ಆನಂದಕರವಾದ ಸಚ್ಛಾಸ್ತ್ರವೆಂಬುವ ಅಮೃತಪಾನವನ್ನು ಮಾಡುವ, ಕೈಲಾದಷ್ಟು ಮಾಡಿಸುವ, ಮಹಾಭಾಗ್ಯವನ್ನು ದಯಪಾಲಿಸು! ಸ್ವಾಮೀ! ನಮೋ ನಮಃ!

ನಾನೂ ಬರೆದೆನು ಶ್ರೀಭಾಗವತ ವ್ಯಾಖ್ಯಾನವನ್ನು, ಲೇಖಣಿ ಬರೆದಂತೆ. ಲೇಖಣಿಯನ್ನು ಹಿಡಿದು ಬರೆಯಿಸಿದವರು ನನ್ನ ಗುರುಗಳು. ಆದ್ದರಿಂದ ಆ ಮಹಾಫಲವೆಲ್ಲವೂ ಅವರಿಗೇ ಸೇರಿದ್ದಾಗಿದೆ. ನಾನು ಪಾಯಸವನ್ನು ಬಡಿಸುವ ಸೌಟಿದ್ದಂತೆ. ಶ್ರೀಮದ್ವೇಶನಿಗೆ ಅರ್ಪಿತವಾಗಲಿ!

ಶ್ರೀಭಾಗವತಾಮೃತವನ್ನು ಶ್ರೀಗುರುಗಳ ಅನುಗ್ರಹದಿಂದ ರಚಿಸಿರುವೆನು. ನನ್ನಂತಹ ಪಾಮರನೂ ಉದ್ಧೃತನಾದೆನು – ಕ್ರಿಮಿಯಿಂದ ರಾಜ್ಯವಾಳಿಸಿದ ಸತ್ಯವತೇಯನ ಕೃಪೆಯಿಂದ ಶ್ರೀವಿಜಯಧ್ವಜೀಯ, ಶ್ರೀಸತ್ಯಧರ್ಮೀಯ, ಶ್ರೀಯಾದುಪತ್ಯ, ಶ್ರೀಶ್ರೀನಿವಾಸತೀರ್ಥೀಯ ಮೊದಲಾದ ವ್ಯಾಖ್ಯಾನಗಳಿಂದ ಉಪಜೀವಿಸಿ, ಶ್ರೀಮದಾನಂದತೀರ್ಥರ ತಾತ್ಪರ್ಯನಿರ್ಣಯ ಸರಣಿಯಲ್ಲಿ ನಡೆಯುವ ನನ್ನನ್ನು, ಮಂದಗತಿ ಎಂದು ಕಡೆಗಣಿಸದೆ, ಸುಜನ ಶಿರೋಮಣಿಗಳು, ಸೂಕ್ತ ಸಲಹೆಗಳನ್ನಿತ್ತು ಕರುಣಿಸುವರೆಂದು ನಂಬಿರುವೆನು. ಶ್ರೀಭಾಗವತಾಮೃತವನ್ನು ಶ್ರೀ ಗುರುರಾಜರು, ಶ್ರೀಸತ್ಯಧ್ಯಾನರು ಇವರ ಅಂತರ್ಗತನಾದ ಘೂಳೀಪ್ರಾಣೇಶನ ಹೃದಯವರ್ತಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ ವೆಂಕಟೇಶನ ಚರಣಾರವಿಂದಗಳಲ್ಲಿ ಭಕ್ತಿಯಿಂದ ಸಮರ್ಪಿಸುತ್ತಿರುವೆನು.

ಅಸ್ಮದ್ಗುರುವರರಾದ ಶ್ರೀಹುಲಿಗೀ ಆಚಾರ್ಯರ ಅಮೃತಹಸ್ತದಿಂದ ಶ್ರೀಕೃಷ್ಣನಿಗೆ ಶ್ರೀಭಾಗವತಾಮೃತವನ್ನು ಅರ್ಪಿಸಿ, ಜನ್ಮಜನ್ಮಗಳಲ್ಲಿ ವೈಷ್ಣವಜನ್ಮ ಬರಲಿ, ಇದೇ ಗುರುಗಳ ಸೇವೆ ಆಗಲಿ! ಶ್ರೀಮಧ್ವಶಾಸ್ತ್ರದ ಸಂಪತ್ತು ಒದಗಲಿ! ಶ್ರೀಭಾಗವತಾಮೃತ ಪಾನದಿಂದ ನನ್ನ ಜನ್ಮ ಪಾವಿತವಾಗಲಿ! ಎಂದು ಪ್ರಾರ್ಥಿಸುತ್ತಿರುವೆನು.

॥ಶ್ರೀಮದ್ವೇಶಾರ್ಪಣಮಸ್ತು॥

ಓಂ

ಉಪಚಿತನವಶಕ್ತಿಭಿಃ ಸ್ವಆತ್ಮನ್ಯುಪರಚಿತ ಸ್ಥಿರಜಂಗಮಪಾಲನಾಯ ।
ಭಗವತೇ, ಉಪಲಬ್ಧಿಮಾತ್ರಧಾಮ್ನೇ ಸುರಋಷಭಾಯ ನಮಃ ಸನಾತನಾಯ॥

ಜಯ ಜಯ ಜಯ ಹರೇ।

ಭವೇ ಭವೇ ಯಥಾಭಕ್ತಿಃ ಪಾದಯೋರ್ೀ ತವ ಜಾಯತೇ ।
ತಥಾ ಕುರುಷ್ವ ದೇವೇಶ ನಾಥಸ್ತ್ವಂ ಮೇಯತಃ ಪ್ರಭೋ ॥
ನಾಮಸಂಕೀರ್ತನಂ ಯಸ್ಯ ಸರ್ವಪಾಪಪ್ರಣಾಶನಂ ।
ಪ್ರಣಾಮೋ ದುಃಖಶಮನಃ ತಂ ನಮಾಮಿ ಹರಿಃ ಪರಂ ॥

ಶ್ರೀಮದಸ್ಮದ್ಗುರುವರ ಶ್ರೀಹುಲಿಗೀಆಚಾರ್ಯವರ್ಯಾಂತರ್ಗತ ಶ್ರೀಸತ್ಯಧ್ಯಾನ
ಗುರ್ವಂತರ್ಗತ ಶ್ರೀರಾಘವೇಂದ್ರತೀರ್ಥ ಗುರುರಾಜಾಂತರ್ಗತ ಶ್ರೀಭಾರತೀ
ರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀವೆಂಕಟೇಶ
ಚರಣಾರವಿಂದರ್ಪಿತಮಸ್ತು

॥ ಶ್ರೀರಸ್ತು ॥

---

# ನಮ್ಮ ಕೆಲವು ಪ್ರಕಟಣೆಗಳು

**ಶ್ರೀ ಬೇಲೂರು ಕೇಶವದಾಸರು**

| | |
|---|---|
| ಶ್ರೀ ಕರ್ಣಾಟಕ ಭಕ್ತ ವಿಜಯ | 200–00 |
| ಶ್ರೀ ರಾಘವೇಂದ್ರ ವಿಜಯ | 80–00 |
| ಶ್ರೀ ಹರಿದಾಸ ಸಾಹಿತ್ಯ : ಒಂದು ಅಧ್ಯಯನ | 100–00 |

**ಕೀರ್ತಿಶೇಷ ಆಸ್ಥಾನ ವಿದ್ವಾನ್ ಪದ್ಮನಾಭಾಚಾರ್ಯ**

| | |
|---|---|
| ಶ್ರೀ ನರಸಿಂಹ ಪುರಾಣ | 350–00 |
| ಶ್ರೀ ಮದ್ವಿಷ್ಣುಮಹಾಪುರಾಣಂ | 500–00 |
| ಶ್ರೀ ರಾಘವೇಂದ್ರ ವಿರಚಿತ ಪ್ರಾತಃ ಸಂಕಲ್ಪ ಗದ್ಯಂ | 20–00 |

**ಗೊರೂರು ಆರ್. ಶ್ರೀಮತಿ**

| | |
|---|---|
| ಜನಪ್ರಿಯ ಕನ್ನಡ ವಾಲ್ಮೀಕಿ ರಾಮಾಯಣ | 250–00 |

**ವಿದುಷಿ ಆರ್. ವಸಂತಲಕ್ಷ್ಮಿ**

| | |
|---|---|
| ಕರ್ನಾಟಕ ಸಂಗೀತ ಶಾಸ್ತ್ರ ಬೋಧಿನಿ | |
| (ಶಾಸ್ತ್ರ ಮತ್ತು ಪ್ರಾಯೋಗಿಕ ಪರಿಷ್ಕೃತ ಪಠ್ಯವಸ್ತು ಪ್ರಕಾರ) | |
| ಜೂನಿಯರ್ ವಿಭಾಗ | 50–00 |
| ಕರ್ನಾಟಕ ಸಂಗೀತ ಶಾಸ್ತ್ರ ವಾಹಿನಿ | 200–00 |
| ಸೀನಿಯರ್ ವಿಭಾಗ | |

**ಉಮ ಶ್ರೀನಿವಾಸ**

| | |
|---|---|
| ಸ್ತೋತ್ರ ಪುಷ್ಪಾಂಜಲಿ (ಸಂಗ್ರಹ) | 120–00 |
| (ಅಷ್ಟೋತ್ತರಗಳು ಮತ್ತು ಸ್ತೋತ್ರಗಳು) | |

---

ಭಾರತೀ ಪ್ರಕಾಶನ : ಸರಸ್ವತೀಪುರಂ : ಮೈಸೂರು–9